# 1. ಅಲ್ ಫಾತಿಹಃ

## ಪರಿಚಯ

**'ಅ**ಲ್ ಫಾತಿಹಃ' ಎಂಬುದು ಈ ಅಧ್ಯಾಯದ ಹೆಸರು. ಒಂದು ವಿಷಯ ಅಥವಾ ಪ್ರಬಂಧದ ಉದ್ಘಾಟನೆಗೆ 'ಫಾತಿಹಾ' ಎನ್ನಲಾಗುತ್ತದೆ. ಇದಕ್ಕೆ ಪೀಠಿಕೆ ಅಥವಾ ಮಾತಿನ ಆರಂಭ ಎಂಬ ಅರ್ಥವೂ ಬರುತ್ತದೆ. ಮುಹಮ್ಮದ್‌ರವರ(ಸ) ಪ್ರವಾದಿತ್ವದ ಆರಂಭ ಕಾಲದಲ್ಲಿ ಅವತೀರ್ಣಗೊಂಡ ಪರಿಪೂರ್ಣ ಅಧ್ಯಾಯ ಇದೇ ಆಗಿದೆ. ಇದಕ್ಕಿಂತ ಮುಂಚೆ ಕೆಲವು ಸೂಕ್ತಗಳಷ್ಟೆ ಆಗೊಮ್ಮೆ ಈಗೊಮ್ಮೆ ಅವತೀರ್ಣಗೊಳ್ಳುತ್ತಿದ್ದುವು.

ಈ ಅಧ್ಯಾಯವು ಕುರ್‌ಆನಿನ ಅಧ್ಯಯನ ಮಾಡಬಯಸುವ ಪ್ರತಿಯೊಬ್ಬ ಮನುಷ್ಯನಿಗೂ ಅಲ್ಲಾಹನು ಕಲಿಸಿಕೊಟ್ಟ ಒಂದು ಪ್ರಾರ್ಥನೆಯಾಗಿದೆ. ಈ ಗ್ರಂಥದ ಪ್ರಯೋಜನ ಪಡೆಯ ಬಯಸುವಿರಾದರೆ, ಮೊತ್ತಮೊದಲು ಜಗದೊಡೆಯ, ಸೃಷ್ಟಿಕರ್ತನಲ್ಲಿ ಈ ರೀತಿ ಪ್ರಾರ್ಥಿಸಬೇಕೆಂದು ತಿಳಿಸಲಿಕ್ಕಾಗಿ ಇದನ್ನು ಗ್ರಂಥದ ಆರಂಭದಲ್ಲಿ ಇರಿಸಲಾಗಿದೆ.

ಕುರ್‌ಆನ್ ಮತ್ತು ಅಲ್ ಫಾತಿಹಾ ಅಧ್ಯಾಯದ ಸಂಬಂಧವು ಒಂದು ಗ್ರಂಥ ಮತ್ತು ಅದರ ಮುನ್ನುಡಿಯೆಂಬಂತಿರದೆ, ಒಂದು ಪ್ರಾರ್ಥನೆ ಮತ್ತು ಅದರ ಉತ್ತರ ದಂತಿದೆ. ದಾಸನು ತನ್ನ ಪ್ರಭುವಿನಲ್ಲಿ ಸನ್ಮಾರ್ಗವನ್ನು ಬೇಡುತ್ತಾನೆ. ಅದಕ್ಕೆ ಉತ್ತರವಾಗಿ ಅಲ್ಲಾಹನು 'ಸನ್ಮಾರ್ಗ ಇದೋ ಇಲ್ಲಿದೆ'ಯೆಂದು ಇಡೀ ಕುರ್‌ಆನನ್ನು ಅವನ ಮುಂದಿಡುತ್ತಾನೆ.

---






(ಅವತೀರ್ಣ - ಮಕ್ಕಾದಲ್ಲಿ)

1. ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

بِسْمِ اللّٰهِ الرَّحْمٰنِ الرَّحِيْمِ ○

2. ಅಲ್ಲಾಹನಿಗೇ ಸರ್ವಸ್ತುತಿ[1] ಅವನು ಸಕಲ ವಿಶ್ವದ ಪ್ರಭು.[2]

اَلْحَمْدُ لِلّٰهِ رَبِّ الْعٰلَمِيْنَ ۝٢

3. ಪರಮ ದಯಾಳು, ಕರುಣಾನಿಧಿ-

الرَّحْمٰنِ الرَّحِيْمِ ۝٣

4. ನಿರ್ಣಾಯಕ ದಿನದ ಅಧಿಪತಿ (ಆದ ಪ್ರಭುವೇ)-

مٰلِكِ يَوْمِ الدِّيْنِ ۝٤

5. ನಾವು ನಿನಗೆ ಮಾತ್ರ ಇಬಾದತ್[3] ಮಾಡುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಬೇಡುತ್ತೇವೆ.

اِيَّاكَ نَعْبُدُ وَاِيَّاكَ نَسْتَعِيْنُ ۝٥

6. ನಮಗೆ ಸನ್ಮಾರ್ಗವನ್ನು ತೋರಿಸು.

اِهْدِنَا الصِّرَاطَ الْمُسْتَقِيْمَ ۝٦

7. ನೀನು ಅನುಗ್ರಹಿಸಿದವರ ಮಾರ್ಗ. ನಿನ್ನ ಕ್ರೋಧಕ್ಕೆ ಪಾತ್ರರಾದವರ ಮಾರ್ಗವಲ್ಲ. (ನೀನು ತೋರಿದ) ದಾರಿಯನ್ನು ತಪ್ಪಿ ನಡೆದವರ ಮಾರ್ಗವೂ ಅಲ್ಲ.[4]

صِرَاطَ الَّذِيْنَ اَنْعَمْتَ عَلَيْهِمْ ۙ غَيْرِ الْمَغْضُوْبِ عَلَيْهِمْ وَلَا الضَّآلِّيْنَ ۝٧

---

1. ತನ್ನ ಪ್ರಭುವಿನ ಸನ್ನಿಧಿಯಲ್ಲಿ ಮನವಿಯ ರೂಪದಲ್ಲಿ ಮುಂದಿರಿಸಲಿಕ್ಕಾಗಿ ಅಲ್ಲಾಹನೇ ಈ 'ಅಲ್ ಫಾತಿಹಃ'(ಅಧ್ಯಾಯ)ವನ್ನು ತನ್ನ ದಾಸರಿಗೆ ಕಲಿಸಿದ್ದಾನೆ.

2 'ರಬ್ಬ್' (ಪ್ರಭು) ಎಂಬ ಪದವನ್ನು ಅರಬಿ ಭಾಷೆಯಲ್ಲಿ ಮೂರು ಅರ್ಥಗಳಲ್ಲಿ ಬಳಸಲಾಗುತ್ತದೆ: 1) ಮಾಲಕ ಮತ್ತು ಒಡೆಯ. II) ಪೋಷಕ, ಪರಿಪಾಲಕ, ಮೇಲ್ವಿಚಾರಕ, ಮೇಲ್ನೋಟವಿರಿಸುವವ. III) ಆಜ್ಞಾಧಿಕಾರಿ, ಸಾರ್ವಭೌಮ, ವ್ಯವಸ್ಥಾಪಕ ಮತ್ತು ಆಡಳಿತಗಾರ. ಅಲ್ಲಾಹನು ಈ ಎಲ್ಲಾ ಅರ್ಥಗಳಲ್ಲೂ ವಿಶ್ವದ ಪ್ರಭುವಾಗಿದ್ದಾನೆ.

3. 'ಇಬಾದತ್' ಎಂಬ ಪದವನ್ನು ಅರಬಿ ಭಾಷೆಯಲ್ಲಿ ಮೂರು ಅರ್ಥಗಳಲ್ಲಿ ಪ್ರಯೋಗಿಸಲಾಗುತ್ತದೆ: I) ಆರಾಧನೆ ಮತ್ತು ಉಪಾಸನೆ. II) ಅನುಸರಣೆ ಮತ್ತು ಆಜ್ಞಾಪಾಲನೆ. III) ದಾಸ್ಯ ಮತ್ತು ಗುಲಾಮಗಿರಿ.

4. ದಾಸನ ಈ ಪ್ರಾರ್ಥನೆಯ ಉತ್ತರವೇ ಈ ಸಂಪೂರ್ಣ ಕುರ್‌ಆನ್. ದಾಸ ತನ್ನ ಒಡೆಯನಿಂದ ಮಾರ್ಗದರ್ಶನ ಯಾಚಿಸುತ್ತಾನೆ. ಅದಕ್ಕುತ್ತರವಾಗಿ ಪ್ರಭು ಅವನಿಗೆ ಈ ಕುರ್‌ಆನನ್ನು ದಯಪಾಲಿಸುತ್ತಾನೆ.







(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ ಮೀಮ್[1].

الٓمّٓ ﴿١﴾

2. ಇದು (ದೈವಿಕ) ಗ್ರಂಥ; ಸಂದೇಹಾತೀತವಿದು. ಭಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ.

ذٰلِكَ الْكِتٰبُ لَا رَيْبَ ۛ فِيْهِ ۛ هُدًى لِّلْمُتَّقِيْنَ ﴿٢﴾

3. ಪರೋಕ್ಷದ[2] ಮೇಲೆ ವಿಶ್ವಾಸವಿರಿಸುವವರಿಗೆ, ನಮಾಝನ್ನು ಸಂಸ್ಥಾಪಿಸುವವರಿಗೆ,[3] ನಾವು ನೀಡಿರುವ ಸಂಪತ್ಸೌಕರ್ಯಗಳಿಂದ ವ್ಯಯಿಸುವವರಿಗೆ-

الَّذِيْنَ يُؤْمِنُوْنَ بِالْغَيْبِ وَيُقِيْمُوْنَ الصَّلٰوةَ وَمِمَّا رَزَقْنٰهُمْ يُنْفِقُوْنَ ﴿٣﴾

4. ನಿಮಗೆ ಅವತೀರ್ಣಗೊಳಿಸಿದ ಗ್ರಂಥದ (ಅರ್ಥಾತ್ ಕುರ್ಆನ್) ಮತ್ತು ನಿಮಗಿಂತ ಮೊದಲು ಅವತೀರ್ಣಗೊಳಿಸಿದ್ದ ಎಲ್ಲಾ ಗ್ರಂಥಗಳ ಮೇಲೆ ವಿಶ್ವಾಸವಿಡುವವರಿಗೆ ಮತ್ತು ಪರಲೋಕದ ಮೇಲೆ ದೃಢ ವಿಶ್ವಾಸವಿಡುವವರಿಗೆ (ಇದು ಮಾರ್ಗದರ್ಶಿ)

وَالَّذِيْنَ يُؤْمِنُوْنَ بِمَآ اُنْزِلَ اِلَيْكَ وَمَآ اُنْزِلَ مِنْ قَبْلِكَ ۚ وَبِالْاٰخِرَةِ هُمْ يُوْقِنُوْنَ ﴿٤﴾

---

1. ಇಂತಹ ಬಿಡಿ ಅಕ್ಷರಗಳು ಪವಿತ್ರ ಕುರ್ಆನಿನ ಕೆಲವು ಅಧ್ಯಾಯಗಳ ಆರಂಭದಲ್ಲಿ ಕಂಡು ಬರುತ್ತದೆ. ವ್ಯಾಖ್ಯಾನಕಾರರು ಇದನ್ನು ವಿವಿಧ ರೀತಿಯಲ್ಲಿ ವಿವರಿಸಿದ್ದಾರೆ. ಆದರೆ ಯಾವುದೇ ವಿವರಣೆಯ ಬಗ್ಗೆ ಒಮ್ಮತವಿಲ್ಲ. ಅದರ ಅರ್ಥವರಿಯುವುದು ಅತ್ಯವಶ್ಯಕವೂ ಅಲ್ಲ. ಏಕೆಂದರೆ ಅದರ ಅರ್ಥವರಿಯದಿದ್ದರೂ ಕುರ್ಆನ್‌ನಿಂದ ಮಾರ್ಗದರ್ಶನ ಪಡೆಯಲು ಅದು ಬಾಧಕವಾಗುವುದಿಲ್ಲ.

2. ಪರೋಕ್ಷವೆಂದರೆ ಮಾನವನ ಇಂದ್ರಿಯಗಳಿಗೆ ನಿಲುಕದ, ಸಾಮಾನ್ಯ ಮನುಷ್ಯರ ನೇರ ಅನುಭವ ಮತ್ತು ವೀಕ್ಷಣೆಗೆ ಅತೀತವಾದ ವಾಸ್ತವಿಕತೆಗಳಾಗಿವೆ. ಉದಾಹರಣೆಗೆ ಅಲ್ಲಾಹನ ಅಸ್ತಿತ್ವ ಮತ್ತು ಗುಣಗಳು, ದೇವಚರರು, ದೇವವಾಣಿ, ಸ್ವರ್ಗ, ನರಕ ಇತ್ಯಾದಿಗಳು.

3. ನಮಾಝ್ ಸಂಸ್ಥಾಪಿಸುವುದೆಂದರೆ ಮಾನವನು ಕಟ್ಟುನಿಟ್ಟಿನಿಂದ ನಮಾಝ್ ನಿರ್ವಹಿಸಬೇಕೆಂದು ಮಾತ್ರವಲ್ಲ, ನಮಾಝ್‌ನ ಸಾಮೂಹಿಕ ವ್ಯವಸ್ಥೆಯನ್ನೂ ವಿಧ್ಯುಕ್ತವಾಗಿ ಸ್ಥಾಪಿಸಬೇಕೆಂದಾಗಿದೆ. ಯಾವುದಾದರೊಂದು ಊರಿನಲ್ಲಿ ವೈಯಕ್ತಿಕವಾಗಿ ಜನರು ನಮಾಝ್ ನಿರ್ವಹಿಸುತ್ತಿದ್ದು, ಸಾಮೂಹಿಕ ನಮಾಝ್ ನಿರ್ವಹಣೆಗೆ ಯಾವುದೇ ವ್ಯವಸ್ಥೆ ಇಲ್ಲದಿದ್ದರೆ ಅಲ್ಲಿ ನಮಾಝ್‌ನ ಸಂಸ್ಥಾಪನೆಯಾಗುತ್ತಿದೆ ಎಂದು ಹೇಳುವಂತಿಲ್ಲ.

5. ಅಂತಹವರು ತಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು.

أُولَٰئِكَ عَلَىٰ هُدًى مِّن رَّبِّهِمْ ۖ وَأُولَٰئِكَ هُمُ الْمُفْلِحُونَ ﴿٥﴾

6. ಈ ವಿಷಯಗಳನ್ನು ನಿಷೇಧಿಸಿದವರಿಗೆ ನೀವು ಎಚ್ಚರಿಕೆ ಕೊಟ್ಟರೂ ಕೊಡದಿದ್ದರೂ ಸರಿಯೇ. ಅವರಂತೂ ವಿಶ್ವಾಸವಿಡುವವರಲ್ಲ.

إِنَّ الَّذِينَ كَفَرُوا سَوَاءٌ عَلَيْهِمْ أَأَنذَرْتَهُمْ أَمْ لَمْ تُنذِرْهُمْ لَا يُؤْمِنُونَ ﴿٦﴾

7. ಅಲ್ಲಾಹನು ಅವರ ಹೃದಯಗಳ ಹಾಗೂ ಕಿವಿಗಳ ಮೇಲೆ ಮುದ್ರೆಯೊತ್ತಿರುತ್ತಾನೆ.[4] ಅವರ ದೃಷ್ಟಿಗಳ ಮೇಲೆ ಪರದೆ ಬಿದ್ದಿದೆ. ಅವರಿಗೆ ಘೋರ ಶಿಕ್ಷೆ ಕಾದಿದೆ.

خَتَمَ اللَّهُ عَلَىٰ قُلُوبِهِمْ وَعَلَىٰ سَمْعِهِمْ ۖ وَعَلَىٰ أَبْصَارِهِمْ غِشَاوَةٌ ۖ وَلَهُمْ عَذَابٌ عَظِيمٌ ﴿٧﴾

8. ಮನುಷ್ಯರಲ್ಲಿ ಕೆಲವರು, "ನಾವು ಅಲ್ಲಾಹನಲ್ಲಿ ಹಾಗೂ ಅಂತಿಮ ದಿವಸದಲ್ಲಿ ವಿಶ್ವಾಸವಿಟ್ಟಿದ್ದೇವೆ" ಎಂದು ಹೇಳುವವರೂ ಇದ್ದಾರೆ. ಆದರೆ ನಿಜವಾಗಿ ಅವರು ವಿಶ್ವಾಸಿಗಳಲ್ಲ.

وَمِنَ النَّاسِ مَن يَقُولُ آمَنَّا بِاللَّهِ وَبِالْيَوْمِ الْآخِرِ وَمَا هُم بِمُؤْمِنِينَ ﴿٨﴾

9. ಅವರು ಅಲ್ಲಾಹನನ್ನೂ ವಿಶ್ವಾಸಿಗಳನ್ನೂ ವಂಚಿಸುತ್ತಾರೆ. ವಾಸ್ತವದಲ್ಲಿ ಅವರು ತಮ್ಮನ್ನು ತಾವೇ ವಂಚಿಸಿಕೊಳ್ಳುತ್ತಿದ್ದಾರೆ ಮತ್ತು ಅವರಿಗೆ ಅದರ ಬೋಧವಿರುವುದಿಲ್ಲ.

يُخَادِعُونَ اللَّهَ وَالَّذِينَ آمَنُوا وَمَا يَخْدَعُونَ إِلَّا أَنفُسَهُمْ وَمَا يَشْعُرُونَ ﴿٩﴾

10. ಅವರ ಹೃದಯಗಳಲ್ಲಿ ಒಂದು ರೋಗವಿದೆ. ಅದನ್ನು ಅಲ್ಲಾಹನು ಇನ್ನಷ್ಟು ಉಲ್ಬಣಗೊಳಿಸಿದನು.[5] ಅವರು ಹೇಳುತ್ತಿರುವ ಸುಳ್ಳಿನ ಪ್ರತಿಫಲವಾಗಿ ಅವರಿಗೆ ವೇದನಾಯುಕ್ತ ಶಿಕ್ಷೆ ಕಾದಿದೆ.

فِي قُلُوبِهِم مَّرَضٌ فَزَادَهُمُ اللَّهُ مَرَضًا ۖ وَلَهُمْ عَذَابٌ أَلِيمٌ بِمَا كَانُوا يَكْذِبُونَ ﴿١٠﴾

11. ಭೂಮಿಯ ಮೇಲೆ ಕ್ಷೋಭೆಯನ್ನುಂಟು ಮಾಡದಿರಿ ಎಂದು ಅವರೊಡನೆ ಹೇಳಿದಾಗಲೆಲ್ಲ ಅವರು, "ನಾವು ಸುಧಾರಕರು ಮಾತ್ರ" ಎಂದು ಹೇಳುತ್ತಾರೆ.

وَإِذَا قِيلَ لَهُمْ لَا تُفْسِدُوا فِي الْأَرْضِ قَالُوا إِنَّمَا نَحْنُ مُصْلِحُونَ ﴿١١﴾

12. ಜಾಗ್ರತೆ! ವಾಸ್ತವದಲ್ಲಿ ಅವರೇ ಗೊಂದಲಕಾರಿಗಳು. ಆದರೆ ಅವರಿಗೆ ಬೋಧವಿರುವುದಿಲ್ಲ.

أَلَا إِنَّهُمْ هُمُ الْمُفْسِدُونَ وَلَٰكِن لَّا يَشْعُرُونَ ﴿١٢﴾

---

4. ಅಲ್ಲಾಹನು ಮುದ್ರೆಯೊತ್ತಿದ್ದ ಕಾರಣದಿಂದ ಅವರು ಅನುಸರಣೆಯನ್ನು ನಿರಾಕರಿಸಿದರೆಂದು ಇದರ ಅರ್ಥವಲ್ಲ. ಮೇಲೆ ಪ್ರಸ್ತಾಪಿಸಲಾದ ಮೂಲಭೂತ ವಿಷಯಗಳನ್ನು ಅಲ್ಲಗಳೆದು, ತಮಗಾಗಿ ಕುರ್‌ಆನ್ ಪ್ರಸ್ತಾವಿಸಿರುವುದಕ್ಕಿಂತ ಭಿನ್ನವಾದ ಮಾರ್ಗವನ್ನು ಆಯ್ಕೆ ಮಾಡಿದ್ದರಿಂದಾಗಿ ಅಲ್ಲಾಹನು ಅವರ ಹೃದಯ ಮತ್ತು ಕಿವಿಗಳಿಗೆ ಮುದ್ರೆಯೊತ್ತಿದನು ಎಂಬುದು ಇದರ ಅರ್ಥವಾಗಿದೆ.

5. ರೋಗವೆಂದರೆ ಕಾಪಟ್ಯದ ರೋಗವಾಗಿದೆ. ಅಲ್ಲಾಹನು ರೋಗವನ್ನು ಉಲ್ಬಣಿಸುತ್ತಾನೆಂದರೆ, ಕಪಟವಿಶ್ವಾಸಿಯನ್ನು ಅಲ್ಲಾಹನು ತಕ್ಷಣ ಶಿಕ್ಷಿಸದೆ ಸಡಿಲ ಬಿಟ್ಟು ಬಿಡುತ್ತಾನೆ. ಇದರಿಂದ ಆತನ ಕಾಪಟ್ಯ ಇನ್ನಷ್ಟು ಹೆಚ್ಚುತ್ತದೆ.

13. "ಇತರರು ವಿಶ್ವಾಸವಿಟ್ಟಂತೆಯೇ ನೀವು ವಿಶ್ವಾಸವಿಡಿರಿ" ಎಂದು ಅವರೊಡನೆ ಹೇಳಲಾದಾಗ, "ಏನು? ಮೂರ್ಖರ ಹಾಗೆ ನಾವೂ ವಿಶ್ವಾಸವಿಡಬೇಕೇ?" ಎಂದು ಅವರು ಹೇಳುತ್ತಾರೆ. ಎಚ್ಚರಿಕೆ! ನಿಜವಾಗಿ ಅವರೇ ಸ್ವತಃ ಮೂರ್ಖರಾಗಿದ್ದಾರೆ ಎಂಬುದನ್ನು ಅವರು ಅರಿತಿಲ್ಲ.

وَإِذَا قِيلَ لَهُمْ آمِنُوا كَمَا آمَنَ النَّاسُ قَالُوا أَنُؤْمِنُ كَمَا آمَنَ السُّفَهَاءُ ۗ أَلَا إِنَّهُمْ هُمُ السُّفَهَاءُ وَلَٰكِن لَّا يَعْلَمُونَ ﴿١٣﴾

14. ಇವರು ವಿಶ್ವಾಸಿಗಳನ್ನು ಕಂಡಾಗ, "ನಾವು ವಿಶ್ವಾಸವಿಟ್ಟಿದ್ದೇವೆ" ಎನ್ನುತ್ತಾರೆ. ಅತ್ತ ತಮ್ಮ ಶೈತಾನರನ್ನು ಸಂಧಿಸಿದಾಗ ಅವರೊಡನೆ, "ನಿಜವಾಗಿ ನಾವು ನಿಮ್ಮ ಜೊತೆಯಲ್ಲೇ ಇದ್ದೇವೆ. ನಾವು ವಿಶ್ವಾಸವಿಡುವವರನ್ನು ಕೇವಲ ಅಪಹಾಸ್ಯ ಮಾಡುತ್ತಿದ್ದೇವೆ" ಎನ್ನುತ್ತಾರೆ.

وَإِذَا لَقُوا الَّذِينَ آمَنُوا قَالُوا آمَنَّا وَإِذَا خَلَوْا إِلَىٰ شَيَاطِينِهِمْ قَالُوا إِنَّا مَعَكُمْ إِنَّمَا نَحْنُ مُسْتَهْزِئُونَ ﴿١٤﴾

15. ಅಲ್ಲಾಹನು ಇವರನ್ನು ಅಪಹಾಸ್ಯ ಮಾಡುತ್ತಿದ್ದಾನೆ. ಇವರು ಈ ದ್ರೋಹದಲ್ಲಿ ಕುರುಡರಂತೆ ಅಲೆದಾಡುತ್ತಿರಲು ಇನ್ನಷ್ಟು ದೀರ್ಘ ಅವಕಾಶವನ್ನು ನೀಡುತ್ತಿದ್ದಾನೆ.

اللَّهُ يَسْتَهْزِئُ بِهِمْ وَيَمُدُّهُمْ فِي طُغْيَانِهِمْ يَعْمَهُونَ ﴿١٥﴾

16. ಇವರು ಸನ್ಮಾರ್ಗಕ್ಕೆ ಬದಲಾಗಿ ದುರ್ಮಾರ್ಗವನ್ನು ಖರೀದಿಸಿಕೊಂಡವರಾಗಿದ್ದಾರೆ. ಆದರೆ ಈ ವ್ಯಾಪಾರ ಇವರಿಗೆ ಲಾಭದಾಯಕವಾದುದಲ್ಲ ಮತ್ತು ಇವರು ಸನ್ಮಾರ್ಗ ಸಿದ್ಧಿಸಿದವರು ಅಲ್ಲವೇ ಅಲ್ಲ.

أُولَٰئِكَ الَّذِينَ اشْتَرَوُا الضَّلَالَةَ بِالْهُدَىٰ فَمَا رَبِحَت تِّجَارَتُهُمْ وَمَا كَانُوا مُهْتَدِينَ ﴿١٦﴾

17. ಇವರ ಉದಾಹರಣೆ ಹೀಗಿದೆ:- ಒಬ್ಬನು ಬೆಂಕಿ ಉರಿಸಿದನು. ಸುತ್ತಮುತ್ತಲೂ ಬೆಳಗಿದಾಗ ಅಲ್ಲಾಹನು ಇವರ ದೃಷ್ಟಿಯನ್ನು ಕಿತ್ತುಕೊಂಡನು ಮತ್ತು ಇವರನ್ನು ಕತ್ತಲೆಯಲ್ಲಿ ಏನೂ ಕಾಣದ ಸ್ಥಿತಿಯಲ್ಲಿ ಬಿಟ್ಟುಬಿಟ್ಟನು.[6]

مَثَلُهُمْ كَمَثَلِ الَّذِي اسْتَوْقَدَ نَارًا فَلَمَّا أَضَاءَتْ مَا حَوْلَهُ ذَهَبَ اللَّهُ بِنُورِهِمْ وَتَرَكَهُمْ فِي ظُلُمَاتٍ لَّا يُبْصِرُونَ ﴿١٧﴾

18. ಇವರು ಕಿವುಡರೂ ಮೂಕರೂ ಅಂಧರೂ ಆಗಿದ್ದಾರೆ. ಇನ್ನಿವರು ಮರಳುವವರಲ್ಲ.

صُمٌّ بُكْمٌ عُمْيٌ فَهُمْ لَا يَرْجِعُونَ ﴿١٨﴾

19. ಅಥವಾ ಇವರ ಉದಾಹರಣೆ ಹೀಗಿದೆ: ಆಕಾಶದಿಂದ ಧಾರಾಕಾರವಾಗಿ ಮಳೆ ಸುರಿಯುತ್ತಲಿದೆ. ಅದರೊಂದಿಗೆ ಕಾರ್ಮೋಡ, ಗುಡುಗು, ಮಿಂಚುಗಳೂ ಇವೆ. ಇವರು ಗುಡುಗಿನ ಗರ್ಜನೆಯನ್ನು ಕೇಳಿ ಮರಣಭಯದಿಂದ ಕಿವಿಗಳಲ್ಲಿ ಬೆರಳುಗಳನ್ನು ಒತ್ತಿಟ್ಟುಕೊಳ್ಳುತ್ತಾರೆ. ಅಲ್ಲಾಹನು ಈ ಸತ್ಯನಿಷೇಧಿಗಳನ್ನು ಎಲ್ಲ ದಿಕ್ಕುಗಳಿಂದಲೂ ಆವರಿಸಿಕೊಂಡಿರುತ್ತಾನೆ.

أَوْ كَصَيِّبٍ مِّنَ السَّمَاءِ فِيهِ ظُلُمَاتٌ وَرَعْدٌ وَبَرْقٌ يَجْعَلُونَ أَصَابِعَهُمْ فِي آذَانِهِم مِّنَ الصَّوَاعِقِ حَذَرَ الْمَوْتِ ۚ وَاللَّهُ مُحِيطٌ بِالْكَافِرِينَ ﴿١٩﴾

6. ಅರ್ಥಾತ್- ಅಲ್ಲಾಹನ ದಾಸನೋರ್ವ ಪ್ರಕಾಶವನ್ನು ಹರಡಿ, ಸತ್ಯವನ್ನು ಮಿಥ್ಯದಿಂದ ಬೇರ್ಪಡಿಸಿ ಸ್ಪಷ್ಟವಾಗಿ ತೋರಿಸಿಕೊಟ್ಟಾಗ ದೃಷ್ಟಿಯುಳ್ಳವರ ಮುಂದೆ ವಾಸ್ತವಿಕತೆಗಳೆಲ್ಲವೂ ವ್ಯಕ್ತವಾದವು. ಆದರೆ ಸ್ವೇಚ್ಛಾವೃತ್ತಿಯಿಂದ ಕುರುಡರಾಗಿದ್ದ ಆ ಕಪಟವಿಶ್ವಾಸಿಗಳಿಗೆ, ಆ ಬೆಳಕಿನಲ್ಲೂ ಏನೂ ಕಾಣಿಸಲಿಲ್ಲ.

20. ಮಿಂಚು ಇವರ ದೃಷ್ಟಿಯನ್ನು ಕಸಿದುಕೊಳ್ಳುವಂತಿದೆ. ಅದು ಕಿಂಚಿತ್ ಬೆಳಗಿದಾಗಲೆಲ್ಲ ಅದರ ಬೆಳಕಿನಲ್ಲಿ ಇವರು ಸ್ವಲ್ಪ ದೂರ ನಡೆಯುತ್ತಾರೆ ಮತ್ತು ಇವರ ಮೇಲೆ ಕತ್ತಲೆಯು ಕವಿದಾಗ ಇವರು ನಿಂತುಬಿಡುತ್ತಾರೆ.[7] ಅಲ್ಲಾಹ್ ಬಯಸಿದ್ದರೆ ಇವರ ಶ್ರವಣ ಮತ್ತು ದೃಷ್ಟಿಗಳನ್ನು ಸಂಪೂರ್ಣವಾಗಿ ಕಸಿದುಕೊಳ್ಳುತ್ತಿದ್ದನು. ನಿಶ್ಚಯವಾಗಿಯೂ ಅಲ್ಲಾಹನು ಪ್ರತಿಯೊಂದು ವಸ್ತುವಿನ ಮೇಲೆ ಸಾಮರ್ಥ್ಯವನ್ನು ಹೊಂದಿದ್ದಾನೆ.

يَكَادُ الْبَرْقُ يَخْطَفُ أَبْصَارَهُمْ ۖ كُلَّمَا أَضَاءَ لَهُم مَّشَوْا فِيهِ وَإِذَا أَظْلَمَ عَلَيْهِمْ قَامُوا ۚ وَلَوْ شَاءَ اللَّهُ لَذَهَبَ بِسَمْعِهِمْ وَأَبْصَارِهِمْ ۚ إِنَّ اللَّهَ عَلَىٰ كُلِّ شَيْءٍ قَدِيرٌ ﴿٢٠﴾

21. ಹೇ ಜನರೇ, ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ. (ಹೀಗೆ ಮಾಡಿದರೆ) ನೀವು ರಕ್ಷಣೆ ಹೊಂದಬಹುದು.[8]

يَا أَيُّهَا النَّاسُ اعْبُدُوا رَبَّكُمُ الَّذِي خَلَقَكُمْ وَالَّذِينَ مِن قَبْلِكُمْ لَعَلَّكُمْ تَتَّقُونَ ﴿٢١﴾

22. ಅವನೇ ಭೂಮಿಯನ್ನು ನಿಮಗೆ ಹಾಸನ್ನಾಗಿ ಹಾಸಿದನು; ಆಕಾಶದ ಮೇಲ್ಛಾವಣಿ ಮಾಡಿದನು; ಮೇಲ್ಭಾಗದಿಂದ ಮಳೆ ಸುರಿಸಿದನು. ಅದರ ಮೂಲಕ ತರತರದ ಬೆಳೆಗಳನ್ನು ಉತ್ಪಾದಿಸಿ ನಿಮಗೆ ಆಹಾರ ಒದಗಿಸಿದನು. ಇದನ್ನು ನೀವು ಅರಿತಿರುತ್ತ ಇತರರನ್ನು ಅಲ್ಲಾಹನಿಗೆ ಪ್ರತಿಸ್ಪರ್ಧಿಗಳನ್ನಾಗಿ ಮಾಡದಿರಿ.[9]

الَّذِي جَعَلَ لَكُمُ الْأَرْضَ فِرَاشًا وَالسَّمَاءَ بِنَاءً وَأَنزَلَ مِنَ السَّمَاءِ مَاءً فَأَخْرَجَ بِهِ مِنَ الثَّمَرَاتِ رِزْقًا لَّكُمْ ۖ فَلَا تَجْعَلُوا لِلَّهِ أَندَادًا وَأَنتُمْ تَعْلَمُونَ ﴿٢٢﴾

23. ನಾವು ನಮ್ಮ ದಾಸನಿಗೆ ಅವತೀರ್ಣಗೊಳಿಸಿದ ಈ ಗ್ರಂಥವು ನಮ್ಮದೋ ಅಲ್ಲವೋ ಎಂಬ ವಿಷಯದಲ್ಲಿ ನಿಮಗೆ ಸಂದೇಹವಿದ್ದರೆ ಇದಕ್ಕೆ ಸರಿಸಮಾನವಾದ ಒಂದು ಅಧ್ಯಾಯ ವನ್ನಾದರೂ ರಚಿಸಿ ತನ್ನಿರಿ. ಅಲ್ಲಾಹನ ಹೊರತು ನಿಮ್ಮೆಲ್ಲ ಸಾಕ್ಷಿಗಳನ್ನೂ ನಿಮ್ಮ ಸಹಾಯಕ್ಕಾಗಿ ಕರೆದು ತನ್ನಿರಿ. ನೀವು ಸತ್ಯವಾದಿಗಳಾಗಿದ್ದರೆ ಈ ಕಾರ್ಯವನ್ನು ಮಾಡಿ ತೋರಿಸಿರಿ.

وَإِن كُنتُمْ فِي رَيْبٍ مِّمَّا نَزَّلْنَا عَلَىٰ عَبْدِنَا فَأْتُوا بِسُورَةٍ مِّن مِّثْلِهِ وَادْعُوا شُهَدَاءَكُم مِّن دُونِ اللَّهِ إِن كُنتُمْ صَادِقِينَ ﴿٢٣﴾

24. ಆದರೆ ನೀವು ಹಾಗೆ ಮಾಡದಿದ್ದಲ್ಲಿ- ಮತ್ತು ಖಂಡಿತವಾಗಿಯೂ ನೀವು ಹಾಗೆಂದೂ ಮಾಡಲಾರಿರಿ- ಸತ್ಯನಿಷೇಧಿಗಳಿಗಾಗಿ

فَإِن لَّمْ تَفْعَلُوا وَلَن تَفْعَلُوا فَاتَّقُوا النَّارَ الَّتِي

7. ಮೊದಲ ಉದಾಹರಣೆಯು, ಮನಸ್ಸಿನಲ್ಲಿ ಸಂಪೂರ್ಣ ನಿರಾಕರಣೆಯಿದ್ದರೂ ಯಾವುದಾದರೂ ಸ್ವಾರ್ಥ ಅಥವಾ ದುರುದ್ದೇಶದಿಂದ ಮುಸ್ಲಿಮರಾಗಿ ಬಿಟ್ಟ ಕಪಟವಿಶ್ವಾಸಿಗಳ ಕುರಿತಾಗಿದೆ. ಈ ಎರಡನೆಯ ಉದಾಹರಣೆಯು ಸಂಶಯ, ಚಂಚಲತೆ ಮತ್ತು ದುರ್ಬಲ ವಿಶ್ವಾಸಕ್ಕೆ ಒಳಗಾದವರ ಕುರಿತಾಗಿದೆ. ಅವರು ಸ್ವಲ್ಪ ಮಟ್ಟಿಗೆ ಸತ್ಯವನ್ನು ನಂಬುವವರಾಗಿದ್ದರು. ಆದರೆ ಅವರು ಸತ್ಯಕ್ಕಾಗಿ ಎಂತಹ ಕಷ್ಟಕಾರ್ಪಣ್ಯಗಳನ್ನೂ ಸಹಿಸಲು ಸಿದ್ಧರಿರಲಿಲ್ಲ.

8. ಅಂದರೆ ಲೋಕದಲ್ಲಿ ಕೆಟ್ಟ ದೃಷ್ಟಿ ಮತ್ತು ದುಷ್ಕೃತ್ಯದಿಂದ ಹಾಗೂ ಪರಲೋಕದಲ್ಲಿ ದೇವಶಿಕ್ಷೆಯಿಂದ ಸುರಕ್ಷಿತರಾಗಬಹುದು.

9. ಇತರರನ್ನು ಅಲ್ಲಾಹನ ಪ್ರತಿಸ್ಪರ್ಧಿಗಳನ್ನಾಗಿ ಮಾಡುವುದೆಂದರೆ ದಾಸ್ಯ ಮತ್ತು ಆರಾಧನೆಯ ವಿವಿಧ ಪ್ರಕಾರಗಳಲ್ಲಿ ಯಾವುದಾದರೊಂದು ಪ್ರಕಾರದ ಮೂಲಕ ದೇವೇತರರೊಂದಿಗೆ ವ್ಯವಹರಿಸುವುದು.

ಸಿದ್ಧಗೊಳಿಸಲ್ಪಟ್ಟಿರುವ ಹಾಗೂ ಮನುಷ್ಯರನ್ನೂ ಶಿಲೆಗಳನ್ನೂ[10] ಇಂಧನವಾಗಿ ಉರಿಸುವ ಆ ನರಕವನ್ನು ಭಯಪಡಿರಿ.

وَقُودُهَا النَّاسُ وَالْحِجَارَةُ ۖ أُعِدَّتْ لِلْكَافِرِينَ ﴿٢٤﴾

25. ಪೈಗಂಬರರೇ, ಈ ಗ್ರಂಥದ ಮೇಲೆ ವಿಶ್ವಾಸವಿರಿಸಿ (ಅದರಂತೆ) ತಮ್ಮ ಕರ್ಮಗಳನ್ನು ಸರಿಪಡಿಸಿಕೊಳ್ಳುವವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ ಎಂಬ ಸುವಾರ್ತೆಯನ್ನು ಕೊಡಿರಿ. ಆ ಉದ್ಯಾನಗಳ ಫಲಗಳು ಇಹಲೋಕದ ಫಲಗಳನ್ನು ಹೋಲುತ್ತಿರುವುವು. ಅವರಿಗೆ ಆ ಫಲಗಳನ್ನು ತಿನ್ನಲು ಕೊಡಲಾದಾಗ ಅವರು, "ಇಂತಹ ಫಲಗಳೇ ಈ ಮುಂಚೆ ಭೂಲೋಕದಲ್ಲಿ ನಮಗೆ ಕೊಡಲಾಗುತ್ತಿದ್ದುವು" ಎಂದು ಹೇಳುವರು. ಅವರಿಗೆ ಅಲ್ಲಿ ಪರಿಶುದ್ಧ ಪತ್ನಿಯರಿರುವರು ಮತ್ತು ಅವರು ಅಲ್ಲಿ ಸದಾ ಕಾಲ ಇರುವರು.

وَبَشِّرِ الَّذِينَ آمَنُوا وَعَمِلُوا الصَّالِحَاتِ أَنَّ لَهُمْ جَنَّاتٍ تَجْرِي مِنْ تَحْتِهَا الْأَنْهَارُ ۖ كُلَّمَا رُزِقُوا مِنْهَا مِنْ ثَمَرَةٍ رِزْقًا ۙ قَالُوا هَٰذَا الَّذِي رُزِقْنَا مِنْ قَبْلُ ۖ وَأُتُوا بِهِ مُتَشَابِهًا ۖ وَلَهُمْ فِيهَا أَزْوَاجٌ مُطَهَّرَةٌ ۖ وَهُمْ فِيهَا خَالِدُونَ ﴿٢٥﴾

26. ಅಹುದು, ಅಲ್ಲಾಹನು ನುಸಿ ಅಥವಾ ಅದಕ್ಕಿಂತಲೂ ಕ್ಷುಲ್ಲಕ ವಸ್ತುವಿನ ಉಪಮೆ ಕೊಡುವ ಬಗ್ಗೆ ನಾಚುವುದಿಲ್ಲ.[11] "ಸತ್ಯವನ್ನು ಸ್ವೀಕರಿಸುವವರು ಈ ಉಪಮೆಗಳನ್ನು ಕಂಡು, ಇದು ಅವರ ಪ್ರಭುವಿನ ಕಡೆಯಿಂದಲೇ ಬಂದ ಪರಮಾರ್ಥವಾಗಿದೆ ಎಂದು ಗ್ರಹಿಸುತ್ತಾರೆ ಮತ್ತು ನಿಷೇಧಿಸುವವರು ಇವುಗಳನ್ನು ಕೇಳಿ, "ಇಂತಹ ಉಪಮೆಗಳೊಂದಿಗೆ ಅಲ್ಲಾಹನಿಗೇನು ಸಂಬಂಧ?" ಎನ್ನುತ್ತಾರೆ. ಹೀಗೆ ಅಲ್ಲಾಹನು ಒಂದೇ ವಿಷಯದ ಮೂಲಕ ಅನೇಕರನ್ನು ಮಾರ್ಗಭ್ರಷ್ಟರನ್ನಾಗಿ ಮಾಡುತ್ತಾನೆ ಮತ್ತು ಅನೇಕರಿಗೆ ಸನ್ಮಾರ್ಗ ತೋರಿಸುತ್ತಾನೆ. ಅವನು ಧರ್ಮಭ್ರಷ್ಟ(ಫಾಸಿಕ)[12]ರನ್ನು ಮಾತ್ರ ಮಾರ್ಗಭ್ರಷ್ಟರನ್ನಾಗಿ ಮಾಡುತ್ತಾನೆ.

إِنَّ اللَّهَ لَا يَسْتَحْيِي أَنْ يَضْرِبَ مَثَلًا مَا بَعُوضَةً فَمَا فَوْقَهَا ۚ فَأَمَّا الَّذِينَ آمَنُوا فَيَعْلَمُونَ أَنَّهُ الْحَقُّ مِنْ رَبِّهِمْ ۖ وَأَمَّا الَّذِينَ كَفَرُوا فَيَقُولُونَ مَاذَا أَرَادَ اللَّهُ بِهَٰذَا مَثَلًا ۘ يُضِلُّ بِهِ كَثِيرًا وَيَهْدِي بِهِ كَثِيرًا ۚ وَمَا يُضِلُّ بِهِ إِلَّا الْفَاسِقِينَ ﴿٢٦﴾

27. ಅಲ್ಲಾಹನ ಜೊತೆ ದೃಢವಾದ ಕರಾರು ಮಾಡಿಕೊಂಡ ಬಳಿಕ ಅದನ್ನು ಮುರಿದು ಹಾಕುವವರು,[13] ಅಲ್ಲಾಹನು ಜೋಡಿಸಲು

الَّذِينَ يَنْقُضُونَ عَهْدَ اللَّهِ مِنْ بَعْدِ مِيثَاقِهِ

10. ಅರ್ಥಾತ್- ಅಲ್ಲಿ ನೀವು ಮಾತ್ರ ನರಕದ ಉರುವಲಾಗಿ ಮಾರ್ಪಡುವುದಲ್ಲ. ನೀವು ದಾಸ್ಯ ಮತ್ತು ಸಾಷ್ಟಾಂಗಕ್ಕೆ ಅರ್ಹರೆಂದು ಭಾವಿಸುತ್ತಿದ್ದ ವಿಗ್ರಹಗಳೂ ನಿಮ್ಮ ಜತೆಗಿರುವುದು.

11. ಇಲ್ಲಿ ಒಂದು ಆಕ್ಷೇಪದ ಪ್ರಸ್ತಾಪ ಮಾಡದೆ ಅದಕ್ಕೆ ಉತ್ತರ ನೀಡಲಾಗಿದೆ. ಕುರ್‌ಆನಿನ ವಿವಿಧೆಡೆಗಳಲ್ಲಿ ವಿಷಯದ ನಿರೂಪಣೆಗಾಗಿ ಜೇಡ, ನೊಣ, ಸೊಳ್ಳೆ ಮುಂತಾದುವುಗಳ ಉದಾಹರಣೆ ಕೊಡಲಾಗಿದೆ. ಇಂತಹ ಕ್ಷುಲ್ಲಕ ಉದಾಹರಣೆಗಳನ್ನು ಪ್ರಸ್ತಾಪಿಸಿರುವ ದೇವಗ್ರಂಥವಾದರೂ ಎಂತಹುದು ಎಂಬುದು ವಿರೋಧಿಗಳ ಆಕ್ಷೇಪವಾಗಿತ್ತು.

12. ಧರ್ಮಭ್ರಷ್ಟ(ಫಾಸಿಕ್)ರು ಎಂದರೆ ಆಜ್ಞೋಲ್ಲಂಘಕರು ಮತ್ತು ದೇವಾನುಸರಣೆಯ ಎಲ್ಲೆ ಮೀರಿ ವರ್ತಿಸುವವರು.

13. ರಾಜನು ತನ್ನ ಸೇವಕರು ಮತ್ತು ಪ್ರಜೆಗಳಿಗಾಗಿ ಹೊರಡಿಸುವ ಆದೇಶ ಅಥವಾ ಮಾರ್ಗಸೂಚಿಗಳನ್ನು ಅರಬಿ ಭಾಷೆಯಲ್ಲಿ 'ಅಹ್ದ್' ಅಥವಾ ಕರಾರು ಎನ್ನಲಾಗುತ್ತದೆ. ಅಲ್ಲಾಹನ 'ಅಹ್ದ್' ಎಂದರೆ ಅವನ ಸ್ಥಿರ ಆದೇಶವಾಗಿದೆ. ಅದರ ಮೂಲಕ ಸಮಸ್ತ ಮಾನವಕುಲ

ಆಜ್ಞಾಪಿಸಿದುದನ್ನು ಮುರಿದು ಹಾಕುವವರು[14] ಮತ್ತು ಭೂಮಿಯ ಮೇಲೆ ಕ್ಷೋಭೆಯನ್ನುಂಟು ಮಾಡುವವರು. ಯಥಾರ್ಥವಾಗಿ ಇವರೇ ನಷ್ಟಕ್ಕೊಳಗಾಗುವವರು.

وَيَقْطَعُونَ مَآ أَمَرَ ٱللَّهُ بِهِۦٓ أَن يُوصَلَ وَيُفْسِدُونَ فِى ٱلْأَرْضِ ۚ أُو۟لَٰٓئِكَ هُمُ ٱلْخَٰسِرُونَ ﴿٢٧﴾

28. ನೀವು ಅಲ್ಲಾಹನನ್ನು ಹೇಗೆ ನಿರಾಕರಿಸುತ್ತೀರಿ? ನೀವಾದರೋ ನಿರ್ಜೀವಿಗಳಾಗಿದ್ದಿರಿ. ಅವನು ನಿಮಗೆ ಜೀವವಿತ್ತನು. ಇನ್ನು ಅವನೇ ನಿಮ್ಮ ಪ್ರಾಣ ತೆಗೆಯುವನು ಮತ್ತು ಅವನೇ ನಿಮಗೆ ಪುನರ್ಜೀವನ ನೀಡುವನು. ತರುವಾಯ ನಿಮಗೆ ಆತನೆಡೆಗೇ ಮರಳಿ ಹೋಗಬೇಕಾಗಿದೆ.

كَيْفَ تَكْفُرُونَ بِٱللَّهِ وَكُنتُمْ أَمْوَٰتًا فَأَحْيَٰكُمْ ۖ ثُمَّ يُمِيتُكُمْ ثُمَّ يُحْيِيكُمْ ثُمَّ إِلَيْهِ تُرْجَعُونَ ﴿٢٨﴾

29. ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ. ಬಳಿಕ ಗಗನದೆಡೆ ಗಮನ ಹರಿಸಿ ಸಪ್ತಗಗನಗಳಿಗೆ[15] ರೂಪು ಕೊಟ್ಟನು. ಆತನು ಸಕಲ ವಿಷಯಗಳ ಜ್ಞಾನಿಯಾಗಿರುತ್ತಾನೆ.

هُوَ ٱلَّذِى خَلَقَ لَكُم مَّا فِى ٱلْأَرْضِ جَمِيعًا ثُمَّ ٱسْتَوَىٰٓ إِلَى ٱلسَّمَآءِ فَسَوَّىٰهُنَّ سَبْعَ سَمَٰوَٰتٍ ۚ وَهُوَ بِكُلِّ شَىْءٍ عَلِيمٌ ﴿٢٩﴾

30. ನಿಮ್ಮ ಪ್ರಭುವು ಮಲಾಯಿಕಃ(ದೇವಚರ)ರೊಡನೆ, "ನಾನು ಭೂಮಿಯಲ್ಲಿ ಒಬ್ಬ ಖಲೀಫಃನನ್ನು[16] (ಪ್ರತಿನಿಧಿ) ನೇಮಿಸಲಿದ್ದೇನೆ" ಎಂದು ಹೇಳಿದ ಸಂದರ್ಭವನ್ನು ಕೊಂಚ ಊಹಿಸಿರಿ. ಅವರು, (ಹೀಗೆ) ನಿವೇದಿಸಿದರು: "ಭೂಮಿಯಲ್ಲಿ ಅದರ ವ್ಯವಸ್ಥೆಯನ್ನು ಕೆಡಿಸುವ ಹಾಗೂ ರಕ್ತಪಾತವೆಸಗುವವನನ್ನು ನೀನು ನೇಮಿಸುವೆಯಾ? ನಾವಂತೂ ನಿನ್ನ ಗುಣಗಾನ ಮಾಡುತ್ತಿರುವುದರೊಂದಿಗೆ ನಿನ್ನನ್ನು ಸ್ತುತಿಸುತ್ತಲೂ ನಿನ್ನ ಪರಿಶುದ್ಧತೆಯನ್ನು ಕೊಂಡಾಡುತ್ತಲೂ ಇದ್ದೇವೆ." ಆಗ ಆತನು ಹೇಳಿದನು, "ವಾಸ್ತವದಲ್ಲಿ ನೀವು ಅರಿಯದುದನ್ನು ನಾನು ಅರಿತಿದ್ದೇನೆ."

وَإِذْ قَالَ رَبُّكَ لِلْمَلَٰٓئِكَةِ إِنِّى جَاعِلٌ فِى ٱلْأَرْضِ خَلِيفَةً ۖ قَالُوٓا۟ أَتَجْعَلُ فِيهَا مَن يُفْسِدُ فِيهَا وَيَسْفِكُ ٱلدِّمَآءَ وَنَحْنُ نُسَبِّحُ بِحَمْدِكَ وَنُقَدِّسُ لَكَ ۖ قَالَ إِنِّىٓ أَعْلَمُ مَا لَا تَعْلَمُونَ ﴿٣٠﴾

31. ಅನಂತರ ಅಲ್ಲಾಹನು ಆದಮರಿಗೆ ಸಕಲ ವಸ್ತುಗಳ ನಾಮಗಳನ್ನು

وَعَلَّمَ ءَادَمَ ٱلْأَسْمَآءَ كُلَّهَا ثُمَّ عَرَضَهُمْ عَلَى ٱلْمَلَٰٓئِكَةِ

---

ಕೇವಲ ಅವನ ದಾಸ್ಯ, ಅನುಸರಣೆ ಮತ್ತು ಆರಾಧನೆಗಾಗಿ ನಿಯುಕ್ತಗೊಂಡಿದೆ. "ದೃಢವಾದ ಕರಾರನ್ನು ಮಾಡಿಕೊಂಡ ಬಳಿಕ" ಎಂಬುದು- ಆದಮ್‌ರನ್ನು(ಅ) ಸೃಷ್ಟಿಸಿದಾಗ ಸರ್ವಮಾನವ ಕುಲದಿಂದ ಈ ಆದೇಶ ಪಾಲನೆಯ ವಾಗ್ದಾನಪಡೆಯಲಾಗಿರುವುದರ ಕಡೆಗೆ ಸೂಚನೆಯಾಗಿದೆ. ಈ ಕುರಿತು ಸೂರಃ ಅಲ್ ಅಲ್‌ರಾಫ್‌ನ 172ನೆಯ ಸೂಕ್ತದಲ್ಲಿ ಪ್ರಸ್ತಾಪವಿದೆ.

14. ಅರ್ಥಾತ್ ಯಾವ ಸಂಬಂಧಗಳ ಸ್ಥಾಪನೆ ಮತ್ತು ಸ್ಥಿರತೆಯಲ್ಲಿ ಮಾನವನ ವೈಯಕ್ತಿಕ ಮತ್ತು ಸಾಮೂಹಿಕ ಅಭ್ಯುದಯ ಅಡಕವಾಗಿದೆಯೋ ಮತ್ತು ಯಾವ ಸಂಬಂಧಗಳನ್ನು ಸರಿಪಡಿಸಲು ಸ್ವತಃ ಅಲ್ಲಾಹನೇ ಆದೇಶಿಸಿದ್ದಾನೋ ಆ ಸಂಬಂಧಗಳಲ್ಲಿ ಇವರು ಹುಳಿ ಹಿಂಡುತ್ತಾರೆ.

15. ಏಳು ಆಕಾಶಗಳಲ್ಲಿ ವಾಸ್ತವಿಕತೆ ಏನೆಂದು ನಿರ್ಧರಿಸುವುದು ಕಷ್ಟ. ಮನುಷ್ಯ ಎಲ್ಲಾ ಕಾಲಗಳಲ್ಲಿ ಆಕಾಶ ಅಥವಾ ನಭೋಮಂಡಲದ ಬಗ್ಗೆ ತನ್ನ ವೀಕ್ಷಣೆ ಮತ್ತು ಊಹೆಯ ಆಧಾರದಲ್ಲಿ ವಿಭಿನ್ನ ಕಲ್ಪನೆಗಳನ್ನು ಇರಿಸುತ್ತಾ ಬಂದಿದ್ದಾನೆ. ಅದು ನಿರಂತರ ಬದಲಾಗುತ್ತಾ ಬಂದಿದೆ. ಒಟ್ಟಿನಲ್ಲಿ ಅದರ ಅರ್ಥ ಭೂಮಿಯಿಂದ ಹೊರತಾದ ಅಗಾಧ ವಿಶ್ವವನ್ನು ಅಲ್ಲಾಹನು ನಿಖರವಾದ ಏಳು ವಿಭಾಗಗಳಲ್ಲಿ ವಿಂಗಡಿಸಿದ್ದಾನೆ ಅಥವಾ ಭೂಮಿ ವಿಶ್ವದ ಯಾವ ಭಾಗದಲ್ಲಿ ನೆಲೆನಿಂತಿದೆಯೋ, ಅದು ಏಳು ವಿಭಾಗಗಳನ್ನೊಳಗೊಂಡಿದೆ ಎಂದಾಗಿರಬಹುದು.

16. ಖಲೀಫ (ಪ್ರತಿನಿಧಿ): ಒಬ್ಬನ ಸೊತ್ತಿನಲ್ಲಿ ಪ್ರತಿನಿಧಿ ಎಂಬ ನೆಲೆಯಲ್ಲಿ ಅವನು ನೀಡಿದ ಅಧಿಕಾರಗಳನ್ನು ಉಪಯೋಗಿಸುವವನು.

ಕಲಿಸಿದನು. ತರುವಾಯ ಅವರನ್ನು ದೇವಚರರ ಮುಂದೆ ತಂದು ಹೇಳಿದನು, "(ಓರ್ವ ಪ್ರತಿನಿಧಿಯ ನೇಮಕದಿಂದ ವ್ಯವಸ್ಥೆಯು ಕೆಟ್ಟು ಹೋಗುವುದೆಂಬ) ನಿಮ್ಮ ಭಾವನೆಯು ದಿಟವೆಂದಾದರೆ, ಈ ವಸ್ತುಗಳ ಹೆಸರುಗಳನ್ನು ನನಗೆ ತಿಳಿಸಿರಿ"-

فَقَالَ أَنۢبِـُٔونِى بِأَسْمَآءِ هَٰٓؤُلَآءِ إِن كُنتُمْ صَٰدِقِينَ ٣١

32. ಅವರು ಹೇಳಿದರು, "ನೀನು ಮಹಾ ಮಹಿಮನು, ನಮಗಂತು ನೀನು ಕಲಿಸಿ ಕೊಟ್ಟಷ್ಟು ಜ್ಞಾನ ಮಾತ್ರ ಇದೆ. ನಿಶ್ಚಯವಾಗಿಯೂ ನೀನು ಜ್ಞಾನಪೂರ್ಣನೂ ಯುಕ್ತಿಪೂರ್ಣನೂ ಆಗಿರುತ್ತೀ."

قَالُوا۟ سُبْحَٰنَكَ لَا عِلْمَ لَنَآ إِلَّا مَا عَلَّمْتَنَآ ۖ إِنَّكَ أَنتَ ٱلْعَلِيمُ ٱلْحَكِيمُ ٣٢

33. ಆ ಬಳಿಕ ಅಲ್ಲಾಹ್ ಆದಮರೊಡನೆ ಇಂತೆಂದನು- "ನೀನು ಇವರಿಗೆ ಈ ವಸ್ತುಗಳ ಹೆಸರುಗಳನ್ನು ಹೇಳಿ ತೋರಿಸು." ಅವರು(ಆದಮರು) ಅವರಿಗೆ ಅವುಗಳ ನಾಮಗಳನ್ನು ಹೇಳಿ ತೋರಿಸಿದರು. ಆಗ ಅಲ್ಲಾಹನು ಹೀಗೆಂದನು, "ನಿಮಗೆ ಅಗೋಚರವಾಗಿರುವ ಆಕಾಶಗಳ ಮತ್ತು ಭೂಮಿಯ ಎಲ್ಲ ಯಥಾರ್ಥಗಳನ್ನು ನಾನು ಬಲ್ಲವನಾಗಿರುತ್ತೇನೆಂದೂ ನೀವು ಬಹಿರಂಗಗೊಳಿಸುವುದನ್ನೂ ಮರೆಮಾಚುವುದನ್ನೂ ನಾನು ಬಲ್ಲವನಾಗಿರುತ್ತೇನೆಂದೂ ನಿಮ್ಮೊಡನೆ ಹೇಳಿರಲಿಲ್ಲವೇ?"

قَالَ يَٰٓـَٔادَمُ أَنۢبِئْهُم بِأَسْمَآئِهِمْ ۖ فَلَمَّآ أَنۢبَأَهُم بِأَسْمَآئِهِمْ قَالَ أَلَمْ أَقُل لَّكُمْ إِنِّىٓ أَعْلَمُ غَيْبَ ٱلسَّمَٰوَٰتِ وَٱلْأَرْضِ وَأَعْلَمُ مَا تُبْدُونَ وَمَا كُنتُمْ تَكْتُمُونَ ٣٣

34. ತರುವಾಯ, "ಆದಮರ ಮುಂದೆ ಬಾಗಿರಿ" ಎಂದು ನಾವು ದೇವಚರರಿಗೆ ಆಜ್ಞಾಪಿಸಿದಾಗ- ಎಲ್ಲರೂ ಬಾಗಿದರು. ಆದರೆ ಇಬ್‌ಲೀಸನು ನಿರಾಕರಿಸಿದನು. ಅವನು ತನ್ನ ಶ್ರೇಷ್ಠತೆಯ ದುರಹಂಕಾರದಲ್ಲಿ ಬಿದ್ದು ಅವಿಧೇಯರಲ್ಲಾದನು.

وَإِذْ قُلْنَا لِلْمَلَٰٓئِكَةِ ٱسْجُدُوا۟ لِءَادَمَ فَسَجَدُوٓا۟ إِلَّآ إِبْلِيسَ أَبَىٰ وَٱسْتَكْبَرَ وَكَانَ مِنَ ٱلْكَٰفِرِينَ ٣٤

35. ಆ ಬಳಿಕ ನಾವು ಆದಮರೊಡನೆ, "ನೀನು ಮತ್ತು ನಿನ್ನ ಪತ್ನಿ- ಇಬ್ಬರೂ ಸ್ವರ್ಗದಲ್ಲಿರಿ ಮತ್ತು ಅಲ್ಲಿ ನೀವು ಇಚ್ಛಿಸಿದ್ದೆಲ್ಲವನ್ನೂ ಬೇಕಷ್ಟು ಉಣ್ಣಿರಿ. ಆದರೆ, ಆ ವೃಕ್ಷವನ್ನು ಸಮೀಪಿಸಬಾರದು. ಅನ್ಯಥಾ ಅಕ್ರಮಿಗಳಾಗುವಿರಿ" ಎಂದೆವು.

وَقُلْنَا يَٰٓـَٔادَمُ ٱسْكُنْ أَنتَ وَزَوْجُكَ ٱلْجَنَّةَ وَكُلَا مِنْهَا رَغَدًا حَيْثُ شِئْتُمَا وَلَا تَقْرَبَا هَٰذِهِ ٱلشَّجَرَةَ فَتَكُونَا مِنَ ٱلظَّٰلِمِينَ ٣٥

36. ಕೊನೆಗೆ ಶೈತಾನನು ಅವರಿಬ್ಬರನ್ನೂ ಆ ವೃಕ್ಷದ ಕಡೆಗೆ ಪ್ರೇರೇಪಿಸಿ ನಮ್ಮ ಆಜ್ಞಾಪಾಲನೆಯಿಂದ ತಡೆದುದಲ್ಲದೆ, ಅವರು ಹಿಂದೆ ಇದ್ದ ಸ್ಥಿತಿಯಿಂದ ಅವರನ್ನು ಹೊರತಂದುಬಿಟ್ಟನು. ಆಗ, "ನೀವಿನ್ನು ಇಲ್ಲಿಂದ ಹೊರಗಿಳಿಯಿರಿ. ನೀವು ಪರಸ್ಪರ ಶತ್ರುಗಳಾಗಿರುತ್ತೀರಿ ಮತ್ತು ನಿಮಗೆ ಒಂದು ನಿರ್ದಿಷ್ಟ ಕಾಲದವರೆಗೆ ಭೂಮಿಯ ಮೇಲಿದ್ದು ಅಲ್ಲಿ ಜೀವಿಸಬೇಕಾದೀತು" ಎಂದು ನಾವು ಆಜ್ಞಾಪಿಸಿದೆವು.

فَأَزَلَّهُمَا ٱلشَّيْطَٰنُ عَنْهَا فَأَخْرَجَهُمَا مِمَّا كَانَا فِيهِ ۖ وَقُلْنَا ٱهْبِطُوا۟ بَعْضُكُمْ لِبَعْضٍ عَدُوٌّ ۖ وَلَكُمْ فِى ٱلْأَرْضِ مُسْتَقَرٌّ وَمَتَٰعٌ إِلَىٰ حِينٍ ٣٦

37. ಆಗ ಆದಮ್ ತನ್ನ ಪ್ರಭುವಿನಿಂದ ಕೆಲವು ಮಾತುಗಳನ್ನು ಕಲಿತುಕೊಂಡು ಪಶ್ಚಾತ್ತಾಪ ಪ್ರಕಟಿಸಿದರು. ಅದನ್ನು ಅವರ ಪ್ರಭುವು ಸ್ವೀಕರಿಸಿದನು. ಏಕೆಂದರೆ, ಅವನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

فَتَلَقَّىٰٓ ءَادَمُ مِن رَّبِّهِۦ كَلِمَٰتٍ فَتَابَ عَلَيْهِ ۚ إِنَّهُۥ هُوَ ٱلتَّوَّابُ ٱلرَّحِيمُ ﴿٣٧﴾

38. ನಾವಂದೆವು, "ನೀವೆಲ್ಲರೂ ಇಲ್ಲಿಂದ ಹೊರಗಿಳಿಯಿರಿ. ಮುಂದೆ ನನ್ನ ಕಡೆಯಿಂದ ಮಾರ್ಗದರ್ಶನವು ನಿಮ್ಮ ಬಳಿ ಬಂದಾಗ, ಯಾರು ಆ ಮಾರ್ಗದರ್ಶನದಂತೆ ನಡೆಯುವರೋ ಅವರಿಗೆ ಯಾವುದೇ ಭಯ ಮತ್ತು ಚಿಂತೆ ಇರಲಾರದು."

قُلْنَا ٱهْبِطُوا۟ مِنْهَا جَمِيعًا ۖ فَإِمَّا يَأْتِيَنَّكُم مِّنِّى هُدًى فَمَن تَبِعَ هُدَاىَ فَلَا خَوْفٌ عَلَيْهِمْ وَلَا هُمْ يَحْزَنُونَ ﴿٣٨﴾

39. ಆ ಮಾರ್ಗದರ್ಶನವನ್ನು ಮಾನ್ಯಮಾಡಲು ನಿರಾಕರಿಸುವವರೂ ನಮ್ಮ 'ದೃಷ್ಟಾಂತ'ಗಳನ್ನು ಸುಳ್ಳಾಗಿಸುವವರೂ ನರಕಾಗ್ನಿಯಲ್ಲಿ ಬೀಳುವವರಾಗಿದ್ದು ಅಲ್ಲಿ ಅವರು ಸದಾ ಕಾಲವೂ ಇರುವರು.

وَٱلَّذِينَ كَفَرُوا۟ وَكَذَّبُوا۟ بِـَٔايَٰتِنَآ أُو۟لَٰٓئِكَ أَصْحَٰبُ ٱلنَّارِ ۖ هُمْ فِيهَا خَٰلِدُونَ ﴿٣٩﴾

40. ಓ ಇಸ್ರಾಈಲ್ ಸಂತತಿಯವರೇ,[17] ನಾನು ನಿಮಗೆ ದಯಪಾಲಿಸಿದ ನನ್ನ ಕೊಡುಗೆಗಳನ್ನು ಸ್ಮರಿಸಿರಿ. ನನ್ನೊಡನೆ ನೀವು ಮಾಡಿದ ಕರಾರನ್ನು ಪೂರೈಸಿದರೆ ನಿಮ್ಮೊಡನೆ ಮಾಡಿದ್ದ ಕರಾರನ್ನು ನಾನೂ ಪೂರೈಸುವೆನು ಮತ್ತು ನನ್ನನ್ನು ಮಾತ್ರ ಭಯಪಡಿರಿ.

يَٰبَنِىٓ إِسْرَٰٓءِيلَ ٱذْكُرُوا۟ نِعْمَتِىَ ٱلَّتِىٓ أَنْعَمْتُ عَلَيْكُمْ وَأَوْفُوا۟ بِعَهْدِىٓ أُوفِ بِعَهْدِكُمْ وَإِيَّٰىَ فَٱرْهَبُونِ ﴿٤٠﴾

41. ನಾನು ಕಳುಹಿಸಿದ ಗ್ರಂಥದ ಮೇಲೆ ವಿಶ್ವಾಸವಿಡಿರಿ. ಈ ಗ್ರಂಥವು ಈ ಮೊದಲೇ ನಿಮ್ಮ ಬಳಿಯಲ್ಲಿರುವ ಗ್ರಂಥವನ್ನು ಸಮರ್ಥಿಸುತ್ತದೆ. ಆದುದರಿಂದ ಅದನ್ನು ನಿಷೇಧಿಸುವವರಲ್ಲಿ ನೀವೇ ಮೊದಲಿಗರಾಗಬೇಡಿರಿ. ನನ್ನ ವಚನಗಳನ್ನು ಅಲ್ಪ ಬೆಲೆಗೆ ವಿಕ್ರಯಿಸಬೇಡಿರಿ[18] ಮತ್ತು ನನ್ನ ಕ್ರೋಧಕ್ಕೆ ಭಯಪಡಿರಿ.

وَءَامِنُوا۟ بِمَآ أَنزَلْتُ مُصَدِّقًا لِّمَا مَعَكُمْ وَلَا تَكُونُوٓا۟ أَوَّلَ كَافِرٍۭ بِهِۦ ۖ وَلَا تَشْتَرُوا۟ بِـَٔايَٰتِى ثَمَنًا قَلِيلًا وَإِيَّٰىَ فَٱتَّقُونِ ﴿٤١﴾

42. ಮಿಥ್ಯದ ಬಣ್ಣ ಬಳಿದು ಸತ್ಯವನ್ನು ಸಂದೇಹಾಸ್ಪದವನ್ನಾಗಿ ಮಾಡಬೇಡಿರಿ ಮತ್ತು ತಿಳಿದೂ ತಿಳಿದೂ ಸತ್ಯವನ್ನು ಬಚ್ಚಿಡಲು ಪ್ರಯತ್ನಿಸಬೇಡಿರಿ.

وَلَا تَلْبِسُوا۟ ٱلْحَقَّ بِٱلْبَٰطِلِ وَتَكْتُمُوا۟ ٱلْحَقَّ وَأَنتُمْ تَعْلَمُونَ ﴿٤٢﴾

43. ನಮಾಝನ್ನು ಸಂಸ್ಥಾಪಿಸಿರಿ. ಝಕಾತ್ (ಕಡ್ಡಾಯದಾನ) ಕೊಡಿರಿ ಮತ್ತು ನನ್ನ ಮುಂದೆ ಬಾಗುವವರೊಂದಿಗೆ ನೀವೂ ಬಾಗಿರಿ.

وَأَقِيمُوا۟ ٱلصَّلَوٰةَ وَءَاتُوا۟ ٱلزَّكَوٰةَ وَٱرْكَعُوا۟ مَعَ ٱلرَّٰكِعِينَ ﴿٤٣﴾

17. ಮದೀನಾ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಯಹೂದಿಯರು ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದರು. ಆದ್ದರಿಂದ ಇದರ ನಂತರ ಅನೇಕ ರುಕೂಅ್(ಪರಿಚ್ಛೇದ)ಗಳ ತನಕ ಅವರನ್ನುದ್ದೇಶಿಸಿ ಬೋಧನೆ ನೀಡಲಾಗಿದೆ.

18. ಯಾವ ಲೌಕಿಕ ಲಾಭಗಳಿಗಾಗಿ ಇವರು ಅಲ್ಲಾಹನ ಆದೇಶ ಮತ್ತು ಮಾರ್ಗದರ್ಶನವನ್ನು ನಿರಾಕರಿಸುತ್ತಿದ್ದರು ಅದನ್ನೇ ಇಲ್ಲಿ 'ಅಲ್ಪ ಬೆಲೆ' ಎನ್ನಲಾಗಿದೆ. ಸತ್ಯದ ವಿಕ್ರಯಕ್ಕೆ ಪ್ರತಿಯಾಗಿ ಮಾನವನು ಲೋಕದ ಸಕಲ ಸಂಪತ್ತನ್ನು ಪಡೆದರೂ ಅದು ಅಲ್ಪ ಬೆಲೆಯಾಗಿದೆ. ಏಕೆಂದರೆ ನಿಶ್ಚಯವಾಗಿಯೂ ಸತ್ಯ ಅದಕ್ಕಿಂತ ಶ್ರೇಷ್ಠವಾದುದು.

44. ನೀವು ಇತರರಿಗೆ ಸನ್ಮಾರ್ಗವನ್ನನುಸರಿಸಲು ಉಪದೇಶ ನೀಡುತ್ತೀರಿ. ಆದರೆ ನಿಮ್ಮನ್ನು ನೀವು ಮರೆತೇ ಬಿಡುತ್ತೀರಾ? ವಸ್ತುತಃ ನೀವು ದಿವ್ಯ ಗ್ರಂಥವನ್ನು ಪಠಿಸುತ್ತೀರಿ. ನೀವು ಒಂದಿಷ್ಟೂ ಯೋಚಿಸುವುದಿಲ್ಲವೇ?

أَتَأْمُرُونَ النَّاسَ بِالْبِرِّ وَتَنسَوْنَ أَنفُسَكُمْ وَأَنتُمْ تَتْلُونَ الْكِتَابَ ۚ أَفَلَا تَعْقِلُونَ ﴿٤٤﴾

45-46. ಸಹನೆ ಮತ್ತು ನಮಾಝ್‌ಗಳಿಂದ ಸಹಾಯ ಪಡೆಯಿರಿ. ಖಂಡಿತವಾಗಿಯೂ ನಮಾಝ್ ಅತ್ಯಂತ ಕಷ್ಟಕರ ಕಾರ್ಯ. ಆದರೆ ಕಟ್ಟಕಡೆಗೆ ತಮ್ಮ ಪ್ರಭುವನ್ನು ಸಂಧಿಸಬೇಕೆಂದೂ ಆತನೆಡೆಗೇ ಮರಳಬೇಕೆಂದೂ ನಂಬಿರುವ ಆಜ್ಞಾಪಾಲಕ ದಾಸರಿಗೆ ಅದು ಕಷ್ಟಕರವಲ್ಲ.

وَاسْتَعِينُوا بِالصَّبْرِ وَالصَّلَاةِ ۚ وَإِنَّهَا لَكَبِيرَةٌ إِلَّا عَلَى الْخَاشِعِينَ ﴿٤٥﴾ الَّذِينَ يَظُنُّونَ أَنَّهُم مُّلَاقُو رَبِّهِمْ وَأَنَّهُمْ إِلَيْهِ رَاجِعُونَ ﴿٤٦﴾

الربع

47. ಓ ಇಸ್ರಾಈಲ್ ಸಂತತಿಯವರೇ, ನಾನು ನಿಮಗೆ ದಯಪಾಲಿಸಿದ್ದ ನನ್ನ ಕೊಡುಗೆಗಳನ್ನೂ ಲೋಕದ ಎಲ್ಲಾ ಜನಾಂಗಗಳ ಮೇಲೆ ನಿಮಗೆ ಶ್ರೇಷ್ಠತೆ ದಯಪಾಲಿಸಿದ್ದುದನ್ನೂ ಸ್ಮರಿಸಿರಿ.[19]

يَا بَنِي إِسْرَائِيلَ اذْكُرُوا نِعْمَتِيَ الَّتِي أَنْعَمْتُ عَلَيْكُمْ وَأَنِّي فَضَّلْتُكُمْ عَلَى الْعَالَمِينَ ﴿٤٧﴾

48. ಯಾರೂ ಯಾರಿಗೂ ಕಿಂಚಿತ್ತೂ ಸಹಾಯಕನಾಗದ ಆ ದಿನವನ್ನು ಭಯಪಡಿರಿ. ಅಂದು ಯಾವನಿಂದಲೂ ಶಿಫಾರಸು ಸ್ವೀಕರಿಸಲಾಗದು; ಯಾವನಿಂದಲೂ ಪರಿಹಾರ ಪಡೆದು ಬಿಡುಗಡೆ ಮಾಡಲಾಗದು ಮತ್ತು ಅಪರಾಧಿಗಳಿಗೆ ಎಲ್ಲಿಂದಲೂ ಸಹಾಯವೊದಗದು.

وَاتَّقُوا يَوْمًا لَّا تَجْزِي نَفْسٌ عَن نَّفْسٍ شَيْئًا وَلَا يُقْبَلُ مِنْهَا شَفَاعَةٌ وَلَا يُؤْخَذُ مِنْهَا عَدْلٌ وَلَا هُمْ يُنصَرُونَ ﴿٤٨﴾

49. ನಾವು ನಿಮ್ಮನ್ನು ಫಿರ್‌ಔನಿ[20]ಯರ ದಾಸ್ಯದಿಂದ ವಿಮೋಚನೆ ಗೊಳಿಸಿದ ಕಾಲವನ್ನು ಸ್ಮರಿಸಿರಿ. ಅವರು ನಿಮ್ಮನ್ನು ಘೋರ ಯಾತನೆಯಲ್ಲಿ ಸಿಲುಕಿಸಿದ್ದರು. ನಿಮ್ಮ ಗಂಡುಮಕ್ಕಳನ್ನು ಕೊಲೆ ಮಾಡುತ್ತಿದ್ದರು ಮತ್ತು ನಿಮ್ಮ ಹೆಣ್ಣುಮಕ್ಕಳನ್ನು ಬದುಕಿರಲು ಬಿಡುತ್ತಿದ್ದರು. ಆ ಪರಿಸ್ಥಿತಿಯಲ್ಲಿ ನಿಮ್ಮ ಪ್ರಭುವಿನ ಕಡೆಯಿಂದ ನಿಮಗೊಂದು ದೊಡ್ಡ ಪರೀಕ್ಷೆ ಎದುರಾಗಿತ್ತು.

وَإِذْ نَجَّيْنَاكُم مِّنْ آلِ فِرْعَوْنَ يَسُومُونَكُمْ سُوءَ الْعَذَابِ يُذَبِّحُونَ أَبْنَاءَكُمْ وَيَسْتَحْيُونَ نِسَاءَكُمْ ۚ وَفِي ذَٰلِكُم بَلَاءٌ مِّن رَّبِّكُمْ عَظِيمٌ ﴿٤٩﴾

19. ನಿಮ್ಮನ್ನು ಶಾಶ್ವತವಾಗಿ ಜಗತ್ತಿನ ಸಮುದಾಯಗಳಲ್ಲಿ ಶ್ರೇಷ್ಠರಾಗಿ ಮಾಡಲಾಗಿದೆ ಎಂದು ಇದರ ಅರ್ಥವಲ್ಲ. ಒಂದು ಕಾಲದಲ್ಲಿ ಜಗತ್ತಿನ ಸಮುದಾಯಗಳ ಪೈಕಿ ಅಲ್ಲಾಹನ ಸತ್ಯಜ್ಞಾನವನ್ನು ಹೊಂದಿದ ಸಮುದಾಯ ನೀವು ಮಾತ್ರವಾಗಿದ್ದಿರಿ. ಆದ್ದರಿಂದಲೇ ನಿಮ್ಮನ್ನು ಜಾಗತಿಕ ಸಮುದಾಯಗಳ ನಾಯಕರಾಗಿಯೂ ಮಾರ್ಗದರ್ಶಿಗಳನ್ನಾಗಿಯೂ ಮಾಡಲಾಗಿತ್ತು. ದೇವನ ದಾಸ್ಯದ ಕಡೆಗೆ ಎಲ್ಲಾ ಸಮುದಾಯಗಳನ್ನು ಕರೆಯುವ ಮತ್ತು ಅವರನ್ನು ಅದರಲ್ಲಿ ಮುನ್ನಡೆಸುವ ಕರ್ತವ್ಯವನ್ನು ನಿಮಗೆ ನೀಡಲಾಗಿತ್ತು ಎಂಬುದು ಇದರ ಅರ್ಥವಾಗಿದೆ.

20. 'ಅಲ್ ಫಿರ್‌ಔನ್' ಎಂಬ ಪದವನ್ನು ನಾವು ಫಿರ್‌ಔನಿಯರು ಎಂದು ಅನುವಾದಿಸಿದ್ದೇವೆ. ಇದರಲ್ಲಿ ಫಿರ್‌ಔನ್‌ನ ಕುಟುಂಬ ಮತ್ತು ಈಜಿಪ್ಟ್‌ನ ಆಡಳಿತ ವರ್ಗಗಳೆರಡೂ ಸೇರಿವೆ.

50. ನಾವು ಸಮುದ್ರವನ್ನು ಭೇದಿಸಿ ನಿಮಗಾಗಿ ದಾರಿ ಮಾಡಿಕೊಟ್ಟ ಸಂದರ್ಭವನ್ನು ಸ್ಮರಿಸಿರಿ. ಬಳಿಕ ನಿಮ್ಮನ್ನು ಅದರೊಳಗಿಂದ ಸುರಕ್ಷಿತವಾಗಿ ಪಾರುಮಾಡಿಸಿದೆವು ಮತ್ತು ನಿಮ್ಮ ಕಣ್ಣೆದುರಲ್ಲೇ ಫಿರ್‌ಔನಿಯರನ್ನು ಮುಳುಗಿಸಿಬಿಟ್ಟೆವು.

وَإِذْ فَرَقْنَا بِكُمُ الْبَحْرَ فَأَنجَيْنَاكُمْ وَأَغْرَقْنَا آلَ فِرْعَوْنَ وَأَنتُمْ تَنظُرُونَ ﴿٥٠﴾

51. ನಾವು 'ಮೂಸಾ'ರನ್ನು ನಲವತ್ತು ಆಹೋರಾತ್ರಿಗಳ ಕರಾರಿನಂತೆ ಕರೆಸಿಕೊಂಡ ಸಂದರ್ಭವನ್ನು ಸ್ಮರಿಸಿರಿ.[21] ಅವರಿಲ್ಲದಿರುವಾಗ ನೀವು ಹಸುವಿನ ಕರುವನ್ನು ಆರಾಧ್ಯವನ್ನಾಗಿಸಿಬಿಟ್ಟಿರಿ. ಆಗ ನೀವು ದೊಡ್ಡ ಅಕ್ರಮವನ್ನೇ ಎಸಗಿದ್ದಿರಿ.

وَإِذْ وَاعَدْنَا مُوسَىٰ أَرْبَعِينَ لَيْلَةً ثُمَّ اتَّخَذْتُمُ الْعِجْلَ مِن بَعْدِهِ وَأَنتُمْ ظَالِمُونَ ﴿٥١﴾

52. ಆದರೆ ಇಷ್ಟಾಗಿಯೂ, ಇನ್ನಾದರೂ ನೀವು ಕೃತಜ್ಞರಾಗಬಹುದೆಂದು ನಾವು ನಿಮ್ಮನ್ನು ಕ್ಷಮಿಸಿದೆವು.

ثُمَّ عَفَوْنَا عَنكُم مِّن بَعْدِ ذَٰلِكَ لَعَلَّكُمْ تَشْكُرُونَ ﴿٥٢﴾

53. (ನೀವು ಅಕ್ರಮವೆಸಗುತ್ತಿದ್ದ ಅದೇ ವೇಳೆಯಲ್ಲಿ) ನಿಮಗೆ ಸನ್ಮಾರ್ಗ ಲಭಿಸಲೆಂದು ಮೂಸಾರಿಗೆ ನಾವು ಗ್ರಂಥವನ್ನೂ ಫುರ್ಕಾನನ್ನೂ[22] ನೀಡಿದ್ದ ಸಂದರ್ಭವನ್ನು ಸ್ಮರಿಸಿರಿ.

وَإِذْ آتَيْنَا مُوسَى الْكِتَابَ وَالْفُرْقَانَ لَعَلَّكُمْ تَهْتَدُونَ ﴿٥٣﴾

54. ಮೂಸಾ (ಈ ಕೊಡುಗೆಯನ್ನು ತೆಗೆದುಕೊಂಡು ಮರಳಿ ಬಂದು) ತನ್ನ ಜನಾಂಗದೊಡನೆ, "ಜನರೇ, ನೀವು ಹಸುವಿನ ಕರುವನ್ನು ಆರಾಧ್ಯವನ್ನಾಗಿ ಸ್ವೀಕರಿಸಿ ನಿಜಕ್ಕೂ ನಿಮ್ಮ ಮೇಲೆ ದೊಡ್ಡ ಅಕ್ರಮವೆಸಗಿದಿರಿ. ಆದುದರಿಂದ ನೀವು ನಿಮ್ಮ ಸೃಷ್ಟಿಕರ್ತನ ಮುಂದೆ ಪಶ್ಚಾತ್ತಾಪ ಪಡಿರಿ ಮತ್ತು ನಿಮ್ಮ ಜೀವಗಳನ್ನು ನೀವೇ ಸಂಹರಿಸಿರಿ.[23] ಇದರಲ್ಲೇ ನಿಮ್ಮ ಸೃಷ್ಟಿಕರ್ತನ ಬಳಿ ನಿಮಗೆ ಒಳಿತಿದೆ' ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ. ಆಗ ನಿಮ್ಮ ಸೃಷ್ಟಿಕರ್ತನು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿದನು. ನಿಶ್ಚಯವಾಗಿಯೂ ಆತನು ಬಹಳವಾಗಿ ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.

وَإِذْ قَالَ مُوسَىٰ لِقَوْمِهِ يَا قَوْمِ إِنَّكُمْ ظَلَمْتُمْ أَنفُسَكُم بِاتِّخَاذِكُمُ الْعِجْلَ فَتُوبُوا إِلَىٰ بَارِئِكُمْ فَاقْتُلُوا أَنفُسَكُمْ ذَٰلِكُمْ خَيْرٌ لَّكُمْ عِندَ بَارِئِكُمْ فَتَابَ عَلَيْكُمْ إِنَّهُ هُوَ التَّوَّابُ الرَّحِيمُ ﴿٥٤﴾

55. ನೀವು ಮೂಸಾರೊಡನೆ, "ಓ ಮೂಸಾ, ಅಲ್ಲಾಹನನ್ನು (ಅವನು

وَإِذْ قُلْتُمْ يَا مُوسَىٰ لَن نُّؤْمِنَ لَكَ حَتَّىٰ نَرَى اللَّهَ

21. ಅಂದರೆ ಈಜಿಪ್ಟಿನಿಂದ ವಿಮೋಚಿತರಾಗಿ ಬನೀಇಸ್ರಾಈಲರು ಸೀನಾಯ್ ಪರ್ಯಾಯ ದ್ವೀಪವನ್ನು ತಲಪಿದಾಗ ಅಲ್ಲಾಹನು ಹ. ಮೂಸಾರನ್ನು(ಅ) 40 ದಿನಗಳ ಮಟ್ಟಿಗೆ ತೂರ್ ಪರ್ವತಕ್ಕೆ ಕರೆದನು. ಆಗತಾನೆ ಸ್ವತಂತ್ರವಾಗಿದ್ದ ಆ ಸಮುದಾಯಕ್ಕೆ ಶರೀಅತ್‌ನ (ಧರ್ಮಶಾಸ್ತ್ರ) ನಿಯಮ ಹಾಗೂ ವ್ಯಾವಹಾರಿಕ ಜೀವನದ ಮಾರ್ಗದರ್ಶನಗಳನ್ನು ನೀಡುವುದೇ ಅದರ ಉದ್ದೇಶವಾಗಿತ್ತು.

22. 'ಫುರ್ಕಾನ್' ಎಂದರೆ ಸತ್ಯ-ಮಿಥ್ಯಗಳ ಅಂತರವನ್ನು ಸ್ಪಷ್ಟಪಡಿಸುವ ಸಾಧನವಾಗಿದೆ. ಅಂದರೆ ಮನುಷ್ಯ ಸತ್ಯ-ಮಿಥ್ಯಗಳ ನಡುವೆ ಭೇದ ಕಲ್ಪಿಸಲು ಸಾಧ್ಯವಾಗುವಂತೆ ಮಾಡುವ ಧಾರ್ಮಿಕ ತಿಳುವಳಿಕೆ ಮತ್ತು ಪರಿಜ್ಞಾನ.

23. ಅರ್ಥಾತ್- ನಿಮ್ಮ ಪೈಕಿ ಕರುವನ್ನು ಆರಾಧ್ಯವೆಂದು ಬಗೆದು ಪೂಜಿಸಿದ ವ್ಯಕ್ತಿಗಳನ್ನು ಕೊಲೆ ಮಾಡಿರಿ.

ನಿಮ್ಮೊಡನೆ ಮಾತಾಡುತ್ತಿರುವುದನ್ನು) ನಾವು ಕಣ್ಣಾರೆ ಕಾಣುವ ತನಕ ನಿಮ್ಮ ಮಾತಿನ ಮೇಲೆ ನಾವು ವಿಶ್ವಾಸವಿಡಲಾರೆವು" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ. ಆಗ, ನೀವು ನೋಡುತ್ತಿದ್ದಂತೆಯೇ ನಿಮ್ಮ ಮೇಲೊಂದು ಭೀಕರ ಸಿಡಿಲೆರಗಿತ್ತು. ನೀವು ನಿರ್ಜೀವಿಗಳಾಗಿ ನೆಲಕ್ಕುರುಳಿದಿರಿ.

جَهْرَةً فَأَخَذَتْكُمُ الصّٰعِقَةُ وَأَنْتُمْ تَنْظُرُونَ ﴿٥٥﴾

56. ಆದರೆ ನೀವು ಈ ಉಪಕಾರದ ಬಳಿಕ ಕೃತಜ್ಞರಾಗಬಹುದೆಂದು ನಿಮ್ಮನ್ನು ನಾವು ಪುನರ್ಜೀವಗೊಳಿಸಿ ಎಬ್ಬಿಸಿದೆವು.

ثُمَّ بَعَثْنٰكُمْ مِّنْ بَعْدِ مَوْتِكُمْ لَعَلَّكُمْ تَشْكُرُونَ ﴿٥٦﴾

57. ನಾವು ನಿಮ್ಮ ಮೇಲೆ ಮೇಘದ ನೆರಳನ್ನು ಮಾಡಿದೆವು. 'ಮನ್ನ್' ಮತ್ತು 'ಸಲ್ವಾ'ಗಳ ಆಹಾರವನ್ನು ನಿಮಗೆ ಒದಗಿಸಿದೆವು ಮತ್ತು "ನಾವು ನಿಮಗೆ ದಯಪಾಲಿಸಿರುವ ಶುದ್ಧವಾದ ಪದಾರ್ಥಗಳನ್ನು ಉಣ್ಣಿರಿ" ಎಂದೆವು. ಆದರೆ ನಿಮ್ಮ ಪೂರ್ವಿಕರು ಅಕ್ರಮ ವೆಸಗಿದ್ದುದು ನಮ್ಮ ಮೇಲಲ್ಲ; ಅವರು ತಮ್ಮ ಮೇಲೆಯೇ ಅಕ್ರಮವೆಸಗಿದ್ದರು.

وَظَلَّلْنَا عَلَيْكُمُ الْغَمَامَ وَأَنْزَلْنَا عَلَيْكُمُ الْمَنَّ وَالسَّلْوٰى ۖ كُلُوا مِنْ طَيِّبٰتِ مَا رَزَقْنٰكُمْ ۖ وَمَا ظَلَمُونَا وَلٰكِنْ كَانُوا أَنْفُسَهُمْ يَظْلِمُونَ ﴿٥٧﴾

58. ನಾವು ನಿಮ್ಮೊಡನೆ, "(ನಿಮ್ಮ ಮುಂದಿರುವ) ಆ ಗ್ರಾಮದೊಳಗೆ ಪ್ರವೇಶಿಸಿರಿ. ನಿಮಗೆ ಇಷ್ಟ ಬಂದಂತೆ ಅದರ ಉತ್ಪನ್ನವನ್ನು ಸವಿಯಿರಿ. ಆದರೆ ಗ್ರಾಮದ ದ್ವಾರದೊಳಗೆ ಪೊಡಮಡುತ್ತ ಪ್ರವೇಶಿಸಿರಿ ಮತ್ತು ಹಿತ್ತ: ಹಿತ್ತ:[24] ಎನ್ನುತ್ತ ಹೋಗಬೇಕು. ನಾವು ನಿಮ್ಮ ಪಾಪಗಳನ್ನು ಕ್ಷಮಿಸುವೆವು ಮತ್ತು ಸದ್ವರ್ತರಿಗೆ ಇನ್ನಷ್ಟು ಅನುಗ್ರಹಗಳನ್ನು ನೀಡುವೆವು" ಎಂದ ಸಂದರ್ಭವನ್ನು ಸ್ಮರಿಸಿರಿ.

وَإِذْ قُلْنَا ادْخُلُوا هٰذِهِ الْقَرْيَةَ فَكُلُوا مِنْهَا حَيْثُ شِئْتُمْ رَغَدًا وَّادْخُلُوا الْبَابَ سُجَّدًا وَّقُولُوا حِطَّةٌ نَّغْفِرْ لَكُمْ خَطٰيٰكُمْ ۚ وَسَنَزِيدُ الْمُحْسِنِينَ ﴿٥٨﴾

59. ಆದರೆ ಅಕ್ರಮಿಗಳು ಅವರೊಡನೆ ಹೇಳಲಾಗಿದ್ದ ಮಾತನ್ನು ಬದಲಾಯಿಸಿ ಏನಕ್ಕೇನೋ ಮಾಡಿಬಿಟ್ಟರು. ಕೊನೆಗೆ ನಾವು ಅಕ್ರಮವೆಸಗಿದವರ ಮೇಲೆ ಆಕಾಶದಿಂದ ಯಾತನೆಯನ್ನು ಇಳಿಸಿದೆವು. ಅದು ಅವರು ಮಾಡುತ್ತಿದ್ದ ಆಜ್ಞೋಲ್ಲಂಘನೆಗಳಿಗೆ ಶಿಕ್ಷೆಯಾಗಿತ್ತು.

فَبَدَّلَ الَّذِينَ ظَلَمُوا قَوْلًا غَيْرَ الَّذِي قِيلَ لَهُمْ فَأَنْزَلْنَا عَلَى الَّذِينَ ظَلَمُوا رِجْزًا مِّنَ السَّمَاءِ بِمَا كَانُوا يَفْسُقُونَ ﴿٥٩﴾

ع

60. ಮೂಸಾ ತಮ್ಮ ಜನಾಂಗಕ್ಕಾಗಿ ಜಲವನ್ನು ಬೇಡಿದ ಸಂದರ್ಭವನ್ನು ಸ್ಮರಿಸಿರಿ. ಆಗ ನಾವು ಹೇಳಿದೆವು, "ನಿಮ್ಮ ಲಾಠಿಯಿಂದ ಆ

وَإِذِ اسْتَسْقٰى مُوسٰى لِقَوْمِهِ فَقُلْنَا اضْرِبْ بِّعَصَاكَ الْحَجَرَ ۖ فَانْفَجَرَتْ مِنْهُ اثْنَتَا

24 'ಹಿತ್ತ:' ಎಂಬ ಪದಕ್ಕೆ ಎರಡು ಅರ್ಥ ಕಲ್ಪಿಸಬಹುದು. ಮೊದಲನೆಯದಾಗಿ ದೇವನಿಂದ ತನ್ನ ತಪ್ಪುಗಳ ಬಗ್ಗೆ ಕ್ಷಮೆ ಯಾಚಿಸುತ್ತಾ ಪ್ರವೇಶಿಸುವುದು. ಎರಡನೆಯದಾಗಿ ಲೂಟಿ ಮತ್ತು ವ್ಯಾಪಕ ಹತ್ಯಾಕಾಂಡದ ಬದಲು ಆ ಪ್ರದೇಶದ ನಿವಾಸಿಗಳಿಗೆ ಸಾರ್ವತ್ರಿಕ ಕ್ಷಮೆಯ ಘೋಷಣೆ ಮಾಡುತ್ತಾ ಪ್ರವೇಶಿಸುವುದು.

ಬಂಡೆಯ ಮೇಲೆ ಹೊಡೆಯಿರಿ." ಆ ಪ್ರಕಾರ ಅದರಿಂದ ಹನ್ನೆರಡು ಚಿಲುಮೆಗಳು ಹೊರ ಚಿಮ್ಮಿದವು. ಪ್ರತಿಯೊಂದು ಗೋತ್ರದವರೂ ತಾವು ನೀರು ಪಡೆಯಬೇಕಾದ ಸ್ಥಳವನ್ನು ಅರಿತುಕೊಂಡರು.[25] "ಅಲ್ಲಾಹನು ಕರುಣಿಸಿದ ಆಹಾರವನ್ನು ತಿನ್ನಿರಿ, ಕುಡಿಯಿರಿ ಮತ್ತು ಭೂಮಿಯ ಮೇಲೆ ಅಶಾಂತಿ ಯನ್ನುಂಟು ಮಾಡದಿರಿ" (ಎಂದು ಆಗ ಬೋಧಿಸಲಾಗಿತ್ತು.)

عَشْرَةَ عَيْنًا ۖ قَدْ عَلِمَ كُلُّ أُنَاسٍ مَّشْرَبَهُمْ ۖ
كُلُوا وَاشْرَبُوا مِن رِّزْقِ اللَّهِ وَلَا تَعْثَوْا
فِي الْأَرْضِ مُفْسِدِينَ ﴿٦٠﴾

61. "ಮೂಸಾರವರೇ, ನಾವು ಒಂದೇ ವಿಧದ ಆಹಾರವನ್ನು ಸಹಿಸಲಾರೆವು, ಭೂಮಿಯಲ್ಲಿ ಬೆಳೆಯುವ ಹರಿವೆ, ಕಾಯಿಪಲ್ಲೆ, ಗೋಧಿ, ಬೇಳೆ, ನೀರುಳ್ಳಿ ಇತ್ಯಾದಿಗಳನ್ನು ನಮಗಾಗಿ ಉಂಟು ಮಾಡಲು ನೀವು ನಿಮ್ಮ ಪ್ರಭುವಿನೊಡನೆ ಪ್ರಾರ್ಥಿಸಿರಿ" ಎಂದು ನೀವು ಹೇಳಿದುದನ್ನು ಸ್ಮರಿಸಿರಿ. ಆಗ ಮೂಸಾ ಹೇಳಿದರು, "ನೀವು ಉತ್ಕೃಷ್ಟವಾದ ವಸ್ತುಗಳ ಬದಲು ನಿಕೃಷ್ಟ ವಸ್ತುಗಳನ್ನು ಬಯಸುವಿರಾ? ಹಾಗಿದ್ದರೆ ನೀವು ಯಾವುದಾದರೊಂದು ಪಟ್ಟಣದಲ್ಲಿ ಹೋಗಿ ವಾಸಿಸಿರಿ. ನೀವು ಕೇಳುತ್ತಿರುವುದೆಲ್ಲ ಅಲ್ಲಿ ಸಿಗುವುದು." ಕೊನೆಗೆ ನಿಂದೆ ಮತ್ತು ದಾರಿದ್ರ್ಯಗಳು ಅವರನ್ನಾವರಿಸಿದವು ಮತ್ತು ಅವರು ಅಲ್ಲಾಹನ ಕ್ರೋಧಕ್ಕೆ ಪಾತ್ರರಾದರು. ಇದೆಲ್ಲ ಅವರು ಅಲ್ಲಾಹನ ವಚನಗಳನ್ನು ನಿರಾಕರಿಸುತ್ತಿದ್ದುದರ ಮತ್ತು ಪ್ರವಾದಿಗಳನ್ನು ಅನ್ಯಾಯವಾಗಿ ಕೊಲೆಗೈಯುತ್ತಿದ್ದುದರ ಫಲವಾಗಿತ್ತು. ಇದು ಅವರ ಆಜ್ಞೋಲ್ಲಂಘನೆಯ ಮತ್ತು ಧರ್ಮಸೀಮೋಲ್ಲಂಘನೆ ಮಾಡುತ್ತಲೇ ಸಾಗುತ್ತಿದ್ದುದರ ಪರಿಣಾಮವಾಗಿತ್ತು.

وَإِذْ قُلْتُمْ يَا مُوسَىٰ لَن نَّصْبِرَ عَلَىٰ طَعَامٍ وَاحِدٍ
فَادْعُ لَنَا رَبَّكَ يُخْرِجْ لَنَا مِمَّا تُنبِتُ الْأَرْضُ
مِن بَقْلِهَا وَقِثَّائِهَا وَفُومِهَا وَعَدَسِهَا وَبَصَلِهَا ۖ
قَالَ أَتَسْتَبْدِلُونَ الَّذِي هُوَ أَدْنَىٰ بِالَّذِي هُوَ
خَيْرٌ ۚ اهْبِطُوا مِصْرًا فَإِنَّ لَكُم مَّا سَأَلْتُمْ ۗ وَ
ضُرِبَتْ عَلَيْهِمُ الذِّلَّةُ وَالْمَسْكَنَةُ وَبَاءُوا
بِغَضَبٍ مِّنَ اللَّهِ ۗ ذَٰلِكَ بِأَنَّهُمْ كَانُوا يَكْفُرُونَ
بِآيَاتِ اللَّهِ وَيَقْتُلُونَ النَّبِيِّينَ بِغَيْرِ الْحَقِّ ۗ
ذَٰلِكَ بِمَا عَصَوا وَّكَانُوا يَعْتَدُونَ ﴿٦١﴾

62. ನಿಶ್ಚಯವಾಗಿಯೂ ಪೈಗಂಬರರನ್ನು ನಂಬುವವರಿರಲಿ, ಯಹೂದಿಯರಿರಲಿ, ಕ್ರೈಸ್ತರಿರಲಿ, ಸಬಯನರಿರಲಿ, ಯಾರು ಅಲ್ಲಾಹ್ ಮತ್ತು ನಿರ್ಣಾಯಕ (ಪುನರುತ್ಥಾನ) ದಿನದ ಮೇಲೆ ವಿಶ್ವಾಸವಿಟ್ಟು, ಸತ್ಕರ್ಮಗಳನ್ನು ಮಾಡುವವರೋ ಅವರಿಗೆ ಅದರ ಪ್ರತಿಫಲವು ಅವರ ಪ್ರಭುವಿನ ಬಳಿ ಇದ್ದೇ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇಲ್ಲ.[26]

إِنَّ الَّذِينَ آمَنُوا وَالَّذِينَ هَادُوا وَالنَّصَارَىٰ
وَالصَّابِئِينَ مَنْ آمَنَ بِاللَّهِ وَالْيَوْمِ الْآخِرِ
وَعَمِلَ صَالِحًا فَلَهُمْ أَجْرُهُمْ عِندَ رَبِّهِمْ
وَلَا خَوْفٌ عَلَيْهِمْ وَلَا هُمْ يَحْزَنُونَ ﴿٦٢﴾

63. ನಾವು (ತೂರ್) ಪರ್ವತವನ್ನು ನಿಮ್ಮ ಮೇಲೆ ಎತ್ತಿ ಹಿಡಿದು, ನಿಮ್ಮಿಂದ ಬಲವಾದ ಕರಾರನ್ನು ಪಡೆದು, "ನಿಮಗೆ

وَإِذْ أَخَذْنَا مِيثَاقَكُمْ وَرَفَعْنَا فَوْقَكُمُ
الطُّورَ خُذُوا مَا آتَيْنَاكُم بِقُوَّةٍ وَاذْكُرُوا

25. ಬನೀಇಸ್ರಾಈಲರಲ್ಲಿ ಹನ್ನೆರಡು ಗೋತ್ರಗಳಿದ್ದವು. ಅವರ ನಡುವೆ ನೀರಿಗಾಗಿ ಜಗಳವಾಗದಿರಲೆಂದು ಅಲ್ಲಾಹನು ಪ್ರತಿಯೊಂದು ಗೋತ್ರಕ್ಕೆ ಪ್ರತ್ಯೇಕ ಚಿಲುಮೆಯನ್ನು ಹೊರಡಿಸಿದನು.

ನೀಡಲಾಗುತ್ತಿರುವ ಗ್ರಂಥವನ್ನು ಭದ್ರವಾಗಿ ಆಧರಿಸಿಕೊಳ್ಳಿರಿ ಮತ್ತು ಅದರಲ್ಲಿ ಉಲ್ಲೇಖಿಸಿರುವ ಆಜ್ಞೆಗಳನ್ನೂ ಬೋಧನೆಗಳನ್ನೂ ನೆನಪಿಟ್ಟುಕೊಳ್ಳಿರಿ; ಅದರ ಮೂಲಕವೇ ನೀವು ಧರ್ಮನಿಷ್ಠೆಯ ಪಥದಲ್ಲಿ ನಡೆಯಬಲ್ಲಿರಿ" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ.

مَا فِيهِ لَعَلَّكُمْ تَتَّقُونَ ﴿٦٣﴾

64. ಆದರೆ ಆ ಬಳಿಕ ನೀವು ನಿಮ್ಮ ಕರಾರಿನಿಂದ ವಿಮುಖರಾದಿರಿ. ಆದರೂ ಅಲ್ಲಾಹನ ಅನುಗ್ರಹವೂ, ದಯೆಯೂ ನಿಮ್ಮನ್ನು ಬಿಡಲಿಲ್ಲ. ಅನ್ಯಥಾ ನೀವು ಎಂದೋ ನಾಶವಾಗುತ್ತಿದ್ದಿರಿ.

ثُمَّ تَوَلَّيْتُم مِّن بَعْدِ ذَٰلِكَ فَلَوْلَا فَضْلُ اللَّهِ عَلَيْكُمْ وَرَحْمَتُهُ لَكُنتُم مِّنَ الْخَاسِرِينَ ﴿٦٤﴾

65. ನಿಮ್ಮ ಜನಾಂಗದವರ ಪೈಕಿ 'ಸಬ್ತ್'[27]ನ ನಿಯಮವನ್ನು ಮುರಿದವರ ವಿಷಯ ನಿಮಗೆ ತಿಳಿದೇ ಇದೆ. ನಾವು ಅವರೊಡನೆ, "ನೀವು ಕಪಿಗಳಾಗಿರಿ ಮತ್ತು ಎಲ್ಲ ಕಡೆಗಳಿಂದಲೂ ಧಿಕ್ಕರಿಸಲ್ಪಡುವ ಸ್ಥಿತಿಯಲ್ಲಿ ನೀವಿರಿ" ಎಂದು ಹೇಳಿದೆವು.

وَلَقَدْ عَلِمْتُمُ الَّذِينَ اعْتَدَوْا مِنكُمْ فِي السَّبْتِ فَقُلْنَا لَهُمْ كُونُوا قِرَدَةً خَاسِئِينَ ﴿٦٥﴾

66. ಹೀಗೆ ನಾವು ಆ ಘಟನೆಯನ್ನು ಅಂದಿನವರಿಗೂ ಮುಂದಿನವರಿಗೂ ಒಂದು ನಿದರ್ಶನವನ್ನಾಗಿಯೂ ಭಯಪಡುವವರಿಗೆ ಉಪದೇಶ ವನ್ನಾಗಿಯೂ ಮಾಡಿದೆವು.

فَجَعَلْنَاهَا نَكَالًا لِّمَا بَيْنَ يَدَيْهَا وَمَا خَلْفَهَا وَمَوْعِظَةً لِّلْمُتَّقِينَ ﴿٦٦﴾

67. ಮೂಸಾ ತನ್ನ ಜನಾಂಗದೊಡನೆ, "ಒಂದು ಗೋವನ್ನು ಬಲಿದಾನ ಕೊಡಲು ಅಲ್ಲಾಹನು ನಿಮಗೆ ಆಜ್ಞಾಪಿಸುತ್ತಾನೆ" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ. ಅವರಂದರು, "ನೀವು ನಮ್ಮನ್ನು ಅಣಕಿಸುತ್ತೀರಾ?" ಆಗ ಮೂಸಾ, "ಮೂಢರಂತಾಡುವುದರ ಬಗ್ಗೆ ನಾನು ಅಲ್ಲಾಹನ ಅಭಯವನ್ನು ಯಾಚಿಸುತ್ತೇನೆ" ಎಂದರು.

وَإِذْ قَالَ مُوسَىٰ لِقَوْمِهِ إِنَّ اللَّهَ يَأْمُرُكُمْ أَن تَذْبَحُوا بَقَرَةً قَالُوا أَتَتَّخِذُنَا هُزُوًا قَالَ أَعُوذُ بِاللَّهِ أَنْ أَكُونَ مِنَ الْجَاهِلِينَ ﴿٦٧﴾

26. ವಾಕ್ಸರಣಿಯನ್ನು ಗಮನಿಸಿದರೆ, ಯಾವ್ಯಾವ ವಿಷಯಗಳ ಮೇಲೆ ಮಾನವ ವಿಶ್ವಾಸವಿಡಬೇಕು ಮತ್ತು ಎಂತಹ ಕರ್ಮಗಳನ್ನು ಎಸಗಿದರೆ ಅವನು ದೇವನ ಬಳಿ ಪುಣ್ಯಕ್ಕೆ ಅರ್ಹನಾಗುವನು ಎಂಬ 'ವಿಶ್ವಾಸ ಮತ್ತು ಸತ್ಕರ್ಮ'ದ ವಿವರಗಳನ್ನು ನೀಡುವುದು ಇದರ ಉದ್ದೇಶವಲ್ಲವೆಂದು ತಾನಾಗಿಯೇ ವ್ಯಕ್ತವಾಗುತ್ತದೆ. ಯಹೂದಿಯರು ಮಾತ್ರವೇ ಮೋಕ್ಷದ ಗುತ್ತೇದಾರರು ಎಂಬ ಅವರ ಮಿಥ್ಯಾಭಿಮಾನವನ್ನು ನಿರಾಕರಿಸುವುದು ಇದರ ಉದ್ದೇಶವಾಗಿದೆ. ಅವರ ಕೂಟಕ್ಕೆ ಸೇರಿದವರು ವಿಶ್ವಾಸ ಮತ್ತು ಕರ್ಮದ ದೃಷ್ಟಿಯಿಂದ ಎಂತಹವರೇ ಆಗಿದ್ದರೂ ಮೋಕ್ಷ ಅವರ ಕಟ್ಟಿಟ್ಟ ಬುತ್ತಿ ಎಂಬ ಭ್ರಮೆಗೆ ಅವರು ಈಡಾಗಿದ್ದರು. ಅವರ ಪ್ರಕಾರ, ಅವರ ಕೂಟದಿಂದ ಹೊರಗಿರುವವರೆಲ್ಲರೂ ನರಕದ ಇಂಧನವಾಗಲಿಕ್ಕಾಗಿಯೇ ಸೃಷ್ಟಿಸಲ್ಪಟ್ಟವರಾಗಿದ್ದಾರೆ. ಈ ತಪ್ಪು ತಿಳುವಳಿಕೆಯನ್ನು ನೀಗಿಸಲಿಕ್ಕಾಗಿ- ಅಲ್ಲಾಹನ ಬಳಿ ನಿಮ್ಮ ಗುಂಪುಗಾರಿಕೆಗೆ ಮಹತ್ವವಿಲ್ಲ. ಅಲ್ಲಿ ಸತ್ಯವಿಶ್ವಾಸ ಮತ್ತು ಸತ್ಕರ್ಮವನ್ನು ಮಾತ್ರ ಪರಿಗಣಿಸಲಾಗುತ್ತದೆ. ಅದರೊಂದಿಗೆ ತನ್ನ ಪ್ರಭುವಿನ ಮುಂದೆ ಹಾಜರಾಗುವವನೇ ತನ್ನ ಪ್ರತಿಫಲ ಪಡೆಯುವನು. ದೇವನ ಬಳಿ ನಿಮ್ಮ ಗುಣವಿಶೇಷತೆಗಳ ಆಧಾರದಲ್ಲಿ ತೀರ್ಮಾನವಾಗುತ್ತದೆಯೇ ಹೊರತು ನಿಮ್ಮ ಜನಗಣತಿಯ ದಾಖಲೆಗಳ ಆಧಾರದಲ್ಲಲ್ಲ ಎಂದು ಹೇಳಲಾಗಿದೆ.

27. 'ಸಬ್ತ್' ಎಂದರೆ ಶನಿವಾರ. ಶನಿವಾರವನ್ನು ವಿಶ್ರಾಂತಿ ಮತ್ತು ಆರಾಧನೆಗಾಗಿ ಮೀಸಲಿರಿಸಬೇಕೆಂದು ಬನೀಇಸ್ರಾಈಲರಿಗೆ ವಿಧಿಸಲಾಗಿತ್ತು. ಆ ದಿನ ಲೌಕಿಕ ಕೆಲಸವನ್ನೂ ಮಾಡಬಾರದು. ಅಡುಗೆಯ ಕೆಲಸವನ್ನು ತಾನೂ ಮಾಡಬಾರದು, ಸೇವಕರಿಂದಲೂ ಮಾಡಿಸಬಾರದು ಎಂಬ ನಿಯಮವಿತ್ತು.

68. ಅವರಂದರು, "ಆ ಗೋವಿನ ಸ್ವಲ್ಪ ವಿವರವನ್ನು ನಮಗೆ ತಿಳಿಸಿ ಕೊಡಬೇಕೆಂದು ನಿಮ್ಮ ಪ್ರಭುವಿನೊಡನೆ ಬೇಡಿರಿ." ಆಗ ಮೂಸಾ, "ಆ ಗೋವು ಹೆಚ್ಚು ಪ್ರಾಯವಾದುದೂ ಆಗಿರಬಾರದು, ಎಳೆಕರುವೂ ಆಗಿರಬಾರದು; ನಡುಹರೆಯದ್ದಾಗಿರಬೇಕೆಂದು ಅಲ್ಲಾಹ್ ಆಜ್ಞಾಪಿಸುತ್ತಾನೆ. ಆದ ಕಾರಣ ನಿಮಗೆ ಆಜ್ಞಾಪಿಸಿದಂತೆ ವರ್ತಿಸಿರಿ" ಎಂದರು.

قَالُوا ادْعُ لَنَا رَبَّكَ يُبَيِّن لَّنَا مَا هِيَ ۚ قَالَ إِنَّهُ يَقُولُ إِنَّهَا بَقَرَةٌ لَّا فَارِضٌ وَلَا بِكْرٌ عَوَانٌ بَيْنَ ذَٰلِكَ ۖ فَافْعَلُوا مَا تُؤْمَرُونَ ﴿٦٨﴾

69. ಮತ್ತೆ ಅವರು, "ಅದರ ಬಣ್ಣ ಯಾವುದಾಗಿರಬೇಕೆಂದೂ ನಿಮ್ಮ ಪ್ರಭುವಿನೊಡನೆ ಕೇಳಿರಿ" ಎಂದರು. ಆಗ ಮೂಸಾ, "ಅದು ಪ್ರೇಕ್ಷಕರ ಕಣ್ಮನಗಳನ್ನು ತಣಿಸುವಂತಹ ಹೊಂಬಣ್ಣದ ಗೋವಾಗಿರಬೇಕೆಂದು ಅವನು ಹೇಳುತ್ತಾನೆ" ಎಂದರು.

قَالُوا ادْعُ لَنَا رَبَّكَ يُبَيِّن لَّنَا مَا لَوْنُهَا ۚ قَالَ إِنَّهُ يَقُولُ إِنَّهَا بَقَرَةٌ صَفْرَاءُ فَاقِعٌ لَّوْنُهَا تَسُرُّ النَّاظِرِينَ ﴿٦٩﴾

70. ಪುನಃ ಅವರು, "ಅದು ಯಾವ ತರದ್ದೆಂದು ಸ್ಪಷ್ಟವಾಗಿ ವಿವರಿಸಲಿ. ಅದನ್ನು ಗುರುತಿಸುವ ಬಗ್ಗೆ ನಮಗೆ ಬಹಳ ಸಂದೇಹವುಂಟಾಗಿದೆ. ಅಲ್ಲಾಹನು ಇಚ್ಛಿಸಿದರೆ ನಾವು ಅದನ್ನು ಗುರುತಿಸುವೆವು" ಎಂದರು.

قَالُوا ادْعُ لَنَا رَبَّكَ يُبَيِّن لَّنَا مَا هِيَ إِنَّ الْبَقَرَ تَشَابَهَ عَلَيْنَا وَإِنَّا إِن شَاءَ اللَّهُ لَمُهْتَدُونَ ﴿٧٠﴾

71. ಆಗ ಮೂಸಾ, "ಆ ಗೋವು ಉಳುವುದಕ್ಕಾಗಲಿ ಕೃಷಿಗೆ ನೀರೆತ್ತಲಿಕ್ಕಾಗಲಿ ಯಾವ ಸೇವೆಗೂ ಉಪಯೋಗಿಸಲ್ಪಡದ್ದೂ, ಸರ್ವಾಂಗ ಸಂಪೂರ್ಣವೂ, ದೋಷರಹಿತವೂ ಆಗಿರಬೇಕೆಂದು ಆತನು ಹೇಳುತ್ತಾನೆ" ಎಂದು ಉತ್ತರವಿತ್ತರು. ಆಗ ಅವರು, "ಈಗ ನೀವು ಅದರ ಸರಿಯಾದ ಪರಿಚಯ ಮಾಡಿಕೊಟ್ಟಿರಿ" ಎಂದು ಸಾರಿದರು. ಆ ಬಳಿಕ ಅವರು ಅದರ ಬಲಿದಾನ ಮಾಡಿದರು. ಅನ್ಯಥಾ ಅವರು ಹಾಗೆ ಮಾಡುವಂತೆ ತೋರುತ್ತಿರಲಿಲ್ಲ.[28]

قَالَ إِنَّهُ يَقُولُ إِنَّهَا بَقَرَةٌ لَّا ذَلُولٌ تُثِيرُ الْأَرْضَ وَلَا تَسْقِي الْحَرْثَ مُسَلَّمَةٌ لَّا شِيَةَ فِيهَا ۚ قَالُوا الْآنَ جِئْتَ بِالْحَقِّ ۚ فَذَبَحُوهَا وَمَا كَادُوا يَفْعَلُونَ ﴿٧١﴾

72. ನೀವು ಒಬ್ಬನನ್ನು ಕೊಲೆಮಾಡಿ ಆ ಬಳಿಕ ಜಗಳಾಡಲಿಕ್ಕೂ ಒಬ್ಬರಿನ್ನೊಬ್ಬರ ಮೇಲೆ ಆರೋಪ ಹೊರಿಸಲಿಕ್ಕೂ ತೊಡಗಿದ ಆ ಸಂದರ್ಭ ನಿಮಗೆ ನೆನಪಿದೆಯೇ? ಆದರೆ ನೀವು ಬಚ್ಚಿಟ್ಟದ್ದನ್ನು ಬಯಲಿಗೆಳೆಯಬೇಕೆಂದು ಅಲ್ಲಾಹ್ ನಿರ್ಧರಿಸಿದ್ದನು.

وَإِذْ قَتَلْتُمْ نَفْسًا فَادَّارَأْتُمْ فِيهَا ۖ وَاللَّهُ مُخْرِجٌ مَّا كُنتُمْ تَكْتُمُونَ ﴿٧٢﴾

28. ಬನೀಇಸ್ರಾಈಲರಿಗೆ ಈಜಿಪ್ಟ್ ಮತ್ತು ನೆರೆಹೊರೆಯ ಸಮುದಾಯಗಳಿಂದಾಗಿ ಗೋವಿನ ಬಗ್ಗೆ ಪವಿತ್ರ ಭಾವನೆ ಮತ್ತು ಗೋಪೂಜೆಯ ಸೋಂಕು ತಗಲಿತ್ತು. ಆದ್ದರಿಂದ ಈಜಿಪ್ಟ್‌ನಿಂದ ಹೊರಡುತ್ತಲೇ ಅವರು ಕರುವನ್ನು ಆರಾಧ್ಯ ವಸ್ತುವಾಗಿ ಮಾಡಿಕೊಂಡಿದ್ದರು. ಆದ್ದರಿಂದ ಗೋವನ್ನು ಸಂಹರಿಸುವಂತೆ ಅವರಿಗೆ ಆದೇಶ ನೀಡಲಾಯಿತು. ಅವರು ನೆಪಗಳನ್ನೊಡ್ಡಲು ಪ್ರಯತ್ನಿಸಿದರು ಮತ್ತು ವಿವರ

73. ಆಗ ನಾವು, ಕೊಲ್ಲಲ್ಪಟ್ಟವನ ಶವಕ್ಕೆ ಅದರ ಮಾಂಸದ ಒಂದು ಭಾಗದಿಂದ ತಟ್ಟಿರಿ ಎಂದು ಆಜ್ಞಾಪಿಸಿದೆವು. ನೋಡಿರಿ, ಇದೇ ರೀತಿ ಅಲ್ಲಾಹನು ಮೃತರನ್ನು ಸಜೀವಗೊಳಿಸುತ್ತಾನಲ್ಲದೆ ನಿಮಗೆ ವಿವೇಚಿಸಲಿಕ್ಕಾಗಿ ತನ್ನ ದೃಷ್ಟಾಂತಗಳನ್ನೂ ತೋರಿಸಿಕೊಡುತ್ತಾನೆ.

فَقُلْنَا اضْرِبُوهُ بِبَعْضِهَا ۚ كَذَٰلِكَ يُحْيِي اللَّهُ الْمَوْتَىٰ وَيُرِيكُمْ آيَاتِهِ لَعَلَّكُمْ تَعْقِلُونَ ﴿٧٣﴾

74. ಆದರೆ ಇಂತಹ ದೃಷ್ಟಾಂತಗಳನ್ನು ಕಂಡ ಮೇಲೂ ನಿಮ್ಮ ಹೃದಯಗಳು ಕಠೋರವಾದುವು- ಕಲ್ಲು ಬಂಡೆಗಳಂತೆ, ಮಾತ್ರವಲ್ಲ ಕಾಠಿಣ್ಯದಲ್ಲಿ ಅವುಗಳಿಗಿಂತಲೂ ಅಧಿಕ. ಏಕೆಂದರೆ, ಕೆಲವು ಕಲ್ಲುಗಳಿಂದ ಚಿಲುಮೆಗಳು ಚಿಮ್ಮಿ ಹರಿಯುತ್ತವೆ. ಕೆಲವು ಒಡೆಯುತ್ತವೆ ಮತ್ತು ಅವುಗಳಿಂದ ನೀರು ಹರಿದು ಬರುತ್ತದೆ. ಮತ್ತಿನ್ನು ಕೆಲವು ದೇವಭಯದಿಂದ ಕಂಪಿಸಿ ಉರುಳಿ ಬೀಳುತ್ತವೆ. ಅಲ್ಲಾಹ್ ನಿಮ್ಮ ಕರ್ಮಗಳ ಬಗ್ಗೆ ಅಲಕ್ಷ್ಯನಾಗಿಲ್ಲ.

ثُمَّ قَسَتْ قُلُوبُكُمْ مِنْ بَعْدِ ذَٰلِكَ فَهِيَ كَالْحِجَارَةِ أَوْ أَشَدُّ قَسْوَةً ۚ وَإِنَّ مِنَ الْحِجَارَةِ لَمَا يَتَفَجَّرُ مِنْهُ الْأَنْهَارُ ۚ وَإِنَّ مِنْهَا لَمَا يَشَّقَّقُ فَيَخْرُجُ مِنْهُ الْمَاءُ ۚ وَإِنَّ مِنْهَا لَمَا يَهْبِطُ مِنْ خَشْيَةِ اللَّهِ ۗ وَمَا اللَّهُ بِغَافِلٍ عَمَّا تَعْمَلُونَ ﴿٧٤﴾

75. ಓ ಮುಸ್ಲಿಮರೇ, ಇವರು ನಿಮ್ಮ ಆಹ್ವಾನದ ಮೇಲೆ ವಿಶ್ವಾಸವಿರಿಸುವರೆಂದು ನಿರೀಕ್ಷಿಸುತ್ತೀರಾ?[29] ವಸ್ತುತಃ ಅವರ ಪೈಕಿ ಒಂದು ವರ್ಗವು ಅಲ್ಲಾಹನ ವಾಣಿಯನ್ನು ಕೇಳಿ ಅದನ್ನು ಚೆನ್ನಾಗಿ ಅರಿತುಕೊಂಡ ಬಳಿಕವೂ ಬೇಕು ಬೇಕೆಂದೇ ಅದರಲ್ಲಿ ಪರಿವರ್ತನೆ ಮಾಡುವ ರೂಢಿಯನ್ನಿಟ್ಟುಕೊಂಡಿತು.

أَفَتَطْمَعُونَ أَنْ يُؤْمِنُوا لَكُمْ وَقَدْ كَانَ فَرِيقٌ مِنْهُمْ يَسْمَعُونَ كَلَامَ اللَّهِ ثُمَّ يُحَرِّفُونَهُ مِنْ بَعْدِ مَا عَقَلُوهُ وَهُمْ يَعْلَمُونَ ﴿٧٥﴾

76. ಅವರು (ಪ್ರವಾದಿ ಮುಹಮ್ಮದ್‌ರ ಮೇಲೆ) ವಿಶ್ವಾಸವಿಟ್ಟವರನ್ನು ಸಂಧಿಸಿದಾಗ, "ನಾವು ಅವರ ಮೇಲೆ ವಿಶ್ವಾಸವಿಟ್ಟಿದ್ದೇವೆ" ಎನ್ನುತ್ತಾರೆ. ಆದರೆ ಅವರೇ ಪರಸ್ಪರ ಏಕಾಂತದಲ್ಲಿ ಭೇಟಿಯಾದಾಗ, "ನೀವು ಮೂರ್ಖರಾಗಿದ್ದೀರಾ? ಅಲ್ಲಾಹ್ ನಿಮಗೆ ವ್ಯಕ್ತಗೊಳಿಸಿದ ಸಂಗತಿಯನ್ನು ಅವರಿಗೆ ಹೇಳಿಕೊಟ್ಟು, ಅವರು ಅದನ್ನೇ ನಿಮ್ಮ ಪ್ರಭುವಿನ ಬಳಿ ನಿಮ್ಮ ವಿರುದ್ಧ ಆಧಾರವಾಗಿ ತರುವಂತೆ ಮಾಡುತ್ತೀರಾ?" ಎನ್ನುತ್ತಾರೆ.

وَإِذَا لَقُوا الَّذِينَ آمَنُوا قَالُوا آمَنَّا وَإِذَا خَلَا بَعْضُهُمْ إِلَىٰ بَعْضٍ قَالُوا أَتُحَدِّثُونَهُمْ بِمَا فَتَحَ اللَّهُ عَلَيْكُمْ لِيُحَاجُّوكُمْ بِهِ عِنْدَ رَبِّكُمْ ۚ أَفَلَا تَعْقِلُونَ ﴿٧٦﴾

77. ಅವರು ಬಚ್ಚಿಡುವುದನ್ನೂ, ಬಹಿರಂಗಗೊಳಿಸುವುದನ್ನೂ ಅಲ್ಲಾಹ್ ಅರಿಯುತ್ತಾನೆಂದು ಅವರು ತಿಳಿದಿಲ್ಲವೇ?

أَوَلَا يَعْلَمُونَ أَنَّ اللَّهَ يَعْلَمُ مَا يُسِرُّونَ وَمَا يُعْلِنُونَ ﴿٧٧﴾

---

ಕೇಳತೊಡಗಿದರು. ಆದರೆ ವಿವರಗಳನ್ನು ಕೇಳುತ್ತಾ ಹೋದಂತೆ ಅವರು ಇಕ್ಕಟ್ಟಿಗೆ ಸಿಲುಕುತ್ತಾ ಹೋದರು. ಕೊನೆಗೆ ಬೊಟ್ಟು ಮಾಡಿ ತೋರಿಸುವಂತೆ, ಆ ಕಾಲದಲ್ಲಿ ಪೂಜೆಗಾಗಿಯೇ ಮೀಸಲಾಗಿಡುತ್ತಿದ್ದ ಹೊಂಬಣ್ಣದ ಆ ವಿಶಿಷ್ಟ ಗೋವನ್ನು ಸಂಹರಿಸುವಂತೆ ಹೇಳಲಾಯಿತು.

29. ಆಗ ತಾನೇ ಪ್ರವಾದಿ ಮುಹಮ್ಮದ್‌ರ(ಸ) ಮೇಲೆ ವಿಶ್ವಾಸವಿಟ್ಟಿದ್ದ ನವ-ಮುಸ್ಲಿಮರನ್ನುದ್ದೇಶಿಸಿ ಈ ಮಾತು ಹೇಳಲಾಗಿದೆ. ಅವರು ಮೊದಲಿನಿಂದಲೂ ಪ್ರವಾದಿತ್ವ, ದೇವಗ್ರಂಥ, ದೇವಚರರು, ಪರಲೋಕ ಮತ್ತು ಶರೀಅತ್(ಧರ್ಮಶಾಸ್ತ್ರ) ಮುಂತಾದ ವಿಚಾರಗಳನ್ನು ತಮ್ಮ ನೆರೆಹೊರೆಯ ಯಹೂದಿಯರ ಮೂಲಕವೇ ಕೇಳಿದ್ದರು. ಆದ್ದರಿಂದ, ಯಾರು ಮೊದಲಿನಿಂದಲೇ ಪ್ರವಾದಿ ಮತ್ತು ದೈವಿಕ ಗ್ರಂಥಗಳ ಹಿಂಬಾಲಕರಾಗಿರುವರೋ ಮತ್ತು ಯಾರ ಸೂಚನೆಯ ಮೂಲಕ ನಮಗೆ ಸತ್ಯವಿಶ್ವಾಸದ ಸೌಭಾಗ್ಯ ದೊರೆತಿದೆಯೋ, ಅವರು ಖಂಡಿತ ನಮಗೆ ನೆರವಾಗುವರು ಮಾತ್ರವಲ್ಲ ಈ ಹಾದಿಯಲ್ಲಿ ಅವರು ಮುಂಚೂಣಿಯಲ್ಲಿರುವರು ಎಂದು ಅವರು ನಿರೀಕ್ಷಿಸುತ್ತಿದ್ದರು.

78. ಅವರ ಪೈಕಿ ಇನ್ನೊಂದು ಪಂಗಡವು ನಿರಕ್ಷರಿಗಳದ್ದಿದೆ. ಅವರು ಗ್ರಂಥಜ್ಞಾನವನ್ನೇನೂ ಹೊಂದಿರುವುದಿಲ್ಲ. ಕೇವಲ ತಮ್ಮ ನಿರಾಧಾರ ಭರವಸೆ ಹಾಗೂ ಆಕಾಂಕ್ಷೆಗಳಲ್ಲಿದ್ದುಕೊಂಡು ಕೆಲವು ಊಹಾಪೋಹೆಗಳಲ್ಲೇ ನಿರತರಾಗಿದ್ದಾರೆ.

وَمِنْهُمْ أُمِّيُّونَ لَا يَعْلَمُونَ الْكِتٰبَ إِلَّآ أَمَانِيَّ وَإِنْ هُمْ إِلَّا يَظُنُّونَ ﴿٧٨﴾

79. ಆದುದರಿಂದ ಸ್ವಹಸ್ತಗಳಿಂದ ಧಾರ್ಮಿಕ ಗ್ರಂಥಗಳನ್ನು ಬರೆದು, ಅದರಿಂದ ತುಚ್ಛ ಪ್ರತಿಫಲ ಪಡೆಯುವ ಸಲುವಾಗಿ, "ಇದು ಅಲ್ಲಾಹನ ಕಡೆಯಿಂದ ಬಂದಿದೆ" ಎಂದು ಹೇಳುವವರಿಗೆ ವಿನಾಶ ಕಾದಿದೆ. ಅವರ ಕೈಗಳಿಂದ ಬರೆಯಲ್ಪಟ್ಟಿರುವ ಕೃತಿಯೂ ಅವರ ಪಾಲಿಗೆ ವಿನಾಶಕಾರಿಯಾಗಿದೆ ಮತ್ತು ಅವರ ಈ ಸಂಪಾದನೆಯೂ ಅವರಿಗೆ ವಿನಾಶಕಾರಿಯಾಗಿದೆ.

فَوَيْلٌ لِّلَّذِينَ يَكْتُبُونَ الْكِتٰبَ بِأَيْدِيهِمْ ثُمَّ يَقُولُونَ هٰذَا مِنْ عِنْدِ اللّٰهِ لِيَشْتَرُوا بِهِ ثَمَنًا قَلِيلًا ۖ فَوَيْلٌ لَّهُمْ مِّمَّا كَتَبَتْ أَيْدِيهِمْ وَوَيْلٌ لَّهُمْ مِّمَّا يَكْسِبُونَ ﴿٧٩﴾

80. ಅವರು, "ನಮಗೆ ಸಿಕ್ಕಿದರೂ ಕೇವಲ ಕೆಲವೇ ದಿನಗಳ ಶಿಕ್ಷೆ ಸಿಗಬಹುದಷ್ಟೆ. ಹೊರತು ನರಕಾಗ್ನಿಯು ನಮ್ಮನ್ನು ಎಂದೂ ಸೋಂಕದು" ಎನ್ನುತ್ತಾರೆ. ಅವರೊಡನೆ ಕೇಳಿರಿ- "ಅಲ್ಲಾಹನಿಗೆ ಉಲ್ಲಂಘಿಸಲಾಗದಂತಹ ಕರಾರನ್ನೇನಾದರೂ ನೀವು ಅವನಿಂದ ಪಡೆದುಕೊಂಡಿರುತ್ತೀರಾ? ಅಥವಾ ನಿಮಗೆ ತಿಳಿಯದ ವಿಷಯವನ್ನು ನೀವು ಅಲ್ಲಾಹನ ಮೇಲೆ ಹೊರಿಸಿ ಹೇಳುತ್ತಿರುವಿರಾ?

وَقَالُوا لَنْ تَمَسَّنَا النَّارُ إِلَّآ أَيَّامًا مَّعْدُودَةً ۚ قُلْ أَتَّخَذْتُمْ عِنْدَ اللّٰهِ عَهْدًا فَلَنْ يُّخْلِفَ اللّٰهُ عَهْدَهُ أَمْ تَقُولُونَ عَلَى اللّٰهِ مَا لَا تَعْلَمُونَ ﴿٨٠﴾

81. ನಿಮ್ಮನ್ನು ನರಕಾಗ್ನಿಯು ಸ್ಪರ್ಶಿಸಲಾರದೇಕೆ? ಪಾಪಗಳಿಸುವವರೂ ಪಾಪಕರ್ಮಗಳಿಂದ ಆವರಿಸಲ್ಪಟ್ಟವರೂ ಯಾರೇ ಇರಲಿ, ಅವರು ನರಕದವರು ಮತ್ತು ಸದಾ ನರಕದಲ್ಲೇ ಇರುವರು.

بَلٰى مَنْ كَسَبَ سَيِّئَةً وَّأَحَاطَتْ بِهِ خَطِيٓئَتُهُ فَأُولٰٓئِكَ أَصْحٰبُ النَّارِ ۖ هُمْ فِيهَا خٰلِدُونَ ﴿٨١﴾

82. ವಿಶ್ವಾಸವಿಟ್ಟು, ಸತ್ಕರ್ಮಗಳನ್ನು ಮಾಡುವವರೇ ಸ್ವರ್ಗದವರು ಮತ್ತು ಅವರು ಸದಾ ಸ್ವರ್ಗದಲ್ಲಿರುವರು."

وَالَّذِينَ اٰمَنُوا وَعَمِلُوا الصّٰلِحٰتِ أُولٰٓئِكَ أَصْحٰبُ الْجَنَّةِ ۖ هُمْ فِيهَا خٰلِدُونَ ﴿٨٢﴾

83. ಅಲ್ಲಾಹನ ಹೊರತು ಬೇರೆ ಯಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದೂ ಮಾತಾಪಿತರು, ಬಂಧು ಬಳಗದವರು, ಅನಾಥರು ಮತ್ತು ನಿರ್ಗತಿಕರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದೂ ಜನರೊಡನೆ ಒಳ್ಳೆಯ ಮಾತುಗಳನ್ನಾಡ ಬೇಕೆಂದೂ ನಮಾಝನ್ನು ಸಂಸ್ಥಾಪಿಸಬೇಕೆಂದೂ 'ಝಕಾತ್' (ಕಡ್ಡಾಯದಾನ) ಕೊಡಬೇಕೆಂದೂ ನಾವು ಇಸ್ರಾಈಲ್ ಸಂತತಿಯವರಿಂದ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ್ನು ಸ್ಮರಿಸಿರಿ. ಆದರೆ ಕೆಲವೇ ಮಂದಿಯ ಹೊರತು ನೀವೆಲ್ಲರೂ ಆ ಕರಾರಿನಿಂದ ವಿಮುಖರಾದಿರಿ; ಇಂದಿಗೂ ವಿಮುಖರಾಗಿಯೇ ಇದ್ದೀರಿ.

وَإِذْ أَخَذْنَا مِيثَاقَ بَنِيٓ إِسْرَآءِيلَ لَا تَعْبُدُونَ إِلَّا اللّٰهَ ۗ وَبِالْوٰلِدَيْنِ إِحْسَانًا وَّذِي الْقُرْبٰى وَالْيَتٰمٰى وَالْمَسٰكِينِ وَقُولُوا لِلنَّاسِ حُسْنًا وَّأَقِيمُوا الصَّلٰوةَ وَاٰتُوا الزَّكٰوةَ ۗ ثُمَّ تَوَلَّيْتُمْ إِلَّا قَلِيلًا مِّنْكُمْ وَأَنْتُمْ مُّعْرِضُونَ ﴿٨٣﴾

84. ನೀವು ಪರಸ್ಪರ ರಕ್ತಪಾತ ಮಾಡಬಾರದೆಂದೂ ಪರಸ್ಪರರನ್ನು ಗೃಹಬಾಹಿರರನ್ನಾಗಿ ಮಾಡಬಾರದೆಂದೂ ನಾವು ನಿಮ್ಮೊಡನೆ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ್ನೂ ಸ್ಮರಿಸಿರಿ. ನೀವು ಅದನ್ನು ಒಪ್ಪಿಕೊಂಡಿದ್ದಿರಿ. ಅದಕ್ಕೆ ನೀವೇ ಸಾಕ್ಷಿಗಳಾಗಿರುತ್ತೀರಿ.

وَإِذْ أَخَذْنَا مِيثَاقَكُمْ لَا تَسْفِكُونَ دِمَاءَكُمْ وَلَا تُخْرِجُونَ أَنفُسَكُم مِّن دِيَارِكُمْ ثُمَّ أَقْرَرْتُمْ وَأَنتُمْ تَشْهَدُونَ ﴿٨٤﴾

85. ಆದರೆ, ಈಗ ನೀವೇ ನಿಮ್ಮ ಬಂಧು ಬಳಗದವರ ಕೊಲೆಗೈಯುತ್ತೀರಲ್ಲದೆ ನಿಮ್ಮೊಳಗಿನವರನ್ನೇ ಗೃಹಬಾಹಿರರನ್ನಾಗಿ ಮಾಡುತ್ತೀರಿ. ಅವರ ವಿರುದ್ಧ ಅಕ್ರಮ ಗುಂಪುಗಾರಿಕೆ ಮಾಡಿಕೊಳ್ಳುತ್ತೀರಿ. ಅವರು ಯುದ್ಧ ಸೆರೆಯಾಳುಗಳಾಗಿ ಬಂದಾಗ ಅವರ ವಿಮೋಚನೆಗಾಗಿ 'ವಿಮೋಚನಾ ಮೌಲ್ಯ' ಪಡೆದೇ ಅವರನ್ನು ಬಿಡುತ್ತೀರಿ. ವಸ್ತುತಃ ಅವರನ್ನು ಗೃಹಬಾಹಿರರನ್ನಾಗಿ ಮಾಡುವುದನ್ನೇ ನಿಮಗೆ ನಿಷೇಧಿಸಲಾಗಿತ್ತು. ನೀವೇನು ಗ್ರಂಥದ ಒಂದಂಶದ ಮೇಲೆ ವಿಶ್ವಾಸವಿಟ್ಟು ಇನ್ನೊಂದಂಶವನ್ನು ನಿಷೇಧಿಸುತ್ತೀರಾ? ನಿಮ್ಮ ಪೈಕಿ ಹೀಗೆ ಮಾಡುವವರ ಶಿಕ್ಷೆಯು ಇಹದಲ್ಲಿ ಅವಮಾನಿತ ಜೀವನವೂ ಪರದಲ್ಲಿ ಘೋರ ಯಾತನೆಯ ಕಡೆಗೆ ತಳ್ಳಲ್ಪಡುವುದೂ ಆಗಿರಬೇಕಲ್ಲದೆ ಇನ್ನೇನು? ನೀವು ಮಾಡುವುದರ ಬಗ್ಗೆ ಅಲ್ಲಾಹನು ಅಶ್ರದ್ಧನಲ್ಲ.

ثُمَّ أَنتُمْ هَٰؤُلَاءِ تَقْتُلُونَ أَنفُسَكُمْ وَتُخْرِجُونَ فَرِيقًا مِّنكُم مِّن دِيَارِهِمْ تَظَاهَرُونَ عَلَيْهِم بِالْإِثْمِ وَالْعُدْوَانِ وَإِن يَأْتُوكُمْ أُسَارَىٰ تُفَادُوهُمْ وَهُوَ مُحَرَّمٌ عَلَيْكُمْ إِخْرَاجُهُمْ ۚ أَفَتُؤْمِنُونَ بِبَعْضِ الْكِتَابِ وَتَكْفُرُونَ بِبَعْضٍ ۚ فَمَا جَزَاءُ مَن يَفْعَلُ ذَٰلِكَ مِنكُمْ إِلَّا خِزْيٌ فِي الْحَيَاةِ الدُّنْيَا ۖ وَيَوْمَ الْقِيَامَةِ يُرَدُّونَ إِلَىٰ أَشَدِّ الْعَذَابِ ۗ وَمَا اللَّهُ بِغَافِلٍ عَمَّا تَعْمَلُونَ ﴿٨٥﴾

86. ಇವರು ತಮ್ಮ ಪರಲೋಕವನ್ನು ಮಾರಿ ಇಹಲೋಕವನ್ನು ಖರೀದಿಸಿದವರು. ಆದುದರಿಂದ ಇವರ ಶಿಕ್ಷೆಯಲ್ಲಿ ಸ್ವಲ್ಪವೂ ಕಡಿಮೆಯಾಗದು ಮತ್ತು ಅವರಿಗೆ ಯಾವ ಸಹಾಯವೂ ಒದಗದು.

أُولَٰئِكَ الَّذِينَ اشْتَرَوُا الْحَيَاةَ الدُّنْيَا بِالْآخِرَةِ ۖ فَلَا يُخَفَّفُ عَنْهُمُ الْعَذَابُ وَلَا هُمْ يُنصَرُونَ ﴿٨٦﴾

87. ನಾವು 'ಮೂಸಾ'ರಿಗೆ ಗ್ರಂಥವನ್ನು ಕೊಟ್ಟೆವು. ತರುವಾಯ ನಿರಂತರ ಸಂದೇಶವಾಹಕರನ್ನು ಕಳುಹಿಸಿದೆವು. ಕೊನೆಗೆ ವ್ಯಕ್ತವಾದ ದೃಷ್ಟಾಂತಗಳನ್ನು ಕೊಟ್ಟು, 'ಮರ್ಯಮ'ರ ಪುತ್ರ 'ಈಸಾ'ರನ್ನು ಕಳುಹಿಸಿ, ಪವಿತ್ರಾತ್ಮನ[30] ಮೂಲಕ ಅವರಿಗೆ ಸಹಾಯ ನೀಡಿದೆವು. ದೇವ ಸಂದೇಶವಾಹಕರು ನಿಮ್ಮ ಚಿತ್ತಾಕಾಂಕ್ಷೆಗಳಿಗೆ ವಿರೋಧವಾದುದನ್ನು ನಿಮಗೆ ತಂದಾಗಲೆಲ್ಲ ನೀವು ಅವರಿಗೆದುರು

وَلَقَدْ آتَيْنَا مُوسَى الْكِتَابَ وَقَفَّيْنَا مِن بَعْدِهِ بِالرُّسُلِ ۖ وَآتَيْنَا عِيسَى ابْنَ مَرْيَمَ الْبَيِّنَاتِ وَأَيَّدْنَاهُ بِرُوحِ الْقُدُسِ ۗ أَفَكُلَّمَا جَاءَكُمْ رَسُولٌ بِمَا لَا تَهْوَىٰ أَنفُسُكُمُ اسْتَكْبَرْتُمْ فَفَرِيقًا

30. 'ಪವಿತ್ರಾತ್ಮ' ಎಂದರೆ ದಿವ್ಯಜ್ಞಾನವೂ ಆಗಿದೆ. ದಿವ್ಯವಾಣಿಯನ್ನು ಮುಟ್ಟಿಸುತ್ತಿದ್ದ ಜಿಬ್‌ರೀಲ್‌ರಿಗೂ(ಅ) ಅಂತೆಯೇ ಅಲ್ಲಾಹನು ಪವಿತ್ರ ಗುಣಗಳನ್ನಿಟ್ಟಿದ್ದ ಹ. ಈಸಾರ(ಅ) ಪವಿತ್ರಾತ್ಮಕ್ಕೂ ಇದು ಅನ್ವಯವಾಗುತ್ತದೆ.

ಉದ್ಧಟತನವನ್ನೇ ತೋರಿದಿರಲ್ಲವೇ? ಕೆಲವರನ್ನು ಸುಳ್ಳಾಗಿಸಿದಿರಿ, ಇನ್ನು ಕೆಲವರನ್ನು ವಧಿಸಿಬಿಟ್ಟಿರಿ.

كَذَّبْتُمْ وَفَرِيقًا تَقْتُلُونَ ﴿٨٧﴾

88. ಅವರು, "ನಮ್ಮ ಹೃದಯಗಳು ಭದ್ರವಾಗಿವೆ" ಎನ್ನುತ್ತಾರೆ ಹಾಗಲ್ಲ, ವಾಸ್ತವದಲ್ಲಿ ಅವರ ಸತ್ಯನಿಷೇಧದ ಕಾರಣದಿಂದಾಗಿ ಅವರ ಮೇಲೆ ಅಲ್ಲಾಹನ ಅಭಿಶಾಪ ಬಿದ್ದಿದೆ. ಆದುದರಿಂದ ಅವರು ಸ್ವಲ್ಪವೇ ವಿಶ್ವಾಸವಿರಿಸುತ್ತಾರೆ.

وَقَالُوا قُلُوبُنَا غُلْفٌ ۚ بَل لَّعَنَهُمُ اللَّهُ بِكُفْرِهِمْ فَقَلِيلًا مَّا يُؤْمِنُونَ ﴿٨٨﴾

89. ಇದೀಗ ಅಲ್ಲಾಹನ ವತಿಯಿಂದ ಅವರ ಬಳಿಗೆ ಬಂದ ಗ್ರಂಥದ ಬಗ್ಗೆ ಅವರ ವರ್ತನೆ ಹೇಗಿದೆ? ಅವರ ಬಳಿ ಮೊದಲೇ ಇದ್ದ ಗ್ರಂಥವನ್ನು ಅದು ದೃಢೀಕರಿಸಿದ್ದರೂ ಅದು ಬರುವುದಕ್ಕೆ ಮುಂಚೆ ಸತ್ಯನಿಷೇಧಿಗಳೆದುರು ವಿಜಯಕ್ಕಾಗಿ ಅವರೇ ಪ್ರಾರ್ಥಿಸುತ್ತಿದ್ದರೂ[31] -ಅದು ಅವರ ಬಳಿ ಬಂದಾಗ ಅದನ್ನು ಅವರು ಗುರುತಿಸಿಕೊಂಡರೂ ನಿಷೇಧಿಸಿಯೇ ಬಿಟ್ಟರು. ಸತ್ಯನಿಷೇಧಿಗಳ ಮೇಲೆ ಅಲ್ಲಾಹನ ಅಭಿಶಾಪವಿದೆ.

وَلَمَّا جَاءَهُمْ كِتَابٌ مِّنْ عِندِ اللَّهِ مُصَدِّقٌ لِّمَا مَعَهُمْ وَكَانُوا مِن قَبْلُ يَسْتَفْتِحُونَ عَلَى الَّذِينَ كَفَرُوا فَلَمَّا جَاءَهُم مَّا عَرَفُوا كَفَرُوا بِهِ ۚ فَلَعْنَةُ اللَّهِ عَلَى الْكَافِرِينَ ﴿٨٩﴾

90. ಅವರು ಅದೆಂತಹ ನಿಕೃಷ್ಟ ವಿಧಾನದಿಂದ ತಮ್ಮ ಮನಸ್ಸುಗಳನ್ನು ಸಮಾಧಾನ ಪಡಿಸುತ್ತಾರೆ[32] ಅಲ್ಲಾಹನು ತನ್ನ ಅನುಗ್ರಹ (ದಿವ್ಯವಾಣಿ ಮತ್ತು ಪ್ರವಾದಿತ್ವ)ವನ್ನು ತನ್ನ ದಾಸರ ಪೈಕಿ ತನಗಿಷ್ಟ ಬಂದವನಿಗೆ ಅನುಗ್ರಹಿಸಿದನೆಂಬ ದ್ವೇಷದಿಂದ ಮಾತ್ರ ಅವನು ಅವತೀರ್ಣಗೊಳಿಸಿದ ಮಾರ್ಗದರ್ಶನವನ್ನು ಅವರು ನಿರಾಕರಿಸಿದರು.[33] ಆದುದರಿಂದ ಈಗ ಅವರು ಕ್ರೋಧದ ಮೇಲೆ ಕ್ರೋಧಕ್ಕೆ ಪಾತ್ರರಾದರು ಮತ್ತು ಇಂತಹ ಸತ್ಯನಿಷೇಧಿಗಳಿಗೆ ಅತ್ಯಂತ ಅಪಮಾನಕರ ಶಿಕ್ಷೆ ಕಾದಿದೆ.

بِئْسَمَا اشْتَرَوْا بِهِ أَنفُسَهُمْ أَن يَكْفُرُوا بِمَا أَنزَلَ اللَّهُ بَغْيًا أَن يُنَزِّلَ اللَّهُ مِن فَضْلِهِ عَلَىٰ مَن يَشَاءُ مِنْ عِبَادِهِ ۖ فَبَاءُوا بِغَضَبٍ عَلَىٰ غَضَبٍ ۚ وَلِلْكَافِرِينَ عَذَابٌ مُّهِينٌ ﴿٩٠﴾

91. "ಅಲ್ಲಾಹನು ಅವತೀರ್ಣಗೊಳಿಸಿದುದರ ಮೇಲೆ ವಿಶ್ವಾಸವಿಡಿರಿ" ಎಂದು ಅವರೊಡನೆ ಹೇಳಿದಾಗ, "ನಮಗೆ (ಇಸ್ರಾಈಲ್ ಕುಲಕ್ಕೆ) ಅವತೀರ್ಣವಾದುದರಲ್ಲಿ ಮಾತ್ರ ನಾವು

وَإِذَا قِيلَ لَهُمْ آمِنُوا بِمَا أَنزَلَ اللَّهُ قَالُوا نُؤْمِنُ بِمَا أُنزِلَ عَلَيْنَا وَيَكْفُرُونَ بِمَا وَرَاءَهُ

31. ಪ್ರವಾದಿವರ್ಯರ(ಸ) ಆಗಮನಕ್ಕೆ ಮೊದಲು ಯಹೂದ್ಯರು, ತಮ್ಮ ಪ್ರವಾದಿಗಳು ಭವಿಷ್ಯ ನುಡಿದಿದ್ದ ಆ ಪ್ರವಾದಿಯ ಆಗಮನವನ್ನು ಕಾತರದಿಂದ ಕಾಯುತ್ತಿದ್ದರು. ಆ ಪ್ರವಾದಿ ಬೇಗನೇ ಆಗಮಿಸಿ ಸತ್ಯನಿಷೇಧಿಗಳ ಮೇಲ್ಮೆ ಕೊನೆಗೊಳ್ಳಲಿ ಮತ್ತು ನಮ್ಮ ಉಚ್ಛ್ರಾಯದ ಯುಗ ಆರಂಭಗೊಳ್ಳಲಿ ಎಂದು ಅವರು ಪ್ರಾರ್ಥಿಸುತ್ತಲೂ ಇದ್ದರು.

32. ಇದರ ಇನ್ನೊಂದು ಅನುವಾದ ಹೀಗಾಗಬಹುದು, "ಅವರು ತಮ್ಮ ಪ್ರಾಣಗಳನ್ನು ಅದೆಷ್ಟು ನಿಕೃಷ್ಟ ವಸ್ತುವಿಗಾಗಿ ವಿಕ್ರಯಿಸುತ್ತಿದ್ದಾರೆ." ಅಂದರೆ ವಿಜಯ, ಸೌಭಾಗ್ಯ ಮತ್ತು ಮೋಕ್ಷವನ್ನೇ ಅವರು ಪರಿತ್ಯಜಿಸಿದರು.

33. ಬರಲಿರುವ ಪ್ರವಾದಿ ತಮ್ಮ ಸಮುದಾಯದಲ್ಲೇ ಹುಟ್ಟಬೇಕೆಂದು ಅವರು ಭಾವಿಸುತ್ತಿದ್ದರು. ಆದರೆ ಅವರು ತಮಗಿಂತ ಕೀಳೆಂದು ಭಾವಿಸುತ್ತಿದ್ದ ಸಮುದಾಯದಲ್ಲಿ ಆ ಪ್ರವಾದಿ ಹುಟ್ಟಿದಾಗ ಯಹೂದಿಯರು ಅವರನ್ನು ನಿರಾಕರಿಸಿದರು. ಅಲ್ಲಾಹನು ಅವರೊಡನೆ ಕೇಳಿಯೇ ಪ್ರವಾದಿಯನ್ನು ಕಳುಹಿಸಬೇಕಿತ್ತು ಎಂಬಂತಿದೆ ಅವರ ವಾದ.

ವಿಶ್ವಾಸವಿಡುತ್ತೇವೆ" ಎಂದು ಅವರು ಹೇಳುತ್ತಾರೆ. ಅದಕ್ಕೆ ಹೊರತಾಗಿರುವುದನ್ನು ಅವರು ನಿಷೇಧಿಸುತ್ತಾರೆ. ವಸ್ತುತಃ ಅದು ಸತ್ಯವಾಗಿದ್ದು ಅವರ ಬಳಿ ಮೊದಲೇ ಇರುವ ಬೋಧನೆಯನ್ನು ದೃಢೀಕರಿಸುತ್ತದೆ. "ಸರಿ, ನೀವು ನಿಮ್ಮ ಬಳಿಗೆ ಬಂದಿರುವ ಬೋಧನೆಯ ಮೇಲೆ ಮಾತ್ರ ವಿಶ್ವಾಸವಿರಿಸುವವರಾಗಿದ್ದರೆ, ಇದಕ್ಕಿಂತ ಮುಂಚೆ (ಇಸ್ರಾಈಲ್ ಸಂತತಿಯಲ್ಲೇ ಜನಿಸಿದ್ದ) ಅಲ್ಲಾಹನ ಸಂದೇಶವಾಹಕರನ್ನು ನೀವೇಕೆ ವಧಿಸುತ್ತಿದ್ದಿರಿ?" ಎಂದು ಅವರೊಡನೆ ಕೇಳಿರಿ.

وَهُوَ الْحَقُّ مُصَدِّقًا لِّمَا مَعَهُمْ ۗ قُلْ فَلِمَ تَقْتُلُونَ أَنبِيَاءَ اللَّهِ مِن قَبْلُ إِن كُنتُم مُّؤْمِنِينَ ﴿٩١﴾

92. ಮೂಸಾ ಎಂತೆಂತಹ ಸ್ಪಷ್ಟ ಆಧಾರಗಳ ಸಹಿತ ನಿಮ್ಮಲ್ಲಿ ಬಂದರು! ಆದರೂ ಅವರು ಬೆನ್ನು ತಿರುಗಿಸಿದ ಕೂಡಲೆ ನೀವು ಕರುವನ್ನು ಆರಾಧಿಸುವಂತಹ ಅಕ್ರಮಿಗಳಾದಿರಿ.

وَلَقَدْ جَاءَكُم مُّوسَىٰ بِالْبَيِّنَاتِ ثُمَّ اتَّخَذْتُمُ الْعِجْلَ مِن بَعْدِهِ وَأَنتُمْ ظَالِمُونَ ﴿٩٢﴾

93. ನಾವು ತೂರ(ಪರ್ವತ)ನ್ನು ನಿಮ್ಮ ಮೇಲೆ ಎತ್ತಿ ಹಿಡಿದು ನಿಮ್ಮಿಂದ ಬಲವಾದ ಕರಾರನ್ನು ಪಡೆದ ಸಂದರ್ಭವನ್ನು ಸ್ಮರಿಸಿರಿ. "ನಾವು ನಿಮಗೆ ಕೊಡುತ್ತಿರುವ ಮಾರ್ಗದರ್ಶನವನ್ನು ಕಟ್ಟುನಿಟ್ಟಾಗಿ ಪಾಲಿಸಿರಿ ಮತ್ತು ಕಿವಿಗೊಟ್ಟು ಆಲಿಸಿರಿ" ಎಂದು ನಿಮಗೆ ತಾಕೀತು ಮಾಡಿದ್ದೆವು. ನಿಮ್ಮ ಪೂರ್ವಿಕರು, "ನಾವು ಕೇಳಿದೆವು ಆದರೆ ಅಂಗೀಕರಿಸಲಾರೆವು" ಎಂದರು. ಅವರ ಮನಸ್ಸಿನಲ್ಲಿ ಕರುವೇ ನೆಲೆಸಿ ಹೋಗಿರುವಷ್ಟು ಅವರು ಮಿಥ್ಯಾರಾಧಕರಾಗಿದ್ದರು. ಹೇಳಿರಿ, ನೀವು ಸತ್ಯವಿಶ್ವಾಸಿಗಳಾಗಿರುವಿರಾದರೆ ಇಂತಹ ನೀಚ ಕಾರ್ಯಗಳ ಆದೇಶವನ್ನು ಕೊಡುತ್ತಿರುವ ನಿಮ್ಮ ವಿಶ್ವಾಸ ನಿಜಕ್ಕೂ ಬಹಳ ವಿಚಿತ್ರ ತರದ್ದಾಗಿದೆ.

وَإِذْ أَخَذْنَا مِيثَاقَكُمْ وَرَفَعْنَا فَوْقَكُمُ الطُّورَ خُذُوا مَا آتَيْنَاكُم بِقُوَّةٍ وَاسْمَعُوا ۖ قَالُوا سَمِعْنَا وَعَصَيْنَا وَأُشْرِبُوا فِي قُلُوبِهِمُ الْعِجْلَ بِكُفْرِهِمْ ۚ قُلْ بِئْسَمَا يَأْمُرُكُم بِهِ إِيمَانُكُمْ إِن كُنتُم مُّؤْمِنِينَ ﴿٩٣﴾

94. "ಪರಲೋಕ ಗೃಹವು ಸಮಸ್ತ ಮಾನವರನ್ನು ಬಿಟ್ಟು ಕೇವಲ ನಿಮಗಾಗಿಯೇ ಅಲ್ಲಾಹನ ಬಳಿ ಕಾಯ್ದಿರಿಸಲ್ಪಟ್ಟಿದೆಯೆಂಬ ನಿಮ್ಮ ಭಾವನೆ ಸತ್ಯವೆಂದಾದರೆ ನೀವು ಮರಣವನ್ನು ಅಪೇಕ್ಷಿಸಿರಿ" ಎಂದು ಅವರೊಡನೆ ಹೇಳಿರಿ.

قُلْ إِن كَانَتْ لَكُمُ الدَّارُ الْآخِرَةُ عِندَ اللَّهِ خَالِصَةً مِّن دُونِ النَّاسِ فَتَمَنَّوُا الْمَوْتَ إِن كُنتُمْ صَادِقِينَ ﴿٩٤﴾

95. ಅವರು ಮರಣವನ್ನೆಂದೂ ಬಯಸರೆಂಬುದು ಖಚಿತ. ಏಕೆಂದರೆ ಅವರು ತಮ್ಮ ಕೈಗಳಿಂದ ಏನನ್ನು ದುಡಿದು ಅಲ್ಲಿಗೆ ಕಳುಹಿಸಿರುವರೋ ಅದರ ಬೇಡಿಕೆ ಇದೇ ಆಗಿದೆ. (ಅರ್ಥಾತ್ ಅಲ್ಲಿಗೆ ಹೋಗಲು ಬಯಸದಿರುವುದು). ಅಲ್ಲಾಹನು ಆ ಅಕ್ರಮಿಗಳನ್ನು ಚೆನ್ನಾಗಿ ಬಲ್ಲನು.

وَلَن يَتَمَنَّوْهُ أَبَدًا بِمَا قَدَّمَتْ أَيْدِيهِمْ ۗ وَاللَّهُ عَلِيمٌ بِالظَّالِمِينَ ﴿٩٥﴾

96. ನೀವು ಅವರನ್ನು ಬದುಕಿನ ಮೇಲೆ ಅತ್ಯಧಿಕ ಆಶೆಯುಳ್ಳವರಾಗಿ ಕಾಣುವಿರಿ. ಈ ವಿಷಯದಲ್ಲಿ ಇವರು ಬಹುದೇವಾರಾಧಕರಿಗಿಂತಲೂ ಮಿಗಿಲಾಗಿದ್ದಾರೆ. ಅವರ ಪೈಕಿ ಪ್ರತಿಯೊಬ್ಬನೂ ತಾನು ಸಾವಿರ ವರ್ಷ ಬದುಕಬೇಕೆಂದು ಬಯಸುತ್ತಾನೆ. ಆದರೆ ದೀರ್ಘಾಯುಷ್ಯವು ಅವನನ್ನು ಶಿಕ್ಷೆಯಿಂದ ದೂರವಿರಿಸಲಾರದು. ಅವರು ಯಾವ ರೀತಿಯ ಕರ್ಮಗಳನ್ನೆಸಗುತ್ತಿದ್ದಾರೆ ಎಂಬುದನ್ನು ಅಲ್ಲಾಹನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದಾನೆ.

وَلَتَجِدَنَّهُمْ اَحْرَصَ النَّاسِ عَلٰى حَيٰوةٍ ۚ وَ
مِنَ الَّذِيْنَ اَشْرَكُوْا ۚ يَوَدُّ اَحَدُهُمْ لَوْ يُعَمَّرُ
اَلْفَ سَنَةٍ ۚ وَمَا هُوَ بِمُزَحْزِحِهٖ مِنَ الْعَذَابِ
اَنْ يُّعَمَّرَ ۗ وَاللّٰهُ بَصِيْرٌ بِمَا يَعْمَلُوْنَ ﴿٩٦﴾

97. ಅವರೊಡನೆ ಹೇಳಿರಿ, 'ಜಿಬ್‌ರೀಲ್'ರೊಂದಿಗೆ ಹಗೆತನವನ್ನಿರಿಸಿದವನು,[34] 'ಜಿಬ್‌ರೀಲ್', ಅಲ್ಲಾಹನ ಅಪ್ಪಣೆಯಿಂದಲೇ ಈ ಕುರ್‌ಆನನ್ನು ನಿಮ್ಮ ಹೃದಯದಲ್ಲಿ ಇಳಿಸುತ್ತಾನೆಂಬುದು ತಿಳಿದಿರಲಿ. ಅದು ಹಿಂದೆ ಬಂದಿದ್ದ ಗ್ರಂಥಗಳನ್ನು ದೃಢೀಕರಿಸುತ್ತದೆ ಮತ್ತು ಅನುಮೋದಿಸುತ್ತದೆ ಮತ್ತು ಅದು ಸತ್ಯವಿಶ್ವಾಸಿಗಳಿಗೆ ಸನ್ಮಾರ್ಗದರ್ಶನ ಹಾಗೂ ವಿಜಯದ ಸುವಾರ್ತೆಯಾಗಿ ಬಂದಿದೆ.

قُلْ مَنْ كَانَ عَدُوًّا لِّجِبْرِيْلَ فَاِنَّهٗ نَزَّلَهٗ
عَلٰى قَلْبِكَ بِاِذْنِ اللّٰهِ مُصَدِّقًا لِّمَا بَيْنَ يَدَيْهِ
وَهُدًى وَّبُشْرٰى لِلْمُؤْمِنِيْنَ ﴿٩٧﴾

98. (ಜಿಬ್‌ರೀಲ್‌ರ ಮೇಲೆ ಅವರ ಹಗೆತನಕ್ಕೆ ಕಾರಣವು ಇದೇ ಎಂದಾದರೆ ಅವರೊಡನೆ ಹೇಳಿರಿ) ಯಾರಾದರೂ ಅಲ್ಲಾಹನ, ಅವನ ದೇವಚರರ, ಅವನ ಸಂದೇಶವಾಹಕರ, ಜಿಬ್‌ರೀಲ್ ಮತ್ತು ಮೀಕಾಈಲರ ಶತ್ರುವಾಗಿದ್ದರೆ, ನಿಶ್ಚಯವಾಗಿಯೂ ಅಲ್ಲಾಹನು ಅಂತಹ ಸತ್ಯನಿಷೇಧಿಗಳ ಶತ್ರುವಾಗಿದ್ದಾನೆ.

مَنْ كَانَ عَدُوًّا لِّلّٰهِ وَمَلٰٓئِكَتِهٖ وَرُسُلِهٖ وَ
جِبْرِيْلَ وَمِيْكٰلَ فَاِنَّ اللّٰهَ عَدُوٌّ لِّلْكٰفِرِيْنَ ﴿٩٨﴾

99. ನಾವು ನಿಮಗೆ ಅವತೀರ್ಣಗೊಳಿಸಿರುವ ಸೂಕ್ತಗಳು ಸುಸ್ಪಷ್ಟ ಸತ್ಯವನ್ನು ಪ್ರಕಟಿಸುವವುಗಳಾಗಿರುತ್ತವೆ. ಕರ್ಮಭ್ರಷ್ಟರು ಮಾತ್ರ ಅವುಗಳ ಅನುಸರಣೆಯನ್ನು ನಿರಾಕರಿಸುತ್ತಾರೆ.

وَلَقَدْ اَنْزَلْنَآ اِلَيْكَ اٰيٰتٍۢ بَيِّنٰتٍ ۚ وَمَا يَكْفُرُ
بِهَآ اِلَّا الْفٰسِقُوْنَ ﴿٩٩﴾

100. ಅವರು ಯಾವುದಾದರೊಂದು ಕರಾರು ಮಾಡಿಕೊಂಡಾಗಲೆಲ್ಲಾ ಅವರ ಪೈಕಿ ಒಂದಲ್ಲೊಂದು ಪಂಗಡವು ಅದನ್ನು ಮುರಿದು ಬಿಡಲಿಲ್ಲವೇ? ನಿಜವಾಗಿ ಅವರಲ್ಲಿ ಹೆಚ್ಚಿನವರು ವಿಶ್ವಾಸವಿರಿಸುವುದಿಲ್ಲ.

اَوَكُلَّمَا عٰهَدُوْا عَهْدًا نَّبَذَهٗ فَرِيْقٌ مِّنْهُمْ ۭ
بَلْ اَكْثَرُهُمْ لَا يُؤْمِنُوْنَ ﴿١٠٠﴾

101. ಅಲ್ಲಾಹನ ವತಿಯಿಂದ ಸಂದೇಶವಾಹಕನೊಬ್ಬನು ಅವರ ಬಳಿ ಇದ್ದ ಗ್ರಂಥವನ್ನು ದೃಢಪಡಿಸುತ್ತಲೂ ಅನುಮೋದಿಸುತ್ತಲೂ

وَلَمَّا جَآءَهُمْ رَسُوْلٌ مِّنْ عِنْدِ اللّٰهِ مُصَدِّقٌ

34. ಯಹೂದಿಯರು ಪ್ರವಾದಿವರ್ಯರನ್ನು(ಸ) ಮತ್ತು ಅವರ ಮೇಲೆ ವಿಶ್ವಾಸವಿಟ್ಟವರನ್ನು ಹಳಿಯುತ್ತಿದ್ದುದು ಮಾತ್ರವಲ್ಲದೆ ಅಲ್ಲಾಹನ ಶ್ರೇಷ್ಠ ದೇವಚರರಾದ ಜಿಬ್‌ರೀಲ್‌ರನ್ನೂ(ಅ) ಬಯ್ಯುತ್ತಿದ್ದರು. ಅವರನ್ನು ತಮ್ಮ ಶತ್ರುವೆನ್ನುತ್ತಿದ್ದರು. ಅವರು, 'ಅನುಗ್ರಹದ ದೇವಚರರಲ್ಲ, ಯಾತನೆಯ ದೇವಚರ' ಎನ್ನುತ್ತಿದ್ದರು.

ಅವರಲ್ಲಿಗೆ ಬಂದಾಗ, ಗ್ರಂಥದವರ ಪೈಕಿ ಒಂದು ಪಂಗಡವು ಏನೂ ತಿಳಿಯದವರಂತೆ ಅಲ್ಲಾಹನ ಗ್ರಂಥವನ್ನು ಅಲಕ್ಷಿಸಿತು.

لِّمَا مَعَهُمْ نَبَذَ فَرِيقٌ مِّنَ الَّذِينَ أُوتُوا الْكِتٰبَ
كِتٰبَ اللّٰهِ وَرَآءَ ظُهُورِهِمْ كَأَنَّهُمْ لَا يَعْلَمُونَ ﴿١٠١﴾

102. ಮತ್ತು ಶೈತಾನರು ಸುಲೈಮಾನರ ಸಾಮ್ರಾಜ್ಯದ ಹೆಸರು ಹೇಳಿ ಮುಂದಿರಿಸುತ್ತಿದ್ದುದನ್ನು ಅವರು ಅನುಸರಿಸತೊಡಗಿದರು. ವಸ್ತುತಃ ಸುಲೈಮಾನರು ಎಂದೂ ಸತ್ಯನಿಷೇಧ ಕೈಗೊಂಡಿರಲಿಲ್ಲ. ಜನರಿಗೆ ಇಂದ್ರಜಾಲ ವಿದ್ಯೆಯನ್ನು ಕಲಿಸುತ್ತಿದ್ದ ಆ ಶೈತಾನರೇ ಸತ್ಯನಿಷೇಧ ಕೈಗೊಂಡಿದ್ದರು. ಅವರು ಬೆಬಿಲೋನಿನಲ್ಲಿ 'ಹಾರೂತ್' ಮತ್ತು 'ಮಾರೂತ್' ಎಂಬೀರ್ವ ದೇವಚರರ ಮೇಲೆ ಇಳಿಸಲಾಗಿದ್ದ ವಸ್ತುವಿನ ಹಿಂದೆ ಬಿದ್ದರು. ವಸ್ತುತಃ (ಆ ದೇವಚರರು) ಯಾರಿಗಾದರೂ ಅದರ ಶಿಕ್ಷಣವನ್ನು ಕೊಡುತ್ತಿದ್ದಾಗಲೆಲ್ಲಾ, "ನೋಡು ನಾವು ಕೇವಲ ಒಂದು ಪರೀಕ್ಷೆ ಆಗಿದ್ದೇವೆ, ನೀನು ಸತ್ಯನಿಷೇಧಕ್ಕೆ ಒಳಗಾಗಬೇಡ" ಎಂದು ಮೊದಲು ಸುಸ್ಪಷ್ಟ ಎಚ್ಚರಿಕೆ ಕೊಡುತ್ತಿದ್ದರು.[35] ಆದರೂ ಇವರು ಅವರಿಂದ ಪತಿ-ಪತ್ನಿಯರಲ್ಲಿ ವಿರಸ ವುಂಟುಮಾಡುವಂತಹದ್ದನ್ನು ಕಲಿಯುತ್ತಿದ್ದರು. ಅಲ್ಲಾಹನ ಅನುಜ್ಞೆಯ ಹೊರತು ಅವರು ಅದರ ಮೂಲಕ ಯಾರಿಗೂ ಕೇಡುಂಟು ಮಾಡುವಂತಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದರೂ ಅವರಿಗೆ ಸ್ವತಃ ಹಾನಿಕಾರಕವಾದ ಹಾಗೂ ಲಾಭದಾಯಕ ವಾಗಿರದಿದ್ದುದನ್ನು ಅವರು ಕಲಿಯುತ್ತಿದ್ದರು. ಅದನ್ನು ಖರೀದಿಸಿದವನಿಗೆ ಪರಲೋಕದಲ್ಲಿ ಏನೂ ಪಾಲಿಲ್ಲವೆಂಬುದನ್ನು ಅವರು ಚೆನ್ನಾಗಿ ಅರಿತಿದ್ದರು. ಅವರು ತಮ್ಮ ಜೀವಗಳ ಬದಲಿಗೆ ಖರೀದಿಸಿದ ಸೊತ್ತು ಅದೆಷ್ಟು ನಿಕೃಷ್ಟ! ಅಕಟ! ಅವರಿಗೆ ಇದು ತಿಳಿದಿರುತ್ತಿದ್ದರೆ!

وَاتَّبَعُوا مَا تَتْلُوا الشَّيٰطِينُ عَلٰى مُلْكِ سُلَيْمٰنَ
وَمَا كَفَرَ سُلَيْمٰنُ وَلٰكِنَّ الشَّيٰطِينَ كَفَرُوا
يُعَلِّمُونَ النَّاسَ السِّحْرَ وَمَآ أُنْزِلَ عَلَى
الْمَلَكَيْنِ بِبَابِلَ هٰرُوتَ وَمٰرُوتَ وَمَا
يُعَلِّمٰنِ مِنْ أَحَدٍ حَتّٰى يَقُولَآ إِنَّمَا نَحْنُ
فِتْنَةٌ فَلَا تَكْفُرْ فَيَتَعَلَّمُونَ مِنْهُمَا مَا يُفَرِّقُونَ
بِهٖ بَيْنَ الْمَرْءِ وَزَوْجِهٖ وَمَا هُمْ بِضَآرِّينَ
بِهٖ مِنْ أَحَدٍ إِلَّا بِإِذْنِ اللّٰهِ وَيَتَعَلَّمُونَ مَا
يَضُرُّهُمْ وَلَا يَنْفَعُهُمْ وَلَقَدْ عَلِمُوا لَمَنِ
اشْتَرٰىهُ مَا لَهٗ فِي الْاٰخِرَةِ مِنْ خَلَاقٍ وَ
لَبِئْسَ مَا شَرَوْا بِهٖٓ أَنْفُسَهُمْ لَوْ كَانُوا يَعْلَمُونَ ﴿١٠٢﴾

103. ಅವರು ಸತ್ಯವಿಶ್ವಾಸ ಮತ್ತು ಧರ್ಮನಿಷ್ಠೆಗಳನ್ನು ಸ್ವೀಕರಿಸುತ್ತಿದ್ದರೆ ಅಲ್ಲಾಹನ ಬಳಿ ಅವರಿಗೆ ಲಭಿಸುತ್ತಿದ್ದ ಪ್ರತಿಫಲವು ಅದಕ್ಕಿಂತ ಎಷ್ಟೋ ಉತ್ತಮವಾಗಿರುತ್ತಿತ್ತು. ಅಕಟ! ಅವರಿಗಿದು ತಿಳಿದಿರುತ್ತಿದ್ದರೆ!

وَلَوْ أَنَّهُمْ اٰمَنُوا وَاتَّقَوْا لَمَثُوبَةٌ مِّنْ عِنْدِ
اللّٰهِ خَيْرٌ لَوْ كَانُوا يَعْلَمُونَ ﴿١٠٣﴾

35. ಈ ಸೂಕ್ತದ ವ್ಯಾಖ್ಯಾನದ ಕುರಿತು ಅನೇಕ ಅಭಿಪ್ರಾಯಗಳಿವೆ. ಆದರೆ ನಾನು ಅರ್ಥ ಮಾಡಿಕೊಂಡಂತೆ ಸಮಸ್ತ ಬನೀಇಸ್ರಾಈಲ್ ಸಮುದಾಯ, ಬೆಬಿಲೋನಿಯಾದಲ್ಲಿ ಸೆರೆಯಾಳುಗಳು ಮತ್ತು ದಾಸರಾಗಿ ಮಾರ್ಪಟ್ಟಿದ್ದ ಕಾಲದಲ್ಲಿ ಅಲ್ಲಾಹನು ಇಬ್ಬರು ದೇವಚರರನ್ನು ಅವರ ಬಳಿ ಮನುಷ್ಯರ ರೂಪದಲ್ಲಿ ಕಳುಹಿಸಿರಬಹುದು. ಲೂತ್ ಸಮುದಾಯದ ಬಳಿಗೆ ದೇವಚರರು ಸುಂದರ ಬಾಲಕರ ರೂಪದಲ್ಲಿ ಹೋಗಿದ್ದಂತೆ ಇಸ್ರಾಈಲರ ಬಳಿಗೆ ಅವರು ಸಾಧುಸಂತರ ವೇಷದಲ್ಲಿ ಹೋಗಿರಬಹುದು. ಅಲ್ಲಿ ಒಂದೆಡೆ ಅವರು ಮಾಟದ ಅಂಗಡಿ ಇಟ್ಟಿರಬಹುದು. ಇನ್ನೊಂದೆಡೆ ಅವರು ತಮ್ಮ ಹೊಣೆ ಮುಕ್ತತೆಗಾಗಿ ಪ್ರತಿಯೊಬ್ಬರೊಡನೆ, "ನೋಡಿ. ನಾವು ನಿಮ್ಮ ಕಡೆಗೆ ಪರೀಕ್ಷಾರ್ಥವಾಗಿ ಕಳುಹಿಸಲ್ಪಟ್ಟವರು. ಆದ್ದರಿಂದ ನಿಮ್ಮ ಭವಿಷ್ಯವನ್ನು ಹಾಳುಮಾಡಿಕೊಳ್ಳದಿರಿ." ಎಂದು ಎಚ್ಚರಿಸುತ್ತಲೂ ಇದ್ದಿರಬಹುದು. ಆದರೂ ಜನರು ಅವರ ಮಾಟ ಮೋಡಿ ಮತ್ತು ತಾಯಿತಗಳಿಗೆ ಮುಗಿಬಿದ್ದಿರಬಹುದು.

104. ಓ ಸತ್ಯವಿಶ್ವಾಸಿಗಳೇ, 'ರಾಇನಾ' ಎಂದೆನ್ನಬೇಡಿರಿ, ಬದಲಾಗಿ 'ಉಂಝುರ್ನಾ' ಎನ್ನಿರಿ ಮತ್ತು ಮಾತನ್ನು ಗಮನವಿಟ್ಟು ಆಲಿಸಿರಿ.[36] ಈ ಸತ್ಯನಿಷೇಧಿಗಳು ವೇದನಾಯುಕ್ತ ಯಾತನೆಗೆ ಅರ್ಹರಾಗಿದ್ದಾರೆ.

يَٰٓأَيُّهَا ٱلَّذِينَ ءَامَنُوا۟ لَا تَقُولُوا۟ رَٰعِنَا وَقُولُوا۟ ٱنظُرْنَا وَٱسْمَعُوا۟ ۗ وَلِلْكَٰفِرِينَ عَذَابٌ أَلِيمٌ ﴿١٠٤﴾

105. ನಿಮ್ಮ ಪ್ರಭುವಿನ ಕಡೆಯಿಂದ ನಿಮ್ಮ ಮೇಲೆ ಏನಾದರೂ ಒಳಿತು ಅವತೀರ್ಣವಾಗುವುದನ್ನು ಗ್ರಂಥದವರೂ, ಬಹು ದೇವಾರಾಧಕರೂ ಆದ ಸತ್ಯನಿಷೇಧಿಗಳು ಎಷ್ಟಕ್ಕೂ ಇಷ್ಟಪಡುವುದಿಲ್ಲ. ಆದರೆ, ಅಲ್ಲಾಹನು ತನಗಿಷ್ಟಬಂದವರನ್ನು ತನ್ನ ಕರುಣೆಗಾಗಿ ಆಯ್ದುಕೊಳ್ಳುತ್ತಾನೆ. ಅಲ್ಲಾಹನು ಮಹಾ ಅನುಗ್ರಹಶಾಲಿ.

مَّا يَوَدُّ ٱلَّذِينَ كَفَرُوا۟ مِنْ أَهْلِ ٱلْكِتَٰبِ وَلَا ٱلْمُشْرِكِينَ أَن يُنَزَّلَ عَلَيْكُم مِّنْ خَيْرٍ مِّن رَّبِّكُمْ ۗ وَٱللَّهُ يَخْتَصُّ بِرَحْمَتِهِۦ مَن يَشَآءُ ۚ وَٱللَّهُ ذُو ٱلْفَضْلِ ٱلْعَظِيمِ ﴿١٠٥﴾

106. ನಾವು ಅನೂರ್ಜಿತಗೊಳಿಸಿದ ಅಥವಾ ವಿಸ್ಮೃತಿಗೊಳಿಸಿದ ವಚನಗಳ ಸ್ಥಾನದಲ್ಲಿ ಅವುಗಳಿಗಿಂತಲೂ ಉತ್ತಮವಾದುದನ್ನು ಅಥವಾ ಅದರಂತೆಯೇ ಇರುವುದನ್ನಾದರೂ ತರುತ್ತೇವೆ.[37] ನಿಶ್ಚಯವಾಗಿಯೂ ಅಲ್ಲಾಹನಿಗೆ ಸರ್ವ ಸಾಮರ್ಥ್ಯವಿದೆ ಎಂಬುದು ನಿಮಗೆ ಅರಿಯದೇ?

مَا نَنسَخْ مِنْ ءَايَةٍ أَوْ نُنسِهَا نَأْتِ بِخَيْرٍ مِّنْهَآ أَوْ مِثْلِهَآ ۗ أَلَمْ تَعْلَمْ أَنَّ ٱللَّهَ عَلَىٰ كُلِّ شَىْءٍ قَدِيرٌ ﴿١٠٦﴾

107. ಭೂಮಿ-ಆಕಾಶಗಳ ಆಧಿಪತ್ಯ ಅಲ್ಲಾಹನಿಗೆ ಮಾತ್ರ ಇರುವುದೆಂದೂ ಅಲ್ಲಾಹನ ಹೊರತು ನಿಮ್ಮ ಸಂರಕ್ಷಕನೂ ಸಹಾಯಕನೂ ಯಾರೂ ಇಲ್ಲವೆಂದೂ ನಿಮಗೆ ತಿಳಿಯದೇ?

أَلَمْ تَعْلَمْ أَنَّ ٱللَّهَ لَهُۥ مُلْكُ ٱلسَّمَٰوَٰتِ وَٱلْأَرْضِ ۗ وَمَا لَكُم مِّن دُونِ ٱللَّهِ مِن وَلِىٍّ وَلَا نَصِيرٍ ﴿١٠٧﴾

108. ಹಿಂದೆ ಮೂಸಾರವರೊಂದಿಗೆ ಪ್ರಶ್ನಿಸಿ ತಗಾದೆ ಮಾಡಿದಂತೆ ನೀವೂ ನಿಮ್ಮ ಪ್ರವಾದಿಯವರೊಡನೆ ಮಾಡಲು ಬಯಸು

أَمْ تُرِيدُونَ أَن تَسْـَٔلُوا۟ رَسُولَكُمْ كَمَا سُئِلَ مُوسَىٰ مِن قَبْلُ ۗ وَمَن يَتَبَدَّلِ ٱلْكُفْرَ

36. ಯಹೂದಿಯರು ಪ್ರವಾದಿವರ್ಯರ(ಸ) ಸಭೆಗೆ ಬರುವಾಗ ಸಲಾಮ್ ಹೇಳುವ ಮತ್ತು ಮಾತನಾಡುವ ಸಂದರ್ಭದಲ್ಲಿ ತಮಗೆ ಸಾಧ್ಯವಿರುವ ಎಲ್ಲಾ ವಿಧಾನದಿಂದ ನಂಜು ಕಾರಲು ಪ್ರಯತ್ನಿಸುತ್ತಿದ್ದರು. ಪ್ರವಾದಿವರ್ಯರೊಂದಿಗೆ(ಸ) ಮಾತನಾಡುವಾಗ ಯಹೂದಿಯರಿಗೆ ಹಲವೊಮ್ಮೆ, "ತಡೆಯಿರಿ. ನಮಗೆ ವಿಷಯವನ್ನು ತಿಳಿದುಕೊಳ್ಳಲು ಅವಕಾಶ ಕೊಡಿ" ಎಂದು ಹೇಳಬೇಕಾದ ಸಂದರ್ಭ ಬರುತ್ತಿತ್ತು. ಆಗ ಅವರು 'ರಾಈನಾ' ಎನ್ನುತ್ತಿದ್ದರು. ಇದರ ಬಾಹ್ಯ ಅರ್ಥ ನಮಗೆ ಸ್ವಲ್ಪ ವಿನಾಯಿತಿ ನೀಡಿರಿ' ಅಥವಾ "ನಮ್ಮ ಮಾತನ್ನು ಕೇಳಿರಿ" ಎಂದೇ ಆಗಿತ್ತು. ಆದರೆ ಅದು ಅನೇಕ ಅಪಾರ್ಥಗಳಿಗೂ ಅವಕಾಶ ಕಲ್ಪಿಸುತ್ತಿತ್ತು. ಆದ್ದರಿಂದ ಈ ಪದ ಬಳಕೆ ಮಾಡದಿರುವಂತೆ ಮತ್ತು ಅದರ ಬದಲು 'ಉನ್‌ಝುರ್‌ನಾ' ಎನ್ನುವಂತೆ ಆದೇಶಿಸಲಾಯಿತು. ಅದರ ಅರ್ಥ "ನಮ್ಮ ಕಡೆಗೆ ಗಮನ ಹರಿಸಿರಿ" ಅಥವಾ "ನಮಗೆ ತಿಳಿದುಕೊಳ್ಳಲು ಅವಕಾಶ ಕೊಡಿರಿ" ಎಂದಾಗಿದೆ.

37. ಇದು ಯಹೂದಿಯರು ಮುಸ್ಲಿಮರ ಮನಸ್ಸಿನಲ್ಲಿ ಬಿತ್ತಲು ಪ್ರಯತ್ನಿಸುತ್ತಿದ್ದ ವಿಶಿಷ್ಟ ರೀತಿಯ ಸಂದೇಹದ ಉತ್ತರ. ಪೂರ್ವಗ್ರಂಥಗಳು ಮತ್ತು ಈ ಕುರ್‌ಆನ್‌ಗಳೆಲ್ಲವೂ ದೇವನ ವತಿಯಿಂದಲೇ ಬಂದವುಗಳಾಗಿದ್ದರೆ, ಪೂರ್ವಗ್ರಂಥಗಳ ಆದೇಶಗಳ ಸ್ಥಾನದಲ್ಲಿ ಇದರಲ್ಲೇಕೆ ಭಿನ್ನ ಆದೇಶಗಳನ್ನು ನೀಡಲಾಗಿದೆ ಎಂದು ಅವರು ಆಕ್ಷೇಪ ವ್ಯಕ್ತಪಡಿಸುತ್ತಿದ್ದರು.

ತ್ತೀರಾ?[38] ವಸ್ತುತಃ ಯಾವನಾದರೂ ಸತ್ಯವಿಶ್ವಾಸದ ರೀತಿ ನೀತಿಯನ್ನು ಸತ್ಯನಿಷೇಧದ ರೀತಿ ನೀತಿಯನ್ನಾಗಿ ಬದಲಿಸಿಕೊಂಡರೆ ಆತನು ನಿಶ್ಚಯವಾಗಿಯೂ ನೇರ ಮಾರ್ಗದಿಂದ ವ್ಯತಿಚಲಿಸಿದನು.

بِالْإِيمَانِ فَقَدْ ضَلَّ سَوَاءَ السَّبِيلِ ﴿١٠٨﴾

109. ಗ್ರಂಥದವರ ಪೈಕಿ ಅನೇಕರು ನಿಮ್ಮನ್ನು ಹೇಗಾದರೂ ಮಾಡಿ ಸತ್ಯವಿಶ್ವಾಸದಿಂದ ಮಿಥ್ಯ ವಿಶ್ವಾಸಕ್ಕೆ ತಿರುಗಿಸಬೇಕೆಂದು ಆಶಿಸುತ್ತಾರೆ. ಅವರಿಗೆ ಸತ್ಯವು ಅಭಿವ್ಯಕ್ತವಾಗಿರುವುದಾದರೂ ತಮ್ಮ ಚಿತ್ತ ಮಾತ್ಸರ್ಯದ ಕಾರಣವಾಗಿ ಅವರು ನಿಮ್ಮ ಬಗ್ಗೆ ಈ ರೀತಿ ಅಪೇಕ್ಷಿಸುತ್ತಾರೆ. ಇದಕ್ಕುತ್ತರವಾಗಿ ಅಲ್ಲಾಹನು ಸ್ವತಃ ತನ್ನ ತೀರ್ಪನ್ನು ಜಾರಿಗೊಳಿಸುವ ತನಕ ನೀವು ಕ್ಷಮಿಸಿರಿ ಮತ್ತು ಅಲಕ್ಷಿಸಿರಿ. ಅಲ್ಲಾಹನು ಸಕಲ ಕಾರ್ಯಗಳಿಗೂ ಶಕ್ತನೆಂಬುದರ ಬಗ್ಗೆ ನಿಸ್ಸಂದೇಹಿಗಳಾಗಿರಿ.

وَدَّ كَثِيرٌ مِّنْ أَهْلِ الْكِتَابِ لَوْ يَرُدُّونَكُم مِّن بَعْدِ إِيمَانِكُمْ كُفَّارًا حَسَدًا مِّنْ عِندِ أَنفُسِهِم مِّن بَعْدِ مَا تَبَيَّنَ لَهُمُ الْحَقُّ ۖ فَاعْفُوا وَاصْفَحُوا حَتَّىٰ يَأْتِيَ اللَّهُ بِأَمْرِهِ ۗ إِنَّ اللَّهَ عَلَىٰ كُلِّ شَيْءٍ قَدِيرٌ ﴿١٠٩﴾

110. ನಮಾಝನ್ನು ಸಂಸ್ಥಾಪಿಸಿರಿ, 'ಝಕಾತ್' ಕೊಡಿರಿ. ನೀವು ಭವಿಷ್ಯಕ್ಕಾಗಿ ಸಂಪಾದಿಸಿ ಕಳುಹಿಸುವ ಪುಣ್ಯಗಳೆಲ್ಲವನ್ನೂ ಅಲ್ಲಾಹನಲ್ಲಿ ಪಡೆಯುವಿರಿ. ನೀವು ಮಾಡುವುದೆಲ್ಲವೂ ಅಲ್ಲಾಹನ ವೀಕ್ಷಣೆಯಲ್ಲಿದೆ.

وَأَقِيمُوا الصَّلَاةَ وَآتُوا الزَّكَاةَ ۚ وَمَا تُقَدِّمُوا لِأَنفُسِكُم مِّنْ خَيْرٍ تَجِدُوهُ عِندَ اللَّهِ ۗ إِنَّ اللَّهَ بِمَا تَعْمَلُونَ بَصِيرٌ ﴿١١٠﴾

111. ಯಹೂದಿಯರಾಗದೆ ಅಥವಾ (ಕ್ರೈಸ್ತರ ಅಭಿಪ್ರಾಯ ಪ್ರಕಾರ) ಕ್ರೈಸ್ತರಾಗದೆ ಯಾರೂ ಸ್ವರ್ಗದೊಳಗೆ ಪ್ರವೇಶಿಸಲಾರರೆಂದು ಅವರೆನ್ನುತ್ತಾರೆ. ಇವು ಅವರ ಅಭಿಲಾಷೆಗಳಾಗಿವೆ. "ನೀವು ನಿಮ್ಮ ವಾದದಲ್ಲಿ ಸತ್ಯವಂತರಾಗಿದ್ದರೆ ನಿಮ್ಮ ಆಧಾರ ಪ್ರಮಾಣಗಳನ್ನು ಮುಂದೆ ತನ್ನಿರಿ" ಎಂದು ಅವರೊಡನೆ ಹೇಳಿರಿ.

وَقَالُوا لَن يَدْخُلَ الْجَنَّةَ إِلَّا مَن كَانَ هُودًا أَوْ نَصَارَىٰ ۗ تِلْكَ أَمَانِيُّهُمْ ۗ قُلْ هَاتُوا بُرْهَانَكُمْ إِن كُنتُمْ صَادِقِينَ ﴿١١١﴾

112. ಹಾಗೇನೂ ಇಲ್ಲ. (ಅಂತಹ ವೈಶಿಷ್ಟ್ಯವೇನೂ ಯಾರಿಗೂ ಇಲ್ಲ) ಅಲ್ಲಾಹನಿಗೆ ಆತ್ಮಾರ್ಪಣೆ ಗೈಯುವ ಮತ್ತು ಸತ್ಸಂಪ್ರದಾಯದಲ್ಲಿ ನಡೆಯುವಾತನು ಯಾರೇ ಇರಲಿ, ಅವನಿಗೆ ಅವನ ಪ್ರಭುವಿನ ಬಳಿ ಅವನ ಪ್ರತಿಫಲವಿದೆ. ಅಂತಹವರಿಗೆ ಯಾವುದೇ ಭಯ ಮತ್ತು ವ್ಯಥೆಯ ಸಂಭವವೇ ಇರಲಾರದು.

بَلَىٰ مَنْ أَسْلَمَ وَجْهَهُ لِلَّهِ وَهُوَ مُحْسِنٌ فَلَهُ أَجْرُهُ عِندَ رَبِّهِ وَلَا خَوْفٌ عَلَيْهِمْ وَلَا هُمْ يَحْزَنُونَ ﴿١١٢﴾

113. ಯಹೂದಿಯರು ಕ್ರೈಸ್ತರ ಬಳಿ ಏನೂ ಇಲ್ಲವೆನ್ನುತ್ತಾರೆ.

وَقَالَتِ الْيَهُودُ لَيْسَتِ النَّصَارَىٰ عَلَىٰ شَيْءٍ

38. ಯಹೂದಿಯರು ನಿರಂತರ ದೋಷಾನ್ವೇಷಣೆ ನಡೆಸಿ ಮುಸ್ಲಿಮರ ಮುಂದೆ ಅನೇಕ ರೀತಿಯ ಪ್ರಶ್ನೆಗಳನ್ನೊಡ್ಡುತ್ತಿದ್ದರು. ನಿಮ್ಮ ಪ್ರವಾದಿಯೊಂದಿಗೆ ಅದು ಕೇಳಿ ಇದು ಕೇಳಿ ಎಂದು ನಿರಂತರ ಅವರನ್ನು ಪ್ರೇರೇಪಿಸುತ್ತಿದ್ದರು. ಈ ವಿಷಯದಲ್ಲಿ ಯಹೂದಿಯರ ಧೋರಣೆ ಅನುಸರಿಸದಂತೆ ಈ ಮೂಲಕ ಮುಸ್ಲಿಮರಿಗೆ ಎಚ್ಚರಿಕೆ ನೀಡಲಾಗುತ್ತಿದೆ.

ಕ್ರೈಸ್ತರು ಯಹೂದಿಯರ ಬಳಿ ಏನೂ ಇಲ್ಲವೆನ್ನುತ್ತಾರೆ. ವಸ್ತುತಃ ಇತ್ತಂಡದವರೂ ಗ್ರಂಥ ಪಾರಾಯಣ ಮಾಡುತ್ತಾರೆ. ಗ್ರಂಥಜ್ಞಾನವಿಲ್ಲದವರೂ ಹೀಗೆಯೇ ಹೇಳುತ್ತಾರೆ. ಇವರು ಹೊಂದಿರುವ ಈ ಭಿನ್ನಾಭಿಪ್ರಾಯಗಳ ತೀರ್ಮಾನವನ್ನು ಅಲ್ಲಾಹನು ಪುನರುತ್ಥಾನ ದಿನದಂದು ಮಾಡುವನು.

وَقَالَتِ النَّصٰرٰى لَيْسَتِ الْيَهُوْدُ عَلٰى شَيْءٍ ۙ وَّهُمْ يَتْلُوْنَ الْكِتٰبَ ۗ كَذٰلِكَ قَالَ الَّذِيْنَ لَا يَعْلَمُوْنَ مِثْلَ قَوْلِهِمْ ۚ فَاللّٰهُ يَحْكُمُ بَيْنَهُمْ يَوْمَ الْقِيٰمَةِ فِيْمَا كَانُوْا فِيْهِ يَخْتَلِفُوْنَ ﴿١١٣﴾

114. ಅಲ್ಲಾಹನ ಆರಾಧನಾಲಯಗಳಲ್ಲಿ ಅವನ ನಾಮಸ್ಮರಣೆಯನ್ನು ತಡೆಯುವ ಮತ್ತು ಅವುಗಳನ್ನು ಹಾಳುಗೆಡಹಲುದ್ಯುಕ್ತರಾಗುವವರಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? ಅಂತಹವರು ಈ ಆರಾಧನಾಲಯಗಳಲ್ಲಿ ಕಾಲಿರಿಸಲು ಅರ್ಹರಲ್ಲ. ಅಲ್ಲಿ ಹೋಗುವುದಿದ್ದರೂ ಭಯಭರಿತರಾಗಿ ಹೋಗಬೇಕು. ಅವರಿಗೆ ಇಹದಲ್ಲಿ ಅಪಮಾನವೂ ಪರದಲ್ಲಿ ಘೋರ ಶಿಕ್ಷೆಯೂ ಕಾದಿದೆ.

وَمَنْ اَظْلَمُ مِمَّنْ مَّنَعَ مَسٰجِدَ اللّٰهِ اَنْ يُّذْكَرَ فِيْهَا اسْمُهٗ وَسَعٰى فِيْ خَرَابِهَا ۗ اُولٰٓئِكَ مَا كَانَ لَهُمْ اَنْ يَّدْخُلُوْهَآ اِلَّا خَآئِفِيْنَ ۬ۗ لَهُمْ فِي الدُّنْيَا خِزْيٌ وَّلَهُمْ فِي الْاٰخِرَةِ عَذَابٌ عَظِيْمٌ ﴿١١٤﴾

115. ಪೂರ್ವ ಪಶ್ಚಿಮಗಳೆಲ್ಲವೂ ಅಲ್ಲಾಹನವು. ನೀವೆತ್ತ ಮುಖ ಮಾಡಿದರೂ ಅಲ್ಲಿ ಅಲ್ಲಾಹನ ಮುಖವಿದೆ. ನಿಶ್ಚಯವಾಗಿಯೂ ಅಲ್ಲಾಹನು ಬಹುವಿಶಾಲನೂ ಅಭಿಜ್ಞನೂ ಆಗಿರುತ್ತಾನೆ.

وَلِلّٰهِ الْمَشْرِقُ وَالْمَغْرِبُ ۚ فَاَيْنَمَا تُوَلُّوْا فَثَمَّ وَجْهُ اللّٰهِ ۗ اِنَّ اللّٰهَ وَاسِعٌ عَلِيْمٌ ﴿١١٥﴾

116. ಅಲ್ಲಾಹನು ಪುತ್ರನನ್ನು ಹೊಂದಿದ್ದಾನೆಂದು ಅವರನ್ನುತ್ತಾರೆ. ಇಂತಹ ಮಾತುಗಳಿಂದ ಅಲ್ಲಾಹನು ಪರಿಶುದ್ಧನು. ವಾಸ್ತವದಲ್ಲಿ ಭೂಮಿ-ಆಕಾಶಗಳಲ್ಲಿರುವುದೆಲ್ಲ ಅವನ ಸೊತ್ತು. ಸರ್ವವೂ ಅವನ ವಿಧೇಯ ಆಜ್ಞಾನುವರ್ತಿಗಳು.

وَقَالُوا اتَّخَذَ اللّٰهُ وَلَدًا ۙ سُبْحٰنَهٗ ۗ بَلْ لَّهٗ مَا فِي السَّمٰوٰتِ وَالْاَرْضِ ۗ كُلٌّ لَّهٗ قٰنِتُوْنَ ﴿١١٦﴾

117. ಆತನು ಭೂಮಿ-ಆಕಾಶಗಳ ನಿರ್ಮಾತೃ. ಅವನು ಯಾವುದಾದರೊಂದು ಕಾರ್ಯದ ನಿರ್ಧಾರ ಮಾಡಿಕೊಂಡೊಡನೆ 'ಸಂಭವಿಸು' ಎಂದು ಆಜ್ಞಾಪಿಸುತ್ತಾನೆ. ಆಗಲೇ ಅದು ಸಂಭವಿಸುತ್ತದೆ.

بَدِيْعُ السَّمٰوٰتِ وَالْاَرْضِ ۗ وَاِذَا قَضٰٓى اَمْرًا فَاِنَّمَا يَقُوْلُ لَهٗ كُنْ فَيَكُوْنُ ﴿١١٧﴾

118. ಅಲ್ಲಾಹನು ಸ್ವತಃ ನಮ್ಮೊಡನೆ ಮಾತಾಡುವುದಿಲ್ಲವೇಕೆ? ಅಥವಾ ಯಾವುದಾದರೂ ನಿದರ್ಶನವೇಕೆ ನಮಗೆ ತೋರುವುದಿಲ್ಲ? ಎಂದು ತಿಳಿಗೇಡಿಗಳು ಕೇಳುತ್ತಾರೆ. ಇವರಿಗಿಂತ ಹಿಂದಿನವರೂ ಹೀಗೆಯೇ ಹೇಳುತ್ತಿದ್ದರು. ಇವರೆಲ್ಲರ (ಮುಂದಿನ ಮತ್ತು ಹಿಂದಿನ ಪಥಭ್ರಷ್ಟರ) ಮನೋವೃತ್ತಿಗಳು ಒಂದೇ ತೆರನಾಗಿವೆ. ದೃಢ ವಿಶ್ವಾಸಿಗಳಿಗೆ ನಾವು ಸುಸ್ಪಷ್ಟ ದೃಷ್ಟಾಂತಗಳನ್ನು ವ್ಯಕ್ತಪಡಿಸಿದ್ದೇವೆ.

وَقَالَ الَّذِيْنَ لَا يَعْلَمُوْنَ لَوْلَا يُكَلِّمُنَا اللّٰهُ اَوْ تَاْتِيْنَآ اٰيَةٌ ۗ كَذٰلِكَ قَالَ الَّذِيْنَ مِنْ قَبْلِهِمْ مِّثْلَ قَوْلِهِمْ ۗ تَشَابَهَتْ قُلُوْبُهُمْ ۗ قَدْ بَيَّنَّا الْاٰيٰتِ لِقَوْمٍ يُّوْقِنُوْنَ ﴿١١٨﴾

119. ನಿಶ್ಚಯವಾಗಿಯೂ ನಾವು ನಿಮ್ಮನ್ನು ಸತ್ಯಜ್ಞಾನದೊಂದಿಗೆ ಸುವಾರ್ತೆ ಕೊಡುವವನಾಗಿಯೂ ಎಚ್ಚರಿಕೆ ಕೊಡುವವನಾಗಿಯೂ ಮಾಡಿ ಕಳುಹಿಸಿದ್ದೇವೆ. (ಇದಕ್ಕಿಂತಲೂ ದೊಡ್ಡ ದೃಷ್ಟಾಂತ ಇನ್ನಾವುದಿದೆ?)[39] ನರಕದೊಂದಿಗೆ ಬಾಂಧವ್ಯ ಬೆಳೆಸಿಕೊಂಡವರ ಕಡೆಯಿಂದ ನೀವು ಹೊಣೆಗಾರರಾಗುವುದಿಲ್ಲ.

إِنَّآ أَرْسَلْنَٰكَ بِٱلْحَقِّ بَشِيرًا وَنَذِيرًا ۖ وَلَا تُسْـَٔلُ عَنْ أَصْحَٰبِ ٱلْجَحِيمِ ﴿١١٩﴾

120. ಯಹೂದಿಯರೂ ಕ್ರೈಸ್ತರೂ-ನೀವು ಅವರ ಮಾರ್ಗವನ್ನು ಅನುಸರಿಸುವ ವರೆಗೂ ನಿಮ್ಮ ಬಗ್ಗೆ ಎಂದೂ ಪ್ರಸನ್ನರಾಗರು. ಅಲ್ಲಾಹನು ತೋರಿಸಿದ ಮಾರ್ಗದರ್ಶನವೇ ವಾಸ್ತವಿಕ ಮಾರ್ಗದರ್ಶನವೆಂದು ಸ್ಪಷ್ಟವಾಗಿ ಹೇಳಿಬಿಡಿರಿ. ನಿಮ್ಮ ಬಳಿಗೆ ಬಂದಿರುವ ದಿವ್ಯಜ್ಞಾನದ ಬಳಿಕವೂ ನೀವು ಅವರ ಚಿತ್ತಾಕಾಂಕ್ಷೆಗಳನ್ನನುಸರಿಸಿದರೆ ಅಲ್ಲಾಹನ ಹಿಡಿತದಿಂದ ರಕ್ಷಿಸಲು ಯಾವನೊಬ್ಬ ರಕ್ಷಕ ಮಿತ್ರನಾಗಲಿ ಸಹಾಯಕನಾಗಲಿ ನಿಮಗೆ ಇರಲಾರನು.

وَلَن تَرْضَىٰ عَنكَ ٱلْيَهُودُ وَلَا ٱلنَّصَٰرَىٰ حَتَّىٰ تَتَّبِعَ مِلَّتَهُمْ ۗ قُلْ إِنَّ هُدَى ٱللَّهِ هُوَ ٱلْهُدَىٰ ۗ وَلَئِنِ ٱتَّبَعْتَ أَهْوَآءَهُم بَعْدَ ٱلَّذِى جَآءَكَ مِنَ ٱلْعِلْمِ ۙ مَا لَكَ مِنَ ٱللَّهِ مِن وَلِىٍّ وَلَا نَصِيرٍ ﴿١٢٠﴾

121. ನಾವು ಗ್ರಂಥವನ್ನು ದಯಪಾಲಿಸಿದ ಬಳಿಕ ಓದಬೇಕಾದ ರೀತಿಯಲ್ಲಿ ಅದನ್ನು (ಕುರ್‌ಆನನ್ನು) ಓದುವವರು ಅದರ ಮೇಲೆ ಹೃತ್ಪೂರ್ವಕ ವಿಶ್ವಾಸವಿಡುತ್ತಾರೆ.[40] ಅದನ್ನು ನಿಷೇಧಿಸುವವರೇ ನಷ್ಟಹೊಂದುವವರು.

ٱلَّذِينَ ءَاتَيْنَٰهُمُ ٱلْكِتَٰبَ يَتْلُونَهُۥ حَقَّ تِلَاوَتِهِۦٓ أُو۟لَٰٓئِكَ يُؤْمِنُونَ بِهِۦ ۗ وَمَن يَكْفُرْ بِهِۦ فَأُو۟لَٰٓئِكَ هُمُ ٱلْخَٰسِرُونَ ﴿١٢١﴾

122. ಓ ಇಸ್ರಾಈಲ್ ಸಂತತಿಗಳೇ, ನಾನು ನಿಮಗೆ ಒದಗಿಸಿದ ಕೊಡುಗೆಗಳನ್ನು ಮತ್ತು ಜಗತ್ತಿನ ಎಲ್ಲಾ ಜನಾಂಗಗಳ ಪೈಕಿ ನಿಮಗೆ ಶ್ರೇಷ್ಠತೆ ದಯಪಾಲಿಸಿದ್ದುದನ್ನು ಸ್ಮರಿಸಿರಿ.

يَٰبَنِىٓ إِسْرَٰٓءِيلَ ٱذْكُرُوا۟ نِعْمَتِىَ ٱلَّتِىٓ أَنْعَمْتُ عَلَيْكُمْ وَأَنِّى فَضَّلْتُكُمْ عَلَى ٱلْعَٰلَمِينَ ﴿١٢٢﴾

123. ಯಾರೂ ಯಾರಿಗೂ ಕಿಂಚಿತ್ತೂ ಉಪಕರಿಸದ, ಯಾರಿಂದಲೂ ಪರಿಹಾರಧನ ಸ್ವೀಕರಿಸಲಾಗದ, ಯಾವ ಶಿಫಾರಸೂ ಫಲಕಾರಿಯಾಗದ ಮತ್ತು ಅಪರಾಧಿಗಳಿಗೆ ಎಲ್ಲಿಂದಲೂ ಯಾವ ಸಹಾಯವೂ ಒದಗದ ಆ ದಿನವನ್ನು ಭಯಪಡಿರಿ.

وَٱتَّقُوا۟ يَوْمًا لَّا تَجْزِى نَفْسٌ عَن نَّفْسٍ شَيْـًٔا وَلَا يُقْبَلُ مِنْهَا عَدْلٌ وَلَا تَنفَعُهَا شَفَٰعَةٌ وَلَا هُمْ يُنصَرُونَ ﴿١٢٣﴾

39. ಅರ್ಥಾತ್- ಇತರ ದೃಷ್ಟಾಂತಗಳಂತಿರಲಿ, ಸ್ವಯಂ ಮುಹಮ್ಮದ್‌ರ(ಸ) ವ್ಯಕ್ತಿತ್ವವೇ ಅತ್ಯಂತ ಸ್ಪಷ್ಟವಾದ ದೃಷ್ಟಾಂತವಾಗಿದೆ. ಪ್ರವಾದಿತ್ವಕ್ಕೆ ಮೊದಲಿನ ಅವರ ಜೀವನ, ಅವರು ಹುಟ್ಟಿ ಬೆಳೆದ ಸಮುದಾಯ ಮತ್ತು ರಾಷ್ಟ್ರದ ಸ್ಥಿತಿಗತಿಗಳು, ಅವರು ನಲ್ವತ್ತು ವರ್ಷಗಳ ಕಾಲ ಜೀವನ ಸಾಗಿಸಿದ ಪರಿಸರ, ಪ್ರವಾದಿಯಾದ ನಂತರ ಅವರು ಮಾಡಿದ ಅದ್ಭುತ ಸಾಧನೆಗಳು ಇವೆಲ್ಲವೂ ಸುಸ್ಪಷ್ಟವಾದ ದೃಷ್ಟಾಂತಗಳಾಗಿವೆ. ಇದರ ಹೊರತು ಬೇರೆ ದೃಷ್ಟಾಂತಗಳನ್ನು ನೀಡುವ ಅವಶ್ಯಕತೆಯೇ ಉದ್ಭವಿಸುವುದಿಲ್ಲ.

40. ಇದು ಗ್ರಂಥದವರ ಪೈಕಿ ಉತ್ತಮ ವ್ಯಕ್ತಿಗಳ ಕಡೆಗೆ ಸೂಚನೆ. ಅವರು ಪ್ರಾಮಾಣಿಕತೆ ಮತ್ತು ಸತ್ಯಸಂಧತೆಯೊಂದಿಗೆ ತಮ್ಮ ಬಳಿ ಮೊದಲಿನಿಂದಲೇ ಇರುವ ದೇವ ಗ್ರಂಥವನ್ನು ಪಠಿಸುವುದರಿಂದ, ಪವಿತ್ರ ಕುರ್‌ಆನನ್ನು ಕೇಳಿ ಅಥವಾ ಓದಿ ಅದರ ಮೇಲೆ ವಿಶ್ವಾಸವಿಡುತ್ತಾರೆ.

124. ಇಬ್‌ರಾಹೀಮರನ್ನು ಅವರ ಪ್ರಭು ಕೆಲವು ವಿಷಯಗಳಲ್ಲಿ ಪರೀಕ್ಷಿಸಿದ ಸಂದರ್ಭವನ್ನು ಸ್ಮರಿಸಿರಿ. ಅವರು ಅವುಗಳಲ್ಲೆಲ್ಲಾ ಸಫಲರಾದರು. ಆಗ ಅಲ್ಲಾಹನು, "ನಾನು ನಿಮ್ಮನ್ನು ಸರ್ವ ಜನರ ನಾಯಕನನ್ನಾಗಿ ಮಾಡುವವನಿದ್ದೇನೆ" ಎಂದನು. ಇಬ್‌ರಾಹೀಮರು, "ನನ್ನ ಸಂತಾನಗಳಿಗೂ ಇದೇ ವಾಗ್ದಾನವೇ?" ಎಂದು ಬಿನ್ನವಿಸಿದರು. ಆಗ ಅಲ್ಲಾಹನು, "ನನ್ನ ವಾಗ್ದಾನವು ಅಕ್ರಮಿಗಳಿಗೆ ಅನ್ವಯಿಸುವುದಿಲ್ಲ" ಎಂದು ಉತ್ತರಿಸಿದನು.[41]

وَإِذِ ابْتَلَىٰ إِبْرَاهِيمَ رَبُّهُ بِكَلِمَاتٍ فَأَتَمَّهُنَّ ۖ قَالَ إِنِّي جَاعِلُكَ لِلنَّاسِ إِمَامًا ۖ قَالَ وَمِن ذُرِّيَّتِي ۖ قَالَ لَا يَنَالُ عَهْدِي الظَّالِمِينَ ﴿١٢٤﴾

125. ನಾವು ಆ ಭವನ(ಕಅಬಾ)ವನ್ನು ಜನರಿಗೆ ಕೇಂದ್ರ ಹಾಗೂ ಶಾಂತಿ ಸ್ಥಾನವನ್ನಾಗಿ ನಿಶ್ಚಯಿಸಿದ ಸಂದರ್ಭ(ವನ್ನು ಸ್ಮರಿಸಿರಿ). "ಇಬ್‌ರಾಹೀಮರು ಆರಾಧನೆಗಾಗಿ ನಿಲ್ಲುವ ಸ್ಥಾನವನ್ನು ನೀವು ಸ್ಥಿರವಾದ ನಮಾಝ್‌ನ ತಾಣವನ್ನಾಗಿಸಿ ಕೊಳ್ಳಿರಿ" ಎಂದು ನಾವು ಜನರಿಗೆ ಆಜ್ಞಾಪಿಸಿದ್ದೆವು. "ನನ್ನ ಈ ಭವನದ ಪ್ರದಕ್ಷಿಣೆ ಮತ್ತು ತಪಶ್ಚರ್ಯೆ ಬಾಗುವವರಿಗಾಗಿ ಹಾಗೂ ಸಾಷ್ಟಾಂಗ ವೆರಗುವವರಿಗಾಗಿ ನಿರ್ಮಲವಾಗಿರಿಸಿರಿ" ಎಂದು ಇಬ್‌ರಾಹೀಮ್ ಮತ್ತು ಇಸ್ಮಾಈಲರಿಗೆ ತಾಕೀತು ಮಾಡಿದ್ದೆವು.

وَإِذْ جَعَلْنَا الْبَيْتَ مَثَابَةً لِّلنَّاسِ وَأَمْنًا ۖ وَاتَّخِذُوا مِن مَّقَامِ إِبْرَاهِيمَ مُصَلًّى ۖ وَعَهِدْنَا إِلَىٰ إِبْرَاهِيمَ وَإِسْمَاعِيلَ أَن طَهِّرَا بَيْتِيَ لِلطَّائِفِينَ وَالْعَاكِفِينَ وَالرُّكَّعِ السُّجُودِ ﴿١٢٥﴾

126. ಇಬ್‌ರಾಹೀಮರು, "ಓ ನನ್ನ ಪ್ರಭೂ! ಈ ನಗರವನ್ನು ಶಾಂತಿಯ ನಗರವನ್ನಾಗಿ ಮಾಡು ಮತ್ತು ಇಲ್ಲಿಯ ನಿವಾಸಿಗಳ ಪೈಕಿ ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿಡುವವರಿಗೆ ನಾನಾ ಫಲಗಳ ಆಹಾರವನ್ನು ನೀಡು" ಎಂದ ಸಂದರ್ಭ(ವನ್ನು ಸ್ಮರಿಸಿರಿ). ಅವರ ಪ್ರಭುವು, "ನಾನು ಭೂಲೋಕದ ಅಲ್ಪಕಾಲದ ಜೀವನಾಧಾರವನ್ನು ಅವಿಶ್ವಾಸಿಗೂ ಕೊಡುವೆನು. ಆದರೆ ಆ ಮೇಲೆ ಅವನನ್ನು ನರಕಕ್ಕೆ ತಳ್ಳುವೆನು. ಅದು ಅತ್ಯಂತ ನಿಕೃಷ್ಟ ನೆಲೆಯಾಗಿರುತ್ತದೆ" ಎಂದು ಉತ್ತರಿಸಿದನು.

وَإِذْ قَالَ إِبْرَاهِيمُ رَبِّ اجْعَلْ هَٰذَا بَلَدًا آمِنًا وَارْزُقْ أَهْلَهُ مِنَ الثَّمَرَاتِ مَنْ آمَنَ مِنْهُم بِاللَّهِ وَالْيَوْمِ الْآخِرِ ۖ قَالَ وَمَن كَفَرَ فَأُمَتِّعُهُ قَلِيلًا ثُمَّ أَضْطَرُّهُ إِلَىٰ عَذَابِ النَّارِ ۖ وَبِئْسَ الْمَصِيرُ ﴿١٢٦﴾

127. ಇಬ್‌ರಾಹೀಮರೂ ಇಸ್ಮಾಈಲರೂ ಆ ಭವನದ ಭಿತ್ತಿಗಳನ್ನೇರಿಸು ತ್ತಿರುವಾಗ (ಹೀಗೆ) ಪ್ರಾರ್ಥಿಸುತ್ತಲೇ ಇದ್ದರು-"ಓ ನಮ್ಮ ಪ್ರಭೂ! ನಮ್ಮಿಂದ ಈ ಸೇವೆಯನ್ನು ಸ್ವೀಕರಿಸು; ನಿಶ್ಚಯ ವಾಗಿಯೂ ನೀನು ಎಲ್ಲವನ್ನೂ ಆಲಿಸುವವನೂ ಎಲ್ಲವನ್ನೂ ತಿಳಿದವನೂ ಆಗಿರುತ್ತೀ.

وَإِذْ يَرْفَعُ إِبْرَاهِيمُ الْقَوَاعِدَ مِنَ الْبَيْتِ وَإِسْمَاعِيلُ رَبَّنَا تَقَبَّلْ مِنَّا ۖ إِنَّكَ أَنتَ السَّمِيعُ الْعَلِيمُ ﴿١٢٧﴾

41. ಅರ್ಥಾತ್- ಈ ವಾಗ್ದಾನವು ನಿಮ್ಮ ಸಂತತಿಯ ಸಜ್ಜನ ವರ್ಗಕ್ಕೆ ಮಾತ್ರ ಅನ್ವಯಿಸುತ್ತದೆ. ಅವರ ಪೈಕಿ ಅಕ್ರಮಿಗಳಿಗೆ ಈ ವಾಗ್ದಾನ ಅನ್ವಯಿಸುವುದಿಲ್ಲ. ಇಲ್ಲಿ ಅಕ್ರಮಿ ಎಂದರೆ ಮನುಷ್ಯರ ಮೇಲೆ ಆಕ್ರಮವೆಸಗುವವರು ಮಾತ್ರವಲ್ಲ, ಸತ್ಯ ಮತ್ತು ಸತ್ಯಸಂಧತೆಯ ಮೇಲೆ ಅಕ್ರಮವೆಸಗುವವರೂ ಅದರಲ್ಲಿ ಸೇರಿದ್ದಾರೆ.

128. ಓ ಪ್ರಭೂ, ನಮ್ಮಿರ್ವರನ್ನು ನಿನ್ನ ಆಜ್ಞಾನುಸಾರಿಗಳಾಗಿ ಮಾಡು. ನಮ್ಮ ಸಂತತಿಯಲ್ಲಿ ನಿನ್ನ ಆಜ್ಞಾನುಸಾರಿಯಾದ ಒಂದು ಸಮುದಾಯವನ್ನು ಎಬ್ಬಿಸು. ನಮಗೆ ನಿನ್ನ ದಾಸ್ಯ-ಆರಾಧನೆಯ ಕ್ರಮಗಳನ್ನು ತೋರಿಸಿ ಕೊಡು ಮತ್ತು ನಮ್ಮ ಅಪರಾಧಗಳನ್ನು ಕ್ಷಮಿಸು. ನೀನು ಮಹಾ ಕ್ಷಮಾದಾನಿಯೂ ಕರುಣಾನಿಧಿಯೂ ಆಗಿರುತ್ತೀಯೆ.

رَبَّنَا وَاجْعَلْنَا مُسْلِمَيْنِ لَكَ وَمِنْ ذُرِّيَّتِنَآ أُمَّةً مُّسْلِمَةً لَّكَ ۖ وَأَرِنَا مَنَاسِكَنَا وَتُبْ عَلَيْنَا ۖ إِنَّكَ أَنْتَ التَّوَّابُ الرَّحِيمُ ﴿١٢٨﴾

129. ಓ ಪ್ರಭೂ, ಅವರಿಗೆ ನಿನ್ನ ವಚನಗಳನ್ನು ಪಠಿಸಿ ಹೇಳುವ ಮತ್ತು ಗ್ರಂಥವನ್ನೂ ಯುಕ್ತಿಯನ್ನೂ ಬೋಧಿಸುವ ಹಾಗೂ ಅವರ ಜೀವನವನ್ನು ಸಂಸ್ಕರಿಸುವ ಓರ್ವ ಸಂದೇಶವಾಹಕನನ್ನು ಅವರೊಳಗಿಂದಲೇ ನಿಯೋಜಿಸು. ನೀನು ಮಹಾಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತೀಯೆ.

رَبَّنَا وَابْعَثْ فِيهِمْ رَسُولًا مِّنْهُمْ يَتْلُوا عَلَيْهِمْ اٰيٰتِكَ وَيُعَلِّمُهُمُ الْكِتٰبَ وَالْحِكْمَةَ وَيُزَكِّيهِمْ ۖ إِنَّكَ أَنْتَ الْعَزِيزُ الْحَكِيمُ ﴿١٢٩﴾

١٥ ع ٨ ١٥

130. ಇಬ್‌ರಾಹೀಮರ ಸಂಪ್ರದಾಯವನ್ನು ತಿರಸ್ಕರಿಸುವವನಾರು? ತನ್ನನ್ನು ತಾನೇ ಮೂರ್ಖತನದಲ್ಲಿ ಸಿಲುಕಿಸಿಕೊಂಡಾತನ ಹೊರತು ಬೇರಾರು ಹೀಗೆ ಮಾಡಬಲ್ಲರು? ಇಬ್‌ರಾಹೀಮರನ್ನು ಇಹಲೋಕದಲ್ಲಿ ನಮ್ಮ ಕಾರ್ಯಕ್ಕಾಗಿ ನಾವು ಆಯ್ಕೆ ಮಾಡಿಕೊಂಡಿದ್ದೆವು. ಪರದಲ್ಲಿ ಅವರು ಸಜ್ಜನರೊಂದಿಗೆ ಇರುವರು.

وَمَنْ يَّرْغَبُ عَنْ مِّلَّةِ إِبْرٰهِمَ إِلَّا مَنْ سَفِهَ نَفْسَهُ ۚ وَلَقَدِ اصْطَفَيْنٰهُ فِي الدُّنْيَا ۖ وَإِنَّهُ فِي الْاٰخِرَةِ لَمِنَ الصّٰلِحِينَ ﴿١٣٠﴾

131. ಅವರ ಪ್ರಭು ಅವರೊಡನೆ, 'ಮುಸ್ಲಿಮನಾಗು'[42] ಎಂದಾಗ ಅವರು ತಕ್ಷಣ "ನಾನು ವಿಶ್ವದೊಡೆಯನ ಮುಸ್ಲಿಮನಾದೆನು" ಎಂದರು.

إِذْ قَالَ لَهُ رَبُّهُ أَسْلِمْ ۙ قَالَ أَسْلَمْتُ لِرَبِّ الْعٰلَمِينَ ﴿١٣١﴾

132. ತಮ್ಮ ಸಂತತಿಗಳಿಗೂ ಅವರು ಅದೇ ಸಂಪ್ರದಾಯದಂತೆ ನಡೆಯುವ ಉಪದೇಶ ಮಾಡಿದ್ದರು. ಅದರ ಉಪದೇಶವನ್ನೇ ಯಅ್‌ಕೂಬರು ತನ್ನ ಸಂತತಿಗೂ ಮಾಡಿದರು. ಅವರು, "ನನ್ನ ಮಕ್ಕಳೇ, ನಿಶ್ಚಯವಾಗಿಯೂ ಅಲ್ಲಾಹನು ನಿಮಗಾಗಿ ಈ ಧರ್ಮವನ್ನೇ ಆಯ್ದಿರುವನು. ಆದುದರಿಂದ ಕೊನೆಯುಸಿರಿನ ತನಕವೂ ಮುಸ್ಲಿಮರಾಗಿಯೇ ಜೀವಿಸಿರಿ" ಎಂದಿದ್ದರು.

وَوَصّٰى بِهَآ إِبْرٰهِمُ بَنِيهِ وَيَعْقُوبُ ۖ يٰبَنِيَّ إِنَّ اللّٰهَ اصْطَفٰى لَكُمُ الدِّينَ فَلَا تَمُوتُنَّ إِلَّا وَأَنْتُمْ مُّسْلِمُونَ ﴿١٣٢﴾

42. 'ಮುಸ್ಲಿಮ್' ಎಂದರೆ ಅಲ್ಲಾಹನ ಮುಂದೆ ಅನುಸರಣೆಯಲ್ಲಿ ಶಿರಬಾಗಿಸುವವನು, ಅಲ್ಲಾಹನನ್ನು ಮಾತ್ರ ತನ್ನ ಮಾಲಕ, ಒಡೆಯ, ಆಜ್ಞಾಧೀಶ ಮತ್ತು ಆರಾಧ್ಯನೆಂದು ಒಪ್ಪಿಕೊಳ್ಳುವವನು. ತನ್ನನ್ನು ಅಲ್ಲಾಹನಿಗೊಪ್ಪಿಸಿ ಬಿಡುವವನು, ದೇವ ವತಿಯಿಂದ ಬಂದ ಮಾರ್ಗದರ್ಶನದಂತೆ ಲೋಕದಲ್ಲಿ ಜೀವನ ನಡೆಸುವವನು, ಈ ವಿಶ್ವಾಸ ಮತ್ತು ಧೋರಣೆಯ ಹೆಸರೇ ಇಸ್ಲಾಮ್. ಸೃಷ್ಟಿಯ ಆರಂಭವಾದಂದಿನಿಂದ ಲೋಕದ ವಿವಿಧ ರಾಷ್ಟ್ರ ಮತ್ತು ಸಮುದಾಯಗಳಲ್ಲಿ ಬಂದ ಪ್ರವಾದಿಗಳೆಲ್ಲರ ಧರ್ಮ ಇದುವೇ ಆಗಿತ್ತು.

133. ಯಅ್‌ಕೂಬರು ಈ ಲೋಕವನ್ನು ಬಿಟ್ಟಗಲುತ್ತಿದ್ದ ಸಂದರ್ಭದಲ್ಲಿ ನೀವು ಉಪಸ್ಥಿತರಿದ್ದಿರಾ? ಅವರು ಮರಣಹೊಂದುತ್ತಿದ್ದಾಗ ತನ್ನ ಪುತ್ರರೊಡನೆ, "ನನ್ನ ಕಾಲಾನಂತರ ನೀವು ಯಾರ ದಾಸ್ಯ-ಆರಾಧನೆ ಮಾಡುವಿರಿ?" ಎಂದು ಕೇಳಿದರು. ಅವರೆಲ್ಲರೂ "ನೀವು ಮತ್ತು ನಿಮ್ಮ ಹಿರಿಯರಾದ ಇಬ್‌ರಾಹೀಮ್, ಇಸ್ಮಾಈಲ್ ಮತ್ತು ಇಸ್‌ಹಾಕರು ವಿಶ್ವಾಸವಿರಿಸಿದ್ದ ಅದೇ ಏಕಮಾತ್ರ ದೇವನ ದಾಸ್ಯ-ಆರಾಧನೆಯನ್ನೇ ನಾವು ಮಾಡುವೆವು ಮತ್ತು ನಾವು ಕೇವಲ ಆತನ ಮುಸ್ಲಿಮ(ಶರಣುಹೋದವ)ರಾಗಿದ್ದೇವೆ" ಎಂದು ಉತ್ತರಿಸಿದರು.

أَمْ كُنتُمْ شُهَدَاءَ إِذْ حَضَرَ يَعْقُوبَ الْمَوْتُ إِذْ قَالَ لِبَنِيهِ مَا تَعْبُدُونَ مِن بَعْدِي قَالُوا نَعْبُدُ إِلَٰهَكَ وَإِلَٰهَ آبَائِكَ إِبْرَاهِيمَ وَإِسْمَاعِيلَ وَإِسْحَاقَ إِلَٰهًا وَاحِدًا وَنَحْنُ لَهُ مُسْلِمُونَ ﴿١٣٣﴾

134. ಗತಿಸಿಹೋದ ಒಂದು ಸಮುದಾಯವದು. ಅವರು ಗಳಿಸಿದುದು ಅವರಿಗೆ ಮತ್ತು ನೀವು ಗಳಿಸಿದುದು ನಿಮಗೆ. ಅವರ ಕರ್ಮಗಳ ಕುರಿತು ನಿಮ್ಮೊಡನೆ ವಿಚಾರಣೆ ನಡೆಯಲಾರದು.

تِلْكَ أُمَّةٌ قَدْ خَلَتْ لَهَا مَا كَسَبَتْ وَلَكُم مَّا كَسَبْتُمْ وَلَا تُسْأَلُونَ عَمَّا كَانُوا يَعْمَلُونَ ﴿١٣٤﴾

135. ಯಹೂದಿಯರಾದರೆ ಸನ್ಮಾರ್ಗ ಪಡೆಯುವಿರೆಂದು ಯಹೂದಿಯರೂ, ಕ್ರೈಸ್ತರಾದರೆ ಸನ್ಮಾರ್ಗ ಪಡೆಯುವಿರೆಂದು ಕ್ರೈಸ್ತರೂ ಹೇಳುತ್ತಾರೆ. ನೀವು ಅವರೊಡನೆ, "ಹಾಗಲ್ಲ, ನಿಜವಾಗಿ ಎಲ್ಲರನ್ನೂ ಬಿಟ್ಟು ಇಬ್‌ರಾಹೀಮರ ಹಾದಿ" ಎಂದು ಹೇಳಿರಿ ಮತ್ತು ಇಬ್‌ರಾಹೀಮರು ಬಹುದೇವಾರಾಧಕರಲ್ಲಾಗಿರಲಿಲ್ಲ.

وَقَالُوا كُونُوا هُودًا أَوْ نَصَارَىٰ تَهْتَدُوا قُلْ بَلْ مِلَّةَ إِبْرَاهِيمَ حَنِيفًا وَمَا كَانَ مِنَ الْمُشْرِكِينَ ﴿١٣٥﴾

136. ಮುಸ್ಲಿಮರೇ ಹೇಳಿರಿ, "ನಾವು ಅಲ್ಲಾಹನ ಮೇಲೆ ಹಾಗೂ ನಮ್ಮ ಕಡೆ ಅವತೀರ್ಣವಾಗಿರುವುದರ ಮೇಲೆ ಮತ್ತು ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿಗಳಿಗೆ ಅವತೀರ್ಣವಾಗಿರುವುದರ ಮೇಲೆ ಹಾಗೂ ಮೂಸಾ, ಈಸಾ ಮತ್ತು ಇತರ ಎಲ್ಲ ಪ್ರವಾದಿಗಳಿಗೆ ಅವರ ಪ್ರಭುವಿನಿಂದ ದೊರೆತಿರುವುದರ ಮೇಲೆ ವಿಶ್ವಾಸವಿಟ್ಟಿದ್ದೇವೆ. ನಾವು ಅವರೊಳಗೆ ತಾರತಮ್ಯವಿರಿಸುವುದಿಲ್ಲ. ನಾವು ಕೇವಲ ಅಲ್ಲಾಹನ ಮುಸ್ಲಿಮರಾಗಿದ್ದೇವೆ."

قُولُوا آمَنَّا بِاللَّهِ وَمَا أُنزِلَ إِلَيْنَا وَمَا أُنزِلَ إِلَىٰ إِبْرَاهِيمَ وَإِسْمَاعِيلَ وَإِسْحَاقَ وَيَعْقُوبَ وَالْأَسْبَاطِ وَمَا أُوتِيَ مُوسَىٰ وَعِيسَىٰ وَمَا أُوتِيَ النَّبِيُّونَ مِن رَّبِّهِمْ لَا نُفَرِّقُ بَيْنَ أَحَدٍ مِّنْهُمْ وَنَحْنُ لَهُ مُسْلِمُونَ ﴿١٣٦﴾

137. ಇನ್ನು, ನೀವು ವಿಶ್ವಾಸವಿರಿಸಿದಂತೆಯೇ ಅವರೂ ವಿಶ್ವಾಸವಿರಿಸಿದರೆ, ನಿಶ್ಚಯವಾಗಿಯೂ ಅವರು ಸನ್ಮಾರ್ಗದಲ್ಲಿದ್ದಾರೆ. ಅವರು ವಿಮುಖರಾದರೆ, ಅವರೇ ಹಟಮಾರಿತನಕ್ಕೊಳಗಾಗಿರುವರೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಅವರಿಗೆದುರು ನಿಮ್ಮ ಸಂರಕ್ಷಣೆಗೆ ಅಲ್ಲಾಹನೇ ಸಾಕು. ಅವನು ಸರ್ವವನ್ನೂ ಆಲಿಸುವವನೂ ಸರ್ವಜ್ಞನೂ ಆಗಿರುತ್ತಾನೆ.

فَإِنْ آمَنُوا بِمِثْلِ مَا آمَنتُم بِهِ فَقَدِ اهْتَدَوا ۖ وَّإِن تَوَلَّوْا فَإِنَّمَا هُمْ فِي شِقَاقٍ ۖ فَسَيَكْفِيكَهُمُ اللَّهُ ۚ وَهُوَ السَّمِيعُ الْعَلِيمُ ﴿١٣٧﴾

138. ಅಲ್ಲಾಹನ ವರ್ಣವನ್ನು ಹೊಂದಿರಿ. ಅವನ ವರ್ಣಕ್ಕಿಂತ ಉತ್ತಮ ವರ್ಣ ಇನ್ನಾರದಿರಬಹುದು? ಮತ್ತು ನಾವು ಕೇವಲ ಆತನ ದಾಸ್ಯ-ಆರಾಧನೆ ಮಾಡುವವರು ಎಂದು ಹೇಳಿರಿ.

صِبْغَةَ اللّٰهِ ۚ وَمَنْ اَحْسَنُ مِنَ اللّٰهِ صِبْغَةً ۫ وَّنَحْنُ لَهٗ عٰبِدُوْنَ ﴿١٣٨﴾

139. ಅವರೊಡನೆ ಹೇಳಿರಿ, "ಅಲ್ಲಾಹ್ ನಮ್ಮ ಪ್ರಭುವೂ ನಿಮ್ಮ ಪ್ರಭುವೂ ಆಗಿರುವಾಗ, ನೀವು ಅಲ್ಲಾಹನ ಬಗ್ಗೆ ನಮ್ಮೊಡನೆ ಜಗಳವಾಡುತ್ತೀರಾ? ನಮ್ಮ ಕರ್ಮಗಳು ನಮಗೆ, ನಿಮ್ಮ ಕರ್ಮಗಳು ನಿಮಗೆ, ನಾವು ನಮ್ಮ ದಾಸ್ಯ-ಆರಾಧನೆಯನ್ನು ಅಲ್ಲಾಹನಿಗಾಗಿ ನಿಷ್ಕಳಂಕಗೊಳಿಸಿದ್ದೇವೆ.

قُلْ اَتُحَآجُّوْنَنَا فِى اللّٰهِ وَهُوَ رَبُّنَا وَرَبُّكُمْ ۚ وَلَنَآ اَعْمَالُنَا وَلَكُمْ اَعْمَالُكُمْ ۚ وَنَحْنُ لَهٗ مُخْلِصُوْنَ ﴿١٣٩﴾

140. ಅಥವಾ ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿಯವರೆಲ್ಲರೂ ಯಹೂದಿಯರೋ ಅಥವಾ ಕ್ರೈಸ್ತರೋ ಆಗಿದ್ದರೆಂದು ನೀವೆನ್ನುತ್ತೀರಾ?" ಹೇಳಿರಿ: "ಹೆಚ್ಚು ತಿಳಿದವರು ನೀವೋ ಅಲ್ಲಾಹನೋ? ಅಲ್ಲಾಹನ ಕಡೆಯಿಂದ ದೊರೆತ ಒಂದು ಸಾಕ್ಷ್ಯವು ತನ್ನಲ್ಲಿದ್ದೂ ಅದನ್ನು ಅಡಗಿಸಿದವನಿಗಿಂತ ಹಿರಿಯ ಅಕ್ರಮಿ ಇನ್ನಾರಿರಬಹುದು? ನಿಮ್ಮ ಚಟುವಟಿಕೆಗಳ ಬಗ್ಗೆ ಅಲ್ಲಾಹನು ಅಶ್ರದ್ಧನಲ್ಲ.

اَمْ تَقُوْلُوْنَ اِنَّ اِبْرٰهٖمَ وَاِسْمٰعِيْلَ وَاِسْحٰقَ وَيَعْقُوْبَ وَالْاَسْبَاطَ كَانُوْا هُوْدًا اَوْ نَصٰرٰى ۗ قُلْ ءَاَنْتُمْ اَعْلَمُ اَمِ اللّٰهُ ۗ وَمَنْ اَظْلَمُ مِمَّنْ كَتَمَ شَهَادَةً عِنْدَهٗ مِنَ اللّٰهِ ۗ وَمَا اللّٰهُ بِغَافِلٍ عَمَّا تَعْمَلُوْنَ ﴿١٤٠﴾

141 ಗತಿಸಿ ಹೋದ ಒಂದು ಸಮುದಾಯವದು. ಅವರು ಗಳಿಸಿದುದು ಅವರಿಗೆ ಮತ್ತು ನೀವು ಗಳಿಸಿದುದು ನಿಮಗೆ. ಅವರ ಕರ್ಮಗಳ ಕುರಿತು ನಿಮ್ಮೊಡನೆ ವಿಚಾರಣೆ ನಡೆಯದು."

تِلْكَ اُمَّةٌ قَدْ خَلَتْ ۚ لَهَا مَا كَسَبَتْ وَلَكُمْ مَّا كَسَبْتُمْ ۚ وَلَا تُسْـَٔلُوْنَ عَمَّا كَانُوْا يَعْمَلُوْنَ ﴿١٤١﴾

142. *"ಇವರು ಈ ಮುಂಚೆ ಮುಖಮಾಡಿ ನಮಾಝ್ ಮಾಡುತ್ತಿದ್ದ ಕಿಬ್ಲಾದಿಂದ ಒಮ್ಮೆಲೇ ತಿರುಗಿಬಿಡಬೇಕಾದರೆ ಇವರಿಗೇನಾಯಿತು?" ಎಂದು ತಿಳಿಗೇಡಿಗಳು ನಿಶ್ಚಯವಾಗಿಯೂ ಕೇಳುವರು.[43] ಓ ಪೈಗಂಬರರೇ, ಅವರೊಡನೆ ಹೇಳಿರಿ: "ಪೂರ್ವ-ಪಶ್ಚಿಮ ಎಲ್ಲವೂ ಅಲ್ಲಾಹನವೇ. ಅಲ್ಲಾಹನು ತಾನಿಷ್ಟಪಡುವವನಿಗೆ ಸನ್ಮಾರ್ಗ ತೋರಿಸುತ್ತಾನೆ."

سَيَقُوْلُ السُّفَهَآءُ مِنَ النَّاسِ مَا وَلّٰىهُمْ عَنْ قِبْلَتِهِمُ الَّتِىْ كَانُوْا عَلَيْهَا ۗ قُلْ لِّلّٰهِ الْمَشْرِقُ وَالْمَغْرِبُ ۗ يَهْدِىْ مَنْ يَّشَآءُ اِلٰى صِرَاطٍ مُّسْتَقِيْمٍ ﴿١٤٢﴾

***ಇಲ್ಲಿಂದ 2ನೇ ಕಾಂಡ ಆರಂಭ.**

43. ಪ್ರವಾದಿವರ್ಯರು(ಸ) ವಲಸೆಯ (ಹಿಜ್ರತ್) ನಂತರ ಮದೀನಾದಲ್ಲಿ ಹದಿನಾರು-ಹದಿನೇಳು ತಿಂಗಳುಗಳ ಕಾಲ 'ಬೈತುಲ್ ಮುಕದ್ದಿಸ್'ನ ಕಡೆಗೆ ಮುಖಮಾಡಿ ನಮಾಝ್ ನಿರ್ವಹಿಸುತ್ತಿದ್ದರು. ಅನಂತರ ಕಅಬಾವನ್ನು ಅಭಿಮುಖ ಕೇಂದ್ರವಾಗಿ ಮಾಡಿ ನಮಾಝ್ ನಿರ್ವಹಿಸುವ ಆಜ್ಞೆ ಬಂತು.

143. ಮತ್ತು ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ[44] ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ನಾವು ನಿಮ್ಮನ್ನು ಒಂದು ಸುಮಧ್ಯ ಸಮುದಾಯ[45]ವನ್ನಾಗಿ ಮಾಡಿದ್ದೇವೆ. ನಿಮ್ಮಲ್ಲಿ ಸಂದೇಶವಾಹಕರ ಅನುಸರಣೆ ಮಾಡುವವರಾರು ಮತ್ತು ವಿಮುಖರಾಗುವವರಾರೆಂದು ತಿಳಿಯಲಿಕ್ಕಾಗಿ ಮಾತ್ರ ನೀವು ಈ ಮುಂಚೆ ಮುಖ ಮಾಡುತ್ತಿದ್ದ ಕಿಬ್ಲಾವನ್ನು ನಾವು ನಿಶ್ಚಯಿಸಿದ್ದೆವು. ಈ ಸಂಗತಿಯಂತು ಅತ್ಯಂತ ಕಠಿಣವಾಗಿತ್ತು. ಆದರೆ ಅಲ್ಲಾಹನಿಂದ ಸನ್ಮಾರ್ಗ ಹೊಂದಿದವರಿಗೆ ಕಿಂಚಿತ್ತೂ ಕಠಿಣವಾಗಲಿಲ್ಲ. ಅಲ್ಲಾಹನು ನಿಮ್ಮ ಸತ್ಯವಿಶ್ವಾಸವನ್ನು ಎಂದಿಗೂ ನಿಷ್ಫಲಗೊಳಿಸಲಾರನು. ಅಲ್ಲಾಹನು ಜನರ ಬಗ್ಗೆ ಅತ್ಯಂತ ಕೃಪಾಳುವೂ ಕರುಣಾನಿಧಿಯೂ ಆಗಿರುತ್ತಾನೆಂಬುದು ಖಾತ್ರಿಯಾಗಿ ತಿಳಿಯಿರಿ.

وَكَذَٰلِكَ جَعَلْنَاكُمْ أُمَّةً وَسَطًا لِّتَكُونُوا شُهَدَاءَ
عَلَى النَّاسِ وَيَكُونَ الرَّسُولُ عَلَيْكُمْ شَهِيدًا ۗ
وَمَا جَعَلْنَا الْقِبْلَةَ الَّتِي كُنتَ عَلَيْهَا إِلَّا لِنَعْلَمَ
مَن يَتَّبِعُ الرَّسُولَ مِمَّن يَنقَلِبُ عَلَىٰ عَقِبَيْهِ ۚ
وَإِن كَانَتْ لَكَبِيرَةً إِلَّا عَلَى الَّذِينَ
هَدَى اللَّهُ ۗ وَمَا كَانَ اللَّهُ لِيُضِيعَ إِيمَانَكُمْ ۚ
إِنَّ اللَّهَ بِالنَّاسِ لَرَءُوفٌ رَّحِيمٌ ﴿١٤٣﴾

144. ಓ ಪೈಗಂಬರರೇ, ನಿಮ್ಮ ಮುಖ ಆಗಾಗ ಆಕಾಶದತ್ತ ತಿರುಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಇದೋ ನಾವು ನಿಮ್ಮನ್ನು ನೀವಿಷ್ಟಪಡುವ ಕಿಬ್ಲಾದ ಕಡೆಗೇ ತಿರುಗಿಸಿಬಿಡುತ್ತೇವೆ. 'ಮಸ್ಜಿದುಲ್ ಹರಾಮ್'ನ ದಿಕ್ಕಿಗೆ ಮುಖ ಮಾಡಿರಿ. ನೀವೆಲ್ಲಿದ್ದರೂ ಅದರ ಕಡೆಗೇ ಮುಖ ಮಾಡಿ ನಮಾಝ್ ಮಾಡುತ್ತಲಿರಿ.[46] (ಕಿಬ್ಲಾದ ಸ್ಥಾನಾಂತರದ) ಈ ಆಜ್ಞೆ ಇವರ ಪ್ರಭುವಿನ ವತಿಯಿಂದ ಬಂದುದು ಸತ್ಯವೆಂದು ಗ್ರಂಥ ಕೊಡಲ್ಪಟ್ಟವರು ಚೆನ್ನಾಗಿ ಬಲ್ಲರು. ಹೀಗಿದ್ದೂ ಇವರು ಮಾಡುತ್ತಿರುವುದರ ಕುರಿತು ಅಲ್ಲಾಹನು ಅಶ್ರದ್ಧನಲ್ಲ.

قَدْ نَرَىٰ تَقَلُّبَ وَجْهِكَ فِي السَّمَاءِ ۖ فَلَنُوَلِّيَنَّكَ
قِبْلَةً تَرْضَاهَا ۚ فَوَلِّ وَجْهَكَ شَطْرَ الْمَسْجِدِ
الْحَرَامِ ۚ وَحَيْثُ مَا كُنتُمْ فَوَلُّوا وُجُوهَكُمْ
شَطْرَهُ ۗ وَإِنَّ الَّذِينَ أُوتُوا الْكِتَابَ لَيَعْلَمُونَ
أَنَّهُ الْحَقُّ مِن رَّبِّهِمْ ۗ وَمَا اللَّهُ بِغَافِلٍ
عَمَّا يَعْمَلُونَ ﴿١٤٤﴾

44. 'ಸುಮಧ್ಯ ಸಮುದಾಯ'ವೆಂದರೆ ನ್ಯಾಯ-ನೀತಿ ಮತ್ತು ಸಂತುಲನೆಯಲ್ಲಿ ನೆಲೆ ನಿಂತ ಲೋಕದ ಸಮುದಾಯಗಳ ಪೈಕಿ ನಾಯಕತ್ವದ ಸ್ಥಾನದಲ್ಲಿರುವ ಸಮುದಾಯವಾಗಿದೆ. ಅದು ಎಲ್ಲರೊಂದಿಗೂ ಸತ್ಯ ಮತ್ತು ನ್ಯಾಯದಿಂದ ಕೂಡಿದ ಸಮಾನ ಸಂಬಂಧ ಹೊಂದಿರುವುದು. ಅಸತ್ಯ ಮತ್ತು ಅನ್ಯಾಯದ ಸಂಬಂಧವನ್ನು ಯಾರೊಂದಿಗೂ ಹೊಂದಿರುವುದಿಲ್ಲ.

45. ಅರ್ಥಾತ್- ನಿರ್ಣಾಯಕ ದಿನದಂದು ಸಮಸ್ತ ಮಾನವಕುಲದ ವಿಚಾರಣೆ ನಡೆಯುವಾಗ, ಪ್ರವಾದಿವರ್ಯರು(ಸ) ಅಲ್ಲಾಹನ ಅಧಿಕೃತ ಪ್ರತಿನಿಧಿಯೆಂಬ ನೆಲೆಯಲ್ಲಿ ತಾನು ದೇವದತ್ತವಾದ ಸುಜ್ಞಾನ, ಸತ್ಕರ್ಮ ಮತ್ತು ಸಂತುಲಿತ ವ್ಯವಸ್ಥೆಯ ಬೋಧನೆಯನ್ನು ಸಾರಸಂಪೂರ್ಣವಾಗಿ ಚಾಚೂ ತಪ್ಪದೆ ತಲಪಿಸಿದ್ದೇನೆ ಮತ್ತು ಅದರಂತೆ ವ್ಯಾವಹಾರಿಕ ಜೀವನವನ್ನು ರೂಪಿಸಿದ್ದೇನೆ ಎಂದು ಸಾಕ್ಷ್ಯ ನುಡಿಯುವರು. ಅನಂತರ ಪ್ರವಾದಿವರ್ಯರ(ಸ) ಉತ್ತರಾಧಿಕಾರಿಗಳೆಂಬ ನೆಲೆಯಲ್ಲಿ ಜನಸಾಮಾನ್ಯರ ಮುಂದೆ ನೀವು ಸಾಕ್ಷ್ಯ ಹೇಳಬೇಕಾಗುವುದು. ಪ್ರವಾದಿವರ್ಯರು(ಸ) ನಿಮಗೆ ತಲಪಿಸಿದ್ದನ್ನು ಇತರರಿಗೆ ತಲುಪಿಸುವಲ್ಲಿ ಮತ್ತು ಅವರು ವ್ಯಾವಹಾರಿಕ ಜೀವನದಲ್ಲಿ ಆಚರಿಸಿದ್ದನ್ನು ಆಚರಿಸುವಲ್ಲಿ ನೀವು ಯಾವುದೇ ರೀತಿಯ ಚ್ಯುತಿ ಮಾಡಲಿಲ್ಲವೆಂದು ಸಾಕ್ಷ್ಯ ಹೇಳಬೇಕಾಗುವುದು.

46. ಇದು ಕಿಬ್ಲಾದ ಬದಲಾವಣೆಯ ಕುರಿತು ನೀಡಲಾದ ಮೂಲ ಆಜ್ಞೆಯಾಗಿದೆ. ಈ ಆಜ್ಞೆ ಹಿ.ಶ. 2ರ ರಜಬ್ ಅಥವಾ ಶಅಬಾನ್ ತಿಂಗಳಲ್ಲಿ ಅವತೀರ್ಣಗೊಂಡಿತು. ಪ್ರವಾದಿವರ್ಯರು(ಸ) ತಮ್ಮ ಅನುಚರರೊಬ್ಬರ ಭೋಜನ ಕೂಟಕ್ಕೆ ಹೋಗಿದ್ದರು. ಅಲ್ಲಿ ಝುಹರ್‌ನ ಸಮಯವಾದಾಗ ಅವರು ಜನರಿಗೆ ನಮಾಝ್ ಮಾಡಿಸಲು ಎದ್ದು ನಿಂತರು. ಎರಡು ರಕಅತ್ ನಿರ್ವಹಿಸಿದ ನಂತರ ಮೂರನೆಯ ರಕಅತ್‌ನಲ್ಲಿ ಒಮ್ಮೆಲೇ ದಿವ್ಯವಾಣಿಯ ಮೂಲಕ ಈ ಸೂಕ್ತ ಅವತೀರ್ಣಗೊಂಡಿತು. ತಕ್ಷಣವೇ ಅವರು ಮತ್ತು ಅವರ

145. ನೀವು ಈ ಗ್ರಂಥದವರ ಬಳಿ ಎಂತಹ ಆಧಾರ ಪ್ರಮಾಣಗಳನ್ನು ತಂದರೂ ಇವರು ನಿಮ್ಮ ಕಿಬ್ಲಾವನ್ನು ಅನುಸರಿಸಲಾರರು. ಇವರ ಕಿಬ್ಲಾವನ್ನು ಅನುಸರಿಸಲು ನಿಮಗೂ ಸಾಧ್ಯವಾಗದು. ಇವರಲ್ಲಿ ಯಾವ ಪಂಗಡವೂ ಇನ್ನೊಂದರ ಕಿಬ್ಲಾವನ್ನು ಅನುಸರಿಸಲು ಸಿದ್ಧವಿಲ್ಲ. ನೀವು ನಿಮಗೆ ದೊರೆತ ಜ್ಞಾನದ ಅನಂತರವೂ ಇವರ ಇಚ್ಛೆಗಳನ್ನು ಅನುಕರಿಸಿದರೆ, ನಿಶ್ಚಯವಾಗಿಯೂ ನೀವು ಅಕ್ರಮಿಗಳೆಂದು ಗಣಿಸಲ್ಪಡುವಿರಿ.

وَلَئِنْ أَتَيْتَ الَّذِينَ أُوتُوا الْكِتَابَ بِكُلِّ آيَةٍ مَا تَبِعُوا قِبْلَتَكَ ۚ وَمَا أَنْتَ بِتَابِعٍ قِبْلَتَهُمْ ۚ وَمَا بَعْضُهُمْ بِتَابِعٍ قِبْلَةَ بَعْضٍ ۚ وَلَئِنِ اتَّبَعْتَ أَهْوَاءَهُمْ مِنْ بَعْدِ مَا جَاءَكَ مِنَ الْعِلْمِ ۙ إِنَّكَ إِذًا لَمِنَ الظَّالِمِينَ ﴿١٤٥﴾

146. ನಾವು ಗ್ರಂಥ ಕೊಟ್ಟಿರುವವರು ಈ ಸ್ಥಾನವನ್ನು (ಈಗ ಕಿಬ್ಲಾ ಮಾಡಲ್ಪಟ್ಟ ಸ್ಥಾನವನ್ನು) ತಮ್ಮ ಮಕ್ಕಳನ್ನು ಗುರುತಿಸುವಂತೆಯೇ ಗುರುತಿಸುತ್ತಾರೆ.[47] ಆದರೆ ಅವರಲ್ಲೊಂದು ಪಂಗಡವು ತಿಳಿದೂ ತಿಳಿದೂ ಸತ್ಯವನ್ನು ಮರೆಮಾಚುತ್ತಿದೆ.

الَّذِينَ آتَيْنَاهُمُ الْكِتَابَ يَعْرِفُونَهُ كَمَا يَعْرِفُونَ أَبْنَاءَهُمْ ۖ وَإِنَّ فَرِيقًا مِنْهُمْ لَيَكْتُمُونَ الْحَقَّ وَهُمْ يَعْلَمُونَ ﴿١٤٦﴾

147. ನಿಮ್ಮ ಪ್ರಭುವಿನ ವತಿಯಿಂದ ಬಂದ ಪರಮ ಸತ್ಯವಿದು. ಆದುದರಿಂದ ನೀವು ಈ ಬಗ್ಗೆ ಎಂದೂ ಸಂಶಯಕ್ಕೊಳಗಾಗಬೇಡಿರಿ.

الْحَقُّ مِنْ رَبِّكَ ۖ فَلَا تَكُونَنَّ مِنَ الْمُمْتَرِينَ ﴿١٤٧﴾

148. ಪ್ರತಿಯೊಬ್ಬನಿಗೂ ಅವನು ಮುಖಮಾಡುವ ದಿಕ್ಕೊಂದಿದೆ. ನೀವಂತು ಸತ್ಕರ್ಮಗಳ ದಿಕ್ಕಿಗೆ ಮುನ್ನಡೆಯಿರಿ. ನೀವೆಲ್ಲಿದ್ದರೂ ಅಲ್ಲಾಹನು ನಿಮ್ಮೆಲ್ಲರನ್ನೂ ಮರಳಿ ತರುವನು. ಅವನ ಅಧಿಕಾರ ವ್ಯಾಪ್ತಿಯಿಂದ ಯಾವುದೂ ಹೊರಗಿಲ್ಲ.

وَلِكُلٍّ وِجْهَةٌ هُوَ مُوَلِّيهَا ۖ فَاسْتَبِقُوا الْخَيْرَاتِ ۚ أَيْنَ مَا تَكُونُوا يَأْتِ بِكُمُ اللَّهُ جَمِيعًا ۚ إِنَّ اللَّهَ عَلَىٰ كُلِّ شَيْءٍ قَدِيرٌ ﴿١٤٨﴾

149. ನೀವು ಎತ್ತ ಯಾತ್ರೆ ಹೊರಟಿದ್ದರೂ ಅಲ್ಲಿ (ನಮಾಝಿನ ವೇಳೆ) ನಿಮ್ಮ ಮುಖವನ್ನು 'ಮಸ್ಜಿದುಲ್ ಹರಾಮ್'ನ ಕಡೆಗೆ ತಿರುಗಿಸಿಬಿಡಿರಿ. ಏಕೆಂದರೆ, ನಿಮ್ಮ ಪಾಲಕ ಪ್ರಭುವಿನ ಪರಮ ದಿಟವಾದ ತೀರ್ಮಾನವಿದು. ಅಲ್ಲಾಹನು ನಿಮ್ಮ ಕರ್ಮಗಳ ಕುರಿತು ಅಶ್ರದ್ಧನಲ್ಲ.

وَمِنْ حَيْثُ خَرَجْتَ فَوَلِّ وَجْهَكَ شَطْرَ الْمَسْجِدِ الْحَرَامِ ۖ وَإِنَّهُ لَلْحَقُّ مِنْ رَبِّكَ ۗ وَمَا اللَّهُ بِغَافِلٍ عَمَّا تَعْمَلُونَ ﴿١٤٩﴾

---

ಹಿಂಬಾಲಕರೆಲ್ಲರೂ ನಮಾಝ್‌ನಲ್ಲಿದ್ದಂತೆಯೇ ಬೈತುಲ್ ಮುಕದ್ದಿಸ್‌ನಿಂದ ಕಅಬಾದ ಕಡೆಗೆ ತಿರುಗಿದರು. ಅನಂತರ ಮದೀನಾ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಅದರ ಡಂಗುರ ಸಾರಲಾಯಿತು. ಸೂಕ್ತದಲ್ಲಿ "ನಿಮ್ಮ ಮುಖ ಆಗಾಗ ಆಕಾಶದತ್ತ ತಿರುಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ" ಮತ್ತು "ನಾವು ನಿಮ್ಮನ್ನು ನೀವಿಷ್ಟಪಡುವ ಕಿಬ್ಲಾದ ಕಡೆಗೇ ತಿರುಗಿಸಿಬಿಡುತ್ತೇವೆ" ಎಂದು ಹೇಳಲಾಗಿರುವುದರಿಂದ ಕಿಬ್ಲಾದ ಬದಲಾವಣೆಯ ಆಜ್ಞೆ ಬರುವುದಕ್ಕೆ ಮೊದಲೇ ಪ್ರವಾದಿವರ್ಯರು(ಸ) ಅದರ ನಿರೀಕ್ಷೆಯಲ್ಲಿದ್ದರೆಂದು ಸ್ಪಷ್ಟವಾಗುತ್ತದೆ.

47. ಇದು ಅರಬರ ಒಂದು ನುಡಿಗಟ್ಟಾಗಿದೆ. ವ್ಯಕ್ತಿ ಚೆನ್ನಾಗಿ ತಿಳಿದಿರುವ ವಿಷಯಗಳ ಕುರಿತು "ಅದನ್ನು ಅವನು ತನ್ನ ಮಕ್ಕಳನ್ನು ಗುರುತಿಸುವಂತೆ ಗುರುತಿಸಬಲ್ಲ" ಎಂದು ಹೇಳಲಾಗುತ್ತದೆ. ಕಅಬಾವನ್ನು ಹ. ಇಬ್‌ರಾಹೀಮ್(ಅ) ನಿರ್ಮಿಸಿದ್ದರು. ಅದಕ್ಕೆ ವ್ಯತಿರಿಕ್ತವಾಗಿ ಬೈತುಲ್ ಮುಕದ್ದಿಸ್ ಅದರ ಹದಿಮೂರು ಶತಮಾನಗಳ ನಂತರ ಹ. ಸುಲೈಮಾನ್‌ರ(ಅ) ಮೂಲಕ ನಿರ್ಮಾಣವಾಗಿತ್ತು ಎಂಬುದನ್ನು ಯಹೂದಿ ಮತ್ತು ಕ್ರೈಸ್ತ ವಿದ್ವಾಂಸರು ಚೆನ್ನಾಗಿ ಬಲ್ಲವರಾಗಿದ್ದರು. ಈ ವಿಷಯ ಯಾರಿಗೂ ತಿಳಿಯದಿರಲಿಲ್ಲ.

150. ಮತ್ತು ನೀವು ಎತ್ತ ಯಾತ್ರೆ ಹೊರಟರೂ ನಿಮ್ಮ ಮುಖವನ್ನು 'ಮಸ್ಜಿದುಲ್ ಹರಾಮ್'ನ ಕಡೆಗೇ ತಿರುಗಿಸಿಬಿಡಿರಿ ಮತ್ತು ಜನರಿಗೆ ನಿಮ್ಮ ವಿರುದ್ಧ ವಾದಕ್ಕೆ ಅವಕಾಶ ಸಿಗದಂತಾಗಲು ನೀವೆಲ್ಲಿದ್ದರೂ ಅದರ ಕಡೆಗೇ ಮುಖ ತಿರುಗಿಸಿರಿ.[48] ಆದರೆ ಅಕ್ರಮಿಗಳ ಬಾಯಿ ಎಂದೂ ಮುಚ್ಚದು. ಆದುದರಿಂದ ಅವರನ್ನು ನೀವು ಭಯಪಡಬೇಡಿರಿ. ನನ್ನನ್ನು ಮಾತ್ರ ಭಯಪಡಿರಿ. ಇದು ನಿಮ್ಮ ಮೇಲೆ ನನ್ನ ಅನುಗ್ರಹವನ್ನು ಸಂಪೂರ್ಣಗೊಳಿಸಲಿಕ್ಕಾಗಿಯೂ[49] ನನ್ನ ಆಜ್ಞಾಪಾಲನೆಯ ಮೂಲಕ ನೀವು ಸನ್ಮಾರ್ಗ ಪಡೆಯಬಹುದೆಂದು ನಿರೀಕ್ಷೆಯಿಂದಲೂ ಆಗಿರುತ್ತದೆ.

وَمِنْ حَيْثُ خَرَجْتَ فَوَلِّ وَجْهَكَ شَطْرَ الْمَسْجِدِ الْحَرَامِ ۚ وَحَيْثُ مَا كُنْتُمْ فَوَلُّوا وُجُوهَكُمْ شَطْرَهُ لِئَلَّا يَكُونَ لِلنَّاسِ عَلَيْكُمْ حُجَّةٌ إِلَّا الَّذِينَ ظَلَمُوا مِنْهُمْ فَلَا تَخْشَوْهُمْ وَاخْشَوْنِي وَلِأُتِمَّ نِعْمَتِي عَلَيْكُمْ وَلَعَلَّكُمْ تَهْتَدُونَ ﴿١٥٠﴾

151. ನಾವು ನಿಮ್ಮೊಳಗಿಂದಲೇ ಓರ್ವ ಸಂದೇಶವಾಹಕನನ್ನು ಕಳುಹಿಸಿದೆವು. ಅವರು ನಿಮಗೆ ನಮ್ಮ ವಚನಗಳನ್ನು ಓದಿ ಹೇಳುತ್ತಾರೆ. ನಿಮ್ಮನ್ನು ಸಂಸ್ಕರಿಸುತ್ತಾರೆ. ನಿಮಗೆ ಗ್ರಂಥ ಮತ್ತು ಯುಕ್ತಿಯ ಶಿಕ್ಷಣ ನೀಡುತ್ತಾರೆ ಮತ್ತು ನೀವು ಇಷ್ಟರ ತನಕ ತಿಳಿಯದಿದ್ದ ಸಂಗತಿಗಳನ್ನು ಬೋಧಿಸುತ್ತಾರೆ.

كَمَا أَرْسَلْنَا فِيكُمْ رَسُولًا مِنْكُمْ يَتْلُو عَلَيْكُمْ آيَاتِنَا وَيُزَكِّيكُمْ وَيُعَلِّمُكُمُ الْكِتَابَ وَالْحِكْمَةَ وَيُعَلِّمُكُمْ مَا لَمْ تَكُونُوا تَعْلَمُونَ ﴿١٥١﴾

152. (ಇದರಿಂದಲೇ ನಿಮಗೆ ಸನ್ಮಾರ್ಗ ಪ್ರಾಪ್ತಿಯಾಯಿತು) ಆದುದರಿಂದ ನೀವು ನನ್ನನ್ನು ಸ್ಮರಿಸುತ್ತಲಿರಿ, ನಾನು ನಿಮ್ಮನ್ನು ಸ್ಮರಿಸುವೆನು ಮತ್ತು ನನಗೆ ಕೃತಜ್ಞರಾಗಿರಿ, ಕೃತಘ್ನರಾಗಬೇಡಿರಿ.

فَاذْكُرُونِي أَذْكُرْكُمْ وَاشْكُرُوا لِي وَلَا تَكْفُرُونِ ﴿١٥٢﴾

153. ಓ ಸತ್ಯವಿಶ್ವಾಸಿಗಳೇ, ಸಹನೆ ಮತ್ತು ನಮಾಝಿನಿಂದ ಸಹಾಯ ಪಡೆಯಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಹನಶೀಲರೊಂದಿಗಿದ್ದಾನೆ.

يَا أَيُّهَا الَّذِينَ آمَنُوا اسْتَعِينُوا بِالصَّبْرِ وَالصَّلَاةِ ۚ إِنَّ اللَّهَ مَعَ الصَّابِرِينَ ﴿١٥٣﴾

154. ಅಲ್ಲಾಹನ ಪಥದಲ್ಲಿ ವಧಿಸಲ್ಪಡುವವರನ್ನು ಮೃತರೆನ್ನಬೇಡಿರಿ. ಅವರು ವಾಸ್ತವದಲ್ಲಿ ಜೀವಂತವಿದ್ದಾರೆ. ಆದರೆ ಅವರ ಜೀವನದ ಅರಿವು ನಿಮಗಾಗುವುದಿಲ್ಲ.

وَلَا تَقُولُوا لِمَنْ يُقْتَلُ فِي سَبِيلِ اللَّهِ أَمْوَاتٌ ۚ بَلْ أَحْيَاءٌ وَلَٰكِنْ لَا تَشْعُرُونَ ﴿١٥٤﴾

155. ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಾಶಗಳಿಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು. ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ.

وَلَنَبْلُوَنَّكُمْ بِشَيْءٍ مِنَ الْخَوْفِ وَالْجُوعِ وَنَقْصٍ مِنَ الْأَمْوَالِ وَالْأَنْفُسِ وَالثَّمَرَاتِ ۗ وَبَشِّرِ الصَّابِرِينَ ﴿١٥٥﴾

48. ಅಂದರೆ ಯಾರಿಗೂ “ತನ್ನ ಪ್ರಭುವಿನ ಸ್ಪಷ್ಟ ಆಜ್ಞೆಯನ್ನು ಉಲ್ಲಂಘಿಸುವ, ಇವರು ಎಂತಹ ಸತ್ಯವಿಶ್ವಾಸಿಗಳು” ಎಂದು ಹೇಳುವ ಅವಕಾಶ ದೊರೆಯಬಾರದು.

49. ಇದು, 'ಜನರಿಗೆ ನಿಮ್ಮ ವಿರುದ್ಧ ವಾದಕ್ಕೆ ಅವಕಾಶ ಸಿಗದಂತಾಗಲು ನೀವೆಲ್ಲಿದ್ದರೂ ಅದರ ಕಡೆಗೇ ಮುಖ ತಿರುಗಿಸಿರಿ' ಎಂಬ ಮಾತಿಗೆ ಸಂಬಂಧಿಸಿದುದಾಗಿದೆ.

156. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾಗ ಅವರು "ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೇ ನಮಗೆ ಮರಳಲಿಕ್ಕಿದೆ" ಎನ್ನುವರು.

الَّذِينَ إِذَا أَصَابَتْهُم مُّصِيبَةٌ قَالُوا إِنَّا
لِلَّهِ وَإِنَّا إِلَيْهِ رَاجِعُونَ ﴿١٥٦﴾

157. ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹ ಗಳಿರುವುವು. ಅವನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವರಾಗಿರುತ್ತಾರೆ.

أُولَٰئِكَ عَلَيْهِمْ صَلَوَاتٌ مِّن رَّبِّهِمْ وَرَحْمَةٌ ۖ
وَأُولَٰئِكَ هُمُ الْمُهْتَدُونَ ﴿١٥٧﴾

158. ನಿಶ್ಚಯವಾಗಿಯೂ 'ಸಫಾ' ಮತ್ತು 'ಮರ್ವಾ'ಗಳು ಅಲ್ಲಾಹನ ಸಂಕೇತಗಳಲ್ಲಾಗಿರುತ್ತವೆ. ಆದುದರಿಂದ ಪವಿತ್ರ ಭವನದ 'ಹಜ್ಜ್' ಯಾ 'ಉಮ್ರಾ'[50] ಮಾಡುವಾತನು ಆ ಎರಡು ಬೆಟ್ಟಗಳ ನಡುವೆ 'ಸಅ್‌ಯ್' ಮಾಡುವುದರಲ್ಲೇನೂ ದೋಷವಿಲ್ಲ ಮತ್ತು ಸ್ವಯಂ ಪ್ರೇರಣೆಯಿಂದ ಸತ್ಕರ್ಮ ಮಾಡುವವನನ್ನು ಅಲ್ಲಾಹ್ ಬಲ್ಲವನೂ ಅವನನ್ನು ಗೌರವಿಸುವವನೂ ಆಗಿರುತ್ತಾನೆ.

إِنَّ الصَّفَا وَالْمَرْوَةَ مِن شَعَائِرِ اللَّهِ ۖ فَمَنْ
حَجَّ الْبَيْتَ أَوِ اعْتَمَرَ فَلَا جُنَاحَ عَلَيْهِ أَن
يَطَّوَّفَ بِهِمَا ۚ وَمَن تَطَوَّعَ خَيْرًا فَإِنَّ اللَّهَ
شَاكِرٌ عَلِيمٌ ﴿١٥٨﴾

159. ನಾವು ಅವತೀರ್ಣಗೊಳಿಸಿದ ಸುವ್ಯಕ್ತ ದೃಷ್ಟಾಂತಗಳನ್ನೂ ಮಾರ್ಗದರ್ಶನಗಳನ್ನೂ - ನಾವು ಅವುಗಳನ್ನು ಸಮಸ್ತ ಮಾನವರಿಗಾಗಿ ನಮ್ಮ ಗ್ರಂಥದಲ್ಲಿ ವಿವರಿಸಿದ ಬಳಿಕವೂ- ಯಾರು ಮರೆಮಾಚುತ್ತಾರೋ ಅವರನ್ನು ಅಲ್ಲಾಹನು ಅಭಿಶಪಿಸುತ್ತಾನೆ ಮತ್ತು ಶಪಿಸುವವರೆಲ್ಲರೂ ಅವರನ್ನು ಅಭಿಶಪಿಸುತ್ತಾರೆ.

إِنَّ الَّذِينَ يَكْتُمُونَ مَا أَنزَلْنَا مِنَ الْبَيِّنَاتِ
وَالْهُدَىٰ مِن بَعْدِ مَا بَيَّنَّاهُ لِلنَّاسِ فِي
الْكِتَابِ ۙ أُولَٰئِكَ يَلْعَنُهُمُ اللَّهُ وَيَلْعَنُهُمُ اللَّاعِنُونَ ﴿١٥٩﴾

160. ಆದರೆ ಪಶ್ಚಾತ್ತಾಪ ಪಡುವವರನ್ನೂ ತಮ್ಮ ವರ್ತನೆಯನ್ನು ತಿದ್ದಿಕೊಳ್ಳುವವರನ್ನೂ, ಮರೆಮಾಚಿದುದನ್ನು ಬಹಿರಂಗ ಗೊಳಿಸುವವರನ್ನೂ ನಾನು ಕ್ಷಮಿಸುವೆನು ಮತ್ತು ನಾನು ಪಶ್ಚಾತ್ತಾಪವನ್ನು ಅತ್ಯಧಿಕವಾಗಿ ಸ್ವೀಕರಿಸುವವನೂ ಕರುಣಾ ನಿಧಿಯೂ ಆಗಿರುತ್ತೇನೆ.

إِلَّا الَّذِينَ تَابُوا وَأَصْلَحُوا وَبَيَّنُوا فَأُولَٰئِكَ
أَتُوبُ عَلَيْهِمْ ۚ وَأَنَا التَّوَّابُ الرَّحِيمُ ﴿١٦٠﴾

161. 'ಸತ್ಯನಿಷೇಧ'[51] ನಿಲುಮೆಯನ್ನು ಕೈಗೊಂಡು ಸತ್ಯನಿಷೇಧಾ ವಸ್ಥೆಯಲ್ಲಿಯೇ ಪ್ರಾಣಬಿಟ್ಟವರಿಗೆ ಅಲ್ಲಾಹನ, ಅವನ ದೇವಚರರ ಮತ್ತು ಸಕಲ ಮಾನವರ ಅಭಿಶಾಪವಿದೆ.

إِنَّ الَّذِينَ كَفَرُوا وَمَاتُوا وَهُمْ كُفَّارٌ أُولَٰئِكَ
عَلَيْهِمْ لَعْنَةُ اللَّهِ وَالْمَلَائِكَةِ وَالنَّاسِ أَجْمَعِينَ ﴿١٦١﴾

50. ದುಲ್‌ಹಜ್ಜ್ ತಿಂಗಳ ನಿರ್ದಿಷ್ಟ ತಾರೀಕಿನಲ್ಲಿ ಮಾಡುವ ಕಅಬಾ ಸಂದರ್ಶನಕ್ಕೆ 'ಹಜ್ಜ್' ಎನ್ನುತ್ತಾರೆ. ಅದರ ಹೊರತು ಉಳಿದ ದಿನಗಳಲ್ಲಿ ಮಾಡುವ ಕಅಬಾ ಸಂದರ್ಶನವನ್ನು 'ಉಮ್ರಾ' ಎನ್ನುತ್ತಾರೆ.

51. ಕುಫ್ರ್(ಸತ್ಯನಿಷೇಧ) ಎಂಬ ಪದವನ್ನು 'ಈಮಾನ್'(ಸತ್ಯವಿಶ್ವಾಸ)ನ ವಿರೋಧಾರ್ಥದಲ್ಲಿ ಉಪಯೋಗಿಸಲಾಗುತ್ತದೆ. ಈಮಾನ್ ಎಂದರೆ ನಂಬುವುದು ಸ್ವೀಕರಿಸುವುದು, ಅಂಗೀಕರಿಸುವುದು ಎಂದರ್ಥ. ಅದಕ್ಕೆದುರಾಗಿ 'ಕುಫ್ರ್' ಎಂದರೆ ಅವಿಶ್ವಾಸ ತೋರುವುದು,

162. ಅವರು ಈ ಶಪಿತಾವಸ್ಥೆಯಲ್ಲಿಯೇ ಸದಾಕಾಲವಿರುವರು. ಅವರ ಶಿಕ್ಷೆಯಲ್ಲಿ ಕಡಿತವೂ ಆಗಲಾರದು. ಅವರಿಗೆ ಇನ್ನೊಂದು ಕಾಲಾವಕಾಶವನ್ನೂ ನೀಡಲಾಗದು.

خٰلِدِيْنَ فِيْهَا ۚ لَا يُخَفَّفُ عَنْهُمُ الْعَذَابُ وَلَا هُمْ يُنْظَرُوْنَ ﴿١٦٢﴾

163. ನಿಮ್ಮ ದೇವ ಏಕೈಕ ದೇವ. ಆ ದಯಾಮಯನೂ ಕರುಣಾ ನಿಧಿಯೂ ಆಗಿರುವವನ ಹೊರತು ಇನ್ನೊಬ್ಬ ದೇವನಿಲ್ಲ.

وَاِلٰهُكُمْ اِلٰهٌ وَّاحِدٌ ۚ لَآ اِلٰهَ اِلَّا هُوَ الرَّحْمٰنُ الرَّحِيْمُ ﴿١٦٣﴾

164. (ಈ ಸತ್ಯವನ್ನು ಅರಿತುಕೊಳ್ಳಲಿಕ್ಕಾಗಿ ಯಾವುದಾದರೂ ಕುರುಹು ಅಥವಾ ದೃಷ್ಟಾಂತ ಬೇಕಾದರೆ) ಆಕಾಶಗಳ ಮತ್ತು ಭೂಮಿಯ ನಿರ್ಮಾಣದಲ್ಲಿ, ಇರುಳು ಹಗಲುಗಳು ಒಂದರ ಹಿಂದೆ ಇನ್ನೊಂದರಂತೆ ನಿರಂತರವಾಗಿ ಬರುತ್ತಿರುವುದರಲ್ಲಿ, ಜನೋಪಯೋಗಿ ಸಾಮಗ್ರಿಗಳನ್ನು ಹೊತ್ತುಕೊಂಡು ಜಲಧಿಗಳಲ್ಲಿ ಸಂಚರಿಸುತ್ತಿರುವ ನೌಕೆಗಳಲ್ಲಿ, ಅಲ್ಲಾಹನು ಆಕಾಶದಿಂದ ಸುರಿಸಿ ಅದರ ಮೂಲಕ ಭೂಮಿಯನ್ನು ನಿರ್ಜೀವಾವಸ್ಥೆಯ ಬಳಿಕ ಸಜೀವಗೊಳಿಸಿ, ಈ ವ್ಯವಸ್ಥೆಯ ಮೂಲಕ ಭೂಮಿಯಲ್ಲಿ ತರತರದ ಜೀವರಾಶಿಗಳು ಹರಡಿರುವಂತೆ ಮಾಡಿದ ಮಳೆ ನೀರಿನಲ್ಲಿ, ಮಾರುತಗಳ ಚಲನೆಯಲ್ಲಿ ಹಾಗೂ ಆಕಾಶ ಮತ್ತು ಭೂಮಿಯ ನಡುವೆ ನಿಯಂತ್ರಿಸಲ್ಪಟ್ಟಿರುವ ಮೋಡಗಳಲ್ಲಿ ನಿಶ್ಚಯವಾಗಿಯೂ ವಿಚಾರವಂತರಿಗೆ ಅನೇಕಾನೇಕ ದೃಷ್ಟಾಂತಗಳಿವೆ.

اِنَّ فِيْ خَلْقِ السَّمٰوٰتِ وَالْاَرْضِ وَاخْتِلَافِ الَّيْلِ وَالنَّهَارِ وَالْفُلْكِ الَّتِيْ تَجْرِيْ فِي الْبَحْرِ بِمَا يَنْفَعُ النَّاسَ وَمَآ اَنْزَلَ اللّٰهُ مِنَ السَّمَآءِ مِنْ مَّآءٍ فَاَحْيَا بِهِ الْاَرْضَ بَعْدَ مَوْتِهَا وَبَثَّ فِيْهَا مِنْ كُلِّ دَآبَّةٍ وَّتَصْرِيْفِ الرِّيٰحِ وَالسَّحَابِ الْمُسَخَّرِ بَيْنَ السَّمَآءِ وَالْاَرْضِ لَاٰيٰتٍ لِّقَوْمٍ يَّعْقِلُوْنَ ﴿١٦٤﴾

165. ಆದರೆ (ಅಲ್ಲಾಹನ ಏಕತೆಯನ್ನು ಪ್ರಮಾಣ ಪಡಿಸುವ ಇಂತಹ ಸುಸ್ಪಷ್ಟ ಕುರುಹುಗಳಿದ್ದರೂ) ಕೆಲವರು ಅಲ್ಲಾಹನ ಹೊರತು ಇತರರನ್ನು ಅವನ ಸರಿಸಾಟಿ ಮತ್ತು ಎದುರಾಳಿಯನ್ನಾಗಿ

وَمِنَ النَّاسِ مَنْ يَّتَّخِذُ مِنْ دُوْنِ اللّٰهِ اَنْدَادًا يُّحِبُّوْنَهُمْ كَحُبِّ اللّٰهِ ۭ وَالَّذِيْنَ

ನಿರಾಕರಿಸುವುದು- ಧಿಕ್ಕರಿಸುವುದು ಎಂದಾಗಿದೆ. ಕುರ್‌ಆನಿನ ಪ್ರಕಾರ ಕುಫ್ರ್‌ನ ಧೋರಣೆಯ ಅನೇಕ ವಿಧಗಳಿವೆ:

1) ಮಾನವ ಮೂಲತಃ ದೇವನನ್ನೇ ನಂಬದಿರುವುದು, ಅವನ ಸಾರ್ವಭೌಮತೆಯನ್ನು ಅಂಗೀಕರಿಸದಿರುವುದು, ಅವನು ತನ್ನ ಮತ್ತು ಸಮಸ್ತ ವಿಶ್ವದ ಒಡೆಯನೂ ಆರಾಧ್ಯನೂ ಆಗಿರುವನೆಂಬುದನ್ನು ನಿರಾಕರಿಸುವುದು ಅಥವಾ ಅವನು ಮಾತ್ರವೇ ಒಡೆಯ ಮತ್ತು ಆರಾಧ್ಯನಾಗಿದ್ದಾನೆ ಎಂದು ನಂಬದಿರುವುದು.

2) ಅಲ್ಲಾಹನ ಮೇಲೆ ವಿಶ್ವಾಸವಿಟ್ಟರೂ ಅವನ ಆದೇಶ ಮತ್ತು ಮಾರ್ಗದರ್ಶನ ಮಾತ್ರ, ಜ್ಞಾನ ಮತ್ತು ಕಾನೂನಿನ ಮೂಲವೆಂದು ಒಪ್ಪಲು ನಿರಾಕರಿಸುವುದು.

3) ಅಲ್ಲಾಹನ ಮಾರ್ಗದರ್ಶನದಂತೆಯೇ ನಡೆಯಬೇಕೆಂದು ತಾತ್ವಿಕವಾಗಿ ಒಪ್ಪಿಕೊಳ್ಳುವುದು. ಆದರೆ ಅಲ್ಲಾಹನು ತನ್ನ ಮಾರ್ಗದರ್ಶನ ಮತ್ತು ಆದೇಶಗಳನ್ನು ತಲಪಿಸಲು ಮಧ್ಯವರ್ತಿಗಳನ್ನಾಗಿ ಮಾಡಿರುವ ಪ್ರವಾದಿಗಳನ್ನು ಒಪ್ಪದಿರುವುದು.

4) ಪ್ರವಾದಿಗಳ ನಡುವೆ ಭೇದ ಕಲ್ಪಿಸುವುದು. ತನ್ನಿಚ್ಛೆ ಅಥವಾ ಪಕ್ಷಪಾತದಿಂದಾಗಿ ಕೆಲವರನ್ನು ನಂಬುವುದು ಮತ್ತು ಕೆಲವರನ್ನು ನಿರಾಕರಿಸುವುದು.

ಮಾಡುತ್ತಾರೆ ಮತ್ತು ಅಲ್ಲಾಹನಿಗೆ ಮಾರುಹೋಗಬೇಕಾದ ರೀತಿಯಲ್ಲಿ, ಅವರಿಗೆ ಮಾರುಹೋಗುತ್ತಾರೆ. ವಸ್ತುತಃ ಸತ್ಯವಿಶ್ವಾಸಿಗಳು ಅತ್ಯಧಿಕವಾಗಿ ಅಲ್ಲಾಹನನ್ನೇ ಪ್ರೀತಿಸುತ್ತಾರೆ. ಅಕಟ! ಸರ್ವ ಶಕ್ತಿಗಳೂ ಸರ್ವ ಅಧಿಕಾರಗಳೂ ಅಲ್ಲಾಹನ ವಶದಲ್ಲೇ ಇರುವುವು ಮತ್ತು ಅಲ್ಲಾಹನು ಶಿಕ್ಷಿಸುವುದರಲ್ಲಿಯೂ ಅತ್ಯಂತ ಕಠೋರನೆಂಬುದನ್ನು, ಯಾತನೆಯನ್ನು ಕಣ್ಣ ಮುಂದೆ ಕಂಡಾಗ ಮನಗಾಣಲಿರುವ ಈ ಅಕ್ರಮಿಗಳು ಇಂದೇ ಅದನ್ನು ಮನಗಂಡಿದ್ದರೆ!

آمَنُوا أَشَدُّ حُبًّا لِّلَّهِ ۗ وَلَوْ يَرَى الَّذِينَ ظَلَمُوا إِذْ يَرَوْنَ الْعَذَابَ أَنَّ الْقُوَّةَ لِلَّهِ جَمِيعًا وَأَنَّ اللَّهَ شَدِيدُ الْعَذَابِ ﴿١٦٥﴾

166. ಅವನು ಶಿಕ್ಷೆ ಕೊಡುವಾಗಿನ ಅವಸ್ಥೆ ಹೀಗಿರುವುದು- ಇಹಲೋಕದಲ್ಲಿ ಅನುಸರಿಸಲ್ಪಡುತ್ತಿದ್ದ ಆ ಮುಂದಾಳುಗಳೇ ತಮ್ಮ ಅನುಯಾಯಿಗಳನ್ನು ಅವಗಣಿಸುವರು. ಆದರೂ ಅವರು ಶಿಕ್ಷೆ ಪಡೆದೇ ತೀರುವರು. ಅವರಿಗಿದ್ದ ಎಲ್ಲ ತರದ ಆಧಾರ-ಬೆಂಬಲಗಳ ಶೃಂಖಲೆ ಕಡಿದುಹೋಗುವುದು.

إِذْ تَبَرَّأَ الَّذِينَ اتُّبِعُوا مِنَ الَّذِينَ اتَّبَعُوا وَرَأَوُا الْعَذَابَ وَتَقَطَّعَتْ بِهِمُ الْأَسْبَابُ ﴿١٦٦﴾

167. ಇಹಲೋಕದಲ್ಲಿ ಅವರ ಹಿಂಬಾಲಕರು "ಅಕಟ! ನಮಗೆ ಇನ್ನೊಂದು ಅವಕಾಶವನ್ನು ನೀಡಲಾಗುತ್ತಿದ್ದರೆ, ಇವರೀಗ ನಮ್ಮೊಂದಿಗೆ ಅಸಂತುಷ್ಟಿಯನ್ನು ತೋರ್ಪಡಿಸುತ್ತಿರುವಂತೆಯೇ ನಾವೂ ಅವರೊಂದಿಗೆ ಅಸಂತುಷ್ಟಿಯನ್ನು ಪ್ರಕಟಪಡಿಸುತ್ತಿದ್ದೆವು" ಎನ್ನುವರು. ಹೀಗೆ ಹತಾಶರೂ ಲಜ್ಜಿತರೂ ಆಗಿ ಅತೀವ ಪಶ್ಚಾತ್ತಾಪ ಪಡುವಂತಾಗುವ ರೀತಿಯಲ್ಲಿ ಅವರು ಇಹಲೋಕದಲ್ಲಿ ಮಾಡುತ್ತಿರುವ ಆ ಕರ್ಮಗಳನ್ನೆಲ್ಲ ಅಲ್ಲಾಹನು ಅವರ ಮುಂದೆ ತರುವನು. ಆದರೆ ಅವರಿಗೆ ನರಕದಿಂದ ಹೊರಗೆ ಹೋಗಲು ಯಾವ ದಾರಿಯೂ ಸಿಗಲಾರದು.

وَقَالَ الَّذِينَ اتَّبَعُوا لَوْ أَنَّ لَنَا كَرَّةً فَنَتَبَرَّأَ مِنْهُمْ كَمَا تَبَرَّءُوا مِنَّا ۗ كَذَٰلِكَ يُرِيهِمُ اللَّهُ أَعْمَالَهُمْ حَسَرَاتٍ عَلَيْهِمْ ۖ وَمَا هُم بِخَارِجِينَ مِنَ النَّارِ ﴿١٦٧﴾

168. ಹೇ ಜನರೇ, ಭೂಮಿಯಲ್ಲಿರುವ ಧರ್ಮಸಮ್ಮತ ಹಾಗೂ ಶುದ್ಧ ವಸ್ತುಗಳನ್ನು ನೀವು ಉಣ್ಣಿರಿ. ಶೈತಾನನು ತೋರಿಸಿದ ಹಾದಿಗಳಲ್ಲಿ ನಡೆಯಬೇಡಿರಿ. ಅವನು ನಿಮ್ಮ ಪ್ರತ್ಯಕ್ಷ ಶತ್ರು.

يَا أَيُّهَا النَّاسُ كُلُوا مِمَّا فِي الْأَرْضِ حَلَالًا طَيِّبًا وَلَا تَتَّبِعُوا خُطُوَاتِ الشَّيْطَانِ ۚ إِنَّهُ لَكُمْ عَدُوٌّ مُّبِينٌ ﴿١٦٨﴾

5) ಪ್ರವಾದಿಗಳು ದೇವನ ವತಿಯಿಂದ ನೀಡಿದ ವಿಶ್ವಾಸ, ನೀತಿ ಮತ್ತು ಜೀವನ ಸಂಹಿತೆಯ ಕುರಿತಾದ ಬೋಧನೆಗಳನ್ನು ಸಂಪೂರ್ಣ ಅಥವಾ ಆಂಶಿಕವಾಗಿ ನಿರಾಕರಿಸುವುದು.

6) ಸೈದ್ಧಾಂತಿಕವಾಗಿ ಇದೆಲ್ಲವನ್ನೂ ಒಪ್ಪಿಕೊಳ್ಳುವುದು, ಆದರೆ ಆಚಾರದಲ್ಲಿ ದೇವಾಜ್ಞೆಗಳನ್ನು ಪ್ರಜ್ಞಾಪೂರ್ವಕ ಉಲ್ಲಂಘಿಸುವುದು ಮತ್ತು ಅದರ ಬಗ್ಗೆ ಪಟ್ಟು ಹಿಡಿಯುವುದು ಲೌಕಿಕ ಜೀವನದ ತನ್ನ ಧೋರಣೆಗೆ ಆಜ್ಞಾನುಸರಣೆಯ ಬದಲು ಆಜ್ಞೋಲ್ಲಂಘನೆಯನ್ನೇ ಮೂಲಾಧಾರವಾಗಿರಿಸುವುದು.

169. ಅವನು ನಿಮಗೆ ಪಾಪಕಾರ್ಯ ಮತ್ತು ಅಶ್ಲೀಲತೆಗಳ ಅಪ್ಪಣೆ ಕೊಟ್ಟು, ಅದು ಅಲ್ಲಾಹನ ಆದೇಶವೆಂದು ನಿಮಗೆ ತಿಳಿದಿಲ್ಲವಾದರೂ ಅಲ್ಲಾಹನ ಹೆಸರಿಂದ ನೀವು ಅದನ್ನು ಹೇಳಿರೆಂದು ಬೋಧಿಸುತ್ತಾನೆ.

إِنَّمَا يَأْمُرُكُمْ بِالسُّوٓءِ وَالْفَحْشَآءِ وَأَنْ تَقُولُوا عَلَى اللّٰهِ مَا لَا تَعْلَمُونَ ﴿١٦٩﴾

170. ಅಲ್ಲಾಹನು ಅವತೀರ್ಣಗೊಳಿಸಿದ ನಿರ್ದೇಶಗಳನ್ನು ಅನುಸರಿಸಿರೆಂದು ಅವರೊಡನೆ ಹೇಳಲಾದಾಗ, "ನಾವು ನಮ್ಮ ಪೂರ್ವಿಕರು ಯಾವ ಕ್ರಮವನ್ನು ಅನುಸರಿಸುತ್ತಿದ್ದುದನ್ನು ಕಂಡಿದ್ದೇವೋ ಅದನ್ನೇ ಅನುಸರಿಸುವೆವು" ಎನ್ನುತ್ತಾರೆ. ಸರಿ, ಅವರ ಪೂರ್ವಿಕರು ತಮ್ಮ ಬುದ್ಧಿಶಕ್ತಿಯನ್ನೇನೂ ಉಪಯೋಗಿಸದೆ ಸತ್ಯಮಾರ್ಗದಿಂದ ವಂಚಿತರಾಗಿದ್ದರೆ ಆಗಲೂ ಇವರು ಅವರನ್ನನುಸರಿಸುತ್ತಲೇ ಇರುವರೇ?

وَإِذَا قِيلَ لَهُمُ اتَّبِعُوا مَآ أَنْزَلَ اللّٰهُ قَالُوا بَلْ نَتَّبِعُ مَآ أَلْفَيْنَا عَلَيْهِ ءَابَآءَنَا ۗ أَوَلَوْ كَانَ ءَابَآؤُهُمْ لَا يَعْقِلُونَ شَيْـًٔا وَلَا يَهْتَدُونَ ﴿١٧٠﴾

171. ಅಲ್ಲಾಹನು ತೋರಿಸಿದ ಮಾರ್ಗದರ್ಶನದ ಪ್ರಕಾರ ನಡೆಯಲು ನಿರಾಕರಿಸಿದವರ ಉಪಮೆಯು - ಕುರುಬನು ಪ್ರಾಣಿಗಳನ್ನು ಕೂಗುವಾಗ ಅವುಗಳು ಅವನ ಕೂಗಾಟದ ನಾದದ ವಿನಾ ಬೇರೇನನ್ನೂ ಕೇಳದಂತಿದೆ. ಇವರು ಕಿವುಡರು, ಮೂಕರು, ಅಂಧರು. ಆದುದರಿಂದ ಇವರಿಗೇನೂ ತಿಳಿಯುವುದಿಲ್ಲ.

وَمَثَلُ الَّذِينَ كَفَرُوا كَمَثَلِ الَّذِي يَنْعِقُ بِمَا لَا يَسْمَعُ إِلَّا دُعَآءً وَنِدَآءً ۚ صُمٌّ بُكْمٌ عُمْيٌ فَهُمْ لَا يَعْقِلُونَ ﴿١٧١﴾

172. ಓ ಸತ್ಯವಿಶ್ವಾಸಿಗಳೇ, ನೀವು ನಿಜವಾಗಿಯೂ ಅಲ್ಲಾಹನ ದಾಸ್ಯ-ಆರಾಧನೆಯನ್ನೇ ಮಾಡುವವರಾದರೆ, ನಾವು ನಿಮಗೆ ಒದಗಿಸಿರುವ ಶುದ್ಧವಾದ ವಸ್ತುಗಳನ್ನು ನಿರಾತಂಕವಾಗಿ ಉಣ್ಣಿರಿ ಮತ್ತು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ.

يَٰٓأَيُّهَا الَّذِينَ ءَامَنُوا كُلُوا مِنْ طَيِّبَٰتِ مَا رَزَقْنَٰكُمْ وَاشْكُرُوا لِلّٰهِ إِنْ كُنْتُمْ إِيَّاهُ تَعْبُدُونَ ﴿١٧٢﴾

173. ಅಲ್ಲಾಹನ ಕಡೆಯಿಂದ ನಿಮ್ಮ ಮೇಲೆ ನಿಷೇಧವೇನಾದರೂ ಇದ್ದರೆ ಅದಿಷ್ಟೆ-ಶವವನ್ನು ತಿನ್ನಬೇಡಿರಿ, ನೆತ್ತರು ಮತ್ತು ಹಂದಿಯ ಮಾಂಸವನ್ನು ವರ್ಜಿಸಿರಿ ಮತ್ತು ಅಲ್ಲಾಹನ ಹೊರತು ಇತರರ ಹೆಸರು ಉಚ್ಚರಿಸಲಾದ ವಸ್ತುಗಳನ್ನು ತಿನ್ನಬೇಡಿರಿ. ಆದರೆ ವಿವಶಾವಸ್ಥೆಯಲ್ಲಿದ್ದು, ನಿಯಮೋಲ್ಲಂಘನೆಯ ಉದ್ದೇಶವಿಲ್ಲದೆಯೂ ಮಿತಿ ಮೀರದೆಯೂ ಅವುಗಳಿಂದೇನನ್ನಾದರೂ ತಿಂದುಬಿಟ್ಟರೆ ದೋಷವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.[52]

إِنَّمَا حَرَّمَ عَلَيْكُمُ الْمَيْتَةَ وَالدَّمَ وَلَحْمَ الْخِنْزِيرِ وَمَآ أُهِلَّ بِهِۦ لِغَيْرِ اللّٰهِ ۖ فَمَنِ اضْطُرَّ غَيْرَ بَاغٍ وَلَا عَادٍ فَلَآ إِثْمَ عَلَيْهِ ۚ إِنَّ اللّٰهَ غَفُورٌ رَّحِيمٌ ﴿١٧٣﴾

52. ಈ ಸೂಕ್ತದಲ್ಲಿ ಮೂರು ಶರತ್ತುಗಳೊಂದಿಗೆ ನಿಷೇಧಿತ ವಸ್ತುಗಳನ್ನು ಉಪಯೋಗಿಸುವ ಅನುಮತಿ ನೀಡಲಾಗಿದೆ:

1) ಅವನು ನಿಜವಾಗಿಯೂ ನಿರ್ಬಂಧಿತಾವಸ್ಥೆಯಲ್ಲಿರಬೇಕು. ಉದಾಹರಣೆಗೆ ಪ್ರಾಣಕ್ಕೆ ಕಂಟಕವೆನ್ನುವಷ್ಟು ಹಸಿವೆ ಬಾಯಾರಿಕೆಯಲ್ಲಿ

174. ಅಲ್ಲಾಹನು ತನ್ನ ಗ್ರಂಥದಲ್ಲಿ ಅವತೀರ್ಣಗೊಳಿಸಿದ ಆದೇಶಗಳನ್ನು ಬಚ್ಚಿಟ್ಟು, ಅವುಗಳನ್ನು ಲೌಕಿಕ ಲಾಭಕ್ಕಾಗಿ ಬಲಿಕೊಡುವವರು ವಾಸ್ತವದಲ್ಲಿ ತಮ್ಮ ಹೊಟ್ಟೆಯನ್ನು ಅಗ್ನಿಯಿಂದ ತುಂಬುತ್ತಿದ್ದಾರೆ. ನಿರ್ಣಾಯಕ ದಿನದಂದು ಅಲ್ಲಾಹನು ಅವರೊಡನೆ ಮಾತನ್ನಾಡನು; ಅವರನ್ನು ಪವಿತ್ರಗೊಳಿಸನು, ಅವರಿಗೆ ವೇದನಾಪೂರ್ಣ ಶಿಕ್ಷೆ ಕಾದಿದೆ.

إِنَّ الَّذِينَ يَكْتُمُونَ مَا أَنزَلَ اللَّهُ مِنَ الْكِتَابِ وَيَشْتَرُونَ بِهِ ثَمَنًا قَلِيلًا ۙ أُولَٰئِكَ مَا يَأْكُلُونَ فِي بُطُونِهِمْ إِلَّا النَّارَ وَلَا يُكَلِّمُهُمُ اللَّهُ يَوْمَ الْقِيَامَةِ وَلَا يُزَكِّيهِمْ وَلَهُمْ عَذَابٌ أَلِيمٌ ﴿١٧٤﴾

175. ಸನ್ಮಾರ್ಗಕ್ಕೆ ಪ್ರತಿಯಾಗಿ ದುರ್ಮಾರ್ಗವನ್ನೂ ಕ್ಷಮೆಗೆ ಪ್ರತಿಯಾಗಿ ಯಾತನೆಯನ್ನೂ ಖರೀದಿಸಿದವರು ಇವರೇ ಆಗಿರುತ್ತಾರೆ. ನರಕ ಯಾತನೆಯನ್ನು ಸಹಿಸಲು ಸಿದ್ಧರಾಗಿರುವ ಅವರ ಸಾಹಸವು ಎಷ್ಟು ವಿಚಿತ್ರ!

أُولَٰئِكَ الَّذِينَ اشْتَرَوُا الضَّلَالَةَ بِالْهُدَىٰ وَالْعَذَابَ بِالْمَغْفِرَةِ ۚ فَمَا أَصْبَرَهُمْ عَلَى النَّارِ ﴿١٧٥﴾

176. ಅಲ್ಲಾಹನಂತು ನಿಶ್ಚಯವಾಗಿಯೂ ಸತ್ಯ ಸಹಿತ ಗ್ರಂಥವನ್ನು ಅವತರಿಸಿದನು. ಆದರೆ ಗ್ರಂಥದಲ್ಲಿ ಭಿನ್ನಾಭಿಪ್ರಾಯಗಳನ್ನುಂಟು ಮಾಡಿದವರು ತಮ್ಮ ಕಚ್ಚಾಟಗಳಲ್ಲಿ ಸತ್ಯದಿಂದ ಬಹುದೂರ ಹೋಗಿ ಬಿಟ್ಟುದರಿಂದ ಹೀಗೆಲ್ಲ ಆಯಿತು.

ذَٰلِكَ بِأَنَّ اللَّهَ نَزَّلَ الْكِتَابَ بِالْحَقِّ ۗ وَإِنَّ الَّذِينَ اخْتَلَفُوا فِي الْكِتَابِ لَفِي شِقَاقٍ بَعِيدٍ ﴿١٧٦﴾

177. ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು ಧರ್ಮಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ ದಿನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದೂ ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು (ಕಡ್ಡಾಯ ದಾನವನ್ನು) ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಇವರೇ ಧರ್ಮನಿಷ್ಠರು.

لَّيْسَ الْبِرَّ أَن تُوَلُّوا وُجُوهَكُمْ قِبَلَ الْمَشْرِقِ وَالْمَغْرِبِ وَلَٰكِنَّ الْبِرَّ مَنْ آمَنَ بِاللَّهِ وَالْيَوْمِ الْآخِرِ وَالْمَلَائِكَةِ وَالْكِتَابِ وَالنَّبِيِّينَ وَآتَى الْمَالَ عَلَىٰ حُبِّهِ ذَوِي الْقُرْبَىٰ وَالْيَتَامَىٰ وَالْمَسَاكِينَ وَابْنَ السَّبِيلِ وَالسَّائِلِينَ وَفِي الرِّقَابِ وَأَقَامَ الصَّلَاةَ وَآتَى الزَّكَاةَ وَالْمُوفُونَ بِعَهْدِهِمْ إِذَا عَاهَدُوا ۖ وَالصَّابِرِينَ فِي الْبَأْسَاءِ وَالضَّرَّاءِ وَحِينَ الْبَأْسِ ۗ أُولَٰئِكَ الَّذِينَ صَدَقُوا ۖ وَأُولَٰئِكَ هُمُ الْمُتَّقُونَ ﴿١٧٧﴾

ಸಿಲುಕಿರುವುದು ಅಥವಾ ಪ್ರಾಣಕ್ಕೆ ಕುತ್ತಾಗಬಹುದಾದ ಕಾಯಿಲೆಯಲ್ಲಿ ಸಿಲುಕಿರುವುದು ಮತ್ತು ಅಂತಹ ಸಂದರ್ಭದಲ್ಲಿ ನಿಷೇಧಿತ ವಸ್ತುಗಳಲ್ಲದೆ ಬೇರೇನೂ ದೊರೆಯದಿರುವುದು.

2) ಅಲ್ಲಾಹನ ಕಾನೂನುಗಳನ್ನು ಮುರಿಯುವ ಇಚ್ಛೆ ಮನಸ್ಸಿನಲ್ಲಿಲ್ಲದಿರುವುದು.

3) ಅವಶ್ಯಕತೆಯ ಮಿತಿಯನ್ನು ಮೀರದಿರುವುದು. ಉದಾಹರಣೆಗೆ ನಿಷೇಧಿತ ವಸ್ತುವಿನ ಕೆಲವು ತುತ್ತು, ಹನಿ ಅಥವಾ ಗುಟುಕು ಪ್ರಾಣ ಉಳಿಸಲು ಪರ್ಯಾಪ್ತವಿದ್ದರೆ ಅದಕ್ಕಿಂತ ಹೆಚ್ಚು ಉಪಯೋಗಿಸದಿರುವುದು.

178. ಓ ಸತ್ಯವಿಶ್ವಾಸಿಗಳೇ, ನಿಮಗೆ ಕೊಲೆಯ ಮೊಕದ್ದಮೆಗಳಲ್ಲಿ ಪ್ರತೀಕಾರವನ್ನು ಶಾಸನಗೊಳಿಸಲಾಗಿದೆ. ಸ್ವತಂತ್ರನು ವಧಿಸಿದ್ದರೆ ಆ ಸ್ವತಂತ್ರನೊಂದಿಗೇ ಸೇಡು ತೀರಿಸಬೇಕು. ಗುಲಾಮನು ಘಾತಕನಾದರೆ ಗುಲಾಮನೇ ವಧಿಸಲ್ಪಡಬೇಕು- ಮತ್ತು ಸ್ತ್ರೀಯು ಈ ಅಪರಾಧವೆಸಗಿದರೆ ಆ ಸ್ತ್ರೀಯೊಂದಿಗೇ ಪ್ರತೀಕಾರವೆಸಗಬೇಕು. ಒಂದು ವೇಳೆ ಘಾತಕನೊಬ್ಬನೊಂದಿಗೆ ಅವನ ಸಹೋದರನು ಸೌಜನ್ಯದಿಂದ ವರ್ತಿಸಲು ಸಿದ್ಧನಾದರೆ 'ಮಅ್‌ರೂಫ್' (ಸರ್ವವಿಧಿತ) ರೀತಿಯಲ್ಲಿ ರಕ್ತಕಾಣಿಕೆಯ ತೀರ್ಮಾನವಾಗಬೇಕು ಮತ್ತು ಘಾತಕನು ನ್ಯಾಯವಾಗಿ ಪರಿಹಾರ ಧನವನ್ನು ಪಾವತಿ ಮಾಡಲು ಬದ್ಧನಾಗಿರುತ್ತಾನೆ.[53] ಇದು ನಿಮ್ಮ ಪಾಲಕ ಪ್ರಭುವಿನ ಕಡೆಯಿಂದ ಸೌಲಭ್ಯವೂ ಕರುಣೆಯೂ ಆಗಿದೆ. ಹೀಗಿದ್ದೂ ಯಾವನಾದರೂ ಹದಮೀರಿದರೆ[54] ಅವನಿಗೆ ವೇದನಾಜನಕ ಶಿಕ್ಷೆ ಇದೆ.

يا ايها الذين امنوا كتب عليكم القصاص
في القتلى ۖ الحر بالحر والعبد بالعبد
والانثى بالانثى ۚ فمن عفي له من اخيه
شيء فاتباع بالمعروف واداء اليه باحسان ۗ
ذلك تخفيف من ربكم ورحمة ۗ فمن
اعتدى بعد ذلك فله عذاب اليم ﴿١٧٨﴾

179. ಓ ಬುದ್ಧಿಜೀವಿಗಳೇ! 'ಕಿಸಾಸ್'ನಲ್ಲಿ (ಪ್ರತೀಕಾರ) ನಿಮಗೆ ಜೀವನವಿದೆ. ನೀವು ಈ ಕಾನೂನಿನ ಉಲ್ಲಂಘನೆಯಿಂದ ದೂರವಿರುವಿರೆಂದು ಆಶಿಸಲಾಗುತ್ತದೆ.

ولكم في القصاص حيوة يا اولي الالباب
لعلكم تتقون ﴿١٧٩﴾

180. ನಿಮ್ಮಲ್ಲಾರಿಗಾದರೂ ಮರಣದ ಸಮಯ ಸನ್ನಿಹಿತವಾದರೆ ಮತ್ತು ಅವನು ಸಂಪತ್ತು ಬಿಟ್ಟು ಹೋಗುತ್ತಿದ್ದರೆ ಮಾತಾಪಿತರಿಗೂ ನೆಂಟರಿಷ್ಟರಿಗೂ ಸರ್ವವಿಧಿತ ರೀತಿಯಲ್ಲಿ ವಸಿಯ್ಯತ್ (ಉಯಿಲು) ಮಾಡುವುದು ನಿಮ್ಮ ಮೇಲೆ ಕಡ್ಡಾಯಗೊಳಿಸಲಾಗಿದೆ.[55] ಇದು ಧರ್ಮನಿಷ್ಠರ ಮೇಲಿನ ಬಾಧ್ಯತೆಯಾಗಿದೆ.

كتب عليكم اذا حضر احدكم الموت
ان ترك خيرا ۚ الوصية للوالدين والاقربين
بالمعروف ۖ حقا على المتقين ﴿١٨٠﴾

181. ಮುಂದೆ ಯಾರಾದರೂ ವಸಿಯ್ಯತ(ಮೃತವಾಣಿ)ನ್ನು ಕೇಳಿಯೂ ಅದನ್ನು ಬದಲಾಯಿಸಿದರೆ, ಅದರ ಪಾಪವು ಬದಲಾಯಿಸಿದವರ ಮೇಲಿರುವುದು. ಅಲ್ಲಾಹನು ಎಲ್ಲವನ್ನೂ ಆಲಿಸುವವನೂ ಸರ್ವಜ್ಞನೂ ಆಗಿರುತ್ತಾನೆ.

فمن بدله بعد ما سمعه فانما اثمه
على الذين يبدلونه ۚ ان الله سميع عليم ﴿١٨١﴾

53. ಇಸ್ಲಾಮಿನ ದಂಡ ಸಂಹಿತೆಯಲ್ಲಿ ಕೊಲೆಯ ಪ್ರಕರಣದ ವೇಳೆ ಸಂಧಾನ ಮಾಡಿಕೊಳ್ಳಬಹುದಾಗಿದೆ. ಕೊಲೆಯಾದವನ ವಾರೀಸುದಾರರಿಗೆ ಕೊಲೆಪಾತಕಿಯನ್ನು ಕ್ಷಮಿಸುವ ಅಧಿಕಾರವಿದೆ. ಆಗ ಅವನಿಗೆ ಮರಣದಂಡನೆಯಾಗಬೇಕೆಂದು ನ್ಯಾಯಾಲಯ ಒತ್ತಾಯಿಸುವುದು ನಿಷಿದ್ಧವಾಗಿದೆ. ಆದರೆ ಕ್ಷಮೆ ನೀಡುವುದಾದರೆ ಕೊಲೆ ಪಾತಕಿಯು ಪರಿಹಾರ ಧನ ನೀಡಬೇಕಾಗುವುದು.

54. ಉದಾಹರಣೆಗೆ ಕೊಲೆಯಾದವನ ವಾರೀಸುದಾರರು ಪರಿಹಾರ ಧನವನ್ನು ಪಡೆದ ಬಳಿಕ ಪ್ರತೀಕಾರ ತೀರಿಸಲು ಪ್ರಯತ್ನಿಸುವುದು ಅಥವಾ ಪರಿಹಾರ ನೀಡಲು ಹಿಂದೇಟು ಹಾಕುವ ಮೂಲಕ ಕೊಲೆಯಾದವನ ವಾರೀಸುದಾರರು ಮಾಡಿದ ಉಪಕಾರಕ್ಕೆ ಕೃತಘ್ನತೆ ತೋರುವುದು.

55. ಪಿತ್ರಾರ್ಜಿತ ಸೊತ್ತಿನ ವಿತರಣೆಗೆ ಯಾವುದೇ ನಿರ್ದಿಷ್ಟ ಆದೇಶಗಳು ಇಲ್ಲದಿದ್ದ ಕಾಲದಲ್ಲಿ ಈ ಆದೇಶ ಕೊಡಲಾಗಿತ್ತು. ಆ ಮೂಲಕ ತನ್ನ ವಾರೀಸುದಾರರ ಪಾಲನ್ನು ಉಯಿಲಿನ ಮೂಲಕ ಗೊತ್ತುಪಡಿಸುವಂತೆ ಪ್ರತಿಯೊಬ್ಬರಿಗೂ ಕಡ್ಡಾಯಗೊಳಿಸಲಾಯಿತು. ಅವನ

182. ಆದರೆ ಉಯಿಲು ಮಾಡಿದವನು ಅರಿತೋ ಅರಿಯದೆಯೋ ಹಕ್ಕುಚ್ಯುತಿ ಮಾಡಿರುವನೆಂಬ ಆಶಂಕೆಯಿದ್ದು ಸಂಬಂಧ ಪಟ್ಟವರೊಂದಿಗೆ ಅದನ್ನು ಸರಿಪಡಿಸಿಕೊಂಡರೆ ಅವನ ಮೇಲೆ ಯಾವ ಪಾಪವೂ ಇಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.

فَمَنْ خَافَ مِن مُّوصٍ جَنَفًا أَوْ إِثْمًا فَأَصْلَحَ بَيْنَهُمْ فَلَا إِثْمَ عَلَيْهِ ۚ إِنَّ اللَّهَ غَفُورٌ رَّحِيمٌ ﴿١٨٢﴾

183. ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷವುಂಟಾಗುವುದೆಂದು ಆಶಿಸಲಾಗಿದೆ.

يَا أَيُّهَا الَّذِينَ آمَنُوا كُتِبَ عَلَيْكُمُ الصِّيَامُ كَمَا كُتِبَ عَلَى الَّذِينَ مِن قَبْلِكُمْ لَعَلَّكُمْ تَتَّقُونَ ﴿١٨٣﴾

184. ಎಣಿಕೆಯ ಕೆಲವೇ ದಿನಗಳ ಉಪವಾಸ ವ್ರತವದು. ನೀವೆಲ್ಲಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಇತರ ದಿನಗಳಲ್ಲಿ ಅಷ್ಟೇ ಸಂಖ್ಯೆಯನ್ನು ಪೂರ್ತಿಗೊಳಿಸಿ ಕೊಳ್ಳಬೇಕು. ಉಪವಾಸವಿರಲು ಶಕ್ತರಾದವರು (ಉಪವಾಸವಿರದಿದ್ದರೆ) ಪ್ರಾಯಶ್ಚಿತ್ತವನ್ನು ಕೊಡಬೇಕು. ಒಂದು ದಿನದ ಉಪವಾಸದ ಪ್ರಾಯಶ್ಚಿತ್ತವು ಓರ್ವ ಬಡವನಿಗೆ ಆಹಾರ ನೀಡುವುದಾಗಿದೆ ಮತ್ತು ತನ್ನ ಇಚ್ಛೆಯಿಂದ ಇನ್ನಷ್ಟು ಸತ್ಕಾರ್ಯ ಮಾಡಿದರೆ ಇದು ಅವನಿಗೆ ಇನ್ನೂ ಉತ್ತಮ. ಆದರೆ ನೀವು ಅರಿಯುವವರಾಗಿದ್ದರೆ ಉಪವಾಸವಿರುವುದೇ ನಿಮಗೆ ಅತ್ಯುತ್ತಮ.[56]

أَيَّامًا مَّعْدُودَاتٍ ۚ فَمَن كَانَ مِنكُم مَّرِيضًا أَوْ عَلَىٰ سَفَرٍ فَعِدَّةٌ مِّنْ أَيَّامٍ أُخَرَ ۚ وَعَلَى الَّذِينَ يُطِيقُونَهُ فِدْيَةٌ طَعَامُ مِسْكِينٍ ۖ فَمَن تَطَوَّعَ خَيْرًا فَهُوَ خَيْرٌ لَّهُ ۚ وَأَن تَصُومُوا خَيْرٌ لَّكُمْ ۖ إِن كُنتُمْ تَعْلَمُونَ ﴿١٨٤﴾

185. ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶಕ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ 'ಕುರ್‌ಆನ್' ಅವತೀರ್ಣಗೊಂಡ ತಿಂಗಳು 'ರಮಝಾನ್' ಆಗಿರುತ್ತದೆ. ಆದುದರಿಂದ

شَهْرُ رَمَضَانَ الَّذِي أُنزِلَ فِيهِ الْقُرْآنُ هُدًى لِّلنَّاسِ وَبَيِّنَاتٍ مِّنَ الْهُدَىٰ وَالْفُرْقَانِ ۚ فَمَن شَهِدَ مِنكُمُ الشَّهْرَ

ಮರಣಾನಂತರ ಸಂಭವಿಸಬಹುದಾದ ಕುಟುಂಬ ಕಲಹ ಅಥವಾ ಯಾವುದೇ ಹಕ್ಕುದಾರನ ಹಕ್ಕುಚ್ಯುತಿಯನ್ನು ತಪ್ಪಿಸುವುದು ಇದರ ಉದ್ದೇಶ. ಅನಂತರ ಅಲ್ಲಾಹನು ವಾರೀಸು ಸೊತ್ತಿನ ವಿತರಣೆಗೆ ತನ್ನ ನಿಯಮಗಳನ್ನು ಗೊತ್ತುಪಡಿಸಿದನು. (ಅದು ಮುಂದೆ ಅನ್ನಿಸಾ ಅಧ್ಯಾಯದಲ್ಲಿ ಬರಲಿದೆ) ಅನಂತರ ಅಲ್ಲಾಹನು ಗೊತ್ತುಪಡಿಸಿದ ವಾರೀಸುದಾರರ ಪಾಲಿನಲ್ಲಿ ಉಯಿಲಿನ ಮೂಲಕ ಯಾವುದೇ ಬದಲಾವಣೆ ಮಾಡುವಂತಿಲ್ಲ. ವಾರೀಸುದಾರನಲ್ಲದವನ ಪರವಾಗಿ ಒಟ್ಟು ಆಸ್ತಿಯ ಮೂರನೇ ಒಂದಂಶಕ್ಕಿಂತ ಹೆಚ್ಚು ಉಯಿಲು ಬರೆಯುವಂತಿಲ್ಲ. ಹಾಗೆಯೇ ಸತ್ಯವಿಶ್ವಾಸಿ ಮತ್ತು ಸತ್ಯನಿಷೇಧಿಗಳು ಪರಸ್ಪರ ಆಸ್ತಿಯ ಹಕ್ಕುದಾರರಾಗುವುದಿಲ್ಲ ಎಂಬ ವಿಧಿಯನ್ನು ಪ್ರವಾದಿವರ್ಯರು(ಸ) ಗೊತ್ತುಪಡಿಸಿದರು.

56. ಇಸ್ಲಾಮಿನ ಬಹುತೇಕ ಆದೇಶಗಳಂತೆ ಕಡ್ಡಾಯ ಉಪವಾಸವನ್ನೂ ಹಂತಹಂತವಾಗಿ ಜಾರಿಗೊಳಿಸಲಾಯಿತು. ಪ್ರವಾದಿವರ್ಯರು(ಸ), ಮೊದಲು ಮುಸ್ಲಿಮರಿಗೆ ತಿಂಗಳಿಗೆ ಮೂರು ದಿನ ಉಪವಾಸ ಆಚರಿಸುವಂತೆ ಆದೇಶಿಸಿದರು. ಆದರೆ ಅವು ಕಡ್ಡಾಯವಾಗಿರಲಿಲ್ಲ. ಅನಂತರ ಹಿ. ಶ. 2ರಲ್ಲಿ ರಮಝಾನ್ ತಿಂಗಳಲ್ಲಿ ಉಪವಾಸ ಆಚರಿಸುವ ಆದೇಶ ಅವತೀರ್ಣಗೊಂಡಿತು. ಆದರೆ ಅದರಲ್ಲಿ ಉಪವಾಸ ಆಚರಿಸುವ ಶಕ್ತಿಯಿದ್ದೂ ಉಪವಾಸ ಆಚರಿಸದವರು ಪ್ರತಿಯೊಂದು ಉಪವಾಸದ ಬದಲು ಒಬ್ಬ ಬಡವನಿಗೆ ಉಣಬಡಿಸಬೇಕು ಎಂಬ ರಿಯಾಯಿತಿಯನ್ನಿರಿಸಲಾಯಿತು. ಅನಂತರವಷ್ಟೇ ಮುಂದೆ ಬರಲಿರುವ ಎರಡನೇ ಆದೇಶ ನೀಡಲಾಯಿತು.

ಯಾವನಾದರೂ ಈ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ಉಪವಾಸ ವ್ರತವನ್ನಾಚರಿಸಬೇಕು. ಯಾವನಾದರೂ ರೋಗಿಯಾಗಿದ್ದರೆ ಅಥವಾ ಪ್ರಯಾಣಿಕನಾಗಿದ್ದರೆ ಆತನು ಇತರ ದಿನಗಳಲ್ಲಿ ಉಪವಾಸ ದಿನಗಳ ಸಂಖ್ಯೆಯನ್ನು ಪೂರ್ತಿಗೊಳಿಸಬೇಕು. ಅಲ್ಲಾಹನು ನಿಮಗೆ ಸೌಲಭ್ಯವನ್ನೀಯಲು ಬಯಸುತ್ತಾನೆ; ನಿಮ್ಮನ್ನು ಕಷ್ಟಕ್ಕೀಡು ಮಾಡಲು ಇಚ್ಛಿಸುವುದಿಲ್ಲ. ನೀವು ಉಪವಾಸದ ಸಂಖ್ಯೆಯನ್ನು ಪೂರ್ತಿಗೊಳಿಸಲು ಅನುಕೂಲವಾಗುವಂತೆಯೂ, ಸನ್ಮಾರ್ಗದರ್ಶನದ ಮೂಲಕ ನಿಮ್ಮನ್ನು ಪ್ರತಿಷ್ಠಿತಗೊಳಿಸಿದ ಅಲ್ಲಾಹನ ಮಹಿಮೆಯನ್ನು ಕೊಂಡಾಡುತ್ತಾ ಅವನಿಗೆ ಕೃತಜ್ಞರಾಗಿರಲಿಕ್ಕಾಗಿಯೂ ಈ ವಿಧಾನವನ್ನು ತೋರಿಸಿ ಕೊಡಲಾಗಿದೆ.

فَلْيَصُمْهُ ۖ وَمَن كَانَ مَرِيضًا أَوْ عَلَىٰ سَفَرٍ
فَعِدَّةٌ مِّنْ أَيَّامٍ أُخَرَ ۗ يُرِيدُ اللَّهُ بِكُمُ
الْيُسْرَ وَلَا يُرِيدُ بِكُمُ الْعُسْرَ وَلِتُكْمِلُوا
الْعِدَّةَ وَلِتُكَبِّرُوا اللَّهَ عَلَىٰ مَا هَدَاكُمْ
وَلَعَلَّكُمْ تَشْكُرُونَ ﴿١٨٥﴾

186. ಓ ಪೈಗಂಬರರೇ, ನನ್ನ ದಾಸರು ನಿಮ್ಮೊಡನೆ ನನ್ನ ಬಗ್ಗೆ ಕೇಳಿದರೆ, ನಾನು ಅವರಿಗೆ ನಿಕಟನಾಗಿದ್ದೇನೆಂದೂ, ಪ್ರಾರ್ಥಿಸುವವನು ನನ್ನನ್ನು ಪ್ರಾರ್ಥಿಸಿದಾಗ ಅವನ ಪ್ರಾರ್ಥನೆಯನ್ನು ಆಲಿಸುತ್ತೇನೆಂದೂ ಅದಕ್ಕೆ ಉತ್ತರಿಸುತ್ತೇನೆಂದೂ ಅವರಿಗೆ ಹೇಳಿರಿ. ಆದುದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ವಿಶ್ವಾಸವಿರಿಸಲಿ. (ಇದನ್ನು ಅವರಿಗೆ ತಿಳಿಸಿಬಿಡಿರಿ) ಅವರು ಸನ್ಮಾರ್ಗ ಪಡೆಯಲೂಬಹುದು.

وَإِذَا سَأَلَكَ عِبَادِي عَنِّي فَإِنِّي قَرِيبٌ ۖ أُجِيبُ
دَعْوَةَ الدَّاعِ إِذَا دَعَانِ ۖ فَلْيَسْتَجِيبُوا لِي
وَلْيُؤْمِنُوا بِي لَعَلَّهُمْ يَرْشُدُونَ ﴿١٨٦﴾

187. ಉಪವಾಸ ವ್ರತದಂದು ರಾತ್ರಿಕಾಲದಲ್ಲಿ ನೀವು ನಿಮ್ಮ ಪತ್ನಿಯರೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದನ್ನು 'ಧರ್ಮಸಮ್ಮತ' ಗೊಳಿಸಲಾಗಿರುತ್ತದೆ. ಅವರು ನಿಮಗೆ ಉಡುಪಾಗಿರುವರು ಮತ್ತು ನೀವು ಅವರಿಗೆ ಉಡುಪಾಗಿರುವಿರಿ. ನೀವು ರಹಸ್ಯವಾಗಿ ಆತ್ಮವಂಚನೆ ಮಾಡುತ್ತಿದ್ದುದು ಅಲ್ಲಾಹನಿಗೆ ತಿಳಿಯಿತು. ಆದರೆ, ಅಲ್ಲಾಹನು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿ ನಿಮ್ಮನ್ನು ಕ್ಷಮಿಸಿರುತ್ತಾನೆ. ಇನ್ನು ನೀವು ಅವರೊಂದಿಗೆ ರಮಿಸಿರಿ ಮತ್ತು ಅಲ್ಲಾಹನು ನಿಮಗೆ ನಿಯತಗೊಳಿಸಿದ ಸವಿಯನ್ನನುಭವಿಸಿಕೊಳ್ಳಿರಿ ಮತ್ತು ಇರುಳಿನ ಕರಿರೇಖೆಯಿಂದ ಉಷಾಕಾಲದ ಬಿಳಿರೇಖೆಯು ನಿಮಗೆ ಬೇರ್ಪಟ್ಟು ತೋರುವವರೆಗಿನ ನಿಶಾವಧಿಯಲ್ಲಿ ತಿನ್ನಿರಿ ಮತ್ತು ಕುಡಿಯಿರಿ. ಅನಂತರ ಈ ಕಾರ್ಯಗಳನ್ನೆಲ್ಲಾ ಬಿಟ್ಟು, ರಾತ್ರಿಯವರೆಗೆ ನಿಮ್ಮ ಉಪವಾಸ ವ್ರತವನ್ನು ಪೂರ್ತಿಗೊಳಿಸಿರಿ. ನೀವು ಮಸೀದಿಗಳಲ್ಲಿ 'ಇಲ್‌ತಿಕಾಫ್'ಗೆ (ಧ್ಯಾನಾಸಕ್ತರಾಗಿ) ಕುಳಿತಿರುವಾಗ ಸ್ತ್ರೀ ಸಂಭೋಗ ಮಾಡಬೇಡಿರಿ. ಇವು ಅಲ್ಲಾಹನು

أُحِلَّ لَكُمْ لَيْلَةَ الصِّيَامِ الرَّفَثُ إِلَىٰ نِسَائِكُمْ ۚ
هُنَّ لِبَاسٌ لَّكُمْ وَأَنتُمْ لِبَاسٌ لَّهُنَّ ۗ عَلِمَ
اللَّهُ أَنَّكُمْ كُنتُمْ تَخْتَانُونَ أَنفُسَكُمْ فَتَابَ
عَلَيْكُمْ وَعَفَا عَنكُمْ ۖ فَالْآنَ بَاشِرُوهُنَّ
وَابْتَغُوا مَا كَتَبَ اللَّهُ لَكُمْ ۚ وَكُلُوا وَاشْرَبُوا
حَتَّىٰ يَتَبَيَّنَ لَكُمُ الْخَيْطُ الْأَبْيَضُ مِنَ الْخَيْطِ
الْأَسْوَدِ مِنَ الْفَجْرِ ۖ ثُمَّ أَتِمُّوا الصِّيَامَ إِلَى
اللَّيْلِ ۚ وَلَا تُبَاشِرُوهُنَّ وَأَنتُمْ عَاكِفُونَ
فِي الْمَسَاجِدِ ۗ تِلْكَ حُدُودُ اللَّهِ فَلَا تَقْرَبُوهَا ۗ
كَذَٰلِكَ يُبَيِّنُ اللَّهُ آيَاتِهِ لِلنَّاسِ لَعَلَّهُمْ يَتَّقُونَ ﴿١٨٧﴾

ನಿರ್ಣಯಿಸಿದ ಮೇರೆಗಳು. ಇವುಗಳನ್ನು ಸಮೀಪಿಸಬಾರದು. ಹೀಗೆ ಜನರು ಅಪರಾಧಗಳಿಂದ ಪಾರಾಗುವರೆಂದು ನಿರೀಕ್ಷಿಸಿ, ಅಲ್ಲಾಹನು ತನ್ನ ಆದೇಶಗಳನ್ನು ಸುಸ್ಪಷ್ಟವಾಗಿ ವಿವರಿಸುತ್ತಾನೆ.

188. ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು.[57]

وَلَا تَأْكُلُوٓا أَمْوَٰلَكُم بَيْنَكُم بِٱلْبَٰطِلِ وَتُدْلُوا بِهَآ إِلَى ٱلْحُكَّامِ لِتَأْكُلُوا فَرِيقًا مِّنْ أَمْوَٰلِ ٱلنَّاسِ بِٱلْإِثْمِ وَأَنتُمْ تَعْلَمُونَ ﴿١٨٨﴾

ع

189. (ಓ ಪೈಗಂಬರರೇ,) ಜನರು ನಿಮ್ಮೊಡನೆ ಚಂದ್ರನ ವೃದ್ಧಿ-ಕ್ಷಯಗಳ ಬಗ್ಗೆ ಪ್ರಶ್ನಿಸುತ್ತಾರೆ. ಅವು ಜನರಿಗೆ ಕಾಲ ನಿರ್ಣಯದ ಹಾಗೂ 'ಹಜ್ಜ್'ನ(ಯಾತ್ರೆಯ) ಸಂಕೇತಗಳಾಗಿವೆಯೆನ್ನಿರಿ. ನೀವು ಹಿಂಭಾಗದಿಂದ ನಿಮ್ಮ ಮನೆಗಳೊಳಗೆ ಪ್ರವೇಶಿಸುತ್ತಿರುವುದು ಪುಣ್ಯ ಕಾರ್ಯವೇನೂ ಅಲ್ಲವೆಂದೂ ಅಲ್ಲಾಹನ ಅಪ್ರಸನ್ನತೆಯಿಂದ ದೂರವಿರುವುದೇ ನಿಜವಾದ ಪುಣ್ಯಕಾರ್ಯವೆಂದೂ ಆ ಪ್ರಯುಕ್ತ ನೀವು ಬಾಗಿಲುಗಳಿಂದಲೇ ನಿಮ್ಮ ಮನೆಗಳೊಳಗೆ ಪ್ರವೇಶಿಸಿರೆಂದೂ ನಿಮಗೆ ವಿಜಯಪ್ರಾಪ್ತಿಯಾಗುವಂತಾಗಲು ಅಲ್ಲಾಹನ ಭಯವಿರಿಸಿಕೊಳ್ಳಿರೆಂದೂ ಅವರೊಡನೆ ಹೇಳಿರಿ.[58]

يَسْـَٔلُونَكَ عَنِ ٱلْأَهِلَّةِ ۖ قُلْ هِىَ مَوَٰقِيتُ لِلنَّاسِ وَٱلْحَجِّ ۗ وَلَيْسَ ٱلْبِرُّ بِأَن تَأْتُوا ٱلْبُيُوتَ مِن ظُهُورِهَا وَلَٰكِنَّ ٱلْبِرَّ مَنِ ٱتَّقَىٰ ۗ وَأْتُوا ٱلْبُيُوتَ مِنْ أَبْوَٰبِهَا ۚ وَٱتَّقُوا ٱللَّهَ لَعَلَّكُمْ تُفْلِحُونَ ﴿١٨٩﴾

190. ನಿಮ್ಮೊಡನೆ ಯುದ್ಧ ಮಾಡುವವರೊಂದಿಗೆ ನೀವೂ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ. ಆದರೆ ಅತಿಕ್ರಮಿಸಬೇಡಿರಿ. ಅಲ್ಲಾಹನು ಅತಿಕ್ರಮಿಸುವವರನ್ನು ಮೆಚ್ಚುವುದಿಲ್ಲ.

وَقَٰتِلُوا فِى سَبِيلِ ٱللَّهِ ٱلَّذِينَ يُقَٰتِلُونَكُمْ وَلَا تَعْتَدُوٓا ۚ إِنَّ ٱللَّهَ لَا يُحِبُّ ٱلْمُعْتَدِينَ ﴿١٩٠﴾

191. ಅವರೊಡನೆ ಹೋರಾಟ ನಡೆಸಬೇಕಾದ ಸಂದರ್ಭ ಬಂದಾಗಲೆಲ್ಲ

وَٱقْتُلُوهُمْ حَيْثُ ثَقِفْتُمُوهُمْ وَأَخْرِجُوهُم

57. ಅಧಿಕಾರಿಗಳಿಗೆ ಲಂಚಕೊಟ್ಟು ಅವರಿಂದ ಅನುಚಿತ ರೀತಿಯಲ್ಲಿ ಪ್ರಯೋಜನ ಪಡೆಯಲು ಪ್ರಯತ್ನಿಸದಿರಿ- ಎಂಬುದು ಇದರ ಒಂದು ಅರ್ಥ. ಅದರ ಇನ್ನೊಂದು ವ್ಯಾಖ್ಯೆ ಏನೆಂದರೆ, ಈ ಸಂಪತ್ತು ಅನ್ಯರಿಗೆ ಸೇರಿದ್ದು ಎಂದು ನಿಮಗೆ ಚೆನ್ನಾಗಿ ತಿಳಿದಿರುವಾಗ, ಅವನ ಬಳಿ ತನ್ನ ಸೊತ್ತಿನ ಬಗ್ಗೆ ಯಾವುದೇ ಆಧಾರವಿಲ್ಲ ಅಥವಾ ಹೇಗಾದರೂ ಮಾಡಿ ಅದನ್ನು ಕಬಳಿಸಲು ನಿಮಗೆ ಸಾಧ್ಯವಿದೆ ಎಂಬ ಕಾರಣಕ್ಕಾಗಿ ಅದರ ಮೊಕದ್ದಮೆಯನ್ನು ನ್ಯಾಯಾಲಯಕ್ಕೆ ಕೊಂಡೊಯ್ಯದಿರಿ. ನ್ಯಾಯಾಧೀಶರು ಮೊಕದ್ದಮೆಯ ವಿವರಗಳನ್ನು ನೋಡಿ ಸಂಪತ್ತನ್ನು ನಿಮಗೆ ಒದಗಿಸಲೂ ಬಹುದು. ಆದರೆ ಅದೆಂದೂ ನಿಮ್ಮ ನ್ಯಾಯಸಮ್ಮತ ಸೊತ್ತಾಗದು.

58. ಅರೇಬಿಯಾದಲ್ಲಿ ಪ್ರಚಲಿತವಿದ್ದ ಮೂಢನಂಬಿಕೆಗಳಲ್ಲಿ ಇದೂ ಒಂದು. ಹಜ್ಜ್‌ಗಾಗಿ ಇಹ್ರಾಮ್ ಕಟ್ಟಿದ ನಂತರ ಅವರು ಬಾಗಿಲ ಮೂಲಕ ಮನೆಗೆ ಪ್ರವೇಶಿಸುತ್ತಿರಲಿಲ್ಲ. ಬದಲಾಗಿ ಹಿಂದಿನ ಗೋಡೆಯಿಂದ ನೆಗೆದು ಅಥವಾ ಗೋಡೆಯಲ್ಲಿ ಕನ್ನ ಕೊರೆದು ಪ್ರವೇಶಿಸುತ್ತಿದ್ದರು. ಪ್ರವಾಸದಿಂದ ಮರಳಿದ ನಂತರವೂ ಹಿಂದಿನಿಂದಲೇ ಮನೆಗೆ ಪ್ರವೇಶಿಸುತ್ತಿದ್ದರು. ಈ ಸೂಕ್ತದಲ್ಲಿ ಪ್ರಸ್ತುತ ಮೂಢನಂಬಿಕೆಯನ್ನು ರದ್ದುಪಡಿಸಿರುವುದರ ಜತೆಗೆ ಒಳಿತು ಅಂತಹ ಪದ್ಧತಿಗಳಲ್ಲಿಲ್ಲ, ನಿಜವಾಗಿ ಒಳಿತು ಅಲ್ಲಾಹನನ್ನು ಭಯಪಡುವುದು ಮತ್ತು ಅವನ ಆಜ್ಞೋಲ್ಲಂಘನೆಯಿಂದ ದೂರವಿರುವುದಾಗಿದೆ ಎನ್ನುವ ಮೂಲಕ ಎಲ್ಲ ಮೂಢನಂಬಿಕೆಗಳ ಮೇಲೆ ಪ್ರಹಾರ ನಡೆಸಲಾಗಿದೆ.

ಹೋರಾಟ ನಡೆಸಿರಿ ಮತ್ತು ಅವರು ನಿಮ್ಮನ್ನು ಹೊರಕ್ಕಟ್ಟಿದಲ್ಲಿಂದ ನೀವೂ ಅವರನ್ನು ಹೊರಕ್ಕಟ್ಟಿರಿ. ಏಕೆಂದರೆ ಹತ್ಯೆಯು ಕೆಟ್ಟದ್ದಾಗಿದ್ದರೂ ಕ್ಷೋಭೆಯು (ಫಿತ್ನಃ) ಅದಕ್ಕಿಂತಲೂ ಕೆಟ್ಟದಾಗಿದೆ.[59] ಅವರು 'ಮಸ್ಜಿದುಲ್ ಹರಾಮ್'ನ ಬಳಿ ನಿಮ್ಮೊಡನೆ ಹೋರಾಡದಿದ್ದರೆ ನೀವೂ ಹೋರಾಡಬೇಡಿರಿ. ಆದರೆ ಅಲ್ಲಿಯೂ ಅವರು ನಿಮ್ಮೊಡನೆ ಹೋರಾಡಿದರೆ, ನೀವೂ ಅವರನ್ನು ನಿರ್ದಾಕ್ಷಿಣ್ಯವಾಗಿ ವಧಿಸಿರಿ. ಇಂತಹ ಸತ್ಯನಿಷೇಧಿಗಳಿಗೆ ಇದೇ ಪ್ರತಿಫಲ.

مِّنْ حَيْثُ أَخْرَجُوكُمْ وَالْفِتْنَةُ أَشَدُّ مِنَ الْقَتْلِ وَلَا تُقَاتِلُوهُمْ عِندَ الْمَسْجِدِ الْحَرَامِ حَتَّىٰ يُقَاتِلُوكُمْ فِيهِ فَإِن قَاتَلُوكُمْ فَاقْتُلُوهُمْ كَذَٰلِكَ جَزَاءُ الْكَافِرِينَ ﴿١٩١﴾

192. ಅನಂತರ ಅವರು ಹಿಂಜರಿದರೆ ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆಂಬುದನ್ನು ನೀವು ಅರಿತಿರಬೇಕು.

فَإِنِ انتَهَوْا فَإِنَّ اللَّهَ غَفُورٌ رَّحِيمٌ ﴿١٩٢﴾

193. ಕ್ಷೋಭೆಯು ಸಂಪೂರ್ಣ ಅಳಿದು, ಹೋಗುವವರೆಗೂ ಧರ್ಮವು ಪರಿಪೂರ್ಣವಾಗಿ ಅಲ್ಲಾಹನಿಗೇ ಆಗುವವರೆಗೂ ನೀವು ಅವರ ವಿರುದ್ಧ ಹೋರಾಡಿರಿ. ಅನಂತರ ಅವರು ಹಿಮ್ಮೆಟ್ಟಿದರೆ ಅಕ್ರಮಿಗಳ ವಿನಾ ಇನ್ನಾರ ಮೇಲೂ ಕೈಯೆತ್ತಬಾರದೆಂಬುದನ್ನು ನೀವು ತಿಳಿದಿರಬೇಕು.

وَقَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ لِلَّهِ فَإِنِ انتَهَوْا فَلَا عُدْوَانَ إِلَّا عَلَى الظَّالِمِينَ ﴿١٩٣﴾

194. ಸನ್ಮಾನಿತ ತಿಂಗಳ ಪರ್ಯಾಯ ಸನ್ಮಾನಿತ ತಿಂಗಳೇ ಆಗಿರುತ್ತದೆ. ಎಲ್ಲಾ ಸನ್ಮಾನಿತಗಳನ್ನು ಸರಿಸಮಾನವಾಗಿಯೇ ಗೌರವಿಸಲಾಗುವುದು.[60] ಆದುದರಿಂದ ನಿಮ್ಮ ಮೇಲೆ ಕೈ ಮಾಡಿದವರ ಮೇಲೆ ನೀವೂ ಅದೇ ರೀತಿಯಲ್ಲಿ ಕೈ ಮಾಡಿರಿ. ಆದರೆ ಅಲ್ಲಾಹನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ಸೀಮೋಲ್ಲಂಘನೆಯನ್ನು ಮಾಡದವರೊಂದಿಗೆ ಮಾತ್ರವಿರುತ್ತಾನೆಂಬುದನ್ನು ನೀವು ತಿಳಿದಿರಬೇಕು.

الشَّهْرُ الْحَرَامُ بِالشَّهْرِ الْحَرَامِ وَالْحُرُمَاتُ قِصَاصٌ فَمَنِ اعْتَدَىٰ عَلَيْكُمْ فَاعْتَدُوا عَلَيْهِ بِمِثْلِ مَا اعْتَدَىٰ عَلَيْكُمْ وَاتَّقُوا اللَّهَ وَاعْلَمُوا أَنَّ اللَّهَ مَعَ الْمُتَّقِينَ ﴿١٩٤﴾

195. ಅಲ್ಲಾಹನ ಮಾರ್ಗದಲ್ಲಿ ವೆಚ್ಚ ಮಾಡಿರಿ ಮತ್ತು ನಿಮ್ಮನ್ನು

وَأَنفِقُوا فِي سَبِيلِ اللَّهِ وَلَا تُلْقُوا بِأَيْدِيكُمْ

59. ಇಲ್ಲಿ 'ಫಿತ್ನ' (ಕ್ಷೋಭೆ) ಎಂದರೆ ಒಂದು ಪಂಗಡ ಅಥವಾ ಒಬ್ಬ ವ್ಯಕ್ತಿ ಅಸತ್ಯದ ಬದಲು ಸತ್ಯವನ್ನು ಅಂಗೀಕರಿಸಿದ ಕಾರಣಕ್ಕಾಗಿ ಮಾತ್ರ ಅವರನ್ನು ಹಿಂಸೆ ಮತ್ತು ದಬ್ಬಾಳಿಕೆಗೆ ಗುರಿಪಡಿಸುವುದಾಗಿದೆ.

60. ಅರಬರಲ್ಲಿ ಪ್ರವಾದಿ ಹ. ಇಬ್‌ರಾಹೀಮ್‌ರ(ಅ) ಕಾಲದಿಂದಲೂ ದುಲ್‌ಕಅದಃ, ದುಲ್‌ಹಜ್ಜ್ ಮತ್ತು ಮುಹರ್ರಮ್ ತಿಂಗಳನ್ನು ಹಜ್ಜ್‌ಗಾಗಿಯೂ ರಜಬ್ ತಿಂಗಳನ್ನು ಉಮ್ರಾಕ್ಕಾಗಿಯೂ ಮೀಸಲಿಡುವ ಪದ್ಧತಿ ಇತ್ತು. ಈ ನಾಲ್ಕು ತಿಂಗಳಲ್ಲಿ ಯುದ್ಧ ಮತ್ತು ಕೊಲೆ-ಸುಲಿಗೆಗಳು ನಿಷಿದ್ಧವಾಗಿದ್ದುವು. ಕಅಬಾ ಯಾತ್ರಾರ್ಥಿಗಳು ನೆಮ್ಮದಿಯಿಂದ ಅಲ್ಲಾಹನ ಭವನದ ಯಾತ್ರೆ ಕೈಗೊಂಡು ತಮ್ಮ ಮನೆಗಳಿಗೆ ಮರಳಬೇಕೆಂಬುದೇ ಇದರ ಉದ್ದೇಶ. ಈ ಕಾರಣದಿಂದಲೇ ಇವುಗಳನ್ನು 'ಹರಾಮ್' ಅರ್ಥಾತ್ ಪವಿತ್ರ ಮಾಸಗಳು ಎಂದು ಕರೆಯಲಾಗುತ್ತಿತ್ತು.

ನೀವೇ ವಿನಾಶಕ್ಕೊಳ ಪಡಿಸಿಕೊಳ್ಳಬೇಡಿರಿ. ಸೌಜನ್ಯ ನೀತಿಯನ್ನು ಸ್ವೀಕರಿಸಿಕೊಳ್ಳಿರಿ. ಏಕೆಂದರೆ, ಅಲ್ಲಾಹನು ಸಜ್ಜನರನ್ನು ಪ್ರೀತಿಸುತ್ತಾನೆ.

إِلَى التَّهْلُكَةِ ۛ وَأَحْسِنُوا ۛ إِنَّ اللَّهَ يُحِبُّ الْمُحْسِنِينَ ﴿١٩٥﴾

196. ಅಲ್ಲಾಹನ ಸಂತುಷ್ಟಿಗಾಗಿ 'ಹಜ್ಜ್' ಮತ್ತು 'ಉಮ್ರಾ'ಗಳ ಸಂಕಲ್ಪ ಮಾಡಿದಾಗ ಅದನ್ನು ಪೂರ್ತಿಗೊಳಿಸಿರಿ. ನೀವೆಲ್ಲಾದರೂ ಸುತ್ತುವರಿಯಲ್ಪಟ್ಟಾಗ ನಿಮಗೊದಗಿರುವ ಬಲಿಯನ್ನು ಅಲ್ಲಾಹನ ಸನ್ನಿಧಿಗೆ ಅರ್ಪಿಸಿರಿ[61] ಮತ್ತು ಬಲಿಯು ತನ್ನ ಸ್ಥಾನವನ್ನು ತಲುಪುವ ತನಕ ನಿಮ್ಮ ತಲೆ ಬೋಳಿಸಬೇಡಿರಿ. ಆದರೆ ರೋಗಿಯಾಗಿರುವ ಅಥವಾ ಶಿರೋಬಾಧೆಯ ಕಾರಣದಿಂದ ತಲೆ ಬೋಳಿಸಿಕೊಂಡಾತನು ಪ್ರಾಯಶ್ಚಿತ್ತ ರೂಪದಲ್ಲಿ ಉಪವಾಸಗಳ ನ್ನಾಚರಿಸಬೇಕು ಅಥವಾ ದಾನ ಕೊಡಬೇಕು ಅಥವಾ ಬಲಿ ಯರ್ಪಿಸಬೇಕು.[62] ಅನಂತರ ನಿಮಗೆ ನೆಮ್ಮದಿಯೊದಗಿದಾಗ,[63] (ಮತ್ತು ನೀವು ಹಜ್ಜ್‌ಗಿಂತ ಮುಂಚಿತವಾಗಿ ಮಕ್ಕಾ ತಲುಪಿದರೆ) 'ಹಜ್ಜ್'ನ ಕಾಲ ಬರುವ ತನಕ 'ಉಮ್ರಾ'ದಿಂದ ಫಲಪಡೆಯುವಾತನು ತನ್ನ ಶಕ್ತ್ಯಾನುಸಾರ ಬಲಿಯನ್ನರ್ಪಿಸಬೇಕು. ಬಲಿಯೊದಗದಿದ್ದರೆ, ಮೂರು ದಿನಗಳ ಉಪವಾಸವನ್ನು 'ಹಜ್ಜ್' ಕಾಲದಲ್ಲಿಯೂ ಏಳು ದಿನಗಳ ಉಪವಾಸವನ್ನು ಸ್ವಗೃಹಕ್ಕೆ ತಲುಪಿದ ಬಳಿಕವೂ, ಹೀಗೆ ಹತ್ತು ದಿನಗಳ ಉಪವಾಸವನ್ನು ಪೂರ್ತಿಯಾಗಿ ಆಚರಿಸಬೇಕು. ಈ ರಿಯಾಯಿತಿಯು ಮಸ್ಜಿದುಲ್ ಹರಾಮ್‌ನ ಸಮೀಪದ ನಿವಾಸಿಗಳಲ್ಲದವರಿಗಾಗಿದೆ. ಅಲ್ಲಾಹನ ಈ ಆಜ್ಞೆಗಳನ್ನು ಉಲ್ಲಂಘಿಸದಿರಿ. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನೆಂಬುದನ್ನು ನೀವು ಚೆನ್ನಾಗಿ ತಿಳಿದಿರಬೇಕು.

وَأَتِمُّوا الْحَجَّ وَالْعُمْرَةَ لِلَّهِ ۚ فَإِنْ أُحْصِرْتُمْ فَمَا اسْتَيْسَرَ مِنَ الْهَدْيِ ۖ وَلَا تَحْلِقُوا رُءُوسَكُمْ حَتَّىٰ يَبْلُغَ الْهَدْيُ مَحِلَّهُ ۚ فَمَنْ كَانَ مِنْكُمْ مَرِيضًا أَوْ بِهِ أَذًى مِنْ رَأْسِهِ فَفِدْيَةٌ مِنْ صِيَامٍ أَوْ صَدَقَةٍ أَوْ نُسُكٍ ۚ فَإِذَا أَمِنْتُمْ فَمَنْ تَمَتَّعَ بِالْعُمْرَةِ إِلَى الْحَجِّ فَمَا اسْتَيْسَرَ مِنَ الْهَدْيِ ۚ فَمَنْ لَمْ يَجِدْ فَصِيَامُ ثَلَاثَةِ أَيَّامٍ فِي الْحَجِّ وَسَبْعَةٍ إِذَا رَجَعْتُمْ ۗ تِلْكَ عَشَرَةٌ كَامِلَةٌ ۗ ذَٰلِكَ لِمَنْ لَمْ يَكُنْ أَهْلُهُ حَاضِرِي الْمَسْجِدِ الْحَرَامِ ۚ وَاتَّقُوا اللَّهَ وَاعْلَمُوا أَنَّ اللَّهَ شَدِيدُ الْعِقَابِ ﴿١٩٦﴾

197. 'ಹಜ್ಜ್'ನ ತಿಂಗಳುಗಳು ಎಲ್ಲರಿಗೂ ತಿಳಿದಿವೆ. ಈ ನಿಶ್ಚಿತ ತಿಂಗಳುಗಳಲ್ಲಿ ಹಜ್ಜ್‌ನ ಸಂಕಲ್ಪ ಮಾಡುವಾತನು ಹಜ್ಜ್ ಕಾಲಾವಧಿಯಲ್ಲಿ ಯಾವುದೇ ಕಾಮಾಪೇಕ್ಷೆಯ, ದುರಾಚಾರದ ಮತ್ತು ಕಲಹದ ಕಾರ್ಯಗಳು ತನ್ನಿಂದ ಸಂಭವಿಸದಂತೆ ಜಾಗರೂಕನಾಗಿರಬೇಕು. ನೀವು ಯಾವ ಸತ್ಕಾರ್ಯಗಳನ್ನು

الْحَجُّ أَشْهُرٌ مَعْلُومَاتٌ ۚ فَمَنْ فَرَضَ فِيهِنَّ الْحَجَّ فَلَا رَفَثَ وَلَا فُسُوقَ وَلَا جِدَالَ فِي الْحَجِّ ۗ وَمَا تَفْعَلُوا مِنْ خَيْرٍ يَعْلَمْهُ اللَّهُ ۗ وَتَزَوَّدُوا فَإِنَّ خَيْرَ الزَّادِ التَّقْوَىٰ

61. ಅರ್ಥಾತ್- ದಾರಿಯಲ್ಲಿ ಮುಂದುವರಿಯಲು ಅಸಾಧ್ಯವಾಗಿ ಅನಿವಾರ್ಯವಾಗಿ ನಿಂತು ಬಿಡಬೇಕಾಗಿ ಬಂದರೆ ಒಂಟೆ, ಗೋವು ಮತ್ತು ಕುರಿಗಳ ಪೈಕಿ ಲಭ್ಯವಿರುವ ಯಾವುದಾದರೂ ಪ್ರಾಣಿಯನ್ನು ಅಲ್ಲಾಹನಿಗಾಗಿ ಬಲಿಯರ್ಪಿಸಿರಿ.

62. ಇಂತಹ ಸಂದರ್ಭಗಳಲ್ಲಿ ಮೂರು ದಿನದ ಉಪವಾಸ ಆಚರಿಸುವ, ಆರು ಮಂದಿ ಬಡವರಿಗೆ ಉಣಬಡಿಸುವ ಅಥವಾ ಕನಿಷ್ಠ ಒಂದು ಆಡನ್ನು 'ದಿಬಃ' ಮಾಡುವ ಆದೇಶವನ್ನು ಪ್ರವಾದಿವರ್ಯರು(ಸ) ನೀಡಿದ್ದಾರೆಂದು ಪ್ರವಾದಿ ವಚನಗಳಿಂದ ತಿಳಿದು ಬರುತ್ತದೆ.

63. ಅಂದರೆ ನಿಮಗೆ ಅನಿವಾರ್ಯವಾಗಿ ದಾರಿಯಲ್ಲೇ ನಿಂತು ಬಿಡಬೇಕಾಗಿ ಬಂದ ಆ ಕಾರಣವು ನಿವಾರಣೆಯಾದಾಗ.

ಮಾಡಿದರೂ ಅದು ಅಲ್ಲಾಹನ ಅರಿವಿನಲ್ಲಿರುವುದು. ಹಜ್ಜ್ ಯಾತ್ರೆಗೆ ಹೋಗುವಾಗ ದಾರಿವೆಚ್ಚವನ್ನು ಕೊಂಡು ಹೋಗಿರಿ. ಅತ್ಯುತ್ತಮ ದಾರಿವೆಚ್ಚವು ಧರ್ಮನಿಷ್ಠೆ ಆಗಿರುತ್ತದೆ. ಆದುದರಿಂದ ಓ ಬುದ್ಧಿಜೀವಿಗಳೇ, ನನ್ನ ಆಜ್ಞೋಲ್ಲಂಘನೆಯಿಂದ ದೂರವಿರಿ.

وَاتَّقُونِ يَا أُولِي الْأَلْبَابِ ﴿١٩٧﴾

198. ನೀವು ಹಜ್ಜ್ ಯಾತ್ರೆಯ ಜೊತೆಯಲ್ಲೇ ನಿಮ್ಮ ಪ್ರಭುವಿನ ಅನುಗ್ರಹವನ್ನರಸುತ್ತ ಹೋಗುವುದರಲ್ಲೇನೂ ಅಡ್ಡಿಯಿಲ್ಲ.[64] ನೀವು 'ಅರಫಾ'ದಿಂದ ಹೊರಟು 'ಮಶ್‌ಅರುಲ್ ಹರಾಮ್' (ಮುಝ್ದಲಿಫಾ)ನ ಬಳಿ ತಂಗಿ, ಅಲ್ಲಾಹನನ್ನು ಸ್ಮರಿಸಿರಿ. ಆತನು ನಿಮಗೆ ಮಾರ್ಗದರ್ಶನ ಮಾಡಿದ ರೀತಿಯಲ್ಲೇ ಸ್ಮರಿಸಿರಿ. ಇದಕ್ಕೆ ಮುಂಚೆ ನೀವು ಪಥಭ್ರಷ್ಟರಾಗಿದ್ದಿರಿ.

لَيْسَ عَلَيْكُمْ جُنَاحٌ أَنْ تَبْتَغُوا فَضْلًا مِنْ رَبِّكُمْ ۚ فَإِذَا أَفَضْتُمْ مِنْ عَرَفَاتٍ فَاذْكُرُوا اللَّهَ عِنْدَ الْمَشْعَرِ الْحَرَامِ ۖ وَاذْكُرُوهُ كَمَا هَدَاكُمْ وَإِنْ كُنْتُمْ مِنْ قَبْلِهِ لَمِنَ الضَّالِّينَ ﴿١٩٨﴾

199. ಆ ಬಳಿಕ ಇತರರೆಲ್ಲರೂ ಮರಳುವಲ್ಲಿಂದಲೇ ನೀವೂ ಮರಳಿರಿ ಮತ್ತು ಅಲ್ಲಾಹನಿಂದ ಕ್ಷಮೆ ಯಾಚಿಸಿರಿ.[65] ನಿಶ್ಚಯವಾಗಿಯೂ ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

ثُمَّ أَفِيضُوا مِنْ حَيْثُ أَفَاضَ النَّاسُ وَاسْتَغْفِرُوا اللَّهَ ۚ إِنَّ اللَّهَ غَفُورٌ رَحِيمٌ ﴿١٩٩﴾

200. ಹೀಗೆ ನೀವು ಹಜ್ಜ್‌ನ ವಿಧಿ ವಿಧಾನಗಳನ್ನು ನಿರ್ವಹಿಸಿದ ಬಳಿಕ, ಹಿಂದೆ ನೀವು ಪೂರ್ವಿಕರನ್ನು ಸ್ಮರಿಸುತ್ತಿದ್ದಂತೆಯೇ ಅಲ್ಲಾಹನನ್ನು ಸ್ಮರಿಸಿರಿ; ಮಾತ್ರವಲ್ಲ ಅದಕ್ಕಿಂತಲೂ ಅಧಿಕವಾಗಿ ಸ್ಮರಿಸಿರಿ. (ಆದರೆ, ಅಲ್ಲಾಹನನ್ನು ಸ್ಮರಿಸುವವರಲ್ಲೂ ತುಂಬಾ ತಾರತಮ್ಯವಿದೆ.) ಅವರಲ್ಲಿ ಕೆಲವರು, "ಓ ನಮ್ಮ ಪ್ರಭೂ, ನಮಗೆ ಇಹಲೋಕದಲ್ಲೇ ಎಲ್ಲವನ್ನೂ ಕೊಟ್ಟುಬಿಡು" ಎನ್ನುವವರಿದ್ದಾರೆ. ಇಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ.

فَإِذَا قَضَيْتُمْ مَنَاسِكَكُمْ فَاذْكُرُوا اللَّهَ كَذِكْرِكُمْ آبَاءَكُمْ أَوْ أَشَدَّ ذِكْرًا ۗ فَمِنَ النَّاسِ مَنْ يَقُولُ رَبَّنَا آتِنَا فِي الدُّنْيَا وَمَا لَهُ فِي الْآخِرَةِ مِنْ خَلَاقٍ ﴿٢٠٠﴾

201. ಇನ್ನು ಕೆಲವರು, "ಓ ನಮ್ಮ ಪ್ರಭೂ, ನಮಗೆ ಇಹಲೋಕದಲ್ಲಿಯೂ ಒಳಿತನ್ನು ದಯಪಾಲಿಸು ಪರಲೋಕದಲ್ಲಿಯೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ಅಗ್ನಿಯಾತನೆಯಿಂದ ರಕ್ಷಿಸು" ಎನ್ನುವವರೂ ಇದ್ದಾರೆ.

وَمِنْهُمْ مَنْ يَقُولُ رَبَّنَا آتِنَا فِي الدُّنْيَا حَسَنَةً وَفِي الْآخِرَةِ حَسَنَةً وَقِنَا عَذَابَ النَّارِ ﴿٢٠١﴾

64. ಅಲ್ಲಾಹನ ಅನುಗ್ರಹವನ್ನು ಹುಡುಕುವುದೆಂದರೆ ಹಜ್ಜ್‌ನ ಅವಧಿಯಲ್ಲಿ ಉಪಜೀವನಕ್ಕಾಗಿ ಯಾವುದೇ ಕೆಲಸವನ್ನು ಮಾಡುವುದಾಗಿದೆ.

65. ಹಝ್ರತ್ ಇಬ್‌ರಾಹೀಮ್ ಮತ್ತು ಇಸ್ಮಾಈಲ್(ಅ) ಅವರ ಕಾಲದಿಂದಲೂ ಪ್ರಚಲಿತವಿದ್ದ ಹಜ್ಜ್‌ನ ವಿಧಾನವೇನೆಂದರೆ ದುಲ್‌ಹಜ್ಜ್ ತಿಂಗಳ 9ನೇ ತಾರೀಕಿನಂದು ಮಿನಾದಿಂದ ಅರಫಾತ್‌ಗೆ ಹೋಗಿ ರಾತ್ರಿ ಅಲ್ಲಿಂದ ಮರಳಿ 'ಮುಝ್ದಲಿಫಾ'ದಲ್ಲಿ ತಂಗುತ್ತಿದ್ದರು. ಅನಂತರ ಕ್ರಮೇಣ ಕುರೈಶರ ಬ್ರಾಹ್ಮಣ್ಯ ಸ್ಥಾಪಿತವಾದಾಗ ಅವರು "ನಾವಾದರೋ ಹರಮ್‌ನ ನಿವಾಸಿಗಳು, ಸಾಮಾನ್ಯ ಅರಬರಂತೆ ಅರಫಾದ ತನಕ ಹೋಗುವುದು ನಮ್ಮ ಘನತೆಗೆ ತಕ್ಕುದಲ್ಲ" ಎನ್ನತೊಡಗಿದರು. ಆದ್ದರಿಂದ ಅವರು ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲಿಕ್ಕಾಗಿ ಮುಝ್ದಲಿಫಾದ ತನಕ ಹೋಗಿ ಅಲ್ಲಿಂದ ಮರಳುತ್ತಿದ್ದರು. ಉಳಿದವರನ್ನು ಅರಫಾದ ತನಕ ಹೋಗಲು ಬಿಡುತ್ತಿದ್ದರು. ಈ ದುರಹಂಕಾರ ಮತ್ತು ದುರಭಿಮಾನದ ಮೂರ್ತಿಯನ್ನೇ ಈ ಸೂಕ್ತದ ಮೂಲಕ ನುಚ್ಚುನೂರುಗೊಳಿಸಲಾಗಿದೆ.

202. ಇಂತಹವರು ತಮ್ಮ ದುಡಿಮೆಗನುಸಾರವಾಗಿ (ಇಕ್ಕಡೆಗಳಲ್ಲೂ) ಪಾಲು ಪಡೆಯುವರು. ಅಲ್ಲಾಹನು ಲೆಕ್ಕ ತೀರಿಸುವುದರಲ್ಲಿ ಅತಿ ಶೀಘ್ರನಾಗಿರುತ್ತಾನೆ.

أُولَٰٓئِكَ لَهُمْ نَصِيبٌ مِّمَّا كَسَبُوا۟ ۚ وَٱللَّهُ سَرِيعُ ٱلْحِسَابِ ﴿٢٠٢﴾

203. ನೀವು ಅಲ್ಲಾಹನ ಧ್ಯಾನದಲ್ಲಿ ಕಳೆಯಬೇಕಾಗಿರುವ ಎಣಿಕೆಯ ಕೆಲವು ದಿನಗಳಿವು. ಯಾವನಾದರೂ ಲಗುಬಗೆಯಿಂದ ಎರಡೇ ದಿನಗಳಲ್ಲಿ ಮರಳಿದರೂ ಏನೂ ದೋಷವಿಲ್ಲ. ಇನ್ನಾವನಾದರೂ ಸ್ವಲ್ಪ ಹೆಚ್ಚು ಕಾಲ ನಿಂತು ಮರಳಿದರೂ ಏನೂ ದೋಷವಿಲ್ಲ.[66] ಇದು, ಈ ದಿನಗಳನ್ನು ಧರ್ಮನಿಷ್ಠೆಯಲ್ಲಿ ಕಳೆದಿದ್ದರೆ ಮಾತ್ರ. ಅಲ್ಲಾಹನ ಅವಿಧೇಯತೆಯಿಂದ ದೂರವಿರಿ. ಒಂದು ದಿನ ಅವನ ಸನ್ನಿಧಿಯಲ್ಲಿ ನಿಮಗೆ ಹಾಜರಾಗಲಿದೆಯೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.

وَٱذْكُرُوا۟ ٱللَّهَ فِىٓ أَيَّامٍ مَّعْدُودَٰتٍ ۚ فَمَن تَعَجَّلَ فِى يَوْمَيْنِ فَلَآ إِثْمَ عَلَيْهِ وَمَن تَأَخَّرَ فَلَآ إِثْمَ عَلَيْهِ ۚ لِمَنِ ٱتَّقَىٰ ۗ وَٱتَّقُوا۟ ٱللَّهَ وَٱعْلَمُوٓا۟ أَنَّكُمْ إِلَيْهِ تُحْشَرُونَ ﴿٢٠٣﴾

204. ಜನರ ಪೈಕಿ ಯಾವನಾದರೊಬ್ಬನ ಮಾತುಗಳು ಐಹಿಕ ಜೀವನದಲ್ಲಿ ನಿಮಗೆ ಅತ್ಯಂತ ಹಿತವಾಗಿ ತೋರುತ್ತವೆ. ಅವನು ತನ್ನ ನಿಷ್ಕಾಪಟ್ಯದ ಬಗ್ಗೆ ಪದೇ ಪದೇ ಅಲ್ಲಾಹನನ್ನು ಸಾಕ್ಷ್ಯ ವಿರಿಸುತ್ತಾನೆ. ಆದರೆ ವಾಸ್ತವದಲ್ಲಿ ಅವನು ಸತ್ಯದ ಅತ್ಯಂತ ಕೆಟ್ಟ ಶತ್ರುವಾಗಿರುತ್ತಾನೆ.

وَمِنَ ٱلنَّاسِ مَن يُعْجِبُكَ قَوْلُهُۥ فِى ٱلْحَيَوٰةِ ٱلدُّنْيَا وَيُشْهِدُ ٱللَّهَ عَلَىٰ مَا فِى قَلْبِهِۦ وَهُوَ أَلَدُّ ٱلْخِصَامِ ﴿٢٠٤﴾

205. ಅಂತಹವನಿಗೆ ಅಧಿಕಾರ ಪ್ರಾಪ್ತವಾದಾಗ[67] ಭೂಮಿಯ ಮೇಲೆ ಅವನ ಚಟುವಟಿಕೆಗಳೆಲ್ಲ ಕ್ಷೋಭೆಯನ್ನುಂಟು ಮಾಡಲಿಕ್ಕೂ ಹೊಲ-ಬೆಳೆಗಳನ್ನು ಹಾಳುಮಾಡಲಿಕ್ಕೂ ಮಾನವ ವಂಶವನ್ನು ನಾಶಮಾಡಲಿಕ್ಕೂ ಆಗಿರುತ್ತವೆ. ವಾಸ್ತವದಲ್ಲಿ (ಅವನು ಸಾಕ್ಷ್ಯ ವಿರಿಸುತ್ತಿರುವ) ಅಲ್ಲಾಹನು ಕ್ಷೋಭೆಯನ್ನು ಎಷ್ಟು ಮಾತ್ರಕ್ಕೂ ಮೆಚ್ಚುವುದಿಲ್ಲ.

وَإِذَا تَوَلَّىٰ سَعَىٰ فِى ٱلْأَرْضِ لِيُفْسِدَ فِيهَا وَيُهْلِكَ ٱلْحَرْثَ وَٱلنَّسْلَ ۗ وَٱللَّهُ لَا يُحِبُّ ٱلْفَسَادَ ﴿٢٠٥﴾

206. 'ಅಲ್ಲಾಹನ ಭಯವಿರಿಸಿಕೋ' ಎಂದು ಅವನೊಡನೆ ಹೇಳಲಾದಾಗ, ಅವನ ದುರಭಿಮಾನವು ಅವನನ್ನು ಪಾಪಕಾರ್ಯದಲ್ಲಿ ದೃಢಗೊಳಿಸುತ್ತದೆ. ಅಂತಹವನಿಗೆ ನರಕವೇ ಸಾಕು ಮತ್ತು ಅದು ಅತ್ಯಂತ ಕೆಟ್ಟ ತಾಣ.

وَإِذَا قِيلَ لَهُ ٱتَّقِ ٱللَّهَ أَخَذَتْهُ ٱلْعِزَّةُ بِٱلْإِثْمِ ۚ فَحَسْبُهُۥ جَهَنَّمُ ۚ وَلَبِئْسَ ٱلْمِهَادُ ﴿٢٠٦﴾

66. ಅರ್ಥಾತ್- 'ಅಯ್ಯಾಮುತ್ತಶ್‌ರೀಕ್' (ದುಲ್‌ಹಜ್ಜ್ ತಿಂಗಳ 9ರಿಂದ 13) ಅವಧಿಯಲ್ಲಿ ಮಿನಾದಿಂದ ಮಕ್ಕಾಕ್ಕೆ ದುಲ್‌ಹಜ್ಜ್ ಹನ್ನೆರಡರಂದು ಮರಳಿದರೂ ಸರಿಯೆ, ಹದಿಮೂರರಂದು ಮರಳಿದರೂ ಸರಿಯೆ.

67. ಇದರ ಇನ್ನೊಂದು ಅನುವಾದ 'ಅವನು ಮರಳಿದಾಗ' ಎಂದೂ ಆಗಬಹುದು. ಅರ್ಥಾತ್- ಹೀಗೆಲ್ಲಾ ಹೇಳಿದ ಬಳಿಕ ಅವನು ಮರಳಿದಾಗ ಅವನು ಮಾಡುವುದು ಈ ರೀತಿ ಎಂದು ಹೇಳಲಾಗಿದೆ.

207. ಇನ್ನೊಂದೆಡೆ ಅಲ್ಲಾಹನ ಸಂಪ್ರೀತಿಯ ಆಕಾಂಕ್ಷೆಯಲ್ಲಿ ತನ್ನ ದೇಹವನ್ನು ಸವೆಸುವವನೂ ಇದ್ದಾನೆ. ಅಂತಹ ದಾಸನ ಮೇಲೆ ಅಲ್ಲಾಹನು ಅತ್ಯಂತ ಕೃಪಾಳುವಾಗಿರುತ್ತಾನೆ.

وَمِنَ النَّاسِ مَنْ يَّشْرِيْ نَفْسَهُ ابْتِغَآءَ مَرْضَاتِ اللّٰهِ ؕ وَاللّٰهُ رَءُوْفٌۢ بِالْعِبَادِ ﴿۲۰۷﴾

208. ಓ ಸತ್ಯವಿಶ್ವಾಸಿಗಳೇ, ನೀವು ಸರ್ವಸಂಪೂರ್ಣವಾಗಿ ಇಸ್ಲಾಮಿನೊಳಗೆ ಸೇರಿಕೊಳ್ಳಿರಿ[68] ಮತ್ತು ಶೈತಾನನನ್ನು ಅನುಸರಿಸಬೇಡಿರಿ. ನಿಶ್ಚಯವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರುವಾಗಿದ್ದಾನೆ.

يٰٓاَيُّهَا الَّذِيْنَ اٰمَنُوا ادْخُلُوْا فِى السِّلْمِ كَآفَّةً ۖ وَّلَا تَتَّبِعُوْا خُطُوٰتِ الشَّيْطٰنِ ؕ اِنَّهٗ لَـكُمْ عَدُوٌّ مُّبِيْنٌ ﴿۲۰۸﴾

209. ನೀವು ನಿಮ್ಮ ಬಳಿಗೆ ಬಂದಿರುವ ಸುವ್ಯಕ್ತ ಬೋಧನೆಗಳನ್ನು ಹೊಂದಿಯೂ ತಪ್ಪಿ ನಡೆದರೆ, ಅಲ್ಲಾಹನು ಮಹಾ ಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.

فَاِنْ زَلَلْتُمْ مِّنْۢ بَعْدِ مَا جَآءَتْكُمُ الْبَيِّنٰتُ فَاعْلَمُوْٓا اَنَّ اللّٰهَ عَزِيْزٌ حَكِيْمٌ ﴿۲۰۹﴾

210. (ಇಷ್ಟೆಲ್ಲಾ ಉಪದೇಶ ಹಾಗೂ ಬೋಧನೆಗಳ ಬಳಿಕವೂ ಜನರು ನೆಟ್ಟಗಾಗದಿದ್ದಲ್ಲಿ) ಅವರೇನು, ಮೋಡಗಳ ಛತ್ರಗಳಲ್ಲಿ ದೇವಚರರ ಸಮೂಹದೊಂದಿಗೆ ಅಲ್ಲಾಹನು ಸ್ವತಃ ಬಂದೆರಗಿ ಅಂತಿಮ ತೀರ್ಮಾನವನ್ನೇ ಮಾಡಿಬಿಡಬೇಕೆಂದು ನಿರೀಕ್ಷಿಸುತ್ತಿರುವರೇ? ಕೊನೆಗಂತು ಎಲ್ಲಾ ಪ್ರಕರಣಗಳೂ ಅಲ್ಲಾಹನ ಸನ್ನಿಧಿಯಲ್ಲೇ ಸಮರ್ಪಿತವಾಗಲಿಕ್ಕಿವೆ.

هَلْ يَنْظُرُوْنَ اِلَّآ اَنْ يَّاْتِيَهُمُ اللّٰهُ فِىْ ظُلَلٍ مِّنَ الْغَمَامِ وَالْمَلٰٓـئِكَةُ وَقُضِىَ الْاَمْرُ ؕ وَاِلَى اللّٰهِ تُرْجَعُ الْاُمُوْرُ ﴿۲۱۰﴾

211. ಬನೀಇಸ್ರಾಈಲರೊಡನೆ, ನಾವು ಅವರಿಗೆ ಯಾವ ಯಾವ ತರದ ಸುವ್ಯಕ್ತ ದೃಷ್ಟಾಂತಗಳನ್ನು ತೋರಿಸಿದ್ದೆವು ಮತ್ತು ಅಲ್ಲಾಹನ ಅನುಗ್ರಹ ಹೊಂದಿದ ಬಳಿಕ ಅದನ್ನು ದುರ್ದೆಸೆಗೆ ಬದಲಿಸುವ ಜನಾಂಗಕ್ಕೆ ಅಲ್ಲಾಹನು ಎಂತಹ ಕಠಿಣ ಶಿಕ್ಷೆ ಕೊಡುತ್ತಾನೆಂದು ಕೇಳಿರಿ.

سَلْ بَنِىْٓ اِسْرَآءِيْلَ كَمْ اٰتَيْنٰهُمْ مِّنْ اٰيَةٍۢ بَيِّنَةٍ ؕ وَمَنْ يُّبَدِّلْ نِعْمَةَ اللّٰهِ مِنْۢ بَعْدِ مَا جَآءَتْهُ فَاِنَّ اللّٰهَ شَدِيْدُ الْعِقَابِ ﴿۲۱۱﴾

212. ಸತ್ಯನಿಷೇಧ ಮಾರ್ಗವನ್ನು ಸ್ವೀಕರಿಸಿಕೊಂಡವರಿಗೆ ಭೂಲೋಕ ಜೀವನವು ಅತ್ಯಂತ ಮನಮೋಹಕವಾಗಿ ಮಾಡಲ್ಪಟ್ಟಿದೆ. ಇಂತಹವರು ಸತ್ಯವಿಶ್ವಾಸ ಮಾರ್ಗ ಸ್ವೀಕರಿಸಿದವರನ್ನು ಅಪಹಾಸ್ಯ ಮಾಡುತ್ತಾರೆ. ಆದರೆ, ಪುನರುತ್ಥಾನ ದಿನದಂದು ಅವರ ಎದುರಾಗಿ

زُيِّنَ لِلَّذِيْنَ كَفَرُوا الْحَيٰوةُ الدُّنْيَا وَيَسْخَرُوْنَ مِنَ الَّذِيْنَ اٰمَنُوْا ۘ وَالَّذِيْنَ اتَّقَوْا فَوْقَهُمْ يَوْمَ الْقِيٰمَةِ ؕ وَاللّٰهُ يَرْزُقُ

68. ಅರ್ಥಾತ್- ಯಾವುದೇ ಅಪವಾದಗಳಿರದಂತೆ ನಿಮ್ಮ ಜೀವನವನ್ನು ಸಂಪೂರ್ಣವಾಗಿ ಇಸ್ಲಾಮಿಗೆ ಬದ್ಧಗೊಳಿಸಿರಿ. ಜೀವನವನ್ನು ಅನೇಕ ರಂಗಗಳಲ್ಲಿ ವಿಂಗಡಿಸಿ, ಕೆಲವದರಲ್ಲಿ ಇಸ್ಲಾಮಿನ ಪಾಲನೆ ಮಾಡಿ ಉಳಿದವುಗಳಲ್ಲಿ ಅದರಿಂದ ಹೊರಗುಳಿಯುವಂತಾಗಬಾರದು.

مَنْ يَّشَآءُ بِغَيْرِ حِسَابٍ ﴿٢١٢﴾

ಧರ್ಮನಿಷ್ಠರೇ ಅತ್ಯುನ್ನತ ಪದವಿಯಲ್ಲಿರುವರು. ಭೂಲೋಕದ ಜೀವನಾಧಾರವನ್ನಂತು ತಾನಿಚ್ಛಿಸಿದವರಿಗೆ ಅಮಿತವಾಗಿ ನೀಡಲು ಅಲ್ಲಾಹನು ಅಧಿಕಾರವುಳ್ಳವನಾಗಿರುತ್ತಾನೆ.

كَانَ النَّاسُ اُمَّةً وَّاحِدَةً فَبَعَثَ اللّٰهُ النَّبِيّٖنَ مُبَشِّرِيْنَ وَمُنْذِرِيْنَ وَاَنْزَلَ مَعَهُمُ الْكِتٰبَ بِالْحَقِّ لِيَحْكُمَ بَيْنَ النَّاسِ فِيْمَا اخْتَلَفُوْا فِيْهِ وَمَا اخْتَلَفَ فِيْهِ اِلَّا الَّذِيْنَ اُوْتُوْهُ مِنْ بَعْدِ مَا جَآءَتْهُمُ الْبَيِّنٰتُ بَغْيًا بَيْنَهُمْ فَهَدَى اللّٰهُ الَّذِيْنَ اٰمَنُوْا لِمَا اخْتَلَفُوْا فِيْهِ مِنَ الْحَقِّ بِاِذْنِهٖ وَاللّٰهُ يَهْدِيْ مَنْ يَّشَآءُ اِلٰى صِرَاطٍ مُّسْتَقِيْمٍ ﴿٢١٣﴾

213. ಆರಂಭದಲ್ಲಿ ಜನರೆಲ್ಲರೂ ಒಂದೇ ಸಂಪ್ರದಾಯದವರಾಗಿದ್ದರು. (ಈ ಸ್ಥಿತಿ ಬಹುಕಾಲ ಉಳಿಯಲಿಲ್ಲ. ಅವರೊಳಗೆ ಭಿನ್ನಾಭಿಪ್ರಾಯಗಳುಂಟಾದುವು) ಆಗ ಅಲ್ಲಾಹನು ಸತ್ಯಮಾರ್ಗದ ಬಗ್ಗೆ ಸುವಾರ್ತೆ ನೀಡುವವರೂ ಮಿಥ್ಯಮಾರ್ಗದ ಬಗ್ಗೆ ಎಚ್ಚರಿಕೆ ಕೊಡುವವರೂ ಆದ ಪ್ರವಾದಿಗಳನ್ನು ರವಾನಿಸಿದನು ಮತ್ತು ಅವರೊಂದಿಗೆ, ಸತ್ಯದ ವಿಷಯದಲ್ಲಿ ಜನರಲ್ಲುಂಟಾಗಿದ್ದ ಭಿನ್ನಾಭಿಪ್ರಾಯಗಳ ಬಗ್ಗೆ ತೀರ್ಪು ನೀಡಲಿಕ್ಕಾಗಿ ಪರಮಸತ್ಯ ಗ್ರಂಥವನ್ನು ಇಳಿಸಿದನು. (ಪ್ರಾರಂಭದಲ್ಲಿ ಜನರಿಗೆ ಸತ್ಯವನ್ನು ತೋರಿಸಿಕೊಡದಿದ್ದುದರಿಂದೇನೂ ಅವರಲ್ಲಿ ಈ ತರದ ಭಿನ್ನಾಭಿಪ್ರಾಯಗಳು ತಲೆದೋರಿದುದಲ್ಲ. ನಿಜವಾಗಿ) ಸತ್ಯದ ಶಿಕ್ಷಣ ಕೊಡಲ್ಪಟ್ಟವರೇ ಈ ಅಭಿಪ್ರಾಯ ಭೇದಗಳನ್ನುಂಟು ಮಾಡಿದರು. ಅವರು ಕೇವಲ ಪರಸ್ಪರ ಅತಿರೇಕ ನಡೆಸಲು ಇಷ್ಟಪಡುತ್ತಿದ್ದುದರಿಂದಲೇ ಸುವ್ಯಕ್ತ ದೃಷ್ಟಾಂತಗಳನ್ನು ಪಡೆದ ಬಳಿಕ ಸತ್ಯವನ್ನು ತ್ಯಜಿಸಿ ವಿವಿಧ ಹಾದಿಗಳನ್ನು ಸೃಷ್ಟಿಸಿಕೊಂಡರು. ಜನರು ಭಿನ್ನಾಭಿಪ್ರಾಯ ತಾಳಿದ್ದ ಆ ಸತ್ಯಮಾರ್ಗವನ್ನು ಅಲ್ಲಾಹನು ತನ್ನ ಅನುಮತಿಯಿಂದ, ಪ್ರವಾದಿಗಳ ಮೇಲೆ ವಿಶ್ವಾಸವಿಟ್ಟವರಿಗೆ ತೋರಿಸಿಕೊಟ್ಟನು. ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ.

اَمْ حَسِبْتُمْ اَنْ تَدْخُلُوا الْجَنَّةَ وَلَمَّا يَاْتِكُمْ مَّثَلُ الَّذِيْنَ خَلَوْا مِنْ قَبْلِكُمْ مَسَّتْهُمُ الْبَاْسَآءُ وَالضَّرَّآءُ وَزُلْزِلُوْا حَتّٰى يَقُوْلَ الرَّسُوْلُ وَالَّذِيْنَ اٰمَنُوْا مَعَهٗ مَتٰى نَصْرُ اللّٰهِ اَلَآ اِنَّ نَصْرَ اللّٰهِ قَرِيْبٌ ﴿٢١٤﴾

214. ನಿಮಗಿಂತ ಹಿಂದೆ ವಿಶ್ವಾಸವಿಟ್ಟಿದ್ದವರ ಮೇಲೆ ಸಂಭವಿಸಿದ್ದ ಘಟನೆಗಳೆಲ್ಲ ನಿಮ್ಮ ಮೇಲೆ ಇನ್ನೂ ಸಂಭವಿಸಿಲ್ಲದಿದ್ದರೂ ನಿಮಗೆ ನಿರಾಯಾಸವಾಗಿ ಸ್ವರ್ಗ ಪ್ರವೇಶ ಒದಗುವುದೆಂದು ನೀವು ಎಣಿಸಿದ್ದೀರಾ?[69] ಆಗಿನ ಸಂದೇಶವಾಹಕರೂ ಅವರ ಜೊತೆಯ ಸತ್ಯವಿಶ್ವಾಸಿಗಳೂ, "ಅಲ್ಲಾಹನ ಸಹಾಯ ಎಂದು ಬಂದೀತು?" ಎಂದು ಕಿರುಚಿ ಬಿಡುವಷ್ಟು ಕಷ್ಟಗಳೂ ವಿಪತ್ತುಗಳೂ ಅವರ ಮೇಲೆ ಎರಗಿದುವು ಮತ್ತು ಅವರನ್ನು ನಡುಗಿಸಿ

69. ಅರ್ಥಾತ್- ಭೂಮುಖಕ್ಕೆ ಪ್ರವಾದಿಗಳು ಬಂದಾಗಲೆಲ್ಲಾ ಅವರಿಗೂ ಅವರ ಅನುಯಾಯಿಗಳಿಗೂ ದೇವಧಿಕ್ಕಾರಿಗಳಿಂದ ಅತ್ಯಂತ ಕಠಿಣ ಪ್ರತಿರೋಧ ಎದುರಾಯಿತು. ಅವರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಮಿಥ್ಯದ ಬದಲಿಗೆ ಸತ್ಯಧರ್ಮದ ಸಂಸ್ಥಾಪನೆಗೆ ಪ್ರಯತ್ನಿಸಿದರು. ಆಗಷ್ಟೇ ಅವರು ಸ್ವರ್ಗಕ್ಕೆ ಅರ್ಹರಾದರು. ಅಲ್ಲಾಹನಿಗಾಗಿ ಮತ್ತು ಅವನ ಧರ್ಮಕ್ಕಾಗಿ ಯಾವ ಯಾತನೆಯನ್ನೂ ಸಹಿಸದೆ ಸ್ವರ್ಗ ಅಷ್ಟು ಅಗ್ಗದಿಂದೇನೂ ಪ್ರಾಪ್ತವಾಗುವುದಿಲ್ಲ.

ಬಿಡಲಾಯಿತು. "ಇದೋ, ಅಲ್ಲಾಹನ ಸಹಾಯ ಸಮೀಪವಿದೆ" (ಎಂದು ಆಗ ಅವರನ್ನು ಸಂತೈಸಲಾಯಿತು.)

215. ನಾವೇನನ್ನು ಖರ್ಚು ಮಾಡಬೇಕೆಂದು ಜನರು ಕೇಳುತ್ತಾರೆ. ನೀವು ಏನು ಖರ್ಚು ಮಾಡುತ್ತೀರೋ ಅದನ್ನು ನಿಮ್ಮ ಮಾತಾಪಿತರ, ಸಂಬಂಧಿಕರ, ಅನಾಥರ, ಬಡವರ ಮತ್ತು ಪ್ರಯಾಣಿಕರ ಮೇಲೆ ಖರ್ಚು ಮಾಡಿರೆಂದೂ ನೀವು ಮಾಡುವ ಎಲ್ಲ ಒಳಿತುಗಳನ್ನು ಅಲ್ಲಾಹನು ಚೆನ್ನಾಗಿ ಅರಿಯುವವನಾಗಿರುತ್ತಾನೆಂದೂ ಉತ್ತರ ಹೇಳಿರಿ.

يَسْـَٔلُوْنَكَ مَاذَا يُنْفِقُوْنَ ۗ قُلْ مَآ اَنْفَقْتُمْ مِّنْ خَيْرٍ فَلِلْوَالِدَيْنِ وَالْاَقْرَبِيْنَ وَالْيَتٰمٰى وَالْمَسٰكِيْنِ وَابْنِ السَّبِيْلِ ۗ وَمَا تَفْعَلُوْا مِنْ خَيْرٍ فَاِنَّ اللّٰهَ بِهٖ عَلِيْمٌ ﴿٢١٥﴾

216. ನಿಮಗೆ ಯುದ್ಧವನ್ನು ಶಾಸನಗೊಳಿಸಲಾಗಿದೆ. ಅದು ನಿಮಗೆ ಅಪ್ರಿಯವಾಗಿದೆ- ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಆ ವಸ್ತುವೇ ನಿಮಗೆ ಗುಣಕರವಾಗಿರಲೂ ಸಾಧ್ಯವಿದೆ ಮತ್ತು ಒಂದು ವಸ್ತುವು ನಿಮಗೆ ಪ್ರಿಯವಾಗಿದ್ದರೂ ಆ ವಸ್ತುವೇ ನಿಮಗೆ ಹಾನಿಕರವಾಗಿರಲೂ ಸಾಧ್ಯವಿದೆ. ಅಲ್ಲಾಹನು ಬಲ್ಲವನಾಗಿದ್ದಾನೆ, ನೀವು ಬಲ್ಲವರಲ್ಲ.

كُتِبَ عَلَيْكُمُ الْقِتَالُ وَهُوَ كُرْهٌ لَّكُمْ ۚ وَعَسٰٓى اَنْ تَكْرَهُوْا شَيْـًٔا وَّهُوَ خَيْرٌ لَّكُمْ ۚ وَعَسٰٓى اَنْ تُحِبُّوْا شَيْـًٔا وَّهُوَ شَرٌّ لَّكُمْ ۗ وَاللّٰهُ يَعْلَمُ وَاَنْتُمْ لَا تَعْلَمُوْنَ ﴿٢١٦﴾

217. ಮಾನ್ಯ ಮಾಸದಲ್ಲಿ ಕಾದಾಡುವ ಬಗ್ಗೆ ಜನರು ನಿಮ್ಮೊಡನೆ ಕೇಳುತ್ತಾರೆ. ಹೇಳಿರಿ: ಅದರಲ್ಲಿ ಕಾದಾಡುವುದು ಮಹಾಪರಾಧವೇ ಸರಿ. ಆದರೆ ಜನರನ್ನು ದೇವಮಾರ್ಗದಿಂದ ತಡೆಯುವುದೂ ಅಲ್ಲಾಹನನ್ನು ನಿಷೇಧಿಸುವುದೂ ದೇವಾರಾಧಕರ ಪಾಲಿಗೆ 'ಮಸ್ಜಿದುಲ್ ಹರಾಮ್'ನ ದಾರಿಯನ್ನು ಮುಚ್ಚುವುದೂ ಹರಮ್(ಕಲಬಾದ ಪರಿಸರ)ನೊಳಗಿರುವವರನ್ನು ಅಲ್ಲಿಂದ ಹೊರಕ್ಕೆ ಅಟ್ಟುವುದೂ ಅಲ್ಲಾಹನ ದೃಷ್ಟಿಯಲ್ಲಿ ಅದಕ್ಕಿಂತಲೂ ಮಹತ್ತರ ಅಪರಾಧವಾಗಿರುತ್ತದೆ ಮತ್ತು ಕ್ಷೋಭೆ ರಕ್ತ ಪಾತಕ್ಕಿಂತಲೂ ಮಹತ್ತರ ಅಪರಾಧವಾಗಿರುತ್ತದೆ.[70] ಅವರಂತು ನಿಮ್ಮೊಂದಿಗೆ ಕಾದಾಡುತ್ತಲೇ ಇರುವರು. ಅವರಿಂದ ಸಾಧ್ಯವೆನಿಸಿದರೆ ನಿಮ್ಮನ್ನು ನಿಮ್ಮ ಧರ್ಮದಿಂದ ಮರಳಿಸಿ ಕೊಂಡೊಯ್ಯುವರು. (ಇದನ್ನು ಚೆನ್ನಾಗಿ ಅರಿತಿರಬೇಕು) ನಿಮ್ಮಲ್ಲಿ

يَسْـَٔلُوْنَكَ عَنِ الشَّهْرِ الْحَرَامِ قِتَالٍ فِيْهِ ۗ قُلْ قِتَالٌ فِيْهِ كَبِيْرٌ ۗ وَصَدٌّ عَنْ سَبِيْلِ اللّٰهِ وَكُفْرٌۢ بِهٖ وَالْمَسْجِدِ الْحَرَامِ وَاِخْرَاجُ اَهْلِهٖ مِنْهُ اَكْبَرُ عِنْدَ اللّٰهِ ۚ وَالْفِتْنَةُ اَكْبَرُ مِنَ الْقَتْلِ ۗ وَلَا يَزَالُوْنَ يُقَاتِلُوْنَكُمْ حَتّٰى يَرُدُّوْكُمْ عَنْ دِيْنِكُمْ اِنِ اسْتَطَاعُوْا ۗ وَمَنْ يَّرْتَدِدْ مِنْكُمْ عَنْ دِيْنِهٖ فَيَمُتْ وَهُوَ كَافِرٌ فَاُولٰٓئِكَ حَبِطَتْ اَعْمَالُهُمْ فِى الدُّنْيَا وَالْاٰخِرَةِ ۚ وَاُولٰٓئِكَ اَصْحٰبُ النَّارِ

70. ಈ ವಿಷಯವನ್ನು ಒಂದು ಘಟನೆಯ ಹಿನ್ನೆಲೆಯಲ್ಲಿ ಪ್ರಸ್ತಾಪಿಸಲಾಗಿದೆ. ಹಿ. ಶ. 2ರ ರಜಬ್ ತಿಂಗಳಲ್ಲಿ ಪ್ರವಾದಿವರ್ಯರು(ಸ) ಎಂಟು ಜನರನ್ನೊಳಗೊಂಡ ತಂಡವನ್ನು ನಖ್ಲಃ (ಮಕ್ಕಾ ಮತ್ತು ತಾಯಿಫ್‌ನ ನಡುವಿನ ಒಂದು ಸ್ಥಳ) ಎಂಬಲ್ಲಿಗೆ ಕಳುಹಿಸಿ, ಕುರೈಶರ ಚಲನವಲನ ಮತ್ತು ಅವರ ಮುಂದಿನ ಯೋಜನೆಗಳ ಕುರಿತು ಮಾಹಿತಿ ಸಂಗ್ರಹಿಸುವಂತೆ ಆದೇಶಿಸಿದರು. ಆದರೆ ಅವರು ಯುದ್ಧದ ಅನುಮತಿ ಕೊಟ್ಟಿರಲಿಲ್ಲ. ಅವರಿಗೆ ದಾರಿಯಲ್ಲಿ ಒಂದು ಚಿಕ್ಕ ವ್ಯಾಪಾರಿ ತಂಡ ಎದುರಾದಾಗ ಅವರು ಅದರ ಮೇಲೆ ಮುಗಿಬಿದ್ದು, ಒಬ್ಬ ವ್ಯಕ್ತಿಯನ್ನು ಕೊಲೆಗೈದು ಉಳಿದವರನ್ನು ಸಂಪತ್ತಿನ ಸಮೇತ ಸೆರೆ ಹಿಡಿದು ಮಕ್ಕಾಕ್ಕೆ ತಂದರು. ಈ ಘಟನೆ ರಜಬ್ ತಿಂಗಳ ಅಂತ್ಯ ಮತ್ತು ಶಅಬಾನ್‌ನ ಆರಂಭದ ವೇಳೆ ನಡೆದಿತ್ತು. ಆದ್ದರಿಂದ ಆಕ್ರಮಣವು ಪವಿತ್ರ ತಿಂಗಳೆನಿಸಿರುವ

ಯಾವನಾದರೂ ಧರ್ಮದಿಂದ ವಿಮುಖನಾದರೆ ಅವಿಶ್ವಾಸಾವಸ್ಥೆಯಲ್ಲಿ ಪ್ರಾಣ ಬಿಟ್ಟರೆ, ಅವನ ಕರ್ಮಗಳು ಇಹಪರಗಳೆರಡರಲ್ಲೂ ವ್ಯರ್ಥವಾಗಿ ಹೋಗುವುವು. ಇಂತಹವರೆಲ್ಲರೂ ನರಕವಾಸಿಗಳು ಮತ್ತು ಅವರು ಚಿರಕಾಲ ನರಕದಲ್ಲೇ ಉಳಿಯುವರು.

هُمْ فِيهَا خٰلِدُونَ ﴿٢١٧﴾

218. ಇದಕ್ಕೆ ವ್ಯತಿರಿಕ್ತವಾಗಿ ವಿಶ್ವಾಸವಿರಿಸಿದವರೂ ಅಲ್ಲಾಹನ ಮಾರ್ಗದಲ್ಲಿ ಮನೆಮಾರನ್ನು ಬಿಟ್ಟವರೂ ಜಿಹಾದ್ ನಡೆಸಿದವರೂ[71] ಅಲ್ಲಾಹನ ಕೃಪೆಯನ್ನು ಅರ್ಹವಾಗಿ ನಿರೀಕ್ಷಿಸುವವರಾಗಿರುತ್ತಾರೆ ಮತ್ತು ಅಲ್ಲಾಹನು ಅವರಿಂದ ಸಂಭವಿಸಿ ಹೋದ ಲೋಪ ದೋಷಗಳನ್ನು ಕ್ಷಮಿಸುವವನೂ ತನ್ನ ಕರುಣೆಯಿಂದ ಅವರನ್ನು ಅನುಗ್ರಹಿಸುವವನೂ ಆಗಿರುತ್ತಾನೆ.

إِنَّ الَّذِينَ ءَامَنُوا وَالَّذِينَ هَاجَرُوا وَ
جٰهَدُوا فِي سَبِيلِ اللَّهِ ۙ أُولٰٓئِكَ يَرْجُونَ
رَحْمَتَ اللَّهِ ۚ وَاللَّهُ غَفُورٌ رَّحِيمٌ ﴿٢١٨﴾

219. ಮದ್ಯಪಾನ ಮತ್ತು ಜೂಜಾಟದ ಬಗ್ಗೆ ಏನು ಆದೇಶವಿದೆಯೆಂದು ಕೇಳುತ್ತಾರೆ. ಹೇಳಿರಿ! ಅವೆರಡರಲ್ಲೂ ಮಹತ್ತರವಾದ ಕೇಡಿದೆ. ಅವುಗಳಲ್ಲಿ ಜನರಿಗೆ ಕೆಲವು ಪ್ರಯೋಜನಗಳು ಇದ್ದರೂ ಅವುಗಳಿಂದಾಗುವ ಹಾನಿಯು ಪ್ರಯೋಜನಗಳಿಗಿಂತ ಬಹಳಷ್ಟು ಹೆಚ್ಚು.[72] ನಾವು ದೇವ ಮಾರ್ಗದಲ್ಲಿ ಏನನ್ನು ಖರ್ಚು ಮಾಡಬೇಕೆಂದು ಕೇಳುತ್ತಾರೆ. "ನಿಮ್ಮ ಅವಶ್ಯಕತೆಗಿಂತ ಮಿಕ್ಕಿರುವುದನ್ನು"[73] ಎಂದು ಹೇಳಿರಿ.

يَسْـَٔلُونَكَ عَنِ الْخَمْرِ وَالْمَيْسِرِ ۖ قُلْ
فِيهِمَآ إِثْمٌ كَبِيرٌ وَمَنٰفِعُ لِلنَّاسِ وَإِثْمُهُمَآ
أَكْبَرُ مِن نَّفْعِهِمَا ۗ وَيَسْـَٔلُونَكَ مَاذَا يُنفِقُونَ ۬ۖ
قُلِ الْعَفْوَ ۗ كَذٰلِكَ يُبَيِّنُ اللَّهُ لَكُمُ الْءَايٰتِ
لَعَلَّكُمْ تَتَفَكَّرُونَ ﴿٢١٩﴾

220. ನೀವು ಇಹ-ಪರಗಳೆರಡರ ಬಗ್ಗೆಯೂ ಚಿಂತೆಯುಳ್ಳವರಾಗಬಹುದೆಂದು ನಿರೀಕ್ಷಿಸಿ ಅಲ್ಲಾಹನು ನಿಮಗೆ ಈ ರೀತಿಯಲ್ಲಿ

فِي الدُّنْيَا وَالْءَاخِرَةِ ۗ وَيَسْـَٔلُونَكَ عَنِ الْيَتٰمٰى ۖ

'ರಜಬ್'ನಲ್ಲೇ ನಡೆಯಿತೇನೋ ಎನ್ನುವ ಸಂಶಯ ಹುಟ್ಟಿಸುವಂತಿತ್ತು. ಆದ್ದರಿಂದ ಕುರೈಶರು ಮತ್ತು ಅವರೊಂದಿಗೆ ತೆರೆಮರೆಯ ಸಂಬಂಧ ಹೊಂದಿದ್ದ ಮದೀನಾದ ಯಹೂದಿಯರು ಮತ್ತು ಕಪಟವಿಶ್ವಾಸಿಗಳು ಮುಸ್ಲಿಮರ ವಿರುದ್ಧ ಅಪಪ್ರಚಾರ ನಡೆಸಲು ಈ ಘಟನೆಗೆ ಸಾಕಷ್ಟು ಪ್ರಚಾರ ನೀಡಿದರು. ನೋಡಲು ಇವರು ಮಹಾ ದೇವಭಕ್ತರು, ಆದರೆ ಇವರ ಅವಸ್ಥೆ ನೋಡಿದರೆ ಪವಿತ್ರ ತಿಂಗಳಲ್ಲೂ ರಕ್ತಪಾತ ಮಾಡಲು ಹಿಂಜರಿಯುವುದಿಲ್ಲ ಎನ್ನುವ ಆಕ್ಷೇಪಗಳನ್ನು ಆರಂಭಿಸಿದರು. ಈ ಸೂಕ್ತದಲ್ಲಿ ಆ ಆಕ್ಷೇಪಗಳಿಗೆ ಉತ್ತರ ಕೊಡಲಾಗಿದೆ.

71. ಜಿಹಾದ್, ಎಂದರೆ ನಿರ್ದಿಷ್ಟ ಉದ್ದೇಶದ ಸಾಧನೆಗಾಗಿ ತನ್ನ ಗರಿಷ್ಠ ಶಕ್ತಿಯನ್ನು ವಿನಿಯೋಗಿಸುವುದಾಗಿದೆ. ಇದು ಕೇವಲ ಯುದ್ಧವೆಂಬ ಅರ್ಥವನ್ನು ಹೊಂದಿರುವ ಪದವಲ್ಲ. ಯುದ್ಧಕ್ಕೆ 'ಕಿತಾಲ್' ಎಂಬ ಪದವನ್ನು ಉಪಯೋಗಿಸಲಾಗಿದೆ. 'ಜಿಹಾದ್' ಎಂಬ ಪದ ಅದಕ್ಕಿಂತ ವಿಶಾಲಾರ್ಥವನ್ನು ಹೊಂದಿದೆ. ಯುದ್ಧವೂ ಸೇರಿದಂತೆ ಎಲ್ಲಾ ಬಗೆಯ ಹೋರಾಟ ಅದರಲ್ಲಿ ಒಳಗೊಂಡಿದೆ.

72. ಇದು ಮದ್ಯಪಾನ ಮತ್ತು ಜೂಜಿನ ಕುರಿತು ಇರುವ ಮೊದಲ ಆಜ್ಞೆಯಾಗಿದೆ. ಇದರಲ್ಲಿ ಆ ಕುರಿತು ಅಸಮಾಧಾನವನ್ನಷ್ಟೇ ಪ್ರಕಟಿಸಲಾಗಿದೆ. ಮುಂದೆ ಅನ್ನಿಸಾ ಅಧ್ಯಾಯದ ಸೂಕ್ತ 43 ಮತ್ತು ಅಲ್ ಮಾಯಿದಃ ಅಧ್ಯಾಯದ ಸೂಕ್ತ 90ರಲ್ಲಿ ಅನಂತರದ ಆದೇಶಗಳು ಬಂದಿವೆ.

73. ಈ ಸೂಕ್ತದ ಕುರಿತು ಚಿತ್ರ-ವಿಚಿತ್ರ ಅರ್ಥಗಳನ್ನು ಕಲ್ಪಿಸಲಾಗುತ್ತಿದೆ. ವಾಸ್ತವದಲ್ಲಿ ಸೂಕ್ತದಲ್ಲಿ ಬಂದಿರುವ ಶಬ್ದಗಳಿಂದ

ಆದೇಶಗಳನ್ನು ಸುಸ್ಪಷ್ಟವಾಗಿ ವಿವರಿಸುತ್ತಾನೆ. ಅನಾಥರೊಂದಿಗೆ ಎಂತಹ ವ್ಯವಹಾರ ಕೈಗೊಳ್ಳಬೇಕೆಂದು ನಿಮ್ಮೊಡನೆ ಕೇಳುತ್ತಾರೆ. ಹೇಳಿರಿ: ಅವರಿಗೆ ಹಿತವಾಗುವಂತಹ ವ್ಯವಹಾರ ಕೈಗೊಳ್ಳುವುದೇ ಉತ್ತಮ. ನೀವು ಅವರೊಂದಿಗೆ ಸಹಬಾಳುವೆ ನಡೆಸುವುದರಲ್ಲಿ ಅಡ್ಡಿಯಿಲ್ಲ. ಅವರು ನಿಮ್ಮ ಸಹೋದರರೇ ತಾನೆ. ಅಹಿತ ಮಾಡುವವರ ಮತ್ತು ಹಿತ ಮಾಡುವವರ ವಿವರ ಅಲ್ಲಾಹನಿಗೆ ತಿಳಿದೇ ಇದೆ. ಅಲ್ಲಾಹನು ಇಚ್ಛಿಸುತ್ತಿದ್ದರೆ ಈ ವಿಷಯದಲ್ಲಿ ನಿಮ್ಮೊಂದಿಗೆ ಕಠಿಣತೆಯನ್ನು ತೋರಿಸುತ್ತಿದ್ದನು. ಆದರೆ, ಅವನು ಸಾಮರ್ಥ್ಯವಿರುವವನಾಗಿರುವುದರೊಂದಿಗೆ ಯುಕ್ತಿಪೂರ್ಣನೂ ಆಗಿರುತ್ತಾನೆ.

قُلْ إِصْلَاحٌ لَّهُمْ خَيْرٌ ۖ وَإِن تُخَالِطُوهُمْ فَإِخْوَانُكُمْ ۚ وَاللَّهُ يَعْلَمُ الْمُفْسِدَ مِنَ الْمُصْلِحِ ۚ وَلَوْ شَاءَ اللَّهُ لَأَعْنَتَكُمْ ۚ إِنَّ اللَّهَ عَزِيزٌ حَكِيمٌ ﴿٢٢٠﴾

221. ಬಹುದೇವವಿಶ್ವಾಸಿನಿಯರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನೀವು ಅವರನ್ನು ವಿವಾಹವಾಗಬಾರದು. ಓರ್ವ ಸತ್ಯವಿಶ್ವಾಸಿನಿಯಾದ ದಾಸಿಯು ಓರ್ವ ಬಹುದೇವ ವಿಶ್ವಾಸಿನಿಯಾದ ಕುಲೀನ ಸ್ತ್ರೀಗಿಂತ ಉತ್ತಮಳು. ಅವಳು ನಿಮಗೆ ಎಷ್ಟು ಮೆಚ್ಚಿಕೆಯವಳೇ ಆಗಿರಲಿ ಮತ್ತು ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು. ಓರ್ವ ಸತ್ಯವಿಶ್ವಾಸಿ ಗುಲಾಮನು ಬಹುದೇವ ವಿಶ್ವಾಸಿ ಕುಲೀನ ಪುರುಷನಿಗಿಂತ ಉತ್ತಮ. ಅವನು ನಿಮಗೆ ಅದೆಷ್ಟು ಮೆಚ್ಚಿಕೆಯವನೇ ಆಗಿರಲಿ. ಇವರು ನಿಮ್ಮನ್ನು ಅಗ್ನಿಯ ಕಡೆಗೆ ಆಹ್ವಾನಿಸುತ್ತಾರೆ ಮತ್ತು ಅಲ್ಲಾಹನು ತನ್ನ ಅನುಜ್ಞೆಯಿಂದ ನಿಮ್ಮನ್ನು ಸ್ವರ್ಗ ಹಾಗೂ ಪಾಪ ವಿಮೋಚನೆಯ ಕಡೆಗೆ ಆಹ್ವಾನಿಸುತ್ತಾನೆ ಮತ್ತು ಜನರು ಬೋಧನೆ ಸ್ವೀಕರಿಸಿ ಪಾಠ ಕಲಿಯಲೆಂದು ಅವನು ತನ್ನ ಆದೇಶಗಳನ್ನು ಅವರ ಮುಂದೆ ವಿವರಿಸುತ್ತಾನೆ.

وَلَا تَنكِحُوا الْمُشْرِكَاتِ حَتَّىٰ يُؤْمِنَّ ۚ وَلَأَمَةٌ مُّؤْمِنَةٌ خَيْرٌ مِّن مُّشْرِكَةٍ وَلَوْ أَعْجَبَتْكُمْ ۗ وَلَا تُنكِحُوا الْمُشْرِكِينَ حَتَّىٰ يُؤْمِنُوا ۚ وَلَعَبْدٌ مُّؤْمِنٌ خَيْرٌ مِّن مُّشْرِكٍ وَلَوْ أَعْجَبَكُمْ ۗ أُولَٰئِكَ يَدْعُونَ إِلَى النَّارِ ۖ وَاللَّهُ يَدْعُو إِلَى الْجَنَّةِ وَالْمَغْفِرَةِ بِإِذْنِهِ ۖ وَيُبَيِّنُ آيَاتِهِ لِلنَّاسِ لَعَلَّهُمْ يَتَذَكَّرُونَ ﴿٢٢١﴾

222. ಆರ್ತವ(ಋತುಸ್ರಾವ)ದ ಕುರಿತು ಅವರು ನಿಮ್ಮೊಡನೆ ಕೇಳುತ್ತಾರೆ. ಹೇಳಿರಿ: ಅದೊಂದು ಮಾಲಿನ್ಯಾವಸ್ಥೆ. ಆರ್ತವಾವಸ್ಥೆಯಲ್ಲಿ ಸ್ತ್ರೀಯರಿಂದ ದೂರವಿರಿ. ಅವರು ಶುದ್ಧರಾಗುವ ವರೆಗೆ ಅವರನ್ನು

وَيَسْأَلُونَكَ عَنِ الْمَحِيضِ ۖ قُلْ هُوَ أَذًى فَاعْتَزِلُوا النِّسَاءَ فِي الْمَحِيضِ ۖ وَلَا تَقْرَبُوهُنَّ

ವ್ಯಕ್ತವಾಗುವುದೇನೆಂದರೆ ಜನರು ತಮ್ಮ ಸೊತ್ತಿನ ಒಡೆಯರಾಗಿದ್ದರು. ಅವರು ದೇವಸಂಪ್ರೀತಿ ಗಳಿಸಲು ತಾವೇನನ್ನು ವ್ಯಯಿಸಬೇಕೆಂದು ಪ್ರಶ್ನಿಸುತ್ತಿದ್ದರು. ಅದಕ್ಕುತ್ತರವಾಗಿ ಅವರಿಗೆ ಮೊದಲು ನಿಮ್ಮ ಜೀವನಾವಶ್ಯಕತೆಗಳನ್ನು ಈಡೇರಿಸಿಕೊಳ್ಳಿ. ಮಿಕ್ಕುಳಿದಿರುವುದನ್ನು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸಿರಿ ಎಂದು ಹೇಳಲಾಗಿದೆ. ಇದು ದಾಸನು ಅಲ್ಲಾಹನ ಮಾರ್ಗದಲ್ಲಿ ಇಚ್ಛಾಪೂರ್ವಕ ಮಾಡುವ ಖರ್ಚಾಗಿದೆ.

ಸಮೀಪಿಸಬೇಡಿರಿ.[74] ಅವರು ಶುದ್ಧರಾದ ಬಳಿಕ ನಿಮಗೆ ಅಲ್ಲಾಹನು ವಿಧಿಸಿದ ಪ್ರಕಾರ ಅವರ ಬಳಿ ಹೋಗಿರಿ. ನಿಶ್ಚಯವಾಗಿಯೂ ಪಾಪಗಳಿಂದ ಪಶ್ಚಾತ್ತಾಪ ಪಡುವವರನ್ನೂ ಶುದ್ಧಾಚಾರವಿರಿಸುವವರನ್ನೂ ಅಲ್ಲಾಹನು ಇಷ್ಟಪಡುತ್ತಾನೆ.

حَتَّىٰ يَطْهُرْنَ ۖ فَإِذَا تَطَهَّرْنَ فَأْتُوهُنَّ مِنْ حَيْثُ أَمَرَكُمُ اللَّهُ ۚ إِنَّ اللَّهَ يُحِبُّ التَّوَّابِينَ وَيُحِبُّ الْمُتَطَهِّرِينَ ﴿٢٢٢﴾

223. ನಿಮ್ಮ ಸ್ತ್ರೀಯರು ನಿಮ್ಮ ಹೊಲಗಳಾಗಿರುತ್ತಾರೆ. ನಿಮ್ಮ ಹೊಲದಲ್ಲಿ ಇಷ್ಟಬಂದಂತೆ ಹೋಗುವ ಅಧಿಕಾರ ನಿಮಗಿದೆ. ಆದರೆ ನಿಮ್ಮ ಭವಿಷ್ಯದ ಕುರಿತು ಚಿಂತಿಸಿರಿ ಮತ್ತು ಅಲ್ಲಾಹನ ಭಯವಿರಿಸಿಕೊಳ್ಳಿರಿ.[75] ಒಂದು ದಿನ ಆತನನ್ನು ಭೇಟಿಯಾಗಲಿಕ್ಕಿದೆ ಎಂಬುದನ್ನು ಚೆನ್ನಾಗಿ ತಿಳಿದುಕೊಂಡಿರಬೇಕು ಮತ್ತು ಓ ಪ್ರವಾದಿಯವರೇ, ನಿಮ್ಮ ಬೋಧನೆಯನ್ನು ಸ್ವೀಕರಿಸಿದವರಿಗೆ ಯಶಸ್ಸಿನ ಶುಭವಾರ್ತೆಯನ್ನು ತಿಳಿಸಿಬಿಡಿರಿ.

نِسَاؤُكُمْ حَرْثٌ لَكُمْ فَأْتُوا حَرْثَكُمْ أَنَّىٰ شِئْتُمْ ۖ وَقَدِّمُوا لِأَنْفُسِكُمْ ۚ وَاتَّقُوا اللَّهَ وَاعْلَمُوا أَنَّكُمْ مُلَاقُوهُ ۗ وَبَشِّرِ الْمُؤْمِنِينَ ﴿٢٢٣﴾

224. ಒಳಿತು, ಧರ್ಮನಿಷ್ಠೆ ಮತ್ತು ಜನರ ಸುಧಾರಣೆಯ ಕಾರ್ಯಗಳಿಂದ ದೂರ ಸರಿಯುವ ಉದ್ದೇಶದಿಂದ ಮಾಡುವ ಶಪಥಗಳಿಗಾಗಿ ಅಲ್ಲಾಹನ ನಾಮವನ್ನು ಉಪಯೋಗಿಸಬೇಡಿರಿ. ಅಲ್ಲಾಹನು ಸರ್ವವನ್ನೂ ಆಲಿಸುವವನೂ ಅರಿಯುವವನೂ ಆಗಿರುತ್ತಾನೆ.

وَلَا تَجْعَلُوا اللَّهَ عُرْضَةً لِأَيْمَانِكُمْ أَنْ تَبَرُّوا وَتَتَّقُوا وَتُصْلِحُوا بَيْنَ النَّاسِ ۗ وَاللَّهُ سَمِيعٌ عَلِيمٌ ﴿٢٢٤﴾

225. ಅನೈಚ್ಛಿಕವಾಗಿ ಅರ್ಥಶೂನ್ಯ ಶಪಥಗೈದುದಕ್ಕಾಗಿ ಅಲ್ಲಾಹನು ನಿಮ್ಮನ್ನು ಹಿಡಿಯುವುದಿಲ್ಲ. ಆದರೆ ಅವನು, ನೀವು ಹೃತ್ಪೂರ್ವಕ ಮಾಡಿದ ಶಪಥಗಳ ವಿಚಾರಣೆ ನಡೆಸಿಯೇ ತೀರುವನು. ಅಲ್ಲಾಹನು ಅತ್ಯಂತ ಕ್ಷಮಾದಾನಿಯೂ ಸಹನಶೀಲನೂ ಆಗಿರುತ್ತಾನೆ.

لَا يُؤَاخِذُكُمُ اللَّهُ بِاللَّغْوِ فِي أَيْمَانِكُمْ وَلَٰكِنْ يُؤَاخِذُكُمْ بِمَا كَسَبَتْ قُلُوبُكُمْ ۗ وَاللَّهُ غَفُورٌ حَلِيمٌ ﴿٢٢٥﴾

226. ತಮ್ಮ ಪತ್ನಿಯರನ್ನು ಸಮೀಪಿಸಲಾರೆವೆಂದು ಶಪಥ ಮಾಡಿಕೊಂಡವರಿಗೆ ನಾಲ್ಕು ತಿಂಗಳುಗಳ ಕಾಲಾವಧಿ ಇದೆ.[76] ಅವರು ಒಲಿದುಕೊಂಡರೆ ಅಲ್ಲಾಹನು ಕ್ಷಮಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.

لِلَّذِينَ يُؤْلُونَ مِنْ نِسَائِهِمْ تَرَبُّصُ أَرْبَعَةِ أَشْهُرٍ ۖ فَإِنْ فَاءُوا فَإِنَّ اللَّهَ غَفُورٌ رَحِيمٌ ﴿٢٢٦﴾

---

74. ಅರ್ಥಾತ್- ಆ ಸಂದರ್ಭದಲ್ಲಿ ಅವರೊಂದಿಗೆ ಸಂಸರ್ಗ ನಡೆಸದಿರಿ.

75. ಸಮಗ್ರ ಪದಗಳಿವು. ಇವುಗಳಿಂದ ಎರಡು ಅರ್ಥಗಳು ಹೊರಡುತ್ತವೆ. ಎರಡಕ್ಕೂ ಸಮಾನ ಪ್ರಾಧಾನ್ಯತೆವಿದೆ. ಮೊದಲನೆಯದಾಗಿ ನಿಮ್ಮ ವಂಶವನ್ನು ಕಾಪಾಡಲು ಪ್ರಯತ್ನಿಸಿರಿ. ಆ ಮೂಲಕ ನೀವು ಲೋಕವನ್ನು ತ್ಯಜಿಸುವುದಕ್ಕೆ ಮೊದಲು ನಿಮ್ಮ ಜಾಗದಲ್ಲಿ ಕೆಲಸ ಮಾಡುವ ಇತರರು ಹುಟ್ಟಿಕೊಳ್ಳುವರು. ಎರಡನೆಯದಾಗಿ ನೀವು ನಿಮ್ಮ ಸ್ಥಾನವನ್ನು ವಹಿಸಿಕೊಡಲಿರುವ ಆ ಮುಂದಿನ ಪೀಳಿಗೆಯನ್ನು ಧರ್ಮ, ನೀತಿ ಮತ್ತು ಮಾನವೀಯತೆಯ ಮುತ್ತುಗಳಿಂದ ಶೃಂಗರಿಸಲು ಪ್ರಯತ್ನಿಸಿರಿ.

76. ಶರೀಅತ್‌ನ ಪಾರಿಭಾಷಿಕದಲ್ಲಿ ಇದನ್ನು 'ಈಲಾ' ಎನ್ನಲಾಗಿದೆ. ಪತಿ-ಪತ್ನಿಯರ ನಡುವಿನ ಸಂಬಂಧ ಯಾವಾಗಲೂ ಸುಗಮವಾಗಿರಲು ಸಾಧ್ಯವಿಲ್ಲ. ಸಂಬಂಧ ಕೆಡಲು ಕಾರಣಗಳು ಉಂಟಾಗುತ್ತಲೇ ಇರುತ್ತವೆ. ಆದರೆ ವಿಧ್ಯುಕ್ತವಾಗಿ ವೈವಾಹಿಕ ಸಂಬಂಧದಲ್ಲಿ ಬೆಸೆದುಕೊಂಡಿದ್ದರೂ, ಕಾರ್ಯತಃ ಅವರು ಪತಿ-ಪತ್ನಿಯರೇ ಅಲ್ಲವೇನೋ ಎನ್ನುವ ರೀತಿಯಲ್ಲಿ ಸಂಬಂಧ ಕೆಡುವುದು ಶರೀಅತ್‌ನ

227. ಮತ್ತು ಅವರು ತಲಾಕಿನ (ವಿವಾಹ ವಿಚ್ಛೇದನದ) ನಿರ್ಧಾರವನ್ನೇ ಕೈಗೊಂಡಿದ್ದರೆ, ಅಲ್ಲಾಹನು ಎಲ್ಲವನ್ನೂ ಆಲಿಸುವವನೂ ಅರಿಯುವವನೂ ಆಗಿರುತ್ತಾನೆಂಬುದನ್ನು ತಿಳಿದಿರಲಿ.[77]

وَإِنْ عَزَمُوا الطَّلَاقَ فَإِنَّ اللَّهَ سَمِيعٌ عَلِيمٌ ﴿٢٢٧﴾

228. ತಲಾಕ್ ಕೊಡಲ್ಪಟ್ಟ ಸ್ತ್ರೀಯರು ಮೂರು ಬಾರಿ ಮುಟ್ಟಾಗುವ ತನಕ ತಮ್ಮನ್ನು ತಡೆದಿರಿಸಿಕೊಳ್ಳಬೇಕು ಮತ್ತು ಅಲ್ಲಾಹನು ಅವರ ಗರ್ಭಾಶಯದೊಳಗೆ ಸೃಷ್ಟಿಸಿರುವುದನ್ನು ಬಚ್ಚಿಡುವುದು ಅವರಿಗೆ ಧರ್ಮಬದ್ಧವಲ್ಲ. ಅವರು ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿರಿಸುವವರಾಗಿದ್ದರೆ ಹಾಗೆ ಎಂದಿಗೂ ಮಾಡಬಾರದು. ಅವರ ಪತಿಯಂದಿರು ಸಂಬಂಧವನ್ನು ಸುಗಮಗೊಳಿಸಿಕೊಳ್ಳಲುದ್ಯುಕ್ತರಾಗಿದ್ದರೆ, ಈ 'ಇದ್ದತ್'ನ ಕಾಲಾವಧಿಯಲ್ಲಿ ಅವರನ್ನು ಪುನಃ ತಮ್ಮ ಪತ್ನಿತ್ವಕ್ಕೆ ಮರಳಿಸಿಕೊಳ್ಳಲು ಹಕ್ಕುಳ್ಳವರಾಗಿರುತ್ತಾರೆ.[78] ಪುರುಷರಿಗೆ ಸ್ತ್ರೀಯರ ಮೇಲೆ ಹಕ್ಕಿರುವ ಹಾಗೆಯೇ ಸ್ತ್ರೀಯರಿಗೂ ಪುರುಷರ ಮೇಲೆ ನ್ಯಾಯೋಚಿತ ಹಕ್ಕು ಇದೆ. ಆದರೆ ಅವರ ಮೇಲೆ ಪುರುಷರಿಗೆ ಒಂದು ಪದವಿ ಇದೆ ಮತ್ತು ಅಲ್ಲಾಹನು ಮಹಾ ಪ್ರತಾಪಶಾಲಿಯೂ ವಿವೇಕಪೂರ್ಣನೂ ಆಗಿರುತ್ತಾನೆ.

وَالْمُطَلَّقَاتُ يَتَرَبَّصْنَ بِأَنْفُسِهِنَّ ثَلَاثَةَ قُرُوءٍ ۚ وَلَا يَحِلُّ لَهُنَّ أَنْ يَكْتُمْنَ مَا خَلَقَ اللَّهُ فِي أَرْحَامِهِنَّ إِنْ كُنَّ يُؤْمِنَّ بِاللَّهِ وَالْيَوْمِ الْآخِرِ ۚ وَبُعُولَتُهُنَّ أَحَقُّ بِرَدِّهِنَّ فِي ذَٰلِكَ إِنْ أَرَادُوا إِصْلَاحًا ۚ وَلَهُنَّ مِثْلُ الَّذِي عَلَيْهِنَّ بِالْمَعْرُوفِ ۚ وَلِلرِّجَالِ عَلَيْهِنَّ دَرَجَةٌ ۗ وَاللَّهُ عَزِيزٌ حَكِيمٌ ﴿٢٢٨﴾

229. ತಲಾಕ್ (ವಿವಾಹ ವಿಚ್ಛೇದನ) ಎರಡು ಸಲ. ಅನಂತರ ನ್ಯಾಯೋಚಿತವಾಗಿ ಸ್ತ್ರೀಯನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡುಗಡೆಗೊಳಿಸಬೇಕು.[79] ಬಿಡುಗಡೆಗೊಳಿಸುವಾಗ ನೀವು ಅವರಿಗೆ (ಪತ್ನಿಯರಿಗೆ) ಕೊಟ್ಟಿದ್ದ ಸಾಧನಗಳ ಪೈಕಿ ಏನನ್ನೂ ಮರಳಿ ಪಡೆಯುವುದು ನಿಮಗೆ ಧರ್ಮಸಮ್ಮತ ಅಲ್ಲ. ದಂಪತಿಗಳಿಗೆ ಅಲ್ಲಾಹನ ಮೇರೆಗಳಲ್ಲೇ ನೆಲೆನಿಲ್ಲಲು ಅಸಾಧ್ಯವಾದೀತೆಂಬ ಸಂದೇಹ ಸ್ಥಿತಿಯು ಇದಕ್ಕೆ

الطَّلَاقُ مَرَّتَانِ ۖ فَإِمْسَاكٌ بِمَعْرُوفٍ أَوْ تَسْرِيحٌ بِإِحْسَانٍ ۗ وَلَا يَحِلُّ لَكُمْ أَنْ تَأْخُذُوا مِمَّا آتَيْتُمُوهُنَّ شَيْئًا إِلَّا أَنْ يَخَافَا أَلَّا يُقِيمَا حُدُودَ اللَّهِ ۖ فَإِنْ خِفْتُمْ أَلَّا يُقِيمَا حُدُودَ اللَّهِ فَلَا جُنَاحَ عَلَيْهِمَا فِيمَا افْتَدَتْ بِهِ ۗ تِلْكَ

ದೃಷ್ಟಿಯಲ್ಲಿ ಅರೋಚಕವಾಗಿದೆ. ಸಂಬಂಧ ಈ ರೀತಿಯಲ್ಲಿ ಕೆಟ್ಟು ಹೋದರೆ ಅಲ್ಲಾಹನು ನಾಲ್ಕು ತಿಂಗಳ ಕಾಲಾವಧಿಯನ್ನು ಗೊತ್ತುಪಡಿಸಿದ್ದಾನೆ. ಈ ಅವಧಿಯಲ್ಲಿ ತಮ್ಮ ಸಂಬಂಧವನ್ನು ಸುಧಾರಿಸಿಕೊಳ್ಳಿರಿ ಅಥವಾ ದಾಂಪತ್ಯ ಸಂಬಂಧವನ್ನು ಕೊನೆಗೊಳಿಸಿರಿ. ಆ ಮೂಲಕ ಇಬ್ಬರೂ ಪರಸ್ಪರ ಸ್ವತಂತ್ರರಾಗಿ ತಮಗೆ ಸರಿಹೊಂದುವವರೊಂದಿಗೆ ವಿವಾಹ ಮಾಡಿಕೊಳ್ಳಬಹುದಾಗಿದೆ.

77. ಅರ್ಥಾತ್- ಅನ್ಯಾಯವಾಗಿ ನೀವು ಪತ್ನಿಯನ್ನು ತೊರೆದಿದ್ದರೆ ಅಲ್ಲಾಹನಿಂದ ನಿರ್ಭಯರಾಗಿ ಇರಬೇಡಿರಿ. ಅವನು ನಿಮ್ಮ ಅತಿಕ್ರಮದ ಬಗ್ಗೆ ಅಜ್ಞನಾಗಿಲ್ಲ.

78. ಪತಿಯು ಪತ್ನಿಗೆ ಒಂದು ಅಥವಾ ಎರಡು ತಲಾಕ್ ನೀಡಿರುವ ಸಂದರ್ಭದಲ್ಲಿ ಈ ಆಜ್ಞೆ ಅನ್ವಯವಾಗುತ್ತದೆ. ಆಗ ಅದು 'ತಲಾಕ್ ರಜಈ' ಎನಿಸಿಕೊಳ್ಳುತ್ತದೆ. ಇದ್ದತ್‌ನ ಅವಧಿಯಲ್ಲಿ ಪತಿ ಪುನಃ ಪತ್ನಿಯನ್ನು ಸೇರಬಹುದು.

79. ಈ ಸೂಕ್ತದ ಮೂಲಕ ವ್ಯಕ್ತವಾಗುವುದೇನೆಂದರೆ ಪತಿ ತನ್ನ ವಿವಾಹ ಬಂಧನದಲ್ಲಿರುವ ಪತ್ನಿಯೊಬ್ಬಳಿಗೆ ಗರಿಷ್ಠ ಎರಡು ಬಾರಿ 'ತಲಾಕ್ ರಜಈ'ಯ ಹಕ್ಕನ್ನು ಪ್ರಯೋಗಿಸಬಹುದು. ತನ್ನ ಪತ್ನಿಗೆ ಎರಡು ಬಾರಿ ತಲಾಕ್ ನೀಡಿ ಪುನಃ ಆಕೆಯನ್ನು ಸೇರಿರುವ ಪತಿ, ತನ್ನ ಜೀವನಾವಧಿಯಲ್ಲಿ ಎಂದಾದರೂ ಮೂರನೆಯ ಬಾರಿ ಆಕೆಗೆ ತಲಾಕ್ ನೀಡಿದರೆ, ಆ ಸ್ತ್ರೀ ಅವನಿಂದ ಶಾಶ್ವತವಾಗಿ ಅಗಲುವಳು.

حُدُوْدُ اللّٰهِ فَلَا تَعْتَدُوْهَا ۚ وَمَنْ يَّتَعَدَّ حُدُوْدَ اللّٰهِ فَاُولٰٓئِكَ هُمُ الظّٰلِمُوْنَ ﴿٢٢٩﴾

ಹೊರತಾಗಿದೆ. ಇಂತಹ ಸ್ಥಿತಿಯಲ್ಲಿ ಅವರಿಬ್ಬರೂ ಅಲ್ಲಾಹನ ಮೇರೆಗಳಲ್ಲೇ ನೆಲೆನಿಲ್ಲಲಾರರೆಂದು ನಿಮಗೆ ಶಂಕೆಯುಂಟಾದಾಗ ಸ್ತ್ರೀಯು ತನ್ನ ಪುರುಷನಿಗೆ (ಪತಿಗೆ) ಏನಾದರೂ ಪರಿಹಾರ ಕೊಟ್ಟು ಬಿಡುಗಡೆ ಹೊಂದುವುದರಲ್ಲಿ ದೋಷವಿಲ್ಲ.[80] ಅಲ್ಲಾಹನಿಂದ ನಿಶ್ಚಯಿಸಲ್ಪಟ್ಟ ಮೇರೆಗಳಿವು. ಇವುಗಳನ್ನು ಉಲ್ಲಂಘಿಸಬೇಡಿರಿ. ಅಲ್ಲಾಹನ ಮೇರೆಗಳನ್ನು ಯಾರಾದರೂ ಮೀರಿದರೆ ಅವರೇ ಅಕ್ರಮಿಗಳು.

فَاِنْ طَلَّقَهَا فَلَا تَحِلُّ لَهٗ مِنْ بَعْدُ حَتّٰى تَنْكِحَ زَوْجًا غَيْرَهٗ ۗ فَاِنْ طَلَّقَهَا فَلَا جُنَاحَ عَلَيْهِمَآ اَنْ يَّتَرَاجَعَآ اِنْ ظَنَّآ اَنْ يُّقِيْمَا حُدُوْدَ اللّٰهِ ۗ وَتِلْكَ حُدُوْدُ اللّٰهِ يُبَيِّنُهَا لِقَوْمٍ يَّعْلَمُوْنَ ﴿٢٣٠﴾

230. ಮತ್ತು (ಪತಿಯು ಎರಡು ಬಾರಿ ತಲಾಕ್ ಕೊಟ್ಟ ಬಳಿಕ ಮೂರನೇ ಬಾರಿಯೂ) ತಲಾಕ್ ಕೊಟ್ಟು ಬಿಟ್ಟರೆ ಆ ಸ್ತ್ರೀಯ ನಿಕಾಹ್ ಇನ್ನೊಬ್ಬನೊಂದಿಗೆ ಆಗಿ ಅವನು ತಲಾಕ್ ಕೊಡುವ ಹೊರತು ಅವಳು ಪುನಃ ಅವನಿಗೆ (ಮೊದಲಿನ ಪತಿಗೆ) ಹಲಾಲ್ ಆಗಲಾರಳು.[81] ಆಗ (ದ್ವಿತೀಯ ಪತಿ ತಲಾಕ್ ಕೊಟ್ಟಾಗ) ಮೊದಲಿನ ಪತಿಯೂ ಈ ಸ್ತ್ರೀಯೂ ಅಲ್ಲಾಹನ ಮೇರೆಯೊಳಗಿರುವೆವೆಂದು ಭಾವಿಸುವುದಾದರೆ, ಅವರು ಪರಸ್ಪರ ಒಲಿದು ಕೊಳ್ಳುವುದರಲ್ಲಿ ದೋಷವಿಲ್ಲ. ಅಲ್ಲಾಹನಿಂದ ನಿಶ್ಚಯಿಸಲ್ಪಟ್ಟ ಮೇರೆಗಳಿವು. (ಅವನ ಮೇರೆಗಳನ್ನು ಮೀರುವುದರ ಪರಿಣಾಮವನ್ನು) ತಿಳಿದಿರುವವರ ಮಾರ್ಗದರ್ಶನಕ್ಕಾಗಿ ಅವನು ಇವುಗಳನ್ನು ಅಭಿವ್ಯಕ್ತಪಡಿಸುತ್ತಾನೆ.

وَاِذَا طَلَّقْتُمُ النِّسَآءَ فَبَلَغْنَ اَجَلَهُنَّ فَاَمْسِكُوْهُنَّ بِمَعْرُوْفٍ اَوْ سَرِّحُوْهُنَّ بِمَعْرُوْفٍ ۠ وَلَا تُمْسِكُوْهُنَّ ضِرَارًا لِّتَعْتَدُوْا ۚ وَمَنْ يَّفْعَلْ ذٰلِكَ فَقَدْ ظَلَمَ نَفْسَهٗ ۗ وَلَا تَتَّخِذُوْٓا اٰيٰتِ اللّٰهِ هُزُوًا ۠ وَّاذْكُرُوْا نِعْمَتَ اللّٰهِ عَلَيْكُمْ وَمَآ اَنْزَلَ عَلَيْكُمْ مِّنَ الْكِتٰبِ

231. ನೀವು ಸ್ತ್ರೀಯರಿಗೆ ತಲಾಕ್ ಕೊಟ್ಟು, ಅವರ 'ಇದ್ದತ್' ಪೂರ್ಣಗೊಳ್ಳಲು ಸಮೀಪಿಸಿದಾಗ ಅವರನ್ನು ನ್ಯಾಯೋಚಿತ ರೀತಿಯಲ್ಲಿ ಇರಿಸಿಕೊಳ್ಳಿರಿ ಇಲ್ಲವೆ ನ್ಯಾಯೋಚಿತ ರೀತಿಯಿಂದ ಬಿಡುಗಡೆಗೊಳಿಸಿರಿ. ಕೇವಲ ಸತಾಯಿಸಲಿಕ್ಕಾಗಿ ಅವರನ್ನು ತಡೆದಿರಿಸಿಕೊಂಡರೆ ಅದು ಅತಿಕ್ರಮವಾಗುವುದು. ಹೀಗೆ ಮಾಡಿದಾತನು ವಾಸ್ತವದಲ್ಲಿ ತನ್ನ ಮೇಲೆ ತಾನೇ ಅಕ್ರಮವೆಸಗುವನು. ಅಲ್ಲಾಹನ ಆಯತ್‌ಗಳನ್ನು ಅಪಹಾಸ್ಯ ಮಾಡಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಎಷ್ಟು ದೊಡ್ಡ ಅನುಗ್ರಹ ಮಾಡಿರುತ್ತಾನೆಂಬುದನ್ನು

80. ಶರೀಅತ್‌ನ ಪಾರಿಭಾಷಿಕದಲ್ಲಿ ಇದನ್ನು 'ಖುಲಾ' ಎನ್ನುತ್ತಾರೆ. ಅರ್ಥಾತ್- ಪತ್ನಿಯು ತನ್ನ ಪತಿಗೆ ಏನನ್ನಾದರೂ ಕೊಟ್ಟು ಅಥವಾ ಕೊಡಿಸಿ ತಲಾಕ್ ಪಡೆಯುವುದು. ಅಂತಹ ಸಂದರ್ಭದಲ್ಲಿ ಪತಿಗೆ, ಆಕೆಯಿಂದ ತಾನು ನೀಡಿದ ಸಂಪತ್ತು ಅಥವಾ ಅದರ ಯಾವುದಾದರೊಂದು ಭಾಗವನ್ನು ಅಥವಾ ಒಮ್ಮತಾಭಿಪ್ರಾಯದಿಂದ ಏನನ್ನು ನಿಶ್ಚಯಿಸಲಾಗುತ್ತದೋ ಅದನ್ನು ಪಡೆಯುವುದು ಧರ್ಮಸಮ್ಮತವಾಗಿದೆ. ಆದರೆ ಪತಿ ಸ್ವತಃ ಪತ್ನಿಗೆ ತಲಾಕ್ ನೀಡಿದ್ದರೆ ಅವನು ಆಕೆಗೆ ನೀಡಿದ ಯಾವುದೇ ಸೊತ್ತನ್ನು ಮರಳಿ ಪಡೆಯುವಂತಿಲ್ಲ.

81. ಅಂದರೆ ಯಾವುದಾದರೊಂದು ಸಂದರ್ಭದಲ್ಲಿ ಸ್ವಇಚ್ಛೆಯಿಂದ ತಲಾಕ್ ನೀಡುವುದಾಗಿದೆ. ಇದರಿಂದ ಕೇವಲ ಮೊದಲನೇ ಪತಿಗೆ ಸ್ತ್ರೀಯನ್ನು ಹಲಾಲ್‌ಗೊಳಿಸಲು ಮಾಡಲಾಗುವ ವಿವಾಹ ಮತ್ತು ವಿವಾಹ ವಿಚ್ಛೇದನದ ಸಂಚಿಗೆ ಯಾವುದೇ ಅವಕಾಶ ದೊರೆಯುವುದಿಲ್ಲ.

ಮರೆಯದಿರಿ. ನಿಮ್ಮ ಮೇಲೆ ಇಳಿಸಿದ ಗ್ರಂಥ ಮತ್ತು ಸದ್ವಿವೇಕಗಳ ಗೌರವವನ್ನು ಕಾಪಾಡಬೇಕೆಂದು ಅವನು ನಿಮಗೆ ಉಪದೇಶಿಸುತ್ತಾನೆ. ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನಿಗೆ ಸರ್ವ ವಿಷಯಗಳ ಅರಿವಿದೆ ಎಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.

وَالْحِكْمَةِ يَعِظُكُمْ بِهٖ ۗ وَاتَّقُوا اللّٰهَ وَاعْلَمُوْٓا
اَنَّ اللّٰهَ بِكُلِّ شَیْءٍ عَلِیْمٌ ﴿۲۳۱﴾

232. ನೀವು ನಿಮ್ಮ ಸ್ತ್ರೀಯರಿಗೆ ತಲಾಕ್ ಕೊಟ್ಟ ಬಳಿಕ ಅವರು ತಮ್ಮ ಇದ್ದತ್ ಪೂರ್ತಿಗೊಳಿಸಿಕೊಂಡಾಗ ತಮಗಿಷ್ಟ ಬಂದ ಪತಿಯ ರೊಂದಿಗೆ ವಿವಾಹ ಮಾಡಿಕೊಳ್ಳಲು ನ್ಯಾಯೋಚಿತ ರೀತಿಯಲ್ಲಿ ಒಪ್ಪಿಕೊಂಡರೆ, ಅವರು ಪರಸ್ಪರ ನಿಕಾಹ್ ಮಾಡಿಕೊಳ್ಳುವುದನ್ನು ಆತಂಕಪಡಿಸಬಾರದು. ನೀವು ಅಲ್ಲಾಹನ ಮೇಲೂ ಅಂತಿಮ ದಿವಸದ ಮೇಲೂ ವಿಶ್ವಾಸವಿಡುವವರಾಗಿದ್ದರೆ ಹೀಗೆ ಮಾಡ ಬಾರದೆಂದು ನಿಮಗೆ ಉಪದೇಶ ನೀಡಲಾಗುತ್ತಿದೆ. ನಿಮಗೆ ಸಭ್ಯವೂ ಪರಿಶುದ್ಧವೂ ಆಗಿರುವ ನಡವಳಿಕೆ ಇದೇ ಆಗಿರುತ್ತದೆ. ಅಲ್ಲಾಹನು ಬಲ್ಲವನು, ನೀವು ಬಲ್ಲವರಲ್ಲ.

وَاِذَا طَلَّقْتُمُ النِّسَآءَ فَبَلَغْنَ اَجَلَهُنَّ
فَلَا تَعْضُلُوْهُنَّ اَنْ یَّنْكِحْنَ اَزْوَاجَهُنَّ
اِذَا تَرَاضَوْا بَیْنَهُمْ بِالْمَعْرُوْفِ ؕ ذٰلِكَ یُوْعَظُ
بِهٖ مَنْ كَانَ مِنْكُمْ یُؤْمِنُ بِاللّٰهِ وَالْیَوْمِ
الْاٰخِرِ ؕ ذٰلِكُمْ اَزْكٰی لَكُمْ وَاَطْهَرُ ؕ
وَاللّٰهُ یَعْلَمُ وَاَنْتُمْ لَا تَعْلَمُوْنَ ﴿۲۳۲﴾

233. ತಮ್ಮ ಶಿಶುಗಳು ಪೂರ್ಣ ಸ್ತನಪಾನಾವಧಿಯ ವರೆಗೆ ಹಾಲು ಕುಡಿಯಬೇಕೆಂದು ಪಿತರು ಬಯಸಿದರೆ, ತಾಯಂದಿರು ತಮ್ಮ ಶಿಶುಗಳಿಗೆ ಎರಡು ವರ್ಷ ಪೂರ್ತಿಯಾಗಿ ಹಾಲುಣಿಸಬೇಕು.[82] ಆಗ ಶಿಶುವಿನ ತಂದೆಯು ಅವರಿಗೆ ನ್ಯಾಯೋಚಿತ ರೀತಿಯಿಂದ ಅನ್ನ, ಬಟ್ಟೆ ಕೊಡಲು ಬಾಧ್ಯಸ್ಥನಾಗುವನು. ಆದರೆ ಅವನವನ ಶಕ್ತಿಗಿಂತ ಮೀರಿದ ಭಾರವನ್ನು ಯಾರ ಮೇಲೂ ಹಾಕಬಾರದು. ಶಿಶುವು ತಾಯಿಯದ್ದು ಎಂಬ ಕಾರಣದಿಂದ ಅವಳನ್ನು ಕಷ್ಟಕ್ಕೊಳಪಡಿಸ ಬಾರದು ಮತ್ತು ಶಿಶುವಿನ ತಂದೆಯೆಂಬ ಕಾರಣದಿಂದ ಅವನನ್ನೂ ಪೇಚಾಟಕ್ಕೊಳಪಡಿಸಬಾರದು. ಮೊಲೆಹಾಲನ್ನುಣಿಸುವವಳ ಈ ಹಕ್ಕು ತಂದೆಯ ಮೇಲಿರುವಂತೆಯೇ ಅವನ ವಾರೀಸುದಾರರ ಮೇಲೂ ಇದೆ. ಆದರೆ ಉಭಯತ್ರರು ಪರಸ್ಪರ ವಿಚಾರ ವಿನಿಮಯದಿಂದ ಒಮ್ಮತರಾಗಿ ಮೊಲೆ ಹಾಲನ್ನು ಬಿಡಿಸಲಿಚ್ಛಿಸುವು ದರಲ್ಲಿ ತಪ್ಪಿಲ್ಲ ಮತ್ತು ನಿಮ್ಮ ಶಿಶುಗಳಿಗೆ ಅನ್ಯ ಸ್ತ್ರೀಯಿಂದ ಸ್ತನಪಾನ ಮಾಡಿಸುವ ಇರಾದೆ ನಿಮಗಿದ್ದರೆ, ಅದಕ್ಕೆ ಪ್ರತಿಫಲವನ್ನು ನಿಶ್ಚಯಿಸಿ ಅದನ್ನು ನ್ಯಾಯೋಚಿತವಾಗಿ ಪಾವತಿ ಮಾಡಿದರೆ ಅದರಲ್ಲೂ ತಪ್ಪಿಲ್ಲ. ಅಲ್ಲಾಹನನ್ನು ಭಯಪಡಿರಿ. ನೀವು ಮಾಡುವುದೆಲ್ಲವೂ ಅಲ್ಲಾಹನ ವೀಕ್ಷಣದೊಳಗಿದೆ ಎಂಬುದನ್ನು ನೀವು ತಿಳಿದಿರಬೇಕು.

وَالْوَالِدٰتُ یُرْضِعْنَ اَوْلَادَهُنَّ حَوْلَیْنِ
كَامِلَیْنِ لِمَنْ اَرَادَ اَنْ یُّتِمَّ الرَّضَاعَةَ ؕ
وَعَلَی الْمَوْلُوْدِ لَهٗ رِزْقُهُنَّ وَكِسْوَتُهُنَّ
بِالْمَعْرُوْفِ ؕ لَا تُكَلَّفُ نَفْسٌ اِلَّا وُسْعَهَا ۚ لَا
تُضَآرَّ وَالِدَةٌ بِوَلَدِهَا وَلَا مَوْلُوْدٌ لَّهٗ
بِوَلَدِهٖ ۗ وَعَلَی الْوَارِثِ مِثْلُ ذٰلِكَ ۚ فَاِنْ
اَرَادَا فِصَالًا عَنْ تَرَاضٍ مِّنْهُمَا وَتَشَاوُرٍ
فَلَا جُنَاحَ عَلَیْهِمَا ؕ وَاِنْ اَرَدْتُّمْ اَنْ تَسْتَرْضِعُوْٓا
اَوْلَادَكُمْ فَلَا جُنَاحَ عَلَیْكُمْ اِذَا سَلَّمْتُمْ مَّاۤ
اٰتَیْتُمْ بِالْمَعْرُوْفِ ؕ وَاتَّقُوا اللّٰهَ وَاعْلَمُوْٓا
اَنَّ اللّٰهَ بِمَا تَعْمَلُوْنَ بَصِیْرٌ ﴿۲۳۳﴾

82. ಇದು ತಲಾಕ್, ಖುಲಾ, ಫಸ್ಕ್ ಅಥವಾ ತಫ್ರೀಕ್‌ನ ಮೂಲಕ ದಂಪತಿಗಳು ಪರಸ್ಪರ ಬೇರ್ಪಟ್ಟಿದ್ದು, ಸ್ತ್ರೀಯು ಸ್ತನಪಾನ ಮಾಡುವ ಮಗುವನ್ನು ಹೊಂದಿರುವ ಸಂದರ್ಭಕ್ಕಿರುವ ಆಜ್ಞೆಯಾಗಿದೆ.

234. ನಿಮ್ಮಲ್ಲಿ ಯಾರಾದರೂ ಮೃತಪಟ್ಟರೆ ಮತ್ತು ಅವರ ಪತ್ನಿಯರು ಜೀವಂತರಾಗಿದ್ದರೆ, ಅವರು (ಪತ್ನಿಯರು) ನಾಲ್ಕು ತಿಂಗಳು ಹತ್ತು ದಿನಗಳ ತನಕ ತಮ್ಮನ್ನು ತಾವೇ ತಡೆದಿರಿಸಿಕೊಳ್ಳಬೇಕು.[83] ಇದ್ದತ್ ಮುಗಿದ ಬಳಿಕ ಅವರು ತಮ್ಮ ವೈಯಕ್ತಿಕ ವಿಷಯದಲ್ಲಿ ನ್ಯಾಯೋಚಿತವಾದುದೇನನ್ನಾದರೂ ಮಾಡಿದರೆ (ಅರ್ಥಾತ್ ವಿವಾಹ) ಅದರ ಹೊಣೆ ನಿಮ್ಮ ಮೇಲಿಲ್ಲ. ಅಲ್ಲಾಹನು ನಿಮ್ಮೆಲ್ಲರ ಕರ್ಮಗಳನ್ನು ಅರಿಯುವವನಾಗಿರುತ್ತಾನೆ.

وَالَّذِينَ يُتَوَفَّوْنَ مِنكُمْ وَيَذَرُونَ أَزْوَاجًا يَتَرَبَّصْنَ بِأَنفُسِهِنَّ أَرْبَعَةَ أَشْهُرٍ وَعَشْرًا ۖ فَإِذَا بَلَغْنَ أَجَلَهُنَّ فَلَا جُنَاحَ عَلَيْكُمْ فِيمَا فَعَلْنَ فِي أَنفُسِهِنَّ بِالْمَعْرُوفِ ۗ وَاللَّهُ بِمَا تَعْمَلُونَ خَبِيرٌ ﴿٢٣٤﴾

235. ಇದ್ದತ್‌ನ ಕಾಲಾವಧಿಯಲ್ಲಿ ಆ ವಿಧವೆಯರೊಂದಿಗೆ ವಿವಾಹದ ಇರಾದೆಯನ್ನು ನೀವು ಸಂಕೇತಗಳ ಮೂಲಕ ಪ್ರಕಟಗೊಳಿಸಿದರೂ ಮನಸ್ಸಿನೊಳಗೆ ಬಚ್ಚಿಟ್ಟರೂ ತಪ್ಪಿಲ್ಲ. ನಿಮ್ಮ ಮನದೊಳಗೆ ಅವರ ಯೋಚನೆ ಬಂದೇ ತೀರುವುದೆಂಬುದನ್ನು ಅಲ್ಲಾಹನು ಅರಿತಿರುತ್ತಾನೆ. ಆದರೆ ರಹಸ್ಯ ವಾಗ್ದಾನ ಮಾಡಬಾರದು. ಯಾವುದೇ ಪ್ರಸ್ತಾಪ ಮಾಡುವುದಾದರೆ ನ್ಯಾಯೋಚಿತ ರೀತಿಯಿಂದ ಮಾಡಿರಿ. ಇದ್ದತ್ ಪೂರ್ಣಗೊಳ್ಳುವ ತನಕ ವಿವಾಹ ಬಂಧನದ ನಿರ್ಧಾರ ಮಾಡಬೇಡಿರಿ. ಅಲ್ಲಾಹನು ನಿಮ್ಮ ಹೃದಯಗಳಲ್ಲಿರುವುದನ್ನೂ ಅರಿಯುತ್ತಾನೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ. ಆದುದರಿಂದ ಆತನನ್ನು ಭಯಪಡಿರಿ. ಅಲ್ಲಾಹನು ಚಿಕ್ಕ ಪುಟ್ಟ ವಿಷಯಗಳನ್ನು ಕ್ಷಮಿಸುವವನೂ ಸಹನಶೀಲನೂ ಆಗಿರುತ್ತಾನೆಂಬುದನ್ನು ನೀವು ತಿಳಿದಿರಬೇಕು.

وَلَا جُنَاحَ عَلَيْكُمْ فِيمَا عَرَّضْتُم بِهِ مِنْ خِطْبَةِ النِّسَاءِ أَوْ أَكْنَنتُمْ فِي أَنفُسِكُمْ ۚ عَلِمَ اللَّهُ أَنَّكُمْ سَتَذْكُرُونَهُنَّ وَلَٰكِن لَّا تُوَاعِدُوهُنَّ سِرًّا إِلَّا أَن تَقُولُوا قَوْلًا مَّعْرُوفًا ۚ وَلَا تَعْزِمُوا عُقْدَةَ النِّكَاحِ حَتَّىٰ يَبْلُغَ الْكِتَابُ أَجَلَهُ ۚ وَاعْلَمُوا أَنَّ اللَّهَ يَعْلَمُ مَا فِي أَنفُسِكُمْ فَاحْذَرُوهُ ۚ وَاعْلَمُوا أَنَّ اللَّهَ غَفُورٌ حَلِيمٌ ﴿٢٣٥﴾

236. ನೀವು ನಿಮ್ಮ ಸ್ತ್ರೀಯರನ್ನು ಸ್ಪರ್ಶಿಸುವುದಕ್ಕಿಂತ ಅಥವಾ ಅವರಿಗೆ ಮಹ್ರ್ (ವಿವಾಹ ಧನ) ನಿಶ್ಚಯಿಸುವುದಕ್ಕಿಂತ ಮುಂಚೆ ಅವರಿಗೆ ತಲಾಕ್ ಕೊಟ್ಟರೆ, ನಿಮ್ಮ ಮೇಲೇನೂ ದೋಷವಿಲ್ಲ. ಇಂತಹ ಸಂದರ್ಭದಲ್ಲಿ ಅವರಿಗೆ ಸ್ವತ್ತನ್ನೇನಾದರೂ ಕೊಡಬೇಕು. ಧನಿಕರು ತನ್ನ ಶಕ್ತ್ಯಾನುಸಾರ ಮತ್ತು ಬಡವನು ತನ್ನ ಶಕ್ತ್ಯಾನುಸಾರ ನ್ಯಾಯೋಚಿತ ರೀತಿಯಿಂದ ಕೊಡಬೇಕು. ಇದು ಸಜ್ಜನರ ಮೇಲಿರುವ ಬಾಧ್ಯತೆಯಾಗಿದೆ.

لَّا جُنَاحَ عَلَيْكُمْ إِن طَلَّقْتُمُ النِّسَاءَ مَا لَمْ تَمَسُّوهُنَّ أَوْ تَفْرِضُوا لَهُنَّ فَرِيضَةً ۚ وَمَتِّعُوهُنَّ عَلَى الْمُوسِعِ قَدَرُهُ وَعَلَى الْمُقْتِرِ قَدَرُهُ مَتَاعًا بِالْمَعْرُوفِ ۖ حَقًّا عَلَى الْمُحْسِنِينَ ﴿٢٣٦﴾

83. ಪತಿಯೊಂದಿಗೆ 'ದೈಹಿಕ ಸಂಪರ್ಕ' ಏರ್ಪಡುವ ಮೊದಲೇ ಪತಿಯನ್ನು ಕಳಕೊಂಡ ಸ್ತ್ರೀಯರಿಗೂ ಮರಣದ ನಂತರದ ಈ ಇದ್ದತ್ ಅನ್ವಯಿಸುತ್ತದೆ. ಆದರೆ ಗರ್ಭಿಣಿ ಸ್ತ್ರೀ ಇದಕ್ಕೆ ಹೊರತಾಗಿದ್ದಾಳೆ. ಆಕೆಯ ಇದ್ದತ್‌ನ ಅವಧಿ ಹೆರಿಗೆಯ ತನಕವಾಗಿದೆ. ಹೆರಿಗೆ ಪತಿಯ ನಿಧನದ ತಕ್ಷಣವಾದರೂ ಅಥವಾ ಕೆಲವು ತಿಂಗಳುಗಳ ಬಳಿಕವಾದರೂ ಸರಿಯೇ. 'ತಮ್ಮನ್ನು ತಾವು ತಡೆದಿರಿಸಿಕೊಳ್ಳಬೇಕು' ಎಂದರೆ ಮರುವಿವಾಹದಿಂದ ತಡೆದಿರಿಸಿಕೊಳ್ಳಬೇಕೆಂದು ಮಾತ್ರವಲ್ಲ, ತನ್ನನ್ನು ಶೃಂಗಾರದಿಂದಲೂ ತಡೆದಿರಿಸಬೇಕೆಂಬುದೂ ಅದರಲ್ಲಿ ಸೇರಿದೆ.

237. ಅವರನ್ನು ಸ್ಪರ್ಶಿಸುವುದಕ್ಕಿಂತ ಮುಂಚೆ ತಲಾಕ್ ಕೊಟ್ಟರೆ, 'ವಿವಾಹಧನ' (ಮಹ್ರ್) ನಿಶ್ಚಯಿಸಲ್ಪಟ್ಟಿದ್ದರೆ, ಅರ್ಧಾಂಶ ವಿವಾಹಧನ ಕೊಡಬೇಕು. ಸ್ತ್ರೀಯು ಮೃದು ನೀತಿಯನ್ನನುಸರಿಸಿದರೆ (ಮತ್ತು ವಿವಾಹಧನ ಬಿಟ್ಟುಕೊಟ್ಟರೆ) ಅಥವಾ ವಿವಾಹ ಸಂಬಂಧವನ್ನು ಕೈಯಲ್ಲಿರಿಸಿ ಕೊಂಡಿರುವ ಪುರುಷನು ಮೃದು ನೀತಿಯನ್ನನುಸರಿಸಿದರೆ (ಮತ್ತು ಪೂರ್ಣ ವಿವಾಹಧನ ಕೊಟ್ಟು ಬಿಟ್ಟರೆ) ಅದು ಬೇರೆ ವಿಷಯ ಮತ್ತು ನೀವು (ಅರ್ಥಾತ್ ಪತಿ) ಮೃದುನೀತಿಯನ್ನನುಸರಿಸಿದರೆ ಇದು ಧರ್ಮನಿಷ್ಠೆಯೊಂದಿಗೆ ಹೆಚ್ಚು ಅನುರೂಪವಾಗಿರುತ್ತದೆ. ಪರಸ್ಪರ ವ್ಯವಹಾರದಲ್ಲಿ ಔದಾರ್ಯವನ್ನು ಮರೆಯಬೇಡಿರಿ. ನಿಮ್ಮ ಕರ್ಮಗಳನ್ನು ಅಲ್ಲಾಹನು ವೀಕ್ಷಿಸುತ್ತಿದ್ದಾನೆ.

وَإِنْ طَلَّقْتُمُوهُنَّ مِنْ قَبْلِ أَنْ تَمَسُّوهُنَّ وَقَدْ فَرَضْتُمْ لَهُنَّ فَرِيضَةً فَنِصْفُ مَا فَرَضْتُمْ إِلَّا أَنْ يَعْفُونَ أَوْ يَعْفُوَ الَّذِي بِيَدِهِ عُقْدَةُ النِّكَاحِ ۚ وَأَنْ تَعْفُوا أَقْرَبُ لِلتَّقْوَىٰ ۚ وَلَا تَنْسَوُا الْفَضْلَ بَيْنَكُمْ ۚ إِنَّ اللَّهَ بِمَا تَعْمَلُونَ بَصِيرٌ ﴿٢٣٧﴾

238. ನಿಮ್ಮ ನಮಾಝ್‌ಗಳನ್ನು ಜಾಗರೂಕತೆಯಿಂದ ಪಾಲಿಸಿರಿ; ಮುಖ್ಯವಾಗಿ ಸರ್ವಗುಣ ಸಂಪನ್ನವಾದ ನಮಾಝ್.[84] ಅತ್ಯಂತ ವಿಧೇಯ ದಾಸರು ನಿಲ್ಲುವ ಹಾಗೆ ಅಲ್ಲಾಹನ ಮುಂದೆ ನಿಲ್ಲಿರಿ.

حَافِظُوا عَلَى الصَّلَوَاتِ وَالصَّلَاةِ الْوُسْطَىٰ وَقُومُوا لِلَّهِ قَانِتِينَ ﴿٢٣٨﴾

239. ಭಯೋತ್ಪಾದಕ ಪರಿಸ್ಥಿತಿಯಲ್ಲಿ, ಪಾದಚಾರಿಗಳಾಗಿ ಅಥವಾ ಸವಾರರಾಗಿ ಸಾಧ್ಯವಿರುವ ರೀತಿಯಲ್ಲಿ ನಮಾಝ್ ನಿರ್ವಹಿಸಿರಿ. ಅಭಯವೊದಗಿದಾಗ ಹಿಂದೆ ನೀವು ತಿಳಿಯದೆ ಇದ್ದುದನ್ನು ಅಲ್ಲಾಹನು ನಿಮಗೆ ಕಲಿಸಿ ಕೊಟ್ಟಿರುವ ರೀತಿಯಲ್ಲಿ ಅವನನ್ನು ಧ್ಯಾನಿಸಿರಿ.

فَإِنْ خِفْتُمْ فَرِجَالًا أَوْ رُكْبَانًا ۖ فَإِذَا أَمِنْتُمْ فَاذْكُرُوا اللَّهَ كَمَا عَلَّمَكُمْ مَا لَمْ تَكُونُوا تَعْلَمُونَ ﴿٢٣٩﴾

240. ನಿಮ್ಮಲ್ಲಿ ಪತ್ನಿಯರನ್ನು ಬಿಟ್ಟು ಮೃತ್ಯುವಶರಾಗುವವರು ತಮ್ಮ ಪತ್ನಿಯರಿಗೆ ಒಂದು ವರ್ಷದ ವರೆಗೆ ಜೀವನಾಂಶ ಕೊಡಬೇಕೆಂದೂ ಅವರನ್ನು ಗೃಹಬಾಹಿರರನ್ನಾಗಿ ಮಾಡಬಾರದೆಂದೂ ಉಯಿಲು ಅಥವಾ ಮೃತ್ಯುಪತ್ರ ಮಾಡಬೇಕು. ಆ ಬಳಿಕ ಅವರು ತಾವೇ ಹೊರಟು ಹೋದರೆ ಅವರು ತಮ್ಮ ವಿಷಯದಲ್ಲಿ ನ್ಯಾಯೋಚಿತವಾಗಿ ಏನು ಮಾಡಿದರೂ ಅದರ ಹೊಣೆ ನಿಮ್ಮ ಮೇಲಿಲ್ಲ. ಅಲ್ಲಾಹನು ಎಲ್ಲರ ಮೇಲೂ ಪ್ರಬಲಾಧಿಕಾರವುಳ್ಳವನೂ ವಿವೇಕಜ್ಞಾನಿಯೂ ಆಗಿರುತ್ತಾನೆ.

وَالَّذِينَ يُتَوَفَّوْنَ مِنْكُمْ وَيَذَرُونَ أَزْوَاجًا وَصِيَّةً لِأَزْوَاجِهِمْ مَتَاعًا إِلَى الْحَوْلِ غَيْرَ إِخْرَاجٍ ۚ فَإِنْ خَرَجْنَ فَلَا جُنَاحَ عَلَيْكُمْ فِي مَا فَعَلْنَ فِي أَنْفُسِهِنَّ مِنْ مَعْرُوفٍ ۗ وَاللَّهُ عَزِيزٌ حَكِيمٌ ﴿٢٤٠﴾

84. ಮೂಲದಲ್ಲಿ 'ಸಲಾತುಲ್ ಉಸ್ತಾ' ಎಂಬ ಪದ ಪ್ರಯೋಗವಾಗಿದೆ. 'ಉಸ್ತಾ' ಎಂದರೆ ಮಧ್ಯಮ ಎಂದಾಗಿದೆ. ಉನ್ನತ ಮತ್ತು ಶ್ರೇಷ್ಠ ಎಂಬರ್ಥವೂ ಅದಕ್ಕಿದೆ. 'ಸಲಾತುಲ್ ಉಸ್ತಾ' ಎಂದರೆ ನಡುವಿನ ನಮಾಝ್ ಎಂದೂ ಆಗಬಹುದು ಅಥವಾ ಸಮಯಪಾಲನೆ ಮತ್ತು ಸಂಪೂರ್ಣ ಕಟ್ಟುನಿಟ್ಟಿನೊಂದಿಗೆ ಏಕಾಗ್ರತೆಯಿಂದ ಮಾಡುವ ಸರ್ವ ಗುಣಸಂಪನ್ನವಾದ ನಮಾಝ್ ಕೂಡ ಆಗಬಹುದು. ನಡುವಿನ ನಮಾಝ್ ಎಂದು ಅರ್ಥೈಸಿರುವ ವ್ಯಾಖ್ಯಾನಕಾರರು ಇದನ್ನು 'ಅಸರ್' ನಮಾಝ್ ಎನ್ನುತ್ತಾರೆ.

241. ಇದೇ ರೀತಿಯಲ್ಲಿ ತಲಾಕ್ ಕೊಡಲ್ಪಟ್ಟ ಸ್ತ್ರೀಯರಿಗೆ ನ್ಯಾಯೋಚಿತವಾಗಿ ಸ್ವತ್ತನ್ನೇನಾದರೂ ಕೊಟ್ಟು ಬೀಳ್ಕೊಡಬೇಕು. ಇದು ಧರ್ಮನಿಷ್ಠರುಗಳ ಮೇಲಿನ ಬಾಧ್ಯತೆಯಾಗಿರುತ್ತದೆ.

وَلِلْمُطَلَّقٰتِ مَتَاعٌۢ بِالْمَعْرُوْفِ ۭ حَقًّا
عَلَى الْمُتَّقِيْنَ ﴿۲۴۱﴾

242. ಹೀಗೆ ಅಲ್ಲಾಹನು ತನ್ನ ಆದೇಶಗಳನ್ನು ಸುಸ್ಪಷ್ಟವಾಗಿ ವಿವರಿಸಿ ಹೇಳುತ್ತಾನೆ. ನೀವು ವಿಚಾರವಂತರಾಗುವಿರೆಂದು ನಿರೀಕ್ಷಿಸಲಾಗಿದೆ.

كَذٰلِكَ يُبَيِّنُ اللّٰهُ لَكُمْ اٰيٰتِهٖ
لَعَلَّكُمْ تَعْقِلُوْنَ ﴿۲۴۲﴾

243. ಮೃತ್ಯುವಿಗೆ ಹೆದರಿ ತಮ್ಮ ಮನೆಮಾರುಗಳನ್ನು ಬಿಟ್ಟು ಹೋದ ಸಾವಿರಾರು ಮಂದಿಯ ಬಗ್ಗೆ ನೀವು ವಿವೇಚಿಸಿದಿರಾ? ಅಲ್ಲಾಹನು ಅವರೊಡನೆ, 'ಸತ್ತು ಹೋಗಿರಿ' ಎಂದನು. ಅನಂತರ ಅವನು ಅವರಿಗೆ ಜೀವದಾನ ಮಾಡಿದನು.[85] ವಾಸ್ತವದಲ್ಲಿ ಅಲ್ಲಾಹನು ಮಾನವರ ಮೇಲೆ ಮಹಾ ಕೃಪೆ ತೋರುವವನಾಗಿರುತ್ತಾನೆ. ಆದರೆ, ಅನೇಕರು ಕೃತಜ್ಞತೆ ಸಲ್ಲಿಸುವುದಿಲ್ಲ.

اَلَمْ تَرَ اِلَى الَّذِيْنَ خَرَجُوْا مِنْ دِيَارِهِمْ
وَهُمْ اُلُوْفٌ حَذَرَ الْمَوْتِ ۠ فَقَالَ لَهُمُ
اللّٰهُ مُوْتُوْا ۣ ثُمَّ اَحْيَاهُمْ ۭ اِنَّ اللّٰهَ لَذُوْ
فَضْلٍ عَلَى النَّاسِ وَلٰكِنَّ اَكْثَرَ
النَّاسِ لَا يَشْكُرُوْنَ ﴿۲۴۳﴾

244. ಮುಸ್ಲಿಮರೇ, ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ. ಅಲ್ಲಾಹನು ಸರ್ವವನ್ನೂ ಆಲಿಸುವವನೂ ಅರಿತಿರುವವನೂ ಆಗಿರುತ್ತಾನೆಂಬುದನ್ನು ಚೆನ್ನಾಗಿ ತಿಳಿದು ಕೊಳ್ಳಿರಿ.

وَقَاتِلُوْا فِيْ سَبِيْلِ اللّٰهِ وَاعْلَمُوْٓا اَنَّ اللّٰهَ
سَمِيْعٌ عَلِيْمٌ ﴿۲۴۴﴾

245. ಅಲ್ಲಾಹನಿಗೆ ಉತ್ತಮ ಸಾಲವನ್ನು[86] ನೀಡುವವರು ನಿಮ್ಮಲ್ಲಿ ಯಾರಿದ್ದಾರೆ? ಹಾಗಾದರೆ ಅವನು ಅದನ್ನು ಅನೇಕಾನೇಕಪಟ್ಟು ವರ್ಧಿಸಿ ನಿಮಗೆ ಮರಳಿಸುವನು. ಕ್ಷಯಗೊಳಿಸುವುದೂ ವರ್ಧಿಸುವುದೂ ಅಲ್ಲಾಹನ ಅಧಿಕಾರದಲ್ಲಿದೆ. ನಿಮಗೆಲ್ಲ ಆತನೆಡೆಗೇ ಮರಳಲಿಕ್ಕಿದೆ.

مَنْ ذَا الَّذِيْ يُقْرِضُ اللّٰهَ قَرْضًا حَسَنًا
فَيُضٰعِفَهٗ لَهٗٓ اَضْعَافًا كَثِيْرَةً ۭ وَاللّٰهُ
يَقْبِضُ وَيَبْصُۜطُ ۠ وَاِلَيْهِ تُرْجَعُوْنَ ﴿۲۴۵﴾

246. 'ಮೂಸಾ'ರ ಅನಂತರ ಬನೀಇಸ್ರಾಈಲರ ಸರದಾರರ ಮೇಲೆ ಸಂಭವಿಸಿದುದರ ಬಗ್ಗೆ ನೀವು ವಿವೇಚಿಸಿದಿರಾ? ಅವರು ತಮ್ಮ ಪ್ರವಾದಿಯೊಡನೆ ನಾವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಲಿಕ್ಕಾಗಿ ನಮಗೊಬ್ಬ ಅರಸನನ್ನು ನಿಯೋಗಿಸಿರಿ" ಎಂದರು. ಪ್ರವಾದಿ, "ನಿಮಗೆ ಯುದ್ಧ ಮಾಡಲು ಅಪ್ಪಣೆ ಕೊಟ್ಟಾಗ ನೀವು

اَلَمْ تَرَ اِلَى الْمَلَاِ مِنْۢ بَنِيْٓ اِسْرَاۗءِيْلَ مِنْۢ
بَعْدِ مُوْسٰى ۘ اِذْ قَالُوْا لِنَبِيٍّ لَّهُمُ ابْعَثْ لَنَا
مَلِكًا نُّقَاتِلْ فِيْ سَبِيْلِ اللّٰهِ ۭ قَالَ هَلْ
عَسَيْتُمْ اِنْ كُتِبَ عَلَيْكُمُ الْقِتَالُ اَلَّا

85. ಈ ಸೂಚನೆ ಬನೀಇಸ್ರಾಈಲರ ನಿರ್ಗಮನದ ಕಡೆಗಿದೆ. ಅಲ್ ಮಾಇದಃ ಅಧ್ಯಾಯದ ನಾಲ್ಕನೆಯ ರುಕೂಅ್‌ನಲ್ಲಿ ಅಲ್ಲಾಹನು ಇದನ್ನು ಸವಿಸ್ತಾರವಾಗಿ ವಿವರಿಸಿದ್ದಾನೆ.

86. 'ಉತ್ತಮ ಸಾಲ'ವೆಂದರೆ ಸದ್ಭಾವನೆಯೊಂದಿಗೆ ನಿಸ್ವಾರ್ಥದಿಂದ ಅಲ್ಲಾಹನ ಮಾರ್ಗದಲ್ಲಿ ಸಂಪತ್ತನ್ನು ವೆಚ್ಚಮಾಡುವುದಾಗಿದೆ. ಅದನ್ನು ಅಲ್ಲಾಹನು ತನ್ನ ಪಾಲಿನ ಸಾಲವೆಂದು ಬಗೆಯುತ್ತಾನೆ. ಅದರ ಅಸಲನ್ನು ಮಾತ್ರವಲ್ಲ ಅದಕ್ಕಿಂತ ಎಷ್ಟೋ ಪಟ್ಟು ಅಧಿಕ ಹಿಂದಿರುಗಿಸುವ ಬಗ್ಗೆ ಅಲ್ಲಾಹನು ವಾಗ್ದಾನ ಮಾಡುತ್ತಾನೆ.

ಯುದ್ಧ ಮಾಡದಿರಲಾರಿರಷ್ಟೆ?" ಎಂದು ಕೇಳಿದರು. ಅವರು, "ನಾವು ನಮ್ಮ ಸ್ವಂತ ಮನೆಗಳಿಂದ ಹೊರಕ್ಕಟ್ಟಲ್ಪಟ್ಟಿರುವಾಗ ಮತ್ತು ನಮ್ಮ ಮಕ್ಕಳು ಮರಿಗಳು ನಮ್ಮಿಂದ ಬೇರ್ಪಡಿಸಲ್ಪಟ್ಟಿರುವಾಗ ನಾವು ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸದಿರುವುದಾದರೂ ಹೇಗೆ?" ಎನ್ನತೊಡಗಿದರು. ಆದರೆ, ಅವರಿಗೆ ಯುದ್ಧ ಮಾಡಲು ಆಜ್ಞೆ ಕೊಟ್ಟಾಗ ಕೆಲವೇ ಮಂದಿಯನ್ನುಳಿದು ಮಿಕ್ಕವರೆಲ್ಲರೂ ಬೆನ್ನು ತೋರಿಸಿದರು. ಅಲ್ಲಾಹನು ಅವರ ಪೈಕಿ ಪ್ರತಿಯೊಬ್ಬ ಅಕ್ರಮಿಯನ್ನೂ ಚೆನ್ನಾಗಿ ಬಲ್ಲವನಾಗಿರುತ್ತಾನೆ.

تُقَاتِلُوا ۖ قَالُوا وَمَا لَنَا أَلَّا نُقَاتِلَ فِي
سَبِيلِ اللَّهِ وَقَدْ أُخْرِجْنَا مِن دِيَارِنَا وَ
أَبْنَائِنَا ۖ فَلَمَّا كُتِبَ عَلَيْهِمُ الْقِتَالُ تَوَلَّوْا
إِلَّا قَلِيلًا مِّنْهُمْ ۗ وَاللَّهُ عَلِيمٌ بِالظَّالِمِينَ ﴿٢٤٦﴾

247. ಅಲ್ಲಾಹನು 'ತಾಲೂತ'ರನ್ನು ನಿಮ್ಮ ಅರಸನನ್ನಾಗಿ ನೇಮಿಸಿರುತ್ತಾನೆಂದು ಅವರ ಪ್ರವಾದಿ ಅವರೊಡನೆ ಹೇಳಿದರು. ಇದನ್ನು ಕೇಳಿದಾಗ ಅವರು, "ಅವನು ನಮ್ಮ ಅರಸನಾಗಲು ಹಕ್ಕುದಾರನಾದುದು ಹೇಗೆ? ಅರಸುತನದ ಅರ್ಹತೆಯನ್ನು ಅವನಿಗಿಂತ ಹೆಚ್ಚು ನಾವು ಹೊಂದಿರುತ್ತೇವೆ. ಅವನೊಬ್ಬ ದೊಡ್ಡ ಶ್ರೀಮಂತನೂ ಅಲ್ಲ" ಎಂದರು. ಆಗ ಪ್ರವಾದಿ, "ಅಲ್ಲಾಹನು ನಿಮಗೆ ಬದಲಾಗಿ ಅವನನ್ನು ಆಯ್ಕೆ ಮಾಡಿರುತ್ತಾನೆ ಮತ್ತು ಅವನಿಗೆ ಬೌದ್ಧಿಕ ಹಾಗೂ ಶಾರೀರಿಕ ಶಕ್ತಿ ಸಾಮರ್ಥ್ಯಗಳನ್ನು ಅತ್ಯಧಿಕವಾಗಿ ನೀಡಿರುತ್ತಾನೆ. ತನ್ನ ಸಾಮ್ರಾಜ್ಯದ ಅಧಿಕಾರವನ್ನು ತನಗಿಷ್ಟ ಬಂದವರಿಗೆ ಕೊಡುವ ಅಧಿಕಾರ ಅಲ್ಲಾಹನಿಗಿದೆ. ಅಲ್ಲಾಹನು ಅತಿ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ" ಎಂದುತ್ತರಿಸಿದರು.

وَقَالَ لَهُمْ نَبِيُّهُمْ إِنَّ اللَّهَ قَدْ بَعَثَ لَكُمْ
طَالُوتَ مَلِكًا ۚ قَالُوا أَنَّىٰ يَكُونُ لَهُ الْمُلْكُ
عَلَيْنَا وَنَحْنُ أَحَقُّ بِالْمُلْكِ مِنْهُ وَلَمْ
يُؤْتَ سَعَةً مِّنَ الْمَالِ ۚ قَالَ إِنَّ اللَّهَ
اصْطَفَاهُ عَلَيْكُمْ وَزَادَهُ بَسْطَةً فِي الْعِلْمِ
وَالْجِسْمِ ۖ وَاللَّهُ يُؤْتِي مُلْكَهُ مَن يَشَاءُ ۚ
وَاللَّهُ وَاسِعٌ عَلِيمٌ ﴿٢٤٧﴾

248. ಇದರೊಂದಿಗೆ ಅವರ ಪ್ರವಾದಿಯು ಅವರೊಡನೆ "ಅವನು (ತಾಲೂತ್) ದೇವವತಿಯಿಂದ ರಾಜನಾಗಿ ನೇಮಕ ಹೊಂದಿರುವನೆಂಬ ಬಗ್ಗೆ ಸಂಕೇತವಾಗಿ, ಅವನ ಕಾಲದಲ್ಲಿ, ನಿಮ್ಮ ಪಾಲಕ ಪ್ರಭುವಿನ ಕಡೆಯಿಂದ, ನಿಮಗೆ ಮನಶ್ಶಾಂತಿಯನ್ನು ನೀಡುವ ಸಾಧನವಾಗಿರುವ ಆ ಪೆಟ್ಟಿಗೆಯು ನಿಮಗೆ ಮರಳಿ ಸಿಗುವುದು. ಅದರಲ್ಲಿ ಮೂಸಾರ ಸಂತತಿ ಮತ್ತು ಹಾರೂನರ ಸಂತತಿಯವರು ಬಿಟ್ಟು ಹೋಗಿದ್ದ ಮಂಗಲ ವಸ್ತುಗಳಿವೆ. ಅದನ್ನೀಗ ದೇವಚರರು ಹೊತ್ತುಕೊಂಡಿದ್ದಾರೆ. ನೀವು ಸತ್ಯವಿಶ್ವಾಸಿಗಳಾಗಿರುವಿರಾದರೆ ಇದು ನಿಮಗೆ ಬಹು ದೊಡ್ಡ ದೃಷ್ಟಾಂತ" ಎಂದೂ ಹೇಳಿದರು.

وَقَالَ لَهُمْ نَبِيُّهُمْ إِنَّ آيَةَ مُلْكِهِ أَن يَأْتِيَكُمُ
التَّابُوتُ فِيهِ سَكِينَةٌ مِّن رَّبِّكُمْ وَبَقِيَّةٌ
مِّمَّا تَرَكَ آلُ مُوسَىٰ وَآلُ هَارُونَ تَحْمِلُهُ
الْمَلَائِكَةُ ۚ إِنَّ فِي ذَٰلِكَ لَآيَةً لَّكُمْ إِن
كُنتُم مُّؤْمِنِينَ ﴿٢٤٨﴾

249. ತಾಲೂತನು ಸೇನೆಗಳನ್ನು ನಡೆಸಿಕೊಂಡು ಹೊರಟಾಗ ಹೀಗೆಂದನು:

فَلَمَّا فَصَلَ طَالُوتُ بِالْجُنُودِ قَالَ إِنَّ اللَّهَ

"ಒಂದು ನದಿಯ ಮೂಲಕ ಅಲ್ಲಾಹನಿಂದ ನಿಮ್ಮ ಪರೀಕ್ಷೆ ನಡೆಯಲಿದೆ. ಅದರ ನೀರು ಕುಡಿದವನು ನನ್ನ ಸಂಗಡಿಗನಲ್ಲ. ಅದರಿಂದ ತನ್ನ ದಾಹವನ್ನು ನೀಗಿಸಿಕೊಳ್ಳದಿರುವಾತನು ಮಾತ್ರ ನನ್ನ ಸಂಗಾತಿ. ಒಂದು ವೇಳೆ ಒಂದು ಬೊಗಸೆ ಕುಡಿದರೆ ಚಿಂತಿಲ್ಲ." ಆದರೆ ಅವರಲ್ಲಿ ಕೆಲವೇ ಮಂದಿಯ ಹೊರತು ಎಲ್ಲರೂ ನದಿಯಿಂದ ಚೆನ್ನಾಗಿ ನೀರು ಕುಡಿದುಬಿಟ್ಟರು. ಹೀಗೆ ತಾಲೂತ್ ಮತ್ತು ಅವನ ಮುಸ್ಲಿಮ್ ಸಂಗಡಿಗರು ನದಿಯನ್ನು ದಾಟಿ ಮುಂದುವರಿದಾಗ ಅವರು ತಾಲೂತನೊಡನೆ, ಇಂದು ನಮ್ಮಲ್ಲಿ ಜಾಲೂತ್ ಮತ್ತು ಅವನ ಸೇನೆಗಳೊಂದಿಗೆ ಹೋರಾಡಲು ಶಕ್ತಿಯಿಲ್ಲವೆಂದು ಹೇಳಿಬಿಟ್ಟರು.[87] ಆದರೆ ತಮಗೆ ಒಂದು ದಿನ ಅಲ್ಲಾಹನನ್ನು ಸಂಧಿಸಲಿಕ್ಕಿದೆಯೆಂಬುದನ್ನು ಅರಿತಿದ್ದವರು, "ಅಲ್ಲಾಹನ ವತಿಯಿಂದ ಅದೆಷ್ಟೋ ಸಲ ಒಂದು ಚಿಕ್ಕ ಸಮೂಹವು ಅತಿ ದೊಡ್ಡ ಸಮೂಹದ ಮೇಲೆ ವಿಜಯ ಪಡೆದುದಿದೆ. ಅಲ್ಲಾಹನು ಸಹನಶೀಲರೊಂದಿಗಿದ್ದಾನೆ" ಎಂದು ಹೇಳಿದರು.

مُبْتَلِيكُمْ بِنَهَرٍ ۚ فَمَنْ شَرِبَ مِنْهُ فَلَيْسَ مِنِّي ۚ وَمَنْ لَّمْ يَطْعَمْهُ فَإِنَّهُ مِنِّي إِلَّا مَنِ اغْتَرَفَ غُرْفَةً بِيَدِهِ ۚ فَشَرِبُوا مِنْهُ إِلَّا قَلِيلًا مِّنْهُمْ ۗ فَلَمَّا جَاوَزَهُ هُوَ وَالَّذِينَ آمَنُوا مَعَهُ ۙ قَالُوا لَا طَاقَةَ لَنَا الْيَوْمَ بِجَالُوتَ وَجُنُودِهِ ۚ قَالَ الَّذِينَ يَظُنُّونَ أَنَّهُمْ مُّلَاقُوا اللَّهِ ۙ كَمْ مِّنْ فِئَةٍ قَلِيلَةٍ غَلَبَتْ فِئَةً كَثِيرَةً بِإِذْنِ اللَّهِ ۗ وَاللَّهُ مَعَ الصَّابِرِينَ ﴿٢٤٩﴾

250. ಅವರು 'ಜಾಲೂತ್' ಮತ್ತು ಅವನ ಸೇನೆಗಳನ್ನೆದುರಿಸಲು ಹೊರಟಾಗ ಹೀಗೆ ಪ್ರಾರ್ಥಿಸಿದರು, "ಓ ನಮ್ಮ ಪ್ರಭೂ, ನಮಗೆ ಸಹನೆಯನ್ನು ಪ್ರದಾನ ಮಾಡು. ನಮ್ಮ ಹೆಜ್ಜೆಗಳನ್ನು ಅಚಲಗೊಳಿಸು. ಸತ್ಯನಿಷೇಧಿ ತಂಡದ ಎದುರು ನಮಗೆ ವಿಜಯ ನೀಡು."

وَلَمَّا بَرَزُوا لِجَالُوتَ وَجُنُودِهِ قَالُوا رَبَّنَا أَفْرِغْ عَلَيْنَا صَبْرًا وَّثَبِّتْ أَقْدَامَنَا وَانْصُرْنَا عَلَى الْقَوْمِ الْكَافِرِينَ ﴿٢٥٠﴾

251. ಕೊನೆಗೆ ಅಲ್ಲಾಹನ ಅನುಮತಿಯಿಂದ ಅವರು ಸತ್ಯನಿಷೇಧಕರನ್ನು ಹೊಡೆದಟ್ಟಿದರು ಮತ್ತು ದಾವೂದರು ಜಾಲೂತನನ್ನು ವಧಿಸಿದರು. ಅಲ್ಲಾಹನು ಅವರಿಗೆ ಸಾಮ್ರಾಜ್ಯವನ್ನೂ ಯುಕ್ತಿಯನ್ನೂ ಅವನು ಬಯಸಿದ ಎಲ್ಲಾ ವಿಷಯಗಳ ಜ್ಞಾನವನ್ನೂ ನೀಡಿದನು. -ಹೀಗೆ ಅಲ್ಲಾಹನು ಮಾನವರ ಒಂದು ಕೂಟವನ್ನು ಇನ್ನೊಂದು ಕೂಟದ ಮೂಲಕ ಸರಿಸಿ ಬಿಡದಿರುತ್ತಿದ್ದರೆ ಭೂಮಿಯ ವ್ಯವಸ್ಥೆಯು ಕೆಟ್ಟು ಹೋಗುತ್ತಿತ್ತು. ಆದರೆ ಲೋಕದ ಜನರ ಮೇಲೆ ಅಲ್ಲಾಹನ ಮಹಾ ಕೃಪೆಯಿದೆ. (ಅವನು ಈ ರೀತಿಯಲ್ಲಿ ಕ್ಷೋಭೆಯನ್ನು ನಿವಾರಿಸುವ ವ್ಯವಸ್ಥೆ ಮಾಡುತ್ತಲೇ ಇರುತ್ತಾನೆ.)

فَهَزَمُوهُمْ بِإِذْنِ اللَّهِ ۙ وَقَتَلَ دَاوُودُ جَالُوتَ وَآتَاهُ اللَّهُ الْمُلْكَ وَالْحِكْمَةَ وَعَلَّمَهُ مِمَّا يَشَاءُ ۗ وَلَوْلَا دَفْعُ اللَّهِ النَّاسَ بَعْضَهُمْ بِبَعْضٍ ۙ لَّفَسَدَتِ الْأَرْضُ وَلَٰكِنَّ اللَّهَ ذُو فَضْلٍ عَلَى الْعَالَمِينَ ﴿٢٥١﴾

252. ಇವು ಅಲ್ಲಾಹನ ವಚನಗಳಾಗಿದ್ದು ಇವುಗಳನ್ನು ಇದ್ದಕ್ಕಿದ್ದಂತೆ

تِلْكَ آيَاتُ اللَّهِ نَتْلُوهَا عَلَيْكَ بِالْحَقِّ ۚ

87. ಪ್ರಾಯಶಃ ನದಿಯ ನೀರನ್ನು ಕುಡಿಯುವ ಮೂಲಕ ತಮ್ಮ ತಾಳ್ಮೆಯನ್ನು ಕಳಕೊಂಡವರೇ ಈ ಮಾತನ್ನೂ ಹೇಳಿರಬೇಕು.

ನಾವು ನಿಮಗೆ ಕೇಳಿಸುತ್ತಿದ್ದೇವೆ ಮತ್ತು ನಿಶ್ಚಯವಾಗಿಯೂ ನೀವು ಸಂದೇಶವಾಹಕರಾಗಿ ಕಳುಹಿಸಲ್ಪಟ್ಟವರಲ್ಲಾಗಿರುತ್ತೀರಿ.

وَاِنَّكَ لَمِنَ الْمُرْسَلِيْنَ ﴿٢٥٢﴾

253. *(ನಮ್ಮ ವತಿಯಿಂದ ಮಾನವರ ಸನ್ಮಾರ್ಗದರ್ಶನಕ್ಕಾಗಿ ನಿಯುಕ್ತರಾದ) ಸಂದೇಶವಾಹಕರವರು. ನಾವು ಅವರಲ್ಲಿ ಒಬ್ಬರಿಂದೊಬ್ಬರಿಗೆ ಉನ್ನತೋನ್ನತ ಸ್ಥಾನಗಳನ್ನು ನೀಡಿದ್ದೇವೆ. ಅಲ್ಲಾಹನು ಸ್ವತಃ ಸಂಭಾಷಣೆ ನಡೆಸಿದವರು ಅವರಲ್ಲಿದ್ದಾರೆ. ಇನ್ನು ಕೆಲವರಿಗೆ ಆತನು ಇತರ ನೆಲೆಗಳಲ್ಲಿ ಉನ್ನತ ಸ್ಥಾನಗಳನ್ನು ನೀಡಿದನು. ಕೊನೆಗೆ ಮರ್ಯಮರ ಪುತ್ರ 'ಈಸಾ'ರಿಗೆ ಸುವ್ಯಕ್ತ ದೃಷ್ಟಾಂತಗಳನ್ನು ನೀಡಿ, ಪವಿತ್ರ ಆತ್ಮದಿಂದ ಅವರಿಗೆ ಸಹಾಯ ಮಾಡಿದನು. ಅಲ್ಲಾಹನು ಇಚ್ಛಿಸುತ್ತಿದ್ದರೆ ಈ ಸಂದೇಶವಾಹಕರ ಅನಂತರ ಸುವ್ಯಕ್ತ ದೃಷ್ಟಾಂತಗಳನ್ನು ಕಂಡವರು ಪರಸ್ಪರ ಕಾದಾಡಲು ಸಾಧ್ಯವಿರಲಿಲ್ಲ. ಆದರೆ (ಅವರನ್ನು ಭಿನ್ನಾಭಿಪ್ರಾಯಗಳಿಂದ ಬಲಾತ್ಕಾರವಾಗಿ ತಡೆಯುವುದು ಅಲ್ಲಾಹನ ನಿಯಮವಾಗಿರಲಿಲ್ಲವಾದುದರಿಂದ) ಅವರು ಪರಸ್ಪರ ಭಿನ್ನಾಭಿಪ್ರಾಯ ತಾಳಿದರು. ಅನಂತರ ಕೆಲವರು ವಿಶ್ವಾಸವಿರಿಸಿದರು, ಇನ್ನು ಕೆಲವರು ನಿರಾಕರಣೆಯ ಮಾರ್ಗವನ್ನನುಸರಿಸಿದರು. ಅಲ್ಲಾಹನು ಇಚ್ಛಿಸುತ್ತಿದ್ದರೆ ಅವರು ಪರಸ್ಪರ ಹೊಡೆದಾಡುತ್ತಿರಲಿಲ್ಲ. ಆದರೆ ಅಲ್ಲಾಹನು ತಾನಿಚ್ಛಿಸಿದುದನ್ನೇ ಮಾಡುತ್ತಾನೆ.

تِلْكَ الرُّسُلُ فَضَّلْنَا بَعْضَهُمْ عَلٰى بَعْضٍ ۘ مِنْهُمْ مَّنْ كَلَّمَ اللّٰهُ وَرَفَعَ بَعْضَهُمْ دَرَجٰتٍ ؕ وَاٰتَيْنَا عِيْسَى ابْنَ مَرْيَمَ الْبَيِّنٰتِ وَاَيَّدْنٰهُ بِرُوْحِ الْقُدُسِ ؕ وَلَوْ شَآءَ اللّٰهُ مَا اقْتَتَلَ الَّذِيْنَ مِنْۢ بَعْدِهِمْ مِّنْۢ بَعْدِ مَا جَآءَتْهُمُ الْبَيِّنٰتُ وَلٰكِنِ اخْتَلَفُوْا فَمِنْهُمْ مَّنْ اٰمَنَ وَمِنْهُمْ مَّنْ كَفَرَ ؕ وَلَوْ شَآءَ اللّٰهُ مَا اقْتَتَلُوْا ۟ وَلٰكِنَّ اللّٰهَ يَفْعَلُ مَا يُرِيْدُ ﴿٢٥٣﴾

254. ಸತ್ಯವಿಶ್ವಾಸಿಗಳೇ, ವ್ಯಾಪಾರ ವಿನಿಮಯಗಳು ನಡೆಯದ, ಗೆಳೆತನಗಳೂ ಶಿಫಾರಸುಗಳೂ ಫಲಕಾರಿಯಾಗದ ಆ ದಿನ ಬರುವುದಕ್ಕಿಂತ ಮೊದಲೇ ನಾವು ನಿಮಗೊದಗಿಸಿರುವ ಸೊತ್ತು ವಿತ್ತಗಳಿಂದ ಖರ್ಚು ಮಾಡಿರಿ. ನಿರಾಕರಣೆಯ ನೀತಿಯನ್ನು ಹೊಂದಿದವರೇ ಅಕ್ರಮಿಗಳು.

يٰۤاَيُّهَا الَّذِيْنَ اٰمَنُوْۤا اَنْفِقُوْا مِمَّا رَزَقْنٰكُمْ مِّنْ قَبْلِ اَنْ يَّاْتِيَ يَوْمٌ لَّا بَيْعٌ فِيْهِ وَلَا خُلَّةٌ وَّلَا شَفَاعَةٌ ؕ وَالْكٰفِرُوْنَ هُمُ الظّٰلِمُوْنَ ﴿٢٥٤﴾

255. ಅಲ್ಲಾಹನು ಚಿರಂತನು, ಸ್ವಯಂಜೀವಂತನು. ಅಖಿಲ ಪ್ರಪಂಚದ ನಿಯಂತ್ರಕನಾದ ಆತನ ಹೊರತು ಆರಾಧ್ಯನಾರೂ ಇಲ್ಲ. ಅವನಿಗೆ ತೂಕಡಿಕೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಆತನದೇ. ಆತನ ಸನ್ನಿಧಿಯಲ್ಲಿ ಆತನ ಅಪ್ಪಣೆಯಿಲ್ಲದೆ ಶಿಫಾರಸು ಮಾಡತಕ್ಕವನಾರಿದ್ದಾನೆ? ದಾಸರ ಮುಂದಿರುವುದನ್ನೂ ಆತನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು.

اَللّٰهُ لَآ اِلٰهَ اِلَّا هُوَ ۚ اَلْحَيُّ الْقَيُّوْمُ ۚ لَا تَاْخُذُهٗ سِنَةٌ وَّلَا نَوْمٌ ؕ لَهٗ مَا فِي السَّمٰوٰتِ وَمَا فِي الْاَرْضِ ؕ مَنْ ذَا الَّذِيْ يَشْفَعُ عِنْدَهٗۤ اِلَّا بِاِذْنِهٖ ؕ يَعْلَمُ مَا بَيْنَ اَيْدِيْهِمْ وَمَا خَلْفَهُمْ ۚ وَلَا يُحِيْطُوْنَ بِشَيْءٍ مِّنْ عِلْمِهٖۤ اِلَّا

*ಇಲ್ಲಿಂದ **3ನೆಯ ಕಾಂಡ ಆರಂಭ.**

ಆತನು ಸ್ವತಃ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು. ಅವನ ಅಧಿಕಾರವು[88] ಆಕಾಶಗಳನ್ನೂ ಭೂಮಿಯನ್ನೂ ವ್ಯಾಪಿಸಿದೆ. ಅವುಗಳ ಸಂರಕ್ಷಣೆಯು ಆತನಿಗೆ ದಣಿಸುವಂಥ ಕಾರ್ಯವಲ್ಲ. ಅವನು ಏಕೈಕ ಮಹೋನ್ನತನೂ ಸರ್ವ ಶ್ರೇಷ್ಠನೂ ಆಗಿರುತ್ತಾನೆ.

بِمَا شَاءَ ۚ وَسِعَ كُرْسِيُّهُ السَّمَاوَاتِ وَالْأَرْضَ ۖ وَلَا يَئُودُهُ حِفْظُهُمَا ۚ وَهُوَ الْعَلِيُّ الْعَظِيمُ ﴿٢٥٥﴾

256. ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ.[89] ಸನ್ಮಾರ್ಗವು ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ. ಇನ್ನು 'ತಾಗೂತ'(ಅತಿಕ್ರಮ)[90]ನ್ನು ನಿರಾಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಟ್ಟಾತನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ನೆಚ್ಚಿಕೊಂಡನು. (ಅವನು ಆಶ್ರಯ ಪಡೆದ) ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

لَا إِكْرَاهَ فِي الدِّينِ ۖ قَد تَّبَيَّنَ الرُّشْدُ مِنَ الْغَيِّ ۚ فَمَن يَكْفُرْ بِالطَّاغُوتِ وَيُؤْمِن بِاللَّهِ فَقَدِ اسْتَمْسَكَ بِالْعُرْوَةِ الْوُثْقَىٰ لَا انفِصَامَ لَهَا ۗ وَاللَّهُ سَمِيعٌ عَلِيمٌ ﴿٢٥٦﴾

257. ಅಲ್ಲಾಹನು ವಿಶ್ವಾಸಿಗಳ ರಕ್ಷಕ ಮಿತ್ರನಾಗಿರುತ್ತಾನೆ ಮತ್ತು ಅವನು ಇವರನ್ನು ಅಂಧಕಾರದಿಂದ ಹೊರತೆಗೆದು ಪ್ರಕಾಶಕ್ಕೆ ತರುತ್ತಾನೆ ಮತ್ತು ನಿರಾಕರಣೆ ಮಾರ್ಗವನ್ನನುಸರಿಸುವವರ ರಕ್ಷಕ ಮಿತ್ರರು ಅತಿಕ್ರಮಿ[91]ಗಳಾಗಿದ್ದಾರೆ. ಅವರು ಇವರನ್ನು ಪ್ರಕಾಶದಿಂದ ಅಂಧಕಾರಗಳ ಕಡೆಗೆ ಎಳೆದೊಯ್ಯುತ್ತಾರೆ. ಇವರು ನರಕಾಗ್ನಿಯವರಾಗಿದ್ದು ಸದಾ ಅಲ್ಲೇ ಇರುವರು.

اللَّهُ وَلِيُّ الَّذِينَ آمَنُوا يُخْرِجُهُم مِّنَ الظُّلُمَاتِ إِلَى النُّورِ ۖ وَالَّذِينَ كَفَرُوا أَوْلِيَاؤُهُمُ الطَّاغُوتُ يُخْرِجُونَهُم مِّنَ النُّورِ إِلَى الظُّلُمَاتِ ۗ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿٢٥٧﴾

258. ನೀವೇನು ಇಬ್‌ರಾಹೀಮರೊಂದಿಗೆ ತರ್ಕ ಮಾಡಿದ ವ್ಯಕ್ತಿಯ[92] ಕುರಿತು ಗಮನಿಸಲಿಲ್ಲವೇ? ತರ್ಕವು ಇಬ್‌ರಾಹೀಮರ ಪ್ರಭು

أَلَمْ تَرَ إِلَى الَّذِي حَاجَّ إِبْرَاهِيمَ فِي رَبِّهِ أَنْ آتَاهُ اللَّهُ الْمُلْكَ إِذْ قَالَ إِبْرَاهِيمُ رَبِّيَ الَّذِي

88. ಮೂಲದಲ್ಲಿ 'ಕುರ್ಸೀ' ಎಂಬ ಪದವನ್ನು ಉಪಯೋಗಿಸಲಾಗಿದೆ. ಸಾಮಾನ್ಯವಾಗಿ ಸರಕಾರ ಅಥವಾ ಅಧಿಕಾರದ ಬಗ್ಗೆ ಹೇಳುವಾಗ ಈ ಪದವನ್ನು ಸೂಚ್ಯವಾಗಿ ಪ್ರಯೋಗಿಸಲಾಗುತ್ತದೆ. ಇತರ ಭಾಷೆಗಳಲ್ಲೂ ಕುರ್ಚಿ ಅಥವಾ ಆಸನ ಎಂಬ ಪದವನ್ನು ಸಾಮಾನ್ಯವಾಗಿ ಆಡಳಿತಾಧಿಕಾರಕ್ಕೆ ಬಳಸಲಾಗುತ್ತದೆ. ಈ ಪದದಿಂದಾಗಿಯೇ ಈ ಸೂಕ್ತ 'ಆಯತುಲ್ ಕುರ್ಸೀ' ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಇದರಲ್ಲಿ ಬೇರೆಲ್ಲಿಯೂ ಕಾಣಸಿಗದಂತಹ ರೀತಿಯಲ್ಲಿ ಅಲ್ಲಾಹನ ಸಂಪೂರ್ಣ ಮತ್ತು ಸಮಗ್ರ ಪರಿಚಯ ಮಾಡಿಸಲಾಗಿದೆ. ಆದ್ದರಿಂದಲೇ ಇದು ಪವಿತ್ರ ಕುರ್‌ಆನಿನ ಅತ್ಯಂತ ಶ್ರೇಷ್ಠ ವಾಕ್ಯವೆಂದು ಪ್ರವಾದಿವಚನದಲ್ಲಿ ಹೇಳಲಾಗಿದೆ.

89. ಅರ್ಥಾತ್- ಸತ್ಯವಿಶ್ವಾಸ ಸ್ವೀಕರಿಸುವಂತೆ ಯಾರನ್ನೂ ನಿರ್ಬಂಧಿಸುವಂತಿಲ್ಲ.

90. ತನ್ನ ನ್ಯಾಯಸಮ್ಮತ ಪರಿಧಿಯನ್ನು ಮೀರಿದ ಪ್ರತಿಯೊಬ್ಬ ವ್ಯಕ್ತಿಯನ್ನೂ ಅರ್ಥಕೋಶದಲ್ಲಿ 'ತಾಗೂತ್' ಎನ್ನಲಾಗುತ್ತದೆ. ಪವಿತ್ರ ಕುರ್‌ಆನಿನ ಪಾರಿಭಾಷಿಕದಲ್ಲಿ 'ತಾಗೂತ್' ಎಂದರೆ ದೇವನ ದಾಸ್ಯದ ಪರಿಧಿಯನ್ನು ಮೀರಿ ಸ್ವತಃ ದೇವತ್ವ ಮತ್ತು ಪ್ರಭುತ್ವವನ್ನು ವಾದಿಸಿಕೊಳ್ಳುವ ಹಾಗೂ ದೇವನ ದಾಸರಿಂದ ತನ್ನ ದಾಸ್ಯ ಮಾಡಿಸುವ ದಾಸನಾಗಿದ್ದಾನೆ.

91. ಇಲ್ಲಿ ತಾಗೂತ್ ಎಂಬ ಪದವನ್ನು ಅನೇಕ ತಾಗೂತ್‌ಗಳು ಎಂಬರ್ಥದಲ್ಲಿ ಉಪಯೋಗಿಸಲಾಗಿದೆ. ಅರ್ಥಾತ್- ದೇವನಿಂದ ವಿಮುಖನಾಗುವ ಮೂಲಕ ಮಾನವ ಒಬ್ಬ 'ತಾಗೂತ್'ನ ಕಪಿಮುಷ್ಠಿಯಲ್ಲಿ ಮಾತ್ರ ಸಿಲುಕುವುದಿಲ್ಲ, ಬದಲಾಗಿ ಹಲವಾರು ತಾಗೂತ್‌ಗಳು ಅವನ ಮೇಲೆ ಎರಗುತ್ತಾರೆ.

92. 'ವ್ಯಕ್ತಿ' ಎಂದರೆ 'ನಮ್ರೂದ್', ಅವನು ಹ. ಇಬ್‌ರಾಹೀಮರ(ಅ) ದೇಶವಾದ ಇರಾಕ್‌ನ ರಾಜನಾಗಿದ್ದ.

يُحْيِي وَيُمِيتُ قَالَ أَنَا أُحْيِي وَأُمِيتُ ۖ قَالَ
إِبْرَاهِيمُ فَإِنَّ اللَّهَ يَأْتِي بِالشَّمْسِ مِنَ الْمَشْرِقِ
فَأْتِ بِهَا مِنَ الْمَغْرِبِ فَبُهِتَ الَّذِي كَفَرَ ۗ
وَاللَّهُ لَا يَهْدِي الْقَوْمَ الظَّالِمِينَ (٢٥٨)

ಯಾರು ಎಂಬುದರ ಕುರಿತು ಮತ್ತು ಅಲ್ಲಾಹನು ಆ ವ್ಯಕ್ತಿಗೆ ಅಧಿಕಾರವನ್ನು ಕೊಟ್ಟಿದ್ದುದರ ಆಧಾರದಲ್ಲಿ. "ಜೀವನ ಮತ್ತು ಮರಣ ಯಾರ ಅಂಕೆಯಲ್ಲಿರುವುದೋ ಅವನು ನನ್ನ ಪ್ರಭು" ಎಂದು ಇಬ್‌ರಾಹೀಮರು ಹೇಳಿದಾಗ ಅವನು, "ಜೀವನ ಮತ್ತು ಮರಣ ನನ್ನ ಅಧಿಕಾರದಲ್ಲಿದೆ" ಎಂದನು. ಇಬ್‌ರಾಹೀಮರು, "ಸರಿ, ಹಾಗಾದರೆ ಅಲ್ಲಾಹನು ಸೂರ್ಯನನ್ನು ಪೂರ್ವ ದಿಕ್ಕಿನಿಂದ ಮೂಡಿಸುತ್ತಾನೆ. ನೀನು ಅದನ್ನು ಪಶ್ಚಿಮ ದಿಕ್ಕಿನಿಂದ ಮೂಡಿಸು" ಎಂದರು. ಇದನ್ನು ಕೇಳಿ ಆ ಸತ್ಯನಿಷೇಧಿ ದಿಗ್ಭ್ರಮೆಗೊಂಡನು. ಆದರೆ ಅಕ್ರಮಿಗಳಿಗೆ ಅಲ್ಲಾಹನು ಸನ್ಮಾರ್ಗವನ್ನು ತೋರಿಸುವುದಿಲ್ಲ.

أَوْ كَالَّذِي مَرَّ عَلَىٰ قَرْيَةٍ وَهِيَ خَاوِيَةٌ
عَلَىٰ عُرُوشِهَا قَالَ أَنَّىٰ يُحْيِي هَٰذِهِ اللَّهُ
بَعْدَ مَوْتِهَا ۖ فَأَمَاتَهُ اللَّهُ مِائَةَ عَامٍ
ثُمَّ بَعَثَهُ ۖ قَالَ كَمْ لَبِثْتَ ۖ قَالَ لَبِثْتُ
يَوْمًا أَوْ بَعْضَ يَوْمٍ ۖ قَالَ بَلْ لَبِثْتَ مِائَةَ
عَامٍ فَانْظُرْ إِلَىٰ طَعَامِكَ وَشَرَابِكَ لَمْ
يَتَسَنَّهْ ۖ وَانْظُرْ إِلَىٰ حِمَارِكَ وَلِنَجْعَلَكَ
آيَةً لِلنَّاسِ ۖ وَانْظُرْ إِلَى الْعِظَامِ كَيْفَ
نُنْشِزُهَا ثُمَّ نَكْسُوهَا لَحْمًا ۚ فَلَمَّا تَبَيَّنَ لَهُ
قَالَ أَعْلَمُ أَنَّ اللَّهَ عَلَىٰ كُلِّ شَيْءٍ قَدِيرٌ (٢٥٩)

259. ಅಥವಾ ತಲೆ ಕೆಳಗಾಗಿ ಬೊಕ್ಕ ಬೋರಲಾಗಿ ಬಿದ್ದಿದ್ದ ಗ್ರಾಮವೊಂದನ್ನು ಹಾದು ಹೋಗುತ್ತಿದ್ದ ಇನ್ನೊರ್ವ ವ್ಯಕ್ತಿಯ ದೃಷ್ಟಾಂತವನ್ನು ಗಮನಿಸಿರಿ. ಅವನು, "ನಾಶವಾಗಿದ್ದ ಈ ಗ್ರಾಮಕ್ಕೆ ಅಲ್ಲಾಹನು ಪುನಃ ಹೇಗೆ ಜೀವದಾನ ಮಾಡುವನು?" ಎಂದನು. ಆಗ ಅಲ್ಲಾಹನು ಅವನ ಪ್ರಾಣಹರಣಗೈದನು. ಅವನು ನೂರು ವರುಷಗಳ ತನಕ ಶವವಾಗಿ ಬಿದ್ದಿದ್ದನು. ಅನಂತರ ಅಲ್ಲಾಹನು ಅವನನ್ನು ಪುನಃ ಜೀವಂತಗೊಳಿಸಿ, "ನೀನು ಎಷ್ಟು ಕಾಲ ಬಿದ್ದುಕೊಂಡಿದ್ದೆ?" ಎಂದು ಕೇಳಿದನು. ಅವನು, "ಒಂದು ದಿನ ಅಥವಾ ಕೆಲವು ತಾಸುಗಳಿದ್ದಿರಬಹುದು" ಎಂದನು. "ಅಲ್ಲ; ನಿನ್ನ ಮೇಲೆ ನೂರು ವರುಷಗಳು ಇದೇ ಸ್ಥಿತಿಯಲ್ಲಿ ಸಂದುಹೋಗಿವೆ. ಈಗ ನಿನ್ನ ಆಹಾರವನ್ನೂ ಪಾನೀಯವನ್ನೂ ನೋಡು. ಅವುಗಳಲ್ಲಿ ಯಾವುದೇ ಮಾರ್ಪಾಟುಂಟಾಗಿಲ್ಲ. ಅತ್ತ ನಿನ್ನ ಕತ್ತೆಯನ್ನು ನೋಡು (ಅದರ ಅಸ್ಥಿಪಂಜರವೂ ಶಿಥಿಲವಾಗಿ ಹೋಗುತ್ತಲಿದೆ). ನಾವು ನಿನ್ನನ್ನು ಜನರಿಗೆ ಒಂದು ದೃಷ್ಟಾಂತವನ್ನಾಗಿ ಮಾಡಲಿಚ್ಛಿಸಿದುದರಿಂದ ಹೀಗೆ ಮಾಡಿದ್ದೇವು. ಮತ್ತೆ ನಾವು ಈ ಅಸ್ಥಿಪಂಜರವನ್ನೆಬ್ಬಿಸಿ ಅದರ ಮೇಲೆ ಮಾಂಸವನ್ನು ಹೇಗೆ ಹೊದಿಸಿ ಬಿಡುತ್ತೇವೆಂಬುದನ್ನು ನೋಡು" ಎಂದು ಅಲ್ಲಾಹನು ಹೇಳಿದನು. ಹೀಗೆ ವಸ್ತುಸ್ಥಿತಿ ಅವನ ಮುಂದೆ ವ್ಯಕ್ತವಾದಾಗ ಅವನು, "ಅಲ್ಲಾಹನು ಪ್ರತಿಯೊಂದು ವಸ್ತುವಿನ ಮೇಲೆ ಅಧಿಕಾರ ಹೊಂದಿದ್ದಾನೆಂಬುದನ್ನು ನಾನು ಬಲ್ಲೆ" ಎಂದನು.

وَإِذْ قَالَ إِبْرَاهِيمُ رَبِّ أَرِنِي كَيْفَ تُحْيِي
الْمَوْتَىٰ ۖ قَالَ أَوَلَمْ تُؤْمِنْ ۖ قَالَ بَلَىٰ وَلَٰكِنْ

260. "ಪ್ರಭೂ, ಮೃತ್ಯುವಶವಾದವರನ್ನು ನೀನು ಹೇಗೆ ಪುನರ್ಭವಗೊಳಿಸುತ್ತೀ ಎಂಬುದನ್ನು ನನಗೆ ತೋರಿಸಿಕೊಡು" ಎಂದು

ಇಬ್‌ರಾಹೀಮರು ಕೇಳಿದ ಸಂದರ್ಭವನ್ನೂ ಸ್ಮರಿಸಿರಿ. "ಏನು, ನಿಮಗೆ ವಿಶ್ವಾಸವಿಲ್ಲವೇ" ಎಂದು ಕೇಳಿದಾಗ ಅವರು "ವಿಶ್ವಾಸವಿದೆ; ಆದರೆ ಮನಸ್ಸಂತೃಪ್ತಿ ಬಯಸುತ್ತೇನೆ"[93] ಎಂದರು. ಆಗ ಅಲ್ಲಾಹನು, "ಹಾಗಾದರೆ ನೀನು ನಾಲ್ಕು ಪಕ್ಷಿಗಳನ್ನು ಪಳಗಿಸಿ ಅನಂತರ ಅವುಗಳ ಒಂದೊಂದು ಭಾಗವನ್ನು ಒಂದೊಂದು ಬೆಟ್ಟದ ಮೇಲೆ ಇರಿಸು. ಆಮೇಲೆ ಅವುಗಳನ್ನು ಕೂಗಿ ಕರೆ. ಅವು ನಿನ್ನ ಬಳಿ ಧಾವಿಸಿ ಬರುವುವು. ಅಲ್ಲಾಹನು ಮಹಾ ಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆಂಬುದನ್ನು ಚೆನ್ನಾಗಿ ಅರಿತುಕೊ" ಎಂದನು.

لِيَطْمَئِنَّ قَلْبِي ۖ قَالَ فَخُذْ أَرْبَعَةً مِّنَ الطَّيْرِ
فَصُرْهُنَّ إِلَيْكَ ثُمَّ اجْعَلْ عَلَىٰ كُلِّ جَبَلٍ
مِّنْهُنَّ جُزْءًا ثُمَّ ادْعُهُنَّ يَأْتِينَكَ سَعْيًا ۚ
وَاعْلَمْ أَنَّ اللَّهَ عَزِيزٌ حَكِيمٌ ﴿٢٦٠﴾

261. ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ ಖರ್ಚಿನ ಉಪಮೆ, ಒಂದು ಕಾಳನ್ನು ಬಿತ್ತಿ ಅದರಿಂದ ಏಳು ತೆನೆಗಳು ಹೊರಟು, ಪ್ರತಿಯೊಂದು ತೆನೆಯಲ್ಲಿ ನೂರು ಕಾಳುಗಳಿರುವಂತಿದೆ. ಇದೇ ರೀತಿಯಲ್ಲಿ ಅಲ್ಲಾಹನು ತಾನುದ್ದೇಶಿಸಿದವನ ಕರ್ಮಗಳಿಗೆ ವೃದ್ಧಿಯನ್ನು ದಯಪಾಲಿಸುತ್ತಾನೆ. ಅವನು ಅತ್ಯಂತ ಉದಾರಿಯೂ ಸರ್ವಜ್ಞನೂ ಆಗಿರುತ್ತಾನೆ.

مَّثَلُ الَّذِينَ يُنفِقُونَ أَمْوَالَهُمْ فِي سَبِيلِ
اللَّهِ كَمَثَلِ حَبَّةٍ أَنبَتَتْ سَبْعَ سَنَابِلَ
فِي كُلِّ سُنبُلَةٍ مِّائَةُ حَبَّةٍ ۗ وَاللَّهُ
يُضَاعِفُ لِمَن يَشَاءُ ۗ وَاللَّهُ وَاسِعٌ عَلِيمٌ ﴿٢٦١﴾

262. ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ, ಖರ್ಚುಮಾಡಿದುದನ್ನು ಆಡಿಕೊಳ್ಳದವರ ಮತ್ತು ಪರಪೀಡನಗೈಯದವರ ಪ್ರತಿಫಲವು ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವತ್ತು ಭಯ ಮತ್ತು ವ್ಯಥೆಯ ಸಂಭವವಿಲ್ಲ.

الَّذِينَ يُنفِقُونَ أَمْوَالَهُمْ فِي سَبِيلِ
اللَّهِ ثُمَّ لَا يُتْبِعُونَ مَا أَنفَقُوا مَنًّا وَلَا
أَذًى ۙ لَّهُمْ أَجْرُهُمْ عِندَ رَبِّهِمْ ۚ وَلَا
خَوْفٌ عَلَيْهِمْ وَلَا هُمْ يَحْزَنُونَ ﴿٢٦٢﴾

263. ಒಂದು ಸವಿನುಡಿ ಮತ್ತು ಕ್ಷಮಾಗುಣವು ಮನನೋಯಿಸುವ ದಾನಕ್ಕಿಂತ ಉತ್ತಮ. ಅಲ್ಲಾಹನು ನಿರಪೇಕ್ಷನು ಮತ್ತು ಸಹನಶೀಲತೆ ಅವನ ವಿಶೇಷತೆಯಾಗಿದೆ.

قَوْلٌ مَّعْرُوفٌ وَمَغْفِرَةٌ خَيْرٌ مِّن صَدَقَةٍ
يَتْبَعُهَا أَذًى ۗ وَاللَّهُ غَنِيٌّ حَلِيمٌ ﴿٢٦٣﴾

264. ಓ ಸತ್ಯವಿಶ್ವಾಸಿಗಳೇ, ತನ್ನ ಸಂಪತ್ತನ್ನು ಆಡಂಬರಕ್ಕಾಗಿ ಖರ್ಚು ಮಾಡುವವನಂತೆ ಹಾಗೂ ಅಲ್ಲಾಹ್ ಮತ್ತು ಪರಲೋಕದಲ್ಲಿ ವಿಶ್ವಾಸವಿರಿಸದವನ ಹಾಗೆ ಉಪಕಾರಭಾರ ವಿರಿಸಿಯೂ ನೋಯಿಸಿಯೂ ನಿಮ್ಮ ದಾನಧರ್ಮಗಳನ್ನು ನೀವು ನಿಷ್ಫಲಗೊಳಿಸಿಕೊಳ್ಳಬೇಡಿರಿ. ಅವನ ಖರ್ಚಿನ ಉಪಮೆಯು - ಮಣ್ಣಿನ ಮೇಲ್ಪದರವಿರುವ ಒಂದು ಬಂಡೆಯಿದ್ದು ಜೋರಾಗಿ ಮಳೆ ಸುರಿದಾಗ ಮಣ್ಣೆಲ್ಲಾ ಕೊಚ್ಚಿ ಹೋಗಿ ಕೇವಲ ಬಂಡೆಯು

يَا أَيُّهَا الَّذِينَ آمَنُوا لَا تُبْطِلُوا صَدَقَاتِكُم
بِالْمَنِّ وَالْأَذَىٰ كَالَّذِي يُنفِقُ مَالَهُ
رِئَاءَ النَّاسِ وَلَا يُؤْمِنُ بِاللَّهِ وَالْيَوْمِ
الْآخِرِ ۖ فَمَثَلُهُ كَمَثَلِ صَفْوَانٍ عَلَيْهِ
تُرَابٌ فَأَصَابَهُ وَابِلٌ فَتَرَكَهُ صَلْدًا ۖ

93. ಅರ್ಥಾತ್- ಪ್ರತ್ಯಕ್ಷ ದರ್ಶನದಿಂದಾಗುವ ಮನಸ್ಸಂತೃಪ್ತಿ.

ಮಾತ್ರ ಉಳಿದಿರುವಂತಿದೆ. ಇಂತಹವರು ತಾವು ದಾನ ಮಾಡಿ ಗಳಿಸಿದೆವೆಂದೆಣಿಸಿರುವ ಪುಣ್ಯವೇನೂ ಅವರ ಕೈ ಸೇರದು. ಸತ್ಯನಿಷೇಧಿಗಳಿಗೆ ಮಾರ್ಗದರ್ಶನ ಮಾಡುವ ಪರಿಪಾಠವನ್ನು ಅಲ್ಲಾಹನು ಇಟ್ಟುಕೊಂಡಿರುವುದಿಲ್ಲ.[94]

لَا يَقْدِرُونَ عَلَىٰ شَيْءٍ مِّمَّا كَسَبُوا ۗ وَاللَّهُ لَا يَهْدِي الْقَوْمَ الْكَافِرِينَ ﴿٢٦٤﴾

265. ಇದಕ್ಕೆ ವ್ಯತಿರಿಕ್ತವಾಗಿ ತನ್ನ ಸಂಪತ್ತನ್ನು ಕೇವಲ ಅಲ್ಲಾಹನ ಸಂತೃಪ್ತಿಗಾಗಿ ಸಂಪೂರ್ಣ ಸ್ಥಿರಚಿತ್ತತೆ ಮತ್ತು ಉಪಶಾಂತಿಯಿಂದ ಖರ್ಚು ಮಾಡುವವರ ಖರ್ಚಿನ ಉಪಮೆ- ಒಂದು ಉನ್ನತ ಪಾತಳಿಯಲ್ಲಿ ಒಂದು ಉದ್ಯಾನವಿದ್ದು ಚೆನ್ನಾಗಿ ಮಳೆಗರೆದಾಗ ಅದು ಇಮ್ಮಡಿ ಫಲ ಕೊಡುವಂತೆ ಮತ್ತು ಒಂದು ವೇಳೆ ಜಡಿಮಳೆ ಬಾರದಿದ್ದರೂ ಲಘುವಾದ ಜಿನುಗು ಮಳೆಯೂ ಅದಕ್ಕೆ ಸಾಕಾಗುವಂತೆ. ನೀವು ಮಾಡುವುದೆಲ್ಲಾ ಅಲ್ಲಾಹನ ವೀಕ್ಷಣೆಯಲ್ಲಿದೆ.

وَمَثَلُ الَّذِينَ يُنفِقُونَ أَمْوَالَهُمُ ابْتِغَاءَ مَرْضَاتِ اللَّهِ وَتَثْبِيتًا مِّنْ أَنفُسِهِمْ كَمَثَلِ جَنَّةٍ بِرَبْوَةٍ أَصَابَهَا وَابِلٌ فَآتَتْ أُكُلَهَا ضِعْفَيْنِ فَإِن لَّمْ يُصِبْهَا وَابِلٌ فَطَلٌّ ۗ وَاللَّهُ بِمَا تَعْمَلُونَ بَصِيرٌ ﴿٢٦٥﴾

266. ನಿಮ್ಮಲ್ಲೊಬ್ಬನ ಬಳಿ ತಳದಲ್ಲಿ ಕಾಲುವೆಗಳು ಹರಿಯುತ್ತಿರುವ, ಖರ್ಜೂರ, ದ್ರಾಕ್ಷೆ ಮತ್ತು ನಾನಾ ವಿಧದ ಫಲಗಳಿಂದ ತುಂಬಿದ ಒಂದು ತೋಟವಿದ್ದು, ಅವನು ಸ್ವತಃ ವೃದ್ಧನಾಗಿ ಅವನ ಎಳೆ ಹರೆಯದ ಮಕ್ಕಳು ದುರ್ಬಲರಾಗಿದ್ದ ಸ್ಥಿತಿಯಲ್ಲಿ ಅದು (ಆ ತೋಟ) ಒಂದು ಅತ್ಯುಷ್ಣ ಚಂಡಮಾರುತಕ್ಕೆ ಸಿಲುಕಿ ಸುಟ್ಟು ಹೋಗುವುದನ್ನು ಅವನು ಇಷ್ಟಪಡುವನೇ?[95] ಹೀಗೆ ನೀವು ಚಿಂತನೆ ಮಾಡಬಹುದೆಂದು ಅಲ್ಲಾಹನು ನಿಮ್ಮ ಮುಂದೆ ದೃಷ್ಟಾಂತಗಳನ್ನು ವಿವರಿಸುತ್ತಾನೆ.

أَيَوَدُّ أَحَدُكُمْ أَن تَكُونَ لَهُ جَنَّةٌ مِّن نَّخِيلٍ وَأَعْنَابٍ تَجْرِي مِن تَحْتِهَا الْأَنْهَارُ لَهُ فِيهَا مِن كُلِّ الثَّمَرَاتِ وَأَصَابَهُ الْكِبَرُ وَلَهُ ذُرِّيَّةٌ ضُعَفَاءُ فَأَصَابَهَا إِعْصَارٌ فِيهِ نَارٌ فَاحْتَرَقَتْ ۗ كَذَٰلِكَ يُبَيِّنُ اللَّهُ لَكُمُ الْآيَاتِ لَعَلَّكُمْ تَتَفَكَّرُونَ ﴿٢٦٦﴾

267. ಓ ಸತ್ಯವಿಶ್ವಾಸಿಗಳೇ, ನೀವು ಸಂಪಾದಿಸಿದ ಸಂಪತ್ತಿನಿಂದ ಮತ್ತು ನಾವು ನಿಮಗಾಗಿ ಭೂಮಿಯಿಂದ ಉತ್ಪಾದಿಸಿದವುಗಳಿಂದ ಉತ್ತಮವಾದವುಗಳನ್ನು ದೇವ ಮಾರ್ಗದಲ್ಲಿ ಖರ್ಚು ಮಾಡಿರಿ. ಅವನ ಮಾರ್ಗದಲ್ಲಿ ಕೊಡಲು ಅತ್ಯಂತ ಕೆಟ್ಟ ವಸ್ತುವನ್ನು ಪ್ರತ್ಯೇಕಿಸಿಡಲು ಪ್ರಯತ್ನಿಸಬಾರದು. ವಸ್ತುತಃ ಯಾರಾದರೂ

يَا أَيُّهَا الَّذِينَ آمَنُوا أَنفِقُوا مِن طَيِّبَاتِ مَا كَسَبْتُمْ وَمِمَّا أَخْرَجْنَا لَكُم مِّنَ الْأَرْضِ ۖ وَلَا تَيَمَّمُوا الْخَبِيثَ مِنْهُ

94. ಇಲ್ಲಿ ಸತ್ಯನಿಷೇಧಿ ಎಂಬ ಪದ ಕೃತಘ್ನ ಮತ್ತು ಅನುಗ್ರಹಗಳನ್ನು ನಿರಾಕರಿಸುವವನೆಂಬ ಅರ್ಥದಲ್ಲಿ ಪ್ರಯೋಗವಾಗಿದೆ.

95. ಅರ್ಥಾತ್- ನಿಮ್ಮ ಇಡೀ ಜೀವನ ಸಂಪಾದನೆಯಿಂದ ಪ್ರಯೋಜನ ಪಡೆಯಲು ನೀವು ಅತಿ ಹೆಚ್ಚು ನಿರ್ಬಂಧಿತರಾಗಿದ್ದ ಮತ್ತು ಮತ್ತೊಮ್ಮೆ ಸಂಪಾದಿಸುವ ಅವಕಾಶವೂ ಇಲ್ಲದಿರುವ ಸೂಕ್ಷ್ಮ ಘಟ್ಟದಲ್ಲಿ ಅದು ಸರ್ವನಾಶವಾಗುವುದನ್ನು ನೀವು ಇಷ್ಟಪಡುತ್ತೀರಾ? ಹಾಗಾದರೆ ಲೋಕದಲ್ಲಿ ಜೀವಾನಾವಧಿಯನ್ನು ಕಳೆದ ನಂತರ ಪರಲೋಕಕ್ಕೆ ತಲಪಿದಾಗ ಇಲ್ಲಿ ಲೋಕದ ನಮ್ಮೆಲ್ಲಾ ಸಾಧನೆಗಳಿಗೆ ಯಾವ ಬೆಲೆಯೂ ಇಲ್ಲ, ಲೋಕದಲ್ಲಿ ನಾವು ಸಂಪಾದಿಸಿದ್ದೆಲ್ಲವೂ ಅಲ್ಲೇ ಉಳಿಯಿತು. ಪರಲೋಕದ ಸವಿಯುಣ್ಣಲು ನಾವು ಅಲ್ಲಿ ಏನನ್ನೂ ಸಂಪಾದಿಸಲೇ ಇಲ್ಲ ಎಂದು ಏಕಾಏಕಿಯಾಗಿ ತಿಳಿದುಬಿಡುವ ರೀತಿಯಲ್ಲಿ ಪರಲೋಕಕ್ಕೆ ಪಾದಾರ್ಪಣೆ ಮಾಡಲು ನೀವು ಇಚ್ಛಿಸುವುದಾದರೂ ಹೇಗೆ?

ಅದೇ ವಸ್ತುವನ್ನು ನಿಮಗೆ ಕೊಟ್ಟಾಗ ಅಲಕ್ಷಿಸುವ ಹೊರತು ನೀವೂ ಅದನ್ನು ಸ್ವೀಕರಿಸಲು ಇಷ್ಟಪಡಲಾರಿರಿ. ಅಲ್ಲಾಹನು ನಿರಪೇಕ್ಷನಾಗಿದ್ದು ಅತ್ಯುನ್ನತ ಗುಣವಿಶೇಷಗಳನ್ನು ಹೊಂದಿದವ ನಾಗಿರುತ್ತಾನೆ.

تُنْفِقُونَ وَلَسْتُمْ بِآخِذِيهِ إِلَّا أَنْ تُغْمِضُوا فِيهِ ۚ وَاعْلَمُوا أَنَّ اللَّهَ غَنِيٌّ حَمِيدٌ ﴿٢٦٧﴾

268. ಶೈತಾನನು ನಿಮ್ಮನ್ನು ದಾರಿದ್ರ್ಯದಿಂದ ಭಯಭೀತಗೊಳಿಸುತ್ತಾನೆ ಮತ್ತು ಅಶ್ಲೀಲ ಕಾರ್ಯಗಳನ್ನೆಸಗುವ ಪ್ರಚೋದನೆಯನ್ನೀಯುತ್ತಾನೆ. ಆದರೆ, ಅಲ್ಲಾಹನು ನಿಮಗೆ ತನ್ನ ಕ್ಷಮೆ ಹಾಗೂ ಅನುಗ್ರಹದ ವಚನವನ್ನೀಯುತ್ತಾನೆ. ಅಲ್ಲಾಹನು ಮಹಾ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ.

الشَّيْطَانُ يَعِدُكُمُ الْفَقْرَ وَيَأْمُرُكُمْ بِالْفَحْشَاءِ ۖ وَاللَّهُ يَعِدُكُمْ مَغْفِرَةً مِنْهُ وَفَضْلًا ۗ وَاللَّهُ وَاسِعٌ عَلِيمٌ ﴿٢٦٨﴾

269. ಅವನು ತನಗಿಷ್ಟ ಬಂದವರಿಗೆ 'ಸದ್ವಿವೇಕ' ಪ್ರದಾನ ಮಾಡುತ್ತಾನೆ. ಸದ್ವಿವೇಕ ಪ್ರಾಪ್ತವಾದವನಿಗೆ ವಾಸ್ತವದಲ್ಲಿ ಮಹಾ ಸಂಪತ್ತು ಪ್ರಾಪ್ತವಾಯಿತೆಂದೇ ಅರ್ಥ. ಇವುಗಳಿಂದ ಬುದ್ಧಿಜೀವಿಗಳು ಮಾತ್ರ ಉಪದೇಶ ಪಡೆಯುತ್ತಾರೆ.

يُؤْتِي الْحِكْمَةَ مَنْ يَشَاءُ ۚ وَمَنْ يُؤْتَ الْحِكْمَةَ فَقَدْ أُوتِيَ خَيْرًا كَثِيرًا ۗ وَمَا يَذَّكَّرُ إِلَّا أُولُو الْأَلْبَابِ ﴿٢٦٩﴾

270. ನೀವು ಖರ್ಚು ಮಾಡಿದುದೂ ನೀವು ಹರಕೆ[96] ಹೊತ್ತುದೂ ಅಲ್ಲಾಹನಿಗೆ ತಿಳಿದಿದೆ. ಅಕ್ರಮಿಗಳಿಗೆ ಸಹಾಯಕರು ಯಾರೂ ಇಲ್ಲ.

وَمَا أَنْفَقْتُمْ مِنْ نَفَقَةٍ أَوْ نَذَرْتُمْ مِنْ نَذْرٍ فَإِنَّ اللَّهَ يَعْلَمُهُ ۗ وَمَا لِلظَّالِمِينَ مِنْ أَنْصَارٍ ﴿٢٧٠﴾

271. ನಿಮ್ಮ ದಾನಧರ್ಮಗಳನ್ನು ಬಹಿರಂಗವಾಗಿ ಕೊಡುವುದಿದ್ದರೂ ಒಳ್ಳೆಯದೇ. ಆದರೆ ರಹಸ್ಯವಾಗಿ ಬಡಬಗ್ಗರಿಗೆ ಕೊಡುವುದು ಹೆಚ್ಚು ಉತ್ತಮ. ಈ ಕ್ರಮದಿಂದಾಗಿ ನಿಮ್ಮ ಹಲವಾರು ದೋಷಗಳು ಪರಿಹಾರಗೊಳ್ಳುವುವು. ಅಲ್ಲಾಹನಿಗಂತೂ ನೀವು ಮಾಡುತ್ತಿರುವುದರ ಅರಿವು ಇದ್ದೇ ಇದೆ.

إِنْ تُبْدُوا الصَّدَقَاتِ فَنِعِمَّا هِيَ ۖ وَإِنْ تُخْفُوهَا وَتُؤْتُوهَا الْفُقَرَاءَ فَهُوَ خَيْرٌ لَكُمْ ۚ وَيُكَفِّرُ عَنْكُمْ مِنْ سَيِّئَاتِكُمْ ۗ وَاللَّهُ بِمَا تَعْمَلُونَ خَبِيرٌ ﴿٢٧١﴾

272. ಜನರಿಗೆ ಸನ್ಮಾರ್ಗ ನೀಡುವ ಹೊಣೆಗಾರಿಕೆಯೇನೂ ನಿಮ್ಮ ಮೇಲಿಲ್ಲ. ಅಲ್ಲಾಹನು ತಾನಿಚ್ಛಿಸಿದಾತನಿಗೆ ಸನ್ಮಾರ್ಗ ನೀಡುತ್ತಾನೆ. ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವುದೆಲ್ಲಾ ನಿಮ್ಮ

لَيْسَ عَلَيْكَ هُدَاهُمْ وَلَكِنَّ اللَّهَ يَهْدِي مَنْ يَشَاءُ ۗ وَمَا تُنْفِقُوا مِنْ خَيْرٍ فَلِأَنْفُسِكُمْ ۚ

96. ಹರಕೆ ಎಂದರೆ ವ್ಯಕ್ತಿ ತನ್ನ ಇಷ್ಟಾರ್ಥ ಪೂರ್ತಿಯಾದರೆ ತನ್ನ ಮೇಲೆ ಕಡ್ಡಾಯವಲ್ಲದ ಸತ್ಕರ್ಮವೊಂದನ್ನು ಮಾಡುವ ಬಗ್ಗೆ ಕರಾರು ಮಾಡುವುದಾಗಿದೆ. ಅದು ಅಲ್ಲಾಹನೊಂದಿಗೆ ಯಾಚಿಸಲಾದ ಧರ್ಮಸಮ್ಮತವಾದ ಇಷ್ಟಾರ್ಥವಾಗಿದ್ದರೆ ಮತ್ತು ಅದು ಪೂರ್ತಿಯಾದರೆ ಅವನು ಮಾಡಬೇಕೆಂದು ಭಾವಿಸಿರುವ ಕೆಲಸವೂ ಅಲ್ಲಾಹನಿಗೆ ಸಲ್ಲುವಂತಹುದೇ ಆಗಿದ್ದರೆ ಅಂತಹ ಹರಕೆ ದೇವಾನುಸರಣೆಯಲ್ಲಾಗಿದೆ. ಅದನ್ನು ಪೂರ್ತೀಕರಿಸುವುದು ಪುಣ್ಯದಾಯಕವಾಗಿದೆ. ಅನ್ಯಥಾ ಹಾಗೆ ಹರಕೆ ಹೊರುವುದು ಪಾಪವಾಗಿದೆ ಮತ್ತು ಅದನ್ನು ಈಡೇರಿಸುವುದು ಶಿಕ್ಷಾರ್ಹವಾಗಿದೆ.

ಸ್ವಂತದ ಒಳಿತಿಗಾಗಿ ಮಾತ್ರ. ಅಲ್ಲಾಹನ ಸಂಪ್ರೀತಿಯನ್ನು ಬಯಸಿಯೇ ನೀವು ಖರ್ಚು ಮಾಡುತ್ತೀರಷ್ಟೆ. ಹಾಗಿದ್ದರೆ ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವ ಸಂಪತ್ತಿನ ಸಂಪೂರ್ಣ ಪ್ರತಿಫಲ ನಿಮಗೆ ಕೊಡಲಾಗುವುದು. ನಿಮ್ಮ ಹಕ್ಕುಚ್ಯುತಿ ಖಂಡಿತ ಆಗಲಾರದು.

وَمَا تُنْفِقُوْنَ اِلَّا ابْتِغَآءَ وَجْهِ اللّٰهِ ؕ وَمَا
تُنْفِقُوْا مِنْ خَيْرٍ يُّوَفَّ اِلَيْكُمْ وَاَنْتُمْ لَا
تُظْلَمُوْنَ ﴿٢٧٢﴾

273. ಅಲ್ಲಾಹನ ಮಾರ್ಗದಲ್ಲಿ ಕಾರ್ಯವೆಸಗುವ ಭರದಲ್ಲಿ ತಮ್ಮ ಸ್ವಂತ ಜೀವನೋಪಾಯಕ್ಕಾಗಿ ಭೂಮಿಯಲ್ಲಿ ಶ್ರಮ ಪಡಲು ಸಾಧ್ಯವಾಗದಿರುವ ಬಡಜನರು ಮುಖ್ಯವಾಗಿ ಸಹಾಯಕ್ಕೆ ಅರ್ಹರಾಗಿದ್ದಾರೆ. ಅರಿವಿಲ್ಲದವನು ಅವರ ಸ್ವಾಭಿಮಾನವನ್ನು ಕಂಡು ಅವರು ಸ್ಥಿತಿವಂತರಾಗಿದ್ದಾರೆಂದೇ ಊಹಿಸುತ್ತಾನೆ. ನೀವು ಅವರ ಮುಖಭಾವಗಳಿಂದ ಅವರ ಆಂತರಿಕ ಸ್ಥಿತಿಯನ್ನು ತಿಳಿದುಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ ಬೇಡುವವರಲ್ಲ. ಅವರ ಸಹಾಯಾರ್ಥವಾಗಿ ನೀವು ಖರ್ಚು ಮಾಡುವ ಸಂಪತ್ತು ಅಲ್ಲಾಹನಿಂದ ಮರೆಯಾಗಿರದು.

لِلْفُقَرَآءِ الَّذِيْنَ اُحْصِرُوْا فِيْ سَبِيْلِ اللّٰهِ لَا
يَسْتَطِيْعُوْنَ ضَرْبًا فِي الْاَرْضِ يَحْسَبُهُمُ
الْجَاهِلُ اَغْنِيَآءَ مِنَ التَّعَفُّفِ ۚ تَعْرِفُهُمْ
بِسِيْمٰهُمْ ۚ لَا يَسْـَٔلُوْنَ النَّاسَ اِلْحَافًا ؕ وَمَا
تُنْفِقُوْا مِنْ خَيْرٍ فَاِنَّ اللّٰهَ بِهٖ عَلِيْمٌ ﴿٢٧٣﴾

274. ತಮ್ಮ ಸಂಪತ್ತನ್ನು ಅಹೋರಾತ್ರಿ ರಹಸ್ಯವಾಗಿಯೂ ಬಹಿರಂಗ ವಾಗಿಯೂ ಖರ್ಚು ಮಾಡುವವರ ಪ್ರತಿಫಲ ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇರುವುದಿಲ್ಲ.

اَلَّذِيْنَ يُنْفِقُوْنَ اَمْوَالَهُمْ بِالَّيْلِ وَالنَّهَارِ
سِرًّا وَّعَلَانِيَةً فَلَهُمْ اَجْرُهُمْ عِنْدَ رَبِّهِمْ ۚ
وَلَا خَوْفٌ عَلَيْهِمْ وَلَا هُمْ يَحْزَنُوْنَ ﴿٢٧٤﴾

275. ಆದರೆ ಬಡ್ಡಿ ತಿನ್ನುವವರ ಅವಸ್ಥೆಯು ಶೈತಾನನ ಸೋಂಕಿನಿಂದ ಹುಚ್ಚನಾದವನಂತಿದೆ.[97] ಅವರು, 'ವ್ಯಾಪಾರವೂ ಬಡ್ಡಿಯಂತೆಯೇ ಇದೆಯಲ್ಲವೇ?'[98] ಎಂದೆನ್ನುವುದೇ ಈ ಅವಸ್ಥೆಯಲ್ಲಿ ಸಿಲುಕಿ ಬಿದ್ದಿರಲು ಕಾರಣ. ವಸ್ತುತಃ ಅಲ್ಲಾಹನು ವ್ಯಾಪಾರವನ್ನು ಧರ್ಮಸಮ್ಮತ ಗೊಳಿಸಿರುತ್ತಾನೆ ಮತ್ತು ಬಡ್ಡಿಯನ್ನು ನಿಷಿದ್ಧಗೊಳಿಸಿರುತ್ತಾನೆ. ಆದುದರಿಂದ ತನ್ನ ಪ್ರಭುವಿನ ವತಿಯಿಂದ ಈ ಉಪದೇಶ ತಲಪಿದಾತನು ಮುಂದೆ ಬಡ್ಡಿಯ ವ್ಯವಹಾರವನ್ನು ವರ್ಜಿಸಿದರೆ, ಗತಕಾಲದಲ್ಲಿ ತಿಂದುದು ತಿಂದಾಯಿತು ಮತ್ತು

اَلَّذِيْنَ يَاْكُلُوْنَ الرِّبٰوا لَا يَقُوْمُوْنَ اِلَّا كَمَا
يَقُوْمُ الَّذِيْ يَتَخَبَّطُهُ الشَّيْطٰنُ مِنَ الْمَسِّ ؕ
ذٰلِكَ بِاَنَّهُمْ قَالُوْٓا اِنَّمَا الْبَيْعُ مِثْلُ الرِّبٰوا ۘ
وَاَحَلَّ اللّٰهُ الْبَيْعَ وَحَرَّمَ الرِّبٰوا ؕ فَمَنْ
جَآءَهٗ مَوْعِظَةٌ مِّنْ رَّبِّهٖ فَانْتَهٰى فَلَهٗ
مَا سَلَفَ ؕ وَاَمْرُهٗٓ اِلَى اللّٰهِ ؕ وَمَنْ عَادَ فَاُولٰٓئِكَ

97. ಅರಬರು ಹುಚ್ಚನನ್ನು 'ಮಜ್ನೂನ್' ಅರ್ಥಾತ್ ಸಮ್ಮೋಹಿತನೆಂದು ಕರೆಯುತ್ತಿದ್ದರು. ಯಾವುದಾದರೂ ವ್ಯಕ್ತಿಯ ಬಗ್ಗೆ ಅವನು ಹುಚ್ಚನಾಗಿದ್ದಾನೆ ಎನ್ನಬೇಕಾದರೆ ಅವನಿಗೆ ಯಕ್ಷಬಾಧೆ ತಟ್ಟಿದೆ ಎನ್ನುತ್ತಿದ್ದರು. ಈ ನುಡಿಗಟ್ಟನ್ನೇ ಉಪಯೋಗಿಸಿ ಪವಿತ್ರ ಕುರ್‌ಆನ್ ಬಡ್ಡಿಕೋರನನ್ನು ಬುದ್ಧಿಭ್ರಮಣೆಯಾದವನಿಗೆ ಹೋಲಿಸಿದೆ.

98. ಅರ್ಥಾತ್- ಅವರ ದೃಷ್ಟಿಕೋನದಲ್ಲಿರುವ ದೋಷವೇನೆಂದರೆ ಅವರು ವ್ಯಾಪಾರದಲ್ಲಿ ಅಸಲಿನ ಮೇಲೆ ಪಡೆಯಲಾಗುವ ಲಾಭ ಮತ್ತು ಬಡ್ಡಿಯ ನಡುವೆ ವ್ಯತ್ಯಾಸ ಕಲ್ಪಿಸುವುದಿಲ್ಲ. ಅವೆರಡೂ ಒಂದೇ ತೆರನಾದವು ಎಂದು ಅವರು ಭಾವಿಸುತ್ತಾರೆ. ವ್ಯಾಪಾರದಲ್ಲಿ ತೊಡಗಿಸಲಾದ ಹಣಕ್ಕೆ ಲಾಭ ಧರ್ಮಸಮ್ಮತವೆಂದಾದರೆ, ಸಾಲ ನೀಡಲ್ಪಟ್ಟ ಹಣಕ್ಕೆ ಲಾಭ ಪಡೆದರೆ ಅದು ನಿಷಿದ್ಧವಾಗುವುದು ಹೇಗೆ? ಎಂದು ಅವರು ವಾದಿಸುತ್ತಿದ್ದರು.

ಅವರ ಪ್ರಕರಣವು ಅಲ್ಲಾಹನ ವಶವಿದೆ.[99] ಈ ಆದೇಶದ ಅನಂತರವೂ ಈ ಕೃತ್ಯವನ್ನು ಪುನರಾವರ್ತಿಸಿದರೆ, ಅಂತಹವರು ನರಕವಾಸಿಗಳಾಗಿದ್ದು ಸದಾ ಅಲ್ಲೇ ನರಳುತ್ತಿರುವರು.

أَصْحٰبُ النَّارِ ۚ هُمْ فِيهَا خٰلِدُونَ ﴿٢٧٥﴾

276. ಅಲ್ಲಾಹನು ಬಡ್ಡಿಯ ವ್ಯವಹಾರವನ್ನು ಅಳಿಸಿಬಿಡುತ್ತಾನೆ ಮತ್ತು ದಾನಧರ್ಮಗಳನ್ನು ವೃದ್ಧಿಸುತ್ತಾನೆ. ಅಲ್ಲಾಹನು ಕೃತಘ್ನ ದುಷ್ಕರ್ಮಿಗಳನ್ನು ಮೆಚ್ಚುವುದಿಲ್ಲ.

يَمْحَقُ اللّٰهُ الرِّبٰوا وَيُرْبِي الصَّدَقٰتِ ۗ وَاللّٰهُ لَا يُحِبُّ كُلَّ كَفَّارٍ أَثِيمٍ ﴿٢٧٦﴾

277. ವಿಶ್ವಾಸವಿರಿಸುವವರ, ಸತ್ಕರ್ಮಗಳನ್ನು ಮಾಡುವವರ, ನಮಾಝನ್ನು ಸಂಸ್ಥಾಪಿಸುವವರ ಮತ್ತು ಝಕಾತ್ ಕೊಡುವವರ ಪ್ರತಿಫಲ ನಿಶ್ಚಯವಾಗಿಯೂ ಅವರ ಪ್ರಭುವಿನ ಬಳಿ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇರುವುದಿಲ್ಲ.

إِنَّ الَّذِينَ اٰمَنُوا وَعَمِلُوا الصّٰلِحٰتِ وَأَقَامُوا الصَّلٰوةَ وَاٰتَوُا الزَّكٰوةَ لَهُمْ أَجْرُهُمْ عِنْدَ رَبِّهِمْ ۚ وَلَا خَوْفٌ عَلَيْهِمْ وَلَا هُمْ يَحْزَنُونَ ﴿٢٧٧﴾

278. ಓ ಸತ್ಯವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ, ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟುಬಿಡಿರಿ.

يٰأَيُّهَا الَّذِينَ اٰمَنُوا اتَّقُوا اللّٰهَ وَذَرُوا مَا بَقِيَ مِنَ الرِّبٰوا إِنْ كُنْتُمْ مُؤْمِنِينَ ﴿٢٧٨﴾

279. ನೀವು ಹಾಗೆ ಮಾಡದಿದ್ದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ.[100] ಇನ್ನಾದರೂ ಪಶ್ಚಾತ್ತಾಪ ಪಟ್ಟರೆ (ಮತ್ತು ಬಡ್ಡಿಯನ್ನು ವರ್ಜಿಸಿದರೆ) ಅಸಲು ಹಣ ಪಡೆಯಲು ನೀವು ಹಕ್ಕುದಾರರಾಗಿರುತ್ತೀರಿ. ನೀವು ಅಕ್ರಮವೆಸಗಲೂ ಬಾರದು. ನಿಮ್ಮ ಮೇಲೆ ಅಕ್ರಮವಾಗಲೂ ಬಾರದು.

فَإِنْ لَمْ تَفْعَلُوا فَأْذَنُوا بِحَرْبٍ مِنَ اللّٰهِ وَرَسُولِهِ ۚ وَإِنْ تُبْتُمْ فَلَكُمْ رُءُوسُ أَمْوَالِكُمْ ۚ لَا تَظْلِمُونَ وَلَا تُظْلَمُونَ ﴿٢٧٩﴾

99. ಅವನು ತಿಂದು ಬಿಟ್ಟ ಬಡ್ಡಿಯನ್ನು ಅಲ್ಲಾಹನು ಮನ್ನಿಸುತ್ತಾನೆಂದು ಇಲ್ಲಿ ಹೇಳಲಾಗಿಲ್ಲ. ಬದಲಾಗಿ ಅದರ ತೀರ್ಮಾನ ಅಲ್ಲಾಹನ ಕೈಯಲ್ಲಿದೆ ಎಂದು ಹೇಳಲಾಗಿದೆ. ಆದ್ದರಿಂದ "ತಿಂದುದು ತಿಂದಾಯಿತು" ಎಂದು ಹೇಳಿದರೆ ಅದನ್ನು ಅಲ್ಲಾಹನು ಕ್ಷಮಿಸಿದ್ದಾನೆ ಎಂದು ಅರ್ಥವಲ್ಲ. ಬದಲಾಗಿ ಆ ಮೂಲಕ ಕಾನೂನಿನಲ್ಲಿರುವ ರಿಯಾಯಿತಿಯನ್ನು ಮಾತ್ರ ಸೂಚಿಸಲಾಗಿದೆ. ಅಂದರೆ ಒಬ್ಬನು ಬಡ್ಡಿ ತಿಂದಿದ್ದರೆ ಅದನ್ನು ಮರಳಿಸುವ ಬೇಡಿಕೆಯನ್ನು ಕಾನೂನಿನ ಮೂಲಕ ಮುಂದಿಡಲಾಗದೆಂದು ಈ ಸೂಕ್ತ ಸೂಚಿಸುತ್ತದೆ.

100. ಈ ಸೂಕ್ತ ಮಕ್ಕಾ ವಿಜಯದ ನಂತರ ಅವತೀರ್ಣಗೊಂಡಿತ್ತು. ಆಗ ಅರಬ್ ಜಗತ್ತು ಇಸ್ಲಾಮೀ ಸರಕಾರದ ಅಧೀನವಾಗಿತ್ತು. ಅದಕ್ಕೆ ಮೊದಲು ಬಡ್ಡಿಯ ಬಗ್ಗೆ ಅಸಮಾಧಾನ ವ್ಯಕ್ತಪಡಿಸಲಾಗಿತ್ತಾದರೂ ಅದನ್ನು ಕಾನೂನಿನ ಮೂಲಕ ನಿಷೇಧಿಸಲಾಗಿರಲಿಲ್ಲ. ಈ ಸೂಕ್ತ ಅವತೀರ್ಣವಾದ ನಂತರ ಇಸ್ಲಾಮೀ ಸರಕಾರದ ಸರಹದ್ದಿನೊಳಗೆ ಬಡ್ಡಿಯ ವ್ಯವಹಾರ ನಡೆಸುವುದು ಒಂದು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಲ್ಪಟ್ಟಿತು. ಈ ಸೂಕ್ತದ ಕೊನೆಯ ಪದಗಳ ಆಧಾರದಲ್ಲಿ ಹ. ಇಬ್ನು ಅಬ್ಬಾಸ್, ಹ. ಹಸನ್ ಬಸರೀ, ಹ.ಇಬ್ನು ಸೀನ್ ಮತ್ತು ಹ. ರಬೀಅ್ ಬಿನ್ ಅನಸ್(ರ) ಅವರ ಪ್ರಕಾರ ಇಸ್ಲಾಮೀ ಸಾಮ್ರಾಜ್ಯದಲ್ಲಿ ಬಡ್ಡಿ ತಿನ್ನುವವನನ್ನು ಬಡ್ಡಿ ವ್ಯವಹಾರ ತ್ಯಜಿಸಿ ಪಶ್ಚಾತ್ತಾಪ ಪಡುವಂತೆ ಒತ್ತಾಯಿಸಬೇಕು. ಅದಕ್ಕೆ ಅವನು ಸಿದ್ಧನಾಗದಿದ್ದರೆ ಅವನನ್ನು ವಧಿಸಬೇಕು. ಇತರ ಕರ್ಮಶಾಸ್ತ್ರಜ್ಞರ ಪ್ರಕಾರ ಅಂತಹ ವ್ಯಕ್ತಿಯನ್ನು ಬಂಧಿಸಿ, ಬಡ್ಡಿಯ ವ್ಯವಹಾರವನ್ನು ತ್ಯಜಿಸುವ ವಚನ ನೀಡುವ ತನಕವೂ ಅವನನ್ನು ಬಂಧನದಲ್ಲಿರಿಸಿದರೆ ಸಾಕಾಗುತ್ತದೆ.

280. ನಿಮ್ಮ ಸಾಲಗಾರನು 'ಕಾಸಿಲ್ಲದವನಾದರೆ' ಅವನಿಗೆ ಸುಸ್ಥಿತಿ ಯುಂಟಾಗುವ ತನಕ ಸಮಯಾವಕಾಶ ಕೊಡಿರಿ ಮತ್ತು ನೀವು ದಾನರೂಪದಲ್ಲಿ ಸಾಲವನ್ನೇ ಬಿಟ್ಟು ಕೊಟ್ಟರೆ ಅದು ನಿಮ್ಮ ಮಟ್ಟಿಗೆ ಇನ್ನಷ್ಟು ಉತ್ತಮವಾಗಿರುವುದು, ನೀವು ಅರಿತವರೇ ಆಗಿದ್ದರೆ.[101]

وَإِن كَانَ ذُو عُسْرَةٍ فَنَظِرَةٌ إِلَىٰ مَيْسَرَةٍ ۚ وَأَن تَصَدَّقُوا خَيْرٌ لَّكُمْ ۖ إِن كُنتُمْ تَعْلَمُونَ ﴿٢٨٠﴾

281. ನೀವು ಅಲ್ಲಾಹನ ಕಡೆಗೆ ಮರಳಿಸಲ್ಪಡುವ ದಿನದ ಅವಮಾನ ಹಾಗೂ ಕಷ್ಟಗಳಿಂದ ಭಯಪಡಿರಿ. ಅಲ್ಲಿ ಪ್ರತಿಯೊಬ್ಬನಿಗೂ ಅವನು ಗಳಿಸಿದ ಪುಣ್ಯ ಅಥವಾ ಪಾಪಗಳ ಸರ್ವ ಸಂಪೂರ್ಣ ಪ್ರತಿಫಲ ಸಿಗುವುದು ಮತ್ತು ಯಾರ ಮೇಲೂ ಎಷ್ಟು ಮಾತ್ರಕ್ಕೂ ಅನ್ಯಾಯವಾಗಲಾರದು.

وَاتَّقُوا يَوْمًا تُرْجَعُونَ فِيهِ إِلَى اللَّهِ ۖ ثُمَّ تُوَفَّىٰ كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿٢٨١﴾

282. ಓ ಸತ್ಯವಿಶ್ವಾಸಿಗಳೇ! ನೀವು ಅವಧಿಯನ್ನು ನಿಶ್ಚಯಿಸಿಕೊಂಡು ಪರಸ್ಪರ ಸಾಲದ ಲೇವಾದೇವಿ[102] ಮಾಡುವಾಗ ಅದನ್ನು ಬರೆದಿಟ್ಟುಕೊಳ್ಳಿರಿ. ಬರಹಗಾರನೊಬ್ಬನು ಉಭಯತ್ರರಲ್ಲಿ ಯಾರಿಗೂ ಅನ್ಯಾಯವಾಗದಂತೆ ಕರಾರು ಪತ್ರ ಬರೆಯಬೇಕು. ಅಲ್ಲಾಹನು ಯಾರಿಗೆ ಬರವಣಿಗೆಯ ಅರ್ಹತೆ ಪ್ರದಾನ ಮಾಡಿರುವನೋ ಅವನು ಬರೆಯಲು ನಿರಾಕರಿಸಬಾರದು. ಅವನು ಬರೆಯಬೇಕು. ಸಾಲಕ್ಕೆ ಬಾಧ್ಯಸ್ಥನಾದವನು (ಸಾಲ ಪಡೆಯು ವಾತನು) ಒಕ್ಕಣೆಯನ್ನು ಬರೆಯಿಸಬೇಕು. ಅವನು ತನ್ನ ಪ್ರಭುವಾದ ಅಲ್ಲಾಹನನ್ನು ಭಯಪಡಬೇಕು. ಇತ್ಯರ್ಥಗೊಂಡ ವ್ಯವಹಾರದಲ್ಲಿ ತಾರತಮ್ಯ ಮಾಡಬಾರದು. ಆದರೆ ಸಾಲ ಪಡೆದವನು ಅಲ್ಪಮತಿ ಅಥವಾ ದುರ್ಬಲನಾಗಿದ್ದರೆ ಅಥವಾ ಒಕ್ಕಣೆ ಹೇಳಲಾರದವನಾಗಿದ್ದರೆ ಅವನ ರಕ್ಷಕನು ನ್ಯಾಯ ಪೂರ್ಣವಾಗಿ ಒಕ್ಕಣೆ ಬರೆಯಿಸಬೇಕು. ಅನಂತರ ನಿಮ್ಮ ಪುರುಷರ ಪೈಕಿ ಇಬ್ಬರನ್ನು ಸಾಕ್ಷಿಯಾಗಿರಿಸಿಕೊಳ್ಳಬೇಕು. ಇಬ್ಬರು ಪುರುಷರು ಸಿಗದಿದ್ದರೆ, ಒಬ್ಬ ಪುರುಷನೂ ಇಬ್ಬರು ಸ್ತ್ರೀಯರೂ ಬೇಕು. ಇದು ಒಬ್ಬಳು ಮರೆತು ಬಿಟ್ಟರೆ ಇನ್ನೊಬ್ಬಳು ನೆನಪಿಗೆ

يَا أَيُّهَا الَّذِينَ آمَنُوا إِذَا تَدَايَنتُم بِدَيْنٍ إِلَىٰ أَجَلٍ مُّسَمًّى فَاكْتُبُوهُ ۚ وَلْيَكْتُب بَّيْنَكُمْ كَاتِبٌ بِالْعَدْلِ ۚ وَلَا يَأْبَ كَاتِبٌ أَن يَكْتُبَ كَمَا عَلَّمَهُ اللَّهُ ۚ فَلْيَكْتُبْ وَلْيُمْلِلِ الَّذِي عَلَيْهِ الْحَقُّ وَلْيَتَّقِ اللَّهَ رَبَّهُ وَلَا يَبْخَسْ مِنْهُ شَيْئًا ۚ فَإِن كَانَ الَّذِي عَلَيْهِ الْحَقُّ سَفِيهًا أَوْ ضَعِيفًا أَوْ لَا يَسْتَطِيعُ أَن يُمِلَّ هُوَ فَلْيُمْلِلْ وَلِيُّهُ بِالْعَدْلِ ۚ وَاسْتَشْهِدُوا شَهِيدَيْنِ مِن رِّجَالِكُمْ ۖ فَإِن لَّمْ يَكُونَا رَجُلَيْنِ فَرَجُلٌ وَامْرَأَتَانِ مِمَّن تَرْضَوْنَ مِنَ الشُّهَدَاءِ أَن تَضِلَّ إِحْدَاهُمَا فَتُذَكِّرَ إِحْدَاهُمَا الْأُخْرَىٰ ۚ

101. ಈ ಸೂಕ್ತದ ಆಧಾರದಲ್ಲಿ ಪರಿಗಣಿಸಲಾದ ನಿಯಮವೇನೆಂದರೆ ಸಾಲ ಮರುಪಾವತಿ ಮಾಡಲಾಗುವ ಸ್ಥಿತಿಯಲ್ಲಿರುವ ಸಾಲಗಾರನಿಗೆ ಇನ್ನಷ್ಟು ಕಾಲಾವಕಾಶ ನೀಡುವಂತೆ ಸಾಲ ನೀಡಿದವರನ್ನು ಇಸ್ಲಾಮೀ ನ್ಯಾಯಾಲಯ ಒತ್ತಾಯಿಸಬಹುದು. ಕೆಲವೊಮ್ಮೆ ಸಾಲವನ್ನು ಆಂಶಿಕವಾಗಿ ಅಥವಾ ಪೂರ್ತಿಯಾಗಿ ಮನ್ನಾ ಮಾಡಿಸುವ ಅಧಿಕಾರವೂ ಅದಕ್ಕಿರುವುದು. ಕರ್ಮಶಾಸ್ತ್ರಜ್ಞರು ನೀಡಿರುವ ವಿವರಗಳ ಪ್ರಕಾರ ಒಬ್ಬ ವ್ಯಕ್ತಿಯ ವಾಸದ ಮನೆ, ಅಡುಗೆಯ ಪಾತ್ರೆಗಳು, ಉಡುವ ಬಟ್ಟೆ ಮತ್ತು ಉಪಜೀವನಕ್ಕಾಗಿ ಬಳಸುವ ಸಲಕರಣೆಗಳನ್ನು ಎಂತಹ ಪರಿಸ್ಥಿತಿಯಲ್ಲೂ ವಶಪಡಿಸಿಕೊಳ್ಳುವಂತಿಲ್ಲ.

102. ಇದರಿಂದ ಸಾಲಕ್ಕೆ ಅವಧಿಯನ್ನು ನಿಶ್ಚಯಿಸಬೇಕು ಎಂಬ ವಿಧಿ ಹೊರಡುತ್ತದೆ.

وَلَا يَأْبَ الشُّهَدَآءُ اِذَا مَا دُعُوْا ۭ وَلَا تَسْـَٔـمُوْٓا اَنْ تَكْتُبُوْهُ صَغِيْرًا اَوْ كَبِيْرًا اِلٰٓى اَجَلِهٖ ۭ ذٰلِكُمْ اَقْسَطُ عِنْدَ اللّٰهِ وَاَقْوَمُ لِلشَّهَادَةِ وَاَدْنٰٓى اَلَّا تَرْتَابُوْٓا اِلَّآ اَنْ تَكُوْنَ تِجَارَةً حَاضِرَةً تُدِيْرُوْنَهَا بَيْنَكُمْ فَلَيْسَ عَلَيْكُمْ جُنَاحٌ اَلَّا تَكْتُبُوْهَا ۭ وَاَشْهِدُوْٓا اِذَا تَبَايَعْتُمْ ۠ وَلَا يُضَاۗرَّ كَاتِبٌ وَّلَا شَهِيْدٌ ڛ وَاِنْ تَفْعَلُوْا فَاِنَّهٗ فُسُوْقٌۢ بِكُمْ ۭ وَاتَّقُوا اللّٰهَ ۭ وَيُعَلِّمُكُمُ اللّٰهُ ۭ وَاللّٰهُ بِكُلِّ شَيْءٍ عَلِيْمٌ ۝٢٨٢

ತರಲಿಕ್ಕಾಗಿ. ಈ ಸಾಕ್ಷಿದಾರರು ನಿಮ್ಮೊಳಗಿನ ಸ್ವೀಕಾರಾರ್ಹ ಸಾಕ್ಷಿದಾರರಲ್ಲಾಗಿರಬೇಕು. ಸಾಕ್ಷಿದಾರರೊಡನೆ ಸಾಕ್ಷಿ ನಿಲ್ಲಲು ಹೇಳಿದಾಗ ಅವರು ನಿರಾಕರಿಸಬಾರದು. ವ್ಯವಹಾರವು ಚಿಕ್ಕದಿರಲಿ ಅಥವಾ ದೊಡ್ಡದಿರಲಿ-ಅವಧಿಯ ನಿರ್ಣಯದೊಂದಿಗೆ ಅದರ ಕರಾರು ಪತ್ರವನ್ನು ಬರೆಯಿಸಿಕೊಳ್ಳುವುದರ ಬಗ್ಗೆ ಉದಾಸೀನ ರಾಗದಿರಿ. ಈ ಕ್ರಮವು ಅಲ್ಲಾಹನ ಬಳಿ ನಿಮಗೆ ಹೆಚ್ಚು ನ್ಯಾಯಬದ್ಧವಾಗಿದೆ. ಇದರಿಂದ ಸಾಕ್ಷ್ಯ ನೆಲೆಗೊಳ್ಳಲು ಹೆಚ್ಚು ಸುಲಭವಾಗುತ್ತದೆ ಮತ್ತು ನೀವು ಸಂಶಯಗ್ರಸ್ತರಾಗುವ ಸಂಭಾವ್ಯತೆಯು ಕಡಿಮೆಯಾಗುತ್ತದೆ. ನೀವು ಪರಸ್ಪರ ಕೈ ಬದಲಾವಣೆಯೊಂದಿಗೆ ಮಾಡಿಕೊಳ್ಳುವ ವ್ಯಾಪಾರ ಸಂಬಂಧ ಲೇವಾದೇವಿಗಳನ್ನು ಬರೆದಿಡದಿದ್ದರೆ ದೋಷವಿಲ್ಲ. ಆದರೆ ವ್ಯಾಪಾರ ವ್ಯವಹಾರಗಳನ್ನು ಇತ್ಯರ್ಥಪಡಿಸಿಕೊಳ್ಳುವಾಗ ಸಾಕ್ಷಿ ದಾರರನ್ನು ಇರಿಸಿಕೊಳ್ಳಿರಿ. ಬರಹಗಾರರನ್ನೂ ಸಾಕ್ಷಿದಾರರನ್ನೂ ಸತಾಯಿಸಬಾರದು. ಹಾಗೆ ಮಾಡಿದರೆ ಅದು ನೀವು ಮಾಡುವ ಪಾಪವಾಗುವುದು. ಅಲ್ಲಾಹನ ಕ್ರೋಧದಿಂದ ಭಯಪಡಿರಿ. ಅವನು ನಿಮಗೆ ಸರಿಯಾದ ಕರ್ಮವಿಧಾನದ ಶಿಕ್ಷಣವನ್ನೀಯು ತ್ತಾನೆ ಮತ್ತು ಅವನು ಸರ್ವ ವಿಷಯಗಳ ಅಭಿಜ್ಞನಾಗಿರುತ್ತಾನೆ.

وَاِنْ كُنْتُمْ عَلٰي سَفَرٍ وَّلَمْ تَجِدُوْا كَاتِبًا فَرِھٰنٌ مَّقْبُوْضَةٌ ۭ فَاِنْ اَمِنَ بَعْضُكُمْ بَعْضًا فَلْيُؤَدِّ الَّذِي اؤْتُمِنَ اَمَانَتَهٗ وَلْيَتَّقِ اللّٰهَ رَبَّهٗ ۭ وَلَا تَكْتُمُوا الشَّهَادَةَ ۭ وَمَنْ يَّكْتُمْهَا فَاِنَّهٗٓ اٰثِمٌ قَلْبُهٗ ۭ وَاللّٰهُ بِمَا تَعْمَلُوْنَ عَلِيْمٌ ۝٢٨٣

283. ನೀವು ಪ್ರಯಾಣದಲ್ಲಿದ್ದು ಕರಾರುಪತ್ರವನ್ನು ಬರೆಯಿಸಲು ಬರೆಹಗಾರನಾರೂ ಸಿಗದಿದ್ದರೆ, ಅಡವು ಪಡೆದು ವ್ಯವಹಾರ ನಡೆಸಿಕೊಳ್ಳಿರಿ.[103] ನೀವು ಪರಸ್ಪರ ವಿಶ್ವಾಸವಿರಿಸಿಕೊಂಡು ವ್ಯವ ಹಾರವನ್ನೇನಾದರೂ ನಡೆಸಿಕೊಂಡರೆ, ವಿಶ್ವಾಸವಿರಿಸಲ್ಪಟ್ಟಾತನು 'ಅಮಾನತ'ನ್ನು (ಅಡವು ಪಡೆದ ವಸ್ತುವನ್ನು) ಹಿಂದಿರುಗಿಸಬೇಕು ಮತ್ತು ತನ್ನ ಪಾಲಕ ಪ್ರಭುವಾದ ಅಲ್ಲಾಹನನ್ನು ಭಯಪಡಬೇಕು. ನೀವು ಸಾಕ್ಷ್ಯವನ್ನು ಅಡಗಿಸಬೇಡಿರಿ. ಸಾಕ್ಷ್ಯವನ್ನಡಗಿಸುವಾತನ ಹೃದಯವು ಪಾಪ ಕಲುಷಿತವಾಗಿದೆ ಮತ್ತು ಅಲ್ಲಾಹನು ನಿಮ್ಮ ಕರ್ಮಗಳಿಂದ ಅಜ್ಞನಾಗಿಲ್ಲ.

لِلّٰهِ مَا فِي السَّمٰوٰتِ وَمَا فِي الْاَرْضِ ۭ وَاِنْ

284. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹನದು.

103. ಅಡವು ಪಡೆಯುವುದರ ಉದ್ದೇಶವು ಸಾಲ ಕೊಡುವಾತನಿಗೆ ಅದರ ಮರುಪಾವತಿಯ ಬಗ್ಗೆ ಸಮಾಧಾನವಾಗುವುದು ಮಾತ್ರ. ಆದರೆ ತಾನು ಕೊಟ್ಟ ಸಂಪತ್ತಿಗೆ ಪ್ರತಿಯಾಗಿ ಅಡವಿಟ್ಟ ವಸ್ತುವಿನಿಂದ ಪ್ರಯೋಜನ ಪಡೆಯುವ ಅಧಿಕಾರ ಅವನಿಗಿಲ್ಲ. ಏಕೆಂದರೆ ಅದು ಬಡ್ಡಿ ಎನಿಸಿ ಕೊಳ್ಳುವುದು. ಆದರೆ ಯಾವುದೇ ಜಾನುವಾರನ್ನು ಅಡವಿಡಲಾಗಿದ್ದರೆ ಅದರ ಹಾಲನ್ನು ಉಪಯೋಗಿಸ ಬಹುದು. ಹಾಗೆಯೇ ಸವಾರಿ ಮತ್ತು ಸರಕು ಸಾಗಣೆಗಾಗಿಯೂ ಅದನ್ನು ಬಳಸಬಹುದು. ಇದು ವಾಸ್ತವದಲ್ಲಿ ಅಡವು ಪಡೆದಾತನು ಜಾನುವಾರಿಗೆ ಕೊಡುವ ಮೇವಿನ ಪ್ರತಿಫಲವಾಗಿದೆ.

ನಿಮ್ಮ ಮನದಿಂಗಿತಗಳನ್ನು ನೀವು ಬಹಿರಂಗಗೊಳಿಸಿದರೂ ಬಚ್ಚಿಟ್ಟರೂ ಅಲ್ಲಾಹನು ನಿಮ್ಮಿಂದ ಅವುಗಳ ಲೆಕ್ಕಾಚಾರ ಪಡೆದೇ ತೀರುವನು. ಅನಂತರ ತನಗಿಷ್ಟ ಬಂದವರನ್ನು ಕ್ಷಮಿಸುವ ಮತ್ತು ತನಗಿಷ್ಟ ಬಂದವರನ್ನು ಶಿಕ್ಷಿಸುವ ಅಧಿಕಾರ ಅವನಿಗಿದೆ. ಅಲ್ಲಾಹನು ಪ್ರತಿಯೊಂದು ವಿಷಯದಲ್ಲಿ ಅಧಿಕಾರವಿರುವವನಾಗಿರುತ್ತಾನೆ.

تُبْدُوْا مَا فِيْٓ اَنْفُسِكُمْ اَوْ تُخْفُوْهُ يُحَاسِبْكُمْ بِهِ اللّٰهُ ؕ فَيَغْفِرُ لِمَنْ يَّشَآءُ وَيُعَذِّبُ مَنْ يَّشَآءُ ؕ وَاللّٰهُ عَلٰى كُلِّ شَيْءٍ قَدِيْرٌ ﴿٢٨٤﴾

285. ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯಗ್ರಂಥಗಳಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿರಿಸುತ್ತಾರೆ. "ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವತ್ತು ತಾರತಮ್ಯವನ್ನಿರಿಸುವುದಿಲ್ಲ. ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ" ಎಂದು ಅವರನ್ನುತ್ತಾರೆ.

اٰمَنَ الرَّسُوْلُ بِمَآ اُنْزِلَ اِلَيْهِ مِنْ رَّبِّهٖ وَالْمُؤْمِنُوْنَ ؕ كُلٌّ اٰمَنَ بِاللّٰهِ وَمَلٰٓئِكَتِهٖ وَكُتُبِهٖ وَرُسُلِهٖ ۟ لَا نُفَرِّقُ بَيْنَ اَحَدٍ مِّنْ رُّسُلِهٖ ۟ وَقَالُوْا سَمِعْنَا وَاَطَعْنَا ۗ غُفْرَانَكَ رَبَّنَا وَاِلَيْكَ الْمَصِيْرُ ﴿٢٨٥﴾

286. ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸುವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು ಶೇಖರಿಸಿದ ಪಾಪದ ದಂಡವೂ ಅವನ ಮೇಲೆಯೇ ಇರುವುದು. (ಓ ಸತ್ಯವಿಶ್ವಾಸಿಗಳೇ! ನೀವು ಹೀಗೆ ಯಾಚಿಸಿರಿ:) ಓ ನಮ್ಮ ಪ್ರಭೂ, ನಮ್ಮಿಂದ ಪ್ರಮಾದವಶಾತ್ ಅಪರಾಧಗಳಾಗಿಬಿಟ್ಟರೆ ಅವುಗಳಿಗಾಗಿ ನಮ್ಮನ್ನು ಹಿಡಿಯಬೇಡ. ಪ್ರಭೂ, ನಮ್ಮ ಪೂರ್ವಿಕರ ಮೇಲೆ ಹೊರಿಸಿದಂತಹ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ಓ ನಮ್ಮ ಪ್ರಭೂ, ನಮ್ಮಿಂದ ಹೊರಲು ಸಾಧ್ಯವಾಗದ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ನಮ್ಮ ಪಾಪಗಳನ್ನು ಪರಿಹರಿಸು, ನಮ್ಮನ್ನು ಕ್ಷಮಿಸು, ನಮ್ಮ ಮೇಲೆ ಕೃಪೆದೋರು. ನೀನೇ ನಮ್ಮ ಒಡೆಯ. ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು.

لَا يُكَلِّفُ اللّٰهُ نَفْسًا اِلَّا وُسْعَهَا ؕ لَهَا مَا كَسَبَتْ وَعَلَيْهَا مَا اكْتَسَبَتْ ؕ رَبَّنَا لَا تُؤَاخِذْنَآ اِنْ نَّسِيْنَآ اَوْ اَخْطَاْنَا ۚ رَبَّنَا وَلَا تَحْمِلْ عَلَيْنَآ اِصْرًا كَمَا حَمَلْتَهٗ عَلَى الَّذِيْنَ مِنْ قَبْلِنَا ۚ رَبَّنَا وَلَا تُحَمِّلْنَا مَا لَا طَاقَةَ لَنَا بِهٖ ۚ وَاعْفُ عَنَّا ٝ وَاغْفِرْ لَنَا ٝ وَارْحَمْنَا ٝ اَنْتَ مَوْلٰىنَا فَانْصُرْنَا عَلَى الْقَوْمِ الْكٰفِرِيْنَ ﴿٢٨٦﴾

---






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ಮೀಮ್.

الٓمّٓ ۝١

2. ಅಲ್ಲಾಹ್- ಅವನ ಅಸ್ತಿತ್ವವು ಚಿರಂತನವಾಗಿದ್ದು, ವಿಶ್ವ ವ್ಯವಸ್ಥಾಪನೆ ಮಾಡುತ್ತಲಿದೆ. ವಸ್ತುತಃ ಅವನ ಹೊರತು ಅನ್ಯ ಆರಾಧ್ಯನಿಲ್ಲ.

اللّٰهُ لَآ اِلٰهَ اِلَّا هُوَ الْحَيُّ الْقَيُّوْمُ ۝٢

3. ಓ ಪೈಗಂಬರರೇ, ಅವನು ನಿಮ್ಮ ಮೇಲೆ ಈ ಗ್ರಂಥವನ್ನು ಅವತೀರ್ಣಗೊಳಿಸಿದನು. ಇದು ಸತ್ಯವನ್ನು ತಂದಿದೆ. ಇದು ಈ ಹಿಂದೆ ಬಂದಿದ್ದ ಗ್ರಂಥಗಳನ್ನು ದೃಢೀಕರಿಸುತ್ತದೆ. ಇದಕ್ಕಿಂತ ಮುಂಚೆ ಅವನು ಮಾನವನ ಸನ್ಮಾರ್ಗದರ್ಶನಕ್ಕಾಗಿ ತೌರಾತ್ ಮತ್ತು ಇಂಜೀಲನ್ನು ಅವತೀರ್ಣಗೊಳಿಸಿದ್ದನು ಮತ್ತು ಅವನು (ಸತ್ಯಾಸತ್ಯತೆಗಳ ತಾರತಮ್ಯ ತೋರಿಸುವ) ಒರೆಗಲ್ಲನ್ನೂ ಅವತೀರ್ಣಗೊಳಿಸಿರುತ್ತಾನೆ.

نَزَّلَ عَلَيْكَ الْكِتٰبَ بِالْحَقِّ مُصَدِّقًا لِّمَا بَيْنَ يَدَيْهِ وَاَنْزَلَ التَّوْرٰىةَ وَالْاِنْجِيْلَ ۝٣ مِنْ قَبْلُ هُدًى لِّلنَّاسِ وَاَنْزَلَ الْفُرْقَانَ

4. ಇನ್ನು ಅಲ್ಲಾಹನ ಆದೇಶಗಳನ್ನು ನಿರಾಕರಿಸುವವರಿಗೆ ನಿಶ್ಚಯವಾಗಿಯೂ ಘೋರ ಶಿಕ್ಷೆ ಸಿಗುವುದು. ಅಲ್ಲಾಹನು ಅತ್ಯಂತ ಶಕ್ತಿಯುಳ್ಳವನು ಮತ್ತು ಪಾಪಕಾರ್ಯಗಳಿಗೆ ತಕ್ಕ ಪ್ರತೀಕಾರ (ಶಿಕ್ಷೆ) ಮಾಡುವವನಾಗಿರುವನು.

اِنَّ الَّذِيْنَ كَفَرُوْا بِاٰيٰتِ اللّٰهِ لَهُمْ عَذَابٌ شَدِيْدٌ ؕ وَاللّٰهُ عَزِيْزٌ ذُو انْتِقَامٍ ۝٤

5. ಭೂಮಿಯ ಮತ್ತು ಆಕಾಶದ ಯಾವ ವಸ್ತುವೂ ಅಲ್ಲಾಹನಿಂದ ಮರೆಯಾಗಿರುವುದಿಲ್ಲ.

اِنَّ اللّٰهَ لَا يَخْفٰى عَلَيْهِ شَيْءٌ فِى الْاَرْضِ وَلَا فِى السَّمَآءِ ۝٥

6. ನಿಮ್ಮ ಮಾತೆಯರ ಗರ್ಭಗಳಲ್ಲಿ ತನಗಿಷ್ಟ ಬಂದ ರೂಪವನ್ನು ನಿಮಗೆ ಕೊಡುವಾತನು ಅವನೇ. ಪ್ರಬಲನೂ ಯುಕ್ತಿಪೂರ್ಣನೂ ಆಗಿರುವ ಅವನ ಹೊರತು ಅನ್ಯ ಆರಾಧ್ಯನಿಲ್ಲ.

هُوَ الَّذِىْ يُصَوِّرُكُمْ فِى الْاَرْحَامِ كَيْفَ يَشَآءُ ؕ لَآ اِلٰهَ اِلَّا هُوَ الْعَزِيْزُ الْحَكِيْمُ ۝٦

7. (ಓ ಪೈಗಂಬರರೇ) ಅವನೇ ಈ ಗ್ರಂಥವನ್ನು ನಿಮ್ಮ ಮೇಲೆ ಅವತೀರ್ಣಗೊಳಿಸಿದನು. ಈ ಗ್ರಂಥದಲ್ಲಿ ಎರಡು ಬಗೆಯ ಸೂಕ್ತಗಳಿವೆ. ಒಂದು, ಗ್ರಂಥದ ಮೂಲಾಧಾರವಾಗಿರುವ ಮುಹ್ಕಮಾತ್[1] ಇನ್ನೊಂದು ಮುತಶಾಬಿಹಾತ್.[2] ಹೃದಯಗಳಲ್ಲಿ ಕೊಂಕುಳ್ಳವರು ಕ್ಷೋಭೆ ಎಬ್ಬಿಸಲಿಕ್ಕಾಗಿ 'ಮುತಶಾಬಿಹಾತ್'ಗಳ ಬೆನ್ನು ಹತ್ತುತ್ತಾರೆ ಮತ್ತು ಅವುಗಳ ದುರ್ವ್ಯಾಖ್ಯಾನ ಮಾಡಲು ಪ್ರಯತ್ನಿಸುತ್ತಾರೆ. ವಸ್ತುತಃ ಅವುಗಳ ನಿಜಾರ್ಥವನ್ನು ಅಲ್ಲಾಹನ ಹೊರತು ಇನ್ನಾರೂ ಬಲ್ಲವರಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಜ್ಞಾನದಲ್ಲಿ ಪರಿಪಕ್ವತೆ ಹೊಂದಿದವರು, "ನಾವು ಇವುಗಳ ಬಗ್ಗೆ ವಿಶ್ವಾಸ ತಳೆದಿದ್ದೇವೆ- ಇವೆಲ್ಲ ನಮ್ಮ ಪ್ರಭುವಿನ ವತಿಯಿಂದಲೇ ಆಗಿರುತ್ತವೆ" ಎನ್ನುತ್ತಾರೆ.[3] ಯಾವುದರಿಂದಲೇ ಆದರೂ ಬುದ್ಧಿಜೀವಿಗಳು ಮಾತ್ರ ಸರಿಯಾದ ಪಾಠ ಪಡೆಯುತ್ತಾರೆ.

هُوَ الَّذِيْٓ اَنْزَلَ عَلَيْكَ الْكِتٰبَ مِنْهُ اٰيٰتٌ مُّحْكَمٰتٌ هُنَّ اُمُّ الْكِتٰبِ وَاُخَرُ مُتَشٰبِهٰتٌ ؕ فَاَمَّا الَّذِيْنَ فِيْ قُلُوْبِهِمْ زَيْغٌ فَيَتَّبِعُوْنَ مَا تَشَابَهَ مِنْهُ ابْتِغَآءَ الْفِتْنَةِ وَابْتِغَآءَ تَاْوِيْلِهٖ ۚ وَمَا يَعْلَمُ تَاْوِيْلَهٗٓ اِلَّا اللّٰهُ ۘ وَالرّٰسِخُوْنَ فِي الْعِلْمِ يَقُوْلُوْنَ اٰمَنَّا بِهٖ ۙ كُلٌّ مِّنْ عِنْدِ رَبِّنَا ۚ وَمَا يَذَّكَّرُ اِلَّآ اُولُوا الْاَلْبَابِ ۝٧

8. ಅವರು ಅಲ್ಲಾಹನೊಡನೆ, (ಹೀಗೆ ಪ್ರಾರ್ಥಿಸುತ್ತಿರುತ್ತಾರೆ) "ಓ ನಮ್ಮ ಪ್ರಭೂ, ನೀನು ನಮ್ಮನ್ನು ನೇರಮಾರ್ಗದಲ್ಲಿ ಹಾಕಿರುತ್ತ ಪುನಃ ನಮ್ಮ ಮನಸ್ಸುಗಳನ್ನು ದೋಷಗಳಲ್ಲಿ ಸಿಲುಕಿಸಿಬಿಡಬೇಡ. ನೀನು ನಿನ್ನ ಅನುಗ್ರಹ ಭಂಡಾರದಿಂದ ಕೃಪೆಯನ್ನು ನೀಡು. ನೀನೇ ನೈಜ ಮಹಾದಾನಿಯಾಗಿರುತ್ತೀ.

رَبَّنَا لَا تُزِغْ قُلُوْبَنَا بَعْدَ اِذْ هَدَيْتَنَا وَهَبْ لَنَا مِنْ لَّدُنْكَ رَحْمَةً ۚ اِنَّكَ اَنْتَ الْوَهَّابُ ۝٨

9. ಓ ನಮ್ಮ ಪ್ರಭೂ, ನೀನು ನಿಶ್ಚಯವಾಗಿಯೂ ಅದೊಂದು ದಿನ

رَبَّنَآ اِنَّكَ جَامِعُ النَّاسِ لِيَوْمٍ لَّا رَيْبَ

1. 'ಮುಹ್ಕಮಾತ್' ಎಂದರೆ ಸ್ಪಷ್ಟೋಕ್ತಿ ಇರುವ ಸೂಕ್ತಗಳು. ಇದರ ಅರ್ಥ ವಿವರಣೆಯನ್ನು ಗೊತ್ತುಪಡಿಸಲು ಯಾವುದೇ ರೀತಿಯ ತೊಡಕಿಲ್ಲ. ಈ ಸೂಕ್ತಗಳು ಗ್ರಂಥದ ನೈಜ ಬುನಾದಿಯಾಗಿವೆ. ಅರ್ಥಾತ್ ಪವಿತ್ರ ಕುರ್‌ಆನ್ ಯಾವ ಉದ್ದೇಶಕ್ಕಾಗಿ ಅವತೀರ್ಣಗೊಂಡಿದೆಯೋ ಅದನ್ನು ಈ ಸೂಕ್ತಗಳೇ ಈಡೇರಿಸುತ್ತವೆ. ಈ ಸೂಕ್ತಗಳ ಮೂಲಕವೇ ಜಗತ್ತಿಗೆ ಇಸ್ಲಾಮಿನ ಸಂದೇಶ ನೀಡಲಾಗಿದೆ. ಪಾಠಬೋಧಕವಾದ ಉಪದೇಶಗಳನ್ನು ನೀಡಲಾಗಿದೆ. ಪಥಭ್ರಷ್ಟತೆಯ ನಿರಾಕರಣೆ ಮತ್ತು ಸನ್ಮಾರ್ಗದ ಸ್ಪಷ್ಟೀಕರಣ ಮಾಡಲಾಗಿದೆ. ಅದರಲ್ಲಿ ಧರ್ಮದ ಮೂಲಭೂತ ತತ್ವಗಳನ್ನು ವಿವರಿಸಲಾಗಿದೆ. ಮೂಲವಿಶ್ವಾಸ, ಆರಾಧನೆ, ಚಾರಿತ್ರ್ಯ, ಕರ್ತವ್ಯ ಮತ್ತು ವಿಧಿ ನಿಷೇಧಗಳ ಆದೇಶಗಳನ್ನೂ ಅದರ ಮೂಲಕವೇ ನೀಡಲಾಗಿದೆ.
2. 'ಮುತಶಾಬಿಹಾತ್' ಎಂದರೆ ಅರ್ಥ ವಿವರಣೆಯಲ್ಲಿ ಅಸ್ಪಷ್ಟತೆಗೆ ಆಸ್ಪದವಿರುವಂತಹ ಸೂಕ್ತಗಳು. ಕಣ್ಣಿಗೆ ಕಾಣದ ವಾಸ್ತವಿಕತೆಗಳ ಕುರಿತು ಅಗತ್ಯ ಮಾಹಿತಿಗಳನ್ನು ಒದಗಿಸದೆ ಮಾನವನಿಗೆ ಜೀವನದ ಯಾವುದೇ ದಿಸೆಯನ್ನು ತಿಳಿಸಲು ಸಾಧ್ಯವಿಲ್ಲವೆಂಬುದು ವ್ಯಕ್ತ. ಅದೇ ರೀತಿ ಮಾನವನ ಇಂದ್ರಿಯಗಳಿಗೆ ಅತೀತವಾದ, ನೋಡಲು, ಸ್ಪರ್ಶಿಸಲು ಮತ್ತು ಸವಿಯಲು ಸಾಧ್ಯವಿಲ್ಲದಂತಹ ವಿಷಯಗಳನ್ನು ವಿವರಿಸಲು ಅದಕ್ಕೆಂದೇ ಮೀಸಲಾಗಿರುವಂತಹ ಯಾವುದೇ ಪದಗಳು ಮಾನವರ ಭಾಷೆಯಲ್ಲಿ ದೊರೆಯುವುದಿಲ್ಲವೆಂಬುದೂ ಸ್ಪಷ್ಟ. ಕೇಳುವವರ ಮನಸ್ಸಿನಲ್ಲಿ ಅದರ ನೈಜ ಚಿತ್ರಣವನ್ನು ಮೂಡಿಸುವಂತಹ ವಿವರಣಾ ಶೈಲಿಯೂ ಪ್ರಚಲಿತದಲ್ಲಿಲ್ಲ. ಆದ್ದರಿಂದ ಅಂತಹ ವಿಷಯಗಳನ್ನು ಪ್ರಸ್ತಾಪಿಸಲು, ಸ್ವರೂಪದಲ್ಲಿ ಅವುಗಳಿಗೆ ಹತ್ತಿರವಿರುವಂತಹ ಮತ್ತು ಇಂದ್ರಿಯಗಳಿಗೆ ನಿಲುಕುವಂತಹ ವಸ್ತುಗಳಿಗೆ ಮಾನವ ಭಾಷೆಯಲ್ಲಿ ಲಭ್ಯವಿರುವ ಪದ ಮತ್ತು ವಿವರಣಾಶೈಲಿಯನ್ನು ಬಳಸುವುದು ಅನಿವಾರ್ಯ. ಕುರ್‌ಆನಿನಲ್ಲೂ ಇಂತಹ ವಾಸ್ತವಿಕತೆಗಳ ವಿವರಣೆಗೆ ಪ್ರಸ್ತುತ ಭಾಷಾಶೈಲಿಯನ್ನೇ ಉಪಯೋಗಿಸಲಾಗಿದೆ. 'ಮುತಶಾಬಿಹಾತ್' ಎಂದರೆ ಇಂತಹ ಭಾಷಾ ಶೈಲಿಯನ್ನು ಅಳವಡಿಸಲಾದ ಸೂಕ್ತಗಳೇ ಆಗಿವೆ.
3. ಜನರಿಗೆ 'ಮುತಶಾಬಿಹಾತ್'ಗಳ ಸರಿಯಾದ ಅರ್ಥವೇ ತಿಳಿದಿರದಿದ್ದರೆ ಅವರು ಅದರ ಮೇಲೆ ಹೇಗೆ ವಿಶ್ವಾಸವಿಡುತ್ತಾರೆಂದು ಯಾರೂ

فِيهِ ۚ إِنَّ اللَّهَ لَا يُخْلِفُ الْمِيعَادَ ⑨

ಎಲ್ಲ ಜನರನ್ನು ಒಟ್ಟುಗೂಡಿಸಲಿರುವೆ. ಆ ದಿನ ಬಂದೊದಗುವುದರಲ್ಲಿ ಏನೇನೂ ಸಂಶಯವಿಲ್ಲ. ನೀನು ಎಷ್ಟು ಮಾತ್ರಕ್ಕೂ ವಚನಭಂಗ ಮಾಡುವವನಲ್ಲ.

إِنَّ الَّذِينَ كَفَرُوا لَنْ تُغْنِيَ عَنْهُمْ أَمْوَالُهُمْ وَلَا أَوْلَادُهُمْ مِنَ اللَّهِ شَيْئًا ۖ وَأُولَٰئِكَ هُمْ وَقُودُ النَّارِ ⑩

10. ಧರ್ಮಧಿಕ್ಕಾರ ನೀತಿಯನ್ನನುಸರಿಸಿದವರಿಗೆ ಅಲ್ಲಾಹನ ಎದುರು ಅವರ ಸಂಪತ್ತಾಗಲಿ ಸಂತತಿಯಾಗಲಿ ಯಾವ ಕೆಲಸಕ್ಕೂ ಬರಲಾರದು. ಅವರು ನರಕಾಗ್ನಿಯ ಇಂಧನವಾಗಿಯೇ ತೀರುವರು.

كَدَأْبِ آلِ فِرْعَوْنَ وَالَّذِينَ مِنْ قَبْلِهِمْ ۚ كَذَّبُوا بِآيَاتِنَا فَأَخَذَهُمُ اللَّهُ بِذُنُوبِهِمْ ۗ وَاللَّهُ شَدِيدُ الْعِقَابِ ⑪

11. ಅವರ ಅಂತಿಮ ಪರಿಣಾಮವು ಫಿರ್‌ಔನನ ಸಂಗಡಿಗರ ಮತ್ತು ಅವರಿಗಿಂತ ಮುಂಚಿನ ಆಜ್ಞೋಲ್ಲಂಘಕರಂತೆಯೇ ಆಗುವುದು. ಅವರು ದೇವನಿದರ್ಶನಗಳನ್ನು ಸುಳ್ಳಾಗಿಸಿದರು. ತತ್ಪರಿಣಾಮವಾಗಿ ಅಲ್ಲಾಹನು ಅವರ ಪಾಪಕರ್ಮಗಳಿಗಾಗಿ ಅವರನ್ನು ಹಿಡಿದುಕೊಂಡನು ಮತ್ತು ನಿಜಕ್ಕೂ ಅಲ್ಲಾಹನು ಉಗ್ರವಾಗಿ ಶಿಕ್ಷಿಸುವವನಾಗಿದ್ದಾನೆ.

قُلْ لِلَّذِينَ كَفَرُوا سَتُغْلَبُونَ وَتُحْشَرُونَ إِلَىٰ جَهَنَّمَ ۚ وَبِئْسَ الْمِهَادُ ⑫

12. ಆದುದರಿಂದ ಓ ಮುಹಮ್ಮದ್‌ರವರೇ, ನಿಮ್ಮ ಆಹ್ವಾನವನ್ನು ಸ್ವೀಕರಿಸಲು ನಿರಾಕರಿಸಿದವರೊಡನೆ, "ನೀವು ಪರಾಜಿತರಾಗುವ ಮತ್ತು ನರಕಾಗ್ನಿಯ ಕಡೆಗೆ ಅಟ್ಟಲ್ಪಡುವ ಕಾಲ ಸನ್ನಿಹಿತವಾಗಿದೆ ಮತ್ತು ನರಕವು ಅತ್ಯಂತ ಕೆಟ್ಟ ತಂಗುದಾಣ" ಎಂದು ಹೇಳಿರಿ.

قَدْ كَانَ لَكُمْ آيَةٌ فِي فِئَتَيْنِ الْتَقَتَا ۖ فِئَةٌ تُقَاتِلُ فِي سَبِيلِ اللَّهِ وَأُخْرَىٰ كَافِرَةٌ يَرَوْنَهُمْ مِثْلَيْهِمْ رَأْيَ الْعَيْنِ ۚ وَاللَّهُ يُؤَيِّدُ بِنَصْرِهِ مَنْ يَشَاءُ ۗ إِنَّ فِي ذَٰلِكَ لَعِبْرَةً لِأُولِي الْأَبْصَارِ ⑬

13. (ಬದ್ರ್ ಯುದ್ಧದಲ್ಲಿ) ಪರಸ್ಪರ ಕಾದಾಡಿದ ಆ ಎರಡು ತಂಡಗಳಲ್ಲಿ ನಿಮಗೊಂದು ನಿದರ್ಶನವಿತ್ತು. ಒಂದು ತಂಡವು ಅಲ್ಲಾಹನ ಮಾರ್ಗದಲ್ಲಿ ಕಾದಾಡುತ್ತಿದ್ದಿತು ಮತ್ತು ಇನ್ನೊಂದು ಸತ್ಯನಿಷೇಧಿ ಆಗಿತ್ತು. ಸತ್ಯನಿಷೇಧಿಗಳ ತಂಡವು ವಿಶ್ವಾಸಿಗಳ ತಂಡಕ್ಕಿಂತ ಇಮ್ಮಡಿ ಇದ್ದುದನ್ನು ನೋಡುವವರು ಕಣ್ಣಾರೆ ನೋಡುತ್ತಿದ್ದರು.[4] ಆದರೆ ಅಲ್ಲಾಹನು ತನಗಿಷ್ಟ ಬಂದವರಿಗೆ ವಿಜಯ ನೀಡಿ ಸಹಕರಿಸುತ್ತಾನೆ (ಎಂಬುದನ್ನು ಪರಿಣಾಮವು ಸಿದ್ಧಪಡಿಸಿತು.) ಜ್ಞಾನಚಕ್ಷು ಹೊಂದಿದವರಿಗೆ ಇದರಲ್ಲಿ ಬಹುದೊಡ್ಡ ಪಾಠ ಅಡಗಿದೆ.

---

ಸಂಶಯ ತಾಳಬೇಕಾಗಿಲ್ಲ. ವಿಚಾರವಂತನೊಬ್ಬನಿಗೆ ಕುರ್‌ಆನ್ ಅಲ್ಲಾಹನ ಗ್ರಂಥವಾಗಿದೆ ಎಂಬ ವಿಶ್ವಾಸ ಮೂಡುವುದು 'ಮುಹ್ಕಮಾತ್'ಗಳ ಅಧ್ಯಯನದಿಂದಲೇ ಹೊರತು 'ಮುತಶಾಬಿಹಾತ್'ಗಳ ಅರ್ಥ ವಿವರಣೆಯಿಂದಲ್ಲ. 'ಮುಹ್ಕಮಾತ್' ಎನಿಸಿಕೊಂಡಿರುವ ಸೂಕ್ತಗಳ ಬಗ್ಗೆ ಚಿಂತನೆ ನಡೆಸಿದಾಗ ಕುರ್‌ಆನ್ ಅಲ್ಲಾಹನ ಗ್ರಂಥವೇ ಆಗಿದೆ ಎಂಬ ಸಮಾಧಾನ ಆತನಲ್ಲಿ ಮೂಡುವುದರಿಂದ, 'ಮುತಶಾಬಿಹಾತ್'ಗಳಿಂದಾಗಿ ಅವನ ಮನಸ್ಸಿನಲ್ಲಿ ಸಂಶಯಗಳು ಹುಟ್ಟುವ ಪ್ರಮೇಯವೇ ಇಲ್ಲ.

4. ನಿಜವಾಗಿ ಅವರ ನಡುವೆ ಮೂರ್ಮಡಿ ವ್ಯತ್ಯಾಸವಿತ್ತು. ಆದರೆ ಸ್ಥೂಲ ನೋಟ ಬೀರುವವನಿಗೂ ಸತ್ಯನಿಷೇಧಿಗಳ ಸೇನೆ ಮುಸ್ಲಿಮರಿಗಿಂತ ಇಮ್ಮಡಿ ಇದೆ ಎನಿಸದೆ ಇರುತ್ತಿರಲಿಲ್ಲ.

14. ಜನರಿಗೆ ಇಂದ್ರಿಯಾಸಕ್ತಿಗಳಾದ- ಸ್ತ್ರೀಯರು, ಮಕ್ಕಳು, ಚಿನ್ನ -ಬೆಳ್ಳಿಗಳ ರಾಶಿ, ಆಯ್ದ ಕುದುರೆಗಳು, ಜಾನುವಾರುಗಳು ಮತ್ತು ಕೃಷಿ ಭೂಮಿ- ಇವುಗಳನ್ನು ಅತ್ಯಾಕರ್ಷಕವಾಗಿ ಮಾಡಲಾಗಿದೆ. ಆದರೆ, ಇವೆಲ್ಲ ಇಹಲೋಕದ ಕೆಲವೇ ದಿನಗಳ ಜೀವನ ಸಾಧನಗಳು. ಯಥಾರ್ಥದಲ್ಲಿ ಅತ್ಯುತ್ತಮ ವಾಸಸ್ಥಳವಂತು ಅಲ್ಲಾಹನ ಬಳಿಯಲ್ಲಿದೆ.

زُيِّنَ لِلنَّاسِ حُبُّ الشَّهَوٰتِ مِنَ النِّسَآءِ
وَالْبَنِيْنَ وَالْقَنَاطِيْرِ الْمُقَنْطَرَةِ مِنَ
الذَّهَبِ وَالْفِضَّةِ وَالْخَيْلِ الْمُسَوَّمَةِ
وَالْاَنْعَامِ وَالْحَرْثِ ؕ ذٰلِكَ مَتَاعُ
الْحَيٰوةِ الدُّنْيَا ۚ وَاللّٰهُ عِنْدَهٗ حُسْنُ الْمَاٰبِ ﴿۱۴﴾

15. ಹೇಳಿರಿ- ನಾನು ಇವುಗಳಿಗಿಂತಲೂ ಹೆಚ್ಚು ಉತ್ತಮವಾದುದೇನೆಂದು ನಿಮಗೆ ತಿಳಿಸಲೇ? ಧರ್ಮನಿಷ್ಠೆಯ ನಿಲುಮೆಯನ್ನು ಕೈಗೊಂಡವರಿಗೆ ಅವರ ಪ್ರಭುವಿನ ಬಳಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳು ಇವೆ. ಅಲ್ಲಿ ಅವರಿಗೆ ಶಾಶ್ವತ ಜೀವನ ಪ್ರಾಪ್ತವಾಗುವುದು. ಪರಿಶುದ್ಧ ಮಡದಿಯರ ಒಡನಾಟವಿರುವುದು ಮತ್ತು ಅವರು ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗುವರು. ಅಲ್ಲಾಹನು ತನ್ನ ದಾಸರ ರೀತಿ-ನೀತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ.

قُلْ اَؤُنَبِّئُكُمْ بِخَيْرٍ مِّنْ ذٰلِكُمْ ؕ لِلَّذِيْنَ
اتَّقَوْا عِنْدَ رَبِّهِمْ جَنّٰتٌ تَجْرِيْ مِنْ تَحْتِهَا
الْاَنْهٰرُ خٰلِدِيْنَ فِيْهَا وَاَزْوَاجٌ مُّطَهَّرَةٌ وَّ
رِضْوَانٌ مِّنَ اللّٰهِ ؕ وَاللّٰهُ بَصِيْرٌۢ بِالْعِبَادِ ﴿۱۵﴾

16. ಅವರು, "ಓ ನಮ್ಮ ಪ್ರಭೂ, ನಾವು ವಿಶ್ವಾಸವಿರಿಸಿದೆವು; ನಮ್ಮ ಅಪರಾಧಗಳನ್ನು ಕ್ಷಮಿಸು ಮತ್ತು ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು" ಎಂದು ಹೇಳುವರು.

اَلَّذِيْنَ يَقُوْلُوْنَ رَبَّنَاۤ اِنَّنَاۤ اٰمَنَّا فَاغْفِرْ لَنَا
ذُنُوْبَنَا وَقِنَا عَذَابَ النَّارِ ﴿۱۶﴾

17. ಇವರು ಸಹನೆಯುಳ್ಳವರೂ ಸತ್ಯಸಂಧರೂ ವಿಧೇಯರೂ ಉದಾರಿಗಳೂ ಆಗಿರುತ್ತಾರೆ ಮತ್ತು ರಾತ್ರೆಯ ಕೊನೆಯ ಘಳಿಗೆಗಳಲ್ಲಿ ಅಲ್ಲಾಹನೊಡನೆ ಪಾಪವಿಮೋಚನೆಗಾಗಿ ಪ್ರಾರ್ಥಿಸು ತ್ತಿರುತ್ತಾರೆ.

اَلصّٰبِرِيْنَ وَالصّٰدِقِيْنَ وَالْقٰنِتِيْنَ وَ
الْمُنْفِقِيْنَ وَالْمُسْتَغْفِرِيْنَ بِالْاَسْحَارِ ﴿۱۷﴾

18. ಅಲ್ಲಾಹನು ತನ್ನ ಹೊರತು ಇತರ ಆರಾಧ್ಯನಿಲ್ಲವೆಂದು ಸ್ವತಃ ಸಾಕ್ಷ್ಯ ನುಡಿಯುತ್ತಾನೆ ಮತ್ತು ದೇವಚರರೂ ಎಲ್ಲಾ ಜ್ಞಾನವಂತರೂ ಆ ಪ್ರಬಲ ಯುಕ್ತಿಪೂರ್ಣನ ಹೊರತು ವಾಸ್ತವದಲ್ಲಿ ಅನ್ಯ ಆರಾಧ್ಯನಿಲ್ಲವೆಂದು ಸತ್ಯ ಮತ್ತು ನ್ಯಾಯದೊಂದಿಗೆ ಸಾಕ್ಷಿ ನುಡಿಯುತ್ತಾರೆ.

شَهِدَ اللّٰهُ اَنَّهٗ لَاۤ اِلٰهَ اِلَّا هُوَ ۙ وَالْمَلٰٓئِكَةُ
وَاُولُوا الْعِلْمِ قَآئِمًاۢ بِالْقِسْطِ ؕ لَاۤ اِلٰهَ اِلَّا
هُوَ الْعَزِيْزُ الْحَكِيْمُ ﴿۱۸﴾

19. ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಮಾತ್ರ. ಗ್ರಂಥ ಕೊಡ ಲ್ಪಟ್ಟವರು ಈ ಧರ್ಮದಿಂದ ಸರಿದು ವಿವಿಧ ಸಂಪ್ರದಾಯಗಳನ್ನು ಕೈಗೊಂಡರು. ಅವರು ಜ್ಞಾನ ಬಂದ ನಂತರ ಪರಸ್ಪರರ ಮೇಲೆ ಅತಿರೇಕವೆಸಗಬಯಸಿದರೆಂದಲ್ಲದೆ ಹೀಗೆ ಮಾಡಲು ಬೇರಾವ

اِنَّ الدِّيْنَ عِنْدَ اللّٰهِ الْاِسْلَامُ ۗ وَمَا
اخْتَلَفَ الَّذِيْنَ اُوْتُوا الْكِتٰبَ اِلَّا مِنْۢ بَعْدِ
مَا جَآءَهُمُ الْعِلْمُ بَغْيًاۢ بَيْنَهُمْ ؕ وَمَنْ يَّكْفُرْ

ಕಾರಣವೂ ಇರಲಿಲ್ಲ ಮತ್ತು ಅಲ್ಲಾಹನ ಆದೇಶಗಳ ಅನುಸರಣೆಯನ್ನು ನಿರಾಕರಿಸುವವರ ವಿಚಾರಣೆ ಮಾಡುವುದರಲ್ಲಿ ಅಲ್ಲಾಹನು ಅತಿ ಶೀಘ್ರನು.

بِاٰيٰتِ اللّٰهِ فَاِنَّ اللّٰهَ سَرِيْعُ الْحِسَابِ ⑲

20. ಇನ್ನು ಓ ಪ್ರವಾದಿಯವರೇ, ಅವರು ನಿಮ್ಮೊಂದಿಗೆ ಜಗಳಾಡಿದರೆ ಅವರೊಡನೆ,- "ನಾನು ಮತ್ತು ನನ್ನ ಅನುಯಾಯಿಗಳಂತು ಅಲ್ಲಾಹನಿಗೆ ಶರಣಾಗತರಾಗಿದ್ದೇವೆ" ಎಂದು ಹೇಳಿರಿ. ಗ್ರಂಥದವರೊಡನೆಯೂ ಗ್ರಂಥದವರಲ್ಲದವರೊಡನೆಯೂ, "ನೀವೂ ಆತನ ಅನುಸರಣೆಯನ್ನು ಸ್ವೀಕರಿಸಿದಿರಾ?" ಎಂದು ಕೇಳಿರಿ. ಸ್ವೀಕರಿಸಿದರೆ, ಅವರು ಸನ್ಮಾರ್ಗ ಪಡೆದರು ಮತ್ತು ಉಪೇಕ್ಷಿಸಿದರೆ, ನಿಮ್ಮ ಮೇಲಂತೂ ಸಂದೇಶವನ್ನು ಮುಟ್ಟಿಸುವ ಹೊಣೆ ಮಾತ್ರವಿತ್ತು. ಮುಂದೆ ಅಲ್ಲಾಹನು ತನ್ನ ದಾಸರೊಂದಿಗೆ ಸ್ವತಃ ವ್ಯವಹರಿಸುವವನಿದ್ದಾನೆ.

فَاِنْ حَآجُّوْكَ فَقُلْ اَسْلَمْتُ وَجْهِىَ لِلّٰهِ وَمَنِ اتَّبَعَنِ ؕ وَقُلْ لِّلَّذِيْنَ اُوْتُوا الْكِتٰبَ وَالْاُمِّيّٖنَ ءَاَسْلَمْتُمْ ؕ فَاِنْ اَسْلَمُوْا فَقَدِ اهْتَدَوْا ۚ وَاِنْ تَوَلَّوْا فَاِنَّمَا عَلَيْكَ الْبَلٰغُ ؕ وَاللّٰهُ بَصِيْرٌۢ بِالْعِبَادِ ⑳

21. ಅಲ್ಲಾಹನ ಆದೇಶಗಳ ಅನುಸರಣೆಯನ್ನು ನಿರಾಕರಿಸುವವರಿಗೂ ಅವನ ಸಂದೇಶವಾಹಕರನ್ನು ಅನ್ಯಾಯವಾಗಿ ವಧಿಸುವವರಿಗೂ ಮಾನವರ ವರ್ಗದಲ್ಲಿ ನ್ಯಾಯ ನೀತಿಗಳನ್ನು ನಿರ್ದೇಶಿಸಲುದ್ಯುಕ್ತ ರಾದವರ ಪ್ರಾಣಾಪಹಾರಗೈಯುವವರಿಗೂ ವೇದನಾತ್ಮಕ ಶಿಕ್ಷೆಯ ಶುಭವಾರ್ತೆ ನೀಡಿರಿ.

اِنَّ الَّذِيْنَ يَكْفُرُوْنَ بِاٰيٰتِ اللّٰهِ وَيَقْتُلُوْنَ النَّبِيّٖنَ بِغَيْرِ حَقٍّ ۙ وَّيَقْتُلُوْنَ الَّذِيْنَ يَاْمُرُوْنَ بِالْقِسْطِ مِنَ النَّاسِ ۙ فَبَشِّرْهُمْ بِعَذَابٍ اَلِيْمٍ ㉑

22. ಇಹ-ಪರಗಳೆರಡರಲ್ಲೂ ಅವರ ಕರ್ಮಫಲಗಳು ನಾಶಗೊಂಡವು ಮತ್ತು ಅವರಿಗೆ ಸಹಾಯಕರು ಯಾರೂ ಇಲ್ಲ.

اُولٰٓئِكَ الَّذِيْنَ حَبِطَتْ اَعْمَالُهُمْ فِى الدُّنْيَا وَالْاٰخِرَةِ ۡ وَمَا لَهُمْ مِّنْ نّٰصِرِيْنَ ㉒

23. ಗ್ರಂಥಜ್ಞಾನದ ಒಂದಂಶವನ್ನು ಪಡೆದವರ ಸ್ಥಿತಿ ಏನೆಂದು ನೀವು ವಿವೇಚಿಸಲಿಲ್ಲವೇ? ಅವರ ನಡುವೆ ತೀರ್ಮಾನ ಕೈಗೊಳ್ಳಲಿಕ್ಕಾಗಿ ಅವರನ್ನು ದೇವಗ್ರಂಥದ ಕಡೆಗೆ ಕರೆದಾಗ ಅವರಲ್ಲೊಂದು ಪಂಗಡವು ಅದರಿಂದ ತಪ್ಪಿಸಿಕೊಳ್ಳುತ್ತದೆ ಮತ್ತು ಆ ತೀರ್ಮಾನದ ಕಡೆಗೆ ಬರಲು ನಿರಾಕರಿಸುತ್ತದೆ.

اَلَمْ تَرَ اِلَى الَّذِيْنَ اُوْتُوْا نَصِيْبًا مِّنَ الْكِتٰبِ يُدْعَوْنَ اِلٰى كِتٰبِ اللّٰهِ لِيَحْكُمَ بَيْنَهُمْ ثُمَّ يَتَوَلّٰى فَرِيْقٌ مِّنْهُمْ وَهُمْ مُّعْرِضُوْنَ ㉓

24. "ನರಕಾಗ್ನಿಯು ನಮಗೆ ಸೋಂಕದು. ಒಂದು ವೇಳೆ ನರಕಯಾತನೆ ನಮಗೆ ಸಿಕ್ಕಿದರೂ ಅದು ಕೆಲವೇ ದಿನಗಳು ಮಾತ್ರ" ಎಂದು ಅವರು ಹೇಳುತ್ತಿರುವುದೇ ಅವರು ಹೀಗೆ ವರ್ತಿಸಲು ಕಾರಣ. ಅವರ ಸ್ವಯಂ ಕಲ್ಪಿತ ವಿಶ್ವಾಸಗಳು ಅವರನ್ನು ತಮ್ಮ ಧರ್ಮದ ಬಗ್ಗೆ ಅತ್ಯಂತ ತಪ್ಪುಧಾರಣೆಯಲ್ಲಿ ಸಿಲುಕಿಸಿವೆ.

ذٰلِكَ بِاَنَّهُمْ قَالُوْا لَنْ تَمَسَّنَا النَّارُ اِلَّآ اَيَّامًا مَّعْدُوْدٰتٍ ۪ وَغَرَّهُمْ فِىْ دِيْنِهِمْ مَّا كَانُوْا يَفْتَرُوْنَ ㉔

25. ಆದರೆ ನಿಸ್ಸಂದೇಹವಾಗಿಯೂ ಬರಲಿರುವ ಅದೊಂದು ದಿನ

فَكَيْفَ اِذَا جَمَعْنٰهُمْ لِيَوْمٍ لَّا رَيْبَ فِيْهِ

ನಾವು ಅವರನ್ನು ಒಟ್ಟುಗೂಡಿಸಿದಾಗ ಅವರ ಅವಸ್ಥೆ ಏನಾದೀತು? ಅಂದು ಪ್ರತಿಯೊಬ್ಬನಿಗೂ ಅವನ ದುಡಿಮೆಯ ಸಂಪೂರ್ಣ ಪ್ರತಿಫಲ ಕೊಡಲಾಗುವುದು ಮತ್ತು ಯಾರ ಮೇಲೂ ಅನ್ಯಾಯವಾಗದು.

وَوُفِّيَتْ كُلُّ نَفْسٍ مَّا كَسَبَتْ وَهُمْ
لَا يُظْلَمُونَ ﴿٢٥﴾

26. ಹೇಳಿರಿ- ಓ ಅಲ್ಲಾಹ್, ಸಕಲ ವಿಶ್ವಾಧಿಪತ್ಯದ ಒಡೆಯನೇ, ನೀನು ನಿನಗಿಷ್ಟ ಬಂದವರಿಗೆ ರಾಜ್ಯಾಧಿಕಾರ ನೀಡುವೆ ಮತ್ತು ನಿನಗಿಷ್ಟ ಬಂದವರಿಂದ ಕಸಿದುಕೊಳ್ಳುವೆ. ನಿನಗಿಷ್ಟ ಬಂದವರಿಗೆ ಪ್ರತಿಷ್ಠೆ ಪ್ರದಾನ ಮಾಡುವೆ. ನಿನಗಿಷ್ಟ ಬಂದವರನ್ನು ಅವಮಾನಪಡಿಸುವೆ. ಒಳಿತುಗಳು ನಿನ್ನ ಅಧಿಕಾರ ಹಸ್ತದಲ್ಲಿವೆ. ನಿಶ್ಚಯವಾಗಿಯೂ ನೀನು ಸರ್ವಶಕ್ತನಾಗಿರುವೆ.

قُلِ اللَّهُمَّ مَالِكَ الْمُلْكِ تُؤْتِي الْمُلْكَ
مَن تَشَاءُ وَتَنزِعُ الْمُلْكَ مِمَّن تَشَاءُ وَ
تُعِزُّ مَن تَشَاءُ وَتُذِلُّ مَن تَشَاءُ ۖ بِيَدِكَ
الْخَيْرُ ۖ إِنَّكَ عَلَىٰ كُلِّ شَيْءٍ قَدِيرٌ ﴿٢٦﴾

27. ನೀನು ಇರುಳನ್ನು ಹಗಲಿನೊಳಗೆ ಪೋಣಿಸುತ್ತಲೂ ಹಗಲನ್ನು ಇರುಳಿನೊಳಗೆ ಪೋಣಿಸುತ್ತಲೂ ತರುವೆ. ಜೀವಿಗಳಿಂದ ನಿರ್ಜೀವಿಗಳನ್ನು ನಿರ್ಜೀವಿಗಳಿಂದ ಜೀವಿಗಳನ್ನೂ ಹೊರಗೆ ತೆಗೆಯುವೆ ಮತ್ತು ನಿನಗಿಷ್ಟ ಬಂದವರಿಗೆ ಅಸಂಖ್ಯಾತ ಜೀವನಾಧಾರ ನೀಡುವೆ.

تُولِجُ اللَّيْلَ فِي النَّهَارِ وَتُولِجُ النَّهَارَ فِي
اللَّيْلِ ۖ وَتُخْرِجُ الْحَيَّ مِنَ الْمَيِّتِ وَتُخْرِجُ
الْمَيِّتَ مِنَ الْحَيِّ ۖ وَتَرْزُقُ مَن تَشَاءُ
بِغَيْرِ حِسَابٍ ﴿٢٧﴾

28. ಸತ್ಯವಿಶ್ವಾಸಿಗಳು ಸತ್ಯವಿಶ್ವಾಸಿಗಳನ್ನು ಬಿಟ್ಟು ಸತ್ಯನಿಷೇಧಿಗಳನ್ನು ತಮ್ಮ ಆತ್ಮೀಯ ಸ್ನೇಹಿತರನ್ನಾಗಿ ಎಂದಿಗೂ ಮಾಡಬಾರದು. ಹಾಗೆ ಮಾಡುವವನ ಸಂಬಂಧ ಅಲ್ಲಾಹನೊಂದಿಗೆ ಏನೂ ಇರುವುದಿಲ್ಲ. ನೀವು ಅವರ ಮರ್ದನದಿಂದ ತಪ್ಪಿಸಿಕೊಳ್ಳಲು ತೋರಿಕೆಗಾಗಿ ಈ ವಿಧಾನವನ್ನನುಸರಿಸಿದರೆ, ಅದಕ್ಕೆ ಕ್ಷಮೆ ಇದೆ.[5] ಆದರೆ ಅಲ್ಲಾಹನು ಸ್ವತಃ ತನ್ನ ಬಗ್ಗೆ (ಭಯಪಡಬೇಕೆಂದು) ನಿಮಗೆ ಎಚ್ಚರಿಕೆ ನೀಡುತ್ತಿದ್ದಾನೆ ಮತ್ತು ನಿಮಗೆ ಆತನ ಕಡೆಗೇ ಮರಳಿ ಹೋಗಲಿಕ್ಕಿದೆ.[6]

لَّا يَتَّخِذِ الْمُؤْمِنُونَ الْكَافِرِينَ أَوْلِيَاءَ مِن
دُونِ الْمُؤْمِنِينَ ۖ وَمَن يَفْعَلْ ذَٰلِكَ فَلَيْسَ
مِنَ اللَّهِ فِي شَيْءٍ إِلَّا أَن تَتَّقُوا مِنْهُمْ
تُقَاةً ۗ وَيُحَذِّرُكُمُ اللَّهُ نَفْسَهُ ۗ وَ
إِلَى اللَّهِ الْمَصِيرُ ﴿٢٨﴾

5. ಅರ್ಥಾತ್- ಸತ್ಯವಿಶ್ವಾಸಿಯೊಬ್ಬ ಇಸ್ಲಾಮಿನ ಶತ್ರು ಕೂಟದ ಜಾಲದಲ್ಲಿ ಸಿಕ್ಕಿಬಿದ್ದಿದ್ದು ಅವರಿಂದ ಹಿಂಸೆ ಮತ್ತು ದಬ್ಬಾಳಿಕೆಯ ಭಯವನ್ನೆದುರಿಸುತ್ತಿದ್ದರೆ, ಅವನಿಗೆ ತನ್ನ ವಿಶ್ವಾಸವನ್ನು ಗೋಪ್ಯವಾಗಿರಿಸುವ ಅನುಮತಿ ಇದೆ. ಸತ್ಯನಿಷೇಧಿಗಳೊಂದಿಗೆ ಅವನು ತೋರಿಕೆಗಾಗಿ ಅವರ ಪೈಕಿಯ ಒಬ್ಬನಂತೆ ಇರಬಹುದು. ಹಾಗೆಯೇ ತಾನು ಮುಸ್ಲಿಮನಾಗಿರುವುದು ಬಹಿರಂಗವಾದಾಗ ಪ್ರಾಣ ಉಳಿಸಲಿಕ್ಕಾಗಿ ಅವನು ಸತ್ಯನಿಷೇಧಿಗಳೊಂದಿಗೆ ಮೈತ್ರಿಯನ್ನು ಪ್ರಕಟಿಸಬಹುದು. ಎಷ್ಟರವರೆಗೆಂದರೆ ತೀವ್ರ ಭಯದ ಸಂದರ್ಭದಲ್ಲಿ ಅದನ್ನು ಎದುರಿಸುವ ಶಕ್ತಿ ಇಲ್ಲದವರಿಗೆ ಬಾಯಿಯಿಂದ ಸತ್ಯನಿಷೇಧದ ವಚನ ಹೇಳಲಿಕ್ಕೂ ಅನುಮತಿ ಇದೆ.

6. ಅರ್ಥಾತ್- ನಿಮ್ಮ ಪ್ರಾಣ ಉಳಿಸಲಿಕ್ಕಾಗಿ ನೀವು ಇಸ್ಲಾಮ್ ಮತ್ತು ಇಸ್ಲಾಮೀ ಸಂಘಟನೆಯ ಹಿತಕ್ಕೆ ಅಥವಾ ಯಾವುದೇ ಮುಸ್ಲಿಮನ ಸೊತ್ತುವಿತ್ತಗಳಿಗೆ ಹಾನಿಯಾಗದಂತೆ ತನ್ನ ಪ್ರಾಣ ಉಳಿಸಿಕೊಳ್ಳುವ ಉಪಾಯವನ್ನು ಕೈಗೊಳ್ಳಬಹುದು. ಆದರೆ ಇಸ್ಲಾಮಿನ ವಿರುದ್ಧ ಸತ್ಯನಿಷೇಧದ ಬೆಳವಣಿಗೆಗೆ ಸಾಧ್ಯವಾಗುವಂತಹ ಅಥವಾ ಮುಸ್ಲಿಮರನ್ನು ಸತ್ಯನಿಷೇಧಿಗಳು ಗೆಲ್ಲಲು ಅವಕಾಶ ನೀಡುವಂತಹ ರೀತಿಯಲ್ಲಿ ನೀವು ಸತ್ಯನಿಷೇಧಿಗಳಿಗೆ ನೆರವಾಗದಂತೆ ಎಚ್ಚರ ವಹಿಸಬೇಕು.

29. ಓ ಪೈಗಂಬರರೇ, ನಿಮ್ಮ ಹೃದಯದಲ್ಲಿರುವುದನ್ನು ಬಚ್ಚಿಟ್ಟರೂ ಪ್ರಕಟಪಡಿಸಿದರೂ ಅಲ್ಲಾಹನು ಅದನ್ನು ಅರಿಯುತ್ತಾನೆಂದೂ ಭೂಮಿ-ಆಕಾಶಗಳ ಯಾವ ವಸ್ತುವೂ ಅವನ ತಿಳುವಳಿಕೆಗೆ ಹೊರತಾಗಿರುವುದಿಲ್ಲವೆಂದೂ ಅವನ ಅಧಿಕಾರವು ಸಮಸ್ತ ವಸ್ತುಗಳ ಮೇಲೂ ವ್ಯಾಪಿಸಿದೆ ಎಂದೂ ಜನರಿಗೆ ಎಚ್ಚರಿಕೆ ಹೇಳಿರಿ.

قُلْ إِنْ تُخْفُوا مَا فِي صُدُورِكُمْ أَوْ تُبْدُوهُ يَعْلَمْهُ اللَّهُ ۗ وَيَعْلَمُ مَا فِي السَّمَاوَاتِ وَمَا فِي الْأَرْضِ ۗ وَاللَّهُ عَلَىٰ كُلِّ شَيْءٍ قَدِيرٌ ﴿٢٩﴾

30. ಪುಣ್ಯ ಮಾಡಿರಲಿ ಅಥವಾ ಪಾಪವೆಸಗಿರಲಿ ಪ್ರತಿಯೊಬ್ಬನೂ ತನ್ನ ಕರ್ಮಫಲವನ್ನು ಪ್ರತ್ಯಕ್ಷ ಪಡೆಯುವ ಆ ದಿನ ಬರಲಿದೆ. ಅಂದು ಮಾನವನು, ಅಕಟ! ಈ ದಿನವು ತನ್ನಿಂದ ಇನ್ನೂ ಬಹಳ ದೂರವಿರುತ್ತಿದ್ದರೆ! ಎಂದು ಆಶಿಸುವನು. ಅಲ್ಲಾಹನು ಸ್ವತಃ ತನ್ನ ಬಗ್ಗೆ (ಭಯಪಡಬೇಕೆಂದು) ನಿಮಗೆ ಎಚ್ಚರಿಕೆ ನೀಡುತ್ತಿದ್ದಾನೆ ಮತ್ತು ಅವನು ತನ್ನ ದಾಸರ ಪರಮ ಹಿತಚಿಂತಕನಾಗಿರುತ್ತಾನೆ.

يَوْمَ تَجِدُ كُلُّ نَفْسٍ مَا عَمِلَتْ مِنْ خَيْرٍ مُحْضَرًا وَمَا عَمِلَتْ مِنْ سُوءٍ تَوَدُّ لَوْ أَنَّ بَيْنَهَا وَبَيْنَهُ أَمَدًا بَعِيدًا ۗ وَيُحَذِّرُكُمُ اللَّهُ نَفْسَهُ ۗ وَاللَّهُ رَءُوفٌ بِالْعِبَادِ ﴿٣٠﴾

31. ಓ ಪೈಗಂಬರರೇ, ನೀವು ಜನರೊಡನೆ ಹೀಗೆ ಹೇಳಿಬಿಡಿರಿ,- "ನೀವು ನಿಜವಾಗಿಯೂ ಅಲ್ಲಾಹನನ್ನು ಪ್ರೀತಿಸುತ್ತೀರೆಂದಾದರೆ ನನ್ನ ಅನುಕರಣೆ ಮಾಡಿರಿ. ಅಲ್ಲಾಹನು ನಿಮ್ಮನ್ನು ಪ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅವನು ಮಹಾ ಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ."

قُلْ إِنْ كُنْتُمْ تُحِبُّونَ اللَّهَ فَاتَّبِعُونِي يُحْبِبْكُمُ اللَّهُ وَيَغْفِرْ لَكُمْ ذُنُوبَكُمْ ۗ وَاللَّهُ غَفُورٌ رَحِيمٌ ﴿٣١﴾

32. "ಅಲ್ಲಾಹ್ ಮತ್ತು ಸಂದೇಶವಾಹಕರ ಅನುಸರಣೆ ಮಾಡಿರಿ" ಎಂದು ಅವರೊಡನೆ ಹೇಳಿರಿ. ಅವರು ನಿಮ್ಮ ಆಹ್ವಾನವನ್ನು ಸ್ವೀಕರಿಸದಿದ್ದರೆ ಅಲ್ಲಾಹನು ತನ್ನ ಮತ್ತು ತನ್ನ ಸಂದೇಶವಾಹಕರ ಅನುಸರಣೆಯನ್ನು ನಿರಾಕರಿಸುವವರನ್ನು ಪ್ರೀತಿಸುವುದು ಖಂಡಿತ ವಾಗಿಯೂ ಅಸಂಭವ.

قُلْ أَطِيعُوا اللَّهَ وَالرَّسُولَ ۖ فَإِنْ تَوَلَّوْا فَإِنَّ اللَّهَ لَا يُحِبُّ الْكَافِرِينَ ﴿٣٢﴾

33. ಅಲ್ಲಾಹನು ಆದಮ್, ನೂಹ್, ಇಬ್‌ರಾಹೀಮ್‌ರ ವಂಶ ಮತ್ತು ಇಮ್‌ರಾನರ[7] ವಂಶಗಳನ್ನು ಸಕಲ ಜಗತ್ತಿನವರ ಮೇಲೆ ಮಹತ್ವ ನೀಡಿ (ತನ್ನ ಸಂದೇಶವಾಹಕತ್ವಕ್ಕಾಗಿ) ಆಯ್ದುಕೊಂಡಿದ್ದನು.

إِنَّ اللَّهَ اصْطَفَىٰ آدَمَ وَنُوحًا وَآلَ إِبْرَاهِيمَ وَآلَ عِمْرَانَ عَلَى الْعَالَمِينَ ﴿٣٣﴾

34. ಇವರು ಪರಸ್ಪರರ ವಂಶದವರೂ ಒಂದೇ ಪರಂಪರೆಯವರೂ ಆಗಿದ್ದರು. ಅಲ್ಲಾಹನು ಎಲ್ಲವನ್ನೂ ಆಲಿಸುತ್ತಾನೆ ಮತ್ತು ಅರಿಯುತ್ತಾನೆ.

ذُرِّيَّةً بَعْضُهَا مِنْ بَعْضٍ ۗ وَاللَّهُ سَمِيعٌ عَلِيمٌ ﴿٣٤﴾

7. ಇಮ್ರಾನ್ ಎಂಬುದು ಹ.ಮೂಸಾ ಮತ್ತು ಹ. ಹಾರೂನ್‌ರ(ಅ) ತಂದೆಯ ಹೆಸರಾಗಿದೆ. ಬೈಬಲ್‌ನಲ್ಲಿ ಅವರನ್ನು 'ಅಮ್ರಾಮ್' ಎಂದು ಉಲ್ಲೇಖಿಸಲಾಗಿದೆ.

35. ಇಮ್‌ರಾನನ ಸ್ತ್ರೀಯು,[8] "ಓ ನನ್ನ ಪ್ರಭೂ, ನಾನು ನನ್ನ ಗರ್ಭದಲ್ಲಿರುವ ಶಿಶುವನ್ನು ನಿನಗೆ ಹರಕೆಯಾಗಿ ಒಪ್ಪಿಸುತ್ತೇನೆ. ಅದು ನಿನ್ನ ಕಾರ್ಯಕ್ಕಾಗಿಯೇ ಸಮರ್ಪಿತವಿರುವುದು. ನನ್ನ ಈ ಕಾಣಿಕೆಯನ್ನು ಸ್ವೀಕರಿಸು. ನಿಶ್ಚಯವಾಗಿಯೂ ನೀನು ಸರ್ವಶ್ರುತನೂ ಸರ್ವಜ್ಞನೂ ಆಗಿರುವೆ, ಎಂದು ಹೇಳುತ್ತಿದ್ದಳು.

إِذْ قَالَتِ امْرَأَتُ عِمْرَانَ رَبِّ إِنِّي نَذَرْتُ لَكَ مَا فِي بَطْنِي مُحَرَّرًا فَتَقَبَّلْ مِنِّي ۖ إِنَّكَ أَنتَ السَّمِيعُ الْعَلِيمُ ﴿٣٥﴾

36. (ಆಗ ಅವನು ಅದನ್ನು ಆಲಿಸುತ್ತಿದ್ದನು) ಅನಂತರ ಅವಳಲ್ಲಿ ಆ ಹೆಣ್ಣು ಶಿಶು ಜನಿಸಿದಾಗ ಅವಳು, "ಓ ನನ್ನ ಪ್ರಭೂ, ನನ್ನಲ್ಲಿ ಹೆಣ್ಣು ಶಿಶು ಜನಿಸಿಬಿಟ್ಟಿದೆ" ಎಂದಳು - ವಸ್ತುತಃ ಅವಳು ಏನು ಪಡೆದಿದ್ದಳೆಂಬುದರ ಸಮಾಚಾರ ಅಲ್ಲಾಹನಿಗೆ ತಿಳಿದಿತ್ತು ಮತ್ತು ಗಂಡು ಶಿಶು ಹೆಣ್ಣು ಶಿಶುವಿನಂತಿರುವುದಿಲ್ಲ. "ಸರಿ, ನಾನು ಅದಕ್ಕೆ ಮರ್ಯಮ್ ಎಂದು ನಾಮಕರಣ ಮಾಡಿಬಿಟ್ಟೆ ಮತ್ತು ನಾನು ಆಕೆಯನ್ನೂ ಆಕೆಯ ಭಾವೀ ಸಂತತಿಯನ್ನೂ ಬಹಿಷ್ಕೃತ ಶೈತಾನನ ಕೇಡಿನಿಂದ (ತಪ್ಪಿಸಲು) ನಿನ್ನ ರಕ್ಷಣೆಗೆ ಒಪ್ಪಿಸುತ್ತೇನೆ" ಎಂದು ಹೇಳಿದಳು.

فَلَمَّا وَضَعَتْهَا قَالَتْ رَبِّ إِنِّي وَضَعْتُهَا أُنثَىٰ وَاللَّهُ أَعْلَمُ بِمَا وَضَعَتْ وَلَيْسَ الذَّكَرُ كَالْأُنثَىٰ ۖ وَإِنِّي سَمَّيْتُهَا مَرْيَمَ وَإِنِّي أُعِيذُهَا بِكَ وَذُرِّيَّتَهَا مِنَ الشَّيْطَانِ الرَّجِيمِ ﴿٣٦﴾

37. ಕೊನೆಗೆ ಅವಳ ಪ್ರಭುವು ಆ ಬಾಲಕಿಯನ್ನು ಸಂತೋಷದಿಂದ ಸ್ವೀಕರಿಸಿಕೊಂಡನು. ಅವಳನ್ನು ಅತ್ಯುತ್ತಮ ಬಾಲಕಿಯನ್ನಾಗಿ ಬೆಳೆಸಿದನು ಮತ್ತು ಝಕರಿಯ್ಯಾರನ್ನು ಅವಳ ರಕ್ಷಕನನ್ನಾಗಿ ಮಾಡಿದನು. ಝಕರಿಯ್ಯಾರವರು ಅವಳ ಕೊಠಡಿಗೆ ಬಂದಾಗಲೆಲ್ಲಾ ಅವಳ ಬಳಿ ಒಂದಲ್ಲೊಂದು ಭಕ್ಷ್ಯ ಪದಾರ್ಥವನ್ನು ಕಂಡು, "ಓ ಮರ್ಯಮ್, ಇದು ನಿನ್ನ ಬಳಿಗೆ ಎಲ್ಲಿಂದ ಬಂತು?' ಎಂದು ಕೇಳುತ್ತಿದ್ದರು. ಆಗ ಅವಳು, "ಅಲ್ಲಾಹನ ಕಡೆಯಿಂದ ಬಂದಿದೆ. ಅಲ್ಲಾಹನು ತನಗಿಷ್ಟ ಬಂದವರಿಗೆ ಎಣಿಸಲಾಗದಷ್ಟು ಅನ್ನಾಧಾರ ನೀಡುತ್ತಾನೆ" ಎಂದು ಉತ್ತರಿಸುತ್ತಿದ್ದಳು.

فَتَقَبَّلَهَا رَبُّهَا بِقَبُولٍ حَسَنٍ وَأَنبَتَهَا نَبَاتًا حَسَنًا وَكَفَّلَهَا زَكَرِيَّا ۖ كُلَّمَا دَخَلَ عَلَيْهَا زَكَرِيَّا الْمِحْرَابَ وَجَدَ عِندَهَا رِزْقًا ۖ قَالَ يَا مَرْيَمُ أَنَّىٰ لَكِ هَٰذَا ۖ قَالَتْ هُوَ مِنْ عِندِ اللَّهِ ۖ إِنَّ اللَّهَ يَرْزُقُ مَن يَشَاءُ بِغَيْرِ حِسَابٍ ﴿٣٧﴾

38. ಇದನ್ನು ಕಂಡು ಝಕರಿಯ್ಯಾರವರು ತಮ್ಮ ಪ್ರಭುವನ್ನು ಪ್ರಾರ್ಥಿಸಿದರು, "ಪ್ರಭೂ, ನಿನ್ನ ಮಹಿಮೆಯಿಂದ ನನಗೆ ಸುನೀತ ಸಂತತಿ ದಯಪಾಲಿಸು. ನೀನೇ ಪ್ರಾರ್ಥನೆಯನ್ನಾಲಿಸುವವನಾಗಿರುತ್ತಿ."

هُنَالِكَ دَعَا زَكَرِيَّا رَبَّهُ ۖ قَالَ رَبِّ هَبْ لِي مِن لَّدُنكَ ذُرِّيَّةً طَيِّبَةً ۖ إِنَّكَ سَمِيعُ الدُّعَاءِ ﴿٣٨﴾

8. 'ಇಮ್ರಾನನ ಸ್ತ್ರೀ' ಎಂಬುದನ್ನು 'ಇಮ್ರಾನನ ಪತ್ನಿ' ಎಂದು ಗ್ರಹಿಸುವುದಾದರೆ ಇಲ್ಲಿ ಪ್ರಸ್ತಾಪಿಸಲಾಗಿರುವ ಇಮ್ರಾನ್ ಮೇಲೆ ಪ್ರಸ್ತಾಪಿಸಿದ ವ್ಯಕ್ತಿಯಲ್ಲವೆಂದಾಗುತ್ತದೆ. ಅವರು ಹ.ಮರ್ಯಮರ ತಂದೆಯಾಗಿದ್ದು, ಪ್ರಾಯಶಃ ಅವರ ಹೆಸರೂ ಇಮ್ರಾನ್ ಎಂದಾಗಿರಬಹುದು. ಇಮ್ರಾನನ ಸ್ತ್ರೀ ಎಂದರೆ 'ಆಲೆ ಇಮ್ರಾನ್'ನ ಸ್ತ್ರೀ ಎಂದು ಅರ್ಥೈಸುವುದಾದರೆ ಹ.ಮರ್ಯಮರ ತಾಯಿ ಇಮ್ರಾನ್ ಮನೆತನದವರಾಗಿದ್ದರೆಂದು ಭಾವಿಸಬೇಕಾಗುತ್ತದೆ.

39. ಅವರು ಮಿಹ್ರಾಬಿನಲ್ಲಿ ನಿಂತು ನಮಾಝ್ ಮಾಡುತ್ತಿದ್ದಾಗ ಪ್ರತ್ಯುತ್ತರವಾಗಿ ದೇವಚರರು ಕರೆದು ಹೀಗೆ ಹೇಳಿದರು, "ಅಲ್ಲಾಹ್ ನಿನಗೆ ಯಹ್ಯಾರ ಸುವಾರ್ತೆ ನೀಡುತ್ತಿದ್ದಾನೆ. ಅವನು ಅಲ್ಲಾಹನ ವತಿಯಿಂದ ಒಂದು 'ಫರಮಾನನ್ನು'[9](ಆಜ್ಞೆಯನ್ನು) ದೃಢ ಪಡಿಸುವವನಾಗಿ ಬರುವನು. ಅವನಲ್ಲಿ ನಾಯಕತ್ವ ಮತ್ತು ಹಿರಿತನವಿರುವುದು. ಅತ್ಯುನ್ನತ ವ್ಯವಸ್ಥಾಪನಾ ಸಾಮರ್ಥ್ಯವಿರುವುದು. ಅವನು ಪ್ರವಾದಿತ್ವವನ್ನು ಹೊಂದುವನು ಮತ್ತು ಸಜ್ಜನರಲ್ಲಿ ಗಣಿಸಲ್ಪಡುವನು."

فَنَادَتْهُ الْمَلَائِكَةُ وَهُوَ قَائِمٌ يُصَلِّي فِي الْمِحْرَابِ أَنَّ اللَّهَ يُبَشِّرُكَ بِيَحْيَىٰ مُصَدِّقًا بِكَلِمَةٍ مِّنَ اللَّهِ وَسَيِّدًا وَحَصُورًا وَنَبِيًّا مِّنَ الصَّالِحِينَ ﴿٣٩﴾

40. ಆಗ ಝಕರಿಯ್ಯಾರವರು, "ಓ ನನ್ನ ಪ್ರಭೂ, ನನ್ನಲ್ಲಿ ಪುತ್ರ ಸಂತತಿ ಉಂಟಾಗುವುದೆಲ್ಲಿಂದ? ನಾನು ಅತಿವೃದ್ಧನಾಗಿದ್ದೇನೆ ಮತ್ತು ನನ್ನ ಪತ್ನಿ ಬಂಜೆಯಾಗಿದ್ದಾಳೆ" ಎಂದರು. ಉತ್ತರ ಸಿಕ್ಕಿತು- "ಹಾಗೆಯೇ ಆಗುವುದು.[10] ಅಲ್ಲಾಹನು ತಾನಿಚ್ಛಿಸುವುದನ್ನು ಮಾಡುತ್ತಾನೆ."

قَالَ رَبِّ أَنَّىٰ يَكُونُ لِي غُلَامٌ وَقَدْ بَلَغَنِيَ الْكِبَرُ وَامْرَأَتِي عَاقِرٌ ۖ قَالَ كَذَٰلِكَ اللَّهُ يَفْعَلُ مَا يَشَاءُ ﴿٤٠﴾

41. ಆಗ ಅವರು ಹೀಗೆ ನಿವೇದಿಸಿದರು, "ನನ್ನ ಪ್ರಭೂ, ಹಾಗಾದರೆ ನನಗೊಂದು ಕುರುಹನ್ನು ನಿರ್ಧರಿಸಿಬಿಡು." ಉತ್ತರ (ಹೀಗೆ) ಬಂತು- "ನೀವು ಮೂರು ದಿನಗಳ ತನಕ ಜನರೊಡನೆ ಸನ್ನೆಗಳ ಮೂಲಕ ವಿನಾ ಏನೂ ಮಾತನಾಡಲಿಕ್ಕಿಲ್ಲ (ಅಥವಾ ನಿಮ್ಮಿಂದ ಮಾತಾಡಲಿಕ್ಕಾಗದು). ಇದೇ ನಿಮಗೆ ಕುರುಹು. ಈ ಅವಧಿಯಲ್ಲಿ ನಿಮ್ಮ ಪ್ರಭುವನ್ನು ಅತಿ ಹೆಚ್ಚಾಗಿ ಸ್ಮರಿಸಬೇಕು ಮತ್ತು ಪ್ರಭಾತ, ಪ್ರದೋಷಗಳಲ್ಲಿ ಅವನ ಸ್ತುತಿಗೈಯುತ್ತಿರಬೇಕು."

قَالَ رَبِّ اجْعَل لِّي آيَةً ۖ قَالَ آيَتُكَ أَلَّا تُكَلِّمَ النَّاسَ ثَلَاثَةَ أَيَّامٍ إِلَّا رَمْزًا ۗ وَاذْكُر رَّبَّكَ كَثِيرًا وَسَبِّحْ بِالْعَشِيِّ وَالْإِبْكَارِ ﴿٤١﴾

42. ಅನಂತರ ದೇವಚರರು ಮರ್ಯಮರ ಬಳಿಗೆ ಬಂದು (ಹೀಗೆ) ಹೇಳಿದ ಸಂದರ್ಭ ಬಂತು- "ಓ ಮರ್ಯಮ್, ಅಲ್ಲಾಹನು ನಿನ್ನನ್ನು ಪುನೀತಳನ್ನಾಗಿ ಮಾಡಿದನು ಮತ್ತು ನಿನಗೆ ಪರಿಶುದ್ಧತೆ ನೀಡಿದನು ಮತ್ತು ಸಮಸ್ತ ಲೋಕದ ಸ್ತ್ರೀಯರ ಮೇಲೆ ನಿನಗೆ ಶ್ರೇಷ್ಠತೆ ದಯಪಾಲಿಸಿ ತನ್ನ ಸೇವೆಗಾಗಿ ಆಯ್ದುಕೊಂಡನು.

وَإِذْ قَالَتِ الْمَلَائِكَةُ يَا مَرْيَمُ إِنَّ اللَّهَ اصْطَفَاكِ وَطَهَّرَكِ وَاصْطَفَاكِ عَلَىٰ نِسَاءِ الْعَالَمِينَ ﴿٤٢﴾

43. ಓ ಮರ್ಯಮ್, ನಿನ್ನ ಪ್ರಭುವಿನ ಆಜ್ಞಾಪಾಲಕಿಯಾಗಿರು, ಅವನ ಮುಂದೆ ಸಾಷ್ಟಾಂಗವೆರಗು, ಅವನ ಮುಂದೆ ಬಾಗುವವರೊಂದಿಗೆ ನೀನೂ ಬಾಗು."

يَا مَرْيَمُ اقْنُتِي لِرَبِّكِ وَاسْجُدِي وَارْكَعِي مَعَ الرَّاكِعِينَ ﴿٤٣﴾

9. ಅಲ್ಲಾಹನ 'ಫರಮಾನು' (ಆಜ್ಞೆ) ಎಂದರೆ ಪ್ರವಾದಿ ಈಸಾ(ಅ) ಆಗಿದ್ದಾರೆ. ಅವರ ಜನನ ಅಲ್ಲಾಹನ ಅಸಾಮಾನ್ಯ ಆಜ್ಞೆಯ ಮೂಲಕ ಅಸ್ವಾಭಾವಿಕ ರೀತಿಯಿಂದಾದುದರಿಂದ ಅವರನ್ನು ಪವಿತ್ರ ಕುರ್‌ಆನಿನಲ್ಲಿ "ಕಲಿಮತುಮ್ಮಿನಲ್ಲಾಹ್" ಅರ್ಥಾತ್ 'ಅಲ್ಲಾಹನ ಆಜ್ಞೆ' ಎನ್ನಲಾಗಿದೆ.

10. ಅರ್ಥಾತ್- ನಿನ್ನ ವೃದ್ಧಾಪ್ಯ ಮತ್ತು ನಿನ್ನ ಪತ್ನಿಯ ಬಂಜೆತನದ ಹೊರತಾಗಿಯೂ ಅಲ್ಲಾಹನು ನಿನಗೆ ಪುತ್ರನನ್ನು ದಯಪಾಲಿಸುವನು.

44. ಓ ಪೈಗಂಬರರೇ, ಇವು ನಿಮಗೆ ದಿವ್ಯವಾಣಿಯ ಮೂಲಕ ನಾವು ನೀಡುತ್ತಿರುವ ಅಗೋಚರ ವೃತ್ತಾಂತಗಳು. ಅನ್ಯಥಾ ಹೈಕಲ್ (ಮಹಾ ಆರಾಧನಾಲಯದ)ನ ಸೇವಕರು ಮರ್ಯಮರ ಪಾಲಕ ಯಾರಾಗಬೇಕೆಂಬ ಬಗ್ಗೆ ಲೇಖನಿಗಳನ್ನೆಸೆಯುತ್ತಿದ್ದಾಗ[11] ನೀವು ಅಲ್ಲಿ ಉಪಸ್ಥಿತರಿದ್ದಿಲ್ಲ ಮತ್ತು ಅವರೊಳಗೆ ಜಗಳವಾಗುತ್ತಿದ್ದಾಗಲೂ ನೀವು ಅಲ್ಲಿರಲಿಲ್ಲ.

ذٰلِكَ مِنْ اَنْۢبَآءِ الْغَيْبِ نُوْحِيْهِ اِلَيْكَ ؕ وَمَا كُنْتَ لَدَيْهِمْ اِذْ يُلْقُوْنَ اَقْلَامَهُمْ اَيُّهُمْ يَكْفُلُ مَرْيَمَ ۪ وَمَا كُنْتَ لَدَيْهِمْ اِذْ يَخْتَصِمُوْنَ ﴿٤٤﴾

45. ದೇವಚರರು ಹೀಗೆಂದರು - "ಓ ಮರ್ಯಮ್, ಅಲ್ಲಾಹನು ನಿನಗೆ ತನ್ನ ಒಂದು 'ಫರಮಾನಿನ' (ಆಜ್ಞೆಯ) ಸುವಾರ್ತೆ ನೀಡುತ್ತಾನೆ. ಅವನ ಹೆಸರು ಮರ್ಯಮಳ ಪುತ್ರ ಮಸೀಹ್ ಈಸಾ ಎಂದಿರುವುದು. ಅವನು ಇಹ ಮತ್ತು ಪರಗಳಲ್ಲಿ ಪ್ರತಿಷ್ಠಿತನಾಗುವನು. ಅಲ್ಲಾಹನ ನಿಕಟ ದಾಸರಲ್ಲಿ ಗಣಿಸಲ್ಪಡುವನು.

اِذْ قَالَتِ الْمَلٰٓئِكَةُ يٰمَرْيَمُ اِنَّ اللّٰهَ يُبَشِّرُكِ بِكَلِمَةٍ مِّنْهُ ۖ اسْمُهُ الْمَسِيْحُ عِيْسَى ابْنُ مَرْيَمَ وَجِيْهًا فِى الدُّنْيَا وَالْاٰخِرَةِ وَمِنَ الْمُقَرَّبِيْنَ ﴿٤٥﴾

46. ತೊಟ್ಟಿಲಲ್ಲಿಯೂ ಅತಿ ವೃದ್ಧಾಪ್ಯಕ್ಕೆ ತಲುಪಿದಾಗಲೂ ಜನರೊಡನೆ ಮಾತನಾಡುವನು ಮತ್ತು ಅವನೊಬ್ಬ ಸಜ್ಜನನಾಗಿರುವನು."

وَيُكَلِّمُ النَّاسَ فِى الْمَهْدِ وَكَهْلًا وَّمِنَ الصّٰلِحِيْنَ ﴿٤٦﴾

47. ಇದನ್ನು ಕೇಳಿ ಮರ್ಯಮ್ ಹೇಳಿದರು, "ಓ ನನ್ನ ಪ್ರಭೂ, ನನ್ನಲ್ಲಿ ಮಗುವಾಗುವುದೆಲ್ಲಿಂದ? ನನ್ನನ್ನಂತು ಪುರುಷನಾರೂ ಸ್ಪರ್ಶಿಸಿಲ್ಲ." ಉತ್ತರ ಸಿಕ್ಕಿತು, -"ಹಾಗೆಯೇ ಸಂಭವಿಸುವುದು."[12] ಅಲ್ಲಾಹನು ತಾನಿಚ್ಛಿಸಿದುದನ್ನು ಸೃಷ್ಟಿಸುತ್ತಾನೆ. ಅವನು ಯಾವುದಾದರೊಂದು ಕಾರ್ಯವನ್ನು ಮಾಡಲು ನಿರ್ಧರಿಸಿದಾಗ, 'ಆಗು' ಎನ್ನುತ್ತಾನೆ ಮತ್ತು ಅದು ಆಗಿ ಬಿಡುತ್ತದೆ.

قَالَتْ رَبِّ اَنّٰى يَكُوْنُ لِىْ وَلَدٌ وَّلَمْ يَمْسَسْنِىْ بَشَرٌ ؕ قَالَ كَذٰلِكِ اللّٰهُ يَخْلُقُ مَا يَشَآءُ ؕ اِذَا قَضٰٓى اَمْرًا فَاِنَّمَا يَقُوْلُ لَهٗ كُنْ فَيَكُوْنُ ﴿٤٧﴾

48. (ದೇವಚರರು ತಮ್ಮ ಮಾತು ಮುಂದುವರಿಸುತ್ತ ಹೇಳಿದರು)- "ಅಲ್ಲಾಹನು ಅವನಿಗೆ ಗ್ರಂಥ ಮತ್ತು ಯುಕ್ತಿಯ ಶಿಕ್ಷಣ ನೀಡುವನು. ತೌರಾತ್ ಮತ್ತು ಇಂಜೀಲಿನ ವಿದ್ಯೆ ಕಲಿಸುವನು.

وَيُعَلِّمُهُ الْكِتٰبَ وَالْحِكْمَةَ وَالتَّوْرٰىةَ وَالْاِنْجِيْلَ ﴿٤٨﴾

49. ಮತ್ತು ಅವನನ್ನು ಬನೀಇಸ್ರಾಈಲರ ಕಡೆಗೆ ಸಂದೇಶವಾಹಕನನ್ನಾಗಿ ನೇಮಕ ಮಾಡುವನು." (ಅವನು ಸಂದೇಶವಾಹಕನ ನೆಲೆಯಲ್ಲಿ ಬನೀಇಸ್ರಾಈಲರ ಬಳಿಗೆ ಬಂದಾಗ ಹೀಗೆ ಹೇಳಿದನು) "ನಾನು ನಿಮ್ಮ ಪ್ರಭುವಿನ ವತಿಯಿಂದ ನಿಮ್ಮ ಬಳಿಗೆ

وَرَسُوْلًا اِلٰى بَنِىْٓ اِسْرَآءِيْلَ ۙ اَنِّىْ قَدْ جِئْتُكُمْ بِاٰيَةٍ مِّنْ رَّبِّكُمْ ۙ اَنِّىْٓ اَخْلُقُ لَكُمْ مِّنَ الطِّيْنِ كَهَيْـَٔةِ الطَّيْرِ فَاَنْفُخُ فِيْهِ

11. ಅರ್ಥಾತ್- ಅದೃಷ್ಟ ಚೀಟಿಯನ್ನೆಸೆಯುತ್ತಿದ್ದರು.

12. ಅರ್ಥಾತ್- ಯಾವುದೇ ಪುರುಷ ನಿನ್ನನ್ನು ಸ್ಪರ್ಶಿಸಿರದಿದ್ದರೂ ನಿನಗೆ ಮಗು ಜನಿಸುವುದು.

ಕುರುಹುಗಳೊಂದಿಗೆ ಬಂದಿರುತ್ತೇನೆ. ನಾನು ನಿಮ್ಮ ಮುಂದೆ ಪಕ್ಷಿ ರೂಪದ ಆಕೃತಿ ಮಾಡುತ್ತೇನೆ ಮತ್ತು ಅದಕ್ಕೆ ಉಸಿರೂದಿ ಬಿಡುತ್ತೇನೆ. ಅದು ಅಲ್ಲಾಹನ ಅಪ್ಪಣೆಯಿಂದ ಪಕ್ಷಿಯಾಗುತ್ತದೆ. ನಾನು ಅಲ್ಲಾಹನ ಅಪ್ಪಣೆಯಿಂದ ಹುಟ್ಟು ಕುರುಡರನ್ನೂ ಕುಷ್ಠರೋಗಿಗಳನ್ನೂ ಗುಣಪಡಿಸುತ್ತೇನೆ ಮತ್ತು ಅವನ ಅಪ್ಪಣೆಯಿಂದ ಸತ್ತವರನ್ನು ಜೀವಂತಗೊಳಿಸುತ್ತೇನೆ. ನೀವು ಏನು ಉಣ್ಣುತ್ತೀರೆಂಬುದನ್ನೂ ನಿಮ್ಮ ಮನೆಗಳಲ್ಲಿ ಏನೇನನ್ನು ದಾಸ್ತಾನು ಮಾಡಿಡುತ್ತೀರೆಂಬುದನ್ನೂ ಹೇಳುತ್ತೇನೆ. ನೀವು ವಿಶ್ವಾಸವಿರಿಸುವವರಾದರೆ ನಿಮಗೆ ಇದರಲ್ಲಿ ಸಾಕಷ್ಟು ನಿದರ್ಶನವಿದೆ.

فَيَكُونُ طَيْرًا بِإِذْنِ اللَّهِ ۖ وَأُبْرِئُ الْأَكْمَهَ وَالْأَبْرَصَ وَأُحْيِي الْمَوْتَىٰ بِإِذْنِ اللَّهِ ۖ وَأُنَبِّئُكُم بِمَا تَأْكُلُونَ وَمَا تَدَّخِرُونَ فِي بُيُوتِكُمْ ۚ إِنَّ فِي ذَٰلِكَ لَآيَةً لَّكُمْ إِن كُنتُم مُّؤْمِنِينَ ﴿٤٩﴾

50. ನಾನು ತೌರಾತಿನಲ್ಲಿರುವುದರ ಪೈಕಿ ಇದೀಗ ನನ್ನ ಕಾಲದಲ್ಲಿರುವ ಶಿಕ್ಷಣ ಮತ್ತು ಸನ್ಮಾರ್ಗದರ್ಶನವನ್ನು ದೃಢೀಕರಿಸುವವನಾಗಿ ಬಂದಿರುತ್ತೇನೆ ಮತ್ತು ನಿಮಗಾಗಿ ನಿಷಿದ್ಧಗೊಳಿಸಲ್ಪಟ್ಟಿರುವ ಕೆಲವು ವಸ್ತುಗಳನ್ನು ಧರ್ಮಸಮ್ಮತಗೊಳಿಸಲಿಕ್ಕಾಗಿ ನಾನು ಬಂದಿರುತ್ತೇನೆ.[13] ನೋಡಿರಿ, ನಾನು ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕುರುಹನ್ನು ತೆಗೆದುಕೊಂಡು ಬಂದಿರುತ್ತೇನೆ. ಆದುದರಿಂದ ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನ ಅನುಸರಣೆ ಮಾಡಿರಿ.

وَمُصَدِّقًا لِّمَا بَيْنَ يَدَيَّ مِنَ التَّوْرَاةِ وَلِأُحِلَّ لَكُم بَعْضَ الَّذِي حُرِّمَ عَلَيْكُمْ ۚ وَجِئْتُكُم بِآيَةٍ مِّن رَّبِّكُمْ فَاتَّقُوا اللَّهَ وَأَطِيعُونِ ﴿٥٠﴾

51. ಅಲ್ಲಾಹನು ನನ್ನ ಪ್ರಭುವೂ ಆಗಿರುತ್ತಾನೆ ನಿಮ್ಮ ಪ್ರಭುವೂ ಆಗಿರುತ್ತಾನೆ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ. ಇದೇ ನೇರ ಮಾರ್ಗವಾಗಿದೆ.

إِنَّ اللَّهَ رَبِّي وَرَبُّكُمْ فَاعْبُدُوهُ ۗ هَٰذَا صِرَاطٌ مُّسْتَقِيمٌ ﴿٥١﴾

52. ಬನೀಇಸ್ರಾಈಲರು ಅಧರ್ಮ ಹಾಗೂ ಸತ್ಯನಿಷೇಧಕ್ಕೆ ಸನ್ನದ್ಧರಾಗಿರುವುದನ್ನು ಈಸಾರವರು ಮನಗಂಡಾಗ, "ಅಲ್ಲಾಹನ ಮಾರ್ಗದಲ್ಲಿ ನನ್ನ ಸಹಾಯಕರಾಗುವವರು ಯಾರು?" ಎಂದು ಕೇಳಿದರು. ಹವಾರಿಗಳು[14] ಉತ್ತರಕೊಟ್ಟರು - "ನಾವು ಅಲ್ಲಾಹನ ಸಹಾಯಕರಾಗಿದ್ದೇವೆ.[15] ನಾವು ಅಲ್ಲಾಹನ ಮೇಲೆ

فَلَمَّا أَحَسَّ عِيسَىٰ مِنْهُمُ الْكُفْرَ قَالَ مَنْ أَنصَارِي إِلَى اللَّهِ ۖ قَالَ الْحَوَارِيُّونَ نَحْنُ أَنصَارُ اللَّهِ آمَنَّا بِاللَّهِ وَاشْهَدْ بِأَنَّا مُسْلِمُونَ ﴿٥٢﴾

13. ಅರ್ಥಾತ್- ನಿಮ್ಮಲ್ಲಿನ ಅಜ್ಞಾನಿಗಳ ಮೂಢನಂಬಿಕೆ, ನಿಮ್ಮ ಕರ್ಮಶಾಸ್ತ್ರಜ್ಞರ ಕಾನೂನಿನ ಕೂದಲು ಸೀಳುವಿಕೆ, ನಿಮ್ಮಲ್ಲಿನ ಸನ್ಯಾಸಪ್ರಿಯರ ಕಾಠಿಣ್ಯ, ಇತ್ಯಾದಿಗಳು. ಅಲ್ಲದೆ ಮುಸ್ಲಿಮೇತರ ಸಮುದಾಯಗಳ ಪ್ರಾಬಲ್ಯದಿಂದಾಗಿ ನಿಮ್ಮಲ್ಲಿ ನೈಜ ಶರೀಅತ್ (ಧರ್ಮಶಾಸ್ತ್ರ)ನಲ್ಲಿ ಸೇರ್ಪಡೆಗೊಂಡಿರುವ ಬಂಧನಗಳನ್ನು ನಾನು ರದ್ದುಪಡಿಸುತ್ತೇನೆ. ಅಲ್ಲಾಹನು ಸಿಂಧುಗೊಳಿಸಿರುವ ಅಥವಾ ನಿಷೇಧಿಸಿರುವವುಗಳನ್ನೇ ನಾನು ನಿಮಗೆ ಸಿಂಧು ಅಥವಾ ನಿಷಿದ್ಧಗೊಳಿಸುತ್ತೇನೆ.

14. ಹವಾರಿ ಎಂಬ ಪದದ ಅರ್ಥವು ನಮ್ಮಲ್ಲಿ ಪ್ರಚಲಿತವಿರುವ ಅನ್ಸಾರ್ (ಸಹಾಯಕರು) ಎಂಬ ಪದದ ಅರ್ಥವೇ ಆಗಿದೆ.

15. ಅರ್ಥಾತ್- ಅಲ್ಲಾಹನ ಮಾರ್ಗದ ಕೆಲಸದಲ್ಲಿ ನಿಮ್ಮ ಸಹಾಯಕರು.

ವಿಶ್ವಾಸವಿಟ್ಟಿದ್ದೇವೆ. ನಾವು ಮುಸ್ಲಿಮ್ (ಅಲ್ಲಾಹನ ಮುಂದೆ ದಾಸ್ಯ-ಅನುಸರಣೆಗಾಗಿ ಶಿರಬಾಗುವವರು) ಎಂಬ ಬಗ್ಗೆ ನೀವು ಸಾಕ್ಷ್ಯ ವಹಿಸಿರಿ.

53. ಓ ನಮ್ಮ ಪ್ರಭೂ, ನೀನು ಅವತೀರ್ಣಗೊಳಿಸಿದ ಆದೇಶವನ್ನು ನಾವು ಒಪ್ಪಿಕೊಂಡೆವು ಮತ್ತು ಸಂದೇಶವಾಹಕರ ಅನುಸರಣೆಯನ್ನೂ ಸ್ವೀಕರಿಸಿದೆವು. ನಮ್ಮ ಹೆಸರುಗಳನ್ನು ಸಾಕ್ಷ್ಯವಹಿಸುವವರಲ್ಲಿ ಬರೆದುಕೋ."

رَبَّنَآ اٰمَنَّا بِمَآ اَنۡزَلۡتَ وَاتَّبَعۡنَا الرَّسُوۡلَ فَاكۡتُبۡنَا مَعَ الشّٰهِدِيۡنَ ﴿۵۳﴾

54. ಅದಲ್ಲದೆ ಬನೀಇಸ್ರಾಈಲರು (ಮಸೀಹರ ವಿರುದ್ಧ) ಗೂಢ ತಂತ್ರಗಳನ್ನು ಮಾಡ ತೊಡಗಿದರು. ಅದಕ್ಕೆ ಪ್ರತಿಯಾಗಿ ಅಲ್ಲಾಹನೂ ತನ್ನ ಗೂಢ ತಂತ್ರವನ್ನು ಮಾಡಿದನು ಮತ್ತು ಇಂತಹ ತಂತ್ರಗಳಲ್ಲಿ ಅಲ್ಲಾಹನು ಅತ್ಯುನ್ನತನು.

وَمَكَرُوۡا وَمَكَرَ اللّٰهُ ؕ وَاللّٰهُ خَيۡرُ الۡمٰكِرِيۡنَ ﴿۵۴﴾

55. (ಅದು ಅಲ್ಲಾಹನ ಗೂಢ ತಂತ್ರವೇ ಆಗಿತ್ತು) ಅಲ್ಲಾಹನು ಹೀಗೆ ಹೇಳಿದನು, "ಓ ಈಸಾ, ನಾನೀಗ ನಿನ್ನನ್ನು ಹಿಂದಕ್ಕೆ ಪಡಕೊಳ್ಳುವೆನು[16] ಮತ್ತು ನಿನ್ನನ್ನು ನನ್ನ ಕಡೆಗೆ ಎತ್ತಿಕೊಳ್ಳುವೆನು ಮತ್ತು ನಿನ್ನನ್ನು ನಿರಾಕರಿಸಿದವರಿಂದ (ಅರ್ಥಾತ್ ಅವರ ಸಂಗಡ ಮತ್ತು ಅವರಿರುವ ಹೊಲಸು ವಾತಾವರಣದಲ್ಲಿ ಅವರೊಂದಿಗೆ ವಾಸಿಸುವುದರಿಂದ) ನಿನ್ನನ್ನು ಪರಿಶುದ್ಧಗೊಳಿಸುವೆನು ಮತ್ತು ಪುನರುತ್ಥಾನದವರೆಗೂ ನಿನ್ನ ಅನುಸರಣೆ ಮಾಡುವವರನ್ನು ನಿನ್ನನ್ನು ನಿಷೇಧಿಸುವವರ ಮೇಲೆ ಶ್ರೇಷ್ಠತೆಯಲ್ಲಿರಿಸುವೆನು. ನಿಮಗೆಲ್ಲರಿಗೂ ಕಟ್ಟಕಡೆಗೆ ನನ್ನ ಬಳಿ ಬರಲಿಕ್ಕಿದೆ. ಆಗ ನಾನು ನಿಮ್ಮ ನಡುವೆ ಭಿನ್ನಾಭಿಪ್ರಾಯವುಂಟಾಗಿದ್ದ ವಿಷಯಗಳ ತೀರ್ಮಾನ ಮಾಡುವೆನು.

اِذۡ قَالَ اللّٰهُ يٰعِيۡسٰۤى اِنِّىۡ مُتَوَفِّيۡكَ وَرَافِعُكَ اِلَىَّ وَمُطَهِّرُكَ مِنَ الَّذِيۡنَ كَفَرُوۡا وَجَاعِلُ الَّذِيۡنَ اتَّبَعُوۡكَ فَوۡقَ الَّذِيۡنَ كَفَرُوۡۤا اِلٰى يَوۡمِ الۡقِيٰمَةِ ۚ ثُمَّ اِلَىَّ مَرۡجِعُكُمۡ فَاَحۡكُمُ بَيۡنَكُمۡ فِيۡمَا كُنۡتُمۡ فِيۡهِ تَخۡتَلِفُوۡنَ ﴿۵۵﴾

56. ಅಧರ್ಮ ಮತ್ತು ನಿಷೇಧ ನೀತಿಯನ್ನನುಸರಿಸುವವರಿಗೆ ಇಹ-ಪರಗಳೆರಡರಲ್ಲೂ ಕಠಿಣ ಶಿಕ್ಷೆ ಕೊಡುವೆನು ಮತ್ತು ಅವರು ಯಾವ ಸಹಾಯಕರನ್ನೂ ಪಡೆಯಲಾರರು.

فَاَمَّا الَّذِيۡنَ كَفَرُوۡا فَاُعَذِّبُهُمۡ عَذَابًا شَدِيۡدًا فِى الدُّنۡيَا وَالۡاٰخِرَةِ وَمَا لَهُمۡ مِّنۡ نّٰصِرِيۡنَ ﴿۵۶﴾

57. ಸತ್ಯವಿಶ್ವಾಸ ಮತ್ತು ಸತ್ಕರ್ಮಗಳ ನಿಲುಮೆಯನ್ನಿರಿಸಿಕೊಂಡವರಿಗೆ ಅವರ ಪ್ರತಿಫಲಗಳು ಸರ್ವಸಂಪೂರ್ಣವಾಗಿ ಕೊಡಲ್ಪಡುವುವು ಮತ್ತು ಅಲ್ಲಾಹನು ಅಕ್ರಮಿಗಳನ್ನು ಎಂದೆಂದಿಗೂ ಪ್ರೀತಿಸುವುದಿಲ್ಲ (ಎಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ.)

وَاَمَّا الَّذِيۡنَ اٰمَنُوۡا وَعَمِلُوا الصّٰلِحٰتِ فَيُوَفِّيۡهِمۡ اُجُوۡرَهُمۡ ؕ وَاللّٰهُ لَا يُحِبُّ الظّٰلِمِيۡنَ ﴿۵۷﴾

16. ಮೂಲದಲ್ಲಿ 'ಮುತವಫ್ಫೀಕ' ಎಂಬ ಪದ ಪ್ರಯೋಗವಾಗಿದೆ. 'ತವಫ್ಫಿ'ಯ ನಿಜಾರ್ಥ ಪಡೆಯುವುದು ಅಥವಾ ಮಾಡುವುದು. ಇದು 'ಪ್ರಾಣ ತೆಗೆಯುವುದು' ಎಂಬ ಅರ್ಥದಲ್ಲಿ ಉಪಯೋಗವಾಗುವುದು ಅದರ ಶಬ್ದಾರ್ಥದಿಂದಲ್ಲ, ಸೂಚ್ಯ ಅರ್ಥದಿಂದಾಗಿದೆ.

58. ಓ ಪೈಗಂಬರರೇ, ಇವು ನಿಮಗೆ ನಾವು ಕೇಳಿಸುತ್ತಿರುವ ನಿದರ್ಶನಗಳು ಹಾಗೂ ಯುಕ್ತಿಪೂರ್ಣ ಉದ್ಬೋಧಗಳು.

ذٰلِكَ نَتْلُوْهُ عَلَيْكَ مِنَ الْاٰيٰتِ وَالذِّكْرِ الْحَكِيْمِ ۝٥٨

59. ಅಲ್ಲಾಹನ ಬಳಿ 'ಈಸಾ'ರ ಉಪಮೆಯು ಆದಮರಂತಿದೆ. ಅಲ್ಲಾಹನು ಅವರನ್ನು (ಆದಮರನ್ನು) ಮಣ್ಣಿನಿಂದ ಸೃಷ್ಟಿಸಿ, 'ಆಗು' ಎಂದು ಆಜ್ಞೆ ಕೊಟ್ಟನು. ಆಗ ಅವರು ಉಂಟಾದರು.[17]

اِنَّ مَثَلَ عِيْسٰى عِنْدَ اللّٰهِ كَمَثَلِ اٰدَمَ ۭ خَلَقَهٗ مِنْ تُرَابٍ ثُمَّ قَالَ لَهٗ كُنْ فَيَكُوْنُ ۝٥٩

60. ಇದು ನಿಮ್ಮ ಪ್ರಭುವಿನ ವತಿಯಿಂದ ತಿಳಿಯಪಡಿಸಲಾಗುವ ಸತ್ಯ ವಿಷಯ ಮತ್ತು ನೀವು ಇದರಲ್ಲಿ ಸಂದೇಹ ತಾಳುವವರಲ್ಲಾಗಬೇಡಿರಿ.

اَلْحَقُّ مِنْ رَّبِّكَ فَلَا تَكُنْ مِّنَ الْمُمْتَرِيْنَ ۝٦٠

61. ಈ (ದಿವ್ಯ)ಜ್ಞಾನ ಬಂದ ಬಳಿಕ ಈ ವಿಷಯದಲ್ಲಿ ಇನ್ನಾರಾದರೂ ನಿಮ್ಮೊಡನೆ ಜಗಳವಾಡಿದರೆ, ಓ ಪೈಗಂಬರರೇ, ಅವರೊಡನೆ ಹೀಗೆ ಹೇಳಿರಿ, -"ಬನ್ನಿರಿ, ನಾವೂ ನೀವೂ ಬಂದು ಸೇರೋಣ ಮತ್ತು ನಮ್ಮ ಮಕ್ಕಳು ಮರಿಗಳನ್ನೂ ಕರೆತರೋಣ ಮತ್ತು ಸುಳ್ಳುಗಾರನ ಮೇಲೆ ಅಲ್ಲಾಹನ ಅಭಿಶಪನವಿರಲೆಂದು ಪ್ರಾರ್ಥಿಸೋಣ.

فَمَنْ حَاۗجَّكَ فِيْهِ مِنْۢ بَعْدِ مَا جَاۗءَكَ مِنَ الْعِلْمِ فَقُلْ تَعَالَوْا نَدْعُ اَبْنَاۗءَنَا وَاَبْنَاۗءَكُمْ وَنِسَاۗءَنَا وَنِسَاۗءَكُمْ وَاَنْفُسَنَا وَاَنْفُسَكُمْ ۣ ثُمَّ نَبْتَهِلْ فَنَجْعَلْ لَّعْنَتَ اللّٰهِ عَلَي الْكٰذِبِيْنَ ۝٦١

62. ಇವು ಅತ್ಯಂತ ವಾಸ್ತವಿಕ ಘಟನೆಗಳು ಮತ್ತು ವಾಸ್ತವದಲ್ಲಿ ಅಲ್ಲಾಹನ ಹೊರತು ಅನ್ಯ ಆರಾಧ್ಯನಾರೂ ಇಲ್ಲ. ನಿಸ್ಸಂದೇಹವಾಗಿ ಅಲ್ಲಾಹನ ಶಕ್ತಿಯೇ ಅತ್ಯುನ್ನತವಾಗಿದ್ದು, ಅವನ ಯುಕ್ತಿಯೇ ಸಂಪೂರ್ಣ ವಿಶ್ವವ್ಯವಸ್ಥೆಯಲ್ಲಿ ಸಕ್ರಿಯವಾಗಿದೆ.

اِنَّ هٰذَا لَهُوَ الْقَصَصُ الْحَقُّ ۚ وَمَا مِنْ اِلٰهٍ اِلَّا اللّٰهُ ۭ وَاِنَّ اللّٰهَ لَهُوَ الْعَزِيْزُ الْحَكِيْمُ ۝٦٢

63. ಆದುದರಿಂದ ಅವರು (ಈ ಶರತ್ತಿನಲ್ಲಿ ಸ್ಪರ್ಧೆಗೆ ಮುಂದೆ ಬರಲು) ನಿರಾಕರಿಸಿದರೆ (ಅವರು ಕಿಡಿಗೇಡಿಗಳೆಂಬ ವಿಷಯ ಸ್ಪಷ್ಟವಾಗುವುದು) ಮತ್ತು ಅಲ್ಲಾಹನಂತೂ ಕಿಡಿಗೇಡಿಗಳ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತಿರುವವನೇ ಆಗಿರುತ್ತಾನೆ.

فَاِنْ تَوَلَّوْا فَاِنَّ اللّٰهَ عَلِيْمٌۢ بِالْمُفْسِدِيْنَ ۝٦٣

64. ಓ ಪೈಗಂಬರರೇ, ಹೇಳಿರಿ- "ಓ ಗ್ರಂಥದವರೇ, ನಿಮ್ಮ ಮತ್ತು ನಮ್ಮೊಳಗೆ ಸಮಾನವಾಗಿರುವ ವಿಷಯಗಳ ಕಡೆಗೆ ಬನ್ನಿರಿ.

قُلْ يٰٓاَهْلَ الْكِتٰبِ تَعَالَوْا اِلٰى كَلِمَةٍ سَوَاۗءٍۢ بَيْنَنَا وَبَيْنَكُمْ اَلَّا نَعْبُدَ اِلَّا اللّٰهَ وَلَا نُشْرِكَ

17. ಅರ್ಥಾತ್- ತಂದೆಯಿಲ್ಲದೆ ಹುಟ್ಟುವುದೇ ಓರ್ವನನ್ನು ದೇವ ಅಥವಾ ದೇವಪುತ್ರನೆನ್ನಲು ಸಾಕಷ್ಟು ಪುರಾವೆಯಾಗಿದ್ದರೆ ಕ್ರೈಸ್ತರು ಹ. ಆದಮ್‌ರ(ಅ) ಕುರಿತು ಅದಕ್ಕಿಂತ ಉನ್ನತವಾದ ವಿಶ್ವಾಸವನ್ನು ಪ್ರತಿಪಾದಿಸಬೇಕಾಗಿತ್ತು. ಏಕೆಂದರೆ ಮಸೀಹ್(ಅ) ತಂದೆಯಿಲ್ಲದೆ ಹುಟ್ಟಿದ್ದರು ನಿಜ. ಆದರೆ ಆದಮ್(ಅ) ತಂದೆ-ತಾಯಿಗಳಿಬ್ಬರೂ ಇಲ್ಲದೆ ಹುಟ್ಟಿದ್ದರು.

ಅದೆಂದರೆ - ನಾವು ಅಲ್ಲಾಹನ ಹೊರತು ಇತರ ಯಾರ ದಾಸ್ಯ-ಆರಾಧನೆಯನ್ನೂ ಮಾಡದಿರೋಣ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರೋಣ ಮತ್ತು ನಮ್ಮ ಪೈಕಿ ಯಾರೂ ಅಲ್ಲಾಹನ ಹೊರತು ಇತರ ಯಾರನ್ನೂ ತನ್ನ ಪ್ರಭುವಾಗಿರಿಸದಿರೋಣ." ಈ ಕರೆಯನ್ನು ಸ್ವೀಕರಿಸಲು ಅವರು ಹಿಂಜರಿದರೆ, ನಾವಂತು ಮುಸ್ಲಿಮರು (ಕೇವಲ ಅಲ್ಲಾಹನ ದಾಸ್ಯ-ಆರಾಧನೆ ಮತ್ತು ದಾಸ್ಯ-ಅನುಸರಣೆ ಮಾಡುವವರು) ಎಂದು ಸ್ಪಷ್ಟವಾಗಿ ಹೇಳಿಬಿಡಿರಿ.

بِهٖ شَيْـًٔا وَّلَا يَتَّخِذَ بَعْضُنَا بَعْضًا اَرْبَابًا مِّنْ دُوْنِ اللّٰهِ ؕ فَاِنْ تَوَلَّوْا فَقُوْلُوا اشْهَدُوْا بِاَنَّا مُسْلِمُوْنَ ﴿۶۴﴾

65. ಓ ಗ್ರಂಥದವರೇ, ನೀವು ಇಬ್‌ರಾಹೀಮರ ವಿಷಯದಲ್ಲಿ ನಮ್ಮೊಂದಿಗೆ ಏಕೆ ಜಗಳಾಡುತ್ತೀರಿ? 'ತೌರಾತ್' ಮತ್ತು 'ಇಂಜೀಲ್' ಇಬ್‌ರಾಹೀಮರ ಅನಂತರವೇ ಅವತೀರ್ಣಗೊಂಡಿವೆಯಷ್ಟೆ. ಇನ್ನೇನು ನಿಮಗೆ ಇಷ್ಟೂ ತಿಳಿಯುವುದಿಲ್ಲವೇ?

يٰۤاَهْلَ الْكِتٰبِ لِمَ تُحَآجُّوْنَ فِىْۤ اِبْرٰهِيْمَ وَمَاۤ اُنْزِلَتِ التَّوْرٰىةُ وَالْاِنْجِيْلُ اِلَّا مِنْۢ بَعْدِهٖ ؕ اَفَلَا تَعْقِلُوْنَ ﴿۶۵﴾

66. ನೀವು ನಿಮಗೆ ತಿಳಿದಿರುವ ವಿಷಯದಲ್ಲಿ ಸಾಕಷ್ಟು ವಾದಗಳನ್ನು ಮಾಡಿಯಾಯಿತು. ಈಗ ನಿಮಗೆ ತಿಳಿದಿಲ್ಲದ ವಿಷಯಗಳಲ್ಲಿ ಏಕೆ ವಾದಿಸುತ್ತಿರುವಿರಿ? ಅಲ್ಲಾಹನು ತಿಳಿದಿರುವನು; ನೀವು ತಿಳಿದಿರುವುದಿಲ್ಲ.

هٰۤاَنْتُمْ هٰٓؤُلَاۤءِ حَاجَجْتُمْ فِيْمَا لَـكُمْ بِهٖ عِلْمٌ فَلِمَ تُحَآجُّوْنَ فِيْمَا لَيْسَ لَـكُمْ بِهٖ عِلْمٌ ؕ وَاللّٰهُ يَعْلَمُ وَاَنْتُمْ لَا تَعْلَمُوْنَ ﴿۶۶﴾

67. ಇಬ್‌ರಾಹೀಮರು ಯಹೂದಿಯೋ ಕ್ರೈಸ್ತರೋ ಆಗಿರಲಿಲ್ಲ; ಅವರು ಓರ್ವ ಏಕನಿಷ್ಠ ಮುಸ್ಲಿಮರಾಗಿದ್ದರು[18] - ಮತ್ತು ಅವರು ಬಹುದೇವವಿಶ್ವಾಸಿಗಳಂತು ಆಗಿರಲೇ ಇಲ್ಲ.

مَا كَانَ اِبْرٰهِيْمُ يَهُوْدِيًّا وَّلَا نَصْرَانِيًّا وَّلٰـكِنْ كَانَ حَنِيْفًا مُّسْلِمًا ؕ وَمَا كَانَ مِنَ الْمُشْرِكِيْنَ ﴿۶۷﴾

68. ಇಬ್‌ರಾಹೀಮರೊಂದಿಗೆ ಸಂಬಂಧವಿರಿಸಿಕೊಳ್ಳಲು ಎಲ್ಲರಿಗಿಂತಲೂ ಅಧಿಕ ಹಕ್ಕು ಸಲ್ಲುವುದಿದ್ದರೆ ಅದು ಅವರನ್ನು ಅನುಸರಿಸಿದವರಿಗೆ ಮತ್ತು ಈಗ ಈ ಪ್ರವಾದಿ ಹಾಗೂ ಇವರನ್ನು ಮಾನ್ಯ ಮಾಡುವವರು ಈ ವಿಷಯದಲ್ಲಿ ಅಧಿಕ ಹಕ್ಕುದಾರರು. ಅಲ್ಲಾಹನು ಸತ್ಯದ ಮೇಲೆ ವಿಶ್ವಾಸವಿಟ್ಟವರಿಗೆ ಮಾತ್ರ ಸಹಾಯಕನಾಗಿರುತ್ತಾನೆ.

اِنَّ اَوْلَى النَّاسِ بِاِبْرٰهِيْمَ لَلَّذِيْنَ اتَّبَعُوْهُ وَهٰذَا النَّبِىُّ وَالَّذِيْنَ اٰمَنُوْا ؕ وَاللّٰهُ وَلِىُّ الْمُؤْمِنِيْنَ ﴿۶۸﴾

69. (ಓ ಸತ್ಯವಿಶ್ವಾಸಿಗಳೇ) ಗ್ರಂಥದವರ ಪೈಕಿ ಒಂದು ಪಂಗಡವು ನಿಮ್ಮನ್ನು ಯಾವ ವಿಧದಿಂದಲಾದರೂ ಸನ್ಮಾರ್ಗದಿಂದ ತಪ್ಪಿಸಿಬಿಡಬೇಕೆಂದು ಪ್ರಯತ್ನಿಸುತ್ತಿದೆ. ವಾಸ್ತವದಲ್ಲಿ ಅವರು

وَدَّتْ طَّآٮِٕفَةٌ مِّنْ اَهْلِ الْكِتٰبِ لَوْ يُضِلُّوْنَكُمْ ؕ وَمَا يُضِلُّوْنَ اِلَّاۤ اَنْفُسَهُمْ

18. ಮೂಲದಲ್ಲಿ 'ಹನೀಫ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಎಲ್ಲದರಿಂದಲೂ ವಿಮುಖನಾಗಿ ನಿರ್ದಿಷ್ಟ ಹಾದಿಯಲ್ಲಿ ನಡೆಯುವವನು ಎಂದಾಗಿದೆ. ಏಕನಿಷ್ಠ ಮುಸ್ಲಿಮ್ ಎಂಬ ಪದವನ್ನು ನಾವು ಈ ಅರ್ಥದಲ್ಲೇ ಉಪಯೋಗಿಸಿದ್ದೇವೆ.

ತಮ್ಮನ್ನೇ ವಿನಾ ಇತರ ಯಾರನ್ನೂ ಪಥಭ್ರಷ್ಟತೆಯಲ್ಲಿ ಹಾಕುತ್ತಿಲ್ಲ. ಆದರೆ ಅವರಿಗೆ ಇದರ ಪ್ರಜ್ಞೆ ಇರುವುದಿಲ್ಲ.

وَمَا يَشْعُرُونَ ﴿٦٩﴾

70. ಓ ಗ್ರಂಥದವರೇ, ನೀವು ಅಲ್ಲಾಹನ ನಿದರ್ಶನಗಳನ್ನೇಕೆ ನಿರಾಕರಿಸುತ್ತೀರಿ? ವಸ್ತುತಃ ನೀವು ಅದನ್ನು ಪ್ರತ್ಯಕ್ಷ ಕಾಣುತ್ತಿರುವಿರಿ.[19]

يَا أَهْلَ الْكِتَابِ لِمَ تَكْفُرُونَ بِآيَاتِ اللَّهِ وَأَنْتُمْ تَشْهَدُونَ ﴿٧٠﴾

71. ಓ ಗ್ರಂಥದವರೇ, ಸತ್ಯಕ್ಕೆ ಮಿಥ್ಯದ ಬಣ್ಣ ಬಳಿದು ಅದನ್ನು ಏಕೆ ಸಂಶಯಾಸ್ಪದವನ್ನಾಗಿ ಮಾಡುತ್ತೀರಿ? ತಿಳಿದೂ ತಿಳಿದೂ ಸತ್ಯವನ್ನೇಕೆ ಮರೆಮಾಚುತ್ತೀರಿ?

يَا أَهْلَ الْكِتَابِ لِمَ تَلْبِسُونَ الْحَقَّ بِالْبَاطِلِ وَتَكْتُمُونَ الْحَقَّ وَأَنْتُمْ تَعْلَمُونَ ﴿٧١﴾

72. ಗ್ರಂಥದವರ ಪೈಕಿ ಒಂದು ಪಂಗಡವು, "ಈ ಪ್ರವಾದಿಯನ್ನು ಸ್ವೀಕರಿಸುವವರಿಗೆ ಅವತೀರ್ಣಗೊಂಡುದರ ಮೇಲೆ ಬೆಳಿಗ್ಗೆ ವಿಶ್ವಾಸವಿಡಿರಿ ಮತ್ತು ಸಂಜೆ ಅದನ್ನು ನಿಷೇಧಿಸಿರಿ. ಪ್ರಾಯಶಃ ಈ ಉಪಾಯದಿಂದ ಇವರು ತಮ್ಮ ವಿಶ್ವಾಸದಿಂದ ದೂರ ಸರಿಯಬಹುದು" ಎನ್ನುತ್ತಾರೆ.

وَقَالَتْ طَائِفَةٌ مِنْ أَهْلِ الْكِتَابِ آمِنُوا بِالَّذِي أُنْزِلَ عَلَى الَّذِينَ آمَنُوا وَجْهَ النَّهَارِ وَاكْفُرُوا آخِرَهُ لَعَلَّهُمْ يَرْجِعُونَ ﴿٧٢﴾

73. ನಿಮ್ಮ ಮತದವರ ಹೊರತು ಇತರ ಯಾರ ಮಾತನ್ನೂ ಒಪ್ಪಿಕೊಳ್ಳಬೇಡಿರೆಂದೂ ಇವರು ಪರಸ್ಪರ ಹೇಳಿಕೊಳ್ಳುತ್ತಾರೆ. ಓ ಪೈಗಂಬರರೇ, ಇವರೊಡನೆ ಹೀಗೆ ಹೇಳಿಬಿಡಿರಿ- "ನಿಜವಾದ ಮಾರ್ಗದರ್ಶನವಂತು ಅಲ್ಲಾಹನ ಮಾರ್ಗದರ್ಶನವಾಗಿದೆ ಮತ್ತು ಒಂದು ಕಾಲದಲ್ಲಿ ನಿಮಗೆ ಕೊಡಲ್ಪಟ್ಟದ್ದನ್ನೇ ಇತರರಿಗೂ ಕೊಡುವುದು ಅಥವಾ ಇತರರಿಗೆ ನಿಮ್ಮ ವಿರುದ್ಧ ನಿಮ್ಮ ಪ್ರಭುವಿನ ಆಸ್ಥಾನದಲ್ಲಿ ಮುಂದಿರಿಸಲು ಬಲವಾದ ಆಧಾರ ಪ್ರಮಾಣ ವೊದಗುವುದು ಅವನದೇ ಕೊಡುಗೆಯಾಗಿದೆ." ಓ ಪೈಗಂಬರರೇ, ಅವರೊಡನೆ ಹೀಗೆ ಹೇಳಿರಿ- "ಭಾಗ್ಯ, ಅನುಗ್ರಹವೆಲ್ಲ ಅಲ್ಲಾಹನ ಅಧಿಕಾರದಲ್ಲಿದೆ. ಅವನು ಅದನ್ನು ತಾನಿಚ್ಛಿಸಿದವರಿಗೆ ದಯ ಪಾಲಿಸುವನು. ಅವನು ವಿಶಾಲ ದೃಷ್ಟಿಯುಳ್ಳವನೂ[20] ಸರ್ವಜ್ಞನೂ ಆಗಿರುತ್ತಾನೆ.

وَلَا تُؤْمِنُوا إِلَّا لِمَنْ تَبِعَ دِينَكُمْ قُلْ إِنَّ الْهُدَىٰ هُدَى اللَّهِ أَنْ يُؤْتَىٰ أَحَدٌ مِثْلَ مَا أُوتِيتُمْ أَوْ يُحَاجُّوكُمْ عِنْدَ رَبِّكُمْ قُلْ إِنَّ الْفَضْلَ بِيَدِ اللَّهِ يُؤْتِيهِ مَنْ يَشَاءُ وَاللَّهُ وَاسِعٌ عَلِيمٌ ﴿٧٣﴾

19. ಇದರ ಇನ್ನೊಂದು ಭಾಷಾಂತರ 'ನೀವು ಸ್ವತಃ ಸಾಕ್ಷ್ಯ ನೀಡುತ್ತಿದ್ದೀರಿ' ಎಂದೂ ಆಗಬಹುದು. ಎರಡು ಸಂದರ್ಭಗಳಲ್ಲೂ ಮೂಲ ವಿಷಯಕ್ಕೇನೂ ಧಕ್ಕೆಯಾಗುವುದಿಲ್ಲ. ಪ್ರವಾದಿವರ್ಯರ(ಸ) ಪಾವನ ಜೀವನ, ಅವರ ಅನುಯಾಯಿಗಳ ಜೀವನದಲ್ಲಿ ಅವರ ಬೋಧನೆಗಳಿಂದ ಉಂಟಾಗಿದ್ದ ಆಶ್ಚರ್ಯಕರ ಪರಿಣಾಮಗಳು, ಕುರ್‌ಆನಿನಲ್ಲಿ ಪ್ರಸ್ತುತಪಡಿಸಲಾಗಿರುವ ಉನ್ನತ ವಿಷಯಗಳು ಮುಂತಾದ ಎಲ್ಲವೂ ಅಲ್ಲಾಹನ ಸ್ಪಷ್ಟ ನಿದರ್ಶನಗಳಾಗಿದ್ದವು. ಪ್ರವಾದಿಗಳ ಇತಿಹಾಸ ಮತ್ತು ದೇವಗ್ರಂಥದ ಶೈಲಿಯನ್ನು ಬಲ್ಲವರಿಗೆ ಮುಹಮ್ಮದ್(ಸ) ಅವರ ಪ್ರವಾದಿತ್ವದ ಬಗ್ಗೆ ಸಂಶಯ ತಾಳುವುದು ಅತ್ಯಂತ ಪ್ರಯಾಸಕರವಾಗಿತ್ತು.

20. ಮೂಲದಲ್ಲಿ 'ವಾಸಿಅ್' ಎಂಬ ಪದ ಪ್ರಯೋಗವಾಗಿದೆ. ಕುರ್‌ಆನಿನಲ್ಲಿ ಸಾಮಾನ್ಯವಾಗಿ ಮೂರು ಸಂದರ್ಭದಲ್ಲಿ ಇಂತಹ ಪದ

74. ಅವನು ತನಗಿಷ್ಟ ಬಂದವರನ್ನು ತನ್ನ ಕೃಪೆಗಾಗಿ ಕಾದಿರಿಸುತ್ತಾನೆ ಮತ್ತು ಅವನ ಅನುಗ್ರಹ ಅತಿ ಉನ್ನತವಾಗಿದೆ."

يَّخْتَصُّ بِرَحْمَتِهٖ مَنْ يَّشَآءُ ؕ وَ اللّٰهُ ذُو الْفَضْلِ الْعَظِيْمِ ﴿٧٤﴾

75. ಗ್ರಂಥದವರಲ್ಲಿ ಕೆಲವರ ಮೇಲೆ ನೀವು ಭರವಸೆಯಿಟ್ಟು ಸಂಪತ್ತಿನ ಒಂದು ರಾಶಿಯನ್ನೇ ಅವರಿಗೆ ವಹಿಸಿಕೊಟ್ಟರೂ ಅವರು ನಿಮ್ಮ ಸೊತ್ತನ್ನು ನಿಮಗೆ ಹಿಂದಿರುಗಿಸುವರು ಮತ್ತು ಅವರಲ್ಲಿ ಕೆಲವರು ಒಂದು ದೀನಾರ(ಚಿನ್ನದ ಒಂದು ನಾಣ್ಯ)ದ ಬಗ್ಗೆ ಅವರ ಮೇಲೆ ಭರವಸೆ ಇಟ್ಟರೂ ನೀವು ಅವರ ಮೇಲೆ ಏರಿ ಹೋಗದೆ ಅದನ್ನು ಅವರು ಹಿಂದಿರುಗಿಸಲಾರರು. ಅವರ ಈ ನೈತಿಕ ಸ್ಥಿತಿಗೆ ಕಾರಣವು, "ಯಹೂದಿಯೇತರರ ವಿಷಯದಲ್ಲಿ ನಮ್ಮೊಡನೆ ಯಾವ ವಿಚಾರಣೆಯೂ ಇಲ್ಲ" ಎಂದು ಅವರು ಹೇಳುತ್ತಿರುವುದೇ ಆಗಿದೆ ಮತ್ತು ಅವರು ಈ ಮಾತನ್ನು ಕೇವಲ ಸುಳ್ಳು ಸೃಷ್ಟಿಸಿ ಮಾಡಿ ಅಲ್ಲಾಹನ ಮೇಲೆ ಹೊರಿಸುತ್ತಿದ್ದಾರೆ.

وَ مِنْ اَهْلِ الْكِتٰبِ مَنْ اِنْ تَاْمَنْهُ بِقِنْطَارٍ يُّؤَدِّهٖۤ اِلَيْكَ ۚ وَ مِنْهُمْ مَّنْ اِنْ تَاْمَنْهُ بِدِيْنَارٍ لَّا يُؤَدِّهٖۤ اِلَيْكَ اِلَّا مَا دُمْتَ عَلَيْهِ قَآئِمًا ؕ ذٰلِكَ بِاَنَّهُمْ قَالُوْا لَيْسَ عَلَيْنَا فِى الْاُمِّيّٖنَ سَبِيْلٌ ۚ وَ يَقُوْلُوْنَ عَلَى اللّٰهِ الْكَذِبَ وَ هُمْ يَعْلَمُوْنَ ﴿٧٥﴾

76. ವಸ್ತುತಃ (ಅಲ್ಲಾಹನು ಇಂತಹ ಮಾತು ಹೇಳಿಯೇ ಇಲ್ಲವೆಂದು) ಅವರಿಗೆ ತಿಳಿದಿದೆ. ಅವರೊಡನೆ ವಿಚಾರಣೆ ಯಾಕಾಗದು? ಯಾರೇ ಆಗಿರಲಿ, ತನ್ನ ವಾಗ್ದಾನವನ್ನು ಪೂರೈಸಿದವನು ಮತ್ತು ದೋಷದಿಂದ ದೂರವಿರುವವನು ಅಲ್ಲಾಹನ ಪ್ರೀತಿಗೆ ಪಾತ್ರನಾಗುವನು. ಏಕೆಂದರೆ, ಧರ್ಮನಿಷ್ಠರು ಅಲ್ಲಾಹನಿಗೆ ಪ್ರಿಯರು.

بَلٰى مَنْ اَوْفٰى بِعَهْدِهٖ وَ اتَّقٰى فَاِنَّ اللّٰهَ يُحِبُّ الْمُتَّقِيْنَ ﴿٧٦﴾

77. ಅಲ್ಲಾಹನ ಕರಾರನ್ನೂ ತಮ್ಮ ಪ್ರತಿಜ್ಞೆಗಳನ್ನೂ ಅಲ್ಪ ಬೆಲೆಗೆ ಮಾರಿದವರಿಗೆ ಪರಲೋಕದಲ್ಲಿ ಏನೂ ಪಾಲಿರುವುದಿಲ್ಲ. ಅಲ್ಲಾಹನು ಪುನರುತ್ಥಾನ ದಿನ ಅವರೊಡನೆ ಮಾತಾಡಲಿಕ್ಕೂ ಇಲ್ಲ; ಅವರ ಕಡೆ ನೋಡಲಿಕ್ಕೂ ಇಲ್ಲ ಮತ್ತು ಅವರನ್ನು ಶುದ್ಧೀಕರಿಸಲಿಕ್ಕೂ ಇಲ್ಲ. ಅವರಿಗೆ ಕಠಿಣ ವೇದನಾಯುಕ್ತ ಯಾತನೆಯಿದೆ.

اِنَّ الَّذِيْنَ يَشْتَرُوْنَ بِعَهْدِ اللّٰهِ وَ اَيْمَانِهِمْ ثَمَنًا قَلِيْلًا اُولٰٓئِكَ لَا خَلَاقَ لَهُمْ فِى الْاٰخِرَةِ وَ لَا يُكَلِّمُهُمُ اللّٰهُ وَ لَا يَنْظُرُ اِلَيْهِمْ يَوْمَ الْقِيٰمَةِ وَ لَا يُزَكِّيْهِمْ ۪ وَ لَهُمْ عَذَابٌ اَلِيْمٌ ﴿٧٧﴾

78. ಅವರಲ್ಲಿ ಕೆಲವರು ಗ್ರಂಥವನ್ನೋದುವಾಗ ನಾಲಗೆಯನ್ನು ತಿರುವು

وَ اِنَّ مِنْهُمْ لَفَرِيْقًا يَّلْوٗنَ اَلْسِنَتَهُمْ بِالْكِتٰبِ

ಪ್ರಯೋಗವಾಗುತ್ತದೆ. ಮೊದಲನೆಯ ಸಂದರ್ಭ ಯಾವುದೆಂದರೆ, ಯಾವುದೇ ಮಾನವ ಸಮೂಹದ ಸಂಕುಚಿತ ದೃಷ್ಟಿಕೋನದ ಪ್ರಸ್ತಾಪ ಬಂದಾಗ, ಅಲ್ಲಾಹನು ನಿಮ್ಮಂತೆ ಸಂಕುಚಿತ ದೃಷ್ಟಿಯುಳ್ಳವನಲ್ಲ ಎಂಬ ವಾಸ್ತವಿಕತೆಯ ಬಗ್ಗೆ ಎಚ್ಚರಿಕೆ ಕೊಡುವ ಅಗತ್ಯ ತಲೆದೋರುವುದು. ಇನ್ನೊಂದು ಸಂದರ್ಭ ಯಾವುದೆಂದರೆ, ಯಾರದಾದರೂ ಜಿಪುಣತೆ, ಸಂಕುಚಿತತೆ ಅಥವಾ ನಿರುತ್ಸಾಹವನ್ನು ಖಂಡಿಸುತ್ತಾ ಅಲ್ಲಾಹನು ಮಹಾ ಉದಾರಿ, ನಿಮ್ಮಂತೆ ಜಿಪುಣನಲ್ಲ ಎಂದು ಹೇಳುವ ಅಗತ್ಯ ತಲೆದೋರುವುದು. ಮೂರನೆಯದಾಗಿ ಜನರು ತಮ್ಮ ಸಂಕುಚಿತ ಭಾವನೆಯಿಂದಾಗಿ ಅಲ್ಲಾಹನ ಬಗ್ಗೆಯೂ ಸೀಮಿತತೆಯನ್ನು ಕಲ್ಪಿಸಿದಾಗ ಅಲ್ಲಾಹನು ನಿಸ್ಸೀಮನಾಗಿದ್ದಾನೆಂದು ಅವರಿಗೆ ತಿಳಿ ಹೇಳುವುದಾಗಿದೆ.

ಮುರುವುಗೊಳಿಸುತ್ತಾರೆ. ಅವರು ಗ್ರಂಥದ ವಿಷಯವನ್ನು ಓದುತ್ತಿರುವರೆಂದೇ ನೀವು ತಿಳಿದುಕೊಳ್ಳುತ್ತೀರಿ. ವಸ್ತುತಃ ಅದು ಗ್ರಂಥದ ವಿಷಯವಾಗಿರುವುದಿಲ್ಲ. ನಾವು ಓದುತ್ತಿರುವುದೆಲ್ಲ ಅಲ್ಲಾಹನ ಕಡೆಯಿಂದಾಗಿದೆ ಎಂದು ಅವರು ಹೇಳುತ್ತಾರೆ. ವಸ್ತುತಃ ಅದು ಅಲ್ಲಾಹನ ಕಡೆಯಿಂದಾಗಿರುವುದಿಲ್ಲ. ಅವರು ಬೇಕು ಬೇಕೆಂದೇ ಸುಳ್ಳು ಮಾತನ್ನು ಅಲ್ಲಾಹನ ಮೇಲೆ ಹೊರಿಸಿಬಿಡುತ್ತಾರೆ.

لِتَحْسَبُوهُ مِنَ الْكِتٰبِ وَمَا هُوَ مِنَ الْكِتٰبِ وَيَقُولُونَ هُوَ مِنْ عِنْدِ اللّٰهِ وَمَا هُوَ مِنْ عِنْدِ اللّٰهِ وَيَقُولُونَ عَلَى اللّٰهِ الْكَذِبَ وَهُمْ يَعْلَمُونَ ﴿٧٨﴾

79. ಅಲ್ಲಾಹನು ತನಗೆ ಗ್ರಂಥವನ್ನೂ ನಿರ್ದೇಶವನ್ನೂ ಪ್ರವಾದಿತ್ವವನ್ನೂ ದಯಪಾಲಿಸಿರುವಾಗ ಅವನು ಜನರೊಡನೆ, ನೀವು ಅಲ್ಲಾಹನ ಬದಲಿಗೆ ನನ್ನ ದಾಸರಾಗಿರಿ ಎನ್ನುವುದು ಯಾವನೇ ಮಾನವನ ಕೆಲಸವಲ್ಲ. ಅವನಂತು, ನೀವು ಓದುತ್ತಿರುವ ಮತ್ತು ಓದಿಸುತ್ತಿರುವ ಗ್ರಂಥದ ಬೋಧನೆಯ ಬೇಡಿಕೆಯ ಪ್ರಕಾರ ಅಪ್ಪಟ ದೇವಭಕ್ತ ಆಗಿರೆಂದೇ ಹೇಳುವನು.

مَا كَانَ لِبَشَرٍ اَنْ يُّؤْتِيَهُ اللّٰهُ الْكِتٰبَ وَالْحُكْمَ وَالنُّبُوَّةَ ثُمَّ يَقُولَ لِلنَّاسِ كُونُوا عِبَادًا لِّي مِنْ دُونِ اللّٰهِ وَلٰكِنْ كُونُوا رَبّٰنِيّٖنَ بِمَا كُنْتُمْ تُعَلِّمُونَ الْكِتٰبَ وَبِمَا كُنْتُمْ تَدْرُسُونَ ﴿٧٩﴾

80. ನೀವು ದೇವಚರರನ್ನು ಅಥವಾ ದೇವ ಸಂದೇಶವಾಹಕರನ್ನು ನಿಮ್ಮ ಪ್ರಭುಗಳನ್ನಾಗಿ ಮಾಡಿಕೊಳ್ಳಿರೆಂದು ಅವನೆಂದೂ ಹೇಳಲಾರ. ನೀವು ಓರ್ವ ಮುಸ್ಲಿಮ್ ಆಗಿರುವಾಗ ಓರ್ವ ಪ್ರವಾದಿಯು ನಿಮಗೆ ಅಧರ್ಮದ ಆದೇಶ ಕೊಡುವುದು ಸಾಧ್ಯವೇ?

وَلَا يَأْمُرَكُمْ اَنْ تَتَّخِذُوا الْمَلٰٓئِكَةَ وَالنَّبِيّٖنَ اَرْبَابًا ۗ اَيَأْمُرُكُمْ بِالْكُفْرِ بَعْدَ اِذْ اَنْتُمْ مُّسْلِمُونَ ﴿٨٠﴾

81. ಅಲ್ಲಾಹನು ಪ್ರವಾದಿಗಳೊಡನೆ, "ಇಂದು ನಾವು ನಿಮಗೆ ಗ್ರಂಥ ಮತ್ತು ಸದ್ವಿವೇಕ ಪ್ರದಾನ ಮಾಡಿರುತ್ತೇವೆ. ನಾಳೆ ಇನ್ನೊಬ್ಬ ಸಂದೇಶವಾಹಕರು ನಿಮ್ಮಲ್ಲಿ ಮೊದಲಿಂದಲೇ ಇರುವ ಇದೇ ಶಿಕ್ಷಣದ ದೃಢೀಕರಣ ಮಾಡುತ್ತ ನಿಮ್ಮ ಬಳಿಗೆ ಬಂದರೆ ನೀವು ಅವನ ಮೇಲೆ ವಿಶ್ವಾಸವಿಟ್ಟು ಅವನಿಗೆ ಸಹಾಯ ಮಾಡಬೇಕಾಗುವುದು"[21] ಎಂಬ ಕರಾರು ಪಡೆದುದನ್ನು ಸ್ಮರಿಸಿರಿ. ಈ ಆದೇಶವನ್ನು ನೀಡಿ ಅಲ್ಲಾಹ್, "ನೀವು ಈ ಕರಾರನ್ನು

وَاِذْ اَخَذَ اللّٰهُ مِيثَاقَ النَّبِيّٖنَ لَمَآ اٰتَيْتُكُمْ مِّنْ كِتٰبٍ وَّحِكْمَةٍ ثُمَّ جَآءَكُمْ رَسُولٌ مُّصَدِّقٌ لِّمَا مَعَكُمْ لَتُؤْمِنُنَّ بِهٖ وَلَتَنْصُرُنَّهٗ ۗ قَالَ ءَاَقْرَرْتُمْ وَاَخَذْتُمْ عَلٰى ذٰلِكُمْ اِصْرِي ۗ قَالُوٓا اَقْرَرْنَا ۗ قَالَ

21. ಅರ್ಥಾತ್- ಎಲ್ಲಾ ಪ್ರವಾದಿಗಳಿಂದ ಈ ವಿಷಯದ ಬಗ್ಗೆ ಕರಾರು ಪಡೆಯಲಾಗುತ್ತಿತ್ತು. ಇಲ್ಲಿ ತಿಳಿದಿರಬೇಕಾದಂತಹ ಇನ್ನೊಂದು ವಿಷಯವೇನೆಂದರೆ ಪ್ರವಾದಿ ಮುಹಮ್ಮದ್‌ರಿಗಿಂತ(ಸ) ಮೊದಲು ಪ್ರತಿಯೊಬ್ಬ ಪ್ರವಾದಿಯಿಂದಲೂ ಈ ಬಗ್ಗೆ ಕರಾರು ಪಡೆಯಲಾಗುತ್ತಿತ್ತು. ಆದ್ದರಿಂದಲೇ ಪ್ರವಾದಿಗಳೆಲ್ಲ ತಮ್ಮ ನಂತರದ ಪ್ರವಾದಿಯ ಬಗ್ಗೆ ಸೂಚನೆ ನೀಡಿದ್ದಾರಲ್ಲದೆ ಅವರನ್ನು ಅನುಸರಿಸುವಂತೆ ಆದೇಶಿಸಿದ್ದಾರೆ. ಆದರೆ ಕುರ್‌ಆನ್ ಮತ್ತು ಹದೀಸ್‌ನಲ್ಲಿ ಎಲ್ಲೂ ಪ್ರವಾದಿ ಮುಹಮ್ಮದ್‌ರಿಂದ(ಸ) ಇಂತಹ ಕರಾರು ಪಡೆದ ಬಗ್ಗೆ ಅಥವಾ ಅವರು ತಮ್ಮ ಸಮುದಾಯಕ್ಕೆ ನಂತರ ಬರಲಿರುವ ಪ್ರವಾದಿಯ ಮೇಲೆ ವಿಶ್ವಾಸವಿಡುವಂತೆ ನಿರ್ದೇಶಿಸಿದ ಬಗ್ಗೆ ವಿವರಗಳು ಲಭ್ಯವಾಗುವುದಿಲ್ಲ. ಅದರ ಬದಲು ಕುರ್‌ಆನಿನಲ್ಲಿ ಪ್ರವಾದಿವರ್ಯರನ್ನು(ಸ) ಅತ್ಯಂತ ವ್ಯಕ್ತವಾದ ಧಾಟಿಯಲ್ಲಿ 'ಅಂತಿಮ ಪ್ರವಾದಿ' ಎನ್ನಲಾಗಿದೆ. ತನ್ನ ನಂತರ ಯಾವುದೇ ಪ್ರವಾದಿ ಬರಲಿಕ್ಕಿಲ್ಲವೆಂದೂ ತಮ್ಮ ಅನೇಕ ವಚನಗಳಲ್ಲಿ ಪ್ರವಾದಿವರ್ಯರು(ಸ) ಹೇಳಿದ್ದಾರೆ.

ಮಾಡುವಿರಾ ಮತ್ತು ಇದರ ಮೇಲೆ ನನ್ನ ಕಡೆಯಿಂದ ಪ್ರತಿಜ್ಞೆಯ ಭಾರೀ ಹೊಣೆಗಾರಿಕೆಯನ್ನು ವಹಿಸುವಿರಾ?" ಎಂದು ಕೇಳಿದಾಗ ಅವರು, "ಅಹುದು, ನಾವು ಪ್ರತಿಜ್ಞೆ ಮಾಡುತ್ತೇವೆ" ಎಂದರು. ಅಲ್ಲಾಹನು, "ಸರಿ, ಹಾಗಿದ್ದರೆ ನೀವು ಸಾಕ್ಷ್ಯ ವಹಿಸಿರಿ ಮತ್ತು ನಾನೂ ನಿಮ್ಮೊಂದಿಗೆ ಸಾಕ್ಷಿಯಾಗಿದ್ದೇನೆ" ಎಂದು ಹೇಳಿದನು.

فَاشْهَدُوْا وَاَنَا مَعَكُمْ مِّنَ الشّٰهِدِيْنَ ﴿٨١﴾

82. ಇದರ ಅನಂತರ ವಚನಭಂಗ ಮಾಡುವವನೇ ಧರ್ಮ ಭ್ರಷ್ಟನಾಗಿದ್ದಾನೆ.

فَمَنْ تَوَلّٰى بَعْدَ ذٰلِكَ فَاُولٰٓئِكَ هُمُ الْفٰسِقُوْنَ ﴿٨٢﴾

83. ಇವರೇನು ಅಲ್ಲಾಹನ ಅನುಸರಣಾ ರೀತಿಯನ್ನು (ಧರ್ಮ) ತ್ಯಜಿಸಿ ಬೇರೆ ಯಾವುದಾದರೂ ರೀತಿಯನ್ನನುಸರಿಸಲು ಇಷ್ಟ ಪಡುತ್ತಾರೆಯೇ? ವಸ್ತುತಃ ಆಕಾಶಗಳ ಮತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹನ ಆಜ್ಞಾಪಾಲಕಗಳಾಗಿ(ಮುಸ್ಲಿಮ್‌ಗಳಾಗಿ)ಯೇ ಇವೆ ಮತ್ತು ಸರ್ವರಿಗೂ ಅವನ ಕಡೆಗೇ ಮರಳಲಿಕ್ಕಿದೆ.

اَفَغَيْرَ دِيْنِ اللّٰهِ يَبْغُوْنَ وَلَهٗٓ اَسْلَمَ مَنْ فِى السَّمٰوٰتِ وَالْاَرْضِ طَوْعًا وَّكَرْهًا وَّاِلَيْهِ يُرْجَعُوْنَ ﴿٨٣﴾

84. ಓ ಪೈಗಂಬರರೇ, ಹೇಳಿರಿ- "ನಾವು ಅಲ್ಲಾಹನ ಮೇಲೆ ವಿಶ್ವಾಸ ವಿಟ್ಟಿದ್ದೇವೆ. ನಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟಿರುವ ಶಿಕ್ಷಣದ ಮೇಲೂ ವಿಶ್ವಾಸವಿಟ್ಟಿದ್ದೇವೆ. ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿಗಳ ಮೇಲೆ ಅವತೀರ್ಣಗೊಳಿಸಲ್ಪಟ್ಟ ಶಿಕ್ಷಣದ ಮೇಲೂ ವಿಶ್ವಾಸವಿಟ್ಟಿದ್ದೇವೆ. ಮೂಸಾ, ಈಸಾ ಮತ್ತು ಇತರ ಪ್ರವಾದಿಗಳಿಗೆ ಅವರ ಪ್ರಭುವಿನ ಕಡೆಯಿಂದ ನೀಡಲ್ಪಟ್ಟವುಗಳ ಮೇಲೂ ವಿಶ್ವಾಸವಿಟ್ಟಿದ್ದೇವೆ. ನಾವು ಅವರೊಳಗೆ ಭೇದವೆಣಿಸುವುದಿಲ್ಲ ಮತ್ತು ನಾವು ಅಲ್ಲಾಹನ ಆಜ್ಞಾಪಾಲಕ(ಮುಸ್ಲಿಮ್) ಆಗಿರುತ್ತೇವೆ.

قُلْ اٰمَنَّا بِاللّٰهِ وَمَآ اُنْزِلَ عَلَيْنَا وَمَآ اُنْزِلَ عَلٰٓى اِبْرٰهِيْمَ وَاِسْمٰعِيْلَ وَاِسْحٰقَ وَيَعْقُوْبَ وَالْاَسْبَاطِ وَمَآ اُوْتِىَ مُوْسٰى وَعِيْسٰى وَالنَّبِيُّوْنَ مِنْ رَّبِّهِمْ لَا نُفَرِّقُ بَيْنَ اَحَدٍ مِّنْهُمْ وَنَحْنُ لَهٗ مُسْلِمُوْنَ ﴿٨٤﴾

85. ಯಾರಾದರೂ ಈ ವಿಧೇಯತೆಯ (ಇಸ್ಲಾಮ್) ಹೊರತು ಯಾವುದಾದರೂ ಇತರ ಪದ್ಧತಿಯನ್ನು ಸ್ವೀಕರಿಸಲಿಚ್ಛಿಸಿದರೆ, ಅವನ ಆ ಪದ್ಧತಿಯನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು ಮತ್ತು ಪರಲೋಕದಲ್ಲಿ ಅವನು ವಿಫಲನೂ ಹತಾಶನೂ ಆಗಿ ತೀರುವನು.

وَمَنْ يَّبْتَغِ غَيْرَ الْاِسْلَامِ دِيْنًا فَلَنْ يُّقْبَلَ مِنْهُ وَهُوَ فِى الْاٰخِرَةِ مِنَ الْخٰسِرِيْنَ ﴿٨٥﴾

86. ಸತ್ಯವಿಶ್ವಾಸದ ಭವ್ಯ ಕೊಡುಗೆಯೊದಗಿದ ಬಳಿಕ ಪುನಃ ಅಧರ್ಮ ಕೈಗೊಂಡವರಿಗೆ ಅಲ್ಲಾಹನು ಸನ್ಮಾರ್ಗದರ್ಶನ ಮಾಡುವುದಾದರೂ

كَيْفَ يَهْدِى اللّٰهُ قَوْمًا كَفَرُوْا بَعْدَ

ಹೇಗೆ? ವಸ್ತುತಃ ಈ ಸಂದೇಶವಾಹಕರು ಸತ್ಯಮಾರ್ಗದಲ್ಲಿರುವರೆಂದೂ ಅವರ ಬಳಿ ಜ್ವಲಂತ ನಿದರ್ಶನಗಳು ಬಂದಿರುತ್ತವೆಂದೂ ಅವರೇ ಸಾಕ್ಷ್ಯ ನುಡಿದಾಗಿದೆ. ಅಲ್ಲಾಹನು ಅಕ್ರಮಿಗಳಿಗೆ ಸನ್ಮಾರ್ಗದರ್ಶನ ಮಾಡುವುದಿಲ್ಲ.

إِيمَانِهِمْ وَشَهِدُوا أَنَّ الرَّسُولَ حَقٌّ وَجَاءَهُمُ الْبَيِّنَاتُ ۚ وَاللَّهُ لَا يَهْدِي الْقَوْمَ الظَّالِمِينَ ﴿٨٦﴾

87. ಅವರ ಮೇಲೆ ಅಲ್ಲಾಹನ, ದೇವಚರರ ಮತ್ತು ಸಕಲ ಮಾನವರ ಅಭಿಶಾಪವಿದೆ.

أُولَٰئِكَ جَزَاؤُهُمْ أَنَّ عَلَيْهِمْ لَعْنَةَ اللَّهِ وَالْمَلَائِكَةِ وَالنَّاسِ أَجْمَعِينَ ﴿٨٧﴾

88. ಅವರು ಸದಾಕಾಲ ಅದೇ ಸ್ಥಿತಿಯಲ್ಲಿರುವರು. ಅವರ ಶಿಕ್ಷೆಯನ್ನು ಲಘೂಕರಿಸಲಾಗದು ಮತ್ತು ಅವರಿಗೆ ಸಮಯಾವಕಾಶವನ್ನೂ ನೀಡಲಾಗದು. ಇದೇ ಅವರ ಅಕ್ರಮಗಳಿಗೆ ತಕ್ಕ ಪ್ರತಿಫಲ.

خَالِدِينَ فِيهَا لَا يُخَفَّفُ عَنْهُمُ الْعَذَابُ وَلَا هُمْ يُنْظَرُونَ ﴿٨٨﴾

89. ಅನಂತರ ಪಶ್ಚಾತ್ತಾಪಪಟ್ಟು ತಮ್ಮ ಕರ್ಮವಿಧಾನಗಳನ್ನು ತಿದ್ದಿ ಸರಿಪಡಿಸಿಕೊಂಡವರು ಇದರಿಂದ ರಕ್ಷಿಸಲ್ಪಡುವರು. ಅಲ್ಲಾಹನು ಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ.

إِلَّا الَّذِينَ تَابُوا مِنْ بَعْدِ ذَٰلِكَ وَأَصْلَحُوا فَإِنَّ اللَّهَ غَفُورٌ رَحِيمٌ ﴿٨٩﴾

90. ಆದರೆ ಸತ್ಯವಿಶ್ವಾಸವನ್ನು ಸ್ವೀಕರಿಸಿದ ಬಳಿಕ ನಿಷೇಧ ನೀತಿಯನ್ನು ಅನುಸರಿಸಿ ತಮ್ಮ ಈ ನಿಷೇಧ ನೀತಿಯಲ್ಲಿ ಮುಂದುವರಿಯುತ್ತ ಹೋದರೆ[22] ಅವರ ಪಶ್ಚಾತ್ತಾಪವನ್ನೂ ಸ್ವೀಕರಿಸಲಾಗದು. ಇಂತಹವರು ಶುದ್ಧ ಪಥಭ್ರಷ್ಟರು.

إِنَّ الَّذِينَ كَفَرُوا بَعْدَ إِيمَانِهِمْ ثُمَّ ازْدَادُوا كُفْرًا لَنْ تُقْبَلَ تَوْبَتُهُمْ وَأُولَٰئِكَ هُمُ الضَّالُّونَ ﴿٩٠﴾

91. ನಿಶ್ಚಯವಾಗಿಯೂ ನಿಷೇಧ ನೀತಿಯನ್ನು ಕೈಗೊಂಡವರು ಮತ್ತು ಸತ್ಯನಿಷೇಧದ ಸ್ಥಿತಿಯಲ್ಲೇ ಪ್ರಾಣಬಿಟ್ಟವರು- ಇವರ ಪೈಕಿ ಯಾರಾದರೂ ತನ್ನನ್ನು ಶಿಕ್ಷೆಯಿಂದ ರಕ್ಷಿಸಲು ಭೂಮಿ ತುಂಬುವಷ್ಟು ಚಿನ್ನವನ್ನು ಪರಿಹಾರವಾಗಿ ಕೊಟ್ಟರೂ ಅದನ್ನು ಸ್ವೀಕರಿಸಲಾಗದು- ಇಂತಹವರಿಗಾಗಿ ವೇದನಾತ್ಮಕ ಶಿಕ್ಷೆ ಸಿದ್ಧವಿದೆ ಮತ್ತು ಅವರು ಯಾವ ಸಹಾಯಕನನ್ನೂ ಪಡೆಯಲಾರರು.

إِنَّ الَّذِينَ كَفَرُوا وَمَاتُوا وَهُمْ كُفَّارٌ فَلَنْ يُقْبَلَ مِنْ أَحَدِهِمْ مِلْءُ الْأَرْضِ ذَهَبًا وَلَوِ افْتَدَىٰ بِهِ ۗ أُولَٰئِكَ لَهُمْ عَذَابٌ أَلِيمٌ وَمَا لَهُمْ مِنْ نَاصِرِينَ ﴿٩١﴾

92. *ನೀವು ನಿಮಗೆ ಬಹಳ ಪ್ರಿಯವಾಗಿರುವ ವಸ್ತುಗಳನ್ನು (ಅಲ್ಲಾಹನ ಮಾರ್ಗದಲ್ಲಿ) ವ್ಯಯಿಸುವ ತನಕವೂ ಪುಣ್ಯ ಮಟ್ಟವನ್ನು

لَنْ تَنَالُوا الْبِرَّ حَتَّىٰ تُنْفِقُوا مِمَّا تُحِبُّونَ ۚ

22. ಅಂದರೆ ಕೇವಲ ನಿರಾಕರಣೆಯನ್ನು ಮಾತ್ರ ಮಾಡದೆ ಕೃತಿಯಲ್ಲೂ ಪ್ರತಿರೋಧ ಮತ್ತು ಪ್ರತಿಭಟನೆ ತೋರಿದರು. ಜನರನ್ನು ದೇವ ಮಾರ್ಗದಿಂದ ತಡೆಯಲು ಸರ್ವತ್ರ ಪ್ರಯತ್ನ ನಡೆಸಿದರು. ಸಂಶಯಗಳನ್ನು ಹುಟ್ಟು ಹಾಕಿದರು. ಅಪನಂಬಿಕೆಗಳನ್ನು ಹರಡಿದರು. ಮನಸ್ಸಿನಲ್ಲಿ ಸಂದೇಹದ ಬೀಜ ಬಿತ್ತಿದರು. ಪ್ರವಾದಿವರ್ಯರ(ಸ) ಆಂದೋಲನ ಯಾವ ರೀತಿಯಲ್ಲೂ ಯಶಸ್ವಿಯಾಗಬಾರದೆಂದು ಅತ್ಯಂತ ಹೇಯವಾದ ಒಳಸಂಚು ಮತ್ತು ಕಿಡಿಗೇಡಿತನಗಳನ್ನು ನಡೆಸಿದರು.

***ಇಲ್ಲಿಂದ 4ನೇ ಕಾಂಡ ಆರಂಭ.**

ತಲಪಲಾರಿರಿ. ನೀವು ಏನೇನು ಖರ್ಚು ಮಾಡುವಿರೋ ಅದರ ಬಗ್ಗೆ ಅಲ್ಲಾಹನು ಅಜ್ಞನಲ್ಲ.

وَمَا تُنْفِقُوْا مِنْ شَيْءٍ فَاِنَّ اللّٰهَ بِهٖ عَلِيْمٌ ﴿٩٢﴾

93. (ಮುಹಮ್ಮದ್‌ರ(ಸ) ಧರ್ಮಶಾಸ್ತ್ರದಲ್ಲಿ ಹಲಾಲ್ ಆಗಿರುವ) ಇವೆಲ್ಲ ಆಹಾರ ಪದಾರ್ಥಗಳೂ ಬನೀಇಸ್ರಾಈಲರಿಗೂ ಹಲಾಲ್ (ಧರ್ಮಸಮ್ಮತ) ಆಗಿದ್ದವು.[23] ಆದರೆ, ಕೆಲವು ವಸ್ತುಗಳನ್ನು 'ತೌರಾತ್' ಅವತೀರ್ಣಗೊಳ್ಳುವುದಕ್ಕೆ ಮುಂಚಿತವಾಗಿ ಇಸ್ರಾಈಲರು (ಹ.ಯಅ್‌ಕೂಬ್‌ರು) ಸ್ವತಃ ತಮ್ಮ ಮೇಲೆ ಹರಾಮ್(ನಿಷಿದ್ಧ) ಆಗಿ ಮಾಡಿಕೊಂಡಿದ್ದರು. ಅವರೊಡನೆ ಹೇಳಿರಿ - "ನೀವು (ನಿಮ್ಮ ಆಕ್ಷೇಪದ ಬಗ್ಗೆ) ಸತ್ಯವಾದಿಗಳಾಗಿದ್ದರೆ, 'ತೌರಾತ'ನ್ನು ತಂದು ಅದಕ್ಕೆ ಸಂಬಂಧಿಸಿದ ವಿಷಯವನ್ನು ಮುಂದಿಡಿರಿ."

كُلُّ الطَّعَامِ كَانَ حِلًّا لِّبَنِيْٓ اِسْرَآءِيْلَ اِلَّا مَا حَرَّمَ اِسْرَآءِيْلُ عَلٰى نَفْسِهٖ مِنْ قَبْلِ اَنْ تُنَزَّلَ التَّوْرٰىةُ ۭ قُلْ فَاْتُوْا بِالتَّوْرٰىةِ فَاتْلُوْهَآ اِنْ كُنْتُمْ صٰدِقِيْنَ ﴿٩٣﴾

94. ಇದರ ಅನಂತರವೂ ತಮ್ಮ ಕೃತಕ ಮಾತುಗಳನ್ನು ಅವರು ಅಲ್ಲಾಹನ ಮೇಲೆ ಆರೋಪಿಸುತ್ತಲೇ ಇದ್ದರೆ ಅವರೇ ನಿಜವಾಗಿಯೂ ಅಕ್ರಮಿಗಳು.

فَمَنِ افْتَرٰى عَلَى اللّٰهِ الْكَذِبَ مِنْۢ بَعْدِ ذٰلِكَ فَاُولٰۗىِٕكَ هُمُ الظّٰلِمُوْنَ ﴿٩٤﴾

95. ಹೇಳಿರಿ- ಅಲ್ಲಾಹನು ನುಡಿದಿರುವುದೆಲ್ಲವನ್ನೂ ಸತ್ಯವಾಗಿಯೇ ನುಡಿದಿದ್ದಾನೆ. ನೀವು ಏಕನಿಷ್ಠೆಯೊಂದಿಗೆ ಇಬ್‌ರಾಹೀಮರ ಪದ್ಧತಿಯ ಅನುಸರಣೆ ಮಾಡಬೇಕು ಮತ್ತು ಇಬ್‌ರಾಹೀಮರು ಬಹುದೇವವಿಶ್ವಾಸ ಕೈಗೊಂಡವರಲ್ಲಾಗಿರಲಿಲ್ಲ.

قُلْ صَدَقَ اللّٰهُ ۣ فَاتَّبِعُوْا مِلَّةَ اِبْرٰهِيْمَ حَنِيْفًا ۭ وَمَا كَانَ مِنَ الْمُشْرِكِيْنَ ﴿٩٥﴾

96. ನಿಶ್ಚಯವಾಗಿಯೂ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವು ಮಕ್ಕಾದಲ್ಲಿರುವುದೇ ಆಗಿರುತ್ತದೆ. ಅದಕ್ಕೆ ಶುಭ ಸಮೃದ್ಧಿಗಳನ್ನು ನೀಡಲಾಗಿತ್ತು ಮತ್ತು ಅದು ಸಮಗ್ರ ಲೋಕದವರಿಗೆ ಸನ್ಮಾರ್ಗದರ್ಶನದ ಕೇಂದ್ರವನ್ನಾಗಿ ಮಾಡಲ್ಪಟ್ಟಿತ್ತು.

اِنَّ اَوَّلَ بَيْتٍ وُّضِعَ لِلنَّاسِ لَلَّذِيْ بِبَكَّةَ مُبٰرَكًا وَّھُدًى لِّـلْعٰلَمِيْنَ ﴿٩٦﴾ۚ

23. ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್‌ರ(ಸ) ಬೋಧನೆಗಳಲ್ಲಿ ಯಾವುದೇ ರೀತಿಯ ತಾತ್ವಿಕ ಆಕ್ಷೇಪವನ್ನು ಹುಡುಕಲು ಯಹೂದಿ ವಿದ್ವಾಂಸರಿಗೆ ಸಾಧ್ಯವಾಗದಿದ್ದಾಗ (ಏಕೆಂದರೆ ಧರ್ಮದ ಮೂಲಭೂತ ವಿಷಯಗಳಲ್ಲಿ ಅವರ ಪೂರ್ವ ಪ್ರವಾದಿಗಳ ಬೋಧನೆಗಳಲ್ಲೂ ಪ್ರವಾದಿವರ್ಯರ(ಸ) ಬೋಧನೆಯಲ್ಲೂ ಯಾವುದೇ ವ್ಯತ್ಯಾಸವಿರಲಿಲ್ಲ) ಅವರು ಕರ್ಮಶಾಸ್ತ್ರಕ್ಕೆ ಸಂಬಂಧಿಸಿದ ಆಕ್ಷೇಪಗಳನ್ನು ಮುಂದಿಡತೊಡಗಿದರು. ಈ ನಿಟ್ಟಿನಲ್ಲಿ ಅವರು ಮಾಡಿದ ಮೊದಲ ಆಕ್ಷೇಪ ಪೂರ್ವ ಪ್ರವಾದಿಗಳ ಕಾಲದಿಂದಲೂ ನಿಷಿದ್ಧವಾಗಿರುವ ಕೆಲವು ವಸ್ತುಗಳ ಸೇವನೆಯನ್ನು ನೀವು ಧರ್ಮಸಮ್ಮತಗೊಳಿಸಿದ್ದೀರಿ ಎಂಬುದಾಗಿತ್ತು. ಇಲ್ಲಿ ಈ ಆಕ್ಷೇಪಕ್ಕೆ ಉತ್ತರ ನೀಡಲಾಗಿದೆ. ಬೈತುಲ್ ಮುಕದ್ದಿಸನ್ನು ಬಿಟ್ಟು ಕಅಬಾ ಭವನವನ್ನು ಅಭಿಮುಖ ಕೇಂದ್ರವಾಗಿ ಯಾಕೆ ಮಾಡಲಾಗಿದೆ ಎಂಬುದು ಅವರ ಇನ್ನೊಂದು ಆಕ್ಷೇಪವಾಗಿತ್ತು. ನಂತರದ ಸೂಕ್ತಗಳಲ್ಲಿ ಈ ಆಕ್ಷೇಪಕ್ಕೂ ಉತ್ತರ ನೀಡಲಾಗಿದೆ.

97. ಅದರಲ್ಲಿ ಸುವ್ಯಕ್ತ ಕುರುಹುಗಳಿವೆ.[24] 'ಮಕಾಮು ಇಬ್‌ರಾಹೀಮ್' (ಇಬ್‌ರಾಹೀಮರು ದೇವಾರಾಧನೆಗಾಗಿ ನಿಂತ ಸ್ಥಾನ)ಇದೆ ಮತ್ತು ಅದರೊಳಗೆ ಪ್ರವೇಶಗೊಂಡವನು ಸಂರಕ್ಷಣೆ ಹೊಂದಿದನು. ಈ ಭವನದವರೆಗೆ ತಲಪಲು ಸಾಧನಾನುಕೂಲತೆಗಳಿರುವವನು ಅದರ 'ಹಜ್ಜ್' ಯಾತ್ರೆ ಕೈಗೊಳ್ಳಬೇಕೆಂಬುದು ಜನರ ಮೇಲೆ ಅಲ್ಲಾಹನ ಹಕ್ಕಾಗಿರುತ್ತದೆ. ಈ ಆಜ್ಞೆಯ ಅನುಸರಣೆಯನ್ನು ಯಾರಾದರೂ ನಿರಾಕರಿಸಿದರೆ, ಅಲ್ಲಾಹನು ಸಕಲ ಜಗತ್ತಿನವರಿಂದ ನಿರಪೇಕ್ಷನಾಗಿರುತ್ತಾನೆಂಬುದನ್ನು ಅವನು ಅರಿತಿರಬೇಕು.

فِيهِ آيَاتٌ بَيِّنَاتٌ مَّقَامُ إِبْرَاهِيمَ ۖ وَمَن دَخَلَهُ كَانَ آمِنًا ۗ وَلِلَّهِ عَلَى النَّاسِ حِجُّ الْبَيْتِ مَنِ اسْتَطَاعَ إِلَيْهِ سَبِيلًا ۚ وَمَن كَفَرَ فَإِنَّ اللَّهَ غَنِيٌّ عَنِ الْعَالَمِينَ ﴿٩٧﴾

98. ಹೇಳಿರಿ- "ಓ ಗ್ರಂಥದವರೇ, ನೀವು ಅಲ್ಲಾಹನ ಸೂಕ್ತಗಳನ್ನು ಒಪ್ಪಿಕೊಳ್ಳಲು ಏಕೆ ನಿರಾಕರಿಸುತ್ತೀರಿ? ನಿಮ್ಮ ಚಟುವಟಿಕೆಗಳನ್ನೆಲ್ಲ ಅಲ್ಲಾಹನು ವೀಕ್ಷಿಸುತ್ತಿದ್ದಾನೆ."

قُلْ يَا أَهْلَ الْكِتَابِ لِمَ تَكْفُرُونَ بِآيَاتِ اللَّهِ وَاللَّهُ شَهِيدٌ عَلَىٰ مَا تَعْمَلُونَ ﴿٩٨﴾

99. ಹೇಳಿರಿ, "ಓ ಗ್ರಂಥದವರೇ, ಅಲ್ಲಾಹನ ಮಾತು ಸ್ವೀಕರಿಸುವವನನ್ನು ಸಹ ನೀವು ಅಲ್ಲಾಹನ ಮಾರ್ಗದಿಂದ ತಡೆಯುತ್ತೀರಿ ಮತ್ತು ಅವನು ಅಡ್ಡ ದಾರಿಯಲ್ಲಿ ನಡೆಯಬೇಕೆಂದು ಬಯಸುತ್ತೀರಿ. ವಸ್ತುತಃ ನೀವು ಸ್ವತಃ (ಅವನು ನೇರ ಮಾರ್ಗದಲ್ಲಿರುವ ಬಗ್ಗೆ) ಸಾಕ್ಷಿಗಳಾಗಿರುತ್ತೀರಿ. (ನಿಮ್ಮದು ಇದೆಂತಹ ನೀತಿ?) ಅಲ್ಲಾಹನು ನಿಮ್ಮ ಚಟುವಟಿಕೆಗಳ ಬಗ್ಗೆ ಬೋಧರಹಿತನಲ್ಲ."

قُلْ يَا أَهْلَ الْكِتَابِ لِمَ تَصُدُّونَ عَن سَبِيلِ اللَّهِ مَنْ آمَنَ تَبْغُونَهَا عِوَجًا وَأَنتُمْ شُهَدَاءُ ۗ وَمَا اللَّهُ بِغَافِلٍ عَمَّا تَعْمَلُونَ ﴿٩٩﴾

100. ಓ ಸತ್ಯವಿಶ್ವಾಸಿಗಳೇ, ನೀವು ಈ ಗ್ರಂಥದವರಲ್ಲಿ ಒಂದು ತಂಡದವರ ಮಾತನ್ನು ಸ್ವೀಕರಿಸಿಕೊಂಡರೆ ಇವರು ನಿಮ್ಮನ್ನು ಸತ್ಯವಿಶ್ವಾಸದಿಂದ ಸತ್ಯನಿಷೇಧದ ಕಡೆಗೆ ಮರಳಿಸಿ ಕೊಂಡೊಯ್ಯುವರು.

يَا أَيُّهَا الَّذِينَ آمَنُوا إِن تُطِيعُوا فَرِيقًا مِّنَ الَّذِينَ أُوتُوا الْكِتَابَ يَرُدُّوكُم بَعْدَ إِيمَانِكُمْ كَافِرِينَ ﴿١٠٠﴾

101. ನಿಮಗೆ ಅಲ್ಲಾಹನ ಸೂಕ್ತಗಳನ್ನು ಓದಿ ಕೇಳಿಸಲಾಗುತ್ತಿದೆ ಮತ್ತು ನಿಮ್ಮ ನಡುವೆ ಸಂದೇಶವಾಹಕರು ಉಪಸ್ಥಿತರಿದ್ದಾರೆ. ಹಾಗಿರುವಾಗ ನಿಮಗೆ ಸತ್ಯನಿಷೇಧದ ಕಡೆಗೆ ಮರಳುವ

وَكَيْفَ تَكْفُرُونَ وَأَنتُمْ تُتْلَىٰ عَلَيْكُمْ آيَاتُ اللَّهِ وَفِيكُمْ رَسُولُهُ ۗ وَمَن يَعْتَصِم

24. ಅರ್ಥಾತ್- ಇದು ಅಲ್ಲಾಹನು ಮೆಚ್ಚಿದ ಮತ್ತು ತನ್ನ ಭವನವಾಗಿ ಆಯ್ದುಕೊಂಡ ಸ್ಥಳವಾಗಿದೆ ಎಂದು ಸಾಬೀತು ಪಡಿಸುವಂತಹ ಸುವ್ಯಕ್ತ ಕುರುಹುಗಳು ಈ ಭವನದಲ್ಲಿವೆ. ಬರಡಾದ ಮರುಭೂಮಿಯಲ್ಲಿ ಅದನ್ನು ನೆಲೆಗೊಳಿಸಲಾಗಿದ್ದರೂ ಆ ಪ್ರದೇಶದಲ್ಲಿ ವಾಸಿಸುವವರಿಗೆ ಅಲ್ಲಾಹನು ಜೀವನಾಧಾರಗಳನ್ನು ಒದಗಿಸುವ ಅತ್ಯುತ್ತಮ ವ್ಯವಸ್ಥೆ ಮಾಡಿದ್ದಾನೆ. ಅಜ್ಞಾನದಿಂದಾಗಿ ಎರಡೂವರೆ ಸಾವಿರ ವರ್ಷಗಳ ಕಾಲ ಸಮಸ್ತ ಅರಬ್ ರಾಷ್ಟ್ರ ಅಶಾಂತಿಗೆ ಈಡಾಗಿತ್ತು. ಆದರೆ ಆ ಕ್ಷೋಭೆಪೀಡಿತ ಪ್ರದೇಶದಲ್ಲಿ ಕಅಬಾ ಮತ್ತು ಅದರ ಸುತ್ತಮುತ್ತಲಿನ ಪ್ರದೇಶ ಮಾತ್ರ ಶಾಂತಿಯ ನೆಲೆಯಾಗಿ ಉಳಿದಿತ್ತು. ಈ ಕಅಬಾದ ನಿಮಿತ್ತವೇ ವರ್ಷಂಪ್ರತಿ ಸುಮಾರು ನಾಲ್ಕು ತಿಂಗಳ ಕಾಲ ದೇಶಕ್ಕೆ ಶಾಂತಿ ಪ್ರಾಪ್ತವಾಗುತ್ತಿತ್ತು. ಅಲ್ಲದೆ ಅರ್ಧಶತಮಾನದ ಹಿಂದೆಯಷ್ಟೇ ಕಅಬಾವನ್ನು ಕೆಡವಲು ಪ್ರಯತ್ನಿಸಿ ಮಕ್ಕಾದ ಮೇಲೆ ಆಕ್ರಮಣ ಮಾಡಿದ 'ಅಬ್ರಹಾ'ನ ಮೇಲೆ ದೇವ ಕ್ರೋಧ ಎರಗಿದ ಉದಾಹರಣೆಯೂ ಸರ್ವವಿಧಿತ. ಆ ಕಾಲದ ಆಬಾಲವೃದ್ಧರೆಲ್ಲರಿಗೂ ಈ ಘಟನೆಯ ಬಗ್ಗೆ ತಿಳಿದಿತ್ತಲ್ಲದೆ ಅದನ್ನು ಕಣ್ಣಾರೆ ಕಂಡ ಅನೇಕರು ಆಗ ಜೀವಿಸಿದ್ದರು.

ಸಂದರ್ಭವೇನು ಉಳಿದಿದೆ? ಅಲ್ಲಾಹನಿಗೆ ಶರಣು ಹೋಗುವಾತನು ನಿಸ್ಸಂದೇಹವಾಗಿ ಸನ್ಮಾರ್ಗ ಹೊಂದುವನು.

بِاللّٰهِ فَقَدْ هُدِيَ اِلٰى صِرَاطٍ مُّسْتَقِيْمٍ ﴿١٠١﴾

102. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಬೇಕಾದ ರೀತಿಯಲ್ಲೇ ಭಯಪಡಿರಿ. ನೀವು ಮುಸ್ಲಿಮರಾಗಿರುವ ಸ್ಥಿತಿಯಲ್ಲಿಯೇ ವಿನಾ ನಿಮಗೆ ಮರಣ ಬಾರದಿರಲಿ.

يٰۤاَيُّهَا الَّذِيْنَ اٰمَنُوا اتَّقُوا اللّٰهَ حَقَّ تُقٰتِهٖ
وَلَا تَمُوْتُنَّ اِلَّا وَاَنْتُمْ مُّسْلِمُوْنَ ﴿١٠٢﴾

103. ನೀವೆಲ್ಲರೂ ಒಟ್ಟಾಗಿ ಅಲ್ಲಾಹನ ಪಾಶವನ್ನು[25] ಬಿಗಿ ಹಿಡಿಯಿರಿ ಮತ್ತು ಭಿನ್ನಭಿನ್ನರಾಗದಿರಿ. ನಿಮ್ಮ ಮೇಲೆ ಅಲ್ಲಾಹನು ಮಾಡಿದ್ದ ಆ ಉಪಕಾರವನ್ನು ಸ್ಮರಿಸಿರಿ. ನೀವು ಪರಸ್ಪರ ಶತ್ರುಗಳಾಗಿದ್ದಿರಿ. ಅವನು ನಿಮ್ಮ ಹೃದಯಗಳನ್ನು ಜೋಡಿಸಿದನು ಮತ್ತು ಅವನ ಅನುಗ್ರಹದಿಂದ ನೀವು ಸಹೋದರರಾದಿರಿ. ನೀವು ಅಗ್ನಿ ತುಂಬಿದ ಒಂದು ಕುಂಡದ ಅಂಚಿನಲ್ಲಿ ನಿಂತಿದ್ದಿರಿ. ಅಲ್ಲಾಹನು ನಿಮ್ಮನ್ನು ಅದರಿಂದ ರಕ್ಷಿಸಿದನು. ಈ ದೃಷ್ಟಾಂತಗಳಿಂದ ನಿಮಗೆ ನಿಮ್ಮ ಶಾಶ್ವತ ವಿಜಯದ ನೇರ ಮಾರ್ಗ ಕಾಣಬಹುದೆಂದು ನಿರೀಕ್ಷಿಸಿ ಅಲ್ಲಾಹನು ತನ್ನ ನಿದರ್ಶನಗಳನ್ನು ನಿಮಗೆ ಪ್ರಕಾಶಗೊಳಿಸುತ್ತಾನೆ.

وَاعْتَصِمُوْا بِحَبْلِ اللّٰهِ جَمِيْعًا وَّلَا تَفَرَّقُوْا
وَاذْكُرُوْا نِعْمَتَ اللّٰهِ عَلَيْكُمْ اِذْ كُنْتُمْ اَعْدَآءً
فَاَلَّفَ بَيْنَ قُلُوْبِكُمْ فَاَصْبَحْتُمْ بِنِعْمَتِهٖۤ
اِخْوَانًا وَكُنْتُمْ عَلٰى شَفَا حُفْرَةٍ مِّنَ
النَّارِ فَاَنْقَذَكُمْ مِّنْهَا كَذٰلِكَ يُبَيِّنُ اللّٰهُ
لَكُمْ اٰيٰتِهٖ لَعَلَّكُمْ تَهْتَدُوْنَ ﴿١٠٣﴾

104. ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವರು.

وَلْتَكُنْ مِّنْكُمْ اُمَّةٌ يَّدْعُوْنَ اِلَى الْخَيْرِ
وَيَاْمُرُوْنَ بِالْمَعْرُوْفِ وَيَنْهَوْنَ عَنِ
الْمُنْكَرِ وَاُولٰٓئِكَ هُمُ الْمُفْلِحُوْنَ ﴿١٠٤﴾

105. ಸುವ್ಯಕ್ತ ನಿದರ್ಶನಗಳು ಪ್ರಾಪ್ತಿಯಾದ ಮೇಲೆ ಭಿನ್ನಾಭಿಪ್ರಾಯಗಳಲ್ಲಿ ಸಿಲುಕಿ ವಿಭಿನ್ನ ಪಕ್ಷ ಪಂಗಡಗಳಲ್ಲಿ ಹರಿ ಹಂಚಿ ಹೋದವರಂತೆ ನೀವಾಗಬಾರದು. ಹೀಗೆ ಮಾಡಿದವರು ಘೋರ ಯಾತನೆಯನ್ನನುಭವಿಸುವರು.

وَلَا تَكُوْنُوْا كَالَّذِيْنَ تَفَرَّقُوْا وَاخْتَلَفُوْا
مِنْۢ بَعْدِ مَا جَآءَهُمُ الْبَيِّنٰتُ وَاُولٰٓئِكَ
لَهُمْ عَذَابٌ عَظِيْمٌ ﴿١٠٥﴾

106. ಅಂದು ಕೆಲವರು ಪ್ರಸನ್ನವದನರಾಗುವರು. ಇನ್ನು ಕೆಲವರ ಮುಖಗಳು ಕರ್‍ರಗಾಗುವುವು. ಮುಖ ಕರ್‍ರಗಾದವರೊಡನೆ (ಹೀಗೆ ಹೇಳಲಾಗುವುದು), "ಈಮಾನಿನ ಭವ್ಯ ಕೊಡುಗೆ ಪ್ರಾಪ್ತವಾದ ಬಳಿಕವೂ ನೀವು ನಿಷೇಧ ನೀತಿಯನ್ನು ಅನುಸರಿಸಿದಿರಾ? ಸರಿ, ಹಾಗಾದರೆ ಈ ಕೃತಘ್ನತೆಯ ಬದಲಿಗೆ ನರಕ ಯಾತನೆಯ ಸವಿಯನ್ನುಣ್ಣಿರಿ."

يَّوْمَ تَبْيَضُّ وُجُوْهٌ وَّتَسْوَدُّ وُجُوْهٌ فَاَمَّا
الَّذِيْنَ اسْوَدَّتْ وُجُوْهُهُمْ اَكَفَرْتُمْ بَعْدَ
اِيْمَانِكُمْ فَذُوْقُوا الْعَذَابَ بِمَا كُنْتُمْ تَكْفُرُوْنَ ﴿١٠٦﴾

25. ಅಲ್ಲಾಹನ ಪಾಶವೆಂದರೆ ಅಲ್ಲಾಹನ ಧರ್ಮ. ಒಂದೆಡೆ ಸತ್ಯವಿಶ್ವಾಸಿಗಳ ಸಂಬಂಧವನ್ನು ಅಲ್ಲಾಹನೊಂದಿಗೆ ಜೋಡಿಸುವ ಮತ್ತು ಇನ್ನೊಂದೆಡೆ ಸಮಸ್ತ ಸತ್ಯವಿಶ್ವಾಸಿಗಳನ್ನು ಸೇರಿಸಿ ಒಂದು ಸಮುದಾಯವನ್ನಾಗಿ ಮಾಡುವ ನಂಟು ಧರ್ಮವೇ ಆಗಿದೆ. ಆದ್ದರಿಂದಲೇ ಅದನ್ನು ಇಲ್ಲಿ 'ಪಾಶ'ವೆಂದು ಸಾರಲಾಗಿದೆ.

107. ಪ್ರಸನ್ನವದನರಾದವರ ವಿಚಾರ-ಅವರಿಗೆ ಅಲ್ಲಾಹನ ಕೃಪಾಶ್ರಯದಲ್ಲಿ ಸ್ಥಾನ ಸಿಗುವುದು ಮತ್ತು ಅವರು ಸದಾ ಅದೇ ಸ್ಥಿತಿಯಲ್ಲಿರುವರು.

وَأَمَّا الَّذِينَ ابْيَضَّتْ وُجُوهُهُمْ فَفِي رَحْمَةِ اللَّهِ ۖ هُمْ فِيهَا خَالِدُونَ ﴿١٠٧﴾

108. ನಾವು ನಿಮಗೆ ನಿಖರವಾಗಿ ತಿಳಿಸುತ್ತಿರುವ ಅಲ್ಲಾಹನ ಸುಸ್ಪಷ್ಟ ಆದೇಶಗಳಿವು. ಏಕೆಂದರೆ ಅಲ್ಲಾಹನು ಲೋಕವಾಸಿಗಳ ಮೇಲೆ ಅಕ್ರಮವೆಸಗುವ ಇರಾದೆಯನ್ನೇನೂ ಇಟ್ಟಿರುವುದಿಲ್ಲ.

تِلْكَ آيَاتُ اللَّهِ نَتْلُوهَا عَلَيْكَ بِالْحَقِّ ۗ وَمَا اللَّهُ يُرِيدُ ظُلْمًا لِلْعَالَمِينَ ﴿١٠٨﴾

109. ಭೂಮಿ-ಆಕಾಶಗಳ ಸಮಸ್ತ ವಸ್ತುಗಳ ಮಾಲಕನು ಅಲ್ಲಾಹನು ಮತ್ತು ಸಕಲ ವ್ಯವಹಾರಗಳೂ ಅಲ್ಲಾಹನ ಆಸ್ಥಾನದಲ್ಲಿ ಅರ್ಪಿಸಲ್ಪಡುತ್ತವೆ.

وَلِلَّهِ مَا فِي السَّمَاوَاتِ وَمَا فِي الْأَرْضِ ۚ وَإِلَى اللَّهِ تُرْجَعُ الْأُمُورُ ﴿١٠٩﴾

110. ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ಪಾಪಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ. ಈ ಗ್ರಂಥದವರು[26] ವಿಶ್ವಾಸವಿಡುತ್ತಿದ್ದರೆ ಅವರಿಗೇ ಚೆನ್ನಾಗಿತ್ತು. ಅವರಲ್ಲಿ ಕೆಲವರು ಸತ್ಯವಿಶ್ವಾಸಿಗಳೂ ಕಂಡು ಬರುತ್ತಾರೆ. ಆದರೂ ಅವರ ಅಧಿಕಾಂಶ ಜನರು ಆಜ್ಞೋಲ್ಲಂಘಕರಾಗಿರುತ್ತಾರೆ.

كُنْتُمْ خَيْرَ أُمَّةٍ أُخْرِجَتْ لِلنَّاسِ تَأْمُرُونَ بِالْمَعْرُوفِ وَتَنْهَوْنَ عَنِ الْمُنْكَرِ وَتُؤْمِنُونَ بِاللَّهِ ۗ وَلَوْ آمَنَ أَهْلُ الْكِتَابِ لَكَانَ خَيْرًا لَهُمْ ۚ مِنْهُمُ الْمُؤْمِنُونَ وَأَكْثَرُهُمُ الْفَاسِقُونَ ﴿١١٠﴾

111. ಇವರು ನಿಮಗೇನೂ ಕೇಡನ್ನುಂಟು ಮಾಡಲಾರರು. ಹೆಚ್ಚೆಂದರೆ ಒಂದಿಷ್ಟು ಸತಾಯಿಸಬಹುದು. ಅವರು ನಿಮ್ಮೊಂದಿಗೆ ಯುದ್ಧ ಮಾಡಿದರೆ, ಹೋರಾಟದಲ್ಲಿ ಬೆನ್ನು ತೋರಿಸುವರು. ಅನಂತರ ಅವರಿಗೆ ಎಲ್ಲಿಂದಲೂ ನೆರವು ಒದಗದಷ್ಟು ಅಸಹಾಯಕರಾಗುವರು.

لَنْ يَضُرُّوكُمْ إِلَّا أَذًى ۖ وَإِنْ يُقَاتِلُوكُمْ يُوَلُّوكُمُ الْأَدْبَارَ ثُمَّ لَا يُنْصَرُونَ ﴿١١١﴾

112. ಇವರು ಇದ್ದಲ್ಲೆಲ್ಲಾ ಇವರ ಮೇಲೆ ಛೀಮಾರಿ ಬಿತ್ತು. ಇನ್ನೆಲ್ಲಾದರೂ ಅಲ್ಲಾಹನಲ್ಲಿ ಅಥವಾ ಜನರಲ್ಲಿ ಆಸರೆ ಸಿಕ್ಕಿದರೆ ಆ ಮಾತು ಬೇರೆ.[27] ಇವರು ಅಲ್ಲಾಹನ ಕ್ರೋಧದಿಂದ

ضُرِبَتْ عَلَيْهِمُ الذِّلَّةُ أَيْنَ مَا ثُقِفُوا إِلَّا بِحَبْلٍ مِنَ اللَّهِ وَحَبْلٍ مِنَ النَّاسِ وَبَاءُوا بِغَضَبٍ مِنَ اللَّهِ وَضُرِبَتْ عَلَيْهِمُ الْمَسْكَنَةُ ۚ

26. ಇಲ್ಲಿ ಗ್ರಂಥದವರೆಂದರೆ ಯಹೂದಿಯರಾಗಿದ್ದಾರೆ.

27. ಅರ್ಥಾತ್- ಜಗತ್ತಿನಲ್ಲಿ ಅವರಿಗೆ ಸ್ವಲ್ಪ ಶಾಂತಿ ಸಮಾಧಾನ ಪ್ರಾಪ್ತವಾದರೂ ಅದು ಅವರ ಸ್ವಂತ ಬಲದಿಂದ ಗಳಿಸಿದ ಶಾಂತಿ-ಸಮಾಧಾನವಲ್ಲ. ಬದಲಾಗಿ ಅದು ಇತರರ ಸಹಕಾರ ಮತ್ತು ಕೃಪೆಯ ಪರಿಣಾಮವಾಗಿದೆ. ಯಾವುದಾದರೂ ಮುಸ್ಲಿಮ್ ರಾಷ್ಟ್ರ ಅವರಿಗೆ ದೇವನ ಹೆಸರಲ್ಲಿ ಕೆಲವೊಮ್ಮೆ ಆಶ್ರಯ ನೀಡಬಹುದು. ಕೆಲವೊಮ್ಮೆ ಮುಸ್ಲಿಮೇತರ ರಾಷ್ಟ್ರಗಳು ಅವರಿಗೆ ಅಭಯ ನೀಡಬಹುದು. ಹೀಗೆ ಕೆಲವೊಮ್ಮೆ ಅವರಿಗೆ ಲೋಕದಲ್ಲಿ ಪ್ರಾಬಲ್ಯ ಸಾಧಿಸುವ ಅವಕಾಶವೂ ದೊರೆಯಬಹುದು. ಆದರೆ ಅದಾವುದನ್ನೂ ಅವರು ತಮ್ಮ

ಆವರಿಸಲ್ಪಟ್ಟಿದ್ದಾರೆ. ಇವರ ಮೇಲೆ ದಾರಿದ್ರ್ಯ ಮತ್ತು ಪರಾಧೀನತೆಯು ಹೇರಲ್ಪಟ್ಟಿದೆ. ಇವೆಲ್ಲ ಇವರು ಅಲ್ಲಾಹನ ನಿದರ್ಶನಗಳನ್ನು ನಿಷೇಧಿಸುತ್ತಲಿದ್ದುದರಿಂದಲೂ ಪ್ರವಾದಿಗಳನ್ನು ಅನ್ಯಾಯವಾಗಿ ವಧಿಸಿರುವುದರಿಂದಲೂ ಉಂಟಾಗಿವೆ. ಇವರ ಅವಿಧೇಯತೆ ಮತ್ತು ಅತಿರೇಕಗಳ ಪರಿಣಾಮವಿದು.

ذٰلِكَ بِاَنَّهُمْ كَانُوْا يَكْفُرُوْنَ بِاٰيٰتِ اللّٰهِ وَيَقْتُلُوْنَ الْاَنْۢبِيَآءَ بِغَيْرِ حَقٍّ ؕ ذٰلِكَ بِمَا عَصَوْا وَّكَانُوْا يَعْتَدُوْنَ ﴿۱۱۲﴾

113. ಆದರೆ ಗ್ರಂಥದವರೆಲ್ಲರೂ ಒಂದೇ ತೆರನಾಗಿರುವುದಿಲ್ಲ. ಅವರಲ್ಲಿ ನೇರಮಾರ್ಗದಲ್ಲಿ ಸ್ಥಿರವಾಗಿರುವ ಕೆಲವರೂ ಇದ್ದಾರೆ. ಅವರು ರಾತ್ರಿಕಾಲದಲ್ಲಿ ಅಲ್ಲಾಹನ ಸೂಕ್ತಗಳನ್ನು ಪಠಿಸುತ್ತಾರೆ ಮತ್ತು ಅವನ ಮುಂದೆ ಸಾಷ್ಟಾಂಗವೆರಗುತ್ತಾರೆ.

لَيْسُوْا سَوَآءً ؕ مِنْ اَهْلِ الْكِتٰبِ اُمَّةٌ قَآئِمَةٌ يَّتْلُوْنَ اٰيٰتِ اللّٰهِ اٰنَآءَ الَّيْلِ وَهُمْ يَسْجُدُوْنَ ﴿۱۱۳﴾

114. ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುತ್ತಾರೆ. ಒಳಿತಿನ ಆದೇಶವನ್ನೀಯುತ್ತಾರೆ ಪಾಪಕಾರ್ಯಗಳಿಂದ ತಡೆಯುತ್ತಾರೆ ಮತ್ತು ಸತ್ಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ಇವರು ಸಜ್ಜನರು.

يُؤْمِنُوْنَ بِاللّٰهِ وَالْيَوْمِ الْاٰخِرِ وَيَاْمُرُوْنَ بِالْمَعْرُوْفِ وَيَنْهَوْنَ عَنِ الْمُنْكَرِ وَيُسَارِعُوْنَ فِى الْخَيْرٰتِ ؕ وَاُولٰٓئِكَ مِنَ الصّٰلِحِيْنَ ﴿۱۱۴﴾

115. ಇವರು ಮಾಡುವ ಯಾವ ಸತ್ಕರ್ಮಗಳನ್ನೂ ಕಡೆಗಣಿಸಲಾಗದು. ಅಲ್ಲಾಹನು ಧರ್ಮನಿಷ್ಠರನ್ನು ಚೆನ್ನಾಗಿ ಬಲ್ಲನು.

وَمَا يَفْعَلُوْا مِنْ خَيْرٍ فَلَنْ يُّكْفَرُوْهُ ؕ وَاللّٰهُ عَلِيْمٌۢ بِالْمُتَّقِيْنَ ﴿۱۱۵﴾

116. ಸತ್ಯನಿಷೇಧ ನೀತಿಯನ್ನನುಸರಿಸಿದವರಿಗೆ ಅಲ್ಲಾಹನೆದುರು ಅವರ ಸಂಪತ್ತಾಗಲಿ, ಸಂತತಿಯಾಗಲಿ ಏನೂ ಫಲ ಕೊಡಲಾರದು. ಅವರಂತು ನರಕಾಗ್ನಿಯಲ್ಲಿ ಬೀಳುವವರು ಮತ್ತು ಅಲ್ಲೇ ಸದಾಕಾಲ ಉಳಿಯುವರು.

اِنَّ الَّذِيْنَ كَفَرُوْا لَنْ تُغْنِىَ عَنْهُمْ اَمْوَالُهُمْ وَلَآ اَوْلَادُهُمْ مِّنَ اللّٰهِ شَيْـًٔا ؕ وَاُولٰٓئِكَ اَصْحٰبُ النَّارِ ۚ هُمْ فِيْهَا خٰلِدُوْنَ ﴿۱۱۶﴾

117. ಅವರು ತಮ್ಮ ಇಹಜೀವನದಲ್ಲಿ ಖರ್ಚು ಮಾಡುತ್ತಿರುವುದರ ಉಪಮೆಯು ಹಿಮಮಯ ಗಾಳಿಯಂತೆಯೂ ಅದು ತಮ್ಮ ಮೇಲೆ ತಾವೇ ಅಕ್ರಮವೆಸಗಿಕೊಂಡವರ ಹೊಲದ ಮೇಲೆ ಬೀಸಿ, ಅದನ್ನು ನಾಶ ಮಾಡಿಬಿಟ್ಟಂತೆಯೂ ಇರುತ್ತದೆ. ಅಲ್ಲಾಹನು ಅವರ ಮೇಲೆ ಅಕ್ರಮವೆಸಗಲಿಲ್ಲ. ವಾಸ್ತವದಲ್ಲಿ ಇವರು ಸ್ವತಃ ತಮ್ಮ ಮೇಲೆ ಅಕ್ರಮವೆಸಗುತ್ತಿದ್ದಾರೆ.

مَثَلُ مَا يُنْفِقُوْنَ فِىْ هٰذِهِ الْحَيٰوةِ الدُّنْيَا كَمَثَلِ رِيْحٍ فِيْهَا صِرٌّ اَصَابَتْ حَرْثَ قَوْمٍ ظَلَمُوْٓا اَنْفُسَهُمْ فَاَهْلَكَتْهُ ؕ وَمَا ظَلَمَهُمُ اللّٰهُ وَلٰكِنْ اَنْفُسَهُمْ يَظْلِمُوْنَ ﴿۱۱۷﴾

118. ಓ ಸತ್ಯವಿಶ್ವಾಸಿಗಳೇ, ನಿಮ್ಮವರ ಹೊರತು ಅನ್ಯರನ್ನು ನಿಮ್ಮ ರಹಸ್ಯಜ್ಞಾನಿಗಳನ್ನಾಗಿ ಮಾಡಿಕೊಳ್ಳಬೇಡಿರಿ. ಅವರು ನಿಮ್ಮ

يٰٓاَيُّهَا الَّذِيْنَ اٰمَنُوْا لَا تَتَّخِذُوْا بِطَانَةً مِّنْ دُوْنِكُمْ لَا يَاْلُوْنَكُمْ خَبَالًا ؕ وَدُّوْا مَا

ತೋಳ್ಬಲದಿಂದ ಸಾಧಿಸಿದ್ದಲ್ಲ. ಬದಲಾಗಿ ಅಕ್ಕಪಕ್ಕದವರ ಪಾದಪೂಜೆ ಮಾಡುವ ಮೂಲಕ ಸಾಧಿಸಿದ್ದಾರೆ. ಅಮೇರಿಕ, ಬ್ರಿಟನ್ ಮತ್ತು ರಷ್ಯಾದ ಸಹಕಾರದಿಂದ ಸ್ಥಾಪಿತವಾದ 'ಇಸ್ರೇಲ್' ಎಂಬ ಯಹೂದಿ ಸಾಮ್ರಾಜ್ಯವೂ ಇಂದು ಅದೇ ಸ್ಥಿತಿಯಲ್ಲಿದೆ.

ದುಃಸ್ಥಿತಿಯಿಂದ ಲಾಭಪಡೆಯುವ ಯಾವ ಸಂದರ್ಭವನ್ನೂ ಕಳೆದುಕೊಳ್ಳುವುದಿಲ್ಲ. ನಿಮಗೆ ಹಾನಿಯುಂಟಾಗುವ ವಿಷಯವೇ ಅವರಿಗೆ ಪ್ರಿಯವಾಗಿರುತ್ತದೆ. ಅವರ ಹೃದಯದಲ್ಲಿರುವ ದ್ವೇಷವು ಅವರ ಬಾಯಿಯಿಂದ ಹೊರ ಹೊಮ್ಮುತ್ತದೆ ಮತ್ತು ಅವರು ತಮ್ಮ ಹೃದಯದಲ್ಲಿ ಅಡಗಿಸಿಕೊಂಡಿರುವುದು ಅದಕ್ಕಿಂತಲೂ ಕಠಿಣತರವಾಗಿದೆ. ನಾವು ನಿಮಗೆ ಸುಸ್ಪಷ್ಟ ಮಾರ್ಗದರ್ಶನಗಳನ್ನು ನೀಡಿದ್ದೇವೆ. ನೀವು ವಿಚಾರವಂತರಾಗಿದ್ದರೆ.

عَنِتُّمْ ۚ قَدْ بَدَتِ الْبَغْضَاءُ مِنْ أَفْوَاهِهِمْ ۖ وَمَا تُخْفِي صُدُورُهُمْ أَكْبَرُ ۚ قَدْ بَيَّنَّا لَكُمُ الْآيَاتِ ۖ إِنْ كُنْتُمْ تَعْقِلُونَ ﴿١١٨﴾

119. (ಇಂತಹವರೊಂದಿಗೆ ಸಂಬಂಧವಿರಿಸಿಕೊಳ್ಳುವ ವಿಷಯದಲ್ಲಿ ಜಾಗರೂಕರಾಗಿರಿ.) ನೀವು ಅವರನ್ನು ಪ್ರೀತಿಸುತ್ತೀರಿ. ಆದರೆ ಅವರು ನಿಮ್ಮನ್ನು ಪ್ರೀತಿಸುವುದಿಲ್ಲ. ವಸ್ತುತಃ ನೀವು ಎಲ್ಲ ದೇವಗ್ರಂಥಗಳನ್ನೂ ಸಮ್ಮತಿಸುತ್ತೀರಿ. ಅವರು ನಿಮ್ಮನ್ನು ಭೇಟಿಯಾದಾಗ, "ನಾವು ಸಹ (ನಿಮ್ಮ ಪ್ರವಾದಿ ಮತ್ತು ಗ್ರಂಥವನ್ನು) ಒಪ್ಪಿಕೊಂಡೆವು" ಎನ್ನುತ್ತಾರೆ. ಆದರೆ ನಿಮ್ಮನ್ನು ಬಿಟ್ಟಗಲಿದಾಗಲಂತು ನಿಮ್ಮ ವಿರುದ್ಧ ಕ್ರೋಧಾತಿರೇಕದಿಂದ ತಮ್ಮ ಬೆರಳುಗಳನ್ನು ತಾವೇ ಕಚ್ಚಿಕೊಳ್ಳಲಾರಂಭಿಸುತ್ತಾರೆ. "ನಿಮ್ಮ ಕ್ರೋಧದಲ್ಲಿ ನೀವೇ ಬೆಂದು ಸಾಯಿರಿ" ಎಂದು ಅವರೊಡನೆ ಹೇಳಿರಿ. ಅಲ್ಲಾಹನು ಹೃದಯಗಳೊಳಗೆ ಅವಿತಿರುವ ರಹಸ್ಯಗಳನ್ನೂ ತಿಳಿದಿರುತ್ತಾನೆ.

هَا أَنْتُمْ أُولَاءِ تُحِبُّونَهُمْ وَلَا يُحِبُّونَكُمْ وَتُؤْمِنُونَ بِالْكِتَابِ كُلِّهِ ۚ وَإِذَا لَقُوكُمْ قَالُوا آمَنَّا ۖ وَإِذَا خَلَوْا عَضُّوا عَلَيْكُمُ الْأَنَامِلَ مِنَ الْغَيْظِ ۚ قُلْ مُوتُوا بِغَيْظِكُمْ ۗ إِنَّ اللَّهَ عَلِيمٌ بِذَاتِ الصُّدُورِ ﴿١١٩﴾

120. ನಿಮಗೆ ಹಿತವಾದರೆ ಅವರಿಗೆ ಅಹಿತವೆನಿಸುತ್ತದೆ ಮತ್ತು ನಿಮ್ಮ ಮೇಲೇನಾದರೂ ವಿಪತ್ತು ಬಂದರೆ ಅವರು ಸಂತೋಷಪಡುತ್ತಾರೆ. ಆದರೆ ನೀವು ಸಹನೆಯಿಂದ ವರ್ತಿಸಿದರೆ ಮತ್ತು ಅಲ್ಲಾಹನಿಗೆ ಭಯಪಟ್ಟು ಕಾರ್ಯವೆಸಗುತ್ತಿದ್ದರೆ ಅವರ ಯಾವ ಹಂಚಿಕೆಯೂ ನಿಮ್ಮ ವಿರುದ್ಧ ಪರಿಣಾಮವನ್ನುಂಟು ಮಾಡಲಾರದು. ಅವರು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಆವರಿಸಿದ್ದಾನೆ.

إِنْ تَمْسَسْكُمْ حَسَنَةٌ تَسُؤْهُمْ وَإِنْ تُصِبْكُمْ سَيِّئَةٌ يَفْرَحُوا بِهَا ۖ وَإِنْ تَصْبِرُوا وَتَتَّقُوا لَا يَضُرُّكُمْ كَيْدُهُمْ شَيْئًا ۗ إِنَّ اللَّهَ بِمَا يَعْمَلُونَ مُحِيطٌ ﴿١٢٠﴾

121. (ಓ ಪೈಗಂಬರರೇ, ಮುಸ್ಲಿಮರ ಮುಂದೆ ಆ ಸಂದರ್ಭದ ಪ್ರಸ್ತಾಪವೆತ್ತಿರಿ) ನೀವು ಮುಂಜಾನೆ ನಿಮ್ಮ ಮನೆಯಿಂದ ಹೊರಟಿದ್ದಿರಿ ಮತ್ತು (ಉಹುದ್ ಬಯಲಿನಲ್ಲಿ) ಮುಸ್ಲಿಮರನ್ನು ಯುದ್ಧಕ್ಕಾಗಿ ಅಲ್ಲಲ್ಲಿ ನೇಮಕ ಮಾಡುತ್ತಿದ್ದಿರಿ. ಅಲ್ಲಾಹನು ಸರ್ವಶ್ರುತ ನಾಗಿರುತ್ತಾನೆ ಮತ್ತು ಎಲ್ಲವನ್ನೂ ಬಲ್ಲವನಾಗಿರುತ್ತಾನೆ.

وَإِذْ غَدَوْتَ مِنْ أَهْلِكَ تُبَوِّئُ الْمُؤْمِنِينَ مَقَاعِدَ لِلْقِتَالِ ۗ وَاللَّهُ سَمِيعٌ عَلِيمٌ ﴿١٢١﴾

122. ನಿಮ್ಮಲ್ಲಿ ಎರಡು ತಂಡಗಳು ಭೀರುತನ ತೋರಿಸಲುದ್ಯುಕ್ತರಾಗಿ

إِذْ هَمَّتْ طَائِفَتَانِ مِنْكُمْ أَنْ تَفْشَلَا

ಬಿಟ್ಟಿದ್ದ ಸಂದರ್ಭವನ್ನು ಸ್ಮರಿಸಿರಿ. ಅವರ ಸಹಾಯಕ್ಕೆ ಅಲ್ಲಾಹನು ಉಪಸ್ಥಿತನಿದ್ದನು ಮತ್ತು ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆಯನ್ನಿಡಬೇಕು.

وَاللَّهُ وَلِيُّهُمَا ۗ وَعَلَى اللَّهِ فَلْيَتَوَكَّلِ الْمُؤْمِنُونَ ﴿١٢٢﴾

123. ಇದಕ್ಕೆ ಮುಂಚೆ 'ಬದ್ರ್' ಯುದ್ಧದಲ್ಲಿ ನೀವು ದುರ್ಬಲರಾಗಿದ್ದರೂ ಅಲ್ಲಾಹನು ನಿಮಗೆ ಸಹಾಯ ಮಾಡಿದ್ದನು. ಆದುದರಿಂದ ನೀವು ಅಲ್ಲಾಹನ ಕೃತಘ್ನತೆಯಿಂದ ದೂರವಿರಬೇಕು. ಮುಂದೆ ನೀವು ಕೃತಜ್ಞರಾಗುವಿರೆಂದು ಆಶಿಸಲಾಗಿದೆ.

وَلَقَدْ نَصَرَكُمُ اللَّهُ بِبَدْرٍ وَأَنْتُمْ أَذِلَّةٌ ۖ فَاتَّقُوا اللَّهَ لَعَلَّكُمْ تَشْكُرُونَ ﴿١٢٣﴾

124. (ಓ ಪೈಗಂಬರರೇ,) "ಅಲ್ಲಾಹನು ಮೂರು ಸಾವಿರ ದೇವಚರರನ್ನು ಇಳಿಸಿ ಸಹಾಯ ಮಾಡಿದರೆ ನಿಮಗೆ ಸಾಲದೇ?" ಎಂದು ನೀವು ಸತ್ಯವಿಶ್ವಾಸಿಗಳೊಡನೆ ಹೇಳುತ್ತಿದ್ದುದನ್ನು ಸ್ಮರಿಸಿರಿ.

إِذْ تَقُولُ لِلْمُؤْمِنِينَ أَلَنْ يَكْفِيَكُمْ أَنْ يُمِدَّكُمْ رَبُّكُمْ بِثَلَاثَةِ آلَافٍ مِنَ الْمَلَائِكَةِ مُنْزَلِينَ ﴿١٢٤﴾

125. ನೀವು ಸಹನೆ ತಾಳಿದರೆ ಮತ್ತು ಅಲ್ಲಾಹನನ್ನು ಭಯಪಟ್ಟು ವರ್ತಿಸಿದರೆ, ಶತ್ರುಗಳು ನಿಮ್ಮ ಮೇಲೇರಿ ಬಂದೊಡನೆ ನಿಸ್ಸಂದೇಹವಾಗಿಯೂ ನಿಮ್ಮ ಪ್ರಭುವು (ಮೂರು ಸಾವಿರವಲ್ಲ) ಐದು ಸಾವಿರ ಗುರಿತಪ್ಪದ ದೇವಚರರ ಮೂಲಕ ನಿಮಗೆ ಸಹಾಯ ಮಾಡುವನು.

بَلَىٰ ۚ إِنْ تَصْبِرُوا وَتَتَّقُوا وَيَأْتُوكُمْ مِنْ فَوْرِهِمْ هَٰذَا يُمْدِدْكُمْ رَبُّكُمْ بِخَمْسَةِ آلَافٍ مِنَ الْمَلَائِكَةِ مُسَوِّمِينَ ﴿١٢٥﴾

126 ನೀವು ಸಂತಸ ಪಡಲಿಕ್ಕಾಗಿಯೂ ನಿಮ್ಮ ಮನಶ್ಶಾಂತಿಗಾಗಿಯೂ ಅಲ್ಲಾಹನು ನಿಮಗೆ ಈ ವಿಷಯವನ್ನು ಅರುಹಿದನು. ವಿಜಯ ವಾದರೋ ಪ್ರಬಲನೂ ಯುಕ್ತಿಪೂರ್ಣನೂ ಆಗಿರುವ ಅಲ್ಲಾಹನ ವತಿಯಿಂದಲೇ ಆಗಿರುತ್ತದೆ.

وَمَا جَعَلَهُ اللَّهُ إِلَّا بُشْرَىٰ لَكُمْ وَلِتَطْمَئِنَّ قُلُوبُكُمْ بِهِ ۗ وَمَا النَّصْرُ إِلَّا مِنْ عِنْدِ اللَّهِ الْعَزِيزِ الْحَكِيمِ ﴿١٢٦﴾

127. ಸತ್ಯನಿಷೇಧ ಮಾರ್ಗದಲ್ಲಿ ನಡೆಯುವವರ ಒಂದು ಭಾಗವನ್ನು ಕತ್ತರಿಸಲಿಕ್ಕಾಗಿ ಅಥವಾ ಅವರು ಆಶಾಭಗ್ನತೆಯೊಂದಿಗೆ ಹಿಮ್ಮೆಟ್ಟಲಿಕ್ಕಾಗಿ (ಈ ಸಹಾಯವನ್ನು ಅವನು ನಿಮಗೆ ಒದಗಿಸುವನು.)

لِيَقْطَعَ طَرَفًا مِنَ الَّذِينَ كَفَرُوا أَوْ يَكْبِتَهُمْ فَيَنْقَلِبُوا خَائِبِينَ ﴿١٢٧﴾

128. (ಓ ಪೈಗಂಬರರೇ,) ತೀರ್ಮಾನದ ಅಧಿಕಾರದಲ್ಲಿ ನಿಮ್ಮ ಪಾಲೇನೂ ಇಲ್ಲ. ಅವರು ಅಕ್ರಮಿಗಳಾಗಿರುವುದರಿಂದ, ತನಗೆ ಇಷ್ಟಬಂದವರನ್ನು ಕ್ಷಮಿಸುವ ಮತ್ತು ಇಷ್ಟಬಂದವರನ್ನು ಶಿಕ್ಷಿಸುವ ಅಧಿಕಾರ ಅಲ್ಲಾಹನಿಗಿದೆ.

لَيْسَ لَكَ مِنَ الْأَمْرِ شَيْءٌ أَوْ يَتُوبَ عَلَيْهِمْ أَوْ يُعَذِّبَهُمْ فَإِنَّهُمْ ظَالِمُونَ ﴿١٢٨﴾

129. ಭೂಮಿ-ಆಕಾಶಗಳಲ್ಲಿ ಏನೆಲ್ಲ ಇರುವುದೋ ಅವುಗಳ ಮಾಲಕನು ಅಲ್ಲಾಹನು. ಅವನು, ಇಷ್ಟಬಂದವರನ್ನು ಕ್ಷಮಿಸಬಲ್ಲನು, ಇಷ್ಟಬಂದವರನ್ನು ಶಿಕ್ಷಿಸಬಲ್ಲನು. ಅವನು ಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ.[28]

وَلِلَّهِ مَا فِي السَّمَاوَاتِ وَمَا فِي الْأَرْضِ ۚ يَغْفِرُ لِمَنْ يَشَاءُ وَيُعَذِّبُ مَنْ يَشَاءُ ۚ وَاللَّهُ غَفُورٌ رَحِيمٌ ﴿١٢٩﴾

130. ಓ ಸತ್ಯವಿಶ್ವಾಸಿಗಳೇ, ಬಡ್ಡಿ-ಮಾರ್ಬಡ್ಡಿ ತಿನ್ನುವುದನ್ನು ಬಿಟ್ಟು ಬಿಡಿರಿ ಮತ್ತು ಅಲ್ಲಾಹನನ್ನು ಭಯಪಡಿರಿ. (ಆಗ) ನೀವು ಕೃಪೆಗೆ ಅರ್ಹರಾಗಿರುವಿರೆಂದು ಆಶಿಸಬಹುದು.

يَاأَيُّهَا الَّذِينَ آمَنُوا لَا تَأْكُلُوا الرِّبَا أَضْعَافًا مُّضَاعَفَةً ۖ وَاتَّقُوا اللَّهَ لَعَلَّكُمْ تُفْلِحُونَ ﴿١٣٠﴾

131. ಸತ್ಯನಿಷೇಧಿಗಳಿಗಾಗಿ ಸಿದ್ಧಗೊಳಿಸಲ್ಪಟ್ಟಿರುವ ಆ ನರಕಾಗ್ನಿಗೆ ಅಂಜಿರಿ.

وَاتَّقُوا النَّارَ الَّتِي أُعِدَّتْ لِلْكَافِرِينَ ﴿١٣١﴾

132 ಮತ್ತು ಅಲ್ಲಾಹನ ಹಾಗೂ ಸಂದೇಶವಾಹಕರ ಆಜ್ಞೆಯನ್ನು ಪಾಲಿಸಿರಿ. ನೀವು ಕೃಪಾರ್ಹರಾಗುವಿರೆಂದು ನಿರೀಕ್ಷಿಸಬಹುದು.

وَأَطِيعُوا اللَّهَ وَالرَّسُولَ لَعَلَّكُمْ تُرْحَمُونَ ﴿١٣٢﴾

133 ನಿಮ್ಮ ಪ್ರಭುವಿನ ಕ್ಷಮೆಯ ಕಡೆಗೆ ಮತ್ತು ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸಿರಿ. ಅದು ದೇವಭಯವುಳ್ಳವರಿಗಾಗಿ ಸಿದ್ಧಗೊಳಿಸಲ್ಪಟ್ಟಿರುತ್ತದೆ.

وَسَارِعُوا إِلَىٰ مَغْفِرَةٍ مِّن رَّبِّكُمْ وَجَنَّةٍ عَرْضُهَا السَّمَاوَاتُ وَالْأَرْضُ أُعِدَّتْ لِلْمُتَّقِينَ ﴿١٣٣﴾

134. ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತನ್ನು ಖರ್ಚು ಮಾಡುತ್ತಾರೆ, ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರರ ಅಪರಾಧಗಳನ್ನು ಕ್ಷಮಿಸುತ್ತಾರೆ.- ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯವರು.

الَّذِينَ يُنفِقُونَ فِي السَّرَّاءِ وَالضَّرَّاءِ وَالْكَاظِمِينَ الْغَيْظَ وَالْعَافِينَ عَنِ النَّاسِ ۗ وَاللَّهُ يُحِبُّ الْمُحْسِنِينَ ﴿١٣٤﴾

135. ಅವರಿಂದ ಎಂದಾದರೂ ಯಾವುದಾದರೂ ಅಶ್ಲೀಲ ಕಾರ್ಯಗಳು ಸಂಭವಿಸಿ ಹೋದಾಗ ಅಥವಾ ಅವರು ಯಾವುದಾದರೂ ಪಾಪಕಾರ್ಯ ಮಾಡಿ ತಮ್ಮ ಮೇಲೆ ತಾವೇ ಅಕ್ರಮವೆಸಗಿ ಕೊಂಡಾಗ ಅವರಿಗೆ ತಕ್ಷಣವೇ ಅಲ್ಲಾಹನ ಸ್ಮರಣೆಯುಂಟಾಗಿ ಬಿಡುತ್ತದೆ ಮತ್ತು ಅವರು ಅವನೊಡನೆ ತಮ್ಮ ಅಪರಾಧಗಳಿಗೆ ಕ್ಷಮೆ ಯಾಚಿಸುತ್ತಾರೆ. - ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸುವವರು ಇನ್ನಾರಿದ್ದಾರೆ? - ಮತ್ತು ಅವರು ತಿಳಿದೂ ತಿಳಿದೂ ತಾವು ಮಾಡಿದ ಅಪರಾಧದ ಬಗ್ಗೆ ಪಟ್ಟು ಹಿಡಿ ಯುವುದಿಲ್ಲ.

وَالَّذِينَ إِذَا فَعَلُوا فَاحِشَةً أَوْ ظَلَمُوا أَنفُسَهُمْ ذَكَرُوا اللَّهَ فَاسْتَغْفَرُوا لِذُنُوبِهِمْ وَمَن يَغْفِرُ الذُّنُوبَ إِلَّا اللَّهُ وَلَمْ يُصِرُّوا عَلَىٰ مَا فَعَلُوا وَهُمْ يَعْلَمُونَ ﴿١٣٥﴾

136. ಅಂಥವರಿಗೆ ಅವರ ಪ್ರಭುವಿನ ಬಳಿ ಇರುವ ಪ್ರತಿಫಲವು ಕ್ಷಮೆ

أُولَٰئِكَ جَزَاؤُهُم مَّغْفِرَةٌ مِّن رَّبِّهِمْ

28. ಉಹುದ್ ಯುದ್ಧದಲ್ಲಿ ಪ್ರವಾದಿವರ್ಯರು(ಸ) ಗಾಯಗೊಂಡಾಗ ಅವರ ಬಾಯಿಯಿಂದ "ತನ್ನ ಪ್ರವಾದಿಯನ್ನು ಗಾಯಗೊಳಿಸುವ ಜನಾಂಗ ಹೇಗೆ ಯಶಸ್ವಿಯಾದೀತು" ಎಂಬ ಶಾಪದ ಮಾತುಗಳು ಹೊರಡುತ್ತವೆ. ಈ ಸೂಕ್ತಗಳು ಅದಕ್ಕೆ ಉತ್ತರವಾಗಿ ಅವತೀರ್ಣಗೊಂಡಿವೆ.

ಮತ್ತು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳಾಗಿವೆ. ಅಲ್ಲಿ ಅವರು ಸದಾಕಾಲವೂ ವಾಸಿಸುವರು. ಸತ್ಕರ್ಮ ಮಾಡುವವರಿಗೆ ಇರುವ ಪ್ರತಿಫಲವು ಎಷ್ಟೊಂದು ಉತ್ತಮ!

وَجَنّٰتٌ تَجْرِي مِنْ تَحْتِهَا الْأَنْهٰرُ خٰلِدِينَ فِيهَا ۚ وَنِعْمَ أَجْرُ الْعٰمِلِينَ ﴿١٣٦﴾

137. ನಿಮಗಿಂತ ಮುಂಚೆ ಅನೇಕ ಯುಗಗಳು ಕಳೆದುಹೋಗಿವೆ. ಅಂದು (ಅಲ್ಲಾಹನ ಆದೇಶಗಳನ್ನು) ಸುಳ್ಳಾಗಿಸಿದ ಜನರ ಪರಿಣಾಮವೇನಾಯಿತೆಂಬುದನ್ನು ಭೂಮಿಯಲ್ಲಿ ಸುತ್ತಾಡಿ ಕಂಡುಕೊಳ್ಳಿರಿ.

قَدْ خَلَتْ مِنْ قَبْلِكُمْ سُنَنٌ فَسِيرُوا فِي الْأَرْضِ فَانْظُرُوا كَيْفَ كَانَ عٰقِبَةُ الْمُكَذِّبِينَ ﴿١٣٧﴾

138. ಇದು ಜನರಿಗೊಂದು ಸುವ್ಯಕ್ತ ಎಚ್ಚರಿಕೆ ಮತ್ತು ಅಲ್ಲಾಹನನ್ನು ಭಯಪಡುವವರಿಗೆ ಸನ್ಮಾರ್ಗದರ್ಶನ ಹಾಗೂ ಉಪದೇಶ.

هٰذَا بَيَانٌ لِلنَّاسِ وَهُدًى وَمَوْعِظَةٌ لِلْمُتَّقِينَ ﴿١٣٨﴾

139. ನೀವು ಧೈರ್ಯಗುಂದಬೇಡಿರಿ, ವ್ಯಥೆ ಪಡಲೂಬೇಡಿರಿ, ನೀವು ವಿಶ್ವಾಸಿಗಳಾಗಿದ್ದರೆ ನೀವೇ ವಿಜಯಿಗಳಾಗುವಿರಿ.

وَلَا تَهِنُوا وَلَا تَحْزَنُوا وَأَنْتُمُ الْأَعْلَوْنَ إِنْ كُنْتُمْ مُؤْمِنِينَ ﴿١٣٩﴾

140. ಈಗ ನಿಮಗೆ ಆಘಾತವಾಗಿದ್ದರೆ ಇದಕ್ಕಿಂತ ಮುಂಚೆ ಇಂತಹದೇ ಆಘಾತ ನಿಮ್ಮ ವಿರೋಧಿ ತಂಡಕ್ಕೂ ಉಂಟಾಗಿದೆ.[29] ಜನರ ಮಧ್ಯೆ ನಾವು ತಿರುಗಿಸುತ್ತಲೇ ಇರುವ ಕಾಲಚಕ್ರವಿದು. ನಿಮ್ಮಲ್ಲಿ ನಿಜವಾದ ವಿಶ್ವಾಸಿಗಳು ಯಾರೆಂಬುದನ್ನು ನೋಡುವ ಸಲುವಾಗಿಯೇ ಅಲ್ಲಾಹನು ಈ ಸಂದರ್ಭವನ್ನು ನಿಮ್ಮ ಮುಂದೆ ತಂದಿದ್ದನು ಮತ್ತು ನಿಜಕ್ಕೂ ಅವನು (ಸತ್ಯದ) ಸಾಕ್ಷ್ಯ ವಹಿಸುವವರನ್ನು ಆಯ್ಕೆ ಮಾಡಿಕೊಳ್ಳಲು ಬಯಸುತ್ತಿದ್ದನು.[30]- ಏಕೆಂದರೆ ಅಲ್ಲಾಹನು ಅಕ್ರಮಿಗಳನ್ನು ಮೆಚ್ಚುವುದಿಲ್ಲ.

إِنْ يَمْسَسْكُمْ قَرْحٌ فَقَدْ مَسَّ الْقَوْمَ قَرْحٌ مِثْلُهُ ۚ وَتِلْكَ الْأَيَّامُ نُدَاوِلُهَا بَيْنَ النَّاسِ ۚ وَلِيَعْلَمَ اللَّهُ الَّذِينَ آمَنُوا وَيَتَّخِذَ مِنْكُمْ شُهَدَاءَ ۗ وَاللَّهُ لَا يُحِبُّ الظّٰلِمِينَ ﴿١٤٠﴾

141. ಅವನು ಈ ಸತ್ವ ಪರೀಕ್ಷೆಯ ಮೂಲಕ ಸತ್ಯವಿಶ್ವಾಸಿಗಳನ್ನು ಬೇರ್ಪಡಿಸಿ ಸತ್ಯನಿಷೇಧಿಗಳನ್ನು ನಿಸ್ತೇಜಗೊಳಿಸಲಿಚ್ಛಿಸುತ್ತಿದ್ದನು.

وَلِيُمَحِّصَ اللَّهُ الَّذِينَ آمَنُوا وَيَمْحَقَ الْكٰفِرِينَ ﴿١٤١﴾

142. ನೀವು ನಿರಾಯಾಸವಾಗಿ ಸ್ವರ್ಗವನ್ನು ಪ್ರವೇಶಿಸುವಿರೆಂದು ಭಾವಿಸಿರುವಿರಾ? ವಸ್ತುತಃ ನಿಮ್ಮಲ್ಲಿ ಯಾರೆಲ್ಲ ಅಲ್ಲಾಹನ

أَمْ حَسِبْتُمْ أَنْ تَدْخُلُوا الْجَنَّةَ وَلَمَّا

29. ಇದು ಬದ್ರ್ ಯುದ್ಧದ ಕಡೆಗಿರುವ ಸೂಚನೆಯಾಗಿದೆ. ಆಗ ಏಟು ತಿಂದು ಸತ್ಯನಿಷೇಧಿಗಳು ಧೈರ್ಯಗುಂದದಿರುವಾಗ ಉಹುದ್ ಯುದ್ಧದಲ್ಲಿ ಏಟು ತಿಂದು ನೀವೇಕೆ ಎದೆಗುಂದಿದ್ದೀರಿ? ಎನ್ನುವುದು ಇದರ ತಾತ್ಪರ್ಯವಾಗಿದೆ.

30. ಮೂಲದಲ್ಲಿ ಪ್ರಯೋಗವಾಗಿರುವ ಪದಗಳ ಅರ್ಥವು 'ನಿಮ್ಮಿಂದ ಕೆಲವು ಹುತಾತ್ಮರನ್ನು ಪಡೆಯಬಯಸಿದ್ದನು' ಎಂದಾಗಿದೆ. ಅಂದರೆ ಅಲ್ಲಾಹನು ಕೆಲವರಿಗೆ ಹುತಾತ್ಮತೆಯ ಸ್ಥಾನ ನೀಡಬಯಸಿದ್ದನು. ಇನ್ನೊಂದು ಅರ್ಥ ಸತ್ಯವಿಶ್ವಾಸಿಗಳು ಮತ್ತು ಕಪಟವಿಶ್ವಾಸಿಗಳಿಂದ ಕೂಡಿದ ನಿಮ್ಮ ಸಮೂಹದಿಂದ ಅಲ್ಲಾಹನು 'ಶುಹದಾಅ ಅಲನ್ನಾಸ್'ರನ್ನು (ಜನರ ಮೇಲೆ ಸತ್ಯಸಾಕ್ಷ್ಯ ವಹಿಸುವವರು) ಪ್ರತ್ಯೇಕವಾಗಿ ಆರಿಸಬಯಸಿದ್ದನು' ಎಂದಾಗಿದೆ. ಅರ್ಥಾತ್ ಅಲ್ಲಾಹನು ಮುಸ್ಲಿಮ್ ಸಮುದಾಯಕ್ಕೆ ನೀಡಿರುವ ಉನ್ನತ ಪದವಿಗೆ ಅರ್ಹರಾದಂತಹ ವ್ಯಕ್ತಿಗಳನ್ನು ಆರಿಸಬಯಸಿದ್ದನು.

يَعْلَمِ اللّٰهُ الَّذِيْنَ جٰهَدُوْا مِنْكُمْ وَيَعْلَمَ الصّٰبِرِيْنَ ﴿١٤٢﴾

ಮಾರ್ಗದಲ್ಲಿ ಹೋರಾಟ ನಡೆಸುವವರೂ ಅದಕ್ಕಾಗಿ ಸಹನೆ ಪಡುವವರೂ ಇದ್ದಾರೆಂದು ಅವನು ಇನ್ನೂ ಕಾಣಲೇ ಇಲ್ಲ.

وَلَقَدْ كُنْتُمْ تَمَنَّوْنَ الْمَوْتَ مِنْ قَبْلِ اَنْ تَلْقَوْهُ فَقَدْ رَاَيْتُمُوْهُ وَاَنْتُمْ تَنْظُرُوْنَ ﴿١٤٣﴾

143. ನೀವಂತು ಮರಣವನ್ನು ಅಪೇಕ್ಷಿಸುತ್ತಿದ್ದಿರಿ. ಆದರೆ, ಅದು ಮರಣವು ಪ್ರತ್ಯಕ್ಷವಾಗಿ ಬಾರದಿದ್ದ ಸಮಯವಾಗಿತ್ತು. ಇದೋ ಈಗ ಅದು ನಿಮ್ಮ ಮುಂದೆ ಬಂದಿತ್ತು ಮತ್ತು ನೀವು ಅದನ್ನು ಕಣ್ಣಾರೆ ಕಂಡುಕೊಂಡಿರಿ.

وَمَا مُحَمَّدٌ اِلَّا رَسُوْلٌ قَدْ خَلَتْ مِنْ قَبْلِهِ الرُّسُلُ اَفَاۡئِنْ مَّاتَ اَوْ قُتِلَ انْقَلَبْتُمْ عَلٰٓى اَعْقَابِكُمْ وَمَنْ يَّنْقَلِبْ عَلٰى عَقِبَيْهِ فَلَنْ يَّضُرَّ اللّٰهَ شَيْـًٔا وَسَيَجْزِى اللّٰهُ الشّٰكِرِيْنَ ﴿١٤٤﴾

144. ಮುಹಮ್ಮದ್‌ರು ಓರ್ವ ಸಂದೇಶವಾಹಕರೇ ವಿನಾ ಇನ್ನೇನೂ ಆಗಿರುವುದಿಲ್ಲ. ಅವರಿಗಿಂತ ಮುಂಚೆ ಇತರ ಸಂದೇಶವಾಹಕರೂ ಗತಿಸಿ ಹೋಗಿದ್ದಾರೆ. ಹಾಗಿರುವಾಗ ಅವರು ಮರಣ ಹೊಂದಿದರೆ ಅಥವಾ ವಧಿಸಲ್ಪಟ್ಟರೆ ನೀವು ಮರಳಿ ಹೋಗುವಿರಾ? ನೆನಪಿಡಿರಿ! ಹಿಂದಕ್ಕೆ ಮರಳುವವನು ಅಲ್ಲಾಹನಿಗೇನೂ ನಷ್ಟವುಂಟು ಮಾಡಲಾರ. ಅಲ್ಲಾಹನ ಕೃತಜ್ಞದಾಸರಾಗಿರುವವರಿಗೆ ಅವನು ಅದರ ಪ್ರತಿಫಲ ನೀಡುವನು.

وَمَا كَانَ لِنَفْسٍ اَنْ تَمُوْتَ اِلَّا بِاِذْنِ اللّٰهِ كِتٰبًا مُّؤَجَّلًا وَمَنْ يُّرِدْ ثَوَابَ الدُّنْيَا نُؤْتِهٖ مِنْهَا وَمَنْ يُّرِدْ ثَوَابَ الْاٰخِرَةِ نُؤْتِهٖ مِنْهَا وَسَنَجْزِى الشّٰكِرِيْنَ ﴿١٤٥﴾

145. ಯಾವ ಜೀವಿಯೂ ಅಲ್ಲಾಹನ ಅನುಮತಿ ಹೊಂದದೆ ಸಾಯಲಾರದು. ಮರಣದ ಸಮಯವಂತು ಬರೆದಿಡಲ್ಪಟ್ಟಿದೆ. ಐಹಿಕ ಪ್ರತಿಫಲಾಪೇಕ್ಷೆಯಿಂದ ಕೆಲಸ ಮಾಡುವವನಿಗೆ ನಾವು ಇಹದಲ್ಲಿಯೇ ಕೊಡುವೆವು ಮತ್ತು ಪಾರಲೌಕಿಕ ಪ್ರತಿಫಲಾಪೇಕ್ಷೆಯಿಂದ ಕೆಲಸ ಮಾಡುವವನು ಅದನ್ನು ಪರಲೋಕದಲ್ಲಿ ಪಡೆಯುವನು ಮತ್ತು ಕೃತಜ್ಞರಿಗೆ ನಾವು ಅದರ ಪ್ರತಿಫಲವನ್ನು ಖಂಡಿತವಾಗಿಯೂ ದಯಪಾಲಿಸುವೆವು.

وَكَاَيِّنْ مِّنْ نَّبِيٍّ قُتِلَ مَعَهٗ رِبِّيُّوْنَ كَثِيْرٌ فَمَا وَهَنُوْا لِمَآ اَصَابَهُمْ فِىْ سَبِيْلِ اللّٰهِ وَمَا ضَعُفُوْا وَمَا اسْتَكَانُوْا وَاللّٰهُ يُحِبُّ الصّٰبِرِيْنَ ﴿١٤٦﴾

146. ಇದಕ್ಕಿಂತ ಮುಂಚೆ ಇಂತಹ ಅನೇಕ ಪ್ರವಾದಿಗಳು ಗತಿಸಿ ಹೋಗಿದ್ದಾರೆ. ಅವರೊಂದಿಗೆ ಸೇರಿ ಅನೇಕ ದೇವಭಕ್ತರು ಯುದ್ಧ ಮಾಡಿದ್ದರು. ಅಲ್ಲಾಹನ ಮಾರ್ಗದಲ್ಲಿ ಅವರ ಮೇಲೆ ಬಿದ್ದ ಕಷ್ಟಗಳಿಂದ ಅವರು ಭಗ್ನ ಹೃದಯಿಗಳಾಗಲಿಲ್ಲ, ಅವರು ದೌರ್ಬಲ್ಯ ತೋರಲಿಲ್ಲ, (ಮಿಥ್ಯದ ಮುಂದೆ) ಶರಣಾಗತರಾಗಲಿಲ್ಲ. ಅಲ್ಲಾಹನು ಇಂತಹ ಸಹನಶೀಲರನ್ನೇ ಪ್ರೀತಿಸುತ್ತಾನೆ.

وَمَا كَانَ قَوْلَهُمْ اِلَّآ اَنْ قَالُوْا رَبَّنَا اغْفِرْ لَنَا ذُنُوْبَنَا وَاِسْرَافَنَا فِىْٓ اَمْرِنَا وَثَبِّتْ اَقْدَامَنَا وَانْصُرْنَا عَلَى الْقَوْمِ الْكٰفِرِيْنَ ﴿١٤٧﴾

147. ಅವರ ಪ್ರಾರ್ಥನೆ ಇದೇ ಆಗಿದ್ದಿತು, "ಓ ನಮ್ಮ ಪ್ರಭೂ, ನಮ್ಮ ಅಪರಾಧಗಳನ್ನೂ ಲೋಪದೋಷಗಳನ್ನೂ ಕ್ಷಮಿಸು. ನಮ್ಮ ಕೆಲಸ ಕಾರ್ಯಗಳಲ್ಲಿ ಸಂಭವಿಸಿ ಬಿಟ್ಟ ಅತಿಕ್ರಮಗಳನ್ನು ಕ್ಷಮಿಸು. ನಮ್ಮ ಪಾದಗಳನ್ನು ಸ್ಥಿರಗೊಳಿಸು ಮತ್ತು ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು."

148. ಕೊನೆಗೆ ಅಲ್ಲಾಹನು ಅವರಿಗೆ ಐಹಿಕ ಪ್ರತಿಫಲವನ್ನೂ ಕೊಟ್ಟನು ಮತ್ತು ಅದಕ್ಕಿಂತಲೂ ಶ್ರೇಷ್ಠವಾದ ಪಾರಲೌಕಿಕ ಪ್ರತಿಫಲವನ್ನೂ ದಯಪಾಲಿಸಿದನು. ಅಲ್ಲಾಹನಿಗೆ ಇಂತಹ ಸತ್ಕರ್ಮಿಗಳೇ ಪ್ರಿಯರು.

فَاٰتٰىهُمُ اللّٰهُ ثَوَابَ الدُّنْيَا وَحُسْنَ ثَوَابِ الْاٰخِرَةِ ۗ وَاللّٰهُ يُحِبُّ الْمُحْسِنِيْنَ ﴿١٤٨﴾

149. ಓ ಸತ್ಯವಿಶ್ವಾಸಿಗಳೇ, ನೀವು ಸತ್ಯನಿಷೇಧಿಗಳನ್ನು ಅನುಸರಿಸಿದರೆ ಅವರು ನಿಮ್ಮನ್ನು ಪೂರ್ವಸ್ಥಿತಿಗೆ ಮರಳಿಸುವರು. ಆಗ ನೀವು ಹತಾಶರಾಗಿ ಮರಳುವಿರಿ.

يٰۤاَيُّهَا الَّذِيْنَ اٰمَنُوْۤا اِنْ تُطِيْعُوا الَّذِيْنَ كَفَرُوْا يَرُدُّوْكُمْ عَلٰۤى اَعْقَابِكُمْ فَتَنْقَلِبُوْا خٰسِرِيْنَ ﴿١٤٩﴾

150. (ಅವರ ಮಾತುಗಳು ಸರಿಯಲ್ಲ) ಅಲ್ಲಾಹನು ನಿಮ್ಮ ರಕ್ಷಕನೂ ಸಹಾಯಕನೂ ಆಗಿರುತ್ತಾನೆಂಬುದೇ ಪರಮಾರ್ಥವಾಗಿದೆ ಮತ್ತು ಅವನು ಸಹಾಯಕರಲ್ಲಿ ಅತ್ಯುತ್ತಮನು.

بَلِ اللّٰهُ مَوْلٰىكُمْ ۚ وَهُوَ خَيْرُ النّٰصِرِيْنَ ﴿١٥٠﴾

151. ನಾವು ಸತ್ಯನಿಷೇಧಿಗಳ ಹೃದಯಗಳಲ್ಲಿ ಶೀಘ್ರದಲ್ಲೇ ಭೀತಿ ಹುಟ್ಟಿಸಲಿರುವೆವು. ಏಕೆಂದರೆ ತನ್ನ ಭಾಗೀದಾರರೆಂಬ ಬಗ್ಗೆ ಅಲ್ಲಾಹನೇನೂ ಸಾಕ್ಷ್ಯಾಧಾರ ನೀಡಿರದಂತಹವರನ್ನು ಅವರು ಆತನ ದೇವತ್ವದಲ್ಲಿ ಭಾಗೀದಾರರಾಗಿ ಮಾಡಿದ್ದಾರೆ. ಅವರ ಅಂತಿಮ ನಿವಾಸವು ನರಕಾಗ್ನಿಯಾಗಿದೆ. ಅಕ್ರಮಿಗಳಿಗೆ ಲಭಿಸಲಿರುವ ವಾಸಸ್ಥಾನವು ಅತ್ಯಂತ ನಿಕೃಷ್ಟವಾದುದು.

سَنُلْقِيْ فِيْ قُلُوْبِ الَّذِيْنَ كَفَرُوا الرُّعْبَ بِمَاۤ اَشْرَكُوْا بِاللّٰهِ مَا لَمْ يُنَزِّلْ بِهٖ سُلْطٰنًا ۚ وَمَاْوٰىهُمُ النَّارُ ۗ وَبِئْسَ مَثْوَى الظّٰلِمِيْنَ ﴿١٥١﴾

152. ಅಲ್ಲಾಹನು ನಿಮ್ಮೊಡನೆ ಮಾಡಿದ್ದ (ಬೆಂಬಲ ಮತ್ತು ಸಹಾಯದ) ವಾಗ್ದಾನವನ್ನಂತು ನೆರವೇರಿಸಿದನು. ಆರಂಭದಲ್ಲಿ ಅವನ ಅಪ್ಪಣೆಯಿಂದ ನೀವೇ ಅವರನ್ನು ವಧಿಸುತ್ತಿದ್ದಿರಿ. ಆದರೆ, ನೀವು ದೌರ್ಬಲ್ಯ ತೋರಿದಾಗ ಮತ್ತು ನಿಮ್ಮ ಕಾರ್ಯದಲ್ಲಿ ಪರಸ್ಪರ ಮತಭೇದ ತಾಳಿದಾಗ ಮತ್ತು ನೀವು ಮೋಹಿತರಾಗಿದ್ದ ಆ ವಸ್ತುವನ್ನು (ಅರ್ಥಾತ್ ಸಮರಾರ್ಜಿತ ಸೊತ್ತನ್ನು) ಅಲ್ಲಾಹನು ನಿಮಗೆ ಹಠಾತ್ತನೆ ತೋರಿಸಿದಾಗ ನೀವು ನಿಮ್ಮ ನಾಯಕನ ಅಪ್ಪಣೆಯನ್ನು ಉಲ್ಲಂಘಿಸಿ ನಡೆದುಬಿಟ್ಟಿರಿ. - ಏಕೆಂದರೆ ನಿಮ್ಮಲ್ಲಿ ಕೆಲವರು ಇಹಲೋಕಾಕಾಂಕ್ಷಿಗಳಿದ್ದರು ಮತ್ತೆ ಕೆಲವರು ಪರಲೋಕಾಕಾಂಕ್ಷೆಯನ್ನಿರಿಸಿಕೊಂಡಿದ್ದರು. ಆಗ ಅಲ್ಲಾಹನು ಪರೀಕ್ಷಾರ್ಥವಾಗಿ ಸತ್ಯನಿಷೇಧಿಗಳೆದುರು ನಿಮ್ಮನ್ನು ಹಿಮ್ಮೆಟ್ಟಿಸಿ ಬಿಟ್ಟನು. ಆದರೂ ನಿಜವಾಗಿ ಅಲ್ಲಾಹನು ನಿಮ್ಮನ್ನು ಕ್ಷಮಿಸಿದನು. ಏಕೆಂದರೆ ಅಲ್ಲಾಹನು ಸತ್ಯವಿಶ್ವಾಸಿಗಳ ಮೇಲೆ ಬಹಳ ಕೃಪಾಕಟಾಕ್ಷವನ್ನಿರಿಸುವವನಾಗಿರುತ್ತಾನೆ.

وَلَقَدْ صَدَقَكُمُ اللّٰهُ وَعْدَهٗۤ اِذْ تَحُسُّوْنَهُمْ بِاِذْنِهٖ ۚ حَتّٰۤى اِذَا فَشِلْتُمْ وَتَنَازَعْتُمْ فِى الْاَمْرِ وَعَصَيْتُمْ مِّنْۢ بَعْدِ مَاۤ اَرٰىكُمْ مَّا تُحِبُّوْنَ ۗ مِنْكُمْ مَّنْ يُّرِيْدُ الدُّنْيَا وَمِنْكُمْ مَّنْ يُّرِيْدُ الْاٰخِرَةَ ۚ ثُمَّ صَرَفَكُمْ عَنْهُمْ لِيَبْتَلِيَكُمْ ۚ وَلَقَدْ عَفَا عَنْكُمْ ۗ وَاللّٰهُ ذُوْ فَضْلٍ عَلَى الْمُؤْمِنِيْنَ ﴿١٥٢﴾

إِذْ تُصْعِدُونَ وَلَا تَلْوُنَ عَلَىٰ أَحَدٍ وَالرَّسُولُ
يَدْعُوكُمْ فِي أُخْرَىٰكُمْ فَأَثَابَكُمْ غَمًّا بِغَمٍّ
لِّكَيْلَا تَحْزَنُوا عَلَىٰ مَا فَاتَكُمْ وَلَا مَا أَصَابَكُمْ
وَاللَّهُ خَبِيرٌ بِمَا تَعْمَلُونَ ﴿١٥٣﴾

153. ಸ್ಮರಿಸಿರಿ- ನೀವು ಓಟಕಿತ್ತಿದ್ದಿರಿ. ನಿಮಗೆ ಯಾರ ಕಡೆಗೂ ತಿರುಗಿ ನೋಡುವ ಬೋಧವಿರಲಿಲ್ಲ ಮತ್ತು ಸಂದೇಶವಾಹಕರು ನಿಮ್ಮ ಹಿಂಭಾಗದಿಂದ ನಿಮ್ಮನ್ನು ಕೂಗಿ ಕರೆಯುತ್ತಿದ್ದರು.[31] ಮುಂದೆ ನೀವೇನಾದರೂ ಕಳೆದುಕೊಂಡಾಗ ಅಥವಾ ನಿಮ್ಮ ಮೇಲೇನಾದರೂ ವಿಪತ್ತು ಎರಗಿದಾಗ ನೀವು ವ್ಯಸನಪಡಬಾರದೆಂಬ ಪಾಠ ಕಲಿಸಲಿಕ್ಕಾಗಿ ಅಲ್ಲಾಹನು ನಿಮ್ಮ ಈ ವರ್ತನೆಯ ಪ್ರತಿಫಲ ರೂಪದಲ್ಲಿ ಆಗ ನಿಮಗೆ ದುಃಖದ ಮೇಲೆ ದುಃಖ ಕೊಟ್ಟನು. ಅಲ್ಲಾಹನು ನಿಮ್ಮ ಎಲ್ಲ ಕರ್ಮಗಳನ್ನೂ ಅರಿತಿರುವವನಾಗಿದ್ದಾನೆ.

ثُمَّ أَنزَلَ عَلَيْكُم مِّن بَعْدِ الْغَمِّ أَمَنَةً
نُّعَاسًا يَغْشَىٰ طَائِفَةً مِّنكُمْ وَطَائِفَةٌ قَدْ
أَهَمَّتْهُمْ أَنفُسُهُمْ يَظُنُّونَ بِاللَّهِ غَيْرَ
الْحَقِّ ظَنَّ الْجَاهِلِيَّةِ يَقُولُونَ هَل لَّنَا
مِنَ الْأَمْرِ مِن شَيْءٍ قُلْ إِنَّ الْأَمْرَ كُلَّهُ
لِلَّهِ يُخْفُونَ فِي أَنفُسِهِم مَّا لَا يُبْدُونَ
لَكَ يَقُولُونَ لَوْ كَانَ لَنَا مِنَ الْأَمْرِ شَيْءٌ
مَّا قُتِلْنَا هَاهُنَا قُل لَّوْ كُنتُمْ فِي بُيُوتِكُمْ
لَبَرَزَ الَّذِينَ كُتِبَ عَلَيْهِمُ الْقَتْلُ إِلَىٰ
مَضَاجِعِهِمْ وَلِيَبْتَلِيَ اللَّهُ مَا فِي صُدُورِكُمْ
وَلِيُمَحِّصَ مَا فِي قُلُوبِكُمْ وَاللَّهُ عَلِيمٌ
بِذَاتِ الصُّدُورِ ﴿١٥٤﴾

154. ಈ ದುಃಖದ ಬಳಿಕ ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಅದೆಂತಹ ಮನಶ್ಶಾಂತಿ ನೀಡಿದನೆಂದರೆ ಅವರು ತೂಕಡಿಸತೊಡಗಿದರು.[32] ಆದರೆ ತಮ್ಮ ಸ್ವಾರ್ಥಕ್ಕೇ ಆದ್ಯತೆ ಕೊಟ್ಟಿದ್ದ ಇನ್ನೊಂದು ಪಂಗಡವು ಅಲ್ಲಾಹನ ಬಗ್ಗೆ ಸತ್ಯಕ್ಕೆ ವಿರುದ್ಧವಾದ ತರತರದ ಅಜ್ಞಾನಜನ್ಯ ಸಂದೇಹಗಳನ್ನು ಮಾಡತೊಡಗಿತು. ಈ ಕಾರ್ಯ ವೆಸಗುವುದರಲ್ಲಿ ನಮ್ಮ ಪಾಲೇನಾದರೂ ಇದೆಯೇ? ಎಂದು ಈಗ ಅವರು ಕೇಳುತ್ತಾರೆ. ಅವರೊಡನೆ, "(ಯಾರದೂ ಯಾವ ಪಾಲೂ ಇಲ್ಲ) ಈ ಕಾರ್ಯ ಸಂಪೂರ್ಣವಾಗಿ ಅಲ್ಲಾಹನ ಅಧೀನವಿದೆ" ಎಂದು ಹೇಳಿರಿ. ವಾಸ್ತವದಲ್ಲಿ ಇವರು ತಮ್ಮ ಮನಸ್ಸಿನೊಳಗೆ ಬಚ್ಚಿಟ್ಟ ವಿಷಯಗಳನ್ನು ನಿಮ್ಮ ಮುಂದೆ ಪ್ರಕಟಿಸುವುದಿಲ್ಲ. "(ನಾಯಕತ್ವದ) ಅಧಿಕಾರಗಳಲ್ಲಿ ನಮ್ಮ ಪಾಲೂ ಇರುತ್ತಿದ್ದರೆ ಇಲ್ಲಿ ನಾವು ಕೊಲ್ಲಲ್ಪಡುತ್ತಿರಲಿಲ್ಲ" ಎಂಬುದೇ ಇವರ ನಿಜವಾದ ಮನದಿಂಗಿತವಾಗಿದೆ. ಅವರೊಡನೆ ಹೇಳಿಬಿಡಿರಿ - "ನೀವು ನಿಮ್ಮ ಮನೆಗಳೊಳಗೆ ಇರುತ್ತಿದ್ದರೂ ಯಾರ ಮರಣ ಲಿಖಿತವಾಗಿತ್ತೋ ಅವರು ಸ್ವತಃ ತಮ್ಮ ವಧಾಸ್ಥಾನಗಳ ಕಡೆಗೆ ಹೊರಟು ಬರುತ್ತಿದ್ದರು. ಇದೀಗ ಸಂಭವಿಸಿದ

31. ಉಹುದ್ ಯುದ್ಧದ ಸಂದರ್ಭದಲ್ಲಿ ಮುಸ್ಲಿಮರ ಮೇಲೆ ಏಕಾಏಕಿಯಾಗಿ ಎರಡೂ ಕಡೆಯಿಂದ ಆಕ್ರಮಣ ನಡೆದಾಗ ಅವರು ಛಿನ್ನಭಿನ್ನರಾದರು. ಆಗ ಕೆಲವರು ಮದೀನಾದ ಕಡೆಗೆ ಓಡಿದರು. ಕೆಲವರು ಉಹುದ್ ಪರ್ವತದ ಮೇಲೇರಿದರು. ಆದರೆ ಪ್ರವಾದಿವರ್ಯರು(ಸ) ತಾವಿದ್ದಲ್ಲಿಂದ ಒಂದಂಗುಲವೂ ಕದಲಲಿಲ್ಲ. ನಾಲ್ಕೂ ಕಡೆಯಿಂದ ಶತ್ರುಗಳು ಆವರಿಸಿದ್ದರು. ಹತ್ತು-ಹನ್ನೆರಡು ಮಂದಿಯ ಬೆರಳೆಣಿಕೆಯ ಗುಂಪು ಮಾತ್ರ ಹತ್ತಿರವಿದ್ದರೂ ಪ್ರವಾದಿವರ್ಯರು(ಸ) ಆ ಸೂಕ್ಷ್ಮ ಘಟ್ಟದಲ್ಲೂ ಬೆಟ್ಟದಂತೆ ಸ್ಥಿರವಾಗಿ ನಿಂತು ಓಡುವವರನ್ನು ಕೂಗಿ ಕರೆಯುತ್ತಿದ್ದರು. 'ಇಲಯ್ಯ ಇಬಾದಲ್ಲಾಹ್, ಇಲಯ್ಯ ಇಬಾದಲ್ಲಾಹ್' ಅರ್ಥಾತ್ 'ಅಲ್ಲಾಹನ ದಾಸರೇ ನನ್ನೆಡೆಗೆ ಬನ್ನಿ, ಅಲ್ಲಾಹನ ದಾಸರೇ ನನ್ನೆಡೆಗೆ ಬನ್ನಿ' ಎನ್ನುತ್ತಿದ್ದರು.

32. ಇದೊಂದು ವಿಚಿತ್ರ ಅನುಭವವಾಗಿತ್ತು. ಆಗ ಇಸ್ಲಾಮೀ ಸೇನೆಯಲ್ಲಿದ್ದ ಕೆಲವರಿಗೆ ಈ ಅನುಭವವಾಗಿತ್ತು. ಯುದ್ಧದಲ್ಲಿ ಪಾಲ್ಗೊಂಡಿದ್ದ ಹ. ಅಬೂತಲ್ಹರ ಪ್ರಕಾರ ನಮ್ಮ ಮೇಲೆ ಆಗ ಎಷ್ಟು ಮಂಪರು ಕವಿದಿತ್ತೆಂದರೆ ಖಡ್ಗಗಳು ಕೈಯಿಂದ ಕೆಳಗೆ ಜಾರುತ್ತಿದ್ದುವು.

ಘಟನೆಯು ನಿಮ್ಮ ಹೃದಯದೊಳಗೆ ಅಡಗಿದ್ದುದನ್ನು ಅಲ್ಲಾಹನು ಪರೀಕ್ಷಿಸಿಕೊಳ್ಳಲಿಕ್ಕಾಗಿ ಮತ್ತು ನಿಮ್ಮ ಮನಸ್ಸಿನಲ್ಲಿರುವ ಕೇಡನ್ನು ತೊಡೆದು ಹಾಕಲಿಕ್ಕಾಗಿ ಸಂಭವಿಸಿದೆ. ಅಲ್ಲಾಹನು ಹೃದಯ ಗಳೊಳಗಿರುವುದನ್ನು ಚೆನ್ನಾಗಿ ಅರಿತಿರುತ್ತಾನೆ.

155. ಹೋರಾಟದ ದಿನ ನಿಮ್ಮಲ್ಲಿ ಬೆನ್ನು ತೋರಿಸಿದವರ ಈ ದೋಷಕ್ಕೆ ಕಾರಣವೇನೆಂದರೆ,- ಅವರ ಕೆಲವು ದೌರ್ಬಲ್ಯಗಳ ನಿಮಿತ್ತ ಶೈತಾನನು ಅವರ ಪಾದಗಳನ್ನು ಅಸ್ಥಿರ ಗೊಳಿಸಿಬಿಟ್ಟಿದ್ದನು. ಅಲ್ಲಾಹನು ಅವರನ್ನು ಕ್ಷಮಿಸಿದನು. ಅಲ್ಲಾಹ್ ಮಹಾ ಕ್ಷಮಾಶೀಲನೂ ಸಹನಶೀಲನೂ ಆಗಿರುತ್ತಾನೆ.

إِنَّ الَّذِينَ تَوَلَّوْا مِنكُمْ يَوْمَ الْتَقَى الْجَمْعَانِ
إِنَّمَا اسْتَزَلَّهُمُ الشَّيْطَانُ بِبَعْضِ مَا كَسَبُوا
وَلَقَدْ عَفَا اللَّهُ عَنْهُمْ إِنَّ اللَّهَ غَفُورٌ حَلِيمٌ ﴿١٥٥﴾

156. ಓ ಸತ್ಯವಿಶ್ವಾಸಿಗಳೇ, ಸತ್ಯನಿಷೇಧಿಗಳಂತೆ ಮಾತಾಡಬೇಡಿರಿ.- ಅವರ ಬಂಧು ಬಳಗದವರು ಪ್ರಯಾಣ ಹೋದಾಗ ಅಥವಾ ಯುದ್ಧದಲ್ಲಿ ಪಾಲ್ಗೊಂಡಿದ್ದಾಗ (ಅಲ್ಲೇನಾದರೂ ಅಪಘಾತಕ್ಕೀ ಡಾದರೆ) ಅವರು ನಮ್ಮ ಬಳಿಯಲ್ಲಿರುತ್ತಿದ್ದರೆ ಸಾಯುತ್ತಿರಲೂ ಇಲ್ಲ ವಧಿಸಲ್ಪಡುತ್ತಿರಲೂ ಇಲ್ಲವೆನ್ನುತ್ತಾರೆ. ಅಲ್ಲಾಹನು ಇಂತಹ ಮಾತುಗಳನ್ನು ಅವರ ಮನಸ್ಸಿನಲ್ಲಿ ಶೋಕತಪ್ತತೆಗೆ ಕಾರಣವನ್ನಾಗಿ ಮಾಡಿಬಿಡುತ್ತಾನೆ. ವಾಸ್ತವದಲ್ಲಿ ಜೀವದಾನ ಮಾಡುವವನೂ ಮರಣ ಕೊಡುವವನೂ ಅಲ್ಲಾಹನೇ ಮತ್ತು ನಿಮ್ಮ ಎಲ್ಲ ಚಲನವಲನಗಳ ಮೇಲ್ವಿಚಾರಕನೂ ಅವನೇ.

يَا أَيُّهَا الَّذِينَ آمَنُوا لَا تَكُونُوا كَالَّذِينَ
كَفَرُوا وَقَالُوا لِإِخْوَانِهِمْ إِذَا ضَرَبُوا فِي
الْأَرْضِ أَوْ كَانُوا غُزًّى لَّوْ كَانُوا عِندَنَا
مَا مَاتُوا وَمَا قُتِلُوا لِيَجْعَلَ اللَّهُ ذَٰلِكَ
حَسْرَةً فِي قُلُوبِهِمْ وَاللَّهُ يُحْيِي وَيُمِيتُ
وَاللَّهُ بِمَا تَعْمَلُونَ بَصِيرٌ ﴿١٥٦﴾

157. ನೀವು ಅಲ್ಲಾಹನ ಮಾರ್ಗದಲ್ಲಿ ವಧಿಸಲ್ಪಟ್ಟರೆ ಅಥವಾ ಮರಣ ಹೊಂದಿದರೆ ಆಗ ನಿಮ್ಮ ಪಾಲಿಗೆ ಬರುವ ಅಲ್ಲಾಹನ ಕ್ಷಮೆ ಮತ್ತು ಕೃಪೆಯು ಇವರು ಸಂಗ್ರಹಿಸುವ ಸಕಲ ವಸ್ತುಗಳಿಗಿಂತಲೂ ಶ್ರೇಷ್ಠವಾಗಿರುತ್ತದೆ.

وَلَئِن قُتِلْتُمْ فِي سَبِيلِ اللَّهِ أَوْ مُتُّمْ
لَمَغْفِرَةٌ مِّنَ اللَّهِ وَرَحْمَةٌ خَيْرٌ مِّمَّا
يَجْمَعُونَ ﴿١٥٧﴾

158. ನೀವು ಮರಣ ಹೊಂದಿದರೂ ವಧಿಸಲ್ಪಟ್ಟರೂ ನಿಮಗೆಲ್ಲರಿಗೂ ಒಟ್ಟಾಗಿ ಅಲ್ಲಾಹನೆಡೆಗೇ ಹೋಗಿ ಸೇರಬೇಕಾಗಿದೆ.

وَلَئِن مُّتُّمْ أَوْ قُتِلْتُمْ لَإِلَى اللَّهِ تُحْشَرُونَ ﴿١٥٨﴾

159. (ಓ ಪೈಗಂಬರರೇ,) ನೀವು ಇವರ ಪಾಲಿಗೆ ಅತ್ಯಂತ ಸೌಮ್ಯ ಸ್ವಭಾವಿಯಾಗಿರುವುದು ಅಲ್ಲಾಹನ ಮಹಾ ಕೃಪೆಯಾಗಿದೆ. ನೀವು ಕಠಿಣ ಸ್ವಭಾವಿ ಮತ್ತು ಕಲ್ಲೆದೆಯವರಾಗಿರುತ್ತಿದ್ದರೆ ಇವರೆಲ್ಲರೂ ನಿಮ್ಮ ಸುತ್ತಮುತ್ತಲಿನಿಂದ ಚದರಿ ಹೋಗುತ್ತಿದ್ದರು. ಇವರ ಪ್ರಮಾದಗಳನ್ನು ಕ್ಷಮಿಸಿರಿ, ಇವರ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿರಿ ಮತ್ತು ಧರ್ಮದ ಕೆಲಸಗಳಲ್ಲಿ ಇವರೊಡನೆ

فَبِمَا رَحْمَةٍ مِّنَ اللَّهِ لِنتَ لَهُمْ وَلَوْ كُنتَ
فَظًّا غَلِيظَ الْقَلْبِ لَانفَضُّوا مِنْ حَوْلِكَ
فَاعْفُ عَنْهُمْ وَاسْتَغْفِرْ لَهُمْ وَشَاوِرْهُمْ
فِي الْأَمْرِ فَإِذَا عَزَمْتَ فَتَوَكَّلْ عَلَى اللَّهِ

ಸಮಾಲೋಚಿಸಿರಿ. ಆ ಬಳಿಕ, ಯಾವುದಾದರೊಂದು ಅಭಿಪ್ರಾಯ
ದಲ್ಲಿ ನೀವು ದೃಢ ನಿರ್ಧಾರ ತಾಳಿದರೆ ಅಲ್ಲಾಹನ ಮೇಲೆ
ಭರವಸೆಯಿಡಿರಿ. ಅಲ್ಲಾಹನ ಮೇಲೆಯೇ ಭರವಸೆಯಿಟ್ಟು
ಕಾರ್ಯವೆಸಗುವವರನ್ನು ಅವನು ಪ್ರೀತಿಸುತ್ತಾನೆ.

إِنَّ اللَّهَ يُحِبُّ الْمُتَوَكِّلِينَ ﴿١٥٩﴾

160. ಅಲ್ಲಾಹನು ನಿಮ್ಮ ಸಹಾಯಕ್ಕಿದ್ದರೆ ಯಾವ ಶಕ್ತಿಯಿಂದಲೂ
ನಿಮ್ಮನ್ನು ಜಯಿಸಲು ಸಾಧ್ಯವಾಗದು ಮತ್ತು ಅವನು ನಿಮ್ಮನ್ನು
ಕೈಬಿಟ್ಟರೆ, ಆಮೇಲೆ ನಿಮಗೆ ಸಹಾಯ ಮಾಡುವವರು
ಯಾರಿದ್ದಾರೆ? ಆದುದರಿಂದ ಅಪ್ಪಟ ಸತ್ಯವಿಶ್ವಾಸಿಗಳು ಅಲ್ಲಾಹನ
ಮೇಲೆಯೇ ಭರವಸೆಯನ್ನಿರಿಸಬೇಕು.

إِن يَنصُرْكُمُ اللَّهُ فَلَا غَالِبَ لَكُمْ ۖ وَإِن
يَخْذُلْكُمْ فَمَن ذَا الَّذِي يَنصُرُكُم مِّن
بَعْدِهِ ۗ وَعَلَى اللَّهِ فَلْيَتَوَكَّلِ الْمُؤْمِنُونَ ﴿١٦٠﴾

161. ವಂಚನೆಯು ಒಬ್ಬ ಪ್ರವಾದಿಗೆ ಶೋಭಿಸುವಂತಹದಲ್ಲ ಮತ್ತು
ವಂಚಕನು ತನ್ನ ವಂಚನೆಯೊಂದಿಗೆ ಪುನರುತ್ಥಾನ ದಿನದಂದು
ಹಾಜರಾಗುವನು. ಆ ಬಳಿಕ ಪ್ರತಿಯೊಂದು ಜೀವಿಗೂ ಅದರ
ಗಳಿಕೆಯ ಸಂಪೂರ್ಣ ಪ್ರತಿಫಲ ಸಿಗುವುದು ಮತ್ತು ಯಾರ
ಮೇಲೂ ಅನ್ಯಾಯವಾಗದು.

وَمَا كَانَ لِنَبِيٍّ أَن يَغُلَّ ۚ وَمَن يَغْلُلْ
يَأْتِ بِمَا غَلَّ يَوْمَ الْقِيَامَةِ ۚ ثُمَّ تُوَفَّىٰ
كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿١٦١﴾

162. ಸದಾಕಾಲವೂ ಅಲ್ಲಾಹನ ಸಂಪ್ರೀತಿಯಂತೆ ನಡೆಯುವ ವ್ಯಕ್ತಿಯು,
ಅಲ್ಲಾಹನ ಕ್ರೋಧಕ್ಕೆ ಪಾತ್ರನಾದ ಹಾಗೂ ಅತಿ ನಿಕೃಷ್ಟ
ಸ್ಥಾನವಾದ ನರಕವೇ ಅಂತಿಮ ನೆಲೆಯಾಗಿರುವ ವ್ಯಕ್ತಿಯು
ಮಾಡುವಂತಹ ಕಾರ್ಯಗಳನ್ನು ಮಾಡಲು ಹೇಗೆ ಸಾಧ್ಯ?

أَفَمَنِ اتَّبَعَ رِضْوَانَ اللَّهِ كَمَن بَاءَ بِسَخَطٍ
مِّنَ اللَّهِ وَمَأْوَاهُ جَهَنَّمُ ۚ وَبِئْسَ الْمَصِيرُ ﴿١٦٢﴾

163. ಅಲ್ಲಾಹನ ಬಳಿ ಈ ಎರಡೂ ವಿಧದ ಜನರೊಳಗೆ ಅತ್ಯಧಿಕ
ಅಂತರವಿದೆ. ಅಲ್ಲಾಹನು ಎಲ್ಲರ ಕರ್ಮಗಳನ್ನು ವೀಕ್ಷಿಸುವವನಾ
ಗಿರುತ್ತಾನೆ.

هُمْ دَرَجَاتٌ عِندَ اللَّهِ ۗ وَاللَّهُ بَصِيرٌ
بِمَا يَعْمَلُونَ ﴿١٦٣﴾

164. ವಾಸ್ತವದಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳ ನಡುವೆ ಅವರೊಳ
ಗಿಂದಲೇ - ಅವರಿಗೆ ಅವನ (ಅಲ್ಲಾಹನ) ಸೂಕ್ತಗಳನ್ನು ಓದಿ
ಹೇಳುವ, ಅವರ ಜೀವನವನ್ನು ಸಂಸ್ಕರಿಸುವ ಮತ್ತು ಅವರಿಗೆ
ಗ್ರಂಥ ಮತ್ತು ವಿವೇಕದ ಶಿಕ್ಷಣ ನೀಡುವ ಓರ್ವ ಸಂದೇಶ
ವಾಹಕನನ್ನು ನಿಯೋಜಿಸಿ, ಅವರ ಮೇಲೆ ಬಹುದೊಡ್ಡ ಉಪಕಾರ
ಮಾಡಿದ್ದಾನೆ. ವಸ್ತುತಃ ಅವರು ಈ ಮುಂಚೆ ವ್ಯಕ್ತವಾದ
ಮಾರ್ಗಭ್ರಷ್ಟತೆಯಲ್ಲಿ ಬಿದ್ದಿದ್ದರು.

لَقَدْ مَنَّ اللَّهُ عَلَى الْمُؤْمِنِينَ إِذْ بَعَثَ
فِيهِمْ رَسُولًا مِّنْ أَنفُسِهِمْ يَتْلُو عَلَيْهِمْ
آيَاتِهِ وَيُزَكِّيهِمْ وَيُعَلِّمُهُمُ الْكِتَابَ
وَالْحِكْمَةَ وَإِن كَانُوا مِن قَبْلُ
لَفِي ضَلَالٍ مُّبِينٍ ﴿١٦٤﴾

165. ನಿಮಗೆ ವಿಪತ್ತು ಬಂದೆರಗಿದಾಗ ನೀವು, "ಇದೆಲ್ಲಿಂದ ಬಂತು?"

أَوَلَمَّا أَصَابَتْكُم مُّصِيبَةٌ قَدْ أَصَبْتُم

ಎನ್ನತೊಡಗಿದಿರಾ? ವಸ್ತುತಃ (ಬದ್ರ್ ಯುದ್ಧದಲ್ಲಿ) ನಿಮ್ಮ ಕೈಗಳಿಂದ (ವಿರೋಧಿಗಳ ಮೇಲೆ) ಇಮ್ಮಡಿ ವಿಪತ್ತು ಉಂಟಾಗಿತ್ತು. ಪ್ರವಾದಿಯವರೇ ಅವರೊಡನೆ ಹೇಳಿರಿ, ಇದು ನೀವು ಸ್ವತಃ ತಂದುಕೊಂಡ ವಿಪತ್ತು. ಅಲ್ಲಾಹನು ಸಕಲ ಕಾರ್ಯಗಳ ಸಾಮರ್ಥ್ಯವುಳ್ಳವನು.

مِّثْلَيْهَا قُلْتُمْ أَنَّىٰ هَٰذَا ۖ قُلْ هُوَ مِنْ عِندِ أَنفُسِكُمْ ۗ إِنَّ اللَّهَ عَلَىٰ كُلِّ شَيْءٍ قَدِيرٌ ﴿١٦٥﴾

166. ಯುದ್ಧದ ದಿವಸ ನಿಮಗೊದಗಿದ ನಷ್ಟ ಅಲ್ಲಾಹನ ಅಪ್ಪಣೆ ಯಿಂದಾಗಿತ್ತು. ಅದು ನಿಮ್ಮಲ್ಲಿ ಯಾರು ಸತ್ಯವಿಶ್ವಾಸಿ ಮತ್ತು ಯಾರು ಕಪಟವಿಶ್ವಾಸಿಯೆಂದು ಅಲ್ಲಾಹನು ನೋಡಿಕೊಳ್ಳ ಲಿಕ್ಕಾಗಿತ್ತು.

وَمَا أَصَابَكُمْ يَوْمَ الْتَقَى الْجَمْعَانِ فَبِإِذْنِ اللَّهِ وَلِيَعْلَمَ الْمُؤْمِنِينَ ﴿١٦٦﴾

167. "ಬನ್ನಿರಿ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ, ಇಲ್ಲವೆ ಕನಿಷ್ಠಪಕ್ಷ (ನಿಮ್ಮ ಪಟ್ಟಣದ) ರಕ್ಷಣೆ ಮಾಡಿರಿ" ಎಂದು ಕಪಟವಿಶ್ವಾಸಿಗಳೊಡನೆ ಹೇಳಿದಾಗ ಅವರು, "ಇಂದು ಯುದ್ಧ ನಡೆಯಲಿರುವುದೆಂದು ನಮಗೆ ತಿಳಿದಿರುತ್ತಿದ್ದರೆ ನಾವು ಖಂಡಿತ ವಾಗಿಯೂ ನಿಮ್ಮ ಸಂಗಡ ಬರುತ್ತಿದ್ದೆವು" ಎನ್ನತೊಡಗಿದರು. ಹೀಗೆ ಹೇಳುತ್ತಿರುವಾಗ ಅವರು ವಿಶ್ವಾಸಕ್ಕಿಂತ ಅವಿಶ್ವಾಸಕ್ಕೆ ಹೆಚ್ಚು ಸಮೀಪವಾಗಿದ್ದರು. ಅವರು ತಮ್ಮ ಹೃದಯಗಳಲ್ಲಿ ಇಲ್ಲದ ಮಾತನ್ನು ತಮ್ಮ ಬಾಯಿಗಳಿಂದ ಹೇಳುತ್ತಾರೆ. ಅವರು ಹೃದಯಗಳಲ್ಲಿ ಬಚ್ಚಿಡುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿರುತ್ತಾನೆ.

وَلِيَعْلَمَ الَّذِينَ نَافَقُوا ۚ وَقِيلَ لَهُمْ تَعَالَوْا قَاتِلُوا فِي سَبِيلِ اللَّهِ أَوِ ادْفَعُوا ۖ قَالُوا لَوْ نَعْلَمُ قِتَالًا لَّاتَّبَعْنَاكُمْ ۗ هُمْ لِلْكُفْرِ يَوْمَئِذٍ أَقْرَبُ مِنْهُمْ لِلْإِيمَانِ ۚ يَقُولُونَ بِأَفْوَاهِهِم مَّا لَيْسَ فِي قُلُوبِهِمْ ۗ وَاللَّهُ أَعْلَمُ بِمَا يَكْتُمُونَ ﴿١٦٧﴾

168. ಇವರು ಸ್ವತಃ ಕುಳಿತುಕೊಂಡಿದ್ದು, ಯುದ್ಧಕ್ಕೆ ಹೋಗಿ ವಧಿಸಲ್ಪಟ್ಟ ಇವರ ಸಹೋದರರ ಬಗ್ಗೆ, "ಅವರು ನಮ್ಮ ಮಾತು ಕೇಳುತ್ತಿದ್ದರೆ ಕೊಲ್ಲಲ್ಪಡುತ್ತಿರಲಿಲ್ಲ" ಎಂದು ಬಿಟ್ಟರು. ಅವರೊಡನೆ, "ನೀವು ನಿಮ್ಮ ಮಾತಿನಲ್ಲಿ ಸತ್ಯವಂತರಾಗಿದ್ದರೆ ಸ್ವತಃ ನಿಮಗೆ ಮರಣ ಬಂದಾಗ ಅದನ್ನು ಮುಂದೂಡಿ ತೋರಿಸಬೇಕು" ಎಂದು ಹೇಳಿರಿ.

الَّذِينَ قَالُوا لِإِخْوَانِهِمْ وَقَعَدُوا لَوْ أَطَاعُونَا مَا قُتِلُوا ۗ قُلْ فَادْرَءُوا عَنْ أَنفُسِكُمُ الْمَوْتَ إِن كُنتُمْ صَادِقِينَ ﴿١٦٨﴾

169. ಅಲ್ಲಾಹನ ಮಾರ್ಗದಲ್ಲಿ ವಧಿಸಲ್ಪಟ್ಟವರನ್ನು ಮೃತರೆನ್ನಬೇಡಿರಿ. ಅವರು ಯಥಾರ್ಥವಾಗಿ ಜೀವಂತವಿದ್ದಾರೆ. ತಮ್ಮ ಪ್ರಭುವಿನ ಬಳಿ ಅನ್ನಾಹಾರ ಪಡೆಯುತ್ತಿದ್ದಾರೆ.

وَلَا تَحْسَبَنَّ الَّذِينَ قُتِلُوا فِي سَبِيلِ اللَّهِ أَمْوَاتًا ۚ بَلْ أَحْيَاءٌ عِندَ رَبِّهِمْ يُرْزَقُونَ ﴿١٦٩﴾

170. ಅಲ್ಲಾಹನು ತನ್ನ ಅನುಗ್ರಹದಿಂದ ಅವರಿಗೆ ನೀಡಿದುದರಲ್ಲಿ ಆನಂದ ತುಂದಿಲರಾಗಿದ್ದಾರೆ. ತಮ್ಮ ಹಿಂದೆ ಭೂಲೋಕದಲ್ಲಿ

فَرِحِينَ بِمَا آتَاهُمُ اللَّهُ مِن فَضْلِهِ وَيَسْتَبْشِرُونَ بِالَّذِينَ لَمْ يَلْحَقُوا

بِهِمْ مِّنْ خَلْفِهِمْ ۙ أَلَّا خَوْفٌ عَلَيْهِمْ وَلَا هُمْ يَحْزَنُونَ ﴿١٧٠﴾

ಉಳಿದಿರುವ ಮತ್ತು ಇನ್ನೂ ಅಲ್ಲಿಗೆ ತಲಪಿರದ ಸತ್ಯವಿಶ್ವಾಸಿಗಳಿಗೂ ಯಾವುದೇ ಭಯ ಮತ್ತು ವ್ಯಥೆಗಳ ಸಂಭವವಿಲ್ಲವೆಂದು ನಿಶ್ಚಿಂತರಾಗಿದ್ದಾರೆ.

يَسْتَبْشِرُونَ بِنِعْمَةٍ مِّنَ اللَّهِ وَفَضْلٍ ۙ وَأَنَّ اللَّهَ لَا يُضِيعُ أَجْرَ الْمُؤْمِنِينَ ﴿١٧١﴾

171. ಅವರು ಅಲ್ಲಾಹನ ಬಹುಮಾನ ಮತ್ತು ಅವನ ಅನುಗ್ರಹದಿಂದಾಗಿ ಹರ್ಷಾನಂದಭರಿತರಾಗಿದ್ದಾರೆ. ಅಲ್ಲಾಹನು ಸತ್ಯವಿಶ್ವಾಸಿಗಳ ಪ್ರತಿಫಲವನ್ನು ವ್ಯರ್ಥ ಮಾಡುವುದಿಲ್ಲವೆಂದು ಅವರಿಗೆ ತಿಳಿದಿದೆ.

الَّذِينَ اسْتَجَابُوا لِلَّهِ وَالرَّسُولِ مِن بَعْدِ مَا أَصَابَهُمُ الْقَرْحُ ۚ لِلَّذِينَ أَحْسَنُوا مِنْهُمْ وَاتَّقَوْا أَجْرٌ عَظِيمٌ ﴿١٧٢﴾

172. ಗಾಯಗೊಂಡ ಬಳಿಕವೂ ಅಲ್ಲಾಹ್ ಮತ್ತು ಸಂದೇಶವಾಹಕರ ಕರೆಗೆ ಓಗೊಟ್ಟವರ ಪೈಕಿ[33] ಸಜ್ಜನರೂ ನಿಷ್ಠರೂ ಆಗಿರುವ ವ್ಯಕ್ತಿಗಳಿಗೆ ಅತ್ಯುತ್ಕೃಷ್ಟ ಪ್ರತಿಫಲವಿದೆ (ಇಂತಹ ಸತ್ಯವಿಶ್ವಾಸಿಗಳ ಪ್ರತಿಫಲವನ್ನು ವ್ಯರ್ಥಗೊಳಿಸಲಾಗುವುದಿಲ್ಲ.)

الَّذِينَ قَالَ لَهُمُ النَّاسُ إِنَّ النَّاسَ قَدْ جَمَعُوا لَكُمْ فَاخْشَوْهُمْ فَزَادَهُمْ إِيمَانًا وَقَالُوا حَسْبُنَا اللَّهُ وَنِعْمَ الْوَكِيلُ ﴿١٧٣﴾

173. "ನಿಮ್ಮ ವಿರುದ್ಧ ದೊಡ್ಡ ಸೈನ್ಯವೊಂದು ಜಮೆಯಾಗಿದೆ, ಅದನ್ನು ಭಯಪಡಿರಿ" ಎಂದು ಜನರು ಅವರೊಡನೆ ಹೇಳಿದರು. ಇದನ್ನು ಕೇಳಿದಾಗ ಅವರ ಸತ್ಯವಿಶ್ವಾಸ ಇನ್ನಷ್ಟು ವರ್ಧಿಸಿತು. "ನಮಗೆ ಅಲ್ಲಾಹ್ ಸಾಕು ಮತ್ತು ಅವನೇ ಅತ್ಯುತ್ತಮ ಕಾರ್ಯಸಾಧಕನು" ಎಂದು ಅವರು ಉತ್ತರವಿತ್ತರು.

فَانقَلَبُوا بِنِعْمَةٍ مِّنَ اللَّهِ وَفَضْلٍ لَّمْ يَمْسَسْهُمْ سُوءٌ وَاتَّبَعُوا رِضْوَانَ اللَّهِ ۗ وَاللَّهُ ذُو فَضْلٍ عَظِيمٍ ﴿١٧٤﴾

174. ಕೊನೆಗೆ ಅವರು ಅಲ್ಲಾಹನ ಕೊಡುಗೆ ಮತ್ತು ಅನುಗ್ರಹದೊಂದಿಗೆ ಹಿಂದಿರುಗಿದರು. ಅವರಿಗೆ ಏನೊಂದೂ ಆಘಾತವುಂಟಾಗಲಿಲ್ಲ ಮತ್ತು ಅಲ್ಲಾಹನ ಪ್ರಸನ್ನತೆಯ ಹಾದಿಯಲ್ಲಿ ಸಾಗಿದ ಹಿರಿತನವೂ ಅವರಿಗೆ ಪ್ರಾಪ್ತವಾಯಿತು. ಅಲ್ಲಾಹ್ ಮಹಾ ಅನುಗ್ರಹದಾನಿಯಾಗಿರುತ್ತಾನೆ.[34]

33. ಉಹುದ್ ಯುದ್ಧದಿಂದ ಮರಳಿದ ಬಹುದೇವ ವಿಶ್ವಾಸಿಗಳಿಗೆ ಬಹಳ ದೂರ ತಲಪಿದ ನಂತರ ಜ್ಞಾನೋದಯವಾಯಿತು. ಅವರು ಪರಸ್ಪರ ಹೀಗೆಂದರು, "ನಾವೆಂತಹ ಕೆಲಸ ಮಾಡಿ ಬಿಟ್ಟೆವು, ಮುಹಮ್ಮದ್‌ರ(ಸ) ಶಕ್ತಿ ಮುರಿಯಲು ಸಿಕ್ಕ ಅಮೂಲ್ಯ ಅವಕಾಶವನ್ನು ಬಿಟ್ಟು ಬಂದೆವು." ನಂತರ ಅವರು ಒಂದೆಡೆ ಕಲೆತು ತಕ್ಷಣವೇ ಮದೀನಾದ ಮೇಲೆ ಎರಡನೇ ಆಕ್ರಮಣ ನಡೆಸುವ ಬಗ್ಗೆ ಸಮಾಲೋಚಿಸಿದರು. ಆದರೆ ನಂತರ ಧೈರ್ಯ ಸಾಲದೆ ಮಕ್ಕಾಕ್ಕೆ ಮರಳಿದರು. ಅತ್ತ ಪ್ರವಾದಿವರ್ಯರಿಗೂ(ಸ) ಇವರು ಮತ್ತೆಲ್ಲಿ ಮರಳಿ ಬಂದಾರೋ ಎಂಬ ಸಂಶಯವಿತ್ತು. ಆದ್ದರಿಂದ ಉಹುದ್ ಯುದ್ಧದ ಮರುದಿನವೇ ಅವರು ಮುಸ್ಲಿಮರನ್ನು ಸೇರಿಸಿ ಹೇಳಿದರು, 'ನಾವೂ ಸತ್ಯನಿಷೇಧಿಗಳನ್ನು ಹಿಂಬಾಲಿಸಬೇಕಾಗಿದೆ.' ಅದು ಅತ್ಯಂತ ಸಂಕೀರ್ಣ ಘಟ್ಟವಾಗಿತ್ತು, ಆದರೆ ನೈಜ ಸತ್ಯವಿಶ್ವಾಸಿಗಳು ಆಗಲೂ ಪ್ರಾಣಾರ್ಪಣೆಗೆ ಸಿದ್ಧರಾದರು. ಅವರು ಪ್ರವಾದಿವರ್ಯರ(ಸ) ಜತೆಗೆ 'ಹಮ್ರಾಯಿಲ್ ಅಸದ್'ನ ತನಕ ಹೋದರು. ಅದು ಮದೀನಾದಿಂದ ಎಂಟು ಮೈಲು ದೂರದಲ್ಲಿದೆ. ಈ ಸೂಕ್ತದಲ್ಲಿ ಆ ಸಮರ್ಪಿತ ವ್ಯಕ್ತಿಗಳನ್ನೇ ಸೂಚಿಸಲಾಗಿದೆ.

34. ಉಹುದ್‌ನಿಂದ ಮರಳುವಾಗ ಅಬೂಸುಫ್‌ಯಾನ್ 'ಬದ್ರ್‌ನಲ್ಲಿ ಬರುವ ವರ್ಷ ಪುನಃ ನಮ್ಮೊಳಗೆ ಮುಖಾಮುಖಿ ನಡೆಯಲಿದೆ' ಎಂದು ಮುಸ್ಲಿಮರಿಗೆ ಸವಾಲೊಡ್ಡಿದ್ದನು. ಆದರೆ ಹೇಳಿದ ಸಂದರ್ಭ ಹತ್ತಿರವಾದಾಗ ಅವನು ಧೈರ್ಯಗುಂದಿದನು. ಆದ್ದರಿಂದ ಅವನು ತನ್ನ ಮಾತು ಉಳಿಸಲಿಕ್ಕಾಗಿ ಗೋಪ್ಯವಾಗಿ ಓರ್ವನನ್ನು ಮದೀನಾಕ್ಕೆ ಕಳುಹಿಸಿ ಮುಸ್ಲಿಮರಲ್ಲಿ ಕೆಲವು ವದಂತಿಗಳನ್ನು ಹರಡಿಸಿದನು. ಈ ವರ್ಷ ಕುರೈಶರು ಬಹಳ ಉಗ್ರ ಸಿದ್ಧತೆ ನಡೆಸಿದ್ದಾರೆ. ಸಮಸ್ತ ಅರಬ್ ದೇಶದಲ್ಲಿ ಯಾರಿಗೂ ಎದುರಿಸಲು ಸಾಧ್ಯವಿಲ್ಲದಂತಹ ಸೇನೆಯನ್ನು ಜಮಾಯಿಸುತ್ತಿದ್ದಾರೆ ಎಂಬ ವದಂತಿಗಳು. ಮುಸ್ಲಿಮರು ಈ ವದಂತಿಯಿಂದ ಸ್ವಲ್ಪ ಪ್ರಭಾವಿತರಾದರು. ಆದರೆ ಅಲ್ಲಾಹನ

175. ಸುಮ್ಮನೆ ತನ್ನ ಮಿತ್ರರ ಬಗ್ಗೆ ಹೆದರಿಸುತ್ತಿದ್ದವನು ಶೈತಾನನಲ್ಲದೆ ಬೇರಾರೂ ಅಲ್ಲವೆಂದು ನಿಮಗೀಗ ತಿಳಿಯಿತು. ಆದುದರಿಂದ ಇನ್ನು ಮುಂದೆ ನೀವು ಮಾನವರನ್ನು ಭಯಪಡಬಾರದು. ನೀವು ವಾಸ್ತವದಲ್ಲಿ ಸತ್ಯವಿಶ್ವಾಸಿಗಳಾಗಿದ್ದರೆ ನನ್ನನ್ನೇ ಭಯಪಡಬೇಕು.

إِنَّمَا ذَٰلِكُمُ الشَّيْطَٰنُ يُخَوِّفُ أَوْلِيَآءَهُۥ فَلَا تَخَافُوهُمْ وَخَافُونِ إِن كُنتُم مُّؤْمِنِينَ ﴿١٧٥﴾

176. (ಓ ಪೈಗಂಬರರೇ) ಇಂದು ಕುಫ್ರ್(ಅಧರ್ಮ) ಮಾರ್ಗದಲ್ಲಿ ಶ್ರಮಿಸುತ್ತಿರುವವರ ಚಟುವಟಿಕೆಗಳು ನಿಮ್ಮನ್ನು ಖಿನ್ನಗೊಳಿಸದಿರಲಿ. ಅವರು ಅಲ್ಲಾಹನಿಗೆ ಏನೂ ಹಾನಿಯನ್ನುಂಟುಮಾಡಲಾರರು. ಅವರಿಗೆ ಪರಲೋಕದಲ್ಲಿ ಯಾವ ಪಾಲನ್ನೂ ಇರಿಸಬಾರದೆಂಬುದು ಅಲ್ಲಾಹನ ಇರಾದೆಯಾಗಿದೆ. ಕೊನೆಗೆ ಅವರಿಗೆ ಕಠಿಣ ಶಿಕ್ಷೆ ಸಿಗಲಿದೆ.

وَلَا يَحْزُنكَ الَّذِينَ يُسَٰرِعُونَ فِى الْكُفْرِ ۚ إِنَّهُمْ لَن يَضُرُّوا اللَّهَ شَيْـًٔا ۗ يُرِيدُ اللَّهُ أَلَّا يَجْعَلَ لَهُمْ حَظًّا فِى الْآخِرَةِ ۖ وَلَهُمْ عَذَابٌ عَظِيمٌ ﴿١٧٦﴾

177. ಸತ್ಯವಿಶ್ವಾಸವನ್ನು ಬಿಟ್ಟು ಸತ್ಯನಿಷೇಧದ ಗ್ರಾಹಕರಾದವರು ಖಂಡಿತವಾಗಿಯೂ ಅಲ್ಲಾಹನಿಗೆ ಏನೇನೂ ನಷ್ಟವನ್ನುಂಟು ಮಾಡುತ್ತಿಲ್ಲ. ಅವರಿಗೆ ವೇದನಾಯುಕ್ತ ಯಾತನೆ ಸಿದ್ಧವಿದೆ.

إِنَّ الَّذِينَ اشْتَرَوُا الْكُفْرَ بِالْإِيمَٰنِ لَن يَضُرُّوا اللَّهَ شَيْـًٔا ۖ وَلَهُمْ عَذَابٌ أَلِيمٌ ﴿١٧٧﴾

178. ನಾವು ಸತ್ಯನಿಷೇಧಿಗಳಿಗೆ ಸಡಿಲು ಬಿಡುತ್ತ ಹೋಗುತ್ತಿರುವುದನ್ನು ಅವರು ತಮಗೆ ಹಿತಕರವೆಂದು ತಿಳಿಯದಿರಲಿ. ಅವರು ಪಾಪಗಳ ಮೂಟೆಯನ್ನು ಆದಷ್ಟು ಸಂಗ್ರಹಿಸಿಕೊಳ್ಳಲೆಂದೇ ನಾವು ಅವರಿಗೆ ಸಡಿಲು ಬಿಡುತ್ತಿದ್ದೇವೆ. ಮುಂದೆ ಅವರಿಗಾಗಿ ಅವಮಾನಕರ ಶಿಕ್ಷೆ ಕಾದಿದೆ.

وَلَا يَحْسَبَنَّ الَّذِينَ كَفَرُوٓا أَنَّمَا نُمْلِى لَهُمْ خَيْرٌ لِّأَنفُسِهِمْ ۚ إِنَّمَا نُمْلِى لَهُمْ لِيَزْدَادُوٓا إِثْمًا ۚ وَلَهُمْ عَذَابٌ مُّهِينٌ ﴿١٧٨﴾

179 ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಈಗ ನೀವು ಇರುವ ಸ್ಥಿತಿಯಲ್ಲಿ ಎಷ್ಟು ಮಾತ್ರಕ್ಕೂ ಇರಗೊಡಲಾರನು. ಅವನು ಶುದ್ಧರನ್ನು ಅಶುದ್ಧರಿಂದ ಬೇರ್ಪಡಿಸಿಯೇ ತೀರುವನು. ಆದರೆ ನಿಮಗೆ ಅಗೋಚರವನ್ನು ತಿಳಿಯಪಡಿಸುವುದು ಅಲ್ಲಾಹನ ಪದ್ಧತಿಯಲ್ಲ.[35] (ಪರೋಕ್ಷ ಜ್ಞಾನ ನೀಡುವುದಕ್ಕಾಗಿ) ಅಲ್ಲಾಹನು ತನ್ನ ಸಂದೇಶವಾಹಕರಲ್ಲಿ ಇಷ್ಟ ಬಂದವರನ್ನು ಆಯ್ದುಕೊಳ್ಳುತ್ತಾನೆ. ಆದುದರಿಂದ (ಪರೋಕ್ಷ ವಿಷಯಗಳ ಕುರಿತು) ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ, ನೀವು ಸತ್ಯವಿಶ್ವಾಸ ಮತ್ತು ದೇವನಿಷ್ಠೆಯಲ್ಲಿ ನಡೆದರೆ, ನಿಮಗೆ ಹಿರಿದಾದ ಪ್ರತಿಫಲ ಸಿಗುವುದು.

مَّا كَانَ اللَّهُ لِيَذَرَ الْمُؤْمِنِينَ عَلَىٰ مَآ أَنتُمْ عَلَيْهِ حَتَّىٰ يَمِيزَ الْخَبِيثَ مِنَ الطَّيِّبِ ۗ وَمَا كَانَ اللَّهُ لِيُطْلِعَكُمْ عَلَى الْغَيْبِ وَلَٰكِنَّ اللَّهَ يَجْتَبِى مِن رُّسُلِهِۦ مَن يَشَآءُ ۖ فَـَٔامِنُوا بِاللَّهِ وَرُسُلِهِۦ ۚ وَإِن تُؤْمِنُوا وَتَتَّقُوا فَلَكُمْ أَجْرٌ عَظِيمٌ ﴿١٧٩﴾

---

ಪ್ರವಾದಿ ಯಾರೂ ಯುದ್ಧಕ್ಕೆ ಅಣಿಯಾಗದಿದ್ದರೆ ನಾನೊಬ್ಬನೇ ಹೋಗುವೆ ಎಂದಾಗ ಹದಿನೈದು ನೂರು ನಿಷ್ಠಾವಂತರು ಅವರ ಜತೆಗೂಡಲು ಸಿದ್ಧರಾದರು. ಅವರನ್ನೇ ಕರೆದುಕೊಂಡು ಪ್ರವಾದಿವರ್ಯರು(ಸ) ಬದ್ರ್‌ಗೆ ಹೋದರು. ಅಬೂಸುಫ್‌ಯಾನ್ ಯುದ್ಧಕ್ಕೆ ಬರಲಿಲ್ಲ. ಮುಸ್ಲಿಮರು ಎಂಟು ದಿನಗಳ ಕಾಲ ಬದ್ರ್‌ನಲ್ಲಿ ತಂಗಿ ವ್ಯಾಪಾರ ವಹಿವಾಟು ನಡೆಸಿ ಸಾಕಷ್ಟು ಸಂಪಾದಿಸಿಕೊಂಡರು.

35. ಅರ್ಥಾತ್- ನಿಮ್ಮ ಪೈಕಿ ಯಾರು ಸತ್ಯವಿಶ್ವಾಸಿಗಳು ಮತ್ತು ಯಾರು ಕಪಟವಿಶ್ವಾಸಿಗಳು ಎಂದು ತಿಳಿಸುವುದು.

180. ಅಲ್ಲಾಹನು ತನ್ನ ಅನುಗ್ರಹ ಮಾಡಿದ ಅನಂತರವೂ ಜಿಪುಣತೆ ತೋರಿಸುವವರು- ಈ ಲೋಭವು ತಮ್ಮ ಪಾಲಿಗೆ ಶುಭಕರ ವೆಂದೆಣಿಸದಿರಲಿ. ಇದು ಅವರ ಮಟ್ಟಿಗೆ ಅತ್ಯಂತ ಅಶುಭಕರ ವಾಗಿರುವುದು. ಅವರು ತಮ್ಮ ಜಿಪುಣತೆಯಿಂದ ಸಂಗ್ರಹಿಸಿಡುವ ವಸ್ತುವೇ ಪುನರುತ್ಥಾನ ದಿನದಂದು ಅವರ ಕಂಠ ಕಡಗವಾಗು ವುದು. ಭೂಮಿ-ಆಕಾಶಗಳ ಅಂತಿಮ ಒಡೆತನ ಅಲ್ಲಾಹನಿಗಾಗಿಯೇ ಇದೆ. ನೀವು ಮಾಡುವುದನ್ನೆಲ್ಲ ಅಲ್ಲಾಹ್ ಬಲ್ಲವನಾಗಿರುತ್ತಾನೆ.

ولا يحسبن الذين يبخلون بما آتاهم الله من فضله هو خيرا لهم بل هو شر لهم سيطوقون ما بخلوا به يوم القيامة ولله ميراث السماوات والأرض والله بما تعملون خبير ﴿١٨٠﴾

181. ಅಲ್ಲಾಹ್ ದರಿದ್ರನೆಂದೂ ನಾವು ಧನಿಕರೆಂದೂ ಹೇಳುವವರ ನುಡಿಯನ್ನು ಅಲ್ಲಾಹನು ಆಲಿಸಿದನು.[36] ನಾವು ಅವರ ಈ ಮಾತುಗಳನ್ನೂ ಬರೆದುಕೊಳ್ಳುವೆವು ಮತ್ತು ಇದಕ್ಕಿಂತ ಮುಂಚೆ ಅವರು ಪ್ರವಾದಿಗಳನ್ನು ನಿಷ್ಕಾರಣವಾಗಿ ವಧಿಸುತ್ತಿದ್ದುದೂ ಅವರ ಕರ್ಮಪತ್ರದಲ್ಲಿ ಉಲ್ಲೇಖಿತವಿದೆ. (ತೀರ್ಪಿನ ಸಮಯ ಬಂದಾಗ) ನಾವು ಅವರೊಡನೆ, "ಇದೋ ಈಗ ನರಕಯಾತನೆಯ ರುಚಿಯನ್ನು ಸವಿಯಿರಿ.

لقد سمع الله قول الذين قالوا إن الله فقير ونحن أغنياء سنكتب ما قالوا وقتلهم الأنبياء بغير حق ونقول ذوقوا عذاب الحريق ﴿١٨١﴾

182. ಇದು ನಿಮ್ಮ ಸ್ವಂತ ಕೈಗಳ ಗಳಿಕೆಯಾಗಿದೆ" ಎಂದು ಹೇಳುವೆವು. ಅಲ್ಲಾಹನು ತನ್ನ ದಾಸರ ಬಗ್ಗೆ ಅಕ್ರಮಿಯಲ್ಲ.

ذلك بما قدمت أيديكم وأن الله ليس بظلام للعبيد ﴿١٨٢﴾

183. "ನಮ್ಮ ಮುಂದೆ ಒಂದು ಬಲಿಯನ್ನರ್ಪಿಸಿ, ಅದನ್ನು ಅಗ್ನಿಯು (ಪರೋಕ್ಷದಿಂದ ಬಂದು) ತಿನ್ನುವುದನ್ನು ತೋರಿಸಿ ಕೊಡದೆ ನಾವು ಯಾವನೇ ಸಂದೇಶವಾಹಕನ ಮೇಲೂ ವಿಶ್ವಾಸವಿಡಬಾರ ದೆಂದು ಅಲ್ಲಾಹ್ ನಮಗೆ ನಿರ್ದೇಶಿಸುತ್ತಾನೆ" ಎಂದು ಹೇಳು ತ್ತಿರುವವರೊಡನೆ ಹೇಳಿರಿ, "ನಿಮ್ಮ ಬಳಿಗೆ ನನಗಿಂತ ಮೊದಲು ಅನೇಕ ಸಂದೇಶವಾಹಕರು ಹಲವು ಪ್ರತ್ಯಕ್ಷ ಪ್ರಮಾಣಗಳನ್ನು ತಂದಿದ್ದರು ಮತ್ತು ನೀವೀಗ ಪ್ರಸ್ತಾಪಿಸುತ್ತಿರುವ ಪ್ರತ್ಯಕ್ಷ ಪ್ರಮಾಣವನ್ನೂ ತಂದಿದ್ದರು. (ವಿಶ್ವಾಸವಿಡಲಿಕ್ಕಾಗಿ ಈ ಶರತ್ತನ್ನು ಮುಂದಿರಿಸುವುದರಲ್ಲಿ) ನೀವು ಸತ್ಯವಾದಿಗಳಾಗಿದ್ದರೆ ಆ ಸಂದೇಶವಾಹಕರನ್ನೇಕೆ ವಧಿಸಿದಿರಿ?

الذين قالوا إن الله عهد إلينا ألا نؤمن لرسول حتى يأتينا بقربان تأكله النار قل قد جاءكم رسل من قبلي بالبينات وبالذي قلتم فلم قتلتموهم إن كنتم صادقين ﴿١٨٣﴾

36. ಇದು ಯಹೂದಿಗಳು ಹೇಳುವ ಮಾತು, "ಅಲ್ಲಾಹನಿಗೆ ಅತ್ಯುತ್ತಮ ಸಾಲ ನೀಡುವವರು ಯಾರಿದ್ದಾರೆ?" ಎಂಬ ಪವಿತ್ರ ಕುರ್‌ಆನಿನ ಸೂಕ್ತ ಅವತೀರ್ಣಗೊಂಡಾಗ ಯಹೂದಿಗಳು ಗೇಲಿ ಮಾಡಲಿಕ್ಕಾಗಿ, "ಹೌದು ಅಲ್ಲಾಹನೀಗ ದಿವಾಳಿಯಾಗಿದ್ದಾನೆ. ಆದ್ದರಿಂದ ಅವನೀಗ ತನ್ನ ದಾಸರಿಂದ ಸಾಲ ಕೇಳುತ್ತಿದ್ದಾನೆ" ಎನ್ನುತ್ತಿದ್ದರು.

184. ಈಗ ಓ ಪೈಗಂಬರರೇ, ಇವರು ನಿಮ್ಮನ್ನು ಸುಳ್ಳಾಗಿಸುತ್ತಿರುವರಾದರೆ, ನಿಮಗಿಂತ ಮೊದಲು ಸುಸ್ಪಷ್ಟ ಪ್ರಮಾಣಗಳನ್ನೂ ಕಿರುಗ್ರಂಥಗಳನ್ನೂ ಪ್ರಕಾಶ ನೀಡುವ ಗ್ರಂಥಗಳನ್ನೂ ತಂದಿದ್ದ ಹಲವಾರು ಸಂದೇಶವಾಹಕರು ಸುಳ್ಳಾಗಿಸಲ್ಪಟ್ಟಿದ್ದಾರೆ.

فَإِنْ كَذَّبُوكَ فَقَدْ كُذِّبَ رُسُلٌ مِّن قَبْلِكَ جَآءُو بِالْبَيِّنَٰتِ وَالزُّبُرِ وَالْكِتَٰبِ الْمُنِيرِ ﴿١٨٤﴾

185. ಕಟ್ಟಕಡೆಗೆ ಪ್ರತಿಯೊಬ್ಬನಿಗೂ ಮರಣ ಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನ ದಿನದಂದು ಪಡೆಯುವವರಿದ್ದೀರಿ. ಅಲ್ಲಿ ನರಕಾಗ್ನಿಯಿಂದ ರಕ್ಷೆ ಹೊಂದುವವನೂ ಸ್ವರ್ಗದಲ್ಲಿ ದಾಖಲು ಮಾಡಲ್ಪಡುವವನೂ ನಿಜವಾದ ಕೃತಾರ್ಥನು. ಈ ಲೋಕದ ಜೀವನವಂತೂ ಕೇವಲ ಭ್ರಾಮಕ ಸಂಪತ್ತಾಗಿದೆ.

كُلُّ نَفْسٍ ذَآئِقَةُ الْمَوْتِ ۗ وَإِنَّمَا تُوَفَّوْنَ أُجُورَكُمْ يَوْمَ الْقِيَٰمَةِ ۖ فَمَن زُحْزِحَ عَنِ النَّارِ وَأُدْخِلَ الْجَنَّةَ فَقَدْ فَازَ ۗ وَمَا الْحَيَوٰةُ الدُّنْيَآ إِلَّا مَتَٰعُ الْغُرُورِ ﴿١٨٥﴾

186. ಮುಸ್ಲಿಮರೇ, ನಿಮಗೆ ಸಂಪತ್ತು ಮತ್ತು ಪ್ರಾಣ ಇವೆರಡರ ಪರೀಕ್ಷೆಗಳೂ ಮುಂದೆ ಬಂದೇ ತೀರುವುವು ಮತ್ತು ನೀವು ಗ್ರಂಥದವರಿಂದಲೂ ಬಹುದೇವ ವಿಶ್ವಾಸಿಗಳಿಂದಲೂ ಹಲವು ನೋಯುವ ಮಾತುಗಳನ್ನು ಕೇಳುವಿರಿ. ಈ ಸಂದರ್ಭಗಳಲ್ಲೆಲ್ಲ ನೀವು ಸಹನೆ ಮತ್ತು ಧರ್ಮನಿಷ್ಠೆಯ ಮಾರ್ಗದಲ್ಲಿ ಸ್ಥಿರವಾಗಿ ನಿಂತರೆ ಇದೊಂದು ಮಹಾ ಸಾಹಸಕಾರ್ಯವಾಗುವುದು.

لَتُبْلَوُنَّ فِىٓ أَمْوَٰلِكُمْ وَأَنفُسِكُمْ وَلَتَسْمَعُنَّ مِنَ الَّذِينَ أُوتُوا الْكِتَٰبَ مِن قَبْلِكُمْ وَمِنَ الَّذِينَ أَشْرَكُوٓا أَذًى كَثِيرًا ۚ وَإِن تَصْبِرُوا وَتَتَّقُوا فَإِنَّ ذَٰلِكَ مِنْ عَزْمِ الْأُمُورِ ﴿١٨٦﴾

187. ಅಲ್ಲಾಹನು ಗ್ರಂಥದವರಿಂದ, "ನೀವು ಗ್ರಂಥದ ಬೋಧನೆಯನ್ನು ಜನರಿಗೆ ಪ್ರಸಾರಮಾಡಬೇಕಾದೀತು ಮತ್ತು ಅವುಗಳನ್ನು ಅಡಗಿಸಬಾರದು ಎಂಬ ಕರಾರನ್ನು ಪಡೆದ ಸಂದರ್ಭವನ್ನು ಅವರಿಗೆ ನೆನಪಿಸಿಕೊಡಿರಿ. ಆದರೆ ಅವರು ಗ್ರಂಥವನ್ನು ಕಡೆಗಣಿಸಿದರು ಮತ್ತು ಅದನ್ನು ಅಲ್ಪ ಬೆಲೆಗೆ ಮಾರಿದರು. ಇವರೆಂತಹ ಕೆಟ್ಟ ವ್ಯವಹಾರ ಮಾಡುತ್ತಿದ್ದಾರೆ!

وَإِذْ أَخَذَ اللَّهُ مِيثَٰقَ الَّذِينَ أُوتُوا الْكِتَٰبَ لَتُبَيِّنُنَّهُۥ لِلنَّاسِ وَلَا تَكْتُمُونَهُۥ فَنَبَذُوهُ وَرَآءَ ظُهُورِهِمْ وَاشْتَرَوْا بِهِۦ ثَمَنًا قَلِيلًا ۖ فَبِئْسَ مَا يَشْتَرُونَ ﴿١٨٧﴾

188. ತಮ್ಮ ಕೃತ್ಯಗಳಿಂದ ಸಂತುಷ್ಟರಾಗಿದ್ದು ನಿಜವಾಗಿ ತಾವು ಮಾಡದಿರುವ ಕಾರ್ಯಗಳ ಪ್ರಶಂಸೆ ತಮಗೆ ಸಲ್ಲಬೇಕೆಂದು ಬಯಸುವವರು ಯಾತನೆಯಿಂದ ಸುರಕ್ಷಿತರೆಂದು ನೀವೆಣಿಸಬೇಡಿರಿ. ವಾಸ್ತವದಲ್ಲಿ ಅವರಿಗೆ ವೇದನಾಯುಕ್ತ ಶಿಕ್ಷೆ ಸಿದ್ಧವಿದೆ.

لَا تَحْسَبَنَّ الَّذِينَ يَفْرَحُونَ بِمَآ أَتَوا وَّيُحِبُّونَ أَن يُحْمَدُوا بِمَا لَمْ يَفْعَلُوا فَلَا تَحْسَبَنَّهُم بِمَفَازَةٍ مِّنَ الْعَذَابِ ۖ وَلَهُمْ عَذَابٌ أَلِيمٌ ﴿١٨٨﴾

189. ಅಲ್ಲಾಹನು ಭೂಮಿ-ಆಕಾಶಗಳ ಮಾಲಕನು ಮತ್ತು ಅವನ ಅಧಿಕಾರವು ಸರ್ವಸ್ವವನ್ನೂ ವ್ಯಾಪಿಸಿದೆ.

وَلِلَّهِ مُلْكُ السَّمَٰوَٰتِ وَالْأَرْضِ ۗ وَاللَّهُ عَلَىٰ كُلِّ شَىْءٍ قَدِيرٌ ﴿١٨٩﴾

190. ಭೂಮಿ-ಆಕಾಶಗಳ ಸೃಷ್ಟಿಯಲ್ಲಿಯೂ ರಾತ್ರಿ ಹಗಲುಗಳು ಅನುಕ್ರಮವಾಗಿ ಬರುತ್ತಿರುವುದರಲ್ಲಿಯೂ ಬುದ್ಧಿಜೀವಿಗಳಿಗೆ ಸಾಕಷ್ಟು ನಿದರ್ಶನಗಳಿವೆ.

إِنَّ فِي خَلْقِ السَّمٰوٰتِ وَالْأَرْضِ وَاخْتِلَافِ
الَّيْلِ وَالنَّهَارِ لَآيٰتٍ لِّأُولِي الْأَلْبَابِ ﴿١٩٠﴾

191. ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ಭೂಮಿ-ಆಕಾಶಗಳ ನಿರ್ಮಾಣದ ಬಗ್ಗೆ ಪರ್ಯಾಲೋಚಿಸುತ್ತಾರೆ. (ಅವರು ಪರವಶರಾಗಿ ಹೀಗೆನ್ನುತ್ತಾರೆ) "ಪ್ರಭೂ, ನೀನು ಇವುಗಳನ್ನೆಲ್ಲ ವ್ಯರ್ಥ ಹಾಗೂ ಉದ್ದೇಶರಹಿತವಾಗಿ ಸೃಷ್ಟಿಸಲಿಲ್ಲ. ನೀನು (ನಿರರ್ಥಕ ಕಾರ್ಯಗಳನ್ನೆಸಗುವುದರಿಂದ) ಪರಿಶುದ್ಧನು. ಆದುದರಿಂದ ಓ ನಮ್ಮ ಪ್ರಭೂ, ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು.

الَّذِينَ يَذْكُرُونَ اللّٰهَ قِيٰمًا وَّقُعُودًا وَّعَلٰى
جُنُوبِهِمْ وَيَتَفَكَّرُونَ فِي خَلْقِ السَّمٰوٰتِ
وَالْأَرْضِ رَبَّنَا مَا خَلَقْتَ هٰذَا بَاطِلًا
سُبْحٰنَكَ فَقِنَا عَذَابَ النَّارِ ﴿١٩١﴾

192. ನೀನು ಯಾರನ್ನು ನರಕದಲ್ಲಿ ಹಾಕಿದೆಯೋ ಅವನನ್ನು ಅತಿ ಅಪಮಾನಕಾರಕ ದುರ್ಗತಿಯಲ್ಲಿ ಹಾಕಿದೆ. ಇಂತಹ ಅಕ್ರಮಿಗಳಿಗೆ ಯಾರೂ ಸಹಾಯಕರಿರಲಾರರು.

رَبَّنَا إِنَّكَ مَنْ تُدْخِلِ النَّارَ فَقَدْ
أَخْزَيْتَهُ وَمَا لِلظّٰلِمِينَ مِنْ أَنْصَارٍ ﴿١٩٢﴾

193. ಓ ನಮ್ಮ ಪ್ರಭೂ, ನಾವು ಸತ್ಯವಿಶ್ವಾಸದ ಕಡೆಗೆ ಆಹ್ವಾನಿಸುತ್ತಿದ್ದ ಮತ್ತು ನಿಮ್ಮ ಪ್ರಭುವನ್ನು ನಂಬಿರೆಂದು ಹೇಳುತ್ತಿದ್ದ ಓರ್ವ ಕರೆ ಕೊಡುವಾತನನ್ನು ಆಲಿಸಿದೆವು. ನಾವು ಅವನ ಆಹ್ವಾನವನ್ನು ಸ್ವೀಕರಿಸಿದೆವು. ಆದುದರಿಂದ ಓ ನಮ್ಮೊಡೆಯಾ, ನಮ್ಮಿಂದ ಸಂಭವಿಸಿ ಹೋಗಿದ್ದ ಅಪರಾಧಗಳನ್ನು ಕ್ಷಮಿಸು. ನಮ್ಮಲ್ಲಿರುವ ಕೆಡುಕುಗಳನ್ನು ದೂರೀಕರಿಸು ಮತ್ತು ನಮ್ಮ ಅವಸಾನವನ್ನು ಸಜ್ಜನರೊಂದಿಗೆ ಮಾಡು.

رَبَّنَا إِنَّنَا سَمِعْنَا مُنَادِيًا يُّنَادِي لِلْإِيمَانِ
أَنْ آمِنُوا بِرَبِّكُمْ فَآمَنَّا رَبَّنَا فَاغْفِرْ لَنَا
ذُنُوبَنَا وَكَفِّرْ عَنَّا سَيِّاٰتِنَا وَتَوَفَّنَا مَعَ الْأَبْرَارِ ﴿١٩٣﴾

194. ಓ ನಮ್ಮ ಪ್ರಭೂ, ನೀನು ನಿನ್ನ ಸಂದೇಶವಾಹಕರ ಮೂಲಕ ಮಾಡಿರುವ ವಾಗ್ದಾನಗಳನ್ನು ನಮಗೆ ನೆರವೇರಿಸಿಕೊಡು ಮತ್ತು ಪುನರುತ್ಥಾನ ದಿನದಂದು ನಮ್ಮನ್ನು ಅವಮಾನಕ್ಕೊಳಪಡಿಸಬೇಡ. ನಿಶ್ಚಯವಾಗಿಯೂ ನೀನು ನಿನ್ನ ವಾಗ್ದಾನಕ್ಕೆ ವ್ಯತಿರಿಕ್ತವಾಗಿ ನಡೆಯುವವನಲ್ಲ."

رَبَّنَا وَآتِنَا مَا وَعَدْتَّنَا عَلٰى رُسُلِكَ وَلَا
تُخْزِنَا يَوْمَ الْقِيٰمَةِ إِنَّكَ لَا تُخْلِفُ الْمِيعَادَ ﴿١٩٤﴾

195. ಉತ್ತರವಾಗಿ ಅವರ ಪ್ರಭು ಹೇಳಿದನು, "ನಾನು ನಿಮ್ಮಲ್ಲಿ ಯಾರೊಬ್ಬನ ಕರ್ಮವನ್ನೂ ನಿಷ್ಫಲಗೊಳಿಸುವವನಲ್ಲ. ಪುರುಷರಾಗಲಿ ಸ್ತ್ರೀಯರಾಗಲಿ ನೀವೆಲ್ಲ ಒಂದೇ ವರ್ಗದವರು. ಆದುದರಿಂದ ಯಾರೂ ನನಗಾಗಿ ತಮ್ಮ ದೇಶ ತ್ಯಾಗ ಮಾಡಿದರೋ ನನ್ನ ಮಾರ್ಗದಲ್ಲಿ ಮನೆ-ಮಾರುಗಳಿಂದ

فَاسْتَجَابَ لَهُمْ رَبُّهُمْ أَنِّي لَا أُضِيعُ عَمَلَ
عَامِلٍ مِّنْكُمْ مِّنْ ذَكَرٍ أَوْ أُنْثٰى بَعْضُكُمْ
مِّنْ بَعْضٍ فَالَّذِينَ هَاجَرُوا وَأُخْرِجُوا
مِنْ دِيَارِهِمْ وَأُوذُوا فِي سَبِيلِي وَقٰتَلُوا

ಹೊರಕ್ಕಟ್ಟಲ್ಪಟ್ಟರೋ, ಸತಾಯಿಸಲ್ಪಟ್ಟರೋ, ನನಗಾಗಿ ಹೋರಾಟ ನಡೆಸಿದರೋ ಮತ್ತು ವಧಿಸಲ್ಪಟ್ಟರೋ ಅವರೆಲ್ಲರ ಅಪರಾಧ ಗಳನ್ನು ನಾನು ಕ್ಷಮಿಸಿಬಿಡುವೆನು ಮತ್ತು ಅವರಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳಲ್ಲಿ ಪ್ರವೇಶ ಕೊಡುವೆನು. ಇದು ಅವರಿಗೆ ಅಲ್ಲಾಹನ ಬಳಿ ಇರುವ ಪ್ರತಿಫಲ ಮತ್ತು ಅತ್ಯುತ್ತಮ ಪ್ರತಿಫಲ ಅಲ್ಲಾಹನ ಬಳಿಯಲ್ಲೇ ಇದೆ.

وَقُتِلُوا لَأُكَفِّرَنَّ عَنْهُمْ سَيِّئَاتِهِمْ وَلَأُدْخِلَنَّهُمْ جَنَّاتٍ تَجْرِي مِنْ تَحْتِهَا الْأَنْهَارُ ثَوَابًا مِنْ عِنْدِ اللَّهِ ۗ وَاللَّهُ عِنْدَهُ حُسْنُ الثَّوَابِ ﴿١٩٥﴾

196. ಓ ಪೈಗಂಬರರೇ, ನಾಡುಗಳಲ್ಲಿ ಅಲ್ಲಾಹನ ಅವಿಧೇಯ ದಾಸರ ಮೆರೆದಾಟವು ನಿಮ್ಮನ್ನು ವಂಚಿಸದಿರಲಿ.

لَا يَغُرَّنَّكَ تَقَلُّبُ الَّذِينَ كَفَرُوا فِي الْبِلَادِ ﴿١٩٦﴾

197. ಇದು ಕೇವಲ ಕೆಲವೇ ದಿನಗಳ ಬಾಳುವೆಯ ಕಿಂಚಿತ್ ಸುಖಭೋಗ. ಅನಂತರ ಇವರೆಲ್ಲರೂ ಅತಿ ನಿಕೃಷ್ಟ ವಾಸಸ್ಥಾನವಾಗಿರುವ ನರಕಾಗ್ನಿಯನ್ನು ಸೇರುವರು.

مَتَاعٌ قَلِيلٌ ثُمَّ مَأْوَاهُمْ جَهَنَّمُ ۚ وَبِئْسَ الْمِهَادُ ﴿١٩٧﴾

198. ಇದಕ್ಕೆ ವ್ಯತಿರಿಕ್ತವಾಗಿ ತಮ್ಮ ಪ್ರಭುವನ್ನು ಭಯಪಡುತ್ತ ಜೀವನ ನಡೆಸುವವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳಿದ್ದು ಅವುಗಳಲ್ಲಿ ಅವರು ಸದಾಕಾಲ ವಾಸಿಸುವರು. ಅವರಿಗೆ ಅಲ್ಲಾಹನ ವತಿಯಿಂದ ಆತಿಥ್ಯವಿದು ಮತ್ತು ಯಾವುದು ಅಲ್ಲಾಹನ ಬಳಿ ಇದೆಯೋ ಅದುವೇ ಸಜ್ಜನರಿಗೆ ಅತ್ಯುತ್ತಮ.

لَٰكِنِ الَّذِينَ اتَّقَوْا رَبَّهُمْ لَهُمْ جَنَّاتٌ تَجْرِي مِنْ تَحْتِهَا الْأَنْهَارُ خَالِدِينَ فِيهَا نُزُلًا مِنْ عِنْدِ اللَّهِ ۗ وَمَا عِنْدَ اللَّهِ خَيْرٌ لِلْأَبْرَارِ ﴿١٩٨﴾

199. ಗ್ರಂಥದವರಲ್ಲಿ ಕೆಲವರು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತಾರೆ. ನಿಮ್ಮ ಕಡೆಗೆ ಕಳುಹಿಸಲ್ಪಟ್ಟ ಗ್ರಂಥದ ಮೇಲೂ ಇದಕ್ಕಿಂತ ಮುಂಚೆ ಸ್ವತಃ ಅವರ ಕಡೆಗೆ ಕಳುಹಿಸಲ್ಪಟ್ಟ ಗ್ರಂಥದ ಮೇಲೂ ವಿಶ್ವಾಸವಿಡುತ್ತಾರೆ. ಅಲ್ಲಾಹನ ಮುಂದೆ ಬಾಗಿರುತ್ತಾರೆ ಮತ್ತು ಅಲ್ಲಾಹನ ಸೂಕ್ತಗಳನ್ನು ಅವರು ಅಲ್ಪ ಬೆಲೆಗೆ ಮಾರಿಬಿಡುವುದಿಲ್ಲ. ಅವರ ಪ್ರತಿಫಲ ಅವರ ಪ್ರಭುವಿನ ಬಳಿ ಇದೆ ಮತ್ತು ಅಲ್ಲಾಹ್ ಲೆಕ್ಕ ತೀರಿಸುವುದರಲ್ಲಿ ಅತಿ ಶೀಘ್ರನು.

وَإِنَّ مِنْ أَهْلِ الْكِتَابِ لَمَنْ يُؤْمِنُ بِاللَّهِ وَمَا أُنْزِلَ إِلَيْكُمْ وَمَا أُنْزِلَ إِلَيْهِمْ خَاشِعِينَ لِلَّهِ لَا يَشْتَرُونَ بِآيَاتِ اللَّهِ ثَمَنًا قَلِيلًا ۗ أُولَٰئِكَ لَهُمْ أَجْرُهُمْ عِنْدَ رَبِّهِمْ ۗ إِنَّ اللَّهَ سَرِيعُ الْحِسَابِ ﴿١٩٩﴾

200. ಓ ಸತ್ಯವಿಶ್ವಾಸಿಗಳೇ, ಸಹನೆಯಿಂದ ವರ್ತಿಸಿರಿ. ಮಿಥ್ಯಾರಾಧಕರ ಎದುರು ಸ್ಥೈರ್ಯ ತೋರಿಸಿರಿ. ಸತ್ಯದ ಸೇವೆಗಾಗಿ ಟೊಂಕ ಕಟ್ಟಿಕೊಂಡಿರಿ ಮತ್ತು ಅಲ್ಲಾಹನನ್ನು ಭಯಪಡುತ್ತಲಿರಿ. ನೀವು ವಿಜಯಿಗಳಾಗುವಿರೆಂದು ನಿರೀಕ್ಷಿಸಬಹುದು.

يَا أَيُّهَا الَّذِينَ آمَنُوا اصْبِرُوا وَصَابِرُوا وَرَابِطُوا وَاتَّقُوا اللَّهَ لَعَلَّكُمْ تُفْلِحُونَ ﴿٢٠٠﴾






**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ಜನರೇ, ನೀವು ನಿಮ್ಮ ಪಾಲಕ ಪ್ರಭುವನ್ನು ಭಯಪಡಿರಿ. ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಜೋಡಿಯನ್ನು ಉಂಟು ಮಾಡಿದನು ಮತ್ತು ಅವೆರಡರಿಂದ ಅನೇಕಾನೇಕ ಸ್ತ್ರೀ-ಪುರುಷರನ್ನು ಲೋಕದಲ್ಲಿ ಹಬ್ಬಿಸಿದನು. ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವನ್ನಿರಿಸಿಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.

يٰۤاَيُّهَا النَّاسُ اتَّقُوْا رَبَّكُمُ الَّذِيْ خَلَقَكُمْ مِّنْ نَّفْسٍ وَّاحِدَةٍ وَّخَلَقَ مِنْهَا زَوْجَهَا وَبَثَّ مِنْهُمَا رِجَالًا كَثِيْرًا وَّنِسَآءً ۚ وَاتَّقُوا اللّٰهَ الَّذِيْ تَسَآءَلُوْنَ بِهٖ وَالْاَرْحَامَ ۗ اِنَّ اللّٰهَ كَانَ عَلَيْكُمْ رَقِيْبًا ۝١

2. ಅನಾಥರ ಸೊತ್ತುಗಳನ್ನು ಅವರಿಗೆ ಹಿಂದಿರುಗಿಸಿರಿ. ಒಳ್ಳೆಯ ಸೊತ್ತಿನ ಸ್ಥಾನದಲ್ಲಿ ಕೆಟ್ಟದನ್ನು ಬದಲಿಸಿಡಬೇಡಿರಿ. ಅವರ ಸೊತ್ತನ್ನು ನಿಮ್ಮದರೊಂದಿಗೆ ಸೇರಿಸಿ ಕಬಳಿಸಲೂ ಬೇಡಿರಿ. ಇದು ಅತ್ಯಂತ ಘೋರ ಪಾತಕ.

وَاٰتُوا الْيَتٰمٰۤى اَمْوَالَهُمْ وَلَا تَتَبَدَّلُوا الْخَبِيْثَ بِالطَّيِّبِ ۖ وَلَا تَاْكُلُوْۤا اَمْوَالَهُمْ اِلٰۤى اَمْوَالِكُمْ ۗ اِنَّهٗ كَانَ حُوْبًا كَبِيْرًا ۝٢

3. ಅನಾಥರೊಂದಿಗೆ ನ್ಯಾಯವಾಗಿ ನಡೆದುಕೊಳ್ಳಲು ಸಾಧ್ಯವಾಗದೆಂಬ ಆಶಂಕೆ ನಿಮಗುಂಟಾದರೆ ಸ್ತ್ರೀಯರಲ್ಲಿ ನಿಮಗೆ ಮೆಚ್ಚಿದ ಇಬ್ಬರನ್ನೋ ಮೂವರನ್ನೋ ನಾಲ್ವರನ್ನೋ ವಿವಾಹ ಮಾಡಿಕೊಳ್ಳಿರಿ.[1] ಆದರೆ ಅವರೊಂದಿಗೆ ನ್ಯಾಯ ಪಾಲಿಸಲಾರಿರೆಂಬ

وَاِنْ خِفْتُمْ اَلَّا تُقْسِطُوْا فِي الْيَتٰمٰى فَانْكِحُوْا مَا طَابَ لَكُمْ مِّنَ النِّسَآءِ مَثْنٰى وَثُلٰثَ وَرُبٰعَ ۚ فَاِنْ خِفْتُمْ اَلَّا تَعْدِلُوْا فَوَاحِدَةً

1. ಈ ಸೂಕ್ತಗಳು ಒಂದಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದಲು ಅನುಮತಿಸಲಿಕ್ಕಾಗಿ ಬಂದಿಲ್ಲವೆಂಬುದು ಗಮನಾರ್ಹ. ಏಕೆಂದರೆ ಇದರ ಅವತೀರ್ಣಕ್ಕೆ ಮೊದಲೇ ಅಲ್ಲಿ ಆ ಪದ್ಧತಿ ಜಾರಿಯಲ್ಲಿತ್ತು. ಸ್ವತಃ ಪ್ರವಾದಿವರ್ಯರು(ಸ) ಆಗ ಒಂದಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದಿದ್ದರು. ಯುದ್ಧದಲ್ಲಿ ಹುತಾತ್ಮರಾದವರು ತಮ್ಮ ಹಿಂದೆ ಬಿಟ್ಟಿದ್ದ ಅನಾಥ ಮಕ್ಕಳ ಸಮಸ್ಯೆಯನ್ನು ಪರಿಹರಿಸಲಿಕ್ಕಾಗಿ ಈ ಸೂಕ್ತ ಅವತೀರ್ಣಗೊಂಡಿದೆ. ಈ ಅನಾಥ ಮಕ್ಕಳ ಪರಿಪಾಲನೆಯನ್ನು ಹಾಗೆಯೇ ನಿಮಗೆ ಮಾಡಲು ಸಾಧ್ಯವಿಲ್ಲದಿದ್ದರೆ ಅನಾಥ ಮಕ್ಕಳನ್ನು ಹೊಂದಿರುವ ಮಹಿಳೆಯರನ್ನು ನೀವು ವಿವಾಹವಾಗಿರಿ ಎನ್ನುವ ಮೂಲಕ ಈ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸಲಾಗಿದೆ.

ಆಶಂಕೆ ನಿಮಗಿದ್ದರೆ ಒಬ್ಬ ಸ್ತ್ರೀಯನ್ನು ಮಾತ್ರ[2] (ವಿವಾಹವಾಗಿರಿ) ಅಥವಾ ನಿಮ್ಮ ವಶಕ್ಕೆ ಬಂದ ಸ್ತ್ರೀಯರನ್ನು ಸ್ವೀಕರಿಸಿಕೊಳ್ಳಿರಿ.[3] ಅನ್ಯಾಯದಿಂದ ತಪ್ಪಿಸಿಕೊಳ್ಳಲು ಇದು ಹೆಚ್ಚು ಉತ್ತಮ.

أَوْ مَا مَلَكَتْ أَيْمَانُكُمْ ۚ ذَٰلِكَ أَدْنَىٰ
أَلَّا تَعُولُوا ۝

4. ಸ್ತ್ರೀಯರಿಗೆ 'ವಿವಾಹಧನ'ವನ್ನು ಆತ್ಮ ಸಂತೋಷದಿಂದ (ಕಡ್ಡಾಯವೆಂದರಿತು) ಪಾವತಿ ಮಾಡಿರಿ. ಅವರು ತಮ್ಮಿಷ್ಟದಿಂದ ವಿವಾಹಧನದ ಒಂದಂಶವನ್ನು ನಿಮಗೆ ಬಿಟ್ಟು ಕೊಟ್ಟರೆ, ನೀವು ಅದನ್ನು ಸಂತೋಷದಿಂದ ಅನುಭೋಗಿಸಿಕೊಳ್ಳಬಹುದು.

وَآتُوا النِّسَاءَ صَدُقَاتِهِنَّ نِحْلَةً ۚ فَإِن
طِبْنَ لَكُمْ عَن شَيْءٍ مِّنْهُ نَفْسًا فَكُلُوهُ
هَنِيئًا مَّرِيئًا ۝

5. ಅಲ್ಲಾಹನು ನಿಮಗೆ ಜೀವನ ಸಾಧನವನ್ನಾಗಿ ನಿಶ್ಚಯಿಸಿರುವ ಸಂಪತ್ತನ್ನು ತಿಳಿಗೇಡಿಗಳ ವಶಕ್ಕೆ ಒಪ್ಪಿಸಬೇಡಿರಿ. ಆದರೆ ಅವರಿಗೆ ಉಣ್ಣಲಿಕ್ಕೂ ಉಡಲಿಕ್ಕೂ ಕೊಡಿರಿ ಮತ್ತು ಅವರಿಗೆ ಸದ್ಬೋಧನೆ ಮಾಡಿರಿ.

وَلَا تُؤْتُوا السُّفَهَاءَ أَمْوَالَكُمُ الَّتِي جَعَلَ
اللَّهُ لَكُمْ قِيَامًا وَارْزُقُوهُمْ فِيهَا وَاكْسُوهُمْ
وَقُولُوا لَهُمْ قَوْلًا مَّعْرُوفًا ۝

6. ಅನಾಥರನ್ನು ಅವರು ವಿವಾಹಯೋಗ್ಯ ವಯಸ್ಸಿನವರಾಗುವ ವರೆಗೂ ಪರಿಶೀಲಿಸುತ್ತಲೇ ಇರಿ.[4] ಅನಂತರ ಅವರಲ್ಲಿ ಯೋಗ್ಯತಾರ್ಹತೆಗಳನ್ನು ಕಂಡೊಡನೆ ಅವರ ಸಂಪತ್ತನ್ನು ಅವರ ವಶಕ್ಕೊಪ್ಪಿಸಿರಿ. ಅವರು ದೊಡ್ಡವರಾಗಿ ತಮ್ಮ ಹಕ್ಕನ್ನು ಕೇಳುವರೆಂದು ಹೆದರಿ, ನ್ಯಾಯದ ಮೇರೆಯನ್ನು ಮೀರಿ, ಅವರ ಸಂಪತ್ತನ್ನು ಲಗುಬಗೆಯಿಂದ ಕಬಳಿಸಬಾರದು. ಅನಾಥರ ರಕ್ಷಕನು ಧನಿಕನಾಗಿದ್ದರೆ ಅವನು ಸಂಯಮದಿಂದ ವರ್ತಿಸಲಿ ಮತ್ತು

وَابْتَلُوا الْيَتَامَىٰ حَتَّىٰ إِذَا بَلَغُوا النِّكَاحَ فَإِنْ
آنَسْتُم مِّنْهُمْ رُشْدًا فَادْفَعُوا إِلَيْهِمْ أَمْوَالَهُمْ ۖ
وَلَا تَأْكُلُوهَا إِسْرَافًا وَبِدَارًا أَن يَكْبَرُوا ۚ
وَمَن كَانَ غَنِيًّا فَلْيَسْتَعْفِفْ ۖ وَمَن كَانَ
فَقِيرًا فَلْيَأْكُلْ بِالْمَعْرُوفِ ۚ فَإِذَا دَفَعْتُمْ

2. ಪತ್ನಿಯರ ಸಂಖ್ಯೆಯನ್ನು ಮಿತಗೊಳಿಸಲಾಗಿದೆ ಮತ್ತು ಒಮ್ಮೆಗೆ ನಾಲ್ಕಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದಿರುವುದನ್ನು ನಿಷೇಧಿಸಲಾಗಿದೆ ಎಂಬ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತಾಭಿಪ್ರಾಯವಿದೆ. ಅಲ್ಲದೆ ಈ ಸೂಕ್ತ ಪತ್ನಿಯರ ಸಂಖ್ಯೆಯನ್ನು ನ್ಯಾಯಪಾಲನೆಯ ಶರತ್ತಿನೊಂದಿಗೆ ಜೋಡಿಸಿದೆ. ನ್ಯಾಯಪಾಲನೆಯ ಶರತ್ತನ್ನು ಈಡೇರಿಸದೆ, ಒಂದಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದುವ ಅನುಮತಿಯಿಂದ ಪ್ರಯೋಜನ ಪಡೆಯುವವನು ಅಲ್ಲಾಹನಿಗೆ ವಂಚನೆ ಮಾಡುವವನಾಗಿದ್ದಾನೆ. ಯಾವ ಪತ್ನಿ ಅಥವಾ ಪತ್ನಿಯರು ನ್ಯಾಯಪಾಲನೆಯ ಶರತ್ತಿನಿಂದ ವಂಚಿತರಾಗಿದ್ದಾರೋ ಅವರ ಅಹವಾಲನ್ನು ಕೇಳುವ ಹಕ್ಕು ಇಸ್ಲಾಮೀ ಆಡಳಿತದ ನ್ಯಾಯಾಲಯಗಳಿಗಿವೆ. ಕೆಲವರು ಪಾಶ್ಚಿಮಾತ್ಯ ಸಿದ್ಧಾಂತಗಳಿಂದ ಪ್ರಭಾವಿತರಾಗಿ, ಪಾಶ್ಚಿಮಾತ್ಯರ ದೃಷ್ಟಿಯಲ್ಲಿ ಒಂದು ಕೆಟ್ಟ ಪದ್ಧತಿಯಾಗಿರುವ ಬಹುಪತ್ನಿತ್ವವನ್ನು ಕೊನೆಗೊಳಿಸುವುದೇ ಕುರ್‌ಆನಿನ ನೈಜ ಉದ್ದೇಶವಾಗಿದೆ ಎಂದು ಸಾಬೀತು ಪಡಿಸಲು ಪ್ರಯತ್ನಿಸುತ್ತಾರೆ. ಇದು ಕೇವಲ ವೈಚಾರಿಕ ದಾಸ್ಯದ ಪರಿಣಾಮವಾಗಿದೆ. ಬಹುಪತ್ನಿತ್ವವೇ ಒಂದು ಕೆಟ್ಟ ಪದ್ಧತಿಯಾಗಿದೆ ಎಂಬುದನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಕೆಲವೊಮ್ಮೆ ಇದು ಸಾಂಸ್ಕೃತಿಕ ಮತ್ತು ನೈತಿಕ ಅನಿವಾರ್ಯತೆಯಾಗಿ ಮಾರ್ಪಡುತ್ತದೆ. ಕುರ್‌ಆನಿನಲ್ಲಿ ಅದನ್ನು ಅತ್ಯಂತ ಸ್ಫುಟವಾದ ಭಾಷೆಯಲ್ಲಿ ಧರ್ಮಸಮ್ಮತವೆನ್ನಲಾಗಿದೆ. ಕುರ್‌ಆನ್ ಅದನ್ನು ಕೊನೆಗೊಳಿಸಬಯಸುತ್ತದೆ ಎಂದು ಊಹಿಸಲು ಅದನ್ನು ಖಂಡಿಸುತ್ತಾ ಸೂಚ್ಯವಾಗಿಯೂ ಯಾವುದೇ ಮಾತನ್ನು ಹೇಳಲಾಗಿಲ್ಲ.

3. ಅರ್ಥಾತ್- ದಾಸಿಯರು. ಅಂದರೆ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ ನಂತರ ಯುದ್ಧ ಕೈದಿಗಳ ವಿನಿಮಯವಾಗದಿದ್ದಾಗ ಸರ್ಕಾರದ ವತಿಯಿಂದ ಜನರ ಮಧ್ಯೆ ವಿತರಿಸಲ್ಪಟ್ಟ ಮಹಿಳೆಯರು.

4. ಅರ್ಥಾತ್- ಅವರು ಪ್ರೌಢಾವಸ್ಥೆಗೆ ಕಾಲಿರಿಸುತ್ತಿರುವ ಹಂತದಲ್ಲಿ ಅವರಲ್ಲಿ ಬೌದ್ಧಿಕ ಬೆಳವಣಿಗೆ ಎಷ್ಟರ ಮಟ್ಟಕ್ಕಿದೆ, ತಮ್ಮ ವ್ಯವಹಾರಗಳನ್ನು ಸ್ವತಃ ನಿರ್ವಹಿಸುವ ಅರ್ಹತೆ ಅವರಲ್ಲಿ ಯಾವ ಮಟ್ಟದಲ್ಲಿ ಕಂಡು ಬರುತ್ತಿದೆ ಎಂಬುದನ್ನು ನೋಡುತ್ತಿರಿ.

ಅವನು ಬಡವನಾಗಿದ್ದರೆ ನ್ಯಾಯೋಚಿತ ರೀತಿಯಿಂದ ತಿನ್ನಲಿ.[5] ಅನಂತರ ಅವರ ಸಂಪತ್ತನ್ನು ಅವರಿಗೆ ಒಪ್ಪಿಸುವಾಗ ಜನರನ್ನು ಸಾಕ್ಷಿಯಾಗಿರಿಸಿಕೊಳ್ಳಿರಿ. ಲೆಕ್ಕ ಪರಿಶೋಧನೆ ನಡೆಸಲು ಅಲ್ಲಾಹ್ ಸಾಕು.

إِلَيْهِمْ أَمْوَالَهُمْ فَأَشْهِدُوا عَلَيْهِمْ ۚ وَكَفَىٰ بِاللَّهِ حَسِيبًا ⑥

7. ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಪುರುಷರಿಗೆ ಪಾಲಿದೆ. ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಸ್ತ್ರೀಯರಿಗೂ ಪಾಲಿದೆ. ಕಡಿಮೆ ಇರಲಿ ಅಥವಾ ಹೆಚ್ಚಿರಲಿ[6] ಈ ಪಾಲು (ಅಲ್ಲಾಹನ ಕಡೆಯಿಂದ) ನಿಶ್ಚಿತವಾಗಿದೆ.

لِّلرِّجَالِ نَصِيبٌ مِّمَّا تَرَكَ الْوَالِدَانِ وَالْأَقْرَبُونَ وَلِلنِّسَاءِ نَصِيبٌ مِّمَّا تَرَكَ الْوَالِدَانِ وَالْأَقْرَبُونَ مِمَّا قَلَّ مِنْهُ أَوْ كَثُرَ ۚ نَصِيبًا مَّفْرُوضًا ⑦

8. ಪಾಲಾಗುವ ಸಂದರ್ಭದಲ್ಲಿ (ಹಕ್ಕುದಾರರಲ್ಲದ) ಸಂಬಂಧಿಕರು, ಅನಾಥರು ಮತ್ತು ನಿರ್ಗತಿಕರು ಬಂದರೆ ಅವರಿಗೂ ಏನಾದರೂ ಕೊಡಿರಿ. ಅವರೊಡನೆ ಸೌಜನ್ಯದ ಮಾತುಗಳನ್ನಾಡಿರಿ.

وَإِذَا حَضَرَ الْقِسْمَةَ أُولُو الْقُرْبَىٰ وَالْيَتَامَىٰ وَالْمَسَاكِينُ فَارْزُقُوهُم مِّنْهُ وَقُولُوا لَهُمْ قَوْلًا مَّعْرُوفًا ⑧

9. ತಾವು ಸ್ವತಃ ಅಸಹಾಯಕ ಮಕ್ಕಳನ್ನು ಬಿಟ್ಟು ಮರಣ ಹೊಂದುತ್ತಿದ್ದರೆ ಆಗ ತಮ್ಮ ಮಕ್ಕಳ ಬಗ್ಗೆ ತಮಗೆಷ್ಟು ಕಾಳಜಿ ಯುಂಟಾಗುತ್ತಿತ್ತೆಂಬುದನ್ನು ಎಣಿಸಿಕೊಂಡು ಜನರು ಭಯಪಡ ಬೇಕು. ಆದುದರಿಂದ ಅವರು ಅಲ್ಲಾಹನನ್ನು ಭಯಪಟ್ಟು ಸರಿಯಾದ ಮಾತನ್ನೇ ಆಡಲಿ.

وَلْيَخْشَ الَّذِينَ لَوْ تَرَكُوا مِنْ خَلْفِهِمْ ذُرِّيَّةً ضِعَافًا خَافُوا عَلَيْهِمْ فَلْيَتَّقُوا اللَّهَ وَلْيَقُولُوا قَوْلًا سَدِيدًا ⑨

10. ಅನಾಥರ ಸೊತ್ತನ್ನು ಅಕ್ರಮವಾಗಿ ಕಬಳಿಸುವವರು ವಾಸ್ತವದಲ್ಲಿ ತಮ್ಮ ಹೊಟ್ಟೆಯನ್ನು ನರಕಾಗ್ನಿಯಿಂದ ತುಂಬುತ್ತಾರೆ ಮತ್ತು ನಿಶ್ಚಯವಾಗಿಯೂ ಅವರು ಜ್ವಲಿಸುವ ನರಕಾಗ್ನಿಯಲ್ಲಿ ತಳ್ಳಲ್ಪಡುವರು.

إِنَّ الَّذِينَ يَأْكُلُونَ أَمْوَالَ الْيَتَامَىٰ ظُلْمًا إِنَّمَا يَأْكُلُونَ فِي بُطُونِهِمْ نَارًا ۖ وَسَيَصْلَوْنَ سَعِيرًا ⑩

ع

5. ಅರ್ಥಾತ್- ಪ್ರತಿಯೊಬ್ಬ ನಿಷ್ಪಕ್ಷಪಾತಿ ವ್ಯಕ್ತಿಗೂ ಸರಿಯೆನಿಸುವ ರೀತಿಯಲ್ಲಿ ತನ್ನ ಸೇವೆಗೆ ಅವನು ಪ್ರತಿಫಲ ಪಡೆಯಲಿ. ಅದನ್ನೂ ಗೋಪ್ಯವಾಗಿ ಪಡೆಯುವ ಬದಲು ನಿಗದಿತ ರೂಪದಲ್ಲಿ ಬಹಿರಂಗವಾಗಿ ಪಡೆಯಲಿ ಮತ್ತು ಅದರ ಲೆಕ್ಕವಿಡಲಿ.

6. ಈ ಸೂಕ್ತದ ಮೂಲಕ ಸ್ಪಷ್ಟವಾಗಿ ಐದು ಆದೇಶಗಳನ್ನು ಕೊಡಲಾಗಿದೆ. ಮೊದಲನೆಯದಾಗಿ ವಾರೀಸು ಸೊತ್ತಿಗೆ ಪುರುಷರು ಮಾತ್ರ ಹಕ್ಕುದಾರರಲ್ಲ ಮಹಿಳೆಯರಿಗೂ ಅದರಲ್ಲಿ ಹಕ್ಕಿದೆ. ಎರಡನೆಯದಾಗಿ ವಾರೀಸು ಸೊತ್ತು ಎಷ್ಟೇ ಚಿಕ್ಕ ಪ್ರಮಾಣದ್ದಾಗಿದ್ದರೂ ಅದು ವಿತರಿಸಲ್ಪಡಬೇಕು. ಮೂರನೆಯದಾಗಿ ಈ ಸೂಕ್ತದಲ್ಲಿ ಮೃತ ವ್ಯಕ್ತಿಯು ಬಿಟ್ಟು ಹೋದ ಒಟ್ಟು ಆಸ್ತಿಯು ವಿತರಣೆಯಾಗಬೇಕು ಎನ್ನಲಾಗಿದೆ. ಸ್ಥಿರಾಸ್ತಿ ಮತ್ತು ಚರಾಸ್ತಿ ಕೃಷಿಗೆ ಸಂಬಂಧಿಸಿದ ಮತ್ತು ಕೃಷ್ಯೇತರ, ಪಿತ್ರಾರ್ಜಿತ ಮತ್ತು ಸ್ವಯಮಾರ್ಜಿತ ಎಂಬ ಭೇದವನ್ನು ಇದರಲ್ಲಿ ಕಲ್ಪಿಸಲಾಗಿಲ್ಲ. ನಾಲ್ಕನೆಯದಾಗಿ ಆಸ್ತಿಯನ್ನು ಹೊಂದಿರುವವನ ಜೀವನಾವಸ್ಥೆಯಲ್ಲಿ ವಾರೀಸು ಹಕ್ಕಿನ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅವನು ತನ್ನ ಹಿಂದೆ ಆಸ್ತಿಯನ್ನು ಬಿಟ್ಟು ನಿಧನನಾದಾಗ ಮಾತ್ರ ವಾರೀಸುದಾರಿಕೆಯ ಪ್ರಶ್ನೆ ಉದ್ಭವಿಸುತ್ತದೆ. ಐದನೆಯದಾಗಿ ಹತ್ತಿರದ ಸಂಬಂಧಿಕರ ಉಪಸ್ಥಿತಿಯಲ್ಲಿ ದೂರದ ಸಂಬಂಧಿಕರು ವಾರೀಸು ಸೊತ್ತನ್ನು ಪಡೆಯಲಾರರು ಎಂಬ ನಿಯಮವೂ ಇದರಿಂದ ವ್ಯಕ್ತವಾಗುತ್ತದೆ. ಸೂಕ್ತ 11ರ ಕೊನೆಯ ಭಾಗದಲ್ಲಿ ಮತ್ತು 33ನೇ ಸೂಕ್ತದಲ್ಲಿ ಈ ನಿಯಮವನ್ನೇ ಮತ್ತಷ್ಟು ವಿವರಿಸಲಾಗಿದೆ.

11. ಅಲ್ಲಾಹನು ನಿಮ್ಮ ಮಕ್ಕಳ ಬಗ್ಗೆ ನಿಮಗೆ ಹೀಗೆ ಆದೇಶವನ್ನೀಯು ತ್ತಾನೆ; ಪುರುಷನಿಗೆ, ಇಬ್ಬರು ಸ್ತ್ರೀಯರಿಗೆ ಸಮಾನವಾದ ಪಾಲಿದೆ.[7] (ಮೃತನ ಉತ್ತರಾಧಿಕಾರಿಗಳಾಗಿ) ಇಬ್ಬರಿಗಿಂತ ಹೆಚ್ಚು ಮಂದಿ ಪುತ್ರಿಯರಿದ್ದರೆ ಅವರಿಗೆ ಉತ್ತರಾಧಿಕಾರದ ಸೊತ್ತಿನಿಂದ ಮೂರನೆಯ ಎರಡಂಶ ಕೊಡಲಾಗುವುದು[8] ಮತ್ತು ಒಬ್ಬಳೇ ಮಗಳಿದ್ದರೆ ಅವಳಿಗೆ ಅರ್ಧಾಂಶ. ಮೃತನು ಮಕ್ಕಳಿದ್ದವನಾಗಿದ್ದರೆ ಮಾತಾಪಿತರಲ್ಲಿ ಪ್ರತಿಯೊಬ್ಬರಿಗೂ ಸೊತ್ತಿನ ಆರನೆಯ ಒಂದಂಶ ಸಿಗಬೇಕು.[9] ಅವನು ಮಕ್ಕಳಿಲ್ಲದವನಾಗಿದ್ದು ಮಾತಾಪಿತರೇ ಅವನ ವಾರೀಸುದಾರರಾಗಿರುವಾಗ ತಾಯಿಗೆ ಮೂರನೆಯ ಒಂದಂಶ ಕೊಡಬೇಕು.[10] ಮೃತನಿಗೆ ಸಹೋದರ ಸಹೋದರಿಯರೂ ಇದ್ದರೆ, ತಾಯಿಯು ಆರನೆಯ ಒಂದಂಶಕ್ಕೆ ಹಕ್ಕುದಾರಳಾಗುವಳು.[11] ಮೃತನು ಮಾಡಿದ 'ವಸಿಯ್ಯತ್' (ಉಯಿಲು) ಪೂರ್ತಿಗೊಳಿಸಿದ ಮತ್ತು ಅವನ ಮೇಲಿರುವ ಸಾಲಗಳ ಸಂದಾಯ ಆದ ಅನಂತರವೇ[12] (ಈ ಪಾಲುಗಳನ್ನು ಹಂಚಲಾಗುವುದು). ನಿಮ್ಮ ಮಾತಾಪಿತರ ಮತ್ತು ಮಕ್ಕಳ ಪೈಕಿ

يُوصِيكُمُ اللَّهُ فِي أَوْلَادِكُمْ ۖ لِلذَّكَرِ مِثْلُ حَظِّ الْأُنثَيَيْنِ ۚ فَإِن كُنَّ نِسَاءً فَوْقَ اثْنَتَيْنِ فَلَهُنَّ ثُلُثَا مَا تَرَكَ ۖ وَإِن كَانَتْ وَاحِدَةً فَلَهَا النِّصْفُ ۚ وَلِأَبَوَيْهِ لِكُلِّ وَاحِدٍ مِّنْهُمَا السُّدُسُ مِمَّا تَرَكَ إِن كَانَ لَهُ وَلَدٌ ۚ فَإِن لَّمْ يَكُن لَّهُ وَلَدٌ وَوَرِثَهُ أَبَوَاهُ فَلِأُمِّهِ الثُّلُثُ ۚ فَإِن كَانَ لَهُ إِخْوَةٌ فَلِأُمِّهِ السُّدُسُ ۚ مِن بَعْدِ وَصِيَّةٍ يُوصِي بِهَا أَوْ دَيْنٍ ۗ آبَاؤُكُمْ وَأَبْنَاؤُكُمْ لَا تَدْرُونَ أَيُّهُمْ أَقْرَبُ لَكُمْ

7. ಕೌಟುಂಬಿಕ ಜೀವನದಲ್ಲಿ ಪುರುಷನಿಗೆ ಶರೀಅತ್ ಹೆಚ್ಚು ಆರ್ಥಿಕ ಜವಾಬ್ದಾರಿಗಳನ್ನು ನೀಡಿದೆ ಮತ್ತು ಸ್ತ್ರೀಯನ್ನು ಅನೇಕ ಆರ್ಥಿಕ ಜವಾಬ್ದಾರಿಗಳಿಂದ ಮುಕ್ತಗೊಳಿಸಿದೆ. ಆದ್ದರಿಂದ ಮಹಿಳೆಗೆ ಆಸ್ತಿಯಲ್ಲಿ ಪುರುಷನಿಗಿಂತ ಕಡಿಮೆ ಪಾಲಿರುವುದು ನ್ಯಾಯದ ಬೇಡಿಕೆಯೂ ಆಗಿದೆ.

8. ಎರಡು ಹೆಣ್ಮಕ್ಕಳಿದ್ದರೂ ಈ ಆದೇಶ ಅನ್ವಯವಾಗುತ್ತದೆ. ಅರ್ಥಾತ್- ಒಬ್ಬನಿಗೆ ವಾರೀಸುದಾರನಾಗಿ ಯಾವುದೇ ಪುತ್ರ ಸಂತಾನವಿಲ್ಲದೆ, ಪುತ್ರಿಯರು ಮಾತ್ರವಿದ್ದರೆ, ಅವರ ಸಂಖ್ಯೆ ಎರಡು ಅಥವಾ ಅದಕ್ಕಿಂತ ಹೆಚ್ಚಿದ್ದರೂ, ಅವನು ಬಿಟ್ಟ ಆಸ್ತಿಯ ಮೂರನೇ ಎರಡು ($^{2}/_{3}$) ಭಾಗವನ್ನು ಪುತ್ರಿಯರಲ್ಲಿ ವಿತರಿಸಲಾಗುವುದು. ಉಳಿದ ಮೂರನೇ ಒಂದು ($^{1}/_{3}$) ಭಾಗವನ್ನು ಇತರ ವಾರೀಸುದಾರರಿಗೆ ಕೊಡಲಾಗುವುದು. ಆದರೆ ಮೃತನಿಗೆ ಒಬ್ಬನೇ ಪುತ್ರನಿದ್ದು ಇತರ ವಾರೀಸುದಾರರಿಲ್ಲದಿದ್ದರೆ ಅವನು ಸಮಸ್ತ ಆಸ್ತಿಯ ವಾರೀಸುದಾರನಾಗುವನು ಎಂಬ ಬಗ್ಗೆ ಒಮ್ಮತಾಭಿಪ್ರಾಯವಿದೆ. ಇತರ ವಾರೀಸುದಾರರು ಇದ್ದ ಪಕ್ಷದಲ್ಲಿ ಅವರಿಗೆ ಸಲ್ಲಬೇಕಾದ ಅಂಶವನ್ನು ಬಿಟ್ಟು ಉಳಿದ ಆಸ್ತಿ ಎಲ್ಲ ಅವನಿಗೆ ದೊರೆಯುವುದು.

9. ಅರ್ಥಾತ್- ಮೃತನಿಗೆ ಮಕ್ಕಳಿದ್ದರೆ ಅವನ ಮಾತಾಪಿತರಲ್ಲಿ ಪ್ರತಿಯೊಬ್ಬರೂ ಆಸ್ತಿಯ ಆರನೇ ಒಂದು ಭಾಗ($^{1}/_{6}$)ವನ್ನು ಪಡೆಯುವರು. ಮೃತನ ವಾರೀಸುದಾರರಾಗಿ ಬರೇ ಪುತ್ರಿಯರು, ಬರೇ ಪುತ್ರರು, ಪುತ್ರ-ಪುತ್ರಿಯರಿಬ್ಬರೂ ಅಥವಾ ಒಬ್ಬನೇ ಪುತ್ರ ಯಾ ಪುತ್ರಿಯಿದ್ದರೂ ಸರಿಯೇ. ಉಳಿದ ಮೂರನೇ ಎರಡು ($^{2}/_{3}$) ಭಾಗದಲ್ಲಿ ಇತರ ವಾರೀಸುದಾರರು ಪಾಲು ಪಡೆಯುವರು.

10. ಮಾತಾಪಿತರ ಹೊರತು ಬೇರಾರೂ ವಾರೀಸುದಾರರಿಲ್ಲದಿದ್ದರೆ ಉಳಿದ ಮೂರನೇ ಎರಡು ($^{2}/_{3}$) ಭಾಗ ತಂದೆಗೆ ಸಿಗುವುದು. ಅನ್ಯಥಾ ತಂದೆ ಮತ್ತು ಇತರ ವಾರೀಸುದಾರರು ಅದರಲ್ಲಿ ಭಾಗಿಗಳಾಗುವರು.

11. ಮೃತನಿಗೆ ಸೋದರ ಸೋದರಿಯರಿದ್ದರೆ ತಾಯಿಯ ಪಾಲು ಮೂರನೇ ಒಂದು ($^{1}/_{3}$) ಭಾಗದ ಬದಲಿಗೆ ಆರನೇ ಒಂದು ($^{1}/_{6}$) ಭಾಗವಾಗುವುದು. ಹೀಗೆ ತಾಯಿಯ ಪಾಲಿನಿಂದ ಪಡೆಯಲಾದ ಆರನೇ ಒಂದು ($^{1}/_{6}$) ಭಾಗವನ್ನು ತಂದೆಯ ಪಾಲಿಗೆ ಸೇರಿಸಲಾಗುವುದು. ಏಕೆಂದರೆ ಇಂತಹ ಸಂದರ್ಭದಲ್ಲಿ ತಂದೆಯ ಮೇಲೆ ಹೆಚ್ಚಿನ ಹೊಣೆಗಾರಿಕೆಗಳಿರುವುದು. ಮೃತನ ತಂದೆ ತಾಯಂದಿರು ಜೀವಂತವಿದ್ದರೆ ಅವನ ಸೋದರ-ಸೋದರಿಯರಿಗೆ ಪಾಲಿರುವುದಿಲ್ಲವೆಂಬುದು ಗಮನಾರ್ಹ.

12. ಇಲ್ಲಿ ವಸಿಯ್ಯತ್‌ನ ಪ್ರಸ್ತಾಪವನ್ನು ಸಾಲಕ್ಕಿಂತ ಮೊದಲು ಮಾಡಲಾಗಿದ್ದರೂ ಸಾಲಕ್ಕೆ, ವಸಿಯ್ಯತ್‌ಗಿಂತ ಹೆಚ್ಚಿನ ಆದ್ಯತೆ ಇದೆ ಎಂಬುದರ ಬಗ್ಗೆ ಒಮ್ಮತಾಭಿಪ್ರಾಯವಿದೆ. ಅರ್ಥಾತ್- ಮೃತನಿಗೆ ಸಾಲವಿದ್ದರೆ ಮೊಟ್ಟ ಮೊದಲು ಅವನ ಆಸ್ತಿಯಿಂದ ಅದನ್ನು ನೀಡಲಾಗುವುದು. ಅನಂತರ ವಸಿಯ್ಯತ್ತನ್ನು ಈಡೇರಿಸಲಾಗುವುದು. ತದನಂತರ ಆಸ್ತಿಯ ವಿಂಗಡನೆ ನಡೆಯುವುದು.

نَفْعًا ۚ فَرِيضَةً مِّنَ اللَّهِ ۗ إِنَّ اللَّهَ كَانَ عَلِيمًا حَكِيمًا ﴿١١﴾

ನಿಮಗೆ ಪ್ರಯೋಜನದ ದೃಷ್ಟಿಯಿಂದ ಯಾರು ಸಮೀಪದವರೆಂಬುದು ನಿಮಗೆ ತಿಳಿಯದು. ಅಲ್ಲಾಹನು ನಿಶ್ಚಯಿಸಿದ ಪಾಲುಗಳಿವು. ನಿಶ್ಚಯವಾಗಿಯೂ ಅಲ್ಲಾಹನು ಸಕಲವನ್ನು ಬಲ್ಲವನೂ ಮಹಾ ಯುಕ್ತಿಪೂರ್ಣನೂ ಆಗಿರುತ್ತಾನೆ.

وَلَكُمْ نِصْفُ مَا تَرَكَ أَزْوَاجُكُمْ إِن لَّمْ يَكُن لَّهُنَّ وَلَدٌ ۚ فَإِن كَانَ لَهُنَّ وَلَدٌ فَلَكُمُ الرُّبُعُ مِمَّا تَرَكْنَ ۚ مِن بَعْدِ وَصِيَّةٍ يُوصِينَ بِهَا أَوْ دَيْنٍ ۚ وَلَهُنَّ الرُّبُعُ مِمَّا تَرَكْتُمْ إِن لَّمْ يَكُن لَّكُمْ وَلَدٌ ۚ فَإِن كَانَ لَكُمْ وَلَدٌ فَلَهُنَّ الثُّمُنُ مِمَّا تَرَكْتُم ۚ مِّن بَعْدِ وَصِيَّةٍ تُوصُونَ بِهَا أَوْ دَيْنٍ ۗ وَإِن كَانَ رَجُلٌ يُورَثُ كَلَالَةً أَوِ امْرَأَةٌ وَلَهُ أَخٌ أَوْ أُخْتٌ فَلِكُلِّ وَاحِدٍ مِّنْهُمَا السُّدُسُ ۚ فَإِن كَانُوا أَكْثَرَ مِن ذَٰلِكَ فَهُمْ شُرَكَاءُ فِي الثُّلُثِ ۚ مِن بَعْدِ وَصِيَّةٍ يُوصَىٰ بِهَا أَوْ دَيْنٍ غَيْرَ مُضَارٍّ ۚ وَصِيَّةً مِّنَ اللَّهِ ۗ وَاللَّهُ عَلِيمٌ حَلِيمٌ ﴿١٢﴾

12. ನಿಮ್ಮ ಪತ್ನಿಯರು ಮಕ್ಕಳಿಲ್ಲದವರಾಗಿದ್ದರೆ ಅವರು ಬಿಟ್ಟು ಹೋದುದರಲ್ಲಿ ಅರ್ಧಾಂಶ ನಿಮಗೆ ಸಿಗುವುದು. ಮಕ್ಕಳಿದ್ದರೆ ಅವರು ಮಾಡಿದ್ದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಸೊತ್ತಿನ ನಾಲ್ಕನೆಯ ಒಂದಂಶ ನಿಮ್ಮದು. ನೀವು ಮಕ್ಕಳಿಲ್ಲದವರಾಗಿದ್ದರೆ ನೀವು ಬಿಟ್ಟುಹೋದ ಸೊತ್ತಿನ ಕಾಲಂಶಕ್ಕೆ ಅವರು ಹಕ್ಕುದಾರರಾಗುವರು. ಮಕ್ಕಳಿದ್ದರೆ ನೀವು ಮಾಡಿದ್ದ ವಸಿಯ್ಯತ್ ಮತ್ತು ಸಾಲಗಳ ಪಾವತಿಯಾದ ಬಳಿಕ ಉಳಿಯುವ ಸೊತ್ತಿನ ಎಂಟನೆಯ ಒಂದಂಶ ಅವರದಾಗುವುದು.[13] (ವಾರೀಸುದಾರರೊಳಗೆ ಪಾಲಾಗತಕ್ಕ ಸೊತ್ತನ್ನು ಬಿಟ್ಟುಹೋದ) ಪುರುಷನಾಗಲಿ, ಸ್ತ್ರೀಯಾಗಲಿ ಮಕ್ಕಳಿಲ್ಲದವರಾಗಿದ್ದು ಅವರ ಮಾತಾಪಿತರೂ ಜೀವಂತರಾಗಿಲ್ಲದಿದ್ದು ಅವರಿಗೆ ಒಬ್ಬ ಸಹೋದರ ಅಥವಾ ಒಬ್ಬ ಸಹೋದರಿ ಇದ್ದರೆ, ಅವರಲ್ಲಿ ಪ್ರತಿಯೊಬ್ಬರಿಗೆ ಆರನೆಯ ಒಂದಂಶ ಸಿಗುವುದು ಮತ್ತು ಸಹೋದರ ಸಹೋದರಿಯರು ಒಬ್ಬರಿಗಿಂತ ಅಧಿಕ ಸಂಖ್ಯೆಯಲ್ಲಿದ್ದರೆ, ಮೃತರು ಮಾಡಿದ್ದ ಹಾನಿಕಾರಕವಲ್ಲದ[14] ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಒಟ್ಟು ಸೊತ್ತಿನ ಮೂರನೆಯ ಒಂದಂಶದಲ್ಲಿ ಅವರೆಲ್ಲರೂ ಭಾಗಿಗಳಾಗುವರು.[15] ಇವು ಅಲ್ಲಾಹನ ಅಪ್ಪಣೆಗಳು ಮತ್ತು ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ.

13. ಅರ್ಥಾತ್- ಒಬ್ಬಳೇ ಪತ್ನಿಯಿದ್ದರೂ, ಅನೇಕ ಪತ್ನಿಯರಿದ್ದರೂ ಸಂತಾನವಿದ್ದರೆ ಅವರ ಪಾಲಿಗೆ ಎಂಟನೇ ಒಂದು ($^1/_8$) ಭಾಗವಿರುವುದು. ಸಂತಾನವಿಲ್ಲದಿದ್ದರೆ ಅವರು ನಾಲ್ಕನೇ ಒಂದು ($^1/_4$) ಭಾಗವನ್ನು ಪಡೆಯಲು ಅರ್ಹರಾಗುವರು. ಎಂಟನೇ ಒಂದು ($^1/_8$) ಅಥವಾ ನಾಲ್ಕನೇ ಒಂದು ($^1/_4$) ಭಾಗದ ಆಸ್ತಿಯಲ್ಲಿ ಎಲ್ಲ ಪತ್ನಿಯರಿಗೂ ಸಮಪಾಲಿರುವುದು.

14. ಹಾನಿಕಾರಕವಾದ ವಸಿಯ್ಯತ್ ಎಂದರೆ ಪಾಲನ್ನು ಪಡೆಯಲು ಬಾಧ್ಯಸ್ಥರಾದ ಸಂಬಂಧಿಕರ ಹಕ್ಕುಗಳು ವಂಚಿಸಲ್ಪಡುವಂತಹ ವಸಿಯ್ಯತ್ ಆಗಿದೆ. ಹಾನಿಕಾರಕವಾದ ಸಾಲವೆಂದರೆ ಹಕ್ಕುದಾರರನ್ನು ವಂಚಿಸಲಿಕ್ಕಾಗಿಯೇ ವಿನಾಕಾರಣ ವ್ಯಕ್ತಿ ತಾನು ಪಡೆಯದ ಸಾಲವನ್ನು ಪಡೆದಿದ್ದೇನೆನ್ನುವುದಾಗಿದೆ. ಅಥವಾ ಹಕ್ಕುದಾರರನ್ನು ಆಸ್ತಿಯಿಂದ ವಂಚಿತಗೊಳಿಸುವ ಉದ್ದೇಶದಿಂದ ಸಾಲದ ಕುತಂತ್ರ ಹೂಡುವುದಾಗಿದೆ.

15. ಈ ಸೂಕ್ತದಲ್ಲಿರುವ ಸೋದರ ಸೋದರಿಯರ ಪ್ರಸ್ತಾಪ ಏಕೋದರ ಸೋದರ ಸೋದರಿಯರ ಅರ್ಥಾತ್ ತಂದೆ ಬೇರೆಯಾದರೂ ಒಂದೇ ತಾಯಿಯ ಗರ್ಭದಲ್ಲಿ ಜನಿಸಿದ ಸೋದರ-ಸೋದರಿಯರ ಕಡೆಗಿದೆ. ಈ ಬಗ್ಗೆ ವ್ಯಾಖ್ಯಾನಕಾರರಲ್ಲಿ ಒಮ್ಮತಾಭಿಪ್ರಾಯವಿದೆ. ಒಡಹುಟ್ಟಿದ ಸೋದರ-ಸೋದರಿಯರು ಮತ್ತು ತಂದೆಯ ಮೂಲಕ ಮೃತನಿಗೆ ಸಂಬಂಧವಿರುವ ಮಲ ಸೋದರ ಸೋದರಿಯರ ಕುರಿತು ಈ ಅಧ್ಯಾಯದ ಕೊನೆಯ ಸೂಕ್ತದಲ್ಲಿ ವಿವರಿಸಲಾಗಿದೆ.

13. ಇವು ಅಲ್ಲಾಹನು ನಿಶ್ಚಯಿಸಿದ ಮೇರೆಗಳು. ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವನಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನ ಗಳಲ್ಲಿ ಅಲ್ಲಾಹನು ಪ್ರವೇಶ ಕೊಡುವನು. ಅವನು ಆ ಸ್ವರ್ಗೋ ದ್ಯಾನಗಳಲ್ಲಿ ಸದಾ ವಾಸಿಸುತ್ತಿರುವನು ಮತ್ತು ಇದೇ ಅಮೋಘ ವಿಜಯವಾಗಿದೆ.

تِلْكَ حُدُوْدُ اللّٰهِ ۚ وَمَنْ يُّطِعِ اللّٰهَ وَرَسُوْلَهٗ يُدْخِلْهُ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ۚ وَذٰلِكَ الْفَوْزُ الْعَظِيْمُ ﴿١٣﴾

14. ಅಲ್ಲಾಹನ ಹಾಗೂ ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡುವವನನ್ನು ಮತ್ತು ಅವನು ನಿರ್ಣಯಿಸಿ ಕೊಟ್ಟ ಮೇರೆಗಳನ್ನು ಮೀರುವವನನ್ನು ಅಲ್ಲಾಹನು ನರಕಾಗ್ನಿಗೆ ತಳ್ಳುವನು. ಅದರಲ್ಲಿ ಅವನು ಸದಾಕಾಲವಿರುವನು ಮತ್ತು ಅವನಿಗೆ ನಿಂದನಾತ್ಮಕ ಶಿಕ್ಷೆ ಇದೆ.

وَمَنْ يَّعْصِ اللّٰهَ وَرَسُوْلَهٗ وَيَتَعَدَّ حُدُوْدَهٗ يُدْخِلْهُ نَارًا خَالِدًا فِيْهَا ۪ وَلَهٗ عَذَابٌ مُّهِيْنٌ ﴿١٤﴾

15. ನಿಮ್ಮ ಸ್ತ್ರೀಯರಲ್ಲಿ ಯಾರಾದರೂ ನೀಚವೃತ್ತಿ (ವ್ಯಭಿಚಾರ) ಎಸಗಿದರೆ ಅವರ ಬಗ್ಗೆ ನಿಮ್ಮಲ್ಲಿನ ನಾಲ್ವರ ಸಾಕ್ಷ್ಯ ಪಡೆಯಿರಿ. ನಾಲ್ವರು ಸಾಕ್ಷ್ಯ ಕೊಟ್ಟರೆ ಆ ಸ್ತ್ರೀಯರನ್ನು ಅವರ ಜೀವನ ಪರ್ಯಂತ ಅಥವಾ ಅಲ್ಲಾಹನು ಅವರಿಗೆ ಬೇರಾವುದಾದರೂ ದಾರಿ ತೆರೆಯುವ ತನಕ ಗೃಹ ಬಂಧನದಲ್ಲಿರಿಸಿರಿ.

وَالّٰتِيْ يَاْتِيْنَ الْفَاحِشَةَ مِنْ نِّسَآئِكُمْ فَاسْتَشْهِدُوْا عَلَيْهِنَّ اَرْبَعَةً مِّنْكُمْ ۚ فَاِنْ شَهِدُوْا فَاَمْسِكُوْهُنَّ فِي الْبُيُوْتِ حَتّٰى يَتَوَفّٰىهُنَّ الْمَوْتُ اَوْ يَجْعَلَ اللّٰهُ لَهُنَّ سَبِيْلًا ﴿١٥﴾

16. ನಿಮ್ಮ ಪೈಕಿ ಈ ಪಾಪಕಾರ್ಯವೆಸಗುವ ಈರ್ವರಿಗೂ ವೇದನೆ ಕೊಡಿರಿ. ಅವರು ಪಶ್ಚಾತ್ತಾಪ ಪಟ್ಟು ತಮ್ಮನ್ನು ಸುಧಾರಿಸಿ ಕೊಂಡರೆ ಅವರನ್ನು ಬಿಟ್ಟುಬಿಡಿರಿ. ಅಲ್ಲಾಹನು ಪಶ್ಚಾತ್ತಾಪವನ್ನು ಬಹಳವಾಗಿ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.[16]

وَالَّذٰنِ يَاْتِيٰنِهَا مِنْكُمْ فَاٰذُوْهُمَا ۚ فَاِنْ تَابَا وَاَصْلَحَا فَاَعْرِضُوْا عَنْهُمَا ۗ اِنَّ اللّٰهَ كَانَ تَوَّابًا رَّحِيْمًا ﴿١٦﴾

17. ಅವಿವೇಕದಿಂದ ಕೆಟ್ಟ ಕಾರ್ಯವೇನಾದರೂ ಎಸಗಿ ಅನಂತರ ಶೀಘ್ರವೇ ಪಶ್ಚಾತ್ತಾಪ ಪಟ್ಟು ಮರಳುವವರ ಪಶ್ಚಾತ್ತಾಪವನ್ನು ಮಾತ್ರ ಅಲ್ಲಾಹನಿಂದ ಸ್ವೀಕರಿಸಲ್ಪಡುವುದೆಂಬುದನ್ನು ತಿಳಿದಿರ ಬೇಕು. ಅಲ್ಲಾಹನು ಇಂತಹವರ ಮೇಲೆ ಪುನಃ ತನ್ನ ಕೃಪಾಕಟಾಕ್ಷ ಬೀರುತ್ತಾನೆ. ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

اِنَّمَا التَّوْبَةُ عَلَى اللّٰهِ لِلَّذِيْنَ يَعْمَلُوْنَ السُّوْٓءَ بِجَهَالَةٍ ثُمَّ يَتُوْبُوْنَ مِنْ قَرِيْبٍ فَاُولٰٓئِكَ يَتُوْبُ اللّٰهُ عَلَيْهِمْ ۗ وَكَانَ اللّٰهُ عَلِيْمًا حَكِيْمًا ﴿١٧﴾

18. ಆದರೆ, ಪಾಪಕಾರ್ಯಗಳನ್ನು ಮಾಡುತ್ತಲೇ ಇದ್ದು ಕೊನೆಗೆ ಮರಣವು ಆಸನ್ನವಾದಾಗ, ಈಗ ನಾನು ಪಶ್ಚಾತ್ತಾಪ ಪಟ್ಟೆ

وَلَيْسَتِ التَّوْبَةُ لِلَّذِيْنَ يَعْمَلُوْنَ السَّيِّاٰتِ ۚ حَتّٰٓى اِذَا حَضَرَ اَحَدَهُمُ الْمَوْتُ قَالَ

16. ಇದು ವ್ಯಭಿಚಾರದ ಕುರಿತು ಮೊದಲ ಆದೇಶವಾಗಿದೆ. ಅನಂತರ ಸ್ತ್ರೀ ಪುರುಷರಿಬ್ಬರಿಗೂ ನೂರು ಕೊರಡೆ ಏಟುಗಳನ್ನು ಬಾರಿಸುವ ಆದೇಶ ಕೊಡಲಾಯಿತು.

ಎನ್ನುವವನಿಗೆ 'ಪಶ್ಚಾತ್ತಾಪ' ಇಲ್ಲ. ಅದೇ ರೀತಿಯಲ್ಲಿ ಕೊನೆಯುಸಿರಿನ ತನಕವೂ 'ಸತ್ಯನಿಷೇಧಿ'ಯಾಗಿರುವವರಿಗೂ 'ಪಶ್ಚಾತ್ತಾಪ' ಇಲ್ಲ. ಇಂತಹವರಿಗೆ ನಾವು ವೇದನಾಯುಕ್ತ ಶಿಕ್ಷೆಯನ್ನು ಸಿದ್ಧಗೊಳಿಸಿಟ್ಟಿರುವೆವು.

إِنِّي تُبْتُ الْآنَ وَلَا الَّذِينَ يَمُوتُونَ وَهُمْ كُفَّارٌ ۚ أُولَٰئِكَ أَعْتَدْنَا لَهُمْ عَذَابًا أَلِيمًا ﴿١٨﴾

19. ಓ ಸತ್ಯವಿಶ್ವಾಸಿಗಳೇ, ನೀವು ಬಲಾತ್ಕಾರವಾಗಿ ಸ್ತ್ರೀಯರ ವಾರೀಸುದಾರರಾಗುವುದು ನಿಮಗೆ ಧರ್ಮಬದ್ಧವಲ್ಲ.[17] ಅವರನ್ನು ಸತಾಯಿಸಿ, ನೀವು ಅವರಿಗೆ ಕೊಟ್ಟಿದ್ದ ವಿವಾಹಧನದ ಒಂದಂಶವನ್ನು ದಕ್ಕಿಸಿಕೊಳ್ಳಲು ಪ್ರಯತ್ನಿಸುವುದೂ ನಿಮಗೆ ಧರ್ಮಬದ್ಧವಲ್ಲ. ಆದರೆ, ಅವರು ಪ್ರತ್ಯಕ್ಷ ನೀಚಕಾರ್ಯ ವೆಸಗಿದಾಗ (ಅದರ ಹಕ್ಕು ನಿಮಗೆ ಇದ್ದೇ ಇದೆ.)[18] ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯ ವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂ ಬಹುದು.

يَا أَيُّهَا الَّذِينَ آمَنُوا لَا يَحِلُّ لَكُمْ أَنْ تَرِثُوا النِّسَاءَ كَرْهًا ۖ وَلَا تَعْضُلُوهُنَّ لِتَذْهَبُوا بِبَعْضِ مَا آتَيْتُمُوهُنَّ إِلَّا أَنْ يَأْتِينَ بِفَاحِشَةٍ مُبَيِّنَةٍ ۚ وَعَاشِرُوهُنَّ بِالْمَعْرُوفِ ۚ فَإِنْ كَرِهْتُمُوهُنَّ فَعَسَىٰ أَنْ تَكْرَهُوا شَيْئًا وَيَجْعَلَ اللَّهُ فِيهِ خَيْرًا كَثِيرًا ﴿١٩﴾

20. ಮತ್ತು ನೀವು ಓರ್ವ ಪತ್ನಿಯ ಸ್ಥಾನದಲ್ಲಿ ಇನ್ನೋರ್ವ ಪತ್ನಿಯನ್ನು ತರುವ ನಿರ್ಧಾರವನ್ನೇ ಮಾಡಿಕೊಂಡರೆ ಅವಳಿಗೆ ನೀವು (ಮೊದಲ ಪತ್ನಿಗೆ) ಸಂಪತ್ತಿನ ರಾಶಿಯನ್ನೇ ಕೊಟ್ಟಿದ್ದರೂ ಅದರಿಂದ ಲೇಶ ಮಾತ್ರವನ್ನೂ ಹಿಂದಕ್ಕೆ ಪಡೆಯಬಾರದು. ನೀವು ಸುಳ್ಳಾರೋಪ ಹೊರಿಸಿ ಮತ್ತು ಪ್ರತ್ಯಕ್ಷ ಅತಿರೇಕವೆಸಗಿ ಅದನ್ನು ಹಿಂದಕ್ಕೆ ಪಡೆಯುವಿರಾ?

وَإِنْ أَرَدْتُمُ اسْتِبْدَالَ زَوْجٍ مَكَانَ زَوْجٍ وَآتَيْتُمْ إِحْدَاهُنَّ قِنْطَارًا فَلَا تَأْخُذُوا مِنْهُ شَيْئًا ۚ أَتَأْخُذُونَهُ بُهْتَانًا وَإِثْمًا مُبِينًا ﴿٢٠﴾

21. ನೀವು ಪರಸ್ಪರ ರಸಾನಂದವನ್ನು ಸವಿದ ಬಳಿಕ ಹಾಗೂ ಅವರು ನಿಮ್ಮಿಂದ ಒಂದು ಪ್ರಬಲ ಕರಾರನ್ನು ಪಡೆದುಕೊಂಡ ಬಳಿಕ ನೀವು ಅದನ್ನು ಹಿಂದಕ್ಕೆ ಪಡೆಯುವುದಾದರೂ ಹೇಗೆ?

وَكَيْفَ تَأْخُذُونَهُ وَقَدْ أَفْضَىٰ بَعْضُكُمْ إِلَىٰ بَعْضٍ وَأَخَذْنَ مِنْكُمْ مِيثَاقًا غَلِيظًا ﴿٢١﴾

22. ನಿಮ್ಮ ಪಿತರು ವಿವಾಹ ಮಾಡಿಕೊಂಡಿದ್ದ ಸ್ತ್ರೀಯರನ್ನು ನೀವು ಎಂದೆಂದಿಗೂ ವಿವಾಹವಾಗಬೇಡಿರಿ. ಆದರೆ ಹಿಂದೆ ಆದುದು ಆಗಿಹೋಯಿತು.[19] ವಾಸ್ತವದಲ್ಲಿ ಇದೊಂದು ಅಶ್ಲೀಲ ಕಾರ್ಯ,

وَلَا تَنْكِحُوا مَا نَكَحَ آبَاؤُكُمْ مِنَ النِّسَاءِ إِلَّا مَا قَدْ سَلَفَ ۚ إِنَّهُ كَانَ فَاحِشَةً

17. ಅರ್ಥಾತ್- ಪತಿಯ ನಿಧನಾನಂತರ ಅವನ ಕುಟುಂಬಸ್ಥರು ಅವನ ವಿಧವೆಯನ್ನು ಮೃತನ ಸೊತ್ತೆಂದು ಭಾವಿಸಿ ಅವಳ ಉತ್ತರಾಧಿಕಾರಿಯಾಗಿ ಬಿಡಬಾರದು. ಪತಿ ನಿಧನ ಹೊಂದಿದ ನಂತರ ಸ್ತ್ರೀ ಸ್ವತಂತ್ರಳು. 'ಇದ್ದತ್'ನ ಅವಧಿ ಮುಗಿದ ನಂತರ ಆಕೆ ತಾನಿಚ್ಛಿಸಿದಲ್ಲಿಗೆ ಹೋಗಬಹುದು ಮತ್ತು ತಾನಿಚ್ಛಿಸಿದವರನ್ನು ವಿವಾಹವಾಗಬಹುದು.

18. ಇದು ಸಂಪತ್ತನ್ನು ಕಬಳಿಸಲಿಕ್ಕಾಗಿಯಲ್ಲ, ಬದಲಾಗಿ ಆಕೆಯ ದುಷ್ಕೃತ್ಯದ ಶಿಕ್ಷೆಯ ರೂಪದಲ್ಲಾಗಿದೆ.

19. ಅರ್ಥಾತ್- ಅಜ್ಞಾನ ಕಾಲದಲ್ಲಿ ತನ್ನ ಮಲತಾಯಿಯನ್ನು ವಿವಾಹವಾದವನು ಈ ಆದೇಶ ಬಂದ ನಂತರವೂ ಆಕೆಯನ್ನು ತನ್ನ ವಿವಾಹ ಬಂಧನದಲ್ಲಿ ಇರಿಸಬಹುದೆಂದು ಇದರ ಅರ್ಥವಲ್ಲ. ಮೊದಲು ಈ ರೀತಿ ವಿವಾಹ ಮಾಡಿಕೊಂಡಿರುವುದರಿಂದ ಆಗಿರುವ ಸಂತಾನ

وَمَقْتًا وَسَاءَ سَبِيلًا ﴿٢٢﴾

ಅಪ್ರಿಯ ಕಾರ್ಯ ಮತ್ತು ದುಷ್ಟ ಸಂಪ್ರದಾಯವಾಗಿದೆ.[20]

حُرِّمَتْ عَلَيْكُمْ أُمَّهَاتُكُمْ وَبَنَاتُكُمْ وَأَخَوَاتُكُمْ
وَعَمَّاتُكُمْ وَخَالَاتُكُمْ وَبَنَاتُ الْأَخِ وَبَنَاتُ
الْأُخْتِ وَأُمَّهَاتُكُمُ اللَّاتِي أَرْضَعْنَكُمْ وَأَخَوَاتُكُمْ
مِنَ الرَّضَاعَةِ وَأُمَّهَاتُ نِسَائِكُمْ وَرَبَائِبُكُمُ
اللَّاتِي فِي حُجُورِكُمْ مِنْ نِسَائِكُمُ اللَّاتِي
دَخَلْتُمْ بِهِنَّ فَإِنْ لَمْ تَكُونُوا دَخَلْتُمْ
بِهِنَّ فَلَا جُنَاحَ عَلَيْكُمْ وَحَلَائِلُ
أَبْنَائِكُمُ الَّذِينَ مِنْ أَصْلَابِكُمْ وَأَنْ
تَجْمَعُوا بَيْنَ الْأُخْتَيْنِ إِلَّا مَا قَدْ سَلَفَ
إِنَّ اللَّهَ كَانَ غَفُورًا رَحِيمًا ﴿٢٣﴾

23. ನಿಮಗೆ ಈ ಸ್ತ್ರೀಯರು ವಿವಾಹಕ್ಕೆ ನಿಷಿದ್ಧರು:- ನಿಮ್ಮ ಮಾತೆಯರು,[21] ಪುತ್ರಿಯರು,[22] ಸಹೋದರಿಯರು,[23] ಸೋದರತ್ತೆಯರು, ತಾಯಿಯ ಸೋದರಿಯರು, ಸೋದರ ಪುತ್ರಿಯರು, ಸೋದರಿ ಪುತ್ರಿಯರು,[24] ನಿಮಗೆ ಮೊಲೆ ಹಾಲುಣಿಸಿದ ಸಾಕು ತಾಯಂದಿರು, ನಿಮ್ಮೊಂದಿಗೆ ಸ್ತನಪಾನ ಸಂಬಂಧವಿರುವ ಸೋದರಿಯರು,[25] ನಿಮ್ಮ ಪತ್ನಿಯರ ತಾಯಂದಿರು ನಿಮ್ಮ ಮಡಿಲಲ್ಲಿ ಪೋಷಣೆ ಪಡೆದಿರುವ ನಿಮ್ಮ ಪತ್ನಿಯ ಪುತ್ರಿಯರು,[26] ಯಾವ ಪತ್ನಿಯರೊಂದಿಗೆ ನೀವು ಸಂಭೋಗ ಮಾಡಿರುವಿರೋ ಅವರ ಪುತ್ರಿಯರು, ಆದರೆ (ಬರೇ ನಿಕಾಹ್ ಆಗಿದ್ದು) ನೀವು ಸಂಭೋಗ ಮಾಡಿರದಿದ್ದರೆ (ಅವರನ್ನು ಬಿಟ್ಟು ಅವರ ಪುತ್ರಿಯರನ್ನು ವಿವಾಹ ಮಾಡಿಕೊಳ್ಳುವುದರಲ್ಲಿ) ದೋಷವಿಲ್ಲ. ನಿಮ್ಮ ಸ್ವಂತ ಪುತ್ರರ ಪತ್ನಿಯರೂ ನಿಮಗೆ ನಿಷಿದ್ಧ.[27] ಒಂದು ವಿವಾಹ ಬಂಧನದಲ್ಲಿ ಇಬ್ಬರು ಸಹೋದರಿಯನ್ನಿರಿಸಿ ಕೊಳ್ಳುವುದೂ ನಿಷಿದ್ಧವಾಗಿದೆ.[28] ಆದರೆ

ಈ ಆದೇಶ ಬಂದ ನಂತರ ಜಾರಸಂತಾನವೆನಿಸಿಕೊಳ್ಳುವುದಿಲ್ಲ. ಅಂತೆಯೇ ಅವರು ತಮ್ಮ ಪಿತ್ರಾರ್ಜಿತ ಸೊತ್ತಿನಲ್ಲಿರುವ ಪಾಲಿನಿಂದಲೂ ವಂಚಿತರಾಗುವುದಿಲ್ಲವೆಂದು ಇದರ ಅರ್ಥವಾಗಿದೆ.

20. ಇಸ್ಲಾಮೀ ಕಾನೂನಿನ ಪ್ರಕಾರ ಇದೊಂದು ಕ್ರಿಮಿನಲ್ ಅಪರಾಧವಾಗಿದ್ದು ಪೊಲೀಸರು ಅದರಲ್ಲಿ ಹಸ್ತಕ್ಷೇಪ ನಡೆಸಬಹುದಾಗಿದೆ.

21. ಸ್ವಂತ ತಾಯಿ ಮತ್ತು ಮಲತಾಯಿಗಳಿಬ್ಬರೂ ತಾಯಿಯ ವ್ಯಾಖ್ಯೆಯಲ್ಲಿ ಬರುತ್ತಾರೆ. ಅಂತೆಯೇ ತಂದೆಯ ತಾಯಿ ಮತ್ತು ತಾಯಿಯ ತಾಯಿ ಕೂಡ.

22. ಪುತ್ರಿ ಎಂದರೆ ಅದರಲ್ಲಿ ಮಗನ ಮಗಳು ಮತ್ತು ಮಗಳ ಮಗಳೂ ಸೇರಿದ್ದಾಳೆ.

23. ಸೋದರಿ ಎಂದರೆ ಒಡಹುಟ್ಟಿದ ಸಹೋದರಿ, ಮಾತೃ ಸಂಬಂಧಿ ಸೋದರಿ ಮತ್ತು ಪಿತೃಸಂಬಂಧಿ ಸೋದರಿ ಮೂವರೂ ಈ ಆದೇಶಕ್ಕೆ ಒಳಪಡುತ್ತಾರೆ.

24. ಈ ಎಲ್ಲಾ ಸಂಬಂಧದಲ್ಲಿ ಸ್ವಂತ ಮತ್ತು ಮಲ ಸಂಬಂಧಗಳೆಂಬ ವ್ಯತ್ಯಾಸವಿಲ್ಲ.

25. ಒಂದು ಮಗು ಗಂಡಾಗಿರಲಿ ಹೆಣ್ಣಾಗಿರಲಿ ಓರ್ವ ಮಹಿಳೆಯ ಹಾಲುಂಡರೆ ಆ ಮಹಿಳೆಯು ಮಗುವಿಗೆ ತಾಯಿಯಂತೆ ಮತ್ತು ಆಕೆಯ ಪತಿಯು ತಂದೆಯಂತೆ ಎಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿದೆ. ನೈಜ ತಂದೆ-ತಾಯಿಗಳ ಮೂಲಕ ನಿಷಿದ್ಧವಾಗಿರುವ ಎಲ್ಲಾ ಸಂಬಂಧಗಳೂ ಹಾಲುಂಡ ಸಂಬಂಧವಿರುವ ತಂದೆ-ತಾಯಿಗಳಿಗೂ ಅನ್ವಯಿಸುತ್ತದೆ. ಮಗುವಿನ ಪಾಲಿಗೆ ತನ್ನ ಜತೆಗೆ ಹಾಲುಂಡ ಮಗು ಮಾತ್ರವಲ್ಲ ಅದರ ಎಲ್ಲ ಸೋದರ-ಸೋದರಿಯರೂ ವಿವಾಹ ನಿಷಿದ್ಧ ಸಂಬಂಧ ಹೊಂದಿದ್ದಾರೆ. ಅವರೆಲ್ಲರೂ ಅವನ ಒಡ ಹುಟ್ಟಿದ ಸೋದರ-ಸೋದರಿಯರಿಗೆ ಸಮಾನರಾಗಿದ್ದಾರೆ. ಅವರ ಮಕ್ಕಳು ಅವನ ಪಾಲಿಗೆ ಸ್ವಂತ ಸೋದರ ಪುತ್ರ ಪುತ್ರಿಯರು ಮತ್ತು ಸೋದರಿ ಪುತ್ರ-ಪುತ್ರಿಯರಂತಾಗಿದ್ದಾರೆ.

26. ಆಕೆ ಮಲತಂದೆಯ ಮನೆಯಲ್ಲಿ ಬೆಳೆದಿದ್ದರೆ ಮಾತ್ರ ನಿಷಿದ್ಧಳು ಎಂಬ ಶರತ್ತಿಲ್ಲ. ಮಲಪುತ್ರಿ, ಮಲತಂದೆಯ ಮನೆಯಲ್ಲಿ ಬೆಳೆದಿದ್ದರೂ ಇಲ್ಲದಿದ್ದರೂ ಆಕೆ ಅವನ ಪಾಲಿಗೆ ಎಲ್ಲಾ ಸಂದರ್ಭದಲ್ಲೂ ನಿಷಿದ್ಧಳು ಎಂಬ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತಾಭಿಪ್ರಾಯವಿದೆ.

27. ಮಗನ ಪತ್ನಿಯಂತೆಯೇ ಮೊಮ್ಮಗನ ಪತ್ನಿಯೂ ಅಜ್ಜನ ಪಾಲಿಗೆ ನಿಷಿದ್ಧಳಾಗಿದ್ದಾಳೆ.

28. ತಾಯಿಯ ಸೋದರಿ, ಸೋದರಿ ಪುತ್ರಿ, ಸೋದರತ್ತೆ ಮತ್ತು ಸೋದರ ಪುತ್ರಿಯರನ್ನು ಒಂದೇ ಕಾಲದಲ್ಲಿ ವಿವಾಹ ಬಂಧನದಲ್ಲಿರಿಸುವುದೂ ನಿಷಿದ್ಧವಾಗಿದೆ. ಈ ವಿಷಯದಲ್ಲಿ ಗಮನದಲ್ಲಿರಿಸಬೇಕಾದ ನಿಯಮವೇನೆಂದರೆ ಇಬ್ಬರು ಸ್ತ್ರೀಯ ಪೈಕಿ ಒಬ್ಬಳು ಒಂದು ವೇಳೆ

ಹಿಂದೆ ಆದುದು ಆಗಿ ಹೋಯಿತು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಿಸುವವನೂ ಕೃಪೆದೋರುವವನೂ ಆಗಿರುತ್ತಾನೆ.[29]

24. *ಇತರರ ವಿವಾಹ ಬಂಧನದಲ್ಲಿರುವ ಸ್ತ್ರೀಯರೂ (ಮುಹ್ಸನಾತ್) ನಿಮಗೆ ನಿಷಿದ್ಧರಾಗಿದ್ದಾರೆ. ಆದರೆ (ಯುದ್ಧದಲ್ಲಿ) ನಿಮ್ಮ ವಶಕ್ಕೆ ಬಂದ ಸ್ತ್ರೀಯರು ಇದಕ್ಕೆ ಹೊರತಾಗಿರುತ್ತಾರೆ.[30] ಇದು ನಿಮ್ಮ ಮೇಲೆ ಅಲ್ಲಾಹನು ನಿರ್ಬಂಧಗೊಳಿಸಿರುವ ಕಾನೂನು. ಇವರ ಹೊರತಾಗಿರುವ ಸ್ತ್ರೀಯರನ್ನು ನೀವು ನಿಮ್ಮ ಸಂಪತ್ತಿನ ಮೂಲಕ ಗಳಿಸುವುದನ್ನು ಧರ್ಮಬದ್ಧಗೊಳಿಸಲಾಗಿದೆ. ಆದರೆ ಅವರನ್ನು ವಿವಾಹ ಬಂಧನದಲ್ಲಿಡಬೇಕು. ಸ್ವಚ್ಛಂದ ಲೈಂಗಿಕತೆ ಸಲ್ಲದು. ಇನ್ನು ನೀವು ಅವರೊಂದಿಗೆ ದಾಂಪತ್ಯ ಜೀವನದ ಸವಿಯನ್ನುಣ್ಣುವುದರ ಪ್ರತಿಫಲವಾಗಿ ಅವರ ವಿವಾಹಧನವನ್ನು ಕಡ್ಡಾಯವಾಗಿ ಅವರಿಗೆ ಕೊಡಿರಿ. ಆದರೆ, ವಿವಾಹಧನ ನಿಶ್ಚಯಿಸಿಕೊಂಡ ಅನಂತರ ಪರಸ್ಪರ ಒಮ್ಮತದ ಒಪ್ಪಂದವೇನಾದರೂ ಆಗಿದ್ದರೆ, ಅದರಲ್ಲೇನೂ ದೋಷವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುತ್ತಾನೆ.

وَّالْمُحْصَنٰتُ مِنَ النِّسَآءِ اِلَّا مَا مَلَكَتْ اَيْمَانُكُمْ ۚ كِتٰبَ اللّٰهِ عَلَيْكُمْ ۚ وَاُحِلَّ لَكُمْ مَّا وَرَآءَ ذٰلِكُمْ اَنْ تَبْتَغُوْا بِاَمْوَالِكُمْ مُّحْصِنِيْنَ غَيْرَ مُسٰفِحِيْنَ ۚ فَمَا اسْتَمْتَعْتُمْ بِهٖ مِنْهُنَّ فَاٰتُوْهُنَّ اُجُوْرَهُنَّ فَرِيْضَةً ۚ وَلَا جُنَاحَ عَلَيْكُمْ فِيْمَا تَرٰضَيْتُمْ بِهٖ مِنْۢ بَعْدِ الْفَرِيْضَةِ ۚ اِنَّ اللّٰهَ كَانَ عَلِيْمًا حَكِيْمًا ۝

25. ನಿಮ್ಮಲ್ಲಾರಾದರೂ ಕುಲೀನ ಮುಸ್ಲಿಮ್ ಸ್ತ್ರೀ(ಮುಹ್ಸನಾತ್) ಯರೊಂದಿಗೆ ವಿವಾಹ ಮಾಡಿಕೊಳ್ಳುವಷ್ಟು ಸ್ಥಿತಿವಂತನಾಗಿರದಿದ್ದರೆ, ನಿಮ್ಮ ಸ್ವಾಧೀನದಲ್ಲಿರುವ ವಿಶ್ವಾಸಿನಿಯರಾದ ದಾಸಿಯರ ಪೈಕಿ ಯಾರೊಂದಿಗಾದರೂ ವಿವಾಹ ಮಾಡಿಕೊಳ್ಳಲಿ. ಅಲ್ಲಾಹನು ನಿಮ್ಮ ವಿಶ್ವಾಸಗಳನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ನೀವೆಲ್ಲರೂ ಒಂದೇ ವರ್ಗಕ್ಕೆ ಸೇರಿದವರು. ಆದುದರಿಂದ ನೀವು ಅವರ ಪೋಷಕರ ಅನುಮತಿಯಿಂದ ಅವರೊಂದಿಗೆ ವಿವಾಹ ಮಾಡಿಕೊಳ್ಳಿರಿ ಮತ್ತು ಅವರು ವಿವಾಹ ಬಂಧನದಲ್ಲಿ ಸುರಕ್ಷಿತೆ (ಮುಹ್ಸನಾತ್)ಯರಾಗಿರುವಂತೆಯೂ ಮುಕ್ತ ಲೈಂಗಿಕ ಸಂಬಂಧ

وَمَنْ لَّمْ يَسْتَطِعْ مِنْكُمْ طَوْلًا اَنْ يَّنْكِحَ الْمُحْصَنٰتِ الْمُؤْمِنٰتِ فَمِنْ مَّا مَلَكَتْ اَيْمَانُكُمْ مِّنْ فَتَيٰتِكُمُ الْمُؤْمِنٰتِ ۚ وَاللّٰهُ اَعْلَمُ بِاِيْمَانِكُمْ ۚ بَعْضُكُمْ مِّنْۢ بَعْضٍ ۚ فَانْكِحُوْهُنَّ بِاِذْنِ اَهْلِهِنَّ وَاٰتُوْهُنَّ اُجُوْرَهُنَّ بِالْمَعْرُوْفِ مُحْصَنٰتٍ غَيْرَ مُسٰفِحٰتٍ وَّلَا مُتَّخِذٰتِ اَخْدَانٍ ۚ فَاِذَآ اُحْصِنَّ فَاِنْ اَتَيْنَ بِفَاحِشَةٍ فَعَلَيْهِنَّ

ಪುರುಷನಾಗಿದ್ದರೆ ಅವನ ವಿವಾಹವು ಇನ್ನೊಬ್ಬಳೊಂದಿಗೆ ನಿಷಿದ್ಧವಾಗುವುದಿದ್ದರೆ ಅಂತಹ ಇಬ್ಬರು ಸ್ತ್ರೀಯರನ್ನು ಜತೆಯಲ್ಲಿ ವಿವಾಹ ಬಂಧನದಲ್ಲಿರಿಸಬಾರದು.

29. ಅರ್ಥಾತ್- ಆ ಕಾರಣಕ್ಕಾಗಿ ಅವನು ವಿಚಾರಣೆಗೆ ಒಳಪಡಲಾರನು. ಆದರೆ ಇಸ್ಲಾಮ್ ಸ್ವೀಕರಿಸಿದ ಬಳಿಕ ಅಜ್ಞಾನ ಕಾಲದಲ್ಲಿ ಅವನು ವಿವಾಹವಾಗಿದ್ದ ಇಬ್ಬರು ಸೋದರಿಯರ ಪೈಕಿ ಒಬ್ಬಳನ್ನು ಇಟ್ಟುಕೊಂಡು ಇನ್ನೊಬ್ಬಳನ್ನು ಬಿಟ್ಟು ಬಿಡಬೇಕಾಗುವುದು.

***ಇಲ್ಲಿಂದ 5ನೆಯ ಕಾಂಡ ಆರಂಭ.**

30. ಅರ್ಥಾತ್- ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ, ಸತ್ಯನಿಷೇಧಿ ಗಂಡಂದಿರು ಶತ್ರು ರಾಷ್ಟ್ರದಲ್ಲಿರುವ ಸ್ತ್ರೀಯರು ನಿಷಿದ್ಧರಲ್ಲ. ಏಕೆಂದರೆ 'ದಾರುಲ್ ಹರಬ್'(ಇಸ್ಲಾಮಿನೊಂದಿಗೆ ಯುದ್ಧ ನಿರತ ರಾಷ್ಟ್ರ)ನಿಂದ 'ದಾರುಲ್ ಇಸ್ಲಾಮ್'(ಇಸ್ಲಾಮೀ ರಾಷ್ಟ್ರ)ಗೆ ಬಂದ ನಂತರ ಅವರ ವೈವಾಹಿಕ ಸಂಬಂಧ ಮುರಿಯುತ್ತದೆ.

ಹೊಂದಿರದಂತೆಯೂ ರಹಸ್ಯ ಕಾಮುಕರನ್ನು ಅರಸದಂತೆಯೂ ಉತ್ತಮ ರೀತಿಯಲ್ಲಿ ಅವರ ವಿವಾಹ ಧನವನ್ನು ಅವರಿಗೆ ಸಲ್ಲಿಸಿರಿ. ಅವರು ವಿವಾಹ ಬಂಧನದಲ್ಲಿ ಸುರಕ್ಷಿತರಾದ ಬಳಿಕ ವ್ಯಭಿಚಾರಕ್ಕಿಳಿದರೆ, ಅವರಿಗೆ ಕುಲೀನ ಸ್ತ್ರೀ(ಮುಹ್ಸನಾತ್)ಯರಿಗೆ ನಿಶ್ಚಯಿಸಲ್ಪಟ್ಟಿರುವ ಶಿಕ್ಷೆಯ ಅರ್ಧಾಂಶ ಶಿಕ್ಷೆಯ ವಿಧಿ ಇದೆ.[31] ನಿಮ್ಮ ಪೈಕಿ, ವಿವಾಹವಾಗದಿರುವ ಕಾರಣ ಸಂಯಮ ಮುರಿದು ಹೋಗಬಹುದೆಂಬ ಆತಂಕವಿರುವವರಿಗಾಗಿ ಈ ಸೌಲಭ್ಯವನ್ನು ಒದಗಿಸಲಾಗಿದೆ. ಆದರೆ ನೀವು ತಾಳ್ಮೆ ವಹಿಸಿದರೆ ಇದು ನಿಮಗೆ ಇನ್ನಷ್ಟು ಉತ್ತಮ. ಅಲ್ಲಾಹನು ಕ್ಷಮಿಸುವಾತನೂ ಕರುಣಾ ನಿಧಿಯೂ ಆಗಿರುತ್ತಾನೆ.

نِصْفُ مَا عَلَى الْمُحْصَنٰتِ مِنَ الْعَذَابِ ۚ ذٰلِكَ
لِمَنْ خَشِيَ الْعَنَتَ مِنْكُمْ ۚ وَاَنْ تَصْبِرُوْا
خَيْرٌ لَّكُمْ ۗ وَاللّٰهُ غَفُوْرٌ رَّحِيْمٌ ﴿٢٥﴾ ع

26. ಅಲ್ಲಾಹನು ನಿಮಗಿಂತ ಮುಂಚೆ ಗತಿಸಿಹೋದ ಸಜ್ಜನರು ಅನುಸರಿಸುತ್ತಿದ್ದ ವಿಧಾನಗಳನ್ನು ನಿಮಗೆ ತೋರಿಸಿಕೊಡಲಿಕ್ಕೂ ಅವುಗಳಂತೆ ನಿಮ್ಮನ್ನು ನಡೆಸಲಿಕ್ಕೂ ಇಚ್ಛಿಸುತ್ತಾನೆ. ಅವನು ತನ್ನ ಕೃಪೆಯೊಂದಿಗೆ ನಿಮ್ಮ ಕಡೆಗೆ ಲಕ್ಷ್ಯವಿಡಲು ಉದ್ದೇಶಿಸುತ್ತಾನೆ. ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುತ್ತಾನೆ.

يُرِيْدُ اللّٰهُ لِيُبَيِّنَ لَكُمْ وَيَهْدِيَكُمْ سُنَنَ
الَّذِيْنَ مِنْ قَبْلِكُمْ وَيَتُوْبَ عَلَيْكُمْ ۗ
وَاللّٰهُ عَلِيْمٌ حَكِيْمٌ ﴿٢٦﴾

27. ಅಲ್ಲಾಹನಂತೂ ತನ್ನ ಕೃಪೆಯೊಂದಿಗೆ ನಿಮ್ಮ ಕಡೆ ಲಕ್ಷ್ಯವಿಡಲು ಬಯಸುತ್ತಾನೆ. ಆದರೆ, ತನ್ನ ದೇಹೇಚ್ಛೆಗಳನ್ನನುಸರಿಸುವವರು, ನೀವು ಸನ್ಮಾರ್ಗವನ್ನು ಬಿಟ್ಟು ಬಹುದೂರ ತೊಲಗಬೇಕೆಂದು ಇಚ್ಛಿಸುತ್ತಾರೆ.

وَاللّٰهُ يُرِيْدُ اَنْ يَّتُوْبَ عَلَيْكُمْ ۟ وَيُرِيْدُ الَّذِيْنَ
يَتَّبِعُوْنَ الشَّهَوٰتِ اَنْ تَمِيْلُوْا مَيْلًا عَظِيْمًا ﴿٢٧﴾

28. ಅಲ್ಲಾಹನು ನಿಮ್ಮ ಮೇಲಿನ ಬಾಧ್ಯತೆಗಳನ್ನು ಹಗುರಗೊಳಿಸ ಬೇಕೆಂದಿಚ್ಛಿಸುತ್ತಾನೆ. ಏಕೆಂದರೆ ಮನುಷ್ಯನು ದುರ್ಬಲನಾಗಿ ಸೃಷ್ಟಿಸಲ್ಪಟ್ಟಿದ್ದಾನೆ.

يُرِيْدُ اللّٰهُ اَنْ يُّخَفِّفَ عَنْكُمْ ۚ وَخُلِقَ
الْاِنْسَانُ ضَعِيْفًا ﴿٢٨﴾

29. ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ

يٰۤاَيُّهَا الَّذِيْنَ اٰمَنُوْا لَا تَاْكُلُوْۤا اَمْوَالَكُمْ
بَيْنَكُمْ بِالْبَاطِلِ اِلَّاۤ اَنْ تَكُوْنَ تِجَارَةً

31. ಈ ರುಕೂಅ್‌ನಲ್ಲಿ ಮುಹ್ಸನಾತ್ ಎಂಬ ಪದವು ಎರಡು ವಿಭಿನ್ನ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಪತಿಯ ರಕ್ಷಣೆ ಪ್ರಾಪ್ತವಿರುವ ವಿವಾಹಿತ ಸ್ತ್ರೀಯರು ಮತ್ತು ವಿವಾಹವಾಗಿರದಿದ್ದರೂ ಕುಟುಂಬದ ರಕ್ಷಣೆ ಪ್ರಾಪ್ತವಿರುವ ಕುಲೀನ ಸ್ತ್ರೀಯರು ಎಂಬುದೇ ಈ ಎರಡು ವಿಭಿನ್ನ ಅರ್ಥಗಳು. 24ನೆಯ ಸೂಕ್ತದಲ್ಲಿ 'ಮುಹ್ಸನಾತ್' ಎಂಬ ಪದ ದಾಸಿಯರಿಗೆ ಪ್ರತಿಯಾಗಿ ಅವಿವಾಹಿತ ಕುಲೀನ ಸ್ತ್ರೀಯರ ಕುರಿತು ಉಪಯೋಗವಾಗಿದೆ. ಸೂಕ್ತದಲ್ಲಿ ಬರುವ ವಿಷಯದಿಂದಲೇ ಇದು ವ್ಯಕ್ತವಾಗುತ್ತದೆ. ತದ್ವಿರುದ್ಧವಾಗಿ ದಾಸಿಯರಿಗೆ ಮುಹ್ಸನಾತ್ ಎಂಬ ಪದ ಮೊದಲನೇ ಅರ್ಥದಲ್ಲಿ (ಅರ್ಥಾತ್ ಪತಿಯ ರಕ್ಷಣೆ ಪಡೆದಿರುವ ವಿವಾಹಿತ ಸ್ತ್ರೀಯರು ಎಂಬ ಅರ್ಥದಲ್ಲಿ) ಪ್ರಯೋಗವಾಗಿದೆ. ಅವರಿಗೆ ವಿವಾಹ ರಕ್ಷಣೆ ದೊರೆತರೆ (ಫ ಇದಾಉಹ್ಸಿನ್ನ) ಅನಂತರ ಅವರು ಎಸಗುವ ವ್ಯಭಿಚಾರಕ್ಕೆ ಮುಹ್ಸನಾತ್ (ಅವಿವಾಹಿತ ಕುಲೀನ ಸ್ತ್ರೀಯರ)ಗಳ ಅರ್ಧಪಾಲು ಶಿಕ್ಷೆ ಕೊಡಲಾಗುವುದೆಂದು ಸ್ಪಷ್ಟವಾಗಿ ಹೇಳಲಾಗಿದೆ.

ಒಪ್ಪಿಗೆಯಿಂದಾಗಬೇಕು.[32] ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ.[33] ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂಬುದನ್ನು ಖಾತ್ರಿಯಾಗಿ ನಂಬಿರಿ.

عَنْ تَرَاضٍ مِّنْكُمْ ۚ وَلَا تَقْتُلُوْٓا اَنْفُسَكُمْ ۭ اِنَّ اللّٰهَ كَانَ بِكُمْ رَحِيْمًا ﴿٢٩﴾

30. ಯಾರಾದರೂ ಅಕ್ರಮ ಅತಿರೇಕಗಳೊಂದಿಗೆ ಹಾಗೆ ಮಾಡಿದರೆ ಅವನನ್ನು ನಾವು ಖಂಡಿತವಾಗಿಯೂ ನರಕಾಗ್ನಿಯಲ್ಲಿ ತಳ್ಳಿ ಬಿಡುವೆವು. ಇದು ಅಲ್ಲಾಹನಿಗೆ ಕಷ್ಟ ಸಾಧ್ಯವಾದುದಲ್ಲ.

وَمَنْ يَّفْعَلْ ذٰلِكَ عُدْوَانًا وَّظُلْمًا فَسَوْفَ نُصْلِيْهِ نَارًا ۭ وَكَانَ ذٰلِكَ عَلَى اللّٰهِ يَسِيْرًا ﴿٣٠﴾

31. ನಿಮಗೆ ಪ್ರತಿಬಂಧಗೊಳಿಸಲಾಗುತ್ತಿರುವ ಆ ಘೋರ ಪಾಪಗಳನ್ನು ನೀವು ವರ್ಜಿಸುತ್ತಲಿದ್ದರೆ, ನಿಮ್ಮ ಚಿಕ್ಕ ಪುಟ್ಟ ಅಪರಾಧಗಳನ್ನು ನಾವು ನಿಮ್ಮ ಲೆಕ್ಕ ಪತ್ರದಿಂದ ನೀಗಿಸಿಬಿಡುವೆವು ಮತ್ತು ನಿಮ್ಮನ್ನು ಗೌರವಪೂರ್ಣ ಸ್ಥಾನದೊಳಗೆ ಸೇರಿಸುವೆವು.

اِنْ تَجْتَنِبُوْا كَبَاۗىِٕرَ مَا تُنْهَوْنَ عَنْهُ نُكَفِّرْ عَنْكُمْ سَيِّاٰتِكُمْ وَنُدْخِلْكُمْ مُّدْخَلًا كَرِيْمًا ﴿٣١﴾

32. ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅಧಿಕವಾಗಿ ನೀಡಿದ್ದರೆ ಅದಕ್ಕಾಗಿ ಆಶೆ ಪಡಬೇಡಿರಿ. ಪುರುಷರು ಗಳಿಸಿದುದಕ್ಕನು ಸಾರವಾದ ಪಾಲು ಅವರಿಗಿದೆ, ಸ್ತ್ರೀಯರು ಗಳಿಸಿದುದಕ್ಕನುಸಾರ ವಾದ ಪಾಲು ಅವರಿಗಿದೆ. ಅಲ್ಲಾಹನೊಡನೆ ಅವನ ಅನುಗ್ರಹವನ್ನು ಯಾಚಿಸುತ್ತಲಿರಿ. ನಿಶ್ಚಯವಾಗಿಯೂ ಅಲ್ಲಾಹನು ಎಲ್ಲಾ ಸಂಗತಿಗಳ ಅರಿವುಳ್ಳವನಾಗಿರುತ್ತಾನೆ.

وَلَا تَتَمَنَّوْا مَا فَضَّلَ اللّٰهُ بِهٖ بَعْضَكُمْ عَلٰي بَعْضٍ ۭ لِلرِّجَالِ نَصِيْبٌ مِّمَّا اكْتَسَبُوْا ۭ وَلِلنِّسَاۗءِ نَصِيْبٌ مِّمَّا اكْتَسَبْنَ ۭ وَسْـَٔـلُوا اللّٰهَ مِنْ فَضْلِهٖ ۭ اِنَّ اللّٰهَ كَانَ بِكُلِّ شَيْءٍ عَلِيْمًا ﴿٣٢﴾

33. ಮಾತಾಪಿತರೂ ಸಮೀಪದ ಬಂಧುಗಳೂ ಬಿಟ್ಟಗಲಿದ ಪ್ರತಿಯೊಂದು ವಸ್ತುವಿಗೂ ವಾರೀಸು ಹಕ್ಕುದಾರರನ್ನು ನಾವು ನಿಶ್ಚಯಿಸಿರುತ್ತೇವೆ. ಇನ್ನು ನೀವು ವಚನ ಕೊಟ್ಟವರಿದ್ದರೆ ಅವರ ಪಾಲನ್ನು ಅವರಿಗೆ ಕೊಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಬಗ್ಗೆ ಸಾಕ್ಷಿಯಾಗಿರುತ್ತಾನೆ.[34]

وَلِكُلٍّ جَعَلْنَا مَوَالِيَ مِمَّا تَرَكَ الْوَالِدٰنِ وَالْاَقْرَبُوْنَ ۭ وَالَّذِيْنَ عَقَدَتْ اَيْمَانُكُمْ فَاٰتُوْهُمْ نَصِيْبَهُمْ ۭ اِنَّ اللّٰهَ كَانَ عَلٰي كُلِّ شَيْءٍ شَهِيْدًا ﴿٣٣﴾

32. 'ಅನುಚಿತ ರೀತಿಯಿಂದ' ಎಂದರೆ ಸತ್ಯಕ್ಕೆ ವಿರುದ್ಧವಾದ ಧಾರ್ಮಿಕ ಮತ್ತು ನೈತಿಕ ವಿಧಿಗಳಲ್ಲಿ ಸಲ್ಲದ ಎಲ್ಲಾ ಬಗೆಯ ವ್ಯವಹಾರಗಳಾಗಿವೆ. 'ಪರಸ್ಪರ ಒಪ್ಪಿಗೆಯಿಂದ' ಅಂದರೆ ಸ್ವತಂತ್ರ ಮತ್ತು ಸುವ್ಯಕ್ತ ಒಪ್ಪಿಗೆಯಾಗಿದೆ. ಯಾವುದೇ ಒತ್ತಡ, ಮೋಸಗಳಿಂದ ಕೂಡಿದ ಒಪ್ಪಿಗೆಯಲ್ಲ. ಅಂತಹುದನ್ನು ಒಪ್ಪಿಗೆ ಎಂದು ಕರೆಯುವಂತಿಲ್ಲ.

33. ಈ ಉದ್ಧರಣೆ ಹಿಂದಿನ ಉದ್ಧರಣೆಯ ಅನುಬಂಧವಾಗಿರಬಹುದು ಅಥವಾ ಸ್ವತಂತ್ರ ಉದ್ಧರಣೆಯಾಗಿರಲೂಬಹುದು. ಇದು ಹಿಂದಿನ ಉದ್ಧರಣೆಯ ಅನುಬಂಧವಾಗಿದ್ದಲ್ಲಿ ಇದರ ಅರ್ಥ ಅನ್ಯರ ಸೊತ್ತನ್ನು ಅಕ್ರಮವಾಗಿ ಕಬಳಿಸುವುದು ತನ್ನನ್ನೇ ನಾಶ ಮಾಡಿಕೊಂಡಂತೆ ಎಂದಾಗಿದೆ. ಇದು ಸ್ವತಂತ್ರ ಉದ್ಧರಣೆಯಾಗಿದ್ದಲ್ಲಿ ಇದಕ್ಕೆ ಎರಡು ಅರ್ಥಗಳಿವೆ. ಪರಸ್ಪರರನ್ನು ಕೊಲೆ ಮಾಡಬೇಡಿರಿ ಎಂಬುದು ಒಂದು ಅರ್ಥ. ಆತ್ಮಹತ್ಯೆ ಮಾಡಿಕೊಳ್ಳದಿರಿ ಎಂಬುದು ಇನ್ನೊಂದು ಅರ್ಥ.

34. ಸ್ನೇಹ ಮತ್ತು ಸೋದರತೆಯ ಒಪ್ಪಂದ ಮಾಡಿಕೊಂಡವರು ಪರಸ್ಪರರ ಸೊತ್ತುಗಳಿಗೆ ಹಕ್ಕುದಾರರಾಗುತ್ತಿದ್ದ ರೂಢಿ ಅರಬರಲ್ಲಿತ್ತು. ಹೀಗೆ ಸಾಕುಮಗ ಸಾಕುತಂದೆಯ ಉತ್ತರಾಧಿಕಾರಿಯಾಗುತ್ತಿದ್ದ. ಈ ಸೂಕ್ತದ ಮೂಲಕ ಅಜ್ಞಾನ ಕಾಲದ ಈ ನಿಯಮವನ್ನು ರದ್ದು ಪಡಿಸುತ್ತಾ ಆಸ್ತಿಯನ್ನು ಸಂಬಂಧಿಕರ ನಡುವೆ ನಾವು ವಿಧಿಸಿರುವುದಕ್ಕನುಗುಣವಾಗಿಯೇ ವಿತರಿಸಬೇಕು ಎಂದು ಹೇಳಲಾಗಿದೆ. ಆದರೆ ಯಾರೊಂದಿಗೆ ನೀವು ಒಪ್ಪಂದ ಮಾಡಿಕೊಂಡಿದ್ದೀರೋ ಅವರಿಗೆ ನಿಮ್ಮ ಜೀವಿತ ಕಾಲದಲ್ಲಿ ನೀವು ಏನನ್ನು ಬೇಕಾದರೂ ನೀಡಬಹುದು.

34. ಪುರುಷರು ಸ್ತ್ರೀಯರ ಮೇಲೆ 'ಮೇಲ್ವಿಚಾರಕ'[35] ಆಗಿರುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದುದರಿಂದ ಮತ್ತು ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ. ಸುಶೀಲೆಯರಾದ ಸ್ತ್ರೀಯರು ಅನುಸರಣಶೀಲರಾಗಿರುತ್ತಾರೆ ಮತ್ತು ಅವರು ಪುರುಷರ ಅನುಪಸ್ಥಿತಿಯಲ್ಲಿ ಅಲ್ಲಾಹನ ರಕ್ಷಣೆಯಲ್ಲಿ ಅವರ ಹಕ್ಕು ಬಾಧ್ಯತೆಗಳ ರಕ್ಷಣೆ ಮಾಡುತ್ತಾರೆ. ನಿಮ್ಮ ಸ್ತ್ರೀಯರಿಂದ ಆಜ್ಞೋಲ್ಲಂಘನೆಯ ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶ ನೀಡಿರಿ. ಮಲಗುವಲ್ಲಿಂದ ಅವರಿಂದ ದೂರವಿರಿ ಮತ್ತು ಅವರಿಗೆ ಹೊಡೆಯಿರಿ.[36] ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ, ಅವರ ಮೇಲೆ ಕೈಯೆತ್ತಲು ಬೇಕು ಬೇಕೆಂದೇ ನೆಪ ಹುಡುಕಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯುನ್ನತನೂ ಮಹಾನನೂ ಆಗಿರುತ್ತಾನೆ.

اَلرِّجَالُ قَوّٰمُوْنَ عَلَى النِّسَآءِ بِمَا فَضَّلَ اللّٰهُ بَعْضَهُمْ عَلٰى بَعْضٍ وَّبِمَآ اَنْفَقُوْا مِنْ اَمْوَالِهِمْ ؕ فَالصّٰلِحٰتُ قٰنِتٰتٌ حٰفِظٰتٌ لِّلْغَيْبِ بِمَا حَفِظَ اللّٰهُ ؕ وَالّٰتِىْ تَخَافُوْنَ نُشُوْزَهُنَّ فَعِظُوْهُنَّ وَاهْجُرُوْهُنَّ فِى الْمَضَاجِعِ وَاضْرِبُوْهُنَّ ۚ فَاِنْ اَطَعْنَكُمْ فَلَا تَبْغُوْا عَلَيْهِنَّ سَبِيْلًا ؕ اِنَّ اللّٰهَ كَانَ عَلِيًّا كَبِيْرًا ﴿٣٤﴾

35. ಪತಿ- ಪತ್ನಿಯರ ಸಂಬಂಧ ಕೆಡುವುದೆಂಬುದು ನಿಮಗೆ ಆತಂಕ ವಾದಾಗ ಒಬ್ಬ ಮಧ್ಯಸ್ಥನನ್ನು ಪುರುಷನ ಕಡೆಯವರಿಂದಲೂ ಒಬ್ಬನನ್ನು ಸ್ತ್ರೀಯ ಕಡೆಯವರಿಂದಲೂ ನಿಯುಕ್ತಗೊಳಿಸಿರಿ. ಅವರಿಬ್ಬರೂ[37] ಸುಧಾರಿಸಲು ಬಯಸಿದರೆ, ಅಲ್ಲಾಹನು ಅವರ ನಡುವೆ ಸಾಮರಸ್ಯದ ಹಾದಿಯನ್ನು ತೆರೆಯುವನು. ನಿಶ್ಚಯ ವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.

وَاِنْ خِفْتُمْ شِقَاقَ بَيْنِهِمَا فَابْعَثُوْا حَكَمًا مِّنْ اَهْلِهٖ وَحَكَمًا مِّنْ اَهْلِهَا ۚ اِنْ يُّرِيْدَآ اِصْلَاحًا يُّوَفِّقِ اللّٰهُ بَيْنَهُمَا ؕ اِنَّ اللّٰهَ كَانَ عَلِيْمًا خَبِيْرًا ﴿٣٥﴾

36. ನೀವೆಲ್ಲರೂ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತ ರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆ

وَاعْبُدُوا اللّٰهَ وَلَا تُشْرِكُوْا بِهٖ شَيْـًٔا وَّبِالْوَالِدَيْنِ اِحْسَانًا وَّبِذِى الْقُرْبٰى وَالْيَتٰمٰى وَالْمَسٰكِيْنِ وَالْجَارِ ذِى الْقُرْبٰى

35. ಯಾವುದೇ ವ್ಯಕ್ತಿ, ಸಂಸ್ಥೆ ಅಥವಾ ವ್ಯವಸ್ಥೆಯ ವ್ಯವಹಾರಗಳನ್ನು ಸರಿಯಾಗಿ ನಡೆಸುವ, ಅದನ್ನು ಸಂರಕ್ಷಿಸುವ ಮತ್ತು ಅದರ ಮೇಲ್ವಿಚಾರಣೆ ನಡೆಸುವ ಹಾಗೂ ಅವರ ಅವಶ್ಯಕತೆಗಳನ್ನು ಪೂರೈಸುವ ವ್ಯಕ್ತಿಗೆ 'ಕವ್ವಾಮ್'(ಮೇಲ್ವಿಚಾರಕ) ಎನ್ನಲಾಗುತ್ತದೆ.

36. ಮೂರೂ ಕೆಲಸಗಳನ್ನು ಏಕಕಾಲಕ್ಕೆ ಮಾಡಬೇಕೆಂದು ಇದರ ಅರ್ಥವಲ್ಲ. ಬದಲಾಗಿ ವೈಮನಸ್ಸು ಉಂಟಾದಾಗ ಈ ಮೂರೂ ಉಪಾಯಗಳನ್ನು ಪಾಲಿಸಬಹುದು. ಇನ್ನು ಅದನ್ನು ಪ್ರಯೋಗಿಸುವಾಗ ತಪ್ಪು ಮತ್ತು ಶಿಕ್ಷೆಯ ನಡುವೆ ಸಮತೋಲನ ಇರಬೇಕು. ಸರಳೋಪಾಯದಿಂದ ಸುಧಾರಣೆ ಸಾಧ್ಯವೆಂದಾದರೆ ಅಲ್ಲಿ ಕಠಿಣೋಪಾಯವನ್ನು ವರ್ಜಿಸಬೇಕು. ಪ್ರವಾದಿವರ್ಯರು(ಸ) ಒಲ್ಲದ ಮನಸ್ಸಿನಿಂದಲೇ ಪತ್ನಿಯರನ್ನು ಥಳಿಸುವ ಅನುಮತಿ ನೀಡಿದ್ದಾರೆ. ಆದರೂ ಥಳಿಸುವುದರ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ.

37. 'ಅವರಿಬ್ಬರು' ಎಂದರೆ ಮಧ್ಯಸ್ತಿಕೆದಾರರೂ ಆಗಿದ್ದಾರೆ. ಅಂತೆಯೇ 'ದಂಪತಿಗಳೂ' ಕಕ್ಷಿಗಳಿಬ್ಬರೂ ಸುಧಾರಣೆಯನ್ನು ಬಯಸುವವರಾಗಿದ್ದರೆ ಮತ್ತು ಮಧ್ಯಸ್ತಿಕೆದಾರರೂ ಹೇಗಾದರೂ ಉಭಯತ್ರರ ನಡುವೆ ಸಂಧಾನವಾಗಬೇಕು ಎಂದು ಬಯಸುವವರಾಗಿದ್ದರೆ ಯಾವುದೇ ರೀತಿಯ ಜಗಳ, ಸಂಧಾನದಲ್ಲಿ ಪರ್ಯವಸಾನವಾಗುವ ಸಾಧ್ಯತೆ ಇದ್ದೇ ಇರುತ್ತದೆ.

ಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ[38] ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮಸ್ತುತಿಗೈಯ್ಯುವವನನ್ನೂ ಅಲ್ಲಾಹನು ಮೆಚ್ಚುವುದಿಲ್ಲ.

وَالْجَارِ الْجُنُبِ وَالصَّاحِبِ بِالْجَنْبِ وَابْنِ السَّبِيلِ وَمَا مَلَكَتْ أَيْمَانُكُمْ إِنَّ اللَّهَ لَا يُحِبُّ مَنْ كَانَ مُخْتَالًا فَخُورًا ﴿٣٦﴾

37. ಸ್ವತಃ ಜಿಪುಣತೆ ತೋರುವವರನ್ನೂ ಇತರರನ್ನು ಜಿಪುಣತೆಗೆ ಪ್ರೇರೇಪಿಸುವವರನ್ನೂ ಅಲ್ಲಾಹನು ತನ್ನ ಅನುಗ್ರಹದಿಂದ ತಮಗೆ ದಯಪಾಲಿಸಿದುದನ್ನು ಬಚ್ಚಿಡುವವರನ್ನೂ ಅಲ್ಲಾಹನು ಮೆಚ್ಚುವುದಿಲ್ಲ. ಅಂತಹ ಕೃತಘ್ನರಿಗಾಗಿ ನಾವು ಅಪಮಾನಕರ ಶಿಕ್ಷೆಯನ್ನು ಸಿದ್ಧಗೊಳಿಸಿಟ್ಟಿರುತ್ತೇವೆ.

الَّذِينَ يَبْخَلُونَ وَيَأْمُرُونَ النَّاسَ بِالْبُخْلِ وَيَكْتُمُونَ مَا آتَاهُمُ اللَّهُ مِنْ فَضْلِهِ وَأَعْتَدْنَا لِلْكَافِرِينَ عَذَابًا مُهِينًا ﴿٣٧﴾

38. ಜನರಿಗೆ ತೋರಿಸುವ ಸಲುವಾಗಿ ಮಾತ್ರ ತಮ್ಮ ಸಂಪತ್ತನ್ನು ಖರ್ಚು ಮಾಡುವವರೂ ಅಲ್ಲಾಹನಿಗೆ ಮೆಚ್ಚುಗೆಯವರಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಮೇಲಾಗಲಿ ಅಂತಿಮ ದಿವಸದ ಮೇಲಾಗಲಿ ವಿಶ್ವಾಸವಿರಿಸುವುದಿಲ್ಲ. ಶೈತಾನನು ಯಾರ ಗೆಳೆಯನಾಗಿಬಿಟ್ಟನೋ ಅವನಿಗೆ ಅತಿ ನಿಕೃಷ್ಟ ಗೆಳೆತನ ಪ್ರಾಪ್ತವಾದಂತೆಯೇ ಸರಿ.

وَالَّذِينَ يُنْفِقُونَ أَمْوَالَهُمْ رِئَاءَ النَّاسِ وَلَا يُؤْمِنُونَ بِاللَّهِ وَلَا بِالْيَوْمِ الْآخِرِ وَمَنْ يَكُنِ الشَّيْطَانُ لَهُ قَرِينًا فَسَاءَ قَرِينًا ﴿٣٨﴾

39. ಇವರು ಅಲ್ಲಾಹ್ ಮತ್ತು ಅಂತಿಮ ದಿವಸದ ಮೇಲೆ ವಿಶ್ವಾಸವಿಡುತ್ತಿದ್ದರೆ ಹಾಗೂ ಅಲ್ಲಾಹನು ಇವರಿಗೆ ನೀಡಿದುದರಿಂದ ಖರ್ಚು ಮಾಡುತ್ತಿದ್ದರೆ ಇವರಿಗೇನಾಗುತ್ತಿತ್ತು? ಇವರು ಹೀಗೆ ಮಾಡುತ್ತಿದ್ದರೆ ಇವರ ಪುಣ್ಯ ಕಾರ್ಯವು ಅಲ್ಲಾಹನಿಗೆ ತಿಳಿಯದಿರುತ್ತಿರಲಿಲ್ಲ.

وَمَاذَا عَلَيْهِمْ لَوْ آمَنُوا بِاللَّهِ وَالْيَوْمِ الْآخِرِ وَأَنْفَقُوا مِمَّا رَزَقَهُمُ اللَّهُ وَكَانَ اللَّهُ بِهِمْ عَلِيمًا ﴿٣٩﴾

40. ವಾಸ್ತವದಲ್ಲಿ ಅಲ್ಲಾಹನು ಯಾರ ಮೇಲೂ ಕಿಂಚಿತ್ತೂ ಅಕ್ರಮವೆಸಗುವುದಿಲ್ಲ. ಯಾರಾದರೂ ಒಂದು ಪುಣ್ಯ ಕಾರ್ಯ ಮಾಡಿದರೆ ಅದನ್ನು ಅಲ್ಲಾಹನು, ಹಲವು ಪಟ್ಟು ವರ್ಧಿಸುತ್ತಾನೆ ಮತ್ತು ತನ್ನ ಕಡೆಯಿಂದಲೂ ಹೇರಳ ಪ್ರತಿಫಲ ಪ್ರದಾನ ಮಾಡುತ್ತಾನೆ.

إِنَّ اللَّهَ لَا يَظْلِمُ مِثْقَالَ ذَرَّةٍ وَإِنْ تَكُ حَسَنَةً يُضَاعِفْهَا وَيُؤْتِ مِنْ لَدُنْهُ أَجْرًا عَظِيمًا ﴿٤٠﴾

38. ಇದರ ಅರ್ಥ ಒಡನಾಟದಲ್ಲಿ ಸ್ನೇಹಿತ ಅಥವಾ ಎಲ್ಲಾದರೂ ಹೇಗಾದರೂ ಜತೆ ಸೇರುವವನು ಎಂದಾಗಿದೆ. ಉದಾಹರಣೆಗೆ ಮಾರುಕಟ್ಟೆಗೆ ಹೋಗುವಾಗ ನಿಮ್ಮ ಜತೆಗೆ ಒಬ್ಬನು ನಡೆಯುತ್ತಿರಬಹುದು, ಅಂಗಡಿಯಲ್ಲಿ ಖರೀದಿಸುವಾಗ ಇನ್ನೊಬ್ಬ ಗ್ರಾಹಕನೂ ನಿಮ್ಮ ಜತೆಗಿರಬಹುದು, ಯಾತ್ರೆಯಲ್ಲಿ ಇನ್ನೋರ್ವ ಸಹಯಾತ್ರಿ ನಿಮ್ಮ ಜತೆಗಿರಬಹುದು. ಈ ತಾತ್ಕಾಲಿಕ ಒಡನಾಟದ ಸಂದರ್ಭದಲ್ಲೂ ಅವನೊಡನೆ ಉತ್ತಮ ವರ್ತನೆ ತೋರುವುದು ಮತ್ತು ಅವನಿಗೆ ಉಪದ್ರವ ನೀಡದಿರುವುದು ಪ್ರತಿಯೊಬ್ಬ ಸುಸಂಸ್ಕೃತ ಮತ್ತು ನಾಗರಿಕ ವ್ಯಕ್ತಿಯ ಕರ್ತವ್ಯವಾಗಿದೆ.

41. ನಾವು ಪ್ರತಿಯೊಂದು ಸಮುದಾಯದಿಂದ ಒಬ್ಬೊಬ್ಬ ಸಾಕ್ಷಿಯನ್ನು ತರುವಾಗಲೂ ಇವರ ಮೇಲೆ ನಿಮ್ಮನ್ನು [ಮುಹಮ್ಮದ್‌ರನ್ನು(ಸ)] ಸಾಕ್ಷಿಯಾಗಿ ನಿಲ್ಲಿಸುವಾಗಲೂ ಇವರೇನು ಮಾಡುವರೆಂದು ಯೋಚಿಸಿರಿ.

فَكَيْفَ إِذَا جِئْنَا مِن كُلِّ أُمَّةٍ بِشَهِيدٍ وَجِئْنَا بِكَ عَلَىٰ هَٰؤُلَاءِ شَهِيدًا ﴿٤١﴾

42. ಆಗ ಧಿಕ್ಕರಿಸಿ ನಡೆದವರು ಹಾಗೂ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದವರು, "ಅಕಟ! ಭೂಮಿ ಬಿರುಕು ಬಿಡುತ್ತಿದ್ದರೆ! ಮತ್ತು ನಾವು ಅದರೊಳಗೆ ಸೇರಿ ಹೋಗುತ್ತಿದ್ದರೆ!" ಎಂದು ಇಚ್ಛಿಪಡುವರು. ಅವರು ಅಲ್ಲಿ ಯಾವುದನ್ನೂ ಅಲ್ಲಾಹನಿಂದ ಅಡಗಿಸಲಾರರು.

يَوْمَئِذٍ يَوَدُّ الَّذِينَ كَفَرُوا وَعَصَوُا الرَّسُولَ لَوْ تُسَوَّىٰ بِهِمُ الْأَرْضُ وَلَا يَكْتُمُونَ اللَّهَ حَدِيثًا ﴿٤٢﴾

43. ಓ ಸತ್ಯವಿಶ್ವಾಸಿಗಳೇ, ನೀವು ಅಮಲಿನಲ್ಲಿದ್ದಾಗ ನಮಾಝನ್ನು ಸಮೀಪಿಸಬೇಡಿರಿ.[39] ನೀವು ಹೇಳುತ್ತಿರುವುದೇನೆಂಬ ಬೋಧವಿರುವಾಗ ನಮಾಝ್ ಮಾಡಬೇಕು.[40] ಅದೇ ರೀತಿಯಲ್ಲಿ ಜನಾಬತ್‌ನ[41] ಸ್ಥಿತಿಯಲ್ಲಿಯೂ ಸ್ನಾನ ಮಾಡಿಕೊಳ್ಳದೆ ನಮಾಝನ್ನು ಸಮೀಪಿಸಬೇಡಿರಿ, ನೀವು ದಾರಿಗರಾಗಿರುವಾಗ ಹೊರತು.[42] ನೀವು ಅನಾರೋಗ್ಯದಿಂದಿದ್ದಾಗ ಅಥವಾ ಪ್ರಯಾಣದಲ್ಲಿದ್ದಾಗ ಅಥವಾ ನಿಮ್ಮಲ್ಲಾರಾದರೂ ಶೌಚ್ಯಕ್ಕೆ ಹೋಗಿ ಬಂದಾಗ ಅಥವಾ ನೀವು ಸ್ತ್ರೀಯರನ್ನು ಸ್ಪರ್ಶಿಸಿರುವಾಗ[43] ನಿಮಗೆ ನೀರು ಸಿಗದೆ ಹೋದರೆ, ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ ಮತ್ತು ಅದರಿಂದ ಮುಖಗಳನ್ನೂ ಕೈಗಳನ್ನೂ ಸವರಿಕೊಳ್ಳಿರಿ.[44] ನಿಶ್ಚಯವಾಗಿಯೂ ಅಲ್ಲಾಹನು ಮೃದು ನೀತಿಯನ್ನನುಸರಿಸುವವನೂ ಅತ್ಯಂತ ಕ್ಷಮಾ ಶೀಲನೂ ಆಗಿರುತ್ತಾನೆ.

يَا أَيُّهَا الَّذِينَ آمَنُوا لَا تَقْرَبُوا الصَّلَاةَ وَأَنتُمْ سُكَارَىٰ حَتَّىٰ تَعْلَمُوا مَا تَقُولُونَ وَلَا جُنُبًا إِلَّا عَابِرِي سَبِيلٍ حَتَّىٰ تَغْتَسِلُوا ۚ وَإِن كُنتُم مَّرْضَىٰ أَوْ عَلَىٰ سَفَرٍ أَوْ جَاءَ أَحَدٌ مِّنكُم مِّنَ الْغَائِطِ أَوْ لَامَسْتُمُ النِّسَاءَ فَلَمْ تَجِدُوا مَاءً فَتَيَمَّمُوا صَعِيدًا طَيِّبًا فَامْسَحُوا بِوُجُوهِكُمْ وَأَيْدِيكُمْ ۗ إِنَّ اللَّهَ كَانَ عَفُوًّا غَفُورًا ﴿٤٣﴾

39. ಇದು ಮದ್ಯಪಾನದ ಬಗೆಗಿನ ಎರಡನೆಯ ಆದೇಶವಾಗಿದೆ. ಮೊದಲನೆಯ ಆದೇಶ ಅಲ್‌ಬಕರಃ ಅಧ್ಯಾಯದಲ್ಲಿ (ಸೂಕ್ತ- 219) ಬಂದಿದೆ.

40. ಅರ್ಥಾತ್- ನಮಾಝ್‌ನಲ್ಲಿ ತಾನು ನಾಲಗೆಯಿಂದ ಏನನ್ನು ಪಠಿಸುತ್ತಿದ್ದೇನೆ ಎಂಬುದನ್ನು ಅರಿಯುವಷ್ಟು ಪ್ರಜ್ಞೆ ಅವನಿಗಿರಬೇಕು. ನಮಾಝ್ ನಿರ್ವಹಿಸಲು ನಿಂತು ಯಾವುದಾದರೂ ಪದ್ಯವನ್ನು ಹಾಡಲು ಶುರು ಮಾಡಬಾರದು.

41. 'ಜನಾಬತ್' ಎಂದರೆ ಸಂಸರ್ಗ ಅಥವಾ ಸ್ವಪ್ನಸ್ಖಲನದಿಂದ ಉಂಟಾಗುವ ಮಾಲಿನ್ಯವಾಗಿದೆ.

42. ಕರ್ಮಶಾಸ್ತ್ರಜ್ಞರು ಮತ್ತು ವ್ಯಾಖ್ಯಾನಕಾರರ ಒಂದು ವಿಭಾಗದ ಪ್ರಕಾರ ಈ ಸೂಕ್ತದ ಅರ್ಥ ಜನಾಬತ್‌ನ ಸ್ಥಿತಿಯಲ್ಲಿ ಮಸೀದಿಯನ್ನು ಪ್ರವೇಶಿಸಬಾರದು. ಆದರೆ ಮಸೀದಿಯ ಮೂಲಕ ಹಾದು ಹೋಗಬಹುದು. ಇನ್ನೊಂದು ವಿಭಾಗದ ಪ್ರಕಾರ ಇದರ ಅರ್ಥ ಪ್ರವಾಸ. ಅರ್ಥಾತ್ ವ್ಯಕ್ತಿ ಪ್ರವಾಸದಲ್ಲಿದ್ದಾಗ 'ಜನಾಬತ್' ಸಂಭವಿಸಿದರೆ ಅದನ್ನು ನೀಗಿಸಲಿಕ್ಕಾಗಿ ಅವನು 'ತಯಮ್ಮುಮ್' ಮಾಡಿಕೊಳ್ಳಬಹುದು.

43. 'ಲಮಸ್' ಅರ್ಥಾತ್ ಸ್ಪರ್ಶಿಸುವುದು ಎಂದರೇನೆಂಬ ಬಗ್ಗೆಯೂ ಭಿನ್ನಾಭಿಪ್ರಾಯವಿದೆ. ಬಹುತೇಕ ಇಮಾಮ್‌ಗಳ ಪ್ರಕಾರ ಇದರ ಅರ್ಥ ಸಂಸರ್ಗವಾಗಿದೆ. ಇಮಾಮ್ ಅಬೂಹನೀಫಾ ಮತ್ತು ಅವರ ಅನುಯಾಯಿಗಳು ಈ ಅರ್ಥವನ್ನೇ ಅಳವಡಿಸಿದ್ದಾರೆ. ಇನ್ನಿತರ ಕೆಲವು ಕರ್ಮಶಾಸ್ತ್ರಜ್ಞರ ಪ್ರಕಾರ ಇದರ ಅರ್ಥ ಸ್ಪರ್ಶಿಸುವುದು ಎಂದಾಗಿದೆ. ಇಮಾಮ್ ಶಾಫೀ(ರ) ಈ ಅರ್ಥವನ್ನೇ ಮಾನ್ಯ ಮಾಡಿದ್ದಾರೆ. ಇಮಾಮ್ ಮಾಲಿಕ್‌ರ(ರ) ಪ್ರಕಾರ ಸ್ತ್ರೀ ಪುರುಷರು ವಿಷಯಾಸಕ್ತಿಯೊಂದಿಗೆ ಪರಸ್ಪರ ಸ್ಪರ್ಶಿಸಿದರೆ ಅವರ ವುಝೂ ಮುರಿಯುತ್ತದೆ. ಆದರೆ ವಿಷಯಾಸಕ್ತಿಯಿಲ್ಲದೆ ಪರಸ್ಪರ ಮೈ ತಾಗಿದರೆ ಅಭ್ಯಂತರವಿಲ್ಲ.

44. ಈ ಆದೇಶದ ವಿವರಣೆಯೇನೆಂದರೆ ವ್ಯಕ್ತಿಯು 'ವುಝೂ'ವಿನಲ್ಲಿಲ್ಲದ ಸಂದರ್ಭದಲ್ಲಿ ಅಥವಾ ಅವನಿಗೆ ಸ್ನಾನದ ಅವಶ್ಯಕತೆ

44. ಗ್ರಂಥ ಜ್ಞಾನದ ಒಂದಂಶ ನೀಡಲ್ಪಟ್ಟಿದ್ದವರನ್ನೂ ನೀವು ನೋಡಿದಿರಾ? ಅವರು ಸ್ವತಃ ಪಥಭ್ರಷ್ಟತೆಯನ್ನು ಖರೀದಿಸಿಕೊಳ್ಳುವವರಾಗಿದ್ದಾರೆ ಮತ್ತು ನೀವೂ ಪಥಭ್ರಷ್ಟರಾಗಬೇಕೆಂದು ಬಯಸುತ್ತಾರೆ.

أَلَمْ تَرَ إِلَى الَّذِينَ أُوتُوا نَصِيبًا مِّنَ الْكِتَابِ يَشْتَرُونَ الضَّلَالَةَ وَيُرِيدُونَ أَن تَضِلُّوا السَّبِيلَ ﴿٤٤﴾

45. ಅಲ್ಲಾಹನು ನಿಮ್ಮ ಶತ್ರುಗಳನ್ನು ಚೆನ್ನಾಗಿ ಅರಿತಿರುವನು ಮತ್ತು ನಿಮ್ಮ ಸಂರಕ್ಷಣೆ ಹಾಗೂ ಸಹಾಯಕ್ಕೆ ಅಲ್ಲಾಹನೇ ಸಾಕು.

وَاللَّهُ أَعْلَمُ بِأَعْدَائِكُمْ ۚ وَكَفَىٰ بِاللَّهِ وَلِيًّا وَكَفَىٰ بِاللَّهِ نَصِيرًا ﴿٤٥﴾

46. ಯಹೂದಿಯರಾದವರಲ್ಲಿ ಕೆಲವರು ಮಾತುಗಳನ್ನು ಅವುಗಳ ಸ್ಥಾನದಿಂದ ಬದಲಾಯಿಸಿ ಬಿಡುವವರೂ ಇದ್ದಾರೆ.[45] ಸತ್ಯಧರ್ಮದ ವಿರುದ್ಧ ಕೇಡುಂಟುಮಾಡಲು ತಮ್ಮ ನಾಲಗೆಗಳನ್ನು ತಿರುಚಿ, 'ಸಮಿಅ್‌ನಾ ವ ಅಸೈನಾ'[46], 'ಇಸ್ಮಅ್ ಗೈರ ಮುಸ್ಮಇನ್'[47] ಮತ್ತು 'ರಾಇನಾ'[48] ಎಂದು ಹೇಳುತ್ತಾರೆ. ಇಷ್ಟಾಗಿ ಅವರು, 'ಸಮಿಅ್‌ನಾ ವ ಅತಅ್‌ನಾ' (ನಾವು ಆಲಿಸಿದೆವು ಮತ್ತು ಅನುಸರಿಸಿದೆವು) 'ಇಸ್ಮಅ್' (ಆಲಿಸು) ಮತ್ತು 'ಉನ್‌ಝುರ್ನಾ' (ನಮ್ಮ ಕಡೆ ಗಮನಿಸಿರಿ) ಎಂದು ಹೇಳುತ್ತಿದ್ದರೆ ಅದು ಅವರಿಗೇ ಉತ್ತಮವೂ ನೇರ ಮಾರ್ಗವೂ ಆಗಿತ್ತು. ಆದರೆ, ಅವರ ಮಿಥ್ಯಾರಾಧನೆಯ ಕಾರಣದಿಂದ ಅವರ ಮೇಲೆ ಅಲ್ಲಾಹನ ಶಾಪ ಬಿದ್ದಿರುತ್ತದೆ. ಆದುದರಿಂದ ಅವರು ಸ್ವಲ್ಪ ಮಾತ್ರವೇ ವಿಶ್ವಾಸ ವಿಡುತ್ತಾರೆ.

مِّنَ الَّذِينَ هَادُوا يُحَرِّفُونَ الْكَلِمَ عَن مَّوَاضِعِهِ وَيَقُولُونَ سَمِعْنَا وَعَصَيْنَا وَاسْمَعْ غَيْرَ مُسْمَعٍ وَرَاعِنَا لَيًّا بِأَلْسِنَتِهِمْ وَطَعْنًا فِي الدِّينِ ۚ وَلَوْ أَنَّهُمْ قَالُوا سَمِعْنَا وَأَطَعْنَا وَاسْمَعْ وَانظُرْنَا لَكَانَ خَيْرًا لَّهُمْ وَأَقْوَمَ وَلَٰكِن لَّعَنَهُمُ اللَّهُ بِكُفْرِهِمْ فَلَا يُؤْمِنُونَ إِلَّا قَلِيلًا ﴿٤٦﴾

ತಲೆದೋರಿದ್ದು ನೀರು ಇಲ್ಲದಾಗ ಅವನು 'ತಯಮ್ಮುಮ್' ಮಾಡಿ ನಮಾಝ್ ನಿರ್ವಹಿಸಬಹುದು. ಅವನು ರೋಗಿಯಾಗಿದ್ದು ವುಝೂ ಅಥವಾ ಸ್ನಾನದಿಂದ ಅವನಿಗೆ ಹಾನಿ ಸಂಭವಿಸುವುದಾದರೆ ನೀರು ಇದ್ದಾಗಲೂ ತಯಮ್ಮುಮ್‌ನ ಅನುಮತಿಯಿಂದ ಪ್ರಯೋಜನ ಪಡೆಯಬಹುದು.

45. ಇದಕ್ಕೆ ಮೂರು ಅರ್ಥಗಳಿವೆ. ಮೊದನೆಯದಾಗಿ ಅಲ್ಲಾಹನ ಗ್ರಂಥದ ಪದಗಳನ್ನು ಮಾರ್ಪಡಿಸುತ್ತಾರೆ. ಎರಡನೆಯದಾಗಿ ತಮ್ಮದೇ ಆದ ವ್ಯಾಖ್ಯಾನಗಳಿಂದ ಗ್ರಂಥದ ಬಗ್ಗೆ ಒಂದಕ್ಕೊಂದು ಅರ್ಥ ಕಲ್ಪಿಸುತ್ತಾರೆ. ಮೂರನೆಯಯದಾಗಿ ಅವರು ಪ್ರವಾದಿ ಮುಹಮ್ಮದ್(ಸ) ಮತ್ತವರ ಅನುಯಾಯಿಗಳ ಜೊತೆ ಅವರ ಮಾತುಗಳನ್ನು ಆಲಿಸುತ್ತಾರೆ ಮತ್ತು ಅಲ್ಲಿಂದ ಮರಳಿದ ನಂತರ ಜನರೊಡನೆ ಅದನ್ನು ತಪ್ಪಾಗಿ ವಿವರಿಸುತ್ತಾರೆ. ಒಂದು ವಿಚಾರವನ್ನು ಪ್ರಸ್ತಾಪಿಸಲಾಗಿದ್ದರೆ ಅವರು ತಮ್ಮ ಕುತಂತ್ರದಿಂದ ಅದಕ್ಕೆ ಬೇರೆಯೇ ಬಣ್ಣಕೊಟ್ಟು ಜನರಲ್ಲಿ ಪ್ರಚುರ ಪಡಿಸುತ್ತಾರೆ.

46. ಅರ್ಥಾತ್- ಅವರಿಗೆ ಅಲ್ಲಾಹನ ಆದೇಶವನ್ನು ಕೊಡಲಾದಾಗ ಅವರು ಜೋರಾಗಿ 'ಸಮಿಅ್‌ನಾ' (ನಾವು ಆಲಿಸಿದೆವು) ಎನ್ನುತ್ತಾರೆ ಮತ್ತು ಮೆಲ್ಲನೆ 'ಅಸೈನಾ' (ನಾವು ಒಪ್ಪಲಿಲ್ಲ) ಎನ್ನುತ್ತಾರೆ. ಅಥವಾ 'ಅತಅ್‌ನಾ' (ನಾವು ಸಮ್ಮತಿಸಿದೆವು) ಎಂಬ ಪದವನ್ನು 'ಅಸೈನಾ' (ನಾವು ಒಪ್ಪಲಿಲ್ಲ) ಎಂಬ ಅರ್ಥ ಬರುವ ಧಾಟಿಯಲ್ಲಿ ಉಚ್ಚರಿಸುತ್ತಾರೆ.

47. ಅರ್ಥಾತ್- ಮಾತನಾಡುವಾಗ ಅವರು ಪ್ರವಾದಿವರ್ಯರೊಡನೆ(ಸ) ಏನಾದರೂ ಹೇಳಬಯಸಿದರೆ 'ಇಸ್ಮಅ್' (ಇತ್ತ ಕೇಳಿರಿ) ಎನ್ನುತ್ತಾರೆ. ಅದರ ಜೊತೆಗೆ ದ್ವಯಾರ್ಥಉಳ್ಳ 'ಗೈರಮುಸ್‌ಮಇನ್' ಎಂಬ ಪದವನ್ನೂ ಹೇಳಿ ಬಿಡುತ್ತಾರೆ. ಅರ್ಥಾತ್ ತಾವು ಎಷ್ಟು ಶ್ರೇಷ್ಠರೆಂದರೆ ತಮ್ಮಿಚ್ಛೆಗೆ ವಿರುದ್ಧ ಯಾವುದೇ ಮಾತನ್ನೂ ನಾವು ಹೇಳುವಂತಿಲ್ಲ. ಇನ್ನೊಂದು ಅರ್ಥ ನಿಮಗೆ ಯಾವುದನ್ನೂ ಹೇಳಲು ನೀವು ಅರ್ಹರಲ್ಲ ಎಂದಾಗುತ್ತದೆ. ಮತ್ತೊಂದು ಅರ್ಥ ದೇವನು ನಿಮ್ಮನ್ನು ಕಿವುಡನಾಗಿ ಮಾಡಲಿ ಎಂದಾಗಿದೆ.

48. ಇದರ ವಿವರಣೆ ಅಲ್‌ಬಕರಃ ಅಧ್ಯಾಯದ 36ನೆಯ ಟಿಪ್ಪಣಿಯಲ್ಲಿ ಬಂದಿದೆ.

47. ಓ ಗ್ರಂಥ ನೀಡಲ್ಪಟ್ಟವರೇ, ನಾವೀಗ ಅವತೀರ್ಣಗೊಳಿಸಿರುವ ಹಾಗೂ ನಿಮ್ಮ ಬಳಿ ಮೊದಲೇ ಇದ್ದ ಗ್ರಂಥವನ್ನು ಸಮರ್ಥಿಸುವ ಈ ಗ್ರಂಥವನ್ನು ಮಾನ್ಯ ಮಾಡಿರಿ. ನಾವು ಮುಖಗಳನ್ನು ವಿರೂಪಗೊಳಿಸಿ ಹಿಂದಕ್ಕೆ ತಿರುಗಿಸಿ ಬಿಡುವ ಅಥವಾ 'ಸಬ್ತ್'ನ ವರನ್ನು ಶಪಿಸಿದಂತೆಯೇ ಅವರನ್ನೂ ಶಪಿಸಿ ಬಿಡುವ ಮುಂಚೆಯೇ ವಿಶ್ವಾಸವಿಡಿರಿ. ಅಲ್ಲಾಹನ ಆಜ್ಞೆಯು ಅನುಷ್ಠಾನಕ್ಕೆ ಬಂದೇ ತೀರುವುದೆಂಬುದನ್ನು ನೆನಪಿಡಿರಿ.

يَٰٓأَيُّهَا ٱلَّذِينَ أُوتُوا۟ ٱلْكِتَٰبَ ءَامِنُوا۟ بِمَا نَزَّلْنَا مُصَدِّقًا لِّمَا مَعَكُم مِّن قَبْلِ أَن نَّطْمِسَ وُجُوهًا فَنَرُدَّهَا عَلَىٰٓ أَدْبَارِهَآ أَوْ نَلْعَنَهُمْ كَمَا لَعَنَّآ أَصْحَٰبَ ٱلسَّبْتِ ۚ وَكَانَ أَمْرُ ٱللَّهِ مَفْعُولًا ﴿٤٧﴾

48. ಅಲ್ಲಾಹನು ತನ್ನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಇತರ ಯಾರನ್ನಾದರೂ ಸಹಭಾಗಿಯನ್ನಾಗಿ ಮಾಡಿದವನು ಅತಿ ದೊಡ್ಡ ಸುಳ್ಳನ್ನು ಸೃಷ್ಟಿಸಿದನು ಮತ್ತು ಅತ್ಯಂತ ಘೋರ ಪಾಪವೆಸಗಿದನು.

إِنَّ ٱللَّهَ لَا يَغْفِرُ أَن يُشْرَكَ بِهِۦ وَيَغْفِرُ مَا دُونَ ذَٰلِكَ لِمَن يَشَآءُ ۚ وَمَن يُشْرِكْ بِٱللَّهِ فَقَدِ ٱفْتَرَىٰٓ إِثْمًا عَظِيمًا ﴿٤٨﴾

49. ತಮ್ಮ ಪಾವಿತ್ರ್ಯದ ಕುರಿತು ಅತಿಯಾಗಿ ಹಿಗ್ಗುವವರನ್ನು ನೀವು ನೋಡಿದಿರಾ? ವಸ್ತುತಃ ಪಾವಿತ್ರ್ಯವನ್ನು ಅಲ್ಲಾಹನೇ ತಾನಿಚ್ಛಿಸಿದವರಿಗೆ ದಯಪಾಲಿಸುತ್ತಾನೆ ಮತ್ತು (ಇವರಿಗೆ ಪಾವಿತ್ರ್ಯ ಒದಗುತ್ತಿಲ್ಲವಾದರೆ ವಾಸ್ತವದಲ್ಲಿ) ಇವರ ಮೇಲೆ ಕಿಂಚಿತ್ತೂ ಅನ್ಯಾಯವಾಗುತ್ತಿಲ್ಲ.

أَلَمْ تَرَ إِلَى ٱلَّذِينَ يُزَكُّونَ أَنفُسَهُم ۚ بَلِ ٱللَّهُ يُزَكِّى مَن يَشَآءُ وَلَا يُظْلَمُونَ فَتِيلًا ﴿٤٩﴾

50. ಇವರು ಅಲ್ಲಾಹನ ಮೇಲೂ ಮಿಥ್ಯಾಪಾದನೆ ಹೊರಿಸಲು ಹೇಸದಿರುವುದನ್ನು ನೋಡಿಕೊಳ್ಳಿರಿ. ಇವರು ಸ್ಪಷ್ಟವಾದ ಪಾಪಿಗಳಾಗಿರುತ್ತಾರೆಂಬುದಕ್ಕೆ ಈ ಒಂದು ಪಾಪವೇ ಸಾಕು.

ٱنظُرْ كَيْفَ يَفْتَرُونَ عَلَى ٱللَّهِ ٱلْكَذِبَ ۖ وَكَفَىٰ بِهِۦٓ إِثْمًا مُّبِينًا ﴿٥٠﴾

51. ಗ್ರಂಥ ಜ್ಞಾನದಿಂದ ಒಂದಂಶ ನೀಡಲ್ಪಟ್ಟವರನ್ನು ನೀವು ಕಾಣಲಿಲ್ಲವೇ? ಅವರು 'ಜಿಬ್ತ್'[49] ಮತ್ತು 'ತಾಗೂತ್'[50]ಗಳನ್ನು ನಂಬುತ್ತಾರೆ. ಅವರು ಸತ್ಯನಿಷೇಧಿಗಳ ಕುರಿತು, ಸತ್ಯವಿಶ್ವಾಸಿಗಳಿ

أَلَمْ تَرَ إِلَى ٱلَّذِينَ أُوتُوا۟ نَصِيبًا مِّنَ ٱلْكِتَٰبِ يُؤْمِنُونَ بِٱلْجِبْتِ وَٱلطَّٰغُوتِ وَيَقُولُونَ لِلَّذِينَ كَفَرُوا۟ هَٰٓؤُلَآءِ أَهْدَىٰ مِنَ

49. 'ಜಿಬ್ತ್'ನ ನಿಜಾರ್ಥ ಅವಾಸ್ತವಿಕ, ಕ್ಷುದ್ರ ಮತ್ತು ನಿರರ್ಥಕ ವಿಷಯಗಳು ಎಂದಾಗಿದೆ. ಇಸ್ಲಾಮೀ ಪಾರಿಭಾಷಿಕದಲ್ಲಿ ಜ್ಯೋತಿಷ್ಯ, ಶಕುನ, ಅದೃಷ್ಟ ಪರೀಕ್ಷೆ, ಜಾದೂ, ಮಂತ್ರ, ಮುಹೂರ್ತ ಇತ್ಯಾದಿ ಭ್ರಾಮಕ ವಿಷಯಗಳು 'ಜಿಬ್ತ್'ನಲ್ಲಿ ಸೇರಿವೆ.

50. ವಿವರಣೆಗಾಗಿ ಅಲ್‌ಬಕರಃ ಅಧ್ಯಾಯದ ಟಿಪ್ಪಣಿ 89-90 ನೋಡಿರಿ.

ಗಿಂತ ಇವರೇ ಹೆಚ್ಚು ನೇರಮಾರ್ಗದಲ್ಲಿದ್ದಾರೆಂದು ಹೇಳುತ್ತಾರೆ.[51]

الَّذِيْنَ اٰمَنُوْا سَبِيْلًا ﴿٥١﴾

52. ಅಲ್ಲಾಹನು ಶಪಿಸಿರುವುದು ಇಂತಹವರನ್ನೇ. ಅಲ್ಲಾಹ್ ಯಾರನ್ನಾದರೂ ಶಪಿಸಿಬಿಟ್ಟರೆ ನೀವು ಅವನಿಗೆ ಯಾವ ಸಹಾಯಕನನ್ನೂ ಕಾಣಲಾರಿರಿ.

اُولٰٓئِكَ الَّذِيْنَ لَعَنَهُمُ اللّٰهُ ۗ وَمَنْ يَّلْعَنِ اللّٰهُ فَلَنْ تَجِدَ لَهٗ نَصِيْرًا ﴿٥٢﴾

53. ಅಧಿಕಾರದಲ್ಲಿ ಇವರಿಗೇನಾದರೂ ಪಾಲು ಇದೆಯೇ? ಹಾಗಿರುತ್ತಿದ್ದರೆ ಇವರು ಇತರರಿಗೆ ಚಿಕ್ಕಾಸನ್ನೂ ಕೊಡುತ್ತಿರಲಿಲ್ಲ.

اَمْ لَهُمْ نَصِيْبٌ مِّنَ الْمُلْكِ فَاِذًا لَّا يُؤْتُوْنَ النَّاسَ نَقِيْرًا ﴿٥٣﴾

54. ಮತ್ತೇನು ಅಲ್ಲಾಹನು ಇತರರಿಗೆ ತನ್ನ ಅನುಗ್ರಹ ಪ್ರದಾನ ಮಾಡಿದುದಕ್ಕಾಗಿ ಇವರು ಅವರ ಬಗ್ಗೆ ಅಸೂಯೆ ಪಡುತ್ತಾರೆಯೇ? ಹಾಗಿದ್ದರೆ ಇವರು ತಿಳಿದಿರಲಿ, ನಾವು ಇಬ್‌ರಾಹೀಮರ ಸಂತತಿಗೆ ಗ್ರಂಥ ಮತ್ತು ದಿವ್ಯಯುಕ್ತಿಯನ್ನು ದಯಪಾಲಿಸಿದ್ದೆವು ಮತ್ತು ಅವರಿಗೆ ಮಹಾ ಸಾಮ್ರಾಜ್ಯವನ್ನು ಕರುಣಿಸಿದ್ದೆವು.

اَمْ يَحْسُدُوْنَ النَّاسَ عَلٰى مَآ اٰتٰىهُمُ اللّٰهُ مِنْ فَضْلِهٖ ۚ فَقَدْ اٰتَيْنَآ اٰلَ اِبْرٰهِيْمَ الْكِتٰبَ وَالْحِكْمَةَ وَاٰتَيْنٰهُمْ مُّلْكًا عَظِيْمًا ﴿٥٤﴾

55. ಆದರೆ ಅವರಲ್ಲಿ ಕೆಲವರು ಅವರ ಮೇಲೆ ವಿಶ್ವಾಸವಿರಿಸಿದರು ಇನ್ನು ಕೆಲವರು ವಿಮುಖರಾದರು. ವಿಮುಖರಾದವರಿಗಂತು ಧಗಧಗಿಸುವ ನರಕಾಗ್ನಿಯೇ ಸಾಕು.[52]

فَمِنْهُمْ مَّنْ اٰمَنَ بِهٖ وَمِنْهُمْ مَّنْ صَدَّ عَنْهُ ۗ وَكَفٰى بِجَهَنَّمَ سَعِيْرًا ﴿٥٥﴾

56. ನಮ್ಮ ನಿದರ್ಶನಗಳನ್ನು ನಿಷೇಧಿಸಿದವರನ್ನು ನಾವು ನಿಶ್ಚಯವಾಗಿಯೂ ನರಕಾಗ್ನಿಗೆ ತಳ್ಳಿಬಿಡುವೆವು. ಅವರ ಮೈಚರ್ಮ ಕರಟಿ ಹೋದಾಗಲೆಲ್ಲ ಅವರು ಶಿಕ್ಷೆಯನ್ನು ಚೆನ್ನಾಗಿ ಸವಿಯುವಂತಾಗಲು ನಾವು ಅದರ ಸ್ಥಾನದಲ್ಲಿ ಬೇರೆ ಚರ್ಮವನ್ನು ಸೃಷ್ಟಿಸುತ್ತ ಹೋಗುವೆವು. ಅಲ್ಲಾಹನು ಮಹಾ ಪ್ರತಾಪಿಯಾಗಿದ್ದು ತನ್ನ ತೀರ್ಮಾನಗಳನ್ನು ಕಾರ್ಯಾಚರಣೆಗೆ ತರುವ ಯುಕ್ತಿಯನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ.

اِنَّ الَّذِيْنَ كَفَرُوْا بِاٰيٰتِنَا سَوْفَ نُصْلِيْهِمْ نَارًا ۗ كُلَّمَا نَضِجَتْ جُلُوْدُهُمْ بَدَّلْنٰهُمْ جُلُوْدًا غَيْرَهَا لِيَذُوْقُوا الْعَذَابَ ۗ اِنَّ اللّٰهَ كَانَ عَزِيْزًا حَكِيْمًا ﴿٥٦﴾

57. ನಮ್ಮ ನಿದರ್ಶನಗಳನ್ನು ಮಾನ್ಯ ಮಾಡಿಕೊಂಡು ಸತ್ಕರ್ಮ ಮಾಡಿದವರಿಗೆ ನಾವು ತಳ ಭಾಗದಲ್ಲಿ ಕಾಲುವೆಗಳು

وَالَّذِيْنَ اٰمَنُوْا وَعَمِلُوا الصّٰلِحٰتِ سَنُدْخِلُهُمْ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ

51. ಇಲ್ಲಿ ಸತ್ಯನಿಷೇಧಕರು ಎಂದರೆ ಅರೇಬಿಯಾದ ಬಹುದೇವಾರಾಧಕರು.

52. ಇಲ್ಲಿ ಬನೀ ಇಸ್ರಾಈಲರ ಅಸೂಯೆಯ ಮಾತುಗಳಿಗೆ ಉತ್ತರಿಸಲಾಗಿದೆ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಅರ್ಥಾತ್ ನೀವು ಅಸೂಯೆ ಪಡುವುದಾದರೂ ಯಾವ ಕಾರಣಕ್ಕಾಗಿ? ನೀವೂ ಇಬ್‌ರಾಹೀಮರ ಸಂತತಿಯೇ ಆಗಿದ್ದೀರಿ. ಅಂತೆಯೇ ಬನೀ ಇಸ್ಮಾಈಲ್ ಕೂಡ ಇಬ್‌ರಾಹೀಮರ ಸಂತತಿಯಾಗಿದ್ದಾರೆ. ಇಬ್‌ರಾಹೀಮರಿಂದ ನಾವು ಪಡೆದಿದ್ದ ನಾಯಕತ್ವದ ಕರಾರು ಇಬ್‌ರಾಹೀಮರ ಸಂತತಿಯ ಪೈಕಿ, ನಾವು ಕಳುಹಿಸಿದ ಗ್ರಂಥ ಮತ್ತು ಯುಕ್ತಿಯನ್ನು ಅನುಸರಿಸುವವರಿಗೆ ಮಾತ್ರ ಅನ್ವಯವಾಗುತ್ತಿತ್ತು. ಈ ಗ್ರಂಥ ಮತ್ತು ಯುಕ್ತಿಯನ್ನು ನಾವು ಮೊದಲು ನಿಮ್ಮೆಡೆಗೆ ಕಳುಹಿಸಿದೆವು. ಆದರೆ ನೀವು ನಿಮ್ಮ ಅನರ್ಹತೆಯಿಂದಾಗಿ ಅದರಿಂದ ವಿಮುಖರಾದಿರಿ. ಈಗ ಅದನ್ನೇ ನಾವು ಬನೀಇಸ್ಮಾಈಲರಿಗೆ ದಯಪಾಲಿಸಿದ್ದೇವೆ. ಅವರು ಅದರ ಮೇಲೆ ವಿಶ್ವಾಸವಿಟ್ಟಿರುವುದು ಅವರ ಪಾಲಿನ ಸೌಭಾಗ್ಯವಾಗಿದೆ.

ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಕೊಡುವೆವು. ಅಲ್ಲಿ ಅವರು ಅನಂತ ಕಾಲ ನೆಲೆಸುವರು. ಅಲ್ಲಿ ಅವರಿಗೆ ಪರಿಶುದ್ಧ ಜೊತೆಗಾರರು ಸಿಗುವರು ಮತ್ತು ನಾವು ಅವರನ್ನು ದಟ್ಟವಾದ ನೆರಳಲ್ಲಿರಿಸುವೆವು.

فِيهَآ أَبَدًا ۖ لَّهُمْ فِيهَآ أَزْوَٰجٌ مُّطَهَّرَةٌ ۖ
وَنُدْخِلُهُمْ ظِلًّا ظَلِيلًا ﴿٥٧﴾

58. ಮುಸ್ಲಿಮರೇ, ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ಒಪ್ಪಿಸಿಕೊಡಿರೆಂದೂ ಜನರೊಳಗೆ ತೀರ್ಪು ನೀಡುವಾಗ ನ್ಯಾಯದೊಂದಿಗೆ ತೀರ್ಪು ನೀಡಿರೆಂದೂ[53] ಅಲ್ಲಾಹನು ನಿಮಗೆ ಆಜ್ಞೆ ವಿಧಿಸುತ್ತಾನೆ. ಅಲ್ಲಾಹನು ನಿಮಗೆ ಅತ್ಯುತ್ತಮ ಉಪದೇಶವನ್ನೀಯುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹ್ ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.

إِنَّ ٱللَّهَ يَأْمُرُكُمْ أَن تُؤَدُّوا۟ ٱلْأَمَٰنَٰتِ إِلَىٰٓ
أَهْلِهَا وَإِذَا حَكَمْتُم بَيْنَ ٱلنَّاسِ أَن
تَحْكُمُوا۟ بِٱلْعَدْلِ ۚ إِنَّ ٱللَّهَ نِعِمَّا يَعِظُكُم
بِهِۦٓ ۗ إِنَّ ٱللَّهَ كَانَ سَمِيعًۢا بَصِيرًا ﴿٥٨﴾

59. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಆಜ್ಞಾಪಾಲನೆ ಮಾಡಿರಿ, ಸಂದೇಶವಾಹಕರ ಮತ್ತು ನಿಮ್ಮೊಳಗಿನ 'ಉಲುಲ್ ಅಮ್ರ್'ರ (ಆಜ್ಞಾಧಿಕಾರ ಹೊಂದಿದವರ) ಆಜ್ಞಾಪಾಲನೆ ಮಾಡಿರಿ. ಅನಂತರ ನಿಮ್ಮೊಳಗೆ ಯಾವುದಾದರೊಂದು ವಿಷಯದಲ್ಲಿ ವಿವಾದವುಂಟಾದರೆ ನೀವು ನಿಜಕ್ಕೂ ಅಲ್ಲಾಹನ ಮತ್ತು ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸುತ್ತೀರಾದರೆ ಆ ವಿವಾದವನ್ನು ಅಲ್ಲಾಹ್ ಮತ್ತು ಸಂದೇಶವಾಹಕರ ಕಡೆಗೆ ತಿರುಗಿಸಿರಿ.[54] ಇದುವೇ ಅತ್ಯಂತ ಸರಿಯಾದ ಕರ್ಮ ವಿಧಾನ. ಇದು ಪರಿಣಾಮದ ದೃಷ್ಟಿಯಿಂದಲೂ ಉತ್ತಮವಾಗಿದೆ.

يَٰٓأَيُّهَا ٱلَّذِينَ ءَامَنُوٓا۟ أَطِيعُوا۟ ٱللَّهَ وَأَطِيعُوا۟
ٱلرَّسُولَ وَأُو۟لِى ٱلْأَمْرِ مِنكُمْ ۖ فَإِن
تَنَٰزَعْتُمْ فِى شَىْءٍ فَرُدُّوهُ إِلَى ٱللَّهِ وَٱلرَّسُولِ
إِن كُنتُمْ تُؤْمِنُونَ بِٱللَّهِ وَٱلْيَوْمِ ٱلْـَٔاخِرِ ۚ
ذَٰلِكَ خَيْرٌ وَأَحْسَنُ تَأْوِيلًا ﴿٥٩﴾

53. ಅರ್ಥಾತ್- ಬನೀಇಸ್ರಾಈಲರು ನಿರತವಾಗಿರುವಂತಹ ಕೆಡುಕುಗಳಿಂದ ನೀವು ಮುಕ್ತವಾಗಿರಬೇಕು. ತಮ್ಮ ಪತನ ಕಾಲದಲ್ಲಿ ಅವರು ತಮ್ಮ ಅಮಾನತ್ತುಗಳನ್ನು ಅರ್ಥಾತ್ ಹೊಣೆಗಾರಿಕೆಯ ಪದವಿಗಳು, ಧಾರ್ಮಿಕ ನೇತೃತ್ವ ಮತ್ತು ಸಾಮುದಾಯಿಕ ನಾಯಕತ್ವವನ್ನು ಅಯೋಗ್ಯರು, ಸಂಕುಚಿತಮತಿಗಳು, ನೀತಿ ಬಾಹಿರರು, ಅಪ್ರಾಮಾಣಿಕರು ಮತ್ತು ದುರಾಚಾರಿಗಳಿಗೆ ನೀಡಿದ್ದರು. ಇದು ಅವರಲ್ಲಿದ್ದ ಮೂಲಭೂತ ಕೆಡುಕುಗಳಲ್ಲಿ ಒಂದಾಗಿತ್ತು. ಹೀಗೆ ಕೆಟ್ಟ ವ್ಯಕ್ತಿಗಳ ನಾಯಕತ್ವದಿಂದ ಸಮಸ್ತ ಸಮುದಾಯದಲ್ಲಿ ಕೆಡುಕು ಆವರಿಸುತ್ತಾ ಹೋಯಿತು. ನೀವು ಈ ರೀತಿ ಮಾಡಬಾರದು ಎಂದು ಇಲ್ಲಿ ಮುಸ್ಲಿಮರಿಗೆ ಮಾರ್ಗದರ್ಶನ ಕೊಡಲಾಗುತ್ತಿದೆ. ಬನೀ ಇಸ್ರಾಈಲರ ಇನ್ನೊಂದು ದೌರ್ಬಲ್ಯ ಅವರು ನ್ಯಾಯದ ಸ್ಫೂರ್ತಿಯಿಂದ ಮುಕ್ತರಾದುದಾಗಿತ್ತು. ವೈಯಕ್ತಿಕ ಮತ್ತು ಸಾಮುದಾಯಿಕ ಉದ್ದೇಶಗಳಿಗಾಗಿ ಅವರು ತಮ್ಮ ವಿಶ್ವಾಸವನ್ನು ನುಂಗಿ ಬಿಡಲು ಅಂಜುತ್ತಿರಲಿಲ್ಲ. ಸುವ್ಯಕ್ತವಾದ ಹಟಮಾರಿತನ ಪ್ರದರ್ಶಿಸುತ್ತಿದ್ದರು. ನ್ಯಾಯವನ್ನು ಬಹಿರಂಗವಾಗಿ ಕೊಲೆ ಮಾಡಲು ಅವರು ಹೇಸುತ್ತಿರಲಿಲ್ಲ. ನೀವು ಈ ರೀತಿ ನ್ಯಾಯಬಾಹಿರರಾಗಿ ಮಾರ್ಪಡಬಾರದು ಎಂದು ಅಲ್ಲಾಹನು ಇಲ್ಲಿ ಮುಸ್ಲಿಮರಿಗೆ ಮಾರ್ಗದರ್ಶನ ನೀಡುತ್ತಿದ್ದಾನೆ. ನಿಮ್ಮ ಮಿತ್ರತ್ವ ಮತ್ತು ಶತ್ರುತ್ವ ಯಾರೊಂದಿಗಿದ್ದರೂ ಸರಿಯೇ. ಎಲ್ಲಾ ಸಂದರ್ಭಗಳಲ್ಲೂ ಮಾತನಾಡುವಾಗ ನೀವು ನ್ಯಾಯಪೂರ್ಣ ಮಾತನ್ನೇ ಆಡಬೇಕು. ತೀರ್ಪು ನೀಡುವಾಗ ನ್ಯಾಯಯುತವಾಗಿಯೇ ನೀಡಬೇಕು.

54. ಆ ಸೂಕ್ತ ಇಸ್ಲಾಮಿನ ಸಮಸ್ತ ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವ್ಯವಸ್ಥೆಯ ಬುನಾದಿಯಾಗಿದೆ. ಇದು ಇಸ್ಲಾಮೀ ವ್ಯವಸ್ಥೆಯ ಸಂವಿಧಾನದ ಮೊದಲ ಪರಿಚ್ಛೇದವಾಗಿದೆ. ಇದರಲ್ಲಿ ಈ ಕೆಳಗಿನ ನಾಲ್ಕು ತತ್ವಗಳನ್ನು ಶಾಶ್ವತವಾಗಿ ನೆಲೆಗೊಳಿಸಲಾಗಿದೆ-

1. ಇಸ್ಲಾಮೀ ವ್ಯವಸ್ಥೆಯಲ್ಲಿ ಅನುಸರಣಾರ್ಹ ಕೇವಲ ಅಲ್ಲಾಹನಾಗಿದ್ದಾನೆ. ಮುಸ್ಲಿಮನು ಮೊಟ್ಟ ಮೊದಲು ಅಲ್ಲಾಹನ ದಾಸನಾಗಿದ್ದಾನೆ, ಬೇರೇನಿದ್ದರೂ ಅನಂತರ.
2. ಪ್ರವಾದಿಯ ಅನುಸರಣೆ ಇಸ್ಲಾಮೀ ವ್ಯವಸ್ಥೆಯ ಎರಡನೆಯ ಬುನಾದಿಯಾಗಿದೆ.
3. ಪೂರ್ವೋಕ್ತ ಎರಡು ಅನುಸರಣೆಗಳ ನಂತರ ಮುಸ್ಲಿಮರ ಪೈಕಿಯ 'ಉಲುಲ್ ಅಮ್ರ್' ಅರ್ಥಾತ್ ನಾಯಕರ ಅನುಸರಣೆ

60. ಓ ಪೈಗಂಬರರೇ, ನಿಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟ ಗ್ರಂಥದ ಮೇಲೂ ನಿಮಗಿಂತ ಮೊದಲು ಅವತೀರ್ಣಗೊಳಿಸಲ್ಪಟ್ಟ ಗ್ರಂಥಗಳ ಮೇಲೂ ನಾವು ವಿಶ್ವಾಸವಿಟ್ಟೆವೆಂದು ಕಂಠೋಕ್ತ ವಾದಿಸುವವರನ್ನು ನೀವು ನೋಡಿಲ್ಲವೇ? ಆದರೆ ಅವರು ತಮ್ಮ ವ್ಯವಹಾರಗಳ ತೀರ್ಮಾನ ಮಾಡಿಸಲು 'ತಾಗೂತ'ನ್ನು ಸಮೀಪಿಸುತ್ತಾರೆ. ವಸ್ತುತಃ ಅವರಿಗೆ ತಾಗೂತನ್ನು ನಿರಾಕರಿಸಲು ಆಜ್ಞಾಪಿಸಲಾಗಿತ್ತು.[55] ಶೈತಾನನು ಅವರನ್ನು ದಾರಿತಪ್ಪಿಸಿ, ನೇರ ಮಾರ್ಗದಿಂದ ಬಹುದೂರ ಕೊಂಡೊಯ್ಯಲಿಚ್ಛಿಸುತ್ತಾನೆ.

أَلَمْ تَرَ إِلَى الَّذِينَ يَزْعُمُونَ أَنَّهُمْ آمَنُوا بِمَا
أُنْزِلَ إِلَيْكَ وَمَا أُنْزِلَ مِنْ قَبْلِكَ يُرِيدُونَ
أَنْ يَتَحَاكَمُوا إِلَى الطَّاغُوتِ وَقَدْ أُمِرُوا
أَنْ يَكْفُرُوا بِهِ وَيُرِيدُ الشَّيْطَانُ أَنْ
يُضِلَّهُمْ ضَلَالًا بَعِيدًا ﴿٦٠﴾

61. ಅಲ್ಲಾಹನು ಅವತೀರ್ಣಗೊಳಿಸಿದುದರ ಕಡೆಗೆ ಬನ್ನಿರಿ ಮತ್ತು ಸಂದೇಶವಾಹಕರ ಕಡೆಗೆ ಬನ್ನಿರಿ ಎಂದು ಅವರೊಡನೆ ಹೇಳಿದಾಗ ಈ ಕಪಟವಿಶ್ವಾಸಿಗಳು ನಿಮ್ಮ ಬಳಿಗೆ ಬರುವುದರಿಂದ ಜಾರಿಕೊಳ್ಳು ತ್ತಿರುವುದನ್ನು ನೀವು ನೋಡುತ್ತೀರಿ.

وَإِذَا قِيلَ لَهُمْ تَعَالَوْا إِلَىٰ مَا أَنْزَلَ اللَّهُ
وَإِلَى الرَّسُولِ رَأَيْتَ الْمُنَافِقِينَ يَصُدُّونَ
عَنْكَ صُدُودًا ﴿٦١﴾

62. ಇವರು ತಮ್ಮ ಸ್ವಹಸ್ತಗಳಿಂದ ತಂದ ವಿಪತ್ತು ಇವರ ಮೇಲೆರಗಿದಾಗ ಏನಾಗುತ್ತದೆ? ಆಗ ಇವರು ನಿಮ್ಮ ಬಳಿ ಪ್ರಮಾಣ ಮಾಡುತ್ತ ಬಂದು, "ನಾವಂತು ದೇವನಾಣೆಗೂ ಒಳಿತನ್ನೇ ಬಯಸುತ್ತಿದ್ದೆವು ಮತ್ತು ನಮ್ಮ ಉದ್ದೇಶವು ಉಭಯತ್ರ ರೊಳಗೆ ಹೇಗಾದರೂ ಸಾಮರಸ್ಯವೇರ್ಪಡಿಸುವುದೇ ಆಗಿತ್ತು" ಎಂದು ಹೇಳುತ್ತಾರೆ.

فَكَيْفَ إِذَا أَصَابَتْهُمْ مُصِيبَةٌ بِمَا قَدَّمَتْ
أَيْدِيهِمْ ثُمَّ جَاءُوكَ يَحْلِفُونَ بِاللَّهِ
إِنْ أَرَدْنَا إِلَّا إِحْسَانًا وَتَوْفِيقًا ﴿٦٢﴾

63. ಅವರ ಮನಸ್ಸಿನಲ್ಲಿರುವುದೆಲ್ಲಾ ಅಲ್ಲಾಹನಿಗೆ ತಿಳಿದಿದೆ. ಅವರೊಂದಿಗೆ ಪ್ರತಿರೋಧಿಸಬೇಡಿರಿ. ಅವರಿಗೆ ತಿಳಿಯ ಹೇಳಿರಿ ಮತ್ತು ಅವರ ಮನಸ್ಸಿಗೆ ನಾಟುವಂತಹ ಉಪದೇಶ ಕೊಡಿರಿ.

أُولَٰئِكَ الَّذِينَ يَعْلَمُ اللَّهُ مَا فِي قُلُوبِهِمْ
فَأَعْرِضْ عَنْهُمْ وَعِظْهُمْ وَقُلْ لَهُمْ فِي
أَنْفُسِهِمْ قَوْلًا بَلِيغًا ﴿٦٣﴾

---

ಮೂರನೆಯದಾಗಿದೆ. 'ಉಲುಲ್ ಅಮ್ರ್' ಎಂದರೆ ಮುಸ್ಲಿಮರ ಸಾಮೂಹಿಕ ವ್ಯವಹಾರಗಳ ನಾಯಕತ್ವ ವಹಿಸುವವರೆಲ್ಲರೂ ಆಗಿದ್ದಾರೆ. ಅವರು ವಿದ್ವಾಂಸರಾಗಿರಬಹುದು, ರಾಜಕೀಯ ಮಾರ್ಗದರ್ಶನ ನೀಡುವ ನಾಯಕರಾಗಿರಬಹುದು, ದೇಶದ ವ್ಯವಸ್ಥೆಯನ್ನು ಕಾಪಾಡುವ ಅಧಿಕಾರಿಗಳಾಗಿರಬಹುದು, ನ್ಯಾಯ ತೀರ್ಮಾನ ಮಾಡುವ ನ್ಯಾಯಾಧೀಶರಾಗಿರಬಹುದು, ನಾಗರಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಗೋತ್ರಗಳು, ಜನವಾಸ ಪ್ರದೇಶಗಳು ಮತ್ತು ಮೊಹಲ್ಲಾಗಳ ನೇತೃತ್ವ ವಹಿಸುವ ಸರದಾರರಾಗಿರಬಹುದು.

4. ದೇವಾದೇಶ ಮತ್ತು ಪ್ರವಾದಿಚರ್ಯೆ, ಮೂಲಭೂತ ಕಾನೂನು ಮತ್ತು ಅಂತಿಮ ಪ್ರಮಾಣಗಳಾಗಿವೆ. ಮುಸ್ಲಿಮರ ಮಧ್ಯೆ ಅಥವಾ ಸರ್ಕಾರ ಮತ್ತು ಜನರ ನಡುವೆ ಯಾವುದೇ ವಿಷಯದಲ್ಲಿ ಸಮಸ್ಯೆ ತಲೆದೋರಿದರೆ ತೀರ್ಮಾನಕ್ಕಾಗಿ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಮೊರೆ ಹೋಗಬೇಕಾಗುವುದು. ಅಲ್ಲಿಂದ ಸಿಗುವ ಯಾವುದೇ ತೀರ್ಮಾನವನ್ನು ಎಲ್ಲರೂ ಶಿರಸಾವಹಿಸಿ ಪಾಲಿಸಬೇಕಾಗುವುದು.

55. ಇಲ್ಲಿ 'ತಾಗೂತ್' ಎಂದರೆ ಅಲ್ಲಾಹನ ಕಾನೂನಿನ ವಿನಾ ಇತರರ ಕಾನೂನುಗಳ ಆಧಾರದಲ್ಲಿ ತೀರ್ಮಾನಿಸುವ ಅಧಿಕಾರಿ ಮತ್ತು ಅಲ್ಲಾಹನ ಸಾರ್ವಭೌಮತೆಯನ್ನು ಮತ್ತು ಪ್ರವಾದಿಚರ್ಯೆಯೇ ಅಂತಿಮ ಪ್ರಮಾಣ ಎಂಬುದನ್ನು ಸಮ್ಮತಿಸದ ನ್ಯಾಯಾಂಗವಾಗಿದೆ ಎಂದು ಸ್ಪಷ್ಟವಾಗುತ್ತದೆ.

64. ನಾವು ಪ್ರತಿಯೊಬ್ಬ ಸಂದೇಶವಾಹಕನನ್ನೂ ಅಲ್ಲಾಹನ ಆಜ್ಞೆ ಪ್ರಕಾರ ಅನುಸರಿಸಲ್ಪಡಲಿಕ್ಕಾಗಿಯೇ ಕಳುಹಿಸಿರುತ್ತೇವೆ (ಎಂದು ಅವರಿಗೆ ತಿಳಿಯಹೇಳಿರಿ.) ಅವರು ತಮ್ಮ ಮೇಲೆ ತಾವೇ ಅಕ್ರಮವೆಸಗಿದಾಗ ನಿಮ್ಮ ಬಳಿಗೆ ಬಂದು ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುತ್ತಿದ್ದರೆ ಮತ್ತು ಸಂದೇಶವಾಹಕರೂ ಅವರಿಗಾಗಿ ಕ್ಷಮೆ ಬೇಡುತ್ತಿದ್ದರೆ, ಖಂಡಿತವಾಗಿಯೂ ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುವುದನ್ನು ಅವರು ಕಾಣುತ್ತಿದ್ದರು.

وَمَآ اَرْسَلْنَا مِنْ رَّسُوْلٍ اِلَّا لِيُطَاعَ بِاِذْنِ اللّٰهِ ؕ وَلَوْ اَنَّهُمْ اِذْ ظَّلَمُوْٓا اَنْفُسَهُمْ جَآءُوْكَ فَاسْتَغْفَرُوا اللّٰهَ وَاسْتَغْفَرَ لَهُمُ الرَّسُوْلُ لَوَجَدُوا اللّٰهَ تَوَّابًا رَّحِيْمًا ﴿٦٤﴾

65. ಓ ಮುಹಮ್ಮದರೇ! ನಿಮ್ಮ ಪ್ರಭುವಿನಾಣೆ, ಇವರು ತಮ್ಮೊಳಗಿನ ಭಿನ್ನಾಭಿಪ್ರಾಯಗಳಲ್ಲಿ ನಿಮ್ಮನ್ನು ತೀರ್ಪು ನೀಡುವವರೆಂದು ಒಪ್ಪಿಕೊಂಡು ಆ ಬಳಿಕ ನೀವು ಕೊಟ್ಟ ತೀರ್ಪಿನ ಬಗ್ಗೆ ತಮ್ಮ ಮನಸ್ಸಿನಲ್ಲೂ ಯಾವುದೇ ಸಂಕೋಚ ಪಡದೆ ಅದನ್ನು ಸರ್ವ ಸಂಪೂರ್ಣವಾಗಿ ಒಪ್ಪಿಕೊಳ್ಳುವವರೆಗೂ ಅವರು ಖಂಡಿತ ಸತ್ಯವಿಶ್ವಾಸಿಗಳಾಗಲಾರರು.

فَلَا وَرَبِّكَ لَا يُؤْمِنُوْنَ حَتّٰى يُحَكِّمُوْكَ فِيْمَا شَجَرَ بَيْنَهُمْ ثُمَّ لَا يَجِدُوْا فِيْٓ اَنْفُسِهِمْ حَرَجًا مِّمَّا قَضَيْتَ وَيُسَلِّمُوْا تَسْلِيْمًا ﴿٦٥﴾

66. ನೀವು ಪ್ರಾಣಾರ್ಪಣೆ ಮಾಡಿಕೊಳ್ಳಿರಿ ಅಥವಾ ನಿಮ್ಮ ಮನೆಗಳನ್ನು ಬಿಟ್ಟು ಹೊರ ನಡೆಯಿರಿ ಎಂದು ನಾವು ಅವರಿಗೆ ಆಜ್ಞಾಪಿಸಿರುತ್ತಿದ್ದರೆ, ಅವರಲ್ಲಿ ಕೆಲವೇ ಮಂದಿ ಹಾಗೆ ಮಾಡುತ್ತಿದ್ದರು. ವಸ್ತುತಃ ಅವರಿಗೆ ಉಪದೇಶಿಸಲ್ಪಟ್ಟಂತೆ ಅವರು ನಡೆಯುತ್ತಿದ್ದರೆ ಅದು ಅವರ ಪಾಲಿಗೆ ಅತ್ಯುತ್ತಮವೂ ಹೆಚ್ಚು ಸ್ಥಿರತೆಗೆ ಕಾರಣವೂ ಆಗುತ್ತಿತ್ತು.

وَلَوْ اَنَّا كَتَبْنَا عَلَيْهِمْ اَنِ اقْتُلُوْٓا اَنْفُسَكُمْ اَوِ اخْرُجُوْا مِنْ دِيَارِكُمْ مَّا فَعَلُوْهُ اِلَّا قَلِيْلٌ مِّنْهُمْ ؕ وَلَوْ اَنَّهُمْ فَعَلُوْا مَا يُوْعَظُوْنَ بِهٖ لَكَانَ خَيْرًا لَّهُمْ وَاَشَدَّ تَثْبِيْتًا ﴿٦٦﴾

67. ಅವರು ಹಾಗೆ ಮಾಡುತ್ತಿದ್ದರೆ ನಾವು ಅವರಿಗೆ ನಮ್ಮ ಕಡೆಯಿಂದ ಮಹಾ ಪ್ರತಿಫಲ ನೀಡುತ್ತಿದ್ದೆವು-

وَّاِذًا لَّاٰتَيْنٰهُمْ مِّنْ لَّدُنَّآ اَجْرًا عَظِيْمًا ﴿٦٧﴾

68. ಮತ್ತು ನಾವು ಅವರಿಗೆ ನೇರ ಮಾರ್ಗ ತೋರಿಸುತ್ತಿದ್ದೆವು.

وَّلَهَدَيْنٰهُمْ صِرَاطًا مُّسْتَقِيْمًا ﴿٦٨﴾

69. ಅಲ್ಲಾಹ್ ಮತ್ತು ಸಂದೇಶವಾಹಕರನ್ನು ಅನುಸರಿಸುವವರು ಅಲ್ಲಾಹನಿಂದ ಸಕಲ ಸೌಭಾಗ್ಯಗಳನ್ನು ಹೊಂದಿದ ಪ್ರವಾದಿಗಳ, ಸತ್ಯಸಂಧರ, ಹುತಾತ್ಮರ ಮತ್ತು ಸಜ್ಜನರ[56] ಸಹವಾಸದಲ್ಲಿರುವರು. ಅದೆಂತಹ ಉತ್ತಮ ಸಂಗಾತಿಗಳವರು!

وَمَنْ يُّطِعِ اللّٰهَ وَالرَّسُوْلَ فَاُولٰٓئِكَ مَعَ الَّذِيْنَ اَنْعَمَ اللّٰهُ عَلَيْهِمْ مِّنَ النَّبِيّٖنَ وَالصِّدِّيْقِيْنَ وَالشُّهَدَآءِ وَالصّٰلِحِيْنَ ۚ وَحَسُنَ اُولٰٓئِكَ رَفِيْقًا ﴿٦٩﴾

56. ಅರ್ಥಾತ್- ಪರಲೋಕದಲ್ಲಿ ಅವರು ಅಂತಹವರ ಜತೆಗಿರುವರು. ತಮ್ಮ ಕರ್ಮದ ನಿಮಿತ್ತ ಅವರ ಪೈಕಿ ಯಾರಾದರೂ ಪ್ರವಾದಿಯಾಗಿ ಮಾರ್ಪಡುವನೆಂದು ಸರ್ವಥಾ ಇದರ ಅರ್ಥವಲ್ಲ.

70. ಇದು ಅಲ್ಲಾಹನ ಕಡೆಯಿಂದ ಒದಗುವ ನೈಜ ಅನುಗ್ರಹ ವಾಗಿರುತ್ತದೆ. ನಿಜಸ್ಥಿತಿಯನ್ನರಿಯಲು ಅಲ್ಲಾಹನ ದಿವ್ಯ ಜ್ಞಾನವೇ ಸಾಕು.

ذَٰلِكَ الْفَضْلُ مِنَ اللَّهِ ۚ وَكَفَىٰ بِاللَّهِ عَلِيمًا ٧٠

71. ಓ ಸತ್ಯವಿಶ್ವಾಸಿಗಳೇ, ಪ್ರತಿರೋಧಕ್ಕೆ ಸದಾ ಸಜ್ಜಾಗಿರಿ. ಅನಂತರ ಸಂದರ್ಭಕ್ಕನುಸಾರವಾಗಿ ಪ್ರತ್ಯಪ್ರತ್ಯೇಕ ಸೇನಾ ತುಕಡಿಗಳಾಗಿ ಅಥವಾ ಒಟ್ಟಾಗಿ ಹೊರಡಿರಿ.[57]

يَا أَيُّهَا الَّذِينَ آمَنُوا خُذُوا حِذْرَكُمْ فَانْفِرُوا ثُبَاتٍ أَوِ انْفِرُوا جَمِيعًا ٧١

72. ನಿಶ್ಚಯವಾಗಿಯೂ ನಿಮ್ಮಲ್ಲಿ ಯುದ್ಧದಿಂದ ತಪ್ಪಿಸಿಕೊಳ್ಳುವವನೂ ಇದ್ದಾನೆ. ನಿಮ್ಮ ಮೇಲೆ ವಿಪತ್ತೇನಾದರೂ ಬಂದರೆ ಅವನು, "ನಾನು ಇವರ ಸಂಗಡ ಹೋಗದಿದ್ದುದು ನನ್ನ ಮೇಲೆ ಅಲ್ಲಾಹನ ಮಹಾ ಅನುಗ್ರಹವಾಯಿತು" ಎಂದು ಹೇಳುತ್ತಾನೆ.

وَإِنَّ مِنْكُمْ لَمَنْ لَيُبَطِّئَنَّ فَإِنْ أَصَابَتْكُمْ مُصِيبَةٌ قَالَ قَدْ أَنْعَمَ اللَّهُ عَلَيَّ إِذْ لَمْ أَكُنْ مَعَهُمْ شَهِيدًا ٧٢

73. ಅಲ್ಲಾಹನ ಕಡೆಯಿಂದ ನಿಮ್ಮ ಮೇಲೆ ಅನುಗ್ರಹವುಂಟಾದರೆ, ಈ ಮುಂಚೆ ನಿಮ್ಮ ಮತ್ತು ಅವನ ನಡುವೆ ಗೆಳೆತನದ ಸಂಬಂಧವೇ ಇರಲಿಲ್ಲವೋ ಎಂಬಂತೆ, "ಅಕಟ! ನಾನೂ ಅವರ ಜೊತೆ ಸೇರಿರುತ್ತಿದ್ದರೆ ನನಗೂ ಹಿರಿದಾದ ಯಶಸ್ಸು ಪ್ರಾಪ್ತ ವಾಗುತ್ತಿತ್ತು" ಎಂದು ಹೇಳುತ್ತಾನೆ.

وَلَئِنْ أَصَابَكُمْ فَضْلٌ مِنَ اللَّهِ لَيَقُولَنَّ كَأَنْ لَمْ تَكُنْ بَيْنَكُمْ وَبَيْنَهُ مَوَدَّةٌ يَا لَيْتَنِي كُنْتُ مَعَهُمْ فَأَفُوزَ فَوْزًا عَظِيمًا ٧٣

74. (ಇಂತಹವರು ತಿಳಿದಿರಬೇಕು) ಪರಲೋಕ ಜೀವನದ ಬದಲಿಗೆ ಇಹಜೀವನವನ್ನು ಮಾರಿದವರು ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕು. ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವವನು ವಧಿಸಲ್ಪಡಲಿ ಅಥವಾ ವಿಜಯಗಳಿಸಲಿ - ಅವನಿಗೆ ನಾವು ಖಂಡಿತವಾಗಿಯೂ ಉನ್ನತವಾದ ಪ್ರತಿಫಲ ನೀಡುವೆವು.

فَلْيُقَاتِلْ فِي سَبِيلِ اللَّهِ الَّذِينَ يَشْرُونَ الْحَيَاةَ الدُّنْيَا بِالْآخِرَةِ ۚ وَمَنْ يُقَاتِلْ فِي سَبِيلِ اللَّهِ فَيُقْتَلْ أَوْ يَغْلِبْ فَسَوْفَ نُؤْتِيهِ أَجْرًا عَظِيمًا ٧٤

75. "ಓ ನಮ್ಮ ಪ್ರಭೂ, ಅಕ್ರಮಿಗಳು ವಾಸಿಸುವ ಈ ನಾಡಿನಿಂದ ನಮ್ಮನ್ನು ಹೊರ ತೆಗೆ. ನೀನು ನಿನ್ನ ಕಡೆಯಿಂದ ನಮಗೊಬ್ಬ ಮೇಲ್ವಿಚಾರಕನನ್ನು ಮತ್ತು ಒಬ್ಬ ಸಹಾಯಕನನ್ನು ನಿಯೋಜಿಸು"[58]

وَمَا لَكُمْ لَا تُقَاتِلُونَ فِي سَبِيلِ اللَّهِ وَالْمُسْتَضْعَفِينَ مِنَ الرِّجَالِ وَالنِّسَاءِ وَالْوِلْدَانِ الَّذِينَ يَقُولُونَ رَبَّنَا أَخْرِجْنَا

57. ಉಹುದ್ ಯುದ್ಧದಲ್ಲಿ ಮುಸ್ಲಿಮರು ಸೋಲನುಭವಿಸಿದ ಕಾರಣ ಸುತ್ತಮುತ್ತಲಿನ ಗೋತ್ರಗಳು ಹೆಚ್ಚು ಧೈರ್ಯ ತಾಳಿದ್ದರು. ಮುಸ್ಲಿಮರು ನಾಲ್ಕು ನಿಟ್ಟಿನಿಂದ ಅಪಾಯವನ್ನು ಎದುರಿಸುತ್ತಿದ್ದರು. ಆ ಕಾಲದಲ್ಲೇ ಈ ಆದೇಶ ಅವತೀರ್ಣಗೊಂಡಿತ್ತು.

58. ಇದು ಮಕ್ಕಾ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇಸ್ಲಾಮ್ ಸ್ವೀಕರಿಸಿದ್ದ ಮಹಿಳೆಯರು, ಮಕ್ಕಳು ಮತ್ತು ಪುರುಷರ ಕಡೆಗಿರುವ ಸೂಚನೆ. ಅವರು ವಲಸೆ ಹೋಗಲಿಕ್ಕೂ ಶಕ್ತರಿರಲಿಲ್ಲ. ಅಂತೆಯೇ ಶೋಷಣೆಯಿಂದ ತಪ್ಪಿಸಿಕೊಳ್ಳಲಿಕ್ಕೂ ಅವರಿಗೆ ಸಾಧ್ಯವಿರಲಿಲ್ಲ. ಅವರು ನಾನಾ ರೀತಿಯ ಚಿತ್ರಹಿಂಸೆಗೆ ಒಳಗಾಗಿದ್ದರು. ಯಾರಾದರೂ ತಮ್ಮನ್ನು ಈ ಅನ್ಯಾಯದಿಂದ ರಕ್ಷಿಸಲಿ ಎಂದು ಅವರು ಮೊರೆಯಿಡುತ್ತಿದ್ದರು.

ಎಂದು ಮೊರೆಯಿಡುತ್ತಿರುವ ಮರ್ದನಕ್ಕೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ, ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡದಿರಲು ಕಾರಣವೇನು?

مِنْ هٰذِهِ الْقَرْيَةِ الظَّالِمِ أَهْلُهَا ۚ وَاجْعَلْ لَنَا مِنْ لَدُنْكَ وَلِيًّا ۚ وَاجْعَلْ لَنَا مِنْ لَدُنْكَ نَصِيرًا ﴿٧٥﴾

76 ಸತ್ಯವಿಶ್ವಾಸ ಕೈಗೊಂಡವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ ಮತ್ತು ಸತ್ಯನಿಷೇಧವನ್ನು ಕೈಗೊಂಡವರು 'ತಾಗೂತ್'(ಬಂಡುಕೋರ)ನ ಮಾರ್ಗದಲ್ಲಿ ಯುದ್ಧ ಮಾಡು ತ್ತಾರೆ. ಆದುದರಿಂದ ನೀವು ಶೈತಾನನ ಸಂಗಡಿಗರೊಡನೆ ಹೋರಾಡಿರಿ. ಶೈತಾನನ ಕುತಂತ್ರಗಳು ವಾಸ್ತವದಲ್ಲಿ ಬಹಳ ದುರ್ಬಲವೆಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ.

الَّذِينَ آمَنُوا يُقَاتِلُونَ فِي سَبِيلِ اللَّهِ ۖ وَالَّذِينَ كَفَرُوا يُقَاتِلُونَ فِي سَبِيلِ الطَّاغُوتِ فَقَاتِلُوا أَوْلِيَاءَ الشَّيْطَانِ ۖ إِنَّ كَيْدَ الشَّيْطَانِ كَانَ ضَعِيفًا ﴿٧٦﴾

77. "ನಿಮ್ಮ ಕೈಗಳನ್ನು ತಡೆಹಿಡಿದುಕೊಳ್ಳಿರಿ. ನಮಾಝುನ್ನು ಸಂಸ್ಥಾಪಿಸಿರಿ ಮತ್ತು ಝಕಾತ್ ಕೊಡಿರಿ" ಎಂದು ಆದೇಶಿಸಲ್ಪಟ್ಟವರನ್ನು ನೀವು ಕಂಡಿರಾ? ಈಗ ಅವರಿಗೆ ಯುದ್ಧದ ಆಜ್ಞೆ ಕೊಡಲ್ಪಟ್ಟಾಗ ಅವರಲ್ಲೊಂದು ಪಂಗಡವು ಅಲ್ಲಾಹನನ್ನು ಭಯಪಡಬೇಕಾದ ರೀತಿಯಲ್ಲಿ ಅಥವಾ ಅದಕ್ಕಿಂತಲೂ ತುಸು ಹೆಚ್ಚೇ ಜನರನ್ನು ಭಯಪಡುತ್ತದೆ. "ಪ್ರಭೂ, ನಮ್ಮ ಮೇಲೆ ನೀನೇಕೆ ಯುದ್ಧವನ್ನು ನಿರ್ಬಂಧಗೊಳಿಸಿದೆ? ನಮಗೆ ಇನ್ನೂ ಸ್ವಲ್ಪ ಕಾಲಾವಕಾಶವನ್ನೇಕೆ ನೀಡಲಿಲ್ಲ?" ಎಂದು ಕೇಳುತ್ತಾರೆ. ಅವರೊಡನೆ ಹೇಳಿರಿ, "ಐಹಿಕ ಜೀವನದ ಬಂಡವಾಳವು ಅತ್ಯಲ್ಪವಾಗಿದೆ ಮತ್ತು ದೇವಭಯವುಳ್ಳ ವನಿಗೆ ಪರಲೋಕವು ಹೆಚ್ಚು ಉತ್ತಮವಾಗಿದೆ ಮತ್ತು ನಿಮ್ಮ ಮೇಲೆ ಕಿಂಚಿತ್ತೂ ಅಕ್ರಮ ನಡೆಯದು.[59]

أَلَمْ تَرَ إِلَى الَّذِينَ قِيلَ لَهُمْ كُفُّوا أَيْدِيَكُمْ وَأَقِيمُوا الصَّلَاةَ وَآتُوا الزَّكَاةَ فَلَمَّا كُتِبَ عَلَيْهِمُ الْقِتَالُ إِذَا فَرِيقٌ مِنْهُمْ يَخْشَوْنَ النَّاسَ كَخَشْيَةِ اللَّهِ أَوْ أَشَدَّ خَشْيَةً ۚ وَقَالُوا رَبَّنَا لِمَ كَتَبْتَ عَلَيْنَا الْقِتَالَ لَوْلَا أَخَّرْتَنَا إِلَىٰ أَجَلٍ قَرِيبٍ ۗ قُلْ مَتَاعُ الدُّنْيَا قَلِيلٌ وَالْآخِرَةُ خَيْرٌ لِمَنِ اتَّقَىٰ وَلَا تُظْلَمُونَ فَتِيلًا ﴿٧٧﴾

78. ಇನ್ನು ಮರಣವಂತು ನೀವು ಎಂತಹ ಭದ್ರ ಕೋಟೆಯೊಳಗಿದ್ದರೂ ನಿಮಗೆ ಬಂದೇ ತೀರುವುದು." ಅವರಿಗೇನಾದರೂ ಲಾಭವುಂಟಾ ದರೆ, "ಇದು ಅಲ್ಲಾಹನ ಕಡೆಯಿಂದ" ಎನ್ನುತ್ತಾರೆ. ನಷ್ಟವುಂಟಾ ದರೆ, "ಓ ಪೈಗಂಬರರೇ, ಇದು ನಿಮ್ಮಿಂದಾಗಿ ಉಂಟಾಗಿರುತ್ತದೆ" ಎನ್ನುತ್ತಾರೆ. ಎಲ್ಲವೂ ಅಲ್ಲಾಹನ ಕಡೆಯಿಂದಲೇ ಆಗಿದೆ ಎಂದು ಹೇಳಿರಿ. ಇವರಿಗೆ ಏನಾಗಿ ಬಿಟ್ಟಿದೆ? ಇವರಿಗೆ ಯಾವ ವಿಷಯವೂ ತಿಳಿಯುವುದಿಲ್ಲವಲ್ಲ!

أَيْنَمَا تَكُونُوا يُدْرِكْكُمُ الْمَوْتُ وَلَوْ كُنْتُمْ فِي بُرُوجٍ مُشَيَّدَةٍ ۗ وَإِنْ تُصِبْهُمْ حَسَنَةٌ يَقُولُوا هَٰذِهِ مِنْ عِنْدِ اللَّهِ ۖ وَإِنْ تُصِبْهُمْ سَيِّئَةٌ يَقُولُوا هَٰذِهِ مِنْ عِنْدِكَ ۚ قُلْ كُلٌّ مِنْ عِنْدِ اللَّهِ ۖ فَمَالِ هَٰؤُلَاءِ الْقَوْمِ لَا يَكَادُونَ يَفْقَهُونَ حَدِيثًا ﴿٧٨﴾

79. ಓ ಮಾನವಾ, ನಿನಗೊದಗುವ ಪ್ರತಿಯೊಂದು ಒಳಿತೂ ಅಲ್ಲಾಹನ ಕೃಪೆಯಿಂದ ಒದಗುತ್ತದೆ ಮತ್ತು ನಿನಗೊದಗುವ ಪ್ರತಿಯೊಂದು

مَا أَصَابَكَ مِنْ حَسَنَةٍ فَمِنَ اللَّهِ ۖ وَمَا أَصَابَكَ مِنْ سَيِّئَةٍ فَمِنْ نَفْسِكَ ۚ وَأَرْسَلْنَاكَ

59. ಅರ್ಥಾತ್- ನೀವು ಅಲ್ಲಾಹನ ಧರ್ಮದ ಸೇವೆಗೈದರೆ ಮತ್ತು ಅವನ ಮಾರ್ಗದಲ್ಲಿ ಜೀವದ ಹಂಗು ತೊರೆದು ಹೋರಾಡಿದರೆ ಅಲ್ಲಾಹನ ಬಳಿಯಿಂದ ನಿಮಗಿರುವ ಪ್ರತಿಫಲವೇನೂ ನಷ್ಟವಾಗುವುದಿಲ್ಲ.

ವಿಪತ್ತೂ ನಿನ್ನ ಕರ್ಮದಿಂದಾಗಿರುತ್ತದೆ. ಓ ಮುಹಮ್ಮದ್‌ರೇ, ನಾವು ನಿಮ್ಮನ್ನು ಮಾನವರಿಗಾಗಿ ಸಂದೇಶವಾಹಕರಾಗಿ ರವಾನಿಸಿರುತ್ತೇವೆ. ಇದರ ಬಗ್ಗೆ ಅಲ್ಲಾಹನ ಸಾಕ್ಷ್ಯವೇ ಸಾಕು.

لِلنَّاسِ رَسُولًا ۚ وَكَفَىٰ بِاللَّهِ شَهِيدًا ﴿٧٩﴾

80. ಸಂದೇಶವಾಹಕನನ್ನು ಅನುಸರಿಸಿದವನು ವಾಸ್ತವದಲ್ಲಿ ಅಲ್ಲಾಹನನ್ನು ಅನುಸರಿಸಿದನು. ಯಾವನಾದರೂ ವಿಮುಖನಾಗಿ ಬಿಟ್ಟರೆ, ನಾವು ನಿಮ್ಮನ್ನು ಅವರ ಮೇಲೆ ರಕ್ಷಕರನ್ನಾಗಿ ಮಾಡಿಯಂತು ಕಳುಹಿಸಿರುವುದಿಲ್ಲ.

مَّن يُطِعِ الرَّسُولَ فَقَدْ أَطَاعَ اللَّهَ ۖ وَمَن تَوَلَّىٰ فَمَا أَرْسَلْنَاكَ عَلَيْهِمْ حَفِيظًا ﴿٨٠﴾

81. ಅವರು ಮುಖತಃ, "ನಾವು ಆಜ್ಞಾಪಾಲಕರು" ಎನ್ನುತ್ತಾರೆ. ಆದರೆ ನಿಮ್ಮನ್ನು ಬಿಟ್ಟಗಲಿದಾಗ ಅವರಲ್ಲೊಂದು ಪಂಗಡವು ರಾತ್ರಿ ಕಾಲದಲ್ಲಿ ಒಟ್ಟು ಸೇರಿ ನಿಮ್ಮ ಮಾತುಗಳಿಗೆ ವಿರುದ್ಧ ಒಳಸಂಚು ನಡೆಸುತ್ತದೆ. ಅಲ್ಲಾಹ್ ಅವರ ಈ ಎಲ್ಲಾ ಗುಪ್ತ ಮಾತುಗಳನ್ನು ಬರೆದಿಡುತ್ತಾನೆ. ನೀವು ಅವರನ್ನು ನಿರ್ಲಕ್ಷಿಸಿರಿ ಮತ್ತು ಅಲ್ಲಾಹನ ಮೇಲೆ ಭರವಸೆ ಇಡಿರಿ. ಭರವಸೆಗೆ ಅವನೇ ಸಾಕು.

وَيَقُولُونَ طَاعَةٌ فَإِذَا بَرَزُوا مِنْ عِندِكَ بَيَّتَ طَائِفَةٌ مِّنْهُمْ غَيْرَ الَّذِي تَقُولُ ۖ وَاللَّهُ يَكْتُبُ مَا يُبَيِّتُونَ ۖ فَأَعْرِضْ عَنْهُمْ وَتَوَكَّلْ عَلَى اللَّهِ ۚ وَكَفَىٰ بِاللَّهِ وَكِيلًا ﴿٨١﴾

82. ಇವರೇನು ಕುರ್‌ಆನಿನ ಬಗ್ಗೆ ಚಿಂತನೆ ನಡೆಸುವುದಿಲ್ಲವೇ? ಇದು ಅಲ್ಲಾಹನ ಹೊರತು ಇನ್ನಾರ ಕಡೆಯಿಂದಾದರೂ ಆಗಿರುತ್ತಿದ್ದರೆ ಇದರಲ್ಲಿ ಅನೇಕ ವಿರೋಧಾಭಾಸಗಳು ಕಂಡು ಬರುತ್ತಿದ್ದುವು.[60]

أَفَلَا يَتَدَبَّرُونَ الْقُرْآنَ ۚ وَلَوْ كَانَ مِنْ عِندِ غَيْرِ اللَّهِ لَوَجَدُوا فِيهِ اخْتِلَافًا كَثِيرًا ﴿٨٢﴾

83. ಇವರು ಯಾವುದಾದರೂ ಶಾಂತಿ ಅಥವಾ ಭೀತಿಯ ವಾರ್ತೆ ಕೇಳಿದಾಗ ಅದನ್ನೆತ್ತಿಕೊಂಡು ಪ್ರಚಾರ ಮಾಡುತ್ತಾರೆ. ನಿಜವಾಗಿ ಇವರು, ಅದನ್ನು ಸಂದೇಶವಾಹಕರಿಗೆ ಅಥವಾ ತಮ್ಮ ಸಂಘಟನೆಯ ಹೊಣೆಗಾರ ವ್ಯಕ್ತಿಗಳಿಗೆ ತಲಪಿಸುತ್ತಿದ್ದರೆ, ಅದರ ಬಗ್ಗೆ ಸರಿಯಾದ ಫಲಿತಾಂಶ ಗ್ರಹಿಸುವ ಅರ್ಹತೆ ಹೊಂದಿದವರು ಅದನ್ನು ಗ್ರಹಿಸಿಕೊಳ್ಳುತ್ತಿದ್ದರು.[61] ನಿಮ್ಮ ಮೇಲೆ ಅಲ್ಲಾಹನ ಅನುಗ್ರಹವೂ ಕೃಪೆಯೂ ಇಲ್ಲದಿರುತ್ತಿದ್ದರೆ ಕೇವಲ ಕೆಲವೇ ಮಂದಿಯ ಹೊರತು (ನಿಮ್ಮ ದೌರ್ಬಲ್ಯಗಳ ಕಾರಣದಿಂದ) ನೀವೆಲ್ಲ ಶೈತಾನನನ್ನು ಅನುಸರಿಸುತ್ತಿದ್ದಿರಿ.

وَإِذَا جَاءَهُمْ أَمْرٌ مِّنَ الْأَمْنِ أَوِ الْخَوْفِ أَذَاعُوا بِهِ ۖ وَلَوْ رَدُّوهُ إِلَى الرَّسُولِ وَإِلَىٰ أُولِي الْأَمْرِ مِنْهُمْ لَعَلِمَهُ الَّذِينَ يَسْتَنبِطُونَهُ مِنْهُمْ ۗ وَلَوْلَا فَضْلُ اللَّهِ عَلَيْكُمْ وَرَحْمَتُهُ لَاتَّبَعْتُمُ الشَّيْطَانَ إِلَّا قَلِيلًا ﴿٨٣﴾

60. ಇವು ಅಲ್ಲಾಹನ ಹೊರತು ಇನ್ನಾರ ವಚನಗಳಾಗಿರಲು ಸಾಧ್ಯವಿಲ್ಲವೆಂದು ಸ್ವತಃ ಈ ವಚನಗಳೇ ಸಾಕ್ಷ್ಯ ನುಡಿಯುತ್ತಿವೆ. ಅನೇಕ ವರ್ಷಗಳ ಕಾಲ ವಿವಿಧ ಕಾಲ ಮತ್ತು ಸಂದರ್ಭಗಳಲ್ಲಿ ಅನೇಕ ವಿಷಯಗಳ ಬಗ್ಗೆ ಭಾಷಣ ಮಾಡುತ್ತಾ ಹೋಗುವ ಯಾವುದೇ ವ್ಯಕ್ತಿಯ ಭಾಷಣ ಸಾದ್ಯಂತ ಸಮಾನ ಮತ್ತು ತದ್ರೂಪವಾಗಿರುವ ಸಂಕಲನವಾಗಲು ಸಾಧ್ಯವೇ ಇಲ್ಲ. ಅದರಲ್ಲೂ ವ್ಯತ್ಯಸ್ಥ ಅಭಿಪ್ರಾಯದ ಲಕ್ಷಣಗಳಿಲ್ಲದ, ವಚನಕಾರನ ಮನದಿಂಗಿತ ಭಿನ್ನ ವರ್ಣಗಳಲ್ಲಿ ಗೋಚರಿಸದ, ಮರುಪರಿಶೀಲನೆಯ ಅಗತ್ಯವೇ ಕಂಡು ಬರದ ವಚನಗಳ ಸಂಕಲನವನ್ನು ಯಾರೂ ರಚಿಸಲಾರ.

61. ಅದು ಗೊಂದಲ ವ್ಯಾಪಕವಾಗಿದ್ದ ಕಾಲ. ಆದ್ದರಿಂದ ನಾಲ್ದೆಸೆಯಲ್ಲೂ ಊಹಾಪೋಹಗಳು ಹರಡಿದ್ದವು. ಕೆಲವೊಮ್ಮೆ ಅಪಾಯ ಎದುರಾಗಿರುವ ಬಗ್ಗೆ ನಿರಾಧಾರ ಮತ್ತು ಉತ್ಪ್ರೇಕ್ಷಿತ ಸುದ್ದಿಗಳು ಬರುತ್ತಿದ್ದವು. ಇದರಿಂದ ಮದೀನಾ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಗೊಂದಲ ಹರಡುತ್ತಿತ್ತು. ಕೆಲವೊಮ್ಮೆ ನಿಜವಾದ ಅಪಾಯ ಎದುರಾಗಿದ್ದರೂ ಚಾಣಾಕ್ಷ ಶತ್ರುಗಳು ಸಮಾಧಾನಕರ

84. ಆದುದರಿಂದ ಓ ಪೈಗಂಬರರೇ, ನೀವು ಅಲ್ಲಾಹನ ಮಾರ್ಗದಲ್ಲಿ ಸಮರ ನಡೆಸಿರಿ. ನೀವು ನಿಮ್ಮ ಸ್ವಂತದ ಹೊರತು ಇತರರ ಬಗ್ಗೆ ಹೊಣೆಗಾರರಲ್ಲ. ಸತ್ಯವಿಶ್ವಾಸಿಗಳನ್ನು ಯುದ್ಧ ಮಾಡಲು ಪ್ರೇರೇಪಿಸಿರಿ. ಅಲ್ಲಾಹನು ಸತ್ಯನಿಷೇಧಿಗಳ ಬಲವನ್ನು ಮುರಿಯುವ ಕಾಲ ದೂರವಿಲ್ಲ. ಅಲ್ಲಾಹನ ಬಲ ಅತಿ ಹೆಚ್ಚು ಮತ್ತು ಅವನ ಶಿಕ್ಷೆ ಅತ್ಯಂತ ಕಠಿಣ.

فَقَاتِلْ فِي سَبِيلِ اللَّهِ ۚ لَا تُكَلَّفُ إِلَّا نَفْسَكَ ۚ وَحَرِّضِ الْمُؤْمِنِينَ ۚ عَسَى اللَّهُ أَن يَكُفَّ بَأْسَ الَّذِينَ كَفَرُوا ۚ وَاللَّهُ أَشَدُّ بَأْسًا وَأَشَدُّ تَنكِيلًا ﴿٨٤﴾

85. ಒಳಿತಿನ ಶಿಫಾರಸು ಮಾಡುವವನು ಅದರಿಂದ ಪಾಲು ಪಡೆಯುವನು. ಕೆಡುಕಿನ ಶಿಫಾರಸು ಮಾಡುವವನು ಅದರಿಂದ ಪಾಲು ಪಡೆಯುವನು ಮತ್ತು ಅಲ್ಲಾಹನು ಪ್ರತಿಯೊಂದು ವಸ್ತುವಿನ ಮೇಲೆ ದೃಷ್ಟಿಯನ್ನಿಡುವವನಾಗಿರುತ್ತಾನೆ.

مَّن يَشْفَعْ شَفَاعَةً حَسَنَةً يَكُن لَّهُ نَصِيبٌ مِّنْهَا ۖ وَمَن يَشْفَعْ شَفَاعَةً سَيِّئَةً يَكُن لَّهُ كِفْلٌ مِّنْهَا ۗ وَكَانَ اللَّهُ عَلَىٰ كُلِّ شَيْءٍ مُّقِيتًا ﴿٨٥﴾

86. ನಿಮಗೆ ಯಾರಾದರೂ ಸಾದರದಿಂದ ಸಲಾಮ್ ಹೇಳಿದರೆ ಅದಕ್ಕಿಂತಲೂ ಉತ್ತಮ ರೀತಿಯಿಂದ ಅಥವಾ ಕನಿಷ್ಠಪಕ್ಷ ಅದೇ ರೀತಿಯಲ್ಲಿ ಪ್ರತಿ ಸಲಾಮ್ ಹೇಳಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಿಷಯಗಳ ಲೆಕ್ಕ ಪರಿಶೋಧಿಸುವವನಾಗಿರುತ್ತಾನೆ.

وَإِذَا حُيِّيتُم بِتَحِيَّةٍ فَحَيُّوا بِأَحْسَنَ مِنْهَا أَوْ رُدُّوهَا ۗ إِنَّ اللَّهَ كَانَ عَلَىٰ كُلِّ شَيْءٍ حَسِيبًا ﴿٨٦﴾

87. ಅಲ್ಲಾಹ್; ಆತನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ನಿಸ್ಸಂದೇಹವಾಗಿ ಬಂದೇ ತೀರಲಿರುವ ಪುನರುತ್ಥಾನ ದಿನದಂದು ಅವನು ನಿಮ್ಮನ್ನೆಲ್ಲ ಒಟ್ಟುಗೂಡಿಸುವನು. ಅಲ್ಲಾಹನ ಮಾತಿಗಿಂತ ಅಧಿಕ ಸತ್ಯ ಮಾತು ಇನ್ನಾರದಾಗಿರಲು ಸಾಧ್ಯ?

اللَّهُ لَا إِلَٰهَ إِلَّا هُوَ ۚ لَيَجْمَعَنَّكُمْ إِلَىٰ يَوْمِ الْقِيَامَةِ لَا رَيْبَ فِيهِ ۗ وَمَنْ أَصْدَقُ مِنَ اللَّهِ حَدِيثًا ﴿٨٧﴾

88. ಕಪಟವಿಶ್ವಾಸಿಗಳ ವಿಷಯದಲ್ಲಿ ನಿಮ್ಮೊಳಗೆ ಎರಡಭಿಪ್ರಾಯಗಳು ಕಂಡುಬರಲು ಕಾರಣವಾದರೂ ಏನು? ವಸ್ತುತಃ ಅವರು ಗಳಿಸಿದ ಕೇಡುಗಳ ಕಾರಣವಾಗಿ ಅಲ್ಲಾಹನು ಅವರನ್ನು ಹೊರಳಿಸಿ ಬಿಟ್ಟಿರುತ್ತಾನೆ. ಅಲ್ಲಾಹನು ಸನ್ಮಾರ್ಗ ನೀಡದಾತನಿಗೆ ನೀವು ಸನ್ಮಾರ್ಗ ನೀಡಲಿಚ್ಛಿಸುತ್ತೀರಾ? ವಸ್ತುತಃ ಅಲ್ಲಾಹನು ಸನ್ಮಾರ್ಗದಿಂದ ತಪ್ಪಿಸಿದಾತನಿಗಾಗಿ ನೀವು ಯಾವ ದಾರಿಯನ್ನೂ ಕಾಣಲಾರಿರಿ.

فَمَا لَكُمْ فِي الْمُنَافِقِينَ فِئَتَيْنِ وَاللَّهُ أَرْكَسَهُم بِمَا كَسَبُوا ۚ أَتُرِيدُونَ أَن تَهْدُوا مَنْ أَضَلَّ اللَّهُ ۖ وَمَن يُضْلِلِ اللَّهُ فَلَن تَجِدَ لَهُ سَبِيلًا ﴿٨٨﴾

ಸುದ್ದಿಗಳನ್ನು ಕಳುಹಿಸುತ್ತಿದ್ದರು. ಇದರಿಂದಾಗಿ ಜನರು ನಿಶ್ಚಿಂತರಾಗಿ ಬಿಡುತ್ತಿದ್ದರು. ಇಂತಹ ಬೇಜವಾಬ್ದಾರಿಯುತ ವದಂತಿಗಳನ್ನು ಹರಡುವುದರ ದೂರಗಾಮಿ ಪರಿಣಾಮವೇನೆಂದು ಜನಸಾಮಾನ್ಯರಿಗೆ ತಿಳಿದಿರಲಿಲ್ಲ. ಎಲ್ಲಾದರೊಂದು ಗಾಳಿ ಸುದ್ದಿ ಸಿಕ್ಕರೆ ಅದನ್ನು ಇತರರ ಕಿವಿಗೂ ಊದುತ್ತಾ ಹೋಗುತ್ತಿದ್ದರು. ಈ ಸೂಕ್ತದಲ್ಲಿ ಇಂತಹವರನ್ನೇ ತರಾಟೆಗೆ ತೆಗೆದುಕೊಳ್ಳಲಾಗಿದೆ. ವದಂತಿಗಳನ್ನು ಹರಡದಂತೆ ಮತ್ತು ಅವರ ಬಳಿಗೆ ತಲಪುವ ವದಂತಿಗಳನ್ನು ಜವಾಬ್ದಾರಿಯುತ ವ್ಯಕ್ತಿಗಳಿಗೆ ಮುಟ್ಟಿಸಿ ಸುಮ್ಮನಾಗುವಂತೆ ಅವರಿಗೆ ಎಚ್ಚರಿಕೆ ನೀಡಲಾಗಿದೆ.

89. ನೀವೂ ಅವರೂ ಸಮಾನರಾಗಲೆಂದು ಅವರು ಸತ್ಯನಿಷೇಧಿಗಳಾದಂತೆಯೇ ನೀವೂ ಸತ್ಯನಿಷೇಧಿಗಳಾಗಬೇಕೆಂದು ಅವರಿಚ್ಛಿಸುತ್ತಾರೆ. ಆದುದರಿಂದ ಅವರು ಅಲ್ಲಾಹನ ಮಾರ್ಗದಲ್ಲಿ ವಲಸೆ ಬರುವವರೆಗೂ ನೀವು ಅವರಲ್ಲಿ ಯಾರನ್ನೂ ನಿಮ್ಮ ಮಿತ್ರರನ್ನಾಗಿ ಮಾಡಿಕೊಳ್ಳಬೇಡಿರಿ. ಅವರು ವಲಸೆಯಿಂದ ಹಿಂಜರಿದರೆ ಅವರನ್ನು ಸಿಕ್ಕಿದಲ್ಲೆಲ್ಲಾ ಹಿಡಿಯಿರಿ ಮತ್ತು ವಧಿಸಿರಿ.[62] ಅವರಲ್ಲಿ ಯಾರನ್ನೂ ನಿಮ್ಮ ಮಿತ್ರ ಹಾಗೂ ಸಹಾಯಕನನ್ನಾಗಿ ಮಾಡಬೇಡಿರಿ.

وَدُّوا لَوْ تَكْفُرُونَ كَمَا كَفَرُوا فَتَكُونُونَ سَوَاءً فَلَا تَتَّخِذُوا مِنْهُمْ أَوْلِيَاءَ حَتَّىٰ يُهَاجِرُوا فِي سَبِيلِ اللَّهِ ۚ فَإِن تَوَلَّوْا فَخُذُوهُمْ وَاقْتُلُوهُمْ حَيْثُ وَجَدتُّمُوهُمْ ۖ وَلَا تَتَّخِذُوا مِنْهُمْ وَلِيًّا وَلَا نَصِيرًا ﴿٨٩﴾

90. ಆದರೆ ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡಿರುವ ಜನಾಂಗದೊಂದಿಗೆ ಹೋಗಿ ಸೇರಿಕೊಂಡ ಕಪಟವಿಶ್ವಾಸಿಗಳು ಈ ಆಜ್ಞೆಗೆ ಹೊರತಾಗಿರುತ್ತಾರೆ.[63] ಅದೇ ರೀತಿಯಲ್ಲಿ ಯುದ್ಧದಿಂದ ಜಿಗುಪ್ಸೆ ಹೊಂದಿ ನಿಮ್ಮ ಬಳಿಗೆ ಬರುವ, ನಿಮ್ಮ ವಿರುದ್ಧವಾಗಲೀ ತಮ್ಮ ಜನಾಂಗದ ವಿರುದ್ಧವಾಗಲೀ ಯುದ್ಧ ಮಾಡಲು ಇಚ್ಛಿಸದಂತಹ ಕಪಟವಿಶ್ವಾಸಿಗಳೂ (ಈ ಆದೇಶದಿಂದ) ಹೊರತಾಗಿರುತ್ತಾರೆ. ಅಲ್ಲಾಹನು ಇಚ್ಛಿಸುತ್ತಿದ್ದರೆ ಅವರನ್ನು ನಿಮ್ಮ ಮೇಲೆ ಎರಗಿಸುತ್ತಿದ್ದನು ಮತ್ತು ಅವರೂ ನಿಮ್ಮ ವಿರುದ್ಧ ಹೋರಾಡುತ್ತಿದ್ದರು. ಆದುದರಿಂದ ಅವರು ನಿಮ್ಮ ವಿರುದ್ಧ ಯುದ್ಧ ಮಾಡದೆ ದೂರವುಳಿದು ಬಿಡುವುದಾದರೆ ಮತ್ತು ನಿಮ್ಮೆದುರು ಸಂಧಿ ಸಮಾಧಾನಗಳ ಹಸ್ತ ಚಾಚಿದರೆ ಅಲ್ಲಾಹನು ನಿಮಗೆ ಅವರ ಮೇಲೆ ಕೈ ಮಾಡುವ ಯಾವ ಮಾರ್ಗವನ್ನೂ ಇರಿಸಿರುವುದಿಲ್ಲ.

إِلَّا الَّذِينَ يَصِلُونَ إِلَىٰ قَوْمٍ بَيْنَكُمْ وَبَيْنَهُم مِّيثَاقٌ أَوْ جَاءُوكُمْ حَصِرَتْ صُدُورُهُمْ أَن يُقَاتِلُوكُمْ أَوْ يُقَاتِلُوا قَوْمَهُمْ ۚ وَلَوْ شَاءَ اللَّهُ لَسَلَّطَهُمْ عَلَيْكُمْ فَلَقَاتَلُوكُمْ ۚ فَإِنِ اعْتَزَلُوكُمْ فَلَمْ يُقَاتِلُوكُمْ وَأَلْقَوْا إِلَيْكُمُ السَّلَمَ فَمَا جَعَلَ اللَّهُ لَكُمْ عَلَيْهِمْ سَبِيلًا ﴿٩٠﴾

91. ನಿಮ್ಮೊಂದಿಗೂ ಶಾಂತಿಯಿಂದಿರಲು ಮತ್ತು ತಮ್ಮ ಜನಾಂಗದೊಂದಿಗೂ ನೆಮ್ಮದಿಯಿಂದಿರಲು ಬಯಸುವ ಇನ್ನೊಂದು ತರದ ಕಪಟವಿಶ್ವಾಸಿಗಳು ನಿಮಗೆ ಸಿಗುವರು. ಆದರೆ ಎಂದಾದರೂ ಕ್ಷೋಭೆಯ ಸಂದರ್ಭವೊದಗಿದರೆ ಅವರು ಅದರಲ್ಲಿ ಧುಮುಕುವರು. ಇಂತಹವರು ನಿಮ್ಮೊಡನೆ ಹೋರಾಟ ನಡೆಸುವುದರಿಂದ ಹಿಂಜರಿಯದಿದ್ದರೆ ಮತ್ತು ಶಾಂತಿ ಸಂಧಾನಗಳನ್ನು ನಿಮ್ಮ

سَتَجِدُونَ آخَرِينَ يُرِيدُونَ أَن يَأْمَنُوكُمْ وَيَأْمَنُوا قَوْمَهُمْ كُلَّمَا رُدُّوا إِلَى الْفِتْنَةِ أُرْكِسُوا فِيهَا ۚ فَإِن لَّمْ يَعْتَزِلُوكُمْ وَيُلْقُوا إِلَيْكُمُ السَّلَمَ وَيَكُفُّوا أَيْدِيَهُمْ فَخُذُوهُمْ

62. ಯುದ್ಧ ನಿರತರಾಗಿದ್ದ ಸತ್ಯನಿಷೇಧಿಗಳ ಕೂಟದೊಂದಿಗೆ ಸೇರಿ ಇಸ್ಲಾಮೀ ಸರಕಾರದ ವಿರುದ್ಧ ಹಗೆತನ ಸಾಧಿಸುವ ಕೆಲಸಗಳಲ್ಲಿ ಸಕ್ರಿಯವಾಗಿದ್ದ ಕಪಟವಿಶ್ವಾಸಿಗಳ ಕುರಿತಂತೆ ಈ ಆಜ್ಞೆ ಬಂದಿದೆ.

63. ಅಂತಹ ಕಪಟವಿಶ್ವಾಸಿಗಳನ್ನು ಮಿತ್ರರು ಅಥವಾ ಸಹಾಯಕರಾಗಿ ಮಾಡಿಕೊಳ್ಳಬಹುದು ಎಂಬುದು ಇದರ ಅರ್ಥವಲ್ಲ. ಅವರು ಇಸ್ಲಾಮೀ ಸರಕಾರದ ಜತೆಗೆ ಒಪ್ಪಂದವಿರುವ ಜನಾಂಗದವರೊಡನೆ ಸೇರಿರುವುದರಿಂದ ಅವರನ್ನು ಹಿಡಿದು ವಧಿಸುವಂತಿಲ್ಲ ಎಂದು ಇದರ ಅರ್ಥವಾಗಿದೆ.

ಮುಂದಿರಿಸದಿದ್ದರೆ ಮತ್ತು ತಮ್ಮ ಕೈಗಳನ್ನು ತಡೆದಿರಿಸಿ ಕೊಳ್ಳದಿದ್ದರೆ ಅವರನ್ನು ಕಂಡ ಕಂಡಲ್ಲಿ ಹಿಡಿಯಿರಿ ಮತ್ತು ವಧಿಸಿರಿ. ಅವರ ಮೇಲೆ ಕೈ ಮಾಡಲು ನಾವು ನಿಮಗೆ ವ್ಯಕ್ತವಾದ ಆಧಾರವನ್ನು ನೀಡಿರುತ್ತೇವೆ.

وَاقْتُلُوهُمْ حَيْثُ ثَقِفْتُمُوهُمْ ۚ وَأُولَٰئِكُمْ جَعَلْنَا لَكُمْ عَلَيْهِمْ سُلْطَانًا مُّبِينًا ﴿٩١﴾

92. ಸತ್ಯವಿಶ್ವಾಸಿಯೊಬ್ಬನು ಇನ್ನೊಬ್ಬ ಸತ್ಯವಿಶ್ವಾಸಿಯನ್ನು ಪ್ರಮಾದ ದಿಂದಾಗಿ ಹೊರತು ವಧಿಸುವುದು ಸರಿಯಲ್ಲ. ಯಾರಾದರೂ ಪ್ರಮಾದವಶಾತ್ ಸತ್ಯವಿಶ್ವಾಸಿಯೊಬ್ಬನನ್ನು ವಧಿಸಿಬಿಟ್ಟರೆ ಅದರ ಪ್ರಾಯಶ್ಚಿತ್ತವು ಒಬ್ಬ ಸತ್ಯವಿಶ್ವಾಸಿ ವ್ಯಕ್ತಿಯನ್ನು ದಾಸ್ಯದಿಂದ ಮುಕ್ತಗೊಳಿಸುವುದು ಮತ್ತು[64] ಹತ ವ್ಯಕ್ತಿಯ ವಾರೀಸುದಾರರು ಪರಿಹಾರಧನವನ್ನು ಕ್ಷಮಿಸದಿದ್ದರೆ ಅದನ್ನು ಅವರಿಗೆ ಕೊಡುವುದು.[65] ಆದರೆ ಹತನಾದ ಈ ಮುಸ್ಲಿಮನು ನಿಮ್ಮ ಶತ್ರು ಜನಾಂಗದವನಾಗಿದ್ದರೆ, ಅದರ ಪ್ರಾಯಶ್ಚಿತ್ತವು ಓರ್ವ ಸತ್ಯವಿಶ್ವಾಸಿ ಗುಲಾಮನನ್ನು ಮುಕ್ತಗೊಳಿಸುವುದು. ಅವನು ನಿಮ್ಮೊಂದಿಗೆ ಒಪ್ಪಂದ ಮಾಡಿಕೊಂಡ ಮುಸ್ಲಿಮೇತರ ಜನಾಂಗದ ವ್ಯಕ್ತಿಯಾಗಿದ್ದರೆ ಅವನ ವಾರೀಸುದಾರರಿಗೆ ಪರಿಹಾರ ಧನ ಕೊಡಲಾಗುವುದು ಮತ್ತು ಒಬ್ಬ ಸತ್ಯವಿಶ್ವಾಸಿ ವ್ಯಕ್ತಿಯನ್ನು ದಾಸ್ಯ ವಿಮೋಚನೆ ಗೊಳಿಸಬೇಕಾಗುವುದು.[66] ಗುಲಾಮನನ್ನು ಪಡೆಯಲಾಗದವನು ನಿರಂತರ ಎರಡು ತಿಂಗಳು ಉಪವಾಸ ವ್ರತವನ್ನಾಚರಿಸಬೇಕು.[67] ಈ ಪಾಪಕ್ಕಾಗಿ ಅಲ್ಲಾಹನೊಡನೆ

وَمَا كَانَ لِمُؤْمِنٍ أَن يَقْتُلَ مُؤْمِنًا إِلَّا خَطَأً ۚ وَمَن قَتَلَ مُؤْمِنًا خَطَأً فَتَحْرِيرُ رَقَبَةٍ مُّؤْمِنَةٍ وَدِيَةٌ مُّسَلَّمَةٌ إِلَىٰ أَهْلِهِ إِلَّا أَن يَصَّدَّقُوا ۚ فَإِن كَانَ مِن قَوْمٍ عَدُوٍّ لَّكُمْ وَهُوَ مُؤْمِنٌ فَتَحْرِيرُ رَقَبَةٍ مُّؤْمِنَةٍ ۖ وَإِن كَانَ مِن قَوْمٍ بَيْنَكُمْ وَبَيْنَهُم مِّيثَاقٌ فَدِيَةٌ مُّسَلَّمَةٌ إِلَىٰ أَهْلِهِ وَتَحْرِيرُ رَقَبَةٍ مُّؤْمِنَةٍ ۖ فَمَن لَّمْ يَجِدْ فَصِيَامُ شَهْرَيْنِ مُتَتَابِعَيْنِ تَوْبَةً مِّنَ اللَّهِ ۗ وَكَانَ اللَّهُ عَلِيمًا حَكِيمًا ﴿٩٢﴾

64. ಹತನಾಗಿರುವವನು ಸತ್ಯವಿಶ್ವಾಸಿಯಾಗಿರುವುದರಿಂದ ಅದರ ಪ್ರಾಯಶ್ಚಿತ್ತವು ಓರ್ವ ಸತ್ಯವಿಶ್ವಾಸಿ ಗುಲಾಮನ ಬಿಡುಗಡೆ ಎಂದು ಸಾರಲಾಗಿದೆ.

65. ರಕ್ತ ಪರಿಹಾರದ ಪ್ರಮಾಣ ನೂರು ಒಂಟೆಗಳು, ಇನ್ನೂರು ಹಸುಗಳು, ಅಥವಾ ಎರಡು ಸಾವಿರ ಆಡುಗಳೆಂದು ಪ್ರವಾದಿವರ್ಯರು(ಸ) ನಿಶ್ಚಯಿಸಿದ್ದಾರೆ. ಯಾರಾದರೂ ಬೇರೆ ರೂಪದಲ್ಲಿ ರಕ್ತ ಪರಿಹಾರ ನೀಡಬಯಸಿದರೆ ಅದು ಪ್ರಸ್ತುತ ಪ್ರಮಾಣದ ಮಾರುಕಟ್ಟೆ ಮೌಲ್ಯಕ್ಕೆ ಅನುಗುಣವಾಗಿ ನಿಶ್ಚಯಿಸಲ್ಪಡುತ್ತದೆ. ಉದಾಹರಣೆಗೆ ನಗದಿನ ರೂಪದಲ್ಲಿ ರಕ್ತ ಪರಿಹಾರ ನೀಡಬಯಸುವವರಿಗೆ ಪ್ರವಾದಿವರ್ಯರು(ಸ) ಎಂಟುನೂರು ದೀನಾರ್ ಅಥವಾ ಎಂಟು ಸಾವಿರ ದಿರ್‌ಹಮ್ ನಿಶ್ಚಯಿಸುತ್ತಿದ್ದರು. ಹ. ಉಮರ್‌ರ(ರ) ಕಾಲ ಬಂದಾಗ ಅವರು ಹೇಳಿದರು; ಈಗ ಒಂಟೆಗಳ ಬೆಲೆ ಏರಿರುವುದರಿಂದ ಚಿನ್ನದ ದೀನಾರ್ ಆದರೆ ಒಂದು ಸಾವಿರ ಅಥವಾ ಬೆಳ್ಳಿಯ ನಾಣ್ಯಗಳಾದರೆ ಹನ್ನೆರಡು ಸಾವಿರ ದಿರ್‌ಹಮ್ ರಕ್ತ ಪರಿಹಾರ ನೀಡಬೇಕಾಗುವುದು. ಈ ರಕ್ತ ಪರಿಹಾರವು ಅನಿರೀಕ್ಷಿತವಾಗಿ ನಡೆದ ವಧೆಗೆ ಅನ್ವಯಿಸುತ್ತದೆಯೇ ಹೊರತು ಉದ್ದೇಶ ಪೂರ್ವಕ ನಡೆಸಲಾದ ಕೊಲೆಗೆ ಅಲ್ಲ ಎಂಬುದು ಉಲ್ಲೇಖನೀಯ.

66. ಈ ಆದೇಶಗಳ ತಾತ್ಪರ್ಯವೇನೆಂದರೆ ಹತನಾದವನು ದಾರುಲ್ ಇಸ್ಲಾಮ್(ಇಸ್ಲಾಮೀ ರಾಷ್ಟ್ರ)ನ ಪ್ರಜೆಯಾಗಿದ್ದರೆ ಹಂತಕನು ರಕ್ತ ಪರಿಹಾರವನ್ನೂ ನೀಡಬೇಕು. ತನ್ನ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ಓರ್ವ ಗುಲಾಮನನ್ನೂ ಸ್ವತಂತ್ರಗೊಳಿಸಬೇಕು. ಹತನಾದವನು ಶತ್ರು ರಾಷ್ಟ್ರದ ಪ್ರಜೆಯಾಗಿದ್ದರೆ ಹಂತಕನು ಗುಲಾಮನೊಬ್ಬನನ್ನು ಸ್ವತಂತ್ರಗೊಳಿಸಿದರೆ ಸಾಕು. ಅದಕ್ಕಾಗಿ ಅವನು ರಕ್ತ ಪರಿಹಾರವನ್ನು ನೀಡಬೇಕಾಗಿಲ್ಲ. ಇಸ್ಲಾಮೀ ರಾಷ್ಟ್ರದೊಂದಿಗೆ ಒಪ್ಪಂದವಿರುವ ಇಸ್ಲಾಮೇತರ ರಾಷ್ಟ್ರದ ಪ್ರಜೆಯಾಗಿದ್ದರೆ ಹಂತಕನು ಓರ್ವ ಗುಲಾಮನನ್ನೂ ಸ್ವತಂತ್ರಗೊಳಿಸಬೇಕು. ಅಂತೆಯೇ ರಕ್ತ ಪರಿಹಾರವನ್ನೂ ನೀಡಬೇಕು. ಆದರೆ ಪರಿಹಾರದ ಪ್ರಮಾಣ ಒಪ್ಪಂದ ಮಾಡಲ್ಪಟ್ಟ ರಾಷ್ಟ್ರದ ಮುಸ್ಲಿಮೇತರನೊಬ್ಬನ ವಧೆಗೆ ಪ್ರತಿಯಾಗಿ ಕೊಡಬೇಕಾದ ಪೂರ್ವ ನಿರ್ಧರಿತ ಪರಿಹಾರಕ್ಕೆ ಸಮಾನವಾಗಿರುತ್ತದೆ.

67. ಅರ್ಥಾತ್- ನಿರಂತರ ಉಪವಾಸ ಆಚರಿಸಬೇಕು. ಮಧ್ಯದಲ್ಲಿ ಉಪವಾಸ ತೊರೆಯಬಾರದು. ನ್ಯಾಯಸಮ್ಮತವಾದ ಕಾರಣವಿಲ್ಲದೆ

ಪಶ್ಚಾತ್ತಾಪ ಪಡುವ ಕ್ರಮವಿದು.[68] ಅಲ್ಲಾಹ್ ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

93. ಒಬ್ಬ ಸತ್ಯವಿಶ್ವಾಸಿಯನ್ನು ಉದ್ದೇಶ ಪೂರ್ವಕವಾಗಿ ವಧಿಸಿದವನಿಗೆ ಅದರ ಪ್ರತಿಫಲ ನರಕವೇ ಆಗಿದ್ದು ಅವನು ಅದರಲ್ಲಿ ಸದಾಕಾಲ ವಾಸಿಸುವನು. ಅವನ ಮೇಲೆ ಅಲ್ಲಾಹನ ಕ್ರೋಧ ಮತ್ತು ಶಾಪವಿದೆ. ಅಲ್ಲಾಹನು ಅವನಿಗಾಗಿ ಘೋರ ಶಿಕ್ಷೆಯನ್ನು ಸಿದ್ಧ ಗೊಳಿಸಿಟ್ಟಿರುತ್ತಾನೆ.

وَمَن يَقْتُلْ مُؤْمِنًا مُّتَعَمِّدًا فَجَزَآؤُهُ جَهَنَّمُ خَٰلِدًا فِيهَا وَغَضِبَ ٱللَّهُ عَلَيْهِ وَلَعَنَهُ وَأَعَدَّ لَهُ عَذَابًا عَظِيمًا ﴿٩٣﴾

94. ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನ ಮಾರ್ಗದಲ್ಲಿ ಜಿಹಾದ್‌ಗೆ ನಡೆದಾಗ ಮಿತ್ರ ಮತ್ತು ಶತ್ರುಗಳಲ್ಲಿ ಭೇದವರಿಯಿರಿ ಮತ್ತು ನಿಮ್ಮನ್ನು ಮುಂದಾಗಿ ಅಭಿವಂದಿಸಿದವನಿಗೆ ತಕ್ಷಣ, "ನೀನು ಸತ್ಯವಿಶ್ವಾಸಿಯಲ್ಲ" ಎನ್ನಬೇಡಿರಿ. ನೀವು ಐಹಿಕ ಜೀವನ ಸಾಧನಗಳನ್ನು ಬಯಸುವಿರಾದರೆ, ಅಲ್ಲಾಹನ ಬಳಿ ನಿಮಗೆ ಬೇಕಾದ ವಿಪುಲ ಸಮರಾರ್ಜಿತ ಸೊತ್ತುಗಳಿವೆ. ನೀವು ಸಹ ಹಿಂದೆ ಇದೇ ಅವಸ್ಥೆಯಲ್ಲಿ ಸಿಲುಕಿದ್ದಿರಷ್ಟೆ. ಅನಂತರ ಅಲ್ಲಾಹನು ನಿಮಗೆ ಉಪಕಾರ ಮಾಡಿದನು. ಆದುದರಿಂದ ಚೆನ್ನಾಗಿ ಪರ್ಯಾಲೋಚಿಸಿರಿ.[69] ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ.

يَٰٓأَيُّهَا ٱلَّذِينَ ءَامَنُوٓا۟ إِذَا ضَرَبْتُمْ فِى سَبِيلِ ٱللَّهِ فَتَبَيَّنُوا۟ وَلَا تَقُولُوا۟ لِمَنْ أَلْقَىٰٓ إِلَيْكُمُ ٱلسَّلَٰمَ لَسْتَ مُؤْمِنًا تَبْتَغُونَ عَرَضَ ٱلْحَيَوٰةِ ٱلدُّنْيَا فَعِندَ ٱللَّهِ مَغَانِمُ كَثِيرَةٌ كَذَٰلِكَ كُنتُم مِّن قَبْلُ فَمَنَّ ٱللَّهُ عَلَيْكُمْ فَتَبَيَّنُوٓا۟ إِنَّ ٱللَّهَ كَانَ بِمَا تَعْمَلُونَ خَبِيرًا ﴿٩٤﴾

---

ನಡುವೆ ಒಂದು ಉಪವಾಸವನ್ನು ತೊರೆದರೆ ಪುನಃ ಉಪವಾಸದ ಸರದಿಯನ್ನು ಆರಂಭಿಸಬೇಕಾಗುವುದು.

68. ಅರ್ಥಾತ್- ಇದು ದಂಡವಲ್ಲ. ಬದಲಾಗಿ ಇದು ತೌಬಃ(ಪಶ್ಚಾತ್ತಾಪ) ಮತ್ತು ಕಫ್ಫಾರಃ(ಪ್ರಾಯಶ್ಚಿತ್ತ)ವಾಗಿದೆ. ದಂಡದಲ್ಲಿ ವಿಷಾದ, ಸಂಕೋಚ ಮತ್ತು ಆತ್ಮಶುದ್ಧಿಯ ಸ್ಫೂರ್ತಿಯೇ ಇರುವುದಿಲ್ಲ. ಸಾಧಾರಣವಾಗಿ ಅದನ್ನು ಒಲ್ಲದ ಮನಸ್ಸಿನಿಂದ ಅಸಮಾಧಾನಪೂರ್ವಕ ಕೊಡಲಾಗುತ್ತದೆ. ಅದು ಬೇಸರ ಮತ್ತು ಅರೋಚಕ ಭಾವನೆಯನ್ನುಂಟು ಮಾಡುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನು ತಪ್ಪು ಸಂಭವಿಸಿದಂತಹ ದಾಸನ ಮನಸ್ಸಿನಿಂದ ಅದರ ಪ್ರಭಾವವನ್ನು ಅಳಿಸಿಬಿಡಲು ಆರಾಧನೆ, ಸತ್ಕರ್ಮ ಮತ್ತು ಇತರರ ಹಕ್ಕುಗಳನ್ನು ಕೊಡುವ ವಿಧಾನವನ್ನು ಅಳವಡಿಸಬೇಕೆಂದು ಬಯಸುತ್ತಾನೆ. ಆ ಮೂಲಕ ಸಂಕೋಚ ಮತ್ತು ವಿಷಾದಗಳೊಂದಿಗೆ ಅವನು ಅಲ್ಲಾಹನೆಡೆಗೆ ಮರಳುತ್ತಾನೆ. ಇದರಿಂದ ಅವನ ತಪ್ಪು ಕ್ಷಮಿಸಲ್ಪಡುವುದರ ಜತೆಗೆ ಅವನ ಮನಸ್ಸು ಇಂತಹ ತಪ್ಪುಗಳ ಪುನರಾವರ್ತನೆಯಿಂದ ಸಂಪೂರ್ಣವಾಗಿ ಮುಕ್ತವಾಗಿರುತ್ತದೆ.

69. ಇಸ್ಲಾಮಿನ ಆರಂಭ ಕಾಲದಲ್ಲಿ 'ಅಸ್ಸಲಾಮು ಅಲೈಕುಮ್' ಎಂಬ ಪದ ಒಂದು ಸಂಕೇತ ಮತ್ತು ಚಿಹ್ನೆಯಾಗಿತ್ತು. ನಾನೂ ನಿಮ್ಮ ಗುಂಪಿಗೆ ಸೇರಿದವನು ಹಾಗೂ ನಿಮ್ಮ ಮಿತ್ರ ಮತ್ತು ಹಿತೈಷಿ ಆಗಿದ್ದೇನೆ, ನಿಮ್ಮ ಶತ್ರುವಲ್ಲ ಎಂದು ಸೂಚಿಸಲಿಕ್ಕಾಗಿ ಒಬ್ಬ ಇನ್ನೊಬ್ಬನಿಗೆ ಈ ಪದವನ್ನು ಉಪಯೋಗಿಸುತ್ತಿದ್ದನು. ಆ ಕಾಲದಲ್ಲಿ ಅರೇಬಿಯಾದ ನವ ಮುಸ್ಲಿಮರು ಮತ್ತು ಸತ್ಯನಿಷೇಧಿಗಳ ನಡುವೆ ಭಾಷೆ, ಉಡುಪು ಮತ್ತಿತರ ವಿಷಯಗಳಲ್ಲಿ ಮೊದಲ ನೋಟದಲ್ಲೇ ಓರ್ವ ಮುಸ್ಲಿಮ್ ಇನ್ನೋರ್ವ ಮುಸ್ಲಿಮನನ್ನು ಗುರುತಿಸಬಲ್ಲಂತಹ ಸ್ಪಷ್ಟವಾದ ಯಾವುದೇ ಅಂತರವಿರಲಿಲ್ಲ. ಆದ್ದರಿಂದ ಈ ಸಾಂಕೇತಿಕ ಪದದ ಪ್ರಾಮುಖ್ಯತೆ ಇನ್ನೂ ಹೆಚ್ಚಿತ್ತು. ಆದ್ದರಿಂದ ಯುದ್ಧದ ಸಂದರ್ಭದಲ್ಲಿ ಅವರಿಗೆ ಪೇಚಿಗೀಡಾಗಬೇಕಾಗಿ ಬರುತ್ತಿತ್ತು. ಮುಸ್ಲಿಮರು ಯಾವುದಾದರೂ ಶತ್ರು ಪಾಳಯದ ಮೇಲೆ ಹಲ್ಲೆ ನಡೆಸುವಾಗ ಯಾವನಾದರೊಬ್ಬ ಮುಸ್ಲಿಮನು ನಡುವೆ ಸಿಕ್ಕಿಬಿದ್ದರೆ, ಅವನು ಹಲ್ಲೆನಡೆಸಿದ ಮುಸ್ಲಿಮರೊಡನೆ ನಾನೂ ನಿಮ್ಮ ಧರ್ಮ ಸಂಬಂಧಿ ಸೋದರನೇ ಆಗಿದ್ದೇನೆಂದು ರುಜುಪಡಿಸಲು 'ಅಸ್ಸಲಾಮು ಅಲೈಕುಮ್' ಅಥವಾ 'ಲಾಇಲಾಹ ಇಲ್ಲಲ್ಲಾಹ್' ಎಂದು ಕೂಗಿ

95. ಮುಸ್ಲಿಮರ ಪೈಕಿ ಯಾವ ಕಾರಣವೂ ಇಲ್ಲದೆ ಮನೆಯೊಳಗೆ ಕುಳಿತಿರುವವರೂ ಅಲ್ಲಾಹನ ಮಾರ್ಗದಲ್ಲಿ ತನು ಧನಗಳಿಂದ ಹೋರಾಡುತ್ತಿರುವವರೂ ಸಮಾನರಾಗಲಾರರು. ಕುಳಿತಿರುವವರಿಗಿಂತ ತನು ಧನಗಳಿಂದ ಹೋರಾಟ ನಡೆಸುವವರ ಸ್ಥಾನವನ್ನು ಅಲ್ಲಾಹನು ಉನ್ನತಗೊಳಿಸಿರುತ್ತಾನೆ. ಅಲ್ಲಾಹನು ಪ್ರತಿಯೊಬ್ಬನಿಗೂ ಒಳಿತಿನ ವಾಗ್ದಾನವನ್ನೇ ಮಾಡಿರುವನಾದರೂ ಅವನ ಬಳಿ ಧರ್ಮಯೋಧರ ಸೇವೆಗಳ ಪ್ರತಿಫಲವು ಕುಳಿತಿರುವವರಿಗಿಂತ ಅತಿ ಹೆಚ್ಚಾಗಿರುತ್ತದೆ.

لَا يَسْتَوِي الْقٰعِدُوْنَ مِنَ الْمُؤْمِنِيْنَ غَيْرُ اُولِي الضَّرَرِ وَ الْمُجٰهِدُوْنَ فِيْ سَبِيْلِ اللّٰهِ بِاَمْوَالِهِمْ وَ اَنْفُسِهِمْ فَضَّلَ اللّٰهُ الْمُجٰهِدِيْنَ بِاَمْوَالِهِمْ وَ اَنْفُسِهِمْ عَلَى الْقٰعِدِيْنَ دَرَجَةً وَ كُلًّا وَّعَدَ اللّٰهُ الْحُسْنٰى وَ فَضَّلَ اللّٰهُ الْمُجٰهِدِيْنَ عَلَى الْقٰعِدِيْنَ اَجْرًا عَظِيْمًا ﴿۹۵﴾

96. ಅವರಿಗೆ ಅಲ್ಲಾಹನ ವತಿಯಿಂದ ಉನ್ನತ ಸ್ಥಾನಗಳೂ ಕ್ಷಮೆಯೂ ಕೃಪೆಯೂ ಇವೆ. ಅಲ್ಲಾಹ್ ಮಹಾ ಕ್ಷಮಾದಾನಿಯೂ ಕರುಣಾ ನಿಧಿಯೂ ಆಗಿರುತ್ತಾನೆ.

دَرَجٰتٍ مِّنْهُ وَ مَغْفِرَةً وَّ رَحْمَةً وَ كَانَ اللّٰهُ غَفُوْرًا رَّحِيْمًا ﴿۹۶﴾

97. ತಮ್ಮ ಮೇಲೆ ತಾವೇ ಅಕ್ರಮವೆಸಗುತ್ತಿದ್ದವರ[70] ಪ್ರಾಣವನ್ನು ದೇವಚರರು ವಶಪಡಿಸಿಕೊಂಡಾಗ ಅವರೊಡನೆ, "ನೀವು ಯಾವ ಸ್ಥಿತಿಯಲ್ಲಿದ್ದಿರಿ?" ಎಂದು ಕೇಳಿದರು. ಅವರು, "ನಾವು ಭೂಮಿಯಲ್ಲಿ ಅಶಕ್ತರೂ ವಿವಶರೂ ಆಗಿದ್ದೆವು" ಎಂದು ಉತ್ತರ ಕೊಟ್ಟರು. ಆಗ ದೇವಚರರು, "ನಿಮಗೆ ವಲಸೆ ಹೋಗಲು ಭೂಮಿಯು ವಿಶಾಲವಿರಲಿಲ್ಲವೇ?" ಎಂದು ಕೇಳಿದರು. ಇಂತಹವರ ವಾಸಸ್ಥಳವು ನರಕವೇ ಆಗಿದೆ. ಅದು ಅತ್ಯಂತ ಕೆಟ್ಟ ವಾಸಸ್ಥಾನ.

اِنَّ الَّذِيْنَ تَوَفّٰىهُمُ الْمَلٰٓئِكَةُ ظَالِمِيْٓ اَنْفُسِهِمْ قَالُوْا فِيْمَ كُنْتُمْ قَالُوْا كُنَّا مُسْتَضْعَفِيْنَ فِي الْاَرْضِ قَالُوْٓا اَلَمْ تَكُنْ اَرْضُ اللّٰهِ وَاسِعَةً فَتُهَاجِرُوْا فِيْهَا فَاُولٰٓئِكَ مَاْوٰىهُمْ جَهَنَّمُ وَ سَآءَتْ مَصِيْرًا ﴿۹۷﴾

98. ಆದರೆ ನಿಜಕ್ಕೂ ವಿವಶರಾಗಿರುವ ಮತ್ತು ಹೊರಟು ಹೋಗಿಬಿಡಲು ದಾರಿ ಹಾಗೂ ಸಾಧನವಿಲ್ಲದ ಪುರುಷರೂ ಸ್ತ್ರೀಯರೂ ಮಕ್ಕಳೂ ಇದಕ್ಕೆ ಹೊರತಾಗಿದ್ದಾರೆ.

اِلَّا الْمُسْتَضْعَفِيْنَ مِنَ الرِّجَالِ وَ النِّسَآءِ وَ الْوِلْدَانِ لَا يَسْتَطِيْعُوْنَ حِيْلَةً وَّ لَا يَهْتَدُوْنَ سَبِيْلًا ﴿۹۸﴾

ಹೇಳುತ್ತಿದ್ದನು. ಆದರೆ ಮುಸ್ಲಿಮರಿಗೆ ಇವನು ಸತ್ಯನಿಷೇಧಿಯೇ ಆಗಿರಬಹುದು, ಬರೇ ಜೀವ ಉಳಿಸುವ ಉದ್ದೇಶದಿಂದ ಹೀಗೆ ನೆಪ ಮಾಡಿಕೊಳ್ಳುತ್ತಿರಬಹುದು ಎಂಬ ಸಂಶಯ ಉಂಟಾಗುತ್ತಿತ್ತು. ಅನೇಕ ಸಂದರ್ಭದಲ್ಲಿ ಅಂತಹವರನ್ನು ಅವರು ವಧಿಸುತ್ತಿದ್ದರು. ಆದ್ದರಿಂದಲೇ ಈ ಸೂಕ್ತದಲ್ಲಿ, ಯಾರಾದರೂ ತನ್ನನ್ನು ಮುಸ್ಲಿಮನೆಂದು ಹೇಳಿಕೊಂಡರೆ, ಅವನು ಕೇವಲ ಜೀವ ಉಳಿಸಲಿಕ್ಕಾಗಿ ಸುಳ್ಳಾಡುತ್ತಿರುವವನಾಗಿರಬಹುದು. ಏನಿದ್ದರೂ ವಿಚಾರಣೆಯ ಬಳಿಕವೇ ಸತ್ಯ ಬಯಲಾಗುತ್ತದೆ. ವಿಚಾರಣೆಯಿಲ್ಲದೆ ಅವನನ್ನು ಬಿಟ್ಟು ಬಿಟ್ಟರೆ ಸತ್ಯನಿಷೇಧಿಯೊಬ್ಬ ಸುಳ್ಳು ಹೇಳಿ ಜೀವ ಉಳಿಸಿಕೊಳ್ಳುವ ಸಾಧ್ಯತೆಯಿದೆ ಎಂಬುದು ನಿಜ. ಅಂತೆಯೇ ವಿಚಾರಣೆಯಿಲ್ಲದೆ ವಧಿಸಿದರೆ ನಿರಪರಾಧಿ ಸತ್ಯವಿಶ್ವಾಸಿಯೊಬ್ಬ ನಿಮ್ಮ ಕೈಯಿಂದ ಅನ್ಯಾಯವಾಗಿ ವಧಿಸಲ್ಪಡುವ ಸಾಧ್ಯತೆಯೂ ಇದ್ದೇ ಇದೆ.

70. ಅರ್ಥಾತ್- ಇಸ್ಲಾಮ್ ಸ್ವೀಕರಿಸಿದ ಬಳಿಕವೂ ಯಾವುದೇ ಕಾರಣ ಅಥವಾ ಅನಿವಾರ್ಯತೆಗಳಿಲ್ಲದೆ ತಮ್ಮ ಸತ್ಯನಿಷೇಧಿ ಜನಾಂಗದೊಂದಿಗೇ ಇದ್ದು ಅರೆ ಸತ್ಯವಿಶ್ವಾಸಿ ಮತ್ತು ಅರೆ ಸತ್ಯನಿಷೇಧಿಯಂತೆ ಜೀವನ ಸಾಗಿಸುವುದರಲ್ಲೇ ಸಂತೃಪ್ತಿ ಪಡೆಯುವವರಾಗಿದ್ದಾರೆ. ಆಗ ಇಸ್ಲಾಮೀ ರಾಷ್ಟ್ರವೊಂದು ಅಸ್ತಿತ್ವಕ್ಕೆ ಬಂದಿತ್ತು. ಅಲ್ಲಿಗೆ ವಲಸೆಹೋಗಿ ತಮ್ಮ ಧರ್ಮ ಮತ್ತು ವಿಶ್ವಾಸಕ್ಕೆ ಬದ್ಧರಾಗಿ ಪೂರ್ಣ ಇಸ್ಲಾಮೀ ಬದುಕನ್ನು ಸಾಗಿಸಲು ಅವರಿಗೆ ಸಾಧ್ಯವಿತ್ತು. ಇಸ್ಲಾಮೀ ರಾಷ್ಟ್ರದಿಂದ ತಮ್ಮ ವಿಶ್ವಾಸದ ರಕ್ಷಣೆಗಾಗಿ ಆ ಕಡೆಗೆ ವಲಸೆ ಬರುವಂತೆ ಅವರಿಗೆ ಆಹ್ವಾನವೂ ಬಂದಿತ್ತು.

99. ಅಲ್ಲಾಹ್ ಅವರನ್ನು ಕ್ಷಮಿಸಿಬಿಡಲೂ ಬಹುದು. ಅಲ್ಲಾಹನು ಅತ್ಯಂತ ಮನ್ನಿಸುವಾತನೂ ಕ್ಷಮಾಶೀಲನೂ ಆಗಿರುತ್ತಾನೆ.

فَأُولَٰٓئِكَ عَسَى اللّٰهُ أَنْ يَّعْفُوَ عَنْهُمْ ؕ وَكَانَ اللّٰهُ عَفُوًّا غَفُوْرًا ﴿٩٩﴾

100. ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವನು ಭೂಮಿಯಲ್ಲಿ ಆಶ್ರಯ ಪಡೆಯಲು ಅನೇಕ ಸ್ಥಳಗಳನ್ನೂ ಜೀವನ ಸಾಗಿಸಲು ಸಾಕಷ್ಟು ಅವಕಾಶವನ್ನೂ ಕಾಣುವನು. ಯಾವನಾದರೂ ತನ್ನ ಮನೆಯಿಂದ ಅಲ್ಲಾಹ್ ಮತ್ತು ಸಂದೇಶವಾಹಕರ ಕಡೆಗೆ ವಲಸೆ ಹೋಗಲು ಹೊರಟರೆ, ಮುಂದೆ ದಾರಿಯಲ್ಲೇ ಅವನಿಗೆ ಮರಣ ವುಂಟಾದರೆ ಅವನ ಪ್ರತಿಫಲ ಅಲ್ಲಾಹನ ಮೇಲೆ ಕಡ್ಡಾಯವಾಗಿ ಬಿಟ್ಟಿತು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.[71]

وَمَنْ يُّهَاجِرْ فِيْ سَبِيْلِ اللّٰهِ يَجِدْ فِي الْأَرْضِ مُرٰغَمًا كَثِيْرًا وَّسَعَةً ؕ وَمَنْ يَّخْرُجْ مِنْۢ بَيْتِهٖ مُهَاجِرًا إِلَى اللّٰهِ وَرَسُوْلِهٖ ثُمَّ يُدْرِكْهُ الْمَوْتُ فَقَدْ وَقَعَ أَجْرُهٗ عَلَى اللّٰهِ ؕ وَكَانَ اللّٰهُ غَفُوْرًا رَّحِيْمًا ﴿١٠٠﴾

101. ನೀವು ಪ್ರಯಾಣಕ್ಕೆ ಹೊರಟಾಗ ನಮಾಝನ್ನು 'ಕಸ್ರ್' ಮಾಡಿಕೊಳ್ಳುವುದರಲ್ಲಿ[72] (ಕಡಿತಗೊಳಿಸಿಕೊಳ್ಳುವುದರಲ್ಲಿ) ಅಡ್ಡಿಯಿಲ್ಲ. (ಮುಖ್ಯವಾಗಿ) ಸತ್ಯನಿಷೇಧಿಗಳು ನಿಮ್ಮನ್ನು ಸತಾಯಿಸುವರೆಂಬ ಆಶಂಕೆಯುಂಟಾದಾಗ. ಏಕೆಂದರೆ ನಿಶ್ಚಯ ವಾಗಿಯೂ ಅವರು ನಿಮ್ಮೊಂದಿಗೆ ಪ್ರತ್ಯಕ್ಷ ಹಗೆತನ ಸಾಧಿಸಲು ಹೊರಟಿರುತ್ತಾರೆ.

وَإِذَا ضَرَبْتُمْ فِي الْأَرْضِ فَلَيْسَ عَلَيْكُمْ جُنَاحٌ أَنْ تَقْصُرُوْا مِنَ الصَّلٰوةِ ۖ إِنْ خِفْتُمْ أَنْ يَّفْتِنَكُمُ الَّذِيْنَ كَفَرُوْا ؕ إِنَّ الْكٰفِرِيْنَ كَانُوْا لَكُمْ عَدُوًّا مُّبِيْنًا ﴿١٠١﴾

102. ಓ ಪೈಗಂಬರರೇ, ನೀವು ಮುಸ್ಲಿಮರೊಂದಿಗೆ ಇದ್ದು (ಯುದ್ಧಾವಸ್ಥೆಯಲ್ಲಿ) ಅವರಿಗೆ ನಮಾಝ್ ಮಾಡಿಸಲು ನಿಂತಾಗ ಅವರಲ್ಲೊಂದು ಗುಂಪು ನಿಮ್ಮ ಸಂಗಡ ನಿಲ್ಲಲಿ ಮತ್ತು ತಮ್ಮ ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡೇ ಇರಲಿ. ಅವರು ಸಾಷ್ಟಾಂಗ ಮಾಡಿದ ಮೇಲೆ ಹಿಂದಕ್ಕೆ ಸರಿದು ಬಿಡಲಿ ಮತ್ತು ಇನ್ನೂ ನಮಾಝ್ ಮಾಡಿರದ ಇನ್ನೊಂದು ಗುಂಪು ಬಂದು ನಿಮ್ಮ ಸಂಗಡ ನಮಾಝ್ ಮಾಡಲಿ. ಅವರೂ ಜಾಗರೂಕರಾಗಿಯೂ ಶಸ್ತ್ರಧಾರಿಗಳಾಗಿಯೂ[73] ಇರಲಿ. ಏಕೆಂದರೆ ನೀವು ನಿಮ್ಮ

وَإِذَا كُنْتَ فِيْهِمْ فَأَقَمْتَ لَهُمُ الصَّلٰوةَ فَلْتَقُمْ طَآئِفَةٌ مِّنْهُمْ مَّعَكَ وَلْيَأْخُذُوْا أَسْلِحَتَهُمْ ۚ فَإِذَا سَجَدُوْا فَلْيَكُوْنُوْا مِنْ وَّرَآئِكُمْ ۖ وَلْتَأْتِ طَآئِفَةٌ أُخْرٰى لَمْ يُصَلُّوْا فَلْيُصَلُّوْا مَعَكَ وَلْيَأْخُذُوْا حِذْرَهُمْ وَأَسْلِحَتَهُمْ ۚ وَدَّ الَّذِيْنَ كَفَرُوْا لَوْ تَغْفُلُوْنَ عَنْ أَسْلِحَتِكُمْ وَأَمْتِعَتِكُمْ

71. ಅಲ್ಲಾಹನ ಧರ್ಮದ ಮೇಲೆ ವಿಶ್ವಾಸವಿಟ್ಟ ವ್ಯಕ್ತಿಗೆ ಸತ್ಯನಿಷೇಧದ ವ್ಯವಸ್ಥೆಯಲ್ಲಿ ಎರಡು ವಿಧದಲ್ಲಿ ಮಾತ್ರ ಜೀವನ ಸಾಗಿಸಲು ಸಾಧ್ಯವಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಒಂದೋ ಅವನು ಇಸ್ಲಾಮನ್ನು ಆ ಪ್ರದೇಶದಲ್ಲಿ ಪ್ರಬಲಗೊಳಿಸಲು ಮತ್ತು ಸತ್ಯನಿಷೇಧದ ವ್ಯವಸ್ಥೆಯನ್ನು ಇಸ್ಲಾಮೀ ವ್ಯವಸ್ಥೆಯಾಗಿ ಮಾರ್ಪಡಿಸಲು ಹೋರಾಡುತ್ತಿರಬೇಕು. ಪ್ರವಾದಿಗಳು ಮತ್ತು ಅವರ ಆರಂಭದ ಅನುಯಾಯಿಗಳು ಹಾಗೆಯೇ ಮಾಡುತ್ತಿದ್ದರು. ಇಲ್ಲವೇ ಅಲ್ಲಿಂದ ಹೊರಡುವ ದಾರಿಗಾಣದೆ ತೀವ್ರ ಅಸಮಾಧಾನದೊಂದಿಗೆ ಅನಿವಾರ್ಯವಾಗಿ ಅಲ್ಲಿ ನೆಲೆಸಿರಬೇಕು.

72. ಶಾಂತಿಯ ಕಾಲದಲ್ಲಿ ಮಾಡಲಾಗುವ ಪ್ರವಾಸದ 'ಕಸ್ರ್' (ನಮಾಝ್‌ನ ಕಡಿತ) ಎಂದರೆ ನಾಲ್ಕು ರಕಅತ್ ಕಡ್ಡಾಯವಿರುವ ಅವಧಿಯಲ್ಲಿ ಎರಡು ರಕಅತ್ ನಮಾಝ್ ನಿರ್ವಹಿಸುವುದಾಗಿದೆ. ಯುದ್ಧಾವಸ್ಥೆಯಲ್ಲಿ ಕಸ್ರ್‌ಗೆ ಮಿತಿಯನ್ನು ಗೊತ್ತುಪಡಿಸಲಾಗಿಲ್ಲ. ಯುದ್ಧದ ಸಂದರ್ಭದಲ್ಲಿ ಅವಕಾಶ ಒದಗಿಬಂದಂತೆ ನಮಾಝ್ ನಿರ್ವಹಿಸಬೇಕು.

73. ಸಲಾತುಲ್ ಖೌಫ್(ಆತಂಕದ ಅವಧಿಯ ನಮಾಝ್)ನ ಈ ಆದೇಶವು ಶತ್ರುವಿನ ಆಕ್ರಮಣದ ಭಯವಿರುವ ಆದರೆ ಯುದ್ಧವಿನ್ನೂ ಆರಂಭಗೊಂಡಿರದ ಸಂದರ್ಭಕ್ಕಾಗಿ ಆಗಿದೆ.

ಆಯುಧಗಳಿಂದಲೂ ಸಾಮಾನು ಸಾಮಗ್ರಿಗಳಿಂದಲೂ ಕಿಂಚಿತ್ತಾದರೂ ಅಜಾಗರೂಕರಾದಾಗ ನಿಮ್ಮ ಮೇಲೆ ಹಠಾತ್ತಾಗಿ ಎರಗಿಬಿಡಬೇಕೆಂದು ಸತ್ಯನಿಷೇಧಿಗಳು ಹೊಂಚುಹಾಕಿಕೊಂಡಿರುತ್ತಾರೆ. ಒಂದು ವೇಳೆ ಮಳೆಯ ಕಾರಣದಿಂದ ನಿಮಗೆ ತೊಂದರೆಯಾಗುವುದೆಂದು ಕಂಡರೆ ಅಥವಾ ನೀವು ರೋಗಗ್ರಸ್ತರಾದರೆ ಆಯುಧಗಳನ್ನು ಕೆಳಗಿಡುವುದರಲ್ಲಿ ದೋಷವಿಲ್ಲ. ಆಗಲೂ ಜಾಗೃತರಾಗಿರಿ. ಅಲ್ಲಾಹ್ ಸತ್ಯನಿಷೇಧಿಗಳಿಗೆ ಅಪಮಾನಕಾರಕ ಶಿಕ್ಷೆಯನ್ನು ಸಿದ್ಧಗೊಳಿಸಿಟ್ಟಿರುತ್ತಾನೆ.

فَيَمِيلُونَ عَلَيْكُمْ مَيْلَةً وَاحِدَةً ۚ وَلَا جُنَاحَ
عَلَيْكُمْ إِنْ كَانَ بِكُمْ أَذًى مِنْ مَطَرٍ أَوْ
كُنْتُمْ مَرْضَىٰ أَنْ تَضَعُوا أَسْلِحَتَكُمْ ۖ وَخُذُوا
حِذْرَكُمْ ۗ إِنَّ اللَّهَ أَعَدَّ لِلْكَافِرِينَ عَذَابًا مُهِينًا ﴿١٠٢﴾

103. ನಮಾಝ್ ಮುಗಿಸಿಕೊಂಡ ಬಳಿಕ ನಿಂತೂ ಕುಳಿತೂ ಮಲಗಿಯೂ ಎಲ್ಲ ಅವಸ್ಥೆಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಲೇ ಇರಿ. ಶಾಂತಿಯುಂಟಾದ ಮೇಲೆ ಸಂಪೂರ್ಣ ನಮಾಝನ್ನು ನೆರವೇರಿಸಿರಿ. ವಾಸ್ತವದಲ್ಲಿ ನಮಾಝ್ ಸತ್ಯವಿಶ್ವಾಸಿಗಳ ಮೇಲೆ ಸಮಯಪಾಲನೆಯೊಂದಿಗೆ ನೆರವೇರಿಸಲು ವಿಧಿಸಲ್ಪಟ್ಟಿರುವ ಕಡ್ಡಾಯ ವಿಧಿಯಾಗಿರುತ್ತದೆ.

فَإِذَا قَضَيْتُمُ الصَّلَاةَ فَاذْكُرُوا اللَّهَ قِيَامًا
وَقُعُودًا وَعَلَىٰ جُنُوبِكُمْ ۚ فَإِذَا اطْمَأْنَنْتُمْ
فَأَقِيمُوا الصَّلَاةَ ۚ إِنَّ الصَّلَاةَ كَانَتْ
عَلَى الْمُؤْمِنِينَ كِتَابًا مَوْقُوتًا ﴿١٠٣﴾

104. ಈ ಗುಂಪನ್ನು ಬೆನ್ನಟ್ಟುವುದರಲ್ಲಿ ದೌರ್ಬಲ್ಯ ತೋರಬೇಡಿರಿ. ನೀವು ಕಷ್ಟಪಡುತ್ತಿರುವಿರಾದರೆ ನಿಮ್ಮಂತೆ ಅವರೂ ಕಷ್ಟಪಡುತ್ತಿದ್ದಾರೆ. ಅವರು ಅಲ್ಲಾಹನಿಂದ ಪ್ರತೀಕ್ಷಿಸದಿರುವುದನ್ನು ನೀವು ಪ್ರತೀಕ್ಷಿಸುತ್ತೀರಿ. ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَلَا تَهِنُوا فِي ابْتِغَاءِ الْقَوْمِ ۖ إِنْ تَكُونُوا
تَأْلَمُونَ فَإِنَّهُمْ يَأْلَمُونَ كَمَا تَأْلَمُونَ ۖ
وَتَرْجُونَ مِنَ اللَّهِ مَا لَا يَرْجُونَ ۗ
وَكَانَ اللَّهُ عَلِيمًا حَكِيمًا ﴿١٠٤﴾

105. ಓ ಪೈಗಂಬರರೇ ಅಲ್ಲಾಹ್ ನಿಮಗೆ ತೋರಿಸಿಕೊಟ್ಟ ಪ್ರಕಾರ ಜನರ ನಡುವೆ ತೀರ್ಪು ನೀಡಲಿಕ್ಕಾಗಿ ನಾವು ನಿಮ್ಮ ಮೇಲೆ ಈ ಗ್ರಂಥವನ್ನು ಸತ್ಯ ಸಹಿತ ಅವತೀರ್ಣಗೊಳಿಸಿದ್ದೇವೆ. ನೀವು ಅಪ್ರಾಮಾಣಿಕರ ಪರವಾಗಿ ವಾದಿಸುವವರಾಗಬೇಡಿರಿ.

إِنَّا أَنْزَلْنَا إِلَيْكَ الْكِتَابَ بِالْحَقِّ
لِتَحْكُمَ بَيْنَ النَّاسِ بِمَا أَرَاكَ اللَّهُ ۚ
وَلَا تَكُنْ لِلْخَائِنِينَ خَصِيمًا ﴿١٠٥﴾

106. ಪಾಪ ವಿಮೋಚನೆಗಾಗಿ ಅಲ್ಲಾಹನನ್ನು ಪ್ರಾರ್ಥಿಸಿರಿ. ಅವನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَاسْتَغْفِرِ اللَّهَ ۖ إِنَّ اللَّهَ كَانَ غَفُورًا رَحِيمًا ﴿١٠٦﴾

107. ಆತ್ಮವಂಚನೆ ಮಾಡುವವರನ್ನು[74] ನೀವು ಸಮರ್ಥಿಸಬೇಡಿರಿ. ನಿಶ್ಚಯವಾಗಿಯೂ ವಿಶ್ವಾಸಘಾತಕ ಮತ್ತು ಪಾಪಕರ್ಮಿಗಳಾದವರು ಅಲ್ಲಾಹನಿಗೆ ಮೆಚ್ಚುಗೆಯವರಲ್ಲ.

وَلَا تُجَادِلْ عَنِ الَّذِينَ يَخْتَانُونَ أَنْفُسَهُمْ ۚ
إِنَّ اللَّهَ لَا يُحِبُّ مَنْ كَانَ خَوَّانًا أَثِيمًا ﴿١٠٧﴾

74. ಇತರರನ್ನು ವಂಚಿಸುವವನು ವಾಸ್ತವದಲ್ಲಿ ಮೊತ್ತ ಮೊದಲು ತನ್ನನ್ನು ತಾನೇ ವಂಚಿಸಿಕೊಳ್ಳುತ್ತಾನೆ.

108. ಇವರು ತಮ್ಮ ಚಟುವಟಿಕೆಗಳನ್ನು ಮಾನವರಿಗೆ ತಿಳಿಯದಂತೆ ಅಡಗಿಸಿಬಿಡಬಲ್ಲರು. ಆದರೆ ಅಲ್ಲಾಹನಿಗೆ ತಿಳಿಯದಂತೆ ಅಡಗಿಸ ಲಾರರು. ಇವರು ರಾತ್ರಿಕಾಲದಲ್ಲಿ ಅವಿತುಕೊಂಡು ಅವನ ಇಚ್ಛೆಗೆ ವಿರುದ್ಧ ಗೂಢಾಲೋಚನೆ ನಡೆಸುತ್ತಿರುವಾಗಲೂ ಆತನು ಇವರ ಸಂಗಡವೇ ಇರುತ್ತಾನೆ. ಇವರ ಸಕಲ ಕರ್ಮಗಳನ್ನು ಅಲ್ಲಾಹನು ಆವರಿಸಿಕೊಂಡಿರುತ್ತಾನೆ.

يَسْتَخْفُونَ مِنَ النَّاسِ وَلَا يَسْتَخْفُونَ مِنَ
اللَّهِ وَهُوَ مَعَهُمْ إِذْ يُبَيِّتُونَ مَا لَا يَرْضَىٰ
مِنَ الْقَوْلِ ۚ وَكَانَ اللَّهُ بِمَا يَعْمَلُونَ مُحِيطًا ﴿١٠٨﴾

109. ನಿಜ; ನೀವು ಈ ಅಪರಾಧಿಗಳ ಪರವಾಗಿ ಇಹ ಜೀವನದಲ್ಲಂತು ವಾದ ಮಾಡಿದಿರಿ. ಆದರೆ ಪುನರುತ್ಥಾನ ದಿನದಂದು ಇವರಿಗಾಗಿ ಅಲ್ಲಾಹನೊಂದಿಗೆ ವಾದಿಸುವವರು ಯಾರಿದ್ದಾರೆ? ಅಲ್ಲಿ ಇವರ ವಕಾಲತು ವಹಿಸುವವರು ಯಾರು?

هَا أَنْتُمْ هَٰؤُلَاءِ جَادَلْتُمْ عَنْهُمْ فِي الْحَيَاةِ
الدُّنْيَا فَمَنْ يُجَادِلُ اللَّهَ عَنْهُمْ يَوْمَ
الْقِيَامَةِ أَمْ مَنْ يَكُونُ عَلَيْهِمْ وَكِيلًا ﴿١٠٩﴾

110. ಯಾವನಾದರೂ ದುಷ್ಕರ್ಮವೆಸಗಿಬಿಟ್ಟರೆ ಅಥವಾ ತನ್ನ ಮೇಲೆ ತಾನೇ ಅಕ್ರಮವೆಸಗಿದರೆ ಮತ್ತು ಆ ಬಳಿಕ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿದರೆ, ಅಲ್ಲಾಹನು ಕ್ಷಮಾದಾನಿಯೂ ಕರುಣಾನಿಧಿಯೂ ಆಗಿರುವುದನ್ನು ಅವನು ಕಾಣುವನು.

وَمَنْ يَعْمَلْ سُوءًا أَوْ يَظْلِمْ نَفْسَهُ ثُمَّ
يَسْتَغْفِرِ اللَّهَ يَجِدِ اللَّهَ غَفُورًا رَحِيمًا ﴿١١٠﴾

111. ಆದರೆ ಯಾರಾದರೂ ಪಾಪ ಗಳಿಸಿಕೊಂಡರೆ ಅವನ ಈ ಗಳಿಕೆಯು ಅವನಿಗೇ ಕೇಡಾಗುವುದು. ಅಲ್ಲಾಹನಿಗೆ ಸಕಲ ವಿಷಯಗಳ ಅರಿವಿದೆ. ಅವನು ಮಹಾ ಯುಕ್ತಿಪೂರ್ಣ ನಾಗಿರುತ್ತಾನೆ.

وَمَنْ يَكْسِبْ إِثْمًا فَإِنَّمَا يَكْسِبُهُ عَلَىٰ
نَفْسِهِ ۚ وَكَانَ اللَّهُ عَلِيمًا حَكِيمًا ﴿١١١﴾

112. ಇನ್ನಾರಾದರೂ ಅಪರಾಧ ಅಥವಾ ಪಾಪಕಾರ್ಯವೆಸಗಿ ಅದರ ಆರೋಪವನ್ನು ಇನ್ನೊಬ್ಬ ನಿರಪರಾಧಿಯ ಮೇಲೆ ಹೊರಿಸಿದರೆ, ಅವನು ಅತಿ ದೊಡ್ಡ ಸುಳ್ಳಾರೋಪಣೆ ಮತ್ತು ಸುವ್ಯಕ್ತ ಪಾತಕದ ಹೊರೆ ಹೊತ್ತುಕೊಂಡನು.

وَمَنْ يَكْسِبْ خَطِيئَةً أَوْ إِثْمًا ثُمَّ يَرْمِ
بِهِ بَرِيئًا فَقَدِ احْتَمَلَ بُهْتَانًا وَإِثْمًا مُبِينًا ﴿١١٢﴾

113. ಓ ಪೈಗಂಬರರೇ, ಅಲ್ಲಾಹನ ಅನುಗ್ರಹವೂ ಕೃಪೆಯೂ ನಿಮ್ಮ ಮೇಲೆ ಇಲ್ಲದಿರುತ್ತಿದ್ದರೆ, ಅವರಲ್ಲೊಂದು ಪಂಗಡವು ನಿಮ್ಮನ್ನು ಅಪಗ್ರಹಿಕೆಗೆ ಹಚ್ಚಲು ನಿರ್ಧರಿಸಿಯೇ ಬಿಟ್ಟಿತ್ತು. ವಸ್ತುತಃ ಅವರು ತಮ್ಮನ್ನೇ ಹೊರತು ಇನ್ನಾರನ್ನೂ ಅಪಗ್ರಹಿಕೆಗೆ ಹಚ್ಚುತ್ತಿರ ಲಿಲ್ಲ. ಅವರು ನಿಮಗೆ ಯಾವ ನಷ್ಟವನ್ನೂ ಮಾಡುವಂತಿರಲಿಲ್ಲ.[75]

وَلَوْلَا فَضْلُ اللَّهِ عَلَيْكَ وَرَحْمَتُهُ لَهَمَّتْ
طَائِفَةٌ مِنْهُمْ أَنْ يُضِلُّوكَ وَمَا يُضِلُّونَ
إِلَّا أَنْفُسَهُمْ ۖ وَمَا يَضُرُّونَكَ مِنْ شَيْءٍ ۚ
وَأَنْزَلَ اللَّهُ عَلَيْكَ الْكِتَابَ وَالْحِكْمَةَ

75. ಅರ್ಥಾತ್- ಅವರು ತಪ್ಪು ವಿವರ ಮತ್ತು ಸಾಕ್ಷ್ಯಾಧಾರಗಳನ್ನು ನೀಡಿ ನಿಮ್ಮನ್ನು ಅಪಗ್ರಹಿಕೆಗೆ ಒಳಗಾಗುವಂತೆ ಮಾಡುವಲ್ಲಿ ಯಶಸ್ವಿಯಾದರೆ ಮತ್ತು ನ್ಯಾಯಕ್ಕೆ ವಿರುದ್ಧವಾಗಿ ತಮ್ಮ ಪರವಾಗಿ ತೀರ್ಮಾನವನ್ನು ಪಡೆದರೆ ನಷ್ಟಕ್ಕೊಳಗಾಗುವವರು ಅವರೇ. ಅದರಿಂದ ನಿಮಗೇನೂ ಕೇಡುಂಟಾಗುವುದಿಲ್ಲ. ಏಕೆಂದರೆ ದೇವನ ದೃಷ್ಟಿಯಲ್ಲಿ ಅವರೇ ಅಪರಾಧಿಯಾಗುತ್ತಾರೆ ವಿನಾ ನೀವಲ್ಲ. ನ್ಯಾಯ

ಅಲ್ಲಾಹನು ನಿಮಗೆ ಗ್ರಂಥ ಹಾಗೂ ಯುಕ್ತಿಯನ್ನು ಅವತೀರ್ಣ ಗೊಳಿಸಿರುತ್ತಾನೆ ಮತ್ತು ನಿಮಗೆ ತಿಳಿಯದಿದ್ದುದನ್ನು ಕಲಿಸಿರು ತ್ತಾನೆ. ಅಲ್ಲಾಹನ ಅನುಗ್ರಹ ನಿಮ್ಮ ಮೇಲೆ ಧಾರಾಳವಿದೆ.

وَعَلَّمَكَ مَا لَمْ تَكُنْ تَعْلَمُ ۚ وَكَانَ فَضْلُ اللَّهِ عَلَيْكَ عَظِيمًا ﴿١١٣﴾

114. ಜನರಾಡುವ ಹೆಚ್ಚಿನ ಗುಪ್ತ ಮಾತುಕತೆಗಳಲ್ಲಿ ಯಾವ ಹಿತವೂ ಇರುವುದಿಲ್ಲ. ಯಾರಾದರೂ ರಹಸ್ಯ ದಾನ ಧರ್ಮಗಳ ಬೋಧನೆ ನೀಡಿದರೆ ಅಥವಾ ಯಾವುದಾದರೂ ಸತ್ಕಾರ್ಯಕ್ಕೆ ಅಥವಾ ಜನರೊಳಗೆ ಪರಸ್ಪರ ವ್ಯವಹಾರಗಳನ್ನು ಸರಿಪಡಿಸಲಿಕ್ಕಾಗಿ ಪ್ರೇರೇ ಪಣೆ ನೀಡಿದರೆ ಇದರಲ್ಲಿ ಹಿತವಿದೆ. ಯಾವನಾದರೂ ಅಲ್ಲಾಹನ ಸಂಪ್ರೀತಿಯ ಪ್ರಾಪ್ತಿಗಾಗಿ ಹೀಗೆ ಮಾಡಿದರೆ ಅವನಿಗೆ ನಾವು ಹಿರಿದಾದ ಪ್ರತಿಫಲ ನೀಡುವೆವು.

لَا خَيْرَ فِي كَثِيرٍ مِنْ نَجْوَاهُمْ إِلَّا مَنْ أَمَرَ بِصَدَقَةٍ أَوْ مَعْرُوفٍ أَوْ إِصْلَاحٍ بَيْنَ النَّاسِ ۚ وَمَنْ يَفْعَلْ ذَٰلِكَ ابْتِغَاءَ مَرْضَاتِ اللَّهِ فَسَوْفَ نُؤْتِيهِ أَجْرًا عَظِيمًا ﴿١١٤﴾

115. ಆದರೆ ಸನ್ಮಾರ್ಗವು ವ್ಯಕ್ತವಾದ ಬಳಿಕವೂ ಸಂದೇಶವಾಹಕರ ವಿರುದ್ಧ ಟೊಂಕ ಕಟ್ಟಿಕೊಂಡವನನ್ನೂ ಸತ್ಯವಿಶ್ವಾಸಿಗಳ ಮಾರ್ಗದ ಹೊರತು ಅನ್ಯ ಮಾರ್ಗಗಳಲ್ಲಿ ನಡೆಯುವವನನ್ನೂ ಅವನು ತಾನಾಗಿ ತಿರುಗಿಕೊಂಡ ಕಡೆಗೇ ನಾವು ತಿರುಗಿಸಿ ಬಿಡುವೆವು ಮತ್ತು ಅವನನ್ನು ಅತ್ಯಂತ ನಿಕೃಷ್ಟ ಸ್ಥಾನವಾಗಿರುವ ನರಕಕ್ಕೆ ತಳ್ಳಿಬಿಡುವೆವು.

وَمَنْ يُشَاقِقِ الرَّسُولَ مِنْ بَعْدِ مَا تَبَيَّنَ لَهُ الْهُدَىٰ وَيَتَّبِعْ غَيْرَ سَبِيلِ الْمُؤْمِنِينَ نُوَلِّهِ مَا تَوَلَّىٰ وَنُصْلِهِ جَهَنَّمَ ۖ وَسَاءَتْ مَصِيرًا ﴿١١٥﴾

116. ಅಲ್ಲಾಹನು ತನ್ನೊಂದಿಗೆ ಇತರರನ್ನು ಭಾಗೀದಾರರನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಯಾರನ್ನಾದರೂ ಭಾಗೀದಾರರ ನ್ನಾಗಿ ಮಾಡಿದವನು ಪಥಭ್ರಷ್ಟತೆಯಲ್ಲಿ ಬಹುದೂರ ಸಾಗಿಬಿಟ್ಟನು.

إِنَّ اللَّهَ لَا يَغْفِرُ أَنْ يُشْرَكَ بِهِ وَيَغْفِرُ مَا دُونَ ذَٰلِكَ لِمَنْ يَشَاءُ ۚ وَمَنْ يُشْرِكْ بِاللَّهِ فَقَدْ ضَلَّ ضَلَالًا بَعِيدًا ﴿١١٦﴾

117. ಅವರು ಅಲ್ಲಾಹನನ್ನು ಬಿಟ್ಟು ದೇವಿಗಳನ್ನು ಆರಾಧ್ಯರನ್ನಾಗಿ ಮಾಡುತ್ತಾರೆ. ಅವರು ಅಲ್ಲಾಹನು ಶಪಿಸಿರುವ ಆ ಬಂಡುಕೋರ ಶೈತಾನನನ್ನು ಆರಾಧ್ಯನನ್ನಾಗಿ ಮಾಡುತ್ತಾರೆ-[76]

إِنْ يَدْعُونَ مِنْ دُونِهِ إِلَّا إِنَاثًا وَإِنْ يَدْعُونَ إِلَّا شَيْطَانًا مَرِيدًا ﴿١١٧﴾

---

ತೀರ್ಮಾನ ಮಾಡುವವರನ್ನು ವಂಚಿಸಿ ತನ್ನ ಪರವಾಗಿ ತೀರ್ಪನ್ನು ಪಡೆಯುವವನು ಈ ಯುಕ್ತಿಗಳಿಂದಾಗಿ ಸತ್ಯ ತನ್ನ ಕಡೆಗಾಯಿತು ಎಂಬ ಭ್ರಮೆಗೆ ಒಳಗಾಗುತ್ತಾನೆ. ವಾಸ್ತವದಲ್ಲಿ ಅಲ್ಲಾಹನ ದೃಷ್ಟಿಯಲ್ಲಿ ಸತ್ಯ ಅದರ ನಿಜವಾದ ಹಕ್ಕುದಾರರಿಗೇ ಸಲ್ಲುತ್ತದೆ. ನ್ಯಾಯಾಧೀಶನ ತಪ್ಪುತಿಳುವಳಿಕೆಯಿಂದಾಗಿ ನೀಡಲ್ಪಡುವ ಯಾವುದೇ ತೀರ್ಪು ಸತ್ಯವನ್ನು ಯಾವ ರೀತಿಯಲ್ಲೂ ಬಾಧಿಸುವುದಿಲ್ಲ.

76. ಶೈತಾನನ ಮುಂದೆ ಯಾರೂ ಅರ್ಚನಾ ವಿಧಿಗಳನ್ನು ನಡೆಸುವುದಿಲ್ಲ. ಅದಕ್ಕೆ ದೇವತ್ವದ ಪಟ್ಟವನ್ನು ನೀಡುವುದಿಲ್ಲ. ಈ ಅರ್ಥದಲ್ಲಿ ಯಾರೂ ಶೈತಾನನ್ನು ಆರಾಧ್ಯನಾಗಿ ಮಾಡುವುದಿಲ್ಲ. ಶೈತಾನನ್ನು ಆರಾಧ್ಯನಾಗಿ ಮಾಡುವುದೆಂದರೆ ತನ್ನ ಮನಸ್ಸನ್ನು ಶೈತಾನನ ಅಂಕಿತಕ್ಕೆ ಕೊಟ್ಟು ಬಿಡುವುದಾಗಿದೆ. ಶೈತಾನನೇ ತನ್ನ ಪ್ರಭು ಮತ್ತು ತಾನು ಅವನ ದಾಸನೇನೋ ಎಂಬಂತೆ ಅವನು ಹೋದೆಡೆಯಲ್ಲೆಲ್ಲಾ ಅವನನ್ನು ಹಿಂಬಾಲಿಸುವುದಾಗಿದೆ. ನಿಶ್ಶರ್ಥವಾದ ಅನುಸರಣೆ ಮತ್ತು ಅಂಧಾನುಕರಣೆಯೂ, 'ಇಬಾದತ್' ಆಗಿದೆ ಎಂದು ಇದರಿಂದ

118. ಅವನು ಅಲ್ಲಾಹನೊಡನೆ, "ನಾನು ನಿನ್ನ ದಾಸರ ಪೈಕಿ ಒಂದು ನಿಶ್ಚಿತ ಪಾಲನ್ನು ಪಡೆದೇ ತೀರುವೆನು.[77]

لَّعَنَهُ اللَّهُ ۘ وَقَالَ لَأَتَّخِذَنَّ مِنْ عِبَادِكَ نَصِيبًا مَّفْرُوضًا ﴿١١٨﴾

119. ನಾನು ಅವರನ್ನು ಪಥಭ್ರಷ್ಟಗೊಳಿಸುವೆನು. ನಾನು ಅವರನ್ನು ಆಶೆ, ಆಕಾಂಕ್ಷೆಗಳಲ್ಲಿ ಸಿಲುಕಿಸಿಬಿಡುವೆನು. ನಾನು ಅವರಿಗೆ ಅಪ್ಪಣೆ ಕೊಡುವೆನು. ಆಗ ಅವರು ನನ್ನ ಅಪ್ಪಣೆಯಂತೆ ಪ್ರಾಣಿಗಳ ಕಿವಿಗಳನ್ನು ಹರಿಯುವರು.[78] ನಾನು ಅಪ್ಪಣೆ ಕೊಡುವೆನು. ಆಗ ಅವರು ನನ್ನ ಅಪ್ಪಣೆಯಂತೆ ಅಲ್ಲಾಹನ ಸೃಷ್ಟಿಯಲ್ಲಿ ವಿಕೃತಿಯನ್ನುಂಟು ಮಾಡುವರು"[79] ಎಂದು ಹೇಳಿದ್ದನು. (ಅವರು ಆ ಶೈತಾನನ ಅನುಸರಣೆ ಮಾಡುತ್ತಿದ್ದಾರೆ.) ಅಲ್ಲಾಹನ ಬದಲಿಗೆ ಶೈತಾನನನ್ನು ತನ್ನ ರಕ್ಷಕ ಮಿತ್ರನನ್ನಾಗಿ ಮಾಡಿಕೊಂಡಾತನು ವ್ಯಕ್ತವಾದ ನಷ್ಟಕ್ಕೆ ಗುರಿಯಾದನು.

وَلَأُضِلَّنَّهُمْ وَلَأُمَنِّيَنَّهُمْ وَلَآمُرَنَّهُمْ فَلَيُبَتِّكُنَّ آذَانَ الْأَنْعَامِ وَلَآمُرَنَّهُمْ فَلَيُغَيِّرُنَّ خَلْقَ اللَّهِ ۚ وَمَن يَتَّخِذِ الشَّيْطَانَ وَلِيًّا مِّن دُونِ اللَّهِ فَقَدْ خَسِرَ خُسْرَانًا مُّبِينًا ﴿١١٩﴾

120. ಅವನು ಇವರಿಗೆ ವಾಗ್ದಾನ ಮಾಡುತ್ತಾನೆ ಮತ್ತು ಇವರಿಗೆ ಭರವಸೆ ಕೊಡುತ್ತಾನೆ. ಆದರೆ ಶೈತಾನನ ಎಲ್ಲ ವಾಗ್ದಾನಗಳು ವಂಚನೆಯ ವಿನಾ ಇನ್ನೇನೂ ಅಲ್ಲ.

يَعِدُهُمْ وَيُمَنِّيهِمْ ۖ وَمَا يَعِدُهُمُ الشَّيْطَانُ إِلَّا غُرُورًا ﴿١٢٠﴾

121. ಇವರ ವಾಸಸ್ಥಾನವು ನರಕವಾಗಿದ್ದು ಅದರಿಂದ ರಕ್ಷಣೆ ಹೊಂದುವ ಯಾವ ವಿಧಾನವನ್ನೂ ಇವರು ಕಾಣಲಾರರು.

أُولَٰئِكَ مَأْوَاهُمْ جَهَنَّمُ وَلَا يَجِدُونَ عَنْهَا مَحِيصًا ﴿١٢١﴾

122. ಸತ್ಯವಿಶ್ವಾಸವನ್ನಿರಿಸಿಕೊಂಡು ಸತ್ಕರ್ಮಗಳನ್ನು ಕೈಗೊಂಡವರಿಗೆ ನಾವು ತಳಭಾಗದಲ್ಲಿ ನದಿಗಳು ಹರಿಯುವಂತಹ ಸ್ವರ್ಗೋದ್ಯಾನ ಗಳಲ್ಲಿ ಪ್ರವೇಶ ಕೊಡುವೆವು. ಅವರು ಅಲ್ಲಿ ಸದಾಕಾಲ ವಾಸಿಸು ವರು. ಇದು ಅಲ್ಲಾಹನ ದಿಟವಾದ ವಾಗ್ದಾನ. ಅಲ್ಲಾಹನಿಗಿಂತ ಅಧಿಕ ಸತ್ಯವಂತನು ಇನ್ನಾರಿದ್ದಾನೆ.

وَالَّذِينَ آمَنُوا وَعَمِلُوا الصَّالِحَاتِ سَنُدْخِلُهُمْ جَنَّاتٍ تَجْرِي مِن تَحْتِهَا الْأَنْهَارُ خَالِدِينَ فِيهَا أَبَدًا ۖ وَعْدَ اللَّهِ حَقًّا ۚ وَمَنْ أَصْدَقُ مِنَ اللَّهِ قِيلًا ﴿١٢٢﴾

ಅರ್ಥವಾಗುತ್ತದೆ. ಈ ರೀತಿಯ ಅನುಸರಣೆ ಮಾಡುವವನು ವಾಸ್ತವದಲ್ಲಿ ಅಲ್ಲಾಹನನ್ನು ಬಿಟ್ಟು ಯಾರನ್ನು ಅನುಸರಿಸುತ್ತಿದ್ದಾನೋ ಅವನನ್ನೇ ಆರಾಧಿಸುತ್ತಿದ್ದಾನೆ.

77. ಅರ್ಥಾತ್- ಅವರ ಸಮಯ, ಪ್ರಯತ್ನ, ದುಡಿಮೆ, ಶಕ್ತಿ-ಸಾಮರ್ಥ್ಯ, ಸಂಪತ್ತು ಮತ್ತು ಸಂತಾನಗಳೆಲ್ಲದರಲ್ಲೂ ತಾನು ಪಾಲುದಾರ ನಾಗುವೆನು. ಅವರನ್ನು ವಂಚಿಸಿ ಎಲ್ಲದರ ಒಂದು ಗಣನೀಯ ಅಂಶವನ್ನು ನನ್ನ ಮಾರ್ಗದಲ್ಲಿ ವಿನಿಯೋಗಿಸುವಂತೆ ಮಾಡುವೆನು.

78. ಇದು ಅರೇಬಿಯಾದ ಜನರಲ್ಲಿದ್ದ ಮೂಢನಂಬಿಕೆಗಳ ಪೈಕಿ ಒಂದರ ಕಡೆಗಿರುವ ಸೂಚನೆ. ಹೆಣ್ಣು ಒಂಟೆಯು ಐದು ಅಥವಾ ಹತ್ತು ಬಾರಿ ಮರಿಹಾಕಿದ ನಂತರ ಅವರು ಅದರ ಕಿವಿ ಕತ್ತರಿಸಿ ತಮ್ಮ ದೇವತೆಯ ಹೆಸರಲ್ಲಿ ಅದನ್ನು ಬಿಟ್ಟು ಬಿಡುತ್ತಿದ್ದರು. ಅಂತಹ ಒಂಟೆಯನ್ನು ಸ್ವಂತಕ್ಕೆ ಉಪಯೋಗಿಸುವುದು ಪಾಪಕೃತ್ಯವೆಂದು ಭಾವಿಸುತ್ತಿದ್ದರು. ಹಾಗೆಯೇ ಹತ್ತು ಒಂಟೆಯ ಮರಿಯ ಜನನಕ್ಕೆ ಕಾರಣವಾದ ಗಂಡು ಒಂಟೆಯನ್ನೂ ದೇವತೆಯ ಹೆಸರಲ್ಲಿ ಬಿಟ್ಟು ಬಿಡುತ್ತಿದ್ದರು. ಕಿವಿ ಕತ್ತರಿಸುವುದು ಅದು ಹರಕೆಗೆ ಬಿಟ್ಟ ಪ್ರಾಣಿಯೆಂದು ಸೂಚಿಸುವಂತಹ ಒಂದು ಚಿಹ್ನೆಯಾಗಿತ್ತು.

79. ಅಲ್ಲಾಹನ ಸೃಷ್ಟಿಯಲ್ಲಿ ವಿಕೃತಿಯನ್ನುಂಟುಮಾಡುವುದೆಂದರೆ ಹುಟ್ಟು ಆಕಾರವನ್ನು ಬದಲಿಸುವುದೆಂದು ಅರ್ಥವಲ್ಲ. ಅಲ್ಲಾಹನು ಒಂದು ವಸ್ತುವನ್ನು ಯಾವುದಕ್ಕಾಗಿ ಸೃಷ್ಟಿಸಿದ್ದಾನೋ ಅದಕ್ಕಾಗಿ ಅದನ್ನು ಉಪಯೋಗಿಸದಿರುವ ಮತ್ತು ಯಾವುದಕ್ಕಾಗಿ ಅದನ್ನು ಸೃಷ್ಟಿಸಿಲ್ಲವೋ

123. ಕರ್ಮಗಳ ಪರಿಣಾಮವು ನಿಮ್ಮ ಆಶೋತ್ತರಗಳನ್ನಾಗಲಿ, ಗ್ರಂಥದ ವರ ಆಶೋತ್ತರಗಳನ್ನಾಗಲಿ ಹೊಂದಿಕೊಂಡಿರುವುದಿಲ್ಲ- ಕೇಡು ಯಾರು ಮಾಡಿದರೂ ಅದರ ಫಲವನ್ನು ಅವನು ಪಡೆದೇ ತೀರುವನು ಮತ್ತು ಅವನು ಅಲ್ಲಾಹನ ಎದುರು ಯಾರನ್ನೂ ತನ್ನ ರಕ್ಷಕ ಮಿತ್ರನನ್ನಾಗಿಯೂ ಸಹಾಯಕನನ್ನಾಗಿಯೂ ಹೊಂದಲಾರನು.

لَيْسَ بِاَمَانِيِّكُمْ وَلَآ اَمَانِيِّ اَهْلِ الْكِتٰبِ ؕ مَنْ يَّعْمَلْ سُوْٓءًا يُّجْزَ بِهٖ ۙ وَلَا يَجِدْ لَهٗ مِنْ دُوْنِ اللّٰهِ وَلِيًّا وَّلَا نَصِيْرًا ﴿۱۲۳﴾

124. ಪುರುಷನಿರಲಿ ಅಥವಾ ಸ್ತ್ರೀ ಇರಲಿ ಸತ್ಕರ್ಮ ಮಾಡುವವರು ಸತ್ಯವಿಶ್ವಾಸಿಗಳಾಗಿದ್ದರೆ ಇಂತಹವರೇ ಸ್ವರ್ಗದಲ್ಲಿ ಪ್ರವೇಶ ಪಡೆಯುವರು. ಕಿಂಚಿತ್ತೂ ಇವರ ಹಕ್ಕು ಚ್ಯುತಿಯಾಗಲಾರದು.

وَمَنْ يَّعْمَلْ مِنَ الصّٰلِحٰتِ مِنْ ذَكَرٍ اَوْ اُنْثٰى وَهُوَ مُؤْمِنٌ فَاُولٰٓئِكَ يَدْخُلُوْنَ الْجَنَّةَ وَلَا يُظْلَمُوْنَ نَقِيْرًا ﴿۱۲۴﴾

125. ಅಲ್ಲಾಹನಿಗೆ ಶರಣುಹೋಗಿ ಸುನೀತನಾಗಿ ಏಕನಿಷ್ಠೆಯಿಂದ ಇಬ್‌ರಾಹೀಮರ - ಅಲ್ಲಾಹನು ತನ್ನ ಮಿತ್ರನಾಗಿಸಿಕೊಂಡ ಆ ಇಬ್‌ರಾಹೀಮರ- ಸಂಪ್ರದಾಯವನ್ನನುಸರಿಸುವವನಿಗಿಂತ ಉತ್ತಮವಾದ ಜೀವನ ಪದ್ಧತಿ ಇನ್ನಾರದ್ದಾಗಿರಲು ಸಾಧ್ಯ?

وَمَنْ اَحْسَنُ دِيْنًا مِّمَّنْ اَسْلَمَ وَجْهَهٗ لِلّٰهِ وَهُوَ مُحْسِنٌ وَّاتَّبَعَ مِلَّةَ اِبْرٰهِيْمَ حَنِيْفًا ؕ وَاتَّخَذَ اللّٰهُ اِبْرٰهِيْمَ خَلِيْلًا ﴿۱۲۵﴾

126. ಭೂಮಿ-ಆಕಾಶಗಳೆಲ್ಲವೂ ಅಲ್ಲಾಹನದು. ಅಲ್ಲಾಹನು ಸಮಸ್ತ ವಸ್ತುಗಳನ್ನು ಆವರಿಸಿಕೊಂಡಿದ್ದಾನೆ.

وَلِلّٰهِ مَا فِي السَّمٰوٰتِ وَمَا فِي الْاَرْضِ ؕ وَكَانَ اللّٰهُ بِكُلِّ شَيْءٍ مُّحِيْطًا ﴿۱۲۶﴾

127. ಜನರು ನಿಮ್ಮೊಡನೆ ಸ್ತ್ರೀಯರ ವಿಷಯದಲ್ಲಿ 'ಫತ್ವಾ' (ಧರ್ಮವಿಧಿ) ಕೇಳುತ್ತಾರೆ.[80] ಹೇಳಿರಿ:- "ಅಲ್ಲಾಹನು ನಿಮಗೆ ಅವರ ವಿಷಯದಲ್ಲಿ 'ಧರ್ಮವಿಧಿ' ನೀಡುತ್ತಾನೆ ಮತ್ತು ಜೊತೆಗೇ ನಿಮಗೆ ಈ ಗ್ರಂಥದಲ್ಲಿ ಮುಂಚಿನಿಂದಲೇ ತಿಳಿಸಿರುವ ಆಜ್ಞೆಗಳನ್ನೂ ನೆನಪಿಗೆ ತಂದುಕೊಡುತ್ತಾನೆ. ಅರ್ಥಾತ್ - ನೀವು ನಿಶ್ಚಿತ ಹಕ್ಕನ್ನು ಸಲ್ಲಿಸದ ಹಾಗೂ ನೀವು ವಿವಾಹ ಮಾಡಿಕೊಳ್ಳಲು ಹಿಂಜರಿಯುವ (ಅಥವಾ ಅತಿಯಾಸೆಯಿಂದ ನೀವು ಸ್ವತಃ ಅವರೊಂದಿಗೆ ವಿವಾಹ ಮಾಡಲು ಬಯಸುವ)[81] ಅನಾಥ ಹೆಣ್ಮಕ್ಕಳ ಬಗೆಗಿರುವ

وَيَسْتَفْتُوْنَكَ فِي النِّسَآءِ ؕ قُلِ اللّٰهُ يُفْتِيْكُمْ فِيْهِنَّ ۙ وَمَا يُتْلٰى عَلَيْكُمْ فِي الْكِتٰبِ فِيْ يَتٰمَى النِّسَآءِ الّٰتِيْ لَا تُؤْتُوْنَهُنَّ مَا كُتِبَ لَهُنَّ وَتَرْغَبُوْنَ اَنْ تَنْكِحُوْهُنَّ وَالْمُسْتَضْعَفِيْنَ مِنَ الْوِلْدَانِ ۙ وَاَنْ تَقُوْمُوْا لِلْيَتٰمٰى بِالْقِسْطِ ؕ

ಅದಕ್ಕಾಗಿ ಅದನ್ನು ಉಪಯೋಗಿಸುವ ಕ್ರಿಯೆಯನ್ನು ಇಲ್ಲಿ ಪೈಶಾಚಿಕ ಕೃತ್ಯವೆನ್ನಲಾಗಿದೆ. ವಸ್ತುವಿನ ಪ್ರಕೃತಿಗೆ ವಿರುದ್ಧವಾದ ಎಲ್ಲಾ ಕೆಲಸಗಳು ಮತ್ತು ಪ್ರಕೃತಿಯ ಬೇಡಿಕೆಯಿಂದ ಮುಕ್ತವಾಗಲು ಅಳವಡಿಸಲಾಗುವ ಎಲ್ಲಾ ವಿಧಾನಗಳು ಈ ಸೂಕ್ತದ ಪ್ರಕಾರ ಪೈಶಾಚಿಕ ಪ್ರೇರಣೆಯ ಪರಿಣಾಮವಾಗಿವೆ. ಉದಾಹರಣೆಗೆ ಸಲಿಂಗರತಿ, ಗರ್ಭಪಾತ, ಸನ್ಯಾಸ, ಬ್ರಹ್ಮಚರ್ಯೆ, ಸ್ತ್ರೀ ಪುರುಷರನ್ನು ಬಂಜೆಯರಾಗಿ ಮಾಡುವುದು, ಪುರುಷರನ್ನು ಶಿಖಂಡಿಯಾಗಿ ಮಾಡುವುದು. ಮಹಿಳೆಯರನ್ನು ಅವರ ನಿಸರ್ಗದತ್ತ ಕರ್ತವ್ಯಗಳಿಂದ ವಿಮುಖಗೊಳಿಸುವುದು, ಪುರುಷರ ಪಾಲಿಗಿರುವ ನಾಗರಿಕತೆಯ ರಂಗಗಳಲ್ಲಿ ಅವರನ್ನು ಎಳೆತರುವುದು ಇತ್ಯಾದಿ.

80. ಜನರು ಯಾವ ವಿಷಯದಲ್ಲಿ ಧರ್ಮ ವಿಧಿ ಕೇಳುತ್ತಿದ್ದಾರೆಂದು ಸ್ಪಷ್ಟೀಕರಿಸಲಾಗಿಲ್ಲ. ಆದರೆ 128ರಿಂದ 130ರ ತನಕದ ಸೂಕ್ತಗಳಲ್ಲಿ ಪ್ರಸ್ತಾಪಿಸಲಾಗಿರುವ ಧರ್ಮವಿಧಿಯನ್ನು ಗಮನಿಸಿದರೆ ಪ್ರಶ್ನೆಯ ಇಂಗಿತ ಅರ್ಥವಾಗುತ್ತದೆ.

81. 'ತರ್‌ಗಬೂನ ಅನ್ ತಂಕಿಹೂಹುನ್ನ' ಎಂದರೆ 'ನೀವು ಅವರನ್ನು ವಿವಾಹವಾಗುವ ಆಸಕ್ತಿಯನ್ನು ಹೊಂದಿರುವಿರಿ' ಎಂದೂ ಆಗಬಹುದು. ಇಲ್ಲವೇ 'ನೀವು ಅವರನ್ನು ವಿವಾಹವಾಗಲಿಚ್ಛಿಸುವುದಿಲ್ಲ' ಎಂದೂ ಆಗಬಹುದು.

وَمَا تَفْعَلُوا مِنْ خَيْرٍ فَإِنَّ اللَّهَ كَانَ بِهِ عَلِيمًا ﴿١٢٧﴾

ಆಜ್ಞೆಗಳನ್ನು ಮತ್ತು ದುರ್ಬಲ ಮಕ್ಕಳ ಬಗೆಗಿರುವ ಆಜ್ಞೆಗಳನ್ನು (ನೆನಪಿಗೆ ತಂದುಕೊಡಲಾಗುತ್ತದೆ.) ಅನಾಥರೊಂದಿಗೆ ನ್ಯಾಯದಿಂದ ವರ್ತಿಸಬೇಕೆಂದು ಅಲ್ಲಾಹನು ನಿಮಗೆ ಬೋಧಿಸುತ್ತಾನೆ. ನೀವು ಮಾಡುವ ಒಳಿತುಗಳು ಅಲ್ಲಾಹನ ತಿಳುವಳಿಕೆಗೆ ಬಾರದಿರಲಾರವು."

وَإِنِ امْرَأَةٌ خَافَتْ مِنْ بَعْلِهَا نُشُوزًا أَوْ إِعْرَاضًا فَلَا جُنَاحَ عَلَيْهِمَا أَنْ يُصْلِحَا بَيْنَهُمَا صُلْحًا ۚ وَالصُّلْحُ خَيْرٌ ۗ وَأُحْضِرَتِ الْأَنْفُسُ الشُّحَّ ۚ وَإِنْ تُحْسِنُوا وَتَتَّقُوا فَإِنَّ اللَّهَ كَانَ بِمَا تَعْمَلُونَ خَبِيرًا ﴿١٢٨﴾

128. ಓರ್ವ ಸ್ತ್ರೀಗೆ[82] ತನ್ನ ಪತಿಯಿಂದ ದುರ್ವರ್ತನೆ ಅಥವಾ ನಿರ್ಲಕ್ಷ್ಯದ ಭಯವಿದ್ದರೆ, ಪತಿ ಮತ್ತು ಪತ್ನಿ (ಕೆಲವು ಹಕ್ಕು ಬಾಧ್ಯತೆಗಳ ತಾರತಮ್ಯಗಳೊಂದಿಗೆ) ಪರಸ್ಪರ ಸಂಧಾನ ಮಾಡಿಕೊಳ್ಳುವುದರಲ್ಲಿ ದೋಷವಿಲ್ಲ. ಹೇಗಿದ್ದರೂ ಸಂಧಾನವೇ ಅತ್ಯುತ್ತಮ.[83] ಹೃದಯಗಳು ಸಂಕುಚಿತ ಭಾವದ ಕಡೆಗೆ ಬೇಗನೆ ವಾಲುತ್ತವೆ. ಆದರೆ ನೀವು ಸೌಜನ್ಯ ಹಾಗೂ ದೇವಭಯದೊಂದಿಗೆ ವರ್ತಿಸಿದರೆ, ಅಲ್ಲಾಹನು ನಿಮ್ಮ ಈ ವರ್ತನೆಯ ಬಗ್ಗೆ ಬೋಧರಹಿತನಾಗಿರಲಾರನೆಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ.

وَلَنْ تَسْتَطِيعُوا أَنْ تَعْدِلُوا بَيْنَ النِّسَاءِ وَلَوْ حَرَصْتُمْ ۖ فَلَا تَمِيلُوا كُلَّ الْمَيْلِ فَتَذَرُوهَا كَالْمُعَلَّقَةِ ۚ وَإِنْ تُصْلِحُوا وَتَتَّقُوا فَإِنَّ اللَّهَ كَانَ غَفُورًا رَحِيمًا ﴿١٢٩﴾

129. ಪತ್ನಿಯರ ನಡುವೆ ಸರ್ವಸಂಪೂರ್ಣ ನ್ಯಾಯ ಪಾಲಿಸಲು ನಿಮ್ಮಿಂದ ಸಾಧ್ಯವಾಗದು. ನೀವು ಇಚ್ಛಿಸಿದರೂ ಅದು ನಿಮ್ಮಿಂದ ಸಾಧ್ಯವಾಗದು. ಆದುದರಿಂದ ಒಬ್ಬ ಪತ್ನಿಯು ಅತ್ತ ಜೋತಾಡಿಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೇ ವಾಲಿಬಿಡಬೇಡಿರಿ.[84] (ದೇವ ಶಾಸನೋದ್ದೇಶವನ್ನು ಪೂರೈಸಲು ಇಷ್ಟು ಸಾಕು.) ನೀವು ನಿಮ್ಮ ವರ್ತನೆಯನ್ನು ಸರಿಯಾಗಿಟ್ಟುಕೊಂಡರೆ ಮತ್ತು ಅಲ್ಲಾಹನಿಗೆ ಭಯಪಟ್ಟುಕೊಂಡಿದ್ದರೆ ಅಲ್ಲಾಹನು ಕ್ಷಮಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.

82. ಇಲ್ಲಿಂದ ಜನರ ಪ್ರಶ್ನೆಗಳಿಗೆ ಉತ್ತರದ ಸರಣಿ ಆರಂಭವಾಗುತ್ತದೆ. ಒಂದಕ್ಕಿಂತ ಹೆಚ್ಚು ಪತ್ನಿಯರಿರುವಾಗ, ಒಬ್ಬಾಕೆಯು ಸ್ತ್ರೀ-ಪುರುಷ ಸಂಪರ್ಕ ಸಾಧ್ಯವಿಲ್ಲದಂತಹ ಸ್ಥಾಯಿರೋಗಕ್ಕೆ ಗುರಿಯಾಗಿದ್ದರೆ ನ್ಯಾಯಪಾಲಿಸುವ ಆದೇಶವನ್ನು ಕೃತಿಗಿಳಿಸುವುದು ಹೇಗೆ ಎಂಬುದು ಪ್ರಶ್ನೆ. ಅಂತಹ ಸಂದರ್ಭದಲ್ಲೂ ಇಬ್ಬರೊಡನೆಯೂ ಒಂದೇ ರೀತಿಯ ಸಾಮೀಪ್ಯ ಇಟ್ಟುಕೊಳ್ಳಲು ಸಾಧ್ಯವೇ? ಏಕ ರೀತಿಯ ಪ್ರೀತಿಯನ್ನು ಹೊಂದಿರಲು ಸಾಧ್ಯವೇ? ದೈಹಿಕ ಸಂಪರ್ಕದಲ್ಲೂ ಸಮಾನತೆ ಪಾಲಿಸಬಹುದೇ? ಒಂದು ವೇಳೆ ಈ ರೀತಿ ನ್ಯಾಯಪಾಲಿಸಲು ಸಾಧ್ಯವಿಲ್ಲವೆಂದಾದರೆ ಎರಡನೆಯ ಪತ್ನಿಯನ್ನು ವಿವಾಹವಾಗಲು ಮೊದಲನೆಯ ಪತ್ನಿಯನ್ನು ಬಿಟ್ಟು ಬಿಡಬೇಕೆ? ಪತ್ನಿ ಸ್ವತಃ ವಿವಾಹ ವಿಚ್ಛೇದನವನ್ನು ಬಯಸದ ಸಂದರ್ಭದಲ್ಲಿ ಸಂಸರ್ಗಕ್ಕೆ ಅಯೋಗ್ಯಳಾಗಿರುವ ಆಕೆ ತನ್ನ ಕೆಲವು ಹಕ್ಕುಗಳಿಂದ ಸ್ವತಃ ಮುಕ್ತಳಾಗಿ ವಿವಾಹ ವಿಚ್ಛೇದನ ಮಾಡದಿರುವಂತೆ ಪತಿಯನ್ನು ಒಲಿಸಿಕೊಳ್ಳಬಹುದೇ? ಹೀಗೆ ಮಾಡುವುದು ನ್ಯಾಯಪಾಲನೆಯ ಶರತ್ತಿಗೆ ವಿರುದ್ಧವಾಗುವುದಿಲ್ಲವೇ? ಎಂಬುದೇ ಆ ಪ್ರಶ್ನೆಗಳು.

83. ಅರ್ಥಾತ್- ವಿವಾಹ ವಿಚ್ಛೇದನ ಮತ್ತು ಪ್ರತ್ಯೇಕತೆಗಿಂತ, ತಾನು ಪ್ರಾಯದ ಒಂದು ಅವಧಿಯನ್ನು ಕಳೆದಿರುವ ಪತಿಯೊಂದಿಗೆ ಸಂಧಾನ ಮಾಡಿಕೊಂಡು ಜತೆಗಿರುವುದೇ ವಾಸಿ.

84. ನ್ಯಾಯಪಾಲನೆಯ ಶರತ್ತಿನೊಂದಿಗೆ ಒಂದೆಡೆ ಪವಿತ್ರ ಕುರ್‌ಆನ್ ಬಹುಪತ್ನಿತ್ವಕ್ಕೆ ಅನುಮತಿ ನೀಡಿದರೆ ನ್ಯಾಯಪಾಲನೆ ಸಾಧ್ಯವಿಲ್ಲವೆನ್ನುವ ಮೂಲಕ ಈ ಅನುಮತಿಯನ್ನು ಮೊಟಕುಗೊಳಿಸುತ್ತದೆ ಎಂಬ ಅರ್ಥವನ್ನು ಕೆಲವರು ಈ ಸೂಕ್ತಕ್ಕೆ ಕಲ್ಪಿಸುತ್ತಾರೆ. ಆದರೆ ಈ ರೀತಿಯ ಅರ್ಥ ಕಲ್ಪಿಸಲು ಈ ಸೂಕ್ತದಲ್ಲಿ ಸರ್ವಥಾ ಅವಕಾಶವಿಲ್ಲ. "ಪತ್ನಿಯರ ನಡುವೆ ಸರ್ವ ಸಂಪೂರ್ಣ ನ್ಯಾಯಪಾಲಿಸಲು ನಿಮ್ಮಿಂದ ಸಾಧ್ಯವಾಗದು" ಎಂದಷ್ಟೇ ಹೇಳಲಾಗಿದ್ದರೆ ಈ ರೀತಿ ಅರ್ಥೈಸಬಹುದಾಗಿತ್ತು. ಆದರೆ "ಒಂದು ಪತ್ನಿಯ ಕಡೆಗೆ ನೀವು ಸಂಪೂರ್ಣ ವಾಲದಿರಿ" ಎಂದು ಹೇಳುವ ಮೂಲಕ ಐರೋಪ್ಯ ಕ್ರೈಸ್ತರ ಅಂಧಾನುಕರಣೆ ಮಾಡುವವರ ಇಂತಹ ವಾದಕ್ಕೆ ಇಲ್ಲಿ ಅವಕಾಶವುಳಿಸಲಾಗಿಲ್ಲ.

وَإِنْ يَتَفَرَّقَا يُغْنِ اللّٰهُ كُلًّا مِّنْ سَعَتِهٖ ۚ وَكَانَ اللّٰهُ وَاسِعًا حَكِيْمًا ﴿١٣٠﴾

130. ಆದರೆ ದಂಪತಿಗಳು ಪರಸ್ಪರ ಬೇರ್ಪಟ್ಟೇ ಬಿಟ್ಟರೆ ಅಲ್ಲಾಹ್ ತನ್ನ ಅಪಾರ ಮಹಿಮೆಯಿಂದ ಒಬ್ಬರನ್ನು ಇನ್ನೊಬ್ಬರಿಂದ ನಿರಪೇಕ್ಷರನ್ನಾಗಿ ಮಾಡಿಬಿಡುವನು. ಅಲ್ಲಾಹನ ಆಶ್ರಯವು ಅತಿ ವಿಶಾಲವಾಗಿದೆ ಮತ್ತು ಅವನು ಮಹಾಧೀಮಂತನೂ ಆಗಿರುತ್ತಾನೆ.

وَلِلّٰهِ مَا فِي السَّمٰوٰتِ وَمَا فِي الْاَرْضِ ۗ وَلَقَدْ وَصَّيْنَا الَّذِيْنَ اُوْتُوا الْكِتٰبَ مِنْ قَبْلِكُمْ وَاِيَّاكُمْ اَنِ اتَّقُوا اللّٰهَ ۗ وَاِنْ تَكْفُرُوْا فَاِنَّ لِلّٰهِ مَا فِي السَّمٰوٰتِ وَمَا فِي الْاَرْضِ ۗ وَكَانَ اللّٰهُ غَنِيًّا حَمِيْدًا ﴿١٣١﴾

131. ಭೂಮಿ-ಆಕಾಶಗಳಲ್ಲಿ ಇರುವುದೆಲ್ಲವೂ ಅಲ್ಲಾಹನ ಸೊತ್ತು. ನಾವು ನಿಮಗಿಂತ ಮುಂಚೆ ಗ್ರಂಥ ನೀಡಿದವರಿಗೆ ಕೊಟ್ಟ ಬೋಧನೆಯೂ ಈಗ ನಿಮಗೆ ಕೊಡುತ್ತಿರುವ ಬೋಧನೆಯೂ ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ ಎಂಬುದೇ ಆಗಿರುತ್ತದೆ. ಆದರೆ ನೀವು ನಿರಾಕರಿಸುತ್ತೀರಾದರೆ ನಿರಾಕರಿಸಿರಿ. ಭೂಮ್ಯಾಕಾಶಗಳ ಸಕಲ ವಸ್ತುಗಳ ಒಡೆಯನು ಅಲ್ಲಾಹನೇ ಆಗಿರುತ್ತಾನೆ ಮತ್ತು ಅವನು ನಿರಪೇಕ್ಷನು; ಸ್ವಯಂ ಸ್ತುತ್ಯರ್ಹನು.

وَلِلّٰهِ مَا فِي السَّمٰوٰتِ وَمَا فِي الْاَرْضِ ۗ وَكَفٰى بِاللّٰهِ وَكِيْلًا ﴿١٣٢﴾

132. ಅಹುದು; ಆಕಾಶಗಳಲ್ಲಿರುವ ಮತ್ತು ಭೂಮಿಯಲ್ಲಿರುವ ಸಮಸ್ತ ವಸ್ತುಗಳ ಒಡೆಯ ಅಲ್ಲಾಹನೇ, ಕಾರ್ಯ ನಿರ್ವಹಣೆಗೆ ಅವನೇ ಸಾಕು.

اِنْ يَّشَاْ يُذْهِبْكُمْ اَيُّهَا النَّاسُ وَيَاْتِ بِاٰخَرِيْنَ ۗ وَكَانَ اللّٰهُ عَلٰى ذٰلِكَ قَدِيْرًا ﴿١٣٣﴾

133. ಆತನಿಚ್ಛಿಸಿದರೆ ನಿಮ್ಮನ್ನು ಸರಿಸಿ ನಿಮ್ಮ ಸ್ಥಾನದಲ್ಲಿ ಇತರರನ್ನು ತರುವನು. ಅವನು ಇದಕ್ಕೆ ಸಂಪೂರ್ಣ ಸಾಮರ್ಥ್ಯ ಹೊಂದಿರುತ್ತಾನೆ.

مَنْ كَانَ يُرِيْدُ ثَوَابَ الدُّنْيَا فَعِنْدَ اللّٰهِ ثَوَابُ الدُّنْيَا وَالْاٰخِرَةِ ۗ وَكَانَ اللّٰهُ سَمِيْعًا بَصِيْرًا ﴿١٣٤﴾

134. ಕೇವಲ ಐಹಿಕ ಪ್ರತಿಫಲವನ್ನು ಬಯಸುವಾತನು- ಅಲ್ಲಾಹನ ಬಳಿ ಐಹಿಕ ಪ್ರತಿಫಲವೂ ಇದೆ, ಪಾರಲೌಕಿಕ ಪ್ರತಿಫಲವೂ ಇದೆ ಎಂಬುದನ್ನು ತಿಳಿದಿರಬೇಕು. ಅಲ್ಲಾಹನು ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.

١٩ ع ١٤

يٰۤاَيُّهَا الَّذِيْنَ اٰمَنُوْا كُوْنُوْا قَوّٰمِيْنَ بِالْقِسْطِ شُهَدَآءَ لِلّٰهِ وَلَوْ عَلٰۤى اَنْفُسِكُمْ اَوِ الْوَالِدَيْنِ وَالْاَقْرَبِيْنَ ۚ اِنْ يَّكُنْ غَنِيًّا اَوْ فَقِيْرًا فَاللّٰهُ اَوْلٰى بِهِمَا ۫ فَلَا تَتَّبِعُوا الْهَوٰۤى اَنْ تَعْدِلُوْا ۚ وَاِنْ تَلْوٗۤا اَوْ تُعْرِضُوْا فَاِنَّ اللّٰهَ

135. ಓ ಸತ್ಯವಿಶ್ವಾಸಿಗಳೇ, ನೀವು ನ್ಯಾಯದ ಧ್ವಜವಾಹಕರೂ ಅಲ್ಲಾಹನಿಗಾಗಿ ಸಾಕ್ಷ್ಯವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ. ಕಕ್ಷಿಯು ಧನಿಕನಿರಲಿ ಅಥವಾ ಬಡವನಿರಲಿ ನಿಮಗಿಂತ ಹೆಚ್ಚಾಗಿ ಅಲ್ಲಾಹನು ಅವರ ಹಿತಚಿಂತಕನಾಗಿರುತ್ತಾನೆ. ಆದುದರಿಂದ

ನಿಮ್ಮ ಚಿತ್ತಾಸಕ್ತಿಯ ಅನುಸರಣೆಯಲ್ಲಿ ನ್ಯಾಯ ಪರಿಪಾಲನೆ ಯಿಂದ ಸರಿಯಬೇಡಿರಿ. ನೀವು ಗೂಢಾರ್ಥದ ಮಾತುಗಳನ್ನಾಡಿದರೆ ಅಥವಾ ಸತ್ಯದಿಂದ ನುಣುಚಿಕೊಂಡರೆ, ನಿಶ್ಚಯವಾಗಿಯೂ ನೀವು ಮಾಡುತ್ತಿರುವ ಕರ್ಮಗಳ ಅರಿವು ಅಲ್ಲಾಹನಿಗಿದೆ ಯೆಂಬುದು ಚೆನ್ನಾಗಿ ತಿಳಿದಿರಲಿ.

كَانَ بِمَا تَعْمَلُونَ خَبِيرًا ﴿١٣٥﴾

136. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಮೇಲೆ, ಅವನ ಸಂದೇಶವಾಹಕರ ಮೇಲೆ, ಅವನು ತನ್ನ ಸಂದೇಶವಾಹಕರಿಗೆ ಅವತೀರ್ಣಗೊಳಿಸಿದ ಗ್ರಂಥದ ಮೇಲೆ ಮತ್ತು ಇದಕ್ಕಿಂತ ಮುಂಚೆ ಅವನು ಅವತೀರ್ಣ ಗೊಳಿಸಿದ್ದ ಪ್ರತಿಯೊಂದು ಗ್ರಂಥದ ಮೇಲೆ ವಿಶ್ವಾಸವಿಡಿರಿ.[85] ಅಲ್ಲಾಹನನ್ನೂ ಅವನ ದೇವಚರರನ್ನೂ ಅವನ ಗ್ರಂಥಗಳನ್ನೂ ಅವನ ಸಂದೇಶವಾಹಕರನ್ನೂ ಅಂತಿಮ ದಿನವನ್ನೂ ನಿರಾಕರಿಸಿ ದವನು[86] ಪಥಭ್ರಷ್ಟನಾಗಿ ಅಲೆದಾಡುತ್ತ ಬಹುದೂರ ಹೋಗಿ ಬಿಟ್ಟನು.

يَا أَيُّهَا الَّذِينَ آمَنُوا آمِنُوا بِاللَّهِ وَرَسُولِهِ
وَالْكِتَابِ الَّذِي نَزَّلَ عَلَىٰ رَسُولِهِ وَالْكِتَابِ
الَّذِي أَنْزَلَ مِنْ قَبْلُ ۚ وَمَنْ يَكْفُرْ
بِاللَّهِ وَمَلَائِكَتِهِ وَكُتُبِهِ وَرُسُلِهِ
وَالْيَوْمِ الْآخِرِ فَقَدْ ضَلَّ ضَلَالًا بَعِيدًا ﴿١٣٦﴾

137 ಸತ್ಯವಿಶ್ವಾಸವನ್ನು ಸ್ವೀಕರಿಸಿಕೊಂಡ ಬಳಿಕ, ನಿರಾಕರಿಸಿ, ಪುನಃ ವಿಶ್ವಾಸವಿಟ್ಟು, ಪುನಃ ನಿರಾಕರಿಸಿ, ತಮ್ಮ ನಿರಾಕರಣೆಯಲ್ಲಿ ಮುಂದೆ ಮುಂದೆ ಸಾಗಿದವರನ್ನು ಅಲ್ಲಾಹನು ಎಂದೆಂದಿಗೂ ಕ್ಷಮಿಸಲಾರನು ಮತ್ತು ಅವರಿಗೆ ಸನ್ಮಾರ್ಗದರ್ಶನ ಮಾಡಿಸಲಾರನು.

إِنَّ الَّذِينَ آمَنُوا ثُمَّ كَفَرُوا ثُمَّ آمَنُوا ثُمَّ
كَفَرُوا ثُمَّ ازْدَادُوا كُفْرًا لَمْ يَكُنِ اللَّهُ
لِيَغْفِرَ لَهُمْ وَلَا لِيَهْدِيَهُمْ سَبِيلًا ﴿١٣٧﴾

138-139.ಸತ್ಯವಿಶ್ವಾಸಿಗಳನ್ನು ಬಿಟ್ಟು ಸತ್ಯನಿಷೇಧಿಗಳನ್ನು ಮಿತ್ರರನ್ನಾಗಿ ಮಾಡಿಕೊಂಡ ಕಪಟವಿಶ್ವಾಸಿಗಳಿಗೆ ವೇದನಾಯುಕ್ತ ಶಿಕ್ಷೆ ಸಿದ್ಧವಿದೆಯೆಂಬ ಸುವಾರ್ತೆಯನ್ನು ಅರುಹಿ ಬಿಡಿರಿ. ಇವರೇನು

بَشِّرِ الْمُنَافِقِينَ بِأَنَّ لَهُمْ عَذَابًا أَلِيمًا ﴿١٣٨﴾
الَّذِينَ يَتَّخِذُونَ الْكَافِرِينَ أَوْلِيَاءَ مِنْ
دُونِ الْمُؤْمِنِينَ ۚ أَيَبْتَغُونَ عِنْدَهُمُ الْعِزَّةَ

85. ವಿಶ್ವಾಸಿಗಳೊಂದಿಗೆ ವಿಶ್ವಾಸವಿಡಿರಿ ಎಂದು ಹೇಳುವುದು ಮೇಲ್ನೋಟಕ್ಕೆ ವಿಚಿತ್ರವೆನಿಸುತ್ತದೆ. ವಾಸ್ತವದಲ್ಲಿ ಇಲ್ಲಿ "ಈಮಾನ್" (ಸತ್ಯವಿಶ್ವಾಸ) ಎಂಬ ಪದ ಎರಡು ವಿಭಿನ್ನ ಅರ್ಥಗಳಲ್ಲಿ ಪ್ರಯೋಗವಾಗಿದೆ. ಸತ್ಯವಿಶ್ವಾಸ ಸ್ವೀಕರಿಸುವುದರ ಒಂದು ಅರ್ಥ ನಿರಾಕರಣೆಯ ಬದಲು ಅನುಸರಣೆಯ ಮಾರ್ಗವನ್ನು ನೆಚ್ಚಿಕೊಳ್ಳುವುದಾಗಿದೆ. ಅವಿಶ್ವಾಸಿಗಳಿಂದ ಪ್ರತ್ಯೇಕಗೊಂಡು ವಿಶ್ವಾಸಿಗಳ ಸಾಲಿಗೆ ಸೇರುವುದಾಗಿದೆ. ಅದರ ಇನ್ನೊಂದು ಅರ್ಥ ಯಾವುದರ ಮೇಲೆ ಅವನು ವಿಶ್ವಾಸವಿರಿಸಿದ್ದಾನೋ ಅದನ್ನು ಮನಃಪೂರ್ವಕವಾಗಿ ಸಂಪೂರ್ಣ ಶ್ರದ್ಧೆ ಮತ್ತು ಪ್ರಾಮಾಣಿಕತೆಗಳೊಂದಿಗೆ ಒಪ್ಪಿಕೊಳ್ಳುವುದಾಗಿದೆ. ಈ ಸೂಕ್ತದ ಅಭಿಸಂಬೋಧನೆ ಮೊದಲ ಅರ್ಥದಲ್ಲಿ ಬರುವ ಸಮಸ್ತ 'ಸತ್ಯವಿಶ್ವಾಸಿ'ಗಳ ಕಡೆಗಿದೆ. ಎರಡನೆಯ ಅರ್ಥದಂತೆ ಅವರೆಲ್ಲರೂ ನೈಜ ವಿಶ್ವಾಸಿಗಳಾಗಬೇಕೆಂಬ ಬೇಡಿಕೆಯನ್ನು ಅವರ ಮುಂದಿರಿಸಲಾಗಿದೆ.

86. 'ನಿರಾಕರಣೆ'ಗೂ ಎರಡು ಅರ್ಥಗಳಿವೆ. ಮೊದಲನೆಯದಾಗಿ ವ್ಯಕ್ತಿ ಸ್ಪಷ್ಟವಾಗಿ ನಿರಾಕರಿಸಿ ಬಿಡುವುದು. ಎರಡನೆಯದಾಗಿ ನಾಲಗೆಯಿಂದ ಸಮ್ಮತಿಸಿದರೂ ಮನಃಪೂರ್ವಕ ಸಮ್ಮತಿಸದಿರುವುದು ಅಥವಾ ತನ್ನ ಧೋರಣೆಯ ಮೂಲಕ ತಾನು ಯಾವುದನ್ನು ನಂಬುವ ಬಗ್ಗೆ ವಾದಿಸಿಕೊಳ್ಳುತ್ತಿರುವನೋ ಅದನ್ನು ವಸ್ತುತಃ ನಂಬುತ್ತಿಲ್ಲವೆಂದು ಸಾಬೀತು ಪಡಿಸುವುದು.

فَإِنَّ الْعِزَّةَ لِلَّهِ جَمِيعًا ﴿١٣٩﴾

ಪ್ರತಿಷ್ಠೆಯನ್ನರಸುತ್ತ ಅವರ ಬಳಿಗೆ ಹೋಗುತ್ತಿರುವರೇ? ವಸ್ತುತಃ ಪ್ರತಿಷ್ಠೆಯು ಸರ್ವಸಂಪೂರ್ಣವಾಗಿ ಅಲ್ಲಾಹನಿಗೇ ಆಗಿರುತ್ತದೆ.

وَقَدْ نَزَّلَ عَلَيْكُمْ فِي الْكِتَابِ أَنْ إِذَا سَمِعْتُمْ آيَاتِ اللَّهِ يُكْفَرُ بِهَا وَيُسْتَهْزَأُ بِهَا فَلَا تَقْعُدُوا مَعَهُمْ حَتَّىٰ يَخُوضُوا فِي حَدِيثٍ غَيْرِهِ ۚ إِنَّكُمْ إِذًا مِّثْلُهُمْ ۗ إِنَّ اللَّهَ جَامِعُ الْمُنَافِقِينَ وَالْكَافِرِينَ فِي جَهَنَّمَ جَمِيعًا ﴿١٤٠﴾

140. "ಅಲ್ಲಾಹನ ವಚನಗಳ ವಿರುದ್ಧ ನಿಷೇಧ ಮಾತುಗಳನ್ನಾಡುತ್ತಿರುವುದನ್ನೂ ಅವು ಅಣಕಿಸಲ್ಪಡುತ್ತಿರುವುದನ್ನೂ ನೀವು ಕೇಳಿದಾಗ, ಅವರು ಬೇರೆ ಮಾತನ್ನಾರಂಭಿಸುವವರೆಗೂ ಅಲ್ಲಿ ಕುಳಿತು ಕೊಳ್ಳಬೇಡಿರಿ. ಅನ್ಯಥಾ ನೀವೂ ಅವರಂತೆಯೇ ಆಗುತ್ತೀರಿ" ಎಂದು ಅಲ್ಲಾಹನು ನಿಮಗೆ ಈ ಗ್ರಂಥದಲ್ಲಿ ಮೊದಲೇ ಅಪ್ಪಣೆ ಕೊಟ್ಟಿದ್ದಾನೆ. ಅಲ್ಲಾಹ್ ಕಪಟ ವಿಶ್ವಾಸಿಗಳನ್ನೂ ಸತ್ಯನಿಷೇಧಿಗಳನ್ನೂ ನರಕದಲ್ಲಿ ಒಟ್ಟುಗೂಡಿಸಲಿರುವನೆಂಬುದನ್ನು ನಿಸ್ಸಂದೇಹವಾಗಿ ತಿಳಿದುಕೊಳ್ಳಿರಿ.

الَّذِينَ يَتَرَبَّصُونَ بِكُمْ فَإِن كَانَ لَكُمْ فَتْحٌ مِّنَ اللَّهِ قَالُوا أَلَمْ نَكُن مَّعَكُمْ وَإِن كَانَ لِلْكَافِرِينَ نَصِيبٌ قَالُوا أَلَمْ نَسْتَحْوِذْ عَلَيْكُمْ وَنَمْنَعْكُم مِّنَ الْمُؤْمِنِينَ ۚ فَاللَّهُ يَحْكُمُ بَيْنَكُمْ يَوْمَ الْقِيَامَةِ ۗ وَلَن يَجْعَلَ اللَّهُ لِلْكَافِرِينَ عَلَى الْمُؤْمِنِينَ سَبِيلًا ﴿١٤١﴾

141. ಈ ಕಪಟವಿಶ್ವಾಸಿಗಳು ನಿಮ್ಮ ವಿಷಯದಲ್ಲಿ (ನಿಮ್ಮ ಸ್ಥಿತಿ ಏನಾಗುತ್ತಿದೆಯೆಂಬುದನ್ನು) ಕಾದು ನೋಡುತ್ತಿರುತ್ತಾರೆ. ಅಲ್ಲಾಹನ ಕಡೆಯಿಂದ ನಿಮಗೆ ವಿಜಯ ಪ್ರಾಪ್ತಿಯಾದರೆ ಇವರು ನಿಮ್ಮ ಬಳಿಗೆ ಬಂದು, "ನಾವೂ ನಿಮ್ಮೊಂದಿಗೆ ಇರಲಿಲ್ಲವೇ?" ಎನ್ನುವರು. ಸತ್ಯನಿಷೇಧಿಗಳಿಗೆ ಮೇಲುಗೈಯಾದರೆ, ಅವರೊಡನೆ, "ನಿಮ್ಮ ವಿರುದ್ಧ ಹೋರಾಡಲು ಶಕ್ತರಿದ್ದೂ ನಾವು ನಿಮ್ಮನ್ನು ಮುಸ್ಲಿಮರಿಂದ ರಕ್ಷಿಸಲಿಲ್ಲವೇ?" ಎನ್ನುವರು. ಆದುದರಿಂದ ನಿಮ್ಮ ಮತ್ತು ಅವರ ಪ್ರಕರಣದ ತೀರ್ಮಾನವನ್ನು ಅಲ್ಲಾಹನು ಪುನರುತ್ಥಾನ ದಿನದಂದು ಮಾಡುವನು. (ಆ ತೀರ್ಮಾನದಲ್ಲಿ) ಅಲ್ಲಾಹನು ಸತ್ಯವಿಶ್ವಾಸಿಗಳಿಗೆದುರಾಗಿ ಸತ್ಯನಿಷೇಧಿಗಳಿಗೆ ವಿಜಯದ ಯಾವ ದಾರಿಯನ್ನೂ ಇರಿಸಿರುವುದೇ ಇಲ್ಲ.

إِنَّ الْمُنَافِقِينَ يُخَادِعُونَ اللَّهَ وَهُوَ خَادِعُهُمْ وَإِذَا قَامُوا إِلَى الصَّلَاةِ قَامُوا كُسَالَىٰ يُرَاءُونَ النَّاسَ وَلَا يَذْكُرُونَ اللَّهَ إِلَّا قَلِيلًا ﴿١٤٢﴾

142. ಈ ಕಪಟವಿಶ್ವಾಸಿಗಳು ಅಲ್ಲಾಹನೊಂದಿಗೆ ವಂಚನೆ ಮಾಡುತ್ತಿದ್ದಾರೆ. ವಸ್ತುತಃ ಅಲ್ಲಾಹನೇ ಅವರನ್ನು ವಂಚನೆಯಲ್ಲಿ ಸಿಲುಕಿಸಿ ಬಿಟ್ಟಿರುತ್ತಾನೆ. ಇವರು ನಮಾಝ್ ಮಾಡಲು ಅರೆ ಮನಸ್ಸಿನಿಂದ, ಕೇವಲ ಜನರಿಗೆ ತೋರಿಸಲಿಕ್ಕಾಗಿ ಏಳುತ್ತಾರೆ. ಇವರು ಅಲ್ಲಾಹನನ್ನು ಅತ್ಯಲ್ಪವೇ ಸ್ಮರಿಸುತ್ತಾರೆ.

مُّذَبْذَبِينَ بَيْنَ ذَٰلِكَ لَا إِلَىٰ هَٰؤُلَاءِ وَلَا إِلَىٰ هَٰؤُلَاءِ ۚ وَمَن يُضْلِلِ اللَّهُ فَلَن تَجِدَ لَهُ سَبِيلًا ﴿١٤٣﴾

143. ಇವರು ಸತ್ಯನಿಷೇಧ ಮತ್ತು ಸತ್ಯವಿಶ್ವಾಸಗಳ ನಡುವೆ ಓಲಾಡುತ್ತಿರುತ್ತಾರೆ. ಸಂಪೂರ್ಣವಾಗಿ ಇತ್ತಲೂ ಇಲ್ಲ; ಸಂಪೂರ್ಣವಾಗಿ ಅತ್ತಲೂ ಇಲ್ಲ. ಅಲ್ಲಾಹನೇ ದಾರಿ ತಪ್ಪಿಸಿದಾತನಿಗೆ ನೀವು ಯಾವ ದಾರಿಯನ್ನೂ ಕಾಣಲಾರಿರಿ.[87]

87. ಅರ್ಥಾತ್- ಯಾರು ಅಲ್ಲಾಹನ ವಾಣಿ ಮತ್ತು ಪ್ರವಾದಿಚರ್ಯೆಯ ಮೂಲಕ ಮಾರ್ಗದರ್ಶನ ಪಡೆಯುವುದಿಲ್ಲವೋ, ಸತ್ಯದಿಂದ

144. ಓ ಸತ್ಯವಿಶ್ವಾಸಿಗಳೇ, ನೀವು ಸತ್ಯವಿಶ್ವಾಸಿಗಳನ್ನು ಬಿಟ್ಟು ಸತ್ಯ ನಿಷೇಧಿಗಳನ್ನು ನಿಮ್ಮ ಆಪ್ತ ಮಿತ್ರರನ್ನಾಗಿ ಮಾಡಿಕೊಳ್ಳಬೇಡಿರಿ. ನೀವು ನಿಮ್ಮ ವಿರುದ್ಧ ಅಲ್ಲಾಹನಿಗೆ ಸುವ್ಯಕ್ತ ಆಧಾರ ಕೊಟ್ಟು ಬಿಡಬೇಕೆಂದಿಚ್ಛಿಸುತ್ತೀರಾ?

يَا أَيُّهَا الَّذِينَ آمَنُوا لَا تَتَّخِذُوا الْكَافِرِينَ أَوْلِيَاءَ مِنْ دُونِ الْمُؤْمِنِينَ ۚ أَتُرِيدُونَ أَنْ تَجْعَلُوا لِلَّهِ عَلَيْكُمْ سُلْطَانًا مُبِينًا ﴿١٤٤﴾

145. ಕಪಟವಿಶ್ವಾಸಿಗಳು ನರಕದ ಅತ್ಯಂತ ತಳಭಾಗಕ್ಕೆ ಹೋಗುವರೆಂಬು ದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ. ಅವರ ಸಹಾಯಕರಾಗಿ ನೀವು ಯಾರನ್ನೂ ಕಾಣಲಾರಿರಿ.

إِنَّ الْمُنَافِقِينَ فِي الدَّرْكِ الْأَسْفَلِ مِنَ النَّارِ وَلَنْ تَجِدَ لَهُمْ نَصِيرًا ﴿١٤٥﴾

146. ಆದರೆ ಅವರ ಪೈಕಿ ಪಶ್ಚಾತ್ತಾಪ ಪಟ್ಟು ಮರಳಿ ತಮ್ಮ ಕರ್ಮ ವಿಧಾನವನ್ನು ಸರಿಪಡಿಸಿಕೊಂಡು ಅಲ್ಲಾಹನಿಗೆ ನಿಷ್ಠೆ ತೋರಿ ತಮ್ಮ ಧರ್ಮವನ್ನು ಅಲ್ಲಾಹನಿಗೇ ಮೀಸಲಾಗಿರಿಸಿಕೊಂಡವರು ಸತ್ಯವಿಶ್ವಾಸಿಗಳೊಂದಿಗೆ ಇರುತ್ತಾರೆ. ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಅತ್ಯಂತ ಹಿರಿದಾದ ಪ್ರತಿಫಲ ನೀಡಿಯೇ ತೀರುವನು.

إِلَّا الَّذِينَ تَابُوا وَأَصْلَحُوا وَاعْتَصَمُوا بِاللَّهِ وَأَخْلَصُوا دِينَهُمْ لِلَّهِ فَأُولَٰئِكَ مَعَ الْمُؤْمِنِينَ ۖ وَسَوْفَ يُؤْتِ اللَّهُ الْمُؤْمِنِينَ أَجْرًا عَظِيمًا ﴿١٤٦﴾

147. ನೀವು ಕೃತಜ್ಞ ದಾಸರಾಗಿದ್ದು ಸತ್ಯವಿಶ್ವಾಸ ಮಾರ್ಗದಲ್ಲಿ ನಡೆಯುತ್ತಿದ್ದರೆ, ಅಲ್ಲಾಹನು ನಿಮ್ಮನ್ನು ದಂಡಿಸುವನೇಕೆ? ಅಲ್ಲಾಹ್ ಮಹಾ ಗುಣಗ್ರಾಹಿಯೂ[88] ಸರ್ವರ ಸ್ಥಿತಿಗತಿಗಳ ಬಗ್ಗೆ ಪೂರ್ಣ ಜ್ಞಾನಿಯೂ ಆಗಿರುತ್ತಾನೆ.

مَا يَفْعَلُ اللَّهُ بِعَذَابِكُمْ إِنْ شَكَرْتُمْ وَآمَنْتُمْ ۚ وَكَانَ اللَّهُ شَاكِرًا عَلِيمًا ﴿١٤٧﴾

148. *ಮನುಷ್ಯನು ಅವಾಚ್ಯ ಪದಗಳನ್ನುಚ್ಚರಿಸುವುದನ್ನು ಅಲ್ಲಾಹನು ಮೆಚ್ಚುವುದಿಲ್ಲ. ಆದರೆ ಮರ್ದಿತನು ಇದಕ್ಕೆ ಹೊರತಾಗಿದ್ದಾನೆ.[89] ಅಲ್ಲಾಹ್ ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ. (ಮರ್ದಿತರಾಗಿರುವ ಸ್ಥಿತಿಯಲ್ಲಿ ನಿಮಗೆ ಅವಾಚ್ಯ ಪದಗಳನ್ನುಚ್ಚರಿ ಸುವ ಹಕ್ಕಿದೆ.)

لَا يُحِبُّ اللَّهُ الْجَهْرَ بِالسُّوءِ مِنَ الْقَوْلِ إِلَّا مَنْ ظُلِمَ ۚ وَكَانَ اللَّهُ سَمِيعًا عَلِيمًا ﴿١٤٨﴾

149. ಆದರೂ ನೀವು ಬಹಿರಂಗವಾಗಿಯೂ ರಹಸ್ಯವಾಗಿಯೂ ಒಳಿತನ್ನೇ ಮಾಡುತ್ತಲಿದ್ದರೆ ಅಥವಾ ಕನಿಷ್ಠಪಕ್ಷ ಕೆಡುಕನ್ನು ಮನ್ನಿಸಿದರೆ, ನಿಶ್ಚಯವಾಗಿಯೂ ಅಲ್ಲಾಹನು(ತನ್ನ ಗುಣವಿಶೇಷತೆಗನುಸಾರವಾಗಿ) ಕ್ಷಮಾಶೀಲನಾಗಿರುತ್ತಾನೆ (ವಸ್ತುತಃ ಶಿಕ್ಷೆ ಕೊಡಲಿಕ್ಕೂ) ಸರ್ವ ಸಮರ್ಥನಾಗಿರುತ್ತಾನೆ.

إِنْ تُبْدُوا خَيْرًا أَوْ تُخْفُوهُ أَوْ تَعْفُوا عَنْ سُوءٍ فَإِنَّ اللَّهَ كَانَ عَفُوًّا قَدِيرًا ﴿١٤٩﴾

---

ವಿಮುಖನಾಗಿ ಅಸತ್ಯದ ಕಡೆಗೆ ಒಲವು ತೋರಿರುವುದನ್ನು ಕಂಡು ಯಾರನ್ನು ಅಲ್ಲಾಹನು ಸ್ವತಃ ಆ ಕಡೆಗೆ ತಿರುಗಿಸಿ ಬಿಟ್ಟಿದ್ದಾನೋ, ಯಾರ ಅಜ್ಞಾನಪ್ರಿಯತೆಯನ್ನು ಕಂಡು ಅಲ್ಲಾಹನು ಅವನ ಪಾಲಿಗೆ ಸನ್ಮಾರ್ಗದರ್ಶನದ ಬಾಗಿಲನ್ನು ಮುಚ್ಚಿ ದುರ್ಮಾರ್ಗದ ಬಾಗಿಲನ್ನು ತೆರೆದಿದ್ದಾನೋ ಅಂತಹವರಿಗೆ ಮಾರ್ಗದರ್ಶನ ಮಾಡುವುದು ವಾಸ್ತವದಲ್ಲಿ ಯಾರಿಂದಲೂ ಸಾಧ್ಯವಿಲ್ಲ.

88. ದಾಸನು ಕೃತಜ್ಞತೆ ತೋರುವುದೆಂದರೆ ಉಪಕಾರ ಸ್ಮರಣೆ ಮಾಡುವುದು. ಕೃತಜ್ಞತೆ ದೇವನ ಕಡೆಯಿಂದ ಪ್ರಕಟವಾಗುವುದೆಂದರೆ ದಾಸನ ಕರ್ಮಗಳನ್ನು ಮಾನ್ಯ ಮಾಡುವುದು.

***ಇಲ್ಲಿಂದ 6ನೆಯ ಕಾಂಡ ಆರಂಭ.**

89. ಅರ್ಥಾತ್- ಶೋಷಿತನಿಗೆ ಶೋಷಕನ ವಿರುದ್ಧ ಸ್ವರ ಎತ್ತುವ ಹಕ್ಕಿದೆ.

150. ಅಲ್ಲಾಹ್ ಹಾಗೂ ಅವನ ಸಂದೇಶವಾಹಕರನ್ನು ನಿಷೇಧಿಸುವವರೂ ಅಲ್ಲಾಹ್ ಹಾಗೂ ಅವನ ಸಂದೇಶವಾಹಕರ ನಡುವೆ ತಾರತಮ್ಯ ಮಾಡಬೇಕೆಂದು ಬಯಸುವವರೂ ನಾವು ಕೆಲವರನ್ನು ಸ್ವೀಕರಿಸುವೆವು ಇನ್ನು ಕೆಲವರನ್ನು ನಿಷೇಧಿಸುವೆವು ಎನ್ನುತ್ತ ಸತ್ಯನಿಷೇಧ ಮತ್ತು ಸತ್ಯವಿಶ್ವಾಸದ ಮಧ್ಯೆ ಒಂದು ನಡುಮಾರ್ಗವನ್ನು ಸ್ವೀಕರಿಸುವ ಇಚ್ಛೆಯುಳ್ಳವರೂ ನೈಜ ಸತ್ಯನಿಷೇಧಿಗಳಾಗಿದ್ದಾರೆ.

إِنَّ الَّذِينَ يَكْفُرُونَ بِاللَّهِ وَرُسُلِهِ وَيُرِيدُونَ أَنْ يُفَرِّقُوا بَيْنَ اللَّهِ وَرُسُلِهِ وَيَقُولُونَ نُؤْمِنُ بِبَعْضٍ وَنَكْفُرُ بِبَعْضٍ وَيُرِيدُونَ أَنْ يَتَّخِذُوا بَيْنَ ذَٰلِكَ سَبِيلًا ﴿١٥٠﴾

151. ಇಂತಹ ಸತ್ಯನಿಷೇಧಿಗಳಿಗೆ ನಾವು ಅಪಮಾನಕಾರಕ ಶಿಕ್ಷೆ ಸಿದ್ಧಪಡಿಸಿಟ್ಟಿರುತ್ತೇವೆ.

أُولَٰئِكَ هُمُ الْكَافِرُونَ حَقًّا ۚ وَأَعْتَدْنَا لِلْكَافِرِينَ عَذَابًا مُهِينًا ﴿١٥١﴾

152. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹ್ ಮತ್ತು ಅವನ ಸಮಗ್ರ ಸಂದೇಶವಾಹಕರನ್ನು ನಂಬಿ, ಅವರ ನಡುವೆ ತಾರತಮ್ಯವಿರಿಸದಿರುವವರಿಗೆ ನಾವು ಖಂಡಿತವಾಗಿಯೂ ಅವರ ಪ್ರತಿಫಲವನ್ನು ನೀಡುವೆವು. ಅಲ್ಲಾಹ್ ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَالَّذِينَ آمَنُوا بِاللَّهِ وَرُسُلِهِ وَلَمْ يُفَرِّقُوا بَيْنَ أَحَدٍ مِنْهُمْ أُولَٰئِكَ سَوْفَ يُؤْتِيهِمْ أُجُورَهُمْ ۗ وَكَانَ اللَّهُ غَفُورًا رَحِيمًا ﴿١٥٢﴾

153. ಬಾನಲೋಕದಿಂದ ನೀವೊಂದು ಲಿಖಿತವನ್ನು ಇಳಿಸಿಕೊಡಬೇಕೆಂದು ಇಂದು ಈ ಗ್ರಂಥದವರು ನಿಮ್ಮೊಂದಿಗೆ ಅಪೇಕ್ಷಿಸುತ್ತಿರುವರೆಂದಾದರೆ, ಇವರು ಇದಕ್ಕಿಂತಲೂ ಹಿರಿದಾದ (ಪಾತಕಪರ) ಬೇಡಿಕೆಗಳನ್ನು ಈ ಹಿಂದೆ ಮೂಸಾರೊಂದಿಗೆ ಮಾಡಿರುತ್ತಾರೆ. ಇವರು ಅವರೊಡನೆ, "ನಮಗೆ ಅಲ್ಲಾಹನನ್ನು ಪ್ರತ್ಯಕ್ಷ ತೋರಿಸು" ಎಂದಿದ್ದರು. ಈ ಉದ್ಧಟತನದ ಕಾರಣದಿಂದಲೇ ಅವರ ಮೇಲೆ ಹಠಾತ್ತನೆ ಸಿಡಿಲೆರಗಿತು. ಅವರು ಸುಸ್ಪಷ್ಟ ನಿದರ್ಶನಗಳನ್ನು ಕಂಡಿದ್ದರೂ ಆ ಬಳಿಕ ಕರುವನ್ನು ತಮ್ಮ ಆರಾಧ್ಯವನ್ನಾಗಿ ಮಾಡಿಕೊಂಡರು. ಇಷ್ಟಾಗಿಯೂ ನಾವು ಅವರನ್ನು ಮನ್ನಿಸಿದೆವು. ನಾವು ಮೂಸಾರಿಗೆ ಸುವ್ಯಕ್ತ ಆದೇಶ ನೀಡಿದೆವು.

يَسْأَلُكَ أَهْلُ الْكِتَابِ أَنْ تُنَزِّلَ عَلَيْهِمْ كِتَابًا مِنَ السَّمَاءِ ۚ فَقَدْ سَأَلُوا مُوسَىٰ أَكْبَرَ مِنْ ذَٰلِكَ فَقَالُوا أَرِنَا اللَّهَ جَهْرَةً فَأَخَذَتْهُمُ الصَّاعِقَةُ بِظُلْمِهِمْ ۚ ثُمَّ اتَّخَذُوا الْعِجْلَ مِنْ بَعْدِ مَا جَاءَتْهُمُ الْبَيِّنَاتُ فَعَفَوْنَا عَنْ ذَٰلِكَ ۚ وَآتَيْنَا مُوسَىٰ سُلْطَانًا مُبِينًا ﴿١٥٣﴾

154. ಅವರ ಮೇಲೆ ಪರ್ವತವನ್ನು (ತೂರ್) ಎತ್ತಿ ಹಿಡಿದು ಅವರಿಂದ (ಆದೇಶವನ್ನು ಪಾಲಿಸುವ) ಕರಾರನ್ನು ಪಡೆದೆವು. ದ್ವಾರದೊಳಕ್ಕೆ ಸಾಷ್ಟಾಂಗವೆರಗುತ್ತ ಪ್ರವೇಶಿಸಬೇಕೆಂದು ನಾವು ಅವರಿಗೆ ಅಪ್ಪಣೆ

وَرَفَعْنَا فَوْقَهُمُ الطُّورَ بِمِيثَاقِهِمْ وَقُلْنَا لَهُمُ ادْخُلُوا الْبَابَ سُجَّدًا وَقُلْنَا لَهُمْ لَا

ಕೊಟ್ಟೆವು.[90] 'ಸಬ್ತ್'ನ (ಸಬ್ಬಾತದ) ನಿಯಮವನ್ನು ಮುರಿಯ ಬೇಡಿರೆಂದು ನಾವು ಅವರಿಗೆ ಹೇಳಿದೆವು ಮತ್ತು ಈ ಬಗ್ಗೆ ಅವರಿಂದ ಬಲವಾದ ಕರಾರನ್ನು ಪಡೆದೆವು.

تَعْدُوا فِي السَّبْتِ وَأَخَذْنَا مِنْهُم مِّيثَاقًا غَلِيظًا ﴿١٥٤﴾

155. ಕೊನೆಗೆ ಅವರು ಕರಾರನ್ನು ಮುರಿದರು. ಅಲ್ಲಾಹನ ನಿದರ್ಶನ ಗಳನ್ನು ಸುಳ್ಳಾಗಿಸಿದರು. ಅನೇಕ ಪ್ರವಾದಿಗಳನ್ನು ಅನ್ಯಾಯವಾಗಿ ವಧಿಸಿದರು. "ನಮ್ಮ ಹೃದಯಗಳು ಕವಚಗಳೊಳಗೆ ಭದ್ರ ವಾಗಿವೆ"[91] ಎಂದೂ ಹೇಳಿಬಿಟ್ಟರು. ವಾಸ್ತವದಲ್ಲಿ ಅವರ ಈ ಮಿಥ್ಯ-ಆರಾಧನೆಯ ಕಾರಣದಿಂದ ಅಲ್ಲಾಹನು ಅವರ ಹೃದಯ ಗಳಿಗೆ ಮುದ್ರೆಯೊತ್ತಿಬಿಟ್ಟನು. ಆದುದರಿಂದ ಅವರು ಅತ್ಯಲ್ಪವೇ ವಿಶ್ವಾಸವಿರಿಸುತ್ತಾರೆ.

فَبِمَا نَقْضِهِم مِّيثَاقَهُمْ وَكُفْرِهِم بِآيَاتِ اللَّهِ وَقَتْلِهِمُ الْأَنبِيَاءَ بِغَيْرِ حَقٍّ وَقَوْلِهِمْ قُلُوبُنَا غُلْفٌ ۚ بَلْ طَبَعَ اللَّهُ عَلَيْهَا بِكُفْرِهِمْ فَلَا يُؤْمِنُونَ إِلَّا قَلِيلًا ﴿١٥٥﴾

156. ಅವರು ತಮ್ಮ ನಿಷೇಧ ನೀತಿಯಲ್ಲಿ ಮುಂದುವರಿಯುತ್ತ ಮರ್ಯಮಳ ಮೇಲೆ ಉಗ್ರ ಸುಳ್ಳಾರೋಪವನ್ನು ಹೊರಿಸಿ ಬಿಟ್ಟರು.

وَبِكُفْرِهِمْ وَقَوْلِهِمْ عَلَىٰ مَرْيَمَ بُهْتَانًا عَظِيمًا ﴿١٥٦﴾

157. ಮತ್ತು ನಾವು ಅಲ್ಲಾಹನ ಸಂದೇಶವಾಹಕರಾದ ಮರ್ಯಮರ ಪುತ್ರ ಈಸಾ ಮಸೀಹರನ್ನು ವಧಿಸಿದೆವೆಂದು ಅವರು ಹೇಳಿದರು.[92] ವಸ್ತುತಃ ಅವರು ಅವರನ್ನು (ಈಸಾರನ್ನು) ವಧಿಸಲೂ ಇಲ್ಲ, ಶಿಲುಬೆಗೇರಿಸಲೂ ಇಲ್ಲ. ನಿಜವಾಗಿ ಆ ಪ್ರಕರಣವು ಅವರಿಗೆ ಅಸ್ಪಷ್ಟಗೊಳಿಸಲ್ಪಟ್ಟಿತು.[93] ಈ ವಿಷಯದಲ್ಲಿ ಭಿನ್ನಾಭಿಪ್ರಾಯ ತೋರಿದವರೂ ವಾಸ್ತವದಲ್ಲಿ ಸಂಶಯಗ್ರಸ್ತರಾಗಿರುತ್ತಾರೆ. ಅವರಿಗೆ ಈ ಪ್ರಕರಣದ ಅರಿವೇನೂ ಇಲ್ಲ. ಕೇವಲ ಗುಮಾನಿಯನ್ನೇ ಅನುಸರಿಸಲಾಗುತ್ತಿದೆ. ಅವರು ಮಸೀಹರನ್ನು ಖಂಡಿತವಾಗಿಯೂ ವಧಿಸಲಿಲ್ಲ.

وَقَوْلِهِمْ إِنَّا قَتَلْنَا الْمَسِيحَ عِيسَى ابْنَ مَرْيَمَ رَسُولَ اللَّهِ وَمَا قَتَلُوهُ وَمَا صَلَبُوهُ وَلَٰكِن شُبِّهَ لَهُمْ ۚ وَإِنَّ الَّذِينَ اخْتَلَفُوا فِيهِ لَفِي شَكٍّ مِّنْهُ ۚ مَا لَهُم بِهِ مِنْ عِلْمٍ إِلَّا اتِّبَاعَ الظَّنِّ ۚ وَمَا قَتَلُوهُ يَقِينًا ﴿١٥٧﴾

---

90. ಇದರ ಪ್ರಸ್ತಾಪ ಅಲ್‌ಬಕರಃ ಅಧ್ಯಾಯದ 58-59ನೆಯ ಸೂಕ್ತದಲ್ಲಿ ಬಂದಿದೆ.

91. ಅರ್ಥಾತ್- ನೀವು ಏನು ಬೇಕಾದರೂ ಹೇಳಿ, ನಮ್ಮ ಮನಸ್ಸಿನ ಮೇಲೆ ಅದರಿಂದ ಯಾವ ಪರಿಣಾಮವೂ ಆಗದು.

92. ಅರ್ಥಾತ್- ಅವರ ಭಂಡ ಧೈರ್ಯ ಎಷ್ಟು ಹೆಚ್ಚಾಗಿತ್ತೆಂದರೆ ಪ್ರವಾದಿಯನ್ನು ಪ್ರವಾದಿಯೆಂದು ಅರಿಯುತ್ತಲೂ ಅವರು ಅವರನ್ನು ಕೊಲೆ ಮಾಡಲು ಹೇಸಲಿಲ್ಲ. ಮಾತ್ರವಲ್ಲ ನಾವು ಅಲ್ಲಾಹನ ಪ್ರವಾದಿಯ ಕೊಲೆ ಮಾಡಿದೆವು ಎಂದು ಧೈರ್ಯದಿಂದ ಹೇಳಿದರು. ಮರ್ಯಮ್ ಅಧ್ಯಾಯದ ಎರಡನೆಯ ಪರಿಚ್ಛೇದವನ್ನು ನಮ್ಮ ಟಿಪ್ಪಣಿಗಳ ಸಮೇತ ಓದಿದರೆ ಬನೀಇಸ್ರಾಈಲರು ಪ್ರವಾದಿ ಈಸಾರ(ಅ) ಬಗ್ಗೆ ಅವರು ನಿಜವಾಗಿಯೂ ದೇವ ಪ್ರವಾದಿಯೇ ಆಗಿದ್ದಾರೆ ಎಂದು ಅರಿತ ಬಳಿಕವೂ ಅವರನ್ನು ಯಾವ ರೀತಿ ಶಿಲುಬೆಗೇರಿಸಲು ಪ್ರಯತ್ನಿಸಿದರೆಂದು ತಿಳಿಯುತ್ತದೆ.

93. ಪ್ರವಾದಿ ಮಸೀಹ್‌ರನ್ನು(ಅ) ಶಿಲುಬೆಗೇರಿಸಲಾಗುವುದಕ್ಕೆ ಮೊದಲೇ ಮೇಲೆತ್ತಿಕೊಳ್ಳಲಾಗಿತ್ತೆಂದು ಈ ಸೂಕ್ತದಿಂದ ಸ್ಪಷ್ಟವಾಗುತ್ತದೆ. ಮಸೀಹ್‌ರು(ಅ) ಶಿಲುಬೆಗೇರಿ ಪ್ರಾಣ ತೆತ್ತರು ಎಂಬ ಕ್ರೈಸ್ತರ ಮತ್ತು ಯಹೂದಿಯರ ಭಾವನೆ ತಪ್ಪುಕಲ್ಪನೆಗಳಿಂದ ಕೂಡಿದ್ದಾಗಿದೆ ಎಂದೂ ಇದರಿಂದ ತಿಳಿದು ಬರುತ್ತದೆ. ಯಹೂದಿಯರು ಅವರನ್ನು ಶಿಲುಬೆಗೇರಿಸುವುದಕ್ಕೆ ಮೊದಲೇ ಅಲ್ಲಾಹನು ಅವರನ್ನು ಯಾವುದೋ ಹಂತದಲ್ಲಿ ಮೇಲೆತ್ತಿಕೊಂಡನು. ಯಹೂದಿಯರು ಶಿಲುಬೆಗೇರಿಸಿದ ವ್ಯಕ್ತಿ ಬೇರೆ ಯಾರೋ ಆಗಿದ್ದನು. ಅವರು ಕಾರಣಾಂತರದಿಂದ ಅವನನ್ನು ಮರ್ಯಮರ ಪುತ್ರ ಈಸಾನೇ ಆಗಿರಬೇಕೆಂದು ಭ್ರಮಿಸಿದರು.

158. ನಿಜವಾಗಿ ಅಲ್ಲಾಹನು ಅವರನ್ನು ತನ್ನ ಕಡೆಗೆ ಎತ್ತಿಕೊಂಡನು. ಅಲ್ಲಾಹನು ಮಹಾ ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆ.

بَلْ رَّفَعَهُ اللّٰهُ اِلَيْهِ ؕ وَكَانَ اللّٰهُ عَزِيْزًا حَكِيْمًا ﴿۱۵۸﴾

159. ಗ್ರಂಥದವರಲ್ಲಿ ಯಾವನೂ ಅವರ ಮರಣಕ್ಕಿಂತ ಮುಂಚೆ ಅವರ ಮೇಲೆ ವಿಶ್ವಾಸವಿರಿಸದಿರಲಾರನು.[94] ಪುನರುತ್ಥಾನ ದಿನದಂದು ಅವರು ಅವರ (ಗ್ರಂಥದವರ) ವಿರುದ್ಧ ಸಾಕ್ಷಿ ಹೇಳುವರು.

وَاِنْ مِّنْ اَهْلِ الْكِتٰبِ اِلَّا لَيُؤْمِنَنَّ بِهٖ قَبْلَ مَوْتِهٖ ۚ وَيَوْمَ الْقِيٰمَةِ يَكُوْنُ عَلَيْهِمْ شَهِيْدًا ﴿۱۵۹﴾

160. ಹೀಗೆ ಈ ಯಹೂದಿಯರ ಈ ಅಕ್ರಮ ವರ್ತನೆಗಳ ಕಾರಣದಿಂದ ಮತ್ತು ಇವರು ಜನರನ್ನು ಅಲ್ಲಾಹನ ಮಾರ್ಗದಿಂದ ಹೆಚ್ಚು ಹೆಚ್ಚಾಗಿ ತಡೆಯುತ್ತಲೂ ಇದ್ದುದರಿಂದ-

فَبِظُلْمٍ مِّنَ الَّذِيْنَ هَادُوْا حَرَّمْنَا عَلَيْهِمْ طَيِّبٰتٍ اُحِلَّتْ لَهُمْ وَبِصَدِّهِمْ عَنْ سَبِيْلِ اللّٰهِ كَثِيْرًا ﴿۱۶۰﴾

161. ಇವರಿಗೆ ನಿಷಿದ್ಧಗೊಳಿಸಿದ್ದ ಬಡ್ಡಿಯನ್ನು ಪಡೆಯುತ್ತಲೂ ಜನರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸುತ್ತಲೂ ಇದ್ದ ಕಾರಣದಿಂದ ನಾವು ಇವರಿಗೆ ಹಿಂದೆ 'ಧರ್ಮಸಮ್ಮತ' ಗೊಳಿಸಿದ್ದ ಅನೇಕ ಶುದ್ಧ ವಸ್ತುಗಳನ್ನು ನಿಷಿದ್ಧ ಎಂದು ವಿಧಿಸಿಬಿಟ್ಟೆವು[95] ಮತ್ತು ಇವರಲ್ಲಿ ಸತ್ಯನಿಷೇಧಿ ಆಗಿರುವವರಿಗಾಗಿ ನಾವು ವೇದನಾಯುಕ್ತ ಯಾತನೆಯನ್ನು ಸಿದ್ಧಗೊಳಿಸಿ ಬಿಟ್ಟಿರುತ್ತೇವೆ.

وَّاَخْذِهِمُ الرِّبٰوا وَقَدْ نُهُوْا عَنْهُ وَاَكْلِهِمْ اَمْوَالَ النَّاسِ بِالْبَاطِلِ ؕ وَاَعْتَدْنَا لِلْكٰفِرِيْنَ مِنْهُمْ عَذَابًا اَلِيْمًا ﴿۱۶۱﴾

162. ಆದರೆ ಇವರಲ್ಲಿ ಪರಿಪಕ್ವ ಜ್ಞಾನವುಳ್ಳವರು ಮತ್ತು ಸತ್ಯವಿಶ್ವಾಸವುಳ್ಳವರೆಲ್ಲರೂ (ಓ ಪೈಗಂಬರರೇ,) ನಿಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟ ಹಾಗೂ ನಿಮಗಿಂತ ಮೊದಲು ಅವತೀರ್ಣಗೊಳಿಸಲ್ಪಟ್ಟ ಶಿಕ್ಷಣದ ಮೇಲೆ ವಿಶ್ವಾಸವಿರಿಸುತ್ತಾರೆ. ಈ ರೀತಿ ವಿಶ್ವಾಸವಿರಿಸುವವರಿಗೆ, ನಮಾಝ್ ಹಾಗೂ ಝಕಾತ್‌ಗಳನ್ನು ಪಾಲಿಸುವವರಿಗೆ ಮತ್ತು ಅಲ್ಲಾಹ್ ಹಾಗೂ

لٰكِنِ الرّٰسِخُوْنَ فِى الْعِلْمِ مِنْهُمْ وَالْمُؤْمِنُوْنَ يُؤْمِنُوْنَ بِمَاۤ اُنْزِلَ اِلَيْكَ وَمَاۤ اُنْزِلَ مِنْ قَبْلِكَ وَالْمُقِيْمِيْنَ الصَّلٰوةَ وَالْمُؤْتُوْنَ الزَّكٰوةَ وَالْمُؤْمِنُوْنَ بِاللّٰهِ وَالْيَوْمِ الْاٰخِرِ ؕ اُولٰٓئِكَ

94. ಈ ವಾಕ್ಯಕ್ಕೆ ಎರಡು ಅರ್ಥಗಳಿವೆ: ಇದರಲ್ಲಿ ಎರಡು ಬಗೆಯ ಅರ್ಥಗಳಿಗೂ ಆಸ್ಪದವಿದೆ. ನಾವು ಭಾಷಾಂತರದಲ್ಲಿ ನೀಡಿದ ಅರ್ಥ ಮೊದಲನೆಯದು. ಎರಡನೆಯದು ಗ್ರಂಥದವರ ಪೈಕಿ ಯಾರೂ ತನ್ನ ಮರಣಕ್ಕಿಂತ ಮುಂಚೆ ಮಸೀಹರ ಮೇಲೆ ವಿಶ್ವಾಸವಿರಿಸದೆ ಇರಲಾರ ಎಂದಾಗಿದೆ.

95. ಪ್ರಾಯಶಃ ಇದು ಮುಂದೆ ಅಲ್ ಅನ್‌ಆಮ್ ಅಧ್ಯಾಯದ 146ನೆಯ ಸೂಕ್ತದಲ್ಲಿ ಬರುವ ವಿಷಯದ ಕಡೆಗೆ ಸೂಚನೆ. ಅರ್ಥಾತ್ ಬನೀಇಸ್ರಾಈಲರಿಗೆ ಉಗುರುಗಳಿರುವ ಎಲ್ಲಾ ಪ್ರಾಣಿಗಳೂ ನಿಷಿದ್ಧಗೊಳಿಸಲ್ಪಟ್ಟವು. ದನ ಮತ್ತು ಆಡಿನ ಕೊಬ್ಬು ಸಹ ಅವರಿಗೆ ನಿಷೇಧಿಸಲ್ಪಟ್ಟಿತು. ಅಲ್ಲದೆ ಯಹೂದಿ ಕರ್ಮಶಾಸ್ತ್ರದಲ್ಲಿರುವ ಇತರ ಕಟ್ಟುನಿಟ್ಟಿನ ನಿಬಂಧನೆಗಳ ಕಡೆಗೂ ಪ್ರಾಯಶಃ ಈ ಮೂಲಕ ಬೊಟ್ಟು ಮಾಡಲಾಗಿರಬಹುದು. ಯಾವುದೇ ವಿಭಾಗಕ್ಕೆ ಜೀವನದ ವರ್ತುಲವನ್ನು ಸಂಕುಚಿತಗೊಳಿಸುವುದು ನಿಜಾರ್ಥದಲ್ಲಿ ಒಂದು ರೀತಿಯ ಶಿಕ್ಷೆಯೇ ಆಗಿದೆ.

سَنُؤْتِيهِمْ أَجْرًا عَظِيمًا ﴿١٦٢﴾

ಅಂತಿಮ ದಿವಸದ ಮೇಲೆ ನಿಜವಾದ ವಿಶ್ವಾಸವಿರಿಸುವವರಿಗೆ ನಾವು ಖಂಡಿತವಾಗಿಯೂ ಅತ್ಯುನ್ನತ ಪ್ರತಿಫಲ ನೀಡುವೆವು.

إِنَّا أَوْحَيْنَا إِلَيْكَ كَمَا أَوْحَيْنَا إِلَىٰ نُوحٍ وَالنَّبِيِّينَ مِن بَعْدِهِ ۚ وَأَوْحَيْنَا إِلَىٰ إِبْرَاهِيمَ وَإِسْمَاعِيلَ وَإِسْحَاقَ وَيَعْقُوبَ وَالْأَسْبَاطِ وَعِيسَىٰ وَأَيُّوبَ وَيُونُسَ وَهَارُونَ وَسُلَيْمَانَ ۚ وَآتَيْنَا دَاوُودَ زَبُورًا ﴿١٦٣﴾

163. ಓ ಪೈಗಂಬರರೇ, ನಾವು ನೂಹ್ ಮತ್ತು ಅನಂತರದ ಪ್ರವಾದಿಗಳ ಕಡೆಗೆ ದಿವ್ಯವಾಣಿ ಕಳುಹಿಸಿದಂತೆಯೇ ನಿಮ್ಮ ಕಡೆಗೂ 'ದಿವ್ಯವಾಣಿ' ಕಳುಹಿಸಿರುತ್ತೇವೆ. ನಾವು ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿ, ಈಸಾ, ಅಯ್ಯೂಬ್, ಯೂನುಸ್, ಹಾರೂನ್ ಮತ್ತು ಸುಲೈಮಾನರ ಕಡೆಗೂ 'ದಿವ್ಯವಾಣಿ' ಕಳುಹಿಸಿದೆವು. ನಾವು ದಾವೂದರಿಗೆ 'ಝುಬೂರ್' ನೀಡಿದೆವು.

وَرُسُلًا قَدْ قَصَصْنَاهُمْ عَلَيْكَ مِن قَبْلُ وَرُسُلًا لَّمْ نَقْصُصْهُمْ عَلَيْكَ ۚ وَكَلَّمَ اللَّهُ مُوسَىٰ تَكْلِيمًا ﴿١٦٤﴾

164. ನಾವು ಇದಕ್ಕಿಂತ ಮುಂಚೆ ನಿಮ್ಮ ಮುಂದೆ ಪ್ರಸ್ತಾಪಿಸಿದ್ದ ಸಂದೇಶವಾಹಕರ ಮೇಲೂ ನಿಮ್ಮ ಮುಂದೆ ಪ್ರಸ್ತಾಪಿಸದೆ ಇದ್ದ ಸಂದೇಶವಾಹಕರ ಮೇಲೂ 'ದಿವ್ಯವಾಣಿ' ಇಳಿಸಿದೆವು. ಅಲ್ಲಾಹನು ಮೂಸಾರೊಡನೆ, ಮಾತನಾಡುವ ರೀತಿಯಲ್ಲೇ ಮಾತನಾಡಿದನು.

رُّسُلًا مُّبَشِّرِينَ وَمُنذِرِينَ لِئَلَّا يَكُونَ لِلنَّاسِ عَلَى اللَّهِ حُجَّةٌ بَعْدَ الرُّسُلِ ۚ وَكَانَ اللَّهُ عَزِيزًا حَكِيمًا ﴿١٦٥﴾

165. ಅವನು ಈ ಸಂದೇಶವಾಹಕರೆಲ್ಲರನ್ನು ನಿಯೋಗಿಸಿದ ಬಳಿಕ ಜನರ ಬಳಿ ಅಲ್ಲಾಹನಿಗೆದುರು ವಾದವುಳಿಯದಂತಾಗಲು[96] ಅವರನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರನ್ನಾಗಿ ಮಾಡಿ ಕಳುಹಿಸಿದ್ದನು. ಅಲ್ಲಾಹನು ಪ್ರತಾಪಶಾಲಿಯೂ ಯುಕ್ತಿ ಪೂರ್ಣನೂ ಆಗಿರುತ್ತಾನೆ.

لَّٰكِنِ اللَّهُ يَشْهَدُ بِمَا أَنزَلَ إِلَيْكَ ۖ أَنزَلَهُ بِعِلْمِهِ ۖ وَالْمَلَائِكَةُ يَشْهَدُونَ ۚ وَكَفَىٰ بِاللَّهِ شَهِيدًا ﴿١٦٦﴾

166. ಆದರೆ (ಜನರು ಒಪ್ಪದಿದ್ದರೆ ಒಪ್ಪದಿರಲಿ.) ಓ ಪೈಗಂಬರರೇ, ಅವನು ನಿಮ್ಮ ಮೇಲೆ ಅವತೀರ್ಣಗೊಳಿಸಿರುವುದನ್ನೆಲ್ಲಾ ತನ್ನ ಜ್ಞಾನದಿಂದ ಅವತೀರ್ಣಗೊಳಿಸಿರುತ್ತಾನೆಂದು ಅಲ್ಲಾಹನು ಸಾಕ್ಷಿ ಹೇಳುತ್ತಾನೆ. ಅಲ್ಲಾಹನ ಸಾಕ್ಷ್ಯವು ಧಾರಾಳ ಸಾಕಿದ್ದರೂ ಇದಕ್ಕೆ ದೇವಚರರೂ ಸಾಕ್ಷಿಗಳಾಗಿದ್ದಾರೆ.

إِنَّ الَّذِينَ كَفَرُوا وَصَدُّوا عَن سَبِيلِ اللَّهِ قَدْ ضَلُّوا ضَلَالًا بَعِيدًا ﴿١٦٧﴾

167. ಇದನ್ನು ಮಾನ್ಯ ಮಾಡಲು ಸ್ವತಃ ನಿರಾಕರಿಸುವವರು ಮತ್ತು ಇತರರನ್ನು ದೇವಮಾರ್ಗದಿಂದ ತಡೆಯುವವರು ಪಥಭ್ರಷ್ಟತೆ ಯಲ್ಲಿ ಸತ್ಯದಿಂದ ಬಹುದೂರ ಸಾಗಿರುತ್ತಾರೆ.

96. ಅರ್ಥಾತ್- ಈ ಎಲ್ಲಾ ಪ್ರವಾದಿಗಳನ್ನು ಕಳುಹಿಸುವುದರ ಉದ್ದೇಶ ಒಂದೇ ಆಗಿತ್ತು. ನಿರ್ಣಾಯಕ ದಿನದಂದು ಯಾವ ಪಥಭ್ರಷ್ಟ ಅಪರಾಧಿಯೂ ನಮಗೆ ತಿಳಿದಿರಲಿಲ್ಲ, ವಸ್ತುಸ್ಥಿತಿಯನ್ನು ತಿಳಿಸಲು ನೀನು ವ್ಯವಸ್ಥೆ ಮಾಡಿರಲಿಲ್ಲ ಎಂದು ಅಲ್ಲಾಹನ ಮುಂದೆ ಹೇಳುವಂತಾಗಬಾರದು. ಈ ರೀತಿ ಸಕಲ ಮನುಷ್ಯರಿಗೆ ನೆಪ ಹೂಡಲು ಅವಕಾಶ ನೀಡದಿರುವುದೇ ಈ ಏಕೈಕ ಉದ್ದೇಶ.

168. ಹೀಗೆ ಸತ್ಯನಿಷೇಧ ಹಾಗೂ ವಿದ್ರೋಹ ಮಾರ್ಗವನ್ನು ಸ್ವೀಕರಿಸಿ ಕೊಂಡು ಅಕ್ರಮ ಅತ್ಯಾಚಾರಕ್ಕಿಳಿದವರನ್ನು ಅಲ್ಲಾಹನು ಎಂದಿಗೂ ಕ್ಷಮಿಸಲಾರನು-

إِنَّ الَّذِينَ كَفَرُوا وَظَلَمُوا لَمْ يَكُنِ اللَّهُ لِيَغْفِرَ لَهُمْ وَلَا لِيَهْدِيَهُمْ طَرِيقًا ﴿١٦٨﴾

169. ಮತ್ತು ಅವರಿಗೆ ನರಕದ ವಿನಾ ಬೇರಾವ ಮಾರ್ಗವನ್ನೂ ತೋರಿಸಲಾರನು. ಅವರು ಅದರಲ್ಲೇ ಸದಾಕಾಲ ವಾಸಿಸುವರು. ಅಲ್ಲಾಹನಿಗೆ ಇದೇನೂ ಕಷ್ಟಕಾರ್ಯವಲ್ಲ.

إِلَّا طَرِيقَ جَهَنَّمَ خَالِدِينَ فِيهَا أَبَدًا ۚ وَكَانَ ذَٰلِكَ عَلَى اللَّهِ يَسِيرًا ﴿١٦٩﴾

170. ಓ ಜನರೇ, ಈ ಸಂದೇಶವಾಹಕರು ನಿಮ್ಮ ಬಳಿಗೆ ನಿಮ್ಮ ಪಾಲಕ ಪ್ರಭುವಿನ ಕಡೆಯಿಂದ ಸತ್ಯವನ್ನು ತಂದಿದ್ದಾರೆ. ವಿಶ್ವಾಸವಿರಿಸಿರಿ. ಅದು ನಿಮಗೇ ಒಳಿತು. ನೀವು ನಿರಾಕರಿಸುತ್ತೀರೆಂದಾದರೆ ಭೂಮಿ-ಆಕಾಶಗಳಲ್ಲಿ ಇರುವುದೆಲ್ಲವೂ ಅಲ್ಲಾಹನದ್ದೆಂಬುದನ್ನು ತಿಳಿದುಕೊಳ್ಳಿರಿ ಮತ್ತು ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.[97]

يَا أَيُّهَا النَّاسُ قَدْ جَاءَكُمُ الرَّسُولُ بِالْحَقِّ مِنْ رَبِّكُمْ فَآمِنُوا خَيْرًا لَكُمْ ۚ وَإِنْ تَكْفُرُوا فَإِنَّ لِلَّهِ مَا فِي السَّمَاوَاتِ وَالْأَرْضِ ۚ وَكَانَ اللَّهُ عَلِيمًا حَكِيمًا ﴿١٧٠﴾

171. ಓ ಗ್ರಂಥದವರೇ, ನಿಮ್ಮ ಧರ್ಮದಲ್ಲಿ ನೀವು ಹದಮೀರಬೇಡಿರಿ,[98] ಸತ್ಯದ ಹೊರತು ಇನ್ನೇನನ್ನೂ ಅಲ್ಲಾಹನ ಮೇಲೆ ಹೊರಿಸಬೇಡಿರಿ. ಮರ್ಯಮರ ಪುತ್ರ ಈಸಾ ಮಸೀಹರು ಅಲ್ಲಾಹನ ಸಂದೇಶವಾಹಕ ರಾಗಿದ್ದರೇ ವಿನಾ ಇನ್ನೇನೂ ಆಗಿರಲಿಲ್ಲ. ಅವರು, ಅಲ್ಲಾಹನು ಮರ್ಯಮರ ಕಡೆಗೆ ಕಳುಹಿಸಿದ ಒಂದು ಫರಮಾನು[99] (ಆಜ್ಞೆ) ಆಗಿದ್ದರು ಮತ್ತು ಅಲ್ಲಾಹನ ಕಡೆಯಿಂದ (ಮರ್ಯಮರ ಗರ್ಭಾಶಯದಲ್ಲಿ ಶಿಶುವಿನ ರೂಪ ಧಾರಣ ಮಾಡಿದ) ಒಂದು

يَا أَهْلَ الْكِتَابِ لَا تَغْلُوا فِي دِينِكُمْ وَلَا تَقُولُوا عَلَى اللَّهِ إِلَّا الْحَقَّ ۚ إِنَّمَا الْمَسِيحُ عِيسَى ابْنُ مَرْيَمَ رَسُولُ اللَّهِ وَكَلِمَتُهُ أَلْقَاهَا إِلَىٰ مَرْيَمَ وَرُوحٌ مِنْهُ ۖ فَآمِنُوا بِاللَّهِ وَرُسُلِهِ ۖ وَلَا تَقُولُوا ثَلَاثَةٌ ۚ انْتَهُوا

97. ಅರ್ಥಾತ್- ತನ್ನ ಸಾಮ್ರಾಜ್ಯದಲ್ಲಿದ್ದು ಕಿಡಿಗೇಡಿತನವನ್ನೆಸಗುವವರ ಬಗ್ಗೆ ನಿಮ್ಮ ಪ್ರಭು ತಿಳಿಯದವನಲ್ಲ. ಹಾಗೆಯೇ ತನ್ನ ಆದೇಶಗಳನ್ನು ಉಲ್ಲಂಘಿಸುವವರನ್ನು ಎದುರಿಸುವ ವಿಧಾನವರಿಯದ ತಿಳಿಗೇಡಿಯೂ ಅವನಲ್ಲ.

98. ಇಲ್ಲಿ ಗ್ರಂಥದವರೆಂದರೆ ಕ್ರೈಸ್ತರು, ಅರಬಿ ಭಾಷೆಯಲ್ಲಿ 'ಗುಲೂ' ಎಂದರೆ ಯಾವುದೇ ವಿಷಯದ ಸಮರ್ಥನೆ ಮತ್ತು ಬೆಂಬಲದಲ್ಲಿ ಮಿತಿಮೀರುವುದು. ಮಸೀಹ್‌ರನ್ನು(ಅ) ನಿರಾಕರಿಸುವ ಮತ್ತು ವಿರೋಧಿಸುವ ಕೆಲಸಗಳಲ್ಲಿ ಮಿತಿಮೀರಿರುವುದು ಯಹೂದಿಯರ ಅಪರಾಧವಾಗಿದ್ದರೆ, ಮಸೀಹ್‌ರ(ಅ) ಮೇಲಿನ ಅಭಿಮಾನದಲ್ಲಿ ಹದ್ದು ಮೀರಿ ಅವರನ್ನು ದೇವಪುತ್ರ ಮತ್ತು ಸಾಕ್ಷಾತ್ ದೇವನಾಗಿ ಮಾಡಿದುದು ಕ್ರೈಸ್ತರ ಅಪರಾಧವಾಗಿತ್ತು.

99. ಮೂಲದಲ್ಲಿ 'ಕಲಿಮಃ' ಎಂಬ ಪದ ಪ್ರಯೋಗವಾಗಿದೆ. ಅಲ್ಲಾಹನು ಮರ್ಯಮರ ಕಡೆಗೆ 'ಕಲಿಮಃ'(ವಚನ)ವನ್ನು ಕಳುಹಿಸುವುದೆಂದರೆ ಪುರುಷನ ವೀರ್ಯದಿಂದ ಸಂಪನ್ನವಾಗದೆ ಗರ್ಭಧಾರಣೆ ಮಾಡಬೇಕೆಂಬ ಆದೇಶವನ್ನು ಹ. ಮರ್ಯಮ್‌ರ(ಅ) ಗರ್ಭಕೋಶದ ಮೇಲೆ ಅವತೀರ್ಣಗೊಳಿಸುವುದು. ಕ್ರೈಸ್ತರು ಮೊದಲು 'ಕಲಿಮಃ' ಎಂಬ ಪದವನ್ನು 'ಕಲಾಮ್' (ವಚನ) ಅಥವಾ 'ನತಕ್' (ಮಾತು) ಎಂಬ ಅರ್ಥಉಳ್ಳ ಪದವೆಂದು ಭಾವಿಸಿದರು. ಅನಂತರ 'ಕಲಾಮ್' ಎಂದರೆ ಅಲ್ಲಾಹನ ಮಾತನಾಡುವ ಗುಣವಿಶೇಷತೆಯಾಗಿರಬಹುದೆಂದು ಕಲ್ಪಿಸಿಕೊಂಡರು. ತದನಂತರ ಅಲ್ಲಾಹನ ಈ ಗುಣವಿಶೇಷತೆಯೇ ಹ. ಮರ್ಯಮ್‌ರ(ಅ) ಗರ್ಭದೊಳಗೆ ಪ್ರವೇಶಿಸಿ ಮಸೀಹ್‌ರ(ಅ) ರೂಪದಲ್ಲಿ ಮೂರ್ತ ಸ್ವರೂಪವನ್ನು ಪಡೆಯಿತು ಎಂದು ಭಾವಿಸಿದರು. ಹೀಗೆ ಕ್ರೈಸ್ತರಲ್ಲಿ ಮಸೀಹ್‌ರ(ಅ) ದೇವತ್ವದ ಬಗ್ಗೆ ಪಥಭ್ರಷ್ಟ ವಿಶ್ವಾಸ ಜನ್ಮತಾಳಿತು. ಈ ತಪ್ಪುಧಾರಣೆಯಿಂದಾಗಿಯೇ ದೇವನು ಸ್ವತಃ ಅಥವಾ ದೇವನ ಗುಣವಿಶೇಷತೆಯಾದ 'ಕಲಾಮ್' ಮಸೀಹ್‌ರ(ಅ) ರೂಪದಲ್ಲಿ ಮೈವೆತ್ತಿರಬಹುದೆಂಬ ವಾದ ಬೇರೂರಿತು.

ಆತ್ಮವಾಗಿದ್ದರು.[100] ಆದುದರಿಂದ ಅಲ್ಲಾಹ್ ಮತ್ತು ಸಂದೇಶ ವಾಹಕರ ಮೇಲೆ ವಿಶ್ವಾಸವಿಡಿರಿ. ಮೂವರಿದ್ದಾರೆನ್ನಬೇಡಿರಿ[101]- ಇದನ್ನು ತೊರೆಯಿರಿ. ಇದು ನಿಮಗೇ ಉತ್ತಮ. ಅಲ್ಲಾಹನಂತೂ ಏಕಮಾತ್ರ ಆರಾಧ್ಯನಾಗಿರುವನು. ಅವನಿಗೊಬ್ಬ ಪುತ್ರನಿದ್ದಾನೆನ್ನಲು, ಅವನು ಅದರಿಂದ ಪರಿಶುದ್ಧನಾಗಿರುತ್ತಾನೆ.[102] ಭೂಮಿ-ಆಕಾಶಗಳ ಸಕಲ ವಸ್ತುಗಳೂ ಅವನ ಸೊತ್ತು ಮತ್ತು ಅವುಗಳ ಸಂರಕ್ಷಣೆಗೆ ಅಲ್ಲಾಹನೇ ಸಾಕು.

خَيْرًا لَّكُمْ ۚ إِنَّمَا اللَّهُ إِلَٰهٌ وَاحِدٌ ۖ سُبْحَانَهُ أَن يَكُونَ لَهُ وَلَدٌ ۘ لَّهُ مَا فِي السَّمَاوَاتِ وَمَا فِي الْأَرْضِ ۗ وَكَفَىٰ بِاللَّهِ وَكِيلًا ﴿١٧١﴾

172. ತಾನು ಅಲ್ಲಾಹನ ದಾಸನಾಗಿರುವ ಬಗ್ಗೆ ಮಸೀಹರು ಎಂದೆಂದೂ ಸಂಕೋಚ ಪಡಲಿಲ್ಲ. ಅತ್ಯಂತ ನಿಕಟವರ್ತಿ ದೇವಚರರೂ ಈ ಬಗ್ಗೆ ಸಂಕೋಚ ಪಡುವುದಿಲ್ಲ. ಯಾವನಾದರೂ ಅಲ್ಲಾಹನ ದಾಸ್ಯದ ಬಗ್ಗೆ ಸಂಕೋಚಪಟ್ಟರೆ ಮತ್ತು ಅಹಂಭಾವ ತೋರಿದರೆ, ಅಲ್ಲಾಹನು ಎಲ್ಲರನ್ನೂ ಸುತ್ತುವರಿದು ತನ್ನ ಮುಂದೆ ಹಾಜರು ಪಡಿಸುವ ಅದೊಂದು ಕಾಲ ಬರಲಿದೆ.

لَّن يَسْتَنكِفَ الْمَسِيحُ أَن يَكُونَ عَبْدًا لِّلَّهِ وَلَا الْمَلَائِكَةُ الْمُقَرَّبُونَ ۚ وَمَن يَسْتَنكِفْ عَنْ عِبَادَتِهِ وَيَسْتَكْبِرْ فَسَيَحْشُرُهُمْ إِلَيْهِ جَمِيعًا ﴿١٧٢﴾

173. ಆಗ ವಿಶ್ವಾಸವಿಟ್ಟು ಸತ್ಕರ್ಮ ವಿಧಾನ ಕೈಗೊಂಡವರು ತಮ್ಮ

فَأَمَّا الَّذِينَ آمَنُوا وَعَمِلُوا الصَّالِحَاتِ

100. ಇಲ್ಲಿ ಸ್ವತಃ ಮಸೀಹ್‌ರನ್ನು(ಅ) 'ರೂಹುಮ್ಮಿನ್‌ಹು' (ದೇವ ವತಿಯಿಂದ ಒಂದು ಆತ್ಮ) ಎನ್ನಲಾಗಿದೆ. ಅಲ್‌ಬಕರಃ ಅಧ್ಯಾಯದ 87ನೆಯ ಸೂಕ್ತದಲ್ಲಿ ಈ ವಿಷಯವನ್ನು ಈ ರೀತಿ ಪ್ರಸ್ತಾಪಿಸಲಾಗಿದೆ. "ನಾವು ಪವಿತ್ರಾತ್ಮದ ಮೂಲಕ ಅವರಿಗೆ ಸಹಾಯ ಮಾಡಿದೆವು" ಈ ಎರಡು ಉಲ್ಲೇಖಗಳ ಅರ್ಥವೇನೆಂದರೆ, ಅಲ್ಲಾಹನು ಮಸೀಹ್‌ರಿಗೆ(ಅ) ಪವಿತ್ರಾತ್ಮವನ್ನು ನೀಡಿದ್ದನು. ಅದು ಕೇಡನ್ನು ಅರಿಯದ, ಸಾದ್ಯಂತ ಸತ್ಯ ಮತ್ತು ಪ್ರಾಮಾಣಿಕತೆಯಿಂದ ಕೂಡಿದ ಮತ್ತು ಅಡಿಯಿಂದ ಮುಡಿತನಕ ಸುಶೀಲವಾದ ಆತ್ಮವಾಗಿತ್ತು. ಕ್ರೈಸ್ತರು ಇದರಲ್ಲೇ ಅತಿರೇಕ ಮಾಡಿದರು. 'ರೂಹುಮ್ಮಿನಲ್ಲಾಹ್'ವನ್ನು ಅವರು ಅಲ್ಲಾಹನ ಆತ್ಮವೆಂದು ಭಾವಿಸಿದರು. ರೂಹುಲ್ ಕುದುಸ್ (Holy Ghost) ಎಂದರೆ ಮಸೀಹ್‌ರಲ್ಲಿ(ಅ) ಅಂತರ್‌ಲೀನಗೊಂಡ ಅಲ್ಲಾಹನ ಪವಿತ್ರಾತ್ಮವೆಂದು ಕಲ್ಪಿಸಿದರು. ಹೀಗೆ ಅಲ್ಲಾಹ್ ಮತ್ತು ಮಸೀಹ್‌ರ(ಅ) ಜತೆಗೆ 'ರೂಹುಲ್ ಕುದುಸ್'(ಪವಿತ್ರಾತ್ಮ)ನನ್ನು ಅವರು ಮೂರನೆಯ ದೇವನಾಗಿ ಮಾಡಿದರು.

101. ಅರ್ಥಾತ್- ನಿಮ್ಮಲ್ಲಿ ಯಾವ ರೂಪದಲ್ಲಾದರೂ ಇರುವ ತ್ರಿದೇವತ್ವದ ವಿಶ್ವಾಸವನ್ನು ತೊರೆದು ಬಿಡಿರಿ. ಕ್ರೈಸ್ತರು ವಾಸ್ತವದಲ್ಲಿ ಏಕಕಾಲಕ್ಕೆ ಏಕದೇವತ್ವದಲ್ಲೂ ತ್ರಿದೇವತ್ವದಲ್ಲೂ ವಿಶ್ವಾಸವಿಡುತ್ತಾರೆ. ಇಂಜೀಲ್(ಬೈಬಲ್)ನಲ್ಲಿ ಕಂಡು ಬರುವ ಮಸೀಹ್‌ರ(ಅ) ಸ್ಪಷ್ಟೋಕ್ತಿಗಳ ಆಧಾರದಲ್ಲಿ 'ದೇವನು ಏಕನಾಗಿದ್ದಾನೆ. ಅವನ ಹೊರತು ಇನ್ನಾವ ದೇವನೂ ಇಲ್ಲ' ಎಂಬುದನ್ನು ಯಾವ ಕ್ರೈಸ್ತನೂ ನಿರಾಕರಿಸಲಾರನು. ಏಕದೇವತ್ವವೇ ನಿಜವಾದ ಧರ್ಮವೆಂದು ಒಪ್ಪಿಕೊಳ್ಳದೇ ಅವರಿಗೆ ಬೇರೆ ದಾರಿ ಇಲ್ಲ. ಆದರೆ ಮಸೀಹ್‌ರ(ಅ) ವ್ಯಕ್ತಿತ್ವಕ್ಕೆ ಅತಿರೇಕವೆಸಗುವ ಮೂಲಕ ಅವರು ತ್ರಿದೇವತ್ವವನ್ನೂ ಪ್ರತಿಪಾದಿಸುತ್ತಿದ್ದಾರೆ. ಈ ತನಕ ಈ ಎರಡು ವಿರೋಧಾಭಾಸದ ವಿಶ್ವಾಸಗಳನ್ನು ಒಟ್ಟೊಟ್ಟಿಗೇ ಹೇಗೆ ಒಪ್ಪಿಕೊಳ್ಳುವುದು ಎಂದು ನಿರ್ಧರಿಸಲು ಅವರಿಗೆ ಸಾಧ್ಯವಾಗಿಲ್ಲ.

102. ಇದು ಕ್ರೈಸ್ತರ ನಾಲ್ಕನೆಯ ಅತಿರೇಕದ ಖಂಡನೆಯಾಗಿದೆ. ಕ್ರೈಸ್ತರ ಉಲ್ಲೇಖಗಳು ಒಂದು ವೇಳೆ ಸರಿಯೇ ಆಗಿದ್ದರೆ, ಅವುಗಳ (ವಿಶೇಷವಾಗಿ ಪ್ರಥಮ ಮೂರು ಬೈಬಲ್‌ಗಳ) ಮೂಲಕ ತಿಳಿದು ಬರುವುದೇನೆಂದರೆ ಮಸೀಹರು(ಅ) ದೇವ ಮತ್ತು ದಾಸರ ನಡುವಿನ ಸಂಬಂಧವನ್ನು ತಂದೆ ಮತ್ತು ಮಗನ ಸಂಬಂಧಕ್ಕೆ ಹೋಲಿಸಿದ್ದಾರೆ. ದೇವನಿಗೆ ತಂದೆ ಎಂಬ ಪದವನ್ನು ಕೇವಲ ಹೋಲಿಕೆ ಮತ್ತು ಅಲಂಕಾರಕ್ಕಾಗಿ ಅವರು ಪ್ರಯೋಗಿಸಿದ್ದಾರೆ. ಇದು ಕೇವಲ ಮಸೀಹ್‌ರಿಗೆ(ಅ) ಸಲ್ಲುವ ವಿಶೇಷತೆಯಲ್ಲ. ಹಿಂದಿನ ಕಾಲದಿಂದಲೇ ಬನೀ ಇಸ್ರಾಈಲರು ದೇವನಿಗೆ ತಂದೆ ಎಂಬ ಪದವನ್ನು ಉಪಯೋಗಿಸುತ್ತಾ ಬಂದಿದ್ದರು. ಬೈಬಲ್‌ನ ಹಳೆಯ ಒಡಂಬಡಿಕೆಯಲ್ಲಿ ಅದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಮಸೀಹ್‌ರು(ಅ) ತಮ್ಮ ಜನಾಂಗದ ವಾಡಿಕೆಗೆ ಅನುಸಾರವಾಗಿಯೇ ಈ ಪದವನ್ನು ಉಪಯೋಗಿಸಿದರು. ಅವರು ದೇವನನ್ನು ತನ್ನ ಮಾತ್ರವಲ್ಲ, ಎಲ್ಲರ ತಂದೆ ಎಂದು ಕರೆಯುತ್ತಿದ್ದರು. ಕ್ರೈಸ್ತರು ಇಲ್ಲಿ ಪುನಃ ಅತಿರೇಕವೆಸಗಿದರು. ಅವರು ಮಸೀಹ್‌ರನ್ನು(ಅ) ದೇವನ 'ಏಕೈಕ' ಪುತ್ರನೆಂದು ಸಾರಿದರು.

ಪ್ರತಿಫಲವನ್ನು ಸರ್ವ ಸಂಪೂರ್ಣ ಪಡೆಯುವರು. ಮಾತ್ರವಲ್ಲದೆ ಅಲ್ಲಾಹ್ ಅವರಿಗೆ ತನ್ನ ಅನುಗ್ರಹದಿಂದ ಇನ್ನಷ್ಟು ಹೆಚ್ಚು ಪುರಸ್ಕಾರವನ್ನು ದಯಪಾಲಿಸುವನು. ದಾಸ್ಯ-ಆರಾಧನೆಗೆ ಸಂಕೋಚ ಪಟ್ಟವರಿಗೆ ಹಾಗೂ ಅಹಂಭಾವ ತೋರಿಸಿದವರಿಗೆ ಅಲ್ಲಾಹ್ ವೇದನಾಯುಕ್ತ ಯಾತನೆ ಕೊಡುವನು. ಅವರು ಅಲ್ಲಾಹನ ಹೊರತು ಇತರ ಯಾರೆಲ್ಲರ ರಕ್ಷಣೆ ಮತ್ತು ಸಹಾಯಗಳ ಮೇಲೆ ಭರವಸೆಯನ್ನಿಡುತ್ತಾರೋ ಅವರ ಪೈಕಿ ಯಾರನ್ನೂ ಅಲ್ಲಿ ಕಾಣಲಾರರು.

فَيُوَفِّيهِمْ أُجُورَهُمْ وَيَزِيدُهُم مِّن فَضْلِهِۦ ۖ وَأَمَّا ٱلَّذِينَ ٱسْتَنكَفُوا۟ وَٱسْتَكْبَرُوا۟ فَيُعَذِّبُهُمْ عَذَابًا أَلِيمًا وَلَا يَجِدُونَ لَهُم مِّن دُونِ ٱللَّهِ وَلِيًّا وَلَا نَصِيرًا ﴿١٧٣﴾

174. ಓ ಜನರೇ, ನಿಮ್ಮ ಪಾಲಕ ಪ್ರಭುವಿನ ವತಿಯಿಂದ ನಿಮ್ಮ ಬಳಿಗೆ ಸುವ್ಯಕ್ತ ಪ್ರಮಾಣವು ಬಂದು ಬಿಟ್ಟಿದೆ. ನಾವು ನಿಮಗೆ ಸ್ಪಷ್ಟವಾಗಿ ದಾರಿ ತೋರಿಸಿಕೊಡುವಂತಹ ಜ್ಯೋತಿಯನ್ನು ಕಳುಹಿಸಿದ್ದೇವೆ.

يَـٰٓأَيُّهَا ٱلنَّاسُ قَدْ جَآءَكُم بُرْهَـٰنٌ مِّن رَّبِّكُمْ وَأَنزَلْنَآ إِلَيْكُمْ نُورًا مُّبِينًا ﴿١٧٤﴾

175. ಇನ್ನು ಯಾರು ಅಲ್ಲಾಹನ ಮಾತನ್ನು ಕೇಳಿ ನಡೆಯುವರೋ ಮತ್ತು ಅವನ ಅಭಯವನ್ನರಸುವರೋ ಅವರನ್ನು ಅಲ್ಲಾಹ್ ತನ್ನ ಕೃಪೆ ಹಾಗೂ ತನ್ನ ಅನುಗ್ರಹಗಳ ಆಶ್ರಯದಲ್ಲಿ ತೆಗೆದುಕೊಳ್ಳುವನು ಮತ್ತು ತನ್ನ ಕಡೆಗೆ ಬರುವ ನೇರ ಮಾರ್ಗವನ್ನು ತೋರಿಸಿಕೊಡುವನು.

فَأَمَّا ٱلَّذِينَ ءَامَنُوا۟ بِٱللَّهِ وَٱعْتَصَمُوا۟ بِهِۦ فَسَيُدْخِلُهُمْ فِى رَحْمَةٍ مِّنْهُ وَفَضْلٍ وَيَهْدِيهِمْ إِلَيْهِ صِرَٰطًا مُّسْتَقِيمًا ﴿١٧٥﴾

176. ಓ ಪೈಗಂಬರರೇ, ಜನರು ನಿಮ್ಮೊಡನೆ 'ಕಲಾಲಃ'ದ[103] ಕುರಿತು ಧರ್ಮವಿಧಿ ಕೇಳುತ್ತಾರೆ. ಹೇಳಿರಿ: ಅಲ್ಲಾಹ್ ನಿಮಗೆ ಹೀಗೆ ಧರ್ಮವಿಧಿ ಕೊಡುತ್ತಾನೆ. ಯಾರಾದರೂ ಸಂತತಿಹೀನನಾಗಿ ಮೃತಪಟ್ಟರೆ ಮತ್ತು ಅವನಿಗೆ ಒಬ್ಬಳೇ ಸಹೋದರಿ[104] ಇದ್ದರೆ, ಅವಳು ಅವನು ಬಿಟ್ಟುಹೋಗುವ ಸೊತ್ತಿನಿಂದ ಅರ್ಧಾಂಶ ಪಡೆಯುವಳು ಮತ್ತು ಸಹೋದರಿಯು ಸಂತತಿ ವಿಹೀನಳಾಗಿ

يَسْتَفْتُونَكَ قُلِ ٱللَّهُ يُفْتِيكُمْ فِى ٱلْكَلَـٰلَةِ ۚ إِنِ ٱمْرُؤٌا۟ هَلَكَ لَيْسَ لَهُۥ وَلَدٌ وَلَهُۥٓ أُخْتٌ فَلَهَا نِصْفُ مَا تَرَكَ ۚ وَهُوَ يَرِثُهَآ إِن لَّمْ يَكُن لَّهَا وَلَدٌ ۚ فَإِن كَانَتَا ٱثْنَتَيْنِ فَلَهُمَا ٱلثُّلُثَانِ مِمَّا تَرَكَ ۚ وَإِن كَانُوٓا۟ إِخْوَةً

103. 'ಕಲಾಲಃ' ಎಂದರೆ ಭಿನ್ನಾಭಿಪ್ರಾಯವೆಂದರ್ಥ. ಕೆಲವರ ಪ್ರಕಾರ ಮಕ್ಕಳಿಲ್ಲದ ಮತ್ತು ತಂದೆ-ತಾತಂದಿರೂ ಬದುಕಿಲ್ಲದ ವ್ಯಕ್ತಿಯನ್ನು ಕಲಾಲಃ ಎನ್ನುತ್ತಾರೆ. ಇನ್ನು ಕೆಲವರ ಪ್ರಕಾರ ಮಕ್ಕಳಿಲ್ಲದೆ ನಿಧನನಾಗುವವನನ್ನು ಕಲಾಲಃ ಎನ್ನುತ್ತಾರೆ. ಆದರೆ ಹೆಚ್ಚಿನ ಕರ್ಮಶಾಸ್ತ್ರಜ್ಞರು ಇದು ಮೊದಲ ಅರ್ಥದಲ್ಲೇ ಪ್ರಯೋಗವಾಗುತ್ತದೆ ಎಂಬ ಹ. ಅಬೂಬಕರ್(ರ) ಅಭಿಪ್ರಾಯವನ್ನು ಮಾನ್ಯ ಮಾಡುತ್ತಾರೆ. ಪವಿತ್ರ ಕುರ್‌ಆನಿನಲ್ಲೂ ಇದಕ್ಕೆ ಸಮರ್ಥನೆ ದೊರೆಯುತ್ತದೆ. ಏಕೆಂದರೆ ಅದರಲ್ಲಿ ಕಲಾಲಃನ ಸಹೋದರಿ ಅರ್ಧಾಂಶ ಸೊತ್ತಿನ ವಾರೀಸುದಾರಳು ಎನ್ನಲಾಗಿದೆ. ಕಲಾಲಃನ ತಂದೆ ಜೀವಂತವಿರುತ್ತಿದ್ದರೆ ಅವನ ಸೋದರಿಗೆ ಸೊತ್ತಿನಲ್ಲಿ ಪಾಲು ಸಿಗುವ ಪ್ರಮೇಯವೇ ಉದ್ಭವಿಸುವುದಿಲ್ಲ.

104. ಇಲ್ಲಿ ಮೃತನ ತಂದೆ-ತಾಯಿಗಳಿಬ್ಬರ ಮೂಲಕವೂ ಅಥವಾ ತಂದೆಯ ಮೂಲಕ ಮಾತ್ರ ಸಂಬಂಧ ಹೊಂದಿರುವ ಸೋದರ-ಸೋದರಿಯರ ಆಸ್ತಿಯ ಹಕ್ಕನ್ನು ಪ್ರಸ್ತಾಪಿಸಲಾಗಿದೆ. ಹ. ಅಬೂಬಕರ್(ರ) ಒಮ್ಮೆ ಪ್ರವಚನವೊಂದರಲ್ಲಿ ಇದರ ಅರ್ಥವನ್ನು ವಿವರಿಸಿದ್ದರು. ಆ ಬಗ್ಗೆ ಸಹಾಬಿಗಳಾರೂ ಆಕ್ಷೇಪವೆತ್ತಿರಲಿಲ್ಲ. ಆದ್ದರಿಂದ ಇದು ಸರ್ವಸಮ್ಮತ ವಿಷಯವಾಗಿದೆ.

رِّجَالًا وَّنِسَآءً فَلِلذَّكَرِ مِثْلُ حَظِّ الْاُنْثَيَيْنِ ۗ يُبَيِّنُ اللّٰهُ لَكُمْ اَنْ تَضِلُّوْا ۗ وَاللّٰهُ بِكُلِّ شَيْءٍ عَلِيْمٌ ﴿١٧٦﴾

ಮೃತಳಾದರೆ, ಸಹೋದರನು ಅವಳ ವಾರೀಸುದಾರನಾಗುವನು.[105] ಮೃತನ ವಾರೀಸುದಾರರಾಗಿ ಇಬ್ಬರು ಸಹೋದರಿಯರಿದ್ದರೆ ಅವರು ಸೊತ್ತಿನ ಮೂರರಲ್ಲೆರಡಂಶದ ಹಕ್ಕುದಾರರಾಗುವರು.[106] ಅನೇಕ ಮಂದಿ ಸಹೋದರ ಸಹೋದರಿಯರಿದ್ದರೆ ಸ್ತ್ರೀಯರಿಗೆ ಒಂದು ಮತ್ತು ಪುರುಷರಿಗೆ ಇಮ್ಮಡಿ ಪಾಲು ಸಿಗುವುದು. ನೀವು ದಾರಿತಪ್ಪಿ ಅಲೆಯದಂತೆ ಅಲ್ಲಾಹನು ನಿಮಗಾಗಿ ಆದೇಶಗಳನ್ನು ವಿಶದೀಕರಿಸುತ್ತಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿನ ಜ್ಞಾನವುಳ್ಳವನಾಗಿರುತ್ತಾನೆ.

105. ಅರ್ಥಾತ್- ಇತರ ಅಧಿಕೃತ ಹಕ್ಕುದಾರರಿಲ್ಲದಿದ್ದರೆ ಸಹೋದರನು ಆಕೆಯ ಪೂರ್ಣ ಸೊತ್ತಿಗೆ ವಾರೀಸುದಾರನಾಗುವನು. ಇತರ ಹಕ್ಕುದಾರರು ಇದ್ದ ಪಕ್ಷದಲ್ಲಿ (ಉದಾಃ ಪತಿ), ಅವರ ಪಾಲನ್ನು ನೀಡಿದ ಬಳಿಕ ಉಳಿದ ಸೊತ್ತು ಸಹೋದರನಿಗೆ ಸಿಗುವುದು.

106. ಎರಡಕ್ಕಿಂತ ಹೆಚ್ಚು ಸೋದರಿಯರಿದ್ದರೂ ಈ ಆದೇಶ ಅನ್ವಯಿಸುತ್ತದೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಓ ಸತ್ಯವಿಶ್ವಾಸಿಗಳೇ, ನಿರ್ಬಂಧಗಳನ್ನು ಕಟ್ಟುನಿಟ್ಟಾಗಿ ಪಾಲಿಸಿರಿ.[1] ನಿಮಗೆ 'ಅನ್‌ಆಮ್' ವರ್ಗದ ಎಲ್ಲ ಪ್ರಾಣಿಗಳನ್ನು ಧರ್ಮ ಸಮ್ಮತಗೊಳಿಸಲಾಗಿದೆ;[2] ಮುಂದೆ ತಿಳಿಸಲ್ಪಡುವ ಪ್ರಾಣಿಗಳ ಹೊರತು - ಆದರೆ ಇಹ್ರಾಮಿನ ಸ್ಥಿತಿಯಲ್ಲಿ ನೀವು ಬೇಟೆಯನ್ನು ಧರ್ಮಸಮ್ಮತಗೊಳಿಸಿಕೊಳ್ಳಬೇಡಿರಿ. ನಿಸ್ಸಂದೇಹವಾಗಿಯೂ ಅಲ್ಲಾಹನು ತಾನಿಚ್ಛಿಸುವ ಆಜ್ಞೆಯನ್ನು ನೀಡುತ್ತಾನೆ.

يٰۤاَيُّهَا الَّذِيْنَ اٰمَنُوْۤا اَوْفُوْا بِالْعُقُوْدِ ۗ اُحِلَّتْ لَكُمْ بَهِيْمَةُ الْاَنْعَامِ اِلَّا مَا يُتْلٰى عَلَيْكُمْ غَيْرَ مُحِلِّى الصَّيْدِ وَاَنْتُمْ حُرُمٌ ؕ اِنَّ اللّٰهَ يَحْكُمُ مَا يُرِيْدُ ①

2. ಓ ಸತ್ಯವಿಶ್ವಾಸಿಗಳೇ, ದೇವೋಪಾಸನೆಯ 'ಲಾಂಛನ'ಗಳನ್ನು ಅವಮಾನಿಸಬೇಡಿರಿ.[3] ನಿಷಿದ್ಧ ಮಾಸಗಳ ಪೈಕಿ ಯಾವುದನ್ನೂ ಧರ್ಮಸಮ್ಮತಗೊಳಿಸಬಾರದು. ಬಲಿ ಪ್ರಾಣಿಗಳನ್ನು ಪೀಡಿಸ ಬಾರದು. ಅಲ್ಲಾಹನಿಗೆ ಮುಡಿಪಾಗಿರಿಸಿದ್ದರ ದ್ಯೋತಕವಾಗಿ ಕೊರಳಲ್ಲಿ ಪಟ್ಟಿಯಿರುವ ಪ್ರಾಣಿಗಳನ್ನು ಪೀಡಿಸಬಾರದು. ತಮ್ಮ

يٰۤاَيُّهَا الَّذِيْنَ اٰمَنُوْا لَا تُحِلُّوْا شَعَآئِرَ اللّٰهِ وَلَا الشَّهْرَ الْحَرَامَ وَلَا الْهَدْىَ وَلَا الْقَلَآئِدَ وَلَاۤ آٰمِّيْنَ الْبَيْتَ الْحَرَامَ يَبْتَغُوْنَ فَضْلًا مِّنْ رَّبِّهِمْ وَرِضْوَانًا ؕ

1. ಅರ್ಥಾತ್- ನಿಮ್ಮ ಮೇಲೆ ವಿಧಿಸಲಾಗಿರುವ ಮೇರೆ ಮತ್ತು ನಿಬಂಧನೆಗಳನ್ನು ಪಾಲಿಸಿರಿ.
2. 'ಅನ್‌ಆಮ್' ಎಂಬ ಪದವು ಅರಬಿ ಭಾಷೆಯಲ್ಲಿ ಒಂಟೆ, ಹಸು, ಕುರಿ, ಆಡು ಇತ್ಯಾದಿ ಜಾನುವಾರುಗಳಿಗೆ ಪ್ರಯೋಗವಾಗುತ್ತದೆ. 'ಬಹೀಮ' ಎಂದು ಎಲ್ಲಾ ಚತುಷ್ಪಾದಿಗಳಿಗೂ ಹೇಳುತ್ತಾರೆ. "ಜಾನುವಾರಿನ ರೂಪದ ಎಲ್ಲಾ ಚತುಷ್ಪಾದಿಗಳನ್ನು ನಿಮಗೆ ಧರ್ಮಸಮ್ಮತಗೊಳಿಸಲಾಗಿದೆ." ಅಂದರೆ ಕೋರೆ ಹಲ್ಲುಗಳಿಲ್ಲದ, ಮಾಂಸಾಹಾರದ ಬದಲಿಗೆ ಸಸ್ಯಾಹಾರ ಸೇವಿಸುವ, ಪ್ರಾಣಿ ಸದೃಶ ಗುಣಗಳಲ್ಲಿ ಜಾನುವಾರುಗಳಿಗೆ ಹೋಲುವ ಎಲ್ಲಾ ಚತುಷ್ಪಾದಿ ಜಾನುವಾರುಗಳು. "ಬೇಟೆಯಾಡಿ ತಿನ್ನುವ ಪ್ರಾಣಿ ಮತ್ತು ಪಕ್ಷಿಗಳು, ಸತ್ತ ಪ್ರಾಣಿಯ ಮಾಂಸ ಭಕ್ಷಿಸುವ ಪ್ರಾಣಿಗಳು ನಿಷಿದ್ಧವಾಗಿವೆ" ಎನ್ನುವ ಮೂಲಕ ಪ್ರವಾದಿವರ್ಯರು(ಸ) ಇದಕ್ಕೆ ಸ್ಪಷ್ಟೀಕರಣ ನೀಡಿದ್ದಾರೆ.
3. ಯಾವುದೇ ಪಂಥ, ವಿಶ್ವಾಸ, ತತ್ವಾದರ್ಶ ಅಥವಾ ವ್ಯವಸ್ಥೆಯನ್ನು ಪ್ರತಿನಿಧಿಸುವ ಎಲ್ಲಾ ವಸ್ತುಗಳು ಅದರ ಲಾಂಛನಗಳೆನಿಸಿಕೊಳ್ಳುತ್ತವೆ. ಏಕೆಂದರೆ ಅವು ಅದರ ಸೂಚಕ ಮತ್ತು ಗುರುತುಗಳಾಗಿವೆ. ಸರ್ಕಾರಿ ಧ್ವಜ, ಸೇನೆ ಮತ್ತು ಆರಕ್ಷಕರ ಸಮವಸ್ತ್ರ, ನಾಣ್ಯಗಳು, ನೋಟುಗಳು, ಅಂಚೆಚೀಟಿ ಇತ್ಯಾದಿಗಳು ಸರ್ಕಾರದ ಚಿಹ್ನೆಗಳಾಗಿವೆ. ಚರ್ಚು, ಬಲಿಪೀಠ ಮತ್ತು ಶಿಲುಬೆ ಕ್ರೈಸ್ತ ಧರ್ಮದ ಲಾಂಛನಗಳಾಗಿವೆ. ಜುಟ್ಟು, ಜನಿವಾರ ಮತ್ತು ಮಂದಿರ ಬ್ರಾಹ್ಮಣರ ಲಾಂಛನಗಳಾಗಿವೆ. ಕೇಶ, ಕಡಗ ಮತ್ತು ಕೃಪಾಣ ಸಿಕ್ಖ್ ಧರ್ಮದ ಲಾಂಛನಗಳಾಗಿವೆ. ಕತ್ತಿ ಮತ್ತು ಸುತ್ತಿಗೆ ಕಮ್ಯುನಿಸಮ್‌ನ ಲಾಂಛನವಾಗಿದೆ. ಈ ಎಲ್ಲಾ ಪಂಥಗಳು ತಮ್ಮ ಹಿಂಬಾಲಕರು ಆ ಲಾಂಛನಗಳನ್ನು ಗೌರವಿಸಬೇಕೆಂದು ಬಯಸುತ್ತವೆ. ಯಾವುದೇ ವ್ಯವಸ್ಥೆಯ ಲಾಂಛನಗಳ ಪೈಕಿ ಯಾವುದಾದರೂ ಒಂದಕ್ಕೆ ಯಾರಾದರೂ ಅಗೌರವ ತೋರಿದರೆ ಅವನು ಆ

ಪ್ರಭುವಿನ ಅನುಗ್ರಹ ಹಾಗೂ ಅವನ ಸಂಪ್ರೀತಿಯನ್ನರಸುತ್ತ ಪವಿತ್ರಾಲಯ(ಕಅಬಾ)ದ ಕಡೆ ಹೋಗುತ್ತಿರುವವರನ್ನು ಕೆಣಕಬಾರದು. ಇಹ್ರಾಮಿನ ಸ್ಥಿತಿಯು ಮುಗಿದ ಬಳಿಕ ನೀವು ಬೇಟೆಯಾಡಬಹುದು. ಒಂದು ಕೂಟವು ನಿಮಗೆ 'ಮಸ್ಜಿದುಲ್ ಹರಾಮ್'ನ ದಾರಿಯನ್ನು ಮುಚ್ಚಿ ಬಿಟ್ಟಿದ್ದರ ಬಗ್ಗೆ ನಿಮಗಿರುವ ಕೋಪವು ನಿಮ್ಮನ್ನು ಅಯುಕ್ತ ರೀತಿಯ ಅತಿರೇಕಗಳನ್ನೆಸಗುವಷ್ಟು ಉದ್ರೇಕಿಸದಿರಲಿ.[4] ಪುಣ್ಯ ಹಾಗೂ ದೇವಭಯದ ಕಾರ್ಯಗಳಲ್ಲಿ ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ. ಅಲ್ಲಾಹನನ್ನು ಭಯಪಡಿರಿ. ಅವನ ಶಿಕ್ಷೆಯು ಅತ್ಯಂತ ಕಠಿಣವಾಗಿರುತ್ತದೆ.

وَإِذَا حَلَلْتُمْ فَاصْطَادُوا ۚ وَلَا يَجْرِمَنَّكُمْ شَنَآنُ قَوْمٍ أَنْ صَدُّوكُمْ عَنِ الْمَسْجِدِ الْحَرَامِ أَنْ تَعْتَدُوا ۘ وَتَعَاوَنُوا عَلَى الْبِرِّ وَالتَّقْوَىٰ ۖ وَلَا تَعَاوَنُوا عَلَى الْإِثْمِ وَالْعُدْوَانِ ۚ وَاتَّقُوا اللَّهَ ۖ إِنَّ اللَّهَ شَدِيدُ الْعِقَابِ ﴿٢﴾

وقف لازم

3. ನಿಮಗೆ ಇವು ನಿಷಿದ್ಧಗೊಳಿಸಲ್ಪಟ್ಟಿವೆ - ಶವ, ರಕ್ತ, ಹಂದಿಮಾಂಸ, ಅಲ್ಲಾಹನ ಹೊರತು ಇತರರ ಹೆಸರಲ್ಲಿ 'ದಿಬ್ಹ್' ಮಾಡಲ್ಪಟ್ಟ (ಚೂರಿ ಹಾಕಲ್ಪಟ್ಟ) ಪ್ರಾಣಿ, ಉಸಿರುಕಟ್ಟಿ ಅಥವಾ ಪೆಟ್ಟು ತಾಗಿ ಅಥವಾ ಎತ್ತರದಿಂದ ಬಿದ್ದು ಅಥವಾ ಘರ್ಷಿಸಲ್ಪಟ್ಟು ಅಥವಾ ಕ್ರೂರಮೃಗದಿಂದ ಹರಿದು ಹಾಕಲ್ಪಟ್ಟು ಸತ್ತ ಪ್ರಾಣಿ. - ಆದರೆ ನೀವು ಜೀವಂತ ಪಡೆದು 'ದಿಬ್ಹ್' ಮಾಡಿದ ಪ್ರಾಣಿಯು ಇದಕ್ಕೆ ಹೊರತಾಗಿದೆ. ಯಾವುದಾದರೂ ಗುಡಿಯ[5] ಮುಂದೆ ಬಲಿಕೊಡಲ್ಪಟ್ಟ ಪ್ರಾಣಿ, ಅಲ್ಲದೆ ಜೂಜಿನ ಮೂಲಕ ಅದೃಷ್ಟ ಪರೀಕ್ಷೆ ಮಾಡುವುದು ಇವೆಲ್ಲ ಧರ್ಮಭ್ರಷ್ಟತೆಯ ಕಾರ್ಯಗಳು. ಇಂದು ಸತ್ಯನಿಷೇಧಿಗಳಿಗೆ ನಿಮ್ಮ ಧರ್ಮದ ಬಗ್ಗೆ

حُرِّمَتْ عَلَيْكُمُ الْمَيْتَةُ وَالدَّمُ وَلَحْمُ الْخِنْزِيرِ وَمَا أُهِلَّ لِغَيْرِ اللَّهِ بِهِ وَالْمُنْخَنِقَةُ وَالْمَوْقُوذَةُ وَالْمُتَرَدِّيَةُ وَالنَّطِيحَةُ وَمَا أَكَلَ السَّبُعُ إِلَّا مَا ذَكَّيْتُمْ وَمَا ذُبِحَ عَلَى النُّصُبِ وَأَنْ تَسْتَقْسِمُوا بِالْأَزْلَامِ ۚ ذَٰلِكُمْ فِسْقٌ ۗ الْيَوْمَ يَئِسَ الَّذِينَ كَفَرُوا مِنْ دِينِكُمْ فَلَا تَخْشَوْهُمْ وَاخْشَوْنِ ۚ الْيَوْمَ أَكْمَلْتُ لَكُمْ دِينَكُمْ

ವ್ಯವಸ್ಥೆಯೊಂದಿಗೆ ವೈರತ್ವ ಹೊಂದಿರುವುದನ್ನು ಅದು ಸೂಚಿಸುತ್ತದೆ. ಅಗೌರವ ತೋರುವವನು ಆ ವ್ಯವಸ್ಥೆಯ ಅಡಿಯಲ್ಲಿರುವವನೇ ಆಗಿದ್ದರೆ ಅವನ ವರ್ತನೆ ವ್ಯವಸ್ಥೆಯ ವಿರುದ್ಧ ನಡೆಸುವ ಬಂಡಾಯಕ್ಕೆ ಸಮಾನವಾಗಿದೆ. 'ಶಆಇರುಲ್ಲಾಹ್' (ಅಲ್ಲಾಹನ ಲಾಂಛನಗಳು) ಎಂದರೆ, ಬಹುದೇವಾರಾಧನೆ, ಸತ್ಯನಿಷೇಧ, ನಾಸ್ತಿಕತೆಗೆ ವಿರುದ್ಧವಾಗಿ ನಿಷ್ಕಳಂಕ ಏಕದೇವೋಪಾಸನೆಯ ವಿಶ್ವಾಸವನ್ನು ಪ್ರತಿನಿಧಿಸುವ ಎಲ್ಲಾ ಗುರುತು ಮತ್ತು ಸಂಕೇತಗಳಾಗಿವೆ.

4. ಸತ್ಯ ನಿಷೇಧಿಗಳು ಆಗ ಕಅಬಾ ಸಂದರ್ಶನದಿಂದ ಮುಸ್ಲಿಮರನ್ನು ತಡೆಯುವ ಮೂಲಕ ಹಜ್ಜ್‌ಕರ್ಮದಿಂದ ಅವರನ್ನು ವಂಚಿತಗೊಳಿಸಿದ್ದರು. ಆದ್ದರಿಂದ ಇಸ್ಲಾಮೀ ಆಕ್ರಮಿತ ಪ್ರದೇಶಗಳ ಮೂಲಕ ಹಾದು ಹೋಗುವ ಸತ್ಯನಿಷೇಧಿಗಳ ಗೋತ್ರಗಳನ್ನು ಹಜ್ಜ್‌ನಿಂದ ತಡೆಯಬೇಕು ಮತ್ತು ಹಜ್ಜ್‌ನ ಕಾಲದಲ್ಲಿ ಅವರ ಯಾತ್ರಾ ತಂಡಗಳ ಮೇಲೆ ದಾಳಿ ನಡೆಸಬೇಕು ಎಂಬ ಭಾವನೆ ಮುಸ್ಲಿಮರಲ್ಲಿ ಮೊಳೆಯಿತು. ಆದರೆ ಅಲ್ಲಾಹನು ಈ ಸೂಕ್ತವನ್ನು ಅವತೀರ್ಣಗೊಳಿಸುವ ಮೂಲಕ ಅವರನ್ನು ಇಂತಹ ವಿಚಾರಗಳಿಂದ ತಡೆದನು.

5. ಮೂಲದಲ್ಲಿ 'ನುಸುಬ್' ಎಂಬ ಪದ ಪ್ರಯೋಗವಾಗಿದೆ. ಅರ್ಥಾತ್ ಅಲ್ಲಾಹೇತರರಿಗೆ ಹರಕೆ ಹೊರಲಿಕ್ಕಾಗಿ ಮತ್ತು ಬಲಿಯರ್ಪಿಸಲಿಕ್ಕಾಗಿ ಜನರು ನಿಗದಿಪಡಿಸಿರುವ ಎಲ್ಲಾ ಸ್ಥಳಗಳಾಗಿವೆ. ಅಲ್ಲಿ ಯಾವುದೇ ಕಲ್ಲು ಅಥವಾ ಮರದ ಮೂರ್ತಿ ಇದ್ದರೂ ಇಲ್ಲದಿದ್ದರೂ ಸರಿಯೇ. ಯಾವುದೇ ಪುಣ್ಯಪುರುಷ, ದೇವಿ, ದೇವತೆ ಅಥವಾ ಬಹುದೇವರಾಧನೆಯಿಂದ ಕೂಡಿದ ಯಾವುದಾದರೂ ವಿಶ್ವಾಸದೊಂದಿಗೆ ಗುರುತಿಸಲ್ಪಡುವ ಇಂತಹ ಸ್ಥಳಗಳನ್ನು ನಮ್ಮ ಭಾಷೆಯಲ್ಲಿ 'ಗುಡಿ' ಎನ್ನುತ್ತೇವೆ. ಇಂತಹ ಯಾವುದೇ ಸ್ಥಳಗಳಲ್ಲಿ ಕೊಯ್ಯಲ್ಪಟ್ಟ ಪ್ರಾಣಿ ನಿಷಿದ್ಧವಾಗಿದೆ.

ವَأَتْمَمْتُ عَلَيْكُمْ نِعْمَتِي وَرَضِيتُ لَكُمُ الْإِسْلَامَ دِينًا ۚ فَمَنِ اضْطُرَّ فِي مَخْمَصَةٍ غَيْرَ مُتَجَانِفٍ لِإِثْمٍ ۙ فَإِنَّ اللَّهَ غَفُورٌ رَحِيمٌ ﴿٣﴾

ಸಂಪೂರ್ಣ ನಿರಾಶೆಯುಂಟಾಗಿರುತ್ತದೆ. ಆದುದರಿಂದ ನೀವು ಅವರನ್ನು ಭಯ ಪಡಬೇಡಿರಿ; ನನ್ನನ್ನು ಭಯಪಡಿರಿ.[6] ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ. (ಆದುದರಿಂದ ನಿಮಗೆ ವಿಧಿಸಿರುವ ಸಮ್ಮತ ಮತ್ತು ನಿಷೇಧದ ನಿರ್ಬಂಧಗಳನ್ನು ಪಾಲಿಸಿರಿ.)[7] ಆದರೆ ಪಾಪದ ಕಡೆಗೆ ಒಲವಿಲ್ಲದೆ ಹಸಿವೆಯಿಂದ ವಿವಶನಾಗಿ ಯಾರಾದರೂ ಅವುಗಳ ಪೈಕಿ ಏನನ್ನಾದರೂ ತಿಂದು ಬಿಟ್ಟರೆ, ಅಲ್ಲಾಹನು ನಿಶ್ಚಯವಾಗಿಯೂ ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.[8]

يَسْأَلُونَكَ مَاذَا أُحِلَّ لَهُمْ ۖ قُلْ أُحِلَّ لَكُمُ الطَّيِّبَاتُ ۙ وَمَا عَلَّمْتُمْ مِنَ الْجَوَارِحِ

4. ತಮಗೆ ಏನೇನೆಲ್ಲ ಧರ್ಮಸಮ್ಮತಗೊಳಿಸಲ್ಪಟ್ಟಿದೆ ಎಂದು ಜನರು ಕೇಳುತ್ತಾರೆ. ಹೇಳಿರಿ;- ನಿಮಗೆ ಎಲ್ಲಾ ಶುದ್ಧ ವಸ್ತುಗಳು ಧರ್ಮ ಸಮ್ಮತಗೊಳಿಸಲ್ಪಟ್ಟಿವೆ.[9] ನೀವು ಪಳಗಿಸಿದ ಪ್ರಾಣಿಗಳು-

6. ಇಲ್ಲಿ 'ಇಂದು' ಎಂದು ಹೇಳಲಾಗಿರುವುದು ನಿರ್ದಿಷ್ಟ ದಿನ ಮತ್ತು ದಿನಾಂಕಕ್ಕೆ ಅಲ್ಲ. ಅದರ ಅರ್ಥ ಈ ಸೂಕ್ತಗಳು ಅವತೀರ್ಣಗೊಂಡ ಸಂದರ್ಭವೆಂದಾಗಿದೆ. ಈಗಿನ ಕಾಲಕ್ಕೆ 'ಇಂದು' ಎಂಬ ಪದವನ್ನು ಬಳಸುವ ರೂಢಿ ನಮ್ಮ ಭಾಷೆಯಲ್ಲೂ ಇದೆ. "ಸತ್ಯನಿಷೇಧಿಗಳಿಗೆ ನಿಮ್ಮ ಧರ್ಮದ ಬಗ್ಗೆ ಸಂಪೂರ್ಣ ನಿರಾಶೆಯುಂಟಾಗಿರುತ್ತದೆ" ಎಂದರೆ ಈಗ ನಿಮ್ಮ ಧರ್ಮವು ಒಂದು ಸ್ಥಾಯಿ ವ್ಯವಸ್ಥೆಯಾಗಿ ಮಾರ್ಪಟ್ಟಿದ್ದು ತನ್ನ ಅಧಿಕಾರ ಬಲದೊಂದಿಗೆ ಜಾರಿಗೊಂಡಿದೆ ಹಾಗೂ ಸ್ಥಾಪಿಸಲ್ಪಟ್ಟಿದೆ. ಅದನ್ನು ಅಳಿಸಿ ಹಾಕಿ ನಿಮ್ಮನ್ನು ಮತ್ತೆ ಅಜ್ಞಾನದೆಡೆಗೆ ಕೊಂಡೊಯ್ಯುವ ನಿಟ್ಟಿನಲ್ಲಿ ಸತ್ಯನಿಷೇಧಿಗಳು ಸಂಪೂರ್ಣ ನಿರಾಶರಾಗಿದ್ದಾರೆ ಎಂದರ್ಥ. "ಆದುದರಿಂದ ನೀವು ಅವರನ್ನು ಭಯಪಡಬೇಡಿರಿ. ನನ್ನನ್ನು ಭಯಪಡಿರಿ" ಎಂದರೆ ಧರ್ಮದ ಆದೇಶ ಮತ್ತು ಮಾರ್ಗದರ್ಶನವನ್ನು ಪಾಲಿಸಲು ಯಾವುದೇ ಸತ್ಯನಿಷೇಧಿ ಶಕ್ತಿಯ ಪ್ರಾಬಲ್ಯ, ಕ್ರೋಧ ಮತ್ತು ಪ್ರತಿರೋಧವನ್ನು ನೀವು ಭಯಪಡಬೇಕಾಗಿಲ್ಲ. ನೀವು ಈಗ ದೇವನನ್ನು ಮಾತ್ರ ಭಯಪಡಬೇಕು. ಅವನ ಆದೇಶಗಳ ಪಾಲನೆಯಲ್ಲಿ ಯಾವುದೇ ರೀತಿಯ ಚ್ಯುತಿಯುಂಟಾದರೆ ನಿಮ್ಮನ್ನು ಮನ್ನಿಸಿ ಬಿಡಲು ಯಾವುದೇ ನೆಪಗಳು ಈಗ ಉಳಿದಿಲ್ಲ ಎಂದರ್ಥ.

7. ಧರ್ಮವನ್ನು ಪರಿಪೂರ್ಣಗೊಳಿಸುವುದೆಂದರೆ ಜೀವನದ ಸಕಲ ಸಮಸ್ಯೆಗಳಿಗೂ ತಾತ್ವಿಕ ಮತ್ತು ಸವಿವರವಾದ ಪರಿಹಾರವಿರುವ ಹಾಗೂ ಸನ್ಮಾರ್ಗದರ್ಶನಕ್ಕೆ ಯಾವುದೇ ಸಂದರ್ಭದಲ್ಲಿ ಬೇರೆಡೆಗೆ ನೋಡುವ ಅವಶ್ಯಕತೆಯೇ ತಲೆದೋರದ ರೀತಿಯಲ್ಲಿ ಅದನ್ನು ವೈಚಾರಿಕ, ಕ್ರಿಯಾತ್ಮಕ, ನಾಗರಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಯನ್ನಾಗಿ ಮಾಡಿ ಬಿಡುವುದಾಗಿದೆ. ಕೊಡುಗೆಯನ್ನು (ನಿಅ್‌ಮತ್) ಪರಿಪೂರ್ಣಗೊಳಿಸುವುದೆಂದರೆ ಸನ್ಮಾರ್ಗದರ್ಶನದ ಕೊಡುಗೆಯನ್ನು ಪರಿಪೂರ್ಣಗೊಳಿಸುವುದಾಗಿದೆ. ಇಸ್ಲಾಮನ್ನು ಧರ್ಮದ ರೂಪದಲ್ಲಿ ಅಂಗೀಕರಿಸುವುದೆಂದರೆ- ನನ್ನ ಅನುಸರಣೆ ಮತ್ತು ದಾಸ್ಯ ಮಾಡುವ ಪ್ರತಿಜ್ಞೆಯನ್ನು ನೀವು ನಿಮ್ಮ ಪ್ರಯತ್ನ ಮತ್ತು ವರ್ತನೆಗಳ ಮೂಲಕ ಸತ್ಯ ಮತ್ತು ಪ್ರಾಮಾಣಿಕವೆಂದು ಸಾಬೀತುಗೊಳಿಸಿದ್ದೀರಿ, ಆದ್ದರಿಂದ ನಾನು ಅದನ್ನು ಸ್ವೀಕರಿಸಿದ್ದೇನೆ. ನನ್ನ ಹೊರತು ಬೇರೆಲ್ಲರ ದಾಸ್ಯದ ಶೃಂಖಲೆಯಿಂದ ಮುಕ್ತವಾಗಿರಬಹುದಾದ ಸ್ಥಿತಿಗೆ ನಿಮ್ಮನ್ನು ತಲಪಿಸಿದ್ದೇನೆ. ನನ್ನ ಅನುಸರಣಶೀಲತೆ ನಿಮ್ಮ ಪಾಲಿಗೆ ಕೇವಲ ವಿಶ್ವಾಸಕ್ಕೆ ಸೀಮಿತವಾಗಿಲ್ಲ. ವ್ಯಾವಹಾರಿಕ ಜೀವನದಲ್ಲೂ ನನ್ನ ಹೊರತು ಬೇರಾವ ಅನುಸರಣೆಯನ್ನು ಕೈಗೊಳ್ಳಬೇಕಾದ ಅನಿವಾರ್ಯತೆ ನಿಮಗೆ ಉಳಿದಿಲ್ಲ ಎಂದಾಗಿದೆ.

8. ವಿವರಣೆಗಾಗಿ ಅಲ್‌ಬಕರಃ ಅಧ್ಯಾಯದ 52ನೇ ಟಿಪ್ಪಣಿ ನೋಡಿರಿ.

9. ಸಿಂಧುವಾದ ಎಲ್ಲಾ ವಸ್ತುಗಳ ವಿವರಣೆಗಳನ್ನು ತಿಳಿಸಬೇಕು. ಅದರ ಹೊರತು ಉಳಿದೆಲ್ಲಾ ವಸ್ತುಗಳನ್ನು ನಿಷಿದ್ಧವೆಂದು ಭಾವಿಸಲು ಇದರಿಂದ ಸಾಧ್ಯವಾಗುತ್ತದೆಂಬುದು ಪ್ರಶ್ನೆ ಕೇಳುವವರ ಉದ್ದೇಶವಾಗಿತ್ತು. ಅದಕ್ಕೆ ಉತ್ತರವಾಗಿ ಕುರ್‌ಆನಿನಲ್ಲಿ ನಿಷಿದ್ಧ ವಸ್ತುಗಳ ವಿವರಣೆ ನೀಡಲಾಗಿದೆ. ಅನಂತರ ಶುದ್ಧ ವಸ್ತುಗಳೆಲ್ಲವೂ ಧರ್ಮಸಮ್ಮತವೆಂಬ ಸಾರ್ವತ್ರಿಕ ಆದೇಶ ನೀಡಲಾಗಿದೆ. ಹೀಗೆ ಪುರಾತನ

ದೇವದತ್ತವಾದ ಜ್ಞಾನದ ಆಧಾರದಲ್ಲಿ ನೀವು ಬೇಟೆಯಾಡಲು ಕಲಿಸಿಕೊಟ್ಟ ಪ್ರಾಣಿಗಳು - ನಿಮಗಾಗಿ ಹಿಡಿದಿಟ್ಟ ಪ್ರಾಣಿಗಳನ್ನೂ ನೀವು ತಿನ್ನಬಹುದು.[10] ಆದರೆ ಅದರ ಮೇಲೆ ಅಲ್ಲಾಹನ ನಾಮವನ್ನುಚ್ಚರಿಸಿಕೊಳ್ಳಿರಿ.[11] ಅಲ್ಲಾಹನ ನಿಯಮೋಲ್ಲಂಘನೆ ಮಾಡುವ ಕುರಿತು ಭಯಪಡಿರಿ. ಲೆಕ್ಕ ಪರಿಶೋಧಿಸಲು ಅಲ್ಲಾಹನಿಗೆ ವಿಳಂಬವಾಗುವುದಿಲ್ಲ.

مُكَلِّبِيْنَ تُعَلِّمُوْنَهُنَّ مِمَّا عَلَّمَكُمُ اللّٰهُ فَكُلُوْا مِمَّآ اَمْسَكْنَ عَلَيْكُمْ وَاذْكُرُوا اسْمَ اللّٰهِ عَلَيْهِ وَاتَّقُوا اللّٰهَ اِنَّ اللّٰهَ سَرِيْعُ الْحِسَابِ ④

5. ಇಂದು ನಿಮಗೆ ಸಕಲ ಶುದ್ಧ ವಸ್ತುಗಳೂ 'ಧರ್ಮಸಮ್ಮತ' ಮಾಡಲ್ಪಟ್ಟಿವೆ. ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ 'ಧರ್ಮಸಮ್ಮತ' ಆಗಿರುತ್ತದೆ.[12] ಸುಶೀಲ ಸ್ತ್ರೀಯರು - ಅವರು ಸತ್ಯವಿಶ್ವಾಸಿ ವರ್ಗದವರಿರಲಿ ಅಥವಾ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟ ವರ್ಗದವರಿರಲಿ[13]- ನೀವು ಅವರಿಗೆ 'ವಿವಾಹಧನ' ಕೊಟ್ಟು ವಿವಾಹದಲ್ಲಿ ಅವರ ರಕ್ಷಕರಾದರೆ ನಿಮಗೆ ಅವರು ಧರ್ಮಸಮ್ಮತ ಆಗಿರುತ್ತಾರೆ. ಅನಿಯಂತ್ರಿತ ಲೈಂಗಿಕ

اَلْيَوْمَ اُحِلَّ لَكُمُ الطَّيِّبٰتُ وَطَعَامُ الَّذِيْنَ اُوْتُوا الْكِتٰبَ حِلٌّ لَّكُمْ وَطَعَامُكُمْ حِلٌّ لَّهُمْ وَالْمُحْصَنٰتُ مِنَ الْمُؤْمِنٰتِ وَالْمُحْصَنٰتُ مِنَ الَّذِيْنَ اُوْتُوا الْكِتٰبَ مِنْ قَبْلِكُمْ اِذَآ اٰتَيْتُمُوْهُنَّ اُجُوْرَهُنَّ مُحْصِنِيْنَ غَيْرَ مُسٰفِحِيْنَ وَلَا مُتَّخِذِيْٓ

ಧರ್ಮವಿಧಿ ತಲೆಕೆಳಗಾಯಿತು. ಯಾವುದನ್ನು ಧರ್ಮಸಮ್ಮತವೆಂದು ಸಾರಲಾಗಿದೆಯೋ ಅದರ ಹೊರತು ಉಳಿದುದೆಲ್ಲವೂ ನಿಷಿದ್ಧವಾಗಿದೆ ಎಂಬುದು ಪುರಾತನ ಧಾರ್ಮಿಕ ವಿಧಿಯಾಗಿತ್ತು. ಅಶುದ್ಧ ವಸ್ತುಗಳನ್ನೂ ಧರ್ಮಸಮ್ಮತಗೊಳಿಸಲು ಪ್ರಯತ್ನಿಸಬಾರದೆಂಬ ಕಾರಣಕ್ಕಾಗಿ ಧರ್ಮಸಮ್ಮತ ವಸ್ತುಗಳು ಶುದ್ಧವಾದುದಾಗಿರಬೇಕೆಂಬ ಶರತ್ತು ವಿಧಿಸಲಾಗಿದೆ, ಇನ್ನು ವಸ್ತುಗಳನ್ನು ಶುದ್ಧವೆಂದು ಪರಿಗಣಿಸುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸಬಹುದು. ಶರೀಅತ್‌ನ ಯಾವುದೇ ವಿಧಿಯ ಆಧಾರದಲ್ಲಿ ಅಶುದ್ಧವೆಂದು ಪರಿಗಣಿಸಲ್ಪಡುವ, ಮನುಷ್ಯನ ಸಹಜ ಸ್ವಭಾವಕ್ಕೆ ಅಸಹ್ಯವೆನಿಸುವ, ತನ್ನ ನೈಸರ್ಗಿಕ ಶುಚಿತ್ವದ ಕಲ್ಪನೆಗೆ ವಿರುದ್ಧವಾದುದೆಂದು ಸುಸಂಸ್ಕೃತ ವ್ಯಕ್ತಿಗೆ ಭಾಸವಾಗುವ ವಸ್ತುಗಳ ಹೊರತು ಉಳಿದುದೆಲ್ಲವೂ ಶುದ್ಧವಾಗಿದೆ.

10. ಬೇಟೆಯ ಪ್ರಾಣಿಗಳೆಂದರೆ ಮಾನವ ಇತರ ಪ್ರಾಣಿಗಳ ಬೇಟೆಗಾಗಿ ಬಳಸುವ ನಾಯಿ, ಚಿರತೆ, ಗರುಡ, ಗಿಡುಗ ಮತ್ತಿತರ ಪ್ರಾಣಿ ಮತ್ತು ಪಕ್ಷಿಗಳಾಗಿವೆ. ಪಳಗಿಸಲ್ಪಟ್ಟ ಪ್ರಾಣಿಗಳ ವಿಶೇಷತೆ ಏನೆಂದರೆ ಅವು ಇತರ ಕ್ರೂರ ಮೃಗಗಳಂತೆ ಪ್ರಾಣಿಯನ್ನು ಹರಿದು ತಿನ್ನದೆ ಅದನ್ನು ತನ್ನ ಯಜಮಾನನಿಗಾಗಿ ಹಿಡಿದಿರಿಸುತ್ತದೆ. ಆದ್ದರಿಂದಲೇ ಕ್ರೂರ ಪ್ರಾಣಿಗಳು ಬೇಟೆಯಾಡಿ ಹಿಡಿದ ಪ್ರಾಣಿಗಳು ನಿಷಿದ್ಧವಾಗಿವೆ. ಪಳಗಿಸಿದ ಪ್ರಾಣಿಗಳು ಬೇಟೆಯಾಡಿದ ಪ್ರಾಣಿಗಳು ಧರ್ಮಸಮ್ಮತವಾಗಿದೆ.

11. ಅರ್ಥಾತ್- ಬೇಟೆಯ ಪ್ರಾಣಿಯನ್ನು ಬೇಟೆಗಾಗಿ ಬಿಡುವಾಗ 'ಬಿಸ್ಮಿಲ್ಲಾಹ್' ಹೇಳಿರಿ. ಬೇಟೆಯ ಪ್ರಾಣಿಯನ್ನು ಬೇಟೆಗಾಗಿ ಬಿಡುವಾಗ ದೇವನಾಮವನ್ನು ಉಚ್ಚರಿಸುವುದು ಅವಶ್ಯಕ ಎಂಬ ನಿಯಮ ಈ ಸೂಕ್ತದಿಂದ ತಿಳಿದುಬರುತ್ತದೆ. ಅನಂತರ ಬೇಟೆಯಾಡಲ್ಪಟ್ಟ ಪ್ರಾಣಿ ಜೀವಿಸಿದ್ದರೆ ಅದನ್ನು ಅಲ್ಲಾಹನ ಹೆಸರೆತ್ತಿ ದಿಬಃ ಮಾಡಬೇಕಾಗಿದೆ. ಜೀವಿಸಿರದಿದ್ದರೆ ದಿಬಃ ಮಾಡದೆಯೇ ಅದು ಧರ್ಮಸಮ್ಮತವಾಗಿದೆ. ಏಕೆಂದರೆ ಬೇಟೆಯ ಪ್ರಾಣಿಯನ್ನು ಬಿಡುವಾಗಲೇ ಅಲ್ಲಾಹನ ಹೆಸರೆತ್ತಲಾಗಿತ್ತು. ಬಾಣಕ್ಕೂ ಇದೇ ನಿಯಮ ಅನ್ವಯವಾಗುತ್ತದೆ.

12. 'ಗ್ರಂಥದವರ ಆಹಾರ'ದಲ್ಲಿ ಅವರು ದಿಬಃ ಮಾಡಿದ ಪ್ರಾಣಿಗಳೂ ಸೇರಿವೆ. ನಮಗೆ ಅವರ ಹಾಗೂ ಅವರಿಗೆ ನಮ್ಮ ಆಹಾರ ಧರ್ಮಸಮ್ಮತವಾಗಿದೆ ಎಂದರೆ ನಮ್ಮ ಮತ್ತು ಅವರ ನಡುವೆ ತಿನ್ನುವ-ಕುಡಿಯುವ ವಿಚಾರದಲ್ಲಿ ಯಾವುದೇ ತೊಡಕು ಅಥವಾ ಅಸ್ಪೃಶ್ಯತೆ ಇಲ್ಲ. ಅವರು ನಮ್ಮ ಜತೆಗೆ ಆಹಾರ ಸೇವಿಸಬಹುದಾಗಿದೆ ಮತ್ತು ನಾವು ಅವರ ಜತೆಗೂ. ಆದರೆ ಈ ಸಾರ್ವತ್ರಿಕ ಅನುಮತಿ ನೀಡುವುದಕ್ಕೆ ಮೊದಲೂ "ನಿಮಗೆ ಶುದ್ಧ ವಸ್ತುಗಳು ಧರ್ಮಸಮ್ಮತವಾಗಿವೆ" ಎಂಬ ಪ್ರಸ್ತಾಪವನ್ನು ಪುನರುಚ್ಚರಿಸಲಾಗಿದೆ. ಶರೀಅತ್‌ನ ಆಧಾರದಲ್ಲಿ ಅವಶ್ಯಕವೆನಿಸುವಂತಹ ಶುಚಿತ್ವದ ನಿಯಮಗಳನ್ನು ಗ್ರಂಥದವರು ಪಾಲಿಸದೆ ಹೋದರೆ, ಅಥವಾ ಅವರ ಆಹಾರದಲ್ಲಿ ವರ್ಜಿಸಬೇಕಾದಂತಹ ನಿಷಿದ್ಧ ವಸ್ತುಗಳು ಸೇರಿದ್ದರೆ ಅವುಗಳನ್ನು ತೊರೆಯಬೇಕಾಗಿದೆ. ಉದಾ: ಅಲ್ಲಾಹನ ಹೆಸರೆತ್ತದೆ ಅಥವಾ ಅಲ್ಲಾಹೇತರರ ಹೆಸರೆತ್ತಿ ದಿಬಃ ಮಾಡಲಾದ ಪ್ರಾಣಿಗಳ ಮಾಂಸ ಸೇವನೆ ನಮ್ಮ ಪಾಲಿಗೆ ಧರ್ಮಸಮ್ಮತವಲ್ಲ.

13. ಅರ್ಥಾತ್- ಕ್ರೈಸ್ತರು ಮತ್ತು ಯಹೂದಿಯರು. ನಿಕಾಹ್ ಮಾಡಿಕೊಳ್ಳುವ ಅನುಮತಿ ಈ ಸ್ತ್ರೀಯರೊಂದಿಗೆ ಮಾತ್ರವಿದೆ. ಅದರ ಜತೆಗೆ

ಸಂಬಂಧವಿರಿಸಿಕೊಳ್ಳುವುದು ಅಥವಾ ರಹಸ್ಯ ಕಾಮುಕರಾಗಿರುವುದು ಸಲ್ಲದು. ಸತ್ಯವಿಶ್ವಾಸ ನೀತಿಯಲ್ಲಿ ನಡೆಯಲು ನಿರಾಕರಿಸಿದವನ ಜೀವನದ ಸಂಪೂರ್ಣ ಕರ್ಮವು ವ್ಯರ್ಥವಾಗುವುದು ಮತ್ತು ಅವನು ಪರಲೋಕದಲ್ಲಿ ದಿವಾಳಿಕೋರನಾಗುವನು.

أَخْدَانٍ ۗ وَمَن يَكْفُرْ بِالْإِيمَانِ فَقَدْ
حَبِطَ عَمَلُهُ وَهُوَ فِي الْآخِرَةِ مِنَ
الْخَاسِرِينَ ⑤ ع

6. ಓ ಸತ್ಯವಿಶ್ವಾಸಿಗಳೇ, ನೀವು ನಮಾಝಿಗೆಂದು ಹೊರಟಾಗ ನಿಮ್ಮ ಮುಖಗಳನ್ನು ಮತ್ತು ಮೊಣಕೈ ಗಂಟುಗಳವರೆಗೆ ಕೈಗಳನ್ನು ತೊಳೆದುಕೊಳ್ಳಿರಿ. ತಲೆಯನ್ನು ಸವರಿರಿ ಮತ್ತು ಹರಡು ಗಂಟುಗಳ ತನಕ ಕಾಲುಗಳನ್ನು ತೊಳೆದುಕೊಳ್ಳಿರಿ.[14] 'ಜನಾಬತ್' (ವೀರ್ಯಸ್ಖಲನಾ ನಂತರದ ಮಾಲಿನ್ಯ) ಸ್ಥಿತಿಯಲ್ಲಿದ್ದರೆ ಸ್ನಾನ ಮಾಡಿ ಶುದ್ಧರಾಗಿಕೊಳ್ಳಿರಿ. ನೀವು ಅನಾರೋಗ್ಯದಿಂದಿದ್ದರೆ ಅಥವಾ ಪ್ರಯಾಣದಲ್ಲಿದ್ದರೆ ಅಥವಾ ನಿಮ್ಮಲ್ಲಾರಾದರೂ ಮಲಮೂತ್ರ ವಿಸರ್ಜನೆ ಮಾಡಿ ಬಂದರೆ ಅಥವಾ ನೀವು ಸ್ತ್ರೀಯರನ್ನು ಸ್ಪರ್ಶಿಸಿದ್ದರೆ ಮತ್ತು ಆ ಬಳಿಕ ನೀರು ಸಿಗದಿದ್ದರೆ, ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ. ಅದರ ಮೇಲೆ ಹಸ್ತಗಳನ್ನು ಬಡಿದು ನಿಮ್ಮ ಮುಖ ಮತ್ತು ಕೈಗಳ ಮೇಲೆ ಸವರಿಕೊಳ್ಳಿರಿ.[15] ಅಲ್ಲಾಹನು ನಿಮ್ಮ ಜೀವನವನ್ನು ಸಂಕುಚಿತಗೊಳಿಸಲಿಚ್ಛಿಸುವುದಿಲ್ಲ. ಬದಲಾಗಿ ನೀವು ಕೃತಜ್ಞರಾಗಲೆಂದು, ಅವನು ನಿಮ್ಮನ್ನು ಪರಿಶುದ್ಧಗೊಳಿಸಲಿಕ್ಕೂ ನಿಮ್ಮ ಮೇಲೆ ತನ್ನ ಕೊಡುಗೆಗಳನ್ನು ಪರಿಪೂರ್ಣಗೊಳಿಸಲಿಕ್ಕೂ ಇಚ್ಛಿಸುತ್ತಾನೆ.

يَا أَيُّهَا الَّذِينَ آمَنُوا إِذَا قُمْتُمْ إِلَى الصَّلَاةِ
فَاغْسِلُوا وُجُوهَكُمْ وَأَيْدِيَكُمْ إِلَى الْمَرَافِقِ
وَامْسَحُوا بِرُءُوسِكُمْ وَأَرْجُلَكُمْ إِلَى
الْكَعْبَيْنِ ۚ وَإِن كُنتُمْ جُنُبًا فَاطَّهَّرُوا ۚ وَ
إِن كُنتُم مَّرْضَىٰ أَوْ عَلَىٰ سَفَرٍ أَوْ جَاءَ أَحَدٌ
مِّنكُم مِّنَ الْغَائِطِ أَوْ لَامَسْتُمُ النِّسَاءَ فَلَمْ
تَجِدُوا مَاءً فَتَيَمَّمُوا صَعِيدًا طَيِّبًا
فَامْسَحُوا بِوُجُوهِكُمْ وَأَيْدِيكُم مِّنْهُ ۚ
مَا يُرِيدُ اللَّهُ لِيَجْعَلَ عَلَيْكُم مِّنْ حَرَجٍ
وَلَٰكِن يُرِيدُ لِيُطَهِّرَكُمْ وَلِيُتِمَّ نِعْمَتَهُ
عَلَيْكُمْ لَعَلَّكُمْ تَشْكُرُونَ ⑥

7. ಅಲ್ಲಾಹನು ನಿಮಗೆ ದಯಪಾಲಿಸಿದ ಭವ್ಯ ಕೊಡುಗೆಯನ್ನು ಸ್ಮರಿಸಿರಿ ಮತ್ತು ಅವನು ನಿಮ್ಮಿಂದ ಪಡೆದಿರುವ ಆ ಬಲವಾದ ಕರಾರನ್ನು ಮರೆಯಬೇಡಿರಿ. ಅರ್ಥಾತ್ "ನಾವು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು" ಎಂಬ ನಿಮ್ಮ

وَاذْكُرُوا نِعْمَةَ اللَّهِ عَلَيْكُمْ وَمِيثَاقَهُ
الَّذِي وَاثَقَكُم بِهِ إِذْ قُلْتُمْ سَمِعْنَا
وَأَطَعْنَا ۖ وَاتَّقُوا اللَّهَ ۚ إِنَّ اللَّهَ عَلِيمٌ

ಅವರು 'ಮುಹ್ಸನಾತ್' (ಸುರಕ್ಷಿತ ಸ್ತ್ರೀಯರು) ಆಗಿರಬೇಕೆಂಬ ಶರತ್ತನ್ನೂ ವಿಧಿಸಲಾಗಿದೆ. ಅರ್ಥಾತ್ ಅವರು ಸ್ವಚ್ಛಂದ ಮನೋವೃತ್ತಿಯ ಸ್ತ್ರೀಯರಾಗಿರಬಾರದು. ನಂತರದ ಸೂಕ್ತದಲ್ಲಿ ಕ್ರೈಸ್ತ ಅಥವಾ ಯಹೂದಿ ಸ್ತ್ರೀಗಾಗಿ ತನ್ನ ವಿಶ್ವಾಸವನ್ನು ಕಳಕೊಳ್ಳಬಾರದು ಎಂಬ ಎಚ್ಚರಿಕೆಯನ್ನೂ ನೀಡಲಾಗಿದೆ.

14. ಈ ಆದೇಶಕ್ಕೆ ಪ್ರವಾದಿವರ್ಯರು(ಸ) ನೀಡಿರುವ ವಿವರಣೆಯಿಂದ ಮುಖ ತೊಳೆಯುವುದರಲ್ಲಿ ಬಾಯಿ ಮುಕ್ಕಳಿಸುವುದು ಮತ್ತು ಮೂಗನ್ನು ಶುಚಿಗೊಳಿಸುವುದೂ ಸೇರಿದೆ ಎಂದು ವ್ಯಕ್ತವಾಗುತ್ತದೆ. ಅದರ ಹೊರತು ಮುಖ ತೊಳೆಯುವಿಕೆ ಪೂರ್ತಿಯಾಗದು. ಕಿವಿ ತಲೆಯ ಭಾಗವಾಗಿದೆ. ಆದ್ದರಿಂದ ತಲೆ ಸವರುವುದರಲ್ಲಿ ಕಿವಿಯ ಒಳಗಿನ ಮತ್ತು ಹೊರಗಿನ ಭಾಗಗಳನ್ನು ಸವರುವುದೂ ಸೇರಿದೆ. ಅಲ್ಲದೆ ವುಝೂ ಮಾಡುವ ಮುನ್ನ ಕೈಯನ್ನು ತೊಳೆದು ಕೊಳ್ಳಬೇಕು. ಏಕೆಂದರೆ ಕೈಯ ಮೂಲಕ ವುಝೂ ಮಾಡುವುದರಿಂದ ಅದು ಮೊದಲು ಶುಚಿಯಾಗಬೇಕು.

15. ವಿವರಣೆಗಾಗಿ ಅನ್ನಿಸಾ ಅಧ್ಯಾಯದ 41 ಮತ್ತು 43ನೆಯ ಟಿಪ್ಪಣಿಯನ್ನು ನೋಡಿರಿ.

ಕರಾರು. ಅಲ್ಲಾಹನನ್ನು ಭಯಪಡಿರಿ. ಅಲ್ಲಾಹ್ ಹೃದಯ ಗಳೊಳಗಿನ ರಹಸ್ಯಗಳನ್ನೂ ತಿಳಿದಿರುತ್ತಾನೆ.

بِذَاتِ الصُّدُورِ ⑦

8. ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ.

يَا أَيُّهَا الَّذِينَ آمَنُوا كُونُوا قَوَّامِينَ لِلَّهِ شُهَدَاءَ بِالْقِسْطِ ۖ وَلَا يَجْرِمَنَّكُمْ شَنَآنُ قَوْمٍ عَلَىٰ أَلَّا تَعْدِلُوا ۚ اعْدِلُوا هُوَ أَقْرَبُ لِلتَّقْوَىٰ ۖ وَاتَّقُوا اللَّهَ ۚ إِنَّ اللَّهَ خَبِيرٌ بِمَا تَعْمَلُونَ ⑧

9. ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮ ಮಾಡುವವರಿಗೆ ಅವರ ಅಪರಾಧಗಳನ್ನು ಮನ್ನಿಸಲಾಗುವುದೆಂದೂ ಅವರಿಗೆ ಮಹತ್ತಾದ ಪ್ರತಿಫಲ ಸಿಗುವುದೆಂದೂ ಅಲ್ಲಾಹನು ವಾಗ್ದಾನವಿತ್ತಿರುತ್ತಾನೆ.

وَعَدَ اللَّهُ الَّذِينَ آمَنُوا وَعَمِلُوا الصَّالِحَاتِ ۙ لَهُمْ مَغْفِرَةٌ وَأَجْرٌ عَظِيمٌ ⑨

10. ಆದರೆ, ಯಾರು ಸತ್ಯವನ್ನು ನಿರಾಕರಿಸಿ ಅಲ್ಲಾಹನ ನಿದರ್ಶನಗಳನ್ನು ಸುಳ್ಳಾಗಿಸುವರೋ, ಅಂಥವರು ನರಕಕ್ಕೆ ಹೋಗುವರು.

وَالَّذِينَ كَفَرُوا وَكَذَّبُوا بِآيَاتِنَا أُولَٰئِكَ أَصْحَابُ الْجَحِيمِ ⑩

11. ಓ ಸತ್ಯವಿಶ್ವಾಸಿಗಳೇ, (ಇತ್ತೀಚೆಗೆ) ಒಂದು ವಿಭಾಗವು ನಿಮ್ಮ ಮೇಲೆ ಕೈ ಮಾಡಲು ಯತ್ನಿಸಿದಾಗ ಅಲ್ಲಾಹನು ಅವರ ಕೈಗಳನ್ನು ನಿಮ್ಮ ಮೇಲೇರದಂತೆ ತಡೆಯುವ ಮೂಲಕ ನಿಮ್ಮ ಮೇಲೆ ಮಾಡಿದ ಉಪಕಾರವನ್ನು ಸ್ಮರಿಸಿರಿ.[16] ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ಸತ್ಯವಿಶ್ವಾಸವುಳ್ಳವರು ಅಲ್ಲಾಹನ ಮೇಲೆಯೇ ಭರವಸೆ ಯನ್ನಿರಿಸಿಕೊಳ್ಳಬೇಕು.

يَا أَيُّهَا الَّذِينَ آمَنُوا اذْكُرُوا نِعْمَتَ اللَّهِ عَلَيْكُمْ إِذْ هَمَّ قَوْمٌ أَنْ يَبْسُطُوا إِلَيْكُمْ أَيْدِيَهُمْ فَكَفَّ أَيْدِيَهُمْ عَنْكُمْ ۖ وَاتَّقُوا اللَّهَ ۚ وَعَلَى اللَّهِ فَلْيَتَوَكَّلِ الْمُؤْمِنُونَ ⑪

ع

12. ಅಲ್ಲಾಹನು ಬನೀಇಸ್ರಾಈಲರಿಂದ ಬಲವಾದ ಕರಾರನ್ನು ಪಡೆದಿದ್ದನು ಮತ್ತು ಅವರೊಳಗಿಂದ ಹನ್ನೆರಡು 'ನಕೀಬ'[17] (ಮೇಲ್ವಿಚಾರಕ)ರನ್ನು ನೇಮಕ ಮಾಡಿದ್ದನು. ಅವರೊಡನೆ,

وَلَقَدْ أَخَذَ اللَّهُ مِيثَاقَ بَنِي إِسْرَائِيلَ وَبَعَثْنَا مِنْهُمُ اثْنَيْ عَشَرَ نَقِيبًا ۖ وَقَالَ

16. ಇದು ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಉಲ್ಲೇಖಿಸಿದ ಘಟನೆಯ ಕಡೆಗಿರುವ ಸೂಚನೆ. ಯಹೂದಿಗಳ ಒಂದು ಗುಂಪು ಪ್ರವಾದಿವರ್ಯರು(ಸ) ಮತ್ತವರ ಆಪ್ತ ಸಂಗಾತಿಗಳನ್ನು ಔತಣಕ್ಕೆ ಆಹ್ವಾನಿಸಿತ್ತು. ಹಠಾತ್ತನೆ ಅವರ ಮೇಲೆ ದಾಳಿ ಮಾಡಿ ಇಸ್ಲಾಮನ್ನು ಮುಗಿಸಿ ಬಿಡುವ ಗುಪ್ತ ಸಂಚನ್ನು ಅವರು ಸಿದ್ಧಪಡಿಸಿದ್ದರು. ಆದರೆ ಅಲ್ಲಾಹನ ಅನುಗ್ರಹದಿಂದ ಅದೇ ವೇಳೆಯಲ್ಲಿ ಆ ಸಂಚಿನ ಬಗ್ಗೆ ಪ್ರವಾದಿವರ್ಯರಿಗೆ(ಸ) ಸುಳಿವು ದೊರೆಯಿತು ಮತ್ತು ಅವರು ಔತಣಕ್ಕೆ ಹೋಗದೆ ಉಳಿದರು.

17. 'ನಕೀಬ್' ಎಂದರೆ ಮೇಲ್ವಿಚಾರಣೆ ಮತ್ತು ಅನ್ವೇಷಣೆ ನಡೆಸುವವನು. ಬನೀಇಸ್ರಾಈಲರಲ್ಲಿ ಹನ್ನೆರಡು ಗೋತ್ರಗಳಿದ್ದವು. ಅಲ್ಲಾಹನು ಆ ಪೈಕಿ ಪ್ರತಿಯೊಂದು ಗೋತ್ರದವರೂ ತಮ್ಮವರಿಂದಲೇ ಒಬ್ಬನನ್ನು ಮೇಲ್ವಿಚಾರಕನನ್ನಾಗಿ ನೇಮಿಸಬೇಕು ಮತ್ತು ಅವನು ಅವರ ಮೇಲೆ ನಿಗಾ ಇಡಬೇಕು, ಅವರನ್ನು ಧರ್ಮರಾಹಿತ್ಯ ಮತ್ತು ಅನೈತಿಕತೆಯಿಂದ ತಡೆಯಲು ಪ್ರಯತ್ನಿಸುತ್ತಿರಬೇಕು ಎಂದು ಅಲ್ಲಾಹನು ಆದೇಶಿಸಿದ್ದನು.

"ನಾನು ನಿಮ್ಮೊಂದಿಗಿದ್ದೇನೆ. ನೀವು ನಮಾಝುನ್ನು ಸ್ಥಿರಪಡಿಸಿದರೆ, ಝಕಾತ್ ನೀಡಿದರೆ, ನನ್ನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿ ಕೊಂಡು ಅವರಿಗೆ ಸಹಾಯ ಮಾಡಿದರೆ ಮತ್ತು ಅಲ್ಲಾಹನಿಗೆ ಉತ್ತಮ ಸಾಲವನ್ನು ನೀಡುತ್ತಲಿದ್ದರೆ, ನಿಶ್ಚಯವಾಗಿಯೂ ನಾನು ನಿಮ್ಮ ಕೇಡುಗಳನ್ನೆಲ್ಲ ನಿಮ್ಮಿಂದ ನೀಗಿಸುವೆನು. ಮಾತ್ರವಲ್ಲದೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಲಿರುವಂತಹ ಸ್ವರ್ಗೋದ್ಯಾನಗಳಲ್ಲಿ ನಿಮಗೆ ಪ್ರವೇಶ ಕೊಡುವೆನು. ಆದರೆ, ಅನಂತರ ನಿಮ್ಮಲ್ಲಾರಾದರೂ 'ಧರ್ಮಧಿಕ್ಕಾರ' ನೀತಿಯನ್ನ ನುಸರಿಸಿದರೆ ನಿಜವಾಗಿಯೂ ಅವನು 'ಸವಾಉಸ್ಸಬೀಲ' (ನೇರಮಾರ್ಗ)ನ್ನು ಕಳೆದುಕೊಂಡನು[18] ಎಂದು ಹೇಳಿದ್ದನು.

اللّٰهُ اِنِّیْ مَعَكُمْ ؕ لَئِنْ اَقَمْتُمُ الصَّلٰوةَ وَ
اٰتَیْتُمُ الزَّكٰوةَ وَ اٰمَنْتُمْ بِرُسُلِیْ وَعَزَّرْتُمُوْهُمْ
وَ اَقْرَضْتُمُ اللّٰهَ قَرْضًا حَسَنًا لَّاُكَفِّرَنَّ
عَنْكُمْ سَیِّاٰتِكُمْ وَلَاُدْخِلَنَّكُمْ جَنّٰتٍ
تَجْرِیْ مِنْ تَحْتِهَا الْاَنْهٰرُ ۚ فَمَنْ كَفَرَ بَعْدَ
ذٰلِكَ مِنْكُمْ فَقَدْ ضَلَّ سَوَآءَ السَّبِیْلِ ﴿۱۲﴾

13. ಅನಂತರ ಅವರು ತಮ್ಮ ಕರಾರನ್ನು ಮುರಿದ ಕಾರಣಕ್ಕಾಗಿಯೇ, ನಾವು ಅವರನ್ನು ನಮ್ಮ ಕೃಪೆಯಿಂದ ಬಹುದೂರ ಒಗೆದು ಬಿಟ್ಟೆವು ಮತ್ತು ಅವರ ಹೃದಯಗಳನ್ನು ಕಠಿಣಗೊಳಿಸಿದೆವು. ಈಗ ಅವರು ಶಬ್ದಗಳನ್ನು ಅದಲು ಬದಲುಗೊಳಿಸಿ, ಮಾತನ್ನು ಎಲ್ಲೆಲ್ಲೋ ಕೊಂಡೊಯ್ಯುತ್ತಾರೆ. ಅವರಿಗೆ ನೀಡಲಾಗಿದ್ದ ಜ್ಞಾನದ ಬಹು ದೊಡ್ಡ ಪಾಲನ್ನು ಅವರು ಮರೆತು ಬಿಟ್ಟಿದ್ದಾರೆ. ಅನು ದಿನವೂ ಅವರ ಅಪ್ರಾಮಾಣಿಕತೆಯ ಒಂದಲ್ಲೊಂದು ರಹಸ್ಯವು ನಿಮ್ಮ ಮುಂದೆ ಬೆಳಕಿಗೆ ಬರುತ್ತಲೇ ಇರುತ್ತದೆ. ಈ ದೋಷದಿಂದ ವಿರಹಿತರಾದವರು ಅವರಲ್ಲಿ ಅತಿ ವಿರಳ. (ಹೀಗಿರುತ್ತಾ, ಅವರು ಎಂತಹ ಕೀಟಲೆಗೈದರೂ ಅದು ಅವರಿಂದ ಪ್ರತೀಕ್ಷಿತವಾದುದೇ ಆಗಿರುತ್ತದೆ.) ಆದುದರಿಂದ ಅವರನ್ನು ಕ್ಷಮಿಸಿರಿ ಮತ್ತು ಅವರ ವರ್ತನೆಗಳನ್ನು ನಿರ್ಲಕ್ಷಿಸುತ್ತಲಿರಿ. ಅಲ್ಲಾಹನು ಸಜ್ಜನರನ್ನು ಪ್ರೀತಿಸುತ್ತಾನೆ.

فَبِمَا نَقْضِهِمْ مِّیْثَاقَهُمْ لَعَنّٰهُمْ وَجَعَلْنَا
قُلُوْبَهُمْ قٰسِیَةً ۚ یُحَرِّفُوْنَ الْكَلِمَ عَنْ
مَّوَاضِعِهٖ ۙ وَنَسُوْا حَظًّا مِّمَّا ذُكِّرُوْا بِهٖ ۚ
وَلَا تَزَالُ تَطَّلِعُ عَلٰی خَآئِنَةٍ مِّنْهُمْ اِلَّا
قَلِیْلًا مِّنْهُمْ فَاعْفُ عَنْهُمْ وَاصْفَحْ ؕ اِنَّ
اللّٰهَ یُحِبُّ الْمُحْسِنِیْنَ ﴿۱۳﴾

14. ಇದೇ ರೀತಿಯಲ್ಲಿ 'ನಾವು ನಸಾರಾ'ಗಳು (ಕ್ರೈಸ್ತರು) ಎಂದು ಹೇಳಿಕೊಂಡಿದ್ದ ಜನರಿಂದಲೂ ನಾವು ಬಲವಾದ ಕರಾರನ್ನು ಪಡೆದಿದ್ದೆವು. ಆದರೆ ಅವರಿಗೂ ಕಲಿಸಿಕೊಡಲಾಗಿದ್ದ ಪಾಠದ ಒಂದು ದೊಡ್ಡ ಭಾಗವನ್ನು ಅವರು ಮರೆತುಬಿಟ್ಟರು. ಕೊನೆಗೆ ನಾವು ಅವರ ನಡುವೆ ಅಂತಿಮ ದಿವಸದ ತನಕವೂ ಹಗೆತನ ಮತ್ತು ಆಂತರಿಕ ದ್ವೇಷದ ಬೀಜವನ್ನು ಬಿತ್ತಿ ಬಿಟ್ಟೆವು. ಅವರು

وَمِنَ الَّذِیْنَ قَالُوْٓا اِنَّا نَصٰرٰۤی اَخَذْنَا
مِیْثَاقَهُمْ فَنَسُوْا حَظًّا مِّمَّا ذُكِّرُوْا بِهٖ ۪
فَاَغْرَیْنَا بَیْنَهُمُ الْعَدَاوَةَ وَالْبَغْضَآءَ اِلٰی
یَوْمِ الْقِیٰمَةِ ؕ وَسَوْفَ یُنَبِّئُهُمُ اللّٰهُ

18. 'ಸವಾಅಸ್ಸಬೀಲ್' ಎಂದರೆ ಉದ್ದಿಷ್ಟ ತಾಣಕ್ಕೆ ತಲಪಲು ರಚಿಸಲಾದ ರಾಜಮಾರ್ಗವಾಗಿದೆ. ಅದನ್ನು ಕಳೆದುಕೊಳ್ಳುವುದೆಂದರೆ ರಾಜಮಾರ್ಗದಿಂದ ಸರಿದು ಕವಲುದಾರಿಯಲ್ಲಿ ದಾರಿತಪ್ಪಿ ನಡೆಯುವುದಾಗಿದೆ.

ಜಗತ್ತಿನಲ್ಲಿ ಏನು ನಿರ್ಮಿಸುತ್ತಿದ್ದರೆಂಬುದನ್ನು ಅಲ್ಲಾಹನು ಅವರಿಗೆ ತೋರಿಸುವ ದಿನವೊಂದು ಖಂಡಿತವಾಗಿಯೂ ಬರಲಿದೆ.

بِمَا كَانُوا يَصْنَعُونَ ﴿١٤﴾

15. ಓ ಗ್ರಂಥದವರೇ, ನೀವು ದೇವಗ್ರಂಥದಿಂದ ಮರೆಮಾಚುತ್ತಿದ್ದ ಅನೇಕ ವಿಷಯಗಳನ್ನು ನಿಮ್ಮೆದುರು ಪ್ರಕಟಪಡಿಸುತ್ತಿರುವ ನಮ್ಮ ಸಂದೇಶವಾಹಕರೊಬ್ಬರು ನಿಮ್ಮ ಬಳಿಗೆ ಬಂದು ಬಿಟ್ಟಿರುತ್ತಾರೆ ಮತ್ತು ಅವರು ಅನೇಕ ವಿಷಯಗಳನ್ನು ಕ್ಷಮಿಸಿ ಬಿಡುತ್ತಾರೆ.[19] ಅಲ್ಲಾಹನ ವತಿಯಿಂದ ಒಂದು ಪ್ರಕಾಶ ಮತ್ತು ಒಂದು ಸುವ್ಯಕ್ತ ಗ್ರಂಥವು ನಿಮ್ಮ ಬಳಿಗೆ ಬಂದು ಬಿಟ್ಟಿದೆ.

يَا أَهْلَ الْكِتَابِ قَدْ جَاءَكُمْ رَسُولُنَا يُبَيِّنُ لَكُمْ كَثِيرًا مِّمَّا كُنتُمْ تُخْفُونَ مِنَ الْكِتَابِ وَيَعْفُو عَن كَثِيرٍ ۚ قَدْ جَاءَكُم مِّنَ اللَّهِ نُورٌ وَكِتَابٌ مُّبِينٌ ﴿١٥﴾

16. ಅದರ ಮೂಲಕ ಅಲ್ಲಾಹನು ತನ್ನ ಸಂಪ್ರೀತಿಯನ್ನು ಅಪೇಕ್ಷಿಸುವವರಿಗೆ ರಕ್ಷಾಮಾರ್ಗವನ್ನು ತೋರಿಸಿ ತನ್ನ ಇಚ್ಛೆಯಿಂದ ಅವರನ್ನು ಅಂಧಕಾರಗಳಿಂದ ಹೊರತೆಗೆದು ಪ್ರಕಾಶದ ಕಡೆಗೆ ಒಯ್ಯುತ್ತಾನೆ ಮತ್ತು ಸನ್ಮಾರ್ಗದತ್ತ ಅವರಿಗೆ ಮಾರ್ಗದರ್ಶನ ಮಾಡುತ್ತಾನೆ.

يَهْدِي بِهِ اللَّهُ مَنِ اتَّبَعَ رِضْوَانَهُ سُبُلَ السَّلَامِ وَيُخْرِجُهُم مِّنَ الظُّلُمَاتِ إِلَى النُّورِ بِإِذْنِهِ وَيَهْدِيهِمْ إِلَىٰ صِرَاطٍ مُّسْتَقِيمٍ ﴿١٦﴾

17. ಮರ್ಯಮರ ಪುತ್ರ 'ಮಸೀಹ'ರನ್ನೇ ದೇವನೆನ್ನುವವರು ಖಂಡಿತವಾಗಿಯೂ 'ಸತ್ಯನಿಷೇಧ' ಮಾಡಿದರು. ಓ ಪೈಗಂಬರರೇ, ಅವರೊಡನೆ ಹೇಳಿರಿ:- "ಅಲ್ಲಾಹನು ಮರ್ಯಮರ ಪುತ್ರ ಮಸೀಹರನ್ನು, ಅವರ ಮಾತೆಯನ್ನು ಮತ್ತು ಸಕಲ ಭೂ ನಿವಾಸಿಗಳನ್ನು ನಾಶಮಾಡಿ ಬಿಡಲಿಚ್ಛಿಸಿದರೆ ಅವನನ್ನು ಆ ಇಚ್ಛೆಯಿಂದ ತಡೆಯುವ ಸಾಮರ್ಥ್ಯ ಯಾರಿಗಿದೆ? ಅಲ್ಲಾಹನು ಭೂಮಿ-ಆಕಾಶಗಳ ಮತ್ತು ಅವುಗಳ ನಡುವೆ ಇರುವ ಸಕಲ ವಸ್ತುಗಳ ಒಡೆಯನಾಗಿರುತ್ತಾನೆ. ಅವನು ತಾನಿಚ್ಛಿಸಿದುದನ್ನು ಸೃಷ್ಟಿಸುತ್ತಾನೆ.[20] ಅವನ ಮಹಿಮೆಯು ಎಲ್ಲವನ್ನೂ ಆವರಿಸಿಕೊಂಡಿದೆ.

لَّقَدْ كَفَرَ الَّذِينَ قَالُوا إِنَّ اللَّهَ هُوَ الْمَسِيحُ ابْنُ مَرْيَمَ ۚ قُلْ فَمَن يَمْلِكُ مِنَ اللَّهِ شَيْئًا إِنْ أَرَادَ أَن يُهْلِكَ الْمَسِيحَ ابْنَ مَرْيَمَ وَأُمَّهُ وَمَن فِي الْأَرْضِ جَمِيعًا ۗ وَلِلَّهِ مُلْكُ السَّمَاوَاتِ وَالْأَرْضِ وَمَا بَيْنَهُمَا ۚ يَخْلُقُ مَا يَشَاءُ ۚ وَاللَّهُ عَلَىٰ كُلِّ شَيْءٍ قَدِيرٌ ﴿١٧﴾

18. ನಾವು ಅಲ್ಲಾಹನ ಪುತ್ರರೂ ಆಪ್ತರೂ ಆಗಿರುತ್ತೇವೆಂದು ಯಹೂದಿಯರೂ ಕ್ರೈಸ್ತರೂ ಹೇಳುತ್ತಾರೆ. ಹಾಗಾದರೆ ಅವನು ನಿಮ್ಮನ್ನು ನಿಮ್ಮ ಪಾಪಗಳಿಗಾಗಿ ಶಿಕ್ಷಿಸುವುದೇಕೆಂದು ಕೇಳಿರಿ. ವಾಸ್ತವದಲ್ಲಿ ಅಲ್ಲಾಹನು ಸೃಷ್ಟಿಸಿದ ಇತರ ಮನುಷ್ಯರಂತೆ

وَقَالَتِ الْيَهُودُ وَالنَّصَارَىٰ نَحْنُ أَبْنَاءُ اللَّهِ وَأَحِبَّاؤُهُ ۚ قُلْ فَلِمَ يُعَذِّبُكُم بِذُنُوبِكُم ۖ بَلْ أَنتُم بَشَرٌ مِّمَّنْ خَلَقَ ۚ

19. ಅರ್ಥಾತ್- ಸತ್ಯಧರ್ಮದ ಸಂಸ್ಥಾಪನೆಗೆ ಅನಿವಾರ್ಯವಾದ ನಿಮ್ಮ ಕೆಲವು ಮುಚ್ಚುಮರೆ ಮತ್ತು ಅಪ್ರಾಮಾಣಿಕತೆಗಳನ್ನು ಅವರು ಬಯಲಿಗೆಳೆಯುತ್ತಾರೆ. ಬಯಲಿಗೆಳೆಯುವುದು ಅನಿವಾರ್ಯವಲ್ಲದ ವಿಷಯಗಳನ್ನು ಅರಿತೂ ನಿರ್ಲಕ್ಷಿಸುತ್ತಾರೆ.

20. ಅರ್ಥಾತ್- ತಂದೆಯಿಲ್ಲದೆ ಹುಟ್ಟಿದ ಮಾತ್ರಕ್ಕಾಗಿ ನೀವು ಅವರನ್ನು ದೇವನನ್ನಾಗಿ ಮಾಡಿಕೊಂಡಿರಿ. ವಾಸ್ತವದಲ್ಲಿ ಅಲ್ಲಾಹನು ಯಾರನ್ನು ಹೇಗೆ ಬೇಕಾದರೂ ಸೃಷ್ಟಿಸಲು ಸಮರ್ಥನಿದ್ದಾನೆ. ಅಲ್ಲಾಹನು ಅಸಾಮಾನ್ಯ ರೂಪದಲ್ಲಿ ಸೃಷ್ಟಿಸಿದ ಮಾತ್ರಕ್ಕೆ ಯಾವುದೇ ದಾಸ ದೇವನಾಗಿ ಮಾರ್ಪಡುವುದಿಲ್ಲ.

يَغْفِرُ لِمَنْ يَشَاءُ وَيُعَذِّبُ مَنْ يَشَاءُ ۚ وَلِلَّهِ مُلْكُ السَّمَاوَاتِ وَالْأَرْضِ وَمَا بَيْنَهُمَا ۖ وَإِلَيْهِ الْمَصِيرُ ﴿١٨﴾

ನೀವೂ ಮನುಷ್ಯರೇ ಆಗಿರುತ್ತೀರಿ. ಅವನು ತಾನಿಚ್ಛಿಸಿದವರನ್ನು ಕ್ಷಮಿಸುತ್ತಾನೆ ಮತ್ತು ತಾನಿಚ್ಛಿಸಿದವರನ್ನು ಶಿಕ್ಷಿಸುತ್ತಾನೆ. ಭೂಮಿ-ಆಕಾಶಗಳು ಹಾಗೂ ಅವುಗಳ ನಡುವೆ ಇರುವ ಸಕಲವೂ ಅಲ್ಲಾಹನ ಆಧಿಪತ್ಯದಲ್ಲಿದ್ದು ಎಲ್ಲರಿಗೂ ಆತನ ಕಡೆಗೇ ಮರಳಲಿಕ್ಕಿದೆ.

يَا أَهْلَ الْكِتَابِ قَدْ جَاءَكُمْ رَسُولُنَا يُبَيِّنُ لَكُمْ عَلَىٰ فَتْرَةٍ مِنَ الرُّسُلِ أَنْ تَقُولُوا مَا جَاءَنَا مِنْ بَشِيرٍ وَلَا نَذِيرٍ ۖ فَقَدْ جَاءَكُمْ بَشِيرٌ وَنَذِيرٌ ۗ وَاللَّهُ عَلَىٰ كُلِّ شَيْءٍ قَدِيرٌ ﴿١٩﴾

19. ಓ ಗ್ರಂಥದವರೇ, "ನಮ್ಮ ಬಳಿಗೆ ಸುವಾರ್ತೆ ಕೊಡುವವನು ಮತ್ತು ಎಚ್ಚರಿಕೆ ನೀಡುವವನು ಯಾರೂ ಬರಲಿಲ್ಲ" ಎಂದು ನೀವು ಹೇಳದಂತಾಗಲು ಸಂದೇಶವಾಹಕರ ಆಗಮನದ ವ್ಯವಸ್ಥೆಯು ದೀರ್ಘಕಾಲದಿಂದ ಸ್ಥಗಿತಗೊಂಡಿದ್ದ ಕಾಲದಲ್ಲಿ, ನಮ್ಮ ಈ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರುತ್ತಾರೆ ಮತ್ತು ಧರ್ಮದ ಸುಸ್ಪಷ್ಟ ಶಿಕ್ಷಣವನ್ನು ನಿಮಗೆ ನೀಡುತ್ತಿದ್ದಾರೆ. ಆದುದರಿಂದ ಈಗ ಆ ಸುವಾರ್ತೆ ಕೊಡುವವನೂ ಎಚ್ಚರಿಕೆ ನೀಡುವವನೂ ಬಂದುಬಿಟ್ಟನು ಮತ್ತು ಅಲ್ಲಾಹನು ಸಕಲ ಕಾರ್ಯಗಳಿಗೆ ಶಕ್ತನಾಗಿರುತ್ತಾನೆ.[21]

وَإِذْ قَالَ مُوسَىٰ لِقَوْمِهِ يَا قَوْمِ اذْكُرُوا نِعْمَةَ اللَّهِ عَلَيْكُمْ إِذْ جَعَلَ فِيكُمْ أَنْبِيَاءَ وَجَعَلَكُمْ مُلُوكًا وَآتَاكُمْ مَا لَمْ يُؤْتِ أَحَدًا مِنَ الْعَالَمِينَ ﴿٢٠﴾

20. ಮೂಸಾರು ತಮ್ಮ ಜನಾಂಗದೊಡನೆ ಹೇಳಿದ್ದುದನ್ನು ಸ್ಮರಿಸಿರಿ: "ಓ ನನ್ನ ಜನಾಂಗದವರೇ, ಅಲ್ಲಾಹನು ನಿಮಗೆ ದಯಪಾಲಿಸಿದ 'ಕೊಡುಗೆ'ಗಳನ್ನು ಸ್ಮರಿಸಿರಿ. ಅವನು ನಿಮ್ಮಲ್ಲಿ ಪ್ರವಾದಿಗಳನ್ನು ಹುಟ್ಟಿಸಿದನು. ನಿಮ್ಮನ್ನು ಅಧಿಪತಿಗಳನ್ನಾಗಿ ಮಾಡಿದನು. ಜಗತ್ತಿನಲ್ಲಿ ಇನ್ನಾರಿಗೂ ನೀಡದಿದ್ದುದನ್ನೆಲ್ಲ ನಿಮಗೆ ನೀಡಿದನು.

يَا قَوْمِ ادْخُلُوا الْأَرْضَ الْمُقَدَّسَةَ الَّتِي كَتَبَ اللَّهُ لَكُمْ وَلَا تَرْتَدُّوا عَلَىٰ أَدْبَارِكُمْ فَتَنْقَلِبُوا خَاسِرِينَ ﴿٢١﴾

21. ಓ ನನ್ನ ಜನಾಂಗದವರೇ, ಅಲ್ಲಾಹನು ನಿಮಗೆಂದು ವಿಧಿಸಿರುವ ಆ ಪಾವನ ಪ್ರದೇಶದೊಳಗೆ ನೀವು ಪ್ರವೇಶಿಸಿರಿ;[22] ಹಿಂಜರಿಯಬೇಡಿರಿ. ಅನ್ಯಥಾ ನೀವು ಪರಾಜಿತರಾಗಿಯೂ ಹತಾಶರಾಗಿಯೂ ಮರಳುವಿರಿ."

قَالُوا يَا مُوسَىٰ إِنَّ فِيهَا قَوْمًا جَبَّارِينَ وَإِنَّا لَنْ نَدْخُلَهَا حَتَّىٰ يَخْرُجُوا مِنْهَا فَإِنْ يَخْرُجُوا مِنْهَا فَإِنَّا دَاخِلُونَ ﴿٢٢﴾

22. ಅವರು, "ಓ ಮೂಸಾ, ಅಲ್ಲಿ ಮಹಾ ಬಲಾಢ್ಯ ಜನರಿದ್ದಾರೆ. ಅವರು ಅಲ್ಲಿಂದ ಹೊರಟು ಹೋಗುವವರೆಗೂ ನಾವು ಅಲ್ಲಿಗೆ ಎಷ್ಟು ಮಾತ್ರಕ್ಕೂ ಹೋಗಲಾರೆವು. ಅವರು ಅಲ್ಲಿಂದ ಹೊರಟು ಹೋದರೆ ನಾವು ಪ್ರವೇಶಿಸಲು ಸಿದ್ಧರಿದ್ದೇವೆ" ಎಂದು ಉತ್ತರ ಕೊಟ್ಟರು.

21. ಅರ್ಥಾತ್- ಸುವಾರ್ತೆ ಮತ್ತು ಎಚ್ಚರಿಕೆ ಕೊಡುವ ಈ ವ್ಯಕ್ತಿಯನ್ನು ನೀವು ಅನುಸರಿಸದೇ ಹೋದರೆ ಅಲ್ಲಾಹನು ಸರ್ವಶಕ್ತನೆಂದು ನಿಮಗೆ ತಿಳಿದಿರಲಿ. ಅವನು ಯಾವುದೇ ಅಡೆತಡೆ ಇಲ್ಲದೆ ಯಾವುದೇ ರೀತಿಯ ಶಿಕ್ಷೆಯನ್ನು ನೀಡಲು ಸಮರ್ಥನು.

22. ಅರ್ಥಾತ್- ಫೆಲಸ್ತೀನ್ ಸಾಮ್ರಾಜ್ಯ. ಆಗ ಅಲ್ಲಿ ಬಹುದೇವಾರಾಧನೆ ಮತ್ತು ಕೆಡುಕಿನಲ್ಲಿ ನಿರತವಾದ ಸಮುದಾಯ ನೆಲೆಸಿತ್ತು. ಬನೀಇಸ್ರಾಈಲರು ಈಜಿಪ್ಟಿನಿಂದ ಹೊರಟಾಗ ಅಲ್ಲಾಹನು ಅವರಿಗಾಗಿ ಈ ಪ್ರದೇಶವನ್ನು ಗೊತ್ತುಪಡಿಸಿದನಲ್ಲದೆ ಅದನ್ನು ಜಯಿಸುವಂತೆ ಆದೇಶಿಸಿದನು.

23. ಈ ಭಯಭೀತರ ನಡುವೆ ಅಲ್ಲಾಹನ 'ಕೊಡುಗೆ'ಗಳು ಸಿದ್ಧಿಸಿದ ಈರ್ವರಿದ್ದರು.[23] ಅವರು, "ಆ ಪರಾಕ್ರಮಿಗಳನ್ನೆದುರಿಸುತ್ತ ದ್ವಾರದೊಳಗೆ ಹೊಕ್ಕು ಬಿಡಿರಿ. ನೀವು ಒಳಗೆ ತಲಪಿದಾಗ ನೀವೇ ವಿಜಯಿಗಳಾಗುವಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹನ ಮೇಲೆ ಭರವಸೆ ಇಡಿರಿ" ಎಂದರು.

قَالَ رَجُلَانِ مِنَ الَّذِينَ يَخَافُونَ أَنْعَمَ اللَّهُ عَلَيْهِمَا ادْخُلُوا عَلَيْهِمُ الْبَابَ فَإِذَا دَخَلْتُمُوهُ فَإِنَّكُمْ غَالِبُونَ ۚ وَعَلَى اللَّهِ فَتَوَكَّلُوا إِنْ كُنْتُمْ مُؤْمِنِينَ ﴿٢٣﴾

24. ಆದರೆ, ಅವರು ಪುನಃ, "ಓ ಮೂಸಾ, ಅವರು ಅಲ್ಲಿರುವ ತನಕ ನಾವು ಎಂದಿಗೂ ಅಲ್ಲಿಗೆ ಹೋಗಲಾರೆವು. ಇನ್ನು ನೀವೂ ನಿಮ್ಮ ಪ್ರಭುವೂ ಹೋಗಿ ಯುದ್ಧ ಮಾಡಿರಿ. ನಾವಿಲ್ಲಿ ಕುಳಿತಿರುತ್ತೇವೆ" ಎಂದು ಹೇಳಿದರು.

قَالُوا يَا مُوسَىٰ إِنَّا لَنْ نَدْخُلَهَا أَبَدًا مَا دَامُوا فِيهَا ۖ فَاذْهَبْ أَنْتَ وَرَبُّكَ فَقَاتِلَا إِنَّا هَاهُنَا قَاعِدُونَ ﴿٢٤﴾

25. ಆಗ ಮೂಸಾ, "ಓ ನನ್ನ ಪ್ರಭೂ, ನನ್ನ ಮತ್ತು ನನ್ನ ಸಹೋದರನ ಹೊರತು ನನ್ನ ಅಧೀನದಲ್ಲಿ ಯಾರೂ ಇಲ್ಲ. ಆದುದರಿಂದ ನೀನು ನಮ್ಮನ್ನು ಈ ಧರ್ಮಧಿಕ್ಕಾರಿಗಳಿಂದ ಬೇರ್ಪಡಿಸಿ ಬಿಡು" ಎಂದು ಹೇಳಿದರು.

قَالَ رَبِّ إِنِّي لَا أَمْلِكُ إِلَّا نَفْسِي وَأَخِي ۖ فَافْرُقْ بَيْنَنَا وَبَيْنَ الْقَوْمِ الْفَاسِقِينَ ﴿٢٥﴾

26. ಅಲ್ಲಾಹನು, "ಸರಿ, ಹಾಗಾದರೆ ಆ ಪ್ರದೇಶವು ಇವರ ಮೇಲೆ ನಲ್ವತ್ತು ವರುಷಗಳವರೆಗೆ 'ನಿಷಿದ್ಧ' ಆಗಿರುವುದು. ಇವರು ಭೂಮಿಯಲ್ಲಿ ಅಲೆದಾಡುತ್ತಲೇ ಇರುವರು. ಈ ಧರ್ಮಭ್ರಷ್ಟರ ಬಗ್ಗೆ ಎಷ್ಟಕ್ಕೂ ಅನುಕಂಪ ತೋರಬೇಡಿರಿ"[24] ಎಂದು ಉತ್ತರ ಕೊಟ್ಟನು.

قَالَ فَإِنَّهَا مُحَرَّمَةٌ عَلَيْهِمْ ۛ أَرْبَعِينَ سَنَةً ۛ يَتِيهُونَ فِي الْأَرْضِ ۚ فَلَا تَأْسَ عَلَى الْقَوْمِ الْفَاسِقِينَ ﴿٢٦﴾

27. ಓ ಪೈಗಂಬರರೇ, 'ಆದಮ'ರ ಈರ್ವರು ಪುತ್ರರ ವೃತ್ತಾಂತವನ್ನು ಇವರಿಗೆ ಮುಚ್ಚುಮರೆಯಿಲ್ಲದೆ ಹೇಳಿಬಿಡಿರಿ. ಅವರಿಬ್ಬರೂ ಬಲಿಯರ್ಪಿಸಿದಾಗ ಒಬ್ಬನ ಬಲಿದಾನವು ಸ್ವೀಕೃತವಾಯಿತು ಮತ್ತು ಇನ್ನೊಬ್ಬನದು ಸ್ವೀಕರಿಸಲ್ಪಡಲಿಲ್ಲ. ಅವನು, "ಖಂಡಿತವಾಗಿಯೂ ನಾನು ನಿನ್ನನ್ನು ವಧಿಸುವೆನು" ಎಂದನು. ಇವನು, "ಅಲ್ಲಾಹ್ 'ಧರ್ಮನಿಷ್ಠರ' ಬಲಿದಾನವನ್ನು ಮಾತ್ರ ಸ್ವೀಕರಿಸುತ್ತಾನೆ.

وَاتْلُ عَلَيْهِمْ نَبَأَ ابْنَيْ آدَمَ بِالْحَقِّ إِذْ قَرَّبَا قُرْبَانًا فَتُقُبِّلَ مِنْ أَحَدِهِمَا وَلَمْ يُتَقَبَّلْ مِنَ الْآخَرِ قَالَ لَأَقْتُلَنَّكَ ۖ قَالَ إِنَّمَا يَتَقَبَّلُ اللَّهُ مِنَ الْمُتَّقِينَ ﴿٢٧﴾

23. ಈ ಈರ್ವರು ಹಿರಿಯರಲ್ಲಿ ಯೂಶಅ್‌ಬಿನ್ ನೂನ್ ಕೂಡ ಒಬ್ಬರು. ಹ. ಮೂಸಾರ(ಅ) ನಂತರ ಅವರು ಮೂಸಾರ(ಅ) ಖಲೀಫಾ ಆಗಿ ಮಾರ್ಪಟ್ಟರು. ಇನ್ನೊಬ್ಬರು ಹ. ಕಾಲಿಬ್ ಆಗಿದ್ದರು. ಅವರು ಯೂಶಅ್‌ರ ಆಪ್ತ ಸಹಾಯಕರಾಗಿದ್ದರು. ನಲವತ್ತು ವರ್ಷಗಳ ಅಲೆದಾಟದ ಬಳಿಕ ಬನೀಇಸ್ರಾಈಲರು ಫೆಲಸ್ತೀನ್ ಪ್ರವೇಶಿಸಿದಾಗ ಮೂಸಾರ(ಅ) ಸಂಗಾತಿಗಳ ಪೈಕಿ ಈ ಇಬ್ಬರು ಮಾತ್ರ ಬದುಕುಳಿದಿದ್ದರು.

24. ಈ ಘಟನೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿರುವುದು ಏಕೆಂದರೆ ಮೂಸಾರ(ಅ) ಕಾಲದಲ್ಲಿ ಅವಿಧೇಯತೆ, ಪಥಭ್ರಷ್ಟತೆ ಮತ್ತು ಹೇಡಿತನವನ್ನು ಪ್ರದರ್ಶಿಸಿದುದಕ್ಕೆ ಬನೀಇಸ್ರಾಈಲರು ಅನುಭವಿಸಬೇಕಾಗಿ ಬಂದ ಶಿಕ್ಷೆಗಿಂತ ಹೆಚ್ಚು ತೀವ್ರವಾದ ಶಿಕ್ಷೆಯನ್ನು ಮುಹಮ್ಮದ್‌ರ(ಸ) ವಿರುದ್ಧ ಬಂಡಾಯದ ಧೋರಣೆ ತಳೆಯುವುದರಿಂದ ನೀವು ಅನುಭವಿಸಲಿದ್ದೀರಿ ಎಂದು ತಿಳಿಯಪಡಿಸುವುದಾಗಿದೆ.

28. ನೀನು ನನ್ನನ್ನು ವಧಿಸಲು ಕೈಯೆತ್ತಿದರೂ ನಾನು ನಿನ್ನನ್ನು ವಧಿಸೆನು.[25] ನಾನು ಸರ್ವಲೋಕ ಪಾಲಕನಾದ ಅಲ್ಲಾಹನನ್ನು ಭಯಪಡುತ್ತೇನೆ.

لَئِنۢ بَسَطتَ إِلَيَّ يَدَكَ لِتَقْتُلَنِى مَآ أَنَا۠ بِبَاسِطٍ يَدِىَ إِلَيْكَ لِأَقْتُلَكَ ۖ إِنِّىٓ أَخَافُ ٱللَّهَ رَبَّ ٱلْعَٰلَمِينَ ﴿٢٨﴾

29. ನನ್ನ ಹಾಗೂ ನಿನ್ನ ಪಾಪಗಳನ್ನು ನೀನೇ ಶೇಖರಿಸಿಕೊಂಡು ನೀನು ನರಕವಾಸಿಯಾಗಿ ಬಿಡಬೇಕು ಎಂದು ನಾನು ಬಯಸುತ್ತೇನೆ. ಅಕ್ರಮಿಗಳ ಅಕ್ರಮಕ್ಕೆ ಇದೇ ಪ್ರತಿಫಲ" ಎಂದು ಉತ್ತರ ಕೊಟ್ಟನು.

إِنِّىٓ أُرِيدُ أَن تَبُوٓأَ بِإِثْمِى وَإِثْمِكَ فَتَكُونَ مِنْ أَصْحَٰبِ ٱلنَّارِ ۚ وَذَٰلِكَ جَزَٰٓؤُا۟ ٱلظَّٰلِمِينَ ﴿٢٩﴾

30. ಕೊನೆಗೆ ಅವನ ಭ್ರಷ್ಟಚಿತ್ತವು ತನ್ನ ಸಹೋದರನ ವಧೆಯನ್ನು ಅವನಿಗೆ ಸುಗಮವಾಗಿಸಿತು ಮತ್ತು ಅವನು ಇವನನ್ನು ವಧಿಸಿ ನಷ್ಟ ಹೊಂದುವವರೊಂದಿಗೆ ಸೇರಿ ಹೋದನು.

فَطَوَّعَتْ لَهُۥ نَفْسُهُۥ قَتْلَ أَخِيهِ فَقَتَلَهُۥ فَأَصْبَحَ مِنَ ٱلْخَٰسِرِينَ ﴿٣٠﴾

31. ಅನಂತರ ಅಲ್ಲಾಹನು ಒಂದು ಕಾಗೆಯನ್ನು ಕಳುಹಿಸಿದನು. ಅದು ಅವನ ಸಹೋದರನ ಮೃತ ಶರೀರವನ್ನು ಹೇಗೆ ಮರೆಸುವುದೆಂಬುದನ್ನು ತೋರಿಸಿಕೊಡಲಿಕ್ಕಾಗಿ ನೆಲವನ್ನು ಅಗೆಯ ತೊಡಗಿತು. ಇದನ್ನು ಕಂಡು ಅವನು, "ಓ ನನ್ನ ದುರದೃಷ್ಟವೇ! ನನ್ನ ಸಹೋದರನ ಶವವನ್ನು ಮರೆಸುವ ಉಪಾಯ ಕಂಡು ಕೊಳ್ಳಲು ಈ ಕಾಗೆಯಂತೆಯೂ ನಾನು ಆಗಲಿಲ್ಲವಲ್ಲ!" ಎಂದನು. ಅನಂತರ ಅವನು ಮಾಡಿದ ಕೃತ್ಯಕ್ಕಾಗಿ ತುಂಬಾ ಪಶ್ಚಾತ್ತಾಪ ಪಟ್ಟನು.[26]

فَبَعَثَ ٱللَّهُ غُرَابًا يَبْحَثُ فِى ٱلْأَرْضِ لِيُرِيَهُۥ كَيْفَ يُوَٰرِى سَوْءَةَ أَخِيهِ ۚ قَالَ يَٰوَيْلَتَىٰٓ أَعَجَزْتُ أَنْ أَكُونَ مِثْلَ هَٰذَا ٱلْغُرَابِ فَأُوَٰرِىَ سَوْءَةَ أَخِى ۖ فَأَصْبَحَ مِنَ ٱلنَّٰدِمِينَ ﴿٣١﴾

32. ಈ ಕಾರಣದಿಂದಲೇ - "ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ ಮತ್ತು ಒಬ್ಬನು ಇನ್ನೊಬ್ಬನಿಗೆ ಜೀವದಾನ ಮಾಡಿದರೆ ಅವನು ಸಕಲ ಮಾನವ ಕೋಟಿಗೆ ಜೀವದಾನ ಮಾಡಿದಂತೆ" ಎಂಬ ಆದೇಶವನ್ನು ನಾವು ಬನೀಇಸ್ರಾಈಲರಿಗೆ ವಿಧಿಸಿದ್ದೆವು. ಆದರೆ ನಮ್ಮ

مِنْ أَجْلِ ذَٰلِكَ كَتَبْنَا عَلَىٰ بَنِىٓ إِسْرَٰٓءِيلَ أَنَّهُۥ مَن قَتَلَ نَفْسًۢا بِغَيْرِ نَفْسٍ أَوْ فَسَادٍ فِى ٱلْأَرْضِ فَكَأَنَّمَا قَتَلَ ٱلنَّاسَ جَمِيعًا وَمَنْ أَحْيَاهَا فَكَأَنَّمَآ أَحْيَا ٱلنَّاسَ جَمِيعًا ۚ وَلَقَدْ جَآءَتْهُمْ رُسُلُنَا بِٱلْبَيِّنَٰتِ

25. ನೀನು ಕೊಲೆ ಮಾಡಲು ಬಂದಾಗ ನಾನು ಕೈ ಕಟ್ಟಿ ಕುಳಿತು ಕೊಲೆಗೆ ಅನುವು ಮಾಡಿಕೊಡುತ್ತೇನೆಂದು ಇದರ ಅರ್ಥವಲ್ಲ. ನೀನು ನನ್ನ ಕೊಲೆಗೆ ಮುಂದಾಗಿರುವಂತೆ ನಾನು ನಿನ್ನ ಕೊಲೆಗೆ ಮುಂದಾಗಲಾರೆ ಎಂದು ಇದರ ಅರ್ಥ.

26. ಇಲ್ಲಿ ಈ ಘಟನೆಯನ್ನು ಪ್ರಸ್ತಾಪಿಸಿರುವುದರ ಉದ್ದೇಶ, ಪ್ರವಾದಿವರ್ಯರು(ಸ) ಮತ್ತವರ ಸನ್ಮಾನ್ಯ ಸಂಗಾತಿಗಳನ್ನು ಕೊಲೆ ಮಾಡಲು ಯಹೂದಿಯರು ಹೂಡಿದ್ದ ಸಂಚಿನ ಬಗ್ಗೆ ಅವರನ್ನು ಹೀಗಳೆಯುವುದಾಗಿದೆ. ಈ ಎರಡು ಘಟನೆಗಳ ನಡುವೆ ಇರುವ ಸಮಾನತೆ ಸ್ಪಷ್ಟವಿದೆ. ಇವರೂ ಅಸೂಯೆಯಿಂದಾಗಿ ಪ್ರವಾದಿವರ್ಯರನ್ನು(ಸ) ಕೊಲೆ ಮಾಡಬಯಸಿದ್ದರು. ಆದಮ್‌ರ(ಅ) ಪುತ್ರನೂ ಅಸೂಯೆಯಿಂದಾಗಿಯೇ ತನ್ನ ಸಹೋದರನನ್ನು ಕೊಲೆ ಮಾಡ ಹೊರಟಿದ್ದನು.

ಸಂದೇಶವಾಹಕರು ಸುವ್ಯಕ್ತ ಆದೇಶಗಳ ಸಹಿತ ಅವರ ಬಳಿಗೆ ನಿರಂತರ ಬಂದುಕೊಂಡಿದ್ದರೂ ಅವರಲ್ಲಿ ಹೆಚ್ಚಿನವರು ಭೂಮಿಯಲ್ಲಿ ಅತಿರೇಕವೆಸಗುವವರಾಗಿದ್ದಾರೆ.

ثُمَّ إِنَّ كَثِيرًا مِّنْهُم بَعْدَ ذَٰلِكَ فِي الْأَرْضِ لَمُسْرِفُونَ ﴿٣٢﴾

33. ಅಲ್ಲಾಹ್ ಹಾಗೂ ಅವನ ಸಂದೇಶವಾಹಕರ ವಿರುದ್ಧ ಸಮರ ಹೂಡುವವರಿಗೆ ಮತ್ತು ಕ್ಷೋಭೆಯನ್ನುಂಟು ಮಾಡಲಿಕ್ಕಾಗಿಯೇ ಭೂಮಿಯ[27] ಮೇಲೆ ಶ್ರಮಿಸುತ್ತಿರುವವರಿಗೆ ಇರುವ ಶಿಕ್ಷೆಯು ವಧಿಸುವುದು ಅಥವಾ ಶಿಲುಬೆಗೇರಿಸುವುದು ಅಥವಾ ಅವರ ಕೈಯನ್ನೂ ಕಾಲನ್ನೂ ವಿರುದ್ಧ ದಿಕ್ಕುಗಳಿಂದ ಕಡಿದು ಹಾಕುವುದು ಅಥವಾ ಅವರನ್ನು ಗಡೀಪಾರು ಮಾಡುವುದು ಆಗಿರುತ್ತದೆ. ಇದು ಇಹಲೋಕದಲ್ಲಿ ಅವರಿಗಿರುವ ಅಪಮಾನ. ಪರಲೋಕದಲ್ಲಿ ಅವರಿಗೆ ಇದಕ್ಕಿಂತಲೂ ಕಠಿಣ ಶಿಕ್ಷೆ ಕಾದಿದೆ.

إِنَّمَا جَزَاءُ الَّذِينَ يُحَارِبُونَ اللَّهَ وَرَسُولَهُ وَيَسْعَوْنَ فِي الْأَرْضِ فَسَادًا أَن يُقَتَّلُوا أَوْ يُصَلَّبُوا أَوْ تُقَطَّعَ أَيْدِيهِمْ وَأَرْجُلُهُم مِّنْ خِلَافٍ أَوْ يُنفَوْا مِنَ الْأَرْضِ ۚ ذَٰلِكَ لَهُمْ خِزْيٌ فِي الدُّنْيَا ۖ وَلَهُمْ فِي الْآخِرَةِ عَذَابٌ عَظِيمٌ ﴿٣٣﴾

34. ಆದರೆ ನಿಮ್ಮ ನಿಯಂತ್ರಣಕ್ಕೆ ಬರುವುದಕ್ಕೆ ಮುಂಚೆಯೇ ಪಶ್ಚಾತ್ತಾಪ ಪಟ್ಟು ಮರಳಿದವರ ಬಗ್ಗೆ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆಂಬುದು ನಿಮಗೆ ತಿಳಿದಿರಬೇಕು.[28]

إِلَّا الَّذِينَ تَابُوا مِن قَبْلِ أَن تَقْدِرُوا عَلَيْهِمْ ۖ فَاعْلَمُوا أَنَّ اللَّهَ غَفُورٌ رَّحِيمٌ ﴿٣٤﴾ ع

35. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ. ಅವನ ಸಾಮೀಪ್ಯದ ಸಾಧನವನ್ನು ಹುಡುಕಿರಿ[29] ಮತ್ತು ಅವನ ಮಾರ್ಗದಲ್ಲಿ ಹೋರಾಡಿರಿ. ನಿಮಗೆ ವಿಜಯ ಪ್ರಾಪ್ತಿಯಾಗಲೂ ಬಹುದು.

يَا أَيُّهَا الَّذِينَ آمَنُوا اتَّقُوا اللَّهَ وَابْتَغُوا إِلَيْهِ الْوَسِيلَةَ وَجَاهِدُوا فِي سَبِيلِهِ لَعَلَّكُمْ تُفْلِحُونَ ﴿٣٥﴾

36. 'ಸತ್ಯನಿಷೇಧ' ನೀತಿಯನ್ನು ಕೈಗೊಂಡವರ ವಶದಲ್ಲಿ ಭೂಮಿಯ

إِنَّ الَّذِينَ كَفَرُوا لَوْ أَنَّ لَهُم مَّا فِي الْأَرْضِ

27. ಇಲ್ಲಿ ಭೂಮಿ ಎಂದರೆ ಇಸ್ಲಾಮೀ ಸರ್ಕಾರದ ಮೇಲೆ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವ ಜವಾಬ್ದಾರಿ ಇರುವ ರಾಷ್ಟ್ರ ಅಥವಾ ಪ್ರದೇಶವಾಗಿದೆ. ಅಲ್ಲಾಹ್ ಮತ್ತು ಪ್ರವಾದಿಯೊಂದಿಗೆ(ಸ) ಯುದ್ಧ ಸಾರುವುದೆಂದರೆ ಇಸ್ಲಾಮೀ ಸರ್ಕಾರ, ರಾಷ್ಟ್ರದಲ್ಲಿ ಸ್ಥಾಪಿಸಬಯಸುವ ಸದ್ವ್ಯವಸ್ಥೆಯ ವಿರುದ್ಧ ಯುದ್ಧ ಸಾರುವುದಾಗಿದೆ. ಕರ್ಮಶಾಸ್ತ್ರಜ್ಞರ ಪ್ರಕಾರ ಶಸ್ತ್ರಸಜ್ಜಿತರಾಗಿ ಗುಂಪುಕಟ್ಟಿ ಕೊಲೆ ಸುಲಿಗೆ ನಡೆಸುವವರೂ ಇದರಲ್ಲಿ ಸೇರಿದ್ದಾರೆ.

28. ಅರ್ಥಾತ್- ಅವರು ಕ್ಷೋಭೆಯುಂಟುಮಾಡುವ ಯತ್ನವನ್ನು ಬಿಟ್ಟು ಬಿಟ್ಟರೆ, ಸದ್ವ್ಯವಸ್ಥೆಯನ್ನು ಬುಡಮೇಲುಗೊಳಿಸುವ ಪ್ರಯತ್ನವನ್ನು ಸ್ಥಗಿತಗೊಳಿಸಿದ್ದರೆ, ತಮ್ಮ ವರ್ತನೆಯ ಮೂಲಕ ಅವರು ತಾವು ಶಾಂತಿಪ್ರಿಯರು, ಕಾನೂನುಪಾಲಕರು ಮತ್ತು ಸನ್ನಡತೆಯನ್ನು ಪಾಲಿಸುವವರೆಂದು ಸಾಬೀತುಗೊಳಿಸಿದರೆ ಅನಂತರ ಅವರ ಪೂರ್ವದ ಅಪರಾಧಗಳಿಗಾಗಿ ಅವರಿಗೆ ಪೂರ್ವೋಕ್ತ ಶಿಕ್ಷೆಗಳನ್ನು ನೀಡಲಾಗದು. ಆದರೆ ಅವರು ಮಾನವ ಹಕ್ಕುಗಳ ಉಲ್ಲಂಘನೆ ಮಾಡಿದರೆ ಅದರ ಹೊಣೆ ಹೊರುವುದರಿಂದ ಅವರೆಂದೂ ಮುಕ್ತರಾಗುವುದಿಲ್ಲ. ಉದಾ: ಅವರು ಯಾರನ್ನಾದರೂ ಕೊಲೆ ಮಾಡಿದ್ದರೆ, ಯಾರ ಸೊತ್ತನ್ನಾದರೂ ಕಬಳಿಸಿದ್ದರೆ, ಮಾನವನ ಪ್ರಾಣ ಮತ್ತು ಸೊತ್ತಿನ ವಿರುದ್ಧ ಯಾವುದೇ ಅನ್ಯಾಯವೆಸಗಿದ್ದರೆ ಅಪರಾಧ ಸಂಹಿತೆಯನ್ನು ಅವರ ಮೇಲೆ ಜಾರಿಗೊಳಿಸ ಲಾಗುವುದು. ಆದರೆ ಬಂಡಾಯ, ವಂಚನೆ ಅಥವಾ ಅಲ್ಲಾಹ್ ಹಾಗೂ ಪ್ರವಾದಿಯ ವಿರುದ್ಧ ಯುದ್ಧ ಸಾರಿದ ಮೊಕದ್ದಮೆಯನ್ನು ಅವರ ಮೇಲೆ ಹೂಡಲಾಗುವುದಿಲ್ಲ.

29. ಅರ್ಥಾತ್- ಅಲ್ಲಾಹನ ಸಂಪ್ರೀತಿ ಮತ್ತು ಸಾಮೀಪ್ಯದ ಸ್ಥಾನಕ್ಕೇರಲು ವಿಧಾನಗಳನ್ನು ಹುಡುಕುತ್ತಿರಿ, ತವಕಿಸುತ್ತಿರಿ.

ಸಕಲ ಸಂಪತ್ತೂ ಅದರೊಂದಿಗೆ ಮತ್ತೂ ಅಷ್ಟೇ ಇದ್ದರೂ ಅವರು ಅದನ್ನೆಲ್ಲ ಪ್ರಾಯಶ್ಚಿತ್ತ ರೂಪದಲ್ಲಿ ಕೊಟ್ಟು ಪುನರುತ್ಥಾನ ದಿನದ ಯಾತನೆಯಿಂದ ತಪ್ಪಿಸಿಕೊಳ್ಳಲಿಚ್ಛಿಸಿದರೂ ಅವರಿಂದ ಅದು ಸ್ವೀಕೃತವಾಗಲಾರದು ಮತ್ತು ಅವರಿಗೆ ವೇದನಾಯುಕ್ತ ಯಾತನೆ ಸಿಕ್ಕಿಯೇ ತೀರುವುದು.

جَمِيعًا وَمِثْلَهُ مَعَهُ لِيَفْتَدُوا بِهِ مِنْ عَذَابِ يَوْمِ الْقِيَامَةِ مَا تُقُبِّلَ مِنْهُمْ ۖ وَلَهُمْ عَذَابٌ أَلِيمٌ ﴿٣٦﴾

37. ಅವರು ನರಕಾಗ್ನಿಯಿಂದ ಓಡಿಹೋಗಬೇಕೆಂದು ಇಚ್ಛಿಸುವರು. ಆದರೆ, ಅವರಿಗೆ ಹೊರ ಬರಲು ಸಾಧ್ಯವಾಗದು. ಅವರಿಗೆ ಶಾಶ್ವತವಾದ ಯಾತನೆ ಕೊಡಲಾಗುವುದು.

يُرِيدُونَ أَنْ يَخْرُجُوا مِنَ النَّارِ وَمَا هُمْ بِخَارِجِينَ مِنْهَا ۖ وَلَهُمْ عَذَابٌ مُقِيمٌ ﴿٣٧﴾

38. ಕಳ್ಳತನ ಮಾಡಿದವನ ಮತ್ತು ಕಳ್ಳತನ ಮಾಡಿದವಳ ಕೈಗಳನ್ನು ಕಡಿದು ಬಿಡಿರಿ.[30] ಇದು ಅವರ ಗಳಿಕೆಯ ಫಲ ಮತ್ತು ಅಲ್ಲಾಹನ ಕಡೆಯಿಂದ ಎಚ್ಚರಿಸುವಂಥ ಶಿಕ್ಷೆ. ಅಲ್ಲಾಹನು ಮಹಾ ಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَالسَّارِقُ وَالسَّارِقَةُ فَاقْطَعُوا أَيْدِيَهُمَا جَزَاءً بِمَا كَسَبَا نَكَالًا مِنَ اللَّهِ ۗ وَاللَّهُ عَزِيزٌ حَكِيمٌ ﴿٣٨﴾

39. ಇನ್ನು ಯಾರಾದರೂ ಅನ್ಯಾಯವೆಸಗಿದ ಬಳಿಕ ಪಶ್ಚಾತ್ತಾಪ ಪಟ್ಟು ತನ್ನ ವರ್ತನೆಯನ್ನು ಸರಿಪಡಿಸಿಕೊಂಡರೆ, ಅಲ್ಲಾಹನ ಕೃಪಾ ಕಟಾಕ್ಷವು ಮತ್ತೆ ಅವನೆಡೆಗೆ ಒಲಿಯುವುದು.[31] ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

فَمَنْ تَابَ مِنْ بَعْدِ ظُلْمِهِ وَأَصْلَحَ فَإِنَّ اللَّهَ يَتُوبُ عَلَيْهِ ۗ إِنَّ اللَّهَ غَفُورٌ رَحِيمٌ ﴿٣٩﴾

40. ಅಲ್ಲಾಹನು ಭೂಮಿ-ಆಕಾಶಗಳ ಅಧಿಪತಿಯೆಂಬುದನ್ನು ನೀವು

أَلَمْ تَعْلَمْ أَنَّ اللَّهَ لَهُ مُلْكُ السَّمَاوَاتِ وَ

30. ಕತ್ತರಿಸಬೇಕಾದುದು ಎರಡೂ ಕೈಗಳಲ್ಲ. ಒಂದು ಕೈ. ಮೊದಲ ಕಳ್ಳತನಕ್ಕೆ ಬಲಗೈಯನ್ನು ಕತ್ತರಿಸಲಾಗುವುದು. ಇನ್ನೊಬ್ಬರ ಸ್ವಾಧೀನದಲ್ಲಿರುವ ಯಾವುದಾದರೂ ಸೊತ್ತನ್ನು ಅನ್ಯಾಯವಾಗಿ ತನ್ನ ಸ್ವಾಧೀನಕ್ಕೆ ಒಳಪಡಿಸುವ ಕ್ರಿಯೆಗೆ ಮಾತ್ರ 'ಕಳ್ಳತನ'ದ ಪದ ಅನ್ವಯವಾಗುತ್ತದೆ. ಒಂದು ಗುರಾಣಿಗಿಂತ ಕಡಿಮೆ ಮೊತ್ತದ ವಸ್ತುವನ್ನು ಕದ್ದರೆ ಕೈಯನ್ನು ಕತ್ತರಿಸಲಾಗುವುದಿಲ್ಲ. ನಂಬಲರ್ಹ ವರದಿಗಳ ಪ್ರಕಾರ ಪ್ರವಾದಿವರ್ಯರ(ಸ) ಕಾಲದಲ್ಲಿ ಗುರಾಣಿಯ ಬೆಲೆ ಹತ್ತು ದಿರ್‌ಹಮ್ ಆಗಿತ್ತು. ಆ ಕಾಲದ ದಿರ್‌ಹಮ್‌ನಲ್ಲಿ ಸುಮಾರು 1/4 ತೊಲೆ ಬೆಳ್ಳಿ ಇರುತ್ತಿತ್ತು. ಕಳ್ಳತನಕ್ಕಾಗಿ ಕೈ ಕತ್ತರಿಸಬಾರದಂತಹ ಅನೇಕ ವಸ್ತುಗಳೂ ಇವೆ. ಉದಾ: ಹಣ್ಣು ಹಂಪಲು, ತರಕಾರಿ, ಊಟ, ಕ್ಷುಲ್ಲಕ ವಸ್ತುಗಳು, ಹಕ್ಕಿ, ಬೈತುಲ್‌ಮಾಲ್‌ನ ಹಣ ಇತ್ಯಾದಿಗಳ ಕಳ್ಳತನ, ಇವುಗಳನ್ನು ಕದ್ದರೆ ಕೈಯನ್ನು ಕತ್ತರಿಸಲಾಗುವುದಿಲ್ಲ. ಆದರೆ ಇಂತಹ ಕಳ್ಳತನ ಕ್ಷಮ್ಯವೆಂದು ಇದರ ಅರ್ಥವಲ್ಲ.

31. ಅಂತಹ ಕಳ್ಳನ ಕೈ ಕತ್ತರಿಸಬಾರದು ಎಂದು ಇದರ ಅರ್ಥವಲ್ಲ. ಕೈಯನ್ನು ಕತ್ತರಿಸಲಾದ ಬಳಿಕ ಪಶ್ಚಾತ್ತಾಪ ಪಟ್ಟು ತನ್ನ ಮನಸ್ಸನ್ನು ಕಳ್ಳತನದಿಂದ ಪರಿಶುದ್ಧಗೊಳಿಸಿ, ಅಲ್ಲಾಹನ ಸಜ್ಜನ ದಾಸನಾಗಿ ಮಾರ್ಪಡುವವನು ಅಲ್ಲಾಹನ ಕ್ರೋಧದಿಂದ ಮುಕ್ತನಾಗುವವನು ಎಂದಾಗಿದೆ. ಅಲ್ಲಾಹನು ಅವನನ್ನು ದೋಷಮುಕ್ತನಾಗಿ ಮಾಡುವನು. ಕೈಯನ್ನು ಕತ್ತರಿಸಿಕೊಂಡ ಬಳಿಕವೂ ಯಾರಾದರೂ ತನ್ನ ದುರುದ್ದೇಶದಿಂದ ಮುಕ್ತನಾಗದಿದ್ದರೆ, ತನ್ನ ಕೈ ಕತ್ತರಿಸಲ್ಪಡಲು ಕಾರಣವಾದ ಹೇಯ ಆಲೋಚನೆಗಳನ್ನು ಪುನಃ ಮೈಗೂಡಿಸಿಕೊಂಡರೆ- ಕೈ ಅವನ ದೇಹದಿಂದ ಪ್ರತ್ಯೇಕಗೊಂಡರೂ, ಕಳ್ಳತನದ ದುರಾಲೋಚನೆ ಅವನ ಮನಸ್ಸಿನಲ್ಲಿ ಇನ್ನೂ ಮನೆ ಮಾಡಿಕೊಂಡಿದೆ ಎಂದಾಯಿತು. ಆದ್ದರಿಂದ ಕೈ ಕತ್ತರಿಸುವುದಕ್ಕೆ ಮೊದಲು ಇದ್ದಂತೆಯೇ ಅನಂತರವೂ ಅವನು ದೇವಕ್ರೋಧಕ್ಕೆ ಅರ್ಹನಾಗಿರುವನು. ಆದ್ದರಿಂದ ಅಲ್ಲಾಹನಿಂದ ಕ್ಷಮೆಯಾಚಿಸಿ ತನ್ನ ಮನಸ್ಸಿನ ಸುಧಾರಣೆ ಮಾಡಿಕೊಳ್ಳುವಂತೆ ಕುರ್‌ಆನ್ ಕಳ್ಳನಿಗೆ ಮಾರ್ಗದರ್ಶನ ಮಾಡುತ್ತದೆ. ಏಕೆಂದರೆ ಆತ್ಮಶುದ್ಧಿಯು, ನ್ಯಾಯಾಲಯದ ಶಿಕ್ಷೆಯಿಂದಾಗದು, ಪ್ರಾಯಶ್ಚಿತ್ತ ಮತ್ತು ದೇವನೆಡೆಗೆ ಮರಳುವುದರಿಂದ ಮಾತ್ರ ಸಾಧ್ಯ.

ತಿಳಿದಿಲ್ಲವೇ? ಅವನು ತಾನಿಚ್ಛಿಸಿದವರನ್ನು ಶಿಕ್ಷಿಸುತ್ತಾನೆ ಮತ್ತು ತನಗಿಷ್ಟ ಬಂದವರನ್ನು ಕ್ಷಮಿಸುತ್ತಾನೆ. ಅವನಿಗೆ ಎಲ್ಲ ಅಧಿಕಾರವೂ ಇದೆ.

الْأَرْضِ ۚ يُعَذِّبُ مَنْ يَشَاءُ وَيَغْفِرُ لِمَنْ
يَشَاءُ ۗ وَاللَّهُ عَلَىٰ كُلِّ شَيْءٍ قَدِيرٌ ﴿٤٠﴾

41. ಓ ಸಂದೇಶವಾಹಕರೇ, 'ಸತ್ಯನಿಷೇಧ' ಮಾರ್ಗದಲ್ಲಿ ಭಾರೀ ಶ್ರಮಪಡುತ್ತಿರುವವರು ನಿಮ್ಮನ್ನು ವ್ಯಾಕುಲಗೊಳಿಸದಿರಲಿ. ಅವರು "ನಾವು ವಿಶ್ವಾಸವಿಟ್ಟೆವು" ಎಂದು ಬಾಯಿ ಮಾತಿನಿಂದ ಹೇಳಿಕೊಂಡರೂ ಹೃದಯದಲ್ಲಿ ವಿಶ್ವಾಸವಿರಿಸದ ಜನರಾಗಿರಲಿ ಅಥವಾ ಅಸತ್ಯ ಮಾತುಗಳನ್ನು ಕೇಳುವ ಹವ್ಯಾಸವುಳ್ಳ ಯಹೂದಿಯರಾಗಿರಲಿ. ಅವರು (ಯಹೂದಿಯರು) ನಿಮ್ಮ ಬಳಿಗೆ ಎಂದೂ ಬಾರದಿರುವ ಇತರ ಜನಾಂಗದವರಿಗಾಗಿ ನಿಮ್ಮ ಮಾತುಗಳಿಗೆ ಕಿವಿಗೊಡುತ್ತಾರೆ. ಇವರು, ದೇವಗ್ರಂಥದ ಪದಗಳ ಇಂಗಿತವು ನಿಶ್ಚಿತವಾಗಿದ್ದರೂ ಅವುಗಳನ್ನು ಅವುಗಳ ನಿಜಾರ್ಥದಿಂದ ದೂರ ಸರಿಸಿಬಿಡುತ್ತಾರೆ ಮತ್ತು ಜನರೊಡನೆ- "ನಿಮಗೆ ಇಂತಹ ಆಜ್ಞೆ ದೊರೆತರೆ ಒಪ್ಪಿಕೊಳ್ಳಿರಿ; ಇಲ್ಲವಾದರೆ ಒಪ್ಪಿಕೊಳ್ಳಬೇಡಿರಿ" ಎಂದು ಹೇಳುತ್ತಾರೆ.[32] ಯಾರನ್ನು ಅಲ್ಲಾಹನೇ 'ಗೊಂದಲ'ಕ್ಕೀಡು ಮಾಡಿರುವನೋ ಅವನನ್ನು ಅಲ್ಲಾಹನ ಹಿಡಿತದಿಂದ ತಪ್ಪಿಸಲು ನೀವು ಏನನ್ನೂ ಮಾಡಲಾರಿರಿ.[33] ಅಲ್ಲಾಹನು ಶುದ್ಧಗೊಳಿಸಲು ಇಚ್ಛಿಸದಿರುವುದು ಇಂತಹವರ ಹೃದಯಗಳನ್ನೇ. ಇವರಿಗೆ ಇಹಲೋಕದಲ್ಲಿ ಅವಮಾನ ಮತ್ತು ಪರಲೋಕದಲ್ಲಿ ಘೋರ ಶಿಕ್ಷೆ ಕಾದಿದೆ.

يَا أَيُّهَا الرَّسُولُ لَا يَحْزُنْكَ الَّذِينَ يُسَارِعُونَ
فِي الْكُفْرِ مِنَ الَّذِينَ قَالُوا آمَنَّا بِأَفْوَاهِهِمْ
وَلَمْ تُؤْمِنْ قُلُوبُهُمْ ۛ وَمِنَ الَّذِينَ هَادُوا ۛ
سَمَّاعُونَ لِلْكَذِبِ سَمَّاعُونَ لِقَوْمٍ آخَرِينَ
لَمْ يَأْتُوكَ ۖ يُحَرِّفُونَ الْكَلِمَ مِنْ
بَعْدِ مَوَاضِعِهِ ۖ يَقُولُونَ إِنْ أُوتِيتُمْ هَٰذَا
فَخُذُوهُ وَإِنْ لَمْ تُؤْتَوْهُ فَاحْذَرُوا ۚ وَمَنْ
يُرِدِ اللَّهُ فِتْنَتَهُ فَلَنْ تَمْلِكَ لَهُ مِنَ اللَّهِ
شَيْئًا ۚ أُولَٰئِكَ الَّذِينَ لَمْ يُرِدِ اللَّهُ أَنْ
يُطَهِّرَ قُلُوبَهُمْ ۚ لَهُمْ فِي الدُّنْيَا خِزْيٌ ۖ
وَلَهُمْ فِي الْآخِرَةِ عَذَابٌ عَظِيمٌ ﴿٤١﴾

42. ಇವರು ಸುಳ್ಳನ್ನು ಆಲಿಸುವವರು ಮತ್ತು 'ನಿಷೇಧಿತ' ಸಂಪತ್ತನ್ನು ಭಕ್ಷಿಸುವವರಾಗಿದ್ದಾರೆ. ಆದುದರಿಂದ ಇವರು ನಿಮ್ಮ ಮುಂದೆ (ತಮ್ಮ ವ್ಯಾಜ್ಯಗಳೊಂದಿಗೆ) ಬಂದರೆ, ನಿಮಗಿಷ್ಟವಿದ್ದರೆ ಅವುಗಳನ್ನು ಇತ್ಯರ್ಥಪಡಿಸುವ ಇಲ್ಲವೆ ನಿರಾಕರಿಸುವ ಅಧಿಕಾರವನ್ನು

سَمَّاعُونَ لِلْكَذِبِ أَكَّالُونَ لِلسُّحْتِ ۚ
فَإِنْ جَاءُوكَ فَاحْكُمْ بَيْنَهُمْ أَوْ أَعْرِضْ
عَنْهُمْ ۖ وَإِنْ تُعْرِضْ عَنْهُمْ فَلَنْ يَضُرُّوكَ

32. ಅರ್ಥಾತ್- ನಾವು ಆದೇಶಿಸುತ್ತಿರುವುದನ್ನೇ ಪ್ರವಾದಿವರ್ಯರೂ(ಸ) ಆದೇಶಿಸಿದರೆ ಅದನ್ನು ಸ್ವೀಕರಿಸಿರಿ. ಅನ್ಯಥಾ ಅದನ್ನು ನಿರಾಕರಿಸಿರಿ ಎಂದು ಅವರು ಅಜ್ಞಾನ ಜನರೊಡನೆ ಹೇಳುತ್ತಾರೆ.

33. ಅಲ್ಲಾಹನು ಯಾರನ್ನಾದರೂ ಗೊಂದಲಕ್ಕೀಡು ಮಾಡುವುದೆಂದರೆ ಯಾರಲ್ಲಾದರೂ ಕೆಟ್ಟ ಆಸಕ್ತಿಗಳು ಚಿಗುರೊಡೆಯುತ್ತಿರುವುದನ್ನು ಕಂಡು ಅಲ್ಲಾಹನು ಅವನ ಮುಂದೆ ನಿರಂತರ ಅವನನ್ನು ಪರೀಕ್ಷೆಗೆ ಗುರಿಪಡಿಸುವಂತಹ ಅವಕಾಶಗಳನ್ನು ತರುವುದಾಗಿದೆ. ಅವನು ಕೆಡುಕಿನ ಕಡೆಗೆ ಇನ್ನೂ ಸಂಪೂರ್ಣವಾಗಿ ವಾಲಿರದಿದ್ದರೆ ಇಂತಹ ಪರೀಕ್ಷೆಗಳ ವೇಳೆ ತನ್ನನ್ನು ಸ್ತಿಮಿತಕ್ಕೆ ತಂದುಕೊಳ್ಳುತ್ತಾನೆ. ಅವನಲ್ಲಿರುವ ಕೆಡುಕನ್ನು ಎದುರಿಸಬಲ್ಲ ಒಳಿತಿನ ಪ್ರೇರಕಶಕ್ತಿಗಳು ಪುಟಿದೇಳುತ್ತವೆ. ಆದರೆ ಅವನು ಸಂಪೂರ್ಣವಾಗಿ ಕೆಡುಕಿನ ಕಡೆಗೆ ವಾಲಿದ್ದರೆ, ಅವನ ಒಳಿತಿನ ಪ್ರೇರಣೆ ಕೆಡುಕಿನ ಪ್ರೇರಣೆಯ ಎದುರು ಒಳಗೊಳಗೇ ಸೋಲೊಪ್ಪಿಕೊಂಡಿದ್ದರೆ ತನ್ನ ಪರೀಕ್ಷೆಯ ಘಳಿಗೆಯಲ್ಲಿ ಅವನು ಕೆಡುಕಿನ ಮುಷ್ಟಿಯಲ್ಲಿ ಸಿಲುಕುತ್ತಾ ಹೋಗುತ್ತಾನೆ. ಇದು ವ್ಯಕ್ತಿಯನ್ನು ಅಲ್ಲಾಹನು ಗೊಂದಲಕ್ಕೀಡು ಮಾಡುವ ರೀತಿಯಾಗಿದೆ. ಆದರಿಂದ ಮನುಷ್ಯನನ್ನು ಸುರಕ್ಷಿತವಾಗಿರಿಸಲು ಅವನ ಯಾವ ಹಿತೈಷಿಗೂ ಸಾಧ್ಯವಾಗುವುದಿಲ್ಲ.

ನಿಮಗೆ ಕೊಡಲಾಗುತ್ತದೆ. ನೀವು ನಿರಾಕರಿಸಿದರೆ ಇವರು ನಿಮಗೆ ಯಾವ ಕೇಡನ್ನೂ ಉಂಟು ಮಾಡಲಾರರು ಮತ್ತು ನೀವು ತೀರ್ಪು ನೀಡುವುದಿದ್ದರೆ, ಸರಿಯಾಗಿ ನ್ಯಾಯಪೂರ್ವಕವಾಗಿ ತೀರ್ಪು ನೀಡಿರಿ. ಅಲ್ಲಾಹನು ನ್ಯಾಯಪರಿಪಾಲಕರನ್ನು ಮೆಚ್ಚುತ್ತಾನೆ.[34]

شَيْـًٔا ۖ وَإِنْ حَكَمْتَ فَاحْكُم بَيْنَهُم بِالْقِسْطِ ۚ إِنَّ اللَّهَ يُحِبُّ الْمُقْسِطِينَ ﴿٤٢﴾

43. ಅಲ್ಲಾಹನ ಆಜ್ಞೆ ಬರೆದಿರುವ 'ತೌರಾತ್' ಇವರ ಬಳಿಯಲ್ಲಿದ್ದೂ ಇವರು ಅದರಿಂದ ಹಿಂಜರಿಯುತ್ತಿರುವಾಗ ನಿಮ್ಮನ್ನು ಮಧ್ಯಸ್ಥನನ್ನಾಗಿ ಮಾಡುವುದು ಹೇಗೆ? ವಾಸ್ತವದಲ್ಲಿ ಇವರು ವಿಶ್ವಾಸವನ್ನೇ ಇರಿಸುವುದಿಲ್ಲ.

وَكَيْفَ يُحَكِّمُونَكَ وَعِندَهُمُ التَّوْرَاةُ فِيهَا حُكْمُ اللَّهِ ثُمَّ يَتَوَلَّوْنَ مِن بَعْدِ ذَٰلِكَ ۚ وَمَا أُولَٰٓئِكَ بِالْمُؤْمِنِينَ ﴿٤٣﴾

44. ನಾವು 'ತೌರಾತ'ನ್ನು ಅವತೀರ್ಣಗೊಳಿಸಿದ್ದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿತ್ತು. ಮುಸ್ಲಿಮರಾಗಿದ್ದ (ಅಲ್ಲಾಹನ ಆಜ್ಞಾನುಸಾರಿಗಳಾಗಿದ್ದ) ಎಲ್ಲ ಪ್ರವಾದಿಗಳೂ ಅದರ ಪ್ರಕಾರವೇ ಈ ಯಹೂದಿಗಳ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸುತ್ತಿದ್ದರು ಮತ್ತು ಇದೇ ರೀತಿಯಲ್ಲಿ ರಬ್ಬಾನಿಗಳೂ ಅಹ್‌ಬಾರರೂ[35] (ಇದರ ಆಧಾರ ಪ್ರಕಾರವೇ ತೀರ್ಪು ನೀಡುತ್ತಿದ್ದರು). ಏಕೆಂದರೆ ಅವರನ್ನು ದೇವಗ್ರಂಥದ ರಕ್ಷಣೆಯ ಹೊಣೆಗಾರರನ್ನಾಗಿ ಮಾಡಲಾಗಿತ್ತು. ಅವರು ಅದಕ್ಕೆ ಸಾಕ್ಷಿಗಳಾಗಿದ್ದರು. ಆದುದರಿಂದ (ಓ ಯಹೂದಿ ವರ್ಗದವರೇ) ನೀವು ಜನರನ್ನು ಭಯಪಡಬೇಡಿರಿ, ನನ್ನನ್ನು ಭಯಪಡಿರಿ ಮತ್ತು ನನ್ನ 'ಸೂಕ್ತ'ಗಳನ್ನು ಅಲ್ಪ ಪ್ರತಿಫಲ ಪಡೆದು ಮಾರಾಟ ಮಾಡುವುದನ್ನು ಬಿಟ್ಟುಬಿಡಿರಿ. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಮಾಡದವರೇ ಸತ್ಯನಿಷೇಧಿಗಳು.

إِنَّا أَنزَلْنَا التَّوْرَاةَ فِيهَا هُدًى وَنُورٌ ۚ يَحْكُمُ بِهَا النَّبِيُّونَ الَّذِينَ أَسْلَمُوا لِلَّذِينَ هَادُوا وَالرَّبَّانِيُّونَ وَالْأَحْبَارُ بِمَا اسْتُحْفِظُوا مِن كِتَابِ اللَّهِ وَكَانُوا عَلَيْهِ شُهَدَاءَ ۚ فَلَا تَخْشَوُا النَّاسَ وَاخْشَوْنِ وَلَا تَشْتَرُوا بِآيَاتِي ثَمَنًا قَلِيلًا ۚ وَمَن لَّمْ يَحْكُم بِمَا أَنزَلَ اللَّهُ فَأُولَٰٓئِكَ هُمُ الْكَافِرُونَ ﴿٤٤﴾

45. ಜೀವಕ್ಕೆ ಬದಲು ಜೀವ, ಕಣ್ಣಿಗೆ ಬದಲು ಕಣ್ಣು, ಮೂಗಿಗೆ ಬದಲು ಮೂಗು, ಕಿವಿಗೆ ಬದಲು ಕಿವಿ, ಹಲ್ಲಿಗೆ ಬದಲು ಹಲ್ಲು ಮತ್ತು ಎಲ್ಲ ಗಾಯಗಳಿಗೆ ಸರಿ ಸಮಾನ ಪ್ರತೀಕಾರವೆಂದು ಯಹೂದಿಯರಿಗೆ ನಾವು ತೌರಾತಿನಲ್ಲಿ ಆದೇಶಿಸಿದ್ದೆವು. ಯಾರಾದರೂ ಪ್ರತೀಕಾರವನ್ನು 'ದಾನ' ಮಾಡಿದರೆ ಅದು ಅವನ ಪಾಲಿಗೆ

وَكَتَبْنَا عَلَيْهِمْ فِيهَا أَنَّ النَّفْسَ بِالنَّفْسِ وَالْعَيْنَ بِالْعَيْنِ وَالْأَنفَ بِالْأَنفِ وَالْأُذُنَ بِالْأُذُنِ وَالسِّنَّ بِالسِّنِّ وَالْجُرُوحَ قِصَاصٌ ۚ فَمَن تَصَدَّقَ بِهِ

34. ಯಹೂದಿಯರು ಆ ತನಕ ಇಸ್ಲಾಮಿ ಸರ್ಕಾರದ ಅಧಿಕೃತ ಪ್ರಜೆಗಳಾಗಿ ಮಾರ್ಪಟ್ಟಿರಲಿಲ್ಲ. ಇಸ್ಲಾಮಿ ಸಾಮ್ರಾಜ್ಯದೊಂದಿಗೆ ಅವರ ಸಂಬಂಧ ಒಪ್ಪಂದಬದ್ಧವಾಗಿತ್ತು. ಆದ್ದರಿಂದ ಪ್ರವಾದಿವರ್ಯರ(ಸ) ನ್ಯಾಯಾಲಯದ ಮೊರೆಹೋಗುವ ಬದ್ಧತೆ ಅವರಿಗಿರಲಿಲ್ಲ. ಆದರೆ ತಮ್ಮ ಧಾರ್ಮಿಕ ನಿಯಮಕ್ಕೆ ಅನುಗುಣವಾದ ತೀರ್ಮಾನವನ್ನು ಬಯಸದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅವರು ಪ್ರವಾದಿವರ್ಯರ(ಸ) ಬಳಿಗೆ ಬರುತ್ತಿದ್ದರು. ಪ್ರವಾದಿವರ್ಯರ(ಸ) ಶರೀಅತ್‌ನಲ್ಲಿ ತಮಗೆ ಬೇರೆ ವಿಧಿ ಇರಬಹುದು. ಆ ಮೂಲಕ ತಮ್ಮ ಧಾರ್ಮಿಕ ವಿಧಿಯನ್ನು ಪಾಲಿಸುವುದರಿಂದ ಮುಕ್ತವಾಗಬಹುದು ಎಂಬುದು ಅವರ ಉದ್ದೇಶವಾಗಿರುತ್ತಿತ್ತು.

35. 'ರಬ್ಬಾನಿ' ಎಂದರೆ ಧಾರ್ಮಿಕ ವಿದ್ವಾಂಸರು, 'ಅಹ್ಬಾರ್' ಎಂದರೆ ಕರ್ಮಶಾಸ್ತ್ರಜ್ಞರು.

ಪ್ರಾಯಶ್ಚಿತ್ತವಾಗುವುದು. ಅಲ್ಲಾಹನಿಂದ ಅವತೀರ್ಣಗೊಂಡ ಕಾನೂನಿನ ಪ್ರಕಾರ ತೀರ್ಮಾನ ಮಾಡದವರೇ ಅಕ್ರಮಿಗಳು.

فَهُوَ كَفَّارَةٌ لَّهُ ۚ وَمَن لَّمْ يَحْكُم بِمَا
أَنزَلَ اللَّهُ فَأُولَٰئِكَ هُمُ الظَّالِمُونَ ﴿٤٥﴾

46. ಮುಂದೆ ನಾವು ಆ ಪ್ರವಾದಿಗಳ ತರುವಾಯ 'ಮರ್ಯಮರ' ಪುತ್ರ 'ಈಸಾ'ರನ್ನು ರವಾನಿಸಿದೆವು. ಅವರು ತೌರಾತಿನೊಳಗಿರುವುದರ ಪೈಕಿ ತಮ್ಮ ಮುಂದೆ ಇದ್ದುದನ್ನು ದೃಢಪಡಿಸುವವರಾಗಿದ್ದರು. ನಾವು ಅವರಿಗೆ ಇಂಜೀಲನ್ನು ನೀಡಿದೆವು. ಅದರಲ್ಲಿ ಸನ್ಮಾರ್ಗ ದರ್ಶನ ಮತ್ತು ಪ್ರಕಾಶವಿತ್ತು. ಅದು ಸಹ ತೌರಾತಿನೊಳಗಿರುವುದರ ಪೈಕಿ ಆಗ ಇದ್ದುದನ್ನು ದೃಢಪಡಿಸುವಂತಹದ್ದಾಗಿತ್ತು ಮತ್ತು ಅದು ದೇವಭಯವುಳ್ಳವರಿಗೆ ಸಾದ್ಯಂತ ಮಾರ್ಗದರ್ಶನ ಮತ್ತು ಉಪದೇಶವಾಗಿತ್ತು.

وَقَفَّيْنَا عَلَىٰ آثَارِهِم بِعِيسَى ابْنِ
مَرْيَمَ مُصَدِّقًا لِّمَا بَيْنَ يَدَيْهِ مِنَ
التَّوْرَاةِ ۖ وَآتَيْنَاهُ الْإِنجِيلَ فِيهِ
هُدًى وَنُورٌ وَمُصَدِّقًا لِّمَا بَيْنَ
يَدَيْهِ مِنَ التَّوْرَاةِ وَهُدًى وَ
مَوْعِظَةً لِّلْمُتَّقِينَ ﴿٤٦﴾

47. ಇಂಜೀಲಿನವರು, ಅಲ್ಲಾಹನು ಅದರಲ್ಲಿ ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಕೈಗೊಳ್ಳಬೇಕೆಂದು ನಮ್ಮ ಅಪ್ಪಣೆ ಇತ್ತು. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಕೈಗೊಳ್ಳದವರೇ ಕರ್ಮಭ್ರಷ್ಟರು.[36]

وَلْيَحْكُمْ أَهْلُ الْإِنجِيلِ بِمَا أَنزَلَ
اللَّهُ فِيهِ ۚ وَمَن لَّمْ يَحْكُم بِمَا أَنزَلَ
اللَّهُ فَأُولَٰئِكَ هُمُ الْفَاسِقُونَ ﴿٤٧﴾

48. ಓ ಪೈಗಂಬರರೇ, ನಾವು ಈ ಗ್ರಂಥವನ್ನು ನಿಮಗೆ ಕಳುಹಿಸಿದೆವು. ಇದು ಸತ್ಯದೊಂದಿಗೆ ಬಂದಿದೆ ಮತ್ತು 'ಅಲ್ ಕಿತಾಬ್'ನ ಪೈಕಿ ತನ್ನ ಮುಂದಿರುವುದನ್ನೆಲ್ಲ ದೃಢಪಡಿಸುವಂತಹದೂ ಅದರ ಸಂರಕ್ಷಕವೂ ಆಗಿರುತ್ತದೆ.[37] ಆದುದರಿಂದ ನೀವು ಅಲ್ಲಾಹನಿಂದ

وَأَنزَلْنَا إِلَيْكَ الْكِتَابَ بِالْحَقِّ مُصَدِّقًا
لِّمَا بَيْنَ يَدَيْهِ مِنَ الْكِتَابِ وَمُهَيْمِنًا
عَلَيْهِ ۖ فَاحْكُم بَيْنَهُم بِمَا أَنزَلَ اللَّهُ ۖ وَلَا

36. ಇಲ್ಲಿ ದೇವನಿಂದ ಅವತೀರ್ಣಗೊಂಡ ಕಾನೂನಿಗೆ ಅನುಗುಣವಾಗಿ ತೀರ್ಮಾನಿಸದ ಜನರಿಗೆ ಸಂಬಂಧಿಸಿದಂತೆ ಅಲ್ಲಾಹನು ಮೂರು ಆದೇಶಗಳನ್ನು ನೀಡಿದ್ದಾನೆ.

1. ಅವರು ಸತ್ಯನಿಷೇಧಿಗಳಾಗಿದ್ದಾರೆ.
2. ಅವರು ಅಕ್ರಮಿಗಳಾಗಿದ್ದಾರೆ.
3. ಅವರು ಕರ್ಮಭ್ರಷ್ಟರಾಗಿದ್ದಾರೆ. ಅಲ್ಲಾಹನ ಆದೇಶ ಸರಿಯಾದುದಲ್ಲ, ಬದಲಾಗಿ ತನ್ನ ಅಥವಾ ಇತರ ಮಾನವರ ಆದೇಶವೇ ಸರಿಯಾದುದೆಂಬ ಭಾವನೆಯಿಂದ ದೇವಾದೇಶಕ್ಕೆ ವಿರುದ್ಧವಾದ ತೀರ್ಮಾನ ಮಾಡುವವನು ಅಪ್ಪಟ ಸತ್ಯನಿಷೇಧಿ, ಅಕ್ರಮಿ ಮತ್ತು ಧರ್ಮಭ್ರಷ್ಟನಾಗಿದ್ದಾನೆ. ದೇವಾದೇಶವೇ ಸರಿಯಾದುದೆಂದು ವಿಶ್ವಾಸವಿರಿಸುವ ಆದರೆ ವ್ಯವಹಾರದಲ್ಲಿ ಅದಕ್ಕೆ ವಿರುದ್ಧವಾದ ತೀರ್ಮಾನ ಕೈಗೊಳ್ಳುವವನು ಧರ್ಮಭ್ರಷ್ಟನಲ್ಲ. ಆದರೆ ಅವನು ತನ್ನ ವಿಶ್ವಾಸವನ್ನು ಸತ್ಯನಿಷೇಧ, ಅಕ್ರಮ ಮತ್ತು ಕರ್ಮಭ್ರಷ್ಟತೆಯಿಂದ ಕಲಸುಮೇಲೋಗರ ಗೊಳಿಸುತ್ತಿದ್ದಾನೆ. ಹಾಗೆಯೇ ತನ್ನೆಲ್ಲಾ ವ್ಯವಹಾರಗಳಲ್ಲಿ ದೇವಾದೇಶಕ್ಕೆ ವಿರುದ್ಧವಾಗಿ ವರ್ತಿಸುವವನು ಎಲ್ಲಾ ವ್ಯವಹಾರಗಳಲ್ಲಿ ಸತ್ಯನಿಷೇಧಿ, ಅಕ್ರಮಿ ಮತ್ತು ಕರ್ಮಭ್ರಷ್ಟನಾಗಿದ್ದಾನೆ. ಕೆಲವು ವ್ಯವಹಾರಗಳಲ್ಲಿ ದೇವಾದೇಶಗಳಿಗೆ ವಿಧೇಯನೂ ಕೆಲವದರಲ್ಲಿ ಅವಿಧೇಯನೂ ಆಗಿದ್ದರೆ ವಿಧೇಯತೆ ಮತ್ತು ಅವಿಧೇಯತೆಯನ್ನು ಅವನು ಯಾವ ಪ್ರಮಾಣದಲ್ಲಿ ಮಿಶ್ರಗೊಳಿಸಿದ್ದಾನೋ ಅದಕ್ಕನುಗುಣವಾಗಿ ಅವನಲ್ಲಿ ಈಮಾನ್, ಇಸ್ಲಾಮ್, ಸತ್ಯನಿಷೇಧ, ಅಕ್ರಮ ಮತ್ತು ಕರ್ಮಭ್ರಷ್ಟತೆ ಕಲಸುಮೇಲೋಗರಗೊಂಡಿರುತ್ತದೆ.

37. ಇಲ್ಲಿ ಪ್ರಮುಖ ವಾಸ್ತವಿಕತೆಯೊಂದರ ಕಡೆಗೆ ಬೊಟ್ಟು ಮಾಡಲಾಗಿದೆ. ಹಿಂದಿನ ಗ್ರಂಥಗಳ ಪೈಕಿ ಯಥಾಸ್ಥಿತಿಯಲ್ಲಿರುವವುಗಳನ್ನು ಕುರ್‌ಆನ್ ದೃಢೀಕರಿಸುತ್ತದೆ ಎಂದೂ ಈ ವಿಷಯವನ್ನು ಪ್ರಸ್ತಾಪಿಸಬಹುದಾಗಿತ್ತು. ಆದರೆ ಅಲ್ಲಾಹನು 'ಹಿಂದಿನ ಗ್ರಂಥಗಳು' ಎಂಬುದರ ಬದಲಿಗೆ 'ಅಲ್ ಕಿತಾಬ್'(The Book) ಎಂಬ ಪದವನ್ನು ಪ್ರಯೋಗಿಸಿದ್ದಾನೆ. ಇದರಿಂದ ಕುರ್‌ಆನ್ ಮತ್ತು ವಿವಿಧ

تَتَّبِعْ أَهْوَآءَهُمْ عَمَّا جَآءَكَ مِنَ الْحَقِّ ۚ لِكُلٍّ جَعَلْنَا مِنكُمْ شِرْعَةً وَمِنْهَاجًا ۚ وَلَوْ شَآءَ اللَّهُ لَجَعَلَكُمْ أُمَّةً وَاحِدَةً وَلَٰكِن لِّيَبْلُوَكُمْ فِى مَآ ءَاتَىٰكُمْ فَاسْتَبِقُوا الْخَيْرَٰتِ ۚ إِلَى اللَّهِ مَرْجِعُكُمْ جَمِيعًا فَيُنَبِّئُكُم بِمَا كُنتُمْ فِيهِ تَخْتَلِفُونَ ﴿٤٨﴾

ಅವತೀರ್ಣಗೊಂಡ ಕಾನೂನಿನ ಪ್ರಕಾರ ಜನರ ವ್ಯವಹಾರಗಳನ್ನು ತೀರ್ಮಾನಿಸಿರಿ ಮತ್ತು ನೀವು ನಿಮ್ಮ ಬಳಿಗೆ ಬಂದಿರುವ ಸತ್ಯದಿಂದ ವಿಮುಖರಾಗಿ, ಅವರ ಇಚ್ಛೆಗಳನ್ನನುಸರಿಸಬೇಡಿರಿ. - ನಾವು ನಿಮ್ಮ (ಮಾನವರ) ಪೈಕಿ ಪ್ರತಿಯೊಬ್ಬನಿಗೆ ಒಂದು ಧರ್ಮಶಾಸ್ತ್ರ ಮತ್ತು ಕರ್ಮಮಾರ್ಗವನ್ನು ನಿಶ್ಚಯಿಸಿದೆವು. ನಿಮ್ಮ ದೇವನು ಇಚ್ಛಿಸುತ್ತಿದ್ದರೆ ನಿಮ್ಮೆಲ್ಲರನ್ನು ಒಂದೇ 'ಸಮುದಾಯ'ವನ್ನಾಗಿಯೂ ಮಾಡಲು ಸಾಧ್ಯವಿತ್ತು. ಆದರೆ ಅವನು ನಿಮಗೆ ಏನು ನೀಡಿರುವನೋ ಅದರಲ್ಲಿ ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ಹೀಗೆ ಮಾಡಿದನು. ಆದುದರಿಂದ ಸತ್ಕರ್ಮಗಳಲ್ಲಿ ಪರಸ್ಪರ ಸ್ಪರ್ಧಿಸಲು ಪ್ರಯತ್ನಿಸಿರಿ. ಕೊನೆಗಂತು ನಿಮಗೆಲ್ಲರಿಗೂ ಅಲ್ಲಾಹನ ಕಡೆಗೆ ಮರಳಿ ಹೋಗಲಿಕ್ಕಿದೆ. ಆಗ ನೀವು ಭಿನ್ನಾಭಿಪ್ರಾಯವಿರಿಸಿ ಕೊಳ್ಳುತ್ತಿರುವ ವಿಷಯಗಳ ವಸ್ತುಸ್ಥಿತಿಯನ್ನು ಅವನು ನಿಮಗೆ ತೋರಿಸಿ ಕೊಡುವನು.

وَأَنِ احْكُم بَيْنَهُم بِمَآ أَنزَلَ اللَّهُ وَلَا تَتَّبِعْ أَهْوَآءَهُمْ وَاحْذَرْهُمْ أَن يَفْتِنُوكَ عَنۢ بَعْضِ مَآ أَنزَلَ اللَّهُ إِلَيْكَ ۖ فَإِن تَوَلَّوْا فَاعْلَمْ أَنَّمَا يُرِيدُ اللَّهُ أَن يُصِيبَهُم بِبَعْضِ ذُنُوبِهِمْ ۗ وَإِنَّ كَثِيرًا مِّنَ النَّاسِ لَفَٰسِقُونَ ﴿٤٩﴾

49. ಆದುದರಿಂದ ಓ ಪೈಗಂಬರರೇ, ನೀವು ಅಲ್ಲಾಹನಿಂದ ಅವತೀರ್ಣಗೊಂಡ ಕಾನೂನಿನ ಪ್ರಕಾರ ಇವರ ವ್ಯವಹಾರಗಳ ತೀರ್ಮಾನ ಮಾಡಿರಿ ಮತ್ತು ಇವರ ಅಭೀಷ್ಟಗಳನ್ನು ಅನುಸರಿಸಬೇಡಿರಿ. ಇವರು ನಿಮ್ಮನ್ನು 'ಗೊಂದಲ'ದಲ್ಲಿ ಸಿಲುಕಿಸಿ, ಅಲ್ಲಾಹನು ನಿಮ್ಮ ಮೇಲೆ ಅವತೀರ್ಣಗೊಳಿಸಿದ ಈ ಮಾರ್ಗದರ್ಶನದಿಂದ ಕಿಂಚಿತ್ತೂ ವಿಮುಖಗೊಳಿಸದಂತೆ ಬಹಳ ಜಾಗರೂಕರಾಗಿರಿ. ಇವರು ಇದನ್ನು ಸ್ವೀಕರಿಸದಿದ್ದರೆ ಅಲ್ಲಾಹನು ಇವರ ಕೆಲವು ಅಪರಾಧಗಳ ನಿಮಿತ್ತ ಇವರನ್ನು ಯಾತನೆಗೆ ಒಳಪಡಿಸಲು ತೀರ್ಮಾನಿಸಿಯೇ ಬಿಟ್ಟಿರುತ್ತಾನೆಂಬುದನ್ನು ತಿಳಿದಿರಿ. ವಾಸ್ತವದಲ್ಲಿ ಇವರಲ್ಲಿ ಹೆಚ್ಚಿನವರು 'ಕರ್ಮಭ್ರಷ್ಟ'ರಾಗಿರುತ್ತಾರೆ.

أَفَحُكْمَ الْجَٰهِلِيَّةِ يَبْغُونَ ۚ وَمَنْ أَحْسَنُ مِنَ اللَّهِ حُكْمًا لِّقَوْمٍ يُوقِنُونَ ﴿٥٠﴾

50. (ಇವರು ದೇವಶಾಸನವನ್ನು ನಿರಾಕರಿಸುತ್ತಿದ್ದಾರೆ) ಇನ್ನೇನು ಇವರು ಅಜ್ಞಾನದ[38] ತೀರ್ಮಾನವನ್ನು ಬಯಸುತ್ತಾರೆಯೇ? ವಸ್ತುತಃ

ಕಾಲ ಹಾಗೂ ಭಾಷೆಗಳಲ್ಲಿ ಅಲ್ಲಾಹನ ವತಿಯಿಂದ ಅವತೀರ್ಣಗೊಂಡ ಗ್ರಂಥಗಳೆಲ್ಲವೂ ಮೂಲತಃ ಒಂದೇ ಗ್ರಂಥವಾಗಿದೆ ಎಂಬ ರಹಸ್ಯ ಬಯಲಾಗುತ್ತದೆ. ಅವುಗಳ ಕರ್ತೃ ಒಬ್ಬನೇ. ಅವುಗಳ ಉದ್ದೇಶ, ಧ್ಯೇಯ ಮತ್ತು ಬೋಧನೆಗಳೆಲ್ಲವೂ ಒಂದೇ ತೆರನಾದುದು. ಮಾನವಕುಲಕ್ಕೆ ಅವುಗಳ ಮೂಲಕ ಒಂದೇ ರೀತಿಯ ಶಿಕ್ಷಣವನ್ನು ಕಲಿಸಲಾಯಿತು. ಅವುಗಳ ನಡುವೆ ವ್ಯತ್ಯಾಸ- ವಾಕ್ಯಗಳಲ್ಲಿ ಮಾತ್ರವಿದೆ. ಬೇರೆ ಬೇರೆ ಅಭಿಸಂಬೋಧಿತರಿಗೆ ಅನುಗುಣವಾಗಿ ವಿಭಿನ್ನ ರೀತಿಯ ವಾಕ್ಯಗಳನ್ನು ಬಳಸಲಾಗಿದೆ. ಕುರ್‌ಆನ್ 'ಅಲ್‌ಕಿತಾಬ್'ನ ಸಂರಕ್ಷಕವಾಗಿದೆ ಎಂದರೆ ಅದು ತನ್ನೊಳಗೆ ಪೂರ್ವದ ದೈವಿಕ ಗ್ರಂಥಗಳಲ್ಲಿ ನೀಡಲಾಗಿರುವ ಸಮಸ್ತ ಬೋಧನೆಗಳನ್ನು ಸುರಕ್ಷಿತವಾಗಿರಿಸಿದೆ ಎಂದಾಗಿದೆ. ಆದ್ದರಿಂದ ಆ ಸದ್ಬೋಧನೆಗಳ ಪೈಕಿ ಈಗ ಯಾವುದೂ ಅಳಿದು ಹೋಗುವಂತಿಲ್ಲ.

38. 'ಅಜ್ಞಾನ' ಎಂಬ ಪದವನ್ನು ಇಸ್ಲಾಮಿಗೆ ವಿರುದ್ಧವಾಗಿ ಉಪಯೋಗಿಸಲಾಗುತ್ತದೆ.ಇಸ್ಲಾಮ್ ಸಾರಸಂಪೂರ್ಣವಾಗಿ ಜ್ಞಾನದ ಪದ್ಧತಿಯಾಗಿದೆ. ಏಕೆಂದರೆ ಅದು ಸಕಲ ಸತ್ಯಗಳನ್ನು ಅರಿತಿರುವ ಸರ್ವಜ್ಞನ ಮಾರ್ಗದರ್ಶನದಿಂದ ಕೂಡಿದೆ. ಇದಕ್ಕೆ ವಿರುದ್ಧವಾಗಿ ಇಸ್ಲಾಮೇತರ

ಅಲ್ಲಾಹನ ಮೇಲೆ ದೃಢವಿಶ್ವಾಸವಿರಿಸುವವರ ದೃಷ್ಟಿಯಲ್ಲಿ ಅಲ್ಲಾಹನ ತೀರ್ಮಾನಕ್ಕಿಂತ ಶ್ರೇಷ್ಠ ತೀರ್ಮಾನ ಮಾಡುವವನು ಇನ್ನಾರಿರಬಹುದು!

51. ಓ ಸತ್ಯವಿಶ್ವಾಸಿಗಳೇ, ನೀವು ಯಹೂದಿಯರನ್ನೂ ಕ್ರೈಸ್ತರನ್ನೂ ನಿಮ್ಮ ಆಪ್ತರನ್ನಾಗಿ ಮಾಡಿಕೊಳ್ಳಬೇಡಿರಿ. ಇವರು ಪರಸ್ಪರ ಆಪ್ತರು. ನಿಮ್ಮಲ್ಲಾರಾದರೂ ಅವರನ್ನು ಆಪ್ತರನ್ನಾಗಿ ಮಾಡಿಕೊಂಡರೆ ಅವನೂ ಅವರೊಂದಿಗೇ ಸೇರಿದವನಾಗಿರುತ್ತಾನೆ. ವಾಸ್ತವದಲ್ಲಿ ಅಲ್ಲಾಹನು ಅಕ್ರಮಿಗಳಿಗೆ ಮಾರ್ಗದರ್ಶನ ಮಾಡುವುದಿಲ್ಲ.

يَا أَيُّهَا الَّذِينَ آمَنُوا لَا تَتَّخِذُوا الْيَهُودَ وَالنَّصَارَىٰ أَوْلِيَاءَ ۘ بَعْضُهُمْ أَوْلِيَاءُ بَعْضٍ ۚ وَمَن يَتَوَلَّهُم مِّنكُمْ فَإِنَّهُ مِنْهُمْ ۗ إِنَّ اللَّهَ لَا يَهْدِي الْقَوْمَ الظَّالِمِينَ ﴿٥١﴾

52. ಹೃದಯಗಳಲ್ಲಿ ಕಾಪಟ್ಯದ ರೋಗವುಳ್ಳವರು ಅವರಲ್ಲೇ ಓಡಾಡಿಕೊಂಡಿರುವುದನ್ನು ನೀವು ಕಾಣುತ್ತೀರಿ. ಅವರು "ನಾವೇನಾದರೂ ಸಂಕಷ್ಟಗಳ ಸುಳಿಯಲ್ಲಿ ಸಿಲುಕಿ ಹೋಗುವೆವೋ ಎಂದು ನಮಗೆ ಭಯವಾಗುತ್ತದೆ" ಎನ್ನುತ್ತಾರೆ. ಅಲ್ಲಾಹ್ ನಿಮಗೆ ನಿರ್ಣಾಯಕ ವಿಜಯ ದಯಪಾಲಿಸಿದಾಗ ಅಥವಾ ತನ್ನ ಕಡೆಯಿಂದ ಇನ್ನೇನಾದರೂ ವ್ಯಕ್ತಪಡಿಸಿದಾಗ, ಇವರು ತಮ್ಮ ಹೃದಯದೊಳಗೆ ಬಚ್ಚಿಟ್ಟುಕೊಂಡಿರುವ ಈ ಕಾಪಟ್ಯದ ಬಗ್ಗೆ ಲಜ್ಜಿತರಾಗಲೂ ಬಹುದು.

فَتَرَى الَّذِينَ فِي قُلُوبِهِم مَّرَضٌ يُسَارِعُونَ فِيهِمْ يَقُولُونَ نَخْشَىٰ أَن تُصِيبَنَا دَائِرَةٌ ۚ فَعَسَى اللَّهُ أَن يَأْتِيَ بِالْفَتْحِ أَوْ أَمْرٍ مِّنْ عِندِهِ فَيُصْبِحُوا عَلَىٰ مَا أَسَرُّوا فِي أَنفُسِهِمْ نَادِمِينَ ﴿٥٢﴾

53. ಆಗ, "ಅಲ್ಲಾಹನ ಹೆಸರನ್ನೆತ್ತಿ ದೃಢವಾದ ಪ್ರತಿಜ್ಞೆ ಮಾಡುತ್ತ ನಾವು ನಿಮ್ಮೊಂದಿಗೆ ಇದ್ದೇವೆಂದು ನಮಗೆ ಭರವಸೆ ಕೊಡುತ್ತಿದ್ದವರು ಇವರೇನು?" ಎಂದು ಸತ್ಯವಿಶ್ವಾಸಿಗಳು ಕೇಳುವರು. ಇವರ ಕರ್ಮಗಳೆಲ್ಲ ನಿಷ್ಫಲಗೊಂಡವು ಮತ್ತು ಕೊನೆಗೆ ಇವರು ಪರಾಜಿತರೂ ಆಗಿಬಿಟ್ಟರು.

وَيَقُولُ الَّذِينَ آمَنُوا أَهَٰؤُلَاءِ الَّذِينَ أَقْسَمُوا بِاللَّهِ جَهْدَ أَيْمَانِهِمْ ۙ إِنَّهُمْ لَمَعَكُمْ ۚ حَبِطَتْ أَعْمَالُهُمْ فَأَصْبَحُوا خَاسِرِينَ ﴿٥٣﴾

54. ಓ ಸತ್ಯವಿಶ್ವಾಸಿಗಳೇ, ನಿಮ್ಮಲ್ಲಾರಾದರೂ ಧರ್ಮದಿಂದ ವಿಮುಖನಾಗುತ್ತಿದ್ದರೆ (ಆಗಲಿ.) ಅಲ್ಲಾಹನ ಪ್ರೀತಿಗೆ ಪಾತ್ರರಾದ ಹಾಗೂ ಅಲ್ಲಾಹನನ್ನು ಪ್ರೀತಿಸುವ ಇನ್ನೊಂದು ಜನವಿಭಾಗವನ್ನು ಅಲ್ಲಾಹನು ಸೃಷ್ಟಿಸುವನು. ಅವರು ಸತ್ಯವಿಶ್ವಾಸಿಗಳೊಂದಿಗೆ

يَا أَيُّهَا الَّذِينَ آمَنُوا مَن يَرْتَدَّ مِنكُمْ عَن دِينِهِ فَسَوْفَ يَأْتِي اللَّهُ بِقَوْمٍ يُحِبُّهُمْ وَيُحِبُّونَهُ أَذِلَّةٍ عَلَى

ವ್ಯವಸ್ಥೆಗಳ ಪೈಕಿ ಪ್ರತಿಯೊಂದೂ 'ಅಜ್ಞಾನ'ದ ವ್ಯವಸ್ಥೆಯಾಗಿದೆ. ಅರೇಬಿಯಾದ ಇಸ್ಲಾಮಿಗೆ ಪೂರ್ವದ ಕಾಲವನ್ನು ಅಜ್ಞಾನ ಕಾಲವೆನ್ನಲಾಗಿದೆ. ಏಕೆಂದರೆ ಆ ಕಾಲದಲ್ಲಿ ಜ್ಞಾನದ ಬದಲು ಬರೇ ಮೂಢನಂಬಿಕೆ, ಗುಮಾನಿ ಮತ್ತು ಸ್ವೇಚ್ಛೆಗಳ ಆಧಾರದಲ್ಲಿ ಮಾನವರು ತಮ್ಮ ಪಾಲಿಗೆ ಜೀವನ ವಿಧಾನವನ್ನು ಅಳವಡಿಸಿಕೊಂಡಿದ್ದರು. ಇಂತಹ ಧೋರಣೆಯನ್ನು ಯಾವ ಕಾಲದಲ್ಲಿ ಅನುಸರಿಸಲಾದರೂ ಅದನ್ನು ಅಜ್ಞಾನಜನ್ಯ ಧೋರಣೆಯಂತಲೇ ಕರೆಯಲಾಗುವುದು.

ವಿನಮ್ರರೂ ಸತ್ಯನಿಷೇಧಿಗಳೊಂದಿಗೆ ಕಠೋರರೂ ಆಗಿರುವವರು.[39] ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವರು. ಯಾವನೇ ಖಂಡಿಸುವವನ ಖಂಡನೆಗೆ ಭಯಪಡಲಾರರು. ಇದು ಅಲ್ಲಾಹನ ಮಹಾ ಅನುಗ್ರಹ. ಇದನ್ನು ಅವನು ತನಗಿಷ್ಟ ಬಂದವರಿಗೆ ಪ್ರದಾನ ಮಾಡುತ್ತಾನೆ. ಅಲ್ಲಾಹನು ಅತಿ ವಿಶಾಲ ಸಾಧನಾನುಕೂಲತೆಗಳ ಮಾಲಕನೂ, ಸರ್ವಜ್ಞನೂ ಆಗಿರುತ್ತಾನೆ.

الْمُؤْمِنِينَ أَعِزَّةٍ عَلَى الْكَافِرِينَ يُجَاهِدُونَ فِي سَبِيلِ اللَّهِ وَلَا يَخَافُونَ لَوْمَةَ لَائِمٍ ۚ ذَٰلِكَ فَضْلُ اللَّهِ يُؤْتِيهِ مَنْ يَشَاءُ ۚ وَاللَّهُ وَاسِعٌ عَلِيمٌ ﴿٥٤﴾

55. ನಿಮ್ಮ ಆಪ್ತ ಮಿತ್ರರು ವಾಸ್ತವದಲ್ಲಿ ಅಲ್ಲಾಹ್, ಅಲ್ಲಾಹನ ಸಂದೇಶವಾಹಕರು ಮತ್ತು ನಮಾಝನ್ನು ಸಂಸ್ಥಾಪಿಸುವ, ಝಕಾತ್ ಕೊಡುವ ಹಾಗೂ ಅಲ್ಲಾಹನ ಮುಂದೆ ಬಾಗುವ ಸತ್ಯವಿಶ್ವಾಸಿಗಳು ಮಾತ್ರ.

إِنَّمَا وَلِيُّكُمُ اللَّهُ وَرَسُولُهُ وَالَّذِينَ آمَنُوا الَّذِينَ يُقِيمُونَ الصَّلَاةَ وَيُؤْتُونَ الزَّكَاةَ وَهُمْ رَاكِعُونَ ﴿٥٥﴾

56. ಅಲ್ಲಾಹನನ್ನೂ ಅವನ ಸಂದೇಶವಾಹಕನನ್ನು ಮತ್ತು ಸತ್ಯವಿಶ್ವಾಸಿಗಳನ್ನು ತನ್ನ ಆಪ್ತ ಮಿತ್ರರನ್ನಾಗಿ ಮಾಡಿಕೊಂಡವನು ಅಲ್ಲಾಹನ ಪಕ್ಷವೇ ವಿಜಯ ಹೊಂದುವ ಪಕ್ಷವೆಂದು ಅರಿತಿರಬೇಕು.

وَمَنْ يَتَوَلَّ اللَّهَ وَرَسُولَهُ وَالَّذِينَ آمَنُوا فَإِنَّ حِزْبَ اللَّهِ هُمُ الْغَالِبُونَ ﴿٥٦﴾

57. ಓ ಸತ್ಯವಿಶ್ವಾಸಿಗಳೇ, ನಿಮ್ಮ ಪೂರ್ವಗಾಮಿ ಗ್ರಂಥದವರ ಪೈಕಿ, ನಿಮ್ಮ ಧರ್ಮವನ್ನು ಅಣಕ ಹಾಗೂ ಹಾಸ್ಯ ವಿನೋದಗಳ ಸಾಧನವನ್ನಾಗಿ ಮಾಡಿಕೊಂಡವರನ್ನೂ ಇತರ 'ಸತ್ಯನಿಷೇಧಿ'ಗಳನ್ನೂ ನಿಮ್ಮ ಗೆಳೆಯ ಹಾಗೂ ಆಪ್ತ ಸ್ನೇಹಿತರನ್ನಾಗಿ ಮಾಡಿಕೊಳ್ಳಬೇಡಿರಿ. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹನನ್ನು ಭಯಪಡಿರಿ.

يَا أَيُّهَا الَّذِينَ آمَنُوا لَا تَتَّخِذُوا الَّذِينَ اتَّخَذُوا دِينَكُمْ هُزُوًا وَلَعِبًا مِنَ الَّذِينَ أُوتُوا الْكِتَابَ مِنْ قَبْلِكُمْ وَالْكُفَّارَ أَوْلِيَاءَ ۚ وَاتَّقُوا اللَّهَ إِنْ كُنْتُمْ مُؤْمِنِينَ ﴿٥٧﴾

58 ನೀವು ನಮಾಝಿಗಾಗಿ ಕರೆ ನೀಡಿದಾಗ ಅವರು ಅದನ್ನು ಗೇಲಿ ಮಾಡಿ ಆಟವಾಡುತ್ತಾರೆ.[40] ಅವರು ಬುದ್ಧಿಹೀನರಾದುದರಿಂದಲೇ ಹಾಗೆ ಮಾಡುತ್ತಾರೆ.

وَإِذَا نَادَيْتُمْ إِلَى الصَّلَاةِ اتَّخَذُوهَا هُزُوًا وَلَعِبًا ۚ ذَٰلِكَ بِأَنَّهُمْ قَوْمٌ لَا يَعْقِلُونَ ﴿٥٨﴾

39. 'ಸತ್ಯವಿಶ್ವಾಸಿಗಳೊಂದಿಗೆ ವಿನಮ್ರವಾಗಿರುವುದೆಂದರೆ ಒಬ್ಬ ವ್ಯಕ್ತಿ ಸತ್ಯವಿಶ್ವಾಸಿಗಳ ವಿರುದ್ಧ ತನ್ನ ಶಕ್ತಿಯನ್ನು ಎಂದೂ ಉಪಯೋಗಿಸದಿರುವುದು. ಅವನ ಬುದ್ಧಿವಂತಿಕೆ, ಜಾಣ್ಮೆ, ಸಾಮರ್ಥ್ಯ, ಪ್ರಭಾವ, ವರ್ಚಸ್ಸು, ಸಂಪತ್ತು, ದೈಹಿಕ ಬಲ ಇತ್ಯಾದಿಗಳ ಪೈಕಿ ಯಾವುದೂ ಮುಸ್ಲಿಮರ ದಮನ, ಉಪದ್ರವ ಮತ್ತು ವಿನಾಶಕ್ಕಾಗಿ ಉಪಯೋಗಿಸಲ್ಪಡದಿರುವುದು. ಮುಸ್ಲಿಮರು ಸದಾ ಅವನನ್ನು ವಿನಮ್ರ, ಕರುಣಾಳು ಹಿತೈಷಿ ಮತ್ತು ಸಹನಶೀಲನೆಂದೇ ಭಾವಿಸಬೇಕು.

ಸತ್ಯನಿಷೇಧಿಗಳ ಪಾಲಿಗೆ ಕಠೋರವಾಗಿರುವುದೆಂದರೆ - ಸತ್ಯವಿಶ್ವಾಸಿ ತನ್ನ ವಿಶ್ವಾಸದಾರ್ಢ್ಯತೆ, ಧರ್ಮಬದ್ಧತೆ, ಆದರ್ಶಪರತೆ, ಚಾರಿತ್ರ್ಯಬಲ ಮತ್ತು ನಂಬಿಕೆಯ ವೈಶಾಲ್ಯದಿಂದಾಗಿ ಇಸ್ಲಾಮಿನ ಶತ್ರುಗಳ ವಿರುದ್ಧ ಬಂಡೆಯಂತೆ ಸ್ಥಿರವಾಗಿರುವುದು. ಯಾವ ಸಂದರ್ಭದಲ್ಲೂ ಅವನನ್ನು ತನ್ನ ಸ್ಥಾನದಿಂದ ಕದಲಿಸಲು ಸಾಧ್ಯವಾಗದಿರುವುದು. ಅವರು ಅವನನ್ನೆಂದೂ ಮೇಣದಂತೆ ಮೆದು ಮತ್ತು ಕೋಮಲನೆಂದು ಭಾವಿಸಲು ಆಸ್ಪದವಿಲ್ಲದಿರುವುದು. ಅವರಿಗೆ ಅವನನ್ನೆದುರಿಸ ಬೇಕಾಗಿ ಬಂದಾಗಲೆಲ್ಲಾ ಈ ಮಹಾಶಯ ಸಾಯಬಹುದು. ಆದರೆ ಮಾರಲ್ಪಡಲಾರ, ಯಾವ ಒತ್ತಡಕ್ಕೂ ಇವನು ಮಣಿಯಲಾರ ಎಂದೆನಿಸುವುದು.

40. ಅರ್ಥಾತ್- ಅದಾನಿನ ಸ್ವರ ಕೇಳಿ ಅದನ್ನು ಅಣಕಿಸುತ್ತಾರೆ. ಅಪಹಾಸ್ಯಕ್ಕಾಗಿ ಅದರ ಶಬ್ದಗಳನ್ನು ಬದಲಿಸುತ್ತಾರೆ. ಅದನ್ನು ವಿಕೃತಗೊಳಿಸಿ ಗೇಲಿ ಮಾಡುತ್ತಾರೆ.

59. ಅವರೊಡನೆ ಹೇಳಿರಿ, "ಓ ಗ್ರಂಥದವರೇ, ನಾವು ಅಲ್ಲಾಹನ ಮೇಲೆ ಮತ್ತು ನಮ್ಮ ಕಡೆಗೆ ಅವತೀರ್ಣಗೊಂಡ ಹಾಗೂ ನಮಗಿಂತ ಮೊದಲೂ ಅವತೀರ್ಣವಾಗಿದ್ದ ಧಾರ್ಮಿಕ ಶಿಕ್ಷಣದ ಮೇಲೆ ವಿಶ್ವಾಸ ತಾಳಿರುತ್ತೇವೆಂಬುದಕ್ಕಾಗಿ ನೀವು ನಮ್ಮೊಡನೆ ಅಸಂತುಷ್ಟರಾಗಿದ್ದೀರೇ ವಿನಾ ಇನ್ನೇನು? ನಿಮ್ಮಲ್ಲಿ ಹೆಚ್ಚಿನವರು 'ಕರ್ಮಭ್ರಷ್ಟ'ರಾಗಿದ್ದಾರೆ."

قُلْ يَا أَهْلَ الْكِتَابِ هَلْ تَنْقِمُونَ مِنَّا إِلَّا أَنْ آمَنَّا بِاللَّهِ وَمَا أُنْزِلَ إِلَيْنَا وَمَا أُنْزِلَ مِنْ قَبْلُ وَأَنَّ أَكْثَرَكُمْ فَاسِقُونَ ﴿٥٩﴾

60. ಹೇಳಿರಿ- "ಅಲ್ಲಾಹನ ಬಳಿ 'ಕರ್ಮಭ್ರಷ್ಟ'ರಿಗಿಂತಲೂ ನಿಕೃಷ್ಟವಾದ ಅಂತಿಮ ಗತಿ ಹೊಂದುವವರನ್ನು ತೋರಿಸಿ ಕೊಡಲೇ? ಅಲ್ಲಾಹನ ಶಾಪ ಹಾಗೂ ಕೋಪಕ್ಕೊಳಗಾದವರು, ಕಪಿಗಳಾಗಿಯೂ ಹಂದಿಗಳಾಗಿಯೂ ಮಾರ್ಪಡಿಸಲ್ಪಟ್ಟವರು ಮತ್ತು 'ತಾಗೂತ್'ನ ದಾಸ್ಯ ಕೈಗೊಂಡವರು. ಅವರ ಸ್ಥಾನವು ಇನ್ನೂ ಕೆಟ್ಟದಾಗಿರುತ್ತದೆ ಮತ್ತು ಅವರು 'ನೇರಮಾರ್ಗ'ದಿಂದ ಅತಿ ಹೆಚ್ಚು ವ್ಯತಿಚಲಿಸಿದವರಾಗಿರುತ್ತಾರೆ.

قُلْ هَلْ أُنَبِّئُكُمْ بِشَرٍّ مِنْ ذَٰلِكَ مَثُوبَةً عِنْدَ اللَّهِ ۚ مَنْ لَعَنَهُ اللَّهُ وَغَضِبَ عَلَيْهِ وَجَعَلَ مِنْهُمُ الْقِرَدَةَ وَالْخَنَازِيرَ وَعَبَدَ الطَّاغُوتَ ۚ أُولَٰئِكَ شَرٌّ مَكَانًا وَأَضَلُّ عَنْ سَوَاءِ السَّبِيلِ ﴿٦٠﴾

61. ಅವರು ನಿಮ್ಮ ಬಳಿಗೆ ಬಂದಾಗ, 'ನಾವು ವಿಶ್ವಾಸವಿಟ್ಟೆವು' ಎನ್ನುತ್ತಾರೆ. ವಾಸ್ತವದಲ್ಲಿ ಅವರು ಅವಿಶ್ವಾಸದೊಂದಿಗೇ ಬಂದಿದ್ದರು ಮತ್ತು ಅವಿಶ್ವಾಸದೊಂದಿಗೇ ಮರಳಿ ಹೋದರು. ಅವರು ತಮ್ಮ ಹೃದಯಗಳಲ್ಲಿ ಬಚ್ಚಿಟ್ಟುಕೊಂಡಿರುವುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.

وَإِذَا جَاءُوكُمْ قَالُوا آمَنَّا وَقَدْ دَخَلُوا بِالْكُفْرِ وَهُمْ قَدْ خَرَجُوا بِهِ ۚ وَاللَّهُ أَعْلَمُ بِمَا كَانُوا يَكْتُمُونَ ﴿٦١﴾

62. ಅವರಲ್ಲಿ ಹೆಚ್ಚಿನವರು ಪಾಪ ಹಾಗೂ ಅಕ್ರಮ, ಅತ್ಯಾಚಾರ ಕಾರ್ಯಗಳಲ್ಲಿ ಶ್ರಮ ಪಡುತ್ತಿರುವುದನ್ನೂ 'ನಿಷಿದ್ಧ' ಸೊತ್ತನ್ನು ಉಣ್ಣುತ್ತಿರುವುದನ್ನೂ ನೀವು ಕಾಣುತ್ತೀರಿ. ಅವರು ಮಾಡುತ್ತಿರುವ ಕೃತ್ಯಗಳು ಅತ್ಯಂತ ನೀಚ.

وَتَرَىٰ كَثِيرًا مِنْهُمْ يُسَارِعُونَ فِي الْإِثْمِ وَالْعُدْوَانِ وَأَكْلِهِمُ السُّحْتَ ۚ لَبِئْسَ مَا كَانُوا يَعْمَلُونَ ﴿٦٢﴾

63. ಅವರ ವಿದ್ವಾಂಸರೂ ಹಿರಿಯರೂ ಅವರನ್ನು ಪಾಪದ ಮಾತುಗಳನ್ನಾಡುವುದರಿಂದಲೂ 'ನಿಷಿದ್ಧ' ಭಕ್ಷಣದಿಂದಲೂ ತಡೆಯುವುದಿಲ್ಲವೇಕೆ? ಅವರು ಸಿದ್ಧಗೊಳಿಸುತ್ತಿರುವ ಜೀವನ ಕೃತ್ಯವು ನಿಜಕ್ಕೂ ಅತ್ಯಂತ ನಿಕೃಷ್ಟ.

لَوْلَا يَنْهَاهُمُ الرَّبَّانِيُّونَ وَالْأَحْبَارُ عَنْ قَوْلِهِمُ الْإِثْمَ وَأَكْلِهِمُ السُّحْتَ ۚ لَبِئْسَ مَا كَانُوا يَصْنَعُونَ ﴿٦٣﴾

64. 'ಅಲ್ಲಾಹನ ಕೈಗಳು ಬಿಗಿಯಲ್ಪಟ್ಟಿವೆ' ಎಂದು ಯಹೂದಿಯರು ಹೇಳುತ್ತಾರೆ.[41] ಬಿಗಿಯಲ್ಪಟ್ಟದ್ದು ಅವರ ಕೈಗಳು.[42] ಅವರ ಈ

وَقَالَتِ الْيَهُودُ يَدُ اللَّهِ مَغْلُولَةٌ ۚ غُلَّتْ

41. ಅರಬಿ ನಾಣ್ಣುಡಿಯಂತೆ ಯಾರದಾದರೂ 'ಕೈ ಬಿಗಿಯಲ್ಪಟ್ಟಿರುವುದೆಂದರೆ' ಅವನು ಜಿಪುಣನಾಗಿದ್ದಾನೆ. ಔದಾರ್ಯ ಮತ್ತು ಕೊಡುಗೆಗಳಿಂದ ಅವನ ಕೈ ಹಿಂಜರಿಯುತ್ತದೆ ಎಂದರ್ಥವಾಗಿದೆ.

42. ಅರ್ಥಾತ್- ಅವರು ಸ್ವತಃ ಜಿಪುಣತೆಗೆ ಈಡಾಗಿದ್ದಾರೆ. ಲೋಭ ಮತ್ತು ಸಂಕುಚಿತತೆಗಾಗಿ ಅತ್ಯಂತ ಕುಖ್ಯಾತರಾಗಿ ಬಿಟ್ಟಿದ್ದಾರೆ.

أَيْدِيهِمْ وَلُعِنُوا بِمَا قَالُوا ۘ بَلْ يَدَاهُ
مَبْسُوطَتَانِ يُنفِقُ كَيْفَ يَشَاءُ ۚ وَلَيَزِيدَنَّ
كَثِيرًا مِّنْهُم مَّا أُنزِلَ إِلَيْكَ مِن رَّبِّكَ
طُغْيَانًا وَكُفْرًا ۚ وَأَلْقَيْنَا بَيْنَهُمُ الْعَدَاوَةَ
وَالْبَغْضَاءَ إِلَىٰ يَوْمِ الْقِيَامَةِ ۚ كُلَّمَا أَوْقَدُوا
نَارًا لِّلْحَرْبِ أَطْفَأَهَا اللَّهُ ۚ وَيَسْعَوْنَ فِي
الْأَرْضِ فَسَادًا ۚ وَاللَّهُ لَا يُحِبُّ الْمُفْسِدِينَ ﴿٦٤﴾

ಹಾಳು ಹರಟೆಯ ಕಾರಣದಿಂದಾಗಿ ಅವರ ಮೇಲೆ ಶಾಪ ಬಿದ್ದಿದೆ. ಅಲ್ಲಾಹನ ಕೈಗಳು ಅತಿ ವಿಶಾಲವಿದ್ದು ಅವನು ತನ್ನಿಚ್ಛೆ ಪ್ರಕಾರ ವ್ಯಯಿಸುತ್ತಾನೆ. ವಾಸ್ತವದಲ್ಲಿ ನಿಮ್ಮ ಪಾಲಕಪ್ರಭುವಿನ ಕಡೆಯಿಂದ ನಿಮ್ಮ ಮೇಲೆ ಅವತೀರ್ಣಗೊಂಡಿರುವ ವಾಣಿಯು ಅವರ ಪೈಕಿ ಹೆಚ್ಚಿನವರ ಉದ್ಧಟತನ ಹಾಗೂ ಮಿಥ್ಯಾರಾಧನೆಯಲ್ಲಿ ಇನ್ನಷ್ಟು ವೃದ್ಧಿಗೆ ಕಾರಣವಾಗಿಬಿಟ್ಟಿದೆ ಮತ್ತು (ಅದರ ಫಲವಾಗಿ) ನಾವು ಅವರ ನಡುವೆ ನಿರ್ಣಾಯಕ ದಿನದವರೆಗೆ ವೈರ ವಿದ್ವೇಷಗಳನ್ನಿರಿಸಿ ಬಿಟ್ಟಿದ್ದೇವೆ. ಅವರು ಯುದ್ಧದ ಕಿಡಿಯನ್ನು ಪ್ರಜ್ವಲಿಸಿದಾಗಲೆಲ್ಲ ಅಲ್ಲಾಹನು ಅದನ್ನು ಆರಿಸಿಬಿಡುತ್ತಾನೆ. ಅವರು ಭೂಮಿಯಲ್ಲಿ ಕ್ಷೋಭೆ ಹಬ್ಬಿಸಲು ಯತ್ನಿಸುತ್ತಾರೆ. ಆದರೆ ಅಲ್ಲಾಹನು ಕ್ಷೋಭೆಯುಂಟು ಮಾಡುವವರನ್ನು ಖಂಡಿತ ಮೆಚ್ಚುವುದಿಲ್ಲ.

وَلَوْ أَنَّ أَهْلَ الْكِتَابِ آمَنُوا وَاتَّقَوْا لَكَفَّرْنَا
عَنْهُمْ سَيِّئَاتِهِمْ وَلَأَدْخَلْنَاهُمْ جَنَّاتِ النَّعِيمِ ﴿٦٥﴾

65. ಈ ಗ್ರಂಥದವರು (ಈ ಉದ್ಧಟತನದ ಬದಲು) ವಿಶ್ವಾಸವಿಟ್ಟಿದ್ದರೆ ಹಾಗೂ ದೇವಭಯ ನೀತಿಯನ್ನನುಸರಿಸುತ್ತಿದ್ದರೆ, ನಾವು ಅವರ ಕೆಡುಕುಗಳನ್ನು ಅವರಿಂದ ದೂರೀಕರಿಸುತ್ತಿದ್ದೆವು ಮತ್ತು ಅವರನ್ನು ಸಕಲ ಸೌಭಾಗ್ಯಗಳಿಂದ ಕೂಡಿದ ಸ್ವರ್ಗೋದ್ಯಾನಗಳಿಗೆ ತಲಪಿಸಿ ಬಿಡುತ್ತಿದ್ದೆವು.

وَلَوْ أَنَّهُمْ أَقَامُوا التَّوْرَاةَ وَالْإِنجِيلَ
وَمَا أُنزِلَ إِلَيْهِم مِّن رَّبِّهِمْ لَأَكَلُوا
مِن فَوْقِهِمْ وَمِن تَحْتِ أَرْجُلِهِم ۚ
مِّنْهُمْ أُمَّةٌ مُّقْتَصِدَةٌ ۖ وَكَثِيرٌ مِّنْهُمْ
سَاءَ مَا يَعْمَلُونَ ﴿٦٦﴾

66. ಅಕಟ! ಅವರು ತೌರಾತ್, ಇಂಜೀಲ್ ಮತ್ತು ಅವರ ಪಾಲಕ ಪ್ರಭುವಿನ ವತಿಯಿಂದ ಅವರ ಕಡೆಗೆ ಕಳುಹಿಸಲ್ಪಟ್ಟಿದ್ದ ಇತರ ಗ್ರಂಥಗಳನ್ನು ಸಂಸ್ಥಾಪಿಸಿರುತ್ತಿದ್ದರೆ! ಹಾಗೆ ಮಾಡುತ್ತಿದ್ದರೆ, ಅವರಿಗಾಗಿ ಆಹಾರವು ಮೇಲ್ಭಾಗದಿಂದ ವರ್ಷಿಸುತ್ತಿತ್ತು, ಕೆಳಭಾಗ ದಿಂದ ಉಕ್ಕಿ ಬರುತ್ತಿತ್ತು. ಅವರಲ್ಲಿ ಕೆಲವರು ಸನ್ಮಾರ್ಗಿಗಳೂ ಇದ್ದಾರೆ ಆದರೆ ಅವರಲ್ಲಿ ಹೆಚ್ಚಿನವರು ಮಹಾ ದುಷ್ಕರ್ಮಿ ಗಳಾಗಿದ್ದಾರೆ.

يَا أَيُّهَا الرَّسُولُ بَلِّغْ مَا أُنزِلَ إِلَيْكَ مِن
رَّبِّكَ ۖ وَإِن لَّمْ تَفْعَلْ فَمَا بَلَّغْتَ رِسَالَتَهُ ۚ
وَاللَّهُ يَعْصِمُكَ مِنَ النَّاسِ ۗ إِنَّ اللَّهَ
لَا يَهْدِي الْقَوْمَ الْكَافِرِينَ ﴿٦٧﴾

67. ಓ ಸಂದೇಶವಾಹಕರೇ, ನಿಮ್ಮ ಪಾಲಕಪ್ರಭುವಿನ ಕಡೆಯಿಂದ ನಿಮ್ಮ ಮೇಲೆ ಅವತೀರ್ಣ ಗೊಳಿಸಲ್ಪಟ್ಟುದನ್ನು ಜನರಿಗೆ ತಲುಪಿ ಸಿರಿ. ಹಾಗೆ ಮಾಡದಿದ್ದರೆ ನೀವು ಅವನ ದೌತ್ಯದ ಬಾಧ್ಯತೆಯನ್ನು ನೆರವೇರಿಸಲಿಲ್ಲ. ಅಲ್ಲಾಹನು ನಿಮ್ಮನ್ನು ಜನರ ಕೇಡಿನಿಂದ ರಕ್ಷಿಸುವವನಾಗಿರುತ್ತಾನೆ. ಅವನು ಸತ್ಯನಿಷೇಧಿಗಳಿಗೆ ಎಂದೆಂದಿಗೂ (ನಿಮ್ಮ ವಿರುದ್ಧ) ವಿಜಯವನ್ನು ನೀಡಲಾರನೆಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ.

68. "ಓ ಗ್ರಂಥದವರೇ, ನೀವು ತೌರಾತನ್ನೂ ಇಂಜೀಲನ್ನೂ ನಿಮಗೆ ನಿಮ್ಮ ಪಾಲಕಪ್ರಭುವಿನ ಕಡೆಯಿಂದ ಅವತೀರ್ಣಗೊಳಿಸಲ್ಪಟ್ಟ ಇತರ ಗ್ರಂಥಗಳನ್ನೂ ನೆಲೆ ನಿಲ್ಲಿಸುವ ತನಕ ನಿಮಗೆ ಯಾವ ತಳಹದಿಯೂ ಇಲ್ಲ" ಎಂದು ಸ್ಪಷ್ಟವಾಗಿ ಹೇಳಿಬಿಡಿರಿ. ನಿಮ್ಮ ಮೇಲೆ ಅವತೀರ್ಣ ಗೊಳಿಸಲಾಗಿರುವ ಫರಮಾನು ಅವರಲ್ಲಿ ಅನೇಕರ ಉದ್ಧಟತನವನ್ನೂ ನಿರಾಕರಣೆಯನ್ನೂ ಇನ್ನಷ್ಟು ವೃದ್ಧಿ ಸುವುದು. ಆದರೆ, ನಿರಾಕರಿಸುವವರ ಸ್ಥಿತಿಯ ಬಗ್ಗೆ ದುಃಖಿಸ ಬೇಡಿರಿ.

قُلْ يَٰٓأَهْلَ ٱلْكِتَٰبِ لَسْتُمْ عَلَىٰ شَىْءٍ حَتَّىٰ تُقِيمُوا۟ ٱلتَّوْرَىٰةَ وَٱلْإِنجِيلَ وَمَآ أُنزِلَ إِلَيْكُم مِّن رَّبِّكُمْ ۗ وَلَيَزِيدَنَّ كَثِيرًا مِّنْهُم مَّآ أُنزِلَ إِلَيْكَ مِن رَّبِّكَ طُغْيَٰنًا وَكُفْرًا ۖ فَلَا تَأْسَ عَلَى ٱلْقَوْمِ ٱلْكَٰفِرِينَ ٦٨

69. (ಇಲ್ಲಿ ಪಟ್ಟಭದ್ರತೆ ಯಾರಿಗೂ ಇಲ್ಲ.) ಮುಸ್ಲಿಮರಿರಲಿ, ಯಹೂದಿಯರಿರಲಿ, 'ಸಾಬೀ'ಗಳಿರಲಿ, ಕ್ರೈಸ್ತರಿರಲಿ, ಯಾರೇ ಇರಲಿ - ಯಾರು ಅಲ್ಲಾಹನ ಮೇಲೆ ಮತ್ತು ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸಿಕೊಂಡು ಸತ್ಕರ್ಮಗಳನ್ನು ಮಾಡುತ್ತಾ ಇರುವನೋ ಅವನಿಗೆ ನಿಶ್ಚಯವಾಗಿಯೂ ಯಾವ ಭಯವೂ ಇಲ್ಲ, ವ್ಯಥೆಯೂ ಇಲ್ಲ.[43]

إِنَّ ٱلَّذِينَ ءَامَنُوا۟ وَٱلَّذِينَ هَادُوا۟ وَٱلصَّٰبِـُٔونَ وَٱلنَّصَٰرَىٰ مَنْ ءَامَنَ بِٱللَّهِ وَٱلْيَوْمِ ٱلْءَاخِرِ وَعَمِلَ صَٰلِحًا فَلَا خَوْفٌ عَلَيْهِمْ وَلَا هُمْ يَحْزَنُونَ ٦٩

70. ನಾವು ಬನೀಇಸ್ರಾಈಲರಿಂದ ಬಲವಾದ ಕರಾರನ್ನು ಪಡೆದೆವು. ಅವರ ಕಡೆಗೆ ಅನೇಕ ಸಂದೇಶವಾಹಕರನ್ನು ರವಾನಿಸಿದೆವು. ಆದರೆ, ಅವರ ಬಳಿ ಸಂದೇಶವಾಹಕರು ಅವರ ದೇಹೇಚ್ಛೆಗಳಿಗೆ ವಿರುದ್ಧವೇನಾದರೂ ತಂದಾಗಲೆಲ್ಲಾ ಅವರು ಕೆಲವರನ್ನು ಸುಳ್ಳಾಗಿಸಿದರು, ಇನ್ನು ಕೆಲವರನ್ನು ವಧಿಸಿಬಿಟ್ಟರು.

لَقَدْ أَخَذْنَا مِيثَٰقَ بَنِىٓ إِسْرَٰٓءِيلَ وَأَرْسَلْنَآ إِلَيْهِمْ رُسُلًا ۖ كُلَّمَا جَآءَهُمْ رَسُولٌۢ بِمَا لَا تَهْوَىٰٓ أَنفُسُهُمْ فَرِيقًا كَذَّبُوا۟ وَفَرِيقًا يَقْتُلُونَ ٧٠

71. ಮತ್ತು ಯಾವ ಗೊಂದಲವೂ ಉಂಟಾಗದೆಂದು ತಮ್ಮಷ್ಟಕ್ಕೇ ತಾವೇ ತಿಳಿದುಕೊಂಡರು. ಆದುದರಿಂದ ಅವರು ಅಂಧರೂ ಕಿವುಡರೂ ಆಗಿ ಹೋದರು. ಆ ಬಳಿಕ ಅಲ್ಲಾಹನು ಅವರನ್ನು ಕ್ಷಮಿಸಿದಾಗ ಅವರಲ್ಲಿ ಹೆಚ್ಚಿನವರು ಇನ್ನಷ್ಟು ಅಂಧರೂ ಕಿವುಡರೂ ಆಗುತ್ತ ಹೋದರು. ಅಲ್ಲಾಹನು ಅವರ ಈ ಎಲ್ಲ ಕೃತ್ಯಗಳನ್ನು ವೀಕ್ಷಿಸುತ್ತಲೇ ಇದ್ದನು.

وَحَسِبُوٓا۟ أَلَّا تَكُونَ فِتْنَةٌ فَعَمُوا۟ وَصَمُّوا۟ ثُمَّ تَابَ ٱللَّهُ عَلَيْهِمْ ثُمَّ عَمُوا۟ وَصَمُّوا۟ كَثِيرٌ مِّنْهُمْ ۚ وَٱللَّهُ بَصِيرٌۢ بِمَا يَعْمَلُونَ ٧١

72. ಮರ್ಯಮರ ಪುತ್ರ ಮಸೀಹನೇ ಅಲ್ಲಾಹನೆಂದು ಹೇಳಿದವರು ಖಂಡಿತವಾಗಿಯೂ 'ಸತ್ಯನಿಷೇಧ' ಕೈಗೊಂಡರು. ವಸ್ತುತಃ ಮಸೀಹರು, "ಓ ಬನೀಇಸ್ರಾಈಲರೇ, ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ"

لَقَدْ كَفَرَ ٱلَّذِينَ قَالُوٓا۟ إِنَّ ٱللَّهَ هُوَ ٱلْمَسِيحُ ٱبْنُ مَرْيَمَ ۖ وَقَالَ ٱلْمَسِيحُ يَٰبَنِىٓ إِسْرَٰٓءِيلَ ٱعْبُدُوا۟ ٱللَّهَ رَبِّى وَ

43. ವಿವರಣೆಗಾಗಿ ಅಲ್‌ಬಕರಃ ಅಧ್ಯಾಯದ 62ನೆಯ ಸೂಕ್ತ ಮತ್ತು 26ನೆಯ ಟಿಪ್ಪಣಿಯನ್ನು ನೋಡಿರಿ.

ಎಂದು ಹೇಳಿದ್ದರು. ಅಲ್ಲಾಹನೊಂದಿಗೆ ಇನ್ನಾರನ್ನಾದರೂ ಸಹಭಾಗಿಗಳನ್ನಾಗಿ ಮಾಡಿದವನಿಗೆ ಅಲ್ಲಾಹನು ಸ್ವರ್ಗವನ್ನು 'ನಿಷಿದ್ಧ' ಗೊಳಿಸಿರುತ್ತಾನೆ ಮತ್ತು ಅವನ ವಾಸಸ್ಥಾನವು 'ನರಕ' ಆಗಿರುತ್ತದೆ. ಇಂತಹ ಅಕ್ರಮಿಗಳಿಗೆ ಯಾರೂ ಸಹಾಯಕರಿಲ್ಲ.

رَبَّكُمْ ۚ إِنَّهُ مَنْ يُشْرِكْ بِاللَّهِ فَقَدْ
حَرَّمَ اللَّهُ عَلَيْهِ الْجَنَّةَ وَمَأْوَاهُ
النَّارُ ۖ وَمَا لِلظَّالِمِينَ مِنْ أَنْصَارٍ ﴿٧٢﴾

73. ಅಲ್ಲಾಹನು ಮೂವರಲ್ಲೊಬ್ಬನೆಂದು ಹೇಳಿದವರು ನಿಶ್ಚಯ ವಾಗಿಯೂ 'ಸತ್ಯನಿಷೇಧ' ಕೈಗೊಂಡರು. ವಾಸ್ತವದಲ್ಲಿ ಏಕದೇವನ ಲ್ಲದೆ ಅನ್ಯ ದೇವನಿಲ್ಲ. ಇವರು ಇಂತಹ ಮಾತುಗಳಿಂದ ದೂರವಿರದಿದ್ದರೆ, ಇವರ ಪೈಕಿ ಸತ್ಯನಿಷೇಧ ನೀತಿಯನ್ನನುಸರಿಸು ವವರಿಗೆಲ್ಲ ವೇದನಾಯುಕ್ತ ಯಾತನೆ ನೀಡಲಾಗುವುದು.

لَقَدْ كَفَرَ الَّذِينَ قَالُوا إِنَّ اللَّهَ ثَالِثُ
ثَلَاثَةٍ ۘ وَمَا مِنْ إِلَٰهٍ إِلَّا إِلَٰهٌ وَاحِدٌ ۚ
وَإِنْ لَمْ يَنْتَهُوا عَمَّا يَقُولُونَ لَيَمَسَّنَّ
الَّذِينَ كَفَرُوا مِنْهُمْ عَذَابٌ أَلِيمٌ ﴿٧٣﴾

74. ಇವರು ಇನ್ನೂ ಅಲ್ಲಾಹನೊಡನೆ 'ಪಶ್ಚಾತ್ತಾಪ' ಪಟ್ಟು ಅವನೊಡನೆ ಕ್ಷಮಾಯಾಚನೆ ಮಾಡಲಾರರೇ? ಅಲ್ಲಾಹನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

أَفَلَا يَتُوبُونَ إِلَى اللَّهِ وَيَسْتَغْفِرُونَهُ ۚ وَاللَّهُ
غَفُورٌ رَحِيمٌ ﴿٧٤﴾

75. ಮರ್ಯಮರ ಪುತ್ರ ಮಸೀಹರು ಕೇವಲ ಓರ್ವ ಸಂದೇಶ ವಾಹಕರಾಗಿದ್ದರೇ ವಿನಾ ಇನ್ನೇನೂ ಆಗಿರಲಿಲ್ಲ. ಅವರಿಗಿಂತ ಮುಂಚೆ ಇನ್ನೂ ಅನೇಕ ಸಂದೇಶವಾಹಕರು ಗತಿಸಿ ಹೋಗಿದ್ದರು. ಅವರ ಮಾತೆ ಓರ್ವ ಸತ್ಯಸಂಧ ಮಹಿಳೆಯಾಗಿದ್ದರು. ಅವರಿಬ್ಬರೂ ಆಹಾರ ಸೇವನೆ ಮಾಡುತ್ತಿದ್ದರು. ನಾವು ಯಾವ ವಿಧದಿಂದ ಇವರ ಮುಂದೆ ಪರಮಾರ್ಥದ ದೃಷ್ಟಾಂತಗಳನ್ನು ಪ್ರಕಟಗೊಳಿಸುತ್ತಿದ್ದೇವೆ ಎಂಬುದನ್ನು ನೋಡಿರಿ. ಹೀಗಿದ್ದೂ ಇವರು ಎತ್ತ ವ್ಯತಿಚಲಿಸುತ್ತಿದ್ದಾರೆಂಬುದನ್ನು ನೋಡಿರಿ.[44]

مَا الْمَسِيحُ ابْنُ مَرْيَمَ إِلَّا رَسُولٌ
قَدْ خَلَتْ مِنْ قَبْلِهِ الرُّسُلُ وَأُمُّهُ
صِدِّيقَةٌ ۖ كَانَا يَأْكُلَانِ الطَّعَامَ ۗ
انْظُرْ كَيْفَ نُبَيِّنُ لَهُمُ الْآيَاتِ ثُمَّ
انْظُرْ أَنَّىٰ يُؤْفَكُونَ ﴿٧٥﴾

76. ಇವರೊಡನೆ ಹೇಳಿರಿ - "ನೀವು ಅಲ್ಲಾಹನನ್ನು ಬಿಟ್ಟು ನಿಮಗೆ ನಷ್ಟವನ್ನುಂಟು ಮಾಡಲಿಕ್ಕೂ ಲಾಭವನ್ನುಂಟು ಮಾಡಲಿಕ್ಕೂ ಅಧಿಕಾರವಿಲ್ಲದವರನ್ನು ಆರಾಧಿಸುತ್ತೀರಾ? ವಸ್ತುತಃ ಸಕಲವನ್ನು

قُلْ أَتَعْبُدُونَ مِنْ دُونِ اللَّهِ مَا لَا
يَمْلِكُ لَكُمْ ضَرًّا وَلَا نَفْعًا ۚ وَاللَّهُ هُوَ

44. ಈ ಪದಗಳ ಮೂಲಕ ಮಸೀಹ್‌ರ(ಅ) ದೇವತ್ವದ ಬಗ್ಗೆ ಕ್ರೈಸ್ತರು ಹೊಂದಿರುವ ಕಲ್ಪನೆಯನ್ನು ಸ್ಪಷ್ಟವಾಗಿ ನಿರಾಕರಿಸಲಾಗಿದೆ. ಇದಕ್ಕಿಂತ ಹೆಚ್ಚಿನ ಸ್ಪಷ್ಟೀಕರಣವನ್ನು ನೀಡುವುದು ಪ್ರಾಯಶಃ ಸಾಧ್ಯವೇ ಇಲ್ಲ. ಯಾರಾದರೂ ಮಸೀಹ್(ಅ) ಏನಾಗಿದ್ದರು ಎಂದು ತಿಳಿಯ ಬಯಸುವುದಾದರೆ ಈ ಸೂಚನೆಗಳ ಮೂಲಕ ಯಾರಿಗಾದರೂ ಸ್ಪಷ್ಟವಾಗಿ ತಿಳಿಯಲು ಸಾಧ್ಯವಿರುವುದೇನೆಂದರೆ, ಅವರು ಓರ್ವ ಮನುಷ್ಯರಾಗಿದ್ದರು. ಅವರು ಕುಲದ ವಿವರಣೆ ಲಭ್ಯವಿರುವ ಮಹಿಳೆಯೊಬ್ಬಳ ಉದರದಲ್ಲಿ ಜನಿಸಿದರು. ಅವರು ಮಾನವ ಕಾಯವನ್ನು ಹೊಂದಿದ್ದರು. ಮನುಷ್ಯ ಸಹಜವಾದ ಎಲ್ಲ ಮಿತಿಗಳನ್ನೂ ಅನಿವಾರ್ಯತೆಗಳನ್ನೂ ಗುಣವಿಶೇಷತೆಗಳನ್ನೂ ಅವರು ಹೊಂದಿದ್ದರು. ಅವರು ನಿದ್ರಿಸುತ್ತಿದ್ದರು. ಆಹಾರ ಸೇವಿಸುತ್ತಿದ್ದರು. ಬೇಸಿಗೆ ಮತ್ತು ಚಳಿಯನ್ನು ಅನುಭವಿಸುತ್ತಿದ್ದರು. ಮಾತ್ರವಲ್ಲ ಕ್ರೈಸ್ತರು ಹೇಳುವಂತೆ ಪಿಶಾಚಿಯ ಪ್ರಲೋಭನೆಗೂ ಒಳಗಾಗಿದ್ದರು. ಇಷ್ಟಾಗಿಯೂ ಅವರನ್ನು ದೇವ ಅಥವಾ ದೇವತ್ವದ ಸಹಭಾಗಿ ಎಂದು ಕಲ್ಪಿಸಲು ಯಾವ ವಿವೇಕಶಾಲಿ ವ್ಯಕ್ತಿಗೆ ಸಾಧ್ಯವಿದೆ.

ಆಲಿಸುವವನೂ ಸರ್ವವನ್ನು ಅರಿಯುವವನೂ ಅಲ್ಲಾಹನೇ ಆಗಿರುತ್ತಾನೆ"

السَّمِيعُ الْعَلِيمُ ۝٧٦

77. ಹೇಳಿರಿ- "ಓ ಗ್ರಂಥದವರೇ, ನಿಮ್ಮ ಧರ್ಮದಲ್ಲಿ ವೃಥಾ ಹದಮೀರಬೇಡಿರಿ ಮತ್ತು ನಿಮಗಿಂತ ಮುಂಚೆ ಪಥಭ್ರಷ್ಟರಾಗಿದ್ದ ಹಾಗೂ ಅನೇಕರನ್ನು ಪಥಭ್ರಷ್ಟರನ್ನಾಗಿ ಮಾಡಿದ ಮತ್ತು 'ಸನ್ಮಾರ್ಗದಿಂದ' ಭ್ರಷ್ಟರಾದವರ ವಿಚಾರಗಳನ್ನನುಸರಿಸಬೇಡಿರಿ."

قُلْ يَا أَهْلَ الْكِتَابِ لَا تَغْلُوا فِي دِينِكُمْ غَيْرَ الْحَقِّ وَلَا تَتَّبِعُوا أَهْوَاءَ قَوْمٍ قَدْ ضَلُّوا مِنْ قَبْلُ وَأَضَلُّوا كَثِيرًا وَضَلُّوا عَنْ سَوَاءِ السَّبِيلِ ۝٧٧

78. ಬನೀಇಸ್ರಾಈಲರಲ್ಲಿ 'ಧರ್ಮಧಿಕ್ಕಾರ' ಮಾರ್ಗವನ್ನನುಸರಿಸಿ ದವರು ದಾವೂದ್ ಮತ್ತು ಮರ್ಯಮರ ಪುತ್ರ 'ಈಸಾ'ರ ಬಾಯಿಯಿಂದ ಶಪಿಸಲ್ಪಟ್ಟರು. ಏಕೆಂದರೆ, ಅವರು ಸೊಕ್ಕಿದ್ದರು ಮತ್ತು ಅತಿಕ್ರಮವೆಸಗುತ್ತಿದ್ದರು.

لُعِنَ الَّذِينَ كَفَرُوا مِنْ بَنِي إِسْرَائِيلَ عَلَىٰ لِسَانِ دَاوُودَ وَعِيسَى ابْنِ مَرْيَمَ ذَٰلِكَ بِمَا عَصَوْا وَكَانُوا يَعْتَدُونَ ۝٧٨

79. ಅವರು ಪರಸ್ಪರರನ್ನು ದುಷ್ಕೃತ್ಯಗಳಿಂದ ತಡೆಯುವುದನ್ನು ಬಿಟ್ಟುಬಿಟ್ಟಿದ್ದರು.[45] ಅವರು ಕೈಗೊಂಡ ಕರ್ಮವಿಧಾನವು ಹೀನಾಯವಾಗಿತ್ತು.

كَانُوا لَا يَتَنَاهَوْنَ عَنْ مُنْكَرٍ فَعَلُوهُ لَبِئْسَ مَا كَانُوا يَفْعَلُونَ ۝٧٩

80. ಇಂದು ನೀವು ಅವರಲ್ಲಿ (ಸತ್ಯವಿಶ್ವಾಸಿಗಳಿಗೆ ವಿರುದ್ಧ) 'ಸತ್ಯನಿಷೇಧಿಗಳನ್ನು' ಬೆಂಬಲಿಸುವ ಮತ್ತು ಪ್ರೀತಿಸುವ ಅನೇಕರನ್ನು ಕಾಣುತ್ತೀರಿ. ಅವರ ಚಿತ್ತಗಳು ಅವರಿಗಾಗಿ ಸಿದ್ಧಪಡಿಸಿ ಕೊಂಡಿರುವ ಫಲಿತಾಂಶವು ಅತ್ಯಂತ ನಿಕೃಷ್ಟವಾಗಿರುತ್ತದೆ. ಅಲ್ಲಾಹ್ ಅವರ ಮೇಲೆ ಅತ್ಯಂತ ಕ್ರೋಧಗೊಂಡಿರುತ್ತಾನೆ ಮತ್ತು ಅವರು ಶಾಶ್ವತ ಯಾತನೆಗೆ ಒಳಗಾಗುವವರಾಗಿದ್ದಾರೆ.

تَرَىٰ كَثِيرًا مِنْهُمْ يَتَوَلَّوْنَ الَّذِينَ كَفَرُوا لَبِئْسَ مَا قَدَّمَتْ لَهُمْ أَنْفُسُهُمْ أَنْ سَخِطَ اللَّهُ عَلَيْهِمْ وَفِي الْعَذَابِ هُمْ خَالِدُونَ ۝٨٠

81. ಅವರು ನಿಜವಾಗಿಯೂ ಅಲ್ಲಾಹ್, ಪ್ರವಾದಿ ಮತ್ತು ಪ್ರವಾದಿಯ ಮೇಲೆ ಅವತೀರ್ಣಗೊಂಡುದನ್ನು ನಂಬುವವರಾಗಿದ್ದರೆ, ಎಂದೆಂದಿಗೂ (ಸತ್ಯವಿಶ್ವಾಸಿಗಳ ವಿರುದ್ಧ) 'ಸತ್ಯನಿಷೇಧಿಗಳನ್ನು' ತಮ್ಮ ಆಪ್ತ ಮಿತ್ರರನ್ನಾಗಿ ಮಾಡಿಕೊಳ್ಳುತ್ತಿರಲಿಲ್ಲ. ಆದರೆ ಅವ ರಲ್ಲಿ ಹೆಚ್ಚಿನವರು ಅಲ್ಲಾಹನ ಅನುಸರಣೆಯನ್ನು ತೊರೆದಿದ್ದಾರೆ.

وَلَوْ كَانُوا يُؤْمِنُونَ بِاللَّهِ وَالنَّبِيِّ وَمَا أُنْزِلَ إِلَيْهِ مَا اتَّخَذُوهُمْ أَوْلِيَاءَ وَلَٰكِنَّ كَثِيرًا مِنْهُمْ فَاسِقُونَ ۝٨١

82. ನೀವು ಯಹೂದಿಯರನ್ನೂ 'ಬಹುದೇವಾರಾಧಕ'ರನ್ನೂ

لَتَجِدَنَّ أَشَدَّ النَّاسِ عَدَاوَةً لِلَّذِينَ

45. ಎಲ್ಲಾ ಸಮುದಾಯಗಳ ಕೇಡಿನ ಆರಂಭ ಕೆಲವು ವ್ಯಕ್ತಿಗಳ ಮೂಲಕ ಆಗುತ್ತದೆ. ಸಮುದಾಯದ ಸಾಮೂಹಿಕ ಆತ್ಮಸಾಕ್ಷಿ ಜಾಗೃತವಾಗಿದ್ದರೆ ಜನಾಭಿಪ್ರಾಯವು ಕೇಡಿಗೆ ಈಡಾಗಿರುವ ಜನರನ್ನು ನಿಯಂತ್ರಿಸುತ್ತದೆ. ಹೀಗೆ ಸಮುದಾಯ ಕೇಡಿನಿಂದ ಮುಕ್ತವಾಗಿರುತ್ತದೆ. ಆದರೆ ಸಮುದಾಯ ಇಂತಹ ವ್ಯಕ್ತಿಗಳ ಬಗ್ಗೆ ಔದಾಸೀನ್ಯ ತೋರಿದರೆ, ತಪ್ಪಿತಸ್ಥರನ್ನು ಶಪಿಸುವ ಬದಲು ಅವರನ್ನು ತಪ್ಪೆಸಗಲು ಸ್ವಚ್ಛಂದವಾಗಿ ಬಿಟ್ಟು ಬಿಟ್ಟರೆ ಕ್ರಮೇಣ ಕೆಲವೇ ವ್ಯಕ್ತಿಗಳಿಗೆ ಸೀಮಿತವಾಗಿದ್ದ ಆ ಕೆಡುಕುಗಳು ಇಡೀ ಸಮುದಾಯದಲ್ಲಿ ಹರಡುತ್ತಾ ಹೋಗುತ್ತದೆ. ಇದೇ ಪ್ರವೃತ್ತಿ ಬನೀಇಸ್ರಾಈಲರನ್ನು ಸಾಮೂಹಿಕವಾಗಿ ಕೇಡಿಗೆ ಗುರಿಪಡಿಸಿತ್ತು.

ಸತ್ಯವಿಶ್ವಾಸಿಗಳ (ವಿರುದ್ಧ) ಹಗೆತನದಲ್ಲಿ ಅತ್ಯುಗ್ರರನ್ನಾಗಿ ಕಾಣು ವಿರಿ. 'ನಾವು ನಸಾರಾಗಳು' ಎಂದು ಹೇಳಿದ್ದವರನ್ನು (ಕ್ರೈಸ್ತರನ್ನು) ನೀವು ಸತ್ಯವಿಶ್ವಾಸಿಗಳ ಗೆಳೆತನದಲ್ಲಿ ಅತಿ ಸಮೀಪದವರನ್ನಾಗಿ ಕಾಣುವಿರಿ. ಏಕೆಂದರೆ- ಅವರಲ್ಲಿ ಧ್ಯಾನಾಸಕ್ತ ವಿದ್ವಾಂಸರೂ ವಿರಕ್ತ ಸಾಧುಗಳೂ ಕಂಡುಬರುತ್ತಾರೆ ಮತ್ತು ಅವರಲ್ಲಿ ಅಹಂಭಾವವಿಲ್ಲ.

آمنوا اليهود والذين أشركوا ۖ ولتجدن أقربهم مودة للذين آمنوا الذين قالوا إنا نصارى ۚ ذلك بأن منهم قسيسين ورهبانا وأنهم لا يستكبرون ﴿٨٢﴾

83. *ಅವರು ಸಂದೇಶವಾಹಕರ ಮೇಲೆ ಅವತೀರ್ಣಗೊಂಡ ಈ ವಾಣಿಯನ್ನು ಆಲಿಸುವಾಗ ಸತ್ಯಪ್ರಜ್ಞೆಯ ಪ್ರಭಾವದಿಂದ ಅವರ ನಯನಗಳು ಅಶ್ರುಗಳಿಂದ ಒದ್ದೆಯಾಗುತ್ತಿರುವುದನ್ನು ನೀವು ಕಾಣುತ್ತೀರಿ. ಅವರು ಹೇಳುತ್ತಾರೆ, "ಓ ನಮ್ಮ ಪ್ರಭೂ, ನಾವು ವಿಶ್ವಾಸವಿರಿಸಿಕೊಂಡೆವು, ನಮ್ಮ ಹೆಸರನ್ನು ಸಾಕ್ಷ್ಯ ನೀಡುವವರೊಂದಿಗೆ ಬರೆದುಕೋ.

وإذا سمعوا ما أنزل إلى الرسول ترى أعينهم تفيض من الدمع مما عرفوا من الحق ۖ يقولون ربنا آمنا فاكتبنا مع الشاهدين ﴿٨٣﴾

84. ನಮ್ಮ ಪಾಲಕ ಪ್ರಭುವು ನಮ್ಮನ್ನು ಸಜ್ಜನ ಭಕ್ತರ ಸಾಲಲ್ಲಿ ಸೇರಿಸಿಕೊಳ್ಳಬೇಕೆಂದು ನಾವು ಅಭಿಲಾಷೆ ಪಡುತ್ತಿರುವಾಗ ನಾವೇಕೆ ವಿಶ್ವಾಸವಿಡಬಾರದು? ನಮ್ಮ ಮುಂದೆ ಬಂದಿರುವ ಸತ್ಯವನ್ನು ನಾವೇಕೆ ಒಪ್ಪಿಕೊಳ್ಳಬಾರದು?"

وما لنا لا نؤمن بالله وما جاءنا من الحق ونطمع أن يدخلنا ربنا مع القوم الصالحين ﴿٨٤﴾

85. ಅವರ ಈ ಮಾತಿನ ಕಾರಣದಿಂದ ಅಲ್ಲಾಹನು ಅವರಿಗೆ ತಳ ಭಾಗದಲ್ಲಿ ಕಾಲುವೆಗಳು ಪ್ರವಹಿಸುತ್ತಿರುವ ಸ್ವರ್ಗೋದ್ಯಾನಗಳನ್ನು ದಯಪಾಲಿಸಿದನು ಮತ್ತು ಅವರು ಅಲ್ಲಿ ಸದಾ ಕಾಲ ವಾಸಿಸುವರು. ಪುಣ್ಯ ಮಾರ್ಗವನ್ನನುಸರಿಸುವವರ ಪ್ರತಿಫಲವಿದು.

فأثابهم الله بما قالوا جنات تجري من تحتها الأنهار خالدين فيها ۚ وذلك جزاء المحسنين ﴿٨٥﴾

86. ಇನ್ನು ನಮ್ಮ ನಿದರ್ಶನಗಳನ್ನು ಧಿಕ್ಕರಿಸಿದವರು ಮತ್ತು ಸುಳ್ಳಾಗಿಸಿದವರು- ಅವರು ನರಕಕ್ಕೆ ಅರ್ಹರು.

والذين كفروا وكذبوا بآياتنا أولئك أصحاب الجحيم ﴿٨٦﴾

87. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನು ನಿಮಗೆ 'ಧರ್ಮಸಮ್ಮತ' ಗೊಳಿಸಿರುವ ಶುದ್ಧ ವಸ್ತುಗಳನ್ನು 'ನಿಷಿದ್ಧ ಮಾಡಿಕೊಳ್ಳಬೇಡಿರಿ[46]

يا أيها الذين آمنوا لا تحرموا طيبات ما

***ಇಲ್ಲಿಂದ 7ನೆಯ ಕಾಂಡ ಆರಂಭ.**

46. ಈ ಸೂಕ್ತದಲ್ಲಿ ಎರಡು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ಮೊದಲನೆಯದಾಗಿ ಹರಾಮ್-ಹಲಾಲ್ (ಧರ್ಮನಿಷಿದ್ಧ-ಧರ್ಮ ಸಮ್ಮತ)ಗಳ ವಿಷಯದಲ್ಲಿ ಸ್ವಯಂ ಸ್ವತಂತ್ರರಾಗದಿರಿ. ಅಲ್ಲಾಹನು ನಿಷಿದ್ಧಗೊಳಿಸಿದವುಗಳೇ ವಾಸ್ತವದಲ್ಲಿ ನಿಷಿದ್ಧವಾಗಿವೆ. ಅಲ್ಲಾಹನು ಧರ್ಮಸಮ್ಮತ ಗೊಳಿಸಿದವುಗಳೇ ವಾಸ್ತವದಲ್ಲಿ ಧರ್ಮಸಮ್ಮತವಾಗಿದೆ. ನಿಮ್ಮಿಚ್ಛೆಗೆ ಅನುಸಾರ ಯಾವುದನ್ನು ಬೇಕಾದರೂ ಧರ್ಮಸಮ್ಮತ ಮತ್ತು ಧರ್ಮನಿಷಿದ್ಧಗೊಳಿಸಿದರೆ ನೀವು ದೇವನಿಯಮದ ಬದಲು ಸ್ವೇಚ್ಛೆಯನ್ನು ಅನುಸರಿಸಿದಂತಾಗುವುದು. ಎರಡನೆಯದಾಗಿ ಕ್ರೈಸ್ತ ಸನ್ಯಾಸಿಗಳು, ಹಿಂದೂ ಯೋಗಿಗಳು, ಬೌದ್ಧ ಭಿಕ್ಷುಗಳು ಮತ್ತು ಪೌರಾತ್ಯ ಸೂಫಿ ಸಂತರಂತೆ ಸನ್ಯಾಸ, ಇಂದ್ರಿಯ ಸುಖಗಳಿಂದ ಪಲಾಯನ ಮಾಡುವ ಮಾರ್ಗವನ್ನು ಅನುಸರಿಸಬೇಡಿರಿ.

ಮತ್ತು ಹದಮೀರಬೇಡಿರಿ. ಅಲ್ಲಾಹನಿಗೆ, ಅತಿರೇಕವೆಸಗುವವರು ಎಷ್ಟು ಮಾತ್ರಕ್ಕೂ ಮೆಚ್ಚುಗೆಯವರಲ್ಲ.

أَحَلَّ اللَّهُ لَكُمْ وَلَا تَعْتَدُوا ۚ إِنَّ اللَّهَ لَا يُحِبُّ الْمُعْتَدِينَ ﴿٨٧﴾

88. ಅಲ್ಲಾಹನು ನಿಮಗೆ ನೀಡಿರುವ 'ಧರ್ಮಸಮ್ಮತ' ಮತ್ತು ಶುದ್ಧ ಆಹಾರವನ್ನು ಉಣ್ಣಿರಿ, ಕುಡಿಯಿರಿ ಮತ್ತು ಯಾವ ಅಲ್ಲಾಹನ ಮೇಲೆ ನೀವು ವಿಶ್ವಾಸವಿರಿಸಿರುವಿರೋ ಅವನ ಆಜ್ಞೋಲ್ಲಂಘನೆ ಯಿಂದ ದೂರವಿರಿ.

وَكُلُوا مِمَّا رَزَقَكُمُ اللَّهُ حَلَالًا طَيِّبًا ۚ وَاتَّقُوا اللَّهَ الَّذِي أَنتُم بِهِ مُؤْمِنُونَ ﴿٨٨﴾

89. ನೀವು ಮಾಡುವ ಅರ್ಥವಿಲ್ಲದ ಶಪಥಗಳಿಗಾಗಿ ಅಲ್ಲಾಹನು ನಿಮ್ಮನ್ನು ಹಿಡಿಯುವುದಿಲ್ಲ. ಆದರೆ ನೀವು ಉದ್ದೇಶಪೂರ್ವಕವಾಗಿ ಮಾಡುವ ಶಪಥಗಳ ಕುರಿತು ಅವನು ಅಗತ್ಯವಾಗಿ ವಿಚಾರಣೆ ನಡೆಸುವನು. (ಇಂತಹ ಶಪಥಗಳನ್ನು ಮುರಿದುದಕ್ಕೆ) ಪ್ರಾಯಶ್ಚಿತ್ತ ವಾಗಿ ಹತ್ತು ಮಂದಿ ದರಿದ್ರರಿಗೆ, ನೀವು ನಿಮ್ಮ ಮಕ್ಕಳು ಮರಿಗಳಿಗೆ ಕೊಡುವಂತಹ ಮಧ್ಯಮ ತರಗತಿಯ ಊಟ ಕೊಡಿರಿ ಅಥವಾ ಅವರಿಗೆ ಬಟ್ಟೆಯುಡಿಸಿರಿ ಅಥವಾ ಒಬ್ಬ ಗುಲಾಮನನ್ನು ವಿಮೋಚನೆಗೊಳಿಸಿರಿ. ಇದಕ್ಕೆ ಬೇಕಾದ ಸಾಮರ್ಥ್ಯ ಇಲ್ಲದವನು ಮೂರು ದಿನಗಳ ಉಪವಾಸ ವ್ರತವನ್ನಾಚರಿಸಬೇಕು. ನೀವು ಶಪಥ ಮಾಡಿಕೊಂಡು ಅದನ್ನು ಮುರಿದುದಕ್ಕಾಗಿ ನಿಮ್ಮ ಶಪಥಗಳಿಗೆ ಪ್ರಾಯಶ್ಚಿತ್ತವಿದು. ನಿಮ್ಮ ಶಪಥಗಳನ್ನು ಪಾಲಿಸಿರಿ. ಈ ರೀತಿ ನೀವು ಕೃತಜ್ಞತೆ ಸಲ್ಲಿಸುವವರಾಗಬಹುದೆಂದು ಅಲ್ಲಾಹನು ತನ್ನ ಆದೇಶಗಳನ್ನು ನಿಮಗೆ ವಿವರಿಸುತ್ತಾನೆ.

لَا يُؤَاخِذُكُمُ اللَّهُ بِاللَّغْوِ فِي أَيْمَانِكُمْ وَلَٰكِن يُؤَاخِذُكُم بِمَا عَقَّدتُّمُ الْأَيْمَانَ ۖ فَكَفَّارَتُهُ إِطْعَامُ عَشَرَةِ مَسَاكِينَ مِنْ أَوْسَطِ مَا تُطْعِمُونَ أَهْلِيكُمْ أَوْ كِسْوَتُهُمْ أَوْ تَحْرِيرُ رَقَبَةٍ ۖ فَمَن لَّمْ يَجِدْ فَصِيَامُ ثَلَاثَةِ أَيَّامٍ ۚ ذَٰلِكَ كَفَّارَةُ أَيْمَانِكُمْ إِذَا حَلَفْتُمْ ۚ وَاحْفَظُوا أَيْمَانَكُمْ ۚ كَذَٰلِكَ يُبَيِّنُ اللَّهُ لَكُمْ آيَاتِهِ لَعَلَّكُمْ تَشْكُرُونَ ﴿٨٩﴾

90. ಓ ಸತ್ಯವಿಶ್ವಾಸಿಗಳೇ, ಮದ್ಯ, ಜೂಜು, 'ಬಲಿ ಪೀಠಗಳು' ಮತ್ತು 'ದಾಳ ಹಾಕುವುದು' ಇವೆಲ್ಲ ಹೊಲಸು ಪೈಶಾಚಿಕ ಕೃತ್ಯಗಳಾಗಿವೆ. ಅವುಗಳನ್ನು ವರ್ಜಿಸಿರಿ, ನಿಮಗೆ ಯಶಸ್ಸು ಲಭಿಸುವುದೆಂದು ನಿರೀಕ್ಷಿಸಬಹುದು.[47]

يَا أَيُّهَا الَّذِينَ آمَنُوا إِنَّمَا الْخَمْرُ وَالْمَيْسِرُ وَالْأَنصَابُ وَالْأَزْلَامُ رِجْسٌ مِّنْ عَمَلِ الشَّيْطَانِ فَاجْتَنِبُوهُ لَعَلَّكُمْ تُفْلِحُونَ ﴿٩٠﴾

91. ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು

إِنَّمَا يُرِيدُ الشَّيْطَانُ أَن يُوقِعَ بَيْنَكُمُ الْعَدَاوَةَ وَالْبَغْضَاءَ فِي الْخَمْرِ وَالْمَيْسِرِ وَيَصُدَّكُمْ

47. ಮದ್ಯಪಾನ ನಿಷೇಧದ ಕುರಿತು ಇದಕ್ಕೆ ಮೊದಲು ಎರಡು ಆದೇಶಗಳು ಬಂದಿದ್ದುವು. ಅವು ಅಲ್‌ಬಕರಃ ಅಧ್ಯಾಯದ 219 ಮತ್ತು ಅನ್ನಿಸಾ ಅಧ್ಯಾಯದ 43ನೆಯ ಸೂಕ್ತದಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಈ ಕೊನೆಯ ಆದೇಶ ಬರುವುದಕ್ಕೆ ಮೊದಲು ಪ್ರವಾದಿವರ್ಯರು(ಸ) ತಮ್ಮ ಪ್ರವಚನವೊಂದರಲ್ಲಿ ಮದ್ಯಪಾನ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ಅಪ್ರಿಯವಾಗಿದೆ, ಅದನ್ನು ನಿಷೇಧಿಸುವಂತಹ ಕಟ್ಟುನಿಟ್ಟಿನ ಆಜ್ಞೆ ಬಂದರೆ ಆಶ್ಚರ್ಯವಿಲ್ಲ. ಆದ್ದರಿಂದ ಮದ್ಯವನ್ನು ಹೊಂದಿರುವವರು ಅದನ್ನು ಮಾರಾಟ ಮಾಡಲಿ ಎಂದು ಜನರನ್ನು ಎಚ್ಚರಿಸಿದ್ದರು. ಅದರ ಸ್ವಲ್ಪ ಕಾಲದ ನಂತರ ಈ ಸೂಕ್ತ ಅವತೀರ್ಣಗೊಂಡಿತು. ಅನಂತರ ಪ್ರವಾದಿವರ್ಯರು(ಸ) ಮದ್ಯವನ್ನು ಹೊಂದಿರುವವರು ಅದನ್ನು ಕುಡಿಯುವುದಾಗಲಿ ಮಾರುವುದಾಗಲಿ ಸಲ್ಲದು, ಅದನ್ನು ನಾಶಪಡಿಸಬೇಕು ಎಂದು ಆದೇಶ ಹೊರಡಿಸಿದರು. ಆದ್ದರಿಂದ ಮದೀನಾದ ಚರಂಡಿಗಳಲ್ಲಿ ಮದ್ಯಹರಿಸಲ್ಪಟ್ಟಿತು.

عَنْ ذِكْرِ اللَّهِ وَعَنِ الصَّلَاةِ ۖ فَهَلْ أَنْتُمْ مُنْتَهُونَ ﴿٩١﴾

ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?

وَأَطِيعُوا اللَّهَ وَأَطِيعُوا الرَّسُولَ وَاحْذَرُوا ۚ فَإِنْ تَوَلَّيْتُمْ فَاعْلَمُوا أَنَّمَا عَلَىٰ رَسُولِنَا الْبَلَاغُ الْمُبِينُ ﴿٩٢﴾

92. ಅಲ್ಲಾಹ್ ಮತ್ತು ಅವನ ಸಂದೇಶವಾಹಕನ ಮಾತನ್ನು ಕೇಳಿರಿ ಮತ್ತು (ಪ್ರಸ್ತುತ ಕೆಡುಕುಗಳನ್ನು) ವರ್ಜಿಸಿರಿ. ಆದರೆ ನೀವು ಆಜ್ಞೋಲ್ಲಂಘನೆ ಮಾಡಿದರೆ ನಮ್ಮ ಸಂದೇಶವಾಹಕರಿಗೆ ಸುಸ್ಪಷ್ಟ ಆಜ್ಞೆಗಳನ್ನು ತಲಪಿಸುವ ಹೊಣೆಗಾರಿಕೆ ಮಾತ್ರವಿತ್ತೆಂಬುದನ್ನು ಅರಿತುಕೊಳ್ಳಿರಿ.

لَيْسَ عَلَى الَّذِينَ آمَنُوا وَعَمِلُوا الصَّالِحَاتِ جُنَاحٌ فِيمَا طَعِمُوا إِذَا مَا اتَّقَوْا وَآمَنُوا وَعَمِلُوا الصَّالِحَاتِ ثُمَّ اتَّقَوْا وَآمَنُوا ثُمَّ اتَّقَوْا وَأَحْسَنُوا ۗ وَاللَّهُ يُحِبُّ الْمُحْسِنِينَ ﴿٩٣﴾

93. ಸತ್ಯವಿಶ್ವಾಸವಿರಿಸಿ ಸತ್ಕರ್ಮಗಳನ್ನು ಕೈಗೊಳ್ಳತೊಡಗಿದವರು ಹಿಂದೆ ಏನನ್ನು ಉಂಡಿದ್ದರೂ ಅಥವಾ ಕುಡಿದಿದ್ದರೂ ಮುಂದೆ 'ನಿಷಿದ್ಧ' ಎಂದು ವಿಧಿಸಲ್ಪಟ್ಟ ವಸ್ತುಗಳಿಂದ ದೂರವಿದ್ದರೆ ಹಾಗೂ 'ಸತ್ಯವಿಶ್ವಾಸ'ದಲ್ಲೇ ಸ್ಥಿರವಾಗಿದ್ದರೆ, ಸತ್ಕರ್ಮಗಳನ್ನು ಮಾಡಿದರೆ, ಅನಂತರ ಯಾವ ಯಾವ ವಸ್ತುವಿನಿಂದ ತಡೆಯಲಾಗುವುದೋ ಅದರಿಂದ ತಡೆದು ನಿಂತರೆ, ಅಲ್ಲಾಹನ 'ಆಜ್ಞೆ'ಯನ್ನು ಸ್ವೀಕರಿಸಿದರೆ ಮತ್ತು ಆ ಬಳಿಕ ದೇವಭಯದೊಂದಿಗೆ ಪುಣ್ಯ ಕಾರ್ಯನಿರತ ರಾದರೆ ದೋಷವಿಲ್ಲ. ಅಲ್ಲಾಹನು ಸಜ್ಜನರನ್ನು ಪ್ರೀತಿಸುತ್ತಾನೆ.

يَا أَيُّهَا الَّذِينَ آمَنُوا لَيَبْلُوَنَّكُمُ اللَّهُ بِشَيْءٍ مِنَ الصَّيْدِ تَنَالُهُ أَيْدِيكُمْ وَرِمَاحُكُمْ لِيَعْلَمَ اللَّهُ مَنْ يَخَافُهُ بِالْغَيْبِ ۚ فَمَنِ اعْتَدَىٰ بَعْدَ ذَٰلِكَ فَلَهُ عَذَابٌ أَلِيمٌ ﴿٩٤﴾

94. ಓ ಸತ್ಯವಿಶ್ವಾಸಿಗಳೇ, ನಿಮ್ಮಲ್ಲಿ ಯಾರು ಅಲ್ಲಾಹನನ್ನು ಪರೋಕ್ಷವಾಗಿಯೂ ಭಯಪಡುತ್ತಾನೆಂದು ನೋಡಲಿಕ್ಕಾಗಿ ಅವನು ನಿಮ್ಮ ಕೈಗಳ ಮತ್ತು ಭರ್ಜಿಗಳ ಹೊಡೆತದಲ್ಲಿರುವ ಬೇಟೆಗಳ ಮೂಲಕ ನಿಮ್ಮನ್ನು ಕಠಿಣತರ ಪರೀಕ್ಷೆಗೊಳಪಡಿಸುವನು. ಈ ಎಚ್ಚರಿಕೆಯ ಅನಂತರವೂ ಅಲ್ಲಾಹನು ನಿಶ್ಚಯಿಸಿದ ಮೇರೆಯನ್ನು ಮೀರುವಾತನಿಗೆ ವೇದನಾಯುಕ್ತ ಶಿಕ್ಷೆ ಕಾದಿದೆ.

يَا أَيُّهَا الَّذِينَ آمَنُوا لَا تَقْتُلُوا الصَّيْدَ وَأَنْتُمْ حُرُمٌ ۚ وَمَنْ قَتَلَهُ مِنْكُمْ مُتَعَمِّدًا فَجَزَاءٌ مِثْلُ مَا قَتَلَ مِنَ النَّعَمِ يَحْكُمُ بِهِ ذَوَا عَدْلٍ مِنْكُمْ هَدْيًا بَالِغَ الْكَعْبَةِ

95. ಓ ಸತ್ಯವಿಶ್ವಾಸಿಗಳೇ ಇಹ್ರಾಮಿನ ಸ್ಥಿತಿಯಲ್ಲಿ ಬೇಟೆಪ್ರಾಣಿಗಳನ್ನು[48] ಕೊಲ್ಲಬೇಡಿರಿ. ನಿಮ್ಮಲ್ಲಾರಾದರೂ ಉದ್ದೇಶಪೂರ್ವಕವಾಗಿ ಹೀಗೆ ಮಾಡಿಬಿಟ್ಟರೆ, ಅವನು ತಾನು ಮಾಡಿದ ಕರ್ಮದ ಸವಿಯನ್ನು ಅನುಭವಿಸುವಂತಾಗಲು ನಿಮ್ಮಲ್ಲಿನ ಇಬ್ಬರು ನ್ಯಾಯಶಾಲಿಗಳು ತೀರ್ಮಾನಿಸುವಂತೆ ಅವನು ಕೊಂದ ಪ್ರಾಣಿಗೆ ಸಮಾನವಾದ

48. ಇಹ್ರಾಮ್‌ನ ಸಂದರ್ಭದಲ್ಲಿ ಸ್ವತಃ ಬೇಟೆಯಾಡುವುದು ಅಥವಾ ಬೇಟೆಯಾಡುವವನಿಗೆ ನೆರವಾಗುವುದು ನಿಷಿದ್ಧ. ಇಹ್ರಾಮ್ ಧರಿಸಿರುವವರಿಗಾಗಿಯೇ ಬೇಟೆಯಾಡಲಾಗಿದ್ದರೂ ಅದರ ಸೇವನೆ ಇಹ್ರಾಮಿನಲ್ಲಿರುವವನಿಗೆ ಧರ್ಮಸಮ್ಮತವಲ್ಲ. ಆದರೆ ಯಾರಾದರೂ ತನಗಾಗಿ ಬೇಟೆಯಾಡಿದ್ದು, ಅದರ ಒಂದು ಭಾಗವನ್ನು ಇಹ್ರಾಮಿನಲ್ಲಿರುವವನ ಸೇವನೆಗೆಂದು ಉಡುಗೊರೆಯ ರೂಪದಲ್ಲಿ ಕಳುಹಿಸಿದ್ದರೆ ಅದನ್ನು ಸೇವಿಸುವುದರಲ್ಲಿ ಅಭ್ಯಂತರವಿಲ್ಲ. ಅಪಾಯಕಾರಿ ಪ್ರಾಣಿಗಳು ಈ ಸಾಮಾನ್ಯ ಆದೇಶದಿಂದ ಹೊರತಾಗಿವೆ. ಉದಾ: ಸರ್ಪ, ಚೇಳು, ಹುಚ್ಚು ನಾಯಿ ಮತ್ತಿತರ ಅಪಾಯಕರ ಜಂತುಗಳನ್ನು ಇಹ್ರಾಮಿನ ಸಂದರ್ಭದಲ್ಲೂ ಕೊಲ್ಲಬಹುದಾಗಿದೆ.

ಒಂದು ಬಲಿಪಶುವನ್ನು ಕಾಣಿಕೆಯಾಗಿ ಕೊಡಬೇಕಾಗುವುದು ಮತ್ತು ಈ ಕಾಣಿಕೆಯು 'ಕಅಬಾ'ಕ್ಕೆ ತಲಪಿಸಲ್ಪಡುವುದು. ಇಲ್ಲವಾದರೆ ಅವನು ಮಾಡಿದುದರ ಫಲವುಣ್ಣುವಂತಾಗಲು ಈ ಪಾಪದ ಪ್ರಾಯಶ್ಚಿತ್ತ ರೂಪದಲ್ಲಿ ಕೆಲವು ಮಂದಿ ದರಿದ್ರರಿಗೆ ಊಟ ಕೊಡಬೇಕಾಗುವುದು ಅಥವಾ ಅದಕ್ಕನುಗುಣವಾಗಿ ಉಪವಾಸವಿಡಬೇಕಾಗುವುದು. ಹಿಂದೆ ಆಗಿ ಹೋದುದನ್ನು ಅಲ್ಲಾಹನು ಕ್ಷಮಿಸಿಬಿಟ್ಟನು. ಆದರೆ, ಇನ್ನು ಯಾರಾದರೂ ಈ ಕೃತ್ಯವನ್ನು ಪುನರಾವರ್ತಿಸಿದರೆ, ಅಲ್ಲಾಹನು ಅವನಿಂದ ಪ್ರತೀಕಾರ ಪಡೆದೇ ತೀರುವನು. ಅಲ್ಲಾಹನು ಮಹಾ ಪ್ರತಾಪಶಾಲಿಯೂ ಪ್ರತೀಕಾರ ಪಡೆಯಲು ಶಕ್ತನೂ ಆಗಿರುತ್ತಾನೆ.

أَوْ كَفَّارَةٌ طَعَامُ مَسَاكِينَ أَوْ عَدْلُ ذَٰلِكَ صِيَامًا لِّيَذُوقَ وَبَالَ أَمْرِهِ ۗ عَفَا اللَّهُ عَمَّا سَلَفَ ۚ وَمَنْ عَادَ فَيَنتَقِمُ اللَّهُ مِنْهُ ۗ وَاللَّهُ عَزِيزٌ ذُو انتِقَامٍ ﴿٩٥﴾

96. ಸಮುದ್ರದ ಬೇಟೆ ಮತ್ತು ಅದನ್ನು ತಿನ್ನುವುದು ನಿಮಗೆ 'ಧರ್ಮಸಮ್ಮತ'ಗೊಳಿಸಲ್ಪಟ್ಟಿದೆ. ನೀವು ತಂಗಿದಲ್ಲಿಯೂ ಅದನ್ನುಣ್ಣಬಹುದು. ಯಾತ್ರಿಕರ ತಂಡಕ್ಕಾಗಿಯೂ ಅದನ್ನು ಆಹಾರವಾಗಿ ಮಾಡಿಕೊಳ್ಳಬಹುದು. ಆದರೆ ನೀವು ಇಹ್ರಾಮಿನ ಸ್ಥಿತಿಯಲ್ಲಿರುವ ತನಕ ಭೂಭಾಗದ ಬೇಟೆಯು ನಿಮಗೆ 'ನಿಷಿದ್ಧ'ಗೊಳಿಸಲ್ಪಟ್ಟಿದೆ. ಆದುದರಿಂದ ಯಾವಾತನ ಸನ್ನಿಧಿಯಲ್ಲಿ ನಿಮ್ಮೆಲ್ಲರನ್ನು ಸುತ್ತುವರಿದು ಹಾಜರುಪಡಿಸಲಾಗುವುದೋ ಆ ಅಲ್ಲಾಹನ ಅವಿಧೇಯತೆಯಿಂದ ದೂರವಿರಿ.

أُحِلَّ لَكُمْ صَيْدُ الْبَحْرِ وَطَعَامُهُ مَتَاعًا لَّكُمْ وَلِلسَّيَّارَةِ ۖ وَحُرِّمَ عَلَيْكُمْ صَيْدُ الْبَرِّ مَا دُمْتُمْ حُرُمًا ۗ وَاتَّقُوا اللَّهَ الَّذِي إِلَيْهِ تُحْشَرُونَ ﴿٩٦﴾

97. ಅಲ್ಲಾಹನು ಪ್ರತಿಷ್ಠಿತ ಭವನವಾದ 'ಕಅಬಾ'ವನ್ನು ಜನರ ಪಾಲಿಗೆ (ಸಾಮೂಹಿಕ ಜೀವನವನ್ನು) ನೆಲೆನಿಲ್ಲಿಸುವ ಸಾಧನವಾಗಿ ಮಾಡಿದನು ಮತ್ತು ಪ್ರತಿಷ್ಠಿತ ತಿಂಗಳನ್ನೂ ಬಲಿಪಶುಗಳನ್ನೂ ಕೊರಳಪಟ್ಟಿಗಳನ್ನೂ (ಈ ಕಾರ್ಯಕ್ಕೆ ಸಹಾಯಕವನ್ನಾಗಿ ಮಾಡಿದನು.) ಇದು ಅಲ್ಲಾಹನು ಭೂಮಿ-ಆಕಾಶಗಳ ಸಕಲ ವೃತ್ತಾಂತಗಳನ್ನು ಅರಿಯುವವನೆಂದೂ ಅವನಿಗೆ ಎಲ್ಲ ವಸ್ತುಗಳ ಪರಿಜ್ಞಾನವಿರುವುದೆಂದೂ ನೀವು ತಿಳಿದುಕೊಳ್ಳಲಿಕ್ಕಾಗಿರುತ್ತದೆ.

جَعَلَ اللَّهُ الْكَعْبَةَ الْبَيْتَ الْحَرَامَ قِيَامًا لِّلنَّاسِ وَالشَّهْرَ الْحَرَامَ وَالْهَدْيَ وَالْقَلَائِدَ ۚ ذَٰلِكَ لِتَعْلَمُوا أَنَّ اللَّهَ يَعْلَمُ مَا فِي السَّمَاوَاتِ وَمَا فِي الْأَرْضِ وَأَنَّ اللَّهَ بِكُلِّ شَيْءٍ عَلِيمٌ ﴿٩٧﴾

98. ಅಲ್ಲಾಹನು ಶಿಕ್ಷೆ ನೀಡುವುದರಲ್ಲಿಯೂ ಅತ್ಯುಗ್ರನು ಮತ್ತು ಅದರೊಂದಿಗೆ ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ.

اعْلَمُوا أَنَّ اللَّهَ شَدِيدُ الْعِقَابِ وَأَنَّ اللَّهَ غَفُورٌ رَّحِيمٌ ﴿٩٨﴾

99. ಸಂದೇಶವಾಹಕರ ಮೇಲೆ ಸಂದೇಶವನ್ನು ತಲುಪಿಸುವ ಹೊಣೆ ಮಾತ್ರವಿದೆ. ಮುಂದೆ ನಿಮ್ಮ ಅಂತರಂಗ ಬಹಿರಂಗಗಳ ಸಕಲ ಸ್ಥಿತಿಗಳನ್ನು ತಿಳಿಯುವವನು ಅಲ್ಲಾಹನು.

مَّا عَلَى الرَّسُولِ إِلَّا الْبَلَاغُ ۗ وَاللَّهُ يَعْلَمُ مَا تُبْدُونَ وَمَا تَكْتُمُونَ ﴿٩٩﴾

100. ಓ ಸಂದೇಶವಾಹಕರೇ, ಅವರೊಡನೆ ಹೇಳಿರಿ, ಅಶುದ್ಧದ ಹೆಚ್ಚಳವು ನಿಮಗೆ ಎಷ್ಟು ಮೋಹಕವಾಗಿ ಕಂಡರೂ ಶುದ್ಧ ಮತ್ತು ಅಶುದ್ಧಗಳು ಎಷ್ಟಕ್ಕೂ ಸಮಾನವಲ್ಲ.[49] ಆದುದರಿಂದ ಓ ಬುದ್ಧಿಜೀವಿಗಳೇ, ಅಲ್ಲಾಹನ ಆಜ್ಞೋಲ್ಲಂಘನೆಯಿಂದ ದೂರವಿರಿ. ಇದರಿಂದ ನಿಮಗೆ ವಿಜಯ ಪ್ರಾಪ್ತವಾಗಬಹುದೆಂದು ನಿರೀಕ್ಷಿಸಬಹುದು.

قُلْ لَّا يَسْتَوِى الْخَبِيْثُ وَالطَّيِّبُ وَلَوْ أَعْجَبَكَ كَثْرَةُ الْخَبِيْثِ ۚ فَاتَّقُوا اللّٰهَ يٰٓأُولِى الْأَلْبَابِ لَعَلَّكُمْ تُفْلِحُوْنَ ﴿١٠٠﴾

101. ಓ ಸತ್ಯವಿಶ್ವಾಸಿಗಳೇ, ಬಹಿರಂಗಗೊಳಿಸಿದರೆ ನಿಮಗೆ ಅಪ್ರಿಯ ವಾಗಬಹುದಾದಂಥ ವಿಷಯಗಳ ಬಗ್ಗೆ ಪ್ರಶ್ನಿಸಬೇಡಿ.[50] ಆದರೆ, ಕುರ್‌ಆನ್ ಅವತೀರ್ಣಗೊಳ್ಳುತ್ತಿರುವಾಗ ಅಂತಹವುಗಳ ಕುರಿತು ಕೇಳಿದರೆ, ಅವು ನಿಮಗೆ ಪ್ರಕಟಗೊಳಿಸಲ್ಪಡುವುವು. ನೀವು ಇಷ್ಟರ ತನಕ ಮಾಡಿರುವುದನ್ನು ಅಲ್ಲಾಹನು ಕ್ಷಮಿಸಿಬಿಟ್ಟನು. ಅವನು ಕ್ಷಮಾಶೀಲನೂ ಸಹನಾಶೀಲನೂ ಆಗಿರುತ್ತಾನೆ.

يٰٓأَيُّهَا الَّذِيْنَ اٰمَنُوْا لَا تَسْـَٔلُوْا عَنْ أَشْيَآءَ إِنْ تُبْدَ لَكُمْ تَسُؤْكُمْ ۚ وَإِنْ تَسْـَٔلُوْا عَنْهَا حِيْنَ يُنَزَّلُ الْقُرْاٰنُ تُبْدَ لَكُمْ ۗ عَفَا اللّٰهُ عَنْهَا ۗ وَاللّٰهُ غَفُوْرٌ حَلِيْمٌ ﴿١٠١﴾

102. ನಿಮಗಿಂತ ಮುಂಚೆ ಒಂದು ಜನಾಂಗವು ಇದೇ ತರದ ಪ್ರಶ್ನೆ ಗಳನ್ನು ಕೇಳಿತ್ತು. ಮುಂದೆ ಅವರು ಈ ವಿಷಯಗಳಿಂದಾಗಿಯೇ 'ಸತ್ಯನಿಷೇಧ'ದಲ್ಲಿ ಸಿಲುಕಿಬಿಟ್ಟರು.

قَدْ سَأَلَهَا قَوْمٌ مِّنْ قَبْلِكُمْ ثُمَّ أَصْبَحُوْا بِهَا كٰفِرِيْنَ ﴿١٠٢﴾

103. ಅಲ್ಲಾಹನು ಯಾವುದೇ 'ಬಹೀರಃ'ವನ್ನಾಗಲೀ 'ಸಾಯಿಬಃ 'ವನ್ನಾಗಲೀ 'ವಸೀಲ'ವನ್ನಾಗಲೀ 'ಹಾಮ'ವನ್ನಾಗಲೀ ನಿಶ್ಚ ಯಿಸಿಲ್ಲ.[51] ಆದರೆ ಈ ಸತ್ಯನಿಷೇಧಿಗಳು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುತ್ತಾರೆ ಮತ್ತು ಅವರಲ್ಲಿ ಹೆಚ್ಚಿನವರು (ಇಂತಹ ಭ್ರಾಮಕ ವಿಷಯಗಳನ್ನು ನಂಬುವ) ಬುದ್ಧಿಹೀನರು.

مَا جَعَلَ اللّٰهُ مِنْۢ بَحِيْرَةٍ وَّلَا سَآئِبَةٍ وَّلَا وَصِيْلَةٍ وَّلَا حَامٍ ۙ وَّلٰكِنَّ الَّذِيْنَ كَفَرُوْا يَفْتَرُوْنَ عَلَى اللّٰهِ الْكَذِبَ ۖ وَأَكْثَرُهُمْ لَا يَعْقِلُوْنَ ﴿١٠٣﴾

49. ಈ ಸೂಕ್ತ, ಬೆಲೆ ಮತ್ತು ಮೌಲ್ಯಗಳ ವಿಶಿಷ್ಟ ಮಾನದಂಡವನ್ನು ನಮ್ಮ ಮುಂದಿರಿಸುತ್ತದೆ. ಇದು ಮೇಲ್ನೋಟಕ್ಕೆ ಮಾನವ ನಿರ್ಧರಿಸುವ ಮಾನದಂಡಕ್ಕಿಂತ ತೀರಾ ಭಿನ್ನವಾಗಿದೆ. ಮೇಲ್ನೋಟಕ್ಕೆ ನೂರು ರೂಪಾಯಿ ಖಂಡಿತವಾಗಿಯೂ ಐದು ರೂಪಾಯಿಗಿಂತ ಹೆಚ್ಚು ಬೆಲೆ ಬಾಳುವುದೆಂದು ತೋರುತ್ತದೆ. ಏಕೆಂದರೆ ನೂರು ಮತ್ತು ಐದರ ನಡುವೆ ದೊಡ್ಡ ವ್ಯತ್ಯಾಸವಿದೆ. ಆದರೆ ಈ ಸೂಕ್ತದ ಪ್ರಕಾರ ನೂರು ರೂಪಾಯಿಗಳನ್ನು ದೇವನ ಆಜ್ಞೋಲ್ಲಂಘನೆಯ ಮೂಲಕ ಸಂಪಾದಿಸಲಾಗಿದ್ದರೆ ಅದು ಅಶುದ್ಧವಾಗಿದೆ. ದೇವನ ಅನುಸರಣೆಯೊಂದಿಗೆ ಐದು ರೂಪಾಯಿಯನ್ನು ಸಂಪಾದಿಸಲಾಗಿದ್ದರೆ ಅದು ಶುದ್ಧವಾಗಿದೆ. ಅಶುದ್ಧವಾದುದು ಪ್ರಮಾಣದಲ್ಲಿ ಎಷ್ಟೇ ಹೆಚ್ಚಿದ್ದರೂ ಅದು ಶುದ್ಧವಾದುದಕ್ಕೆ ತುಲ್ಯವಾಗಲಾರದು.

50. ಪ್ರವಾದಿವರ್ಯರೊಂದಿಗೆ(ಸ) ಕೆಲವರು ಚಿತ್ರವಿಚಿತ್ರವಾದ ನಿರರ್ಥಕ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅವು ಧಾರ್ಮಿಕವಾಗಿಯೂ ಲೌಕಿಕವಾಗಿಯೂ ನಿರರ್ಥಕವಾದ ಪ್ರಶ್ನೆಗಳಾಗಿದ್ದವು. ಆದ್ದರಿಂದ ಈ ಎಚ್ಚರಿಕೆ ನೀಡಲಾಗಿದೆ.

51. ಇದು ಅರಬರಲ್ಲಿದ್ದ ಮೂಢನಂಬಿಕೆಗಳ ಪ್ರಸ್ತಾಪವಾಗಿದೆ. ಬಹೀರಃ:- ಐದು ಬಾರಿ ಮರಿ ಹಾಕಿದ ಮತ್ತು ಕೊನೆಯಲ್ಲಿ ಗಂಡು ಮರಿಗೆ ಜನ್ಮ ನೀಡಿದ ಒಂಟೆಯನ್ನು ಅವರು 'ಬಹೀರ' ಎನ್ನುತ್ತಿದ್ದರು. ಅಜ್ಞಾನ ಕಾಲದಲ್ಲಿ ಅರಬರು ಅಂತಹ ಒಂಟೆಯ ಕಿವಿಯನ್ನು ಕತ್ತರಿಸಿ ಅದನ್ನು ಸ್ವತಂತ್ರವಾಗಿ ಬಿಟ್ಟು ಬಿಡುತ್ತಿದ್ದರು. ಅನಂತರ ಯಾರೂ ಅದರ ಮೇಲೆ ಸವಾರಿ ಮಾಡುವುದಾಗಲಿ, ಹಾಲು ಕರೆಯುವುದಾಗಲಿ, ಉಣ್ಣೆಯನ್ನು ತೆಗೆಯುವುದಾಗಲಿ ಮಾಡುತ್ತಿರಲಿಲ್ಲ. ಯಾವ ಹೊಲ ಅಥವಾ ಹುಲ್ಲುಗಾವಲಿನ ಹುಲ್ಲು ಮೇಯಲಿಕ್ಕೂ ಎಲ್ಲಿಂದ ಬೇಕಾದರೂ ನೀರು ಕುಡಿಯಲಿಕ್ಕೂ ಅದಕ್ಕೆ ಸ್ವಾತಂತ್ರ್ಯವಿತ್ತು. ಸಾಯಿಬಃ- ಯಾವುದಾದರೂ ಆಕಾಂಕ್ಷೆ ಈಡೇರಿದ, ರೋಗ ಶಮನವಾದ

104. "ಅಲ್ಲಾಹನು ಅವತೀರ್ಣಗೊಳಿಸಿದ ಶಾಸನದ ಕಡೆಗೂ ಆತನ ಸಂದೇಶವಾಹಕರ ಕಡೆಗೂ ಬನ್ನಿರಿ" ಎಂದು ಅವರೊಡನೆ ಹೇಳಿದಾಗ ಅವರು, "ನಾವು ನಮ್ಮ ಪೂರ್ವಿಕರನ್ನು ಯಾವ ಮಾರ್ಗದಲ್ಲಿ ಕಂಡಿದ್ದೇವೋ ಅದೇ ನಮಗೆ ಸಾಕು" ಎಂದು ಹೇಳುತ್ತಾರೆ. ಪೂರ್ವಿಕರು ಏನೂ ಅರಿತಿರದಿದ್ದರೂ ಮತ್ತು ಅವರಿಗೆ ಸನ್ಮಾರ್ಗದ ಅರಿವೇ ಇಲ್ಲದಿದ್ದರೂ ಇವರು ಅವರನ್ನೇ ಅನುಕರಿಸುತ್ತಲಿರುವರೇ?

وَإِذَا قِيلَ لَهُمْ تَعَالَوْا إِلَىٰ مَا أَنزَلَ اللَّهُ وَإِلَى الرَّسُولِ قَالُوا حَسْبُنَا مَا وَجَدْنَا عَلَيْهِ آبَاءَنَا ۚ أَوَلَوْ كَانَ آبَاؤُهُمْ لَا يَعْلَمُونَ شَيْئًا وَلَا يَهْتَدُونَ ﴿١٠٤﴾

105. ಓ ಸತ್ಯವಿಶ್ವಾಸಿಗಳೇ, ನೀವು ನಿಮ್ಮ ಬಗ್ಗೆ ಚಿಂತಿಸಿಕೊಳ್ಳಿರಿ. ನೀವು ಸ್ವತಃ ಸತ್ಪಥದಲ್ಲಿದ್ದರೆ ಇತರರ ಪಥಭ್ರಷ್ಟತೆಯಿಂದ ನಿಮಗೇನೂ ಕೇಡುಂಟಾಗದು.[52] ನಿಮಗೆಲ್ಲರಿಗೂ ಅಲ್ಲಾಹನ ಕಡೆಗೆ ಮರಳಿ ಸಾಗಲಿಕ್ಕಿದೆ. ನೀವೇನು ಮಾಡುತ್ತಿದ್ದಿರೆಂದು ಆಗ ಅವನು ನಿಮಗೆ ತೋರಿಸಿ ಕೊಡುವನು.

يَا أَيُّهَا الَّذِينَ آمَنُوا عَلَيْكُمْ أَنفُسَكُمْ ۖ لَا يَضُرُّكُم مَّن ضَلَّ إِذَا اهْتَدَيْتُمْ ۚ إِلَى اللَّهِ مَرْجِعُكُمْ جَمِيعًا فَيُنَبِّئُكُم بِمَا كُنتُمْ تَعْمَلُونَ ﴿١٠٥﴾

106. ಓ ಸತ್ಯವಿಶ್ವಾಸಿಗಳೇ, ನಿಮಗಾರಿಗಾದರೂ ಮರಣದ ಕಾಲ ಬಂದಾಗ ಮತ್ತು ಅವನು 'ಉಯಿಲು' ಮಾಡುತ್ತಿರುವಾಗ ನಿಮ್ಮ ಕೂಟದಿಂದ ಇಬ್ಬರು ನ್ಯಾಯಶೀಲರನ್ನು[53] ಸಾಕ್ಷಿ

يَا أَيُّهَا الَّذِينَ آمَنُوا شَهَادَةُ بَيْنِكُمْ إِذَا حَضَرَ أَحَدَكُمُ الْمَوْتُ حِينَ الْوَصِيَّةِ

ಅಥವಾ ಅಪಾಯದಿಂದ ಪಾರಾದ ಕಾರಣಕ್ಕಾಗಿ ಕೃತಜ್ಞತೆಯ ರೂಪದಲ್ಲಿ ಹರಕೆಗೆ ಬಿಡಲಾದ ಒಂಟೆಯನ್ನು ಸಾಯಿಬಃ ಎನ್ನಲಾಗುತ್ತದೆ. ಅಲ್ಲದೆ ಹತ್ತು ಬಾರಿ ಹೆಣ್ಣು ಮರಿಯನ್ನೇ ಹಾಕಿದ ಒಂಟೆಯನ್ನೂ ಸ್ವತಂತ್ರವಾಗಿ ಬಿಟ್ಟು ಬಿಡಲಾಗುತ್ತಿತ್ತು.

**ವಸೀಲ:-** ಆಡಿನ ಮೊದಲ ಮರಿ ಗಂಡಾಗಿದ್ದರೆ ಅದನ್ನು ದೇವರುಗಳ ಹೆಸರಲ್ಲಿ ಬಲಿಯರ್ಪಿಸಲಾಗುತ್ತಿತ್ತು. ಹೆಣ್ಣು ಮರಿಯಾದರೆ ಅದನ್ನು ಇಟ್ಟುಕೊಳ್ಳಲಾಗುತ್ತಿತ್ತು. ಹೆಣ್ಣು ಮತ್ತು ಗಂಡು ಮರಿಗಳೆರಡೂ ಒಟ್ಟಿಗೆ ಜನಿಸಿದರೆ ಗಂಡು ಮರಿಯನ್ನು ಬಲಿಯರ್ಪಿಸುವ ಬದಲು ದೇವರುಗಳ ಹೆಸರಲ್ಲಿ ಸ್ವತಂತ್ರವಾಗಿ ಬಿಟ್ಟು ಬಿಡುತ್ತಿದ್ದರು. ಇದರ ಹೆಸರೇ 'ವಸೀಲ.'

**ಹಾಮ್:-** ಒಂಟೆಯೊಂದರ ಮೊಮ್ಮರಿಯು ಸವಾರಿ ಮಾಡಲರ್ಹವಾಗುವಷ್ಟು ಬೆಳೆದು ನಿಂತರೆ ಆ ಮುದಿ ಒಂಟೆಯನ್ನು ಸ್ವತಂತ್ರವಾಗಿ ಬಿಟ್ಟು ಬಿಡಲಾಗುತ್ತಿತ್ತು. ಹಾಗೆಯೇ ಯಾವುದಾದರೂ ಗಂಡು ಒಂಟೆಯ ವೀರ್ಯದಿಂದ ಹತ್ತು ಮರಿಗಳು ಹುಟ್ಟಿದ್ದರೆ ಅದನ್ನೂ ಸ್ವತಂತ್ರಗೊಳಿಸಲಾಗುತ್ತಿತ್ತು.

52. ಅರ್ಥಾತ್- ಸದಾ ಇನ್ನೊಬ್ಬ ಏನು ಮಾಡುತ್ತಿದ್ದಾನೆ, ಯಾರ ವಿಶ್ವಾಸದಲ್ಲಿ ಎಂತಹ ದೋಷಗಳಿವೆ, ಯಾರಲ್ಲಿ ಎಂತಹ ದುಷ್ಕೃತ್ಯಗಳಿವೆ ಎಂಬಿತ್ಯಾದಿಗಳನ್ನು ನೋಡುವ ಬದಲು ವ್ಯಕ್ತಿ ಸ್ವತಃ ತಾನೇನು ಮಾಡುತ್ತಿದ್ದೇನೆ ಎಂದು ನೋಡಿಕೊಳ್ಳಬೇಕು. ಆದರೆ ವ್ಯಕ್ತಿ ತನ್ನ ಮೋಕ್ಷದ ಬಗ್ಗೆ ಮಾತ್ರ ಚಿಂತಿಸಬೇಕು, ಇತರರ ಸುಧಾರಣೆಯ ಬಗ್ಗೆ ಆಲೋಚಿಸಬಾರದು ಎಂದು ಅರ್ಥವಲ್ಲ. ಈ ತಪ್ಪುಕಲ್ಪನೆಯನ್ನು ನೀಗಿಸುತ್ತಾ ಹ. ಅಬೂಬಕರ್ ಸಿದ್ದೀಕ್(ರ) ತಮ್ಮ ಪ್ರವಚನವೊಂದರಲ್ಲಿ ಹೀಗೆ ಹೇಳಿದ್ದಾರೆ, "ಜನರೇ,! ನೀವು ಈ ಸೂಕ್ತವನ್ನು ಓದುತ್ತೀರಿ ಮತ್ತು ಅದನ್ನು ತಪ್ಪಾಗಿ ಅರ್ಥೈಸಿಕೊಳ್ಳುತ್ತೀರಿ. ಕೆಡುಕನ್ನು ನೋಡಿ ಅದನ್ನು ಪರಿವರ್ತಿಸಲು ಪ್ರಯತ್ನಿಸದ, ಅಕ್ರಮವನ್ನು ಕಂಡೂ ಅಕ್ರಮಿಯ ಕೈ ಹಿಡಿಯದ ಸ್ಥಿತಿಗೆ ಜನರು ತಲಪಿದರೆ ಅಲ್ಲಾಹನ ಯಾತನೆ ಎಲ್ಲರನ್ನೂ ಆವರಿಸಿಕೊಳ್ಳಬಹುದು ಎಂದು ಪ್ರವಾದಿವರ್ಯರು(ಸ) ಹೇಳಿದುದನ್ನು ನಾನು ಕೇಳಿದ್ದೇನೆ. ಆದ್ದರಿಂದ ದೇವನಾಜ್ಞೆಗೂ ಒಳಿತಿನ ಆದೇಶ ಕೊಡುವುದು ಮತ್ತು ಕೆಡುಕಿನಿಂದ ತಡೆಯುವುದು ನಿಮ್ಮ ಮೇಲೆ ಕಡ್ಡಾಯ. ಅನ್ಯಥಾ ನಿಮ್ಮಲ್ಲಿ ಅತ್ಯಂತ ಕೀಳ್ಮಟ್ಟದವರನ್ನು ಅಲ್ಲಾಹನು ನಿಮ್ಮ ಮೇಲೆ ಅಧಿಕಾರ ಉಳ್ಳವರಾಗಿ ಮಾಡುವನು. ಅವರು ನಿಮಗೆ ತೀವ್ರತರ ಯಾತನೆಗಳನ್ನುಂಟು ಮಾಡುವರು. ಅಂತಹ ಸಂದರ್ಭದಲ್ಲಿ ನಿಮ್ಮಲ್ಲಿನ ಸದ್ಭಕ್ತರು ಅಲ್ಲಾಹನೊಡನೆ ಪ್ರಾರ್ಥಿಸುವರು, ಆದರೆ ಅದು ಸ್ವೀಕರಿಸಲ್ಪಡಲಾರದು."

53. ಅರ್ಥಾತ್- ಧರ್ಮಿಷ್ಠನೂ, ಸತ್ಯಸಂಧನೂ ನಂಬಲರ್ಹನೂ ಆದ ಓರ್ವ ಮುಸ್ಲಿಮ್.

ಗಳನ್ನಾಗಿರಿಸಿಕೊಳ್ಳಬೇಕು ಅಥವಾ ನೀವು ಪ್ರಯಾಣದಲ್ಲಿದ್ದಾಗ ನಿಮಗೆ ಮರಣಯಾತನೆಯುಂಟಾದರೆ ಪರ(ಧರ್ಮೀಯ)ರಿಂದ ಲಾದರೂ ಇಬ್ಬರನ್ನು ಸಾಕ್ಷಿಗಳಾಗಿರಿಸಿಕೊಳ್ಳಿರಿ. ಆ ಬಳಿಕ ಸಂದೇಹವೇನಾದರೂ ಉಂಟಾದರೆ ಇಬ್ಬರು ಸಾಕ್ಷಿದಾರರನ್ನೂ ನಮಾಝಿನ ಬಳಿಕ (ಮಸೀದಿಯೊಳಗೆ) ತಡೆದಿರಿಸಬೇಕು. ಅವರು ಅಲ್ಲಾಹನ ಪ್ರಮಾಣ ಮಾಡುತ್ತ, "ಒಬ್ಬನು ನಮ್ಮ ಬಂಧು ಬಳಗದವನೇ ಆಗಿದ್ದರೂ (ನಾವು ಅವನಿಗೆ ರಿಯಾಯಿತಿ ತೋರಿಸುವವರಲ್ಲ) ನಾವು ಯಾವುದೇ ಸ್ವಂತ ಲಾಭಕ್ಕಾಗಿ ಸಾಕ್ಷ್ಯ ವಿಕ್ರಯ ಮಾಡುವವರಲ್ಲ ಮತ್ತು ಅಲ್ಲಾಹನಿಗೆ ಸಂಬಂಧಿಸಿದ ಸಾಕ್ಷ್ಯವನ್ನು ಅಡಗಿಸುವವರಲ್ಲ. ಒಂದು ವೇಳೆ ನಾವು ಹಾಗೆ ಮಾಡಿದರೆ ಪಾಪಿಗಳಲ್ಲಿ ಗಣಿಸಲ್ಪಡುವೆವು" ಎಂದು ಹೇಳಬೇಕು.

ثْنٰنِ ذَوَا عَدْلٍ مِّنْكُمْ اَوْ اٰخَرٰنِ مِنْ غَيْرِكُمْ اِنْ اَنْتُمْ ضَرَبْتُمْ فِي الْاَرْضِ فَاَصَابَتْكُمْ مُّصِيْبَةُ الْمَوْتِ ۚ تَحْبِسُوْنَهُمَا مِنْۢ بَعْدِ الصَّلٰوةِ فَيُقْسِمٰنِ بِاللّٰهِ اِنِ ارْتَبْتُمْ لَا نَشْتَرِيْ بِهٖ ثَمَنًا وَّلَوْ كَانَ ذَا قُرْبٰى ۙ وَلَا نَكْتُمُ شَهَادَةَ ۙ اللّٰهِ اِنَّآ اِذًا لَّمِنَ الْاٰثِمِيْنَ ﴿١٠٦﴾

107. ಆದರೆ ಅವರಿಬ್ಬರೂ ತಮ್ಮನ್ನು ತಾವೇ ಪಾಪಕ್ಕೆ ಗುರಿಪಡಿಸಿಕೊಂಡರೆಂದು ತಿಳಿದು ಬಂದರೆ ಅವರ ಸ್ಥಾನದಲ್ಲಿ, ಸಾಕ್ಷಿ ನೀಡುವುದರಲ್ಲಿ ಅವರಿಗಿಂತಲೂ ಹೆಚ್ಚು ಅರ್ಹತೆ ಪಡೆದ ಬೇರೆ ಇಬ್ಬರು, ಹಕ್ಕುಚ್ಯುತಿಗೆ ತುತ್ತಾದವರ ಪೈಕಿ - ಸಾಕ್ಷಿಗಳಾಗಿ ನಿಲ್ಲಬೇಕು. ಅವರು ಅಲ್ಲಾಹನ ಮೇಲೆ ಆಣೆ ಹಾಕಿ, "ನಮ್ಮ ಸಾಕ್ಷ್ಯವು ಅವರ ಸಾಕ್ಷ್ಯಕ್ಕಿಂತ ಅಧಿಕ ಸತ್ಯವಾಗಿರುತ್ತದೆ. ನಾವು ನಮ್ಮ ಸಾಕ್ಷ್ಯದಲ್ಲಿ ಯಾವುದೇ ಅತಿರೇಕಗೈದಿರುವುದಿಲ್ಲ. ಹಾಗೆ ಮಾಡಿದರೆ ನಾವು ಅಕ್ರಮಿಗಳಲ್ಲಾಗುವೆವು" ಎಂದು ಹೇಳಬೇಕು.

فَاِنْ عُثِرَ عَلٰٓى اَنَّهُمَا اسْتَحَقَّآ اِثْمًا فَاٰخَرٰنِ يَقُوْمٰنِ مَقَامَهُمَا مِنَ الَّذِيْنَ اسْتَحَقَّ عَلَيْهِمُ الْاَوْلَيٰنِ فَيُقْسِمٰنِ بِاللّٰهِ لَشَهَادَتُنَآ اَحَقُّ مِنْ شَهَادَتِهِمَا وَمَا اعْتَدَيْنَآ ۖ اِنَّآ اِذًا لَّمِنَ الظّٰلِمِيْنَ ﴿١٠٧﴾

108. ಈ ಕ್ರಮದಿಂದಾಗಿ ಜನರು ನಿಖರವಾಗಿ ಸಾಕ್ಷ್ಯ ಹೇಳುವರು. ಅಥವಾ ಕನಿಷ್ಠಪಕ್ಷ ಅವರ ಪ್ರಮಾಣ ವಚನಗಳ ನಂತರ ಇತರರ ಪ್ರಮಾಣ ವಚನಗಳ ಮೂಲಕ ತಮ್ಮ ಖಂಡನೆಯಾಗದಂತೆ ಭಯಪಡುವರೆಂದು ಹೆಚ್ಚಾಗಿ ನಿರೀಕ್ಷಿಸಬಹುದು. ಅಲ್ಲಾಹನನ್ನು ಭಯಪಡಿರಿ ಮತ್ತು ಕಿವಿಗೊಟ್ಟು ಕೇಳಿರಿ- ಅಲ್ಲಾಹನು ಆಜ್ಞೋಲ್ಲಂಘಕರನ್ನು ತನ್ನ ಸನ್ಮಾರ್ಗದಿಂದ ವಂಚಿತಗೊಳಿಸುತ್ತಾನೆ.

ذٰلِكَ اَدْنٰٓى اَنْ يَّاْتُوْا بِالشَّهَادَةِ عَلٰى وَجْهِهَآ اَوْ يَخَافُوْٓا اَنْ تُرَدَّ اَيْمَانٌۢ بَعْدَ اَيْمَانِهِمْ ۗ وَاتَّقُوا اللّٰهَ وَاسْمَعُوْا ۗ وَاللّٰهُ لَا يَهْدِي الْقَوْمَ الْفٰسِقِيْنَ ﴿١٠٨﴾ ع

109. ಅಲ್ಲಾಹನು ಸಂದೇಶವಾಹಕರನ್ನೆಲ್ಲ ಒಟ್ಟುಗೂಡಿಸಿ, "ನಿಮಗೆ ಯಾವ ಉತ್ತರ ಕೊಡಲಾಯಿತೆಂದು"[54] ಕೇಳುವ ಆ ದಿನ

يَوْمَ يَجْمَعُ اللّٰهُ الرُّسُلَ فَيَقُوْلُ مَاذَآ اُجِبْتُمْ ۗ قَالُوْا لَا عِلْمَ لَنَا ۗ اِنَّكَ

54. ಅರ್ಥಾತ್- ನಿರ್ಣಾಯಕ ದಿನದಂದು ಎಲ್ಲಾ ಪ್ರವಾದಿಗಳೊಡನೆ, ಇಸ್ಲಾಮಿನೆಡೆಗೆ ನೀವು ಜಗತ್ತಿಗೆ ನೀಡಿದ ಆಹ್ವಾನಕ್ಕೆ ಲೋಕದ ಜನರು ನಿಮಗೆ ಯಾವ ಪ್ರತ್ಯುತ್ತರ ನೀಡಿದರು ಎಂದು ಕೇಳಲಾಗುವುದು.

أَنتَ عَلَّامُ الْغُيُوبِ ﴿١٠٩﴾

ಅವರು, "ನಮಗೇನೂ ಅರಿವಿಲ್ಲ. ನೀನೇ ರಹಸ್ಯವಾಗಿರುವ ಸಕಲ ಪರಮಾರ್ಥಗಳನ್ನು ಅರಿಯುವವನಾಗಿರುತ್ತಿ" ಎಂದೇ ನಿವೇದಿಸುವರು.

إِذْ قَالَ اللَّهُ يَا عِيسَى ابْنَ مَرْيَمَ اذْكُرْ نِعْمَتِي عَلَيْكَ وَعَلَىٰ وَالِدَتِكَ إِذْ أَيَّدتُّكَ بِرُوحِ الْقُدُسِ تُكَلِّمُ النَّاسَ فِي الْمَهْدِ وَكَهْلًا ۖ وَإِذْ عَلَّمْتُكَ الْكِتَابَ وَالْحِكْمَةَ وَالتَّوْرَاةَ وَالْإِنجِيلَ ۖ وَإِذْ تَخْلُقُ مِنَ الطِّينِ كَهَيْئَةِ الطَّيْرِ بِإِذْنِي فَتَنفُخُ فِيهَا فَتَكُونُ طَيْرًا بِإِذْنِي ۖ وَتُبْرِئُ الْأَكْمَهَ وَالْأَبْرَصَ بِإِذْنِي ۖ وَإِذْ تُخْرِجُ الْمَوْتَىٰ بِإِذْنِي ۖ وَإِذْ كَفَفْتُ بَنِي إِسْرَائِيلَ عَنكَ إِذْ جِئْتَهُم بِالْبَيِّنَاتِ فَقَالَ الَّذِينَ كَفَرُوا مِنْهُمْ إِنْ هَٰذَا إِلَّا سِحْرٌ مُّبِينٌ ﴿١١٠﴾

110. ಅಲ್ಲಾಹನು ಹೀಗೆ ಹೇಳಲಿರುವ ಆ ಸಂದರ್ಭವನ್ನು ಊಹಿಸಿರಿ- "ಓ ಮರ್ಯಮರ ಪುತ್ರ ಈಸಾ, ನಾನು ನಿನಗೂ ನಿನ್ನ ಮಾತೆಗೂ ದಯಪಾಲಿಸಿದ್ದ 'ಭವ್ಯ ಕೊಡುಗೆಗಳನ್ನು' ಜ್ಞಾಪಿಸು. ನಾನು ಪವಿತ್ರಾತ್ಮನ ಮೂಲಕ ನಿನಗೆ ಸಹಾಯ ಮಾಡಿದೆ. ನೀನು ತೊಟ್ಟಿಲಲ್ಲಿಯೂ ವೃದ್ಧಾಪ್ಯದಲ್ಲಿಯೂ ಮಾತಾಡುತ್ತಿದ್ದೆ. ನಾನು ನಿನಗೆ ಗ್ರಂಥ ಮತ್ತು ಯುಕ್ತಿ, ತೌರಾತ್ ಮತ್ತು ಇಂಜೀಲ್‌ಗಳನ್ನು ಕೊಟ್ಟಿದ್ದೆ. ನೀನು ನನ್ನ ಅಪ್ಪಣೆಯಿಂದ ಮಣ್ಣಿನಿಂದ ಪಕ್ಷಿಯ ಪ್ರತಿರೂಪವನ್ನು ರಚಿಸುತ್ತಿದ್ದೆ ಮತ್ತು ಅದಕ್ಕೆ ಊದುತ್ತಿದ್ದೆ. ಅದು ನನ್ನ ಅಪ್ಪಣೆಯಿಂದ ಪಕ್ಷಿಯಾಗಿ ಬಿಡುತ್ತಿತ್ತು. ನೀನು ಹುಟ್ಟು ಕುರುಡರನ್ನೂ ಕುಷ್ಠ ರೋಗಿಗಳನ್ನೂ ನನ್ನ ಅಪ್ಪಣೆಯಿಂದ ವಾಸಿ ಮಾಡುತ್ತಿದ್ದೆ. ಮೃತ ದೇಹಗಳನ್ನು ನನ್ನ ಅಪ್ಪಣೆಯಿಂದ ಎಬ್ಬಿಸುತ್ತಿದ್ದೆ.[55] ಮುಂದೆ ನೀನು ಬನೀಇಸ್ರಾಈಲರ ಬಳಿಗೆ ಸುವ್ಯಕ್ತ ದೃಷ್ಟಾಂತಗಳನ್ನು ಕೊಂಡು ಹೋದಾಗ ಅವರಲ್ಲಿದ್ದ ಸತ್ಯನಿಷೇಧಿಗಳು ಈ ದೃಷ್ಟಾಂತಗಳು ಮಾಟಗಾರಿಕೆಯ ವಿನಾ ಬೇರೇನೂ ಅಲ್ಲವೆಂದರು. ಆಗ ನಾನೇ ನಿನ್ನನ್ನು ಅವರಿಂದ ರಕ್ಷಿಸಿದೆನು.

وَإِذْ أَوْحَيْتُ إِلَى الْحَوَارِيِّينَ أَنْ آمِنُوا بِي وَبِرَسُولِي قَالُوا آمَنَّا وَاشْهَدْ بِأَنَّنَا مُسْلِمُونَ ﴿١١١﴾

111. ನನ್ನ ಮೇಲೂ ನನ್ನ ಸಂದೇಶವಾಹಕರ ಮೇಲೂ ವಿಶ್ವಾಸ ವಿಡಿರೆಂದು ಹವಾರಿಗಳಿಗೆ ನಾನು ಸೂಚನೆ ಕೊಟ್ಟಾಗ, ನಾವು ವಿಶ್ವಾಸವಿಟ್ಟೆವೆಂದೂ ನಾವು ಮುಸ್ಲಿಮರಾಗಿರುವ ಬಗ್ಗೆ ಸಾಕ್ಷಿ ನಿಲ್ಲಿರೆಂದೂ ಅವರು ಹೇಳಿದರು.

إِذْ قَالَ الْحَوَارِيُّونَ يَا عِيسَى ابْنَ مَرْيَمَ هَلْ يَسْتَطِيعُ رَبُّكَ أَن يُنَزِّلَ عَلَيْنَا

112. (ಹವಾರಿಗಳಿಗೆ ಸಂಬಂಧಿಸಿದ)[56] ಈ ಘಟನೆಯೂ ನೆನಪಿರಲಿ: ಹವಾರಿಗಳು, "ಓ ಮರ್ಯಮರ ಪುತ್ರ ಈಸಾ, ನಿಮ್ಮ ಪ್ರಭು

55. ಅರ್ಥಾತ್- ಮರಣಾವಸ್ಥೆಯಿಂದ ಎಬ್ಬಿಸಿ ಸಜೀವಾವಸ್ಥೆಗೆ ತಲುಪಿಸುತ್ತಿದ್ದೆ.

56. ಹವಾರಿಗಳ ಪ್ರಸ್ತಾಪ ಈ ಮೊದಲು ಬಂದಿತ್ತು. ಆದ್ದರಿಂದ ಇಲ್ಲಿ ಮಾತಿನ ಸರಣಿಯನ್ನು ಮುರಿದು ಉಪಮಾತಿನ ರೂಪದಲ್ಲಿ ಹವಾರಿಗಳಿಗೆ ಸಂಬಂಧಪಟ್ಟ ಇನ್ನೊಂದು ಘಟನೆಯೆಡೆಗೆ ಸೂಚಿಸಲಾಗಿದೆ. ಇದರಿಂದ ಮಸೀಹ್‌ರಿಂದ(ಅ) ನೇರವಾಗಿ ಬೋಧನೆಗಳನ್ನು ಪಡೆದಿದ್ದ ಶಿಷ್ಯಂದಿರು ಅವರನ್ನು ಓರ್ವ ಮನುಷ್ಯ ಮತ್ತು ಓರ್ವ ದೇವದಾಸನೆಂದು ಮಾತ್ರ ಭಾವಿಸುತ್ತಿದ್ದರೆಂದು ವ್ಯಕ್ತವಾಗುತ್ತದೆ. ತಮ್ಮ ಗುರು ದೇವರಾಗಿದ್ದಾರೆ, ದೇವನ ಸಹಭಾಗಿಯಾಗಿದ್ದಾರೆ ಅಥವಾ ದೇವಪುತ್ರನಾಗಿದ್ದಾರೆ ಎಂದು ಅವರು ಕನಸು ಮನಸ್ಸಿನಲ್ಲೂ ಭಾವಿಸಿರಲಿಲ್ಲ. ಮಸೀಹ್(ಅ) ಸ್ವತಃ ಅವರ ಮುಂದೆ ತಾನೊಬ್ಬ ಅಧಿಕಾರವಿಲ್ಲದ ದೇವದಾಸನಾಗಿದ್ದೇನೆ ಎಂಬ ಚಿತ್ರಣ ನೀಡಿದ್ದರೆಂದೂ ಇದರಿಂದ ವ್ಯಕ್ತವಾಗುತ್ತದೆ.

ನಮ್ಮ ಮೇಲೆ ಆಕಾಶದಿಂದ ಊಟದ ಹರಿವಾಣವನ್ನು ಇಳಿಸ ಬಲ್ಲನೇ?" ಎಂದು ಕೇಳಿದಾಗ ಈಸಾರವರು ನೀವು ಸತ್ಯವಾದಿಗಳಾಗಿದ್ದರೆ ಅಲ್ಲಾಹನನ್ನು ಭಯಪಡಿರೆಂದರು.

مَآئِدَةً مِّنَ السَّمَآءِ ۖ قَالَ اتَّقُوا اللَّهَ إِن كُنتُم مُّؤْمِنِينَ ﴿١١٢﴾

113. ಆಗ ಅವರು, "ನಾವು ಆ ಹರಿವಾಣದಿಂದ ಉಣ್ಣುವಂತಾಗಲಿಕ್ಕೂ ಅದರಿಂದ ನಮ್ಮ ಮನಸ್ಸಿಗೆ ಶಾಂತಿಯುಂಟಾಗಲಿಕ್ಕೂ ತಾವು ನಮ್ಮೊಡನೆ ಹೇಳಿದುದೆಲ್ಲ ಸತ್ಯವೆಂದು ನಮಗೆ ತಿಳಿದುಬರಲಿಕ್ಕೂ ನಾವು ಅದರ ಬಗ್ಗೆ ಸಾಕ್ಷಿಗಳಾಗಿರಲಿಕ್ಕೂ ಬಯಸುತ್ತೇವೆ" ಎಂದರು.

قَالُوا نُرِيدُ أَن نَّأْكُلَ مِنْهَا وَتَطْمَئِنَّ قُلُوبُنَا وَنَعْلَمَ أَن قَدْ صَدَقْتَنَا وَنَكُونَ عَلَيْهَا مِنَ الشَّاهِدِينَ ﴿١١٣﴾

114. ಆಗ ಮರ್ಯಮರ ಪುತ್ರ ಈಸಾರವರು ಹೀಗೆ ಪ್ರಾರ್ಥಿಸಿದರು: "ಓ ಅಲ್ಲಾಹ್, ನಮ್ಮ ಪ್ರಭೂ, ಆಕಾಶದಿಂದ ನಮಗೊಂದು ಊಟದ ಹರಿವಾಣವನ್ನು ಇಳಿಸು. ಅದು ನಮಗೂ ನಮ್ಮ ಹಿಂಗಾಮಿಗಳಿಗೂ ಮುಂಗಾಮಿಗಳಿಗೂ ಸಂತಸದ ಸಂದರ್ಭವಾಗಿಯೂ ನಿನ್ನ ಕಡೆಯಿಂದ ಒಂದು ದೃಷ್ಟಾಂತವಾಗಿಯೂ ಪರಿಣಮಿಸಲಿ. ನಮಗೆ ಆಹಾರ ಪ್ರದಾನ ಮಾಡು. ನೀನು ಅತ್ಯುತ್ತಮ ಅನ್ನದಾತನು."

قَالَ عِيسَى ابْنُ مَرْيَمَ اللَّهُمَّ رَبَّنَا أَنزِلْ عَلَيْنَا مَآئِدَةً مِّنَ السَّمَآءِ تَكُونُ لَنَا عِيدًا لِّأَوَّلِنَا وَآخِرِنَا وَآيَةً مِّنكَ ۖ وَارْزُقْنَا وَأَنتَ خَيْرُ الرَّازِقِينَ ﴿١١٤﴾

115. ಅಲ್ಲಾಹ್ ಉತ್ತರವಿತ್ತನು: "ನಾನು ಅದನ್ನು ನಿಮ್ಮ ಮೇಲೆ ಇಳಿಸುವವನಿದ್ದೇನೆ. ಆದರೆ ಅನಂತರ ನಿಮ್ಮ ಪೈಕಿ ಸತ್ಯನಿಷೇಧ ಕೈಗೊಂಡವನಿಗೆ ಜಗತ್ತಿನಲ್ಲಿ ಬೇರಾರಿಗೂ ಕೊಡದಂತಹ ಶಿಕ್ಷೆ ಕೊಡುವೆನು."

قَالَ اللَّهُ إِنِّي مُنَزِّلُهَا عَلَيْكُمْ ۖ فَمَن يَكْفُرْ بَعْدُ مِنكُمْ فَإِنِّي أُعَذِّبُهُ عَذَابًا لَّا أُعَذِّبُهُ أَحَدًا مِّنَ الْعَالَمِينَ ﴿١١٥﴾

116. (ಈ ಉಪಕಾರಗಳನ್ನೆಲ್ಲ ನೆನಪಿಸಿ) ಅಲ್ಲಾಹನು, "ಓ ಮರ್ಯಮರ ಪುತ್ರ ಈಸಾ, ಅಲ್ಲಾಹನ ಹೊರತು ನನ್ನನ್ನೂ ನನ್ನ ಮಾತೆಯನ್ನೂ ದೇವರನ್ನಾಗಿ ಮಾಡಿಕೊಳ್ಳಿರೆಂದು ನೀವು ಜನರೊಡನೆ ಹೇಳಿದ್ದಿರಾ?"[57] ಎಂದು ಕೇಳುವಾಗ ಅವರು ಉತ್ತರಿಸುವರು: ನೀನು ಪರಮ ಪಾವನನು. ನನಗೆ ಹೇಳಲು ಹಕ್ಕಿಲ್ಲದಂತಹ ಮಾತನ್ನು ಹೇಳುವ ಕಾರ್ಯ ನನ್ನದಾಗಿರಲಿಲ್ಲ. ನಾನು ಹಾಗೆ ಹೇಳಿರುತ್ತಿದ್ದರೆ ಅದು ನಿಶ್ಚಯವಾಗಿಯೂ ನಿನಗೆ ತಿಳಿದಿರುತ್ತಿತ್ತು.

وَإِذْ قَالَ اللَّهُ يَا عِيسَى ابْنَ مَرْيَمَ أَأَنتَ قُلْتَ لِلنَّاسِ اتَّخِذُونِي وَأُمِّيَ إِلَٰهَيْنِ مِن دُونِ اللَّهِ ۖ قَالَ سُبْحَانَكَ مَا يَكُونُ لِي أَن أَقُولَ مَا لَيْسَ لِي بِحَقٍّ ۚ إِن كُنتُ قُلْتُهُ فَقَدْ عَلِمْتَهُ ۚ تَعْلَمُ مَا فِي

57. ಕ್ರೈಸ್ತರು ಅಲ್ಲಾಹನ ಜತೆಗೆ ಮಸೀಹರನ್ನು(ಅ) ಮತ್ತು ಪವಿತ್ರಾತ್ಮನನ್ನು ಮಾತ್ರವಲ್ಲದೆ ಅವರ ತಾಯಿಯಾದ ಮರ್ಯಮ್‌ರನ್ನೂ(ಅ) ಶಾಶ್ವತವಾಗಿ ದೇವರನ್ನಾಗಿ ಮಾಡಿದರು. ಮಸೀಹರ(ಅ) ನಂತರ ಮೊದಲ ಮುನ್ನೂರು ವರ್ಷಗಳ ತನಕ ಇಂತಹ ಕಲ್ಪನೆಗಳಿಂದ ಕ್ರೈಸ್ತ ಜಗತ್ತು ಮುಕ್ತವಾಗಿತ್ತು. ಕ್ರಿ.ಶ. ಮೂರನೆಯ ಶತಮಾನದ ಕೊನೆಯ ಕಾಲದಲ್ಲಿ ಅಲೆಕ್ಸಾಂಡ್ರಿಯಾದ ಕೆಲವು ಧಾರ್ಮಿಕ ವಿದ್ವಾಂಸರು ಮೊಟ್ಟ ಮೊದಲ ಬಾರಿ ಮರ್ಯಮ್‌ರಿಗೆ 'ದೇವನ ತಾಯಿ', 'ದೇವತಾ ಮಾತೆ' ಮುಂತಾದ ಪದಗಳನ್ನು ಉಪಯೋಗಿಸಿದರು. ಅನಂತರ ಹಂತಹಂತವಾಗಿ ಮರ್ಯಮರ ಆರಾಧನೆಯೂ ಕ್ರೈಸ್ತರಲ್ಲಿ ರೂಢಿಯಾಯಿತು.

ನನ್ನ ಮನಸ್ಸಿನಲ್ಲಿರುವುದು ನಿನಗೆ ಗೊತ್ತಿದೆ. ನಿನ್ನ ಮನಸ್ಸಿನಲ್ಲಿರುವುದು ನನಗೆ ಗೊತ್ತಿಲ್ಲ. ನೀನು ಸಕಲ ರಹಸ್ಯ ಪರಮಾರ್ಥಗಳ ಜ್ಞಾನಿಯಾಗಿರುತ್ತಿ.

نَفْسِيْ وَلَآ اَعْلَمُ مَا فِيْ نَفْسِكَ ۭ اِنَّكَ اَنْتَ عَلَّامُ الْغُيُوْبِ ۝

117. ನೀನು ನನಗೆ ನೀಡಿದ ಆಜ್ಞೆಯ ವಿನಾ ಇನ್ನೇನನ್ನೂ ನಾನು ಅವರಲ್ಲಿ ಹೇಳಿಲ್ಲ- ಅದು, "ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ" ಎಂದಾಗಿತ್ತು. "ನಾನು ಅವರ ನಡುವೆ ವಾಸಿಸಿದ್ದ ಕಾಲದ ವರೆಗೆ ಮಾತ್ರ ನಾನು ಅವರ ಮೇಲ್ವಿಚಾರಕನಾಗಿದ್ದೆ. ನೀನು ನನ್ನನ್ನು ಹಿಂದಕ್ಕೆ ಕರೆಸಿಕೊಂಡ ಮೇಲೆ ನೀನೇ ಅವರ ಮೇಲ್ವಿಚಾರಕನಾಗಿರುತ್ತಿ ಮತ್ತು ನೀನಂತು ಸಕಲ ವಸ್ತುಗಳ ಮೇಲ್ನೋಟವಿರಿಸುವವನಾಗಿರುತ್ತಿ.

مَا قُلْتُ لَهُمْ اِلَّا مَآ اَمَرْتَنِيْ بِهٖٓ اَنِ اعْبُدُوا اللّٰهَ رَبِّيْ وَرَبَّكُمْ ۚ وَكُنْتُ عَلَيْهِمْ شَهِيْدًا مَّا دُمْتُ فِيْهِمْ ۚ فَلَمَّا تَوَفَّيْتَنِيْ كُنْتَ اَنْتَ الرَّقِيْبَ عَلَيْهِمْ ۭ وَاَنْتَ عَلٰي كُلِّ شَيْءٍ شَهِيْدٌ ﴿١١٧﴾

118. ನೀನು ಅವರಿಗೆ ಶಿಕ್ಷೆ ಕೊಟ್ಟರೆ ಖಂಡಿತವಾಗಿಯೂ ಅವರು ನಿನ್ನ ದಾಸರೇ ಮತ್ತು ಅವರನ್ನು ಕ್ಷಮಿಸಿ ಬಿಟ್ಟರೆ ನಿಶ್ಚಯವಾಗಿಯೂ ನೀನು ಅಜೇಯನೂ ಯುಕ್ತಿಪೂರ್ಣನೂ ಆಗಿರುತ್ತಿ."

اِنْ تُعَذِّبْهُمْ فَاِنَّهُمْ عِبَادُكَ ۚ وَاِنْ تَغْفِرْ لَهُمْ فَاِنَّكَ اَنْتَ الْعَزِيْزُ الْحَكِيْمُ ﴿١١٨﴾

119. ಆಗ ಅಲ್ಲಾಹ್ ಹೇಳುವನು- "ಸತ್ಯಸಂಧರಿಗೆ ಅವರ ಸತ್ಯಸಂಧತೆಯು ಫಲ ನೀಡುವ ದಿನವಿದು. ಅವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ. ಇಲ್ಲಿ ಅವರು ಸದಾ ಕಾಲವೂ ವಾಸಿಸುತ್ತಿರುವರು. ಅಲ್ಲಾಹ್ ಅವರಿಂದ ಸಂತುಷ್ಟನಾದನು ಮತ್ತು ಅವರು ಅವನಿಂದ ಸಂತುಷ್ಟರಾದರು. ಇದೇ ಅತ್ಯುತ್ಕೃಷ್ಟ ಯಶಸ್ಸು.

قَالَ اللّٰهُ هٰذَا يَوْمُ يَنْفَعُ الصّٰدِقِيْنَ صِدْقُهُمْ ۭ لَهُمْ جَنّٰتٌ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَآ اَبَدًا ۭ رَضِيَ اللّٰهُ عَنْهُمْ وَرَضُوْا عَنْهُ ۭ ذٰلِكَ الْفَوْزُ الْعَظِيْمُ ﴿١١٩﴾

120. ಭೂಮಿ-ಆಕಾಶಗಳ ಮತ್ತು ಅವುಗಳೊಳಗಿರುವ ಸರ್ವಸ್ವದ ಸಾರ್ವಭೌಮತೆ ಅವನಿಗೇ ಇದೆ. ಮತ್ತು ಅವನು ಸಕಲ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನು.

لِلّٰهِ مُلْكُ السَّمٰوٰتِ وَالْاَرْضِ وَمَا فِيْهِنَّ ۭ وَهُوَ عَلٰي كُلِّ شَيْءٍ قَدِيْرٌ ﴿١٢٠﴾

---







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದ, ಪ್ರಕಾಶವನ್ನೂ ಅಂಧಕಾರವನ್ನೂ ಉಂಟುಮಾಡಿದ ಅಲ್ಲಾಹನಿಗೇ ಸರ್ವಸ್ತೋತ್ರಗಳು. ಆದರೂ ಸತ್ಯಾಹ್ವಾನ ಸ್ವೀಕರಿಸಲು ನಿರಾಕರಿಸುವವರು ಇತರರನ್ನು ತಮ್ಮ ಪಾಲಕ ಪ್ರಭುವಿಗೆ ಸರಿಸಮಾನರೆಂದು ನಿಷ್ಕರ್ಷಿಸಿಕೊಂಡಿದ್ದಾರೆ.

اَلْحَمْدُ لِلّٰهِ الَّذِيْ خَلَقَ السَّمٰوٰتِ وَالْاَرْضَ وَجَعَلَ الظُّلُمٰتِ وَالنُّوْرَ ۬ ثُمَّ الَّذِيْنَ كَفَرُوْا بِرَبِّهِمْ يَعْدِلُوْنَ ①

2. ಅವನೇ ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದವನು ಮತ್ತು ನಿಮಗಾಗಿ ಜೀವನದ ಒಂದು ಕಾಲಾವಧಿಯನ್ನು ನಿರ್ಣಯಿಸಿದವನು. ನಿರ್ಣಯಿಸಲ್ಪಟ್ಟ ಇನ್ನೊಂದು ಕಾಲಾವಧಿಯೂ ಅವನಲ್ಲಿದೆ.[1] ಆದರೆ ನೀವು ಸಂಶಯಗ್ರಸ್ತರಾಗಿದ್ದೀರಿ.

هُوَ الَّذِيْ خَلَقَكُمْ مِّنْ طِيْنٍ ثُمَّ قَضٰى اَجَلًا ؕ وَاَجَلٌ مُّسَمًّى عِنْدَهٗ ثُمَّ اَنْتُمْ تَمْتَرُوْنَ ②

3. ಆಕಾಶಗಳಲ್ಲೂ ಭೂಮಿಯಲ್ಲೂ ಅವನೇ ಏಕದೇವನು. ನಿಮ್ಮ ಅಂತರಂಗ ಬಹಿರಂಗಗಳೆಲ್ಲವನ್ನೂ ಅವನು ಅರಿಯುತ್ತಾನೆ. ನೀವು ಸಂಪಾದಿಸುವ ಒಳಿತು ಅಥವಾ ಕೆಡುಕುಗಳನ್ನೂ ಚೆನ್ನಾಗಿ ಅರಿತಿದ್ದಾನೆ.

وَهُوَ اللّٰهُ فِي السَّمٰوٰتِ وَفِي الْاَرْضِ ؕ يَعْلَمُ سِرَّكُمْ وَجَهْرَكُمْ وَيَعْلَمُ مَا تَكْسِبُوْنَ ③

4. ಅವರ ಮುಂದೆ ಬಂದ ಅವರ ಪ್ರಭುವಿನ ನಿದರ್ಶನಗಳ ಪೈಕಿ ಅವರು ನಿರಾಕರಿಸದ ಯಾವ ನಿದರ್ಶನವೂ ಇಲ್ಲ.

وَمَا تَاْتِيْهِمْ مِّنْ اٰيَةٍ مِّنْ اٰيٰتِ رَبِّهِمْ اِلَّا كَانُوْا عَنْهَا مُعْرِضِيْنَ ④

5. ಅದೇ ಪ್ರಕಾರ ಈಗ ಅವರ ಬಳಿಗೆ ಬಂದಿರುವ ಸತ್ಯವನ್ನೂ ಅವರು ತಿರಸ್ಕರಿಸಿಬಿಟ್ಟರು. ಅವರು ಇಷ್ಟರ ತನಕ ಅಪಹಾಸ್ಯ ಮಾಡಿಕೊಂಡಿದ್ದ ವಿಷಯದ ಬಗ್ಗೆ ಕೆಲವು ಸುದ್ದಿಗಳು ಸದ್ಯದಲ್ಲೇ ಅವರಿಗೆ ಸಿಗಲಿವೆ.[2]

فَقَدْ كَذَّبُوْا بِالْحَقِّ لَمَّا جَآءَهُمْ ؕ فَسَوْفَ يَاْتِيْهِمْ اَنْۢبٰٓؤُا مَا كَانُوْا بِهٖ يَسْتَهْزِءُوْنَ ⑤

1. ಅರ್ಥಾತ್- ಹಿಂದೆ ಗತಿಸಿದ ಮತ್ತು ಮುಂದೆ ಬರಲಿರುವ ಮಾನವರೆಲ್ಲರೂ ಜೀವಂತಗೊಳಿಸಲ್ಪಟ್ಟು ಲೆಕ್ಕ ಸಮರ್ಪಣೆಗಾಗಿ ತಮ್ಮ ಪ್ರಭುವಿನ ಮುಂದೆ ಹಾಜರಾಗುವ ನಿರ್ಣಾಯಕ ದಿನದ ಆ ಘಳಿಗೆ.

6. ಇವರಿಗಿಂತ ಮುಂಚೆ ತಮ್ಮ ಕಾಲದಲ್ಲಿ ಪ್ರಬಲರಾಗಿ ಮೆರೆಯುತ್ತಿದ್ದ ಎಷ್ಟೋ ಜನಾಂಗಗಳನ್ನು ನಾವು ನಾಶಗೊಳಿಸಿದ್ದೇವೆಂಬುದನ್ನು ಇವರು ಕಂಡಿಲ್ಲವೇ? ನಾವು ನಿಮಗೆ ನೀಡಿಲ್ಲದ ಅಧಿಕಾರಗಳನ್ನು ಅವರಿಗೆ ದಯಪಾಲಿಸಿದ್ದೆವು. ಅವರ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸಿದೆವು ಮತ್ತು ಅವರ ಕೆಳಗೆ ನದಿಗಳನ್ನು ಹರಿಸಿದೆವು. (ಆದರೆ ಅವರು ಕೃತಘ್ನರಾದಾಗ) ಕೊನೆಗೆ ನಾವು ಅವರ ಪಾಪಗಳ ಫಲವಾಗಿ ಅವರನ್ನು ನಾಶಪಡಿಸಿ ಅವರ ಸ್ಥಾನದಲ್ಲಿ ಬೇರೆ ಯುಗದ ಜನಾಂಗಗಳನ್ನು ಎಬ್ಬಿಸಿದೆವು.

أَلَمْ يَرَوْا كَمْ أَهْلَكْنَا مِن قَبْلِهِم مِّن قَرْنٍ مَّكَّنَّاهُمْ فِي الْأَرْضِ مَا لَمْ نُمَكِّن لَّكُمْ وَأَرْسَلْنَا السَّمَاءَ عَلَيْهِم مِّدْرَارًا وَجَعَلْنَا الْأَنْهَارَ تَجْرِي مِن تَحْتِهِمْ فَأَهْلَكْنَاهُم بِذُنُوبِهِمْ وَأَنشَأْنَا مِن بَعْدِهِمْ قَرْنًا آخَرِينَ ﴿٦﴾

7. ಓ ಪೈಗಂಬರರೇ, ನಾವು ನಿಮ್ಮ ಮೇಲೆ ಕಾಗದದಲ್ಲಿ ಬರೆದ ಒಂದು ಗ್ರಂಥವನ್ನು ಅವತೀರ್ಣಗೊಳಿಸುತ್ತಿದ್ದರೆ ಮತ್ತು ಜನರು ಅದನ್ನು ಕೈಗಳಿಂದ ಮುಟ್ಟಿಯೂ ನೋಡಿ ಕೊಳ್ಳುತ್ತಿದ್ದರೆ ಆಗಲೂ ಸತ್ಯನಿಷೇಧಿಗಳು, ಇದು ವ್ಯಕ್ತವಾದ ಮಾಟವಲ್ಲದೆ ಇನ್ನೇನೂ ಅಲ್ಲವೆಂದೇ ಹೇಳುತ್ತಿದ್ದರು.

وَلَوْ نَزَّلْنَا عَلَيْكَ كِتَابًا فِي قِرْطَاسٍ فَلَمَسُوهُ بِأَيْدِيهِمْ لَقَالَ الَّذِينَ كَفَرُوا إِنْ هَٰذَا إِلَّا سِحْرٌ مُّبِينٌ ﴿٧﴾

8. ಈ ಪ್ರವಾದಿಯ ಮೇಲೆ ಒಬ್ಬ 'ದೇವಚರ' ಏಕೆ ಇಳಿಸಲ್ಪಡಲಿಲ್ಲವೆಂದು ಇವರು ಕೇಳುತ್ತಾರೆ.[3] ನಾವು ದೇವಚರನನ್ನು ಇಳಿಸುತ್ತಿದ್ದರೆ, ಇಷ್ಟರೊಳಗೆ ಎಂದೋ ತೀರ್ಮಾನವೇ ಆಗಿಬಿಡುತ್ತಿತ್ತು. ಅನಂತರ ಇವರಿಗೆ ಅವಧಿ ಕೊಡಲಾಗುತ್ತಿರಲಿಲ್ಲ.

وَقَالُوا لَوْلَا أُنزِلَ عَلَيْهِ مَلَكٌ ۖ وَلَوْ أَنزَلْنَا مَلَكًا لَّقُضِيَ الْأَمْرُ ثُمَّ لَا يُنظَرُونَ ﴿٨﴾

9. ಒಂದು ವೇಳೆ ನಾವು ದೇವಚರನನ್ನು ಇಳಿಸುತ್ತಿದ್ದರೂ ಅವನನ್ನು ಮಾನವರೂಪದಲ್ಲೇ ಇಳಿಸುತ್ತಿದ್ದೆವು. ಹೀಗೆ ಇವರನ್ನು ಈಗ ಇವರು ಸಿಲುಕಿಬಿದ್ದಿರುವ ಸಂಶಯದಲ್ಲೇ ಸಿಲುಕಿಸಿಬಿಡುತ್ತಿದ್ದೆವು.

وَلَوْ جَعَلْنَاهُ مَلَكًا لَّجَعَلْنَاهُ رَجُلًا وَلَلَبَسْنَا عَلَيْهِم مَّا يَلْبِسُونَ ﴿٩﴾

10. (ಓ ಪೈಗಂಬರರೇ,) ನಿಮಗಿಂತ ಮುಂಚೆಯೂ ಅನೇಕ ಮಂದಿ ಸಂದೇಶವಾಹಕರು ಅಪಹಾಸ್ಯಗೊಳಿಸಲ್ಪಟ್ಟಿದ್ದಾರೆ. ಆದರೆ, ಕೊನೆಗೆ ಅವರು ಅಪಹಾಸ್ಯ ಮಾಡುತ್ತಿದ್ದ ವಾಸ್ತವಿಕತೆಯೇ ಅವರ ಮೇಲೆ ಬಂದೆರಗಿತು.

وَلَقَدِ اسْتُهْزِئَ بِرُسُلٍ مِّن قَبْلِكَ فَحَاقَ بِالَّذِينَ سَخِرُوا مِنْهُم مَّا كَانُوا بِهِ يَسْتَهْزِئُونَ ﴿١٠﴾

2. ಇದು ಮದೀನಾ ವಲಸೆ ಮತ್ತು ಅದರ ನಂತರ ಇಸ್ಲಾಮಿಗೆ ಹಂತಹಂತವಾಗಿ ದೊರೆಯಲಿದ್ದ ವಿಜಯಗಳ ಕಡೆಗಿರುವ ಸೂಚನೆ. ಈ ಸೂಚನೆಯನ್ನು ನೀಡಲಾದಾಗ ಯಾವ ರೀತಿಯ ಸುದ್ದಿಗಳು ತಮಗೆ ತಲಪಲಿವೆ ಎಂದು ಸತ್ಯನಿಷೇಧಿಗಳು ಊಹಿಸುವಂತಿರಲಿಲ್ಲ. ಅಂತೆಯೇ ಮುಸ್ಲಿಮರ ಮನಸ್ಸಿನಲ್ಲೂ ಅದರ ಬಗ್ಗೆ ಯಾವುದೇ ಕಲ್ಪನೆಯಿರಲಿಲ್ಲ.

3. ಅರ್ಥಾತ್- ಇವರನ್ನು ಪ್ರವಾದಿಯನ್ನಾಗಿ ಮಾಡಿ ಅಲ್ಲಾಹನ ವತಿಯಿಂದ ಕಳುಹಿಸಲಾಗಿರುವಾಗ ಆಕಾಶದಿಂದ ಒಂದು ದೇವಚರನೂ ಇಳಿಯಬೇಕಾಗಿತ್ತು. ಅದು ಜನರೊಡನೆ "ನೋಡಿ! ಇವರು ದೇವನ ಪ್ರವಾದಿ ಇವರ ಮಾತು ಕೇಳದಿದ್ದರೆ ನಿಮ್ಮನ್ನು ಶಿಕ್ಷಿಸಲಾಗುವುದು" ಎಂದು ಹೇಳಬೇಕಾಗಿತ್ತು.

11. ನೀವು ಭೂಮಿಯ ಮೇಲೆ ಸಂಚರಿಸಿ ಸುಳ್ಳಾಗಿಸುವವರ ಪರಿಣಾಮವೇನಾಯಿತೆಂಬುದನ್ನು ಕಣ್ಣಾರೆ ನೋಡಿಕೊಳ್ಳಿರೆಂದು ಇವರೊಡನೆ ಹೇಳಿರಿ.

قُلْ سِيرُوا فِي الْأَرْضِ ثُمَّ انْظُرُوا كَيْفَ كَانَ عَاقِبَةُ الْمُكَذِّبِينَ ﴿١١﴾

12. ಭೂಮಿ-ಆಕಾಶಗಳಲ್ಲಿರುವುದೆಲ್ಲ ಯಾರದೆಂದು ಇವರೊಡನೆ ಕೇಳಿರಿ. ಎಲ್ಲವೂ ಅಲ್ಲಾಹನದೇ ಎಂದು ಹೇಳಿರಿ. ಅವನು ತನ್ನನ್ನು ಕೃಪಾಕಾರುಣ್ಯಗಳಿಗೆ ಬದ್ಧನಾಗಿ ಮಾಡಿಕೊಂಡಿದ್ದಾನೆ. (ಆದುದರಿಂದಲೇ ಅವನು ನಿಮ್ಮ ಆಜ್ಞೋಲ್ಲಂಘನೆ ಮತ್ತು ಉದ್ಧಟತನಗಳಿಗಾಗಿ ನಿಮ್ಮನ್ನು ಬೇಗನೆ ಹಿಡಿಯುವುದಿಲ್ಲ) ಅವನು ಪುನರುತ್ಥಾನ ದಿನದಂದು ನಿಮ್ಮೆಲ್ಲರನ್ನೂ ಖಂಡಿತವಾಗಿಯೂ ಒಟ್ಟುಗೂಡಿಸುವನು. ಇದು ನಿಸ್ಸಂದೇಹವಾದ ವಾಸ್ತವಿಕತೆ. ಆದರೆ, ತಮ್ಮನ್ನು ತಾವೇ ವಿನಾಶದ ಅಪಾಯಕ್ಕೆ ಸಿಲುಕಿಸಿ ಕೊಂಡವರು ಇದನ್ನು ಒಪ್ಪುವುದಿಲ್ಲ.

قُلْ لِمَنْ مَا فِي السَّمٰوٰتِ وَالْأَرْضِ ۖ قُلْ لِلّٰهِ ۚ كَتَبَ عَلٰى نَفْسِهِ الرَّحْمَةَ ۚ لَيَجْمَعَنَّكُمْ إِلٰى يَوْمِ الْقِيٰمَةِ لَا رَيْبَ فِيهِ ۚ الَّذِينَ خَسِرُوا أَنْفُسَهُمْ فَهُمْ لَا يُؤْمِنُونَ ﴿١٢﴾

13. ಇರುಳಿನ ಅಂಧಕಾರದಲ್ಲಿಯೂ ಹಗಲಿನ ಪ್ರಕಾಶದಲ್ಲಿಯೂ ಇರುವುದೆಲ್ಲವೂ ಅಲ್ಲಾಹನದೇ. ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَلَهُ مَا سَكَنَ فِي اللَّيْلِ وَالنَّهَارِ ۚ وَهُوَ السَّمِيعُ الْعَلِيمُ ﴿١٣﴾

14. ನಾನು ಅಲ್ಲಾಹನನ್ನು ಬಿಟ್ಟು ಇನ್ನಾರನ್ನಾದರೂ ನನ್ನ ಸಂರಕ್ಷಕನಾಗಿ ಮಾಡಿಕೊಳ್ಳಬೇಕೇ? ಅವನಾದರೋ ಭೂಮಿ-ಆಕಾಶಗಳ ಕರ್ತೃ. ಅವನು ಉಣಿಸುವವನು, ಉಣ್ಣುವವನಲ್ಲ. ಹೇಳಿರಿ- ನನಗಂತು ಮೊತ್ತ ಮೊದಲು ಅವನ ಮುಂದೆ ಶರಣಾಗತನಾಗುವ ಆಜ್ಞೆಯನ್ನೇ ನೀಡಲಾಗಿದೆ. (ಮತ್ತು ಇನ್ನಾರಾದರೂ 'ದೇವಸಹಬಾಗಿತ್ವ' ಮಾಡಿ ದರೆ ಮಾಡಲಿ) ನೀನು ಎಷ್ಟು ಮಾತ್ರಕ್ಕೂ 'ಅಲ್ಲಾಹನೊಂದಿಗೆ ಸಹಭಾಗಿ'ಯನ್ನಾಗಿ ಮಾಡುವವರಲ್ಲಾಗಬಾರದು (ಎಂದು ನನಗೆ ತಾಕೀತು ಮಾಡಲಾಗಿದೆ.)

قُلْ أَغَيْرَ اللّٰهِ أَتَّخِذُ وَلِيًّا فَاطِرِ السَّمٰوٰتِ وَالْأَرْضِ وَهُوَ يُطْعِمُ وَلَا يُطْعَمُ ۗ قُلْ إِنِّيٓ أُمِرْتُ أَنْ أَكُونَ أَوَّلَ مَنْ أَسْلَمَ وَلَا تَكُونَنَّ مِنَ الْمُشْرِكِينَ ﴿١٤﴾

15. ಹೇಳಿರಿ- ನಾನು ನನ್ನ ಪ್ರಭುವಿನ ಆಜ್ಞೋಲ್ಲಂಘನೆ ಮಾಡಿದರೆ ಒಂದು ಮಹಾ (ಭಯಾನಕ) ದಿನ ನಾನು ಶಿಕ್ಷೆ ಅನುಭವಿಸ ಬೇಕಾದೀತೆಂದು ಭಯಪಡುತ್ತೇನೆ.

قُلْ إِنِّيٓ أَخَافُ إِنْ عَصَيْتُ رَبِّي عَذَابَ يَوْمٍ عَظِيمٍ ﴿١٥﴾

16. ಅಂದು ಶಿಕ್ಷೆಯಿಂದ ಪಾರಾದವನ ಮೇಲೆ ಅಲ್ಲಾಹನು ಮಹಾಕೃಪೆಗೈದನು. ಇದುವೇ ಸುಸ್ಪಷ್ಟ ವಿಜಯವಾಗಿರುತ್ತದೆ.

مَنْ يُصْرَفْ عَنْهُ يَوْمَئِذٍ فَقَدْ رَحِمَهُ ۚ وَذٰلِكَ الْفَوْزُ الْمُبِينُ ﴿١٦﴾

17. ಅಲ್ಲಾಹನು ನಿಮಗೆ ಯಾವುದೇ ರೀತಿಯ ಕೇಡನ್ನುಂಟು

وَإِنْ يَمْسَسْكَ اللّٰهُ بِضُرٍّ فَلَا كَاشِفَ

ಮಾಡಿದರೆ, ಅವನ ಹೊರತು ನಿಮ್ಮನ್ನು ಆ ಕೇಡಿನಿಂದ ರಕ್ಷಿಸುವವರು ಯಾರೂ ಇಲ್ಲ. ಅವನು ನಿಮಗೆ ಒಳಿತನ್ನುಂಟು ಮಾಡಿದರೆ, ಅವನು ಸಕಲ ಕಾರ್ಯಗಳಿಗೆ ಸಮರ್ಥನು.

لَهٗۤ اِلَّا هُوَ ؕ وَاِنْ يَّمْسَسْكَ بِخَيْرٍ فَهُوَ عَلٰى كُلِّ شَىْءٍ قَدِيْرٌ ﴿١٧﴾

18. ಅವನು ತನ್ನ ದಾಸರ ಮೇಲೆ ಸಂಪೂರ್ಣ ಅಧಿಕಾರವುಳ್ಳವನು ಮತ್ತು ಧೀಮಂತನೂ ಸೂಕ್ಷ್ಮಜ್ಞನೂ ಆಗಿರುತ್ತಾನೆ.

وَهُوَ الْقَاهِرُ فَوْقَ عِبَادِهٖ ؕ وَهُوَ الْحَكِيْمُ الْخَبِيْرُ ﴿١٨﴾

19. ಯಾರ ಸಾಕ್ಷ್ಯವು ಎಲ್ಲಕ್ಕಿಂತಲೂ ಶ್ರೇಷ್ಠವಾಗಿದೆ ಎಂದು ಇವರೊಡನೆ ಕೇಳಿರಿ- ನನ್ನ ಮತ್ತು ನಿಮ್ಮ ನಡುವೆ ಅಲ್ಲಾಹನು ಸಾಕ್ಷಿಯಾಗಿದ್ದಾನೆ ಮತ್ತು ಈ ಕುರ್‌ಆನ್ ನಿಮಗೂ ಇನ್ನು ಇದು ಯಾರಿಗೆಲ್ಲ ತಲುಪುವುದೋ ಅವರೆಲ್ಲರಿಗೂ ಎಚ್ಚರಿಕೆ ನೀಡಲಿಕ್ಕಾಗಿ ನನ್ನ ಕಡೆಗೆ 'ದಿವ್ಯವಾಣಿ' ಮೂಲಕ ಕಳುಹಿಸಲ್ಪಟ್ಟಿದೆ- ಎಂದು ಹೇಳಿರಿ. ಅಲ್ಲಾಹನೊಂದಿಗೆ ಇತರ ಆರಾಧ್ಯರೂ ಇರುವರೆಂದು ನಿಜಕ್ಕೂ ನೀವು ಸಾಕ್ಷ್ಯ ನೀಡಬಲ್ಲಿರಾ?[4] ನಾನಂತು ಎಷ್ಟು ಮಾತ್ರಕ್ಕೂ ಹಾಗೆ ಸಾಕ್ಷ್ಯ ನೀಡಲಾರೆನೆಂದು ಹೇಳಿರಿ. ನಿಶ್ಚಯವಾಗಿಯೂ ಅವನು ಏಕಮಾತ್ರ ಆರಾಧ್ಯನು ಮತ್ತು ನೀವು ಸಿಕ್ಕಿಬಿದ್ದಿರುವ 'ದೇವಸಹಭಾಗಿತ್ವ'ದಿಂದ ನಾನು ತೀರಾ ಮುಕ್ತನಾಗಿದ್ದೇನೆಂದು ಹೇಳಿರಿ.

قُلْ اَىُّ شَىْءٍ اَكْبَرُ شَهَادَةً ؕ قُلِ اللّٰهُ ۙ شَهِيْدٌۢ بَيْنِىْ وَبَيْنَكُمْ ۚ وَاُوْحِىَ اِلَىَّ هٰذَا الْقُرْاٰنُ لِاُنْذِرَكُمْ بِهٖ وَمَنْۢ بَلَغَ ؕ اَئِنَّكُمْ لَتَشْهَدُوْنَ اَنَّ مَعَ اللّٰهِ اٰلِهَةً اُخْرٰى ؕ قُلْ لَّاۤ اَشْهَدُ ۚ قُلْ اِنَّمَا هُوَ اِلٰهٌ وَّاحِدٌ وَّاِنَّنِىْ بَرِىْۤءٌ مِّمَّا تُشْرِكُوْنَ ﴿١٩﴾

20. ನಾವು ಯಾರಿಗೆ ಗ್ರಂಥ ದಯಪಾಲಿಸಿರುವೆವೋ ಅವರು ತಮ್ಮ ಪುತ್ರರನ್ನು ಗುರುತಿಸುವಂತೆಯೇ ಇದನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ. ಆದರೆ ತಮ್ಮನ್ನು ತಾವೇ ನಷ್ಟಕ್ಕೊಳಪಡಿಸಿ ಕೊಂಡವರು ಇದನ್ನು ಒಪ್ಪುವುದಿಲ್ಲ.

اَلَّذِيْنَ اٰتَيْنٰهُمُ الْكِتٰبَ يَعْرِفُوْنَهٗ كَمَا يَعْرِفُوْنَ اَبْنَآءَهُمْ ۘ اَلَّذِيْنَ خَسِرُوْۤا اَنْفُسَهُمْ فَهُمْ لَا يُؤْمِنُوْنَ ﴿٢٠﴾

21. ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವನಿಗಿಂತ ಅಥವಾ ಅಲ್ಲಾಹನ ನಿದರ್ಶನಗಳನ್ನು ಸುಳ್ಳಾಗಿಸುವವನಿಗಿಂತ ಹಿರಿಯ ಅಕ್ರಮಿ ಇನ್ನಾರಿರಬಹುದು? ನಿಶ್ಚಯವಾಗಿಯೂ ಇಂತಹ ಅಕ್ರಮಿಗಳು ಎಂದೆಂದಿಗೂ ಯಶಸ್ಸು ಹೊಂದಲಾರರು.

وَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِاٰيٰتِهٖ ؕ اِنَّهٗ لَا يُفْلِحُ الظّٰلِمُوْنَ ﴿٢١﴾

22. ನಾವು ಇವರನ್ನೆಲ್ಲ ಒಟ್ಟುಗೂಡಿಸುವಂದು 'ಬಹುದೇವವಿಶ್ವಾಸಿ' ಗಳೊಡನೆ, "ನೀವು ನಿಮ್ಮ ದೇವರೆಂದು ತಿಳಿದು ವೃಥಾ

وَيَوْمَ نَحْشُرُهُمْ جَمِيْعًا ثُمَّ نَقُوْلُ لِلَّذِيْنَ اَشْرَكُوْۤا اَيْنَ شُرَكَآؤُكُمُ الَّذِيْنَ

4. ಕೇವಲ ಕಲ್ಪನೆ ಅಥವಾ ಭ್ರಮೆಯ ಆಧಾರದಲ್ಲಿ ಯಾವುದರ ಬಗೆಗೂ ಸಾಕ್ಷ್ಯವಹಿಸಲು ಸಾಧ್ಯವಿಲ್ಲ. ಅದಕ್ಕಾಗಿ ವ್ಯಕ್ತಿ ಸಂಪೂರ್ಣ ವಿಶ್ವಾಸದೊಂದಿಗೆ 'ಇದು ಹೀಗಿದೆ' ಎಂದು ಹೇಳ ಬಲ್ಲಂತಹ ನಿಖರವಾದ ಜ್ಞಾನದ ಅಗತ್ಯವಿದೆ. ಒಟ್ಟಿನಲ್ಲಿ ಈ ಪ್ರಶ್ನೆಯ ಅರ್ಥ ಈ ಅನಂತ ವಿಶ್ವಕ್ಕೆ ದೇವನ ಹೊರತು ದಾಸ್ಯ ಮತ್ತು ಪೂಜೆಗೆ ಅರ್ಹವಾದಂತಹ ಪರಮಾಧಿಕಾರವುಳ್ಳ ಪ್ರಭು ಬೇರೊಬ್ಬನಿದ್ದಾನೆಯೇ? ಎಂದಾಗಿದೆ.

ಅಭಿಮಾನ ಪಡುತ್ತಿದ್ದ ಸಹಭಾಗಿಗಳು ಈಗ ಎಲ್ಲಿದ್ದಾರೆ? ಎಂದು ಕೇಳುವೆವು.

كُنْتُمْ تَزْعُمُونَ ﴿٢٢﴾

23. ಆಗ ಅವರು, "ಓ ನಮ್ಮ ಪ್ರಭೂ, ನಿನ್ನಾಣೆ ನಾವು 'ಬಹುದೇವ ವಿಶ್ವಾಸಿ'ಗಳಲ್ಲಾಗಿರಲಿಲ್ಲ" ಎಂಬ (ಸುಳ್ಳು ಹೇಳಿಕೆ ಕೊಡುವ) ಹೊರತು ಇನ್ನಾವ ಕುತಂತ್ರವನ್ನೂ ಹೂಡಲಾರರು.

ثُمَّ لَمْ تَكُنْ فِتْنَتُهُمْ إِلَّا أَنْ قَالُوا وَاللَّهِ رَبِّنَا مَا كُنَّا مُشْرِكِينَ ﴿٢٣﴾

24. ಆಗ ಅವರು ತಾವೇ ತಮ್ಮ ಮೇಲೆ ಹೇಗೆ ಸುಳ್ಳನ್ನು ಸೃಷ್ಟಿಸಿಕೊಳ್ಳುವರೆಂದು ನೋಡಿರಿ. ಅಲ್ಲಿ ಅವರ ಕೃತಕ ದೇವರುಗಳೆಲ್ಲ ಕಳೆದು ಹೋಗುವರು.

انْظُرْ كَيْفَ كَذَبُوا عَلَىٰ أَنْفُسِهِمْ وَضَلَّ عَنْهُمْ مَا كَانُوا يَفْتَرُونَ ﴿٢٤﴾

25. ಅವರಲ್ಲಿ ಕೆಲವರು ನಿಮ್ಮ ಮಾತನ್ನು ಕಿವಿಗೊಟ್ಟು ಕೇಳುವವರೂ ಇದ್ದಾರೆ. ಆದರೆ, ನಾವು ಅವರ ಹೃದಯಗಳ ಮೇಲೆ ತೆರೆ ಎಳೆದು ಬಿಟ್ಟಿದ್ದೇವೆ. ಇದರಿಂದಾಗಿ ಅವರು ಅದನ್ನು ಸ್ವಲ್ಪವೂ ಗ್ರಹಿಸುವುದಿಲ್ಲ ಮತ್ತು (ಎಲ್ಲವನ್ನೂ ಕೇಳಿದರೂ ಏನೂ ಕೇಳದಂತೆ) ಅವರ ಕಿವಿಗಳಲ್ಲಿ ತಡೆ ಇಟ್ಟಿದ್ದೇವೆ. ಅವರು ಯಾವ ನಿದರ್ಶನವನ್ನೇ ಕಂಡರೂ ಅದರ ಮೇಲೆ ವಿಶ್ವಾಸವಿಡಲಾರರು. ಎಲ್ಲಿಯವರೆಗೆಂದರೆ, ಅವರು ನಿಮ್ಮ ಬಳಿಗೆ ಬಂದು ನಿಮ್ಮೊಡನೆ ಜಗಳಾಡುವಾಗ ಅವರ ಪೈಕಿ ನಿರಾಕರಣೆಯ ನಿರ್ಧಾರವನ್ನೇ ಕೈಗೊಂಡವರು (ಎಲ್ಲವನ್ನೂ ಕೇಳಿದ ಬಳಿಕ) ಇದೊಂದು ಹಳೇ ಕಾಲದ ಕಟ್ಟುಕತೆಯೇ ವಿನಾ ಇನ್ನೇನೂ ಅಲ್ಲವೆಂದು ಹೇಳುತ್ತಾರೆ.

وَمِنْهُمْ مَنْ يَسْتَمِعُ إِلَيْكَ ۖ وَجَعَلْنَا عَلَىٰ قُلُوبِهِمْ أَكِنَّةً أَنْ يَفْقَهُوهُ وَفِي آذَانِهِمْ وَقْرًا ۚ وَإِنْ يَرَوْا كُلَّ آيَةٍ لَا يُؤْمِنُوا بِهَا ۚ حَتَّىٰ إِذَا جَاءُوكَ يُجَادِلُونَكَ يَقُولُ الَّذِينَ كَفَرُوا إِنْ هَٰذَا إِلَّا أَسَاطِيرُ الْأَوَّلِينَ ﴿٢٥﴾

26. ಅವರು ಈ ಸತ್ಯ ಸಂಗತಿಯನ್ನು ಸ್ವೀಕರಿಸದಂತೆ ಜನರನ್ನು ತಡೆಯುತ್ತಾರೆ ಮತ್ತು ಸ್ವತಃ ತಾವೂ ಇದರಿಂದ ದೂರ ಓಡುತ್ತಾರೆ. (ಈ ವರ್ತನೆಯ ಮೂಲಕ ನಿಮಗೆ ನಷ್ಟವನ್ನುಂಟು ಮಾಡುತ್ತಿದ್ದೇವೆಂದು ಅವರು ತಿಳಿದುಕೊಂಡಿದ್ದಾರೆ.) ವಸ್ತುತಃ ಅವರು ತಮ್ಮನ್ನು ತಾವೇ ವಿನಾಶಕ್ಕೊಳಪಡಿಸಿಕೊಳ್ಳುವ ಕಾರ್ಯ ಮಾಡುತ್ತಿದ್ದಾರೆ. ಆದರೆ ಅವರಿಗೆ ಅದರ ಬೋಧವಿಲ್ಲ.

وَهُمْ يَنْهَوْنَ عَنْهُ وَيَنْأَوْنَ عَنْهُ ۖ وَإِنْ يُهْلِكُونَ إِلَّا أَنْفُسَهُمْ وَمَا يَشْعُرُونَ ﴿٢٦﴾

27. ಅಕಟ! ಅವರು ನರಕಾಗ್ನಿಯ ಕಿನಾರೆಯಲ್ಲಿ ನಿಲ್ಲಿಸಲ್ಪಡುವಾಗಿನ ಅವರ ಅವಸ್ಥೆಯನ್ನು ನೋಡಲು ನಿಮಗೆ ಸಾಧ್ಯವಾಗುತ್ತಿದ್ದರೆ! ಆಗ ಅವರು, "ಅಕಟ! ನಾವು ಭೂಲೋಕಕ್ಕೆ ಪುನಃ ಮರಳಿಸಲ್ಪಟ್ಟು ನಮ್ಮ ಪ್ರಭುವಿನ ನಿದರ್ಶನಗಳನ್ನು ಸುಳ್ಳಾಗಿಸದೆ, ವಿಶ್ವಾಸವಿರಿಸಿ ಕೊಂಡವರಲ್ಲಿ ಸೇರುವಂಥ ದಾರಿಯೇನಾದರೂ ನಮಗೆ ಸಿಗುತ್ತಿದ್ದರೆ!" ಎಂದು ಹೇಳುವರು.

وَلَوْ تَرَىٰ إِذْ وُقِفُوا عَلَى النَّارِ فَقَالُوا يَا لَيْتَنَا نُرَدُّ وَلَا نُكَذِّبَ بِآيَاتِ رَبِّنَا وَنَكُونَ مِنَ الْمُؤْمِنِينَ ﴿٢٧﴾

بَلْ بَدَا لَهُمْ مَّا كَانُوا يُخْفُونَ مِن قَبْلُ ۖ وَلَوْ رُدُّوا لَعَادُوا لِمَا نُهُوا عَنْهُ وَإِنَّهُمْ لَكَاذِبُونَ ﴿٢٨﴾

28. ವಾಸ್ತವದಲ್ಲಿ ಅವರು ಮರೆ ಮಾಡಿದ್ದ ನಿಜಸ್ಥಿತಿಯು ಆಗ ಅವರ ಮುಂದೆ ಪ್ರತ್ಯಕ್ಷವಾಗಿ ಬಿಟ್ಟ ಕಾರಣದಿಂದ ಮಾತ್ರ ಅವರು ಹೀಗೆ ಹೇಳುವರು. ಅನ್ಯಥಾ ಅವರನ್ನು ಗತ ಜೀವನದ ಕಡೆಗೆ ಹಿಂದಿರುಗಿಸಿದರೆ ಅವರಿಗೆ ಮಾಡಬಾರದೆಂದು ವಿಧಿಸಲಾಗಿದ್ದೆಲ್ಲ ವನ್ನೂ ಅವರು ಪುನಃ ಮಾಡುವರು. ಅವರಂತೂ ಸುಳ್ಳುಗಾರರೇ ಆಗಿದ್ದಾರೆ.

وَقَالُوا إِنْ هِيَ إِلَّا حَيَاتُنَا الدُّنْيَا وَمَا نَحْنُ بِمَبْعُوثِينَ ﴿٢٩﴾

29. (ಆದುದರಿಂದ ತಮ್ಮ ಇಚ್ಛೆಯನ್ನು ಪ್ರಕಟಪಡಿಸುತ್ತಿರುವಾಗಲೂ ಸುಳ್ಳನ್ನೇ ಆಡುವರು.) ಜೀವನವೇನಿದ್ದರೂ ಕೇವಲ ನಮ್ಮ ಈ ಇಹಲೋಕದ ಜೀವನ ಮಾತ್ರ. ನಾವು ಮರಣಾನಂತರ ಎಷ್ಟು ಮಾತ್ರಕ್ಕೂ ಪುನಃ ಎಬ್ಬಿಸಲ್ಪಡಲಾರೆವೆಂದು ಇಂದು ಇವರು ಹೇಳುತ್ತಾರೆ.

وَلَوْ تَرَىٰ إِذْ وُقِفُوا عَلَىٰ رَبِّهِمْ ۚ قَالَ أَلَيْسَ هَٰذَا بِالْحَقِّ ۚ قَالُوا بَلَىٰ وَرَبِّنَا ۚ قَالَ فَذُوقُوا الْعَذَابَ بِمَا كُنتُمْ تَكْفُرُونَ ﴿٣٠﴾

30. ಇವರು ತಮ್ಮ ಪ್ರಭುವಿನ ಮುಂದೆ ನಿಲ್ಲಿಸಲ್ಪಡುವ ಆ ದೃಶ್ಯವನ್ನು ನೋಡಲು ನಿಮ್ಮಿಂದ ಸಾಧ್ಯವಾಗುತ್ತಿದ್ದರೆ! ಆಗ ಇವರ ಪ್ರಭು ಇವರೊಡನೆ, "ಇದು ನಿಜಸ್ಥಿತಿಯಲ್ಲವೇ?" ಎಂದು ಕೇಳುವನು, "ಹೌದು ನಮ್ಮ ಪ್ರಭೂ, ಇದು ನಿಜಸ್ಥಿತಿಯೇ" ಎಂದು ಅವರು ಹೇಳುವರು. ಅವನು, "ಸರಿ ಹಾಗಾದರೆ ಈಗ ನೀವು ನಿಜಸ್ಥಿತಿಯ ನಿರಾಕರಣೆಯ ಫಲವಾಗಿ ಯಾತನೆಯ ಸವಿಯನ್ನುಣ್ಣಿರಿ" ಎನ್ನುವನು.

قَدْ خَسِرَ الَّذِينَ كَذَّبُوا بِلِقَاءِ اللَّهِ ۖ حَتَّىٰ إِذَا جَاءَتْهُمُ السَّاعَةُ بَغْتَةً قَالُوا يَا حَسْرَتَنَا عَلَىٰ مَا فَرَّطْنَا فِيهَا وَهُمْ يَحْمِلُونَ أَوْزَارَهُمْ عَلَىٰ ظُهُورِهِمْ ۚ أَلَا سَاءَ مَا يَزِرُونَ ﴿٣١﴾

31. ಅಲ್ಲಾಹನನ್ನು ಭೇಟಿಯಾಗಲಿಕ್ಕಿರುವುದನ್ನು ಸುಳ್ಳಾಗಿಸುವವರು ನಷ್ಟಹೊಂದಿದರು. ಆ ಘಳಿಗೆಯು ಹಠಾತ್ತನೆ ಬಂದು ಬಿಡುವಾಗ, "ಅಯ್ಯೋ, ಈ ವಿಷಯದಲ್ಲಿ ನಮ್ಮಿಂದ ಎಂತಹ ಪ್ರಮಾದ ವಾಯಿತು" ಎಂದು ಇವರೇ ಹೇಳುವರು. ಇವರು ತಮ್ಮ ಬೆನ್ನ ಮೇಲೆ ಪಾಪಗಳ ಮೂಟೆಯನ್ನು ಹೇರಿಕೊಂಡ ಸ್ಥಿತಿಯಲ್ಲಿರುವರು. ನೋಡಿರಿ, ಎಷ್ಟು ನಿಕೃಷ್ಟ ಹೊರೆಯನ್ನು ಇವರು ಹೊತ್ತಿರುವರು!

وَمَا الْحَيَاةُ الدُّنْيَا إِلَّا لَعِبٌ وَلَهْوٌ ۖ وَلَلدَّارُ الْآخِرَةُ خَيْرٌ لِّلَّذِينَ يَتَّقُونَ ۗ أَفَلَا تَعْقِلُونَ ﴿٣٢﴾

32. ಇಹಲೋಕದ ಜೀವನವಂತು ಒಂದು ಆಟ ಮತ್ತು ವಿನೋದ ವಾಗಿದೆ.[5] ವಾಸ್ತವದಲ್ಲಿ ನಷ್ಟದಿಂದ ಪಾರಾಗಲು ಬಯಸುವವರಿಗೆ ಪರಲೋಕದ ವಾಸಸ್ಥಾನವೇ ಲೇಸು. ಇನ್ನೇನು ನೀವು ವಿಚಾರ ಮಾಡುವುದಿಲ್ಲವೇ?

5. ಲೌಕಿಕ ಜೀವನಕ್ಕೆ ಯಾವುದೇ ಗಾಂಭೀರ್ಯವಿಲ್ಲ. ಅದನ್ನು ಕೇವಲ ಆಟ-ವಿನೋದಗಳಂತೆ ನಿಮಗೆ ನೀಡಲಾಗಿದೆ ಎಂದು ಇದರ ಅರ್ಥವಲ್ಲ. ಪರಲೋಕದ ಶಾಶ್ವತ ಜೀವನಕ್ಕೆ ಹೋಲಿಸಿದರೆ ಈ ಲೌಕಿಕ ಜೀವನ, ಒಬ್ಬ ವ್ಯಕ್ತಿ ಸ್ವಲ್ಪ ಹೊತ್ತು ಆಟ ವಿನೋದಗಳಲ್ಲಿ ಮನಸ್ಸನ್ನು ಮುದಗೊಳಿಸಿ ಮತ್ತೆ ತನ್ನ ನೈಜ ಗಂಭೀರ ಚಟುವಟಿಕೆಗಳ ಕಡೆಗೆ ಮರಳುವಂತಿದೆ ಎಂಬುದು ಇದರ ಇಂಗಿತ. ಲೌಕಿಕ ಜೀವನವನ್ನು ಆಟ-ವಿನೋದಗಳಿಗೆ ಹೋಲಿಸಲಿಕ್ಕೆ ಮತ್ತೊಂದು ಕಾರಣವೂ ಇದೆ. ಅದಾವುದೆಂದರೆ ಇಲ್ಲಿ ವಾಸ್ತವಿಕತೆಗಳು

33. ಓ ಪೈಗಂಬರರೇ, ಇವರು ಸೃಷ್ಟಿಸಿ ಹೇಳುತ್ತಿರುವ ಮಾತುಗಳಿಂದ ನಿಮಗೆ ಖೇದವಾಗುತ್ತಿರುವುದು ನಮಗೆ ಗೊತ್ತಿದೆ. ಆದರೆ ಇವರು ನಿರಾಕರಿಸುತ್ತಿರುವುದು ನಿಮ್ಮನ್ನಲ್ಲ. ಈ ಅಕ್ರಮಿಗಳು ವಾಸ್ತವದಲ್ಲಿ ಅಲ್ಲಾಹನ ನಿದರ್ಶನಗಳನ್ನು ನಿರಾಕರಿಸುತ್ತಿದ್ದಾರೆ.[6]

قَدْ نَعْلَمُ إِنَّهُ لَيَحْزُنُكَ الَّذِي يَقُولُونَ فَإِنَّهُمْ لَا يُكَذِّبُونَكَ وَلَٰكِنَّ الظَّالِمِينَ بِآيَاتِ اللَّهِ يَجْحَدُونَ ﴿٣٣﴾

34. ನಿಮಗಿಂತ ಮೊದಲೂ ಅನೇಕ ಸಂದೇಶವಾಹಕರು, ಸುಳ್ಳಾಗಿಸಲ್ಪಟ್ಟಿರುತ್ತಾರೆ. ಆದರೆ ಈ ಸುಳ್ಳಾಗಿಸುವಿಕೆ ಮತ್ತು ಅವರಿಗೆ ಕೊಡಲ್ಪಟ್ಟ ಹಿಂಸೆಯ ಬಗ್ಗೆ ಅವರು ತಾಳ್ಮೆ ವಹಿಸಿದರು. ಕೊನೆಗೆ ಅವರಿಗೆ ನಮ್ಮ ಸಹಾಯ ಒದಗಿತು. ಅಲ್ಲಾಹನ ವಚನಗಳನ್ನು ಬದಲಾಯಿಸುವ ಶಕ್ತಿ ಯಾರಲ್ಲೂ ಇಲ್ಲ. ಗತ ಸಂದೇಶವಾಹಕರಿಗೆ ಏನೇನು ಸಂಭವಿಸಿತ್ತೆಂಬ ವೃತ್ತಾಂತಗಳು ನಿಮಗೆ ತಲುಪಿರುತ್ತವೆ.

وَلَقَدْ كُذِّبَتْ رُسُلٌ مِّن قَبْلِكَ فَصَبَرُوا عَلَىٰ مَا كُذِّبُوا وَأُوذُوا حَتَّىٰ أَتَاهُمْ نَصْرُنَا ۚ وَلَا مُبَدِّلَ لِكَلِمَاتِ اللَّهِ ۚ وَلَقَدْ جَاءَكَ مِن نَّبَإِ الْمُرْسَلِينَ ﴿٣٤﴾

35. ಇಷ್ಟಾಗಿಯೂ ಇವರ ಅಶ್ರದ್ಧೆಯನ್ನು ನಿಮ್ಮಿಂದ ಸಹಿಸಲಾಗುವುದಿಲ್ಲವೆಂದಾದರೆ, ನಿಮ್ಮಲ್ಲೇನಾದರೂ ಬಲವಿದ್ದರೆ ನೆಲದಲ್ಲೊಂದು ಸುರಂಗವನ್ನು ಹುಡುಕಿರಿ ಅಥವಾ ಆಕಾಶಕ್ಕೆ ಏಣಿಯಿಡಿರಿ ಮತ್ತು ಇವರ ಬಳಿಗೆ ದೃಷ್ಟಾಂತವೇನಾದರೂ ತರಲು ಪ್ರಯತ್ನಿಸಿರಿ. ಅಲ್ಲಾಹನು ಇಚ್ಛಿಸುತ್ತಿದ್ದರೆ ಇವರೆಲ್ಲರನ್ನೂ ಸನ್ಮಾರ್ಗದಲ್ಲಿ ಒಟ್ಟುಗೂಡಿಸಲು ಶಕ್ತನಾಗಿದ್ದನು. ಆದುದರಿಂದ ಅಜ್ಞಾನಿಗಳಲ್ಲಾಗಬೇಡಿರಿ.[7]

وَإِن كَانَ كَبُرَ عَلَيْكَ إِعْرَاضُهُمْ فَإِنِ اسْتَطَعْتَ أَن تَبْتَغِيَ نَفَقًا فِي الْأَرْضِ أَوْ سُلَّمًا فِي السَّمَاءِ فَتَأْتِيَهُم بِآيَةٍ ۚ وَلَوْ شَاءَ اللَّهُ لَجَمَعَهُمْ عَلَى الْهُدَىٰ ۚ فَلَا تَكُونَنَّ مِنَ الْجَاهِلِينَ ﴿٣٥﴾

ಗೋಪ್ಯವಾಗಿರುವುದರಿಂದ ಅಂತರ್ ದೃಷ್ಟಿಯಿಲ್ಲದ, ಬಹಿರಂಗವನ್ನು ಮಾತ್ರ ನೋಡುವ ವ್ಯಕ್ತಿಗಳನ್ನು ತಪ್ಪುಕಲ್ಪನೆಗಳಿಗೀಡು ಮಾಡುವಂತಹ ಧಾರಾಳ ಸಾಧನಗಳು ಲಭ್ಯವಿದೆ. ಇಂತಹ ತಪ್ಪುಕಲ್ಪನೆಗಳಲ್ಲಿ ಸಿಲುಕಿ ಜನರು ಜೀವನದ ಪರಮಾರ್ಥಕ್ಕೆ ವಿರುದ್ಧವಾದ ಎಂತಹ ವಿಚಿತ್ರ ಧೋರಣೆಗಳನ್ನು ಅನುಸರಿಸುತ್ತಾರೆಂದರೆ ಅವರ ಜೀವನ ಬರೇ ಆಟ-ವಿನೋದಗಳಂತಾಗಿ ಬಿಡುತ್ತದೆ.

6. ವಾಸ್ತವದಲ್ಲಿ ಪ್ರವಾದಿ ಮುಹಮ್ಮದ್(ಸ) ಅಲ್ಲಾಹನ ಸೂಕ್ತಗಳನ್ನು ಓದಿ ಕೇಳಿಸಲು ಆರಂಭಿಸುವ ತನಕ, ಅವರ ಜನಾಂಗದ ಎಲ್ಲರೂ ಅವರನ್ನು 'ಅಮೀನ್'(ಪ್ರಾಮಾಣಿಕ) ಮತ್ತು 'ಸಾದಿಕ್' (ಸತ್ಯಸಂಧ) ಎಂದು ಕರೆಯುತ್ತಿದ್ದರು. ಅವರ ಸತ್ಯಸಂಧತೆಯ ಬಗ್ಗೆ ಅವರಿಗೆ ಪೂರ್ಣ ವಿಶ್ವಾಸವಿತ್ತು. ಆದರೆ ಅವರು ಅಲ್ಲಾಹನ ಸಂದೇಶವನ್ನು ತಲುಪಿಸಲು ಆರಂಭಿಸಿದ ತಕ್ಷಣ ಅವರ ಜನಾಂಗದವರು ಅವರನ್ನು ನಿರಾಕರಿಸಿದರು. ಆದರೆ ಈ ಬದಲಾದ ಪರಿಸ್ಥಿತಿಯಲ್ಲೂ ವೈಯಕ್ತಿಕವಾಗಿ ಅವರನ್ನು ಸುಳ್ಳುಗಾರನೆಂದು ಸಾರುವ ಧೈರ್ಯ ಯಾರಿಗೂ ಇರಲಿಲ್ಲ. ಯಾವುದೇ ಲೌಕಿಕ ವ್ಯವಹಾರಗಳ ವೇಳೆ ಅವರು ಸುಳ್ಳಾಡಿದ್ದಾರೆ ಎಂಬಂತಹ ಆರೋಪವನ್ನು ಅವರ ಕಟ್ಟಾ ವಿರೋಧಿಯೂ ಎಂದೂ ಅವರ ಮೇಲೆ ಹೊರಿಸಿರಲಿಲ್ಲ. ಅವರ ಪ್ರವಾದಿತ್ವವನ್ನು ಮಾತ್ರ ಅವರು ಸುಳ್ಳಾಗಿಸಿದರು. ಅಬೂಜಹಲ್ ಅವರ ಕಡು ವೈರಿಯಾಗಿದ್ದ ಹ. ಅಲೀಯವರು(ರ) ಉಲ್ಲೇಖಿಸಿರುವಂತೆ ಅವನು ಒಮ್ಮೆ ಪ್ರವಾದಿವರ್ಯರೊಂದಿಗೆ(ಸ) ಮಾತನಾಡುತ್ತಾ ಹೀಗೆಂದನು, "ನಾವು ನಿಮ್ಮನ್ನು ಸುಳ್ಳು ಹೇಳುವವರೆನ್ನುವುದಿಲ್ಲ. ಆದರೆ ನೀವು ಮುಂದಿಡುತ್ತಿರುವ ವಿಚಾರ ಸುಳ್ಳೆನ್ನುತ್ತೇವೆ."

7. ಅರ್ಥಾತ್- ಇವರು ವಿಶ್ವಾಸವಿಡುವಂತಾಗಲು ಯಾವುದಾದರೂ ದೃಷ್ಟಾಂತವನ್ನು ತೋರಿಸಬೇಕು ಎಂಬ ಬಗ್ಗೆ ಚಿಂತಿತರಾಗದಿರಿ. ಮಾನವರೆಲ್ಲರೂ ಸನ್ಮಾರ್ಗಿಗಳಾಗಿಯೇ ತೀರಬೇಕು ಎಂದು ಅಲ್ಲಾಹನು ಬಯಸಿದ್ದರೆ ಅವನು ಎಲ್ಲರನ್ನೂ ಸತ್ಯವಿಶ್ವಾಸಿಗಳಾಗಿಯೇ ಸೃಷ್ಟಿಸುತ್ತಿದ್ದ. ಹಾಗಿದ್ದರೆ ಪ್ರವಾದಿಗಳನ್ನು ಕಳುಹಿಸುವ ಹಾಗೂ ವಿಶ್ವಾಸಿಗಳು ಮತ್ತು ಅವಿಶ್ವಾಸಿಗಳ ನಡುವೆ ಸಂಘರ್ಷವೇರ್ಪಡಿಸುವ ಔಚಿತ್ಯವೇ ಇರಲಿಲ್ಲ.

36. ನಿಶ್ಚಯವಾಗಿಯೂ ಆಲಿಸುವವರು ಮಾತ್ರ ಸತ್ಯಾಹ್ವಾನಕ್ಕೆ ಓಗೊಡುತ್ತಾರೆ. ಇನ್ನು ಸತ್ತವರ ಮಾತು[8] ಅವರನ್ನಂತು ಅಲ್ಲಾಹನು ಸಮಾಧಿಗಳಿಂದಲೇ ಎಬ್ಬಿಸುವನು. ತರುವಾಯ ಅವರು (ಅವನ ನ್ಯಾಯಾಲಯದ ಮುಂದೆ ಹಾಜರಾಗಲಿಕ್ಕಾಗಿ) ಮರಳಿ ತರಲ್ಪಡು ವರು.

إِنَّمَا يَسْتَجِيبُ الَّذِينَ يَسْمَعُونَ ۘ وَالْمَوْتَىٰ يَبْعَثُهُمُ اللَّهُ ثُمَّ إِلَيْهِ يُرْجَعُونَ ﴿٣٦﴾

37. ಈ ಪ್ರವಾದಿಯ ಮೇಲೆ ಏನಾದರೂ ಕುರುಹು ಏಕೆ ಇಳಿಸಲ್ಪಡಲಿಲ್ಲವೆಂದು ಇವರು ಕೇಳುತ್ತಾರೆ. ಹೇಳಿರಿ, ಅಲ್ಲಾಹನು ಕುರುಹನ್ನಿಳಿಸಲು ಸಂಪೂರ್ಣ ಶಕ್ತನಾಗಿದ್ದಾನೆ. ಆದರೆ ಇವರಲ್ಲಿ ಹೆಚ್ಚಿನವರು ತಿಳಿಗೇಡಿಗಳಾಗಿದ್ದಾರೆ.[9]

وَقَالُوا لَوْلَا نُزِّلَ عَلَيْهِ آيَةٌ مِّن رَّبِّهِ ۚ قُلْ إِنَّ اللَّهَ قَادِرٌ عَلَىٰ أَن يُنَزِّلَ آيَةً وَلَٰكِنَّ أَكْثَرَهُمْ لَا يَعْلَمُونَ ﴿٣٧﴾

38. ಭೂಮಿಯ ಮೇಲೆ ಚಲಿಸುವ ಪ್ರಾಣಿಗಳನ್ನೂ ವಾಯುವಿನಲ್ಲಿ ರೆಕ್ಕೆಗಳಿಂದ ಹಾರಾಡುವ ಪಕ್ಷಿಗಳನ್ನೂ ನೋಡಿಕೊಳ್ಳಿರಿ. ಇವೆಲ್ಲವೂ ನಿಮ್ಮಂತೆಯೇ ಇರುವ ವರ್ಗಗಳು. ನಾವು ಅವುಗಳ ವಿಧಿಲಿಖಿತದಲ್ಲೇನೂ ಲೋಪಗೊಳಿಸಲಿಲ್ಲ. ಅನಂತರ ಇವೆಲ್ಲ ತಮ್ಮ ಪ್ರಭುವಿನ ಕಡೆಗೆ ಒಟ್ಟುಗೂಡಿಸಲ್ಪಡುತ್ತವೆ.

وَمَا مِن دَابَّةٍ فِي الْأَرْضِ وَلَا طَائِرٍ يَطِيرُ بِجَنَاحَيْهِ إِلَّا أُمَمٌ أَمْثَالُكُم ۚ مَّا فَرَّطْنَا فِي الْكِتَابِ مِن شَيْءٍ ۚ ثُمَّ إِلَىٰ رَبِّهِمْ يُحْشَرُونَ ﴿٣٨﴾

39. ಆದರೆ ನಮ್ಮ ನಿದರ್ಶನಗಳನ್ನು ಸುಳ್ಳಾಗಿಸುವವರು ಕಿವುಡರೂ ಮೂಕರೂ ಆಗಿರುತ್ತಾರೆ. ಅಂಧಕಾರಗಳಲ್ಲಿ ಬಿದ್ದಿರುತ್ತಾರೆ. ಅಲ್ಲಾಹನು ತನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದವರನ್ನು ಸನ್ಮಾರ್ಗಕ್ಕೆ ಹಾಕಿ ಬಿಡುತ್ತಾನೆ.[10]

وَالَّذِينَ كَذَّبُوا بِآيَاتِنَا صُمٌّ وَبُكْمٌ فِي الظُّلُمَاتِ ۗ مَن يَشَإِ اللَّهُ يُضْلِلْهُ وَمَن يَشَأْ يَجْعَلْهُ عَلَىٰ صِرَاطٍ مُّسْتَقِيمٍ ﴿٣٩﴾

40. ಇವರೊಡನೆ ಹೇಳಿರಿ- ನೀವು ತುಸು ಆಲೋಚಿಸಿ ಹೇಳಿರಿ. ನಿಮ್ಮ ಮೇಲೆ ಎಂದಾದರೂ ಅಲ್ಲಾಹನ ಕಡೆಯಿಂದ

قُلْ أَرَأَيْتَكُمْ إِنْ أَتَاكُمْ عَذَابُ اللَّهِ أَوْ أَتَتْكُمُ السَّاعَةُ أَغَيْرَ اللَّهِ تَدْعُونَ

وقف غفران

وقفٌ منزل

8. ಆರಿಸುವವರು ಎಂದರೆ ಆತ್ಮಸಾಕ್ಷಿ ಜಾಗೃತವಾಗಿರುವವರು. ತಮ್ಮ ಬುದ್ಧಿ ಮತ್ತು ವಿಚಾರಕ್ಕೆ ತಿಲಾಂಜಲಿಯಿತ್ತು ಹೃದಯದ ಕವಾಟಗಳಿಗೆ ಪಕ್ಷಪಾತ ಮತ್ತು ನಿಷ್ಕ್ರಿಯತೆಯ ಬೀಗ ಜಡಿದುಕೊಳ್ಳದೇ ಇರುವವರು. ಮರಣ ಹೊಂದಿರುವವರೆಂದರೆ ಅಂಧಾನುಯಾಯಿಯಾಗಿ ಹಿಂದಿನವರು ಅನುಸರಿಸಿದ ಮಾರ್ಗವನ್ನೇ ಕುರುಡನಂತೆ ಅನುಸರಿಸುವವರು. ಅದಕ್ಕೆ ವ್ಯತಿರಿಕ್ತವಾದ ಯಾವುದೇ ಮಾತನ್ನು ಅದು ಅಪ್ಪಟ ಸತ್ಯವೇ ಆಗಿದ್ದರೂ ಅವರು ಸ್ವೀಕರಿಸಲು ಸಿದ್ಧರಾಗುವುದಿಲ್ಲ.

9. ಕುರುಹು ಎಂದರೆ ಅನುಭವಕ್ಕೆ ಬರುವ ಪವಾಡ. ಅಲ್ಲಾಹನು ತನ್ನ ಕುರುಹನ್ನು ತೋರಿಸದೇ ಇರಲು ಕಾರಣ ಅಸಾಮರ್ಥ್ಯವಲ್ಲ. ಬದಲಾಗಿ ಅದಕ್ಕೆ ಬೇರೆಯೇ ಕಾರಣವಿದೆ. ತಮ್ಮ ಅಜ್ಞಾನದಿಂದಾಗಿ ಅವರಿಗದು ತಿಳಿದಿಲ್ಲ ಎಂದು ತಿಳಿಯಪಡಿಸುವುದೇ ಈ ಸೂಕ್ತದ ಉದ್ದೇಶ.

10. ಅಲ್ಲಾಹನು ಪಥಭ್ರಷ್ಟಗೊಳಿಸುವುದೆಂದರೆ ಅಜ್ಞಾನಪ್ರಿಯನಾದ ಒಬ್ಬ ವ್ಯಕ್ತಿಗೆ ಅಲ್ಲಾಹನ ದೃಷ್ಟಾಂತಗಳ ಬಗ್ಗೆ ಅಧ್ಯಯನ ಮಾಡುವ ಅವಕಾಶವನ್ನು ಕರುಣಿಸದೇ ಇರುವುದಾಗಿದೆ. ಪಕ್ಷಪಾತ ಪೀಡಿತನಾದ ಮತ್ತು ವಾಸ್ತವಪ್ರಿಯನಲ್ಲದ ವಿದ್ಯಾರ್ಥಿಯೊಬ್ಬನು ಸತ್ಯದ ದೃಷ್ಟಾಂತಗಳನ್ನು ಕಂಡರೂ ಅದು ಅವನ ಕಣ್ಣಿನಿಂದ ಮರೆಯಾಗಿರುವುದು. ತಪ್ಪುತಿಳುವಳಿಕೆಗಳಲ್ಲಿ ಸಿಲುಕಿಸುವಂತಹ ವಸ್ತುಗಳು ಅವನನ್ನು ಸತ್ಯದಿಂದ ಬಹಳ ದೂರ ಕೊಂಡೊಯ್ಯುವಂತೆ ಮಾಡುವುದು. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನು ಸನ್ಮಾರ್ಗದರ್ಶನ ನೀಡುವುದೆಂದರೆ ಸತ್ಯಾನ್ವೇಷಕನೊಬ್ಬನಿಗೆ ಜ್ಞಾನ ಮೂಲಗಳಿಂದ ಪ್ರಯೋಜನ ಪಡೆಯುವ ಅವಕಾಶವನ್ನು ಕರುಣಿಸುವುದು. ಅಲ್ಲಾಹನ ದೃಷ್ಟಾಂತಗಳಲ್ಲಿ ಸತ್ಯವನ್ನು ತಲುಪುವಂತಹ ಗುರುತುಗಳು ಅವನಿಗೆ ಗೋಚರಿಸುವಂತೆ ಮಾಡುವುದು.

ಯಾವುದಾದರೊಂದು ವಿಪತ್ತು ಬಂದೆರಗಿದಾಗ ಅಥವಾ ನಿಮ್ಮ ಕೊನೆಯ ಘಳಿಗೆಯು ಬಂದಾಗ ನೀವು ಅಲ್ಲಾಹನನ್ನು ಬಿಟ್ಟು ಇನ್ನಾರನ್ನಾದರೂ ಕೂಗಿ ಕರೆಯುತ್ತೀರಾ? ನೀವು ಸತ್ಯವಾದಿಗಳಾಗಿದ್ದರೆ ಹೇಳಿರಿ.

إِن كُنتُمْ صَٰدِقِينَ ﴿٤٠﴾

41. ಆಗ ನೀವು ಅಲ್ಲಾಹನನ್ನೇ ಕೂಗಿ ಕರೆಯುತ್ತೀರಿ. ಅನಂತರ ಅವನಿಚ್ಛಿಸಿದರೆ ಈ ವಿಪತ್ತನ್ನು ನಿಮ್ಮ ಮೇಲಿನಿಂದ ದೂರೀಕರಿಸುತ್ತಾನೆ. ಇಂತಹ ಸಂದರ್ಭಗಳಲ್ಲಿ ನೀವು ಸ್ವಯಂ ಕಲ್ಪಿಸಿ ಕೊಂಡಿರುವ ಭಾಗೀದಾರರನ್ನು ಮರೆತು ಬಿಡುತ್ತೀರಿ.[11]

بَلْ إِيَّاهُ تَدْعُونَ فَيَكْشِفُ مَا تَدْعُونَ إِلَيْهِ إِن شَآءَ وَتَنسَوْنَ مَا تُشْرِكُونَ ﴿٤١﴾

42. ನಾವು ನಿಮಗಿಂತ ಮೊದಲು ಅನೇಕ ಜನಾಂಗಗಳಿಗೆ ಸಂದೇಶವಾಹಕರನ್ನು ಕಳುಹಿಸಿದೆವು. ಆ ಜನಾಂಗಗಳು ವಿನಯದಿಂದ ನಮ್ಮ ಮುಂದೆ ಬಾಗುವಂತೆ ಅವರನ್ನು ಕಷ್ಟ ಕಾರ್ಪಣ್ಯಗಳಲ್ಲಿ ಸಿಲುಕಿಸಿದೆವು.

وَلَقَدْ أَرْسَلْنَآ إِلَىٰٓ أُمَمٍ مِّن قَبْلِكَ فَأَخَذْنَٰهُم بِٱلْبَأْسَآءِ وَٱلضَّرَّآءِ لَعَلَّهُمْ يَتَضَرَّعُونَ ﴿٤٢﴾

43. ನಮ್ಮ ಕಡೆಯಿಂದ ಅವರ ಮೇಲೆ ಕಷ್ಟ ಬಂದಾಗ ಅವರೇಕೆ ವಿನಯ ತೋರಲಿಲ್ಲ? ಆದರೆ ಅವರ ಹೃದಯಗಳು ಇನ್ನಷ್ಟು ಕಠಿಣವಾದವು ಮತ್ತು ನೀವು ಮಾಡುತ್ತಿರುವುದೆಲ್ಲಾ ಚೆನ್ನಾಗಿದೆ ಯೆಂದು ಶೈತಾನನು ಅವರನ್ನು ಸಮಾಧಾನ ಪಡಿಸಿದನು.

فَلَوْلَآ إِذْ جَآءَهُم بَأْسُنَا تَضَرَّعُوا۟ وَلَٰكِن قَسَتْ قُلُوبُهُمْ وَزَيَّنَ لَهُمُ ٱلشَّيْطَٰنُ مَا كَانُوا۟ يَعْمَلُونَ ﴿٤٣﴾

44. ಅನಂತರ ಅವರು, ತಮಗೆ ಕೊಡಲ್ಪಟ್ಟ ಬುದ್ಧಿವಾದವನ್ನು ಮರೆತು ಬಿಟ್ಟಾಗ ನಾವು ಅವರಿಗಾಗಿ ಎಲ್ಲ ವಿಧದ ಸಂಪನ್ನತೆಯ ದ್ವಾರಗಳನ್ನು ತೆರೆದು ಬಿಟ್ಟೆವು. ಅವರಿಗೆ ದಯಪಾಲಿಸಲ್ಪಟ್ಟ ಕೊಡುಗೆಗಳಲ್ಲಿ ಅವರು ಚೆನ್ನಾಗಿ ಮಗ್ನರಾಗಿದ್ದಾಗ ನಾವು ಹಠಾತ್ತನೆ ಅವರನ್ನು ಹಿಡಿದು ಕೊಂಡೆವು. ಆಗ ಅವರು ಯಾವುದೇ ಒಳಿತಿನ ಬಗ್ಗೆ ನಿರಾಶರಾಗಿದ್ದರು.

فَلَمَّا نَسُوا۟ مَا ذُكِّرُوا۟ بِهِۦ فَتَحْنَا عَلَيْهِمْ أَبْوَٰبَ كُلِّ شَىْءٍ حَتَّىٰٓ إِذَا فَرِحُوا۟ بِمَآ أُوتُوٓا۟ أَخَذْنَٰهُم بَغْتَةً فَإِذَا هُم مُّبْلِسُونَ ﴿٤٤﴾

45. ಹೀಗೆ ಅಕ್ರಮವೆಸಗಿದವರ ಮೂಲವೇ ಕಡಿದು ಹಾಕಲ್ಪಟ್ಟಿತು. ಸರ್ವಸ್ತುತಿಯು ಸರ್ವಲೋಕಗಳ ಪಾಲಕ ಪ್ರಭುವಾದ ಅಲ್ಲಾಹನಿಗೆ.

فَقُطِعَ دَابِرُ ٱلْقَوْمِ ٱلَّذِينَ ظَلَمُوا۟ ۚ وَٱلْحَمْدُ لِلَّهِ رَبِّ ٱلْعَٰلَمِينَ ﴿٤٥﴾

11. ಅರ್ಥಾತ್- ಈ ಕುರುಹು ನಿಮ್ಮ ವ್ಯಕ್ತಿತ್ವದಲ್ಲೇ ಅಡಕವಾಗಿದೆ. ಯಾವುದಾದರೂ ದೊಡ್ಡ ಆತಂಕ ನಿಮಗೆ ಎದುರಾದರೆ, ಮರಣ ತನ್ನ ಭೀಕರ ಸ್ವರೂಪದೊಂದಿಗೆ ನಿಮ್ಮ ಮುಂದೆ ಬಂದು ನಿಂತಾಗ ದೇವನಲ್ಲದೆ ಬೇರಾರ ಆಶ್ರಯವೂ ನಿಮಗೆ ಕಾಣಿಸುವುದಿಲ್ಲ. ದೊಡ್ಡ ದೊಡ್ಡ ಬಹುದೇವಾರಾಧಕರೂ ಆಗ ತಮ್ಮ ಆರಾಧ್ಯರುಗಳನ್ನು ಮರೆತು ಏಕದೇವನನ್ನು ಕೂಗಿ ಕರೆಯುತ್ತಾರೆ. ಅಪ್ಪಟ ನಾಸ್ತಿಕನಾಗಿರುವವನೂ ಅಂತಹ ಸಂದರ್ಭದಲ್ಲಿ ದೇವನ ಮುಂದೆ ಕೈ ಚಾಚಿ ಮೊರೆಯಿಡುತ್ತಾನೆ. ದೇವೋಪಾಸನೆ ಮತ್ತು ಏಕದೇವತ್ವದ ಸಾಕ್ಷ್ಯವಹಿಸುವ ಗುಣ ಪ್ರತಿಯೊಬ್ಬನ ವ್ಯಕ್ತಿತ್ವದಲ್ಲೂ ಇದೆ ಎಂಬುದಕ್ಕೆ ಇದುವೇ ಅತ್ಯಂತ ದೊಡ್ಡ ಪ್ರಮಾಣವಾಗಿದೆ. ಅದರ ಮೇಲೆ ಅಲಕ್ಷ್ಯ ಮತ್ತು ಅಜ್ಞಾನದ ಎಷ್ಟೇ ತೆರೆಗಳನ್ನು ಎಳೆದರೂ ಸರಿಯೇ. ಯಾವಾಗಲಾದರೊಮ್ಮೆ ಅದು ಮೇಲೆದ್ದು ಗೋಚರಿಸಿಯೇ ತೀರುತ್ತದೆ.

46. ಓ ಪೈಗಂಬರರೇ, ಇವರೊಡನೆ ಕೇಳಿರಿ- ಅಲ್ಲಾಹನು ನಿಮ್ಮ ದೃಷ್ಟಿಯನ್ನೂ ಶ್ರವಣವನ್ನೂ ನಿಮ್ಮಿಂದ ಕಸಿದುಕೊಂಡು ನಿಮ್ಮ ಹೃದಯಗಳಿಗೆ ಮುದ್ರೆಯೊತ್ತಿಬಿಟ್ಟರೆ[12] ಈ ಶಕ್ತಿಗಳನ್ನು ನಿಮಗೆ ಮರಳಿ ಕೊಡಿಸಲು ಅಲ್ಲಾಹನ ಹೊರತು ಇನ್ನಾವ ದೇವನಿದ್ದಾನೆ? ನಾವು ಪದೇ ಪದೇ ನಮ್ಮ ನಿದರ್ಶನಗಳನ್ನು ಹೇಗೆ ಇವರ ಮುಂದೆ ಇರಿಸುತ್ತೇವೆ ಮತ್ತು ಇವರು ಅವುಗಳನ್ನು ಕಂಡೂ ಕಾಣದಂತೆ ಹೇಗೆ ವರ್ತಿಸುತ್ತಾರೆಂಬುದನ್ನು ನೋಡಿರಿ.

قُلْ أَرَأَيْتُمْ إِنْ أَخَذَ اللَّهُ سَمْعَكُمْ وَأَبْصَارَكُمْ وَخَتَمَ عَلَىٰ قُلُوبِكُمْ مَنْ إِلَٰهٌ غَيْرُ اللَّهِ يَأْتِيكُمْ بِهِ ۗ انْظُرْ كَيْفَ نُصَرِّفُ الْآيَاتِ ثُمَّ هُمْ يَصْدِفُونَ ﴿٤٦﴾

47. ಹೇಳಿರಿ- ಅಲ್ಲಾಹನ ಕಡೆಯಿಂದ ನಿಮ್ಮ ಮೇಲೆ ಅಕಸ್ಮಾತ್ ಅಥವಾ ಪ್ರತ್ಯಕ್ಷ ಯಾತನೆ ಬಂದೆರಗಿದರೆ ಅತ್ಯಾಚಾರಿಗಳ ವಿನಾ ಇನ್ನಾರಾದರೂ ನಾಶ ಹೊಂದುವರೇ ಎಂದು ಯೋಚಿಸಿದಿರಾ?

قُلْ أَرَأَيْتَكُمْ إِنْ أَتَاكُمْ عَذَابُ اللَّهِ بَغْتَةً أَوْ جَهْرَةً هَلْ يُهْلَكُ إِلَّا الْقَوْمُ الظَّالِمُونَ ﴿٤٧﴾

48. ನಾವು ಎಲ್ಲ ಸಂದೇಶವಾಹಕರನ್ನು ಸಜ್ಜನರಿಗೆ ಸುವಾರ್ತೆ ನೀಡುವವರೂ ದುರ್ಜನರಿಗೆ ಎಚ್ಚರಿಗೆ ಕೊಡುವವರೂ ಆಗಿ ಮಾತ್ರ ಕಳುಹಿಸುತ್ತೇವೆ. ಆ ಬಳಿಕ ಅವರ ಮಾತನ್ನು ನಂಬಿ, ತಮ್ಮ ಕರ್ಮವಿಧಾನವನ್ನು ಸರಿಪಡಿಸಿಕೊಂಡವರಿಗೆ ಯಾವುದೇ ಭಯ ಮತ್ತು ವ್ಯಥೆಯ ಸಂಭವವೂ ಇರುವುದಿಲ್ಲ.

وَمَا نُرْسِلُ الْمُرْسَلِينَ إِلَّا مُبَشِّرِينَ وَمُنْذِرِينَ ۖ فَمَنْ آمَنَ وَأَصْلَحَ فَلَا خَوْفٌ عَلَيْهِمْ وَلَا هُمْ يَحْزَنُونَ ﴿٤٨﴾

49. ನಮ್ಮ ನಿದರ್ಶನಗಳನ್ನು ಸುಳ್ಳಾಗಿಸುವವರು ತಮ್ಮ ನಿರಾಕರಣೆಯ ಫಲವಾಗಿ ಶಿಕ್ಷೆ ಅನುಭವಿಸಿಯೇ ತೀರುವರು.

وَالَّذِينَ كَذَّبُوا بِآيَاتِنَا يَمَسُّهُمُ الْعَذَابُ بِمَا كَانُوا يَفْسُقُونَ ﴿٤٩﴾

50. ಓ ಪೈಗಂಬರರೇ, ಇವರೊಡನೆ ಹೇಳಿರಿ- "ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ನಾನು ಪರೋಕ್ಷಜ್ಞಾನಿಯೂ ಅಲ್ಲ. ನಾನು ದೇವಚರನೆಂದೂ ಹೇಳುವುದಿಲ್ಲ. ನಾನು ನನ್ನ ಮೇಲೆ ಅವತೀರ್ಣಗೊಳ್ಳುತ್ತಿರುವ 'ದಿವ್ಯವಾಣಿ'ಯ ಅನುಸರಣೆಯನ್ನು ಮಾತ್ರ ಮಾಡುತ್ತಿದ್ದೇನೆ" ಮತ್ತು ಇವರೊಡನೆ, "ಕುರುಡನೂ ದೃಷ್ಟಿಯುಳ್ಳವನೂ ಸರಿಸಮಾನನಾಗಿರಲು ಸಾಧ್ಯವೇ? ನೀವು ವಿವೇಚಿಸುವುದಿಲ್ಲವೇ?" ಎಂದು ಕೇಳಿರಿ.

قُلْ لَا أَقُولُ لَكُمْ عِنْدِي خَزَائِنُ اللَّهِ وَلَا أَعْلَمُ الْغَيْبَ وَلَا أَقُولُ لَكُمْ إِنِّي مَلَكٌ ۖ إِنْ أَتَّبِعُ إِلَّا مَا يُوحَىٰ إِلَيَّ ۚ قُلْ هَلْ يَسْتَوِي الْأَعْمَىٰ وَالْبَصِيرُ ۚ أَفَلَا تَتَفَكَّرُونَ ﴿٥٠﴾

51 ಓ ಪೈಗಂಬರರೇ, ತಮ್ಮ ಪ್ರಭುವಿನ ಮುಂದೆ ಆತನ ಹೊರತು (ಅಧಿಕಾರಬಲವುಳ್ಳ) ಸಹಾಯಕರು ಅಥವಾ ಶಿಫಾರಸು

وَأَنْذِرْ بِهِ الَّذِينَ يَخَافُونَ أَنْ يُحْشَرُوا إِلَىٰ رَبِّهِمْ ۙ لَيْسَ لَهُمْ مِنْ دُونِهِ وَلِيٌّ وَلَا

12. ಮನಸ್ಸಿನ ಮೇಲೆ ಬೀಗ ಜಡಿಯುವುದೆಂದರೆ ಯೋಚಿಸುವ ಮತ್ತು ತಿಳಿಯುವ ಸಾಮರ್ಥ್ಯಗಳನ್ನು ಕಿತ್ತುಕೊಳ್ಳುವುದಾಗಿದೆ.

ಮಾಡುವವರು ಯಾರೂ ಇಲ್ಲದಂತಹ ಸ್ಥಿತಿಯಲ್ಲಿ ಹಾಜರು ಗೊಳಿಸಲ್ಪಡಲಿದ್ದೇವೆಂದು ಭಯಪಡುವವರಿಗೆ ನೀವು ಇದರ (ಈ ದಿವ್ಯ ಬೋಧನೆಯ) ಮೂಲಕ ಉಪದೇಶ ನೀಡಿರಿ. ಪ್ರಾಯಶಃ (ಈ ಉಪದೇಶದಿಂದ ಜಾಗೃತರಾಗಿ) ಇವರು ದೇವಭಯದ ನೀತಿ ಅನುಸರಿಸಲೂ ಬಹುದು.

شَفِيعٌ لَّعَلَّهُمْ يَتَّقُونَ ﴿٥١﴾

52. ಯಾರು ತಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಪ್ರಾರ್ಥಿಸುತ್ತಾರೋ ಹಾಗೂ ಅವನ ಸಂಪ್ರೀತಿಯನ್ನರಸುತ್ತಿರು ತ್ತಾರೋ ಅವರನ್ನು ನಿಮ್ಮಿಂದ ದೂರಕ್ಕೆ ಅಟ್ಟಬೇಡಿರಿ. ಅವರ ಲೆಕ್ಕದಲ್ಲಿನ ಯಾವ ಭಾರವೂ ನಿಮ್ಮ ಮೇಲಿಲ್ಲ ಮತ್ತು ನಿಮ್ಮ ಲೆಕ್ಕದಲ್ಲಿನ ಯಾವ ಭಾರವೂ ಅವರ ಮೇಲಿಲ್ಲ. ಹೀಗಿದ್ದರೂ ನೀವು ಅವರನ್ನು ದೂರಕ್ಕೆ ಅಟ್ಟಿದರೆ ನೀವು ಅಕ್ರಮಿಗಳಲ್ಲಿ ಗಣಿಸಲ್ಪಡುವಿರಿ.

وَلَا تَطْرُدِ الَّذِينَ يَدْعُونَ رَبَّهُم بِالْغَدَاةِ وَالْعَشِيِّ يُرِيدُونَ وَجْهَهُ ۖ مَا عَلَيْكَ مِنْ حِسَابِهِم مِّن شَيْءٍ وَمَا مِنْ حِسَابِكَ عَلَيْهِم مِّن شَيْءٍ فَتَطْرُدَهُمْ فَتَكُونَ مِنَ الظَّالِمِينَ ﴿٥٢﴾

53. ವಾಸ್ತವದಲ್ಲಿ ನಾವು ಇದೇ ರೀತಿಯಲ್ಲಿ ಇವರ ಪೈಕಿ ಕೆಲವರನ್ನು ಕೆಲವರ ಮೂಲಕ ಪರೀಕ್ಷೆಗೊಳಪಡಿಸಿದ್ದೇವೆ.[13] ಇದು ಅವರು ಇವರನ್ನು ಕಂಡು, "ನಮ್ಮ ಪೈಕಿ ಅಲ್ಲಾಹನ ಅನುಗ್ರಹವಾದುದು ಇವರ ಮೇಲೆಯೇ?" ಎಂದು ಕೇಳುವಂತಾಗಲಿಕ್ಕಾಗಿ. ಹೌದು, ಅಲ್ಲಾಹನು ತನ್ನ ಕೃತಜ್ಞ ದಾಸರನ್ನು ಇವರಿಗಿಂತ ಚೆನ್ನಾಗಿ ಅರಿಯುವುದಿಲ್ಲವೇ?

وَكَذَٰلِكَ فَتَنَّا بَعْضَهُم بِبَعْضٍ لِّيَقُولُوا أَهَٰؤُلَاءِ مَنَّ اللَّهُ عَلَيْهِم مِّن بَيْنِنَا ۗ أَلَيْسَ اللَّهُ بِأَعْلَمَ بِالشَّاكِرِينَ ﴿٥٣﴾

54. ನಮ್ಮ ನಿದರ್ಶನಗಳ ಮೇಲೆ ವಿಶ್ವಾಸವಿಡುವವರು ನಿಮ್ಮ ಬಳಿಗೆ ಬಂದಾಗ ಅವರೊಡನೆ ಹೇಳಿರಿ- ನಿಮ್ಮ ಮೇಲೆ ಶಾಂತಿ ಇದೆ. ನಿಮ್ಮ ಪ್ರಭು ಔದಾರ್ಯ ನೀತಿಯನ್ನು ತನ್ನ ಮೇಲೆ ವಿಧಿಸಿಕೊಂಡಿದ್ದಾನೆ. ನಿಮ್ಮಲ್ಲಾರಾದರೂ ತಿಳಿಗೇಡಿತನದಿಂದ ದೋಷಮಾಡಿ, ಆ ಬಳಿಕ ಪಶ್ಚಾತ್ತಾಪ ಪಟ್ಟರೆ ಮತ್ತು ತನ್ನನ್ನು ಸುಧಾರಿಸಿಕೊಂಡರೆ, ಅವನು (ಅಲ್ಲಾಹನು) ಅವನನ್ನು ಕ್ಷಮಿಸುತ್ತಾನೆ ಮತ್ತು ಮೃದುನೀತಿಯನ್ನನುಸರಿಸುತ್ತಾನೆ.[14]

وَإِذَا جَاءَكَ الَّذِينَ يُؤْمِنُونَ بِآيَاتِنَا فَقُلْ سَلَامٌ عَلَيْكُمْ ۖ كَتَبَ رَبُّكُمْ عَلَىٰ نَفْسِهِ الرَّحْمَةَ ۖ أَنَّهُ مَنْ عَمِلَ مِنكُمْ سُوءًا بِجَهَالَةٍ ثُمَّ تَابَ مِن بَعْدِهِ وَأَصْلَحَ فَأَنَّهُ غَفُورٌ رَّحِيمٌ ﴿٥٤﴾

13. ಅರ್ಥಾತ್- ಸಮಾಜದಲ್ಲಿ ಕೆಳವರ್ಗದ ಬಡವರು ಮತ್ತು ನಿರ್ಗತಿಕರಿಗೆ ಮೊದಲು ಸತ್ಯವಿಶ್ವಾಸದ ಸೌಭಾಗ್ಯವನ್ನು ನೀಡುವ ಮೂಲಕ ನಾವು ಸೊತ್ತು ಮತ್ತು ಘನತೆಯ ಬಗ್ಗೆ ಅಹಂಭಾವ ಹೊಂದಿರುವವರನ್ನು ಪರೀಕ್ಷೆಗೆ ಗುರಿಪಡಿಸಿದ್ದೇವೆ.

14. ಆ ಕಾಲದಲ್ಲಿ ಪ್ರವಾದಿವರ್ಯರ(ಸ) ಮೇಲೆ ವಿಶ್ವಾಸವಿರಿಸಿದ್ದ ವ್ಯಕ್ತಿಗಳಲ್ಲಿ ಅನೇಕರು ಅಜ್ಞಾನ ಕಾಲದಲ್ಲಿ ಮಹಾ ಪಾಪಗಳನ್ನೆಸಗಿದವರಾಗಿದ್ದರು. ಇಸ್ಲಾಮ್ ಸ್ವೀಕಾರದ ನಂತರ ಅವರ ಜೀವನ ಸಂಪೂರ್ಣವಾಗಿ ಬದಲಾಗಿತ್ತು. ಆದರೆ ಇಸ್ಲಾಮಿನ ವಿರೋಧಿಗಳು ಅವರನ್ನು ಅವರ ಗತಕಾಲದ ದೋಷ ಮತ್ತು ವರ್ತನೆಗಳ ಬಗ್ಗೆ ನೆನಪಿಸಿ ಪೀಡಿಸುತ್ತಿದ್ದರು. ಅದಕ್ಕಾಗಿ ಸತ್ಯವಿಶ್ವಾಸಿಗಳಿಗೆ ಸಾಂತ್ವನ ನೀಡುವಂತೆ ಇಲ್ಲಿ ಹೇಳಲಾಗುತ್ತಿದೆ. ಪಶ್ಚಾತ್ತಾಪ ಪಟ್ಟು ತನ್ನನ್ನು ಸುಧಾರಿಸಿಕೊಂಡವರನ್ನು ಅವರ ಗತ ಪಾಪಗಳ ಕಾರಣಕ್ಕಾಗಿ ಹಿಡಿಯುವಂತಹ ಜಾಯಮಾನ ಅಲ್ಲಾಹನದಲ್ಲ ಎಂದು ಅವರೊಡನೆ ಹೇಳಿರಿ ಎನ್ನಲಾಗುತ್ತಿದೆ.

55. (ಇದಕ್ಕೆ ಅವನ ಔದಾರ್ಯವೇ ಕಾರಣವಾಗಿರುತ್ತದೆ). ಹೀಗೆ ನಾವು ಅಪರಾಧಿಗಳ ಮಾರ್ಗವು ಸ್ಪಷ್ಟವಾಗಲಿಕ್ಕಾಗಿ ನಮ್ಮ ನಿದರ್ಶನಗಳನ್ನು ವಿವರಿಸುತ್ತೇವೆ.

وَكَذَٰلِكَ نُفَصِّلُ الْآيَاتِ وَلِتَسْتَبِينَ
سَبِيلُ الْمُجْرِمِينَ ﴿٥٥﴾

56. ಓ ಪೈಗಂಬರರೇ, ಇವರೊಡನೆ ಹೇಳಿರಿ- ನೀವು ಅಲ್ಲಾಹನ ಹೊರತು ಇತರ ಯಾರನ್ನು ಕರೆಯುತ್ತೀರೋ ಅವರ ಆರಾಧನೆ ಮಾಡುವುದನ್ನು ನನಗೆ ನಿಷೇಧಿಸಲಾಗಿದೆ. ಹೇಳಿರಿ- ನಾನು ನಿಮ್ಮ ಇಚ್ಛೆಗಳ ಅನುಸರಣೆ ಮಾಡಲಾರೆನು. ನಾನು ಹಾಗೆ ಮಾಡಿದರೆ ಪಥಭ್ರಷ್ಟನಾದೇನು, ಸನ್ಮಾರ್ಗ ಹೊಂದದವರಲ್ಲಾದೇನು.

قُلْ إِنِّي نُهِيتُ أَنْ أَعْبُدَ الَّذِينَ تَدْعُونَ
مِنْ دُونِ اللَّهِ ۚ قُلْ لَا أَتَّبِعُ أَهْوَاءَكُمْ ۙ قَدْ
ضَلَلْتُ إِذًا وَمَا أَنَا مِنَ الْمُهْتَدِينَ ﴿٥٦﴾

57. ಹೇಳಿರಿ- ನಾನು ನನ್ನ ಪ್ರಭುವಿನ ವತಿಯಿಂದ ಒಂದು ಪ್ರತ್ಯಕ್ಷ ಪ್ರಮಾಣದ ಮೇಲೆ ಸ್ಥಿರವಾಗಿದ್ದೇನೆ ಮತ್ತು ನೀವು ಅದನ್ನು ಸುಳ್ಳಾಗಿಸಿ ಬಿಟ್ಟಿರುವಿರಿ. ನೀವು ತವಕಪಡುತ್ತಿರುವ ವಿಷಯವೀಗ ನನ್ನ ಅಧಿಕಾರದಲ್ಲಿಲ್ಲ. ತೀರ್ಮಾನದ ಸಂಪೂರ್ಣ ಅಧಿಕಾರ ಅಲ್ಲಾಹನಿಗಿದೆ. ಅವನೇ ಸತ್ಯ ಸಂಗತಿಯನ್ನು ತಿಳಿಸುತ್ತಾನೆ. ಅವನು ತೀರ್ಪು ನೀಡುವವರಲ್ಲಿ ಅತ್ಯುತ್ತಮನು.

قُلْ إِنِّي عَلَىٰ بَيِّنَةٍ مِنْ رَبِّي وَكَذَّبْتُمْ
بِهِ ۚ مَا عِنْدِي مَا تَسْتَعْجِلُونَ بِهِ ۚ إِنِ
الْحُكْمُ إِلَّا لِلَّهِ ۖ يَقُصُّ الْحَقَّ ۖ وَهُوَ
خَيْرُ الْفَاصِلِينَ ﴿٥٧﴾

58. ಹೇಳಿರಿ- ನೀವು ತವಕಪಡುತ್ತಿರುವ ವಸ್ತು ನನ್ನ ಅಧಿಕಾರದಲ್ಲಿರುತ್ತಿದ್ದರೆ ನನ್ನ ಮತ್ತು ನಿಮ್ಮ ನಡುವೆ ಎಂದೋ ತೀರ್ಮಾನವಾಗಿ ಬಿಡುತ್ತಿತ್ತು. ಆದರೆ ಅಕ್ರಮಿಗಳ ವಿಷಯದಲ್ಲಿ ಹೇಗೆ ವರ್ತಿಸಬೇಕೆಂದು ಅಲ್ಲಾಹನು ಚೆನ್ನಾಗಿ ಅರಿತಿರುತ್ತಾನೆ.

قُلْ لَوْ أَنَّ عِنْدِي مَا تَسْتَعْجِلُونَ بِهِ
لَقُضِيَ الْأَمْرُ بَيْنِي وَبَيْنَكُمْ ۗ وَاللَّهُ
أَعْلَمُ بِالظَّالِمِينَ ﴿٥٨﴾

59. ಪರೋಕ್ಷದ ಬೀಗದ ಕೈಗಳು ಅವನ ವಶದಲ್ಲೇ ಇವೆ. ಅವುಗಳನ್ನು ಅವನ ಹೊರತು ಇನ್ನಾರೂ ಅರಿಯರು. ನೆಲ ಜಲಗಳಲ್ಲಿರುವುದೆಲ್ಲವನ್ನೂ ಅವನು ತಿಳಿದಿರುತ್ತಾನೆ. ಮರದಿಂದ ಉದುರುವ ಒಂದು ಎಲೆಯ ಕುರಿತೂ ಭೂಮಿಯ ಅಂಧಕಾರಗಳಲ್ಲಿ ಹುದುಗಿರುವ ಒಂದು ಧಾನ್ಯದ ಬಗೆಗೂ ಅವನಿಗೆ ತಿಳಿಯದೆ ಇಲ್ಲ. ಒಣ-ಹಸಿಗಳೆಲ್ಲವೂ ಒಂದು ತೆರೆದ ಗ್ರಂಥದಲ್ಲಿ ಲಿಖಿತಗೊಂಡಿದೆ.

وَعِنْدَهُ مَفَاتِحُ الْغَيْبِ لَا يَعْلَمُهَا إِلَّا
هُوَ ۚ وَيَعْلَمُ مَا فِي الْبَرِّ وَالْبَحْرِ ۚ وَمَا
تَسْقُطُ مِنْ وَرَقَةٍ إِلَّا يَعْلَمُهَا وَلَا حَبَّةٍ
فِي ظُلُمَاتِ الْأَرْضِ وَلَا رَطْبٍ وَلَا يَابِسٍ
إِلَّا فِي كِتَابٍ مُبِينٍ ﴿٥٩﴾

60. ಅವನೇ ರಾತ್ರಿಕಾಲದಲ್ಲಿ ನಿಮ್ಮ ಪ್ರಾಣಹರಣ ಮಾಡುತ್ತಾನೆ ಮತ್ತು ಹಗಲಲ್ಲಿ ನೀವು ಮಾಡುತ್ತಿರುವುದನ್ನೆಲ್ಲ ಅವನು ಅರಿಯುತ್ತಾನೆ. ಅನಂತರ ಜೀವನಾವಧಿಯು ಪೂರ್ಣಗೊಳ್ಳಲಿಕ್ಕಾಗಿ ಮರುದಿನ ನಿಮ್ಮನ್ನು ಅದೇ ವ್ಯವಹಾರ ಜಗತ್ತಿಗೆ ಮರಳಿಸುತ್ತಾನೆ. ಕಟ್ಟಕಡೆಗೆ ನಿಮ್ಮ ಮರಳುವಿಕೆಯು ಆತನ ಕಡೆಗೇ ಇದೆ. ಅನಂತರ, ನೀವು ಏನು ಮಾಡುತ್ತಿದ್ದಿರೆಂಬುದನ್ನು ಅವನು ನಿಮಗೆ ತಿಳಿಸುವನು.

وَهُوَ الَّذِي يَتَوَفَّاكُمْ بِاللَّيْلِ وَيَعْلَمُ مَا
جَرَحْتُمْ بِالنَّهَارِ ثُمَّ يَبْعَثُكُمْ فِيهِ
لِيُقْضَىٰ أَجَلٌ مُسَمًّى ۖ ثُمَّ إِلَيْهِ مَرْجِعُكُمْ
ثُمَّ يُنَبِّئُكُمْ بِمَا كُنْتُمْ تَعْمَلُونَ ﴿٦٠﴾

61. ಅವನು ತನ್ನ ದಾಸರ ಮೇಲೆ ಸಂಪೂರ್ಣ ಅಧಿಕಾರವುಳ್ಳವನಾಗಿದ್ದಾನೆ ಮತ್ತು ನಿಮ್ಮ ಮೇಲೆ ಮೇಲ್ನೋಟವಿರಿಸುವವರನ್ನು (ದೇವಚರರನ್ನು) ನೇಮಕ ಮಾಡಿ ಕಳುಹಿಸುತ್ತಾನೆ. ಎಷ್ಟರ ವರೆಗೆಂದರೆ ನಿಮ್ಮಲ್ಲಿ ಯಾರಿಗಾದರೂ ಮರಣ ಆಸನ್ನವಾದಾಗ ಅವನಿಂದ ಕಳುಹಿಸಲ್ಪಟ್ಟ ದೇವಚರರು ಅವನ ಪ್ರಾಣಹರಣ ಮಾಡುತ್ತಾರೆ ಮತ್ತು ತಮ್ಮ ಕರ್ತವ್ಯವನ್ನು ನೆರವೇರಿಸುವುದರಲ್ಲಿ ಅವರು ಸ್ವಲ್ಪವೂ ಲೋಪ ಮಾಡುವುದಿಲ್ಲ.

وَهُوَ الْقَاهِرُ فَوْقَ عِبَادِهِ وَيُرْسِلُ عَلَيْكُمْ حَفَظَةً حَتَّىٰ إِذَا جَاءَ أَحَدَكُمُ الْمَوْتُ تَوَفَّتْهُ رُسُلُنَا وَهُمْ لَا يُفَرِّطُونَ ﴿٦١﴾

62. ತರುವಾಯ ಸರ್ವರೂ ತಮ್ಮ ನೈಜ ಮಾಲಕನಾದ ಅಲ್ಲಾಹನ ಕಡೆಗೆ ಹಿಂದಿರುಗಿಸಲ್ಪಡುವರು. ಎಚ್ಚರಿಕೆ! ತೀರ್ಮಾನದ ಸಕಲ ಅಧಿಕಾರವು ಅವನಿಗೇ ಪ್ರಾಪ್ತವಿದೆ ಮತ್ತು ಅವನು ಅತಿ ಶೀಘ್ರವಾಗಿ ಲೆಕ್ಕ ಪರಿಶೋಧಿಸುವವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.

ثُمَّ رُدُّوا إِلَى اللَّهِ مَوْلَاهُمُ الْحَقِّ ۚ أَلَا لَهُ الْحُكْمُ وَهُوَ أَسْرَعُ الْحَاسِبِينَ ﴿٦٢﴾

63. ಓ ಪೈಗಂಬರರೇ, ಇವರೊಡನೆ ಕೇಳಿರಿ- ನಿಮ್ಮನ್ನು ನೆಲಜಲಗಳ ಅಂಧಕಾರಗಳಲ್ಲಿ ಅಪಾಯಗಳಿಂದ ರಕ್ಷಿಸುವವನು ಯಾರು? ನೀವು (ಕಷ್ಟಕಾಲದಲ್ಲಿ) ನಡುಗುತ್ತಲೂ ಮೌನವಾಗಿಯೂ ಯಾರೊಡನೆ ಪ್ರಾರ್ಥಿಸುತ್ತೀರಿ? ಈ ಅನಿಷ್ಟದಿಂದ ನಮ್ಮನ್ನು ಪಾರು ಮಾಡಿಬಿಟ್ಟರೆ ನಾವು ನಿಶ್ಚಯವಾಗಿಯೂ ಕೃತಜ್ಞರಾಗುವೆವೆಂದು ಯಾರೊಡನೆ ಹೇಳುತ್ತೀರಿ?

قُلْ مَنْ يُنَجِّيكُمْ مِنْ ظُلُمَاتِ الْبَرِّ وَالْبَحْرِ تَدْعُونَهُ تَضَرُّعًا وَخُفْيَةً لَئِنْ أَنْجَانَا مِنْ هَٰذِهِ لَنَكُونَنَّ مِنَ الشَّاكِرِينَ ﴿٦٣﴾

64. ಹೇಳಿರಿ- ನಿಮ್ಮನ್ನು ಇದರಿಂದಲೂ ಸಕಲ ವಿಪತ್ತುಗಳಿಂದಲೂ ರಕ್ಷಿಸುವವನು ಅಲ್ಲಾಹ್. ಇಷ್ಟಾಗಿಯೂ ನೀವು ಇತರರನ್ನು ಅವನ ಭಾಗೀದಾರರನ್ನಾಗಿ ಮಾಡುತ್ತೀರಿ.[15]

قُلِ اللَّهُ يُنَجِّيكُمْ مِنْهَا وَمِنْ كُلِّ كَرْبٍ ثُمَّ أَنْتُمْ تُشْرِكُونَ ﴿٦٤﴾

15. ಅರ್ಥಾತ್- ಅಲ್ಲಾಹನೇ ಸರ್ವಾಧಿಕಾರಿಯಾಗಿದ್ದಾನೆ. ಪರಮಾಧಿಕಾರ ಉಳ್ಳವನು ಅವನು ಮಾತ್ರ. ಒಳಿತು-ಕೆಡುಕುಗಳೆಲ್ಲವೂ ಅವನ ನಿಯಂತ್ರಣದಲ್ಲಿವೆ. ಎಲ್ಲರ ವಿಧಿಯೂ ಅವನ ಹಸ್ತದಲ್ಲಿದೆ. ನಿಮ್ಮ ಮನಸ್ಸಿನಲ್ಲೇ ಇದಕ್ಕೆ ಪುರಾವೆಗಳಿವೆ. ನಿಮಗೆ ಕಷ್ಟಕಾಲ ಎದುರಾದಾಗ ಮತ್ತು ಭೌತಿಕ ಆಶ್ರಯಗಳೆಲ್ಲವೂ ಕಳಚಿ ಬೀಳುತ್ತಿರುವುದನ್ನು ಕಂಡಾಗ ನೀವು ದಾರಿಗಾಣದೆ ಅವನೆಡೆಗೇ ಮರಳುತ್ತೀರಿ. ಆದರೆ ಇಷ್ಟು ಸ್ಪಷ್ಟವಾದ ಲಕ್ಷಣ ಇದ್ದಾಗಲೂ ನೀವು ನಿರಾಧಾರವಾಗಿ ಬೇರೆಯವರನ್ನು ಅವನಿಗೆ ಸಹಭಾಗಿಗಳನ್ನಾಗಿ ಮಾಡಿದಿರಿ. ಅವನ ಜೀವನಾಧಾರದಿಂದ ನೀವು ಬೆಳೆಯುತ್ತೀರಿ. ಆದರೆ ಇತರರನ್ನು ಅನ್ನದಾತರನ್ನಾಗಿ ಮಾಡಿಕೊಳ್ಳುತ್ತೀರಿ. ಅವನ ಅನುಗ್ರಹದಿಂದ ನೀವು ನೆರವು ಪಡೆಯುತ್ತೀರಿ. ಆದರೆ ಬೇರೆಯವರನ್ನು ಸಹಾಯಕರೆಂದು ಕರೆಯುತ್ತೀರಿ. ನೀವು ಅವನ ದಾಸರೇ ಆಗಿದ್ದರೂ ಬೇರೆಯವರ ದಾಸ್ಯ ಕೈಗೊಳ್ಳುತ್ತೀರಿ. ಅವನೇ ನಿಮ್ಮ ಕಷ್ಟಹರಣ ಮಾಡುತ್ತಾನೆ. ಕಷ್ಟಕಾಲದಲ್ಲಿ ಅವನ ಮುಂದೆಯೇ ನೀವು ಮೊರೆಯಿಡುತ್ತೀರಿ. ಆದರೆ ಆ ಘಳಿಗೆ ಕಳೆದರೆ ಇತರರು ನಿಮ್ಮ ಸಂಕಟಹರರಾಗಿ ಮಾರ್ಪಡುತ್ತಾರೆ. ಇತರರ ಹೆಸರಲ್ಲಿಯೇ ನೀವು ಹರಕೆ ಇಡಲಾರಂಭಿಸುತ್ತೀರಿ.

65. ಹೇಳಿರಿ- ನಿಮಗೆ ನಿಮ್ಮ ಮೇಲ್ಭಾಗದಿಂದ ಅಥವಾ ನಿಮ್ಮ ಪಾದಗಳ ಕೆಳಗಿಂದ ಯಾವುದಾದರೂ ಯಾತನೆಯನ್ನು ಎರಗಿಸಲಿಕ್ಕೂ ಅಥವಾ ನಿಮ್ಮನ್ನು ಪಂಗಡಗಳನ್ನಾಗಿ ವಿಭಾಗಿಸಿ, ಒಂದು ಪಂಗಡಕ್ಕೆ ಇನ್ನೊಂದು ಪಂಗಡದ ಬಲದ ಸವಿಯನ್ನು ಉಣಿಸಲಿಕ್ಕೂ ಅವನು ಶಕ್ತನಾಗಿದ್ದಾನೆ. ಇವರು ವಾಸ್ತವಿಕತೆಯನ್ನು ಅರಿತುಕೊಳ್ಳಲೆಂದು ಯಾವ ರೀತಿಯಲ್ಲಿ ನಾವು, ಪದೇಪದೇ ವಿವಿಧ ರೀತಿಗಳಿಂದ ನಮ್ಮ ನಿದರ್ಶನಗಳನ್ನು ಅವರ ಮುಂದಿರಿಸುತ್ತಿರುವೆ ಎಂಬುದನ್ನು ನೋಡಿರಿ.

قُلْ هُوَ الْقَادِرُ عَلَىٰ أَنْ يَبْعَثَ عَلَيْكُمْ عَذَابًا مِنْ فَوْقِكُمْ أَوْ مِنْ تَحْتِ أَرْجُلِكُمْ أَوْ يَلْبِسَكُمْ شِيَعًا وَيُذِيقَ بَعْضَكُمْ بَأْسَ بَعْضٍ ۗ انْظُرْ كَيْفَ نُصَرِّفُ الْآيَاتِ لَعَلَّهُمْ يَفْقَهُونَ ﴿٦٥﴾

66. ನಿಮ್ಮ ಜನಾಂಗವು ಅದನ್ನು ನಿರಾಕರಿಸುತ್ತಲಿದೆ. ವಸ್ತುತಃ ಅದು ಪರಮಾರ್ಥವಾಗಿರುತ್ತದೆ. ಅವರೊಡನೆ ಹೇಳಿರಿ, "ನಾನು ನಿಮ್ಮ ಮೇಲೆ ಹೊಣೆಗಾರನಾಗಿ ನೇಮಿಸಲ್ಪಟ್ಟಿಲ್ಲ.[16]

وَكَذَّبَ بِهِ قَوْمُكَ وَهُوَ الْحَقُّ ۚ قُلْ لَسْتُ عَلَيْكُمْ بِوَكِيلٍ ﴿٦٦﴾

67. ಪ್ರತಿಯೊಂದು ವಿಷಯವೂ ಪ್ರಕಟಗೊಳ್ಳುವ ಒಂದು ಕಾಲವು ನಿಶ್ಚಿತವಿದೆ. ಪರಿಣಾಮವು ಸದ್ಯದಲ್ಲೇ ನಿಮಗೆ ಸ್ವತಃ ತಿಳಿದು ಬರುವುದು."

لِكُلِّ نَبَإٍ مُسْتَقَرٌّ ۚ وَسَوْفَ تَعْلَمُونَ ﴿٦٧﴾

68. ಓ ಪೈಗಂಬರರೇ, ಜನರು ನಮ್ಮ ವಚನಗಳಲ್ಲಿ ದೋಷಾನ್ವೇಷಣೆಗೈಯುತ್ತಿರುವುದನ್ನು ನೀವು ಕಂಡಾಗ, ಅವರು ಈ ಮಾತುಕತೆಯನ್ನು ಬಿಟ್ಟು ಬೇರೆ ಮಾತುಗಳಲ್ಲಿ ತೊಡಗುವ ವರೆಗೂ ಅವರ ಬಳಿಯಿಂದ ದೂರ ಸರಿಯಿರಿ. ಒಂದು ವೇಳೆ ಶೈತಾನನು ನಿಮ್ಮನ್ನು ಮರವೆಗೆ ಒಳಪಡಿಸಿದರೆ ನಿಮಗೆ ಈ ಪ್ರಮಾದವು ಮನವರಿಕೆಯಾದ ಬಳಿಕ ಪುನಃ ಇಂತಹ ಅಕ್ರಮಿಗಳ ಹತ್ತಿರ ಕುಳಿತುಕೊಳ್ಳಬೇಡಿರಿ.

وَإِذَا رَأَيْتَ الَّذِينَ يَخُوضُونَ فِي آيَاتِنَا فَأَعْرِضْ عَنْهُمْ حَتَّىٰ يَخُوضُوا فِي حَدِيثٍ غَيْرِهِ ۚ وَإِمَّا يُنْسِيَنَّكَ الشَّيْطَانُ فَلَا تَقْعُدْ بَعْدَ الذِّكْرَىٰ مَعَ الْقَوْمِ الظَّالِمِينَ ﴿٦٨﴾

69. ಅವರ ಲೆಕ್ಕದಲ್ಲಿರುವ ಯಾವ ವಿಷಯದ ಹೊಣೆಗಾರಿಕೆಯೂ ಧರ್ಮನಿಷ್ಠರ ಮೇಲಿಲ್ಲ. ಆದರೆ ಅವರು ಅಪರಾಧ ನೀತಿಯಿಂದ ದೂರ ಸರಿಯಬಹುದೆಂದುಕೊಂಡು ಉಪದೇಶ ಮಾಡುವುದು ಅವರ ಕರ್ತವ್ಯವಾಗಿದೆ.

وَمَا عَلَى الَّذِينَ يَتَّقُونَ مِنْ حِسَابِهِمْ مِنْ شَيْءٍ وَلَٰكِنْ ذِكْرَىٰ لَعَلَّهُمْ يَتَّقُونَ ﴿٦٩﴾

70. ತಮ್ಮ 'ಧರ್ಮ'ವನ್ನು ಆಟ-ವಿನೋದಗಳನ್ನಾಗಿ ಮಾಡಿಕೊಂಡವರನ್ನೂ ಇಹಜೀವನದಿಂದಾಗಿ ವಂಚನೆಗೊಳಗಾದವರನ್ನೂ ಬಿಟ್ಟು

وَذَرِ الَّذِينَ اتَّخَذُوا دِينَهُمْ لَعِبًا وَلَهْوًا وَغَرَّتْهُمُ الْحَيَاةُ الدُّنْيَا ۚ وَذَكِّرْ بِهِ

16. ಅರ್ಥಾತ್- ನೀವು ನೋಡದೆ ಇರುವುದನ್ನು ಬಲವಂತದಿಂದ ನಿಮಗೆ ತೋರಿಸುವುದು ಅಥವಾ ನೀವು ತಿಳಿಯದೇ ಇರುವುದನ್ನು ಒತ್ತಾಯಪೂರ್ವಕ ತಿಳಿಯಪಡಿಸುವುದು ನನ್ನ ಜಾಯಮಾನವಲ್ಲ. ಅಂತೆಯೇ ನೀವು ನೋಡಿ ತಿಳಿದುಕೊಳ್ಳದಿದ್ದರೆ ನಿಮ್ಮ ಮೇಲೆ ಯಾತನೆ ಎರಗುವಂತೆ ಮಾಡುವುದೂ ನನ್ನ ಕೆಲಸವಲ್ಲ.

ಬಿಡಿರಿ. ಆದರೆ ಈ ಕುರ್‌ಆನನ್ನು ಕೇಳಿಸುತ್ತಾ, ಯಾರೂ ತನ್ನ ಸ್ವಂತ ಕರ್ಮದ ಫಲವಾಗಿ ವಿಪತ್ತಿಗೆ ಸಿಲುಕದಂತೆ ಬೋಧನೆ ಮತ್ತು ಎಚ್ಚರಿಕೆ ನೀಡಿರಿ. ಹಾಗೆ ಸಿಲುಕಿಕೊಂಡಾಗ ಅವನನ್ನು ಅಲ್ಲಾಹನಿಂದ ರಕ್ಷಿಸುವ ಯಾವ ರಕ್ಷಕಮಿತ್ರನೂ ಶಿಫಾರಸು ದಾರನೂ ಇರಲಾರನು. ಅವನು ತನಗೆ ಸಾಧ್ಯವಿರುವ ಎಲ್ಲವನ್ನೂ ಪರಿಹಾರವಾಗಿ ಕೊಟ್ಟು ಬಿಡುಗಡೆಗೊಳ್ಳಬಯಸಿದರೆ ಅದನ್ನೂ ಅವನಿಂದ ಸ್ವೀಕರಿಸಲಾಗದು. ಏಕೆಂದರೆ ಇಂಥವರು ತಮ್ಮ ಸ್ವಂತ ಗಳಿಕೆಯ ಫಲವಾಗಿ ಹಿಡಿಯಲ್ಪಡುವವರು. ಅವರಿಗೆ ಅವರ ಸತ್ಯಧಿಕ್ಕಾರದ ಪ್ರತಿಫಲವಾಗಿ ಕುದಿಯುತ್ತಿರುವ ನೀರು ಕುಡಿಯ ಲಿಕ್ಕೂ ವೇದನಾಯುಕ್ತ ಯಾತನೆ ಅನುಭವಿಸಲಿಕ್ಕೂ ಸಿಗುವುದು.

أَن تُبْسَلَ نَفْسٌ بِمَا كَسَبَتْ لَيْسَ لَهَا مِن دُونِ اللَّهِ وَلِيٌّ وَلَا شَفِيعٌ وَإِن تَعْدِلْ كُلَّ عَدْلٍ لَّا يُؤْخَذْ مِنْهَا أُولَٰئِكَ الَّذِينَ أُبْسِلُوا بِمَا كَسَبُوا لَهُمْ شَرَابٌ مِّنْ حَمِيمٍ وَعَذَابٌ أَلِيمٌ بِمَا كَانُوا يَكْفُرُونَ ٧٠

71. ಓ ಪೈಗಂಬರರೇ, ಅವರೊಡನೆ ಕೇಳಿರಿ:- ನಾವು ಅಲ್ಲಾಹನನ್ನು ಬಿಟ್ಟು, ನಮಗೆ ಲಾಭವನ್ನಾಗಲಿ, ನಷ್ಟವನ್ನಾಗಲಿ ಉಂಟು ಮಾಡಲಾಗದವರನ್ನು ಕರೆದು ಪ್ರಾರ್ಥಿಸಬೇಕೇ? ಅಲ್ಲಾಹನು ನಮಗೆ ನೇರ ಮಾರ್ಗವನ್ನು ತೋರಿಸಿರುವಾಗ ನಾವೀಗ ಹಿಂದಕ್ಕೆ ಮರಳಬೇಕೇ? ನಾವು ನಮ್ಮ ಸ್ಥಿತಿಯನ್ನು ಮರುಭೂಮಿಯಲ್ಲಿ ಶೈತಾನರಿಂದ ದಾರಿಗೆಡಿಸಲ್ಪಟ್ಟು "ಇತ್ತ ಬಾ, ಸನ್ಮಾರ್ಗ ಇಲ್ಲಿದೆ" ಎಂದು ತನ್ನ ಸಂಗಡಿಗರು ಕರೆಯುತ್ತಿದ್ದರೂ ಪರಿಭ್ರಾಂತನಾಗಿ ಅಲೆದಾಡುತ್ತಿರುವ ವ್ಯಕ್ತಿಯಂತೆ ಮಾಡಿಕೊಳ್ಳಬೇಕೇ? ಹೇಳಿರಿ - ವಾಸ್ತವದಲ್ಲಿ ಸರಿಯಾದ ಮಾರ್ಗದರ್ಶನವು ಕೇವಲ ಅಲ್ಲಾಹನ ಮಾರ್ಗದರ್ಶನವಾಗಿದೆ. "ವಿಶ್ವದೊಡೆಯನ ಮುಂದೆ ದಾಸ್ಯ-ಅನುಸರಣೆಯೊಂದಿಗೆ ಶಿರಬಾಗಿರಿ,

قُلْ أَنَدْعُوا مِن دُونِ اللَّهِ مَا لَا يَنفَعُنَا وَلَا يَضُرُّنَا وَنُرَدُّ عَلَىٰ أَعْقَابِنَا بَعْدَ إِذْ هَدَانَا اللَّهُ كَالَّذِي اسْتَهْوَتْهُ الشَّيَاطِينُ فِي الْأَرْضِ حَيْرَانَ لَهُ أَصْحَابٌ يَدْعُونَهُ إِلَى الْهُدَى ائْتِنَا قُلْ إِنَّ هُدَى اللَّهِ هُوَ الْهُدَىٰ وَأُمِرْنَا لِنُسْلِمَ لِرَبِّ الْعَالَمِينَ ٧١

72. ನಮಾಝನ್ನು ಸಂಸ್ಥಾಪಿಸಿರಿ ಮತ್ತು ಅವನ ಆಜ್ಞೋಲ್ಲಂಘನೆ ಯಿಂದ ದೂರವಿರಿ. ನೀವು ಅವನ ಕಡೆಗೇ ಒಟ್ಟುಗೂಡಿಸಲ್ಪಡುವಿರಿ" ಎಂದು ನಮಗೆ ಅವನ ಕಡೆಯಿಂದ ಆದೇಶ ಸಿಕ್ಕಿರುತ್ತದೆ.

وَأَنْ أَقِيمُوا الصَّلَاةَ وَاتَّقُوهُ وَهُوَ الَّذِي إِلَيْهِ تُحْشَرُونَ ٧٢

73. ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿದವನು ಅವನೇ.[17]

وَهُوَ الَّذِي خَلَقَ السَّمَاوَاتِ وَالْأَرْضَ

17. ಅಲ್ಲಾಹನು ಭೂಮಿ-ಆಕಾಶಗಳನ್ನು ಸತ್ಯದೊಂದಿಗೆ ಸೃಷ್ಟಿಸಿದ್ದಾನೆ ಅಥವಾ ದಿಟವಾಗಿ ಸೃಷ್ಟಿಸಿದ್ದಾನೆ ಎಂಬ ಉಲ್ಲೇಖ ಕುರ್‌ಆನಿನಲ್ಲಿ ಅಲ್ಲಲ್ಲಿ ಬಂದಿದೆ. ಅರ್ಥಾತ್, ಭೂಮಿ-ಆಕಾಶಗಳನ್ನು ಕೇವಲ ಆಟ-ವಿನೋದಗಳಿಗಾಗಿ ಸೃಷ್ಟಿಸಲಾಗಿಲ್ಲ. ಮನಸ್ಸಿಗೆ ಬಂದಷ್ಟು ಹೊತ್ತು ಆಟವಾಡಿ ಅನಂತರ ಮುರಿದು ಬಿಸಾಕುವಂತಹ ಮಕ್ಕಳ ಆಟಿಕೆ ಇದಲ್ಲ. ಇದು ಯುಕ್ತಿಪೂರ್ಣವಾದ ಗಂಭೀರತೆಯಿಂದ ಕೂಡಿದ ಒಂದು ಕೆಲಸವಾಗಿದೆ. ಇದರ ಹಿಂದೆ ಒಂದು ಮಹದುದ್ದೇಶವಿದೆ. ಅದರ ಒಂದು ಘಟ್ಟ ಕಳೆದ ಬಳಿಕ ನಿಸರ್ಗದ ಸೃಷ್ಟಿಕರ್ತ ಅದರ ಪರಿಶೀಲನೆ ನಡೆಸುವುದು ಅನಿವಾರ್ಯವಾಗುತ್ತದೆ. ಅದರ ಪರಿಣಾಮದ ಆಧಾರದಲ್ಲೇ ಮತ್ತೊಂದು ಯುಗಕ್ಕೆ ಬುನಾದಿ ಹಾಕಲಾಗುತ್ತದೆ. ಅಲ್ಲಾಹನು ನಿಸರ್ಗದ ಸಂಪೂರ್ಣ ವ್ಯವಸ್ಥೆಯನ್ನು ಸತ್ಯದ ಭದ್ರ ಬುನಾದಿಗಳೊಂದಿಗೆ ಸೃಷ್ಟಿಸಿದ್ದಾನೆಂಬುದು ಇದರ ಇನ್ನೊಂದು ಅರ್ಥ. ಅದರಲ್ಲಿನ ಪ್ರತಿಯೊಂದು ವಸ್ತುವೂ ನ್ಯಾಯ, ಯುಕ್ತಿ ಮತ್ತು ಸತ್ಯದ ನಿಯಮಗಳಿಗೆ ಬದ್ಧವಾಗಿದೆ. ಮಿಥ್ಯ ವ್ಯವಸ್ಥೆಗೆ ಇಲ್ಲಿ ಬೇರೂರಿ

ಪುನರುತ್ಥಾನವಾಗಬೇಕೆಂದು ಅವನು ಎಂದು ಹೇಳುವನೋ ಅಂದೇ ಅದು ಸಂಭವಿಸುವುದು. ಅವನ ಅಪ್ಪಣೆಯು ಪರಮ ಸತ್ಯ. ಸೂರ್(ಕಹಳೆ) ಊದಲ್ಪಡುವಂದು ಸಾರ್ವಭೌಮತೆ ಅವನದ್ದೇ ಆಗಿರುವುದು. ಅವನು ಪರೋಕ್ಷ ಮತ್ತು ಪ್ರತ್ಯಕ್ಷ ಜ್ಞಾನಿ,[18] ಧೀಮಂತ ಮತ್ತು ಸೂಕ್ಷ್ಮಜ್ಞನು.

بِالْحَقِّ ۖ وَيَوْمَ يَقُولُ كُن فَيَكُونُ ۚ قَوْلُهُ
الْحَقُّ ۚ وَلَهُ الْمُلْكُ يَوْمَ يُنفَخُ فِي الصُّورِ ۚ
عَالِمُ الْغَيْبِ وَالشَّهَادَةِ ۚ وَهُوَ الْحَكِيمُ الْخَبِيرُ ﴿٧٣﴾

74. ಇಬ್‌ರಾಹೀಮ್ ತನ್ನ ತಂದೆ ಆಝರನೊಡನೆ, "ನೀವು ವಿಗ್ರಹಗಳನ್ನು ದೇವರನ್ನಾಗಿ ಮಾಡುತ್ತೀರಾ? ನಾನಂತು ನಿಮ್ಮನ್ನೂ ನಿಮ್ಮ ಜನಾಂಗವನ್ನೂ ವ್ಯಕ್ತವಾದ ಪಥಭ್ರಷ್ಟತೆಯಲ್ಲಿ ಕಾಣುತ್ತಿರುವೆನು" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ.

وَإِذْ قَالَ إِبْرَاهِيمُ لِأَبِيهِ آزَرَ أَتَتَّخِذُ
أَصْنَامًا آلِهَةً ۖ إِنِّي أَرَاكَ وَقَوْمَكَ
فِي ضَلَالٍ مُّبِينٍ ﴿٧٤﴾

75. ನಾವು ಇಬ್‌ರಾಹೀಮರಿಗೆ ಇದೇ ರೀತಿಯಲ್ಲಿ ಭೂಮಿ-ಆಕಾಶಗಳ ಸಾಮ್ರಾಜ್ಯ ವ್ಯವಸ್ಥೆಯನ್ನು ತೋರಿಸಿಕೊಡುತ್ತಿದ್ದೆವು, ಅವರು ದೃಢವಿಶ್ವಾಸವುಳ್ಳವರಲ್ಲಾಗಬೇಕೆಂದು.

وَكَذَٰلِكَ نُرِي إِبْرَاهِيمَ مَلَكُوتَ السَّمَاوَاتِ
وَالْأَرْضِ وَلِيَكُونَ مِنَ الْمُوقِنِينَ ﴿٧٥﴾

76. ಒಮ್ಮೆ ರಾತ್ರಿ ಕಾಲವು ಅವರನ್ನಾವರಿಸಿದಾಗ ಅವರೊಂದು ನಕ್ಷತ್ರವನ್ನು ಕಂಡರು. "ಇದು ನನ್ನ ಪ್ರಭು" ಎಂದರು. ಆದರೆ ಅದು ಅಸ್ತಮಿಸಿದಾಗ, "ನಾನು ಅಸ್ತಮಿಸುವವರಿಗೆ ಮಾರು ಹೋಗುವುದಿಲ್ಲ" ಎಂದರು.

فَلَمَّا جَنَّ عَلَيْهِ اللَّيْلُ رَأَىٰ كَوْكَبًا ۖ قَالَ هَٰذَا
رَبِّي ۖ فَلَمَّا أَفَلَ قَالَ لَا أُحِبُّ الْآفِلِينَ ﴿٧٦﴾

77. ಅನಂತರ ಚಂದ್ರನು ಪ್ರಕಾಶಿಸುತ್ತಿರುವುದು ಕಂಡಾಗ, "ಇದು ನನ್ನ ಪ್ರಭು" ಎಂದರು. ಆದರೆ ಅದೂ ಮುಳುಗಿದಾಗ, "ನನ್ನ ಪ್ರಭು ನನಗೆ ಮಾರ್ಗದರ್ಶನವನ್ನೀಯದಿರುತ್ತಿದ್ದರೆ ನಾನೂ ಪಥಭ್ರಷ್ಟರಲ್ಲಾಗುತ್ತಿದ್ದೆ" ಎಂದರು.

فَلَمَّا رَأَى الْقَمَرَ بَازِغًا قَالَ هَٰذَا رَبِّي ۖ
فَلَمَّا أَفَلَ قَالَ لَئِن لَّمْ يَهْدِنِي رَبِّي
لَأَكُونَنَّ مِنَ الْقَوْمِ الضَّالِّينَ ﴿٧٧﴾

78. ತರುವಾಯ ಸೂರ್ಯನನ್ನು ಪ್ರಕಾಶಮಯವಾಗಿ ಕಂಡು, "ಇದೇ ನನ್ನ ಪ್ರಭು; ಇದು ಎಲ್ಲಕ್ಕಿಂತಲೂ ದೊಡ್ಡದಾಗಿದೆ" ಎಂದರು.

فَلَمَّا رَأَى الشَّمْسَ بَازِغَةً قَالَ هَٰذَا رَبِّي

---

ಬೆಳೆಯಲು ಆಸ್ಪದವೇ ಇಲ್ಲ. ಮಿಥ್ಯ ವ್ಯವಸ್ಥೆಯ ವಾಹಕರಿಗೆ ಅಲ್ಲಾಹನು ಒಂದು ಅವಕಾಶವನ್ನು ಕರುಣಿಸಿದರೆ ಬೇರೆ ವಿಷಯ. ಅವರು ತಮ್ಮ ಮಿಥ್ಯ, ಅಕ್ರಮ ಮತ್ತು ದುರ್ಮಾರ್ಗಗಳನ್ನು ಬೆಳೆಸಲು ಸಾಧ್ಯವೇ ಎಂದು ಪ್ರಯತ್ನಿಸಿ ನೋಡಲಿ. ಕೊನೆಗೊಂದು ದಿನ ಭೂಮಿಯು ತನ್ನೊಳಗೆ ಹುದುಗಿರುವ ಮಿಥ್ಯದ ಪ್ರತಿಯೊಂದು ಬೀಜವನ್ನೂ ಕಿತ್ತೆಸೆಯುವುದು. ಈ ಪೈಶಾಚಿಕ ವೃಕ್ಷದ ಪೋಷಣೆ ಮತ್ತು ನೀರಾವರಿಗೆ ನಾನು ಮಾಡಿದ ಪ್ರಯತ್ನವೆಲ್ಲವೂ ವೃಥಾ ನಷ್ಟವಾಯಿತು, ಎಂದು ಕೊನೆಗೆ ಪ್ರತಿಯೊಬ್ಬ ಮಿಥ್ಯದ ವಾಹಕನಿಗೂ ತೋರದೆ ಇರಲಾರದು. ಇದರ ಮೂರನೆಯ ಅರ್ಥವೇನೆಂದರೆ ದೇವನು ಸಕಲ ನಿಸರ್ಗವನ್ನು ಸತ್ಯದ ಆಧಾರದಲ್ಲೇ ಸೃಷ್ಟಿಸಿದ್ದಾನೆ. ತನಗೆ ಅದರ ಮೇಲಿರುವ ಹಕ್ಕಿನ ಆಧಾರದಲ್ಲಿ ಅವನು ಅದನ್ನು ಪರಿಪಾಲಿಸುತ್ತಿದ್ದಾನೆ. ಅವನು ಮಾತ್ರ ತಾನು ಸೃಷ್ಟಿಸಿರುವ ನಿಸರ್ಗದ ಮೇಲೆ ಅಧಿಕಾರ ಹೊಂದಿರುವುದರಿಂದ ಇಲ್ಲಿ ಅವನ ಆಜ್ಞೆಯಷ್ಟೇ ಪಾಲಿಸಲ್ಪಡುತ್ತದೆ. ಬೇರಾರಿಗೂ ಇಲ್ಲಿ ಆಜ್ಞಾಧಿಕಾರವಿಲ್ಲ.

18. ಗೈಬ್: (ಪರೋಕ್ಷ): ಅರ್ಥಾತ್ ಸೃಷ್ಟಿಗಳಿಂದ ಮರೆಯಾಗಿರುವ ಎಲ್ಲಾ ವಿಷಯಗಳು. ಶಹಾದತ್(ಪ್ರತ್ಯಕ್ಷ) : ಎಲ್ಲಾ ಸೃಷ್ಟಿಗಳಿಗೂ ಗೋಚರಿಸುವ ಸುವ್ಯಕ್ತ ವಿಷಯಗಳು.

ಆದರೆ ಅದೂ ಅಸ್ತಮಿಸಿದಾಗ ಇಬ್‌ರಾಹೀಮರು ಉದ್ಗರಿಸಿದರು:- "ಓ ನನ್ನ ಜನಾಂಗಬಾಂಧವರೇ, ನೀವು ದೇವನ ಸಹಭಾಗಿಯಾಗಿಸುವವುಗಳಿಂದೆಲ್ಲ ನಾನು ವಿರಕ್ತನು.[19]

هَٰذَآ أَكْبَرُ ۖ فَلَمَّآ أَفَلَتْ قَالَ يَٰقَوْمِ إِنِّى بَرِىٓءٌ مِّمَّا تُشْرِكُونَ ﴿٧٨﴾

79. ನಾನು ಏಕನಿಷ್ಠೆಯಿಂದ ನನ್ನ ಮುಖವನ್ನು ಭೂಮಿ-ಆಕಾಶಗಳನ್ನು ಸೃಷ್ಟಿಸಿದವನ ಕಡೆಗೆ ತಿರುಗಿಸಿದೆನು. ನಾನು ಎಷ್ಟು ಮಾತ್ರಕ್ಕೂ ಅಲ್ಲಾಹನೊಂದಿಗೆ ಸಹಭಾಗಿಗಳನ್ನಾಗಿ ಮಾಡುವವರಲ್ಲಿ ಸೇರಿದವನಲ್ಲ."

إِنِّى وَجَّهْتُ وَجْهِىَ لِلَّذِى فَطَرَ ٱلسَّمَٰوَٰتِ وَٱلْأَرْضَ حَنِيفًا ۖ وَمَآ أَنَا۠ مِنَ ٱلْمُشْرِكِينَ ﴿٧٩﴾

80. ಅವರ ಜನಾಂಗವು ಅವರೊಂದಿಗೆ ಜಗಳಾಡತೊಡಗಿದಾಗ ಅವರು ಆ ಜನಾಂಗದೊಡನೆ, "ನೀವು ಅಲ್ಲಾಹನ ವಿಷಯದಲ್ಲಿ ನನ್ನೊಡನೆ ಜಗಳಾಡುತ್ತೀರಾ? ವಸ್ತುತಃ ಅಲ್ಲಾಹನು ನನಗೆ ಸನ್ಮಾರ್ಗದರ್ಶನ ಮಾಡಿರುತ್ತಾನೆ ಮತ್ತು ನೀವು (ಅಲ್ಲಾಹನೊಂದಿಗೆ) ಸಹಭಾಗಿಗಳನ್ನಾಗಿರಿಸಿಕೊಂಡವರನ್ನು ನಾನು ಭಯಪಡುವುದಿಲ್ಲ. ನನ್ನ ಪ್ರಭು ಇಚ್ಛಿಸಿದುದು ಮಾತ್ರ ಆಗಲು ಸಾಧ್ಯವಿದೆ. ನನ್ನ ಪ್ರಭುವಿನ ಜ್ಞಾನವು ಪ್ರತಿಯೊಂದು ವಸ್ತುವನ್ನಾವರಿಸಿಕೊಂಡಿದೆ. ಇನ್ನೇನು ನೀವು ಎಚ್ಚರಗೊಳ್ಳಲಾರಿರಾ?[20]

وَحَآجَّهُۥ قَوْمُهُۥ ۚ قَالَ أَتُحَٰٓجُّوٓنِّى فِى ٱللَّهِ وَقَدْ هَدَىٰنِ ۚ وَلَآ أَخَافُ مَا تُشْرِكُونَ بِهِۦٓ إِلَّآ أَن يَشَآءَ رَبِّى شَيْـًٔا ۗ وَسِعَ رَبِّى كُلَّ شَىْءٍ عِلْمًا ۗ أَفَلَا تَتَذَكَّرُونَ ﴿٨٠﴾

81. ಅಲ್ಲಾಹನು ಯಾವ ಆಧಾರ ಪ್ರಮಾಣವನ್ನೂ ಇಳಿಸದ ವಸ್ತುಗಳನ್ನು ಅಲ್ಲಾಹನೊಂದಿಗೆ ದೇವತ್ವದಲ್ಲಿ ಸಹಭಾಗಿಗಳನ್ನಾಗಿ ಮಾಡಲು ನೀವು ಭಯಪಡುವುದಿಲ್ಲ. ಹೀಗಿರುತ್ತ ನೀವು ಅಲ್ಲಾಹನೊಂದಿಗೆ ಸಹಭಾಗಿಗಳನ್ನಾಗಿಸಿದವುಗಳನ್ನು ನಾನೇಕೆ ಭಯಪಡಲಿ? ನಮ್ಮೆರಡು ಪಂಗಡಗಳ ಪೈಕಿ ಹೆಚ್ಚು ನಿರ್ಭಯತೆ ಮತ್ತು ಮನಶ್ಶಾಂತಿಗೆ ಅರ್ಹರು ಯಾರು? ನೀವು ಬಲ್ಲವರಾಗಿದ್ದರೆ ಹೇಳಿರಿ.

وَكَيْفَ أَخَافُ مَآ أَشْرَكْتُمْ وَلَا تَخَافُونَ أَنَّكُمْ أَشْرَكْتُم بِٱللَّهِ مَا لَمْ يُنَزِّلْ بِهِۦ عَلَيْكُمْ سُلْطَٰنًا ۚ فَأَىُّ ٱلْفَرِيقَيْنِ أَحَقُّ بِٱلْأَمْنِ ۖ إِن كُنتُمْ تَعْلَمُونَ ﴿٨١﴾

82. ವಾಸ್ತವದಲ್ಲಿ ಯಾರು ವಿಶ್ವಾಸವಿಟ್ಟು ತಮ್ಮ ವಿಶ್ವಾಸವನ್ನು ಅಕ್ರಮದೊಂದಿಗೆ ಕಲುಷಿತ ಗೊಳಿಸದಿರುವರೋ ಅವರಿಗೇ ಶಾಂತಿ ಇದೆ ಮತ್ತು ಅವರು ಮಾತ್ರ ಸನ್ಮಾರ್ಗದಲ್ಲಿರುತ್ತಾರೆ."

ٱلَّذِينَ ءَامَنُوا۟ وَلَمْ يَلْبِسُوٓا۟ إِيمَٰنَهُم بِظُلْمٍ أُو۟لَٰٓئِكَ لَهُمُ ٱلْأَمْنُ وَهُم مُّهْتَدُونَ ﴿٨٢﴾

19. ಇಲ್ಲಿ ಹ. ಇಬ್‌ರಾಹೀಮ್‌ರನ್ನು(ಅ) ಅವರ ಪ್ರವಾದಿತ್ವಕ್ಕೆ ಮೊದಲು ವಾಸ್ತವಿಕತೆಯೆಡೆಗೆ ತಲುಪಲು ಕಾರಣವಾದ ಅವರ ಆರಂಭದ ಚಿಂತನಾಶೈಲಿಯನ್ನು ಪ್ರಸ್ತಾಪಿಸಲಾಗಿದೆ. ಎಲ್ಲೆಡೆಯೂ ಬಹುದೇವಾರಾಧನೆಯೇ ಆವರಿಸಿಕೊಂಡಿರುವ ವಾತಾವರಣದಲ್ಲಿ ಜನಿಸಿದ, ಬುದ್ಧಿಸ್ತಿಮಿತದಲ್ಲಿರುವ ವಿಚಾರ ಪೂರ್ಣವಾದ ಓರ್ವ ವ್ಯಕ್ತಿ ನಿಸರ್ಗದ ದೃಷ್ಟಾಂತಗಳನ್ನು ನೋಡಿ ಅವುಗಳ ಬಗ್ಗೆ ಸರಿಯಾದ ಚಿಂತನೆ ನಡೆಸಿ ವಾಸ್ತವಿಕತೆಯನ್ನು ಅರಿಯುವಲ್ಲಿ ಸಫಲನಾದ ರೀತಿಯನ್ನು ಇಲ್ಲಿ ವರ್ಣಿಸಲಾಗಿದೆ.

20. ಮೂಲದಲ್ಲಿ 'ತದಕ್ಕುರ್' ಎಂಬ ಪದ ಪ್ರಯೋಗವಾಗಿದೆ. ಅರ್ಥಾತ್ ಅಲಕ್ಷ್ಯ ಮತ್ತು ಮರೆಗುಳಿತನಕ್ಕೆ ಈಡಾಗಿರುವ ವ್ಯಕ್ತಿ ಜಾಗೃತನಾಗಿ ತಾನು ಅಲಕ್ಷ್ಯವಾಗಿರುವುದು ಯಾವುದರ ಬಗ್ಗೆ ಎಂದು ತಿಳಿದುಕೊಳ್ಳುವುದಾಗಿದೆ. ಆದ್ದರಿಂದ 'ಅಫಲಾ ತದಕ್ಕರೂನ್' ಎಂಬುದನ್ನು ನಾವು 'ನೀವು ಎಚ್ಚರಗೊಳ್ಳಲಾರಿರಾ?' ಎಂದು ಅನುವಾದಿಸಿದ್ದೇವೆ.

83. ನಾವು ಇಬ್‌ರಾಹೀಮರಿಗೆ ಅವರ ಜನಾಂಗದೆದುರು ದಯಪಾಲಿಸಿದ್ದ ಆಧಾರ ಪ್ರಮಾಣ ಇದೇ ಆಗಿತ್ತು. ನಾವು ನಮಗಿಷ್ಟ ಬಂದವರಿಗೆ ಉನ್ನತ ಪದವಿಗಳನ್ನು ದಯಪಾಲಿಸುತ್ತೇವೆ. ವಾಸ್ತವದಲ್ಲಿ ನಿಮ್ಮ ಪ್ರಭು ಪರಮ ಧೀಮಂತನೂ ಸರ್ವಜ್ಞನೂ ಆಗಿರುತ್ತಾನೆ.

وَتِلْكَ حُجَّتُنَآ اٰتَيْنٰهَآ اِبْرٰهِيْمَ عَلٰى قَوْمِهٖ ؕ نَرْفَعُ دَرَجٰتٍ مَّنْ نَّشَآءُ ؕ اِنَّ رَبَّكَ حَكِيْمٌ عَلِيْمٌ ﴿۸۳﴾

84. ಮುಂದೆ ನಾವು ಇಬ್‌ರಾಹೀಮರಿಗೆ ಇಸ್‌ಹಾಕ್ ಮತ್ತು ಯಅ್‌ಕೂಬರಂಥ ಸಂತತಿಗಳನ್ನು ನೀಡಿದೆವು. ಪ್ರತಿಯೊಬ್ಬರಿಗೂ ಸನ್ಮಾರ್ಗದರ್ಶನ ಮಾಡಿದೆವು. ಅದಕ್ಕಿಂತ ಮುಂಚೆ ನೂಹರಿಗೆ ತೋರಿಸಿದ್ದ (ಮಾರ್ಗವೇ ಅದಾಗಿತ್ತು) ಮತ್ತು ಅವರದೇ ಪೀಳಿಗೆಯಿಂದ ನಾವು ದಾವೂದ್, ಸುಲೈಮಾನ್, ಅಯ್ಯೂಬ್, ಯೂಸುಫ್, ಮೂಸಾ ಮತ್ತು ಹಾರೂನರಿಗೆ (ಸನ್ಮಾರ್ಗ ನೀಡಿದೆವು.) ಈ ರೀತಿ ನಾವು ಸಜ್ಜನರಿಗೆ ಅವರ ಸತ್ಕರ್ಮದ ಫಲ ನೀಡುತ್ತೇವೆ.

وَوَهَبْنَا لَهٗۤ اِسْحٰقَ وَيَعْقُوْبَ ؕ كُلًّا هَدَيْنَا ۚ وَنُوْحًا هَدَيْنَا مِنْ قَبْلُ وَمِنْ ذُرِّيَّتِهٖ دَاوٗدَ وَسُلَيْمٰنَ وَاَيُّوْبَ وَيُوْسُفَ وَمُوْسٰى وَهٰرُوْنَ ؕ وَكَذٰلِكَ نَجْزِى الْمُحْسِنِيْنَ ﴿۸۴﴾

85. (ಅವರ ವಂಶದಿಂದಲೇ) ಝಕರಿಯ್ಯಾ, ಯಹ್ಯಾ, ಈಸಾ ಮತ್ತು ಇಲ್ಯಾಸರಿಗೆ (ಮಾರ್ಗದರ್ಶನ ಮಾಡಿದೆವು.) ಅವರೆಲ್ಲರೂ ಸಜ್ಜನರಾಗಿದ್ದರು.

وَزَكَرِيَّا وَيَحْيٰى وَعِيْسٰى وَاِلْيَاسَ ؕ كُلٌّ مِّنَ الصّٰلِحِيْنَ ﴿۸۵﴾

86. (ಅವರದೇ ಸಂತಾನದಿಂದ) ಇಸ್ಮಾಈಲ್, ಅಲ್‌ಯಸಅ್, ಯೂನುಸ್ ಮತ್ತು ಲೂತರಿಗೆ (ಸನ್ಮಾರ್ಗದರ್ಶನ ಮಾಡಿದೆವು). ಅವರಲ್ಲಿ ಪ್ರತಿಯೊಬ್ಬರಿಗೆ ನಾವು ಸಕಲ ಜಗತ್ತಿನವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದೆವು.

وَاِسْمٰعِيْلَ وَالْيَسَعَ وَيُوْنُسَ وَلُوْطًا ؕ وَكُلًّا فَضَّلْنَا عَلَى الْعٰلَمِيْنَ ﴿۸۶﴾

87. ಮಾತ್ರವಲ್ಲದೆ ಅವರ ಪೂರ್ವಜರು, ಅವರ ಮಕ್ಕಳು ಮತ್ತು ಅವರ ಬಂಧುಬಳಗದವರಲ್ಲಿ ಅನೇಕರನ್ನು ನಾವು ಅನುಗ್ರಹಿಸಿದೆವು. ಅವರನ್ನು ನಮ್ಮ ಸೇವೆಗಾಗಿ ಆಯ್ದುಕೊಂಡೆವು ಮತ್ತು ಅವರಿಗೆ ಸನ್ಮಾರ್ಗದರ್ಶನ ನೀಡಿದೆವು.

وَمِنْ اٰبَآئِهِمْ وَذُرِّيّٰتِهِمْ وَاِخْوَانِهِمْ ۚ وَاجْتَبَيْنٰهُمْ وَهَدَيْنٰهُمْ اِلٰى صِرَاطٍ مُّسْتَقِيْمٍ ﴿۸۷﴾

88. ಅಲ್ಲಾಹನ ಮಾರ್ಗದರ್ಶನವಿದು. ತನ್ಮೂಲಕ ಅವನು ತನ್ನ ದಾಸರ ಪೈಕಿ ತನಗಿಷ್ಟ ಬಂದವರಿಗೆ ಸನ್ಮಾರ್ಗದರ್ಶನ ಮಾಡುತ್ತಾನೆ. ಆದರೆ, ಅವರೆಲ್ಲಾದರೂ 'ದೇವ ಸಹಭಾಗಿತ್ವ' ಮಾಡುತ್ತಿದ್ದರೆ ಅವರು ಮಾಡಿದ್ದೆಲ್ಲ ವ್ಯರ್ಥವಾಗುತ್ತಿತ್ತು.

ذٰلِكَ هُدَى اللّٰهِ يَهْدِىْ بِهٖ مَنْ يَّشَآءُ مِنْ عِبَادِهٖ ؕ وَلَوْ اَشْرَكُوْا لَحَبِطَ عَنْهُمْ مَّا كَانُوْا يَعْمَلُوْنَ ﴿۸۸﴾

89. ಅವರನ್ನೇ ನಾವು ಗ್ರಂಥ, ಹುಕ್ಮ್ (ಶಾಸನಾಧಿಕಾರ) ಮತ್ತು

اُولٰٓئِكَ الَّذِيْنَ اٰتَيْنٰهُمُ الْكِتٰبَ وَالْحُكْمَ

وَالنُّبُوَّةَ ۚ فَإِن يَكْفُرْ بِهَا هَٰؤُلَاءِ فَقَدْ وَكَّلْنَا بِهَا قَوْمًا لَّيْسُوا بِهَا بِكَافِرِينَ ﴿٨٩﴾

ಪ್ರವಾದಿತ್ವ ನೀಡಿ ಅನುಗ್ರಹಿಸಿದ್ದೆವು.[21] ಇದೀಗ ಇವರು ಇದನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತಿರುವರಾದರೆ, (ಚಿಂತಿಲ್ಲ) ನಾವು ಈ 'ಭವ್ಯ ಕೊಡುಗೆ'ಯನ್ನು, ಅದನ್ನು ನಿರಾಕರಿಸದ ಇತರ ಕೆಲವರಿಗೆ ಒಪ್ಪಿಸಿದ್ದೇವೆ.

أُولَٰئِكَ الَّذِينَ هَدَى اللَّهُ ۖ فَبِهُدَاهُمُ اقْتَدِهْ ۗ قُل لَّا أَسْأَلُكُمْ عَلَيْهِ أَجْرًا ۖ إِنْ هُوَ إِلَّا ذِكْرَىٰ لِلْعَالَمِينَ ﴿٩٠﴾

ع

90. ಓ ಪೈಗಂಬರರೇ ಅವರೇ ಅಲ್ಲಾಹನ ವತಿಯಿಂದ ಸನ್ಮಾರ್ಗ ಹೊಂದಿದವರಾಗಿದ್ದರು. ನೀವು ಅವರ ಮಾರ್ಗದಲ್ಲೇ ನಡೆಯಿರಿ ಮತ್ತು "ನಾನು (ಧರ್ಮಪ್ರಚಾರ ಮತ್ತು ಸನ್ಮಾರ್ಗದರ್ಶನದ) ಈ ಕಾರ್ಯಕ್ಕಾಗಿ ನಿಮ್ಮಿಂದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ಇದು ಸಕಲ ಜಗತ್ತಿನವರಿಗಾಗಿರುವ ಒಂದು ಸಾರ್ವತ್ರಿಕ ಉಪದೇಶವಾಗಿರುತ್ತದೆ" ಎಂದು ಹೇಳಿರಿ.

وَمَا قَدَرُوا اللَّهَ حَقَّ قَدْرِهِ إِذْ قَالُوا مَا أَنزَلَ اللَّهُ عَلَىٰ بَشَرٍ مِّن شَيْءٍ ۗ قُلْ مَنْ أَنزَلَ الْكِتَابَ الَّذِي جَاءَ بِهِ مُوسَىٰ نُورًا وَهُدًى لِّلنَّاسِ ۖ تَجْعَلُونَهُ قَرَاطِيسَ تُبْدُونَهَا وَتُخْفُونَ كَثِيرًا ۖ وَعُلِّمْتُم مَّا لَمْ تَعْلَمُوا أَنتُمْ وَلَا آبَاؤُكُمْ ۖ قُلِ اللَّهُ ۖ ثُمَّ ذَرْهُمْ فِي خَوْضِهِمْ يَلْعَبُونَ ﴿٩١﴾

91. ಇವರು ಅಲ್ಲಾಹನು ಯಾವ ಮಾನವನ ಮೇಲೂ ಏನನ್ನೂ ಅವತೀರ್ಣಗೊಳಿಸಿಲ್ಲವೆಂದು ಹೇಳುವಾಗ ಅಲ್ಲಾಹನ ಮಹಾನತೆಯನ್ನು ಚೆನ್ನಾಗಿ ಗ್ರಹಿಸಲಿಲ್ಲ. ಇವರೊಡನೆ ಕೇಳಿರಿ- ಮೂಸಾ ತಂದಿದ್ದ ಗ್ರಂಥ ಅದು ಸಕಲ ಮಾನವರಿಗಾಗಿ ಪ್ರಕಾಶವೂ ಮಾರ್ಗದರ್ಶನವೂ ಆಗಿತ್ತು. ಅದನ್ನು ನೀವು ಚೂರು ಚೂರುಗಳನ್ನಾಗಿ ಮಾಡಿಡುತ್ತೀರಿ. ಕೆಲವನ್ನು ತೋರಿಸಿ ಅಧಿಕಾಂಶವನ್ನು ಬಚ್ಚಿಡುತ್ತೀರಿ. ಅದರ ಮೂಲಕ ನೀವೂ ನಿಮ್ಮ ಪೂರ್ವಜರೂ ಅರಿತಿರದ ಜ್ಞಾನ ನಿಮಗೆ ನೀಡಲ್ಪಟ್ಟಿತ್ತು. ಅದನ್ನು ಅವತೀರ್ಣಗೊಳಿಸಿದವನಾದರೂ ಯಾರು?[22] ಅಲ್ಲಾಹ್ ಎಂದು ಮಾತ್ರ ಹೇಳಿಬಿಡಿರಿ. ಸಾಕು, ಅನಂತರ ಅವರನ್ನು ತಮ್ಮ ಕುತರ್ಕಗಳೊಂದಿಗೆ ಆಡುತ್ತಿರಲು ಬಿಡಿರಿ.

وَهَٰذَا كِتَابٌ أَنزَلْنَاهُ مُبَارَكٌ مُّصَدِّقُ الَّذِي بَيْنَ يَدَيْهِ وَلِتُنذِرَ أُمَّ الْقُرَىٰ

92. (ಆ ಗ್ರಂಥದಂತೆಯೇ) ಇದು ನಾವು ಇಳಿಸಿರುವ ಇನ್ನೊಂದು ಗ್ರಂಥವಾಗಿದೆ, ಅತ್ಯಂತ ಶುಭ ಸಮೃದ್ಧಿಯುಳ್ಳದ್ದಾಗಿದೆ. ಇದಕ್ಕಿಂತ ಮುಂಚೆ ಬಂದುದನ್ನು ದೃಢೀಕರಿಸುತ್ತದೆ; ಇದರ ಮೂಲಕ

21. ಇಲ್ಲಿ ಪ್ರವಾದಿಗಳಿಗೆ ಮೂರು ವಸ್ತುಗಳನ್ನು ದಯಪಾಲಿಸಲಾದ ಪ್ರಸ್ತಾಪವಿದೆ. ಮೊದಲನೆಯದಾಗಿ ಗ್ರಂಥ ಅಥವಾ ಸನ್ಮಾರ್ಗದರ್ಶನ, ಎರಡನೆಯದಾಗಿ ಹುಕ್ಮ್ ಅರ್ಥಾತ್ ಸನ್ಮಾರ್ಗದರ್ಶನದ ಬಗ್ಗೆ ಸರಿಯಾದ ಪರಿಜ್ಞಾನ. ಅದರ ತತ್ವಗಳನ್ನು ಜೀವನದ ವ್ಯವಹಾರಗಳಿಗೆ ಅನ್ವಯಗೊಳಿಸುವ ಅರ್ಹತೆ ಮತ್ತು ಜೀವನದ ಸಮಸ್ಯೆಗಳ ಬಗ್ಗೆ ನಿರ್ಣಾಯಕ ಅಭಿಪ್ರಾಯ ತಾಳುವ ದೇವದತ್ತ ಸಾಮರ್ಥ್ಯ. ಮೂರನೆಯದಾಗಿ ಪ್ರವಾದಿತ್ವ. ಅರ್ಥಾತ್ ಸನ್ಮಾರ್ಗದರ್ಶನದ ಆಧಾರದಲ್ಲಿ ಅಲ್ಲಾಹನ ಸೃಷ್ಟಿಗಳಿಗೆ ಮಾರ್ಗದರ್ಶನ ಮಾಡುವ ಪದವಿ.

22. ಈ ಉತ್ತರವನ್ನು ಯಹೂದಿಯರಿಗೆ ನೀಡಲಾಗುತ್ತಿರುವುದರಿಂದ ಮೂಸಾರ(ಅ) ಮೇಲೆ ತೌರಾತನ್ನು ಅವತೀರ್ಣಗೊಳಿಸಿರುವುದನ್ನು ಆಧಾರ ರೂಪದಲ್ಲಿ ಸಮರ್ಪಿಸಲಾಗುತ್ತಿದೆ. ಏಕೆಂದರೆ ಅದನ್ನು ಅವರು ಸ್ವತಃ ಸಮ್ಮತಿಸುತ್ತಿದ್ದರು. ಹ. ಮೂಸಾರ(ಅ) ಮೇಲೆ ತೌರಾತ್ ಅವತೀರ್ಣಗೊಂಡಿತ್ತು ಎಂಬ ಅವರ ವಿಶ್ವಾಸವು, ದೇವನು ಯಾವುದೇ ಮನುಷ್ಯರ ಮೇಲೆ ಏನನ್ನೂ ಅವತೀರ್ಣಗೊಳಿಸಿಲ್ಲ ಎಂಬ ಅವರ ಮಾತನ್ನು ಅಲ್ಲಗಳೆಯಲು ಪರ್ಯಾಪ್ತವಿದೆ. ಕನಿಷ್ಠಪಕ್ಷ ಮನುಷ್ಯನ ಮೇಲೆ 'ದೇವವಾಣಿ' ಅವತೀರ್ಣಗೊಳ್ಳುತ್ತದೆ ಮತ್ತು ಅವತೀರ್ಣಗೊಂಡಿದೆ ಎಂದು ಇದರಿಂದ ವ್ಯಕ್ತವಾಗುತ್ತದೆ.

ನೀವು ಈ ಕೇಂದ್ರ ನಗರ (ಅರ್ಥಾತ್ ಮಕ್ಕಾ) ಮತ್ತು ಇದರ ಸುತ್ತಮುತ್ತಲಿನ ನಿವಾಸಿಗಳಿಗೆ ಎಚ್ಚರಿಕೆ ನೀಡಲಿಕ್ಕಾಗಿ ಅವತೀರ್ಣಗೊಳಿಸಲ್ಪಟ್ಟಿರುತ್ತದೆ. ಪರಲೋಕದ ಮೇಲೆ ವಿಶ್ವಾಸವಿಡುವವರು ಈ ಗ್ರಂಥದ ಮೇಲೆ ವಿಶ್ವಾಸವಿರಿಸುತ್ತಾರೆ ಮತ್ತು ಅವರು ತಮ್ಮ ನಮಾಝನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

وَمَنْ حَوْلَهَا ۚ وَالَّذِينَ يُؤْمِنُونَ بِالْآخِرَةِ يُؤْمِنُونَ بِهِ ۖ وَهُمْ عَلَىٰ صَلَاتِهِمْ يُحَافِظُونَ ﴿٩٢﴾

93. ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವನಿಗಿಂತ ಅಥವಾ ತನ್ನ ಮೇಲೆ ಯಾವುದೇ 'ದಿವ್ಯವಾಣಿ' ಅವತೀರ್ಣವಾಗಿರದಿದ್ದರೂ ನನಗೆ 'ದಿವ್ಯವಾಣಿ' ಬಂದಿದೆಯೆನ್ನುವವನಿಗಿಂತ ಅಥವಾ ಅಲ್ಲಾಹನು ಅವತೀರ್ಣಗೊಳಿಸಿರುವುದಕ್ಕೆ ಎದುರಾಗಿ ನಾನೂ ಇಂತಹದನ್ನು ಅವತೀರ್ಣಗೊಳಿಸಿ ತೋರಿಸಿ ಬಿಡುವೆನು ಎನ್ನುವವನಿಗಿಂತ ಹಿರಿಯ ಅಕ್ರಮಿ ಇನ್ನಾರಿದ್ದಾನೆ? ಅಕಟ! ನೀವು ಅಕ್ರಮಿಗಳನ್ನು, ಅವರು ಮರಣ ಸಂಕಟದಲ್ಲಿ ಮುಳುಗೇಳುತ್ತಿರುವ ಮತ್ತು ದೇವಚರರು ಕೈ ಚಾಚುತ್ತ, "ತನ್ನಿರಿ, ನಿಮ್ಮ ಪ್ರಾಣವನ್ನು ಹೊರ ತೆಗೆಯಿರಿ. ನೀವು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿ ವೃಥಾ ಒದರುತ್ತಿದ್ದುದರ ಹಾಗೂ ಅವನ ನಿದರ್ಶನಗಳ ವಿರುದ್ಧ ಉದ್ಧಟತನ ತೋರುತ್ತಿದ್ದುದರ ಫಲವಾಗಿ ಇಂದು ನಿಮಗೆ ಅಪಮಾನಕರ ಶಿಕ್ಷೆ ನೀಡಲಾಗುವುದು" ಎಂದು ಹೇಳುತ್ತಿರುವ ಸ್ಥಿತಿಯಲ್ಲಿ ನೋಡಲು ಶಕ್ತರಾಗುತ್ತಿದ್ದರೆ!

وَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا أَوْ قَالَ أُوحِيَ إِلَيَّ وَلَمْ يُوحَ إِلَيْهِ شَيْءٌ وَمَنْ قَالَ سَأُنْزِلُ مِثْلَ مَا أَنْزَلَ اللَّهُ ۗ وَلَوْ تَرَىٰ إِذِ الظَّالِمُونَ فِي غَمَرَاتِ الْمَوْتِ وَالْمَلَائِكَةُ بَاسِطُو أَيْدِيهِمْ أَخْرِجُوا أَنْفُسَكُمُ ۖ الْيَوْمَ تُجْزَوْنَ عَذَابَ الْهُونِ بِمَا كُنْتُمْ تَقُولُونَ عَلَى اللَّهِ غَيْرَ الْحَقِّ وَكُنْتُمْ عَنْ آيَاتِهِ تَسْتَكْبِرُونَ ﴿٩٣﴾

94. (ಅಲ್ಲಾಹ್ ಅಂದು ಹೀಗೆ ಹೇಳುವನು:) ಇದೋ ನಾವು ನಿಮ್ಮನ್ನು ಪ್ರಥಮ ಬಾರಿ ಒಬ್ಬಂಟಿಗರನ್ನಾಗಿ ಸೃಷ್ಟಿಸಿದಂತೆಯೇ ನೀವೀಗ ಒಬ್ಬಂಟಿಗರಾಗಿ ನಮ್ಮ ಮುಂದೆ ಹಾಜರಾಗಿಬಿಟ್ಟಿರಿ. ನಾವು ನಿಮಗೆ ಇಹಲೋಕದಲ್ಲಿ ಕೊಟ್ಟಿದ್ದುದನ್ನೆಲ್ಲ ನೀವು ಬಿಟ್ಟು ಬಂದಿರಿ. ಈಗ ನಿಮ್ಮೊಂದಿಗೆ ನಿಮ್ಮ ಕಾರ್ಯನಿರ್ವಹಣೆಯಲ್ಲಿ ಯಾರ ಪಾಲಿದೆಯೆಂದು ನೀವು ತಿಳಿದುಕೊಂಡಿದ್ದೀರೋ ಆ ನಿಮ್ಮ ಶಿಫಾರಸುದಾರರನ್ನು ನಾವು ಇಲ್ಲಿ ಕಾಣುತ್ತಿಲ್ಲ. ನಿಮ್ಮ ಪರಸ್ಪರ ಸಂಬಂಧಗಳು ಮುರಿದು ಹೋದವು. ನೀವು ಅಭಿಮಾನವಿರಿಸಿಕೊಂಡಿದ್ದವರೆಲ್ಲರೂ ನಿಮ್ಮಿಂದ ಮಾಯವಾಗಿಬಿಟ್ಟರು.

وَلَقَدْ جِئْتُمُونَا فُرَادَىٰ كَمَا خَلَقْنَاكُمْ أَوَّلَ مَرَّةٍ وَتَرَكْتُمْ مَا خَوَّلْنَاكُمْ وَرَاءَ ظُهُورِكُمْ ۖ وَمَا نَرَىٰ مَعَكُمْ شُفَعَاءَكُمُ الَّذِينَ زَعَمْتُمْ أَنَّهُمْ فِيكُمْ شُرَكَاءُ ۚ لَقَدْ تَقَطَّعَ بَيْنَكُمْ وَضَلَّ عَنْكُمْ مَا كُنْتُمْ تَزْعُمُونَ ﴿٩٤﴾

95. ಕಾಳು ಮತ್ತು ಗೊರಟನ್ನು ಸೀಳುವವನು ಅಲ್ಲಾಹ್.[23] ಅವನೇ ಸಜೀವಿಯನ್ನು ನಿರ್ಜೀವಿಯಿಂದ ಹೊರತೆಗೆಯುತ್ತಾನೆ ಮತ್ತು ನಿರ್ಜೀವಿಯನ್ನು ಸಜೀವಿಯಿಂದ ಹೊರತರುವವನಾಗಿರುತ್ತಾನೆ.[24]

إِنَّ اللَّهَ فَالِقُ الْحَبِّ وَالنَّوَىٰ ۖ يُخْرِجُ الْحَيَّ مِنَ الْمَيِّتِ وَمُخْرِجُ الْمَيِّتِ مِنَ الْحَيِّ ۚ

23. ಅರ್ಥಾತ್- ಭೂತಳದಲ್ಲಿ ಬೀಜ ಟಿಸಿಲೊಡೆದು ಮೊಳಕೆ ಹೊರಬರುವಂತೆ ಮಾಡುವವನು.

24. ನಿರ್ಜೀವಿಯಿಂದ ಸಜೀವಿಯನ್ನು ಹೊರತರುವುದೆಂದರೆ ನಿರ್ಜೀವ ವಸ್ತುವಿನಿಂದ ಸಜೀವ ಸೃಷ್ಟಿಗಳನ್ನು ಸೃಷ್ಟಿಸುವುದು. ನಿರ್ಜೀವಿಯನ್ನು ಸಜೀವಿಯಿಂದ ಹೊರತೆಗೆಯುವುದೆಂದರೆ ಸಜೀವ ದೇಹಗಳಿಂದ ನಿರ್ಜೀವ ಪದಾರ್ಥಗಳನ್ನು ಹೊರತರುವುದು.

ಈ ಎಲ್ಲ ಕಾರ್ಯಗಳನ್ನು ಮಾಡುವವನಂತು ಅಲ್ಲಾಹ್. ಹೀಗಿರುತ್ತ ನೀವೆತ್ತ ದಾರಿತಪ್ಪಿ ಸಾಗುತ್ತಿರುವಿರಿ?

ذٰلِكُمُ اللّٰهُ فَاَنّٰى تُؤْفَكُوْنَ ﴿٩٥﴾

96. ಅವನೇ ಇರುಳಿನ ಪರದೆಯನ್ನು ಹರಿದು ಪ್ರಭಾತವನ್ನು ತರುತ್ತಾನೆ. ಅವನೇ ಇರುಳನ್ನು ನೆಮ್ಮದಿಯ ಕಾಲವನ್ನಾಗಿ ಮಾಡಿರುತ್ತಾನೆ. ಅವನೇ ಸೂರ್ಯ ಚಂದ್ರರ ಉದಯಾಸ್ತಗಳ ಗಣನೆಯನ್ನು ನಿಶ್ಚಯಿಸಿರುತ್ತಾನೆ. ಇವೆಲ್ಲ ಆ ಮಹಾ ಪ್ರತಾಪಿಯೂ ಸರ್ವಜ್ಞನೂ ನಿಶ್ಚಯಿಸಿರುವ ಕ್ರಮಗಳು.

فَالِقُ الْاِصْبَاحِ ۚ وَجَعَلَ الَّيْلَ سَكَنًا وَّالشَّمْسَ
وَالْقَمَرَ حُسْبَانًا ۗ ذٰلِكَ تَقْدِيْرُ الْعَزِيْزِ الْعَلِيْمِ ﴿٩٦﴾

97. ಅವನೇ ನಿಮಗೆ ನಕ್ಷತ್ರಗಳನ್ನು ಮರುಭೂಮಿಯ ಮತ್ತು ಸಾಗರಗಳ ಅಂಧಕಾರಗಳಲ್ಲಿ ದಾರಿ ತಿಳಿಯುವ ಸಾಧನವನ್ನಾಗಿ ಮಾಡಿದನು. ನೋಡಿರಿ, ನಾವು ಜ್ಞಾನವುಳ್ಳವರಿಗೆ ನಿದರ್ಶನ ಗಳನ್ನು[25] ಸುಸ್ಪಷ್ಟವಾಗಿ ತಿಳಿಸಿಬಿಟ್ಟಿರುತ್ತೇವೆ.

وَهُوَ الَّذِيْ جَعَلَ لَكُمُ النُّجُوْمَ لِتَهْتَدُوْا
بِهَا فِيْ ظُلُمٰتِ الْبَرِّ وَالْبَحْرِ ۗ قَدْ فَصَّلْنَا
الْاٰيٰتِ لِقَوْمٍ يَّعْلَمُوْنَ ﴿٩٧﴾

98. ಅವನೇ ನಿಮ್ಮನ್ನು ಒಂದೇ ವ್ಯಕ್ತಿಯಿಂದ ಸೃಷ್ಟಿಸಿದನು. ಪ್ರತಿಯೊಬ್ಬನಿಗೂ ಒಂದು ತಂಗುದಾಣವೂ ಇನ್ನೊಂದು ಅವನು ಒಪ್ಪಿಸಲ್ಪಡುವ ಜಾಗವೂ ಇದೆ. ಅರಿವುಳ್ಳವರಿಗೆ ಈ ನಿದರ್ಶನಗಳನ್ನು ನಾವು ಅಭಿವ್ಯಕ್ತಗೊಳಿಸಿರುತ್ತೇವೆ.

وَهُوَ الَّذِيْٓ اَنْشَاَكُمْ مِّنْ نَّفْسٍ وَّاحِدَةٍ
فَمُسْتَقَرٌّ وَّمُسْتَوْدَعٌ ۗ قَدْ فَصَّلْنَا الْاٰيٰتِ
لِقَوْمٍ يَّفْقَهُوْنَ ﴿٩٨﴾

99. ಅವನೇ ಆಕಾಶದಿಂದ ನೀರನ್ನು ಸುರಿಸಿದನು. ಅನಂತರ ಅದರ ಮೂಲಕ ಎಲ್ಲ ವಿಧದ ವನಸ್ಪತಿಗಳನ್ನು ಉತ್ಪಾದಿಸಿದನು. ಆ ಮೇಲೆ ಅದರಿಂದ ಹಚ್ಚ ಹಸುರಾದ ಹೊಲಗಳನ್ನೂ ವೃಕ್ಷಗಳನ್ನೂ ಉಂಟು ಮಾಡಿದನು. ಆ ಬಳಿಕ ಅವುಗಳಿಂದ ಹಲವು ಪದರು ಗಳಿಂದ ಹೊದಿಯಲ್ಪಟ್ಟ ಧಾನ್ಯಗಳನ್ನು ಹೊರ ತಂದನು ಮತ್ತು ಖರ್ಜೂರಗಳ ಮೊಗ್ಗುಗಳಿಂದ, ಭಾರದಿಂದಾಗಿ ಬಾಗುತ್ತಿರುವ ಫಲಗಳ ಗೊಂಚಲು ಗೊಂಚಲುಗಳನ್ನೇ ಉಂಟು ಮಾಡಿದನು. ದ್ರಾಕ್ಷೆ, ಝೈತೂನ್(ಇಪ್ಪೆ) ದಾಳಿಂಬೆಗಳ ತೋಟಗಳನ್ನು ಬೆಳೆಸಿದನು. ಅವುಗಳ ಫಲಗಳು ಪರಸ್ಪರ ಹೋಲುತ್ತಲೂ ಇವೆ ಮತ್ತು ಪ್ರತಿಯೊಂದರ ವೈಶಿಷ್ಟ್ಯಗಳು ವಿಭಿನ್ನವಾಗಿಯೂ ಇವೆ. ಈ ವೃಕ್ಷಗಳು ಫಲಬಿಡುವಾಗ ಅವುಗಳಲ್ಲಿ ಫಲ ಬರುವ ಮತ್ತು ಪಕ್ವವಾಗುವ ವಿದ್ಯಮಾನವನ್ನು ಸೂಕ್ಷ್ಮವಾಗಿ ಅವ ಲೋಕಿಸಿರಿ. ವಿಶ್ವಾಸವಿಡುವವರಿಗೆ ಇವುಗಳಲ್ಲಿ ನಿದರ್ಶನಗಳಿವೆ.

وَهُوَ الَّذِيْٓ اَنْزَلَ مِنَ السَّمَاۤءِ مَاۤءً ۚ فَاَخْرَجْنَا
بِهٖ نَبَاتَ كُلِّ شَيْءٍ فَاَخْرَجْنَا مِنْهُ خَضِرًا
نُّخْرِجُ مِنْهُ حَبًّا مُّتَرَاكِبًا ۚ وَمِنَ النَّخْلِ
مِنْ طَلْعِهَا قِنْوَانٌ دَانِيَةٌ وَّجَنّٰتٍ مِّنْ
اَعْنَابٍ وَّالزَّيْتُوْنَ وَالرُّمَّانَ مُشْتَبِهًا
وَّغَيْرَ مُتَشَابِهٍ ۗ اُنْظُرُوْٓا اِلٰى ثَمَرِهٖٓ اِذَآ اَثْمَرَ
وَيَنْعِهٖ ۗ اِنَّ فِيْ ذٰلِكُمْ لَاٰيٰتٍ لِّقَوْمٍ يُّؤْمِنُوْنَ ﴿٩٩﴾

25. ಅರ್ಥಾತ್- ದೇವನು ಏಕನಾಗಿದ್ದಾನೆ, ಬೇರಾರೂ ದೇವತ್ವದ ಗುಣವನ್ನು ಹೊಂದಿಲ್ಲ. ಯಾರಿಗೂ ದೇವನ ಪರಮಾಧಿಕಾರದಲ್ಲಿ ಪಾಲಿಲ್ಲ. ದೇವನಿಗೆ ಸಲ್ಲಬೇಕಾದಂತಹ ಹಕ್ಕುಗಳಲ್ಲಿ ಯಾವುದೇ ಹಕ್ಕಿಗೆ ಬೇರಾರೂ ಬಾಧ್ಯಸ್ಥರಾಗುವುದಿಲ್ಲ ಎಂಬ ವಾಸ್ತವಿಕತೆಯನ್ನು ಸೂಚಿಸುವಂತಹ ನಿದರ್ಶನಗಳು.

| | |
|---|---|
| 100. ಇಷ್ಟಾಗಿಯೂ ಜನರು 'ಯಕ್ಷ'ರನ್ನು ಅಲ್ಲಾಹನಿಗೆ ಸಹಭಾಗಿಗಳಾಗಿಸಿ ಬಿಟ್ಟರು.[26] ವಸ್ತುತಃ ಅವನು ಅವರನ್ನು ಸೃಷ್ಟಿಸಿದವನು. ಆದರೆ ಅವರು ವಿಚಾರ ಮಾಡದೆ ಅವನಿಗೆ ಪುತ್ರ ಮತ್ತು ಪುತ್ರಿಯರನ್ನು ಕಲ್ಪಿಸಿಕೊಂಡರು. ವಸ್ತುತಃ ಅವನು ಇವರು ಹೇಳುತ್ತಿರುವ ವಿಷಯಗಳಿಂದ ಪರಿಶುದ್ಧನೂ ಅತ್ಯುನ್ನತನೂ ಆಗಿರುತ್ತಾನೆ. | وَجَعَلُوا لِلَّهِ شُرَكَاءَ الْجِنَّ وَخَلَقَهُمْ وَخَرَقُوا لَهُ بَنِينَ وَبَنَاتٍ بِغَيْرِ عِلْمٍ ۚ سُبْحَانَهُ وَتَعَالَىٰ عَمَّا يَصِفُونَ ﴿١٠٠﴾ |
| 101. ಅವನು ಭೂಮಿ-ಆಕಾಶಗಳ ಕರ್ತೃ. ಅವನಿಗೊಬ್ಬ ಬಾಳ ಸಂಗಾತಿಯೇ ಇಲ್ಲದಿರುವಾಗ ಅವನಿಗೆ ಮಗನಾಗುವುದು ಹೇಗೆ? ಅವನು ಸರ್ವವನ್ನೂ ಸೃಷ್ಟಿಸಿದನು ಮತ್ತು ಅವನು ಸಕಲ ವಸ್ತುಗಳ ಜ್ಞಾನವುಳ್ಳವನು. | بَدِيعُ السَّمَاوَاتِ وَالْأَرْضِ ۖ أَنَّىٰ يَكُونُ لَهُ وَلَدٌ وَلَمْ تَكُن لَّهُ صَاحِبَةٌ ۖ وَخَلَقَ كُلَّ شَيْءٍ ۖ وَهُوَ بِكُلِّ شَيْءٍ عَلِيمٌ ﴿١٠١﴾ |
| 102. ಅವನೇ ಅಲ್ಲಾಹ್, ನಿಮ್ಮ ಪ್ರಭು. ಅವನ ಹೊರತು ಅನ್ಯ ಆರಾಧ್ಯನಿಲ್ಲ. ಸಕಲ ವಸ್ತುಗಳ ಕರ್ತೃ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ. ಅವನು ಸಕಲ ವಸ್ತುಗಳ ಹೊಣೆಗಾರನು. | ذَٰلِكُمُ اللَّهُ رَبُّكُمْ ۖ لَا إِلَٰهَ إِلَّا هُوَ ۖ خَالِقُ كُلِّ شَيْءٍ فَاعْبُدُوهُ ۚ وَهُوَ عَلَىٰ كُلِّ شَيْءٍ وَكِيلٌ ﴿١٠٢﴾ |
| 103. ದೃಷ್ಟಿಗಳು ಅವನನ್ನು ಕಾಣಲಾರವು. ಆದರೆ ಅವನು ದೃಷ್ಟಿಗಳನ್ನು ಕಾಣುತ್ತಾನೆ. ಅವನು ಅತ್ಯಂತ ಸೂಕ್ಷ್ಮದರ್ಶಿಯೂ ಸೂಕ್ಷ್ಮಜ್ಞನೂ ಆಗಿರುತ್ತಾನೆ. | لَّا تُدْرِكُهُ الْأَبْصَارُ وَهُوَ يُدْرِكُ الْأَبْصَارَ ۖ وَهُوَ اللَّطِيفُ الْخَبِيرُ ﴿١٠٣﴾ |
| 104. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಅಂತರ್ದೃಷ್ಟಿಯ ಪ್ರಕಾಶಗಳು ಬಂದು ಬಿಟ್ಟಿವೆ. ಈಗ ಚೆನ್ನಾಗಿ ವೀಕ್ಷಿಸುವವನು ತನಗೇ ಹಿತವನ್ನು ಮಾಡಿಕೊಳ್ಳುವನು. ಅಂಧನಾಗಿದ್ದುಕೊಂಡವನು ಸ್ವತಃ ನಷ್ಟಹೊಂದುವನು. ನಾನು ನಿಮ್ಮ ಕಾವಲುಗಾರನೇನೂ ಅಲ್ಲ.[27] | قَدْ جَاءَكُم بَصَائِرُ مِن رَّبِّكُمْ ۖ فَمَنْ أَبْصَرَ فَلِنَفْسِهِ ۖ وَمَنْ عَمِيَ فَعَلَيْهَا ۚ وَمَا أَنَا عَلَيْكُم بِحَفِيظٍ ﴿١٠٤﴾ |

26. ಅರ್ಥಾತ್- ನಿಸರ್ಗದ ವ್ಯವಸ್ಥೆಯನ್ನು ಕಾಪಾಡಲು ಮತ್ತು ಮನುಷ್ಯನ ವಿಧಿಯನ್ನು ರೂಪಿಸಲು ಅಲ್ಲಾಹನ ಜತೆಗೆ ಇತರ ಅಗೋಚರ ಶಕ್ತಿಗಳೂ ಭಾಗಿಯಾಗಿವೆ ಎಂದು ಅವರು ತಮ್ಮ ಭ್ರಮೆಗಳ ಮೂಲಕ ಕಲ್ಪಿಸಿಕೊಂಡರು. ಮಳೆಗೊಂದು ದೇವತೆ, ಬೆಳೆಗೊಂದು ದೇವತೆ, ಸಿರಿಗೊಂದು ದೇವತೆ, ರೋಗಕ್ಕೊಂದು ದೇವತೆ ಎಂದು ಮುಂತಾಗಿ ಅವರು ಕಲ್ಪಿಸಿಕೊಂಡರು. ಆತ್ಮ, ಪಿಶಾಚಿ, ರಾಕ್ಷಸರು, ದೇವತೆಗಳೇ ಮುಂತಾದ ಶ್ರದ್ಧೆ- ನಂಬಿಕೆಗಳು ಜಗತ್ತಿನ ಎಲ್ಲಾ ಬಹುದೇವಾರಾಧಕ ಸಮಾಜದಲ್ಲೂ ಕಂಡು ಬರುತ್ತದೆ.

27. ಇದು ಅಲ್ಲಾಹನ ವಚನವೇ ಆಗಿದ್ದರೂ ಈ ಮಾತನ್ನು ಪ್ರವಾದಿವರ್ಯರ(ಸ) ಮೂಲಕ ಹೇಳಿಸಲಾಗುತ್ತಿದೆ. ಇದು ಸೂರಃ ಫಾತಿಹಾ, ಅಲ್ಲಾಹನ ವಚನವಾಗಿದ್ದರೂ ಅಲ್ಲಾಹನ ದಾಸರ ಮೂಲಕ ಹೇಳಿಸಲಾಗಿರುವಂತೆಯೇ ಇದೆ. ನಾನು ನಿಮ್ಮ ಕಾವಲುಗಾರನೇನೂ ಅಲ್ಲ ಎಂದರೆ ಈ ಪ್ರಕಾಶವನ್ನು ನಿಮ್ಮ ಮುಂದೆ ಸಮರ್ಪಿಸಿ ಬಿಡುವುದಷ್ಟೇ ನನ್ನ ಕೆಲಸ. ಅನಂತರ ಕಣ್ತೆರೆದು ನೋಡುವುದು ಅಥವಾ ನೋಡದೇ ಇರುವುದು ನಿಮಗೆ ಬಿಟ್ಟದ್ದು. ಸ್ವತಃ ಕಣ್ಮುಚ್ಚಿಕೊಂಡಿರುವವರನ್ನು ಬಲವಂತದಿಂದ ಕಣ್ತೆರೆಯುವಂತೆ ಮಾಡುವುದು ಅಥವಾ ಏನನ್ನೂ ನೋಡದಿರುವವರನ್ನು ಬಲವಂತದಿಂದ ನೋಡುವಂತೆ ಮಾಡುವ ಕೆಲಸ ನನಗೆ ವಹಿಸಲಾಗಿಲ್ಲ.

105. ಹೀಗೆ ನಾವು ನಮ್ಮ ನಿದರ್ಶನಗಳನ್ನು ಆಗಾಗ ವಿವಿಧ ರೀತಿಗಳಲ್ಲಿ ವಿವರಿಸುತ್ತೇವೆ. "ನೀವು ಯಾರಿಂದಲೋ ಕಲಿತು ಬಂದಿದ್ದೀರಿ" ಎಂದು ಇವರು ಹೇಳಲಿಕ್ಕಾಗಿಯೂ ಜ್ಞಾನ ಹೊಂದಿದವರ ಮೇಲೆ ವಸ್ತುಸ್ಥಿತಿಯನ್ನು ಪ್ರಕಟಗೊಳಿಸಲಿಕ್ಕಾಗಿಯೂ ನಾವು ಹೀಗೆ ಮಾಡುತ್ತೇವೆ.

وَكَذَٰلِكَ نُصَرِّفُ الْآيَاتِ وَلِيَقُولُوا دَرَسْتَ وَلِنُبَيِّنَهُ لِقَوْمٍ يَعْلَمُونَ ﴿١٠٥﴾

106. ಓ ಪೈಗಂಬರರೇ, ನಿಮ್ಮ ಪ್ರಭುವಿನ ವತಿಯಿಂದ ನಿಮ್ಮ ಮೇಲೆ ಅವತೀರ್ಣಗೊಂಡ 'ದಿವ್ಯವಾಣಿ'ಯನ್ನು ಅನುಸರಿಸಿರಿ. ಏಕೆಂದರೆ ಆ ಏಕ ಪ್ರಭುವಿನ ಹೊರತು ಅನ್ಯ ಆರಾಧ್ಯನಿಲ್ಲ ಮತ್ತು 'ಬಹುದೇವವಿಶ್ವಾಸಿ'ಗಳನ್ನು ನಿರ್ಲಕ್ಷಿಸಿರಿ.

اتَّبِعْ مَا أُوحِيَ إِلَيْكَ مِن رَّبِّكَ ۖ لَا إِلَٰهَ إِلَّا هُوَ ۖ وَأَعْرِضْ عَنِ الْمُشْرِكِينَ ﴿١٠٦﴾

107. ಅಲ್ಲಾಹನು ಇಚ್ಛಿಸುತ್ತಿದ್ದರೆ ಅವರು 'ಬಹುದೇವಾರಾಧನೆ' ಮಾಡುತ್ತಿರಲಿಲ್ಲ. (ಅಂತಹ ವ್ಯವಸ್ಥೆಯನ್ನು ಅವನು ಸ್ವತಃ ಮಾಡಿಬಿಡುತ್ತಿದ್ದನು.) ನಾವು ನಿಮ್ಮನ್ನು ಅವರ ಕಾವಲುಗಾರರನ್ನಾಗಿ ನೇಮಕ ಮಾಡಿರುವುದಿಲ್ಲ ಮತ್ತು ನೀವು ಅವರ ಹೊಣೆಗಾರರೂ ಅಲ್ಲ.

وَلَوْ شَاءَ اللَّهُ مَا أَشْرَكُوا ۗ وَمَا جَعَلْنَاكَ عَلَيْهِمْ حَفِيظًا ۖ وَمَا أَنتَ عَلَيْهِم بِوَكِيلٍ ﴿١٠٧﴾

108. (ಓ ಮುಸ್ಲಿಮರೇ,) ಅವರು ಅಲ್ಲಾಹನ ಹೊರತು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರನ್ನು ತೆಗಳಬೇಡಿರಿ. ಇದರಿಂದ ಅವರು 'ಬಹುದೇವಾರಾಧನೆ'ಗಿಂತಲೂ ಮುಂದುವರಿದು ಅಜ್ಞಾನದಿಂದ ಅಲ್ಲಾಹನನ್ನು ತೆಗಳತೊಡಗುವರು. ನಾವು ಇದೇ ರೀತಿಯಲ್ಲಿ ಪ್ರತಿಯೊಂದು ಸಮುದಾಯಕ್ಕೆ ಅದರ ಕರ್ಮವನ್ನು ಚೆಲುವಾಗಿಸಿದ್ದೇವೆ. ಅನಂತರ ಅವರಿಗೆ ತಮ್ಮ ಪ್ರಭುವಿನ ಕಡೆಗೇ ಮರಳಿ ಸಾಗಲಿಕ್ಕಿದೆ. ಆಗ ಅವನು ಅವರೇನು ಮಾಡುತ್ತಿದ್ದರೆಂಬುದನ್ನು ಅವರಿಗೆ ತೋರಿಸಿಕೊಡುವನು.

وَلَا تَسُبُّوا الَّذِينَ يَدْعُونَ مِن دُونِ اللَّهِ فَيَسُبُّوا اللَّهَ عَدْوًا بِغَيْرِ عِلْمٍ ۗ كَذَٰلِكَ زَيَّنَّا لِكُلِّ أُمَّةٍ عَمَلَهُمْ ثُمَّ إِلَىٰ رَبِّهِم مَّرْجِعُهُمْ فَيُنَبِّئُهُم بِمَا كَانُوا يَعْمَلُونَ ﴿١٠٨﴾

109. ನಮ್ಮ ಮುಂದೆ ಒಂದು ನಿದರ್ಶನವು (ಪವಾಡ) ಬಂದುಬಿಟ್ಟರೆ ನಾವು ಅದರ ಮೇಲೆ ವಿಶ್ವಾಸವಿಡುವೆವೆಂದು ಇವರು ಆಣೆಯ ಮೇಲೆ ಆಣೆ ಹಾಕುತ್ತ ಹೇಳುತ್ತಾರೆ. ಓ ಪೈಗಂಬರರೇ, ನಿದರ್ಶನಗಳು ಅಲ್ಲಾಹನ ಬಳಿ ಇವೆಯೆಂದು ಹೇಳಿರಿ. ನಿದರ್ಶನಗಳು ಬಂದುಬಿಟ್ಟರೂ ಇವರು ವಿಶ್ವಾಸವಿಡುವವರಲ್ಲವೆಂದು ನಿಮಗೆ ತಿಳಿಯ ಪಡಿಸುವುದು ಹೇಗೆ?[28]

وَأَقْسَمُوا بِاللَّهِ جَهْدَ أَيْمَانِهِمْ لَئِن جَاءَتْهُمْ آيَةٌ لَّيُؤْمِنُنَّ بِهَا ۚ قُلْ إِنَّمَا الْآيَاتُ عِندَ اللَّهِ ۖ وَمَا يُشْعِرُكُمْ أَنَّهَا إِذَا جَاءَتْ لَا يُؤْمِنُونَ ﴿١٠٩﴾

28. ತಮ್ಮ ಪಥಭ್ರಷ್ಟ ಸಹೋದರರು ನೇರಮಾರ್ಗಕ್ಕೆ ಬಂದು ಬಿಡುವಂತಹ ದೃಷ್ಟಾಂತವೊಂದು ಪ್ರಕಟವಾಗಬೇಕು ಎಂದು ಚಿಂತಾಕ್ರಾಂತರಾಗಿ ಹಂಬಲಿಸುತ್ತಿದ್ದ ಮುಸ್ಲಿಮರನ್ನುದ್ದೇಶಿಸಿ ಈ ಮಾತು ಹೇಳಲಾಗುತ್ತಿದೆ.

110. ಇವರು ಮೊದಲ ಬಾರಿ ಇದರ (ಈ ಗ್ರಂಥದ) ಮೇಲೆ ವಿಶ್ವಾಸ ವಿಡದಂತೆಯೇ ನಾವು ಇವರ ಹೃದಯಗಳನ್ನೂ ದೃಷ್ಟಿಗಳನ್ನೂ ತಿರುಗಿಸಿ ಬಿಡುತ್ತಿದ್ದೇವೆ. ತಮ್ಮ ಉದ್ಧಟತನದಲ್ಲೇ ಅಲೆದಾಡು ತ್ತಿರಲು ನಾವು ಇವರನ್ನು ಬಿಟ್ಟು ಬಿಡುತ್ತೇವೆ.

وَنُقَلِّبُ أَفْئِدَتَهُمْ وَأَبْصَارَهُمْ كَمَا لَمْ يُؤْمِنُوا بِهِ أَوَّلَ مَرَّةٍ وَنَذَرُهُمْ فِي طُغْيَانِهِمْ يَعْمَهُونَ ﴿١١٠﴾

111. *ನಾವು ಇವರ ಮೇಲೆ ದೇವಚರರನ್ನು ಅವತೀರ್ಣಗೊಳಿಸುತ್ತಿದ್ದರೂ ಸತ್ತವರು ಇವರೊಡನೆ ಮಾತಾಡುತ್ತಿದ್ದರೂ ಇವರ ಕಣ್ಣ ಮುಂದೆ ನಾವು ಅಖಿಲ ಜಗತ್ತಿನಲ್ಲಿರುವ ವಸ್ತುಗಳನ್ನು ಒಟ್ಟುಗೂಡಿಸುತ್ತಿದ್ದರೂ (ಇವರು ವಿಶ್ವಾಸವಿಡಬೇಕೆಂದು) ಅಲ್ಲಾಹನ ವಿಧಿ ಇಲ್ಲದಿರುತ್ತಿದ್ದರೆ ಇವರು ವಿಶ್ವಾಸವಿಡುತ್ತಿರಲಿಲ್ಲ. ಆದರೆ ಹೆಚ್ಚಿನವರು ಅವಿವೇಕದ ಮಾತುಗಳನ್ನಾಡುತ್ತಾರೆ.

وَلَوْ أَنَّنَا نَزَّلْنَا إِلَيْهِمُ الْمَلَائِكَةَ وَكَلَّمَهُمُ الْمَوْتَىٰ وَحَشَرْنَا عَلَيْهِمْ كُلَّ شَيْءٍ قُبُلًا مَا كَانُوا لِيُؤْمِنُوا إِلَّا أَنْ يَشَاءَ اللَّهُ وَلَٰكِنَّ أَكْثَرَهُمْ يَجْهَلُونَ ﴿١١١﴾

112. ನಾವಂತು ಇದೇ ರೀತಿಯಲ್ಲಿ ಮಾನವ ಶೈತಾನರನ್ನೂ 'ಯಕ್ಷ' ಶೈತಾನರನ್ನೂ ಪ್ರತಿಯೊಬ್ಬ ಪ್ರವಾದಿಯ ಶತ್ರುಗಳನ್ನಾಗಿ ಮಾಡಿರುವೆವು. ಇವರು ಮನಮೋಹಕ ಮಾತುಗಳನ್ನು ವಂಚನೆಯ ರೂಪದಲ್ಲಿ ಪರಸ್ಪರರ ಮನಸ್ಸಿನೊಳಗೆ ಇಳಿಸುತ್ತಿರುತ್ತಾರೆ. ಇವರು ಹಾಗೆ ಮಾಡಬಾರದೆಂದು ನಿಮ್ಮ ಪ್ರಭುವಿನ ವಿಧಿ ಇರುತ್ತಿದ್ದರೆ ಇವರು ಎಂದಿಗೂ ಹಾಗೆ ಮಾಡುತ್ತಿರಲಿಲ್ಲ. ಇವರು ತಮ್ಮ ಸ್ವಕಲ್ಪಿತ ಆರೋಪಗಳಲ್ಲೇ ಬಿದ್ದುಕೊಂಡಿರುವಂತೆ ಇವರನ್ನು ಇವರಷ್ಟಕ್ಕೆ ಬಿಟ್ಟುಬಿಡಿರಿ.

وَكَذَٰلِكَ جَعَلْنَا لِكُلِّ نَبِيٍّ عَدُوًّا شَيَاطِينَ الْإِنْسِ وَالْجِنِّ يُوحِي بَعْضُهُمْ إِلَىٰ بَعْضٍ زُخْرُفَ الْقَوْلِ غُرُورًا ۚ وَلَوْ شَاءَ رَبُّكَ مَا فَعَلُوهُ فَذَرْهُمْ وَمَا يَفْتَرُونَ ﴿١١٢﴾

113. ಪರಲೋಕದ ಮೇಲೆ ವಿಶ್ವಾಸವಿಡದವರ ಹೃದಯಗಳಲ್ಲಿ ಇದರ (ಈ ಮನಮೋಹಕ ವಂಚನೆಯ) ಕಡೆಗೆ ಒಲವುಂಟಾಗಿ ಅವರು ಅದರಿಂದ ತೃಪ್ತರಾಗಲೆಂದೂ ಅವರು ಗಳಿಸಲಿಚ್ಛಿಸುವ ಕೆಡುಕುಗಳನ್ನು ಗಳಿಸಿಕೊಳ್ಳಲೆಂದೂ (ನಾವು ಅವರನ್ನು ಇದನ್ನೆಲ್ಲ ಮಾಡಲು ಬಿಡುತ್ತೇವೆ.)[29]

وَلِتَصْغَىٰ إِلَيْهِ أَفْئِدَةُ الَّذِينَ لَا يُؤْمِنُونَ بِالْآخِرَةِ وَلِيَرْضَوْهُ وَلِيَقْتَرِفُوا مَا هُمْ مُقْتَرِفُونَ ﴿١١٣﴾

114. ವಸ್ತುಸ್ಥಿತಿ ಹೀಗಿರುವಾಗ ನಾನು ಅಲ್ಲಾಹನ ಹೊರತು ಬೇರಾವನಾದರೂ ತೀರ್ಮಾನ ಮಾಡುವವನನ್ನು ಹುಡುಕಬೇಕೇ? ವಸ್ತುತಃ ಅವನು ವಿವರಪೂರ್ಣವಾದ ಗ್ರಂಥವನ್ನು ನಿಮ್ಮ

أَفَغَيْرَ اللَّهِ أَبْتَغِي حَكَمًا وَهُوَ الَّذِي أَنْزَلَ إِلَيْكُمُ الْكِتَابَ مُفَصَّلًا ۚ وَالَّذِينَ آتَيْنَاهُمُ

***ಇಲ್ಲಿಂದ 8ನೆಯ ಕಾಂಡ ಆರಂಭ.**

29. 110ರಿಂದ 113ನೆಯ ಸೂಕ್ತದ ವರೆಗೆ ಹೇಳಲಾಗಿರುವ ವಿಚಾರವೇನೆಂದರೆ ಮನುಷ್ಯನಿಗೆ ಸಂಬಂಧಿಸಿದಂತೆ, ವಿಧಿಬದ್ಧವಾಗಿ ಮಾರ್ಗದರ್ಶನ ಮಾಡುವ ನಿಯಮ ಅಲ್ಲಾಹನ ಬಳಿಯಿಲ್ಲ. ಮರದಲ್ಲಿ ಹಣ್ಣುಗಳು ಮೂಡುವಂತೆ ಅಥವಾ ಸ್ವತಃ ಮನುಷ್ಯನ ತಲೆಯಲ್ಲೇ ಕೂದಲು ಬೆಳೆಯುವಂತೆ ನೈಸರ್ಗಿಕ ವಿಧಿಗೆ ಬದ್ಧನಾಗಿರುವ ಪ್ರಮೇಯ ಮನುಷ್ಯನಿಗಿಲ್ಲ. ಅವನನ್ನು ಲೋಕಕ್ಕೆ ಪರೀಕ್ಷೆಗೆಂದು ಕಳುಹಿಸಲಾಗಿದೆ. ಸನ್ಮಾರ್ಗ ಮತ್ತು ಪಥಭ್ರಷ್ಟತೆಗಳ ಪೈಕಿ ಯಾವುದನ್ನು ಬೇಕಾದರೂ ನೆಚ್ಚಿಕೊಳ್ಳುವ ಸ್ವಾಂತಂತ್ರ್ಯವನ್ನು ಅವನಿಗೆ ಪರೀಕ್ಷಾರ್ಥವಾಗಿ ನೀಡಲಾಗಿದೆ. ಅವನು ಸ್ವತಃ ದಾರಿತಪ್ಪಿ ನಡೆಯಬಯಸಿದರೆ ಅಲ್ಲಾಹನು ತನ್ನ ವಿಧಿಯಂತೆ ಬಲವಂತದಿಂದ ಅವನಿಗೆ ಮಾರ್ಗದರ್ಶನ ಮಾಡುವುದಿಲ್ಲ.

ಕಡೆಗೆ ಅವತೀರ್ಣಗೊಳಿಸಿರುತ್ತಾನೆ.[30] ನಿಮಗಿಂತ ಮೊದಲು ಗ್ರಂಥ ನೀಡಲ್ಪಟ್ಟವರು, ಈ ಗ್ರಂಥವು ನಿಮ್ಮ ಪ್ರಭುವಿನ ಕಡೆಯಿಂದಲೇ ಸತ್ಯಸಹಿತ ಅವತೀರ್ಣಗೊಂಡಿದೆ ಯೆಂಬುದನ್ನು ತಿಳಿದಿರುತ್ತಾರೆ. ಆದುದರಿಂದ ಸಂಶಯಗ್ರಸ್ತರಾದವರಲ್ಲಾಗಬೇಡಿರಿ.

الْكِتٰبَ يَعْلَمُوْنَ اَنَّهٗ مُنَزَّلٌ مِّنْ رَّبِّكَ بِالْحَقِّ فَلَا تَكُوْنَنَّ مِنَ الْمُمْتَرِيْنَ ﴿١١٤﴾

115. ನಿಮ್ಮ ಪ್ರಭುವಿನ ವಚನವು ಸತ್ಯ ಮತ್ತು ನ್ಯಾಯದ ದೃಷ್ಟಿಯಿಂದ ಪರಿಪೂರ್ಣವಾಗಿದೆ. ಅವನ ಆದೇಶಗಳಲ್ಲಿ ಯಾರೂ ಬದಲಾವಣೆ ಮಾಡುವವರಿಲ್ಲ. ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَتَمَّتْ كَلِمَتُ رَبِّكَ صِدْقًا وَّعَدْلًا ۗ لَا مُبَدِّلَ لِكَلِمٰتِهٖ ۚ وَهُوَ السَّمِيْعُ الْعَلِيْمُ ﴿١١٥﴾

116. ಓ ಪೈಗಂಬರರೇ, ನೀವು ಭೂ ನಿವಾಸಿಗಳಲ್ಲಿ ಹೆಚ್ಚಿನವರ ಹೇಳಿಕೆಯಂತೆ ನಡೆದರೆ ಅವರು ನಿಮ್ಮನ್ನು ಅಲ್ಲಾಹನ ಮಾರ್ಗ ದಿಂದ ತಪ್ಪಿಸಿ ಬಿಡುವರು. ಅವರಂತು ಕೇವಲ ಗುಮಾನಿ ಯನ್ನನುಸರಿಸಿ ಊಹಾಪೋಹೆಗಳ ಪ್ರಕಾರ ವರ್ತಿಸುತ್ತಾರೆ.

وَاِنْ تُطِعْ اَكْثَرَ مَنْ فِى الْاَرْضِ يُضِلُّوْكَ عَنْ سَبِيْلِ اللّٰهِ ۗ اِنْ يَّتَّبِعُوْنَ اِلَّا الظَّنَّ وَاِنْ هُمْ اِلَّا يَخْرُصُوْنَ ﴿١١٦﴾

117. ವಾಸ್ತವದಲ್ಲಿ ನಿಮ್ಮ ಪ್ರಭುವಿನ ಮಾರ್ಗದಿಂದ ಯಾರು ದೂರ ಸರಿದಿರುತ್ತಾನೆ ಮತ್ತು ಯಾರು ನೇರ ಮಾರ್ಗದಲ್ಲಿದ್ದಾನೆಂಬುದನ್ನು ಅವನು ಚೆನ್ನಾಗಿ ಅರಿತಿರುತ್ತಾನೆ.

اِنَّ رَبَّكَ هُوَ اَعْلَمُ مَنْ يَّضِلُّ عَنْ سَبِيْلِهٖ ۚ وَهُوَ اَعْلَمُ بِالْمُهْتَدِيْنَ ﴿١١٧﴾

118. ನೀವು ಅಲ್ಲಾಹನ 'ಸೂಕ್ತ'ಗಳಲ್ಲಿ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ನಾಮ ಉಚ್ಚರಿಸಲ್ಪಟ್ಟಿರುವ ಪ್ರಾಣಿಯ ಮಾಂಸವನ್ನು ತಿನ್ನಿರಿ.

فَكُلُوْا مِمَّا ذُكِرَ اسْمُ اللّٰهِ عَلَيْهِ اِنْ كُنْتُمْ بِاٰيٰتِهٖ مُؤْمِنِيْنَ ﴿١١٨﴾

119. ನೀವು ಅಲ್ಲಾಹನ ನಾಮ ಉಚ್ಚರಿಸಲ್ಪಟ್ಟ ವಸ್ತುವನ್ನು ತಿನ್ನದಿರಲು ಕಾರಣವೇನು? ನಿಜವಾಗಿ ವಿವಶಾವಸ್ಥೆಯ ವಿನಾ ಇತರ ಎಲ್ಲ ಸ್ಥಿತಿಗಳಲ್ಲಿಯೂ ಅಲ್ಲಾಹನು ನಿಷೇಧಿಸಿರುವ ವಸ್ತುಗಳ ವಿವರವನ್ನು ನಿಮಗೆ ತಿಳಿಸಿಕೊಡಲಾಗಿದೆ. ನಿಶ್ಚಯವಾಗಿಯೂ ಹೆಚ್ಚಿನವರು ಜ್ಞಾನವಿಲ್ಲದೆ ಕೇವಲ ತಮ್ಮ ಅಭಿಲಾಷೆಗಳಿಂದಾಗಿ ಪಥಭ್ರಷ್ಟ ಮಾತುಗಳನ್ನಾಡುತ್ತಾರೆ. ಹದತಪ್ಪಿ ನಡೆಯುತ್ತಿರುವ ಇವರನ್ನು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು.

وَمَا لَكُمْ اَلَّا تَأْكُلُوْا مِمَّا ذُكِرَ اسْمُ اللّٰهِ عَلَيْهِ وَقَدْ فَصَّلَ لَكُمْ مَّا حَرَّمَ عَلَيْكُمْ اِلَّا مَا اضْطُرِرْتُمْ اِلَيْهِ ۗ وَاِنَّ كَثِيْرًا لَّيُضِلُّوْنَ بِاَهْوَاۤىِٕهِمْ بِغَيْرِ عِلْمٍ ۗ اِنَّ رَبَّكَ هُوَ اَعْلَمُ بِالْمُعْتَدِيْنَ ﴿١١٩﴾

120. ನೀವು ಪ್ರತ್ಯಕ್ಷ ಮತ್ತು ಪರೋಕ್ಷ ಪಾಪಕಾರ್ಯಗಳಿಂದ ದೂರವಿರಿ. ಪಾಪ ಗಳಿಸುವವರು ತಮ್ಮ ಗಳಿಕೆಯ ಪ್ರತಿಫಲ ಪಡೆದೇ ತೀರುವರು.

وَذَرُوْا ظَاهِرَ الْاِثْمِ وَبَاطِنَهٗ ۗ اِنَّ الَّذِيْنَ يَكْسِبُوْنَ الْاِثْمَ سَيُجْزَوْنَ بِمَا كَانُوْا يَقْتَرِفُوْنَ ﴿١٢٠﴾

30. ಈ ಸೂಕ್ತದಲ್ಲಿ ಮಾತು ಪ್ರವಾದಿವರ್ಯರ(ಸ) ಮೂಲಕ ಪ್ರಕಟವಾಗಿದೆ. ಅಭಿಸಂಬೋಧನೆ ಮುಸ್ಲಿಮರ ಕಡೆಗಿದೆ.

وَلَا تَأْكُلُوا مِمَّا لَمْ يُذْكَرِ اسْمُ اللّٰهِ
عَلَيْهِ وَإِنَّهُ لَفِسْقٌ ۗ وَإِنَّ الشَّيٰطِيْنَ
لَيُوْحُوْنَ إِلٰى أَوْلِيٰٓئِهِمْ لِيُجَادِلُوْكُمْ ۚ
وَإِنْ أَطَعْتُمُوْهُمْ إِنَّكُمْ لَمُشْرِكُوْنَ ﴿١٢١﴾

121. ಅಲ್ಲಾಹನ ನಾಮ ಉಚ್ಚರಿಸದೆ ವಧಿಸಲ್ಪಟ್ಟ ಪ್ರಾಣಿಯ ಮಾಂಸ ತಿನ್ನಬೇಡಿರಿ. ಹೀಗೆ ಮಾಡುವುದು ಧರ್ಮಭ್ರಷ್ಟತೆ. ನಿಮ್ಮೊಡನೆ ಜಗಳ ಮಾಡಲಿಕ್ಕಾಗಿ ಶೈತಾನರು ತಮ್ಮ ಸಂಗಾತಿಗಳ ಮನಸ್ಸಿನಲ್ಲಿ ಸಂಶಯ ಮತ್ತು ಆಕ್ಷೇಪಣೆಗಳನ್ನು ಉಂಟು ಮಾಡುತ್ತಾರೆ. ನೀವು ಅವರ ಅನುಸರಣೆ ಸ್ವೀಕರಿಸಿದರೆ, ಖಂಡಿತವಾಗಿಯೂ ನೀವು 'ಬಹುದೇವವಿಶ್ವಾಸಿ'ಗಳು

أَوَمَنْ كَانَ مَيْتًا فَأَحْيَيْنٰهُ وَجَعَلْنَا لَهٗ
نُوْرًا يَّمْشِيْ بِهٖ فِي النَّاسِ كَمَنْ مَّثَلُهٗ
فِي الظُّلُمٰتِ لَيْسَ بِخَارِجٍ مِّنْهَا ۚ كَذٰلِكَ
زُيِّنَ لِلْكٰفِرِيْنَ مَا كَانُوْا يَعْمَلُوْنَ ﴿١٢٢﴾

122. ಹಿಂದೆ ಸತ್ತಿದ್ದು, ಅನಂತರ ನಾವು ಜೀವದಾನ ಮಾಡಿ ಜನರ ಮಧ್ಯೆ ಜೀವನದ ಮಾರ್ಗದಲ್ಲಿ ಮುಂದುವರಿಯಲು ಬೇಕಾದ ಬೆಳಕನ್ನು ದಯಪಾಲಿಸಿದ ಓರ್ವ ವ್ಯಕ್ತಿಯು, ಅಂಧಕಾರದಲ್ಲಿ ಬಿದ್ದುಕೊಂಡಿರುವ ಮತ್ತು ಯಾವ ರೀತಿಯಲ್ಲಿಯೂ ಅವುಗಳಿಂದ ಎದ್ದು ಬಾರದ ವ್ಯಕ್ತಿಯಂತೆ ಆಗಬಲ್ಲನೇ?[31] ಸತ್ಯನಿಷೇಧಿಗಳಿಗೆ ಇದೇ ರೀತಿಯಲ್ಲಿ ಅವರ ಕರ್ಮಗಳು ಸುಂದರವಾಗಿ ತೋರುವಂತೆ ಮಾಡಲಾಗಿದೆ.

وَكَذٰلِكَ جَعَلْنَا فِيْ كُلِّ قَرْيَةٍ أَكٰبِرَ
مُجْرِمِيْهَا لِيَمْكُرُوْا فِيْهَا ۚ وَمَا يَمْكُرُوْنَ
إِلَّا بِأَنْفُسِهِمْ وَمَا يَشْعُرُوْنَ ﴿١٢٣﴾

123. ಇದೇ ರೀತಿ ನಾವು ಪ್ರತಿಯೊಂದು ಊರಿನಲ್ಲಿ ತಮ್ಮ ವಂಚನೆ ಮತ್ತು ಕುತಂತ್ರಗಳ ಜಾಲವನ್ನು ಹರಡಲು ಅದರ ದೊಡ್ಡ ದೊಡ್ಡ ಅಪರಾಧಿಗಳನ್ನು ಹಚ್ಚಿಬಿಟ್ಟಿದ್ದೇವೆ. ವಾಸ್ತವದಲ್ಲಿ ಅವರು ತಮ್ಮ ಮೋಸದ ಜಾಲದಲ್ಲಿ ತಾವೇ ಸಿಕ್ಕಿ ಬೀಳುತ್ತಾರೆ. ಆದರೆ ಅವರಿಗೆ ಅದರ ಬೋಧವಿಲ್ಲ.

وَإِذَا جَآءَتْهُمْ اٰيَةٌ قَالُوْا لَنْ نُّؤْمِنَ
حَتّٰى نُؤْتٰى مِثْلَ مَآ أُوْتِيَ رُسُلُ اللّٰهِ ۘ اَللّٰهُ
أَعْلَمُ حَيْثُ يَجْعَلُ رِسَالَتَهٗ ۗ سَيُصِيْبُ
الَّذِيْنَ أَجْرَمُوْا صَغَارٌ عِنْدَ اللّٰهِ وَعَذَابٌ
شَدِيْدٌۢ بِمَا كَانُوْا يَمْكُرُوْنَ ﴿١٢٤﴾

124. ಅವರ ಮುಂದೆ ಯಾವುದಾದರೂ ನಿದರ್ಶನ ಬಂದಾಗ, "ಅಲ್ಲಾಹನ ಸಂದೇಶವಾಹಕರಿಗೆ ಸಿಕ್ಕಿರುವ ವಸ್ತು ಸ್ವತಃ ನಮಗೆ ಸಿಗುವವರೆಗೂ ನಾವು ವಿಶ್ವಾಸವಿರಿಸಲಾರೆವು" ಎಂದು ಅವರು ಹೇಳುತ್ತಾರೆ. ತನ್ನ ಸಂದೇಶವಾಹಕತ್ವದ ಕಾರ್ಯವನ್ನು ಯಾರಿಂದ ಹೇಗೆ ಮಾಡಿಸ ಬೇಕೆಂಬುದನ್ನು ಅಲ್ಲಾಹನು ಬಹಳ ಚೆನ್ನಾಗಿ ಬಲ್ಲನು. ಈ ಅಪರಾಧಿಗಳು ತಮ್ಮ ಧೂರ್ತತನದ ಫಲವಾಗಿ ಅಲ್ಲಾಹನ ಬಳಿ ಅವಮಾನಕ್ಕೆ ಹಾಗೂ ಕಠಿಣಯಾತನೆಗೊಳಗಾಗುವ ಕಾಲ ಸನ್ನಿಹಿತವಾಗಿದೆ.

فَمَنْ يُّرِدِ اللّٰهُ أَنْ يَّهْدِيَهٗ يَشْرَحْ صَدْرَهٗ
لِلْإِسْلَامِ ۚ وَمَنْ يُّرِدْ أَنْ يُّضِلَّهٗ يَجْعَلْ

125. ಆದರೆ (ಸತ್ಯವೇನೆಂದರೆ) ಅಲ್ಲಾಹನು ಯಾರಿಗೆ ಸನ್ಮಾರ್ಗ ನೀಡಲಿಚ್ಛಿಸುತ್ತಾನೋ ಅವನ ಹೃದಯವನ್ನು ಇಸ್ಲಾಮಿಗಾಗಿ

31. ಅರ್ಥಾತ್- ಮಾನವೀಯತೆಯ ಪರಿಜ್ಞಾನ ಮೂಡಿದ ಮತ್ತು ಜ್ಞಾನದ ಬೆಳಕಿನ ಮೂಲಕ ದುರ್ಮಾರ್ಗಗಳ ನಡುವೆ ಸನ್ಮಾರ್ಗವನ್ನು ಸ್ಪಷ್ಟವಾಗಿ ಕಾಣುತ್ತಿರುವ ವ್ಯಕ್ತಿಯು, ಅಜ್ಞಾನ ಮತ್ತು ತಿಳಿಗೇಡಿತನದ ಕತ್ತಲಲ್ಲಿ ತೊಳಲಾಡುತ್ತಿರುವ ವ್ಯಕ್ತಿಗಳಂತೆ ಲೋಕದಲ್ಲಿ ಜೀವನ ಸಾಗಿಸುವನು ಎಂದು ನೀವು ಭಾವಿಸುವುದಾದರೂ ಹೇಗೆ?

| | |
|---|---|
| ತೆರೆದು ಬಿಡುತ್ತಾನೆ ಮತ್ತು ಯಾರನ್ನು ಪಥಭ್ರಷ್ಟತೆಯಲ್ಲಿಡ ಲಿಚ್ಛಿಸುತ್ತಾನೋ ಅವನ ಹೃದಯವನ್ನು ಸಂಕೀರ್ಣಗೊಳಿಸುತ್ತಾನೆ. (ಇಸ್ಲಾಮಿನ ಬಗ್ಗೆ ಯೋಚಿಸುತ್ತಲೇ) ಅವನಿಗೆ, ತನ್ನ ಆತ್ಮವು ಆಕಾಶಕ್ಕೆ ಹಾರಿ ಹೋಗುತ್ತಿರುವುದೋ ಎಂದು ಭಾಸವಾಗುವಂತೆ ಅದನ್ನು ಅದುಮುತ್ತಾನೆ. ಹೀಗೆ ಅಲ್ಲಾಹನು(ಸತ್ಯದಿಂದ ಪರಾರಿ ಮತ್ತು ಆ ಕುರಿತು ತಿರಸ್ಕಾರದ)[32] ಮಾಲಿನ್ಯವನ್ನು ವಿಶ್ವಾಸವಿಡ ದವರ ಮೇಲೆ ಹೇರಿ ಬಿಡುತ್ತಾನೆ. | صَدْرَهُ ضَيِّقًا حَرَجًا كَأَنَّمَا يَصَّعَّدُ فِي السَّمَاءِ ۚ كَذَٰلِكَ يَجْعَلُ اللَّهُ الرِّجْسَ عَلَى الَّذِينَ لَا يُؤْمِنُونَ ﴿١٢٥﴾ |
| 126. ನಿಜವಾಗಿ ಈ ಮಾರ್ಗ ನಿಮ್ಮ ಪ್ರಭುವಿನ ನೇರ ಮಾರ್ಗವಾಗಿರು ತ್ತದೆ ಮತ್ತು ಉಪದೇಶವನ್ನು ಸ್ವೀಕರಿಸುವವರಿಗೆ ಅದರ ಕುರುಹುಗಳು ವಿವರಿಸಲ್ಪಟ್ಟಿವೆ. | وَهَٰذَا صِرَاطُ رَبِّكَ مُسْتَقِيمًا ۗ قَدْ فَصَّلْنَا الْآيَاتِ لِقَوْمٍ يَذَّكَّرُونَ ﴿١٢٦﴾ |
| 127. ಅವರ ಪ್ರಭುವಿನ ಬಳಿ ಅವರಿಗಾಗಿ ಶಾಂತಿ ಸದನವಿದೆ ಮತ್ತು ಅವರು ಕೈಗೊಂಡ ಸರಿಯಾದ ಕರ್ಮವಿಧಾನದ ಕಾರಣ ಅವನು ಅವರ ಸಂರಕ್ಷಕನಾಗಿರುತ್ತಾನೆ. | لَهُمْ دَارُ السَّلَامِ عِندَ رَبِّهِمْ ۖ وَهُوَ وَلِيُّهُم بِمَا كَانُوا يَعْمَلُونَ ﴿١٢٧﴾ |
| 128. ಅಲ್ಲಾಹನು ಇವರೆಲ್ಲರನ್ನು ಸುತ್ತುವರಿದು ಒಟ್ಟುಗೂಡಿಸುವ ದಿನ 'ಯಕ್ಷ'ಶೈತಾನರನ್ನುದ್ದೇಶಿಸಿ, "ಓ 'ಯಕ್ಷ' ಕೂಟವೇ, ನೀವಂತು ಮಾನವ ವರ್ಗವನ್ನು ಚೆನ್ನಾಗಿ ಮೋಸ ಮಾಡಿದಿರಿ" ಎಂದು ಹೇಳುವನು. ಮನುಷ್ಯರ ಪೈಕಿ ಅವರ ಆಪ್ತ ಮಿತ್ರರಾದ ವರು "ಪ್ರಭೂ, ನಮ್ಮಲ್ಲಿ ಪ್ರತಿಯೊಬ್ಬನು ಇನ್ನೊಬ್ಬನನ್ನು ಚೆನ್ನಾಗಿ ಉಪಯೋಗಿಸಿಕೊಂಡಿದ್ದಾನೆ. ಈಗ ನೀನು ನಮಗಾಗಿ ನಿಶ್ಚಯಿಸಿದ್ದ ಕಾಲ ಘಟ್ಟಕ್ಕೆ ನಾವು ಬಂದು ತಲುಪಿದ್ದೇವೆ" ಎಂದು ಹೇಳುವರು. ಆಗ ಅಲ್ಲಾಹನು, "ಈಗ ನರಕಾಗ್ನಿಯೇ ನಿಮ್ಮ ವಾಸಸ್ಥಾನವಾಗಿದ್ದು ಅದರಲ್ಲಿ ನೀವು ಸದಾ ವಾಸಿಸುವಿರಿ" ಎಂದು ಹೇಳುವನು. ಅಲ್ಲಾಹನು ಯಾರನ್ನು ರಕ್ಷಿಸಲಿಚ್ಛಿಸುವನೋ ಅವರು ಮಾತ್ರ ಅದರಿಂದ ರಕ್ಷಣೆ ಹೊಂದುವರು. ನಿಶ್ಚಯವಾಗಿಯೂ ನಿಮ್ಮ ಪ್ರಭು ಮಹಾಧೀಮಂತನೂ ಸರ್ವಜ್ಞನೂ ಆಗಿರುತ್ತಾನೆ. | وَيَوْمَ يَحْشُرُهُمْ جَمِيعًا يَا مَعْشَرَ الْجِنِّ قَدِ اسْتَكْثَرْتُم مِّنَ الْإِنسِ ۖ وَقَالَ أَوْلِيَاؤُهُم مِّنَ الْإِنسِ رَبَّنَا اسْتَمْتَعَ بَعْضُنَا بِبَعْضٍ وَبَلَغْنَا أَجَلَنَا الَّذِي أَجَّلْتَ لَنَا ۚ قَالَ النَّارُ مَثْوَاكُمْ خَالِدِينَ فِيهَا إِلَّا مَا شَاءَ اللَّهُ ۗ إِنَّ رَبَّكَ حَكِيمٌ عَلِيمٌ ﴿١٢٨﴾ |
| 129. ಹೀಗೆ ಅಕ್ರಮಿಗಳು (ಭೂಲೋಕದಲ್ಲಿ ಪರಸ್ಪರ ಕೂಡಿಕೊಂಡು) ಮಾಡುತ್ತಿದ್ದ ದುಡಿಮೆಯ ಕಾರಣದಿಂದ ನಾವು (ಪರಲೋಕದಲ್ಲಿ) ಅವರನ್ನು ಪರಸ್ಪರರ ಸಂಗಾತಿಗಳಾಗಿ ಮಾಡುವೆವು. | وَكَذَٰلِكَ نُوَلِّي بَعْضَ الظَّالِمِينَ بَعْضًا بِمَا كَانُوا يَكْسِبُونَ ﴿١٢٩﴾ |

32. ಈ ವಾಕ್ಯದಿಂದ ಸ್ಪಷ್ಟವಾಗುವುದೇನೆಂದರೆ ವಿಶ್ವಾಸವಿಡದವರ ಮನಸ್ಸನ್ನು ಅಲ್ಲಾಹನು ಇಸ್ಲಾಮಿನ ಮಟ್ಟಿಗೆ ಸಂಕುಚಿತಗೊಳಿಸುತ್ತಾನೆ ಮತ್ತು ಅವನು ಅವರಿಗೆ ಮಾರ್ಗದರ್ಶನ ಮಾಡಲಿಚ್ಛಿಸುವುದಿಲ್ಲ.

130. "ಓ 'ಯಕ್ಷ' ಮತ್ತು ಮಾನವ ವರ್ಗವೇ, ನಿಮಗೆ ನನ್ನ ನಿದರ್ಶನ ಗಳನ್ನು ಕೇಳಿಸುತ್ತ ಇಂದಿನ ಪರಿಣಾಮದ ಬಗ್ಗೆ ಎಚ್ಚರಿಸಲಿಕ್ಕಾಗಿ ನಿಮ್ಮ ಬಳಿಗೆ ನಿಮ್ಮೊಳಗಿಂದಲೇ ಸಂದೇಶವಾಹಕರು ಬಂದಿರಲಿಲ್ಲವೇ?" (ಎಂದೂ ಆ ಸಂದರ್ಭದಲ್ಲಿ ಅಲ್ಲಾಹನು ಅವರೊಡನೆ ಕೇಳುವನು) ಅವರು, "ನಿಜ. ನಮ್ಮ ವಿರುದ್ಧ ನಾವೇ ಸಾಕ್ಷಿ ಹೇಳುತ್ತೇವೆ" ಎನ್ನುವರು. ಇಂದು ಲೌಕಿಕ ಜೀವನವು ಇವರನ್ನು ವಂಚನೆಗೊಳಪಡಿಸಿರುತ್ತದೆ. ಆದರೆ ಆಗ ಅವರು ನಾವು ಸತ್ಯನಿಷೇಧಿಗಳಾಗಿದ್ದೆವೆಂದು ತಮ್ಮ ವಿರುದ್ಧ ತಾವೇ ಸಾಕ್ಷಿ ಹೇಳುವರು.

يَٰمَعْشَرَ ٱلْجِنِّ وَٱلْإِنسِ أَلَمْ يَأْتِكُمْ رُسُلٌ مِّنكُمْ يَقُصُّونَ عَلَيْكُمْ ءَايَٰتِى وَيُنذِرُونَكُمْ لِقَآءَ يَوْمِكُمْ هَٰذَا ۚ قَالُوا۟ شَهِدْنَا عَلَىٰٓ أَنفُسِنَا ۖ وَغَرَّتْهُمُ ٱلْحَيَوٰةُ ٱلدُّنْيَا وَشَهِدُوا۟ عَلَىٰٓ أَنفُسِهِمْ أَنَّهُمْ كَانُوا۟ كَٰفِرِينَ ﴿١٣٠﴾

131. ನಿಮ್ಮ ಪ್ರಭು, ನಾಡಿನ ನಿವಾಸಿಗಳು ವಾಸ್ತವಿಕತೆಯ ಬಗ್ಗೆ ಬೋಧ ರಹಿತರಾಗಿದ್ದಾಗ ಅಕ್ರಮವಾಗಿ ಆ ನಾಡುಗಳನ್ನು ನಾಶ ಗೊಳಿಸುವವನಾಗಿರಲಿಲ್ಲ (ಎಂಬುದು ಸಾಬೀತಾಗಲಿಕ್ಕಾಗಿ ಅವರಿಂದ ಈ ಸಾಕ್ಷ್ಯವನ್ನು ಪಡೆಯಲಾಗುವುದು)

ذَٰلِكَ أَن لَّمْ يَكُن رَّبُّكَ مُهْلِكَ ٱلْقُرَىٰ بِظُلْمٍ وَأَهْلُهَا غَٰفِلُونَ ﴿١٣١﴾

132. ಪ್ರತಿಯೊಬ್ಬನ ಸ್ಥಾನವು ಅವನ ಕರ್ಮಕ್ಕನುಸಾರವಾಗಿರುತ್ತದೆ ಮತ್ತು ನಿಮ್ಮ ಪ್ರಭು ಜನರ ಕರ್ಮಗಳ ಬಗ್ಗೆ ಅಲಕ್ಷ್ಯ ನಾಗಿರುವುದಿಲ್ಲ.

وَلِكُلٍّ دَرَجَٰتٌ مِّمَّا عَمِلُوا۟ ۚ وَمَا رَبُّكَ بِغَٰفِلٍ عَمَّا يَعْمَلُونَ ﴿١٣٢﴾

133. ನಿಮ್ಮ ಪ್ರಭು ನಿರಪೇಕ್ಷನು ಮತ್ತು ದಯೆಯು ಅವನ ಧೋರಣೆಯಾಗಿದೆ. ಅವನು ನಿಮ್ಮನ್ನು ಬೇರೆ ಕೆಲವರ ವಂಶದಿಂದ ಉದ್ಭೂತಗೊಳಿಸಿದಂತೆ ಅವನಿಚ್ಛಿಸಿದರೆ ನಿಮ್ಮನ್ನು ನೀಗಿಸಿ ನಿಮ್ಮ ಸ್ಥಾನದಲ್ಲಿ ತನಗಿಷ್ಟ ಬಂದವರನ್ನು ತರಬಲ್ಲನು.

وَرَبُّكَ ٱلْغَنِىُّ ذُو ٱلرَّحْمَةِ ۚ إِن يَشَأْ يُذْهِبْكُمْ وَيَسْتَخْلِفْ مِنۢ بَعْدِكُم مَّا يَشَآءُ كَمَآ أَنشَأَكُم مِّن ذُرِّيَّةِ قَوْمٍ ءَاخَرِينَ ﴿١٣٣﴾

134. ನಿಮಗೆ ಯಾವುದರ ವಾಗ್ದಾನ ಮಾಡಲಾಗುತ್ತಿದೆಯೋ ಅದು ಬಂದೇ ತೀರುವುದು ಖಚಿತ. ನೀವು ಅಲ್ಲಾಹನನ್ನು ಮಣಿಸುವ ಸಾಮರ್ಥ್ಯವನ್ನು ಹೊಂದಿಲ್ಲ.

إِنَّ مَا تُوعَدُونَ لَءَاتٍ ۖ وَمَآ أَنتُم بِمُعْجِزِينَ ﴿١٣٤﴾

135. ಓ ಪೈಗಂಬರರೇ, ಹೇಳಿರಿ: "ಜನರೇ, ನೀವು ನಿಮ್ಮ ಸ್ಥಾನದಲ್ಲಿ ಕಾರ್ಯನಿರತರಾಗಿರಿ, ನಾನೂ ನನ್ನ ಸ್ಥಾನದಲ್ಲಿ ಕಾರ್ಯ ನಿರತನಾಗಿ ರುತ್ತೇನೆ. ಅಂತಿಮ ಪರಿಣಾಮ ಯಾರ ಪಾಲಿಗೆ ಹಿತಕರ ವಾಗಿರುವುದೆಂಬುದು ಸದ್ಯವೇ ನಿಮಗೆ ತಿಳಿದು ಬರುವುದು. ನಿಶ್ಚಯವಾಗಿಯೂ ಅಕ್ರಮಿಗಳು ಎಂದಿಗೂ ಯಶಸ್ಸು ಪಡೆಯಲಾರರು."

قُلْ يَٰقَوْمِ ٱعْمَلُوا۟ عَلَىٰ مَكَانَتِكُمْ إِنِّى عَامِلٌ ۖ فَسَوْفَ تَعْلَمُونَ مَن تَكُونُ لَهُۥ عَٰقِبَةُ ٱلدَّارِ ۗ إِنَّهُۥ لَا يُفْلِحُ ٱلظَّٰلِمُونَ ﴿١٣٥﴾

136. ಇವರು ಅಲ್ಲಾಹನಿಗೆ, ಸ್ವತಃ ಆತನೇ ಉಂಟುಮಾಡಿದ ಹೊಲ

وَجَعَلُوا۟ لِلَّهِ مِمَّا ذَرَأَ مِنَ ٱلْحَرْثِ وَٱلْأَنْعَٰمِ

ನَصِيبًا فَقَالُوا هَٰذَا لِلَّهِ بِزَعْمِهِمْ وَهَٰذَا لِشُرَكَائِنَا ۖ فَمَا كَانَ لِشُرَكَائِهِمْ فَلَا يَصِلُ إِلَى اللَّهِ ۖ وَمَا كَانَ لِلَّهِ فَهُوَ يَصِلُ إِلَىٰ شُرَكَائِهِمْ ۗ سَاءَ مَا يَحْكُمُونَ ﴿١٣٦﴾

ಮತ್ತು ಜಾನುವಾರುಗಳಲ್ಲಿ ಒಂದಂಶವನ್ನು ನಿಶ್ಚಯಿಸಿದ್ದಾರೆ ಮತ್ತು ಇದು ಅಲ್ಲಾಹನಿಗೆ ಮತ್ತು ಇದು ನಾವು ನಿಶ್ಚಯಿಸಿಕೊಂಡಿರುವ ಸಹಭಾಗಿಗಳಿಗೆಂದು ತಾವೇ ಹೇಳಿಕೊಳ್ಳುತ್ತಾರೆ. ಆ ಬಳಿಕ ಇವರು ತಮ್ಮ ಸಹಭಾಗಿಗಳಿಗೆ ನಿಶ್ಚಯಿಸಿದ ಪಾಲು ಅಲ್ಲಾಹನಿಗೆ ಮುಟ್ಟುವುದಿಲ್ಲ. ಆದರೆ ಅಲ್ಲಾಹನಿಗೆ ನಿಶ್ಚಯಿಸಿದ ಪಾಲು ಇವರ ಸಹಭಾಗಿಗಳಿಗೆ ತಲುಪಿಬಿಡುತ್ತದೆ.[33] ಎಂತಹ ಕೆಟ್ಟ ತೀರ್ಮಾನ ಮಾಡುತ್ತಾರಿವರು.

وَكَذَٰلِكَ زَيَّنَ لِكَثِيرٍ مِّنَ الْمُشْرِكِينَ قَتْلَ أَوْلَادِهِمْ شُرَكَاؤُهُمْ لِيُرْدُوهُمْ وَلِيَلْبِسُوا عَلَيْهِمْ دِينَهُمْ ۖ وَلَوْ شَاءَ اللَّهُ مَا فَعَلُوهُ ۖ فَذَرْهُمْ وَمَا يَفْتَرُونَ ﴿١٣٧﴾

137. ಇದೇ ರೀತಿಯಲ್ಲಿ ಅನೇಕ 'ಬಹುದೇವವಿಶ್ವಾಸಿ'ಗಳಿಗೆ ಅವರ ಸಹಭಾಗಿಗಳು ತಮ್ಮ ಮಕ್ಕಳ ವಧೆಯನ್ನು ಮನೋಹರಗೊಳಿಸಿ ಬಿಟ್ಟಿದ್ದಾರೆ.[34] ಇದು, ಅವರನ್ನು ವಿನಾಶಕ್ಕೊಳಪಡಿಸಲಿಕ್ಕಾಗಿ ಮತ್ತು ಅವರ ಪಾಲಿಗೆ ಅವರ ಧರ್ಮವನ್ನು ಸಂದೇಹಾಸ್ಪದಗೊಳಿಸಲಿಕ್ಕಾಗಿ.[35] ಅಲ್ಲಾಹನಿಚ್ಛಿಸುತ್ತಿದ್ದರೆ ಇವರು ಹಾಗೆ ಮಾಡುತ್ತಿರಲಿಲ್ಲ. ಆದುದರಿಂದ ಇವರು ತಮ್ಮ ಸುಳ್ಳು ಸೃಷ್ಟನೆಯಲ್ಲೇ ಬಿದ್ದಿರಲಿಕ್ಕಾಗಿ ಇವರನ್ನು ಬಿಟ್ಟುಬಿಡಿರಿ.

---

33. ಅವರು ದೇವನ ಹೆಸರಲ್ಲಿ ಪ್ರತ್ಯೇಕಿಸಲಾದ ಪಾಲಿನಲ್ಲೂ ತರತರದ ಕುತಂತ್ರಗಳನ್ನು ನಡೆಸಿ ಕಡಿತಗೊಳಿಸುತ್ತಿದ್ದರು. ಎಲ್ಲಾ ವಿಧದಿಂದಲೂ ತಮ್ಮ ಸ್ವಯಂಕೃತ ದೇವ ಸಹಭಾಗಿಗಳ ಅಂಶವನ್ನು ಹೆಚ್ಚಿಸಲು ಅವರು ಪ್ರಯತ್ನಿಸುತ್ತಿದ್ದರು. ಉದಾ: ಧಾನ್ಯ ಮತ್ತು ಹಣ್ಣುಹಂಪಲುಗಳನ್ನು ದೇವನ ಹೆಸರಲ್ಲಿ ಪ್ರತ್ಯೇಕಗೊಳಿಸುವ ಸಂದರ್ಭದಲ್ಲಿ ಸ್ವಲ್ಪ ಭಾಗ ಬಿದ್ದುಬಿಟ್ಟರೆ ಅದನ್ನು ತಮ್ಮ ಸಹಭಾಗಿಗಳ ಪಾಲಿಗೆ ಸೇರಿಸುತ್ತಿದ್ದರು. ಸಹಭಾಗಿಗಳ ಪಾಲು ಬಿದ್ದುಬಿಟ್ಟರೆ ಅಥವಾ ದೇವನಿಗಾಗಿ ಪ್ರತ್ಯೇಕಿಸಲಾದ ಭಾಗಕ್ಕೆ ಸೇರಿಬಿಟ್ಟರೆ ಅದನ್ನು ಮರಳಿ ಪಡೆದು ಕೊಳ್ಳುತ್ತಿದ್ದರು. ಹರಕೆ ಮಾಡಲಾದ ಧಾನ್ಯವನ್ನು ಉಪಯೋಗಿಸಬೇಕಾದಂತಹ ಅನಿವಾರ್ಯತೆ ಎದುರಾದರೆ ದೇವನ ಪಾಲನ್ನು ತಿಂದು ಬಿಡುತ್ತಿದ್ದರು. ಆದರೆ ತಮ್ಮ ಸಹಭಾಗಿಗಳ ಅಂಶಕ್ಕೆ ಕೈಯನ್ನೂ ತಾಗಿಸುತ್ತಿರಲಿಲ್ಲ. ಅದರಿಂದ ಯಾವ ಆಪತ್ತು ಬಂದೆರಗಬಹುದೋ ಎಂದು ಅವರು ಹೆದರುತ್ತಿದ್ದರು.

34. ಇಲ್ಲಿ 'ಸಹಭಾಗಿಗಳು' ಎಂಬ ಪದ ಪೂರ್ವೋಕ್ತ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿಲ್ಲ. ಪರಸ್ಪರರು ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. 136ನೆಯ ಸೂಕ್ತದಲ್ಲಿ ಸಹಭಾಗಿಗಳು ಎಂಬ ಪದ ಅವರ ಆರಾಧ್ಯರುಗಳು ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಅವರ ಶಿಫಾರಸು, ಮಧ್ಯವರ್ತಿತನ ಮತ್ತು ಪ್ರಭಾವದ ಮೂಲಕವೇ ಅನುಗ್ರಹ ಪ್ರಾಪ್ತವಾಗುತ್ತದೆಂದು ಅವರು ಭಾವಿಸುತ್ತಿದ್ದರು. ಅನುಗ್ರಹ ಪ್ರಾಪ್ತಿಗಾಗಿ ಸ್ತುತಿಸುವಾಗ ಆ ಆರಾಧ್ಯರುಗಳನ್ನೂ ಅವರು ದೇವನ ಸಹಭಾಗಿಗಳನ್ನಾಗಿ ಮಾಡುತ್ತಿದ್ದರು. ಆದರೆ ಈ ಸೂಕ್ತದಲ್ಲಿ 'ಸಹಭಾಗಿಗಳು' ಎಂಬ ಪದವನ್ನು ಶಿಶುಹತ್ಯೆಯ ಪದ್ಧತಿಯನ್ನು ಜಾರಿಗೊಳಿಸಿದ ಮನುಷ್ಯರ ಪಾಲಿಗೆ ಬಳಸಲಾಗಿದೆ. ಈ ಬರ್ಬರ ಪದ್ಧತಿಯನ್ನು ಜನರ ಪಾಲಿಗೆ ಧರ್ಮಸಮ್ಮತ ಮತ್ತು ಪ್ರಿಯಕರವಾಗಿ ಮಾಡಿದ ನರಪಿಶಾಚಿಗಳ ಕುರಿತು ಈ ಪದವನ್ನು ಉಪಯೋಗಿಸಲಾಗಿದೆ. ಶಿಶು ಹತ್ಯೆಯ ಮೂರು ವಿಧಿಗಳು ಅರಬರಲ್ಲಿ ಜಾರಿಯಲ್ಲಿದ್ದವು. ಕುರ್‌ಆನಿನಲ್ಲಿ ಆ ಮೂರೂ ಪದ್ಧತಿಗಳ ಕಡೆಗೆ ಸೂಚಿಸಲಾಗಿದೆ-

i) ಹೆಣ್ಣು ಶಿಶು ಹತ್ಯೆ: ಯಾರೂ ತನ್ನ ಅಳಿಯನಾಗಬಾರದು. ಗೋತ್ರ ಕಲಹದ ವೇಳೆ ಹೆಣ್ಮಕ್ಕಳು ಶತ್ರುಗಳ ಕೈ ಸೇರಬಾರದು. ಅಥವಾ ಇನ್ನಾವುದೇ ಕಾರಣದಿಂದ ಅವರು ತನ್ನ ಮಾನನಷ್ಟಕ್ಕೆ ಕಾರಣವಾಗಬಾರದು ಎಂಬುದೇ ಇದರ ಉದ್ದೇಶ.

ii) ಶಿಶು ಹತ್ಯೆ: ಅವರ ಪೋಷಣೆಯ ಭಾರವನ್ನು ಸಹಿಸಲು ಸಾಧ್ಯವಾಗದಿರುವುದು. ಆರ್ಥಿಕ ಮೂಲಗಳ ಕೊರತೆಯಿಂದಾಗಿ ಅವರು ಹೊರಲಾರದ ಹೊರೆಯಾಗಿ ಮಾರ್ಪಡುವುದು.

iii) ತಮ್ಮ ಆರಾಧ್ಯರುಗಳ ಸಂಪ್ರೀತಿಗಾಗಿ ಮಕ್ಕಳನ್ನು ಬಲಿ ಕೊಡುವುದು.

35. ಅಜ್ಞಾನ ಕಾಲದ ಅರಬರು ತಮ್ಮನ್ನು ಇಬ್‌ರಾಹೀಮ್ ಮತ್ತು ಇಸ್ಮಾಈಲರ(ಅ) ಅನುಯಾಯಿಗಳು ಎನ್ನುತ್ತಿದ್ದರು. ಆದ್ದರಿಂದ ತಾವು ಪಾಲಿಸುತ್ತಿರುವ ಧರ್ಮ, ದೇವನ ದೃಷ್ಟಿಯಲ್ಲಿ ಅತ್ಯಂತ ಪ್ರಿಯವಾದುದೆಂದು ಅವರು ಭಾವಿಸುತ್ತಿದ್ದರು. ಆದರೆ ಅವರ ಧರ್ಮದಲ್ಲಿ ಶತಮಾನಗಳಿಂದ ಧಾರ್ಮಿಕ ಮುಖಂಡರು, ಗೋತ್ರದ ನಾಯಕರು, ಕುಟುಂಬದ ಹಿರಿಯರೇ ಮುಂತಾದ ವ್ಯಕ್ತಿಗಳು ವಿವಿಧ ಬಗೆಯ

138. ಇವರು, ಈ ಪ್ರಾಣಿಗಳೂ ಈ ಹೊಲಗಳೂ ಸುರಕ್ಷಿತವಾಗಿವೆ. ಇವುಗಳನ್ನು ನಾವು ಉಣಿಸಲಿಚ್ಛಿಸುವವರು ಮಾತ್ರ ಉಣ್ಣಬಹುದು ಎನ್ನುತ್ತಾರೆ. ವಸ್ತುತಃ ಈ ನಿರ್ಬಂಧವು ಇವರ ಸ್ವಕಲ್ಪಿತವಾಗಿದೆ. ಹಾಗೆಯೇ ಕೆಲವು ಪ್ರಾಣಿಗಳ ಮೇಲೆ ಸವಾರಿ ಮಾಡುವುದೂ ಭಾರ ಹೇರುವುದೂ ನಿಷೇಧಿಸಲ್ಪಟ್ಟಿದೆ ಮತ್ತು ಇವರು ಅಲ್ಲಾಹನ ನಾಮವನ್ನುಚ್ಚರಿಸದ ಕೆಲವು ಪ್ರಾಣಿಗಳೂ ಇವೆ. ಇವೆಲ್ಲವೂ ಅವರು ಅಲ್ಲಾಹನ ಮೇಲೆ ಹೊರಿಸಿರುವ ಆರೋಪಗಳು. ಅಲ್ಲಾಹನು ಅವರಿಗೆ ಈ ಸುಳ್ಳಾರೋಪಗಳ ಪ್ರತಿಫಲವನ್ನು ಸದ್ಯದಲ್ಲೇ ಕೊಡುವನು.

وَقَالُوا هَٰذِهِ أَنْعَامٌ وَحَرْثٌ حِجْرٌ لَا يَطْعَمُهَا إِلَّا مَنْ نَشَاءُ بِزَعْمِهِمْ وَأَنْعَامٌ حُرِّمَتْ ظُهُورُهَا وَأَنْعَامٌ لَا يَذْكُرُونَ اسْمَ اللَّهِ عَلَيْهَا افْتِرَاءً عَلَيْهِ ۚ سَيَجْزِيهِمْ بِمَا كَانُوا يَفْتَرُونَ ﴿١٣٨﴾

139. ಈ ಪ್ರಾಣಿಗಳ ಹೊಟ್ಟೆಯೊಳಗಿರುವುದು ನಮ್ಮ ಪುರುಷರಿಗೆ ಕಾದಿರಿಸಿದ್ದೆಂದೂ ನಮ್ಮ ಸ್ತ್ರೀಯರಿಗೆ ಅದು ನಿಷಿದ್ಧವಾಗಿರುತ್ತದೆಂದೂ, ಅದು ಸತ್ತಿದ್ದರೆ ಮಾತ್ರ ಉಭಯತ್ರರೂ ಅದನ್ನು ತಿನ್ನುವುದರಲ್ಲಿ ಭಾಗಿಗಳಾಗಬಹುದೆಂದೂ ಅವರು ಹೇಳುತ್ತಾರೆ. ಅವರ ಈ ಕಲ್ಪಿತ ಮಾತುಗಳಿಗಾಗಿ ಅವರ ಪ್ರತಿಫಲವನ್ನು ಅಲ್ಲಾಹನು ಅವರಿಗೆ ಕೊಟ್ಟೇ ತೀರುವನು. ನಿಶ್ಚಯವಾಗಿಯೂ ಅವನು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುತ್ತಾನೆ.

وَقَالُوا مَا فِي بُطُونِ هَٰذِهِ الْأَنْعَامِ خَالِصَةٌ لِذُكُورِنَا وَمُحَرَّمٌ عَلَىٰ أَزْوَاجِنَا ۖ وَإِنْ يَكُنْ مَيْتَةً فَهُمْ فِيهِ شُرَكَاءُ ۚ سَيَجْزِيهِمْ وَصْفَهُمْ ۚ إِنَّهُ حَكِيمٌ عَلِيمٌ ﴿١٣٩﴾

140. ನಿಶ್ಚಯವಾಗಿಯೂ ತಮ್ಮ ಮಕ್ಕಳನ್ನು ಅಜ್ಞಾನ ಮತ್ತು ತಿಳಿಗೇಡಿತನದಿಂದ ವಧಿಸಿದವರೂ ಅಲ್ಲಾಹನು ಪ್ರದಾನ ಮಾಡಿದ ಅನ್ನಾಹಾರವನ್ನು ಸುಳ್ಳು ಸೃಷ್ಟನೆಯೊಂದಿಗೆ ನಿಷೇಧ ಮಾಡಿಕೊಂಡವರೂ ನಷ್ಟದಲ್ಲಿ ಬಿದ್ದರು. ನಿಶ್ಚಯವಾಗಿಯೂ ಅವರು ಪಥಭ್ರಷ್ಟರಾದರು ಮತ್ತು ಎಷ್ಟು ಮಾತ್ರಕ್ಕೂ ಅವರು ಸನ್ಮಾರ್ಗ ಹೊಂದುವವರಲ್ಲಾಗಿರಲಿಲ್ಲ.

قَدْ خَسِرَ الَّذِينَ قَتَلُوا أَوْلَادَهُمْ سَفَهًا بِغَيْرِ عِلْمٍ وَحَرَّمُوا مَا رَزَقَهُمُ اللَّهُ افْتِرَاءً عَلَى اللَّهِ ۚ قَدْ ضَلُّوا وَمَا كَانُوا مُهْتَدِينَ ﴿١٤٠﴾

141. ತರತರದ ಉದ್ಯಾನಗಳನ್ನೂ ದ್ರಾಕ್ಷಾ ತೋಟಗಳನ್ನೂ ಖರ್ಜೂರ ತೋಟಗಳನ್ನೂ ಬೆಳೆಗಳನ್ನೂ ಬೆಳೆಸಿದವನು ಅಲ್ಲಾಹನೇ. ಅವುಗಳಿಂದ ತರತರದ ಆಹಾರ ಪದಾರ್ಥಗಳು ಸಿಗುತ್ತವೆ. ಝೈತೂನ್ (ಇಪ್ಪೆ) ಮತ್ತು ದಾಳಿಂಬೆಗಳ ಮರಗಳನ್ನೂ ಬೆಳೆಸಿದನು. ಅವುಗಳ ಫಲಗಳು ಆಕಾರದಲ್ಲಿ ಏಕ ಪ್ರಕಾರವಾಗಿದ್ದು ರುಚಿಯಲ್ಲಿ ಭಿನ್ನವಾಗಿರುತ್ತವೆ. ಅವುಗಳು ಫಲಿಸಿದಾಗ ಫಲಗಳನ್ನು ತಿನ್ನಿರಿ. ಅವುಗಳ ಬೆಳೆಯನ್ನು ಕೊಯ್ದಾಗ ಅಲ್ಲಾಹನ ಹಕ್ಕನ್ನು ಸಂದಾಯ ಮಾಡಿರಿ ಮತ್ತು ದುರ್ವ್ಯಯ ಮಾಡಬೇಡಿರಿ. ದುರ್ವ್ಯಯ ಮಾಡುವವರನ್ನು ಅಲ್ಲಾಹನು ಮೆಚ್ಚುವುದಿಲ್ಲ.

وَهُوَ الَّذِي أَنْشَأَ جَنَّاتٍ مَعْرُوشَاتٍ وَغَيْرَ مَعْرُوشَاتٍ وَالنَّخْلَ وَالزَّرْعَ مُخْتَلِفًا أُكُلُهُ وَالزَّيْتُونَ وَالرُّمَّانَ مُتَشَابِهًا وَغَيْرَ مُتَشَابِهٍ ۚ كُلُوا مِنْ ثَمَرِهِ إِذَا أَثْمَرَ وَآتُوا حَقَّهُ يَوْمَ حَصَادِهِ ۖ وَلَا تُسْرِفُوا ۚ إِنَّهُ لَا يُحِبُّ الْمُسْرِفِينَ ﴿١٤١﴾

ನಂಬಿಕೆ, ಪದ್ಧತಿ ಮತ್ತು ಕಟ್ಟಳೆಗಳನ್ನು ಸೇರಿಸುತ್ತಾ ಬಂದಿದ್ದರು. ಅನಂತರದ ಪೀಳಿಗೆಗಳು ಅದನ್ನು ತಮ್ಮ ಧರ್ಮದ ಅವಿಭಾಜ್ಯ ಅಂಗವೆಂದು ಭಾವಿಸಿದವು. ಹೀಗೆ ಅವರ ಧರ್ಮ ಸಂಪೂರ್ಣವಾಗಿ ಸಂದೇಹಾಸ್ಪದವಾಯಿತು.

142. ಜಾನುವಾರುಗಳಲ್ಲಿ ಸವಾರಿ ಮತ್ತು ಹೊರೆ ಹೊರುವುದಕ್ಕಾಗಿ ಉಪಯೋಗವಾಗುವವುಗಳನ್ನೂ ತಿನ್ನಲು ಮತ್ತು ಹಾಸಲು ಉಪಯೋಗವಾಗುವವುಗಳನ್ನೂ[36] ಉಂಟುಮಾಡಿದವನು ಅವನೇ. ಅಲ್ಲಾಹನು ನಿಮಗೆ ದಯಪಾಲಿಸಿದ ವಸ್ತುಗಳಿಂದ ತಿನ್ನಿರಿ ಮತ್ತು ಶೈತಾನನನ್ನು ಅನುಸರಿಸಬೇಡಿರಿ. ನಿಜವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರು.

وَمِنَ الْأَنْعَامِ حَمُولَةً وَفَرْشًا ۚ كُلُوا مِمَّا رَزَقَكُمُ اللَّهُ وَلَا تَتَّبِعُوا خُطُوَاتِ الشَّيْطَانِ ۚ إِنَّهُ لَكُمْ عَدُوٌّ مُبِينٌ ﴿١٤٢﴾

143. ಇವು ಎಂಟು ಗಂಡು ಹೆಣ್ಣುಗಳು. ಎರಡು ಕುರಿಯ ಜಾತಿಯಿಂದ ಮತ್ತು ಎರಡು ಆಡಿನ ಜಾತಿಯಿಂದ. ಓ ಪೈಗಂಬರರೇ, ಇವರೊಡನೆ ಕೇಳಿರಿ - ಅಲ್ಲಾಹನು ನಿಷೇಧಿಸಿರುವುದು ಇವುಗಳ ಗಂಡನ್ನೇ ಅಥವಾ ಹೆಣ್ಣನ್ನೇ? ಅಥವಾ ಕುರಿಗಳ ಮತ್ತು ಆಡುಗಳ ಹೊಟ್ಟೆಯೊಳಗಿರುವ ಮರಿಗಳನ್ನೇ? ನೀವು ಸತ್ಯವಂತರಾಗಿದ್ದರೆ ಸರಿಯಾದ ಜ್ಞಾನದೊಂದಿಗೆ ನನಗೆ ತಿಳಿಸಿರಿ.

ثَمَانِيَةَ أَزْوَاجٍ ۖ مِنَ الضَّأْنِ اثْنَيْنِ وَمِنَ الْمَعْزِ اثْنَيْنِ ۗ قُلْ آلذَّكَرَيْنِ حَرَّمَ أَمِ الْأُنْثَيَيْنِ أَمَّا اشْتَمَلَتْ عَلَيْهِ أَرْحَامُ الْأُنْثَيَيْنِ ۖ نَبِّئُونِي بِعِلْمٍ إِنْ كُنْتُمْ صَادِقِينَ ﴿١٤٣﴾

144. ಇದೇ ರೀತಿಯಲ್ಲಿ ಎರಡು ಒಂಟೆಯ ಜಾತಿಯಿಂದ ಮತ್ತು ಎರಡು ದನದ ಜಾತಿಯಿಂದ ಇವೆ. ಕೇಳಿರಿ; ಅಲ್ಲಾಹನು ನಿಷೇಧಿಸಿರುವುದು ಇವುಗಳ ಗಂಡನ್ನೇ ಅಥವಾ ಹೆಣ್ಣನ್ನೇ ಅಥವಾ ಒಂಟೆ ಮತ್ತು ದನದ ಹೊಟ್ಟೆಯೊಳಗಿರುವ ಕರುಗಳನ್ನೇ? ಅಲ್ಲಾಹನು ಇವುಗಳನ್ನು ನಿಷೇಧಿಸಿದ ಆಜ್ಞೆ ಕೊಟ್ಟಾಗ ನೀವು ಉಪಸ್ಥಿತರಿದ್ದಿರಾ? ಜ್ಞಾನವಿಲ್ಲದೆ ಜನರನ್ನು ತಪ್ಪು ದಾರಿಗೆಳೆಯಲಿಕ್ಕಾಗಿ ಅಲ್ಲಾಹನ ಮೇಲೆ ಮಿಥ್ಯಾರೋಪ ಹೊರಿಸುವವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? ನಿಶ್ಚಯವಾಗಿಯೂ ಅಲ್ಲಾಹನು ಇಂತಹ ಅಕ್ರಮಿಗಳಿಗೆ ಮಾರ್ಗದರ್ಶನವನ್ನೀಯುವುದಿಲ್ಲ.

وَمِنَ الْإِبِلِ اثْنَيْنِ وَمِنَ الْبَقَرِ اثْنَيْنِ ۗ قُلْ آلذَّكَرَيْنِ حَرَّمَ أَمِ الْأُنْثَيَيْنِ أَمَّا اشْتَمَلَتْ عَلَيْهِ أَرْحَامُ الْأُنْثَيَيْنِ ۖ أَمْ كُنْتُمْ شُهَدَاءَ إِذْ وَصَّاكُمُ اللَّهُ بِهَٰذَا ۚ فَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا لِيُضِلَّ النَّاسَ بِغَيْرِ عِلْمٍ ۗ إِنَّ اللَّهَ لَا يَهْدِي الْقَوْمَ الظَّالِمِينَ ﴿١٤٤﴾

145. ಓ ಪೈಗಂಬರರೇ, ಅವರೊಡನೆ ಹೇಳಿರಿ- ನನ್ನ ಬಳಿ ಬಂದಿರುವ 'ದಿವ್ಯವಾಣಿ'ಯಲ್ಲಂತೂ ಶವ ಅಥವಾ ಸುರಿಸಲ್ಪಟ್ಟ ರಕ್ತ ಅಥವಾ ಹಂದಿಯ ಮಾಂಸ- ಅದು ಮಲಿನವಾಗಿರುವುದರಿಂದ- ಅಥವಾ ಅಲ್ಲಾಹನ ಹೊರತು ಇತರರ ಹೆಸರಲ್ಲಿ ಬಲಿಕೊಡಲ್ಪಟ್ಟುದು[37] ಅದು ಧರ್ಮಭ್ರಷ್ಟವಾಗಿರುವುದರಿಂದ ಇವಲ್ಲದೆ ಇನ್ನಾವ ವಸ್ತುವೂ ತಿನ್ನುವವನಿಗೆ ನಿಷಿದ್ಧವಾಗಿರುವುದನ್ನು ನಾನು

قُلْ لَا أَجِدُ فِي مَا أُوحِيَ إِلَيَّ مُحَرَّمًا عَلَىٰ طَاعِمٍ يَطْعَمُهُ إِلَّا أَنْ يَكُونَ مَيْتَةً أَوْ دَمًا مَسْفُوحًا أَوْ لَحْمَ خِنْزِيرٍ فَإِنَّهُ رِجْسٌ أَوْ فِسْقًا أُهِلَّ لِغَيْرِ اللَّهِ بِهِ ۚ

36. ಅರ್ಥಾತ್- ಅವುಗಳ ತೊಗಲು ಮತ್ತು ರೋಮಗಳಿಂದ ಹಾಸನ್ನು ತಯಾರಿಸಲಾಗುತ್ತದೆ.

37. ಇದರ ಅರ್ಥ ಇವುಗಳನ್ನುಳಿದು ಬೇರಾವುದೇ ತಿನ್ನುವ ವಸ್ತು ಶರೀಅತ್‌ನಲ್ಲಿ ನಿಷಿದ್ಧವಲ್ಲ ಎಂದಲ್ಲ. ಬದಲಾಗಿ ನೀವು ನಿಷಿದ್ಧ

فَمَنِ اضْطُرَّ غَيْرَ بَاغٍ وَّلَا عَادٍ فَإِنَّ رَبَّكَ غَفُورٌ رَّحِيمٌ ﴿١٤٥﴾

ಕಾಣುವುದಿಲ್ಲ. ಆದರೆ ಒಬ್ಬನು ವಿವಶಾವಸ್ಥೆಯಲ್ಲಿ ಆಜ್ಞೋಲ್ಲಂಘನೆಯ ಉದ್ದೇಶವಿಲ್ಲದೆ (ಇವುಗಳ ಪೈಕಿ ಏನನ್ನಾದರೂ ತಿಂದರೆ) ಮತ್ತು ಅಗತ್ಯದ ಮೇರೆಯನ್ನು ಮೀರದೆ ಇದ್ದರೆ ನಿಶ್ಚಯವಾಗಿಯೂ ನಿಮ್ಮ ಪ್ರಭು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَعَلَى الَّذِينَ هَادُوا حَرَّمْنَا كُلَّ ذِي ظُفُرٍ ۚ وَمِنَ الْبَقَرِ وَالْغَنَمِ حَرَّمْنَا عَلَيْهِمْ شُحُومَهُمَا إِلَّا مَا حَمَلَتْ ظُهُورُهُمَا أَوِ الْحَوَايَا أَوْ مَا اخْتَلَطَ بِعَظْمٍ ۚ ذَٰلِكَ جَزَيْنَاهُم بِبَغْيِهِمْ ۖ وَإِنَّا لَصَادِقُونَ ﴿١٤٦﴾

146. ಯಹೂದಿತ್ವವನ್ನು ಸ್ವೀಕರಿಸಿಕೊಂಡವರ ಮೇಲೆ ನಾವು ಎಲ್ಲ ಉಗುರುಳ್ಳ ಪ್ರಾಣಿಗಳನ್ನು ನಿಷೇಧಿಸಿದ್ದೆವು. ಬೆನ್ನು ಅಥವಾ ಕರುಳುಗಳಿಗೆ ತಗಲಿದ ಅಥವಾ ಎಲುಬಿಗೆ ತಾಗಿಕೊಂಡಿರುವ ಕೊಬ್ಬಿನ ಹೊರತು ದನ ಮತ್ತು ಆಡಿನ ಕೊಬ್ಬನ್ನೂ (ನಿಷಿದ್ಧಗೊಳಿಸಿದ್ದೆವು). ನಾವು ಅವರಿಗೆ ಅವರ ಭಂಡಾಯಕ್ಕೆ ಕೊಟ್ಟ ಶಿಕ್ಷೆಯಿದು.[38] ನಿಶ್ಚಯವಾಗಿಯೂ ನಾವು ಹೇಳುವುದೆಲ್ಲ ಪರಮ ಸತ್ಯವೇ ಆಗಿರುತ್ತದೆ.

فَإِن كَذَّبُوكَ فَقُل رَّبُّكُمْ ذُو رَحْمَةٍ وَاسِعَةٍ ۖ وَلَا يُرَدُّ بَأْسُهُ عَنِ الْقَوْمِ الْمُجْرِمِينَ ﴿١٤٧﴾

147. ಇನ್ನವರು ನಿಮ್ಮನ್ನು ಸುಳ್ಳಾಗಿಸಿದರೆ, ಅವರೊಡನೆ ಹೇಳಿರಿ- ನಿಮ್ಮ ಪ್ರಭುವಿನ ಕೃಪಾಶ್ರಯವು ಅತಿ ವಿಶಾಲವಾಗಿದೆ ಮತ್ತು ಅವನ ಶಿಕ್ಷೆಯನ್ನು ತಡೆಗಟ್ಟಲು ಅಪರಾಧಿಗಳಿಂದ ಸಾಧ್ಯವಾಗದು.

سَيَقُولُ الَّذِينَ أَشْرَكُوا لَوْ شَاءَ اللَّهُ مَا أَشْرَكْنَا وَلَا آبَاؤُنَا وَلَا حَرَّمْنَا مِن شَيْءٍ ۚ كَذَٰلِكَ كَذَّبَ الَّذِينَ مِن قَبْلِهِمْ حَتَّىٰ ذَاقُوا بَأْسَنَا ۗ قُلْ هَلْ عِندَكُم مِّنْ عِلْمٍ فَتُخْرِجُوهُ لَنَا ۖ إِن تَتَّبِعُونَ إِلَّا الظَّنَّ وَإِنْ أَنتُمْ إِلَّا تَخْرُصُونَ ﴿١٤٨﴾

148. (ನಿಮ್ಮ ಈ ಮಾತುಗಳಿಗೆ ಉತ್ತರವಾಗಿ) ಈ 'ಬಹುದೇವವಿಶ್ವಾಸಿ'ಗಳು, "ಅಲ್ಲಾಹನು ಇಚ್ಛಿಸುತ್ತಿದ್ದರೆ ನಾವೂ 'ದೇವಸಹಭಾಗಿತ್ವ' ಮಾಡುತ್ತಿರಲಿಲ್ಲ ನಮ್ಮ ಪೂರ್ವಿಕರೂ ಮಾಡುತ್ತಿರಲಿಲ್ಲ ಮತ್ತು ನಾವು ಯಾವ ವಸ್ತುಗಳನ್ನೂ ನಿಷಿದ್ಧಗೊಳಿಸುತ್ತಿರಲಿಲ್ಲ" ಎಂದು ಖಂಡಿತ ಹೇಳುವರು.[39] ಇವರಿಗಿಂತ ಮುಂಚಿನವರೂ ಇದೇ ತರದ ಮಾತುಗಳನ್ನು ಸೃಷ್ಟಿಸಿ ಸತ್ಯವನ್ನು ತಿರಸ್ಕರಿಸಿದರು. ಕೊನೆಗೆ ಅವರು ನಮ್ಮ ಯಾತನೆಯ ಸವಿಯನ್ನು ಆಸ್ವದಿಸಿಕೊಂಡರು. ಅವರೊಡನೆ ಹೇಳಿರಿ- "ನಿಮ್ಮ ಹತ್ತಿರ ನಮ್ಮ ಮುಂದಿರಿಸತಕ್ಕ ಜ್ಞಾನವೇನಾದರೂ ಇದೆಯೇ? ನೀವಂತು ಕೇವಲ ಗುಮಾನಿಯಂತೆ ನಡೆಯುತ್ತೀರಿ ಮತ್ತು ಬರೇ ಊಹಾಪೋಹೆಗಳನ್ನಿರಿಸುತ್ತೀರಿ."

---

ಮಾಡಿಕೊಂಡಿರುವುದು ನಿಷಿದ್ಧ ವಸ್ತುಗಳಲ್ಲ. ನಿಜವಾಗಿ ನಿಷಿದ್ಧವಾದವುಗಳು ಇವು ಎಂದು ಇಲ್ಲಿ ಹೇಳಲಾಗಿದೆ. ವಿವರಣೆಗಾಗಿ ಅಲ್ ಮಾಯಿದಃ ಅಧ್ಯಾಯದ 2 ಮತ್ತು 7ನೆಯ ಟಿಪ್ಪಣಿಯನ್ನು ನೋಡಿರಿ.

38. ಆಲಿ ಇಮ್ರಾನ್‌ನ 93 ಮತ್ತು ಅನ್ನಿಸಾ ಅಧ್ಯಾಯದ 160ನೆಯ ಸೂಕ್ತವನ್ನು ನೋಡಿರಿ.

39. ಅಪರಾಧಿಗಳು ಮತ್ತು ಅಕ್ರಮಿಗಳು ಸದಾ ಮುಂದಿಡುತ್ತಾ ಬಂದಿರುವ ಹಳೆಯ ನೆಪಗಳನ್ನೇ ಅವರು ತಮ್ಮ ಅಪರಾಧ ಮತ್ತು ಅಕ್ರಮಗಳ ಸಮರ್ಥನೆಯಲ್ಲಿ ಮುಂದಿಡುತ್ತಾರೆ. ಅವರು ಹೀಗೆ ಹೇಳುವರು: ನಾವು ಬಹುದೇವಾರಾಧನೆಯಲ್ಲಿ ನಿರತವಾಗಬೇಕು, ನಾವು ನಿಷಿದ್ಧಗೊಳಿಸಿಕೊಂಡಿರುವವುಗಳೇ ನಮ್ಮ ಪಾಲಿಗೆ ನಿಷಿದ್ಧವಾಗಿರಬೇಕು ಎಂದು ಅಲ್ಲಾಹನು ನಮಗೆ ವಿಧಿಸಿದ್ದಾನೆ. ಅಲ್ಲಾಹನು ನಾವು ಹೀಗೆ

149 ಹೇಳಿರಿ: "(ನಿಮ್ಮ ಆಧಾರ ಪ್ರಮಾಣಕ್ಕೆದುರು) ಪರಮಾರ್ಥ ಕ್ಕೊಯ್ಯುವ ಆಧಾರ ಪ್ರಮಾಣವು ಅಲ್ಲಾಹನಲ್ಲಿದೆ. ಅಲ್ಲಾಹನು ಇಚ್ಛಿಸುತ್ತಿದ್ದರೆ ಖಂಡಿತವಾಗಿಯೂ ನಿಮಗೆಲ್ಲರಿಗೂ ಸನ್ಮಾರ್ಗ ದರ್ಶನ ನೀಡುತ್ತಿದ್ದನು."[40]

قُلْ فَلِلَّهِ الْحُجَّةُ الْبَالِغَةُ ۖ فَلَوْ شَاءَ لَهَدَاكُمْ أَجْمَعِينَ ﴿١٤٩﴾

150. ಅವರೊಡನೆ ಹೇಳಿರಿ: "ಅಲ್ಲಾಹನೇ ಈ ವಸ್ತುಗಳನ್ನು ನಿಷಿದ್ಧ ಗೊಳಿಸಿರುತ್ತಾನೆಂದು ಸಾಕ್ಷ್ಯ ಹೇಳುವ ನಿಮ್ಮ ಸಾಕ್ಷಿಗಳನ್ನು ತನ್ನಿರಿ." ಅವರು ಸಾಕ್ಷಿ ಹೇಳಿಬಿಟ್ಟರೂ ನೀವು ಅವರೊಂದಿಗೆ ಸಾಕ್ಷಿ ಹೇಳಬಾರದು.[41] ಮತ್ತು ನೀವು ನಮ್ಮ ನಿದರ್ಶನಗಳನ್ನು ಸುಳ್ಳಾಗಿಸುವ, ಪರಲೋಕವನ್ನು ನಿರಾಕರಿಸುವ ಮತ್ತು ಇತರರನ್ನು ತಮ್ಮ ಪ್ರಭುವಿಗೆ ಸಮಾನರಾಗಿ ಮಾಡುವವರ ಅಭಿಲಾಷೆಗಳನ್ನು ಅನುಸರಿಸಬೇಡಿರಿ.

قُلْ هَلُمَّ شُهَدَاءَكُمُ الَّذِينَ يَشْهَدُونَ أَنَّ اللَّهَ حَرَّمَ هَٰذَا ۖ فَإِن شَهِدُوا فَلَا تَشْهَدْ مَعَهُمْ ۚ وَلَا تَتَّبِعْ أَهْوَاءَ الَّذِينَ كَذَّبُوا بِآيَاتِنَا وَالَّذِينَ لَا يُؤْمِنُونَ بِالْآخِرَةِ وَهُم بِرَبِّهِمْ يَعْدِلُونَ ﴿١٥٠﴾

151. ಓ ಪೈಗಂಬರರೇ, ನೀವು ಅವರೊಡನೆ ಹೇಳಿರಿ: "ಬನ್ನಿರಿ ನಿಮ್ಮ ಪ್ರಭು ನಿಮ್ಮ ಮೇಲೆ ಯಾವ ನಿರ್ಬಂಧಗಳನ್ನು ಹೊರಿಸಿರುತ್ತಾ ನೆಂಬುದನ್ನು ನಾನು ತಿಳಿಸುವೆನು.[42] ಅವನೊಂದಿಗೆ ಯಾವುದನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯ ದೊಂದಿಗೆ ವರ್ತಿಸಿರಿ. ಮತ್ತು ನಿಮ್ಮ ಮಕ್ಕಳನ್ನು ದಾರಿದ್ರ್ಯದ ಭಯದಿಂದ ವಧಿಸಬೇಡಿರಿ. ನಾವು ನಿಮಗೂ ಜೀವನೋಪಾಧಿ ಯನ್ನು ನೀಡುತ್ತೇವೆ ಅವರಿಗೂ ನೀಡುವೆವು ಮತ್ತು ಅಶ್ಲೀಲ

قُلْ تَعَالَوْا أَتْلُ مَا حَرَّمَ رَبُّكُمْ عَلَيْكُمْ ۖ أَلَّا تُشْرِكُوا بِهِ شَيْئًا ۖ وَبِالْوَالِدَيْنِ إِحْسَانًا ۖ وَلَا تَقْتُلُوا أَوْلَادَكُم مِّنْ إِمْلَاقٍ ۖ نَّحْنُ نَرْزُقُكُمْ وَإِيَّاهُمْ ۖ وَلَا تَقْرَبُوا الْفَوَاحِشَ مَا ظَهَرَ مِنْهَا وَمَا بَطَنَ ۖ وَلَا تَقْتُلُوا النَّفْسَ

---

ಮಾಡಬಾರದು ಎಂದು ಬಯಸಿದ್ದರೆ ನಮಗೆ ಈ ಕೃತ್ಯಗಳನ್ನೆಸಗಲು ಹೇಗೆ ಸಾಧ್ಯ? ಅಲ್ಲಾಹನ ವಿಧಿಯಂತೆಯೇ ನಾವು ಈ ಎಲ್ಲಾ ಕೆಲಸಗಳನ್ನು ಮಾಡುತ್ತಿರುವುದರಿಂದ ಸರಿಯಾದುದನ್ನೇ ಮಾಡುತ್ತಿದ್ದೇವೆ. ಅದಕ್ಕಾಗಿ ಒಂದು ವೇಳೆ ಆಕ್ಷೇಪಿಸಬೇಕಾದರೆ ಅಲ್ಲಾಹನನ್ನೇ ಆಕ್ಷೇಪಿಸಬೇಕು, ನಮ್ಮನ್ನಲ್ಲ. ಏಕೆಂದರೆ ನಾವು ಹಾಗೆ ಮಾಡಲು ನಿರ್ಬಂಧಿತರಾಗಿದ್ದೇವೆ. ಅದಕ್ಕಿಂತ ಭಿನ್ನವಾದುದೇನನ್ನಾದರೂ ಮಾಡಲು ನಾವು ಸಮರ್ಥರಲ್ಲ.

40. ಅಲ್ಲಾಹನಿಚ್ಛಿಸಿದ್ದರೆ ನಾವು ಬಹುದೇವಾರಾಧನೆ ಮಾಡುತ್ತಿರಲಿಲ್ಲ ಎಂದಷ್ಟೇ ನೀವು ಸಮರ್ಥನೆಯಲ್ಲಿ ಹೇಳಿಕೊಳ್ಳುತ್ತೀರಿ. ಆದರೆ ಅದರಿಂದ ಮಾತು ಪೂರ್ಣಗೊಳ್ಳುವುದಿಲ್ಲ. ಮಾತನ್ನು ಪೂರ್ತಿಗೊಳಿಸಬೇಕೆಂದಿದ್ದರೆ, ಅಲ್ಲಾಹನಿಚ್ಛಿಸಿದ್ದರೆ ಎಲ್ಲರಿಗೂ ಸನ್ಮಾರ್ಗ ತೋರುತ್ತಿದ್ದ ಎಂದು ಹೇಳಿರಿ. ಬೇರೆ ಪದಗಳಲ್ಲಿ ಹೇಳುವುದಾದರೆ ನೀವು ಸ್ವತಃ ಸನ್ಮಾರ್ಗವನ್ನು ಆಯ್ಕೆ ಮಾಡಲು ಸಿದ್ಧರಿಲ್ಲ. ಅಲ್ಲಾಹನು ದೇವಚರರನ್ನು ಆಜನ್ಮ ಸನ್ಮಾರ್ಗಗಾಮಿಗಳಾಗಿ ಮಾಡಿರುವಂತೆ ನಿಮ್ಮನ್ನೂ ಮಾಡಬೇಕಾಗಿತ್ತೆಂದು ನೀವು ಭಾವಿಸುತ್ತೀರಿ. ಮನುಷ್ಯನ ಪಾಲಿಗೂ ದೇವವಿಧಿ ಹಾಗೆಯೇ ಆಗಿರುತ್ತಿದ್ದರೆ ಅಲ್ಲಾಹನು ಅವರನ್ನು ಹಾಗೆಯೇ ಸೃಷ್ಟಿಸುತ್ತಿದ್ದನು. ಆದರೆ ಅದು ಅಲ್ಲಾಹನ ವಿಧಿಯಲ್ಲ. ಆದ್ದರಿಂದ ಅಲ್ಲಾಹನೂ ನೀವು ಸ್ವತಃ ನೆಚ್ಚಿಕೊಂಡಿರುವ ಪಥಭ್ರಷ್ಟತೆಯ ಮಾರ್ಗದಲ್ಲಿ ನಿಮ್ಮನ್ನು ಬಿದ್ದುಕೊಂಡಿರಲು ಬಿಟ್ಟು ಬಿಡುವನು.

41. ಅರ್ಥಾತ್- ತನಗೆ ತಿಳಿದಿರುವ ವಿಷಯಗಳ ಬಗ್ಗೆ ಮಾತ್ರ ಸಾಕ್ಷ್ಯ ಹೇಳಲು ಸಾಧ್ಯವಿದೆ ಎಂಬ ಸಾಕ್ಷ್ಯದ ಜವಾಬ್ದಾರಿಯ ಬಗ್ಗೆ ಚೆನ್ನಾಗಿ ತಿಳಿದಿದ್ದರೆ ಅವರೆಂದೂ ಈ ರೀತಿ ಸಾಕ್ಷ್ಯ ಹೇಳುವ ಧೈರ್ಯ ತಾಳಲಾರರು. ಒಂದು ವೇಳೆ ಅವರು ಸಾಕ್ಷ್ಯದ ಜವಾಬ್ದಾರಿಯನ್ನರಿಯದೆ ದೇವನ ಹೆಸರೆತ್ತಿ ಸುಳ್ಳು ಸಾಕ್ಷ್ಯ ಹೇಳುವ ಭಂಡ ಧೈರ್ಯ ತೋರಿದರೆ ಅವರ ಸುಳ್ಳಿನಲ್ಲಿ ನೀವೂ ಅವರ ಜತೆಗಾರರಾಗಿ ಮಾರ್ಪಡದಿರಿ.

42. ಅರ್ಥಾತ್- ನೀವು ಯಾವುದನ್ನು ಅಳವಡಿಸಿಕೊಂಡಿದ್ದೀರೋ ಅದು ದೇವನ ವತಿಯಿಂದ ಗೊತ್ತು ಪಡಿಸಲಾದ ನಿರ್ಬಂಧಗಳಲ್ಲ. ನಿಜವಾದ ನಿರ್ಬಂಧಗಳು ಇವುಗಳಾಗಿವೆ.

ವಿಷಯಗಳನ್ನು ಸಮೀಪಿಸಬೇಡಿರಿ-[43] ಅದು ಪ್ರತ್ಯಕ್ಷವಿರಲಿ ಪರೋಕ್ಷವಿರಲಿ, ಅಲ್ಲಾಹನು ಸನ್ಮಾನಿಸಿದ ಯಾವ ಜೀವವನ್ನೂ ನ್ಯಾಯದ ವಿನಾ ಕೊಲೆ ಮಾಡಬೇಡಿರಿ. ನೀವು ವಿವೇಚಿಸಬಹುದೆಂದು ಅವನು ನಿಮಗೆ ಈ ಆದೇಶಗಳನ್ನು ನೀಡಿರುತ್ತಾನೆ.

الَّتِي حَرَّمَ اللَّهُ إِلَّا بِالْحَقِّ ۚ ذَٰلِكُمْ وَصَّاكُمْ بِهِ لَعَلَّكُمْ تَعْقِلُونَ ﴿١٥١﴾

152. ಮಾತ್ರವಲ್ಲದೆ ಅನಾಥರು ಪ್ರಬುದ್ಧರಾಗುವ ವರೆಗೆ ಅತ್ಯುತ್ತಮ ರೀತಿಯ ಹೊರತು ಅವರ ಸೊತ್ತಿನ ಬಳಿ ಸುಳಿಯಬೇಡಿರಿ. ಅಳತೆ ಮತ್ತು ತೂಕಗಳಲ್ಲಿ ಸಂಪೂರ್ಣ ನ್ಯಾಯದೊಂದಿಗೆ ವರ್ತಿಸಿರಿ. ನಾವು ಪ್ರತಿಯೊಬ್ಬನ ಮೇಲೆ ಅವನಿಂದ ಹೊರಲಿಕ್ಕಾಗುವಷ್ಟು ಹೊಣೆಗಾರಿಕೆಯ ಭಾರವನ್ನು ಮಾತ್ರ ಹೊರಿಸುತ್ತೇವೆ. ವಿಷಯವು ನಿಮ್ಮ ಆಪ್ತ ಬಂಧುಗಳಿಗೆ ಸಂಬಂಧಿಸಿದುದೇ ಆಗಿದ್ದರೂ ಮಾತಾಡುವಾಗ ನ್ಯಾಯಪೂರ್ವಕವಾಗಿಯೇ ಮಾತಾಡಿರಿ ಮತ್ತು ಅಲ್ಲಾಹನ ಕರಾರನ್ನು ಪೂರ್ತಿಗೊಳಿಸಿರಿ.[44] ನೀವು ಉಪದೇಶ ಸ್ವೀಕರಿಸಬಹುದೆಂದು ನಿರೀಕ್ಷಿಸಿ ಅಲ್ಲಾಹನು ಈ ವಿಷಯಗಳ ಆದೇಶವನ್ನು ನಿಮಗೆ ನೀಡಿದ್ದಾನೆ.

وَلَا تَقْرَبُوا مَالَ الْيَتِيمِ إِلَّا بِالَّتِي هِيَ أَحْسَنُ حَتَّىٰ يَبْلُغَ أَشُدَّهُ ۖ وَأَوْفُوا الْكَيْلَ وَالْمِيزَانَ بِالْقِسْطِ ۖ لَا نُكَلِّفُ نَفْسًا إِلَّا وُسْعَهَا ۖ وَإِذَا قُلْتُمْ فَاعْدِلُوا وَلَوْ كَانَ ذَا قُرْبَىٰ ۖ وَبِعَهْدِ اللَّهِ أَوْفُوا ۚ ذَٰلِكُمْ وَصَّاكُمْ بِهِ لَعَلَّكُمْ تَذَكَّرُونَ ﴿١٥٢﴾

153. ನನ್ನ ನೇರ ಮಾರ್ಗವು ಇದುವೇ ಆದುದರಿಂದ ಇದರಲ್ಲೇ ನಡೆಯಿರಿ ಮತ್ತು ಅನ್ಯಮಾರ್ಗದಲ್ಲಿ ನಡೆಯದಿರಿ. ಅವು ಅವನ ಮಾರ್ಗದಿಂದ ತಪ್ಪಿಸಿ ನಿಮ್ಮನ್ನು ಚದುರಿಸಿ ಬಿಡುವುವು. ನೀವು ವಕ್ರತೆಯಿಂದ ದೂರವಿರಬಹುದೆಂದು ನಿರೀಕ್ಷಿಸಿ ನಿಮ್ಮ ಪ್ರಭು ನಿಮಗೆ ನೀಡಿದ ಆದೇಶವಿದು.

وَأَنَّ هَٰذَا صِرَاطِي مُسْتَقِيمًا فَاتَّبِعُوهُ ۖ وَلَا تَتَّبِعُوا السُّبُلَ فَتَفَرَّقَ بِكُمْ عَنْ سَبِيلِهِ ۚ ذَٰلِكُمْ وَصَّاكُمْ بِهِ لَعَلَّكُمْ تَتَّقُونَ ﴿١٥٣﴾

154. ಅನಂತರ ನಾವು ಮೂಸಾರಿಗೆ ಗ್ರಂಥವನ್ನು ದಯಪಾಲಿಸಿದ್ದೆವು. ಅದು ಉತ್ತಮ ರೀತಿಯನ್ನನುಸರಿಸುವವರ ಮೇಲೆ ಭವ್ಯಕೊಡುಗೆಗಳ ಪರಿಪೂರ್ಣತೆ, ಅಗತ್ಯವುಳ್ಳ ಪ್ರತಿಯೊಂದು ವಿಷಯದ ವಿವರಣೆ ಮತ್ತು ಸಾದ್ಯಂತ ಮಾರ್ಗದರ್ಶನ ಮತ್ತು ಕೃಪೆಯಾಗಿತ್ತು. ಅದು, ಜನರು ತಮ್ಮ ಪ್ರಭುವಿನ ಭೇಟಿಯ ಮೇಲೆ ವಿಶ್ವಾಸವಿರಿಸುವರೆಂದು ನಿರೀಕ್ಷಿಸಿ (ಬನೀ ಇಸ್‌ರಾಈಲರಿಗೆ ಕೊಡಲ್ಪಟ್ಟಿತ್ತು)[45]

ثُمَّ آتَيْنَا مُوسَى الْكِتَابَ تَمَامًا عَلَى الَّذِي أَحْسَنَ وَتَفْصِيلًا لِكُلِّ شَيْءٍ وَهُدًى وَرَحْمَةً لَعَلَّهُمْ بِلِقَاءِ رَبِّهِمْ يُؤْمِنُونَ ﴿١٥٤﴾

43. ಮೂಲದಲ್ಲಿ 'ಫವಾಹಿಶ್' ಎಂಬ ಪದ ಪ್ರಯೋಗವಾಗಿದೆ. ಸುವ್ಯಕ್ತವಾದ ಎಲ್ಲಾ ನೀಚ ಕಾರ್ಯಗಳಿಗೂ ಇದು ಅನ್ವಯಿಸುತ್ತದೆ. ಕುರ್‌ಆನಿನಲ್ಲಿ ವ್ಯಭಿಚಾರ, ಸಲಿಂಗರತಿ, ನಗ್ನತೆ, ವ್ಯಭಿಚಾರದ ಸುಳ್ಳಾರೋಪ, ತಂದೆ ವಿವಾಹವಾದಾಕೆಯನ್ನು ವರಿಸುವುದೇ ಮುಂತಾದವುಗಳನ್ನು ಅಶ್ಲೀಲ ಕಾರ್ಯಗಳೆಂದು ಹೇಳಲಾಗಿದೆ. ಕಳ್ಳತನ, ಮದ್ಯಪಾನ, ಭಿಕ್ಷಾಟನೆ ಇತ್ಯಾದಿಗಳನ್ನು ಸಾರಾಸಗಟಾಗಿ ಪ್ರವಾದಿ ವಚನದಲ್ಲೂ ಅಶ್ಲೀಲತೆಯೆಂದು ಕರೆಯಲಾಗಿದೆ. ಇಂತಹ ಲಜ್ಜಾಸ್ಪದ ಕೆಲಸಗಳೆಲ್ಲವೂ ಅಶ್ಲೀಲತೆಯಲ್ಲಿ ಸೇರಿವೆ. ಇಂತಹ ಕೆಲಸಗಳನ್ನು ನೀವು ಬಹಿರಂಗವಾಗಿಯೂ ಮಾಡದಿರಿ. ಗೋಪ್ಯವಾಗಿಯೂ ಮಾಡದಿರಿ.

44. 'ಅಲ್ಲಾಹನ ಕರಾರು' ಎಂದರೆ ದೇವ ಮತ್ತು ಮನುಷ್ಯರ ನಡುವೆ ಹಾಗೂ ಮನುಷ್ಯ-ಮನುಷ್ಯರ ನಡುವೆ- ಮಾನವನೊಬ್ಬ ಅಲ್ಲಾಹನ ಭೂಮಿಯಲ್ಲಿ ಹಾಗೂ ಮಾನವ ಸಮಾಜದಲ್ಲಿ ಜನ್ಮತಾಳಿದಾಗ ಸ್ವಾಭಾವಿಕವಾಗಿ ಮಾರ್ಪಡುವ ಕರಾರುಗಳಾಗಿವೆ.

155. ಅದೇ ರೀತಿಯಲ್ಲಿ ಮಂಗಲದಾಯಕವಾದ ಈ ಗ್ರಂಥವನ್ನೂ ನಾವು ಅವತೀರ್ಣ ಗೊಳಿಸಿದ್ದೇವೆ. ಆದುದರಿಂದ ನೀವು ಇದನ್ನು ಅನುಸರಿಸಿರಿ ಮತ್ತು ಧರ್ಮನಿಷ್ಠೆಯ ನೀತಿಯನ್ನಿರಿಸಿಕೊಳ್ಳಿರಿ. ನಿಮ್ಮ ಮೇಲೆ ಕೃಪೆ ತೋರಲ್ಪಡಲೂ ಬಹುದು.

وَهَٰذَا كِتَٰبٌ أَنزَلْنَٰهُ مُبَارَكٌ فَٱتَّبِعُوهُ وَٱتَّقُوا۟ لَعَلَّكُمْ تُرْحَمُونَ ۝١٥٥

156. ಗ್ರಂಥವನ್ನು ನಮಗಿಂತ ಮುಂಚಿನ ಎರಡು ಪಂಗಡಗಳಿಗೆ ಕೊಡಲಾಗಿತ್ತೆಂದೂ ಅವರು ಏನನ್ನು ಓದುತ್ತಿದ್ದರು ಮತ್ತು ಓದಿಸುತ್ತಿದ್ದರೆಂಬ ಸಮಾಚಾರವೇ ನಮಗೆ ತಿಳಿದಿರಲಿಲ್ಲವೆಂದೂ ಈಗ ನೀವು ಹೇಳಲಾರಿರಿ.

أَن تَقُولُوٓا۟ إِنَّمَآ أُنزِلَ ٱلْكِتَٰبُ عَلَىٰ طَآئِفَتَيْنِ مِن قَبْلِنَا وَإِن كُنَّا عَن دِرَاسَتِهِمْ لَغَٰفِلِينَ ۝١٥٦

157. ನಮ್ಮ ಮೇಲೆ ಗ್ರಂಥ ಅವತೀರ್ಣಗೊಳಿಸಲ್ಪಡುತ್ತಿದ್ದರೆ ನಾವು ಅವರಿಗಿಂತಲೂ ಹೆಚ್ಚು ಸತ್ಯಸಂಧರೆಂದು ಸಾದರಪಡಿಸುತ್ತಿದ್ದೆ ವೆಂಬ ನೆಪವನ್ನು ಈಗ ನೀವು ಹೂಡಲಾರಿರಿ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಒಂದು ಸುವ್ಯಕ್ತ ಪ್ರಮಾಣ, ಮಾರ್ಗದರ್ಶನ ಮತ್ತು ಕೃಪೆಯು ಬಂದುಬಿಟ್ಟಿದೆ. ಈಗ ಅಲ್ಲಾಹನ ನಿದರ್ಶನಗಳನ್ನು ಸುಳ್ಳಾಗಿಸುವ ಮತ್ತು ಅವುಗಳನ್ನು ತಿರಸ್ಕರಿಸುವವನಿಗಿಂತ ದೊಡ್ಡ ಅಕ್ರಮಿ ಯಾರಿರಬಹುದು. ನಮ್ಮ ನಿದರ್ಶನಗಳನ್ನು ತಿರಸ್ಕರಿಸುವವರಿಗೆ ಅವರ ತಿರಸ್ಕಾರದ ಫಲವಾಗಿ ನಾವು ಅತ್ಯಂತ ಕೆಟ್ಟ ಶಿಕ್ಷೆಯನ್ನು ಕೊಟ್ಟೇ ತೀರುವೆವು.

أَوْ تَقُولُوا۟ لَوْ أَنَّآ أُنزِلَ عَلَيْنَا ٱلْكِتَٰبُ لَكُنَّآ أَهْدَىٰ مِنْهُمْ ۚ فَقَدْ جَآءَكُم بَيِّنَةٌ مِّن رَّبِّكُمْ وَهُدًى وَرَحْمَةٌ ۚ فَمَنْ أَظْلَمُ مِمَّن كَذَّبَ بِـَٔايَٰتِ ٱللَّهِ وَصَدَفَ عَنْهَا ۗ سَنَجْزِى ٱلَّذِينَ يَصْدِفُونَ عَنْ ءَايَٰتِنَا سُوٓءَ ٱلْعَذَابِ بِمَا كَانُوا۟ يَصْدِفُونَ ۝١٥٧

158. ಅವರ ಮುಂದೆ ದೇವಚರರು ಬಂದು ನಿಲ್ಲಬೇಕೆಂದು ಅಥವಾ ನಿಮ್ಮ ಪ್ರಭು ಸ್ವತಃ ಬರಬೇಕೆಂದು ಅಥವಾ ನಿಮ್ಮ ಪ್ರಭುವಿನ ಕೆಲವು ನಿದರ್ಶನಗಳು ತೋರಿ ಬರಬೇಕೆಂದು[46] ಇವರು ನಿರೀಕ್ಷಿಸು ತ್ತಿರುವರೇ? ನಿಮ್ಮ ಪ್ರಭುವಿನ ಕೆಲವು ನಿದರ್ಶನಗಳು ಪ್ರತ್ಯಕ್ಷವಾಗಿ ಬಿಟ್ಟ ದಿನ, ಈ ಹಿಂದೆ ವಿಶ್ವಾಸವಿಡದಿದ್ದ ಅಥವಾ ತನ್ನ ವಿಶ್ವಾಸದಿಂದ ಏನಾದರೂ ಒಳಿತನ್ನು ಸಂಪಾದಿಸದವನ 'ವಿಶ್ವಾಸ'ವು ಏನೂ ಫಲ ಕೊಡಲಾರದು. ಓ ಪೈಗಂಬರರೇ, ಹೇಳಿರಿ: "ನೀವು ಕಾದು ನೋಡಿರಿ, ನಾವೂ ಕಾದಿರುತ್ತೇವೆ."

هَلْ يَنظُرُونَ إِلَّآ أَن تَأْتِيَهُمُ ٱلْمَلَٰٓئِكَةُ أَوْ يَأْتِىَ رَبُّكَ أَوْ يَأْتِىَ بَعْضُ ءَايَٰتِ رَبِّكَ ۗ يَوْمَ يَأْتِى بَعْضُ ءَايَٰتِ رَبِّكَ لَا يَنفَعُ نَفْسًا إِيمَٰنُهَا لَمْ تَكُنْ ءَامَنَتْ مِن قَبْلُ أَوْ كَسَبَتْ فِىٓ إِيمَٰنِهَا خَيْرًا ۗ قُلِ ٱنتَظِرُوٓا۟ إِنَّا مُنتَظِرُونَ ۝١٥٨

---

45. ಅರ್ಥಾತ್- ಜನರು ತಮ್ಮನ್ನು ಯಾವುದೇ ಜವಾಬ್ದಾರಿಕೆ ಇಲ್ಲದವರೆಂದು ಭಾವಿಸುವುದನ್ನು ಬಿಟ್ಟುಬಿಡಬೇಕು. ತಮ್ಮ ಪ್ರಭುವಿನ ಮುಂದೆ ಹಾಜರಾಗಿ ತಮ್ಮೆಲ್ಲ ಕೆಲಸಗಳಿಗೂ ಒಂದು ದಿನ ಉತ್ತರ ಹೇಳಬೇಕಾಗಿದೆ ಎಂದು ಭಾವಿಸಬೇಕು.

46. ಅರ್ಥಾತ್ ನಿರ್ಣಾಯಕ ದಿನದ ಲಕ್ಷಣಗಳು, ಯಾತನೆ ಅಥವಾ ವಾಸ್ತವಿಕತೆಯನ್ನು ಸಂಪೂರ್ಣವಾಗಿ ಅನಾವರಣಗೊಳಿಸುವಂತಹ ಮತ್ತು ಅದು ಪ್ರಕಟಗೊಂಡ ಬಳಿಕ ಪರೀಕ್ಷೆಯ ಪ್ರಶ್ನೆಯೇ ಉಳಿಯದಂತಹ ಯಾವುದಾದರೂ ಸಂಕೇತ.

159. ತಮ್ಮ ಧರ್ಮವನ್ನು ಛಿನ್ನ ವಿಚ್ಛಿನ್ನಗೊಳಿಸಿ ಗುಂಪು ಗುಂಪುಗಳಾಗಿ ಬಿಟ್ಟವರ ಜೊತೆ ನಿಶ್ಚಯವಾಗಿಯೂ ನಿಮಗೆ ಯಾವ ಸಂಬಂಧವೂ ಇಲ್ಲ. ಅವರ ಪ್ರಕರಣ ಅಲ್ಲಾಹನ ಬಳಿ ಇದೆ. ಅವರು ಏನು ಮಾಡಿರುತ್ತಾರೆಂಬುದನ್ನು ಅವನೇ ಅವರಿಗೆ ತೋರಿಸುವನು.

إِنَّ الَّذِينَ فَرَّقُوا دِينَهُمْ وَكَانُوا شِيَعًا
لَسْتَ مِنْهُمْ فِي شَيْءٍ ۚ إِنَّمَا أَمْرُهُمْ إِلَى
اللَّهِ ثُمَّ يُنَبِّئُهُمْ بِمَا كَانُوا يَفْعَلُونَ ﴿١٥٩﴾

160. ಅಲ್ಲಾಹನ ಬಳಿಗೆ ಪುಣ್ಯ ತೆಗೆದುಕೊಂಡು ಬಂದವನಿಗೆ ಹತ್ತು ಪಟ್ಟು ಪುಣ್ಯಫಲವಿದೆ. ಪಾಪ ತೆಗೆದುಕೊಂಡು ಬಂದವನಿಗೆ ಅವನು ಮಾಡಿದ ಅಪರಾಧದಷ್ಟೇ ಪ್ರತಿಫಲ ಕೊಡಲಾಗುವುದು ಮತ್ತು ಯಾರ ಮೇಲೂ ಅನ್ಯಾಯವಾಗದು.

مَنْ جَاءَ بِالْحَسَنَةِ فَلَهُ عَشْرُ أَمْثَالِهَا ۖ وَ
مَنْ جَاءَ بِالسَّيِّئَةِ فَلَا يُجْزَىٰ إِلَّا مِثْلَهَا
وَهُمْ لَا يُظْلَمُونَ ﴿١٦٠﴾

161. ಓ ಪೈಗಂಬರರೇ, (ಹೀಗೆ) ಹೇಳಿರಿ: "ನನ್ನ ಪ್ರಭು ನನಗೆ ನೇರ ಮಾರ್ಗವನ್ನು ತೋರಿಸಿದ್ದಾನೆ. ಯಾವುದೇ ವಕ್ರತೆಯಿಲ್ಲದ ಅತ್ಯಂತ ಸರಿಯಾದ ಧರ್ಮ, ಇಬ್‌ರಾಹೀಮರು ಏಕನಿಷ್ಠೆಯಿಂದ ಕೈಗೊಂಡ ಮಾರ್ಗ- ಅವರು 'ಬಹುದೇವವಿಶ್ವಾಸಿ'ಗಳಲ್ಲಾಗಿರ ಲಿಲ್ಲ."

قُلْ إِنَّنِي هَدَانِي رَبِّي إِلَىٰ صِرَاطٍ
مُسْتَقِيمٍ ۚ دِينًا قِيَمًا مِلَّةَ إِبْرَاهِيمَ
حَنِيفًا ۚ وَمَا كَانَ مِنَ الْمُشْرِكِينَ ﴿١٦١﴾

162-163. ಹೇಳಿರಿ- ನನ್ನ ನಮಾಝ್, ನನ್ನ ಸರ್ವ ಉಪಾಸನಾವಿಧಿಗಳು,[47] ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಯಾವ ಸಹಭಾಗಿಯೂ ಇಲ್ಲದ ಸರ್ವಲೋಕಪಾಲಕನಿಗಾಗಿದೆ- ಇದನ್ನೇ ನನಗೆ ಆದೇಶಿಸಲಾಗಿದೆ. ನಾನು ಆಜ್ಞಾನುಸರಣೆಯೊಂದಿಗೆ ಶಿರಬಾಗುವವರಲ್ಲಿ ಸರ್ವಪ್ರಥಮನಾಗಿರುತ್ತೇನೆ.

قُلْ إِنَّ صَلَاتِي وَنُسُكِي وَمَحْيَايَ وَ
مَمَاتِي لِلَّهِ رَبِّ الْعَالَمِينَ ﴿١٦٢﴾
لَا شَرِيكَ لَهُ ۖ وَبِذَٰلِكَ أُمِرْتُ وَأَنَا
أَوَّلُ الْمُسْلِمِينَ ﴿١٦٣﴾

164. ಹೇಳಿರಿ: ಅಲ್ಲಾಹನೇ ಸಕಲ ವಸ್ತುಗಳ ಪ್ರಭುವಾಗಿರುವಾಗ, ನಾನು ಅವನ ಹೊರತು ಇತರ ಪ್ರಭುವನ್ನರಸಬೇಕೇ? ಪ್ರತಿಯೊಬ್ಬನೂ ತಾನು ಸಂಪಾದಿಸುತ್ತಿರುವುದಕ್ಕೆ ಸ್ವತಃ ತಾನೇ ಹೊಣೆಗಾರನಾಗಿರುತ್ತಾನೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ

قُلْ أَغَيْرَ اللَّهِ أَبْغِي رَبًّا وَهُوَ رَبُّ كُلِّ
شَيْءٍ ۚ وَلَا تَكْسِبُ كُلُّ نَفْسٍ إِلَّا عَلَيْهَا ۚ
وَلَا تَزِرُ وَازِرَةٌ وِزْرَ أُخْرَىٰ ۚ ثُمَّ إِلَىٰ

47. ಮೂಲದಲ್ಲಿ 'ನುಸುಕ್' ಎಂಬ ಪದವನ್ನು ಬಳಸಲಾಗಿದೆ. ಅದಕ್ಕೆ ತ್ಯಾಗವೆಂದೂ ಅರ್ಥವಿದೆ. ದಾಸ್ಯ ಮತ್ತು ಉಪಾಸನೆಯ ಇತರೆಲ್ಲ ವಿಧಿಗಳಿಗೂ ಈ ಪದ ಸಾಮಾನ್ಯವಾಗಿ ಬಳಕೆಯಾಗುತ್ತದೆ.

رَبِّكُمْ مَّرْجِعُكُمْ فَيُنَبِّئُكُمْ بِمَا كُنْتُمْ فِيْهِ تَخْتَلِفُوْنَ ﴿١٦٤﴾

ಹೊರೆಯನ್ನು ಹೊರುವುದಿಲ್ಲ.[48] ಆ ಬಳಿಕ ನಿಮಗೆಲ್ಲರಿಗೂ ನಿಮ್ಮ ಪ್ರಭುವಿನ ಕಡೆಗೆ ಮರಳಲಿಕ್ಕಿದೆ. ಆಗ ಅವನು ನಿಮ್ಮ ಭಿನ್ನಾಭಿಪ್ರಾಯಗಳ ವಾಸ್ತವಿಕತೆಯನ್ನು ನಿಮ್ಮ ಮುಂದೆಯೇ ಪ್ರಕಟ ಗೊಳಿಸುವನು.

وَهُوَ الَّذِيْ جَعَلَكُمْ خَلٰٓئِفَ الْاَرْضِ وَرَفَعَ بَعْضَكُمْ فَوْقَ بَعْضٍ دَرَجٰتٍ لِّيَبْلُوَكُمْ فِيْ مَآ اٰتٰىكُمْ ۗ اِنَّ رَبَّكَ سَرِيْعُ الْعِقَابِ ۖ وَاِنَّهٗ لَغَفُوْرٌ رَّحِيْمٌ ﴿١٦٥﴾

165. ಅವನೇ ನಿಮ್ಮನ್ನು ಭೂಮಿಯ ಪ್ರತಿನಿಧಿಗಳನ್ನಾಗಿ ಮಾಡಿದನು ಮತ್ತು ನಿಮಗೆ ಕೊಟ್ಟಿರುವುದರಲ್ಲಿ ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ನಿಮ್ಮಲ್ಲಿ ಕೆಲವರಿಗೆ ಕೆಲವರಿಗಿಂತ ಉನ್ನತ ಪದವಿಗಳನ್ನು ನೀಡಿದನು. ನಿಶ್ಚಯವಾಗಿಯೂ ನಿಮ್ಮ ಪ್ರಭು ಶಿಕ್ಷೆ ಕೊಡುವುದರಲ್ಲಿ ಅತಿ ಶೀಘ್ರನು ಮತ್ತು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

---

48. ಅರ್ಥಾತ್- ಪ್ರತಿಯೊಬ್ಬನೂ ತನ್ನ ಕರ್ಮಗಳಿಗೆ ಸ್ವಯಂ ಜವಾಬ್ದಾರನಾಗಿದ್ದಾನೆ. ಒಬ್ಬನ ಕರ್ಮದ ಹೊಣೆ ಮತ್ತೊರ್ವನ ಮೇಲೆ ಇರಲು ಸಾಧ್ಯವಿಲ್ಲ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಅಲಿಫ್ ಲಾಮ್ಮೀಮ್ ಸ್ವಾದ್.

الٓمّٓصٓ ﴿۱﴾

2. ಇದು ನಿಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟಿರುವ ಗ್ರಂಥ. ಆದುದರಿಂದ ಓ ಮುಹಮ್ಮದ್‌ರೇ, ಇದರಿಂದ ನಿಮ್ಮ ಹೃದಯದಲ್ಲಿ ಅಳುಕುಂಟಾಗದಿರಲಿ.[1] ಇದನ್ನು ಅವತೀರ್ಣಗೊಳಿಸುವ ಉದ್ದೇಶವು ನೀವು ಇದರ ಮೂಲಕ (ನಿಷೇಧಿಗಳಿಗೆ) ಎಚ್ಚರಿಕೆ ನೀಡಬೇಕು ಮತ್ತು ವಿಶ್ವಾಸಿಗಳಿಗೆ ಉಪದೇಶ ನೀಡಬೇಕು ಎಂಬುದಾಗಿರುತ್ತದೆ.

كِتٰبٌ اُنۡزِلَ اِلَيۡكَ فَلَا يَكُنۡ فِىۡ صَدۡرِكَ حَرَجٌ مِّنۡهُ لِتُنۡذِرَ بِهٖ وَذِكۡرٰى لِلۡمُؤۡمِنِيۡنَ ﴿۲﴾

3. ಹೇ ಜನರೇ, ನಿಮ್ಮ ಪ್ರಭುವಿನ ಕಡೆಯಿಂದ ಅವತೀರ್ಣಗೊಳಿಸಲ್ಪಟ್ಟಿರುವುದನ್ನೆಲ್ಲ ಅನುಸರಿಸಿರಿ ಮತ್ತು ನಿಮ್ಮ ಪಾಲಕ ಪ್ರಭುವನ್ನು ಬಿಟ್ಟು ಇತರ ಸಂರಕ್ಷಕರನ್ನು ಅನುಸರಿಸ ಬೇಡಿರಿ. ಆದರೆ ನೀವು ಉಪದೇಶವನ್ನು ಅಲ್ಪವೇ ಸ್ವೀಕರಿಸುತ್ತೀರಿ.

اِتَّبِعُوۡا مَاۤ اُنۡزِلَ اِلَيۡكُمۡ مِّنۡ رَّبِّكُمۡ وَلَا تَتَّبِعُوۡا مِنۡ دُوۡنِهٖۤ اَوۡلِيَآءَ ؕ قَلِيۡلًا مَّا تَذَكَّرُوۡنَ ﴿۳﴾

4. ಎಷ್ಟೋ ನಾಡುಗಳನ್ನು ನಾವು ನೆಲಸಮ ಮಾಡಿ ಬಿಟ್ಟೆವು. ಅವುಗಳ ಮೇಲೆ ನಮ್ಮ ಯಾತನೆಯು ಹಠಾತ್ತನೆ ರಾತ್ರೆಯ ವೇಳೆ ಅಥವಾ ಅವರು ಹಾಡುಹಗಲಲ್ಲೇ ವಿಶ್ರಾಂತಿ ಪಡೆಯುತ್ತಿದ್ದಾಗ ಎರಗಿತು.

وَكَمۡ مِّنۡ قَرۡيَةٍ اَهۡلَكۡنٰهَا فَجَآءَهَا بَاۡسُنَا بَيَاتًا اَوۡ هُمۡ قَآئِلُوۡنَ ﴿۴﴾

5. ನಮ್ಮ ಯಾತನೆ ಅವರ ಮೇಲೆ ಎರಗಿದಾಗ ಅವರ ಬಾಯಲ್ಲಿ "ನಿಜವಾಗಿಯೂ ನಾವು ಅಕ್ರಮಿಗಳಾಗಿದ್ದೆವು" ಎಂದಲ್ಲದೆ ಇನ್ನಾವ ಸ್ವರವೂ ಇರಲಿಲ್ಲ.

فَمَا كَانَ دَعۡوٰٮهُمۡ اِذۡ جَآءَهُمۡ بَاۡسُنَاۤ اِلَّاۤ اَنۡ قَالُوۡۤا اِنَّا كُنَّا ظٰلِمِيۡنَ ﴿۵﴾

1. ಅರ್ಥಾತ್- ಯಾವುದೇ ಸಂಕೋಚ ಅಥವಾ ಭಯವಿಲ್ಲದೆ ನೀವು ಇದನ್ನು ಜನರಿಗೆ ತಲಪಿಸಿರಿ. ವಿರೋಧಿಗಳು ಅದನ್ನು ಯಾವ ರೀತಿ ಸ್ವೀಕರಿಸುತ್ತಾರೆ ಎಂಬುದನ್ನು ನೀವು ಗಣನೆಗೆ ತೆಗೆದುಕೊಳ್ಳದಿರಿ.

6. ಆದ್ದರಿಂದ ನಾವು ಯಾರ ಕಡೆಗೆ ಸಂದೇಶವಾಹಕರನ್ನು ಕಳುಹಿಸಿದ್ದೆವೋ ಅವರನ್ನೆಲ್ಲಾ ವಿಚಾರಣೆ ನಡೆಸಿಯೇ ತೀರುವೆವು ಮತ್ತು (ಸಂದೇಶವಾಹಕರು ದೌತ್ಯದ ಕರ್ತವ್ಯವನ್ನು ಎಷ್ಟರ ಮಟ್ಟಿಗೆ ನೆರವೇರಿಸಿದ್ದರು ಮತ್ತು ಅವರಿಗೆ ಏನು ಪ್ರತಿಕ್ರಿಯೆ ದೊರಕಿತೆಂದು) ಸಂದೇಶವಾಹಕರೊಡನೆಯೂ ನಾವು ಪ್ರಶ್ನಿಸುವೆವು.

فَلَنَسْـَٔلَنَّ الَّذِينَ أُرْسِلَ إِلَيْهِمْ وَلَنَسْـَٔلَنَّ الْمُرْسَلِينَ ۝٦

7. ಆಗ ನಾವು ಸ್ವತಃ ಸಂಪೂರ್ಣ ಜ್ಞಾನದೊಂದಿಗೆ ಸಕಲ ಘಟನೆಗಳನ್ನು ಅವರ ಮುಂದಿಟ್ಟು ಬಿಡುವೆವು. ನಾವೆಂದೂ ಮಾಯವಾಗಿರಲಿಲ್ಲವಷ್ಟೆ.

فَلَنَقُصَّنَّ عَلَيْهِم بِعِلْمٍ ۖ وَمَا كُنَّا غَائِبِينَ ۝٧

8. ತೂಕವು ಅಂದು ಸಾಕ್ಷಾತ್ ಸತ್ಯವಾಗಿರುವುದು.[2] ಯಾರ ತೂಗು ತಟ್ಟೆಯು ಭಾರವಾಗಿರುವುದೋ ಅವರೇ ಸಾರ್ಥಕ್ಯ ಹೊಂದುವವರಾಗುವರು.

وَالْوَزْنُ يَوْمَئِذٍ الْحَقُّ ۚ فَمَن ثَقُلَتْ مَوَازِينُهُ فَأُولَٰئِكَ هُمُ الْمُفْلِحُونَ ۝٨

9. ಮತ್ತು ಯಾರ ತೂಗು ತಟ್ಟೆಯು ಹಗುರವಾಗಿರುವುದೋ ಅವರೇ ಸ್ವಯಂ ತಮ್ಮನ್ನು ನಷ್ಟಕ್ಕೊಳಪಡಿಸಿಕೊಂಡವರಾಗುವರು. ಏಕೆಂದರೆ ಅವರು ನಮ್ಮ ನಿದರ್ಶನಗಳ ಬಗ್ಗೆ ಅಕ್ರಮ ನೀತಿಯನ್ನನುಸರಿಸುತ್ತಿದ್ದರು.

وَمَنْ خَفَّتْ مَوَازِينُهُ فَأُولَٰئِكَ الَّذِينَ خَسِرُوا أَنفُسَهُم بِمَا كَانُوا بِآيَاتِنَا يَظْلِمُونَ ۝٩

10. ನಾವು ನಿಮ್ಮನ್ನು ಜಗತ್ತಿನಲ್ಲಿ ಸಾಮರ್ಥ್ಯ ಕೊಟ್ಟು ನೆಲೆಗೊಳಿಸಿದೆವು ಮತ್ತು ಇಲ್ಲಿ ನಿಮಗೆ ಜೀವನ ಸಾಧನಗಳನ್ನು ಒದಗಿಸಿದೆವು. ಆದರೆ ನೀವು ಅತ್ಯಲ್ಪವೇ ಕೃತಜ್ಞರಾಗಿರುತ್ತೀರಿ.

وَلَقَدْ مَكَّنَّاكُمْ فِي الْأَرْضِ وَجَعَلْنَا لَكُمْ فِيهَا مَعَايِشَ ۗ قَلِيلًا مَّا تَشْكُرُونَ ۝١٠

11. ನಾವು ನಿಮ್ಮ ಸೃಷ್ಟಿಯನ್ನು ಆರಂಭಿಸಿದೆವು. ಅನಂತರ ನಾವು ನಿಮಗೆ ರೂಪ ಕೊಟ್ಟೆವು. ತರುವಾಯ "ಆದಮನ ಮುಂದೆ 'ಸಾಷ್ಟಾಂಗವೆರಗಿರಿ' ಎಂದು ದೇವಚರರೊಡನೆ ಹೇಳಿದೆವು." ಈ ಅಪ್ಪಣೆಯಂತೆ ಎಲ್ಲರೂ ಸಾಷ್ಟಾಂಗ ಮಾಡಿದರು. ಆದರೆ ಇಬ್‌ಲೀಸನು 'ಸಾಷ್ಟಾಂಗ' ಮಾಡುವವರೊಂದಿಗೆ ಸೇರಲಿಲ್ಲ.[3]

وَلَقَدْ خَلَقْنَاكُمْ ثُمَّ صَوَّرْنَاكُمْ ثُمَّ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ لَمْ يَكُن مِّنَ السَّاجِدِينَ ۝١١

2. ಅರ್ಥಾತ್- ಅಲ್ಲಾಹನ ನ್ಯಾಯದ ತಕ್ಕಡಿಯಲ್ಲಿ ಆ ದಿನ ಸತ್ಯವಲ್ಲದೆ ಬೇರಾವುದಕ್ಕೂ ತೂಕವಿರಲಾರದು. ತೂಕವಿಲ್ಲದ ಯಾವುದೂ ಅಂದು ಸತ್ಯವೆನಿಸಲಾರದು. ಯಾರ ಬಳಿ ಎಷ್ಟು ಸತ್ಯಾಂಶವಿರುವುದೋ ಅಷ್ಟೇ ಅದು ತೂಗುವುದು. ತೂಕದ ಆಧಾರದಲ್ಲೇ ಆ ದಿನ ಎಲ್ಲಾ ತೀರ್ಮಾನಗಳು ನಡೆಯುವುದು. ಬೇರಾವುದನ್ನೂ ಆ ದಿನ ಕಿಂಚಿತ್ತೂ ಪರಿಗಣಿಸಲಾಗದು.

3. ಇಬ್‌ಲೀಸ್ ದೇವಚರರಲ್ಲಾಗಿದ್ದ ಎಂದು ಇದರ ಅರ್ಥವಲ್ಲ. ಭೂಮಿಯ ವ್ಯವಸ್ಥೆಯನ್ನು ನೋಡಿಕೊಳ್ಳುವ ದೇವಚರರೊಂದಿಗೆ ಆದಮರಿಗೆ ಸಾಷ್ಟಾಂಗವೆರಗಲು ಆದೇಶಿಸುವುದೆಂದರೆ ನಿಜವಾಗಿ ಆ ದೇವಚರರ ಅಧೀನದಲ್ಲಿರುವ ಸೃಷ್ಟಿಗಳೆಲ್ಲರೂ ಆದಮರಿಗೆ ಅಧೀನವಾಗಿರಬೇಕು ಎಂದಾಗಿತ್ತು. ಈ ಸೃಷ್ಟಿಗಳ ಪೈಕಿ ಇಬ್‌ಲೀಸ್ ಮಾತ್ರ ಮುಂದೆ ಬಂದು ತಾನು ಆದಮನ ಮುಂದೆ ಸಾಷ್ಟಾಂಗವೆರಗುವುದಿಲ್ಲವೆಂದು ಪ್ರಕಟಿಸಿದನು.

12. "ನಾನು ನಿನಗೆ ಅಪ್ಪಣೆ ಕೊಟ್ಟಿದ್ದಾಗ, 'ಸಾಷ್ಟಾಂಗ' ಮಾಡುವುದರಿಂದ ನಿನ್ನನ್ನು ತಡೆದ ವಿಷಯ ಯಾವುದು?" ಎಂದು (ಅಲ್ಲಾಹ್) ಕೇಳಿದಾಗ, "ನಾನು ಅವನಿಗಿಂತ ಶ್ರೇಷ್ಠನಾಗಿರುತ್ತೇನೆ. ನೀನು ನನ್ನನ್ನು ಅಗ್ನಿಯಿಂದ ಮತ್ತು ಅವನನ್ನು ಮಣ್ಣಿನಿಂದ ಸೃಷ್ಟಿಸಿರುತ್ತಿ" ಎಂದು(ಇಬ್‌ಲೀಸ್) ಹೇಳಿದನು.

قَالَ مَا مَنَعَكَ أَلَّا تَسْجُدَ إِذْ أَمَرْتُكَ ۖ قَالَ أَنَا خَيْرٌ مِّنْهُ خَلَقْتَنِي مِن نَّارٍ وَخَلَقْتَهُ مِن طِينٍ ﴿١٢﴾

13. ಆಗ ಅಲ್ಲಾಹನು, "ನೀನು ಇಲ್ಲಿಂದ ಕೆಳಗೆ ಇಳಿ. ಇಲ್ಲಿ ಶ್ರೇಷ್ಠತೆಯ ಅಹಂಕಾರ ತೋರಿಸುವ ಹಕ್ಕು ನಿನಗಿಲ್ಲ. ತೊಲಗು- ವಾಸ್ತವದಲ್ಲಿ ನೀನು ಸ್ವಯಂ ತನ್ನ ಅಪಮಾನವನ್ನು ಬಯಸುವವರಲ್ಲಾಗಿರುವೆ"[4] ಎಂದನು.

قَالَ فَاهْبِطْ مِنْهَا فَمَا يَكُونُ لَكَ أَن تَتَكَبَّرَ فِيهَا فَاخْرُجْ إِنَّكَ مِنَ الصَّاغِرِينَ ﴿١٣﴾

14. ಆಗ ಅವನು, "ಇವರೆಲ್ಲರೂ ಇನ್ನೊಮ್ಮೆ ಎಬ್ಬಿಸಲ್ಪಡುವ ದಿವಸದ ತನಕ ನನಗೆ ಅವಧಿ ಕೊಡು" ಎಂದನು.

قَالَ أَنظِرْنِي إِلَىٰ يَوْمِ يُبْعَثُونَ ﴿١٤﴾

15. ಅಲ್ಲಾಹನು, "ನಿನಗೆ ಅವಧಿ ಕೊಡಲಾಯಿತು" ಎಂದನು.

قَالَ إِنَّكَ مِنَ الْمُنظَرِينَ ﴿١٥﴾

16. ಆಗ ಅವನು, "ಹಾಗಾದರೆ ನೀನು ನನ್ನನ್ನು ಪಥಭ್ರಷ್ಟತೆಗೊಳಪಡಿಸಿದಂತೆಯೇ ನಾನೂ ಇನ್ನು ನಿನ್ನ ನೇರ ಮಾರ್ಗದಲ್ಲಿ ಈ ಮಾನವರನ್ನು ಹೊಂಚು ಹಾಕುತ್ತಿರುವೆನು.

قَالَ فَبِمَا أَغْوَيْتَنِي لَأَقْعُدَنَّ لَهُمْ صِرَاطَكَ الْمُسْتَقِيمَ ﴿١٦﴾

17. ಮುಂದಿನಿಂದಲೂ ಹಿಂದಿನಿಂದಲೂ ಬಲಭಾಗದಿಂದಲೂ ಎಡಭಾಗದಿಂದಲೂ ಎಲ್ಲ ಕಡೆಗಳಿಂದಲೂ ಅವರನ್ನು ಸುತ್ತುಗಟ್ಟುವೆನು ಮತ್ತು ನೀನು ಅವರ ಪೈಕಿ ಬಹುಮಂದಿಯನ್ನು ಕೃತಜ್ಞರನ್ನಾಗಿ ಕಾಣಲಾರೆ" ಎಂದನು.

ثُمَّ لَآتِيَنَّهُم مِّن بَيْنِ أَيْدِيهِمْ وَمِنْ خَلْفِهِمْ وَعَنْ أَيْمَانِهِمْ وَعَن شَمَائِلِهِمْ ۖ وَلَا تَجِدُ أَكْثَرَهُمْ شَاكِرِينَ ﴿١٧﴾

18. ಅಲ್ಲಾಹನು, "ನೀನು ಇಲ್ಲಿಂದ ನಿಂದ್ಯನೂ ಬಹಿಷ್ಕೃತನೂ ಆಗಿ ತೊಲಗು. ಅವರ ಪೈಕಿ ಯಾರು ನಿನ್ನನ್ನು ಅನುಸರಿಸುತ್ತಾರೋ ಅವರಿಂದ ನಿನ್ನ ಸಹಿತ 'ನರಕ'ವನ್ನು ತುಂಬುವೆನೆಂಬುದನ್ನು ನಿಸ್ಸಂದೇಹವಾಗಿ ಅರಿತುಕೋ.

قَالَ اخْرُجْ مِنْهَا مَذْءُومًا مَّدْحُورًا ۖ لَّمَن تَبِعَكَ مِنْهُمْ لَأَمْلَأَنَّ جَهَنَّمَ مِنكُمْ أَجْمَعِينَ ﴿١٨﴾

19. ಮತ್ತು ಓ ಆದಮ್, ನೀನು ಮತ್ತು ನಿನ್ನ ಪತ್ನಿ- ಇಬ್ಬರೂ ಈ ಸ್ವರ್ಗದಲ್ಲಿ ವಾಸಿಸಿರಿ. ನೀವಿಲ್ಲಿ ನಿಮಗೆ ಇಷ್ಟ ಬಂದುದನ್ನು ಉಣ್ಣಿರಿ. ಆದರೆ ಈ ವೃಕ್ಷದ ಬಳಿ ಸುಳಿಯಬಾರದು. ಅನ್ಯಥಾ ಅಕ್ರಮಿಗಳ ಸಾಲಿಗೆ ಸೇರುವಿರಿ ಎಂದನು.

وَيَا آدَمُ اسْكُنْ أَنتَ وَزَوْجُكَ الْجَنَّةَ فَكُلَا مِنْ حَيْثُ شِئْتُمَا وَلَا تَقْرَبَا هَٰذِهِ الشَّجَرَةَ فَتَكُونَا مِنَ الظَّالِمِينَ ﴿١٩﴾

4. ಮೂಲದಲ್ಲಿ 'ಸ್ವಾಗಿರೀನ್' ಎಂಬ ಪದ ಪ್ರಯೋಗವಾಗಿದೆ. 'ಸ್ವಾಗಿರ್' ಎಂದರೆ ನಿಂದ್ಯತೆ ಮತ್ತು ನೀಚತೆಯನ್ನು ಸ್ವತಃ ಅಪ್ಪಿಕೊಳ್ಳುವುದು. ಸೃಷ್ಟಿ ಮತ್ತು ದಾಸನಾಗಿರುತ್ತಲೂ ಮೇಲರಿಮೆ ಮತ್ತು ಅಹಂಭಾವಕ್ಕೆ ಈಡಾಗುವುದೆಂದರೆ ಸ್ವತಃ ನೀಚನಾಗುವುದಾಗಿದೆ ಎಂಬುದೇ ಈ ದೇವವಾಣಿಯ ಇಂಗಿತ.

20. ಅನಂತರ, ಪರಸ್ಪರರಿಂದ ಮರೆಗೊಳಿಸಲ್ಪಟ್ಟಿದ್ದ ಅವರ ಲಜ್ಜಾಂಗಗಳು ಪರಸ್ಪರರ ಮುಂದೆ ತೆರೆಯುವಂತಾಗಲೆಂದು, ಶೈತಾನನು ಅವರನ್ನು ಪ್ರಚೋದಿಸಿದನು. ಅವನು ಅವರೊಡನೆ, "ನಿಮ್ಮ ಪ್ರಭು ನಿಮ್ಮನ್ನು ಈ ವೃಕ್ಷದಿಂದ ತಡೆದಿರುವುದು ನೀವೆಲ್ಲಾದರೂ ದೇವಚರರಾಗಿ ಬಿಡಬಾರದು ಅಥವಾ ನಿಮಗೆ ಶಾಶ್ವತ ಜೀವನವೊದಗಿ ಬಿಡಬಾರದು ಎಂಬ ಕಾರಣದಿಂದ ಮಾತ್ರ" ಎಂದನು.

فَوَسْوَسَ لَهُمَا الشَّيْطٰنُ لِيُبْدِيَ لَهُمَا مَا وٗرِيَ عَنْهُمَا مِنْ سَوْاٰتِهِمَا وَقَالَ مَا نَهٰىكُمَا رَبُّكُمَا عَنْ هٰذِهِ الشَّجَرَةِ اِلَّآ اَنْ تَكُوْنَا مَلَكَيْنِ اَوْ تَكُوْنَا مِنَ الْخٰلِدِيْنَ ﴿٢٠﴾

21. ನಾನು ನಿಮ್ಮ ನೈಜ ಹಿತಚಿಂತಕನಾಗಿದ್ದೇನೆಂದು ಅವರೊಡನೆ ಆಣೆ ಹಾಕಿ ಹೇಳಿದನು.

وَقَاسَمَهُمَآ اِنِّيْ لَكُمَا لَمِنَ النّٰصِحِيْنَ ﴿٢١﴾

22. ಹೀಗೆ ಅವನು ಅವರಿಬ್ಬರನ್ನೂ ಮೋಸಗೊಳಿಸಿ ಕ್ರಮೇಣ ತನ್ನ ಧಾಟಿಗೆ ತಂದನು. ಕೊನೆಗೆ ಅವರಿಬ್ಬರೂ ಆ ವೃಕ್ಷವನ್ನು ಸವಿದಾಗ ಅವರ ಗುಪ್ತಾಂಗಗಳು ಪರಸ್ಪರರ ಮುಂದೆ ಪ್ರತ್ಯಕ್ಷಗೊಂಡವು ಮತ್ತು ಅವರು ತಮ್ಮ ದೇಹಗಳನ್ನು ಸ್ವರ್ಗದ ಎಲೆಗಳಿಂದ ಮರೆಸ ತೊಡಗಿದರು. ಆಗ ಅವರ ಪ್ರಭು ಅವರನ್ನು ಕರೆದು, "ನಾನು ನಿಮ್ಮನ್ನು ಈ ವೃಕ್ಷದಿಂದ ತಡೆದಿರಲಿಲ್ಲವೇ? ಹಾಗೂ ಶೈತಾನನು ನಿಮ್ಮ ಪ್ರತ್ಯಕ್ಷ ಶತ್ರುವೆಂದು ನಿಮಗೆ ಹೇಳಿರಲಿಲ್ಲವೇ?" ಎಂದು ಕೇಳಿದನು.

فَدَلّٰىهُمَا بِغُرُوْرٍ ۚ فَلَمَّا ذَاقَا الشَّجَرَةَ بَدَتْ لَهُمَا سَوْاٰتُهُمَا وَطَفِقَا يَخْصِفٰنِ عَلَيْهِمَا مِنْ وَّرَقِ الْجَنَّةِ ۭ وَنَادٰىهُمَا رَبُّهُمَآ اَلَمْ اَنْهَكُمَا عَنْ تِلْكُمَا الشَّجَرَةِ وَاَقُلْ لَّكُمَآ اِنَّ الشَّيْطٰنَ لَكُمَا عَدُوٌّ مُّبِيْنٌ ﴿٢٢﴾

23. ಅವರಿಬ್ಬರೂ, "ಓ ನಮ್ಮ ಪ್ರಭೂ, ನಾವು ನಮ್ಮ ಮೇಲೆ ಅಕ್ರಮವೆಸಗಿಕೊಂಡೆವು. ಈಗ ನೀನು ನಮ್ಮನ್ನು ಕ್ಷಮಿಸದಿದ್ದರೆ ಹಾಗೂ ನಮ್ಮ ಮೇಲೆ ಕೃಪೆತೋರದಿದ್ದರೆ ನಿಶ್ಚಯವಾಗಿಯೂ ನಾವು ನಷ್ಟ ಹೊಂದುವವರಲ್ಲಾಗುವೆವು"[5] ಎಂದು ಹೇಳಿದರು.

قَالَا رَبَّنَا ظَلَمْنَآ اَنْفُسَنَا ۫ وَاِنْ لَّمْ تَغْفِرْ لَنَا وَتَرْحَمْنَا لَنَكُوْنَنَّ مِنَ الْخٰسِرِيْنَ ﴿٢٣﴾

5. ಇದರಿಂದ ನಾಚಿಕೆ ಮತ್ತು ಸಂಕೋಚದ ಭಾವನೆ ಮನುಷ್ಯನಿಗೆ ಸ್ವಾಭಾವಿಕವಾದುದು ಎಂದು ವ್ಯಕ್ತವಾಗುತ್ತದೆ. ತನ್ನ ದೇಹದ ನಿರ್ದಿಷ್ಟ ಭಾಗಗಳನ್ನು ಇತರರಿಗೆ ತೋರಿಸಲು ಮನುಷ್ಯನಿಗೆ ಆಗುವ ಸಹಜವಾದ ನಾಚಿಕೆಯೇ ಇದಕ್ಕೊಂದು ಉದಾಹರಣೆ. ಆದ್ದರಿಂದಲೇ ಪಿಶಾಚಿಯು ಮನುಷ್ಯನನ್ನು ಅವನ ಸತ್-ಪ್ರಕೃತಿಯಿಂದ ಸರಿಸಲು ಹೂಡಿದ ಮೊದಲ ಸಂಚು ಅವನ ಲಜ್ಜೆ ಮತ್ತು ಸಂಕೋಚದ ಸ್ವಭಾವದ ಮೇಲೆ ಪ್ರಹಾರ ಮಾಡುವುದಾಗಿತ್ತು. ನಗ್ನತೆಯ ಮೂಲಕ ಅಶ್ಲೀಲತೆಯ ದ್ವಾರವನ್ನು ತೆರೆಸುವುದಾಗಿತ್ತು. ಅವನನ್ನು ಲೈಂಗಿಕ ಅರಾಜಕತೆಗೆ ಗುರಿಪಡಿಸುವುದಾಗಿತ್ತು. ಹಾಗೆಯೇ ಮಾನವನಲ್ಲಿ ಉನ್ನತ ಹಂತಕ್ಕೇರುವ ಸಹಜವಾದ ದಾಹ ಇದೆಯೆಂದೂ ಇದರಿಂದ ವ್ಯಕ್ತವಾಗುತ್ತದೆ. ಆದ್ದರಿಂದಲೇ ಪಿಶಾಚಿಯು ಹಿತೈಷಿಯ ವೇಷದಲ್ಲಿ ಬಂದು ನಾನು ನಿನ್ನನ್ನು ಇನ್ನಷ್ಟು ಉನ್ನತ ಸ್ಥಾನಕ್ಕೆ ಕೊಂಡೊಯ್ಯಬಯಸುತ್ತೇನೆ ಎಂದು ಹೇಳಬೇಕಾಯಿತು. ಮನುಷ್ಯನನ್ನು ಪಿಶಾಚಿಗಿಂತ ಉನ್ನತಗೊಳಿಸುವ ಅವನ ನಿಜವಾದ ವಿಶೇಷತೆ, ತಪ್ಪು ಸಂಭವಿಸಿದಾಗ ಪಶ್ಚಾತ್ತಾಪ ಪಟ್ಟು ಅಲ್ಲಾಹನಲ್ಲಿ ಕ್ಷಮೆಯಾಚಿಸುವುದಾಗಿದೆ ಎಂದು ಇದರಿಂದ ವ್ಯಕ್ತವಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಇಬ್ಲೀಸನು ತಪ್ಪು ಸಂಭವಿಸಿದಾಗ ಅಲ್ಲಾಹನೊಂದಿಗೆ ದುರಹಂಕಾರ ಪ್ರದರ್ಶಿಸಿದನು ಮತ್ತು ಬಂಡಾಯಕ್ಕಿಳಿದನು. ಇದುವೇ ಅವನನ್ನು ನಿಂದ್ಯ ಮತ್ತು ನೀಚನಾಗಿ ಮಾಡಿತು ಎಂದೂ ಇದರಿಂದ ತಿಳಿದು ಬರುತ್ತದೆ.

24. ಆಗ ಅಲ್ಲಾಹನು, "ಇಳಿದುಬಿಡಿರಿ, ನೀವು ಪರಸ್ಪರ ಶತ್ರುಗಳಾಗಿರುತ್ತೀರಿ ಮತ್ತು ನಿಮಗಾಗಿ ಒಂದು ನಿರ್ದಿಷ್ಟ ಕಾಲಾವಧಿವರೆಗೆ ಭೂಮಿಯ ಮೇಲೆಯೇ ವಾಸಸ್ಥಾನ ಮತ್ತು ಜೀವನ ಸಾಧನಗಳಿವೆ" ಎಂದೂ-

قَالَ اهْبِطُوا بَعْضُكُمْ لِبَعْضٍ عَدُوٌّ ۚ وَلَكُمْ
فِي الْأَرْضِ مُسْتَقَرٌّ وَّمَتَاعٌ إِلَىٰ حِينٍ ﴿٢٤﴾

25. "ಅಲ್ಲೇ ನಿಮಗೆ ಬದುಕಲಿಕ್ಕೂ ಸಾಯಲಿಕ್ಕೂ ಇದೆ ಮತ್ತು ಕೊನೆಗೆ ಅದರಿಂದಲೇ ನಿಮ್ಮನ್ನು ಎಬ್ಬಿಸಲಾಗುವುದು" ಎಂದೂ ಹೇಳಿದನು.

قَالَ فِيهَا تَحْيَوْنَ وَفِيهَا تَمُوتُونَ
وَمِنْهَا تُخْرَجُونَ ﴿٢٥﴾

ربع

26. ಓ ಆದಮರ ಸಂತತಿಯೇ, ನಾವು ನಿಮ್ಮ ದೇಹದ ಲಜ್ಜಾಭಾಗಗಳನ್ನು ಮರೆಸಲಿಕ್ಕಾಗಿಯೂ ನಿಮ್ಮ ದೇಹದ ರಕ್ಷಣೆ ಹಾಗೂ ಅಲಂಕಾರದ ಸಾಧನವಾಗಿಯೂ ನಿಮ್ಮ ಮೇಲೆ ಉಡುಪನ್ನು ಇಳಿಸಿರುತ್ತೇವೆ. 'ಧರ್ಮನಿಷ್ಠೆ'ಯು (ತಕ್ವಾ) ಅತ್ಯುತ್ತಮ ಉಡುಪಾಗಿರುತ್ತದೆ. ಇದು ಅಲ್ಲಾಹನ ಕುರುಹುಗಳಲ್ಲೊಂದಾಗಿರುತ್ತದೆ. ಜನರು ಇದರಿಂದ ಪಾಠ ಪಡೆಯಲೂ ಬಹುದು.

يَا بَنِي آدَمَ قَدْ أَنزَلْنَا عَلَيْكُمْ لِبَاسًا يُوَارِي
سَوْآتِكُمْ وَرِيشًا ۖ وَلِبَاسُ التَّقْوَىٰ ذَٰلِكَ خَيْرٌ ۚ
ذَٰلِكَ مِنْ آيَاتِ اللَّهِ لَعَلَّهُمْ يَذَّكَّرُونَ ﴿٢٦﴾

27. ಓ ಆದಮರ ಸಂತತಿಯೇ, ಶೈತಾನನು ನಿಮ್ಮ ಮಾತಾಪಿತರನ್ನು ಸ್ವರ್ಗದಿಂದ ತೊಲಗಿಸಿದ್ದ ಹಾಗೂ ಒಬ್ಬರ ಮುಂದೆ ಇನ್ನೊಬ್ಬರ ಲಜ್ಜಾಂಗಗಳು ಗೋಚರಿಸುವಂತೆ ಅವರ ಉಡು ಪನ್ನು ಅವರ ಮೇಲಿಂದ ಕಳಚಿದ್ದ ಹಾಗೆಯೇ ನಿಮ್ಮನ್ನು 'ಪರೀಕ್ಷೆ'ಗೆ ಒಳಪಡಿಸದಿರಲಿ. ಅವನು ಮತ್ತು ಅವನ ಸಂಗಾತಿಗಳು ನೀವು ಅವರನ್ನು ನೋಡಲಾಗದ ಸ್ಥಾನದಿಂದ ನಿಮ್ಮನ್ನು ನೋಡುತ್ತಿದ್ದಾರೆ. ನಾವು ಈ ಶೈತಾನರನ್ನು ಅವಿಶ್ವಾಸಿಗಳ ಸಂರಕ್ಷಕರಾಗಿ ಮಾಡಿದ್ದೇವೆ.

يَا بَنِي آدَمَ لَا يَفْتِنَنَّكُمُ الشَّيْطَانُ كَمَا أَخْرَجَ
أَبَوَيْكُم مِّنَ الْجَنَّةِ يَنزِعُ عَنْهُمَا لِبَاسَهُمَا
لِيُرِيَهُمَا سَوْآتِهِمَا ۗ إِنَّهُ يَرَاكُمْ هُوَ وَقَبِيلُهُ
مِنْ حَيْثُ لَا تَرَوْنَهُمْ ۗ إِنَّا جَعَلْنَا الشَّيَاطِينَ
أَوْلِيَاءَ لِلَّذِينَ لَا يُؤْمِنُونَ ﴿٢٧﴾

28. ಇವರು ಯಾವುದಾದರೊಂದು ಅಶ್ಲೀಲ ಕಾರ್ಯವೆಸಗಿದಾಗ, "ನಾವು ನಮ್ಮ ಪೂರ್ವಿಕರನ್ನು ಇದೇ ಪದ್ಧತಿಯಲ್ಲಿ ಕಂಡಿದ್ದೇವೆ ಮತ್ತು ಅಲ್ಲಾಹನೇ ನಮಗೆ ಹೀಗೆ ಮಾಡುವ ಅಪ್ಪಣೆ ಕೊಟ್ಟಿದ್ದಾನೆ" ಎಂದು ಹೇಳುತ್ತಾರೆ.[6] ಅಲ್ಲಾಹನು ಅಶ್ಲೀಲ ಕಾರ್ಯಗಳನ್ನು ಮಾಡಲು ಎಂದೆಂದಿಗೂ ಅಪ್ಪಣೆ ಕೊಡುವುದಿಲ್ಲವೆಂದು ಇವರೊಡನೆ ಹೇಳಿರಿ. ಅಲ್ಲಾಹನ ಹೆಸರಲ್ಲಿ, ಅವನದ್ದೆಂದು ನಿಮಗೆ ಅರಿವಿಲ್ಲದಂತಹ ಮಾತುಗಳನ್ನು ನೀವಾಡುತ್ತೀರಾ?

وَإِذَا فَعَلُوا فَاحِشَةً قَالُوا وَجَدْنَا عَلَيْهَا
آبَاءَنَا وَاللَّهُ أَمَرَنَا بِهَا ۗ قُلْ إِنَّ اللَّهَ
لَا يَأْمُرُ بِالْفَحْشَاءِ ۖ أَتَقُولُونَ عَلَى اللَّهِ مَا
لَا تَعْلَمُونَ ﴿٢٨﴾

6. ಇದು ಅರಬರಲ್ಲಿದ್ದ ಬೆತ್ತಲಾಗಿ ಪ್ರದಕ್ಷಿಣೆ ಮಾಡುವ ಪದ್ಧತಿಯೆಡೆಗಿರುವ ಸೂಚನೆ. ಅವರಲ್ಲಿ ಹೆಚ್ಚಿನವರು ಹಜ್ಜ್‌ನ ಸಂದರ್ಭದಲ್ಲಿ ಬೆತ್ತಲಾಗಿ ಕಅಬಾದ ಪ್ರದಕ್ಷಿಣೆ ಮಾಡುತ್ತಿದ್ದರು. ಅವರ ಪೈಕಿಯ ಮಹಿಳೆಯರು ಈ ವಿಷಯದಲ್ಲಿ ಪುರುಷರಿಗಿಂತಲೂ ಹೆಚ್ಚು ನಿರ್ಲಜ್ಜರಾಗಿದ್ದರು. ಅವರು ಇದನ್ನೊಂದು ಧಾರ್ಮಿಕ ವಿಧಿ ಮತ್ತು ಪುಣ್ಯಕಾರ್ಯವೆಂದು ಭಾವಿಸಿ ನಿರ್ವಹಿಸುತ್ತಿದ್ದರು.

29. ಓ ಪೈಗಂಬರರೇ; ಇವರೊಡನೆ ಹೇಳಿರಿ, "ನನ್ನ ಪ್ರಭು ನ್ಯಾಯಪರ ಆಜ್ಞೆಯನ್ನಿತ್ತಿದ್ದಾನೆ. ಪ್ರತಿಯೊಂದು ಉಪಾಸನೆಯಲ್ಲಿ ಗಮನವನ್ನು ಸರಿಯಾಗಿರಿಸಬೇಕೆಂದೂ ಧರ್ಮವನ್ನು ಅವನಿಗೇ ಮೀಸಲಾಗಿಟ್ಟು ಅವನನ್ನೇ ಕೂಗಿ ಕರೆಯಬೇಕೆಂದೂ ಅವನ ಆಜ್ಞೆಯಾಗಿರುತ್ತದೆ. ಅವನು ನಿಮ್ಮನ್ನು ಈಗ ಸೃಷ್ಟಿಸಿದಂತೆಯೇ ನೀವು ಪುನಃ ಸೃಷ್ಟಿಸಲ್ಪಡುವಿರಿ."

قُلْ اَمَرَ رَبِّيْ بِالْقِسْطِ ۟ وَاَقِيْمُوْا وُجُوْهَكُمْ عِنْدَ كُلِّ مَسْجِدٍ وَّادْعُوْهُ مُخْلِصِيْنَ لَهُ الدِّيْنَ ۬ كَمَا بَدَاَكُمْ تَعُوْدُوْنَ ۝٢٩

30. ಅವನು ಒಂದು ವಿಭಾಗಕ್ಕಂತು ನೇರ ಮಾರ್ಗವನ್ನು ತೋರಿಸಿರುತ್ತಾನೆ. ಆದರೆ ಇನ್ನೊಂದು ವಿಭಾಗದ ಮೇಲೆ ಪಥಭ್ರಷ್ಟತೆ ಅಂಟಿಕೊಂಡಿದೆ ಏಕೆಂದರೆ, ಅವರು ಅಲ್ಲಾಹನ ಬದಲಿಗೆ ಶೈತಾನರನ್ನು ತಮ್ಮ ರಕ್ಷಕರಾಗಿ ಮಾಡಿಕೊಂಡಿರುತ್ತಾರೆ ಮತ್ತು ತಾವು ನೇರ ಮಾರ್ಗದಲ್ಲಿದ್ದೇವೆಂದು ಅವರು ಭಾವಿಸಿಕೊಂಡಿದ್ದಾರೆ.

فَرِيْقًا هَدٰى وَفَرِيْقًا حَقَّ عَلَيْهِمُ الضَّلٰلَةُ ۬ اِنَّهُمُ اتَّخَذُوا الشَّيٰطِيْنَ اَوْلِيَآءَ مِنْ دُوْنِ اللّٰهِ وَيَحْسَبُوْنَ اَنَّهُمْ مُّهْتَدُوْنَ ۝٣٠

31. ಓ ಆದಮರ ಸಂತತಿಯವರೇ, ಉಪಾಸನೆಯ ಎಲ್ಲ ಸಂದರ್ಭಗಳಲ್ಲೂ ನಿಮ್ಮ 'ಅಲಂಕಾರ'ಗಳಿಂದ ಭೂಷಿತರಾಗಿರಿ.[7] ಉಣ್ಣಿರಿ, ಕುಡಿಯಿರಿ ಮತ್ತು ಮಿತಿ ಮೀರಬೇಡಿರಿ. ಅಲ್ಲಾಹನು ಮಿತಿ ಮೀರುವವರನ್ನು ಮೆಚ್ಚುವುದಿಲ್ಲ.

يٰبَنِيْٓ اٰدَمَ خُذُوْا زِيْنَتَكُمْ عِنْدَ كُلِّ مَسْجِدٍ وَّكُلُوْا وَاشْرَبُوْا وَلَا تُسْرِفُوْا ۚ اِنَّهٗ لَا يُحِبُّ الْمُسْرِفِيْنَ ۝٣١

32. ಓ ಪೈಗಂಬರರೇ, ಅವರೊಡನೆ ಕೇಳಿರಿ, - ಅಲ್ಲಾಹನು ತನ್ನ ದಾಸರಿಗಾಗಿ, ಹೊರತೆಗೆದಿರುವ ವಸ್ತ್ರ ಭೂಷಣಗಳನ್ನೂ ಶುದ್ಧ ಆಹಾರ ಸಾಮಗ್ರಿಗಳನ್ನೂ ನಿಷಿದ್ಧಗೊಳಿಸಿದವನಾರು? ಹೇಳಿರಿ: ಇವೆಲ್ಲ ವಸ್ತುಗಳೂ ಇಹಜೀವನದಲ್ಲೂ ಸತ್ಯವಿಶ್ವಾಸಿಗಳಿಗಾಗಿರುತ್ತವೆ ಮತ್ತು ಪುನರುತ್ಥಾನ ದಿನದಲ್ಲಂತು ಇವು ಕೇವಲ ಅವರಿಗಾಗಿಯೇ ಮೀಸಲಾಗಿರುವುವು. ಇದೇ ರೀತಿಯಲ್ಲಿ ನಾವು ನಮ್ಮ ಸೂಕ್ತಗಳನ್ನು ಜ್ಞಾನವುಳ್ಳವರಿಗೆ ಸುಸ್ಪಷ್ಟವಾಗಿ ವಿವರಿಸುತ್ತೇವೆ.

قُلْ مَنْ حَرَّمَ زِيْنَةَ اللّٰهِ الَّتِيْٓ اَخْرَجَ لِعِبَادِهٖ وَالطَّيِّبٰتِ مِنَ الرِّزْقِ ۭ قُلْ هِيَ لِلَّذِيْنَ اٰمَنُوْا فِي الْحَيٰوةِ الدُّنْيَا خَالِصَةً يَّوْمَ الْقِيٰمَةِ ۭ كَذٰلِكَ نُفَصِّلُ الْاٰيٰتِ لِقَوْمٍ يَّعْلَمُوْنَ ۝٣٢

33. ಓ ಪೈಗಂಬರರೇ, ಇವರೊಡನೆ, ಹೇಳಿರಿ, "ನನ್ನ ಪ್ರಭು ನಿಷಿದ್ಧಗೊಳಿಸಿದ ವಿಷಯಗಳಿವು:- ಲಜ್ಜಾಹೀನ ಕಾರ್ಯಗಳು - ಅವು ಪ್ರತ್ಯಕ್ಷವಾದವುಗಳಿರಲಿ ಅಥವಾ ರಹಸ್ಯವಾದವುಗಳಿರಲಿ- ಪಾಪ ಕಾರ್ಯಗಳು,[8] ಸತ್ಯಕ್ಕೆ ವಿರುದ್ಧವಾದ ಅತಿರೇಕ,[9] ಅಲ್ಲಾಹನು

قُلْ اِنَّمَا حَرَّمَ رَبِّيَ الْفَوَاحِشَ مَا ظَهَرَ مِنْهَا وَمَا بَطَنَ وَالْاِثْمَ وَالْبَغْيَ بِغَيْرِ الْحَقِّ وَاَنْ تُشْرِكُوْا بِاللّٰهِ مَا لَمْ يُنَزِّلْ

7. ಇಲ್ಲಿ ಅಲಂಕಾರವೆಂದರೆ ಪೂರ್ಣ ಉಡುಪಾಗಿದೆ. ದೇವನ ಆರಾಧನೆಗೆ ನಿಂತುಕೊಳ್ಳುವಾಗ ಸತ್ರ್ (ಮರೆಸಲೇ ಬೇಕಾದ ಲಜ್ಜಾಂಗಗಳು) ಮಾತ್ರ ಮುಚ್ಚಿಕೊಂಡರೆ ಸಾಲದು. ಸಾಧ್ಯವಿರುವಷ್ಟರ ಮಟ್ಟಿಗೆ ಪೂರ್ಣ ಉಡುಪನ್ನು ಧರಿಸುವುದೂ ಅವಶ್ಯಕ. ಅದು ಲಜ್ಜಾಂಗಗಳನ್ನೂ ಮರೆಸಬೇಕು ಅಂತೆಯೇ ಅಲಂಕಾರವೂ ಆಗಿರಬೇಕು. ಒಬ್ಬನು ಯಾವನಾದರೂ ಸನ್ಮಾನ್ಯ ವ್ಯಕ್ತಿಯನ್ನು ಭೇಟಿಯಾಗಲು ಹೋಗುವಾಗ ಉತ್ತಮ ಉಡುಪು ಧರಿಸುವಂತೆ ಆರಾಧನೆಯ ಸಂದರ್ಭದಲ್ಲೂ ಉತ್ತಮ ಉಡುಪು ಧರಿಸಬೇಕು.

8. ಮೂಲದಲ್ಲಿ 'ಇಸ್ಮ್' ಎಂಬ ಪದ ಪ್ರಯೋಗವಾಗಿದೆ. ಅದರ ಮೂಲಾರ್ಥ 'ಕುಂದು-ಕೊರತೆ' ಎಂದಾಗಿದೆ. ಅರ್ಥಾತ್ ಅಲ್ಲಾಹನ ಅನುಸರಣೆ ಮತ್ತು ಆಜ್ಞಾಪಾಲನೆಯಲ್ಲಿ ಲೋಪ ಮಾಡುವುದು.

9. ಅರ್ಥಾತ್- ತನ್ನ ಮೇರೆಯನ್ನು ಮೀರಿ ತನಗೆ ಹಕ್ಕಿಲ್ಲದಂತಹ ಸೀಮೆಯನ್ನು ಪ್ರವೇಶಿಸುವುದು.

ಯಾರ ಪರವಾಗಿ ಯಾವುದೇ ಆಧಾರ ಅವತೀರ್ಣಗೊಳಿಸಿಲ್ಲವೋ ಅಂಥವರನ್ನು ಅವನೊಂದಿಗೆ ಸಹಭಾಗಿಯಾಗಿಸುವುದು ಮತ್ತು (ವಾಸ್ತವದಲ್ಲಿ ಅಲ್ಲಾಹನೇ ಹೇಳಿರುತ್ತಾನೆಂದು) ನಿಮಗೆ ತಿಳುವಳಿಕೆ ಇಲ್ಲದಿರುವ ಮಾತನ್ನು ಅಲ್ಲಾಹನ ಹೆಸರಲ್ಲಿ ಹೇಳುವುದು.

بِهٖ سُلْطٰنًا وَّاَنْ تَقُوْلُوْا عَلَى اللّٰهِ مَا لَا تَعْلَمُوْنَ ٣٣

34. ಪ್ರತಿಯೊಂದು ಜನಾಂಗಕ್ಕೆ ಒಂದು ಕಾಲಾವಧಿ ನಿಶ್ಚಿತವಿದೆ. ಅದರ ಕಾಲಾವಧಿಯು ಮುಗಿದಾಗ ಒಂದು ಕ್ಷಣ ಹಿಂದೆ ಅಥವಾ ಮುಂದೆ ಆಗುವುದಿಲ್ಲ.

وَلِكُلِّ اُمَّةٍ اَجَلٌ ۚ فَاِذَا جَآءَ اَجَلُهُمْ لَا يَسْتَاْخِرُوْنَ سَاعَةً وَّلَا يَسْتَقْدِمُوْنَ ٣٤

35. ಓ ಆದಮರ ಸಂತತಿಯವರೇ, ನಮ್ಮ ವಚನಗಳನ್ನು ಹೇಳಿ ಕೊಡುತ್ತಿರುವ ಸಂದೇಶವಾಹಕರು ಸ್ವತಃ ನಿಮ್ಮ ಮಧ್ಯೆಯಿಂದಲೇ ನಿಮ್ಮ ಬಳಿಗೆ ಬಂದರೆ, ಆಜ್ಞೋಲ್ಲಂಘನೆ ಮಾಡದವನು ಹಾಗೂ ತನ್ನನ್ನು ತಾನೇ ಸಂಸ್ಕರಿಸಿಕೊಳ್ಳುವವನಿಗೆ ಯಾವುದೇ ಭಯ ಮತ್ತು ವ್ಯಥೆಯ ಸಂಭವವೇ ಇಲ್ಲವೆಂಬುದನ್ನು ಅರಿತು ಕೊಳ್ಳಿರಿ (ಎಂಬ ವಿಷಯವನ್ನು ಅಲ್ಲಾಹನು ಸೃಷ್ಟಿಯ ಆರಂಭದಲ್ಲೇ ಸ್ಪಷ್ಟವಾಗಿ ಹೇಳಿದ್ದನು.)

يٰبَنِيْٓ اٰدَمَ اِمَّا يَاْتِيَنَّكُمْ رُسُلٌ مِّنْكُمْ يَقُصُّوْنَ عَلَيْكُمْ اٰيٰتِيْ ۙ فَمَنِ اتَّقٰى وَاَصْلَحَ فَلَا خَوْفٌ عَلَيْهِمْ وَلَا هُمْ يَحْزَنُوْنَ ٣٥

36. ನಮ್ಮ ವಚನಗಳನ್ನು ಸುಳ್ಳಾಗಿಸುವವರು ಮತ್ತು ಅವುಗಳ ವಿರುದ್ಧ ಉದ್ಧಟತನ ತೋರುವವರೇ ನರಕಾಗ್ನಿಯವರಾಗಿದ್ದು ಅಲ್ಲಿ ಅವರು ಸದಾ ಕಾಲ ವಾಸಿಸುವರು.

وَالَّذِيْنَ كَذَّبُوْا بِاٰيٰتِنَا وَاسْتَكْبَرُوْا عَنْهَآ اُولٰٓئِكَ اَصْحٰبُ النَّارِ ۚ هُمْ فِيْهَا خٰلِدُوْنَ ٣٦

37. ಮಿಥ್ಯಾರೋಪಗಳನ್ನು ಸೃಷ್ಟಿಸಿ ಅಲ್ಲಾಹನ ಮೇಲೆ ಹೊರಿಸುವವನಿಗಿಂತ ಅಥವಾ ಅಲ್ಲಾಹನ ಸತ್ಯವಚನಗಳನ್ನು ಸುಳ್ಳಾಗಿಸುವವನಿಗಿಂತ ದೊಡ್ಡ ಅಕ್ರಮಿ ಇನ್ನಾರು? ಇಂಥವರು ನಮ್ಮಿಂದ ಕಳುಹಿಸಲ್ಪಟ್ಟ ನಮ್ಮ ದೇವಚರರು ಅವರ ಪ್ರಾಣಹರಣ ಮಾಡಲು ತಲಪುವ ಕ್ಷಣದ ವರೆಗೂ ವಿಧಿಲಿಖಿತದಂತೆ ತಮ್ಮ ಪಾಲನ್ನು ಪಡೆಯುತ್ತಲೇ ಇರುವರು.[10] ಆಗ ದೇವಚರರು ಅವರೊಡನೆ, "ನೀವು ಅಲ್ಲಾಹನ ಬದಲಿಗೆ ಕೂಗಿ ಕರೆಯುತ್ತಿದ್ದ ನಿಮ್ಮ ಆರಾಧ್ಯರು ಈಗೆಲ್ಲಿದ್ದಾರೆ?" ಎಂದು ಕೇಳುವರು- ಅವರು, "ಅವರೆಲ್ಲರೂ ಕಾಣೆಯಾಗಿದ್ದಾರೆ" ಎನ್ನುವರು. ನಾವು ನಿಜಕ್ಕೂ ಸತ್ಯಧಿಕ್ಕಾರಿಗಳಾಗಿದ್ದೆವೆಂದು ಅವರು ತಮ್ಮ ವಿರುದ್ಧ ತಾವೇ ಸಾಕ್ಷಿ ಹೇಳುವರು.

فَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِاٰيٰتِهٖ ۗ اُولٰٓئِكَ يَنَالُهُمْ نَصِيْبُهُمْ مِّنَ الْكِتٰبِ ۗ حَتّٰٓى اِذَا جَآءَتْهُمْ رُسُلُنَا يَتَوَفَّوْنَهُمْ ۙ قَالُوْٓا اَيْنَ مَا كُنْتُمْ تَدْعُوْنَ مِنْ دُوْنِ اللّٰهِ ۗ قَالُوْا ضَلُّوْا عَنَّا وَشَهِدُوْا عَلٰٓى اَنْفُسِهِمْ اَنَّهُمْ كَانُوْا كٰفِرِيْنَ ٣٧

10. ಅರ್ಥಾತ್- ಅವರಿಗೆ ನಿಗದಿ ಪಡಿಸಲಾಗಿರುವಷ್ಟು ಕಾಲ ಅವರು ಲೋಕದಲ್ಲಿರುವರು ಮತ್ತು ಮೇಲ್ನೋಟಕ್ಕೆ ಒಳ್ಳೆಯ ಅಥವಾ ಕೆಟ್ಟ ಜೀವಿತವೆಂದು ತೋರುವ ತಮ್ಮ ಪಾಲಿನ ಜೀವನವನ್ನು ಅವರು ನಡೆಸುವರು.

38. ನಿಮಗಿಂತ ಮುಂಚೆ ಗತಿಸಿಹೋದ 'ಯಕ್ಷ ಮತ್ತು ಮಾನವ' ಸಮುದಾಯಗಳು ಪ್ರವೇಶಿಸಿದ್ದ ನರಕಾಗ್ನಿಯಲ್ಲೇ ನೀವೂ ಪ್ರವೇಶಿಸಿರೆಂದು ಅಲ್ಲಾಹನು ಹೇಳುವನು. ಪ್ರತಿಯೊಂದು ಸಮುದಾಯವೂ ನರಕಾಗ್ನಿಯೊಳಗೆ ಪ್ರವೇಶಿಸುವಾಗ ತನಗಿಂತ ಮುಂಚಿನ ಸಮುದಾಯವನ್ನು ಶಪಿಸುತ್ತ ಪ್ರವೇಶಿಸುವುದು. ಹೀಗೆ ಎಲ್ಲರೂ ಅಲ್ಲಿ ಒಟ್ಟು ಸೇರಿದಾಗ ಅನಂತರದ ಪ್ರತಿಯೊಂದು ಸಮುದಾಯವು ತನಗಿಂತ ಮುಂಚಿನ ಸಮುದಾಯದ ಬಗ್ಗೆ, "ಓ ನಮ್ಮ ಪ್ರಭೂ, ನಮ್ಮನ್ನು ಪಥಭ್ರಷ್ಟರಾಗಿ ಮಾಡಿದವರು ಇವರೇ ಆಗಿದ್ದರು. ಆದುದರಿಂದ ಇವರಿಗೆ ನರಕಾಗ್ನಿಯ ಇಮ್ಮಡಿ ಯಾತನೆ ನೀಡು" ಎಂದು ಹೇಳುವುದು, "ಪ್ರತಿಯೊಂದಕ್ಕೂ ಇಮ್ಮಡಿ ಯಾತನೆಯೇ ಇದೆ. ಆದರೆ ನಿಮಗೆ ತಿಳಿದಿರುವುದಿಲ್ಲ" ಎಂಬ ಉತ್ತರ ಸಿಗುವುದು.[11]

قَالَ ادْخُلُوا فِي أُمَمٍ قَدْ خَلَتْ مِنْ قَبْلِكُمْ مِنَ الْجِنِّ وَالْإِنْسِ فِي النَّارِ كُلَّمَا دَخَلَتْ أُمَّةٌ لَعَنَتْ أُخْتَهَا حَتَّى إِذَا ادَّارَكُوا فِيهَا جَمِيعًا قَالَتْ أُخْرَاهُمْ لِأُولَاهُمْ رَبَّنَا هَؤُلَاءِ أَضَلُّونَا فَآتِهِمْ عَذَابًا ضِعْفًا مِنَ النَّارِ قَالَ لِكُلٍّ ضِعْفٌ وَلَكِنْ لَا تَعْلَمُونَ ﴿٣٨﴾

39. ಮೊದಲಿನ ಸಮುದಾಯವು ಅನಂತರದ ಸಮುದಾಯದೊಡನೆ, "(ನಾವು ಅಪರಾಧಿಗಳಾಗಿದ್ದರೆ) ನಿಮಗೆ ನಮ್ಮ ಮೇಲಿದ್ದ ಶ್ರೇಷ್ಠತೆಯಾದರೂ ಏನು? ಈಗ ನಿಮ್ಮ ಗಳಿಕೆಯ ಫಲವಾಗಿ ಯಾತನೆಯ ಸವಿಯನ್ನು ಅನುಭವಿಸಿರಿ" ಎನ್ನುವುದು.

وَقَالَتْ أُولَاهُمْ لِأُخْرَاهُمْ فَمَا كَانَ لَكُمْ عَلَيْنَا مِنْ فَضْلٍ فَذُوقُوا الْعَذَابَ بِمَا كُنْتُمْ تَكْسِبُونَ ﴿٣٩﴾

40. ನಮ್ಮ ವಚನಗಳನ್ನು ಸುಳ್ಳಾಗಿಸಿದವರಿಗೆ ಮತ್ತು ಅವುಗಳ ವಿರುದ್ಧ ಉದ್ಧಟತನ ತೋರಿದವರಿಗೆ ಗಗನ ದ್ವಾರಗಳು ಎಷ್ಟು ಮಾತ್ರಕ್ಕೂ ತೆರೆಯಲ್ಪಡಲಾರವು ಎಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ. ಅವರ ಸ್ವರ್ಗ ಪ್ರವೇಶವು ಸೂಜಿಯ ರಂಧ್ರದೊಳಗೆ ಒಂಟೆ ಪ್ರವೇಶಿಸುವಷ್ಟೇ ಅಸಂಭವ. ಅಪರಾಧಿಗಳಿಗೆ ನಮ್ಮಲ್ಲಿ ಇಂತಹ ಪ್ರತಿಫಲವೇ ಸಿಗುತ್ತದೆ.

إِنَّ الَّذِينَ كَذَّبُوا بِآيَاتِنَا وَاسْتَكْبَرُوا عَنْهَا لَا تُفَتَّحُ لَهُمْ أَبْوَابُ السَّمَاءِ وَلَا يَدْخُلُونَ الْجَنَّةَ حَتَّى يَلِجَ الْجَمَلُ فِي سَمِّ الْخِيَاطِ وَكَذَلِكَ نَجْزِي الْمُجْرِمِينَ ﴿٤٠﴾

41. ಅವರಿಗೆ ನರಕದ್ದೇ ಹಾಸಿಗೆ ಮತ್ತು ನರಕದ್ದೇ ಹೊದಿಕೆ ಇರುವುದು. ನಾವು ಅಕ್ರಮಿಗಳಿಗೆ ಕೊಡುವ ಪ್ರತಿಫಲ ಇದುವೇ ಆಗಿರುತ್ತದೆ.

لَهُمْ مِنْ جَهَنَّمَ مِهَادٌ وَمِنْ فَوْقِهِمْ غَوَاشٍ وَكَذَلِكَ نَجْزِي الظَّالِمِينَ ﴿٤١﴾

42. ಇದಕ್ಕೆ ವ್ಯತಿರಿಕ್ತವಾಗಿ ನಮ್ಮ ವಚನಗಳನ್ನು ಸ್ವೀಕರಿಸಿಕೊಂಡವರು ಮತ್ತು ಸತ್ಕರ್ಮ ಕೈಗೊಂಡವರು- ನಾವು ಪ್ರತಿಯೊಬ್ಬನನ್ನು ಅವನ ಶಕ್ತಿಗನುಸಾರ ಮಾತ್ರ ಹೊಣೆಗಾರನನ್ನಾಗಿ ಮಾಡುತ್ತೇವೆ- ಅವರು ಸ್ವರ್ಗದವರು. ಅಲ್ಲಿ ಅವರು ಸದಾಕಾಲ ವಾಸಿಸುವರು.

وَالَّذِينَ آمَنُوا وَعَمِلُوا الصَّالِحَاتِ لَا نُكَلِّفُ نَفْسًا إِلَّا وُسْعَهَا أُولَئِكَ أَصْحَابُ الْجَنَّةِ هُمْ فِيهَا خَالِدُونَ ﴿٤٢﴾

11. ಅರ್ಥಾತ್- ಸ್ವತಃ ಪಥಭ್ರಷ್ಟತೆಯನ್ನು ನೆಚ್ಚಿಕೊಂಡಿದ್ದಕ್ಕಾಗಿ ಒಂದು ವಿಧದ ಶಿಕ್ಷೆಯಾದರೆ ಇತರರನ್ನೂ ಪಥಭ್ರಷ್ಟಗೊಳಿಸಿದ್ದಕ್ಕಾಗಿ ಮತ್ತೊಂದು ವಿಧದ ಶಿಕ್ಷೆ. ತಮ್ಮ ಅಪರಾಧಗಳಿಗಾಗಿ ಒಂದು ಶಿಕ್ಷೆಯಾದರೆ ಇತರರಿಗೆ ಅಪರಾಧ ಕೃತ್ಯಗಳ ಬಳುವಳಿಯನ್ನು ಬಿಟ್ಟು ಬಂದಿದ್ದಕ್ಕಾಗಿ ಮತ್ತೊಂದು ಶಿಕ್ಷೆ.

43. ಅವರ ಹೃದಯಗಳಲ್ಲಿ ಒಬ್ಬರ ವಿರುದ್ಧ ಇನ್ನೊಬ್ಬರಿಗಿದ್ದ ಕ್ಲೇಶಗಳನ್ನು ನಾವು ತೆಗೆದುಬಿಡುವೆವು. ಅವರ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು, "ನಮಗೆ ಈ ಮಾರ್ಗವನ್ನು ತೋರಿಸಿ ಕೊಟ್ಟ ಅಲ್ಲಾಹನಿಗೇ ಸರ್ವಸ್ತುತಿಯು. ಅಲ್ಲಾಹನು ನಮಗೆ ಮಾರ್ಗ ದರ್ಶನ ನೀಡದಿರುತ್ತಿದ್ದರೆ, ನಾವು ಸ್ವಯಂ ಮಾರ್ಗದರ್ಶನ ಹೊಂದುತ್ತಿರಲಿಲ್ಲ. ನಮ್ಮ ಪ್ರಭುವಿನಿಂದ ಕಳುಹಿಸಲ್ಪಟ್ಟ ಸಂದೇಶ ವಾಹಕರು ನಿಜಕ್ಕೂ ಸತ್ಯವನ್ನೇ ಪಡಕೊಂಡು ಬಂದಿದ್ದರು" ಎಂದು ಹೇಳುವರು. ಆಗ, "ನೀವು ವಾರೀಸುದಾರರಾಗಿ ಮಾಡಲ್ಪಟ್ಟಿರುವ ಈ ಸ್ವರ್ಗವು ನೀವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವಾಗಿ ನಿಮಗೆ ಸಿಕ್ಕಿದೆ" ಎಂಬ ಧ್ವನಿ ಕೇಳಿ ಬರುವುದು.

وَنَزَعْنَا مَا فِي صُدُورِهِمْ مِنْ غِلٍّ تَجْرِي مِنْ تَحْتِهِمُ الْأَنْهَارُ ۖ وَقَالُوا الْحَمْدُ لِلَّهِ الَّذِي هَدَانَا لِهَٰذَا وَمَا كُنَّا لِنَهْتَدِيَ لَوْلَا أَنْ هَدَانَا اللَّهُ ۖ لَقَدْ جَاءَتْ رُسُلُ رَبِّنَا بِالْحَقِّ ۖ وَنُودُوا أَنْ تِلْكُمُ الْجَنَّةُ أُورِثْتُمُوهَا بِمَا كُنْتُمْ تَعْمَلُونَ ﴿٤٣﴾

44. ಸ್ವರ್ಗದವರು ನರಕದವರನ್ನು ಕೂಗಿ ಹೀಗೆ ಹೇಳುವರು, "ನಮ್ಮ ಪ್ರಭು ನಮಗೆ ನೀಡಿದ್ದ ಸಕಲ ವಾಗ್ದಾನಗಳು ಸರಿಯಾಗಿರುವುದನ್ನು ನಾವು ಕಂಡುಕೊಂಡೆವು. ನಿಮ್ಮ ಪ್ರಭು ನಿಮಗೆ ಮಾಡಿದ್ದ ವಾಗ್ದಾನಗಳು ಸರಿಯಾಗಿರುವುದನ್ನು ನೀವು ಕಂಡುಕೊಂಡಿರಾ?" ಅವರು ಹೌದೆನ್ನುವರು. ಆಗ ಘೋಷಿಸುವವನೊಬ್ಬನು ಅವರ ನಡುವೆ ಹೀಗೆ ಘೋಷಿಸುವನು, ಅಕ್ರಮಿಗಳ ಮೇಲೆ ಅಲ್ಲಾಹನ ಶಾಪವಿದೆ.

وَنَادَىٰ أَصْحَابُ الْجَنَّةِ أَصْحَابَ النَّارِ أَنْ قَدْ وَجَدْنَا مَا وَعَدَنَا رَبُّنَا حَقًّا فَهَلْ وَجَدْتُمْ مَا وَعَدَ رَبُّكُمْ حَقًّا ۖ قَالُوا نَعَمْ ۚ فَأَذَّنَ مُؤَذِّنٌ بَيْنَهُمْ أَنْ لَعْنَةُ اللَّهِ عَلَى الظَّالِمِينَ ﴿٤٤﴾

45. ಅವರು ಅಲ್ಲಾಹನ ಮಾರ್ಗದಿಂದ ಜನರನ್ನು ತಡೆಯುತ್ತಿದ್ದರು, ಅದನ್ನು ಜಟಿಲಗೊಳಿಸಲು ಯತ್ನಿಸುತ್ತಿದ್ದರು ಹಾಗೂ ಪರ ಲೋಕವನ್ನು ನಿರಾಕರಿಸುತ್ತಿದ್ದರು.

الَّذِينَ يَصُدُّونَ عَنْ سَبِيلِ اللَّهِ وَيَبْغُونَهَا عِوَجًا وَهُمْ بِالْآخِرَةِ كَافِرُونَ ﴿٤٥﴾

46. ಇವೆರಡೂ ವರ್ಗಗಳ ಮಧ್ಯೆ ಒಂದು ತೆರೆಯಿರುವುದು. ಅದರ ಶಿಖರ(ಅಲ್‌ರಾಫ್)ಗಳಲ್ಲಿ ಇನ್ನು ಕೆಲವರಿರುವರು. ಇವರು ಪ್ರತಿಯೊಬ್ಬನನ್ನು ಅವನ ಮುಖ ಮುದ್ರೆಯಿಂದಲೇ ಗುರುತು ಹಿಡಿಯುವರು ಮತ್ತು ಸ್ವರ್ಗದವರೊಡನೆ, "ನಿಮಗೆ ಶುಭವಾಗಲಿ" ಎಂದು ಕೂಗಿ ಹೇಳುವರು. ಇವರಿನ್ನೂ ಸ್ವರ್ಗದೊಳಗೆ ಪ್ರವೇಶಿಸಲಿಲ್ಲ. ಆದರೆ ಅದರ ಉಮೇದುವಾರರಾಗಿರುವರು.[12]

وَبَيْنَهُمَا حِجَابٌ ۚ وَعَلَى الْأَعْرَافِ رِجَالٌ يَعْرِفُونَ كُلًّا بِسِيمَاهُمْ ۚ وَنَادَوْا أَصْحَابَ الْجَنَّةِ أَنْ سَلَامٌ عَلَيْكُمْ ۚ لَمْ يَدْخُلُوهَا وَهُمْ يَطْمَعُونَ ﴿٤٦﴾

47. ಇವರ ದೃಷ್ಟಿಗಳು ನರಕದ ಕಡೆಗೆ ತಿರುಗಿದಾಗ ಇವರು, "ಓ ನಮ್ಮ ಪ್ರಭೂ, ನಮ್ಮನ್ನು ಈ ಅಕ್ರಮಿಗಳೊಂದಿಗೆ ಸೇರಿಸಬೇಡ" ಎಂದು ಹೇಳುವರು.

وَإِذَا صُرِفَتْ أَبْصَارُهُمْ تِلْقَاءَ أَصْحَابِ النَّارِ قَالُوا رَبَّنَا لَا تَجْعَلْنَا مَعَ الْقَوْمِ الظَّالِمِينَ ﴿٤٧﴾

12. 'ಅಸ್‌ಹಾಬುಲ್ ಅಲ್‌ರಾಫ್' ಅಥವಾ ಶಿಖರದವರು. ಅಂದರೆ ಸ್ವರ್ಗ ಪ್ರವೇಶಿಸಲು ಸಾಧ್ಯವಾಗುವಷ್ಟು ಸಕಾರಾತ್ಮಕ ಅಂಶಗಳನ್ನಾಗಲಿ, ನರಕಕ್ಕೆ ತಳ್ಳಿ ಬಿಡಲಾಗುವಷ್ಟು ನಕಾರಾತ್ಮಕ ಅಂಶಗಳನ್ನಾಗಲಿ ಹೊಂದಿರದವರು. ಆದ್ದರಿಂದ ಅವರು ಸ್ವರ್ಗ ಮತ್ತು ನರಕದ ಒಂದು ಸರಹದ್ದಿನಲ್ಲಿದ್ದು ಅಲ್ಲಾಹನ ಅನುಗ್ರಹದಿಂದ ತಮಗೂ ಸ್ವರ್ಗ ಪ್ರಾಪ್ತವಾಗಬಹುದು ಎಂಬ ನಿರೀಕ್ಷೆಯಲ್ಲಿರುವರು.

48. ಅನಂತರ ಈ 'ಶಿಖರದವರು' ನರಕದ ಕೆಲವು ಕುಖ್ಯಾತ ಜನರನ್ನು ಅವರ ಲಕ್ಷಣಗಳಿಂದಲೇ ಗುರುತು ಹಿಡಿದು, "ಇಂದು ನಿಮ್ಮ ಕೂಟಗಳೂ ನೀವು ಅಹಂಕಾರ ಪಡುತ್ತಿದ್ದ ವಸ್ತು ಒಡವೆಗಳೂ ನಿಮಗೆ ಯಾವ ಕೆಲಸಕ್ಕೂ ಬಾರದಾದವು ಎಂಬುದನ್ನು ನೀವು ಕಂಡುಕೊಂಡಿರಿ.

وَنَادَىٰ أَصْحَابُ الْأَعْرَافِ رِجَالًا يَعْرِفُونَهُم بِسِيمَاهُمْ قَالُوا مَا أَغْنَىٰ عَنكُمْ جَمْعُكُمْ وَمَا كُنتُمْ تَسْتَكْبِرُونَ ﴿٤٨﴾

49. ಇವರಿಗೆ ಅಲ್ಲಾಹನು ತನ್ನ ಕೃಪೆಯಿಂದ ಏನನ್ನೂ ನೀಡಲಾರನೆಂದು ನೀವು ಆಣೆ ಹಾಕಿ ಹೇಳುತ್ತಿದ್ದುದು ಈ ಸ್ವರ್ಗವಾಸಿಗಳನ್ನು ಕುರಿತಾಗಿಯೇ ಅಲ್ಲವೇ? ಇಂದು "ಸ್ವರ್ಗದಲ್ಲಿ ಪ್ರವೇಶಿಸಿರಿ. ನಿಮಗೆ ಭಯವೂ ಇಲ್ಲ ವ್ಯಥೆಯೂ ಇಲ್ಲ" ಎಂದು ಹೇಳಿದುದು ಇವರೊಡನೆಯೇ ಅಲ್ಲವೇ?" ಎಂದು ಕೂಗಿ ಹೇಳುವರು.

أَهَٰؤُلَاءِ الَّذِينَ أَقْسَمْتُمْ لَا يَنَالُهُمُ اللَّهُ بِرَحْمَةٍ ۚ ادْخُلُوا الْجَنَّةَ لَا خَوْفٌ عَلَيْكُمْ وَلَا أَنتُمْ تَحْزَنُونَ ﴿٤٩﴾

50-51. ನರಕದವರು ಸ್ವರ್ಗದವರನ್ನು ಕೂಗಿ, "ನಮ್ಮ ಮೇಲೆ ಒಂದಿಷ್ಟು ನೀರನ್ನು ಸುರಿದುಬಿಡಿರಿ ಅಥವಾ ಅಲ್ಲಾಹನು ನಿಮಗೆ ಕೊಟ್ಟ ಆಹಾರದಿಂದಲೇ ತುಸು ಎಸೆದು ಬಿಡಿರಿ" ಎನ್ನುವರು. ಆಗ, "ಅಲ್ಲಾಹನ ಧರ್ಮವನ್ನು ಆಟವನ್ನಾಗಿಯೂ ವಿನೋದವನ್ನಾಗಿಯೂ ಮಾಡಿಕೊಂಡಿದ್ದ ಹಾಗೂ ಭೂಲೋಕದ ಜೀವನದಿಂದಾಗಿ ವಂಚನೆಗೊಳಪಟ್ಟಿದ್ದ ಸತ್ಯನಿಷೇಧಿಗಳಿಗೆ ಅಲ್ಲಾಹನು ಇವೆರಡು ವಸ್ತುಗಳನ್ನೂ ನಿಷಿದ್ಧಗೊಳಿಸಿರುತ್ತಾನೆ. ಅವರು ಇಂದಿನ ಭೇಟಿಯನ್ನು ಮರೆತುಬಿಟ್ಟಂತೆಯೇ ನಮ್ಮ ದೃಷ್ಟಾಂತಗಳನ್ನು ನಿರಾಕರಿಸುತ್ತಿದ್ದುದರಿಂದ ಇಂದು ನಾವೂ ಅವರನ್ನು ಮರೆತುಬಿಡುವೆವು ಎಂದು ಅಲ್ಲಾಹನು ಹೇಳುತ್ತಾನೆ" ಎಂದು ಅವರು ಉತ್ತರ ಕೊಡುವರು.

وَنَادَىٰ أَصْحَابُ النَّارِ أَصْحَابَ الْجَنَّةِ أَنْ أَفِيضُوا عَلَيْنَا مِنَ الْمَاءِ أَوْ مِمَّا رَزَقَكُمُ اللَّهُ ۚ قَالُوا إِنَّ اللَّهَ حَرَّمَهُمَا عَلَى الْكَافِرِينَ ﴿٥٠﴾ الَّذِينَ اتَّخَذُوا دِينَهُمْ لَهْوًا وَلَعِبًا وَغَرَّتْهُمُ الْحَيَاةُ الدُّنْيَا ۚ فَالْيَوْمَ نَنسَاهُمْ كَمَا نَسُوا لِقَاءَ يَوْمِهِمْ هَٰذَا وَمَا كَانُوا بِآيَاتِنَا يَجْحَدُونَ ﴿٥١﴾

52. ನಾವು ಜ್ಞಾನದ ಆಧಾರದಲ್ಲಿ ಸವಿಸ್ತಾರಗೊಳಿಸಿರುವ ಹಾಗೂ ವಿಶ್ವಾಸವಿಡುವವರಿಗೆ ಮಾರ್ಗದರ್ಶನ ಮತ್ತು ಕರುಣೆಯಾಗಿರುವ ಗ್ರಂಥವನ್ನು ಇವರ ಬಳಿಗೆ ತಂದಿದ್ದೇವೆ.

وَلَقَدْ جِئْنَاهُم بِكِتَابٍ فَصَّلْنَاهُ عَلَىٰ عِلْمٍ هُدًى وَرَحْمَةً لِّقَوْمٍ يُؤْمِنُونَ ﴿٥٢﴾

53. ಇನ್ನೇನು ಈ ಗ್ರಂಥವು ತಿಳಿಸುತ್ತಿರುವ ಪರಿಣಾಮವು ತೋರಿ ಬರಬೇಕೆಂಬುದರ ಹೊರತು ಬೇರೇನನ್ನಾದರೂ ಇವರು ನಿರೀಕ್ಷಿಸುತ್ತಿರುವರೇ? ಆ ಪರಿಣಾಮವು ಮುಂದೆ ಬಂದು ಬಿಟ್ಟಂದು, ಈ ಹಿಂದೆ ಅದನ್ನು ಅವಗಣಿಸಿದ್ದವರೇ ಹೀಗೆ

هَلْ يَنظُرُونَ إِلَّا تَأْوِيلَهُ ۚ يَوْمَ يَأْتِي تَأْوِيلُهُ يَقُولُ الَّذِينَ نَسُوهُ مِن قَبْلُ قَدْ جَاءَتْ رُسُلُ رَبِّنَا بِالْحَقِّ فَهَل لَّنَا

ಹೇಳುವರು: "ನಿಜಕ್ಕೂ ನಮ್ಮ ಪ್ರಭುವಿನ ಸಂದೇಶವಾಹಕರು ಸತ್ಯ ಸಹಿತವೇ ಬಂದಿದ್ದರು. ಇನ್ನು ನಮ್ಮ ಪರವಾಗಿ ಶಿಫಾರಸು ಮಾಡಲು ನಮಗೆ ಯಾರಾದರೂ ಶಿಫಾರಸುದಾರರು ಸಿಗುವರೇ? ಅಥವಾ ನಾವು ಹಿಂದೆ ಮಾಡುತ್ತಿದ್ದುದರ ಬದಲಿಗೆ ಇನ್ನು ಬೇರೆ ರೀತಿಯಿಂದ ಕಾರ್ಯವೆಸಗಿ ತೋರಿಸಲಿಕ್ಕಾಗಿ ನಮ್ಮನ್ನು ಇನ್ನೊಮ್ಮೆ ಹಿಂದಕ್ಕೆ ಕಳುಹಿಸಿ ಬಿಡಲಿ."- ಅವರು ತಮ್ಮನ್ನು ತಾವೇ ನಷ್ಟಕ್ಕೆ ಗುರಿಪಡಿಸಿಕೊಂಡರು. ಅವರು ಸೃಷ್ಟಿಸಿಕೊಂಡಿದ್ದ ಎಲ್ಲ ಸುಳ್ಳುಗಳೂ ಇಂದು ಅವರಿಂದ ಮಾಯವಾದುವು.

مِنْ شُفَعَآءَ فَيَشْفَعُوْا لَنَآ اَوْ نُرَدُّ فَنَعْمَلَ غَيْرَ الَّذِىْ كُنَّا نَعْمَلُ ؕ قَدْ خَسِرُوْٓا اَنْفُسَهُمْ وَضَلَّ عَنْهُمْ مَّا كَانُوْا يَفْتَرُوْنَ ﴿۵۳﴾ ع

54. ವಾಸ್ತವದಲ್ಲಿ ನಿಮ್ಮ ಪ್ರಭು ಅಲ್ಲಾಹನೇ ಆಗಿರುತ್ತಾನೆ. ಅವನು ಭೂಮಿ-ಆಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿದನು.[13] ತರುವಾಯ ತನ್ನ 'ವಿಶ್ವ ಸಾಮ್ರಾಜ್ಯ ಪೀಠ'ದಲ್ಲಿ (ಅರ್ಶ್) ವಿರಾಜಮಾನನಾದನು.[14] ಅವನು ಇರುಳನ್ನು ಹಗಲಿನ ಮೇಲೆ ಹರಡುತ್ತಾನೆ ಮತ್ತು ರಾತ್ರೆಯನ್ನು ಹಗಲು ಹಿಂಬಾಲಿಸಿಕೊಂಡು ಓಡಿ ಬರುತ್ತದೆ. ಅವನು ಸೂರ್ಯನನ್ನೂ ಚಂದ್ರನನ್ನೂ ನಕ್ಷತ್ರಗಳನ್ನೂ ಸೃಷ್ಟಿಸಿದನು. ಎಲ್ಲವೂ ಅವನ ಆಜ್ಞಾಧೀನವಾಗಿವೆ. ಎಚ್ಚರಿಕೆ! ಅವನದೇ ಸೃಷ್ಟಿ. ಅವನದೇ ಅಪ್ಪಣೆ.[15] ಸರ್ವಲೋಕಗಳ ಒಡೆಯನೂ ಪ್ರಭುವೂ ಆಗಿರುವ ಅಲ್ಲಾಹನುಮಹಾ ಸಮೃದ್ಧನು.[16]

اِنَّ رَبَّكُمُ اللّٰهُ الَّذِىْ خَلَقَ السَّمٰوٰتِ وَالْاَرْضَ فِىْ سِتَّةِ اَيَّامٍ ثُمَّ اسْتَوٰى عَلَى الْعَرْشِ ۟ يُغْشِى الَّيْلَ النَّهَارَ يَطْلُبُهٗ حَثِيْثًا ۙ وَّالشَّمْسَ وَالْقَمَرَ وَالنُّجُوْمَ مُسَخَّرٰتٍۭ بِاَمْرِهٖ ؕ اَلَا لَهُ الْخَلْقُ وَالْاَمْرُ ؕ تَبٰرَكَ اللّٰهُ رَبُّ الْعٰلَمِيْنَ ﴿۵۴﴾

55. ನಿಮ್ಮ ಪ್ರಭುವನ್ನು ಭಯ ವಿನಯದೊಂದಿಗೆ ಮತ್ತು ರಹಸ್ಯವಾಗಿ ಪ್ರಾರ್ಥಿಸಿರಿ. ನಿಶ್ಚಯವಾಗಿಯೂ ಅವನು ಸೀಮೋಲ್ಲಂಘಕರನ್ನು ಮೆಚ್ಚುವುದಿಲ್ಲ.

اُدْعُوْا رَبَّكُمْ تَضَرُّعًا وَّخُفْيَةً ؕ اِنَّهٗ لَا يُحِبُّ الْمُعْتَدِيْنَ ﴿۵۵﴾ ج

56. ಭೂಮಿಯಲ್ಲಿ ಸುಧಾರಣೆಯಾಗಿರುವಾಗ ಕ್ಷೋಭೆಯನ್ನುಂಟು ಮಾಡಬೇಡಿರಿ.[17] ಭಯದೊಂದಿಗೂ ಆಶೆಯೊಂದಿಗೂ

وَلَا تُفْسِدُوْا فِى الْاَرْضِ بَعْدَ اِصْلَاحِهَا وَادْعُوْهُ خَوْفًا وَّطَمَعًا ؕ اِنَّ رَحْمَتَ اللّٰهِ

13. ಇಲ್ಲಿ 'ದಿನ' ಎಂಬ ಪದವು ಲೋಕದ ಜನರು ಇಪ್ಪತ್ತನಾಲ್ಕು ಗಂಟೆಗಳಿಗೆ ಸಮಾನವಾದುದೆಂದು ಭಾವಿಸುವ ದಿನವೂ ಆಗಿರಬಹುದು. ಅಥವಾ ಇದನ್ನು 'ಯುಗ' ಎಂಬ ಅರ್ಥದಲ್ಲೂ ಉಪಯೋಗಿಸಲಾಗಿರಬಹುದು.

14. ದೇವನು ವಿಶ್ವಸಿಂಹಾಸನದಲ್ಲಿ ವಿರಾಜಮಾನನಾಗುವ ಬಗೆ ಹೇಗೆ ಎಂದು ವಿವರವಾಗಿ ತಿಳಿದು ಕೊಳ್ಳಲು ನಮಗೆ ಸಾಧ್ಯವಿಲ್ಲ. ಇದು 'ಮುತಶಾಬಿಹಾತ್' (ಅರ್ಥವಿವರಣೆಯಲ್ಲಿ ಅಸ್ಪಷ್ಟತೆಗೆ ಆಸ್ಪದವಿರುವಂತಹ ಸೂಕ್ತ)ಗಳಲ್ಲಾಗಿದೆ. ಅದಕ್ಕೆ ನಿರ್ದಿಷ್ಟ ಅರ್ಥವನ್ನು ಗೊತ್ತುಪಡಿಸುವಂತಿಲ್ಲ.

15. ಅರ್ಥಾತ್- ದೇವನೇ ಈ ನಿಸರ್ಗವನ್ನು ಸೃಷ್ಟಿಸಿದ್ದಾನೆ. ಅವನೇ ಇದರ ಆಜ್ಞಾಧಿಕಾರಿಯಾಗಿದ್ದಾನೆ. ತನ್ನ ಸೃಷ್ಟಿಯನ್ನು ಅವನು ಇತರರ ಅಧೀನಕ್ಕೆ ಕೊಟ್ಟು ಬಿಟ್ಟಿಲ್ಲ. ಅಂತೆಯೇ ತನ್ನ ಯಾವುದೇ ಸೃಷ್ಟಿಗಳೂ ಸ್ವಚ್ಛಂದವಾಗಿ ಮನಬಂದಂತೆ ವರ್ತಿಸಲು ಅಧಿಕಾರ ನೀಡಿಲ್ಲ.

16. ಅಲ್ಲಾಹನು ಮಹಾ ಸಮೃದ್ಧನಾಗಿದ್ದಾನೆಂದರೆ ಅವನ ಗುಣವಿಶೇಷತೆ ಮತ್ತು ಒಳಿತುಗಳು ನಿಸ್ಸೀಮವಾಗಿವೆ. ಅವನಿಂದ ಲೆಕ್ಕಮಿತಿ ಇಲ್ಲದಷ್ಟು ಒಳಿತುಗಳು ಹರಡುತ್ತಿವೆ.

17. ಅರ್ಥಾತ್-ನೂರಾರು, ಸಾವಿರಾರು ವರ್ಷಗಳ ಅವಧಿಯಲ್ಲಿ ಅಲ್ಲಾಹನ ಪ್ರವಾದಿಗಳು ಮತ್ತು ಮಾನವಕುಲದ ಸುಧಾರಕರ ಪ್ರಯತ್ನಗಳಿಂದ ಮನುಷ್ಯನ ಚಾರಿತ್ರ್ಯ ಮತ್ತು ನಾಗರಿಕತೆಯಲ್ಲಿ ಆಗಿರುವ ಸುಧಾರಣೆಯನ್ನು ತಮ್ಮ ದುಷ್ಕೃತ್ಯಗಳ ಮೂಲಕ ಹಾಳುಗೆಡಹದಿರಿ.

ಅಲ್ಲಾಹನನ್ನೇ ಕೂಗಿ ಪ್ರಾರ್ಥಿಸಿರಿ. ನಿಶ್ಚಯವಾಗಿಯೂ ಅಲ್ಲಾಹನ ಕೃಪೆಯು ಸಜ್ಜನರ ಸಮೀಪದಲ್ಲಿದೆ.

قَرِيبٌ مِّنَ الْمُحْسِنِينَ ﴿٥٦﴾

57. ತನ್ನ ಕೃಪೆಗೆ ಮುಂದಾಗಿ ಸುವಾರ್ತೆಯೊಂದಿಗೆ ಮಾರುತಗಳನ್ನು ಕಳುಹಿಸುವವನು ಅಲ್ಲಾಹನೇ ಆಗಿರುತ್ತಾನೆ. ಅನಂತರ ಅವು ನೀರನ್ನು ಹೊತ್ತ ಮೋಡಗಳನ್ನೆತ್ತಿಕೊಂಡಾಗ ಅವುಗಳಿಗೆ ಯಾವುದಾದರೊಂದು ನಿರ್ಜೀವ ಭೂಭಾಗದ ಕಡೆಗೆ ಚಲನೆ ಕೊಡುತ್ತಾನೆ ಮತ್ತು ಮಳೆಗರೆದು ಆ ನಿರ್ಜೀವ ಭೂಭಾಗದಿಂದ ತರತರದ ಫಲಗಳನ್ನು ಹೊರ ತರುತ್ತಾನೆ. ನೋಡಿರಿ ಹೀಗೆಯೇ ನಾವು ಮೃತರನ್ನು ಮರಣಾವಸ್ಥೆಯಿಂದ ಹೊರ ತರುತ್ತೇವೆ. ಇದು ನೀವು ಈ ಪ್ರತ್ಯಕ್ಷ ದರ್ಶನದಿಂದ ಪಾಠ ಕಲಿಯುವಿರೆಂಬ ನಿರೀಕ್ಷೆಯಿಂದಾಗಿರುತ್ತದೆ.

وَهُوَ الَّذِي يُرْسِلُ الرِّيَاحَ بُشْرًا بَيْنَ يَدَيْ رَحْمَتِهِ ۖ حَتَّىٰ إِذَا أَقَلَّتْ سَحَابًا ثِقَالًا سُقْنَاهُ لِبَلَدٍ مَّيِّتٍ فَأَنزَلْنَا بِهِ الْمَاءَ فَأَخْرَجْنَا بِهِ مِن كُلِّ الثَّمَرَاتِ ۚ كَذَٰلِكَ نُخْرِجُ الْمَوْتَىٰ لَعَلَّكُمْ تَذَكَّرُونَ ﴿٥٧﴾

58. ಉತ್ತಮ ನೆಲವು ತನ್ನ ಪ್ರಭುವಿನ ಆಜ್ಞೆಯಿಂದ ವಿಪುಲವಾಗಿ ಬೆಳೆ ತರುತ್ತದೆ. ಕೆಟ್ಟ ನೆಲದಿಂದ ಕೆಟ್ಟ ಬೆಳೆಯ ವಿನಾ ಇನ್ನೇನೂ ಹೊರ ಬರುವುದಿಲ್ಲ. ಇದೇ ರೀತಿಯಲ್ಲಿ ಕೃತಜ್ಞರಾಗುವವರಿಗೆ ನಾವು ಪದೇ ಪದೇ ನಮ್ಮ ದೃಷ್ಟಾಂತಗಳನ್ನು ಮುಂದಿಡುತ್ತೇವೆ.

وَالْبَلَدُ الطَّيِّبُ يَخْرُجُ نَبَاتُهُ بِإِذْنِ رَبِّهِ ۖ وَالَّذِي خَبُثَ لَا يَخْرُجُ إِلَّا نَكِدًا ۚ كَذَٰلِكَ نُصَرِّفُ الْآيَاتِ لِقَوْمٍ يَشْكُرُونَ ﴿٥٨﴾

59. ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದೆವು.[18] ಅವರು ಹೇಳಿದರು, "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಾನು ನಿಮ್ಮ ಬಗ್ಗೆ ಒಂದು ಭಯಾನಕ ದಿನದ ಯಾತನೆ ಯಿಂದ ಭಯಪಡುತ್ತೇನೆ."

لَقَدْ أَرْسَلْنَا نُوحًا إِلَىٰ قَوْمِهِ فَقَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ إِنِّي أَخَافُ عَلَيْكُمْ عَذَابَ يَوْمٍ عَظِيمٍ ﴿٥٩﴾

60. ಅವರ ಜನಾಂಗದ ಮುಂದಾಳುಗಳು ಹೇಳಿದರು: "ನಮಗಂತು ನೀವು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಸಿಲುಕಿರುವುದು ಕಂಡು ಬರುತ್ತದೆ."

قَالَ الْمَلَأُ مِن قَوْمِهِ إِنَّا لَنَرَاكَ فِي ضَلَالٍ مُّبِينٍ ﴿٦٠﴾

61. ನೂಹರು ಹೇಳಿದರು- "ಓ ನನ್ನ ಜನಾಂಗ ಬಾಂಧವರೇ, ನಾನು ಯಾವುದೇ ಪಥಭ್ರಷ್ಟತೆಯಲ್ಲಿ ಸಿಲುಕಿರುವುದಿಲ್ಲ. ನಿಜವಾಗಿ ನಾನು ಸರ್ವಲೋಕ ಪಾಲಕನ ಸಂದೇಶವಾಹಕನಾಗಿರುತ್ತೇನೆ.

قَالَ يَا قَوْمِ لَيْسَ بِي ضَلَالَةٌ وَلَٰكِنِّي رَسُولٌ مِّن رَّبِّ الْعَالَمِينَ ﴿٦١﴾

62. ನಿಮಗೆ ನನ್ನ ಪ್ರಭುವಿನ ಸಂದೇಶಗಳನ್ನು ತಲಪಿಸುತ್ತೇನೆ. ನಾನು ನಿಮ್ಮ ಹಿತಚಿಂತಕನಾಗಿರುತ್ತೇನೆ. ನಿಮಗೆ ತಿಳಿಯದಿರುವುದು ಅಲ್ಲಾಹನ ಕಡೆಯಿಂದ ನನಗೆ ತಿಳಿದಿದೆ.

أُبَلِّغُكُمْ رِسَالَاتِ رَبِّي وَأَنصَحُ لَكُمْ وَأَعْلَمُ مِنَ اللَّهِ مَا لَا تَعْلَمُونَ ﴿٦٢﴾

18. ಇಂದು 'ಇರಾಕ್' ಎಂದು ಕರೆಯಲಾಗುವ ಪ್ರದೇಶದಲ್ಲಿ ಹ.ನೂಹ್‌ರ(ಅ) ಜನಾಂಗ ವಾಸಿಸುತ್ತಿತ್ತು.

63. ನಿಮಗೆ ಎಚ್ಚರಿಕೆ ನೀಡಿ ನೀವು ದುರ್ನೀತಿಯಿಂದ ರಕ್ಷಿಸಲ್ಪಡುವಂತೆ ಮತ್ತು ನಿಮ್ಮ ಮೇಲೆ ದಯೆ ತೋರಲ್ಪಡುವಂತೆ ನಿಮ್ಮ ಬಳಿಗೆ ನಿಮ್ಮ ಸ್ವಂತ ಜನಾಂಗದ ಓರ್ವ ವ್ಯಕ್ತಿಯ ಮೂಲಕ ನಿಮ್ಮ ಪ್ರಭುವಿನ ಉದ್ಬೋಧ ಬಂದುದರ ಬಗ್ಗೆ ನಿಮಗೆ ಆಶ್ಚರ್ಯ ವಾಗುತ್ತಿದೆಯೇ?"

أَوَعَجِبْتُمْ أَن جَاءَكُمْ ذِكْرٌ مِّن رَّبِّكُمْ عَلَىٰ رَجُلٍ مِّنكُمْ لِيُنذِرَكُمْ وَلِتَتَّقُوا وَلَعَلَّكُمْ تُرْحَمُونَ ٦٣

64. ಆದರೆ ಅವರು ಇವರನ್ನು ಸುಳ್ಳಾಗಿಸಿ ಬಿಟ್ಟರು. ಕೊನೆಗೆ ನಾವು ಇವರನ್ನು ಹಾಗೂ ಇವರ ಸಂಗಡಿಗರನ್ನು ಒಂದು ನಾವೆಯಲ್ಲಿ ರಕ್ಷಿಸಿದೆವು ಮತ್ತು ನಮ್ಮ ವಚನಗಳನ್ನು ಸುಳ್ಳಾಗಿಸಿದ್ದವರನ್ನು ಮುಳುಗಿಸಿಬಿಟ್ಟೆವು. ವಾಸ್ತವದಲ್ಲಿ ಅವರು ಕುರುಡ ಜನಾಂಗ ವಾಗಿದ್ದರು.

فَكَذَّبُوهُ فَأَنجَيْنَاهُ وَالَّذِينَ مَعَهُ فِي الْفُلْكِ وَأَغْرَقْنَا الَّذِينَ كَذَّبُوا بِآيَاتِنَا ۚ إِنَّهُمْ كَانُوا قَوْمًا عَمِينَ ٦٤

65. ನಾವು 'ಆದ್'ರ (ಜನಾಂಗದವರ) ಕಡೆಗೆ ಅವರ ಸಹೋದರ 'ಹೂದ'ರನ್ನು ಕಳುಹಿಸಿದೆವು.[19] ಅವರು ಹೇಳಿದರು; "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನೀವು ದೇವ ಭಯವಿರಿಸಿ ಕೊಳ್ಳುವುದಿಲ್ಲವೇ?"

وَإِلَىٰ عَادٍ أَخَاهُمْ هُودًا ۗ قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۚ أَفَلَا تَتَّقُونَ ٦٥

66. ಅವರ ಜನಾಂಗದ ಸತ್ಯನಿಷೇಧಿ ಮುಂದಾಳುಗಳು, "ನಾವು ನಿನ್ನನ್ನು ಬುದ್ಧಿಹೀನತೆಯಲ್ಲಿ ಕಾಣುತ್ತೇವೆ. ನೀನು ಸುಳ್ಳುಗಾರನೆಂದು ನಾವು ಭಾವಿಸುತ್ತೇವೆ" ಎಂದು ಉತ್ತರಿಸಿದರು.

قَالَ الْمَلَأُ الَّذِينَ كَفَرُوا مِن قَوْمِهِ إِنَّا لَنَرَاكَ فِي سَفَاهَةٍ وَإِنَّا لَنَظُنُّكَ مِنَ الْكَاذِبِينَ ٦٦

67. ಅವರು ಹೇಳಿದರು; "ಓ ನನ್ನ ಜನಾಂಗ ಬಾಂಧವರೇ, ನನ್ನಲ್ಲಿ ಬುದ್ಧಿಶೂನ್ಯತೆ ಇಲ್ಲ. ನಿಜವಾಗಿ ನಾನು ಸರ್ವಲೋಕಪಾಲಕನ ಸಂದೇಶವಾಹಕನಾಗಿರುತ್ತೇನೆ.

قَالَ يَا قَوْمِ لَيْسَ بِي سَفَاهَةٌ وَلَٰكِنِّي رَسُولٌ مِّن رَّبِّ الْعَالَمِينَ ٦٧

68. ನಿಮಗೆ ನನ್ನ ಪ್ರಭುವಿನ ಸಂದೇಶಗಳನ್ನು ತಲಪಿಸುತ್ತೇನೆ ಮತ್ತು ನೀವು ಭರವಸೆಯಿಟ್ಟು ಕೊಳ್ಳಬಹುದಾದಂತಹ ಹಿತೈಷಿಯಾಗಿರು ತ್ತೇನೆ.

أُبَلِّغُكُمْ رِسَالَاتِ رَبِّي وَأَنَا لَكُمْ نَاصِحٌ أَمِينٌ ٦٨

69. ನಿಮಗೆ ಎಚ್ಚರಿಕೆ ನೀಡಲಿಕ್ಕಾಗಿ ನಿಮ್ಮ ಸ್ವಂತ ಜನಾಂಗದವನ ಮೂಲಕ ನಿಮ್ಮ ಪ್ರಭುವಿನ ಉದ್ಬೋಧ ಬಂದುದಕ್ಕಾಗಿ ನಿಮಗೆ

أَوَعَجِبْتُمْ أَن جَاءَكُمْ ذِكْرٌ مِّن رَّبِّكُمْ عَلَىٰ رَجُلٍ مِّنكُمْ لِيُنذِرَكُمْ ۚ وَاذْكُرُوا

19. ಆದ್ ಜನಾಂಗದ ನೈಜ ವಾಸಸ್ಥಳ 'ಅಹ್‌ಕಾಫ್' ಆಗಿತ್ತು. ಅದು ಹಿಜಾಝ್, ಯಮನ್ ಮತ್ತು ಯಮಾಮದ ನಡುವೆ ಇತ್ತು. ಅಲ್ಲಿಂದಲೇ ಅವರು ಯಮನ್‌ನ ಪಶ್ಚಿಮ ತೀರ ಪ್ರದೇಶಗಳು, ಒಮಾನ್, ಹಝ್ರುಮೌತ್‌ಗಳಿಂದ ಇರಾಕ್‌ನ ತನಕ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದ್ದರು.

إِذْ جَعَلَكُمْ خُلَفَآءَ مِنْ بَعْدِ قَوْمِ نُوْحٍ وَّزَادَكُمْ فِي الْخَلْقِ بَصْطَةً ۚ فَاذْكُرُوْٓا اٰلَآءَ اللّٰهِ لَعَلَّكُمْ تُفْلِحُوْنَ ﴿٦٩﴾

ಆಶ್ಚರ್ಯವಾಯಿತೇ? ನಿಮ್ಮ ಪ್ರಭು ನೂಹರ ಜನಾಂಗದ ತರುವಾಯ ನಿಮ್ಮನ್ನು ಅದರ ಉತ್ತರಾಧಿಕಾರಿಯನ್ನಾಗಿಯೂ ದೃಢಕಾಯರನ್ನಾಗಿಯೂ ಮಾಡಿದನೆಂಬುದನ್ನು ಮರೆಯದಿರಿ. ಆದ್ದರಿಂದ ಅಲ್ಲಾಹನ ಮಹಿಮೆಯನ್ನು ಸ್ಮರಿಸಿರಿ.[20] ನೀವು ಯಶಸ್ವಿಗಳಾಗಬಹುದು."

قَالُوْٓا اَجِئْتَنَا لِنَعْبُدَ اللّٰهَ وَحْدَهٗ وَنَذَرَ مَا كَانَ يَعْبُدُ اٰبَآؤُنَا ۚ فَأْتِنَا بِمَا تَعِدُنَآ اِنْ كُنْتَ مِنَ الصّٰدِقِيْنَ ﴿٧٠﴾

70. ಅವರು ಹೇಳಿದರು: "ನಾವು ಏಕಮಾತ್ರ ಅಲ್ಲಾಹನನ್ನು ಆರಾಧಿಸಬೇಕು ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದವರನ್ನು ಬಿಟ್ಟುಬಿಡಬೇಕೆಂದು ನೀನು ನಮ್ಮ ಬಳಿಗೆ ಬಂದಿರುವೆಯಾ? ನೀನು ಸತ್ಯವಾದಿಯಾಗಿದ್ದರೆ ನೀನು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ತಂದುಬಿಡು."

قَالَ قَدْ وَقَعَ عَلَيْكُمْ مِّنْ رَّبِّكُمْ رِجْسٌ وَّغَضَبٌ ۗ اَتُجَادِلُوْنَنِيْ فِيْٓ اَسْمَآءٍ سَمَّيْتُمُوْهَآ اَنْتُمْ وَاٰبَآؤُكُمْ مَّا نَزَّلَ اللّٰهُ بِهَا مِنْ سُلْطٰنٍ ۗ فَانْتَظِرُوْٓا اِنِّيْ مَعَكُمْ مِّنَ الْمُنْتَظِرِيْنَ ﴿٧١﴾

71. ಅವರು ಹೇಳಿದರು: "ನಿಮ್ಮ ಮೇಲೆ ನಿಮ್ಮ ಪ್ರಭುವಿನ ಶಾಪ ಬಿದ್ದಿತು ಮತ್ತು ಅವನ ಕ್ರೋಧವೆರಗಿತು. ಅಲ್ಲಾಹನು ಯಾವ ಆಧಾರ ಪ್ರಮಾಣಗಳನ್ನೂ ಇಳಿಸದಿರುವ, ನೀವು ಮತ್ತು ನಿಮ್ಮ ಪೂರ್ವಿಕರು ಇಟ್ಟುಕೊಂಡಂತಹ ಹೆಸರುಗಳ ಬಗ್ಗೆ ನೀವು ನನ್ನೊಂದಿಗೆ ಜಗಳವಾಡುತ್ತೀರಾ?[21] ನೀವೂ ಕಾದುಕೊಂಡಿರಿ, ನಾನೂ ನಿಮ್ಮೊಂದಿಗೆ ಕಾದಿರುತ್ತೇನೆ."

فَاَنْجَيْنٰهُ وَالَّذِيْنَ مَعَهٗ بِرَحْمَةٍ مِّنَّا وَقَطَعْنَا دَابِرَ الَّذِيْنَ كَذَّبُوْا بِاٰيٰتِنَا وَمَا كَانُوْا مُؤْمِنِيْنَ ﴿٧٢﴾

72. ಕೊನೆಗೆ ನಾವು ನಮ್ಮ ಕೃಪೆಯಿಂದ ಹೂದ್ ಮತ್ತು ಅವರ ಸಂಗಡಿಗರನ್ನು ರಕ್ಷಿಸಿದೆವು ಮತ್ತು ನಮ್ಮ ನಿದರ್ಶನಗಳನ್ನು ಸುಳ್ಳಾಗಿಸಿದವರ ಬೇರನ್ನೇ ಕಡಿದುಬಿಟ್ಟೆವು. ಅವರು ವಿಶ್ವಾಸ ವಿರಿಸುವವರಾಗಿರಲಿಲ್ಲ.

ع ٩ ٨ ١٢

وقف لازم

وَاِلٰى ثَمُوْدَ اَخَاهُمْ صٰلِحًا ۘ قَالَ يٰقَوْمِ اعْبُدُوا اللّٰهَ مَا لَكُمْ مِّنْ اِلٰهٍ غَيْرُهٗ ۗ قَدْ

73. 'ಸಮೂದ್' (ಜನಾಂಗದವರ) ಕಡೆಗೆ ನಾವು ಅವರ ಸಹೋದರ ಸಾಲಿಹರನ್ನು ಕಳುಹಿಸಿದೆವು.[22] ಅವರು ಹೇಳಿದರು: "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ.

20. ಮೂಲದಲ್ಲಿ 'ಆಲಾಅ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಅನುಗ್ರಹ, ಮಹಿಮೆ ಮತ್ತು ಉನ್ನತ ಗುಣಗಳು ಎಂದಾಗಿದೆ.

21. ಅರ್ಥಾತ್- ನೀವು ಕೆಲವರನ್ನು ಮಳೆಯ, ಗಾಳಿಯ, ಸಂಪತ್ತಿನ ಮತ್ತು ರೋಗರುಜಿನಗಳ ದೇವರೆಂದು ಕರೆಯುತ್ತೀರಿ. ವಾಸ್ತವದಲ್ಲಿ ಆ ಪೈಕಿ ಯಾರೂ ಯಾವುದರ ದೇವರೂ ಅಲ್ಲ. ಇದೆಲ್ಲವೂ ನೀವು ಅವರಿಗೆ ಕೊಟ್ಟಿರುವ ಹೆಸರುಗಳಾಗಿವೆ. ಅವುಗಳಿಗಾಗಿ ಜಗಳ ಮಾಡುವವರು ವಾಸ್ತವದಲ್ಲಿ ಕೆಲವು ಹೆಸರುಗಳಿಗಾಗಿ ಜಗಳಾಡುತ್ತಾರೆ. ಅವರು ಜಗಳಾಡುವುದು ಯಾವುದೇ ವಾಸ್ತವಿಕತೆಗಾಗಿ ಅಲ್ಲ.

22. ಸಮೂದ್ ಜನಾಂಗದ ವಾಸಸ್ಥಳ ವಾಯುವ್ಯ ಅರೇಬಿಯಾದ 'ಅಲ್ ಹಿಜ್ರ್' ಎಂಬ ಪ್ರದೇಶವಾಗಿದೆ. ಈಗ ಮದೀನಾ ಮತ್ತು ತಬೂಕ್‌ನ ನಡುವೆ ಒಂದು ಸ್ಥಳವಿದೆ. ಅದನ್ನು 'ಮದಾಯನ್ ಸಾಲಿಹ್' ಎಂದು ಕರೆಯುತ್ತಾರೆ. ಇದು ಸಮೂದ್ ಜನಾಂಗದ ರಾಜಧಾನಿಯಾಗಿತ್ತು. ಹಿಂದಿನ ಕಾಲದಲ್ಲಿ ಅದನ್ನು 'ಹಿಜ್ರ್' ಎಂದು ಕರೆಯಲಾಗುತ್ತಿತ್ತು. ಇಂದಿಗೂ ಸಮೂದ್ ಜನಾಂಗದವರು ಪರ್ವತಗಳನ್ನು ಕೊರೆದು ನಿರ್ಮಿಸಿದಂತಹ ಕೆಲವು ಕಟ್ಟಡಗಳು ಅಲ್ಲಿ ಅಸ್ತಿತ್ವದಲ್ಲಿವೆ.

ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಸ್ಪಷ್ಟ ಪ್ರಮಾಣ ಬಂದಿರುತ್ತದೆ. ಅಲ್ಲಾಹನ ಈ ಹೆಣ್ಣೊಂಟೆಯು ನಿಮಗೊಂದು ದೃಷ್ಟಾಂತದ ರೂಪದಲ್ಲಿದೆ.[23] ಆದುದರಿಂದ ಅಲ್ಲಾಹನ ಭೂಮಿಯಲ್ಲಿ ಇದನ್ನು ಮೇಯಲು ಬಿಡಿರಿ. ದುರುದ್ದೇಶದಿಂದ ಇದನ್ನು ಮುಟ್ಟಬೇಡಿರಿ. ಅನ್ಯಥಾ ಒಂದು ವೇದನಾಯುಕ್ತ ಯಾತನೆ ನಿಮ್ಮನ್ನು ಆಕ್ರಮಿಸುವುದು.

جَاءَتْكُم بَيِّنَةٌ مِّن رَّبِّكُمْ ۖ هَٰذِهِ نَاقَةُ اللَّهِ لَكُمْ آيَةً ۖ فَذَرُوهَا تَأْكُلْ فِي أَرْضِ اللَّهِ ۖ وَلَا تَمَسُّوهَا بِسُوءٍ فَيَأْخُذَكُمْ عَذَابٌ أَلِيمٌ ﴿٧٣﴾

74. ಅಲ್ಲಾಹನು 'ಆದ್' ಜನಾಂಗದ ತರುವಾಯ ನಿಮ್ಮನ್ನು ಅದರ ಉತ್ತರಾಧಿಕಾರಿಯನ್ನಾಗಿ ಮಾಡಿದ ಸಂದರ್ಭವನ್ನು ಸ್ಮರಿಸಿರಿ. ನೀವಿಂದು ಅದರ ಸಮತಟ್ಟಾದ ಬಯಲುಗಳಲ್ಲಿ ಭವ್ಯ ಭವನಗಳನ್ನು ಕಟ್ಟುವಂತೆಯೂ ಅದರ ಪರ್ವತಗಳನ್ನು ಕಟ್ಟಡಗಳ ರೂಪದಲ್ಲಿ ಕೊರೆಯುವಂತೆಯೂ ನಿಮಗೆ ಅವನು ಭೂಮಿಯ ಮೇಲೆ ಪ್ರತಿಷ್ಠೆ ದಯಪಾಲಿಸಿದನು. ಆದ್ದರಿಂದ ಅವನ ಮಹಿಮಾದ್ಭುತಗಳ ಬಗ್ಗೆ ಬೋಧಶೂನ್ಯರಾಗಬೇಡಿರಿ. ಭೂಮಿಯ ಮೇಲೆ ಕ್ಷೋಭೆ ಹರಡಬೇಡಿರಿ.

وَاذْكُرُوا إِذْ جَعَلَكُمْ خُلَفَاءَ مِن بَعْدِ عَادٍ وَبَوَّأَكُمْ فِي الْأَرْضِ تَتَّخِذُونَ مِن سُهُولِهَا قُصُورًا وَتَنْحِتُونَ الْجِبَالَ بُيُوتًا ۖ فَاذْكُرُوا آلَاءَ اللَّهِ وَلَا تَعْثَوْا فِي الْأَرْضِ مُفْسِدِينَ ﴿٧٤﴾

75. ಅವರ ಜನಾಂಗದ ದುರಹಂಕಾರಿ ನಾಯಕರು, ವಿಶ್ವಾಸವಿಟ್ಟಿದ್ದ ದುರ್ಬಲ ವರ್ಗದವರೊಡನೆ ಹೇಳಿದರು:- "ಸಾಲಿಹರು ತಮ್ಮ ಪ್ರಭುವಿನ ಸಂದೇಶವಾಹಕರೇ ಆಗಿರುತ್ತಾರೆಂದು ನಿಜಕ್ಕೂ ನೀವು ಅರಿತಿರುವಿರಾ?" ಅವರು ಉತ್ತರವಿತ್ತರು: "ನಿಶ್ಚಯವಾಗಿಯೂ ಅವರು ಯಾವ ಸಂದೇಶದೊಂದಿಗೆ ಕಳುಹಿಸಲ್ಪಟ್ಟಿರುತ್ತಾರೋ ಅದನ್ನು ನಾವು ನಂಬುತ್ತೇವೆ."

قَالَ الْمَلَأُ الَّذِينَ اسْتَكْبَرُوا مِن قَوْمِهِ لِلَّذِينَ اسْتُضْعِفُوا لِمَنْ آمَنَ مِنْهُمْ أَتَعْلَمُونَ أَنَّ صَالِحًا مُّرْسَلٌ مِّن رَّبِّهِ ۚ قَالُوا إِنَّا بِمَا أُرْسِلَ بِهِ مُؤْمِنُونَ ﴿٧٥﴾

76. (ಆಗ) ಆ ದುರಹಂಕಾರಿಗಳು: "ನಿಶ್ಚಯವಾಗಿಯೂ ನೀವು ಯಾವುದರ ಮೇಲೆ ವಿಶ್ವಾಸವಿಟ್ಟಿರುತ್ತೀರೋ ನಾವು ಅದರ ನಿಷೇಧಕರು" ಎಂದು ಹೇಳಿದರು.

قَالَ الَّذِينَ اسْتَكْبَرُوا إِنَّا بِالَّذِي آمَنتُم بِهِ كَافِرُونَ ﴿٧٦﴾

77. ತರುವಾಯ ಅವರು ಆ ಹೆಣ್ಣೊಂಟೆಯನ್ನು ಕೊಂದು ಹಾಕಿದರು[24] ಮತ್ತು ಪ್ರಭುವಿನ ಆಜ್ಞೆಯನ್ನು ಸಂಪೂರ್ಣ ಧಿಕ್ಕರಿಸಿ ನಡೆದರು.

فَعَقَرُوا النَّاقَةَ وَعَتَوْا عَنْ أَمْرِ رَبِّهِمْ وَقَالُوا يَا صَالِحُ ائْتِنَا بِمَا تَعِدُنَا إِن كُنتَ

23. ಈ ಘಟನೆಯ ವಿವರಗಳನ್ನು ಕುರ್‌ಆನಿನಲ್ಲಿ ವಿವಿಧೆಡೆ ಪ್ರಸ್ತಾಪಿಸಲಾಗಿದೆ. ಇದರಿಂದ ವ್ಯಕ್ತವಾಗುವುದೇನೆಂದರೆ ಹ. ಸಾಲಿಹ್(ಅ) ಅಲ್ಲಾಹನಿಂದ ನೇಮಕಗೊಂಡವರೇ ಆಗಿದ್ದಾರೆ ಎಂದು ಸಾರುವಂತಹ ಸ್ಪಷ್ಟ ನಿದರ್ಶನವೊಂದನ್ನು ಸಮೂದ್ ಜನಾಂಗ ಅವರಿಂದ ಬಯಸಿತ್ತು. ಇದಕ್ಕುತ್ತರವಾಗಿ ಹ. ಸಾಲಿಹ್(ಅ) ಹೆಣ್ಣು ಒಂಟೆಯನ್ನು ತೋರಿಸಿದರು.

24. ಒಂಟೆಯನ್ನು ಓರ್ವ ವ್ಯಕ್ತಿ ಕೊಂದಿದ್ದನು. ಇದನ್ನು 'ಅಲ್‌ಕಮರ್' ಮತ್ತು 'ಅಶ್ಶಮ್ಸ್' ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಆದರೆ ಈ ಅಪರಾಧಕ್ಕೆ ಸಮಸ್ತ ಜನಾಂಗದ ಬೆಂಬಲವಿತ್ತು. ಕೊಂದವನು ತನ್ನ ಜನಾಂಗದ ಇಚ್ಛೆಯನ್ನು ಈಡೇರಿಸಿದ್ದನಷ್ಟೆ. ಆದ್ದರಿಂದ ಅದರ ಆರೋಪಕ್ಕೆ ಸಮಸ್ತ ಜನಾಂಗವನ್ನು ಗುರಿಪಡಿಸಲಾಯಿತು.

'ಸಾಲಿಹ್'ರೊಂದಿಗೆ ಹೀಗೆಂದರು:- "ನೀವು ನಿಜಕ್ಕೂ ಸಂದೇಶ ವಾಹಕರಲ್ಲಾಗಿರುವಿರಾದರೆ, ನೀವು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ತನ್ನಿರಿ."

مِنَ الْمُرْسَلِيْنَ ﴿٧٧﴾

78. ಕೊನೆಗೆ ನಡುಗಿಸಿಬಿಡುವಂತಹ ವಿಪತ್ತೊಂದು ಅವರ ಮೇಲೆ ಬಂದೆರಗಿತು ಮತ್ತು ಅವರು ತಮ್ಮ ಮನೆಗಳಲ್ಲಿ ಅಧೋಮುಖ ರಾಗಿ ಬಿದ್ದಲ್ಲೇ ಬಿದ್ದುಬಿಟ್ಟರು.

فَاَخَذَتْهُمُ الرَّجْفَةُ فَاَصْبَحُوْا فِيْ دَارِهِمْ جٰثِمِيْنَ ﴿٧٨﴾

79. ಸಾಲಿಹರು: "ಓ ನನ್ನ ಜನಾಂಗ ಬಾಂಧವರೇ ನಾನು ನನ್ನ ಪ್ರಭುವಿನ ಸಂದೇಶವನ್ನು ನಿಮಗೆ ತಲಪಿಸಿ ಬಿಟ್ಟೆ. ನಾನು ನಿಮಗೆ ತುಂಬಾ ಹಿತೋಪದೇಶ ನೀಡಿದೆ. ಆದರೆ, ನೀವು ನಿಮ್ಮ ಹಿತಚಿಂತಕನನ್ನು ಮೆಚ್ಚದೆ ಹೋದರೆ ನಾನೇನು ಮಾಡಲಿ!" ಎನ್ನುತ್ತ ಅವರ ನಾಡುಗಳಿಂದ ಹೊರಟು ಹೋಗಿ ಬಿಟ್ಟರು.

فَتَوَلّٰى عَنْهُمْ وَقَالَ يٰقَوْمِ لَقَدْ اَبْلَغْتُكُمْ رِسَالَةَ رَبِّيْ وَنَصَحْتُ لَكُمْ وَلٰكِنْ لَّا تُحِبُّوْنَ النّٰصِحِيْنَ ﴿٧٩﴾

80. ಅನಂತರ ನಾವು 'ಲೂತ'ರನ್ನು ಸಂದೇಶವಾಹಕರನ್ನಾಗಿ ಮಾಡಿ ಕಳುಹಿಸಿದೆವು. ಅವರು ತಮ್ಮ ಜನಾಂಗದವರನ್ನುದ್ದೇಶಿಸಿ ಹೇಳಿದ ಸಂದರ್ಭವನ್ನು ಸ್ಮರಿಸಿರಿ.[25] 'ನೀವು ನಿಮಗಿಂತ ಮುಂಚೆ ಜಗತ್ತಿನಲ್ಲಿ ಇನ್ನಾರೂ ಮಾಡದಿರುವಂಥ ಅಶ್ಲೀಲಕಾರ್ಯವನ್ನೆಸಗುವ ಲಜ್ಜಾಹೀನರಾಗಿಬಿಟ್ಟಿರಾ?

وَلُوْطًا اِذْ قَالَ لِقَوْمِهٖۤ اَتَاْتُوْنَ الْفَاحِشَةَ مَا سَبَقَكُمْ بِهَا مِنْ اَحَدٍ مِّنَ الْعٰلَمِيْنَ ﴿٨٠﴾

81. ನೀವು ಸ್ತ್ರೀಯರನ್ನು ಬಿಟ್ಟು ಪುರುಷರೊಂದಿಗೆ ನಿಮ್ಮ ಕಾಮಾಭಿ ಲಾಷೆಯನ್ನು ನೀಗಿಸಿಕೊಳ್ಳುತ್ತೀರಾ? ವಾಸ್ತವದಲ್ಲಿ ನೀವು ಸ್ಪಷ್ಟವಾಗಿ ಹದಮೀರುವವರಾಗಿರುತ್ತೀರಿ."

اِنَّكُمْ لَتَاْتُوْنَ الرِّجَالَ شَهْوَةً مِّنْ دُوْنِ النِّسَآءِ ؕ بَلْ اَنْتُمْ قَوْمٌ مُّسْرِفُوْنَ ﴿٨١﴾

82. ಆದರೆ, ಆ ಜನಾಂಗದ ಉತ್ತರ, "ಇವರನ್ನು ನಮ್ಮ ನಾಡಿನಿಂದ ಹೊರಕ್ಕೆ ದಬ್ಬಿರಿ. ಭಾರೀ ಪರಿಶುದ್ಧರಾಗುತ್ತಾರಿವರು!" ಎಂಬುದರ ವಿನಾ ಇನ್ನೇನೂ ಇರಲಿಲ್ಲ.

وَمَا كَانَ جَوَابَ قَوْمِهٖۤ اِلَّاۤ اَنْ قَالُوْۤا اَخْرِجُوْهُمْ مِّنْ قَرْيَتِكُمْ ۚ اِنَّهُمْ اُنَاسٌ يَّتَطَهَّرُوْنَ ﴿٨٢﴾

83. ಕೊನೆಗೆ ನಾವು ಲೂತರನ್ನೂ ಅವರ ಮನೆಯವರನ್ನೂ- ಹಿಂದೆ ಉಳಿದುಬಿಟ್ಟ ಅವರ ಪತ್ನಿಯ ಹೊರತು- ರಕ್ಷಿಸಿ ಒಯ್ದೆವು.

فَاَنْجَيْنٰهُ وَاَهْلَهٗۤ اِلَّا امْرَاَتَهٗ ۖ كَانَتْ مِنَ الْغٰبِرِيْنَ ﴿٨٣﴾

84. ಮತ್ತು ಆ ಜನಾಂಗದ ಮೇಲೆ ನಾವೊಂದು ಮಳೆಗರೆದೆವು.[26] ಅನಂತರ ಆ ಅಪರಾಧಿಗಳ ಪಾಡೇನಾಯಿತೆಂದು ನೋಡಿರಿ.

وَاَمْطَرْنَا عَلَيْهِمْ مَّطَرًا ؕ فَانْظُرْ كَيْفَ كَانَ عَاقِبَةُ الْمُجْرِمِيْنَ ﴿٨٤﴾

25. ಹ. ಲೂತ್(ಅ) ಅವರು ಹ. ಇಬ್‌ರಾಹೀಮ್‌ರ(ಅ) ಸೋದರ ಪುತ್ರರಾಗಿದ್ದರು. ಇಂದು ಶಾಂತ ಸಾಗರವಿರುವ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನಾಂಗಕ್ಕೆ ಅವರನ್ನು ಪ್ರವಾದಿಯಾಗಿ ಕಳುಹಿಸಲಾಗಿತ್ತು.

26. ಮಳೆಯೆಂದರೆ ಇಲ್ಲಿ ನೀರಿನ ಮಳೆ ಎಂದು ಅರ್ಥವಲ್ಲ. ಬದಲಾಗಿ ಕುರ್‌ಆನಿನ ಇತರ ಕಡೆಗಳಲ್ಲಿ ವಿವರಿಸಲಾಗಿರುವಂತೆ ಅದು ಕಲ್ಲಿನ ಮಳೆಯಾಗಿತ್ತು.

85. ಮದ್‌ಯನರ[27] ಕಡೆಗೆ ಅವರ ಸಹೋದರ 'ಶುಐಬ್'ರನ್ನು ಕಳುಹಿಸಿದೆವು. ಅವರು ಹೇಳಿದರು, "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಸುವ್ಯಕ್ತ ಮಾರ್ಗದರ್ಶನ ಬಂದಿರುತ್ತದೆ. ಆದುದರಿಂದ ಅಳತೆ ಮತ್ತು ತೂಕವನ್ನು ಸಂಪೂರ್ಣ ಗೊಳಿಸಿರಿ. ಜನರಿಗೆ ಅವರ ವಸ್ತುಗಳನ್ನು ಕಡಿತಗೊಳಿಸಿಕೊಡಬೇಡಿರಿ ಮತ್ತು ಭೂಮಿಯಲ್ಲಿ ಸುಧಾರಣೆಯಾದ ಬಳಿಕ ಕ್ಷೋಭೆಯನ್ನುಂಟು ಮಾಡಬೇಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿದ್ದರೆ ಇದರಲ್ಲಿ ನಿಮಗೆ ಒಳಿತಿದೆ.[28]

وَإِلَىٰ مَدْيَنَ أَخَاهُمْ شُعَيْبًا ۗ قَالَ يَٰقَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۖ قَدْ جَاءَتْكُم بَيِّنَةٌ مِّن رَّبِّكُمْ ۖ فَأَوْفُوا الْكَيْلَ وَالْمِيزَانَ وَلَا تَبْخَسُوا النَّاسَ أَشْيَاءَهُمْ وَلَا تُفْسِدُوا فِي الْأَرْضِ بَعْدَ إِصْلَاحِهَا ۚ ذَٰلِكُمْ خَيْرٌ لَّكُمْ إِن كُنتُم مُّؤْمِنِينَ ﴿٨٥﴾

86. ಜನರನ್ನು ಭಯಭೀತರನ್ನಾಗಿ ಮಾಡುತ್ತಲೂ ವಿಶ್ವಾಸವಿಡುವವರನ್ನು ಅಲ್ಲಾಹನ ಮಾರ್ಗದಿಂದ ತಡೆಯಲುದ್ಯುಕ್ತರಾಗುತ್ತಲೂ ನೇರ ಮಾರ್ಗವನ್ನು ವಕ್ರಗೊಳಿಸುತ್ತಲೂ ಇರಲಿಕ್ಕಾಗಿ (ಜೀವನದ) ಎಲ್ಲ ಮಾರ್ಗಗಳಲ್ಲೂ ದರೋಡೆಗಾರರಾಗಿ ಕುಳಿತಿರಬೇಡಿರಿ. ನೀವು ಕಡಿಮೆ ಸಂಖ್ಯೆಯಲ್ಲಿದ್ದಿರಿ. ತರುವಾಯ ಅಲ್ಲಾಹನು ನಿಮ್ಮನ್ನು ಬಹುಸಂಖ್ಯೆಯವರನ್ನಾಗಿ ಮಾಡಿದನು. ಆ ಕಾಲವನ್ನು ಸ್ಮರಿಸಿರಿ. ಜಗತ್ತಿನಲ್ಲಿ ಗೊಂದಲಗಾರರ ಪರಿಣಾಮವೇನಾಯಿತೆಂಬುದನ್ನು ಚೆನ್ನಾಗಿ ಕಣ್ತೆರೆದು ನೋಡಿರಿ.

وَلَا تَقْعُدُوا بِكُلِّ صِرَاطٍ تُوعِدُونَ وَتَصُدُّونَ عَن سَبِيلِ اللَّهِ مَنْ آمَنَ بِهِ وَتَبْغُونَهَا عِوَجًا ۚ وَاذْكُرُوا إِذْ كُنتُمْ قَلِيلًا فَكَثَّرَكُمْ ۖ وَانظُرُوا كَيْفَ كَانَ عَاقِبَةُ الْمُفْسِدِينَ ﴿٨٦﴾

87. ಯಾವ ಶಿಕ್ಷಣದೊಂದಿಗೆ ನಾನು ಕಳುಹಿಸಲ್ಪಟ್ಟಿರುತ್ತೇನೋ ಅದರ ಮೇಲೆ ನಿಮ್ಮ ಪೈಕಿ ಒಂದು ಪಂಗಡವು ವಿಶ್ವಾಸ ವಿಡುತ್ತಲೂ ಇನ್ನೊಂದು (ಪಂಗಡವು) ವಿಶ್ವಾಸವಿಡದೆಯೂ ಇದ್ದರೆ ಅಲ್ಲಾಹನು ನಮ್ಮ ನಡುವೆ ಒಂದು ತೀರ್ಮಾನ ಮಾಡುವವರೆಗೂ ಸಹನೆಯೊಂದಿಗೆ ಕಾದು ಕೊಂಡಿರಿ ಮತ್ತು ಅವನೇ ಎಲ್ಲರಿಗಿಂತಲೂ ಉತ್ತಮ ತೀರ್ಮಾನ ಮಾಡುವವನಾಗಿರುತ್ತಾನೆ.

وَإِن كَانَ طَائِفَةٌ مِّنكُمْ آمَنُوا بِالَّذِي أُرْسِلْتُ بِهِ وَطَائِفَةٌ لَّمْ يُؤْمِنُوا فَاصْبِرُوا حَتَّىٰ يَحْكُمَ اللَّهُ بَيْنَنَا ۚ وَهُوَ خَيْرُ الْحَاكِمِينَ ﴿٨٧﴾

27. ಮದ್‌ಯನಿನ ನಿಜವಾದ ಭೂಭಾಗವು ಹಿಜಾಝ್‌ನ ವಾಯುವ್ಯ ಮತ್ತು ಫೆಲೆಸ್ತೀನಿನ ದಕ್ಷಿಣದಲ್ಲಿ ಕೆಂಪು ಸಮುದ್ರ ಮತ್ತು ಅಕಬಾ ಕೊಲ್ಲಿಯ ದಡದಲ್ಲಿತ್ತು. ಅಲ್ಲದೆ ಸೀನಾಯಿ ಪರ್ಯಾಯ ದ್ವೀಪದ ಪೂರ್ವ ಕರಾವಳಿಯಲ್ಲೂ ಅದರ ಕೆಲವು ಪ್ರದೇಶ ಹರಡಿಕೊಂಡಿತ್ತು. ಅವರು ದೊಡ್ಡ ವ್ಯಾಪಾರಿ ಜನಾಂಗವಾಗಿದ್ದರು. ಪುರಾತನ ಕಾಲದಲ್ಲಿ ಕೆಂಪು ಸಮುದ್ರದ ಕರಾವಳಿಯಲ್ಲಿ ಯಮನ್‌ನಿಂದ ಮಕ್ಕಾ ಮತ್ತು ಯಂಬೂಅ್‌ಗಳ ಮೂಲಕ ಸಿರಿಯಾದೆಡೆಗೆ ಹೋಗುವ ಹೆದ್ದಾರಿಯಿತ್ತು. ಇನ್ನೊಂದು ವ್ಯಾಪಾರಿ ಹೆದ್ದಾರಿ ಇರಾಕ್‌ನಿಂದ ಈಜಿಪ್ಟ್‌ನ ಕಡೆಗೆ ಹೋಗುತ್ತಿತ್ತು. ಇವೆರಡು ಹೆದ್ದಾರಿಗಳು ಕೂಡುವ ಸ್ಥಳದಲ್ಲೇ ಈ ಜನಾಂಗದ ನಾಡುಗಳಿದ್ದವು.

28. ಅವರು ತಾವು ಸತ್ಯವಿಶ್ವಾಸಿಗಳೆಂದು ವಾದಿಸಿಕೊಳ್ಳುತ್ತಿದ್ದರು ಎಂದು ಇದರಿಂದ ವ್ಯಕ್ತವಾಗುತ್ತದೆ.

88. *ತಮ್ಮ ಹಿರಿಮೆಯ ಅಹಂಕಾರದಲ್ಲಿ ಸಿಲುಕಿದ್ದ ಅವರ ಜನಾಂಗದ ಮುಂದಾಳುಗಳು ಅವರೊಡನೆ (ಹೀಗೆ) ಹೇಳಿದರು, "ಓ ಶುಐಬ್, ನಾವು ನಿಮ್ಮನ್ನೂ ನಿಮ್ಮೊಂದಿಗೆ ವಿಶ್ವಾಸವಿಟ್ಟವರನ್ನೂ ನಮ್ಮ ನಾಡಿನಿಂದ ಹೊರಕ್ಕಟ್ಟುವೆವು. ಅನ್ಯಥಾ ನೀವು ನಮ್ಮ ಒಕ್ಕೂಟಕ್ಕೆ ಮರಳಿ ಬರಬೇಕಾದೀತು." (ಆಗ) ಶುಐಬರು (ಹೀಗೆ) ಉತ್ತರ ಕೊಟ್ಟರು- "ನಾವು ಒಪ್ಪದಿದ್ದರೂ ನಮ್ಮನ್ನು ಬಲಾತ್ಕಾರವಾಗಿ ತಿರುಗಿಸಲಾಗುವುದೇ?

قَالَ الْمَلَأُ الَّذِينَ اسْتَكْبَرُوا مِن قَوْمِهِ لَنُخْرِجَنَّكَ يَا شُعَيْبُ وَالَّذِينَ آمَنُوا مَعَكَ مِن قَرْيَتِنَا أَوْ لَتَعُودُنَّ فِي مِلَّتِنَا ۚ قَالَ أَوَلَوْ كُنَّا كَارِهِينَ ﴿٨٨﴾

89. ಅಲ್ಲಾಹನು ನಮ್ಮನ್ನು ನಿಮ್ಮ ಒಕ್ಕೂಟದಿಂದ ವಿಮೋಚನೆಗೊಳಿಸಿರುವಾಗ ನಾವು ಅದಕ್ಕೆ ಮರಳಿ ಬಂದರೆ ನಾವು ಅಲ್ಲಾಹನ ಮೇಲೆ ಸುಳ್ಳನ್ನು ಸೃಷ್ಟಿಸುವವರಾಗುವೆವು. ನಮ್ಮ ಪ್ರಭು ಅಲ್ಲಾಹನೇ ಆ ರೀತಿ ಇಚ್ಛಿಸುವ ವಿನಾ ನಮಗೆ ಅದರ ಕಡೆಗೆ ಮರಳಲು ಖಂಡಿತ ಸಾಧ್ಯವಾಗದು. ನಮ್ಮ ಪ್ರಭುವಿನ ಜ್ಞಾನವು ಸಕಲ ವಸ್ತುಗಳನ್ನಾವರಿಸಿಕೊಂಡಿದೆ. ನಾವು ಅವನ ಮೇಲೆಯೇ ಭರವಸೆಯನ್ನಿರಿಸಿದೆವು. ಓ ನಮ್ಮ ಪ್ರಭೂ, ನಮ್ಮ ಮತ್ತು ನಮ್ಮ ಜನಾಂಗದ ನಡುವೆ ಸರಿಯಾಗಿ ತೀರ್ಮಾನ ಮಾಡಿಬಿಡು. ನೀನು ಅತ್ಯುತ್ತಮ ತೀರ್ಪು ನೀಡುವವನಾಗಿರುತ್ತೀ."

قَدِ افْتَرَيْنَا عَلَى اللَّهِ كَذِبًا إِنْ عُدْنَا فِي مِلَّتِكُم بَعْدَ إِذْ نَجَّانَا اللَّهُ مِنْهَا ۚ وَمَا يَكُونُ لَنَا أَن نَّعُودَ فِيهَا إِلَّا أَن يَشَاءَ اللَّهُ رَبُّنَا ۚ وَسِعَ رَبُّنَا كُلَّ شَيْءٍ عِلْمًا ۚ عَلَى اللَّهِ تَوَكَّلْنَا ۚ رَبَّنَا افْتَحْ بَيْنَنَا وَبَيْنَ قَوْمِنَا بِالْحَقِّ وَأَنتَ خَيْرُ الْفَاتِحِينَ ﴿٨٩﴾

90. ಅವರನ್ನು ನಿರಾಕರಿಸಿದ ಅವರ ಜನಾಂಗದ ಮುಂದಾಳುಗಳು ತಮ್ಮೊಳಗೆ ಹೀಗೆ ಹೇಳಿದರು, "ನೀವು ಶುಐಬರ ಅನುಸರಣೆ ಮಾಡಿದರೆ ಹಾಳಾಗಿ ಹೋಗುವಿರಿ.[29]

وَقَالَ الْمَلَأُ الَّذِينَ كَفَرُوا مِن قَوْمِهِ لَئِنِ اتَّبَعْتُمْ شُعَيْبًا إِنَّكُمْ إِذًا لَّخَاسِرُونَ ﴿٩٠﴾

91. ಆದರೆ, ಒಂದು ಭೀಕರ ವಿಪತ್ತು ಬಂದು ಅವರನ್ನು ಆಕ್ರಮಿಸಿತು ಮತ್ತು ಅವರು ತಮ್ಮ ಮನೆಗಳಲ್ಲಿ ಅಧೋಮುಖರಾಗಿ ಬಿದ್ದಲ್ಲೇ ಬಿದ್ದುಬಿಟ್ಟರು.

فَأَخَذَتْهُمُ الرَّجْفَةُ فَأَصْبَحُوا فِي دَارِهِمْ جَاثِمِينَ ﴿٩١﴾

92. ಶುಐಬರನ್ನು ಸುಳ್ಳಾಗಿಸಿದವರು ಅವರ ಮನೆಗಳಲ್ಲಿ ವಾಸಿಸಲೇ ಇಲ್ಲವೋ ಎಂಬಂತೆ ಅಳಿದುಹೋದರು. ಕೊನೆಗೆ ಶುಐಬರನ್ನು ಸುಳ್ಳಾಗಿಸಿದವರೇ ಹಾಳಾಗಿ ಹೋದರು.

الَّذِينَ كَذَّبُوا شُعَيْبًا كَأَن لَّمْ يَغْنَوْا فِيهَا ۚ الَّذِينَ كَذَّبُوا شُعَيْبًا كَانُوا هُمُ الْخَاسِرِينَ ﴿٩٢﴾

***ಇಲ್ಲಿಂದ 9ನೆಯ ಕಾಂಡ ಆರಂಭ.**

29. ಇದು ಕೇವಲ ಶುಐಬ್‌ರ(ಅ) ಜನಾಂಗದ ಸರದಾರರಿಗೆ ಸೀಮಿತವಾದ ವಿಷಯವಲ್ಲ. ಸತ್ಯ, ಸನ್ಮಾರ್ಗ ಮತ್ತು ಪ್ರಾಮಾಣಿಕತೆಯ ಧೋರಣೆ ತಳೆಯುವುದರಲ್ಲಿ ಎಲ್ಲಾ ಕಾಲದ ಕೆಟ್ಟ ಜನರು ಇಂತಹುದೇ ಅಪಾಯಗಳನ್ನು ಗುರುತಿಸಿದ್ದಾರೆ. ವ್ಯಾಪಾರ, ರಾಜಕೀಯ ಮುಂತಾದ ಲೌಕಿಕ ವ್ಯವಹಾರಗಳೂ ಸುಳ್ಳು, ಅವಿಶ್ವಾಸ ಮತ್ತು ದುರ್ನಡತೆಯ ಹೊರತು ನಡೆಯಲಾರದು. ಪ್ರಾಮಾಣಿಕತೆಯನ್ನು ಪಾಲಿಸುವುದೆಂದರೆ ತನ್ನ ಲೋಕವನ್ನು ನಷ್ಟಪಡಿಸಿಕೊಳ್ಳುವುದಾಗಿದೆ ಎಂಬುದು ಎಲ್ಲಾ ಕಾಲದ ಪಥಭ್ರಷ್ಟ ಜನರ ಭಾವನೆಯಾಗಿತ್ತು.

93. ಶುಐಬರು, "ಓ ನನ್ನ ಜನಾಂಗ ಬಾಂಧವರೇ, ನಾನು ನನ್ನ ಪ್ರಭುವಿನ ಸಂದೇಶಗಳನ್ನು ನಿಮಗೆ ತಲಪಿಸಿದೆ. ನಿಮ್ಮ ಮೇಲಿನ ಹಿತಚಿಂತನೆಯ ಋಣವನ್ನು ಸಲ್ಲಿಸಿದೆ. ಈಗ ನಾನು ಸತ್ಯವನ್ನು ನಿರಾಕರಿಸುವಂತಹ ಜನಾಂಗಕ್ಕಾಗಿ ಖೇದ ಪಡುವುದೆಂತು?" ಎನ್ನುತ್ತ ತಮ್ಮ ನಾಡಿನಿಂದ ಹೊರಟು ಹೋಗಿಬಿಟ್ಟರು.

فَتَوَلّٰى عَنْهُمْ وَقَالَ يٰقَوْمِ لَقَدْ اَبْلَغْتُكُمْ رِسٰلٰتِ رَبِّيْ وَنَصَحْتُ لَكُمْ ۚ فَكَيْفَ اٰسٰى عَلٰى قَوْمٍ كٰفِرِيْنَ ﴿٩٣﴾

94. ಒಂದು ನಾಡಿಗೆ ನಾವು ಪ್ರವಾದಿಯನ್ನು ಕಳುಹಿಸಿದಾಗ, ಎಂದೂ ಆ ನಾಡಿನ ಜನರನ್ನು ಮೊದಲು ಅಭಾವ ಹಾಗೂ ಸಂಕಷ್ಟಗಳಿಗೊಳಪಡಿಸದೆ ಇರಲಿಲ್ಲ. ಅವರು ವಿನಮ್ರರಾಗಬಹುದೆಂದು (ಹೀಗೆ ಮಾಡಿದ್ದೆವು.)

وَمَآ اَرْسَلْنَا فِيْ قَرْيَةٍ مِّنْ نَّبِيٍّ اِلَّآ اَخَذْنَآ اَهْلَهَا بِالْبَاْسَآءِ وَالضَّرَّآءِ لَعَلَّهُمْ يَضَّرَّعُوْنَ ﴿٩٤﴾

95. ತರುವಾಯ ಅವರ ದಾರಿದ್ರ್ಯವನ್ನು ಸಮೃದ್ಧಿಯನ್ನಾಗಿ ಬದಲಾಯಿಸಿಬಿಟ್ಟೆವು. ಇದರಿಂದ ಅವರು ಚೆನ್ನಾಗಿ ಅಭಿವೃದ್ಧಿ ಹೊಂದಿದರು. ಆಗ ಅವರು, "ನಮ್ಮ ಪೂರ್ವಿಕರಿಗೂ ಕಷ್ಟ ಕಾಲಗಳೂ ಸುಖದ ಕಾಲಗಳೂ ಬರುತ್ತಲೇ ಇದ್ದುವು" ಎಂದು ಹೇಳತೊಡಗಿದರು. ಕೊನೆಗೆ ನಾವು ಅವರನ್ನು ಹಠಾತ್ತನೆ ಹಿಡಿದುಬಿಟ್ಟೆವು. ಅವರಿಗೆ ಅದರ ಸುಳಿವೂ ಸಿಗಲಿಲ್ಲ.[30]

ثُمَّ بَدَّلْنَا مَكَانَ السَّيِّئَةِ الْحَسَنَةَ حَتّٰى عَفَوْا وَّقَالُوْا قَدْ مَسَّ اٰبَآءَنَا الضَّرَّآءُ وَالسَّرَّآءُ فَاَخَذْنٰهُمْ بَغْتَةً وَّهُمْ لَا يَشْعُرُوْنَ ﴿٩٥﴾

96. ನಾಡಿನವರು ವಿಶ್ವಾಸವಿರಿಸುತ್ತಿದ್ದರೆ ಮತ್ತು ದೇವಭಯವಿರಿಸುತ್ತಿದ್ದರೆ, ನಾವು ಅವರಿಗೆ ಆಕಾಶ ಮತ್ತು ಭೂಮಿಯಿಂದ ಸಮೃದ್ಧಿಯ ದ್ವಾರಗಳನ್ನು ತೆರೆದು ಕೊಡುತ್ತಿದ್ದೆವು. ಆದರೆ ಅವರು ಸುಳ್ಳಾಗಿಸಿದರು. ಆದುದರಿಂದ ಅವರು ಶೇಖರಿಸುತ್ತಿದ್ದ ಕೆಟ್ಟ ಗಳಿಕೆಗಾಗಿ ಅವರನ್ನು ನಾವು ಹಿಡಿದುಬಿಟ್ಟೆವು.

وَلَوْ اَنَّ اَهْلَ الْقُرٰٓى اٰمَنُوْا وَاتَّقَوْا لَفَتَحْنَا عَلَيْهِمْ بَرَكٰتٍ مِّنَ السَّمَآءِ وَالْاَرْضِ وَلٰكِنْ كَذَّبُوْا فَاَخَذْنٰهُمْ بِمَا كَانُوْا يَكْسِبُوْنَ ﴿٩٦﴾

97. ನಾಡಿನವರು ರಾತ್ರೆ ನಿದ್ರಿಸುತ್ತಿದ್ದಾಗ ನಮ್ಮ ಯಾತನೆಯು ಹಠಾತ್ತನೆ ಬಂದು ಬಿಡಲಾರದೆಂದು ಈಗ ನಿರ್ಭೀತರಾಗಿರುವರೇ?

اَفَاَمِنَ اَهْلُ الْقُرٰٓى اَنْ يَّاْتِيَهُمْ بَاْسُنَا بَيَاتًا وَّهُمْ نَآئِمُوْنَ ﴿٩٧﴾

30. ಒಬ್ಬೊಬ್ಬ ಪ್ರವಾದಿ ಮತ್ತು ಒಂದೊಂದೇ ಜನಾಂಗದ ವಿವರಗಳನ್ನು ಪ್ರತ್ಯಪ್ರತ್ಯೇಕವಾಗಿ ವಿವರಿಸಿದ ಬಳಿಕ, ಎಲ್ಲಾ ಕಾಲಗಳಲ್ಲೂ ಪ್ರವಾದಿಗಳನ್ನು ನೇಮಿಸುವಾಗ ಅಲ್ಲಾಹನು ಅನುಸರಿಸುವ ಸಮಗ್ರ ನಿಯಮವನ್ನು ವಿವರಿಸಲಾಗುತ್ತಿದೆ. ಅದಾವುದೆಂದರೆ ಪ್ರವಾದಿಗಳನ್ನು ಕಳುಹಿಸುವ ಮೊದಲು ಆ ಜನಾಂಗವನ್ನು ಸಂಕಷ್ಟ ಮತ್ತು ವಿಕೋಪಗಳಿಗೆ ಗುರಿಪಡಿಸಲಾಗುತ್ತದೆ. ದೇವೋಪದೇಶಕ್ಕೆ ಅವರ ಕಿವಿಗಳು ತೆರೆದುಕೊಳ್ಳಲಿ ಮತ್ತು ಅವರು ದೇವನ ಮುಂದೆ ದೈನ್ಯತೆಯಿಂದ ಬಾಗಲು ಸಿದ್ಧರಾಗಲಿ ಎಂಬುದೇ ಇದರ ಉದ್ದೇಶ. ಇಂತಹ ಅನುಕೂಲಕರ ಪರಿಸ್ಥಿತಿಯಲ್ಲೂ ಅವರ ಹೃದಯ ಸತ್ಯಸ್ವೀಕಾರದ ಕಡೆಗೆ ವಾಲದಿದ್ದರೆ ಅವರನ್ನು ಸುಭಿಕ್ಷೆಯ ಪರೀಕ್ಷೆಗೆ ಒಳಪಡಿಸಲಾಗುತ್ತದೆ. ಆ ಮೂಲಕ ಅವರ ವಿನಾಶಕ್ಕೆ ಪೀಠಿಕೆ ಹಾಕಲಾಗುತ್ತದೆ. ಪ್ರವಾದಿಗಳನ್ನು ಉಲ್ಲಂಘಿಸಿದರೂ ಅನುಗ್ರಹಗಳ ಮಳೆಗರೆಯುತ್ತಿರುವುದನ್ನು ಕಂಡು ಮೇಲಿನಿಂದ ನಿಯಂತ್ರಿಸುವಂತಹ ಯಾವ ದೇವನೂ ಇಲ್ಲ ಎಂದವರು ಭಾವಿಸುತ್ತಾರೆ. ನಮಗೆ ನಾವೇ ದೊಡ್ಡವರೆಂಬ ಭಾವನೆ ಅವರ ಮನಸ್ಸನ್ನು ಆವರಿಸಿಕೊಳ್ಳುತ್ತದೆ. ಹೀಗೆ ಅಂತಿಮವಾಗಿ ಅವರು ದೇವಯಾತನೆಗೆ ಗುರಿಯಾಗಿ ಬಿಡುತ್ತಾರೆ.

98. ಅಥವಾ ಅವರು ಹಗಲು ಹೊತ್ತಿನಲ್ಲಿ ಕ್ರೀಡಾ ಮಗ್ನರಾಗಿದ್ದಾಗ ನಮ್ಮ ಯಾತನೆ ಎರಗಲಾರದೆಂದು ನಾಡಿನವರು ನಿಶ್ಚಿಂತರಾಗಿರುವರೇ?

أَوَأَمِنَ أَهْلُ الْقُرَىٰ أَنْ يَأْتِيَهُمْ بَأْسُنَا ضُحًى وَهُمْ يَلْعَبُونَ ﴿٩٨﴾

99. ಇವರು ಅಲ್ಲಾಹನ ನಿಗೂಢ ತಂತ್ರದ[31] ಬಗ್ಗೆ ನಿರ್ಭೀತರಾಗಿರುವರೇ? ವಸ್ತುತಃ ನಾಶ ಹೊಂದುವ ಜನಾಂಗ ಮಾತ್ರವೇ ಅಲ್ಲಾಹನ ನಿಗೂಢ ತಂತ್ರದಿಂದ ನಿರ್ಭೀತವಾಗಿರುವುದು.

أَفَأَمِنُوا مَكْرَ اللَّهِ ۚ فَلَا يَأْمَنُ مَكْرَ اللَّهِ إِلَّا الْقَوْمُ الْخَاسِرُونَ ﴿٩٩﴾

100. ನಾವಿಚ್ಛಿಸಿದರೆ ಅವರ ಪಾಪಗಳಿಗಾಗಿ ಅವರನ್ನು ಹಿಡಿಯಬಲ್ಲೆವೆಂಬ ವಾಸ್ತವಿಕತೆಯು ಭೂಮಿಯ ಪೂರ್ವ ನಿವಾಸಿಗಳ ಅನಂತರ ಅದರ ವಾರೀಸುದಾರರಾಗಿರುವವರಿಗೆ ಏನೂ ಪಾಠ ಕಲಿಸಿಕೊಡಲಿಲ್ಲವೆ? (ಆದರೆ ಅವರು ಬೋಧಪ್ರದ ವಾಸ್ತವಿಕತೆಯ ಬಗ್ಗೆ ಅನಾಸ್ಥೆ ವಹಿಸುತ್ತಾರೆ.) ನಾವು ಅವರ ಹೃದಯಗಳ ಮೇಲೆ ಮುದ್ರೆಯೊತ್ತುತ್ತೇವೆ. ಅನಂತರ ಅವರು ಏನನ್ನೂ ಆಲಿಸುವುದಿಲ್ಲ.

أَوَلَمْ يَهْدِ لِلَّذِينَ يَرِثُونَ الْأَرْضَ مِنْ بَعْدِ أَهْلِهَا أَنْ لَوْ نَشَاءُ أَصَبْنَاهُمْ بِذُنُوبِهِمْ ۚ وَنَطْبَعُ عَلَىٰ قُلُوبِهِمْ فَهُمْ لَا يَسْمَعُونَ ﴿١٠٠﴾

101. ನಾವು ನಿಮಗೆ ಯಾವ ಜನಾಂಗಗಳ ವೃತ್ತಾಂತಗಳನ್ನು ಹೇಳುತ್ತಿರುವೆವೋ ಅವರ (ಉದಾಹರಣೆಗಳು ನಿಮ್ಮ ಮುಂದಿವೆ.) ಪ್ರವಾದಿಗಳು ಅವರ ಮುಂದೆ ಸುವ್ಯಕ್ತ ಪ್ರಮಾಣಗಳನ್ನು ತಂದರು. ಆದರೆ ಅವರು ಒಮ್ಮೆ ಸುಳ್ಳಾಗಿಸಿದುದನ್ನು ಪುನಃ ಸ್ವೀಕರಿಸುವವರಾಗಿರಲಿಲ್ಲ. ನೋಡಿರಿ, ನಾವು ಇದೇ ರೀತಿಯಲ್ಲಿ ಸತ್ಯನಿಷೇಧಿಗಳ ಹೃದಯಗಳ ಮೇಲೆ ಮುದ್ರೆಯೊತ್ತಿ ಬಿಡುತ್ತೇವೆ.

تِلْكَ الْقُرَىٰ نَقُصُّ عَلَيْكَ مِنْ أَنْبَائِهَا ۚ وَلَقَدْ جَاءَتْهُمْ رُسُلُهُمْ بِالْبَيِّنَاتِ ۚ فَمَا كَانُوا لِيُؤْمِنُوا بِمَا كَذَّبُوا مِنْ قَبْلُ ۚ كَذَٰلِكَ يَطْبَعُ اللَّهُ عَلَىٰ قُلُوبِ الْكَافِرِينَ ﴿١٠١﴾

102. ನಾವು ಅವರ ಪೈಕಿ ಹೆಚ್ಚಿನವರಲ್ಲಿ ಯಾವ ಕರಾರು ಪಾಲನೆಯನ್ನೂ ಕಾಣಲಿಲ್ಲ. ಮಾತ್ರವಲ್ಲ ಹೆಚ್ಚಿನವರು 'ಕರ್ಮಭ್ರಷ್ಟ'ರಾಗಿರುವುದನ್ನೇ ಕಂಡೆವು.

وَمَا وَجَدْنَا لِأَكْثَرِهِمْ مِنْ عَهْدٍ ۖ وَإِنْ وَجَدْنَا أَكْثَرَهُمْ لَفَاسِقِينَ ﴿١٠٢﴾

103. ಆ ಬಳಿಕ (ಮೇಲೆ ಪ್ರಸ್ತಾಪಿಸಲಾದ) ಆ ಜನಾಂಗಗಳ ತರುವಾಯ ನಾವು ಮೂಸಾರನ್ನು ನಮ್ಮ ದೃಷ್ಟಾಂತಗಳ ಸಹಿತ ಫಿರ್‌ಔನ್ ಮತ್ತು ಅವನ ಜನಾಂಗದ ಸರದಾರರ ಬಳಿಗೆ ಕಳುಹಿಸಿದೆವು.[32]

ثُمَّ بَعَثْنَا مِنْ بَعْدِهِمْ مُوسَىٰ بِآيَاتِنَا إِلَىٰ فِرْعَوْنَ وَمَلَئِهِ فَظَلَمُوا بِهَا ۖ فَانْظُرْ

31. ಮೂಲದಲ್ಲಿ 'ಮಕರ್' ಎಂಬ ಪದ ಪ್ರಯೋಗವಾಗಿದೆ. ಅರಬಿ ಭಾಷೆಯಲ್ಲಿ ಅದರ ಅರ್ಥ 'ಸಂಚು' ಎಂದಾಗಿದೆ. ಅರ್ಥಾತ್ ಒಬ್ಬನಿಗೆ ನಿರ್ಣಾಯಕ ಹೊಡೆತ ಬೀಳುವ ತನಕವೂ ಆತನು ಎಲ್ಲವೂ ಸರಿಯಾಗಿಯೇ ಇದೆ. ತನಗೆ ಯಾವ ಬಾಧೆಯೂ ತಟ್ಟದು ಎಂದು ಬಾಹ್ಯ ವಿದ್ಯಮಾನಗಳನ್ನು ಕಂಡು ಭಾವಿಸುತ್ತಿರುವಂತೆ ಒಬ್ಬನ ವಿರುದ್ಧ ಒಳಸಂಚು ನಡೆಸುವುದು.

32. 'ಫಿರ್‌ಔನ್' ಎಂಬ ಶಬ್ದದ ಅರ್ಥ 'ಸೂರ್ಯ ದೇವತೆಯ ಸಂತತಿ' ಎಂದಾಗಿದೆ. ಈಜಿಪ್ಟ್‌ನ ಪುರಾತನ ಕಾಲದ ಜನರು ತಮ್ಮ ಪರಮ ದೇವನೆಂದು ಭಾವಿಸುತ್ತಿದ್ದ ಸೂರ್ಯನನ್ನು 'ರಅ್' ಎನ್ನುತ್ತಿದ್ದರು. ಅದರಿಂದಲೇ 'ಫಿರ್‌ಔನ್' ಎಂಬ ಪದ ಹುಟ್ಟಿ ಬಂದಿದೆ. ಇದು ಯಾವುದಾದರೊಬ್ಬ ವ್ಯಕ್ತಿಯ ಹೆಸರಲ್ಲ. ಈಜಿಪ್ಟಿನ ಎಲ್ಲಾ ರಾಜರುಗಳನ್ನೂ ಈ ಹೆಸರಿನಿಂದಲೇ ಕರೆಯುತ್ತಿದ್ದರು. ಇದು ರಷ್ಯಾದ ರಾಜರುಗಳನ್ನು 'ಝಾರ್' ಮತ್ತು ಇರಾನ್‌ನ ರಾಜರುಗಳನ್ನು 'ಕಿಸ್ರಾ' ಎಂದು ಕರೆಯುವಂತಿದೆ.

ಆದರೆ ಅವರೂ ನಮ್ಮ ದೃಷ್ಟಾಂತಗಳಿಗೆ ಅಕ್ರಮವೆಸಗಿದರು. ಆ ಕಿಡಿಗೇಡಿಗಳ ಪರಿಣಾಮವೇನಾಯಿತೆಂದು ನೋಡಿರಿ.

كَيْفَ كَانَ عَاقِبَةُ الْمُفْسِدِينَ

104. ಮೂಸಾ ಹೇಳಿದರು: "ಓ ಫಿರ್‌ಔನ್, ನಾನು ಸರ್ವಲೋಕ ಪಾಲಕನ ಕಡೆಯಿಂದ ಕಳುಹಿಸಲ್ಪಟ್ಟಿದ್ದೇನೆ.

وَقَالَ مُوسَىٰ يَا فِرْعَوْنُ إِنِّي رَسُولٌ مِّن رَّبِّ الْعَالَمِينَ

105. ಅಲ್ಲಾಹನ ನಾಮವೆತ್ತಿ ಸತ್ಯದ ಹೊರತು ಇನ್ನೇನನ್ನೂ ಹೇಳದಿರಲಿಕ್ಕಾಗಿಯೇ ನನ್ನನ್ನು ನಿಯೋಜಿಸಲಾಗಿದೆ. ನಾನು ನಿಮ್ಮ ಬಳಿಗೆ ನನ್ನ ಪ್ರಭುವಿನ ಕಡೆಯಿಂದ ನೇಮಕದ ಸುವ್ಯಕ್ತ ಪ್ರಮಾಣ ಹೊಂದಿ ಬಂದಿರುತ್ತೇನೆ. ಆದುದರಿಂದ ನೀನು ಬನೀಇಸ್‌ರಾಈಲರನ್ನು ನನ್ನ ಸಂಗಡ ಕಳುಹಿಸಿಕೊಡು.

حَقِيقٌ عَلَىٰ أَن لَّا أَقُولَ عَلَى اللَّهِ إِلَّا الْحَقَّ قَدْ جِئْتُكُم بِبَيِّنَةٍ مِّن رَّبِّكُمْ فَأَرْسِلْ مَعِيَ بَنِي إِسْرَائِيلَ

106. ಫಿರ್‌ಔನನು ಹೇಳಿದನು- "ನೀನು ದೃಷ್ಟಾಂತವೇನಾದರೂ ತಂದಿದ್ದರೆ ಹಾಗೂ ನೀನು ಸತ್ಯವಂತನಾಗಿದ್ದರೆ ಅದನ್ನು ಮುಂದಿಡು."

قَالَ إِن كُنتَ جِئْتَ بِآيَةٍ فَأْتِ بِهَا إِن كُنتَ مِنَ الصَّادِقِينَ

107. ಮೂಸಾ ತಮ್ಮ ಲಾಠಿಯನ್ನು ಎಸೆದರು. ಹಠಾತ್ತನೆ ಅದೊಂದು ಜೀವಂತ ಹೆಬ್ಬಾವಾಗಿತ್ತು.

فَأَلْقَىٰ عَصَاهُ فَإِذَا هِيَ ثُعْبَانٌ مُّبِينٌ

108. ಅವರು ತಮ್ಮ ಜೇಬಿನಿಂದ ಕೈ ಹೊರತೆಗೆದರು ಮತ್ತು ಅದು ಪ್ರೇಕ್ಷಕರ ಮುಂದೆ ಜಗ ಜಗಿಸುತ್ತಿತ್ತು.

وَنَزَعَ يَدَهُ فَإِذَا هِيَ بَيْضَاءُ لِلنَّاظِرِينَ

109. ಈ ಕಾರಣಕ್ಕಾಗಿ ಫಿರ್‌ಔನನ ಸರದಾರರು ಪರಸ್ಪರ ಹೇಳಿದರು- "ಖಂಡಿತವಾಗಿಯೂ ಇವನೊಬ್ಬ ನಿಪುಣ ಮಾಟಗಾರನಾಗಿರುತ್ತಾನೆ.

قَالَ الْمَلَأُ مِن قَوْمِ فِرْعَوْنَ إِنَّ هَٰذَا لَسَاحِرٌ عَلِيمٌ

110. ನಿಮ್ಮನ್ನು ನಿಮ್ಮ ಭೂಮಿಯಿಂದ ಹೊರ ಹಾಕಲಿಚ್ಛಿಸುತ್ತಾನೆ.[33] ಈಗ ನೀವೇನು ಹೇಳುತ್ತೀರಿ?"

يُرِيدُ أَن يُخْرِجَكُم مِّنْ أَرْضِكُمْ فَمَاذَا تَأْمُرُونَ

111. ಅನಂತರ ಅವರೆಲ್ಲರೂ, "ಇವನಿಗೂ ಇವನ ಸಹೋದರನಿಗೂ ಕಾದಿರಲು ಹೇಳಿರಿ. ಎಲ್ಲಾ ತಜ್ಞ ಮಾಟಗಾರರನ್ನು ನಿಮ್ಮಲ್ಲಿಗೆ ತರಲಿಕ್ಕಾಗಿ ಎಲ್ಲಾ ಪಟ್ಟಣಗಳಲ್ಲಿ ಹರಿಕಾರರನ್ನು ಕಳುಹಿಸಿರಿ" ಎಂದು ಫಿರ್‌ಔನ್‌ನಿಗೆ ಸೂಚಿಸಿದರು.

قَالُوا أَرْجِهْ وَأَخَاهُ وَأَرْسِلْ فِي الْمَدَائِنِ حَاشِرِينَ

33. ಮೂಸಾ(ಅ) ಅವರು ತಾನು ಪ್ರವಾದಿಯಾಗಿದ್ದೇನೆಂದು ವಾದಿಸಿಕೊಳ್ಳುವುದರ ಅರ್ಥವೇ ಅವರು ಸಮಸ್ತ ಜೀವನ ವ್ಯವಸ್ಥೆಯನ್ನು ಬದಲಾಯಿಸ ಬಯಸುತ್ತಾರೆ ಎಂದಾಗಿತ್ತು. ಸಹಜವಾಗಿಯೇ ರಾಜಕೀಯ ವ್ಯವಸ್ಥೆಯೂ ಅದರಲ್ಲಿ ಸೇರಿದೆ. ಏಕೆಂದರೆ ಸರ್ವಲೋಕಗಳ ಒಡೆಯನ ಪ್ರತಿನಿಧಿಯು ಇತರರ ಅನುಸರಣಶೀಲ ಪ್ರಜೆಯಾಗಿರಲಿಕ್ಕೆ ಬರುವುದಿಲ್ಲ. ಅವನು ಸ್ವತಃ ಅನುಕರಿಸಲ್ಪಡಲಿಕ್ಕೆ ಮತ್ತು ಆಡಳಿತ ನಿರ್ವಹಿಸಲಿಕ್ಕೆ ಬರುತ್ತಾನೆ. ಸತ್ಯನಿಷೇಧಿಯೊಬ್ಬನ ಆಡಳಿತಾಧಿಕಾರವನ್ನು ಸಮ್ಮತಿಸುವುದು ಪ್ರವಾದಿತ್ವದ ಪದವಿಗೆ ತೀರಾ ವಿರುದ್ಧವಾಗಿದೆ. ಆದ್ದರಿಂದಲೇ ಮೂಸಾರ(ಅ) ಬಾಯಿಯಿಂದ ಪ್ರವಾದಿತ್ವದ ಘೋಷಣೆಯನ್ನು ಕೇಳುತ್ತಲೇ ಫಿರ್‌ಔನ್ ಮತ್ತು ಅವನ ಸಾಮ್ರಾಜ್ಯದ ಪ್ರಭುತ್ವಗಳಿಗೆ, ಇಂತಹ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ರಾಂತಿಯ ಅಪಾಯ ತಲೆದೋರಿತು. ಈ ವ್ಯಕ್ತಿಯ ಮಾತಿಗೆ ಮಾನ್ಯತೆ ದೊರೆತರೆ ಅಧಿಕಾರ ನಮ್ಮ ಕೈಯಿಂದ ಹೊರಟು ಹೋಗುತ್ತದೆ ಎಂದು ಅವರು ಭಾವಿಸಿದರು.

112. ಆ ಪ್ರಕಾರ ಮಾಟಗಾರರು ಫಿರ್‌ಔನನ ಬಳಿಗೆ ಬಂದರು.

يَأْتُوكَ بِكُلِّ سٰحِرٍ عَلِيْمٍ ﴿١١٢﴾

113. ಅವರು (ಹೀಗೆ) ಹೇಳಿದರು: "ನಾವು ಗೆದ್ದರೆ ನಮಗೆ ಪ್ರತಿಫಲ ಖಂಡಿತವಾಗಿಯೂ ಸಿಗುವುದಲ್ಲವೇ?"

وَجَآءَ السَّحَرَةُ فِرْعَوْنَ قَالُوْٓا اِنَّ لَنَا لَاَجْرًا اِنْ كُنَّا نَحْنُ الْغٰلِبِيْنَ ﴿١١٣﴾

114. ಫಿರ್‌ಔನನು ಉತ್ತರ ಕೊಟ್ಟನು, "ಹೌದು. ಜೊತೆಗೇ ನೀವು ಆಸ್ಥಾನದ ನಿಕಟವರ್ತಿಗಳೂ ಆಗುವಿರಿ."

قَالَ نَعَمْ وَاِنَّكُمْ لَمِنَ الْمُقَرَّبِيْنَ ﴿١١٤﴾

115. ಅನಂತರ ಅವರು ಮೂಸಾರೊಡನೆ, "ನೀವು ಎಸೆಯುತ್ತೀರಾ ಅಥವಾ ನಾವು ಎಸೆಯಬೇಕೇ?" ಎಂದು ಕೇಳಿದರು.

قَالُوْا يٰمُوْسٰٓى اِمَّآ اَنْ تُلْقِيَ وَاِمَّآ اَنْ نَّكُوْنَ نَحْنُ الْمُلْقِيْنَ ﴿١١٥﴾

116. ಮೂಸಾರು, "ನೀವೇ ಎಸೆಯಿರಿ" ಎಂದರು. ಅವರು ತಮ್ಮ ಮಂತ್ರ ದಂಡಗಳನ್ನೆಸೆದು ದೃಷ್ಟಿಗಳನ್ನು ವಶೀಕರಿಸಿ ಹೃದಯಗಳನ್ನು ಭಯಗ್ರಸ್ತಗೊಳಿಸಿದರು ಮತ್ತು ಅವರು ಭಾರೀ ದೊಡ್ಡ ಮಾಟವನ್ನೇ ತಂದಿದ್ದರು.

قَالَ اَلْقُوْا ۚ فَلَمَّآ اَلْقَوْا سَحَرُوْٓا اَعْيُنَ النَّاسِ وَاسْتَرْهَبُوْهُمْ وَجَآءُوْ بِسِحْرٍ عَظِيْمٍ ﴿١١٦﴾

117. ನಾವು ಮೂಸಾರಿಗೆ ಲಾಠಿಯನ್ನು ಎಸೆದು ಬಿಡಿರೆಂದು ಸೂಚನೆ ಕೊಟ್ಟೆವು. ಅದನ್ನು ಎಸೆದೊಡನೆ ಕ್ಷಣಾರ್ಧದಲ್ಲಿ ಅದು ಅವರ ಮೋಸದ ಮಾಟವನ್ನು ನುಂಗುತ್ತಾ ಸಾಗಿತು.

وَاَوْحَيْنَآ اِلٰى مُوْسٰٓى اَنْ اَلْقِ عَصَاكَ ۚ فَاِذَا هِيَ تَلْقَفُ مَا يَاْفِكُوْنَ ﴿١١٧﴾

118. ಹೀಗೆ ಸತ್ಯವಿದ್ದುದು ಸತ್ಯವಾಗಿಯೇ ಸ್ಥಿರಪಟ್ಟಿತು. ಅವರು ಮಾಡಿಟ್ಟದ್ದೆಲ್ಲ ಮಿಥ್ಯವಾಯಿತು.

فَوَقَعَ الْحَقُّ وَبَطَلَ مَا كَانُوْا يَعْمَلُوْنَ ﴿١١٨﴾

119. ಫಿರ್‌ಔನ್ ಮತ್ತು ಅವನ ಸಂಗಡಿಗರು ಸ್ಪರ್ಧಾರಂಗದಲ್ಲಿ ಸೋತು ಹೋದರು (ಮತ್ತು ವಿಜಯಿಗಳಾಗುವ ಬದಲು)- ಅವಮಾನಿತರಾದರು.

فَغُلِبُوْا هُنَالِكَ وَانْقَلَبُوْا صٰغِرِيْنَ ﴿١١٩﴾

120. ಯಾವುದೋ ಒಂದು ವಸ್ತುವು ಮಾಟಗಾರರ ಅಂತರಂಗದಿಂದಲೇ ಅವರನ್ನು ಸಾಷ್ಟಾಂಗವೆರಗುವಂತೆ ಮಾಡಿತು.

وَاُلْقِيَ السَّحَرَةُ سٰجِدِيْنَ ﴿١٢٠﴾

121. ಅವರು, "ನಾವು ಸರ್ವಲೋಕಪಾಲಕನನ್ನು ನಂಬಿದೆವು-

قَالُوْٓا اٰمَنَّا بِرَبِّ الْعٰلَمِيْنَ ﴿١٢١﴾

122. ಮೂಸಾ ಮತ್ತು ಹಾರೂನ್ ನಂಬುವ ಪ್ರಭುವನ್ನು"- ಎಂದರು.[34]

رَبِّ مُوْسٰى وَهٰرُوْنَ ﴿١٢٢﴾

34. ಹೀಗೆ ಅಲ್ಲಾಹನು ಫಿರ್‌ಔನ್ ಮತ್ತವನ ಸಂಗಡಿಗರ ಉಪಾಯವು ಅವರಿಗೇ ತಿರುಗಿ ಬೀಳುವಂತೆ ಮಾಡಿದನು. ಅವನು ದೇಶದ ಎಲ್ಲಾ ಪರಿಣತ ಜಾದೂಗಾರರನ್ನು ಕರೆಸಿ ಸಾರ್ವಜನಿಕರ ಮುಂದೆ ಪ್ರದರ್ಶನ ಏರ್ಪಡಿಸಿದನು. ಮೂಸಾರನ್ನು(ಅ) ಜಾದೂಗಾರನೆಂದು

123. ಫಿರ್‌ಔನನು ಹೇಳಿದನು- "ನಾನು ನಿಮಗೆ ಅಪ್ಪಣೆ ಕೊಡುವುದಕ್ಕಿಂತ ಮುಂಚೆ ನೀವು ಅವನ ಮೇಲೆ ವಿಶ್ವಾಸವಿಟ್ಟಿರಾ? ನಿಶ್ಚಯ ವಾಗಿಯೂ ಇದು ಈ ರಾಜಧಾನಿಯಲ್ಲಿ ಇದರ ಮಾಲಿಕರನ್ನು ಅಧಿಕಾರಚ್ಯುತರಾಗಿ ಮಾಡಲಿಕ್ಕಾಗಿ ನೀವು ಹೂಡಿದ ಒಳಸಂಚಾ ಗಿತ್ತು. ಇದರ ಪರಿಣಾಮವು ಸದ್ಯದಲ್ಲೇ ನಿಮಗೆ ತಿಳಿಯಲಿದೆ.

قَالَ فِرْعَوْنُ آمَنتُم بِهِ قَبْلَ أَنْ آذَنَ لَكُمْ ۖ إِنَّ هَٰذَا لَمَكْرٌ مَّكَرْتُمُوهُ فِي الْمَدِينَةِ لِتُخْرِجُوا مِنْهَا أَهْلَهَا ۖ فَسَوْفَ تَعْلَمُونَ ﴿١٢٣﴾

124. ನಾನು ನಿಮ್ಮ ಕೈಕಾಲುಗಳನ್ನು ವಿರುದ್ಧ ದಿಕ್ಕುಗಳಿಂದ ಕಡಿಸಿ ಬಿಡುವೆನು. ಅನಂತರ ನಿಮ್ಮೆಲ್ಲರನ್ನು ಶಿಲುಬೆಗೇರಿಸುವೆನು."

لَأُقَطِّعَنَّ أَيْدِيَكُمْ وَأَرْجُلَكُم مِّنْ خِلَافٍ ثُمَّ لَأُصَلِّبَنَّكُمْ أَجْمَعِينَ ﴿١٢٤﴾

125. ಅವರು ಉತ್ತರಿಸಿದರು- "ನಮಗಂತು ನಮ್ಮ ಪ್ರಭುವಿನ ಕಡೆಗೇ ಮರಳಲಿಕ್ಕಿದೆ.

قَالُوا إِنَّا إِلَىٰ رَبِّنَا مُنقَلِبُونَ ﴿١٢٥﴾

126. ನಮ್ಮ ಪ್ರಭುವಿನ ದೃಷ್ಟಾಂತಗಳು ನಮ್ಮ ಮುಂದೆ ಬಂದಾಗ ನಾವು ಅವುಗಳ ಮೇಲೆ ವಿಶ್ವಾಸವಿರಿಸಿದೆವೆಂಬ ಕಾರಣಕ್ಕಾಗಿಯೇ ವಿನಾ ಇನ್ನಾವುದಕ್ಕೂ ನೀನು ನಮ್ಮ ವಿರುದ್ಧ ಪ್ರತೀಕಾರಕ್ಕಿಳಿಯುವು ದಿಲ್ಲ. ಓ ನಮ್ಮ ಪ್ರಭೂ, ನಮಗೆ ಸಹನೆಯನ್ನು ಅನುಗ್ರಹಿಸು. ನಾವು ನಿನ್ನ ಮುಸ್ಲಿಮ(ವಿಧೇಯ ಆಜ್ಞಾಪಾಲಕ)ರಾಗಿರುವ ಸ್ಥಿತಿಯಲ್ಲಿ ನೀನು ನಮ್ಮನ್ನು ಈ ಲೋಕದಿಂದ ಎತ್ತಿಕೋ."[35]

وَمَا تَنقِمُ مِنَّا إِلَّا أَنْ آمَنَّا بِآيَاتِ رَبِّنَا لَمَّا جَاءَتْنَا ۚ رَبَّنَا أَفْرِغْ عَلَيْنَا صَبْرًا وَتَوَفَّنَا مُسْلِمِينَ ﴿١٢٦﴾

127. ಫಿರ್‌ಔನನೊಡನೆ ಅವನ ಜನಾಂಗದ ಸರದಾರರು ಹೀಗೆಂದರು: "ನೀನು ಮೂಸಾ ಮತ್ತು ಅವನ ಜನಾಂಗವನ್ನು ದೇಶದಲ್ಲಿ

وَقَالَ الْمَلَأُ مِن قَوْمِ فِرْعَوْنَ أَتَذَرُ مُوسَىٰ وَقَوْمَهُ لِيُفْسِدُوا فِي الْأَرْضِ وَيَذَرَكَ

---

ಜನರಿಗೆ ದೃಢಪಡಿಸುವುದು ಇದರ ಉದ್ದೇಶವಾಗಿತ್ತು. ಅಥವಾ ಕನಿಷ್ಠಪಕ್ಷ ಅವರ ಬಗ್ಗೆ ಜನರಲ್ಲಿ ಸಂಶಯ ಮೂಡಬೇಕೆಂದು ಅವರು ಭಾವಿಸಿದ್ದರು. ಆದರೆ ಈ ಸ್ಪರ್ಧೆಯಲ್ಲಿ ಸೋತ ನಂತರ ಅವರಿಂದ ಆಹ್ವಾನಿಸಲ್ಪಟ್ಟ ಜಾದೂಗಾರರೇ, "ಮೂಸಾರು(ಅ) ಸಮರ್ಪಿಸುತ್ತಿರುವುದು ನಿಶ್ಚಯವಾಗಿ ಜಾದೂ ಅಲ್ಲ. ಖಂಡಿತವಾಗಿಯೂ ಅದು ಸರ್ವಲೋಕಗಳ ಒಡೆಯನ ಶಕ್ತಿಯ ಮಹಿಮೆ ಯಾಗಿದೆ. ಅದರ ಮುಂದೆ ಎಂತಹ ಜಾದುವೂ ನಡೆಯಲಾರದು" ಎಂದು ಒಮ್ಮತಾಭಿಪ್ರಾಯದಿಂದ ನಿರ್ಧರಿಸಿದರು.

35. ಫಿರ್‌ಔನ್ ತನ್ನ ಉಪಾಯ ತಲೆಕೆಳಗಾಗುತ್ತಿರುವುದನ್ನು ಕಂಡು ಕೊನೆಯದಾಗಿ ಇನ್ನೊಂದು ಸಂಚು ಹೂಡಿದನು. ಈ ಸಮಸ್ತ ಪ್ರಕರಣವನ್ನು ಅವನು ಮೂಸಾ ಮತ್ತು ಜಾದೂಗಾರರ ಹೂಟವೆಂದು ಸಾರಿ ಅವರಿಗೆ ದೈಹಿಕ ಶಿಕ್ಷೆ ಮತ್ತು ಕೊಲೆಯ ಬೆದರಿಕೆ ಹಾಕಿದನು. ಆ ಮೂಲಕ ಅವರು ತಪ್ಪೊಪ್ಪಿಕೊಳ್ಳಲಿ ಎಂದು ಅವನು ಬಯಸಿದ್ದನು. ಆದರೆ ಅವನ ಈ ತಂತ್ರವೂ ವಿಫಲವಾಯಿತು. ಜಾದೂಗಾರರು ಎಂತಹ ಶಿಕ್ಷೆಗೂ ಸಿದ್ಧವೆಂದು ಸಾರಿ ತಮ್ಮನ್ನು ಅರ್ಪಿಸಿ ಕೊಂಡರು. ಮೂಸಾರ(ಅ) ಸತ್ಯಸಂಧತೆಯ ಮೇಲೆ ವಿಶ್ವಾಸವಿಡುವುದಕ್ಕೆ ಕಾರಣ ಒಳಸಂಚಲ್ಲ ಬದಲಾಗಿ ಸತ್ಯದ ಅಂಗೀಕಾರವಾಗಿದೆ ಎಂದು ಆ ಮೂಲಕ ಅವರು ಸಾಬೀತುಪಡಿಸಿದರು. ಸತ್ಯವಿಶ್ವಾಸವು ಕೆಲವು ಕ್ಷಣಗಳಲ್ಲೇ ಆ ಜಾದೂಗಾರರ ಮನಸ್ಸಿನಲ್ಲಿ ಎಂತಹ ಪರಿವರ್ತನೆಯುಂಟು ಮಾಡಿತು ಎಂಬುದೂ ಇಲ್ಲಿ ಗಮನಾರ್ಹ. ಸ್ವಲ್ಪ ಹೊತ್ತಿಗೆ ಮೊದಲು ಅವರು ತಮ್ಮ ಪೂರ್ವಜರ ಧರ್ಮದ ಬೆಂಬಲಕ್ಕಾಗಿ ತಮ್ಮ ಮನೆಗಳಿಂದ ಹೊರಟು ಬಂದಿದ್ದರು. ನಮ್ಮ ಧರ್ಮವನ್ನು ಮೂಸಾರ(ಅ) ಆಕ್ರಮಣದಿಂದ ರಕ್ಷಿಸುವಲ್ಲಿ ಸಫಲರಾದರೆ ಸರ್ಕಾರದಿಂದ ನಮಗೇನು ಉಡುಗೊರೆ ಸಿಗುವುದು ಎಂದು ಅವರು ಫಿರ್‌ಔನನೊಡನೆ ಕೇಳುತ್ತಿದ್ದರು. ಆದರೆ ಸತ್ಯವಿಶ್ವಾಸದ ಅನುಗ್ರಹ ಪ್ರಾಪ್ತವಾದಾಗ ಅವರ ಸತ್ಯಸಂಧತೆ ಮತ್ತು ದೃಢಚಿತ್ತತೆ ಪರಾಕಾಷ್ಠೆಗೆ ತಲಪಿತು. ಸ್ವಲ್ಪ ಹೊತ್ತು ಮೊದಲು ಅವರು ದುರಾಶೆಯಿಂದ ರಾಜನ ಮುಂದೆ ಕೈಯೊಡ್ಡುತ್ತಿದ್ದರು. ಆದರೆ ಈಗ ಅವರು ಅವನ ದೊಡ್ಡಸ್ತಿಕೆ ಮತ್ತು ಗರ್ವವನ್ನು ಮೆಟ್ಟಿ ನಿಂತು ಅತ್ಯಂತ ಭಯಾನಕ ಯಾತನೆಯ ಬಗ್ಗೆ ಅವನು ನೀಡಿದ್ದ ಬೆದರಿಕೆಯನ್ನು ಸ್ವೀಕರಿ ಸಲು ಸಿದ್ಧರಾಗಿದ್ದರು. ತಮ್ಮ ಮುಂದೆ ಅನಾವರಣಗೊಂಡಿದ್ದ ಸತ್ಯವನ್ನು ಯಾವ ಕಾರಣಕ್ಕೂ ಬಿಟ್ಟು ಬಿಡಲು ಅವರು ಸಿದ್ಧರಿರಲಿಲ್ಲ.

ಗೊಂದಲಗಳನ್ನು ಹಬ್ಬಿಸುತ್ತಿರಲಿಕ್ಕೂ ನಿನ್ನ ಹಾಗೂ ನಿನ್ನ ಆರಾಧ್ಯರ ಆರಾಧನೆಯನ್ನು ತೊರೆದು ಬಿಟ್ಟಿರಲಿಕ್ಕೂ ಹೀಗೆಯೇ ಬಿಟ್ಟು ಬಿಡುವೆಯಾ?" ಫಿರ್‌ಔನನು ಹೇಳಿದನು: "ನಾನು ಅವರ ಗಂಡು ಮಕ್ಕಳನ್ನು ಕೊಲೆ ಮಾಡಿಸುವೆನು ಮತ್ತು ಅವರ ಹೆಣ್ಮಕ್ಕಳನ್ನು ಜೀವಂತ ವಿರಲು ಬಿಡುವೆನು.[36] ಅವರ ಮೇಲೆ ನಮ್ಮ ಅಧಿಕಾರದ ಹಿಡಿತ ಬಿಗಿಯಾಗಿದೆ."

وَآلِهَتَكَ ۚ قَالَ سَنُقَتِّلُ أَبْنَاءَهُمْ وَنَسْتَحْيِي نِسَاءَهُمْ وَإِنَّا فَوْقَهُمْ قَاهِرُونَ ﴿١٢٧﴾

128. ಮೂಸಾ ತಮ್ಮ ಜನಾಂಗದೊಡನೆ ಹೀಗೆಂದರು: "ಅಲ್ಲಾಹನೊಡನೆ ಸಹಾಯ ಯಾಚಿಸಿರಿ ಮತ್ತು ತಾಳ್ಮೆ ವಹಿಸಿರಿ. ಭೂಮಿ ಅಲ್ಲಾಹನದು. ಅವನು ತನ್ನ ದಾಸರಲ್ಲಿ ತನಗಿಷ್ಟ ಬಂದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ.[37] ಅಂತಿಮ ವಿಜಯವು ಅವನನ್ನು ಭಯಪಟ್ಟು ವರ್ತಿಸುವವರಿಗಾಗಿದೆ."

قَالَ مُوسَىٰ لِقَوْمِهِ اسْتَعِينُوا بِاللَّهِ وَاصْبِرُوا ۖ إِنَّ الْأَرْضَ لِلَّهِ يُورِثُهَا مَنْ يَشَاءُ مِنْ عِبَادِهِ ۖ وَالْعَاقِبَةُ لِلْمُتَّقِينَ ﴿١٢٨﴾

129. ಅವರ ಜನಾಂಗದವರು ಹೇಳಿದರು: "ನೀವು ಬರುವುದಕ್ಕೆ ಮುಂಚೆಯೂ ನಾವು ಸತಾಯಿಸಲ್ಪಡುತ್ತಿದ್ದೆವು. ಈಗ ನೀವು ಬಂದ ಬಳಿಕವೂ ಸತಾಯಿಸಲ್ಪಡುತ್ತಿದ್ದೇವೆ." ಅವರು ಹೀಗೆ ಹೇಳಿದರು: "ನಿಮ್ಮ ಪ್ರಭು ನಿಮ್ಮ ಶತ್ರುವನ್ನು ನಾಶಗೊಳಿಸುವ ಹಾಗೂ ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳನ್ನಾಗಿ ಮಾಡುವ ಸಮಯ ಸನ್ನಿಹಿತವಾಗಿದೆ. ಆಮೇಲೆ ಅವನು ನೀವು ಹೇಗೆ ವರ್ತಿಸುತ್ತೀರೆಂದು ನೋಡುವನು."

قَالُوا أُوذِينَا مِنْ قَبْلِ أَنْ تَأْتِيَنَا وَمِنْ بَعْدِ مَا جِئْتَنَا ۚ قَالَ عَسَىٰ رَبُّكُمْ أَنْ يُهْلِكَ عَدُوَّكُمْ وَيَسْتَخْلِفَكُمْ فِي الْأَرْضِ فَيَنْظُرَ كَيْفَ تَعْمَلُونَ ﴿١٢٩﴾

130. ಫಿರ್‌ಔನನ ಜನರಿಗೆ ಬುದ್ಧಿ ಬರಬಹುದೆಂದು ನಾವು ಅವರನ್ನು ಅನೇಕ ವರ್ಷಗಳ ವರೆಗೆ ಬರಗಾಲ ಮತ್ತು ಫಲಗಳ ಅಭಾವದಲ್ಲಿ ಸಿಲುಕಿಸಿಟ್ಟೆವು.

وَلَقَدْ أَخَذْنَا آلَ فِرْعَوْنَ بِالسِّنِينَ وَنَقْصٍ مِنَ الثَّمَرَاتِ لَعَلَّهُمْ يَذَّكَّرُونَ ﴿١٣٠﴾

131. ಆದರೆ, ಅವರಿಗೆ ಸುದಿನಗಳು ಬಂದಾಗ ಅವರು, ನಾವು ಇದಕ್ಕೇ ಅರ್ಹರಾಗಿದ್ದೆವೆನ್ನುತ್ತಿದ್ದರು. ದುರ್ದಿನಗಳು ಬಂದಾಗ ಮೂಸಾ ಮತ್ತು ಅವರ ಸಂಗಡಿಗರನ್ನು ಅಪಶಕುನವೆನ್ನುತ್ತಿದ್ದರು. ವಸ್ತುತಃ ಅವರ ಅಪಶಕುನವು ಅಲ್ಲಾಹನ ಕೈಯಲ್ಲಿತ್ತು. ಆದರೆ ಅವರಲ್ಲಿ ಹೆಚ್ಚಿನವರು ಅರಿವಿಲ್ಲದವರಾಗಿದ್ದರು.

فَإِذَا جَاءَتْهُمُ الْحَسَنَةُ قَالُوا لَنَا هَٰذِهِ ۖ وَإِنْ تُصِبْهُمْ سَيِّئَةٌ يَطَّيَّرُوا بِمُوسَىٰ وَمَنْ مَعَهُ ۗ أَلَا إِنَّمَا طَائِرُهُمْ عِنْدَ اللَّهِ وَلَٰكِنَّ أَكْثَرَهُمْ لَا يَعْلَمُونَ ﴿١٣١﴾

36. ಹಿಂಸೆಯ ಒಂದು ಯುಗವು ಹ. ಮೂಸಾರ(ಅ) ಜನನಕ್ಕೆ ಮೊದಲು ಜಾರಿಗೊಂಡಿತ್ತು. ಮೂಸಾರ(ಅ) ಪ್ರವಾದಿತ್ವದ ನಂತರ ಈ ಎರಡನೆಯ ಹಿಂಸಾಯುಗ ಆರಂಭಗೊಂಡಿತು. ಎರಡೂ ಯುಗಗಳಲ್ಲಿದ್ದ ಒಂದು ಸಾಮಾನ್ಯ ಅಂಶವೆಂದರೆ ಬನೀಇಸ್ರಾಈಲರ ಪುತ್ರರನ್ನು ವಧಿಸಲಾಯಿತು ಮತ್ತು ಅವರ ಪುತ್ರಿಯರನ್ನು ಜೀವಿಸಲು ಬಿಡಲಾಯಿತು. ಕ್ರಮೇಣ ಅವರ ವಂಶ ಕೊನೆಗೊಂಡು ಅವರು ಇತರ ಜನಾಂಗಗಳಲ್ಲಿ ಲೀನವಾಗಿ ಬಿಡಬೇಕು ಎಂಬುದು ಇದರ ಉದ್ದೇಶವಾಗಿತ್ತು.

37. ಇಂದಿನ ಕಾಲದಲ್ಲಿ ಕೆಲವರು ಈ ಸೂಕ್ತದ "ಭೂಮಿಯು ಅಲ್ಲಾಹನದು" ಎಂಬ ಭಾಗವನ್ನು ಆಯ್ದುಕೊಳ್ಳುತ್ತಾರೆ. ಆದರೆ "ಯಾರನ್ನು ಬೇಕಾದರೂ ಅವನು ಅದರ ವಾರೀಸುದಾರರನ್ನಾಗಿ ಮಾಡುತ್ತಾನೆ" ಎಂಬ ಅನಂತರದ ಭಾಗವನ್ನು ಬಿಟ್ಟು ಬಿಡುತ್ತಾರೆ.

132. ಅವರು ಮೂಸಾರೊಡನೆ, "ನೀನು ನಮ್ಮನ್ನು ಆಕರ್ಷಿಸಲು ಎಂತಹ ದೃಷ್ಟಾಂತವನ್ನು ತಂದರೂ ನಾವು ನಿನ್ನ ಮಾತನ್ನು ನಂಬುವವರಲ್ಲ" ಎಂದರು.

وَقَالُوا مَهْمَا تَأْتِنَا بِهِ مِنْ آيَةٍ لِتَسْحَرَنَا
بِهَا فَمَا نَحْنُ لَكَ بِمُؤْمِنِينَ ﴿١٣٢﴾

133. ಕೊನೆಗೆ ನಾವು ಅವರ ಮೇಲೆ ಚಂಡಮಾರುತ ಕಳುಹಿಸಿದೆವು. ಮಿಡತೆಗಳ ಕೂಟವನ್ನು ಬಿಟ್ಟೆವು. (ಧಾನ್ಯ ಕೆಡಿಸುವ) ಕೀಟಗಳನ್ನು ಹಬ್ಬಿಸಿದೆವು. ಕಪ್ಪೆಗಳನ್ನು ಹೊರಡಿಸಿದೆವು, ರಕ್ತವನ್ನು ಸುರಿಸಿದೆವು. ಇವೆಲ್ಲ ದೃಷ್ಟಾಂತಗಳನ್ನು ಬೇರೆ ಬೇರೆಯಾಗಿ ತೋರಿಸಿದೆವು. ಆದರೆ, ಅವರು ಅಹಂಕಾರವೆಸಗುತ್ತಲೇ ಸಾಗಿದರು ಮತ್ತು ಅವರು ಮಹಾ ಅಪರಾಧಿ ಜನಾಂಗವಾಗಿದ್ದರು.

فَأَرْسَلْنَا عَلَيْهِمُ الطُّوفَانَ وَالْجَرَادَ
وَالْقُمَّلَ وَالضَّفَادِعَ وَالدَّمَ آيَاتٍ مُفَصَّلَاتٍ
فَاسْتَكْبَرُوا وَكَانُوا قَوْمًا مُجْرِمِينَ ﴿١٣٣﴾

134. ಅವರ ಮೇಲೆ ವಿಪತ್ತು ಎರಗಿದಾಗ ಅವರು ಹೀಗೆನ್ನುತ್ತಿದ್ದರು: "ಓ ಮೂಸಾ, ನಿನಗೆ ನಿನ್ನ ಪ್ರಭುವಿನ ವತಿಯಿಂದ ದೊರೆತಿರುವ ಪದವಿಯ ಆಧಾರದಲ್ಲಿ ನಮಗಾಗಿ ಪ್ರಾರ್ಥಿಸು. ನೀನು ಈ ಸಲ ನಮ್ಮ ಮೇಲಿಂದ ಈ ವಿಪತ್ತನ್ನು ಹೋಗಲಾಡಿಸಿ ಬಿಟ್ಟರೆ ನಾವು ನಿನ್ನ ಮಾತನ್ನು ನಂಬುವೆವು ಮತ್ತು ಬನೀಇಸ್ರಾಈಲರನ್ನು ನಿನ್ನೊಂದಿಗೆ ಕಳುಹಿಸುವೆವು."

وَلَمَّا وَقَعَ عَلَيْهِمُ الرِّجْزُ قَالُوا يَا مُوسَى
ادْعُ لَنَا رَبَّكَ بِمَا عَهِدَ عِنْدَكَ لَئِنْ
كَشَفْتَ عَنَّا الرِّجْزَ لَنُؤْمِنَنَّ لَكَ
وَلَنُرْسِلَنَّ مَعَكَ بَنِي إِسْرَائِيلَ ﴿١٣٤﴾

135. ಆದರೆ, ನಾವು ಅವರ ಮೇಲಿಂದ ನಮ್ಮ ಯಾತನೆಯನ್ನು, ಅವರು ಪೂರ್ತಿಗೊಳಿಸಲಿಕ್ಕಿದ್ದ ಒಂದು ಅವಧಿಯವರೆಗೆ ಸರಿಸಿಬಿಡುತ್ತಿದ್ದರೆ ಅವರು ಒಮ್ಮೆಲೆ ವಚನಭಂಗ ಮಾಡುತ್ತಿದ್ದರು.

فَلَمَّا كَشَفْنَا عَنْهُمُ الرِّجْزَ إِلَىٰ أَجَلٍ هُمْ
بَالِغُوهُ إِذَا هُمْ يَنْكُثُونَ ﴿١٣٥﴾

136. ಆಗ ನಾವು ಅವರಿಂದ ಪ್ರತೀಕಾರ ಪಡೆದೆವು ಮತ್ತು ಅವರನ್ನು ಸಮುದ್ರದಲ್ಲಿ ಮುಳುಗಿಸಿ ಬಿಟ್ಟೆವು. ಏಕೆಂದರೆ, ಅವರು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದ್ದರು ಮತ್ತು ಅವುಗಳ ಬಗ್ಗೆ ಅಲಕ್ಷ್ಯರಾಗಿದ್ದರು.

فَانْتَقَمْنَا مِنْهُمْ فَأَغْرَقْنَاهُمْ فِي الْيَمِّ بِأَنَّهُمْ
كَذَّبُوا بِآيَاتِنَا وَكَانُوا عَنْهَا غَافِلِينَ ﴿١٣٦﴾

137. ಅವರ ಸ್ಥಾನದಲ್ಲಿ ದುರ್ಬಲರಾಗಿರಿಸಲ್ಪಟ್ಟಿದ್ದವರನ್ನು ನಾವು ಸಮೃದ್ಧಿಯನ್ನಿರಿಸಿದ್ದ ಆ ಭೂಭಾಗದ ಪೂರ್ವ ಪಶ್ಚಿಮಗಳ ವಾರೀಸುದಾರರನ್ನಾಗಿ ಮಾಡಿಬಿಟ್ಟೆವು.[38] ಈ ರೀತಿಯಲ್ಲಿ ಬನೀಇಸ್‌ರಾಈಲರಿಗೆ ನೀಡಿದ್ದ ನಿನ್ನ ಪ್ರಭುವಿನ ಉತ್ತಮ

وَأَوْرَثْنَا الْقَوْمَ الَّذِينَ كَانُوا يُسْتَضْعَفُونَ
مَشَارِقَ الْأَرْضِ وَمَغَارِبَهَا الَّتِي بَارَكْنَا
فِيهَا وَتَمَّتْ كَلِمَتُ رَبِّكَ الْحُسْنَىٰ عَلَىٰ
بَنِي إِسْرَائِيلَ بِمَا صَبَرُوا وَدَمَّرْنَا

38. ಅರ್ಥಾತ್- ಬನೀಇಸ್ರಾಈಲರನ್ನು ಫೆಲೆಸ್ತೀನ್ ಸಾಮ್ರಾಜ್ಯದ ವಾರೀಸುದಾರರನ್ನಾಗಿ ಮಾಡಿದನು. ಕುರ್‌ಆನಿನ ವಿವಿಧೆಡೆಗಳಲ್ಲಿ ನಾವು ಈ ಪ್ರದೇಶದಲ್ಲಿ ಸಮೃದ್ಧಿಯನ್ನಿರಿಸಿದ್ದೇವೆ ಎಂಬ ಪದ ಫೆಲೆಸ್ತೀನ್ ಮತ್ತು ಸಿರಿಯಾಗಳಿಗೆ ಪ್ರಯೋಗವಾಗಿದೆ.

ವಾಗ್ದಾನವು ನೆರವೇರಿತು. ಏಕೆಂದರೆ ಅವರು ತಾಳ್ಮೆ ವಹಿಸಿದ್ದರು. ಫಿರ್‌ಔನ್ ಮತ್ತು ಅವನ ಜನಾಂಗದವರು ರಚಿಸಿದ್ದೆಲ್ಲವನ್ನೂ ಕಟ್ಟಿಟ್ಟದ್ದೆಲ್ಲವನ್ನೂ ನಾವು ಧ್ವಂಸ ಮಾಡಿ ಬಿಟ್ಟೆವು.

مَا كَانَ يَصْنَعُ فِرْعَوْنُ وَقَوْمُهٗ وَمَا كَانُوْا يَعْرِشُوْنَ ﴿١٣٧﴾

138. ನಾವು ಬನೀಇಸ್ರಾಈಲರನ್ನು ಸಮುದ್ರದಿಂದ ಪಾರುಗೊಳಿಸಿದೆವು. ಅನಂತರ ಅವರು ಮುಂದೆ ಸಾಗಿದರು. ದಾರಿಯಲ್ಲಿ ಕೆಲವು ವಿಗ್ರಹಗಳ ಮುಂದೆ ತನ್ಮಯರಾಗಿ ಕುಳಿತಿದ್ದ ಒಂದು ಜನಾಂಗದ ಬಳಿಗೆ ತಲಪಿದಾಗ, "ಓ ಮೂಸಾ, ಇವರ ಆರಾಧ್ಯ ವಸ್ತುಗಳಂತಹ ಆರಾಧ್ಯ ವಸ್ತುವನ್ನು ನಮಗೂ ಮಾಡಿಕೊಡು"[39] ಎಂದರು. ಮೂಸಾ ಹೇಳಿದರು, "ನಿಜಕ್ಕೂ ನೀವು ಅಜ್ಞಾನದ ಮಾತು ಗಳನ್ನಾಡುತ್ತೀರಿ.

وَجٰوَزْنَا بِبَنِيْٓ اِسْرَآءِيْلَ الْبَحْرَ فَاَتَوْا عَلٰى قَوْمٍ يَّعْكُفُوْنَ عَلٰٓى اَصْنَامٍ لَّهُمْ ۚ قَالُوْا يٰمُوْسَى اجْعَلْ لَّنَآ اِلٰهًا كَمَا لَهُمْ اٰلِهَةٌ ۗ قَالَ اِنَّكُمْ قَوْمٌ تَجْهَلُوْنَ ﴿١٣٨﴾

139. ಇವರು ಅನುಸರಿಸುತ್ತಿರುವ ಕ್ರಮವು ನಿಶ್ಚಯವಾಗಿಯೂ ನಾಶ ವಾಗಲಿದೆ ಮತ್ತು ಇವರು ಮಾಡುತ್ತಿರುವುದು ಕೇವಲ ಮಿಥ್ಯ ಕಾರ್ಯ."

اِنَّ هٰٓؤُلَآءِ مُتَبَّرٌ مَّا هُمْ فِيْهِ وَبٰطِلٌ مَّا كَانُوْا يَعْمَلُوْنَ ﴿١٣٩﴾

140. ಅನಂತರ ಮೂಸಾ ಹೇಳಿದರು: "ನಾನು ನಿಮಗಾಗಿ ಅಲ್ಲಾಹನ ಹೊರತು ಇನ್ನಾವುದಾದರೂ ಆರಾಧ್ಯನನ್ನು ಹುಡುಕುವುದೇ? ವಸ್ತುತಃ ನಿಮಗೆ ಅಖಿಲ ಜಗತ್ತಿನ ಜನಾಂಗಗಳ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದವನು ಅಲ್ಲಾಹನೇ ಆಗಿರುತ್ತಾನೆ.

قَالَ اَغَيْرَ اللّٰهِ اَبْغِيْكُمْ اِلٰهًا وَّهُوَ فَضَّلَكُمْ عَلَى الْعٰلَمِيْنَ ﴿١٤٠﴾

141. ನಾವು ಫಿರ್‌ಔನ್‌ನವರಿಂದ ನಿಮ್ಮನ್ನು ವಿಮೋಚನೆಗೊಳಿಸಿದ ಸಂದರ್ಭವನ್ನು ಸ್ಮರಿಸಿರಿ (ಎಂದು ಅಲ್ಲಾಹನು ಹೇಳುತ್ತಾನೆ). ಅವರು ನಿಮ್ಮನ್ನು ಕಠಿಣ ಯಾತನೆಯಲ್ಲಿ ಸಿಲುಕಿಸಿದ್ದರು. ನಿಮ್ಮ ಗಂಡು ಮಕ್ಕಳನ್ನು ವಧಿಸುತ್ತಿದ್ದರು ಮತ್ತು ನಿಮ್ಮ ಹೆಣ್ಮಕ್ಕಳನ್ನು ಬದುಕಲು ಬಿಡುತ್ತಿದ್ದರು. ಅದರಲ್ಲಿ ನಿಮ್ಮ ಪ್ರಭುವಿನ ಕಡೆಯಿಂದ ನಿಮಗೊಂದು ದೊಡ್ಡ ಪರೀಕ್ಷೆ ಇತ್ತು."

وَاِذْ اَنْجَيْنٰكُمْ مِّنْ اٰلِ فِرْعَوْنَ يَسُوْمُوْنَكُمْ سُوْٓءَ الْعَذَابِ ۚ يُقَتِّلُوْنَ اَبْنَآءَكُمْ وَيَسْتَحْيُوْنَ نِسَآءَكُمْ ۗ وَفِيْ ذٰلِكُمْ بَلَآءٌ مِّنْ رَّبِّكُمْ عَظِيْمٌ ﴿١٤١﴾

142. ನಾವು ಮೂಸಾರನ್ನು ಮೂವತ್ತು ಅಹೋರಾತ್ರಿಗಳಿಗಾಗಿ (ಸಿನಾಯಿ ಪರ್ವತಕ್ಕೆ) ಕರೆದೆವು. ತರುವಾಯ ಹತ್ತು ದಿನ ಹೆಚ್ಚಿಸಿದೆವು. ಹೀಗೆ ಅವರ ಪ್ರಭು ನಿಶ್ಚಯಿಸಿದ್ದ ಅವಧಿ ನಲ್ವತ್ತು ದಿನಗಳಾದುವು. ಮೂಸಾ ಹೋಗುವಾಗ ತಮ್ಮ ಸಹೋದರ ಹಾರೂನರೊಡನೆ, "ನನ್ನ ಅನುಪಸ್ಥಿತಿಯಲ್ಲಿ ನೀವು ನನ್ನ ಜನಾಂಗದ ಪ್ರತಿನಿಧಿಯಾಗಿರ

وَوٰعَدْنَا مُوْسٰى ثَلٰثِيْنَ لَيْلَةً وَّاَتْمَمْنٰهَا بِعَشْرٍ فَتَمَّ مِيْقَاتُ رَبِّهٖٓ اَرْبَعِيْنَ لَيْلَةً ۚ وَقَالَ مُوْسٰى لِاَخِيْهِ هٰرُوْنَ اخْلُفْنِيْ فِيْ

39. ಅದು ಮುಸ್ಲಿಮ್ ಸಮುದಾಯವಾಗಿದ್ದರೂ ನೂರಾರು ವರ್ಷಗಳ ಕಾಲ ಈಜಿಪ್ಟಿನ ಮೂರ್ತಿ ಪೂಜಕ ಸಮುದಾಯದ ನಡುವೆ ಇದ್ದುದರಿಂದ ಅದರಿಂದ ಪ್ರಭಾವಿತವಾಗಿತ್ತು.

ಬೇಕು; ಒಳ್ಳೆಯ ಕಾರ್ಯವೆಸಗಬೇಕು ಕೆಡುಕುಂಟು ಮಾಡುವವರ ಮಾರ್ಗದಲ್ಲಿ ನಡೆಯಬಾರದು" ಎಂದರು.

قَوْمِي وَأَصْلِحْ وَلَا تَتَّبِعْ سَبِيلَ الْمُفْسِدِينَ ﴿١٤٢﴾

143. ನಾವು ನಿಶ್ಚಯಿಸಿದ ಸಮಯಕ್ಕೆ ಸರಿಯಾಗಿ ಅವರು ತಲಪಿ ಅವರ ಪ್ರಭು ಅವರೊಡನೆ ಮಾತನಾಡಿದಾಗ ಅವರು, "ಓ ಪ್ರಭೂ, ನನಗೆ ನಿನ್ನ ದರ್ಶನಕ್ಕೆ ಬೇಕಾದ ದೃಕ್ಶಕ್ತಿ ಪ್ರದಾನ ಮಾಡು" ಎಂದು ಭಿನ್ನವಿಸಿದಾಗ, "ನೀನು ನನ್ನನ್ನು ನೋಡಲಾರೆ. ಅದೋ ಮುಂದಿರುವ ಪರ್ವತವನ್ನು ನೋಡು. ಅದು ತನ್ನ ಸ್ಥಾನದಲ್ಲಿ ಸ್ಥಿರವಾಗಿ ನಿಂತರೆ ನೀನು ನನ್ನನ್ನು ನೋಡಬಲ್ಲೆ" ಎಂದನು. ಆ ಪ್ರಕಾರ ಅವರ ಪ್ರಭು ಪರ್ವತದ ಮೇಲೆ ದಿವ್ಯ ಪ್ರಕಾಶವನ್ನು ಬೀರಿದಾಗ ಅದು ಅದನ್ನು ನುಚ್ಚು ನೂರುಗೊಳಿಸಿತು. ಮೂಸಾ ಮೂರ್ಛೆ ತಪ್ಪಿ ಬಿದ್ದರು. ಸ್ಮೃತಿ ಬಂದಾಗ ಹೀಗೆಂದರು, "ನೀನು ಮಹಾ ಪರಿಶುದ್ಧನು. ನಾನು ನಿನ್ನಲ್ಲಿ ಪಶ್ಚಾತ್ತಾಪ ಪಡುತ್ತೇನೆ ಮತ್ತು ಎಲ್ಲರಿಗಿಂತಲೂ ಮೊದಲು ವಿಶ್ವಾಸವಿಡುವವನು ನಾನಾಗಿರುತ್ತೇನೆ."

وَلَمَّا جَاءَ مُوسَىٰ لِمِيقَاتِنَا وَكَلَّمَهُ رَبُّهُ قَالَ رَبِّ أَرِنِي أَنظُرْ إِلَيْكَ ۚ قَالَ لَن تَرَانِي وَلَٰكِنِ انظُرْ إِلَى الْجَبَلِ فَإِنِ اسْتَقَرَّ مَكَانَهُ فَسَوْفَ تَرَانِي ۚ فَلَمَّا تَجَلَّىٰ رَبُّهُ لِلْجَبَلِ جَعَلَهُ دَكًّا وَخَرَّ مُوسَىٰ صَعِقًا ۚ فَلَمَّا أَفَاقَ قَالَ سُبْحَانَكَ تُبْتُ إِلَيْكَ وَأَنَا أَوَّلُ الْمُؤْمِنِينَ ﴿١٤٣﴾

144. ಅಲ್ಲಾಹನು, "ಓ ಮೂಸಾ, ನಾನು ನನ್ನ ಸಂದೇಶವಾಹಕತ್ವ ನೆರವೇರಿಸಲಿಕ್ಕೂ ನನ್ನೊಂದಿಗೆ ಮಾತಾಡಲಿಕ್ಕೂ ಎಲ್ಲರಿಗಿಂತಲೂ ಮಿಗಿಲಾಗಿ ನಿನ್ನನ್ನು ಆರಿಸಿಕೊಂಡಿದ್ದೇನೆ. ಆದ ಕಾರಣ ನಾನು ನಿನಗೆ ಕೊಟ್ಟುದನ್ನು ಸ್ವೀಕರಿಸಿ ಕೃತಜ್ಞತೆ ಸಲ್ಲಿಸು" ಎಂದನು.

قَالَ يَا مُوسَىٰ إِنِّي اصْطَفَيْتُكَ عَلَى النَّاسِ بِرِسَالَاتِي وَبِكَلَامِي فَخُذْ مَا آتَيْتُكَ وَكُن مِّنَ الشَّاكِرِينَ ﴿١٤٤﴾

145. ಅನಂತರ ನಾವು ಮೂಸಾರಿಗೆ ಜೀವನದ ಪ್ರತಿಯೊಂದು ವಿಭಾಗಕ್ಕೆ ಸಂಬಂಧಿಸಿದ ಬೋಧನೆಯನ್ನೂ ಪ್ರತಿಯೊಂದು ವಿಭಾಗಕ್ಕೆ ಸಂಬಂಧಿಸಿದ ಸ್ಪಷ್ಟ ಮಾರ್ಗದರ್ಶನವನ್ನೂ ಫಲಕಗಳ ಮೇಲೆ ಬರೆದು ಕೊಟ್ಟೆವು ಮತ್ತು ಹೀಗೆ ಹೇಳಿದೆವು: "ಈ ಮಾರ್ಗದರ್ಶನಗಳನ್ನು ಭದ್ರವಾಗಿ ಹಿಡಿದುಕೊಳ್ಳಿರಿ ಮತ್ತು ಇವುಗಳ ಉತ್ತಮ ಅರ್ಥವನ್ನು ಅನುಸರಿಸುವಂತೆ ನಿಮ್ಮ ಜನಾಂಗಕ್ಕೆ ಅಪ್ಪಣೆ ಕೊಡಿರಿ. ಕರ್ಮಭ್ರಷ್ಟರ ನಿವಾಸವನ್ನು ಸದ್ಯವೇ ನಿಮಗೆ ತೋರಿಸಿ ಕೊಡುವೆನು.

وَكَتَبْنَا لَهُ فِي الْأَلْوَاحِ مِن كُلِّ شَيْءٍ مَّوْعِظَةً وَتَفْصِيلًا لِّكُلِّ شَيْءٍ فَخُذْهَا بِقُوَّةٍ وَأْمُرْ قَوْمَكَ يَأْخُذُوا بِأَحْسَنِهَا ۚ سَأُرِيكُمْ دَارَ الْفَاسِقِينَ ﴿١٤٥﴾

146. ಅನ್ಯಾಯವಾಗಿ ಭೂಮಿಯಲ್ಲಿ ಅಹಂಕಾರ ಪಡುವವರ ದೃಷ್ಟಿಗಳನ್ನು ನನ್ನ ನಿದರ್ಶನಗಳಿಂದ ತಿರುಗಿಸಿಬಿಡುವೆನು. ಅವರು ಯಾವ ನಿದರ್ಶನಗಳನ್ನು ಕಂಡರೂ ಎಷ್ಟು ಮಾತ್ರಕ್ಕೂ ವಿಶ್ವಾಸ ವಿಡುವವರಲ್ಲ. ಅವರ ಮುಂದೆ ನೇರ ಮಾರ್ಗ ಬಂದರೆ ಅದನ್ನು ಸ್ವೀಕರಿಸಲಿಕ್ಕಿಲ್ಲ ಮತ್ತು ವಾಮ ಮಾರ್ಗವನ್ನು ಕಂಡರೆ ಅದರಲ್ಲಿ ಮುನ್ನಡೆಯುವರು. ಏಕೆಂದರೆ ಅವರು ನಮ್ಮ ನಿದರ್ಶನಗಳನ್ನು ಸುಳ್ಳಾಗಿಸಿದರು ಮತ್ತು ಅವುಗಳ ಬಗ್ಗೆ ಅಲಕ್ಷ್ಯರಾಗಿದ್ದರು.

سَأَصْرِفُ عَنْ آيَاتِيَ الَّذِينَ يَتَكَبَّرُونَ فِي الْأَرْضِ بِغَيْرِ الْحَقِّ وَإِن يَرَوْا كُلَّ آيَةٍ لَّا يُؤْمِنُوا بِهَا وَإِن يَرَوْا سَبِيلَ الرُّشْدِ لَا يَتَّخِذُوهُ سَبِيلًا وَإِن يَرَوْا سَبِيلَ الْغَيِّ يَتَّخِذُوهُ سَبِيلًا ۚ ذَٰلِكَ بِأَنَّهُمْ كَذَّبُوا بِآيَاتِنَا وَكَانُوا عَنْهَا غَافِلِينَ ﴿١٤٦﴾

147. ನಮ್ಮ ನಿದರ್ಶನಗಳನ್ನು ಸುಳ್ಳಾಗಿಸಿದವನ ಮತ್ತು ಪರಲೋಕದ ಹಾಜರಾಗುವಿಕೆಯನ್ನು ನಿರಾಕರಿಸಿದವನ ಸಂಪೂರ್ಣ ಕರ್ಮಗಳು ವ್ಯರ್ಥವಾದವು. ಜನರು ತಮ್ಮ ಕರ್ಮಕ್ಕೆ ತಕ್ಕ ಪ್ರತಿಫಲ ವನ್ನುಣ್ಣುವುದರ ವಿನಾ ಇನ್ನೇನನ್ನಾದರೂ ಪಡೆಯಬಲ್ಲರೇ?

وَالَّذِيْنَ كَذَّبُوْا بِاٰيٰتِنَا وَلِقَآءِ الْاٰخِرَةِ حَبِطَتْ اَعْمَالُهُمْ ؕ هَلْ يُجْزَوْنَ اِلَّا مَا كَانُوْا يَعْمَلُوْنَ ۟

148. ಮೂಸಾರ ಅನುಪಸ್ಥಿತಿಯಲ್ಲಿ ಅವರ ಜನಾಂಗದವರು ತಮ್ಮ ಆಭರಣಗಳಿಂದ ಒಂದು ಕರುವಿನ ವಿಗ್ರಹವನ್ನು ತಯಾರಿಸಿದರು. ಅದರಿಂದ ಎತ್ತಿನಂತಹ ಸ್ವರ ಹೊರಡುತ್ತಿತ್ತು. ಅದು ಅವರೊಡನೆ ಮಾತಾಡುವುದಿಲ್ಲವೆಂಬುದೂ ಯಾವ ವಿಷಯದಲ್ಲೂ ಮಾರ್ಗದರ್ಶನ ಮಾಡುವುದಿಲ್ಲವೆಂಬುದೂ ಅವರಿಗೆ ಕಾಣ ದಾಯಿತೇ? ಆದರೂ ಅವರು ಅದನ್ನು ಆರಾಧ್ಯವನ್ನಾಗಿ ಮಾಡಿ ಕೊಂಡರು ಮತ್ತು ಅವರು ಮಹಾ ಅಕ್ರಮಿಗಳಾಗಿದ್ದರು.[40]

وَاتَّخَذَ قَوْمُ مُوْسٰى مِنْ بَعْدِهٖ مِنْ حُلِيِّهِمْ عِجْلًا جَسَدًا لَّهٗ خُوَارٌ ؕ اَلَمْ يَرَوْا اَنَّهٗ لَا يُكَلِّمُهُمْ وَلَا يَهْدِيْهِمْ سَبِيْلًا ۘ اِتَّخَذُوْهُ وَكَانُوْا ظٰلِمِيْنَ ۟

149. ಅನಂತರ ಅವರ ವಂಚನೆಯ ಜಾಲವು ಮುರಿದಾಗ ಹಾಗೂ ಅವರು ನಿಜಕ್ಕೂ ಪಥಭ್ರಷ್ಟರಾಗಿ ಬಿಟ್ಟಿದ್ದಾರೆಂದು ಕಂಡಾಗ, "ನಮ್ಮ ಪ್ರಭು ನಮ್ಮ ಮೇಲೆ ಕೃಪೆ ತೋರದಿದ್ದರೆ ಮತ್ತು ನಮ್ಮನ್ನು ಕ್ಷಮಿಸದಿದ್ದರೆ ನಾವು ಹಾಳಾಗಿ ಹೋಗುವೆವು" ಎಂದು ಹೇಳ ತೊಡಗಿದರು.

وَلَمَّا سُقِطَ فِيْۤ اَيْدِيْهِمْ وَرَاَوْا اَنَّهُمْ قَدْ ضَلُّوْا ۙ قَالُوْا لَىِٕنْ لَّمْ يَرْحَمْنَا رَبُّنَا وَيَغْفِرْ لَنَا لَنَكُوْنَنَّ مِنَ الْخٰسِرِيْنَ ۟

150. ಅತ್ತ ಮೂಸಾ ಕ್ರೋಧ ಹಾಗೂ ದುಃಖಿತರಾಗಿ ತಮ್ಮ ಜನಾಂಗದ ಕಡೆಗೆ ಮರಳಿದರು. ಬಂದೊಡನೆ, "ನಾನಿಲ್ಲದಿರುವಾಗ ನೀವು ಅತ್ಯಂತ ಕೆಟ್ಟ ರೀತಿಯಲ್ಲಿ ನನ್ನನ್ನು ಪ್ರತಿನಿಧೀಕರಿಸಿದಿರಿ! ನಿಮ್ಮ ಪ್ರಭುವಿನ ಆಜ್ಞೆಯನ್ನು ಕಾಯುವಷ್ಟು ತಾಳ್ಮೆಯೂ ನಿಮಗೆ ಉಂಟಾಗಲಿಲ್ಲವೇ?" ಎನ್ನುತ್ತ ಫಲಕಗಳನ್ನು ಎಸೆದು ಬಿಟ್ಟರು ಮತ್ತು ತಮ್ಮ ಸಹೋದರ(ಹಾರೂನ)ನ ತಲೆಗೂದಲನ್ನು ಹಿಡಿದೆಳೆದರು. ಹಾರೂನರು, "ಓ ನನ್ನ ಮಾತಾಪುತ್ರನೇ, ಇವರು ನನ್ನನ್ನು ದುರ್ಬಲನನ್ನಾಗಿ ಮಾಡಿಬಿಟ್ಟರು. ನನ್ನನ್ನು ವಧಿಸಿ ಬಿಡುವುದರಲ್ಲಿದ್ದರು. ಆದ್ದರಿಂದ ಶತ್ರುಗಳಿಗೆ ನನ್ನ ಮೇಲೆ ನಗುವ ಸಂದರ್ಭ ಕೊಡಬೇಡ ಮತ್ತು ಈ ಅಕ್ರಮಿ ಜನಾಂಗ ದೊಂದಿಗೆ ನನ್ನನ್ನು ಸೇರಿಸಬೇಡ" ಎಂದರು.

وَلَمَّا رَجَعَ مُوْسٰۤى اِلٰى قَوْمِهٖ غَضْبَانَ اَسِفًا ۙ قَالَ بِئْسَمَا خَلَفْتُمُوْنِيْ مِنْ بَعْدِيْ ۚ اَعَجِلْتُمْ اَمْرَ رَبِّكُمْ ۚ وَاَلْقَى الْاَلْوَاحَ وَاَخَذَ بِرَاْسِ اَخِيْهِ يَجُرُّهٗۤ اِلَيْهِ ؕ قَالَ ابْنَ اُمَّ اِنَّ الْقَوْمَ اسْتَضْعَفُوْنِيْ وَكَادُوْا يَقْتُلُوْنَنِيْ ۖؗ فَلَا تُشْمِتْ بِيَ الْاَعْدَآءَ وَلَا تَجْعَلْنِيْ مَعَ الْقَوْمِ الظّٰلِمِيْنَ ۟

40. ಇದು ಬನೀಇಸ್ರಾಈಲರು ಈಜಿಪ್ಟಿನವರಿಂದ ಪ್ರಭಾವಿತವಾಗಿದ್ದುದರ ದ್ವಿತೀಯ ಪ್ರಕಟಣೆಯಾಗಿತ್ತು. ಈಜಿಪ್ಟ್‌ನಲ್ಲಿ ಗೋಪೂಜೆ ಮತ್ತು ಗೋವಿನ ಪಾವಿತ್ರ್ಯದ ನಂಬಿಕೆ ಇತ್ತು. ಇದರಿಂದ ಬನೀಇಸ್ರಾಈಲ್ ಜನಾಂಗ ಎಷ್ಟು ತೀವ್ರವಾಗಿ ಪ್ರಭಾವಿತವಾಗಿತ್ತೆಂದರೆ ಅವರ ಪ್ರವಾದಿ ಅವರಿಂದ ಕಣ್ಮರೆಯಾಗುತ್ತಲೇ ಅವರು ಆರಾಧನೆ ಮಾಡಲಿಕ್ಕಾಗಿ ಕೃತಕ ಕರುವೊಂದನ್ನು ಸಿದ್ಧಪಡಿಸಿದರು.

151. ಆಗ ಮೂಸಾ, "ಓ ನನ್ನ ಪ್ರಭೂ, ನನ್ನನ್ನೂ ನನ್ನ ಸಹೋದರನನ್ನೂ ಕ್ಷಮಿಸು ಮತ್ತು ನಮ್ಮನ್ನು ನಿನ್ನ ಕರುಣೆಯಲ್ಲಿ ಸೇರಿಸಿಕೋ, ನೀನು ಅತ್ಯಂತ ಕೃಪಾಳುವಾಗಿರುವೆ" ಎಂದರು.

قَالَ رَبِّ اغْفِرْ لِي وَلِأَخِي وَأَدْخِلْنَا فِي رَحْمَتِكَ ۖ وَأَنتَ أَرْحَمُ الرَّاحِمِينَ ﴿١٥١﴾

152. (ಇದಕ್ಕೆ ಉತ್ತರವಾಗಿ ಹೀಗೆ ಅಪ್ಪಣೆಯಾಯಿತು) ಕರುವನ್ನು ತಮ್ಮ ಆರಾಧ್ಯವನ್ನಾಗಿ ಮಾಡಿಕೊಂಡವರು ಖಂಡಿತವಾಗಿಯೂ ತಮ್ಮ ಪ್ರಭುವಿನ ಕ್ರೋಧಕ್ಕೊಳಗಾಗಿಯೇ ತೀರುವರು ಮತ್ತು ಇಹಜೀವನದಲ್ಲಿ ಅವಮಾನಿತರಾಗುವರು. ಸುಳ್ಳನ್ನು ಸೃಷ್ಟಿಸುವವರಿಗೆ ನಾವು ಇದೇ ರೀತಿಯ ಶಿಕ್ಷೆ ಕೊಡುತ್ತೇವೆ.

إِنَّ الَّذِينَ اتَّخَذُوا الْعِجْلَ سَيَنَالُهُمْ غَضَبٌ مِّن رَّبِّهِمْ وَذِلَّةٌ فِي الْحَيَاةِ الدُّنْيَا ۚ وَكَذَٰلِكَ نَجْزِي الْمُفْتَرِينَ ﴿١٥٢﴾

153. ದುಷ್ಕರ್ಮಗಳನ್ನೆಸಗಿ ಅನಂತರ ಪಶ್ಚಾತ್ತಾಪ ಪಟ್ಟು ವಿಶ್ವಾಸ ಸ್ವೀಕರಿಸಿದರೆ ನಿಶ್ಚಯವಾಗಿಯೂ ಈ ಪಶ್ಚಾತ್ತಾಪ ಮತ್ತು ವಿಶ್ವಾಸದ ಬಳಿಕ ನಿನ್ನ ಪ್ರಭು ಕ್ಷಮಿಸುವವನೂ ಕರುಣಾಮಯಿಯೂ ಆಗಿರುತ್ತಾನೆ.

وَالَّذِينَ عَمِلُوا السَّيِّئَاتِ ثُمَّ تَابُوا مِن بَعْدِهَا وَآمَنُوا إِنَّ رَبَّكَ مِن بَعْدِهَا لَغَفُورٌ رَّحِيمٌ ﴿١٥٣﴾

154. ಈ ರೀತಿಯಲ್ಲಿ ಮೂಸಾರ ಕೋಪ ಇಳಿದಾಗ ಅವರು ಆ ಫಲಕಗಳನ್ನು ಎತ್ತಿಕೊಂಡರು. ಅವುಗಳಲ್ಲಿ ತಮ್ಮ ಪ್ರಭುವನ್ನು ಭಯಪಡುವವರಿಗಾಗಿ ಮಾರ್ಗದರ್ಶನ ಮತ್ತು ಕೃಪೆ ಲಿಖಿತಗೊಂಡಿತ್ತು.

وَلَمَّا سَكَتَ عَن مُّوسَى الْغَضَبُ أَخَذَ الْأَلْوَاحَ ۖ وَفِي نُسْخَتِهَا هُدًى وَرَحْمَةٌ لِّلَّذِينَ هُمْ لِرَبِّهِمْ يَرْهَبُونَ ﴿١٥٤﴾

155. ಮತ್ತು ಅವರು (ತಮ್ಮ ಸಂಗಡ) ನಾವು ಗೊತ್ತುಪಡಿಸಿದ ಸಮಯಕ್ಕೆ ಸರಿಯಾಗಿ ಹಾಜರಾಗುವಂತೆ ತಮ್ಮ ಜನಾಂಗದ ಎಪ್ಪತ್ತು ಮಂದಿಯನ್ನು ಆರಿಸಿಕೊಂಡರು.[41] ಒಂದು ಪ್ರಚಂಡ ಭೂಕಂಪವು ಅವರನ್ನು ಬಾಧಿಸಿದಾಗ ಮೂಸಾರು ಹೀಗೆ ಹೇಳಿದರು: "ಓ ನನ್ನ ಪ್ರಭೂ, ನೀನಿಚ್ಛಿಸುತ್ತಿದ್ದರೆ ಇವರನ್ನೂ ನನ್ನನ್ನೂ ಈ ಮೊದಲೇ ನಾಶಪಡಿಸಬಹುದಿತ್ತು. ನಮ್ಮ ಪೈಕಿ ಕೆಲವು ತಿಳಿಗೇಡಿಗಳು ಮಾಡಿದ್ದ ಅಪರಾಧಕ್ಕಾಗಿ ನಮ್ಮೆಲ್ಲರನ್ನೂ ನಾಶಗೊಳಿಸುವೆಯಾ? ಇದಂತು ನೀನು ಮಾಡಿದ ಒಂದು ಪರೀಕ್ಷೆಯಾಗಿತ್ತು. ನೀನು ಇದರ ಮೂಲಕ ನಿನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸುತ್ತೀ ಮತ್ತು ನಿನಗಿಷ್ಟಬಂದವರಿಗೆ ಸನ್ಮಾರ್ಗದರ್ಶನ ನೀಡುತ್ತೀ. ನೀನೇ ನಮ್ಮ ರಕ್ಷಕ ಮಿತ್ರನಾಗಿರುವೆ. ನಮ್ಮನ್ನು ಕ್ಷಮಿಸು. ನಮ್ಮ ಮೇಲೆ ಕೃಪೆತೋರು. ನೀನು ಕ್ಷಮಿಸುವವರಲ್ಲಿ ಅತಿ ಶ್ರೇಷ್ಠನಾಗಿರುವೆ.

وَاخْتَارَ مُوسَىٰ قَوْمَهُ سَبْعِينَ رَجُلًا لِّمِيقَاتِنَا ۖ فَلَمَّا أَخَذَتْهُمُ الرَّجْفَةُ قَالَ رَبِّ لَوْ شِئْتَ أَهْلَكْتَهُم مِّن قَبْلُ وَإِيَّايَ ۖ أَتُهْلِكُنَا بِمَا فَعَلَ السُّفَهَاءُ مِنَّا ۖ إِنْ هِيَ إِلَّا فِتْنَتُكَ تُضِلُّ بِهَا مَن تَشَاءُ وَتَهْدِي مَن تَشَاءُ ۖ أَنتَ وَلِيُّنَا فَاغْفِرْ لَنَا وَارْحَمْنَا ۖ وَأَنتَ خَيْرُ الْغَافِرِينَ ﴿١٥٥﴾

41. ಜನಾಂಗದ ಎಪ್ಪತ್ತು ಮಂದಿ ಪ್ರತಿನಿಧಿಗಳು ಸೀನಾಯಿ ಪರ್ವತದಲ್ಲಿ ದೇವಸನ್ನಿಧಿಯಲ್ಲಿ ಹಾಜರಾಗಿ ಜನಾಂಗದ ವತಿಯಿಂದ ಕರುವಿನ ಆರಾಧನೆಯ ಅಪರಾಧಕ್ಕಾಗಿ ಕ್ಷಮೆಯಾಚಿಸಬೇಕು ಮತ್ತು ಅನುಸರಣೆಯ ಕರಾರನ್ನು ಪುನಃ ದೃಢೀಕರಿಸಬೇಕು ಎಂಬ ಉದ್ದೇಶಕ್ಕಾಗಿ ಈ ಕರೆ ನೀಡಲಾಗಿತ್ತು.

156. ನಮಗಾಗಿ ಇಹಲೋಕದ ಹಿತವನ್ನೂ ಪರಲೋಕದ ಹಿತವನ್ನೂ ಲಿಖಿತಗೊಳಿಸು. ನಾವು ನಿನ್ನ ಕಡೆಗೆ ಮರಳಿದೆವು." ಇದಕ್ಕುತ್ತರವಾಗಿ ಹೀಗೆ ಅಪ್ಪಣೆಯಾಯಿತು -"ನಾನು ಇಷ್ಟಬಂದವರಿಗೆ ಶಿಕ್ಷೆ ವಿಧಿಸುತ್ತೇನೆ. ಆದರೆ ನನ್ನ ಕರುಣೆಯು ಸರ್ವವನ್ನೂ ವ್ಯಾಪಿಸಿ ಕೊಂಡಿದೆ. ನಾನು ಅದನ್ನು ಆಜ್ಞೋಲ್ಲಂಘನೆ ಮಾಡದ, ಝಕಾತ್ ಕೊಡುವ ಮತ್ತು ನನ್ನ ನಿದರ್ಶನಗಳ ಮೇಲೆ ವಿಶ್ವಾಸ ವಿರಿಸುವವರಿಗಾಗಿ ಲಿಖಿತಗೊಳಿಸುವೆನು."

وَاكْتُبْ لَنَا فِيْ هٰذِهِ الدُّنْيَا حَسَنَةً وَّفِي الْاٰخِرَةِ اِنَّا هُدْنَآ اِلَيْكَ ؕ قَالَ عَذَابِيْٓ اُصِيْبُ بِهٖ مَنْ اَشَآءُ ۚ وَرَحْمَتِيْ وَسِعَتْ كُلَّ شَيْءٍ ؕ فَسَاَكْتُبُهَا لِلَّذِيْنَ يَتَّقُوْنَ وَيُؤْتُوْنَ الزَّكٰوةَ وَالَّذِيْنَ هُمْ بِاٰيٰتِنَا يُؤْمِنُوْنَ ﴿۱۵۶﴾

157. (ಆದ್ದರಿಂದ) ತಮ್ಮಲ್ಲಿರುವ 'ತೌರಾತ್' ಮತ್ತು 'ಇಂಜೀಲ್' ಗಳಲ್ಲಿ ಪ್ರಸ್ತಾಪಿಸಲಾಗಿರುವ ಈ ಸಂದೇಶವಾಹಕ 'ನಿರಕ್ಷರಿ ಪ್ರವಾದಿ'ಯ ಅನುಸರಣೆಯನ್ನು ಸ್ವೀಕರಿಸಿದವರು[42] (ಈ ಕೃಪೆಗೆ ಪಾತ್ರರಾಗುವರು) ಇವರು (ಪ್ರವಾದಿ) ಅವರಿಗೆ ಸತ್ಕರ್ಮದ ಆದೇಶ ನೀಡುತ್ತಾರೆ ಮತ್ತು ದುಷ್ಕೃತ್ಯದಿಂದ ತಡೆಯುತ್ತಾರೆ. ಅವರಿಗೆ ಶುದ್ಧ ವಸ್ತುಗಳನ್ನು 'ಧರ್ಮಸಮ್ಮತ' ಮತ್ತು ಅಶುದ್ಧ ವಸ್ತುಗಳನ್ನು 'ನಿಷಿದ್ಧ'ಗೊಳಿಸುತ್ತಾರೆ. ಅವರ ಮೇಲೆ ಹೇರಲಾಗಿರುವ ಹೊರೆಗಳನ್ನು ಇಳಿಸುತ್ತಾರೆ. ಅವರನ್ನು ಬಿಗಿಯಲಾಗಿದ್ದ ಬಂಧನಗಳನ್ನು ಬಿಡಿಸುತ್ತಾರೆ.[43] ಆದುದರಿಂದ ಇವರ ಮೇಲೆ ವಿಶ್ವಾಸವಿರಿಸುವವರು, ಇವರನ್ನು ಸಮರ್ಥಿಸುವವರು, ಇವರಿಗೆ ಸಹಕಾರ ನೀಡುವವರು ಮತ್ತು ಇವರೊಂದಿಗೆ ಅವತೀರ್ಣಗೊಳಿಸಲಾಗಿರುವ ಪ್ರಕಾಶವನ್ನು ಅನುಸರಿಸುವವರು ಮಾತ್ರ ಯಶಸ್ವಿ ಗಳಾಗುವವರು.

اَلَّذِيْنَ يَتَّبِعُوْنَ الرَّسُوْلَ النَّبِيَّ الْاُمِّيَّ الَّذِيْ يَجِدُوْنَهٗ مَكْتُوْبًا عِنْدَهُمْ فِي التَّوْرٰىةِ وَالْاِنْجِيْلِ ؗ يَاْمُرُهُمْ بِالْمَعْرُوْفِ وَيَنْهٰىهُمْ عَنِ الْمُنْكَرِ وَيُحِلُّ لَهُمُ الطَّيِّبٰتِ وَيُحَرِّمُ عَلَيْهِمُ الْخَبٰٓئِثَ وَيَضَعُ عَنْهُمْ اِصْرَهُمْ وَالْاَغْلٰلَ الَّتِيْ كَانَتْ عَلَيْهِمْ ؕ فَالَّذِيْنَ اٰمَنُوْا بِهٖ وَعَزَّرُوْهُ وَنَصَرُوْهُ وَاتَّبَعُوا النُّوْرَ الَّذِيْٓ اُنْزِلَ مَعَهٗٓ ۙ اُولٰٓئِكَ هُمُ الْمُفْلِحُوْنَ ﴿۱۵۷﴾

42. ಯಹೂದಿಯರಲ್ಲಿ ಪ್ರಚಲಿತವಿದ್ದ ಪಾರಿಭಾಷಿಕದಂತೆ ಇಲ್ಲಿ ಪ್ರವಾದಿವರ್ಯರಿಗೆ(ಸ) 'ಉಮ್ಮಿ' (ನಿರಕ್ಷರಿ) ಎಂಬ ಪದವನ್ನು ಉಪಯೋಗಿಸಲಾಗಿದೆ. ಬನೀಇಸ್ರಾಈಲರು ತಮ್ಮನ್ನುಳಿದು ಇತರೆಲ್ಲ ಜನಾಂಗಗಳನ್ನು 'ಉಮ್ಮಿ' (GENTILE) ಎನ್ನುತ್ತಿದ್ದರು. ಆದ್ದರಿಂದ ತಮ್ಮ ಜನಾಂಗದ ಬಗ್ಗೆ ಅವರಿಗಿದ್ದ ಹಿರಿಮೆಯಿಂದಾಗಿ ಅವರು 'ಉಮ್ಮಿ'ಗಳ ನೇತೃತ್ವವನ್ನು ಸಹಿಸುವುದಂತಿರಲಿ ತಮಗೆ ಸರಿಸಾಟಿಯಾದ ಮಾನವೀಯ ಹಕ್ಕುಗಳು 'ಉಮ್ಮಿ'ಗಳಿಗೆ ಪ್ರಾಪ್ತವಾಗುವುದೂ ಅವರಿಗೆ ಸಹ್ಯವಿರಲಿಲ್ಲ. ಆದ್ದರಿಂದಲೇ ಕುರ್‌ಆನಿನಲ್ಲಿ "ಉಮ್ಮಿಗಳ ಸಂಪತ್ತು ಸೂರೆಗೈಯುವುದರ ಬಗ್ಗೆ ನಮ್ಮೊಡನೆ ಯಾವ ವಿಚಾರಣೆಯೂ ಇಲ್ಲ" (ಆಲಿ ಇಮ್ರಾನ್: 75) ಎಂಬ ಅವರ ಮಾತನ್ನು ಉಲ್ಲೇಖಿಸಲಾಗಿದೆ. ಇಲ್ಲಿ ಅವರು ಉಪಯೋಗಿಸುತ್ತಿದ್ದ ಪದವನ್ನೇ ಉಪಯೋಗಿಸುವ ಮೂಲಕ ಅಲ್ಲಾಹನು, "ಈಗ ಈ 'ಉಮ್ಮಿ'ಯಲ್ಲೇ ನಿಮ್ಮ ಭವಿಷ್ಯ ಅಡಕವಾಗಿದೆ." ಅವರ ಅನುಸರಣೆ ಮಾಡಿದರೆ ಮಾತ್ರ ನನ್ನ ಅನುಗ್ರಹದಲ್ಲಿ ಪಾಲು ಪಡೆಯುತ್ತೀರಿ. ಅನ್ಯಥಾ ನೀವು ಶತಮಾನಗಳಿಂದ ಈಡಾಗುತ್ತಾ ಬಂದಿರುವ ದೇವಕ್ರೋಧವೇ ನಿಮ್ಮ ಪಾಲಿಗಿರುವುದು ಎಂದು ಹೇಳುತ್ತಿದ್ದಾನೆ.

43. ಅರ್ಥಾತ್- ಅವರ ಕರ್ಮಶಾಸ್ತ್ರಜ್ಞರು ತಮ್ಮ ಕೂದಲು ಸೀಳುವಿಕೆಯ ನಿಯಮಗಳಿಂದ, ಅವರ ಸನ್ಯಾಸಿಗಳು ತಮ್ಮ ಸನ್ಯಾಸದ ಉತ್ಪ್ರೇಕ್ಷಿತ ಕಲ್ಪನೆಯಿಂದ ಮತ್ತು ಅವರ ಅಜ್ಞಾನಪೀಡಿತ ಜನರು ಮೂಢನಂಬಿಕೆ ಮತ್ತು ಸ್ವಯಂಕೃತ ನಿಯಮಗಳಿಂದ ತಮ್ಮ ಜೀವನವನ್ನು ಹೊರೆ ಗಳಡಿಯಲ್ಲಿ ಸಿಲುಕಿಸಿಕೊಂಡಿದ್ದರು. ಅನೇಕ ಬಂಧನಗಳಲ್ಲಿ ತಮ್ಮನ್ನು ಬಿಗಿದುಕೊಂಡಿದ್ದರು. ಪ್ರವಾದಿವರ್ಯರು(ಸ) ಇಂತಹ ಹೊರೆಗಳನ್ನೆಲ್ಲಾ ಇಳಿಸುತ್ತಾರೆ ಮತ್ತು ಬಂಧನಗಳನ್ನೆಲ್ಲಾ ಬಿಡಿಸಿ ಜೀವನವನ್ನು ಮುಕ್ತಗೊಳಿಸುತ್ತಾರೆ.

158. ಓ ಮುಹಮ್ಮದರೇ, ಹೇಳಿರಿ: "ಓ ಮಾನವರೇ, ನಾನು ನಿಮ್ಮೆಲ್ಲರ ಕಡೆಗೆ ಭೂಮಿ ಆಕಾಶಗಳ ಸಾರ್ವಭೌಮನಾಗಿರುವ ಅಲ್ಲಾಹನ ಸಂದೇಶವಾಹಕನಾಗಿರುತ್ತೇನೆ. ಅವನ ಹೊರತು ಆರಾಧ್ಯನಿಲ್ಲ. ಅವನೇ ಜೀವನ ನೀಡುವವನು. ಅವನೇ ಮರಣ ಕೊಡುವವನು. ಆದುದರಿಂದ ಅಲ್ಲಾಹನ ಮೇಲೂ ಹಾಗೂ ಅವನಿಂದ ಕಳುಹಿಸಲಾದ, ಅಲ್ಲಾಹ್ ಮತ್ತು ಅವನ ಆದೇಶಗಳ ಮೇಲೆ ವಿಶ್ವಾಸವಿರಿಸುವ, 'ನಿರಕ್ಷರಿ' ಪ್ರವಾದಿಯವರ ಮೇಲೂ ವಿಶ್ವಾಸವಿರಿಸಿರಿ ಮತ್ತು ಅವರನ್ನು ಅನುಸರಿಸಿರಿ. ನೀವು ಸನ್ಮಾರ್ಗ ಹೊಂದಬಹುದು."

قُلْ يَٰٓأَيُّهَا ٱلنَّاسُ إِنِّى رَسُولُ ٱللَّهِ إِلَيْكُمْ جَمِيعًا ٱلَّذِى لَهُۥ مُلْكُ ٱلسَّمَٰوَٰتِ وَٱلْأَرْضِ ۖ لَآ إِلَٰهَ إِلَّا هُوَ يُحْىِۦ وَيُمِيتُ ۖ فَـَٔامِنُوا۟ بِٱللَّهِ وَرَسُولِهِ ٱلنَّبِىِّ ٱلْأُمِّىِّ ٱلَّذِى يُؤْمِنُ بِٱللَّهِ وَكَلِمَٰتِهِۦ وَٱتَّبِعُوهُ لَعَلَّكُمْ تَهْتَدُونَ ﴿١٥٨﴾

159. ಮೂಸಾರ ಜನಾಂಗದಲ್ಲಿ ಸತ್ಯದ ಪ್ರಕಾರ ಮಾರ್ಗದರ್ಶನ ಮಾಡುತ್ತಿದ್ದ ಹಾಗೂ ಸತ್ಯದ ಪ್ರಕಾರವೇ ನ್ಯಾಯಪಾಲನೆ ಮಾಡುತ್ತಿದ್ದ ಒಂದು ಪಂಗಡವಿತ್ತು.

وَمِن قَوْمِ مُوسَىٰٓ أُمَّةٌ يَهْدُونَ بِٱلْحَقِّ وَبِهِۦ يَعْدِلُونَ ﴿١٥٩﴾

160. ನಾವು ಆ ಜನಾಂಗವನ್ನು ಹನ್ನೆರಡು ಮನೆತನಗಳಾಗಿ ವಿಭಾಗಿಸಿ, ಅವರನ್ನು ಸ್ವತಂತ್ರ ಪಂಗಡಗಳಾಗಿ ರೂಪಿಸಿದ್ದೆವು. ಆ ಜನಾಂಗವು ಮೂಸಾರೊಡನೆ ನೀರು ಕೇಳಿದಾಗ ನಾವು ಆ ಬಂಡೆಯ ಮೇಲೆ ತಮ್ಮ ಲಾಠಿಯಿಂದ ಹೊಡೆಯಲು ಸೂಚನೆ ಕೊಟ್ಟೆವು. ಆ ಪ್ರಕಾರ ಆ ಬಂಡೆಯಿಂದ ಹಠಾತ್ತನೆ ಹನ್ನೆರಡು ಚಿಲುಮೆಗಳು ಉಕ್ಕಿ ಬಂದುವು. ಪ್ರತಿಯೊಂದು ಪಂಗಡವು ನೀರು ಪಡೆಯಬೇಕಾದ ಸ್ಥಳವನ್ನು ನಿಶ್ಚಯಿಸಿಕೊಂಡಿತು. ನಾವು ಅವರ ಮೇಲೆ ಮೋಡದ ನೆರಳನ್ನು ಮಾಡಿದೆವು. ಅವರಿಗೆ 'ಮನ್ನ್' ಮತ್ತು 'ಸಲ್ವಾ' ಇಳಿಸಿದೆವು. "ನಾವು ನಿಮಗೆ ದಯಪಾಲಿಸಿದ ಶುದ್ಧ ವಸ್ತುಗಳನ್ನು ಉಣ್ಣಿರಿ" (ಎಂದು ಅಪ್ಪಣೆ ಕೊಟ್ಟೆವು) ಆದರೆ ಆ ಬಳಿಕ ಅವರು ಮಾಡಿದ್ದೆಲ್ಲ ನಮ್ಮ ಮೇಲೆ ಅಕ್ರಮವಾಗಿರಲಿಲ್ಲ, ನಿಜವಾಗಿ ಅವರು ತಮ್ಮ ಮೇಲೆಯೇ ಅಕ್ರಮವೆಸಗಿಕೊಂಡಿದ್ದರು.

وَقَطَّعْنَٰهُمُ ٱثْنَتَىْ عَشْرَةَ أَسْبَاطًا أُمَمًا ۚ وَأَوْحَيْنَآ إِلَىٰ مُوسَىٰٓ إِذِ ٱسْتَسْقَىٰهُ قَوْمُهُۥٓ أَنِ ٱضْرِب بِّعَصَاكَ ٱلْحَجَرَ ۖ فَٱنۢبَجَسَتْ مِنْهُ ٱثْنَتَا عَشْرَةَ عَيْنًا ۖ قَدْ عَلِمَ كُلُّ أُنَاسٍ مَّشْرَبَهُمْ ۚ وَظَلَّلْنَا عَلَيْهِمُ ٱلْغَمَٰمَ وَأَنزَلْنَا عَلَيْهِمُ ٱلْمَنَّ وَٱلسَّلْوَىٰ ۖ كُلُوا۟ مِن طَيِّبَٰتِ مَا رَزَقْنَٰكُمْ ۚ وَمَا ظَلَمُونَا وَلَٰكِن كَانُوٓا۟ أَنفُسَهُمْ يَظْلِمُونَ ﴿١٦٠﴾

161. "ಈ ನಾಡಿನಲ್ಲಿ ವಾಸಿಸಿರಿ; ನಿಮ್ಮಿಷ್ಟದಂತೆ ಇಲ್ಲಿಯ ಬೆಳೆಯಿಂದ ಜೀವನಾಧಾರಗಳನ್ನು ಪಡೆಯಿರಿ ಮತ್ತು 'ಹಿತ್ತಃ ಹಿತ್ತಃ' ಎನ್ನುತ್ತ ಪಟ್ಟಣದ ದ್ವಾರದೊಳಗೆ ಶಿರಬಾಗುತ್ತ ಪ್ರವೇಶಿಸಿರಿ. ನಾವು ನಿಮ್ಮ ಅಪರಾಧಗಳನ್ನು ಕ್ಷಮಿಸುವೆವು ಮತ್ತು ಸಜ್ಜನರಿಗೆ ಇನ್ನಷ್ಟು ಅನುಗ್ರಹ ಪ್ರದಾನ ಮಾಡುವೆವು" ಎಂದು ಅವರೊಡನೆ ಹೇಳಿದ್ದ ಸಂದರ್ಭವನ್ನು ಸ್ಮರಿಸಿರಿ.

وَإِذْ قِيلَ لَهُمُ ٱسْكُنُوا۟ هَٰذِهِ ٱلْقَرْيَةَ وَكُلُوا۟ مِنْهَا حَيْثُ شِئْتُمْ وَقُولُوا۟ حِطَّةٌ وَٱدْخُلُوا۟ ٱلْبَابَ سُجَّدًا نَّغْفِرْ لَكُمْ خَطِيٓـَٰٔتِكُمْ ۚ سَنَزِيدُ ٱلْمُحْسِنِينَ ﴿١٦١﴾

فَبَدَّلَ الَّذِينَ ظَلَمُوا مِنْهُمْ قَوْلًا غَيْرَ الَّذِي قِيلَ لَهُمْ فَأَرْسَلْنَا عَلَيْهِمْ رِجْزًا مِّنَ السَّمَاءِ بِمَا كَانُوا يَظْلِمُونَ ١٦٢

162. ಆದರೆ ಅವರ ಪೈಕಿ ಅಕ್ರಮಿಗಳಾಗಿದ್ದವರು ಅವರೊಡನೆ ಹೇಳಲಾಗಿದ್ದ ಮಾತನ್ನು ಬದಲಾಯಿಸಿ ಬಿಟ್ಟರು. ನಾವು ಅವರ ಅಕ್ರಮಗಳ ಫಲವಾಗಿ ಅವರ ಮೇಲೆ ಆಕಾಶದಿಂದ ಯಾತನೆ ಇಳಿಸಿದೆವು.

وَاسْأَلْهُمْ عَنِ الْقَرْيَةِ الَّتِي كَانَتْ حَاضِرَةَ الْبَحْرِ إِذْ يَعْدُونَ فِي السَّبْتِ إِذْ تَأْتِيهِمْ حِيتَانُهُمْ يَوْمَ سَبْتِهِمْ شُرَّعًا وَيَوْمَ لَا يَسْبِتُونَ ۙ لَا تَأْتِيهِمْ ۚ كَذَٰلِكَ نَبْلُوهُم بِمَا كَانُوا يَفْسُقُونَ ١٦٣

163. ಇವರೊಡನೆ ಸಮುದ್ರ ತೀರದಲ್ಲಿದ್ದ ಆ ನಾಡಿನವರ ಕುರಿತೂ ಸ್ವಲ್ಪ ವಿಚಾರಿಸಿರಿ.[44] ಅವರಿಗೆ ಈ ಘಟನೆಯನ್ನು ನೆನಪಿಸಿರಿ - ಅಲ್ಲಿಯವರು 'ಸಬ್ತ್'ನ ದಿನ (ಶನಿವಾರ) ಅಲ್ಲಾಹನ ಆಜ್ಞೆಗಳನ್ನು ಉಲ್ಲಂಘಿಸುತ್ತಿದ್ದರು. 'ಸಬ್ತ್'ನ ದಿನವೇ ಮೀನುಗಳು ಉಕ್ಕಿ ಉಕ್ಕಿ ಮೇಲೆ ಬರುತ್ತಿದ್ದುವು ಮತ್ತು 'ಸಬ್ತ್'ನ ಹೊರತು ಇತರ ದಿನಗಳಲ್ಲಿ ಬರುತ್ತಿರಲಿಲ್ಲ. ನಾವು ಅವರ ಆಜ್ಞೋಲ್ಲಂಘನೆಯ ಕಾರಣ ಅವರನ್ನು ಪರೀಕ್ಷೆಗೊಳ ಪಡಿಸುತ್ತಿದ್ದುದರಿಂದ ಹೀಗಾಗುತ್ತಿತ್ತು.

وَإِذْ قَالَتْ أُمَّةٌ مِّنْهُمْ لِمَ تَعِظُونَ قَوْمًا ۙ اللَّهُ مُهْلِكُهُمْ أَوْ مُعَذِّبُهُمْ عَذَابًا شَدِيدًا ۖ قَالُوا مَعْذِرَةً إِلَىٰ رَبِّكُمْ وَلَعَلَّهُمْ يَتَّقُونَ ١٦٤

164. ಅವರಿಗೆ ಆ ಸಂದರ್ಭವನ್ನು ನೆನಪಿಸಿರಿ; ಅವರ ಪೈಕಿ ಒಂದು ಪಂಗಡವು ಇನ್ನೊಂದು ಪಂಗಡದೊಡನೆ, "ಅಲ್ಲಾಹನು ನಾಶಗೊಳಿಸಲಿರುವ ಅಥವಾ ಕಠಿಣ ಶಿಕ್ಷೆ ಕೊಡಲಿರುವಂಥವರಿಗೆ ನೀವೇಕೆ ಉಪದೇಶ ನೀಡುತ್ತೀರಿ?" ಎಂದು ಕೇಳಿದಾಗ ಅವರು ಹೀಗೆ ಉತ್ತರ ಕೊಟ್ಟಿದ್ದರು: "ನಾವು ಇದನ್ನೆಲ್ಲ ನಿಮ್ಮ ಪ್ರಭುವಿನ ಸನ್ನಿಧಿಯಲ್ಲಿ ನಮ್ಮ ನೆಪವನ್ನು ಮುಂದಿಡಲಿಕ್ಕಾಗಿ ಮಾಡುತ್ತೇವೆ. ಹಾಗೂ ಇವರು ಅವನ ಆಜ್ಞೋಲ್ಲಂಘನೆಯಿಂದ ದೂರ ಸರಿಯತೊಡಗುವರೆಂದು ನಿರೀಕ್ಷಿಸಿ ಹೀಗೆ ಮಾಡುತ್ತೇವೆ."

فَلَمَّا نَسُوا مَا ذُكِّرُوا بِهِ أَنجَيْنَا الَّذِينَ يَنْهَوْنَ عَنِ السُّوءِ وَأَخَذْنَا الَّذِينَ ظَلَمُوا بِعَذَابٍ بَئِيسٍ بِمَا كَانُوا يَفْسُقُونَ ١٦٥

165. ಕೊನೆಗೆ ಅವರು ಅವರಿಗೆ ನೆನಪಿಗೆ ತಂದು ಕೊಟ್ಟಿದ್ದ ಮಾರ್ಗದರ್ಶನವನ್ನು ಸಂಪೂರ್ಣ ಮರೆತು ಬಿಟ್ಟಾಗ ಕೆಡುಕಿನಿಂದ ತಡೆಯುತ್ತಿದ್ದವರನ್ನು ನಾವು ರಕ್ಷಿಸಿದೆವು ಮತ್ತು ಅಕ್ರಮ ವೆಸಗುತ್ತಿದ್ದ ಮಿಕ್ಕೆಲ್ಲರನ್ನು ಅವರ ಆಜ್ಞೋಲ್ಲಂಘನೆಗಾಗಿ ತೀವ್ರ ಯಾತನೆಯಲ್ಲಿ ಹಿಡಿದೆವು.

فَلَمَّا عَتَوْا عَن مَّا نُهُوا عَنْهُ قُلْنَا لَهُمْ كُونُوا قِرَدَةً خَاسِئِينَ ١٦٦

166. ಅನಂತರ ಯಾವ ಕಾರ್ಯಗಳಿಂದ ಅವರನ್ನು ತಡೆಯಲಾಗಿತ್ತೋ ಅವುಗಳನ್ನೇ ಅವರು ತಮ್ಮ ಉದ್ಧಟತನದಿಂದ ಮಾಡುತ್ತ

44. ಈ ಪ್ರದೇಶ 'ಐಲಃ', 'ಐಲಾತ್' ಅಥವಾ 'ಐಲೂತ್' ಆಗಿರಬಹುದೆಂಬುದು ಹೆಚ್ಚಿನ ಸಂಶೋಧಕರ ಅಭಿಪ್ರಾಯ. ಅಲ್ಲಿ ಈಗ ಇಸ್ರಾಈಲ್‌ನ ಯಹೂದಿ ಸಾಮ್ರಾಜ್ಯ ಅದೇ ಹೆಸರಿನಿಂದ ಒಂದು ಬಂದರನ್ನು ನಿರ್ಮಿಸಿದೆ. ಅದರ ಬಳಿಯಲ್ಲೇ ಜೋರ್ಡಾನಿನ ಸುಪ್ರಸಿದ್ಧ 'ಅಕಬಾ' ಬಂದರು ಇದೆ.

ಹೋದಾಗ "ಹೀನ ವಾನರರಾಗಿ ಬಿಡಿರಿ"[45] ಎಂದು ನಾವು ಹೇಳಿ ಬಿಟ್ಟೆವು.

167. ಬನೀಇಸ್ರಾಈಲರ ಮೇಲೆ ಪುನರುತ್ಥಾನ ದಿನದವರೆಗೂ ಅವರಿಗೆ ತೀವ್ರ ಯಾತನೆ ಕೊಡುವಂಥವರನ್ನು ಎರಗಿಸುತ್ತಲೇ ಇರುವೆನೆಂದು ನಿಮ್ಮ ಪ್ರಭು ಘೋಷಿಸಿದುದನ್ನು ಸ್ಮರಿಸಿರಿ. ನಿಶ್ಚಯವಾಗಿಯೂ ನಿಮ್ಮ ಪ್ರಭು ಶಿಕ್ಷೆ ಕೊಡುವುದರಲ್ಲಿ ಅತಿ ಶೀಘ್ರನು ಮತ್ತು ನಿಶ್ಚಯವಾಗಿಯೂ ಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ.

وَإِذْ تَأَذَّنَ رَبُّكَ لَيَبْعَثَنَّ عَلَيْهِمْ إِلَىٰ يَوْمِ الْقِيَامَةِ مَن يَسُومُهُمْ سُوءَ الْعَذَابِ ۗ إِنَّ رَبَّكَ لَسَرِيعُ الْعِقَابِ ۖ وَإِنَّهُ لَغَفُورٌ رَّحِيمٌ ﴿١٦٧﴾

168. ನಾವು ಅವರನ್ನು ಭೂಮಿಯ ಮೇಲೆ ವಿಭಿನ್ನಗೊಳಿಸಿ ಅನೇಕ ಜನಾಂಗಗಳಾಗಿ ಹಂಚಿ ಬಿಟ್ಟೆವು. ಅವರಲ್ಲಿ ಕೆಲವರು ಸಜ್ಜನರಾಗಿದ್ದರೆ ಕೆಲವರು ಅದಕ್ಕೆ ವ್ಯತಿರಿಕ್ತವಾಗಿದ್ದರು. ಅವರು ಮರಳಬಹುದೆಂದು ನಿರೀಕ್ಷಿಸಿ ನಾವು ಅವರನ್ನು ಅನುಕೂಲ ಮತ್ತು ಪ್ರತಿಕೂಲ ಪರಿಸ್ಥಿತಿಗಳ ಮೂಲಕ ಪರೀಕ್ಷೆಗೊಳಪಡಿಸಿದೆವು.

وَقَطَّعْنَاهُمْ فِي الْأَرْضِ أُمَمًا ۖ مِّنْهُمُ الصَّالِحُونَ وَمِنْهُمْ دُونَ ذَٰلِكَ ۖ وَبَلَوْنَاهُم بِالْحَسَنَاتِ وَالسَّيِّئَاتِ لَعَلَّهُمْ يَرْجِعُونَ ﴿١٦٨﴾

169. ಹಿಂದಿನ ತಲೆಮಾರುಗಳ ಬಳಿಕ ದೇವಗ್ರಂಥದ ವಾರೀಸುದಾರರಾಗಿ ಇಹಲೋಕದ ತುಚ್ಛ ಲಾಭಗಳನ್ನು ಸಂಗ್ರಹಿಸುವವರು ಇವರ ಉತ್ತರಾಧಿಕಾರಿಗಳಾದರು. ನಾವು ಕ್ಷಮಿಸಲ್ಪಡುವೆವೆಂಬ ನಿರೀಕ್ಷೆ ನಮಗಿದೆಯೆಂದು ಇವರು ಹೇಳುತ್ತಾರೆ. ಅದೇ ಲೌಕಿಕ ಸಂಪತ್ತು ಪುನಃ ಅವರ ಮುಂದೆ ಬಂದಾಗ ಅದರ ಮುಂದೆ ಮುಗಿಬೀಳುತ್ತಾರೆ. ಅಲ್ಲಾಹನ ಹೆಸರಲ್ಲಿ ಸತ್ಯವಾದುದನ್ನೇ ಹೇಳಬೇಕೆಂದು ಗ್ರಂಥದ ಪ್ರಮಾಣವನ್ನು ಅವರಿಂದ ಪಡೆಯಲಾಗಿಲ್ಲವೇ?

فَخَلَفَ مِن بَعْدِهِمْ خَلْفٌ وَرِثُوا الْكِتَابَ يَأْخُذُونَ عَرَضَ هَٰذَا الْأَدْنَىٰ وَيَقُولُونَ سَيُغْفَرُ لَنَا وَإِن يَأْتِهِمْ عَرَضٌ مِّثْلُهُ يَأْخُذُوهُ ۚ أَلَمْ يُؤْخَذْ عَلَيْهِم مِّيثَاقُ الْكِتَابِ أَن لَّا يَقُولُوا عَلَى اللَّهِ إِلَّا الْحَقَّ

45. ಆ ಪ್ರದೇಶದಲ್ಲಿ ಮೂರು ವಿಧದ ಜನರಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ. ಮೊದಲನೆಯದಾಗಿ ದೇವಾದೇಶಗಳನ್ನು ನಿರ್ಭಿಡವಾಗಿ ಉಲ್ಲಂಘಿಸುತ್ತಿದ್ದವರು, ಎರಡನೆಯ ವಿಭಾಗ ಸ್ವತಃ ದೇವಾದೇಶಗಳ ಉಲ್ಲಂಘನೆ ಮಾಡುತ್ತಿರಲಿಲ್ಲ, ಆದರೆ ಆಜ್ಞೋಲ್ಲಂಘನೆಯನ್ನು ಮೌನವಾಗಿ ಕುಳಿತು ನೋಡುತ್ತಿದ್ದರು. ಮಾತ್ರವಲ್ಲ ಈ ಕಿಡಿಗೇಡಿಗಳಿಗೆ ಉಪದೇಶ ಮಾಡುವುದರಿಂದೇನು ಫಲ ಎಂದು ಉಪದೇಶಕರಿಗೆ ಹೇಳುತ್ತಿದ್ದರು. ಮೂರನೆಯ ವಿಭಾಗದ ಜನರಿಗೆ, ತಮ್ಮ ಸತ್ಯವಿಶ್ವಾಸದ ವರ್ಚಸ್ಸಿನಿಂದಾಗಿ ದೇವಾದೇಶಗಳ ಬಹಿರಂಗ ಉಲ್ಲಂಘನೆ ಸಹ್ಯವಿರಲಿಲ್ಲ. ಆದ್ದರಿಂದ ಅವರು ಒಳಿತನ್ನು ಆಜ್ಞಾಪಿಸುವುದರಲ್ಲಿ ಮತ್ತು ಕೆಡುಕನ್ನು ವಿರೋಧಿಸುವುದರಲ್ಲಿ ಸಕ್ರಿಯವಾಗಿದ್ದರು. ಅಂತಾದರೂ ಈ ಅಪರಾಧಿಗಳು ಸನ್ಮಾರ್ಗಕ್ಕೆ ಬಂದು ಬಿಡಲಿ, ಒಂದು ವೇಳೆ ಅವರು ಸನ್ಮಾರ್ಗಕ್ಕೆ ಬರದಿದ್ದರೆ ಕನಿಷ್ಠಪಕ್ಷ ನಮ್ಮ ಕರ್ತವ್ಯವಾದರೂ ಈಡೇರಲಿ. ಅದರಿಂದ ದೇವನ ಮುಂದೆ ಸಾಕ್ಷ್ಯವನ್ನು ಒದಗಿಸಬಹುದಾಗಿದೆ ಎಂದವರು ಆಲೋಚಿಸಿದರು. ಆದ್ದರಿಂದ ಆ ಪ್ರದೇಶದ ಮೇಲೆ ದೇವಯಾತನೆ ಎರಗಿದಾಗ ಮೂರು ವಿಭಾಗಗಳ ಪೈಕಿ ಮೂರನೆಯ ವಿಭಾಗ ಮಾತ್ರ ಯಾತನೆಯಿಂದ ಸುರಕ್ಷಿತವಾಗುಳಿಯಿತು ಎಂದು ಕುರ್‌ಆನ್ ಹೇಳುತ್ತದೆ. ಏಕೆಂದರೆ ಅವರು ಮಾತ್ರ ದೇವನ ಮುಂದೆ ಉತ್ತರಕೊಡಬೇಕಾದ ಬಗ್ಗೆ ಚಿಂತಿತರಾಗಿದ್ದರು. ಅವರು ಮಾತ್ರ ತಮ್ಮ ನಿರಪರಾಧಿತ್ವದ ಸಾಕ್ಷ್ಯ ಒದಗಿಸಿದ್ದರು. ಆದರೆ ಉಳಿದೆರಡು ವಿಭಾಗಗಳು ಅಕ್ರಮಿಗಳು ಎಂದು ಪರಿಗಣಿಸಲ್ಪಟ್ಟವು. ಅವರು ತಂತಮ್ಮ ಅಪರಾಧಕ್ಕನುಸಾರ ಶಿಕ್ಷೆಗೊಳಗಾದರು. ದೇವಾದೇಶಗಳನ್ನು ಸ್ಪಷ್ಟವಾಗಿ ಉಲ್ಲಂಘಿಸುತ್ತಿದ್ದವರನ್ನು ಮಾತ್ರ ಕಪಿಗಳನ್ನಾಗಿ ಮಾಡಲಾಯಿತು.

ಗ್ರಂಥದಲ್ಲಿ ಬರೆದಿರುವುದನ್ನು ಇವರು ಸ್ವತಃ ಓದಿರುತ್ತಾರೆ. ಪರಲೋಕದ ವಾಸಸ್ಥಳವಂತು ದೇವಭಯವುಳ್ಳವರಿಗೇ ಉತ್ತಮ.[46] ಇಷ್ಟನ್ನೂ ನೀವು ಗ್ರಹಿಸುವುದಿಲ್ಲವೇ?

وَدَرَسُوا مَا فِيهِ ۗ وَالدَّارُ الْآخِرَةُ خَيْرٌ لِّلَّذِينَ يَتَّقُونَ ۗ أَفَلَا تَعْقِلُونَ ﴿١٦٩﴾

170. ಗ್ರಂಥವನ್ನು ಅನುಸರಿಸುವವರು ಮತ್ತು ನಮಾಝನ್ನು ಸಂಸ್ಥಾಪಿಸಿ ಕೊಂಡವರು- ನಿಶ್ಚಯವಾಗಿಯೂ ಇಂತಹ ಸದಾಚಾರಿಗಳ ಸತ್ಫಲವನ್ನು ನಾವೆಂದಿಗೂ ನಷ್ಟಗೊಳಿಸಲಾರೆವು.

وَالَّذِينَ يُمَسِّكُونَ بِالْكِتَابِ وَأَقَامُوا الصَّلَاةَ إِنَّا لَا نُضِيعُ أَجْرَ الْمُصْلِحِينَ ﴿١٧٠﴾

171. ನಾವು ಪರ್ವತವನ್ನೆತ್ತಿ ಛತ್ರಿಯಂತೆ ಅವರ ಮೇಲೆ ಹರಡಿದಾಗ ಅದು ತಮ್ಮ ಮೇಲೆ ಬಿದ್ದುಬಿಡುವುದೆಂದು ಅವರು ಶಂಕಿಸಿದ ಆ ಸಂದರ್ಭವೂ ಅವರಿಗೆ ನೆನಪಿದೆಯೆ? ಆಗ ನಾವು ಅವರೊಡನೆ, "ನಾವು ನಿಮಗೆ ಕೊಡುತ್ತಿರುವ ಗ್ರಂಥವನ್ನು ಬಿಗಿಯಾಗಿ ಹಿಡಿಯಿರಿ ಮತ್ತು ಅದರಲ್ಲಿ ಬರೆದಿರುವುದನ್ನು ನೆನಪಿಟ್ಟುಕೊಳ್ಳಿರಿ. ನೀವು ಧರ್ಮನಿಷ್ಠರಾಗಬಹುದು" ಎಂದು ಹೇಳಿದ್ದೆವು.

وَإِذْ نَتَقْنَا الْجَبَلَ فَوْقَهُمْ كَأَنَّهُ ظُلَّةٌ وَظَنُّوا أَنَّهُ وَاقِعٌ بِهِمْ خُذُوا مَا آتَيْنَاكُم بِقُوَّةٍ وَاذْكُرُوا مَا فِيهِ لَعَلَّكُمْ تَتَّقُونَ ﴿١٧١﴾

172. ಓ ಪೈಗಂಬರರೇ, ನಿಮ್ಮ ಪ್ರಭು ಆದಮರ ಪೀಳಿಗೆಯಿಂದ ಅವರ ಸಂತತಿಯನ್ನು ಹೊರತಂದಿದ್ದ ಹಾಗೂ ಅವರನ್ನು ಸ್ವತಃ ಅವರ ಮೇಲೆ ಸಾಕ್ಷಿಗಳಾಗಿ ಮಾಡುತ್ತಾ "ನಾನು ನಿಮ್ಮ ಪ್ರಭುವಲ್ಲವೇ?" ಎಂದು ಕೇಳಿದ್ದ ಸಂದರ್ಭವನ್ನು ಜನರಿಗೆ ನೆನಪಿಸಿರಿ. ಆಗ ಅವರು, "ಹೌದು, ಖಂಡಿತವಾಗಿಯೂ ನೀನೇ ನಮ್ಮ ಪ್ರಭು. ನಾವು ಇದಕ್ಕೆ ಸಾಕ್ಷ್ಯ ವಹಿಸುತ್ತೇವೆ"[47] ಎಂದರು. ನೀವು ಪುನರುತ್ಥಾನ ದಿನದಂದು "ನಾವು ಈ ಬಗ್ಗೆ ಅಜ್ಞರಾಗಿದ್ದೆವು" ಎಂದು ಹೇಳಿಬಿಡಬಾರದೆಂದು-

وَإِذْ أَخَذَ رَبُّكَ مِن بَنِي آدَمَ مِن ظُهُورِهِمْ ذُرِّيَّتَهُمْ وَأَشْهَدَهُمْ عَلَىٰ أَنفُسِهِمْ أَلَسْتُ بِرَبِّكُمْ ۖ قَالُوا بَلَىٰ ۛ شَهِدْنَا ۛ أَن تَقُولُوا يَوْمَ الْقِيَامَةِ إِنَّا كُنَّا عَنْ هَٰذَا غَافِلِينَ ﴿١٧٢﴾

173. ಅಥವಾ 'ದೇವ ಸಹಭಾಗಿತ್ವ'ವನ್ನು ನಮಗಿಂತ ಮುಂಚೆ ನಮ್ಮ ಪೂರ್ವಿಕರು ಪ್ರಾರಂಭಿಸಿದ್ದರು, ನಾವು ಅವರ ಬಳಿಕ ಅವರ ಸಂತತಿಯಲ್ಲಿ ಜನಿಸಿದವರು, ಹೀಗಿರುವಾಗ ದುರಾಚಾರಿಗಳು ಮಾಡಿದ ಅಪರಾಧಕ್ಕಾಗಿ ನೀನು ನಮ್ಮನ್ನು ಹಿಡಿಯುವೆಯಾ?" ಎಂದು ಕೇಳಿಬಿಡಬಾರದೆಂದು ನಾವು ಹೀಗೆ ಮಾಡಿದ್ದೆವು.

أَوْ تَقُولُوا إِنَّمَا أَشْرَكَ آبَاؤُنَا مِن قَبْلُ وَكُنَّا ذُرِّيَّةً مِّن بَعْدِهِمْ ۖ أَفَتُهْلِكُنَا بِمَا فَعَلَ الْمُبْطِلُونَ ﴿١٧٣﴾

46. ಈ ವಾಕ್ಯವನ್ನು ಎರಡು ರೀತಿಯಲ್ಲಿ ಅನುವಾದಿಸಬಹುದು. ಮೊದಲನೆಯದು ನಾವು ಮೇಲೆ ಕೊಟ್ಟಿರುವ ಅನುವಾದ. ಇನ್ನೊಂದು "ದೇವಭಯ ಉಳ್ಳವರಿಗೆ ಪರಲೋಕದ ವಾಸಸ್ಥಳವೇ ಉತ್ತಮ" ಎಂದಾಗಿದೆ.

47. ಅನೇಕ ಪ್ರವಾದಿವಚನಗಳಿಂದ ವ್ಯಕ್ತವಾಗುವಂತೆ ಇದು ಆದಮ್‌ರ(ಅ) ಸೃಷ್ಟಿಯ ವೇಳೆ ನಡೆದ ಘಟನೆ. ಆಗ ದೇವಚರರನ್ನೆಲ್ಲಾ ಸೇರಿಸಿ ಮೊದಲ ಮಾನವನ ಮುಂದೆ ಸಾಷ್ಟಾಂಗವೆರಗಿಸಲಾಗಿತ್ತು ಮತ್ತು ಭೂಮುಖದಲ್ಲಿ ಮಾನವನ 'ಖಿಲಾಫತ್' ಅನ್ನು ಘೋಷಿಸಲಾಗಿತ್ತು. ಅಂತೆಯೇ ಆ ದಿನ ಪ್ರಳಯಕಾಲದ ತನಕ ಹುಟ್ಟಲಿರುವ ಎಲ್ಲ ಮಾನವರಿಗೂ ಅಲ್ಲಾಹನು ಒಮ್ಮೆಲೇ ಅಸ್ತಿತ್ವ ಮತ್ತು ಪ್ರಜ್ಞೆಯನ್ನು ನೀಡಿ ತನ್ನ ಮುಂದೆ ಹಾಜರುಪಡಿಸಿ ತನ್ನ ಪ್ರಭುತ್ವದ ಬಗ್ಗೆ ಅವರಿಂದ ಸಾಕ್ಷ್ಯ ಪಡೆದಿದ್ದನು.

174. ನೋಡಿರಿ, ಹೀಗೆ ನಾವು ದೃಷ್ಟಾಂತಗಳನ್ನು ಸುಸ್ಪಷ್ಟವಾಗಿ ವಿವರಿಸುತ್ತೇವೆ.[48] ಇವರು ಮರಳಿ ಬರಬೇಕೆಂದೇ ಹೀಗೆ ಮಾಡುತ್ತೇವೆ.

وَكَذَٰلِكَ نُفَصِّلُ الْآيَاتِ وَلَعَلَّهُمْ يَرْجِعُونَ ﴿١٧٤﴾

175. ಓ ಪೈಗಂಬರರೇ, ನಾವು ನಮ್ಮ ದೃಷ್ಟಾಂತಗಳ ಜ್ಞಾನವನ್ನು ದಯಪಾಲಿಸಿದ್ದರೂ ಅವುಗಳ ಪಾಲನೆಯಿಂದ ತಪ್ಪಿಸಿಕೊಂಡವನ ವೃತ್ತಾಂತವನ್ನೂ ಅವರ ಮುಂದೆ ವಿವರಿಸಿರಿ. ಕೊನೆಗೆ ಅವನು ಪಥಭ್ರಷ್ಟರಲ್ಲಿ ಸೇರಿ ಹೋಗುವಲ್ಲಿಯವರೆಗೂ ಶೈತಾನನು ಅವನ ಬೆಂಬತ್ತಿದನು.

وَاتْلُ عَلَيْهِمْ نَبَأَ الَّذِي آتَيْنَاهُ آيَاتِنَا فَانسَلَخَ مِنْهَا فَأَتْبَعَهُ الشَّيْطَانُ فَكَانَ مِنَ الْغَاوِينَ ﴿١٧٥﴾

176. ನಾವಿಚ್ಛಿಸುತ್ತಿದ್ದರೆ ಆ ದೃಷ್ಟಾಂತಗಳ ಮೂಲಕ ಅವನಿಗೆ ಔನ್ನತ್ಯ ದಯಪಾಲಿಸುತ್ತಿದ್ದೆವು. ಆದರೆ ಅವನಂತು ನೆಲದ ಕಡೆಗೇ ಬಾಗಿ ಬಿಟ್ಟನು ಮತ್ತು ತನ್ನ ಇಂದ್ರಿಯಾಸಕ್ತಿಗಳನ್ನೇ ಹಿಂಬಾಲಿಸಿದನು. ಆದುದರಿಂದ ಅವನ ಪರಿಸ್ಥಿತಿಯು ನಾಯಿಯಂತಾಯಿತು. ನೀವು ಅದರ ಮೇಲೆ ದಾಳಿ ಮಾಡಿದರೂ ಅದು ನಾಲಗೆಯನ್ನು ಹೊರ ಚಾಚಿಕೊಂಡಿರುವುದು.[49] ಅದನ್ನು ಬಿಟ್ಟು ಬಿಟ್ಟರೂ ಅದು ನಾಲಗೆಯನ್ನು ಹೊರ ಚಾಚಿಕೊಂಡಿರುವುದು. ಇದುವೇ ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸುವವರಿಗೆ ಇರುವ ಉಪಮೆ. ನೀವು ಈ ವೃತ್ತಾಂತಗಳನ್ನು ಇವರಿಗೆ ಹೇಳುತ್ತಲಿರಿ. ಇವರು ಕೊಂಚ ಚಿಂತಿಸಲಿ.

وَلَوْ شِئْنَا لَرَفَعْنَاهُ بِهَا وَلَٰكِنَّهُ أَخْلَدَ إِلَى الْأَرْضِ وَاتَّبَعَ هَوَاهُ ۚ فَمَثَلُهُ كَمَثَلِ الْكَلْبِ إِن تَحْمِلْ عَلَيْهِ يَلْهَثْ أَوْ تَتْرُكْهُ يَلْهَث ۚ ذَّٰلِكَ مَثَلُ الْقَوْمِ الَّذِينَ كَذَّبُوا بِآيَاتِنَا ۚ فَاقْصُصِ الْقَصَصَ لَعَلَّهُمْ يَتَفَكَّرُونَ ﴿١٧٦﴾

177. ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದವರ ಉದಾಹರಣೆಯು ಅತ್ಯಂತ ನಿಕೃಷ್ಟವಾಗಿದೆ ಮತ್ತು ಅವರು ತಮ್ಮ ಮೇಲೆ ತಾವೇ ಅಕ್ರಮವೆಸಗುತ್ತಿದ್ದಾರೆ.

سَاءَ مَثَلًا الْقَوْمُ الَّذِينَ كَذَّبُوا بِآيَاتِنَا وَأَنفُسَهُمْ كَانُوا يَظْلِمُونَ ﴿١٧٧﴾

178. ಅಲ್ಲಾಹನು ಯಾರಿಗೆ ಸನ್ಮಾರ್ಗದರ್ಶನ ಮಾಡುತ್ತಾನೋ ಅವನೇ ಸನ್ಮಾರ್ಗ ಹೊಂದುತ್ತಾನೆ ಮತ್ತು ಅಲ್ಲಾಹನು ತನ್ನ ಮಾರ್ಗ ದರ್ಶನದಿಂದ ಯಾರನ್ನು ವಂಚಿಸುತ್ತಾನೋ ಅವನೇ ವಿಫಲನೂ ಹತಾಶನೂ ಆಗಿರುತ್ತಾನೆ.

مَن يَهْدِ اللَّهُ فَهُوَ الْمُهْتَدِي ۖ وَمَن يُضْلِلْ فَأُولَٰئِكَ هُمُ الْخَاسِرُونَ ﴿١٧٨﴾

48. ಅರ್ಥಾತ್- ಮನುಷ್ಯನ ವ್ಯಕ್ತಿತ್ವದಲ್ಲೇ ಇರುವ ಸತ್ಯವನ್ನು ಗುರುತಿಸಬಲ್ಲ ಚಿಹ್ನೆಗಳು ಸನ್ಮಾರ್ಗದ ಕಡೆಗೆ ಅವನಿಗೆ ಮಾರ್ಗದರ್ಶನವೀಯುತ್ತವೆ.

49. ವ್ಯಾಖ್ಯಾನಕಾರರು ಈ ಉದಾಹರಣೆಯನ್ನು ಪ್ರವಾದಿವರ್ಯರ(ಸ) ಕಾಲದ ಮತ್ತು ಅದಕ್ಕಿಂತ ಮೊದಲು ಇತಿಹಾಸದಲ್ಲಿ ಆಗಿ ಹೋದ ಅನೇಕ ವ್ಯಕ್ತಿಗಳಿಗೆ ಅನ್ವಯಗೊಳಿಸಿದ್ದಾರೆ. ವಾಸ್ತವದಲ್ಲಿ ಈ ಉದಾಹರಣೆ ಅನ್ವಯವಾಗುವ ಆ ನಿರ್ದಿಷ್ಟ ವ್ಯಕ್ತಿ ಅಗೋಚರವಾಗಿದ್ದಾನೆ. ಆದರೆ ಅಂತಹ ಗುಣಗಳನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಗೂ ಈ ಉದಾಹರಣೆ ಅನ್ವಯವಾಗುತ್ತದೆ. ಅಲ್ಲಾಹನು ಅಂತಹ ವ್ಯಕ್ತಿಯನ್ನು ನಾಯಿಗೆ ಹೋಲಿಸಿದ್ದಾನೆ. ಸದಾ ನೇತಾಡುವ ಅದರ ನಾಲಗೆ ಮತ್ತು ನಿರಂತರ ಸುರಿಯುವ ಅದರ ಜೊಲ್ಲು ಎಂದೂ ತಣಿಯದ ದುರಾಸೆಯ ಅಗ್ನಿ ಮತ್ತು ಯಾವುದರಿಂದಲೂ ತೃಪ್ತವಾಗದ ದುಷ್ಟ ಸಂಕಲ್ಪವನ್ನು ಸೂಚಿಸುತ್ತದೆ. ಈ ಹೋಲಿಕೆಯು ಲೌಕಿಕ ಮೋಹದಲ್ಲಿ ಅಂಧನಾದವನನ್ನು ನಮ್ಮ ಭಾಷೆಯಲ್ಲಿ ನಾಯಿ ಎನ್ನುವಂತೆಯೇ ಇದೆ.

179. ಅನೇಕ 'ಯಕ್ಷ' ಮತ್ತು ಮನುಷ್ಯರನ್ನು ನಾವು ನರಕಕ್ಕಾಗಿಯೇ ಸೃಷ್ಟಿಸಿದ್ದೇವೆಂಬುದು ವಾಸ್ತವ. ಅವರಿಗೆ ಹೃದಯಗಳಿವೆ ಆದರೆ ಅವರು ಅದರಿಂದ ವಿವೇಚಿಸುವುದಿಲ್ಲ. ಅವರಿಗೆ ಕಣ್ಣು ಗಳಿವೆ ಆದರೆ ಅವರು ಅವುಗಳಿಂದ ವೀಕ್ಷಿಸುವುದಿಲ್ಲ. ಅವರಿಗೆ ಕಿವಿಗಳಿವೆ ಆದರೆ ಅವರು ಅವುಗಳಿಂದ ಆಲಿಸುವುದಿಲ್ಲ. ಅವರು ಪ್ರಾಣಿಗಳಂತಿದ್ದಾರೆ ಮಾತ್ರವಲ್ಲ ಅವುಗಳಿಗಿಂತಲೂ ದಾರಿಗೆಟ್ಟ ವರು. ಅವರು ಅಲಕ್ಷ್ಯರಾಗಿದ್ದಾರೆ.[50]

وَلَقَدْ ذَرَاْنَا لِجَهَنَّمَ كَثِيْرًا مِّنَ الْجِنِّ وَالْاِنْسِ ۖ لَهُمْ قُلُوْبٌ لَّا يَفْقَهُوْنَ بِهَا ۖ وَلَهُمْ اَعْيُنٌ لَّا يُبْصِرُوْنَ بِهَا ۖ وَلَهُمْ اٰذَانٌ لَّا يَسْمَعُوْنَ بِهَا ۗ اُولٰٓئِكَ كَالْاَنْعَامِ بَلْ هُمْ اَضَلُّ ۗ اُولٰٓئِكَ هُمُ الْغٰفِلُوْنَ ﴿١٧٩﴾

180. ಅಲ್ಲಾಹನು ಉತ್ತಮ ನಾಮಗಳಿಗೆ ಅರ್ಹನಾಗಿದ್ದಾನೆ. ಅವನನ್ನು ಉತ್ತಮ ನಾಮಗಳಿಂದಲೇ ಕರೆಯಿರಿ. ಅವನ ನಾಮಗಳನ್ನಿಡು ವುದರಲ್ಲಿ ಅತಿರೇಕವೆಸಗುವವರನ್ನು ಬಿಟ್ಟು ಬಿಡಿರಿ. ಅವರು ಮಾಡುವುದರ ಪ್ರತಿಫಲವನ್ನು ಅವರು ಪಡೆದೇ ತೀರುವರು.[51]

وَلِلّٰهِ الْاَسْمَآءُ الْحُسْنٰى فَادْعُوْهُ بِهَا ۖ وَذَرُوا الَّذِيْنَ يُلْحِدُوْنَ فِيْٓ اَسْمَآئِهٖ ۗ سَيُجْزَوْنَ مَا كَانُوْا يَعْمَلُوْنَ ﴿١٨٠﴾

181. ನಮ್ಮ ಸೃಷ್ಟಿಯಲ್ಲಿ ನಿಖರವಾಗಿ ಸತ್ಯದಂತೆ ಮಾರ್ಗದರ್ಶನ ಮತ್ತು ಅದರಂತೆ ನ್ಯಾಯ ಪಾಲಿಸುವ ಒಂದು ಪಂಗಡವೂ ಇದೆ.

وَمِمَّنْ خَلَقْنَآ اُمَّةٌ يَّهْدُوْنَ بِالْحَقِّ وَبِهٖ يَعْدِلُوْنَ ﴿١٨١﴾

182. ನಮ್ಮ ದೃಷ್ಟಾಂತವನ್ನು ಸುಳ್ಳಾಗಿಸಿದವರನ್ನು ನಾವು ಕ್ರಮೇಣ ಅವರಿಗೆ ಅರಿವೇ ಆಗದಂತೆ ವಿನಾಶದ ಕಡೆಗೆ ಒಯ್ಯುವೆವು.

وَالَّذِيْنَ كَذَّبُوْا بِاٰيٰتِنَا سَنَسْتَدْرِجُهُمْ مِّنْ حَيْثُ لَا يَعْلَمُوْنَ ﴿١٨٢﴾

183. ನಾನು ಅವರಿಗೆ ಸಡಿಲು ಬಿಡುತ್ತಿದ್ದೇನೆ. ನನ್ನ ತಂತ್ರವು ಅತ್ಯಂತ ಅಬೇಧ್ಯವಾದುದು.

وَاُمْلِيْ لَهُمْ ۗ اِنَّ كَيْدِيْ مَتِيْنٌ ﴿١٨٣﴾

184. ಇವರೆಂದೂ ಚಿಂತಿಸಿಲ್ಲವೇ? ಇವರ ಸಂಗಾತಿಯ ಮೇಲೆ ಹುಚ್ಚಿನ ಯಾವ ಪ್ರಭಾವವೂ ಇಲ್ಲ.[52] ಅವರು (ದುಷ್ಪರಿಣಾಮ ಮುಂದೆ ಬರುವುದಕ್ಕೆ ಮುಂಚೆಯೇ) ಸುಸ್ಪಷ್ಟ ಎಚ್ಚರಿಕೆ ನೀಡುತ್ತಿದ್ದಾರೆ.

اَوَلَمْ يَتَفَكَّرُوْا ۗ مَا بِصَاحِبِهِمْ مِّنْ جِنَّةٍ ۗ اِنْ هُوَ اِلَّا نَذِيْرٌ مُّبِيْنٌ ﴿١٨٤﴾

---

50. ಅರ್ಥಾತ್- ನಾವು ಅವರನ್ನು ಹೃದಯ, ಮೆದುಳು, ಕಣ್ಣು ಮತ್ತು ಕಿವಿಗಳನ್ನು ನೀಡಿ ಕಳುಹಿಸಿದ್ದೆವು. ಆದರೆ ಆ ಅಕ್ರಮಿಗಳು ಅದರಿಂದ ಯಾವುದೇ ಪ್ರಯೋಜನವನ್ನು ಪಡೆಯಲಿಲ್ಲ. ಬದಲಾಗಿ ತಮ್ಮ ದುಷ್ಕೃತ್ಯಗಳಿಂದಾಗಿ ಕೊನೆಗೆ ನರಕಕ್ಕೆ ಅರ್ಹರಾದರು.

51. "ಉತ್ತಮ ಹೆಸರುಗಳು" ಎಂದರೆ ದೇವನ ಮಹಾನತೆ, ಶ್ರೇಷ್ಠತೆ, ಪಾವಿತ್ರ್ಯ, ಪಾವನತೆ ಮತ್ತು ಅವನ ಸಮಗ್ರ ಗುಣವಿಶೇಷತೆಗಳು ಪ್ರಕಟಗೊಳ್ಳುವ ಹೆಸರುಗಳಾಗಿವೆ. "ಅಲ್ಲಾಹನಿಗೆ ಹೆಸರುಗಳನ್ನಿಡುವುದರಲ್ಲಿ ಸತ್ಯದಿಂದ ವಿಮುಖನಾಗುವುದು" ಎಂದರೆ ದೇವನ ಸ್ಥಾನಕ್ಕೆ ಒಗ್ಗದ, ಅವನ ಘನತೆಗೆ ತಕ್ಕುದಲ್ಲದ, ದೋಷ ಮತ್ತು ಕುಂದುಕೊರತೆಗಳನ್ನು ಬಿಂಬಿಸುವ ಅಥವಾ ಆ ಮಹಾಮಹಿಮನ ಬಗ್ಗೆ ತಪ್ಪಾದ ವಿಶ್ವಾಸ ಮತ್ತು ಶ್ರದ್ಧೆಯನ್ನು ಪ್ರಕಟಿಸುವಂತಹ ಹೆಸರುಗಳು.

52. ಇಲ್ಲಿ 'ಸಂಗಾತಿ' ಎಂದರೆ ಪ್ರವಾದಿವರ್ಯರು(ಸ) ಅವರನ್ನು ಮಕ್ಕಾದ ಜನರ ಸಂಗಾತಿಯೆಂದು ಏಕೆ ಹೇಳಲಾಗಿದೆಯೆಂದರೆ ಅವರು ಮಕ್ಕಾದವರ ಪಾಲಿಗೆ ಅಪರಿಚಿತರಾಗಿರಲಿಲ್ಲ. ಅವರ ಮಧ್ಯೆಯೇ ಪ್ರವಾದಿವರ್ಯರು(ಸ) ಹುಟ್ಟಿದರು. ಅವರ ನಡುವೆಯೇ ಜೀವಿಸಿ ಬಾಲ್ಯ, ಯೌವನ ಮತ್ತು ವೃದ್ಧಾಪ್ಯವನ್ನು ಕಳೆದರು. ಪ್ರವಾದಿತ್ವಕ್ಕೆ ಮೊದಲು ಅವರ ಇಡೀ ಜನಾಂಗ ಅವರನ್ನೊಬ್ಬ ಸಚ್ಚರಿತ ಮತ್ತು

185. ಇವರು ಭೂಮಿ-ಆಕಾಶಗಳ ವ್ಯವಸ್ಥೆಯ ಕುರಿತು ಎಂದಾದರೂ ವಿವೇಚಿಸಲಿಲ್ಲವೇ? ಅಲ್ಲಾಹನು ಸೃಷ್ಟಿಸಿರುವ ಯಾವ ವಸ್ತುವನ್ನೇ ಆದರೂ ಕಣ್ತೆರೆದು ನೋಡಲಿಲ್ಲವೇ? ಪ್ರಾಯಶಃ ಇವರ ಜೀವನಾವಧಿಯು ಪೂರ್ಣಗೊಳ್ಳುವ ಕಾಲ ಸಮೀಪಿಸಿರಬಹುದೆಂಬುದನ್ನು ಇವರು ಯೋಚಿಸಲಿಲ್ಲವೇ? ಪ್ರವಾದಿಯವರ ಈ ಎಚ್ಚರಿಕೆಯ ಬಳಿಕವೂ (ವಿಶ್ವಾಸ ವಿಡದವರು) ಇನ್ನಾವ ಮಾತಿನಿಂದ ವಿಶ್ವಾಸವಿಡಬಹುದು?

أَوَلَمْ يَنظُرُوا فِي مَلَكُوتِ السَّمَاوَاتِ وَالْأَرْضِ وَمَا خَلَقَ اللَّهُ مِن شَيْءٍ وَأَنْ عَسَىٰ أَن يَكُونَ قَدِ اقْتَرَبَ أَجَلُهُمْ ۖ فَبِأَيِّ حَدِيثٍ بَعْدَهُ يُؤْمِنُونَ ﴿١٨٥﴾

186. ಅಲ್ಲಾಹನು ಮಾರ್ಗದರ್ಶನದಿಂದ ಯಾರನ್ನಾದರೂ ವಂಚಿಸಿಬಿಟ್ಟರೆ ಅವನಿಗೆ ಇನ್ನಾರೂ ಮಾರ್ಗದರ್ಶಕನಿಲ್ಲ ಮತ್ತು ಅಲ್ಲಾಹನು ಅವರನ್ನು ಅವರ ಉದ್ಧಟತನದಲ್ಲೇ ಅಲೆದಾಡುತ್ತಿರಲು ಬಿಟ್ಟುಬಿಡುತ್ತಾನೆ.

مَن يُضْلِلِ اللَّهُ فَلَا هَادِيَ لَهُ ۚ وَيَذَرُهُمْ فِي طُغْيَانِهِمْ يَعْمَهُونَ ﴿١٨٦﴾

187. ಆ ನಿರ್ಣಾಯಕ ದಿನದ ಘಳಿಗೆ ಬರುವುದಾದರೂ ಯಾವಾಗ? ಎಂದು ಇವರು ನಿಮ್ಮೊಡನೆ ಕೇಳುತ್ತಾರೆ. "ಅದರ ಜ್ಞಾನವು ನನ್ನ ಪ್ರಭುವಿನ ಬಳಿಯೇ ಇದೆ. ಅದನ್ನು ಅದರ ನಿಶ್ಚಿತ ಸಮಯದಲ್ಲಿ ಅವನೇ ಪ್ರಕಟಗೊಳಿಸುವನು. ಭೂಮಿ-ಆಕಾಶಗಳಲ್ಲಿ ಅದು ಅತ್ಯಂತ ಕಠಿಣ ಕಾಲವಾಗಿರುವುದು. ಅದು ನಿಮ್ಮ ಮೇಲೆ ಹಠಾತ್ತನೆ ಬರುವುದು" ಎಂದು ಹೇಳಿರಿ. ನೀವು ಅದರ ಶೋಧನೆಯಲ್ಲೇ ಬಿದ್ದಿರುವಿರೋ ಎಂಬಂತೆ ಇವರು ಅದರ ಕುರಿತಾಗಿ ನಿಮ್ಮೊಡನೆ ಪ್ರಶ್ನಿಸುತ್ತಾರೆ. ಹೇಳಿರಿ: "ಅದರ ಅರಿವು ಅಲ್ಲಾಹನಿಗೆ ಮಾತ್ರವಿದೆ. ಆದರೆ ಹೆಚ್ಚಿನವರು ಈ ವಾಸ್ತವಿಕತೆಯಿಂದ ಅಜ್ಞರಾಗಿದ್ದಾರೆ."

يَسْأَلُونَكَ عَنِ السَّاعَةِ أَيَّانَ مُرْسَاهَا ۖ قُلْ إِنَّمَا عِلْمُهَا عِندَ رَبِّي ۖ لَا يُجَلِّيهَا لِوَقْتِهَا إِلَّا هُوَ ۚ ثَقُلَتْ فِي السَّمَاوَاتِ وَالْأَرْضِ ۚ لَا تَأْتِيكُمْ إِلَّا بَغْتَةً ۗ يَسْأَلُونَكَ كَأَنَّكَ حَفِيٌّ عَنْهَا ۖ قُلْ إِنَّمَا عِلْمُهَا عِندَ اللَّهِ وَلَٰكِنَّ أَكْثَرَ النَّاسِ لَا يَعْلَمُونَ ﴿١٨٧﴾

188. ಓ ಪೈಗಂಬರರೇ, ಇವರೊಡನೆ ಹೀಗೆ ಹೇಳಿರಿ: "ನನ್ನ ಸ್ವಂತ ಹಿತಾಹಿತಗಳ ಅಧಿಕಾರ ನನಗಿಲ್ಲ. ಅಲ್ಲಾಹನು ಯಾವುದನ್ನು ಇಚ್ಛಿಸುತ್ತಾನೋ ಅದು ಆಗುತ್ತದೆ. ಮತ್ತು ನನಗೆ 'ಪರೋಕ್ಷ ಜ್ಞಾನ'ವಿರುತ್ತಿದ್ದರೆ ನಾನು ಅನೇಕ ಲಾಭಗಳನ್ನು ನನಗಾಗಿ ಒದಗಿಸಿಕೊಳ್ಳುತ್ತಿದ್ದೆ ಮತ್ತು ನನಗೆಂದೂ ಹಾನಿ ತಟ್ಟುತ್ತಿರಲಿಲ್ಲ. ನನ್ನ ಮಾತಿನ ಮೇಲೆ ವಿಶ್ವಾಸವಿಡುವವರಿಗೆ ನಾನು ಕೇವಲ ಎಚ್ಚರಿಕೆ ಕೊಡುವವನೂ ಸುವಾರ್ತೆ ನೀಡುವವನೂ ಆಗಿರುತ್ತೇನೆ."

قُل لَّا أَمْلِكُ لِنَفْسِي نَفْعًا وَلَا ضَرًّا إِلَّا مَا شَاءَ اللَّهُ ۚ وَلَوْ كُنتُ أَعْلَمُ الْغَيْبَ لَاسْتَكْثَرْتُ مِنَ الْخَيْرِ وَمَا مَسَّنِيَ السُّوءُ ۚ إِنْ أَنَا إِلَّا نَذِيرٌ وَبَشِيرٌ لِّقَوْمٍ يُؤْمِنُونَ ﴿١٨٨﴾

ಸದ್ಬುದ್ಧಿಯಿರುವ ವ್ಯಕ್ತಿಯೆಂಬ ನೆಲೆಯಿಂದ ಅರಿತಿತ್ತು. ಆದರೆ ಪ್ರವಾದಿತ್ವದ ನಂತರ ಅವರು ದೇವಸಂದೇಶವನ್ನು ತಲಪಿಸಲು ಆರಂಭಿಸಿದಾಗ ಇದ್ದಕ್ಕಿದ್ದಂತೆಯೇ ಅವರನ್ನು ಹುಚ್ಚನೆನ್ನಲಾಯಿತು. ಅವರು ಹುಚ್ಚನೆನ್ನುತ್ತಿದ್ದುದು ಪ್ರವಾದಿತ್ವಕ್ಕೆ ಮೊದಲಿನ ಅವರ ಮಾತುಗಳ ಕುರಿತಾಗಿರಲಿಲ್ಲ. ಬದಲಾಗಿ ಪ್ರವಾದಿತ್ವದ ನಂತರದ ಅವರ ಸಂದೇಶದ ಕುರಿತಾಗಿತ್ತು ಎಂದು ಇದರಿಂದ ವ್ಯಕ್ತವಾಗುತ್ತದೆ. ಆದ್ದರಿಂದಲೇ "ಈ ಮಾತುಗಳಲ್ಲಿ ಹುಚ್ಚಿನ ಯಾವ ಅಂಶವಿದೆ? ಅವರೆಂದಾದರೂ ಆಲೋಚಿಸಿದ್ದಾರೆಯೇ?" ಎಂದು ಇಲ್ಲಿ ಕೇಳಲಾಗುತ್ತಿದೆ.

189. ನಿಮ್ಮನ್ನು ಒಂದು ವ್ಯಕ್ತಿಯಿಂದ ಸೃಷ್ಟಿಸಿದವನು ಅಲ್ಲಾಹನೇ ಆಗಿರುತ್ತಾನೆ ಮತ್ತು ಅವನು ಅದೇ ವ್ಯಕ್ತಿಯಿಂದ ಅದರ ಜೋಡಿಯನ್ನು ಉಂಟು ಮಾಡಿದನು. (ಇದು) ಅವಳಿಂದ ಮನಶ್ಶಾಂತಿ ಪಡೆಯಲಿಕ್ಕಾಗಿ. ಅನಂತರ ಪುರುಷನು ಸ್ತ್ರೀಯೊಂದಿಗೆ ಸಂಯೋಗಿಸಿದಾಗ ಅವಳಿಗೆ ಒಂದು ಲಘುವಾದ ಗರ್ಭಧಾರಣೆ ಯಾಯಿತು. ಅವಳು ಅದನ್ನು ಹೊತ್ತುಕೊಂಡೇ ನಡೆಯುತ್ತಿದ್ದಳು. ಅದು ಭಾರವಾದಾಗ ಅವರಿಬ್ಬರು ಒಟ್ಟಾಗಿ ತಮ್ಮ ಪ್ರಭುವಾದ ಅಲ್ಲಾಹನೊಡನೆ, "ನೀನು ನಮಗೆ ಉತ್ತಮ ಮಗುವನ್ನಿತ್ತರೆ ನಾವು ನಿನಗೆ ಕೃತಜ್ಞರಾಗುವೆವು" ಎಂದು ಪ್ರಾರ್ಥಿಸಿದರು.

هُوَ الَّذِي خَلَقَكُم مِّن نَّفْسٍ وَاحِدَةٍ وَجَعَلَ مِنْهَا زَوْجَهَا لِيَسْكُنَ إِلَيْهَا ۖ فَلَمَّا تَغَشَّاهَا حَمَلَتْ حَمْلًا خَفِيفًا فَمَرَّتْ بِهِ ۖ فَلَمَّا أَثْقَلَت دَّعَوَا اللَّهَ رَبَّهُمَا لَئِنْ آتَيْتَنَا صَالِحًا لَّنَكُونَنَّ مِنَ الشَّاكِرِينَ ﴿١٨٩﴾

190. ಆದರೆ ಅಲ್ಲಾಹನು ಅವರಿಗೊಂದು ಉತ್ತಮ ಮಗುವನ್ನು ನೀಡಿದಾಗ ಅವರು ಅವನ ಕೊಡುಗೆಯಲ್ಲಿ ಇತರರನ್ನು ಅವನ ಸಹಭಾಗಿಗಳಾಗಿ ಮಾಡತೊಡಗಿದರು.[53] ಅಲ್ಲಾಹನು, ಅವರು ಸಹಭಾಗಿಗಳಾಗಿಸುವ ವಿಷಯಗಳಿಗಿಂತ ಅತ್ಯುನ್ನತನಾಗಿರುತ್ತಾನೆ.

فَلَمَّا آتَاهُمَا صَالِحًا جَعَلَا لَهُ شُرَكَاءَ فِيمَا آتَاهُمَا ۚ فَتَعَالَى اللَّهُ عَمَّا يُشْرِكُونَ ﴿١٩٠﴾

191. ಯಾವುದನ್ನೂ ಸೃಷ್ಟಿಸಲಾಗದೆ ಸ್ವತಃ ಸೃಷ್ಟಿಸಲ್ಪಟ್ಟವುಗಳನ್ನು ಅಲ್ಲಾಹನ ಸಹಭಾಗಿಗಳಾಗಿ ಮಾಡುವವರು ಎಂತಹ ತಿಳಿಗೇಡಿಗಳು?

أَيُشْرِكُونَ مَا لَا يَخْلُقُ شَيْئًا وَهُمْ يُخْلَقُونَ ﴿١٩١﴾

192. ಅವು ಇವರಿಗೆ ಸಹಾಯ ಮಾಡಲಾರವು. ಸ್ವತಃ ತಮ್ಮ ಸಹಾಯ ಮಾಡಿಕೊಳ್ಳಲೂ ಅಶಕ್ತವಾಗಿವೆ.

وَلَا يَسْتَطِيعُونَ لَهُمْ نَصْرًا وَلَا أَنفُسَهُمْ يَنصُرُونَ ﴿١٩٢﴾

193. ನೀವು ಅವರನ್ನು ಸನ್ಮಾರ್ಗದ ಕಡೆಗೆ ಬರಲು ಕರೆಕೊಟ್ಟರೆ ಅವರು ನಿಮ್ಮನ್ನು ಹಿಂಬಾಲಿಸಲಾರರು. ನೀವು ಅವರನ್ನು ಕರೆದರೂ ಕರೆಯದಿದ್ದರೂ ಎರಡೂ ನಿಮ್ಮ ಮಟ್ಟಿಗೆ ಸರಿಸಮಾನ ವಿರುವುದು.[54]

وَإِن تَدْعُوهُمْ إِلَى الْهُدَىٰ لَا يَتَّبِعُوكُمْ ۚ سَوَاءٌ عَلَيْكُمْ أَدَعَوْتُمُوهُمْ أَمْ أَنتُمْ صَامِتُونَ ﴿١٩٣﴾

---

53. ಅರ್ಥಾತ್- ಸಂತಾನ ಭಾಗ್ಯವನ್ನು ನೀಡುವವನು ಅಲ್ಲಾಹನಾಗಿದ್ದಾನೆ. ಮಹಿಳೆಯ ಉದರದಲ್ಲಿ ಅಲ್ಲಾಹನು ಹಾವು, ಕೋತಿ ಅಥವಾ ವಿಚಿತ್ರ ಪ್ರಾಣಿಯೊಂದನ್ನು ಸೃಷ್ಟಿಸಿದರೆ ಯಾರಿಗೂ ಅದರ ಆಕಾರವನ್ನು ಬದಲಿಸಲು ಸಾಧ್ಯವಿಲ್ಲ ಅಥವಾ ಮಗುವನ್ನು ಗರ್ಭದಲ್ಲೇ ಅವನು ಕುರುಡ, ಕಿವುಡ, ಕುಂಟ ಅಥವಾ ಅಂಗವಿಕಲನಾಗಿ ಮಾಡಿದರೆ ಇಲ್ಲವೇ ಅದರ ದೈಹಿಕ, ಮಾನಸಿಕ ಶಕ್ತಿಗಳಲ್ಲಿ ಯಾವುದಾದರೂ ದೌರ್ಬಲ್ಯವನ್ನು ಉಂಟುಮಾಡಿದರೆ ಅದನ್ನು ಬದಲಾಯಿಸಲು ಯಾರೂ ಶಕ್ತರಲ್ಲ. ಬಹುದೇವಾರಾಧಕರೂ ಏಕದೇವಾರಾಧಕರಷ್ಟೇ ಈ ಸತ್ಯವನ್ನು ಅರಿತಿದ್ದಾರೆ. ಆದ್ದರಿಂದಲೇ ಗರ್ಭಾವಸ್ಥೆಯಲ್ಲಿ ಆರೋಗ್ಯವಂತ ಮಗು ಹುಟ್ಟುವ ಬಗ್ಗೆ ಅಲ್ಲಾಹನಲ್ಲಿಯೇ ಪೂರ್ಣ ಭರವಸೆಯಿರಿಸಲಾಗುತ್ತದೆ. ಆದರೆ ಅವರ ಭರವಸೆ ಈಡೇರಿ ಚಂದಿರನಂತಹ ಮಗು ಹುಟ್ಟಿದರೆ ಕೃತಜ್ಞತಾರ್ಪಣೆಗಾಗಿ ದೇವಿ, ದೇವತೆ, ಅವತಾರ ಮತ್ತು ಪುಣ್ಯಪುರುಷರ ಹೆಸರಲ್ಲಿ ಹರಕೆ ಒಪ್ಪಿಸಲಾಗುತ್ತದೆ. ಅದು ದೇವೇತರರ ಕೃಪೆಯಿಂದಾಗಿ ಹುಟ್ಟಿದೆಯೇನೋ ಎಂಬಂತಹ ಹೆಸರನ್ನು ಅದಕ್ಕೆ ಇಡಲಾಗುತ್ತದೆ.

54. ಅರ್ಥಾತ್- ಈ ಬಹುದೇವಾರಾಧಕರ ಮಿಥ್ಯ ಆರಾಧ್ಯರುಗಳು ತಮ್ಮ ಭಕ್ತರಿಗೆ ಸನ್ಮಾರ್ಗ ತೋರುವುದಂತಿರಲಿ, ಸ್ವತಃ ಯಾವುದೋ

194. ನೀವು ಅಲ್ಲಾಹನನ್ನು ಬಿಟ್ಟು ಯಾರನ್ನು ಕೂಗಿ ಕರೆಯುತ್ತೀರೋ ಅವರೂ ನಿಮ್ಮಂತಿರುವ ದಾಸರೇ. ಅವರ ಬಗ್ಗೆ ನಿಮ್ಮ ವಿಚಾರಗಳು ಸರಿಯಾಗಿದ್ದರೆ ನೀವು ಅವರನ್ನೊಮ್ಮೆ ಪ್ರಾರ್ಥಿಸಿ, ನಿಮ್ಮ ಪ್ರಾರ್ಥನೆಗೆ ಉತ್ತರ ಕೊಡುತ್ತಾರೋ ನೋಡಿರಿ.

إِنَّ الَّذِينَ تَدْعُونَ مِن دُونِ اللَّهِ عِبَادٌ أَمْثَالُكُمْ فَادْعُوهُمْ فَلْيَسْتَجِيبُوا لَكُمْ إِن كُنتُمْ صَادِقِينَ ﴿١٩٤﴾

195. ಅವರಿಗೆ ನಡೆಯಲು ಕಾಲುಗಳಿವೆಯೇ? ಅವರಿಗೆ ಹಿಡಿಯಲು ಕೈಗಳಿವೆಯೇ? ಅವರಿಗೆ ನೋಡಲು ಕಣ್ಣುಗಳಿವೆಯೇ? ಅವರಿಗೆ ಕೇಳಲು ಕಿವಿಗಳಿವೆಯೇ? ಓ ಪೈಗಂಬರರೇ, ಇವರೊಡನೆ ಹೇಳಿರಿ: ನೀವು (ಅಲ್ಲಾಹನ) ಭಾಗೀದಾರರಾಗಿಸಿದವರನ್ನು ಕರೆದುಕೊಳ್ಳಿರಿ. ತರುವಾಯ ನೀವೆಲ್ಲರೂ ಸೇರಿ ನನ್ನ ವಿರುದ್ಧ ಕಾರ್ಯಾಚರಣೆ ನಡೆಸಿರಿ ಮತ್ತು ನನಗೆ ಕಿಂಚಿತ್ತೂ ಕಾಲಾವಕಾಶ ಕೊಡಬೇಡಿರಿ.

أَلَهُمْ أَرْجُلٌ يَمْشُونَ بِهَا أَمْ لَهُمْ أَيْدٍ يَبْطِشُونَ بِهَا أَمْ لَهُمْ أَعْيُنٌ يُبْصِرُونَ بِهَا أَمْ لَهُمْ آذَانٌ يَسْمَعُونَ بِهَا قُلِ ادْعُوا شُرَكَاءَكُمْ ثُمَّ كِيدُونِ فَلَا تُنظِرُونِ ﴿١٩٥﴾

196. ಅಲ್ಲಾಹನೇ ನನ್ನ ರಕ್ಷಕ ಮಿತ್ರನು. ಅವನು ಈ ಗ್ರಂಥವನ್ನು ಅವತೀರ್ಣಗೊಳಿಸಿರುವನು. ಅವನು ಸಜ್ಜನರನ್ನು ಸಂರಕ್ಷಿಸುತ್ತಾನೆ.

إِنَّ وَلِيِّيَ اللَّهُ الَّذِي نَزَّلَ الْكِتَابَ وَهُوَ يَتَوَلَّى الصَّالِحِينَ ﴿١٩٦﴾

197. ಇದಕ್ಕೆ ವ್ಯತಿರಿಕ್ತವಾಗಿ ನೀವು ಅಲ್ಲಾಹನನ್ನು ಬಿಟ್ಟು ಯಾರನ್ನು ಕರೆಯುತ್ತೀರೋ ಅವರು ನಿಮಗೂ ಸಹಾಯವನ್ನು ಮಾಡಲಾರರು ಮತ್ತು ತಮಗೆ ಸ್ವಯಂ ಸಹಾಯ ಮಾಡಿಕೊಳ್ಳಲಿಕ್ಕೂ ಅಶಕ್ತರು.

وَالَّذِينَ تَدْعُونَ مِن دُونِهِ لَا يَسْتَطِيعُونَ نَصْرَكُمْ وَلَا أَنفُسَهُمْ يَنصُرُونَ ﴿١٩٧﴾

198. ನೀವು ಅವರನ್ನು ನೇರಮಾರ್ಗಕ್ಕೆ ಬರಲು ಹೇಳಿದರೆ, ನಿಮ್ಮ ಮಾತನ್ನು ಕೇಳಲಿಕ್ಕೂ ಅವರಿಂದ ಸಾಧ್ಯವಿಲ್ಲ. ಅವರು ನಿಮ್ಮೆಡೆಗೆ ನೋಡುತ್ತಿರುವಂತೆ ತೋರುತ್ತದೆ ಆದರೆ ವಾಸ್ತವದಲ್ಲಿ ಅವರು ಏನನ್ನೂ ನೋಡುವುದಿಲ್ಲ.

وَإِن تَدْعُوهُمْ إِلَى الْهُدَىٰ لَا يَسْمَعُوا وَتَرَاهُمْ يَنظُرُونَ إِلَيْكَ وَهُمْ لَا يُبْصِرُونَ ﴿١٩٨﴾

199. ಓ ಪೈಗಂಬರರೇ, ಕ್ಷಮಾಶೀಲರಾಗಿರಿ. ಸರ್ವವಿಧಿತ ಒಳಿತುಗಳನ್ನು ಬೋಧಿಸಿರಿ ಮತ್ತು ತಿಳಿಗೇಡಿಗಳೊಡನೆ ಜಗಳಾಡಬೇಡಿರಿ.

خُذِ الْعَفْوَ وَأْمُرْ بِالْعُرْفِ وَأَعْرِضْ عَنِ الْجَاهِلِينَ ﴿١٩٩﴾

200. ಶೈತಾನನು ನಿಮ್ಮನ್ನೆಂದಾದರೂ ಪ್ರಚೋದಿಸಿದರೆ ಅಲ್ಲಾಹನ ಅಭಯ ಯಾಚಿಸಿರಿ. ಅವನು ಸಕಲವನ್ನೂ ಆಲಿಸುವವನೂ ಅರಿಯುವವನೂ ಆಗಿರುತ್ತಾನೆ.

وَإِمَّا يَنزَغَنَّكَ مِنَ الشَّيْطَانِ نَزْغٌ فَاسْتَعِذْ بِاللَّهِ إِنَّهُ سَمِيعٌ عَلِيمٌ ﴿٢٠٠﴾

ಸನ್ಮಾರ್ಗದರ್ಶಿಯ ಅನುಸರಣೆ ಮಾಡಲಿಕ್ಕೂ ಅವುಗಳಿಗೆ ಸಾಧ್ಯವಿಲ್ಲ. ಕೂಗಿ ಕರೆಯುವವನ ಪ್ರಾರ್ಥನೆಗೂ ಅವು ಉತ್ತರಿಸುವುದಿಲ್ಲ.

201. ವಾಸ್ತವದಲ್ಲಿ ಧರ್ಮನಿಷ್ಠರಾದವರಿಗೆ ಶೈತಾನನ ಪ್ರಭಾವದಿಂದ ದುರಾಲೋಚನೆಗಳು ಸೋಂಕಿದರೂ ಅವರು ತಕ್ಷಣ ಜಾಗೃತರಾಗುತ್ತಾರೆ ಮತ್ತು ಅವರಿಗೆ ಸರಿಯಾದ ಕರ್ಮ ವಿಧಾನ ಯಾವುದೆಂದು ಸ್ಪಷ್ಟವಾಗಿ ತೋರುತ್ತದೆ.

إِنَّ الَّذِينَ اتَّقَوْا إِذَا مَسَّهُمْ طَائِفٌ مِّنَ الشَّيْطَانِ تَذَكَّرُوا فَإِذَا هُم مُّبْصِرُونَ ﴿٢٠١﴾

202. ಇನ್ನು ಅವರ (ಶೈತಾನರ) ಸಹೋದರರು- ಅವರು ಅವರನ್ನು ಕುಟಿಲ ಮಾರ್ಗದಲ್ಲಿ ಎಳೆದೊಯ್ಯುತ್ತಾರೆ ಮತ್ತು ಅವರನ್ನು ದಾರಿ ತಪ್ಪಿಸುವುದರಲ್ಲಿ ಏನೂ ಲೋಪವಿರಿಸುವುದಿಲ್ಲ.

وَإِخْوَانُهُمْ يَمُدُّونَهُمْ فِي الْغَيِّ ثُمَّ لَا يُقْصِرُونَ ﴿٢٠٢﴾

203. ಓ ಪೈಗಂಬರರೇ, ನೀವು ಇವರ ಮುಂದೆ ಯಾವುದಾದರೂ ನಿದರ್ಶನ(ಪವಾಡ)ವನ್ನು ಇರಿಸದಿದ್ದರೆ ನೀವು ನಿಮಗಾಗಿ ಯಾವುದಾದರೂ ನಿದರ್ಶನವನ್ನು ಆರಿಸಿಕೊಳ್ಳಲಿಲ್ಲವೇಕೆ? ಎಂದು ಇವರು ಕೇಳುತ್ತಾರೆ. ಅವರೊಡನೆ ಹೇಳಿರಿ:- "ನಾನು, ನನ್ನ ಪ್ರಭು ನನಗೆ ಅವತೀರ್ಣಗೊಳಿಸಿದ 'ದಿವ್ಯವಾಣಿ'ಯನ್ನು ಮಾತ್ರ ಅನುಸರಿಸುತ್ತೇನೆ. ಇವು ನಿಮ್ಮ ಪ್ರಭುವಿನ ಕಡೆಯಿಂದ ಜ್ಞಾನ ಪ್ರಕಾಶಗಳಾಗಿರುತ್ತವೆ ಮತ್ತು ಅವುಗಳನ್ನು ಸ್ವೀಕರಿಸಿಕೊಳ್ಳುವವರಿಗೆ ಮಾರ್ಗದರ್ಶನ ಮತ್ತು ಅನುಗ್ರಹವಾಗಿರುತ್ತವೆ.

وَإِذَا لَمْ تَأْتِهِم بِآيَةٍ قَالُوا لَوْلَا اجْتَبَيْتَهَا ۚ قُلْ إِنَّمَا أَتَّبِعُ مَا يُوحَىٰ إِلَيَّ مِن رَّبِّي ۚ هَٰذَا بَصَائِرُ مِن رَّبِّكُمْ وَهُدًى وَرَحْمَةٌ لِّقَوْمٍ يُؤْمِنُونَ ﴿٢٠٣﴾

204. ನಿಮ್ಮ ಮುಂದೆ ಕುರ್‌ಆನ್ ಓದಿದಾಗ ಅದನ್ನು ಲಕ್ಷ್ಯವಿಟ್ಟು ಕೇಳಿರಿ ಮತ್ತು ಮೌನವಾಗಿರಿ. ನೀವು ಅನುಗ್ರಹೀತರಾಗಬಹುದು.

وَإِذَا قُرِئَ الْقُرْآنُ فَاسْتَمِعُوا لَهُ وَأَنصِتُوا لَعَلَّكُمْ تُرْحَمُونَ ﴿٢٠٤﴾

205. ಓ ಪೈಗಂಬರರೇ, ನಿಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಮನಸ್ಸಿನೊಳಗೂ ಭಯಭರಿತರಾಗಿಯೂ ಮೆಲುದನಿಯೊಂದಿಗೂ ಸ್ಮರಿಸುತ್ತಲಿರಿ; ಅಸಡ್ಡೆಯಲ್ಲಿ ಬಿದ್ದಿರುವವರಲ್ಲಾಗಬೇಡಿರಿ.

وَاذْكُر رَّبَّكَ فِي نَفْسِكَ تَضَرُّعًا وَخِيفَةً وَدُونَ الْجَهْرِ مِنَ الْقَوْلِ بِالْغُدُوِّ وَالْآصَالِ وَلَا تَكُن مِّنَ الْغَافِلِينَ ﴿٢٠٥﴾

206. ನಿಮ್ಮ ಪ್ರಭುವಿನ ಸಾಮೀಪ್ಯವನ್ನು ಹೊಂದಿದ ದೇವಚರರು ಎಂದೂ ತಮ್ಮ ಹಿರಿಮೆಯ ಅಹಂಭಾವದಲ್ಲಿ ಬಿದ್ದು ಅವನ ದಾಸ್ಯ-ಆರಾಧನೆಯಿಂದ ವಿಮುಖರಾಗುವುದಿಲ್ಲ. ಅವರು ಅವನ ಕೀರ್ತನೆ ಮಾಡುತ್ತಾರೆ ಮತ್ತು ಅವನ ಮುಂದೆ ಸಾಷ್ಟಾಂಗ ವೆರಗಿಕೊಂಡಿರುತ್ತಾರೆ.[55]

إِنَّ الَّذِينَ عِندَ رَبِّكَ لَا يَسْتَكْبِرُونَ عَنْ عِبَادَتِهِ وَيُسَبِّحُونَهُ وَلَهُ يَسْجُدُونَ ۩ ﴿٢٠٦﴾

السجدة الثانية

---

55. ಈ ಸೂಕ್ತವನ್ನು ಓದುವ ಅಥವಾ ಕೇಳುವ ವ್ಯಕ್ತಿಯು ಸಾಷ್ಟಾಂಗವೆರಗಬೇಕೆಂಬ ಆದೇಶವಿದೆ. ಕುರ್‌ಆನಿನ 14 ಸ್ಥಳದಲ್ಲಿ ಇಂತಹ ಸಾಷ್ಟಾಂಗದ ಸೂಕ್ತಗಳು ಬಂದಿವೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ನಿಮ್ಮೊಡನೆ 'ಅನ್‌ಫಾಲ್'(ಸಮರಾರ್ಜಿತ ಸೊತ್ತು)ನ ಕುರಿತು ಪ್ರಶ್ನಿಸುತ್ತಾರೆ.[1] ಈ 'ಸಮರಾರ್ಜಿತ ಸೊತ್ತು' ಅಲ್ಲಾಹ್ ಮತ್ತು ಅವನ ರಸೂಲರದ್ದು. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ಪರಸ್ಪರ ಸಂಬಂಧಗಳನ್ನು ಸರಿಪಡಿಸಿರಿ. ನೀವು ಮೂಮಿನ್ ಆಗಿದ್ದರೆ ಅಲ್ಲಾಹ್ ಹಾಗೂ ಅವನ ರಸೂಲ ರನ್ನು ಅನುಸರಿಸಿರಿ' ಎಂದು ಹೇಳಿರಿ.[2]

يَسْـَٔلُوْنَكَ عَنِ الْاَنْفَالِ ۭ قُلِ الْاَنْفَالُ لِلّٰهِ وَالرَّسُوْلِ ۚ فَاتَّقُوا اللّٰهَ وَاَصْلِحُوْا ذَاتَ بَيْنِكُمْ ۠ وَاَطِيْعُوا اللّٰهَ وَرَسُوْلَهٗٓ اِنْ كُنْتُمْ مُّؤْمِنِيْنَ ①

2. ಅಲ್ಲಾಹನ ಪ್ರಸ್ತಾಪ ಕೇಳಿದೊಡನೆ ಹೃದಯದಲ್ಲಿ ನಡುಕವುಂಟಾ ಗುವವರೇ ನಿಜವಾದ ಮೂಮಿನರು. ಅವರ ಮುಂದೆ ಅಲ್ಲಾಹನ 'ಸೂಕ್ತ'ಗಳನ್ನು ಓದಿದಾಗ ಅವರ ಸತ್ಯವಿಶ್ವಾಸ ವೃದ್ಧಿಯಾಗುತ್ತದೆ ಮತ್ತು ಅವರು ತಮ್ಮ ಪ್ರಭುವಿನ ಮೇಲೆ ಭರವಸೆಯಿಡುತ್ತಾರೆ.

اِنَّمَا الْمُؤْمِنُوْنَ الَّذِيْنَ اِذَا ذُكِرَ اللّٰهُ وَجِلَتْ قُلُوْبُهُمْ وَاِذَا تُلِيَتْ عَلَيْهِمْ اٰيٰتُهٗ زَادَتْهُمْ اِيْمَانًا وَّعَلٰي رَبِّهِمْ يَتَوَكَّلُوْنَ ②

3. ಅವರು ನಮಾಝುನ್ನು ಸಂಸ್ಥಾಪಿಸುತ್ತಾರೆ ಮತ್ತು ನಾವು ಅವರಿಗೆ ನೀಡಿದುದರಿಂದ (ನಮ್ಮ ಮಾರ್ಗದಲ್ಲಿ) ಖರ್ಚು ಮಾಡುತ್ತಾರೆ.

الَّذِيْنَ يُقِيْمُوْنَ الصَّلٰوةَ وَمِمَّا رَزَقْنٰهُمْ يُنْفِقُوْنَ ③

4. ಇಂಥವರೇ ನಿಜವಾದ ಸತ್ಯವಿಶ್ವಾಸಿಗಳು. ಅವರಿಗಾಗಿ ಅವರ

اُولٰۗىِٕكَ هُمُ الْمُؤْمِنُوْنَ حَقًّا ۭ لَهُمْ دَرَجٰتٌ

1. 'ಅನ್‌ಫಾಲ್' ಎಂಬುದು ನಫಿಲ್‌ನ ಬಹುವಚನ. ಅರಬಿ ಭಾಷೆಯಲ್ಲಿ ತನ್ನ ಬಾಧ್ಯತೆ ಅಥವಾ ಹಕ್ಕಿಗೆ ಮೀರಿದ್ದನ್ನು 'ನಫಿಲ್' ಎನ್ನುತ್ತಾರೆ. ದಾಸನ ಕಡೆಯಿಂದಾದರೆ ಇದರ ಅರ್ಥ ತನ್ನ ಪ್ರಭುವಿಗೆ ಸಲ್ಲಬೇಕಾದ ಕರ್ತವ್ಯಕ್ಕಿಂತ ಹೆಚ್ಚಿನ ಸೇವೆಯನ್ನು ತನ್ನಿಷ್ಟದಂತೆ ಸ್ವಯಂ ಪ್ರೇರಣೆಯಿಂದ ಮಾಡುವುದಾಗಿದೆ. ಉದಾ: ನಫಿಲ್ ನಮಾಝ್- ಪ್ರಭುವಿನ ಕಡೆಯಿಂದಾದರೆ ತನ್ನ ದಾಸನಿಗೆ ಅವನ ಹಕ್ಕಿಗಿಂತ ಹೆಚ್ಚಿನ ಉಡುಗೊರೆ ಮತ್ತು ಅನುಗ್ರಹವನ್ನು ಕರುಣಿಸುವುದಾಗಿದೆ. ಇಲ್ಲಿ ಅನ್‌ಫಾಲ್ ಎಂಬ ಪದ ಬದ್ರ್ ಯುದ್ಧದ ಮೂಲಕ ಮುಸ್ಲಿಮರ ಕೈ ಸೇರಿದ್ದ ಸಮರಾರ್ಜಿತ ಸೊತ್ತಿಗೆ ಉಪಯೋಗಿಸಲಾಗಿದೆ. ಇದು ನಿಮ್ಮ ಸಂಪಾದನೆಯಲ್ಲ ಬದಲಾಗಿ ಅಲ್ಲಾಹನು ಕರುಣಿಸಿದ ಅನುಗ್ರಹವಾಗಿದೆ ಎಂದು ಮನದಟ್ಟು ಮಾಡಲಿಕ್ಕಾಗಿಯೇ ಇಲ್ಲಿ ಅದಕ್ಕೆ 'ಅನ್‌ಫಾಲ್' ಎಂಬ ಪದವನ್ನು ಉಪಯೋಗಿಸಲಾಗಿದೆ.
2. ಈ ಸಂಪತ್ತಿನ ವಿತರಣೆಯ ಕುರಿತು ಯಾವುದೇ ಆದೇಶ ಬರುವುದಕ್ಕೆ ಮೊದಲೇ ಮುಸ್ಲಿಮರ ವಿಭಿನ್ನ ಸಮೂಹಗಳು ತಮ್ಮತಮ್ಮ ಪಾಲಿನ ಬಗ್ಗೆ ವಾದಿಸಿಕೊಳ್ಳಲಾರಂಭಿಸಿದ್ದವು. ಆದ್ದರಿಂದಲೇ ಈ ಮಾತು ಹೇಳಲಾಗಿದೆ.

ಪ್ರಭುವಿನ ಬಳಿ ಉನ್ನತ ಸ್ಥಾನಗಳಿವೆ. ಅಪರಾಧಗಳಿಗೆ ಕ್ಷಮೆ ಇದೆ ಮತ್ತು ಅತ್ಯುತ್ತಮ ಜೀವನಾಧಾರವಿದೆ.

عِندَ رَبِّهِمْ وَمَغْفِرَةٌ وَّرِزْقٌ كَرِيمٌ ④

5. ನಿಮ್ಮ ಪ್ರಭು ನಿಮ್ಮನ್ನು ನಿಮ್ಮ ನಿವಾಸದಿಂದ ಸತ್ಯಸಹಿತ ಹೊರ ಹಾಕಿದ್ದನು ಮತ್ತು ಸತ್ಯವಿಶ್ವಾಸಿಗಳ ಪೈಕಿ ಒಂದು ಪಂಗಡಕ್ಕೆ ಇದು ಅಪ್ರಿಯವಾಗಿತ್ತು.

كَمَآ أَخْرَجَكَ رَبُّكَ مِنْ بَيْتِكَ بِالْحَقِّ وَإِنَّ فَرِيقًا مِّنَ الْمُؤْمِنِينَ لَكَرِهُونَ ⑤

6. ಅದು ಸುಸ್ಪಷ್ಟವಾಗಿ ಪ್ರತ್ಯಕ್ಷವಾಗಿದ್ದರೂ ಅವರು ಆ ಸತ್ಯದ ವಿಷಯದಲ್ಲಿ ನಿಮ್ಮೊಂದಿಗೆ ತರ್ಕಿಸುತ್ತಿದ್ದರು. ತಮ್ಮ ಕಣ್ಣೆದುರೇ ಕಾಣುತ್ತಿರುವ ಮೃತ್ಯುವಿನ ಕಡೆಗೆ ಅಟ್ಟಲಾಗುತ್ತಿದೆಯೋ ಎಂಬಂತೆ ಇತ್ತು ಅವರ ಸ್ಥಿತಿ. (ಈ ಸಮರಾರ್ಜಿತದ ವಿಷಯದಲ್ಲಿಯೂ ಆಗ ಸಂಭವಿಸಿದಂತಹ ಪರಿಸ್ಥಿತಿಯೇ ಉಂಟಾಗುತ್ತಲಿದೆ.)

يُجَادِلُونَكَ فِي الْحَقِّ بَعْدَ مَا تَبَيَّنَ كَأَنَّمَا يُسَاقُونَ إِلَى الْمَوْتِ وَهُمْ يَنْظُرُونَ ⑥

7. ಎರಡು ತಂಡಗಳ ಪೈಕಿ ಒಂದು ನಿಮಗೆ ಸಿಗುವುದೆಂದು ಅಲ್ಲಾಹನು ನಿಮಗೆ ವಾಗ್ದಾನ ಮಾಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.[3] ದುರ್ಬಲ ತಂಡವು ನಿಮಗೆ ಸಿಗಬೇಕೆಂದು ನೀವು ಇಚ್ಛಿಸುತ್ತಿದ್ದಿರಿ. ಆದರೆ ತನ್ನ ಆದೇಶಗಳಿಂದ ಸತ್ಯವನ್ನು ಸತ್ಯವಾಗಿ ಮಾಡಿ ತೋರಿಸಿ, ಸತ್ಯನಿಷೇಧಿಗಳ ಮೂಲೋತ್ಪಾಟನಗೊಳಿಸಿಬಿಡ ಬೇಕೆಂಬುದು ಅಲ್ಲಾಹನ ಇಚ್ಛೆ ಆಗಿತ್ತು.

وَإِذْ يَعِدُكُمُ اللّٰهُ إِحْدَى الطَّآئِفَتَيْنِ أَنَّهَا لَكُمْ وَتَوَدُّونَ أَنَّ غَيْرَ ذَاتِ الشَّوْكَةِ تَكُونُ لَكُمْ وَيُرِيدُ اللّٰهُ أَنْ يُّحِقَّ الْحَقَّ بِكَلِمٰتِهِ وَيَقْطَعَ دَابِرَ الْكٰفِرِينَ ⑦

8. ಇದು ಅಪರಾಧಿಗಳಿಗೆ ಎಷ್ಟೇ ಅಪ್ರಿಯವಾಗಿದ್ದರೂ ಸತ್ಯವನ್ನು ಸತ್ಯವಾಗಿಯೂ ಮಿಥ್ಯವನ್ನು ಮಿಥ್ಯವಾಗಿಯೂ ಮಾಡಿತೋರಿಸ ಲಿಕ್ಕಾಗಿತ್ತು.

لِيُحِقَّ الْحَقَّ وَيُبْطِلَ الْبٰطِلَ وَلَوْ كَرِهَ الْمُجْرِمُونَ ⑧

9. ನೀವು ನಿಮ್ಮ ಪ್ರಭುವಿನೊಡನೆ ಮೊರೆಯಿಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ನಾನು ನಿಮ್ಮ ಸಹಾಯಕ್ಕಾಗಿ ಸರದಿಯಂತೆ ಒಂದು ಸಾವಿರ ದೇವಚರರನ್ನು ಕಳುಹಿಸುತ್ತಲಿದ್ದೇನೆಂದು ಅವನು ಉತ್ತರಿಸಿದನು.

إِذْ تَسْتَغِيثُونَ رَبَّكُمْ فَاسْتَجَابَ لَكُمْ أَنِّي مُمِدُّكُمْ بِأَلْفٍ مِّنَ الْمَلٰٓئِكَةِ مُرْدِفِينَ ⑨

10. ನಿಮಗೆ ಸುವಾರ್ತೆ ಹಾಗೂ ಅದರಿಂದ ನಿಮ್ಮ ಮನಸ್ಸಿಗೆ ನೆಮ್ಮದಿ ಯುಂಟಾಗುವಂತಾಗಲಿಕ್ಕಾಗಿ ಮಾತ್ರ ಅಲ್ಲಾಹನು ನಿಮಗೆ ಈ ವಿಷಯವನ್ನು ತಿಳಿಯಪಡಿಸಿದನು. ಸಹಾಯವು ಯಾವಾಗ ಲಭಿಸಿದರೂ ಅದು ಅಲ್ಲಾಹನ ಕಡೆಯಿಂದಲೇ ಲಭಿಸುತ್ತದೆ.

وَمَا جَعَلَهُ اللّٰهُ إِلَّا بُشْرٰى وَلِتَطْمَئِنَّ بِهِ قُلُوبُكُمْ ۚ وَمَا النَّصْرُ إِلَّا مِنْ عِنْدِ اللّٰهِ ۚ إِنَّ اللّٰهَ عَزِيزٌ حَكِيمٌ ⑩

3. ಅರ್ಥಾತ್- ಸಿರಿಯಾದ ಕಡೆಯಿಂದ ಬರುತ್ತಿದ್ದ ವ್ಯಾಪಾರಿ ತಂಡ ಅಥವಾ ಮಕ್ಕಾದಿಂದ ಬರುತ್ತಿದ್ದ ಕುರೈಶರ ಸೇನೆ.

ನಿಶ್ಚಯವಾಗಿಯೂ ಅಲ್ಲಾಹನು ಮಹಾಪ್ರತಾಪಿಯೂ ಧೀಮಂತನೂ ಆಗಿರುತ್ತಾನೆ.

11. ಅಲ್ಲಾಹನು ತನ್ನ ಕಡೆಯಿಂದ ತೂಕಡಿಕೆಯ ರೂಪದಲ್ಲಿ ನಿಮ್ಮ ಮೇಲೆ ನೆಮ್ಮದಿ ಹಾಗೂ ನಿರ್ಭಯತೆಯನ್ನು ಆಚ್ಛಾದಿಸುತ್ತಿದ್ದ[4] ಹಾಗೂ ನಿಮ್ಮನ್ನು ಶುದ್ಧೀಕರಿಸಲಿಕ್ಕೂ ಶೈತಾನನಿಂದ ಹಾಕಲ್ಪಟ್ಟ ಮಾಲಿನ್ಯವನ್ನು ನಿಮ್ಮಿಂದ ದೂರೀಕರಿಸಲಿಕ್ಕೂ ನಿಮ್ಮ ಹೃದಯಗಳಲ್ಲಿ ಧೈರ್ಯ ತುಂಬಲಿಕ್ಕೂ ತನ್ಮೂಲಕ ನಿಮ್ಮ ಪಾದಗಳನ್ನು ನೆಲೆಯೂರಿಸಲಿಕ್ಕೂ ಆಕಾಶದಿಂದ ನಿಮ್ಮ ಮೇಲೆ ಮಳೆ ಸುರಿಸುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.

إِذْ يُغَشِّيكُمُ النُّعَاسَ أَمَنَةً مِّنْهُ وَيُنَزِّلُ عَلَيْكُم مِّنَ السَّمَاءِ مَاءً لِّيُطَهِّرَكُم بِهِ وَيُذْهِبَ عَنكُمْ رِجْزَ الشَّيْطَانِ وَلِيَرْبِطَ عَلَىٰ قُلُوبِكُمْ وَيُثَبِّتَ بِهِ الْأَقْدَامَ ﴿١١﴾

12. ನಿಮ್ಮ ಪ್ರಭು ದೇವಚರರಿಗೆ, "ನಾನು ನಿಮ್ಮೊಂದಿಗೆ ಇದ್ದೇನೆ. ನೀವು ಸತ್ಯವಿಶ್ವಾಸಿಗಳನ್ನು ಸುಸ್ಥಿರಗೊಳಿಸಿರಿ. ನಾನೀಗಲೇ ಸತ್ಯನಿಷೇಧಿಗಳ ಹೃದಯಗಳಲ್ಲಿ ಭೀತಿಯನ್ನುಂಟು ಮಾಡುತ್ತೇನೆ. ನೀವು ಅವರ ಗೋಣುಗಳ ಮೇಲೂ ಹೊಡೆಯಿರಿ ಮತ್ತು ಎಲ್ಲ ಸಂದುಸಂದುಗಳಿಗೂ ಹೊಡೆಯಿರಿ"[5] ಎಂದು ಸೂಚನೆ ಕೊಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.

إِذْ يُوحِي رَبُّكَ إِلَى الْمَلَائِكَةِ أَنِّي مَعَكُمْ فَثَبِّتُوا الَّذِينَ آمَنُوا ۚ سَأُلْقِي فِي قُلُوبِ الَّذِينَ كَفَرُوا الرُّعْبَ فَاضْرِبُوا فَوْقَ الْأَعْنَاقِ وَاضْرِبُوا مِنْهُمْ كُلَّ بَنَانٍ ﴿١٢﴾

13. ಇದು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ಅವರು ವಿರೋಧಿಸಿದುದರಿಂದ. ಅಲ್ಲಾಹ್ ಮತ್ತು ಅವನ ಸಂದೇಶವಾಹಕನನ್ನು ವಿರೋಧಿಸಿದವನನ್ನು ಅಲ್ಲಾಹನು ಅತ್ಯಂತ ಕಠಿಣವಾಗಿ ದಂಡಿಸುವವನಾಗಿರುತ್ತಾನೆ.

ذَٰلِكَ بِأَنَّهُمْ شَاقُّوا اللَّهَ وَرَسُولَهُ ۚ وَمَن يُشَاقِقِ اللَّهَ وَرَسُولَهُ فَإِنَّ اللَّهَ شَدِيدُ الْعِقَابِ ﴿١٣﴾

14. ಇದು[6] ನಿಮಗಿರುವ ಶಿಕ್ಷೆ. ಈಗ ಇದನ್ನು ಸವಿಯಿರಿ. ಸತ್ಯವನ್ನು ನಿಷೇಧಿಸುವವರಿಗಾಗಿ ನರಕಾಗ್ನಿಯ ಯಾತನೆ ಇದೆಯೆಂಬುದು ನಿಮಗೆ ತಿಳಿದಿರಲಿ.

ذَٰلِكُمْ فَذُوقُوهُ وَأَنَّ لِلْكَافِرِينَ عَذَابَ النَّارِ ﴿١٤﴾

4. ಉಹುದ್ ಯುದ್ಧದಲ್ಲೂ ಮುಸ್ಲಿಮರಿಗೆ ಇಂತಹದೇ ಅನುಭವ ಆಗಿತ್ತು. ಅದನ್ನೇ ಆಲಿ ಇಮ್ರಾನ್ ಅಧ್ಯಾಯದ 154ನೆಯ ಸೂಕ್ತದಲ್ಲಿ ವಿವರಿಸಲಾಗಿದೆ.

5. ಇಲ್ಲಿಯ ತನಕ ಬದ್ರ್ ಯುದ್ಧದ ಘಟನಾವಳಿಗಳನ್ನು ಒಂದೊಂದಾಗಿ ನೆನಪಿಸಲಾಗಿರುವುದರ ಉದ್ದೇಶ ವಾಸ್ತವದಲ್ಲಿ 'ಅನ್‌ಫಾಲ್' ಎಂಬ ಪದದ ಅರ್ಥವನ್ನು ವಿವರಿಸುವುದಾಗಿದೆ. ಈ ಸಮರಾರ್ಜಿತ ಸೊತ್ತು ನಮ್ಮ ಮರಣಾಂತಿಕ ಹೋರಾಟದ ಪ್ರತಿಫಲವೆಂದು ಭಾವಿಸಿ ನೀವು ಅದರ ಮಾಲಕರಾಗಿ ಮಾರ್ಪಡದಿರಿ. ಇದು ವಾಸ್ತವದಲ್ಲಿ ದೇವನ ಅನುಗ್ರಹವಾಗಿದೆ. ಅನುಗ್ರಹವನ್ನು ದಯಪಾಲಿಸುವವನು ಮಾತ್ರ ಅದರ ಒಡೆಯ ಎಂದು ಆರಂಭದಲ್ಲಿ ಹೇಳಲಾಗಿದೆ. ಇಲ್ಲಿ ಆಧಾರ ಪ್ರಮಾಣದ ರೂಪದಲ್ಲಿ ಘಟನಾವಳಿಗಳನ್ನು ಎಣಿಸಲಾಗುತ್ತಿದೆ. ಇದರಲ್ಲಿ ನಿಮ್ಮ ಹೋರಾಟ, ಧೈರ್ಯ ಮತ್ತು ಸ್ಥೈರ್ಯಗಳ ಪಾಲೆಷ್ಟು ಹಾಗೂ ಅಲ್ಲಾಹನ ಅನುಗ್ರಹದ ಪಾಲೆಷ್ಟು ಎಂದು ಸ್ವತಃ ಎಣಿಕೆ ಮಾಡಿಕೊಳ್ಳಿ. ಆದ್ದರಿಂದ ಈ ಸೊತ್ತು ಯಾವ ರೀತಿ ವಿತರಿಸಬೇಕು ಎಂದು ನಿರ್ಧರಿಸಬೇಕಾದುದೂ ನೀವಲ್ಲ. ಬದಲಾಗಿ ಅಲ್ಲಾಹನಾಗಿದ್ದಾನೆ.

6. ಬದ್ರ್‌ನಲ್ಲಿ ಸೋಲನುಭವಿಸಿದ ಕುರೈಶರ ಸತ್ಯನಿಷೇಧಿಗಳನ್ನು ಉದ್ದೇಶಿಸಿ ಈ ಮಾತು ಹೇಳಲಾಗಿದೆ.

15. ಓ ಸತ್ಯವಿಶ್ವಾಸಿಗಳೇ, ನೀವು ಒಂದು ಸೇನೆಯ ರೂಪದಲ್ಲಿ ಸತ್ಯನಿಷೇಧಿಗಳನ್ನು ಎದುರ್ಗೊಂಡಾಗ ಯುದ್ಧದಲ್ಲಿ ಹಿಮ್ಮೆಟ್ಟ ಬೇಡಿರಿ.

يَا أَيُّهَا الَّذِينَ آمَنُوا إِذَا لَقِيتُمُ الَّذِينَ كَفَرُوا زَحْفًا فَلَا تُوَلُّوهُمُ الْأَدْبَارَ ﴿١٥﴾

16. ಇಂತಹ ಸಂದರ್ಭದಲ್ಲಿ ಯುದ್ಧ ತಂತ್ರಕ್ಕಾಗಿ ಅಥವಾ ಬೇರೆ ಸೈನ್ಯದೊಂದಿಗೆ ಹೋಗಿ ಸೇರಿಕೊಳ್ಳಲಿಕ್ಕಾಗಿ ಹೊರತು ಯಾರಾದರೂ ಹಿಮ್ಮೆಟ್ಟಿದರೆ- ಅವನು ಅಲ್ಲಾಹನ ಕ್ರೋಧದಿಂದ ಆವರಿಸಲ್ಪಡು ವನು. ಅವನ ವಾಸಸ್ಥಾನವು 'ನರಕ' ಆಗಿರುವುದು. ಅದು ಹಿಂತೆರಳುವ ಅತಿ ನಿಕೃಷ್ಟ ತಾಣ.

وَمَن يُوَلِّهِمْ يَوْمَئِذٍ دُبُرَهُ إِلَّا مُتَحَرِّفًا لِّقِتَالٍ أَوْ مُتَحَيِّزًا إِلَىٰ فِئَةٍ فَقَدْ بَاءَ بِغَضَبٍ مِّنَ اللَّهِ وَمَأْوَاهُ جَهَنَّمُ ۖ وَبِئْسَ الْمَصِيرُ ﴿١٦﴾

17. ನೀವು ಅವರನ್ನು ವಧಿಸಲಿಲ್ಲ. ನಿಜವಾಗಿ ಅಲ್ಲಾಹನು ಅವರನ್ನು ವಧಿಸಿದನು. ಓ ಪೈಗಂಬರರೇ, ನೀವು ಎಸೆದುದಲ್ಲ. ನಿಜವಾಗಿ ಅಲ್ಲಾಹನು ಎಸೆದನು.[7] ಇದು (ಸತ್ಯವಿಶ್ವಾಸಿಗಳ ಕೈಗಳು ಈ ಕಾರ್ಯಕ್ಕಾಗಿ ಬಳಸಲ್ಪಟ್ಟುದು) ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಒಂದು ಅತ್ಯುತ್ತಮ ಪರೀಕ್ಷೆಯಿಂದ ಜಯಪ್ರದವಾಗಿ ಪಾರು ಗಾಣಿಸಲಿಕ್ಕಾಗಿತ್ತು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

فَلَمْ تَقْتُلُوهُمْ وَلَٰكِنَّ اللَّهَ قَتَلَهُمْ ۚ وَمَا رَمَيْتَ إِذْ رَمَيْتَ وَلَٰكِنَّ اللَّهَ رَمَىٰ ۚ وَلِيُبْلِيَ الْمُؤْمِنِينَ مِنْهُ بَلَاءً حَسَنًا ۚ إِنَّ اللَّهَ سَمِيعٌ عَلِيمٌ ﴿١٧﴾

18. ಇದಂತು ನಿಮ್ಮೊಂದಿಗಿನ ವ್ಯವಹಾರವಾಯಿತು ಮತ್ತು ಸತ್ಯ ನಿಷೇಧಿಗಳೊಂದಿಗಿನ ವ್ಯವಹಾರವೇನೆಂದರೆ ನಿಶ್ಚಯವಾಗಿಯೂ ಅಲ್ಲಾಹನು ಅವರ ಕುತಂತ್ರಗಳನ್ನು ದುರ್ಬಲಗೊಳಿಸಿ ಬಿಡುವನು.

ذَٰلِكُمْ وَأَنَّ اللَّهَ مُوهِنُ كَيْدِ الْكَافِرِينَ ﴿١٨﴾

19. (ಈ ಸತ್ಯನಿಷೇಧಿಗಳೊಡನೆ ಹೇಳಿಬಿಡಿರಿ) "ನೀವು ತೀರ್ಮಾನವನ್ನೇ ಬಯಸುತ್ತೀರಾದರೆ, ಇದೋ ತೀರ್ಮಾನವು ನಿಮ್ಮ ಮುಂದೆ ಬಂದು ಬಿಟ್ಟಿತು.[8] ಈಗ ಹಿಮ್ಮೆಟ್ಟಿದರೆ ನಿಮಗೇ ಒಳಿತು. ಮುಂದೆ ಇದನ್ನೇ ಪುನರಾವರ್ತಿಸಿದರೆ ನಾವೂ ಇದೇ ಶಿಕ್ಷೆಯನ್ನು ಪುನರಾವರ್ತಿಸುವೆವು. ನಿಮ್ಮ ಜನಬಲವು ಅದೆಷ್ಟೇ ದೊಡ್ಡದಿದ್ದರೂ ನಿಮಗೇನೂ ಪ್ರಯೋಜನವಾಗದು. ಅಲ್ಲಾಹನು ಸತ್ಯವಿಶ್ವಾಸಿ ಗಳೊಂದಿಗೆ ಇದ್ದಾನೆ."

إِن تَسْتَفْتِحُوا فَقَدْ جَاءَكُمُ الْفَتْحُ ۖ وَإِن تَنتَهُوا فَهُوَ خَيْرٌ لَّكُمْ ۖ وَإِن تَعُودُوا نَعُدْ وَلَن تُغْنِيَ عَنكُمْ فِئَتُكُمْ شَيْئًا وَلَوْ كَثُرَتْ وَأَنَّ اللَّهَ مَعَ الْمُؤْمِنِينَ ﴿١٩﴾

7. ಬದ್ರ್ ಯುದ್ಧದ ವೇಳೆ ಮುಸ್ಲಿಮರು ಮತ್ತು ಸತ್ಯನಿಷೇಧಿಗಳು ಪರಸ್ಪರ ಎದುರ್ಗೊಂಡು ಯುದ್ಧವು ಭೀಕರ ಹಂತಕ್ಕೆ ತಲಪಿದಾಗ ಪ್ರವಾದಿವರ್ಯರು(ಸ) 'ಶಾಹತಿಲ್ ವುಜೂಹ್' ಎನ್ನುತ್ತಾ ಹಿಡಿ ಮಣ್ಣನ್ನು ಸತ್ಯನಿಷೇಧಿಗಳ ಕಡೆಗೆ ಎಸೆದರು. ಅದರ ಜತೆಗೆ ಪ್ರವಾದಿವರ್ಯರ(ಸ) ಸೂಚನೆಯಂತೆ ಮುಸ್ಲಿಮರು ಒಮ್ಮೆಲೆ ಸತ್ಯನಿಷೇಧಿಗಳ ಮೇಲೆ ಮುಗಿ ಬಿದ್ದರು. ಈ ಘಟನೆಯ ಕಡೆಗೇ ಇಲ್ಲಿ ಸೂಚಿಸಲಾಗುತ್ತಿದೆ. ಅರ್ಥಾತ್ ಕೈ ಪ್ರವಾದಿವರ್ಯರದ್ದಾಗಿದ್ದರೂ(ಸ) ಪೆಟ್ಟು ಅಲ್ಲಾಹನ ಕಡೆಯಿಂದಾಗಿತ್ತು.

8. ಮಕ್ಕಾದಿಂದ ಹೊರಡುವಾಗ ಬಹುದೇವಾರಾಧಕರು ಕಅಬಾದ ಪರದೆ ಹಿಡಿದು, "ದೇವಾ! ಎರಡು ಗುಂಪುಗಳ ಪೈಕಿ ಉತ್ತಮವಾದುದಕ್ಕೆ ಜಯ ದಯಪಾಲಿಸು" ಎಂದು ಪ್ರಾರ್ಥಿಸಿದ್ದರು.

20. ಓ ಸತ್ಯವಿಶ್ವಾಸಿಗಳೇ, ಅಲ್ಲಾಹ್ ಮತ್ತು ಅವನ ರಸೂಲರನ್ನು ಅನುಸರಿಸಿರಿ. ಆಜ್ಞೆಯನ್ನು ಕೇಳಿಯೂ ಅದರಿಂದ ವಿಮುಖರಾಗಬೇಡಿರಿ.

يَا أَيُّهَا الَّذِينَ آمَنُوا أَطِيعُوا اللَّهَ وَرَسُولَهُ وَلَا تَوَلَّوْا عَنْهُ وَأَنْتُمْ تَسْمَعُونَ ﴿٢٠﴾

21. ಆಲಿಸದೆಯೇ 'ನಾವು ಆಲಿಸಿದೆವು' ಎನ್ನುವವರಂತೆ ನೀವಾಗಬೇಡಿರಿ.

وَلَا تَكُونُوا كَالَّذِينَ قَالُوا سَمِعْنَا وَهُمْ لَا يَسْمَعُونَ ﴿٢١﴾

22. ವಾಸ್ತವದಲ್ಲಿ ಬುದ್ಧಿ ಶಕ್ತಿಯಿಂದ ಪ್ರಯೋಜನ ಪಡೆಯದ ಕಿವುಡ-ಮೂಕ ಜನರೇ ಅಲ್ಲಾಹನ ಬಳಿ ಅತ್ಯಂತ ಕೀಳ್ತರದ ಪ್ರಾಣಿಗಳು.

إِنَّ شَرَّ الدَّوَابِّ عِنْدَ اللَّهِ الصُّمُّ الْبُكْمُ الَّذِينَ لَا يَعْقِلُونَ ﴿٢٢﴾

23. ಅವರಲ್ಲಿ ಕಿಂಚಿತ್ತಾದರೂ ಒಳಿತಿದೆಯೆಂದು ಅಲ್ಲಾಹನಿಗೆ ತಿಳಿಯುತ್ತಿದ್ದರೆ ನಿಶ್ಚಯವಾಗಿಯೂ ಅವನು ಅವರಿಗೆ ಕೇಳುವ ದಿವ್ಯಾನುಗ್ರಹ ನೀಡುತ್ತಿದ್ದನು. (ಆದರೆ, ಅವರಲ್ಲಿ ಒಳಿತೇ ಇಲ್ಲದಿರುವಾಗ) ಅವನು ಅವರಿಗೆ ಕೇಳಿಸುತ್ತಿದ್ದರೂ ಅವರು ಅಶ್ರದ್ಧೆಯೊಂದಿಗೆ ಮುಖವನ್ನು ತಿರುಗಿಸಿಬಿಡುತ್ತಿದ್ದರು.

وَلَوْ عَلِمَ اللَّهُ فِيهِمْ خَيْرًا لَأَسْمَعَهُمْ وَلَوْ أَسْمَعَهُمْ لَتَوَلَّوْا وَهُمْ مُعْرِضُونَ ﴿٢٣﴾

24. ಓ ಸತ್ಯವಿಶ್ವಾಸಿಗಳೇ, ನಿಮಗೆ ಚೇತನ ನೀಡುವಂತಹ ವಿಷಯದ ಕಡೆಗೆ ಅಲ್ಲಾಹ್ ಮತ್ತು ರಸೂಲರು ನಿಮ್ಮನ್ನು ಕರೆದಾಗ 'ಓ'ಗೊಡಿರಿ. ಅಲ್ಲಾಹ್ ಮನುಷ್ಯನ ಮತ್ತು ಅವನ ಹೃದಯದ ನಡುವೆ ಇದ್ದಾನೆಂದೂ ನೀವು ಅವನ ಕಡೆಗೆ ಒಟ್ಟುಗೂಡಿಸಲ್ಪಡುವಿರೆಂದೂ ಅರಿತುಕೊಳ್ಳಿರಿ.

يَا أَيُّهَا الَّذِينَ آمَنُوا اسْتَجِيبُوا لِلَّهِ وَلِلرَّسُولِ إِذَا دَعَاكُمْ لِمَا يُحْيِيكُمْ وَاعْلَمُوا أَنَّ اللَّهَ يَحُولُ بَيْنَ الْمَرْءِ وَقَلْبِهِ وَأَنَّهُ إِلَيْهِ تُحْشَرُونَ ﴿٢٤﴾

25. ಯಾವುದರ ಪರಿಣಾಮವು ನಿಮ್ಮ ಪೈಕಿ ಪಾಪ ಮಾಡಿದವರಿಗೆ ಮಾತ್ರ ಸೀಮಿತವಾಗಿರಲಾರದೋ ಆ 'ಪೀಡನ'ದಿಂದ ನೀವು ದೂರವಿರಿ.[9] ಅಲ್ಲಾಹ್ ಕಠಿಣವಾಗಿ ಶಿಕ್ಷಿಸುವವನೆಂಬುದನ್ನು ತಿಳಿದುಕೊಳ್ಳಿರಿ.

وَاتَّقُوا فِتْنَةً لَا تُصِيبَنَّ الَّذِينَ ظَلَمُوا مِنْكُمْ خَاصَّةً وَاعْلَمُوا أَنَّ اللَّهَ شَدِيدُ الْعِقَابِ ﴿٢٥﴾

26. ನೀವು ಕಡಿಮೆ ಸಂಖ್ಯೆಯಲ್ಲಿದ್ದು ಭೂಮಿಯಲ್ಲಿ ನಿಮ್ಮನ್ನು ಬಲಹೀನರೆಂದು ಪರಿಗಣಿಸಲಾಗುತ್ತಿದ್ದ ಆ ಕಾಲವನ್ನು ಜ್ಞಾಪಿಸಿರಿ. ಜನರು ನಿಮ್ಮನ್ನು ಅಳಿಸಿಬಿಡಬಹುದೆಂದು ನೀವು ಶಂಕಿಸುತ್ತಿದ್ದಿರಿ. ಅನಂತರ ಅಲ್ಲಾಹನು ನಿಮಗೆ ಆಶ್ರಯ ಸ್ಥಾನವನ್ನು ಒದಗಿಸಿದನು. ತನ್ನ ಸಹಾಯದಿಂದ ನಿಮ್ಮನ್ನು ಬಲಪಡಿಸಿದನು ಮತ್ತು ನಿಮಗೆ

وَاذْكُرُوا إِذْ أَنْتُمْ قَلِيلٌ مُسْتَضْعَفُونَ فِي الْأَرْضِ تَخَافُونَ أَنْ يَتَخَطَّفَكُمُ النَّاسُ فَآوَاكُمْ وَأَيَّدَكُمْ بِنَصْرِهِ وَرَزَقَكُمْ مِنَ الطَّيِّبَاتِ لَعَلَّكُمْ تَشْكُرُونَ ﴿٢٦﴾

9. ಅರ್ಥಾತ್- ಸಾರ್ವತ್ರಿಕ ಪಿಡುಗಿನ ರೂಪದಲ್ಲಿ ಬಾಧಿಸುವ ಸಾಮೂಹಿಕ ಕ್ಷೋಭೆಗಳಾಗಿವೆ. ಅದರ ಸುಳಿಯಲ್ಲಿ ಅಪರಾಧಿಗಳು ಮಾತ್ರವಲ್ಲ ಅಪರಾಧಮಯ ಸಮಾಜದಲ್ಲಿ ಬದುಕುವುದನ್ನು ನೆಚ್ಚಿಕೊಂಡವರೂ ಸಿಕ್ಕಿಬಿಡುತ್ತಾರೆ.

ಉತ್ತಮ ಜೀವನಾಧಾರ ಒದಗಿಸಿದನು. (ಇದು) ನೀವು ಕೃತಜ್ಞರಾಗಬಹುದೆಂದು.

27. ಓ ಸತ್ಯವಿಶ್ವಾಸಿಗಳೇ, ತಿಳುವಳಿಕೆ ಇದ್ದೂ ಅಲ್ಲಾಹ್ ಮತ್ತು ರಸೂಲರೊಂದಿಗೆ ವಿಶ್ವಾಸಘಾತಕವೆಸಗಬೇಡಿರಿ ಮತ್ತು ನಿಮ್ಮ ಅಮಾನತ್[10](ವಿಶ್ವಸ್ತನಿಧಿ)ಗಳಲ್ಲಿ ವಿದ್ರೋಹವೆಸಗಬೇಡಿರಿ.

يَا أَيُّهَا الَّذِينَ آمَنُوا لَا تَخُونُوا اللَّهَ وَالرَّسُولَ وَتَخُونُوا أَمَانَاتِكُمْ وَأَنتُمْ تَعْلَمُونَ ﴿٢٧﴾

28. ನಿಮ್ಮ ಸೊತ್ತುಗಳು ಮತ್ತು ನಿಮ್ಮ ಸಂತತಿಗಳು ವಾಸ್ತವದಲ್ಲಿ ಪರೀಕ್ಷಾ ಸಾಧನಗಳೆಂದೂ ಪ್ರತಿಫಲ ನೀಡಲು ಅಲ್ಲಾಹನ ಬಳಿ ಬೇಕಾದಷ್ಟಿದೆಯೆಂದೂ ತಿಳಿದುಕೊಳ್ಳಿರಿ.

وَاعْلَمُوا أَنَّمَا أَمْوَالُكُمْ وَأَوْلَادُكُمْ فِتْنَةٌ وَأَنَّ اللَّهَ عِندَهُ أَجْرٌ عَظِيمٌ ﴿٢٨﴾

29. ಓ ಸತ್ಯವಿಶ್ವಾಸಿಗಳೇ, ನೀವು ದೇವಭಯವನ್ನಿರಿಸಿಕೊಂಡರೆ ಅಲ್ಲಾಹನು ನಿಮಗೊಂದು ಒರೆಗಲ್ಲನ್ನು[11] ಒದಗಿಸುವನು. ನಿಮ್ಮ ದೋಷಗಳನ್ನು ನಿಮ್ಮಿಂದ ದೂರೀಕರಿಸುವನು ಮತ್ತು ನಿಮ್ಮ ಅಪರಾಧಗಳನ್ನು ಕ್ಷಮಿಸುವನು. ಅಲ್ಲಾಹ್ ಮಹಾ ಅನುಗ್ರಹದಾನಿಯಾಗಿರುತ್ತಾನೆ.

يَا أَيُّهَا الَّذِينَ آمَنُوا إِن تَتَّقُوا اللَّهَ يَجْعَل لَّكُمْ فُرْقَانًا وَيُكَفِّرْ عَنكُمْ سَيِّئَاتِكُمْ وَيَغْفِرْ لَكُمْ ۗ وَاللَّهُ ذُو الْفَضْلِ الْعَظِيمِ ﴿٢٩﴾

30. ಸತ್ಯನಿಷೇಧಿಗಳು ನಿಮ್ಮನ್ನು ಸೆರೆಹಿಡಿಯಲಿಕ್ಕೆ ಅಥವಾ ವಧಿಸಲಿಕ್ಕೆ ಅಥವಾ ದೇಶಭ್ರಷ್ಟ ಗೊಳಿಸಲಿಕ್ಕೆ ಗೂಢಾಲೋಚನೆ ನಡೆಸುತ್ತಿದ್ದ ಕಾಲವೂ ಸ್ಮರಣೀಯವಾಗಿದೆ.[12] ಅವರು ತಮ್ಮ ಕುತಂತ್ರಗಳನ್ನು ನಡೆಸುತ್ತಿದ್ದರು. ಅಲ್ಲಾಹನು ತನ್ನ ತಂತ್ರ ಹೂಡುತ್ತಿದ್ದನು ಮತ್ತು ಅಲ್ಲಾಹ್ ಅತ್ಯುತ್ತಮ ತಂತ್ರಜ್ಞನಾಗಿರುತ್ತಾನೆ.

وَإِذْ يَمْكُرُ بِكَ الَّذِينَ كَفَرُوا لِيُثْبِتُوكَ أَوْ يَقْتُلُوكَ أَوْ يُخْرِجُوكَ ۚ وَيَمْكُرُونَ وَيَمْكُرُ اللَّهُ ۖ وَاللَّهُ خَيْرُ الْمَاكِرِينَ ﴿٣٠﴾

31. ಅವರಿಗೆ ನಮ್ಮ ವಚನಗಳನ್ನು ಓದಿ ಹೇಳಿದಾಗ ಅವರು,

وَإِذَا تُتْلَىٰ عَلَيْهِمْ آيَاتُنَا قَالُوا قَدْ سَمِعْنَا

10. 'ಅಮಾನತ್ತುಗಳು' ಎಂದರೆ ಒಬ್ಬನ ಮೇಲೆ ವಿಶ್ವಾಸ ತಾಳಿ ಅವನಿಗೆ ವಹಿಸಿಕೊಡಲಾಗುವ ಎಲ್ಲಾ ಜವಾಬ್ದಾರಿಕೆಗಳಾಗಿವೆ. ಅದು ಕರಾರನ್ನು ಈಡೇರಿಸುವುದು, ಸಾಮೂಹಿಕ ಸಂಧಾನ ಮಾಡಿಸುವುದು, ಸಮೂಹದ ರಹಸ್ಯ ಪಾಲನೆ ಮಾಡುವುದು, ವೈಯಕ್ತಿಕ ಅಥವಾ ಸಾಮೂಹಿಕ ಸೊತ್ತಿನ ಮೇಲ್ನೋಟ ವಹಿಸುವುದು, ಯಾವುದೇ ಪದವಿ ಅಥವಾ ಹುದ್ದೆಯನ್ನು ಸ್ವೀಕರಿಸುವುದು ಮುಂತಾದ ವ್ಯಕ್ತಿಯ ಮೇಲಿನ ಭರವಸೆಯೊಂದಿಗೆ ಸಮಾಜ ಅವನಿಗೆ ನೀಡುವಂತಹ ಯಾವುದೇ ಹೊಣೆಗಾರಿಕೆಯಾಗಿರಬಹುದು.

11. ಅಸಲಿ-ನಕಲಿಗಳ ವ್ಯತ್ಯಾಸವನ್ನು ಸ್ಪಷ್ಟಪಡಿಸುವ ವಸ್ತುವಿಗೆ ಒರೆಗಲ್ಲು ಎನ್ನಲಾಗುತ್ತದೆ. 'ಫುರ್‌ಕಾನ್'ನ ವ್ಯಾಖ್ಯಾನವೂ ಅದೇ ಆಗಿದೆ. ಆದ್ದರಿಂದಲೇ ನಾವು ಅದನ್ನು 'ಒರೆಗಲ್ಲು' ಎಂದು ಭಾಷಾಂತರಿಸಿದ್ದೇವೆ. ಲೋಕದಲ್ಲಿ ಅಲ್ಲಾಹನನ್ನು ಭಯಪಡುತ್ತಾ ಜೀವಿಸಿದರೆ, ಹೆಜ್ಜೆ ಹೆಜ್ಜೆಗೂ ಯಾವುದು ಸರಿ, ಯಾವುದು ತಪ್ಪು, ಸತ್ಯ ಮತ್ತು ದೇವನೆಡೆಗೆ ಕೊಂಡೊಯ್ಯುವ ಮಾರ್ಗ ಯಾವುದು ಹಾಗೂ ಮಿಥ್ಯಾಧಾರಿತ ಪಿಶಾಚಿಯೆಡೆಗೆ ಕೊಂಡೊಯ್ಯುವ ಮಾರ್ಗ ಯಾವುದು ಎಂದು ಸ್ವತಃ ಅರಿತುಕೊಳ್ಳುವಂತಹ ಶಕ್ತಿಯನ್ನು ಅಲ್ಲಾಹನು ನಿಮ್ಮಲ್ಲಿ ಬೆಳೆಸುವನು.

12. ಇನ್ನು ಮುಹಮ್ಮದ್‌ರೂ(ಸ) ಮದೀನಾಕ್ಕೆ ಹೊರಟು ಹೋಗಲಿದ್ದಾರೆ ಎಂಬ ಕುರೈಶರ ಶಂಕೆ ನಿಜಗೊಳ್ಳುವ ಹಂತಕ್ಕೆ ತಲಪಿದ ಸಂದರ್ಭವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ವ್ಯಕ್ತಿ ಮಕ್ಕಾದಿಂದ ಹೊರಟು ಹೋದರೆ ಅಪಾಯ ಮಿತಿಮೀರಿ ಹೋಗುವುದು ಎಂದು ಆಗ ಅವರು ಪರಸ್ಪರ ಆಡಿಕೊಳ್ಳತೊಡಗಿದರು. ಆದ್ದರಿಂದ ಅವರ ಬಗ್ಗೆ ಅಂತಿಮ ತೀರ್ಮಾನ ತಳೆಯಲಿಕ್ಕಾಗಿ ಅವರು ಸಭೆಯೊಂದನ್ನು ಕರೆದರು. ಈ ಅಪಾಯವನ್ನು ನೀಗಿಸುವುದು ಹೇಗೆ ಎಂಬ ಬಗ್ಗೆ ಅವರು ಪರಸ್ಪರ ಸಮಾಲೋಚನೆ ನಡೆಸಿದರು.

"ಹೌದು, ನಾವು ಕೇಳಿದೆವು. ನಾವು ಇಚ್ಛಿಸಿದರೆ ಇಂತಹ ಮಾತುಗಳನ್ನು ನಾವೂ ಸೃಷ್ಟಿಸಿ ಹೇಳಬಲ್ಲೆವು. ಇವು ಹಿಂದಿನಿಂದಲೇ ಜನರು ಹೇಳುತ್ತಾ ಬಂದಿರುವ ಕಟ್ಟುಕಥೆಗಳಲ್ಲದೆ ಇನ್ನೇನೂ ಅಲ್ಲ" ಎನ್ನುತ್ತಿದ್ದರು.

لَوْ نَشَآءُ لَقُلْنَا مِثْلَ هٰذَآ ۙ إِنْ هٰذَآ إِلَّآ أَسٰطِيرُ الْأَوَّلِينَ ٣١

32. "ದೇವಾ, ಇದು ನಿಜವಾಗಿಯೂ ನಿನ್ನ ಕಡೆಯಿಂದ ಬಂದ ಸತ್ಯವಾಗಿದ್ದರೆ ನಮ್ಮ ಮೇಲೆ ಆಕಾಶದಿಂದ ಕಲ್ಲಿನ ಮಳೆಗರೆಸು ಅಥವಾ ಇನ್ನಾವುದಾದರೂ ವೇದನಾತ್ಮಕ ಶಿಕ್ಷೆಯನ್ನು ತಾ" ಎಂದು ಹೇಳಿದ್ದ ಮಾತೂ ಜ್ಞಾಪಕದಲ್ಲಿದೆ.

وَإِذْ قَالُوا اللّٰهُمَّ إِنْ كَانَ هٰذَا هُوَ الْحَقَّ مِنْ عِنْدِكَ فَأَمْطِرْ عَلَيْنَا حِجَارَةً مِّنَ السَّمَآءِ أَوِ ائْتِنَا بِعَذَابٍ أَلِيمٍ ٣٢

33. ನೀವು ಅವರೊಂದಿಗೆ ಇರುವಾಗ ಅಲ್ಲಾಹ್ ಅವರ ಮೇಲೆ ಯಾತನೆ ಇಳಿಸುವವನಿರಲಿಲ್ಲ. ಜನರು ಕ್ಷಮಾಯಾಚನೆ ಮಾಡುತ್ತಿರುವಾಗ ಅವರನ್ನು ಶಿಕ್ಷಿಸುವುದೂ ಅಲ್ಲಾಹನ ರೂಢಿಯಲ್ಲ.

وَمَا كَانَ اللّٰهُ لِيُعَذِّبَهُمْ وَأَنْتَ فِيهِمْ ۚ وَمَا كَانَ اللّٰهُ مُعَذِّبَهُمْ وَهُمْ يَسْتَغْفِرُونَ ٣٣

34. ಆದರೆ ಈಗ ಅವರು 'ಮಸ್ಜಿದುಲ್ ಹರಾಮ್'ನ ದಾರಿಯನ್ನು ತಡೆಯುತ್ತಿರುವಾಗ ಅವರ ಮೇಲೆ ಯಾತನೆಯನ್ನೇಕೆ ಇಳಿಸಬಾರದು? ವಸ್ತುತಃ ಅವರು ಆ ಮಸೀದಿಯ ಅರ್ಹ ವ್ಯವಸ್ಥಾಪಕರಲ್ಲ. ಅದರ ಅರ್ಹ ವ್ಯವಸ್ಥಾಪಕರು ಧರ್ಮನಿಷ್ಠರು ಮಾತ್ರವೇ ಆಗಬಲ್ಲರು. ಆದರೆ ಹೆಚ್ಚಿನವರು ಇದನ್ನು ತಿಳಿಯುವುದಿಲ್ಲ.

وَمَا لَهُمْ أَلَّا يُعَذِّبَهُمُ اللّٰهُ وَهُمْ يَصُدُّونَ عَنِ الْمَسْجِدِ الْحَرَامِ وَمَا كَانُوٓا أَوْلِيَآءَهُ ۚ إِنْ أَوْلِيَآؤُهُ إِلَّا الْمُتَّقُونَ وَلٰكِنَّ أَكْثَرَهُمْ لَا يَعْلَمُونَ ٣٤

35. ಕಅಬಾದ ಬಳಿ ಅವರ ನಮಾಝ್ ಕೇವಲ ಸಿಳ್ಳು ಹೊಡೆಯುವುದು, ಕೈ ಚಪ್ಪಾಳೆ ಹೊಡೆಯುವುದು ಹೊರತು ಇನ್ನೇನೂ ಅಲ್ಲ. ಆದುದರಿಂದ ಇದೋ ನೀವು ಸತ್ಯವನ್ನು ನಿಷೇಧಿಸಿದುದರ ಫಲವಾಗಿ ಈಗ ಯಾತನೆಯ ಸವಿಯನ್ನುಣ್ಣಿರಿ.

وَمَا كَانَ صَلَاتُهُمْ عِنْدَ الْبَيْتِ إِلَّا مُكَآءً وَّتَصْدِيَةً ۚ فَذُوقُوا الْعَذَابَ بِمَا كُنْتُمْ تَكْفُرُونَ ٣٥

36. ವಾಸ್ತವದಲ್ಲಿ ಸತ್ಯನಿಷೇಧಿಗಳು ಅಲ್ಲಾಹನ ಮಾರ್ಗದಿಂದ ಜನರನ್ನು ತಡೆಯಲಿಕ್ಕಾಗಿ ತಮ್ಮ ಸಂಪತ್ತನ್ನು ವಿನಿಯೋಗಿಸುತ್ತಾರೆ. ಅವರು ಇನ್ನು ಮುಂದೆಯೂ ಇನ್ನಷ್ಟು ಖರ್ಚು ಮಾಡುತ್ತಿರುವರು. ಕೊನೆಗೆ ಈ ಪರಿಶ್ರಮಗಳೇ ಅವರಿಗೆ ವಿಷಾದದ ಕಾರಣಗಳಾಗುವುವು. ಅನಂತರ ಅವರು ಪರಾಜಿತರಾಗುವರು. ಈ ಸತ್ಯನಿಷೇಧಿಗಳು ನರಕದ ಕಡೆಗೆ ಸುತ್ತುಗಟ್ಟಿ ತರಲ್ಪಡುವರು.

إِنَّ الَّذِينَ كَفَرُوا يُنْفِقُونَ أَمْوَالَهُمْ لِيَصُدُّوا عَنْ سَبِيلِ اللّٰهِ ۚ فَسَيُنْفِقُونَهَا ثُمَّ تَكُونُ عَلَيْهِمْ حَسْرَةً ثُمَّ يُغْلَبُونَ ۗ وَالَّذِينَ كَفَرُوٓا إِلٰى جَهَنَّمَ يُحْشَرُونَ ٣٦

37. ಇದು ಅಲ್ಲಾಹ್ ಮಾಲಿನ್ಯವನ್ನು ನೈರ್ಮಲ್ಯದಿಂದ ಬೇರ್ಪಡಿಸಲಿಕ್ಕಾಗಿಯೂ ಎಲ್ಲಾ ವಿಧದ ಮಾಲಿನ್ಯಗಳನ್ನು

لِيَمِيزَ اللّٰهُ الْخَبِيثَ مِنَ الطَّيِّبِ وَيَجْعَلَ الْخَبِيثَ بَعْضَهُ عَلٰى بَعْضٍ فَيَرْكُمَهُ جَمِيعًا

ಒಟ್ಟುಗೂಡಿಸಿ ಆ ಮೂಟೆಯನ್ನು 'ನರಕದಲ್ಲಿ' ತಳ್ಳಿಬಿಡಲಿಕ್ಕಾಗಿಯೂ ಆಗಿರುತ್ತದೆ. ಇವರೇ ನಿಜವಾಗಿ ನಷ್ಟಹೊಂದಿದವರು.

فَيَجْعَلَهُ فِي جَهَنَّمَ ۚ أُولَٰئِكَ هُمُ الْخَاسِرُونَ ﴿٣٧﴾

38. ಓ ಪೈಗಂಬರರೇ, ಈ ಸತ್ಯನಿಷೇಧಿಗಳೊಡನೆ ಹೇಳಿರಿ:- "ಈಗಲಾದರೂ ನೀವು ಹಿಂಜರಿದರೆ ಹಿಂದೆ ಸಂಭವಿಸಿ ಹೋದುದನ್ನು ಕಡೆಗಣಿಸಲಾಗುವುದು." ಆದರೆ ಇವರು ಮುಂಚಿನ ನೀತಿಯನ್ನೇ ಪುನರಾವರ್ತಿಸಿದರೆ ಗತ ಜನಾಂಗಗಳ ಮೇಲೆ ಏನೆಲ್ಲ ಸಂಭವಿಸಿದೆಯೆಂಬುದು ಎಲ್ಲರಿಗೂ ತಿಳಿದೇ ಇದೆ.

قُل لِّلَّذِينَ كَفَرُوا إِن يَنتَهُوا يُغْفَرْ لَهُم مَّا قَدْ سَلَفَ وَإِن يَعُودُوا فَقَدْ مَضَتْ سُنَّتُ الْأَوَّلِينَ ﴿٣٨﴾

39. ಓ ಸತ್ಯವಿಶ್ವಾಸಿಗಳೇ, 'ಫಿತ್ನ'(ಕ್ಷೋಭೆ) ಅಳಿದು ಹೋಗುವ ವರೆಗೂ 'ಧರ್ಮ'(ದೀನ್) ಸರ್ವಸಂಪೂರ್ಣವಾಗಿ ಅಲ್ಲಾಹನಿಗಾಗಿ ಆಗುವ ವರೆಗೂ ಈ ಸತ್ಯನಿಷೇಧಿಗಳೊಡನೆ ಹೋರಾಡಿರಿ. ಹಾಗೆ ಅವರು 'ಪೀಡನ' ದಿಂದ ತಡೆದು ನಿಂತರೆ ಅವರ ಕರ್ಮಗಳನ್ನು ವೀಕ್ಷಿಸುವವನು ಅಲ್ಲಾಹನಾಗಿರುತ್ತಾನೆ.

وَقَاتِلُوهُمْ حَتَّىٰ لَا تَكُونَ فِتْنَةٌ وَيَكُونَ الدِّينُ كُلُّهُ لِلَّهِ ۚ فَإِنِ انتَهَوْا فَإِنَّ اللَّهَ بِمَا يَعْمَلُونَ بَصِيرٌ ﴿٣٩﴾

40. ಅವರು ಒಪ್ಪದಿದ್ದರೆ ಅಲ್ಲಾಹ್ ನಿಮ್ಮ ಸಂರಕ್ಷಕನೆಂದೂ ಅವನು ಅತ್ಯುತ್ತಮ ರಕ್ಷಕನೂ ಸಹಾಯಕನೂ ಆಗಿರುತ್ತಾನೆಂದೂ ತಿಳಿದುಕೊಳ್ಳಿರಿ.

وَإِن تَوَلَّوْا فَاعْلَمُوا أَنَّ اللَّهَ مَوْلَاكُمْ ۚ نِعْمَ الْمَوْلَىٰ وَنِعْمَ النَّصِيرُ ﴿٤٠﴾

41. *ನೀವು ಗಳಿಸಿದ ಯಾವುದೇ ಸಮರಾರ್ಜಿತ ಸೊತ್ತಿನ[13] ಐದನೆಯ ಒಂದಂಶವು ಅಲ್ಲಾಹನಿಗೆ, ಅವನ ಸಂದೇಶವಾಹಕರಿಗೆ, ಸಂಬಂಧಿಕರಿಗೆ, ಅನಾಥರಿಗೆ, ನಿರ್ಗತಿಕರಿಗೆ ಮತ್ತು ಪ್ರಯಾಣಿಕರಿಗಾಗಿರುತ್ತದೆ ಎಂಬುದು ನಿಮಗೆ ತಿಳಿದಿರಬೇಕು. ನೀವು ಅಲ್ಲಾಹನ ಮೇಲೆ ಮತ್ತು ನಿಷ್ಕರ್ಷೆಯ ದಿನ ಅರ್ಥಾತ್ ಎರಡು ಸೇನೆಗಳು ಎದುರ್ಗೊಂಡ ದಿನ ನಾವು ನಮ್ಮ ದಾಸನ ಮೇಲೆ ಅವತೀರ್ಣಗೊಳಿಸಿದುದರ ಮೇಲೆ ವಿಶ್ವಾಸವಿಟ್ಟಿದ್ದರೆ[14] (ಈ ಪಾಲನ್ನು ಹೃತ್ಪೂರ್ವಕವಾಗಿ ಸಂದಾಯ ಮಾಡಿರಿ) ಅಲ್ಲಾಹನು ಪ್ರತಿಯೊಂದು ವಿಷಯದ ಸಾಮರ್ಥ್ಯವುಳ್ಳವನು.

وَاعْلَمُوا أَنَّمَا غَنِمْتُم مِّن شَيْءٍ فَأَنَّ لِلَّهِ خُمُسَهُ وَلِلرَّسُولِ وَلِذِي الْقُرْبَىٰ وَالْيَتَامَىٰ وَالْمَسَاكِينِ وَابْنِ السَّبِيلِ إِن كُنتُمْ آمَنتُم بِاللَّهِ وَمَا أَنزَلْنَا عَلَىٰ عَبْدِنَا يَوْمَ الْفُرْقَانِ يَوْمَ الْتَقَى الْجَمْعَانِ ۗ وَاللَّهُ عَلَىٰ كُلِّ شَيْءٍ قَدِيرٌ ﴿٤١﴾

42. ನೀವು ಕಣಿವೆಯ ಈ ಕಡೆಯಲ್ಲಿದ್ದ, ಅವರು ಆ ಕಡೆಯಲ್ಲಿ

إِذْ أَنتُم بِالْعُدْوَةِ الدُّنْيَا وَهُم بِالْعُدْوَةِ

***ಇಲ್ಲಿಂದ 10ನೆಯ ಕಾಂಡ ಆರಂಭ.**

13. ಉಪನ್ಯಾಸದ ಆರಂಭದಲ್ಲಿ ಸಮರಾರ್ಜಿತ ಸೊತ್ತಿನ ಬಗ್ಗೆ ಇದು ಅಲ್ಲಾಹನ ಅನುಗ್ರಹವಾಗಿದ್ದು ಅದರ ಬಗ್ಗೆ ತೀರ್ಮಾನ ಕೈಗೊಳ್ಳುವ ಅಧಿಕಾರ ಅಲ್ಲಾಹನಿಗೆ ಮತ್ತು ಅವನ ಪ್ರವಾದಿಗೆ ಮಾತ್ರವಿದೆ ಎಂದು ಹೇಳಲಾಗಿತ್ತು. ಇಲ್ಲಿ ಆ ತೀರ್ಮಾನ ಏನು ಎಂದು ಹೇಳಲಾಗುತ್ತಿದೆ ಮತ್ತು ಸಮರಾರ್ಜಿತ ಸೊತ್ತಿನ ವಿತರಣಾ ವಿಧಿಯನ್ನು ಗೊತ್ತುಪಡಿಸಲಾಗುತ್ತಿದೆ.

14. ಅರ್ಥಾತ್- ವಿಜಯ ಮತ್ತು ಸಮರಾರ್ಜಿತ ಸೊತ್ತಿನ ಪ್ರಾಪ್ತಿಗೆ ಕಾರಣವಾದ ಅಲ್ಲಾಹನ ಬೆಂಬಲ ಮತ್ತು ಸಹಾಯ.

ಬೀಡು ಬಿಟ್ಟಿದ್ದ ಮತ್ತು ವ್ಯಾಪಾರ ತಂಡವು ನಿಮಗಿಂತ ಕೆಳಗಡೆ (ಕರಾವಳಿಯ ಕಡೆ) ಇದ್ದ ಸಂದರ್ಭವನ್ನು ಸ್ಮರಿಸಿರಿ. ನಿಮ್ಮ ಮತ್ತು ಅವರ ನಡುವೆ ಮುಂಚಿತವಾಗಿಯೇ ಯುದ್ಧದ ಕರಾರಾಗಿರುತ್ತಿದ್ದರೆ, ನೀವು ಆ ಸಂದರ್ಭದಲ್ಲಿ ನಿಶ್ಚಯವಾಗಿಯೂ ನುಣುಚಿಕೊಳ್ಳುತ್ತಿದ್ದಿರಿ. ಆದರೆ ನಾಶ ಹೊಂದಬೇಕಾದವನು ಪ್ರತ್ಯಕ್ಷ ಪ್ರಮಾಣದೊಂದಿಗೆ ನಾಶಹೊಂದಬೇಕಿತ್ತು ಮತ್ತು ಜೀವಿಸಿರಬೇಕಾದವನು ಪ್ರತ್ಯಕ್ಷ ಪ್ರಮಾಣದೊಂದಿಗೆ ಜೀವಿಸಿರಬೇಕಿತ್ತು. ಅಲ್ಲಾಹನು ಮಾಡಿಕೊಂಡಿದ್ದ ಈ ನಿರ್ಧಾರವು ಪ್ರಕಟವಾಗಲಿಕ್ಕಾಗಿ ಇದೆಲ್ಲ ಸಂಭವಿಸಿತು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

الْقُصْوَىٰ وَالرَّكْبُ أَسْفَلَ مِنكُمْ ۚ وَلَوْ تَوَاعَدتُّمْ لَاخْتَلَفْتُمْ فِي الْمِيعَادِ ۙ وَلَٰكِن لِّيَقْضِيَ اللَّهُ أَمْرًا كَانَ مَفْعُولًا لِّيَهْلِكَ مَنْ هَلَكَ عَن بَيِّنَةٍ وَيَحْيَىٰ مَنْ حَيَّ عَن بَيِّنَةٍ ۗ وَإِنَّ اللَّهَ لَسَمِيعٌ عَلِيمٌ ﴿٤٢﴾

43. ಓ ಸಂದೇಶವಾಹಕರೇ, ಅಲ್ಲಾಹನು ಅವರನ್ನು ನಿಮ್ಮ ಸ್ವಪ್ನದಲ್ಲಿ ಕಡಿಮೆ ಸಂಖ್ಯೆಯಲ್ಲಿ ತೋರಿಸುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.[15] ಅವನು ನಿಮಗೆ ಅವರ ಸಂಖ್ಯೆಯನ್ನು ಅಧಿಕವಾಗಿ ತೋರಿಸುತ್ತಿದ್ದರೆ, ನಿಶ್ಚಯವಾಗಿಯೂ ನೀವು ಧೈರ್ಯಗೆಡುತ್ತಿದ್ದಿರಿ ಮತ್ತು ಯುದ್ಧದ ವಿಷಯದಲ್ಲಿ ತರ್ಕಿಸಲಾರಂಭಿಸುತ್ತಿದ್ದಿರಿ. ಆದರೆ ಅಲ್ಲಾಹನೇ ನಿಮ್ಮನ್ನು ಇದರಿಂದ ರಕ್ಷಿಸಿದನು. ನಿಶ್ಚಯವಾಗಿಯೂ ಅವನು ಹೃದಯದಲ್ಲಿರುವುದನ್ನು ಅರಿಯುವವನಾಗಿರುತ್ತಾನೆ.

إِذْ يُرِيكَهُمُ اللَّهُ فِي مَنَامِكَ قَلِيلًا ۖ وَلَوْ أَرَاكَهُمْ كَثِيرًا لَّفَشِلْتُمْ وَلَتَنَازَعْتُمْ فِي الْأَمْرِ وَلَٰكِنَّ اللَّهَ سَلَّمَ ۗ إِنَّهُ عَلِيمٌ بِذَاتِ الصُّدُورِ ﴿٤٣﴾

44. ಅಲ್ಲಾಹನು ಸಂಗ್ರಾಮದ ವೇಳೆ ನಿಮ್ಮ ದೃಷ್ಟಿಯಲ್ಲಿ ಶತ್ರುಗಳನ್ನು ಕಡಿಮೆಯಾಗಿಯೂ ಅವರ ದೃಷ್ಟಿಯಲ್ಲಿ ನಿಮ್ಮನ್ನು ಕಡಿಮೆಯಾಗಿಯೂ ತೋರಿಸಿ ಕೊಟ್ಟ ಸಂದರ್ಭವನ್ನು ಸ್ಮರಿಸಿರಿ. (ಇದು) ಸಂಭವಿಸಬೇಕಾಗಿದ್ದುದನ್ನು ಪ್ರಕಟಗೊಳಿಸಲಿಕ್ಕಾಗಿ, ಕಟ್ಟಕಡೆಗೆ ಸಕಲ ವ್ಯವಹಾರಗಳೂ ಅಲ್ಲಾಹನ ಕಡೆಗೇ ಮರಳುತ್ತವೆ.

وَإِذْ يُرِيكُمُوهُمْ إِذِ الْتَقَيْتُمْ فِي أَعْيُنِكُمْ قَلِيلًا وَيُقَلِّلُكُمْ فِي أَعْيُنِهِمْ لِيَقْضِيَ اللَّهُ أَمْرًا كَانَ مَفْعُولًا ۗ وَإِلَى اللَّهِ تُرْجَعُ الْأُمُورُ ﴿٤٤﴾

45. ಓ ಸತ್ಯವಿಶ್ವಾಸಿಗಳೇ, ಯಾವುದಾದರೊಂದು ತಂಡದೊಂದಿಗೆ ನಿಮ್ಮ ಹೋರಾಟ ನಡೆದರೆ ನೀವು ಸುಸ್ಥಿರರಾಗಿರಿ ಮತ್ತು ಅಲ್ಲಾಹನನ್ನು ಅತಿ ಹೆಚ್ಚಾಗಿ ಸ್ಮರಿಸಿರಿ. ನಿಮಗೆ ವಿಜಯ ಪ್ರಾಪ್ತಿಯಾದೀತೆಂದು ನಿರೀಕ್ಷಿಸಬಹುದು.

يَا أَيُّهَا الَّذِينَ آمَنُوا إِذَا لَقِيتُمْ فِئَةً فَاثْبُتُوا وَاذْكُرُوا اللَّهَ كَثِيرًا لَّعَلَّكُمْ تُفْلِحُونَ ﴿٤٥﴾

46. ಅಲ್ಲಾಹ್ ಮತ್ತು ಅವನ ರಸೂಲರನ್ನು ಅನುಸರಿಸಿರಿ. ಪರಸ್ಪರ

وَأَطِيعُوا اللَّهَ وَرَسُولَهُ وَلَا تَنَازَعُوا فَتَفْشَلُوا

15. ಇದು ಪ್ರವಾದಿವರ್ಯರು(ಸ) ಮುಸ್ಲಿಮರ ಜತೆಗೆ ಮದೀನಾದಿಂದ ಹೊರಡುತ್ತಿದ್ದ ಅಥವಾ ಹೊರಟು ಯಾವುದೋ ಪ್ರದೇಶಕ್ಕೆ ತಲಪಿದ್ದ ಸಂದರ್ಭದ ಕುರಿತು ಹೇಳಲಾಗಿರುವ ಮಾತು. ಸತ್ಯನಿಷೇಧಿಗಳ ಸೇನೆ ಎಷ್ಟು ದೊಡ್ಡದು ಎಂದು ಆ ತನಕ ವ್ಯಕ್ತವಾಗಿರಲಿಲ್ಲ. ಆಗ ಪ್ರವಾದಿವರ್ಯರು(ಸ) ಕನಸಿನಲ್ಲಿ ಆ ಸೇನೆಯನ್ನು ಕಂಡರು. ಅವರಿಗೆ ತೋರಿಸಲಾದ ದೃಶ್ಯದಿಂದ ಸತ್ಯನಿಷೇಧಿಗಳೂ ಹೆಚ್ಚಿನ ಸಂಖ್ಯೆಯಲ್ಲೇನೂ ಇಲ್ಲವೆಂದು ಪ್ರವಾದಿವರ್ಯರು(ಸ) ಅಂದಾಜಿಸಿದರು.

ಜಗಳಾಡಬೇಡಿರಿ. ಅನ್ಯಥಾ ನಿಮ್ಮಲ್ಲಿ ದೌರ್ಬಲ್ಯವುಂಟಾಗುವುದು ಮತ್ತು ನೀವು ಭೀರುಗಳಾಗಿ ಬಿಡುವಿರಿ. ಸಹನೆಯಿಂದ ವರ್ತಿಸಿರಿ.[16] ಅಲ್ಲಾಹನು ಸಹನಶೀಲರೊಂದಿಗೆ ಇದ್ದಾನೆ.

وَتَذْهَبَ رِيحُكُمْ وَاصْبِرُوا إِنَّ اللَّهَ مَعَ الصَّابِرِينَ ﴿٤٦﴾

47. ತಮ್ಮ ಮನೆಗಳಿಂದ ಅಹಂಭಾವದಿಂದಲೂ ಜನರಿಗೆ ತಮ್ಮ ಠೀವಿಯನ್ನು ತೋರಿಸುತ್ತಲೂ ಹೊರಡುವವರ ರೀತಿ ನೀತಿಗಳನ್ನು ಅನುಕರಿಸಬೇಡಿರಿ. ಅಲ್ಲಾಹನ ಮಾರ್ಗದಿಂದ ತಡೆಯುವುದು ಅವರ ನೀತಿ. ಅವರ ಯಾವ ಕೃತ್ಯವೂ ಅಲ್ಲಾಹನ ಹಿಡಿತದಿಂದ ಹೊರಗಿಲ್ಲ.

وَلَا تَكُونُوا كَالَّذِينَ خَرَجُوا مِن دِيَارِهِم بَطَرًا وَرِئَاءَ النَّاسِ وَيَصُدُّونَ عَن سَبِيلِ اللَّهِ وَاللَّهُ بِمَا يَعْمَلُونَ مُحِيطٌ ﴿٤٧﴾

48. ಶೈತಾನನು ಅವರ ದುಷ್ಕರ್ಮಗಳನ್ನು ಅವರ ದೃಷ್ಟಿಗಳಲ್ಲಿ ಸುಂದರವಾಗಿಸಿ ತೋರಿಸಿದ ಹಾಗೂ "ಇಂದು ಜನರಲ್ಲಾರೂ ನಿಮ್ಮನ್ನು ಜಯಿಸಲು ಸಾಧ್ಯವಿಲ್ಲ ಮತ್ತು ನಾನು ನಿಮ್ಮ ಸಂಗಡವಿದ್ದೇನೆ" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ. ಆದರೆ ಇತ್ತಂಡಗಳು ಎದುರ್ಗೊಂಡಾಗ ಅವನು ಹಿಮ್ಮೆಟ್ಟಿದನು ಮತ್ತು "ನನ್ನ ಮತ್ತು ನಿಮ್ಮ ಒಡನಾಟವಿಲ್ಲ. ನೀವು ಕಾಣದುದನ್ನು ನಾನು ಕಾಣುತ್ತಿದ್ದೇನೆ. ನನಗೆ ಅಲ್ಲಾಹನ ಭಯವಾಗುತ್ತದೆ ಮತ್ತು ಅಲ್ಲಾಹನು ಅತ್ಯಂತ ಕಠಿಣವಾಗಿ ಶಿಕ್ಷಿಸುವವನು" ಎಂದು ಹೇಳಿದನು.

وَإِذْ زَيَّنَ لَهُمُ الشَّيْطَانُ أَعْمَالَهُمْ وَقَالَ لَا غَالِبَ لَكُمُ الْيَوْمَ مِنَ النَّاسِ وَإِنِّي جَارٌ لَّكُمْ فَلَمَّا تَرَاءَتِ الْفِئَتَانِ نَكَصَ عَلَىٰ عَقِبَيْهِ وَقَالَ إِنِّي بَرِيءٌ مِّنكُمْ إِنِّي أَرَىٰ مَا لَا تَرَوْنَ إِنِّي أَخَافُ اللَّهَ وَاللَّهُ شَدِيدُ الْعِقَابِ ﴿٤٨﴾ ع

49. "ಇವರನ್ನಂತು ಇವರ 'ಧರ್ಮ'ವು ಮರುಳುಗೊಳಿಸಿದೆ" ಎಂದು ಕಪಟವಿಶ್ವಾಸಿಗಳೂ ಹೃದಯಗಳಲ್ಲಿ ರೋಗ ತಗಲಿದವರೂ ಹೇಳುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ[17] ವಸ್ತುತಃ ಯಾರಾದರೂ

إِذْ يَقُولُ الْمُنَافِقُونَ وَالَّذِينَ فِي قُلُوبِهِم مَّرَضٌ غَرَّ هَٰؤُلَاءِ دِينُهُمْ وَمَن

16. ಅರ್ಥಾತ್- ತಮ್ಮ ಭಾವನೆ ಮತ್ತು ಬಯಕೆಗಳನ್ನು ನಿಯಂತ್ರಣದಲ್ಲಿಡಿರಿ. ಆತುರ, ಭಯಾಶಂಕೆ, ದುರಾಶೆ ಮತ್ತು ಸಲ್ಲದ ಉದ್ವೇಗಗಳಿಂದ ದೂರವಿರಿ. ಶಾಂತಚಿತ್ತದಿಂದ ವ್ಯವಧಾನಪೂರ್ವಕ ನಿರ್ಧಾರ ಕೈಗೊಳ್ಳಿರಿ. ಆತಂಕ ಮತ್ತು ಸಂಕಷ್ಟಗಳು ಎದುರಾದರೆ ನೀವು ವಿಚಲಿತರಾಗಬಾರದು. ಉದ್ರೇಕಕಾರಿ ಪರಿಸ್ಥಿತಿ ತಲೆದೋರಿದರೆ ಕೋಪಾವಿಷ್ಟರಾಗಿ ಸಲ್ಲದ ವರ್ತನೆಗಳು ನಿಮ್ಮಿಂದ ಆಗಿ ಹೋಗಬಾರದು. ನಿರಂತರ ಸಂಕಷ್ಟ, ಎರಗಿ ಪರಿಸ್ಥಿತಿ ಹದಗೆಡುತ್ತಿರುವುದನ್ನು ಕಂಡಾಗ ನೀವು ಭಯವಿಹ್ವಲರಾಗಿ ಸ್ಥಿಮಿತ ಕಳಕೊಳ್ಳದಿರಿ. ಉದ್ದೇಶ ಸಾಧನೆಯ ಹುಮ್ಮಸ್ಸಿನಲ್ಲಿ ತಲ್ಲಣರಾಗದಿರಿ. ಅಪರಿಪಕ್ವ ಉಪಾಯಗಳು ಮೇಲ್ನೋಟಕ್ಕೆ ಫಲಪ್ರದವಾಗುತ್ತಿರುವಂತೆ ಕಂಡಾಗ ಆತುರದ ತೀರ್ಮಾನ ಕೈಗೊಳ್ಳದಿರಿ. ಲೌಕಿಕ ಪ್ರಯೋಜನ- ಲಾಭಗಳು ಹಾಗೂ ದೇಹೇಚ್ಛೆಗಳ ಆಮಿಷ ನಿಮ್ಮನ್ನು ಸೆಳೆಯಬಯಸಿದರೆ ಅನಿಯಂತ್ರಿತವಾಗಿ ಅದರತ್ತ ಹರಿದು ಹೋಗುವಷ್ಟು ನಿಮ್ಮ ವ್ಯಕ್ತಿತ್ವವನ್ನು ದುರ್ಬಲ ಪಡಿಸಿಕೊಳ್ಳದಿರಿ. 'ಸಹನೆ' ಎಂಬ ಒಂದು ಶಬ್ದದಲ್ಲಿ ಈ ಎಲ್ಲಾ ಅರ್ಥಗಳೂ ಅಡಕವಾಗಿವೆ. ಹೀಗೆ ಎಲ್ಲ ವಿಧದಲ್ಲೂ ಸಹನೆ ತೋರುವವರಿಗೆ ನನ್ನ ಸಹಾಯ ಪ್ರಾಪ್ತವಾಗುವುದು ಎಂದು ಅಲ್ಲಾಹನು ಹೇಳುತ್ತಿದ್ದಾನೆ.

17. ಅರ್ಥಾತ್- ಸಾಧನಾನುಕೂಲತೆಗಳಿಲ್ಲದ ಮುಸ್ಲಿಮರ ಸಣ್ಣ ಗುಂಪು ಕುರೈಶರ ಪ್ರಬಲ ಶಕ್ತಿಯೊಂದಿಗೆ ಸಂಘರ್ಷಿಸಲು ಹೋಗುತ್ತಿರುವುದನ್ನು ಕಂಡು ಮದೀನಾದ ಕಪಟವಿಶ್ವಾಸಿಗಳು ಮತ್ತು ಲೋಕದಲ್ಲಿ ಮೈಮರೆತು ದೇವವಿಸ್ಮೃತಿಯ ರೋಗಕ್ಕೆ ಈಡಾಗಿದ್ದ ಜನರು, "ಈ ವ್ಯಕ್ತಿಗಳು ತಮ್ಮ ಧರ್ಮಭೀರುತನದಿಂದ ಹುಚ್ಚರಾಗಿದ್ದಾರೆ" ಎಂದು ಪರಸ್ಪರ ಹೇಳಿಕೊಳ್ಳುತ್ತಿದ್ದರು. ಈ ಹೋರಾಟದಲ್ಲಿ ಅವರು ಖಂಡಿತ ನಾಶ ಹೊಂದುವರು. ಅವರು ವಿವೇಕವನ್ನೇ ಕಳೆದುಕೊಂಡು ಬಿಡುವ ರೀತಿಯಲ್ಲಿ ಈ ಪ್ರವಾದಿಯು ಅವರ ಮೇಲೆ ಮಂತ್ರ ಊದಿ ಬಿಟ್ಟಿದ್ದಾರೆ. ಕಣ್ಣಾರೆ ಕಂಡೂ ಅವರು ಮೃತ್ಯುದವಡೆಗೆ ಹೊರಟು ಹೋಗುತ್ತಿದ್ದಾರೆ" ಎಂದು ಅವರು ಆಡಿಕೊಳ್ಳುತ್ತಿದ್ದರು.

ಅಲ್ಲಾಹನ ಮೇಲೆ ಭರವಸೆಯನ್ನಿಟ್ಟರೆ ಅಲ್ಲಾಹನು ಮಹಾ ಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆ.

يَتَوَكَّلْ عَلَى اللَّهِ فَإِنَّ اللَّهَ عَزِيزٌ حَكِيمٌ ﴿٤٩﴾

50. ದೇವಚರರು (ಹತರಾದ) ಸತ್ಯನಿಷೇಧಿಗಳ ಪ್ರಾಣಹರಣ ಮಾಡುತ್ತಿದ್ದಾಗಿನ ಸ್ಥಿತಿಯನ್ನು ನೀವು ನೋಡುತ್ತಿದ್ದರೆ! ಅವರು ಅವರ ಮುಖಗಳ ಹಾಗೂ ಸೊಂಟಗಳ ಮೇಲೆ ಪ್ರಹಾರಗಳನ್ನೆಸಗುತ್ತ, "ಇದೋ ಈಗ ಸುಡುವ ಶಿಕ್ಷೆಯನ್ನು ಸವಿಯಿರಿ.

وَلَوْ تَرَىٰ إِذْ يَتَوَفَّى الَّذِينَ كَفَرُوا ۙ الْمَلَائِكَةُ يَضْرِبُونَ وُجُوهَهُمْ وَأَدْبَارَهُمْ وَذُوقُوا عَذَابَ الْحَرِيقِ ﴿٥٠﴾

51. ನಿಮ್ಮ ಸ್ವಹಸ್ತಗಳು ಈ ಮುಂಚೆ ಸಿದ್ಧಗೊಳಿಸಿಟ್ಟಿದ್ದ ಸಾಧನಗಳ ಪ್ರತಿಫಲವಿದು. ಅನ್ಯಥಾ ಅಲ್ಲಾಹನು ತನ್ನ ದಾಸರ ಮೇಲೆ ಅಕ್ರಮವೆಸಗುವವನಲ್ಲ" ಎಂದು ಹೇಳುತ್ತಲಿದ್ದರು.

ذَٰلِكَ بِمَا قَدَّمَتْ أَيْدِيكُمْ وَأَنَّ اللَّهَ لَيْسَ بِظَلَّامٍ لِّلْعَبِيدِ ﴿٥١﴾

52. ಈ ಘಟನೆಯು ಫಿರ್‌ಔನನ ಜನಾಂಗ ಮತ್ತು ಅವರಿಗಿಂತ ಮುಂಚಿನ ಇತರ ಜನಾಂಗಗಳೊಂದಿಗೆ ಸಂಭವಿಸುತ್ತ ಬಂದಂತೆ ಅವರ ಮೇಲೂ ಸಂಭವಿಸಿತು. ಅವರು ಅಲ್ಲಾಹನ ನಿದರ್ಶನಗಳನ್ನು ನಿರಾಕರಿಸಿದರು ಮತ್ತು ಅಲ್ಲಾಹನು ಅವರ ಪಾಪಗಳಿಗಾಗಿ ಅವರನ್ನು ಹಿಡಿದು ಬಿಟ್ಟನು. ಅಲ್ಲಾಹನು ಪ್ರಬಲನೂ ಅತ್ಯಂತ ಕಠಿಣವಾಗಿ ದಂಡಿಸುವವನೂ ಆಗಿರುತ್ತಾನೆ.

كَدَأْبِ آلِ فِرْعَوْنَ ۙ وَالَّذِينَ مِن قَبْلِهِمْ ۚ كَفَرُوا بِآيَاتِ اللَّهِ فَأَخَذَهُمُ اللَّهُ بِذُنُوبِهِمْ ۗ إِنَّ اللَّهَ قَوِيٌّ شَدِيدُ الْعِقَابِ ﴿٥٢﴾

53. ಇದೇಕೆಂದರೆ ಅಲ್ಲಾಹನು ಯಾವುದೇ ಜನಾಂಗದ ಮೇಲೆ ಮಾಡಿದ ಅನುಗ್ರಹವನ್ನು ಆ ಜನಾಂಗ ತನ್ನನ್ನು ತಾನೇ ಬದಲಾಯಿಸಿಕೊಳ್ಳುವವರೆಗೂ ಬದಲಾಯಿಸುವ ಪರಿಪಾಟ ಅವನಿಗಿಲ್ಲ. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

ذَٰلِكَ بِأَنَّ اللَّهَ لَمْ يَكُ مُغَيِّرًا نِّعْمَةً أَنْعَمَهَا عَلَىٰ قَوْمٍ حَتَّىٰ يُغَيِّرُوا مَا بِأَنفُسِهِمْ ۙ وَأَنَّ اللَّهَ سَمِيعٌ عَلِيمٌ ﴿٥٣﴾

54. ಫಿರ್‌ಔನನ ಜನಾಂಗ ಮತ್ತು ಅದಕ್ಕಿಂತ ಮುಂಚಿನ ಜನಾಂಗದವರ ಮೇಲೆ ಸಂಭವಿಸಿದುದೆಲ್ಲ ಇದೇ ನಿಯಮಕ್ಕನುಸಾರವಾಗಿತ್ತು. ಅವರು ತಮ್ಮ ಪ್ರಭುವಿನ ನಿದರ್ಶನಗಳನ್ನು ಸುಳ್ಳಾಗಿಸಿದರು. ಆಗ ನಾವು ಅವರ ಪಾಪಗಳ ಫಲವಾಗಿ ಅವರನ್ನು ನಾಶಗೊಳಿಸಿದೆವು ಮತ್ತು ಫಿರ್‌ಔನನ ಜನಾಂಗವನ್ನು ಮುಳುಗಿಸಿದೆವು. ಇವರೆಲ್ಲರೂ ಅಕ್ರಮಿಗಳಾಗಿದ್ದರು.

كَدَأْبِ آلِ فِرْعَوْنَ ۙ وَالَّذِينَ مِن قَبْلِهِمْ ۚ كَذَّبُوا بِآيَاتِ رَبِّهِمْ فَأَهْلَكْنَاهُم بِذُنُوبِهِمْ وَأَغْرَقْنَا آلَ فِرْعَوْنَ ۚ وَكُلٌّ كَانُوا ظَالِمِينَ ﴿٥٤﴾

55. ನಿಶ್ಚಯವಾಗಿಯೂ ಭೂಮಿಯ ಮೇಲೆ ಚಲಿಸುವ ಸೃಷ್ಟಿಗಳಲ್ಲಿ ಸತ್ಯವನ್ನು ನಿರಾಕರಿಸುವವರೇ ಅಲ್ಲಾಹನ ಬಳಿ ಅತ್ಯಂತ ನಿಕೃಷ್ಟರು. ಅವರು ಎಷ್ಟು ಮಾತ್ರಕ್ಕೂ ವಿಶ್ವಾಸವಿರಿಸುವವರಲ್ಲ.

إِنَّ شَرَّ الدَّوَابِّ عِندَ اللَّهِ الَّذِينَ كَفَرُوا فَهُمْ لَا يُؤْمِنُونَ ﴿٥٥﴾

56. (ಮುಖ್ಯವಾಗಿ) ಅವರ ಪೈಕಿ ನಿಮ್ಮೊಡನೆ ಒಪ್ಪಂದ ಮಾಡಿ

الَّذِينَ عَاهَدتَّ مِنْهُمْ ثُمَّ يَنقُضُونَ

ಕೊಂಡವರು. ಅವರು ಪ್ರತಿ ಸಲವೂ ಅದನ್ನು ಮುರಿಯುತ್ತಾರೆ ಮತ್ತು ಸ್ವಲ್ಪವೂ ಅಲ್ಲಾಹನ ಭಯವಿರಿಸುವುದಿಲ್ಲ.[18]

عَهْدَهُمْ فِي كُلِّ مَرَّةٍ وَهُمْ لَا يَتَّقُونَ ﴿٥٦﴾

57. ಅವರು ಯುದ್ಧದಲ್ಲಿ ನಿಮಗೆ ಸೆರೆ ಸಿಕ್ಕಿದರೆ ಮುಂದೆ ಇದೇ ನೀತಿಯನ್ನನುಸರಿಸುವ ಇತರರಿಗೆ ಒಂದು ಪಾಠವಾಗುವ ರೀತಿಯಲ್ಲಿ ತಕ್ಕ ಶಿಕ್ಷೆ ಕೊಡಿರಿ.[19]

فَإِمَّا تَثْقَفَنَّهُمْ فِي الْحَرْبِ فَشَرِّدْ بِهِم مَّنْ خَلْفَهُمْ لَعَلَّهُمْ يَذَّكَّرُونَ ﴿٥٧﴾

58. ನಿಮಗೆಂದಾದರೂ ಯಾವುದಾದರೊಂದು ಜನಾಂಗದಿಂದ ವಂಚನೆಯ ಆಶಂಕೆಯಿದ್ದರೆ ಅದರ ಕರಾರನ್ನು ಅದರ ಮುಂದೆ ಎಸೆದು ಬಿಡಿರಿ.[20] ನಿಶ್ಚಯವಾಗಿಯೂ ಅಲ್ಲಾಹನು ವಂಚಕರನ್ನು ಮೆಚ್ಚುವುದಿಲ್ಲ.

وَإِمَّا تَخَافَنَّ مِن قَوْمٍ خِيَانَةً فَانبِذْ إِلَيْهِمْ عَلَىٰ سَوَاءٍ ۚ إِنَّ اللَّهَ لَا يُحِبُّ الْخَائِنِينَ ﴿٥٨﴾

59. ಸತ್ಯನಿಷೇಧಿಗಳು ತಾವು ಗೆದ್ದೆವೆಂಬ ಅಪಗ್ರಹಿಕೆಯಲ್ಲಿರುವುದು ಬೇಡ. ಖಂಡಿತವಾಗಿಯೂ ಅವರು ನಮ್ಮನ್ನು ಸೋಲಿಸಲಾರರು.

وَلَا يَحْسَبَنَّ الَّذِينَ كَفَرُوا سَبَقُوا ۚ إِنَّهُمْ لَا يُعْجِزُونَ ﴿٥٩﴾

60. ನೀವು ನಿಮ್ಮಿಂದ ಸಾಧ್ಯವಾದಷ್ಟು ಹೆಚ್ಚು ಶಕ್ತಿಯನ್ನು ಹಾಗೂ ಸಾಕಿ ಸಿದ್ಧಗೊಳಿಸಿದ ಕುದುರೆಗಳನ್ನು ಅವರೊಡನೆ ಹೋರಾಟ ನಡೆಸಲಿಕ್ಕಾಗಿ ಅಣಿಗೊಳಿಸಿಕೊಳ್ಳಿರಿ.[21] ಇದರ ಮೂಲಕ ಅಲ್ಲಾಹನ ಶತ್ರು, ನಿಮ್ಮ ಶತ್ರು ಮತ್ತು ನಿಮಗೆ ಅರಿವಿಲ್ಲದ ಹಾಗೂ ಅಲ್ಲಾಹನಿಗೆ ಅರಿವಿರುವ ಇತರ ಶತ್ರುಗಳನ್ನು ಭೀತಿಗೊಳಿಸಲಿಕ್ಕಾಗಿ. ಅಲ್ಲಾಹನ ಮಾರ್ಗದಲ್ಲಿ ನೀವು ಏನೆಲ್ಲಾ ಖರ್ಚು ಮಾಡುವಿರೋ ಅದರ ಸರ್ವ ಸಂಪೂರ್ಣ ಪ್ರತಿಫಲವನ್ನು ನಿಮಗೆ ಮರಳಿಸಲಾಗುವುದು ಮತ್ತು ನಿಮ್ಮೊಂದಿಗೆ ಎಷ್ಟು ಮಾತ್ರಕ್ಕೂ ಅನ್ಯಾಯ ಮಾಡಲಾಗದು.

وَأَعِدُّوا لَهُم مَّا اسْتَطَعْتُم مِّن قُوَّةٍ وَمِن رِّبَاطِ الْخَيْلِ تُرْهِبُونَ بِهِ عَدُوَّ اللَّهِ وَعَدُوَّكُمْ وَآخَرِينَ مِن دُونِهِمْ لَا تَعْلَمُونَهُمُ اللَّهُ يَعْلَمُهُمْ ۚ وَمَا تُنفِقُوا مِن شَيْءٍ فِي سَبِيلِ اللَّهِ يُوَفَّ إِلَيْكُمْ وَأَنتُمْ لَا تُظْلَمُونَ ﴿٦٠﴾

18. ಇಲ್ಲಿ ವಿಶೇಷವಾಗಿ ಯಹೂದಿಯರ ಕಡೆಗೆ ಸೂಚಿಸಲಾಗಿದೆ. ಅವರ ಮತ್ತು ಮುಹಮ್ಮದ್‌ರ(ಸ) ನಡುವೆ ಒಪ್ಪಂದ ಏರ್ಪಟ್ಟಿತ್ತು. ಅದರ ಹೊರತಾಗಿಯೂ ಅವರು ಪ್ರವಾದಿವರ್ಯರು(ಸ) ಮತ್ತು ಮುಸ್ಲಿಮರನ್ನು ವಿರೋಧಿಸುವುದರಲ್ಲಿ ನಿರತರಾಗಿದ್ದರು. ಬದ್ರ್ ಯುದ್ಧವಾದ ತಕ್ಷಣ ಅವರು ಪ್ರತೀಕಾರ ತೀರಿಸುವಂತೆ ಕುರೈಶರನ್ನು ಕೆರಳಿಸಲಾರಂಭಿಸಿದರು.

19. ಅಂದರೆ ಯಾವುದೇ ಜನಾಂಗದೊಂದಿಗೆ ನಮಗೆ ಒಪ್ಪಂದವಿರುವಾಗ ಅವರು ಒಪ್ಪಂದದ ಹೊಣೆಗಾರಿಕೆಗಳನ್ನೆಲ್ಲಾ ಒತ್ತಟ್ಟಿಗಿರಿಸಿ ನಮ್ಮ ವಿರುದ್ಧ ಯಾವುದೇ ಯುದ್ಧದಲ್ಲಿ ಭಾಗವಹಿಸಿದರೆ, ನಾವೂ ಒಪ್ಪಂದದ ನೈತಿಕ ಹೊಣೆಗಾರಿಕೆಗಳಿಂದ ಮುಕ್ತವಾಗಿ ಬಿಡುತ್ತೇವೆ. ಅವರೊಂದಿಗೆ ನಾವು ಯುದ್ಧ ಮಾಡಬಹುದು. ಹಾಗೆಯೇ ಯಾವುದಾದರೂ ಜನಾಂಗದೊಂದಿಗೆ ಯುದ್ಧ ನಿರತವಾಗಿರುವಾಗ ಒಪ್ಪಂದವಿರುವ ಜನಾಂಗದ ವ್ಯಕ್ತಿಗಳೂ ಶತ್ರುಗಳ ಜತೆ ಶಾಮೀಲಾಗಿರುವುದನ್ನು ಕಂಡರೆ, ಅವರನ್ನು ವಧಿಸಲು ಮತ್ತು ಅವರ ಜತೆ ಶತ್ರುಗಳಂತೆ ವರ್ತಿಸಲು ನಾವು ಕಿಂಚಿತ್ತೂ ಸಂಕೋಚಪಡಬೇಕಾಗಿಲ್ಲ.

20. ಅರ್ಥಾತ್ "ನಮ್ಮ-ನಿಮ್ಮ ನಡುವೆ ಯಾವ ಒಪ್ಪಂದವೂ ಇಲ್ಲ. ಏಕೆಂದರೆ ನೀವು ಒಪ್ಪಂದವನ್ನು ಮುರಿದಿದ್ದೀರಿ" ಎಂದು ಅವರನ್ನು ಸ್ಪಷ್ಟವಾಗಿ ಎಚ್ಚರಿಸಿ ಬಿಡಿರಿ.

21. ಅರ್ಥಾತ್- ಅವಶ್ಯಕತೆ ತಲೆದೋರಿದಾಗ ಕ್ಷಿಪ್ರವಾಗಿ ಯುದ್ಧದ ಕಾರ್ಯಾಚರಣೆ ನಡೆಸಲು ಸಾಧ್ಯವಾಗುವಂತೆ ಯುದ್ಧ ಸಾಮಗ್ರಿ ಮತ್ತು ಸ್ಥಿರವಾದ ಸೇನೆ ಸದಾ ನಿಮ್ಮ ಬಳಿ ಸಿದ್ಧವಿರಬೇಕು. ಅಪಾಯ ಸನ್ನಿಹಿತವಾದಾಗ ಲಗುಬಗೆಯಿಂದ ಸ್ವಯಂಸೇವಕರು, ಶಸ್ತ್ರಾಸ್ತ್ರ ಮತ್ತು ಯುದ್ಧ ಸಾಮಗ್ರಿಗಳನ್ನು ಕಲೆಹಾಕಲು ಪ್ರಯತ್ನಿಸುವ ಸ್ಥಿತಿ ಬರಬಾರದು. ನಿಮ್ಮ ಸಿದ್ಧತೆ ನಡೆಯುತ್ತಿರುವಾಗಲೇ ಶತ್ರುಗಳು ತಮ್ಮ ಕೆಲಸ ಸಾಧಿಸಿ ಬಿಡುವಂತಾಗಬಾರದು.

61. ಓ ಪೈಗಂಬರರೇ, ಶತ್ರುವು ಶಾಂತಿ ಸಂಧಾನಗಳ ಕಡೆಗೆ ವಾಲಿದರೆ ನೀವೂ ಅದಕ್ಕೆ ಸಿದ್ಧರಾಗಿರಿ ಮತ್ತು ಅಲ್ಲಾಹನ ಮೇಲೆ ಭರವಸೆಯನ್ನಿರಿಸಿರಿ. ನಿಶ್ಚಯವಾಗಿಯೂ ಅವನೇ ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَإِنْ جَنَحُوْا لِلسَّلْمِ فَاجْنَحْ لَهَا وَتَوَكَّلْ عَلَى اللّٰهِ ۚ إِنَّهٗ هُوَ السَّمِيْعُ الْعَلِيْمُ ﴿٦١﴾

62. ಅವರು ವಂಚಿಸಬೇಕೆಂದೆಣಿಸಿದರೆ ನಿಮಗೆ ಅಲ್ಲಾಹನೇ ಸಾಕು. ತನ್ನ ಸಹಾಯ ಹಸ್ತದಿಂದಲೂ ಸತ್ಯವಿಶ್ವಾಸಿಗಳ ಮೂಲಕವೂ ನಿಮಗೆ ಸಹಕರಿಸಿದವನೂ-

وَإِنْ يُّرِيْدُوْٓا أَنْ يَّخْدَعُوْكَ فَإِنَّ حَسْبَكَ اللّٰهُ ۚ هُوَ الَّذِيْٓ أَيَّدَكَ بِنَصْرِهٖ وَبِالْمُؤْمِنِيْنَ ﴿٦٢﴾

63. ಸತ್ಯವಿಶ್ವಾಸಿಗಳ ಹೃದಯಗಳನ್ನು ಪರಸ್ಪರ ಜೋಡಿಸಿದವನೂ ಅವನೇ ತಾನೆ. ನೀವು ಭೂಮಿಯಲ್ಲಿರುವ ಸಕಲ ಸಂಪತ್ತನ್ನು ಖರ್ಚುಮಾಡಿದರೂ ಇವರ ಹೃದಯಗಳನ್ನು ಜೋಡಿಸಲಾಗುತ್ತಿರಲಿಲ್ಲ. ಇವರ ಹೃದಯಗಳನ್ನು ಜೋಡಿಸಿದವನು ಅಲ್ಲಾಹನು. ನಿಶ್ಚಯವಾಗಿಯೂ ಅವನು ಮಹಾ ಪ್ರತಾಪಿಯೂ ಧೀಮಂತನೂ ಆಗಿರುತ್ತಾನೆ.

وَأَلَّفَ بَيْنَ قُلُوْبِهِمْ ۚ لَوْ أَنْفَقْتَ مَا فِي الْأَرْضِ جَمِيْعًا مَّآ أَلَّفْتَ بَيْنَ قُلُوْبِهِمْ وَلٰكِنَّ اللّٰهَ أَلَّفَ بَيْنَهُمْ ۚ إِنَّهٗ عَزِيْزٌ حَكِيْمٌ ﴿٦٣﴾

64. ಓ ಪೈಗಂಬರರೇ, ನಿಮಗೂ ನಿಮ್ಮ ಅನುಯಾಯಿಗಳಾದ ಸತ್ಯವಿಶ್ವಾಸಿಗಳಿಗೂ ಅಲ್ಲಾಹನೇ ಸಾಕು.

يٰٓأَيُّهَا النَّبِيُّ حَسْبُكَ اللّٰهُ وَمَنِ اتَّبَعَكَ مِنَ الْمُؤْمِنِيْنَ ﴿٦٤﴾

ع

65. ಓ ಪೈಗಂಬರರೇ, ಸತ್ಯವಿಶ್ವಾಸಿಗಳನ್ನು ಯುದ್ಧಕ್ಕೆ ಪ್ರೇರೇಪಿಸಿರಿ. ನಿಮ್ಮಲ್ಲಿ ಇಪ್ಪತ್ತು ಮಂದಿ ಸಹನಶೀಲರಿದ್ದರೆ ಅವರು ಇನ್ನೂರು ಮಂದಿಯ ಎದುರು ಜಯಗಳಿಸುವರು ಮತ್ತು ಇಂತಹ ನೂರು ಮಂದಿ ಇದ್ದರೆ ಸತ್ಯನಿಷೇಧಿಗಳ ಸಾವಿರ ಮಂದಿಯನ್ನು ಮೀರಿಸಬಲ್ಲರು. ಏಕೆಂದರೆ ಅವರು (ಸತ್ಯನಿಷೇಧಿಗಳು) ತಿಳಿಗೇಡಿಗಳು.[22]

يٰٓأَيُّهَا النَّبِيُّ حَرِّضِ الْمُؤْمِنِيْنَ عَلَى الْقِتَالِ ۚ إِنْ يَّكُنْ مِّنْكُمْ عِشْرُوْنَ صٰبِرُوْنَ يَغْلِبُوْا مِائَتَيْنِ ۚ وَإِنْ يَّكُنْ مِّنْكُمْ مِّائَةٌ يَّغْلِبُوْٓا أَلْفًا مِّنَ الَّذِيْنَ كَفَرُوْا بِأَنَّهُمْ قَوْمٌ لَّا يَفْقَهُوْنَ ﴿٦٥﴾

66. ಈಗ ಅಲ್ಲಾಹನು ನಿಮ್ಮ ಭಾರವನ್ನು ಹಗುರಗೊಳಿಸಿದನು ಮತ್ತು ನಿಮ್ಮಲ್ಲಿ ಇನ್ನೂ ದೌರ್ಬಲ್ಯವಿರುವುದೆಂದು ಅವನಿಗೆ ತಿಳಿಯಿತು. ಆದುದರಿಂದ ನಿಮ್ಮಲ್ಲಿ ನೂರು ಮಂದಿ ಸಹನಶೀಲರಿದ್ದರೆ ಅವರು

اَلْـٰٔنَ خَفَّفَ اللّٰهُ عَنْكُمْ وَعَلِمَ أَنَّ فِيْكُمْ ضَعْفًا ۚ فَإِنْ يَّكُنْ مِّنْكُمْ مِّائَةٌ صَابِرَةٌ

22. ಇಂದಿನ ಪಾರಿಭಾಷಿಕದಲ್ಲಿ 'ನೈತಿಕ ಬಲ' ಅಥವಾ ಚಾರಿತ್ರ್ಯಬಲ (Moral) ಎಂದು ಕರೆಯಲಾಗುವುದನ್ನೇ ಅಲ್ಲಾಹನು ಪ್ರಜ್ಞೆ ಮತ್ತು ತಿಳುವಳಿಕೆ ಎಂದು ವಿವರಿಸಿದ್ದಾನೆ. ತನ್ನ ಜೀವಿತೋದ್ದೇಶದ ಬಗ್ಗೆ ಸರಿಯಾದ ಜ್ಞಾನವಿರುವ ಮತ್ತು ಶಾಂತಚಿತ್ತದಿಂದ ಸರಿಯಾಗಿ ಪರಾಮರ್ಶಿಸಿ ಯುದ್ಧ ಮಾಡುವವನಿಗೆ ತಾನು ಯಾವ ಉದ್ದೇಶಕ್ಕಾಗಿ ಪ್ರಾಣವನ್ನು ಪಣಕ್ಕಿಟ್ಟು ಹೋರಾಡುತ್ತಿದ್ದೇನೋ ಅದು ತನ್ನ ವೈಯಕ್ತಿಕ ಜೀವನಕ್ಕಿಂತ ಅಮೂಲ್ಯವಾದುದು ಎಂದು ತಿಳಿದಿರುತ್ತದೆ. ಆದ್ದರಿಂದ ಅದು ಪ್ರಾಪ್ತವಾಗದಿದ್ದರೆ ತಾನು ಬದುಕಿದರೂ ಬೆಲೆಯಿಲ್ಲವೆಂದು ಅವನು ಭಾವಿಸುತ್ತಾನೆ. ಆದ್ದರಿಂದ ಅವನು, ಇಂತಹ ಜ್ಞಾನವಿಲ್ಲದೆ ಹೋರಾಡುವವನಿಗಿಂತ ಬಹಳ ಹೆಚ್ಚು ಶಕ್ತಿಶಾಲಿಯಾಗಿರುತ್ತಾನೆ. ದೈಹಿಕ ಬಲದಲ್ಲಿ ಅವರ ನಡುವೆ ಯಾವುದೇ ವ್ಯತ್ಯಾಸವಿಲ್ಲದಿದ್ದರೂ ಸರಿಯೇ.

ಇನ್ನೂರರ ಮೇಲೂ ಸಾವಿರ ಮಂದಿ ಇಂಥವರಿದ್ದರೆ ಎರಡು ಸಾವಿರದ ಮೇಲೂ ಅಲ್ಲಾಹನ ಆಜ್ಞೆಯಿಂದ ವಿಜಯಿಗಳಾಗುವರು.[23] ಅಲ್ಲಾಹನು ಸಹನಶೀಲರ ಸಂಗಡವಿದ್ದಾನೆ.

يَغْلِبُوا مِائَتَيْنِ ۚ وَإِن يَكُن مِّنكُمْ أَلْفٌ يَغْلِبُوا أَلْفَيْنِ بِإِذْنِ اللَّهِ ۗ وَاللَّهُ مَعَ الصَّابِرِينَ ﴿٦٦﴾

67. ಭೂಮಿಯಲ್ಲಿ ಶತ್ರುಗಳನ್ನು ಚೆನ್ನಾಗಿ ಸದೆಬಡಿಯುವ ವರೆಗೂ ತನ್ನ ಬಳಿ ಸೆರೆಯಾಳುಗಳಿರುವುದು ಓರ್ವ ಪ್ರವಾದಿಗೆ ಶೋಭಿಸುವುದಿಲ್ಲ. ನೀವು ಲೌಕಿಕ ಲಾಭಗಳನ್ನು ಬಯಸುತ್ತೀರಿ. ವಸ್ತುತಃ ಅಲ್ಲಾಹನ ದೃಷ್ಟಿಯಲ್ಲಿ ಪರಲೋಕವಿದೆ. ಅಲ್ಲಾಹನು ಮಹಾಪ್ರತಾಪಿಯೂ ಧೀಮಂತನೂ ಆಗಿರುತ್ತಾನೆ.

مَا كَانَ لِنَبِيٍّ أَن يَكُونَ لَهُ أَسْرَىٰ حَتَّىٰ يُثْخِنَ فِي الْأَرْضِ ۚ تُرِيدُونَ عَرَضَ الدُّنْيَا وَاللَّهُ يُرِيدُ الْآخِرَةَ ۗ وَاللَّهُ عَزِيزٌ حَكِيمٌ ﴿٦٧﴾

68. ಅಲ್ಲಾಹನ ವಿಧಿಯು ಮೊದಲೇ ಲಿಖಿತಗೊಂಡಿಲ್ಲದಿರುತ್ತಿದ್ದರೆ, ನೀವು ಪಡೆದುದರ ಫಲವಾಗಿ ನಿಮಗೆ ಘೋರ ಶಿಕ್ಷೆ ಸಿಗುತ್ತಿತ್ತು.

لَّوْلَا كِتَابٌ مِّنَ اللَّهِ سَبَقَ لَمَسَّكُمْ فِيمَا أَخَذْتُمْ عَذَابٌ عَظِيمٌ ﴿٦٨﴾

69. ಆದುದರಿಂದ ನೀವು ಪಡೆದಿರುವ ಧರ್ಮಬದ್ಧವೂ ಶುದ್ಧವೂ ಆಗಿರುವ ಸೊತ್ತನ್ನು ಅನುಭೋಗಿಸಿಕೊಳ್ಳಿರಿ ಮತ್ತು ಅಲ್ಲಾಹನನ್ನು ಭಯಪಡುತ್ತಲಿರಿ.[24] ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾ ಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

فَكُلُوا مِمَّا غَنِمْتُمْ حَلَالًا طَيِّبًا ۚ وَاتَّقُوا اللَّهَ ۚ إِنَّ اللَّهَ غَفُورٌ رَّحِيمٌ ﴿٦٩﴾

70. ಓ ಪೈಗಂಬರರೇ, ನಿಮ್ಮ ವಶದಲ್ಲಿರುವ ಸೆರೆಯಾಳುಗಳೊಡನೆ ಹೇಳಿರಿ: "ನಿಮ್ಮ ಹೃದಯಗಳಲ್ಲೇನಾದರೂ ಒಳಿತು ಇರುವುದೆಂದು ಅಲ್ಲಾಹನಿಗೆ ತಿಳಿದರೆ ಅವನು ನಿಮ್ಮಿಂದ ಪಡೆದುದಕ್ಕಿಂತಲೂ ಉತ್ತಮವಾದುದನ್ನು ನಿಮಗೆ ನೀಡುವನು ಮತ್ತು ನಿಮ್ಮ

يَا أَيُّهَا النَّبِيُّ قُل لِّمَن فِي أَيْدِيكُم مِّنَ الْأَسْرَىٰ إِن يَعْلَمِ اللَّهُ فِي قُلُوبِكُمْ خَيْرًا يُؤْتِكُمْ خَيْرًا مِّمَّا أُخِذَ مِنكُمْ وَيَغْفِرْ

23. ಇದರ ಅರ್ಥ ಮೊದಲು ಒಂದು ಮತ್ತು ಹತ್ತರ ಅನುಪಾತವಿತ್ತು. ಈಗ ದೌರ್ಬಲ್ಯ ಗೋಚರಿಸಿರುವುದರಿಂದ ಒಂದು ಮತ್ತು ಎರಡರ ಅನುಪಾತ ಏರ್ಪಟ್ಟಿತು ಎಂದಲ್ಲ. ಇದರ ನೈಜ ತಾತ್ಪರ್ಯವೇನೆಂದರೆ, ತಾತ್ವಿಕ ಮತ್ತು ಗುಣಮಟ್ಟದ ದೃಷ್ಟಿಯಿಂದ ಸತ್ಯವಿಶ್ವಾಸಿಗಳು ಮತ್ತು ಸತ್ಯನಿಷೇಧಿಗಳ ನಡುವೆ ಒಂದು ಮತ್ತು ಹತ್ತರ ಅನುಪಾತವೇ ಇದೆ. ಆದರೆ ನಿಮ್ಮ ನೈತಿಕ ತರಬೇತಿ ಇನ್ನೂ ಪೂರ್ಣಗೊಂಡಿಲ್ಲ. ಪರಿಜ್ಞಾನ ಮತ್ತು ತಿಳುವಳಿಕೆಯಲ್ಲೂ ನೀವು ಪರಿಪಕ್ವತೆಗೆ ತಲಪಿಲ್ಲ. ಆದ್ದರಿಂದ ನಿಮ್ಮ ದುಪ್ಪಟ್ಟು ಶಕ್ತಿಯಿರುವ ಪತನೋನ್ಮುಖಿ ಜನಾಂಗದೊಂದಿಗೆ ಸಂಘರ್ಷಿಸಲು ನೀವು ಕಿಂಚಿತ್ತೂ ಅಳುಕಬೇಕಾಗಿಲ್ಲ. ಇದು ಹಿ.ಶ. 2ರಲ್ಲಿ ಬಂದ ಬೋಧನೆಗಳು ಎಂಬುದು ಗಮನಾರ್ಹ. ಆ ವೇಳೆ ಅನೇಕ ಮುಸ್ಲಿಮರು ಆಗ ತಾನೇ ಇಸ್ಲಾಮಿನೊಳಗೆ ಪ್ರವೇಶಿಸಿದವರಾಗಿದ್ದರು ಮತ್ತು ಅವರು ತರಬೇತಿಯ ಪ್ರಾಥಮಿಕ ಹಂತದಲ್ಲಿದ್ದರು.

24. ಬದ್ರ್ ಯುದ್ಧಕ್ಕೆ ಮೊದಲು ಮುಹಮ್ಮದ್ ಅಧ್ಯಾಯದಲ್ಲಿ ಯುದ್ಧದ ಕುರಿತು ನೀಡಲಾಗಿದ್ದ ಆರಂಭಿಕ ಮಾರ್ಗದರ್ಶನಗಳಲ್ಲಿ ಯುದ್ಧ ಕೈದಿಗಳಿಂದ ಪರಿಹಾರಧನ ವಸೂಲು ಮಾಡುವ ಅನುಮತಿ ನೀಡಲಾಗಿತ್ತು. ಅದರ ಜತೆಗೆ "ಮೊದಲು ಶತ್ರುಗಳ ಬಲವನ್ನು ಸಂಪೂರ್ಣ ಮುರಿಯಬೇಕು, ಅನಂತರ ಯುದ್ಧಕೈದಿಗಳನ್ನು ಹಿಡಿಯಬೇಕು" ಎಂಬ ಶರತ್ತನ್ನೂ ವಿಧಿಸಲಾಗಿತ್ತು. ಈ ಆದೇಶದ ಪ್ರಕಾರ ಮುಸ್ಲಿಮರು ಬದ್ರ್ ಯುದ್ಧದಲ್ಲಿ ಕೈದಿಗಳನ್ನು ಹಿಡಿದು ಅವರಿಂದ ಪರಿಹಾರ ಧನ ವಸೂಲು ಮಾಡಿದ್ದರು. ಅವರ ಕೆಲಸ ಅನುಮತಿಗೆ ಅನುಗುಣವಾಗಿಯೇ ಇತ್ತು. ಆದರೆ ಶತ್ರುಗಳ ಶಕ್ತಿಯನ್ನು ಸಂಪೂರ್ಣ ಉಡುಗಿಸುವ ಶರತ್ತನ್ನು ಈಡೇರಿಸುವ ಮೊದಲೇ ಅವರು ಕೈದಿಗಳನ್ನು ಹಿಡಿಯುವ ಮತ್ತು ಸಮರಾರ್ಜಿತ ಸೊತ್ತನ್ನು ಸಂಗ್ರಹಿಸುವ ಕೆಲಸಕ್ಕೆ ತೊಡಗಿದರು. ಇದರ ಬಗ್ಗೆಯೇ ಅಲ್ಲಾಹನು ತನ್ನ ಅಪ್ರಿಯತೆಯನ್ನು ಪ್ರಕಟಿಸಿದ್ದಾನೆ. ಏಕೆಂದರೆ ಹೀಗೆ ಮಾಡುವ ಬದಲು ಮುಸ್ಲಿಮರು ಸತ್ಯನಿಷೇಧಿಗಳನ್ನು ಹಿಂಬಾಲಿಸಿದ್ದರೆ ಆಗಲೇ ಕುರೈಶರ ಬಲವನ್ನು ಮುರಿದು ಬಿಡಬಹುದಾಗಿತ್ತು.

ಅಪರಾಧಗಳನ್ನು ಕ್ಷಮಿಸುವನು. ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."

لَكُمْ ۗ وَاللّٰهُ غَفُوْرٌ رَّحِيْمٌ ۝٧٠

71. ಆದರೆ ನಿಮ್ಮನ್ನು ವಂಚಿಸುವ ಇರಾದೆ ಅವರಿಗಿದ್ದರೆ ಅವರು ಇದಕ್ಕಿಂತ ಮುಂಚೆ ಅಲ್ಲಾಹನನ್ನು ವಂಚಿಸಿದ್ದಾರೆ. ಇದರ ಫಲವಾಗಿಯೇ ಅವರನ್ನು ನಿಮ್ಮ ವಶಕ್ಕೆ ಕೊಡುವ ಶಿಕ್ಷೆಯನ್ನು ಅಲ್ಲಾಹನು ಅವರಿಗೆ ಕೊಟ್ಟನು. ಅಲ್ಲಾಹನು ಸರ್ವಜ್ಞನೂ ಧೀಮಂತನೂ ಆಗಿರುತ್ತಾನೆ.

وَاِنْ يُّرِيْدُوْا خِيَانَتَكَ فَقَدْ خَانُوا اللّٰهَ
مِنْ قَبْلُ فَاَمْكَنَ مِنْهُمْ ۗ وَاللّٰهُ عَلِيْمٌ حَكِيْمٌ ۝٧١

72. 'ಸತ್ಯವಿಶ್ವಾಸ' ಸ್ವೀಕರಿಸಿದವರೂ 'ವಲಸೆ' (ಹಿಜ್ರತ್) ಮಾಡಿದವರೂ ಅಲ್ಲಾಹನ ಮಾರ್ಗದಲ್ಲಿ ತಮ್ಮ ತನುಗಳಿಂದ ಹೋರಾಡಿದವರೂ ಧನವನ್ನು ವ್ಯಯಿಸಿದವರೂ 'ವಲಸೆ' ಮಾಡಿದವರಿಗೆ ಆಶ್ರಯ ಮತ್ತು ಸಹಾಯವನ್ನು ಕೊಟ್ಟವರೂ ವಾಸ್ತವದಲ್ಲಿ ಪರಸ್ಪರ ರಕ್ಷಕ ಮಿತ್ರರು. ವಿಶ್ವಾಸವಿರಿಸಿದರೂ 'ವಲಸೆ' ಮಾಡಿ (ಇಸ್ಲಾಮೀ ರಾಷ್ಟ್ರಕ್ಕೆ) ಬಾರದವರೊಂದಿಗೆ ಅವರು 'ವಲಸೆ' ಮಾಡಿ ಬರುವವರೆಗೂ ನಿಮ್ಮ (ವಿಲಾಯತ್) ಸ್ನೇಹ ಸಂಬಂಧವಿಲ್ಲ.[25] ಅವರು ಧರ್ಮ ಕಾರ್ಯದಲ್ಲಿ ನಿಮ್ಮಿಂದ ಸಹಾಯ ಕೋರಿದರೆ ಅವರಿಗೆ ಸಹಾಯ ಮಾಡಬೇಕಾದುದು ನಿಮ್ಮ ಮೇಲೆ ಕಡ್ಡಾಯ ವಾಗಿದೆ. ಆದರೆ, ಇದು ನಿಮ್ಮೊಂದಿಗೆ ಒಪ್ಪಂದಬದ್ಧ ಜನಾಂಗದ ವಿರುದ್ಧವಾಗಿರಬಾರದು.[26] ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ವೀಕ್ಷಿಸುತ್ತಾನೆ.

اِنَّ الَّذِيْنَ اٰمَنُوْا وَهَاجَرُوْا وَجٰهَدُوْا
بِاَمْوَالِهِمْ وَاَنْفُسِهِمْ فِيْ سَبِيْلِ اللّٰهِ
وَالَّذِيْنَ اٰوَوْا وَّنَصَرُوْٓا اُولٰٓئِكَ بَعْضُهُمْ
اَوْلِيَآءُ بَعْضٍ ۗ وَالَّذِيْنَ اٰمَنُوْا وَلَمْ يُهَاجِرُوْا
مَا لَكُمْ مِّنْ وَّلَايَتِهِمْ مِّنْ شَيْءٍ حَتّٰى
يُهَاجِرُوْا ۚ وَاِنِ اسْتَنْصَرُوْكُمْ فِي الدِّيْنِ
فَعَلَيْكُمُ النَّصْرُ اِلَّا عَلٰى قَوْمٍ بَيْنَكُمْ وَ
بَيْنَهُمْ مِّيْثَاقٌ ۗ وَاللّٰهُ بِمَا تَعْمَلُوْنَ بَصِيْرٌ ۝٧٢

25. ಅರಬಿ ಭಾಷೆಯಲ್ಲಿ 'ವಿಲಾಯತ್' ಎಂಬ ಪದ ಬೆಂಬಲ, ಸಹಾಯ, ಸಹಯೋಗ, ಸ್ನೇಹ, ಸಾಮೀಪ್ಯ, ಮೇಲ್ವಿಚಾರಣೆ ಮತ್ತು ಇಂತಹುದೇ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಈ ಸೂಕ್ತದ ಹಿನ್ನೆಲೆಯಲ್ಲಿ ಪ್ರಜೆಗಳಿಗೆ ಸರ್ಕಾರದೊಂದಿಗೂ, ಸರ್ಕಾರಕ್ಕೆ ಪ್ರಜೆಗಳೊಂದಿಗೂ ಇರುವ ಸಂಬಂಧವಲ್ಲದೆ ಪ್ರಜೆಗಳ ನಡುವೆ ಇರಬೇಕಾದ ಪರಸ್ಪರ ಸಂಬಂಧದ ಕಡೆಗೆ ಸೂಚಿಸಲಾಗಿದೆ. ಆದ್ದರಿಂದ ಈ ಸೂಕ್ತ ಸಾಂವಿಧಾನಿಕ ಮತ್ತು ರಾಜಕೀಯ ಮೇಲ್ವಿಚಾರಣೆಯನ್ನು ಇಸ್ಲಾಮೀ ಸಾಮ್ರಾಜ್ಯದ ಭೌಗೋಳಿಕ ಗಡಿಗೆ ಸೀಮಿತಗೊಳಿಸುತ್ತದೆ. ಗಡಿಯಾಚೆ ವಾಸಿಸುವ ಮುಸ್ಲಿಮರನ್ನು ಈ ವಿಶಿಷ್ಟ ಸಂಬಂಧದಿಂದ ಹೊರತು ಪಡಿಸಲಾಗಿದೆ. ಹೀಗೆ ಸಂಬಂಧ ಕಡಿದುಕೊಳ್ಳುವುದರಿಂದ ಉಂಟಾಗುವ ಶಾಸನಾತ್ಮಕ ಪರಿಣಾಮಗಳು ಅತ್ಯಂತ ವಿಸ್ತೃತವಾದುದು. ಅದರ ವಿವರಗಳಿಗೆ ಹೋಗಲು ಇಲ್ಲಿ ಅವಕಾಶವಿಲ್ಲ.

26. ಮೇಲಿನ ಸೂಕ್ತದಲ್ಲಿ 'ದಾರುಲ್ ಇಸ್ಲಾಮ್'(ಇಸ್ಲಾಮೀ ರಾಷ್ಟ್ರ)ನಿಂದ ಹೊರಗೆ ವಾಸಿಸುವ ಮುಸ್ಲಿಮರನ್ನು ರಾಜಕೀಯ ಮೇಲ್ವಿಚಾರಣೆಯ ಸಂಬಂಧದಿಂದ ಮುಕ್ತಗೊಳಿಸಲಾಗಿತ್ತು. ಈ ಸೂಕ್ತದಲ್ಲಿ ಪ್ರಸ್ತುತ ಸ್ವರೂಪದ ಸಂಬಂಧದಿಂದ ಅವರು ಹೊರತಾಗಿದ್ದರೂ 'ಧಾರ್ಮಿಕ ಸಂಬಂಧ'ದಿಂದ ಅವರೆಂದೂ ಮುಕ್ತರಲ್ಲ ಎಂದು ವಿವರಿಸಲಾಗುತ್ತಿದೆ. ಅವರ ಮೇಲೆ ಅನ್ಯಾಯವಾಗುತ್ತಿರುವಾಗ ಅವರು ತಮ್ಮ ಇಸ್ಲಾಮೀ ಭ್ರಾತೃತ್ವದ ಸಂಬಂಧದ ಆಧಾರದಲ್ಲಿ ಇಸ್ಲಾಮೀ ಸಾಮ್ರಾಜ್ಯದಿಂದ ಸಹಾಯ ಯಾಚಿಸಿದರೆ ತಮ್ಮ ಶೋಷಿತ ಬಂಧುಗಳಿಗೆ ನೆರವಾಗುವುದು ಅವರ ಕರ್ತವ್ಯವಾಗಿದೆ. ಅದರ ಜತೆಗೆ ಇನ್ನೊಂದು ಸ್ಪಷ್ಟೀಕರಣವನ್ನೂ ನೀಡಲಾಗುತ್ತಿದೆ. ಇಸ್ಲಾಮೀ ಭ್ರಾತೃಗಳ ಮೇಲಿರುವ ಕರ್ತವ್ಯವನ್ನು ನಿಯಮಬಾಹಿರವಾಗಿ ಒಟ್ಟಾರೆ ಈಡೇರಿಸಲಾಗುವುದಿಲ್ಲ. ಅಂತಾರಾಷ್ಟ್ರೀಯ ಹೊಣೆಗಾರಿಕೆಗಳು ಮತ್ತು ನೈತಿಕ ಮೇರೆಗಳನ್ನು ಗಮನದಲ್ಲಿರಿಸುತ್ತಲೇ ಆ ಕರ್ತವ್ಯವನ್ನು ಈಡೇರಿಸಲಾಗುವುದು. ಅನ್ಯಾಯವೆಸಗುತ್ತಿರುವ ಜನಾಂಗದೊಂದಿಗೆ ಇಸ್ಲಾಮೀ ರಾಷ್ಟ್ರದ ಒಪ್ಪಂದಗಳಿದ್ದರೆ, ಶೋಷಿತ ಮುಸ್ಲಿಮರಿಗೆ ನೆರವಾಗುವ ವೇಳೆ ಪ್ರಸ್ತುತ ಒಪ್ಪಂದದ ನೈತಿಕ ಹೊಣೆಗಾರಿಕೆಗಳ ಉಲ್ಲಂಘನೆಯಾಗದಂತೆ ಎಚ್ಚರವಹಿಸಲಾಗುವುದು.

73. ಸತ್ಯನಿಷೇಧಿಗಳು ಪರಸ್ಪರ ರಕ್ಷಕ ಮಿತ್ರರಾಗಿರುತ್ತಾರೆ. ನೀವು ಹಾಗೆ ಮಾಡದಿದ್ದರೆ ಭೂಮಿಯಲ್ಲಿ ಗೊಂದಲವೂ ಹಿರಿದಾದ ಕ್ಷೋಭೆಯೂ ಉಂಟಾಗುವುದು.[27]

وَالَّذِينَ كَفَرُوا بَعْضُهُمْ أَوْلِيَاءُ بَعْضٍ ۚ إِلَّا تَفْعَلُوهُ تَكُنْ فِتْنَةٌ فِي الْأَرْضِ وَفَسَادٌ كَبِيرٌ ﴿٧٣﴾

74. ಸತ್ಯವಿಶ್ವಾಸ ಸ್ವೀಕರಿಸಿದವರು, ಅಲ್ಲಾಹನ ಮಾರ್ಗದಲ್ಲಿ ಮನೆ ಮಾರುಗಳನ್ನು ಬಿಟ್ಟವರು, ಜೀವನದ ಹಂಗುತೊರೆದು ಹೋರಾಡಿ ದವರು, ಆಶ್ರಯ ನೀಡಿದವರು ಮತ್ತು ಸಹಾಯ ಮಾಡಿದವರು ಅವರೇ ನಿಜವಾದ 'ಸತ್ಯವಿಶ್ವಾಸಿಗಳು.' ಅವರ ಪಾಲಿಗೆ ಕ್ಷಮೆಯೂ ಅತ್ಯುತ್ತಮ ಜೀವನಾಂಶವೂ ಇದೆ.

وَالَّذِينَ آمَنُوا وَهَاجَرُوا وَجَاهَدُوا فِي سَبِيلِ اللَّهِ وَالَّذِينَ آوَوا وَّنَصَرُوا أُولَٰئِكَ هُمُ الْمُؤْمِنُونَ حَقًّا ۚ لَّهُم مَّغْفِرَةٌ وَرِزْقٌ كَرِيمٌ ﴿٧٤﴾

75. ಅನಂತರ ವಿಶ್ವಾಸವಿಟ್ಟವರು, 'ವಲಸೆ' ಮಾಡಿ ಬಂದವರು ಮತ್ತು ನಿಮ್ಮೊಟ್ಟಿಗೆ ಕೂಡಿಕೊಂಡು ಹೋರಾಡಿದವರು ಸಹ ನಿಮ್ಮೊಂದಿಗೆ ಸೇರಿದ್ದಾರೆ. ಆದರೆ ಅಲ್ಲಾಹನ ಗ್ರಂಥದಲ್ಲಿ ರಕ್ತ ಸಂಬಂಧಿಕರು ಪರಸ್ಪರ ಹೆಚ್ಚು ಹಕ್ಕುದಾರರು.[28] ನಿಶ್ಚಯ ವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಜ್ಞಾನಿಯಾಗಿರುತ್ತಾನೆ.

وَالَّذِينَ آمَنُوا مِن بَعْدُ وَهَاجَرُوا وَجَاهَدُوا مَعَكُمْ فَأُولَٰئِكَ مِنكُمْ ۚ وَأُولُو الْأَرْحَامِ بَعْضُهُمْ أَوْلَىٰ بِبَعْضٍ فِي كِتَابِ اللَّهِ ۗ إِنَّ اللَّهَ بِكُلِّ شَيْءٍ عَلِيمٌ ﴿٧٥﴾

---

27. ಅರ್ಥಾತ್- 'ದಾರುಲ್ ಇಸ್ಲಾಮ್'ನ ಮುಸ್ಲಿಮರು ಪರಸ್ಪರ ರಕ್ಷಕ ಮಿತ್ರರಾಗಿ ಮಾರ್ಪಡದಿದ್ದರೆ, ವಲಸೆ ಬಂದು 'ದಾರುಲ್ ಇಸ್ಲಾಮ್'ನಲ್ಲಿ ನೆಲೆಸದೆ 'ದಾರುಲ್ ಕುಫ್ರ್'ನಲ್ಲೇ ಉಳಿದು ಬಿಡುವವರನ್ನು 'ದಾರುಲ್ ಇಸ್ಲಾಮ್'ನ ಮುಸ್ಲಿಮರು ತಮ್ಮ 'ರಾಜಕೀಯ ಮೇಲ್ವಿಚಾರಣೆ' ಯಿಂದ ಹೊರತಾಗಿರುವವರೆಂದು ಭಾವಿಸದಿದ್ದರೆ, ಹೊರಗಿನ ಶೋಷಿತ ಮುಸ್ಲಿಮರು ಸಹಾಯ ಯಾಚಿಸಿದಾಗ ಅವರಿಗೆ ನೆರವಾಗದಿದ್ದರೆ, ಯಾರೊಂದಿಗೆ ಇಸ್ಲಾಮೀ ರಾಷ್ಟ್ರದ ಒಪ್ಪಂದವಿರುವುದೋ ಅವರಿಗೆ ವಿರುದ್ಧವಾಗಿ ಮುಸ್ಲಿಮರಿಗೆ ನೆರವಾಗಬಾರದು ಎಂಬ ನಿಯಮವನ್ನೂ ಪಾಲಿಸಲಾಗದಿದ್ದರೆ ಹಾಗೂ ಮುಸ್ಲಿಮರು ಸತ್ಯನಿಷೇಧಿಗಳ ಸ್ನೇಹ ಸಂಬಂಧವನ್ನು ನಿಲ್ಲಿಸಿಬಿಡದಿದ್ದರೆ ಭೂಮಿಯಲ್ಲಿ ದೊಡ್ಡ ಕ್ಷೋಭೆ ಮತ್ತು ಗೊಂದಲ ಹುಟ್ಟಿಕೊಳ್ಳುವುದು.

28. ಅರ್ಥಾತ್- ಆಸ್ತಿಯ ವಿಂಗಡನೆಯು ಕೌಟುಂಬಿಕ ಸಂಬಂಧದ ಆಧಾರದಲ್ಲಿ ನಡೆಯುವುದೇ ಹೊರತು ಇಸ್ಲಾಮೀ ಭ್ರಾತೃತ್ವದ ಆಧಾರದಲ್ಲಿ ಅಲ್ಲ. "ಮುಸ್ಲಿಮರಾದ ಸಂಬಂಧಿಕರು ಮಾತ್ರ ಪರಸ್ಪರರ ವಾರೀಸುದಾರರಾಗಿದ್ದಾರೆ. ಮುಸ್ಲಿಮನು ಯಾವುದೇ ಸತ್ಯನಿಷೇಧಿಯ ಅಥವಾ ಸತ್ಯನಿಷೇಧಿಯು ಯಾವುದೇ ಮುಸ್ಲಿಮನ ವಾರೀಸುದಾರನಾಗಲಾರನು" ಎಂಬ ಪ್ರವಾದಿವಚನ ಈ ಆದೇಶವನ್ನು ವ್ಯಾಖ್ಯಾನಿಸುತ್ತದೆ.







(ಅವತೀರ್ಣ - ಮದೀನಾದಲ್ಲಿ)

بَرَآءَةٌ مِّنَ اللّٰهِ وَرَسُوْلِهٖۤ اِلَى الَّذِيْنَ عٰهَدْتُّمْ مِّنَ الْمُشْرِكِيْنَ ۝١

1. ನೀವು ಒಪ್ಪಂದ ಮಾಡಿಕೊಂಡಿದ್ದ[1] 'ಬಹುದೇವವಿಶ್ವಾಸಿ'ಗಳಿಗೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕನ ಕಡೆಯಿಂದ ಒಪ್ಪಂದ ವಿಮುಕ್ತತೆಯ ಘೋಷಣೆಯಿದು.[2]

فَسِيْحُوْا فِى الْاَرْضِ اَرْبَعَةَ اَشْهُرٍ وَّاعْلَمُوْۤا اَنَّكُمْ غَيْرُ مُعْجِزِى اللّٰهِ ۙ وَاَنَّ اللّٰهَ مُخْزِى الْكٰفِرِيْنَ ۝٢

2. ಆದುದರಿಂದ ನೀವು ಇನ್ನೂ ನಾಲ್ಕು ತಿಂಗಳು ನಾಡಿನಲ್ಲಿ ಸಂಚರಿಸಿಕೊಳ್ಳಿರಿ. ನೀವು ಅಲ್ಲಾಹನನ್ನು ಪರಾಜಿತಗೊಳಿಸಲಾರಿರೆಂಬುದನ್ನೂ ಅಲ್ಲಾಹನು ಸತ್ಯನಿಷೇಧಿಗಳನ್ನು ಅವಮಾನಗೊಳಿಸಲಿರುವನೆಂಬುದನ್ನೂ ಚೆನ್ನಾಗಿ ತಿಳಿದುಕೊಳ್ಳಿರಿ.

وَاَذَانٌ مِّنَ اللّٰهِ وَرَسُوْلِهٖۤ اِلَى النَّاسِ يَوْمَ الْحَجِّ الْاَكْبَرِ اَنَّ اللّٰهَ بَرِىْٓءٌ

3. ಅಲ್ಲಾಹನೂ ಅವನ ಸಂದೇಶವಾಹಕರೂ 'ಬಹುದೇವವಿಶ್ವಾಸಿ'ಗಳಿಂದ ಹೊಣೆ ವಿಮುಕ್ತರಾಗಿರುವರೆಂದು ಅಲ್ಲಾಹ್ ಮತ್ತು

---

1. ಯಾವುದೇ ಜನಾಂಗದ ಬಗ್ಗೆ ಅವರು ಒಪ್ಪಂದದಲ್ಲಿ ವಂಚನೆ ಮಾಡಿ ಅದನ್ನು ಮುರಿಯುವರೆಂದು ನಿಮಗೆ ಶಂಕೆ ಇದ್ದರೆ ಅವರೊಂದಿಗಿನ ಒಪ್ಪಂದವನ್ನು ಬಹಿರಂಗವಾಗಿ ತಳ್ಳಿ ಬಿಡಿರಿ. ನಮ್ಮ ನಡುವೆ ಮುಂದೆ ಯಾವ ಒಪ್ಪಂದವೂ ಇಲ್ಲವೆಂದು ಅವರಿಗೆ ಎಚ್ಚರಿಕೆ ನೀಡಿರಿ. ಈ ನೀತಿ ಶಾಸ್ತ್ರದ ಆಧಾರದಲ್ಲೇ, ಒಪ್ಪಂದವಿದ್ದಾಗಲೂ ಸದಾ ಇಸ್ಲಾಮಿನ ವಿರುದ್ಧ ಸಂಚು ಹೂಡುತ್ತಿದ್ದ ಮತ್ತು ಸಂದರ್ಭ ಒದಗಿದಾಗ ಒಪ್ಪಂದವನ್ನು ಒತ್ತಟ್ಟಿಗಿರಿಸಿ ಶತ್ರುತ್ವಕ್ಕೆ ಅಣಿಯಾಗಿಸುತ್ತಿದ್ದ ಎಲ್ಲಾ ಜನಾಂಗಗಳೊಂದಿಗೆ ಒಪ್ಪಂದ ರದ್ದಾಗಿದೆಯೆಂದು ಘೋಷಿಸಲಾಯಿತು. ಈ ಘೋಷಣೆಯ ನಂತರ ಅರೇಬಿಯಾದ ಬಹುದೇವಾರಾಧಕರು ಇಕ್ಕಟ್ಟಿಗೆ ಸಿಲುಕಿದರು. ಒಂದೋ ಹೋರಾಡಲು ಸಿದ್ಧರಾಗಿ ಇಸ್ಲಾಮಿ ಶಕ್ತಿಯೊಂದಿಗೆ ಸಂಘರ್ಷಕ್ಕಿಳಿದು ತಮ್ಮ ಅಸ್ತಿತ್ವವನ್ನೇ ಕಳಕೊಳ್ಳಬೇಕು, ಇಲ್ಲವೇ ದೇಶ ಬಿಟ್ಟು ಹೊರಟು ಹೋಗಬೇಕು ಅಥವಾ ಇಸ್ಲಾಮ್ ಸ್ವೀಕರಿಸಿ ತಮ್ಮನ್ನೂ ತಮ್ಮ ಪ್ರದೇಶವನ್ನು ಆಗಲೇ ಇಸ್ಲಾಮಿ ರಾಷ್ಟ್ರದ ಅಧೀನವಾಗಿದ್ದ ಬಹುಭಾಗದ ವ್ಯವಸ್ಥೆಯ ವಶಕ್ಕೆ ಕೊಟ್ಟುಬಿಡಬೇಕು. ಇದನ್ನು ಬಿಟ್ಟರೆ ಅವರಿಗೆ ಬೇರೆ ದಾರಿಯೇ ಇರಲಿಲ್ಲ.
2. ಐದನೆಯ ರುಕೂಅ್‌ನ ಕೊನೆಯ ತನಕದ ಈ ಸೂಕ್ತಗಳು ಹಿ. ಶ. 9ರಲ್ಲಿ ಅವತೀರ್ಣಗೊಂಡಿದ್ದುವು. ಆಗಲೇ ಪ್ರವಾದಿವರ್ಯರು(ಸ) ಹ. ಅಬೂಬಕರ್‌ರನ್ನು(ರ) ಹಜ್ಜ್‌ಗೆ ಕಳುಹಿಸಿದ್ದರು. ಆನಂತರ ಈ ಸೂಕ್ತಗಳು ಅವತೀರ್ಣಗೊಂಡಾಗ ಪ್ರವಾದಿವರ್ಯರು(ಸ) ಹ. ಅಲೀಯವರನ್ನು(ರ) ಹಜ್ಜ್ ಯಾತ್ರಿಕರ ಸಮಸ್ತ ಸಮೂಹಕ್ಕೆ ಅದನ್ನು ಓದಿ ಕೇಳಿಸಲು ಕಳುಹಿಸಿಕೊಟ್ಟರು ಮತ್ತು ಈ ಕೆಳಗಿನ ನಾಲ್ಕು ವಿಷಯಗಳನ್ನು ಘೋಷಿಸುವಂತೆ ಹೇಳಿದರು. i) ಇಸ್ಲಾಮ್ ಧರ್ಮವನ್ನು ಸ್ವೀಕರಿಸಲು ಒಪ್ಪದ ಯಾರೂ ಸ್ವರ್ಗವನ್ನು ಪ್ರವೇಶಿಸಲಾರರು. ii) ಈ ವರ್ಷದ ನಂತರ ಯಾವ ಬಹುದೇವಾರಾಧಕನೂ ಹಜ್ಜ್ ಯಾತ್ರೆಗೆ ಬರಬಾರದು. iii) ಅಲ್ಲಾಹನ ಭವನದ ಸುತ್ತ ನಗ್ನರಾಗಿ ಪ್ರದಕ್ಷಿಣೆ ಮಾಡುವುದು ನಿಷಿದ್ಧ. iv) ಅಲ್ಲಾಹನ ಪ್ರವಾದಿಯ ಜತೆ ಒಪ್ಪಂದ ಬಾಕಿಯುಳಿದಿರುವ ಅರ್ಥಾತ್ ಒಪ್ಪಂದವನ್ನು ಮುರಿಯದಿರುವವರ ಜತೆಗೆ ಒಪ್ಪಂದವಿರುವಷ್ಟು ಕಾಲವೂ ಮೈತ್ರಿ ಬೆಳೆಸಲಾಗುವುದು. ಪ್ರವಾದಿವರ್ಯರ(ಸ) ಮಾರ್ಗದರ್ಶನದಂತೆ ಹ.ಅಲೀ(ರ) ದುಲ್‌ಹಜ್ಜ್ 10ರಂದು ಈ ಪ್ರಕಟಣೆ ಹೊರಡಿಸಿದರು.

ಅವನ ರಸೂಲರ ಕಡೆಯಿಂದ 'ಹಜ್ಜುಲ್ ಅಕ್ಬರ್' (ಮಹಾ ಹಜ್ಜ್ ಯಾತ್ರೆಯ)[3] ದಿನದಂದು ಮಾಡಲಾಗುತ್ತಿರುವ ಸಾರ್ವತ್ರಿಕ ಘೋಷಣೆಯಿದು. ನೀವು ಪಶ್ಚಾತ್ತಾಪ ಪಟ್ಟರೆ ನಿಮಗೇ ಒಳಿತು. ನೀವು ವಿಮುಖರಾದರೆ, ಅಲ್ಲಾಹನನ್ನು ಪರಾಜಿತಗೊಳಿಸಲಾರಿರೆಂದು ಚೆನ್ನಾಗಿ ತಿಳಿದುಕೊಳ್ಳಿರಿ. ಓ ಪೈಗಂಬರರೇ, ಸತ್ಯನಿಷೇಧಿಗಳಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ತಿಳಿಸಿಬಿಡಿರಿ.

مِّنَ الْمُشْرِكِيْنَ ۙ وَرَسُوْلُهٗ ۭ فَاِنْ تُبْتُمْ فَهُوَ خَيْرٌ لَّكُمْ ۚ وَاِنْ تَوَلَّيْتُمْ فَاعْلَمُوْٓا اَنَّكُمْ غَيْرُ مُعْجِزِي اللّٰهِ ۭ وَبَشِّرِ الَّذِيْنَ كَفَرُوْا بِعَذَابٍ اَلِيْمٍ ۝

4. ನೀವು ಒಪ್ಪಂದ ಮಾಡಿಕೊಂಡಿದ್ದು, ತಮ್ಮ ಒಪ್ಪಂದ ಪಾಲನೆಯಲ್ಲಿ ನಿಮ್ಮೊಂದಿಗೆ ಯಾವತ್ತೂ ಲೋಪವೆಸಗದಿದ್ದರೆ ಹಾಗೂ ನಿಮ್ಮ ವಿರುದ್ಧ ಯಾರಿಗೂ ಸಹಾಯ ಮಾಡದಿದ್ದರೆ, ಆ 'ಬಹುದೇವವಿಶ್ವಾಸಿ'ಗಳು ಇದಕ್ಕೆ ಹೊರತಾಗಿದ್ದಾರೆ. ಇಂಥವರೊಂದಿಗೆ ನೀವೂ ಅವಧಿಯವರೆಗೆ ಒಪ್ಪಂದವನ್ನು ಪಾಲಿಸಿರಿ. ಏಕೆಂದರೆ, ಅಲ್ಲಾಹನು 'ಧರ್ಮನಿಷ್ಠ'ರನ್ನೇ ಮೆಚ್ಚುತ್ತಾನೆ.

اِلَّا الَّذِيْنَ عٰهَدْتُّمْ مِّنَ الْمُشْرِكِيْنَ ثُمَّ لَمْ يَنْقُصُوْكُمْ شَيْـًٔا وَّلَمْ يُظَاهِرُوْا عَلَيْكُمْ اَحَدًا فَاَتِمُّوْٓا اِلَيْهِمْ عَهْدَهُمْ اِلٰى مُدَّتِهِمْ ۭ اِنَّ اللّٰهَ يُحِبُّ الْمُتَّقِيْنَ ۝

5. ನಿಷೇಧಿತ ಮಾಸಗಳು ಕಳೆದ ಬಳಿಕ[4] 'ಬಹುದೇವವಿಶ್ವಾಸಿ'ಗಳನ್ನು ಸಿಕ್ಕಲ್ಲಿ ವಧಿಸಿರಿ. ಅವರನ್ನು ಸೆರೆ ಹಿಡಿಯಿರಿ. ಮುತ್ತಿಗೆ ಹಾಕಿರಿ. ಬೇಹು ನಡೆಸುವಲ್ಲೆಲ್ಲ ಅವರನ್ನು ಹೊಂಚು ಹಾಕುತ್ತ ಕುಳಿತುಕೊಳ್ಳಿರಿ. ಮುಂದೆ ಅವರು ಪಶ್ಚಾತ್ತಾಪ ಪಟ್ಟರೆ, ನಮಾಝನ್ನು ಸಂಸ್ಥಾಪಿಸಿದರೆ ಮತ್ತು ಝಕಾತ್ ಕೊಟ್ಟರೆ ಅವರನ್ನು ಬಿಟ್ಟುಬಿಡಿರಿ.[5] ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

فَاِذَا انْسَلَخَ الْاَشْهُرُ الْحُرُمُ فَاقْتُلُوا الْمُشْرِكِيْنَ حَيْثُ وَجَدْتُّمُوْهُمْ وَخُذُوْهُمْ وَاحْصُرُوْهُمْ وَاقْعُدُوْا لَهُمْ كُلَّ مَرْصَدٍ ۚ فَاِنْ تَابُوْا وَاَقَامُوا الصَّلٰوةَ وَاٰتَوُا الزَّكٰوةَ فَخَلُّوْا سَبِيْلَهُمْ ۭ اِنَّ اللّٰهَ غَفُوْرٌ رَّحِيْمٌ ۝

6. 'ಬಹುದೇವವಿಶ್ವಾಸಿ'ಗಳ ಪೈಕಿ ಯಾರಾದರೂ (ಅಲ್ಲಾಹನ ವಾಣಿಯನ್ನಾಲಿಸಲಿಕ್ಕಾಗಿ) ನಿಮ್ಮೊಡನೆ ಅಭಯ ಯಾಚಿಸಿ ನಿಮ್ಮ

وَاِنْ اَحَدٌ مِّنَ الْمُشْرِكِيْنَ اسْتَجَارَكَ فَاَجِرْهُ حَتّٰى يَسْمَعَ كَلٰمَ اللّٰهِ ثُمَّ اَبْلِغْهُ

3. ಹಜ್ಜುಲ್ ಅಸ್ಗರ್(ಕಿರಿಯ ಹಜ್ಜ್)ಗೆ ಪ್ರತಿಯಾಗಿ ಹಜ್ಜುಲ್ ಅಕ್ಬರ್ (ಹಿರಿಯ ಹಜ್ಜ್) ಎಂಬ ಪದ ಪ್ರಯೋಗವಾಗಿದೆ. ಅರಬರು ಉಮ್ರಾಕ್ಕೆ ಕಿರಿಯ ಹಜ್ಜ್ ಎನ್ನುತ್ತಿದ್ದರು. ಇದಕ್ಕೆ ವಿರುದ್ಧವಾಗಿ ದುಲ್‌ಹಜ್ಜ್ ತಿಂಗಳ ನಿರ್ದಿಷ್ಟ ದಿನಾಂಕಗಳಂದು ನಡೆಯುವ ಹಜ್ಜ್‌ಗೆ ಹಜ್ಜುಲ್ ಅಕ್ಬರ್ ಎನ್ನಲಾಗುತ್ತದೆ.

4. ಇಲ್ಲಿ ನಿಷಿದ್ಧ ತಿಂಗಳುಗಳು ಎಂದರೆ ಸತ್ಯನಿಷೇಧಿಗಳಿಗೆ ಅವಧಿ ನೀಡಲಾಗಿದ್ದ ನಾಲ್ಕು ತಿಂಗಳುಗಳಾಗಿವೆ. ಈ ಅವಧಿಯಲ್ಲಿ ಸತ್ಯನಿಷೇಧಿಗಳ ಮೇಲೆ ಆಕ್ರಮಣ ನಡೆಸುವುದು ಮುಸ್ಲಿಮರ ಪಾಲಿಗೆ ಸಮ್ಮತವಾಗಿರಲಿಲ್ಲ. ಆದ್ದರಿಂದಲೇ ಅವುಗಳನ್ನು ನಿಷಿದ್ಧ ತಿಂಗಳುಗಳು ಎಂದು ಹೇಳಲಾಗಿದೆ.

5. ಅರ್ಥಾತ್- ಸತ್ಯನಿಷೇಧ ಮತ್ತು ಬಹುದೇವಾರಾಧನೆಯ ಬಗ್ಗೆ ಪ್ರಾಯಶ್ಚಿತ್ತಪಟ್ಟರೆ ಸಾಕಾಗಲಾರದು. ಅವರು ನಮಾಝ್ ಸಂಸ್ಥಾಪಿಸಬೇಕಾಗುವುದು. ಝಕಾತ್ ಕೊಡಬೇಕಾಗುವುದು. ಅನ್ಯಥಾ ಅವರು ಸತ್ಯನಿಷೇಧವನ್ನು ತೊರೆದು ಇಸ್ಲಾಮನ್ನು ಅಂಗೀಕರಿಸಿದ್ದಾರೆ ಎಂದು ಸಮ್ಮತಿಸಲಾಗದು.

ಬಳಿಗೆ ಬರಲಿಚ್ಛಿಸಿದರೆ ಅಲ್ಲಾಹನ ವಚನವನ್ನು ಅವನು ಆಲಿಸಿಕೊಳ್ಳುವವರೆಗೆ ಅವನಿಗೆ ಅಭಯ ನೀಡಿರಿ. ಅನಂತರ ಅವನನ್ನು ಅವನ ಸುರಕ್ಷಾಸ್ಥಾನಕ್ಕೆ ತಲುಪಿಸಿಬಿಡಿರಿ. ಅವರು ತಿಳುವಳಿಕೆಯಿಲ್ಲದವರಾದುದರಿಂದ ಹೀಗೆ ಮಾಡಬೇಕಾಗಿದೆ.

مَأْمَنَهُ ۚ ذَٰلِكَ بِأَنَّهُمْ قَوْمٌ لَّا يَعْلَمُونَ ﴿٦﴾

7. ಈ 'ಬಹುದೇವವಿಶ್ವಾಸಿ'ಗಳಿಗೆ ಅಲ್ಲಾಹ್ ಮತ್ತು ಅವನ ರಸೂಲರ ಬಳಿ ಒಪ್ಪಂದವಿರುವುದಾದರೂ ಹೇಗೆ? 'ಮಸ್ಜಿದುಲ್ ಹರಾಮ್'ನ ಬಳಿ ಒಪ್ಪಂದ ಮಾಡಿಕೊಂಡವರೊಡನೆ ಹೊರತು.[6] ಅವರು ನಿಮ್ಮೊಡನೆ ನೇರವಾಗಿರುವ ವರೆಗೂ ನೀವು ಅವರೊಡನೆ ನೇರವಾಗಿರಿ. ಏಕೆಂದರೆ ಅಲ್ಲಾಹನು 'ಧರ್ಮನಿಷ್ಠ'ರನ್ನು ಮೆಚ್ಚುತ್ತಾನೆ.

كَيْفَ يَكُونُ لِلْمُشْرِكِينَ عَهْدٌ عِندَ اللَّهِ وَعِندَ رَسُولِهِ إِلَّا الَّذِينَ عَاهَدتُّمْ عِندَ الْمَسْجِدِ الْحَرَامِ ۖ فَمَا اسْتَقَامُوا لَكُمْ فَاسْتَقِيمُوا لَهُمْ ۚ إِنَّ اللَّهَ يُحِبُّ الْمُتَّقِينَ ﴿٧﴾

8. ಆದರೆ ಅವರ ಹೊರತು ಇತರ 'ಬಹುದೇವವಿಶ್ವಾಸಿ'ಗಳೊಂದಿಗೆ ಒಪ್ಪಂದವಿರುವುದಾದರೂ ಹೇಗೆ? ಅವರ ಅವಸ್ಥೆಯೇನೆಂದರೆ, ಅವರು ನಿಮ್ಮ ಮೇಲೆ ಜಯಗಳಿಸಿದರೆ ನಿಮ್ಮ ವಿಷಯದಲ್ಲಿ ಬಾಂಧವ್ಯವನ್ನಾಗಲಿ ಒಪ್ಪಂದದ ಹೊಣೆಯನ್ನಾಗಲಿ ಪರಿಗಣಿಸುವುದಿಲ್ಲ. ಅವರು ಬರೇ ಬಾಯಿ ಮಾತುಗಳಿಂದ ನಿಮ್ಮನ್ನು ಮೆಚ್ಚಿಸಲು ಯತ್ನಿಸುತ್ತಾರೆ. ಆದರೆ ಅವರ ಅಂತಃಕರಣಗಳು ನಿಷೇಧಿಸುತ್ತವೆ. ಅವರಲ್ಲಿ ಹೆಚ್ಚಿನವರು 'ಕರ್ಮಭ್ರಷ್ಟರು.'

كَيْفَ وَإِن يَظْهَرُوا عَلَيْكُمْ لَا يَرْقُبُوا فِيكُمْ إِلًّا وَلَا ذِمَّةً ۚ يُرْضُونَكُم بِأَفْوَاهِهِمْ وَتَأْبَىٰ قُلُوبُهُمْ وَأَكْثَرُهُمْ فَاسِقُونَ ﴿٨﴾

9. ಅವರು ಅಲ್ಲಾಹನ 'ಸೂಕ್ತ'ಗಳ ಬದಲಿಗೆ ಅತ್ಯಲ್ಪ ಬೆಲೆಯನ್ನು ಸ್ವೀಕರಿಸಿಕೊಂಡರು. ಅನಂತರ ಅಲ್ಲಾಹನ ಮಾರ್ಗಕ್ಕೆ ತಡೆಯಾಗಿ ನಿಂತರು. ಅವರು ಮಾಡುತ್ತಿದ್ದ ಕಾರ್ಯಗಳೆಲ್ಲ ಅತ್ಯಂತ ನಿಕೃಷ್ಟವಾಗಿದ್ದವು.

اشْتَرَوْا بِآيَاتِ اللَّهِ ثَمَنًا قَلِيلًا فَصَدُّوا عَن سَبِيلِهِ ۚ إِنَّهُمْ سَاءَ مَا كَانُوا يَعْمَلُونَ ﴿٩﴾

10. ಒಬ್ಬ ಸತ್ಯವಿಶ್ವಾಸಿಯ ವಿಷಯದಲ್ಲಿ ಇವರು ಬಾಂಧವ್ಯವನ್ನಾಗಲಿ ಒಪ್ಪಂದದ ಹೊಣೆಯನ್ನಾಗಲಿ ಪರಿಗಣಿಸುವುದಿಲ್ಲ. ಅತಿರೇಕವು ಯಾವಾಗಲೂ ಅವರ ಕಡೆಯಿಂದಲೇ ಆಗಿದೆ.

لَا يَرْقُبُونَ فِي مُؤْمِنٍ إِلًّا وَلَا ذِمَّةً ۚ وَأُولَٰئِكَ هُمُ الْمُعْتَدُونَ ﴿١٠﴾

11. ಆದರೂ ಇವರು ಪಶ್ಚಾತ್ತಾಪ ಪಟ್ಟರೆ ಮತ್ತು ನಮಾಝನ್ನು ಸಂಸ್ಥಾಪಿಸಿ ಝಕಾತ್ ಕೊಟ್ಟರೆ, ನಿಮ್ಮ ಧರ್ಮಬಾಂಧವರಾಗಿರುತ್ತಾರೆ.[7] ತಿಳುವಳಿಕೆಯುಳ್ಳವರಿಗೆ ನಾವು ನಮ್ಮ ಆದೇಶಗಳನ್ನು ವಿವರಿಸುತ್ತೇವೆ.

فَإِن تَابُوا وَأَقَامُوا الصَّلَاةَ وَآتَوُا الزَّكَاةَ فَإِخْوَانُكُمْ فِي الدِّينِ ۗ وَنُفَصِّلُ الْآيَاتِ لِقَوْمٍ يَعْلَمُونَ ﴿١١﴾

6. ಅರ್ಥಾತ್- ಕಿನಾನ, ಕುಝಾಅ ಮತ್ತು ಸಮ್ರಾ ಗೋತ್ರಗಳು.

7. ಅರ್ಥಾತ್- ನಮಾಝ್ ಮತ್ತು ಝಕಾತ್‌ನ ಪಾಲನೆ ಮಾಡದೆ ಕೇವಲ ಪ್ರಾಯಶ್ಚಿತ್ತಪಟ್ಟ ಮಾತ್ರಕ್ಕೆ ಅವರು ನಿಮ್ಮ ಧಾರ್ಮಿಕ ಸೋದರರಾಗಿ ಮಾರ್ಪಡುವುದಿಲ್ಲ. ಈ ಶರತ್ತನ್ನು ಅವರು ಈಡೇರಿಸಿದರೆ ಅವರ ಮೇಲೆ ಕೈ ಮಾಡುವುದು ಮತ್ತು ಅವರ ಜೀವ-

12. ಒಪ್ಪಂದದ ಅನಂತರ ಅವರು ಪುನಃ ತಮ್ಮ ಶಪಥಗಳನ್ನು ಮುರಿದು ನಿಮ್ಮ ಧರ್ಮದ ಮೇಲೆ ಆಕ್ರಮಣವೆಸಗಲಾರಂಭಿಸಿದರೆ 'ಸತ್ಯನಿಷೇಧ'ದ ಮುಂದಾಳುಗಳೊಂದಿಗೆ ಯುದ್ಧ ಮಾಡಿರಿ. ಏಕೆಂದರೆ, ಅವರ ಶಪಥಗಳನ್ನು ನಂಬಲಾಗದು. ಪ್ರಾಯಶಃ ಅವರು (ಪುನಃ ಖಡ್ಗ ಬಲದ ಮೂಲಕವೇ) ಹಿಂಜರಿಯಬಹುದು.[8]

وَإِن نَّكَثُوا أَيْمَانَهُم مِّن بَعْدِ عَهْدِهِمْ وَطَعَنُوا فِي دِينِكُمْ فَقَاتِلُوا أَئِمَّةَ الْكُفْرِ ۙ إِنَّهُمْ لَا أَيْمَانَ لَهُمْ لَعَلَّهُمْ يَنتَهُونَ ﴿١٢﴾

13. ತಮ್ಮ ಶಪಥಗಳನ್ನು ಮುರಿಯುತ್ತಲೇ ಇದ್ದು ಸಂದೇಶವಾಹಕರನ್ನು ದೇಶದಿಂದ ಹೊರಹಾಕಲು ನಿರ್ಧರಿಸಿದ ಮತ್ತು ಅತಿರೇಕ ವನ್ನಾರಂಭಿಸಿದವರೊಂದಿಗೆ ನೀವು ಯುದ್ಧ ಮಾಡುವುದಿಲ್ಲವೇ? ನೀವು ಅವರಿಗೆ ಹೆದರುತ್ತೀರಾ? ನೀವು ಸತ್ಯವಿಶ್ವಾಸಿಗಳಾಗಿದ್ದರೆ ನಿಮ್ಮ ಭಯಕ್ಕೆ ಅಲ್ಲಾಹನು ಹೆಚ್ಚು ಅರ್ಹನು.

أَلَا تُقَاتِلُونَ قَوْمًا نَّكَثُوا أَيْمَانَهُمْ وَهَمُّوا بِإِخْرَاجِ الرَّسُولِ وَهُم بَدَءُوكُمْ أَوَّلَ مَرَّةٍ ۚ أَتَخْشَوْنَهُمْ ۚ فَاللَّهُ أَحَقُّ أَن تَخْشَوْهُ إِن كُنتُم مُّؤْمِنِينَ ﴿١٣﴾

14. ಅವರೊಡನೆ ಯುದ್ಧ ಮಾಡಿರಿ. ಅಲ್ಲಾಹನು ನಿಮ್ಮ ಕೈಗಳಿಂದ ಅವರಿಗೆ ಶಿಕ್ಷೆ ಕೊಡಿಸುವನು, ಅವರನ್ನು ಅವಮಾನಗೊಳಿಸುವನು, ಅವರ ವಿರುದ್ಧ ನಿಮಗೆ ಸಹಾಯ ಮಾಡುವನು. ಅನೇಕ ಸತ್ಯ ವಿಶ್ವಾಸಿಗಳ ಹೃದಯಗಳನ್ನು ತಣಿಸುವನು.

قَاتِلُوهُمْ يُعَذِّبْهُمُ اللَّهُ بِأَيْدِيكُمْ وَيُخْزِهِمْ وَيَنصُرْكُمْ عَلَيْهِمْ وَيَشْفِ صُدُورَ قَوْمٍ مُّؤْمِنِينَ ﴿١٤﴾

15. ಅವರ ಹೃದಯಗಳ ಬೇಗುದಿಯನ್ನು ಹೋಗಲಾಡಿಸುವನು ಮತ್ತು ತನಗಿಷ್ಟವಿದ್ದವರಿಗೆ 'ಪಶ್ಚಾತ್ತಾಪ'ದ ಅನುಗ್ರಹ ನೀಡುವನು.[9] ಅಲ್ಲಾಹನು ಸಕಲವನ್ನೂ ಬಲ್ಲವನೂ ಧೀಮಂತನೂ ಆಗಿರುತ್ತಾನೆ.

وَيُذْهِبْ غَيْظَ قُلُوبِهِمْ ۗ وَيَتُوبُ اللَّهُ عَلَىٰ مَن يَشَاءُ ۗ وَاللَّهُ عَلِيمٌ حَكِيمٌ ﴿١٥﴾

16. ನಿಮ್ಮನ್ನು ಹೀಗೆಯೇ ಬಿಟ್ಟು ಬಿಡಲಾಗುವುದೆಂದು ನೀವೆಣಿಸಿ ದ್ದೀರಾ? ವಸ್ತುತಃ ನಿಮ್ಮ ಪೈಕಿ (ಅಲ್ಲಾಹನ ಮಾರ್ಗದಲ್ಲಿ) ಅತಿ ಯಾಗಿ ಪರಿಶ್ರಮಿಸಿದವರು ಮತ್ತು ಅಲ್ಲಾಹನನ್ನೂ ಸಂದೇಶ ವಾಹಕರನ್ನೂ ಸತ್ಯವಿಶ್ವಾಸಿಗಳನ್ನೂ ಹೊರತು ಅನ್ಯರನ್ನು ಆತ್ಮ ಮಿತ್ರರನ್ನಾಗಿ ಮಾಡಿಕೊಳ್ಳದವರೆಂದು ಅಲ್ಲಾಹನು ಇನ್ನೂ

أَمْ حَسِبْتُمْ أَن تُتْرَكُوا وَلَمَّا يَعْلَمِ اللَّهُ الَّذِينَ جَاهَدُوا مِنكُمْ وَلَمْ يَتَّخِذُوا مِن دُونِ اللَّهِ وَلَا رَسُولِهِ وَلَا الْمُؤْمِنِينَ وَلِيجَةً ۚ وَاللَّهُ خَبِيرٌ بِمَا تَعْمَلُونَ ﴿١٦﴾

---

ಸೊತ್ತುಗಳ ವಿರುದ್ಧ ಮುಗಿ ಬೀಳುವುದು ನಿಮ್ಮ ಪಾಲಿಗೆ ನಿಷಿದ್ಧ. ಜತೆಗೆ ಅವರಿಗೆ ಆಗುವ ಇನ್ನೊಂದು ಪ್ರಯೋಜನವೆಂದರೆ ಇಸ್ಲಾಮೀ ಸಮಾಜದಲ್ಲಿ ಸಮಾನ ಹಕ್ಕುಗಳು ದೊರೆಯುವುದು. ಸಾಮಾಜಿಕ, ಸಾಂಸ್ಕೃತಿಕ ಮತ್ತು ಶಾಸನಾತ್ಮಕ ದೃಷ್ಟಿಯಿಂದ ಅವರು ಇತರ ಮುಸ್ಲಿಮರಂತೆಯೇ ಇರುವರು. ಅವರ ಪ್ರಗತಿಯ ಮಾರ್ಗದಲ್ಲಿ ಯಾವುದೇ ರೀತಿಯ ತಾರತಮ್ಯ ಅಡ್ಡಿಯಾಗಲಾರದು.

8. ಇಲ್ಲಿ ಒಪ್ಪಂದ ಮಾಡುವುದು ಮತ್ತು ಶಪಥ ಹಾಕುವುದೆಂದರೆ ತಾನು ಮುಸ್ಲಿಮನಾಗಿದ್ದೇನೆ ಎಂಬ ಕರಾರು ಮಾಡುವುದು ಮತ್ತು ಇಸ್ಲಾಮಿನ ಬಗ್ಗೆ ತನಗಿರುವ ನಿಷ್ಠೆಯ ಬಗ್ಗೆ ಶಪಥ ಹಾಕುವುದಾಗಿದೆ. ಅರ್ಥಾತ್ ಅವರು ಮುಸ್ಲಿಮರಾಗಿ ಮಾರ್ಪಟ್ಟ ನಂತರ ಪುನಃ ಸತ್ಯನಿಷೇಧದ ಕಡೆಗೆ ಮರಳಿದರೆ ಅವರೊಡನೆ ಯುದ್ಧ ಮಾಡಿರಿ. ಈ ಆದೇಶದ ಪ್ರಕಾರವೇ ಹ.ಅಬೂಬಕರ್(ರ) ಧರ್ಮಭ್ರಷ್ಟರ ವಿರುದ್ಧ ಯುದ್ಧ ಮಾಡಿದ್ದರು.

9. ಈ ಪ್ರಕಟಣೆ ಬರುತ್ತಲೇ ಅರೇಬಿಯಾದ ಸುತ್ತಮುತ್ತಲ ಪ್ರದೇಶದಲ್ಲಿ ಅಗ್ನಿ ಜ್ವಾಲೆಗಳೆದ್ದು ರಕ್ತರಂಜಿತ ಯುದ್ಧವೊಂದನ್ನು ನಾವು ಎದುರಿಸಬೇಕಾಗುವುದು ಎಂದು ಮುಸ್ಲಿಮರು ಭಯಪಡುತ್ತಿದ್ದರು. ನಿಮ್ಮ ಈ ಸಂದೇಹ ಸರಿಯಲ್ಲ. ಅದಕ್ಕೆ ವಿರುದ್ಧವಾದ ಪರಿಣಾಮವನ್ನು ನೀವು ಕಾಣಲಿರುವಿರಿ ಎಂದು ಅಲ್ಲಾಹನು ಈ ಸೂಕ್ತಗಳಲ್ಲಿ ಸಾಂತ್ವನ ನೀಡಿದ್ದಾನೆ.

ಕಂಡುಕೊಳ್ಳಲೇ ಇಲ್ಲ. ಅಲ್ಲಾಹ್ ನೀವು ಮಾಡುತ್ತಿರುವುದೆಲ್ಲವನ್ನೂ ಚೆನ್ನಾಗಿ ಬಲ್ಲವನಾಗಿರುತ್ತಾನೆ.

17. 'ಬಹುದೇವವಿಶ್ವಾಸಿ'ಗಳು ತಮ್ಮ ಮೇಲೆ ತಾವೇ ಸತ್ಯನಿಷೇಧಕ್ಕೆ ಸಾಕ್ಷಿಗಳಾಗಿರುವಾಗ ಅವರು ಅಲ್ಲಾಹನ ಮಸೀದಿಗಳ ಮೇಲ್ವಿಚಾರಕರೂ ಸೇವಕರೂ ಆಗಿರುವುದು ಅವರಿಗೆ ತಕ್ಕುದಲ್ಲ. ಅವರ ಸತ್ಕರ್ಮಗಳೆಲ್ಲ ವ್ಯರ್ಥವಾದುವು. ಅವರಿಗೆ ಸದಾಕಾಲ 'ನರಕ'ದಲ್ಲಿ ವಾಸಿಸಲಿಕ್ಕಿದೆ.

مَا كَانَ لِلْمُشْرِكِيْنَ اَنْ يَّعْمُرُوْا مَسٰجِدَ اللّٰهِ شٰهِدِيْنَ عَلٰۤى اَنْفُسِهِمْ بِالْكُفْرِ ؕ اُولٰٓئِكَ حَبِطَتْ اَعْمَالُهُمْ ۖۚ وَفِى النَّارِ هُمْ خٰلِدُوْنَ ۝١٧

18. ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿರಿಸುವವರೂ ನಮಾಝನ್ನು ಸಂಸ್ಥಾಪಿಸುವವರೂ ಝಕಾತ್ ಕೊಡುವವರೂ ಅಲ್ಲಾಹನನ್ನು ಹೊರತು ಇನ್ನಾರನ್ನೂ ಭಯಪಡದವರೂ ಮಾತ್ರ ಅಲ್ಲಾಹನ ಮಸೀದಿಗಳನ್ನು ನೆಲೆಗೊಳಿಸುವವ(ಮೇಲ್ವಿಚಾರಕ ಮತ್ತು ಸೇವಕ)ರಾಗಬಲ್ಲರು. ಅವರು ಮಾತ್ರ ಸನ್ಮಾರ್ಗದಲ್ಲಿ ನಡೆಯುವವರೆಂದು ನಿರೀಕ್ಷಿಸಬಹುದು.

اِنَّمَا يَعْمُرُ مَسٰجِدَ اللّٰهِ مَنْ اٰمَنَ بِاللّٰهِ وَالْيَوْمِ الْاٰخِرِ وَاَقَامَ الصَّلٰوةَ وَاٰتَى الزَّكٰوةَ وَلَمْ يَخْشَ اِلَّا اللّٰهَ فَعَسٰۤى اُولٰٓئِكَ اَنْ يَّكُوْنُوْا مِنَ الْمُهْتَدِيْنَ ۝١٨

19. ಹಜ್ಜ್ ಯಾತ್ರಿಕರಿಗೆ ಜಲಪಾನ ಮಾಡಿಸುವುದನ್ನು ಮತ್ತು ಮಸ್ಜಿದುಲ್ ಹರಾಮ್‌ನ ಸೇವೆಯನ್ನು ನೀವು ಅಲ್ಲಾಹನ ಹಾಗೂ ಅಂತಿಮ ದಿನದ ಮೇಲೆ ವಿಶ್ವಾಸವಿಟ್ಟು ಅಲ್ಲಾಹನ ಮಾರ್ಗದಲ್ಲಿ ಜೀವದ ಹಂಗು ತೊರೆದು ಹೋರಾಟ ನಡೆಸಿದವನ ಕರ್ಮಕ್ಕೆ ಸರಿಸಮಾನವೆಂದು ಪರಿಗಣಿಸಿದಿರಾ?[10] ಅಲ್ಲಾಹನ ದೃಷ್ಟಿಯಲ್ಲಿ ಇವರಿಬ್ಬರು ಸರಿಸಮಾನರಲ್ಲ ಮತ್ತು ಅಲ್ಲಾಹ್ ಅಕ್ರಮಿಗಳಿಗೆ ಸನ್ಮಾರ್ಗದರ್ಶನ ಮಾಡಿಸುವುದಿಲ್ಲ.

اَجَعَلْتُمْ سِقَايَةَ الْحَآجِّ وَعِمَارَةَ الْمَسْجِدِ الْحَرَامِ كَمَنْ اٰمَنَ بِاللّٰهِ وَالْيَوْمِ الْاٰخِرِ وَجٰهَدَ فِىْ سَبِيْلِ اللّٰهِ ؕ لَا يَسْتَوٗنَ عِنْدَ اللّٰهِ ؕ وَاللّٰهُ لَا يَهْدِى الْقَوْمَ الظّٰلِمِيْنَ ۝١٩

20. ಸತ್ಯವಿಶ್ವಾಸವನ್ನು ಕೈಗೊಂಡ, ಅಲ್ಲಾಹನ ಮಾರ್ಗದಲ್ಲಿ ಮನೆ ಮಾರುಗಳನ್ನು ಬಿಟ್ಟು ಮತ್ತು ತನುಧನಗಳಿಂದ ಹೋರಾಟ ನಡೆಸಿದವರ ಪದವಿಯೇ ಅಲ್ಲಾಹನ ಬಳಿ ಉನ್ನತವಾಗಿರುತ್ತದೆ. ಅವರೇ ವಿಜಯಿಗಳು.

اَلَّذِيْنَ اٰمَنُوْا وَهَاجَرُوْا وَجٰهَدُوْا فِىْ سَبِيْلِ اللّٰهِ بِاَمْوَالِهِمْ وَاَنْفُسِهِمْ ۙ اَعْظَمُ دَرَجَةً عِنْدَ اللّٰهِ ؕ وَاُولٰٓئِكَ هُمُ الْفَآئِزُوْنَ ۝٢٠

21. ಅವರ ಪ್ರಭು ಅವರಿಗೆ ತನ್ನ ಕೃಪೆ, ಸಂಪ್ರೀತಿ ಮತ್ತು ಅವರಿಗಾಗಿ ಅನಂತ ಸುಖಭೋಗ ಸಾಧನಗಳಿರುವ ಸ್ವರ್ಗಗಳ ಸುವಾರ್ತೆ ನೀಡುತ್ತಾನೆ.

يُبَشِّرُهُمْ رَبُّهُمْ بِرَحْمَةٍ مِّنْهُ وَرِضْوَانٍ وَّجَنّٰتٍ لَّهُمْ فِيْهَا نَعِيْمٌ مُّقِيْمٌ ۝٢١

10. ಈ ವಾಣಿಯ ಮೂಲಕ ಅಲ್ಲಾಹನ ಭವನದ ಮೊಕ್ತೇಸರಗಿರಿಯನ್ನು ಮುಂದೆ ಬಹುದೇವಾ ರಾಧಕರು ಮಾಡುವಂತಿಲ್ಲ ಎಂಬ ತೀರ್ಮಾನವನ್ನು ನೀಡಲಾಗಿದೆ. ಕೇವಲ ಹಜ್ಜ್ ಯಾತ್ರಿಕರ ಸೇವೆ ಮಾಡುತ್ತಿದ್ದಾರೆಂಬ ಕಾರಣಕ್ಕಾಗಿ ಕುರೈಶ್‌ನ ಬಹುದೇವಾರಾಧಕರು ಅದರ ಬಾಧ್ಯಸ್ಥರಾಗಿ ಮಾರ್ಪಡುವುದಿಲ್ಲ.

22. ಅವರು ಅವುಗಳಲ್ಲಿ ಸದಾಕಾಲ ವಾಸಿಸುತ್ತಿರುವರು. ನಿಶ್ಚಯ ವಾಗಿಯೂ ಅಲ್ಲಾಹನ ಬಳಿ ಸೇವಾ ಪ್ರತಿಫಲ ನೀಡಲಿಕ್ಕಾಗಿ ಧಾರಾಳವಿದೆ.

خٰلِدِيْنَ فِيْهَآ اَبَدًا ؕ اِنَّ اللّٰهَ عِنْدَهٗۤ اَجْرٌ عَظِيْمٌ ﴿٢٢﴾

23. ಓ ಸತ್ಯವಿಶ್ವಾಸಿಗಳೇ, ನಿಮ್ಮ ಪಿತರೂ ನಿಮ್ಮ ಭ್ರಾತೃಗಳೂ 'ಸತ್ಯವಿಶ್ವಾಸ'ಕ್ಕೆ ಎದುರಾಗಿ 'ಸತ್ಯನಿಷೇಧ'ವನ್ನೇ ಇಷ್ಟಪಟ್ಟರೆ ಅವರನ್ನೂ ಆಪ್ತರನ್ನಾಗಿ ಮಾಡಿಕೊಳ್ಳಬೇಡಿರಿ. ನಿಮ್ಮಲ್ಲಾರಾದರೂ ಅವರನ್ನು ಆಪ್ತರನ್ನಾಗಿ ಮಾಡಿಕೊಂಡರೆ ಅವರೇ ಅಕ್ರಮಿ ಗಳಾಗುವರು.

يٰۤاَيُّهَا الَّذِيْنَ اٰمَنُوْا لَا تَتَّخِذُوْۤا اٰبَآءَكُمْ وَاِخْوَانَكُمْ اَوْلِيَآءَ اِنِ اسْتَحَبُّوا الْكُفْرَ عَلَى الْاِيْمَانِ ؕ وَمَنْ يَّتَوَلَّهُمْ مِّنْكُمْ فَاُولٰٓئِكَ هُمُ الظّٰلِمُوْنَ ﴿٢٣﴾

24. ಓ ಪೈಗಂಬರರೇ, ಹೇಳಿರಿ - ನಿಮ್ಮ ಪಿತರೂ ನಿಮ್ಮ ಮಕ್ಕಳೂ ನಿಮ್ಮ ಸೋದರರೂ ನಿಮ್ಮ ಪತ್ನಿಯರೂ ನಿಮ್ಮ ನೆಂಟರಿಷ್ಟರೂ ನೀವು ಸಂಪಾದಿಸಿದ ಸಂಪತ್ತೂ ಮಂದಗೊಳ್ಳಬಹುದೆಂದು ನೀವು ಭಯಪಡುತ್ತಿರುವ ನಿಮ್ಮ ವ್ಯಾಪಾರ ವಹಿವಾಟುಗಳೂ ನೀವು ಇಷ್ಟಪಡುತ್ತಿರುವ ನಿಮ್ಮ ನಿವಾಸಗಳೂ ನಿಮಗೆ - ಅಲ್ಲಾಹ್, ಅವನ ಸಂದೇಶವಾಹಕ ಮತ್ತು ಅವನ ಮಾರ್ಗದಲ್ಲಿ ಹೋರಾಟ ನಡೆಸುವುದಕ್ಕಿಂತಲೂ ಪ್ರಿಯವಾಗಿದ್ದರೆ, ಅಲ್ಲಾಹನ ತನ್ನ ತೀರ್ಮಾನವನ್ನು ನಿಮ್ಮ ಮುಂದೆ ತರುವವರೆಗೂ ಕಾದು ನಿಲ್ಲಿರಿ. ಅಲ್ಲಾಹನು 'ಕರ್ಮಭ್ರಷ್ಟ'ರಿಗೆ ಮಾರ್ಗದರ್ಶನ ಮಾಡುವು ದಿಲ್ಲ.

قُلْ اِنْ كَانَ اٰبَآؤُكُمْ وَاَبْنَآؤُكُمْ وَاِخْوَانُكُمْ وَاَزْوَاجُكُمْ وَعَشِيْرَتُكُمْ وَاَمْوَالُ ۨاقْتَرَفْتُمُوْهَا وَتِجَارَةٌ تَخْشَوْنَ كَسَادَهَا وَمَسٰكِنُ تَرْضَوْنَهَاۤ اَحَبَّ اِلَيْكُمْ مِّنَ اللّٰهِ وَرَسُوْلِهٖ وَجِهَادٍ فِىْ سَبِيْلِهٖ فَتَرَبَّصُوْا حَتّٰى يَاْتِىَ اللّٰهُ بِاَمْرِهٖ ؕ وَاللّٰهُ لَا يَهْدِى الْقَوْمَ الْفٰسِقِيْنَ ﴿٢٤﴾

ع

25. ಅಲ್ಲಾಹ್ ಇದಕ್ಕಿಂತ ಮುಂಚೆ ಅನೇಕ ಸಂದರ್ಭಗಳಲ್ಲಿ ನಿಮಗೆ ಸಹಾಯ ಮಾಡಿರುತ್ತಾನೆ. ಇದೀಗ ಹುನೈನ್ ಯುದ್ಧದ ದಿನ (ಅವನ ನೆರವಿನ ವೈಖರಿಯನ್ನು ನೀವು ಕಂಡಿರುತ್ತೀರಿ.)[11] ಅಂದು ನಿಮಗೆ ಸಂಖ್ಯಾಬಲದ ಜಂಬವಿತ್ತು. ಆದರೆ ಅದು ನಿಮಗೇನೂ ಫಲಕೊಡಲಿಲ್ಲ. ಭೂಮಿಯು ವಿಶಾಲವಿದ್ದೂ ನಿಮ್ಮ ಮಟ್ಟಿಗೆ ಸಂಕುಚಿತವಾಗಿಬಿಟ್ಟಿತು ಮತ್ತು ನೀವು ಬೆನ್ನು ತಿರುಗಿಸಿ ಓಟಕಿತ್ತಿರಿ.

لَقَدْ نَصَرَكُمُ اللّٰهُ فِىْ مَوَاطِنَ كَثِيْرَةٍ ۙ وَّيَوْمَ حُنَيْنٍ ۙ اِذْ اَعْجَبَتْكُمْ كَثْرَتُكُمْ فَلَمْ تُغْنِ عَنْكُمْ شَيْـًٔا وَّضَاقَتْ عَلَيْكُمُ الْاَرْضُ بِمَا رَحُبَتْ ثُمَّ وَلَّيْتُمْ مُّدْبِرِيْنَ ﴿٢٥﴾

11. ಹುನೈನ್ ಯುದ್ಧ ಹಿ. ಶ. 8ರ ಶವ್ವಾಲ್ ತಿಂಗಳಲ್ಲಿ ಈ ಸೂಕ್ತಗಳು ಅವತೀರ್ಣಗೊಳ್ಳುವ ಸುಮಾರು ಹನ್ನೆರಡು-ಹದಿಮೂರು ತಿಂಗಳು ಮೊದಲು ಮಕ್ಕಾ ಮತ್ತು ತಾಯಿಫ್‌ನ ನಡುವೆ ಹುನೈನ್ ಕಣಿವೆಯಲ್ಲಿ ನಡೆದಿತ್ತು. ಈ ಯುದ್ಧದಲ್ಲಿ ಮುಸ್ಲಿಮರ ಕಡೆಯಲ್ಲಿ ಹನ್ನೆರಡು ಸಾವಿರ ಸೈನಿಕರಿದ್ದರು. ಇನ್ನೊಂದೆಡೆ ಸತ್ಯನಿಷೇಧಿಗಳು ಅವರಿಗಿಂತ ಬಹಳ ಕಡಿಮೆ ಸಂಖ್ಯೆಯಲ್ಲಿದ್ದರು. ಅದರ ಹೊರತಾಗಿಯೂ ಹವಾಝಿನ್ ಗೋತ್ರದ ಬಿಲ್ಲುಗಾರರು, ಮುಸ್ಲಿಮರು ಬೆನ್ನು ತಿರುಗಿಸಿಕೊಳ್ಳುವಂತೆ ಮಾಡಿದರು. ಇಸ್ಲಾಮೀ ಸೇನೆ ಅಸ್ತವ್ಯಸ್ತಗೊಂಡಿತು. ಆ ವೇಳೆ ಪ್ರವಾದಿವರ್ಯರು(ಸ) ಮತ್ತು ಪ್ರಾಣವನ್ನು ಪಣಕ್ಕಿಟ್ಟ ಅವರ ಕೆಲವೇ ಕೆಲವು ಅನುಚರರು ವಿಚಲಿತ ರಾಗದೆ ನಿಂತಿದ್ದರು. ಅವರ ದೃಢಚಿತ್ತತೆಯಿಂದಾಗಿಯೇ ಸೇನೆಗೆ ಮತ್ತೊಮ್ಮೆ ಸಜ್ಜು ಗೊಳ್ಳಲು ಸಾಧ್ಯವಾಯಿತು. ಕೊನೆಗೆ ಮುಸ್ಲಿಮರೇ ಜಯಶಾಲಿಗಳಾದರು. ಅನ್ಯಥಾ ಮಕ್ಕಾ ವಿಜಯದಿಂದ ಗಳಿಸಿರುವುದಕ್ಕಿಂತ ಹೆಚ್ಚಿನದನ್ನು ಹುನೈನ್ ಯುದ್ಧದ ಮೂಲಕ ಕಳೆದು ಕೊಳ್ಳಬೇಕಾಗುತ್ತಿತ್ತು.

26. ಅನಂತರ ಅಲ್ಲಾಹನು ತನ್ನ ಪ್ರಶಾಂತತೆಯನ್ನು ತನ್ನ ರಸೂಲರ ಮೇಲೂ ಸತ್ಯವಿಶ್ವಾಸಿಗಳ ಮೇಲೂ ಇಳಿಸಿದನು ಮತ್ತು ನಿಮಗೆ ಕಾಣದಂತಹ ಸೈನ್ಯವನ್ನು ಇಳಿಸಿ ಸತ್ಯನಿಷೇಧಿಗಳನ್ನು ಶಿಕ್ಷಿಸಿದನು. ಸತ್ಯವನ್ನು ನಿಷೇಧಿಸುವವರಿಗೆ ಇದೇ ಪ್ರತಿಫಲ.

ثُمَّ اَنْزَلَ اللّٰهُ سَكِيْنَتَهٗ عَلٰى رَسُوْلِهٖ وَعَلَى الْمُؤْمِنِيْنَ وَاَنْزَلَ جُنُوْدًا لَّمْ تَرَوْهَا وَعَذَّبَ الَّذِيْنَ كَفَرُوْا ؕ وَذٰلِكَ جَزَآءُ الْكٰفِرِيْنَ ﴿۲۶﴾

27. ಹೀಗೆ ಶಿಕ್ಷೆಕೊಟ್ಟ ಬಳಿಕ ಅಲ್ಲಾಹನು ತನಗಿಷ್ಟವಿದ್ದವರಿಗೆ ಪಶ್ಚಾತ್ತಾಪ ಪಡುವ ಅನುಗ್ರಹ ನೀಡುತ್ತಾನೆ.[12] (ಇದನ್ನೂ ನೀವು ಕಂಡು ಕೊಂಡಿರಿ.) ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

ثُمَّ يَتُوْبُ اللّٰهُ مِنْۢ بَعْدِ ذٰلِكَ عَلٰى مَنْ يَّشَآءُ ؕ وَاللّٰهُ غَفُوْرٌ رَّحِيْمٌ ﴿۲۷﴾

28. ಓ ಸತ್ಯವಿಶ್ವಾಸಿಗಳೇ, ಬಹುದೇವವಿಶ್ವಾಸಿಗಳು ಅಶುದ್ಧರಾಗಿರುತ್ತಾರೆ.* ಆದುದರಿಂದ ಈ ವರ್ಷದ ಬಳಿಕ ಅವರು ಮಸ್ಜಿದುಲ್ ಹರಾಮಿನ ಬಳಿ ಸುಳಿಯಬಾರದು.[13] ನಿಮಗೆ ದಾರಿದ್ರ್ಯದ ಭಯ ವಿದ್ದರೆ ಅಲ್ಲಾಹನಿಚ್ಛಿಸಿದರೆ ನಿಮ್ಮನ್ನು ತನ್ನ ಅನುಗ್ರಹದಿಂದ ಸಂಪನ್ನಗೊಳಿಸಲೂಬಹುದು. ಅಲ್ಲಾಹನು ಸರ್ವಜ್ಞನೂ ಯುಕ್ತಿ ಪೂರ್ಣನೂ ಆಗಿರುತ್ತಾನೆ.

يٰۤاَيُّهَا الَّذِيْنَ اٰمَنُوْۤا اِنَّمَا الْمُشْرِكُوْنَ نَجَسٌ فَلَا يَقْرَبُوا الْمَسْجِدَ الْحَرَامَ بَعْدَ عَامِهِمْ هٰذَا ۚ وَاِنْ خِفْتُمْ عَيْلَةً فَسَوْفَ يُغْنِيْكُمُ اللّٰهُ مِنْ فَضْلِهٖۤ اِنْ شَآءَ ؕ اِنَّ اللّٰهَ عَلِيْمٌ حَكِيْمٌ ﴿۲۸﴾

29. ಅಲ್ಲಾಹ್ ಹಾಗೂ ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸದ, ಅಲ್ಲಾಹ್ ಹಾಗೂ ಅವನ ರಸೂಲರು ನಿಷಿದ್ಧವೆಂದು ಸಾರಿರುವುದನ್ನು ನಿಷಿದ್ಧಮಾಡಿಕೊಳ್ಳದ ಮತ್ತು ಸತ್ಯಧರ್ಮವನ್ನು ತಮ್ಮ ಧರ್ಮವನ್ನಾಗಿ ಮಾಡಿಕೊಳ್ಳದ ಗ್ರಂಥದವರು ತಮ್ಮ ಕೈಯಿಂದಲೇ 'ಜಿಝಿಯ' (ರಕ್ಷಣಾಕರ) ಕೊಟ್ಟು, ಅಧೀನ ರಾಗುವವರೆಗೂ (ಅವರೊಡನೆ ಹೋರಾಡಿರಿ.)[14]

قَاتِلُوا الَّذِيْنَ لَا يُؤْمِنُوْنَ بِاللّٰهِ وَلَا بِالْيَوْمِ الْاٰخِرِ وَلَا يُحَرِّمُوْنَ مَا حَرَّمَ اللّٰهُ وَرَسُوْلُهٗ وَلَا يَدِيْنُوْنَ دِيْنَ الْحَقِّ مِنَ الَّذِيْنَ اُوْتُوا الْكِتٰبَ حَتّٰى يُعْطُوا الْجِزْيَةَ عَنْ يَّدٍ وَّهُمْ صٰغِرُوْنَ ﴿۲۹﴾

30. 'ಉಝೈರ್' ದೇವಪುತ್ರನೆಂದು ಯಹೂದಿಯರು ಹೇಳುತ್ತಾರೆ.

وَقَالَتِ الْيَهُوْدُ عُزَيْرُ ۨابْنُ اللّٰهِ وَقَالَتِ

12. ಹುನೈನ್ ಯುದ್ಧದಲ್ಲಿ ಸೋಲನುಭವಿಸಿದ ಸತ್ಯನಿಷೇಧಿಗಳೆಲ್ಲರೂ ಆ ಬಳಿಕ ಇಸ್ಲಾಮ್ ಸ್ವೀಕರಿಸಿದರು. ಅದರ ಕಡೆಗೇ ಈ ಮೂಲಕ ಸೂಚಿಸಲಾಗಿದೆ.

*ಅವರ ವಿಶ್ವಾಸ, ನಡತೆ, ಕರ್ಮಗಳು ಹಾಗೂ ಅಜ್ಞಾನಜನ್ಯ ಜೀವನ ಪದ್ಧತಿಯೂ ಅಶುದ್ಧವಾಗಿದೆ.

13. ಅರ್ಥಾತ್- ಮುಂದೆ ಅವರ ಪಾಲಿಗೆ ಹಜ್ಜ್ ಮತ್ತು ಅಲ್ಲಾಹನ ಭವನದ ಸಂದರ್ಶನ ಮಾತ್ರವಲ್ಲದೆ ಮಸ್ಜಿದುಲ್ ಹರಾಮ್‌ನ ಆವರಣದೊಳಗೆ ಪ್ರವೇಶವೂ ನಿಷಿದ್ಧವಾಗಿದೆ.

14. ಅರ್ಥಾತ್ ಅವರು ವಿಶ್ವಾಸ ತಾಳಬೇಕು ಮತ್ತು ಸತ್ಯ ಧರ್ಮದ ಅನುಯಾಯಿಗಳಾಗಿ ಮಾರ್ಪಡಬೇಕು ಎಂಬುದು ಹೋರಾಟದ ಉದ್ದೇಶವಲ್ಲ. ಅವರ ಆಡಳಿತ ಕೊನೆಗೊಳ್ಳಬೇಕು ಎಂಬುದು ಇದರ ಉದ್ದೇಶ. ಅವರು ಭೂಮಿಯಲ್ಲಿ ಆಜ್ಞಾಧಿಕಾರಿಗಳಾಗಿಯೂ ಆದೇಶ ಕೊಡುವವರಾಗಿಯೂ ಇರಕೂಡದು. ಭೂಮಿಯ ಸುವ್ಯವಸ್ಥೆ ಕಾಪಾಡುವ, ಆದೇಶಕೊಡುವ ಮತ್ತು ನಾಯಕತ್ವದ ಅಧಿಕಾರಗಳು ಸತ್ಯಧರ್ಮದ ಅನುಯಾಯಿಗಳ ಬಳಿ ಇರಬೇಕು. ಗ್ರಂಥದವರು ಅವರ ಕೈಕೆಳಗೆ ಅಧೀನರಾಗಿ ಇರಬೇಕು. ಅನಂತರ ಅವರ ಪೈಕಿ ಯಾರು ಬೇಕಾದರೂ ಸ್ವಇಚ್ಛೆಯಿಂದ ಮುಸ್ಲಿಮರಾಗಬಹುದು. ಅನ್ಯಥಾ ಅವರು ಜಿಝಿಯಾ ತೆರುತ್ತಿರಬೇಕು. ಇಸ್ಲಾಮೀ ಸರ್ಕಾರ ದಿಮ್ಮಿಗಳಿಗೆ ನೀಡುವ ಸುರಕ್ಷೆಗೆ ಪ್ರತಿಯಾಗಿ ಈ ಜಿಝಿಯಾ ತೆರಿಗೆಯನ್ನು ಪಡೆಯಲಾಗುತ್ತದೆ. ಅಲ್ಲದೆ ಅವರು ಅಧೀನರಾಗಿರಲು ಸಮ್ಮತಿಸುತ್ತಾರೆ ಎಂಬುದನ್ನು ಸೂಚಿಸಲಿಕ್ಕೂ ಇದೊಂದು ಸಂಕೇತವಾಗಿದೆ.

ಮಸೀಹ್ (ಈಸಾ) ದೇವ ಪುತ್ರನೆಂದು ಕ್ರೈಸ್ತರು ಹೇಳುತ್ತಾರೆ. ಅವರು ತಮಗಿಂತ ಹಿಂದೆ ಸತ್ಯನಿಷೇಧಿಗಳಾಗಿದ್ದವರನ್ನು ಅನುಕರಿಸುತ್ತ ತಮ್ಮ ಬಾಯಿಗಳಿಂದ ಹೊರಡಿಸುವ ಅಸಂಬದ್ಧ ಮಾತುಗಳಿವು. ದೇವನ ಪ್ರಹಾರವಿದೆ ಅವರ ಮೇಲೆ. ಅವರು ಎಲ್ಲಿಂದ ಮೋಸಹೋಗುತ್ತಿರುವರೋ!

النَّصٰرَى الْمَسِيْحُ ابْنُ اللّٰهِ ۭ ذٰلِكَ قَوْلُهُمْ بِاَفْوَاهِهِمْ ۚ يُضَاهِـُٔوْنَ قَوْلَ الَّذِيْنَ كَفَرُوْا مِنْ قَبْلُ ۭ قٰتَلَهُمُ اللّٰهُ ۚ اَنّٰى يُؤْفَكُوْنَ ۝

31. ಅವರು ಅಲ್ಲಾಹನನ್ನು ಹೊರತು ತಮ್ಮ ವಿದ್ವಾಂಸರನ್ನೂ ಸಂತರನ್ನೂ ತಮ್ಮ ಪ್ರಭುಗಳನ್ನಾಗಿ ಮಾಡಿಕೊಂಡಿರುತ್ತಾರೆ[15] ಇದೇ ರೀತಿಯಲ್ಲಿ ಮರ್ಯಮರ ಪುತ್ರ ಮಸೀಹರನ್ನೂ (ಪ್ರಭುವಾಗಿ ಮಾಡಿಕೊಂಡಿದ್ದಾರೆ.) ವಸ್ತುತಃ ಅವರಿಗೆ ಏಕದೇವನನ್ನು ಹೊರತು ಇನ್ನಾರ ದಾಸ್ಯ ಆರಾಧನೆಯನ್ನೂ ಮಾಡಲು ಅಪ್ಪಣೆ ಕೊಡಲಾಗಿಲ್ಲ. ಆತನ ಹೊರತು ಅನ್ಯ-ಆರಾಧ್ಯರಾರೂ ಇಲ್ಲ. ಅವರಾಡುತ್ತಿರುವ ದೇವಸಹಭಾಗಿತ್ವ ಪರ ಮಾತುಗಳಿಂದ ಅವನು ಅತ್ಯಂತ ಪರಿಶುದ್ಧನು.

اِتَّخَذُوْٓا اَحْبَارَهُمْ وَرُهْبَانَهُمْ اَرْبَابًا مِّنْ دُوْنِ اللّٰهِ وَالْمَسِيْحَ ابْنَ مَرْيَمَ ۚ وَمَآ اُمِرُوْٓا اِلَّا لِيَعْبُدُوْٓا اِلٰهًا وَّاحِدًا ۚ لَآ اِلٰهَ اِلَّا هُوَ ۭ سُبْحٰنَهٗ عَمَّا يُشْرِكُوْنَ ۝

32. ಅವರು ಅಲ್ಲಾಹನ ಜ್ಯೋತಿಯನ್ನು ತಮ್ಮ ಬಾಯಿಗಳಿಂದ ಊದಿ ನಂದಿಸಿಬಿಡಲು ಇಚ್ಛಿಸುತ್ತಾರೆ. ಆದರೆ ಅಲ್ಲಾಹ್ ತನ್ನ ಜ್ಯೋತಿಯನ್ನು ಪರಿಪೂರ್ಣಗೊಳಿಸದೆ ಬಿಡುವವನಲ್ಲ. ಇದು ಸತ್ಯನಿಷೇಧಿಗಳಿಗೆ ಎಷ್ಟೇ ಅಪ್ರಿಯವಾಗಲಿ.

يُرِيْدُوْنَ اَنْ يُّطْفِــُٔـوْا نُوْرَ اللّٰهِ بِاَفْوَاهِهِمْ وَيَاْبَى اللّٰهُ اِلَّآ اَنْ يُّتِمَّ نُوْرَهٗ وَلَوْ كَرِهَ الْكٰفِرُوْنَ ۝

33. ತನ್ನ ರಸೂಲರನ್ನು ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ಕಳುಹಿಸಿದಾತನು ಅಲ್ಲಾಹನೇ. (ಇದು) ಅದನ್ನು ಸಕಲ ಧರ್ಮಗಳ ಮೇಲೆ ಉತ್ಥಾನಗೊಳಿಸಲಿಕ್ಕಾಗಿ.[16] 'ಬಹುದೇವವಿಶ್ವಾಸಿ'ಗಳಿಗೆ ಇದು ಎಷ್ಟೇ ಅಪ್ರಿಯವಾಗಿರಲಿ.

هُوَ الَّذِيْٓ اَرْسَلَ رَسُوْلَهٗ بِالْهُدٰى وَدِيْنِ الْحَقِّ لِيُظْهِرَهٗ عَلَي الدِّيْنِ كُلِّهٖ ۙ وَلَوْ كَرِهَ الْمُشْرِكُوْنَ ۝

15. ಪ್ರವಾದಿವಚನದ ಮೂಲಕ ತಿಳಿದುಬರುವುದೇನೆಂದರೆ ಮೊದಲು ಕ್ರೈಸ್ತರಾಗಿದ್ದ ಅದಿ ಬಿನ್ ಹಾತಿಮ್ ಪ್ರವಾದಿವರ್ಯರ(ಸ) ಬಳಿ ಬಂದು ಇಸ್ಲಾಮ್ ಸ್ವೀಕರಿಸಿದ ಬಳಿಕ, "ಈ ಸೂಕ್ತದಲ್ಲಿ ನಮ್ಮ ಮೇಲೆ ವಿದ್ವಾಂಸರನ್ನು ಮತ್ತು ಸಂತರನ್ನು ದೇವರುಗಳನ್ನಾಗಿ ಮಾಡಿರುವ ಆರೋಪ ಹೊರಿಸಲಾಗಿದೆ. ಇದರ ಸತ್ಯಾಂಶವೇನು?" ಎಂದು ಕೇಳಿದರು. ಪ್ರವಾದಿವರ್ಯರು(ಸ) ಉತ್ತರಿಸುತ್ತಾ ಹೇಳಿದರು, "ಅವರು ನಿಷೇಧಿಸುವುದನ್ನು ನೀವು ನಿಮ್ಮ ಪಾಲಿಗೆ ನಿಷಿದ್ಧಗೊಳಿಸಿಕೊಳ್ಳುತ್ತೀರಿ. ಅವರು ಧರ್ಮಸಮ್ಮತಗೊಳಿಸುವುದನ್ನೂ ನೀವು ನಿಮ್ಮ ಪಾಲಿಗೆ ಧರ್ಮಸಮ್ಮತಗೊಳಿಸಿಕೊಳ್ಳುತ್ತೀರಿ. ಇದು ನಿಜವಲ್ಲವೇ?" "ಹೌದು ಹಾಗೆ ನಾವು ಮಾಡುತ್ತೇವೆ" ಎಂದು ಅವರು ಹೇಳಿದರು. ಅದಕ್ಕೆ ಪ್ರವಾದಿವರ್ಯರು(ಸ), "ಅವರನ್ನು ದೇವರಾಗಿ ಮಾಡಿಕೊಳ್ಳುವುದರ ಅರ್ಥ ಇದುವೇ ಆಗಿದೆ" ಎಂದು ಹೇಳಿದರು. ಗ್ರಂಥದ ಆಧಾರವಿಲ್ಲದೆ ಯಾರಾದರೂ ಮನುಷ್ಯರ ಜೀವನಕ್ಕೆ ಸಿಂಧು ಅಸಿಂಧುಗಳ ಮೇರೆಯನ್ನು ಗೊತ್ತು ಪಡಿಸುವುದು ವಾಸ್ತವದಲ್ಲಿ ತನ್ನನ್ನು ದೇವತ್ವದ ಸ್ಥಾನದಲ್ಲಿ ಕುಳ್ಳಿರಿಸುವುದಕ್ಕೆ ಸಮಾನವಾಗಿದೆ. ಅವರ ವಿಧಿನಿರ್ಣಯದ ಅಧಿಕಾರವನ್ನು ಸಮ್ಮತಿಸುವುದು ವಾಸ್ತವದಲ್ಲಿ ಅವರನ್ನೇ ದೇವರಾಗಿ ಮಾಡಿಕೊಂಡಂತೆ ಎಂದು ಇದರಿಂದ ವ್ಯಕ್ತವಾಗುತ್ತದೆ.

16. 'ಅದ್ದೀನ್' ಎಂಬ ಪದವನ್ನು ನಾವು ಧರ್ಮ ಎಂದು ಅನುವಾದಿಸಿದ್ದೇವೆ. ಅರಬಿ ಭಾಷೆಯಲ್ಲಿ 'ದೀನ್' ಎಂಬ ಶಬ್ದ ಜೀವನ ವ್ಯವಸ್ಥೆ ಅಥವಾ ಬದುಕಿನ ಪದ್ಧತಿಗೆ ಉಪಯೋಗಿಸಲ್ಪಡುತ್ತದೆ. ಅದರ ನಿರ್ಮಾತೃವನ್ನು ಅನುಸರಣೆಯೋಗ್ಯವೆಂದು ಬಗೆದು ಅನುಸರಿಸಬೇಕಾಗುತ್ತದೆ. ಒಟ್ಟಿನಲ್ಲಿ ಪ್ರವಾದಿಗಳ ಆಗಮನೋದ್ದೇಶ ಅವರು ದೇವನ ವತಿಯಿಂದ ತಂದಿರುವ ಸನ್ಮಾರ್ಗ ಮತ್ತು ಸದ್ಧರ್ಮವನ್ನು 'ದೀನ್'ನ

34. ಓ ಸತ್ಯವಿಶ್ವಾಸಿಗಳೇ, ಗ್ರಂಥದವರ ಅಧಿಕಾಂಶ ವಿದ್ವಾಂಸರೂ ಸಂತರೂ ಜನರ ಸಂಪತ್ತನ್ನು ಅನುಚಿತ ವಿಧಾನಗಳಿಂದ ಕಬಳಿಸುತ್ತಾರೆ ಮತ್ತು ಅವರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ. ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವ ಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ.

يَا أَيُّهَا الَّذِينَ آمَنُوا إِنَّ كَثِيرًا مِنَ الْأَحْبَارِ وَالرُّهْبَانِ لَيَأْكُلُونَ أَمْوَالَ النَّاسِ بِالْبَاطِلِ وَيَصُدُّونَ عَنْ سَبِيلِ اللَّهِ ۗ وَالَّذِينَ يَكْنِزُونَ الذَّهَبَ وَالْفِضَّةَ وَلَا يُنْفِقُونَهَا فِي سَبِيلِ اللَّهِ فَبَشِّرْهُمْ بِعَذَابٍ أَلِيمٍ ﴿٣٤﴾

35. ಈ ಚಿನ್ನ-ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವರ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆ ಹಾಕಲಾಗುವುದು. "ನೀವು ನಿಮಗಾಗಿ ಸಂಗ್ರಹಿಸಿಟ್ಟಿದ್ದ ಸಂಪತ್ತು ಇದುವೇ, ಈಗ ನೀವು ಕೂಡಿಹಾಕಿದ್ದ ಸಂಪತ್ತನ್ನು ಸವಿಯಿರಿ" (ಎನ್ನಲಾಗುವುದು.)

يَوْمَ يُحْمَىٰ عَلَيْهَا فِي نَارِ جَهَنَّمَ فَتُكْوَىٰ بِهَا جِبَاهُهُمْ وَجُنُوبُهُمْ وَظُهُورُهُمْ ۖ هَٰذَا مَا كَنَزْتُمْ لِأَنْفُسِكُمْ فَذُوقُوا مَا كُنْتُمْ تَكْنِزُونَ ﴿٣٥﴾

36. ನಿಶ್ಚಯವಾಗಿಯೂ ಅಲ್ಲಾಹನು ಭೂಮಿ-ಆಕಾಶಗಳನ್ನು ಸೃಷ್ಟಿಸಿದಂದಿನಿಂದಲೂ ಅಲ್ಲಾಹನ ಲಿಖಿತದಲ್ಲಿ ತಿಂಗಳುಗಳ ಸಂಖ್ಯೆ ಹನ್ನೆರಡೇ ಇದೆ. ಅವುಗಳ ಪೈಕಿ ನಾಲ್ಕು ತಿಂಗಳುಗಳು ನಿಷಿದ್ಧವಾಗಿವೆ.[17] ಇದುವೇ ಸರಿಯಾದ ನಿಯಮ. ಆದುದರಿಂದ ಈ ನಾಲ್ಕು ತಿಂಗಳುಗಳಲ್ಲಿ ನಿಮ್ಮ ಮೇಲೆ ಅಕ್ರಮವೆಸಗಬೇಡಿರಿ ಮತ್ತು ಬಹುದೇವವಿಶ್ವಾಸಿಗಳೆಲ್ಲರೂ ಒಟ್ಟಾಗಿ ನಿಮ್ಮೊಡನೆ ಹೋರಾಟ ನಡೆಸುವಂತೆ ನೀವೂ ಒಟ್ಟಾಗಿ ಅವರೊಡನೆ ಹೋರಾಟ ನಡೆಸಿರಿ.[18] ಅಲ್ಲಾಹನು ಧರ್ಮನಿಷ್ಠರೊಂದಿಗೇ ಇದ್ದಾನೆಂಬುದನ್ನು ಅರಿಯಿರಿ.

إِنَّ عِدَّةَ الشُّهُورِ عِنْدَ اللَّهِ اثْنَا عَشَرَ شَهْرًا فِي كِتَابِ اللَّهِ يَوْمَ خَلَقَ السَّمَاوَاتِ وَالْأَرْضَ مِنْهَا أَرْبَعَةٌ حُرُمٌ ۚ ذَٰلِكَ الدِّينُ الْقَيِّمُ ۚ فَلَا تَظْلِمُوا فِيهِنَّ أَنْفُسَكُمْ ۚ وَقَاتِلُوا الْمُشْرِكِينَ كَافَّةً كَمَا يُقَاتِلُونَكُمْ كَافَّةً ۚ وَاعْلَمُوا أَنَّ اللَّهَ مَعَ الْمُتَّقِينَ ﴿٣٦﴾

37. 'ನಸೀ' ಎಂಬುದು ಸತ್ಯನಿಷೇಧದಲ್ಲಿ ಇನ್ನೊಂದು ಹೆಚ್ಚಳ.

إِنَّمَا النَّسِيءُ زِيَادَةٌ فِي الْكُفْرِ ۖ يُضَلُّ بِهِ

ಸ್ಥಾನದಲ್ಲಿರುವ ಇತರೆಲ್ಲ ವ್ಯವಸ್ಥೆ ಮತ್ತು ಪದ್ಧತಿಗಳ ಮೇಲೆ ಪ್ರಬಲಗೊಳಿಸುವುದಾಗಿದೆ ಎಂದು ಈ ಸೂಕ್ತದಲ್ಲಿ ತಿಳಿಸಲಾಗಿದೆ. ತಾವು ತಂದಿರುವ ಜೀವನ ವ್ಯವಸ್ಥೆಯನ್ನು ಇತರ ವ್ಯವಸ್ಥೆಯ ಆಶ್ರಯದಲ್ಲಿ ಅಧೀನವಾಗಿರಿಸಲು ಮತ್ತು ಆ ವ್ಯವಸ್ಥೆಯು ನೀಡಿರುವ ರಿಯಾಯಿತಿ ಮತ್ತು ಅವಕಾಶಗಳ ಮಟ್ಟಕ್ಕೆ ಅದನ್ನು ಹೊಂದಿಕೊಳ್ಳುವಂತೆ ಮಾಡಲಿಕ್ಕಾಗಿ ಯಾವ ಪ್ರವಾದಿಯೂ ಬಂದಿರಲಿಲ್ಲ. ಅವರು ಭೂಮಿ-ಆಕಾಶಗಳ ಅಧಿಪತಿಯ ಪ್ರತಿನಿಧಿಗಳಾಗಿ ಬರುತ್ತಾರೆ ಮತ್ತು ತಮ್ಮೊಡೆಯನ ಸತ್ಯವ್ಯವಸ್ಥೆ ಪ್ರಬಲವಾಗುವುದನ್ನು ಅವರು ಕಾಣಬಯಸುತ್ತಾರೆ. ಲೋಕದಲ್ಲಿ ಇತರ ಜೀವನ ವ್ಯವಸ್ಥೆಯಿದ್ದರೂ ಅದು ದೈವಿಕ ವ್ಯವಸ್ಥೆಯು ನೀಡಿರುವ ಅವಕಾಶಗಳ ಮಿತಿಗಳಲ್ಲಿರಬೇಕು. ಜಿಝಿಯಾ ಪಾವತಿಸಿದಾಗ ದಿಮ್ಮಿಗಳಿಗೆ ತಮ್ಮ ಜೀವನ ಪದ್ಧತಿಯನ್ನು ಪಾಲಿಸಲು ಅವಕಾಶವಿರುವಂತಿರಬೇಕು. ಅದರ ಸ್ಥಿತಿ, ಸತ್ಯನಿಷೇಧಿಗಳು ಪ್ರಬಲರಾಗಿ ಸದ್ಧರ್ಮದ ವಕ್ತಾರರು ದಿಮ್ಮಿಗಳಾಗಿ ಮಾರ್ಪಡುವಂತಾಗಬಾರದು.

17. ನಿಷಿದ್ಧ ತಿಂಗಳುಗಳೆಂದರೆ ಹಜ್ಜ್ ನಿರ್ವಹಿಸಲಿಕ್ಕಾಗಿ ಇರುವ ದುಲ್‌ಕಅದ್, ದುಲ್‌ಹಜ್ಜ್ ಮತ್ತು ಮುಹರ್ರಮ್ ಹಾಗೂ ಉಮ್ರಾಕ್ಕಾಗಿ ಇರುವ ರಜಬ್ ತಿಂಗಳು.

18. ಅರ್ಥಾತ್- ಈ ತಿಂಗಳುಗಳಲ್ಲೂ ಬಹುದೇವಾರಾಧಕರು ಹೋರಾಟವನ್ನು ನಿಲ್ಲಿಸದಿದ್ದರೆ, ಅವರು ಸಂಘಟಿತರಾಗಿ ನಿಮ್ಮ ವಿರುದ್ಧ ಹೋರಾಡುವಂತೆ, ನೀವೂ ಸಂಘಟಿತರಾಗಿ ಅವರ ವಿರುದ್ಧ ಹೋರಾಡಿರಿ. ಅಲ್‌ಬಕರಃ ಅಧ್ಯಾಯದ 194ನೆಯ ಸೂಕ್ತ, ಈ ಸೂಕ್ತದ ವಿವರಣೆಯಾಗಿದೆ.

ಇದರಿಂದ ಸತ್ಯನಿಷೇಧಿಗಳು ಪಥಭ್ರಷ್ಟತೆಯಲ್ಲಿ ಸಿಲುಕಿಸಲ್ಪಡುತ್ತಾರೆ. ಅಲ್ಲಾಹನು ನಿಷಿದ್ಧಗೊಳಿಸಿದ ತಿಂಗಳುಗಳ ಸಂಖ್ಯೆ ಭರ್ತಿಯಾಗುವಂತೆ ಹಾಗೂ ಅಲ್ಲಾಹನು 'ನಿಷಿದ್ಧ'ಗೊಳಿಸಿದುದನ್ನು 'ಧರ್ಮಸಮ್ಮತ'ವನ್ನಾಗಿ ಮಾಡಿಕೊಳ್ಳಲಿಕ್ಕಾಗಿ ಒಂದು ವರ್ಷ, ಒಂದು ತಿಂಗಳನ್ನು ಧರ್ಮಬದ್ಧಗೊಳಿಸಿಕೊಳ್ಳುತ್ತಾರೆ ಮತ್ತು ಇನ್ನೊಂದು ವರ್ಷ ಅದನ್ನು 'ನಿಷಿದ್ಧ'ಗೊಳಿಸಿಕೊಳ್ಳುತ್ತಾರೆ.[19] ಅವರ ದುಷ್ಕರ್ಮಗಳನ್ನು ಅವರಿಗೆ ಮನೋಹರಗೊಳಿಸಲಾಗಿದೆ. ಅಲ್ಲಾಹನು ಸತ್ಯನಿಷೇಧಿಗಳಿಗೆ ಮಾರ್ಗದರ್ಶನವನ್ನೀಯುವುದಿಲ್ಲ.

الَّذِينَ كَفَرُوا يُحِلُّونَهُ عَامًا وَيُحَرِّمُونَهُ عَامًا لِّيُوَاطِئُوا عِدَّةَ مَا حَرَّمَ اللَّهُ فَيُحِلُّوا مَا حَرَّمَ اللَّهُ ۚ زُيِّنَ لَهُمْ سُوءُ أَعْمَالِهِمْ ۗ وَاللَّهُ لَا يَهْدِي الْقَوْمَ الْكَافِرِينَ ﴿٣٧﴾ ع

38. ಓ ಸತ್ಯವಿಶ್ವಾಸಿಗಳೇ,[20] ಅಲ್ಲಾಹನ ಮಾರ್ಗದಲ್ಲಿ ಹೊರಡಲು ನಿಮ್ಮೊಡನೆ ಹೇಳಿದಾಗ ನೀವು ನೆಲಕ್ಕೆ ಅಂಟಿಕೊಂಡದ್ದೇಕೆ? ನೀವು ಪರಲೋಕಕ್ಕೆ ಪ್ರತಿಯಾಗಿ ಐಹಿಕ ಜೀವನವನ್ನು ಮೆಚ್ಚಿಕೊಂಡಿರಾ? ಹಾಗಿದ್ದರೆ ನಿಮಗೆ ತಿಳಿದಿರಲಿ! ಇಹಜೀವನದ ಈ ಸಾಮಾನು ಸಲಕರಣೆಗಳೆಲ್ಲ ಪರಲೋಕದಲ್ಲಿ ಅತ್ಯಲ್ಪವಾಗಿರುವುವು.

يَا أَيُّهَا الَّذِينَ آمَنُوا مَا لَكُمْ إِذَا قِيلَ لَكُمُ انفِرُوا فِي سَبِيلِ اللَّهِ اثَّاقَلْتُمْ إِلَى الْأَرْضِ ۚ أَرَضِيتُم بِالْحَيَاةِ الدُّنْيَا مِنَ الْآخِرَةِ ۚ فَمَا مَتَاعُ الْحَيَاةِ الدُّنْيَا فِي الْآخِرَةِ إِلَّا قَلِيلٌ ﴿٣٨﴾

39. ನೀವು ಹೊರಡದಿದ್ದರೆ ಅಲ್ಲಾಹ್ ನಿಮಗೆ ವೇದನಾತ್ಮಕ ಶಿಕ್ಷೆ ಕೊಡುವನು ಮತ್ತು ನಿಮ್ಮ ಸ್ಥಾನದಲ್ಲಿ ಬೇರಾವುದಾದರೂ ಜನಾಂಗವನ್ನು ಎಬ್ಬಿಸುವನು. ನೀವು ಅವನಿಗೇನೂ ನಷ್ಟವನ್ನುಂಟು ಮಾಡಲಾರಿರಿ. ಅಲ್ಲಾಹನು ಪ್ರತಿಯೊಂದು ವಿಷಯದ ಸಾಮರ್ಥ್ಯವಿರುವವನು.

إِلَّا تَنفِرُوا يُعَذِّبْكُمْ عَذَابًا أَلِيمًا وَيَسْتَبْدِلْ قَوْمًا غَيْرَكُمْ وَلَا تَضُرُّوهُ شَيْئًا ۗ وَاللَّهُ عَلَىٰ كُلِّ شَيْءٍ قَدِيرٌ ﴿٣٩﴾

40. ನೀವು ಪ್ರವಾದಿಯವರಿಗೆ ಸಹಾಯ ಮಾಡದಿದ್ದರೆ ಚಿಂತಿಲ್ಲ. ಸತ್ಯನಿಷೇಧಿಗಳು ಅವರನ್ನು ಹೊರ ಹಾಕಿದಾಗ, ಅವರು ಇಬ್ಬರ ಪೈಕಿ ಎರಡನೆಯವರಾಗಿದ್ದಾಗ, ಅವರಿಬ್ಬರೂ ಗುಹೆಯೊಳಗಿದ್ದಾಗ, ಅವರು ತಮ್ಮ ಸಂಗಾತಿಯೊಡನೆ, "ಖೇದಗೊಳ್ಳಬೇಡಿರಿ. ಅಲ್ಲಾಹ್

إِلَّا تَنصُرُوهُ فَقَدْ نَصَرَهُ اللَّهُ إِذْ أَخْرَجَهُ الَّذِينَ كَفَرُوا ثَانِيَ اثْنَيْنِ إِذْ هُمَا فِي الْغَارِ إِذْ يَقُولُ لِصَاحِبِهِ لَا تَحْزَنْ إِنَّ اللَّهَ مَعَنَا ۖ

19. ಅರಬರಲ್ಲಿ ಎರಡು ವಿಧದ 'ನಸೀ' ಪ್ರಚಲಿತವಿತ್ತು. ಮೊದಲನೆಯದಾಗಿ ಯುದ್ಧ, ದರೋಡೆ, ಕೊಲೆಯ ಪ್ರತೀಕಾರ ಇತ್ಯಾದಿಗಳಿಗಾಗಿ ಅವರು ಯಾವುದಾದರೂ ನಿಷಿದ್ಧ ತಿಂಗಳನ್ನು ಧರ್ಮಸಮ್ಮತಗೊಳಿಸಿಕೊಳ್ಳುತ್ತಿದ್ದರು. ಅದಕ್ಕೆ ಪ್ರತಿಯಾಗಿ ಯಾವುದಾದರೂ ಧರ್ಮಸಮ್ಮತ ತಿಂಗಳನ್ನು ನಿಷಿದ್ಧಗೊಳಿಸಿ ತಿಂಗಳುಗಳ ಸಂಖ್ಯೆಯನ್ನು ಪೂರ್ತಿಗೊಳಿಸಿಕೊಳ್ಳುತ್ತಿದ್ದರು. ಎರಡನೆಯದಾಗಿ ಚಂದ್ರಮಾನ ವರ್ಷವನ್ನು ಸೌರಮಾನ ವರ್ಷದಲ್ಲಿ ಬದಲಾಯಿಸಲಿಕ್ಕಾಗಿ ಒಂದು ತಿಂಗಳನ್ನು ಅದರಲ್ಲಿ ಸೇರಿಸಿ ಬಿಡುತ್ತಿದ್ದರು. ಹಜ್ಜ್ ಸದಾ ಒಂದೇ ತಿಂಗಳಲ್ಲಿ ಬರಲು ಮತ್ತು ಚಂದ್ರಮಾನ ವರ್ಷದಂತೆ ವಿಭಿನ್ನ ಋತುಗಳಲ್ಲಿ ಹಜ್ಜ್ ಎದುರಾಗುವುದರಿಂದುಂಟಾಗುವ ತಾಪತ್ರಯಗಳನ್ನು ತಪ್ಪಿಸಲು ಅದರಿಂದ ಸಾಧ್ಯವಾಗುತ್ತಿತ್ತು. ಹೀಗೆ 33 ವರ್ಷಗಳ ಕಾಲ ಹಜ್ಜ್ ನಿಜವಾದ ಅವಧಿಗೆ ಪ್ರತಿಯಾಗಿ ಬೇರೆ ದಿನಾಂಕಗಳಲ್ಲೇ ನಡೆಯುತ್ತಾ ಬಂದಿತ್ತು. ಮೂವತ್ತನಾಲ್ಕನೆಯ ವರ್ಷದಲ್ಲಿ ಮಾತ್ರ ಒಮ್ಮೆ ಹಜ್ಜ್, ದುಲ್‌ಹಜ್ಜ್ 9 ಮತ್ತು 10ನೆಯ ತಾರೀಕಿನಂದೇ ನಡೆಯುತ್ತಿತ್ತು. ಪ್ರವಾದಿವರ್ಯರು(ಸ) ವಿದಾಯ ಹಜ್ಜ್ (ಹಜ್ಜತುಲ್ ವಿದಾಅ್) ನಿರ್ವಹಿಸಿದ ಸಂದರ್ಭದಲ್ಲಿ ಹಜ್ಜ್ ತನ್ನ ನಿಜವಾದ ದಿನಾಂಕಗಳಲ್ಲಿ ಬಂದಿತ್ತು. ಅಂದಿನಿಂದಲೇ 'ನಸೀ'ಯ ಪದ್ಧತಿಯನ್ನು ಕೊನೆಗೊಳಿಸಲಾಯಿತು.

20. ಈ ಸೂಕ್ತಗಳು 9ನೆಯ ರುಕೂಅ್‌ನ ಕೊನೆಯ ತನಕವೂ ತಬೂಕ್ ಯುದ್ಧಕ್ಕೆ ಸಿದ್ಧತೆ ನಡೆಸಲಾಗುತ್ತಿದ್ದ ಕಾಲದಲ್ಲಿ ಅವತೀರ್ಣಗೊಂಡಿತ್ತು.

ನಮ್ಮ ಜತೆಯಲ್ಲಿದ್ದಾನೆ"[21] ಎಂದು ಹೇಳುತ್ತಿದ್ದಾಗ ಅಲ್ಲಾಹ್ ಅವರಿಗೆ ಸಹಾಯ ಮಾಡಿರುತ್ತಾನೆ. ಆಗ ಅಲ್ಲಾಹ್ ಅವರ ಮೇಲೆ ತನ್ನ ಕಡೆಯಿಂದ ಮನಶ್ಶಾಂತಿಯನ್ನಿಳಿಸಿದನು ಮತ್ತು ನಿಮಗೆ ಕಾಣಿಸದ ಪಡೆಗಳ ಮೂಲಕ ಅವರಿಗೆ ನೆರವು ನೀಡಿದನು ಮತ್ತು ಸತ್ಯನಿಷೇಧಿಗಳ ವಚನವನ್ನು ಸೋಲಿಸಿದನು. ಅಲ್ಲಾಹನ ವಚನವಂತು ಉನ್ನತವಾಗಿಯೇ ಇದೆ. ಅಲ್ಲಾಹ್ ಮಹಾ ಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆ.

فَأَنزَلَ اللَّهُ سَكِينَتَهُ عَلَيْهِ وَأَيَّدَهُ بِجُنُودٍ لَّمْ تَرَوْهَا وَجَعَلَ كَلِمَةَ الَّذِينَ كَفَرُوا السُّفْلَىٰ ۗ وَكَلِمَةُ اللَّهِ هِيَ الْعُلْيَا ۗ وَاللَّهُ عَزِيزٌ حَكِيمٌ ﴿٤٠﴾

41. ಹಗುರವಾದ ಸ್ಥಿತಿಯಲ್ಲಾಗಲಿ, ಭಾರವಾದ ಸ್ಥಿತಿಯಲ್ಲಾಗಲಿ ಹೊರಡಿರಿ. ನಿಮ್ಮ ಧನಗಳಿಂದಲೂ ಜೀವಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸಿರಿ. ನೀವು ಅರಿತಿದ್ದರೆ ಇದು ನಿಮಗೆ ಉತ್ತಮ.

انفِرُوا خِفَافًا وَثِقَالًا وَجَاهِدُوا بِأَمْوَالِكُمْ وَأَنفُسِكُمْ فِي سَبِيلِ اللَّهِ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ﴿٤١﴾

42. ಓ ಪೈಗಂಬರರೇ, ಲಾಭವು ಸುಲಭವಾಗಿ ಸಿಗುತ್ತಿದ್ದರೆ ಮತ್ತು ಪ್ರಯಾಣವು ಸುಗಮವಾಗಿರುತ್ತಿದ್ದರೆ ಅವರು ನಿಶ್ಚಯವಾಗಿಯೂ ನಿಮ್ಮನ್ನು ಹಿಂಬಾಲಿಸಲು ಸಿದ್ಧರಾಗುತ್ತಿದ್ದರು. ಆದರೆ ಈ ದಾರಿ ಅವರಿಗೆ ಬಹಳ ಕಠಿಣಕರವಾಗಿ ಬಿಟ್ಟಿತು.[22] ಈಗ ಅವರು "ನಮ್ಮಿಂದ ಹೊರಡಲು ಸಾಧ್ಯವಾಗುತ್ತಿದ್ದರೆ ಖಂಡಿತವಾಗಿಯೂ ನಿಮ್ಮೊಂದಿಗೆ ಬರುತ್ತಿದ್ದೆವು" ಎಂದು ಅಲ್ಲಾಹನಾಣೆ ಹಾಕುತ್ತ ಹೇಳುವರು. ಅವರು ತಮ್ಮನ್ನು ತಾವೇ ವಿನಾಶಕ್ಕೊಡ್ಡುತ್ತಿರುವರು. ಅವರು ಸುಳ್ಳುಗಾರರೆಂದು ಅಲ್ಲಾಹನು ಚೆನ್ನಾಗಿ ಬಲ್ಲನು.

لَوْ كَانَ عَرَضًا قَرِيبًا وَسَفَرًا قَاصِدًا لَّاتَّبَعُوكَ وَلَٰكِن بَعُدَتْ عَلَيْهِمُ الشُّقَّةُ ۚ وَسَيَحْلِفُونَ بِاللَّهِ لَوِ اسْتَطَعْنَا لَخَرَجْنَا مَعَكُمْ يُهْلِكُونَ أَنفُسَهُمْ وَاللَّهُ يَعْلَمُ إِنَّهُمْ لَكَاذِبُونَ ﴿٤٢﴾

43. ಓ ಪೈಗಂಬರರೇ, ಅಲ್ಲಾಹನು ನಿಮ್ಮನ್ನು ಕ್ಷಮಿಸಲಿ. ನೀವು ಅವರಿಗೇಕೆ ವಿನಾಯಿತಿ ನೀಡಿದಿರಿ? (ನೀವು ವಿನಾಯಿತಿ ನೀಡಬಾರದಿತ್ತು. ಆಗ) ಯಾರು ಸತ್ಯಸಂಧರೆಂಬುದು ನಿಮಗೆ ಪ್ರಕಟವಾಗುತ್ತಿತ್ತು. ಸುಳ್ಳುಗಾರರನ್ನು ನೀವು ತಿಳಿದುಕೊಳ್ಳುತ್ತಿದ್ದಿರಿ.

عَفَا اللَّهُ عَنكَ لِمَ أَذِنتَ لَهُمْ حَتَّىٰ يَتَبَيَّنَ لَكَ الَّذِينَ صَدَقُوا وَتَعْلَمَ الْكَاذِبِينَ ﴿٤٣﴾

21. ಮಕ್ಕಾದ ಸತ್ಯನಿಷೇಧಿಗಳು ಪ್ರವಾದಿವರ್ಯರನ್ನು(ಸ) ವಧಿಸುವ ತೀರ್ಮಾನ ಮಾಡಿ ಬಿಟ್ಟಿದ್ದರು. ಅವರನ್ನು ಕೊಲ್ಲಲು ನಿಗದಿಪಡಿಸಲಾದ ರಾತ್ರಿಯಲ್ಲೇ ಪ್ರವಾದಿವರ್ಯರು(ಸ) ಮಕ್ಕಾದಿಂದ ಹೊರಟು ಮೂರು ದಿನ ಸೌರ್ ಗುಹೆಯಲ್ಲಿ ಅಡಗಿ ಕುಳಿತರು. ಅನಂತರ ಅವರು ಮದೀನಾಕ್ಕೆ ವಲಸೆ ಕೈಗೊಂಡರು. ಆ ವೇಳೆ ಹ. ಅಬೂಬಕರ್(ರ) ಮಾತ್ರ ಗುಹೆಯಲ್ಲಿ ಅವರ ಜತೆ ಗಿದ್ದರು. ಅದೇ ಸಂದರ್ಭವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

22. ಅರ್ಥಾತ್- ರೋಮ್‌ನಂತಹ ಶಕ್ತಿಯನ್ನು ಎದುರಿಸಬೇಕಾಗಿದೆ. ತೀವ್ರ ಬೇಸಿಗೆಯ ಕಾಲ ಬೇರೆ. ದೇಶದಲ್ಲಿ ಬರಗಾಲವಿದೆ. ಬಹಳ ಆಸೆ ಹೊತ್ತು ಕುಳಿತಿರುವ ಹೊಸ ವರ್ಷದ ಬೆಳೆಗಳು ಬಲಿತು ನಿಂತಿವೆ ಮತ್ತು ಬೆಳೆಕೊಯ್ಯುವ ದಿನಗಳು ಸಮೀಪವಿದೆ. ಇದನ್ನೆಲ್ಲಾ ಕಂಡು ಅವರಿಗೆ 'ತಬೂಕ್'ನ ಯಾತ್ರೆ ಅತ್ಯಂತ ತ್ರಾಸದಾಯಕವೆಂದು ಭಾಸವಾಯಿತು.

44. ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿಡುವವರು ತಮಗೆ ತನು-ಧನಗಳೊಂದಿಗೆ ಹೋರಾಟ ನಡೆಸುವುದರಿಂದ ವಿನಾಯಿತಿ ನೀಡಬೇಕೆಂದು ಎಂದೆಂದಿಗೂ ವಿನಂತಿಸಲಾರರು. ಅಲ್ಲಾಹನು ಧರ್ಮನಿಷ್ಠರನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ.

لَا يَسْتَأْذِنُكَ الَّذِينَ يُؤْمِنُونَ بِاللَّهِ وَالْيَوْمِ الْآخِرِ أَنْ يُجَاهِدُوا بِأَمْوَالِهِمْ وَأَنْفُسِهِمْ ۗ وَاللَّهُ عَلِيمٌ بِالْمُتَّقِينَ ﴿٤٤﴾

45. ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸದವರು ಮಾತ್ರ ಇಂತಹ ನಿವೇದನೆಗಳನ್ನು ಮಾಡುತ್ತಾರೆ. ಅವರ ಹೃದಯಗಳಲ್ಲಿ ಸಂಶಯವಿದೆ. ಅವರು ತಮ್ಮ ಸಂಶಯಗಳಲ್ಲೇ ತಲ್ಲಣಗೊಳ್ಳುತ್ತಿದ್ದಾರೆ.

إِنَّمَا يَسْتَأْذِنُكَ الَّذِينَ لَا يُؤْمِنُونَ بِاللَّهِ وَالْيَوْمِ الْآخِرِ وَارْتَابَتْ قُلُوبُهُمْ فَهُمْ فِي رَيْبِهِمْ يَتَرَدَّدُونَ ﴿٤٥﴾

46. ಅವರ ಇಚ್ಛೆಯು ಹೊರಡುವುದೇ ಆಗಿರುತ್ತಿದ್ದರೆ ಅವರು ಅದಕ್ಕಾಗಿ ಸ್ವಲ್ಪವಾದರೂ ಸಿದ್ಧತೆ ಮಾಡುತ್ತಿದ್ದರು. ಆದರೆ ಅಲ್ಲಾಹನು ಅವರ ಏಳುವಿಕೆಯನ್ನು ಇಷ್ಟಪಟ್ಟಿರಲಿಲ್ಲ. ಆದುದರಿಂದ ಅವನು ಅವರನ್ನು ಉದಾಸೀನರನ್ನಾಗಿ ಮಾಡಿದನು. "ಕೂತಿರುವವರೊಂದಿಗೆ ನೀವು ಕೂತು ಕೊಳ್ಳಿರಿ" ಎನ್ನಲಾಯಿತು.

وَلَوْ أَرَادُوا الْخُرُوجَ لَأَعَدُّوا لَهُ عُدَّةً وَلَٰكِنْ كَرِهَ اللَّهُ انْبِعَاثَهُمْ فَثَبَّطَهُمْ وَقِيلَ اقْعُدُوا مَعَ الْقَاعِدِينَ ﴿٤٦﴾

47. ಅವರು ನಿಮ್ಮ ಸಂಗಡ ಹೊರಡುತ್ತಿದ್ದರೆ, ನಿಮ್ಮೊಳಗೆ ಕೇಡನ್ನೇ ಹೊರತು ಇನ್ನೇನನ್ನೂ ವರ್ಧಿಸುತ್ತಿರಲಿಲ್ಲ. ಅವರು ನಿಮ್ಮೊಳಗೆ ಗೊಂದಲಗಳನ್ನುಂಟು ಮಾಡಲಿಕ್ಕಾಗಿ ಶ್ರಮಿಸುತ್ತಿದ್ದರು. ಅವರ ಮಾತುಗಳಿಗೆ ಕಿವಿಗೊಡುವವರು ಇನ್ನೂ ನಿಮ್ಮ ಕೂಟದೊಳಗಿದ್ದಾರೆ. ಅಲ್ಲಾಹನು ಈ ಅಕ್ರಮಿಗಳನ್ನು ಚೆನ್ನಾಗಿ ಬಲ್ಲನು.

لَوْ خَرَجُوا فِيكُمْ مَا زَادُوكُمْ إِلَّا خَبَالًا وَلَأَوْضَعُوا خِلَالَكُمْ يَبْغُونَكُمُ الْفِتْنَةَ وَفِيكُمْ سَمَّاعُونَ لَهُمْ ۗ وَاللَّهُ عَلِيمٌ بِالظَّالِمِينَ ﴿٤٧﴾

48. ಇದಕ್ಕಿಂತ ಮೊದಲೂ ಅವರು 'ಗೊಂದಲ'ವನ್ನೆಬ್ಬಿಸಲು ಪ್ರಯತ್ನಿಸಿದ್ದರು. ಅವರ ಇಚ್ಛೆಗೆದುರಾಗಿ ಸತ್ಯವು ಪ್ರಕಟಗೊಂಡು ಅಲ್ಲಾಹನ ಕಾರ್ಯ ಜಯಪ್ರದವಾಗುವವರೆಗೂ ಅವರು ನಿಮ್ಮನ್ನು ಸೋಲಿಸಲಿಕ್ಕಾಗಿ ಅನೇಕ ವಿಧದ ಕುತಂತ್ರಗಳನ್ನು ನಡೆಸಿದ್ದರು.

لَقَدِ ابْتَغَوُا الْفِتْنَةَ مِنْ قَبْلُ وَقَلَّبُوا لَكَ الْأُمُورَ حَتَّىٰ جَاءَ الْحَقُّ وَظَهَرَ أَمْرُ اللَّهِ وَهُمْ كَارِهُونَ ﴿٤٨﴾

49. "ನನಗೆ ರಿಯಾಯಿತಿ ಕೊಟ್ಟು ಬಿಡಿರಿ. ನನ್ನನ್ನು 'ಪರೀಕ್ಷೆ'ಗೊಳಪಡಿಸಬೇಡಿರಿ." ಎಂದು ಹೇಳುವವರೂ ಅವರಲ್ಲಿದ್ದಾರೆ.- ತಿಳಿದುಕೊಳ್ಳಿರಿ. ಇವರು 'ಗೊಂದಲ'ದಲ್ಲೇ ಬಿದ್ದು ಕೊಂಡಿದ್ದಾರೆ. 'ನರಕ'ವು ಈ 'ಸತ್ಯನಿಷೇಧಿ'ಗಳನ್ನು ಸುತ್ತುವರಿದಿದೆ.

وَمِنْهُمْ مَنْ يَقُولُ ائْذَنْ لِي وَلَا تَفْتِنِّي ۚ أَلَا فِي الْفِتْنَةِ سَقَطُوا ۗ وَإِنَّ جَهَنَّمَ لَمُحِيطَةٌ بِالْكَافِرِينَ ﴿٤٩﴾

50. ನಿಮಗೆ ಹಿತವಾದರೆ ಅವರಿಗೆ ಖೇದವಾಗುತ್ತದೆ. ನಿಮಗೆ ವಿಪತ್ತುಂಟಾದರೆ ಅವರು ಮುಖ ತಿರುಗಿಸಿ ಆನಂದ ತುಂದಿಲರಾಗಿ ಮರಳುತ್ತಾರೆ ಮತ್ತು ನಾವು ನಮ್ಮ ವ್ಯವಹಾರವನ್ನು ಮೊದಲೇ ಸರಿಪಡಿಸಿಕೊಂಡುದು ಬಹಳ ಒಳಿತಾಯಿತೆನ್ನುತ್ತ ಸಾಗುತ್ತಾರೆ.

إِنْ تُصِبْكَ حَسَنَةٌ تَسُؤْهُمْ ۖ وَإِنْ تُصِبْكَ مُصِيبَةٌ يَقُولُوا قَدْ أَخَذْنَا أَمْرَنَا مِنْ قَبْلُ وَيَتَوَلَّوْا وَهُمْ فَرِحُونَ ﴿٥٠﴾

51. ಅವರೊಡನೆ ಹೇಳಿರಿ- ಅಲ್ಲಾಹನೇ ನಮಗಾಗಿ ಲಿಖಿತಗೊಳಿಸಿದುದರ ಹೊರತು ಬೇರಾವುದೂ (ಒಳಿತು ಅಥವಾ ಕೆಡುಕು) ನಮ್ಮನ್ನು ಬಾಧಿಸುವುದಿಲ್ಲ. ಅಲ್ಲಾಹನೇ ನಮ್ಮ ಮಾಲಿಕನಾಗಿರುತ್ತಾನೆ. ಸತ್ಯವಿಶ್ವಾಸಿಗಳು ಅವನ ಮೇಲೆಯೇ ಭರವಸೆಯನ್ನಿಡಬೇಕು.

قُلْ لَّنْ يُّصِيْبَنَآ اِلَّا مَا كَتَبَ اللّٰهُ لَنَا ۚ هُوَ مَوْلٰىنَا ۚ وَعَلَى اللّٰهِ فَلْيَتَوَكَّلِ الْمُؤْمِنُوْنَ ﴿٥١﴾

52. ಅವರೊಡನೆ ಹೇಳಿರಿ- ನೀವು ನಮ್ಮ ವಿಷಯದಲ್ಲಿ ನಿರೀಕ್ಷಿಸುತ್ತಿರುವುದು ಎರಡು ಒಳಿತುಗಳ ಪೈಕಿ ಒಂದಲ್ಲದೆ ಇನ್ನೇನು?[23] ಅಲ್ಲಾಹನೇ ನಿಮಗೆ ಶಿಕ್ಷೆ ಕೊಡುತ್ತಾನೋ ಅಥವಾ ನಮ್ಮ ಕೈಗಳಿಂದ ಕೊಡಿಸುತ್ತಾನೋ ಎಂದು ನಾವು ನಿಮ್ಮ ವಿಷಯದಲ್ಲಿ ನಿರೀಕ್ಷಿಸುತ್ತಿದ್ದೇವೆ. ಸರಿ; ಇನ್ನು ನೀವೂ ನಿರೀಕ್ಷಿಸುತ್ತಲಿರಿ, ನಾವೂ ನಿಮ್ಮೊಂದಿಗೆ ನಿರೀಕ್ಷಿಸುತ್ತಿರುತ್ತೇವೆ.

قُلْ هَلْ تَرَبَّصُوْنَ بِنَآ اِلَّآ اِحْدَى الْحُسْنَيَيْنِ ۗ وَنَحْنُ نَتَرَبَّصُ بِكُمْ اَنْ يُّصِيْبَكُمُ اللّٰهُ بِعَذَابٍ مِّنْ عِنْدِهٖٓ اَوْ بِاَيْدِيْنَا ۖ فَتَرَبَّصُوْٓا اِنَّا مَعَكُمْ مُّتَرَبِّصُوْنَ ﴿٥٢﴾

53. ಅವರೊಡನೆ ಹೇಳಿರಿ- ನೀವು (ನಿಮ್ಮ ಸಂಪತ್ತುಗಳನ್ನು) ಸಸಂತೋಷ ಖರ್ಚು ಮಾಡಿರಿ ಅಥವಾ ಅರೆಮನಸ್ಸಿನಿಂದ ಹೇಗಿದ್ದರೂ ಅವು ಸ್ವೀಕರಿಸಲ್ಪಡಲಾರವು. ಏಕೆಂದರೆ ನೀವು ಕರ್ಮಭ್ರಷ್ಟರಾಗಿರುತ್ತೀರಿ.

قُلْ اَنْفِقُوْا طَوْعًا اَوْ كَرْهًا لَّنْ يُّتَقَبَّلَ مِنْكُمْ ۗ اِنَّكُمْ كُنْتُمْ قَوْمًا فٰسِقِيْنَ ﴿٥٣﴾

54. ಅವರು ಅಲ್ಲಾಹ್ ಮತ್ತು ಅವನ ರಸೂಲರನ್ನು ನಿಷೇಧಿಸಿದರು. ಅವರು ನಮಾಝಿಗೆ ಆಲಸ್ಯದೊಂದಿಗೆ ಬರುತ್ತಾರೆ. ದೇವ ಮಾರ್ಗದಲ್ಲಿ ಒಲ್ಲದ ಮನಸ್ಸಿನಿಂದ ಖರ್ಚು ಮಾಡುತ್ತಾರೆ. ಇದರ ಹೊರತು ಅವರ ಸಂಪತ್ತು ಸ್ವೀಕರಿಸದಿರಲು ಇನ್ನಾವ ಕಾರಣವೂ ಇಲ್ಲ.

وَمَا مَنَعَهُمْ اَنْ تُقْبَلَ مِنْهُمْ نَفَقٰتُهُمْ اِلَّآ اَنَّهُمْ كَفَرُوْا بِاللّٰهِ وَبِرَسُوْلِهٖ وَلَا يَاْتُوْنَ الصَّلٰوةَ اِلَّا وَهُمْ كُسَالٰى وَلَا يُنْفِقُوْنَ اِلَّا وَهُمْ كٰرِهُوْنَ ﴿٥٤﴾

55. ಇವರ ಸಂಪತ್ತು ಮತ್ತು ಸಂತತಿಗಳ ಆಧಿಕ್ಯವನ್ನು ಕಂಡು ಮೋಸಹೋಗಬೇಡಿರಿ. ಅಲ್ಲಾಹ್ ಇವುಗಳ ಮೂಲಕವೇ ಅವರಿಗೆ ಇಹಜೀವನದಲ್ಲಿಯೂ ಶಿಕ್ಷೆ ಕೊಡ ಬೇಕೆಂದೂ ಇವರು ಪ್ರಾಣ ಬಿಡುವುದು ಸತ್ಯನಿಷೇಧಾವಸ್ಥೆಯಲ್ಲೇ ಆಗಬೇಕೆಂದೂ ಇಚ್ಛಿಸುತ್ತಾನೆ.

فَلَا تُعْجِبْكَ اَمْوَالُهُمْ وَلَآ اَوْلَادُهُمْ ۗ اِنَّمَا يُرِيْدُ اللّٰهُ لِيُعَذِّبَهُمْ بِهَا فِى الْحَيٰوةِ الدُّنْيَا وَتَزْهَقَ اَنْفُسُهُمْ وَهُمْ كٰفِرُوْنَ ﴿٥٥﴾

56. ನಾವು ನಿಮ್ಮವರೇ ಆಗಿರುತ್ತೇವೆಂದು ಅಲ್ಲಾಹನಾಣೆ ಹಾಕುತ್ತ ಹೇಳುತ್ತಾರೆ. ವಸ್ತುತಃ ಅವರು ಎಷ್ಟು ಮಾತ್ರಕ್ಕೂ ನಿಮ್ಮ ಕೂಟದವರಲ್ಲ. ವಾಸ್ತವದಲ್ಲಿ ಅವರು ನಿಮ್ಮಿಂದ ಭಯಭೀತ ರಾಗಿರುವವರು.

وَيَحْلِفُوْنَ بِاللّٰهِ اِنَّهُمْ لَمِنْكُمْ ۗ وَمَا هُمْ مِّنْكُمْ وَلٰكِنَّهُمْ قَوْمٌ يَّفْرَقُوْنَ ﴿٥٦﴾

23. ಅರ್ಥಾತ್- ಅಲ್ಲಾಹನ ಮಾರ್ಗದ ಹುತಾತ್ಮತೆ ಅಥವಾ ಇಸ್ಲಾಮಿನ ವಿಜಯ.

57. ಅವರಿಗೆಲ್ಲಾದರೂ ಅಭಯಸ್ಥಾನ ಅಥವಾ ಗುಹೆ ಅಥವಾ ನುಗ್ಗಿ ಕುಳಿತಿರಲು ಸ್ಥಳ ಸಿಕ್ಕಿದರೆ, ಓಡಿ ಹೋಗಿ ಅದರೊಳಗೆ ಅವಿತು ಕೊಳ್ಳುತ್ತಿದ್ದರು.

لَوْ يَجِدُونَ مَلْجَأً أَوْ مَغَارَاتٍ أَوْ مُدَّخَلًا لَّوَلَّوْا إِلَيْهِ وَهُمْ يَجْمَحُونَ ﴿٥٧﴾

58. ಓ ಪೈಗಂಬರರೇ, ಅವರಲ್ಲಿ ಕೆಲವರು ಸದಕಾತ್[24] (ಕಡ್ಡಾಯ ದಾನಗಳ) ವಿತರಣಾ ಕಾರ್ಯದ ಬಗ್ಗೆ ನಿಮ್ಮನ್ನು ಆಕ್ಷೇಪಿಸುತ್ತಾರೆ. ಆ ಸೊತ್ತಿನಿಂದ ಅವರಿಗೇನಾದರೂ ಕೊಟ್ಟು ಬಿಟ್ಟರೆ ತೃಪ್ತ ರಾಗುತ್ತಾರೆ. ಕೊಡದಿದ್ದರೆ ಸಿಟ್ಟಾಗುತ್ತಾರೆ.

وَمِنْهُم مَّن يَلْمِزُكَ فِي الصَّدَقَاتِ فَإِنْ أُعْطُوا مِنْهَا رَضُوا وَإِن لَّمْ يُعْطَوْا مِنْهَا إِذَا هُمْ يَسْخَطُونَ ﴿٥٨﴾

59. ಅಲ್ಲಾಹ್ ಮತ್ತು ರಸೂಲರು ಅವರಿಗೆ ಕೊಟ್ಟುದರಲ್ಲಿ ಅವರು ತೃಪ್ತಿಪಟ್ಟು, "ಅಲ್ಲಾಹ್ ನಮಗೆ ಸಾಕು. ಅವನು ತನ್ನ ಅನುಗ್ರಹದಿಂದ ಇನ್ನೂ ಧಾರಾಳವಾಗಿ ನೀಡುವನು ಮತ್ತು ಅವನ ರಸೂಲರೂ ನಮಗೆ ದಯಪಾಲಿಸುವರು. ನಾವು ಅಲ್ಲಾಹನ ಕಡೆಗೇ ಭರವಸೆಯನ್ನಿರಿಸಿಕೊಂಡಿದ್ದೇವೆ" ಎನ್ನುತ್ತಿದ್ದರೆ ಅದೆಷ್ಟು ಉತ್ತಮವಾಗುತ್ತಿತ್ತು.

وَلَوْ أَنَّهُمْ رَضُوا مَا آتَاهُمُ اللَّهُ وَرَسُولُهُ وَقَالُوا حَسْبُنَا اللَّهُ سَيُؤْتِينَا اللَّهُ مِن فَضْلِهِ وَرَسُولُهُ إِنَّا إِلَى اللَّهِ رَاغِبُونَ ﴿٥٩﴾

60. ವಾಸ್ತವದಲ್ಲಿ ಈ 'ಕಡ್ಡಾಯದಾನ'ಗಳು (ಫಕೀರ) ಬಡವರಿಗೆ, (ಮಿಸ್ಕೀನ್) ದರಿದ್ರರಿಗೆ,[25] 'ಕಡ್ಡಾಯದಾನ'ಗಳ ಕಾರ್ಯಗಳಲ್ಲಿ ನೇಮಕಗೊಂಡವರಿಗೆ, ಮನವೊಲಿಸ ಬೇಕಾದ ಅಗತ್ಯವಿರುವವ ರಿಗೆ,[26] ಕೊರಳು ಬಿಡಿಸುವುದಕ್ಕೆ,[27] ಸಾಲಗಾರರಿಗೆ ನೆರವು ನೀಡ ಲಿಕ್ಕೆ ಅಲ್ಲಾಹನ ಮಾರ್ಗದಲ್ಲಿ[28] ಮತ್ತು ಪ್ರಯಾಣಿಕರ

إِنَّمَا الصَّدَقَاتُ لِلْفُقَرَاءِ وَالْمَسَاكِينِ وَالْعَامِلِينَ عَلَيْهَا وَالْمُؤَلَّفَةِ قُلُوبُهُمْ وَفِي الرِّقَابِ وَالْغَارِمِينَ وَفِي سَبِيلِ اللَّهِ وَابْنِ السَّبِيلِ فَرِيضَةً مِّنَ اللَّهِ

24. ಅರ್ಥಾತ್- ಝಕಾತ್‌ನ ಸೊತ್ತು.

25. ಫಕೀರರು ಅಥವಾ ಬಡವರು ಎಂದರೆ ತಮ್ಮ ಉಪಜೀವನಕ್ಕಾಗಿ ಇತರರ ಸಹಾಯದ ಆಶ್ರಯದಲ್ಲಿರುವವರು. ಮಿಸ್ಕೀನ್‌ಗಳು ಎಂದರೆ ಸಾಮಾನ್ಯ ಅಪೇಕ್ಷಿತರಿಗಿಂತಲೂ ಹೆಚ್ಚು ಸಂಕಷ್ಟದ ಸ್ಥಿತಿಯಲ್ಲಿರುವವರು.

26. 'ತಾಲೀಫುಲ್ ಕಲ್ಬ್' ಎಂದರೆ ಮನವೊಲಿಸುವುದಾಗಿದೆ. ಈ ಆದೇಶದ ಇಂಗಿತವೇನೆಂದರೆ - ಇಸ್ಲಾಮನ್ನು ವಿರೋಧಿಸುವಲ್ಲಿ ಸಕ್ರಿಯರಾಗಿರುವವರಿಗೆ ಒಂದು ವೇಳೆ ಸಂಪತ್ತು ನೀಡಿ ಅವರ ದ್ವೇಷಾಗ್ನಿಯನ್ನು ತಣಿಸಲು ಸಾಧ್ಯವಿದ್ದರೆ, ಸತ್ಯನಿಷೇಧಿಗಳ ಪಾಳಯದಲ್ಲಿ ಸಕ್ರಿಯರಾಗಿರುವವರು ಸಂಪತ್ತಿಗಾಗಿ ಅವರಿಂದ ಸಂಬಂಧ ಕಡಿದು ಮುಸ್ಲಿಮರ ಸಹಾಯಕರಾಗಿ ಮಾರ್ಪಡುವುದಿದ್ದರೆ, ಆಗ ತಾನೇ ಇಸ್ಲಾಮ್ ಸ್ವೀಕರಿಸಿರುವ ಮತ್ತು ಹಣದಿಂದ ಅವರಿಗೆ ನೆರವಾಗದಿದ್ದರೆ ಪುನಃ ಸತ್ಯನಿಷೇಧದ ಕಡೆಗೆ ಮರಳುವಂತಹ ಶಂಕೆಯಿರುವ ದುರ್ಬಲ ವಿಶ್ವಾಸಿಗಳು ನಿಮ್ಮ ಜತೆಗಿದ್ದರೆ ಅವರಿಗೆ ನಿರಂತರ ಭತ್ಯೆ ಅಥವಾ ಸಾಂದರ್ಭಿಕ ಉಡುಗೊರೆ ನೀಡಿ ಇಸ್ಲಾಮಿನ ಸಹಾಯಕರಾಗಿ, ಅನುಯಾಯಿಯಾಗಿ ಅಥವಾ ಕನಿಷ್ಠಪಕ್ಷ ನಿರುಪದ್ರವಿ ಶತ್ರುವಾಗಿ ಮಾರ್ಪಡಿಸಬಹುದಾಗಿದೆ.

27. ಕೊರಳು ಬಿಡಿಸುವುದು ಎಂದರೆ ಗುಲಾಮರ ವಿಮೋಚನೆ ಮಾಡುವುದು.

28. 'ಅಲ್ಲಾಹನ ಮಾರ್ಗದಲ್ಲಿ' ಎಂಬುದು ಒಂದು ಸಾಮಾನ್ಯ ಪ್ರಯೋಗ. ಅಲ್ಲಾಹನ ಸಂಪ್ರೀತಿ ಪ್ರಾಪ್ತವಾಗುವ ಸತ್ಕಾರ್ಯಗಳೆಲ್ಲವೂ ಇದರ ಅರ್ಥವ್ಯಾಪ್ತಿಯಲ್ಲಿ ಬರುತ್ತವೆ. ಈ ಅಭಿಪ್ರಾಯದ ಆಧಾರದಲ್ಲೇ ವಿದ್ವಾಂಸರ ಒಂದು ವಿಭಾಗ ಝಕಾತ್‌ನ ಹಣವನ್ನು ಎಲ್ಲಾ ವಿಧದ ಸತ್ಕಾರ್ಯಗಳಲ್ಲಿ ವ್ಯಯಿಸಬಹುದಾಗಿದೆ ಎಂಬ ಅಭಿಪ್ರಾಯವನ್ನು ಹೊಂದಿದೆ. ಆದರೆ ಬಹುತೇಕ ವಿದ್ವಾಂಸರ ಪ್ರಕಾರ ಅಲ್ಲಾಹನ ಮಾರ್ಗದಲ್ಲಿ ಎಂದರೆ 'ಅಲ್ಲಾಹನ ಮಾರ್ಗದ ಹೋರಾಟವಾಗಿದೆ. ಅರ್ಥಾತ್ ಸತ್ಯನಿಷೇಧದ ವ್ಯವಸ್ಥೆಯನ್ನು ಅಳಿಸಿ ಅಲ್ಲಿ ಇಸ್ಲಾಮೀ ವ್ಯವಸ್ಥೆಯನ್ನು ಸ್ಥಾಪಿಸಲು ನಡೆಸುವ ಪ್ರಯತ್ನ. ಈ ಹೋರಾಟದಲ್ಲಿ ನಿರತರಾಗಿರುವವರ ಪ್ರಯಾಣ ವೆಚ್ಚ, ವಾಹನ ಖರ್ಚು, ಶಸ್ತ್ರಾಸ್ತ್ರ ಮತ್ತು ಸಾಧನಾನುಕೂಲತೆಗಳು ಇತ್ಯಾದಿಗಳನ್ನು ಒದಗಿಸಲಿಕ್ಕೂ ಝಕಾತ್‌ನಿಂದ ನೆರವು ನೀಡಬಹುದು. ಅವರು ಸ್ವತಃ ಸುಭಿಕ್ಷೆಯಲ್ಲಿರುವವರಾಗಿದ್ದು ನೆರವಿನ ಅವಶ್ಯಕತೆ ಅವರಿಗೆ ಇಲ್ಲದಿದ್ದರೂ ಸರಿಯೇ.

ಆದರಕ್ಕಾಗಿ[29] ಖರ್ಚು ಮಾಡಲಿಕ್ಕಾಗಿರುತ್ತವೆ. ಅಲ್ಲಾಹನ ಕಡೆಯ ಒಂದು ಕಡ್ಡಾಯವಿದು. ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುತ್ತಾನೆ.

وَاللّٰهُ عَلِيْمٌ حَكِيْمٌ ۝٦٠

61. ಇವರಲ್ಲಿ ಕೆಲವರು ತಮ್ಮ ಮಾತುಗಳಿಂದ ಪ್ರವಾದಿವರ್ಯರಿಗೆ ಕೀಟಲೆ ಕೊಡುತ್ತಾರೆ ಮತ್ತು "ಇದೋರ್ವ ಕಿವಿಸೋಲುವ ವ್ಯಕ್ತಿ" ಎನ್ನುತ್ತಾರೆ. ಹೇಳಿರಿ- "ಅವರು ನಿಮ್ಮ ಹಿತಕ್ಕಾಗಿ ಹಾಗಾಗಿದ್ದಾರೆ. ಅವರು ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತಾರೆ. ಸತ್ಯ ವಿಶ್ವಾಸಿಗಳ ಮೇಲೆ ಭರವಸೆಯನ್ನಿರಿಸುತ್ತಾರೆ ಮತ್ತು ನಿಮ್ಮ ಪೈಕಿ ಸತ್ಯವಿಶ್ವಾಸಿಗಳ ಮೇಲೆ ಕರುಣಾಮಯಿಯಾಗಿದ್ದಾರೆ. ಅಲ್ಲಾಹನ ರಸೂಲರಿಗೆ ಕೀಟಲೆ ಕೊಡುವವರಿಗಾಗಿ ವೇದನಾಯುಕ್ತ ಶಿಕ್ಷೆಯಿದೆ."

وَمِنْهُمُ الَّذِيْنَ يُؤْذُوْنَ النَّبِيَّ وَيَقُوْلُوْنَ هُوَ اُذُنٌ ؕ قُلْ اُذُنُ خَيْرٍ لَّكُمْ يُؤْمِنُ بِاللّٰهِ وَيُؤْمِنُ لِلْمُؤْمِنِيْنَ وَرَحْمَةٌ لِّلَّذِيْنَ اٰمَنُوْا مِنْكُمْ ؕ وَالَّذِيْنَ يُؤْذُوْنَ رَسُوْلَ اللّٰهِ لَهُمْ عَذَابٌ اَلِيْمٌ ۝٦١

62. ಅವರು ನಿಮ್ಮನ್ನು ಮೆಚ್ಚಿಸಲಿಕ್ಕಾಗಿ ನಿಮ್ಮ ಮೇಲೆ ಅಲ್ಲಾಹನಾಣೆ ಹಾಕುತ್ತಾರೆ. ವಸ್ತುತಃ ಅವರು ಸತ್ಯವಿಶ್ವಾಸಿಗಳಾಗಿದ್ದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರು ಮೆಚ್ಚಿಸಲು ಹೆಚ್ಚು ಅರ್ಹರಾಗಿರುತ್ತಾರೆ.

يَحْلِفُوْنَ بِاللّٰهِ لَكُمْ لِيُرْضُوْكُمْ ۚ وَاللّٰهُ وَرَسُوْلُهٗۤ اَحَقُّ اَنْ يُّرْضُوْهُ اِنْ كَانُوْا مُؤْمِنِيْنَ ۝٦٢

63. ಅಲ್ಲಾಹ್ ಮತ್ತು ರಸೂಲರನ್ನು ವಿರೋಧಿಸುವವನಿಗೆ ನರಕಾಗ್ನಿ ಕಾದಿದ್ದು ಅದರಲ್ಲಿ ಅವನು ಸದಾಕಾಲ ವಾಸಿಸುವನೆಂದು ಅವರಿಗೆ ತಿಳಿಯದೇ? ಇದು ಅತಿ ದೊಡ್ಡ ಅಪಮಾನವಾಗಿರುತ್ತದೆ.

اَلَمْ يَعْلَمُوْۤا اَنَّهٗ مَنْ يُّحَادِدِ اللّٰهَ وَرَسُوْلَهٗ فَاَنَّ لَهٗ نَارَ جَهَنَّمَ خَالِدًا فِيْهَا ؕ ذٰلِكَ الْخِزْيُ الْعَظِيْمُ ۝٦٣

64. ತಮ್ಮ ಅಂತರಂಗದಲ್ಲಿರುವ ರಹಸ್ಯಗಳನ್ನು ಬಹಿರಂಗಗೊಳಿಸುವಂತಹ 'ಅಧ್ಯಾಯ'ವೊಂದು ಅವತೀರ್ಣವಾಗಿಬಿಡುವುದೋ ಎಂದು ಈ 'ಕಪಟವಿಶ್ವಾಸಿ'ಗಳು ಹೆದರುತ್ತಾರೆ. ಓ ಪೈಗಂಬರರೇ, ಅವರೊಡನೆ ಹೇಳಿರಿ, "ಇನ್ನೂ ಅಪಹಾಸ್ಯ ಮಾಡಿರಿ. ನಿಶ್ಚಯವಾಗಿಯೂ ಯಾವ ವಿಷಯವು ಬಹಿರಂಗಗೊಳ್ಳುವ ಬಗ್ಗೆ ನೀವು ಹೆದರುತ್ತಿದ್ದಿರೋ ಅದನ್ನು ಅಲ್ಲಾಹನು ಬಹಿರಂಗಗೊಳಿಸುವವನಿದ್ದಾನೆ."

يَحْذَرُ الْمُنٰفِقُوْنَ اَنْ تُنَزَّلَ عَلَيْهِمْ سُوْرَةٌ تُنَبِّئُهُمْ بِمَا فِيْ قُلُوْبِهِمْ ؕ قُلِ اسْتَهْزِءُوْا ۚ اِنَّ اللّٰهَ مُخْرِجٌ مَّا تَحْذَرُوْنَ ۝٦٤

65. "ನೀವು ಏನು ಮಾಡುತ್ತಿದ್ದಿರಿ?" ಎಂದು ಅವರೊಡನೆ ಕೇಳಿದರೆ "ನಾವು ಹಾಸ್ಯ ವಿನೋದಗಳಲ್ಲಿ ತಲ್ಲೀನರಾಗಿದ್ದೆವು"[30] ಎಂದು

وَلَئِنْ سَاَلْتَهُمْ لَيَقُوْلُنَّ اِنَّمَا كُنَّا نَخُوْضُ وَنَلْعَبُ ؕ قُلْ اَبِاللّٰهِ وَاٰيٰتِهٖ وَرَسُوْلِهٖ

29. ಪ್ರಯಾಣಿಕ ತನ್ನ ಸ್ವಂತ ಸ್ಥಳದಲ್ಲಿ ಸಿರಿವಂತನಾಗಿದ್ದು, ಪ್ರಯಾಣದ ವೇಳೆ ಅವನು ಅಪೇಕ್ಷಿತನಾಗಿ ಮಾರ್ಪಟ್ಟಿದ್ದರೆ ಝಕಾತ್‌ನಿಂದ ಅಂತಹವನಿಗೂ ನೆರವು ನೀಡಬಹುದು.

30. ತಬೂಕ್ ಯುದ್ಧದ ಸಂದರ್ಭದಲ್ಲಿ ಕಪಟವಿಶ್ವಾಸಿಗಳು ತಮ್ಮ ಸಭೆಗಳಲ್ಲಿ ಕುಳಿತು ಪ್ರವಾದಿವರ್ಯರು(ಸ) ಮತ್ತು ಮುಸ್ಲಿಮರ

ಥಟ್ಟನೆ ಹೇಳಿಬಿಡುವರು. ಅವರೊಡನೆ ಹೇಳಿರಿ,- ನಿಮ್ಮ ಹಾಸ್ಯ ವಿನೋದಗಳು ಅಲ್ಲಾಹ್, ಅವನ ವಚನಗಳು ಮತ್ತು ಅವನ ರಸೂಲರೊಂದಿಗೇ ಆಗಿತ್ತೇ?

كُنْتُمْ تَسْتَهْزِءُوْنَ ﴿٦٥﴾

66. ಈಗ ನೆಪಗಳನ್ನೊಡ್ಡದಿರಿ. ನೀವು ವಿಶ್ವಾಸವಿಟ್ಟ ಬಳಿಕ ನಿಷೇಧಿಸಿರುತ್ತೀರಿ. ನಾವು ನಿಮ್ಮಲ್ಲಿ ಒಂದು ಕೂಟವನ್ನು ಕ್ಷಮಿಸಿಬಿಟ್ಟರೂ ಇನ್ನೊಂದು ಕೂಟವನ್ನು ಖಂಡಿತವಾಗಿಯೂ ಶಿಕ್ಷಿಸುವೆವು. ಏಕೆಂದರೆ ಅವರು ಅಪರಾಧಿಗಳು.

لَا تَعْتَذِرُوْا قَدْ كَفَرْتُمْ بَعْدَ اِيْمَانِكُمْ ؕ
اِنْ نَّعْفُ عَنْ طَآئِفَةٍ مِّنْكُمْ نُعَذِّبْ
طَآئِفَةً ۢ بِاَنَّهُمْ كَانُوْا مُجْرِمِيْنَ ﴿٦٦﴾

67. ಕಪಟವಿಶ್ವಾಸಿ ಪುರುಷರೂ ಕಪಟವಿಶ್ವಾಸಿ ಸ್ತ್ರೀಯರೂ ಪರಸ್ಪರ ಅನ್ಯೋನ್ಯರು. ಅವರು ಕೆಡುಕಿನ ಆಜ್ಞೆ ಕೊಡುತ್ತಾರೆ, ಒಳಿತುಗಳಿಂದ ತಡೆಯುತ್ತಾರೆ ಮತ್ತು ತಮ್ಮ ಕೈಗಳನ್ನು ಸತ್ಕಾರ್ಯಗಳಿಂದ ತಡೆದಿಡುತ್ತಾರೆ. ಅವರು ಅಲ್ಲಾಹನನ್ನು ಮರೆತುಬಿಟ್ಟರು. ಆಗ ಅಲ್ಲಾಹನೂ ಅವರನ್ನು ಮರೆತುಬಿಟ್ಟನು. ನಿಶ್ಚಯವಾಗಿಯೂ ಈ ಕಪಟವಿಶ್ವಾಸಿಗಳೇ ಕರ್ಮಭ್ರಷ್ಟರು.

اَلْمُنٰفِقُوْنَ وَالْمُنٰفِقٰتُ بَعْضُهُمْ مِّنْۢ بَعْضٍ ۘ
يَاْمُرُوْنَ بِالْمُنْكَرِ وَيَنْهَوْنَ عَنِ الْمَعْرُوْفِ
وَيَقْبِضُوْنَ اَيْدِيَهُمْ ؕ نَسُوا اللّٰهَ فَنَسِيَهُمْ ؕ
اِنَّ الْمُنٰفِقِيْنَ هُمُ الْفٰسِقُوْنَ ﴿٦٧﴾

68. ಅಲ್ಲಾಹನು ಕಪಟವಿಶ್ವಾಸಿ ಪುರುಷರಿಗೂ ಕಪಟವಿಶ್ವಾಸಿ ಸ್ತ್ರೀಯರಿಗೂ ಸತ್ಯನಿಷೇಧಿಗಳಿಗೂ ನರಕಾಗ್ನಿಯ ವಾಗ್ದಾನ ಮಾಡಿರುತ್ತಾನೆ. ಅವರು ಅದರಲ್ಲಿ ಸದಾಕಾಲ ವಾಸಿಸುವರು. ಅದೇ ಅವರಿಗೆ ಯೋಗ್ಯವಾಗಿದೆ. ಅವರ ಮೇಲೆ ಅಲ್ಲಾಹನ ಅಭಿಶಪನವಿದೆ ಮತ್ತು ಅವರಿಗೆ ಶಾಶ್ವತ ಶಿಕ್ಷೆಯಿದೆ.

وَعَدَ اللّٰهُ الْمُنٰفِقِيْنَ وَالْمُنٰفِقٰتِ وَالْكُفَّارَ
نَارَ جَهَنَّمَ خٰلِدِيْنَ فِيْهَا ؕ هِيَ حَسْبُهُمْ ۚ
وَلَعَنَهُمُ اللّٰهُ ۚ وَلَهُمْ عَذَابٌ مُّقِيْمٌ ﴿٦٨﴾

69. ನಿಮ್ಮ ರೀತಿ ನೀತಿಗಳೆಲ್ಲ ನಿಮ್ಮ ಪೂರ್ವಿಕರಂತೆಯೇ ಇವೆ. ಅವರು ನಿಮಗಿಂತ ಹೆಚ್ಚು ಸುಶಕ್ತರೂ ನಿಮಗಿಂತ ಅಧಿಕ ಧನಾಢ್ಯರೂ ಸಂತತಿ ಸಮೃದ್ಧರೂ ಆಗಿದ್ದರು. ಅನಂತರ ಅವರು ತಮ್ಮ ಪಾಲಿನ ಲೌಕಿಕ ಸುಖಭೋಗಗಳನ್ನುಂಡರು. ನೀವು ಸಹ ಅವರಂತೆಯೇ ನಿಮ್ಮ ಪಾಲಿನ ಸುಖಭೋಗಗಳನ್ನುಂಡಿರಿ. ಅವರು ಬಿದ್ದಿದ್ದಂತಹ ಕುತರ್ಕಗಳಲ್ಲಿ ನೀವೂ ಬಿದ್ದಿರಿ. ಅವರ

كَالَّذِيْنَ مِنْ قَبْلِكُمْ كَانُوْٓا اَشَدَّ مِنْكُمْ
قُوَّةً وَّاَكْثَرَ اَمْوَالًا وَّاَوْلَادًا ؕ فَاسْتَمْتَعُوْا
بِخَلَاقِهِمْ فَاسْتَمْتَعْتُمْ بِخَلَاقِكُمْ كَمَا
اسْتَمْتَعَ الَّذِيْنَ مِنْ قَبْلِكُمْ بِخَلَاقِهِمْ
وَخُضْتُمْ كَالَّذِيْ خَاضُوْا ؕ اُولٰٓئِكَ حَبِطَتْ

ಅಪಹಾಸ್ಯ ಮಾಡುತ್ತಿದ್ದರು. ಪ್ರಾಮಾಣಿಕವಾಗಿ ಜಿಹಾದ್‌ಗೆ ಸಿದ್ಧರಾಗುವವರನ್ನು ಗೇಲಿ ಮಾಡಿ ಅವರ ಧೈರ್ಯವನ್ನು ಉಡುಗಿಸಲು ಪ್ರಯತ್ನಿಸುತ್ತಿದ್ದರು. ಅವರ ಅನೇಕ ಮಾತುಗಳು ಉಲ್ಲೇಖಿಸಲ್ಪಟ್ಟಿವೆ. ಉದಾಹರಣೆಗೆ ಒಂದು ಸಭೆಯಲ್ಲಿ ಕೆಲವು ಕಪಟವಿಶ್ವಾಸಿಗಳು ಸೇರಿ ಹರಟೆ ಕೊಚ್ಚುತ್ತಿದ್ದರು. ಒಬ್ಬ ಹೇಳಿದ, "ರೋಮನ್ನರನ್ನೂ ನೀವು ಅರಬರಂತೆಯೇ ಭಾವಿಸಿದ್ದಿರೇನು? ನಾಳೆ ನೋಡುವಿರಂತೆ. ಹೋರಾಡಲು ಬಂದಿರುವ ಈ ಪರಾಕ್ರಮಿಗಳು ಹಗ್ಗದಲ್ಲಿ ಕಟ್ಟಲ್ಪಟ್ಟಿರುವರು." ಇನ್ನೊಬ್ಬ ಹೇಳಿದ, "ಮೇಲಿನಿಂದ ನೂರು ನೂರು ಕೊರಡೆಯೇಟು ಬಾರಿಸಬೇಕೆಂಬ ಆದೇಶ ಬಂದರೆ ಬಹಳ ಮೋಜೆನಿಸೀತು." ಪ್ರವಾದಿವರ್ಯರು(ಸ) ಯುದ್ಧಕ್ಕೆ ಸಿದ್ಧತೆ ನಡೆಸುತ್ತಿರುವುದನ್ನು ಕಂಡು ಇನ್ನೊಬ್ಬ ಕಪಟವಿಶ್ವಾಸಿ ತನ್ನ ಮಿತ್ರರೊಂದಿಗೆ ಹೀಗೆಂದನು, "ಇವರನ್ನು ನೋಡಿ! ಇವರು ರೋಮ್ ಮತ್ತು ಸಿರಿಯಾದ ಕೋಟೆಗಳನ್ನು ಜಯಿಸಲು ಹೊರಟಿದ್ದಾರೆ."

ಪರಿಣಾಮವೇನಾಯಿತೆಂದರೆ ಇಹ-ಪರಗಳಲ್ಲಿ ಅವರ ಕರ್ಮಗಳೆಲ್ಲ ನಿಷ್ಫಲಗೊಂಡವು. ಅವರೇ ನಷ್ಟದಲ್ಲಿದ್ದಾರೆ.

أَعْمَالُهُمْ فِي الدُّنْيَا وَالْآخِرَةِ ۖ وَأُولَٰئِكَ هُمُ الْخَاسِرُونَ ﴿٦٩﴾

70. ಇವರಿಗೆ ಇವರ ಪೂರ್ವಿಕರ ಇತಿಹಾಸವು ತಲುಪಲಿಲ್ಲವೇ? ನೂಹರ ಜನಾಂಗ, ಆದ್, ಸಮೂದ್, ಇಬ್‌ರಾಹೀಮರ ಜನಾಂಗ, ಮದ್‌ಯನದವರು ಮತ್ತು ಬುಡಮೇಲು ಗೊಳಿಸಲಾದ ಆ ನಾಡುಗಳು.[31] ಅವರ ರಸೂಲರು ಅವರ ಬಳಿ ಪ್ರತ್ಯಕ್ಷ ಪ್ರಮಾಣಗಳನ್ನು ತೆಗೆದುಕೊಂಡು ಬಂದರು. ಅವರ ಮೇಲೆ ಅಕ್ರಮವೆಸಗುವುದು ಅಲ್ಲಾಹನ ಕಾರ್ಯವಾಗಿರಲಿಲ್ಲ. ಆದರೆ ಅವರು ಸ್ವತಃ ತಮ್ಮ ಮೇಲೆ ತಾವೇ ಅಕ್ರಮ ವೆಸಗುವವರಾಗಿದ್ದರು.

أَلَمْ يَأْتِهِمْ نَبَأُ الَّذِينَ مِن قَبْلِهِمْ قَوْمِ نُوحٍ وَعَادٍ وَثَمُودَ ۙ وَقَوْمِ إِبْرَاهِيمَ وَأَصْحَابِ مَدْيَنَ وَالْمُؤْتَفِكَاتِ ۚ أَتَتْهُمْ رُسُلُهُم بِالْبَيِّنَاتِ ۖ فَمَا كَانَ اللَّهُ لِيَظْلِمَهُمْ وَلَٰكِن كَانُوا أَنفُسَهُمْ يَظْلِمُونَ ﴿٧٠﴾

71. ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು; ಅವರು ಒಳಿತುಗಳ ಅಪ್ಪಣೆ ಕೊಡುತ್ತಾರೆ ಮತ್ತು ಕೆಡುಕುಗಳಿಂದ ತಡೆಯುತ್ತಾರೆ. ನಮಾಝ್ ಸಂಸ್ಥಾಪಿಸುತ್ತಾರೆ, ಝಕಾತ್ ಕೊಡುತ್ತಾರೆ ಮತ್ತು ಅಲ್ಲಾಹ್ ಹಾಗೂ ಅವನ ರಸೂಲರ ಅನುಸರಣೆ ಮಾಡುತ್ತಾರೆ. ಇವರ ಮೇಲೆ ಅಲ್ಲಾಹನ ಕರುಣೆ ಅವತೀರ್ಣಗೊಂಡೇ ತೀರುವುದು. ನಿಶ್ಚಯವಾಗಿಯೂ ಅಲ್ಲಾಹ್ ಮಹಾ ಪ್ರತಾಪಿಯೂ ಯುಕ್ತಿ ಪೂರ್ಣನೂ ಆಗಿರುತ್ತಾನೆ.

وَالْمُؤْمِنُونَ وَالْمُؤْمِنَاتُ بَعْضُهُمْ أَوْلِيَاءُ بَعْضٍ ۚ يَأْمُرُونَ بِالْمَعْرُوفِ وَيَنْهَوْنَ عَنِ الْمُنكَرِ وَيُقِيمُونَ الصَّلَاةَ وَيُؤْتُونَ الزَّكَاةَ وَيُطِيعُونَ اللَّهَ وَرَسُولَهُ ۚ أُولَٰئِكَ سَيَرْحَمُهُمُ اللَّهُ ۗ إِنَّ اللَّهَ عَزِيزٌ حَكِيمٌ ﴿٧١﴾

72. ಅಲ್ಲಾಹ್ ಈ ಸತ್ಯವಿಶ್ವಾಸಿ ಸ್ತ್ರೀ-ಪುರುಷರಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳನ್ನು ನೀಡುವ ವಾಗ್ದಾನ ಮಾಡುತ್ತಾನೆ. ಅವರು ಅದರಲ್ಲಿ ಸದಾ ವಾಸಿಸು ತ್ತಿರುವರು. ಆ ಸದಾ ಹಸುರಾದ ಉದ್ಯಾನಗಳಲ್ಲಿ ಅವರಿಗಾಗಿ ನಿರ್ಮಲ ವಸತಿ ಗೃಹ ಗಳಿರುವುವು. ಎಲ್ಲಕ್ಕೂ ಮಿಗಿಲಾಗಿ ಅವರಿಗೆ ಅಲ್ಲಾಹನ ಸಂಪ್ರೀತಿಯು ಪ್ರಾಪ್ತವಾಗುವುದು. ಇದುವೇ ಮಹಾ ಯಶಸ್ಸು.

وَعَدَ اللَّهُ الْمُؤْمِنِينَ وَالْمُؤْمِنَاتِ جَنَّاتٍ تَجْرِي مِن تَحْتِهَا الْأَنْهَارُ خَالِدِينَ فِيهَا وَمَسَاكِنَ طَيِّبَةً فِي جَنَّاتِ عَدْنٍ ۚ وَرِضْوَانٌ مِّنَ اللَّهِ أَكْبَرُ ۚ ذَٰلِكَ هُوَ الْفَوْزُ الْعَظِيمُ ﴿٧٢﴾

73. ಓ ಪೈಗಂಬರರೇ,[32] ಸತ್ಯನಿಷೇಧಿಗಳ ಹಾಗೂ 'ಕಪಟವಿಶ್ವಾಸಿ'ಗಳ ವಿರುದ್ಧ ಉಗ್ರ ಹೋರಾಟ ನಡೆಸಿರಿ ಮತ್ತು ಅವರೊಡನೆ

يَا أَيُّهَا النَّبِيُّ جَاهِدِ الْكُفَّارَ وَالْمُنَافِقِينَ وَاغْلُظْ عَلَيْهِمْ ۚ وَمَأْوَاهُمْ جَهَنَّمُ ۖ

31. ಅರ್ಥಾತ್- ಬುಡಮೇಲುಗೊಳಿಸಲಾದಂತಹ ಲೂತ್ ಜನಾಂಗದ ಜನವಾಸ ಪ್ರದೇಶಗಳು.

32. ಇಲ್ಲಿಂದ ತಬೂಕ್ ಯುದ್ಧದ ನಂತರ ಅವತೀರ್ಣಗೊಂಡ ಸೂಕ್ತಗಳು ಆರಂಭಗೊಳ್ಳುತ್ತವೆ.

وَبِئْسَ الْمَصِيرُ ۝٧٣

ಕಟುವಾಗಿ ವರ್ತಿಸಿರಿ. ಕೊನೆಗೆ ಅವರ ವಾಸಸ್ಥಾನವು ನರಕವಾಗಿದೆ ಮತ್ತು ಅದು ಅತ್ಯಂತ ಕೆಟ್ಟ ನಿವಾಸ.

يَحْلِفُونَ بِاللَّهِ مَا قَالُوا وَلَقَدْ قَالُوا كَلِمَةَ الْكُفْرِ وَكَفَرُوا بَعْدَ إِسْلَامِهِمْ وَهَمُّوا بِمَا لَمْ يَنَالُوا ۚ وَمَا نَقَمُوا إِلَّا أَنْ أَغْنَاهُمُ اللَّهُ وَرَسُولُهُ مِنْ فَضْلِهِ ۚ فَإِنْ يَتُوبُوا يَكُ خَيْرًا لَهُمْ ۖ وَإِنْ يَتَوَلَّوْا يُعَذِّبْهُمُ اللَّهُ عَذَابًا أَلِيمًا فِي الدُّنْيَا وَالْآخِرَةِ ۚ وَمَا لَهُمْ فِي الْأَرْضِ مِنْ وَلِيٍّ وَلَا نَصِيرٍ ۝٧٤

74. ನಾವು ಆ ಮಾತನ್ನು ಹೇಳಲಿಲ್ಲವೆಂದು ಇವರು ಅಲ್ಲಾಹನಾಣೆ ಹಾಕುತ್ತ ಹೇಳುತ್ತಾರೆ. ವಸ್ತುತಃ ಅವರು ಖಂಡಿತವಾಗಿಯೂ ಆ ಸತ್ಯನಿಷೇಧದ ಮಾತನ್ನಾಡಿದ್ದಾರೆ.[33] ಅವರು ಇಸ್ಲಾಮ್ ಸ್ವೀಕರಿಸಿದ ಬಳಿಕ ಸತ್ಯವನ್ನು ನಿಷೇಧಿಸಿದ ಅಪರಾಧವೆಸಗಿದ್ದಾರೆ. ಅವರು ಏನೆಲ್ಲ ಮಾಡಬೇಕೆಂದೆಣಿಸಿದ್ದರೋ ಅವುಗಳನ್ನು ಮಾಡದಾದರು.[34] ಅವರ ಕೋಪವೆಲ್ಲ ತನ್ನ ಅನುಗ್ರಹದಿಂದ ಅಲ್ಲಾಹ್ ಮತ್ತು ಅವನ ರಸೂಲರು ಅವರನ್ನು ಸಂಪನ್ನ ಗೊಳಿಸಿದ್ದರಿಂದಲೇ ತಾನೆ. ಈಗ ಅವರು ತಮ್ಮ ನಿಲುಮೆಗಾಗಿ ಪಶ್ಚಾತ್ತಾಪ ಪಟ್ಟರೆ ಅದು ಅವರಿಗೇ ಒಳಿತು. ಅವರು ಪಶ್ಚಾತ್ತಾಪ ಪಡದಿದ್ದರೆ ಅಲ್ಲಾಹ್ ಅವರಿಗೆ ಇಹದಲ್ಲೂ ಪರದಲ್ಲೂ ಅತ್ಯಂತ ವೇದನಾಯುಕ್ತ ಶಿಕ್ಷೆ ಕೊಡುವನು. ಭೂಮಿಯಲ್ಲಿ ಇವರ ರಕ್ಷಕ ಮಿತ್ರರಾಗಲಿ, ಸಹಾಯಕರಾಗಲಿ ಯಾರೂ ಇಲ್ಲ.

وَمِنْهُمْ مَنْ عَاهَدَ اللَّهَ لَئِنْ آتَانَا مِنْ فَضْلِهِ لَنَصَّدَّقَنَّ وَلَنَكُونَنَّ مِنَ الصَّالِحِينَ ۝٧٥

75. ಅವನು ತನ್ನ ಅನುಗ್ರಹದಿಂದ ನಮಗೇನಾದರೂ ಕೊಟ್ಟರೆ ನಾವೂ ದಾನ ಮಾಡುವೆವೆಂದೂ ಸಜ್ಜನರಾಗಿ ಬಾಳುವೆವೆಂದೂ ಅಲ್ಲಾಹ ನೊಡನೆ ಕರಾರು ಮಾಡಿದವರೂ ಅವರಲ್ಲಿ ಕೆಲವರಿದ್ದಾರೆ.

فَلَمَّا آتَاهُمْ مِنْ فَضْلِهِ بَخِلُوا بِهِ وَتَوَلَّوْا وَهُمْ مُعْرِضُونَ ۝٧٦

76. ಆದರೆ, ಅಲ್ಲಾಹನು ತನ್ನ ಅನುಗ್ರಹದಿಂದ ಅವರನ್ನು ಸಂಪನ್ನರನ್ನಾಗಿ ಮಾಡಿದಾಗ ಅವರು ಜಿಪುಣತೆಗೆ ಇಳಿದರು ಮತ್ತು ತಮ್ಮ ಕರಾರಿನ ಗೊಡವೆಯೇ ಇಲ್ಲದಂತೆ ಅದರಿಂದ ವಿಮುಖರಾದರು.

فَأَعْقَبَهُمْ نِفَاقًا فِي قُلُوبِهِمْ إِلَىٰ يَوْمِ

77. ಪರಿಣಾಮವಾಗಿ ಅವರು ಅಲ್ಲಾಹನೊಡನೆ ಮಾಡಿದ ಕರಾರು

33. ಇಲ್ಲಿ ಸೂಚಿಸಲಾಗಿರುವ ಆ ಮಾತು ಯಾವುದು ಎಂಬ ಬಗ್ಗೆ ಸುದೃಢವಾದ ಯಾವುದೇ ವಿವರಣೆ ನಮಗೆ ಬಂದು ತಲಪಿಲ್ಲ. ಆದರೆ ಹದೀಸ್ ವರದಿಗಳಲ್ಲಿ ಆ ಕಾಲದ ಕಪಟವಿಶ್ವಾಸಿಗಳು ಆಡಿದ್ದ ಅಂತಹ ಅನೇಕ ಸತ್ಯನಿಷೇಧವನ್ನು ಸೂಚಿಸುವಂತಹ ಮಾತುಗಳು ಬಂದಿವೆ. ಉದಾಹರಣೆಗೆ ಕಪಟವಿಶ್ವಾಸಿಯೊಬ್ಬ ಮುಸ್ಲಿಮ್ ಯುವಕನೊಂದಿಗೆ ಮಾತನಾಡುತ್ತಾ ಹೇಳಿದ, "ಈ ವ್ಯಕ್ತಿ [ಪ್ರವಾದಿವರ್ಯರು(ಸ)] ಹೇಳುವುದೆಲ್ಲವೂ ಸತ್ಯವಾಗಿದ್ದರೆ ನಾವೆಲ್ಲರೂ ಕತ್ತೆಗಳಿಗಿಂತಲೂ ಕಡೆಯೆಂದಾಯಿತು" ಇನ್ನೊಂದು ಉಲ್ಲೇಖದ ಪ್ರಕಾರ ತಬೂಕ್‌ನ ಪ್ರಯಾಣದ ವೇಳೆ ಪ್ರವಾದಿವರ್ಯರ(ಸ) ಒಂಟೆ ಕಾಣೆಯಾಯಿತು. ಆಗ ಕಪಟವಿಶ್ವಾಸಿಗಳ ಒಂದು ಗುಂಪು ತಮ್ಮ ಕೂಟದಲ್ಲಿ ಕುಳಿತು ಆ ಬಗ್ಗೆ ಮನಸಾರೆ ಅಪಹಾಸ್ಯ ಮಾಡಿತು, "ಇವರು ಆಗಸದ ಸುದ್ದಿಗಳನ್ನೇನೋ ತಿಳಿಸುತ್ತಾರೆ. ಆದರೆ ತನ್ನ ಒಂಟೆ ಈಗ ಎಲ್ಲಿದೆ ಎಂದು ಮಾತ್ರ ಇವರಿಗೆ ತಿಳಿದಿಲ್ಲ."

34. ಇದು ಕಪಟವಿಶ್ವಾಸಿಗಳು ತಬೂಕ್ ಯುದ್ಧದ ವೇಳೆ ಹೂಡಿದ್ದ ಸಂಚುಗಳ ಕಡೆಗಿರುವ ಸೂಚನೆ. ಒಮ್ಮೆ ಅವರು ರಾತ್ರಿಯ ವೇಳೆ ಪ್ರಯಾಣದ ಸಂದರ್ಭದಲ್ಲಿ ಪ್ರವಾದಿವರ್ಯರನ್ನೂ(ಸ) ಪ್ರಪಾತಕ್ಕೆ ಎಸೆದು ಬಿಡುವ ಯೋಜನೆ ರೂಪಿಸಿದ್ದರು. ತಬೂಕ್‌ನಲ್ಲಿ ಮುಸ್ಲಿಮರಿಗೆ ಸೋಲಾದರೆ ಅಬ್ದುಲ್ಲಾ ಬಿನ್ ಉಬೈಗೆ ಕಿರೀಟಧಾರಣೆ ಮಾಡಿಸುವ ಬಗ್ಗೆಯೂ ಅವರು ಮೊದಲೇ ನಿರ್ಧರಿಸಿಕೊಂಡಿದ್ದರು.

ಭಂಗಕ್ಕಾಗಿಯೂ ಅವರು ಸುಳ್ಳು ಹೇಳಿದುದಕ್ಕಾಗಿಯೂ ಅಲ್ಲಾಹನು ಅವರ ಹೃದಯದಲ್ಲಿ 'ಕಾಪಟ್ಯ'ವನ್ನು ಇರಿಸಿ ಬಿಟ್ಟನು. ಅದು ಅವರು ಅವನ ಸನ್ನಿಧಿಯಲ್ಲಿ ಹಾಜರಾಗುವವರೆಗೂ ಅವರ ಬೆನ್ನು ಬಿಡದು.

يَلْقَوْنَهُ بِمَا أَخْلَفُوا اللَّهَ مَا وَعَدُوهُ وَبِمَا كَانُوا يَكْذِبُونَ ﴿٧٧﴾

78. ಅಲ್ಲಾಹನಿಗೆ ಇವರ ರಹಸ್ಯ ಹಾಗೂ ಗೂಢಾಲೋಚನೆಯ ಅರಿವು ಕೂಡ ಇದೆ ಮತ್ತು ಅಲ್ಲಾಹನು ಅಗೋಚರ ವಿಷಯಗಳನ್ನೂ ಚೆನ್ನಾಗಿ ಅರಿಯುವವನು ಎಂಬುದೂ ಇವರಿಗೆ ತಿಳಿಯದೇ?

أَلَمْ يَعْلَمُوا أَنَّ اللَّهَ يَعْلَمُ سِرَّهُمْ وَنَجْوَاهُمْ وَأَنَّ اللَّهَ عَلَّامُ الْغُيُوبِ ﴿٧٨﴾

79. ಸ್ವಯಂ ಪ್ರೇರಣೆಯಿಂದ ದಾನ ಮಾಡುವ ಸತ್ಯವಿಶ್ವಾಸಿಗಳ ಧನ ತ್ಯಾಗಗಳ ಬಗ್ಗೆ ಇವರು ವ್ಯಂಗ್ಯೋಕ್ತಿಗಳನ್ನಾಡುತ್ತಾರೆ ಮತ್ತು (ಅಲ್ಲಾಹನ ಮಾರ್ಗದಲ್ಲಿ ದಾನ ಮಾಡಲು) ಸ್ವತಃ ದೇಹಶ್ರಮ ವಹಿಸಿ ದುಡಿದು ಕೊಡುವ ಹೊರತು ತಮ್ಮ ಬಳಿ ಇನ್ನೇನೂ ಇಲ್ಲದಿರುವಂತಹವರನ್ನು ಗೇಲಿ ಮಾಡುತ್ತಾರೆ. (ಅಲ್ಲಾಹ್ ಇಂತಹ ಧನಿಕ ಲೋಭಿಗಳನ್ನು ಚೆನ್ನಾಗಿ ಬಲ್ಲನು.) ಹೀಗೆ ಗೇಲಿ ಮಾಡುವವರನ್ನು ಅಲ್ಲಾಹ್ ಗೇಲಿ ಮಾಡುತ್ತಾನೆ ಮತ್ತು ಅವರಿಗೆ ವೇದನಾಯುಕ್ತ ಶಿಕ್ಷೆ ಇದೆ.

الَّذِينَ يَلْمِزُونَ الْمُطَّوِّعِينَ مِنَ الْمُؤْمِنِينَ فِي الصَّدَقَاتِ وَالَّذِينَ لَا يَجِدُونَ إِلَّا جُهْدَهُمْ فَيَسْخَرُونَ مِنْهُمْ سَخِرَ اللَّهُ مِنْهُمْ وَلَهُمْ عَذَابٌ أَلِيمٌ ﴿٧٩﴾

80. ಓ ಪೈಗಂಬರರೇ, ನೀವು ಇಂತಹವರಿಗಾಗಿ ಕ್ಷಮಾಯಾಚನೆ ಮಾಡಿದರೂ ಮಾಡದಿದ್ದರೂ ಅವರನ್ನು ಕ್ಷಮಿಸಬೇಕೆಂದು ನೀವು ಎಪ್ಪತ್ತು ಸಲ ನಿವೇದಿಸಿಕೊಂಡರೂ ಅಲ್ಲಾಹನು ಅವರನ್ನು ಎಂದೆಂದಿಗೂ ಕ್ಷಮಿಸನು. ಕಾರಣವೇನೆಂದರೆ ಅವರು ಅಲ್ಲಾಹ್ ಹಾಗೂ ಅವನ ರಸೂಲರನ್ನು ನಿಷೇಧಿಸಿದ್ದಾರೆ ಮತ್ತು ಅಲ್ಲಾಹನು ಕರ್ಮಭ್ರಷ್ಟರಿಗೆ ಸನ್ಮಾರ್ಗದರ್ಶನ ಮಾಡುವುದಿಲ್ಲ.

اسْتَغْفِرْ لَهُمْ أَوْ لَا تَسْتَغْفِرْ لَهُمْ إِنْ تَسْتَغْفِرْ لَهُمْ سَبْعِينَ مَرَّةً فَلَنْ يَغْفِرَ اللَّهُ لَهُمْ ذَٰلِكَ بِأَنَّهُمْ كَفَرُوا بِاللَّهِ وَرَسُولِهِ وَاللَّهُ لَا يَهْدِي الْقَوْمَ الْفَاسِقِينَ ﴿٨٠﴾

81. ಹಿಂದೆ ಉಳಿದಿರಲು ವಿನಾಯಿತಿ ನೀಡಲ್ಪಟ್ಟವರು ಅಲ್ಲಾಹ್ ಹಾಗೂ ಅವನ ರಸೂಲರಿಗೆ ನೆರವಾಗದೆ ಮನೆಯಲ್ಲೇ ಕುಳಿತಿರುವ ಬಗ್ಗೆ ಸಂತಸಪಟ್ಟರು. ಧನ ಮತ್ತು ತನುಗಳಿಂದ ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವುದು ಅವರಿಗೆ ಇಷ್ಟವಿರಲಿಲ್ಲ. ಅವರು ಜನರೊಡನೆ, "ಈ ಕಠಿಣ ಉಷ್ಣದಲ್ಲಿ ಹೊರಡಬೇಡಿರಿ" ಎಂದರು. ಅವರೊಡನೆ ಹೇಳಿರಿ, "ನರಕಾಗ್ನಿಯು ಇದಕ್ಕಿಂತಲೂ ಹೆಚ್ಚು ಉಷ್ಣವಿದೆ." ಅಕಟ! ಅವರಿಗೆ ಇದರ ಪ್ರಜ್ಞೆಯಿರುತ್ತಿದ್ದರೆ!

فَرِحَ الْمُخَلَّفُونَ بِمَقْعَدِهِمْ خِلَافَ رَسُولِ اللَّهِ وَكَرِهُوا أَنْ يُجَاهِدُوا بِأَمْوَالِهِمْ وَأَنْفُسِهِمْ فِي سَبِيلِ اللَّهِ وَقَالُوا لَا تَنْفِرُوا فِي الْحَرِّ قُلْ نَارُ جَهَنَّمَ أَشَدُّ حَرًّا لَوْ كَانُوا يَفْقَهُونَ ﴿٨١﴾

82. ಈಗ ಅವರು ನಗುವುದನ್ನು ಕಡಿಮೆ ಮಾಡಬೇಕು. ಹೆಚ್ಚು

فَلْيَضْحَكُوا قَلِيلًا وَلْيَبْكُوا كَثِيرًا جَزَاءً

ಅಳಬೇಕು. ಏಕೆಂದರೆ ಅವರು ಗಳಿಸುತ್ತಲಿದ್ದ ಪಾಪಗಳ ಪ್ರತಿಫಲವು ಇಂತಹದೇ (ಅದರ ಬಗ್ಗೆ ಅಳಬೇಕಾದುದೇ).

بِمَا كَانُوْا يَكْسِبُوْنَ ﴿٨٢﴾

83. ಅಲ್ಲಾಹನು ನಿಮ್ಮನ್ನು ಅವರ ಬಳಿಗೆ ಹಿಂದಿರುಗಿಸಿದರೆ ಹಾಗೂ ಇನ್ನು ಮುಂದೆ ಅವರಲ್ಲಿ ಯಾವುದಾದರೊಂದು ಕೂಟವು ಯುದ್ಧಕ್ಕೆ ಹೊರಡಲು ನಿಮ್ಮೊಡನೆ ಅನುಮತಿ ಕೇಳಿದರೆ "ಇನ್ನು ನೀವು ನನ್ನೊಂದಿಗೆ ಹೊರಡಲಾರಿರಿ ಮತ್ತು ನನ್ನ ಸಂಗಡ ಯಾವತ್ತು ಶತ್ರುಗಳೊಂದಿಗೆ ಹೋರಾಟ ನಡೆಸಲಾರಿರಿ. ನೀವು ಈ ಮುಂಚೆ ಕುಳಿತಿರುವುದನ್ನೇ ಇಷ್ಟಪಟ್ಟಿದ್ದೀರಿ. ಆದುದರಿಂದ ಈಗಲೂ ಮನೆಯೊಳಗೆ ಕುಳಿತಿರುವವರೊಂದಿಗೇ ಕುಳಿತುಕೊಂಡು ಇರಿ" ಎಂದು ಹೇಳಿರಿ.

فَإِنْ رَّجَعَكَ اللّٰهُ إِلٰى طَآئِفَةٍ مِّنْهُمْ فَاسْتَأْذَنُوْكَ لِلْخُرُوْجِ فَقُلْ لَّنْ تَخْرُجُوْا مَعِيَ أَبَدًا وَّلَنْ تُقَاتِلُوْا مَعِيَ عَدُوًّا ۖ إِنَّكُمْ رَضِيْتُمْ بِالْقُعُوْدِ أَوَّلَ مَرَّةٍ فَاقْعُدُوْا مَعَ الْخٰلِفِيْنَ ﴿٨٣﴾

84. ಇನ್ನು ಮುಂದೆ ಅವರಲ್ಲಿ ಯಾರಾದರೂ ಮರಣ ಹೊಂದಿದರೆ ಅವನ 'ಜನಾಝಾ ನಮಾಝ್' ಅನ್ನು ನೀವು ಎಷ್ಟು ಮಾತ್ರಕ್ಕೂ ನಿರ್ವಹಿಸಬಾರದು ಮತ್ತು ಅವನ ಸಮಾಧಿಯ ಬಳಿ ಎಂದಿಗೂ ನಿಲ್ಲಬಾರದು, ಏಕೆಂದರೆ ಅವರು ಅಲ್ಲಾಹ್ ಮತ್ತು ಅವನ ರಸೂಲರನ್ನು ನಿಷೇಧಿಸಿದರು. ಅವರು ಕರ್ಮಭ್ರಷ್ಟರಾಗಿರುವ ಸ್ಥಿತಿಯಲ್ಲಿ ಸತ್ತಿದ್ದಾರೆ.

وَلَا تُصَلِّ عَلٰى أَحَدٍ مِّنْهُمْ مَّاتَ أَبَدًا وَّلَا تَقُمْ عَلٰى قَبْرِهٖ ۖ إِنَّهُمْ كَفَرُوْا بِاللّٰهِ وَرَسُوْلِهٖ وَمَاتُوْا وَهُمْ فٰسِقُوْنَ ﴿٨٤﴾

85. ಅವರ ಶ್ರೀಮಂತಿಕೆ ಮತ್ತು ಅವರ ಸಂತಾನಾಧಿಕ್ಯವು ನಿಮ್ಮನ್ನು ವಂಚಿಸದಿರಲಿ. ಅಲ್ಲಾಹನಂತು ಈ ಧನ ಮತ್ತು ಸಂತತಿಗಳ ಮೂಲಕ ಅವರನ್ನು ಇದೇ ಲೋಕದಲ್ಲಿ ಶಿಕ್ಷಿಸಲಿಕ್ಕೂ ಅವರ ಪ್ರಾಣಗಳು ಸತ್ಯನಿಷೇಧಾವಸ್ಥೆಯಲ್ಲಿ ಹೊರಟು ಹೋಗುವಂತಾಗಲಿಕ್ಕೂ ನಿರ್ಧರಿಸಿದ್ದಾನೆ.

وَلَا تُعْجِبْكَ أَمْوَالُهُمْ وَأَوْلَادُهُمْ ۖ إِنَّمَا يُرِيْدُ اللّٰهُ أَنْ يُّعَذِّبَهُمْ بِهَا فِي الدُّنْيَا وَتَزْهَقَ أَنْفُسُهُمْ وَهُمْ كٰفِرُوْنَ ﴿٨٥﴾

86. ಅಲ್ಲಾಹನ ಮೇಲೆ ವಿಶ್ವಾಸವಿಡಿರಿ ಮತ್ತು ಅವನ ರಸೂಲರೊಂದಿಗೆ ಕೂಡಿ ಹೋರಾಟ ನಡೆಸಿರಿ ಎಂಬ ವಿಷಯವನ್ನೊಳಗೊಂಡ ಅಧ್ಯಾಯವೆಂದಾದರೂ ಅವತೀರ್ಣಗೊಂಡಾಗ ಅವರಲ್ಲಿದ್ದ ಸ್ಥಿತಿವಂತರೇ ನಿಮ್ಮೊಡನೆ ನಮಗೆ ಜಿಹಾದ್‌ನಲ್ಲಿ (ಧರ್ಮಯುದ್ಧದಲ್ಲಿ) ಭಾಗವಹಿಸುವ ಬಗ್ಗೆ ವಿನಾಯಿತಿ ಕೊಡಬೇಕೆಂದು ಕೇಳತೊಡಗಿದುದನ್ನು ನೀವು ಕಂಡಿರಿ. "ಕುಳಿತಿರುವವರೊಂದಿಗೆ ಇರಲಿಕ್ಕಾಗಿ ನಮ್ಮನ್ನು ಬಿಟ್ಟುಬಿಡಿರಿ" ಎಂದು ಅವರು ಹೇಳಿದರು.

وَإِذَآ أُنْزِلَتْ سُوْرَةٌ أَنْ اٰمِنُوْا بِاللّٰهِ وَجَاهِدُوْا مَعَ رَسُوْلِهِ اسْتَأْذَنَكَ أُولُوا الطَّوْلِ مِنْهُمْ وَقَالُوْا ذَرْنَا نَكُنْ مَّعَ الْقٰعِدِيْنَ ﴿٨٦﴾

87. ಅವರು ಮನೆಯಲ್ಲಿ ಕುಳಿತುಕೊಂಡಿರುವ ಮಹಿಳೆಯರೊಂದಿಗೆ ಸೇರುವುದನ್ನು ಇಷ್ಟಪಟ್ಟರು. ಅವರ ಹೃದಯಗಳಿಗೆ ಮುದ್ರೆ

رَضُوْا بِأَنْ يَّكُوْنُوْا مَعَ الْخَوَالِفِ وَطُبِعَ عَلٰى قُلُوْبِهِمْ فَهُمْ لَا يَفْقَهُوْنَ ﴿٨٧﴾

ಯೊತ್ತಲ್ಪಟ್ಟಿತು. ಆದುದರಿಂದ ಈಗ ಅವರಿಗೆ ಏನೂ ತೋಚುವುದಿಲ್ಲ.

88. ಇದಕ್ಕೆ ವ್ಯತಿರಿಕ್ತವಾಗಿ ರಸೂಲರೂ ರಸೂಲರೊಂದಿಗೆ ವಿಶ್ವಾಸ ವಿರಿಸಿದವರೂ ತಮ್ಮ ಧನಗಳಿಂದಲೂ ತನುಗಳಿಂದಲೂ ಹೋರಾಟ ನಡೆಸಿದರು. ಈಗ ಎಲ್ಲ ಒಳಿತುಗಳೂ ಅವರ ಪಾಲಿಗಿವೆ ಮತ್ತು ಅವರೇ ಯಶಸ್ವಿಗಳೂ ಆಗಿರುತ್ತಾರೆ.

لٰكِنِ الرَّسُوْلُ وَ الَّذِيْنَ اٰمَنُوْا مَعَهٗ جٰهَدُوْا بِاَمْوَالِهِمْ وَ اَنْفُسِهِمْ ؕ وَ اُولٰٓئِكَ لَهُمُ الْخَيْرٰتُ ۫ وَ اُولٰٓئِكَ هُمُ الْمُفْلِحُوْنَ ﴿٨٨﴾

89. ಅಲ್ಲಾಹನು ಅವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಪ್ರವಹಿಸು ತ್ತಿರುವ ಸ್ವರ್ಗೋದ್ಯಾನಗಳನ್ನು ಸಿದ್ಧಗೊಳಿಸಿಟ್ಟಿರುವನು. ಅವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಇದುವೇ ಉನ್ನತವಾದ ವಿಜಯ.

اَعَدَّ اللّٰهُ لَهُمْ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَا ؕ ذٰلِكَ الْفَوْزُ الْعَظِيْمُ ﴿٨٩﴾

90. ಅನೇಕ ಮಂದಿ 'ಗ್ರಾಮೀಣ' ಅರಬರೂ ಬಂದರು. ಅವರು ತಮಗೂ ಹಿಂದೆ ಉಳಿದಿರಲು ಅನುಮತಿ ನೀಡಲ್ಪಡಬೇಕೆಂದು ನೆಪ ಹೇಳಿದರು. ಅಲ್ಲಾಹ್ ಮತ್ತು ಅವನ ರಸೂಲರೊಂದಿಗೆ ಈಮಾನಿನ ಸುಳ್ಳು ಕರಾರನ್ನು ಮಾಡಿದ್ದವರು ಹೀಗೆ ಕುಳಿತುಬಿಟ್ಟರು. ಈ ಗ್ರಾಮೀಣರಲ್ಲಿ ಸತ್ಯನಿಷೇಧಿಗಳು ಸದ್ಯವೇ ವೇದನಾಯುಕ್ತ ಶಿಕ್ಷೆಯನ್ನು ಅನುಭವಿಸಲಿರುವರು.

وَ جَآءَ الْمُعَذِّرُوْنَ مِنَ الْاَعْرَابِ لِيُؤْذَنَ لَهُمْ وَ قَعَدَ الَّذِيْنَ كَذَبُوا اللّٰهَ وَ رَسُوْلَهٗ ؕ سَيُصِيْبُ الَّذِيْنَ كَفَرُوْا مِنْهُمْ عَذَابٌ اَلِيْمٌ ﴿٩٠﴾

91. ದುರ್ಬಲರೂ ರೋಗಿಗಳೂ ಧರ್ಮಯುದ್ಧದಲ್ಲಿ ಪಾಲ್ಗೊಳ್ಳಲು ದಾರಿವೆಚ್ಚವೊದಗದವರೂ ನಿಷ್ಕಳಂಕ ಹೃದಯದೊಂದಿಗೆ ಅಲ್ಲಾಹ್ ಮತ್ತು ಅವನ ರಸೂಲರಿಗೆ ನಿಷ್ಠರಾಗಿದ್ದರೆ ಹಿಂದೆ ಉಳಿದು ಬಿಡುವುದರಲ್ಲಿ ಅಡ್ಡಿಯಿಲ್ಲ.[35] ಇಂತಹ ಸಜ್ಜನೋತ್ತಮರ ಬಗ್ಗೆ ಆಕ್ಷೇಪಕ್ಕೆ ಅವಕಾಶವಿಲ್ಲ. ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

لَيْسَ عَلَى الضُّعَفَآءِ وَ لَا عَلَى الْمَرْضٰى وَ لَا عَلَى الَّذِيْنَ لَا يَجِدُوْنَ مَا يُنْفِقُوْنَ حَرَجٌ اِذَا نَصَحُوْا لِلّٰهِ وَ رَسُوْلِهٖ ؕ مَا عَلَى الْمُحْسِنِيْنَ مِنْ سَبِيْلٍ ؕ وَ اللّٰهُ غَفُوْرٌ رَّحِيْمٌ ﴿٩١﴾

92. ಇದೇ ರೀತಿಯಲ್ಲಿ ತಾವೇ ಬಂದು ನಮಗೆ ಸವಾರಿಗಾಗಿ ಏನಾದರೂ ಒದಗಿಸಿರೆಂದು ಕೇಳಿಕೊಂಡವರ ಬಗೆಗೂ ಯಾವತ್ತು ಆಕ್ಷೇಪಕ್ಕೆ ಅವಕಾಶವಿಲ್ಲ ಮತ್ತು ನಾನು ನಿಮಗೆ ಸವಾರಿಗಾಗಿ ಒದಗಿಸುವ ಯಾವ ವ್ಯವಸ್ಥೆಯನ್ನೂ ಮಾಡಲಾರೆನೆಂದು ನೀವು ಹೇಳಿದಾಗ ಅವರು ಅಸಹಾಯಕರಾಗಿ ಹಿಂದಿರುಗಿದರು. ಅವರ

وَّ لَا عَلَى الَّذِيْنَ اِذَا مَآ اَتَوْكَ لِتَحْمِلَهُمْ قُلْتَ لَآ اَجِدُ مَآ اَحْمِلُكُمْ عَلَيْهِ ۪ تَوَلَّوْا وَّ اَعْيُنُهُمْ تَفِيْضُ مِنَ الدَّمْعِ حَزَنًا اَلَّا

35. ಮೇಲ್ನೋಟಕ್ಕೆ ನೆಪಗಳನ್ನು ಹೊಂದಿರುವವರ ವೃದ್ಧಾಪ್ಯ, ರೋಗ ಅಥವಾ ಅಸಾಮರ್ಥ್ಯವು ಕ್ಷಮೆಗೆ ಸಾಕಾಗಲಾರದು. ಅವರು ಅಲ್ಲಾಹನ ಮತ್ತು ಪ್ರವಾದಿಯ ನೈಜ ನಿಷ್ಠಾವಂತರಾಗಿದ್ದಾಗ ಮಾತ್ರ ಇದು ಅವರ ಪಾಲಿಗೆ ಕ್ಷಮೆಗೆ ಕಾರಣವಾದೀತು. ಅನ್ಯಥಾ ಕರ್ತವ್ಯ ಪಾಲಿಸಬೇಕಾಗಿದ್ದ ಸಂದರ್ಭದಲ್ಲಿ ಅವನು ಅಸಮರ್ಥನೂ ರೋಗಿಯೂ ಆಗಿದ್ದನೆಂಬ ಕಾರಣಕ್ಕಾಗಿ ಮಾತ್ರ ಯಾರನ್ನೂ ಕ್ಷಮಿಸಲಾಗುವುದಿಲ್ಲ.

ಕಣ್ಣುಗಳಿಂದ ಅಶ್ರುಧಾರೆ ಇಳಿಯುತ್ತಿತ್ತು. ಅವರಿಗೆ ತಮ್ಮ ಸ್ವಂತ ಖರ್ಚಿನಿಂದ ಧರ್ಮಯುದ್ಧದಲ್ಲಿ ಭಾಗವಹಿಸಲು ನಾವು ಶಕ್ತರಾಗಿಲ್ಲವಲ್ಲಾ! ಎಂಬ ಅತೀವ ದುಃಖವಿತ್ತು.

يَجِدُوا مَا يُنْفِقُونَ ﴿٩٢﴾

93. ಆದರೆ ಧನಿಕರಾಗಿದ್ದೂ ಧರ್ಮಯುದ್ಧದಲ್ಲಿ ಭಾಗವಹಿಸುವುದರಿಂದ ತಮಗೆ ವಿನಾಯಿತಿ ಕೊಡಬೇಕೆಂದು ನಿಮ್ಮೊಡನೆ ನಿವೇದಿಸಿ ಕೊಂಡವರು ಆಕ್ಷೇಪಾರ್ಹರು. ಅವರು ಮನೆಯೊಳಗಿರುವ ಸ್ತ್ರೀಯರೊಂದಿಗೆ ಸೇರಿಕೊಳ್ಳುವುದನ್ನು ಇಷ್ಟಪಟ್ಟರು. ಅಲ್ಲಾಹನು ಅವರ ಹೃದಯಗಳಿಗೆ ಮುದ್ರೆಯೊತ್ತಿಬಿಟ್ಟನು. ಆದುದರಿಂದ (ಅಲ್ಲಾಹನ ಬಳಿ ಅವರ ವರ್ತನೆಯ ಪರಿಣಾಮ ಯಾವ ರೂಪ ದಲ್ಲಿ ಹೊರಬೀಳಲಿದೆಯೆಂಬುದು) ಅವರಿಗೆ ತಿಳಿಯುವುದಿಲ್ಲ.

إِنَّمَا السَّبِيلُ عَلَى الَّذِينَ يَسْتَأْذِنُونَكَ وَهُمْ أَغْنِيَاءُ ۚ رَضُوا بِأَنْ يَكُونُوا مَعَ الْخَوَالِفِ وَطَبَعَ اللَّهُ عَلَىٰ قُلُوبِهِمْ فَهُمْ لَا يَعْلَمُونَ ﴿٩٣﴾

94. *ನೀವು ಹಿಂದಿರುಗಿ ಅವರ ಬಳಿಗೆ ತಲುಪುವಾಗ ಅವರು ತರ ತರದ ನೆಪಗಳನ್ನೊಡ್ಡುವರು. ಆದರೆ, ನೀವು ಸ್ಪಷ್ಟವಾಗಿ (ಹೀಗೆ) ಹೇಳಿಬಿಡಬೇಕು- "ನೆಪಗಳನ್ನೊಡ್ಡಬೇಡಿರಿ. ನಾವು ನಿಮ್ಮ ಯಾವ ಮಾತನ್ನೂ ನಂಬಲಾರೆವು. ಅಲ್ಲಾಹನು ನಮಗೆ ನಿಮ್ಮ ಸ್ಥಿತಿ ಗತಿಗಳನ್ನು ತಿಳಿಸಿ ಬಿಟ್ಟಿರುವನು. ಇನ್ನು ಅಲ್ಲಾಹ್ ಮತ್ತು ಅವನ ರಸೂಲರು ನಿಮ್ಮ ವರ್ತನೆಯನ್ನು ನೋಡುವರು. ಅನಂತರ ನೀವು ವ್ಯಕ್ತ ಅವ್ಯಕ್ತಗಳನ್ನೆಲ್ಲ ಅರಿಯುವವನ ಕಡೆಗೆ ಮರಳಿಸಲ್ಪಡುವಿರಿ. ಅವನು ನೀವೇನೇನು ಮಾಡುತ್ತಿದ್ದಿರಿ ಎಂಬುದನ್ನು ನಿಮಗೆ ತಿಳಿಸುವನು."

يَعْتَذِرُونَ إِلَيْكُمْ إِذَا رَجَعْتُمْ إِلَيْهِمْ ۚ قُلْ لَا تَعْتَذِرُوا لَنْ نُؤْمِنَ لَكُمْ قَدْ نَبَّأَنَا اللَّهُ مِنْ أَخْبَارِكُمْ ۚ وَسَيَرَى اللَّهُ عَمَلَكُمْ وَرَسُولُهُ ثُمَّ تُرَدُّونَ إِلَىٰ عَالِمِ الْغَيْبِ وَالشَّهَادَةِ فَيُنَبِّئُكُمْ بِمَا كُنْتُمْ تَعْمَلُونَ ﴿٩٤﴾

95. ನೀವು ಮರಳುವಾಗ ಅವರನ್ನು ನೀವು ಬಿಟ್ಟುಬಿಡಬೇಕೆಂದು ಅವರು ನಿಮ್ಮ ಮುಂದೆ ಅಲ್ಲಾಹನಾಣೆಗಳನ್ನು ಹಾಕುವರು. ಆ ಪ್ರಕಾರ ಅವರನ್ನು ನೀವು ಬಿಟ್ಟೇ ಬಿಡಿರಿ. ಏಕೆಂದರೆ, ಅವರು ಮಾಲಿನ್ಯವಾಗಿರುತ್ತಾರೆ ಮತ್ತು ಅವರ ನಿಜವಾದ ವಾಸಸ್ಥಾನ ನರಕ. ಅದು ಅವರು ಗಳಿಸಿದುದರ ಫಲವಾಗಿ ಅವರಿಗೆ ಸಿಗುವುದು.

سَيَحْلِفُونَ بِاللَّهِ لَكُمْ إِذَا انْقَلَبْتُمْ إِلَيْهِمْ لِتُعْرِضُوا عَنْهُمْ ۖ فَأَعْرِضُوا عَنْهُمْ ۖ إِنَّهُمْ رِجْسٌ ۖ وَمَأْوَاهُمْ جَهَنَّمُ جَزَاءً بِمَا كَانُوا يَكْسِبُونَ ﴿٩٥﴾

96. ನೀವು ಅವರೊಂದಿಗೆ ಪ್ರಸನ್ನರಾಗಬೇಕೆಂದು ಅವರು ನಿಮ್ಮ ಮುಂದೆ ಆಣೆಗಳನ್ನು ಹಾಕುವರು. ವಸ್ತುತಃ ನೀವು ಅವರೊಂದಿಗೆ ಪ್ರಸನ್ನರಾಗಿಬಿಟ್ಟರೂ ಅಲ್ಲಾಹನು ಎಂದೆಂದಿಗೂ ಇಂತಹ ಕರ್ಮಭ್ರಷ್ಟರೊಂದಿಗೆ ಪ್ರಸನ್ನನಾಗಲಾರನು.

يَحْلِفُونَ لَكُمْ لِتَرْضَوْا عَنْهُمْ ۖ فَإِنْ تَرْضَوْا عَنْهُمْ فَإِنَّ اللَّهَ لَا يَرْضَىٰ عَنِ الْقَوْمِ الْفَاسِقِينَ ﴿٩٦﴾

*ಇಲ್ಲಿಂದ **11**ನೆಯ ಕಾಂಡ ಆರಂಭ.

ٱلْأَعْرَابُ أَشَدُّ كُفْرًا وَنِفَاقًا وَأَجْدَرُ أَلَّا يَعْلَمُوا حُدُودَ مَآ أَنزَلَ ٱللَّهُ عَلَىٰ رَسُولِهِۦ ۗ وَٱللَّهُ عَلِيمٌ حَكِيمٌ ﴿٩٧﴾

97. ಈ ಬದವೀ ಅರಬರು ಸತ್ಯನಿಷೇಧದಲ್ಲಿಯೂ ಕಾಪಟ್ಯದಲ್ಲಿಯೂ ಅತಿ ಕಠೋರರಾಗಿದ್ದಾರೆ. ಅಲ್ಲಾಹನು ತನ್ನ ರಸೂಲರ ಮೇಲೆ ಅವತೀರ್ಣಗೊಳಿಸಿದ ಧರ್ಮದ ಮೇರೆಗಳ ಬಗ್ಗೆ ಅವರು ಅಜ್ಞರಾಗಿರುವ ಸಂಭವವೇ ಹೆಚ್ಚು.[36] ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುತ್ತಾನೆ.

وَمِنَ ٱلْأَعْرَابِ مَن يَتَّخِذُ مَا يُنفِقُ مَغْرَمًا وَيَتَرَبَّصُ بِكُمُ ٱلدَّوَآئِرَ ۚ عَلَيْهِمْ دَآئِرَةُ ٱلسَّوْءِ ۗ وَٱللَّهُ سَمِيعٌ عَلِيمٌ ﴿٩٨﴾

98. ಅಲ್ಲಾಹನ ಮಾರ್ಗದಲ್ಲಿ ಒಂದಿಷ್ಟು ಖರ್ಚು ಮಾಡಿದರೂ ಅದನ್ನು ಬಲಾತ್ಕಾರದ ದಂಡನೆಯೆಂದು ತಿಳಿದುಕೊಳ್ಳುವವರೂ ಈ ಬದವೀ ಅರಬರಲ್ಲಿದ್ದಾರೆ ಮತ್ತು (ನೀವು ಯಾವುದಾದರೊಂದು ವಿಪತ್ತಿನಲ್ಲಿ ಸಿಕ್ಕಿಬಿಟ್ಟರೆ ನೀವು ಅವರನ್ನು ಬಿಗಿದಿರುವ ಈ ವ್ಯವಸ್ಥೆಯ ವಿಧೇಯತೆಯ ನೊಗವನ್ನು ತಮ್ಮ ಕೊರಳಿನಿಂದ ತೆಗೆದೆಸೆದುಬಿಡಬಹುದೆಂದು ಭಾವಿಸಿ) ನಿಮ್ಮ ಬಗ್ಗೆ ಕಾಲಚಕ್ರದ ಉರುಳಾಟವನ್ನು ನಿರೀಕ್ಷಿಸುತ್ತಾರೆ. ವಸ್ತುತಃ ಕೆಡುಕಿನ ಚಕ್ರವು ಅವರ ಮೇಲೆಯೇ ಉರುಳಿದೆ. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَمِنَ ٱلْأَعْرَابِ مَن يُؤْمِنُ بِٱللَّهِ وَٱلْيَوْمِ ٱلْءَاخِرِ وَيَتَّخِذُ مَا يُنفِقُ قُرُبَٰتٍ عِندَ ٱللَّهِ وَصَلَوَٰتِ ٱلرَّسُولِ ۚ أَلَآ إِنَّهَا قُرْبَةٌ لَّهُمْ ۚ سَيُدْخِلُهُمُ ٱللَّهُ فِى رَحْمَتِهِۦٓ ۗ إِنَّ ٱللَّهَ غَفُورٌ رَّحِيمٌ ﴿٩٩﴾ ع

99. ಈ ಬದವೀ ಅರಬರಲ್ಲೇ ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿಡುವವರೂ ಕೆಲವರಿದ್ದಾರೆ. ಅವರು ತಾವು ಖರ್ಚು ಮಾಡುವುದನ್ನು ಅಲ್ಲಾಹನ ಸಾಮೀಪ್ಯ ಮತ್ತು ರಸೂಲರ ಕಡೆಯಿಂದ ಕೃಪಾಶೀರ್ವಾದ ಪಡೆಯುವ ಸಾಧನವನ್ನಾಗಿ ಮಾಡುತ್ತಾರೆ. ಅಹುದು, ಅದು ಅವರಿಗೆ ನಿಜಕ್ಕೂ ಸಾಮೀಪ್ಯದ ಸಾಧನವಾಗಿದೆ ಮತ್ತು ಅಲ್ಲಾಹ್ ನಿಶ್ಚಯವಾಗಿಯೂ ಅವರನ್ನು ತನ್ನ ಕರುಣೆಯೊಳಗೆ ಪ್ರವೇಶಗೊಳಿಸುವನು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

36. ಬದವಿ ಅರಬರು ಎಂದರೆ ಮದೀನಾ ಸುತ್ತಮುತ್ತಲಿನ ಗ್ರಾಮೀಣ ಮತ್ತು ಮರುಭೂಮಿ ಪ್ರದೇಶದಲ್ಲಿ ವಾಸಿಸುವ ಅರಬರಾಗಿದ್ದಾರೆ. ಇವರು ಮದೀನಾದಲ್ಲಿ ಪ್ರಬಲ ಮತ್ತು ಸುವ್ಯವಸ್ಥಿತವಾದ ಶಕ್ತಿಯೊಂದು ಉದಯವಾಗುತ್ತಿರುವುದನ್ನು ಕಂಡು ಮೊದಲು ಅದಕ್ಕೆ ಮಾರುಹೋದರು. ಆದರೆ ಅನಂತರ ಇಸ್ಲಾಮ್ ಮತ್ತು ಸತ್ಯನಿಷೇಧದ ಸಂಘರ್ಷಗಳ ಸಂದರ್ಭದಲ್ಲಿ ಒಂದು ಅವಧಿಯ ತನಕ ಅವರು ಸಂದರ್ಭ ಸಾಧಕತನದ ಧೋರಣೆ ಅನುಸರಿಸಿದರು. ಅನಂತರ ಇಸ್ಲಾಮೀ ಸರಕಾರದ ಪ್ರಾಬಲ್ಯ ನಜ್ದ್ ಮತ್ತು ಹಿಜಾಝ್‌ನ ಒಂದು ದೊಡ್ಡ ಭಾಗದಲ್ಲಿ ವ್ಯಾಪಿಸಿ, ವಿರೋಧಿ ಶಕ್ತಿಗಳ ಪ್ರಾಬಲ್ಯ ಕೊನೆಗೊಳ್ಳತೊಡಗಿದಾಗ, ಇನ್ನು ಇಸ್ಲಾಮಿನ ವರ್ತುಲದೊಳಕ್ಕೆ ಪ್ರವೇಶಿಸುವುದರಲ್ಲೇ ಹಿತವಿದೆ ಎಂದು ಅವರು ಭಾವಿಸಿದರು. ವಿಶ್ವಾಸ ತಂದಿದ್ದ ಮತ್ತು ಪ್ರಾಮಾಣಿಕವಾಗಿ ಅದರ ಬೇಡಿಕೆಗಳನ್ನು ಈಡೇರಿಸಲು ಸನ್ನದ್ಧರಾಗಿದ್ದ ಕೆಲವು ಮಂದಿಯೂ ಅವರಲ್ಲಿದ್ದರು. ಅವರ ಪ್ರಸ್ತುತ ಪರಿಸ್ಥಿತಿಯನ್ನೇ ಈ ಸೂಕ್ತದಲ್ಲಿ ವರ್ಣಿಸಲಾಗಿದೆ. ಅರ್ಥಾತ್ ಪಟ್ಟಣದವರಿಗೆ ಹೋಲಿಸಿದರೆ ಈ ಗ್ರಾಮ ಮರುಭೂಮಿಯ ನಿವಾಸಿಗಳು ಹೆಚ್ಚು ಕಾಪಟ್ಯದ ಧೋರಣೆಯನ್ನು ಹೊಂದಿದ್ದಾರೆ. ಸತ್ಯವನ್ನು ನಿರಾಕರಿಸುವ ಭಾವ ಅವರಲ್ಲಿ ಹೆಚ್ಚು ಕಂಡು ಬರುತ್ತದೆ. ಅನಂತರ ಅದರ ಕಾರಣವನ್ನೂ ವಿವರಿಸಲಾಗಿದೆ. ಪಟ್ಟಣದವರು ಜ್ಞಾನಿಗಳು ಮತ್ತು ಸತ್ಯದ ವಾಹಕರ ಸಹವಾಸದಿಂದ ಧರ್ಮ ಮತ್ತು ಅದರ ಮೇರೆಗಳ ಬಗ್ಗೆ ತಿಳುವಳಿಕೆಯನ್ನು ಗಳಿಸುತ್ತಾರೆ. ಆದರೆ ಬದವೀಗಳು ಹೊಟ್ಟೆ ಹೊರೆಯಲಿಕ್ಕಾಗಿ ಬದುಕುವ ಪ್ರಾಣಿಗಳಂತೆ ಸಮಸ್ತ ಜೀವನವನ್ನು ರಾತ್ರಿ ಹಗಲೆನ್ನದೆ ಜೀವನಾಧಾರ ಸಂಪಾದಿಸುವುದಕ್ಕಾಗಿ ಮುಡಿಪಾಗಿಡುತ್ತಾರೆ. ಪ್ರಾಣಿ ಸದೃಶ ಜೀವನಕ್ಕಿಂತ ಉನ್ನತವಾದ ಯಾವುದೇ ವಿಚಾರಗಳ ಬಗ್ಗೆ ಗಮನಹರಿಸಲಿಕ್ಕೂ ಅವರಿಗೆ ಅವಕಾಶ ದೊರೆಯುವುದಿಲ್ಲ. ಆದ್ದರಿಂದ ಧರ್ಮ ಮತ್ತು ಅದರ ಮೇರೆಗಳ ಬಗ್ಗೆ ಅವರು ಅಜ್ಞರಾಗಿರುವ ಸಾಧ್ಯತೆಗಳು ಹೆಚ್ಚಿವೆ. ಮುಂದೆ 122ನೆಯ ಸೂಕ್ತದಲ್ಲಿ ಅವರ ಈ ರೋಗಕ್ಕೆ ನಿವಾರಣೋಪಾಯವನ್ನು ಸೂಚಿಸಲಾಗಿದೆ.

100. ಈಮಾನಿನ ಕರೆಗೆ ಓಗೊಡುವುದರಲ್ಲಿ ಮೊದಲಿಗರಾದ ಮುಹಾಜಿರ್ ಮತ್ತು ಅನ್ಸಾರರೊಂದಿಗೂ ಅನಂತರ ಸತ್ಯಸಂಧತೆಯೊಂದಿಗೆ ಅವರನ್ನು ಹಿಂಬಾಲಿಸಿದವರೊಂದಿಗೂ ಅಲ್ಲಾಹನು ಪ್ರಸನ್ನನಾದನು ಮತ್ತು ಅಲ್ಲಾಹನೊಂದಿಗೆ ಅವರು ಪ್ರಸನ್ನರಾದರು. ಅಲ್ಲಾಹ್ ಅವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳನ್ನು ಸಿದ್ಧಗೊಳಿಸಿಟ್ಟಿರುತ್ತಾನೆ. ಅವುಗಳಲ್ಲಿ ಅವರು ಸದಾ ವಾಸಿಸುತ್ತಿರುವರು. ಇದುವೇ ಅತ್ಯಂತ ಭವ್ಯ ಯಶಸ್ಸು.

وَالسّٰبِقُوْنَ الْاَوَّلُوْنَ مِنَ الْمُهٰجِرِيْنَ وَالْاَنْصَارِ وَالَّذِيْنَ اتَّبَعُوْهُمْ بِاِحْسَانٍ ۙ رَّضِيَ اللّٰهُ عَنْهُمْ وَرَضُوْا عَنْهُ وَاَعَدَّ لَهُمْ جَنّٰتٍ تَجْرِيْ تَحْتَهَا الْاَنْهٰرُ خٰلِدِيْنَ فِيْهَاۤ اَبَدًا ؕ ذٰلِكَ الْفَوْزُ الْعَظِيْمُ ﴿١٠٠﴾

101. ನಿಮ್ಮ ಆಸುಪಾಸಿನಲ್ಲಿರುವ ಬದವೀಯರಲ್ಲಿ ಅನೇಕ ಕಪಟ ವಿಶ್ವಾಸಿಗಳಿದ್ದಾರೆ. ಅದೇ ರೀತಿಯಲ್ಲಿ ಮದೀನಾ ವಾಸಿಗಳಲ್ಲಿಯೂ ಕಪಟವಿಶ್ವಾಸಿಗಳಿದ್ದಾರೆ. ಅವರು ಕಾಪಟ್ಯದಲ್ಲಿ ನಿಸ್ಸೀಮರಾಗಿದ್ದಾರೆ. ನೀವು ಅವರನ್ನು ಅರಿತಿಲ್ಲ. ನಾವು ಅವರನ್ನು ಅರಿತಿದ್ದೇವೆ. ನಾವು ಅವರಿಗೆ ಇಮ್ಮಡಿ ಶಿಕ್ಷೆ ಕೊಡುವ ಕಾಲ ಸಮೀಪವಿದೆ. ಅನಂತರ ಅವರು ಬಹುದೊಡ್ಡ ಶಿಕ್ಷೆಗಾಗಿ ಮರಳಿ ತರಲ್ಪಡುವರು.

وَمِمَّنْ حَوْلَكُمْ مِّنَ الْاَعْرَابِ مُنٰفِقُوْنَ ۛؕ وَمِنْ اَهْلِ الْمَدِيْنَةِ ۛؔ مَرَدُوْا عَلَى النِّفَاقِ ۫ لَا تَعْلَمُهُمْ ؕ نَحْنُ نَعْلَمُهُمْ ؕ سَنُعَذِّبُهُمْ مَّرَّتَيْنِ ثُمَّ يُرَدُّوْنَ اِلٰى عَذَابٍ عَظِيْمٍ ﴿١٠١﴾ۚ

102. ತಮ್ಮ ಅಪರಾಧಗಳನ್ನು ಒಪ್ಪಿಕೊಂಡಂತಹ ಬೇರೆ ಕೆಲವರಿದ್ದಾರೆ. ಅವರ ಕರ್ಮ ಸಮ್ಮಿಶ್ರವಾಗಿದೆ. ಸ್ವಲ್ಪ ಸತ್ಕರ್ಮ ಮತ್ತು ಸ್ವಲ್ಪ ದುಷ್ಕರ್ಮ. ಅಲ್ಲಾಹ್ ಅವರ ಮೇಲೆ ಪುನಃ ದಯೆ ತೋರಲೂ ಸಾಕು. ಏಕೆಂದರೆ ಅವನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَاٰخَرُوْنَ اعْتَرَفُوْا بِذُنُوْبِهِمْ خَلَطُوْا عَمَلًا صَالِحًا وَّاٰخَرَ سَيِّئًا ؕ عَسَى اللّٰهُ اَنْ يَّتُوْبَ عَلَيْهِمْ ؕ اِنَّ اللّٰهَ غَفُوْرٌ رَّحِيْمٌ ﴿١٠٢﴾

103. ಓ ಪೈಗಂಬರರೇ, ನೀವು ಅವರ ಸಂಪತ್ತುಗಳಿಂದ 'ದಾನ ಧರ್ಮ'ಗಳನ್ನು ಪಡೆದು ಅವರನ್ನು ಶುದ್ಧೀಕರಿಸಿರಿ ಮತ್ತು (ಸನ್ಮಾರ್ಗದಲ್ಲಿ) ಅವರನ್ನು ಮುಂದುವರಿಸಿರಿ ಮತ್ತು ಅವರಿಗಾಗಿ ಪ್ರಾರ್ಥಿಸಿರಿ. ಏಕೆಂದರೆ, ನಿಮ್ಮ ಪ್ರಾರ್ಥನೆಯು ಅವರ ಮನಶ್ಶಾಂತಿಗೆ ಕಾರಣವಾಗುವುದು. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

خُذْ مِنْ اَمْوَالِهِمْ صَدَقَةً تُطَهِّرُهُمْ وَتُزَكِّيْهِمْ بِهَا وَصَلِّ عَلَيْهِمْ ؕ اِنَّ صَلٰوتَكَ سَكَنٌ لَّهُمْ ؕ وَاللّٰهُ سَمِيْعٌ عَلِيْمٌ ﴿١٠٣﴾

104. ಅಲ್ಲಾಹ್ ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸುವವನೂ ಅವರ ದಾನಗಳಿಗೆ ಸ್ವೀಕಾರ ನೀಡುವವನೂ ಅತ್ಯಧಿಕ ಕ್ಷಮಿಸುವವನೂ ಕರುಣಾನಿಧಿಯೂ ಆಗಿರುತ್ತಾನೆಂದು ಅವರಿಗೆ ತಿಳಿದಿಲ್ಲವೇ?

اَلَمْ يَعْلَمُوْۤا اَنَّ اللّٰهَ هُوَ يَقْبَلُ التَّوْبَةَ عَنْ عِبَادِهٖ وَيَاْخُذُ الصَّدَقٰتِ وَاَنَّ اللّٰهَ هُوَ التَّوَّابُ الرَّحِيْمُ ﴿١٠٤﴾

105. ಓ ಪೈಗಂಬರರೇ, ಅವರೊಡನೆ ಹೇಳಿರಿ, "ನೀವು ಪ್ರವರ್ತಿಸಿರಿ. ನಿಮ್ಮ ವರ್ತನೆ ಈಗ ಹೇಗಿರುತ್ತದೆಂದು ಅಲ್ಲಾಹ್, ಅವನ ರಸೂಲ್ ಮತ್ತು ಸತ್ಯವಿಶ್ವಾಸಿಗಳು ವೀಕ್ಷಿಸುವರು. ಆ ಬಳಿಕ ಪ್ರತ್ಯಕ್ಷ ಮತ್ತು ರಹಸ್ಯಗಳೆಲ್ಲವನ್ನೂ ಅರಿಯುವಾತನ ಕಡೆಗೆ ನೀವು ಮರಳಿಸಲ್ಪಡುವಿರಿ. ನೀವೇನು ಮಾಡುತ್ತಲಿದ್ದಿರೆಂಬುದನ್ನು ಅವನು ನಿಮಗೆ ತೋರಿಸಿ ಕೊಡುವನು."

وَقُلِ اعْمَلُوا فَسَيَرَى اللَّهُ عَمَلَكُمْ
وَرَسُولُهُ وَالْمُؤْمِنُونَ ۖ وَسَتُرَدُّونَ إِلَىٰ
عَالِمِ الْغَيْبِ وَالشَّهَادَةِ فَيُنَبِّئُكُمْ بِمَا
كُنْتُمْ تَعْمَلُونَ ﴿١٠٥﴾

106. ಇನ್ನು ಕೆಲವರಿದ್ದಾರೆ. ಅವರ ಪ್ರಕರಣವು ಇನ್ನೂ ಅಲ್ಲಾಹನ ಆಜ್ಞೆಯನ್ನು ಅವಲಂಬಿಸಿದೆ. ಅವನು ಇಷ್ಟಪಟ್ಟರೆ ಅವರಿಗೆ ಶಿಕ್ಷೆ ಕೊಡಬಹುದು. ಇಷ್ಟಪಟ್ಟರೆ ಅವರ ಮೇಲೆ ಪುನಃ ದಯೆತೋರಲೂ ಬಹುದು. ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَآخَرُونَ مُرْجَوْنَ لِأَمْرِ اللَّهِ إِمَّا يُعَذِّبُهُمْ
وَإِمَّا يَتُوبُ عَلَيْهِمْ ۗ وَاللَّهُ عَلِيمٌ حَكِيمٌ ﴿١٠٦﴾

107. ಒಂದು ಮಸೀದಿ ಕಟ್ಟಿಸಿದ ಕೆಲವರಿದ್ದಾರೆ. ಅವರು ಅದನ್ನು (ಸತ್ಯಾಹ್ವಾನಕ್ಕೆ) ಹಾನಿಯನ್ನುಂಟು ಮಾಡಲಿಕ್ಕೂ (ಅಲ್ಲಾಹನ ದಾಸ್ಯ-ಆರಾಧನೆ ಮಾಡುವ ಬದಲಿಗೆ) ಸತ್ಯವನ್ನು ನಿಷೇಧಿಸಲಿಕ್ಕೂ ಸತ್ಯವಿಶ್ವಾಸಿಗಳೊಳಗೆ ಒಡಕನ್ನುಂಟು ಮಾಡಲಿಕ್ಕೂ (ಈ ತೋರಿಕೆಯ ಆರಾಧನಾಲಯವನ್ನು) ಈ ಮುಂಚೆ ಅಲ್ಲಾಹ್ ಮತ್ತು ಅವನ ರಸೂಲರ ವಿರುದ್ಧ ಯುದ್ಧಾಸಕ್ತನಾಗಿದ್ದವನಿಗೆ ಹೊಂಚುದಾಣವನ್ನಾಗಿಡುವ ಉದ್ದೇಶದಿಂದ ಕಟ್ಟಿಸಿರುತ್ತಾರೆ. ನಮ್ಮ ಉದ್ದೇಶವು ಒಳ್ಳೆಯದಾಗಿದ್ದಿತೇ ವಿನಾ ಇನ್ನಾವುದೂ ಇರಲಿಲ್ಲವೆಂದು ಅವರು ಖಂಡಿತವಾಗಿಯೂ ಪ್ರಮಾಣ ಮಾಡುತ್ತ ಹೇಳುವರು. ಆದರೆ ಅವರು ಸುಳ್ಳುಗಾರರೆಂಬುದಕ್ಕೆ ಅಲ್ಲಾಹನು ಸಾಕ್ಷಿಯಾಗಿದ್ದಾನೆ.

وَالَّذِينَ اتَّخَذُوا مَسْجِدًا ضِرَارًا وَ
كُفْرًا وَتَفْرِيقًا بَيْنَ الْمُؤْمِنِينَ وَإِرْصَادًا
لِمَنْ حَارَبَ اللَّهَ وَرَسُولَهُ مِنْ قَبْلُ ۚ
وَلَيَحْلِفُنَّ إِنْ أَرَدْنَا إِلَّا الْحُسْنَىٰ ۖ وَ
اللَّهُ يَشْهَدُ إِنَّهُمْ لَكَاذِبُونَ ﴿١٠٧﴾

108. ನೀವು ಎಷ್ಟು ಮಾತ್ರಕ್ಕೂ ಆ ಕಟ್ಟಡದೊಳಗೆ ನಿಲ್ಲಬಾರದು. ಆರಂಭದ ದಿನದಿಂದಲೇ ಧರ್ಮನಿಷ್ಠೆಯ ಮೇಲೆ ಸ್ಥಾಪಿತಗೊಂಡಿರುವ ಮಸೀದಿಯೇ (ಆರಾಧನೆಗಾಗಿ) ನಿಲ್ಲಲು ಯೋಗ್ಯವಾದುದು. ಶುದ್ಧವಾಗಿರಬೇಕೆಂದು ಇಚ್ಛಿಸುವವರು ಅದರಲ್ಲಿ ಇರುತ್ತಾರೆ. ಶುದ್ಧತೆಯನ್ನು ಪಾಲಿಸುವವರೇ ಅಲ್ಲಾಹನಿಗೆ ಇಷ್ಟವುಳ್ಳವರು.[37]

لَا تَقُمْ فِيهِ أَبَدًا ۚ لَمَسْجِدٌ أُسِّسَ
عَلَى التَّقْوَىٰ مِنْ أَوَّلِ يَوْمٍ أَحَقُّ أَنْ
تَقُومَ فِيهِ ۚ فِيهِ رِجَالٌ يُحِبُّونَ أَنْ
يَتَطَهَّرُوا ۚ وَاللَّهُ يُحِبُّ الْمُطَّهِّرِينَ ﴿١٠٨﴾

37. ಮದೀನಾದಲ್ಲಿ ಆಗ ಎರಡು ಮಸೀದಿಗಳಿದ್ದವು. ಒಂದು ಕುಬಾ ಮಸೀದಿ ಅದು ನಗರದ ಹೊರವಲಯದಲ್ಲಿತ್ತು. ಇನ್ನೊಂದು ಮಸ್ಜಿದುನ್ನಬವಿ ಅದು ನಗರದ ಒಳಭಾಗದಲ್ಲಿತ್ತು. ಈ ಎರಡು ಮಸೀದಿಗಳಿರುವಾಗ ಮೂರನೆಯ ಮಸೀದಿಯನ್ನು ಕಟ್ಟುವ ಅವಶ್ಯಕತೆ

أَفَمَنْ أَسَّسَ بُنْيَانَهُ عَلَىٰ تَقْوَىٰ مِنَ اللَّهِ وَرِضْوَانٍ خَيْرٌ أَم مَّنْ أَسَّسَ بُنْيَانَهُ عَلَىٰ شَفَا جُرُفٍ هَارٍ فَانْهَارَ بِهِ فِي نَارِ جَهَنَّمَ ۗ وَاللَّهُ لَا يَهْدِي الْقَوْمَ الظَّالِمِينَ ﴿١٠٩﴾

109. ತನ್ನ ಕಟ್ಟಡದ ಬುನಾದಿಯನ್ನು ಅಲ್ಲಾಹನ ಭಯ ಮತ್ತು ಅವನ ಸಂಪ್ರೀತಿಯ ಅಪೇಕ್ಷೆಯ ಮೇಲಿರಿಸಿದವನು ಉತ್ತಮನೋ ಅಥವಾ ತನ್ನ ಕಟ್ಟಡವನ್ನು ಒಂದು ಕಣಿವೆಯ ಟೊಳ್ಳಾದ ಅಸ್ಥಿರ ಅಂಚಿನಲ್ಲಿ ಕಟ್ಟಿಸಿದ್ದು ಅದರ ಸಹಿತ ನೆಟ್ಟಗೆ ನರಕಾಗ್ನಿಯಲ್ಲಿ ಹೋಗಿ ಬಿದ್ದವನೋ? ಅಲ್ಲಾಹನು ಇಂತಹ ಅಕ್ರಮಿಗಳಿಗೆ ಎಂದೆಂದಿಗೂ ನೇರಮಾರ್ಗವನ್ನು ತೋರಿಸುವುದಿಲ್ಲ.

لَا يَزَالُ بُنْيَانُهُمُ الَّذِي بَنَوْا رِيبَةً فِي قُلُوبِهِمْ إِلَّا أَن تَقَطَّعَ قُلُوبُهُمْ ۗ وَاللَّهُ عَلِيمٌ حَكِيمٌ ﴿١١٠﴾

110. ಅವರು ನಿರ್ಮಿಸಿದ ಕಟ್ಟಡವು ಅವರ ಹೃದಯದಲ್ಲಿ ಸದಾ ಸಂದೇಹದ ಮೂಲವಾಗಿ ಉಳಿಯುವುದು. ಅವರ ಹೃದಯಗಳೇ ಚೂರುಚೂರಾಗಬೇಕೇ ವಿನಾ (ಅದರೊಳಗಿಂದ ಪಾರಾಗುವ ಬೇರಾವ ದಾರಿಯೂ ಇಲ್ಲ.) ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

إِنَّ اللَّهَ اشْتَرَىٰ مِنَ الْمُؤْمِنِينَ أَنفُسَهُمْ وَأَمْوَالَهُم بِأَنَّ لَهُمُ الْجَنَّةَ ۚ يُقَاتِلُونَ فِي سَبِيلِ اللَّهِ فَيَقْتُلُونَ وَيُقْتَلُونَ ۖ وَعْدًا عَلَيْهِ حَقًّا فِي التَّوْرَاةِ وَالْإِنجِيلِ وَالْقُرْآنِ ۚ وَمَنْ أَوْفَىٰ بِعَهْدِهِ مِنَ اللَّهِ ۚ فَاسْتَبْشِرُوا بِبَيْعِكُمُ الَّذِي بَايَعْتُم بِهِ ۚ وَذَٰلِكَ هُوَ الْفَوْزُ الْعَظِيمُ ﴿١١١﴾

111. ವಾಸ್ತವದಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳಿಂದ ಅವರ ತನು-ಧನಗಳನ್ನು ಸ್ವರ್ಗದ ಬದಲಿಗೆ ಖರೀದಿ ಮಾಡಿರುತ್ತಾನೆ.[38] ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಡುತ್ತಾರೆ, ವಧಿಸುತ್ತಾರೆ ಮತ್ತು ವಧಿಸಲ್ಪಡುತ್ತಾರೆ. ತೌರಾತ್, ಇಂಜೀಲ್ ಮತ್ತು ಕುರ್‌ಆನಿನಲ್ಲಿ ಅವರೊಡನೆ (ಮಾಡಲಾದ, ಸ್ವರ್ಗದ ವಾಗ್ದಾನವು) ಅಲ್ಲಾಹನ ಹೊಣೆಯಲ್ಲಿರುವ ದೃಢ ವಾಗ್ದಾನವಾಗಿದೆ. ಅಲ್ಲಾಹನಿಗಿಂತ ಮಿಗಿಲಾಗಿ ತನ್ನ ವಾಗ್ದಾನ ಪೂರೈಸುವವನು ಯಾರಿದ್ದಾನೆ? ಆದುದರಿಂದ ನೀವು ಆತನೊಂದಿಗೆ ಮಾಡಿಕೊಂಡಿರುವ ವ್ಯವಹಾರಕ್ಕಾಗಿ ಸಂತೋಷಪಡಿರಿ. ಇದುವೇ ಅತ್ಯಂತ ಹಿರಿಯ ವಿಜಯವಾಗಿದೆ.

التَّائِبُونَ الْعَابِدُونَ الْحَامِدُونَ السَّائِحُونَ

112. ಅಲ್ಲಾಹನ ಕಡೆಗೆ ಪದೇ ಪದೇ ಮರಳುವವರು,[39] ಅವನ

---

ಇರಲಿಲ್ಲ. ಆದರೆ ಕಪಟವಿಶ್ವಾಸಿಗಳು ಒಂದು ನೆಪವನ್ನು ಹುಡುಕಿ ತೆಗೆದರು. ಮಳೆಯ ವೇಳೆ ಮತ್ತು ಚಳಿಗಾಲದ ರಾತ್ರಿಗಳಲ್ಲಿ ಸಾಮಾನ್ಯ ಜನರಿಗೆ ವಿಶೇಷವಾಗಿ ಆ ಮಸೀದಿಗಳಿಂದ ದೂರದಲ್ಲಿ ವಾಸಿಸುವ ಮುದುಕರು ಮತ್ತು ವಿಕಲಾಂಗರಿಗೆ ಐದು ಹೊತ್ತಿನ ನಮಾಝಿಗೆ ಹಾಜರಾಗುವುದು ಕಷ್ಟವಾಗುತ್ತದೆ. ಆದ್ದರಿಂದ ನಮಾಝಿಗಳ ಸೌಲಭ್ಯಕ್ಕಾಗಿ ಈ ಮಸೀದಿಯನ್ನು ನಿರ್ಮಿಸ ಬಯಸುತ್ತೇವೆ ಎಂದು ಹೇಳಿ ಅವರು ಮಸೀದಿಯ ನಿರ್ಮಾಣಕ್ಕೆ ಅನುಮತಿ ಪಡೆದರು. ಅನಂತರ ಅದನ್ನು ತಮ್ಮ ಸಂಚುಗಳ ಕೇಂದ್ರವನ್ನಾಗಿ ಮಾಡಿದರು. ಪ್ರವಾದಿವರ್ಯರನ್ನು(ಸ) ವಂಚಿಸಿ ಅವರಿಂದಲೇ ಅದರ ಉದ್ಘಾಟನೆ ಮಾಡಿಸಬೇಕೆಂದು ಅವರು ಬಯಸಿದ್ದರು. ಆದರೆ ಅಲ್ಲಾಹನು ಪ್ರವಾದಿವರ್ಯರಿಗೆ(ಸ) ಅವರ ಸಂಕಲ್ಪಗಳ ಬಗ್ಗೆ ಮೊದಲೇ ತಿಳಿಸಿದನು. ಆದ್ದರಿಂದ ತಬೂಕ್‌ನಿಂದ ಮರಳಿದ ಬಳಿಕ ಪ್ರವಾದಿವರ್ಯರು(ಸ) 'ಮಸ್ಜಿದುಝಿರಾರ್' ಎಂಬ ಆ ಮಸೀದಿಯನ್ನು ಧ್ವಂಸಗೊಳಿಸಿದರು.

38. ಇಲ್ಲಿ ದೇವನ ಮತ್ತು ದಾಸನ ನಡುವೆ ಇರುವ ಸತ್ಯವಿಶ್ವಾಸದ ವ್ಯವಹಾರವನ್ನು 'ಬೈಅ್' (ವ್ಯಾಪಾರ) ಎನ್ನಲಾಗಿದೆ. ಅರ್ಥಾತ್ ಸತ್ಯವಿಶ್ವಾಸ ಒಂದು ಒಪ್ಪಂದವಾಗಿದೆ. ಅದರ ಪ್ರಕಾರ ದಾಸ ತನ್ನ ದೇಹ ಮತ್ತು ಸೊತ್ತನ್ನು ದೇವನಿಗೆ ಮಾರಾಟಮಾಡುತ್ತಾನೆ. ಅದಕ್ಕೆ ಪ್ರತಿಯಾಗಿ ಮರಣೋತ್ತರ ಜೀವನದಲ್ಲಿ ಸ್ವರ್ಗವನ್ನು ನೀಡಲಾಗುವುದು ಎಂಬ ಆಶ್ವಾಸನೆಯನ್ನು ಅವನು ಸ್ವೀಕರಿಸಿಕೊಳ್ಳುತ್ತಾನೆ.

39. ಮೂಲದಲ್ಲಿ 'ಅತ್ತಾಯಿಬೂನ್' ಎಂಬ ಪದ ಪ್ರಯೋಗವಾಗಿದೆ. ಅದರ ಶಬ್ದಾರ್ಥ 'ತೌಬ ಮಾಡುವವರು ಅಥವಾ ಪ್ರಾಯಶ್ಚಿತ್ತ

ದಾಸ್ಯ-ಆರಾಧನೆ ಮಾಡುವವರು, ಅವನ ಗುಣಗಾನ ಮಾಡುವವರು, ಅವನಿಗಾಗಿ ಭೂಮಿಯಲ್ಲಿ ಸಂಚರಿಸುವವರು,[40] ಅವನ ಮುಂದೆ ಬಾಗುವವರು ಮತ್ತು ಸಾಷ್ಟಾಂಗವೆರಗುವವರು, ಒಳಿತಿನ ಆಜ್ಞೆ ನೀಡುವವರು, ಕೆಡುಕಿನಿಂದ ತಡೆಯುವವರು ಮತ್ತು ಅಲ್ಲಾಹನ ಮೇರೆಗಳ ರಕ್ಷಣೆ ಮಾಡುವವರು (ಅಲ್ಲಾಹನೊಂದಿಗೆ ತಮ್ಮ ವ್ಯವಹಾರವನ್ನು ಪೂರ್ತಿಗೊಳಿಸಿಕೊಂಡ ಆ 'ಸತ್ಯವಿಶ್ವಾಸಿ'ಗಳ ವೈಶಿಷ್ಟ್ಯಗಳಿವು.) ಓ ಪೈಗಂಬರರೇ, ಆ ಸತ್ಯವಿಶ್ವಾಸಿಗಳಿಗೆ ಶುಭವಾರ್ತೆ ನೀಡಿರಿ.

ٱلرَّٰكِعُونَ ٱلسَّٰجِدُونَ ٱلْـَٔامِرُونَ بِٱلْمَعْرُوفِ وَٱلنَّاهُونَ عَنِ ٱلْمُنكَرِ وَٱلْحَٰفِظُونَ لِحُدُودِ ٱللَّهِ ۗ وَبَشِّرِ ٱلْمُؤْمِنِينَ ﴿١١٢﴾

113. ಮುಶ್ರಿಕರು ನರಕಕ್ಕೆ ಅರ್ಹರೆಂಬ ವಿಷಯ ವ್ಯಕ್ತವಾಗಿರುವಾಗ, ಅವರು ಆಪ್ತ ಬಂಧುಗಳೇ ಆಗಿದ್ದರೂ ಅವರ ಕ್ಷಮೆಗಾಗಿ ಪ್ರಾರ್ಥಿಸುವುದು ಪ್ರವಾದಿಗೂ ಸತ್ಯವಿಶ್ವಾಸ ಹೊಂದಿದವರಿಗೂ ಶೋಭಿಸುವುದಿಲ್ಲ.

مَا كَانَ لِلنَّبِىِّ وَٱلَّذِينَ ءَامَنُوٓا۟ أَن يَسْتَغْفِرُوا۟ لِلْمُشْرِكِينَ وَلَوْ كَانُوٓا۟ أُو۟لِى قُرْبَىٰ مِنۢ بَعْدِ مَا تَبَيَّنَ لَهُمْ أَنَّهُمْ أَصْحَٰبُ ٱلْجَحِيمِ ﴿١١٣﴾

114. ಇಬ್‌ರಾಹೀಮರು ತಮ್ಮ ಪಿತನಿಗಾಗಿ ಪ್ರಾರ್ಥಿಸಿದ್ದುದು ಅವರು ತಮ್ಮ ಪಿತನೊಂದಿಗೆ ಮಾಡಿದ ವಾಗ್ದಾನದ ಕಾರಣದಿಂದಾಗಿತ್ತು. ಆದರೆ ಅವರ ತಂದೆಯು ಅಲ್ಲಾಹನ ಶತ್ರುವೆಂಬ ವಿಷಯ ಅವರಿಗೆ ಮನವರಿಕೆಯಾದಾಗ ಅವರು ಅವನಿಂದ ಅಸಂತುಷ್ಟರಾದರು. ನಿಶ್ಚಯವಾಗಿಯೂ ಇಬ್‌ರಾಹೀಮರು ಬಹಳ ಕೋಮಲ ಹೃದಯದವರೂ ಸಹನಶೀಲರೂ ಆಗಿದ್ದರು.

وَمَا كَانَ ٱسْتِغْفَارُ إِبْرَٰهِيمَ لِأَبِيهِ إِلَّا عَن مَّوْعِدَةٍ وَعَدَهَآ إِيَّاهُ فَلَمَّا تَبَيَّنَ لَهُۥٓ أَنَّهُۥ عَدُوٌّ لِّلَّهِ تَبَرَّأَ مِنْهُ ۚ إِنَّ إِبْرَٰهِيمَ لَأَوَّٰهٌ حَلِيمٌ ﴿١١٤﴾

115. ಜನರಿಗೆ ಸನ್ಮಾರ್ಗದರ್ಶನ ನೀಡಿದ ಬಳಿಕ ಅವರು ವರ್ಜಿಸಬೇಕಾದುದೇನೆಂಬುದನ್ನು ಸುವ್ಯಕ್ತವಾಗಿ ಅವರಿಗೆ ತಿಳಿಸದೆ ಅವರನ್ನು ಪಥಭ್ರಷ್ಟಗೊಳಿಸುವುದು ಅಲ್ಲಾಹನ ರೂಢಿಯಲ್ಲ. ವಾಸ್ತವದಲ್ಲಿ ಅಲ್ಲಾಹನು ಸಕಲ ವಿಷಯಗಳ ಜ್ಞಾನವುಳ್ಳವನಾಗಿರುತ್ತಾನೆ.

وَمَا كَانَ ٱللَّهُ لِيُضِلَّ قَوْمًۢا بَعْدَ إِذْ هَدَىٰهُمْ حَتَّىٰ يُبَيِّنَ لَهُم مَّا يَتَّقُونَ ۚ إِنَّ ٱللَّهَ بِكُلِّ شَىْءٍ عَلِيمٌ ﴿١١٥﴾

116. ಭೂಮಿ-ಆಕಾಶಗಳ ಪ್ರಭುತ್ವವು ವಾಸ್ತವದಲ್ಲಿ ಅಲ್ಲಾಹನ ವಶವಿದೆ. ಬದುಕು ಸಾವುಗಳು ಅವನ ಅಧಿಕಾರದಲ್ಲಿವೆ. ಅವನಲ್ಲದೆ ನಿಮಗಾರೂ ರಕ್ಷಕ ಮಿತ್ರನಾಗಲಿ ಸಹಾಯಕನಾಗಲಿ ಇಲ್ಲ.

إِنَّ ٱللَّهَ لَهُۥ مُلْكُ ٱلسَّمَٰوَٰتِ وَٱلْأَرْضِ ۖ يُحْىِۦ وَيُمِيتُ ۚ وَمَا لَكُم مِّن دُونِ ٱللَّهِ مِن وَلِىٍّ وَلَا نَصِيرٍ ﴿١١٦﴾

---

ಪಡುವವರು ಎಂದಾಗಿದೆ. ಆದರೆ ಈ ಪದ ಪ್ರಯೋಗವಾಗಿರುವ ವಾಕ್ಯದ ಶೈಲಿಯನ್ನು ನೋಡಿದರೆ ಪ್ರಾಯಶ್ಚಿತ್ತ ಪಡುವುದು ಸತ್ಯವಿಶ್ವಾಸಿಗಳ ಶಾಶ್ವತ ಗುಣಗಳಲ್ಲೊಂದಾಗಿದೆ ಎಂದು ಸ್ಪಷ್ಟವಾಗುತ್ತದೆ. ಅವರು ಒಮ್ಮೆ ಮಾತ್ರ ಪ್ರಾಯಶ್ಚಿತ್ತ ಪಡುವುದಲ್ಲ, ಬದಲಾಗಿ ಸದಾ ಪ್ರಾಯಶ್ಚಿತ್ತಪಡುತ್ತಲೇ ಇರುತ್ತಾರೆ ಎಂಬುದು ಇದರ ನಿಜವಾದ ವ್ಯಾಖ್ಯೆಯಾಗಿದೆ. ತೌಬಾದ ನಿಜವಾದ ಅರ್ಥ ಮರಳುವುದು ಅಥವಾ ವಾಲುವುದು ಎಂದಾಗಿದೆ. ಆದ್ದರಿಂದ ಈ ಪದದ ನೈಜ ಸ್ಫೂರ್ತಿಯನ್ನು ವ್ಯಕ್ತಪಡಿಸಲಿಕ್ಕಾಗಿ ನಾವು ಅದನ್ನು ವಿವರಣಾತ್ಮಕವಾಗಿ, "ಅಲ್ಲಾಹನೆಡೆಗೆ ಪದೇ ಪದೇ ಮರಳುವವರು" ಎಂದು ಅನುವಾದಿಸಿದ್ದೇವೆ.

40. ಅದರ ಇನ್ನೊಂದು ಅನುವಾದ ಉಪವಾಸ ಆಚರಿಸುವವರು ಎಂದೂ ಆಗಬಹುದು.

117. ಅಲ್ಲಾಹನು ಪ್ರವಾದಿಯವರನ್ನೂ ಅವರ ಕಷ್ಟಕಾಲದಲ್ಲಿ ಅವರಿಗೆ ಸಹಕರಿಸಿದ ಮುಹಾಜಿರ್ ಮತ್ತು ಅನ್ಸಾರರನ್ನೂ ಕ್ಷಮಿಸಿಬಿಟ್ಟನು. ಅವರ ಪೈಕಿ ಕೆಲವರ ಹೃದಯಗಳು ವಕ್ರತೆಯ ಕಡೆಗೆ ವಾಲಿಹೋಗಿದ್ದರೂ[41] (ಆದರೆ ಅವರು ವಕ್ರತೆಯನ್ನನುಸರಿಸದೆ ಪ್ರವಾದಿಯವರನ್ನು ಅನುಸರಿಸಿದಾಗ) ಅಲ್ಲಾಹನು ಅವರನ್ನು ಕ್ಷಮಿಸಿದನು. ನಿಶ್ಚಯವಾಗಿಯೂ ಅವನು ಅವರೊಂದಿಗೆ ವಾತ್ಸಲ್ಯ ಹಾಗೂ ಕರುಣೆಯ ವ್ಯವಹಾರವನ್ನಿರಿಸಿದ್ದಾನೆ.

لَقَدْ تَّابَ اللّٰهُ عَلَى النَّبِيِّ وَ الْمُهٰجِرِيْنَ وَالْاَنْصَارِ الَّذِيْنَ اتَّبَعُوْهُ فِيْ سَاعَةِ الْعُسْرَةِ مِنْۢ بَعْدِ مَا كَادَ يَزِيْغُ قُلُوْبُ فَرِيْقٍ مِّنْهُمْ ثُمَّ تَابَ عَلَيْهِمْ ؕ اِنَّهٗ بِهِمْ رَءُوْفٌ رَّحِيْمٌ ﴿۱۱۷﴾

118. ಪ್ರಕರಣವು ಮುಂದೂಡಲ್ಪಟ್ಟಿದ್ದ ಆ ಮೂವರನ್ನೂ ಅವನು ಕ್ಷಮಿಸಿದನು. ಭೂಮಿಯು ವಿಶಾಲವಾಗಿದ್ದರೂ ಅದು ಅವರ ಪಾಲಿಗೆ ಸಂಕುಚಿತವಾಯಿತು. ಅವರ ಜೀವಗಳೂ ಅವರಿಗೆ ಹೊರೆಯಾಗಿಬಿಟ್ಟವು. ಅಲ್ಲಾಹನಿಂದ ರಕ್ಷಣೆ ಹೊಂದಲು ಸ್ವತಃ ಅಲ್ಲಾಹನ ಕೃಪಾಶ್ರಯದ ವಿನಾ ಬೇರೆ ಆಶ್ರಯವಿಲ್ಲವೆಂದು ಅವರು ತಿಳಿದುಕೊಂಡರು. ಆಗ ಅವರು ತನ್ನ ಕಡೆಗೆ ಮರಳಿ ಬರಲೆಂದು ಅಲ್ಲಾಹನು ತನ್ನ ಕೃಪೆಯೊಂದಿಗೆ ಅವರ ಕಡೆಗೆ ತಿರುಗಿದನು. ನಿಶ್ಚಯವಾಗಿಯೂ ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.[42]

وَّعَلَى الثَّلٰثَةِ الَّذِيْنَ خُلِّفُوْا ؕ حَتّٰۤى اِذَا ضَاقَتْ عَلَيْهِمُ الْاَرْضُ بِمَا رَحُبَتْ وَضَاقَتْ عَلَيْهِمْ اَنْفُسُهُمْ وَظَنُّوْۤا اَنْ لَّا مَلْجَاَ مِنَ اللّٰهِ اِلَّاۤ اِلَيْهِ ؕ ثُمَّ تَابَ عَلَيْهِمْ لِيَتُوْبُوْا ؕ اِنَّ اللّٰهَ هُوَ التَّوَّابُ الرَّحِيْمُ ﴿۱۱۸﴾

119. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ, ಸತ್ಯ ಸಂಧರೊಂದಿಗಿರಿ.

يٰۤاَيُّهَا الَّذِيْنَ اٰمَنُوا اتَّقُوا اللّٰهَ وَكُوْنُوْا مَعَ الصّٰدِقِيْنَ ﴿۱۱۹﴾

120. ಅಲ್ಲಾಹನ ರಸೂಲರನ್ನು ಬಿಟ್ಟು ಮನೆಯಲ್ಲಿ ಕೂತಿರುವುದೂ ಅವರಿಂದ ನಿಶ್ಚಿಂತರಾಗಿ ತಮ್ಮ ತಮ್ಮ ಪ್ರಾಣಗಳ ಬಗ್ಗೆ ಯೋಚಿಸುತ್ತಿರುವುದೂ ಮದೀನಾವಾಸಿಗಳಿಗೂ ಆಸುಪಾಸಿನ

مَا كَانَ لِاَهْلِ الْمَدِيْنَةِ وَمَنْ حَوْلَهُمْ مِّنَ الْاَعْرَابِ اَنْ يَّتَخَلَّفُوْا عَنْ رَّسُوْلِ اللّٰهِ وَلَا يَرْغَبُوْا بِاَنْفُسِهِمْ عَنْ نَّفْسِهٖ ؕ

41. ಅರ್ಥಾತ್- ಕೆಲವು ಪ್ರಾಮಾಣಿಕ ಸಂಗಾತಿಗಳೂ ಆ ಸಂಕಷ್ಟದ ಸಂದರ್ಭದಲ್ಲಿ ಯುದ್ಧಕ್ಕೆ ಹೋಗುವುದರಿಂದ ಸ್ವಲ್ಪ ಮಟ್ಟಿಗೆ ಹಿಂಜರಿಯತೊಡಗಿದ್ದರು. ಆದರೆ ಅವರ ಮನಸ್ಸಿನಲ್ಲಿ ವಿಶ್ವಾಸವಿದ್ದುದರಿಂದ ಮತ್ತು ಪ್ರಾಮಾಣಿಕ ಚಿತ್ತದಿಂದ ಅವರು ಸತ್ಯಧರ್ಮವನ್ನು ಪ್ರೀತಿಸುತ್ತಿದ್ದುದರಿಂದ ಕೊನೆಗೂ ಅವರು ತಮ್ಮ ದೌರ್ಬಲ್ಯಗಳನ್ನು ಜಯಿಸಿಕೊಂಡರು.

42. ಈ ಮೂವರು ವ್ಯಕ್ತಿಗಳು ಕಅಬ್ ಬಿನ್ ಮಾಲಿಕ್, ಹಿಲಾಲ್ ಬಿನ್ ಉಮಯ್ಯ ಮತ್ತು ಮುರಾರ ಬಿನ್ ರಬೀಅ್(ರ) ಆಗಿದ್ದರು. ಮೂವರು ನೈಜ ಸತ್ಯವಿಶ್ವಾಸಿಗಳಾಗಿದ್ದರು. ಅದಕ್ಕೆ ಮೊದಲು ಅವರು ತಮ್ಮ ಪ್ರಾಮಾಣಿಕತೆಯನ್ನು ಹಲವು ಬಾರಿ ಸಾಬೀತು ಪಡಿಸಿದ್ದರು. ಅನೇಕ ತ್ಯಾಗಗಳನ್ನು ನೀಡಿದ್ದರು. ಆದರೆ ಅವರ ಈ ಸೇವೆಗಳ ಹೊರತಾಗಿಯೂ ಯುದ್ಧಕ್ಕೆ ಹೋಗಲು ಶಕ್ತರಾದ ಮುಸ್ಲಿಮರೆಲ್ಲರೂ ಯುದ್ಧಕ್ಕೆ ಹೊರಡಬೇಕೆಂದು ತಬೂಕ್ ಯುದ್ಧದ ಸಂದರ್ಭದಲ್ಲಿ ಆಜ್ಞೆ ಬಂದಾಗ ಈ ವ್ಯಕ್ತಿಗಳು ಔದಾಸೀನ್ಯ ಪ್ರದರ್ಶಿಸಿದ್ದರು. ಅದರ ಬಗ್ಗೆ ಉಗ್ರ ಕ್ರಮ ಕೈಗೊಳ್ಳಲಾಯಿತು. ತಬೂಕ್‌ನಿಂದ ಮರಳಿದ ಬಳಿಕ ಪ್ರವಾದಿವರ್ಯರು(ಸ) ಯಾರೂ ಅವರಿಗೆ ಸಲಾಮ್ ಹೇಳದಂತೆ ಮತ್ತು ಅವರೊಂದಿಗೆ ಮಾತನಾಡದಂತೆ ಮುಸ್ಲಿಮರಿಗೆ ಆದೇಶಿಸಿದರು. ನಲವತ್ತು ದಿನಗಳ ನಂತರ ಅವರ ಪತ್ನಿಯರಿಗೂ ಅವರನ್ನು ಬಿಟ್ಟಿರುವಂತೆ ತಾಕೀತು ಮಾಡಲಾಯಿತು. ಈ ಸೂಕ್ತದಲ್ಲಿ ಚಿತ್ರಿಸಲಾಗಿರುವಂತಹ ಪರಿಸ್ಥಿತಿಯನ್ನೇ ಅವರು ಮದೀನಾದಲ್ಲಿ ಸಾಕ್ಷಾತ್ ಎದುರಿಸುತ್ತಿದ್ದರು. ಕೊನೆಗೆ ಅವರೊಂದಿಗೆ ನಿರ್ಬಂಧಕ್ಕೆ 50 ದಿನಗಳಾದಾಗ ಕ್ಷಮೆಯ ಈ ಆದೇಶ ಅವತೀರ್ಣಗೊಂಡಿತು.

ಬದವೀಗಳಿಗೂ ಎಷ್ಟು ಮಾತ್ರಕ್ಕೂ ತಕ್ಕುದಾಗಿರಲಿಲ್ಲ. ಏಕೆಂದರೆ, ಅವರು ಅಲ್ಲಾಹನ ಮಾರ್ಗದಲ್ಲಿ ಹಸಿವು, ಬಾಯಾರಿಕೆ, ದೇಹ ಶ್ರಮಗಳನ್ನೂ- ಯಾವತ್ತು ಕಷ್ಟಗಳನ್ನು ಸಹಿಸಿಯೂ ಅವರು ಸತ್ಯನಿಷೇಧಿಗಳಿಗೆ ಅಪ್ರಿಯವಾದ ಮಾರ್ಗ ದಲ್ಲಿ ದಿಟ್ಟ ಹೆಜ್ಜೆಯಿರಿಸಿಯೂ ಅವರು ಯಾವನಾದರೊಬ್ಬ ವೈರಿಯೊಂದಿಗೆ (ಸತ್ಯದ್ವೇಷದ) ಪ್ರತೀಕಾರ ಪಡೆದೂ ಅದರ ಫಲವಾಗಿ ಅವರಿಗೊಂದು ಸತ್ಕರ್ಮವು ಲಿಖಿತಗೊಳ್ಳದಿರುವುದು ಎಂದಿಗೂ ಸಾಧ್ಯವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಸಜ್ಜನೋ ತ್ತಮರ ಸೇವಾಫಲವನ್ನು ನಿರರ್ಥಕ ಗೊಳಿಸುವುದಿಲ್ಲ.

ذَٰلِكَ بِأَنَّهُمْ لَا يُصِيبُهُمْ ظَمَأٌ وَلَا نَصَبٌ
وَلَا مَخْمَصَةٌ فِي سَبِيلِ اللَّهِ وَلَا يَطَئُونَ
مَوْطِئًا يَغِيظُ الْكُفَّارَ وَلَا يَنَالُونَ مِنْ
عَدُوٍّ نَّيْلًا إِلَّا كُتِبَ لَهُم بِهِ عَمَلٌ صَالِحٌ
إِنَّ اللَّهَ لَا يُضِيعُ أَجْرَ الْمُحْسِنِينَ ﴿١٢٠﴾

121. ಅದೇ ರೀತಿಯಲ್ಲಿ ಅವರು (ದೇವಮಾರ್ಗದಲ್ಲಿ) ಹೆಚ್ಚೋ ಕಡಿಮೆಯೋ ಖರ್ಚು ವಹಿಸಿಯೂ (ಧರ್ಮಯುದ್ಧಕ್ಕಾಗಿ) ಅವರು ಯಾವುದಾದರೊಂದು ಕಣಿವೆಯನ್ನು ದಾಟಿಯೂ ಅಲ್ಲಾಹ್ ಅವರ ಈ ಸತ್ಕರ್ಮದ ಪ್ರತಿಫಲ ಅವರಿಗೆ ನೀಡು ವಂತಾಗಲು ಅವರ ಪಾಲಿಗೆ ಸತ್ಕರ್ಮವು ಲಿಖಿತಗೊಳ್ಳದಿರಲು ಎಂದಿಗೂ ಸಾಧ್ಯವಿಲ್ಲ.

وَلَا يُنفِقُونَ نَفَقَةً صَغِيرَةً وَلَا كَبِيرَةً
وَلَا يَقْطَعُونَ وَادِيًا إِلَّا كُتِبَ لَهُمْ لِيَجْزِيَهُمُ
اللَّهُ أَحْسَنَ مَا كَانُوا يَعْمَلُونَ ﴿١٢١﴾

122. ಇದ್ದ ಸತ್ಯವಿಶ್ವಾಸಿಗಳೆಲ್ಲರೂ ಹೊರಟು ಬಿಡುವ ಅಗತ್ಯವೇನೂ ಇರಲಿಲ್ಲ. ಆದರೆ ಅವರ ವಾಸಸ್ಥಾನಗಳ ಪ್ರತಿಯೊಂದು ಭಾಗದಿಂದ ಕೆಲವರು ಹೊರಟು ಬಂದು ಧರ್ಮಪ್ರಜ್ಞೆಯನ್ನು ಹೊಂದಿ ಹಿಂದಿರುಗಿ ಹೋಗಿ ತಮ್ಮ ಪ್ರದೇಶದ ನಿವಾಸಿಗಳನ್ನು (ಅಮುಸ್ಲಿಮರ ರೀತಿ-ನೀತಿಗಳಿಂದ) ದೂರವಿರಲು ಎಚ್ಚರಿಸು ವಂತಾಗಲಿಲ್ಲವೇಕೆ?[43]

وَمَا كَانَ الْمُؤْمِنُونَ لِيَنفِرُوا كَافَّةً ۚ فَلَوْلَا
نَفَرَ مِن كُلِّ فِرْقَةٍ مِّنْهُمْ طَائِفَةٌ لِّيَتَفَقَّهُوا
فِي الدِّينِ وَلِيُنذِرُوا قَوْمَهُمْ إِذَا رَجَعُوا
إِلَيْهِمْ لَعَلَّهُمْ يَحْذَرُونَ ﴿١٢٢﴾

ع

123. ಓ ಸತ್ಯವಿಶ್ವಾಸಿಗಳೇ, ನಿಮ್ಮ ಹತ್ತಿರದಲ್ಲೇ ಇರುವ ಸತ್ಯನಿಷೇಧಿಗಳೊಂದಿಗೆ ಯುದ್ಧ ಮಾಡಿರಿ.[44] ಅವರು ನಿಮ್ಮಲ್ಲಿ

يَا أَيُّهَا الَّذِينَ آمَنُوا قَاتِلُوا الَّذِينَ يَلُونَكُم
مِّنَ الْكُفَّارِ وَلْيَجِدُوا فِيكُمْ غِلْظَةً ۚ

43. ಅರ್ಥಾತ್- ಬದವಿಗಳೆಲ್ಲರೂ ಮದೀನಾಕ್ಕೆ ಬರುವುದು ಅವಶ್ಯಕವಾಗಿರಲಿಲ್ಲ. ಪ್ರತಿಯೊಂದು ಊರು ಮತ್ತು ಪ್ರದೇಶದಿಂದ ಕೆಲವರು ಮದೀನಾಕ್ಕೆ ಬಂದು ಧರ್ಮದ ಜ್ಞಾನ ಸಂಪಾದಿಸಿದ್ದರೆ ಮತ್ತು ಮರಳಿದ ನಂತರ ತಮ್ಮ ಪ್ರದೇಶದ ಜನರಿಗೆ ಧರ್ಮದ ಬೋಧನೆ ನೀಡಿರುತ್ತಿದ್ದರೆ ಬದವಿಗಳಲ್ಲಿ ಅಷ್ಟು ಅಜ್ಞಾನ ಉಳಿಯಲು ಸಾಧ್ಯವಿರಲಿಲ್ಲ. ಕಾಪಟ್ಯದ ರೋಗಕ್ಕೆ ತುತ್ತಾಗಿ, ಮುಸ್ಲಿಮರಾಗಿಯೂ ಕರ್ತವ್ಯಚ್ಯುತಿ ಮಾಡುವಂತಹ ಪರಿಸ್ಥಿತಿ ಅವರಿಗೆ ಬರುತ್ತಿರಲಿಲ್ಲ.

44. ಮಾತಿನ ಹಿನ್ನೆಲೆಯನ್ನು ಗಮನಿಸಿದರೆ ಇಲ್ಲಿ ಸತ್ಯನಿಷೇಧಿಗಳು ಎಂದು ಹೇಳಲಾಗಿರುವುದು ಕಪಟವಿಶ್ವಾಸಿಗಳ ಕುರಿತು ಎಂದು ವ್ಯಕ್ತವಾಗುತ್ತದೆ. ಅವರ ಕಾಪಟ್ಯ ಸಂಪೂರ್ಣವಾಗಿ ಬಹಿರಂಗಗೊಂಡಿತ್ತು. ಅವರು ಇಸ್ಲಾಮಿ ಸಮಾಜದಲ್ಲಿ ಸೇರಿಕೊಂಡಿದ್ದುದರಿಂದ ತೀವ್ರ ನಷ್ಟಗಳನ್ನು ಎದುರಿಸಬೇಕಾಗುತ್ತಿತ್ತು.

ಕಾಠಿಣ್ಯವನ್ನು ಕಾಣಬೇಕು.[45] ಅಲ್ಲಾಹನು 'ಧರ್ಮನಿಷ್ಠ'ರೊಂದಿಗೆ ಇದ್ದಾನೆಂಬುದನ್ನು ತಿಳಿದುಕೊಳ್ಳಿರಿ.

وَاعْلَمُوا أَنَّ اللَّهَ مَعَ الْمُتَّقِينَ ﴿١٢٣﴾ ع

124. ಒಂದು ಹೊಸ ಅಧ್ಯಾಯ ಅವತೀರ್ಣಗೊಳ್ಳುವಾಗ ಅವರಲ್ಲಿ ಕೆಲವರು (ಅಣಕದ ರೂಪದಲ್ಲಿ ಮುಸ್ಲಿಮರೊಡನೆ) "ಹೇಳಿರಿ, ಇದರಿಂದ ನಿಮ್ಮ ಪೈಕಿ ಯಾರ ಈಮಾನಿನಲ್ಲಿ ವೃದ್ಧಿಯಾಯಿತು?" ಎಂದು ವಿಚಾರಿಸುತ್ತಾರೆ. ಈಮಾನ್ ಇಟ್ಟವರ ಈಮಾನಿನಲ್ಲಂತು (ಅವತೀರ್ಣಗೊಳ್ಳುವ ಪ್ರತಿಯೊಂದು ಅಧ್ಯಾಯವು) ವಾಸ್ತವದಲ್ಲಿ ವೃದ್ಧಿಯನ್ನೇ ಉಂಟು ಮಾಡಿದೆ ಮತ್ತು ಅವರು ಅದರಿಂದ ಸಂತುಷ್ಟರಾಗಿದ್ದಾರೆ.

وَإِذَا مَا أُنزِلَتْ سُورَةٌ فَمِنْهُم مَّن يَقُولُ أَيُّكُمْ زَادَتْهُ هَٰذِهِ إِيمَانًا ۚ فَأَمَّا الَّذِينَ آمَنُوا فَزَادَتْهُمْ إِيمَانًا وَهُمْ يَسْتَبْشِرُونَ ﴿١٢٤﴾

125. ಆದರೆ ಯಾರ ಹೃದಯಗಳಿಗೆ (ಕಾಪಟ್ಯದ) ರೋಗ ತಗಲಿತ್ತೋ ಅವರ ಹಿಂದಿನ ಮಾಲಿನ್ಯದ ಮೇಲೆ (ಪ್ರತಿಯೊಂದು ಹೊಸ ಅಧ್ಯಾಯವು) ಇನ್ನೊಂದು ಮಾಲಿನ್ಯವನ್ನು ಹೆಚ್ಚಿಸಿತು ಮತ್ತು ಅವರು ಸಾಯುವವರೆಗೂ 'ಸತ್ಯನಿಷೇಧ'ದಲ್ಲೇ ಇದ್ದರು.

وَأَمَّا الَّذِينَ فِي قُلُوبِهِم مَّرَضٌ فَزَادَتْهُمْ رِجْسًا إِلَىٰ رِجْسِهِمْ وَمَاتُوا وَهُمْ كَافِرُونَ ﴿١٢٥﴾

126. ಇವರನ್ನು ಪ್ರತಿವರ್ಷವೂ ಒಂದೆರಡು ಸಲ ಪರೀಕ್ಷೆಗೆ ಗುರಿಪಡಿಸಲಾಗುತ್ತಿರುವುದನ್ನು ಇವರು ಕಾಣುವುದಿಲ್ಲವೇ?[46] ಆದರೆ ಇಷ್ಟಾಗಿಯೂ ಇವರು ಪಶ್ಚಾತ್ತಾಪ ಪಡುವುದೂ ಇಲ್ಲ. ಪಾಠ ಕಲಿಯುವುದೂ ಇಲ್ಲ.

أَوَلَا يَرَوْنَ أَنَّهُمْ يُفْتَنُونَ فِي كُلِّ عَامٍ مَّرَّةً أَوْ مَرَّتَيْنِ ثُمَّ لَا يَتُوبُونَ وَلَا هُمْ يَذَّكَّرُونَ ﴿١٢٦﴾

127. ಯಾವುದಾದರೂ ಅಧ್ಯಾಯ ಅವತೀರ್ಣಗೊಳ್ಳುವಾಗ "ನಿಮ್ಮನ್ನಾರಾದರೂ ನೋಡುತ್ತಿಲ್ಲವಷ್ಟೆ" ಎಂದು ಇವರು ಪರಸ್ಪರ ಕಣ್ಣುಸನ್ನೆಗಳಿಂದಲೇ ಮಾತಾಡಿಕೊಳ್ಳುತ್ತಾರೆ. ಅನಂತರ ಸದ್ದಿಲ್ಲದೆ ಎದ್ದು ಓಡುತ್ತಾರೆ. ಅಲ್ಲಾಹನು ಇವರ ಹೃದಯಗಳನ್ನು ತಿರುಚಿ ಬಿಟ್ಟಿರುತ್ತಾನೆ. ಏಕೆಂದರೆ ಇವರು ತಿಳಿಗೇಡಿಗಳು.

وَإِذَا مَا أُنزِلَتْ سُورَةٌ نَّظَرَ بَعْضُهُمْ إِلَىٰ بَعْضٍ هَلْ يَرَاكُم مِّنْ أَحَدٍ ثُمَّ انصَرَفُوا ۚ صَرَفَ اللَّهُ قُلُوبَهُم بِأَنَّهُمْ قَوْمٌ لَّا يَفْقَهُونَ ﴿١٢٧﴾

128. ನೋಡಿರಿ, ನಿಮ್ಮ ಬಳಿಗೆ ಓರ್ವ ಸಂದೇಶವಾಹಕರು ಬಂದಿರುತ್ತಾರೆ. ಅವರು ನಿಮ್ಮವರಿಂದಲೇ ಆಗಿರುತ್ತಾರೆ. ನೀವು ನಷ್ಟಹೊಂದುವುದು ಅವರಿಗೆ ಅಸಹನೀಯವಾಗಿದೆ. ಅವರು ನಿಮ್ಮ ಯಶಸ್ಸಿಗೆ

لَقَدْ جَاءَكُمْ رَسُولٌ مِّنْ أَنفُسِكُمْ عَزِيزٌ عَلَيْهِ مَا عَنِتُّمْ حَرِيصٌ عَلَيْكُم بِالْمُؤْمِنِينَ رَءُوفٌ رَّحِيمٌ ﴿١٢٨﴾

45. ಅರ್ಥಾತ್- ಆ ತನಕ ಅವರೊಂದಿಗೆ ಕೈಗೊಳ್ಳಲಾದ ಮೃದು ಧೋರಣೆ ಇನ್ನು ಕೊನೆಗೊಳ್ಳಬೇಕಾಗಿದೆ.

46. ಅರ್ಥಾತ್- ಒಂದೆರಡು ಸಲವಾದರೂ ಅವರ ಸತ್ಯವಿಶ್ವಾಸದ ವಾದ ಪರೀಕ್ಷೆಯ ಒರೆಗಲ್ಲಿಗೆ ಹಚ್ಚಲ್ಪಟ್ಟು ಅದರ ಹುಳುಕು ಬಹಿರಂಗವಾಗದಂತಹ ಯಾವುದೇ ವರ್ಷವೂ ಕಳೆದಿರಲಿಲ್ಲ.

ಹಂಬಲಿಸುವವರಾಗಿದ್ದಾರೆ. ಅವರು ಸತ್ಯವಿಶ್ವಾಸಿಗಳಿಗೆ ವತ್ಸಲರೂ ಕರುಣಾಳುವೂ ಆಗಿರುತ್ತಾರೆ.

129. ಓ ಪೈಗಂಬರರೇ, ಇನ್ನಿವರು ನಿಮ್ಮಿಂದ ವಿಮುಖರಾಗುತ್ತಾರಾದರೆ ಇವರೊಡನೆ ಹೀಗೆ ಹೇಳಿಬಿಡಿರಿ. "ನನಗೆ ಅಲ್ಲಾಹನೇ ಸಾಕು. ಅವನ ಹೊರತು ಅನ್ಯ ಆರಾಧ್ಯನಿಲ್ಲ. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದ್ದೇನೆ ಮತ್ತು ಅವನು 'ವಿಶ್ವ ಮಹಾ ಸಿಂಹಾಸನ'ದ ಮಾಲಿಕನಾಗಿರುತ್ತಾನೆ."

فَإِنْ تَوَلَّوْا فَقُلْ حَسْبِيَ اللَّهُ لَا إِلَٰهَ إِلَّا هُوَ ۖ عَلَيْهِ تَوَكَّلْتُ ۖ وَهُوَ رَبُّ الْعَرْشِ الْعَظِيمِ ﴿١٢٩﴾

١٦
ع٧
٥






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ ರಾ, ಇವು ಯುಕ್ತಿಪೂರ್ಣವೂ ನೀತಿಬೋಧಕವೂ ಆಗಿರುವ ಗ್ರಂಥದ ಸೂಕ್ತಗಳು.

الٓرٰ تِلْكَ اٰيٰتُ الْكِتٰبِ الْحَكِيْمِ ۝١

2. ನಾವು (ಅನಾಸ್ಥೆಯಿಂದಿರುವ) ಜನರಿಗೆ ಎಚ್ಚರಿಕೆ ನೀಡಲಿಕ್ಕೂ ಸತ್ಯವಿಶ್ವಾಸಿಗಳಿಗೆ ಅವರ ಪ್ರಭುವಿನ ಬಳಿ ನಿಜವಾದ ಗೌರವಾದರಗಳಿವೆ ಎಂಬ ಸುವಾರ್ತೆ ನೀಡಲಿಕ್ಕೂ ಸ್ವತಃ ಅವರೊಳಗಿಂದಲೇ ಓರ್ವ ಮನುಷ್ಯನ ಮೇಲೆ 'ದಿವ್ಯವಾಣಿ'ಯನ್ನು ಕಳುಹಿಸಿರುವುದು ಜನರಿಗೆ ಆಶ್ಚರ್ಯದ ವಿಷಯವಾಯಿತೇ? (ಇಷ್ಟು ಮಾತ್ರಕ್ಕಾಗಿ) 'ಈತನು ಮಾಟಗಾರ' ಎಂದು ಸತ್ಯನಿಷೇಧಿಗಳು ಹೇಳಿದರು.[1]

اَكَانَ لِلنَّاسِ عَجَبًا اَنْ اَوْحَيْنَآ اِلٰى رَجُلٍ مِّنْهُمْ اَنْ اَنْذِرِ النَّاسَ وَبَشِّرِ الَّذِيْنَ اٰمَنُوْٓا اَنَّ لَهُمْ قَدَمَ صِدْقٍ عِنْدَ رَبِّهِمْ ۗ قَالَ الْكٰفِرُوْنَ اِنَّ هٰذَا لَسٰحِرٌ مُّبِيْنٌ ۝٢

3. ವಾಸ್ತವದಲ್ಲಿ ಆಕಾಶಗಳನ್ನೂ ಭೂಮಿಯನ್ನೂ ಆರು ದಿನಗಳಲ್ಲಿ ಸೃಷ್ಟಿಸಿದ, ಅನಂತರ ವಿಶ್ವ ಸಿಂಹಾಸನದಲ್ಲಿ ವಿರಾಜಿಸಿ ವಿಶ್ವಾಡಳಿತ ನಡೆಸುತ್ತಿರುವ ಅಲ್ಲಾಹನೇ ನಿಮ್ಮ ಪ್ರಭು. ಅವನ ಅನುಮತಿ ದೊರೆತ ಬಳಿಕವೇ ವಿನಾ ಯಾರೂ 'ಶಿಫಾರಸು' ಮಾಡುವವರಿಲ್ಲ. ಈ ಅಲ್ಲಾಹನೇ ನಿಮ್ಮ ಪ್ರಭು. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ ಮತ್ತೂ ನೀವು ಎಚ್ಚರಗೊಳ್ಳುವುದಿಲ್ಲವೇ?

اِنَّ رَبَّكُمُ اللّٰهُ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ اسْتَوٰى عَلَى الْعَرْشِ يُدَبِّرُ الْاَمْرَ ۗ مَا مِنْ شَفِيْعٍ اِلَّا مِنْۢ بَعْدِ اِذْنِهٖ ۗ ذٰلِكُمُ اللّٰهُ رَبُّكُمْ فَاعْبُدُوْهُ ۗ اَفَلَا تَذَكَّرُوْنَ ۝٣

4. ನಿಮಗೆಲ್ಲರಿಗೂ ಅವನ ಕಡೆಗೇ ಮರಳಿ ಹೋಗಲಿಕ್ಕಿದೆ. ಇದು ಅಲ್ಲಾಹನ ಪರಿಪಕ್ವ ವಾಗ್ದಾನ. ನಿಶ್ಚಯವಾಗಿಯೂ ಸೃಷ್ಟಿಯ ಆರಂಭವನ್ನು ಅವನೇ ಮಾಡುತ್ತಾನೆ. ಅನಂತರ ಅವನೇ

اِلَيْهِ مَرْجِعُكُمْ جَمِيْعًا ۗ وَعْدَ اللّٰهِ حَقًّا ۗ اِنَّهٗ يَبْدَؤُا الْخَلْقَ ثُمَّ يُعِيْدُهٗ لِيَجْزِيَ

1. ಕುರ್‌ಆನನ್ನು ಆಲಿಸಿ ಪ್ರವಾದಿವರ್ಯರ(ಸ) ಬೋಧನೆಯಿಂದ ಪ್ರಭಾವಿತರಾಗಿ ಸತ್ಯವಿಶ್ವಾಸ ಸ್ವೀಕರಿಸುವ ಯಾವನೇ ವ್ಯಕ್ತಿ ಪ್ರಾಣವನ್ನು ಪಣಕ್ಕಿಡಲು ಸಿದ್ಧನಾಗುತ್ತಿದ್ದ. ಯಾವುದೇ ಲೌಕಿಕ ಸಂಬಂಧವನ್ನೂ ತೊರೆದು ಯಾವ ಸಂಕಷ್ಟವನ್ನು ಬೇಕಾದರೂ ಆಹ್ವಾನಿಸಲು ತಯಾರಾಗುತ್ತಿದ್ದ. ಆದ್ದರಿಂದಲೇ ಅವರು ಪ್ರವಾದಿವರ್ಯರನ್ನು(ಸ) ಜಾದೂಗಾರನೆನ್ನುತ್ತಿದ್ದರು.

ಇನ್ನೊಮ್ಮೆ ಸೃಷ್ಟಿಸುವನು. (ಇದು) ಸತ್ಯವಿಶ್ವಾಸವಿರಿಸಿ ಸತ್ಕರ್ಮ ವೆಸಗುವವರಿಗೆ ನ್ಯಾಯಪೂರ್ಣ ಪ್ರತಿಫಲ ಕೊಡಲಿಕ್ಕಾಗಿ ಮತ್ತು 'ಸತ್ಯನಿಷೇಧ' ನೀತಿಯನ್ನು ಕೈಗೊಂಡವರು ಕುದಿಯುವ ನೀರು ಕುಡಿಯಲಿಕ್ಕಾಗಿ ಮತ್ತು ಅವರು 'ಸತ್ಯನಿಷೇಧ'ವೆಸಗುತ್ತಿದ್ದುದರ ಪ್ರತಿಫಲವಾಗಿ ವೇದನಾಯುಕ್ತ ಶಿಕ್ಷೆಯನ್ನು ಅನುಭವಿಸಲಿಕ್ಕಾಗಿ.

الَّذِينَ آمَنُوا وَعَمِلُوا الصَّالِحَاتِ بِالْقِسْطِ ۚ وَالَّذِينَ كَفَرُوا لَهُمْ شَرَابٌ مِّنْ حَمِيمٍ وَعَذَابٌ أَلِيمٌ بِمَا كَانُوا يَكْفُرُونَ ﴿٤﴾

5. ಸೂರ್ಯನನ್ನು ಪ್ರಕಾಶಮಾನವನ್ನಾಗಿ ಮಾಡಿದವನೂ ಚಂದ್ರನಿಗೆ ಹೊಳಪನ್ನು ಕೊಟ್ಟವನೂ ನೀವು ಸಂವತ್ಸರಗಳ ಎಣಿಕೆಗಳನ್ನೂ ತಾರೀಕುಗಳ ಗಣನೆಯನ್ನೂ ತಿಳಿದುಕೊಳ್ಳಲಿಕ್ಕಾಗಿ ಅದಕ್ಕೆ ವೃದ್ಧಿ ಕ್ಷಯಗಳ ಘಟ್ಟಗಳನ್ನು ಸರಿಯಾಗಿ ನಿರ್ಣಯಿಸಿ ಕೊಟ್ಟವನೂ ಅವನೇ. ಅಲ್ಲಾಹನು ಇವೆಲ್ಲವುಗಳನ್ನೂ ಸತ್ಯಪೂರ್ಣವಾಗಿಯೇ ಸೃಷ್ಟಿಸಿದನು. ಅವನು ಅರಿವುಳ್ಳವರಿಗೆ ತನ್ನ ದೃಷ್ಟಾಂತಗಳನ್ನು ವಿವರಿಸುತ್ತಾನೆ.

هُوَ الَّذِي جَعَلَ الشَّمْسَ ضِيَاءً وَالْقَمَرَ نُورًا وَقَدَّرَهُ مَنَازِلَ لِتَعْلَمُوا عَدَدَ السِّنِينَ وَالْحِسَابَ ۚ مَا خَلَقَ اللَّهُ ذَٰلِكَ إِلَّا بِالْحَقِّ ۚ يُفَصِّلُ الْآيَاتِ لِقَوْمٍ يَعْلَمُونَ ﴿٥﴾

6. ನಿಶ್ಚಯವಾಗಿಯೂ ರಾತ್ರಿ ಹಗಲುಗಳು ಒಂದನ್ನೊಂದು ಹಿಂಬಾಲಿಸಿಕೊಂಡು ಬರುವುದರಲ್ಲಿಯೂ ಅಲ್ಲಾಹನು ಭೂಮಿ-ಆಕಾಶಗಳಲ್ಲಿ ಸೃಷ್ಟಿಸಿರುವ ಪ್ರತಿಯೊಂದು ವಸ್ತುವಿನಲ್ಲಿಯೂ (ಮಿಥ್ಯ ಆಚಾರ ಮತ್ತು ಮಿಥ್ಯ ವಿಚಾರಗಳಿಂದ) ದೂರವಿರಲು ಬಯಸುವವರಿಗೆ ನಿದರ್ಶನಗಳಿವೆ.[2]

إِنَّ فِي اخْتِلَافِ اللَّيْلِ وَالنَّهَارِ وَمَا خَلَقَ اللَّهُ فِي السَّمَاوَاتِ وَالْأَرْضِ لَآيَاتٍ لِّقَوْمٍ يَتَّقُونَ ﴿٦﴾

7. ನಿಶ್ಚಯವಾಗಿಯೂ ನಮ್ಮನ್ನು ಭೇಟಿಯಾಗುವ ನಿರೀಕ್ಷೆಯಿಲ್ಲದವರ, ಐಹಿಕ ಜೀವನದಲ್ಲೇ ತೃಪ್ತರಾಗಿರುವವರ ಹಾಗೂ ನಮ್ಮ ದೃಷ್ಟಾಂತಗಳ ಬಗ್ಗೆ ಅಲಕ್ಷ್ಯರಾಗಿರುವವರ-

إِنَّ الَّذِينَ لَا يَرْجُونَ لِقَاءَنَا وَرَضُوا بِالْحَيَاةِ الدُّنْيَا وَاطْمَأَنُّوا بِهَا وَالَّذِينَ هُمْ عَنْ آيَاتِنَا غَافِلُونَ ﴿٧﴾

8. ಅಂತಿಮ ವಾಸಸ್ಥಾನವು 'ನರಕ' ಆಗಿರುವುದು. ಇದು ಅವರು (ತಮ್ಮ ಈ ತಪ್ಪು ಆಚಾರ ಮತ್ತು ವಿಚಾರಗಳ ನಿಮಿತ್ತ) ಎಸಗಿದ ಕೆಡುಕುಗಳ ಫಲವಾಗಿದೆ.

أُولَٰئِكَ مَأْوَاهُمُ النَّارُ بِمَا كَانُوا يَكْسِبُونَ ﴿٨﴾

9. ಖಂಡಿತವಾಗಿಯೂ ಸತ್ಯವಿಶ್ವಾಸವಿರಿಸಿ (ಅರ್ಥಾತ್ ಈ ಗ್ರಂಥವು ಪ್ರತಿಪಾದಿಸುತ್ತಿರುವ ಸತ್ಯಗಳನ್ನು ಸ್ವೀಕರಿಸಿ) ಸತ್ಕರ್ಮಗಳನ್ನು ಮಾಡುತ್ತಿದ್ದವರನ್ನು ಅವರ ಪ್ರಭು ಅವರ ಈಮಾನಿನ ಕಾರಣವಾಗಿ ಸನ್ಮಾರ್ಗದಲ್ಲಿ ನಡೆಸುವನು; ಅನುಗ್ರಹಭರಿತ ಸ್ವರ್ಗೋದ್ಯಾನಗಳಲ್ಲಿ ಅವರ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು.

إِنَّ الَّذِينَ آمَنُوا وَعَمِلُوا الصَّالِحَاتِ يَهْدِيهِمْ رَبُّهُم بِإِيمَانِهِمْ ۖ تَجْرِي مِن تَحْتِهِمُ الْأَنْهَارُ فِي جَنَّاتِ النَّعِيمِ ﴿٩﴾

2. ಈ ನಿದರ್ಶನಗಳಿಂದ ವಾಸ್ತವಿಕತೆಯೆಡೆಗೆ ತಲಪಲು ಈ ಎರಡು ಗುಣಗಳನ್ನು ಹೊಂದಿರುವವರಿಗೆ ಮಾತ್ರ ಸಾಧ್ಯ. ಮೊದಲನೆಯದಾಗಿ ಅವರು ಅಜ್ಞಾನಜನ್ಯ ಪಕ್ಷಪಾತಗಳಿಂದ ಮುಕ್ತರಾಗಿ ಜ್ಞಾನಸಂಪಾದನೆಗಾಗಿ ಅಲ್ಲಾಹನು ಮನುಷ್ಯನಿಗೆ ನೀಡಿರುವ ಮಾಧ್ಯಮಗಳನ್ನು ಉಪಯೋಗಿಸಬೇಕು. ಎರಡನೆಯದಾಗಿ ತಪ್ಪಿನಿಂದ ಮುಕ್ತರಾಗಿ ಸತ್ಯಮಾರ್ಗವನ್ನು ಅನುಸರಿಸುವ ಬಯಕೆ ಅವರಲ್ಲಿರಬೇಕು.

10. ಅದರಲ್ಲಿ ಅವರ ಧ್ವನಿಯು, "ಓ ಅಲ್ಲಾಹ್, ನೀನು ಪರಿಶುದ್ಧನು" ಎಂದೂ ಅವರ ಪ್ರಾರ್ಥನೆಯು "ಪ್ರಶಾಂತಿ ಇರಲಿ" ಎಂದೂ ಅವರ ಪ್ರತಿಯೊಂದು ಮಾತಿನ ಕೊನೆಯನುಡಿ "ಸರ್ವ ಸ್ತುತಿ ಸ್ತೋತ್ರಗಳೂ ಸಕಲ ಲೋಕಗಳ ಪ್ರಭುವಾದ ಅಲ್ಲಾಹನಿಗೇ" ಎಂದೂ ಆಗಿರುವುದು.

دَعْوٰىهُمْ فِيْهَا سُبْحٰنَكَ اللّٰهُمَّ وَتَحِيَّتُهُمْ فِيْهَا سَلٰمٌ ۚ وَاٰخِرُ دَعْوٰىهُمْ اَنِ الْحَمْدُ لِلّٰهِ رَبِّ الْعٰلَمِيْنَ ﴿١٠﴾

11. ಜನರು ಲೌಕಿಕ ಹಿತವನ್ನು ಬೇಡುವಲ್ಲಿ ತವಕಪಡುವಷ್ಟೇ ಅವರಿಗೆ ಕೇಡುಂಟು ಮಾಡಲಿಕ್ಕಾಗಿ ಅಲ್ಲಾಹನು ತವಕಪಡುತ್ತಿದ್ದರೆ, ಅವರ ಕರ್ಮಾವಧಿಯನ್ನು ಎಂದೋ ಮುಗಿಸಿಬಿಡಲಾಗುತ್ತಿತ್ತು. (ಆದರೆ ಇದು ನಮ್ಮ ಕ್ರಮವಲ್ಲ) ಆದುದರಿಂದ ನಮ್ಮನ್ನು ಭೇಟಿಯಾಗುವ ನಿರೀಕ್ಷೆಯನ್ನಿರಿಸದವರನ್ನು ನಾವು ಅವರ ವಿದ್ರೋಹಗಳಲ್ಲೇ ಅಲೆದಾಡುತ್ತಿರಲು ಬಿಟ್ಟು ಬಿಡುತ್ತೇವೆ.

وَلَوْ يُعَجِّلُ اللّٰهُ لِلنَّاسِ الشَّرَّ اسْتِعْجَالَهُمْ بِالْخَيْرِ لَقُضِيَ اِلَيْهِمْ اَجَلُهُمْ ؕ فَنَذَرُ الَّذِيْنَ لَا يَرْجُوْنَ لِقَآءَنَا فِيْ طُغْيَانِهِمْ يَعْمَهُوْنَ ﴿١١﴾

12. ಮಾನವನ ಸ್ಥಿತಿಯಿದು- ಅವನ ಮೇಲೆ ಕಷ್ಟಕಾಲ ಬಂದಾಗ ನಿಂತೂ ಕುಳಿತೂ ಮಲಗಿಯೂ ನಮ್ಮೊಡನೆ ಮೊರೆಯಿಡುತ್ತಾನೆ. ಆದರೆ ನಾವು ಅವನ ಕಷ್ಟವನ್ನು ದೂರಸರಿಸಿ ಬಿಟ್ಟಾಗ ಅವನು ಎಂದೂ ತನ್ನ ಕಷ್ಟ ಕಾಲದಲ್ಲಿ ನಮ್ಮೊಡನೆ ಮೊರೆಯಿಡಲೇ ಇಲ್ಲವೋ ಎಂಬಂತೆ ನಡೆದು ಬಿಡುತ್ತಾನೆ. ಹೀಗೆ ಹದಮೀರಿ ನಡೆಯುವವರಿಗೆ ಅವರ ಕೃತ್ಯಗಳು ಮನೋಹರಗೊಳಿಸಲ್ಪಟ್ಟಿವೆ.

وَاِذَا مَسَّ الْاِنْسَانَ الضُّرُّ دَعَانَا لِجَنْۢبِهٖۤ اَوْ قَاعِدًا اَوْ قَآئِمًا ۚ فَلَمَّا كَشَفْنَا عَنْهُ ضُرَّهٗ مَرَّ كَاَنْ لَّمْ يَدْعُنَاۤ اِلٰى ضُرٍّ مَّسَّهٗ ؕ كَذٰلِكَ زُيِّنَ لِلْمُسْرِفِيْنَ مَا كَانُوْا يَعْمَلُوْنَ ﴿١٢﴾

13. ಹೇ ಜನರೇ; ನಿಮಗಿಂತ ಮುಂಚಿನ ಜನಾಂಗಗಳು[3] ಅಕ್ರಮವೆಸಗಿದಾಗ ನಾವು ಅವುಗಳನ್ನು ನಾಶಗೊಳಿಸಿದೆವು. ಅವರ ಸಂದೇಶ ವಾಹಕರು ಸುವ್ಯಕ್ತ ಪ್ರಮಾಣಗಳನ್ನು ಅವರ ಬಳಿಗೆ ತಂದರು. ಆದರೂ ಅವರು ವಿಶ್ವಾಸವಿಡಲಿಲ್ಲ. ನಾವು ಅಪರಾಧಿಗಳಿಗೆ ಅವರ ಅಪರಾಧಗಳ ಪ್ರತಿಫಲವನ್ನು ಇದೇ ರೀತಿಯಲ್ಲಿ ಕೊಡುತ್ತೇವೆ.

وَلَقَدْ اَهْلَكْنَا الْقُرُوْنَ مِنْ قَبْلِكُمْ لَمَّا ظَلَمُوْا ۙ وَجَآءَتْهُمْ رُسُلُهُمْ بِالْبَيِّنٰتِ وَمَا كَانُوْا لِيُؤْمِنُوْا ؕ كَذٰلِكَ نَجْزِى الْقَوْمَ الْمُجْرِمِيْنَ ﴿١٣﴾

3. ಮೂಲದಲ್ಲಿ 'ಕರ್ನ್' ಎಂಬ ಪದ ಪ್ರಯೋಗವಾಗಿದೆ. ಅರಬಿ ಭಾಷೆಯಲ್ಲಿ ಅದರ ಅರ್ಥ ಸಾಮಾನ್ಯವಾಗಿ ಒಂದು 'ಯುಗಕ್ಕೆ ಸೇರಿದ ಮಾನವರು' ಎಂದಾಗಿದೆ. ಆದರೆ ಕುರ್‌ಆನಿನಲ್ಲಿ ವಿವಿಧ ಸಂದರ್ಭಗಳಲ್ಲಿ ಈ ಪದ ಪ್ರಯೋಗವಾಗಿರುವ ಶೈಲಿಯನ್ನು ಗಮನಿಸಿದರೆ 'ಕರ್ನ್' ಎಂಬ ಶಬ್ದ ಆಯಾ ಕಾಲದಲ್ಲಿ ಅತ್ಯಂತ ಉಚ್ಛ್ರಾಯದ ಸ್ಥಿತಿಯಲ್ಲಿದ್ದ ಜನಾಂಗಕ್ಕೆ ಉಪಯೋಗಿಸಲ್ಪಟ್ಟಿದೆ ಎಂದು ವ್ಯಕ್ತವಾಗುತ್ತದೆ. ಅಂತಹ ಜನಾಂಗವನ್ನು ನಾಶಪಡಿಸಲಾಯಿತು ಎಂದರೆ ಅವರ ವಂಶವನ್ನು ಕೊನೆಗೊಳಿಸಲಾಯಿತು ಎಂದು ಮಾತ್ರ ಅರ್ಥವಲ್ಲ. ಅವರನ್ನು ಉನ್ನತ ಸ್ಥಾನದಿಂದ ಕೆಳಗಿಳಿಸುವುದು, ಅವರ ಸಂಸ್ಕೃತಿ ಮತ್ತು ನಾಗರಿಕತೆ ನಿರ್ನಾಮವಾಗುವುದು, ಅವರ ಅನನ್ಯತೆ ಕೊನೆಗೊಳ್ಳುವುದು, ಅವರ ವಿಭಾಗಗಳು ವಿಚ್ಛಿದ್ರವಾಗಿ ಇತರ ಜನಾಂಗಗಳಲ್ಲಿ ಲೀನವಾಗಿ ಬಿಡುವುದು - ಮುಂತಾದವುಗಳೆಲ್ಲವೂ ವಿನಾಶದ ಸ್ವರೂಪಗಳೇ ಆಗಿವೆ.

14. ಈಗ ನೀವು ಹೇಗೆ ವರ್ತಿಸುತ್ತೀರೆಂದು ನೋಡಲಿಕ್ಕಾಗಿ ನಾವು ಅವರ ತರುವಾಯ ನಿಮಗೆ ಭೂಮಿಯಲ್ಲಿ ಅವರ ಸ್ಥಾನ ಕೊಟ್ಟೆವು.

ثُمَّ جَعَلْنٰكُمْ خَلٰٓئِفَ فِي الْاَرْضِ مِنْۢ بَعْدِهِمْ لِنَنْظُرَ كَيْفَ تَعْمَلُوْنَ ﴿١٤﴾

15. ನಮ್ಮ ಸುವ್ಯಕ್ತ ವಚನಗಳನ್ನು ಅವರಿಗೆ ತಿಳಿಯ ಹೇಳಿದಾಗ ನಮ್ಮನ್ನು ಭೇಟಿಯಾಗುವ ನಿರೀಕ್ಷೆಯನ್ನಿರಿಸದವರು, "ಇದರ ಬದಲಿಗೆ ಇನ್ನೊಂದು ಕುರ್‌ಆನನ್ನು ತನ್ನಿರಿ, ಇಲ್ಲವೆ ಇದರಲ್ಲಿ ಸ್ವಲ್ಪ ತಿದ್ದುಪಡಿ ಮಾಡಿರಿ" ಎಂದು ಹೇಳುತ್ತಾರೆ, ಓ ಪೈಗಂಬರರೇ, ಅವರೊಡನೆ (ಹೀಗೆ) ಹೇಳಿರಿ-"ನನ್ನ ಕಡೆಯಿಂದ ಇದರಲ್ಲೇನಾದರೂ ಮಾರ್ಪಾಟು ಮಾಡುವುದು ನನ್ನ ಕೆಲಸವಲ್ಲ. ನಾನಂತು ನನಗೆ ಕಳುಹಿಸಲ್ಪಡುವ 'ದಿವ್ಯವಾಣಿ'ಯನ್ನು ಅನುಸರಿಸುವವನಾಗಿರುತ್ತೇನೆ. ನಾನು ನನ್ನ ಪ್ರಭುವಿನ ಆಜ್ಞೋಲ್ಲಂಘನೆ ಮಾಡಿದರೆ ನನಗೆ ಒಂದು ಭಯಾನಕ ಯಾತನೆಯ ಭಯವಿದೆ."

وَاِذَا تُتْلٰى عَلَيْهِمْ اٰيَاتُنَا بَيِّنٰتٍ ۙ قَالَ الَّذِيْنَ لَا يَرْجُوْنَ لِقَآءَنَا ائْتِ بِقُرْاٰنٍ غَيْرِ هٰذَآ اَوْ بَدِّلْهُ ۗ قُلْ مَا يَكُوْنُ لِيْٓ اَنْ اُبَدِّلَهٗ مِنْ تِلْقَآئِ نَفْسِيْ ۚ اِنْ اَتَّبِعُ اِلَّا مَا يُوْحٰٓى اِلَيَّ ۚ اِنِّيْٓ اَخَافُ اِنْ عَصَيْتُ رَبِّيْ عَذَابَ يَوْمٍ عَظِيْمٍ ﴿١٥﴾

16. ಮತ್ತು ಹೇಳಿರಿ- "ಅಲ್ಲಾಹನ ವಿಧಿ ನಿಯಮವು ಇದೇ ಆಗಿರುತ್ತಿದ್ದರೆ ನಾನು ನಿಮಗೆ ಈ ಕುರ್‌ಆನನ್ನು ಎಂದಿಗೂ ತಿಳಿಯ ಹೇಳುತ್ತಿರ ಲಿಲ್ಲ ಮತ್ತು ಅಲ್ಲಾಹನು ನಿಮಗೆ ಇದರ ವರ್ತಮಾನವನ್ನೂ ಕೊಡುತ್ತಿರಲಿಲ್ಲ. ನಾನು ಇದಕ್ಕೆ ಮುಂಚೆ ನಿಮ್ಮ ನಡುವೆ ಕೆಲವು ಕಾಲ ಕಳೆದಿರುವೆನಷ್ಟೆ. ನೀವೇನು ವಿವೇಚಿಸುವುದಿಲ್ಲವೇ?[4]

قُلْ لَّوْ شَآءَ اللّٰهُ مَا تَلَوْتُهٗ عَلَيْكُمْ وَلَآ اَدْرٰىكُمْ بِهٖ ۖ فَقَدْ لَبِثْتُ فِيْكُمْ عُمُرًا مِّنْ قَبْلِهٖ ۗ اَفَلَا تَعْقِلُوْنَ ﴿١٦﴾

17. ಸುಳ್ಳೊಂದನ್ನು ಸೃಷ್ಟಿಸಿ ಅಲ್ಲಾಹನ ಮೇಲೆ ಹೊರಿಸುವವನಿಗಿಂತ ಅಥವಾ ನಿಜವಾದ ವಚನಗಳನ್ನು ಸುಳ್ಳೆಂದು ಹೇಳುವವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? ನಿಶ್ಚಯವಾಗಿಯೂ ಅಪರಾಧಿಗಳು ಎಂದೂ ವಿಜಯಿಗಳಾಗಲಾರರು."

فَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِاٰيٰتِهٖ ۗ اِنَّهٗ لَا يُفْلِحُ الْمُجْرِمُوْنَ ﴿١٧﴾

18. ಅವರು ಅಲ್ಲಾಹನನ್ನು ಬಿಟ್ಟು ಇವರಿಗೆ ನಷ್ಟವನ್ನಾಗಲಿ ಲಾಭವನ್ನಾಗಲಿ ಉಂಟು ಮಾಡದಂಥವರನ್ನು ಆರಾಧಿಸುತ್ತಾರೆ ಮತ್ತು "ಇವರು ಅಲ್ಲಾಹನ ಬಳಿ ನಮ್ಮ ಶಿಫಾರಸು ಮಾಡುವ ವರು" ಎಂದು ಹೇಳುತ್ತಾರೆ. ಓ ಪೈಗಂಬರರೇ, ಇವರೊಡನೆ ಹೇಳಿರಿ, "ಅಲ್ಲಾಹನು ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ

وَيَعْبُدُوْنَ مِنْ دُوْنِ اللّٰهِ مَا لَا يَضُرُّهُمْ وَلَا يَنْفَعُهُمْ وَيَقُوْلُوْنَ هٰٓؤُلَآءِ شُفَعَآؤُنَا عِنْدَ اللّٰهِ ۗ قُلْ اَتُنَبِّئُوْنَ اللّٰهَ بِمَا لَا يَعْلَمُ فِي السَّمٰوٰتِ وَلَا فِي الْاَرْضِ ۗ سُبْحٰنَهٗ

4. ಅರ್ಥಾತ್- ನಾನು ನಿಮ್ಮ ಪಾಲಿಗೆ ಅಪರಿಚಿತ ವ್ಯಕ್ತಿಯೇನೂ ಅಲ್ಲ. ನಿಮ್ಮ ನಗರದಲ್ಲೇ ನಾನು ಹುಟ್ಟಿದೆ. ನಿಮ್ಮ ಮಧ್ಯೆ ಇದ್ದುಕೊಂಡೇ ಬಾಲ್ಯಾವಸ್ಥೆಯಿಂದ ಈ ವಯಸ್ಸಿಗೆ ತಲಪಿದ್ದೇನೆ. ನನ್ನ ಸಮಸ್ತ ಜೀವನವನ್ನು ನೋಡಿದ ನಂತರವೂ ಈ ಕುರ್‌ಆನ್ ನಾನು ರಚಿಸಿದ ವಾಣಿಯೆಂದು ಪ್ರಾಮಾಣಿಕ ಚಿತ್ತದಿಂದ ಹೇಳಲು ನಿಮಗೆ ಸಾಧ್ಯವೇ? ನನ್ನ ಮನಸ್ಸಿಗೆ ತೋಚಿದ್ದನ್ನು ಹೇಳಿ ಜನರೊಡನೆ ಇದು ಅಲ್ಲಾಹನ ವತಿಯಿಂದ ಅವತೀರ್ಣಗೊಂಡಿದೆ ಎಂದು ಹೇಳುವಂತಹ ಘೋರ ಸುಳ್ಳು ನುಡಿಯನ್ನು ನೀವು ನನ್ನಿಂದ ನಿರೀಕ್ಷಿಸುತ್ತೀರಾ?

ತಿಳಿಯದಂತಹ ಸುದ್ದಿಯನ್ನು ನೀವು ಅವನಿಗೆ ತಿಳಿಸುತ್ತೀರಾ?[5] ಇವರು ಸಹಭಾಗಿಗಳನ್ನಾಗಿ ಮಾಡುತ್ತಿರುವವುಗಳಿಂದೆಲ್ಲ ಅವನು ಅತಿ ಪಾವನನಾಗಿರುತ್ತಾನೆ."

وَتَعٰلٰى عَمَّا يُشْرِكُوْنَ ﴿١٨﴾

19. ಆರಂಭದಲ್ಲಿ ಮಾನವರೆಲ್ಲರೂ ಒಂದೇ ಸಮುದಾಯವಾಗಿದ್ದರು. ಅನಂತರ ಅವರು ವಿವಿಧ ತತ್ವಾದರ್ಶಗಳನ್ನು ಉಂಟು ಮಾಡಿ ಕೊಂಡರು. ನಿಮ್ಮ ಪ್ರಭುವಿನ ಕಡೆಯಿಂದ ಒಂದು ವಿಷಯವು ಮೊದಲೇ ತೀರ್ಮಾನವಾಗದಿರುತ್ತಿದ್ದರೆ ಅವರು ಪರಸ್ಪರ ಭಿನ್ನಾಭಿ ಪ್ರಾಯವಿರಿಸುತ್ತಿರುವುದರ ತೀರ್ಮಾನ ಮಾಡಿ ಬಿಡಲಾಗುತ್ತಿತ್ತು.[6]

وَمَا كَانَ النَّاسُ اِلَّاۤ اُمَّةً وَّاحِدَةً فَاخْتَلَفُوْا ؕ وَلَوْلَا كَلِمَةٌ سَبَقَتْ مِنْ رَّبِّكَ لَقُضِىَ بَيْنَهُمْ فِيْمَا فِيْهِ يَخْتَلِفُوْنَ ﴿١٩﴾

20. ಈ ಪ್ರವಾದಿಯ ಮೇಲೆ ಇವನ ಪ್ರಭುವಿನ ಕಡೆಯಿಂದ ಒಂದು ದೃಷ್ಟಾಂತವೇಕೆ ಅವತೀರ್ಣಗೊಳಿಸಲ್ಪಡಲಿಲ್ಲವೆಂದು ಇವರು ಕೇಳುತ್ತಾರಲ್ಲ. ಅವರೊಡನೆ, "ನಿಶ್ಚಯವಾಗಿಯೂ ಅದೃಶ್ಯ ಜ್ಞಾನದ ಒಡೆಯ ಅಲ್ಲಾಹನೇ ಆಗಿರುತ್ತಾನೆ. ನೀವು ಕಾಯುತ್ತಿರಿ, ನಾನೂ ನಿಮ್ಮೊಂದಿಗೆ ಕಾದುಕೊಂಡಿರುತ್ತೇನೆ" ಎಂದು ಹೇಳಿರಿ.

وَيَقُوْلُوْنَ لَوْلَاۤ اُنْزِلَ عَلَيْهِ اٰيَةٌ مِّنْ رَّبِّهٖ ۚ فَقُلْ اِنَّمَا الْغَيْبُ لِلّٰهِ فَانْتَظِرُوْا ۚ اِنِّىْ مَعَكُمْ مِّنَ الْمُنْتَظِرِيْنَ ﴿٢٠﴾

ع ٢ ٧

21. ನಾವು ಜನರಿಗೆ ಕಷ್ಟದ ಬಳಿಕ ಅನುಗ್ರಹದ ಸವಿಯನ್ನುಣಿಸಿದಾಗ ಆ ಕೂಡಲೆ ಅವರು ನಮ್ಮ ನಿದರ್ಶನಗಳ ಬಗ್ಗೆ ಕುತಂತ್ರಗಳನ್ನು ಆರಂಭಿಸಿಬಿಡುತ್ತಾರೆ.[7] "ಅಲ್ಲಾಹ್ ತಂತ್ರಗಾರಿಕೆಯಲ್ಲಿ ನಿಮಗಿಂತ ಹೆಚ್ಚು ಶೀಘ್ರನು. ಅವನ ದೂತರು ನಿಮ್ಮ ಎಲ್ಲ ಕುತಂತ್ರಗಳನ್ನೂ ಬರೆದಿಡುತ್ತಿದ್ದಾರೆ" ಎಂದು ಅವರೊಡನೆ ಹೇಳಿರಿ.

وَاِذَاۤ اَذَقْنَا النَّاسَ رَحْمَةً مِّنْۢ بَعْدِ ضَرَّآءَ مَسَّتْهُمْ اِذَا لَهُمْ مَّكْرٌ فِىْۤ اٰيَاتِنَا ؕ قُلِ اللّٰهُ اَسْرَعُ مَكْرًا ؕ اِنَّ رُسُلَنَا يَكْتُبُوْنَ مَا تَمْكُرُوْنَ ﴿٢١﴾

22. ನಿಮ್ಮನ್ನು ನೆಲ-ಜಲಗಳಲ್ಲಿ ಅಲ್ಲಾಹನೇ ಚಲಾಯಿಸುತ್ತಾನೆ. ನೀವು ನಾವೆಗಳನ್ನೇರಿ ಅನುಕೂಲಕರ ಮಾರುತದೊಂದಿಗೆ ಆನಂದ ತುಂದಿಲರಾಗಿ ಪ್ರಯಾಣ ಮಾಡುತ್ತಿರುವಾಗ ಹಠಾತ್ತನೆ ಪ್ರತಿಕೂಲ ಮಾರುತವು ಬಲವಾಗಿ ಬೀಸಿ ಎಲ್ಲ ಕಡೆಗಳಿಂದಲೂ ತೆರೆಗಳು ಅಪ್ಪಳಿಸುತ್ತಿರುವಾಗ ಮತ್ತು ನಾವು ಚಂಡಮಾರುತದಿಂದ

هُوَ الَّذِىْ يُسَيِّرُكُمْ فِى الْبَرِّ وَالْبَحْرِ ؕ حَتّٰۤى اِذَا كُنْتُمْ فِى الْفُلْكِ ۚ وَجَرَيْنَ بِهِمْ بِرِيْحٍ طَيِّبَةٍ وَّفَرِحُوْا بِهَا جَآءَتْهَا رِيْحٌ عَاصِفٌ

5. ಯಾವುದೇ ವಸ್ತುವಿನ ಬಗ್ಗೆ ಅಲ್ಲಾಹನಿಗೆ ತಿಳಿದಿಲ್ಲವೆಂದರೆ ಆ ವಸ್ತು ಅಸ್ತಿತ್ವದಲ್ಲೇ ಇಲ್ಲವೆಂದರ್ಥ. ಏಕೆಂದರೆ ಅಸ್ತಿತ್ವದಲ್ಲಿರುವ ಎಲ್ಲದರ ಬಗ್ಗೆಯೂ ಅಲ್ಲಾಹನಿಗೆ ತಿಳಿದಿದೆ. ಒಟ್ಟಿನಲ್ಲಿ ಅವರ ಪರವಾಗಿ ಶಿಫಾರಸು ಮಾಡುವವರು ಯಾರೂ ಇಲ್ಲ ಎಂಬುದರ ಕಡೆಗೆ ಇದೊಂದು ಸೂಕ್ಷ್ಮವಾದ ಸೂಚನೆಯಾಗಿದೆ. ಅಲ್ಲಾಹನ ಬಳಿ ನಿಮ್ಮ ಪರವಾಗಿ ಶಿಫಾರಸು ಮಾಡುವವರು ಭೂಮಿ-ಆಕಾಶಗಳಲ್ಲಿ ಇರುವ ಬಗ್ಗೆ ಅವನಿಗೆ ತಿಳಿದಿಲ್ಲ. ಹಾಗಿರುವಾಗ ನೀವು ಯಾವ ಶಿಫಾರಸುದಾರರ ಬಗ್ಗೆ ಹೇಳುತ್ತಿದ್ದೀರಿ? ಎಂದು ಕೇಳಲಾಗಿದೆ.

6. ಅರ್ಥಾತ್ ಅಂತಿಮ ತೀರ್ಮಾನ ನಿರ್ಣಾಯಕ ದಿನದಂದು ನಡೆಯುವುದು ಎಂಬ ಬಗ್ಗೆ ಅಲ್ಲಾಹನು ಮೊದಲೇ ತೀರ್ಮಾನಿಸಿರದಿರುತ್ತಿದ್ದರೆ ಅವನು ಇಲ್ಲೇ ಆ ಬಗ್ಗೆ ತೀರ್ಮಾನಿಸಿ ಬಿಡುತ್ತಿದ್ದನು.

7. ಅರ್ಥಾತ್- ಸಂಕಷ್ಟಗಳು ಅಲ್ಲಾಹನ ಕಡೆಯಿಂದ ಬರುವ ದೃಷ್ಟಾಂತವಾಗಿವೆ. ಅಲ್ಲಾಹನ ಹೊರತು ಅದನ್ನು ನೀಗಿಸುವವರು ಯಾರೂ ಇಲ್ಲ ಎಂಬ ಪ್ರಜ್ಞೆಯನ್ನು ಅದು ಮಾನವನಲ್ಲಿ ಬೆಳೆಸುತ್ತದೆ. ಆದರೆ ಅದು ದೂರವಾಗಿ ಒಳ್ಳೆಯ ದಿನಗಳು ಬಂದ ತಕ್ಷಣ ಇದು ನಮ್ಮ ಆರಾಧ್ಯರುಗಳ ಮತ್ತು ಶಿಫಾರಸುದಾರರ ಅನುಗ್ರಹದ ಫಲ ಎಂದು ಅವರು ಹೇಳತೊಡಗುತ್ತಾರೆ.

ಸುತ್ತುವರಿಯಲ್ಪಟ್ಟೆವೆಂದು ಪ್ರಯಾಣಿಕರು ಮನಗಾಣು ತ್ತಿರುವಾಗ ಎಲ್ಲರೂ ತಮ್ಮ ಧರ್ಮವನ್ನು ಅಲ್ಲಾಹನಿಗೆ ಮಾತ್ರ ಮೀಸಲಾಗಿರಿಸಿಕೊಂಡು ಅವನೊಡನೆ, "ನೀನು ಈ ಗಂಡಾಂತರದಿಂದ ನಮ್ಮನ್ನು ಪಾರುಗಾಣಿಸಿದರೆ ನಾವು ಕೃತಜ್ಞ ದಾಸರಾಗುವೆವು" ಎಂದು ಪ್ರಾರ್ಥಿಸುತ್ತಾರೆ.

وَجَآءَهُمُ الْمَوْجُ مِنْ كُلِّ مَكَانٍ وَّظَنُّوْٓا اَنَّهُمْ اُحِيْطَ بِهِمْ ۙ دَعَوُا اللّٰهَ مُخْلِصِيْنَ لَهُ الدِّيْنَ ۚ لَئِنْ اَنْجَيْتَنَا مِنْ هٰذِهٖ لَنَكُوْنَنَّ مِنَ الشّٰكِرِيْنَ ﴿٢٢﴾

23. ಆದರೆ, ಅವನು ಅವರನ್ನು ರಕ್ಷಿಸಿದಾಗ ಮತ್ತೆ ಅದೇ ಜನರು ಸತ್ಯದಿಂದ ವಿಮುಖರಾಗಿ ಭೂಮಿಯಲ್ಲಿ ಬಂಡಾಯವೇಳುತ್ತಾರೆ. ಜನರೇ, ನಿಮ್ಮ ಈ ಬಂಡಾಯವು ನಿಮ್ಮ ವಿರುದ್ಧವೇ ತಿರುಗಿ ಬೀಳುತ್ತದೆ. ಐಹಿಕ ಜೀವನವು ಕೇವಲ ಕೆಲವೇ ದಿನಗಳ ಸುಖಾನಂದ, ಅದನ್ನೀಗ (ಅನುಭವಿಸಿಕೊಳ್ಳಿರಿ) ಅನಂತರ ನಿಮಗೆ ನಮ್ಮ ಕಡೆಗೆ ಮರಳಿ ಬರಲಿಕ್ಕಿದೆ. ನೀವು ಏನು ಮಾಡುತ್ತಿದ್ದಿರೆಂಬುದನ್ನು ಆಗ ನಾವು ನಿಮಗೆ ತಿಳಿಸುವೆವು.

فَلَمَّآ اَنْجٰىهُمْ اِذَا هُمْ يَبْغُوْنَ فِى الْاَرْضِ بِغَيْرِ الْحَقِّ ۗ يٰٓاَيُّهَا النَّاسُ اِنَّمَا بَغْيُكُمْ عَلٰٓى اَنْفُسِكُمْ ۙ مَّتَاعَ الْحَيٰوةِ الدُّنْيَا ۖ ثُمَّ اِلَيْنَا مَرْجِعُكُمْ فَنُنَبِّئُكُمْ بِمَا كُنْتُمْ تَعْمَلُوْنَ ﴿٢٣﴾

24. (ನೀವು ನಮ್ಮ ದೃಷ್ಟಾಂತಗಳನ್ನು ಕಡೆಗಣಿಸಲು ಯಾವ ಜೀವನದ ಮದೋನ್ಮತ್ತತೆಯು ಕಾರಣವಾಗಿರುತ್ತದೋ ಆ) ಐಹಿಕ ಜೀವನದ ಉದಾಹರಣೆಯು (ಹೀಗಿದೆ): - ನಾವು ಆಕಾಶದಿಂದ ಮಳೆಗರೆದೆವು. ಆಗ ಜನರೂ ಜಾನುವಾರುಗಳೂ ತಿನ್ನುವ ಬೆಳೆಯು ಹುಲುಸಾಗಿ ಬೆಳೆಯಿತು. ಭೂಮಿಯು ಸಸ್ಯ ಶ್ಯಾಮಲ ವಾಗಿದ್ದು ಹೊಲಗದ್ದೆಗಳು ಬೆಳೆ ತುಂಬಿ ನಿಂತಿದ್ದುವು ಹಾಗೂ ಅವುಗಳ ಮಾಲಿಕರು ನಾವೀಗ ಇದರಿಂದ ಫಲ ಹೊಂದಲು ಸಮರ್ಥರಾಗಿದ್ದೇವೆಂದು ಭಾವಿಸುತ್ತಿದ್ದರು. ಆಗ ಹಠಾತ್ತನೆ ರಾತ್ರೆ ಅಥವಾ ಹಗಲಲ್ಲಿ ನಮ್ಮ ಅಪ್ಪಣೆ ಬಂದು ಬಿಟ್ಟಿತು ಮತ್ತು ನಿನ್ನೆ ಅಲ್ಲೇನೂ ಇರಲೇ ಇಲ್ಲವೋ ಎಂಬಂತೆ ನಾವು ಅದನ್ನು ಅಳಿಸಿಬಿಟ್ಟೆವು. ವಿವೇಚಿಸುವ ಜನರಿಗೆ ನಾವು ಈ ರೀತಿಯಲ್ಲಿ ದೃಷ್ಟಾಂತಗಳನ್ನು ಸುಸ್ಪಷ್ಟವಾಗಿ ಮುಂದಿರಿಸುತ್ತೇವೆ.

اِنَّمَا مَثَلُ الْحَيٰوةِ الدُّنْيَا كَمَآءٍ اَنْزَلْنٰهُ مِنَ السَّمَآءِ فَاخْتَلَطَ بِهٖ نَبَاتُ الْاَرْضِ مِمَّا يَاْكُلُ النَّاسُ وَالْاَنْعَامُ ۗ حَتّٰٓى اِذَآ اَخَذَتِ الْاَرْضُ زُخْرُفَهَا وَازَّيَّنَتْ وَظَنَّ اَهْلُهَآ اَنَّهُمْ قٰدِرُوْنَ عَلَيْهَآ ۙ اَتٰىهَآ اَمْرُنَا لَيْلًا اَوْ نَهَارًا فَجَعَلْنٰهَا حَصِيْدًا كَاَنْ لَّمْ تَغْنَ بِالْاَمْسِ ۗ كَذٰلِكَ نُفَصِّلُ الْاٰيٰتِ لِقَوْمٍ يَّتَفَكَّرُوْنَ ﴿٢٤﴾

25. (ನೀವು ಈ ಅಸ್ಥಿರ ಜೀವನದ ಮಾಯೆಯಲ್ಲಿ ಸಿಕ್ಕಿ ಬೀಳುತ್ತಿರುವಿರಿ) ಅಲ್ಲಾಹನು ನಿಮ್ಮನ್ನು 'ದಾರುಸ್ಸಲಾಮ್'ನ (ಶಾಂತಿಗೃಹದ) ಕಡೆಗೆ ಕರೆಯುತ್ತಿದ್ದಾನೆ.[8] (ಸನ್ಮಾರ್ಗ ದರ್ಶನವು ಅವನ ಅಂಕೆಯಲ್ಲಿದೆ) ಅವನು ತನಗಿಷ್ಟ ಬಂದವರಿಗೆ ಸನ್ಮಾರ್ಗ ದರ್ಶನ ಮಾಡಿಸುತ್ತಾನೆ.

وَاللّٰهُ يَدْعُوْٓا اِلٰى دَارِ السَّلٰمِ ۗ وَيَهْدِيْ مَنْ يَّشَآءُ اِلٰى صِرَاطٍ مُّسْتَقِيْمٍ ﴿٢٥﴾

8. ಅರ್ಥಾತ್- ಪಾರತ್ರಿಕ ಜೀವನದಲ್ಲಿ ನಿಮ್ಮನ್ನು 'ದಾರಸ್ಸಲಾಮ್'ಗೆ ಅರ್ಹರಾಗಿ ಮಾಡುವಂತಹ ಜೀವನವನ್ನು ಲೋಕದಲ್ಲಿ ಬಾಳಬೇಕೆಂಬ ಕರೆಯನ್ನು ಅವನು ನೀಡುತ್ತಿದ್ದಾನೆ. 'ದಾರುಸ್ಸಲಾಮ್' ಎಂದರೆ ಸ್ವರ್ಗವಾಗಿದೆ. ಅರ್ಥಾತ್ ಶಾಂತಿಯ ಭವನ. ಯಾವುದೇ ಅಪಾಯ, ಸಂಕಷ್ಟ, ದುಃಖ ಮತ್ತು ಉಪದ್ರವಗಳಿಲ್ಲದ ಸ್ಥಳ.

26. ಒಳಿತಿನ ಮಾರ್ಗ ಹಿಡಿದವರಿಗೆ ಒಳಿತಿದೆ. ಇನ್ನೂ ಹೆಚ್ಚಿನ ಅನುಗ್ರಹವಿದೆ. ಅವರ ಮುಖಕ್ಕೆ ಕಳಂಕವಾಗಲಿ ಅವರಿಗೆ ಅವ ಮಾನವಾಗಲಿ ಆಗದು. ಅವರು ಸ್ವರ್ಗಕ್ಕೆ ಹಕ್ಕುದಾರರು. ಅಲ್ಲಿ ಅವರು ಸದಾಕಾಲ ವಾಸಿಸುವರು.

لِلَّذِينَ أَحْسَنُوا الْحُسْنَىٰ وَزِيَادَةٌ ۖ وَلَا يَرْهَقُ وُجُوهَهُمْ قَتَرٌ وَلَا ذِلَّةٌ ۚ أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ٢٦

27. ಪಾಪ ಗಳಿಸಿದವರು ಅವರ ಪಾಪಗಳಿಗೆ ತಕ್ಕಂತೆ ಪ್ರತಿಫಲ ಪಡೆಯುವರು. ಅವಮಾನವು ಅವರನ್ನಾವರಿಸುವುದು. ಅವರನ್ನು ಅಲ್ಲಾಹನಿಂದ ರಕ್ಷಿಸುವವನಾರೂ ಇರಲಾರನು. ಅವರ ಮುಖಗಳ ಮೇಲೆ ನಿಶಾಂಧಕಾರದ ಕಪ್ಪು ಪರದೆಗಳು ಬಿದ್ದಿರುವಂತೆ ಕತ್ತಲೆ ಕವಿದಿರುವುದು. ಅವರು ನರಕಕ್ಕೇ ಹಕ್ಕುದಾರರು. ಅದರಲ್ಲಿ ಅವರು ಸದಾಕಾಲ ವಾಸಿಸುವರು.

وَالَّذِينَ كَسَبُوا السَّيِّئَاتِ جَزَاءُ سَيِّئَةٍ بِمِثْلِهَا وَتَرْهَقُهُمْ ذِلَّةٌ ۖ مَا لَهُمْ مِنَ اللَّهِ مِنْ عَاصِمٍ ۖ كَأَنَّمَا أُغْشِيَتْ وُجُوهُهُمْ قِطَعًا مِنَ اللَّيْلِ مُظْلِمًا ۚ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ٢٧

28. ನಾವು ಅವರೆಲ್ಲರನ್ನೂ ಒಟ್ಟಾಗಿ (ನಮ್ಮ ನ್ಯಾಯಾಲಯದಲ್ಲಿ) ಸೇರಿಸುವ ದಿನ, ಬಹುದೇವಾರಾಧನೆ ಮಾಡಿದವರೊಡನೆ, ನೀವೂ (ದೇವತ್ವದಲ್ಲಿ) ನೀವು ಮಾಡಿಕೊಂಡ ಸಹಭಾಗಿಗಳೂ ನಿಲ್ಲಿರೆಂದು ಹೇಳುವೆವು. ಆ ಬಳಿಕ ನಾವು ಅವರ ನಡುವಿನಿಂದ ಪರಕೀಯತೆಯ ಪರದೆಯನ್ನು ಸರಿಸಿಬಿಡುವೆವು.[9] ಅವರು ಮಾಡಿಕೊಂಡ ಸಹ ಭಾಗಿಗಳು ಹೇಳುವರು,- "ನೀವು ನಮ್ಮ ದಾಸ್ಯ-ಆರಾಧನೆಯ ನ್ನಂತೂ ಮಾಡುತ್ತಿರಲಿಲ್ಲ.

وَيَوْمَ نَحْشُرُهُمْ جَمِيعًا ثُمَّ نَقُولُ لِلَّذِينَ أَشْرَكُوا مَكَانَكُمْ أَنْتُمْ وَشُرَكَاؤُكُمْ ۚ فَزَيَّلْنَا بَيْنَهُمْ ۖ وَقَالَ شُرَكَاؤُهُمْ مَا كُنْتُمْ إِيَّانَا تَعْبُدُونَ ٢٨

29. (ನೀವು ನಮ್ಮನ್ನು ಆರಾಧಿಸುತ್ತಿದ್ದರೂ) ನಾವು ನಿಮ್ಮ ದಾಸ್ಯ-ಆರಾಧನೆಯ ಬಗ್ಗೆ ಸಂಪೂರ್ಣ ಅಜ್ಞರಾಗಿದ್ದೆವೆಂಬುದಕ್ಕೆ ನಮ್ಮ ಮತ್ತು ನಿಮ್ಮ ನಡುವೆ ಅಲ್ಲಾಹನ ಸಾಕ್ಷ್ಯ ಸಾಕು."

فَكَفَىٰ بِاللَّهِ شَهِيدًا بَيْنَنَا وَبَيْنَكُمْ إِنْ كُنَّا عَنْ عِبَادَتِكُمْ لَغَافِلِينَ ٢٩

30. ಆಗ ಪ್ರತಿಯೊಬ್ಬನು ತಾನು ಮಾಡಿದ ಕರ್ಮದ ಸವಿಯನ್ನುಣ್ಣು ವನು. ಎಲ್ಲರೂ ತಮ್ಮ ನೈಜ ಒಡೆಯನಾದ ಅಲ್ಲಾಹನ ಕಡೆಗೆ ತಿರುಗಿಸಲ್ಪಡುವರು ಮತ್ತು ಅವರು ಸೃಷ್ಟಿಸಿಕೊಂಡ ಎಲ್ಲ ಸುಳ್ಳುಗಳೂ ಮಾಯವಾಗುವುವು.

هُنَالِكَ تَبْلُو كُلُّ نَفْسٍ مَا أَسْلَفَتْ ۚ وَرُدُّوا إِلَى اللَّهِ مَوْلَاهُمُ الْحَقِّ ۖ وَضَلَّ عَنْهُمْ مَا كَانُوا يَفْتَرُونَ ٣٠

النصف

31. ಅವರೊಡನೆ ಕೇಳಿರಿ- ನಿಮಗೆ ಆಕಾಶಗಳಿಂದಲೂ ಭೂಮಿ ಯಿಂದಲೂ ಜೀವನಾಧಾರ ನೀಡುತ್ತಿರುವವನಾರು? ಈ ಶ್ರವಣ ಮತ್ತು ದೃಕ್ಶಕ್ತಿಗಳು ಯಾರ ವಶದಲ್ಲಿವೆ? ನಿರ್ಜೀವಿಯಿಂದ

قُلْ مَنْ يَرْزُقُكُمْ مِنَ السَّمَاءِ وَالْأَرْضِ أَمَّنْ يَمْلِكُ السَّمْعَ وَالْأَبْصَارَ وَمَنْ

9. ಅರ್ಥಾತ್- ಬಹುದೇವಾರಾಧಕರನ್ನು ಅವರ ಆರಾಧ್ಯರುಗಳು, ನಮ್ಮ ಆರಾಧನೆ ಮಾಡುತ್ತಿದ್ದವರು ಇವರೇ ಆಗಿದ್ದಾರೆ ಎಂದು ಗುರುತು ಹಚ್ಚುವರು. ಹಾಗೆಯೇ ಬಹುದೇವಾರಾಧಕರು, ನಾವು ಆರಾಧನೆ ಮಾಡುತ್ತಿದ್ದ ಆರಾಧ್ಯರುಗಳು ಇವರೇ ಆಗಿದ್ದಾರೆ ಎಂದೂ ಗುರುತು ಹಿಡಿಯುವರು.

ಸಜೀವಿಯನ್ನು ಸಜೀವಿಯಿಂದ ನಿರ್ಜೀವಿಯನ್ನೂ ಹೊರತರುವವನಾರು? ಈ ಜಗತ್ತಿನ ವ್ಯವಸ್ಥೆಯನ್ನು ಶಿಸ್ತುಬದ್ಧವಾಗಿ ನಡೆಸುತ್ತಿರುವವನಾರು? 'ಅಲ್ಲಾಹ್' ಎಂದೇ ಅವರು ಹೇಳುವರು. ಹೇಳಿರಿ - "ಹಾಗಿದ್ದರೂ ನೀವು (ಪರಮಾರ್ಥಕ್ಕೆ ವಿರುದ್ಧವಾಗಿ ನಡೆಯುವುದನ್ನು) ತೊರೆಯುವುದಿಲ್ಲವೇ?

يُخْرِجُ الْحَيَّ مِنَ الْمَيِّتِ وَيُخْرِجُ الْمَيِّتَ مِنَ الْحَيِّ وَمَنْ يُدَبِّرُ الْأَمْرَ ۚ فَسَيَقُولُونَ اللَّهُ ۚ فَقُلْ أَفَلَا تَتَّقُونَ ٣١

32. ನಿಜವಾಗಿ ಈ ಅಲ್ಲಾಹನೇ ನಿಮ್ಮ ಯಥಾರ್ಥ ಪ್ರಭು. ಇನ್ನು ಸತ್ಯದ ತರುವಾಯ ಪಥಭ್ರಷ್ಟತೆಯ ವಿನಾ ಬೇರೇನು ಉಳಿದಿದೆ? ನೀವೆತ್ತ ಅಲೆದಾಡಿಸಲ್ಪಡುತ್ತಿರುವಿರಿ?[10]

فَذَٰلِكُمُ اللَّهُ رَبُّكُمُ الْحَقُّ ۖ فَمَاذَا بَعْدَ الْحَقِّ إِلَّا الضَّلَالُ ۖ فَأَنَّىٰ تُصْرَفُونَ ٣٢

33. ಹೀಗೆ, ಕರ್ಮಭ್ರಷ್ಟರು ವಿಶ್ವಾಸವಿರಿಸಲಾರರೆಂದು ನಿಮ್ಮ ಪ್ರಭು ಹೇಳಿದ ಮಾತು ನಿಜವಾಯಿತು.

كَذَٰلِكَ حَقَّتْ كَلِمَتُ رَبِّكَ عَلَى الَّذِينَ فَسَقُوا أَنَّهُمْ لَا يُؤْمِنُونَ ٣٣

34. "ನೀವಿರಿಸಿಕೊಂಡಿರುವ ಸಹಭಾಗಿಗಳ ಪೈಕಿ ಸೃಷ್ಟಿಯ ಆರಂಭ ಮಾಡುವವನೂ ಅದನ್ನು ಪುನರಾವರ್ತಿಸುವವನೂ ಯಾರಾದರೂ ಇದ್ದಾನೆಯೇ?" ಎಂದು ಇವರೊಡನೆ ಕೇಳಿರಿ. ಹೇಳಿರಿ- "ಸೃಷ್ಟಿಯನ್ನು ಆರಂಭಿಸುವವನೂ ಅದನ್ನು ಪುನರಾವರ್ತಿಸುವವನೂ ಕೇವಲ ಅಲ್ಲಾಹನೇ. ಹೀಗಿರುತ್ತ ನೀವು ಇದಾವ ತದ್ವಿರುದ್ಧ ಮಾರ್ಗದಲ್ಲಿ ನಡೆಸಲ್ಪಡುತ್ತಿರುವಿರಿ?"

قُلْ هَلْ مِنْ شُرَكَائِكُمْ مَنْ يَبْدَأُ الْخَلْقَ ثُمَّ يُعِيدُهُ ۚ قُلِ اللَّهُ يَبْدَأُ الْخَلْقَ ثُمَّ يُعِيدُهُ ۖ فَأَنَّىٰ تُؤْفَكُونَ ٣٤

35. "ನೀವಿರಿಸಿಕೊಂಡಿರುವ ಸಹಭಾಗಿಗಳ ಪೈಕಿ ಯಾರಾದರೂ ಸತ್ಯದ ಕಡೆಗೆ ಮಾರ್ಗದರ್ಶನ ನೀಡುವವನೂ ಇದ್ದಾನೆಯೇ?" ಎಂದು ಇವರೊಡನೆ ಕೇಳಿರಿ. ಹೇಳಿರಿ- "ಸತ್ಯದ ಕಡೆಗೆ ಮಾರ್ಗದರ್ಶನ ಮಾಡುವವನು ಕೇವಲ ಅಲ್ಲಾಹನೇ. ಹೀಗಿರುತ್ತ ಸತ್ಯದ ಕಡೆಗೆ ಮಾರ್ಗದರ್ಶನ ಮಾಡುವವನು ಅನುಸರಣೆಗೆ ಹೆಚ್ಚು ಅರ್ಹನೋ ಅಥವಾ ತನಗೆ ಮಾರ್ಗದರ್ಶನ ಮಾಡಿಸದಿದ್ದರೆ ಸ್ವತಃ ಸನ್ಮಾರ್ಗ ಹೊಂದದವನು ಅನುಸರಣೆಗೆ ಹೆಚ್ಚು ಅರ್ಹನೋ? ನಿಮಗೇನಾಗಿ ಬಿಟ್ಟಿದೆ? ನೀವೆಂತಹ ತದ್ವಿರುದ್ಧ ತೀರ್ಮಾನ ಕೈಗೊಳ್ಳುತ್ತೀರಿ?"

قُلْ هَلْ مِنْ شُرَكَائِكُمْ مَنْ يَهْدِي إِلَى الْحَقِّ ۚ قُلِ اللَّهُ يَهْدِي لِلْحَقِّ ۗ أَفَمَنْ يَهْدِي إِلَى الْحَقِّ أَحَقُّ أَنْ يُتَّبَعَ أَمَّنْ لَا يَهِدِّي إِلَّا أَنْ يُهْدَىٰ ۖ فَمَا لَكُمْ كَيْفَ تَحْكُمُونَ ٣٥

10. ಜನಸಾಮಾನ್ಯರನ್ನುದ್ದೇಶಿಸಿ ಈ ಮಾತು ಹೇಳಲಾಗುತ್ತಿದೆ ಎಂಬುದು ಗಮನಾರ್ಹ. ನೀವು ಯಾವ ಕಡೆಗೆ ತಿರುಗುತ್ತಿದ್ದೀರಿ ಎಂದು ಅವರೊಡನೆ ಕೇಳಲಾಗುತ್ತಿಲ್ಲ. ಬದಲಾಗಿ, "ಯಾವ ಕಡೆಗೆ ತಿರುಗಿಸಲ್ಪಡುತ್ತಿದ್ದೀರಿ?" ಎಂದು ಕೇಳಲಾಗುತ್ತಿದೆ. ಇದರಿಂದ ಜನರನ್ನು ಸನ್ಮಾರ್ಗದಿಂದ ದೂರಸರಿಸಿ ದುರ್ಮಾರ್ಗದ ಕಡೆಗೆ ತಿರುಗಿಸುವಂತಹ ವ್ಯಕ್ತಿ ಅಥವಾ ಸಮೂಹ ಅಸ್ತಿತ್ವದಲ್ಲಿದೆ ಎಂದು ವ್ಯಕ್ತವಾಗುತ್ತದೆ. ಆದ್ದರಿಂದಲೇ ಕುರುಡರಂತೆ ನೀವು ಪಥಭ್ರಷ್ಟಗೊಳಿಸುವವರ ಹಿಂದೆ ಯಾಕೆ ಹೋಗುತ್ತಿದ್ದೀರಿ ಎಂದು ಕೇಳಲಾಗುತ್ತಿದೆ. 'ವಾಸ್ತವಿಕತೆ ಹೀಗಿರುವಾಗ ನೀವು ಹೋಗುತ್ತಿರುವುದಾದರೂ ಯಾವ ಕಡೆಗೆ? ನಿಮ್ಮ ವಿವೇಕವನ್ನು ಉಪಯೋಗಿಸಿ ನೀವು ಆಲೋಚಿಸುವುದಿಲ್ಲವೇಕೆ?' ಎನ್ನಲಾಗುತ್ತಿದೆ.

36. ವಾಸ್ತವದಲ್ಲಿ ಅವರ ಪೈಕಿ ಹೆಚ್ಚಿನವರು ಊಹೆ ಮತ್ತು ಗುಮಾನಿಗಳನ್ನು ಮಾತ್ರ ಹಿಂಬಾಲಿಸುತ್ತಾರೆ.[11] ವಸ್ತುತಃ ಗುಮಾನಿಯು ಸತ್ಯದ ಅವಶ್ಯಕತೆಯನ್ನು ಎಷ್ಟಕ್ಕೂ ಪೂರೈಸುವುದಿಲ್ಲ. ಇವರು ಮಾಡುತ್ತಿರುವುದನ್ನೆಲ್ಲಾ ಅಲ್ಲಾಹನು ಚೆನ್ನಾಗಿ ಅರಿಯುತ್ತಾನೆ.

وَمَا يَتَّبِعُ أَكْثَرُهُمْ إِلَّا ظَنًّا ۚ إِنَّ الظَّنَّ لَا يُغْنِي مِنَ الْحَقِّ شَيْئًا ۚ إِنَّ اللَّهَ عَلِيمٌ بِمَا يَفْعَلُونَ ﴿٣٦﴾

37. ಈ ಕುರ್‌ಆನ್ ಅಲ್ಲಾಹನ 'ದಿವ್ಯವಾಣಿ' ಮತ್ತು ಬೋಧನೆಯ ಹೊರತು ರಚಿಸಲ್ಪಡುವಂತಹ ವಸ್ತುವಲ್ಲ. ನಿಜವಾಗಿ ಇದು ಹಿಂದೆ ಬಂದಿದ್ದುದರ ದೃಢೀಕರಣವೂ ಪರಮ ಗ್ರಂಥದ ವಿವರಣೆಯೂ ಆಗಿರುತ್ತದೆ. ಇದು ಸರ್ವಲೋಕಾಧಿಪತಿಯ ಕಡೆಯಿಂದ ಬಂದಿರುವುದು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

وَمَا كَانَ هَٰذَا الْقُرْآنُ أَنْ يُفْتَرَىٰ مِنْ دُونِ اللَّهِ وَلَٰكِنْ تَصْدِيقَ الَّذِي بَيْنَ يَدَيْهِ وَتَفْصِيلَ الْكِتَابِ لَا رَيْبَ فِيهِ مِنْ رَبِّ الْعَالَمِينَ ﴿٣٧﴾

38. ಇದನ್ನು ಪೈಗಂಬರರು ಸ್ವತಃ ರಚಿಸಿಕೊಂಡರೆಂದು ಇವರು ಹೇಳುತ್ತಾರೆಯೇ? ಹೇಳಿರಿ;- "ನೀವು ನಿಮ್ಮ ಈ ಆಪಾದನೆಯ ಬಗ್ಗೆ ಸತ್ಯವಾದಿಗಳಾಗಿದ್ದರೆ ಇದರಂತಿರುವ ಒಂದು ಅಧ್ಯಾಯವನ್ನು ರಚಿಸಿ ತನ್ನಿರಿ ಮತ್ತು ಅಲ್ಲಾಹನೋರ್ವನನ್ನು ಬಿಟ್ಟು ಯಾರನ್ನೆಲ್ಲ ಸಹಾಯಕ್ಕಾಗಿ ಕರೆಯಲು ಸಾಧ್ಯವಿದೆಯೋ ಅವರನ್ನೆಲ್ಲ ಕರೆದುಕೊಳ್ಳಿರಿ."

أَمْ يَقُولُونَ افْتَرَاهُ ۖ قُلْ فَأْتُوا بِسُورَةٍ مِثْلِهِ وَادْعُوا مَنِ اسْتَطَعْتُمْ مِنْ دُونِ اللَّهِ إِنْ كُنْتُمْ صَادِقِينَ ﴿٣٨﴾

39. ವಾಸ್ತವದಲ್ಲಿ ಯಾವುದು ಇವರ ಜ್ಞಾನದ ಹಿಡಿತಕ್ಕೆ ಸಿಗಲಿಲ್ಲವೋ ಮತ್ತು ಯಾವುದರ ಕ್ರಿಯಾಫಲವು ಇವರ ಮುಂದೆ ಬರಲಿಲ್ಲವೋ ಅದನ್ನು ಇವರು (ವೃಥಾ ಅನುಮಾನದಿಂದಲೇ) ಸುಳ್ಳಾಗಿಸಿದರು. ಇದೇ ರೀತಿಯಲ್ಲಿ ಇವರ ಪೂರ್ವಿಕರೂ ಸುಳ್ಳಾಗಿಸಿದ್ದರು. ಅನಂತರ ಆ ಅಕ್ರಮಿಗಳ ಪರಿಣಾಮವೇನಾಯಿತೆಂಬುದನ್ನು ನೋಡಿರಿ.

بَلْ كَذَّبُوا بِمَا لَمْ يُحِيطُوا بِعِلْمِهِ وَلَمَّا يَأْتِهِمْ تَأْوِيلُهُ ۚ كَذَٰلِكَ كَذَّبَ الَّذِينَ مِنْ قَبْلِهِمْ ۖ فَانْظُرْ كَيْفَ كَانَ عَاقِبَةُ الظَّالِمِينَ ﴿٣٩﴾

40. ಇವರಲ್ಲಿ ಕೆಲವರು ವಿಶ್ವಾಸವಿರಿಸುವರು ಮತ್ತು ಇನ್ನು ಕೆಲವರು ವಿಶ್ವಾಸವಿರಿಸಲಾರರು. ನಿಮ್ಮ ಪ್ರಭು ಈ ಕಿಡಿಗೇಡಿಗಳನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ.

وَمِنْهُمْ مَنْ يُؤْمِنُ بِهِ وَمِنْهُمْ مَنْ لَا يُؤْمِنُ بِهِ ۚ وَرَبُّكَ أَعْلَمُ بِالْمُفْسِدِينَ ﴿٤٠﴾

ع

11. ಅರ್ಥಾತ್- ಧರ್ಮಗಳನ್ನು ಸ್ಥಾಪಿಸಿದ, ತತ್ವಶಾಸ್ತ್ರಗಳನ್ನು ಹೆಣೆದ ಮತ್ತು ಜೀವನದ ನಿಯಮಗಳನ್ನು ರೂಪಿಸಿದ ವ್ಯಕ್ತಿಗಳೂ ಕಲ್ಪನೆ ಮತ್ತು ಭ್ರಮೆಗಳ ಆಧಾರದಲ್ಲೇ ಅದನ್ನು ರಚಿಸಿದರು. ಜ್ಞಾನದ ಆಧಾರದಲ್ಲಲ್ಲ. ಈ ಧಾರ್ಮಿಕ ಮತ್ತು ಲೌಕಿಕ ಮಾರ್ಗದರ್ಶಿಗಳನ್ನು ಅನುಸರಿಸುತ್ತಿರುವವರೂ ತಿಳುವಳಿಕೆ ಮತ್ತು ಜ್ಞಾನದಿಂದಾಗಿಯಲ್ಲ. ಬದಲಾಗಿ ಗುಮಾನಿಯ ಆಧಾರದಲ್ಲೇ ಅವರನ್ನು ಅನುಸರಿಸುತ್ತಿದ್ದಾರೆ. ಇಂತಹ ಮಹಾನ್ ವ್ಯಕ್ತಿಗಳು ಹೀಗೆ ಹೇಳುತ್ತಿರ ಬೇಕಾದರೆ ನನ್ನ ತಾತ ಮುತ್ತಾತಂದಿರು ಅದನ್ನು ಪಾಲಿಸುತ್ತಾ ಬಂದಿರಬೇಕಾದರೆ ಮತ್ತು ಇಡೀ ಲೋಕವೇ ಅವರನ್ನು ಅನುಸರಿಸುತ್ತಿರಬೇಕಾದರೆ ಅವರು ಹೇಳುತ್ತಿರುವುದು ನಿಜವೇ ಆಗಿರಬಹುದು ಎಂಬುದು ಅವರ ಕಲ್ಪನೆ.

وَاِنْ كَذَّبُوْكَ فَقُلْ لِّيْ عَمَلِيْ وَلَكُمْ عَمَلُكُمْ ۚ اَنْتُمْ بَرِيْٓـُٔوْنَ مِمَّآ اَعْمَلُ وَاَنَا بَرِيْٓءٌ مِّمَّا تَعْمَلُوْنَ ﴿٤١﴾

41. ಇವರು ನಿಮ್ಮನ್ನು ಸುಳ್ಳಾಗಿಸುತ್ತಿದ್ದರೆ, ಹೇಳಿರಿ; - "ನನ್ನ ಕರ್ಮ ನನಗೆ ಮತ್ತು ನಿಮ್ಮ ಕರ್ಮ ನಿಮಗೆ. ನಾನು ಮಾಡುತ್ತಿರುವ ಯಾವುದೇ ಕರ್ಮದ ಹೊಣೆಯಿಂದ ನೀವು ಮುಕ್ತರು. ನೀವು ಮಾಡುತ್ತಿರುವ ಯಾವುದೇ ಕರ್ಮದ ಹೊಣೆಯಿಂದ ನಾನು ಮುಕ್ತನು."[12]

وَمِنْهُمْ مَّنْ يَّسْتَمِعُوْنَ اِلَيْكَ ۗ اَفَاَنْتَ تُسْمِعُ الصُّمَّ وَلَوْ كَانُوْا لَا يَعْقِلُوْنَ ﴿٤٢﴾

42. ಇವರಲ್ಲಿ ಅನೇಕರು ನಿಮ್ಮ ಮಾತುಗಳನ್ನು ಕೇಳುತ್ತಾರೆ. ಆದರೆ ಕಿವುಡರು ಏನನ್ನೂ ಗ್ರಹಿಸದಿದ್ದರೂ ನೀವು ಅವರಿಗೆ ಕೇಳಿ ಸುವಿರಾ?[13]

وَمِنْهُمْ مَّنْ يَّنْظُرُ اِلَيْكَ ۗ اَفَاَنْتَ تَهْدِى الْعُمْىَ وَلَوْ كَانُوْا لَا يُبْصِرُوْنَ ﴿٤٣﴾

43. ಇವರಲ್ಲಿ ಅನೇಕರು ನಿಮ್ಮತ್ತ ನೋಡುತ್ತಾರೆ. ಆದರೆ ಕುರುಡರಿಗೆ ಏನೂ ಹೊಳೆಯದಿದ್ದರೂ ನೀವು ಅವರಿಗೆ ಮಾರ್ಗದರ್ಶನ ಮಾಡುವಿರಾ?

اِنَّ اللّٰهَ لَا يَظْلِمُ النَّاسَ شَيْـًٔا وَّلٰكِنَّ النَّاسَ اَنْفُسَهُمْ يَظْلِمُوْنَ ﴿٤٤﴾

44. ವಾಸ್ತವದಲ್ಲಿ ಅಲ್ಲಾಹನು ಜನರ ಮೇಲೆ ಅಕ್ರಮವೆಸಗುವುದಿಲ್ಲ. ಜನರು ತಾವೇ ತಮ್ಮ ಮೇಲೆ ಅಕ್ರಮವೆಸಗಿಕೊಳ್ಳುತ್ತಾರೆ.

وَيَوْمَ يَحْشُرُهُمْ كَاَنْ لَّمْ يَلْبَثُوْٓا اِلَّا سَاعَةً مِّنَ النَّهَارِ يَتَعَارَفُوْنَ بَيْنَهُمْ ۗ قَدْ خَسِرَ الَّذِيْنَ كَذَّبُوْا بِلِقَآءِ اللّٰهِ وَمَا كَانُوْا مُهْتَدِيْنَ ﴿٤٥﴾

45. (ಇಂದು ಇವರು ಐಹಿಕ ಜೀವನದಲ್ಲಿ ಉನ್ಮತ್ತರಾಗಿದ್ದಾರೆ) ಅಲ್ಲಾಹನು ಇವರನ್ನು ಒಟ್ಟು ಸೇರಿಸುವ ದಿನ (ಇದೇ ಐಹಿಕ ಜೀವನವು) ಇವರಿಗೆ ಹಗಲಿನ ಒಂದು ಕ್ಷಣಕಾಲ ಪರಸ್ಪರ ಪರಿ ಚಯ ಮಾಡಿಕೊಳ್ಳಲಿಕ್ಕಾಗಿ ತಾವು ತಂಗಿದ್ದಂತೆ (ಭಾಸವಾಗುವುದು) ಅಲ್ಲಾಹನೊಡನೆ ಭೇಟಿಯನ್ನು ಸುಳ್ಳಾಗಿಸಿದವರು ನಿಜಕ್ಕೂ ನಷ್ಟಹೊಂದಿದರೆಂದೂ ಅವರು ಸನ್ಮಾರ್ಗದಲ್ಲಿರಲಿಲ್ಲವೆಂದೂ (ಆಗ ಅವರಿಗೆ ಖಚಿತವಾಗುವುದು).

وَاِمَّا نُرِيَنَّكَ بَعْضَ الَّذِىْ نَعِدُهُمْ اَوْ نَتَوَفَّيَنَّكَ فَاِلَيْنَا مَرْجِعُهُمْ ثُمَّ اللّٰهُ شَهِيْدٌ عَلٰى مَا يَفْعَلُوْنَ ﴿٤٦﴾

46. ಯಾವ ದುಷ್ಪರಿಣಾಮಗಳಿಂದ ನಾವು ಅವರನ್ನು ಹೆದರಿಸುತ್ತೇವೋ ಅದರ ಒಂದಂಶವನ್ನು ನಾವು ನಿಮ್ಮ ಜೀವಮಾನದಲ್ಲೇ ನಿಮಗೆ ತೋರಿಸಬಹುದು ಅಥವಾ ಅದಕ್ಕಿಂತ ಮುಂಚೆಯೇ ನಿಮ್ಮನ್ನು ಎತ್ತಿಕೊಳ್ಳಬಹುದು. ಹೇಗಿದ್ದರೂ ಇವರಿಗೆ ನಮ್ಮ ಕಡೆಗೆ ಬರಲಿಕ್ಕಿದೆ. ಇವರು ಏನೆಲ್ಲ ಮಾಡುತ್ತಿರುವರೋ ಅದರ ಬಗ್ಗೆ ಅಲ್ಲಾಹ್ ಸಾಕ್ಷಿಯಾಗಿರುತ್ತಾನೆ.

12. ಅರ್ಥಾತ್- ನಿರರ್ಥಕ ಜಗಳ ಕಾಯುವ ಮತ್ತು ಚರ್ಚೆಗಳನ್ನು ನಡೆಸುವ ಅವಶ್ಯಕತೆಯಿಲ್ಲ. ನಾನು ಸುಳ್ಳಾರೋಪ ಹೊರಿಸುತ್ತಿದ್ದರೆ ಅದಕ್ಕೆ ನಾನೇ ಹೊಣೆಗಾರ. ನಿಮ್ಮ ಮೇಲೆ ಅದರ ಯಾವ ಜವಾಬ್ದಾರಿಕೆಯೂ ಇಲ್ಲ. ನೀವು ಸತ್ಯವನ್ನು ತಿರುಚುವ ಮೂಲಕ ನನಗೆ ಯಾವ ಹಾನಿಯನ್ನೂ ಉಂಟು ಮಾಡಲಾರಿರಿ. ನಿಮಗೇ ನೀವು ನಷ್ಟ ಉಂಟು ಮಾಡಿಕೊಳ್ಳುತ್ತಿದ್ದೀರಷ್ಟೆ.

13. ಪ್ರಾಣಿಗಳು ಶಬ್ದವನ್ನು ಕೇಳಿಸಿಕೊಳ್ಳುವಂತೆ ಕೇಳಿಸಿಕೊಳ್ಳುವುದು ಒಂದು ವಿಧವಾಗಿದೆ. ಇನ್ನೊಂದು ವಿಧ, ಅರ್ಥದ ಕಡೆಗೆ ಗಮನ ಹರಿಸಿ ವಿಷಯ ಸಮರ್ಪಕವಾದುದಾದರೆ ಅದನ್ನು ಸಮ್ಮತಿಸುವ ಸನ್ನದ್ಧತೆಯೊಂದಿಗೆ ಕೇಳುವುದಾಗಿದೆ.

47. ಪ್ರತಿಯೊಂದು 'ಸಮುದಾಯ'ಕ್ಕೆ ಓರ್ವ ರಸೂಲನಿದ್ದಾನೆ.[14] ಒಂದು ಸಮುದಾಯದ ಬಳಿಗೆ ಅದರ ರಸೂಲ್ ಬಂದಾಗ ಅದರ ತೀರ್ಮಾನವನ್ನು ನ್ಯಾಯಪೂರ್ಣವಾಗಿ ಮಾಡಿಬಿಡಲಾಗುತ್ತದೆ ಮತ್ತು ಅದರ ಮೇಲೆ ಕಿಂಚಿತ್ತೂ ಅಕ್ರಮವೆಸಗಲಾಗುವುದಿಲ್ಲ.

وَلِكُلِّ أُمَّةٍ رَّسُولٌ ۖ فَإِذَا جَاءَ رَسُولُهُمْ قُضِيَ بَيْنَهُم بِالْقِسْطِ وَهُمْ لَا يُظْلَمُونَ ﴿٤٧﴾

48. "ನಿಮ್ಮ ಈ ಬೆದರಿಕೆಯು ನಿಜವಾಗಿದ್ದರೆ ಇದು ಪೂರ್ಣಗೊಳ್ಳುವುದು ಯಾವಾಗ?" ಎನ್ನುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ﴿٤٨﴾

49. ಹೇಳಿರಿ, "ಸ್ವತಃ ನನ್ನ ಲಾಭ-ಹಾನಿಗಳೂ ನನ್ನ ಅಧಿಕಾರದಲ್ಲಿಲ್ಲ. ಎಲ್ಲವೂ ಅಲ್ಲಾಹನ ವಿಧಿಯನ್ನು ಹೊಂದಿಕೊಂಡಿದೆ. ಪ್ರತಿಯೊಂದು ಸಮುದಾಯಕ್ಕೂ ಒಂದು ನಿಶ್ಚಿತ ಕಾಲಾವಧಿ ಇದೆ. ಈ ಕಾಲಾವಧಿ ಮುಗಿದಾಗ ಕ್ಷಣ ಮಾತ್ರವೂ ಹಿಂದು ಮುಂದಾಗುವುದಿಲ್ಲ."

قُل لَّا أَمْلِكُ لِنَفْسِي ضَرًّا وَلَا نَفْعًا إِلَّا مَا شَاءَ اللَّهُ ۗ لِكُلِّ أُمَّةٍ أَجَلٌ ۚ إِذَا جَاءَ أَجَلُهُمْ فَلَا يَسْتَأْخِرُونَ سَاعَةً ۖ وَلَا يَسْتَقْدِمُونَ ﴿٤٩﴾

50. ಇವರೊಡನೆ ಹೇಳಿರಿ;- ಅಲ್ಲಾಹನ ಯಾತನೆಯು ರಾತ್ರೆ ಅಥವಾ ಹಗಲಲ್ಲಿ ಹಠಾತ್ತನೆ ಬಂದೆರಗಿ ಬಿಟ್ಟರೆ (ನೀವು ಏನು ಮಾಡಬಲ್ಲಿರಿ) ಎಂಬುದನ್ನು ಯೋಚಿಸಿದಿರಾ? ಅಪರಾಧಿಗಳು ಇದರಲ್ಲಿ ತವಕಪಡುವ ವಿಷಯವಾದರೂ ಏನಿದೆ?

قُلْ أَرَأَيْتُمْ إِنْ أَتَاكُمْ عَذَابُهُ بَيَاتًا أَوْ نَهَارًا مَّاذَا يَسْتَعْجِلُ مِنْهُ الْمُجْرِمُونَ ﴿٥٠﴾

51. ಅದು ನಿಮ್ಮ ಮೇಲೆ ಬಂದೆರಗಿದ ಅನಂತರವೇ ನೀವು ಅದನ್ನು ನಂಬುವಿರಾ? ಈಗ ತಪ್ಪಿಸಿಕೊಳ್ಳಲಿಚ್ಛಿಸುತ್ತೀರಾ? ವಸ್ತುತಃ ನೀವೇ ಅದು ಬೇಗನೆ ಬರಬೇಕೆಂಬ ತರಾತುರಿಯಲ್ಲಿದ್ದಿರಿ.

أَثُمَّ إِذَا مَا وَقَعَ آمَنتُم بِهِ ۚ آلْآنَ وَقَدْ كُنتُم بِهِ تَسْتَعْجِلُونَ ﴿٥١﴾

52. ಆ ಬಳಿಕ ಅಕ್ರಮಿಗಳೊಡನೆ (ಹೀಗೆ) ಹೇಳಲಾಗುವುದು. ಇನ್ನು ಅನಂತ ಕಾಲದ ಯಾತನೆಯನ್ನು ಸವಿಯಿರಿ. ನೀವು ಗಳಿಸುತ್ತಿದ್ದುದರ ಪ್ರತಿಫಲದ ಹೊರತು ಇನ್ನಾವ ಪ್ರತಿಫಲವನ್ನು ನಿಮಗೆ ಕೊಡಲು ಸಾಧ್ಯ?

ثُمَّ قِيلَ لِلَّذِينَ ظَلَمُوا ذُوقُوا عَذَابَ الْخُلْدِ هَلْ تُجْزَوْنَ إِلَّا بِمَا كُنتُمْ تَكْسِبُونَ ﴿٥٢﴾

14. 'ಉಮ್ಮತ್' ಎಂಬ ಪದವನ್ನು ಇಲ್ಲಿ ಒಂದು ಜನಾಂಗ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿಲ್ಲ. ಪ್ರವಾದಿಯ ಆಗಮನದ ನಂತರ ಅವರ ಸಂದೇಶ ಯಾರ್‍ಯಾರಿಗೆ ತಲಪುತ್ತದೋ ಅವರೆಲ್ಲರೂ ಪ್ರವಾದಿಯ 'ಉಮ್ಮತ್'ನಲ್ಲಿ ಸೇರಿದ್ದಾರೆ. ಅದಕ್ಕಾಗಿ ಪ್ರವಾದಿಯವರು ಅವರ ನಡುವೆ ಜೀವಂತ ಇರಬೇಕಾಗಿಯೂ ಇಲ್ಲ. ಅವರ ಬೋಧನೆಗಳು ಅಸ್ತಿತ್ವದಲ್ಲಿರುವಷ್ಟು ಕಾಲ ಮತ್ತು ಅವರು ಯಾವುದರ ಬೋಧನೆ ಕೊಡುತ್ತಿದ್ದಾರೆಂದು ಪ್ರತಿಯೊಬ್ಬನಿಗೂ ತಿಳಿಯಲು ಸಾಧ್ಯವಿರುವಷ್ಟು ಕಾಲ, ಲೋಕದ ಜನರೆಲ್ಲರೂ ಅವರ 'ಉಮ್ಮತ್' ಎಂದು ಪರಿಗಣಿಸಲ್ಪಡುವರು. ಮುಂದೆ ಬರುತ್ತಿರುವ ಆದೇಶಗಳು ಅವರೆಲ್ಲರಿಗೂ ಅನ್ವಯವಾಗುವುದು. ಈ ಅರ್ಥದಲ್ಲಿ ಮುಹಮ್ಮದ್(ಸ) ಆಗಮನದ ನಂತರ ಲೋಕದಲ್ಲಿರುವ ಮಾನವರೆಲ್ಲರೂ ಅವರ ಉಮ್ಮತಿಗಳಾಗಿದ್ದಾರೆ. ಕುರ್‌ಆನ್ ತನ್ನ ನೈಜ ರೂಪದಲ್ಲಿ ಇರುವಷ್ಟು ಕಾಲವೂ ಅವರು ಉಮ್ಮತಿಗಳಾಗಿಯೇ ಇರುವರು. ಆದ್ದರಿಂದಲೇ ಸೂಕ್ತದಲ್ಲಿ "ಪ್ರತಿಯೊಂದು ಜನಾಂಗಕ್ಕೂ ಓರ್ವ ಪ್ರವಾದಿ ಇದ್ದಾರೆ" ಎಂದು ಹೇಳಲಾಗಿಲ್ಲ. ಬದಲಾಗಿ "ಪ್ರತಿಯೊಂದು ಉಮ್ಮತ್‌ಗೆ ಓರ್ವ ಪ್ರವಾದಿ ಇದ್ದಾರೆ" ಎಂದು ಹೇಳಲಾಗಿದೆ.

53. "ನೀವು ಹೇಳುತ್ತಿರುವುದು ನಿಜಕ್ಕೂ ಸತ್ಯವೇ?" ಎಂದು ಕೇಳುತ್ತಾರೆ. ಹೇಳಿರಿ; "ನನ್ನ ಪ್ರಭುವಿನಾಣೆ, ಇದು ಖಂಡಿತವಾಗಿಯೂ ಸತ್ಯ. ಅದು ಸಂಭವಿಸುವುದನ್ನು ತಡೆಯುವಷ್ಟು ಸಾಮರ್ಥ್ಯ ನಿಮಗಿಲ್ಲ."

وَيَسْتَنْبِئُونَكَ أَحَقٌّ هُوَ ۖ قُلْ إِي وَرَبِّي إِنَّهُ لَحَقٌّ ۖ وَمَا أَنْتُمْ بِمُعْجِزِينَ ﴿٥٣﴾

54. ಅಕ್ರಮವೆಸಗಿದ ಪ್ರತಿಯೊಬ್ಬನ ಬಳಿ ಭೂಮಿಯ ಸಕಲ ಸಂಪತ್ತು ಇದ್ದರೂ ಆ ಯಾತನೆಯಿಂದ ಪಾರಾಗಲಿಕ್ಕಾಗಿ ಅವನು ಅದನ್ನೆಲ್ಲ ಪರಿಹಾರವಾಗಿ ಕೊಡಲು ಸಿದ್ಧನಾಗುವನು. ಇವರು ಆ ಯಾತನೆಯನ್ನು ಕಂಡಾಗ ಮನದೊಳಗೇ ಮರುಗುವರು. ಆದರೆ ಅವರ ನಡುವೆ ನ್ಯಾಯಪೂರ್ಣವಾದ ತೀರ್ಮಾನ ಕೈಕೊಳ್ಳಲಾಗುವುದು. ಅವರ ಮೇಲೆ ಯಾವ ಅಕ್ರಮವೂ ಆಗಲಾರದು.

وَلَوْ أَنَّ لِكُلِّ نَفْسٍ ظَلَمَتْ مَا فِي الْأَرْضِ لَافْتَدَتْ بِهِ ۗ وَأَسَرُّوا النَّدَامَةَ لَمَّا رَأَوُا الْعَذَابَ ۖ وَقُضِيَ بَيْنَهُمْ بِالْقِسْطِ ۚ وَهُمْ لَا يُظْلَمُونَ ﴿٥٤﴾

55. ಕೇಳಿರಿ! ಆಕಾಶಗಳಲ್ಲೂ ಭೂಮಿಯಲ್ಲೂ ಇರುವುದೆಲ್ಲವೂ ಅಲ್ಲಾಹನದೇ. ಕೇಳಿರಿ, ಅಲ್ಲಾಹನ ವಾಗ್ದಾನ ಸತ್ಯವಾದುದು. ಆದರೆ ಹೆಚ್ಚಿನವರು ಅರಿತಿರುವುದಿಲ್ಲ.

أَلَا إِنَّ لِلَّهِ مَا فِي السَّمَاوَاتِ وَالْأَرْضِ ۗ أَلَا إِنَّ وَعْدَ اللَّهِ حَقٌّ وَلَٰكِنَّ أَكْثَرَهُمْ لَا يَعْلَمُونَ ﴿٥٥﴾

56. ಅವನೇ ಜೀವದಾನ ಮಾಡುತ್ತಾನೆ ಅವನೇ ಮರಣ ಕೊಡುತ್ತಾನೆ. ಮತ್ತು ನಿಮಗೆಲ್ಲರಿಗೂ ಅವನ ಕಡೆಗೇ ಮರಳಲಿಕ್ಕಿದೆ.

هُوَ يُحْيِي وَيُمِيتُ وَإِلَيْهِ تُرْجَعُونَ ﴿٥٦﴾

57. ಜನರೇ! ನಿಮ್ಮ ಪ್ರಭುವಿನ ಕಡೆಯಿಂದ ನಿಮಗೊಂದು ಉಪದೇಶ ಬಂದಿದೆ. ಇದು ಮನಸ್ಸುಗಳೊಳಗಿನ ಕಾಯಿಲೆಗಳ ಗುಣೌಷಧವಾಗಿದೆ ಮತ್ತು ಅದನ್ನು ಸ್ವೀಕರಿಸಿಕೊಂಡವರಿಗೆ ಸನ್ಮಾರ್ಗ ದರ್ಶನವೂ ಕೃಪೆಯೂ ಆಗಿರುತ್ತದೆ.

يَا أَيُّهَا النَّاسُ قَدْ جَاءَتْكُمْ مَوْعِظَةٌ مِنْ رَبِّكُمْ وَشِفَاءٌ لِمَا فِي الصُّدُورِ وَهُدًى وَرَحْمَةٌ لِلْمُؤْمِنِينَ ﴿٥٧﴾

58. ಓ ಪೈಗಂಬರರೇ, (ಹೀಗೆ) ಹೇಳಿರಿ: "ಇದನ್ನು ಅವತೀರ್ಣಗೊಳಿಸಿದುದು ಅಲ್ಲಾಹನ ಅನುಗ್ರಹ ಮತ್ತು ಕೃಪೆಯಾಗಿರುತ್ತದೆ. ಇದಕ್ಕಾಗಿ ಜನರು ಸಂತೋಷ ಪಡಬೇಕು. ಜನರು ಶೇಖರಿಸುತ್ತಿರುವ ಎಲ್ಲ ವಸ್ತುಗಳಿಗಿಂತಲೂ ಇದು ಉತ್ತಮವಾಗಿದೆ."

قُلْ بِفَضْلِ اللَّهِ وَبِرَحْمَتِهِ فَبِذَٰلِكَ فَلْيَفْرَحُوا هُوَ خَيْرٌ مِمَّا يَجْمَعُونَ ﴿٥٨﴾

59. ಓ ಪೈಗಂಬರರೇ! ಇವರೊಡನೆ ಹೇಳಿರಿ- "ಅಲ್ಲಾಹನು ನಿಮಗಾಗಿ ಇಳಿಸಿದ್ದ 'ರಿಝ್ಕ್'ನ[15] ಪೈಕಿ ನೀವಾಗಿಯೇ ಕೆಲವನ್ನು 'ನಿಷಿದ್ಧ'

قُلْ أَرَأَيْتُمْ مَا أَنْزَلَ اللَّهُ لَكُمْ مِنْ رِزْقٍ فَجَعَلْتُمْ مِنْهُ حَرَامًا وَحَلَالًا قُلْ

15. 'ರಿಝ್ಕ್' ಎಂಬ ಪದ ಉರ್ದು ಭಾಷೆಯಲ್ಲಿ ತಿನ್ನುವ-ಕುಡಿಯುವ ವಸ್ತುಗಳಿಗೆ ಉಪಯೋಗಿಸಲ್ಪಡುತ್ತದೆ. ಆದರೆ ಅರಬಿ ಭಾಷೆಯಲ್ಲಿ

ಮತ್ತು ಕೆಲವನ್ನು 'ಧರ್ಮಸಮ್ಮತ'ಗೊಳಿಸಿದುದರ ಬಗ್ಗೆ ನೀವು ವಿವೇಚಿಸಿದ್ದೀರಾ?'[16] ಅಲ್ಲಾಹನು ನಿಮಗೆ ಇದರ ಅನುಮತಿ ನೀಡಿದ್ದನೋ ಅಥವಾ ನೀವು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುತ್ತಿರುವಿರೋ ಎಂದು ಇವರೊಡನೆ ಕೇಳಿರಿ.[17]

آٰللّٰهُ اَذِنَ لَكُمْ اَمْ عَلَى اللّٰهِ تَفْتَرُوْنَ ﴿٥٩﴾

60. ಅಲ್ಲಾಹನ ಮೇಲೆ ಇಂತಹ ಸುಳ್ಳಾರೋಪ ಹೊರಿಸುವವರೊಂದಿಗೆ ನಿರ್ಣಾಯಕ ದಿನದಂದು ಹೇಗೆ ವ್ಯವಹರಿಸಲಾಗುವುದೆಂದು ಅವರು ಊಹಿಸಿದ್ದಾರೆಯೇ? ಅಲ್ಲಾಹನಾದರೋ ಜನರ ಮೇಲೆ ಕೃಪಾ ಕಟಾಕ್ಷವನ್ನಿರಿಸುತ್ತಾನೆ. ಆದರೆ ಹೆಚ್ಚಿನವರು ಕೃತಜ್ಞತೆ ತೋರುವುದಿಲ್ಲ.

وَمَا ظَنُّ الَّذِيْنَ يَفْتَرُوْنَ عَلَى اللّٰهِ الْكَذِبَ يَوْمَ الْقِيٰمَةِ ؕ اِنَّ اللّٰهَ لَذُوْ فَضْلٍ عَلَى النَّاسِ وَلٰكِنَّ اَكْثَرَهُمْ لَا يَشْكُرُوْنَ ﴿٦٠﴾ ع

61. ಓ ಪೈಗಂಬರರೇ, ನೀವು ಯಾವುದೇ ಅವಸ್ಥೆಯಲ್ಲಿದ್ದರೂ ಕುರ್‌ಆನ್‌ನಿಂದ ಏನನ್ನು ಕೇಳಿಸುತ್ತಿದ್ದರೂ ಮತ್ತು ಜನರೇ, ನೀವೂ ಏನನ್ನೂ ಮಾಡುತ್ತಲಿದ್ದರೂ ಆ ವೇಳೆ ನಾವು ನಿಮ್ಮನ್ನು ನೋಡುತ್ತಿರುತ್ತೇವೆ. ನಿಮ್ಮ ಪ್ರಭುವಿನ ದೃಷ್ಟಿಯಿಂದ ಅಡಗಿರುವ ಹಾಗೂ ಒಂದು ಸುಸ್ಪಷ್ಟ ಗ್ರಂಥದಲ್ಲಿ ಲಿಖಿತಗೊಂಡಿರದ ಅಣು ಮಾತ್ರ ವಸ್ತುವೂ ಚಿಕ್ಕದಾಗಲಿ ದೊಡ್ಡದಾಗಲಿ ಭೂಮಿಯಲ್ಲೂ ಇಲ್ಲ, ಆಕಾಶಗಳಲ್ಲೂ ಇಲ್ಲ.

وَمَا تَكُوْنُ فِيْ شَاْنٍ وَّمَا تَتْلُوْا مِنْهُ مِنْ قُرْاٰنٍ وَّلَا تَعْمَلُوْنَ مِنْ عَمَلٍ اِلَّا كُنَّا عَلَيْكُمْ شُهُوْدًا اِذْ تُفِيْضُوْنَ فِيْهِ ؕ وَمَا يَعْزُبُ عَنْ رَّبِّكَ مِنْ مِّثْقَالِ ذَرَّةٍ فِي الْاَرْضِ وَلَا فِي السَّمَآءِ وَلَاۤ اَصْغَرَ مِنْ ذٰلِكَ وَلَاۤ اَكْبَرَ اِلَّا فِيْ كِتٰبٍ مُّبِيْنٍ ﴿٦١﴾

62. ಕೇಳಿರಿ! ನಿಶ್ಚಯವಾಗಿಯೂ ಅಲ್ಲಾಹನ ಮಿತ್ರರಾಗಿರುವವರಿಗೆ, ಯಾವತ್ತು ಭಯ ಮತ್ತು ವ್ಯಥೆಯ ಸಂಭವವೇ ಇಲ್ಲ.

اَلَاۤ اِنَّ اَوْلِيَآءَ اللّٰهِ لَا خَوْفٌ عَلَيْهِمْ وَلَا هُمْ يَحْزَنُوْنَ ﴿٦٢﴾ ۚ

63. ಅವರು ಸತ್ಯವಿಶ್ವಾಸವಿರಿಸಿಕೊಂಡವರು ಮತ್ತು ಧರ್ಮನಿಷ್ಠೆಯ ನಿಲುಮೆಯನ್ನಿರಿಸಿ ಕೊಂಡವರು.

الَّذِيْنَ اٰمَنُوْا وَكَانُوْا يَتَّقُوْنَ ﴿٦٣﴾ ؕ

64. ಇಹಪರ ಜೀವನಗಳೆರಡರಲ್ಲೂ ಅವರಿಗೆ ಭಾರೀ ಶುಭವಾರ್ತೆ

لَهُمُ الْبُشْرٰى فِي الْحَيٰوةِ الدُّنْيَا وَفِي

ಅದರ ಅರ್ಥ 'ಆಹಾರ'ಕ್ಕೆ ಸೀಮಿತವಾಗಿಲ್ಲ. ಕೊಡುಗೆ, ಉಡುಗೊರೆ ಮತ್ತು ಸೌಭಾಗ್ಯ ಎಂಬ ಅರ್ಥದಲ್ಲೂ ಅದರ ಉಪಯೋಗ ಸಾಮಾನ್ಯವಾಗಿದೆ. ಅಲ್ಲಾಹನು ಮನುಷ್ಯನಿಗೆ ಭೂಮಿಯಲ್ಲಿ ಏನೆಲ್ಲಾ ನೀಡಿದ್ದಾನೋ ಅದೆಲ್ಲವೂ ಅವನ 'ರಿಝ್ಕ್' ಆಗಿದೆ.

16. ಅರ್ಥಾತ್- ತಮ್ಮ ಪಾಲಿಗೆ ಕಾನೂನು ಮತ್ತು ಶರೀಅತನ್ನು ರಚಿಸಲು ನೀವು ಸ್ವಯಂ ಸ್ವತಂತ್ರರಾದಿರಿ. ವಾಸ್ತವದಲ್ಲಿ ಯಾರು 'ರಿಝ್ಕ್' ಅಥವಾ ಜೀವನಾಧಾರವನ್ನು ಒದಗಿಸಿದ್ದಾನೋ, ಅವನಿಗೇ ಅದರ ಸಿಂಧು-ಅಸಿಂಧುಗಳ ಮೇರೆ ಮತ್ತು ನಿಯಮಗಳನ್ನು ರೂಪಿಸುವ ಅಧಿಕಾರವಿದೆ.

17. ಸುಳ್ಳಾರೋಪ ಹೊರಿಸುವುದರ ಮೂರು ವಿಧಗಳಿವೆ. ಮೊದಲನೆಯದಾಗಿ ಅಲ್ಲಾಹನು ಸ್ವತಃ ಈ ಅಧಿಕಾರವನ್ನು ಮನುಷ್ಯನಿಗೆ ನೀಡಿದ್ದಾನೆ ಎಂದು ಹೇಳುವುದು. ಎರಡನೆಯದಾಗಿ ನಮ್ಮ ಪಾಲಿಗೆ ಕಾನೂನು ಮತ್ತು ಶರೀಅತನ್ನು ಗೊತ್ತುಪಡಿಸುವುದು ಅಲ್ಲಾಹನ ಕೆಲಸವಲ್ಲ ಎಂದು ಹೇಳುವುದು. ಮೂರನೆಯದಾಗಿ ಸಿಂಧು-ಅಸಿಂಧುಗಳು ಅಲ್ಲಾಹನ ವತಿಯಿಂದಾಗಿದೆ ಎಂದು ಹೇಳಿ ಆಧಾರ ಪ್ರಮಾಣದ ರೂಪದಲ್ಲಿ ಅಲ್ಲಾಹನ ಯಾವುದೇ ಗ್ರಂಥವನ್ನು ಸಮರ್ಪಿಸದಿರುವುದು.

ಇದೆ. ಅಲ್ಲಾಹನ ವಚನಗಳು ಬದಲಾಗುವಂತಿಲ್ಲ. ಇದುವೇ ಅತಿ ಹಿರಿದಾದ ಯಶಸ್ಸು.

الْآخِرَةِ ۚ لَا تَبْدِيلَ لِكَلِمَاتِ اللَّهِ ۚ ذَٰلِكَ هُوَ الْفَوْزُ الْعَظِيمُ ﴿٦٤﴾

65. ಓ ಪೈಗಂಬರರೇ, ಇವರು ನಿಮ್ಮ ಬಗ್ಗೆ ಸೃಷ್ಟನೆ ಮಾಡುತ್ತಿರುವ ಮಾತುಗಳು ನಿಮ್ಮನ್ನು ದುಃಖಕ್ಕೀಡು ಮಾಡದಿರಲಿ, ಪ್ರತಿಷ್ಠೆಯು ಸರ್ವ ಸಂಪೂರ್ಣವಾಗಿ ಅಲ್ಲಾಹನ ಅಧಿಕಾರದಲ್ಲಿದೆ. ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَلَا يَحْزُنكَ قَوْلُهُمْ ۘ إِنَّ الْعِزَّةَ لِلَّهِ جَمِيعًا ۚ هُوَ السَّمِيعُ الْعَلِيمُ ﴿٦٥﴾

66. ತಿಳಿದುಕೊಳ್ಳಿರಿ- ಆಕಾಶಗಳಲ್ಲಿರುವವರಿರಲಿ ಅಥವಾ ಭೂಮಿಯ ಮೇಲಿರುವವರಿರಲಿ ಎಲ್ಲರೂ ಅಲ್ಲಾಹನ ಅಧೀನರು. ಅಲ್ಲಾಹನ ಹೊರತು (ಸ್ವಯಂ ನಿರ್ಮಿತ) ಸಹಭಾಗಿಗಳನ್ನು ಕರೆಯುತ್ತಿರುವವರು ಕೇವಲ ಕಲ್ಪಿತ ಕಲ್ಪನೆಗಳ ಹಿಂಬಾಲಕರು ಮತ್ತು ಅವರು ಬರೇ ಊಹಾಪೋಹೆಗಳನ್ನಷ್ಟೇ ಮಾಡುತ್ತಾರೆ.

أَلَا إِنَّ لِلَّهِ مَن فِي السَّمَاوَاتِ وَمَن فِي الْأَرْضِ ۗ وَمَا يَتَّبِعُ الَّذِينَ يَدْعُونَ مِن دُونِ اللَّهِ شُرَكَاءَ ۚ إِن يَتَّبِعُونَ إِلَّا الظَّنَّ وَإِنْ هُمْ إِلَّا يَخْرُصُونَ ﴿٦٦﴾

67. ನೀವು ಪ್ರಶಾಂತಿಯನ್ನು ಪಡೆಯಲಾಗುವಂತೆ ನಿಮಗಾಗಿ ರಾತ್ರಿಯನ್ನು ಮಾಡಿದವನೂ ಪ್ರಕಾಶಮಾನವಾಗಿ ಹಗಲನ್ನು ಮಾಡಿದವನೂ ಅಲ್ಲಾಹನೇ ಆಗಿರುತ್ತಾನೆ. ಇದರಲ್ಲಿ (ಪೈಗಂಬರರ ಕರೆಯನ್ನು ಕಿವಿಗೊಟ್ಟು) ಆಲಿಸುವವರಿಗೆ ದೃಷ್ಟಾಂತಗಳಿವೆ.

هُوَ الَّذِي جَعَلَ لَكُمُ اللَّيْلَ لِتَسْكُنُوا فِيهِ وَالنَّهَارَ مُبْصِرًا ۚ إِنَّ فِي ذَٰلِكَ لَآيَاتٍ لِّقَوْمٍ يَسْمَعُونَ ﴿٦٧﴾

68. ಅಲ್ಲಾಹನು ತನಗೋರ್ವ ಪುತ್ರನನ್ನು ಮಾಡಿಕೊಂಡಿದ್ದಾನೆಂದು ಜನರಾಡಿಬಿಟ್ಟರು, 'ಅಲ್ಲಾಹ್ ಪರಮ ಪವಿತ್ರನು', ಅವನಂತು ನಿರಪೇಕ್ಷನಾಗಿರುತ್ತಾನೆ. ಭೂಮಿ ಮತ್ತು ಆಕಾಶಗಳಲ್ಲಿರುವುದೆಲ್ಲವೂ ಅವನ ಸ್ವಂತ ಸೊತ್ತು. ಈ ಮಾತಿಗೆ ನಿಮ್ಮಲ್ಲಿ ಆಧಾರ ಪ್ರಮಾಣವಾದರೂ ಏನಿದೆ? ಅಲ್ಲಾಹನ ಬಗ್ಗೆ ನಿಮಗೆ ತಿಳಿಯದುದನ್ನು ಹೇಳುತ್ತೀರಾ?

قَالُوا اتَّخَذَ اللَّهُ وَلَدًا ۗ سُبْحَانَهُ ۖ هُوَ الْغَنِيُّ ۖ لَهُ مَا فِي السَّمَاوَاتِ وَمَا فِي الْأَرْضِ ۚ إِنْ عِندَكُم مِّن سُلْطَانٍ بِهَٰذَا ۚ أَتَقُولُونَ عَلَى اللَّهِ مَا لَا تَعْلَمُونَ ﴿٦٨﴾

69. ಓ ಪೈಗಂಬರರೇ, ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವರು ಎಂದೆಂದಿಗೂ ಕೃತಾರ್ಥರಾಗಲಾರರೆಂದು ಹೇಳಿ ಬಿಡಿರಿ.

قُلْ إِنَّ الَّذِينَ يَفْتَرُونَ عَلَى اللَّهِ الْكَذِبَ لَا يُفْلِحُونَ ﴿٦٩﴾

70. ಕೇವಲ ಕೆಲವೇ ದಿನಗಳ ಇಹಲೋಕ ಜೀವನದಲ್ಲಿ ಅವರು ಆನಂದ ಪಟ್ಟುಕೊಳ್ಳಲಿ. ಆಮೇಲೆ ಅವರು ನಮ್ಮ ಕಡೆಗೇ ಮರಳಬೇಕಾಗಿದೆ. ಅನಂತರ ಅವರು ಮಾಡುತ್ತಿರುವ ಸತ್ಯನಿಷೇಧ ಕಾರ್ಯಕ್ಕಾಗಿ ನಾವು ಅವರಿಗೆ ಘೋರ ಯಾತನೆಯ ಸವಿಯನ್ನುಣಿಸುವೆವು.

مَتَاعٌ فِي الدُّنْيَا ثُمَّ إِلَيْنَا مَرْجِعُهُمْ ثُمَّ نُذِيقُهُمُ الْعَذَابَ الشَّدِيدَ بِمَا كَانُوا يَكْفُرُونَ ﴿٧٠﴾

71. ಇವರಿಗೆ ನೂಹರ ಸಮಾಚಾರ ತಿಳಿಸಿರಿ. ಅವರು ತಮ್ಮ ಜನಾಂಗಕ್ಕೆ ಹೇಳಿದಾಗಿನ ವೃತ್ತಾಂತ "ಓ ನನ್ನ ಜನಾಂಗ ಬಾಂಧವರೇ, ನಿಮ್ಮ ನಡುವೆ ನನ್ನ ಇರುವಿಕೆಯೂ ಅಲ್ಲಾಹನ ವಚನಗಳನ್ನು ಹೇಳಿ ಹೇಳಿ ನಿಮ್ಮನ್ನು ಅಲಕ್ಷ್ಯಭಾವದಿಂದ ಎಚ್ಚರಗೊಳಿಸುವುದೂ ನಿಮಗೆ ಅಸಹನೀಯವಾಗಿರುವುದಾದರೆ ನನ್ನ ಭರವಸೆ ಅಲ್ಲಾಹನ ಮೇಲಿದೆ. ನೀವು ಸ್ವಯಂ ನಿಶ್ಚಯಿಸಿ ಕೊಂಡಿರುವ ಸಹಭಾಗಿಗಳನ್ನು ಜತೆಗೂಡಿಸಿಕೊಂಡು ಒಂದು ಒಮ್ಮತದ ನಿರ್ಧಾರವನ್ನು ಮಾಡಿಕೊಳ್ಳಿರಿ. ನಿಮ್ಮ ಮುಂದಿರುವ ಯೋಜನೆಯ ಯಾವ ಅಂಶವೂ ನಿಮ್ಮ ದೃಷ್ಟಿಯಿಂದ ಮರೆಯಾಗಿ ಹೋಗದಂತೆ ಅದರ ಬಗ್ಗೆ ಚೆನ್ನಾಗಿ ವಿವೇಚಿಸಿಕೊಳ್ಳಿರಿ. ಅನಂತರ ಅದನ್ನು ನನ್ನ ವಿರುದ್ಧ ಕಾರ್ಯಾಚರಣೆಗೆ ತನ್ನಿರಿ ಮತ್ತು ನನಗೆ ಸಮಯಾವಕಾಶ ಕೊಡಲೇ ಬೇಡಿರಿ.

وَاتْلُ عَلَيْهِمْ نَبَأَ نُوحٍ إِذْ قَالَ لِقَوْمِهِ يَا قَوْمِ إِنْ كَانَ كَبُرَ عَلَيْكُمْ مَقَامِي وَتَذْكِيرِي بِآيَاتِ اللَّهِ فَعَلَى اللَّهِ تَوَكَّلْتُ فَأَجْمِعُوا أَمْرَكُمْ وَشُرَكَاءَكُمْ ثُمَّ لَا يَكُنْ أَمْرُكُمْ عَلَيْكُمْ غُمَّةً ثُمَّ اقْضُوا إِلَيَّ وَلَا تُنْظِرُونِ ﴿٧١﴾

72. ನೀವು ನನ್ನ ಉಪದೇಶವನ್ನು ತಿರಸ್ಕರಿಸಿದರೆ, (ನನಗೆ ನಷ್ಟವೇನು?) ನಾನಂತು ನಿಮ್ಮಿಂದ ಯಾವತ್ತು ಪ್ರತಿಫಲಾಪೇಕ್ಷಕನಾಗಿರಲಿಲ್ಲ. ನನ್ನ ಪ್ರತಿಫಲವು ಅಲ್ಲಾಹನಲ್ಲಿದೆ. (ಯಾರಾದರೂ ಮಾನ್ಯ ಮಾಡಲಿ ಅಥವಾ ಮಾಡದಿರಲಿ) ನಾನು ಸ್ವಯಂ ಮುಸ್ಲಿಮನಾಗಿರ ಬೇಕೆಂದು ನನಗೆ ಆಜ್ಞಾಪಿಸಲಾಗಿರುತ್ತದೆ."

فَإِنْ تَوَلَّيْتُمْ فَمَا سَأَلْتُكُمْ مِنْ أَجْرٍ ۖ إِنْ أَجْرِيَ إِلَّا عَلَى اللَّهِ ۖ وَأُمِرْتُ أَنْ أَكُونَ مِنَ الْمُسْلِمِينَ ﴿٧٢﴾

73. ಆ ಜನರು ಅವರನ್ನು ಸುಳ್ಳಾಗಿಸಿದರು. ಇದರ ಪರಿಣಾಮವಾಗಿ ನಾವು ಅವರನ್ನೂ ಅವರ ಸಂಗಡ ನಾವೆಯಲ್ಲಿದ್ದವರೆಲ್ಲರನ್ನೂ ರಕ್ಷಿಸಿದೆವು. ಅವರನ್ನೇ ಭೂಮಿಯಲ್ಲಿ ಉತ್ತರಾಧಿಕಾರಿಗಳಾಗಿ ಮಾಡಿದೆವು ಮತ್ತು ನಮ್ಮ ದೃಷ್ಟಾಂತಗಳನ್ನು ಸುಳ್ಳಾಗಿಸಿದ್ದ ಎಲ್ಲರನ್ನೂ ಮುಳುಗಿಸಿ ಬಿಟ್ಟೆವು. ಆದುದರಿಂದ ಎಚ್ಚರಿಕೆ ನೀಡ ಲ್ಪಟ್ಟಿದ್ದವರ (ಅಷ್ಟಾಗಿಯೂ ಸ್ವೀಕರಿಸದಿದ್ದವರ) ಪರಿಣಾಮ ವೇನಾಯಿತೆಂದು ನೋಡಿಕೊಳ್ಳಿರಿ.

فَكَذَّبُوهُ فَنَجَّيْنَاهُ وَمَنْ مَعَهُ فِي الْفُلْكِ وَجَعَلْنَاهُمْ خَلَائِفَ وَأَغْرَقْنَا الَّذِينَ كَذَّبُوا بِآيَاتِنَا ۖ فَانْظُرْ كَيْفَ كَانَ عَاقِبَةُ الْمُنْذَرِينَ ﴿٧٣﴾

74. 'ನೂಹ'ರ ತರುವಾಯ ನಾವು ಬೇರೆ ಬೇರೆ ರಸೂಲರನ್ನು ಅವರ ಜನಾಂಗಗಳ ಕಡೆಗೆ ರವಾನಿಸಿದೆವು. ಅವರೆಲ್ಲ ಅವರ ಬಳಿಗೆ ಸುಸ್ಪಷ್ಟ ದೃಷ್ಟಾಂತಗಳ ಸಹಿತ ಬಂದರು. ಆದರೆ ಅವರು ಈ ಮುಂಚೆ ಸುಳ್ಳಾಗಿಸಿದ್ದುದನ್ನು ಮತ್ತೆ ಸ್ವೀಕರಿಸಲಿಲ್ಲ. ಹೀಗೆ ಹದಮೀರಿ ಸಾಗುವವರ ಹೃದಯಗಳಿಗೆ ನಾವು ಮುದ್ರೆಯೊತ್ತಿ ಬಿಡುತ್ತೇವೆ.

ثُمَّ بَعَثْنَا مِنْ بَعْدِهِ رُسُلًا إِلَىٰ قَوْمِهِمْ فَجَاءُوهُمْ بِالْبَيِّنَاتِ فَمَا كَانُوا لِيُؤْمِنُوا بِمَا كَذَّبُوا بِهِ مِنْ قَبْلُ ۚ كَذَٰلِكَ نَطْبَعُ عَلَىٰ قُلُوبِ الْمُعْتَدِينَ ﴿٧٤﴾

75. ಅವರನಂತರ ನಾವು ಮೂಸಾ ಮತ್ತು ಹಾರೂನರನ್ನು ನಮ್ಮ ನಿದರ್ಶನಗಳ ಸಹಿತ ಫಿರ್‌ಔನ್ ಮತ್ತು ಅವನ ಸರದಾರರ ಕಡೆಗೆ ಕಳುಹಿಸಿದೆವು. ಆದರೆ ಅವರು ತಮ್ಮ ಹಿರಿಮೆಯ ದರ್ಪವನ್ನು ತೋರಿದರು ಮತ್ತು ಅವರು ಅಪರಾಧಿಗಳಾಗಿದ್ದರು.

ثُمَّ بَعَثْنَا مِنْ بَعْدِهِمْ مُّوسٰى وَهٰرُوْنَ اِلٰى فِرْعَوْنَ وَمَلَا۟ئِهٖ بِاٰيٰتِنَا فَاسْتَكْبَرُوْا وَكَانُوْا قَوْمًا مُّجْرِمِيْنَ ﴿٧٥﴾

76. ಆ ಪ್ರಕಾರ ಅವರು ನಮ್ಮ ಕಡೆಯಿಂದ ಸತ್ಯವು ಅವರ ಮುಂದೆ ಬಂದಾಗ ಇದು ಸುವ್ಯಕ್ತ ಮಾಟವೆಂದು ಬಿಟ್ಟರು.

فَلَمَّا جَآءَهُمُ الْحَقُّ مِنْ عِنْدِنَا قَالُوْٓا اِنَّ هٰذَا لَسِحْرٌ مُّبِيْنٌ ﴿٧٦﴾

77. 'ಮೂಸಾ'ರು ಹೀಗೆಂದರು, "ನಿಮ್ಮ ಮುಂದೆ ಸತ್ಯವು ಪ್ರತ್ಯಕ್ಷಗೊಂಡಾಗ ಅದನ್ನು ಹೀಗೆನ್ನುತ್ತೀರಾ? ಇದು ಮಾಟವೇ? ವಸ್ತುತಃ ಮಾಟಗಾರರು ಯಶಸ್ವಿಗಳಾಗುವುದಿಲ್ಲ.[18]

قَالَ مُوْسٰٓى اَتَقُوْلُوْنَ لِلْحَقِّ لَمَّا جَآءَكُمْ ۖ اَسِحْرٌ هٰذَا ۖ وَلَا يُفْلِحُ السّٰحِرُوْنَ ﴿٧٧﴾

78. ಅವರು ಹೀಗೆ ಉತ್ತರಿಸಿದರು, "ನಾವು ನಮ್ಮ ಪೂರ್ವಿಕರನ್ನು ಕಂಡಿದ್ದ ಪದ್ಧತಿಯಿಂದ ನಮ್ಮನ್ನು ತಿರುಗಿಸಲಿಕ್ಕಾಗಿಯೂ ಭೂಮಿಯಲ್ಲಿ ನಿಮ್ಮಿಬ್ಬರ ಹಿರಿಮೆ ಸಂಸ್ಥಾಪಿಸಲಿಕ್ಕಾಗಿಯೂ ನೀನು ಬಂದಿರುವೆಯಾ? ನಾವು ನಿಮ್ಮ ಮಾತನ್ನು ಸ್ವೀಕರಿಸುವವರಲ್ಲ."

قَالُوْٓا اَجِئْتَنَا لِتَلْفِتَنَا عَمَّا وَجَدْنَا عَلَيْهِ اٰبَآءَنَا وَتَكُوْنَ لَكُمَا الْكِبْرِيَآءُ فِى الْاَرْضِ ۗ وَمَا نَحْنُ لَكُمَا بِمُؤْمِنِيْنَ ﴿٧٨﴾

79. ಫಿರ್‌ಔನನು (ತನ್ನವರೊಡನೆ) ಹೇಳಿದನು, "ಪ್ರತಿಯೊಬ್ಬ ತಜ್ಞ ಮಾಟಗಾರನನ್ನು ನನ್ನ ಮುಂದೆ ಹಾಜರುಪಡಿಸಿರಿ."

وَقَالَ فِرْعَوْنُ ائْتُوْنِيْ بِكُلِّ سٰحِرٍ عَلِيْمٍ ﴿٧٩﴾

80. ಮಾಟಗಾರರು ಬಂದಾಗ (ಅವರೊಡನೆ) ಮೂಸಾ, "ನೀವು ಎಸೆಯಬೇಕಾದುದನ್ನು ಎಸೆಯಿರಿ" ಎಂದರು.

فَلَمَّا جَآءَ السَّحَرَةُ قَالَ لَهُمْ مُّوْسٰٓى اَلْقُوْا مَآ اَنْتُمْ مُّلْقُوْنَ ﴿٨٠﴾

81. ಅವರು ಮಂತ್ರ ದಂಡಗಳನ್ನು ಎಸೆದಾಗ ಮೂಸಾರು (ಹೀಗೆ) ಹೇಳಿದರು, "ನೀವೀಗ ಎಸೆದುದು ಜಾದುವಾಗಿರುತ್ತದೆ. ಅಲ್ಲಾಹನು ಈಗಲೇ ಇದನ್ನು ನಿರರ್ಥಕಗೊಳಿಸಿ ಬಿಡುತ್ತಾನೆ. ಅಲ್ಲಾಹನು ಕಿಡಿಗೇಡಿಗಳ ಕಾರ್ಯವನ್ನು ಸರಿಯಾಗಲು ಬಿಡುವುದಿಲ್ಲ.

فَلَمَّآ اَلْقَوْا قَالَ مُوْسٰى مَا جِئْتُمْ بِهِ السِّحْرُ ۗ اِنَّ اللّٰهَ سَيُبْطِلُهٗ ۗ اِنَّ اللّٰهَ لَا يُصْلِحُ عَمَلَ الْمُفْسِدِيْنَ ﴿٨١﴾

82. ಮತ್ತು ಅಲ್ಲಾಹ್ ತನ್ನ ಅಪ್ಪಣೆಯಿಂದ ಸತ್ಯವನ್ನು ಸತ್ಯವನ್ನಾಗಿಯೇ ಮಾಡಿ ತೋರಿಸುತ್ತಾನೆ. ಇದರಿಂದ ಅಪರಾಧಿಗಳಿಗೆ ಎಷ್ಟೇ ಅಸಂತುಷ್ಟಿಯುಂಟಾದರೂ ಸರಿಯೇ."

وَيُحِقُّ اللّٰهُ الْحَقَّ بِكَلِمٰتِهٖ وَلَوْ كَرِهَ الْمُجْرِمُوْنَ ﴿٨٢﴾

18. ಅರ್ಥಾತ್- ಮೇಲ್ನೋಟಕ್ಕೆ ಮಾಟ, ಮಂತ್ರ ಮತ್ತು ಪವಾಡದಲ್ಲಿ ಕಂಡುಬರುವ ಸಮಾನತೆಯನ್ನು ಕಂಡು ನೀವು ನಿಸ್ಸಂಕೋಚವಾಗಿ ಅದನ್ನು ಮಾಟವೆಂದು ಹೇಳಿ ಬಿಟ್ಟಿರಿ. ಆದರೆ ಮಾಟಗಾರರು ಎಂತಹ ಚಾರಿತ್ರ್ಯ ಉಳ್ಳವರು? ಅವರು ಯಾವ ಉದ್ದೇಶಕ್ಕಾಗಿ ಮಾಟಮಂತ್ರಗಳನ್ನು ಮಾಡುತ್ತಾರೆಂದು ನೀವು ನೋಡಲಿಲ್ಲ. ಅಕ್ರಮಿಯಾದ ಆಡಳಿತಗಾರನ ಮುಂದೆ ನಿರ್ಭಯವಾಗಿ ಬಂದು ಅವನೊಡನೆ ಅವನ ಪಥಭ್ರಷ್ಟತೆಯ ಬಗ್ಗೆ ಆಕ್ಷೇಪ ಮಾಡುವ ಹಾಗೂ ದೇವಭಕ್ತಿ ಮತ್ತು ಪರಿಶುದ್ಧತೆಯ ಕರೆ ನೀಡುವ ಕೆಲಸವನ್ನು ಮಾಟಗಾರರು ಮಾಡುತ್ತಾರೆಯೇ?

83. ಮೂಸಾರವರ ಮೇಲೆ ಆ ಜನಾಂಗದ ಕೆಲವು ಮಂದಿ ಯುವಕರ[19] ವಿನಾ ಇನ್ನಾರೂ ವಿಶ್ವಾಸವಿರಿಸಲಿಲ್ಲ. (ಇದು) ಫಿರ್‌ಔನನ ಭಯದಿಂದ ಹಾಗೂ ತಮ್ಮ ಜನಾಂಗದ ಮುಖಂಡರ ಭಯದಿಂದ. ಫಿರ್‌ಔನ್ ಅವರನ್ನು ಯಾತನೆಗೊಳಪಡಿಸುವನೆಂದು (ಅವರಿಗೆ ಭಯವಿತ್ತು.) ವಾಸ್ತವದಲ್ಲಿ ಫಿರ್‌ಔನನು ಭೂಮಿಯ ಮೇಲೆ ಪ್ರಾಬಲ್ಯ ಹೊಂದಿದವನೂ ಹದಮೀರಿದವನೂ ಆಗಿದ್ದನು.[20]

فَمَآ اٰمَنَ لِمُوْسٰٓى اِلَّا ذُرِّيَّةٌ مِّنْ قَوْمِهٖ عَلٰى خَوْفٍ مِّنْ فِرْعَوْنَ وَمَلَا۟ىِٕهِمْ اَنْ يَّفْتِنَهُمْ ؕ وَاِنَّ فِرْعَوْنَ لَعَالٍ فِى الْاَرْضِ ۚ وَاِنَّهٗ لَمِنَ الْمُسْرِفِيْنَ ﴿۸۳﴾

84. ಮೂಸಾ ತಮ್ಮ ಜನಾಂಗದೊಡನೆ, "ಜನರೇ, ನೀವು ನಿಜಕ್ಕೂ ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಾದರೆ- ಅವನ ಮೇಲೆ ಭರವಸೆಯನ್ನಿರಿಸಿರಿ- ನೀವು ನಿಜಕ್ಕೂ ಮುಸ್ಲಿಮರಾಗಿದ್ದರೆ" (ಹಾಗೆ ಮಾಡಿರಿ) ಎಂದು ಹೇಳಿದರು.

وَقَالَ مُوْسٰى يٰقَوْمِ اِنْ كُنْتُمْ اٰمَنْتُمْ بِاللّٰهِ فَعَلَيْهِ تَوَكَّلُوْٓا اِنْ كُنْتُمْ مُّسْلِمِيْنَ ﴿۸۴﴾

85. ಅವರು ಉತ್ತರವಿತ್ತರು:[21] "ನಾವು ಅಲ್ಲಾಹನ ಮೇಲೆಯೇ ಭರವಸೆಯನ್ನಿರಿಸಿದೆವು. ಓ ನಮ್ಮ ಪ್ರಭೂ, ನಮ್ಮನ್ನು ಅಕ್ರಮಿಗಳಿಗೆ ಪರೀಕ್ಷಾ ಸಾಧನವನ್ನಾಗಿ ಮಾಡದಿರು-

فَقَالُوْا عَلَى اللّٰهِ تَوَكَّلْنَا ۚ رَبَّنَا لَا تَجْعَلْنَا فِتْنَةً لِّلْقَوْمِ الظّٰلِمِيْنَ ﴿۸۵﴾

86. ಮತ್ತು ನಿನ್ನ ಕೃಪೆಯಿಂದ ನಮ್ಮನ್ನು ಸತ್ಯನಿಷೇಧಿಗಳಿಂದ ರಕ್ಷಿಸು."

وَنَجِّنَا بِرَحْمَتِكَ مِنَ الْقَوْمِ الْكٰفِرِيْنَ ﴿۸۶﴾

87. ನಾವು ಮೂಸಾ ಮತ್ತು ಅವರ ಸಹೋದರನಿಗೆ (ಈ ರೀತಿ) ಸೂಚನೆ ಕೊಟ್ಟೆವು, "ಈಜಿಪ್ಟಿನಲ್ಲಿ ತಮ್ಮ ಜನಾಂಗದವರಿಗಾಗಿ ಕೆಲವು ನಿವೇಶನಗಳನ್ನು ಒದಗಿಸಿರಿ. ತಮ್ಮ ಆ ನಿವೇಶನಗಳನ್ನು

وَاَوْحَيْنَآ اِلٰى مُوْسٰى وَاَخِيْهِ اَنْ تَبَوَّاٰ لِقَوْمِكُمَا بِمِصْرَ بُيُوْتًا وَّاجْعَلُوْا بُيُوْتَكُمْ

---

19. ಮೂಲದಲ್ಲಿ 'ದುರ್ರಿಯ್ಯಃ' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಸಂತಾನ. ನಾವು ಅದನ್ನು 'ಯುವಕರು' ಎಂದು ಭಾಷಾಂತರಿಸಿದ್ದೇವೆ. ಈ ವಿಶಿಷ್ಟ ಪದವನ್ನು ಪ್ರಯೋಗಿಸುವ ಮೂಲಕ ಪವಿತ್ರ ಕುರ್‌ಆನ್ ಹೇಳಬಯಸುವುದೇನೆಂದರೆ, ಈ ಅಪಾಯಕಾರಿ ಘಟ್ಟದಲ್ಲಿ ಸತ್ಯಕ್ಕೆ ನೆರವಾಗುವ ಮತ್ತು ಸತ್ಯದ ವಾಹಕರನ್ನು ತನ್ನ ಮಾರ್ಗದರ್ಶಿ ಎಂದು ಒಪ್ಪಿಕೊಳ್ಳುವ ಧೈರ್ಯವನ್ನು ಕೆಲವು ಯುವಕ-ಯುವತಿಯರು ಮಾತ್ರ ತೋರಿದರು. ಅವರ ತಂದೆ-ತಾಯಂದಿರು ಮತ್ತು ಜನಾಂಗದ ಹಿರಿಯ ವ್ಯಕ್ತಿಗಳಿಗೆ ಅಂತಹ ಸೌಭಾಗ್ಯ ದೊರೆಯಲಿಲ್ಲ. ನೆಪಗಳನ್ನು ಹುಡುಕುವ ಪ್ರವೃತ್ತಿ, ಲೌಕಿಕ ಹಿತಾಸಕ್ತಿಗಳ ದಾಸ್ಯ ಮತ್ತು ಸ್ವಾರ್ಥ ಹಿತಾಸಕ್ತಿ ಅವರನ್ನು ಆವರಿಸಿಕೊಂಡಿತ್ತು. ಅದು ಅವರನ್ನು ಸತ್ಯಕ್ಕೆ ನೆರವಾಗಲುದ್ಯುಕ್ತವಾಗುವುದರಿಂದ ತಡೆಯಿತು. ಅದು ಅವರಿಗೆ ಅತ್ಯಂತ ಅಪಾಯಕರ ಹಾದಿಯೆಂದು ತೋರಿತು. ಸಾಲದೆಂಬಂತೆ ಮೂಸಾರ(ಅ) ಬಳಿ ಹೋಗದಂತೆ ಯುವಕರನ್ನೂ ಅವರು ತಡೆಯುತ್ತಿದ್ದರು. ಅನ್ಯಥಾ ನೀವೂ ಫಿರ್‌ಔನ್‌ನ ಕ್ರೋಧಕ್ಕೆ ಒಳಗಾಗುವಿರಿ, ನಮಗೂ ಆಪತ್ತು ಬಂದೊದಗುವುದು ಎಂದು ಅವರು ಹೇಳುತ್ತಿದ್ದರು.

20. ಅರ್ಥಾತ್- ತಮ್ಮ ಉದ್ದೇಶ ಸಾಧನೆಗಾಗಿ ಎಂತಹ ಕೆಟ್ಟ ವಿಧಾನವನ್ನು ಅನುಸರಿಸಲೂ ಹೇಸದವರು. ಯಾವುದೇ ರೀತಿಯ ಅಕ್ರಮ, ಅನೈತಿಕತೆ ಮತ್ತು ದಾನವೀಯ, ಪಾಶವೀಯ ಕೃತ್ಯಗಳನ್ನೆಸಗಲು ಹಿಂಜರಿಯದವರು. ತಮ್ಮ ಸ್ವಾರ್ಥ ಸಾಧನೆಗಾಗಿ ಯಾವ ಅತಿರೇಕಕ್ಕೂ ಸಿದ್ಧರಾಗುವವರು. ಅವರು ಯಾವ ಮಿತಿಯನ್ನೂ ಪಾಲಿಸುವುದಿಲ್ಲ.

21. ಇದು ಮೂಸಾರಿಗೆ(ಅ) ನೆರವು ನೀಡಲುದ್ಯುಕ್ತರಾಗಿದ್ದ ಯುವಕರು ನೀಡಿದ ಉತ್ತರವಾಗಿದೆ. ಇಲ್ಲಿ 'ಕಾಲೂ' (ಹೇಳಿದರು) ಎಂಬ ಪದವನ್ನು ಜನಾಂಗದ ಬದಲು ಯುವಕರಿಗಾಗಿ ಉಪಯೋಗಿಸಲಾಗಿದೆ ಎಂದು ಹಿನ್ನೆಲೆಯನ್ನು ಗಮನಿಸಿದರೆ ವ್ಯಕ್ತವಾಗುತ್ತದೆ.

ಅಭಿಮುಖಕೇಂದ್ರ(ಕಿಬ್ಲಾ)ವನ್ನಾಗಿ ಮಾಡಿಕೊಳ್ಳಿರಿ, ನಮಾಝುನ್ನು ಸಂಸ್ಥಾಪಿಸಿರಿ[22] ಮತ್ತು ಸತ್ಯವಿಶ್ವಾಸಿಗಳಿಗೆ ಶುಭವಾರ್ತೆ ನೀಡಿರಿ."

قِبْلَةً وَّاَقِيْمُوا الصَّلٰوةَ ۗ وَبَشِّرِ الْمُؤْمِنِيْنَ ﴿٨٧﴾

88. ಮೂಸಾರವರು ಪ್ರಾರ್ಥಿಸಿದರು, "ಓ ನಮ್ಮ ಪ್ರಭೂ, ನೀನು ಫಿರ್‌ಔನ್ ಮತ್ತು ಅವನ ಸರದಾರರಿಗೆ ಲೌಕಿಕ ಜೀವನದಲ್ಲಿ ವೈಭವಾಡಂಬರ ಹಾಗೂ ಸಂಪತ್ತನ್ನು ಪ್ರದಾನ ಮಾಡಿರುವಿ. ಓ ಪ್ರಭೂ, ಇದು ಅವರು ಜನರನ್ನು ನಿನ್ನ ಮಾರ್ಗದಿಂದ ತಪ್ಪಿಸಲಿಕ್ಕಾಗಿಯೇ? ಓ ಪ್ರಭೂ, ಅವರ ಸಂಪತ್ತನ್ನು ನಾಶಪಡಿಸು. ಅವರು ವೇದನಾಯುಕ್ತ ಯಾತನೆಯನ್ನು ಕಣ್ಣಾರೆ ಕಾಣುವವರೆಗೂ ವಿಶ್ವಾಸವಿರಿಸದಂತೆ ಅವರ ಹೃದಯಗಳ ಮೇಲೆ ಮುದ್ರೆಯೊತ್ತಿಬಿಡು."[23]

وَقَالَ مُوْسٰى رَبَّنَآ اِنَّكَ اٰتَيْتَ فِرْعَوْنَ وَمَلَاَهٗ زِيْنَةً وَّاَمْوَالًا فِى الْحَيٰوةِ الدُّنْيَا ۙ رَبَّنَا لِيُضِلُّوْا عَنْ سَبِيْلِكَ ۚ رَبَّنَا اطْمِسْ عَلٰٓى اَمْوَالِهِمْ وَاشْدُدْ عَلٰى قُلُوْبِهِمْ فَلَا يُؤْمِنُوْا حَتّٰى يَرَوُا الْعَذَابَ الْاَلِيْمَ ﴿٨٨﴾

89. ಅಲ್ಲಾಹನು ಉತ್ತರವಿತ್ತನು: - ನಿಮ್ಮಿಬ್ಬರ ಪ್ರಾರ್ಥನೆಯು ಸ್ವೀಕರಿಸಲ್ಪಟ್ಟಿತು. ದೃಢಚಿತ್ತರಾಗಿರಿ, ಅಜ್ಞಾನಿಗಳ ಮಾರ್ಗವನ್ನೆಂದಿಗೂ ಅನುಸರಿಸಬೇಡಿರಿ.

قَالَ قَدْ اُجِيْبَتْ دَّعْوَتُكُمَا فَاسْتَقِيْمَا وَلَا تَتَّبِعٰٓنِّ سَبِيْلَ الَّذِيْنَ لَا يَعْلَمُوْنَ ﴿٨٩﴾

90. ನಾವು ಬನೀಇಸ್ರಾಈಲರನ್ನು ಸಮುದ್ರ ದಾಟಿಸಿಕೊಂಡೊಯ್ದೆವು. ಅನಂತರ ಫಿರ್‌ಔನನೂ ಅವನ ಸೇನೆಯೂ ದಂಗೆ, ವಿದ್ವೇಷಗಳನ್ನು ಉದ್ದೇಶವಾಗಿರಿಸಿಕೊಂಡು ಅವರನ್ನು ಬೆನ್ನಟ್ಟಿದರು. ಕೊನೆಗೆ ಫಿರ್‌ಔನನು ಮುಳುಗುತ್ತಿರುವಾಗ ಹೀಗೆಂದನು, "ಬನೀ ಇಸ್‌ರಾಈಲರು ವಿಶ್ವಾಸವಿಟ್ಟಿರುವ ದೇವನ ಹೊರತು ಅನ್ಯ ದೇವನಿಲ್ಲವೆಂದು ನಾನು ಒಪ್ಪಿಕೊಂಡೆನು ಮತ್ತು ನಾನೂ ಶರಣಾಗತರಾಗುವವರಲ್ಲಾಗಿರುತ್ತೇನೆ."

وَجٰوَزْنَا بِبَنِىْٓ اِسْرَآءِيْلَ الْبَحْرَ فَاَتْبَعَهُمْ فِرْعَوْنُ وَجُنُوْدُهٗ بَغْيًا وَّعَدْوًا ۗ حَتّٰٓى اِذَآ اَدْرَكَهُ الْغَرَقُ ۙ قَالَ اٰمَنْتُ اَنَّهٗ لَآ اِلٰهَ اِلَّا الَّذِىْٓ اٰمَنَتْ بِهٖ بَنُوْٓا اِسْرَآءِيْلَ وَاَنَا مِنَ الْمُسْلِمِيْنَ ﴿٩٠﴾

22. ಈಜಿಪ್ಟಿನಲ್ಲಿ ಸರ್ಕಾರದ ದೌರ್ಜನ್ಯ ಮತ್ತು ಸ್ವತಃ ಬನೀಇಸ್ರಾಈಲರ ದುರ್ಬಲ ವಿಶ್ವಾಸದಿಂದಾಗಿ ಇಸ್ರಾಈಲಿ ಮತ್ತು ಈಜಿಪ್ಟ್ ಮೂಲದ ಮುಸ್ಲಿಮರಲ್ಲಿ ಸಾಮೂಹಿಕ ನಮಾಝಿನ ವ್ಯವಸ್ಥೆಯೇ ಕೊನೆಗೊಂಡಿತ್ತು. ಅವರ ಅಧಃಪತನ, ಅನೈಕ್ಯ ಮತ್ತು ಧಾರ್ಮಿಕ ಸ್ಫೂರ್ತಿಯ ವಿನಾಶಕ್ಕೆ ಇದೂ ಒಂದು ಪ್ರಮುಖ ಕಾರಣವಾಗಿತ್ತು. ಆದ್ದರಿಂದ ಮೂಸಾರಿಗೆ(ಅ) ಈ ವ್ಯವಸ್ಥೆಯನ್ನು ಪುನಃ ಸ್ಥಾಪಿಸುವಂತೆ ಆಜ್ಞಾಪಿಸಲಾಯಿತು. ಈ ಉದ್ದೇಶಕ್ಕಾಗಿ ಈಜಿಪ್ಟ್‌ನಲ್ಲಿ ಕೆಲವು ಮನೆಗಳನ್ನು ನಿರ್ಮಿಸಿರಿ ಅಥವಾ ಗೊತ್ತುಪಡಿಸಿಕೊಳ್ಳಿರಿ ಮತ್ತು ಅಲ್ಲಿ ಸಾಮೂಹಿಕ ನಮಾಝುನ್ನು ರೂಢಿಗೊಳಿಸಿರಿ ಎನ್ನಲಾಯಿತು. ಆ ಮನೆಗಳನ್ನು ಕಿಬ್ಲಾವನ್ನಾಗಿ ಮಾಡಿಕೊಳ್ಳುವುದೆಂದರೆ ಅದನ್ನು ಸಮಸ್ತ ಸಮುದಾಯದ ಪಾಲಿಗೆ ಗಮನ ಕೇಂದ್ರವಾಗಿ ಮಾಡಿರಿ. ಅನಂತರವಷ್ಟೇ ಅಲ್ಲಿ ನಮಾಝ್ ಸಂಸ್ಥಾಪಿಸಿರಿ. ಅರ್ಥಾತ್ ಭಿನ್ನಭಿನ್ನರಾಗಿ ತಂತಮ್ಮ ಸ್ಥಳಗಳಲ್ಲಿ ನಮಾಝ್ ನಿರ್ವಹಿಸುವ ಬದಲು ನಿರ್ದಿಷ್ಟ ಸ್ಥಳಗಳಲ್ಲಿ ಒಟ್ಟು ಸೇರಿ ನಮಾಝ್ ನಿರ್ವಹಿಸಿರಿ ಎಂದಾಗಿದೆ.

23. ತಮ್ಮ ಈಜಿಪ್ಟ್ ವಾಸ್ತವ್ಯದ ಅತ್ಯಂತ ಕೊನೆಯ ಘಟ್ಟದಲ್ಲಿ ಮೂಸಾರು(ಅ) ಈ ರೀತಿ ಪ್ರಾರ್ಥಿಸಿದ್ದರು. ಅನೇಕ ಬಾರಿ ದೃಷ್ಟಾಂತಗಳನ್ನು ನೋಡಿದ ಮತ್ತು ಧರ್ಮವನ್ನು ಸಾರಸಂಪೂರ್ಣವಾಗಿ ಮುಟ್ಟಿಸಲಾದ ನಂತರವೂ ಫಿರ್‌ಔನ್ ಮತ್ತು ಅವನ ಆಸ್ಥಾನಿಗರು ಸತ್ಯವನ್ನು ದ್ವೇಷಿಸುವುದರಲ್ಲಿ ಹಠಸಾಧನೆ ಮಾಡುವವರಂತೆ ಭದ್ರವಾಗಿ ನಿಂತಿದ್ದರು. ಇಂತಹ ಸಂದರ್ಭದಲ್ಲಿ ಪ್ರವಾದಿಯು ಅವರ ವಿರುದ್ಧ ದೇವನೊಡನೆ ಮಾಡುವ ಪ್ರಾರ್ಥನೆ, ದೇವನು ಸತ್ಯನಿಷೇಧದಲ್ಲಿ ಹಟಸಾಧನೆ ಮಾಡಬಯಸುವವರ ಕುರಿತು ಮಾಡಿರುವ ತೀರ್ಮಾನಕ್ಕೆ ಅನುಗುಣವಾಗಿರುತ್ತದೆ. ಅರ್ಥಾತ್ ತದನಂತರ ಅವರಿಗೆ ಎಂದೂ ಸತ್ಯವಿಶ್ವಾಸದ ಸೌಭಾಗ್ಯವನ್ನು ಕರುಣಿಸಲಾಗುವುದಿಲ್ಲ.

91. "ಈಗ ವಿಶ್ವಾಸವಿಡುತ್ತೀಯಾ? ವಸ್ತುತಃ ಇದಕ್ಕೆ ಮುಂಚಿನವರೆಗೂ ನೀನು ಆಜ್ಞೋಲ್ಲಂಘನೆ ಮಾಡುತ್ತಲಿದ್ದೆ ಮತ್ತು ಕಿಡಿಗೇಡಿ ಗಳಲ್ಲಾಗಿದ್ದೆ.

آٰلْـٰٔنَ وَقَدْ عَصَيْتَ قَبْلُ وَكُنْتَ مِنَ الْمُفْسِدِيْنَ ﴿٩١﴾

92. ನಿಶ್ಚಯವಾಗಿಯೂ ನಮ್ಮ ನಿದರ್ಶನಗಳ ಬಗ್ಗೆ ಅಲಕ್ಷ್ಯರಾಗಿರುವವರು ಬಹುಸಂಖ್ಯೆಯಲ್ಲಿದ್ದರೂ ನೀನು ಮುಂದಿನ ತಲೆಮಾರುಗಳಿಗೆ ಎಚ್ಚರಿಕೆಯ ದ್ಯೋತಕವಾಗಿರುವಂತೆ ನಾವಿನ್ನು ನಿನ್ನ ಶವವನ್ನು ಮಾತ್ರ ಸುರಕ್ಷಿತವಾಗಿರಿಸುವೆವು" (ಎಂದು ಉತ್ತರಿಸಲಾಯಿತು.)

فَالْيَوْمَ نُنَجِّيْكَ بِبَدَنِكَ لِتَكُوْنَ لِمَنْ خَلْفَكَ اٰيَةً ۗ وَاِنَّ كَثِيْرًا مِّنَ النَّاسِ عَنْ اٰيٰتِنَا لَغٰفِلُوْنَ ﴿٩٢﴾

93. ನಾವು ಬನೀಇಸ್ರಾಈಲರಿಗೆ ಅತ್ಯುತ್ತಮ ವಾಸಸ್ಥಾನ ನೀಡಿದೆವು ಮತ್ತು ಅವರಿಗೆ ಅತ್ಯುತ್ಕೃಷ್ಟ ಜೀವನಾಧಾರಗಳನ್ನು ದಯಪಾಲಿಸಿದೆವು. ಆದರೆ, ಅವರು ದಿವ್ಯಜ್ಞಾನ ಹೊಂದಿದ ಬಳಿಕವೂ ಭಿನ್ನಾಭಿಪ್ರಾಯ ತಾಳಿದರು. ನಿಶ್ಚಯವಾಗಿಯೂ ನಿನ್ನ ಪ್ರಭು ಪುನರುತ್ಥಾನ ದಿನ ಅವರ ನಡುವೆ ಅವರು ಭಿನ್ನಾಭಿಪ್ರಾಯ ತಾಳುತ್ತಿದ್ದ ವಿಷಯದಲ್ಲಿ ತೀರ್ಪು ನೀಡುವನು.

وَلَقَدْ بَوَّاْنَا بَنِيْٓ اِسْرَاۤءِيْلَ مُبَوَّاَ صِدْقٍ وَّرَزَقْنٰهُمْ مِّنَ الطَّيِّبٰتِ ۚ فَمَا اخْتَلَفُوْا حَتّٰى جَاۤءَهُمُ الْعِلْمُ ۗ اِنَّ رَبَّكَ يَقْضِيْ بَيْنَهُمْ يَوْمَ الْقِيٰمَةِ فِيْمَا كَانُوْا فِيْهِ يَخْتَلِفُوْنَ ﴿٩٣﴾

94. ನಾವು ನಿಮಗೆ ಅವತೀರ್ಣಗೊಳಿಸಿದ ಸನ್ಮಾರ್ಗದರ್ಶನದ ಬಗೆಗೆ ನಿಮಗೆ ಕಿಂಚಿತ್ತಾದರೂ ಸಂಶಯವಿದ್ದರೆ, ನಿಮಗಿಂತ ಮುಂಚೆಯೇ ಗ್ರಂಥವನ್ನೋದುತ್ತಿದ್ದವರನ್ನು ವಿಚಾರಿಸಿರಿ. ವಾಸ್ತವದಲ್ಲಿ ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಸತ್ಯವೇ ಬಂದಿರುತ್ತದೆ. ಆದುದರಿಂದ ಸಂಶಯಗ್ರಸ್ತರಲ್ಲಾಗಬೇಡಿರಿ.

فَاِنْ كُنْتَ فِيْ شَكٍّ مِّمَّآ اَنْزَلْنَآ اِلَيْكَ فَسْـَٔلِ الَّذِيْنَ يَقْرَءُوْنَ الْكِتٰبَ مِنْ قَبْلِكَ ۚ لَقَدْ جَاۤءَكَ الْحَقُّ مِنْ رَّبِّكَ فَلَا تَكُوْنَنَّ مِنَ الْمُمْتَرِيْنَ ﴿٩٤﴾

95. ಮತ್ತು ಅಲ್ಲಾಹನ ವಚನಗಳನ್ನು ಸುಳ್ಳಾಗಿಸುವವರಲ್ಲಾಗಬೇಡಿರಿ. ಅನ್ಯಥಾ ನೀವು ನಷ್ಟ ಹೊಂದುವವರಲ್ಲಾಗುವಿರಿ.[24]

وَلَا تَكُوْنَنَّ مِنَ الَّذِيْنَ كَذَّبُوْا بِاٰيٰتِ اللّٰهِ فَتَكُوْنَ مِنَ الْخٰسِرِيْنَ ﴿٩٥﴾

96. ವಾಸ್ತವದಲ್ಲಿ ಯಾರ ಬಗ್ಗೆ ನಿನ್ನ ಪ್ರಭುವಿನ ವಚನವು ಸತ್ಯವಾಗಿಬಿಟ್ಟಿತೋ[25] ಅವರು ಎಂದಿಗೂ ವಿಶ್ವಾಸವಿರಿಸಲಾರರು.

اِنَّ الَّذِيْنَ حَقَّتْ عَلَيْهِمْ كَلِمَتُ رَبِّكَ لَا يُؤْمِنُوْنَ ﴿٩٦﴾

24. ಇಲ್ಲಿ ಪ್ರವಾದಿವರ್ಯರನ್ನುದ್ದೇಶಿಸಿ(ಸ) ಈ ಮಾತು ಹೇಳಲಾಗಿರುವಂತೆ ಕಂಡು ಬರುತ್ತದೆ. ವಾಸ್ತವದಲ್ಲಿ ಇದರ ಉದ್ದೇಶ ಪ್ರವಾದಿವರ್ಯರ(ಸ) ಸಂದೇಶದ ಬಗ್ಗೆ ಸಂದೇಹ ವ್ಯಕ್ತಪಡಿಸುತ್ತಿದ್ದ ಜನರಿಗೆ ಇದನ್ನು ಕೇಳಿಸುವುದಾಗಿದೆ. ಇಲ್ಲಿ ಗ್ರಂಥದವರ ಪ್ರಸ್ತಾಪ ಮಾಡಲಾಗಿರುವುದೇಕೆಂದರೆ- ಅರಬ್ ನಿವಾಸಿಗಳೇನೋ ದೈವಿಕ ಗ್ರಂಥಗಳ ಬಗ್ಗೆ ಜ್ಞಾನ ಇಲ್ಲದವರಾಗಿದ್ದಾರೆ. ಅವರ ಪಾಲಿಗೆ ಇದೊಂದು ಹೊಸ ಸ್ವರವಾಗಿತ್ತು. ಆದರೆ ಗ್ರಂಥದವರ ವಿದ್ವಾಂಸರ ಪೈಕಿ ಪ್ರಾಮಾಣಿಕರೂ ನ್ಯಾಯಪ್ರಿಯರೂ ಆದವರು ಈ ಬಗ್ಗೆ ಪ್ರಮಾಣ ಮಾಡಬಹುದಾಗಿತ್ತು. ಹಿಂದಿನ ಪ್ರವಾದಿಗಳೆಲ್ಲರೂ ನೀಡಿದ ಸಂದೇಶವನ್ನೇ ಈ ಕುರ್‌ಆನ್ ಕೂಡ ನೀಡುತ್ತದೆ ಎಂದು ಅವರು ದೃಢೀಕರಿಸಬಹುದಾಗಿತ್ತು.

25. ಅರ್ಥಾತ್- ಸ್ವತಃ ಸನ್ಮಾರ್ಗವನ್ನು ಬಯಸದವರಿಗೆ, ತಮ್ಮ ಹೃದಯಗಳಿಗೆ ಹಟ, ಪಕ್ಷಪಾತ ಮತ್ತು ಜಿಗುಟು ಧೋರಣೆಯ ಬೀಗ

97. ಅವರ ಮುಂದೆ ಎಂತಹ ನಿದರ್ಶನಗಳು ಬಂದರೂ ಅವರು ವೇದನಾಯುಕ್ತ ಯಾತನೆಯು ಬರುತ್ತಿರುವುದನ್ನು ಕಣ್ಣಾರೆ ಕಾಣುವ ವರೆಗೂ ವಿಶ್ವಾಸವಿರಿಸಲಾರರು.

وَلَوْ جَآءَتْهُمْ كُلُّ اٰيَةٍ حَتّٰى يَرَوُا الْعَذَابَ الْاَلِيْمَ ﴿٩٧﴾

98. ಒಂದು ನಾಡು ಯಾತನೆಯನ್ನು ಕಣ್ಣಾರೆ ಕಂಡ ಬಳಿಕ ವಿಶ್ವಾಸವಿಟ್ಟು ಅದರ ವಿಶ್ವಾಸವು ಅದಕ್ಕೆ ಫಲಕಾರಿಯಾದು ದಿದೆಯೇ? ಯೂನುಸರ ಜನಾಂಗದ ಹೊರತು (ಇಂತಹ ಉದಾ ಹರಣೆ ಇಲ್ಲ.) ಆ ಜನಾಂಗವು ಸತ್ಯವಿಶ್ವಾಸ ಸ್ವೀಕರಿಸಿದಾಗ ನಾವು ಅದರ ಮೇಲಿಂದ ಇಹ ಜೀವನದಲ್ಲೇ ಅಪಮಾನಕಾರಕ ಯಾತನೆಯನ್ನು ನೀಗಿಸಿಬಿಟ್ಟಿದ್ದೆವು[26] ಮತ್ತು ಅದಕ್ಕೆ ಒಂದು ಕಾಲಾವಧಿವರೆಗೆ ಇಹಜೀವನದಿಂದ ಫಲ ಹೊಂದುವ ಅವಕಾಶ ಕೊಟ್ಟಿದ್ದೆವು.

فَلَوْلَا كَانَتْ قَرْيَةٌ اٰمَنَتْ فَنَفَعَهَآ اِيْمَانُهَآ اِلَّا قَوْمَ يُوْنُسَ ؕ لَمَّآ اٰمَنُوْا كَشَفْنَا عَنْهُمْ عَذَابَ الْخِزْيِ فِى الْحَيٰوةِ الدُّنْيَا وَمَتَّعْنٰهُمْ اِلٰى حِيْنٍ ﴿٩٨﴾

99. (ಭೂಮಿಯಲ್ಲಿರುವವರೆಲ್ಲರೂ ಸತ್ಯವಿಶ್ವಾಸಿ ಮತ್ತು ಆಜ್ಞಾಪಾಲ ಕರೇ ಆಗಿರಬೇಕೆಂದು) ನಿಮ್ಮ ಪ್ರಭುವಿನ ವಿಧಿ ನಿಯಮವಿರು ತ್ತಿದ್ದರೆ, ಭೂವಾಸಿಗಳೆಲ್ಲರೂ ವಿಶ್ವಾಸವಿಟ್ಟೇ ತೀರುತ್ತಿದ್ದರು. ಹೀಗಿರುವಾಗ ಜನರೆಲ್ಲರೂ ಸತ್ಯವಿಶ್ವಾಸಿಗಳಾಗಬೇಕೆಂದು ನೀವು ಒತ್ತಾಯ ಪಡಿಸುವಿರಾ?

وَلَوْ شَآءَ رَبُّكَ لَاٰمَنَ مَنْ فِى الْاَرْضِ كُلُّهُمْ جَمِيْعًا ؕ اَفَاَنْتَ تُكْرِهُ النَّاسَ حَتّٰى يَكُوْنُوْا مُؤْمِنِيْنَ ﴿٩٩﴾

100. ಯಾರೊಬ್ಬನೂ ಅಲ್ಲಾಹನ ಅನುಮತಿಯ ಹೊರತು ವಿಶ್ವಾಸ ವಿಡಲಾರನು. ಬುದ್ಧಿಶಕ್ತಿಯನ್ನುಪಯೋಗಿಸದವರ ಮೇಲೆ ಅಲ್ಲಾಹನು ಕೊಳೆಯನ್ನು ಹೇರುತ್ತಾನೆ.

وَمَا كَانَ لِنَفْسٍ اَنْ تُؤْمِنَ اِلَّا بِاِذْنِ اللّٰهِ ؕ وَيَجْعَلُ الرِّجْسَ عَلَى الَّذِيْنَ لَا يَعْقِلُوْنَ ﴿١٠٠﴾

101. ಭೂಮಿ ಮತ್ತು ಆಕಾಶಗಳಲ್ಲಿರುವುದನ್ನೆಲ್ಲ ಕಣ್ತೆರೆದು ನೋಡಿ ರೆಂದು ಇವರೊಡನೆ ಹೇಳಿರಿ. ವಿಶ್ವಾಸವಿರಿಸಿಕೊಳ್ಳಲಿಕ್ಕೇ ಇಚ್ಛಿಸ ದಿರುವವರಿಗೆ ದೃಷ್ಟಾಂತಗಳೂ ಎಚ್ಚರಿಕೆಗಳೂ ಏನು ಪ್ರಯೋಜನ ಕೊಟ್ಟಾವು?

قُلِ انْظُرُوْا مَاذَا فِى السَّمٰوٰتِ وَالْاَرْضِ ؕ وَمَا تُغْنِى الْاٰيٰتُ وَالنُّذُرُ عَنْ قَوْمٍ لَّا يُؤْمِنُوْنَ ﴿١٠١﴾

102. ಇವರು ಇವರಿಗಿಂತ ಮುಂಚಿನವರು ಕಂಡಿದ್ದ ದುರ್ದಿನಗಳನ್ನೇ ಕಾಣಬೇಕೆಂದು ನಿರೀಕ್ಷಿಸುತ್ತಾರಲ್ಲದೆ ಇನ್ನೇನು? "ಸರಿ,

فَهَلْ يَنْتَظِرُوْنَ اِلَّا مِثْلَ اَيَّامِ الَّذِيْنَ خَلَوْا مِنْ قَبْلِهِمْ ؕ قُلْ فَانْتَظِرُوْٓا اِنِّىْ

ಜಡಿದುಕೊಂಡಿರುವವರಿಗೆ ಮತ್ತು ಪರಲೋಕದ ಪರಿಣಾಮದ ಬಗ್ಗೆ ನಿಶ್ಚಿಂತರಾಗಿ ಲೋಕದ ವ್ಯಾಮೋಹದಲ್ಲಿ ಮೈಮರೆತಿರುವವರಿಗೆ ಎಂದೂ ಸತ್ಯವಿಶ್ವಾಸದ ಸೌಭಾಗ್ಯ ದೊರೆಯಲಾರದು ಎಂಬ ವಚನ.

26. ವ್ಯಾಖ್ಯಾನಕಾರರ ಪ್ರಕಾರ ಇದಕ್ಕೆ ಕಾರಣವೇನೆಂದರೆ ಹ. ಯೂನುಸ್(ಅ) ದೇವಯಾತನೆಯ ಬಗ್ಗೆ ಸುದ್ದಿ ಮುಟ್ಟಿಸಿದ ನಂತರ ಅಲ್ಲಾಹನ ಅನುಮತಿಯಿಲ್ಲದೆ ತಮ್ಮ ಪ್ರದೇಶವನ್ನು ಬಿಟ್ಟು ಹೊರಟು ಹೋಗಿದ್ದರು. ಅನಂತರ ಯಾತನೆಯ ಕುರುಹುಗಳನ್ನು ಕಂಡಾಗ ಅಶೂರಿಗಳು ಪಶ್ಚಾತ್ತಾಪಪಟ್ಟು ಕ್ಷಮೆ ಯಾಚಿಸತೊಡಗಿದರು. ಆಗ ಅಲ್ಲಾಹನು ಅವರನ್ನು ಕ್ಷಮಿಸಿಬಿಟ್ಟನು.

ನಿರೀಕ್ಷಿಸುತ್ತಿರಿ, ನಾನೂ ನಿಮ್ಮೊಂದಿಗೆ ನಿರೀಕ್ಷಿಸುತ್ತಿರುತ್ತೇನೆ" ಎಂದು ಇವರೊಡನೆ ಹೇಳಿರಿ.

مَعَكُمْ مِّنَ الْمُنْتَظِرِيْنَ ﴿١٠٢﴾

103. ಆ ಬಳಿಕ (ಇಂತಹ ಕಾಲ ಬಂದಾಗ) ನಾವು ನಮ್ಮ ರಸೂಲರನ್ನೂ ಸತ್ಯವಿಶ್ವಾಸಿಗಳನ್ನೂ ರಕ್ಷಿಸಿಕೊಳ್ಳುತ್ತೇವೆ. ಇದೇ ನಮ್ಮ ಪದ್ಧತಿ. ಸತ್ಯವಿಶ್ವಾಸಿಗಳನ್ನು ರಕ್ಷಿಸುವುದು ನಮ್ಮ ಹೊಣೆ.

ثُمَّ نُنَجِّيْ رُسُلَنَا وَالَّذِيْنَ اٰمَنُوْا كَذٰلِكَ ۚ حَقًّا عَلَيْنَا نُنْجِ الْمُؤْمِنِيْنَ ﴿١٠٣﴾

١٠ ع ١١ ١٥

104. ಓ ಪೈಗಂಬರರೇ, ಹೇಳಿರಿ, "ಹೇ ಜನರೇ, ನೀವು ನನ್ನ ಧರ್ಮದ ಬಗೆಗೆ ಇನ್ನೂ ಸಂಶಯಗ್ರಸ್ತರಾಗಿದ್ದರೆ, ಇತ್ತ ಕೇಳಿರಿ! ನೀವು ಅಲ್ಲಾಹನ ಹೊರತು ಯಾರ ಇಬಾದತ್(ದಾಸ್ಯ-ಆರಾಧನೆ) ಮಾಡುತ್ತೀರೋ ಅವರ ದಾಸ್ಯ-ಆರಾಧನೆಯನ್ನು ನಾನು ಮಾಡುವುದಿಲ್ಲ. ಬದಲಾಗಿ, ಯಾರ ವಶದಲ್ಲಿ ನಿಮ್ಮ ಮೃತ್ಯುವಿದೆಯೋ ಆ ಅಲ್ಲಾಹನ ದಾಸ್ಯ-ಆರಾಧನೆಯನ್ನು ಮಾತ್ರ ನಾನು ಮಾಡುತ್ತೇನೆ. ನಾನು ಸತ್ಯ ವಿಶ್ವಾಸಿಗಳಲ್ಲಾಗಿರಬೇಕೆಂದು ಆಜ್ಞಾಪಿಸಲ್ಪಟ್ಟಿರುತ್ತೇನೆ.

قُلْ يٰاَيُّهَا النَّاسُ اِنْ كُنْتُمْ فِيْ شَكٍّ مِّنْ دِيْنِيْ فَلَآ اَعْبُدُ الَّذِيْنَ تَعْبُدُوْنَ مِنْ دُوْنِ اللّٰهِ وَلٰكِنْ اَعْبُدُ اللّٰهَ الَّذِيْ يَتَوَفّٰىكُمْ ۖ وَاُمِرْتُ اَنْ اَكُوْنَ مِنَ الْمُؤْمِنِيْنَ ﴿١٠٤﴾

105. ಮತ್ತು ಏಕಾಗ್ರಚಿತ್ತನಾಗಿ ನನ್ನನ್ನು ಧರ್ಮದಲ್ಲಿ ಸರಿಯಾಗಿ ನೆಲೆಗೊಳಿಸಿಕೊಳ್ಳಬೇಕೆಂದೂ[27] ಎಷ್ಟು ಮಾತ್ರಕ್ಕೂ 'ಬಹುದೇವವಿಶ್ವಾಸಿ'ಗಳಲ್ಲಾಗಬಾರದೆಂದೂ ನನ್ನೊಡನೆ ಹೇಳಲಾಗಿದೆ.

وَاَنْ اَقِمْ وَجْهَكَ لِلدِّيْنِ حَنِيْفًا ۚ وَلَا تَكُوْنَنَّ مِنَ الْمُشْرِكِيْنَ ﴿١٠٥﴾

106. ಅಲ್ಲಾಹನನ್ನು ಬಿಟ್ಟು, ನಿಮಗೆ ಲಾಭವನ್ನಾಗಲಿ ನಷ್ಟವನ್ನಾಗಲಿ ಉಂಟು ಮಾಡಲು ಸಮರ್ಥರಲ್ಲದ ಯಾವುದೇ ಅಸ್ತಿತ್ವವನ್ನು ಪ್ರಾರ್ಥಿಸಬೇಡಿರಿ. ನೀವು ಹಾಗೆ ಮಾಡಿದರೆ ಖಂಡಿತವಾಗಿಯೂ ಅಕ್ರಮಿಗಳಲ್ಲಾಗುವಿರಿ.

وَلَا تَدْعُ مِنْ دُوْنِ اللّٰهِ مَا لَا يَنْفَعُكَ وَلَا يَضُرُّكَ ۚ فَاِنْ فَعَلْتَ فَاِنَّكَ اِذًا مِّنَ الظّٰلِمِيْنَ ﴿١٠٦﴾

107. ಅಲ್ಲಾಹನು ನಿಮ್ಮನ್ನು ಯಾವುದಾದರೂ ಕಷ್ಟಕ್ಕೆ ಗುರಿಪಡಿಸಿದರೆ, ಸ್ವತಃ ಅವನ ಹೊರತು ಆ ಕಷ್ಟವನ್ನು ದೂರೀಕರಿಸುವವನು ಇನ್ನಾರೂ ಇಲ್ಲ ಮತ್ತು ಅವನು ನಿಮಗೆ ಹಿತವನ್ನು ಬಯಸಿದರೆ ಅವನ ಅನುಗ್ರಹವನ್ನು ತಡೆಯುವವನೂ ಯಾರೂ ಇಲ್ಲ.

وَاِنْ يَّمْسَسْكَ اللّٰهُ بِضُرٍّ فَلَا كَاشِفَ لَهٗٓ اِلَّا هُوَ ۚ وَاِنْ يُّرِدْكَ بِخَيْرٍ فَلَا رَآدَّ لِفَضْلِهٖ ۗ يُصِيْبُ بِهٖ مَنْ يَّشَآءُ

27. ಮೂಲದಲ್ಲಿ 'ಅಕಿಮ್ ವಜ್‌ಹಕ ಲಿದ್ದೀನಿ ಹನೀಫಾ' ಎಂಬ ಶಬ್ದಗಳು ಉಪಯೋಗಿಸಲ್ಪಟ್ಟಿವೆ. 'ಅಕಿಮ್ ವಜ್‌ಹಕ' ಎಂಬುದರ ಶಬ್ದಾರ್ಥ 'ನಿನ್ನ ಮುಖವನ್ನು ನಾಟುವುದು' ಎಂದಾಗಿದೆ. ಇದರ ತಾತ್ಪರ್ಯವೇನೆಂದರೆ ನಿನ್ನ ದಿಕ್ಕು ಒಂದೇ ಕಡೆಗೆ ಸ್ಥಿರವಾಗಿರಬೇಕು. ಅದು ಅಲುಗಾಡುತ್ತಲೂ ಕದಲುತ್ತಲೂ ಇರಬಾರದು. ಹಿಂದೆ-ಮುಂದೆ, ಎಡ-ಬಲಗಳಿಗೆ ತಿರುಗುತ್ತಲಿರಬಾರದು. ನಿನಗೆ ತೋರಿಸಲಾಗಿರುವ ಮಾರ್ಗದಲ್ಲಿ ನಿನ್ನ ಮೂಗಿನ ನೇರಕ್ಕೆ ದೃಷ್ಟಿಯನ್ನಿಟ್ಟು ನಡೆಯುತ್ತಿರಬೇಕು. ಈ ನಿರ್ಬಂಧವೇ ಅತ್ಯಂತ ಕಟ್ಟುನಿಟ್ಟಿನದಾಗಿತ್ತು. ಆದರೂ ಅಷ್ಟಕ್ಕೇ ನಿಲ್ಲಿಸದೆ ಅದಕ್ಕೆ 'ಹನೀಫಾ' ಎಂಬ ಮತ್ತೊಂದು ನಿರ್ಬಂಧವನ್ನೂ ಹೇರಲಾಯಿತು. 'ಹನೀಫ್' ಎಂದರೆ ಎಲ್ಲದರಿಂದಲೂ ವಿಮುಖನಾಗಿ ಒಂದೇ ದಿಕ್ಕಿಗೆ ತಿರುಗುವವನಾಗಿದ್ದಾನೆ.

مِنْ عِبَادِهِ ۚ وَهُوَ الْغَفُورُ الرَّحِيمُ ﴿١٠٧﴾

ಅವನು ತನ್ನ ದಾಸರ ಪೈಕಿ ತನಗಿಷ್ಟ ಬಂದವರಿಗೆ ತನ್ನ ಅನುಗ್ರಹ ಪ್ರದಾನ ಮಾಡುತ್ತಾನೆ. ಅವನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

قُلْ يَا أَيُّهَا النَّاسُ قَدْ جَاءَكُمُ الْحَقُّ مِنْ رَبِّكُمْ ۖ فَمَنِ اهْتَدَىٰ فَإِنَّمَا يَهْتَدِي لِنَفْسِهِ ۖ وَمَنْ ضَلَّ فَإِنَّمَا يَضِلُّ عَلَيْهَا ۖ وَمَا أَنَا عَلَيْكُمْ بِوَكِيلٍ ﴿١٠٨﴾

108. ಓ ಮುಹಮ್ಮದ್, ಹೇಳಿರಿ, "ಜನರೇ, ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕಡೆಯಿಂದ ಪರಮ ಸತ್ಯವು ಬಂದು ಬಿಟ್ಟಿತು. ಇನ್ನು ಯಾರು ಸನ್ಮಾರ್ಗವನ್ನನುಸರಿಸುವನೋ ಅವನ ಸನ್ಮಾರ್ಗ ಪ್ರಕ್ರಿಯೆಯು ಅವನಿಗೇ ಫಲಕಾರಿಯಾಗುವುದು ಮತ್ತು ಯಾರು ಪಥಭ್ರಷ್ಟನಾಗಿರುವನೋ ಅವನ ಪಥಭ್ರಷ್ಟತೆಯು ಅವನಿಗೇ ಹಾನಿಕರವಾಗುವುದು ಮತ್ತು ನಾನು ನಿಮ್ಮ ಮೇಲೆ ಕೊತ್ವಾಲ ನೇನೂ ಅಲ್ಲ."

وَاتَّبِعْ مَا يُوحَىٰ إِلَيْكَ وَاصْبِرْ حَتَّىٰ يَحْكُمَ اللَّهُ ۚ وَهُوَ خَيْرُ الْحَاكِمِينَ ﴿١٠٩﴾

109. ಓ ಪೈಗಂಬರರೇ, ನಿಮ್ಮ ಕಡೆಗೆ 'ದಿವ್ಯವಾಣಿ'ಯ ಮೂಲಕ ಅವತೀರ್ಣಗೊಳ್ಳುತ್ತಿರುವ ಸನ್ಮಾರ್ಗವನ್ನು ಅನುಸರಿಸುತ್ತಲೇ ಸಾಗಿರಿ ಮತ್ತು ಅಲ್ಲಾಹನು ತೀರ್ಮಾನ ಮಾಡುವ ವರೆಗೂ ತಾಳ್ಮೆವಹಿಸಿರಿ. ಅವನೇ ಅತ್ಯುತ್ತಮ ತೀರ್ಮಾನ ಮಾಡುವವನಾಗಿ ರುತ್ತಾನೆ.






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1-2. ಅಲಿಫ್ ಲಾಮ್ ರಾ, ಇದು ಫರಮಾನು[1] ಇದರ ಸೂಕ್ತಗಳು ಪ್ರಬುದ್ಧ ಮತ್ತು ಕೂಲಂಕಷವಾಗಿದ್ದು ನೀವು ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದು ಓರ್ವ ಧೀಮಂತನೂ ವಿವರಪೂರ್ಣನೂ ಆದವನ ಕಡೆಯಿಂದ ನಿರ್ದೇಶಿಸಲ್ಪಟ್ಟಿದೆ. ನಾನು ಅವನ ಕಡೆಯಿಂದ ನಿಮಗೆ ಎಚ್ಚರಿಕೆ ಕೊಡುವವನೂ ಸುವಾರ್ತೆ ನೀಡುವವನೂ ಆಗಿರುತ್ತೇನೆ.

الٓرٰ كِتٰبٌ اُحۡكِمَتۡ اٰيٰتُهٗ ثُمَّ فُصِّلَتۡ مِنۡ لَّدُنۡ حَكِيۡمٍ خَبِيۡرٍ ۙ﴿۱﴾ اَلَّا تَعۡبُدُوۡۤا اِلَّا اللّٰهَ ؕ اِنَّنِىۡ لَـكُمۡ مِّنۡهُ نَذِيۡرٌ وَّبَشِيۡرٌ ۙ﴿۲﴾

3. ನೀವು ನಿಮ್ಮ ಪ್ರಭುವಿನೊಡನೆ ಕ್ಷಮೆ ಯಾಚಿಸಿ ಅವನಿಗೆ ಶರಣು ಹೋಗಿರಿ. ಅವನು ಒಂದು ನಿಶ್ಚಿತ ಕಾಲಾವಧಿಯ ವರೆಗೆ ನಿಮಗೆ ಉತ್ತಮ ಜೀವನಾಧಾರಗಳನ್ನು ನೀಡುವನು[2] ಮತ್ತು ಪ್ರತಿಯೊಬ್ಬ ಅನುಗ್ರಹೀತನಿಗೆ ತನ್ನ ಅನುಗ್ರಹವನ್ನು ಪ್ರದಾನ ಮಾಡುವನು.[3] ಆದರೆ ನೀವು ವಿಮುಖರಾದರೆ ನಿಮ್ಮ ಪಾಲಿಗೆ ಒಂದು ಮಹಾ ದಿನದಂದು ಬರುವ ಯಾತನೆಯ ಬಗ್ಗೆ ನಾನು ಭಯಪಡುತ್ತೇನೆ.

وَّاَنِ اسۡتَغۡفِرُوۡا رَبَّكُمۡ ثُمَّ تُوۡبُوۡۤا اِلَيۡهِ يُمَتِّعۡكُمۡ مَّتَاعًا حَسَنًا اِلٰٓى اَجَلٍ مُّسَمًّى وَّيُؤۡتِ كُلَّ ذِىۡ فَضۡلٍ فَضۡلَهٗ ؕ وَاِنۡ تَوَلَّوۡا فَاِنِّىۡۤ اَخَافُ عَلَيۡكُمۡ عَذَابَ يَوۡمٍ كَبِيۡرٍ ﴿۳﴾

---

1. ವಿವರಣಾ ಶೈಲಿಗೆ ಅನುಗುಣವಾಗಿ ಇಲ್ಲಿ 'ಕಿತಾಬ್' ಎಂಬ ಪದವನ್ನು 'ಫರಮಾನು' ಎಂದು ಭಾಷಾಂತರಿಸಲಾಗಿದೆ. ಅರಬಿ ಭಾಷೆಯಲ್ಲಿ ಈ ಶಬ್ದ ಗ್ರಂಥ ಅಥವಾ ಪುಸ್ತಕ ಎಂಬರ್ಥದಲ್ಲಿ ಮಾತ್ರವಲ್ಲ- ಅಪ್ಪಣೆ, ರಾಜಾಜ್ಞೆ ಎಂಬರ್ಥದಲ್ಲೂ ಪ್ರಯೋಗಿಸಲ್ಪಡುತ್ತದೆ. ಕುರ್‌ಆನಿನಲ್ಲಿ ಅನೇಕ ಕಡೆಗಳಲ್ಲಿ ಈ ಶಬ್ದ ಇದೇ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.
2. ಅರ್ಥಾತ್- ಲೋಕದಲ್ಲಿರಲು ನಿಮಗೆ ನಿಗದಿಪಡಿಸಲಾಗಿರುವ ಅವಧಿಯಲ್ಲಿ ಅವನು ನಿಮ್ಮನ್ನು ಕೆಟ್ಟ ಸ್ಥಿತಿಯಲ್ಲಲ್ಲ, ಉತ್ತಮ ಸ್ಥಿತಿಯಲ್ಲಿರಿಸುವನು. ನಿಮ್ಮ ಮೇಲೆ ಅವನ ಅನುಗ್ರಹಗಳು ವರ್ಷಿಸುವುದು. ಅವನು ದಯಪಾಲಿಸುವ ಸಮೃದ್ಧಿಯನ್ನು ನೀವು ಆಸ್ವದಿಸುವಿರಿ. ನೀವು ಸುಭಿಕ್ಷೆ ಮತ್ತು ನೆಮ್ಮದಿಯಿಂದಿರುವಿರಿ. ಜೀವನದಲ್ಲಿ ಶಾಂತಿ ಸಮಾಧಾನ ನಿಮಗೆ ಪ್ರಾಪ್ತವಾಗುವುದು. ನಿಮಗೆ ನಿಂದ್ಯತೆ ಮತ್ತು ಅವಮಾನದ ಬದಲು ಗೌರವಾಭಿಮಾನದ ಬದುಕು ಸಿಗುವುದು.
3. ಅರ್ಥಾತ್- ಚಾರಿತ್ರ್ಯ ಮತ್ತು ಸತ್ಕರ್ಮದಲ್ಲಿ ಯಾರು ಎಷ್ಟು ಮುಂದುವರಿಯುವರೋ ಅವರಿಗೆ ಅಷ್ಟೇ ಉನ್ನತವಾದ ಸ್ಥಾನಮಾನ ದೊರೆಯುವುದು. ತನ್ನ ಚಾರಿತ್ರ್ಯ ಮತ್ತು ನಡವಳಿಕೆಯ ಮೂಲಕ ಅವನು ತನ್ನನ್ನು ಯಾವ ಸೌಭಾಗ್ಯಕ್ಕೆ ಅರ್ಹನಾಗಿ ಮಾಡುವನೋ ಆ ಸೌಭಾಗ್ಯ ಅವನಿಗೆ ದೊರೆತೇ ತೀರುವುದು.

4. ನಿಮಗೆಲ್ಲರಿಗೂ ಅಲ್ಲಾಹನ ಕಡೆಗೆ ಮರಳಲಿಕ್ಕಿದೆ. ಅವನು ಸರ್ವ ಸಮರ್ಥನು.

إِلَى اللَّهِ مَرْجِعُكُمْ ۖ وَهُوَ عَلَىٰ كُلِّ شَيْءٍ قَدِيرٌ ﴿٤﴾

5. ನೋಡಿರಿ, ಇವರು ಅವನಿಂದ ಅಡಗಿಸಿಕೊಳ್ಳಲಿಕ್ಕಾಗಿ ತಮ್ಮ ಹೃದಯಗಳನ್ನು ಮುದುಡಿ ಕೊಳ್ಳುತ್ತಾರೆ.[4] ಜಾಗ್ರತೆ! ಇವರು ತಮ್ಮನ್ನು ತಾವು ಬಟ್ಟೆಗಳಿಂದ ಮುಚ್ಚಿಕೊಂಡಾಗ ಅಲ್ಲಾಹನು ಇವರ ಅಂತರಂಗವನ್ನೂ ಬಹಿರಂಗವನ್ನೂ ತಿಳಿಯುತ್ತಾನೆ. ಅವನಂತು ಇವರ ಹೃದಯ ರಹಸ್ಯಗಳನ್ನೂ ಬಲ್ಲನು.

أَلَا إِنَّهُمْ يَثْنُونَ صُدُورَهُمْ لِيَسْتَخْفُوا مِنْهُ ۚ أَلَا حِينَ يَسْتَغْشُونَ ثِيَابَهُمْ يَعْلَمُ مَا يُسِرُّونَ وَمَا يُعْلِنُونَ ۚ إِنَّهُ عَلِيمٌ بِذَاتِ الصُّدُورِ ﴿٥﴾

6. *ಭೂಮಿಯಲ್ಲಿ ಚಲಿಸುವ ಯಾವ ಸಜೀವಿಯ ಜೀವನಾಧಾರವೂ ಅಲ್ಲಾಹನ ಹೊಣೆಯಲ್ಲಿಲ್ಲದೆ ಇಲ್ಲ. ಅದು ಎಲ್ಲಿ ವಾಸಿಸುತ್ತದೆ ಮತ್ತು ಎಲ್ಲಿ ಒಪ್ಪಿಸಲ್ಪಡುತ್ತದೆ ಎಂಬುದು ಅವನಿಗೆ ತಿಳಿಯದೆ ಇಲ್ಲ. ಎಲ್ಲವೂ ಒಂದು ಸುಸ್ಪಷ್ಟ ಗ್ರಂಥದಲ್ಲಿ ಲಿಖಿತಗೊಂಡಿದೆ.

وَمَا مِنْ دَابَّةٍ فِي الْأَرْضِ إِلَّا عَلَى اللَّهِ رِزْقُهَا وَيَعْلَمُ مُسْتَقَرَّهَا وَمُسْتَوْدَعَهَا ۚ كُلٌّ فِي كِتَابٍ مُبِينٍ ﴿٦﴾

7. ನಿಮ್ಮಲ್ಲಿ ಸತ್ಕರ್ಮವೆಸಗುವವನಾರೆಂದು ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ[5] ಭೂಮಿ ಮತ್ತು ಆಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅವನೇ. - ಅದಕ್ಕಿಂತ ಮುಂಚೆ ಅವನ (ಅರ್ಶ್) ವಿಶ್ವಸಿಂಹಾಸನ ಅರ್ಥಾತ್ ಆಧಿಪತ್ಯವು ನೀರಿನ ಮೇಲಿತ್ತು.[6] ಓ ಪೈಗಂಬರರೇ, ಮರಣಾನಂತರ ನೀವು ಇನ್ನೊಮ್ಮೆ ಎಬ್ಬಿಸಲ್ಪಡುವಿರೆಂದು ಅವರೊಡನೆ ಹೇಳಿದಾಗ ಸತ್ಯನಿಷೇಧಿಗಳು, "ಇದಂತು ಸುಸ್ಪಷ್ಟ ಮಾಟಗಾರಿಕೆ" ಎಂದು ಥಟ್ಟನೆ ಹೇಳಿ ಬಿಡುತ್ತಾರೆ.[7]

وَهُوَ الَّذِي خَلَقَ السَّمَاوَاتِ وَالْأَرْضَ فِي سِتَّةِ أَيَّامٍ وَكَانَ عَرْشُهُ عَلَى الْمَاءِ لِيَبْلُوَكُمْ أَيُّكُمْ أَحْسَنُ عَمَلًا ۗ وَلَئِنْ قُلْتَ إِنَّكُمْ مَبْعُوثُونَ مِنْ بَعْدِ الْمَوْتِ لَيَقُولَنَّ الَّذِينَ كَفَرُوا إِنْ هَٰذَا إِلَّا سِحْرٌ مُبِينٌ ﴿٧﴾

8. ನಾವು ಅವರ ಶಿಕ್ಷೆಯನ್ನು ಒಂದು ನಿರ್ದಿಷ್ಟ ಕಾಲಾವಧಿಯ ವರೆಗೆ ತಡೆದಿರಿಸಿದಾಗ, "ಅದನ್ನು ಯಾವ ವಸ್ತು ತಡೆಹಿಡಿಯಿತು?" ಎಂದು ಅವರು ಕೇಳುತ್ತಾರೆ. ಕೇಳಿರಿ! ಆ ಶಿಕ್ಷೆಯ ಸಮಯ

وَلَئِنْ أَخَّرْنَا عَنْهُمُ الْعَذَابَ إِلَىٰ أُمَّةٍ مَعْدُودَةٍ لَيَقُولُنَّ مَا يَحْبِسُهُ ۗ أَلَا يَوْمَ يَأْتِيهِمْ لَيْسَ مَصْرُوفًا عَنْهُمْ وَحَاقَ

4. ಮಕ್ಕಾದ ಸತ್ಯನಿಷೇಧಿಗಳು ಪ್ರವಾದಿವರ್ಯರು(ಸ) ಎದುರಾಗದಿರಲೆಂದು ತಮ್ಮ ದಿಕ್ಕನ್ನು ಬದಲಿಸಿಕೊಳ್ಳುತ್ತಿದ್ದರು.

***ಇಲ್ಲಿಂದ 12ನೆಯ ಕಾಂಡ ಆರಂಭ.**

5. ಅರ್ಥಾತ್- ಸೃಷ್ಟಿಸುವುದರ ಉದ್ದೇಶ ಲೋಕದಲ್ಲಿ ಮಾನವರನ್ನು ಸೃಷ್ಟಿಸಿ ಅವನನ್ನು ಪರೀಕ್ಷಿಸುವುದಾಗಿತ್ತು.

6. ಇಲ್ಲಿ 'ನೀರು' ಎಂದು ಯಾವುದರ ಬಗ್ಗೆ ಹೇಳಲಾಗಿದೆ ಎಂದು ನಾವು ಹೇಳುವಂತಿಲ್ಲ. ಅದು 'ನೀರು' ಎಂದು ನಾವು ಗುರುತಿಸುವ ವಸ್ತುವೇ ಆಗಿದೆಯೇ ಅಥವಾ ಭೌತಿಕ ವಸ್ತುಗಳೆಲ್ಲವೂ ದ್ರವ ರೂಪದಲ್ಲಿ ಇದ್ದಾಗ ಯಾವ ರೂಪದಲ್ಲಿತ್ತು ಎಂದು ಸೂಚಿಸಲು 'ರೂಪಕವಾಗಿ' ಉಪಯೋಗಿಸಲಾದ ಪದವೇ ಎಂದು ಹೇಳುವಂತಿಲ್ಲ. 'ಅರ್ಶ್' ಅಥವಾ ವಿಶ್ವಸಿಂಹಾಸನವು ನೀರಮೇಲಿತ್ತು ಎಂಬುದರ ವ್ಯಾಖ್ಯಾನವನ್ನು ನಿಗದಿಪಡಿಸುವುದೂ ತ್ರಾಸದಾಯಕವಾಗಿದೆ. ಪ್ರಾಯಶಃ ಆಗ ದೇವಸಾಮ್ರಾಜ್ಯ ನೀರಿನ ಮೇಲೆ ಇದ್ದಿರಬಹುದು.

7. ಅರ್ಥಾತ್ ಮರಣದ ನಂತರ ಮತ್ತೆ ಜೀವಂತಗೊಳ್ಳಲು ಸಾಧ್ಯವೇ ಇಲ್ಲ. ಆದರೆ ಈ ದುಃಸಾಧ್ಯವಾದ ವಿಷಯವನ್ನು ಒಪ್ಪಿಕೊಳ್ಳುವಂತೆ ನಮ್ಮ ಬುದ್ಧಿಗೆ ಮಾಟಮಾಡಲಾಗುತ್ತಿದೆ.

ಬಂತೆಂದರೆ ಅದನ್ನು ಯಾರಿಂದಲೂ ತಡೆಯಲಾಗದು. ಅವರು ಯಾವುದನ್ನು ಅಪಹಾಸ್ಯ ಮಾಡುತ್ತಿದ್ದರೋ ಅದೇ ಅವರನ್ನು ಮುತ್ತಿಕೊಳ್ಳುವುದು.

بِهِمْ مَّا كَانُوْا بِهٖ يَسْتَهْزِءُوْنَ ۝٨

9. ನಾವು ಮಾನವನಿಗೆ ನಮ್ಮ ಕೃಪೆಯನ್ನು ನೀಡಿ ಅನಂತರ ಅದನ್ನು ಅವನಿಂದ ಕಸಿದುಕೊಂಡರೆ ಅವನು ನಿರಾಶನಾಗಿ ಕೃತಘ್ನತೆ ತೋರಲಾರಂಭಿಸುತ್ತಾನೆ.

وَلَئِنْ اَذَقْنَا الْاِنْسَانَ مِنَّا رَحْمَةً ثُمَّ نَزَعْنٰهَا مِنْهُ ۚ اِنَّهٗ لَيَـُٔوْسٌ كَفُوْرٌ ۝٩

10. ಅವನ ಮೇಲೆ ಬಂದಿದ್ದ ಕಷ್ಟಗಳ ಅನಂತರ ನಾವು ಅವನಿಗೆ 'ಸೌಭಾಗ್ಯ'ಗಳ ಸವಿಯನ್ನುಣಿಸಿದಾಗ ಅವನು ನನ್ನ ಎಲ್ಲಾ ದುರದೃಷ್ಟಗಳೂ ತೊಲಗಿದುವು ಎನ್ನುತ್ತಾನೆ. ಅನಂತರ ಅವನು ಆನಂದ ತುಂದಿಲನಾಗುತ್ತಾನೆ ಮತ್ತು ಅಹಂಕಾರ ಪಡುತ್ತಾನೆ.

وَلَئِنْ اَذَقْنٰهُ نَعْمَآءَ بَعْدَ ضَرَّآءَ مَسَّتْهُ لَيَقُوْلَنَّ ذَهَبَ السَّيِّاٰتُ عَنِّيْ ۭ اِنَّهٗ لَفَرِحٌ فَخُوْرٌ ۝١٠

11. ತಾಳ್ಮೆ ವಹಿಸುವವರು ಮತ್ತು ಸತ್ಕರ್ಮಿಗಳು ಮಾತ್ರ ಈ ದೋಷದಿಂದ ವಿರಹಿತರಾಗಿದ್ದಾರೆ. ಕ್ಷಮೆಯೂ ಉನ್ನತವಾದ ಪ್ರತಿಫಲವೂ ಇವರಿಗೇ ಇರುವುದು.

اِلَّا الَّذِيْنَ صَبَرُوْا وَعَمِلُوا الصّٰلِحٰتِ ۭ اُولٰۗىِٕكَ لَهُمْ مَّغْفِرَةٌ وَّاَجْرٌ كَبِيْرٌ ۝١١

12. ಓ ಪೈಗಂಬರರೇ, ನಿಮ್ಮ ಮೇಲೆ ಅವತೀರ್ಣಗೊಳಿಸಲಾಗುತ್ತಿರುವ ದಿವ್ಯವಾಣಿಯಿಂದ ಕೆಲವನ್ನು ನೀವು (ತಿಳಿಸದೆ) ಬಿಟ್ಟುಬಿಡಬಾರದು. ಅವರಾಡುವ "ಈ ವ್ಯಕ್ತಿಯ ಮೇಲೊಂದು ನಿಧಿಯನ್ನೇಕೆ ಇಳಿಸಲಾಗಲಿಲ್ಲ?" ಅಥವಾ "ಇವನ ಸಂಗಡ ದೇವಚರನೋರ್ವನೇಕೆ ಬರಲಿಲ್ಲ?" ಎಂಬ ಮಾತುಗಳಿಂದಾಗಿ ನೀವು ಸಂಕೋಚ ಪಡಬೇಕಾಗಿಲ್ಲ. ನೀವಂತು ಕೇವಲ ಎಚ್ಚರಿಕೆ ಕೊಡುವವರಾಗಿದ್ದೀರಿ. ಸಕಲ ಕಾರ್ಯಗಳ ಹೊಣೆಗಾರನು ಅಲ್ಲಾಹನಾಗಿರುತ್ತಾನೆ.

فَلَعَلَّكَ تَارِكٌۢ بَعْضَ مَا يُوْحٰٓى اِلَيْكَ وَضَاۗىِٕقٌۢ بِهٖ صَدْرُكَ اَنْ يَّقُوْلُوْا لَوْلَآ اُنْزِلَ عَلَيْهِ كَنْزٌ اَوْ جَاۗءَ مَعَهٗ مَلَكٌ ۭ اِنَّمَآ اَنْتَ نَذِيْرٌ ۭ وَاللّٰهُ عَلٰي كُلِّ شَيْءٍ وَّكِيْلٌ ۝١٢

13. ಪೈಗಂಬರರು ಈ ಗ್ರಂಥವನ್ನು ತಾವೇ ಸೃಷ್ಟನೆ ಮಾಡಿಕೊಂಡರೆಂದು ಇವರು ಹೇಳುತ್ತಾರೆಯೇ! ಹಾಗಾದರೆ ಇದರಂತಹ ಹತ್ತು 'ಅಧ್ಯಾಯ'ಗಳನ್ನು ಸೃಷ್ಟಿಸಿ ತನ್ನಿರಿ ಮತ್ತು ಅಲ್ಲಾಹನ ಹೊರತು ನಿಮ್ಮ (ಪೂಜ್ಯರು) ಯಾರೆಲ್ಲ ಇರುವರೋ ಅವರನ್ನೆಲ್ಲ ಸಹಾಯಕ್ಕಾಗಿ ಕರೆಯಲು ಸಾಧ್ಯವಿದ್ದರೆ ಕರೆದುಕೊಳ್ಳಬಹುದು. ನೀವು (ಅವರನ್ನು ಪೂಜ್ಯರೆಂದು ತಿಳಿಯುವುದರಲ್ಲಿ) ಸತ್ಯವಾದಿಗಳಾಗಿದ್ದರೆ (ಹಾಗೆ ಮಾಡಿರಿ.)

اَمْ يَقُوْلُوْنَ افْتَرٰىهُ ۭ قُلْ فَاْتُوْا بِعَشْرِ سُوَرٍ مِّثْلِهٖ مُفْتَرَيٰتٍ وَّادْعُوْا مَنِ اسْتَطَعْتُمْ مِّنْ دُوْنِ اللّٰهِ اِنْ كُنْتُمْ صٰدِقِيْنَ ۝١٣

14. ಅವರು (ನಿಮ್ಮ ಪೂಜ್ಯರು) ನಿಮ್ಮ ನೆರವಿಗೆ ಬಾರದಿದ್ದರೆ ಇದು ಅಲ್ಲಾಹನ ದಿವ್ಯಜ್ಞಾನದಿಂದ ಅವತೀರ್ಣಗೊಂಡಿದೆ ಮತ್ತು ಅವನ ಹೊರತು ಅನ್ಯ ದೇವನಿಲ್ಲವೆಂದು ಚೆನ್ನಾಗಿ ಅರಿತುಕೊಳ್ಳಿರಿ. ಇನ್ನಾದರೂ (ಈ ಪರಮಾರ್ಥದ ಮುಂದೆ) ಶರಣಾಗತ ರಾಗುತ್ತೀರಾ?

فَإِلَّمْ يَسْتَجِيبُوا لَكُمْ فَاعْلَمُوا أَنَّمَا أُنْزِلَ بِعِلْمِ اللَّهِ وَأَنْ لَا إِلَٰهَ إِلَّا هُوَ ۖ فَهَلْ أَنْتُمْ مُسْلِمُونَ ⑭

15. ಈ ಲೌಕಿಕ ಜೀವನ ಮತ್ತು ಇದರ ಬೆಡಗು ಬಿನ್ನಾಣಗಳನ್ನು ಬಯಸುವವರ ಕರ್ಮಗಳ ಸಂಪೂರ್ಣ ಪ್ರತಿಫಲವನ್ನು ನಾವು ಇಲ್ಲೇ ಕೊಟ್ಟುಬಿಡುತ್ತೇವೆ ಮತ್ತು ಇದರಲ್ಲಿ ಅವರಿಗೆ ಯಾವ ಕೊರತೆಯನ್ನೂ ಮಾಡುವುದಿಲ್ಲ.

مَنْ كَانَ يُرِيدُ الْحَيَاةَ الدُّنْيَا وَزِينَتَهَا نُوَفِّ إِلَيْهِمْ أَعْمَالَهُمْ فِيهَا وَهُمْ فِيهَا لَا يُبْخَسُونَ ⑮

16. ಆದರೆ ಇಂಥವರಿಗೆ ಪರಲೋಕದಲ್ಲಿ ನರಕಾಗ್ನಿಯ ವಿನಾ ಇನ್ನೇನೂ ಇಲ್ಲ. ಇವರು ಇಲ್ಲಿ ನಿರ್ಮಿಸಿದ್ದೆಲ್ಲವೂ ಅಳಿದು ಹೋಯಿತು ಮತ್ತು ಈಗ ಇವರು ಮಾಡಿದ್ದೆಲ್ಲವೂ ನಿರರ್ಥಕ (ಎಂದು ಅಲ್ಲಿ ತಿಳಿದು ಬರುವುದು)

أُولَٰئِكَ الَّذِينَ لَيْسَ لَهُمْ فِي الْآخِرَةِ إِلَّا النَّارُ ۖ وَحَبِطَ مَا صَنَعُوا فِيهَا وَبَاطِلٌ مَا كَانُوا يَعْمَلُونَ ⑯

17. ತನ್ನ ಪ್ರಭುವಿನ ಕಡೆಯಿಂದ ಪ್ರತ್ಯಕ್ಷ ಪ್ರಮಾಣವನ್ನು ಪಡೆದ ವ್ಯಕ್ತಿಯು[8] ಆ ಬಳಿಕ (ಆ ಪ್ರಮಾಣಕ್ಕೆ ಪೂರಕವಾಗಿ) ಪ್ರಭುವಿನ ಕಡೆಯಿಂದ ಒಂದು ಸಾಕ್ಷ್ಯವೂ ಬಂದಾಗ[9] ಮತ್ತು ಅದಕ್ಕೆ ಮುಂಚೆ ಮಾರ್ಗದರ್ಶಿ ಹಾಗೂ ಕೃಪೆಯಾಗಿ ಬಂದಿದ್ದ ಮೂಸಾರ ಗ್ರಂಥವೂ ಇರುವಾಗ (ಅವನೂ ಲೋಕೋಪಾಸಕರಂತೆ ಇದನ್ನು ನಿರಾಕರಿಸಬಲ್ಲನೇ?) ಇಂತಹವರು ಖಂಡಿತ ಇದರಲ್ಲಿ ವಿಶ್ವಾಸ ಇರಿಸುವರು. ಯಾವುದಾದರೂ ಜನ ವಿಭಾಗವು ಇದನ್ನು ನಿರಾಕರಿಸಿದರೆ ಅದಕ್ಕೆ ವಾಗ್ದಾನವೀಯಲಾಗಿರುವ ಸ್ಥಾನವು ನರ ಕಾಗ್ನಿಯೇ, ಆದುದರಿಂದ ಓ ಸಂದೇಶವಾಹಕರೇ! ಇದರ ಬಗ್ಗೆ ನೀವು ಯಾವುದೇ ಸಂದೇಹಕ್ಕೊಳಗಾಗ ಬೇಡಿರಿ. ಇದು ನಿಮ್ಮ ಪ್ರಭುವಿನಿಂದ ಬಂದಿರುವ ಪರಮ ಸತ್ಯ. ಆದರೆ ಹೆಚ್ಚಿನವರು ವಿಶ್ವಾಸವಿರಿಸುವುದಿಲ್ಲ.

أَفَمَنْ كَانَ عَلَىٰ بَيِّنَةٍ مِنْ رَبِّهِ وَيَتْلُوهُ شَاهِدٌ مِنْهُ وَمِنْ قَبْلِهِ كِتَابُ مُوسَىٰ إِمَامًا وَرَحْمَةً ۚ أُولَٰئِكَ يُؤْمِنُونَ بِهِ ۚ وَمَنْ يَكْفُرْ بِهِ مِنَ الْأَحْزَابِ فَالنَّارُ مَوْعِدُهُ ۚ فَلَا تَكُ فِي مِرْيَةٍ مِنْهُ ۚ إِنَّهُ الْحَقُّ مِنْ رَبِّكَ وَلَٰكِنَّ أَكْثَرَ النَّاسِ لَا يُؤْمِنُونَ ⑰

8. ಅರ್ಥಾತ್- ಮಾನವನಿಗೆ ತನ್ನ ಅಸ್ತಿತ್ವ, ಭೂಮಿ-ಆಕಾಶಗಳ ಸೃಷ್ಟಿ ಮತ್ತು ನಿಸರ್ಗ ವ್ಯವಸ್ಥೆಯಲ್ಲೇ ಈ ಲೋಕಕ್ಕೆ ಒಬ್ಬ ಸೃಷ್ಟಿಕರ್ತ, ಒಡೆಯ, ಪರಿಪಾಲಕ ಮತ್ತು ಆಜ್ಞಾದೀಶನಾದ ದೇವನಿದ್ದಾನೆ ಎಂಬುದರ ಸಾಕ್ಷ್ಯ ಪ್ರಾಪ್ತವಾಗುತ್ತದೆ. ಈ ಸಾಕ್ಷ್ಯಗಳ ಆಧಾರದಲ್ಲೇ ಈ ಜೀವನದ ನಂತರ ಮತ್ತೊಂದು ಜೀವನ ಇರಲೇಬೇಕಾಗಿದೆ. ಅದರಲ್ಲಿ ಮಾನವ ತನ್ನ ಕರ್ಮಗಳ ಬಗ್ಗೆ ತನ್ನೊಡಯನಿಗೆ ಲೆಕ್ಕ ಸಮರ್ಪಣೆ ಮಾಡಬೇಕಾಗಿದೆ ಮತ್ತು ತಾನು ಮಾಡಿರುವುದರ ಶಿಕ್ಷೆ-ರಕ್ಷೆಗಳನ್ನು ಪಡೆಯಬೇಕಾಗಿದೆ ಎಂಬುದರ ಬಗೆಗೂ ಅವನ ಮನಸ್ಸು ಸಾಕ್ಷ್ಯ ನುಡಿಯುತ್ತದೆ.

9. ಅರ್ಥಾತ್- ಕುರ್‌ಆನ್ ಗ್ರಂಥ. ಅದು ಬಂದ ನಂತರ ಪ್ರಸ್ತುತ ನೈಸರ್ಗಿಕ ಮತ್ತು ವೈಚಾರಿಕ ಸಾಕ್ಷ್ಯಾಧಾರಗಳನ್ನು ಸಮರ್ಥಿಸಿತು. ಮಾನವ ತನ್ನ ವ್ಯಕ್ತಿತ್ವ ಮತ್ತು ನಿಸರ್ಗದಲ್ಲಿ ಕಾಣುವ ಸಾಕ್ಷ್ಯಾಧಾರಗಳೇ ವಾಸ್ತವದಲ್ಲಿ ಸತ್ಯವಾಗಿದೆ ಎಂಬುದನ್ನು ಅದು ಅವನಿಗೆ ತಿಳಿಸಿಕೊಟ್ಟಿತು.

18. ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು?[10] ಇಂಥವರು ತಮ್ಮ ಪ್ರಭುವಿನ ಮುಂದೆ ತರಲ್ಪಡುವರು ಮತ್ತು ತಮ್ಮ ಪ್ರಭುವಿನ ಮೇಲೆ ಸುಳ್ಳಾರೋಪ ಹೊರಿಸಿದವರು ಇವರೇ ಎಂದು ಸಾಕ್ಷಿದಾರರು ಹೇಳುವರು. ಕೇಳಿರಿ! ಅಕ್ರಮಿಗಳ ಮೇಲೆ ಅಲ್ಲಾಹನ ಶಾಪವಿದೆ.[11]

وَمَنْ أَظْلَمُ مِمَّنِ افْتَرَىٰ عَلَى اللَّهِ كَذِبًا ۚ أُولَٰئِكَ يُعْرَضُونَ عَلَىٰ رَبِّهِمْ وَيَقُولُ الْأَشْهَادُ هَٰؤُلَاءِ الَّذِينَ كَذَبُوا عَلَىٰ رَبِّهِمْ ۚ أَلَا لَعْنَةُ اللَّهِ عَلَى الظَّالِمِينَ ﴿١٨﴾

19. ಅಲ್ಲಾಹನ ಮಾರ್ಗದಿಂದ ಜನರನ್ನು ತಡೆಯುವ, ಆ ಮಾರ್ಗವನ್ನು ವಕ್ರಗೊಳಿಸುವ ಮತ್ತು ಪರಲೋಕವನ್ನು ನಿರಾಕರಿಸುವಂತಹ ಅಕ್ರಮಿಗಳ ಮೇಲೆ.

الَّذِينَ يَصُدُّونَ عَنْ سَبِيلِ اللَّهِ وَيَبْغُونَهَا عِوَجًا وَهُمْ بِالْآخِرَةِ هُمْ كَافِرُونَ ﴿١٩﴾

20. ಅವರು ಭೂಮಿಯಲ್ಲಿ ಅಲ್ಲಾಹನನ್ನು ಅಸಹಾಯಕನಾಗಿ ಮಾಡಬಲ್ಲವರಾಗಿರಲಿಲ್ಲ ಮತ್ತು ಅಲ್ಲಾಹನೆದುರು ಅವರಿಗಾರೂ ಸಹಾಯಕನೂ ಇರಲಿಲ್ಲ. ಅವರಿಗೀಗ ಇಮ್ಮಡಿ ಯಾತನೆ ಕೊಡಲಾಗುವುದು. ಅವರು ಯಾರ ಮಾತನ್ನೂ ಕೇಳುತ್ತಿರಲಿಲ್ಲ. ಸ್ವತಃ ಅವರಿಗೇನೂ ಹೊಳೆಯುತ್ತಲೂ ಇರಲಿಲ್ಲ.

أُولَٰئِكَ لَمْ يَكُونُوا مُعْجِزِينَ فِي الْأَرْضِ وَمَا كَانَ لَهُمْ مِنْ دُونِ اللَّهِ مِنْ أَوْلِيَاءَ ۘ يُضَاعَفُ لَهُمُ الْعَذَابُ ۚ مَا كَانُوا يَسْتَطِيعُونَ السَّمْعَ وَمَا كَانُوا يُبْصِرُونَ ﴿٢٠﴾

21. ಅವರು ತಮ್ಮನ್ನು ತಾವೇ ನಷ್ಟಕ್ಕೆ ಗುರಿಪಡಿಸಿಕೊಂಡವರು. ಇವರು ಸೃಜಿಸಿಕೊಂಡದ್ದೆಲ್ಲವೂ ಇವರಿಂದ ಕಳೆದುಹೋಯಿತು.

أُولَٰئِكَ الَّذِينَ خَسِرُوا أَنْفُسَهُمْ وَضَلَّ عَنْهُمْ مَا كَانُوا يَفْتَرُونَ ﴿٢١﴾

22. ಪರಲೋಕದಲ್ಲಿ ಇವರೇ ಅತ್ಯಧಿಕ ನಷ್ಟ ಹೊಂದುವುದು ಅನಿವಾರ್ಯ.

لَا جَرَمَ أَنَّهُمْ فِي الْآخِرَةِ هُمُ الْأَخْسَرُونَ ﴿٢٢﴾

23. ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೂ ತಮ್ಮ ಪ್ರಭುವಿನವರೇ ಆಗಿಬಿಟ್ಟವರೂ ನಿಶ್ಚಯವಾಗಿಯೂ ಸ್ವರ್ಗದವರು. ಅವರು ಅದರಲ್ಲಿ ಸದಾಕಾಲ ವಾಸಿಸುವರು.

إِنَّ الَّذِينَ آمَنُوا وَعَمِلُوا الصَّالِحَاتِ وَأَخْبَتُوا إِلَىٰ رَبِّهِمْ أُولَٰئِكَ أَصْحَابُ الْجَنَّةِ ۖ هُمْ فِيهَا خَالِدُونَ ﴿٢٣﴾

24. ಈ ಎರಡು ವರ್ಗದವರ ಉಪಮೆ ಹೀಗಿದೆ- ಒಬ್ಬನು ಕುರುಡನೂ ಕಿವುಡನೂ ಆಗಿದ್ದಾನೆ. ಇನ್ನೊಬ್ಬನು ದೃಷ್ಟಿ ಮತ್ತು ಶ್ರವಣವುಳ್ಳವನೂ ಆಗಿದ್ದಾನೆ. ಇವರಿಬ್ಬರೂ ಸಮಾನರಾಗಬಲ್ಲರೇ?

مَثَلُ الْفَرِيقَيْنِ كَالْأَعْمَىٰ وَالْأَصَمِّ وَالْبَصِيرِ وَالسَّمِيعِ ۚ هَلْ يَسْتَوِيَانِ

10. ಅರ್ಥಾತ್- ದೇವತ್ವ ಮತ್ತು ದಾಸ್ಯ-ಅನುಸರಣೆ ಮಾಡಿಸುವ ಅವನ ಹಕ್ಕಿನಲ್ಲಿ ಇತರರೂ ಭಾಗೀದಾರರು ಎಂದು ಹೇಳುವುದು, ದೇವನಿಗೆ ತನ್ನ ದಾಸರ ಸನ್ಮಾರ್ಗದರ್ಶನದ ಅಥವಾ ಪಥಭ್ರಷ್ಟತೆಯಲ್ಲಿ ಯಾವುದೇ ಆಸಕ್ತಿಯಿಲ್ಲ. ಅವನು ನಮ್ಮ ಮಾರ್ಗದರ್ಶನಕ್ಕಾಗಿ ಯಾವುದೇ ಪ್ರವಾದಿ ಅಥವಾ ಗ್ರಂಥವನ್ನು ಕಳುಹಿಸಿಲ್ಲ. ನಮ್ಮ ಜೀವನಕ್ಕೆ ಯಾವ ಶೈಲಿಯನ್ನು ಬೇಕಾದರೂ ಅಳವಡಿಸಿಕೊಳ್ಳಲು ಅವನು ನಮ್ಮನ್ನು ಸ್ವತಂತ್ರವಾಗಿ ಬಿಟ್ಟು ಬಿಟ್ಟಿದ್ದಾನೆ. ದೇವನು ನಮ್ಮನ್ನು ಹೀಗೆಯೇ ವಿನೋದಕ್ಕಾಗಿ ಸೃಷ್ಟಿಸಿದ್ದಾನೆ ಮತ್ತು ಹಾಗೆಯೇ ನಮಗೆ ಅಂತ್ಯವನ್ನೂ ನೀಡುತ್ತಾನೆ. ಅವನ ಮುಂದೆ ನಾವು ಯಾವುದೇ ರೀತಿಯ ಉತ್ತರದಾಯಿತ್ವವನ್ನೂ ಹೊಂದಿಲ್ಲ. ಯಾವುದೇ ರೀತಿಯ ಶಿಕ್ಷೆ-ರಕ್ಷೆಗಳು ಎದುರಾಗಲಿಕ್ಕಿಲ್ಲ ಎಂದೆಲ್ಲಾ ಹೇಳುವುದಾಗಿದೆ.

11. ವಿವರಣಾ ಶೈಲಿಯಿಂದ, ಈ ಮಾತನ್ನು ಪರಲೋಕದಲ್ಲಿ ಅವರು ಹಾಜರುಗೊಳಿಸಲ್ಪಡುವಾಗ ಹೇಳಲಾಗುವುದು ಎಂದು ವ್ಯಕ್ತವಾಗುತ್ತದೆ.

ನೀವು ಈ ಉಪಮೆಯಿಂದ ಪಾಠವೇನಾದರೂ ಕಲಿಯುವುದಿಲ್ಲವೇಕೆ?

مَثَلًا ۚ أَفَلَا تَذَكَّرُونَ ﴿٢٤﴾

25. ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದ್ದಾಗ (ಇಂತಹ ಪರಿಸ್ಥಿತಿಯೇ ಇತ್ತು) ನೂಹರು ಇಂತೆಂದರು, "ನಾನು ನಿಮಗೆ ಸುವ್ಯಕ್ತ ಎಚ್ಚರಿಕೆ ನೀಡುತ್ತೇನೆ.

وَلَقَدْ أَرْسَلْنَا نُوحًا إِلَىٰ قَوْمِهِ إِنِّي لَكُمْ نَذِيرٌ مُبِينٌ ﴿٢٥﴾

26. ನೀವು ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬೇಡಿರಿ. ಅನ್ಯಥಾ ನಿಮ್ಮ ಮೇಲೆ ಒಂದು ದಿನ ವೇದನಾಯುಕ್ತ ಯಾತನೆ ಎರಗುವುದೆಂದು ನಾನು ಭಯ ಪಡುತ್ತೇನೆ."

أَنْ لَا تَعْبُدُوا إِلَّا اللَّهَ ۖ إِنِّي أَخَافُ عَلَيْكُمْ عَذَابَ يَوْمٍ أَلِيمٍ ﴿٢٦﴾

27. ಅವರ ಮಾತನ್ನು ನಿರಾಕರಿಸಿದ್ದ ಅವರ ಜನಾಂಗದ ಸರದಾರರು ಹೀಗೆಂದರು-"ನೀವು ನಮ್ಮ ದೃಷ್ಟಿಯಲ್ಲಿ ನಮ್ಮಂತಹ ಒಬ್ಬ ಮನುಷ್ಯನಾಗಿರುವಿರೇ ವಿನಾ ಇನ್ನೇನೂ ಅಲ್ಲ. ನಮ್ಮ ಜನಾಂಗದಲ್ಲಿ ನೀಚರಾಗಿದ್ದವರು ಮಾತ್ರ ಹಿಂದು ಮುಂದು ನೋಡದೆ ನಿಮ್ಮನ್ನು ಅನುಸರಿಸುತ್ತಿರುವುದನ್ನು ನಾವು ಕಾಣುತ್ತೇವೆ. ನೀವು ನಮಗಿಂತ ಯಾವ ವಿಷಯದಲ್ಲೂ ಶ್ರೇಷ್ಠರಾಗಿರುವುದನ್ನು ನಾವು ಕಾಣುವುದಿಲ್ಲ. ಮಾತ್ರವಲ್ಲ ನಾವು ನಿಮ್ಮನ್ನು ಸುಳ್ಳುಗಾರನೆಂದೆಣಿಸುತ್ತೇವೆ."

فَقَالَ الْمَلَأُ الَّذِينَ كَفَرُوا مِنْ قَوْمِهِ مَا نَرَاكَ إِلَّا بَشَرًا مِثْلَنَا وَمَا نَرَاكَ اتَّبَعَكَ إِلَّا الَّذِينَ هُمْ أَرَاذِلُنَا بَادِيَ الرَّأْيِ وَمَا نَرَىٰ لَكُمْ عَلَيْنَا مِنْ فَضْلٍ بَلْ نَظُنُّكُمْ كَاذِبِينَ ﴿٢٧﴾

28. ಅವರು (ಹೀಗೆ) ಹೇಳಿದರು- "ಓ ನನ್ನ ಜನಾಂಗ ಬಾಂಧವರೇ, ನೀವೇ ಯೋಚಿಸಿರಿ, ನಾನು ನನ್ನ ಪ್ರಭುವಿನ ಕಡೆಯಿಂದ ಒಂದು ಸ್ಪಷ್ಟ ಆಧಾರ ಪ್ರಮಾಣದಲ್ಲಿ ಸ್ಥಿರವಾಗಿದ್ದೆ. ತರುವಾಯ ಅವನು ನನಗೆ ತನ್ನ ವಿಶೇಷ ಕೃಪೆಯನ್ನೂ ಪ್ರದಾನ ಮಾಡಿದನು. ಆದರೆ ಅದು ನಿಮಗೆ ಗೋಚರಿಸಲಿಲ್ಲ. ಹೀಗಿರುವಾಗ ನೀವು ಒಪ್ಪದಿದ್ದರೂ ನಾವು ಬಲಾತ್ಕರಿಸಿ ನಿಮ್ಮ ತಲೆಗೆ ಲೇಪಿಸಲು ನಮ್ಮಲ್ಲೇನು ಸಾಧನವಿದೆ?

قَالَ يَا قَوْمِ أَرَأَيْتُمْ إِنْ كُنْتُ عَلَىٰ بَيِّنَةٍ مِنْ رَبِّي وَآتَانِي رَحْمَةً مِنْ عِنْدِهِ فَعُمِّيَتْ عَلَيْكُمْ أَنُلْزِمُكُمُوهَا وَأَنْتُمْ لَهَا كَارِهُونَ ﴿٢٨﴾

29. ಓ ನನ್ನ ಜನಾಂಗ ಬಾಂಧವರೇ, ನಾನು ಈ ಕೆಲಸದ ಬಗ್ಗೆ ನಿಮ್ಮಿಂದ ಹಣ ಕೇಳುವುದಿಲ್ಲ. ನನ್ನ ಪ್ರತಿಫಲ ಅಲ್ಲಾಹನಲ್ಲಿದೆ. ನನ್ನ ಮಾತು ನಂಬಿದವರನ್ನು ಹೊರದಬ್ಬಿಬಿಡಲಿಕ್ಕೂ ನನ್ನಿಂದ ಸಾಧ್ಯವಾಗದು. ಅವರು ತಾವೇ ತಮ್ಮ ಪ್ರಭುವಿನ ಸನ್ನಿಧಿಗೆ ಹೋಗುವವರು. ಆದರೆ ನೀವು ತಿಳಿಗೇಡಿತನದಿಂದ ವರ್ತಿಸುತ್ತಿರುವುದನ್ನು ನಾನು ಕಾಣುತ್ತಿದ್ದೇನೆ.

وَيَا قَوْمِ لَا أَسْأَلُكُمْ عَلَيْهِ مَالًا ۖ إِنْ أَجْرِيَ إِلَّا عَلَى اللَّهِ ۚ وَمَا أَنَا بِطَارِدِ الَّذِينَ آمَنُوا ۚ إِنَّهُمْ مُلَاقُو رَبِّهِمْ وَلَٰكِنِّي أَرَاكُمْ قَوْمًا تَجْهَلُونَ ﴿٢٩﴾

30. ಓ ನನ್ನ ಜನಾಂಗ ಬಾಂಧವರೇ, ನಾನು ಇವರನ್ನು ತಳ್ಳಿಬಿಟ್ಟರೆ ಅಲ್ಲಾಹನ ಹಿಡಿತದಿಂದ ನನ್ನನ್ನು ಕಾಪಾಡಲು ಯಾರು ಬಂದಾರು? ನಿಮಗೆ ಇಷ್ಟೂ ತಿಳಿಯುವುದಿಲ್ಲವೇ?

وَيٰقَوْمِ مَنْ يَّنْصُرُنِيْ مِنَ اللّٰهِ اِنْ طَرَدْتُّهُمْ اَفَلَا تَذَكَّرُوْنَ ۝

31. ನನ್ನ ಬಳಿ ಅಲ್ಲಾಹನ ಭಂಡಾರವಿದೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ನಾನು ಪರೋಕ್ಷದ ಜ್ಞಾನಿಯೆಂದೂ ಹೇಳುವುದಿಲ್ಲ. ನಾನೊಬ್ಬ ದೇವಚರನಾಗಿದ್ದೇನೆಂದೂ ನಾನು ವಾದಿಸುತ್ತಿಲ್ಲ. ನಿಮ್ಮ ದೃಷ್ಟಿಗೆ ಕೀಳಾಗಿ ಕಾಣಿಸುತ್ತಿರುವವರಿಗೆ ಅಲ್ಲಾಹನು ಒಳಿತನ್ನೇನೂ ನೀಡಿರುವುದಿಲ್ಲವೆಂದೂ ನಾನು ಹೇಳಲಾರೆ. ಅವರ ಅಂತಃಕರಣದ ಸ್ಥಿತಿಯನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು. ನಾನು ಹಾಗೆ ಹೇಳಿಬಿಟ್ಟರೆ ಅಕ್ರಮಿಯಾದೇನು."

وَلَآ اَقُوْلُ لَكُمْ عِنْدِيْ خَزَآىِٕنُ اللّٰهِ وَلَآ اَعْلَمُ الْغَيْبَ وَلَآ اَقُوْلُ اِنِّيْ مَلَكٌ وَّلَآ اَقُوْلُ لِلَّذِيْنَ تَزْدَرِيْٓ اَعْيُنُكُمْ لَنْ يُّؤْتِيَهُمُ اللّٰهُ خَيْرًا اَللّٰهُ اَعْلَمُ بِمَا فِيْٓ اَنْفُسِهِمْ اِنِّيْٓ اِذًا لَّمِنَ الظّٰلِمِيْنَ ۝

32. ಕೊನೆಗೆ ಅವರು ಹೀಗೆಂದರು- "ಓ ನೂಹ್! ನೀವು ನಮ್ಮೊಡನೆ ವಾಗ್ವಾದ ನಡೆಸಿದಿರಿ, ತುಂಬಾ ನಡೆಸಿದಿರಿ. ಇನ್ನು ನೀವು ಸತ್ಯವಾದಿಯಾಗಿದ್ದರೆ ನೀವು ನಮಗೆ ಬೆದರಿಕೆ ಹಾಕುತ್ತಿರುವ ಆ ಯಾತನೆಯನ್ನು ಬರಮಾಡಿಸಿರಿ."

قَالُوْا يٰنُوْحُ قَدْ جٰدَلْتَنَا فَاَكْثَرْتَ جِدَالَنَا فَاْتِنَا بِمَا تَعِدُنَآ اِنْ كُنْتَ مِنَ الصّٰدِقِيْنَ ۝

33. ನೂಹ್ ಹೀಗೆ ಉತ್ತರ ಕೊಟ್ಟರು: "ಅಲ್ಲಾಹನಿಚ್ಛಿಸಿದರೆ ಅವನೇ ಅದನ್ನು ತರುವನು. ನೀವು ಅದನ್ನು ತಡೆಯುವಷ್ಟು ಸಾಮರ್ಥ್ಯ ಹೊಂದಿರುವುದಿಲ್ಲ.

قَالَ اِنَّمَا يَاْتِيْكُمْ بِهِ اللّٰهُ اِنْ شَآءَ وَمَآ اَنْتُمْ بِمُعْجِزِيْنَ ۝

34. ಇನ್ನು ನಾನು ನಿಮಗೇನಾದರೂ ಹಿತವನ್ನು ಮಾಡಲು ಬಯಸಿದರೂ ಅಲ್ಲಾಹನೇ ನಿಮ್ಮನ್ನು ದಾರಿ ತಪ್ಪಿಸಲಿಚ್ಛಿಸಿರುವಾಗ[12] ನನ್ನ ಹಿತಾ ಕಾಂಕ್ಷೆಯೇನೂ ನಿಮಗೆ ಫಲ ಕೊಡಲಾರದು. ಅವನೇ ನಿಮ್ಮ ಪ್ರಭು ಮತ್ತು ಅವನಲ್ಲಿಗೇ ನೀವು ಮರಳಲಿಕ್ಕಿದ್ದೀರಿ."

وَلَا يَنْفَعُكُمْ نُصْحِيْٓ اِنْ اَرَدْتُّ اَنْ اَنْصَحَ لَكُمْ اِنْ كَانَ اللّٰهُ يُرِيْدُ اَنْ يُّغْوِيَكُمْ هُوَ رَبُّكُمْ وَاِلَيْهِ تُرْجَعُوْنَ ۝

35. ಓ ಪೈಗಂಬರರೇ, ಇದನ್ನೆಲ್ಲಾ ಈ ವ್ಯಕ್ತಿ ಸ್ವಯಂ ರಚಿಸಿಕೊಂಡಿದ್ದಾನೆಂದು ಇವರು ಹೇಳುತ್ತಿದ್ದಾರೇನು? ಇವರೊಡನೆ ಹೇಳಿರಿ, "ಇದನ್ನು ನಾನೇ ರಚಿಸಿದ್ದಾದರೆ ನನ್ನ ಅಪರಾಧದ ಹೊಣೆ ನನ್ನ ಮೇಲೆ ಇದೆ ಮತ್ತು ನೀವು ಮಾಡುತ್ತಿರುವ ಅಪರಾಧದಿಂದ ನಾನು ಮುಕ್ತನಾಗಿರುತ್ತೇನೆ."

اَمْ يَقُوْلُوْنَ افْتَرٰىهُ قُلْ اِنِ افْتَرَيْتُهٗ فَعَلَيَّ اِجْرَامِيْ وَاَنَا بَرِيْٓءٌ مِّمَّا تُجْرِمُوْنَ ۝

12. ಅರ್ಥಾತ್- ನಿಮ್ಮ ಹಟ, ದುಷ್ಟತನ ಮತ್ತು ಒಳಿತಿನ ಬಗೆಗಿರುವ ನಿರಾಸಕ್ತಿಯನ್ನು ಕಂಡು ಅಲ್ಲಾಹನೇ ನಿಮಗೆ ಸನ್ಮಾರ್ಗದರ್ಶನದ ಸೌಭಾಗ್ಯವನ್ನು ಕರುಣಿಸುವುದಿಲ್ಲವೆಂದು ಮತ್ತು ನೀವು ಬಯಸುವ ಪಥಭ್ರಷ್ಟತೆಯಲ್ಲೇ ನಿಮ್ಮನ್ನು ಅಲೆದಾಡಿಸುವುದೆಂದು ತೀರ್ಮಾನಿಸಿದ್ದರೆ, ನಿಮ್ಮ ಸುಧಾರಣೆಗಾಗಿ ನನ್ನ ಯಾವ ಪ್ರಯತ್ನವೂ ಫಲಕಾರಿಯಾಗಲಾರದು.

36. ನೂಹರಿಗೆ (ಹೀಗೆ) 'ದಿವ್ಯವಾಣಿ' ಮಾಡಲಾಯಿತು- "ನಿಮ್ಮ ಜನಾಂಗದಲ್ಲಿ ವಿಶ್ವಾಸ ಸ್ವೀಕರಿಸುವವರೆಲ್ಲ ಸ್ವೀಕರಿಸಿಯಾಯಿತು. ಇನ್ನಾರೂ ಸ್ವೀಕರಿಸುವವರಿಲ್ಲ. ಅವರ ಕುಕೃತ್ಯಗಳಿಗಾಗಿ ದುಃಖಿಸುವುದನ್ನು ತೊರೆಯಿರಿ.

وَأُوحِيَ إِلَىٰ نُوحٍ أَنَّهُ لَن يُؤْمِنَ مِن
قَوْمِكَ إِلَّا مَن قَدْ آمَنَ فَلَا تَبْتَئِسْ
بِمَا كَانُوا يَفْعَلُونَ ﴿٣٦﴾

37. ಮತ್ತು ನಮ್ಮ ಮೇಲ್ನೋಟದಲ್ಲಿ ನಮ್ಮ ಮಾರ್ಗದರ್ಶನದ ಪ್ರಕಾರ ಒಂದು ನಾವೆಯನ್ನು ಕಟ್ಟಲಾರಂಭಿಸಿರಿ. ಅಕ್ರಮಿಗಳ ಪರವಾಗಿ ನಮ್ಮೊಡನೆ ಶಿಫಾರಸು ಮಾಡಬಾರದು. ನಿಶ್ಚಯ ವಾಗಿಯೂ ಇವರೆಲ್ಲರೂ ಮುಳುಗಿಸಲ್ಪಡುವವರು."

وَاصْنَعِ الْفُلْكَ بِأَعْيُنِنَا وَوَحْيِنَا وَلَا
تُخَاطِبْنِي فِي الَّذِينَ ظَلَمُوا ۚ إِنَّهُم مُّغْرَقُونَ ﴿٣٧﴾

38. ನೂಹರು ನಾವೆಯನ್ನು ತಯಾರಿಸುತ್ತಿದ್ದರು. ಅವರ ಜನಾಂಗದ ಸರದಾರರ ಪೈಕಿ ಅವರ ಬಳಿಯಿಂದ ಹಾದು ಹೋಗುತ್ತಿದ್ದವರು ಅವರನ್ನು ಗೇಲಿ ಮಾಡುತ್ತಿದ್ದರು. ನೂಹರು (ಹೀಗೆ) ಹೇಳಿದರು, "ನೀವು ನಮ್ಮನ್ನು ಕಂಡು ನಗುತ್ತಿದ್ದರೆ ನಾವೂ ನಿಮ್ಮನ್ನು ಕಂಡು ನಗುತ್ತಿದ್ದೇವೆ.

وَيَصْنَعُ الْفُلْكَ وَكُلَّمَا مَرَّ عَلَيْهِ مَلَأٌ
مِّن قَوْمِهِ سَخِرُوا مِنْهُ ۚ قَالَ إِن تَسْخَرُوا
مِنَّا فَإِنَّا نَسْخَرُ مِنكُمْ كَمَا تَسْخَرُونَ ﴿٣٨﴾

39. ಅಪಮಾನಗೊಳಿಸುವಂತಹ ಯಾತನೆಯು ಯಾರ ಮೇಲೆರಗುತ್ತದೆ ಮತ್ತು ತಪ್ಪಿಸಿದರೂ ದೂರವಾಗದಂತಹ ಆ ವಿಪತ್ತು ಯಾರ ಮೇಲೆ ಬೀಳುತ್ತದೆಂದು ಸದ್ಯದಲ್ಲೇ ನಿಮಗೆ ಸ್ವತಃ ತಿಳಿದು ಬರುವುದು.[13]

فَسَوْفَ تَعْلَمُونَ مَن يَأْتِيهِ عَذَابٌ
يُخْزِيهِ وَيَحِلُّ عَلَيْهِ عَذَابٌ مُّقِيمٌ ﴿٣٩﴾

40. ಕೊನೆಗೊಮ್ಮೆ ನಮ್ಮ ಆಜ್ಞೆ ಬಂದಿತು ಮತ್ತು ಆ ಭಟ್ಟಿಯು ಉಕ್ಕೇರಿತು.[14] ಆಗ ನಾವು (ಹೀಗೆ) ಹೇಳಿದೆವು: "ಪ್ರತಿ ಒಂದು

حَتَّىٰ إِذَا جَاءَ أَمْرُنَا وَفَارَ التَّنُّورُ
قُلْنَا احْمِلْ فِيهَا مِن كُلٍّ زَوْجَيْنِ اثْنَيْنِ

13. ಇದೊಂದು ವಿಚಿತ್ರ ಸಂದರ್ಭವಾಗಿದೆ. ಇದರ ಬಗ್ಗೆ ಆಲೋಚಿಸುವುದರಿಂದ ಮಾನವನು ಲೋಕದ ಬಾಹ್ಯವನ್ನು ನೋಡಿ ಯಾವ ರೀತಿ ಮೋಸ ಹೋಗುತ್ತಾನೆ ಎಂದು ತಿಳಿದುಬರುತ್ತದೆ. ನೂಹ್(ಅ) ನದಿಯಿಂದ ಬಹಳ ದೂರ ಒಣ ಪ್ರದೇಶದಲ್ಲಿ ಹಡಗು ನಿರ್ಮಿಸುತ್ತಿದ್ದಾಗ ಜನರಿಗೆ ನಿಜವಾಗಿಯೂ ಅದೊಂದು ಹಾಸ್ಯಾಸ್ಪದ ಕೆಲಸವೆಂದು ಭಾಸವಾಗಿರಬಹುದು. ಈ ಹಿರಿಯಜ್ಜನ ಅರುಳುಮರುಳು ಈಗ ಯಾವ ಮಟ್ಟಕ್ಕೆ ತಲಪಿ ಬಿಟ್ಟಿದೆಯೆಂದರೆ ಇವರು ನೆಲದ ಮೇಲೆ ಹಡಗು ಚಲಾಯಿಸಲು ಹೊರಟಿದ್ದಾರೆ ಎಂದು ಬಿದ್ದು ಬಿದ್ದು ನಗುತ್ತಾ ಹೇಳುತ್ತಿದ್ದಿರಬಹುದು. ಕೆಲದಿನಗಳ ನಂತರ ನಿಜವಾಗಿಯೂ ಇಲ್ಲಿ ಹಡಗು ಚಲಿಸುವುದು ಎಂದು ಅವರು ಪ್ರಾಯಶಃ ಕನಸು ಮನಸ್ಸಿನಲ್ಲೂ ಆಲೋಚಿಸಿರಲಿಕ್ಕಿಲ್ಲ. ಆದರೆ ವಾಸ್ತವಿಕತೆಯ ಜ್ಞಾನವಿದ್ದ ಮತ್ತು ನಾಳೆ ಇಲ್ಲಿ ಹಡಗಿನ ಎಂತಹ ಅವಶ್ಯಕತೆ ತಲೆದೋರಬಹುದೆಂದು ತಿಳಿದಿದ್ದ ವ್ಯಕ್ತಿಗೆ ಜನರ ಅಜ್ಞಾನ, ತಿಳಿಗೇಡಿತನ ಮತ್ತು ಮೂರ್ಖತನದಿಂದ ಕೂಡಿದ ಸಮಾಧಾನವನ್ನು ಕಂಡು ಅಷ್ಟೇ ನಗೆ ಬಂದಿರಬಹುದು. ಇವರೆಂತಹ ತಿಳಿಗೇಡಿಗಳು! ವಿನಾಶ ಇವರ ತಲೆಯ ಮೇಲೆ ಬಂದು ನಿಂತಿದೆ. ಅದು ಇನ್ನೇನು ಬರುವುದರಲ್ಲೇ ಇದೆ ಎಂದು ನಾನು ಅವರಿಗೆ ಎಚ್ಚರಿಕೆಯನ್ನೂ ನೀಡಿದ್ದೇನೆ. ಮಾತ್ರವಲ್ಲ ಅವರ ಕಣ್ಣೆದುರಿನಲ್ಲೇ ಅದರಿಂದ ಸುರಕ್ಷಿತವಾಗಿರಲು ಸಿದ್ಧತೆಯನ್ನೂ ಮಾಡುತ್ತಿದ್ದೇನೆ. ಆದರೆ ಇವರು ಬಹಳ ಸಂತೃಪ್ತಿಯಿಂದ ಕುಳಿತು ಬಿಟ್ಟಿದ್ದಾರೆ. ಮಾತ್ರವಲ್ಲ ತಿರುಗಿ ನನ್ನನ್ನೇ ಹುಚ್ಚನೆಂದು ಭಾವಿಸುತ್ತಿದ್ದಾರೆ ಎಂದು ಅವರು ಹೇಳುತ್ತಿರಬಹುದು.

14. ಈ ಕುರಿತು ವ್ಯಾಖ್ಯಾನಕಾರರ ಹೇಳಿಕೆಗಳು ವಿಭಿನ್ನವಾಗಿವೆ. ನಮ್ಮ ದೃಷ್ಟಿಯಲ್ಲಿ ಕುರ್‌ಆನಿನ ಸುವ್ಯಕ್ತ ಶಬ್ದಗಳಿಂದ ತಿಳಿದು ಬರುವುದೇ ಸರಿಯಾದ ತಾತ್ಪರ್ಯವಾಗಿದೆ. ಚಂಡಮಾರುತದ ಆರಂಭ ಒಂದು ವಿಶಿಷ್ಟ ಭಟ್ಟಿಯಿಂದಾಯಿತು. ಅದರ ಕೆಳಗಿನಿಂದ ನೀರಿನ ಬುಗ್ಗೆ ಚಿಮ್ಮಿ ಹರಿಯಿತು. ಇನ್ನೊಂದೆಡೆ ಆಗಸದಿಂದ ಅವ್ಯಾಹತ ಮಳೆ ಆರಂಭವಾಯಿತು. ಅಲ್ಲದೆ ಭೂಮಿಯಲ್ಲಿ ಅಲ್ಲಲ್ಲಿ ನೀರಿನ ಬುಗ್ಗೆಗಳು ಪುಟಿದೆದ್ದವು.

ಜಾತಿಯ ಪ್ರಾಣಿಗಳ ಒಂದೊಂದು ಜೋಡಿಯನ್ನು ನಾವೆಯಲ್ಲಿಟ್ಟು ಕೊಳ್ಳಿರಿ ಮೊದಲೇ ಗುರುತಿಸಲ್ಪಟ್ಟಿರುವವರ ಹೊರತು[15] ನಿಮ್ಮ ಕುಟುಂಬದವರನ್ನೂ ಹತ್ತಿಸಿಕೊಳ್ಳಿರಿ; ವಿಶ್ವಾಸವಿರಿಸಿಕೊಂಡವರನ್ನೂ ಕುಳ್ಳಿರಿಸಿಕೊಳ್ಳಿರಿ." ನೂಹರ ಮೇಲೆ ವಿಶ್ವಾಸವಿಟ್ಟಿದ್ದವರು ಕೆಲವೇ ಮಂದಿ ಇದ್ದರು.

وَأَهْلَكَ إِلَّا مَنْ سَبَقَ عَلَيْهِ الْقَوْلُ وَمَنْ آمَنَ ۚ وَمَا آمَنَ مَعَهُ إِلَّا قَلِيلٌ ﴿٤٠﴾

41. ನೂಹರು ಇಂತೆಂದರು, "ಇದರಲ್ಲಿ ಹತ್ತಿಕೊಳ್ಳಿರಿ, ಇದು ಚಲಿಸುವುದೂ ನಿಲ್ಲುವುದೂ ಅಲ್ಲಾಹನ ನಾಮದಿಂದಲೇ ಆಗಿರುತ್ತದೆ. ನನ್ನ ಪ್ರಭು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."

وَقَالَ ارْكَبُوا فِيهَا بِسْمِ اللَّهِ مَجْرَاهَا وَمُرْسَاهَا ۚ إِنَّ رَبِّي لَغَفُورٌ رَحِيمٌ ﴿٤١﴾

42. ನಾವೆಯು ಇವರನ್ನೆತ್ತಿಕೊಂಡು ಚಲಿಸುತ್ತಲಿತ್ತು. ಒಂದೊಂದೇ ಅಲೆ ಪರ್ವತದಂತೆ ಏರಿ ಬರುತ್ತಿತ್ತು. ನೂಹರ ಮಗನು ದೂರದಲ್ಲಿದ್ದನು. ನೂಹರು ಕೂಗಿ ಕರೆದು ಇಂತೆಂದರು: "ಮಗನೇ, ನಮ್ಮ ಸಂಗಡ ಹತ್ತಿಕೋ. ಸತ್ಯನಿಷೇಧಿಗಳೊಂದಿಗಿರಬೇಡ."

وَهِيَ تَجْرِي بِهِمْ فِي مَوْجٍ كَالْجِبَالِ وَنَادَىٰ نُوحٌ ابْنَهُ وَكَانَ فِي مَعْزِلٍ يَا بُنَيَّ ارْكَبْ مَعَنَا وَلَا تَكُنْ مَعَ الْكَافِرِينَ ﴿٤٢﴾

43. ಅವನು (ಹೀಗೆ) ಪ್ರತ್ಯುತ್ತರ ಕೊಟ್ಟನು: "ನಾನೀಗಲೇ ಒಂದು ಪರ್ವತದ ಮೇಲೆ ಹತ್ತಿಕೊಳ್ಳುತ್ತೇನೆ ಅದು ನನ್ನನ್ನು ನೀರಿನಿಂದ ರಕ್ಷಿಸುವುದು." (ಅದಕ್ಕೆ) ನೂಹರು, "ಅಲ್ಲಾಹನೇ ಯಾರ ಮೇಲಾದರೂ ಕರುಣೆ ತೋರುವ ಹೊರತು ಇಂದು ಯಾವುದೂ ಅವನ ಆಜ್ಞೆಯಿಂದ ರಕ್ಷಿಸಲಾರದು" ಎಂದರು. ಅಷ್ಟರಲ್ಲಿ ಒಂದು ಅಲೆಯು ಅವರಿಬ್ಬರ ನಡುವೆ ಅಡ್ಡ ಬಂತು ಮತ್ತು ಅವನೂ ಮುಳುಗಿದವರಲ್ಲಿ ಸೇರಿ ಬಿಟ್ಟನು.

قَالَ سَآوِي إِلَىٰ جَبَلٍ يَعْصِمُنِي مِنَ الْمَاءِ ۚ قَالَ لَا عَاصِمَ الْيَوْمَ مِنْ أَمْرِ اللَّهِ إِلَّا مَنْ رَحِمَ ۚ وَحَالَ بَيْنَهُمَا الْمَوْجُ فَكَانَ مِنَ الْمُغْرَقِينَ ﴿٤٣﴾

44. "ಓ ಭೂಮಿಯೇ, ನಿನ್ನ ನೀರನ್ನೆಲ್ಲ ಹೀರಿಕೋ ಮತ್ತು ಓ ಆಕಾಶವೇ, ತಡೆ!" ಎಂದು ಅಪ್ಪಣೆಯಾಯಿತು. ಆ ಪ್ರಕಾರ ನೀರು ನೆಲದೊಳಗೆ ಇಂಗಿತು. ತೀರ್ಮಾನ ಆಗಿ ಹೋಯಿತು. ನೌಕೆಯು 'ಜೂದಿ'ಯಲ್ಲಿ ತಂಗಿತು.[16] ಅಕ್ರಮಿಗಳ ಜನಾಂಗ ದೂರ ತೊಲಗಿತೆಂದು ಹೇಳಲಾಯಿತು."

وَقِيلَ يَا أَرْضُ ابْلَعِي مَاءَكِ وَيَا سَمَاءُ أَقْلِعِي وَغِيضَ الْمَاءُ وَقُضِيَ الْأَمْرُ وَاسْتَوَتْ عَلَى الْجُودِيِّ ۖ وَقِيلَ بُعْدًا لِلْقَوْمِ الظَّالِمِينَ ﴿٤٤﴾

15. ಅರ್ಥಾತ್- ನಿಮ್ಮ ಮನೆಯವರ ಪೈಕಿ ಸತ್ಯನಿಷೇಧಿಗಳಾಗಿರುವವರು ಮತ್ತು ಅಲ್ಲಾಹನ ಅನುಗ್ರಹಕ್ಕೆ ಪಾತ್ರರಾಗದಿರುವವರು ಎಂದು ಯಾವ ವ್ಯಕ್ತಿಗಳ ಕುರಿತು ನಿಮಗೆ ಮೊದಲೇ ತಿಳಿಸಲಾಗಿದೆಯೋ ಅವರನ್ನು ನಾವೆಯಲ್ಲಿ ಹತ್ತಿಸದಿರಿ.

16. ಜೂದಿ ಪರ್ವತ ಕುರ್ದಿಸ್ತಾನದ ಇಬ್ನ್‌ಉಮರ್ ದ್ವೀಪದ ವಾಯುವ್ಯ ದಿಕ್ಕಿನಲ್ಲಿದೆ. ಇಂದಿಗೂ ಅದು ಜೂದಿ ಪರ್ವತವೆಂಬ ಹೆಸರಿನಿಂದ ಖ್ಯಾತವಾಗಿದೆ.

وَنَادَىٰ نُوحٌ رَّبَّهُ فَقَالَ رَبِّ إِنَّ ابْنِي مِنْ أَهْلِي وَإِنَّ وَعْدَكَ الْحَقُّ وَأَنتَ أَحْكَمُ الْحَاكِمِينَ ﴿٤٥﴾

45. ನೂಹರು ತಮ್ಮ ಪ್ರಭುವನ್ನು (ಹೀಗೆ) ಕೂಗಿ ಕರೆದರು "ಪ್ರಭೂ, ನನ್ನ ಮಗನು ನನ್ನ ಕುಟುಂಬದವನಾಗಿದ್ದಾನೆ. ನಿನ್ನ ವಾಗ್ದಾನವು ಸತ್ಯ ಮತ್ತು ನೀನು ಎಲ್ಲ ಅಧಿಪತಿಗಳ ಅಧಿಪತಿಯಾಗಿರುತ್ತಿ."

قَالَ يَا نُوحُ إِنَّهُ لَيْسَ مِنْ أَهْلِكَ ۖ إِنَّهُ عَمَلٌ غَيْرُ صَالِحٍ ۖ فَلَا تَسْأَلْنِ مَا لَيْسَ لَكَ بِهِ عِلْمٌ ۖ إِنِّي أَعِظُكَ أَن تَكُونَ مِنَ الْجَاهِلِينَ ﴿٤٦﴾

46. (ಅದಕ್ಕೆ ಹೀಗೆ) ಉತ್ತರ ಬಂತು, "ಓ ನೂಹ್, ಅವನು ನಿನ್ನ ಕುಟುಂಬದವನಲ್ಲ. ಅವನೊಂದು ಕೆಟ್ಟು ಹೋದ ಕಾರ್ಯ.[17] ಆದುದರಿಂದ ಯಾವುದರ ನಿಜಸ್ಥಿತಿಯು ನಿನಗೆ ತಿಳಿದಿಲ್ಲವೋ ಆ ಕುರಿತು ನನ್ನೊಡನೆ ನಿವೇದಿಸಬೇಡ. ನೀನು ಅಜ್ಞಾನಿಗಳಂತೆ ವರ್ತಿಸ ಬೇಡವೆಂದು ನಾನು ನಿನಗೆ ಉಪದೇಶಿಸುತ್ತೇನೆ."

قَالَ رَبِّ إِنِّي أَعُوذُ بِكَ أَنْ أَسْأَلَكَ مَا لَيْسَ لِي بِهِ عِلْمٌ ۖ وَإِلَّا تَغْفِرْ لِي وَتَرْحَمْنِي أَكُن مِّنَ الْخَاسِرِينَ ﴿٤٧﴾

47. ಆ ಕೂಡಲೇ ನೂಹ್ ಹೀಗೆಂದರು; "ಓ ನನ್ನ ಪ್ರಭೂ, ನನಗೆ ತಿಳಿದಿಲ್ಲದಿರುವುದನ್ನು ನಿನ್ನಿಂದ ಬೇಡುವುದರ ಬಗ್ಗೆ ನಾನು ನಿನ್ನ ಅಭಯ ಯಾಚಿಸುತ್ತೇನೆ.[18] ನೀನು ನನ್ನನ್ನು ಕ್ಷಮಿಸದಿದ್ದರೆ ಹಾಗೂ ನನ್ನ ಮೇಲೆ ದಯೆ ತೋರದಿದ್ದರೆ ನಾನು ನಷ್ಟ ಹೊಂದುವವರಲ್ಲಾಗುವೆನು."

قِيلَ يَا نُوحُ اهْبِطْ بِسَلَامٍ مِّنَّا وَبَرَكَاتٍ عَلَيْكَ وَعَلَىٰ أُمَمٍ مِّمَّن مَّعَكَ ۚ وَأُمَمٌ سَنُمَتِّعُهُمْ ثُمَّ يَمَسُّهُم مِّنَّا عَذَابٌ أَلِيمٌ ﴿٤٨﴾

48. ಅಪ್ಪಣೆಯಾಯಿತು, "ಓ ನೂಹ್, ಇಳಿದು ಬಿಡು. ನಿನ್ನ ಮೇಲೆ ಮತ್ತು ನಿನ್ನೊಂದಿಗಿರುವ ಸಮುದಾಯಗಳ ಮೇಲೆ ನಮ್ಮ ಕಡೆಯಿಂದ ಶಾಂತಿ ಮತ್ತು ಸಮೃದ್ಧಿಗಳಿವೆ. ಕೆಲವು ಸಮು ದಾಯಗಳಿಗೆ ಸ್ವಲ್ಪ ಕಾಲದ ವರೆಗೆ ಜೀವನ ಸಾಧನಗಳನ್ನು ನೀಡುವೆವು. ಅನಂತರ ಅವರಿಗೆ ನಮ್ಮ ಕಡೆಯಿಂದ ವೇದನಾಯುಕ್ತ ಯಾತನೆ ತಲುಪುವುದು."

تِلْكَ مِنْ أَنبَاءِ الْغَيْبِ نُوحِيهَا إِلَيْكَ ۖ مَا كُنتَ تَعْلَمُهَا أَنتَ وَلَا قَوْمُكَ مِن قَبْلِ هَٰذَا ۖ فَاصْبِرْ ۖ إِنَّ الْعَاقِبَةَ لِلْمُتَّقِينَ ﴿٤٩﴾

49. ಓ ಪೈಗಂಬರರೇ, ನಿಮಗೆ 'ದಿವ್ಯವಾಣಿಯ' ಮೂಲಕ ಕೊಡುತ್ತಿರುವ ಅದೃಶ್ಯದ ವರ್ತಮಾನಗಳಿವು. ಇದಕ್ಕೆ ಮುಂಚೆ ಇವುಗಳನ್ನು ನೀವಾಗಲಿ ನಿಮ್ಮ ಜನಾಂಗವಾಗಲಿ ಅರಿತಿರಲಿಲ್ಲ. ಆದುದರಿಂದ ತಾಳ್ಮೆ ವಹಿಸಿರಿ. ಅಂತಿಮ ಪರಿಣಾಮವಂತು 'ಧರ್ಮನಿಷ್ಠರ' ಪರವಾಗಿಯೇ ಇದೆ.[19]

17. ಇದು ಹೇಗೆಂದರೆ, ಒಬ್ಬ ವ್ಯಕ್ತಿಯ ಶರೀರದ ಯಾವುದಾದರೊಂದು ಅಂಗ ಕೊಳೆತು ಹೋಗಿದ್ದು ಡಾಕ್ಟರರು ಅದನ್ನು ಕತ್ತರಿಸಿ ಎಸೆಯುವ ತೀರ್ಮಾನ ಮಾಡಿದ್ದರೆ, ರೋಗಿಯು ವೈದ್ಯರೊಡನೆ, "ಇದು ನನ್ನ ದೇಹದ ಒಂದು ಅಂಗವಾಗಿದೆ. ಇದನ್ನೇಕೆ ಕತ್ತರಿಸುತ್ತೀರಿ?" ಎಂದು ಕೇಳುತ್ತಾನೆ. ಆಗ ವೈದ್ಯರು, "ಇದು ನಿಮ್ಮ ದೇಹದ ಅಂಗವಾಗಿ ಉಳಿದಿಲ್ಲ. ಏಕೆಂದರೆ ಇದು ಕೊಳೆತು ಹೋಗಿದೆ" ಎಂದು ಉತ್ತರಿಸುತ್ತಾರೆ. ಓರ್ವ ಸಚ್ಚರಿತ ತಂದೆಯೊಂದಿಗೆ ಅವರ ಅಯೋಗ್ಯ ಪುತ್ರನ ಕುರಿತು, "ಅವನೊಂದು ಕೆಟ್ಟು ಹೋದ ಕಾರ್ಯ" ಎಂದು ಹೇಳುವುದೂ ಇದೇ ಅರ್ಥದಲ್ಲಾಗಿದೆ. ಅಂದರೆ ಅವನ ಪರಿಪಾಲನೆಗಾಗಿ ನೀವು ಮಾಡಿದ ಶ್ರಮವೆಲ್ಲಾ ವ್ಯರ್ಥವಾಯಿತು, ಕೆಲಸ ಕೆಟ್ಟು ಹೋಯಿತು ಎಂದಾಗಿದೆ.

18. ಅರ್ಥಾತ್- ಯಾವುದು ಸರಿಯಾದುದೆಂದು ತನಗೆ ತಿಳಿದಿಲ್ಲವೋ ಅಂತಹ ಬೇಡಿಕೆಯನ್ನು ಮುಂದಿರಿಸುವುದು.

19. ಅರ್ಥಾತ್- ಕಟ್ಟಕಡೆಗೆ ನೂಹ್(ಅ) ಮತ್ತು ಅವರ ಸಂಗಡಿಗರೇ ಯಶಸ್ವಿಯಾದಂತೆ, ನೀವು ಮತ್ತು ನಿಮ್ಮ ಸಂಗಾತಿಗಳೂ

50. ನಾವು 'ಆದ್' ಜನಾಂಗದೆಡೆಗೆ ಅವರ ಬಂಧು ಹೂದರನ್ನು ಕಳುಹಿಸಿದೆವು. ಅವರು ಹೀಗೆಂದರು, "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯನಿಲ್ಲ. ನೀವು ಕೇವಲ ಸುಳ್ಳು ಸೃಷ್ಟನೆ ಮಾಡಿ ಕೊಂಡಿರುತ್ತೀರಿ.

وَإِلَىٰ عَادٍ أَخَاهُمْ هُودًا ۚ قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ ۖ إِنْ أَنتُمْ إِلَّا مُفْتَرُونَ ﴿٥٠﴾

51. ಓ ನನ್ನ ಜನಾಂಗ ಬಾಂಧವರೇ, ಈ ಕಾರ್ಯಕ್ಕಾಗಿ ನಾನು ನಿಮ್ಮಿಂದೇನೂ ಪ್ರತಿಫಲ ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ನನ್ನನ್ನು ಸೃಷ್ಟಿಸಿದವನ ಬಳಿ ಇದೆ. ನೀವು ಕೊಂಚವೂ ವಿವೇಚಿಸು ವುದಿಲ್ಲವೇ?

يَا قَوْمِ لَا أَسْأَلُكُمْ عَلَيْهِ أَجْرًا ۖ إِنْ أَجْرِيَ إِلَّا عَلَى الَّذِي فَطَرَنِي ۚ أَفَلَا تَعْقِلُونَ ﴿٥١﴾

52. ಓ ನನ್ನ ಜನಾಂಗ ಬಾಂಧವರೇ, ನಿಮ್ಮ ಪ್ರಭುವಿನೊಡನೆ ಕ್ಷಮೆ ಯಾಚಿಸಿರಿ ಮತ್ತು ಪಶ್ಚಾತ್ತಾಪ ಪಟ್ಟು ಆತನ ಕಡೆಗೆ ಮರಳಿರಿ. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಕಾರವಾಗಿ ಮಳೆ ಸುರಿಸುವನು ಮತ್ತು ನಿಮ್ಮ ಈಗಿನ ಶಕ್ತಿಗೆ ಇನ್ನಷ್ಟು ಶಕ್ತಿಯನ್ನು ವರ್ಧಿಸಿ ಕೊಡುವನು. ಅಪರಾಧಿಗಳಾಗಿ (ದಾಸ್ಯ-ಆರಾಧನೆಯಿಂದ) ವಿಮುಖರಾಗಬೇಡಿರಿ.

وَيَا قَوْمِ اسْتَغْفِرُوا رَبَّكُمْ ثُمَّ تُوبُوا إِلَيْهِ يُرْسِلِ السَّمَاءَ عَلَيْكُم مِّدْرَارًا وَيَزِدْكُمْ قُوَّةً إِلَىٰ قُوَّتِكُمْ وَلَا تَتَوَلَّوْا مُجْرِمِينَ ﴿٥٢﴾

53. ಅವರು (ಹೀಗೆ) ಉತ್ತರ ಕೊಟ್ಟರು, "ಓ ಹೂದ್, ನೀವು ನಮ್ಮ ಬಳಿಗೆ ಪ್ರತ್ಯಕ್ಷ ಪ್ರಮಾಣ ತರಲಿಲ್ಲ. ನಿಮ್ಮ ಮಾತನ್ನು ಕೇಳಿ ನಾವು ನಮ್ಮ ಪೂಜ್ಯರನ್ನು ತ್ಯಜಿಸಲಾರೆವು ಮತ್ತು ನಿಮ್ಮ ಮೇಲೆ ವಿಶ್ವಾಸವಿಡಲಾರೆವು.

قَالُوا يَا هُودُ مَا جِئْتَنَا بِبَيِّنَةٍ وَمَا نَحْنُ بِتَارِكِي آلِهَتِنَا عَن قَوْلِكَ وَمَا نَحْنُ لَكَ بِمُؤْمِنِينَ ﴿٥٣﴾

54. ನಿಮ್ಮ ಮೇಲೆ ನಮ್ಮ ಆರಾಧ್ಯರುಗಳ ಪೈಕಿ ಯಾರದೋ ಶಾಪ ಬಿದ್ದಿದೆಯೆಂದು ನಾವು ತಿಳಿಯುತ್ತೇವೆ"[20] ಹೂದ್ ಹೇಳಿದರು: "ನಾನು ಅಲ್ಲಾಹನ ಸಾಕ್ಷ್ಯವನ್ನು ಮುಂದಿರಿಸುತ್ತೇನೆ. ನೀವು ಅಲ್ಲಾಹನ ಹೊರತು ದೇವತ್ವದಲ್ಲಿ ಭಾಗೀದಾರರನ್ನಾಗಿಸಿಕೊಂಡಿ ರುವ ಇತರರಿಂದ ನಾನು ಮುಕ್ತನಾಗಿದ್ದೇನೆಂಬ ಬಗ್ಗೆ ನೀವು ಸಾಕ್ಷಿಯಾಗಿರಿ.

إِن نَّقُولُ إِلَّا اعْتَرَاكَ بَعْضُ آلِهَتِنَا بِسُوءٍ ۗ قَالَ إِنِّي أُشْهِدُ اللَّهَ وَاشْهَدُوا أَنِّي بَرِيءٌ مِّمَّا تُشْرِكُونَ ﴿٥٤﴾

ಜಯಶೀಲರಾಗುವಿರಿ. ಆದ್ದರಿಂದ ಈ ಸಂದರ್ಭದಲ್ಲಿ ನೀವು ಯಾವ ಸಂಕಷ್ಟ ಮತ್ತು ಯಾತನೆಗಳನ್ನು ಎದುರಿಸುತ್ತಿರುವಿರೋ ಆ ಬಗ್ಗೆ ವ್ಯಾಕುಲ ಚಿತ್ತರಾಗದಿರಿ. ಧೈರ್ಯ ಮತ್ತು ತಾಳ್ಮೆಯಿಂದ ನಿಮ್ಮ ಕೆಲಸವನ್ನು ಮುಂದುವರಿಸಿರಿ.

20. ಅರ್ಥಾತ್- ನೀನು ಯಾವುದಾದರೂ ದೇವಿ-ದೇವತೆ ಅಥವಾ ಮಹಾಪುರುಷರ ಸನ್ನಿಧಿಯಲ್ಲಿ ಅಗೌರವ ತೋರಿರಬಹುದು. ಅದರ ಪರಿಣಾಮವನ್ನೇ ನೀನೀಗ ಅನುಭವಿಸುತ್ತಿರುವೆ. ಆದ್ದರಿಂದಲೇ ಏನೇನೋ ಅಸಂಬದ್ಧ ಮಾತನಾಡಲು ತೊಡಗಿರುವೆ. ನಿನ್ನೆಯ ತನಕ ನೀನು ಘನತೆ ಗೌರವಗಳೊಂದಿಗೆ ವಾಸಿಸುತ್ತಿದ್ದ ಪ್ರದೇಶಗಳಲ್ಲಿ ನಿನಗೆ ಬೈಗುಳ ಮತ್ತು ಕಲ್ಲೇಟುಗಳ ಆತಿಥ್ಯ ನೀಡಲಾಗುತ್ತಿದೆ.

55. ನೀವೆಲ್ಲರೂ ಸೇರಿ ನನ್ನ ವಿರುದ್ಧ ಕಾರ್ಯಾಚರಣೆಯಲ್ಲಿ ಯಾವುದೇ ಕೊರತೆ ಮಾಡಬೇಡಿರಿ ಮತ್ತು ನನಗೆ ಕಿಂಚಿತ್ತೂ ಕಾಲಾವಕಾಶ ಕೊಡಬೇಡಿರಿ.

مِنْ دُوْنِهٖ فَكِيْدُوْنِيْ جَمِيْعًا ثُمَّ لَا تُنْظِرُوْنِ ﴿٥٥﴾

56. ನಾನು, ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ಮೇಲೆ ಭರವಸೆ ಇಟ್ಟಿದ್ದೇನೆ. ಅವನ ಕೈಯಲ್ಲಿ ಅದರ ಜುಟ್ಟಿಲ್ಲದ ಯಾವ ಜೀವಿಯೂ ಇಲ್ಲ. ನಿಶ್ಚಯವಾಗಿಯೂ ನನ್ನ ಪ್ರಭು ನೇರಮಾರ್ಗದಲ್ಲಿದ್ದಾನೆ.

اِنِّيْ تَوَكَّلْتُ عَلَى اللّٰهِ رَبِّيْ وَرَبِّكُمْ ؕ مَا مِنْ دَآبَّةٍ اِلَّا هُوَ اٰخِذٌۢ بِنَاصِيَتِهَا ؕ اِنَّ رَبِّيْ عَلٰى صِرَاطٍ مُّسْتَقِيْمٍ ﴿٥٦﴾

57. ನೀವು ವಿಮುಖರಾಗುವುದಾದರೆ ಆಗಿರಿ. ನಾನು ಯಾವ ಸಂದೇಶವನ್ನು ಕೊಟ್ಟು ನಿಮ್ಮ ಬಳಿಗೆ ಕಳುಹಿಸಲ್ಪಟ್ಟಿದ್ದೆನೋ ಅದನ್ನು ನಾನು ನಿಮಗೆ ತಲುಪಿಸಿಬಿಟ್ಟಿದ್ದೇನೆ. ಇನ್ನು ನನ್ನ ಪ್ರಭು ನಿಮ್ಮ ಸ್ಥಾನದಲ್ಲಿ ಇನ್ನೊಂದು ಜನಾಂಗವನ್ನು ಎಬ್ಬಿಸುವನು. ನೀವು ಅವನಿಗೆ ಯಾವ ಹಾನಿಯನ್ನೂ ಮಾಡಲಾರಿರಿ. ನಿಶ್ಚಯ ವಾಗಿಯೂ ನನ್ನ ಪ್ರಭು ಸಕಲ ವಸ್ತುಗಳ ಸಂರಕ್ಷಕನು."

فَاِنْ تَوَلَّوْا فَقَدْ اَبْلَغْتُكُمْ مَّآ اُرْسِلْتُ بِهٖۤ اِلَيْكُمْ ؕ وَيَسْتَخْلِفُ رَبِّيْ قَوْمًا غَيْرَكُمْ ۚ وَلَا تَضُرُّوْنَهٗ شَيْـًٔا ؕ اِنَّ رَبِّيْ عَلٰى كُلِّ شَيْءٍ حَفِيْظٌ ﴿٥٧﴾

58. ಅನಂತರ ನಮ್ಮ ಆಜ್ಞೆ ಬಂದಾಗ ನಾವು ನಮ್ಮ ಕೃಪೆಯಿಂದ ಹೂದರನ್ನೂ ಅವರ ಮೇಲೆ ವಿಶ್ವಾಸವಿರಿಸಿದವರನ್ನೂ ರಕ್ಷಿಸಿದೆವು ಮತ್ತು ಒಂದು ಕಠಿಣ ಶಿಕ್ಷೆಯಿಂದ ಅವರನ್ನು ಪಾರುಗೊಳಿಸಿದೆವು.

وَلَمَّا جَآءَ اَمْرُنَا نَجَّيْنَا هُوْدًا وَّالَّذِيْنَ اٰمَنُوْا مَعَهٗ بِرَحْمَةٍ مِّنَّا ۚ وَنَجَّيْنٰهُمْ مِّنْ عَذَابٍ غَلِيْظٍ ﴿٥٨﴾

59. ಇವರೇ ಆದ್ ಜನಾಂಗದವರು. ಇವರು ತಮ್ಮ ಪ್ರಭುವಿನ ನಿದರ್ಶನಗಳನ್ನು ನಿರಾಕರಿಸಿದರು, ಅವರು ರಸೂಲರನ್ನು ಧಿಕ್ಕರಿಸಿ ದರು. ಪ್ರತಿಯೊಬ್ಬ ಮದೋನ್ಮತ್ತ ಸತ್ಯ ವಿರೋಧಿಯನ್ನು ಅನುಸರಿಸುತ್ತ ಸಾಗಿದರು.

وَتِلْكَ عَادٌ ۟ۙ جَحَدُوْا بِاٰيٰتِ رَبِّهِمْ وَعَصَوْا رُسُلَهٗ وَاتَّبَعُوْۤا اَمْرَ كُلِّ جَبَّارٍ عَنِيْدٍ ﴿٥٩﴾

60. ಕಟ್ಟಕಡೆಗೆ ಇಹಲೋಕದಲ್ಲಿಯೂ ಅವರು ಶಾಪಗ್ರಸ್ತರಾದರು ಮತ್ತು ಪುನರುತ್ಥಾನದಂದೂ ಆ ಶಾಪ ಅವರನ್ನು ಹಿಂಬಾಲಿಸು ವುದು. ಕೇಳಿರಿ! ಆದ್ ಜನಾಂಗವು ತನ್ನ ಪ್ರಭುವನ್ನು ನಿರಾಕರಿಸಿತು. ಕೇಳಿರಿ! ಹೂದ್‌ರ ಜನಾಂಗದವರಾದ ಆದ್ ದೂರಕ್ಕೆ ಎಸೆಯಲ್ಪಟ್ಟರು.

وَاُتْبِعُوْا فِيْ هٰذِهِ الدُّنْيَا لَعْنَةً وَّيَوْمَ الْقِيٰمَةِ ؕ اَلَاۤ اِنَّ عَادًا كَفَرُوْا رَبَّهُمْ ؕ اَلَا بُعْدًا لِّعَادٍ قَوْمِ هُوْدٍ ﴿٦٠﴾

61. ನಾವು ಸಮೂದರ ಕಡೆಗೆ ಅವರ ಬಂಧು ಸಾಲಿಹರನ್ನು ಕಳುಹಿಸಿದೆವು. ಅವರು (ಹೀಗೆ) ಹೇಳಿದರು: "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯನಿಲ್ಲ. ಅವನೇ ನಿಮ್ಮನ್ನು

وَاِلٰى ثَمُوْدَ اَخَاهُمْ صٰلِحًا ۘ قَالَ يٰقَوْمِ اعْبُدُوا اللّٰهَ مَا لَكُمْ مِّنْ اِلٰهٍ غَيْرُهٗ ؕ هُوَ اَنْشَاَكُمْ مِّنَ الْاَرْضِ وَاسْتَعْمَرَكُمْ

ಭೂಮಿಯಿಂದ ಸೃಷ್ಟಿಸಿದನು ಮತ್ತು ಇಲ್ಲಿ ನೆಲೆಗೊಳಿಸಿದನು. ಆದುದರಿಂದ ನೀವು ಅವನೊಡನೆ ಕ್ಷಮೆ ಯಾಚಿಸಿರಿ ಮತ್ತು ಪಶ್ಚಾತ್ತಾಪ ಪಟ್ಟು ಆತನೆಡೆಗೆ ಮರಳಿರಿ. ನಿಶ್ಚಯವಾಗಿಯೂ ನನ್ನ ಪ್ರಭು ನಿಕಟನೂ ಪ್ರಾರ್ಥನೆಗಳಿಗೆ ಉತ್ತರ ಕೊಡುವವನೂ ಆಗಿರುತ್ತಾನೆ."[21]

فِيهَا فَاسْتَغْفِرُوهُ ثُمَّ تُوبُوٓا۟ إِلَيْهِ ۚ إِنَّ رَبِّى قَرِيبٌ مُّجِيبٌ ۝

62. ಅವರು ಹೀಗೆ ಹೇಳಿದರು; "ಓ ಸಾಲಿಹ್, ಇದಕ್ಕಿಂತ ಮುಂಚೆ ನಾವು ನಿಮ್ಮಿಂದ ಬಹಳಷ್ಟು ನಿರೀಕ್ಷಿಸಿದ್ದೆವು. ನಮ್ಮ ಪೂರ್ವಿಕರು ಪೂಜಿಸಿಕೊಂಡಿದ್ದವುಗಳನ್ನು ಪೂಜಿಸುವುದರಿಂದ ನೀವು ನಮ್ಮನ್ನು ತಡೆಯುತ್ತೀರಾ? ನೀವು ಯಾವ ದಾರಿಗೆ ನಮ್ಮನ್ನು ಕರೆಯು ತ್ತೀರೋ ಅದರ ಬಗ್ಗೆ ನಮಗೆ ದೊಡ್ಡ ಸಂದೇಹವಿದೆ. ಅದು ನಮ್ಮನ್ನು ಸಂಶಯಕ್ಕೊಳಪಡಿಸಿದೆ."

قَالُوا۟ يَٰصَٰلِحُ قَدْ كُنتَ فِينَا مَرْجُوًّا قَبْلَ هَٰذَآ ۖ أَتَنْهَىٰنَآ أَن نَّعْبُدَ مَا يَعْبُدُ ءَابَآؤُنَا وَإِنَّنَا لَفِى شَكٍّ مِّمَّا تَدْعُونَآ إِلَيْهِ مُرِيبٍ ۝

63. ಸಾಲಿಹ್ ಹೀಗೆಂದರು, "ಓ ನನ್ನ ಜನಾಂಗ ಬಾಂಧವರೇ, ನಾನು ನನ್ನ ಪ್ರಭುವಿನ ಕಡೆಯಿಂದ ಸುವ್ಯಕ್ತ ಪ್ರಮಾಣವನ್ನಿರಿಸಿ ಕೊಂಡಿದ್ದರೆ ಹಾಗೂ ಅವನು ತನ್ನ ಕೃಪೆಯನ್ನೂ ನನಗೆ ದಯ ಪಾಲಿಸಿದ್ದರೆ, ಆ ಬಳಿಕ ನಾನು ಅವನ ಆಜ್ಞೋಲ್ಲಂಘನೆ ಮಾಡಿ ದರೆ, ನನ್ನನ್ನು ಅಲ್ಲಾಹನ ಹಿಡಿತದಿಂದ ರಕ್ಷಿಸುವವರಾರು? ನೀವು ಇದರ ಬಗ್ಗೆ ವಿವೇಚಿಸಿದಿರಾ? ನೀವು ನನ್ನನ್ನು ಇನ್ನಷ್ಟು ನಷ್ಟಕ್ಕೆ ಗುರಿಪಡಿಸುವಿರೇ ವಿನಾ ಇನ್ನೇನು ಮಾಡಬಲ್ಲಿರಿ?

قَالَ يَٰقَوْمِ أَرَءَيْتُمْ إِن كُنتُ عَلَىٰ بَيِّنَةٍ مِّن رَّبِّى وَءَاتَىٰنِى مِنْهُ رَحْمَةً فَمَن يَنصُرُنِى مِنَ ٱللَّهِ إِنْ عَصَيْتُهُۥ ۖ فَمَا تَزِيدُونَنِى غَيْرَ تَخْسِيرٍ ۝

64. ಓ ನನ್ನ ಜನಾಂಗ ಬಾಂಧವರೇ, ಇದೋ ಅಲ್ಲಾಹನ ಈ

وَيَٰقَوْمِ هَٰذِهِۦ نَاقَةُ ٱللَّهِ لَكُمْ ءَايَةً

21. ಈ ಸಂಕ್ಷಿಪ್ತವಾದ ಸೂಕ್ತದ ಮೂಲಕ ಹ. ಸಾಲಿಹ್(ಅ) ಅವರು ಬಹುದೇವಾರಾಧನೆಯ ಎಲ್ಲಾ ವ್ಯವಹಾರಗಳ ಬುಡವನ್ನೇ ಕಿತ್ತೆಸೆದಿದ್ದಾರೆ. ಸರ್ವಲೋಕ ಪರಿಪಾಲಕನ ಪವಿತ್ರ ಸನ್ನಿಧಿ ಜನಸಾಮಾನ್ಯರಿಗೆ ಎಟುಕುವುದಿಲ್ಲ ಎಂದು ಬಹುದೇವಾರಾಧಕರು ಭಾವಿಸುತ್ತಾರೆ. ಕೆಲವು ಚಾಣಾಕ್ಷಮತಿಗಳು ಆ ರೀತಿಯ ಭಾವನೆಯನ್ನು ಮೂಡಿಸಲು ಪ್ರಯತ್ನಿಸಿದ್ದಾರೆ ಕೂಡ. ಅವನ ಸನ್ನಿಧಿಗೆ ಸಾಮಾನ್ಯ ವ್ಯಕ್ತಿಯೊಬ್ಬ ಹೇಗೆ ತಲಪಿಯಾನು. ಪವಿತ್ರ ಆತ್ಮಗಳ ಮಧ್ಯಸ್ಥಿಕೆ ಇಲ್ಲದೆ ಅಥವಾ ಬಲಿ, ಹರಕೆ ಮತ್ತು ಬೇಡಿಕೆಗಳನ್ನು ಮೇಲಿನ ತನಕ ತಲಪಿಸುವ ತಂತ್ರವನ್ನು ಬಲ್ಲ ಧರ್ಮದ ಪೀಠಾಧಿಪತಿಗಳ ನೆರವು ಪಡೆಯದೆ ದೇವ ಸನ್ನಿಧಿಗೆ ಪ್ರಾರ್ಥನೆ ತಲಪಿ ಅಲ್ಲಿಂದ ಉತ್ತರ ದೊರೆಯಲು ಯಾವ ರೀತಿಯಿಂದಲೂ ಸಾಧ್ಯವಲ್ಲ ಎಂದು ಮಂದಟ್ಟು ಮಾಡಿಸಲು ಅವರು ಪ್ರಯತ್ನಿಸಿದ್ದಾರೆ. ಇಂತಹ ತಪ್ಪುಕಲ್ಪನೆಗಳೇ ದಾಸ ಮತ್ತು ದೇವನ ನಡುವೆ ಸಣ್ಣ ದೊಡ್ಡ ಆರಾಧ್ಯರುಗಳು ಮತ್ತು ಶಿಫಾರಸುದಾರರ ಒಂದು ದೊಡ್ಡ ಕೂಟವನ್ನೇ ನಿರ್ಮಿಸಿವೆ. ಹ. ಸಾಲಿಹ್(ಅ) ಅಜ್ಞಾನಜನ್ಯವಾದ ಈ ಮಾಯಾಜಾಲವನ್ನು ಎರಡೇ ಮಾತುಗಳ ಮೂಲಕ ಕಡಿದು ಹಾಕುತ್ತಾರೆ. ಮೊದಲನೆಯದಾಗಿ, ಅಲ್ಲಾಹನು ಸಮೀಪವಿದ್ದಾನೆ. ಅರ್ಥಾತ್ ಅವನು ನಿಮ್ಮಿಂದ ದೂರದಲ್ಲಿದ್ದಾನೆ ಎಂಬ ನಿಮ್ಮ ಭಾವನೆ ತಪ್ಪಾಗಿದೆ. ಹಾಗೆಯೇ ನೇರವಾಗಿ ಅವನನ್ನು ಕರೆದು ನಿಮ್ಮ ಪ್ರಾರ್ಥನೆಗಳಿಗೆ ಉತ್ತರವನ್ನು ಪಡೆಯಲಾರಿರಿ ಎಂಬ ನಿಮ್ಮ ಭಾವನೆಯೂ ಸರಿಯಲ್ಲ. ನಿಮ್ಮಲ್ಲಿ ಪ್ರತಿಯೊಬ್ಬನೂ ತನ್ನ ಬಳಿಯೇ ದೇವನನ್ನು ಪಡೆಯಬಹುದು. ಅವನೊಡನೆ ಮೊರೆಯಿಡಬಹುದು. ತನ್ನ ಬೇಡಿಕೆಗಳನ್ನು ನೇರವಾಗಿ ಅವನ ಮುಂದಿರಿಸಬಹುದು. ಪ್ರತಿಯೋರ್ವ ದಾಸನ ಪ್ರಾರ್ಥನೆಗೂ ಅವನು ಸ್ವತಃ ಉತ್ತರವೀಯುತ್ತಾನೆ. ವಿಶ್ವದೊಡೆಯನ ಸನ್ನಿಧಿ ಪ್ರತಿಯೊಬ್ಬನ ಪಾಲಿಗೂ ತೆರೆದಿರುವಾಗ ಮತ್ತು ಅದು ಪ್ರತಿಯೊಬ್ಬನಿಗೂ ಹತ್ತಿರದಲ್ಲಿರುವಾಗ ನೀವೇಕೆ ಅಜ್ಞಾನದಲ್ಲಿ ಬಿದ್ದುಕೊಂಡಿರುವಿರಿ ಮತ್ತು ಮಧ್ಯವರ್ತಿಗಳನ್ನೂ ಶಿಫಾರಸುದಾರರನ್ನೂ ಹುಡುಕುತ್ತಾ ಯಾಕೆ ತಿರುಗುತ್ತಿರುವಿರಿ.

فَذَرُوهَا تَأْكُلْ فِي أَرْضِ اللَّهِ وَلَا تَمَسُّوهَا بِسُوءٍ فَيَأْخُذَكُمْ عَذَابٌ قَرِيبٌ ﴿٦٤﴾

ಒಂಟೆಯು ನಿಮಗೊಂದು ನಿದರ್ಶನವಾಗಿದೆ. ಇದನ್ನು ಅಲ್ಲಾಹನ ಭೂಮಿಯಲ್ಲಿ ಸ್ವತಂತ್ರವಾಗಿ ಮೇಯಲು ಬಿಡಿರಿ. ದುರುದ್ದೇಶ ಪೂರ್ವಕವಾಗಿ ಅದನ್ನು ಸಮೀಪಿಸಬೇಡಿರಿ. ಅನ್ಯಥಾ ಕೂಡಲೇ ನಿಮ್ಮ ಮೇಲೆ ಅಲ್ಲಾಹನ ಯಾತನೆ ಎರಗಿ ಬಿಡುವುದು."

فَعَقَرُوهَا فَقَالَ تَمَتَّعُوا فِي دَارِكُمْ ثَلَاثَةَ أَيَّامٍ ۖ ذَٰلِكَ وَعْدٌ غَيْرُ مَكْذُوبٍ ﴿٦٥﴾

65. ಆದರೆ ಅವರು ಅದನ್ನು ಕೊಂದು ಹಾಕಿದರು. ಆಗ ಸಾಲಿಹ್‌ರು ಅವರಿಗೆ, "ನೀವಿನ್ನು ಬರೇ ಮೂರು ದಿನಗಳ ತನಕ ನಿಮ್ಮ ಮನೆಗಳಲ್ಲಿ ಸುಖೋಪಭೋಗಗಳೊಂದಿಗೆ ವಾಸಿಸಿರಿ. ಇದು ಸುಳ್ಳಾಗದಂತಹ ವಾಗ್ದಾನಾವಧಿ" ಎಂದು ಅವರಿಗೆ ಎಚ್ಚರಿಸಿದರು.

فَلَمَّا جَاءَ أَمْرُنَا نَجَّيْنَا صَالِحًا وَالَّذِينَ آمَنُوا مَعَهُ بِرَحْمَةٍ مِّنَّا وَمِنْ خِزْيِ يَوْمِئِذٍ ۗ إِنَّ رَبَّكَ هُوَ الْقَوِيُّ الْعَزِيزُ ﴿٦٦﴾

66. ಕೊನೆಗೆ ನಮ್ಮ ತೀರ್ಮಾನದ ಸಮಯ ಬಂದೊಡನೆ ನಾವು ನಮ್ಮ ಕೃಪೆಯಿಂದ ಸಾಲಿಹರನ್ನೂ ಅವರ ಮೇಲೆ ವಿಶ್ವಾಸ ವಿಟ್ಟವರನ್ನೂ ರಕ್ಷಿಸಿದೆವು ಮತ್ತು ಆ ದಿನದ ಅಪಮಾನದಿಂದ ಅವರನ್ನು ಕಾಪಾಡಿದೆವು. ನಿಶ್ಚಯವಾಗಿಯೂ ನಿಮ್ಮ ಪ್ರಭುವೇ ಪ್ರಬಲನೂ ಅಜೇಯನೂ ಆಗಿರುತ್ತಾನೆ.

وَأَخَذَ الَّذِينَ ظَلَمُوا الصَّيْحَةُ فَأَصْبَحُوا فِي دِيَارِهِمْ جَاثِمِينَ ﴿٦٧﴾

67. ಅಕ್ರಮವೆಸಗಿದವರನ್ನು ಒಂದು ಮಹಾ ಸ್ಫೋಟವು ಆವರಿಸಿತು ಮತ್ತು ಅವರು ಹಿಂದೆಂದೂ ಅಲ್ಲಿ ವಾಸಿಸಿರಲೇ ಇಲ್ಲವೋ ಎಂಬಂತೆ ನಿಶ್ಚಲರಾಗಿ ಇದ್ದಲ್ಲೇ ಸತ್ತುಬಿದ್ದರು.

كَأَن لَّمْ يَغْنَوْا فِيهَا ۗ أَلَا إِنَّ ثَمُودَ كَفَرُوا رَبَّهُمْ ۗ أَلَا بُعْدًا لِّثَمُودَ ﴿٦٨﴾

68. ಕೇಳಿರಿ! ಸಮೂದರು ತಮ್ಮ ಪ್ರಭುವನ್ನು ನಿಷೇಧಿಸಿದರು. ಕೇಳಿರಿ! ಸಮೂದ್ ಕಿತ್ತೆಸೆಯಲ್ಪಟ್ಟರು.

وَلَقَدْ جَاءَتْ رُسُلُنَا إِبْرَاهِيمَ بِالْبُشْرَىٰ قَالُوا سَلَامًا ۖ قَالَ سَلَامٌ ۖ فَمَا لَبِثَ أَن جَاءَ بِعِجْلٍ حَنِيذٍ ﴿٦٩﴾

69. ನಮ್ಮ ದೂತರು (ದೇವಚರರು) ಇಬ್‌ರಾಹೀಮರ ಬಳಿ ಸುವಾರ್ತೆಯೊಂದಿಗೆ ಬಂದರು. ನಿಮಗೆ ಸಲಾಮ್ ಎಂದರು. ಇಬ್‌ರಾಹೀಮರು ನಿಮಗೂ ಸಲಾಮ್ ಎಂದರು. ತರುವಾಯ ಅವರು ತುಸು ಹೊತ್ತಿನಲ್ಲೇ ಒಂದು ಹುರಿದ ಕರುವನ್ನು ತಂದು ಅವರ ಭೋಜನಕ್ಕಾಗಿ ಮುಂದಿಟ್ಟರು.[22]

فَلَمَّا رَأَىٰ أَيْدِيَهُمْ لَا تَصِلُ إِلَيْهِ نَكِرَهُمْ وَأَوْجَسَ مِنْهُمْ خِيفَةً ۚ قَالُوا

70. ಆದರೆ ಅವರ ಕೈಗಳು ಆಹಾರದ ಕಡೆಗೆ ಚಲಿಸದಿರುವುದನ್ನು ಕಂಡಾಗ[23] ಅವರು ಅತಿಥಿಗಳ ಬಗ್ಗೆ ಸಂದೇಹಕ್ಕೊಳಗಾದರು

22. ದೇವಚರರು ಹ. ಇಬ್‌ರಾಹೀಮ್‌ರ(ಅ) ಬಳಿಗೆ ಮಾನವರ ರೂಪದಲ್ಲಿ ತಲಪಿದ್ದರು ಎಂದು ಇದರಿಂದ ವ್ಯಕ್ತವಾಗುತ್ತದೆ. ಮೊದಲು ಅವರು ತಮ್ಮನ್ನು ಪರಿಚಯಪಡಿಸಿಕೊಳ್ಳಲಿಲ್ಲ. ಆದ್ದರಿಂದ ಇಬ್‌ರಾಹೀಮ್(ಅ) ಇವರು ಅಪರಿಚಿತ ಅತಿಥಿಗಳಾಗಿರಬಹುದು ಎಂದು ಭಾವಿಸಿ, ಬಂದ ಕೂಡಲೇ ಅವರಿಗೆ ಆತಿಥ್ಯದ ವ್ಯವಸ್ಥೆ ಮಾಡಿದರು.

23. ಇದರಿಂದ ಇಬ್‌ರಾಹೀಮ್‌ರಿಗೆ(ಅ) ಇವರು ದೇವಚರರಾಗಿದ್ದಾರೆ ಎಂದು ತಿಳಿಯಿತು.

ಮತ್ತು ಮನಸ್ಸಿನೊಳಗೇ ಅವರ ಬಗ್ಗೆ ಹೆದರಿದರು. ಅವರು ಹೀಗೆಂದರು; "ಹೆದರಬೇಡಿರಿ, ನಾವು ಲೂತರ ಜನಾಂಗದ ಕಡೆಗೆ ಕಳುಹಿಸಲ್ಪಟ್ಟವರು."

لَا تَخَفْ إِنَّا أُرْسِلْنَا إِلَىٰ قَوْمِ لُوطٍ ۝٧٠

71. ಇಬ್‌ರಾಹೀಮರ ಪತ್ನಿಯೂ (ಅಲ್ಲೇ) ನಿಂತಿದ್ದರು. ಅವರು ಇದನ್ನು ಕೇಳಿ ನಕ್ಕು ಬಿಟ್ಟರು. ಅನಂತರ ನಾವು ಆಕೆಗೆ ಇಸ್‌ಹಾಕ್ ಮತ್ತು ಇಸ್‌ಹಾಕರ ತರುವಾಯ ಯಅ್‌ಕೂಬರ ಬಗೆಗೂ ಸುವಾರ್ತೆ ನೀಡಿದೆವು.

وَامْرَأَتُهُ قَائِمَةٌ فَضَحِكَتْ فَبَشَّرْنَاهَا بِإِسْحَاقَ وَمِن وَرَاءِ إِسْحَاقَ يَعْقُوبَ ۝٧١

72. ಅವರು (ಅರ್ಥಾತ್ ಇಬ್‌ರಾಹೀಮರ ಪತ್ನಿ) ಹೇಳಿದರು: "ಅಕಟ! ನನ್ನ ದೌರ್ಭಾಗ್ಯವೇ,[24] ನಾನು ಹಣ್ಣು ಮುದುಕಿಯೂ ನನ್ನ ಪತಿ ಅತಿ ವೃದ್ಧರೂ ಆಗಿರುವಾಗ ನನ್ನಲ್ಲಿ ಮಕ್ಕಳಾಗುವರೇ? ಇದಂತು ಅತ್ಯಂತ ಸೋಜಿಗದ ವಿಷಯ!"

قَالَتْ يَا وَيْلَتَىٰ أَأَلِدُ وَأَنَا عَجُوزٌ وَهَٰذَا بَعْلِي شَيْخًا ۖ إِنَّ هَٰذَا لَشَيْءٌ عَجِيبٌ ۝٧٢

73. ದೇವಚರರು, "ಅಲ್ಲಾಹನ ಆಜ್ಞೆಯ ಬಗ್ಗೆ ಆಶ್ಚರ್ಯಪಡುತ್ತೀರಾ? ಓ ಇಬ್‌ರಾಹೀಮರ ಮನೆಯವರೇ, ನಿಮ್ಮ ಮೇಲೆ ಅಲ್ಲಾಹನ ದಯೆ ಮತ್ತು ಸಮೃದ್ಧಿಗಳಿವೆ. ನಿಜವಾಗಿಯೂ ಅಲ್ಲಾಹನು ಅತ್ಯಧಿಕ ಸ್ತುತ್ಯರ್ಹನೂ ಮಹಿಮಾವಂತನೂ ಆಗಿರುತ್ತಾನೆ" ಎಂದು ಹೇಳಿದರು.

قَالُوا أَتَعْجَبِينَ مِنْ أَمْرِ اللَّهِ ۖ رَحْمَتُ اللَّهِ وَبَرَكَاتُهُ عَلَيْكُمْ أَهْلَ الْبَيْتِ ۚ إِنَّهُ حَمِيدٌ مَّجِيدٌ ۝٧٣

74. ಹೀಗೆ ಇಬ್‌ರಾಹೀಮರ ಭಯ ನೀಗಿದಾಗ ಮತ್ತು (ಸಂತತಿ ಯುಂಟಾಗಬಹುದೆಂಬ ಶುಭವಾರ್ತೆಯಿಂದ) ಅವರಿಗೆ ಸಂತೋಷ ವಾದಾಗ ಅವರು ನಮ್ಮೊಡನೆ ಲೂತ್ ಜನಾಂಗದ ಕುರಿತು 'ಜಗಳ' ಆರಂಭಿಸಿದರು.[25]

فَلَمَّا ذَهَبَ عَنْ إِبْرَاهِيمَ الرَّوْعُ وَجَاءَتْهُ الْبُشْرَىٰ يُجَادِلُنَا فِي قَوْمِ لُوطٍ ۝٧٤

75. ವಾಸ್ತವದಲ್ಲಿ ಇಬ್‌ರಾಹೀಮರು ಸಹನಶೀಲರೂ ಕೋಮಲ ಹೃದಯಿಯೂ ಎಲ್ಲ ಸ್ಥಿತಿಗಳಲ್ಲೂ ನಮ್ಮ ಕಡೆಗೆ ಒಲಿಯುವವರೂ ಆಗಿದ್ದರು.

إِنَّ إِبْرَاهِيمَ لَحَلِيمٌ أَوَّاهٌ مُّنِيبٌ ۝٧٥

---

24. ಹ. ಸಾರ ಈ ಬಗ್ಗೆ ಸಂತುಷ್ಟರಾಗುವ ಬದಲು ಇದನ್ನು ತನ್ನ ದೌರ್ಭಾಗ್ಯವೆಂದು ಭಾವಿಸಿದ್ದರೆಂದು ಇದರರ್ಥವಲ್ಲ. ಬದಲಾಗಿ ಇದು ಮಹಿಳೆಯರು ಸಾಮಾನ್ಯವಾಗಿ ಆಶ್ಚರ್ಯದ ವೇಳೆ ಹೇಳುವ ಶಬ್ದವಾಗಿದೆ.

25. ಜಗಳ ಎಂಬ ಪದ ಇಲ್ಲಿ ಹ. ಇಬ್‌ರಾಹೀಮ್(ಅ) ತಮ್ಮ ಪ್ರಭುವಿನೊಂದಿಗೆ ಹೊಂದಿದ್ದ ಅತೀವ ಪ್ರೀತ್ಯಾದರದ ಸಂಬಂಧವನ್ನು ವ್ಯಕ್ತಪಡಿಸುತ್ತದೆ. ದೇವ ಮತ್ತು ದಾಸನ ನಡುವೆ ಬಹಳ ಹೊತ್ತಿನ ತನಕ ಮಾತುಕತೆ ಜಾರಿಯಲ್ಲಿರುತ್ತದೆಂಬ ಚಿತ್ರಣ ಈ ಪದದಿಂದ ನಮ್ಮ ಕಣ್ಣಿಗೆ ಕಟ್ಟುತ್ತದೆ. ಹೇಗಾದರೂ ಲೂತ್ ಸಮುದಾಯವನ್ನು ಯಾತನೆಯಿಂದ ಪಾರು ಗೊಳಿಸಬೇಕೆಂದು ದಾಸ ಒತ್ತಾಯಪಡಿಸುತ್ತಾನೆ. ಅದಕ್ಕುತ್ತರವಾಗಿ ದೇವನು, ಈ ಸಮುದಾಯ ಒಳಿತಿನಿಂದ ಸಂಪೂರ್ಣ ಮುಕ್ತವಾಗಿದೆ, ಅವರೊಂದಿಗೆ ಯಾವುದೇ ರೀತಿಯ ರಿಯಾಯಿತಿ ಮಾಡಲಾಗದಷ್ಟು ಅವರ ಅಪರಾಧಗಳು ಹೆಚ್ಚಿವೆ ಎಂದು ಹೇಳುತ್ತಾನೆ. ಆದರೆ ದಾಸನೆಂಬ ನೆಲೆಯಲ್ಲಿ ಅವನು ಮತ್ತೆ ಮತ್ತೆ ಅದನ್ನೇ ಹೇಳುತ್ತಾನೆ, "ಪ್ರಭೂ! ಕಿಂಚಿತ್ತಾದರೂ ಒಳಿತು ಅವರಲ್ಲಿ ಬಾಕಿಯುಳಿದಿದ್ದರೆ ಅವರಿಗೆ ಸ್ವಲ್ಪ ಕಾಲಾವಕಾಶವನ್ನು ಕೊಟ್ಟುಬಿಡು. ಅವರ ಒಳಿತು ಫಲ ನೀಡಲೂ ಬಹುದು."

76. (ಕೊನೆಗೆ ನಮ್ಮ ದೇವಚರರು ಅವರೊಡನೆ ಹೇಳಿದರು:) "ಓ ಇಬ್‌ರಾಹೀಮರೇ, ಇನ್ನು ವಾದಿಸಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಪ್ರಭುವಿನ ಅಪ್ಪಣೆ ಆಗಿ ಹೋಗಿದೆ. ಇನ್ನು ಅವರ ಮೇಲೆ ಯಾರಿಂದಲೂ ನೀಗಿಸಲಾಗದಂತಹ ಯಾತನೆ ಬಂದೇ ತೀರುವುದು.

يَٰٓإِبْرَٰهِيمُ أَعْرِضْ عَنْ هَٰذَآ ۖ إِنَّهُۥ قَدْ جَآءَ أَمْرُ رَبِّكَ ۖ وَإِنَّهُمْ ءَاتِيهِمْ عَذَابٌ غَيْرُ مَرْدُودٍ ﴿٧٦﴾

77. ದೇವಚರರು 'ಲೂತ'ರ ಬಳಿಗೆ ಬಂದಾಗ ಅವರ ಆಗಮನದಿಂದ ಅವರು ತುಂಬಾ ಗಾಬರಿಗೊಂಡರು ಮತ್ತು ಅವರ ಮನಸ್ಸು ಕುಗ್ಗಿತು. ಇಂದು ಮಹಾ ಗಂಡಾಂತರದ ದಿನವೆಂದರು.[26]

وَلَمَّا جَآءَتْ رُسُلُنَا لُوطًا سِىٓءَ بِهِمْ وَضَاقَ بِهِمْ ذَرْعًا وَقَالَ هَٰذَا يَوْمٌ عَصِيبٌ ﴿٧٧﴾

78. (ಈ ಅತಿಥಿಗಳು ಬಂದೊಡನೆ) ಅವರ ಜನಾಂಗದವರು ಸ್ವಚ್ಛಂದವಾಗಿ ಅವರ ಮನೆಯ ಕಡೆಗೆ ಧಾವಿಸಿ ಬಂದರು. ಅವರು ಮುಂಚಿನಿಂದಲೇ ಇಂತಹ ದುಶ್ಚಟವಿದ್ದವರಾಗಿದ್ದರು. ಅವರೊಡನೆ ಲೂತ್ ಹೀಗೆಂದರು, "ಓ ನನ್ನ ಜನಾಂಗದವರೇ, ಇದೋ ನನ್ನ ಪುತ್ರಿಯರಿದ್ದಾರೆ. ಇವರು ನಿಮಗೆ ಅಧಿಕ ಪವಿತ್ರರು.[27] ಅಲ್ಲಾಹನನ್ನು ಒಂದಿಷ್ಟು ಭಯಪಡಿರಿ. ನನ್ನ ಅತಿಥಿಗಳ ಬಗ್ಗೆ ನನ್ನನ್ನು ಅಪಮಾನಗೊಳಿಸಬೇಡಿರಿ. ನಿಮ್ಮಲ್ಲಿ ಸಜ್ಜನನಾರೂ ಇಲ್ಲವೇ?"

وَجَآءَهُۥ قَوْمُهُۥ يُهْرَعُونَ إِلَيْهِ وَمِن قَبْلُ كَانُوا۟ يَعْمَلُونَ ٱلسَّيِّـَٔاتِ ۚ قَالَ يَٰقَوْمِ هَٰٓؤُلَآءِ بَنَاتِى هُنَّ أَطْهَرُ لَكُمْ ۖ فَٱتَّقُوا۟ ٱللَّهَ وَلَا تُخْزُونِ فِى ضَيْفِىٓ ۖ أَلَيْسَ مِنكُمْ رَجُلٌ رَّشِيدٌ ﴿٧٨﴾

79. ಅವರು (ಈ ರೀತಿ) ಉತ್ತರಿಸಿದರು, "ನಿಮ್ಮ ಪುತ್ರಿಯರಲ್ಲಿ ನಮಗೇನೂ ಹಕ್ಕಿಲ್ಲವೆಂಬುದು ನಿಮಗೆ ಗೊತ್ತೇ ಇದೆ. ನಾವು ಇಚ್ಛಿಸುವುದೇನೆಂಬುದೂ ನಿಮಗೆ ತಿಳಿದಿದೆ."

قَالُوا۟ لَقَدْ عَلِمْتَ مَا لَنَا فِى بَنَاتِكَ مِنْ حَقٍّ وَإِنَّكَ لَتَعْلَمُ مَا نُرِيدُ ﴿٧٩﴾

80. ಲೂತ್ ಹೇಳಿದರು: "ಅಕಟಃ ನಿಮ್ಮನ್ನು ತಡೆಯುವ ಶಕ್ತಿ ನನಗಿರುತ್ತಿದ್ದರೆ! ಅಥವಾ ನನಗೆ ಅಭಯ ಪಡೆಯಲು ಬಲವಾದ ಆಶ್ರಯವೇನಾದರೂ ಇರುತ್ತಿದ್ದರೆ!"

قَالَ لَوْ أَنَّ لِى بِكُمْ قُوَّةً أَوْ ءَاوِىٓ إِلَىٰ رُكْنٍ شَدِيدٍ ﴿٨٠﴾

26. ಈ ದೇವಚರರು ಸ್ಫುರದ್ರೂಪಿ ಬಾಲಕರ ರೂಪದಲ್ಲಿ ಹ. ಲೂತ್‌ರ(ಅ) ಬಳಿ ಬಂದಿದ್ದರು. ಇವರು ದೇವಚರರಾಗಿದ್ದಾರೆಂದು ಅವರಿಗೆ ತಿಳಿದಿರಲಿಲ್ಲ. ಆದ್ದರಿಂದಲೇ ಈ ಅತಿಥಿಗಳ ಆಗಮನದಿಂದ ಅವರು ತೀವ್ರ ಚಿಂತೆಗೀಡಾಗಿ ಎದೆಗುಂದಿದರು. ತನ್ನ ಸಮುದಾಯ ಎಷ್ಟು ಚಾರಿತ್ರ್ಯಹೀನ ಮತ್ತು ನಿರ್ಲಜ್ಜವಾದುದೆಂದು ಅವರಿಗೆ ತಿಳಿದಿತ್ತು.

27. ಹ. ಲೂತ್‌ರು(ಅ) ತಮ್ಮ ಪುತ್ರಿಯರನ್ನು ವ್ಯಭಿಚಾರಕ್ಕಾಗಿ ಮುಂದು ಮಾಡಿದ್ದರು ಎಂದು ಇದರ ಅರ್ಥವಲ್ಲ. "ಇವರು ನಿಮಗೆ ಅತ್ಯಂತ ಪರಿಶುದ್ಧರು" ಎಂಬ ವಾಕ್ಯ ಇಂತಹ ತಪ್ಪುಕಲ್ಪನೆಗೆ ಅವಕಾಶವನ್ನೇ ಕಲ್ಪಿಸುವುದಿಲ್ಲ. ತನ್ನ ಲೈಂಗಿಕ ಆಸಕ್ತಿಯನ್ನು ಅಲ್ಲಾಹನು ಗೊತ್ತುಪಡಿಸಿರುವ ನೈಸರ್ಗಿಕ ಮತ್ತು ಧರ್ಮಸಮ್ಮತ ವಿಧಾನದಿಂದ ಈಡೇರಿಸಿರಿ, ಅದಕ್ಕಾಗಿ ಮಹಿಳೆಯರಿಗೇನೂ ಬರವಿಲ್ಲ ಎಂಬುದು ಹ. ಲೂತ್‌ರ(ಅ) ಮಾತಿನ ಸ್ಪಷ್ಟವಾದ ಇಂಗಿತವಾಗಿತ್ತು.

81. ಆಗ ದೇವಚರರು ಅವರೊಡನೆ (ಹೀಗೆ) ಹೇಳಿದರು: "ಓ ಲೂತ್, ನಾವು ನಿಮ್ಮ ಪ್ರಭುವಿನಿಂದ ಕಳುಹಿಸಲ್ಪಟ್ಟ ದೇವಚರರಾಗಿರುತ್ತೇವೆ. ನಿಮಗೇನೂ ಕೇಡುಂಟು ಮಾಡಲು ಇವರಿಂದಾಗದು. ನೀವು ಕತ್ತಲೆ ಇರುವಾಗಲೇ ನಿಮ್ಮ ಕುಟುಂಬದವರನ್ನು ಸಂಗಡ ಕರೆದುಕೊಂಡು ಹೋಗಿಬಿಡಿರಿ. ನಿಮ್ಮಲ್ಲಿ ಯಾರೊಬ್ಬರೂ ಹಿಂದೆ ತಿರುಗಿ ನೋಡಬಾರದೆಂಬುದನ್ನು ನೆನಪಿಟ್ಟುಕೊಳ್ಳಿರಿ. ಆದರೆ ನಿಮ್ಮ ಪತ್ನಿ (ನಿಮ್ಮೊಂದಿಗೆ ಹೋಗಲಾರಳು) ಏಕೆಂದರೆ ಇವರ ಮೇಲೆ ಸಂಭವಿಸಲಿರುವುದೆಲ್ಲಾ ಅವಳ ಮೇಲೂ ಸಂಭವಿಸುವುದು. ಅವರ ವಿನಾಶಕ್ಕಾಗಿ ಪ್ರಾತಃಕಾಲವು ನಿಶ್ಚಯಿಸಲ್ಪಟ್ಟಿದೆ. ಇನ್ನು ಬೆಳಗಾಗಲು ಸಮಯವೇ ಎಷ್ಟಿದೆ!"

قَالُوا يَا لُوطُ إِنَّا رُسُلُ رَبِّكَ لَن يَصِلُوا إِلَيْكَ فَأَسْرِ بِأَهْلِكَ بِقِطْعٍ مِّنَ اللَّيْلِ وَلَا يَلْتَفِتْ مِنكُمْ أَحَدٌ إِلَّا امْرَأَتَكَ إِنَّهُ مُصِيبُهَا مَا أَصَابَهُمْ إِنَّ مَوْعِدَهُمُ الصُّبْحُ أَلَيْسَ الصُّبْحُ بِقَرِيبٍ ﴿٨١﴾

82. ಹೀಗೆ ನಮ್ಮ ತೀರ್ಮಾನದ ಸಮಯ ಬಂದಾಗ ನಾವು ಆ ನಾಡನ್ನು ಬುಡಮೇಲು ಮಾಡಿ ಬಿಟ್ಟೆವು ಮತ್ತು ಅದರ ಮೇಲೆ ಸುಟ್ಟ ಕಲ್ಲುಗಳನ್ನು ಎಡೆಬಿಡದೆ ಸುರಿಸಿದೆವು.

فَلَمَّا جَاءَ أَمْرُنَا جَعَلْنَا عَالِيَهَا سَافِلَهَا وَأَمْطَرْنَا عَلَيْهَا حِجَارَةً مِّن سِجِّيلٍ مَّنضُودٍ ﴿٨٢﴾

83. ಅವುಗಳ ಪೈಕಿ ಪ್ರತಿಯೊಂದು ಕಲ್ಲೂ ನಿಮ್ಮ ಪ್ರಭುವಿನ ಬಳಿ ಗುರುತಿಸಲ್ಪಟ್ಟಿತ್ತು.[28] ಈ ಶಿಕ್ಷೆಯು ಅಕ್ರಮಿಗಳಿಂದ ದೂರವಿಲ್ಲ.

مُّسَوَّمَةً عِندَ رَبِّكَ وَمَا هِيَ مِنَ الظَّالِمِينَ بِبَعِيدٍ ﴿٨٣﴾

84. ನಾವು 'ಮದ್‌ಯನ್'ನವರ ಕಡೆಗೆ ಅವರ ಬಂಧು ಶುಐಬರನ್ನು ಕಳುಹಿಸಿದೆವು. ಅವರು (ಹೀಗೆ) ಹೇಳಿದರು: "ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ಇನ್ನಾರೂ ನಿಮ್ಮ ಆರಾಧ್ಯನಿಲ್ಲ. ನೀವು ಅಳತೆ ಮತ್ತು ತೂಕದಲ್ಲಿ ಕಡಿಮೆ ಮಾಡಬೇಡಿರಿ. ಇಂದು ನಾನು ನಿಮ್ಮನ್ನು ಉತ್ತಮ ಸ್ಥಿತಿಯಲ್ಲಿ ಕಾಣುತ್ತಿದ್ದೇನೆ. ಆದರೆ ನಾಳೆ ನಿಮ್ಮ ಮೇಲೆ, ಎಲ್ಲರನ್ನೂ ಆವರಿಸಿಕೊಳ್ಳುವ ಯಾತನೆಯ ದಿನವೊಂದು ಬರಲಿರುವ ವಿಷಯದಲ್ಲಿ ನಾನು ಭಯಪಡುತ್ತೇನೆ.

وَإِلَىٰ مَدْيَنَ أَخَاهُمْ شُعَيْبًا قَالَ يَا قَوْمِ اعْبُدُوا اللَّهَ مَا لَكُم مِّنْ إِلَٰهٍ غَيْرُهُ وَلَا تَنقُصُوا الْمِكْيَالَ وَالْمِيزَانَ إِنِّي أَرَاكُم بِخَيْرٍ وَإِنِّي أَخَافُ عَلَيْكُمْ عَذَابَ يَوْمٍ مُّحِيطٍ ﴿٨٤﴾

85. ಓ ನನ್ನ ಜನಾಂಗ ಬಾಂಧವರೇ, ನ್ಯಾಯದೊಂದಿಗೆ ಪೂರ್ತಿಯಾಗಿ ಅಳತೆ ಮತ್ತು ತೂಕ ಮಾಡಿಕೊಡಿರಿ. ಜನರಿಗೆ ಅವರ ವಸ್ತುಗಳನ್ನು ಕಡಿಮೆ ಮಾಡಿಕೊಡಬೇಡಿರಿ ಮತ್ತು ಭೂಮಿಯಲ್ಲಿ ಕ್ಷೋಭೆ ಹರಡುತ್ತ ನಡೆಯಬೇಡಿರಿ.

وَيَا قَوْمِ أَوْفُوا الْمِكْيَالَ وَالْمِيزَانَ بِالْقِسْطِ وَلَا تَبْخَسُوا النَّاسَ أَشْيَاءَهُمْ وَلَا تَعْثَوْا فِي الْأَرْضِ مُفْسِدِينَ ﴿٨٥﴾

---

28. ಅರ್ಥಾತ್- ಪ್ರತಿಯೊಂದು ಕಲ್ಲಿಗೂ ಅದು ಎಂತಹ ವಿನಾಶವನ್ನೆಸಗಬೇಕು ಮತ್ತು ಯಾವ ಕಲ್ಲು ಯಾವ ಅಪರಾಧಿಯ ಮೇಲೆ ಬೀಳಬೇಕು ಎಂದು ಅಲ್ಲಾಹನು ಗೊತ್ತುಪಡಿಸಿದ್ದನು.

86. ನೀವು ಸತ್ಯವಿಶ್ವಾಸಿಗಳಾಗಿರುವಿರಾದರೆ ಅಲ್ಲಾಹನು ನೀಡಿದ ಉಳಿತಾಯವೇ ನಿಮಗೆ ಉತ್ತಮ. ಅಂತು ನಾನೇನೂ ನಿಮ್ಮ ಮೇಲ್ನೋಟಗಾರನಲ್ಲ."

بَقِيَّتُ اللَّهِ خَيْرٌ لَّكُمْ إِن كُنتُم مُّؤْمِنِينَ ۚ وَمَا أَنَا عَلَيْكُم بِحَفِيظٍ ﴿٨٦﴾

87. ಅವರು ಉತ್ತರವಿತ್ತರು, "ಓ ಶುಐಬ್, ನಾವು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದ ಆರಾಧ್ಯರನ್ನೆಲ್ಲಾ ತ್ಯಜಿಸಬೇಕೆಂದಾಗಲಿ, ನಮ್ಮ ಸೊತ್ತುಗಳನ್ನೂ ನಮಗೆ ಸರಿ ಕಂಡಂತೆ ಬಳಸುವ ಅಧಿಕಾರ ವಿಲ್ಲವೆಂದಾಗಲಿ ನಿನ್ನ ನಮಾಝ್ ನಿನಗೆ ಆಜ್ಞಾಪಿಸುತ್ತಿದೆಯೇ ನೀನೊಬ್ಬನು ಮಾತ್ರ ಮಹಾ ಸೌಜನ್ಯಶೀಲನೂ ಸನ್ಮಾರ್ಗನಿಷ್ಠನೂ ಆಗಿಬಿಟ್ಟಿರುವೆ!"

قَالُوا يَا شُعَيْبُ أَصَلَاتُكَ تَأْمُرُكَ أَن نَّتْرُكَ مَا يَعْبُدُ آبَاؤُنَا أَوْ أَن نَّفْعَلَ فِي أَمْوَالِنَا مَا نَشَاءُ ۖ إِنَّكَ لَأَنتَ الْحَلِيمُ الرَّشِيدُ ﴿٨٧﴾

88. ಶುಐಬ್ (ಹೀಗೆ) ಹೇಳಿದರು: "ಓ ನನ್ನ ಜನಾಂಗ ಬಾಂಧವರೇ, ನೀವೇ ವಿವೇಚಿಸಿರಿ, ನಾನು ನನ್ನ ಪ್ರಭುವಿನ ಕಡೆಯಿಂದ ಒಂದು ಸುಸ್ಪಷ್ಟ ಪ್ರಮಾಣದಲ್ಲಿದ್ದರೆ ಹಾಗೂ ಅವನು ನನಗೆ ತನ್ನ ಕಡೆಯಿಂದ ಉತ್ತಮ ಜೀವನಾಧಾರವನ್ನೂ ದಯಪಾಲಿಸಿದ್ದರೆ,[29] (ಅನಂತರವೂ ನಾನು ನಿಮ್ಮ ಪಥಭ್ರಷ್ಟತೆಗಳಲ್ಲೂ ನಿಷಿದ್ಧ ಸಂಪಾದನೆಗಳಲ್ಲೂ ಸಹಭಾಗಿಯಾಗಿ ಹೇಗಿರಲಿ?) ನಾನು ನಿಮ್ಮನ್ನು ಯಾವುದರಿಂದ ತಡೆಯುತ್ತಿರುವೆನೋ ಅದನ್ನು ನಾನೇ ಮಾಡಲು ಎಷ್ಟು ಮಾತ್ರಕ್ಕೂ ಇಚ್ಛಿಸುವುದಿಲ್ಲ. ನಾನು ನನ್ನಿಂದ ಸಾಧ್ಯವಾಗು ವಷ್ಟು ಸುಧಾರಣೆ ಮಾಡಲಿಚ್ಛಿಸುತ್ತೇನೆ. ನಾನು ಮಾಡುವುದೆಲ್ಲವೂ ಅಲ್ಲಾಹನ ದಿವ್ಯಾನುಗ್ರಹದ ಮೇಲೆ ಆಧಾರಿತವಾಗಿದೆ. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದ್ದೇನೆ ಮತ್ತು ಪ್ರತಿಯೊಂದು ವಿಷಯದಲ್ಲೂ ಅವನತ್ತಲೇ ವಾಲುತ್ತೇನೆ.

قَالَ يَا قَوْمِ أَرَأَيْتُمْ إِن كُنتُ عَلَىٰ بَيِّنَةٍ مِّن رَّبِّي وَرَزَقَنِي مِنْهُ رِزْقًا حَسَنًا ۚ وَمَا أُرِيدُ أَنْ أُخَالِفَكُمْ إِلَىٰ مَا أَنْهَاكُمْ عَنْهُ ۚ إِنْ أُرِيدُ إِلَّا الْإِصْلَاحَ مَا اسْتَطَعْتُ ۚ وَمَا تَوْفِيقِي إِلَّا بِاللَّهِ ۚ عَلَيْهِ تَوَكَّلْتُ وَإِلَيْهِ أُنِيبُ ﴿٨٨﴾

89. ಓ ನನ್ನ ಜನಾಂಗ ಬಾಂಧವರೇ, ನನ್ನ ವಿರುದ್ಧವಿರುವ ನಿಮ್ಮ ಹಟಸಾಧನೆಯು ಕೊನೆಗೆ ನಿಮ್ಮ ಮೇಲೂ ನೂಹರ ಅಥವಾ ಹೂದರ ಅಥವಾ ಸಾಲಿಹರ ಜನಾಂಗದವರ ಮೇಲೆ ತಂದಂತಹ ಯಾತನೆಯನ್ನು ತರಲು ಕಾರಣವಾಗದಿರಲಿ. ಲೂತರ ಜನಾಂಗ ದವರಂತೂ ನಿಮಗಿಂತ ಹೆಚ್ಚೇನೂ ದೂರವಿಲ್ಲ.

وَيَا قَوْمِ لَا يَجْرِمَنَّكُمْ شِقَاقِي أَن يُصِيبَكُم مِّثْلُ مَا أَصَابَ قَوْمَ نُوحٍ أَوْ قَوْمَ هُودٍ أَوْ قَوْمَ صَالِحٍ ۚ وَمَا قَوْمُ لُوطٍ مِّنكُم بِبَعِيدٍ ﴿٨٩﴾

29. ಅರ್ಥಾತ್- ನನ್ನ ಪ್ರಭು ನನಗೆ ಸತ್ಯವನ್ನರಿಯುವ ದೃಷ್ಟಿಯನ್ನು ಹಾಗೂ ಧರ್ಮಸಮ್ಮತವಾದ ಜೀವನಾಧಾರಗಳನ್ನು ಕರುಣಿಸಿರುವಾಗ ನನ್ನ ಪಾಲಿಗೆ ಇದು ಧರ್ಮಸಮ್ಮತವಾಗುವುದು ಹೇಗೆ? ದೇವನು ನನಗೆ ದಯಪಾಲಿಸಿರುವ ಅನುಗ್ರಹಕ್ಕೆ ಪ್ರತಿಯಾಗಿ ನಾನು ನಿಮ್ಮ ಪಥಭ್ರಷ್ಟತೆ ಮತ್ತು ನಿಷಿದ್ಧ ಸಂಪಾದನೆಗಳನ್ನು ಸತ್ಯ ಮತ್ತು ಧರ್ಮಸಮ್ಮತವೆಂದು ಹೇಳಿ ಅವನಿಗೆ ಕೃತಘ್ನತೆ ತೋರುವುದಾದರೂ ಹೇಗೆ?

90. ನೀವು ನಿಮ್ಮ ಪ್ರಭುವಿನೊಡನೆ ಕ್ಷಮೆ ಬೇಡಿರಿ ಮತ್ತು ಅವನ ಕಡೆಗೆ ಮರಳಿರಿ. ನಿಶ್ಚಯವಾಗಿಯೂ ನನ್ನ ಪ್ರಭು ಕರುಣಾನಿಧಿಯೂ ತನ್ನ ಸೃಷ್ಟಿಯ ಮೇಲೆ ಪ್ರೇಮವುಳ್ಳವನೂ ಆಗಿರುತ್ತಾನೆ.

وَاسْتَغْفِرُوا رَبَّكُمْ ثُمَّ تُوبُوا إِلَيْهِ ۚ إِنَّ رَبِّي رَحِيمٌ وَدُودٌ ﴿٩٠﴾

91. ಅವರು ಹೀಗೆ ಉತ್ತರಕೊಟ್ಟರು: "ಓ ಶುಐಬ್, ನಿನ್ನ ಅನೇಕ ಮಾತುಗಳು ನಮಗೆ ಅರ್ಥವೇ ಆಗುವುದಿಲ್ಲ. ನೀನು ನಮ್ಮೊಳಗೆ ಓರ್ವ ಬಲಹೀನನಾಗಿರುವುದನ್ನು ನಾವು ಕಾಣುತ್ತೇವೆ. ನಿನ್ನ ಪರಿವಾರವಿಲ್ಲದಿರುತ್ತಿದ್ದರೆ ನಾವೆಂದೋ ನಿನ್ನನ್ನು ಕಲ್ಲೆಸೆದು ಕೊಂದು ಹಾಕುತ್ತಿದ್ದೆವು. ನೀನು ನಮಗಿಂತ ಬಲಾಢ್ಯನೇನೂ ಅಲ್ಲ."

قَالُوا يَا شُعَيْبُ مَا نَفْقَهُ كَثِيرًا مِمَّا تَقُولُ وَإِنَّا لَنَرَاكَ فِينَا ضَعِيفًا ۖ وَلَوْلَا رَهْطُكَ لَرَجَمْنَاكَ ۖ وَمَا أَنْتَ عَلَيْنَا بِعَزِيزٍ ﴿٩١﴾

92. ಶುಐಬ್ ಹೇಳಿದರು: "ನೀವು (ನನ್ನ ಪರಿವಾರವನ್ನು ಭಯ ಪಟ್ಟು) ಅಲ್ಲಾಹನನ್ನು ಮರೆತು ಬಿಡಲು, ನಿಮ್ಮ ದೃಷ್ಟಿಯಲ್ಲಿ ನನ್ನ ಪರಿವಾರವು ಅಲ್ಲಾಹನಿಗಿಂತಲೂ ಅಧಿಕ ಪ್ರಬಲವಾದುದೇ? ನೀವು ಮಾಡುತ್ತಿರುವುದಾವುದೂ ಅಲ್ಲಾಹನ ಹಿಡಿತದಿಂದ ಹೊರಗಿಲ್ಲವೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ.

قَالَ يَا قَوْمِ أَرَهْطِي أَعَزُّ عَلَيْكُمْ مِنَ اللَّهِ وَاتَّخَذْتُمُوهُ وَرَاءَكُمْ ظِهْرِيًّا ۖ إِنَّ رَبِّي بِمَا تَعْمَلُونَ مُحِيطٌ ﴿٩٢﴾

93. ಓ ನನ್ನ ಜನಾಂಗ ಬಾಂಧವರೇ, ನೀವು ನಿಮ್ಮ ಕ್ರಮದಂತೆ ಕಾರ್ಯವೆಸಗುತ್ತ ಸಾಗಿರಿ, ನಾನು ನನ್ನ ಕ್ರಮದಂತೆ ಕಾರ್ಯವೆಸ ಗುತ್ತಿರುವೆನು. ಯಾರ ಮೇಲೆ ಅಪಮಾನಕರ ಯಾತನೆ ಬರುತ್ತದೆ ಮತ್ತು ಯಾರು ಸುಳ್ಳುಗಾರರು ಎಂಬುದು ನಿಮಗೆ ಶೀಘ್ರವೇ ತಿಳಿದು ಬರುವುದು. ನೀವೂ ಅದನ್ನು ನಿರೀಕ್ಷಿಸುತ್ತಲಿರಿ. ನಾನೂ ನಿಮ್ಮೊಂದಿಗೆ ನಿರೀಕ್ಷಿಸುತ್ತಿರುತ್ತೇನೆ.

وَيَا قَوْمِ اعْمَلُوا عَلَىٰ مَكَانَتِكُمْ إِنِّي عَامِلٌ ۖ سَوْفَ تَعْلَمُونَ مَنْ يَأْتِيهِ عَذَابٌ يُخْزِيهِ وَمَنْ هُوَ كَاذِبٌ ۖ وَارْتَقِبُوا إِنِّي مَعَكُمْ رَقِيبٌ ﴿٩٣﴾

94. ಕೊನೆಗೆ ನಮ್ಮ ತೀರ್ಮಾನದ ಸಮಯ ಬಂದಾಗ ನಾವು ನಮ್ಮ ಕೃಪೆಯಿಂದ ಶುಐಬ್ ಮತ್ತು ಅವರ ಸತ್ಯವಿಶ್ವಾಸಿಗಳಾದ ಸಂಗ ಡಿಗರನ್ನು ರಕ್ಷಿಸಿದೆವು ಮತ್ತು ಅಕ್ರಮವೆಸಗಿದವರನ್ನು ಒಂದು ಭಯಾನಕ ಸ್ಫೋಟವು ಆಕ್ರಮಿಸಿತು.

وَلَمَّا جَاءَ أَمْرُنَا نَجَّيْنَا شُعَيْبًا وَالَّذِينَ آمَنُوا مَعَهُ بِرَحْمَةٍ مِنَّا وَأَخَذَتِ الَّذِينَ ظَلَمُوا الصَّيْحَةُ فَأَصْبَحُوا فِي دِيَارِهِمْ جَاثِمِينَ ﴿٩٤﴾

95. ಆ ನಾಡಿನವರು ಅಲ್ಲಿ ನೆಲೆಸಿಯೇ ಇರಲಿಲ್ಲವೋ ಎಂಬಂತೆ ಅವರು ಕದಲದೆ ಬಿದ್ದಲ್ಲೇ ಬಿದ್ದು ಬಿಟ್ಟರು. ಕೇಳಿರಿ, ಸಮೂದ್ ಎಸೆಯಲ್ಪಟ್ಟಂತೆ ಮದ್‌ಯನಿನವರೂ ದೂರ ಎಸೆಯಲ್ಪಟ್ಟರು.

كَأَنْ لَمْ يَغْنَوْا فِيهَا ۗ أَلَا بُعْدًا لِمَدْيَنَ كَمَا بَعِدَتْ ثَمُودُ ﴿٩٥﴾

96. ನಾವು ಮೂಸಾರನ್ನು ನಮ್ಮ ನಿದರ್ಶನಗಳೊಂದಿಗೂ (ನೇಮಕದ) ಸುವ್ಯಕ್ತ ಆಧಾರದೊಂದಿಗೂ ಕಳುಹಿಸಿದೆವು-

وَلَقَدْ أَرْسَلْنَا مُوسَىٰ بِآيَاتِنَا وَسُلْطَانٍ مُبِينٍ ﴿٩٦﴾

97. ಫಿರ್‌ಔನ್ ಮತ್ತು ಅವನ ರಾಜಮಾನ್ಯ ಸರದಾರರ ಕಡೆಗೆ- ಆದರೆ, ಆ ಜನರು ಫಿರ್‌ಔನನ ಆಜ್ಞೆಯನ್ನು ಅನುಸರಿಸಿದರು. ವಸ್ತುತಃ ಫಿರ್‌ಔನನ ಆಜ್ಞೆಯು ಸನ್ಮಾರ್ಗಪರವಾಗಿರಲಿಲ್ಲ.

إِلَىٰ فِرْعَوْنَ وَمَلَإِيْهِ فَاتَّبَعُوٓا أَمْرَ فِرْعَوْنَ ۖ وَمَآ أَمْرُ فِرْعَوْنَ بِرَشِيدٍ ﴿٩٧﴾

98. ಪುನರುತ್ಥಾನ ದಿನದಂದು ಅವನು ತನ್ನ ಜನಾಂಗದ ಮುಂದೆ ನಿಂತು ಅವರನ್ನು ತನ್ನ ನೇತೃತ್ವದಲ್ಲಿ ನರಕದ ಕಡೆಗೆ ಒಯ್ಯುವನು. ಅವರು ತಲಪುವ ಸ್ಥಾನ ಅದೆಷ್ಟು ನಿಕೃಷ್ಟ!

يَقْدُمُ قَوْمَهُۥ يَوْمَ الْقِيَٰمَةِ فَأَوْرَدَهُمُ النَّارَ ۖ وَبِئْسَ الْوِرْدُ الْمَوْرُودُ ﴿٩٨﴾

99. ಅವರ ಮೇಲೆ ಇಹಲೋಕದಲ್ಲೂ ಶಾಪಬಿದ್ದಿತು ಮತ್ತು ಪುನರುತ್ಥಾನದಂದೂ ಬೀಳುವುದು. ಅವರಿಗೆ ಸಿಗುವ ಪ್ರತಿಫಲ ಎಷ್ಟು ನಿಕೃಷ್ಟ!

وَأُتْبِعُوا فِى هَٰذِهِۦ لَعْنَةً وَيَوْمَ الْقِيَٰمَةِ ۚ بِئْسَ الرِّفْدُ الْمَرْفُودُ ﴿٩٩﴾

100. ನಾವು ನಿಮಗೆ ತಿಳಿಯ ಹೇಳುವ ಕೆಲವು ನಾಡುಗಳ ವೃತ್ತಾಂತಗಳಿವು. ಇವುಗಳಲ್ಲಿ ಕೆಲವು ಈಗಲೂ ನೆಲೆ ನಿಂತಿವೆ. ಇನ್ನು ಕೆಲವು ನಿರ್ಮೂಲನಗೊಂಡಿವೆ.

ذَٰلِكَ مِنْ أَنۢبَآءِ الْقُرَىٰ نَقُصُّهُۥ عَلَيْكَ ۖ مِنْهَا قَآئِمٌ وَحَصِيدٌ ﴿١٠٠﴾

101. ನಾವು ಅವರ ಮೇಲೆ ಅಕ್ರಮವೆಸಗಲಿಲ್ಲ. ಅವರು ತಾವೇ ತಮ್ಮ ಮೇಲೆ ಅಕ್ರಮವೆಸಗಿ ಕೊಂಡರು. ನಿಮ್ಮ ಪ್ರಭುವಿನ ಆಜ್ಞೆ ಬಂದಾಗ ಅವರು ಅಲ್ಲಾಹನನ್ನು ಬಿಟ್ಟು ಕೂಗಿ ಕರೆಯುತ್ತಿದ್ದ ಆರಾಧ್ಯರಾರೂ ಅವರಿಗೆ ಪ್ರಯೋಜನಕ್ಕೆ ಬಾರದಾದರು ಮತ್ತು ಅವರಿಗೆ ವಿನಾಶವನ್ನು ಹೊರತು ಇನ್ನೇನನ್ನೂ ಅವರು ಹೆಚ್ಚಿಸಲಿಲ್ಲ.

وَمَا ظَلَمْنَٰهُمْ وَلَٰكِن ظَلَمُوٓا أَنفُسَهُمْ ۖ فَمَآ أَغْنَتْ عَنْهُمْ ءَالِهَتُهُمُ الَّتِى يَدْعُونَ مِن دُونِ اللَّهِ مِن شَىْءٍ لَّمَّا جَآءَ أَمْرُ رَبِّكَ ۖ وَمَا زَادُوهُمْ غَيْرَ تَتْبِيبٍ ﴿١٠١﴾

102. ನಿಮ್ಮ ಪ್ರಭು ಯಾವುದಾದರೂ ಅಕ್ರಮಿ ನಾಡನ್ನು ಹಿಡಿಯುವಾಗ ಅವನ ಹಿಡಿತ ಹೀಗೆಯೇ ಇರುತ್ತದೆ. ವಾಸ್ತವದಲ್ಲಿ ಅವನ ಹಿಡಿತವು ಬಹಳ ಬಿಗಿಯೂ ವೇದನಾಯುಕ್ತವೂ ಆಗಿರುತ್ತದೆ.

وَكَذَٰلِكَ أَخْذُ رَبِّكَ إِذَآ أَخَذَ الْقُرَىٰ وَهِىَ ظَٰلِمَةٌ ۚ إِنَّ أَخْذَهُۥٓ أَلِيمٌ شَدِيدٌ ﴿١٠٢﴾

103. ವಾಸ್ತವದಲ್ಲಿ ಪರಲೋಕಯಾತನೆಯ ಭಯ ಹೊಂದಿದ ಪ್ರತಿಯೊಬ್ಬನಿಗೂ ಇದರಲ್ಲೊಂದು ನಿದರ್ಶನವಿದೆ. ಅದು ಸಕಲ ಜನರೂ ಒಟ್ಟುಗೂಡುವ ಒಂದು ದಿನವಾಗಿರುವುದು. ಸಂಭವಿಸುವುದೆಲ್ಲವೂ ಎಲ್ಲರ ಕಣ್ಣ ಮುಂದೆಯೇ ಸಂಭವಿಸುವ ದಿನವದು.

إِنَّ فِى ذَٰلِكَ لَءَايَةً لِّمَنْ خَافَ عَذَابَ الْءَاخِرَةِ ۚ ذَٰلِكَ يَوْمٌ مَّجْمُوعٌ لَّهُ النَّاسُ وَذَٰلِكَ يَوْمٌ مَّشْهُودٌ ﴿١٠٣﴾

104. ನಾವು ಅದನ್ನು ತರಲು ಹೆಚ್ಚೇನೂ ವಿಳಂಬ ಮಾಡುತ್ತಿಲ್ಲ. ಕೇವಲ ಸ್ವಲ್ಪವೇ ಕಾಲಾವಧಿಯು ಅದಕ್ಕೆ ನಿಶ್ಚಯವಾಗಿದೆ.

وَمَا نُؤَخِّرُهُۥٓ إِلَّا لِأَجَلٍ مَّعْدُودٍ ﴿١٠٤﴾

105. ಅದು ಬಂದಾಗ ಆತನ ಅನುಮತಿಯಿಂದ ಏನಾದರೂ ಹೇಳುವ ಹೊರತು ಯಾರೊಬ್ಬನಿಗೂ ಮಾತೆತ್ತುವ ಸಾಮರ್ಥ್ಯವಿರದು. ಅಂದು ಅವರಲ್ಲಿ ಕೆಲವರು ದುರ್ದೈವಿಗಳೂ ಇನ್ನು ಕೆಲವರು ಸುದೈವಿಗಳೂ ಆಗುವರು.

يَوْمَ يَأْتِ لَا تَكَلَّمُ نَفْسٌ إِلَّا بِإِذْنِهِ ۚ فَمِنْهُمْ شَقِيٌّ وَسَعِيدٌ ﴿١٠٥﴾

106. ದುರ್ದೈವಿಗಳಾಗುವವರು ನರಕಕ್ಕೆ ಹೋಗುವರು. (ಅಲ್ಲಿ ಉಷ್ಣ ಹಾಗೂ ತೃಷಾಧಿಕ್ಯದಿಂದ) ಮೇಲುಸಿರೆತ್ತುತ್ತಲೂ ಬುಸುಗುಟ್ಟು ತ್ತಲೂ ಇರುವರು.

فَأَمَّا الَّذِينَ شَقُوا فَفِي النَّارِ لَهُمْ فِيهَا زَفِيرٌ وَشَهِيقٌ ﴿١٠٦﴾

107. ನಿಮ್ಮ ಪ್ರಭು ಬೇರೇನನ್ನಾದರೂ ಇಚ್ಛಿಸುವ ಹೊರತು ಆಕಾಶಗಳೂ ಭೂಮಿಯೂ ನೆಲೆ ನಿಂತಿರುವ ವರೆಗೂ ಅವರು ಅದೇ ಸ್ಥಿತಿಯಲ್ಲಿ ಇರುವರು.[30] ನಿಶ್ಚಯವಾಗಿಯೂ ನಿಮ್ಮ ಪ್ರಭು ತನ್ನಿಚ್ಛೆಯಂತೆ ಮಾಡುವ ಸಾಮರ್ಥ್ಯವುಳ್ಳವನಾಗಿರುತ್ತಾನೆ.

خَالِدِينَ فِيهَا مَا دَامَتِ السَّمَاوَاتُ وَالْأَرْضُ إِلَّا مَا شَاءَ رَبُّكَ ۚ إِنَّ رَبَّكَ فَعَّالٌ لِمَا يُرِيدُ ﴿١٠٧﴾

108. ಇನ್ನು ಸುದೈವಿಗಳ ವಿಚಾರ-ಅವರು ಸ್ವರ್ಗಕ್ಕೆ ಹೋಗುವರು. ನಿಮ್ಮ ಪ್ರಭು ಬೇರೇನನ್ನಾದರೂ ಇಚ್ಛಿಸುವ ಹೊರತು ಅವರು ಆಕಾಶಗಳೂ ಭೂಮಿಯೂ ನೆಲೆನಿಂತಿರುವ ವರೆಗೂ ಅಲ್ಲೇ ಸದಾ ವಾಸಿಸುತ್ತಿರುವರು. ಎಂದೂ ಕೊನೆಗೊಳ್ಳದ ನಿರಂತರ ಕೊಡುಗೆಗಳು ಅವರಿಗೆ ಸಿಗುವುವು.

وَأَمَّا الَّذِينَ سُعِدُوا فَفِي الْجَنَّةِ خَالِدِينَ فِيهَا مَا دَامَتِ السَّمَاوَاتُ وَالْأَرْضُ إِلَّا مَا شَاءَ رَبُّكَ ۖ عَطَاءً غَيْرَ مَجْذُوذٍ ﴿١٠٨﴾

109. ಆದುದರಿಂದ ಓ ಪೈಗಂಬರರೇ, ಇವರು ಆರಾಧನೆ ಮಾಡುತ್ತಿರುವ ವುಗಳ ಬಗ್ಗೆ ನೀವೆಂದೂ ಸಂದೇಹಕ್ಕೊಳಗಾಗಬೇಡಿರಿ. ಇವರಂತು ಈ ಮುಂಚೆ ಇವರ ಪೂರ್ವಿಕರು ಪೂಜಿಸಿಕೊಂಡು ಬಂದಂತೆ ತಾವೂ ಪೂಜಿಸುತ್ತಲಿದ್ದಾರೆ ಮತ್ತು ನಾವು ಅವರಿಗೆ ಕೊಂಚವೂ ಲೋಪಮಾಡದೆ ಅವರ ಪಾಲನ್ನು ಸಂಪೂರ್ಣವಾಗಿ ಕೊಡುವೆವು.

فَلَا تَكُ فِي مِرْيَةٍ مِمَّا يَعْبُدُ هَٰؤُلَاءِ ۚ مَا يَعْبُدُونَ إِلَّا كَمَا يَعْبُدُ آبَاؤُهُمْ مِنْ قَبْلُ ۚ وَإِنَّا لَمُوَفُّوهُمْ نَصِيبَهُمْ غَيْرَ مَنْقُوصٍ ﴿١٠٩﴾

110. ನಾವು ಇದಕ್ಕಿಂತ ಮುಂಚೆ ಮೂಸಾರಿಗೆ ಗ್ರಂಥ ದಯಪಾಲಿಸಿದ್ದೆವು. (ಈಗ ನಿಮಗೆ ನೀಡಲಾಗಿರುವ ಈ ಗ್ರಂಥದ ಬಗೆಗೆ ಭಿನ್ನಾಭಿಪ್ರಾಯ ತಾಳುತ್ತಿರುವಂತೆಯೇ) ಅದರ ಬಗೆಗೂ ಭಿನ್ನಾಭಿಪ್ರಾಯ ತಾಳಲಾ ಗಿತ್ತು. ನಿಮ್ಮ ಪ್ರಭುವಿನ ಕಡೆಯಿಂದ ಒಂದು ವಿಷಯವು ಮೊದಲೇ ನಿರ್ಧರಿಸಲ್ಪಡದಿರುತ್ತಿದ್ದರೆ ಆ ಭಿನ್ನಾಭಿಪ್ರಾಯ ತಾಳುವವರ ನಡುವೆ ಎಂದೋ ತೀರ್ಮಾನ ಮಾಡಿಬಿಡಲಾಗುತ್ತಿತ್ತು. ಈ ವಸ್ತುಸ್ಥಿತಿಯಿಂದಾಗಿಯೇ ಅವರು ಈ ಬಗ್ಗೆ ಸಂಶಯ ಗ್ರಸ್ತರಾಗಿರುತ್ತಾರೆ.

وَلَقَدْ آتَيْنَا مُوسَى الْكِتَابَ فَاخْتُلِفَ فِيهِ ۚ وَلَوْلَا كَلِمَةٌ سَبَقَتْ مِنْ رَبِّكَ لَقُضِيَ بَيْنَهُمْ ۚ وَإِنَّهُمْ لَفِي شَكٍّ مِنْهُ مُرِيبٍ ﴿١١٠﴾

30. ಶಾಶ್ವತವಾಗಿ ಎಂಬ ಅರ್ಥದಲ್ಲಿ ಈ ಪದಗಳನ್ನು ಇಲ್ಲಿ ನುಡಿಗಟ್ಟಿನ ರೂಪದಲ್ಲಿ ಪ್ರಯೋಗಿಸಲಾಗಿದೆ.

111. ನಿಮ್ಮ ಪ್ರಭು ಅವರಿಗೆ ಅವರ ಕರ್ಮಗಳ ಸಂಪೂರ್ಣ ಪ್ರತಿಫಲ ಕೊಟ್ಟೇ ತೀರುವನೆಂಬುದೂ ಪರಮಾರ್ಥ. ನಿಶ್ಚಯವಾಗಿಯೂ ಅವನು ಅವರ ಸಕಲ ಕರ್ಮಗಳನ್ನು ಬಲ್ಲವನು.

وَإِنَّ كُلًّا لَّمَّا لَيُوَفِّيَنَّهُمْ رَبُّكَ أَعْمَالَهُمْ ۚ إِنَّهُ بِمَا يَعْمَلُونَ خَبِيرٌ ﴿١١١﴾

112. ಆದುದರಿಂದ ಓ ಪೈಗಂಬರರೇ, ನೀವೂ (ಸತ್ಯನಿಷೇಧ ಮತ್ತು ಬಂಡಾಯ ನೀತಿಯನ್ನು ಬಿಟ್ಟು ಸತ್ಯವಿಶ್ವಾಸ ಮತ್ತು ಅನುಸರಣೆಯ ಕಡೆಗೆ ಬಂದಿರುವ) ನಿಮ್ಮ ಸಂಗಡಿಗರೂ ನಿಮಗೆ ಆಜ್ಞಾಪಿಸಿರುವ ಪ್ರಕಾರ ನೇರಮಾರ್ಗದಲ್ಲಿ ಸ್ಥಿರವಾಗಿ ನೆಲೆ ನಿಲ್ಲಿರಿ. ದಾಸ್ಯದ ಮೇರೆಯನ್ನು ಮೀರಬೇಡಿರಿ. ನಿಮ್ಮ ಪ್ರಭು ನೀವು ಮಾಡುತ್ತಿರುವುದನ್ನೆಲ್ಲ ವೀಕ್ಷಿಸುತ್ತಿದ್ದಾನೆ.

فَاسْتَقِمْ كَمَا أُمِرْتَ وَمَن تَابَ مَعَكَ وَلَا تَطْغَوْا ۚ إِنَّهُ بِمَا تَعْمَلُونَ بَصِيرٌ ﴿١١٢﴾

113. ಆ ಅಕ್ರಮಿಗಳ ಕಡೆಗೆ ಕೊಂಚವೂ ವಾಲಬೇಡಿರಿ. ಅನ್ಯಥಾ ನರಕಾಗ್ನಿಯ ಸುಳಿಯಲ್ಲಿ ಸಿಕ್ಕಿ ಬಿಡುವಿರಿ. ನಿಮ್ಮನ್ನು ಅಲ್ಲಾಹನಿಂದ ರಕ್ಷಿಸತಕ್ಕ ರಕ್ಷಕ ಮಿತ್ರರಾರೂ ನಿಮಗೆ ಸಿಗಲಾರರು ಮತ್ತು ನಿಮಗೆ ಎಲ್ಲಿಂದಲೂ ಸಹಾಯವೂ ಒದಗದು.

وَلَا تَرْكَنُوا إِلَى الَّذِينَ ظَلَمُوا فَتَمَسَّكُمُ النَّارُ وَمَا لَكُم مِّن دُونِ اللَّهِ مِنْ أَوْلِيَاءَ ثُمَّ لَا تُنصَرُونَ ﴿١١٣﴾

114. ಹಗಲಿನ ಉಭಯ ಕೊನೆಗಳಲ್ಲೂ ರಾತ್ರಿ ಸ್ವಲ್ಪ ಕಳೆದ ಬಳಿಕವೂ[31] ನಮಾಝನ್ನು ಸಂಸ್ಥಾಪಿಸಿರಿ. ವಾಸ್ತವದಲ್ಲಿ ಪುಣ್ಯ ಕಾರ್ಯಗಳು ಪಾಪಕಾರ್ಯಗಳನ್ನು ದೂರೀಕರಿಸುತ್ತವೆ. ಇದು ಅಲ್ಲಾಹನನ್ನು ಸ್ಮರಿಸುವವರಿಗೊಂದು ಸ್ಮರಣೆಯಾಗಿರುತ್ತದೆ.

وَأَقِمِ الصَّلَاةَ طَرَفَيِ النَّهَارِ وَزُلَفًا مِّنَ اللَّيْلِ ۚ إِنَّ الْحَسَنَاتِ يُذْهِبْنَ السَّيِّئَاتِ ۚ ذَٰلِكَ ذِكْرَىٰ لِلذَّاكِرِينَ ﴿١١٤﴾

115. ತಾಳ್ಮೆಯಿಂದಿರಿ. ಅಲ್ಲಾಹ್ ಸಜ್ಜನರ ಪ್ರತಿಫಲವನ್ನೆಂದೂ ವ್ಯರ್ಥಗೊಳಿಸುವುದಿಲ್ಲ.

وَاصْبِرْ فَإِنَّ اللَّهَ لَا يُضِيعُ أَجْرَ الْمُحْسِنِينَ ﴿١١٥﴾

116. ಜನರು ಈ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವುದನ್ನು ತಡೆಯುವಂತಹ ಒಂದು ಉತ್ತಮ ಜನ ವಿಭಾಗವು ನಿಮಗಿಂತ ಮುಂಚೆ ಗತಿಸಿಹೋದ ಜನಾಂಗಗಳಲ್ಲೇಕೆ ಉಂಟಾಗಲಿಲ್ಲ? ಇಂತಹವರು ಇದ್ದರೂ ನಾವು ಈ ಜನಾಂಗದಿಂದ ರಕ್ಷಿಸಿದಂತಹ ಕೆಲವೇ ಮಂದಿ ಇದ್ದರು. ಅನ್ಯಥಾ ಅಕ್ರಮಿಗಳು ಅವರಿಗೆ ಧಾರಾಳವಾಗಿ ಕೊಡಲ್ಪಟ್ಟಿದ್ದ ಸುಖ ಭೋಗಗಳನ್ನೇ ಹಿಂಬಾಲಿಸುತ್ತಿದ್ದರು. ಅವರು ಅಪರಾಧಿಗಳಾಗಿಬಿಟ್ಟರು.

فَلَوْلَا كَانَ مِنَ الْقُرُونِ مِن قَبْلِكُمْ أُولُو بَقِيَّةٍ يَنْهَوْنَ عَنِ الْفَسَادِ فِي الْأَرْضِ إِلَّا قَلِيلًا مِّمَّنْ أَنجَيْنَا مِنْهُمْ ۗ وَاتَّبَعَ الَّذِينَ ظَلَمُوا مَا أُتْرِفُوا فِيهِ وَكَانُوا مُجْرِمِينَ ﴿١١٦﴾

31. ಹಗಲಿನ ಕೊನೆಗಳೆಂದರೆ ಪ್ರಭಾತ ಮತ್ತು ಮುಸ್ಸಂಜೆ. ರಾತ್ರಿ ಕಳೆದ ನಂತರ ಎಂದರೆ ಇಶಾದ ಹೊತ್ತಾಗಿದೆ. (ನಮಾಝ್‌ನ ಸಮಯದ ವಿವರಣೆಗಾಗಿ ನೋಡಿರಿ- ಅಧ್ಯಾಯ ಬನೀಇಸ್ರಾಈಲ್ ಸೂಕ್ತ 78, ತಾಹಾ ಸೂಕ್ತ 130, ಅರ್ರೂಮ್ 17 ಮತ್ತು 18ನೆಯ ಸೂಕ್ತಗಳು.

117. ನಾಡುಗಳ ನಿವಾಸಿಗಳು ಸುಧಾರಕರಾಗಿರುವಾಗ ನಿಮ್ಮ ಪ್ರಭು ಆ ನಾಡುಗಳನ್ನು ಅನ್ಯಾಯವಾಗಿ ನಾಶಗೊಳಿಸುವವನಲ್ಲ.

وَمَا كَانَ رَبُّكَ لِيُهْلِكَ الْقُرٰى بِظُلْمٍ
وَّاَهْلُهَا مُصْلِحُوْنَ ﴿١١٧﴾

118. ನಿಶ್ಚಯವಾಗಿಯೂ ನಿಮ್ಮ ಪ್ರಭು ಇಚ್ಛಿಸುತ್ತಿದ್ದರೆ ಸಕಲ ಮಾನವರನ್ನು ಒಂದೇ ಸಮುದಾಯವನ್ನಾಗಿ ಮಾಡುತ್ತಿದ್ದನು. ಆದರೆ ಅವರಿನ್ನು ಭಿನ್ನಮತಿಗಳಾಗಿಯೇ ಮುಂದುವರಿಯುವರು.

وَلَوْ شَآءَ رَبُّكَ لَجَعَلَ النَّاسَ اُمَّةً
وَّاحِدَةً وَّلَا يَزَالُوْنَ مُخْتَلِفِيْنَ ﴿١١٨﴾

119. ನಿಮ್ಮ ಪ್ರಭುವಿನ ಕೃಪೆಯಿದ್ದವರು ಮಾತ್ರ ಭಿನ್ನತೆಯಿಂದ ಪಾರಾಗುವರು. ಇದಕ್ಕಾಗಿಯೇ (ಈ ಆಯ್ಕೆಯ ಸ್ವಾತಂತ್ರ್ಯ ಪರೀಕ್ಷೆಗಾಗಿಯೇ) ಅವನು ಅವರನ್ನು ಸೃಷ್ಟಿಸಿರುವನು. ನಾನು ಯಕ್ಷರು ಮತ್ತು ಮನುಷ್ಯರಿಂದಲೂ ಎಲ್ಲರಿಂದಲೂ ನರಕವನ್ನು ತುಂಬಿಸುವೆನೆಂದು ನಿಮ್ಮ ಪ್ರಭು ಹೇಳಿದ್ದ ಮಾತು ಪೂರ್ಣಗೊಂಡಿತು.

اِلَّا مَنْ رَّحِمَ رَبُّكَ ؕ وَلِذٰلِكَ خَلَقَهُمْ ؕ
وَتَمَّتْ كَلِمَةُ رَبِّكَ لَاَمْلَئَنَّ جَهَنَّمَ
مِنَ الْجِنَّةِ وَالنَّاسِ اَجْمَعِيْنَ ﴿١١٩﴾

120. ಓ ಪೈಗಂಬರರೇ, ನಿಮಗೆ ಹೇಳಲಾಗುವ ಸಂದೇಶವಾಹಕರ ವೃತ್ತಾಂತಗಳಿವು. ನಾವು ಇವುಗಳ ಮೂಲಕ ನಿಮ್ಮ ಮನಸ್ಸನ್ನು ಬಲಪಡಿಸುತ್ತೇವೆ. ಇವುಗಳಿಂದ ನಿಮಗೆ ಪರಮಾರ್ಥಜ್ಞಾನ ಲಭಿಸಿತು. ಸತ್ಯವಿಶ್ವಾಸಿಗಳಿಗೆ ಉಪದೇಶ ಹಾಗೂ ಜಾಗೃತಿ ಲಭಿಸಿದುವು.

وَكُلًّا نَّقُصُّ عَلَيْكَ مِنْ اَنْۢبَآءِ الرُّسُلِ
مَا نُثَبِّتُ بِهٖ فُؤَادَكَ ۚ وَجَآءَكَ فِيْ هٰذِهِ
الْحَقُّ وَمَوْعِظَةٌ وَّذِكْرٰى لِلْمُؤْمِنِيْنَ ﴿١٢٠﴾

121. ಸತ್ಯವಿಶ್ವಾಸವನ್ನು ಸ್ವೀಕರಿಸದವರೊಡನೆ ಹೇಳಿರಿ - ನೀವು ನಿಮ್ಮ ಕ್ರಮದಂತೆ ಕಾರ್ಯವೆಸಗಿರಿ ಮತ್ತು ನಾವು ನಮ್ಮ ಕ್ರಮದಂತೆ ಕಾರ್ಯವೆಸಗುತ್ತೇವೆ.

وَقُلْ لِّلَّذِيْنَ لَا يُؤْمِنُوْنَ اعْمَلُوْا عَلٰى
مَكَانَتِكُمْ ؕ اِنَّا عٰمِلُوْنَ ﴿١٢١﴾

122. ಕರ್ಮಫಲವನ್ನು ನೀವೂ ನಿರೀಕ್ಷಿಸಿರಿ ನಾವೂ ನಿರೀಕ್ಷಿಸುತ್ತೇವೆ.

وَانْتَظِرُوْا ۚ اِنَّا مُنْتَظِرُوْنَ ﴿١٢٢﴾

123. ಆಕಾಶಗಳಲ್ಲೂ ಭೂಮಿಯಲ್ಲೂ ಅಡಗಿರುವುದೆಲ್ಲವೂ ಅಲ್ಲಾಹನ ಅಧೀನದಲ್ಲಿವೆ. ಸಕಲ ವ್ಯವಹಾರಗಳೂ ಆತನ ಕಡೆಗೇ ಮರಳಿಸಲ್ಪಡುತ್ತವೆ. ಆದುದರಿಂದ ಓ ಪೈಗಂಬರರೇ, ನೀವು ಅವನ ದಾಸ್ಯ-ಆರಾಧನೆ ಮಾಡಿರಿ. ಅವನ ಮೇಲೆಯೇ ಭರವಸೆಯನ್ನಿಡಿರಿ. ನೀವು ಮಾಡುತ್ತಿರುವುದರ ಬಗ್ಗೆ ಅಲ್ಲಾಹನು ಅಶ್ರದ್ಧನಲ್ಲ.

وَلِلّٰهِ غَيْبُ السَّمٰوٰتِ وَالْاَرْضِ وَاِلَيْهِ
يُرْجَعُ الْاَمْرُ كُلُّهٗ فَاعْبُدْهُ وَتَوَكَّلْ
عَلَيْهِ ؕ وَمَا رَبُّكَ بِغَافِلٍ عَمَّا تَعْمَلُوْنَ ﴿١٢٣﴾






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಲಿಫ್ ಲಾಮ್ ರಾ. ಇವು ತನ್ನ ಅಭಿಪ್ರಾಯವನ್ನು ಸುವ್ಯಕ್ತವಾಗಿ ವಿವರಿಸಿ ಹೇಳುವ ಗ್ರಂಥದ ಸೂಕ್ತಗಳು.

الٓرٰ تِلْكَ اٰيٰتُ الْكِتٰبِ الْمُبِيْنِ ①

2. ಇದನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತೆ ನಾವು ಇದನ್ನು ಕುರ್‌ಆನನ್ನಾಗಿ[1] ಮಾಡಿ ಅರಬೀ ಭಾಷೆಯಲ್ಲಿ ಅವತೀರ್ಣಗೊಳಿಸಿದೆವು.

اِنَّآ اَنْزَلْنٰهُ قُرْءٰنًا عَرَبِيًّا لَّعَلَّكُمْ تَعْقِلُوْنَ ②

3. ಓ ಪೈಗಂಬರರೇ, ನಾವು ಈ ಕುರ್‌ಆನನ್ನು ನಿಮ್ಮ ಕಡೆಗೆ 'ದಿವ್ಯವಾಣಿ' ಮಾಡಿ, ವೃತ್ತಾಂತಗಳನ್ನೂ ವಸ್ತುಸ್ಥಿತಿಗಳನ್ನೂ ಉತ್ತಮ ಶೈಲಿಯಲ್ಲಿ ನಿಮಗೆ ವಿವರಿಸಿಕೊಡುತ್ತೇವೆ. ಅನ್ಯಥಾ ಇದಕ್ಕಿಂತ ಮುಂಚೆ ನೀವು (ಈ ವಿಷಯಗಳ ಕುರಿತು) ಸಂಪೂರ್ಣ ಪ್ರಜ್ಞಾಹೀನರಾಗಿದ್ದಿರಿ.

نَحْنُ نَقُصُّ عَلَيْكَ اَحْسَنَ الْقَصَصِ بِمَآ اَوْحَيْنَآ اِلَيْكَ هٰذَا الْقُرْاٰنَ ۖ وَاِنْ كُنْتَ مِنْ قَبْلِهٖ لَمِنَ الْغٰفِلِيْنَ ③

4. ಯೂಸುಫರು ತಮ್ಮ ಪಿತರೊಡನೆ ಹೇಳಿದ ಸಂದರ್ಭವಿದು- "ಅಪ್ಪಾ, ಹನ್ನೊಂದು ನಕ್ಷತ್ರಗಳೂ ಸೂರ್ಯನೂ ಚಂದ್ರನೂ ಇದ್ದು ಅವೆಲ್ಲಾ ನನಗೆ ಸಾಷ್ಟಾಂಗವೆರಗುತ್ತಿರುವುದನ್ನು ನಾನು ಸ್ವಪ್ನದಲ್ಲಿ ಕಂಡಿರುತ್ತೇನೆ."

اِذْ قَالَ يُوْسُفُ لِاَبِيْهِ يٰٓاَبَتِ اِنِّيْ رَاَيْتُ اَحَدَ عَشَرَ كَوْكَبًا وَّالشَّمْسَ وَالْقَمَرَ رَاَيْتُهُمْ لِيْ سٰجِدِيْنَ ④

5. ಉತ್ತರವಾಗಿ ಅವರ ತಂದೆ ಇಂತೆಂದರು, "ಮಗನೇ, ನಿನ್ನ ಈ ಸ್ವಪ್ನವನ್ನು ನಿನ್ನ ಸಹೋದರರೊಡನೆ ಹೇಳಬೇಡ. ಅನ್ಯಥಾ

قَالَ يٰبُنَيَّ لَا تَقْصُصْ رُءْيَاكَ عَلٰٓى اِخْوَتِكَ فَيَكِيْدُوْا لَكَ كَيْدًا ۭ اِنَّ

1. ಕುರ್‌ಆನಿನ ಶಬ್ದಾರ್ಥ ಓದುವುದು ಎಂದಾಗಿದೆ. ಗ್ರಂಥಕ್ಕೆ ಈ ಹೆಸರನ್ನು ಏಕೆ ಕೊಡಲಾಗಿದೆ ಎಂದರೆ ಇದು ಎಲ್ಲಾ ವಿಭಾಗದ ಜನರು ಓದುವ ಮತ್ತು ಅತಿ ಹೆಚ್ಚಾಗಿ ಓದಲ್ಪಡುವ ಗ್ರಂಥವಾಗಿದೆ.

ಅವರು ನಿನ್ನ ವಿರುದ್ಧ ಒಳಸಂಚು ನಡೆಸುವರು.[2] ವಾಸ್ತವದಲ್ಲಿ ಶೈತಾನನು ಮಾನವನ ಪ್ರತ್ಯಕ್ಷ ಶತ್ರು.

الشَّيْطٰنَ لِلْاِنْسَانِ عَدُوٌّ مُّبِيْنٌ ۝٥

6. (ನೀನು ಸ್ವಪ್ನದಲ್ಲಿ ಕಂಡ) ಹಾಗೆಯೇ ಆಗುವುದು. ನಿನ್ನ ಪ್ರಭುವು ನಿನ್ನನ್ನು (ತನ್ನ ಕಾರ್ಯಕ್ಕಾಗಿ) ಆಯ್ದುಕೊಳ್ಳುವನು. ನಿನಗೆ ವಿಷಯಗಳ ಆಳಕ್ಕೆ ತಲುಪುವುದನ್ನು ಕಲಿಸಿಕೊಡುವನು[3] ಮತ್ತು ಇದಕ್ಕೆ ಮುಂಚೆ, ನಿನ್ನ ಪೂರ್ವಜರಾಗಿದ್ದ ಇಬ್‌ರಾಹೀಮ್ ಮತ್ತು ಇಸ್‌ಹಾಕ್‌ರ ಮೇಲೆ ಅವನು ತನ್ನ 'ಭವ್ಯಕೊಡುಗೆ'ಯನ್ನು ಪೂರ್ಣಗೊಳಿಸಿದಂತೆ ನಿನ್ನ ಮೇಲೂ ಯಅ್‌ಕೂಬರ ವಂಶಜರ ಮೇಲೂ ಪೂರ್ಣಗೊಳಿಸುವನು. ನಿಶ್ಚಯವಾಗಿಯೂ ನಿನ್ನ ಪ್ರಭು ಸರ್ವಜ್ಞನೂ ಧೀಮಂತನೂ ಆಗಿರುತ್ತಾನೆ."

وَكَذٰلِكَ يَجْتَبِيْكَ رَبُّكَ وَيُعَلِّمُكَ مِنْ تَاْوِيْلِ الْاَحَادِيْثِ وَيُتِمُّ نِعْمَتَهٗ عَلَيْكَ وَعَلٰٓى اٰلِ يَعْقُوْبَ كَمَآ اَتَمَّهَا عَلٰٓى اَبَوَيْكَ مِنْ قَبْلُ اِبْرٰهِيْمَ وَاِسْحٰقَ ۭ اِنَّ رَبَّكَ عَلِيْمٌ حَكِيْمٌ ۝٦

7. ವಾಸ್ತವದಲ್ಲಿ ಯೂಸುಫ್ ಮತ್ತು ಅವರ ಸಹೋದರರ ಚರಿತ್ರೆಯಲ್ಲಿ ಈ ಪ್ರಶ್ನಿಸುವವರಿಗೆ ದೊಡ್ಡ ನಿದರ್ಶನಗಳಿವೆ.

لَقَدْ كَانَ فِيْ يُوْسُفَ وَاِخْوَتِهٖٓ اٰيٰتٌ لِّلسَّاۗىِٕلِيْنَ ۝٧

8. ಈ ಕಥೆಯ ಆರಂಭ ಹೀಗಿದೆ- ಅವರ ಸಹೋದರರು ಪರಸ್ಪರ ಹೀಗೆ ಹೇಳಿದರು: ಈ ಯೂಸುಫನೂ ಅವನ ಸಹೋದರನೂ[4] ನಮ್ಮ ತಂದೆಗೆ ನಮ್ಮೆಲ್ಲರಿಗಿಂತ ಹೆಚ್ಚು ಪ್ರಿಯರಾಗಿರುತ್ತಾರೆ. ವಸ್ತುತಃ ನಾವು ಒಂದು ಸಂಪೂರ್ಣ ಕೂಟವಾಗಿದ್ದೇವೆ. ನಿಜ ಹೇಳುವುದಾದರೆ ನಮ್ಮ ಪಿತೃವರ್ಯರು ಸ್ಪಷ್ಟ ದುರ್ಮಾರ್ಗದಲ್ಲಿದ್ದಾರೆ.

اِذْ قَالُوْا لَيُوْسُفُ وَاَخُوْهُ اَحَبُّ اِلٰٓى اَبِيْنَا مِنَّا وَنَحْنُ عُصْبَةٌ ۭ اِنَّ اَبَانَا لَفِيْ ضَلٰلٍ مُّبِيْنِ ۝٨

9. ನಿಮ್ಮ ತಂದೆಯವರ ಒಲವು ನಿಮ್ಮ ಕಡೆಗೇ ಆಗುವಂತೆ ಮಾಡಲಿಕ್ಕಾಗಿ ಯೂಸುಫನನ್ನು ಕೊಂದು ಹಾಕಿರಿ, ಇಲ್ಲವೆ

اقْتُلُوْا يُوْسُفَ اَوِ اطْرَحُوْهُ اَرْضًا يَّخْلُ لَكُمْ وَجْهُ اَبِيْكُمْ وَتَكُوْنُوْا مِنْ بَعْدِهٖ

2. ಹ. ಯೂಸುಫ್‌ರ(ಅ) ಹತ್ತು ಮಂದಿ ಸಹೋದರರು ಬೇರೆ ತಾಯಿಯ ಉದರದಲ್ಲಿ ಹುಟ್ಟಿದವರಾಗಿದ್ದರು. ಅದರ ಜತೆಗೆ ಓರ್ವ ಕಿರಿಯ ಒಡಹುಟ್ಟಿದ ಸಹೋದರ ಅವರಿಗಿದ್ದನು. ಯೂಸುಫ್‌ರ(ಅ) ಮಲ ಸಹೋದರರು ಅವರ ಬಗ್ಗೆ ಅಸೂಯೆಪಡುತ್ತಿದ್ದರು. ತಮ್ಮ ಸ್ವಾರ್ಥ ಸಾಧನೆಗಾಗಿ ಯಾವುದೇ ಕೆಟ್ಟ ಕೆಲಸ ಮಾಡಲು ಹಿಂಜರಿಯುವರು ಎಂದು ಭಾವಿಸ ಬಹುದಾದಷ್ಟು ಉನ್ನತ ಚಾರಿತ್ರ್ಯವನ್ನೂ ಅವರು ಹೊಂದಿರಲಿಲ್ಲ ಎಂಬುದು ಹ. ಯಅ್‌ಕೂಬ್‌ರಿಗೆ(ಅ) ತಿಳಿದಿತ್ತು. ಆದ್ದರಿಂದ ಅವರು ತಮ್ಮ ಸಚ್ಚರಿತ ಪುತ್ರನನ್ನು ಜಾಗ್ರತೆಯಿಂದಿರುವಂತೆ ಎಚ್ಚರಿಸಿದರು. ಕನಸಿನಲ್ಲಿ ಕಂಡ ಸೂರ್ಯನೆಂದರೆ ಹ.ಯಅ್‌ಕೂಬ್(ಅ), ಚಂದ್ರನೆಂದರೆ ಅವರ ಪತ್ನಿ (ಹ. ಯೂಸುಫ್‌ರ(ಅ) ಮಲತಾಯಿ) ಮತ್ತು ಹನ್ನೊಂದು ನಕ್ಷತ್ರಗಳೆಂದರೆ ಹನ್ನೊಂದು ಪುತ್ರರಾಗಿದ್ದರು ಎಂಬುದು ಸ್ಪಷ್ಟವಿದೆ.

3. ಮೂಲದಲ್ಲಿ 'ತಅ್‌ವೀಲುಲ್ ಅಹಾದೀಸ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಸಾಮಾನ್ಯವಾಗಿ ಭಾವಿಸಲಾಗಿರುವಂತೆ ಕೇವಲ ಸ್ವಪ್ನಫಲದ ಜ್ಞಾನವಲ್ಲ. ವಾಸ್ತವದಲ್ಲಿ ಅದರ ತಾತ್ಪರ್ಯವೇನೆಂದರೆ ಅಲ್ಲಾಹನು ನಿನಗೆ ವ್ಯವಹಾರಜ್ಞಾನ ಮತ್ತು ವಾಸ್ತವಿಕತೆಯನ್ನು ಗುರುತಿಸುವ ಜ್ಞಾನ ದಯಪಾಲಿಸುವನು. ಪ್ರತಿಯೊಂದು ವಿಷಯದ ಆಳಕ್ಕೆ ತಲಪುವ ಮತ್ತು ತಳ ಮುಟ್ಟಲು ಸಾಧ್ಯವಾಗುವಂತಹ ಅಂತರ್‌ದೃಷ್ಟಿಯನ್ನು ನಿನಗೆ ನೀಡಲಾಗುವುದು ಎಂದಾಗಿದೆ.

4. ಅರ್ಥಾತ್- ಹ. ಯೂಸುಫ್‌ರಿಗಿಂತ(ಅ) ಹಲವು ವರ್ಷ ಕಿರಿಯರಾದ ಅವರ ತಮ್ಮ ಬಿನ್ ಯಮೀನ್.

ಎಲ್ಲಾದರೂ ಎಸೆದುಬಿಡಿರಿ. ಈ ಕಾರ್ಯವನ್ನು ಮಾಡಿಯಾದ ಬಳಿಕ ಸಜ್ಜನರಾಗಿರಬೇಕು.

قَوْمًا صٰلِحِيْنَ ⑨

10. ಆಗ ಅವರಲ್ಲೊಬ್ಬನು ಹೇಳಿದನು-"ಯೂಸುಫನನ್ನು ಕೊಲ್ಲಬೇಡಿರಿ. ಹಾಗೇನಾದರೂ ಮಾಡಲೇಬೇಕೆಂದಾದರೆ ಯಾವುದಾದರೊಂದು ಆಳವಾದ ಬಾವಿಯಲ್ಲಿ ಹಾಕಿಬಿಡಿರಿ. ಯಾವುದಾದರೊಂದು ಪ್ರವಾಸಿ ತಂಡವು ಅವನನ್ನು ಎತ್ತಿಕೊಂಡೊಯ್ಯಬಹುದು."

قَالَ قَآئِلٌ مِّنْهُمْ لَا تَقْتُلُوْا يُوْسُفَ وَاَلْقُوْهُ فِيْ غَيٰبَتِ الْجُبِّ يَلْتَقِطْهُ بَعْضُ السَّيَّارَةِ اِنْ كُنْتُمْ فٰعِلِيْنَ ⑩

11. ಈ ನಿರ್ಧಾರ ಪ್ರಕಾರ ಅವರು ಹೋಗಿ ತಮ್ಮ ತಂದೆಯವರೊಡನೆ, "ಅಪ್ಪಾ, ನೀವು ಯೂಸುಫನ ಬಗೆಗೆ ನಮ್ಮ ಮೇಲೆ ಭರವಸೆ ಯನ್ನೇಕೆ ಇರಿಸುವುದಿಲ್ಲ? ವಸ್ತುತಃ ನಾವು ಅವನ ನೈಜ ಹಿತಾ ಕಾಂಕ್ಷಿಗಳಾಗಿರುತ್ತೇವೆ.

قَالُوْا يٰۤاَبَانَا مَا لَكَ لَا تَاْمَنَّا عَلٰى يُوْسُفَ وَاِنَّا لَهٗ لَنٰصِحُوْنَ ⑪

12. ನಾಳೆ ಅವನನ್ನು ನಮ್ಮ ಸಂಗಡ ಕಳುಹಿಸಿರಿ. ಏನಾದರೂ ಮೆದ್ದು,[5] ಆಡಿ, ನಲಿದು ಆನಂದ ಪಡುವನು. ನಾವು ಖಂಡಿತ ವಾಗಿಯೂ ಅವನ ರಕ್ಷಣೆಗೆ ಇದ್ದೇವೆ" ಎಂದರು.

اَرْسِلْهُ مَعَنَا غَدًا يَّرْتَعْ وَيَلْعَبْ وَاِنَّا لَهٗ لَحٰفِظُوْنَ ⑫

13. ಆಗ ತಂದೆ ಹೇಳಿದರು, "ನೀವು ಅವನನ್ನು ಕರೆದೊಯ್ಯುವುದು ನನ್ನನ್ನು ದುಃಖಕ್ಕೀಡು ಮಾಡುತ್ತಿದೆ. ನೀವು ಅವನಿಂದ ಅಜಾಗ ರೂಕರಾಗಿದ್ದಾಗ ಅವನನ್ನು ತೋಳ ತಿಂದುಬಿಡಬಹುದೆಂಬ ಭಯ ನನ್ನನ್ನು ಕಾಡುತ್ತಿದೆ."

قَالَ اِنِّيْ لَيَحْزُنُنِيْۤ اَنْ تَذْهَبُوْا بِهٖ وَاَخَافُ اَنْ يَّاْكُلَهُ الذِّئْبُ وَاَنْتُمْ عَنْهُ غٰفِلُوْنَ ⑬

14. ಆಗ ಅವರು, "ನಾವು ಒಂದು ತಂಡವೇ ಆಗಿರುವಾಗ, ನಾವಿರುತ್ತ ಅವನನ್ನು ತೋಳ ತಿಂದರೆ, ನಾವು ಯಾವುದಕ್ಕೂ ಬೇಡದವರಾ ಗುವೆವು" ಎಂದರು.

قَالُوْا لَئِنْ اَكَلَهُ الذِّئْبُ وَنَحْنُ عُصْبَةٌ اِنَّاۤ اِذًا لَّخٰسِرُوْنَ ⑭

15. ಹೀಗೆ ಅವರು ಒತ್ತಾಯಪಡಿಸಿ ಅವರನ್ನು ಒಯ್ದಾಗ ಮತ್ತು ಅವರು ಅವರನ್ನು (ಯೂಸುಫರನ್ನು) ಒಂದು ಆಳವಾದ ಬಾವಿಗೆ ತಳ್ಳಿಬಿಡಬೇಕೆಂದು ಒಮ್ಮತದಿಂದ ನಿರ್ಧರಿಸಿದಾಗ, "ನೀನು ಇವರಿಗೆ ಇವರ ಈ ವರ್ತನೆಯ ಪರಿಣಾಮವನ್ನು ತೋರಿಸಿ ಕೊಡುವ ಸಂದರ್ಭವೊಂದು ಬರಲಿಕ್ಕಿದೆ. ಇವರು ಅದರ ಬಗ್ಗೆ ಪ್ರಜ್ಞಾಹೀನರಾಗಿದ್ದಾರೆ" ಎಂದು ನಾವು ಯೂಸು ಫರಿಗೆ 'ದಿವ್ಯವಾಣಿ' ಮಾಡಿದೆವು.

فَلَمَّا ذَهَبُوْا بِهٖ وَاَجْمَعُوْۤا اَنْ يَّجْعَلُوْهُ فِيْ غَيٰبَتِ الْجُبِّ ۚ وَاَوْحَيْنَاۤ اِلَيْهِ لَتُنَبِّئَنَّهُمْ بِاَمْرِهِمْ هٰذَا وَهُمْ لَا يَشْعُرُوْنَ ⑮

5. ಮಗು ಕಾಡಿನಲ್ಲಿ ನಡೆದಾಡಿ ಹಣ್ಣುಗಳನ್ನು ಕೊಯ್ದು ತಿನ್ನುತ್ತಾ ಸುತ್ತಾಡುವುದನ್ನು ಅಕ್ಕರೆಯಿಂದ 'ಮೇಯುವುದು' ಎನ್ನಲಾಗಿದೆ.

16. ಸಂಜೆ ಹೊತ್ತಿಗೆ ಅವರು ಅಳುತ್ತ, ತಮ್ಮ ತಂದೆಯ ಬಳಿಗೆ ಬಂದರು.

وَجَآءُوْٓ اَبَاهُمْ عِشَآءً يَّبْكُوْنَ ۝١٦

17. "ಅಪ್ಪಾ, ನಾವು ಓಟದ ಸ್ಪರ್ಧೆಯಲ್ಲಿ ನಿರತರಾಗಿದ್ದೆವು. ಯೂಸುಫ ನನ್ನು ನಮ್ಮ ಸಾಮಾನುಗಳ ಹತ್ತಿರ ಬಿಟ್ಟಿದ್ದೆವು. ಅಷ್ಟರಲ್ಲಿ ತೋಳ ಬಂದು ಅವನನ್ನು ತಿಂದು ಬಿಟ್ಟಿತು. ನಾವು ಸತ್ಯ ವಂತರಾಗಿದ್ದರೂ ತಾವು ನಮ್ಮ ಮಾತನ್ನು ನಂಬಲಾರಿರಿ" ಎಂದರು.

قَالُوْا يٰٓاَبَانَآ اِنَّا ذَهَبْنَا نَسْتَبِقُ وَتَرَكْنَا يُوْسُفَ عِنْدَ مَتَاعِنَا فَاَكَلَهُ الذِّئْبُ ۚ وَمَآ اَنْتَ بِمُؤْمِنٍ لَّنَا وَلَوْ كُنَّا صٰدِقِيْنَ ۝١٧

18. ಅವರು ಯೂಸುಫರ ಅಂಗಿಗೆ ಕೃತಕ ರಕ್ತ ಹಚ್ಚಿ ತಂದಿದ್ದರು. ಇದನ್ನು ಕೇಳಿ ಅವರ ತಂದೆ ಹೇಳಿದರು- "ಆದರೆ ನಿಮ್ಮ ಭ್ರಷ್ಟ ಚಿತ್ತಗಳು ನಿಮಗೆ ಒಂದು ದೊಡ್ಡ ಕಾರ್ಯವನ್ನು ಸುಲಭ ಗೊಳಿಸಿಬಿಟ್ಟವು. ಚಿಂತಿಲ್ಲ, ನಾನು ಸಹಿಸಿಕೊಳ್ಳುವೆನು- ಚೆನ್ನಾಗಿ ಸಹಿಸಿಕೊಳ್ಳುವೆನು. ನಿಮ್ಮ ಸೃಷ್ಟನೆಯ ಮಾತುಗಳ ಬಗ್ಗೆ ಅಲ್ಲಾಹ ನೊಡನೆ ಮಾತ್ರ ಸಹಾಯ ಯಾಚಿಸಬಹುದಷ್ಟೆ."

وَجَآءُوْ عَلٰى قَمِيْصِهٖ بِدَمٍ كَذِبٍ ۗ قَالَ بَلْ سَوَّلَتْ لَكُمْ اَنْفُسُكُمْ اَمْرًا ۗ فَصَبْرٌ جَمِيْلٌ ۗ وَاللّٰهُ الْمُسْتَعَانُ عَلٰى مَا تَصِفُوْنَ ۝١٨

19. ಅತ್ತ ಪ್ರವಾಸಿಗರ ತಂಡವೊಂದು ಬಂದಿತು. ಅದು ತನ್ನ ನೀರು ತರುವವನನ್ನು ನೀರು ತರಲು ಕಳುಹಿಸಿತು. ಅವನು ತೊಟ್ಟಿಯನ್ನು ಬಾವಿಗೆ ಇಳಿಸಿದಾಗ (ಯೂಸುಫರನ್ನು ಕಂಡು) "ಶುಭವಾಗಲಿ! ಇಲ್ಲೊಬ್ಬ ಬಾಲಕನಿದ್ದಾನೆ" ಎಂದು ಕೂಗಿದನು. ಅವರು (ಪ್ರವಾಸೀ ತಂಡದವರು) ಅವರನ್ನು (ಯೂಸುಫರನ್ನು) ವ್ಯಾಪಾರದ ಸರಕಾಗಿ ಬಚ್ಚಿಟ್ಟುಕೊಂಡರು. ವಸ್ತುತಃ ಅವರು ಮಾಡುತ್ತಿದ್ದು ದನ್ನು ಅಲ್ಲಾಹನು ಬಲ್ಲವನಾಗಿದ್ದನು.

وَجَآءَتْ سَيَّارَةٌ فَاَرْسَلُوْا وَارِدَهُمْ فَاَدْلٰى دَلْوَهٗ ۗ قَالَ يٰبُشْرٰى هٰذَا غُلٰمٌ ۗ وَاَسَرُّوْهُ بِضَاعَةً ۗ وَاللّٰهُ عَلِيْمٌۢ بِمَا يَعْمَلُوْنَ ۝١٩

20. ಕೊನೆಗೆ ಅವರು ಕೆಲವೇ ದಿರ್‌ಹಮ್‌ಗಳ ತುಚ್ಛ ಬೆಲೆಗೆ ಅವರನ್ನು ಮಾರಿಬಿಟ್ಟರು ಮತ್ತು ಅವರು ಅವರ ಬೆಲೆಯ ಬಗ್ಗೆ ಹೆಚ್ಚಿನ ನಿರೀಕ್ಷೆಯುಳ್ಳವರಾಗಿರಲಿಲ್ಲ.

وَشَرَوْهُ بِثَمَنٍۢ بَخْسٍ دَرَاهِمَ مَعْدُوْدَةٍ ۚ وَكَانُوْا فِيْهِ مِنَ الزّٰهِدِيْنَ ۝٢٠

21. ಅವರನ್ನು ಖರೀದಿಸಿದ ಈಜಿಪ್ಟಿನವನು ತನ್ನ ಪತ್ನಿಯೊಡನೆ, "ಇವನನ್ನು ಚೆನ್ನಾಗಿರಿಸು, ಇವನು ನಮಗೆ ಫಲಕಾರಿಯಾಗಲೂ ಬಹುದು ಅಥವಾ ನಾವು ಇವನನ್ನು ದತ್ತುಪುತ್ರನನ್ನಾಗಿಯೂ ಮಾಡಿಕೊಳ್ಳಬಹುದು! ಎಂದನು. ಈ ರೀತಿ ನಾವು ಯೂಸುಫರಿಗೆ ಆ ಭೂಭಾಗದಲ್ಲಿ ನೆಲೆಯೂರಲು ಅವಕಾಶ ಮಾಡಿ ಕೊಟ್ಟೆವು ಮತ್ತು ಅವರಿಗೆ ವಿಷಯಗಳನ್ನು ಗ್ರಹಿಸುವ ಜ್ಞಾನವನ್ನು ಕೊಡುವ

وَقَالَ الَّذِى اشْتَرٰىهُ مِنْ مِّصْرَ لِامْرَاَتِهٖٓ اَكْرِمِىْ مَثْوٰىهُ عَسٰٓى اَنْ يَّنْفَعَنَآ اَوْ نَتَّخِذَهٗ وَلَدًا ۗ وَكَذٰلِكَ مَكَّنَّا لِيُوْسُفَ فِى الْاَرْضِ ۡ وَلِنُعَلِّمَهٗ مِنْ تَاْوِيْلِ الْاَحَادِيْثِ ۗ وَاللّٰهُ غَالِبٌ عَلٰٓى اَمْرِهٖ وَلٰكِنَّ

ವ್ಯವಸ್ಥೆ ಮಾಡಿದೆವು. ಅಲ್ಲಾಹನು ತನ್ನ ಕಾರ್ಯವನ್ನು ಮಾಡಲು ಸುಶಕ್ತನು. ಆದರೆ ಹೆಚ್ಚಿನವರು ತಿಳಿಯುವುದಿಲ್ಲ.

أَكْثَرَ النَّاسِ لَا يَعْلَمُونَ ٢١

22. ಅವರು ತಮ್ಮ ತುಂಬು ಯೌವನಕ್ಕೆ ತಲುಪಿದಾಗ ನಾವು ಅವರಿಗೆ ತೀರ್ಮಾನದ ಶಕ್ತಿ ಮತ್ತು ಜ್ಞಾನ ನೀಡಿದೆವು. ಸಜ್ಜನರಿಗೆ ನಾವು ಈ ರೀತಿ ಪ್ರತಿಫಲ ನೀಡುತ್ತೇವೆ.

وَلَمَّا بَلَغَ أَشُدَّهُ آتَيْنَاهُ حُكْمًا وَعِلْمًا ۚ وَكَذَٰلِكَ نَجْزِي الْمُحْسِنِينَ ٢٢

23. ಯೂಸುಫರು ವಾಸಿಸುತ್ತಿದ್ದ ಮನೆಯೊಡತಿ ಅವರ ಮೇಲೆ ಪ್ರೇಮ ಜಾಲ ಬೀಸತೊಡಗಿದಳು. ಒಂದು ದಿನ ಕದ ಮುಚ್ಚಿ, 'ಇತ್ತ ಬಾ' ಎಂದಳು. ಆಗ ಯೂಸುಫರು 'ಅಲ್ಲಾಹನು ರಕ್ಷಿಸಲಿ. ನನ್ನ ಪ್ರಭು[6] ನನಗೆ ಉತ್ತಮ ಸ್ಥಾನವನ್ನು ದಯಪಾಲಿಸಿದ್ದಾನೆ. (ಹೀಗಿರುವಾಗ ನಾನು ಈ ನೀಚ ಕಾರ್ಯವೆಸಗುವುದೇ?) ಇಂತಹ ಅಕ್ರಮಿಗಳು ಎಂದೂ ಯಶಸ್ವಿಗಳಾಗುವುದಿಲ್ಲ" ಎಂದರು.

وَرَاوَدَتْهُ الَّتِي هُوَ فِي بَيْتِهَا عَن نَّفْسِهِ وَغَلَّقَتِ الْأَبْوَابَ وَقَالَتْ هَيْتَ لَكَ ۚ قَالَ مَعَاذَ اللَّهِ ۖ إِنَّهُ رَبِّي أَحْسَنَ مَثْوَايَ ۖ إِنَّهُ لَا يُفْلِحُ الظَّالِمُونَ ٢٣

24. ಅವಳು ಅವರ ಕಡೆಗೆ ಮುಂದುವರಿದಳು. ಯೂಸುಫರೂ ತಮ್ಮ ಪ್ರಭುವಿನ ನಿದರ್ಶನವನ್ನು ಕಾಣದಿರುತ್ತಿದ್ದರೆ[7] ಅವಳ ಕಡೆಗೆ ಮುಂದಾಗುತ್ತಿದ್ದರು. ಹೀಗಾದುದು ನಾವು ಅವರಿಂದ ಪಾಪ ಮತ್ತು ನಿರ್ಲಜ್ಜತನವನ್ನು ತೊಲಗಿಸಲಿಕ್ಕಾಗಿ, ವಾಸ್ತವದಲ್ಲಿ ಅವರು ನಮ್ಮ ಆಯ್ದ ದಾಸರಲ್ಲಾಗಿದ್ದರು.

وَلَقَدْ هَمَّتْ بِهِ ۖ وَهَمَّ بِهَا لَوْلَا أَن رَّأَىٰ بُرْهَانَ رَبِّهِ ۚ كَذَٰلِكَ لِنَصْرِفَ عَنْهُ السُّوءَ وَالْفَحْشَاءَ ۚ إِنَّهُ مِنْ عِبَادِنَا الْمُخْلَصِينَ ٢٤

25. ಕೊನೆಗೆ ಯೂಸುಫರು ಮುಂದಿನಿಂದಲೂ ಅವಳು ಹಿಂದಿನಿಂದಲೂ ಬಾಗಿಲಿನತ್ತ ಓಡಿದರು ಮತ್ತು ಹಿಂದಿನಿಂದ ಯೂಸುಫರ ಅಂಗಿಯನ್ನು (ಹಿಡಿದೆಳೆದು) ಹರಿದಳು. ಬಾಗಿಲಲ್ಲಿ ಅವರಿಬ್ಬರೂ ಅವಳ ಪತಿ ಉಪಸ್ಥಿತನಿದ್ದುದನ್ನು ಕಂಡರು. ಅವನನ್ನು ಕಂಡೊಡನೆ

وَاسْتَبَقَا الْبَابَ وَقَدَّتْ قَمِيصَهُ مِن دُبُرٍ وَأَلْفَيَا سَيِّدَهَا لَدَا الْبَابِ ۚ قَالَتْ مَا جَزَاءُ مَنْ أَرَادَ بِأَهْلِكَ سُوءًا إِلَّا

6. ಸಾಮಾನ್ಯವಾಗಿ ವ್ಯಾಖ್ಯಾನಕಾರರು ಮತ್ತು ಅನುವಾದಕರು ಇಲ್ಲಿ 'ನನ್ನ ಪ್ರಭು' ಎಂಬ ಪದವನ್ನು ಹ. ಯೂಸುಫ್(ಅ) ತಾನು ನೌಕರಿ ಮಾಡುತ್ತಿದ್ದ ಆ ವ್ಯಕ್ತಿಗೆ ಉಪಯೋಗಿಸಿದ್ದಾರೆ ಎಂದು ಭಾವಿಸುತ್ತಾರೆ. ನನ್ನ ಯಜಮಾನ ನನ್ನನ್ನು ಇಷ್ಟು ಸುಸ್ಥಿತಿಯಲ್ಲಿಟ್ಟಿದ್ದಾನೆ. ಹಾಗಿರುವಾಗ ಅವನ ಪತ್ನಿಯೊಡನೆ ವ್ಯಭಿಚಾರವೆಸಗುವಂತಹ, ಉಂಡ ಮನೆಗೆ ಎರಡು ಬಗೆಯುವ ಕೆಲಸವನ್ನು ನಾನು ಮಾಡುವುದಾದರೂ ಹೇಗೆ ಎಂಬುದು ಅವರ ಮಾತಿನ ಇಂಗಿತವಾಗಿತ್ತೆಂದು ಭಾವಿಸಲಾಗುತ್ತದೆ. ಆದರೆ ಪಾಪದಿಂದ ದೂರವಿರಲಿಕ್ಕಾಗಿ ಅಲ್ಲಾಹನ ಬದಲು ಯಾವನಾದರೊಬ್ಬ ದಾಸನನ್ನು ಭಯಪಡುವುದು ಓರ್ವ ಪ್ರವಾದಿಯ ಘನತೆಗೆ ತಕ್ಕುದಾದ ಮಾತಲ್ಲ. ಅಲ್ಲದೆ ದೇವೇತರರನ್ನು 'ರಬ್ಬ್' ಎಂದು ಅಲ್ಲಾಹನ ಯಾವುದೇ ಪ್ರವಾದಿ ಹೇಳಿರುವುದಕ್ಕೆ ಕುರ್‌ಆನಿನಲ್ಲಿ ಉದಾಹರಣೆಯಿಲ್ಲ.

7. 'ಬುರ್‌ಹಾನ್' ಎಂದರೆ ಸಾಕ್ಷ್ಯ ಮತ್ತು ನಿದರ್ಶನ. ಪ್ರಭುವಿನ ಬುರ್‌ಹಾನ್ ಎಂದರೆ ಅಲ್ಲಾಹನು ಬೋಧಿಸಿರುವ ನಿದರ್ಶನ. ಅದರ ಮೂಲಕವೇ ಯೂಸುಫ್‌ರ(ಅ) ಮನಸ್ಸಾಕ್ಷಿಗೆ ಈ ಮಹಿಳೆಯು ವಿಲಾಸಕ್ಕೆ ನೀಡಿರುವ ಆಹ್ವಾನವನ್ನು ಸ್ವೀಕರಿಸುವುದು ನಿನಗೆ ಭೂಷಣವಲ್ಲ ಎಂದು ಪ್ರೇರೇಪಿಸಲು ಸಾಧ್ಯವಾಯಿತು. ಹಾಗೆಯೇ ಹಿಂದಿನ ಉಲ್ಲೇಖದಲ್ಲಿ ಬಂದಿರುವ, "ನನ್ನ ಪ್ರಭು ನನಗೆ ಉತ್ತಮ ಸ್ಥಾನವನ್ನು ದಯಪಾಲಿಸಿದ್ದಾನೆ. (ಹೀಗಿರುವಾಗ ನಾನು ಈ ನೀಚ ಕಾರ್ಯವೆಸಗುವುದೇ?) ಇಂತಹ ಅಕ್ರಮಿಗಳು ಎಂದೂ ಯಶಸ್ವಿಗಳಾಗುವುದಿಲ್ಲ" ಎಂಬುದೂ ಅಲ್ಲಾಹನ ನಿದರ್ಶನವೇ ಆಗಿದೆ.

ಆಕೆ ಹೇಳಿದಳು, "ನಿಮ್ಮ ಮನೆಯಾಕೆಯೊಂದಿಗೆ ನೀಚಕಾರ್ಯ ವೆಸಗಲಿಚ್ಛಿಸಿದವನ ಶಿಕ್ಷೆಯೇನು? ಇವನಿಗೆ ಸೆರೆಮನೆವಾಸ ಅಥವಾ ವೇದನಾತ್ಮಕ ದಂಡನೆಯ ವಿನಾ ಇನ್ನಾವ ಶಿಕ್ಷೆ ಇರಬಹುದು?"

أَن يُسْجَنَ أَوْ عَذَابٌ أَلِيمٌ ﴿٢٥﴾

26. (ಆಗ) ಯೂಸುಫರು, "ಇವಳೇ ನನ್ನನ್ನು ಬಲೆಗೆ ಸಿಕ್ಕಿಸಲು ಯತ್ನಿಸಿದ್ದಳು" ಎಂದರು. ಆ ಸ್ತ್ರೀಯ ಕುಟುಂಬದವರಲ್ಲೊಬ್ಬನು (ಸಂದರ್ಭೋಚಿತ) ಸಾಕ್ಷ್ಯವನ್ನು ಹೀಗೆ ನೀಡಿದನು- "ಯೂಸುಫನ ಅಂಗಿ ಮುಂಭಾಗದಿಂದ ಹರಿದಿದ್ದರೆ ಸ್ತ್ರೀಯು ಸತ್ಯವಂತಳು ಮತ್ತು ಇವನು ಸುಳ್ಳುಗಾರ.

قَالَ هِيَ رَاوَدَتْنِي عَن نَّفْسِي وَشَهِدَ شَاهِدٌ مِّنْ أَهْلِهَا ۚ إِن كَانَ قَمِيصُهُ قُدَّ مِن قُبُلٍ فَصَدَقَتْ وَهُوَ مِنَ الْكَاذِبِينَ ﴿٢٦﴾

27. ಇವನ ಅಂಗಿ ಹಿಂಭಾಗದಿಂದ ಹರಿದಿದ್ದರೆ ಸ್ತ್ರೀಯು ಸುಳ್ಳುಗಾರ್ತಿ ಮತ್ತು ಇವನು ಸತ್ಯವಂತ."[8]

وَإِن كَانَ قَمِيصُهُ قُدَّ مِن دُبُرٍ فَكَذَبَتْ وَهُوَ مِنَ الصَّادِقِينَ ﴿٢٧﴾

28. ಆಕೆಯ ಪತಿಯು ಯೂಸುಫರ ಅಂಗಿಯು ಹಿಂಭಾಗದಿಂದ ಹರಿದಿದ್ದುದನ್ನು ಕಂಡಾಗ ಇಂತೆಂದನು, "ನಿಮ್ಮ (ಸ್ತ್ರೀಯರ) ಕುತಂತ್ರಗಳಿವು. ನಿಜಕ್ಕೂ ನಿಮ್ಮ ಕುತಂತ್ರಗಳು ಕಂಟಕಪ್ರಾಯ ವಾಗಿರುತ್ತವೆ.

فَلَمَّا رَأَىٰ قَمِيصَهُ قُدَّ مِن دُبُرٍ قَالَ إِنَّهُ مِن كَيْدِكُنَّ ۖ إِنَّ كَيْدَكُنَّ عَظِيمٌ ﴿٢٨﴾

29. ಯೂಸುಫ್! ನೀನು ಈ ವಿಷಯವನ್ನು ಕಡೆಗಣಿಸು ಮತ್ತು ಓ ಸ್ತ್ರೀಯೇ! ನೀನು ನಿನ್ನ ಅಪರಾಧಕ್ಕಾಗಿ ಕ್ಷಮೆ ಯಾಚಿಸು. ವಾಸ್ತವದಲ್ಲಿ ನೀನೇ ಅಪರಾಧಿಯಾಗಿದ್ದಿ."

يُوسُفُ أَعْرِضْ عَنْ هَٰذَا ۚ وَاسْتَغْفِرِي لِذَنبِكِ ۖ إِنَّكِ كُنتِ مِنَ الْخَاطِئِينَ ﴿٢٩﴾

30. ನಗರದ ವನಿತೆಯರು ಪರಸ್ಪರ ಚರ್ಚಿಸತೊಡಗಿದರು- "ಅಝೀಝನ[9] ಪತ್ನಿ ತನ್ನ ತರುಣ ಗುಲಾಮನನ್ನು ಮೋಹಪಾಶ ದಲ್ಲಿ ಬಿಗಿಯಲು ಯತ್ನಿಸುತ್ತಿದ್ದಾಳೆ. ಪ್ರೇಮವು ಅವಳನ್ನು ಅನಿಯಂತ್ರಿತಗೊಳಿಸಿದೆ. ನಮ್ಮ ದೃಷ್ಟಿಯಲ್ಲಿ ಅವಳು ಸುವ್ಯಕ್ತ ತಪ್ಪು ಹಾದಿಯಲ್ಲಿದ್ದಾಳೆ."

وَقَالَ نِسْوَةٌ فِي الْمَدِينَةِ امْرَأَتُ الْعَزِيزِ تُرَاوِدُ فَتَاهَا عَن نَّفْسِهِ ۖ قَدْ شَغَفَهَا حُبًّا ۖ إِنَّا لَنَرَاهَا فِي ضَلَالٍ مُّبِينٍ ﴿٣٠﴾

8. ಅರ್ಥಾತ್- ಹ. ಯೂಸುಫ್‌ರ(ಅ) ಅಂಗಿ ಮುಂಭಾಗದಿಂದ ಹರಿದಿದ್ದರೆ ಯೂಸುಫ್‌ರೇ(ಅ) ಮೊದಲು ಕೈ ಮಾಡಿದ್ದರು ಮತ್ತು ಮಹಿಳೆ ತನ್ನ ರಕ್ಷಣೆಗಾಗಿ ಸೆಣಸುತ್ತಿದ್ದಳು ಎಂಬುದಕ್ಕೆ ಅದೊಂದು ಸ್ಪಷ್ಟ ಪುರಾವೆಯಾಗಿದೆ. ಆದರೆ ಯೂಸುಫ್‌ರ(ಅ) ಅಂಗಿ ಹಿಂದಿನಿಂದ ಹರಿದಿದ್ದರೆ ಆಕೆ ಅವರ ಹಿಂದೆ ಬಿದ್ದಿದ್ದಳು ಮತ್ತು ಯೂಸುಫ್(ಅ) ಆಕೆಯಿಂದ ಬಿಡಿಸಿ ಕೊಳ್ಳಬಯಸಿದ್ದರು ಎಂದು ಸಾಬೀತಾಗುತ್ತದೆ. ಅಲ್ಲದೆ ಊಹೆಗೆ ನಿಲುಕುವಂತಹ ಇನ್ನೊಂದು ಸಾಕ್ಷ್ಯವೂ ಇದರಲ್ಲಿ ಅಡಕವಾಗಿದೆ. ಪ್ರಸ್ತುತ ಸಾಕ್ಷಿದಾರನು ಹ. ಯೂಸುಫ್‌ರ(ಅ) ಅಂಗಿಯ ಕಡೆಗೆ ಮಾತ್ರ ಗಮನ ಸೆಳೆದಿದ್ದಾನೆ. ಇದರಿಂದ ಆ ಸ್ತ್ರೀಯ ದೇಹದಲ್ಲಿ ಹೊಯ್ಕೈಯ ಯಾವುದೇ ಚಿಹ್ನೆಗಳು ಇರಲಿಲ್ಲವೆಂದು ವ್ಯಕ್ತವಾಗುತ್ತದೆ. ಇದೊಂದು ವೇಳೆ ಅತ್ಯಾಚಾರದ ಪ್ರಕರಣವಾಗಿದ್ದರೆ ಆಕೆಯಲ್ಲಿ ಅದರ ಲಕ್ಷಣಗಳು ಇರಬೇಕಾಗಿತ್ತು.

9. 'ಅಝೀಝ್' ಎಂಬುದು ಆ ವ್ಯಕ್ತಿಯ ಹೆಸರಾಗಿರಲಿಲ್ಲ. ಬದಲಾಗಿ ಈಜಿಪ್ಟ್‌ನಲ್ಲಿ ಉನ್ನತ ಪದವಿಯಲ್ಲಿರುವ ವ್ಯಕ್ತಿಗೆ ಈ ಪದವನ್ನು ಸಾಮಾನ್ಯವಾಗಿ ಪ್ರಯೋಗಿಸಲಾಗುತ್ತಿತ್ತು.

31. ಅವಳು ಅವರ ಈ ಕುಟಿಲ ಮಾತುಗಳನ್ನು ಕೇಳಿದಾಗ ಕರೆ ಕಳುಹಿಸಿದಳು ಮತ್ತು ಅವರಿಗಾಗಿ ಸುಪ್ಪತ್ತಿಗೆಗಳಿಂದ ಸಜ್ಜಾದ ಸಭೆಯೊಂದನ್ನು ಏರ್ಪಡಿಸಿದಳು. ಔತಣದಲ್ಲಿ ಪ್ರತಿಯೊಬ್ಬಳ ಮುಂದೆ ಒಂದೊಂದು ಚೂರಿಯನ್ನಿರಿಸಿದಳು. (ಆ ಸ್ತ್ರೀಯರು ಹಣ್ಣುಗಳನ್ನು ಕೊಯ್ದು ತಿನ್ನುತ್ತಲಿದ್ದ ಅದೇ ವೇಳೆಯಲ್ಲಿ) ಅವಳು ಯೂಸುಫರಿಗೆ ಅವರ ಮುಂದೆ ಹೊರಟು ಬರುವಂತೆ ಸೂಚನೆ ಕೊಟ್ಟಳು. ಆ ಸ್ತ್ರೀಯರ ದೃಷ್ಟಿ ಅವರ ಮೇಲೆ ಬಿದ್ದಾಗ ಅವರು ದಂಗಾದರು ಮತ್ತು ತಮ್ಮ ಕೈಗಳನ್ನೇ ಕೊಯ್ದುಕೊಂಡರು. "ಅಲ್ಲ, ಈತನು ಎಷ್ಟು ಮಾತ್ರಕ್ಕೂ ಮಾನವನಲ್ಲ. ಇದಾರೋ ಸನ್ಮಾನ್ಯ ದೇವಚರ" ಎಂದು ಭಾವಪರವಶರಾಗಿ ಕೂಗಿಕೊಂಡರು.

فَلَمَّا سَمِعَتْ بِمَكْرِهِنَّ أَرْسَلَتْ إِلَيْهِنَّ وَأَعْتَدَتْ لَهُنَّ مُتَّكَأً وَآتَتْ كُلَّ وَاحِدَةٍ مِّنْهُنَّ سِكِّينًا وَقَالَتِ اخْرُجْ عَلَيْهِنَّ ۖ فَلَمَّا رَأَيْنَهُ أَكْبَرْنَهُ وَقَطَّعْنَ أَيْدِيَهُنَّ وَقُلْنَ حَاشَ لِلَّهِ مَا هَٰذَا بَشَرًا إِنْ هَٰذَا إِلَّا مَلَكٌ كَرِيمٌ ﴿٣١﴾

32. ಅಝೀಝರ ಪತ್ನಿ ಹೇಳಿದಳು, "ಕಂಡಿರಾ! ಯಾರ ವಿಷಯವಾಗಿ ನೀವು ನನ್ನ ಕುರಿತು ಆಕ್ಷೇಪಕರ ಮಾತುಗಳನ್ನಾಡುತ್ತಿದ್ದಿರೋ ಆ ವ್ಯಕ್ತಿ ಇವನೇ. ನಿಸ್ಸಂದೇಹವಾಗಿಯೂ ನಾನು ಇವನನ್ನು ವಶೀಕರಿಸಲು ಪ್ರಯತ್ನಿಸಿದ್ದೆ. ಆದರೆ ಇವನು ತಪ್ಪಿಸಿಕೊಂಡನು. ಇವನು ನನ್ನ ಮಾತು ಕೇಳದಿದ್ದರೆ, ಸೆರೆಮನೆ ಸೇರುವನು ಮತ್ತು ಅಪಮಾನಕ್ಕೊಳಗಾಗುವನು."

قَالَتْ فَذَٰلِكُنَّ الَّذِي لُمْتُنَّنِي فِيهِ ۖ وَلَقَدْ رَاوَدتُّهُ عَن نَّفْسِهِ فَاسْتَعْصَمَ ۖ وَلَئِن لَّمْ يَفْعَلْ مَا آمُرُهُ لَيُسْجَنَنَّ وَلَيَكُونًا مِّنَ الصَّاغِرِينَ ﴿٣٢﴾

33. ಯೂಸುಫ್ ಹೇಳಿದರು, "ಓ ನನ್ನ ಪ್ರಭೂ, ಇವರು ನನ್ನಿಂದ ಬಯಸುವ ಕಾರ್ಯಕ್ಕಿಂತ ನನಗೆ ಸೆರೆಮನೆಯೇ ಲೇಸು. ನೀನು ಇವರ ಕುತಂತ್ರಗಳನ್ನು ನನ್ನಿಂದ ನೀಗಿಸದಿದ್ದರೆ ನಾನು ಅವರ ಬಲೆಯಲ್ಲಿ ಬಿದ್ದು ಹೋಗುವೆನು ಮತ್ತು ಅಜ್ಞಾನಿಗಳಲ್ಲಿ ಸೇರಿ ಹೋಗುವೆನು."

قَالَ رَبِّ السِّجْنُ أَحَبُّ إِلَيَّ مِمَّا يَدْعُونَنِي إِلَيْهِ ۖ وَإِلَّا تَصْرِفْ عَنِّي كَيْدَهُنَّ أَصْبُ إِلَيْهِنَّ وَأَكُن مِّنَ الْجَاهِلِينَ ﴿٣٣﴾

34. ಅವರ ಪ್ರಭು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದನು ಮತ್ತು ಆ ಸ್ತ್ರೀಯರ ಕುತಂತ್ರಗಳನ್ನು ಅವರಿಂದ ನೀಗಿಸಿದನು. ನಿಶ್ಚಯವಾಗಿಯೂ ಸರ್ವಶ್ರುತನೂ ಸರ್ವಜ್ಞನೂ ಅವನೇ.

فَاسْتَجَابَ لَهُ رَبُّهُ فَصَرَفَ عَنْهُ كَيْدَهُنَّ ۚ إِنَّهُ هُوَ السَّمِيعُ الْعَلِيمُ ﴿٣٤﴾

35. ತರುವಾಯ ಒಂದು ಕಾಲಾವಧಿಯವರೆಗೆ ಇವರನ್ನು ಸೆರೆಯಲ್ಲಿಡಬೇಕೆಂದು ಅವರಿಗೆ ತೋರಿತು. ವಸ್ತುತಃ ಅವರು (ಇವರ ಪಾವಿತ್ರ್ಯ ಮತ್ತು ಸ್ವತಃ ತಮ್ಮ ಸ್ತ್ರೀಯರ ದುರ್ಗುಣಗಳ) ಸುಸ್ಪಷ್ಟ ದೃಷ್ಟಾಂತಗಳನ್ನು ಕಂಡುಕೊಂಡಿದ್ದರು.[10]

ثُمَّ بَدَا لَهُم مِّن بَعْدِ مَا رَأَوُا الْآيَاتِ لَيَسْجُنُنَّهُ حَتَّىٰ حِينٍ ﴿٣٥﴾

10. ನ್ಯಾಯದ ಬೇಡಿಕೆಯನುಸಾರ ಕೋರ್ಟಿನಲ್ಲಿ ಅಪರಾಧವನ್ನು ಸಾಬೀತು ಪಡಿಸದೆ ಅನ್ಯಾಯವಾಗಿ ಯಾರನ್ನಾದರೂ ಹಿಡಿದು ಸೆರೆಮನೆಗೆ ಕಳುಹಿಸುವುದು ಕೆಟ್ಟ ಆಡಳಿತಗಾರರಲ್ಲಿದ್ದ ಹಳೇ ಚಾಳಿ ಎಂದು ಇದರಿಂದ ವ್ಯಕ್ತವಾಗುತ್ತದೆ. ಇಂದಿನ ನರಪಿಶಾಚಿಗಳೂ ಈ ವಿಷಯದಲ್ಲಿ ನಾಲ್ಕು ಸಾವಿರ ವರ್ಷ ಪೂರ್ವದ ಕಿಡಿಗೇಡಿಗಳಿಗಿಂತ ಭಿನ್ನರಲ್ಲ.

36. ಸೆರೆಮನೆಯೊಳಗೆ ಇನ್ನಿಬ್ಬರು ಗುಲಾಮರೂ ಇವರೊಂದಿಗೆ ಪ್ರವೇಶಿಸಿದರು. ಒಂದು ದಿನ ಅವರಲ್ಲೊಬ್ಬನು "ನಾನು ಸಾರಾಯಿ ಭಟ್ಟಿ ಇಳಿಸುತ್ತಿರುವುದನ್ನು ಸ್ವಪ್ನದಲ್ಲಿ ಕಂಡೆನು" ಎಂದನು. ಇನ್ನೊಬ್ಬನು, "ನನ್ನ ತಲೆಯ ಮೇಲೆ ರೊಟ್ಟಿಯನ್ನಿರಿಸಿರುವುದನ್ನೂ ಪಕ್ಷಿಗಳು ಅವುಗಳನ್ನು ತಿನ್ನುತ್ತಿರುವುದನ್ನೂ ನಾನು ಕಂಡೆನು" ಎಂದನು. ನಮಗೆ ಇದರ ಮರ್ಮ ತಿಳಿಸಬೇಕೆಂದೂ ನೀವೊಬ್ಬ ಸಜ್ಜನರಾಗಿರುವುದನ್ನು ನಾವು ಕಾಣುತ್ತೇವೆಂದೂ ಇಬ್ಬರೂ ಹೇಳಿದರು.

وَدَخَلَ مَعَهُ السِّجْنَ فَتَيٰنِ ۗ قَالَ اَحَدُهُمَآ اِنِّيْٓ اَرٰىنِيْٓ اَعْصِرُ خَمْرًا ۚ وَقَالَ الْاٰخَرُ اِنِّيْٓ اَرٰىنِيْٓ اَحْمِلُ فَوْقَ رَاْسِيْ خُبْزًا تَاْكُلُ الطَّيْرُ مِنْهُ ۗ نَبِّئْنَا بِتَاْوِيْلِهٖ ۚ اِنَّا نَرٰىكَ مِنَ الْمُحْسِنِيْنَ ﴿٣٦﴾

37. ಯೂಸುಫ್ (ಹೀಗೆ) ಹೇಳಿದರು- "ಇಲ್ಲಿ ನಿಮಗೆ ಸಿಗುತ್ತಿರುವ ಊಟ ಬರುವುದಕ್ಕೆ ಮುಂಚೆ ನಾನು ನಿಮಗೆ ಈ ಸ್ವಪ್ನಗಳ ಫಲವನ್ನು ಹೇಳುವೆನು. ಇದು ನನ್ನ ಪ್ರಭು ನನಗೆ ದಯಪಾಲಿಸಿರುವ ಜ್ಞಾನಗಳಲ್ಲೊಂದು. ವಾಸ್ತವದಲ್ಲಿ ನಾನು ಅಲ್ಲಾಹನ ಮೇಲೆ ವಿಶ್ವಾಸವಿಡದವರ ಮತ್ತು ಪರಲೋಕವನ್ನು ನಿರಾಕರಿಸುವವರ ಮಾರ್ಗವನ್ನು ಬಿಟ್ಟಿರುವೆನು.

قَالَ لَا يَاْتِيْكُمَا طَعَامٌ تُرْزَقٰنِهٖٓ اِلَّا نَبَّاْتُكُمَا بِتَاْوِيْلِهٖ قَبْلَ اَنْ يَّاْتِيَكُمَا ۗ ذٰلِكُمَا مِمَّا عَلَّمَنِيْ رَبِّيْ ۗ اِنِّيْ تَرَكْتُ مِلَّةَ قَوْمٍ لَّا يُؤْمِنُوْنَ بِاللّٰهِ وَهُمْ بِالْاٰخِرَةِ هُمْ كٰفِرُوْنَ ﴿٣٧﴾

38. ಮತ್ತು ನಮ್ಮ ಪೂರ್ವಜರಾಗಿರುವ ಇಬ್‌ರಾಹೀಮ್, ಇಸ್‌ಹಾಕ್ ಮತ್ತು ಯಅ್‌ಕೂಬರ ಮಾರ್ಗವನ್ನು ಅವಲಂಬಿಸಿದ್ದೇನೆ. ಅಲ್ಲಾಹನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿಸುವುದು ನಮ್ಮ ಕೆಲಸವಲ್ಲ. ವಾಸ್ತವದಲ್ಲಿ ಇದು (ಅಲ್ಲಾಹನು ನಮ್ಮನ್ನು ತನ್ನ ಹೊರತು ಇನ್ನಾರದೇ ದಾಸರಾಗಿ ಮಾಡದಿರುವುದು) ನಮ್ಮ ಮೇಲೆ ಮತ್ತು ಸಕಲ ಮಾನವರ ಮೇಲೆ ಅಲ್ಲಾಹನ ಅನುಗ್ರಹವಾಗಿದೆ. ಆದರೆ ಹೆಚ್ಚಿನವರು ಕೃತಜ್ಞತೆ ಸಲ್ಲಿಸುವುದಿಲ್ಲ.

وَاتَّبَعْتُ مِلَّةَ اٰبَاۤءِيْٓ اِبْرٰهِيْمَ وَاِسْحٰقَ وَيَعْقُوْبَ ۗ مَا كَانَ لَنَآ اَنْ نُّشْرِكَ بِاللّٰهِ مِنْ شَيْءٍ ۗ ذٰلِكَ مِنْ فَضْلِ اللّٰهِ عَلَيْنَا وَعَلَى النَّاسِ وَلٰكِنَّ اَكْثَرَ النَّاسِ لَا يَشْكُرُوْنَ ﴿٣٨﴾

39. ಓ ಸೆರೆಮನೆಯ ನನ್ನ ಸಂಗಾತಿಗಳೇ, "ಅನೇಕ ಭಿನ್ನ ಭಿನ್ನ ಪ್ರಭುಗಳು ಲೇಸೋ ಅಥವಾ ಸರ್ವ ಸಮರ್ಥನಾದ ಏಕ ಅಲ್ಲಾಹನೋ? ಎಂದು ನೀವು ಸ್ವತಃ ಯೋಚಿಸಿರಿ.

يٰصَاحِبَيِ السِّجْنِ ءَاَرْبَابٌ مُّتَفَرِّقُوْنَ خَيْرٌ اَمِ اللّٰهُ الْوَاحِدُ الْقَهَّارُ ﴿٣٩﴾

40. ಅವನನ್ನು ಬಿಟ್ಟು ನೀವು ಯಾರ ದಾಸ್ಯ-ಆರಾಧನೆ ಮಾಡುತ್ತಿರುವಿರೋ ಅವರೆಲ್ಲಾ ನೀವೂ ನಿಮ್ಮ ಪೂರ್ವಿಕರೂ ಇರಿಸಿಕೊಂಡಿರುವ ಕೆಲವು ಹೆಸರುಗಳ ವಿನಾ ಇನ್ನೇನೂ ಅಲ್ಲ. ಅಲ್ಲಾಹನು ಅವುಗಳ ಬಗ್ಗೆ ಯಾವ ಪ್ರಮಾಣವನ್ನೂ ಇಳಿಸಿರುವುದಿಲ್ಲ. ಆಜ್ಞಾಧಿಕಾರವು ಅಲ್ಲಾಹನಿಗೆ ಹೊರತು ಇನ್ನಾರಿಗೂ ಇಲ್ಲ. ಅವನ ಹೊರತು ನೀವು ಯಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದು ಅವನ ಕಟ್ಟಪ್ಪಣೆ ಇದೆ. ಇದೇ ಅಪ್ಪಟ ಋಜು ಜೀವನ ಮಾರ್ಗ. ಆದರೆ ಹೆಚ್ಚಿನ ಜನರು ಅರಿಯುವುದಿಲ್ಲ.

مَا تَعْبُدُوْنَ مِنْ دُوْنِهٖٓ اِلَّآ اَسْمَاۤءً سَمَّيْتُمُوْهَآ اَنْتُمْ وَاٰبَاۤؤُكُمْ مَّآ اَنْزَلَ اللّٰهُ بِهَا مِنْ سُلْطٰنٍ ۗ اِنِ الْحُكْمُ اِلَّا لِلّٰهِ ۗ اَمَرَ اَلَّا تَعْبُدُوْٓا اِلَّآ اِيَّاهُ ۗ ذٰلِكَ الدِّيْنُ الْقَيِّمُ وَلٰكِنَّ اَكْثَرَ النَّاسِ لَا يَعْلَمُوْنَ ﴿٤٠﴾

41. ಓ ಸೆರೆಮನೆಯ ನನ್ನ ಸಂಗಾತಿಗಳೇ, ನಿಮ್ಮ ಸ್ವಪ್ನ ಫಲವಿದು: ನಿಮ್ಮಲ್ಲೊರ್ವನು ತನ್ನ ಪ್ರಭುವಿಗೆ (ಈಜಿಪ್ಟ್‌ನ ದೊರೆಗೆ)[11] ಮದ್ಯ ಕುಡಿಸುವನು. ಇನ್ನೊಬ್ಬನು ಗಲ್ಲಿಗೇರಿಸಲ್ಪಡುವನು ಮತ್ತು ಪಕ್ಷಿಗಳು ಅವನ ತಲೆಯನ್ನು ಕುಕ್ಕಿ ಕುಕ್ಕಿ ತಿನ್ನುವುವು. ನೀವು ಕೇಳುತ್ತಲಿದ್ದ ವಿಷಯದ ತೀರ್ಮಾನ ಆಗಿ ಹೋಯಿತು."

يٰصَاحِبَيِ السِّجْنِ اَمَّاۤ اَحَدُكُمَا فَيَسْقِيْ رَبَّهٗ خَمْرًا ۚ وَاَمَّا الْاٰخَرُ فَيُصْلَبُ فَتَاْكُلُ الطَّيْرُ مِنْ رَّاْسِهٖ ؕ قُضِيَ الْاَمْرُ الَّذِيْ فِيْهِ تَسْتَفْتِيٰنِ ﴿٤١﴾

42. ಅನಂತರ, ಅವರ ಪೈಕಿ ಯಾರು ಬಿಡುಗಡೆಯಾಗುವನೆಂಬ ನಿರೀಕ್ಷೆಯಿತ್ತೋ ಅವನೊಡನೆ ಯೂಸುಫ್‌ರು, "ನಿನ್ನ ಪ್ರಭುವಿನೊಡನೆ (ಈಜಿಪ್ಟ್‌ನ ದೊರೆ) ನನ್ನ ಪ್ರಸ್ತಾಪವೆತ್ತಬೇಕು" ಎಂದು ಹೇಳಿದರು. ಆದರೆ ಶೈತಾನನು ಅವನಿಗೆ ಮರವೆಯನ್ನುಂಟು ಮಾಡಿಬಿಟ್ಟನು. ಅವನು ತನ್ನ ಪ್ರಭುವಿನೊಡನೆ (ಈಜಿಪ್ಟ್‌ನ ದೊರೆ) ಯೂಸುಫರ ಪ್ರಸ್ತಾಪವೆತ್ತಲು ಮರೆತೇ ಬಿಟ್ಟನು. ಹೀಗೆ ಅವರು ಅನೇಕ ವರ್ಷಗಳ ವರೆಗೆ ಸೆರೆಮನೆಯಲ್ಲೇ ಉಳಿದುಬಿಟ್ಟರು.

وَقَالَ لِلَّذِيْ ظَنَّ اَنَّهٗ نَاجٍ مِّنْهُمَا اذْكُرْنِيْ عِنْدَ رَبِّكَ ۫ فَاَنْسٰىهُ الشَّيْطٰنُ ذِكْرَ رَبِّهٖ فَلَبِثَ فِي السِّجْنِ بِضْعَ سِنِيْنَ ﴿٤٢﴾

43. ಒಂದು ದಿನ[12] ಅರಸನು, "ನಾನು ಸ್ವಪ್ನದಲ್ಲಿ ಏಳು ಕೊಬ್ಬಿದ ಹಸುಗಳನ್ನು ಏಳು ಕೃಶವಾದ ಹಸುಗಳು ತಿನ್ನುತ್ತಿರುವುದನ್ನೂ ಧಾನ್ಯದ ಏಳು ತೆನೆಗಳು ಹಸುರಾಗಿದ್ದು ಇತರ ಏಳು ತೆನೆಗಳು ಒಣಗಿರುವುದನ್ನೂ ಕಂಡಿರುತ್ತೇನೆ. ಓ ನನ್ನ ಆಸ್ಥಾನದವರೇ, ನೀವು ಸ್ವಪ್ನಗಳ ಫಲ ಬಲ್ಲವರಾಗಿದ್ದರೆ, ನನಗೆ ಈ ಸ್ವಪ್ನದ ಫಲವನ್ನು ಹೇಳಿರಿ" ಎಂದನು.

وَقَالَ الْمَلِكُ اِنِّيْۤ اَرٰى سَبْعَ بَقَرٰتٍ سِمَانٍ يَّاْكُلُهُنَّ سَبْعٌ عِجَافٌ وَّسَبْعَ سُنْۢبُلٰتٍ خُضْرٍ وَّاُخَرَ يٰبِسٰتٍ ؕ يٰۤاَيُّهَا الْمَلَاُ اَفْتُوْنِيْ فِيْ رُءْيَايَ اِنْ كُنْتُمْ لِلرُّءْيَا تَعْبُرُوْنَ ﴿٤٣﴾

44. ಆಗ ಜನರು, "ಗೊಂದಲಪೂರ್ಣ ಸ್ವಪ್ನಗಳಿವು. ಇಂತಹ ಸ್ವಪ್ನಗಳ ಫಲ ನಮಗೆ ತಿಳಿಯದು" ಎಂದರು.

قَالُوْۤا اَضْغَاثُ اَحْلَامٍ ۚ وَمَا نَحْنُ بِتَاْوِيْلِ الْاَحْلَامِ بِعٰلِمِيْنَ ﴿٤٤﴾

45. ಆ ಇಬ್ಬರು ಸೆರೆಯಾಳುಗಳ ಪೈಕಿ ಬದುಕಿ ಉಳಿದಿದ್ದವನಿಗೆ ದೀರ್ಘ ಕಾಲದ ತರುವಾಯ ಈಗ ಆ ಮಾತು ನೆನಪಿಗೆ ಬಂತು. ಅವನು, "ನಿಮಗೆ ಇದರ ಫಲ ನಾನು ಹೇಳುತ್ತೇನೆ. ನನ್ನನ್ನು ಸ್ವಲ್ಪ ಹೊತ್ತಿನ ಮಟ್ಟಿಗೆ (ಸೆರೆಮನೆಯಲ್ಲಿರುವ ಯೂಸುಫರ ಬಳಿಗೆ) ಕಳುಹಿಸಿರಿ" ಎಂದನು.

وَقَالَ الَّذِيْ نَجَا مِنْهُمَا وَادَّكَرَ بَعْدَ اُمَّةٍ اَنَا اُنَبِّئُكُمْ بِتَاْوِيْلِهٖ فَاَرْسِلُوْنِ ﴿٤٥﴾

11. ಸೂಕ್ತ 23ನ್ನು ಇದರೊಂದಿಗೆ ಸೇರಿಸಿ ಓದುವುದರಿಂದ ವ್ಯಕ್ತವಾಗುವುದೇನೆಂದರೆ, ಹ. ಯೂಸುಫ್(ಅ) ನನ್ನ ಪ್ರಭು ಎಂದು ಅಲ್ಲಾಹನ ಕುರಿತಾಗಿ ಹೇಳಿದ್ದರು. ಈಜಿಪ್ಟ್‌ನ ದೊರೆಯ ಗುಲಾಮನೊಂದಿಗೆ, "ನಿನ್ನ ಪ್ರಭುವಿಗೆ ಮದ್ಯ ಕುಡಿಸುವೆ" ಎಂದು ಈಜಿಪ್ಟಿನ ದೊರೆಯ ಕುರಿತಾಗಿ ಹೇಳಿದ್ದರು. ಏಕೆಂದರೆ ಆ ಜನರು ಈಜಿಪ್ಟಿನ ದೊರೆಯನ್ನೇ ತಮ್ಮ ಪ್ರಭುವೆಂದು ಭಾವಿಸುತ್ತಿದ್ದರು.

12. ಮಧ್ಯದಲ್ಲಿ ಅನೇಕ ವರ್ಷಗಳ ಸೆರೆಮನೆ ವಾಸದ ವೃತ್ತಾಂತವನ್ನು ಬಿಟ್ಟು ಇಲ್ಲಿ ನೇರವಾಗಿ ಹ. ಯೂಸುಫ್‌ರ(ಅ) ಲೌಕಿಕ ಉತ್ಥಾನ ಆರಂಭಗೊಂಡ ವೃತ್ತಾಂತದೊಂದಿಗೆ ಇದನ್ನು ಜೋಡಿಸಲಾಗುತ್ತದೆ.

46. ಅವನು ಹೋಗಿ ಯೂಸುಫರೊಡನೆ, "ಓ, ಸಾದ್ಯಂತ ಸತ್ಯ ಸಂಧರಾಗಿರುವವರೇ[13], ಏಳು ಕೊಬ್ಬಿದ ಹಸುಗಳನ್ನು ಏಳು ಕೃಶವಾದ ಹಸುಗಳು ತಿನ್ನುತ್ತಿವೆ ಮತ್ತು ಏಳು ತೆನೆಗಳು ಹಸುರಾಗಿಯೂ ಇನ್ನು ಏಳು ತೆನೆಗಳು ಒಣಗಿಯೂ ಇವೆ. ಈ ಸ್ವಪ್ನದ ಫಲವನ್ನು ನನಗೆ ಹೇಳಿರಿ. ಹಾಗಾದರೆ ನಾನು ಜನರ ಕಡೆಗೆ ಮರಳಬಹುದು ಮತ್ತು ಅವರು ತಿಳಿದು ಕೊಳ್ಳಬಹುದು"[14] ಎಂದನು.

يُوسُفُ أَيُّهَا الصِّدِّيقُ أَفْتِنَا فِي سَبْعِ بَقَرَاتٍ سِمَانٍ يَأْكُلُهُنَّ سَبْعٌ عِجَافٌ وَسَبْعِ سُنْبُلَاتٍ خُضْرٍ وَأُخَرَ يَابِسَاتٍ لَعَلِّي أَرْجِعُ إِلَى النَّاسِ لَعَلَّهُمْ يَعْلَمُونَ ﴿٤٦﴾

47. ಯೂಸುಫ್ ಹೇಳಿದರು- "ಏಳು ವರ್ಷಗಳ ತನಕ ನೀವು ನಿರಂತರವಾಗಿ ಕೃಷಿ ಮಾಡುತ್ತಿರುವಿರಿ. ಆ ಕಾಲಾವಧಿಯಲ್ಲಿ ನೀವು ಕೊಯ್ಯುವ ಬೆಳೆಯಿಂದ ನಿಮ್ಮ ಆಹಾರಕ್ಕೆ ಬೇಕಾದಷ್ಟು ಅಂಶವನ್ನು ತೆಗೆದು ಉಳಿದುದನ್ನು ಅದರ ತೆನೆಗಳಲ್ಲೇ ಇರಗೊಡಿರಿ.

قَالَ تَزْرَعُونَ سَبْعَ سِنِينَ دَأَبًا فَمَا حَصَدْتُمْ فَذَرُوهُ فِي سُنْبُلِهِ إِلَّا قَلِيلًا مِمَّا تَأْكُلُونَ ﴿٤٧﴾

48. ಅನಂತರ ಏಳು ಕಠಿಣ ವರ್ಷಗಳು ಬರುವುವು. ಆಗ ಆ ಕಾಲಕ್ಕಾಗಿ ಸಂಗ್ರಹಿಸಿಟ್ಟುದನ್ನು ಉಣ್ಣಬಹುದು. ಒಂದು ವೇಳೆ ಉಳಿಯುವುದಾದರೆ ನೀವು ಜೋಪಾನವಾಗಿರಿಸಿದುದು ಮಾತ್ರ.

ثُمَّ يَأْتِي مِنْ بَعْدِ ذَٰلِكَ سَبْعٌ شِدَادٌ يَأْكُلْنَ مَا قَدَّمْتُمْ لَهُنَّ إِلَّا قَلِيلًا مِمَّا تُحْصِنُونَ ﴿٤٨﴾

49. ಅನಂತರ ಬರುವ ಇನ್ನೊಂದು ವರ್ಷದಲ್ಲಿ ಕೃಪಾವೃಷ್ಟಿಯ ಮೂಲಕ ಜನರ ಸಂಕಷ್ಟ ನಿವಾರಣೆಯಾಗುವುದು ಮತ್ತು ಅವರು ರಸ ಹಿಂಡುವರು."

ثُمَّ يَأْتِي مِنْ بَعْدِ ذَٰلِكَ عَامٌ فِيهِ يُغَاثُ النَّاسُ وَفِيهِ يَعْصِرُونَ ﴿٤٩﴾

50. ಅರಸನು, "ಅವರನ್ನು ನನ್ನ ಬಳಿಗೆ ಕರೆದು ತನ್ನಿರಿ" ಎಂದನು. ಆದರೆ ರಾಜದೂತನು ಯೂಸುಫರ ಬಳಿಗೆ ಬಂದಾಗ ಅವರು, (ಹೀಗೆ) ಹೇಳಿದರು, "ನಿನ್ನ ಪ್ರಭುವಿನ ಬಳಿಗೆ ನೀನು ಹಿಂದಿರುಗು ಮತ್ತು ತಮ್ಮ ಕೈಗಳನ್ನು ಕೊಯ್ದುಕೊಂಡ ಸ್ತ್ರೀಯರ ಸಂಗತಿ ಯೇನೆಂದು ಅವನೊಡನೆ ಕೇಳು. ನನ್ನ ಪ್ರಭುವಂತು ಅವರ ಕುತಂತ್ರಗಳನ್ನು ತಿಳಿದೇ ಇದ್ದಾನೆ."

وَقَالَ الْمَلِكُ ائْتُونِي بِهِ ۖ فَلَمَّا جَاءَهُ الرَّسُولُ قَالَ ارْجِعْ إِلَىٰ رَبِّكَ فَاسْأَلْهُ مَا بَالُ النِّسْوَةِ اللَّاتِي قَطَّعْنَ أَيْدِيَهُنَّ ۚ إِنَّ رَبِّي بِكَيْدِهِنَّ عَلِيمٌ ﴿٥٠﴾

---

13. ಮೂಲದಲ್ಲಿ 'ಸಿದ್ದೀಕ್' ಎಂಬ ಪದ ಪ್ರಯೋಗವಾಗಿದೆ. ಅರಬಿ ಭಾಷೆಯಲ್ಲಿ ಅದು ಸತ್ಯಸಂಧತೆ ಮತ್ತು ಉನ್ನತ ಮಟ್ಟದ ಸನ್ನಡತೆಗೆ ಉಪಯೋಗಿಸಲ್ಪಡುತ್ತದೆ. ಇದರಿಂದ ಅವನು ಸೆರೆಮನೆವಾಸದ ಅವಧಿಯಲ್ಲಿ ಹ. ಯೂಸುಫ್‌ರ(ಅ) ಸಚ್ಚಾರಿತ್ರ್ಯದಿಂದ ಎಷ್ಟು ಗಹನವಾಗಿ ಪ್ರಭಾವಿತನಾಗಿದ್ದನು ಮತ್ತು ದೀರ್ಘಾವಧಿ ಕಳೆದ ಬಳಿಕವೂ ಅದು ಹೇಗೆ ಅವನಲ್ಲಿ ಅಚ್ಚಳಿಯದೆ ಉಳಿದಿತ್ತು ಎಂದು ವ್ಯಕ್ತವಾಗುತ್ತದೆ.

14. ಅರ್ಥಾತ್- ಅವರು ತಮ್ಮ ಸ್ಥಾನಮಾನವನ್ನು ತಿಳಿಯುವಂತಾಗಲಿ. “ಇವರು ಎಂತಹ ಉನ್ನತ ವ್ಯಕ್ತಿ ಮತ್ತು ಇವರನ್ನು ಎಂತಹ ಜಾಗದಲ್ಲಿ ಬಂಧಿಸಿಡಲಾಗಿದೆ” ಎಂಬ ಪ್ರಜ್ಞೆ ಅವರಲ್ಲಿ ಮೂಡುವಂತಾಗಲಿ. ಹೀಗೆ ಸೆರೆಮನೆಯಲ್ಲಿ ನಾನು ತಮ್ಮೊಡನೆ ಮಾಡಿದಂತಹ ವಾಗ್ದಾನವನ್ನು ಈಡೇರಿಸುವಂತಹ ಅವಕಾಶ ನನಗೆ ಸಿಗಲಿ.

51. ಆ ಪ್ರಕಾರ ಅರಸನು ಆ ಸ್ತ್ರೀಯರೊಡನೆ, "ನೀವು ಯೂಸುಫರನ್ನು ವಶೀಕರಿಸಲು ಪ್ರಯತ್ನಿಸಿದಾಗಿನ ನಿಮ್ಮ ಅನುಭವವೇನು?" ಎಂದು ಕೇಳಿದನು. ಎಲ್ಲರೂ ಒಕ್ಕೊರಳಿನಿಂದ, "ಎಷ್ಟಕ್ಕೂ ಇಲ್ಲ, ನಾವು ಅವರಲ್ಲಿ ಯಾವ ದೋಷವನ್ನೂ ಕಾಣಲಿಲ್ಲ" ಎಂದರು. ಅಝೀಝುನ ಪತ್ನಿಯು, "ಈಗ ಸತ್ಯವು ಬಯಲಾಗಿದೆ. ಅವರನ್ನು ಪುಸಲಾಯಿಸಲು ಪ್ರಯತ್ನಿಸಿದವಳು ನಾನೇ ಆಗಿದ್ದೆ. ಖಂಡಿತವಾಗಿಯೂ ಅವರು ಸತ್ಯ ಸಂಧರು" ಎಂದು ಹೇಳಿದಳು.

قَالَ مَا خَطْبُكُنَّ إِذْ رَاوَدْتُّنَّ يُوسُفَ عَنْ نَّفْسِهِ ۚ قُلْنَ حَاشَ لِلّٰهِ مَا عَلِمْنَا عَلَيْهِ مِنْ سُوْٓءٍ ۚ قَالَتِ امْرَاَتُ الْعَزِيْزِ الْـٰٔنَ حَصْحَصَ الْحَقُّ ۫ اَنَا رَاوَدْتُّهٗ عَنْ نَّفْسِهٖ وَاِنَّهٗ لَمِنَ الصّٰدِقِيْنَ ﴿٥١﴾

52. ಯೂಸುಫ್ ಹೇಳಿದರು, "ಇದರ ಉದ್ದೇಶವು ನಾನು ತೆರೆಯ ಮರೆಯಲ್ಲಿ ಅಝೀಝುನಿಗೆ ವಿಶ್ವಾಸಘಾತಕವೆಸಗಲಿಲ್ಲವೆಂದೂ ಅಲ್ಲಾಹನು ವಿಶ್ವಾಸಘಾತಕರ ಕುತಂತ್ರವನ್ನು ಸಫಲ ಗೊಳಿಸಲು ಬಿಡುವುದಿಲ್ಲವೆಂದೂ (ಅಝೀಝ್) ತಿಳಿದುಕೊಳ್ಳಬೇಕೆಂಬು ದಾಗಿತ್ತು.

ذٰلِكَ لِيَعْلَمَ اَنِّيْ لَمْ اَخُنْهُ بِالْغَيْبِ وَاَنَّ اللّٰهَ لَا يَهْدِيْ كَيْدَ الْخَآئِنِيْنَ ﴿٥٢﴾

53. *ನನ್ನ ಚಿತ್ತವು ನಿರ್ದೋಷಿಯೆಂದು ನಾನೇನೂ ಹೇಳಿಕೊಳ್ಳುವು ದಿಲ್ಲ. ನನ್ನ ಪ್ರಭುವಿನ ಕೃಪೆಯಿಲ್ಲದೆ ಹೋದರೆ ಚಿತ್ತವಂತು ಕೇಡಿನ ಕಡೆಗೇ ಪ್ರೇರೇಪಿಸುತ್ತದೆ. ನಿಶ್ಚಯವಾಗಿಯೂ ನನ್ನ ಪ್ರಭು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."

وَمَآ اُبَرِّئُ نَفْسِيْ ۚ اِنَّ النَّفْسَ لَاَمَّارَةٌ ۢ بِالسُّوْٓءِ اِلَّا مَا رَحِمَ رَبِّيْ ۚ اِنَّ رَبِّيْ غَفُوْرٌ رَّحِيْمٌ ﴿٥٣﴾

الجزء ١٣

54. ಅರಸನು ಹೇಳಿದನು, "ಅವನನ್ನು ನನ್ನ ಬಳಿಗೆ ಕರೆತನ್ನಿರಿ. ನಾನು ಅವನನ್ನು ನನಗಾಗಿ ಕಾಯ್ದಿರಿಸಿಕೊಳ್ಳುತ್ತೇನೆ." ಯೂಸುಫರು ಅವನೊಡನೆ ಮಾತುಕತೆ ನಡೆಸಿದಾಗ ಅವನು ಹೀಗೆಂದನು, "ಇಂದು ತಾವು ನಮ್ಮಲ್ಲಿ ಗೌರವಾನ್ವಿತರಾಗಿರುತ್ತೀರಿ ಮತ್ತು ತಮ್ಮ ಪ್ರಾಮಾಣಿಕತೆಯ ಬಗ್ಗೆ ಸಂಪೂರ್ಣ ಭರವಸೆಯಿದೆ."

وَقَالَ الْمَلِكُ ائْتُوْنِيْ بِهٖٓ اَسْتَخْلِصْهُ لِنَفْسِيْ ۚ فَلَمَّا كَلَّمَهٗ قَالَ اِنَّكَ الْيَوْمَ لَدَيْنَا مَكِيْنٌ اَمِيْنٌ ﴿٥٤﴾

55. ಯೂಸುಫ್ ಹೇಳಿದರು, "ದೇಶದ ಭಂಡಾರಗಳನ್ನು ನನ್ನ ವಶಕ್ಕೆ ಬಿಡಿರಿ. ನಿಶ್ಚಯವಾಗಿಯೂ ನಾನು ರಕ್ಷಣೆ ಮಾಡುವವನೂ ತಿಳುವಳಿಕೆಯುಳ್ಳವನೂ ಆಗಿರುತ್ತೇನೆ."

قَالَ اجْعَلْنِيْ عَلٰى خَزَآئِنِ الْاَرْضِ ۚ اِنِّيْ حَفِيْظٌ عَلِيْمٌ ﴿٥٥﴾

*ಇಲ್ಲಿಂದ **13**ನೆಯ ಕಾಂಡ ಆರಂಭ.

56. ಹೀಗೆ ನಾವು ಯೂಸುಫರಿಗೆ ಆ ಭೂಭಾಗದ ಅಧಿಕಾರವನ್ನು ಸುಗಮಗೊಳಿಸಿದೆವು. ಅಲ್ಲಿ ತನಗೆ ಸರಿಕಂಡಲ್ಲೆಲ್ಲ ಸ್ಥಳ ಮಾಡಿ ಕೊಳ್ಳಲು ಅವರು ಅಧಿಕಾರ ಹೊಂದಿದ್ದರು.[15] ನಾವು ನಮಗಿಷ್ಟ ವಿದ್ದವರಿಗೆ ನಮ್ಮ ಕೃಪೆಯನ್ನು ಕರುಣಿಸುತ್ತೇವೆ. ನಮ್ಮಲ್ಲಿ ಸದ್ಭಕ್ತರ ಪ್ರತಿಫಲವು ನಷ್ಟಗೊಳಿಸಲ್ಪಡುವುದಿಲ್ಲ.

وَكَذَٰلِكَ مَكَّنَّا لِيُوسُفَ فِي الْأَرْضِ ۚ يَتَبَوَّأُ مِنْهَا حَيْثُ يَشَاءُ ۚ نُصِيبُ بِرَحْمَتِنَا مَنْ نَشَاءُ ۖ وَلَا نُضِيعُ أَجْرَ الْمُحْسِنِينَ ﴿٥٦﴾

57. ಸತ್ಯವಿಶ್ವಾಸವನ್ನಿರಿಸಿ, ದೇವಭಯದೊಂದಿಗೆ ಕಾರ್ಯಪ್ರವೃತ್ತ ರಾಗುವವರಿಗೆ ಪರಲೋಕದ ಪ್ರತಿಫಲವು ಇನ್ನಷ್ಟು ಉತ್ತಮ ವಾಗಿರುತ್ತದೆ.

وَلَأَجْرُ الْآخِرَةِ خَيْرٌ لِلَّذِينَ آمَنُوا وَكَانُوا يَتَّقُونَ ﴿٥٧﴾

58. ಯೂಸುಫರ ಸಹೋದರರು ಈಜಿಪ್ಟ್‌ಗೆ ಬಂದರು ಮತ್ತು ಇವರ ಮುಂದೆ ಹಾಜರಾದರು.[16] ಇವರು ಅವರನ್ನು ಗುರುತಿಸಿದರು. ಆದರೆ ಅವರಿಗೆ ಇವರ ಗುರುತು ಸಿಗಲಿಲ್ಲ.

وَجَاءَ إِخْوَةُ يُوسُفَ فَدَخَلُوا عَلَيْهِ فَعَرَفَهُمْ وَهُمْ لَهُ مُنْكِرُونَ ﴿٥٨﴾

59. ಇವರು ಅವರ ಸರಕುಗಳನ್ನೆಲ್ಲಾ ಸಿದ್ಧಗೊಳಿಸಿದ ಬಳಿಕ ಹೊರಡು ವಾಗ ಹೀಗೆ ಹೇಳಿದರು, "ನಿಮ್ಮ ಮಲ ಸಹೋದರನನ್ನು ನನ್ನ ಬಳಿಗೆ ಕರೆ ತರಬೇಕು. ನಾನು ಹೇಗೆ ಅಳತೆ ಪಾತ್ರೆ ತುಂಬಿ ಕೊಡು ತ್ತೇನೆಂದೂ ಎಷ್ಟು ಉತ್ತಮ ಆತಿಥೇಯನಾಗಿದ್ದೇನೆಂಬುದನ್ನೂ ಕಾಣುತ್ತೀರಲ್ಲವೆ?

وَلَمَّا جَهَّزَهُمْ بِجَهَازِهِمْ قَالَ ائْتُونِي بِأَخٍ لَكُمْ مِنْ أَبِيكُمْ ۚ أَلَا تَرَوْنَ أَنِّي أُوفِي الْكَيْلَ وَأَنَا خَيْرُ الْمُنْزِلِينَ ﴿٥٩﴾

60. ನೀವು ಅವನನ್ನು ಕರೆತರದಿದ್ದರೆ ನನ್ನಲ್ಲಿ ನಿಮಗೆ ಧಾನ್ಯವಿಲ್ಲ. ಮಾತ್ರವಲ್ಲ ನೀವು ನನ್ನ ಬಳಿ ಸುಳಿಯಲೂ ಬಾರದು."[17]

فَإِنْ لَمْ تَأْتُونِي بِهِ فَلَا كَيْلَ لَكُمْ عِنْدِي وَلَا تَقْرَبُونِ ﴿٦٠﴾

15. ಅರ್ಥಾತ್- ಈಗ ಸಮಸ್ತ ಈಜಿಪ್ಟ್ ದೇಶ ಅವರದಾಗಿತ್ತು. ಅದರ ಎಲ್ಲಾ ಪ್ರದೇಶಗಳನ್ನು ಅವರು ತನ್ನದೆಂದು ಹೇಳಬಹುದಾಗಿತ್ತು. ದೇಶದ ಯಾವ ಮೂಲೆಯಲ್ಲೂ ಅವರನ್ನು ತಡೆಯಲು ಸಾಧ್ಯವಿರಲಿಲ್ಲ. ಇದು ಹ. ಯೂಸುಫ್‌ರಿಗೆ(ಅ) ಆ ದೇಶದಲ್ಲಿ ಪ್ರಾಪ್ತವಾಗಿದ್ದ ಸಾರ್ವಭೌಮ ಅಧಿಕಾರ ಮತ್ತು ಸಂಪೂರ್ಣ ಪ್ರಾಬಲ್ಯದ ವಿವರಣೆಯಾಗಿದೆ. ಪುರಾತನ ಕಾಲದ ವ್ಯಾಖ್ಯಾನಕಾರರೂ ಈ ಸೂಕ್ತವನ್ನು ಹೀಗೆಯೇ ವ್ಯಾಖ್ಯಾನಿಸಿದ್ದಾರೆ. ಇಬ್ನ್ ಝೈದ್ ಇದನ್ನು ಹೀಗೆ ವಿವರಿಸಿದ್ದಾರೆ, "ನಾವು ಯೂಸುಫ್‌ರನ್ನು ಈಜಿಪ್ಟ್‌ನಲ್ಲಿದ್ದ ಸರ್ವಸ್ವದ ಮಾಲಕನನ್ನಾಗಿ ಮಾಡಿದೆವು. ಲೋಕದ ಆ ಭೂಭಾಗದಲ್ಲಿ ಅವರು ತನಗೆ ತೋಚಿದ್ದನ್ನು ಮಾಡಬಹುದಾಗಿತ್ತು. ಆ ಸಾಮ್ರಾಜ್ಯವನ್ನೇ ಅವರ ವಶಕ್ಕೊಪ್ಪಿಸಲಾಯಿತು. ಫಿರ್‌ಔನನನ್ನು ತನ್ನ ಅಧೀನಗೊಳಿಸಿ ತಾನು ಅವನಿಗಿಂತ ಉನ್ನತ ಪದವಿಯವರಾಗಿ ಬಿಡಲಿಕ್ಕೂ ಅವರಿಗೆ ಸಾಧ್ಯವಿತ್ತು." ಇನ್ನೊರ್ವ ವ್ಯಾಖ್ಯಾನಕಾರರಾದ ಮುಜಾಹಿದ್‌ರ ಪ್ರಕಾರ ಈಜಿಪ್ಟ್‌ನ ದೊರೆ ಹ. ಯೂಸುಫ್‌ರ(ಅ) ಮೂಲಕ ಇಸ್ಲಾಮ್ ಸ್ವೀಕಾರ ಮಾಡಿದ್ದನು.

16. ಇಲ್ಲಿಂದ ಏಳೆಂಟು ವರ್ಷದ ಘಟನಾವಳಿಗಳನ್ನು ಮಧ್ಯದಲ್ಲಿ ಬಿಟ್ಟು ವಿವರಣಾ ಸರಣಿಯನ್ನು ಬನೀಇಸ್ರಾಈಲರು ಈಜಿಪ್ಟ್‌ಗೆ ಹೋಗಲಾರಂಭಿಸಿದ ಸಂದರ್ಭದೊಂದಿಗೆ ಜೋಡಿಸಲಾಗಿದೆ.

17. ಈ ಮಾತನ್ನು ಹ. ಯೂಸುಫ್(ಅ) ಏಕೆ ಹೇಳಿರಬಹುದೆಂದರೆ, ಬರದಿಂದಾಗಿ ಈಜಿಪ್ಟ್‌ನಲ್ಲಿ ಧಾನ್ಯಕ್ಕೆ ನಿಯಂತ್ರಣವಿತ್ತು. ಧಾನ್ಯವನ್ನು ಪಡೆಯಲಿಕ್ಕಾಗಿ ಈ ಹತ್ತು ಮಂದಿ ಸಹೋದರರು ಬಂದಿದ್ದರು. ಆದರೆ ಅವರು ತಮ್ಮ ತಂದೆ ಮತ್ತು ಹನ್ನೊಂದನೇ ಸಹೋದರನ ಪಾಲನ್ನೂ ಕೇಳುತ್ತಿದ್ದಿರಬಹುದು. ಆಗ ಹ. ಯೂಸುಫ್(ಅ) ನಿಮ್ಮ ತಂದೆ ಸ್ವತಃ ಬಾರದಿರುವ ನೆವನವೇನೋ ಸತ್ಯವಾಗಿರಬಹುದು. ಏಕೆಂದರೆ ಅವರು ವೃದ್ಧರೂ ಅಂಧರೂ ಆಗಿದ್ದಾರೆ. ಆದರೆ ಸಹೋದರ ಬಾರದಿರುವುದಕ್ಕೆ ಸಮರ್ಪಕವಾದ ಯಾವ ಕಾರಣವಿದೆ? ಇರಲಿ. ಈ ಸಂದರ್ಭದಲ್ಲಿ ನಿಮ್ಮ ಮಾತಿನ ಮೇಲೆ ವಿಶ್ವಾಸವಿಟ್ಟು ನಿಮಗೆ ಸಂಪೂರ್ಣ ಧಾನ್ಯವನ್ನು ನೀಡುತ್ತೇವೆ. ಆದರೆ ಮುಂದಿನ ಬಾರಿ

61. ಅವರು ಹೇಳಿದರು, "ತಂದೆಯವರು ಅವನನ್ನು ಕಳುಹಿಸಲು ಒಪ್ಪುವಂತೆ ಮಾಡಲು ಪ್ರಯತ್ನಿಸುವೆವು. ಹೀಗೆ ನಾವು ಮಾಡಿಯೇ ತೀರುವೆವು."

قَالُوا سَنُرَاوِدُ عَنْهُ أَبَاهُ وَإِنَّا لَفَاعِلُونَ ﴿٦١﴾

62. ಧಾನ್ಯದ ಪ್ರತಿಯಾಗಿ ಅವರು ಕೊಟ್ಟಿದ್ದ ಮೊಬಲಗನ್ನು ಅವರ ಸರಕಿನಲ್ಲೇ ಗುಟ್ಟಾಗಿ ಇರಿಸಿಬಿಡಿರೆಂದು ಯೂಸುಫರು ತನ್ನ ಗುಲಾಮರೊಡನೆ ಹೇಳಿದರು. ಅವರು ಮನೆಗೆ ತಲುಪಿದಾಗ ತಮಗೆ ಮರಳಿ ಸಿಕ್ಕಿದ ಮೊಬಲಗನ್ನು ಗುರುತಿಸಿಕೊಳ್ಳುವರು (ಅಥವಾ ಈ ಔದಾರ್ಯಕ್ಕಾಗಿ ಕೃತಜ್ಞರಾಗುವರು) ಮತ್ತು ಪುನಃ ಮರಳಿ ಬರಲೂಬಹುದೆಂಬ ನಿರೀಕ್ಷೆಯಿಂದ ಯೂಸುಫ್ ಹೀಗೆ ಮಾಡಿದ್ದರು.

وَقَالَ لِفِتْيَانِهِ اجْعَلُوا بِضَاعَتَهُمْ فِي رِحَالِهِمْ لَعَلَّهُمْ يَعْرِفُونَهَا إِذَا انْقَلَبُوا إِلَىٰ أَهْلِهِمْ لَعَلَّهُمْ يَرْجِعُونَ ﴿٦٢﴾

63. ಅವರು ತಮ್ಮ ತಂದೆಯವರ ಬಳಿಗೆ ಹೋದಾಗ ಹೀಗೆಂದರು, "ಅಪ್ಪಾ, ಇನ್ನು ಮುಂದೆ ನಮಗೆ ಧಾನ್ಯ ಕೊಡಲು ನಿರಾಕರಿಸಲಾಗಿದೆ. ಆದುದರಿಂದ ನಾವು ಧಾನ್ಯವನ್ನು ತರುವಂತಾಗಲು ತಾವು ನಮ್ಮ ಸಂಗಡ ನಮ್ಮ ಸಹೋದರನನ್ನು ಕಳುಹಿಸಿ ಕೊಡಿರಿ. ಅವನ ರಕ್ಷಣೆಗೆ ನಾವು ಹೊಣೆಗಾರರು."

فَلَمَّا رَجَعُوا إِلَىٰ أَبِيهِمْ قَالُوا يَا أَبَانَا مُنِعَ مِنَّا الْكَيْلُ فَأَرْسِلْ مَعَنَا أَخَانَا نَكْتَلْ وَإِنَّا لَهُ لَحَافِظُونَ ﴿٦٣﴾

64. ಆಗ ತಂದೆಯು, "ನಾನು ಇದಕ್ಕೆ ಮುಂಚೆ ಇವನ ಅಣ್ಣನ ವಿಷಯದಲ್ಲಿ ನಿಮ್ಮ ಮೇಲೆ ಭರವಸೆಯನ್ನಿರಿಸಿದ್ದಂತೆಯೇ ಇವನ ವಿಷಯದಲ್ಲೂ ಇಡಬೇಕೇ? ಅಲ್ಲಾಹನೇ ಅತ್ಯುತ್ತಮ ರಕ್ಷಕನು ಮತ್ತು ಅವನು ಎಲ್ಲರಿಗಿಂತಲೂ ಹೆಚ್ಚು ಕರುಣಾಳು ವಾಗಿರುತ್ತಾನೆ" ಎಂದರು.

قَالَ هَلْ آمَنُكُمْ عَلَيْهِ إِلَّا كَمَا أَمِنْتُكُمْ عَلَىٰ أَخِيهِ مِنْ قَبْلُ ۖ فَاللَّهُ خَيْرٌ حَافِظًا ۖ وَهُوَ أَرْحَمُ الرَّاحِمِينَ ﴿٦٤﴾

65. ತರುವಾಯ ಅವರು ತಮ್ಮ ಸರಕನ್ನು ಬಿಚ್ಚಿದಾಗ ಅವರ ಮೊಬಲಗು ಅವರಿಗೆ ಹಿಂದಿರುಗಿಸಲ್ಪಟ್ಟಿರುವುದನ್ನು ಕಂಡು, "ಅಪ್ಪಾ, ನಮಗೆ ಇನ್ನೇನು ಬೇಕು? ಇಲ್ಲಿ ನೋಡಿರಿ. ನಮ್ಮ ಹಣವನ್ನೂ ನಮಗೆ ಹಿಂದಿರುಗಿಸಲಾಗಿದೆ. ನಾವಿನ್ನು ಹೋಗುವೆವು. ನಮ್ಮ ಕುಟುಂಬಕ್ಕಾಗಿ ಆಹಾರ ಧಾನ್ಯ ತರುವೆವು. ನಮ್ಮ ಸಹೋದರನ ರಕ್ಷಣೆಯನ್ನೂ ಮಾಡುವೆವು ಮತ್ತು ಒಂದು ಒಂಟೆ ಹೊರೆಯನ್ನು ಹೆಚ್ಚುವರಿಯಾಗಿ ತರುವೆವು. ಇಷ್ಟು ಧಾನ್ಯದ ಹೆಚ್ಚಳವು ಸುಲಭವಾಗಿ ಆಗಿಬಿಡುವುದು" ಎಂದು ಉದ್ಗರಿಸಿದರು.

وَلَمَّا فَتَحُوا مَتَاعَهُمْ وَجَدُوا بِضَاعَتَهُمْ رُدَّتْ إِلَيْهِمْ ۖ قَالُوا يَا أَبَانَا مَا نَبْغِي ۖ هَٰذِهِ بِضَاعَتُنَا رُدَّتْ إِلَيْنَا ۖ وَنَمِيرُ أَهْلَنَا وَنَحْفَظُ أَخَانَا وَنَزْدَادُ كَيْلَ بَعِيرٍ ۖ ذَٰلِكَ كَيْلٌ يَسِيرٌ ﴿٦٥﴾

ನೀವು ಅವನನ್ನು ಜತೆಯಲ್ಲಿ ತರದಿದ್ದರೆ ನಿಮ್ಮ ಮೇಲಿನ ವಿಶ್ವಾಸ ಇರಲಾರದು ಮತ್ತು ನಿಮಗೆ ಧಾನ್ಯವೂ ಸಿಗಲಾರದು ಎಂದು ಹೇಳಿರಬಹುದು.

66. ಅವರ ತಂದೆ ಹೇಳಿದರು- "ನೀವೇ ಆಕ್ರಮಣಕ್ಕೊಳಗಾಗಿ ಬಿಡುವುದರ ಹೊರತು ಅವನನ್ನು ನನ್ನ ಬಳಿಗೆ ಮರಳಿ ಕರೆತಂದೇ ತೀರುವಿರೆಂದು ನೀವು ನನಗೆ ಅಲ್ಲಾಹನ ಹೆಸರಲ್ಲಿ ಪ್ರಮಾಣ ವಚನ ನೀಡುವ ತನಕ ನಾನು ಅವನನ್ನು ನಿಮ್ಮ ಸಂಗಡ ಸರ್ವಥಾ ಕಳುಹಿಸಿ ಕೊಡಲಾರೆ." ಅವರಿಗೆ (ಹ. ಯಅ್‌ಕೂಬರಿಗೆ) ಅವರೆಲ್ಲರೂ ತಮ್ಮ ತಮ್ಮ ಪ್ರಮಾಣವಚನ ಕೊಟ್ಟ ಬಳಿಕ ಅವರು (ಯಅ್‌ಕೂಬರು) ಹೇಳಿದರು, "ನಮ್ಮ ಈ ಪ್ರತಿಜ್ಞೆಯ ಮೇಲ್ನೋಟವಿರಿಸುವವನು ಅಲ್ಲಾಹ್."

قَالَ لَنْ أُرْسِلَهُ مَعَكُمْ حَتَّىٰ تُؤْتُونِ مَوْثِقًا مِّنَ اللَّهِ لَتَأْتُنَّنِي بِهِ إِلَّا أَن يُحَاطَ بِكُمْ ۖ فَلَمَّا آتَوْهُ مَوْثِقَهُمْ قَالَ اللَّهُ عَلَىٰ مَا نَقُولُ وَكِيلٌ ﴿٦٦﴾

67. ತರುವಾಯ ಅವರು ಹೇಳಿದರು, "ಓ ನನ್ನ ಮಕ್ಕಳೇ, ನೀವು ಈಜಿಪ್ಟ್‌ನ ರಾಜಧಾನಿಯೊಳಗೆ ಒಂದೇ ದ್ವಾರದಿಂದ ಪ್ರವೇಶಿಸ ಬಾರದು.[18] ಬೇರೆ ಬೇರೆ ದ್ವಾರಗಳಿಂದ ಪ್ರವೇಶಿಸಬೇಕು. ಆದರೆ ನಾನು ನಿಮ್ಮನ್ನು ಅಲ್ಲಾಹನ ವಿಧಿಯಿಂದ ತಪ್ಪಿಸಲಾರೆ. ಆಜ್ಞಾಧಿಕಾರವು ಅವನ ಹೊರತು ಇನ್ನಾರಿಗೂ ಇಲ್ಲ. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದೆ ಮತ್ತು ಯಾರು ಭರವಸೆಯನ್ನಿರಿಸುವುದಿದ್ದರೂ ಅವನ ಮೇಲೆಯೇ ಇರಿಸಲಿ."

وَقَالَ يَا بَنِيَّ لَا تَدْخُلُوا مِن بَابٍ وَاحِدٍ وَادْخُلُوا مِنْ أَبْوَابٍ مُّتَفَرِّقَةٍ ۖ وَمَا أُغْنِي عَنكُم مِّنَ اللَّهِ مِن شَيْءٍ ۖ إِنِ الْحُكْمُ إِلَّا لِلَّهِ ۖ عَلَيْهِ تَوَكَّلْتُ ۖ وَعَلَيْهِ فَلْيَتَوَكَّلِ الْمُتَوَكِّلُونَ ﴿٦٧﴾

68. ವಾಸ್ತವದಲ್ಲಿ ಆದುದೂ ಇದೇ. ಅವರು ತಮ್ಮ ತಂದೆಯ ಆದೇಶದಂತೆ (ಬೇರೆ ಬೇರೆ ದ್ವಾರಗಳಿಂದ) ನಗರದೊಳಗೆ ಪ್ರವೇಶಿಸಿದ್ದ ಈ ಜಾಗ್ರತಾ ಯತ್ನವು ಅಲ್ಲಾಹನ ವಿಧಿಯ ಮುಂದೆ ಏನೂ ಫಲಕಾರಿಯಾಗಲಿಲ್ಲ. ಯಅ್‌ಕೂಬರು ತಮ್ಮ ಮನಸ್ಸಿನಲ್ಲಿದ್ದ ಒಂದು ಅಂಜಿಕೆಯನ್ನು ದೂರೀಕರಿಸಿಕೊಳ್ಳಲಿಕ್ಕಾಗಿ ಅವರು ತಮ್ಮ ಪ್ರಯತ್ನ ಮಾಡಿಕೊಂಡರಷ್ಟೆ. ನಿಸ್ಸಂದೇಹ ವಾಗಿಯೂ ನಾವು ನೀಡಿದ ಶಿಕ್ಷಣದಿಂದ ಅವರು ಸುಶಿಕ್ಷಿತರಾಗಿಯೇ ಇದ್ದರು. ಆದರೆ ಹೆಚ್ಚಿನವರು ಪರಮಾರ್ಥವನ್ನು ತಿಳಿಯುವುದಿಲ್ಲ.

وَلَمَّا دَخَلُوا مِنْ حَيْثُ أَمَرَهُمْ أَبُوهُم مَّا كَانَ يُغْنِي عَنْهُم مِّنَ اللَّهِ مِن شَيْءٍ إِلَّا حَاجَةً فِي نَفْسِ يَعْقُوبَ قَضَاهَا ۚ وَإِنَّهُ لَذُو عِلْمٍ لِّمَا عَلَّمْنَاهُ وَلَٰكِنَّ أَكْثَرَ النَّاسِ لَا يَعْلَمُونَ ﴿٦٨﴾

69. ಇವರು ಯೂಸುಫರ ಸನ್ನಿಧಿಗೆ ತಲುಪಿದಾಗ ಅವರು ತಮ್ಮ ತಮ್ಮನನ್ನು ಒತ್ತಟ್ಟಿಗೆ ಕರೆದು, "(ಕಾಣೆಯಾಗಿದ್ದ) ನಿನ್ನ ಆ ಸಹೋದರನೇ ನಾನು. ಇನ್ನು ನೀನು ಇವರು ವರ್ತಿಸುತ್ತಿದ್ದುದರ ಬಗೆಗೆ ಚಿಂತಿಸಬೇಡ" ಎಂದರು.[19]

وَلَمَّا دَخَلُوا عَلَىٰ يُوسُفَ آوَىٰ إِلَيْهِ أَخَاهُ ۖ قَالَ إِنِّي أَنَا أَخُوكَ فَلَا تَبْتَئِسْ بِمَا كَانُوا يَعْمَلُونَ ﴿٦٩﴾

---

18. ಬರಗಾಲದ ಈ ಸಂದರ್ಭದಲ್ಲಿ ಅವರು ಗುಂಪುಗಟ್ಟಿ ಈಜಿಪ್ಟ್‌ನೊಳಗೆ ಪ್ರವೇಶಿಸಿದರೆ ಅವರನ್ನು ಜನರು ಸಂಶಯದಿಂದ ನೋಡ ಬಹುದು. ಇವರು ದರೋಡೆ ಮಾಡಲಿಕ್ಕಾಗಿ ಬಂದವರೆಂದು ಶಂಕಿಸಬಹುದೆಂದು ಪ್ರಾಯಶಃ ಹ. ಯಅ್‌ಕೂಬ್(ಅ) ಭಾವಿಸಿರಬಹುದು.

19. ಪ್ರಾಯಶಃ ಈ ಭೇಟಿಯ ಸಂದರ್ಭದಲ್ಲಿ ಬಿನ್‌ಯಮೀನ್ ತಮ್ಮ ಮಲ ಸಹೋದರರು ಯಾವೆಲ್ಲಾ ಕೆಟ್ಟ ವರ್ತನೆ ತೋರಿದರು ಎಂಬುದನ್ನು ತಿಳಿಸಿರಬಹುದು. ಆಗ ಯೂಸುಫ್(ಅ) ತಮ್ಮ ಸಹೋದರನಿಗೆ “ಇನ್ನು ನೀನು ನನ್ನ ಬಳಿಯೇ ಇರುವೆ. ಆ ಅಕ್ರಮಿಗಳ ಕಪಿಮುಷ್ಟಿಯಲ್ಲಿರಲು ನಾನು ಮತ್ತೆ ನಿನ್ನನ್ನು ಕಳುಹಿಸಿ ಕೊಡಲಾರೆ” ಎಂದು ಸಾಂತ್ವನ ನೀಡಿರಬಹುದು. ಬಿನ್ ಯಮೀನ್‌ನನ್ನು

70. ಯೂಸುಫ್ ತಮ್ಮ ಸಹೋದರರ ಸಾಮಾನನ್ನು ಹೇರಿಸುತ್ತಿರುವಾಗ ತಮ್ಮ ತಮ್ಮನ ಸರಕಿನಲ್ಲಿ ಲೋಟೆಯನ್ನು ಇಟ್ಟು ಬಿಟ್ಟರು. ತರುವಾಯ ಕೂಗುವವನೊಬ್ಬನು, "ಓ ಯಾತ್ರಿಕ ತಂಡದವರೇ, ನೀವು ಕಳ್ಳರಾಗಿರುತ್ತೀರಿ" ಎಂದು ಕೂಗಿದನು.

فَلَمَّا جَهَّزَهُمْ بِجَهَازِهِمْ جَعَلَ السِّقَايَةَ فِي رَحْلِ أَخِيهِ ثُمَّ أَذَّنَ مُؤَذِّنٌ أَيَّتُهَا الْعِيرُ إِنَّكُمْ لَسَارِقُونَ ﴿٧٠﴾

71. ಅವರು ತಿರುಗಿ, "ನಿಮ್ಮದೇನು ಕಳೆದುಹೋಗಿದೆ?" ಎಂದು ಕೇಳಿದರು.

قَالُوا وَأَقْبَلُوا عَلَيْهِمْ مَاذَا تَفْقِدُونَ ﴿٧١﴾

72. ಆಗ ಸರಕಾರಿ ನೌಕರರು, "ರಾಜನ ಲೋಟೆಯು ಕಳೆದುಹೋಗಿದೆ" ಎಂದರು. (ಅವರ ನಾಯಕನು) "ಅದನ್ನು ತಂದು ಕೊಟ್ಟವನಿಗೆ ಒಂದು ಒಂಟೆ ಹೊರುವಷ್ಟು ಧಾನ್ಯ ಬಹುಮಾನವಿದೆ. ಇದಕ್ಕೆ ನಾನು ಹೊಣೆಗಾರನಾಗಿದ್ದೇನೆ" ಎಂದನು.

قَالُوا نَفْقِدُ صُوَاعَ الْمَلِكِ وَلِمَنْ جَاءَ بِهِ حِمْلُ بَعِيرٍ وَأَنَا بِهِ زَعِيمٌ ﴿٧٢﴾

73. ಆ ಸಹೋದರರು, "ಅಲ್ಲಾಹನಾಣೆ! ನಾವು ಈ ದೇಶದಲ್ಲಿ ಗೊಂದಲವನ್ನುಂಟು ಮಾಡಲು ಬಂದವರಲ್ಲವೆಂದೂ ನಾವು ಕಳ್ಳತನ ಮಾಡುವವರಲ್ಲವೆಂದೂ ನೀವು ಚೆನ್ನಾಗಿ ಬಲ್ಲಿರಿ" ಎಂದರು.

قَالُوا تَاللَّهِ لَقَدْ عَلِمْتُمْ مَا جِئْنَا لِنُفْسِدَ فِي الْأَرْضِ وَمَا كُنَّا سَارِقِينَ ﴿٧٣﴾

74. "ಸರಿ, ನೀವು ಸುಳ್ಳುಗಾರರಾದರೆ ಕಳ್ಳನಿಗೆ ಶಿಕ್ಷೆಯೇನು?" ಎಂದು ಅವರು ಕೇಳಿದರು.

قَالُوا فَمَا جَزَاؤُهُ إِنْ كُنْتُمْ كَاذِبِينَ ﴿٧٤﴾

75. ಅದಕ್ಕೆ ಅವರು, "ಅವನಿಗೆ ಶಿಕ್ಷೆಯೇ? ಯಾರ ಸರಕಿನೊಳಗಿಂದ ಅದು ಸಿಗುವುದೋ ಅವನೇ ಅದರ ಬದಲಿಗೆ ಇರಿಸಲ್ಪಡಬೇಕು. ನಮ್ಮಲ್ಲಿ ಇಂತಹ ಅಕ್ರಮಿಗಳಿಗೆ ಶಿಕ್ಷೆ ಕೊಡುವ ಕ್ರಮ ಇದುವೇ" ಎಂದು ಹೇಳಿದರು.

قَالُوا جَزَاؤُهُ مَنْ وُجِدَ فِي رَحْلِهِ فَهُوَ جَزَاؤُهُ ۚ كَذَٰلِكَ نَجْزِي الظَّالِمِينَ ﴿٧٥﴾

76. ಆಗ ಯೂಸುಫ್ ತಮ್ಮ ಸಹೋದರನದಕ್ಕಿಂತ ಮುಂಚೆ ಅವರ ಚೀಲಗಳ ತಪಾಸಣೆ ನಡೆಸಲಾರಂಭಿಸಿದರು. ಆ ಬಳಿಕ ತನ್ನ ತಮ್ಮನ ಚೀಲದಿಂದ, ಕಾಣೆಯಾಗಿದ್ದುದನ್ನು ಹೊರ ತೆಗೆದರು. ಹೀಗೆ ನಾವು ನಮ್ಮ ಯುಕ್ತಿಯಿಂದ ಯೂಸುಫರನ್ನು ಸಮರ್ಥಿಸಿದೆವು. ಅಲ್ಲಾಹನೇ ಇಚ್ಛಿಸಿದ ವಿನಾ ರಾಜಧರ್ಮ (ಅರ್ಥಾತ್ ಈಜಿಪ್ಟ್‌ನ ರಾಜ ಶಾಸನದ) ಪ್ರಕಾರ ತನ್ನ

فَبَدَأَ بِأَوْعِيَتِهِمْ قَبْلَ وِعَاءِ أَخِيهِ ثُمَّ اسْتَخْرَجَهَا مِنْ وِعَاءِ أَخِيهِ ۚ كَذَٰلِكَ كِدْنَا لِيُوسُفَ ۖ مَا كَانَ لِيَأْخُذَ أَخَاهُ فِي دِينِ الْمَلِكِ إِلَّا أَنْ يَشَاءَ اللَّهُ ۚ نَرْفَعُ دَرَجَاتٍ

---

ಈಜಿಪ್ಟ್‌ನಲ್ಲೇ ಉಳಿಸಿಕೊಳ್ಳಲು ಯಾವ ಯೋಜನೆ ರೂಪಿಸುವುದು ಎಂಬ ಬಗ್ಗೆಯೂ ಈ ಇಬ್ಬರು ಸಹೋದರರ ನಡುವೆ ಅದೇ ಸಂದರ್ಭದಲ್ಲಿ ತೀರ್ಮಾನವಾಗಿರಬಹುದು. ಆ ಮೂಲಕ ಯೂಸುಫ್(ಅ) ವಿಷಯವನ್ನು ಯುಕ್ತಿಪೂರ್ವಕ ಗೋಪ್ಯವಾಗಿರಿಸಲು ಬಯಸಿದ್ದಕ್ಕೆ ಅನುಗುಣವಾದ ತೀರ್ಮಾನ ಆಗಿರಬಹುದು.

ತಮ್ಮನನ್ನು ಹಿಡಿಯುವುದು ಅವರಿಗೆ ಯೋಗ್ಯವಾಗಿರಲಿಲ್ಲ.[20] ನಾವು ನಮಗಿಷ್ಟ ಬಂದವರ ಸ್ಥಾನವನ್ನು ಉನ್ನತಗೊಳಿಸುತ್ತೇವೆ. ಸಕಲ ಜ್ಞಾನಿಗಳಿಗಿಂತ ಮೇಲಾಗಿರುವ ಓರ್ವ ಸರ್ವಜ್ಞನಿದ್ದಾನೆ.

مَّنْ نَّشَآءُ ۗ وَفَوْقَ كُلِّ ذِىْ عِلْمٍ عَلِيْمٌ ۝٧٦

77. ಆ ಸಹೋದರರು ಹೇಳಿದರು, "ಈತನು ಕದ್ದರೆ ಆಶ್ಚರ್ಯವಿಲ್ಲ. ಇದಕ್ಕಿಂತ ಮುಂಚೆ ಇವನ ಅಣ್ಣನೂ (ಯೂಸುಫ್) ಕಳವು ಮಾಡಿದ್ದಾನೆ." ಯೂಸುಫ್, ಅವರ ಈ ಮಾತನ್ನು ನುಂಗಿಕೊಂಡರು. ನಿಜಸ್ಥಿತಿಯನ್ನೂ ಬಹಿರಂಗಗೊಳಿಸಲಿಲ್ಲ. "ಮಹಾ ನೀಚರು ನೀವು! (ನನ್ನ ಸಮ್ಮುಖದಲ್ಲೇ) ನೀವು ಹೊರಿಸುತ್ತಿರುವ ಅಪವಾದದ ನಿಜ ಸ್ಥಿತಿಯನ್ನು ಅಲ್ಲಾಹ್ ಚೆನ್ನಾಗಿ ಬಲ್ಲವನಾಗಿರುತ್ತಾನೆ" ಎಂದಿಷ್ಟೆ (ಸ್ವಗತ) ಹೇಳಿಕೊಂಡು ಸುಮ್ಮನಾದರು.

قَالُوْٓا اِنْ يَّسْرِقْ فَقَدْ سَرَقَ اَخٌ لَّهٗ مِنْ قَبْلُ ۚ فَاَسَرَّهَا يُوْسُفُ فِىْ نَفْسِهٖ وَلَمْ يُبْدِهَا لَهُمْ ۚ قَالَ اَنْتُمْ شَرٌّ مَّكَانًا ۚ وَاللّٰهُ اَعْلَمُ بِمَا تَصِفُوْنَ ۝٧٧

78. ಅವರು ಹೇಳಿದರು, "ಓ ಅಧಿಕಾರಿಯೇ, (ಅಝೀಝ್!)[21] ಇವನ ತಂದೆ ತುಂಬಾ ವಯೋವೃದ್ಧರು. ತಾವು ಇವನ ಸ್ಥಾನದಲ್ಲಿ ನಮ್ಮ ಪೈಕಿ ಯಾರನ್ನಾದರೂ ತಡೆದಿರಿಸಿಕೊಳ್ಳಿರಿ. ನಾವು ನಿಮ್ಮನ್ನು ಮಹಾ ಸಜ್ಜನರನ್ನಾಗಿ ಕಾಣುತ್ತೇವೆ."

قَالُوْا يٰٓاَيُّهَا الْعَزِيْزُ اِنَّ لَهٗٓ اَبًا شَيْخًا كَبِيْرًا فَخُذْ اَحَدَنَا مَكَانَهٗ ۚ اِنَّا نَرٰىكَ مِنَ الْمُحْسِنِيْنَ ۝٧٨

79. ಆಗ ಯೂಸುಫ್ ಹೇಳಿದರು, "ಶಾಂತಂ ಪಾಪಂ. ಇನ್ನೊಬ್ಬನನ್ನು ನಾವು ಇರಿಸಿಕೊಳ್ಳುವುದಾದರೂ ಹೇಗೆ? ನಾವು ನಮ್ಮ ಸೊತ್ತನ್ನು ಯಾರಲ್ಲಿ ಕಂಡೆವೋ[22] ಅವನನ್ನು ಬಿಟ್ಟು ಇನ್ನೊಬ್ಬನನ್ನು ಇರಿಸಿಕೊಂಡರೆ ನಾವು ಅಕ್ರಮಿಗಳಾಗುವೆವು."

قَالَ مَعَاذَ اللّٰهِ اَنْ نَّاْخُذَ اِلَّا مَنْ وَّجَدْنَا مَتَاعَنَا عِنْدَهٗٓ ۙ اِنَّآ اِذًا لَّظٰلِمُوْنَ ۝٧٩

20. "ಯೂಸುಫ್(ಅ), ರಾಜನ ಕಾನೂನಿನ ಪ್ರಕಾರ ತಮ್ಮ ಸಹೋದರನನ್ನು ಹಿಡಿಯುವಂತಿರಲಿಲ್ಲ" ಎಂದು ಸಾಮಾನ್ಯವಾಗಿ ಇದನ್ನು ಭಾಷಾಂತರಿಸಲಾಗುತ್ತದೆ. ಆದರೆ ಹೀಗೆ ಇದನ್ನು ಅರ್ಥೈಸಿಕೊಳ್ಳುವುದಾದರೆ ವಿಷಯ ಅಸ್ಪಷ್ಟವಾಗಿ ಉಳಿಯುತ್ತದೆ. ರಾಜನ ಕಾನೂನಿನನ್ವಯ ಕಳ್ಳನನ್ನು ಹಿಡಿಯಲು ಸಾಧ್ಯವಾಗದೆ ಇರುವುದಾದರೂ ಹೇಗೆ? ಕಳ್ಳನನ್ನು ಹಿಡಿಯಲು ಅನುಮತಿ ಇಲ್ಲದಂತಹ ಕಾನೂನನ್ನು ಹೊಂದಿರುವ ಸಾಮ್ರಾಜ್ಯ ಜಗತ್ತಿನಲ್ಲಿ ಎಂದಾದರೂ ಅಸ್ತಿತ್ವದಲ್ಲಿತ್ತೇ? ಆದ್ದರಿಂದ ವಸ್ತುಸ್ಥಿತಿ ಯಾವುದೆಂದರೆ ಅಲ್ಲಾಹನ ಪ್ರವಾದಿಯಾಗಿರುತ್ತಾ ರಾಜನ ಕಾನೂನಿನನ್ವಯ ವರ್ತಿಸಲು ಹ. ಯೂಸುಫ್‌ರಿಗೆ(ಅ) ಸಾಧ್ಯವಿರಲಿಲ್ಲ. ಆದ್ದರಿಂದಲೇ ಹ. ಯೂಸುಫ್(ಅ) ತಮ್ಮ ಸಹೋದರರೊಡನೆ ಅವರ ಬಳಿಯ ಕಾನೂನಿನ ಬಗ್ಗೆ ಕೇಳಿದರು ಮತ್ತು ಪೂರ್ವ ಪ್ರವಾದಿ ಹ. ಇಬ್‌ರಾಹೀಮ್‌ರ(ಅ) ಶರೀಅತ್‌ನಂತೆ ತಮ್ಮ ಸಹೋದರನನ್ನು ಸೆರೆಹಿಡಿದರು.

21. ಇಲ್ಲಿ 'ಅಝೀಝ್' ಎಂಬ ಪದ ಹ.ಯೂಸುಫ್‌ರಿಗೆ(ಅ) ಪ್ರಯೋಗಿಸಲ್ಪಟ್ಟಿದೆ. ಕೇವಲ ಈ ಕಾರಣಕ್ಕಾಗಿಯೇ ವ್ಯಾಖ್ಯಾನಕಾರರು ಈ ಹಿಂದೆ ಝುಲೈಕಾಳ ಪತಿ ಹೊಂದಿದ್ದ ಪದವಿಯಲ್ಲಿ ಈಗ ಹ. ಯೂಸುಫ್(ಅ) ನೇಮಕಗೊಂಡಿದ್ದಾರೆ ಎಂದು ಭಾವಿಸಿದ್ದಾರೆ. ಆದರೆ ಟಿಪ್ಪಣಿ 9ರಲ್ಲಿ ನಾವು ಈ ಬಗ್ಗೆ ಸ್ಪಷ್ಟೀಕರಣ ನೀಡಿದ್ದೇವೆ. ಇದು ಈಜಿಪ್ಟಿನ ಯಾವುದೇ ನಿರ್ದಿಷ್ಟ ಪದವಿಯ ಹೆಸರಾಗಿರಲಿಲ್ಲ. ಬದಲಾಗಿ 'ಅಧಿಕಾರಾರೂಢ' ಎಂಬ ಅರ್ಥದಲ್ಲಿ ಈ ಪದ ಪ್ರಯೋಗಿಸಲ್ಪಡುತ್ತದೆ.

22. ಇಲ್ಲಿ 'ಕಳ್ಳ' ಎನ್ನುವ ಬದಲು “ನಾವು ನಮ್ಮ ಸೊತ್ತನ್ನು ಯಾರಲ್ಲಿ ಕಂಡೆವೊ" ಎನ್ನುವ ಎಚ್ಚರಿಕೆಯನ್ನು ಪಾಲಿಸಲಾಗಿರುವುದು ಗಮನಾರ್ಹ. ಇದನ್ನೇ ಶರೀಅತ್‌ನ ಪಾರಿಭಾಷಿಕದಲ್ಲಿ 'ತೌರಿಯಃ' ಎನ್ನಲಾಗುತ್ತದೆ. ಅರ್ಥಾತ್ 'ವಾಸ್ತವಿಕತೆಯನ್ನು ಮರೆಸುವುದು' ಅಥವಾ ವಸ್ತುಸ್ಥಿತಿಯನ್ನು ಗೋಪ್ಯವಾಗಿರಿಸುವುದು. ಯಾವುದಾದರೂ ಶೋಷಿತನನ್ನು ಶೋಷಕನಿಂದ ರಕ್ಷಿಸಲು ಅಥವಾ ಯಾವುದಾದರೂ ದೊಡ್ಡ

80. ಹೀಗೆ ಯೂಸುಫರಿಂದ ನಿರಾಶರಾದ ಮೇಲೆ ಅವರು ಒತ್ತಟ್ಟಿಗೆ ಹೋಗಿ ಪರಸ್ಪರ ಸಮಾಲೋಚನೆ ನಡೆಸತೊಡಗಿದರು. ಅವರಲ್ಲಿ ಎಲ್ಲರಿಗೂ ಹಿರಿಯನಾಗಿದ್ದವನು ಹೇಳಿದನು, "ನಿಮ್ಮ ತಂದೆ ನಿಮ್ಮೊಡನೆ ಅಲ್ಲಾಹನ ಹೆಸರಲ್ಲಿ ಪ್ರಮಾಣ ವಚನ ಪಡೆದಿರುವುದು ನಿಮಗೆ ತಿಳಿದಿಲ್ಲವೇ? ಇದಕ್ಕೆ ಮುಂಚೆ ಯೂಸುಫನ ವಿಷಯದಲ್ಲಿ ನೀವು ಮಾಡಿರುವುದೆಲ್ಲವೂ ನಿಮಗೆ ತಿಳಿದಿದೆ. ಇನ್ನು ನನ್ನ ತಂದೆಯವರು ನನಗೆ ಅನುಮತಿ ಕೊಡುವ ವರೆಗೆ ಅಥವಾ ಅಲ್ಲಾಹನೇ ನನ್ನ ಬಗ್ಗೆ ತೀರ್ಮಾನ ಮಾಡುವ ವರೆಗೆ ನಾನು ಇಲ್ಲಿಂದ ಎಷ್ಟು ಮಾತ್ರಕ್ಕೂ ಹೋಗಲಾರೆ. ಅಲ್ಲಾಹನು ಅತ್ಯುತ್ತಮ ತೀರ್ಪುಗಾರನು.

فَلَمَّا اسْتَيْـَٔسُوْا مِنْهُ خَلَصُوْا نَجِيًّا ؕ قَالَ كَبِيْرُهُمْ اَلَمْ تَعْلَمُوْۤا اَنَّ اَبَاكُمْ قَدْ اَخَذَ عَلَيْكُمْ مَّوْثِقًا مِّنَ اللّٰهِ وَ مِنْ قَبْلُ مَا فَرَّطْتُّمْ فِيْ يُوْسُفَ ۚ فَلَنْ اَبْرَحَ الْاَرْضَ حَتّٰى يَاْذَنَ لِيْۤ اَبِيْۤ اَوْ يَحْكُمَ اللّٰهُ لِيْ ۚ وَ هُوَ خَيْرُ الْحٰكِمِيْنَ ﴿۸۰﴾

81. ನೀವು ಮರಳಿ ಹೋಗಿ ತಂದೆಯವರೊಡನೆ, ಅಪ್ಪಾ, ನಿಮ್ಮ ಮಗನು ಕಳವು ಮಾಡಿದ್ದಾನೆ. ಅವನು ಕಳವು ಮಾಡುತ್ತಿರುವುದನ್ನು ನಾವು ನೋಡಲಿಲ್ಲ. ನಮಗೆ ತಿಳಿದುದನ್ನು ಮಾತ್ರ ನಾವು ಹೇಳುತ್ತೇವೆ. ಅದೃಶ್ಯವಾಗಿರುವುದರ ಬಗ್ಗೆ ಮೇಲ್ನೋಟವಹಿಸಲು ನಮ್ಮಿಂದ ಸಾಧ್ಯವಿರಲಿಲ್ಲ.

اِرْجِعُوْۤا اِلٰۤى اَبِيْكُمْ فَقُوْلُوْا يٰۤاَبَانَاۤ اِنَّ ابْنَكَ سَرَقَ ۚ وَ مَا شَهِدْنَاۤ اِلَّا بِمَا عَلِمْنَا وَ مَا كُنَّا لِلْغَيْبِ حٰفِظِيْنَ ﴿۸۱﴾

82. ತಾವು ನಾವಿದ್ದ ನಾಡಿನ ಜನರೊಡನೆಯೂ ನಾವು ಯಾವ ಯಾತ್ರಾ ತಂಡದೊಂದಿಗೆ ಬಂದಿದ್ದೇವೋ ಅವರೊಡನೆಯೂ ಕೇಳಿಕೊಳ್ಳಿರಿ. ನಾವು ಸಂಪೂರ್ಣ ಸತ್ಯವಾದಿಗಳು ಎಂದು ಹೇಳಿರಿ" ಎಂದನು.

وَ سْـَٔلِ الْقَرْيَةَ الَّتِيْ كُنَّا فِيْهَا وَ الْعِيْرَ الَّتِيْۤ اَقْبَلْنَا فِيْهَا ؕ وَ اِنَّا لَصٰدِقُوْنَ ﴿۸۲﴾

83. ಈ ವೃತ್ತಾಂತವನ್ನು ಕೇಳಿ ತಂದೆಯು, "ವಾಸ್ತವದಲ್ಲಿ ನಿಮ್ಮ ಭ್ರಷ್ಟಚಿತ್ತವು ನಿಮಗೆ ಇನ್ನೊಂದು ದೊಡ್ಡ ವಿಷಯವನ್ನು

قَالَ بَلْ سَوَّلَتْ لَكُمْ اَنْفُسُكُمْ اَمْرًا ؕ فَصَبْرٌ

ಅಕ್ರಮವನ್ನು ತಡೆಯಲು ವಾಸ್ತವಿಕತೆಗೆ ವಿರುದ್ಧವಾದ ಮಾತನ್ನು ಹೇಳುವುದು ಅಥವಾ ಸತ್ಯಕ್ಕೆ ದೂರವಾದ ನೆಪ ಹುಡುಕುವುದರ ವಿನಾ ಬೇರಾವುದೇ ದಾರಿಯಿಲ್ಲದ ಸಂದರ್ಭದಲ್ಲಿ - ಸತ್ಯಸಂಧನಾದ ಓರ್ವ ವ್ಯಕ್ತಿ ಸುಳ್ಳಾಡುವುದರಿಂದ ದೂರವಿರುತ್ತಾ ವಾಸ್ತವಿಕತೆಯನ್ನು ಗೋಪ್ಯವಾಗಿಟ್ಟು ಕೇಡನ್ನು ಎದುರಿಸಲಿಕ್ಕಾಗಿ ಯಾವುದಾದರೂ ಮಾತನ್ನು ಹೇಳುವುದು ಅಥವಾ ಯಾವುದಾದರೂ ಯುಕ್ತಿಯನ್ನು ಪಾಲಿಸಲು ಪ್ರಯತ್ನಿಸುವುದು. ಪ್ರಸ್ತುತ ಸಂದರ್ಭದಲ್ಲಿ ಹ. ಯೂಸುಫ್(ಅ) ಯಾವ ರೀತಿ ಧರ್ಮ ಸಮ್ಮತವಾದ 'ತೌರಿಯಃ'ದ ಶರತ್ತುಗಳನ್ನು ಸಾದ್ಯಂತ ಈಡೇರಿಸಿದ್ದಾರೆ ಎಂಬುದು ಗಮನಾರ್ಹ. ಸಹೋದರನ ಒಪ್ಪಿಗೆ ಪಡೆದು ಅವನ ಸರಕಿನಲ್ಲಿ ಲೋಟೆಯನ್ನಿರಿಸಿದರು. ಆದರೆ ನೌಕರರಿಗೆ ಅವನ ಮೇಲೆ ಕಳ್ಳತನದ ಆರೋಪ ಹೊರಿಸುವಂತೆ ಹೇಳಲಿಲ್ಲ. ಅನಂತರ ಸರ್ಕಾರಿ ನೌಕರರು ಕಳ್ಳತನದ ಆರೋಪದಲ್ಲಿ ಅವರನ್ನು ಹಿಡಿದು ತಂದಾಗ ಸಾವಧಾನದಿಂದ ಅವರ ಶೋಧನೆ ನಡೆಸಲಾಯಿತು. ಅನಂತರ ಸಹೋದರರು, "ಬಿನ್ ಯಮೀನ್‌ನ ಬದಲಿಗೆ ನಮ್ಮಲ್ಲಿ ಯಾರನ್ನಾದರೂ ಇಟ್ಟುಕೊಳ್ಳಿರಿ" ಎಂದು ಹೇಳಿದಾಗ ಅದಕ್ಕುತ್ತರವಾಗಿ ಅವರ ಮಾತಿನ ಮೂಲಕವೇ ಅವರಿಗೆ ಎದಿರೇಟು ನೀಡಲಾಯಿತು, "ಯಾರ ಸರಕಿನಿಂದ ಸೊತ್ತು ಹೊರಬರುತ್ತದೋ ಅವನನ್ನು ಇರಿಸಿಕೊಳ್ಳಬೇಕೆಂಬುದು ನಿಮ್ಮ ತೀರ್ಮಾನವೇ ಆಗಿತ್ತು. ನಿಮ್ಮೆದುರಿನಲ್ಲೇ ಬಿನ್‌ಯಮೀನ್‌ನ ಸರಕಿನಿಂದ ನಮ್ಮ ಸೊತ್ತು ಹೊರಬಂದಿದೆ. ಆದ್ದರಿಂದ ನಾವು ಇವನನ್ನೇ ಇರಿಸಿಕೊಳ್ಳುತ್ತೇವೆ. ಇನ್ನೊಬ್ಬನನ್ನು ಅವನ ಬದಲಿಗೆ ಇರಿಸಿಕೊಳ್ಳಲು ಹೇಗೆ ಸಾಧ್ಯ?" ಎಂದು ಹೇಳಲಾಯಿತು.

ಸುಲಭಗೊಳಿಸಿಬಿಟ್ಟಿತು.[23] ಚಿಂತಿಲ್ಲ; ಇದನ್ನೂ ತಾಳಿಕೊಳ್ಳುವೆನು; ಚೆನ್ನಾಗಿ ತಾಳಿಕೊಳ್ಳುವೆನು. ಅಲ್ಲಾಹನು ಅವರೆಲ್ಲರನ್ನೂ ತಂದು ನನ್ನೊಂದಿಗೆ ಸೇರಿಸಿಬಿಡಲೂ ಬಹುದು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನಾಗಿದ್ದು ಅವನ ಎಲ್ಲಾ ಕಾರ್ಯಗಳೂ ಯುಕ್ತಿಪೂರ್ಣವಾಗಿರುತ್ತವೆ" ಎಂದು ಹೇಳಿದರು.

جَمِيلٌ ۖ عَسَى اللَّهُ أَن يَأْتِيَنِي بِهِمْ جَمِيعًا ۚ
إِنَّهُ هُوَ الْعَلِيمُ الْحَكِيمُ ﴿٨٣﴾

84. ಅನಂತರ ಅವರು (ಯಅ್‌ಕೂಬರು) ಅವರಿಂದ ಮುಖ ತಿರುಗಿಸಿ ಕುಳಿತರು ಮತ್ತು 'ಹಾ! ಯೂಸುಫ್!' ಎಂದು ಪ್ರಲಾಪಿಸತೊಡಗಿದರು. ಅವರು ಒಳಗಿಂದೊಳಗೆ ಶೋಕಾತಿರೇಕ ದಿಂದ ಏದುಸಿರು ಬಿಡುತ್ತಿದ್ದರು ಮತ್ತು ಅವರ ಕಣ್ಣುಗಳು ಬಿಳುಪೇರಿ ಬಿಟ್ಟಿದ್ದುವು.

وَتَوَلَّىٰ عَنْهُمْ وَقَالَ يَا أَسَفَىٰ عَلَىٰ يُوسُفَ
وَابْيَضَّتْ عَيْنَاهُ مِنَ الْحُزْنِ فَهُوَ كَظِيمٌ ﴿٨٤﴾

85. ಪುತ್ರರು ಹೇಳಿದರು, "ಅಲ್ಲಾಹನಾಣೆ! ತಾವಂತು ಯೂಸುಫನನ್ನೇ ನೆನೆಸುತ್ತ ಅವನ ದುಃಖದಲ್ಲಿ ತಮ್ಮನ್ನು ತಾವೇ ಕರಗಿಸಿಬಿಡುವಿರಿ ಅಥವಾ ತಮ್ಮ ಜೀವವನ್ನೇ ನಾಶಗೊಳಿಸಿಕೊಳ್ಳುವಿರಿ."

قَالُوا تَاللَّهِ تَفْتَأُ تَذْكُرُ يُوسُفَ حَتَّىٰ تَكُونَ
حَرَضًا أَوْ تَكُونَ مِنَ الْهَالِكِينَ ﴿٨٥﴾

86. ಅವರು ಹೀಗೆ ಹೇಳಿದರು: "ನಾನು ನನ್ನ ತಲ್ಲಣ ಮತ್ತು ದುಃಖದ ಮೊರೆಯನ್ನು ಅಲ್ಲಾಹನ ಹೊರತು ಇನ್ನಾರೊಡನೆಯೂ ಇಡುವು ದಿಲ್ಲ. ಅಲ್ಲಾಹನನ್ನು ನಾನು ತಿಳಿದುಕೊಂಡಂತೆ ನೀವು ತಿಳಿದಿಲ್ಲ.

قَالَ إِنَّمَا أَشْكُو بَثِّي وَحُزْنِي إِلَى اللَّهِ
وَأَعْلَمُ مِنَ اللَّهِ مَا لَا تَعْلَمُونَ ﴿٨٦﴾

87. ಓ ನನ್ನ ಮಕ್ಕಳೇ, ನೀವು ಹೋಗಿ ಯೂಸುಫನನ್ನೂ ಅವನ ತಮ್ಮನನ್ನೂ ಪತ್ತೆಹಚ್ಚಿರಿ. ಅಲ್ಲಾಹನ ಅನುಗ್ರಹದಿಂದ ನಿರಾಶರಾಗ ಬೇಡಿರಿ. ಅವನ ಅನುಗ್ರಹದಿಂದ ಸತ್ಯನಿಷೇಧಿಗಳು ಮಾತ್ರ ನಿರಾಶರಾಗುತ್ತಾರೆ."

يَا بَنِيَّ اذْهَبُوا فَتَحَسَّسُوا مِن يُوسُفَ وَأَخِيهِ
وَلَا تَيْأَسُوا مِن رَّوْحِ اللَّهِ ۖ إِنَّهُ لَا يَيْأَسُ
مِن رَّوْحِ اللَّهِ إِلَّا الْقَوْمُ الْكَافِرُونَ ﴿٨٧﴾

88. ಇವರು ಈಜಿಪ್ಟ್‌ಗೆ ಹೋಗಿ ಯೂಸುಫರ ಮುಂದೆ ಹಾಜರಾದಾಗ ಇವರು ಹೀಗೆ ಭಿನ್ನವಿಸಿದರು, "ಓ ಮಹಾನುಭಾವರೇ, ನಾವು ಮತ್ತು ನಮ್ಮ ಮಕ್ಕಳು ಮರಿಗಳು ಮಹಾ ಗಂಡಾಂತರದಲ್ಲಿ ಸಿಲುಕಿದ್ದೇವೆ. ನಾವು ಅತ್ಯಲ್ಪ ಬಂಡವಾಳ ತಂದಿದ್ದೇವೆ. ತಾವು

فَلَمَّا دَخَلُوا عَلَيْهِ قَالُوا يَا أَيُّهَا الْعَزِيزُ
مَسَّنَا وَأَهْلَنَا الضُّرُّ وَجِئْنَا بِبِضَاعَةٍ
مُّزْجَاةٍ فَأَوْفِ لَنَا الْكَيْلَ وَتَصَدَّقْ

23. ಅರ್ಥಾತ್- ನಾನು ನನ್ನ ಮಗನ ಸಚ್ಚಾರಿತ್ರ್ಯದ ಬಗ್ಗೆ ಚೆನ್ನಾಗಿ ಬಲ್ಲೆ. ಆದರೆ ನನ್ನ ಮಗ ಒಂದು ಲೋಟೆಯನ್ನು ಕದಿಯುವ ಅಪರಾಧವೆಸಗಬಹುದು ಎಂದು ಭಾವಿಸುವುದು ನಿಮ್ಮ ಪಾಲಿಗೆ ಸುಲಭವಾಗಿದೆ. ಇದಕ್ಕೆ ಮೊದಲು ನಿಮ್ಮೋರ್ವ ಸಹೋದರನನ್ನು ಬೇಕಂತಲೇ ಕಾಣೆಯಾಗಿಸುವುದು ಮತ್ತು ಅವನ ಅಂಗಿಗೆ ಯಾವುದೋ ರಕ್ತವನ್ನು ತಾಗಿಸಿಕೊಂಡು ಬರುವುದು ನಿಮ್ಮ ಪಾಲಿಗೆ ಸುಲಭದ ಕೆಲಸವಾಗಿತ್ತು. ಈಗ ಮತ್ತೋರ್ವ ಸಹೋದರನನ್ನು ಕಳ್ಳನೆಂದು ಸಮ್ಮತಿಸಿ ಆ ಬಗ್ಗೆ ನನಗೆ ಸುದ್ದಿ ಮುಟ್ಟಿಸುವುದೂ ನಿಮ್ಮ ಪಾಲಿಗೆ ಸುಲಭವಾಗಿದೆ.

ನಮಗೆ ಹೇರಳ ಧಾನ್ಯ ನೀಡಿರಿ ಮತ್ತು ನಮಗೆ ದಾನ ಮಾಡಿರಿ. ಅಲ್ಲಾಹನು ದಾನ ಮಾಡುವವರಿಗೆ ಪ್ರತಿಫಲ ನೀಡುತ್ತಾನೆ."

عَلَيْنَا ۖ إِنَّ اللَّهَ يَجْزِي الْمُتَصَدِّقِينَ ﴿٨٨﴾

89. (ಇದನ್ನು ಕೇಳಿ ಯೂಸುಫರಿಗೆ ಸಹಿಸಲಾಗಲಿಲ್ಲ) ಅವರು (ಹೀಗೆ) ಹೇಳಿದರು: "ನೀವು ಅಜ್ಞಾನಿಗಳಾಗಿದ್ದಾಗ ಯೂಸುಫ್ ಮತ್ತು ಅವನ ತಮ್ಮನ ವಿಷಯದಲ್ಲಿ ಹೇಗೆ ವರ್ತಿಸಿದ್ದಿರೆಂದೂ ನಿಮಗೆ ತಿಳಿದಿದೆಯೇ?"

قَالَ هَلْ عَلِمْتُمْ مَا فَعَلْتُمْ بِيُوسُفَ وَأَخِيهِ إِذْ أَنْتُمْ جَاهِلُونَ ﴿٨٩﴾

90. (ಅವರು ಬೆರಗಾಗಿ ಕೇಳಿದರು) "ಏನು? ನೀವು ಯೂಸುಫರೇ?" (ಆಗ) ಅವರು, "ಅಹುದು, ನಾನು ಯೂಸುಫ್ ಮತ್ತು ಇವನು ನನ್ನ ತಮ್ಮ. ಅಲ್ಲಾಹನು ನಮ್ಮ ಮೇಲೆ ಅನುಗ್ರಹ ತೋರಿದ್ದಾನೆ. ವಾಸ್ತವದಲ್ಲಿ ಭಯಭಕ್ತಿಯೊಂದಿಗೂ ಸಹನೆಯೊಂದಿಗೂ ಕಾರ್ಯವೆಸಗಿದರೆ ಅಲ್ಲಾಹನ ಬಳಿ ಇಂತಹ ಸಜ್ಜನರ ಪ್ರತಿಫಲ ವ್ಯರ್ಥಗೊಳ್ಳುವುದಿಲ್ಲ" ಎಂದರು.

قَالُوا أَإِنَّكَ لَأَنْتَ يُوسُفُ ۖ قَالَ أَنَا يُوسُفُ وَهَٰذَا أَخِي ۖ قَدْ مَنَّ اللَّهُ عَلَيْنَا ۖ إِنَّهُ مَنْ يَتَّقِ وَيَصْبِرْ فَإِنَّ اللَّهَ لَا يُضِيعُ أَجْرَ الْمُحْسِنِينَ ﴿٩٠﴾

91. ಅವರು (ಹೀಗೆ) ಹೇಳಿದರು, "ಅಲ್ಲಾಹನಾಣೆ! ನಿಮಗೆ ಅಲ್ಲಾಹನು ನಮ್ಮ ಮೇಲೆ ಶ್ರೇಷ್ಠತೆ ದಯಪಾಲಿಸಿದ್ದಾನೆ. ನಿಜಕ್ಕೂ ನಾವು ಅಪರಾಧಿಗಳಾಗಿದ್ದೆವು."

قَالُوا تَاللَّهِ لَقَدْ آثَرَكَ اللَّهُ عَلَيْنَا وَإِنْ كُنَّا لَخَاطِئِينَ ﴿٩١﴾

92. ಆಗ ಅವರು, "ಇಂದು ನಿಮ್ಮ ಮೇಲೆ ಯಾವ ದೋಷಾರೋಪಣೆಯೂ ಇಲ್ಲ. ಅಲ್ಲಾಹನು ನಿಮ್ಮನ್ನು ಕ್ಷಮಿಸಲಿ. ಅವನು ಎಲ್ಲರಿಗಿಂತಲೂ ಮಿಗಿಲಾದ ದಯಾಮಯನಾಗಿರುತ್ತಾನೆ.

قَالَ لَا تَثْرِيبَ عَلَيْكُمُ الْيَوْمَ ۖ يَغْفِرُ اللَّهُ لَكُمْ ۖ وَهُوَ أَرْحَمُ الرَّاحِمِينَ ﴿٩٢﴾

93. ಹೋಗಿರಿ, ನನ್ನ ಈ ಅಂಗಿಯನ್ನು ಕೊಂಡು ಹೋಗಿರಿ ಮತ್ತು ನನ್ನ ತಂದೆಯವರ ಮುಖದ ಮೇಲೆ ಹಾಕಿಬಿಡಿರಿ. ಅವರ ದೃಷ್ಟಿ ಮರಳಿ ಬರುವುದು ಮತ್ತು ನಿಮ್ಮ ಕುಟುಂಬದವರನ್ನೆಲ್ಲ ನನ್ನ ಬಳಿಗೆ ಕರೆತನ್ನಿರಿ" ಎಂದರು.

اذْهَبُوا بِقَمِيصِي هَٰذَا فَأَلْقُوهُ عَلَىٰ وَجْهِ أَبِي يَأْتِ بَصِيرًا وَأْتُونِي بِأَهْلِكُمْ أَجْمَعِينَ ﴿٩٣﴾

94. ಈ ಕಾರವಾನವು (ಈಜಿಪ್ಟ್‌ನಿಂದ ಹೊರಟಾಗ) ಅವರ ತಂದೆಯು (ಕನ್‌ಆನ್‌ನಲ್ಲಿ ಹೀಗೆ) ಹೇಳಿದರು: "ನಾನು ಯೂಸುಫನ ಸುವಾಸನೆಯನ್ನು ಪಡೆಯುತ್ತಿದ್ದೇನೆ. ನೀವು ನನಗೆ ಮುದಿಭ್ರಾಂತಿಯುಂಟಾಗಿದೆ ಎಂದೇನೂ ಹೇಳಬೇಡಿರಿ."

وَلَمَّا فَصَلَتِ الْعِيرُ قَالَ أَبُوهُمْ إِنِّي لَأَجِدُ رِيحَ يُوسُفَ ۖ لَوْلَا أَنْ تُفَنِّدُونِ ﴿٩٤﴾

95. ಆಗ ಮನೆಯವರು, "ಅಲ್ಲಾಹನಾಣೆ ನೀವಿನ್ನೂ ಅದೇ ಹಳೆಯ ಭ್ರಮೆಯಲ್ಲೇ ಬಿದ್ದಿರುವಿರಿ" ಎಂದರು.

قَالُوا تَاللَّهِ إِنَّكَ لَفِي ضَلَالِكَ الْقَدِيمِ ﴿٩٥﴾

| | |
|---|---|
| 96. ತರುವಾಯ ಸುವಾರ್ತೆ ತರುವವನು ಬಂದಾಗ ಅವನು ಯೂಸುಫರ ಅಂಗಿಯನ್ನು ಯಅ್‌ಕೂಬರ ಮುಖದ ಮೇಲೆ ಹಾಕಿದನು ಮತ್ತು ಒಮ್ಮೆಲೆ ಅವರ ದೃಷ್ಟಿ ಮರಳಿ ಬಂತು. ಆಗ ಅವರು ಹೇಳಿದರು, "ನಾನು ಮೊದಲೇ ಹೇಳುತ್ತಿರಲಿಲ್ಲವೇ? ನಾನು ಅಲ್ಲಾಹನ ಕಡೆಯಿಂದ ನಿಮಗೆ ತಿಳಿಯದುದನ್ನು ತಿಳಿಯುತ್ತೇನೆ." | فَلَمَّآ أَن جَآءَ ٱلۡبَشِيرُ أَلۡقَىٰهُ عَلَىٰ وَجۡهِهِۦ فَٱرۡتَدَّ بَصِيرٗاۖ قَالَ أَلَمۡ أَقُل لَّكُمۡ إِنِّيٓ أَعۡلَمُ مِنَ ٱللَّهِ مَا لَا تَعۡلَمُونَ ﴿٩٦﴾ |
| 97. ಆಗ ಎಲ್ಲರೂ ಒಕ್ಕೊರಳಿನಿಂದ, "ಅಪ್ಪಾ, ತಾವು ನಮ್ಮ ಅಪರಾಧಗಳಿಗಾಗಿ ಕ್ಷಮೆ ಯಾಚಿಸಿರಿ. ನಿಜಕ್ಕೂ ನಾವು ಅಪರಾಧಿಗಳಾಗಿದ್ದೆವು" ಎಂದರು. | قَالُواْ يَٰٓأَبَانَا ٱسۡتَغۡفِرۡ لَنَا ذُنُوبَنَآ إِنَّا كُنَّا خَٰطِـِٔينَ ﴿٩٧﴾ |
| 98. ಆಗ ಅವರು, "ನಾನು ನನ್ನ ಪ್ರಭುವಿನೊಡನೆ ನಿಮ್ಮನ್ನು ಕ್ಷಮಿಸಲಿಕ್ಕಾಗಿ ಪ್ರಾರ್ಥಿಸುವೆನು. ಅವನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ" ಎಂದರು. | قَالَ سَوۡفَ أَسۡتَغۡفِرُ لَكُمۡ رَبِّيٓۖ إِنَّهُۥ هُوَ ٱلۡغَفُورُ ٱلرَّحِيمُ ﴿٩٨﴾ |
| 99. ಅನಂತರ ಇವರು ಯೂಸುಫರ ಬಳಿಗೆ ತಲಪಿದಾಗ ಅವರು ತಮ್ಮ ಮಾತಾಪಿತರನ್ನು ತನ್ನೊಂದಿಗೆ ಇರಿಸಿಕೊಂಡರು ಮತ್ತು (ತಮ್ಮ ಎಲ್ಲಾ ಕುಟುಂಬದವರೊಡನೆ) "ನೀವೆಲ್ಲರೂ ನಗರದೊಳಕ್ಕೆ ಪ್ರವೇಶಿಸಿರಿ. ಅಲ್ಲಾಹನಿಚ್ಛಿಸಿದರೆ ಇಲ್ಲಿ ಶಾಂತಿ ಸಮಾಧಾನಗಳೊಂದಿಗೆ ವಾಸಿಸುವಿರಿ" ಎಂದರು. | فَلَمَّا دَخَلُواْ عَلَىٰ يُوسُفَ ءَاوَىٰٓ إِلَيۡهِ أَبَوَيۡهِ وَقَالَ ٱدۡخُلُواْ مِصۡرَ إِن شَآءَ ٱللَّهُ ءَامِنِينَ ﴿٩٩﴾ |
| 100. (ನಗರದೊಳಗೆ ಪ್ರವೇಶಿಸಿದ ತರುವಾಯ) ಅವರು ತಮ್ಮ ಮಾತಾಪಿತರನ್ನೆತ್ತಿ ತಮ್ಮ ಬಳಿ ಆಸನದಲ್ಲಿ ಕುಳ್ಳಿರಿಸಿಕೊಂಡರು ಮತ್ತು ಎಲ್ಲರೂ ಅವರ ಮುಂದೆ ಸಜ್ದಃ ಮಾಡಿದರು.[24] ಆಗ ಯೂಸುಫ್ ಇಂತೆಂದರು: "ಅಪ್ಪಾ, ನಾನು ಹಿಂದೆ ಕಂಡಿದ್ದ ಸ್ವಪ್ನದ ಫಲ ಇದಾಗಿರುತ್ತದೆ. ನನ್ನ ಪ್ರಭು ಅದನ್ನು ಸತ್ಯಗೊಳಿಸಿ | وَرَفَعَ أَبَوَيۡهِ عَلَى ٱلۡعَرۡشِ وَخَرُّواْ لَهُۥ سُجَّدٗاۖ وَقَالَ يَٰٓأَبَتِ هَٰذَا تَأۡوِيلُ رُءۡيَٰيَ مِن قَبۡلُ قَدۡ جَعَلَهَا رَبِّي حَقّٗاۖ وَقَدۡ أَحۡسَنَ بِيٓ إِذۡ أَخۡرَجَنِي مِنَ |

24. ಈ 'ಸಾಷ್ಟಾಂಗ' (ಸಜ್ದಃ) ಎಂಬ ಪದದಿಂದ ಅನೇಕರು ತಪ್ಪುಕಲ್ಪನೆಗೆ ಒಳಗಾಗಿದ್ದಾರೆ. ಎಲ್ಲಿಯವರೆಗೆಂದರೆ ಇದನ್ನೇ ಆಧಾರವಾಗಿರಿಸಿ ರಾಜರುಗಳ ಮತ್ತು ಪೀರ್‌ಗಳ ಮುಂದೆ ವಂದನಾ ಸಾಷ್ಟಾಂಗ ಮತ್ತು ಗೌರವಸಾಷ್ಟಾಂಗ ಮಾಡುವ ಅವಕಾಶವನ್ನೂ ಒಂದು ವಿಭಾಗ ಹುಡುಕಿ ತೆಗೆದಿದೆ. ಇನ್ನು ಕೆಲವರು ಈ ಅರೋಚಕ ವಿಷಯದಿಂದ ನುಣುಚಿಕೊಳ್ಳಲಿಕ್ಕಾಗಿ ಅದನ್ನು ಹೀಗೆ ವಿವರಿಸಿದರು. ಹಿಂದಿನ ಶರೀಅತ್‌ನಲ್ಲಿ ಅಲ್ಲಾಹೇತರರಿಗೆ ಸಾಷ್ಟಾಂಗವೆರಗುವುದು ಮಾತ್ರ ನಿಷಿದ್ಧವಾಗಿತ್ತು. ಆರಾಧನಾ ಭಾವನೆಯಿಂದ ಮುಕ್ತವಾದ ಸಾಷ್ಟಾಂಗವನ್ನು ಇತರರಿಗೂ ಮಾಡಬಹುದಾಗಿತ್ತು. ಆದರೆ ಮುಹಮ್ಮದ್‌ರ(ಸ) ಮೂಲಕ ಬಂದ ಶರೀಅತ್‌ನಲ್ಲಿ ಎಲ್ಲಾ ವಿಧದ ಸಾಷ್ಟಾಂಗವನ್ನು ಅಲ್ಲಾಹೇತರರಿಗೆ ನಿಷಿದ್ಧಗೊಳಿಸಲಾಯಿತು. 'ಸಜ್ದಃ' ಎಂಬ ಪದವನ್ನು ಆಧುನಿಕ ಪಾರಿಭಾಷಿಕದ ಆಧಾರದಲ್ಲಿ ಅರ್ಥೈಸಲಾಗಿರುವುದೇ ವಾಸ್ತವದಲ್ಲಿ ಈ ಎಲ್ಲಾ ತಪ್ಪುಕಲ್ಪನೆಗಳಿಗೂ ಕಾರಣವಾಗಿದೆ. ಅರ್ಥಾತ್ ಕೈ, ಮೊಣಕಾಲು ಮತ್ತು ಹಣೆಯನ್ನು ನೆಲಕ್ಕೆ ತಾಗಿಸುವುದು. ವಾಸ್ತವದಲ್ಲಿ 'ಸಜ್ದಃ'ದ ಮೂಲಾರ್ಥ ಬಾಗುವುದು ಎಂದು ಮಾತ್ರವಾಗಿದೆ. ಇಲ್ಲಿಯೂ ಇದೇ ಅರ್ಥದಲ್ಲಿ ಈ ಪದ ಪ್ರಯೋಗವಾಗಿದೆ.

ಬಿಟ್ಟನು. ನನ್ನನ್ನು ಸೆರೆಮನೆಯಿಂದ ಬಿಡಿಸಿದುದೂ ತಮ್ಮನ್ನೆಲ್ಲಾ ಮರುಭೂಮಿಯಿಂದ ತಂದು ನನ್ನೊಂದಿಗೆ ಸೇರಿಸಿದುದೂ ಅವನ ಮಹದುಪಕಾರವಾಗಿದೆ. ವಸ್ತುತಃ ಶೈತಾನನು ನನ್ನ ಮತ್ತು ನನ್ನ ಸಹೋದರರ ನಡುವೆ ಪಿತೂರಿಯನ್ನುಂಟು ಮಾಡಿಬಿಟ್ಟಿದ್ದನು. ವಾಸ್ತವದಲ್ಲಿ ನನ್ನ ಪ್ರಭು ಗ್ರಹಿಸಲಾಗದಂತಹ ಯುಕ್ತಿಗಳಿಂದ ತನ್ನ ವಿಧಿಯನ್ನು ಪೂರ್ತೀಕರಿಸುತ್ತಾನೆ. ನಿಶ್ಚಯವಾಗಿಯೂ ಅವನು ಸರ್ವಜ್ಞನೂ ಧೀಮಂತನೂ ಆಗಿರುತ್ತಾನೆ.

السِّجْنِ وَجَآءَ بِكُمْ مِّنَ الْبَدْوِ مِنْۢ بَعْدِ اَنْ نَّزَغَ الشَّيْطٰنُ بَيْنِيْ وَبَيْنَ اِخْوَتِيْ ؕ اِنَّ رَبِّيْ لَطِيْفٌ لِّمَا يَشَآءُ ؕ اِنَّهٗ هُوَ الْعَلِيْمُ الْحَكِيْمُ ۝١٠٠

101. ಓ ನನ್ನ ಪ್ರಭೂ, ನೀನು ನನಗೆ ಸಾಮ್ರಾಜ್ಯಾಧಿಕಾರವನ್ನು ದಯಪಾಲಿಸಿದೆ. ವಿಷಯಗಳ ಆಳವನ್ನರಿಯಲು ಕಲಿಸಿಕೊಟ್ಟೆ. ಓ ಆಕಾಶಗಳ ಮತ್ತು ಭೂಮಿಯ ನಿರ್ಮಾಪಕಾ! ಇಹದಲ್ಲೂ ಪರದಲ್ಲೂ ನೀನೇ ನನ್ನ ರಕ್ಷಕ ಮಿತ್ರನು. ನನ್ನನ್ನು ಮುಸ್ಲಿಮನನ್ನಾಗಿ ಅಂತ್ಯಗೊಳಿಸು ಮತ್ತು ಅಂತಿಮವಾಗಿ ಸಜ್ಜನರೊಂದಿಗೆ ಸೇರಿಸು.

رَبِّ قَدْ اٰتَيْتَنِيْ مِنَ الْمُلْكِ وَعَلَّمْتَنِيْ مِنْ تَاْوِيْلِ الْاَحَادِيْثِ ۚ فَاطِرَ السَّمٰوٰتِ وَالْاَرْضِ ۟ اَنْتَ وَلِيّٖ فِي الدُّنْيَا وَالْاٰخِرَةِ ۚ تَوَفَّنِيْ مُسْلِمًا وَّاَلْحِقْنِيْ بِالصّٰلِحِيْنَ ۝١٠١

102. ಓ ಪೈಗಂಬರರೇ, ನಿಮ್ಮ ಮೇಲೆ ಅವತೀರ್ಣಗೊಳಿಸುತ್ತಿರುವ ಈ ಚರಿತ್ರೆಯು ಅದೃಶ್ಯ ವೃತ್ತಾಂತಗಳಲ್ಲಾಗಿದೆ. ಅನ್ಯಥಾ ಯೂಸುಫರ ಸಹೋದರರು ಪರಸ್ಪರ ಒಮ್ಮತದೊಂದಿಗೆ ಕುತಂತ್ರ ಹೂಡಿದಾಗ ನೀವು ಅಲ್ಲಿರಲಿಲ್ಲ.

ذٰلِكَ مِنْ اَنْۢبَآءِ الْغَيْبِ نُوْحِيْهِ اِلَيْكَ ۚ وَمَا كُنْتَ لَدَيْهِمْ اِذْ اَجْمَعُوْٓا اَمْرَهُمْ وَهُمْ يَمْكُرُوْنَ ۝١٠٢

103. ಆದರೆ ನೀವು ಎಷ್ಟೇ ಆಗ್ರಹಿಸಿದರೂ ಇವರಲ್ಲಿ ಹೆಚ್ಚಿನವರು ವಿಶ್ವಾಸ ಹೊಂದುವವರಲ್ಲ.

وَمَآ اَكْثَرُ النَّاسِ وَلَوْ حَرَصْتَ بِمُؤْمِنِيْنَ ۝١٠٣

104. ವಸ್ತುತಃ ನೀವು ಅವರಿಂದ ಈ ಸೇವೆಗೆ ಯಾವ ಪ್ರತಿಫಲವನ್ನೂ ಬೇಡುವುದಿಲ್ಲ. ಇದು ಜಗತ್ತಿನವರಿಗೊಂದು ಸಾರ್ವತ್ರಿಕ ಉಪದೇಶ.

وَمَا تَسْـَٔلُهُمْ عَلَيْهِ مِنْ اَجْرٍ ؕ اِنْ هُوَ اِلَّا ذِكْرٌ لِّلْعٰلَمِيْنَ ۝١٠٤

105. ಆಕಾಶಗಳಲ್ಲೂ ಭೂಮಿಯಲ್ಲೂ ಎಷ್ಟೋ ನಿದರ್ಶನಗಳಿವೆ. ಅವುಗಳನ್ನು ಇವರು ಹಾದು ಕೊಂಡು ಹೋಗುತ್ತಿರುತ್ತಾರೆ ಮತ್ತು ಅವುಗಳ ಕಡೆಗೆ ಕಿಂಚಿತ್ ಗಮನ ಹರಿಸುವುದಿಲ್ಲ.

وَكَاَيِّنْ مِّنْ اٰيَةٍ فِي السَّمٰوٰتِ وَالْاَرْضِ يَمُرُّوْنَ عَلَيْهَا وَهُمْ عَنْهَا مُعْرِضُوْنَ ۝١٠٥

106. ಇವರಲ್ಲಿ ಹೆಚ್ಚಿನವರು ಅಲ್ಲಾಹನನ್ನು ನಂಬುತ್ತಾರೆ. ಆದರೆ ಅವನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿಸಿಕೊಂಡು (ನಂಬುತ್ತಾರೆ).

وَمَا يُؤْمِنُ اَكْثَرُهُمْ بِاللّٰهِ اِلَّا وَهُمْ مُّشْرِكُوْنَ ۝١٠٦

107. ಅಲ್ಲಾಹನ ಯಾತನೆಯ ಒಂದಂಶ ವಿಪತ್ತು ಥಟ್ಟನೆ ಇವರ ಮೇಲೆ ಬಿದ್ದುಬಿಡಲಾರದೆಂದು ಅಥವಾ ಲೋಕಾಂತ್ಯವಾಗುವ ಆ ಘಳಿಗೆಯು ಹಠಾತ್ತನೆ ಅವರ ಮೇಲೆ ಬಂದು ಬಿಡ ಲಾರದೆಂದು ಇವರೇನು ನಿಶ್ಚಿಂತರಾಗಿರುವರೇ?

أَفَأَمِنُوٓا أَن تَأْتِيَهُمْ غَاشِيَةٌ مِّنْ عَذَابِ اللَّهِ أَوْ تَأْتِيَهُمُ السَّاعَةُ بَغْتَةً وَهُمْ لَا يَشْعُرُونَ ﴿١٠٧﴾

108. ನೀವು ಇವರೊಡನೆ ಸ್ಪಷ್ಟವಾಗಿ ಹೇಳಿಬಿಡಿರಿ - "ಇದೇ ನನ್ನ ಮಾರ್ಗ. ನಾನು ಅಲ್ಲಾಹನ ಕಡೆಗೆ ಕರೆ ನೀಡುತ್ತೇನೆ. ನಾನೂ ನನ್ನ ಸಂಗಾತಿಗಳೂ ಸಂಪೂರ್ಣ ಪ್ರಕಾಶದಲ್ಲಿ ದಾರಿಗಾಣುತ್ತಿದ್ದೇವೆ. ಅಲ್ಲಾಹನು ಅತ್ಯಂತ ಪಾವನನು. ಸಹಭಾಗಿಗಳಾಗಿಸುವವರೊಂದಿಗೆ ನನಗೆ ಯಾವ ಸಂಬಂಧವೂ ಇಲ್ಲ."

قُلْ هَٰذِهِۦ سَبِيلِىٓ أَدْعُوٓا إِلَى اللَّهِ عَلَىٰ بَصِيرَةٍ أَنَا وَمَنِ اتَّبَعَنِى وَسُبْحَانَ اللَّهِ وَمَآ أَنَا مِنَ الْمُشْرِكِينَ ﴿١٠٨﴾

109. ಓ ಪೈಗಂಬರರೇ, ನಿಮಗಿಂತ ಮುಂಚೆ ನಾವು ಕಳುಹಿಸಿದ್ದ ಪ್ರವಾದಿಗಳೆಲ್ಲರೂ ಪುರುಷರೇ ಆಗಿದ್ದರು. ಆಯಾ ನಾಡುಗಳಲ್ಲೇ ವಾಸಿಸುವವರಲ್ಲಾಗಿದ್ದರು ಮತ್ತು ಅವರ ಕಡೆಗೇ ನಾವು 'ದಿವ್ಯವಾಣಿ'ಯನ್ನು ಕಳುಹಿಸುತ್ತಲಿದ್ದೆವು. ಇವರಿಗಿಂತ ಮುಂಚಿನ ಜನಾಂಗಗಳ ಪರಿಣಾಮವು ಇವರಿಗೆ ಕಾಣದಿರಬೇಕಾದರೆ ಇವರು ಭೂಮಿಯ ಮೇಲೆ ಸಂಚರಿಸಲಿಲ್ಲವೇ? (ಪ್ರವಾದಿಗಳ ಬೋಧನೆ ಯನ್ನು ಸ್ವೀಕರಿಸಿ) ದೇವಭಯವಿರಿಸಿಕೊಂಡವರಿಗೆ ನಿಶ್ಚಯ ವಾಗಿಯೂ ಪರಲೋಕ ಗೇಹವು ಇನ್ನಷ್ಟು ಉತ್ತಮ. ಇನ್ನಾದರೂ ನೀವು ವಿವೇಚಿಸಲಾರಿರಾ?

وَمَآ أَرْسَلْنَا مِن قَبْلِكَ إِلَّا رِجَالًا نُّوحِىٓ إِلَيْهِم مِّنْ أَهْلِ الْقُرَىٰٓ أَفَلَمْ يَسِيرُوا فِى الْأَرْضِ فَيَنظُرُوا كَيْفَ كَانَ عَاقِبَةُ الَّذِينَ مِن قَبْلِهِمْ وَلَدَارُ الْآخِرَةِ خَيْرٌ لِّلَّذِينَ اتَّقَوْا أَفَلَا تَعْقِلُونَ ﴿١٠٩﴾

110. (ಗತ ಪ್ರವಾದಿಗಳೂ ದೀರ್ಘಕಾಲದ ವರೆಗೆ ಬೋಧನೆ ನೀಡುತ್ತಲೇ ಇದ್ದರೂ ಜನರು ಕಿವಿ ಕೊಡಲಿಲ್ಲ) ಕೊನೆಗೆ ಪ್ರವಾದಿಗಳು ಜನರ ಬಗ್ಗೆ ನಿರಾಶೆಗೊಂಡಾಗ ಹಾಗೂ ಅವರೊಡನೆ ಸುಳ್ಳೇ ಹೇಳಲಾಗಿತ್ತೆಂದು ಜನರೂ ತಿಳಿದುಕೊಂಡಾಗ ಹಠಾತ್ತನೆ ನಮ್ಮ ಸಹಾಯವು ಪ್ರವಾದಿಗಳಿಗೆ ತಲಪಿತು. ಇಂತಹ ಸಂದರ್ಭ ಬಂದು ಬಿಟ್ಟಾಗ ನಮಗಿಷ್ಟ ಬಂದವರನ್ನು ರಕ್ಷಿಸಿಕೊಳ್ಳುವುದು ನಮ್ಮ ರೂಢಿ. ಅಪರಾಧಿಗಳ ಮೇಲಿಂದ ನಮ್ಮ ಯಾತನೆಯು ಎಷ್ಟಕ್ಕೂ ಸರಿಯಲಾರದು.

حَتَّىٰٓ إِذَا اسْتَيْـَٔسَ الرُّسُلُ وَظَنُّوٓا أَنَّهُمْ قَدْ كُذِبُوا جَآءَهُمْ نَصْرُنَا فَنُجِّىَ مَن نَّشَآءُ وَلَا يُرَدُّ بَأْسُنَا عَنِ الْقَوْمِ الْمُجْرِمِينَ ﴿١١٠﴾

لَقَدْ كَانَ فِي قَصَصِهِمْ عِبْرَةٌ لِّأُولِي الْأَلْبَابِ ۗ مَا كَانَ حَدِيثًا يُفْتَرَىٰ وَلَٰكِن تَصْدِيقَ الَّذِي بَيْنَ يَدَيْهِ وَتَفْصِيلَ كُلِّ شَيْءٍ وَهُدًى وَرَحْمَةً لِّقَوْمٍ يُؤْمِنُونَ ﴿١١١﴾

111. ಗತ ಸಮುದಾಯಗಳ ಈ ಕಥೆಗಳಲ್ಲಿ ಬುದ್ಧಿಜೀವಿಗಳಿಗೆ ಪಾಠವಿದೆ. ಕುರ್‌ಆನಿನಲ್ಲಿ ವಿವರಿಸಲ್ಪಡುತ್ತಿರುವುದೆಲ್ಲ ಕೃತಕ ವಿಷಯಗಳಲ್ಲ. ಪರಂತು ಇದಕ್ಕಿಂತ ಮುಂಚೆ ಬಂದಿರುವ ಗ್ರಂಥಗಳ ದೃಢೀಕರಣವೂ ಪ್ರತಿಯೊಂದು ವಿಷಯದ ವಿವರಣೆಯೂ[25] ಸತ್ಯವಿಶ್ವಾಸವನ್ನು ಸ್ವೀಕರಿಸಿಕೊಳ್ಳುವವರಿಗೆ ಸನ್ಮಾರ್ಗದರ್ಶನವೂ ಅನುಗ್ರಹವೂ ಆಗಿರುತ್ತದೆ.

---

25. ಅರ್ಥಾತ್- ಮನುಷ್ಯನ ಮಾರ್ಗದರ್ಶನಕ್ಕೆ ಅಗತ್ಯವಿರುವ ಎಲ್ಲಾ ವಿಷಯಗಳ ವಿವರಣೆ, ಕೆಲವರು "ಎಲ್ಲಾ ವಿಷಯಗಳ ವಿವರಣೆ" ಎಂದರೆ ಅನಗತ್ಯವಾಗಿ ಲೋಕದ ಸರ್ವಸ್ವದ ವಿವರಣೆ ಎಂದು ಭಾವಿಸುತ್ತಾರೆ. ಅನಂತರ ಅವರು ಕುರ್‌ಆನಿನಲ್ಲಿ ಕಾಡು, ವೈದ್ಯಕೀಯಶಾಸ್ತ್ರ, ಗಣಿತ ಮತ್ತಿತರ ಜ್ಞಾನ ಮತ್ತು ಕಲೆಗಳ ವಿವರಗಳು ಲಭ್ಯವಿಲ್ಲವಲ್ಲ ಎಂಬ ಗೊಂದಲಕ್ಕೆ ಈಡಾಗುತ್ತಾರೆ. ಇನ್ನು ಕೆಲವರು ಎಲ್ಲಾ ಕಲೆಗಳ ವಿವರಗಳನ್ನು ಕುರ್‌ಆನ್‌ನಿಂದ ಪಡೆಯಲು ಹೇಗಾದರೂ ಮಾಡಿ ಪ್ರಯತ್ನಿಸುತ್ತಾರೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ಅಲಿಫ್ ಲಾಮ್ಮೀಮ್ ರಾ. ಇವು ದೇವಗ್ರಂಥದ ಸೂಕ್ತಗಳು. ನಿಮ್ಮ ಪ್ರಭುವಿನ ಕಡೆಯಿಂದ ನಿಮಗೆ ಅವತೀರ್ಣಗೊಳಿಸಲ್ಪಟ್ಟುದೆಲ್ಲವೂ ಪರಮ ಸತ್ಯ. ಆದರೆ, (ನಿಮ್ಮ ಜನಾಂಗದ) ಹೆಚ್ಚಿನವರು ವಿಶ್ವಾಸವಿರಿಸುತ್ತಿಲ್ಲ.

الٓمّٓرٰ ۚ تِلْكَ اٰيٰتُ الْكِتٰبِ ؕ وَالَّذِيْٓ اُنْزِلَ اِلَيْكَ مِنْ رَّبِّكَ الْحَقُّ وَلٰكِنَّ اَكْثَرَ النَّاسِ لَا يُؤْمِنُوْنَ ۝

2. ಆಕಾಶಗಳನ್ನೂ ನಿಮಗೆ ತೋರುವಂತಹ ಆಧಾರಗಳೇನೂ ಇಲ್ಲದೆಯೇ ನಿಲ್ಲಿಸಿದವನು[1] ಅಲ್ಲಾಹನೇ ಆಗಿರುತ್ತಾನೆ. ಅನಂತರ ಅವನು ವಿಶ್ವಸಿಂಹಾಸನಾರೂಢನಾದನು ಮತ್ತು ಅವನು ಸೂರ್ಯನನ್ನೂ ಚಂದ್ರನನ್ನೂ ಒಂದು ನಿಯಮಕ್ಕೊಳಪಡಿಸಿದನು. ಈ ಸಂಪೂರ್ಣ ವ್ಯವಸ್ಥೆಯ ಪ್ರತಿಯೊಂದು ವಸ್ತುವೂ ಒಂದು ನಿರ್ದಿಷ್ಟ ಕಾಲದ ವರೆಗೆ ನಡೆಯುತ್ತಿರುತ್ತದೆ. ಇವೆಲ್ಲ ಕಾರ್ಯಗಳನ್ನು ಅವನೇ ನಿಯಂತ್ರಿಸುತ್ತಿದ್ದಾನೆ. ನೀವು ನಿಮ್ಮ ಪ್ರಭುವನ್ನು ಭೇಟಿ ಯಾಗಲಿರುವ ಬಗ್ಗೆ ದೃಢ ನಂಬಿಕೆ ತಾಳಲಿಕ್ಕಾಗಿ ಅವನು ದೃಷ್ಟಾಂತಗಳನ್ನು ಸುಸ್ಪಷ್ಟವಾಗಿ ವಿವರಿಸುತ್ತಾನೆ.[2]

اَللّٰهُ الَّذِيْ رَفَعَ السَّمٰوٰتِ بِغَيْرِ عَمَدٍ تَرَوْنَهَا ثُمَّ اسْتَوٰى عَلَى الْعَرْشِ وَسَخَّرَ الشَّمْسَ وَالْقَمَرَ ؕ كُلٌّ يَّجْرِيْ لِاَجَلٍ مُّسَمًّى ؕ يُدَبِّرُ الْاَمْرَ يُفَصِّلُ الْاٰيٰتِ لَعَلَّكُمْ بِلِقَآءِ رَبِّكُمْ تُوْقِنُوْنَ ۝

1. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆಕಾಶಗಳನ್ನು ಅಗೋಚರವಾದ ಮತ್ತು ಅನುಭವಕ್ಕೆ ಬಾರದ ಆಧಾರಗಳ ಮೇಲೆ ನಿಲ್ಲಿಸಿದನು. ಬಾಹ್ಯ ನೋಟಕ್ಕೆ ವಿಶಾಲವಾದ ಅಂತರಿಕ್ಷದಲ್ಲಿರುವ ಅಗಣಿತ ಗಗನ ಕಾಯಗಳನ್ನು ಹಿಡಿದಿಟ್ಟಿರುವಂತಹ ಯಾವ ವಸ್ತುವೂ ಕಂಡು ಬರುವುದಿಲ್ಲ. ಆದರೆ ಅಗೋಚರವಾದ ಶಕ್ತಿಯೊಂದು ಪ್ರತಿಯೊಂದನ್ನೂ ಅದರ ಸ್ಥಾನದಲ್ಲಿ ತಡೆದು ನಿಲ್ಲಿಸಿದೆ ಮತ್ತು ಈ ಭವ್ಯ ಕಾಯಗಳು ಭೂಮಿಯ ಮೇಲೆ ಅಥವಾ ಒಂದು ಇನ್ನೊಂದರ ಮೇಲೆ ಬೀಳದಂತೆ ತಡೆಯುತ್ತಿದೆ.
2. ಅರ್ಥಾತ್- ಅಲ್ಲಾಹನ ಪ್ರವಾದಿಯು ಯಾವ ವಾಸ್ತವಿಕತೆಗಳ ಸುದ್ದಿ ಮುಟ್ಟಿಸುತ್ತಿದ್ದಾರೋ ಅವು ನಿಜವಾಗಿಯೂ ವಸ್ತುಸ್ಥಿತಿಯಾಗಿದೆ. ನಿಸರ್ಗದ ಎಲ್ಲ ಕಡೆಗಳಲ್ಲೂ ಆ ಬಗ್ಗೆ ಸಾಕ್ಷ್ಯ ನುಡಿಯುವಂತಹ ದೃಷ್ಟಾಂತಗಳು ಇವೆ. ಜನರು ಕಣ್ತೆರೆದು ನೋಡಿದರೆ, ಕುರ್‌ಆನ್ ಯಾವೆಲ್ಲಾ ವಿಷಯಗಳ ಮೇಲೆ ವಿಶ್ವಾಸವಿಡಲು ಕರೆ ಕೊಡುತ್ತದೋ, ಭೂಮಿ-ಆಕಾಶಗಳಲ್ಲಿ ಹರಡಿರುವ ಅಸಂಖ್ಯ ದೃಷ್ಟಾಂತಗಳು ಅದನ್ನು ದೃಢೀಕರಿಸುತ್ತಿರುವುದನ್ನು ಅವರು ಕಾಣುವರು.

3. ಈ ಭೂಮಿಯನ್ನು ವಿಸ್ತರಿಸಿದವನೂ ಇದರಲ್ಲಿ ಪರ್ವತಗಳ ಗೂಟಗಳನ್ನು ನಾಟಿದವನೂ ನದಿಗಳನ್ನು ಹರಿಸಿದವನೂ ಅವನೇ. ಅವನೇ ಪ್ರತಿಯೊಂದು ವಿಧದ ಫಲಗಳ ಜೋಡಿಗಳನ್ನು ಸೃಷ್ಟಿಸಿದನು ಮತ್ತು ಅವನೇ ಹಗಲಿನ ಮೇಲೆ ಇರುಳನ್ನು ಆಚ್ಛಾದಿಸುತ್ತಾನೆ. ನಿಶ್ಚಯವಾಗಿಯೂ ಆಲೋಚಿಸುವವರಿಗೆ ಇವುಗಳಲ್ಲೆಲ್ಲ ಅನೇಕ ದೃಷ್ಟಾಂತಗಳಿವೆ.

وَهُوَ الَّذِي مَدَّ الْأَرْضَ وَجَعَلَ فِيهَا رَوَاسِيَ وَأَنْهَارًا ۖ وَمِنْ كُلِّ الثَّمَرَاتِ جَعَلَ فِيهَا زَوْجَيْنِ اثْنَيْنِ ۖ يُغْشِي اللَّيْلَ النَّهَارَ ۚ إِنَّ فِي ذَٰلِكَ لَآيَاتٍ لِقَوْمٍ يَتَفَكَّرُونَ ③

4. ಭೂಮಿಯಲ್ಲಿ ಒಂದಕ್ಕೊಂದು ತಾಗಿಕೊಂಡಿರುವ ಬೇರೆ ಬೇರೆ ಭೂಭಾಗಗಳಿವೆ. ದ್ರಾಕ್ಷಾ ತೋಟಗಳಿವೆ, ಹೊಲಗಳಿವೆ, ಖರ್ಜೂರದ ಮರಗಳೂ ಇದ್ದು ಅವುಗಳಲ್ಲಿ ಕೆಲವು ಒಂದೇ ಕಾಂಡದಿಂದ ಮೇಲೆದ್ದು ಕವಲೊಡೆಯದವುಗಳೂ ಇನ್ನು ಕೆಲವು ಕವಲೊಡೆದವುಗಳೂ ಇವೆ. ಇವೆಲ್ಲವುಗಳೂ ಒಂದೇ ನೀರಿನಿಂದ ತೋಯಿಸಲ್ಪಡುತ್ತವೆ. ಆದರೆ ನಾವು ರುಚಿಯಲ್ಲಿ ಕೆಲವನ್ನು ಮೇಲ್ತರದ್ದಾಗಿಯೂ ಇನ್ನು ಕೆಲವನ್ನು ಕೀಳ್ತರದ್ದಾಗಿಯೂ ಮಾಡಿ ಬಿಡುತ್ತೇವೆ. ಇವೆಲ್ಲವುಗಳಲ್ಲಿಯೂ ವಿವೇಕಮತಿಗಳಿಗೆ ಅನೇಕ ದೃಷ್ಟಾಂತಗಳಿವೆ.

وَفِي الْأَرْضِ قِطَعٌ مُتَجَاوِرَاتٌ وَجَنَّاتٌ مِنْ أَعْنَابٍ وَزَرْعٌ وَنَخِيلٌ صِنْوَانٌ وَغَيْرُ صِنْوَانٍ يُسْقَىٰ بِمَاءٍ وَاحِدٍ وَنُفَضِّلُ بَعْضَهَا عَلَىٰ بَعْضٍ فِي الْأُكُلِ ۚ إِنَّ فِي ذَٰلِكَ لَآيَاتٍ لِقَوْمٍ يَعْقِلُونَ ④

5. ನೀವು ಆಶ್ಚರ್ಯಪಡುವುದಾದರೆ, "ನಾವು ಸತ್ತು ಮಣ್ಣಾಗಿ ಹೋದ ಬಳಿಕ ಪುನರಪಿ ಸೃಷ್ಟಿಸಲ್ಪಡುವೆವೋ?" ಎಂದು ಪ್ರಶ್ನಿಸುವವರ ಮಾತು ಆಶ್ಚರ್ಯಪಡತಕ್ಕದ್ದೇ ಆಗಿದೆ. ಇವರು ತಮ್ಮ ಪ್ರಭುವನ್ನು ನಿಷೇಧಿಸಿದವರು.[3] ಇವರು ಕೊರಳಲ್ಲಿ ಕೋಳ ಬಿದ್ದವರು.[4] ಇವರೇ ನರಕದವರು ಮತ್ತು ನರಕದಲ್ಲಿ ಸದಾ ಉಳಿಯುವವರು.

وَإِنْ تَعْجَبْ فَعَجَبٌ قَوْلُهُمْ أَإِذَا كُنَّا تُرَابًا أَإِنَّا لَفِي خَلْقٍ جَدِيدٍ ۗ أُولَٰئِكَ الَّذِينَ كَفَرُوا بِرَبِّهِمْ ۖ وَأُولَٰئِكَ الْأَغْلَالُ فِي أَعْنَاقِهِمْ ۖ وَأُولَٰئِكَ أَصْحَابُ النَّارِ ۖ هُمْ فِيهَا خَالِدُونَ ⑤

6. ಇವರು ಒಳಿತಿಗಿಂತ ಮೊದಲು ಕೆಡುಕಿಗಾಗಿ ಆತುರ ಪಡುತ್ತಿದ್ದಾರೆ.[5] ವಸ್ತುತಃ ಇವರಿಗಿಂತ ಮುಂಚೆ (ಈ ರೀತಿ ನಡೆದವರ ಮೇಲೆ ಅಲ್ಲಾಹನ ಯಾತನೆಯ) ಬೋಧಪ್ರದವಾದ ದೃಷ್ಟಾಂತಗಳು

وَيَسْتَعْجِلُونَكَ بِالسَّيِّئَةِ قَبْلَ الْحَسَنَةِ وَقَدْ خَلَتْ مِنْ قَبْلِهِمُ الْمَثُلَاتُ ۗ وَإِنَّ

3. ಅರ್ಥಾತ್- ಪರಲೋಕವನ್ನು ನಿರಾಕರಿಸುವ ಮೂಲಕ ಅವರು ಅಲ್ಲಾಹನನ್ನೂ ಅವನ ಮಹಿಮೆ ಮತ್ತು ಯುಕ್ತಿಯನ್ನೂ ನಿರಾಕರಿಸುತ್ತಾರೆ. ನಾವು ಮಣ್ಣಲ್ಲಿ ಸೇರಿಹೋದ ಬಳಿಕ ಮತ್ತೊಮ್ಮೆ ಸೃಷ್ಟಿಸಲ್ಪಡುವುದು ದುಃಸಾಧ್ಯ ಎಂದು ಅವರು ಹೇಳುತ್ತಾರೆ. ಅವರ ಹೇಳಿಕೆಯಲ್ಲಿ ಅವರನ್ನು ಸೃಷ್ಟಿಸಿದ ದೇವನು ಅಶಕ್ತನೂ, ಅಸಹಾಯಕನೂ, ತಿಳಿಗೇಡಿಯೂ, ಬುದ್ಧಿಹೀನನೂ ಆಗಿದ್ದಾನೆಂಬ ಅರ್ಥವೂ ಅಡಕವಾಗಿದೆ. (ಶಾಂತಂ ಪಾಪಂ)

4. ಕೊರಳಲ್ಲಿ ಕೋಳ ಬಿದ್ದಿರುವುದು ಸೆರೆಯಾಳಾಗಿರುವುದರ ಸಂಕೇತವಾಗಿದೆ. ಅವರ ಕೊರಳಲ್ಲಿ ಕೋಳ ಬಿದ್ದಿವೆ ಎಂದರೆ ಅವರು ತಮ್ಮ ಅಜ್ಞಾನ, ಜಿಗುಟುತನ, ಮನಃಸೇಚ್ಛೆ ಮತ್ತು ಹಿರಿಯರ ಅಂಧಾನುಕರಣೆಯ ದಾಸರಾಗಿ ಮಾರ್ಪಟ್ಟಿರುವರು. ಅವರು ಸ್ವತಂತ್ರವಾಗಿ ಆಲೋಚಿಸಲಾರರು. ಅವರು ತಮ್ಮ ಪೂರ್ವಗ್ರಹಗಳಲ್ಲಿ ಹೇಗೆ ಸಿಲುಕಿಕೊಂಡಿರುವರೆಂದರೆ ಅವರು ಪರಲೋಕದ ಮೇಲೆ ವಿಶ್ವಾಸ ವಿಡಲಾರರು. ಅದು ಸಾದ್ಯಂತ ಸತ್ಯವಾದುದಾದರೂ ಸರಿಯೇ. ಪರಲೋಕದ ನಿರಾಕರಣೆಯಲ್ಲಿ ಅವರು ದೃಢವಾಗಿ ನಿಲ್ಲುತ್ತಾರೆ. ಅದು ಎಷ್ಟು ಅಸಮಂಜಸವಾದ ಕಲ್ಪನೆಯಾದರೂ ಸರಿಯೇ.

5. ಅರ್ಥಾತ್- ಯಾತನೆಯನ್ನು ಅಪೇಕ್ಷಿಸುತ್ತಿದ್ದಾರೆ.

ಗತಿಸಿ ಹೋಗಿವೆ. ವಾಸ್ತವದಲ್ಲಿ ನಿನ್ನ ಪ್ರಭು ಜನರ ಅತಿರೇಕಗಳನ್ನು ಲೆಕ್ಕಿಸದೆ ಕ್ಷಮಾದಾನ ಮಾಡುವವನು ಮತ್ತು ನಿನ್ನ ಪ್ರಭು ಘೋರ ಶಿಕ್ಷೆಗೆ ಗುರಿಪಡಿಸುವವನು ಎಂಬುದೂ ಪರಮಾರ್ಥ.

رَبَّكَ لَذُو مَغْفِرَةٍ لِّلنَّاسِ عَلَىٰ ظُلْمِهِمْ ۖ وَإِنَّ رَبَّكَ لَشَدِيدُ الْعِقَابِ ٦

7. ನಿಮ್ಮನ್ನು ನಿಷೇಧಿಸಿದವರು- "ಈ ವ್ಯಕ್ತಿಯ ಮೇಲೆ ಇವನ ಪ್ರಭುವಿನ ಕಡೆಯಿಂದ ಯಾವುದಾದರೊಂದು ನಿದರ್ಶನವೇಕೆ ಇಳಿದಿಲ್ಲ?" ಎಂದು ಕೇಳುತ್ತಾರೆ. ನೀವಂತು ಕೇವಲ ಎಚ್ಚರಿಕೆ ಕೊಡುವವರಾಗಿರುತ್ತೀರಿ ಮತ್ತು ಪ್ರತಿಯೊಂದು ಜನಾಂಗಕ್ಕೂ ಓರ್ವ ಮಾರ್ಗದರ್ಶಕನಿದ್ದಾನೆ.

وَيَقُولُ الَّذِينَ كَفَرُوا لَوْلَا أُنزِلَ عَلَيْهِ آيَةٌ مِّن رَّبِّهِ ۗ إِنَّمَا أَنتَ مُنذِرٌ ۖ وَلِكُلِّ قَوْمٍ هَادٍ ٧

ع

8. ಅಲ್ಲಾಹನು ಪ್ರತಿಯೋರ್ವ ಗರ್ಭಿಣಿಯ ಗರ್ಭವನ್ನು ಅರಿತಿರುತ್ತಾನೆ. ಅದರಲ್ಲಾಗುವ ವೃದ್ಧಿ-ಕ್ಷಯಗಳನ್ನೂ ಅರಿತಿರುತ್ತಾನೆ ಮತ್ತು ಪ್ರತಿಯೊಂದು ವಸ್ತುವಿಗೂ ಅವನಲ್ಲೊಂದು ಪ್ರಮಾಣ ನಿಶ್ಚಯ ವಾಗಿರುತ್ತದೆ.

اللَّهُ يَعْلَمُ مَا تَحْمِلُ كُلُّ أُنثَىٰ وَمَا تَغِيضُ الْأَرْحَامُ وَمَا تَزْدَادُ ۖ وَكُلُّ شَيْءٍ عِندَهُ بِمِقْدَارٍ ٨

9. ಅವನು ಎಲ್ಲ ಪ್ರತ್ಯಕ್ಷಾಪ್ರತ್ಯಕ್ಷಗಳ ಜ್ಞಾನಿ. ಅವನು ಅತಿ ಮಹಾನನು ಮತ್ತು ಚಿರೋನ್ನತನು.

عَالِمُ الْغَيْبِ وَالشَّهَادَةِ الْكَبِيرُ الْمُتَعَالِ ٩

10. ನಿಮ್ಮಲ್ಲಾರಾದರೂ ಸ್ವರವೆತ್ತಿ ಮಾತಾಡಲಿ ಅಥವಾ ಮೆಲುದನಿಯಿಂದ ಮಾತಾಡಲಿ, ನಿಶಾಂಧಕಾರದಲ್ಲಿ ಅಡಗಿರಲಿ ಯಾ ಹಗಲಿನ ಬೆಳಕಿನಲ್ಲಿ ಚಲಿಸುತ್ತಿರಲಿ ಅವನ ಮಟ್ಟಿಗೆ ಎಲ್ಲವೂ ಸರಿಸಮಾನ.

سَوَاءٌ مِّنكُم مَّنْ أَسَرَّ الْقَوْلَ وَمَن جَهَرَ بِهِ وَمَنْ هُوَ مُسْتَخْفٍ بِاللَّيْلِ وَسَارِبٌ بِالنَّهَارِ ١٠

11. ಅವನಿಂದ ನೇಮಕಗೊಂಡ ಕಾವಲುಗಾರರು ಪ್ರತಿಯೊಬ್ಬನ ಮುಂದೆಯೂ ಹಿಂದೆಯೂ ಇದ್ದಾರೆ. ಅವರು ಅಲ್ಲಾಹನ ಅಪ್ಪಣೆಯಿಂದ ಅವನ ಮೇಲ್ವಿಚಾರಣೆ ನಡೆಸುತ್ತಿರುತ್ತಾರೆ. ವಾಸ್ತವದಲ್ಲಿ ಒಂದು ಜನಾಂಗವು ಸ್ವತಃ ತಾನೇ ತನ್ನ ಸ್ಥಿತಿಯನ್ನು ಬದಲಾಯಿಸಿ ಕೊಳ್ಳುವವರೆಗೂ ಅಲ್ಲಾಹನು ಅದರ ಸ್ಥಿತಿಯನ್ನು ಬದಲಾಯಿಸುವುದಿಲ್ಲ. ಅಲ್ಲಾಹನು ಯಾವುದಾದರೊಂದು ಜನಾಂಗಕ್ಕೆ ಕೇಡುಂಟುಮಾಡುವ ನಿರ್ಧಾರ ಕೈಗೊಂಡರೆ ಅದನ್ನು ಯಾರಿಂದಲೂ ತಡೆಯಲಾಗದು ಮತ್ತು ಇಂತಹ ಜನಾಂಗಕ್ಕೆ ಅಲ್ಲಾಹನ ಎದುರಾಗಿ ಯಾವ ಸಹಾಯಕನೂ ಸಿಗಲಾರನು.

لَهُ مُعَقِّبَاتٌ مِّن بَيْنِ يَدَيْهِ وَمِنْ خَلْفِهِ يَحْفَظُونَهُ مِنْ أَمْرِ اللَّهِ ۗ إِنَّ اللَّهَ لَا يُغَيِّرُ مَا بِقَوْمٍ حَتَّىٰ يُغَيِّرُوا مَا بِأَنفُسِهِمْ ۗ وَإِذَا أَرَادَ اللَّهُ بِقَوْمٍ سُوءًا فَلَا مَرَدَّ لَهُ ۚ وَمَا لَهُم مِّن دُونِهِ مِن وَالٍ ١١

12. ನಿಮ್ಮ ಮುಂದೆ ಮಿಂಚುಗಳನ್ನು ಮಿಂಚಿಸುವವನು ಅವನೇ. ಅವುಗಳನ್ನು ಕಂಡು ನಿಮಗೆ ಅಂಜಿಕೆಯೂ ಆಸೆಯೂ ಉಂಟಾಗುತ್ತವೆ. ಜಲಭರಿತವಾದ ಮೇಘಗಳನ್ನು ಮೇಲೇರಿಸುವವನೂ ಅವನೇ.

هُوَ الَّذِي يُرِيكُمُ الْبَرْقَ خَوْفًا وَطَمَعًا وَيُنشِئُ السَّحَابَ الثِّقَالَ ١٢

13. ಮೋಡಗಳ ಘರ್ಜನೆಯು ಅವನ ಸ್ತೋತ್ರದೊಂದಿಗೆ ಅವನ ಕೀರ್ತನೆ ಮಾಡುತ್ತದೆ[6] ಮತ್ತು ದೇವಚರರು ಅವನ ಭೀತಿಯಿಂದ ನಡುಗುತ್ತ ಅವನ ಕೀರ್ತನೆ ಮಾಡುತ್ತಾರೆ. ಅವನು ಸಿಡಿಲುಗಳನ್ನು ಕಳುಹಿಸುತ್ತಾನೆ ಮತ್ತು (ಅನೇಕ ವೇಳೆ) ಜನರು ಅಲ್ಲಾಹನ ವಿಷಯದಲ್ಲಿ ಜಗಳಾಡುತ್ತಿರುವಾಗಲೇ ಅವುಗಳನ್ನು ತನಗಿಷ್ಟ ಬಂದವರ ಮೇಲೆ ಎರಗಿಸಿ ಬಿಡುತ್ತಾನೆ. ವಾಸ್ತವದಲ್ಲಿ ಅವನು ಅತ್ಯಂತ ಪ್ರಬಲನು.

وَيُسَبِّحُ الرَّعْدُ بِحَمْدِهِ وَالْمَلٰٓئِكَةُ مِنْ خِيفَتِهِ ۚ وَيُرْسِلُ الصَّوَاعِقَ فَيُصِيبُ بِهَا مَنْ يَّشَآءُ وَهُمْ يُجَادِلُونَ فِي اللّٰهِ ۚ وَهُوَ شَدِيدُ الْمِحَالِ ﴿١٣﴾

14. ಅವನನ್ನು ಮಾತ್ರ ಪ್ರಾರ್ಥಿಸುವುದೇ ಸರಿ.[7] ಅವನನ್ನು ಬಿಟ್ಟು ಇವರು ಮೊರೆಯಿಡುತ್ತಿರುವ ಇತರರು ಇವರ ಪ್ರಾರ್ಥನೆಗೆ ಯಾವ ಉತ್ತರವನ್ನೂ ಕೊಡಲಾರರು. ಅವರನ್ನು ಕೂಗಿ ಕರೆಯುವುದೆಂದರೆ - ಒಬ್ಬನು ನೀರಿದ್ದ ಕಡೆಗೆ ಕೈಗಳೆರಡನ್ನೂ ಚಾಚಿ, ನೀನು ನನ್ನ ಬಾಯಿಗೆ ಬಾ ಎಂದು ಅದರೊಡನೆ ಪ್ರಾರ್ಥಿಸಿಕೊಂಡಂತೆ. ವಸ್ತುತಃ ನೀರು (ತಾನಾಗಿ) ಅವನ ಬಳಿಗೆ ತಲಪಲಾರದು. ಇದೇ ರೀತಿಯಲ್ಲಿ ಸತ್ಯನಿಷೇಧಿಗಳ ಪ್ರಾರ್ಥನೆಗಳೂ ಗುರಿ ಮುಟ್ಟಲಾರವು.

لَهٗ دَعْوَةُ الْحَقِّ ۗ وَالَّذِينَ يَدْعُونَ مِنْ دُونِهٖ لَا يَسْتَجِيبُونَ لَهُمْ بِشَيْءٍ إِلَّا كَبَاسِطِ كَفَّيْهِ إِلَى الْمَآءِ لِيَبْلُغَ فَاهُ وَمَا هُوَ بِبَالِغِهٖ ۚ وَمَا دُعَآءُ الْكٰفِرِينَ إِلَّا فِي ضَلٰلٍ ﴿١٤﴾

15. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಪ್ರತಿಯೊಂದು ವಸ್ತುವೂ ಇಚ್ಛಾಪೂರ್ವಕವಾಗಿಯೋ ಅನಿಚ್ಛಾಪೂರ್ವಕವಾಗಿಯೋ 'ಸಾಷ್ಟಾಂಗ' ಮಾಡುತ್ತಿರುವುದು[8] ಅಲ್ಲಾಹನಿಗೇ ಆಗಿರುತ್ತದೆ ಮತ್ತು ಸಕಲ ವಸ್ತುಗಳ ನೆರಳುಗಳು ಬೆಳಗು ಬೈಗುಗಳಲ್ಲಿ ಅವನ ಮುಂದೆ ಬಾಗುತ್ತವೆ.[9]

وَلِلّٰهِ يَسْجُدُ مَنْ فِي السَّمٰوٰتِ وَالْأَرْضِ طَوْعًا وَّكَرْهًا وَّظِلٰلُهُمْ بِالْغُدُوِّ وَالْاٰصَالِ ﴿١٥﴾

السجدة

6. ಅರ್ಥಾತ್- ಗಾಳಿಯನ್ನು ಬೀಸುವ, ಆವಿಯನ್ನು ಮೇಲೇರಿಸುವ, ದಟ್ಟ ಮೋಡಗಳನ್ನು ಒಟ್ಟು ಸೇರಿಸುವ, ಮಿಂಚನ್ನು ಮಳೆಗೆ ಹೇತುವನ್ನಾಗಿ ಮಾಡುವ ಮತ್ತು ಈ ರೀತಿ ಭೂಮಿಯ ಎಲ್ಲಾ ಸೃಷ್ಟಿಗಳಿಗೆ ನೀರಿನ ವ್ಯವಸ್ಥೆ ಮಾಡುವ ದೇವನು ತನ್ನ ಸಾಮರ್ಥ್ಯ ಮತ್ತು ಯುಕ್ತಿಗಳಲ್ಲಿ ಪರಿಪೂರ್ಣನು. ತನ್ನ ಗುಣವಿಶೇಷತೆಗಳಲ್ಲಿ ಯಾವುದೇ ರೀತಿಯ ದೋಷವಿಲ್ಲದವನು. ತನ್ನ ದೇವತ್ವದಲ್ಲಿ ಯಾವುದೇ ಸಹಭಾಗಿತ್ವ ಇಲ್ಲದವನು - ಎಂದು ಮೋಡಗಳ ಗುಡುಗು ಸಾರಿ ಹೇಳುತ್ತದೆ. ಪ್ರಾಣಿಗಳು ಕೇಳುವಂತೆ ಅದನ್ನು ಕೇಳುವವರು ಮೋಡಗಳಿಂದ ಗುಡುಗಿನ ಸದ್ದನ್ನು ಮಾತ್ರ ಕೇಳುತ್ತಾರೆ. ಆದರೆ ಪ್ರಜ್ಞಾವಂತ ಕಿವಿಗಳನ್ನು ಹೊಂದಿರುವವರು ಮೋಡಗಳ ಗುಡುಗಿನಲ್ಲಿ ಏಕದೇವತ್ವದ ಘೋಷಣೆಯನ್ನು ಆಲಿಸುತ್ತಾರೆ.
7. ಪ್ರಾರ್ಥಿಸುವುದು ಎಂದರೆ ತನ್ನ ಬೇಡಿಕೆಗಳ ಈಡೇರಿಕೆಯಲ್ಲಿ ನೆರವಾಗುವಂತೆ ಪ್ರಾರ್ಥಿಸುವುದಾಗಿದೆ. ಅರ್ಥಾತ್ ಬಯಕೆಗಳ ಈಡೇರಿಕೆ ಮತ್ತು ಕಷ್ಟ ಪರಿಹಾರದ ಸಂಪೂರ್ಣ ಅಧಿಕಾರ ಅಲ್ಲಾಹನ ಹಸ್ತದಲ್ಲೇ ಇದೆ. ಆದ್ದರಿಂದ ಅವನೊಡನೆ ಪ್ರಾರ್ಥಿಸುವುದು ಮಾತ್ರ ಸರಿಯಾದುದಾಗಿದೆ.
8. ಸಾಷ್ಟಾಂಗವೆರಗುವುದೆಂದರೆ ಅನುಸರಣೆಯಲ್ಲಿ ಬಾಗುವುದು, ಆಜ್ಞೆಯನ್ನು ಪಾಲಿಸುವುದು ಮತ್ತು ಶಿರಸಾ ವಹಿಸಿ ಅನುಸರಿಸುವುದು ಎಂದಾಗಿದೆ.

16. ಆಕಾಶಗಳ ಮತ್ತು ಭೂಮಿಯ ಪ್ರಭು ಯಾರೆಂದು ಇವರನ್ನು ಕೇಳಿರಿ- ಹೇಳಿರಿ, 'ಅಲ್ಲಾಹ್'- ಹಾಗಿದ್ದರೆ ಹೇಳಿರಿ- "ವಸ್ತುಸ್ಥಿತಿ ಇದಾಗಿರುವಾಗ ನೀವು ಅವನನ್ನು ಬಿಟ್ಟು ಸ್ವತಃ ತಮಗೇ ಏನಾದರೂ ಲಾಭ-ನಷ್ಟ ಮಾಡುವ ಅಧಿಕಾರವಿಲ್ಲದಂತಹವರನ್ನು ನಿಮ್ಮ ರಕ್ಷಕ ಮಿತ್ರರನ್ನಾಗಿರಿಸಿಕೊಂಡಿರುತ್ತೀರಾ?" ಹೇಳಿರಿ- ಕುರುಡನೂ ದೃಷ್ಟಿಯುಳ್ಳವನೂ ಸರಿಸಮಾನರೇ? ಪ್ರಕಾಶವೂ ಅಂಧಕಾರಗಳೂ ಸರಿಸಮಾನವೇ? ಹಾಗಿಲ್ಲದಿದ್ದರೆ ಇವರು ಮಾಡಿಕೊಂಡಿರುವ ಸಹಭಾಗಿಗಳೂ ಅಲ್ಲಾಹನ ಹಾಗೆಯೇ ಏನನ್ನಾದರೂ ಸೃಷ್ಟಿಸಿದ್ದುಂಟೇ? ಆ ಕಾರಣದಿಂದ ಸೃಷ್ಟಿಯ ವಿಷಯವು ಅವರಿಗೆ ಅಸ್ಪಷ್ಟವಾಗಿಬಿಟ್ಟಿತೇ? ಹೇಳಿರಿ- ಸಕಲ ವಸ್ತುಗಳ ಸೃಷ್ಟಿಕರ್ತನು ಅಲ್ಲಾಹನು ಮಾತ್ರ ಮತ್ತು ಅವನು ಏಕೈಕನೂ ಅಜೇಯನೂ ಆಗಿರುತ್ತಾನೆ.

قُلْ مَنْ رَّبُّ السَّمٰوٰتِ وَالْاَرْضِ ؕ قُلِ اللّٰهُ ؕ قُلْ اَفَاتَّخَذْتُمْ مِّنْ دُوْنِهٖۤ اَوْلِيَآءَ لَا يَمْلِكُوْنَ لِاَنْفُسِهِمْ نَفْعًا وَّلَا ضَرًّا ؕ قُلْ هَلْ يَسْتَوِى الْاَعْمٰى وَالْبَصِيْرُ ۙ اَمْ هَلْ تَسْتَوِى الظُّلُمٰتُ وَالنُّوْرُ ۚ اَمْ جَعَلُوْا لِلّٰهِ شُرَكَآءَ خَلَقُوْا كَخَلْقِهٖ فَتَشَابَهَ الْخَلْقُ عَلَيْهِمْ ؕ قُلِ اللّٰهُ خَالِقُ كُلِّ شَىْءٍ وَّهُوَ الْوَاحِدُ الْقَهَّارُ ﴿١٦﴾

17. ಅಲ್ಲಾಹನು ಆಕಾಶದಿಂದ ಮಳೆ ಸುರಿಸಿದನು. ಪ್ರತಿಯೊಂದು ನದಿ-ನಾಲೆ ಅದನ್ನು ತನ್ನಲ್ಲಿ ತುಂಬುವಷ್ಟನ್ನು ಕೊಂಡೊಯ್ದಿತು. ತರುವಾಯ ಮಹಾಪೂರವೆದ್ದಾಗ ಮೇಲ್ತಳದಲ್ಲಿ ನೊರೆಯೂ ಬಂದಿತು. ಇದೇ ತರದ ನೊರೆಯು ಆಭರಣ ಹಾಗೂ ಪಾತ್ರೆಗಳನ್ನು ಮಾಡಲಿಕ್ಕಾಗಿ ಲೋಹಗಳನ್ನು ಬೆಂಕಿಯಲ್ಲಿ ಕರಗಿಸುವಾಗ ಅವುಗಳಿಂದಲೂ ಏಳುತ್ತದೆ. ಈ ಉಪಮೆಯ ಮೂಲಕವೇ ಅಲ್ಲಾಹನು ಸತ್ಯ ಮತ್ತು ಅಸತ್ಯಗಳನ್ನು ವಿವರಿಸುತ್ತಾನೆ. ನೊರೆ ಆರಿ ಹೋಗುತ್ತದೆ ಮತ್ತು ಮಾನವನಿಗೆ ಉಪಯುಕ್ತವಾದುದು ಭೂಮಿಯಲ್ಲಿ ತಂಗಿಕೊಳ್ಳುತ್ತದೆ. ಹೀಗೆ ಅಲ್ಲಾಹನು ಉಪಮೆಗಳ ಮೂಲಕ ವಿಷಯವನ್ನು ವಿವರಿಸಿ ಹೇಳುತ್ತಾನೆ.

اَنْزَلَ مِنَ السَّمَآءِ مَآءً فَسَالَتْ اَوْدِيَةٌۢ بِقَدَرِهَا فَاحْتَمَلَ السَّيْلُ زَبَدًا رَّابِيًا ؕ وَمِمَّا يُوْقِدُوْنَ عَلَيْهِ فِى النَّارِ ابْتِغَآءَ حِلْيَةٍ اَوْ مَتَاعٍ زَبَدٌ مِّثْلُهٗ ؕ كَذٰلِكَ يَضْرِبُ اللّٰهُ الْحَقَّ وَالْبَاطِلَ ۬ ؕ فَاَمَّا الزَّبَدُ فَيَذْهَبُ جُفَآءً ۚ وَاَمَّا مَا يَنْفَعُ النَّاسَ فَيَمْكُثُ فِى الْاَرْضِ ؕ كَذٰلِكَ يَضْرِبُ اللّٰهُ الْاَمْثَالَ ﴿١٧﴾

18. ತಮ್ಮ ಪ್ರಭುವಿನ ಕರೆಗೆ ಓಗೊಟ್ಟವರಿಗೆ ಉತ್ತಮ ಪ್ರತಿಫಲವಿದೆ. ಅದನ್ನು ಸ್ವೀಕರಿಸದಿದ್ದವರು ಭೂಮಿಯ ಸಕಲ ಸಂಪತ್ತಿನ ಒಡೆಯರಾಗಿದ್ದರೂ, ಅಷ್ಟೇ ಇನ್ನೂ ಒದಗಿಸಿಕೊಂಡರೂ ಅದೆಲ್ಲವನ್ನೂ ಅಲ್ಲಾಹನ ಹಿಡಿತದಿಂದ ಪಾರಾಗಲಿಕ್ಕಾಗಿ ಪರಿಹಾರ ರೂಪದಲ್ಲಿ ಕೊಟ್ಟು ಬಿಡಲು ಸಿದ್ಧರಾಗುವರು. ಇವರಿಂದ ಕೆಟ್ಟ ರೀತಿಯಲ್ಲಿ ಲೆಕ್ಕಾಚಾರ ಪಡೆಯಲಾಗುವುದು ಮತ್ತು ಅವರ ವಾಸಸ್ಥಾನವು 'ನರಕ' ಆಗಿರುವುದು. ಅತ್ಯಂತ ನಿಕೃಷ್ಟ ಸ್ಥಾನವದು.

لِلَّذِيْنَ اسْتَجَابُوْا لِرَبِّهِمُ الْحُسْنٰى ؕ وَالَّذِيْنَ لَمْ يَسْتَجِيْبُوْا لَهٗ لَوْ اَنَّ لَهُمْ مَّا فِى الْاَرْضِ جَمِيْعًا وَّمِثْلَهٗ مَعَهٗ لَافْتَدَوْا بِهٖ ؕ اُولٰٓئِكَ لَهُمْ سُوْٓءُ الْحِسَابِ ۙ وَمَاْوٰىهُمْ جَهَنَّمُ ؕ وَبِئْسَ الْمِهَادُ ﴿١٨﴾

9. ನೆರಳು ಸಾಷ್ಟಾಂಗವೆರಗುವುದೆಂದರೆ, ವಸ್ತುಗಳ ನೆರಳು ಬೆಳಗು ಬೈಗುಗಳಲ್ಲಿ ಪಶ್ಚಿಮ ಮತ್ತು ಪೂರ್ವ ದಿಕ್ಕುಗಳಲ್ಲಿ ಬೀಳುವುದು, ಇವೆಲ್ಲವೂ ನಿರ್ದಿಷ್ಟ ಆಜ್ಞೆಗೆ ಬದ್ಧವಾಗಿದೆ ಮತ್ತು ಯಾವುದೋ ನಿಯಮಕ್ಕೆ ಅಧೀನವಾಗಿದೆ ಎಂಬುದನ್ನು ಸೂಚಿಸುತ್ತದೆ.

19. ನಿಮ್ಮ ಪ್ರಭು ನಿಮ್ಮ ಮೇಲೆ ಅವತೀರ್ಣಗೊಳಿಸಿರುವ ಈ ಗ್ರಂಥವನ್ನು ಸತ್ಯವೆಂದು ತಿಳಿಯುವವನೂ ಈ ಪರಮಾರ್ಥದಿಂದ ಅಂಧನಾಗಿರುವವನೂ ಪರಸ್ಪರ ಸಮಾನರಾಗಿರುವುದೆಂತು? ವಾಸ್ತವದಲ್ಲಿ ಬುದ್ಧಿಜೀವಿಗಳೇ ಉಪದೇಶ ಸ್ವೀಕರಿಸುತ್ತಾರೆ.

أَفَمَن يَعْلَمُ أَنَّمَا أُنزِلَ إِلَيْكَ مِن رَّبِّكَ
الْحَقُّ كَمَنْ هُوَ أَعْمَىٰ ۚ إِنَّمَا يَتَذَكَّرُ
أُولُو الْأَلْبَابِ ﴿١٩﴾

20. ಅವರು ಅಲ್ಲಾಹನೊಡನೆ ಮಾಡಿದ ಕರಾರನ್ನು ಪಾಲಿಸುತ್ತಾರೆ. ಅದನ್ನು (ಕರಾರನ್ನು) ಬಲಗೊಳಿಸಿಕೊಂಡ ಬಳಿಕ ಮುರಿದು ಬಿಡುವುದಿಲ್ಲ.

الَّذِينَ يُوفُونَ بِعَهْدِ اللَّهِ وَلَا
يَنقُضُونَ الْمِيثَاقَ ﴿٢٠﴾

21. ಅಲ್ಲಾಹನು ಯಾವ ಯಾವ ಸಂಬಂಧಗಳನ್ನು ಕಾಪಾಡಲು ಆಜ್ಞೆ ಕೊಟ್ಟಿರುವನೋ ಅವುಗಳನ್ನು ಕಾಪಾಡಿಕೊಳ್ಳುತ್ತಾರೆ. ತಮ್ಮ ಪ್ರಭುವನ್ನು ಭಯಪಡುತ್ತಾರೆ. ಎಲ್ಲಾದರೂ ತಮ್ಮೊಡನೆ ಕೆಟ್ಟ ರೀತಿಯ ವಿಚಾರಣೆ ನಡೆದುಬಿಟ್ಟೀತೋ ಎಂದು ಹೆದರುತ್ತಾರೆ.

وَالَّذِينَ يَصِلُونَ مَا أَمَرَ اللَّهُ بِهِ أَن
يُوصَلَ وَيَخْشَوْنَ رَبَّهُمْ وَيَخَافُونَ
سُوءَ الْحِسَابِ ﴿٢١﴾

22. ಅವರು ತಮ್ಮ ಪ್ರಭುವಿನ ಸಂಪ್ರೀತಿಗಾಗಿ ಸಹನೆಯಿಂದ ವರ್ತಿಸುತ್ತಾರೆ. ನಮಾಝನ್ನು ಸಂಸ್ಥಾಪಿಸುತ್ತಾರೆ. ನಾವು ನೀಡಿರುವ ಜೀವನ ಸಾಧನಗಳಿಂದ ಬಹಿರಂಗವಾಗಿಯೂ ರಹಸ್ಯವಾಗಿಯೂ ವ್ಯಯಿಸುತ್ತಾರೆ. ಕೆಡುಕುಗಳನ್ನು ಒಳಿತುಗಳಿಂದ ನಿವಾರಿಸುತ್ತಾರೆ. ಪರಲೋಕ ಗೃಹವು ಅವರಿಗೇ ಆಗಿರುತ್ತದೆ.

وَالَّذِينَ صَبَرُوا ابْتِغَاءَ وَجْهِ رَبِّهِمْ
وَأَقَامُوا الصَّلَاةَ وَأَنفَقُوا مِمَّا رَزَقْنَاهُمْ
سِرًّا وَعَلَانِيَةً وَيَدْرَءُونَ بِالْحَسَنَةِ
السَّيِّئَةَ أُولَٰئِكَ لَهُمْ عُقْبَى الدَّارِ ﴿٢٢﴾

23. ಅರ್ಥಾತ್ ಅವರ ಶಾಶ್ವತ ನಿವಾಸವಾಗಲಿರುವ ಸ್ವರ್ಗೋದ್ಯಾನಗಳು. ಸ್ವತಃ ಅವರೂ ಅವರ ಪೂರ್ವಿಕರ, ಅವರ ಪತ್ನಿಯರ ಹಾಗೂ ಅವರ ಸಂತತಿಗಳ ಪೈಕಿ ಸಜ್ಜನರಾಗಿರುವವರೂ ಅವುಗಳಲ್ಲಿ ಪ್ರವೇಶಿಸುವರು. ಎಲ್ಲಾ ದಿಕ್ಕುಗಳಿಂದಲೂ ದೇವಚರರು ಅವರನ್ನು ಸ್ವಾಗತಿಸಲು ಬರುವರು-

جَنَّاتُ عَدْنٍ يَدْخُلُونَهَا وَمَن صَلَحَ
مِنْ آبَائِهِمْ وَأَزْوَاجِهِمْ وَذُرِّيَّاتِهِمْ
وَالْمَلَائِكَةُ يَدْخُلُونَ عَلَيْهِم مِّن كُلِّ بَابٍ ﴿٢٣﴾

24. ಮತ್ತು ಅವರೊಡನೆ, "ನಿಮಗೆ ರಕ್ಷಣೆ ಇರಲಿ, ನೀವು (ಭೂಲೋಕದಲ್ಲಿ) ಸಹನೆಯಿಂದ ವರ್ತಿಸಿದ್ದುದರ ಫಲವಾಗಿ ಇಂದು ಇದಕ್ಕೆ ಅರ್ಹರಾಗಿರುತ್ತೀರಿ" ಎಂದು ಹೇಳುವರು. ಪರಲೋಕ ಗೃಹವು ಅದೆಷ್ಟು ಉತ್ತಮ!

سَلَامٌ عَلَيْكُم بِمَا صَبَرْتُمْ فَنِعْمَ عُقْبَى الدَّارِ ﴿٢٤﴾

25. ಅಲ್ಲಾಹನೊಂದಿಗೆ ಬಲವಾದ ಕರಾರನ್ನು ಮಾಡಿಕೊಂಡ ಬಳಿಕ ಮುರಿದುಬಿಡುವವರು, ಅಲ್ಲಾಹನು ಜೋಡಿಸಲು ಆಜ್ಞೆ

وَالَّذِينَ يَنقُضُونَ عَهْدَ اللَّهِ مِن بَعْدِ
مِيثَاقِهِ وَيَقْطَعُونَ مَا أَمَرَ اللَّهُ بِهِ

ಕೊಟ್ಟಂತಹ ಸಂಬಂಧಗಳನ್ನು ಮುರಿಯುವವರು ಮತ್ತು ಭೂಮಿಯ ಮೇಲೆ ಗೊಂದಲ ಹಬ್ಬಿಸುತ್ತಿರುವವರು ಶಾಪಕ್ಕೆ ಅರ್ಹರು. ಅವರಿಗೆ ಪರಲೋಕದಲ್ಲಿ ಅತ್ಯಂತ ಕೆಟ್ಟ ನಿವಾಸವಿದೆ.

أَنْ يُّوْصَلَ وَيُفْسِدُوْنَ فِي الْأَرْضِ ۙ أُولٰٓئِكَ لَهُمُ اللَّعْنَةُ وَلَهُمْ سُوْٓءُ الدَّارِ ﴿٢٥﴾

26. ಅಲ್ಲಾಹನು ತನಗಿಷ್ಟವಿದ್ದವರಿಗೆ ಜೀವನಾಧಾರವನ್ನು ವಿಪುಲಗೊಳಿಸುತ್ತಾನೆ ಮತ್ತು ತನಗಿಷ್ಟವಿದ್ದವರಿಗೆ ಪರಿಮಿತಗೊಳಿಸಿ ಕೊಡುತ್ತಾನೆ. ಇವರು ಇಹಜೀವನದಲ್ಲಿ ಮಗ್ನರಾಗಿದ್ದಾರೆ. ವಸ್ತುತಃ ಇಹಜೀವನವು ಪರಲೋಕ ಜೀವನದ ಮುಂದೆ ಅತಿ ಅಲ್ಪ ಸಾಧನವೇ ವಿನಾ ಬೇರೇನೂ ಅಲ್ಲ.

اَللّٰهُ يَبْسُطُ الرِّزْقَ لِمَنْ يَّشَآءُ وَيَقْدِرُ ۚ وَفَرِحُوْا بِالْحَيٰوةِ الدُّنْيَا ۗ وَمَا الْحَيٰوةُ الدُّنْيَا فِي الْاٰخِرَةِ اِلَّا مَتَاعٌ ﴿٢٦﴾

27. [ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು] ನಿರಾಕರಿಸಿದವರು, "ಇವನ ಮೇಲೆ ಇವನ ಪ್ರಭುವಿನ ಕಡೆಯಿಂದ ಯಾವುದಾದರೊಂದು ನಿದರ್ಶನವೇಕೆ ಅವತೀರ್ಣಗೊಳ್ಳಲಿಲ್ಲ?" ಎಂದು ಕೇಳುತ್ತಾರೆ. ಹೇಳಿರಿ- "ಅಲ್ಲಾಹನು ನಿಶ್ಚಯವಾಗಿಯೂ ತನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸಿಬಿಡುತ್ತಾನೆ ಮತ್ತು ಅವನ ಕಡೆಗೆ ವಾಲುವವರಿಗೇ ತನ್ನ ಕಡೆಗೆ ಬರುವ ದಾರಿಯನ್ನು ತೋರಿಸುತ್ತಾನೆ."

وَيَقُوْلُ الَّذِيْنَ كَفَرُوْا لَوْلَآ اُنْزِلَ عَلَيْهِ اٰيَةٌ مِّنْ رَّبِّهٖ ۗ قُلْ اِنَّ اللّٰهَ يُضِلُّ مَنْ يَّشَآءُ وَيَهْدِيْٓ اِلَيْهِ مَنْ اَنَابَ ﴿٢٧﴾

28. ಇಂತಹವರೇ (ಈ ಪ್ರವಾದಿಯ ಆಹ್ವಾನವನ್ನು) ಸ್ವೀಕರಿಸಿದ್ದಾರೆ ಮತ್ತು ಅವರ ಹೃದಯಗಳಿಗೆ ಅಲ್ಲಾಹನ ಸ್ಮರಣೆಯಿಂದ ಶಾಂತಿಯೊದಗುತ್ತದೆ. ಕೇಳಿರಿ, ಮನಶ್ಶಾಂತಿಯೊದಗುವುದು ಅಲ್ಲಾಹನ ಸ್ಮರಣೆಯಿಂದಲೇ ಎಂಬುದು ಖಚಿತ.

اَلَّذِيْنَ اٰمَنُوْا وَتَطْمَئِنُّ قُلُوْبُهُمْ بِذِكْرِ اللّٰهِ ۗ اَلَا بِذِكْرِ اللّٰهِ تَطْمَئِنُّ الْقُلُوْبُ ﴿٢٨﴾

29. ಸತ್ಯಾಹ್ವಾನವನ್ನು ಸ್ವೀಕರಿಸಿ ಸತ್ಕರ್ಮವೆಸಗಿದವರು ಅದೃಷ್ಟಶಾಲಿಗಳು. ಅವರಿಗೆ ಅತ್ಯುತ್ತಮ ಅಂತಿಮ ನೆಲೆ ಇದೆ.

اَلَّذِيْنَ اٰمَنُوْا وَعَمِلُوا الصّٰلِحٰتِ طُوْبٰى لَهُمْ وَحُسْنُ مَاٰبٍ ﴿٢٩﴾

30. ಓ ಪೈಗಂಬರರೇ, ಅನೇಕ ಸಮುದಾಯಗಳು ಗತಿಸಿಹೋದ ಅನಂತರದ ಈ ಸಮುದಾಯಕ್ಕೆ ಈ ರೀತಿ ನಾವು ನಿಮ್ಮನ್ನು ರಸೂಲರಾಗಿ ಮಾಡಿ ಕಳುಹಿಸಿರುತ್ತೇವೆ,[10] ನಾವು ನಿಮಗೆ 'ದಿವ್ಯವಾಣಿ' ಮೂಲಕ ಅವತೀರ್ಣಗೊಳಿಸುತ್ತಿರುವ ಸಂದೇಶವನ್ನು ಇವರಿಗೆ ಓದಿ ಹೇಳಲಿಕ್ಕಾಗಿ. ಅವರು ಅತ್ಯಂತ ಕರುಣಾಮಯಿಯಾಗಿರುವಾತನನ್ನು ನಿಷೇಧಿಸುತ್ತಾರೆ. ಅವರೊಡನೆ ಹೇಳಿರಿ- "ಅವನೇ ನನ್ನ ಪಾಲಕ ಪ್ರಭು, ಅವನ ಹೊರತು ಆರಾಧ್ಯನಾರೂ ಇಲ್ಲ. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದೆ. ಅವನೇ ನನ್ನ ಆಶ್ರಯದಾತ."

كَذٰلِكَ اَرْسَلْنٰكَ فِيْٓ اُمَّةٍ قَدْ خَلَتْ مِنْ قَبْلِهَآ اُمَمٌ لِّتَتْلُوَا۟ عَلَيْهِمُ الَّذِيْٓ اَوْحَيْنَآ اِلَيْكَ وَهُمْ يَكْفُرُوْنَ بِالرَّحْمٰنِ ۗ قُلْ هُوَ رَبِّيْ لَآ اِلٰهَ اِلَّا هُوَ ۚ عَلَيْهِ تَوَكَّلْتُ وَاِلَيْهِ مَتَابِ ﴿٣٠﴾

10. ಅರ್ಥಾತ್- ಈ ಜನರು ಬಯಸುತ್ತಿರುವ ಯಾವುದೇ ರೀತಿಯ ದೃಷ್ಟಾಂತಗಳಿಲ್ಲದೆ.

31. ಪರ್ವತಗಳನ್ನು ಚಲಿಸುವಂತೆ ಅಥವಾ ಭೂಮಿಯನ್ನು ಸೀಳಿಬಿಡುವಂತೆ ಅಥವಾ ಮೃತರು ಸಮಾಧಿಯಿಂದ ಎದ್ದು ಮಾತಾಡುವಂತೆ ಮಾಡಿಬಿಡತಕ್ಕಂತಹ ಒಂದು ಕುರ್‌ಆನ್ ಅವತೀರ್ಣಗೊಳಿಸಲ್ಪಡುತ್ತಿದ್ದರೂ ಅವರು ನಂಬುತ್ತಿರಲಿಲ್ಲ (ಇಂತಹ ದೃಷ್ಟಾಂತಗಳನ್ನು ತೋರಿಸಿಬಿಡುವುದೇನೂ ಕಷ್ಟ ಸಾಧ್ಯವಲ್ಲ.) ನಿಜವಾಗಿ ಸಕಲ ಕಾರ್ಯಗಳ ಪರಮಾಧಿಕಾರ ಅಲ್ಲಾಹನ ಕೈಯಲ್ಲೇ ಇದೆ.[11] ಅಲ್ಲಾಹ್ ಇಚ್ಛಿಸುತ್ತಿದ್ದರೆ ಸಕಲ ಮಾನವರಿಗೂ ಸನ್ಮಾರ್ಗ ದರ್ಶನ ನೀಡಿಬಿಡುತ್ತಿದ್ದನೆಂದು[12] ತಿಳಿದು (ಸತ್ಯನಿಷೇಧಿಗಳ ಬೇಡಿಕೆಯ ಉತ್ತರವಾಗಿ ಯಾವುದಾದರೊಂದು ಕುರುಹು ತೋರಿ ಬರಬಹುದೆಂಬುದರ ಬಗ್ಗೆ ಇನ್ನೂ ಆಶೆ ಇಟ್ಟುಕೊಂಡಿರುವ) ಸತ್ಯವಿಶ್ವಾಸಿಗಳು ನಿರಾಶರಾಗಲಿಲ್ಲವೇ? ಸತ್ಯನಿಷೇಧಿಗಳ ದುಷ್ಕರ್ಮಗಳ ಕಾರಣದಿಂದ ಅವರ ಮೇಲೆ ಅಥವಾ ಅವರ ಮನೆಯ ಸಮೀಪವೆಲ್ಲಾದರೂ ಒಂದಲ್ಲೊಂದು ವಿಪತ್ತು ಎರಗುತ್ತಲೇ ಇರುತ್ತದೆ. ಇದು ಅಲ್ಲಾಹನ ವಾಗ್ದಾನ ಪೂರ್ತಿಗೊಳ್ಳುವವರೆಗೂ ನಿರಂತರವಾಗಿ ಮುಂದುವರಿಯುತ್ತಲೇ ಇರುವುದು. ನಿಶ್ಚಯವಾಗಿಯೂ ಅಲ್ಲಾಹನು ತನ್ನ ವಾಗ್ದಾನವನ್ನು ಉಲ್ಲಂಘಿಸುವುದಿಲ್ಲ.

وَلَوْ أَنَّ قُرْآنًا سُيِّرَتْ بِهِ الْجِبَالُ أَوْ قُطِّعَتْ بِهِ الْأَرْضُ أَوْ كُلِّمَ بِهِ الْمَوْتَىٰ ۗ بَل لِّلَّهِ الْأَمْرُ جَمِيعًا ۗ أَفَلَمْ يَيْأَسِ الَّذِينَ آمَنُوا أَن لَّوْ يَشَاءُ اللَّهُ لَهَدَى النَّاسَ جَمِيعًا ۗ وَلَا يَزَالُ الَّذِينَ كَفَرُوا تُصِيبُهُم بِمَا صَنَعُوا قَارِعَةٌ أَوْ تَحُلُّ قَرِيبًا مِّن دَارِهِمْ حَتَّىٰ يَأْتِيَ وَعْدُ اللَّهِ ۚ إِنَّ اللَّهَ لَا يُخْلِفُ الْمِيعَادَ ﴿٣١﴾

32. ನಿಮಗಿಂತ ಮೊದಲೂ ಅನೇಕ ರಸೂಲರು ಅಪಹಾಸ್ಯಗೊಳಿಸಲ್ಪಟ್ಟಿದ್ದಾರೆ. ಆದರೆ ನಾನು ಸತ್ಯನಿಷೇಧಿಗಳನ್ನು ಯಾವಾಗಲೂ ಸಡಿಲು ಬಿಟ್ಟಿದ್ದೇನೆ ಮತ್ತು ಕೊನೆಗೆ ಅವರನ್ನು ಬಿಗಿ ಹಿಡಿದೆನು. ಅನಂತರ ನನ್ನ ಶಿಕ್ಷೆ ಎಷ್ಟು ಕಠಿಣವಿತ್ತೆಂದು ನೋಡಿಕೊಳ್ಳಿರಿ.

وَلَقَدِ اسْتُهْزِئَ بِرُسُلٍ مِّن قَبْلِكَ فَأَمْلَيْتُ لِلَّذِينَ كَفَرُوا ثُمَّ أَخَذْتُهُمْ ۖ فَكَيْفَ كَانَ عِقَابِ ﴿٣٢﴾

33. ಪ್ರತಿಯೊಬ್ಬನ ಗಳಿಕೆಯ ಮೇಲೆ ದೃಷ್ಟಿ ಇರಿಸಿರುವ ಅಲ್ಲಾಹನಿಗೆ ಜನರು ಕೆಲವು ಭಾಗೀದಾರರನ್ನು ನಿಶ್ಚಯಿಸಿಕೊಂಡಿರುವರೇ? ಅವನ ಬಗ್ಗೆ ಈ ಸಾಹಸವೇ? ಓ ಪೈಗಂಬರರೇ, ಅವರೊಡನೆ ಹೇಳಿರಿ- ಅವುಗಳು ನಿಜಕ್ಕೂ ಅಲ್ಲಾಹನೇ ನಿಶ್ಚಯಿಸಿಕೊಂಡಿರುವ ಸಹಭಾಗಿಗಳಾಗಿದ್ದರೆ ಅವರು ಯಾರು ಯಾರೆಂದು ಅವರ

أَفَمَنْ هُوَ قَائِمٌ عَلَىٰ كُلِّ نَفْسٍ بِمَا كَسَبَتْ ۗ وَجَعَلُوا لِلَّهِ شُرَكَاءَ قُلْ سَمُّوهُمْ ۚ أَمْ تُنَبِّئُونَهُ بِمَا لَا يَعْلَمُ فِي الْأَرْضِ

11. ಅರ್ಥಾತ್- ದೃಷ್ಟಾಂತಗಳನ್ನು ತೋರಿಸದಿರಲು ಕಾರಣ ಅಲ್ಲಾಹನು ಅದನ್ನು ತೋರಿಸಲು ಸಮರ್ಥನಲ್ಲ ಎಂಬುದಲ್ಲ. ಬದಲಾಗಿ ಈ ರೀತಿ ಕಾರ್ಯವೆಸಗುವುದು ಅಲ್ಲಾಹನ ಯುಕ್ತಿಗೆ ವಿರುದ್ಧವಾಗಿದೆ. ಏಕೆಂದರೆ ಪರಮೋದ್ದೇಶ ಸನ್ಮಾರ್ಗದರ್ಶನವಾಗಿದೆಯೇ ಹೊರತು ಪ್ರವಾದಿಯ ಪ್ರವಾದಿತ್ವವನ್ನು ನಂಬಿಸಿ ಬಿಡುವುದಲ್ಲ. ಇನ್ನು ಸನ್ಮಾರ್ಗದರ್ಶನವಾದರೋ ಜನರ ಚಿಂತನೆ ಮತ್ತು ಅಂತರ್‌ದೃಷ್ಟಿಯ ಸುಧಾರಣೆಯಾಗದೆ ಸಾಧ್ಯವಿಲ್ಲ.

12. ಅರ್ಥಾತ್- ತಿಳುವಳಿಕೆಯಿಲ್ಲದ ಮತ್ತು ಪ್ರಜ್ಞಾಪೂರ್ವಕವಲ್ಲದ ಸತ್ಯವಿಶ್ವಾಸವೇ ಉದ್ದೇಶವಾಗಿದ್ದರೆ ದೃಷ್ಟಾಂತಗಳನ್ನು ತೋರಿಸುವ ಗೊಡವೆಗೆ ಹೋಗುವ ಆವಶ್ಯಕತೆ ಮತ್ತು ಅಲ್ಲಾಹನು ಎಲ್ಲರನ್ನೂ ಸತ್ಯವಿಶ್ವಾಸಿಗಳಾಗಿಯೇ ಸೃಷ್ಟಿಸುವ ಮೂಲಕವೂ ಈ ಕೆಲಸವನ್ನು ಸಾಧಿಸಬಹುದಾಗಿತ್ತು.

ಹೆಸರೆತ್ತಿ ಹೇಳಿ ನೋಡೋಣ. ಅಲ್ಲಾಹನು ತನ್ನ ಭೂಮಿಯಲ್ಲಿ ತಿಳಿದಿರದಂತಹ ಒಂದು ಹೊಸ ವಿಷಯವನ್ನು ನೀವು ಅವನಿಗೆ ತಿಳಿಸುತ್ತೀರಾ? ಅಥವಾ ನೀವು ಸುಮ್ಮನೆ ಬಾಯಿಗೆ ಬಂದುದನ್ನು ಹೇಳಿಬಿಡುತ್ತೀರಾ? ವಾಸ್ತವದಲ್ಲಿ ಸತ್ಯಾಹ್ವಾನವನ್ನು ನಿರಾಕರಿಸಿದ ವರಿಗೆ ಅವರ ಕುತಂತ್ರಗಳು[13] ಮನೋಹರ ವಾಗಿಸಲ್ಪಟ್ಟಿವೆ ಮತ್ತು ಅವರು ಸನ್ಮಾರ್ಗದಿಂದ ತಡೆಯಲ್ಪಟ್ಟಿರುತ್ತಾರೆ. ಯಾರನ್ನು ಅಲ್ಲಾಹನು ಪಥಭ್ರಷ್ಟತೆಯಲ್ಲಿ ಹಾಕಿಬಿಡುತ್ತಾನೋ ಅವನಿಗಾರೂ ಮಾರ್ಗದರ್ಶಕನಿಲ್ಲ.

أَمْ بِظَاهِرٍ مِنَ الْقَوْلِ ۗ بَلْ زُيِّنَ لِلَّذِينَ كَفَرُوا مَكْرُهُمْ وَصُدُّوا عَنِ السَّبِيلِ ۗ وَمَنْ يُضْلِلِ اللَّهُ فَمَا لَهُ مِنْ هَادٍ ﴿٣٣﴾

34. ಇಂತಹವರಿಗೆ ಇಹಜೀವನದಲ್ಲೇ ಶಿಕ್ಷೆ ಇದೆ ಮತ್ತು ಪರಲೋಕದ ಶಿಕ್ಷೆ ಇದಕ್ಕಿಂತಲೂ ಕಠಿಣವಾಗಿದೆ. ಅವರನ್ನು ಅಲ್ಲಾಹನಿಂದ ರಕ್ಷಿಸುವವರು ಯಾರೂ ಇಲ್ಲ.

لَهُمْ عَذَابٌ فِي الْحَيَاةِ الدُّنْيَا ۖ وَلَعَذَابُ الْآخِرَةِ أَشَقُّ ۖ وَمَا لَهُمْ مِنَ اللَّهِ مِنْ وَاقٍ ﴿٣٤﴾

35. ದೇವಭಯವಿರಿಸಿಕೊಂಡವರಿಗೆ ವಾಗ್ದಾನ ಮಾಡಲಾಗಿರುವ ಸ್ವರ್ಗದ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿವೆ. ಅದರ ಫಲಗಳಿಗೂ ನೆರಳಿಗೂ ಅಳಿವಿಲ್ಲ. ದೇವಭಯವುಳ್ಳವರ ಅಂತಿಮ ಪರಿಣಾಮ ವಿದು ಮತ್ತು ಸತ್ಯನಿಷೇಧಿಗಳ ಅಂತಿಮ ಪರಿಣಾಮವು ನರ ಕಾಗ್ನಿಯೇ ಆಗಿದೆ.

مَثَلُ الْجَنَّةِ الَّتِي وُعِدَ الْمُتَّقُونَ ۖ تَجْرِي مِنْ تَحْتِهَا الْأَنْهَارُ ۖ أُكُلُهَا دَائِمٌ وَظِلُّهَا ۚ تِلْكَ عُقْبَى الَّذِينَ اتَّقَوْا ۖ وَعُقْبَى الْكَافِرِينَ النَّارُ ﴿٣٥﴾

36. ಓ ಪೈಗಂಬರರೇ, ನಾವು ಹಿಂದೆ ಯಾರಿಗೆ ಗ್ರಂಥ ದಯ ಪಾಲಿಸಿದ್ದೆವೋ ಅವರು ನಿಮಗೆ ನಾವು ಅವತೀರ್ಣಗೊಳಿಸಿರುವ ಈ ಗ್ರಂಥದಿಂದ ಸಂತುಷ್ಟರಾಗಿದ್ದಾರೆ. ವಿವಿಧ ಪಂಗಡಗಳಲ್ಲಿ ಕೆಲವರು ಇದರ ಕೆಲವು ವಿಷಯಗಳನ್ನು ಒಪ್ಪದವರೂ ಇದ್ದಾರೆ. ನೀವು ಸ್ಪಷ್ಟವಾಗಿ (ಹೀಗೆ) ಹೇಳಿಬಿಡಿರಿ- "ನನಗೆ ಕೇವಲ ಅಲ್ಲಾಹನ ದಾಸ್ಯ-ಆರಾಧನೆಯ ಆಜ್ಞೆ ನೀಡಲಾಗಿದೆ. ಅವನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿಸುವುದನ್ನು ನಿಷೇಧಿಸಲಾಗಿದೆ. ಆದುದರಿಂದ ನಾನು ಅವನ ಕಡೆಗೇ ಕರೆ ನೀಡುತ್ತೇನೆ ಮತ್ತು ನನ್ನ ಮರಳುವಿಕೆಯೂ ಆತನ ಕಡೆಗೇ ಇದೆ."

وَالَّذِينَ آتَيْنَاهُمُ الْكِتَابَ يَفْرَحُونَ بِمَا أُنْزِلَ إِلَيْكَ ۖ وَمِنَ الْأَحْزَابِ مَنْ يُنْكِرُ بَعْضَهُ ۚ قُلْ إِنَّمَا أُمِرْتُ أَنْ أَعْبُدَ اللَّهَ وَلَا أُشْرِكَ بِهِ ۚ إِلَيْهِ أَدْعُو وَإِلَيْهِ مَآبِ ﴿٣٦﴾

13. ಬಹುದೇವಾರಾಧನೆಯನ್ನು ಇಲ್ಲಿ ಕುತಂತ್ರವೆನ್ನಲಾಗಿದೆ. ಏಕೆಂದರೆ ಯಾವ ನಕ್ಷತ್ರ, ಉಪಗ್ರಹ, ದೇವಚರರು, ಆತ್ಮಗಳು ಅಥವಾ ಹಿರಿಯ ವ್ಯಕ್ತಿಗಳನ್ನು ಇವರು ದೇವತ್ವದ ಅಧಿಕಾರವನ್ನು ಹೊಂದಿರುವವರೆಂದು ಹೇಳುತ್ತಿದ್ದಾರೋ, ಯಾರನ್ನು ಇವರು ದೇವನ ವಿಶಿಷ್ಟ ಹಕ್ಕುಗಳಲ್ಲಿ ಭಾಗಿದಾರರನ್ನಾಗಿ ಮಾಡಿದ್ದಾರೋ ಅವರ ಪೈಕಿ ಯಾರೂ ಅಂತಹ ಅಧಿಕಾರ ಅಥವಾ ಗುಣಗಳನ್ನು ಹೊಂದಿರುವ ಬಗ್ಗೆ ಪ್ರತಿಪಾದಿಸಿರಲಿಲ್ಲ. ಅಂತಹ ಹಕ್ಕುಗಳನ್ನು ಅಪೇಕ್ಷಿಸಿರಲೂ ಇಲ್ಲ. ನಮ್ಮ ಮುಂದೆ ಪೂಜಾ ಕರ್ಮಗಳನ್ನು ಕೈಗೊಂಡರೆ ನಾವು ನಿಮ್ಮ ಕೆಲಸ ಈಡೇರಿಸಿ ಕೊಡುತ್ತೇವೆ ಎಂದು ಹೇಳಿರಲೂ ಇಲ್ಲ. ಇದು ಕೆಲವು ಚಾಣಾಕ್ಷಮತಿಗಳ ಕೆಲಸವಾಗಿದೆ. ಅವರು ಜನಸಾಮಾನ್ಯರಲ್ಲಿ ತಮ್ಮ ದೇವತ್ವದ ಛಾಪು ಒತ್ತಲಿಕ್ಕಾಗಿ ಮತ್ತು ಅವರ ಸಂಪಾದನೆಯಿಂದ ಪಾಲು ಪಡೆಯಲಿಕ್ಕಾಗಿ ಕೆಲವು ಕೃತಕ ದೇವರುಗಳನ್ನು ಸೃಷ್ಟಿಸಿದರು. ಜನರನ್ನು ಅವರ ಶ್ರದ್ಧಾಳುಗಳನ್ನಾಗಿ ಮಾಡಿದರು. ತಮ್ಮನ್ನು ಯಾವುದಾದರೊಂದು ರೂಪದಲ್ಲಿ ಪ್ರತಿನಿಧಿಗಳನ್ನಾಗಿ ಮಾಡಿಕೊಂಡು ಸ್ವಾರ್ಥ ಸಾಧನೆ ಮಾಡಲು ಅವರು ಪ್ರಯತ್ನಿಸಿದರು.

37. ನಾವು ಈ ಅರಬಿ (ಭಾಷೆಯ) ಆದೇಶವನ್ನು ಈ ನಿರ್ದೇಶನ ದೊಂದಿಗೆ ನಿಮಗೆ ಅವತೀರ್ಣಗೊಳಿಸಿರುತ್ತೇವೆ. ನಿಮಗೆ ಬಂದಿ ರುವ ಈ ಜ್ಞಾನದ ಬಳಿಕವೂ ನೀವು ಜನರ ಅಭಿಲಾಷೆಗಳನ್ನನು ಸರಿಸಿದರೆ, ಅಲ್ಲಾಹನ ಎದುರು ನಿಮಗೆ ಬೆಂಬಲಿಗರಾಗಲಿ ನಿಮ್ಮನ್ನು ಅವನ ಹಿಡಿತದಿಂದ ರಕ್ಷಿಸುವವರಾಗಲಿ ಯಾರೂ ಇರಲಾರರು.

وَكَذٰلِكَ اَنْزَلْنٰهُ حُكْمًا عَرَبِيًّا ؕ وَلَئِنِ
اتَّبَعْتَ اَهْوَآءَهُمْ بَعْدَ مَا جَآءَكَ مِنَ الْعِلْمِ ۙ
مَا لَكَ مِنَ اللّٰهِ مِنْ وَّلِيٍّ وَّلَا وَاقٍ ﴿۳۷﴾

38. ನಾವು ನಿಮಗಿಂತ ಮುಂಚೆಯೂ ಅನೇಕ ಸಂದೇಶವಾಹಕರನ್ನು ಕಳುಹಿಸಿದ್ದೇವು ಮತ್ತು ನಾವು ಅವರಿಗೆ ಪತ್ನಿಯರನ್ನೂ ಮಕ್ಕಳನ್ನೂ ನೀಡಿದ್ದೇವು.[14] ಯಾವ ಸಂದೇಶವಾಹಕನಿಗೂ ಅಲ್ಲಾಹನ ಅನು ಮತಿಯಿಲ್ಲದೆ ಯಾವತ್ತು ನಿದರ್ಶನವನ್ನು, ತಾನೇ ತಂದು ತೋರಿಸುವ ಸಾಮರ್ಥ್ಯವಿರಲಿಲ್ಲ. ಪ್ರತಿಯೊಂದು ಯುಗಕ್ಕೂ ಒಂದು ಗ್ರಂಥವಿದೆ.

وَلَقَدْ اَرْسَلْنَا رُسُلًا مِّنْ قَبْلِكَ وَجَعَلْنَا
لَهُمْ اَزْوَاجًا وَّذُرِّيَّةً ؕ وَمَا كَانَ لِرَسُوْلٍ
اَنْ يَّاْتِيَ بِاٰيَةٍ اِلَّا بِاِذْنِ اللّٰهِ ؕ لِكُلِّ
اَجَلٍ كِتَابٌ ﴿۳۸﴾

39. ಅಲ್ಲಾಹನು ತನಗಿಷ್ಟ ಬಂದುದನ್ನು ಅಳಿಸಿಬಿಡುತ್ತಾನೆ ಮತ್ತು ತನಗಿಷ್ಟವಿದ್ದುದನ್ನು ಉಳಿಸುತ್ತಾನೆ. 'ಉಮ್ಮುಲ್‌ಕಿತಾಬ್' (ಮಾತೃ ಗ್ರಂಥ)[15] ಅವನ ಬಳಿಯಲ್ಲೇ ಇದೆ.

يَمْحُوا اللّٰهُ مَا يَشَآءُ وَيُثْبِتُ ۖۚ وَعِنْدَهٗۤ
اُمُّ الْكِتٰبِ ﴿۳۹﴾

40. ಓ ಪೈಗಂಬರರೇ, ನಾವು ಇವರಿಗೆ ಕೊಡುತ್ತಿರುವ ದುಷ್ಪರಿಣಾಮದ ಬೆದರಿಕೆಯ ಒಂದಂಶವನ್ನು ನಾವು ನಿಮ್ಮ ಜೀವಮಾನದಲ್ಲೇ ತೋರಿಸಿದರೂ ಅಥವಾ ಅದು ಪ್ರಕಟವಾಗುವುದಕ್ಕೆ ಮುಂಚೆ ನಿಮ್ಮನ್ನು ಎತ್ತಿಕೊಂಡರೂ ಹೇಗಿದ್ದರೂ ಸಂದೇಶವನ್ನು ಮುಟ್ಟಿಸು ವುದು ನಿಮ್ಮ ಕೆಲಸ ಮತ್ತು ಲೆಕ್ಕಾಚಾರ ಪಡೆಯುವುದು ನಮ್ಮ ಕೆಲಸ.

وَاِنْ مَّا نُرِيَنَّكَ بَعْضَ الَّذِيْ نَعِدُهُمْ اَوْ
نَتَوَفَّيَنَّكَ فَاِنَّمَا عَلَيْكَ الْبَلٰغُ وَعَلَيْنَا
الْحِسَابُ ﴿۴۰﴾

41. ನಾವು ಈ ಭೂಭಾಗದಲ್ಲಿ ಮುಂದೊತ್ತಿ ಬರುತ್ತಿರುವುದನ್ನೂ ಇದರ ಪರಿಧಿಯನ್ನು ಎಲ್ಲ ದಿಕ್ಕುಗಳಿಂದಲೂ ಮುದುಡಿಸುತ್ತ ಬರುತ್ತಿರುವುದನ್ನೂ ಇವರು ನೋಡುತ್ತಿಲ್ಲವೇ?[16] ಅಲ್ಲಾಹನು ಅಧಿಕಾರ ನಡೆಸುತ್ತಾನೆ. ಅವನ ತೀರ್ಮಾನವನ್ನು ಪುನರ್ವಿಮರ್ಶಿಸ ತಕ್ಕವನು ಯಾರೂ ಇಲ್ಲ ಮತ್ತು ಅವನಿಗೆ ಲೆಕ್ಕಾಚಾರ ಪಡೆ ಯುವುದರಲ್ಲಿ ಸ್ವಲ್ಪವೂ ವಿಳಂಬವಾಗುವುದಿಲ್ಲ.

اَوَلَمْ يَرَوْا اَنَّا نَاْتِي الْاَرْضَ نَنْقُصُهَا
مِنْ اَطْرَافِهَا ؕ وَاللّٰهُ يَحْكُمُ لَا مُعَقِّبَ
لِحُكْمِهٖ ؕ وَهُوَ سَرِيْعُ الْحِسَابِ ﴿۴۱﴾

14. ಇದು ಪ್ರವಾದಿವರ್ಯರ(ಸ) ಮೇಲೆ ಮಾಡಲಾಗುತ್ತಿದ್ದ ಆಕ್ಷೇಪವೊಂದಕ್ಕೆ ಉತ್ತರವಾಗಿದೆ. ಹೆಂಡತಿ ಮಕ್ಕಳನ್ನು ಹೊಂದಿರುವ ಇವರೆಂತಹ ಪ್ರವಾದಿ! ಪ್ರವಾದಿಗೂ ಮನಃಸೇಚ್ಛೆಗಳಿಗೂ ಎಲ್ಲಿಯ ಸಂಬಂಧ? ಎಂದು ಅವರು ಹೇಳುತ್ತಿದ್ದರು. ಅದೇ ವೇಳೆ ನಾವು ಪ್ರವಾದಿಗಳಾದ ಇಬ್‌ರಾಹೀಮ್ ಮತ್ತು ಇಸ್ಮಾಈಲ್‌ರ(ಅ) ಸಂತತಿಯಾಗಿರುವುದರ ಬಗ್ಗೆ ಅವರು ಹೆಮ್ಮೆ ಪಡುತ್ತಿದ್ದರು.

15. 'ಉಮ್ಮುಲ್ ಕಿತಾಬ್' ಎಂದರೆ ಮೂಲ ಗ್ರಂಥವೆಂದಾಗಿದೆ. ಅರ್ಥಾತ್ ಎಲ್ಲಾ ದಿವ್ಯಗ್ರಂಥಗಳು ಹೊರಟಿರುವ ಚಿಲುಮೆ ಅಥವಾ ಉಗಮ ಕೇಂದ್ರ.

42. ಇವರಿಗಿಂತ ಮುಂಚೆ ಗತಿಸಿದವರೂ ಮಹಾ ಮಹಾ ಕುತಂತ್ರಗಳನ್ನು ಹೂಡಿದ್ದರು. ಆದರೆ ನಿರ್ಣಾಯಕವಾದ ತಂತ್ರವು ಸರ್ವಸಂಪೂರ್ಣವಾಗಿ ಅಲ್ಲಾಹನ ಕೈಯಲ್ಲೇ ಇದೆ. ಯಾರು ಏನನ್ನು ಸಂಪಾದಿಸುತ್ತಿರುವನೆಂಬುದು ಅವನಿಗೆ ಗೊತ್ತಿದೆ. ಯಾರ ಪರ್ಯವಸಾನವು ಶುಭಕರವಾಗುವುದೆಂದು ಈ ಸತ್ಯನಿಷೇಧಿಗಳು ಶೀಘ್ರವೇ ತಿಳಿಯುವರು.

وَقَدْ مَكَرَ الَّذِينَ مِن قَبْلِهِمْ فَلِلَّهِ الْمَكْرُ جَمِيعًا ۖ يَعْلَمُ مَا تَكْسِبُ كُلُّ نَفْسٍ ۗ وَسَيَعْلَمُ الْكُفَّارُ لِمَنْ عُقْبَى الدَّارِ ﴿٤٢﴾

43. ನೀವು ದೇವಸಂದೇಶವಾಹಕರಲ್ಲವೆಂದು ಈ ಸತ್ಯನಿಷೇಧಿಗಳು ಹೇಳುತ್ತಾರೆ. ಹೇಳಿರಿ- "ನನ್ನ ಮತ್ತು ನಿಮ್ಮ ನಡುವೆ ಅಲ್ಲಾಹನ ಸಾಕ್ಷ್ಯವೇ ಸಾಕು ಮತ್ತು ದಿವ್ಯ ಗ್ರಂಥದ ಜ್ಞಾನವುಳ್ಳವನ ಸಾಕ್ಷ್ಯ ಸಾಕು."

وَيَقُولُ الَّذِينَ كَفَرُوا لَسْتَ مُرْسَلًا ۚ قُلْ كَفَىٰ بِاللَّهِ شَهِيدًا بَيْنِي وَبَيْنَكُمْ وَمَنْ عِندَهُ عِلْمُ الْكِتَابِ ﴿٤٣﴾

---

16. ಅರ್ಥಾತ್- ಇಸ್ಲಾಮಿನ ಪ್ರಭಾವ ಅರಬ್ ಸಾಮ್ರಾಜ್ಯದ ಮೂಲೆಮೂಲೆಗೆ ಹರಡುತ್ತಾ ಹೋಗುತ್ತಿರುವುದು ನಿಮ್ಮ ವಿರೋಧಿಗಳಿಗೆ ಕಾಣುತ್ತಿಲ್ಲವೇ. ನಾಲ್ಕೂ ನಿಟ್ಟಿನಿಂದ ಅವರ ವಲಯ ಕುಂಟಿತವಾಗುತ್ತಾ ಹೋಗುತ್ತಿದೆ. ಇದು ಅವರ ವಿನಾಶದ ಲಕ್ಷಣವಲ್ಲದಿದ್ದರೆ ಮತ್ತೇನು? "ನಾವು ಈ ಭೂಭಾಗದಲ್ಲಿ ಮುಂದೊತ್ತಿ ಬರುತ್ತಿದ್ದೇವೆ" ಎಂಬ ಅಲ್ಲಾಹನ ಮಾತು ಒಂದು ಸೊಗಸಾದ ಧಾಟಿಯಾಗಿದೆ. ಸತ್ಯಾಹ್ವಾನ ವಾಸ್ತವದಲ್ಲಿ ಅಲ್ಲಾಹನ ಕಡೆಯಿಂದಾಗಿರುತ್ತದೆ. ಅಲ್ಲಾಹನು ಸತ್ಯದೆಡೆಗೆ ಆಹ್ವಾನಿಸುವವರ ಜತೆಗಿರುತ್ತಾನೆ. ಆದ್ದರಿಂದಲೇ ಯಾವುದಾದರೂ ಭೂಭಾಗದಲ್ಲಿ ಈ ಸಂದೇಶ ಪ್ರಚಾರಗೊಳ್ಳುತ್ತಿರುವುದನ್ನು ಅಲ್ಲಾಹನು, "ನಾವು ಈ ಭೂಭಾಗದಲ್ಲಿ ಮುಂದೊತ್ತಿ ಬರುತ್ತಿದ್ದೇವೆ" ಎಂದು ವಿವರಿಸುತ್ತಾನೆ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಲಿಫ್ ಲಾಮ್ ರಾ. ಓ ಮುಹಮ್ಮದರೇ, ಇದೊಂದು ಗ್ರಂಥ. ನೀವು ಜನರನ್ನು ಅವರ ಪ್ರಭುವಿನ ಅನುಜ್ಞೆಯಂತೆ ಅಂಧಕಾರಗಳಿಂದ ಹೊರತೆಗೆದು ಪ್ರಕಾಶದ ಕಡೆಗೆ ತರಲಿಕ್ಕಾಗಿ ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿರುತ್ತೇವೆ. ಅವನು ಮಹಾ ಪ್ರತಾಪಿಯೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ.[1]

الٓرٰ ۚ كِتٰبٌ اَنْزَلْنٰهُ اِلَيْكَ لِتُخْرِجَ النَّاسَ مِنَ الظُّلُمٰتِ اِلَى النُّوْرِ ۙ بِاِذْنِ رَبِّهِمْ اِلٰى صِرَاطِ الْعَزِيْزِ الْحَمِيْدِ ①

2. ಮತ್ತು ಆಕಾಶಗಳ ಹಾಗೂ ಭೂಮಿಯ ಸಕಲ ಸೃಷ್ಟಿಗಳ ಮಾಲಕನಾಗಿರುತ್ತಾನೆ. ಸತ್ಯನಿಷೇಧಿಗಳಿಗೆ ಅತ್ಯಂತ ವಿನಾಶಕಾರಿ ಶಿಕ್ಷೆಯಿದೆ.

اللّٰهِ الَّذِيْ لَهٗ مَا فِي السَّمٰوٰتِ وَمَا فِي الْاَرْضِ ۗ وَوَيْلٌ لِّلْكٰفِرِيْنَ مِنْ عَذَابٍ شَدِيْدٍ ②

3. ಅವರು ಐಹಿಕ ಜೀವನಕ್ಕೆ ಪಾರತ್ರಿಕ ಜೀವನಕ್ಕಿಂತ ಹೆಚ್ಚು ಮಹತ್ವ ನೀಡುತ್ತಾರೆ. ಅವರು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ ಮತ್ತು ಈ ಮಾರ್ಗವು (ಅವರ ಇಚ್ಛೆಗಳ ಪ್ರಕಾರ) ವಕ್ರವಾಗಬೇಕೆಂದು ಬಯಸುತ್ತಾರೆ. ಇವರು ಪಥ ಭ್ರಷ್ಟತೆಯಲ್ಲಿ ಬಹುದೂರ ಸಾಗಿದ್ದಾರೆ.

الَّذِيْنَ يَسْتَحِبُّوْنَ الْحَيٰوةَ الدُّنْيَا عَلَى الْاٰخِرَةِ وَيَصُدُّوْنَ عَنْ سَبِيْلِ اللّٰهِ وَيَبْغُوْنَهَا عِوَجًا ۗ اُولٰٓئِكَ فِيْ ضَلٰلٍ بَعِيْدٍ ③

4. ನಾವು ನಮ್ಮ ಸಂದೇಶವನ್ನು ಸಾರಲಿಕ್ಕಾಗಿ ರವಾನಿಸಿದ ಪ್ರವಾದಿಗಳ ಪೈಕಿ ಪ್ರತಿಯೊಬ್ಬನೂ ತನ್ನ ಜನಾಂಗದವರಿಗೆ ಚೆನ್ನಾಗಿ ವಿವರಿಸಿ ಕೊಡಲಿಕ್ಕಾಗಿ ಅವರ ಭಾಷೆಯಲ್ಲೇ ಸಂದೇಶ ಕೊಟ್ಟಿರುತ್ತಾನೆ. ಮುಂದೆ ಅಲ್ಲಾಹನು ತನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದವರಿಗೆ ಸನ್ಮಾರ್ಗದರ್ಶನ ನೀಡುತ್ತಾನೆ. ಅವನು ಮಹಾ ಪ್ರತಾಪಶಾಲಿಯೂ ಧೀಮಂತನೂ ಆಗಿರುತ್ತಾನೆ.

وَمَآ اَرْسَلْنَا مِنْ رَّسُوْلٍ اِلَّا بِلِسَانِ قَوْمِهٖ لِيُبَيِّنَ لَهُمْ ۗ فَيُضِلُّ اللّٰهُ مَنْ يَّشَآءُ وَيَهْدِيْ مَنْ يَّشَآءُ ۗ وَهُوَ الْعَزِيْزُ الْحَكِيْمُ ④

1. ಹಮೀದ್(ಸ್ತುತ್ಯರ್ಹ) ಎಂಬ ಪದವು 'ಮಹ್ಮೂದ್' ಎಂಬ ಪದದ ಅರ್ಥವನ್ನೇ ಹೊಂದಿದೆ. ಆದರೆ ಅವೆರಡರ ನಡುವೆ ಸೂಕ್ಷ್ಮವಾದ ಒಂದು ವ್ಯತ್ಯಾಸವಿದೆ. ಒಬ್ಬ ವ್ಯಕ್ತಿಯನ್ನು ಪ್ರಶಂಸಿಸಲಾಗಿದ್ದರೆ ಅಥವಾ ಪ್ರಶಂಸಿಸಲ್ಪಡುತ್ತಿದ್ದರೆ ಅವನನ್ನು 'ಮಹ್ಮೂದ್' ಎನ್ನಲಾಗುತ್ತದೆ. ಆದರೆ 'ಹಮೀದ್' ಎಂದರೆ ಸ್ವಯಮೇವ ಸ್ತುತ್ಯರ್ಹನೆಂದು ಅರ್ಥ. ಅವನನ್ನು ಯಾರಾದರೂ ಸ್ತುತಿಸುತ್ತಿದ್ದರೂ ಇಲ್ಲದಿದ್ದರೂ ಸರಿಯೇ.

5. ನಾವು ಇದಕ್ಕಿಂತ ಮುಂಚೆ ಮೂಸಾರನ್ನು ನಮ್ಮ ನಿದರ್ಶನ ಗಳೊಂದಿಗೆ ರವಾನಿಸಿದ್ದೆವು. ನಿಮ್ಮ ಜನಾಂಗವನ್ನು ಅಂಧಕಾರ ಗಳಿಂದ ಹೊರತೆಗೆದು ಪ್ರಕಾಶಕ್ಕೆ ತರಬೇಕೆಂದೂ ಅವರಿಗೆ 'ಅಯ್ಯಾಮಿಲ್ಲಾಹ್'[2] (ದಿವ್ಯದಿನ)ಗಳ ಬೋಧಪ್ರದ ಘಟನೆಗಳನ್ನು ಹೇಳಿ ತಿಳಿಸಿ ಉಪದೇಶಿಸ ಬೇಕೆಂದೂ ನಾವು ಅವರಿಗೂ ಅಪ್ಪಣೆ ಕೊಟ್ಟಿದ್ದೆವು. ಈ ಘಟನೆಗಳಲ್ಲಿ ನಿಶ್ಚಯವಾಗಿಯೂ ಪ್ರತಿಯೊಬ್ಬ ಸಹನಶೀಲನಿಗೂ ಕೃತಜ್ಞನಿಗೂ[3] ದೊಡ್ಡ ನಿದರ್ಶನಗಳಿವೆ.

وَلَقَدْ أَرْسَلْنَا مُوسَىٰ بِآيَاتِنَا أَنْ أَخْرِجْ
قَوْمَكَ مِنَ الظُّلُمَاتِ إِلَى النُّورِ
وَذَكِّرْهُمْ بِأَيَّامِ اللَّهِ ۚ إِنَّ فِي ذَٰلِكَ لَآيَاتٍ
لِكُلِّ صَبَّارٍ شَكُورٍ ⑤

6. ಮೂಸಾ ತನ್ನ ಜನಾಂಗದೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ, "ಅಲ್ಲಾಹನು ನಿಮ್ಮ ಮೇಲೆ ಮಾಡಿದ ಉಪಕಾರವನ್ನು ಸ್ಮರಿಸಿರಿ. ಅವನು ನಿಮ್ಮನ್ನು ಫಿರ್‌ಔನನ ಜನಾಂಗದಿಂದ ಬಿಡಿಸಿ ದನು. ಅವರು ನಿಮಗೆ ಅತ್ಯಧಿಕ ಹಿಂಸೆ ಕೊಡುತ್ತಿದ್ದರು. ನಿಮ್ಮ ಗಂಡು ಮಕ್ಕಳನ್ನು ವಧಿಸಿ ಬಿಡುತ್ತಿದ್ದರು ಮತ್ತು ನಿಮ್ಮ ಹೆಣ್ಣು ಮಕ್ಕಳನ್ನು ಜೀವಂತ ಬಿಟ್ಟು ಬಿಡುತ್ತಿದ್ದರು. ಇದರಲ್ಲಿ ನಿಮ್ಮ ಪ್ರಭುವಿನ ಕಡೆಯಿಂದ ನಿಮ್ಮ ಪಾಲಿಗೆ ಮಹಾ ಪರೀಕ್ಷೆಯಿತ್ತು.

وَإِذْ قَالَ مُوسَىٰ لِقَوْمِهِ اذْكُرُوا نِعْمَةَ
اللَّهِ عَلَيْكُمْ إِذْ أَنْجَاكُمْ مِنْ آلِ فِرْعَوْنَ
يَسُومُونَكُمْ سُوءَ الْعَذَابِ وَيُذَبِّحُونَ
أَبْنَاءَكُمْ وَيَسْتَحْيُونَ نِسَاءَكُمْ ۚ وَفِي
ذَٰلِكُمْ بَلَاءٌ مِنْ رَبِّكُمْ عَظِيمٌ ⑥

7. ನೀವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದೂ ನೀವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದೂ ನಿಮ್ಮ ಪ್ರಭು ಎಚ್ಚರಿಕೆ ಕೊಟ್ಟಿದ್ದುದನ್ನೂ ಸ್ಮರಿಸಿರಿ."

وَإِذْ تَأَذَّنَ رَبُّكُمْ لَئِنْ شَكَرْتُمْ لَأَزِيدَنَّكُمْ ۖ
وَلَئِنْ كَفَرْتُمْ إِنَّ عَذَابِي لَشَدِيدٌ ⑦

8. ಮತ್ತು ಮೂಸಾ ಹೇಳಿದರು: "ನೀವೂ ಭೂಮಿಯ ಮೇಲೆ ವಾಸಿಸುವವರೆಲ್ಲರೂ ಸತ್ಯನಿಷೇಧಿಗಳಾಗಿ ಬಿಟ್ಟರೂ ಅಲ್ಲಾಹನು ನಿರಪೇಕ್ಷನೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ."

وَقَالَ مُوسَىٰ إِنْ تَكْفُرُوا أَنْتُمْ وَمَنْ فِي
الْأَرْضِ جَمِيعًا فَإِنَّ اللَّهَ لَغَنِيٌّ حَمِيدٌ ⑧

9. ನಿಮಗಿಂತ[4] ಮುಂಚೆ ಗತಿಸಿ ಹೋದ ನೂಹರ ಜನಾಂಗ, ಆದ್, ಸಮೂದ್ ಮತ್ತು ಅಲ್ಲಾಹನ ಹೊರತು ಇನ್ನಾರ ಲೆಕ್ಕಕ್ಕೂ

أَلَمْ يَأْتِكُمْ نَبَأُ الَّذِينَ مِنْ
قَبْلِكُمْ قَوْمِ نُوحٍ وَعَادٍ وَثَمُودَ ۛ

2. 'ಅಯ್ಯಾಮ್' ಎಂಬ ಪದವನ್ನು ಅರಬಿಯಲ್ಲಿ ಸಾಮಾನ್ಯವಾಗಿ ಸ್ಮರಣಾರ್ಹ ಐತಿಹಾಸಿಕ ಘಟನೆಗಳಿಗೆ ಉಪಯೋಗಿಸಲಾಗುತ್ತದೆ. 'ಅಯ್ಯಾಮುಲ್ಲಾಹ್' ಎಂದರೆ ಅಲ್ಲಾಹನು ಗತಕಾಲದ ಜನಾಂಗಗಳು ಮತ್ತು ಮಹಾ ವ್ಯಕ್ತಿಗಳಿಗೆ ಅವರವರ ಕರ್ಮಕ್ಕನುಗುಣವಾಗಿ ಪ್ರತಿಫಲ ಅಥವಾ ಶಿಕ್ಷೆ ನೀಡಿದಂತಹ ಮಾನವೇತಿಹಾಸದ ಪ್ರಮುಖ ಅಧ್ಯಾಯಗಳಾಗಿವೆ.
3. ಅರ್ಥಾತ್- ದೃಷ್ಟಾಂತಗಳೇನೋ ಇವೆ. ಆದರೆ ಅಲ್ಲಾಹನ ಪರೀಕ್ಷೆಗಳ ವೇಳೆ ತಾಳ್ಮೆ ಮತ್ತು ಧೈರ್ಯದಿಂದಿರುವವರಿಗೆ ಹಾಗೂ ಅಲ್ಲಾಹನ ಅನುಗ್ರಹಗಳನ್ನು ಸರಿಯಾಗಿ ಅನುಭವಿಸಿ ಆ ಬಗ್ಗೆ ದೇವನನ್ನು ಸ್ತುತಿಸುವವರಿಗೆ ಮಾತ್ರ ಅದರಿಂದ ಪ್ರಯೋಜನ ಪಡೆಯುವುದು ಸಾಧ್ಯ.
4. ಹ. ಮೂಸಾರ(ಅ) ಭಾಷಣ ಪೂರ್ವೋಕ್ತ ವಿಷಯದೊಂದಿಗೆ ಸಮಾಪ್ತಿಗೊಂಡಿತು. ಇಲ್ಲಿಂದ ಮಕ್ಕಾದ ಸತ್ಯನಿಷೇಧಿಗಳೊಂದಿಗಿನ ನೇರ ಅಭಿಸಂಬೋಧನೆ ಆರಂಭಗೊಳ್ಳುತ್ತದೆ.

وَالَّذِينَ مِن بَعْدِهِمْ ۛ لَا يَعْلَمُهُمْ إِلَّا اللَّهُ ۚ جَاءَتْهُمْ رُسُلُهُم بِالْبَيِّنَاتِ فَرَدُّوا أَيْدِيَهُمْ فِي أَفْوَاهِهِمْ وَقَالُوا إِنَّا كَفَرْنَا بِمَا أُرْسِلْتُم بِهِ وَإِنَّا لَفِي شَكٍّ مِّمَّا تَدْعُونَنَا إِلَيْهِ مُرِيبٍ ﴿٩﴾

ಸಿಗದ ಅವರ ನಂತರದ ಹಲವಾರು ಜನಾಂಗಗಳ ಸಮಾಚಾರಗಳು ನಿಮಗೆ ತಲುಪಲಿಲ್ಲವೇ? ಅವರ ಸಂದೇಶವಾಹಕರು ಅವರ ಬಳಿಗೆ ಸುಸ್ಪಷ್ಟ ವಿಷಯಗಳನ್ನೂ ಸುವ್ಯಕ್ತ ನಿದರ್ಶನಗಳನ್ನೂ ತಂದಾಗ ಅವರು ತಮ್ಮ ಕೈಯನ್ನು ಬಾಯೊಳಗೆ ಒತ್ತಿಕೊಂಡು[5] (ಹೀಗೆ) ಹೇಳಿದರು- "ಯಾವ ಸಂದೇಶ ಸಹಿತ ನೀವು ಕಳುಹಿಸಲ್ಪಟ್ಟಿರುವಿರೋ ಅದನ್ನು ನಾವು ನಿರಾಕರಿಸುತ್ತೇವೆ ಮತ್ತು ನೀವು ನಮಗೆ ಯಾವುದರ ಕರೆ ನೀಡುತ್ತೀರೋ ಅದರ ಬಗ್ಗೆ ನಾವು ತೀವ್ರ ಚಿಂತಾಪೂರ್ಣ ಸಂಶಯಕ್ಕೊಳಗಾಗಿದ್ದೇವೆ."

قَالَتْ رُسُلُهُمْ أَفِي اللَّهِ شَكٌّ فَاطِرِ السَّمَاوَاتِ وَالْأَرْضِ ۖ يَدْعُوكُمْ لِيَغْفِرَ لَكُم مِّن ذُنُوبِكُمْ وَيُؤَخِّرَكُمْ إِلَىٰ أَجَلٍ مُّسَمًّى ۚ قَالُوا إِنْ أَنتُمْ إِلَّا بَشَرٌ مِّثْلُنَا تُرِيدُونَ أَن تَصُدُّونَا عَمَّا كَانَ يَعْبُدُ آبَاؤُنَا فَأْتُونَا بِسُلْطَانٍ مُّبِينٍ ﴿١٠﴾

10. ಅವರ ರಸೂಲರು ಹೇಳಿದರು- "ಆಕಾಶಗಳ ಮತ್ತು ಭೂಮಿಯ ಸೃಷ್ಟಿಕರ್ತನಾದ ಅಲ್ಲಾಹನ ಬಗ್ಗೆ ನಿಮಗೆ ಸಂಶಯವಿದೆಯೇ? ಅವನು ನಿಮ್ಮ ಅಪರಾಧಗಳನ್ನು ಕ್ಷಮಿಸಲಿಕ್ಕಾಗಿ ಮತ್ತು ನಿಮಗೆ ಒಂದು ನಿಶ್ಚಿತ ಅವಧಿಯ ತನಕ ಸಮಯಾವಕಾಶ ನೀಡಲಿಕ್ಕಾಗಿ ನಿಮ್ಮನ್ನು ಕರೆಯುತ್ತಿದ್ದಾನೆ." ಅವರು (ಹೀಗೆ) ಉತ್ತರಕೊಟ್ಟರು, "ನೀವು ನಮ್ಮ ಹಾಗಿರುವ ಮನುಷ್ಯರಲ್ಲದೆ ಇನ್ನೇನೂ ಅಲ್ಲ. ನಮ್ಮ ಪೂರ್ವಿಕರಿಂದಲೇ ಆರಾಧಿಸಲ್ಪಡುತ್ತಾ ಬಂದಿರುವವುಗಳ ದಾಸ್ಯ-ಆರಾಧನೆಯಿಂದ ನೀವು ನಮ್ಮನ್ನು ತಡೆಯಲಿಚ್ಛಿಸುತ್ತೀರಿ. ಹಾಗಿದ್ದರೆ ಸುವ್ಯಕ್ತ ಆಧಾರ ಪ್ರಮಾಣ ತನ್ನಿರಿ."

قَالَتْ لَهُمْ رُسُلُهُمْ إِن نَّحْنُ إِلَّا بَشَرٌ مِّثْلُكُمْ وَلَٰكِنَّ اللَّهَ يَمُنُّ عَلَىٰ مَن يَشَاءُ مِنْ عِبَادِهِ ۖ وَمَا كَانَ لَنَا أَن نَّأْتِيَكُم بِسُلْطَانٍ إِلَّا بِإِذْنِ اللَّهِ ۚ وَعَلَى اللَّهِ فَلْيَتَوَكَّلِ الْمُؤْمِنُونَ ﴿١١﴾

11. ಅವರ ರಸೂಲರು ಅವರೊಡನೆ ಹೇಳಿದರು; "ನಿಜಕ್ಕೂ ನಾವು ನಿಮ್ಮಂತಹ ಮನುಷ್ಯರೇ ವಿನಾ ಇನ್ನೇನೂ ಅಲ್ಲ. ಆದರೆ ಅಲ್ಲಾಹನು ತನ್ನ ದಾಸರ ಪೈಕಿ ತನಗಿಷ್ಟ ಬಂದವರನ್ನು ಅನುಗ್ರಹಿಸುತ್ತಾನೆ ಮತ್ತು ನಿಮಗೇನಾದರೂ ಆಧಾರ ಪ್ರಮಾಣ ತರುವುದು ನಮ್ಮ ಅಧಿಕಾರದಲ್ಲಿಲ್ಲ. ಆಧಾರ ಪ್ರಮಾಣ ಅಲ್ಲಾಹನ ಅನುಜ್ಞೆಯಿಂದಲೇ ಬರಬಲ್ಲುದು ಮತ್ತು ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆ ಇಡಬೇಕು.

وَمَا لَنَا أَلَّا نَتَوَكَّلَ عَلَى اللَّهِ وَقَدْ هَدَانَا سُبُلَنَا ۚ وَلَنَصْبِرَنَّ عَلَىٰ مَا آذَيْتُمُونَا ۚ وَعَلَى اللَّهِ فَلْيَتَوَكَّلِ الْمُتَوَكِّلُونَ ﴿١٢﴾

12. ನಮ್ಮ ಜೀವನ ಮಾರ್ಗಗಳಲ್ಲಿ ಅಲ್ಲಾಹನು ನಮಗೆ ಮಾರ್ಗದರ್ಶನ ಮಾಡಿರುವಾಗ ನಾವು ಅವನ ಮೇಲೆ ಏಕೆ ಭರವಸೆ ಇಡಬಾರದು. ನೀವು ನಮಗೆ ಕೊಡುವಂತಹ ಹಿಂಸೆಗಳನ್ನು ನಾವು ಸಹಿಸಿಕೊಳ್ಳುವೆವು. ಭರವಸೆಯಿಡುವವರ ಭರವಸೆಯು ಅಲ್ಲಾಹನ ಮೇಲೆಯೇ ಇರಬೇಕು.

5. ಇದು 'ಬೆರಳು ಕಚ್ಚಿಕೊಳ್ಳುವುದು' ಅಥವಾ 'ಕಿವಿಗೆ ಕೈ ಇಟ್ಟು ಕೊಳ್ಳುವುದು' ಮುಂತಾಗಿ ಹೇಳಲಾಗುವಂತಹ ಅರ್ಥವನ್ನೇ ಹೊಂದಿದೆ.

13. ಕೊನೆಗೆ ಸತ್ಯನಿಷೇಧಿಗಳು ತಮ್ಮ ಸಂದೇಶವಾಹಕರೊಡನೆ, "ನೀವು ನಮ್ಮ ಜಾತಿಗೆ ಮರಳಿ ಬರಬೇಕು[6] ಇಲ್ಲವೇ ನಾವು ನಿಮ್ಮನ್ನು ನಮ್ಮ ನಾಡಿನಿಂದ ಹೊರಕ್ಕಟ್ಟಿ ಬಿಡುವೆವು" ಎಂದರು. ಆಗ ಅವರ ಪ್ರಭು ಅವರ ಮೇಲೆ 'ದಿವ್ಯವಾಣಿ' ಕಳುಹಿಸಿದನು - "ನಾವು ಈ ಅಕ್ರಮಿಗಳನ್ನು ನಾಶಗೊಳಿಸುವೆವು-

وَقَالَ الَّذِينَ كَفَرُوا لِرُسُلِهِمْ لَنُخْرِجَنَّكُم مِّنْ أَرْضِنَا أَوْ لَتَعُودُنَّ فِي مِلَّتِنَا ۖ فَأَوْحَىٰ إِلَيْهِمْ رَبُّهُمْ لَنُهْلِكَنَّ الظَّالِمِينَ ﴿١٣﴾

14. ಮತ್ತು ಆ ಬಳಿಕ ನಿಮ್ಮನ್ನು ಭೂಮಿಯಲ್ಲಿ ನೆಲೆಗೊಳಿಸುವೆವು. ಇದು ನನ್ನ ಸನ್ನಿಧಿಯಲ್ಲಿ ನಡೆಯಲಿರುವ ವಿಚಾರಣೆಯ ಭಯ ವಿರಿಸಿಕೊಂಡವನಿಗೆ ಹಾಗೂ ನನ್ನ ಎಚ್ಚರಿಕೆಗೆ ಹೆದರುವವನಿಗೆ ಇರುವ ಬಹುಮಾನ."

وَلَنُسْكِنَنَّكُمُ الْأَرْضَ مِن بَعْدِهِمْ ۚ ذَٰلِكَ لِمَنْ خَافَ مَقَامِي وَخَافَ وَعِيدِ ﴿١٤﴾

15. ಅವರು ತೀರ್ಮಾನ ಬಯಸಿದ್ದರು. (ಅವರ ತೀರ್ಮಾನ ಹೀಗಾಯಿತು). ಪ್ರತಿಯೊಬ್ಬ ಮದೋನ್ಮತ್ತ ಸತ್ಯನಿಷೇಧಿಯು ಶಿಕ್ಷಿಸಲ್ಪಟ್ಟನು.

وَاسْتَفْتَحُوا وَخَابَ كُلُّ جَبَّارٍ عَنِيدٍ ﴿١٥﴾

16. ಇದರ ನಂತರ ಮುಂದೆ ಅವನಿಗೆ 'ನರಕ' ಇದೆ. ಅಲ್ಲಿ ಅವನಿಗೆ ಕೀವು ಮಿಶ್ರಿತ ರಕ್ತದಂತಹ ನೀರನ್ನು ಕುಡಿಯಲು ಕೊಡ ಲಾಗುವುದು.

مِّن وَرَائِهِ جَهَنَّمُ وَيُسْقَىٰ مِن مَّاءٍ صَدِيدٍ ﴿١٦﴾

17. ಅದನ್ನು ಅವನು ಬಹಳ ಪ್ರಯಾಸ ಪೂರ್ವಕ ಗಂಟಲಿನಿಂದ ಇಳಿಸಲು ಪ್ರಯತ್ನಿಸುವನು ಮತ್ತು ಅತ್ಯಂತ ಕಷ್ಟದಿಂದಲೇ ಇಳಿಸಬಲ್ಲನು. ಮೃತ್ಯು ಎಲ್ಲ ಕಡೆಗಳಿಂದಲೂ ಅವನನ್ನು ಆವರಿಸಿರುವುದು. ಆದರೆ ಅವನು ಸಾಯಲಾರ. ಮುಂದೆ ಒಂದು ಘೋರ ಯಾತನೆಯು ಅವನಿಗೆ ಪ್ರಾಣಕಂಟಕವಾಗಿರುವುದು.

يَتَجَرَّعُهُ وَلَا يَكَادُ يُسِيغُهُ وَيَأْتِيهِ الْمَوْتُ مِن كُلِّ مَكَانٍ وَمَا هُوَ بِمَيِّتٍ ۖ وَمِن وَرَائِهِ عَذَابٌ غَلِيظٌ ﴿١٧﴾

18. ತಮ್ಮ ಪ್ರಭುವನ್ನು ನಿಷೇಧಿಸಿದವರ ಕರ್ಮಗಳ ಉದಾಹರಣೆಯು ಒಂದು ಬಿರುಗಾಳಿಯ ದಿನದ ಚಂಡಮಾರುತವು ಹಾರಿಸಿದ ಬೂದಿಯಂತಿದೆ. ಅವರು ತಮ್ಮ ಗಳಿಕೆಗೆ ಯಾವ ಪ್ರತಿಫಲವನ್ನೂ ಪಡೆಯಲಾರರು. ಇದೇ ಪ್ರಥಮ ದರ್ಜೆಯ ಪಥಭ್ರಷ್ಟತೆ.

مَّثَلُ الَّذِينَ كَفَرُوا بِرَبِّهِمْ ۖ أَعْمَالُهُمْ كَرَمَادٍ اشْتَدَّتْ بِهِ الرِّيحُ فِي يَوْمٍ عَاصِفٍ ۖ لَّا يَقْدِرُونَ مِمَّا كَسَبُوا عَلَىٰ شَيْءٍ ۚ ذَٰلِكَ هُوَ الضَّلَالُ الْبَعِيدُ ﴿١٨﴾

6. ಪ್ರವಾದಿಗಳು ತಮ್ಮ ಪ್ರವಾದಿತ್ವಕ್ಕೆ ಮೊದಲು ಪಥಭ್ರಷ್ಟ ಸಮುದಾಯದ ಅನುಯಾಯಿಯಾಗಿದ್ದರು ಎಂದು ಇದರ ಅರ್ಥವಲ್ಲ. ಪ್ರವಾದಿತ್ವಕ್ಕೆ ಮೊದಲು ಅವರು ಒಂದು ರೀತಿಯ ಮೌನ ಜೀವನ ನಡೆಸುತ್ತಿದ್ದರು. ಯಾವುದೇ ಧರ್ಮದ ಪ್ರಚಾರವನ್ನು ಅವರು ನಡೆಸುತ್ತಿರಲಿಲ್ಲ. ಹಾಗೆಯೇ ಪ್ರಚಲಿತವಿದ್ದ ಯಾವುದೇ ಧರ್ಮವನ್ನು ಅವರು ನಿರಾಕರಿಸುತ್ತಲೂ ಇರಲಿಲ್ಲ. ಆದ್ದರಿಂದ ಅವರ ಜನಾಂಗ ಅವರನ್ನು ನಮ್ಮ ಪೈಕಿಯವನೇ ಆದ ಒಬ್ಬನೆಂದು ಭಾವಿಸುತ್ತಿದ್ದರು. ಪ್ರವಾದಿತ್ವದ ಕೆಲಸವನ್ನು ಆರಂಭಿಸುತ್ತಲೇ, ಪೂರ್ವಜರ ಸಮುದಾಯದಿಂದ ಹೊರಹೋದರೆಂಬ ಆರೋಪವನ್ನು ಅವರ ಮೇಲೆ ಹೊರಿಸಲಾಗುತ್ತಿತ್ತು. ವಾಸ್ತವದಲ್ಲಿ ಪ್ರವಾದಿತ್ವಕ್ಕೆ ಮೊದಲೂ ಅವರೆಂದೂ ಬಹುದೇವಾರಾಧಕರ ಜನಾಂಗದಲ್ಲಿ ಸೇರಿರಲಿಲ್ಲ. ಆದ್ದರಿಂದ ಅವರು ಅದರಿಂದ ಹೊರನಡೆದಿರುವ ಆರೋಪ ಹೊರಿಸುವುದು ಅರ್ಥಹೀನವಾಗಿದೆ ಎಂಬುದು ಇದರ ಅರ್ಥ.

19. ಅಲ್ಲಾಹನು ಭೂಮಿ-ಆಕಾಶಗಳ ಸೃಷ್ಟಿಯನ್ನು ಸತ್ಯಪೂರ್ಣವಾಗಿ ನೆಲೆ ನಿಲ್ಲಿಸಿರುವುದನ್ನು ನೀವು ಕಾಣುವುದಿಲ್ಲವೇ? ಅವನು ಇಚ್ಛಿಸಿದರೆ ನಿಮ್ಮನ್ನು ಅಳಿಸಿ ಒಂದು ಹೊಸ ಸೃಷ್ಟಿಯನ್ನು ನಿಮ್ಮ ಸ್ಥಾನದಲ್ಲಿ ತರಬಲ್ಲನು.

أَلَمْ تَرَ أَنَّ اللَّهَ خَلَقَ السَّمَٰوَٰتِ وَالْأَرْضَ بِالْحَقِّ ۚ إِن يَشَأْ يُذْهِبْكُمْ وَيَأْتِ بِخَلْقٍ جَدِيدٍ ﴿١٩﴾

20. ಹೀಗೆ ಮಾಡಲು ಅವನಿಗೇನೂ ಪ್ರಯಾಸವಿಲ್ಲ.

وَمَا ذَٰلِكَ عَلَى اللَّهِ بِعَزِيزٍ ﴿٢٠﴾

21. ಇವರೆಲ್ಲರೂ ಒಟ್ಟಾಗಿ ಅಲ್ಲಾಹನ ಮುಂದೆ ಪ್ರತ್ಯಕ್ಷರಾಗುವಾಗ ಈ ಲೋಕದಲ್ಲಿ ಅಶಕ್ತರಾಗಿದ್ದವರು ಅಹಂಭಾವಿಗಳಾಗಿದ್ದವರೊಡನೆ, "ಭೂಲೋಕದಲ್ಲಿ ನಾವು ನಿಮಗೆ ಅಧೀನರಾಗಿದ್ದೆವು. ಈಗ ನೀವು ನಮ್ಮನ್ನು ಅಲ್ಲಾಹನ ಶಿಕ್ಷೆಯಿಂದ ರಕ್ಷಿಸಲಿಕ್ಕಾಗಿಯೂ ಏನಾದರೂ ಮಾಡಬಲ್ಲಿರಾ?" ಎಂದು ಕೇಳುವರು. (ಅದಕ್ಕೆ) ಅವರು (ಹೀಗೆ) ಉತ್ತರ ಕೊಡುವರು: "ಅಲ್ಲಾಹ್ ನಮಗೆ ಮೋಕ್ಷದ ದಾರಿಯನ್ನು ತೋರಿಸಿ ಕೊಡುತ್ತಿದ್ದರೆ ನಾವು ನಿಮಗೂ ಅದನ್ನು ಖಂಡಿತ ತೋರಿಸಿ ಕೊಡುತ್ತಿದ್ದೆವು. ಈಗ ನಾವು ಪ್ರಲಾಪಿಸಿದರೂ ಸಹಿಸಿಕೊಂಡರೂ (ಪರಿಣಾಮ) ಒಂದೇ. ಹೇಗಿದ್ದರೂ ನಮಗೆ ರಕ್ಷಣೆಯ ಯಾವ ದಾರಿಯೂ ಇಲ್ಲ."

وَبَرَزُوا لِلَّهِ جَمِيعًا فَقَالَ الضُّعَفَٰٓؤُا لِلَّذِينَ اسْتَكْبَرُوٓا إِنَّا كُنَّا لَكُمْ تَبَعًا فَهَلْ أَنتُم مُّغْنُونَ عَنَّا مِنْ عَذَابِ اللَّهِ مِن شَيْءٍ ۚ قَالُوا لَوْ هَدَىٰنَا اللَّهُ لَهَدَيْنَٰكُمْ ۖ سَوَآءٌ عَلَيْنَآ أَجَزِعْنَآ أَمْ صَبَرْنَا مَا لَنَا مِن مَّحِيصٍ ﴿٢١﴾

22. ತೀರ್ಮಾನ ಆಗಿ ಬಿಟ್ಟಾಗ ಶೈತಾನ್(ಹೀಗೆ) ಹೇಳುವನು: "ವಾಸ್ತವದಲ್ಲಿ ಅಲ್ಲಾಹನು ನಿಮಗೆ ನೀಡಿದ್ದ ವಾಗ್ದಾನಗಳೆಲ್ಲ ಸತ್ಯ ವಾಗಿದ್ದುವು ಮತ್ತು ನಾನು ನಿಮಗೆ ಮಾಡಿದ್ದ ವಾಗ್ದಾನಗಳ ಪೈಕಿ ಒಂದನ್ನೂ ನೆರವೇರಿಸಲಿಲ್ಲ. ನಿಮ್ಮ ಮೇಲೆ ನನ್ನ ಬಲ ಪ್ರಯೋಗವೇನೂ ಇರಲಿಲ್ಲ. ನಾನು ನಿಮ್ಮನ್ನು ನನ್ನ ಮಾರ್ಗದ ಕಡೆಗೆ ಕರೆ ನೀಡಿದ್ದುದೇ ವಿನಾ ಇನ್ನೇನೂ ಮಾಡಲಿಲ್ಲ. ನೀವು ನನ್ನ ಕರೆಗೆ ಓಗೊಟ್ಟಿರಿ. ಈಗ ನನ್ನನ್ನು ಹಳಿಯಬೇಡಿರಿ; ನಿಮ್ಮನ್ನೇ ನೀವು ಹಳಿದುಕೊಳ್ಳಿರಿ. ಇಲ್ಲಿ ನಿಮ್ಮ ದುಃಖವನ್ನು ನಾನು ನಿವಾರಿಸಲಾರೆ ಮತ್ತು ನನ್ನ ದುಃಖವನ್ನು ನೀವೂ ನಿವಾರಿಸಲಾರಿರಿ. ಈ ಮೊದಲು ನೀವು ನನ್ನನ್ನು ದೇವತ್ವದಲ್ಲಿ ಭಾಗೀದಾರನನ್ನಾಗಿ ಮಾಡಿದ್ದರೆ[7] ನಾನು ಅದರಿಂದ ಹೊಣೆ ವಿಮುಕ್ತನಾಗಿದ್ದೇನೆ. ಇಂತಹ ಅಕ್ರಮಿಗಳಿಗೆ ವೇದನಾಯುಕ್ತ ಶಿಕ್ಷೆಯಿರುವುದು ಖಂಡಿತ."

وَقَالَ الشَّيْطَٰنُ لَمَّا قُضِيَ الْأَمْرُ إِنَّ اللَّهَ وَعَدَكُمْ وَعْدَ الْحَقِّ وَوَعَدتُّكُمْ فَأَخْلَفْتُكُمْ ۖ وَمَا كَانَ لِيَ عَلَيْكُم مِّن سُلْطَٰنٍ إِلَّآ أَن دَعَوْتُكُمْ فَاسْتَجَبْتُمْ لِي ۖ فَلَا تَلُومُونِي وَلُومُوٓا أَنفُسَكُم ۖ مَّآ أَنَا بِمُصْرِخِكُمْ وَمَآ أَنتُم بِمُصْرِخِيَّ ۖ إِنِّي كَفَرْتُ بِمَآ أَشْرَكْتُمُونِ مِن قَبْلُ ۗ إِنَّ الظَّٰلِمِينَ لَهُمْ عَذَابٌ أَلِيمٌ ﴿٢٢﴾

7. ವಿಶ್ವಾಸಾತ್ಮಕವಾಗಿ ಶೈತಾನನನ್ನು ಯಾರೂ ದೇವತ್ವದಲ್ಲಿ ಸಹಭಾಗಿಯಾಗಿ ಮಾಡುವುದಿಲ್ಲ ಮತ್ತು ಅದರ ಉಪಾಸನೆ ಮಾಡುವುದಿಲ್ಲ ಎಂಬುದು ಸರ್ವವಿದಿತ. ಎಲ್ಲರೂ ಅದನ್ನು ಶಪಿಸುತ್ತಾರೆ. ಆದರೆ ಅದರ ಅನುಸರಣೆ, ದಾಸ್ಯ ಮತ್ತು ಅಂಧ ಅಥವಾ ಉದ್ದೇಶ ಪೂರ್ವಕವಾದ ಅನುಕರಣೆಯನ್ನು ಮಾಡಲಾಗುತ್ತದೆ. ಅದನ್ನೇ ಇಲ್ಲಿ 'ಬಹುದೇವಾರಾಧನೆ' ಎಂದು ಕರೆಯಲಾಗಿದೆ.

23. ಇದಕ್ಕೆ ವ್ಯತಿರಿಕ್ತವಾಗಿ ಸತ್ಯವಿಶ್ವಾಸ ಸ್ವೀಕರಿಸಿದವರೂ ಸತ್ಕರ್ಮವೆಸಗಿದವರೂ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸಲ್ಪಡುವರು. ಅಲ್ಲಿ ಅವರು ತಮ್ಮ ಪ್ರಭುವಿನ ಅನುಜ್ಞೆಯಿಂದ ಸದಾ ವಾಸಿಸುತ್ತಿರುವರು. ಅಲ್ಲಿ ಅವರನ್ನು ಶಾಂತಿಯ ಶುಭಾಶಯಗಳೊಂದಿಗೆ ಸ್ವಾಗತಿಸಲಾಗುವುದು.

وَأُدْخِلَ الَّذِينَ آمَنُوا وَعَمِلُوا الصَّالِحَاتِ جَنَّاتٍ تَجْرِي مِنْ تَحْتِهَا الْأَنْهَارُ خَالِدِينَ فِيهَا بِإِذْنِ رَبِّهِمْ ۖ تَحِيَّتُهُمْ فِيهَا سَلَامٌ ﴿٢٣﴾

24. ಅಲ್ಲಾಹನು 'ಪವಿತ್ರ ವಚನ'ವನ್ನು ಯಾವುದಕ್ಕೆ ಹೋಲಿಸಿರುತ್ತಾನೆಂದು ನೀವು ನೋಡುತ್ತಿಲ್ಲವೇ? ಅದರ ಉಪಮೆ ಹೀಗಿದೆ: ಒಂದು ಉತ್ತಮ ಜಾತಿಯ ಮರ. ಅದರ ಬೇರುಗಳು ನೆಲದೊಳಗೆ ಆಳಕ್ಕೆ ಸ್ಥಿರವಾಗಿ ನಾಟಿವೆ. ಗೆಲ್ಲುಗಳು ಆಕಾಶಕ್ಕೆ ಮುಟ್ಟಿವೆ.

أَلَمْ تَرَ كَيْفَ ضَرَبَ اللَّهُ مَثَلًا كَلِمَةً طَيِّبَةً كَشَجَرَةٍ طَيِّبَةٍ أَصْلُهَا ثَابِتٌ وَفَرْعُهَا فِي السَّمَاءِ ﴿٢٤﴾

25. ಅದು ಸದಾಕಾಲವೂ ತನ್ನ ಪ್ರಭುವಿನ ಅನುಜ್ಞೆಯಿಂದ ತನ್ನ ಫಲಗಳನ್ನು ಕೊಡುತ್ತಿದೆ. ಜನರು ಇವುಗಳಿಂದ ಪಾಠ ಕಲಿಯಲೆಂದು ಅಲ್ಲಾಹನು ಈ ಉದಾಹರಣೆಗಳನ್ನು ಕೊಡುತ್ತಾನೆ.

تُؤْتِي أُكُلَهَا كُلَّ حِينٍ بِإِذْنِ رَبِّهَا ۗ وَيَضْرِبُ اللَّهُ الْأَمْثَالَ لِلنَّاسِ لَعَلَّهُمْ يَتَذَكَّرُونَ ﴿٢٥﴾

26. 'ಪೈಶಾಚಿಕ ವಚನ'ದ ಉಪಮೆ - ಒಂದು ಕೆಟ್ಟ ಜಾತಿಯ ಮರದಂತಿದೆ. ಅದು ಭೂಮಿಯ ಮೇಲ್ಭಾಗದಿಂದ ಕಿತ್ತೆಸೆಯಲ್ಪಡುತ್ತದೆ. ಅದಕ್ಕೆ ಸ್ಥಿರತೆಯೆಂಬುದೇ ಇಲ್ಲ.

وَمَثَلُ كَلِمَةٍ خَبِيثَةٍ كَشَجَرَةٍ خَبِيثَةٍ اجْتُثَّتْ مِنْ فَوْقِ الْأَرْضِ مَا لَهَا مِنْ قَرَارٍ ﴿٢٦﴾

27. ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಒಂದು ಸ್ಥಿರ ವಚನದ ಆಧಾರದಲ್ಲಿ ಇಹ-ಪರಗಳೆರಡರಲ್ಲೂ ಭದ್ರತೆ ದಯಪಾಲಿಸುತ್ತಾನೆ ಮತ್ತು ಅಕ್ರಮಿಗಳನ್ನು ಅಲ್ಲಾಹನು ದಾರಿಗೆಡಿಸುತ್ತಾನೆ. ತನಗಿಷ್ಟ ಬಂದಂತೆ ಮಾಡುವ ಅಧಿಕಾರ ಅಲ್ಲಾಹನಿಗಿದೆ.

يُثَبِّتُ اللَّهُ الَّذِينَ آمَنُوا بِالْقَوْلِ الثَّابِتِ فِي الْحَيَاةِ الدُّنْيَا وَفِي الْآخِرَةِ ۖ وَيُضِلُّ اللَّهُ الظَّالِمِينَ ۚ وَيَفْعَلُ اللَّهُ مَا يَشَاءُ ﴿٢٧﴾

28. ಅಲ್ಲಾಹನಿಂದ 'ಕೊಡುಗೆ'ಯನ್ನು ಪಡೆದು ಅದನ್ನು ಕೃತಘ್ನತೆಯನ್ನಾಗಿ ಬದಲಾಯಿಸಿ, (ತಮ್ಮೊಂದಿಗೆ) ತಮ್ಮ ಜನಾಂಗವನ್ನೂ ವಿನಾಶಗೃಹದೊಳಕ್ಕೆ ತಳ್ಳಿಬಿಟ್ಟವರನ್ನು ನೀವು ಕಂಡಿರಾ?

أَلَمْ تَرَ إِلَى الَّذِينَ بَدَّلُوا نِعْمَتَ اللَّهِ كُفْرًا وَأَحَلُّوا قَوْمَهُمْ دَارَ الْبَوَارِ ﴿٢٨﴾

29. ಅರ್ಥಾತ್ ಜಹನ್ನಮ್‌ನೊಳಗೆ (ನರಕದೊಳಗೆ), ಅದರಲ್ಲಿ ಅವರು ಕರಟಿ ಹೋಗುವರು. ಅದು ಅತ್ಯಂತ ನಿಕೃಷ್ಟ ತಾಣ.

جَهَنَّمَ يَصْلَوْنَهَا ۖ وَبِئْسَ الْقَرَارُ ﴿٢٩﴾

30. ಅಲ್ಲಾಹನ ಮಾರ್ಗದಿಂದ ತಮ್ಮನ್ನು ತಪ್ಪಿಸಲಿಕ್ಕಾಗಿ ಅವರು ಅಲ್ಲಾಹನಿಗೆ ಕೆಲವು ಭಾಗೀದಾರರನ್ನು ಮಾಡಿಕೊಂಡರು. ಅವರೊಡನೆ, "ಈಗ ನೀವು ಸುಖ ಪಟ್ಟು ಕೊಳ್ಳಿರಿ. ಕೊನೆಗೆ ನಿಮಗೆ ನರಕಕ್ಕೆ ಮರಳಿ ಹೋಗಬೇಕಾಗಿದೆ" ಎಂದು ಹೇಳಿರಿ.

وَجَعَلُوا لِلَّهِ أَنْدَادًا لِيُضِلُّوا عَنْ سَبِيلِهِ ۗ قُلْ تَمَتَّعُوا فَإِنَّ مَصِيرَكُمْ إِلَى النَّارِ ﴿٣٠﴾

31. ಓ ಪೈಗಂಬರರೇ, ಸತ್ಯವಿಶ್ವಾಸವನ್ನು ಸ್ವೀಕರಿಸಿದ ನನ್ನ ದಾಸರೊಡನೆ ನಮಾಝನ್ನು ಸಂಸ್ಥಾಪಿಸಲಿಕ್ಕೂ ಲೇವಾದೇವಿಗಳೂ ಸ್ನೇಹಾಚಾರಗಳೂ ಇರಲಾರದ ಆ ದಿನ ಬರುವುದಕ್ಕೆ ಮುಂಚೆಯೇ ನಾವು ಅವರಿಗೆ ಏನನ್ನೆಲ್ಲ ದಯಪಾಲಿಸಿರುತ್ತೇವೋ ಅದರಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ (ಸತ್ಕಾರ್ಯಗಳಲ್ಲಿ) ಖರ್ಚು ಮಾಡಲಿಕ್ಕೂ ಹೇಳಿಬಿಡಿರಿ.

قُل لِّعِبَادِيَ الَّذِينَ آمَنُوا يُقِيمُوا الصَّلَاةَ وَيُنفِقُوا مِمَّا رَزَقْنَاهُمْ سِرًّا وَعَلَانِيَةً مِّن قَبْلِ أَن يَأْتِيَ يَوْمٌ لَّا بَيْعٌ فِيهِ وَلَا خِلَالٌ ﴿٣١﴾

32. ಭೂಮಿ-ಆಕಾಶಗಳನ್ನು ಸೃಷ್ಟಿಸಿದವನೂ ಆಕಾಶದಿಂದ ಮಳೆ ಸುರಿಸಿದವನೂ ಅದರ ಮೂಲಕ ನಿಮಗೆ ಆಹಾರವನ್ನೊದಗಿಸಲಿಕ್ಕಾಗಿ ತರತರದ ಫಲಗಳನ್ನು ಉತ್ಪಾದಿಸಿದವನೂ ಅಲ್ಲಾಹನೇ ಆಗಿರುತ್ತಾನೆ. ಅವನು ತನ್ನ ಆಜ್ಞೆ ಪ್ರಕಾರ ಸಮುದ್ರದಲ್ಲಿ ಸಂಚರಿಸುವಂತೆ ಹಡಗನ್ನು ನಿಮ್ಮ ನಿಯಂತ್ರಣಕ್ಕೆ ಕೊಟ್ಟನು ಮತ್ತು ನಿಮಗಾಗಿ ನದಿಗಳನ್ನೂ ನಿಯಂತ್ರಿಸಿದನು.

اللَّهُ الَّذِي خَلَقَ السَّمَاوَاتِ وَالْأَرْضَ وَأَنزَلَ مِنَ السَّمَاءِ مَاءً فَأَخْرَجَ بِهِ مِنَ الثَّمَرَاتِ رِزْقًا لَّكُمْ ۖ وَسَخَّرَ لَكُمُ الْفُلْكَ لِتَجْرِيَ فِي الْبَحْرِ بِأَمْرِهِ ۖ وَسَخَّرَ لَكُمُ الْأَنْهَارَ ﴿٣٢﴾

33. ಅವನು ನಿರಂತರವಾಗಿ ಚಲಿಸುತ್ತಿರುವ ಸೂರ್ಯ ಚಂದ್ರರನ್ನು ನಿಮಗಾಗಿ ನಿಯಂತ್ರಿಸಿದನು ಮತ್ತು ರಾತ್ರೆ ಹಗಲುಗಳನ್ನು ನಿಮಗಾಗಿ ನಿಯಂತ್ರಿಸಿದನು.[8]

وَسَخَّرَ لَكُمُ الشَّمْسَ وَالْقَمَرَ دَائِبَيْنِ ۖ وَسَخَّرَ لَكُمُ اللَّيْلَ وَالنَّهَارَ ﴿٣٣﴾

34. ಅವನು ನೀವು ಬೇಡಿದುದನ್ನೆಲ್ಲ ನಿಮಗೆ ಕೊಟ್ಟನು.[9] ನೀವು ಅಲ್ಲಾಹನ 'ಕೊಡುಗೆ'ಗಳನ್ನು ಎಣಿಕೆ ಮಾಡಲಿಚ್ಛಿಸಿದರೆ ಮಾಡಲಾರಿರಿ. ವಾಸ್ತವದಲ್ಲಿ ಮಾನವನು ಮಹಾ ಅನ್ಯಾಯಿಯೂ ಕೃತಘ್ನನೂ ಆಗಿರುತ್ತಾನೆ.

وَآتَاكُم مِّن كُلِّ مَا سَأَلْتُمُوهُ ۚ وَإِن تَعُدُّوا نِعْمَتَ اللَّهِ لَا تُحْصُوهَا ۗ إِنَّ الْإِنسَانَ لَظَلُومٌ كَفَّارٌ ﴿٣٤﴾

35. ಇಬ್‌ರಾಹೀಮರು ಪ್ರಾರ್ಥಿಸಿದ ಸಂದರ್ಭವನ್ನು ನೆನೆಯಿರಿ. "ಓ ನನ್ನ ಪ್ರಭೂ, ಈ ಪಟ್ಟಣ(ಅರ್ಥಾತ್ ಮಕ್ಕಾ)ವನ್ನು ಶಾಂತಿ ನಗರವನ್ನಾಗಿ ಮಾಡು ಮತ್ತು ನನ್ನನ್ನೂ ನನ್ನ ಸಂತತಿಯನ್ನೂ ವಿಗ್ರಹಾರಾಧನೆಯಿಂದ ರಕ್ಷಿಸು.

وَإِذْ قَالَ إِبْرَاهِيمُ رَبِّ اجْعَلْ هَٰذَا الْبَلَدَ آمِنًا وَاجْنُبْنِي وَبَنِيَّ أَن نَّعْبُدَ الْأَصْنَامَ ﴿٣٥﴾

8. 'ನಿಮಗಾಗಿ ನಿಯಂತ್ರಿಸಿದನು' ಎಂಬುದನ್ನು ಸಾಮಾನ್ಯವಾಗಿ 'ನಿಮ್ಮ ಅಧೀನಗೊಳಿಸಿದನು' ಎಂದು ತಪ್ಪಾಗಿ ಅರ್ಥೈಸಲಾಗುತ್ತದೆ. ಅನಂತರ ಇಂತಹ ವಿಷಯವನ್ನೊಳಗೊಂಡ ಸೂಕ್ತಗಳಿಗೆ ಚಿತ್ರವಿಚಿತ್ರ ಅರ್ಥಗಳನ್ನು ಕಲ್ಪಿಸಲಾಗುತ್ತದೆ. ಕೆಲವರು ಈ ಸೂಕ್ತಗಳ ಆಧಾರದಲ್ಲಿ ಭೂಮಿ-ಆಕಾಶಗಳನ್ನು ಅಧೀನಗೊಳಿಸುವುದೇ ಮಾನವನ ಜೀವನೋದ್ದೇಶ ಎಂದು ಹೇಳುವಷ್ಟು ಅತಿರೇಕಕ್ಕೂ ತಲಪಿದ್ದಾರೆ. ವಾಸ್ತವದಲ್ಲಿ ಇವುಗಳನ್ನು ನಿಯಂತ್ರಿಸುವುದು ಎಂದರೆ ಅಲ್ಲಾಹನು ಅವುಗಳನ್ನು ಮಾನವನಿಗೆ ಪ್ರಯೋಜನಕಾರಿಯಾದಂತಹ ನಿಯಮಗಳಿಗೆ ಬದ್ಧಗೊಳಿಸಿದ್ದಾನೆ ಎಂದಾಗಿದೆ.

9. ಅರ್ಥಾತ್- ನಿಸರ್ಗದತ್ತವಾದ ನಿಮ್ಮೆಲ್ಲಾ ಬೇಡಿಕೆಗಳನ್ನು ಈಡೇರಿಸಿದನು. ನಿಮ್ಮ ಜೀವನಕ್ಕೆ ಬೇಕಾದುದೆಲ್ಲವನ್ನೂ ಒದಗಿಸಿದನು. ನಿಮ್ಮ ಉಳಿವು ಮತ್ತು ಅಭಿವೃದ್ಧಿಗೆ ಬೇಕಾದ ಸಾಧನಾನು ಕೂಲತೆಗಳನ್ನೆಲ್ಲಾ ದಯಪಾಲಿಸಿದನು.

36. ಓ ನನ್ನ ಪ್ರಭೂ, ಈ ವಿಗ್ರಹಗಳು ಅನೇಕರನ್ನು ದಾರಿಗೆಡಿಸಿವೆ. (ಇವು ನನ್ನ ಸಂತತಿಯನ್ನೂ ಪಥಭ್ರಷ್ಟಗೊಳಿಸಿಬಿಡಲೂ ಬಹುದು. ಆದುದರಿಂದ ಅವರ ಪೈಕಿ) ನನ್ನ ಪದ್ಧತಿಯಲ್ಲಿ ನಡೆಯುವವನು ನನ್ನವನು ಮತ್ತು ಯಾರಾದರೂ ನನ್ನದಕ್ಕೆ ವಿರುದ್ಧವಾದ ರೀತಿ ಯಲ್ಲಿ ನಡೆದರೆ, ನಿಶ್ಚಯವಾಗಿಯೂ ನೀನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಿ.

رَبِّ إِنَّهُنَّ أَضْلَلْنَ كَثِيرًا مِّنَ النَّاسِ ۖ فَمَن تَبِعَنِي فَإِنَّهُ مِنِّي ۖ وَمَنْ عَصَانِي فَإِنَّكَ غَفُورٌ رَّحِيمٌ ﴿٣٦﴾

37. ಓ ನನ್ನ ಪ್ರಭೂ, ನಾನು ನನ್ನ ಸಂತತಿಯ ಒಂದು ಭಾಗವನ್ನು ಒಂದು ಬಂಜರು ಕಣಿವೆಯಲ್ಲಿ ನಿನ್ನ ಸನ್ಮಾನ್ಯ ಗೃಹದ ಬಳಿ ತಂದು ನೆಲೆಗೊಳಿಸಿದ್ದೇನೆ. ಓ ನನ್ನ ಪ್ರಭೂ, ಇವರು ನಮಾಝನ್ನು ಸಂಸ್ಥಾಪಿಸಲೆಂದು ಹೀಗೆ ಮಾಡಿದ್ದೇನೆ. ಆದುದರಿಂದ ನೀನು ಜನಮನಗಳು ಇವರ ಕಡೆಗೆ ಒಲಿಯುವಂತೆ ಮಾಡು ಮತ್ತು ಇವರಿಗೆ ತಿನ್ನಲು ಫಲಗಳನ್ನು ನೀಡು. ಇವರು ಕೃತಜ್ಞರಾಗಲೂ ಬಹುದು.

رَّبَّنَا إِنِّي أَسْكَنتُ مِن ذُرِّيَّتِي بِوَادٍ غَيْرِ ذِي زَرْعٍ عِندَ بَيْتِكَ الْمُحَرَّمِ رَبَّنَا لِيُقِيمُوا الصَّلَاةَ فَاجْعَلْ أَفْئِدَةً مِّنَ النَّاسِ تَهْوِي إِلَيْهِمْ وَارْزُقْهُم مِّنَ الثَّمَرَاتِ لَعَلَّهُمْ يَشْكُرُونَ ﴿٣٧﴾

38. ಓ ನನ್ನ ಪ್ರಭೂ, ನಾವು ಅಡಗಿಸುವುದನ್ನೂ ಬಹಿರಂಗ ಪಡಿಸುವುದನ್ನೂ ನೀನು ಬಲ್ಲವನಾಗಿರುತ್ತಿ ಮತ್ತು ನಿಜಕ್ಕೂ ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ಅಲ್ಲಾಹನಿಂದ ಏನೊಂದೂ ಅಡಗಿರುವುದಿಲ್ಲ.

رَبَّنَا إِنَّكَ تَعْلَمُ مَا نُخْفِي وَمَا نُعْلِنُ ۗ وَمَا يَخْفَىٰ عَلَى اللَّهِ مِن شَيْءٍ فِي الْأَرْضِ وَلَا فِي السَّمَاءِ ﴿٣٨﴾

39. ಈ ವೃದ್ಧಾಪ್ಯದಲ್ಲಿ ನನಗೆ ಇಸ್ಮಾಈಲ್ ಮತ್ತು ಇಸ್‌ಹಾಕರಂತಹ ಪುತ್ರರನ್ನು ದಯಪಾಲಿಸಿದ ಅಲ್ಲಾಹನಿಗೆ ಕೃತಜ್ಞತೆ. ನಿಶ್ಚಯ ವಾಗಿಯೂ ನನ್ನ ಪ್ರಭು ಪ್ರಾರ್ಥನೆಯನ್ನು ಆಲಿಸುತ್ತಾನೆ.

الْحَمْدُ لِلَّهِ الَّذِي وَهَبَ لِي عَلَى الْكِبَرِ إِسْمَاعِيلَ وَإِسْحَاقَ ۚ إِنَّ رَبِّي لَسَمِيعُ الدُّعَاءِ ﴿٣٩﴾

40. ಓ ನನ್ನ ಪ್ರಭೂ ನೀನು ನನ್ನನ್ನು ನಮಾಝ್ ಸಂಸ್ಥಾಪಿಸುವವನ ನ್ನಾಗಿ ಮಾಡು. ನನ್ನ ಸಂತತಿಯಿಂದಲೂ (ಈ ಕಾರ್ಯವೆಸ ಗುವವರನ್ನು ಎಬ್ಬಿಸು.) ಓ ನನ್ನ ಪ್ರಭೂ, ನನ್ನ ಪ್ರಾರ್ಥನೆಯನ್ನು ಸ್ವೀಕರಿಸು.

رَبِّ اجْعَلْنِي مُقِيمَ الصَّلَاةِ وَمِن ذُرِّيَّتِي ۚ رَبَّنَا وَتَقَبَّلْ دُعَاءِ ﴿٤٠﴾

41. ಓ ನನ್ನ ಪ್ರಭೂ, ನನ್ನನ್ನೂ ನನ್ನ ಮಾತಾಪಿತರನ್ನೂ[10] ಸಕಲ ಸತ್ಯವಿಶ್ವಾಸಿಗಳನ್ನೂ ವಿಚಾರಣೆ ನಡೆಸಲ್ಪಡುವ ಆ ದಿನ ಕ್ಷಮಿಸಿ ಬಿಡು.

رَبَّنَا اغْفِرْ لِي وَلِوَالِدَيَّ وَلِلْمُؤْمِنِينَ يَوْمَ يَقُومُ الْحِسَابُ ﴿٤١﴾

10. ಹ. ಇಬ್‌ರಾಹೀಮ್(ಅ) ತಮ್ಮ ದೇಶ ಬಿಟ್ಟು ಹೊರಡುವಾಗ ಮಾಡಿದ್ದ ವಾಗ್ದಾನದಂತೆ ಅವರು ತಮ್ಮ ತಂದೆಯನ್ನೂ ಕ್ಷಮೆಯ ಪ್ರಾರ್ಥನೆಯಲ್ಲಿ ಸೇರಿಸಿದ್ದರು. "ನಿಮಗೆ ಕ್ಷಮೆ ನೀಡಬೇಕೆಂದು ನಾನು ನನ್ನ ಪ್ರಭುವಿನೊಡನೆ ಪ್ರಾರ್ಥಿಸಿಕೊಳ್ಳುವೆನು." (ಸೂರಃ

42. ಈ ಅಕ್ರಮಿಗಳು ಮಾಡುತ್ತಿರುವುದರ ಬಗ್ಗೆ ಅಲ್ಲಾಹನು ಅಶ್ರದ್ಧನಾಗಿರುವನೆಂದು ನೀವು ಭಾವಿಸಬೇಡಿರಿ. ಅಲ್ಲಾಹ್ ಅವರಿಗೆ - ಕಣ್ಣುಗಳು ತೆರೆದೇ ಇರುವ ಆ ದಿನದ ವರೆಗೆ- ಕಾಲಾವಕಾಶ ನೀಡುತ್ತಿದ್ದಾನೆ.

وَلَا تَحْسَبَنَّ اللّٰهَ غَافِلًا عَمَّا يَعْمَلُ الظّٰلِمُوْنَ ۗ
اِنَّمَا يُؤَخِّرُهُمْ لِيَوْمٍ تَشْخَصُ فِيْهِ الْاَبْصَارُ ﴿٤٢﴾

43. ಅಂದು ಅವರು ತಲೆಯೆತ್ತಿಕೊಂಡು ಓಡುತ್ತಿರುವರು, ಅವರ ದೃಷ್ಟಿಗಳು ಮೇಲಕ್ಕೇ ನಾಟಿರುವುವು, ಹೃದಯಗಳು ಗಾಬರಿಗೊಂಡಿರುವುವು.

مُهْطِعِيْنَ مُقْنِعِيْ رُءُوْسِهِمْ لَا يَرْتَدُّ
اِلَيْهِمْ طَرْفُهُمْ ۚ وَاَفْـِٕدَتُهُمْ هَوَآءٌ ﴿٤٣﴾

44. ಓ ಪೈಗಂಬರರೇ, ಶಿಕ್ಷೆಯು ಬಂದೆರಗುವ ಆ ದಿವಸದ ಬಗ್ಗೆ ನೀವು ಜನರಿಗೆ ಎಚ್ಚರಿಕೆ ಕೊಡಿರಿ. ಆಗ ಈ ಅಕ್ರಮಿಗಳು, "ಓ ನಮ್ಮ ಪ್ರಭೂ, ನಮಗೆ ಇನ್ನೂ ಕೊಂಚ ಕಾಲಾವಕಾಶವನ್ನು ಕೊಟ್ಟು ಬಿಡು. ನಾವು ನಿನ್ನ ಕರೆಗೆ ಓಗೊಡುವೆವು ಮತ್ತು ಸಂದೇಶವಾಹಕರನ್ನು ಅನುಸರಿಸುವೆವು" ಎನ್ನುವರು. (ಆದರೆ ಅವರಿಗೆ ಹೀಗೆ ಉತ್ತರ ಕೊಡಲಾಗುವುದು:) "ನಮಗೆಂದೂ ಅವನತಿ ಬರಲಿಕ್ಕೇ ಇಲ್ಲವೆಂದು ಇದಕ್ಕೆ ಮುಂಚೆ ಆಣೆ ಹಾಕುತ್ತ ಹೇಳುತ್ತಿದ್ದವರು ನೀವೇ ಅಲ್ಲವೇ?

وَاَنْذِرِ النَّاسَ يَوْمَ يَاْتِيْهِمُ الْعَذَابُ
فَيَقُوْلُ الَّذِيْنَ ظَلَمُوْا رَبَّنَآ اَخِّرْنَآ
اِلٰٓى اَجَلٍ قَرِيْبٍ ۙ نُّجِبْ دَعْوَتَكَ وَنَتَّبِعِ
الرُّسُلَ ۗ اَوَلَمْ تَكُوْنُوْٓا اَقْسَمْتُمْ مِّنْ
قَبْلُ مَا لَكُمْ مِّنْ زَوَالٍ ﴿٤٤﴾

45. ವಸ್ತುತಃ ನೀವು ತಮ್ಮ ಮೇಲೆ ತಾವೇ ಅಕ್ರಮವೆಸಗಿದ್ದ ಆ ಜನಾಂಗಗಳ ನಾಡುಗಳಲ್ಲಿ ವಾಸಿಸಿದ್ದಿರಿ ಮತ್ತು ನಾವು ಅವರೊಂದಿಗೆ ಹೇಗೆ ವರ್ತಿಸಿದ್ದೇವೆಂಬುದನ್ನು ನೋಡಿರುತ್ತೀರಿ ಮತ್ತು ನಾವು ಅದರ ಉದಾಹರಣೆಗಳನ್ನು ಕೊಡುತ್ತ ನಿಮಗೆ ಬೋಧಿಸಿಯೂ ಇದ್ದೆವು.

وَّسَكَنْتُمْ فِيْ مَسٰكِنِ الَّذِيْنَ ظَلَمُوْٓا
اَنْفُسَهُمْ وَتَبَيَّنَ لَكُمْ كَيْفَ فَعَلْنَا بِهِمْ
وَضَرَبْنَا لَكُمُ الْاَمْثَالَ ﴿٤٥﴾

46. ಅವರು ತಮ್ಮ ಎಲ್ಲಾ ಕುತಂತ್ರಗಳನ್ನು ನಡೆಸಿ ನೋಡಿದರು. ಅವರ ಕುತಂತ್ರಗಳು ಪರ್ವತಗಳನ್ನೇ ಸರಿಸುವಷ್ಟು ಘೋರವಾಗಿದ್ದುವಾದರೂ ಅವರ ಪ್ರತಿಯೊಂದು ಕುತಂತ್ರದ ಪ್ರತಿ ಖಂಡನೆ ಅಲ್ಲಾಹನ ಬಳಿಯಲ್ಲಿತ್ತು."

وَقَدْ مَكَرُوْا مَكْرَهُمْ وَعِنْدَ اللّٰهِ
مَكْرُهُمْ ۗ وَاِنْ كَانَ مَكْرُهُمْ
لِتَزُوْلَ مِنْهُ الْجِبَالُ ﴿٤٦﴾

47. ಆದುದರಿಂದ ಓ ಪೈಗಂಬರರೇ ಎಂದಾದರೂ ಅಲ್ಲಾಹನು, ತನ್ನ ಸಂದೇಶವಾಹಕರೊಡನೆ ಮಾಡಿದ ವಾಗ್ದಾನಗಳಿಗೆ ವಿರುದ್ಧವಾಗಿ ವರ್ತಿಸುವನೆಂದು ಭಾವಿಸಬೇಡಿರಿ. ವಾಸ್ತವದಲ್ಲಿ ಅಲ್ಲಾಹನು ಮಹಾ ಪ್ರತಾಪಿಯೂ ಪ್ರತೀಕಾರ ಪಡೆಯುವವನೂ ಆಗಿರುತ್ತಾನೆ.

فَلَا تَحْسَبَنَّ اللّٰهَ مُخْلِفَ وَعْدِهٖ
رُسُلَهٗ ۗ اِنَّ اللّٰهَ عَزِيْزٌ ذُو انْتِقَامٍ ﴿٤٧﴾

ಮರ್ಯಮ್ 47ನೆಯ ಸೂಕ್ತ) ಎಂಬುದು ಆ ವಾಗ್ದಾನವಾಗಿತ್ತು. ಆದರೆ ಅವನಂತು ಅಲ್ಲಾಹನ ಶತ್ರುವಾಗಿದ್ದ ಎಂದು ತಿಳಿದ ಬಳಿಕ ಅವರು ಅದರಿಂದ ವಿಮುಖರಾದರು. (ಸೂರಃ ಅತ್ತೌಬಃದ 114ನೆಯ ಸೂಕ್ತ)

48. ಭೂಮಿ ಮತ್ತು ಆಕಾಶಗಳು ಬದಲಾಯಿಸಲ್ಪಟ್ಟು ಏನಕ್ಕೇನೋ ಮಾಡಲ್ಪಡುವ ಆ ದಿನದ[11] ಬಗ್ಗೆ ಹಾಗೂ ಏಕನೂ ಪ್ರಚಂಡನೂ ಆದ ಅಲ್ಲಾಹನ ಮುಂದೆ ಸರ್ವರೂ ಪ್ರತ್ಯಕ್ಷ ಹಾಜರಾಗಲಿರುವ ದಿನದ ಬಗ್ಗೆ ಅವರಿಗೆ ಎಚ್ಚರಿಕೆ ನೀಡಿರಿ.

يَوْمَ تُبَدَّلُ الْأَرْضُ غَيْرَ الْأَرْضِ وَالسَّمَاوَاتُ وَبَرَزُوا لِلَّهِ الْوَاحِدِ الْقَهَّارِ ﴿٤٨﴾

49. ಅಂದು ಅಪರಾಧಿಗಳು ಸಂಕೋಲೆಗಳಿಂದ ಬಿಗಿಯಲ್ಪಟ್ಟಿರುವುದನ್ನು ನೀವು ನೋಡುವಿರಿ.

وَتَرَى الْمُجْرِمِينَ يَوْمَئِذٍ مُقَرَّنِينَ فِي الْأَصْفَادِ ﴿٤٩﴾

50. ಅವರು ಟಾರಿನ ಉಡುಪು ಧರಿಸಿರುವರು ಮತ್ತು ಅಗ್ನಿ ಜ್ವಾಲೆಗಳು ಅವರ ಮುಖಗಳ ಮೇಲೆ ಆವರಿಸುತ್ತಿರುವುವು.

سَرَابِيلُهُمْ مِنْ قَطِرَانٍ وَتَغْشَىٰ وُجُوهَهُمُ النَّارُ ﴿٥٠﴾

51. ಅಲ್ಲಾಹನು ಪ್ರತಿಯೊಂದು ಜೀವಿಗೂ ಅದರ ಕರ್ಮಫಲವನ್ನು ಕೊಡಲಿಕ್ಕಾಗಿ ಹೀಗಾಗುವುದು. ನಿಶ್ಚಯವಾಗಿಯೂ ಅಲ್ಲಾಹನು ವಿಚಾರಣೆ ನಡೆಸುವುದರಲ್ಲಿ ಅತಿ ಶೀಘ್ರನು.

لِيَجْزِيَ اللَّهُ كُلَّ نَفْسٍ مَا كَسَبَتْ إِنَّ اللَّهَ سَرِيعُ الْحِسَابِ ﴿٥١﴾

52. ಇದು ಸಕಲ ಮಾನವರಿಗೆ ಒಂದು ಸಂದೇಶ. ಅವರಿಗೆ ಇದರ ಮೂಲಕ ಎಚ್ಚರಿಕೆ ಕೊಡಲಿಕ್ಕಾಗಿಯೂ ವಾಸ್ತವದಲ್ಲಿ ದೇವನೊಬ್ಬನೇ ಎಂದು ಅವರು ತಿಳಿದುಕೊಳ್ಳಲಿಕ್ಕಾಗಿಯೂ ಬುದ್ಧಿಜೀವಿಗಳು ಎಚ್ಚರಗೊಳ್ಳಲೆಂದೂ ಇದು ಕಳುಹಿಸಲ್ಪಟ್ಟಿರುತ್ತದೆ.

هَٰذَا بَلَاغٌ لِلنَّاسِ وَلِيُنْذَرُوا بِهِ وَلِيَعْلَمُوا أَنَّمَا هُوَ إِلَٰهٌ وَاحِدٌ وَلِيَذَّكَّرَ أُولُو الْأَلْبَابِ ﴿٥٢﴾

---

11. ಈ ಸೂಕ್ತ ಮತ್ತು ಕುರ್‌ಆನಿನ ಇತರ ಸೂಚನೆಗಳಿಂದ ವ್ಯಕ್ತವಾಗುವುದೇನೆಂದರೆ ನಿರ್ಣಾಯಕ ದಿನದಂದು ಭೂಮಿ-ಆಕಾಶಗಳನ್ನು ಸಂಪೂರ್ಣ ನಾಶಪಡಿಸಿ ಬಿಡಲಾಗುವುದಿಲ್ಲ. ಆದರೆ ಪ್ರಚಲಿತ ಭೌತಿಕ ವ್ಯವಸ್ಥೆಯನ್ನು ಸಂಪೂರ್ಣ ಅಸ್ತವ್ಯಸ್ತಗೊಳಿಸಿಬಿಡಲಾಗುವುದು. ಅನಂತರ ಪ್ರಥಮ ಸೂರ್ (ಅರ್ಥಾತ್ ಕಹಳೆ) ಮತ್ತು ಕೊನೆಯ ಕಹಳೆಯ ನಡುವೆ ನಿರ್ದಿಷ್ಟ ಅಂತರದ ವೇಳೆ ಭೂಮಿ-ಆಕಾಶಗಳ ಈಗಿನ ಸ್ವರೂಪವನ್ನು ಬದಲಿಸಲಾಗುವುದು. ಬೇರೆಯೇ ನೈಸರ್ಗಿಕ ನಿಯಮಗಳೊಂದಿಗೆ ಭಿನ್ನ ವ್ಯವಸ್ಥೆಯನ್ನು ರೂಪಿಸಲಾಗುವುದು. ಎರಡು 'ಕಹಳೆ'ಗಳ ನಡುವಿನ ಅಂತರ ಎಷ್ಟಿರುತ್ತದೆ ಎಂಬುದನ್ನು ಅಲ್ಲಾಹನೇ ಬಲ್ಲ. ಅದುವೇ ಪರಲೋಕವಾಗಿರುವುದು. ಅನಂತರ ಕೊನೆಯ 'ಕಹಳೆ' ಊದುತ್ತಲೇ ಆದಮ್‌ರ(ಅ) ಸೃಷ್ಟಿಯಿಂದ ಹಿಡಿದು ಪ್ರಳಯಕಾಲದ ತನಕ ಹುಟ್ಟಿದವರೆಲ್ಲರನ್ನೂ ಮತ್ತೊಮ್ಮೆ ಜೀವಂತಗೊಳಿಸಲಾಗುವುದು. ಅವರೆಲ್ಲರೂ ಅಲ್ಲಾಹನ ಮುಂದೆ ಹಾಜರುಗೊಳಿಸಲ್ಪಡುವರು. ಕುರ್‌ಆನ್ ಈ ಲೋಕವನ್ನು 'ಹಶರ್' ಎಂದು ಕರೆದಿದೆ. ಅದರ ಶಬ್ದಾರ್ಥ ಒಟ್ಟು ಸೇರಿಸುವುದು ಎಂದಾಗಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಲಿಫ್ ಲಾಮ್ ರಾ. ದೇವಗ್ರಂಥ ಹಾಗೂ ಸುವ್ಯಕ್ತ ಕುರ್‌ಆನಿನ ಸೂಕ್ತಗಳಿವು.[1]

الٓرٰ ۚ تِلْكَ اٰيٰتُ الْكِتٰبِ وَقُرْاٰنٍ مُّبِيْنٍ ①

2. *ಇಂದು (ಇಸ್ಲಾಮ್ ಧರ್ಮಾಹ್ವಾನವನ್ನು ಸ್ವೀಕರಿಸುವುದರ ಬದಲು) ನಿಷೇಧಿಸಿದವರು ಪಶ್ಚಾತ್ತಾಪದ ಮೇಲೆ ಪಶ್ಚಾತ್ತಾಪ ಪಡುತ್ತ, "ಅಯ್ಯೋ! ನಾವು ಮುಸ್ಲಿಮ(ಶರಣಾಗತ)ರಾಗುತ್ತಿದ್ದರೆ!" ಎನ್ನಲಿರುವ ಆ ಕಾಲ ದೂರವಿಲ್ಲ.

رُبَمَا يَوَدُّ الَّذِيْنَ كَفَرُوْا لَوْ كَانُوْا مُسْلِمِيْنَ ②

3. ಅವರನ್ನು (ಅವರ ಪಾಡಿಗೆ) ಬಿಟ್ಟು ಬಿಡಿರಿ. ತಿಂದುಂಡು ಸುಖೋಪಭೋಗಗಳನ್ನು ಅನುಭವಿಸುತ್ತಲಿರಲಿ. ಹುಸಿ ಭರವಸೆಯು ಇವರನ್ನು ಮರವೆಗೆ ಒಳಪಡಿಸಿರಲಿ- ಸದ್ಯದಲ್ಲೇ ಇವರಿಗೆ ಮನವರಿಕೆಯಾಗುವುದು.

ذَرْهُمْ يَاْكُلُوْا وَيَتَمَتَّعُوْا وَيُلْهِهِمُ الْاَمَلُ فَسَوْفَ يَعْلَمُوْنَ ③

4. ನಾವು ಈ ಮುಂಚೆ ನಾಶಗೊಳಿಸಿದ ಪ್ರತಿಯೊಂದು ನಾಡಿಗೂ ಒಂದು ನಿರ್ದಿಷ್ಟ ಕರ್ಮಾವಧಿಯನ್ನು ಲಿಖಿತಗೊಳಿಸಲಾಗಿತ್ತು.

وَمَآ اَهْلَكْنَا مِنْ قَرْيَةٍ اِلَّا وَلَهَا كِتَابٌ مَّعْلُوْمٌ ④

5. ಯಾವ ಜನಾಂಗವೂ ತನಗೆ ನಿಶ್ಚಯಿಸಲ್ಪಟ್ಟ ಕಾಲಕ್ಕಿಂತ ಮುಂಚೆ ನಾಶಗೊಳ್ಳುವುದೂ ಇಲ್ಲ, ಅನಂತರ ಅದು ಉಳಿಯುವುದೂ ಇಲ್ಲ.

مَا تَسْبِقُ مِنْ اُمَّةٍ اَجَلَهَا وَمَا يَسْتَاْخِرُوْنَ ⑤

1. 'ಮುಬೀನ್' ಎಂಬ ಪದ ಕುರ್‌ಆನಿನ ಗುಣವಿಶೇಷಣದ ರೂಪದಲ್ಲಿ ಬಳಕೆಯಾಗಿದೆ. ಅದರ ಅರ್ಥ ಈ ಸೂಕ್ತಗಳು ತನ್ನ ಇಂಗಿತವನ್ನು ಅತ್ಯಂತ ಸ್ಪಷ್ಟವಾಗಿ ಸಾದರ ಪಡಿಸುವ ಕುರ್‌ಆನಿನದ್ದಾಗಿದೆ ಎಂದಾಗಿದೆ.

***ಇಲ್ಲಿಂದ 14ನೆಯ ಕಾಂಡ ಆರಂಭ.**

6. ಇವರು ಹೇಳುತ್ತಾರೆ, 'ಈ ದಿಕ್ರ್'[2] (ಉಪದೇಶ) ಅವತೀರ್ಣಗೊಂಡವನೇ![3] ಖಂಡಿತವಾಗಿಯೂ ನೀನೊಬ್ಬ ಹುಚ್ಚ.

وَقَالُوا يَا أَيُّهَا الَّذِي نُزِّلَ عَلَيْهِ الذِّكْرُ إِنَّكَ لَمَجْنُونٌ ﴿٦﴾

7. ನೀನು ಸತ್ಯವಾದಿಯಾಗಿದ್ದರೆ ನಮ್ಮ ಮುಂದೆ ದೇವಚರರನ್ನೇಕೆ ತರುವುದಿಲ್ಲ?

لَوْ مَا تَأْتِينَا بِالْمَلَائِكَةِ إِنْ كُنْتَ مِنَ الصَّادِقِينَ ﴿٧﴾

8. ನಾವು ದೇವಚರರನ್ನು ಸುಮ್ಮನೆ ಇಳಿಸುವುದಿಲ್ಲ. ಅವರು ಇಳಿಯುವಾಗ ಸತ್ಯ ಸಹಿತವಾಗಿಯೇ ಇಳಿಯುತ್ತಾರೆ ಮತ್ತು ಆ ಬಳಿಕ ಜನರಿಗೆ ಕಾಲಾವಕಾಶ ನೀಡಲಾಗುವುದಿಲ್ಲ.[4]

مَا نُنَزِّلُ الْمَلَائِكَةَ إِلَّا بِالْحَقِّ وَمَا كَانُوا إِذًا مُنْظَرِينَ ﴿٨﴾

9. ಈ 'ಉಪದೇಶ'ವನ್ನು ನಿಶ್ಚಯವಾಗಿಯೂ ನಾವು ಅವತೀರ್ಣಗೊಳಿಸಿರುತ್ತೇವೆ ಮತ್ತು ಸ್ವತಃ ನಾವೇ ಅದರ ರಕ್ಷಕರೂ ಆಗಿರುತ್ತೇವೆ.

إِنَّا نَحْنُ نَزَّلْنَا الذِّكْرَ وَإِنَّا لَهُ لَحَافِظُونَ ﴿٩﴾

10. ಓ ಪೈಗಂಬರರೇ, ನಾವು ನಿಮಗಿಂತ ಮುಂಚೆ ಗತಿಸಿಹೋದ ಅನೇಕ ಜನಾಂಗಗಳಲ್ಲಿ ಸಂದೇಶವಾಹಕರನ್ನು ಕಳುಹಿಸಿದ್ದೇವೆ.

وَلَقَدْ أَرْسَلْنَا مِنْ قَبْلِكَ فِي شِيَعِ الْأَوَّلِينَ ﴿١٠﴾

11. ಅವರ ಬಳಿಗೆ ಬಂದಿದ್ದ ಸಂದೇಶವಾಹಕರನ್ನು ಅವರು ಎಂದೂ ಅಪಹಾಸ್ಯ ಮಾಡದೆ ಇರಲಿಲ್ಲ.

وَمَا يَأْتِيهِمْ مِنْ رَسُولٍ إِلَّا كَانُوا بِهِ يَسْتَهْزِئُونَ ﴿١١﴾

12. ನಾವು ಈ ಉಪದೇಶವನ್ನು ಅಪರಾಧಿಗಳ ಹೃದಯದೊಳಗೆ ಇದೇ ರೀತಿಯಲ್ಲಿ (ಸಲಾಕೆಯಂತೆ) ಹಾಯಿಸುತ್ತೇವೆ.[5]

كَذَٰلِكَ نَسْلُكُهُ فِي قُلُوبِ الْمُجْرِمِينَ ﴿١٢﴾

---

2. 'ದಿಕ್ರ್' ಎಂಬ ಪದ ಕುರ್‌ಆನಿನಲ್ಲಿ 'ಅಲ್ಲಾಹನ ವಚನ'ಕ್ಕೆ ಬಳಕೆಯಾಗಿದೆ. ಅದು ಸಾದ್ಯಂತ ಉದ್ಬೋದನೆಗಳೊಂದಿಗೆ ಅವತೀರ್ಣಗೊಳ್ಳುತ್ತದೆ. ಗತ ಪ್ರವಾದಿಗಳ ಮೇಲೆ ಅವತೀರ್ಣಗೊಂಡ ಗ್ರಂಥಗಳೆಲ್ಲವೂ 'ದಿಕ್ರ್'ಗಳಾಗಿದ್ದುವು. ಅಂತೆಯೇ ಈ ಕುರ್‌ಆನ್ ಕೂಡ 'ದಿಕ್ರ್' ಆಗಿದೆ. ದಿಕ್ರ್‌ನ ಮೂಲ ಅರ್ಥ ನೆನಪಿಸುವುದು, ಎಚ್ಚರಗೊಳಿಸುವುದು ಮತ್ತು ಬೋಧನೆ ಕೊಡುವುದು ಎಂದಾಗಿದೆ.
3. ಈ ವಾಕ್ಯವನ್ನು ಅವರು ಅಣಕದ ರೂಪದಲ್ಲಿ ಹೇಳುತ್ತಿದ್ದರು. ಈ 'ದಿಕ್ರ್' ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಂಡಿದೆ ಎಂಬ ಬಗ್ಗೆ ಅವರಿಗೆ ಒಪ್ಪಿಗೆಯೇ ಇರಲಿಲ್ಲ. ಅದನ್ನು ಅವರು ಸಮ್ಮತಿಸಿದ್ದರೆ ಪ್ರವಾದಿವರ್ಯರನ್ನು(ಸ) ಹುಚ್ಚನೆಂದು ಹೇಳಲಿಕ್ಕೂ ಅವರಿಗೆ ಸಾಧ್ಯವಿರಲಿಲ್ಲ. "ನನ್ನ ಮೇಲೆ ದಿಕ್ರ್ ಅವತೀರ್ಣಗೊಂಡಿದೆ ಎಂದು ಹೇಳುತ್ತಿರುವ ಓ ವ್ಯಕ್ತಿಯೇ?" ಎಂದು ಈ ಮೂಲಕ ಅವರು ಹೇಳಬಯಸಿದ್ದರು.
4. ಅರ್ಥಾತ್- ಯಾವುದಾದರೊಂದು ಜನಾಂಗ, "ದೇವಚರರನ್ನು ಕರೆಸಿ" ಎಂದು ಹೇಳಿದಾಕ್ಷಣ ಅವರು ಬಂದು ಪ್ರತ್ಯಕ್ಷವಾಗಲು ದೇವಚರರನ್ನು ಮೋಜಿಗಾಗಿ ಇಳಿಸಲಾಗುವುದಿಲ್ಲ. ದೇವಚರರನ್ನು ಯಾವುದಾದರೂ ಜನಾಂಗದ ಬಗ್ಗೆ ಅಂತಿಮ ತೀರ್ಮಾನ ಮಾಡಬೇಕಾದ ನಿರ್ಣಾಯಕ ಹಂತದಲ್ಲಿ ಕಳುಹಿಸಲಾಗುತ್ತದೆ. "ಸತ್ಯದೊಂದಿಗೆ ಇಳಿಯುತ್ತಾರೆ" ಎಂದರೆ ಸತ್ಯವನ್ನು ಹೊತ್ತುಕೊಂಡು ಇಳಿಯುತ್ತಾರೆ ಎಂದು ಅರ್ಥ. ಅರ್ಥಾತ್ ಅಲ್ಲಾಹನ ದಿಟವಾದ ತೀರ್ಮಾನದೊಂದಿಗೆ ಅವರು ಬರುತ್ತಾರೆ ಮತ್ತು ಅದನ್ನು ಜಾರಿಗೊಳಿಸಿಯೇ ತೀರುತ್ತಾರೆ.
5. ಮೂಲದಲ್ಲಿ 'ನಸ್‌ಲುಕುಹು' ಎಂಬ ಪದ ಪ್ರಯೋಗವಾಗಿದೆ. ಸಲಕ್ ಎಂದರೆ ಅರಬಿ ಭಾಷೆಯಲ್ಲಿ ಯಾವುದಾದರೂ ವಸ್ತುವನ್ನು ಇನ್ನೊಂದರ ಮೂಲಕ ಸಾಗಿಸುವುದು, ಹಾಯಿಸುವುದು ಅಥವಾ ಪೋಣಿಸುವುದು ಎಂದಾಗಿದೆ. ನೂಲನ್ನು ಸೂಜಿಯ ರಂಧ್ರದೊಳಗೆ ಪೋಣಿಸುವಂತೆ. ಒಟ್ಟಿನಲ್ಲಿ ಈ ಸೂಕ್ತದ ಅರ್ಥವೇನೆಂದರೆ ಸತ್ಯವಿಶ್ವಾಸಿಗಳ ಮೇಲೆ ಈ ದಿಕ್ರ್ ಹೃದಯದ ಶಾಂತಿ ಮತ್ತು ಆತ್ಮದ

13. ಅವರು ಇದರ ಮೇಲೆ ವಿಶ್ವಾಸವಿರಿಸುವುದಿಲ್ಲ. ಇಂತಹವರ ವರ್ತನೆಯು ಪೂರ್ವಕಾಲದಿಂದಲೂ ಹೀಗೆಯೇ ನಡೆದು ಬರುತ್ತಿದೆ.

لَا يُؤْمِنُونَ بِهِ وَقَدْ خَلَتْ سُنَّةُ الْأَوَّلِينَ ﴿١٣﴾

14. ನಾವು ಅವರಿಗೆ ಆಕಾಶದ ದ್ವಾರವೊಂದನ್ನು ತೆರೆದು, ಅವರು ಹಾಡುಹಗಲಲ್ಲೇ ಅದರ ಮೇಲೆ ಏರಲು ತೊಡಗುತ್ತಿದ್ದರೆ-

وَلَوْ فَتَحْنَا عَلَيْهِم بَابًا مِّنَ السَّمَاءِ فَظَلُّوا فِيهِ يَعْرُجُونَ ﴿١٤﴾

15. ಅವರು ನಮಗೆ ಕಣ್ಣು ಕಟ್ಟು ಮಾಡಲಾಗಿದೆ ಎಂದಷ್ಟೆ ಅಲ್ಲದೆ ನಮಗೆ ಮಾಟಮಾಡಲಾಗಿದೆಯೆಂದೂ ಹೇಳುತ್ತಿದ್ದರು.

لَقَالُوا إِنَّمَا سُكِّرَتْ أَبْصَارُنَا بَلْ نَحْنُ قَوْمٌ مَّسْحُورُونَ ﴿١٥﴾

16. ಆಕಾಶಗಳಲ್ಲಿ ಅನೇಕ ಬುರುಜುಗಳನ್ನೂ ಮಾಡಿರುವುದು ನಾವೇ.[6] ಅವುಗಳನ್ನು ನಾವು ನೋಡುವವರಿಗಾಗಿ (ನಕ್ಷತ್ರಗಳಿಂದ) ಅಲಂಕರಿಸಿರುತ್ತೇವೆ-

وَلَقَدْ جَعَلْنَا فِي السَّمَاءِ بُرُوجًا وَزَيَّنَّاهَا لِلنَّاظِرِينَ ﴿١٦﴾

17. ಮತ್ತು ಪ್ರತಿಯೊಬ್ಬ ಧಿಕ್ಕರಿಸಲ್ಪಟ್ಟ ಶೈತಾನನಿಂದ ಅವುಗಳನ್ನು ಕಾಪಾಡಿರುತ್ತೇವೆ.

وَحَفِظْنَاهَا مِن كُلِّ شَيْطَانٍ رَّجِيمٍ ﴿١٧﴾

18. ಯಾವ ಶೈತಾನನೂ ಒಂದಿಷ್ಟು ಕದ್ದು ಕೇಳುವ ಹೊರತು[7] ಅವುಗಳಲ್ಲಿ ದಾರಿಗಾಣಲಾರ ಮತ್ತು ಅವನು ಕದ್ದಾಲಿಸಲು ಪ್ರಯತ್ನಿಸುವಾಗ ಒಂದು ಪ್ರಕಾಶಮಯ ಜ್ವಾಲೆಯು ಅವನನ್ನು ಬೆನ್ನಟ್ಟುತ್ತದೆ.[8]

إِلَّا مَنِ اسْتَرَقَ السَّمْعَ فَأَتْبَعَهُ شِهَابٌ مُّبِينٌ ﴿١٨﴾

ಆಹಾರದ ರೂಪದಲ್ಲಿ ಇಳಿಯುತ್ತದೆ. ಆದರೆ ಅಪರಾಧಿಗಳ ಹೃದಯಕ್ಕೆ ಅದು ಮಿಂಚಿನಂತೆ ನಾಟುತ್ತದೆ. ಅದನ್ನು ಕೇಳಿ ಅವರಲ್ಲಿ ಅಗ್ನಿಜ್ವಾಲೆಗಳೇಳುತ್ತವೆ. ಕಾಯಿಸಿದ ಸಲಾಕೆಯು ಹೃದಯದ ಮೂಲಕ ದಾಟಿ ಹೋಯಿತೋ ಎಂದು ಅವರಿಗೆ ಭಾಸವಾಗುತ್ತದೆ.

6. ಮೂಲದಲ್ಲಿ ಬುರೂಜ್ ಎಂಬ ಪದ ಪ್ರಯೋಗಿಸಲಾಗಿದೆ. 'ಬುರ್ಜ್' ಎಂದು ಅರಬಿ ಭಾಷೆಯಲ್ಲಿ ಕೋಟೆ, ಅರಮನೆ ಅಥವಾ ದೃಢವಾದ ಕಟ್ಟಡಕ್ಕೆ ಹೇಳುತ್ತಾರೆ. ನಂತರದ ವಿಷಯವನ್ನು ಗಮನಿಸಿದರೆ ಪ್ರಾಯಶಃ ಇದನ್ನು ಆಕಾಶ ಲೋಕದ ಪರಸ್ಪರ ಸುದೃಢವಾದ ಸರಹದ್ದುಗಳ ಮೂಲಕ ಪ್ರತ್ಯೇಕಗೊಂಡಿರುವ ವಲಯಗಳ ಬಗ್ಗೆ ಹೇಳಲಾಗಿರಬಹುದೆಂದು ವ್ಯಕ್ತವಾಗುತ್ತದೆ. ಈ ವಿವರಣೆಯ ಆಧಾರದಲ್ಲಿ ಬುರೂಜ್ ಎಂದರೆ 'ಸುರಕ್ಷಿತ ವಲಯಗಳು' ಎಂದು ಅರ್ಥೈಸುವುದು ಅತ್ಯಂತ ಸೂಕ್ತವೆನಿಸುತ್ತದೆ.

7. ಅರ್ಥಾತ್- ತಮ್ಮ ಸಂಗಾತಿಗಳಿಗೆ ಅಗೋಚರ ಸುದ್ದಿಗಳನ್ನು ಮುಟ್ಟಿಸುವ ಶೈತಾನರು. ವಾಸ್ತವದಲ್ಲಿ ಅವರ ಬಳಿ ಅಗೋಚರ ವಿಷಯಗಳನ್ನು ತಿಳಿಯುವ ಯಾವುದೇ ಮಾಧ್ಯಮವಿಲ್ಲ. ಎಲ್ಲಿ ಬೇಕಾದರೂ ಸಂಚರಿಸಿ ಅಲ್ಲಾಹನ ರಹಸ್ಯಗಳನ್ನು ತಿಳಿದುಕೊಳ್ಳಲು ನಿಸರ್ಗ ಅವರ ಮುಂದೆ ಸಂಪೂರ್ಣ ತೆರವುಗೊಂಡಿಲ್ಲ. ಅವರು ಕದ್ದು ಕೇಳಲು ಖಂಡಿತ ಪ್ರಯತ್ನಿಸುತ್ತಾರೆ. ಆದರೆ ವಾಸ್ತವದಲ್ಲಿ ಅವರಿಗೇನೂ ತಿಳಿಯುವುದಿಲ್ಲ.

8. 'ಶಿಹಾಬುಮ್ಮುಬೀನ್'ನ ಶಬ್ದಾರ್ಥ ಪ್ರಕಾಶಮಯ ಜ್ವಾಲೆ ಎಂದಾಗಿದೆ. ಇನ್ನೊಂದೆಡೆ ಕುರ್‌ಆನಿನಲ್ಲಿ ಇದಕ್ಕೆ 'ಶಿಹಾಬೆ ಸಾಕಿಬ್' ಎಂಬ ಪದ ಪ್ರಯೋಗಿಸಲಾಗಿದೆ. ಅರ್ಥಾತ್ ಕತ್ತಲೆಯನ್ನು ಭೇದಿಸುವಂತಹ ಜ್ವಾಲೆ. ಇದರ ಅರ್ಥ ನಾವು ಸಾಮಾನ್ಯವಾಗಿ ಉಲ್ಕೆಗಳು ಎಂದು ಕರೆಯುವ, ಬೀಳುವ ನಕ್ಷತ್ರಗಳು ಎಂದೇ ಆಗಿರಬೇಕಾಗಿಲ್ಲ. ಅವು ಬೇರೆ ರೂಪದ ಕಿರಣಗಳಾಗಿರಲೂಬಹುದು. ಉದಾ: ನಿಸರ್ಗ ಕಿರಣಗಳು (Cosmic Rays) ಅಥವಾ ನಮ್ಮ ಜ್ಞಾನಕ್ಕೆ ಇನ್ನೂ ಬಾರದಿರುವ ಅದಕ್ಕಿಂತಲೂ ತೀಕ್ಷ್ಣವಾದ ಇತರ ಕಿರಣಗಳು. ಹಾಗೆಯೇ ಕೆಲವೊಮ್ಮೆ ಬರಿಗಣ್ಣಿಗೆ ನಕ್ಷತ್ರ ತುಂಡಾಗಿ ವೇಗದೊಂದಿಗೆ ಭೂಮಿಯ ಕಡೆಗೆ ಬೀಳುತ್ತಿರುವಂತೆ ಭಾಸವಾಗುವ ಉಲ್ಕಾಪಾತವೇ ಆಗಿರಲೂಬಹುದು. ಇದು ಶೈತಾನರು ಬಾನಲೋಕದ ಕಡೆಗೆ ಆರೋಹಣ ಮಾಡುವುದಕ್ಕೆ ತಡೆಯಾಗಿ ನಿಲ್ಲುತ್ತವೆ.

19. ನಾವು ಭೂಮಿಯನ್ನು ಹರಡಿದೆವು. ಅದರಲ್ಲಿ ಪರ್ವತಗಳನ್ನು ನಾಟಿದೆವು. ಅದರಲ್ಲಿ ಎಲ್ಲ ಜಾತಿಯ ಸಸ್ಯಗಳನ್ನು ಸರಿಯಾಗಿ ನಿಶ್ಚಿತ ಪ್ರಮಾಣದಲ್ಲಿ ಬೆಳೆಸಿದೆವು.

وَالْأَرْضَ مَدَدْنٰهَا وَأَلْقَيْنَا فِيْهَا رَوَاسِيَ وَأَنْۢبَتْنَا فِيْهَا مِنْ كُلِّ شَيْءٍ مَّوْزُوْنٍ ﴿١٩﴾

20. ಮತ್ತು ಅದರಲ್ಲಿ ನಿಮಗಾಗಿಯೂ ನೀವು ಅನ್ನದಾತರಲ್ಲದಂತಹ ಅನೇಕ ಸೃಷ್ಟಿಗಳಿಗೂ ಜೀವನ ಸಾಧನಗಳನ್ನು ಒದಗಿಸಿದೆವು.

وَجَعَلْنَا لَكُمْ فِيْهَا مَعَايِشَ وَمَنْ لَّسْتُمْ لَهٗ بِرٰزِقِيْنَ ﴿٢٠﴾

21. ಯಾವುದೇ ವಸ್ತುವಿನ ಭಂಡಾರ ನಮ್ಮ ಬಳಿ ಇಲ್ಲದಿಲ್ಲ ಮತ್ತು ಯಾವ ವಸ್ತುವನ್ನಾದರೂ ನಾವು ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಮಾತ್ರ ಇಳಿಸುತ್ತೇವೆ.

وَإِنْ مِّنْ شَيْءٍ إِلَّا عِنْدَنَا خَزَآئِنُهٗ وَمَا نُنَزِّلُهٗٓ إِلَّا بِقَدَرٍ مَّعْلُوْمٍ ﴿٢١﴾

22. ಫಲಪ್ರದವಾದ ಮಾರುತಗಳನ್ನು ನಾವೇ ಕಳುಹಿಸುತ್ತೇವೆ. ಅನಂತರ ಆಕಾಶದಿಂದ ನೀರನ್ನು ಸುರಿಸುತ್ತೇವೆ ಮತ್ತು ನಿಮ್ಮ ದಾಹವನ್ನು ತಣಿಸುತ್ತೇವೆ. ಈ ಸಂಪತ್ತಿನ ಸಂಗ್ರಾಹಕರು ನೀವಲ್ಲ.

وَأَرْسَلْنَا الرِّيٰحَ لَوَاقِحَ فَأَنْزَلْنَا مِنَ السَّمَآءِ مَآءً فَأَسْقَيْنٰكُمُوْهُ ۚ وَمَآ أَنْتُمْ لَهٗ بِخٰزِنِيْنَ ﴿٢٢﴾

23. ಜೀವ ನೀಡುವವರೂ ಮರಣ ನೀಡುವವರೂ ನಾವೇ. ನಾವೇ ಎಲ್ಲರ ವಾರೀಸುದಾರರಾಗುವವರಿದ್ದೇವೆ.[9]

وَإِنَّا لَنَحْنُ نُحْيٖ وَنُمِيْتُ وَنَحْنُ الْوٰرِثُوْنَ ﴿٢٣﴾

24. ನಿಮ್ಮ ಪೈಕಿ ಈ ಮುಂಚೆ ಗತಿಸಿ ಹೋದವರನ್ನೂ ನಾವು ಬಲ್ಲೆವು ಆ ಬಳಿಕ ಬರುವವರೂ ನಮ್ಮ ಕಣ್ಣ ಮುಂದಿದ್ದಾರೆ.

وَلَقَدْ عَلِمْنَا الْمُسْتَقْدِمِيْنَ مِنْكُمْ وَلَقَدْ عَلِمْنَا الْمُسْتَأْخِرِيْنَ ﴿٢٤﴾

25. ನಿಶ್ಚಯವಾಗಿಯೂ ನಿಮ್ಮ ಪ್ರಭು ಅವರೆಲ್ಲರನ್ನೂ ಒಟ್ಟುಗೂಡಿಸುವನು. ಅವನು ಮಹಾ ಧೀಮಂತನೂ ಸರ್ವಜ್ಞನೂ ಆಗಿರುತ್ತಾನೆ.

وَإِنَّ رَبَّكَ هُوَ يَحْشُرُهُمْ ۗ إِنَّهٗ حَكِيْمٌ عَلِيْمٌ ﴿٢٥﴾

26. ನಾವು ಮಾನವನನ್ನು ಹಳಸಿದ ಮಣ್ಣಿನ ಒಣ ಗಾರೆಯಿಂದ ಸೃಷ್ಟಿಸಿದೆವು.[10]

وَلَقَدْ خَلَقْنَا الْإِنْسَانَ مِنْ صَلْصَالٍ مِّنْ حَمَإٍ مَّسْنُوْنٍ ﴿٢٦﴾

9. ಅರ್ಥಾತ್- ನಿಮ್ಮ ನಂತರ ನಾವೇ ಬಾಕಿಯುಳಿಯುವವರಾಗಿದ್ದೇವೆ. ನಿಮಗೆ ದೊರೆತಿರುವುದೆಲ್ಲವೂ ತಾತ್ಕಾಲಿಕವಾಗಿ ದೊರೆತಿದೆ. ಕೊನೆಗೆ ನಾವು ದಯಪಾಲಿಸಿರುವ ಎಲ್ಲವನ್ನೂ ಹಾಗೆಯೇ ಬಿಟ್ಟು ನೀವು ಬರಿಗೈಯಲ್ಲಿ ಹೊರಡಲಿರುವಿರಿ ಮತ್ತು ಈ ಎಲ್ಲಾ ವಸ್ತುಗಳು ಹಾಗೆಯೇ ನಮ್ಮ ಖಜಾನೆಯಲ್ಲಿ ಬಾಕಿಯುಳಿಯುವುದು.

10. ಮನುಷ್ಯನು ಪ್ರಾಣಿಗಳ ಹಂತದಿಂದ ನಿರಂತರ ಪ್ರಗತಿ ಸಾಧಿಸುತ್ತಾ ಮನುಷ್ಯತ್ವದ ಮಜಲಿಗೆ ಕಾಲಿರಿಸಲಿಲ್ಲ ಎಂಬುದನ್ನು ಕುರ್‌ಆನ್ ಈ ಮೂಲಕ ಸ್ಪಷ್ಟಪಡಿಸುತ್ತದೆ. ಆಧುನಿಕ ಕಾಲದ ಡಾರ್ವಿನ್ ಸಿದ್ಧಾಂತದಿಂದ ಪ್ರಭಾವಿತರಾದ ವ್ಯಾಖ್ಯಾನಕಾರರು ಕುರ್‌ಆನ್‌ನಿಂದ ಅದನ್ನು ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಮನುಷ್ಯನ ಸೃಷ್ಟಿಯ ಆರಂಭ ಭೂಮಿಯ ಮೂಲವಸ್ತುಗಳಿಂದ ಆಗಿದೆ ಎನ್ನುವುದನ್ನು ಅಲ್ಲಾಹನು, 'ಸಲ್‌ಸಾಲಿಮ್ಮಿನ್ ಹಮಯಿಮ್ಮಸ್ನೂನ್' (ಮಣ್ಣಿನ ಒಣಗಾರೆಯಿಂದ) ಎಂದು ವಿವರಿಸಿದ್ದಾನೆ. ನಾದಿದ ಮಣ್ಣಿನಿಂದ ಒಂದು ಗೊಂಬೆಯನ್ನು ತಯಾರಿಸಲಾಯಿತು, ಅದು ಒಣಗಿದ ನಂತರ ಅದಕ್ಕೆ ಆತ್ಮವನ್ನು ಊದಲಾಯಿತು ಎಂದು ಇದರಿಂದ ವ್ಯಕ್ತವಾಗುತ್ತದೆ.

| | |
|---|---|
| 27. ಮತ್ತು ಅದಕ್ಕಿಂತ ಮುಂಚೆ 'ಜಿನ್ನ್'ಗಳನ್ನು (ಯಕ್ಷರನ್ನು) ಅಗ್ನಿಯ ಜ್ವಾಲೆಯಿಂದ ಸೃಷ್ಟಿಸಿದ್ದೆವು.[11] | وَالْجَآنَّ خَلَقْنٰهُ مِنْ قَبْلُ مِنْ نَّارِ السَّمُوْمِ ﴿٢٧﴾ |
| 28. ನಿಮ್ಮ ಪ್ರಭು ದೇವಚರರೊಡನೆ, "ನಾನು ಹಳಸಿದ ಮಣ್ಣಿನ ಒಣ ಗಾರೆಯಿಂದ ಒಬ್ಬ ಮಾನವನನ್ನು ಸೃಷ್ಟಿಸುವವನಿದ್ದೇನೆ. | وَاِذْ قَالَ رَبُّكَ لِلْمَلٰٓئِكَةِ اِنِّىْ خَالِقٌۢ بَشَرًا مِّنْ صَلْصَالٍ مِّنْ حَمَاٍ مَّسْنُوْنٍ ﴿٢٨﴾ |
| 29. ನಾನು ಅವನನ್ನು ಸಂಪೂರ್ಣಗೊಳಿಸಿ ಅವನೊಳಗೆ ನನ್ನ ಆತ್ಮದಿಂದ ಕೊಂಚ ಊದಿದಾಗ ನೀವೆಲ್ಲರೂ ಅವನ ಮುಂದೆ ಸಾಷ್ಟಾಂಗ ವೆರಗಬೇಕು" ಎಂದು ಹೇಳಿದ ಸಂದರ್ಭವನ್ನು ಸ್ಮರಿಸಿರಿ. | فَاِذَا سَوَّيْتُهٗ وَنَفَخْتُ فِيْهِ مِنْ رُّوْحِىْ فَقَعُوْا لَهٗ سٰجِدِيْنَ ﴿٢٩﴾ |
| 30. ಆ ಪ್ರಕಾರ ಎಲ್ಲ ದೇವಚರರೂ ಸಾಷ್ಟಾಂಗವೆರಗಿದರು- | فَسَجَدَ الْمَلٰٓئِكَةُ كُلُّهُمْ اَجْمَعُوْنَ ﴿٣٠﴾ |
| 31. 'ಇಬ್‌ಲೀಸ್'ನ ಹೊರತು. ಅವನು ಸಾಷ್ಟಾಂಗವೆರಗುವವರೊಂದಿಗೆ ಸೇರಲು ನಿರಾಕರಿಸಿಬಿಟ್ಟನು. | اِلَّآ اِبْلِيْسَ ؕ اَبٰٓى اَنْ يَّكُوْنَ مَعَ السّٰجِدِيْنَ ﴿٣١﴾ |
| 32. ಪ್ರಭು ಕೇಳಿದನು, "ಓ ಇಬ್‌ಲೀಸ್, ನೀನು ಸಾಷ್ಟಾಂಗವೆರಗುವವರೊಂದಿಗೆ ಸೇರದಿರಲು ಕಾರಣವೇನು?" | قَالَ يٰٓاِبْلِيْسُ مَا لَكَ اَلَّا تَكُوْنَ مَعَ السّٰجِدِيْنَ ﴿٣٢﴾ |
| 33. ಅವನು (ಹೀಗೆ) ಹೇಳಿದನು: "ನೀನು ಹಳಸಿದ ಮಣ್ಣಿನ ಗಾರೆಯಿಂದ ಸೃಷ್ಟಿಸಿದ ಈ ಮಾನವನಿಗೆ ಸಾಷ್ಟಾಂಗವೆರಗುವುದು ನನ್ನ ಕೆಲಸವಲ್ಲ." | قَالَ لَمْ اَكُنْ لِّاَسْجُدَ لِبَشَرٍ خَلَقْتَهٗ مِنْ صَلْصَالٍ مِّنْ حَمَاٍ مَّسْنُوْنٍ ﴿٣٣﴾ |
| 34. (ಆಗ) ಪ್ರಭು, "ಇಲ್ಲಿಂದ ಹೊರಗೆ ನಡೆ. ಏಕೆಂದರೆ ನೀನು ಶಪಿಸಲ್ಪಟ್ಟವನು- | قَالَ فَاخْرُجْ مِنْهَا فَاِنَّكَ رَجِيْمٌ ﴿٣٤﴾ |
| 35. ಮತ್ತು ಮುಂದೆ ನಿರ್ಣಾಯಕ ದಿನದ ವರೆಗೂ ನಿನ್ನ ಮೇಲೆ ಅಭಿಶಪನವಿದೆ" ಎಂದನು. | وَّاِنَّ عَلَيْكَ اللَّعْنَةَ اِلٰى يَوْمِ الدِّيْنِ ﴿٣٥﴾ |
| 36. (ಆಗ) ಅವನು, "ಓ ನನ್ನ ಪ್ರಭೂ, ಹಾಗಿದ್ದರೆ ಸಕಲ ಮಾನವರೂ ಪುನಃ ಎಬ್ಬಿಸಲ್ಪಡುವ ದಿನದ ವರೆಗೆ ಕಾಲಾವಕಾಶ ನೀಡು" ಎಂದು ಬಿನ್ನವಿಸಿದನು. | قَالَ رَبِّ فَاَنْظِرْنِىْۤ اِلٰى يَوْمِ يُبْعَثُوْنَ ﴿٣٦﴾ |

11. 'ಸಮೂಮ್' ಎಂದು ಬಿಸಿಗಾಳಿಗೆ ಹೇಳುತ್ತಾರೆ. ಬೆಂಕಿಯನ್ನು ಬಿಸಿಗಾಳಿಯ ಜತೆಗೆ ಸೇರಿಸಿ ವಿವರಿಸಲಾದರೆ ಅದರ ಅರ್ಥ ಬೆಂಕಿಯ ಬದಲು, ತೀಕ್ಷ್ಣ ಆವಿ ಎಂದಾಗುತ್ತದೆ. ಇದರಿಂದ ಜಿನ್ನ್‌ಗಳನ್ನು ಅಗ್ನಿಯಿಂದ ಸೃಷ್ಟಿಸಲಾಗಿದೆ ಎಂದು ಕುರ್‌ಆನಿನಲ್ಲಿ ಹೇಳಲಾಗಿರುವ ಕಡೆಗಳ ಬಗ್ಗೆಯೂ ವ್ಯಾಖ್ಯಾನ ದೊರೆಯುತ್ತದೆ.

37. ಆಗ, ಅಲ್ಲಾಹನು ಹೇಳಿದನು-"ಇದೋ ನಿನಗೆ ಕಾಲಾವಕಾಶವಿದೆ-

قَالَ فَإِنَّكَ مِنَ الْمُنْظَرِينَ

38. ನಮಗೆ ತಿಳಿದಿರುವ ಆ ನಿಶ್ಚಿತ ಸಮಯದ ವರೆಗೆ."

إِلَىٰ يَوْمِ الْوَقْتِ الْمَعْلُومِ

39. ಅವನೆಂದನು, "ಓ ನನ್ನ ಪ್ರಭೂ, ನೀನು ನನ್ನನ್ನು ದಾರಿ ಗೆಡಿಸಿದಂತೆಯೇ ನಾನು ಭೂಮಿಯಲ್ಲಿ ಮನಮೋಹಕಗಳನ್ನುಂಟು ಮಾಡಿ ಎಲ್ಲ ಜನರನ್ನು ದಾರಿಗೆಡಿಸಿ ಬಿಡುವೆನು,

قَالَ رَبِّ بِمَا أَغْوَيْتَنِي لَأُزَيِّنَنَّ لَهُمْ فِي الْأَرْضِ وَلَأُغْوِيَنَّهُمْ أَجْمَعِينَ

40. ನೀನು ಆಯ್ದುಕೊಂಡ ದಾಸರನ್ನು ಹೊರತು."

إِلَّا عِبَادَكَ مِنْهُمُ الْمُخْلَصِينَ

41. (ಆಗ ಅಲ್ಲಾಹನು ಹೀಗೆ) ಹೇಳಿದನು: "ನೇರವಾಗಿ ನನ್ನನ್ನು ತಲಪುವ ಮಾರ್ಗವಿದು.[12]

قَالَ هَٰذَا صِرَاطٌ عَلَيَّ مُسْتَقِيمٌ

42. ನಿಶ್ಚಯವಾಗಿಯೂ ನನ್ನ ನಿಷ್ಠಾವಂತ ದಾಸರ ಮೇಲೆ ನಿನ್ನ ಅಧಿಕಾರ ನಡೆಯದು. ನಿನ್ನ ಅಧಿಕಾರವು ನಿನ್ನನ್ನು ಅನುಸರಿಸುವ ಪಥಭ್ರಷ್ಟರ ಮೇಲೆ ಮಾತ್ರ ನಡೆಯುವುದಷ್ಟೆ.[13]

إِنَّ عِبَادِي لَيْسَ لَكَ عَلَيْهِمْ سُلْطَانٌ إِلَّا مَنِ اتَّبَعَكَ مِنَ الْغَاوِينَ

43. ನಿಶ್ಚಯವಾಗಿಯೂ ಅವರೆಲ್ಲರಿಗೂ ನರಕದ ವಾಗ್ದಾನವಿದೆ."

وَإِنَّ جَهَنَّمَ لَمَوْعِدُهُمْ أَجْمَعِينَ

44. ಈ ನರಕಕ್ಕೆ ಏಳು ದ್ವಾರಗಳಿವೆ. ಪ್ರತಿಯೊಂದು ದ್ವಾರಕ್ಕೆ ಅವರಲ್ಲೊಂದು ಭಾಗವನ್ನು ನಿಗದಿಗೊಳಿಸಲಾಗಿದೆ.[14]

لَهَا سَبْعَةُ أَبْوَابٍ لِكُلِّ بَابٍ مِنْهُمْ جُزْءٌ مَقْسُومٌ

45. ಇದಕ್ಕೆ ವ್ಯತಿರಿಕ್ತವಾಗಿ ಕರ್ಮನಿಷ್ಠರು ಉದ್ಯಾನಗಳಲ್ಲಿಯೂ ಚಿಲುಮೆಗಳಲ್ಲಿಯೂ ಇರುವರು.

إِنَّ الْمُتَّقِينَ فِي جَنَّاتٍ وَعُيُونٍ

46. ಶಾಂತರಾಗಿಯೂ ನಿರ್ಭಯರಾಗಿಯೂ ಅವುಗಳೊಳಗೆ ಪ್ರವೇಶಿಸಿರೆಂದು ಅವರೊಡನೆ ಹೇಳಲಾಗುವುದು.

ادْخُلُوهَا بِسَلَامٍ آمِنِينَ

12. 'ಹಾದಾ ಸಿರಾತುಲ್ ಅಲಯ್ಯ ಮುಸ್ತಕೀಮ್' ಎಂಬುದನ್ನು ಎರಡು ರೀತಿಯಲ್ಲಿ ಅರ್ಥೈಸಬಹುದಾಗಿದೆ. ಒಂದನೆಯದು ನಾವು ಭಾಷಾಂತರದಲ್ಲಿ ಕೊಟ್ಟಿರುವ ಅರ್ಥವಾಗಿದೆ. ಎರಡನೆಯದು, "ಆ ಮಾತು ನಿಜ. ನಾನೂ ಅದಕ್ಕೆ ಬದ್ಧನಾಗಿರುವೆ" ಎಂದಾಗಿದೆ.

13. ಈ ವಾಕ್ಯದ ಅರ್ಥ ಹೀಗೂ ಆಗಬಹುದು, 'ನನ್ನ ದಾಸರ (ಜನಸಾಮಾನ್ಯರ) ಮೇಲೆ ಬಲವಂತದಿಂದ ಅವರನ್ನು ಆಜ್ಞೋಲ್ಲಂಘಕರನ್ನಾಗಿ ಮಾಡುವ ಅಧಿಕಾರ ನಿನಗೆ ಇರಲಾರದು. ಆದರೆ ಸ್ವತಃ ದಾರಿತಪ್ಪಿರುವ ಮತ್ತು ಸ್ವಯಂ ನಿನ್ನ ಅನುಸರಣೆ ಮಾಡಬಯಸುವವರನ್ನು ನಿನ್ನ ಮಾರ್ಗದಲ್ಲಿ ನಡೆಯಲು ಬಿಟ್ಟು ಬಿಡಲಾಗುವುದು. ಅವರನ್ನು ಒತ್ತಾಯಪೂರ್ವಕ ಅದರಿಂದ ತಡೆಯಲು ನಾವು ಪ್ರಯತ್ನಿಸುವುದಿಲ್ಲ.

14. ನರಕದ ಈ ದ್ವಾರಗಳು ಪ್ರಾಯಶಃ ಅವರ ಪಥಭ್ರಷ್ಟತೆ ಮತ್ತು ಪಾಪಗಳಿಗೆ ಅನುಗುಣ ವಾಗಿರುವುದು. ಅವುಗಳ ಮೂಲಕವೇ ವ್ಯಕ್ತಿ ತನ್ನನ್ನು ನರಕಕ್ಕೆ ಅರ್ಹನಾಗಿ ಮಾಡಿಕೊಳ್ಳುವನು. ಉದಾಹರಣೆಗೆ ಕೆಲವರು ನಾಸ್ತಿಕತೆಯ ಮೂಲಕ ನರಕದೆಡೆಗೆ ಸಾಗುತ್ತಾರೆ. ಕೆಲವರು ಕಪಟ ವಿಶ್ವಾಸ, ಬಹುದೇವಾರಾಧನೆ, ಸ್ವೇಚ್ಛಾಚಾರ, ಪಥಭ್ರಷ್ಟತೆ, ಅಕ್ರಮ-ಅನ್ಯಾಯ, ಸೃಷ್ಟಿಗಳಿಗೆ ಉಪದ್ರವ ನೀಡುವ ಪ್ರವೃತ್ತಿ, ಮಿಥ್ಯದ ಪ್ರಚಾರ, ಸತ್ಯನಿಷೇಧದ ಸಂಸ್ಥಾಪನೆ, ಕೆಡುಕು ಮತ್ತು ಅಶ್ಲೀಲತೆಯ ಪ್ರಚಾರ ಇತ್ಯಾದಿ ವಿಭಿನ್ನ ಮಾರ್ಗಗಳನ್ನು ಅನುಸರಿಸುತ್ತಾರೆ. ಒಬ್ಬ ವ್ಯಕ್ತಿಯ ಯಾವ ದುರ್ಗುಣ ಹೆಚ್ಚು ಸುವ್ಯಕ್ತವಿರುವುದೋ ಅದಕ್ಕನುಗುಣವಾಗಿ ನರಕದೆಡೆಗೆ ಸಾಗಲು ಅವನ ಹಾದಿಯನ್ನು ಗೊತ್ತುಪಡಿಸಲಾಗುವುದು.

47. ಅವರ ಹೃದಯಗಳಲ್ಲಿ ಇರಬಹುದಾದ ಅಲ್ಪಸ್ವಲ್ಪ ಕೇಡನ್ನು ನಾವು ತೆಗೆದು ಬಿಡುವೆವು. ಅವರು ಪರಸ್ಪರ ಸಹೋದರರಾಗಿ ಅಭಿಮುಖರಾಗಿ ಆಸನಗಳಲ್ಲಿ ಕುಳಿತುಕೊಳ್ಳುವರು.

وَنَزَعْنَا مَا فِي صُدُورِهِم مِّنْ غِلٍّ إِخْوَانًا عَلَىٰ سُرُرٍ مُّتَقَابِلِينَ ﴿٤٧﴾

48. ಅವರಿಗೆ ಅಲ್ಲಿ ಯಾವತ್ತು ಪರಿಶ್ರಮ ಪಡಬೇಕಾಗಿ ಬರದು ಮತ್ತು ಅವರು ಅಲ್ಲಿಂದ ಹೊರಹಾಕಲ್ಪಡುವುದೂ ಇಲ್ಲ.

لَا يَمَسُّهُمْ فِيهَا نَصَبٌ وَمَا هُم مِّنْهَا بِمُخْرَجِينَ ﴿٤٨﴾

49. ಓ ಪೈಗಂಬರರೇ, ನಾನು ಮಹಾ ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತೇನೆಂದು ನನ್ನ ದಾಸರಿಗೆ ತಿಳಿಸಿಬಿಡಿರಿ.

نَبِّئْ عِبَادِي أَنِّي أَنَا الْغَفُورُ الرَّحِيمُ ﴿٤٩﴾

50. ಇದರೊಂದಿಗೇ ನನ್ನ ಯಾತನೆಯೂ ಅತ್ಯಂತ ವೇದನಾಯುಕ್ತ ವಾಗಿದೆ (ಎಂದೂ ತಿಳಿಸಿ ಬಿಡಿರಿ.)

وَأَنَّ عَذَابِي هُوَ الْعَذَابُ الْأَلِيمُ ﴿٥٠﴾

51. ಇವರಿಗೆ ಇಬ್‌ರಾಹೀಮರ ಅತಿಥಿಗಳ ವೃತ್ತಾಂತವನ್ನೂ ತಿಳಿಸಿರಿ.

وَنَبِّئْهُمْ عَن ضَيْفِ إِبْرَاهِيمَ ﴿٥١﴾

52. ಅವರು ಇವರಲ್ಲಿಗೆ ಬಂದು, "ನಿಮಗೆ ಶಾಂತಿ ಇರಲಿ" ಎಂದರು. ಆಗ ಇವರು, "ನಮಗೆ ನಿಮ್ಮ ಬಗೆಗೆ ಹೆದರಿಕೆಯಾಗುತ್ತಿದೆ" ಎಂದರು.

إِذْ دَخَلُوا عَلَيْهِ فَقَالُوا سَلَامًا قَالَ إِنَّا مِنكُمْ وَجِلُونَ ﴿٥٢﴾

53. ಆಗ ಅವರು, "ಹೆದರಬೇಡಿರಿ, ನಾವು ನಿಮಗೆ ಓರ್ವ ಮೇಧಾವಿ ಯಾದ ಪುತ್ರನ ಸುವಾರ್ತೆ ನೀಡುತ್ತೇವೆ" ಎಂದರು.[15]

قَالُوا لَا تَوْجَلْ إِنَّا نُبَشِّرُكَ بِغُلَامٍ عَلِيمٍ ﴿٥٣﴾

54. ಇಬ್‌ರಾಹೀಮರು, "ಈ ವೃದ್ಧಾಪ್ಯದಲ್ಲಿ ನೀವು ನನಗೆ (ಮಗನ) ಸುವಾರ್ತೆ ನೀಡುತ್ತೀರಾ? ನೀವೆಂತಹ ಸುವಾರ್ತೆ ನೀಡುತ್ತಿರುವಿ ರೆಂದು ಕೊಂಚ ಯೋಚಿಸಿರಿ" ಎಂದರು.

قَالَ أَبَشَّرْتُمُونِي عَلَىٰ أَن مَّسَّنِيَ الْكِبَرُ فَبِمَ تُبَشِّرُونَ ﴿٥٤﴾

55. ಆಗ ಅವರು, "ನಾವು ನಿಮಗೆ ಪರಮ ಸತ್ಯವಾಗಿರುವ ಸುವಾರ್ತೆ ನೀಡುತ್ತಿದ್ದೇವೆ- ನೀವು ನಿರಾಶರಾಗಬೇಡಿರಿ" ಎಂದು ಉತ್ತರ ಕೊಟ್ಟರು.

قَالُوا بَشَّرْنَاكَ بِالْحَقِّ فَلَا تَكُن مِّنَ الْقَانِطِينَ ﴿٥٥﴾

56. ಇಬ್‌ರಾಹೀಮರು, "ತಮ್ಮ ಪ್ರಭುವಿನ ಅನುಗ್ರಹದ ಬಗ್ಗೆ ಪಥಭ್ರಷ್ಟರು ಮಾತ್ರ ನಿರಾಶರಾಗುತ್ತಾರೆ" ಎಂದು ಹೇಳಿ-

قَالَ وَمَن يَقْنَطُ مِن رَّحْمَةِ رَبِّهِ إِلَّا الضَّالُّونَ ﴿٥٦﴾

15. ಅರ್ಥಾತ್- ಹ. ಇಸ್‌ಹಾಕ್‌ರ(ರ) ಜನನದ ಸುವಾರ್ತೆ. ಹೂದ್ ಅಧ್ಯಾಯದಲ್ಲಿ ಈ ಬಗ್ಗೆ ವಿವರಣೆ ನೀಡಲಾಗಿದೆ.

57. "ಓ ದೇವದೂತರೇ, ನೀವು ಯಾವ ಕಾರ್ಯಾಚರಣೆಗಾಗಿ ಬಂದಿರುವಿರಿ?" ಎಂದು ಕೇಳಿದರು.

قَالَ فَمَا خَطْبُكُمْ أَيُّهَا الْمُرْسَلُونَ ﴿٥٧﴾

58. (ಆಗ) ಅವರು, "ನಾವು ಒಂದು ಅಪರಾಧಿ ಜನಾಂಗದ ಕಡೆಗೆ ಕಳುಹಿಸಲ್ಪಟ್ಟಿದ್ದೇವೆ-

قَالُوا إِنَّا أُرْسِلْنَا إِلَىٰ قَوْمٍ مُجْرِمِينَ ﴿٥٨﴾

59. ಆದರೆ 'ಲೂತ್'ರ ಮನೆಯವರು ಇದಕ್ಕೆ ಹೊರತಾಗಿದ್ದಾರೆ. ಅವರ ಮನೆಯವರೆಲ್ಲರನ್ನೂ ನಾವು ರಕ್ಷಿಸುವೆವು-

إِلَّا آلَ لُوطٍ إِنَّا لَمُنَجُّوهُمْ أَجْمَعِينَ ﴿٥٩﴾

60. 'ಲೂತ್'ರ ಪತ್ನಿಯ ಹೊರತು; ಆಕೆ ಹಿಂದೆ ಉಳಿಯುವವರಲ್ಲಿ ಸೇರಿದವಳೆಂದು ನಾವು ವಿಧಿಸಿದ್ದೇವೆ (ಎಂದು ಅಲ್ಲಾಹನು ಹೇಳುತ್ತಾನೆ)" ಎಂದರು.

إِلَّا امْرَأَتَهُ قَدَّرْنَا ۙ إِنَّهَا لَمِنَ الْغَابِرِينَ ﴿٦٠﴾

61. ಅನಂತರ ಆ ದೂತರು ಲೂತರಲ್ಲಿಗೆ ತಲಪಿದಾಗ-

فَلَمَّا جَاءَ آلَ لُوطٍ الْمُرْسَلُونَ ﴿٦١﴾

62. ಅವರು, "ನೀವು ನನಗೆ ಅಪರಿಚಿತರಾಗಿ ತೋರುತ್ತೀರಿ" ಎಂದರು.

قَالَ إِنَّكُمْ قَوْمٌ مُنْكَرُونَ ﴿٦٢﴾

63. ಆಗ ಅವರು, "ಅಲ್ಲ; ಯಾವುದರ ಆಗಮನದ ಬಗ್ಗೆ ಇವರು ಸಂದೇಹ ಪಡುತ್ತಿದ್ದರೋ ಅದನ್ನು ತೆಗೆದುಕೊಂಡು ನಾವು ಬಂದಿದ್ದೇವೆ.

قَالُوا بَلْ جِئْنَاكَ بِمَا كَانُوا فِيهِ يَمْتَرُونَ ﴿٦٣﴾

64. ನಾವು ಸತ್ಯ ಸಹಿತ ನಿಮ್ಮ ಬಳಿಗೆ ಬಂದಿರುತ್ತೇವೆಂದು ನಾವು ನಿಮ್ಮೊಡನೆ ಖಾತ್ರಿಯಾಗಿ ಹೇಳುತ್ತೇವೆ.

وَأَتَيْنَاكَ بِالْحَقِّ وَإِنَّا لَصَادِقُونَ ﴿٦٤﴾

65. ಆದುದರಿಂದ ಇನ್ನು ನೀವು ಸ್ವಲ್ಪ ರಾತ್ರಿ ಉಳಿದಿರುವಾಗಲೇ ನಿಮ್ಮ ಮನೆಯವರನ್ನು ಕರಕೊಂಡು ಹೊರಟು ಹೋಗಿಬಿಡಿರಿ ಮತ್ತು ನೀವು ಸ್ವತಃ ಅವರ ಹಿಂದೆ ಹಿಂದೆಯೇ ನಡೆಯಿರಿ. ನಿಮ್ಮ ಪೈಕಿ ಯಾರೂ ಹಿಂತಿರುಗಿ ನೋಡಬಾರದು. ನಿಮಗೆ ಎತ್ತ ಹೋಗಲು ಆಜ್ಞಾಪಿಸಲಾಗುತ್ತದೋ ಅತ್ತ ನೇರವಾಗಿ ಸಾಗಿರಿ" ಎಂದು ಹೇಳಿದರು.

فَأَسْرِ بِأَهْلِكَ بِقِطْعٍ مِنَ اللَّيْلِ وَاتَّبِعْ أَدْبَارَهُمْ وَلَا يَلْتَفِتْ مِنْكُمْ أَحَدٌ وَامْضُوا حَيْثُ تُؤْمَرُونَ ﴿٦٥﴾

66. ಬೆಳಗಾಗುವುದರೊಳಗಾಗಿ ಅವರೆಲ್ಲರ ಮೂಲೋತ್ಪಾಟನಗೊಳಿಸಲಾಗುವುದೆಂಬ ನಮ್ಮ ಈ ತೀರ್ಮಾನವನ್ನು ನಾವು ಅವರಿಗೆ ಮುಟ್ಟಿಸಿಬಿಟ್ಟೆವು.

وَقَضَيْنَا إِلَيْهِ ذَٰلِكَ الْأَمْرَ أَنَّ دَابِرَ هَٰؤُلَاءِ مَقْطُوعٌ مُصْبِحِينَ ﴿٦٦﴾

| | |
|---|---|
| 67. ಇಷ್ಟರಲ್ಲಿ ನಗರದವರು ಸಂತೋಷದಿಂದ ಮೈ ಮರೆತು ಲೂತರ ಮನೆಗೆ ಧಾವಿಸಿ ಬಂದರು. | وَجَآءَ اَهۡلُ الۡمَدِيۡنَةِ يَسۡتَبۡشِرُوۡنَ ﴿۶۷﴾ |
| 68. ಲೂತರು ಹೇಳಿದರು, "ಬಂಧುಗಳೇ, ಇವರು ನನ್ನ ಅತಿಥಿಗಳು- ನನ್ನನ್ನು ಅವಮಾನಿಸಬೇಡಿರಿ. | قَالَ اِنَّ هٰٓؤُلَاۤءِ ضَيۡفِىۡ فَلَا تَفۡضَحُوۡنِۙ ﴿۶۸﴾ |
| 69. ಅಲ್ಲಾಹನನ್ನು ಭಯಪಡಿರಿ- ನನ್ನನ್ನು ಅಪಮಾನಕ್ಕೀಡು ಮಾಡಬೇಡಿರಿ." | وَاتَّقُوا اللّٰهَ وَلَا تُخۡزُوۡنِ ﴿۶۹﴾ |
| 70. ಆಗ ಅವರು, "ಇಡೀ ಲೋಕದ ಗುತ್ತಿಗೆ ಪಡೆಯುವುದು ಬೇಡವೆನ್ನುತ್ತ ನಾವು ಪದೇ ಪದೇ ನಿಮ್ಮನ್ನು ತಡೆಯಲಿಲ್ಲವೇ?" ಎಂದು ಕೇಳಿದರು. | قَالُوۡۤا اَوَلَمۡ نَـنۡهَكَ عَنِ الۡعٰلَمِيۡنَ ﴿۷۰﴾ |
| 71. ಲೂತರು (ವಿನಮ್ರತೆಯಿಂದ), "ನಿಮಗೇನಾದರೂ ಮಾಡಲೇಬೇಕೆಂದಿದ್ದರೆ ಇದೋ ಈ ನನ್ನ ಪುತ್ರಿಯರಿದ್ದಾರೆ" ಎಂದು ಹೇಳಿದರು.[16] | قَالَ هٰٓؤُلَاۤءِ بَنٰتِىۡۤ اِنۡ كُنۡتُمۡ فٰعِلِيۡنَؕ ﴿۷۱﴾ |
| 72. ನಿಮ್ಮ ಜೀವದಾಣೆ! (ಓ ಪೈಗಂಬರರೇ,) ಆಗ ಆ ಜನರು ಮದೋನ್ಮತ್ತರಾಗಿದ್ದರು. ಅದರಿಂದ ಅವರು ಮೈ ಮರೆತಿದ್ದರು. | لَعَمۡرُكَ اِنَّهُمۡ لَفِىۡ سَكۡرَتِهِمۡ يَعۡمَهُوۡنَ ﴿۷۲﴾ |
| 73. ಕಟ್ಟಕಡೆಗೆ ಉಷಾಕಾಲವಾದೊಡನೆ ಅವರ ಮೇಲೆ ಒಂದು ಭಯಾನಕ ಸ್ಫೋಟವೆರಗಿತು. | فَاَخَذَتۡهُمُ الصَّيۡحَةُ مُشۡرِقِيۡنَۙ ﴿۷۳﴾ |
| 74. ನಾವು ಆ ನಾಡನ್ನು ಬುಡಮೇಲು ಮಾಡಿ ಬಿಟ್ಟೆವು ಮತ್ತು ಅವರ ಮೇಲೆ ಸುಡುಮಣ್ಣಿನ ಕಲ್ಲುಗಳ ಮಳೆಗರೆದೆವು. | فَجَعَلۡنَا عَالِيَهَا سَافِلَهَا وَاَمۡطَرۡنَا عَلَيۡهِمۡ حِجَارَةً مِّنۡ سِجِّيۡلٍؕ ﴿۷۴﴾ |
| 75. ಈ ಘಟನೆಯಲ್ಲಿ ವಿಚಾರಶೀಲರಿಗೆ ಉನ್ನತವಾದ ನಿದರ್ಶನಗಳಿವೆ. | اِنَّ فِىۡ ذٰلِكَ لَاٰيٰتٍ لِّلۡمُتَوَسِّمِيۡنَ ﴿۷۵﴾ |
| 76. (ಈ ದುರ್ಘಟನೆ ಸಂಭವಿಸಿದ) ಆ ಪ್ರದೇಶವು ಸಾರ್ವಜನಿಕ ಸಂಚಾರ ಮಾರ್ಗದಲ್ಲೇ ಇದೆ.[17] | وَاِنَّهَا لَبِسَبِيۡلٍ مُّقِيۡمٍ ﴿۷۶﴾ |
| 77. ಇದರಲ್ಲಿ ನಿಶ್ಚಯವಾಗಿಯೂ ಸತ್ಯವಿಶ್ವಾಸಿಗಳಿಗೆ ಎಚ್ಚರಿಕೆಯ ಸಾಧನಗಳಿವೆ. | اِنَّ فِىۡ ذٰلِكَ لَاٰيَةً لِّلۡمُؤۡمِنِيۡنَؕ ﴿۷۷﴾ |

16. ವಿವರಣೆಗಾಗಿ ನೋಡಿರಿ. ಅಧ್ಯಾಯ ಹೂದ್, ಟಿಪ್ಪಣಿ-26, 27.

17. ಅರ್ಥಾತ್- ಹಿಜಾಝ್‌ನಿಂದ ಸಿರಿಯಾ ಮತ್ತು ಇರಾಕ್‌ನಿಂದ ಈಜಿಪ್ಟ್‌ಗೆ ಹೋಗುವಾಗ ಈ ವಿನಾಶಕ್ಕೀಡಾದ ಪ್ರದೇಶಗಳು ದಾರಿಯಲ್ಲಿ ಸಿಗುತ್ತವೆ. ಯಾತ್ರಾತಂಡಗಳು ಸಾಮಾನ್ಯವಾಗಿ ವಿನಾಶದ ಪಳಿಯುಳಿಕೆಗಳನ್ನು ನೋಡುತ್ತವೆ. ಇಂದಿಗೂ ಆ ಇಡೀ ಪ್ರದೇಶದಲ್ಲಿ ಅದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

78. 'ಐಕಃ'ದವರು[18] ಅಕ್ರಮಿಗಳಾಗಿದ್ದರು.

وَإِن كَانَ أَصْحَٰبُ ٱلْأَيْكَةِ لَظَٰلِمِينَ ﴿٧٨﴾

79. ನಾವು ಅವರ ಮೇಲೂ ಪ್ರತೀಕಾರವೆಸಗಿದೆವು. ಈ ಎರಡೂ ಜನಾಂಗಗಳ ಅವಶೇಷಗಳು ರಾಜ ಮಾರ್ಗದಲ್ಲೇ ಇವೆ.[19]

فَٱنتَقَمْنَا مِنْهُمْ وَإِنَّهُمَا لَبِإِمَامٍ مُّبِينٍ ﴿٧٩﴾

80. 'ಹಿಜ್ರ್'ನವರೂ ಸಂದೇಶವಾಹಕರನ್ನು ಸುಳ್ಳಾಗಿಸಿದ್ದರು.

وَلَقَدْ كَذَّبَ أَصْحَٰبُ ٱلْحِجْرِ ٱلْمُرْسَلِينَ ﴿٨٠﴾

81. ನಾವು ನಮ್ಮ ನಿದರ್ಶನಗಳನ್ನು ಅವರಿಗೆ ತೋರಿಸಿದೆವು. ಆದರೆ ಅವರು ಅವೆಲ್ಲವನ್ನೂ ಅಲಕ್ಷಿಸುತ್ತಲೇ ಇದ್ದರು.

وَءَاتَيْنَٰهُمْ ءَايَٰتِنَا فَكَانُوا۟ عَنْهَا مُعْرِضِينَ ﴿٨١﴾

82. ಅವರು ಪರ್ವತಗಳನ್ನು ಕೊರೆದು ಮನೆಗಳನ್ನು ಮಾಡುತ್ತಿದ್ದರು ಮತ್ತು ತಮ್ಮಷ್ಟಕ್ಕೆ ನಿರ್ಭಯರಾಗಿ ನಿಶ್ಚಿಂತರಾಗಿದ್ದರು.

وَكَانُوا۟ يَنْحِتُونَ مِنَ ٱلْجِبَالِ بُيُوتًا ءَامِنِينَ ﴿٨٢﴾

83. ಕಟ್ಟಕಡೆಗೆ ಬೆಳಗಾಗುತ್ತಲೇ ಒಂದು ಪ್ರಚಂಡ ಸ್ಫೋಟವು ಬಂದೆರಗಿತು.

فَأَخَذَتْهُمُ ٱلصَّيْحَةُ مُصْبِحِينَ ﴿٨٣﴾

84. ಮತ್ತು ಅವರ ಸಂಪಾದನೆಯು ಅವರ ಯಾವ ಉಪಯೋಗಕ್ಕೂ ಬರಲಿಲ್ಲ.

فَمَآ أَغْنَىٰ عَنْهُم مَّا كَانُوا۟ يَكْسِبُونَ ﴿٨٤﴾

85. ನಾವು ಭೂಮಿ-ಆಕಾಶಗಳನ್ನೂ ಅವುಗಳಲ್ಲಿ ಇರುವುದೆಲ್ಲವನ್ನೂ ಪರಮ ಸತ್ಯವಾಗಿಯೇ ವಿನಾ ಸೃಷ್ಟಿಸಲಿಲ್ಲ ಮತ್ತು ತೀರ್ಮಾನದ ಗಳಿಗೆಯು ಖಂಡಿತವಾಗಿಯೂ ಬರಲಿದೆ. ಆದುದರಿಂದ ಓ ಪೈಗಂಬರರೇ, ನೀವು (ಇವರ ಅಸಭ್ಯ ವರ್ತನೆಗೆ ಪ್ರತಿಯಾಗಿ) ಸೌಜನ್ಯ ಪೂರ್ಣ ಕ್ಷಮೆಯೊಂದಿಗೆ ವರ್ತಿಸಿರಿ.

وَمَا خَلَقْنَا ٱلسَّمَٰوَٰتِ وَٱلْأَرْضَ وَمَا بَيْنَهُمَآ إِلَّا بِٱلْحَقِّ ۗ وَإِنَّ ٱلسَّاعَةَ لَءَاتِيَةٌ ۖ فَٱصْفَحِ ٱلصَّفْحَ ٱلْجَمِيلَ ﴿٨٥﴾

86. ನಿಶ್ಚಯವಾಗಿಯೂ ನಿಮ್ಮ ಪ್ರಭು ಎಲ್ಲರ ಸೃಷ್ಟಿಕರ್ತನೂ ಸರ್ವಜ್ಞನೂ ಆಗಿರುತ್ತಾನೆ.

إِنَّ رَبَّكَ هُوَ ٱلْخَلَّٰقُ ٱلْعَلِيمُ ﴿٨٦﴾

87. ನಾವು ನಿಮಗೆ ಪದೇ ಪದೇ ಪುನರಾವರ್ತಿಸುವ ಸಪ್ತ ಸೂಕ್ತಗಳನ್ನೂ[20] ದಿವ್ಯ ಕುರ್‌ಆನನ್ನೂ ದಯಪಾಲಿಸಿದ್ದೇವೆ.

وَلَقَدْ ءَاتَيْنَٰكَ سَبْعًا مِّنَ ٱلْمَثَانِى وَٱلْقُرْءَانَ ٱلْعَظِيمَ ﴿٨٧﴾

18. ಅರ್ಥಾತ್- ಹ. ಶುಐಬ್‌ರ(ಅ) ಸಮುದಾಯಕ್ಕೆ ಸೇರಿದ ಜನರು. 'ಐಕ' ಎಂಬುದು 'ತಬೂಕ್'ನ ಪ್ರಾಚೀನ ಹೆಸರು.

19. ಮದ್‌ಯನ್ ಮತ್ತು ಐಕ ಸಮುದಾಯಗಳ ಪ್ರದೇಶವೂ ಹಿಜಾಝ್‌ನಿಂದ ಸಿರಿಯಾ ಮತ್ತು ಫೆಲಸ್ತೀನ್‌ಗೆ ಹೋಗುವ ಮಾರ್ಗದಲ್ಲೇ ಇದೆ.

20. ಅರ್ಥಾತ್- 'ಫಾತಿಹಾ' ಅಧ್ಯಾಯದ ಸೂಕ್ತಗಳು. ಪ್ರಾಚೀನ ವಿದ್ವಾಂಸರ ಪೈಕಿ ಹೆಚ್ಚಿನವರು ಈ ಬಗ್ಗೆ ಒಮ್ಮತಾಭಿಪ್ರಾಯ ಹೊಂದಿದ್ದಾರೆ.

88. ನಾವು ಅವರಲ್ಲಿರುವ ನಾನಾ ವಿಧದ ಜನರಿಗೆ ಕೊಟ್ಟಿರುವ ಲೌಕಿಕ ಸುಖೋಪಭೋಗಗಳ ಕಡೆಗೆ ನೀವು ಕಣ್ಣೆತ್ತಿಯೂ ನೋಡಬೇಡಿರಿ ಮತ್ತು ಅವರಿಗಾಗಿ ಮರುಗಲೂ ಬೇಡಿರಿ. (ಅವರನ್ನು ಅವರ ಪಾಡಿಗೆ ಬಿಟ್ಟು) ಸತ್ಯವಿಶ್ವಾಸವನ್ನು ಸ್ವೀಕರಿಸುವವರ ಕಡೆಗೆ ಬಾಗಿರಿ.

لَا تَمُدَّنَّ عَيْنَيْكَ إِلَىٰ مَا مَتَّعْنَا بِهِۦٓ أَزْوَٰجًا مِّنْهُمْ وَلَا تَحْزَنْ عَلَيْهِمْ وَٱخْفِضْ جَنَاحَكَ لِلْمُؤْمِنِينَ ﴿٨٨﴾

89. (ನಿರಾಕರಿಸುವವರೊಡನೆ) "ನಾನು ಸುಸ್ಪಷ್ಟವಾಗಿ ಎಚ್ಚರಿಕೆ ನೀಡುವವನು" ಎಂದು ಹೇಳಿಬಿಡಿರಿ.

وَقُلْ إِنِّيٓ أَنَا ٱلنَّذِيرُ ٱلْمُبِينُ ﴿٨٩﴾

90-91. ಇದು ತಮ್ಮ ಕುರ್‌ಆನನ್ನು ಛಿನ್ನವಿಚ್ಛಿನ್ನಗೊಳಿಸಿರುವ[21] ಒಡಕುಗಾರರ ಕಡೆಗೆ ನಾವು ಕಳುಹಿಸಿದ್ದಂತಹ ಎಚ್ಚರಿಕೆಯೇ ಆಗಿರುತ್ತದೆ.

كَمَآ أَنزَلْنَا عَلَى ٱلْمُقْتَسِمِينَ ﴿٩٠﴾ ٱلَّذِينَ جَعَلُوا۟ ٱلْقُرْءَانَ عِضِينَ ﴿٩١﴾

92-93. ನಿಮ್ಮ ಪ್ರಭುವಿನಾಣೆ! ಅವರೇನು ಮಾಡುತ್ತಲಿದ್ದರೆಂದು ನಾವು ಅವರೆಲ್ಲರೊಡನೆ ವಿಚಾರಿಸಿಯೇ ತೀರುವೆವು.

فَوَرَبِّكَ لَنَسْـَٔلَنَّهُمْ أَجْمَعِينَ ﴿٩٢﴾ عَمَّا كَانُوا۟ يَعْمَلُونَ ﴿٩٣﴾

94. ಆದುದರಿಂದ ಓ ಪೈಗಂಬರರೇ, ನಿಮಗೆ ಕೊಡಲಾಗುತ್ತಿರುವ ಆದೇಶಗಳನ್ನು ಘಂಟಾ ಘೋಷವಾಗಿ ಸಾರಿ ಬಿಡಿರಿ ಮತ್ತು ಬಹುದೇವವಿಶ್ವಾಸಿಗಳನ್ನು ಕೊಂಚವೂ ಗಣನೆಗೆ ತೆಗೆದು ಕೊಳ್ಳಬೇಡಿರಿ.

فَٱصْدَعْ بِمَا تُؤْمَرُ وَأَعْرِضْ عَنِ ٱلْمُشْرِكِينَ ﴿٩٤﴾

95. ಆ ಅಪಹಾಸ್ಯ ಮಾಡುವವರನ್ನು ನಿಮ್ಮ ಪರವಾಗಿ ಶಿಕ್ಷಿಸಲು ನಾವು ಸಾಕು.

إِنَّا كَفَيْنَٰكَ ٱلْمُسْتَهْزِءِينَ ﴿٩٥﴾

96. ಅವರು ಅಲ್ಲಾಹನೊಂದಿಗೆ ಇತರರನ್ನು ದೇವನೆನ್ನುತ್ತಾರೆ. ಸದ್ಯವೇ ಅವರಿಗೆ ಗೊತ್ತಾಗಲಿದೆ.

ٱلَّذِينَ يَجْعَلُونَ مَعَ ٱللَّهِ إِلَٰهًا ءَاخَرَ ۚ فَسَوْفَ يَعْلَمُونَ ﴿٩٦﴾

97. ಅವರಾಡುತ್ತಿರುವ ಅಪವಾದದ ಮಾತುಗಳಿಂದ ನಿಮಗೆ ತುಂಬಾ ಖೇದವಾಗುತ್ತಿದೆ ಎಂಬುದನ್ನು ನಾವು ಬಲ್ಲೆವು-

وَلَقَدْ نَعْلَمُ أَنَّكَ يَضِيقُ صَدْرُكَ بِمَا يَقُولُونَ ﴿٩٧﴾

---

ಪ್ರವಾದಿವರ್ಯರು(ಸ), 'ಸಬ್‌ಅನ್ ಮಿನಲ್ ಮಸಾನಿ' ಎಂದರೆ ಸೂರಃ ಫಾತಿಹಾ ಎಂದು ಹೇಳಿರುವುದಾಗಿ ಇಮಾಮ್ ಬುಖಾರಿ(ರ) ಅವರೂ ಎರಡು ಉಲ್ಲೇಖಗಳನ್ನು ನೀಡಿದ್ದಾರೆ.

21. ಅರ್ಥಾತ್- ಕುರ್‌ಆನ್ ನೀಡಲಾಗಿರುವಂತೆ ಅವರಿಗೆ ನೀಡಲಾಗಿದ್ದ ಗ್ರಂಥವನ್ನು ಅವರು ಛಿದ್ರಛಿದ್ರಗೊಳಿಸಿದರು. ಅದರ ಕೆಲವು ಭಾಗವನ್ನು ಅನುಸರಿಸಿದರು, ಕೆಲವನ್ನು ಕಡೆಗಣಿಸಿಬಿಟ್ಟರು.

98. (ಇದಕ್ಕೆ ಪರಿಹಾರವೇನೆಂದರೆ) ನಿಮ್ಮ ಪ್ರಭುವಿನ ಕೀರ್ತನೆಯೊಂದಿಗೆ ಅವನನ್ನು ಸ್ತುತಿಸಿರಿ. ಅವನ ಸನ್ನಿಧಿಯಲ್ಲಿ ಸಾಷ್ಟಾಂಗವೆರಗಿರಿ-

فَسَبِّحْ بِحَمْدِ رَبِّكَ وَكُنْ مِّنَ السّٰجِدِيْنَ ﴿٩٨﴾

99. ಖಂಡಿತವಾಗಿಯೂ ಬಂದೇ ತೀರುವ ಆ ಕೊನೆಯ ಘಳಿಗೆಯ ವರೆಗೂ ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡುತ್ತಲಿರಿ.

وَاعْبُدْ رَبَّكَ حَتّٰى يَأْتِيَكَ الْيَقِيْنُ ﴿٩٩﴾

---






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಲ್ಲಾಹನ ವಿಧಿ ಬಂದು ಬಿಟ್ಟಿತು.[1] ಇನ್ನು ಅದಕ್ಕಾಗಿ ಅವಸರ ಪಡಬೇಡಿರಿ. ಅವನು ಪರಮ ಪಾವನನು ಮತ್ತು ಇವರು ಮಾಡುತ್ತಿರುವ 'ದೇವಸಹಭಾಗಿತ್ವಕ್ಕಿಂತ' ಮಹೋನ್ನತನು.

أَتَىٰ أَمْرُ اللّٰهِ فَلَا تَسْتَعْجِلُوهُ ۚ سُبْحَانَهُ وَتَعَالَىٰ عَمَّا يُشْرِكُونَ ①

2. ಅವನು ಈ 'ರೂಹ್' ಅನ್ನು[2] ತನಗೆ ಇಷ್ಟ ಬಂದ ದಾಸನ ಮೇಲೆ ತನ್ನ ಅನುಜ್ಞೆಯಿಂದ ದೇವಚರರ ಮುಖಾಂತರ ಅವತೀರ್ಣ ಗೊಳಿಸಿಬಿಡುತ್ತಾನೆ. (ಇದು) "ನನ್ನ ಹೊರತು ಯಾರೂ ನಿಮ್ಮ ಆರಾಧ್ಯನಿಲ್ಲ. ಆದುದರಿಂದ ನೀವು ನನ್ನನ್ನೇ ಭಯಪಡಿರಿ, ಎಂದು ಜನರನ್ನು ಎಚ್ಚರಿಸಿರಿ" (ಎಂಬ ಆದೇಶ ಸಹಿತ ವಾಗಿರುತ್ತದೆ).

يُنَزِّلُ الْمَلَائِكَةَ بِالرُّوحِ مِنْ أَمْرِهِ عَلَىٰ مَنْ يَشَاءُ مِنْ عِبَادِهِ أَنْ أَنْذِرُوا أَنَّهُ لَا إِلَٰهَ إِلَّا أَنَا فَاتَّقُونِ ②

3. ಅವನು ಆಕಾಶಗಳನ್ನೂ ಭೂಮಿಯನ್ನೂ ಸತ್ಯಪೂರ್ಣವಾಗಿ ಸೃಷ್ಟಿಸಿರುತ್ತಾನೆ. ಇವರು ಮಾಡುವ 'ದೇವಸಹಭಾಗಿತ್ವಕ್ಕಿಂತ' ಅವನು ಮಹೋನ್ನತನು.

خَلَقَ السَّمَاوَاتِ وَالْأَرْضَ بِالْحَقِّ ۚ تَعَالَىٰ عَمَّا يُشْرِكُونَ ③

4. ಅವನು ಮಾನವನನ್ನು ಬರೇ ಒಂದು ವೀರ್ಯಾಣುವಿನಿಂದ

خَلَقَ الْإِنْسَانَ مِنْ نُطْفَةٍ فَإِذَا هُوَ

1. ಅರ್ಥಾತ್- ಅದು ಗೋಚರವಾಗುವ ಮತ್ತು ಜಾರಿಗೊಳ್ಳುವ ಕಾಲ ಹತ್ತಿರವೇ ಇದೆ. ಪ್ರಾಯಶಃ ಇಲ್ಲಿ ತೀರ್ಮಾನವೆಂದು ಹೇಳಲಾಗಿರುವುದು ಪ್ರವಾದಿವರ್ಯರು(ಸ) ಮಕ್ಕಾದಿಂದ ವಲಸೆ ಹೋಗುವುದರ ಕುರಿತಾಗಿದೆ. ಈ ಸೂಕ್ತ ಬಂದ ಸ್ವಲ್ಪ ಕಾಲದ ನಂತರವೇ ಅದರ ಆಜ್ಞೆ ನೀಡಲಾಯಿತು. ಪ್ರವಾದಿಗಳು ಯಾವ ಜನಾಂಗದ ಮಧ್ಯೆ ತಮ್ಮ ದೌತ್ಯವನ್ನು ನಿರ್ವಹಿಸುತ್ತಾರೋ ಆ ಜನಾಂಗ ಆಜ್ಞೋಲ್ಲಂಘನೆಯ ಚರಮ ಸೀಮೆಗೆ ತಲಪಿದಾಗ ಪ್ರವಾದಿಗೆ ವಲಸೆ ಹೋಗುವ ಆಜ್ಞೆ ನೀಡಲಾಗುತ್ತದೆ ಎಂದು ಕುರ್‌ಆನಿನ ಅಧ್ಯಯನದಿಂದ ನಮಗೆ ವ್ಯಕ್ತವಾಗುತ್ತದೆ. ಈ ಆಜ್ಞೆ ಆ ಜನಾಂಗದ ಭವಿಷ್ಯದ ಬಗ್ಗೆ ತೀರ್ಮಾನವನ್ನೂ ಮಾಡಿಬಿಡುತ್ತದೆ. ಅನಂತರ ಅವರ ಮೇಲೆ ವಿನಾಶಕಾರಿ ಯಾತನೆ ಎರಗುತ್ತದೆ. ಇಲ್ಲವೇ ಪ್ರವಾದಿ ಮತ್ತು ಅವರ ಅನುಯಾಯಿಗಳ ಮೂಲಕ ಅವರ ಮೂಲೋತ್ಪಾಟನೆಯಾಗುತ್ತದೆ.
2. ಇಲ್ಲಿ 'ರೂಹ್' ಎಂದರೆ ಪ್ರವಾದಿತ್ವದ ಸ್ಫೂರ್ತಿ ಮತ್ತು ದಿವ್ಯವಾಣಿ. ಪ್ರವಾದಿಗಳ ನಡೆ-ನುಡಿಗಳೆಲ್ಲವೂ ಇವುಗಳಿಂದ ಕೂಡಿರುತ್ತದೆ.

ಸೃಷ್ಟಿಸಿದನು ಮತ್ತು ನೋಡುತ್ತಿದ್ದ ಹಾಗೆ ಅವನೊಬ್ಬ ಪ್ರತ್ಯಕ್ಷ ಜಗಳಗಂಟನಾಗಿ ಮಾರ್ಪಟ್ಟನು.[3]

خَصِيمٌ مُّبِينٌ ④

5. ಅವನು (ಅರ್ಥಾತ್ ಅಲ್ಲಾಹನು) ಪ್ರಾಣಿಗಳನ್ನು ಸೃಷ್ಟಿಸಿದನು. ಅವುಗಳಲ್ಲಿ ನಿಮಗೆ ಉಡುಪೂ ಆಹಾರವೂ ಇನ್ನೂ ನಾನಾ ವಿಧದ ಇತರ ಪ್ರಯೋಜನಗಳೂ ಇವೆ.

وَالْأَنْعَامَ خَلَقَهَا ۗ لَكُمْ فِيهَا دِفْءٌ وَمَنَافِعُ وَمِنْهَا تَأْكُلُونَ ⑤

6. ನೀವು ಮುಂಜಾನೆ ಅವುಗಳನ್ನು ಮೇವಿಗೆ ಬಿಡುವಾಗಲೂ ಸಂಜೆ ಅವುಗಳನ್ನು ಮರಳಿ ತರುವಾಗಲೂ ನಿಮಗೆ ಅವುಗಳಲ್ಲಿ ಸೊಬಗಿದೆ.

وَلَكُمْ فِيهَا جَمَالٌ حِينَ تُرِيحُونَ وَحِينَ تَسْرَحُونَ ⑥

7. ಅವು ನಿಮಗಾಗಿ ಹೊರೆಯನ್ನು ಹೊತ್ತುಕೊಂಡು, ನೀವು ಅತ್ಯಂತ ಪರಿಶ್ರಮ ಪಡದೆ ತಲುಪಲಾಗದಂತಹ ಸ್ಥಳಗಳಿಗೆ ಒಯ್ಯುತ್ತವೆ. ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ವತ್ಸಲನೂ ಕರುಣಾನಿಧಿಯೂ ಆಗಿರುತ್ತಾನೆ.

وَتَحْمِلُ أَثْقَالَكُمْ إِلَىٰ بَلَدٍ لَّمْ تَكُونُوا بَالِغِيهِ إِلَّا بِشِقِّ الْأَنفُسِ ۚ إِنَّ رَبَّكُمْ لَرَءُوفٌ رَّحِيمٌ ⑦

8. ಅವನು ಕುದುರೆಗಳನ್ನೂ ಹೇಸರಕತ್ತೆಗಳನ್ನೂ ಕತ್ತೆಗಳನ್ನೂ ನಿಮ್ಮ ಸವಾರಿಗಾಗಿಯೂ ಅವು ನಿಮ್ಮ ಜೀವನದ ಶೋಭೆಯಾಗುವಂತೆಯೂ ಸೃಷ್ಟಿಸಿದನು. ನಿಮಗೆ ಗೊತ್ತೇ ಇಲ್ಲದ ಇನ್ನೂ ಅನೇಕ ವಸ್ತುಗಳನ್ನು ಅವನು (ನಿಮ್ಮ ಪ್ರಯೋಜನಕ್ಕಾಗಿ) ಸೃಷ್ಟಿಸುತ್ತಾನೆ.[4]

وَالْخَيْلَ وَالْبِغَالَ وَالْحَمِيرَ لِتَرْكَبُوهَا وَزِينَةً ۚ وَيَخْلُقُ مَا لَا تَعْلَمُونَ ⑧

9. ಅಡ್ಡ ಮಾರ್ಗಗಳೂ ಇರುವಾಗ ನೇರ ಮಾರ್ಗವನ್ನು ತೋರಿಸುವ ಹೊಣೆ ಅಲ್ಲಾಹನ ಮೇಲೆಯೇ ಇದೆ. ಅವನು ಇಚ್ಛಿಸುತ್ತಿದ್ದರೆ ನಿಮಗೆಲ್ಲರಿಗೂ ಸನ್ಮಾರ್ಗದರ್ಶನ ಮಾಡುತ್ತಿದ್ದನು.

وَعَلَى اللَّهِ قَصْدُ السَّبِيلِ وَمِنْهَا جَائِرٌ ۚ وَلَوْ شَاءَ لَهَدَاكُمْ أَجْمَعِينَ ⑨

10. ಅವನೇ ನಿಮಗಾಗಿ ಆಕಾಶದಿಂದ ನೀರನ್ನು ಸುರಿಸಿದನು. ಅದನ್ನು ನೀವು ಸ್ವತಃ ಕುಡಿಯುತ್ತೀರಿ ಮತ್ತು ಅದರಿಂದ ನಿಮ್ಮ ಪ್ರಾಣಿಗಳಿಗೆ ಮೇವೂ ಉಂಟಾಗುತ್ತದೆ.

هُوَ الَّذِي أَنزَلَ مِنَ السَّمَاءِ مَاءً ۖ لَّكُم مِّنْهُ شَرَابٌ وَمِنْهُ شَجَرٌ فِيهِ تُسِيمُونَ ⑩

3. ಇದನ್ನು ಎರಡು ರೀತಿಯಲ್ಲಿ ಅರ್ಥೈಸಬಹುದು. ಪ್ರಾಯಶಃ ಎರಡು ಅರ್ಥಗಳೂ ಇದಕ್ಕೆ ಅನ್ವಯವಾಗುತ್ತದೆ. ಮೊದಲನೆಯದಾಗಿ ಸಂವಾದ ನಡೆಸಲು ಅರ್ಹವಾದ ಮತ್ತು ತನ್ನ ಇಂಗಿತಕ್ಕೆ ಆಧಾರ ಪ್ರಮಾಣಗಳನ್ನು ಒದಗಿಸಲು ಸಮರ್ಥನಾದ ಆ ಮಾನವನನ್ನು ಅಲ್ಲಾಹನು ಅತ್ಯಂತ ನಿಕೃಷ್ಟವಾದ ವೀರ್ಯದ ಬಿಂದುವಿನಿಂದ ಸೃಷ್ಟಿಸಿದನು. ಎರಡನೆಯದಾಗಿ ಅಲ್ಲಾಹನು ವೀರ್ಯದಂತಹ ನಿಕೃಷ್ಟ ವಸ್ತುವಿನಿಂದ ಸೃಷ್ಟಿಸಿದ ಮಾನವನ ಆತ್ಮಪ್ರತಿಷ್ಠೆಯ ಅತಿರೇಕವನ್ನು ನೋಡಿ! ಅವನು ಸ್ವತಃ ದೇವನೊಡನೆಯೇ ಜಗಳ ಕಾಯಲು ಸಿದ್ಧನಾಗಿ ನಿಂತಿದ್ದಾನೆ.

4. ಅರ್ಥಾತ್- ಮಾನವನ ಹಿತಕ್ಕಾಗಿ ಕಾರ್ಯವೆಸಗುತ್ತಿರುವ ಅಸಂಖ್ಯ ವಿಷಯಗಳು. ಎಲ್ಲಿ ಎಷ್ಟು ಪ್ರಮಾಣದ ಸೇವಕರು ಅವನ ಸೇವೆಗೆಯ್ಯುತ್ತಿದ್ದಾರೆ ಮತ್ತು ಆ ಸೇವೆಯ ಸ್ವರೂಪ ಎಂತಹುದು ಎಂಬ ಬಗ್ಗೆಯೂ ಅವನಿಗೆ ತಿಳುವಳಿಕೆಯಿಲ್ಲ.

11. ಅವನು ಈ ನೀರಿನ ಮೂಲಕ ಬೆಳೆ ಬೆಳೆಯಿಸುತ್ತಾನೆ. ಝೈತೂನ್ (ಜೀತ ವೃಕ್ಷ), ಖರ್ಜೂರ, ದ್ರಾಕ್ಷೆ ಮತ್ತು ಇತರ ನಾನಾ ವಿಧದ ಫಲಗಳನ್ನು ಉತ್ಪಾದಿಸುತ್ತಾನೆ. ವಿವೇಚಿಸುವವರಿಗೆ ನಿಶ್ಚಯವಾಗಿಯೂ ಇದರಲ್ಲಿ ಒಂದು ದೊಡ್ಡ ನಿದರ್ಶನವಿದೆ.

يُنۢبِتُ لَكُم بِهِ ٱلزَّرۡعَ وَٱلزَّيۡتُونَ وَٱلنَّخِيلَ وَٱلۡأَعۡنَٰبَ وَمِن كُلِّ ٱلثَّمَرَٰتِۚ إِنَّ فِي ذَٰلِكَ لَأٓيَةٗ لِّقَوۡمٖ يَتَفَكَّرُونَ ١١

12. ಅವನು ನಿಮಗಾಗಿ ಇರುಳು ಹಗಲುಗಳನ್ನೂ ಸೂರ್ಯ ಚಂದ್ರರನ್ನೂ ನಿಯಂತ್ರಿಸಿರುತ್ತಾನೆ. ಎಲ್ಲಾ ನಕ್ಷತ್ರಗಳೂ ಅವನ ಅಪ್ಪಣೆಯಿಂದ ನಿಯಂತ್ರಿತವಾಗಿವೆ. ಬುದ್ಧಿಜೀವಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

وَسَخَّرَ لَكُمُ ٱلَّيۡلَ وَٱلنَّهَارَ وَٱلشَّمۡسَ وَٱلۡقَمَرَۖ وَٱلنُّجُومُ مُسَخَّرَٰتُۢ بِأَمۡرِهِۦٓۚ إِنَّ فِي ذَٰلِكَ لَأٓيَٰتٖ لِّقَوۡمٖ يَعۡقِلُونَ ١٢

13. ಅವನು ನಿಮಗಾಗಿ ಭೂಮಿಯಲ್ಲಿ ಸೃಷ್ಟಿಸಿರುವ ವಿವಿಧ ಬಣ್ಣಗಳ ವಸ್ತುಗಳಲ್ಲಿಯೂ ಗ್ರಹಿಸುವವರಿಗೆ ಖಂಡಿತವಾಗಿಯೂ ನಿದರ್ಶನವಿದೆ.

وَمَا ذَرَأَ لَكُمۡ فِي ٱلۡأَرۡضِ مُخۡتَلِفًا أَلۡوَٰنُهُۥٓۚ إِنَّ فِي ذَٰلِكَ لَأٓيَةٗ لِّقَوۡمٖ يَذَّكَّرُونَ ١٣

14. ನಿಮಗಾಗಿ ಸಮುದ್ರಗಳನ್ನು ನಿಯಂತ್ರಿಸಿ ನೀವು ಅದರಿಂದ ತಾಜಾ ಮಾಂಸ ಪಡೆದು ತಿನ್ನಲಾಗುವಂತೆಯೂ ಅದರಿಂದ ನೀವು ಧರಿಸುವ ಅಲಂಕಾರ ಸಾಧನಗಳನ್ನು ಹೊರ ತೆಗೆಯುವಂತೆಯೂ ಮಾಡಿದವನು ಅವನೇ. ನಾವೆಯು ಸಮುದ್ರದ ಹೃದಯವನ್ನು ಸೀಳುತ್ತ ಸಾಗುತ್ತಿರುವುದನ್ನು ನೀವು ನೋಡುತ್ತೀರಿ. ಇವೆಲ್ಲ ನೀವು ನಿಮ್ಮ ಪ್ರಭುವಿನ ಅನುಗ್ರಹವನ್ನು ಅರಸಲಿಕ್ಕೂ[5] ಅವನಿಗೆ ಕೃತಜ್ಞರಾಗಲಿಕ್ಕೂ ಆಗಿರುತ್ತದೆ.

وَهُوَ ٱلَّذِي سَخَّرَ ٱلۡبَحۡرَ لِتَأۡكُلُواْ مِنۡهُ لَحۡمٗا طَرِيّٗا وَتَسۡتَخۡرِجُواْ مِنۡهُ حِلۡيَةٗ تَلۡبَسُونَهَاۖ وَتَرَى ٱلۡفُلۡكَ مَوَاخِرَ فِيهِ وَلِتَبۡتَغُواْ مِن فَضۡلِهِۦ وَلَعَلَّكُمۡ تَشۡكُرُونَ ١٤

15. ಭೂಮಿಯು ನಿಮ್ಮನ್ನೆತ್ತಿಕೊಂಡು ಅಲುಗಾಡದಂತೆ ಅವನು ಭೂಮಿಯಲ್ಲಿ ಪರ್ವತಗಳನ್ನು ನಾಟಿ ಬಿಟ್ಟಿರುತ್ತಾನೆ. ನೀವು ದಾರಿಗಾಣಲಿಕ್ಕೂ ಅವನು ನದಿಗಳನ್ನು ಹರಿಸಿದನು ಮತ್ತು ಸ್ವಾಭಾವಿಕವಾದ ಮಾರ್ಗಗಳನ್ನು ಮಾಡಿದನು.

وَأَلۡقَىٰ فِي ٱلۡأَرۡضِ رَوَٰسِيَ أَن تَمِيدَ بِكُمۡ وَأَنۡهَٰرٗا وَسُبُلٗا لَّعَلَّكُمۡ تَهۡتَدُونَ ١٥

16. ಅವನು ಭೂಮಿಯಲ್ಲಿ ಮಾರ್ಗಗಳನ್ನು ತೋರಿಸುವ ಕುರುಹುಗಳನ್ನಿರಿಸಿದನು ಮತ್ತು ಜನರು ನಕ್ಷತ್ರಗಳಿಂದಲೂ ದಾರಿಗಾಣುತ್ತಾರೆ.

وَعَلَٰمَٰتٖۚ وَبِٱلنَّجۡمِ هُمۡ يَهۡتَدُونَ ١٦

17. ಹೀಗಿರುವಾಗ ಸೃಷ್ಟಿಸುವಾತನೂ ಏನನ್ನೂ ಸೃಷ್ಟಿಸದವರೂ ಸಮಾನರೇ? ನೀವೇನು ವಿವೇಚಿಸುವುದಿಲ್ಲವೇ?

أَفَمَن يَخۡلُقُ كَمَن لَّا يَخۡلُقُۚ أَفَلَا تَذَكَّرُونَ ١٧

5. ಅರ್ಥಾತ್- ಸಿಂಧುವಾದ ಮಾರ್ಗದಿಂದ ನಿಮ್ಮ ಜೀವನಾಧಾರವನ್ನು ಪಡೆಯಲು ಪ್ರಯತ್ನಿಸಿರಿ.

18. ನೀವು ಅಲ್ಲಾಹನ ಅನುಗ್ರಹಗಳನ್ನು ಎಣಿಕೆ ಮಾಡಲಿಚ್ಛಿಸಿದರೂ ಎಣಿಕೆ ಮಾಡಲಾರಿರಿ. ವಾಸ್ತವದಲ್ಲಿ ಅವನು ಮಹಾ ಕ್ಷಮಾ ಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِن تَعُدُّوا نِعْمَةَ اللَّهِ لَا تُحْصُوهَا ۗ
إِنَّ اللَّهَ لَغَفُورٌ رَّحِيمٌ ﴿١٨﴾

19. ವಸ್ತುತಃ ನೀವು ಬಹಿರಂಗಗೊಳಿಸುವುದನ್ನೂ ಮುಚ್ಚಿಡುವುದನ್ನೂ ಅಲ್ಲಾಹನು ಬಲ್ಲವನಾಗಿರುತ್ತಾನೆ.

وَاللَّهُ يَعْلَمُ مَا تُسِرُّونَ وَمَا تُعْلِنُونَ ﴿١٩﴾

20. ಇವರು ಅಲ್ಲಾಹನನ್ನು ಬಿಟ್ಟು ಇತರ ಯಾರನ್ನು ಕೂಗಿ ಪ್ರಾರ್ಥಿಸುತ್ತಿರುವರೋ ಅವರು ಯಾವುದೇ ವಸ್ತುವಿನ ಸೃಷ್ಟಿ ಕರ್ತರಲ್ಲ. ನಿಜವಾಗಿ ಅವರು ಸ್ವತಃ ಸೃಷ್ಟಿಗಳು.

وَالَّذِينَ يَدْعُونَ مِن دُونِ اللَّهِ لَا
يَخْلُقُونَ شَيْئًا وَهُمْ يُخْلَقُونَ ﴿٢٠﴾

21. ಅವರು ನಿರ್ಜೀವಿಗಳು, ಸಜೀವಿಗಳಲ್ಲ. ಅವರನ್ನು ಯಾವಾಗ (ಪುನಃ ಜೀವಂತಗೊಳಿಸಿ) ಎಬ್ಬಿಸಲಾಗುವುದೆಂದು ಅವರಿಗೆ ತಿಳಿದಿರುವುದಿಲ್ಲ.[6]

أَمْوَاتٌ غَيْرُ أَحْيَاءٍ ۖ وَمَا يَشْعُرُونَ
أَيَّانَ يُبْعَثُونَ ﴿٢١﴾

22. ನಿಮ್ಮ ಆರಾಧ್ಯನು ಕೇವಲ ಏಕ ಆರಾಧ್ಯನು. ಆದರೆ ಪರಲೋಕದ ಮೇಲೆ ವಿಶ್ವಾಸ ವಿರಿಸದವರ ಹೃದಯಗಳಲ್ಲಿ ನಿರಾಕರಣೆಯು ನೆಲೆನಿಂತು ಬಿಟ್ಟಿದೆ ಮತ್ತು ಅವರು ಗರ್ವಿಷ್ಠರಾಗಿದ್ದಾರೆ.

إِلَٰهُكُمْ إِلَٰهٌ وَاحِدٌ ۚ فَالَّذِينَ لَا يُؤْمِنُونَ
بِالْآخِرَةِ قُلُوبُهُم مُّنكِرَةٌ وَهُم
مُّسْتَكْبِرُونَ ﴿٢٢﴾

23. ನಿಶ್ಚಯವಾಗಿಯೂ ಅಲ್ಲಾಹನು ಇವರು ಮುಚ್ಚಿಡುವ ಮತ್ತು ಬಹಿರಂಗಗೊಳಿಸುವ ಸರ್ವ ಕರ್ಮಗಳನ್ನು ಅರಿಯುತ್ತಾನೆ. ಅಹಂಭಾವದಲ್ಲಿ ಸಿಲುಕಿರುವವರನ್ನು ಖಂಡಿತವಾಗಿಯೂ ಅಲ್ಲಾಹನು ಮೆಚ್ಚುವುದಿಲ್ಲ.

لَا جَرَمَ أَنَّ اللَّهَ يَعْلَمُ مَا يُسِرُّونَ وَمَا
يُعْلِنُونَ ۚ إِنَّهُ لَا يُحِبُّ الْمُسْتَكْبِرِينَ ﴿٢٣﴾

24. ನಿಮ್ಮ ಪ್ರಭು ಅವತೀರ್ಣಗೊಳಿಸಿರುವುದು ಏನನ್ನು ಎಂದು ಅವರೊಡನೆ ಯಾರಾದರೂ ಕೇಳಿದರೆ,[7] "ಅದೆಲ್ಲಾ ಹಿಂದಿನ ಕಾಲದ ಹಳಸಲು ಕತೆಗಳು" ಎಂದು ಇವರು ಹೇಳುತ್ತಾರೆ-

وَإِذَا قِيلَ لَهُم مَّاذَا أَنزَلَ رَبُّكُمْ ۙ
قَالُوا أَسَاطِيرُ الْأَوَّلِينَ ﴿٢٤﴾

25. ಪುನರುತ್ಥಾನ ದಿನದಂದು ತಮ್ಮ ಪೂರ್ಣ ಹೊರೆಯನ್ನು ಹೊರಲಿಕ್ಕಾಗಿಯೂ ಅದರೊಂದಿಗೇ ಅಜ್ಞಾನದಿಂದಾಗಿ ಇವರು

لِيَحْمِلُوا أَوْزَارَهُمْ كَامِلَةً يَوْمَ الْقِيَامَةِ ۙ
وَمِنْ أَوْزَارِ الَّذِينَ يُضِلُّونَهُم بِغَيْرِ

6. ಇಲ್ಲಿ ಪ್ರಸ್ತಾವಿಸಲಾಗಿರುವ ಸ್ವಯಂಕೃತ ಆರಾಧ್ಯರುಗಳು ಮೃತಪಟ್ಟ ಮಾನವರಾಗಿದ್ದಾರೆ ಎಂದು ಈ ಪದಗಳಿಂದ ಸ್ಪಷ್ಟವಾಗುತ್ತದೆ. ಏಕೆಂದರೆ ದೇವಚರರು ಜೀವಂತವಿದ್ದಾರೆ ಅವರು ಮೃತಪಟ್ಟಿಲ್ಲ. ಇನ್ನು ಮರ ಹಾಗೂ ಶಿಲೆಗಳ ಮೂಲಕ ಮಾಡಲ್ಪಟ್ಟ ವಿಗ್ರಹಗಳು ಮತ್ತೆ ಜೀವಂತಗೊಳಿಸಿ ಎಬ್ಬಿಸಲ್ಪಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

7. ಅರೇಬಿಯಾದಲ್ಲಿ ಪ್ರವಾದಿವರ್ಯರ(ಸ) ಬಗ್ಗೆ ಚರ್ಚೆಗಳು ನಡೆಯುತ್ತಿದ್ದಾಗ ಹೊರಗಿನ ಜನರು ಮಕ್ಕಾದ ಜನರೊಡನೆ ಪ್ರವಾದಿಯ ಮತ್ತು ಕುರ್ಆನಿನ ಕುರಿತು ಪ್ರಶ್ನೆಗಳನ್ನು ಕೇಳುತ್ತಿದ್ದರು.

عِلْمٍ ۗ أَلَا سَاءَ مَا يَزِرُونَ ﴿٢٥﴾

ಯಾರನ್ನು ಪಥಭ್ರಷ್ಟಗೊಳಿಸಿರುತ್ತಾರೋ ಅವರ ಒಂದಿಷ್ಟು ಹೊರೆಯನ್ನೂ ಶೇಖರಿಸಿಕೊಳ್ಳಲಿಕ್ಕಾಗಿಯೂ ಇವರು ಹೀಗೆ ಹೇಳುತ್ತಾರೆ. ನೋಡಿರಿ, ಇವರು ಅದೆಂತಹ ಕಠಿಣ ಹೊರೆಯನ್ನು ತಮ್ಮ ಮೇಲೆ ಹೇರಿಕೊಳ್ಳುತ್ತಿದ್ದಾರೆ.

قَدْ مَكَرَ الَّذِينَ مِن قَبْلِهِمْ فَأَتَى اللَّهُ بُنْيَانَهُم مِّنَ الْقَوَاعِدِ فَخَرَّ عَلَيْهِمُ السَّقْفُ مِن فَوْقِهِمْ وَأَتَاهُمُ الْعَذَابُ مِنْ حَيْثُ لَا يَشْعُرُونَ ﴿٢٦﴾

26. ಇವರಿಗಿಂತ ಮುಂಚೆಯೂ ಅನೇಕರು (ಸತ್ಯವನ್ನು ಹೀನೈಸ ಲಿಕ್ಕಾಗಿ) ಇದೇ ರೀತಿಯ ಕುತಂತ್ರಗಳನ್ನು ಮಾಡಿರುತ್ತಾರೆ. ಆದರೆ ಅಲ್ಲಾಹನು ಅವರ ಕುತಂತ್ರದ ಕಟ್ಟಡವನ್ನು ಬುಡ ದಿಂದಲೇ ಕಿತ್ತೆಸೆದನು ಮತ್ತು ಮೇಲಿಂದ ಅದರ ಮಾಡು ಅವರ ತಲೆಯ ಮೇಲೆಯೇ ಮಗುಚಿ ಬಿತ್ತು. ಅವರು ನಿರೀಕ್ಷಿಸಿಯೂ ಇರದಂತಹ ದಿಕ್ಕಿನಿಂದ ಅವರ ಮೇಲೆ ಯಾತನೆ ಎರಗಿತು.

ثُمَّ يَوْمَ الْقِيَامَةِ يُخْزِيهِمْ وَيَقُولُ أَيْنَ شُرَكَائِيَ الَّذِينَ كُنتُمْ تُشَاقُّونَ فِيهِمْ ۚ قَالَ الَّذِينَ أُوتُوا الْعِلْمَ إِنَّ الْخِزْيَ الْيَوْمَ وَالسُّوءَ عَلَى الْكَافِرِينَ ﴿٢٧﴾

27. ಮುಂದೆ ಪುನರುತ್ಥಾನ ದಿನದಂದು ಅಲ್ಲಾಹನು ಅವರನ್ನು ಅಪಮಾನಗೊಳಿಸುವನು ಮತ್ತು ಅವರೊಡನೆ, "ನನ್ನ ಯಾವ ಸಹಭಾಗಿಗಳಿಗೋಸ್ಕರ ನೀವು (ಸತ್ಯಸಂಧರೊಡನೆ) ಜಗಳ ವಾಡುತ್ತಿದ್ದಿರೋ ಅವರೀಗ ಎಲ್ಲಿದ್ದಾರೆ?" ಎಂದು ಕೇಳುವನು. ಭೂಲೋಕದಲ್ಲಿ ಜ್ಞಾನ ಪ್ರಾಪ್ತವಾಗಿದ್ದವರು, "ಇಂದು ನಿಶ್ಚಯ ವಾಗಿಯೂ ಸತ್ಯನಿಷೇಧಿಗಳಿಗೆ ಅಪಮಾನವೂ ದುರ್ದೆಶೆಯೂ ಇದೆ" ಎನ್ನುವರು.

الَّذِينَ تَتَوَفَّاهُمُ الْمَلَائِكَةُ ظَالِمِي أَنفُسِهِمْ ۖ فَأَلْقَوُا السَّلَمَ مَا كُنَّا نَعْمَلُ مِن سُوءٍ ۚ بَلَىٰ إِنَّ اللَّهَ عَلِيمٌ بِمَا كُنتُمْ تَعْمَلُونَ ﴿٢٨﴾

28. ಅಹುದು, ಈ ಸತ್ಯನಿಷೇಧಿಗಳು ತಮ್ಮ ಮೇಲೆ ತಾವೇ ಅಕ್ರಮ ವೆಸಗುತ್ತಿರುವ ವೇಳೆ ದೇವಚರರ ಕೈಯಲ್ಲಿ ಸೆರೆಸಿಕ್ಕಿದಾಗ (ಹಟ ಮಾರಿತನವನ್ನು ಬಿಟ್ಟು) ತಕ್ಷಣ ಶರಣು ಹೋಗುತ್ತಾರೆ ಮತ್ತು "ನಾವೇನೂ ದುಷ್ಕರ್ಮವೆಸಗುತ್ತಿರಲಿಲ್ಲ" ಎಂದು ಹೇಳುತ್ತಾರೆ. ಆಗ ದೇವಚರರು, "ಏಕಿಲ್ಲ? ಅಲ್ಲಾಹನು ನೀವು ಮಾಡುತ್ತಿದ್ದ ನಿಮ್ಮ ದುಷ್ಕರ್ಮಗಳನ್ನು ಚೆನ್ನಾಗಿ ಬಲ್ಲವ ನಾಗಿರುತ್ತಾನೆ.

فَادْخُلُوا أَبْوَابَ جَهَنَّمَ خَالِدِينَ فِيهَا ۖ فَلَبِئْسَ مَثْوَى الْمُتَكَبِّرِينَ ﴿٢٩﴾

29. ಈಗ ನರಕ ದ್ವಾರಗಳೊಳಗೆ ನುಗ್ಗಿರಿ. ನಿಮಗೆ ಸದಾ ಇಲ್ಲೇ ಇರಬೇಕಾಗಿದೆ" ಎಂದು ಉತ್ತರ ಕೊಡುವರು. ಒಟ್ಟಿನಲ್ಲಿ ಅಹಂಕಾರಿಗಳ ವಾಸಸ್ಥಾನವು ಅತ್ಯಂತ ನಿಕೃಷ್ಟವಾಗಿದೆ.

وَقِيلَ لِلَّذِينَ اتَّقَوْا مَاذَا أَنزَلَ رَبُّكُمْ ۚ قَالُوا خَيْرًا ۗ لِّلَّذِينَ أَحْسَنُوا فِي هَٰذِهِ الدُّنْيَا حَسَنَةٌ ۚ وَلَدَارُ الْآخِرَةِ خَيْرٌ ۚ

30. ನಿಮ್ಮ ಪ್ರಭುವಿನ ಕಡೆಯಿಂದ ಅವತೀರ್ಣಗೊಂಡಿರುವುದೇನೆಂದು ದೇವಭಯವುಳ್ಳವರೊಡನೆ ಕೇಳುವಾಗ ಅವರು, "ಅತ್ಯುತ್ತಮ ವಾದುದು ಅವತೀರ್ಣಗೊಂಡಿದೆ" ಎಂದು ಉತ್ತರ ಕೊಡುತ್ತಾರೆ. ಇಂತಹ ಸಜ್ಜನರಿಗೆ ಇಹಲೋಕದಲ್ಲೂ ಒಳಿತಿದೆ ಮತ್ತು ಪರಲೋಕ

ಗೃಹವಂತು ಅವರ ಮಟ್ಟಿಗೆ ಅತ್ಯುತ್ತಮವೇ ಆಗಿದೆ. 'ಧರ್ಮನಿಷ್ಠ'ರ ಭವನ ಬಹಳ ಚೆನ್ನಾಗಿದೆ.

وَلَنِعْمَ دَارُ الْمُتَّقِينَ ﴿٣٠﴾

31. ಶಾಶ್ವತ ನಿವಾಸದ ಸ್ವರ್ಗೋದ್ಯಾನಗಳು. ಅವುಗಳಲ್ಲಿ ಅವರು ಪ್ರವೇಶಿಸುವರು. ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅಲ್ಲಿ ಎಲ್ಲವೂ ಅವರ ಇಚ್ಛೆಯ ಪ್ರಕಾರವಿರುವುದು. ಅಲ್ಲಾಹನು 'ಧರ್ಮನಿಷ್ಠ'ರಿಗೆ ಈ ಪ್ರತಿಫಲ ಕೊಡುತ್ತಾನೆ.

جَنّٰتُ عَدْنٍ يَّدْخُلُوْنَهَا تَجْرِيْ مِنْ تَحْتِهَا الْاَنْهٰرُ لَهُمْ فِيْهَا مَا يَشَآءُوْنَ ۭ كَذٰلِكَ يَجْزِي اللّٰهُ الْمُتَّقِيْنَ ﴿٣١﴾

32. ದೇವಚರರು ಆ 'ಧರ್ಮನಿಷ್ಠರು'ಗಳ ಪ್ರಾಣಗಳನ್ನು ಪಾವನಾವಸ್ಥೆಯಲ್ಲಿ ವಶಪಡಿಸಿ ಕೊಳ್ಳುವಾಗ, "ನಿಮ್ಮ ಮೇಲೆ ಶಾಂತಿ ಇರಲಿ. ನಿಮ್ಮ ಕರ್ಮಗಳ ಪ್ರತಿಫಲವಾಗಿ ಸ್ವರ್ಗದೊಳಗೆ ಪ್ರವೇಶಿಸಿರಿ" ಎನ್ನುವರು.

الَّذِيْنَ تَتَوَفّٰىهُمُ الْمَلٰۗىِٕكَةُ طَيِّبِيْنَ ۙ يَقُوْلُوْنَ سَلٰمٌ عَلَيْكُمُ ۙ ادْخُلُوا الْجَنَّةَ بِمَا كُنْتُمْ تَعْمَلُوْنَ ﴿٣٢﴾

33. ಓ ಪೈಗಂಬರರೇ, ಇನ್ನು ದೇವಚರರೇ ಬರಬೇಕು ಅಥವಾ ನಿಮ್ಮ ಪ್ರಭುವಿನ ತೀರ್ಮಾನವೇ ಬರಬೇಕೆಂದು ಇವರು ನಿರೀಕ್ಷಿಸುತ್ತಿರುವರೇ? ಇಂತಹ ಹಟಮಾರಿತನವನ್ನು ಇವರಿಗಿಂತ ಮುಂಚೆ ಅನೇಕರು ತೋರಿದ್ದಾರೆ. ಆಗ ಅವರ ಮೇಲೆ ಸಂಭವಿಸಿದುದು ಅವರ ಮೇಲೆ ಅಲ್ಲಾಹನ ಅಕ್ರಮವಾಗಿರಲಿಲ್ಲ. ವಾಸ್ತವದಲ್ಲಿ ಅವರು ತಾವೇ ತಮ್ಮ ಮೇಲೆ ಮಾಡಿಕೊಂಡಿದ್ದ ಅವರ ಸ್ವಂತ ಅಕ್ರಮವಾಗಿತ್ತು.

هَلْ يَنْظُرُوْنَ اِلَّآ اَنْ تَاْتِيَهُمُ الْمَلٰۗىِٕكَةُ اَوْ يَاْتِيَ اَمْرُ رَبِّكَ ۭ كَذٰلِكَ فَعَلَ الَّذِيْنَ مِنْ قَبْلِهِمْ ۭ وَمَا ظَلَمَهُمُ اللّٰهُ وَلٰكِنْ كَانُوْٓا اَنْفُسَهُمْ يَظْلِمُوْنَ ﴿٣٣﴾

34. ಅವರ ದುಷ್ಕರ್ಮಗಳ ದುಷ್ಪರಿಣಾಮಗಳು ಕೊನೆಗೆ ಅವರನ್ನೇ ಪೀಡಿಸಿದುವು ಮತ್ತು ಅವರು ಯಾವುದನ್ನು ಅಪಹಾಸ್ಯ ಮಾಡುತ್ತಿದ್ದರೋ ಅದೇ ಅವರನ್ನು ಅಕ್ರಮಿಸಿಬಿಟ್ಟಿತು.

فَاَصَابَهُمْ سَيِّاٰتُ مَا عَمِلُوْا وَحَاقَ بِهِمْ مَّا كَانُوْا بِهٖ يَسْتَهْزِءُوْنَ ﴿٣٤﴾ ع

35. "ಅಲ್ಲಾಹನು ಇಚ್ಛಿಸುತ್ತಿದ್ದರೆ ನಾವಾಗಲಿ ನಮ್ಮ ಹಿರಿಯರಾಗಲಿ ಅವನ ಹೊರತು ಇತರರನ್ನು ಪೂಜಿಸುತ್ತಿರಲಿಲ್ಲ ಮತ್ತು ಅವನ ಅಪ್ಪಣೆಯ ವಿನಾ ಯಾವುದನ್ನೂ 'ನಿಷಿದ್ಧ' ಗೊಳಿಸುತ್ತಿರಲಿಲ್ಲ" ಎಂದು ಬಹುದೇವ ವಿಶ್ವಾಸಿಗಳು ಹೇಳುತ್ತಾರೆ. ಇಂತಹ ನೆಪಗಳನ್ನೇ ಇವರಿಗಿಂತ ಮುಂಚಿನವರೂ ಒಡ್ಡುತ್ತಿದ್ದರು. ವಿಷಯಗಳನ್ನು ಸುಸ್ಪಷ್ಟವಾಗಿ ತಲುಪಿಸುವ ಹೊರತು ಬೇರಾವ ಹೊಣೆಗಾರಿಕೆ ಯಾದರೂ ಸಂದೇಶವಾಹಕರ ಮೇಲೆ ಇದೆಯೇ?

وَقَالَ الَّذِيْنَ اَشْرَكُوْا لَوْ شَاۗءَ اللّٰهُ مَا عَبَدْنَا مِنْ دُوْنِهٖ مِنْ شَيْءٍ نَّحْنُ وَلَآ اٰبَاۗؤُنَا وَلَا حَرَّمْنَا مِنْ دُوْنِهٖ مِنْ شَيْءٍ ۭ كَذٰلِكَ فَعَلَ الَّذِيْنَ مِنْ قَبْلِهِمْ ۚ فَهَلْ عَلَي الرُّسُلِ اِلَّا الْبَلٰغُ الْمُبِيْنُ ﴿٣٥﴾

36. ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶ ವಾಹಕನನ್ನು ಕಳುಹಿಸಿದೆವು ಮತ್ತು "ಅಲ್ಲಾಹನ ದಾಸ್ಯ-ಆರಾಧನೆ

وَلَقَدْ بَعَثْنَا فِيْ كُلِّ اُمَّةٍ رَّسُوْلًا اَنِ اعْبُدُوا اللّٰهَ وَاجْتَنِبُوا الطَّاغُوْتَ ۚ فَمِنْهُمْ

مَّنْ هَدَى اللَّهُ وَمِنْهُم مَّنْ حَقَّتْ عَلَيْهِ الضَّلَالَةُ ۚ فَسِيرُوا فِي الْأَرْضِ فَانظُرُوا كَيْفَ كَانَ عَاقِبَةُ الْمُكَذِّبِينَ ﴿٣٦﴾

ಮಾಡಿರಿ ಮತ್ತು 'ತಾಗೂತ್'ನ ಆರಾಧನೆಯಿಂದ ದೂರವಿರಿ" ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು. ಅನಂತರ ಅಲ್ಲಾಹನು ಕೆಲವರಿಗೆ ಸನ್ಮಾರ್ಗದರ್ಶನ ಮಾಡಿದನು ಮತ್ತು ಇನ್ನು ಕೆಲವರ ಮೇಲೆ ಪಥಭ್ರಷ್ಟತೆ ಹೇರಲ್ಪಟ್ಟಿತು. ಹೀಗೆ ಸುಳ್ಳಾಗಿಸುವವರ ಅಂತಿಮ ಪರಿಣಾಮವೇನಾಗಿದೆಯೆಂದು ಭೂಮಿಯ ಮೇಲೆ ಸಂಚರಿಸಿ ನೋಡಿಕೊಳ್ಳಿರಿ.

إِن تَحْرِصْ عَلَىٰ هُدَاهُمْ فَإِنَّ اللَّهَ لَا يَهْدِي مَن يُضِلُّ ۖ وَمَا لَهُم مِّن نَّاصِرِينَ ﴿٣٧﴾

37. ಓ ಪೈಗಂಬರರೇ, ನೀವು ಅವರ ಸನ್ಮಾರ್ಗದರ್ಶನಕ್ಕಾಗಿ ಎಷ್ಟು ಅತ್ಯಾಕಾಂಕ್ಷಿಯಾಗಿದ್ದರೂ ಅಲ್ಲಾಹನು ಯಾರನ್ನು ಪಥಭ್ರಷ್ಟಗೊಳಿಸುತ್ತಾನೋ ಅವನಿಗೆ ಸನ್ಮಾರ್ಗದರ್ಶನ ಮಾಡುವುದಿಲ್ಲ. ಇಂತಹವರಿಗೆ ಯಾರೂ ಸಹಾಯ ಮಾಡಲಾರರು.

وَأَقْسَمُوا بِاللَّهِ جَهْدَ أَيْمَانِهِمْ ۙ لَا يَبْعَثُ اللَّهُ مَن يَمُوتُ ۚ بَلَىٰ وَعْدًا عَلَيْهِ حَقًّا وَلَٰكِنَّ أَكْثَرَ النَّاسِ لَا يَعْلَمُونَ ﴿٣٨﴾

38. ಸತ್ತವನನ್ನು ಅಲ್ಲಾಹನು ಪುನರುತ್ಥಾನಗೊಳಿಸಲಾರನೆಂದು ಇವರು ದೃಢವಾಗಿ ಅಲ್ಲಾಹನಾಣೆ ಹಾಕಿ ಹೇಳುತ್ತಾರೆ. ಉತ್ಥಾನಗೊಳಿಸನೇಕೆ? ಇದೊಂದು ವಾಗ್ದಾನ. ಇದನ್ನು ಪೂರ್ಣಗೊಳಿಸುವುದನ್ನು ಅವನು ತನ್ನ ಮೇಲೆ ನಿರ್ಬಂಧಗೊಳಿಸಿಕೊಂಡಿರುತ್ತಾನೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.

لِيُبَيِّنَ لَهُمُ الَّذِي يَخْتَلِفُونَ فِيهِ وَلِيَعْلَمَ الَّذِينَ كَفَرُوا أَنَّهُمْ كَانُوا كَاذِبِينَ ﴿٣٩﴾

39. ಯಾವ ಪರಮಾರ್ಥದ ಬಗ್ಗೆ ಇವರು ಭಿನ್ನಾಭಿಪ್ರಾಯವುಳ್ಳವರಾಗಿರುವರೋ ಅದನ್ನು ಅಲ್ಲಾಹನು ಇವರ ಮುಂದೆ ಪ್ರಕಟಗೊಳಿಸಲಿಕ್ಕಾಗಿ ಮತ್ತು ಸತ್ಯನಿಷೇಧಿಗಳಿಗೆ ತಾವು ಸುಳ್ಳುಗಾರರೆಂದು ಅರಿಯುವಂತಾಗಲಿಕ್ಕಾಗಿ ಹೀಗಾಗಬೇಕಾದುದು ಅಗತ್ಯ.

إِنَّمَا قَوْلُنَا لِشَيْءٍ إِذَا أَرَدْنَاهُ أَن نَّقُولَ لَهُ كُن فَيَكُونُ ﴿٤٠﴾

ربع

40. (ಇನ್ನು ಅದರ ಸಾಧ್ಯತೆಯ ಕುರಿತು) ನಾವು ಯಾವುದನ್ನಾದರೂ ಅಸ್ತಿತ್ವಕ್ಕೆ ತರಬೇಕೆಂದಾದರೆ ಹೆಚ್ಚೇನೂ ಮಾಡಬೇಕಾಗಿ ಬರುವುದಿಲ್ಲ, 'ಆಗು' ಎಂದು ಅಪ್ಪಣೆ ಕೊಟ್ಟರಾಯಿತು. ಅದು ಆಗಿ ಬಿಡುತ್ತದೆ.

وَالَّذِينَ هَاجَرُوا فِي اللَّهِ مِن بَعْدِ مَا ظُلِمُوا لَنُبَوِّئَنَّهُمْ فِي الدُّنْيَا حَسَنَةً ۖ وَلَأَجْرُ الْآخِرَةِ أَكْبَرُ ۚ لَوْ كَانُوا يَعْلَمُونَ ﴿٤١﴾

وقف لازم

41. ಮರ್ದನ ಸಹಿಸಿದ ತರುವಾಯ ಅಲ್ಲಾಹನಿಗಾಗಿ ಹಿಜ್ರತ್(ವಲಸೆ) ಮಾಡಿದವರಿಗೆ ನಾವು ಇಹದಲ್ಲೇ ಉತ್ತಮ ವಾಸಸ್ಥಾನ ನೀಡುವೆವು ಮತ್ತು ಪರಲೋಕದ ಪ್ರತಿಫಲವಂತು ಅತ್ಯಂತ ಹಿರಿದಾಗಿದೆ.[8] ಅದೆಷ್ಟು ಶ್ರೇಷ್ಠವಾದ ಪ್ರತಿಫಲವು ಅವರನ್ನು ಕಾದಿದೆ ಎಂಬುದನ್ನು ಅವರು ಅರಿತು ಕೊಂಡಿದ್ದರೆ!

8. ಇದು ಸತ್ಯನಿಷೇಧಿಗಳ ಸಹಿಸಲಸಾಧ್ಯವಾದ ಅಕ್ರಮಗಳಿಂದ ಬೇಸತ್ತು ಇಥಿಯೋಪಿಯಾದ ಕಡೆಗೆ ವಲಸೆ ಹೋದ ವಲಸಿಗರ ಕಡೆಗಿರುವ ಸೂಚನೆ.

| | |
|---|---|
| 42. ತಾಳ್ಮೆ ವಹಿಸಿದ ಹಾಗೂ ತಮ್ಮ ಪ್ರಭುವಿನ ಭರವಸೆಯಲ್ಲಿ ಕಾರ್ಯವೆಸಗುತ್ತಿರುವ ಆ ಮರ್ದಿತರು. | الَّذِيْنَ صَبَرُوْا وَعَلٰى رَبِّهِمْ يَتَوَكَّلُوْنَ ﴿٤٢﴾ |
| 43. ಓ ಪೈಗಂಬರರೇ, ನಾವು ನಿಮಗಿಂತ ಮುಂಚೆಯೂ ಸಂದೇಶ ವಾಹಕರನ್ನು ಕಳುಹಿಸಿದಾಗಲೆಲ್ಲ ಪುರುಷರನ್ನೇ ಕಳುಹಿಸಿದ್ದೇವೆ. ನಾವು ಅವರಿಗೆ ನಮ್ಮ ಸಂದೇಶಗಳನ್ನು 'ದಿವ್ಯವಾಣಿ' ಮಾಡುತ್ತಿದ್ದೆವು. ನಿಮಗೆ ಗೊತ್ತಿಲ್ಲದಿದ್ದರೆ ವಿದ್ವಾಂಸರೊಡನೆ ವಿಚಾರಿಸಿರಿ.[9] | وَمَآ اَرْسَلْنَا مِنْ قَبْلِكَ اِلَّا رِجَالًا نُّوْحِيْٓ اِلَيْهِمْ فَسْـَٔلُوْٓا اَهْلَ الذِّكْرِ اِنْ كُنْتُمْ لَا تَعْلَمُوْنَ ﴿٤٣﴾ |
| 44. ಗತ ಸಂದೇಶವಾಹಕರಿಗೂ ನಾವು ಪ್ರತ್ಯಕ್ಷ ಪ್ರಮಾಣಗಳನ್ನೂ ಗ್ರಂಥಗಳನ್ನೂ ಕೊಟ್ಟು ಕಳುಹಿಸಿದ್ದೆವು ಮತ್ತು ಈಗ ಈ ಸ್ಮರಣವನ್ನು ನಿಮಗೆ ಅವತೀರ್ಣಗೊಳಿಸಿ, ನೀವು ಜನತೆಯ ಮುಂದೆ, ಅವರಿಗಾಗಿ ಅವತೀರ್ಣಗೊಳಿಸಲ್ಪಟ್ಟಿರುವ[10] ಬೋಧನೆಯನ್ನು ವಿವರಿಸುವಂತೆಯೂ ಸ್ಪಷ್ಟೀಕರಿಸುವಂತೆಯೂ ಜನರು (ಸ್ವಯಂ) ವಿವೇಚಿಸುವಂತೆಯೂ ಮಾಡಿದೆವು. | بِالْبَيِّنٰتِ وَالزُّبُرِ ۗ وَاَنْزَلْنَآ اِلَيْكَ الذِّكْرَ لِتُبَيِّنَ لِلنَّاسِ مَا نُزِّلَ اِلَيْهِمْ وَلَعَلَّهُمْ يَتَفَكَّرُوْنَ ﴿٤٤﴾ |
| 45. (ಸಂದೇಶವಾಹಕರ ಕರೆಯನ್ನು ವಿರೋಧಿಸುವ ಕಾರ್ಯದಲ್ಲಿ) ಅತ್ಯಂತ ಹೀನರೀತಿಯ ಕುತಂತ್ರ ಹೂಡುವವರು, ಅಲ್ಲಾಹನು ಅವರನ್ನು ನೆಲವು ನುಂಗುವಂತೆ ಮಾಡಿ ಬಿಡುವನು ಅಥವಾ ಅವರು ನಿರೀಕ್ಷಿಸದಂತಹ ಕಡೆಯಿಂದ ಯಾತನೆಯನ್ನು ತಂದೆರಗಿಸುವನು- | اَفَاَمِنَ الَّذِيْنَ مَكَرُوا السَّيِّاٰتِ اَنْ يَّخْسِفَ اللّٰهُ بِهِمُ الْاَرْضَ اَوْ يَاْتِيَهُمُ الْعَذَابُ مِنْ حَيْثُ لَا يَشْعُرُوْنَ ﴿٤٥﴾ |
| 46. ಅಥವಾ ಅವರು ನಡೆದಾಡುವಾಗ ಹಠಾತ್ತನೆ ಹಿಡಿಯುವನು- | اَوْ يَاْخُذَهُمْ فِيْ تَقَلُّبِهِمْ فَمَا هُمْ بِمُعْجِزِيْنَ ﴿٤٦﴾ |
| 47. ಅಥವಾ ಅವರಿಗೆ ಬರಲಿರುವ ವಿಪತ್ತಿನ ಭೀತಿ ತಗಲಿದ್ದು ಅದರಿಂದ ತಪ್ಪಿಸಿಕೊಳ್ಳುವ ಚಿಂತೆಯಿಂದ ಜಾಗೃತರಾಗಿರುವ ಸ್ಥಿತಿಯಲ್ಲಿ ಅವರನ್ನು ಹಿಡಿಯುವನು ಎಂಬ ಬಗ್ಗೆ ನಿರ್ಭೀತರಾಗಿರುವರೇ? ಅವನು ಏನು ತಾನೆ ಮಾಡಲಿಚ್ಛಿಸಿದರೂ ಇವರು ಅವನನ್ನು ಸೋಲಿಸುವ ಶಕ್ತಿಯನ್ನು ಹೊಂದಿರುವುದಿಲ್ಲ. ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ವತ್ಸಲನೂ ಕರುಣಾನಿಧಿಯೂ ಆಗಿರುತ್ತಾನೆ. | اَوْ يَاْخُذَهُمْ عَلٰى تَخَوُّفٍ ۗ فَاِنَّ رَبَّكُمْ لَرَءُوْفٌ رَّحِيْمٌ ﴿٤٧﴾ |

9. ಅರ್ಥಾತ್- ಪ್ರವಾದಿಗಳು ಮಾನವರೇ ಆಗಿದ್ದರೋ ಅಥವಾ ಬೇರೇನಾದರೂ ಆಗಿದ್ದರೋ ಎಂಬ ಕುರಿತು ದಿವ್ಯಗ್ರಂಥಗಳ ಜ್ಞಾನ ಇರುವವರೊಡನೆ ಕೇಳಿರಿ.

10. ಅರ್ಥಾತ್- ಪ್ರವಾದಿವರ್ಯರು(ಸ) ತಮ್ಮ ಮಾತು ಕೃತಿಗಳ ಮೂಲಕ ಗ್ರಂಥದ ಬೋಧನೆ ಮತ್ತು ಆದೇಶಗಳ ವ್ಯಾಖ್ಯಾನ ಮತ್ತು ವಿಶದೀಕರಣ ಮಾಡಲಿಕ್ಕಾಗಿ ಅವರ ಮೇಲೆ ಗ್ರಂಥವನ್ನು ಅವತೀರ್ಣಗೊಳಿಸಲಾಗಿದೆ. ಇದರಿಂದ ಪ್ರವಾದಿಚರ್ಯೆಯೇ ಕುರ್‌ಆನಿನ ಅಧಿಕೃತ ಮತ್ತು ನಂಬಲರ್ಹ ವ್ಯಾಖ್ಯಾನವಾಗಿದೆಯೆಂದೂ ಸಾಬೀತಾಗುತ್ತದೆ.

| | |
|---|---|
| 48. ಅಲ್ಲಾಹನು ಸೃಷ್ಟಿಸಿರುವ ವಸ್ತುಗಳ ನೆರಳು ಎಡಕ್ಕೂ ಬಲಕ್ಕೂ ಬೀಳುತ್ತ ಅಲ್ಲಾಹನಿಗೆ ಎರಗುತ್ತಿರುವುದನ್ನು ಇವರು ನೋಡುವುದಿಲ್ಲವೇ?[11] ಹೀಗೆ ಎಲ್ಲವೂ ತಮ್ಮ ದೀನಭಾವವನ್ನು ಪ್ರಕಟಿಸುತ್ತವೆ. | أَوَلَمْ يَرَوْا إِلَىٰ مَا خَلَقَ اللَّهُ مِن شَيْءٍ يَتَفَيَّأُ ظِلَالُهُ عَنِ الْيَمِينِ وَالشَّمَائِلِ سُجَّدًا لِّلَّهِ وَهُمْ دَاخِرُونَ ﴿٤٨﴾ |
| 49. ಆಕಾಶಗಳಲ್ಲಿಯೂ ಭೂಮಿಯಲ್ಲಿಯೂ ಎಷ್ಟು ಸಜೀವಿ ಸೃಷ್ಟಿಗಳಿವೆಯೋ ಎಷ್ಟು ದೇವಚರರಿರುವರೋ ಸಕಲವೂ ಅಲ್ಲಾಹನ ಮುಂದೆ ಸಾಷ್ಟಾಂಗವೆರಗುತ್ತವೆ. ಅವು ಎಷ್ಟಕ್ಕೂ ಅಹಂಭಾವ ತೋರುವುದಿಲ್ಲ. | وَلِلَّهِ يَسْجُدُ مَا فِي السَّمَاوَاتِ وَمَا فِي الْأَرْضِ مِن دَابَّةٍ وَالْمَلَائِكَةُ وَهُمْ لَا يَسْتَكْبِرُونَ ﴿٤٩﴾ |
| 50. ತಮ್ಮ ಮೇಲಿರುವ ತಮ್ಮ ಪ್ರಭುವನ್ನು ಅವರು ಭಯಪಡುತ್ತಾರೆ ಮತ್ತು ಕೊಟ್ಟ ಅಪ್ಪಣೆ ಪ್ರಕಾರವೇ ಕಾರ್ಯವೆಸಗುತ್ತಾರೆ. | يَخَافُونَ رَبَّهُم مِّن فَوْقِهِمْ وَيَفْعَلُونَ مَا يُؤْمَرُونَ ۩ ﴿٥٠﴾ |
| 51. ಇಬ್ಬರು ಆರಾಧ್ಯರನ್ನು ಮಾಡಿಕೊಳ್ಳಬೇಡಿರಿ[12] ಆರಾಧ್ಯನಂತು ಒಬ್ಬನೇ. ಆದುದರಿಂದ ನನ್ನನ್ನು ಮಾತ್ರ ಭಯಪಡಿರಿ ಎಂದು ಅಲ್ಲಾಹನು ಆಜ್ಞಾಪಿಸುತ್ತಾನೆ. | وَقَالَ اللَّهُ لَا تَتَّخِذُوا إِلَٰهَيْنِ اثْنَيْنِ ۖ إِنَّمَا هُوَ إِلَٰهٌ وَاحِدٌ ۖ فَإِيَّايَ فَارْهَبُونِ ﴿٥١﴾ |
| 52. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲವೂ ಅವನದೇ. ಅವನ ಧರ್ಮವೇ (ಇಡೀ ವಿಶ್ವದಲ್ಲಿ) ಸಂಪೂರ್ಣವಾಗಿ ಜಾರಿಯಲ್ಲಿದೆ.[13] ಹೀಗಿರುತ್ತ ನೀವು ಅಲ್ಲಾಹನನ್ನು ಬಿಟ್ಟು ಇನ್ನಾರನ್ನಾದರೂ ಭಯಪಡುವಿರಾ? | وَلَهُ مَا فِي السَّمَاوَاتِ وَالْأَرْضِ وَلَهُ الدِّينُ وَاصِبًا ۚ أَفَغَيْرَ اللَّهِ تَتَّقُونَ ﴿٥٢﴾ |
| 53. ನಿಮಗೆ ಒದಗಿರುವ ಎಲ್ಲ 'ಭವ್ಯ ಕೊಡುಗೆ'ಗಳು ಅಲ್ಲಾಹನ ಕಡೆಯಿಂದಲೇ ಆಗಿರುತ್ತವೆ. ನಿಮಗೆ ಹಾನಿ ತಟ್ಟಿದಾಗ ನೀವು ಅವನೊಡನೆಯೇ ಮೊರೆಯಿಡುತ್ತೀರಿ. | وَمَا بِكُم مِّن نِّعْمَةٍ فَمِنَ اللَّهِ ۖ ثُمَّ إِذَا مَسَّكُمُ الضُّرُّ فَإِلَيْهِ تَجْأَرُونَ ﴿٥٣﴾ |
| 54. ಆದರೆ ಅಲ್ಲಾಹನು ಆ ಸಂಕಷ್ಟವನ್ನು ನೀಗಿಸಿದಾಗ ತಟ್ಟನೆ ನಿಮ್ಮಲ್ಲೊಂದು ವಿಭಾಗ ತನ್ನ ಪ್ರಭುವಿನೊಂದಿಗೆ ಇತರರನ್ನು (ಆ ಅನುಗ್ರಹದ ಕೃತಜ್ಞತೆಗಾಗಿ) ಸಹಭಾಗಿಗಳನ್ನಾಗಿ ಮಾಡ ತೊಡಗುತ್ತದೆ, | ثُمَّ إِذَا كَشَفَ الضُّرَّ عَنكُمْ إِذَا فَرِيقٌ مِّنكُم بِرَبِّهِمْ يُشْرِكُونَ ﴿٥٤﴾ |

11. ಅರ್ಥಾತ್- ಕಾಯವನ್ನು ಹೊಂದಿರುವ ಪ್ರತಿಯೊಂದು ವಸ್ತುವಿನ ನೆರಳು-ಪರ್ವತಗಳು, ವೃಕ್ಷಗಳು, ಪ್ರಾಣಿಗಳು ಮತ್ತು ಮನುಷ್ಯರೆಲ್ಲರೂ ಒಂದು ಸರ್ವವ್ಯಾಪಕವಾದ ನಿಯಮಕ್ಕೆ ಅಧೀನವಾಗಿವೆ ಎಂಬುದನ್ನು ಸೂಚಿಸುತ್ತದೆ. ಎಲ್ಲದರ ಹಣೆಯಲ್ಲೂ ದಾಸ್ಯದ ಚುಕ್ಕೆಯಿದೆ. ದೇವತ್ವದಲ್ಲಿ ಯಾರಿಗೂ ಕಿಂಚಿತ್ತೂ ಪಾಲಿಲ್ಲ. ನೆರಳು ಬೀಳುವುದು ಅದು ಭೌತಿಕ ವಸ್ತುವಾಗಿದೆ ಎಂಬುದರ ಸೂಚನೆಯಾಗಿದೆ. ಭೌತಿಕ ವಸ್ತುವಾಗಿರುವುದು ದಾಸ್ಯಕ್ಕೊಳಪಟ್ಟಿರುವುದರ ಮತ್ತು ಸೃಷ್ಟಿಯಾಗಿರುವುದರ ಸ್ಪಷ್ಟ ಆಧಾರವಾಗಿದೆ.

12. ಎರಡು ದೇವರುಗಳ ಅಸ್ತಿತ್ವದ ನಿರಾಕರಣೆಯಲ್ಲಿ ಸಹಜವಾಗಿಯೇ ಎರಡಕ್ಕಿಂತ ಅಧಿಕ ದೇವರುಗಳ ನಿರಾಕರಣೆಯೂ ಇದೆ.

13. ಬೇರೆ ಮಾತುಗಳಲ್ಲಿ ಹೇಳುವುದಾದರೆ ಸಮಸ್ತ ನಿಸರ್ಗ ವ್ಯವಸ್ಥೆ ಅವನ ಅನುಸರಣೆಯ ಆಧಾರದಲ್ಲೇ ನಡೆಯುತ್ತಿದೆ.

55. ಇದು ಅಲ್ಲಾಹನ ಉಪಕಾರಕ್ಕೆ ಕೃತಘ್ನತೆ ತೋರಲಿಕ್ಕಾಗಿ. ಸರಿ; ಹಾಗಾದರೆ ಸುಖೋಪ ಭೋಗಗಳನ್ನು ಅನುಭವಿಸಿಕೊಳ್ಳಿರಿ. ಸದ್ಯವೇ ನಿಮಗೆ ತಿಳಿಯುವುದು.

لِيَكْفُرُوا بِمَا آتَيْنَاهُمْ ۚ فَتَمَتَّعُوا ۖ فَسَوْفَ تَعْلَمُونَ ﴿٥٥﴾

56. ಇವರು ಯಾರ ನಿಜಸ್ಥಿತಿಯನ್ನು ಅರಿತಿಲ್ಲವೋ ಅಂತಹವರ ಪಾಲನ್ನು ನಾವು ಕೊಟ್ಟಿರುವ ಜೀವನಾಧಾರದಿಂದ ನಿಶ್ಚಯಿಸುತ್ತಾರೆ. ಅಲ್ಲಾಹನಾಣೆ, ಈ ಸುಳ್ಳನ್ನು ನೀವು ಹೇಗೆ ಸೃಷ್ಟಿಸಿ ಕೊಂಡಿದ್ದಿರೆಂದು ನಿಮ್ಮೊಡನೆ ಖಂಡಿತವಾಗಿಯೂ ಕೇಳಲಾಗುವುದು.

وَيَجْعَلُونَ لِمَا لَا يَعْلَمُونَ نَصِيبًا مِّمَّا رَزَقْنَاهُمْ ۗ تَاللَّهِ لَتُسْأَلُنَّ عَمَّا كُنتُمْ تَفْتَرُونَ ﴿٥٦﴾

57. ಇವರು ಅಲ್ಲಾಹನಿಗೆ ಪುತ್ರಿಯರನ್ನು ನಿಶ್ಚಯಿಸುತ್ತಾರೆ.[14] ಅವನು ಪರಮ ಪಾವನನು ಮತ್ತು ಇವರು ತಮಗಾಗಿ ತಾವಿಷ್ಟಪಟ್ಟುದನ್ನೇ ನಿಶ್ಚಯಿಸಿಕೊಳ್ಳುತ್ತಾರಲ್ಲಾ![15]

وَيَجْعَلُونَ لِلَّهِ الْبَنَاتِ سُبْحَانَهُ ۙ وَلَهُم مَّا يَشْتَهُونَ ﴿٥٧﴾

58. ಇವರ ಪೈಕಿ ಯಾರಿಗಾದರೂ ಮಗಳು ಹುಟ್ಟಿದ ಸುವಾರ್ತೆ ಕೊಟ್ಟಾಗ ಅವನ ಮುಖ ಕಳೆಗುಂದಿ ಹೋಗುತ್ತದೆ ಮತ್ತು ಅವನು ಸಿಡಿಮಿಡಿಗೊಳ್ಳುತ್ತಾನೆ.

وَإِذَا بُشِّرَ أَحَدُهُم بِالْأُنثَىٰ ظَلَّ وَجْهُهُ مُسْوَدًّا وَهُوَ كَظِيمٌ ﴿٥٨﴾

59. ಈ ಅಶುಭ ವಾರ್ತೆಯ ಬಳಿಕ ಯಾರಿಗೂ ಮುಖ ತೋರಿಸಲಾಗದೆ ಜನರಿಂದ ತಲೆ ಮರೆಸಿಕೊಳ್ಳುತ್ತಾನೆ. ಈ ಅಪಮಾನದೊಂದಿಗೆ ಮಗುವನ್ನಿರಿಸಿಕೊಳ್ಳಲೇ ಅಥವಾ ಮಣ್ಣಿನಲ್ಲಿ ಹುಗಿದು ಬಿಡಲೇ ಎಂದು ಯೋಚಿಸುತ್ತಾನೆ. ಇವರು ಅಲ್ಲಾಹನ ಬಗ್ಗೆ ಎಂತಹ ಕೆಟ್ಟ ನಿರ್ಣಯ ಕೈಗೊಳ್ಳುತ್ತಾರೆಂದು ನೋಡಿರಿ.[16]

يَتَوَارَىٰ مِنَ الْقَوْمِ مِن سُوءِ مَا بُشِّرَ بِهِ ۚ أَيُمْسِكُهُ عَلَىٰ هُونٍ أَمْ يَدُسُّهُ فِي التُّرَابِ ۗ أَلَا سَاءَ مَا يَحْكُمُونَ ﴿٥٩﴾

60. ಪರಲೋಕದ ಮೇಲೆ ವಿಶ್ವಾಸವಿರಿಸದವರೇ ದುರ್ಗುಣ ವಿಶೇಷಣಗಳಿಗೆ ಅರ್ಹರು. ಅಲ್ಲಾಹನಿಗೆ ಅತ್ಯುತ್ತಮ ಗುಣ ವಿಶೇಷಗಳಿವೆ. ಅವನೇ ಮಹಾ ಪ್ರತಾಪಿಯೂ ಮಹಾ ಧೀಮಂತನೂ ಆಗಿರುತ್ತಾನೆ.

لِلَّذِينَ لَا يُؤْمِنُونَ بِالْآخِرَةِ مَثَلُ السَّوْءِ ۖ وَلِلَّهِ الْمَثَلُ الْأَعْلَىٰ ۚ وَهُوَ الْعَزِيزُ الْحَكِيمُ ﴿٦٠﴾

14. ಅರೇಬಿಯಾದ ಬಹುದೇವಾರಾಧಕರು ನೆಚ್ಚಿಕೊಂಡಿದ್ದ ಆರಾಧ್ಯರುಗಳಲ್ಲಿ ದೇವಂದಿರು ಕಡಿಮೆ ಸಂಖ್ಯೆಯಲ್ಲಿದ್ದರು. ದೇವಿಗಳ ಸಂಖ್ಯೆ ಹೆಚ್ಚಿತ್ತು. ದೇವಿಯರು ದೇವಪುತ್ರಿಯರಾಗಿದ್ದಾರೆ ಎಂದು ಅವರು ವಿಶ್ವಾಸವಿಡುತ್ತಿದ್ದರು. ಹಾಗೆಯೇ ದೇವಚರರನ್ನೂ ಅವರು ದೇವಪುತ್ರಿಯರೆಂದು ಕರೆಯುತ್ತಿದ್ದರು.

15. ಅರ್ಥಾತ್- ಪುತ್ರರನ್ನು.

16. ಅರ್ಥಾತ್- ತಮ್ಮ ಪಾಲಿಗೆ ಅಪಮಾನಕರವೆಂದು ಅವರು ಭಾವಿಸುವ ಪುತ್ರಿಯರನ್ನು ನಿಸ್ಸಂಕೋಚವಾಗಿ ಅಲ್ಲಾಹನಿಗೆ ವಹಿಸಿಬಿಡುತ್ತಿದ್ದರು.

61. ಅಲ್ಲಾಹನು ಜನರನ್ನು ಅವರ ಅತ್ಯಾಚಾರಗಳಿಗಾಗಿ ತಕ್ಷಣ ಹಿಡಿಯುತ್ತಿದ್ದರೆ ಭೂಮಿಯ ಮೇಲೆ ಒಂದು ಜೀವಿಯನ್ನೂ ಬಿಡುತ್ತಿರಲಿಲ್ಲ. ಆದರೆ ಅವನು ಎಲ್ಲರಿಗೂ ಒಂದು ನಿಶ್ಚಿತ ಸಮಯದ ವರೆಗೆ ಕಾಲಾವಕಾಶ ನೀಡುತ್ತಾನೆ. ಮುಂದೆ ಆ ಸಮಯ ಬಂದು ಬಿಟ್ಟೊಡನೆ ಅದರಿಂದ ಒಂದು ಕ್ಷಣವೂ ಹಿಂದೆ ಮುಂದೆ ಆಗುವಂತಿಲ್ಲ.

وَلَوْ يُؤَاخِذُ اللَّهُ النَّاسَ بِظُلْمِهِم مَّا تَرَكَ
عَلَيْهَا مِن دَابَّةٍ وَلَٰكِن يُؤَخِّرُهُمْ إِلَىٰ
أَجَلٍ مُّسَمًّى ۖ فَإِذَا جَاءَ أَجَلُهُمْ لَا
يَسْتَأْخِرُونَ سَاعَةً ۖ وَلَا يَسْتَقْدِمُونَ ﴿٦١﴾

62. ಇಂದು ಇವರು ತಮ್ಮ ಸ್ವಂತಕ್ಕಾಗಿ ಮೆಚ್ಚದಂತಹವುಗಳನ್ನು ಅಲ್ಲಾಹನಿಗೆ ನಿಶ್ಚಯಿಸುತ್ತಾರೆ. ಅವರಿಗಾಗಿ ಒಳಿತೇ ಇರುವುದೆಂದು ಅವರ ನಾಲಗೆಗಳು ಸುಳ್ಳಾಡುತ್ತಿವೆ. ಅವರಿಗಿರುವುದು ಒಂದೇ ವಸ್ತು. ಅದು ನರಕಾಗ್ನಿ. ನಿಶ್ಚಯವಾಗಿಯೂ ಇವರು ಎಲ್ಲರಿ ಗಿಂತಲೂ ಮುಂದಾಗಿ ಅದಕ್ಕೆ ಕಳುಹಿಸಲ್ಪಡುವರು.

وَيَجْعَلُونَ لِلَّهِ مَا يَكْرَهُونَ وَتَصِفُ
أَلْسِنَتُهُمُ الْكَذِبَ أَنَّ لَهُمُ الْحُسْنَىٰ ۖ
لَا جَرَمَ أَنَّ لَهُمُ النَّارَ وَأَنَّهُم مُّفْرَطُونَ ﴿٦٢﴾

63. ಓ ಪೈಗಂಬರರೇ, ಅಲ್ಲಾಹನಾಣೆ! ನಾವು ನಿಮಗಿಂತ ಮುಂಚೆಯೂ ಅನೇಕ ಜನಾಂಗಗಳಿಗೆ ಸಂದೇಶವಾಹಕರನ್ನು ಕಳುಹಿಸಿದ್ದೇವೆ. (ಮುಂಚೆಯೂ) ಶೈತಾನನು ಅವರ ದುಷ್ಕರ್ಮಗಳನ್ನು ಅವರಿಗೆ ಮನೋಹರವನ್ನಾಗಿ ಮಾಡಿ ತೋರಿಸಿದನು (ಮತ್ತು ಅವರು ಸಂದೇಶವಾಹಕರ ಮಾತನ್ನು ಕೇಳಲಿಲ್ಲ.) ಆ ಶೈತಾನನೇ ಇಂದು ಇವರ ಸಂರಕ್ಷಕನೂ ಆಗಿದ್ದಾನೆ ಮತ್ತು ಇವರು ವೇದನಾಯುಕ್ತ ಶಿಕ್ಷೆಗೆ ಅರ್ಹರಾಗುತ್ತಿದ್ದಾರೆ.

تَاللَّهِ لَقَدْ أَرْسَلْنَا إِلَىٰ أُمَمٍ مِّن قَبْلِكَ
فَزَيَّنَ لَهُمُ الشَّيْطَانُ أَعْمَالَهُمْ فَهُوَ
وَلِيُّهُمُ الْيَوْمَ وَلَهُمْ عَذَابٌ أَلِيمٌ ﴿٦٣﴾

64. ನೀವು ಅವರು ಇರಿಸಿಕೊಂಡಿರುವ ಆ ಭಿನ್ನಾಭಿಪ್ರಾಯಗಳ ವಸ್ತು ಸ್ಥಿತಿಯನ್ನು ಅವರಿಗೆ ವಿವರಿಸಲಿಕ್ಕಾಗಿ ನಾವು ಈ ಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿರುತ್ತೇವೆ. ಈ ಗ್ರಂಥವು ಇದನ್ನು ನಂಬುವವರಿಗೆ ಮಾರ್ಗದರ್ಶಕ ಹಾಗೂ ಅನುಗ್ರಹವಾಗಿ ಅವ ತೀರ್ಣಗೊಂಡಿರುತ್ತದೆ.

وَمَا أَنزَلْنَا عَلَيْكَ الْكِتَابَ إِلَّا لِتُبَيِّنَ
لَهُمُ الَّذِي اخْتَلَفُوا فِيهِ ۙ وَهُدًى
وَرَحْمَةً لِّقَوْمٍ يُؤْمِنُونَ ﴿٦٤﴾

65. ಅಲ್ಲಾಹನು ಆಕಾಶದಿಂದ ನೀರನ್ನು ಸುರಿಸಿದನು ಮತ್ತು ನಿರ್ಜೀವ ವಾಗಿ ಬಿದ್ದುಕೊಂಡಿದ್ದ ನೆಲದಲ್ಲಿ ಅದರಿಂದಾಗಿ ಜೀವಕಳೆಯ ನ್ನುಂಟು ಮಾಡಿದನು.[17] (ಇದನ್ನು ನೀವು ಪ್ರತಿಯೊಂದು ಮಳೆ ಗಾಲದಲ್ಲಿ ನೋಡುತ್ತೀರಿ) ನಿಶ್ಚಯವಾಗಿಯೂ ಆಲಿಸುವವರಿಗೆ ಇದರಲ್ಲಿ ಒಂದು ನಿದರ್ಶನವಿದೆ.

وَاللَّهُ أَنزَلَ مِنَ السَّمَاءِ مَاءً فَأَحْيَا
بِهِ الْأَرْضَ بَعْدَ مَوْتِهَا ۚ إِنَّ فِي ذَٰلِكَ
لَآيَةً لِّقَوْمٍ يَسْمَعُونَ ﴿٦٥﴾

17. ಅರ್ಥಾತ್- ಪ್ರತಿವರ್ಷವೂ ನೀವು ಈ ದೃಶ್ಯವನ್ನು ನೋಡುತ್ತೀರಿ. ಭೂಮಿ ಸಂಪೂರ್ಣವಾಗಿ ಬಟ್ಟ ಬಯಲಾಗಿರುತ್ತದೆ. ಯಾವ ಜೀವಕಳೆಯೂ ಅದರಲ್ಲಿ ಕಂಡು ಬರುವುದಿಲ್ಲ. ಹುಲ್ಲುಕಡ್ಡಿಗಳಾಗಲಿ, ಬಳ್ಳಿಗಳಾಗಲಿ, ಫಲಪುಷ್ಪಗಳಾಗಲಿ, ಭೂಚರ ಮಳೆ ಹುಳಗಳಾಗಲಿ

وَإِنَّ لَكُمْ فِي الْأَنْعَامِ لَعِبْرَةً ۖ نُسْقِيكُمْ مِمَّا فِي بُطُونِهِ مِنْ بَيْنِ فَرْثٍ وَدَمٍ لَبَنًا خَالِصًا سَائِغًا لِلشَّارِبِينَ ﴿٦٦﴾

66. ನಿಶ್ಚಯವಾಗಿಯೂ ಜಾನುವಾರುಗಳಲ್ಲಿಯೂ ನಿಮಗೊಂದು ಪಾಠವಿದ್ದೇ ಇದೆ. ಅವುಗಳ ಹೊಟ್ಟೆಯೊಳಗಿರುವ ಸೆಗಣಿ ಮತ್ತು ರಕ್ತದ ಮಧ್ಯದಿಂದ ಕುಡಿಯುವವರಿಗೆ ಆಹ್ಲಾದಕರವಾದ ಶುದ್ಧ ಹಾಲನ್ನು ನಾವು ಕುಡಿಸುತ್ತೇವೆ.

وَمِنْ ثَمَرَاتِ النَّخِيلِ وَالْأَعْنَابِ تَتَّخِذُونَ مِنْهُ سَكَرًا وَرِزْقًا حَسَنًا ۗ إِنَّ فِي ذَٰلِكَ لَآيَةً لِقَوْمٍ يَعْقِلُونَ ﴿٦٧﴾

67. (ಇದೇ ತರದಲ್ಲಿ) ಖರ್ಜೂರದ ಮರಗಳಿಂದಲೂ ದ್ರಾಕ್ಷೆಯ ಬಳ್ಳಿಗಳಿಂದಲೂ ನಾವು ಒಂದು ವಸ್ತುವನ್ನು ನಿಮಗೆ ಕುಡಿಸುತ್ತೇವೆ. ಅದನ್ನು ನೀವು ಮಾದಕ ಪೇಯವನ್ನಾಗಿಯೂ ಶುದ್ಧ ಆಹಾರ ವನ್ನಾಗಿಯೂ ಮಾಡಿಕೊಳ್ಳುತ್ತೀರಿ.[18] ನಿಶ್ಚಯವಾಗಿಯೂ ಬುದ್ಧಿ ಜೀವಿಗಳಿಗೆ ಇದರಲ್ಲಿ ಒಂದು ನಿದರ್ಶನವಿದೆ.

وَأَوْحَىٰ رَبُّكَ إِلَى النَّحْلِ أَنِ اتَّخِذِي مِنَ الْجِبَالِ بُيُوتًا وَمِنَ الشَّجَرِ وَمِمَّا يَعْرِشُونَ ﴿٦٨﴾
ثُمَّ كُلِي مِنْ كُلِّ الثَّمَرَاتِ فَاسْلُكِي سُبُلَ رَبِّكِ ذُلُلًا ۚ يَخْرُجُ مِنْ بُطُونِهَا شَرَابٌ مُخْتَلِفٌ أَلْوَانُهُ فِيهِ شِفَاءٌ لِلنَّاسِ ۗ إِنَّ فِي ذَٰلِكَ لَآيَةً لِقَوْمٍ يَتَفَكَّرُونَ ﴿٦٩﴾

68-69. ಇನ್ನೂ ನೋಡಿರಿ. ನಿಮ್ಮ ಪ್ರಭು ಜೇನುನೊಣಕ್ಕೆ, ಪರ್ವತ ಗಳಲ್ಲೂ ಮರಗಳಲ್ಲೂ ತಟ್ಟಿಗಳ ಮೇಲಿರಿಸಿದ ಬಳ್ಳಿಗಳಲ್ಲೂ ತನ್ನ ತೊಟ್ಟಿಗಳನ್ನು ಕಟ್ಟಿ ಎಲ್ಲಾ ವಿಧದ ಫಲಗಳ ರಸವನ್ನು ಹೀರಿ, ನಿನ್ನ ಪ್ರಭು ಸುಗಮಗೊಳಿಸಿದ ಮಾರ್ಗಗಳಲ್ಲಿ ಚಲಿಸುತ್ತಿರು ಎಂದು 'ವಹ್ಯ್'[19] ಮಾಡಿದನು (ಆದೇಶವಿತ್ತನು). ಆ ನೊಣದ ಹೊಟ್ಟೆಯಿಂದ ವಿವಿಧ ಬಣ್ಣಗಳ ಪಾನಕ ಹೊರಡುತ್ತದೆ. ಅದರಲ್ಲಿ ಜನರಿಗೆ ಗುಣಾಂಶವಿದೆ. ನಿಶ್ಚಯವಾಗಿಯೂ ಚಿಂತನ ಶೀಲರಿಗೆ ಇದರಲ್ಲೂ ಒಂದು ನಿದರ್ಶನವಿದೆ.

وَاللَّهُ خَلَقَكُمْ ثُمَّ يَتَوَفَّاكُمْ ۚ وَمِنْكُمْ مَنْ

70. ಮತ್ತೂ ನೋಡಿರಿ. ಅಲ್ಲಾಹನು ನಿಮ್ಮನ್ನು ಸೃಷ್ಟಿಸಿದನು. ಆ ಮೇಲೆ ಅವನು ನಿಮಗೆ ಮರಣವನ್ನೀಯುತ್ತಾನೆ ಮತ್ತು

ಅಲ್ಲಿ ಕಂಡು ಬರುವುದಿಲ್ಲ. ಅಷ್ಟರಲ್ಲಿ ಮಳೆಗಾಲ ಬಂದು ಬಿಡುತ್ತದೆ. ನಾಲ್ಕು ಹನಿಗಳು ಬೀಳುತ್ತಲೇ ಭೂಮಿಯಲ್ಲಿ ಜೀವ ಚೈತನ್ಯ ಗೋಚರಿಸತೊಡಗುತ್ತದೆ. ಭೂತಲದಲ್ಲಿ ಹೂತುಹೋಗಿದ್ದ ಅನೇಕ ಬೇರುಗಳು ಇದ್ದಕ್ಕಿದ್ದಂತೆ ಚಿಗುರುತ್ತವೆ. ಹಿಂದಿನ ಮಳೆಗಾಳದಲ್ಲಿ ಹುಟ್ಟಿದ ಬಳಿಕ ಒಣಗಿ ಸತ್ತು ಹೋಗಿದ್ದ ಸಸ್ಯಗಳೆಲ್ಲವೂ ಪುನಃ ಹೊರಬರುತ್ತವೆ. ಬೇಸಿಗೆಯಲ್ಲಿ ನಾಮಾವಶೇಷವಾಗಿದ್ದ ಮಳೆಗಾಲದ ಹುಳ-ಹುಪ್ಪಟೆಗಳು ಹಿಂದಿನ ಮುಂಗಾರಿನ ಪೂರ್ಣ ವೈಭವದೊಂದಿಗೆ ಮತ್ತೆ ಗೋಚರಿಸತೊಡಗುತ್ತವೆ. ನಿಮ್ಮ ಜೀವಮಾನದಲ್ಲಿ ಈ ಪ್ರಕ್ರಿಯೆಯನ್ನು ಆಗಾಗ ನೀವು ನೋಡುತ್ತಲೇ ಇರುತ್ತೀರಿ. ಆದರೆ ಸತ್ತ ಬಳಿಕ ಮಾನವರೆಲ್ಲರನ್ನೂ ಮತ್ತೆ ಸೃಷ್ಟಿಸಲಾಗುವುದು ಎಂಬ ಪ್ರವಾದಿಯ ಮಾತಿನ ಬಗ್ಗೆ ನೀವು ಆಶ್ಚರ್ಯ ಪ್ರಕಟಿಸುತ್ತೀರಿ.

18. ಇದರಲ್ಲಿ ಆಂಶಿಕವಾಗಿ ಮದ್ಯ ನಿಷಿದ್ಧವಾಗಿದೆ ಮತ್ತು ಅದು ಪರಿಶುದ್ಧ ಆಹಾರವಲ್ಲ ಎಂಬುದನ್ನೂ ಸೂಚಿಸಲಾಗಿದೆ.

19. 'ವಹ್ಯ್'ಯ ಶಬ್ದಾರ್ಥ ಗುಪ್ತವಾದ ಮತ್ತು ಸೂಕ್ಷ್ಮವಾದ ಸೂಚನೆ ಎಂದಾಗಿದೆ. ಸೂಚನೆ ನೀಡುವವನು ಮತ್ತು ಸ್ವೀಕರಿಸುವವನಲ್ಲದೆ ಬೇರಾರೂ ಅದನ್ನು ಅನುಭವಿಸುವುದಿಲ್ಲ. ಇದೇ ಹಿನ್ನೆಲೆಯೊಂದಿಗೆ ಈ ಪದ 'ಇಲ್ಕಾ' ಅರ್ಥಾತ್ ಜ್ಞಾನೋದಯ ಅಥವಾ 'ಇಲ್ಹಾಮ್' ಅರ್ಥಾತ್ ಗುಪ್ತ ಬೋಧನೆ ಎಂಬರ್ಥದಲ್ಲಿ ಪ್ರಯೋಗವಾಗುತ್ತದೆ.

ನಿಮ್ಮಲ್ಲಿ ಕೆಲವರು ಎಲ್ಲವನ್ನೂ ತಿಳಿದ ಅನಂತರವೂ ಏನೂ ತಿಳಿಯದವರಾಗುವಂತೆ ಅತಿ ವೃದ್ಧಾಪ್ಯಕ್ಕೆ ತಲುಪಿಸಲ್ಪಡುತ್ತಾರೆ. ವಾಸ್ತವದಲ್ಲಿ ಅಲ್ಲಾಹನೇ ಸರ್ವಜ್ಞನೂ ಸರ್ವಶಕ್ತನೂ ಆಗಿರುತ್ತಾನೆ.

يُّرَدُّ اِلٰٓى اَرْذَلِ الْعُمُرِ لِكَیْ لَا يَعْلَمَ بَعْدَ عِلْمٍ شَيْـًٔا ؕ اِنَّ اللّٰهَ عَلِيْمٌ قَدِيْرٌ ﴿۷۰﴾

71. ಇನ್ನೂ ನೋಡಿರಿ, ಅಲ್ಲಾಹನು ನಿಮ್ಮ ಪೈಕಿ ಕೆಲವರಿಗೆ ಕೆಲವರ ಮೇಲೆ ಜೀವನಾಧಾರದಲ್ಲಿ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆ. ಹೀಗೆ ಈ ಶ್ರೇಷ್ಠತೆ ನೀಡಲ್ಪಟ್ಟವರು ತಮ್ಮ ಜೀವನಾಧಾರವನ್ನು ತಮ್ಮ ಗುಲಾಮರಿಗೆ ಕೊಟ್ಟು ಅವರೂ ಜೀವನಾಧಾರದಲ್ಲಿ ಸಮಾನ ಪಾಲುಗಾರರಾಗುವಂತೆ ಮಾಡುವವರಲ್ಲ. ಹೀಗಿರುವಾಗ ಅಲ್ಲಾಹನ ಅನುಗ್ರಹವನ್ನು ಮಾತ್ರ ಇವರು ನಿರಾಕರಿಸುವುದೇ?[20]

وَاللّٰهُ فَضَّلَ بَعْضَكُمْ عَلٰى بَعْضٍ فِى الرِّزْقِ ۚ فَمَا الَّذِيْنَ فُضِّلُوْا بِرَآدِّىْ رِزْقِهِمْ عَلٰى مَا مَلَكَتْ اَيْمَانُهُمْ فَهُمْ فِيْهِ سَوَآءٌ ؕ اَفَبِنِعْمَةِ اللّٰهِ يَجْحَدُوْنَ ﴿۷۱﴾

72. ನಿಮಗಾಗಿ ನಿಮ್ಮ ವರ್ಗದಿಂದಲೇ ಪತ್ನಿಯರನ್ನುಂಟು ಮಾಡಿದವನು ಅಲ್ಲಾಹನೇ. ಆ ಪತ್ನಿಯರಿಂದ ಅವನೇ ನಿಮಗೆ ಪುತ್ರರನ್ನೂ ಪೌತ್ರರನ್ನೂ ದಯಪಾಲಿಸಿದನು ಮತ್ತು ಉತ್ತಮೋತ್ತಮ ಪದಾರ್ಥಗಳನ್ನು ನಿಮಗೆ ತಿನ್ನಲು ಕೊಟ್ಟನು. ಇನ್ನೇನು ಇವರು (ಇಷ್ಟನ್ನೆಲ್ಲಾ ಕಂಡೂ ತಿಳಿದೂ) ಅಸತ್ಯದಲ್ಲಿ ವಿಶ್ವಾಸವಿರಿಸುತ್ತಾರೆಯೇ?[21] ಮತ್ತು ಅಲ್ಲಾಹನ ಅನುಗ್ರಹಗಳನ್ನು ನಿರಾಕರಿಸುತ್ತಾರೆಯೇ?

وَاللّٰهُ جَعَلَ لَكُمْ مِّنْ اَنْفُسِكُمْ اَزْوَاجًا وَّجَعَلَ لَكُمْ مِّنْ اَزْوَاجِكُمْ بَنِيْنَ وَحَفَدَةً وَّرَزَقَكُمْ مِّنَ الطَّيِّبٰتِ ؕ اَفَبِالْبَاطِلِ يُؤْمِنُوْنَ وَبِنِعْمَتِ اللّٰهِ هُمْ يَكْفُرُوْنَ ﴿۷۲﴾

73. ಅಲ್ಲಾಹನನ್ನು ಬಿಟ್ಟು ಆಕಾಶಗಳಿಂದಾಗಲೀ ಭೂಮಿಯಿಂದಾಗಲೀ ಇವರಿಗೆ ಜೀವನಾಧಾರವನ್ನು ಕೊಡುವ ಏನೊಂದೂ

وَيَعْبُدُوْنَ مِنْ دُوْنِ اللّٰهِ مَا لَا يَمْلِكُ لَهُمْ رِزْقًا مِّنَ السَّمٰوٰتِ وَالْاَرْضِ

20. ಆಧುನಿಕ ಕಾಲದಲ್ಲಿ ಕೆಲವರು ಈ ಸೂಕ್ತಕ್ಕೆ ಈ ರೀತಿಯ ಅರ್ಥವನ್ನು ಕಲ್ಪಿಸುತ್ತಾರೆ, "ಅಲ್ಲಾಹನು ಯಾರಿಗೆ ಜೀವನಾಧಾರಗಳಲ್ಲಿ ಸಮೃದ್ಧಿ ದಯಪಾಲಿಸಿದ್ದಾನೋ ಅವರು ಅದನ್ನು ತಮ್ಮ ನೌಕರರಿಗೆ ಮತ್ತು ಗುಲಾಮರಿಗೆ ಮರಳಿಸಬೇಕಾಗಿದೆ. ಒಂದು ವೇಳೆ ಅವರು ಮರಳಿಸದಿದ್ದರೆ ಅಲ್ಲಾಹನ ಅನುಗ್ರಹಕ್ಕೆ ಕೃತಘ್ನತೆ ತೋರಿದಂತಾಗುತ್ತದೆ." ನಿಜವಾಗಿ ಪೂರ್ವೋಕ್ತ ಉಪನ್ಯಾಸ ಆರಂಭದಿಂದಲೂ ಬಹುದೇವವಾದದ ನಿರಾಕರಣೆ ಮತ್ತು ಏಕದೇವತ್ವದ ಸಮರ್ಥನೆಯ ಕುರಿತಾಗಿದೆ. ಮುಂದೆಯೂ ನಿರಂತರ ಇದೇ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಹಿನ್ನೆಲೆಯನ್ನು ಗಮನಿಸಿದಾಗ ಇಲ್ಲಿಯೂ ಇದೇ ವಿಷಯಕ್ಕೆ ಒತ್ತುಕೊಡಲಾಗಿದೆ ಎಂದು ಸ್ಪಷ್ಟವಾಗುತ್ತದೆ. ನೀವು ಸ್ವತಃ ನಿಮ್ಮ ಗುಲಾಮರು ಮತ್ತು ನೌಕರರಿಗೆ ಸಮಾನ ಸ್ಥಾನಮಾನ ಕೊಡುವುದಿಲ್ಲ. ಹಾಗಿರುವಾಗ ಅಲ್ಲಾಹನು ನಿಮಗೆ ಮಾಡಿರುವ ಉಪಕಾರಗಳಿಗೆ ಪ್ರತಿಯಾಗಿ ಅಲ್ಲಾಹನಿಗೆ ಕೃತಜ್ಞತಾರ್ಪಣೆ ಮಾಡುವಾಗ ಯಾವ ರೀತಿಯ ಅಧಿಕಾರಗಳೂ ಇಲ್ಲದ ದೇವನ ದಾಸರನ್ನೂ ಏಕೆ ಅವನಿಗೆ ಭಾಗಿದಾರರನ್ನಾಗಿ ನಿಲ್ಲಿಸುತ್ತೀರಿ? ಅಧಿಕಾರ ಮತ್ತು ಹಕ್ಕುಗಳಲ್ಲಿ ಅವರು ದೇವನಿಗೆ ಸಮಾನವಾದ ಪಾಲನ್ನು ಹೊಂದಿದ್ದಾರೆಂದು ಏಕೆ ಭಾವಿಸುತ್ತೀರಿ?

21. ಅರ್ಥಾತ್ ಸತ್ಯದೂರ ಮತ್ತು ನಿರಾಧಾರವಾದ ವಿಶ್ವಾಸವನ್ನು ಹೊಂದಿದ್ದಾರೆ. ಅವರ ಅದೃಷ್ಟ ಖುಲಾಯಿಸುವಂತೆ ಮಾಡುವುದು ಅಥವಾ ಕೆಡಿಸುವುದು, ಇಷ್ಟಾರ್ಥವನ್ನು ಈಡೇರಿಸುವುದು, ಪ್ರಾರ್ಥನೆಗಳನ್ನು ಆಲಿಸುವುದು, ಸಂತಾನಭಾಗ್ಯ ದಯಪಾಲಿಸುವುದು, ನೌಕರಿ ದೊರೆಯುವಂತೆ ಮಾಡುವುದು, ಮೊಕದ್ದಮೆಗಳಲ್ಲಿ ಗೆಲ್ಲುವಂತೆ ಮಾಡುವುದು ಮತ್ತು ರೋಗರುಜಿನಗಳಿಂದ ರಕ್ಷಿಸುವುದು, ದೇವಿ-ದೇವತೆಗಳ, ಜಿನ್ನ್‌ಗಳ ಹಾಗೂ ಗತಮಹಾಪುರುಷರ ಅಧಿಕಾರದಲ್ಲಿರುವಂತಹ ವಿಷಯಗಳು ಎಂದು ಅವರು ಭಾವಿಸುತ್ತಾರೆ.

شَيْـًٔا وَّلَا يَسْتَطِيْعُوْنَ ۚ

ಅಧಿಕಾರವಿರದ ಮತ್ತು ಈ ಕೆಲಸವನ್ನು ಮಾಡಲು ಸಾಧ್ಯವೇ ಇಲ್ಲದಂತಹ ಇತರರನ್ನು ಇವರು ಆರಾಧಿಸುತ್ತಾರೆಯೇ?

فَلَا تَضْرِبُوْا لِلّٰهِ الْاَمْثَالَ ؕ اِنَّ اللّٰهَ يَعْلَمُ وَاَنْتُمْ لَا تَعْلَمُوْنَ ۝

74. ಆದುದರಿಂದ ಅಲ್ಲಾಹನಿಗೆ ಹೋಲಿಕೆಗಳನ್ನು ಕಲ್ಪಿಸಬೇಡಿರಿ.[22] ಅಲ್ಲಾಹನಿಗೆ ತಿಳಿದಿದೆ, ನಿಮಗೆ ತಿಳಿದಿಲ್ಲ.

ضَرَبَ اللّٰهُ مَثَلًا عَبْدًا مَّمْلُوْكًا لَّا يَقْدِرُ عَلٰى شَيْءٍ وَّمَنْ رَّزَقْنٰهُ مِنَّا رِزْقًا حَسَنًا فَهُوَ يُنْفِقُ مِنْهُ سِرًّا وَّجَهْرًا ؕ هَلْ يَسْتَوٗنَ ؕ اَلْحَمْدُ لِلّٰهِ ؕ بَلْ اَكْثَرُهُمْ لَا يَعْلَمُوْنَ ۝

75. ಅಲ್ಲಾಹನು ಒಂದು ಉಪಮೆ ಕೊಡುತ್ತಾನೆ. ಒಬ್ಬನು ಗುಲಾಮನಾಗಿದ್ದು ಪರಾಧೀನನಾಗಿರುತ್ತಾನೆ. ಅವನಿಗೆ ಸ್ವಂತ ಅಧಿಕಾರವೇನೂ ಇಲ್ಲ. ಇನ್ನೊಬ್ಬನಿಗೆ ನಾವು ನಮ್ಮ ಕಡೆಯಿಂದ ಉತ್ತಮ ಜೀವನಾಧಾರವನ್ನು ನೀಡಿದ್ದೇವೆ. ಅವನು ಅದರಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ ಚೆನ್ನಾಗಿ ಖರ್ಚು ಮಾಡುತ್ತಾನೆ. ಇವರಿಬ್ಬರು ಸರಿಸಮಾನರಾಗಿರುವರೇ? ಹೇಳಿರಿ- 'ಅಲ್‌ಹಮ್ದು ಲಿಲ್ಲಾಹ್'[23] (ಸಕಲ ಸ್ತೋತ್ರಗಳು ಅಲ್ಲಾಹನಿಗೆ). ಆದರೆ ಹೆಚ್ಚಿನವರು (ಈ ಸರಳವಾದ ಮಾತನ್ನೂ) ಅರಿಯುವುದಿಲ್ಲ.

وَضَرَبَ اللّٰهُ مَثَلًا رَّجُلَيْنِ اَحَدُهُمَآ اَبْكَمُ لَا يَقْدِرُ عَلٰى شَيْءٍ وَّهُوَ كَلٌّ عَلٰى مَوْلٰىهُ ۙ اَيْنَمَا يُوَجِّهْهُّ لَا يَاْتِ بِخَيْرٍ ؕ هَلْ يَسْتَوِيْ هُوَ ۙ وَمَنْ يَّاْمُرُ بِالْعَدْلِ ۙ وَهُوَ عَلٰى صِرَاطٍ مُّسْتَقِيْمٍ ۝

76. ಅಲ್ಲಾಹನು ಇನ್ನೊಂದು ಉಪಮೆ ಕೊಡುತ್ತಾನೆ; ಇಬ್ಬರಿದ್ದಾರೆ. ಒಬ್ಬನು ಮೂಕನು. ಯಾವ ಕೆಲಸವನ್ನೂ ಮಾಡಲಾರ. ತನ್ನ ಯಜಮಾನನಿಗೆ ಹೊರೆಯಾಗಿದ್ದಾನೆ. ಅವನು ಇವನನ್ನು ಎತ್ತ ಕಳುಹಿಸಿದರೂ ಯಾವ ಒಳ್ಳೆಯ ಕಾರ್ಯವೂ ಇವನಿಂದಾಗುವುದಿಲ್ಲ. ಇನ್ನೊಬ್ಬನು ನ್ಯಾಯದ ಆಜ್ಞೆ ಕೊಡುತ್ತಾನೆ ಮತ್ತು ಸ್ವತಃ ನೇರಮಾರ್ಗದಲ್ಲಿ ನೆಲೆ ನಿಂತಿದ್ದಾನೆ. ಹೇಳಿರಿ! ಇವರಿಬ್ಬರು ಸರಿಸಮಾನರಾಗಿರುವರೇ?

ع

وَلِلّٰهِ غَيْبُ السَّمٰوٰتِ وَالْاَرْضِ ؕ وَمَآ اَمْرُ السَّاعَةِ اِلَّا كَلَمْحِ الْبَصَرِ اَوْ هُوَ اَقْرَبُ ؕ اِنَّ اللّٰهَ عَلٰى كُلِّ شَيْءٍ قَدِيْرٌ ۝

77. ಭೂಮಿ-ಆಕಾಶಗಳ ಅಗೋಚರ ಸತ್ಯಗಳ ಜ್ಞಾನ ಅಲ್ಲಾಹನಿಗೆ ಮಾತ್ರವಿದೆ. ಪ್ರಳಯದ ಸಂಭವವು ಮನುಷ್ಯನು ರೆಪ್ಪೆ ಬಡಿಯುವುದರೊಳಗೆ ಅಥವಾ ಅದಕ್ಕಿಂತಲೂ ಕಡಿಮೆ ಸಮಯದೊಳಗಾಗುವುದು. ವಾಸ್ತವದಲ್ಲಿ ಅಲ್ಲಾಹನು ಎಲ್ಲವನ್ನೂ ಮಾಡಬಲ್ಲನು.

وَاللّٰهُ اَخْرَجَكُمْ مِّنْ بُطُوْنِ اُمَّهٰتِكُمْ لَا

78. ಅಲ್ಲಾಹನು ನೀವು ಏನೂ ಅರಿಯದ ಸ್ಥಿತಿಯಲ್ಲಿ ನಿಮ್ಮನ್ನು

22. ಅರ್ಥಾತ್- ಲೋಕದ ಚಕ್ರವರ್ತಿಗಳು ಮತ್ತು ರಾಜ ಮಹಾರಾಜರುಗಳಂತೆ ಅವನಿದ್ದಾನೆಂದು ಭಾವಿಸದಿರಿ. ನಿಕಟವರ್ತಿಗಳ ಮತ್ತು ಆಸ್ಥಾನದ ಆಪ್ತರ ಮಧ್ಯವರ್ತಿಕೆ ಇಲ್ಲದೆ ನಿಮ್ಮ ಅರ್ಜಿಗಳನ್ನು ರಾಜರುಗಳಿಗೆ ತಲಪಿಸಲು ಸಾಧ್ಯವಾಗದಿರುವಂತೆ ದೇವನ ಬಗ್ಗೆಯೂ ನೀವು ಕಲ್ಪಿಸಿಕೊಳ್ಳದಿರಿ. ಅವನು ತನ್ನ ದೇವಚರರು, ಮಹಾಪುರುಷರು ಮತ್ತಿತರ ಆಪ್ತರಿಂದ ಸುತ್ತುವರಿಯಲ್ಪಟ್ಟಿದ್ದಾನೆ. ಅವರ ಮಧ್ಯವರ್ತಿಕೆ ಇಲ್ಲದೆ ಯಾವ ಕೆಲಸವೂ ಸಾಧಿತವಾಗದು ಎಂದು ಭಾವಿಸದಿರಿ.

23. ಈ ಪ್ರಶ್ನೆಗೆ ಉತ್ತರವಾಗಿ ಬಹುದೇವಾರಾಧಕರು ಅವರಿಬ್ಬರೂ ಸಮಾನರಾಗಿದ್ದಾರೆ ಎಂದು ಹೇಳುವಂತಿರಲಿಲ್ಲ. ಆದ್ದರಿಂದ ಅಲ್ಲಾಹನು 'ಅಲ್ಲಾಹನಿಗೆ ಸ್ತುತಿ' ಇಷ್ಟು ವಿಷಯ ನಿಮ್ಮ ತಿಳುವಳಿಕೆಗೆ ಬಂದು ಬಿಟ್ಟಿತು ಎಂದು ಹೇಳುತ್ತಿದ್ದಾನೆ.

ನಿಮ್ಮ ತಾಯಂದಿರ ಹೊಟ್ಟೆಗಳಿಂದ ಹೊರ ತಂದನು. ನೀವು ಕೃತಜ್ಞರಾಗಲಿಕ್ಕಾಗಿ. ಅವನು ನಿಮಗೆ ಶ್ರವಣ ಶಕ್ತಿಯನ್ನೂ ದೃಷ್ಟಿಗಳನ್ನೂ ವಿಚಾರ ಮಾಡುವ ಮನಸ್ಸುಗಳನ್ನೂ ನೀಡಿದನು.

تَعْلَمُونَ شَيْئًا وَجَعَلَ لَكُمُ السَّمْعَ وَالْأَبْصَارَ وَالْأَفْئِدَةَ لَعَلَّكُمْ تَشْكُرُونَ ۝٧٨

79. ಪಕ್ಷಿಗಳು ಅಂತರಿಕ್ಷದಲ್ಲಿ ಹೇಗೆ ನಿಯಂತ್ರಣಕ್ಕೊಳಗಾಗಿವೆಯೆಂಬುದನ್ನು ಇವರೆಂದೂ ನೋಡಲಿಲ್ಲವೇ? ಅವುಗಳನ್ನು ಅಲ್ಲಾಹನ ಹೊರತು ಇನ್ನಾರು ಆಧರಿಸಿದ್ದಾರೆ? ಸತ್ಯವಿಶ್ವಾಸವಿರಿಸುವವರಿಗೆ ಇದರಲ್ಲಿ ತುಂಬಾ ನಿದರ್ಶನಗಳಿವೆ.

أَلَمْ يَرَوْا إِلَى الطَّيْرِ مُسَخَّرَاتٍ فِي جَوِّ السَّمَاءِ مَا يُمْسِكُهُنَّ إِلَّا اللَّهُ إِنَّ فِي ذَٰلِكَ لَآيَاتٍ لِقَوْمٍ يُؤْمِنُونَ ۝٧٩

80. ಅಲ್ಲಾಹನು ನಿಮಗಾಗಿ ನಿಮ್ಮ ಮನೆಗಳನ್ನು ನೆಮ್ಮದಿಯ ಸ್ಥಾನವನ್ನಾಗಿ ಮಾಡಿದನು. ಅವನು ಪ್ರಾಣಿಗಳ ತೊಗಲಿನಿಂದ ನಿಮಗಾಗಿ ಮನೆ(ಡೇರೆ)ಗಳನ್ನು ಮಾಡಿದನು.[24] ನೀವು ಅವುಗಳನ್ನು ಪ್ರಯಾಣ ಮತ್ತು ತಂಗು ಇವೆರಡೂ ಸ್ಥಿತಿಗಳಲ್ಲಿ ಹಗುರವಾಗಿ ಕಾಣುತ್ತೀರಿ. ಅಲ್ಲಾಹನು ಅವುಗಳ ತುಪ್ಪಳ, ಉಣ್ಣೆ ಮತ್ತು ರೋಮಗಳಿಂದ ಬಾಳಿನುದ್ದಕ್ಕೂ ನಿಮ್ಮ ಉಪಯೋಗಕ್ಕೆ ಬರುವಂತಹ ಅನೇಕ ಉಡುವ ಮತ್ತು ಬಳಕೆಯ ವಸ್ತುಗಳನ್ನು ಸೃಷ್ಟಿಸಿದನು.

وَاللَّهُ جَعَلَ لَكُمْ مِنْ بُيُوتِكُمْ سَكَنًا وَجَعَلَ لَكُمْ مِنْ جُلُودِ الْأَنْعَامِ بُيُوتًا تَسْتَخِفُّونَهَا يَوْمَ ظَعْنِكُمْ وَيَوْمَ إِقَامَتِكُمْ وَمِنْ أَصْوَافِهَا وَأَوْبَارِهَا وَأَشْعَارِهَا أَثَاثًا وَمَتَاعًا إِلَىٰ حِينٍ ۝٨٠

81. ಅಲ್ಲಾಹನು ತಾನು ಸೃಷ್ಟಿಸಿದ ಅನೇಕ ವಸ್ತುಗಳಿಂದ ನಿಮಗಾಗಿ ನೆರಳಿನ ವ್ಯವಸ್ಥೆ ಮಾಡಿದನು. ಪರ್ವತಗಳಲ್ಲಿ ನಿಮಗಾಗಿ ಆಶ್ರಯ ಸ್ಥಾನಗಳನ್ನು ಮಾಡಿದನು. ನಿಮಗೆ, ಉಷ್ಣದಿಂದ ರಕ್ಷಿಸತಕ್ಕ ಉಡುಪನ್ನೂ ಪರಸ್ಪರರೊಳಗಿನ ಯುದ್ಧದಲ್ಲಿ ನಿಮಗೆ ರಕ್ಷಣೆ ನೀಡುವಂತಹ ಬೇರೆ ಕೆಲವು ಉಡುಪುಗಳನ್ನೂ ದಯಪಾಲಿಸಿದನು. ಹೀಗೆ ನೀವು ಆಜ್ಞಾನುಸಾರಿಗಳಾಗಬಹುದೆಂದು ಅವನು ನಿಮ್ಮ ಮೇಲೆ ತನ್ನ 'ಕೊಡುಗೆ'ಗಳನ್ನು ಪೂರ್ತಿಗೊಳಿಸುತ್ತಾನೆ.

وَاللَّهُ جَعَلَ لَكُمْ مِمَّا خَلَقَ ظِلَالًا وَجَعَلَ لَكُمْ مِنَ الْجِبَالِ أَكْنَانًا وَجَعَلَ لَكُمْ سَرَابِيلَ تَقِيكُمُ الْحَرَّ وَسَرَابِيلَ تَقِيكُمْ بَأْسَكُمْ كَذَٰلِكَ يُتِمُّ نِعْمَتَهُ عَلَيْكُمْ لَعَلَّكُمْ تُسْلِمُونَ ۝٨١

82. ಹೀಗಿರುತ್ತ ಇವರು ವಿಮುಖರಾಗುತ್ತಾರಾದರೆ, ಓ ಪೈಗಂಬರರೇ, ಸತ್ಯ ಸಂದೇಶವನ್ನು ಸುವ್ಯಕ್ತವಾಗಿ ತಲಪಿಸುವುದಷ್ಟೇ ನಿಮ್ಮ ಹೊಣೆಯಾಗಿರುತ್ತದೆ.

فَإِنْ تَوَلَّوْا فَإِنَّمَا عَلَيْكَ الْبَلَاغُ الْمُبِينُ ۝٨٢

83. ಇವರು ಅಲ್ಲಾಹನ 'ಭವ್ಯಕೊಡುಗೆ'ಯನ್ನು ಅರಿಯುತ್ತಾರೆ; ಅನಂತರ ನಿರಾಕರಿಸುತ್ತಾರೆ ಮತ್ತು ಇವರಲ್ಲಿ ಹೆಚ್ಚಿನವರು ಸತ್ಯವನ್ನು ಸ್ವೀಕರಿಸಿಕೊಳ್ಳಲಿಕ್ಕೇ ಸಿದ್ಧರಿಲ್ಲ.

يَعْرِفُونَ نِعْمَتَ اللَّهِ ثُمَّ يُنْكِرُونَهَا وَأَكْثَرُهُمُ الْكَافِرُونَ ۝٨٣

24. ಅರ್ಥಾತ್- ಚರ್ಮದಿಂದ ನಿರ್ಮಿತವಾದ ಡೇರೆಗಳು. ಅದರ ಬಳಕೆ ಅರೇಬಿಯಾದಲ್ಲಿ ಹೆಚ್ಚಾಗಿದೆ.

84. ಆ ದಿನ ನಾವು ಪ್ರತಿಯೊಂದು ಸಮುದಾಯದಿಂದ ಒಬ್ಬೊಬ್ಬ ಸಾಕ್ಷಿಯನ್ನು ನಿಲ್ಲಿಸುವೆವು. (ಅಂದು ಏನಾಗುವುದೆಂಬ ಕಿಂಚಿತ್ ಪ್ರಜ್ಞೆಯಾದರೂ ಇವರಿಗಿದೆಯೇ?) ಸತ್ಯನಿಷೇಧಿಗಳಿಗೆ ಕುತರ್ಕಗಳನ್ನು ಮುಂದಿರಿಸಲಿಕ್ಕೂ ಅವಕಾಶ ದೊರೆಯಲಾರದು.[25] ಅವರಿಂದ ಪಶ್ಚಾತ್ತಾಪ ಹಾಗೂ ಕ್ಷಮಾಯಾಚನೆಯ ತಗಾದೆಯನ್ನೂ ಮಾಡಲಾಗದು.

وَيَوْمَ نَبْعَثُ مِنْ كُلِّ أُمَّةٍ شَهِيدًا ثُمَّ لَا يُؤْذَنُ لِلَّذِينَ كَفَرُوا وَلَا هُمْ يُسْتَعْتَبُونَ ﴿٨٤﴾

85. ಅಕ್ರಮಿಗಳು ಒಮ್ಮೆ ಯಾತನೆಗೊಳಗಾದ ಬಳಿಕ ಅವರ ಯಾತನೆಯಲ್ಲಿ ಸ್ವಲ್ಪವೂ ಕಡಿತ ಮಾಡಲಾಗದು ಮತ್ತು ಒಂದು ಕ್ಷಣ ಕಾಲದ ಅವಕಾಶವೂ ಕೊಡಲಾಗದು.

وَإِذَا رَأَى الَّذِينَ ظَلَمُوا الْعَذَابَ فَلَا يُخَفَّفُ عَنْهُمْ وَلَا هُمْ يُنْظَرُونَ ﴿٨٥﴾

86. ಇಹಲೋಕದಲ್ಲಿ 'ಬಹುದೇವವಿಶ್ವಾಸ' ಕೈಗೊಂಡವರು ತಾವು ನಿಶ್ಚಯಿಸಿಕೊಂಡಿದ್ದ ಸಹಭಾಗಿಗಳನ್ನು ಕಂಡಾಗ, "ಓ ನಮ್ಮ ಪ್ರಭೂ, ನಿನ್ನನ್ನು ಬಿಟ್ಟು ನಾವು ಪ್ರಾರ್ಥಿಸುತ್ತಿದ್ದ ಸಹಭಾಗಿಗಳು ಇವರೇ" ಎಂದು ಹೇಳುವರು. ಆಗ ಅವರ ಆ ಆರಾಧ್ಯರು, "ನೀವು ಸುಳ್ಳುಗಾರರು"[26] ಎಂದು ನಿಖರವಾಗಿ ಉತ್ತರ ಕೊಡುವರು.

وَإِذَا رَأَى الَّذِينَ أَشْرَكُوا شُرَكَاءَهُمْ قَالُوا رَبَّنَا هَٰؤُلَاءِ شُرَكَاؤُنَا الَّذِينَ كُنَّا نَدْعُو مِنْ دُونِكَ ۖ فَأَلْقَوْا إِلَيْهِمُ الْقَوْلَ إِنَّكُمْ لَكَاذِبُونَ ﴿٨٦﴾

87. ಆಗ ಇವರೆಲ್ಲರೂ ಅಲ್ಲಾಹನ ಮುಂದೆ ಶರಣು ಹೋಗುವರು ಮತ್ತು ಈ ಲೋಕದಲ್ಲಿ ಮಾಡುತ್ತಿದ್ದ ಅವರ ಸುಳ್ಳು ಸೃಷ್ಟನೆಗಳೆಲ್ಲ ಮಾಯವಾಗಿ ಹೋಗುವುವು.

وَأَلْقَوْا إِلَى اللَّهِ يَوْمَئِذٍ السَّلَمَ ۖ وَضَلَّ عَنْهُمْ مَا كَانُوا يَفْتَرُونَ ﴿٨٧﴾

88. ಸ್ವತಃ 'ಸತ್ಯನಿಷೇಧ' ಮಾರ್ಗವನ್ನು ಕೈಗೊಂಡವರಿಗೂ ಇತರರನ್ನು ಅಲ್ಲಾಹನ ಮಾರ್ಗದಿಂದ ತಡೆದವರಿಗೂ ಅವರು ಇಹಲೋಕದಲ್ಲಿ ಮಾಡುತ್ತಿದ್ದ ಕಿಡಿಗೇಡಿತನದ ಪ್ರತಿಫಲವಾಗಿ ನಾವು ಯಾತನೆಯ ಮೇಲೆ ಯಾತನೆ ಕೊಡುವೆವು.

الَّذِينَ كَفَرُوا وَصَدُّوا عَنْ سَبِيلِ اللَّهِ زِدْنَاهُمْ عَذَابًا فَوْقَ الْعَذَابِ بِمَا كَانُوا يُفْسِدُونَ ﴿٨٨﴾

89. (ಓ ಪೈಗಂಬರರೇ, ಇವರಿಗೆ ಆ ದಿನದ ಬಗ್ಗೆ ಎಚ್ಚರಿಕೆ ನೀಡಿರಿ.) ಅಂದು ನಾವು ಪ್ರತಿಯೊಂದು ಸಮುದಾಯದಲ್ಲಿ ಅದರ ವಿರುದ್ಧ ಸಾಕ್ಷ್ಯ ಹೇಳುವ ಒಬ್ಬ ಸಾಕ್ಷಿದಾರನನ್ನು ಅದರೊಳಗಿಂದಲೇ ಎಬ್ಬಿಸುವೆವು ಮತ್ತು ಇವರ ವಿರುದ್ಧ ಸಾಕ್ಷ್ಯ ಹೇಳಲು

وَيَوْمَ نَبْعَثُ فِي كُلِّ أُمَّةٍ شَهِيدًا عَلَيْهِمْ مِنْ أَنْفُسِهِمْ ۖ وَجِئْنَا بِكَ شَهِيدًا عَلَىٰ هَٰؤُلَاءِ ۚ وَنَزَّلْنَا عَلَيْكَ الْكِتَابَ تِبْيَانًا

25. ಅವರಿಗೆ ಸ್ಪಷ್ಟೀಕರಣದ ಅನುಮತಿ ನೀಡಲಾಗುವುದಿಲ್ಲವೆಂದು ಇದರ ಅರ್ಥವಲ್ಲ. ಬದಲಾಗಿ ಅವರ ಅಪರಾಧಗಳನ್ನು ಯಾವ ರೀತಿಯ ಸ್ಪಷ್ಟನೆಗೂ ಆಸ್ಪದವಿಲ್ಲದಂತಹ ಸುವ್ಯಕ್ತವಾದ ಮತ್ತು ನಿರಾಕರಿಸಲು ಸಾಧ್ಯವಾಗದಂತಹ ಆಧಾರ ಪ್ರಮಾಣಗಳ ಮೂಲಕ ಸಾಬೀತು ಪಡಿಸಲಾಗುವುದು.

26. ಅರ್ಥಾತ್- ದೇವನನ್ನು ಬಿಟ್ಟು ನಮ್ಮನ್ನು ಕರೆದು ಪ್ರಾರ್ಥಿಸುವಂತೆ ನಾವೆಂದೂ ನಿಮಗೆ ಹೇಳಿರಲಿಲ್ಲ. ನಾವು ನಿಮ್ಮ ಕೃತ್ಯದ ಬಗ್ಗೆ ಸಂತುಷ್ಟರಾಗಿರಲಿಲ್ಲ. ಮಾತ್ರವಲ್ಲ ನೀವು ನಮ್ಮನ್ನು ಪ್ರಾರ್ಥಿಸುತ್ತಿರುವ ಬಗ್ಗೆ ನಮಗೆ ತಿಳುವಳಿಕೆಯೇ ಇರಲಿಲ್ಲ.

ನಾವು ನಿಮ್ಮನ್ನು ತರುವೆವು. (ಆ ಸಾಕ್ಷ್ಯಕ್ಕೆ ಪೂರ್ವ ಸಿದ್ಧತೆ ಯಾಗಿಯೇ) ನಾವು ನಿಮಗೆ ಈ ಗ್ರಂಥವನ್ನು ಅವತೀರ್ಣಗೊಳಿಸಿದ್ದೇವೆ. ಇದು ಪ್ರತಿಯೊಂದು ವಸ್ತುವನ್ನು ಸುವ್ಯಕ್ತವಾಗಿ ವಿವರಿಸುವಂತಹದೂ ಆಜ್ಞಾನುಸರಣೆ ಮಾಡುವವರಿಗೆ ಮಾರ್ಗ ದರ್ಶನವೂ ಕೃಪೆಯೂ ಸುವಾರ್ತೆಯೂ ಆಗಿರುತ್ತದೆ.

لِّكُلِّ شَيْءٍ وَّهُدًى وَّرَحْمَةً وَّبُشْرٰى لِلْمُسْلِمِيْنَ ﴿٨٩﴾

90. ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸುತ್ತಾನೆ. ನೀವು ಜಾಗೃತರಾಗಲಿಕ್ಕಾಗಿ ಅವನು ನಿಮಗೆ ಉಪದೇಶ ನೀಡುತ್ತಾನೆ.

اِنَّ اللّٰهَ يَاْمُرُ بِالْعَدْلِ وَالْاِحْسَانِ وَاِيْتَآئِ ذِى الْقُرْبٰى وَيَنْهٰى عَنِ الْفَحْشَآءِ وَالْمُنْكَرِ وَالْبَغْيِ ۚ يَعِظُكُمْ لَعَلَّكُمْ تَذَكَّرُوْنَ ﴿٩٠﴾

91. ನೀವು ಅಲ್ಲಾಹನೊಡನೆ ಕರಾರು ಮಾಡಿಕೊಂಡಿದ್ದರೆ ಅದನ್ನು ಪಾಲಿಸಿರಿ. ನೀವು ಅಲ್ಲಾಹನನ್ನು ನಿಮ್ಮ ಮೇಲೆ ಸಾಕ್ಷ್ಯ ನಿಲ್ಲಿಸಿಕೊಂಡು ಮಾಡಿದ ಪ್ರತಿಜ್ಞೆಗಳನ್ನು ಮುರಿಯಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಸಕಲ ಕರ್ಮಗಳನ್ನೂ ಅಲ್ಲಾಹನು ತಿಳಿದಿರುತ್ತಾನೆ.

وَاَوْفُوْا بِعَهْدِ اللّٰهِ اِذَا عٰهَدْتُّمْ وَلَا تَنْقُضُوا الْاَيْمَانَ بَعْدَ تَوْكِيْدِهَا وَقَدْ جَعَلْتُمُ اللّٰهَ عَلَيْكُمْ كَفِيْلًا ۗ اِنَّ اللّٰهَ يَعْلَمُ مَا تَفْعَلُوْنَ ﴿٩١﴾

92. ತಾನೇ ಶ್ರಮವಹಿಸಿ ನೂಲು ನೂತು ಅನಂತರ ತಾನೇ ಅದನ್ನು ತುಂಡು ತುಂಡಾಗಿಸುವ ಸ್ತ್ರೀಯಂತೆ ನಿಮ್ಮ ಸ್ಥಿತಿ ಆಗಬಾರದು. ಒಂದು ಜನಾಂಗವು ಇನ್ನೊಂದು ಜನಾಂಗಕ್ಕಿಂತ ಹೆಚ್ಚು ಲಾಭ ಹೊಂದಲಿಕ್ಕಾಗಿ ನೀವು ನಿಮ್ಮ ಪ್ರತಿಜ್ಞೆಗಳನ್ನು ಪರಸ್ಪರರ ವ್ಯವಹಾರಗಳಲ್ಲಿ ಕುಟಿಲತೆ ಹಾಗೂ ಧೂರ್ತತನದ ಸಾಧನವನ್ನಾಗಿ ಮಾಡುತ್ತೀರಿ. ವಸ್ತುತಃ ಅಲ್ಲಾಹನು ಈ ಪ್ರತಿಜ್ಞೆಗಳ ಮೂಲಕ ನಿಮ್ಮನ್ನು ಪರೀಕ್ಷೆಗೊಳಪಡಿಸುತ್ತಾನೆ ಮತ್ತು ಅವನು ಪುನರುತ್ಥಾನ ದಿನದಂದು ನಿಮ್ಮ ಎಲ್ಲಾ ಭಿನ್ನಾಭಿಪ್ರಾಯಗಳ ವಾಸ್ತವಿಕತೆಯನ್ನು ನಿಮ್ಮ ಮುಂದೆ ಪ್ರಕಟಗೊಳಿಸುವನು.

وَلَا تَكُوْنُوْا كَالَّتِيْ نَقَضَتْ غَزْلَهَا مِنْۢ بَعْدِ قُوَّةٍ اَنْكَاثًا ۗ تَتَّخِذُوْنَ اَيْمَانَكُمْ دَخَلًاۢ بَيْنَكُمْ اَنْ تَكُوْنَ اُمَّةٌ هِيَ اَرْبٰى مِنْ اُمَّةٍ ۗ اِنَّمَا يَبْلُوْكُمُ اللّٰهُ بِهٖ ۗ وَلَيُبَيِّنَنَّ لَكُمْ يَوْمَ الْقِيٰمَةِ مَا كُنْتُمْ فِيْهِ تَخْتَلِفُوْنَ ﴿٩٢﴾

93. ಅಲ್ಲಾಹನ ಇಚ್ಛೆ ಇದಾಗಿರುತ್ತಿದ್ದರೆ (ನಿಮ್ಮೊಳಗೆ ಭಿನ್ನಾಭಿಪ್ರಾಯ ವಿರಬಾರದೆಂದಿರುತ್ತಿದ್ದರೆ) ಅವನು ನಿಮ್ಮೆಲ್ಲರನ್ನೂ ಒಂದೇ ಸಮುದಾಯವನ್ನಾಗಿ ಮಾಡಿಬಿಡುತ್ತಿದ್ದನು. ಆದರೆ ಅವನು ತನಗಿಷ್ಟ ಬಂದವರನ್ನು ಪಥಭ್ರಷ್ಟತೆಗೊಳಪಡಿಸುತ್ತಾನೆ ಮತ್ತು ತನಗಿಷ್ಟ ಬಂದವರಿಗೆ ಸನ್ಮಾರ್ಗವನ್ನು ತೋರುತ್ತಾನೆ ಮತ್ತು ಖಂಡಿತವಾಗಿಯೂ ನಿಮ್ಮ ಕರ್ಮಗಳ ಬಗ್ಗೆ ನಿಮ್ಮನ್ನು ವಿಚಾರಿಸಿಯೇ ತೀರಲಾಗುವುದು.

وَلَوْ شَآءَ اللّٰهُ لَجَعَلَكُمْ اُمَّةً وَّاحِدَةً وَّلٰكِنْ يُّضِلُّ مَنْ يَّشَآءُ وَيَهْدِيْ مَنْ يَّشَآءُ ۗ وَلَتُسْـَٔلُنَّ عَمَّا كُنْتُمْ تَعْمَلُوْنَ ﴿٩٣﴾

94. (ಓ ಮುಸ್ಲಿಮರೇ,) ನೀವು ನಿಮ್ಮ ಪ್ರತಿಜ್ಞೆಗಳನ್ನು ಪರಸ್ಪರರನ್ನು ವಂಚಿಸುವ ಸಾಧನವನ್ನಾಗಿ ಮಾಡಿಕೊಳ್ಳಬೇಡಿರಿ. ನಿಮ್ಮ ಪಾದಗಳು ಸ್ಥಿರಗೊಂಡ ಬಳಿಕ ಕಿತ್ತು ಹೋಗುವಂತಾಗಬಾರದು. ನೀವು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆದ ಅಪರಾಧಕ್ಕಾಗಿ ಕೆಟ್ಟ ಪರಿಣಾಮವನ್ನು ಕಾಣುವಂತೆಯೂ ಘೋರ ಶಿಕ್ಷೆಯನ್ನು ಅನುಭವಿಸುವಂತೆಯೂ ಆಗಿಬಿಡಬಾರದು.[27]

وَلَا تَتَّخِذُوٓا أَيْمَانَكُمْ دَخَلًا بَيْنَكُمْ فَتَزِلَّ قَدَمٌ بَعْدَ ثُبُوتِهَا وَتَذُوقُوا السُّوٓءَ بِمَا صَدَدتُّمْ عَن سَبِيلِ اللّٰهِ ۚ وَلَكُمْ عَذَابٌ عَظِيمٌ ﴿٩٤﴾

95. ಅಲ್ಲಾಹನೊಂದಿಗೆ ಮಾಡಿದ ಕರಾರನ್ನು ಅಲ್ಪಲಾಭಕ್ಕಾಗಿ ಮಾರಬೇಡಿರಿ. ನೀವು ತಿಳಿದಿದ್ದರೆ, ಅಲ್ಲಾಹನ ಬಳಿಯಲ್ಲಿರುವುದು ನಿಮಗೆ ಹೆಚ್ಚು ಉತ್ತಮ.

وَلَا تَشْتَرُوا بِعَهْدِ اللّٰهِ ثَمَنًا قَلِيلًا ۚ إِنَّمَا عِندَ اللّٰهِ هُوَ خَيْرٌ لَّكُمْ إِن كُنتُمْ تَعْلَمُونَ ﴿٩٥﴾

96. ನಿಮ್ಮಲ್ಲಿರುವುದೆಲ್ಲಾ ಖರ್ಚಾಗಿ ಹೋಗಲಿದೆ. ಅಲ್ಲಾಹನ ಬಳಿಯಲ್ಲಿರುವುದು ಮಾತ್ರ ಬಾಕಿ ಉಳಿದಿರುವುದು. ನಿಶ್ಚಯವಾಗಿಯೂ ನಾವು ಸಹನೆಯೊಂದಿಗೆ ಕಾರ್ಯವೆಸಗುವವರಿಗೆ ಅವರ ಪ್ರತಿಫಲವನ್ನು ಅವರ ಅತ್ಯುತ್ತಮ ಕರ್ಮಗಳಿಗನುಸಾರ ನೀಡುವೆವು.

مَا عِندَكُمْ يَنفَدُ وَمَا عِندَ اللّٰهِ بَاقٍ ۗ وَلَنَجْزِيَنَّ الَّذِينَ صَبَرُوٓا أَجْرَهُم بِأَحْسَنِ مَا كَانُوا يَعْمَلُونَ ﴿٩٦﴾

97. ಪುರುಷನಾಗಿರಲಿ ಸ್ತ್ರೀ ಆಗಿರಲಿ ಯಾರು ಸತ್ಕರ್ಮವೆಸಗುವನೋ ಅವನು ಸತ್ಯವಿಶ್ವಾಸಿಯಾಗಿದ್ದರೆ ಅವನಿಗೆ ನಾವು ಇಹಲೋಕದಲ್ಲಿ ಪರಿಶುದ್ಧ ಜೀವನವನ್ನು ದಯಪಾಲಿಸುವೆವು ಮತ್ತು ಇಂತಹವರಿಗೆ (ಪರಲೋಕದಲ್ಲಿ) ಅವರ ಅತ್ಯುತ್ತಮ ಕರ್ಮಗಳಿಗನುಸಾರ ಪ್ರತಿಫಲ ನೀಡುವೆವು.

مَنْ عَمِلَ صَالِحًا مِّن ذَكَرٍ أَوْ أُنثَىٰ وَهُوَ مُؤْمِنٌ فَلَنُحْيِيَنَّهُ حَيَوٰةً طَيِّبَةً ۖ وَلَنَجْزِيَنَّهُمْ أَجْرَهُم بِأَحْسَنِ مَا كَانُوا يَعْمَلُونَ ﴿٩٧﴾

98. ನೀವು ಕುರ್‌ಆನನ್ನು ಪಠಿಸಲಾರಂಭಿಸುವಾಗ ಶಪಿತ ಶೈತಾನನಿಂದ ಅಲ್ಲಾಹನ ಅಭಯ ಯಾಚಿಸಿಕೊಳ್ಳಿರಿ.[28]

فَإِذَا قَرَأْتَ الْقُرْآنَ فَاسْتَعِذْ بِاللّٰهِ مِنَ الشَّيْطَانِ الرَّجِيمِ ﴿٩٨﴾

99. ಸತ್ಯವಿಶ್ವಾಸವಿರಿಸುವವರ ಹಾಗೂ ತಮ್ಮ ಪ್ರಭುವಿನ ಮೇಲೆ ಭರವಸೆಯನ್ನಿರಿಸುವವರ ಮೇಲೆ ಅವನ ಹತೋಟಿ ಖಂಡಿತವಾಗಿಯೂ ಇಲ್ಲ.

إِنَّهُ لَيْسَ لَهُ سُلْطَانٌ عَلَى الَّذِينَ آمَنُوا وَعَلَىٰ رَبِّهِمْ يَتَوَكَّلُونَ ﴿٩٩﴾

27. ಅರ್ಥಾತ್- ಒಬ್ಬ ವ್ಯಕ್ತಿ ಇಸ್ಲಾಮಿನ ಸತ್ಯತೆಯನ್ನು ಸಮ್ಮತಿಸಿದ ಬಳಿಕ ಕೇವಲ ನಿಮ್ಮ ಅನೀತಿಯನ್ನು ಕಂಡು ಧರ್ಮದಿಂದ ವಿಮುಖವಾಗುವಂತೆ ಆಗಬಾರದು. ಹೀಗೆ ಸತ್ಯವಿಶ್ವಾಸಿಗಳ ಕೂಟದಲ್ಲಿ ಅವನು ನೋಡಿದಂತಹ ವ್ಯಕ್ತಿಗಳು ಚಾರಿತ್ರ್ಯ ಮತ್ತು ವ್ಯವಹಾರದಲ್ಲಿ ಸತ್ಯನಿಷೇಧಿಗಳಿಗಿಂತ ಭಿನ್ನರಲ್ಲ ಎಂಬುದನ್ನು ಗಮನಿಸಿ. ಅವನು ಸತ್ಯವಿಶ್ವಾಸಿಗಳ ಕೂಟದಲ್ಲಿ ಸೇರುವುದರಿಂದ ದೂರ ಉಳಿಯುವಂತಾಗಬಾರದು.

28. ಅರ್ಥಾತ್- ನಾಲಗೆಯಿಂದ "ಅವೂದು ಬಿಲ್ಲಾಹಿ ಮಿನಶ್ಶೈತಾನಿರ್ರಜೀಮ್" ಎಂದು ಉಚ್ಚರಿಸಬೇಕೆಂದು ಮಾತ್ರವಲ್ಲ ಶೈತಾನನ ದಾರಿತಪ್ಪಿಸುವಂತಹ ಪ್ರಲೋಭನೆಗಳಿಂದ ತನ್ನನ್ನು ಸುರಕ್ಷಿತವಾಗಿರಿಸುವಂತೆ ಮನಃಪೂರ್ವಕವಾಗಿ ಅಲ್ಲಾಹನನ್ನು ಪ್ರಾರ್ಥಿಸಬೇಕು. ಏಕೆಂದರೆ ಈ ಗ್ರಂಥದಿಂದ ಮಾರ್ಗದರ್ಶನವನ್ನು ಪಡೆಯದವನು ಬೇರೆಲ್ಲಿಂದಲೂ ಅದನ್ನು ಪಡೆಯಲಾರನು. ಈ ಗ್ರಂಥದಿಂದ ಪಥಭ್ರಷ್ಟತೆಯನ್ನು ಪಡೆದವನನ್ನು ಜಗತ್ತಿನ ಬೇರಾವ ಗ್ರಂಥವೂ ಪಥಭ್ರಷ್ಟತೆಯಿಂದ ರಕ್ಷಿಸಲಾರದು.

100. ಅವನನ್ನು ತಮ್ಮ ಸಂರಕ್ಷಕನನ್ನಾಗಿ ಮಾಡಿಕೊಂಡವರ ಮೇಲೆ ಮತ್ತು ಅವನ ವಂಚನೆಗೊಳಪಟ್ಟು 'ದೇವಸಹಭಾಗಿತ್ವ' ಮಾಡುವವರ ಮೇಲೆ ಮಾತ್ರ ಅವನ ಪ್ರಭಾವವಿರುತ್ತದೆ.

إِنَّمَا سُلْطَانُهُ عَلَى الَّذِينَ يَتَوَلَّوْنَهُ وَالَّذِينَ هُم بِهِ مُشْرِكُونَ ﴿١٠٠﴾

101. ನಾವು ಒಂದು 'ಸೂಕ್ತ'ದ ಸ್ಥಾನದಲ್ಲಿ ಇನ್ನೊಂದು 'ಸೂಕ್ತ'ವನ್ನು ಅವತೀರ್ಣಗೊಳಿಸಿದಾಗ ಏನನ್ನು ಅವತೀರ್ಣಗೊಳಿಸಬೇಕೆಂದು ಅಲ್ಲಾಹನೇ ಚೆನ್ನಾಗಿ ಬಲ್ಲನು-ಈ ಕುರ್‌ಆನನ್ನು ನೀವೇ ಸ್ವಯಂ ಸೃಷ್ಟಿಸುತ್ತೀರೆಂದು ಇವರು ಹೇಳುತ್ತಾರೆ. ವಾಸ್ತವದಲ್ಲಿ ಅವರಲ್ಲಿ ಅನೇಕರು ವಸ್ತುಸ್ಥಿತಿಯನ್ನು ಅರಿತಿರುವುದಿಲ್ಲ.

وَإِذَا بَدَّلْنَا آيَةً مَّكَانَ آيَةٍ ۙ وَاللَّهُ أَعْلَمُ بِمَا يُنَزِّلُ قَالُوا إِنَّمَا أَنتَ مُفْتَرٍ ۚ بَلْ أَكْثَرُهُمْ لَا يَعْلَمُونَ ﴿١٠١﴾

102. ವಿಶ್ವಾಸವಿರಿಸುವವರ ವಿಶ್ವಾಸವನ್ನು ಪರಿಪಕ್ವಗೊಳಿಸಲಿಕ್ಕಾಗಿಯೂ ಆಜ್ಞಾಪಾಲಕರಿಗೆ ಜೀವನದ ವ್ಯವಹಾರಗಳಲ್ಲಿ ನೇರ ಮಾರ್ಗವನ್ನು ತೋರಿಸಲಿಕ್ಕಾಗಿಯೂ ಅವರಿಗೆ ವಿಜಯ ಹಾಗೂ ಮೋಕ್ಷದ ಸುವಾರ್ತೆ ನೀಡಲಿಕ್ಕಾಗಿಯೂ ಇದನ್ನು (ರೂಹುಲ್‌ಕುದುಸ್) ಪವಿತ್ರಾತ್ಮನು ಯಥಾವತ್ತಾಗಿ ನನ್ನ ಪ್ರಭುವಿನ ಕಡೆಯಿಂದ ಅನುಕ್ರಮವಾಗಿ ಅವತೀರ್ಣಗೊಳಿಸಿದನೆಂದು ಹೇಳಿರಿ.[29]

قُلْ نَزَّلَهُ رُوحُ الْقُدُسِ مِن رَّبِّكَ بِالْحَقِّ لِيُثَبِّتَ الَّذِينَ آمَنُوا وَهُدًى وَبُشْرَىٰ لِلْمُسْلِمِينَ ﴿١٠٢﴾

103. ಈ ವ್ಯಕ್ತಿಗೆ ಒಬ್ಬನು ಕಲಿಸಿಕೊಡುತ್ತಾನೆಂದು ನಿಮ್ಮ ಕುರಿತು ಇವರು ಹೇಳುತ್ತಾರೆಂದು ನಮಗೆ ಗೊತ್ತಿದೆ. ವಸ್ತುತಃ ಅವರ ಸಂಕೇತವು ಯಾರ ಕಡೆಗಿರುವುದೋ ಅವನ ಭಾಷೆ 'ಅರಬಿಯೇತರ' ಆಗಿದೆ ಮತ್ತು ಇದು ಸುಸ್ಪಷ್ಟ ಅರಬೀ ಭಾಷೆಯಾಗಿರುತ್ತದೆ.

وَلَقَدْ نَعْلَمُ أَنَّهُمْ يَقُولُونَ إِنَّمَا يُعَلِّمُهُ بَشَرٌ ۗ لِّسَانُ الَّذِي يُلْحِدُونَ إِلَيْهِ أَعْجَمِيٌّ وَهَٰذَا لِسَانٌ عَرَبِيٌّ مُّبِينٌ ﴿١٠٣﴾

104. ವಾಸ್ತವದಲ್ಲಿ ಅಲ್ಲಾಹನ ಸೂಕ್ತಗಳಲ್ಲಿ ವಿಶ್ವಾಸವಿರಿಸದವರಿಗೆ ಅಲ್ಲಾಹನು ಎಂದೆಂದಿಗೂ ಸನ್ಮಾರ್ಗದರ್ಶನ ಮಾಡುವುದಿಲ್ಲ. ಇಂತಹವರಿಗೆ ವೇದನಾಯುಕ್ತ ಯಾತನೆ ಇದೆ.

إِنَّ الَّذِينَ لَا يُؤْمِنُونَ بِآيَاتِ اللَّهِ لَا يَهْدِيهِمُ اللَّهُ وَلَهُمْ عَذَابٌ أَلِيمٌ ﴿١٠٤﴾

105. (ಪ್ರವಾದಿಯು ಸುಳ್ಳು ಮಾತುಗಳ ಸೃಷ್ಟನೆ ಮಾಡುವುದಿಲ್ಲ) ವಾಸ್ತವದಲ್ಲಿ ಅಲ್ಲಾಹನ ಸೂಕ್ತಗಳಲ್ಲಿ ವಿಶ್ವಾಸವಿರಿಸದವರೇ ಸುಳ್ಳು ಸೃಷ್ಟನೆ ಮಾಡುತ್ತಿದ್ದಾರೆ.[30] ನಿಜಕ್ಕೂ ಅವರೇ ಸುಳ್ಳುಗಾರರು.

إِنَّمَا يَفْتَرِي الْكَذِبَ الَّذِينَ لَا يُؤْمِنُونَ بِآيَاتِ اللَّهِ ۖ وَأُولَٰئِكَ هُمُ الْكَاذِبُونَ ﴿١٠٥﴾

29. 'ರೂಹುಲ್ ಕುದುಸ್'ನ ಶಬ್ದಾರ್ಥ 'ಪವಿತ್ರಾತ್ಮ' ಅಥವಾ 'ಪರಿಶುದ್ಧ ಆತ್ಮ' ಎಂದಾಗಿದೆ. ಪಾರಿಭಾಷಿಕವಾಗಿ ಹ. ಜಿಬ್‌ರೀಲ್‌ರಿಗೆ(ಅ) ಈ ಬಿರುದು ನೀಡಲಾಗಿದೆ. ಇಲ್ಲಿ ದಿವ್ಯವಾಣಿಯನ್ನು ತರುವ ದೇವಚರರ ಹೆಸರಿನ ಬದಲು ಅವರ ಬಿರುದನ್ನು ಉಪಯೋಗಿಸಿರುವುದರ ಉದ್ದೇಶ ಈ ವಾಣಿಯನ್ನು ತರುವ 'ಆತ್ಮ' ಮಾನವೀಯ ದೌರ್ಬಲ್ಯಗಳಿಂದ ಮುಕ್ತವಾಗಿದೆ. ಅದು ಬಹಳ ಪ್ರಾಮಾಣಿಕವಾಗಿ ಅಲ್ಲಾಹನ ಸಂದೇಶವನ್ನು ತಲಪಿಸುತ್ತದೆ ಎಂದು ಸಂಬೋಧಿತರಿಗೆ ಎಚ್ಚರಿಕೆ ನೀಡುವುದಾಗಿದೆ.

30. ಇನ್ನೊಂದು ರೀತಿಯಲ್ಲಿ ಇದನ್ನು ಹೀಗೆ ಭಾಷಾಂತರಿಸಬಹುದು, "ಅಲ್ಲಾಹನ ಸೂಕ್ತಗಳ ಮೇಲೆ ವಿಶ್ವಾಸವಿಡದವರು ಸುಳ್ಳಾಡುತ್ತಾರೆ."

106. ಸತ್ಯವಿಶ್ವಾಸವನ್ನು ಸ್ವೀಕರಿಸಿಕೊಂಡ ಬಳಿಕ ನಿಷೇಧಿಸುವವನು (ಒಂದು ವೇಳೆ) ನಿರ್ಬಂಧಿಸಲ್ಪಟ್ಟಿದ್ದು ಅವನ ಹೃದಯವು ಈಮಾನಿನ ಬಗ್ಗೆ ಸಂತೃಪ್ತವಾಗಿದ್ದರೆ (ಸರಿ) ಆದರೆ ಮನಸಾರೆ ಸತ್ಯನಿಷೇಧವನ್ನು ಸ್ವೀಕರಿಸಿದವನ ಮೇಲೆ ಅಲ್ಲಾಹನ ಪ್ರಕೋಪ ಇದೆ. ಇಂತಹವರಿಗೆಲ್ಲಾ ಘೋರ ಯಾತನೆ ಇದೆ.[31]

مَن كَفَرَ بِاللَّهِ مِن بَعْدِ إِيمَانِهِ إِلَّا مَنْ أُكْرِهَ وَقَلْبُهُ مُطْمَئِنٌّ بِالْإِيمَانِ وَلَٰكِن مَّن شَرَحَ بِالْكُفْرِ صَدْرًا فَعَلَيْهِمْ غَضَبٌ مِّنَ اللَّهِ وَلَهُمْ عَذَابٌ عَظِيمٌ ﴿١٠٦﴾

107. ಇದೇಕೆಂದರೆ ಅವರು ಪರಲೋಕದ ಬದಲಾಗಿ ಇಹಲೋಕ ಜೀವನವನ್ನು ಮೆಚ್ಚಿದರು. ಅಲ್ಲಾಹನು ಸತ್ಯನಿಷೇಧಿಗಳಿಗೆ ಸನ್ಮಾರ್ಗ ದರ್ಶನವನ್ನೀಯುವುದಿಲ್ಲ.

ذَٰلِكَ بِأَنَّهُمُ اسْتَحَبُّوا الْحَيَاةَ الدُّنْيَا عَلَى الْآخِرَةِ وَأَنَّ اللَّهَ لَا يَهْدِي الْقَوْمَ الْكَافِرِينَ ﴿١٠٧﴾

108. ಅಲ್ಲಾಹನು ಹೃದಯಗಳಿಗೂ ಶ್ರವಣಗಳಿಗೂ ದೃಷ್ಟಿಗಳ ಮೇಲೂ ಮುದ್ರೆ ಹಾಕಿದಂತಹವರಿವರು. ಇವರು ಅಲಕ್ಷ್ಯದಲ್ಲಿ ಮುಳುಗಿ ಬಿಟ್ಟಿದ್ದಾರೆ.

أُولَٰئِكَ الَّذِينَ طَبَعَ اللَّهُ عَلَىٰ قُلُوبِهِمْ وَسَمْعِهِمْ وَأَبْصَارِهِمْ ۖ وَأُولَٰئِكَ هُمُ الْغَافِلُونَ ﴿١٠٨﴾

109. ಪರಲೋಕದಲ್ಲಿ ಇವರೇ ನಷ್ಟ ಹೊಂದುವವರೆಂಬುದರಲ್ಲಿ ಸಂಶಯವಿಲ್ಲ.[32]

لَا جَرَمَ أَنَّهُمْ فِي الْآخِرَةِ هُمُ الْخَاسِرُونَ ﴿١٠٩﴾

110. ಇದಕ್ಕೆ ವ್ಯತಿರಿಕ್ತವಾಗಿ ಕೆಲವರು(ಸತ್ಯವಿಶ್ವಾಸವನ್ನು ಸ್ವೀಕರಿಸಿದ್ದ ಕಾರಣಕ್ಕಾಗಿ) ಸತಾಯಿಸಲ್ಪಟ್ಟಾಗ ಅವರು ಮನೆಮಾರುಗಳನ್ನು ತೊರೆದರು, 'ವಲಸೆ' ಹೋದರು, ಅಲ್ಲಾಹನ ಮಾರ್ಗದಲ್ಲಿ ಕಷ್ಟ ಕಾರ್ಪಣ್ಯಗಳನ್ನು ಸಹಿಸಿದರು ಮತ್ತು ಸಹನೆಯಿಂದ ವರ್ತಿಸಿದರು. ಅವರ ಬಗ್ಗೆ ನಿಶ್ಚಯವಾಗಿಯೂ ನಿನ್ನ ಪ್ರಭು ಕ್ಷಮಾಶೀಲನೂ ಕರುಣೆ ತೋರುವವನೂ ಆಗಿರುತ್ತಾನೆ.

ثُمَّ إِنَّ رَبَّكَ لِلَّذِينَ هَاجَرُوا مِن بَعْدِ مَا فُتِنُوا ثُمَّ جَاهَدُوا وَصَبَرُوا إِنَّ رَبَّكَ مِن بَعْدِهَا لَغَفُورٌ رَّحِيمٌ ﴿١١٠﴾

111. ಪ್ರತಿಯೊಬ್ಬನೂ ತನ್ನ ರಕ್ಷಣೆಯ ಚಿಂತೆಯಲ್ಲೇ ಬಿದ್ದಿರುವ, ಪ್ರತಿಯೊಬ್ಬನಿಗೂ ಅವನ ಕರ್ಮದ ಫಲವನ್ನು ಪರಿಪೂರ್ಣ ಕೊಡಲಾಗುವ ಮತ್ತು ಯಾರ ಮೇಲೂ ಕಿಂಚಿತ್ತೂ ಅಕ್ರಮವಾಗದಿರುವ ದಿನ (ಇವರೆಲ್ಲರ ತೀರ್ಮಾನವಾಗುವುದು.)

يَوْمَ تَأْتِي كُلُّ نَفْسٍ تُجَادِلُ عَن نَّفْسِهَا وَتُوَفَّىٰ كُلُّ نَفْسٍ مَّا عَمِلَتْ وَهُمْ لَا يُظْلَمُونَ ﴿١١١﴾

31. ಇದು ಆ ಕಾಲದಲ್ಲಿ ತೀವ್ರ ಸ್ವರೂಪದ ಅನ್ಯಾಯಗಳಿಗೆ ಈಡಾಗಿದ್ದ ಮುಸ್ಲಿಮರ ಕುರಿತು ಇರುವ ಸೂಕ್ತವಾಗಿದೆ. ಅವರನ್ನು ಸಹಿಸಲಸಾಧ್ಯವಾದ ಯಾತನೆಗಳ ಮೂಲಕ ಸತ್ಯನಿಷೇಧ ಕೈಗೊಳ್ಳಲು ನಿರ್ಬಂಧಿಸಲಾಗುತ್ತಿತ್ತು. ಯಾವುದಾದರೂ ಸಂದರ್ಭದಲ್ಲಿ ಅಕ್ರಮಗಳಿಂದ ನಿರ್ಬಂಧಿತರಾಗಿ ನಾಲಗೆಯಿಂದ ಸತ್ಯನಿಷೇಧದ ವಚನ ಹೊರಡಿಸಿ, ನಿಮ್ಮ ಹೃದಯದ ವಿಶ್ವಾಸ ಸತ್ಯನಿಷೇಧದಿಂದ ಮುಕ್ತವಾಗಿದ್ದರೆ ನಿಮಗೆ ಕ್ಷಮೆ ನೀಡಲಾಗುವುದು ಎಂದು ಅವರೊಡನೆ ಹೇಳಲಾಗುತ್ತಿದೆ. ಆದರೆ ಮನಃಪೂರ್ವಕವಾಗಿ ನೀವು ಸತ್ಯನಿಷೇಧವನ್ನೇ ನೆಚ್ಚಿಕೊಂಡರೆ, ಲೌಕಿಕ ಜೀವನದಲ್ಲಿ ನೀವು ಪ್ರಾಣ ಉಳಿಸಿಕೊಳ್ಳಬಹುದು. ಆದರೆ ದೇವನ ಶಿಕ್ಷೆಯಿಂದ ನೀವು ಸುರಕ್ಷಿತವಾಗಿ ಉಳಿಯಲಾರಿರಿ.

32. ಸತ್ಯವಿಶ್ವಾಸದ ಹಾದಿ ದುರ್ಗಮವಾದುದೆಂದು ಭಾವಿಸಿ ಆ ಬಗ್ಗೆ ಪಶ್ಚಾತ್ತಾಪ ಪಟ್ಟು ತಮ್ಮ ಸತ್ಯನಿಷೇಧಿ ಅಥವಾ ಬಹುದೇವಾರಾಧಕ ಸಮುದಾಯದೊಂದಿಗೆ ಹೋಗಿ ಸೇರಿದ್ದ ಜನರ ಕುರಿತು ಈ ಮಾತು ಹೇಳಲಾಗಿದೆ.

112. ಅಲ್ಲಾಹನು ಒಂದು ನಾಡಿನ ಉಪಮೆ ಕೊಡುತ್ತಾನೆ. ಅದು ಶಾಂತಿಯೊಂದಿಗೆ ಸಂತೃಪ್ತ ಜೀವನ ಸಾಗಿಸುತ್ತಿತ್ತು ಮತ್ತು ಎಲ್ಲ ಕಡೆಗಳಿಂದಲೂ ಅದಕ್ಕೆ ಹೇರಳ ಜೀವನಾಧಾರ ದೊರಕುತ್ತಿತ್ತು. ಆಗಲೇ ಅದು ಅಲ್ಲಾಹನ 'ಕೊಡುಗೆ'ಗಳನ್ನು ನಿಷೇಧಿಸಲಾರಂಭಿಸಿತು. ಆಗ ಅಲ್ಲಾಹನು ಅದರ ನಿವಾಸಿಗಳಿಗೆ ಅವರ ದುಷ್ಕೃತ್ಯಗಳ ಸವಿಯನ್ನು ತೋರಿಸಿದುದು ಹೇಗೆಂದರೆ, ಹಸಿವೆ ಮತ್ತು ಭಯ ಅವರನ್ನು ಆವರಿಸಿದುವು.

وَضَرَبَ اللّٰهُ مَثَلًا قَرْيَةً كَانَتْ اٰمِنَةً مُّطْمَئِنَّةً يَّاْتِيْهَا رِزْقُهَا رَغَدًا مِّنْ كُلِّ مَكَانٍ فَكَفَرَتْ بِاَنْعُمِ اللّٰهِ فَاَذَاقَهَا اللّٰهُ لِبَاسَ الْجُوْعِ وَالْخَوْفِ بِمَا كَانُوْا يَصْنَعُوْنَ ﴿١١٢﴾

113. ಅವರ ಬಳಿಗೆ ಅವರ ಜನಾಂಗದಿಂದಲೇ ಓರ್ವ ರಸೂಲ್ ಬಂದರು. ಆದರೆ, ಅವರು ಅವರನ್ನು (ರಸೂಲರನ್ನು) ಸುಳ್ಳಾಗಿಸಿದರು. ಕೊನೆಗೆ ಅವರು ಅಕ್ರಮಿಗಳಾಗಿದ್ದ ಸ್ಥಿತಿಯಲ್ಲಿ ಯಾತನೆಯು ಅವರ ಮೇಲೆರಗಿತು.[33]

وَلَقَدْ جَآءَهُمْ رَسُوْلٌ مِّنْهُمْ فَكَذَّبُوْهُ فَاَخَذَهُمُ الْعَذَابُ وَهُمْ ظٰلِمُوْنَ ﴿١١٣﴾

114. ಆದುದರಿಂದ ಓ ಜನರೇ! ನೀವು ನಿಜಕ್ಕೂ ಅಲ್ಲಾಹನ ದಾಸ್ಯ-ಆರಾಧನೆ ಮಾಡುವವರಾಗಿದ್ದರೆ ಅಲ್ಲಾಹನು ನಿಮಗೆ ದಯಪಾಲಿಸಿರುವ 'ಧರ್ಮಸಮ್ಮತ' ಹಾಗೂ ಶುದ್ಧವಾದ ಆಹಾರವನ್ನು ಉಣ್ಣಿರಿ ಮತ್ತು ಅಲ್ಲಾಹನ 'ಕೊಡುಗೆ'ಗೆ ಕೃತಜ್ಞತೆ ಸಲ್ಲಿಸಿರಿ.

فَكُلُوْا مِمَّا رَزَقَكُمُ اللّٰهُ حَلٰلًا طَيِّبًا ۪ وَّاشْكُرُوْا نِعْمَتَ اللّٰهِ اِنْ كُنْتُمْ اِيَّاهُ تَعْبُدُوْنَ ﴿١١٤﴾

115. ಅಲ್ಲಾಹನು ನಿಮಗೆ 'ನಿಷಿದ್ಧ'ಗೊಳಿಸಿದವುಗಳು ಇವು- ಶವ, ರಕ್ತ, ಹಂದಿಮಾಂಸ ಮತ್ತು ಅಲ್ಲಾಹನ ಹೊರತು ಇತರರ ನಾಮೋಚ್ಚಾರ ಮಾಡಲ್ಪಟ್ಟ ಪ್ರಾಣಿ. ಆದರೆ ಯಾರಾದರೂ ಹಸಿವೆಯಿಂದ ವಿವಶನಾಗಿ, ಅಲ್ಲಾಹನ ಕಾನೂನನ್ನು ಉಲ್ಲಂಘಿಸುವ ಅಪೇಕ್ಷೆ ಇಲ್ಲದೆ, ಅತ್ಯಾವಶ್ಯಕತೆಯ ಮೇರೆ ಮೀರದೆ, ಆ ವಸ್ತುಗಳಿಂದ ಒಂದಿಷ್ಟು ಸೇವಿಸಿದರೆ, ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

اِنَّمَا حَرَّمَ عَلَيْكُمُ الْمَيْتَةَ وَالدَّمَ وَلَحْمَ الْخِنْزِيْرِ وَمَآ اُهِلَّ لِغَيْرِ اللّٰهِ بِهٖ ۚ فَمَنِ اضْطُرَّ غَيْرَ بَاغٍ وَّلَا عَادٍ فَاِنَّ اللّٰهَ غَفُوْرٌ رَّحِيْمٌ ﴿١١٥﴾

116. ಇದು 'ಧರ್ಮಸಮ್ಮತ', ಇದು 'ನಿಷಿದ್ಧ'[34] ಎಂದು ನಿಮ್ಮ ನಾಲಿಗೆಗಳು ಸುಳ್ಳು ವಿಧಿಗಳನ್ನು ಹೇಳುತ್ತಿವೆ. ಇಂತಹ ವಿಧಿಗಳನ್ನು

وَلَا تَقُوْلُوْا لِمَا تَصِفُ اَلْسِنَتُكُمُ الْكَذِبَ هٰذَا حَلٰلٌ وَّهٰذَا حَرَامٌ لِّتَفْتَرُوْا عَلَى

33. ಹ. ಇಬ್ನ್ ಅಬ್ಬಾಸ್‌ರ(ರ) ಪ್ರಕಾರ ಇಲ್ಲಿ ಹೆಸರೆತ್ತದೆ ಸೂಚ್ಯವಾಗಿ ಮಕ್ಕಾದ ಕುರಿತೇ ಈ ಮಾತು ಹೇಳಲಾಗಿದೆ. ಇಲ್ಲಿ ಪ್ರಸ್ತಾಪಿಸಲಾಗಿರುವ ಭಯ ಮತ್ತು ಹಸಿವೆಯ ಸಂಕಷ್ಟವೆಂದರೆ ಪ್ರವಾದಿವರ್ಯರ(ಸ) ಪ್ರವಾದಿತ್ವದ ನಂತರ ಒಂದು ಅವಧಿಯ ತನಕ ಮಕ್ಕಾದ ಜನರಿಗೆ ಬಾಧಿಸಿದ ಬರವಾಗಿದೆ.

34. ಧರ್ಮಸಮ್ಮತ ಅಥವಾ ನಿಷಿದ್ಧಗೊಳಿಸುವ ಹಕ್ಕು ಯಾರಿಗೂ ಇಲ್ಲ ಎಂದು ಈ ಸೂಕ್ತ ಸ್ಪಷ್ಟಪಡಿಸುತ್ತದೆ. ಸಿಂಧು-ಅಸಿಂಧುಗಳ ಬಗ್ಗೆ ತೀರ್ಮಾನ ಮಾಡುವಂತಹ ಧೈರ್ಯವನ್ನು ತೋರುವವನು ವಾಸ್ತವದಲ್ಲಿ ಸೀಮೋಲ್ಲಂಘನೆ ಮಾಡುವವನಾಗಿದ್ದಾನೆ. ದೇವಕಾನೂನನ್ನು ಆಧಾರವಾಗಿರಿಸಿ ಅದರ ಆದೇಶಗಳ ಆಧಾರದಲ್ಲಿ ಇದು ಸಿಂಧು, ಇದು ಅಸಿಂಧು ಎಂದು ತೀರ್ಮಾನ ಮಾಡುವುದಿದ್ದರೆ ಅಡ್ಡಿಯಿಲ್ಲ. ಸ್ವತಂತ್ರವಾಗಿ ಸಿಂಧು-ಅಸಿಂಧುಗಳನ್ನು ಗೊತ್ತು ಪಡಿಸಿಕೊಳ್ಳುವುದನ್ನು ಅಲ್ಲಾಹನ ಮೇಲೆ

ಹೇಳಿ ಅಲ್ಲಾಹನ ಮೇಲೆ ಸುಳ್ಳು ಸೃಷ್ಟಿಸಬೇಡಿರಿ. ಅಲ್ಲಾಹನ ಮೇಲೆ ಸುಳ್ಳನ್ನು ಹೊರಿಸುವವರು ಎಂದಿಗೂ ಯಶಸ್ವಿಗಳಾಗುವುದಿಲ್ಲ.

اللّٰهِ الْكَذِبَ ؕ اِنَّ الَّذِيْنَ يَفْتَرُوْنَ عَلَى اللّٰهِ الْكَذِبَ لَا يُفْلِحُوْنَ ؕ﴿۱۱۶﴾

117. ಲೌಕಿಕ ಸುಖ ಭೋಗ ಕೇವಲ ಅಲ್ಪಾವಧಿಯದು. ಕೊನೆಗೆ ಅವರಿಗೆ ವೇದನಾತ್ಮಕ ಯಾತನೆ ಇರುವುದು.

مَتَاعٌ قَلِيْلٌ ۪ وَّ لَهُمْ عَذَابٌ اَلِيْمٌ ﴿۱۱۷﴾

118. ನಾವು ನಿಮ್ಮೊಡನೆ ಈ ಮುಂಚೆ ಪ್ರಸ್ತಾಪಿಸಿದ ವಸ್ತುಗಳನ್ನು ಮುಖ್ಯವಾಗಿ ಯಹೂದಿಯರಿಗೆ ನಿಷಿದ್ಧಗೊಳಿಸಿದ್ದೆವು. ಇದು ಅವರ ಮೇಲೆ ನಮ್ಮ ಅಕ್ರಮವಾಗಿರಲಿಲ್ಲ. ನಿಜವಾಗಿ ಅವರೇ ಸ್ವತಃ ತಮ್ಮ ಮೇಲೆ ಅಕ್ರಮವೆಸಗಿಕೊಳ್ಳುತ್ತಿದ್ದರು.

وَ عَلَى الَّذِيْنَ هَادُوْا حَرَّمْنَا مَا قَصَصْنَا عَلَيْكَ مِنْ قَبْلُ ۚ وَ مَا ظَلَمْنٰهُمْ وَ لٰكِنْ كَانُوْۤا اَنْفُسَهُمْ يَظْلِمُوْنَ ﴿۱۱۸﴾

119. ಆದರೆ ಅಜ್ಞಾನದಿಂದಾಗಿ ದುಷ್ಕರ್ಮಗಳನ್ನು ಮಾಡಿ ಅನಂತರ ಪಶ್ಚಾತ್ತಾಪ ಪಟ್ಟು ತಮ್ಮ ಕರ್ಮಗಳನ್ನು ಸರಿಪಡಿಸಿಕೊಂಡರೆ ನಿಶ್ಚಯವಾಗಿಯೂ ಪಶ್ಚಾತ್ತಾಪ ಮತ್ತು ಸಂಸ್ಕಾರದ ಅನಂತರ ನಿಮ್ಮ ಪ್ರಭು ಅವರ ಮೇಲೆ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

ثُمَّ اِنَّ رَبَّكَ لِلَّذِيْنَ عَمِلُوا السُّوْٓءَ بِجَهَالَةٍ ثُمَّ تَابُوْا مِنْۢ بَعْدِ ذٰلِكَ وَ اَصْلَحُوْۤا ۙ اِنَّ رَبَّكَ مِنْۢ بَعْدِهَا لَغَفُوْرٌ رَّحِيْمٌ ﴿۱۱۹﴾

120. ವಾಸ್ತವದಲ್ಲಿ ಇಬ್‌ರಾಹೀಮ್ ಸ್ವಯಂ ತಾನೇ ಒಂದು ಸಮುದಾಯವಾಗಿದ್ದರು. ಅಲ್ಲಾಹನ ಆಜ್ಞಾನುಸಾರಿ ಮತ್ತು ಏಕನಿಷ್ಠ(ರಾಗಿದ್ದರು.) ಅವರೆಂದೂ 'ಬಹುದೇವವಿಶ್ವಾಸಿ' ಆಗಿರಲಿಲ್ಲ.

اِنَّ اِبْرٰهِيْمَ كَانَ اُمَّةً قَانِتًا لِّلّٰهِ حَنِيْفًا ؕ وَ لَمْ يَكُ مِنَ الْمُشْرِكِيْنَ ﴿۱۲۰﴾

121. ಅಲ್ಲಾಹನ ಕೊಡುಗೆಗಳಿಗೆ ಕೃತಜ್ಞತೆ ಸಲ್ಲಿಸುವವರಾಗಿದ್ದರು. ಅಲ್ಲಾಹನು ಅವರನ್ನು ಆಯ್ದುಕೊಂಡನು ಮತ್ತು ನೇರ ಮಾರ್ಗವನ್ನು ತೋರಿಸಿದನು.

شَاكِرًا لِّاَنْعُمِهٖ ؕ اِجْتَبٰىهُ وَ هَدٰىهُ اِلٰى صِرَاطٍ مُّسْتَقِيْمٍ ﴿۱۲۱﴾

122. ನಾವು ಇಹಲೋಕದಲ್ಲಿ ಅವರಿಗೆ ಒಳಿತನ್ನು ದಯಪಾಲಿಸಿದೆವು ಮತ್ತು ಪರಲೋಕದಲ್ಲಿ ಅವರು ನಿಶ್ಚಯವಾಗಿಯೂ ಸಜ್ಜನರಲ್ಲಾಗಿರುವರು.

وَ اٰتَيْنٰهُ فِي الدُّنْيَا حَسَنَةً ؕ وَ اِنَّهٗ فِي الْاٰخِرَةِ لَمِنَ الصّٰلِحِيْنَ ؕ﴿۱۲۲﴾

---

ಸುಳ್ಳಾರೋಪ ಹೊರಿಸುವುದು ಎಂದು ಹೇಳಲಾಗಿದೆ. ಏಕೆಂದರೆ ಅಲ್ಲಾಹನ ಗ್ರಂಥದ ಆಧಾರದಿಂದ ಮುಕ್ತವಾಗಿ ಅವನು ಕೊಡುವ ಆದೇಶದಲ್ಲಿ ಎರಡು ಅಂಶಗಳಿರಲು ಸಾಧ್ಯ. ಒಂದೋ ತಾನು ಯಾವುದನ್ನು ಸಿಂಧು ಅಥವಾ ಅಸಿಂಧುವೆಂದು ಹೇಳುತ್ತಿದ್ದೇನೋ ಅದನ್ನು ಅಲ್ಲಾಹನೇ ಸಿಂಧು-ಅಸಿಂಧುಗೊಳಿಸಿದ್ದಾನೆ ಎಂದು ಅವನು ಹೇಳುತ್ತಾನೆ. ಇಲ್ಲವೇ ಅಲ್ಲಾಹನು, ಧರ್ಮಸಮ್ಮತ ಮತ್ತು ನಿಷಿದ್ಧ ಗೊಳಿಸುವಂತಹ ಕರ್ತವ್ಯದಿಂದ ಮುಕ್ತನಾಗಿ ಮನುಷ್ಯನನ್ನು ತನ್ನಿಚ್ಛೆಯ ಕಾನೂನು ರಚಿಸಲು ಸ್ವತಂತ್ರವಾಗಿ ಬಿಟ್ಟು ಬಿಡುತ್ತಾನೆ ಎಂದು ಹೇಳುತ್ತಾನೆ. ಈ ಪೈಕಿ ಅವನು ಯಾವುದನ್ನು ವಾದಿಸಿದರೂ ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವುದಕ್ಕೆ ಸಮಾನವಾಗಿದೆ.

123. ಅನಂತರ ನೀವು ಏಕನಿಷ್ಠರಾಗಿ ಇಬ್‌ರಾಹೀಮರ ಪಥದಲ್ಲಿ ನಡೆಯಲಿಕ್ಕಾಗಿ ನಾವು ನಿಮ್ಮ ಕಡೆಗೆ 'ದಿವ್ಯವಾಣಿ' ಕಳುಹಿಸಿದೆವು ಮತ್ತು ಅವರು 'ಬಹುದೇವವಿಶ್ವಾಸಿ'ಗಳಲ್ಲಾಗಿರಲಿಲ್ಲ.

ثُمَّ أَوْحَيْنَا إِلَيْكَ أَنِ اتَّبِعْ مِلَّةَ إِبْرَاهِيمَ حَنِيفًا ۖ وَمَا كَانَ مِنَ الْمُشْرِكِينَ ﴿١٢٣﴾

124. 'ಸಬ್ತ್'ನ ವಿಷಯ, ಅದನ್ನು ನಾವು ಅದರ ವಿಧಿಗಳ ಕುರಿತು ಭಿನ್ನಾಭಿಪ್ರಾಯ ತಾಳಿದವರ ಮೇಲೆ ಹೇರಿದ್ದೆವು ಮತ್ತು ನಿಶ್ಚಯವಾಗಿಯೂ ಅವರು ಭಿನ್ನಾಭಿಪ್ರಾಯ ಹೊಂದಿದ್ದ ಎಲ್ಲ ವಿಷಯಗಳನ್ನು ನಿಮ್ಮ ಪ್ರಭು ಪುನರುತ್ಥಾನ ದಿನ ತೀರ್ಮಾನಿಸಿ ಬಿಡುವನು.

إِنَّمَا جُعِلَ السَّبْتُ عَلَى الَّذِينَ اخْتَلَفُوا فِيهِ ۚ وَإِنَّ رَبَّكَ لَيَحْكُمُ بَيْنَهُمْ يَوْمَ الْقِيَامَةِ فِيمَا كَانُوا فِيهِ يَخْتَلِفُونَ ﴿١٢٤﴾

125. ಓ ಪೈಗಂಬರರೇ, ಯುಕ್ತಿ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ ಮತ್ತು ಜನರೊಂದಿಗೆ ಅತ್ಯುತ್ತಮ ರೀತಿಯಿಂದ ವಾದಿಸಿರಿ. ಯಾರು ಅವನ ಮಾರ್ಗದಿಂದ ಭ್ರಷ್ಟನಾಗಿದ್ದಾನೆ ಮತ್ತು ಯಾರು ನೇರ ಮಾರ್ಗದಲ್ಲಿದ್ದಾನೆಂಬುದನ್ನು ನಿಮ್ಮ ಪ್ರಭುವೇ ಚೆನ್ನಾಗಿ ಬಲ್ಲನು.

ادْعُ إِلَىٰ سَبِيلِ رَبِّكَ بِالْحِكْمَةِ وَالْمَوْعِظَةِ الْحَسَنَةِ ۖ وَجَادِلْهُم بِالَّتِي هِيَ أَحْسَنُ ۚ إِنَّ رَبَّكَ هُوَ أَعْلَمُ بِمَن ضَلَّ عَن سَبِيلِهِ ۖ وَهُوَ أَعْلَمُ بِالْمُهْتَدِينَ ﴿١٢٥﴾

126. ನೀವು ಪ್ರತೀಕಾರವೆಸಗುವುದಿದ್ದರೆ ನಿಮ್ಮ ಮೇಲೆ ಅತಿರೇಕವೆಸಗಲಾಗಿದ್ದಷ್ಟು ಮಾತ್ರ ಎಸಗಿರಿ. ಆದರೆ, ನೀವು ತಾಳ್ಮೆ ವಹಿಸಿದರೆ ನಿಶ್ಚಯವಾಗಿಯೂ ಇದು ಸಹನಶೀಲರಿಗೆ ಅತ್ಯುತ್ತಮ.

وَإِنْ عَاقَبْتُمْ فَعَاقِبُوا بِمِثْلِ مَا عُوقِبْتُم بِهِ ۖ وَلَئِن صَبَرْتُمْ لَهُوَ خَيْرٌ لِّلصَّابِرِينَ ﴿١٢٦﴾

127. ಓ ಪೈಗಂಬರರೇ, ಸಹನೆಯೊಂದಿಗೆ ಕಾರ್ಯವೆಸಗುತ್ತಲೇ ಸಾಗಿರಿ ಮತ್ತು ನಿಮ್ಮ ಈ ಸಹನೆ ಅಲ್ಲಾಹನ ಅನುಗ್ರಹದಿಂದಲೇ ಇದೆ. ಅವರ ಚಟುವಟಿಕೆಗಳ ಬಗ್ಗೆ ಖೇದಿಸಬೇಡಿರಿ ಮತ್ತು ಅವರ ಕುತಂತ್ರಗಳಿಂದ ಧೈರ್ಯಗುಂದಬೇಡಿರಿ.

وَاصْبِرْ وَمَا صَبْرُكَ إِلَّا بِاللَّهِ ۚ وَلَا تَحْزَنْ عَلَيْهِمْ وَلَا تَكُ فِي ضَيْقٍ مِّمَّا يَمْكُرُونَ ﴿١٢٧﴾

128. ನಿಶ್ಚಯವಾಗಿಯೂ ಅಲ್ಲಾಹನು ದೇವಭಯದೊಂದಿಗೆ ವರ್ತಿಸುವವರ ಹಾಗೂ ಸೌಜನ್ಯ ನೀತಿಯನ್ನನುಸರಿಸುವವರ ಸಂಗಡ ವಿದ್ದಾನೆ.

إِنَّ اللَّهَ مَعَ الَّذِينَ اتَّقَوا وَّالَّذِينَ هُم مُّحْسِنُونَ ﴿١٢٨﴾

---






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. *****ತನ್ನ ಕೆಲವು ನಿದರ್ಶನಗಳನ್ನು ತೋರಿಸಿಕೊಡಲಿಕ್ಕಾಗಿ ತನ್ನ ದಾಸನನ್ನು ಒಂದು ರಾತ್ರಿ 'ಮಸ್ಜಿದುಲ್ ಹರಾಮ್'ನಿಂದ, ನಾವು ಪರಿಸರವನ್ನು ಸಮೃದ್ಧಗೊಳಿಸಿರುವಂತಹ 'ಅಕ್ಸಾ' ಮಸೀದಿಯ ತನಕ ಕೊಂಡು ಹೋದವನು ಪರಮ ಪಾವನನು.[1] ನಿಶ್ಚಯ ವಾಗಿಯೂ ಅವನು ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.

سُبْحٰنَ الَّذِيْٓ اَسْرٰى بِعَبْدِهٖ لَيْلًا مِّنَ الْمَسْجِدِ الْحَرَامِ اِلَى الْمَسْجِدِ الْاَقْصَا الَّذِيْ بٰرَكْنَا حَوْلَهٗ لِنُرِيَهٗ مِنْ اٰيٰتِنَا ۭ اِنَّهٗ هُوَ السَّمِيْعُ الْبَصِيْرُ ۝

2. ನಾವು ಇದಕ್ಕೆ ಮುಂಚೆ ಮೂಸಾರಿಗೆ ಗ್ರಂಥ ನೀಡಿದ್ದೆವು ಮತ್ತು ನನ್ನ ಹೊರತು ಇನ್ನಾರನ್ನೂ ನಿಮ್ಮ ಕಾರ್ಯನಿರ್ವಾಹಕನಾಗಿ[2]

وَاٰتَيْنَا مُوْسَى الْكِتٰبَ وَجَعَلْنٰهُ هُدًى

الجزء الخامس عشر

---

***ಇಲ್ಲಿಂದ 15ನೆಯ ಕಾಂಡ ಆರಂಭ.**

1. ಇದು 'ಮಿಅ್‌ರಾಜ್' ಎಂದು ಕರೆಯಲ್ಪಡುವ ಘಟನೆಯೇ ಆಗಿದೆ. ಹೆಚ್ಚಿನ ನಂಬಲರ್ಹ ಉಲ್ಲೇಖಗಳ ಪ್ರಕಾರ ಈ ಘಟನೆ ಹಿಜ್ರತ್‌ಗಿಂತ ಒಂದು ವರ್ಷ ಮೊದಲು ನಡೆಯಿತು. ಪ್ರವಾದಿವಚನ (ಹದೀಸ್) ಮತ್ತು ಪ್ರವಾದಿಚರ್ಯೆಯ(ಸೀರತ್) ಗ್ರಂಥಗಳಲ್ಲಿ ಈ ಘಟನೆಯ ವಿವರಗಳನ್ನು ಅನೇಕ ಸಹಾಬಿಗಳು ಉಲ್ಲೇಖಿಸಿದ್ದಾರೆ. ಅವರ ಸಂಖ್ಯೆ ಇಪ್ಪತ್ತೈದರ ತನಕವಿದೆ. ಪವಿತ್ರ ಕುರ್‌ಆನ್ ಮಸ್ಜಿದುಲ್ ಹರಾಮ್ ಅರ್ಥಾತ್ ಬೈತುಲ್ಲಾದಿಂದ ಮಸ್ಜಿದ್ ಅಕ್ಸಾ ಅಥವಾ ಬೈತುಲ್ ಮುಕದ್ದಿಸ್‌ನ ವರೆಗೆ ಪ್ರವಾದಿವರ್ಯರು(ಸ) ಹೋದುದನ್ನು ಮಾತ್ರ ವಿವರಿಸುತ್ತದೆ. ಪ್ರವಾದಿವಚನಗಳಲ್ಲಿ ಬೈತುಲ್ ಮಕ್ದಿಸ್‌ನಿಂದ ಬಾನಲೋಕದ ಅತ್ಯುನ್ನತ ಹಂತಕ್ಕೆ ತಲಪಿ ಅಲ್ಲಾಹನ ಸನ್ನಿಧಿಯಲ್ಲಿ ಪ್ರವಾದಿವರ್ಯರು(ಸ) ಹಾಜರಾದ ವಿವರಗಳನ್ನು ಪ್ರಸ್ತಾಪಿಸಲಾಗಿದೆ. ಈ ಯಾತ್ರೆಯ ಸ್ವರೂಪ ಹೇಗೆ? ಇದು ಜಾಗೃತಾವಸ್ಥೆಯಲ್ಲಿ ನಡೆದಿತ್ತೇ ಅಥವಾ ಕನಸಿನಲ್ಲೇ? ಪ್ರವಾದಿವರ್ಯರು(ಸ) ಸ್ವತಃ ಯಾತ್ರೆ ಕೈಗೊಂಡಿದ್ದರೇ ಅಥವಾ ತಾವು ಕುಳಿತಲ್ಲಿಯೇ ಅವರ ಆತ್ಮಕ್ಕೆ ಅದನ್ನು ತೋರಿಸಲಾಯಿತೇ? ಮುಂತಾದ ಪ್ರಶ್ನೆಗಳಿಗೆ ಪವಿತ್ರ ಕುರ್‌ಆನಿನ ಪದಗಳು ಉತ್ತರ ನೀಡುತ್ತವೆ. "...ಕೊಂಡು ಹೋದವನು ಪರಮಪಾವನನು" ಎಂಬ ಪದದಿಂದ ಮಾತನ್ನು ಆರಂಭಿಸಲಾಗಿರುವುದೇ ಇದೊಂದು ಅಸಾಮಾನ್ಯ ಘಟನೆಯಾಗಿತ್ತು ಎಂಬುದನ್ನು ಸೂಚಿಸುತ್ತದೆ. ಅಂತೆಯೇ ಅಲ್ಲಾಹನ ಅಸಾಮಾನ್ಯ ಸಾಮರ್ಥ್ಯದಿಂದ ಅದು ಸಾಧ್ಯವಾಯಿತು ಎಂಬುದನ್ನು ಧ್ವನಿಸುತ್ತದೆ. ಕನಸಿನಲ್ಲಿ ಒಬ್ಬ ವ್ಯಕ್ತಿ ಇಂತಹ ವಸ್ತುಗಳನ್ನು ನೋಡುವುದು ಅಥವಾ ಅಂತಃಜ್ಞಾನದ ಮೂಲಕ ನೋಡುವುದು ಅತ್ಯಂತ ಪ್ರಮುಖವಾದ ವಿಷಯವೇನಲ್ಲ. ಅದಕ್ಕಾಗಿ ಕನಸಿನ ಅಥವಾ ಅಂತಃ ಜ್ಞಾನದ ಮೂಲಕ ತನ್ನ ದಾಸನಿಗೆ ಇದನ್ನು ತೋರಿಸಿದ ಪ್ರಭು ಸಕಲ ವಿಧ ದೌರ್ಬಲ್ಯ ಮತ್ತು ದೋಷಗಳಿಂದ ಮುಕ್ತನು ಎಂಬ ಪೀಠಿಕೆಯ ಅಗತ್ಯವೂ ಇರುವುದಿಲ್ಲ. ಅಲ್ಲದೆ "ಒಂದು ರಾತ್ರಿಯಲ್ಲಿ ತನ್ನ ದಾಸನನ್ನು ಕೊಂಡು ಹೋದನು" ಎಂಬ ವಾಕ್ಯವೂ ಅದೊಂದು ಶಾರೀರಿಕ ಯಾತ್ರೆಯಾಗಿತ್ತೆಂಬುದಕ್ಕೆ ಆಧಾರವಾಗಿದೆ. ಕನಸಿನ ಯಾತ್ರೆ ಅಥವಾ ಅಂತಃಜ್ಞಾನದ ಯಾತ್ರೆಗೆ ಈ ಪದಗಳು ಎಷ್ಟು ಮಾತ್ರಕ್ಕೂ ಸೂಕ್ತ ವೆನಿಸಲಾರವು. ಆದ್ದರಿಂದ ಇದು ಆತ್ಮಕ್ಕೆ ಮಾಡಿಸಲಾದ ಪ್ರಯೋಗವಾಗಿರಲಿಲ್ಲ. ಬದಲಾಗಿ ಇದು ಅಲ್ಲಾಹನು ಪ್ರವಾದಿವರ್ಯರಿಗೆ(ಸ) ಮಾಡಿಸಿದ ಶಾರೀರಿಕ ಯಾತ್ರೆ ಮತ್ತು ಪ್ರತ್ಯಕ್ಷ ದರ್ಶನವಾಗಿತ್ತೆಂದು ನಂಬದೆ ಅನ್ಯ ದಾರಿಯಿಲ್ಲ.
2. 'ವಕೀಲ್' ಎಂದರೆ ವಿಶ್ವಾಸ ಮತ್ತು ಭರವಸೆಯ ಕೇಂದ್ರಬಿಂದು. ಪೂರ್ಣ ಭರವಸೆಯೊಂದಿಗೆ ತನ್ನ ವ್ಯವಹಾರಗಳನ್ನೆಲ್ಲಾ ಒಪ್ಪಿಸಿ ಬಿಡಲಾಗುವಂತಹವನು. ಸನ್ಮಾರ್ಗದರ್ಶನ ಮತ್ತು ಸಹಾಯಕ್ಕಾಗಿ ಯಾರನ್ನು ಸಂಪರ್ಕಿಸಲಾಗುತ್ತದೋ ಅವನು.

ಮಾಡಿಕೊಳ್ಳಬಾರದೆಂಬ ಅಪ್ಪಣೆಯೊಂದಿಗೆ ಅದನ್ನು ಬನೀ ಇಸ್ರಾಈಲರಿಗೆ ಸನ್ಮಾರ್ಗದರ್ಶನದ ಸಾಧನವನ್ನಾಗಿ ಮಾಡಿದ್ದೆವು.

لِّبَنِيٓ إِسۡرَٰٓءِيلَ أَلَّا تَتَّخِذُواْ مِن دُونِي وَكِيلٗا ②

3. ನೂಹರ ಸಂಗಡ ನಾವು ನಾವೆಯಲ್ಲಿ ಏರಿಸಿದ್ದವರ ಸಂತತಿ ನೀವಾಗಿರುತ್ತೀರಿ ಮತ್ತು ನೂಹ್ ಓರ್ವ ಕೃತಜ್ಞ ದಾಸರಾಗಿದ್ದರು.

ذُرِّيَّةَ مَنۡ حَمَلۡنَا مَعَ نُوحٍۚ إِنَّهُۥ كَانَ
عَبۡدٗا شَكُورٗا ③

4. ತರುವಾಯ ನಾವು ಬನೀಇಸ್ರಾಈಲರಿಗೆ - ನೀವು ಎರಡು ಬಾರಿ ಭೂಮಿಯಲ್ಲಿ ಗೊಂದಲವನ್ನುಂಟು ಮಾಡುವಿರಿ ಹಾಗೂ ಭಾರೀ ವಿದ್ರೋಹ ತೋರುವಿರಿ ಎಂದು ನಮ್ಮ ಗ್ರಂಥದಲ್ಲಿ[3] ಎಚ್ಚರಿಸಿ ಬಿಟ್ಟಿದ್ದೆವು.

وَقَضَيۡنَآ إِلَىٰ بَنِيٓ إِسۡرَٰٓءِيلَ فِي ٱلۡكِتَٰبِ
لَتُفۡسِدُنَّ فِي ٱلۡأَرۡضِ مَرَّتَيۡنِ وَلَتَعۡلُنَّ
عُلُوّٗا كَبِيرٗا ④

5. ಕೊನೆಗೆ ಆ ಪೈಕಿ ಪ್ರಥಮ ವಿದ್ರೋಹ ಸಂಭವಿಸಿದಾಗ (ಓ ಬನೀಇಸ್ರಾಈಲರೇ!) ನಾವು ನಿಮ್ಮ ವಿರುದ್ಧ ನಮ್ಮ ಅತ್ಯಂತ ಪ್ರಬಲರಾಗಿದ್ದ ದಾಸರನ್ನು ಎಬ್ಬಿಸಿದೆವು ಮತ್ತು ಅವರು ನಿಮ್ಮ ನಾಡುಗಳಿಗೆ ನುಗ್ಗಿ ಎಲ್ಲ ಕಡೆ ಹಬ್ಬಿ ಹೋದರು.[4] ಇದು ನೆರ ವೇರಬೇಕಾಗಿದ್ದ ಒಂದು ವಾಗ್ದಾನವಾಗಿತ್ತು.

فَإِذَا جَآءَ وَعۡدُ أُولَىٰهُمَا بَعَثۡنَا عَلَيۡكُمۡ
عِبَادٗا لَّنَآ أُوْلِي بَأۡسٖ شَدِيدٖ فَجَاسُواْ
خِلَٰلَ ٱلدِّيَارِۚ وَكَانَ وَعۡدٗا مَّفۡعُولٗا ⑤

6. ಅನಂತರ ನಾವು ನಿಮಗೆ ಅವರ ಮೇಲೆ ಪ್ರಾಬಲ್ಯ ಸ್ಥಾಪಿಸುವ ಅವಕಾಶ ನೀಡಿದೆವು. ನಿಮಗೆ ಸಂಪತ್ತು ಹಾಗೂ ಸಂತತಿಗಳಿಂದ ನೆರವಾದೆವು ಮತ್ತು ನಿಮ್ಮ ಸಂಖ್ಯೆಯನ್ನು ಮೊದಲಿಗಿಂತ ಹೆಚ್ಚಿಸಿದೆವು.

ثُمَّ رَدَدۡنَا لَكُمُ ٱلۡكَرَّةَ عَلَيۡهِمۡ وَأَمۡدَدۡنَٰكُم
بِأَمۡوَٰلٖ وَبَنِينَ وَجَعَلۡنَٰكُمۡ أَكۡثَرَ نَفِيرًا ⑥

7. ನೋಡಿರಿ- ನೀವು ಸತ್ಕರ್ಮ ಮಾಡಿದ್ದರೆ ಅದು ನಿಮ್ಮ ಹಿತಕ್ಕಾಗಿಯೇ ಮಾಡಿದ್ದೀರಿ, ದುಷ್ಕರ್ಮವೆಸಗಿದ್ದರೆ ಅದು ನಿಮಗೇ ಕೇಡಾಗಿ ಪರಿಣಮಿಸಿತು. ತರುವಾಯ ಎರಡನೆಯ ವಾಗ್ದಾನದ ಕಾಲ ಬಂದಾಗ ನಿಮ್ಮ ಮುಖಗಳನ್ನು ವಿರೂಪಗೊಳಿಸುವಂತೆಯೂ ಮಸೀದಿ(ಬೈತುಲ್ ಮಕ್ದಿಸ್)ಯಲ್ಲಿ ಹಿಂದೆ ಶತ್ರುಗಳು ನುಗ್ಗಿದಂತೆ ನುಗ್ಗುವಂತೆಯೂ ಅವರ ಕೈಗೆ ಸಿಕ್ಕಿದುದನ್ನೆಲ್ಲ ನಾಶಗೊಳಿಸುವಂತೆಯೂ ನಾವು ನಿಮ್ಮ ಮೇಲೆ ಇತರ ಶತ್ರುಗಳನ್ನು ಹೇರಿಬಿಟ್ಟೆವು.[5]

إِنۡ أَحۡسَنتُمۡ أَحۡسَنتُمۡ لِأَنفُسِكُمۡۖ وَإِنۡ
أَسَأۡتُمۡ فَلَهَاۚ فَإِذَا جَآءَ وَعۡدُ ٱلۡأٓخِرَةِ لِيَسُـُٔواْ
وُجُوهَكُمۡ وَلِيَدۡخُلُواْ ٱلۡمَسۡجِدَ كَمَا دَخَلُوهُ
أَوَّلَ مَرَّةٖ وَلِيُتَبِّرُواْ مَا عَلَوۡاْ تَتۡبِيرًا ⑦

3. ಇಲ್ಲಿ 'ಕಿತಾಬ್' ಎಂದು ಹೇಳಲಾಗಿರುವುದು 'ತೌರಾತ್'ನ ಕುರಿತಲ್ಲ. ಬದಲಾಗಿ ಅದು ದಿವ್ಯಗ್ರಂಥಗಳ ಸಂಕಲನವಾಗಿದೆ. ಅದಕ್ಕೆ 'ಅಲ್ ಕಿತಾಬ್' ಎಂಬ ಪದ ಕುರ್‌ಆನಿನಲ್ಲಿ ಅನೇಕ ಕಡೆಗಳಲ್ಲಿ ಪ್ರಯೋಗವಾಗಿದೆ.

4. ಅರ್ಥಾತ್- ಅಶೂರಿಗಳು ಮತ್ತು ಬೆಬಿಲೋನಿನವರ ಮೂಲಕ ಬನೀಇಸ್ರಾಈಲರ ಮೇಲೆ ಎರಗಿದ ಮಾರಕ ವಿನಾಶ.

5. ಅರ್ಥಾತ್- ಬೈತುಲ್ ಮುಕದ್ದಿಸನ್ನು ಸಂಪೂರ್ಣವಾಗಿ ನಾಶ ಪಡಿಸಿ, ಬನೀಇಸ್ರಾಈಲರನ್ನು ಫೆಲೆಸ್ತೀನ್‌ನಿಂದ ಹೊಡೆದೋಡಿಸಿದ ರೋಮನ್ನರು ಅಂದಿನಿಂದ ಇಂದಿನ ತನಕ ಎರಡು ಸಾವಿರ ವರ್ಷಗಳ ಅವಧಿಯಲ್ಲಿ ಲೋಕದಾದ್ಯಂತ ಚದುರಿ ಹರಿಹಂಚಾಗಿದ್ದಾರೆ.

8. ಈಗ ನಿಮ್ಮ ಪ್ರಭು ನಿಮ್ಮ ಮೇಲೆ ದಯೆ ತೋರಲೂ ಬಹುದು. ಆದರೆ ನೀವು ನಿಮ್ಮ ಗತ ನೀತಿಯನ್ನು ಪುನರಾವರ್ತಿಸಿದರೆ ನಾವು ನಮ್ಮ ಶಿಕ್ಷೆಯನ್ನು ಪುನರಾವರ್ತಿಸುವೆವು. ಧಿಕ್ಕಾರಿಗಳಿಗೆ ನಾವು ನರಕವನ್ನು ಸೆರೆಮನೆಯನ್ನಾಗಿ ಮಾಡಿಟ್ಟಿದ್ದೇವೆ.

عَسٰى رَبُّكُمْ اَنْ يَّرْحَمَكُمْ ۚ وَاِنْ عُدْتُّمْ عُدْنَا ۘ وَجَعَلْنَا جَهَنَّمَ لِلْكٰفِرِيْنَ حَصِيْرًا ۝٨

9. ವಾಸ್ತವದಲ್ಲಿ ಈ ಕುರ್‌ಆನ್ ಅತ್ಯಂತ ನೇರ ಮಾರ್ಗವನ್ನು ತೋರಿಸಿ ಕೊಡುತ್ತದೆ. ಇದನ್ನು ಸ್ವೀಕರಿಸಿಕೊಂಡು ಸತ್ಕರ್ಮವೆಸಗಿದವರಿಗೆ ದೊಡ್ಡ ಸತ್ಫಲವಿದೆಯೆಂಬ ಸುವಾರ್ತೆಯನ್ನು ನೀಡುತ್ತದೆ.

اِنَّ هٰذَا الْقُرْاٰنَ يَهْدِيْ لِلَّتِيْ هِيَ اَقْوَمُ وَيُبَشِّرُ الْمُؤْمِنِيْنَ الَّذِيْنَ يَعْمَلُوْنَ الصّٰلِحٰتِ اَنَّ لَهُمْ اَجْرًا كَبِيْرًا ۝٩

10. ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸದವರಿಗೆ ನಾವು ಅವರಿಗಾಗಿ ಘೋರ ಯಾತನೆಯನ್ನು ಸಿದ್ಧಗೊಳಿಸಿಟ್ಟಿದ್ದೇವೆಂದು ತಿಳಿಸುತ್ತದೆ.

وَّاَنَّ الَّذِيْنَ لَا يُؤْمِنُوْنَ بِالْاٰخِرَةِ اَعْتَدْنَا لَهُمْ عَذَابًا اَلِيْمًا ۝١٠

11. ಮಾನವನು ಒಳಿತನ್ನು ಬೇಡಿಕೊಳ್ಳಬೇಕಾದ ರೀತಿಯಲ್ಲಿ ಕೆಡುಕನ್ನು ಬೇಡುತ್ತಾನೆ. ಮನುಷ್ಯನು ಮಹಾ ದುಡುಕು ಸ್ವಭಾವದವನು.[6]

وَيَدْعُ الْاِنْسَانُ بِالشَّرِّ دُعَآءَهٗ بِالْخَيْرِ ۭ وَكَانَ الْاِنْسَانُ عَجُوْلًا ۝١١

12. ನಾವು ಇರುಳು ಮತ್ತು ಹಗಲನ್ನು ಎರಡು ನಿದರ್ಶನಗಳಾಗಿ ಮಾಡಿರುತ್ತೇವೆ. ನೀವು ನಿಮ್ಮ ಪ್ರಭುವಿನ ಅನುಗ್ರಹವನ್ನು ಅರಸಿಕೊಳ್ಳಲಾಗುವಂತೆಯೂ ಸಂವತ್ಸರಗಳ ಗಣನೆಯನ್ನು ಮಾಡಿಕೊಳ್ಳುವಂತೆಯೂ ನಾವು ಇರುಳಿನ ನಿದರ್ಶನವನ್ನು ಮಬ್ಬಾಗಿಯೂ ಹಗಲಿನ ನಿದರ್ಶನವನ್ನು ಪ್ರಕಾಶಮಾನವಾಗಿಯೂ ಮಾಡಿದೆವು. ನಾವು ಪ್ರತಿಯೊಂದು ವಸ್ತುವನ್ನೂ ಇದೇ ರೀತಿಯಲ್ಲಿ ಬೇರ್ಪಡಿಸಿಟ್ಟಿರುತ್ತೇವೆ.

وَجَعَلْنَا الَّيْلَ وَالنَّهَارَ اٰيَتَيْنِ فَمَحَوْنَآ اٰيَةَ الَّيْلِ وَجَعَلْنَآ اٰيَةَ النَّهَارِ مُبْصِرَةً لِّتَبْتَغُوْا فَضْلًا مِّنْ رَّبِّكُمْ وَلِتَعْلَمُوْا عَدَدَ السِّنِيْنَ وَالْحِسَابَ ۭ وَكُلَّ شَيْءٍ فَصَّلْنٰهُ تَفْصِيْلًا ۝١٢

6. ಇದು ಮಕ್ಕಾದ ಸತ್ಯನಿಷೇಧಿಗಳು ಪ್ರವಾದಿವರ್ಯರೊಂದಿಗೆ(ಸ) ಆಡುತ್ತಿದ್ದ ಮೂರ್ಖತನದಿಂದ ಕೂಡಿದ ಮಾತುಗಳಿಗೆ ಉತ್ತರವಾಗಿದೆ. "ನೀವು ನಮ್ಮನ್ನು ಎಚ್ಚರಿಸುತ್ತಿರುವ ಆ ಯಾತನೆಯನ್ನು ಈಗಲೇ ತಂದು ಬಿಡಿ" ಎಂದು ಅವರು ಹೇಳುತ್ತಿದ್ದರು. ಮೇಲಿನ ಪ್ರಸ್ತಾಪಗಳ ತಕ್ಷಣ ಈ ಸೂಕ್ತವನ್ನು ಉಲ್ಲೇಖಿಸಲಾಗಿರುವುದರ ಉದ್ದೇಶ ಅವರಿಗೆ ಎಚ್ಚರಿಕೆ ಕೊಡುವುದಾಗಿದೆ. “ಮೂರ್ಖರೇ! ನೀವು ಒಳಿತಿನ ಬದಲು ಯಾತನೆಯನ್ನು ನಿರೀಕ್ಷಿಸುತ್ತಿದ್ದೀರಾ? ದೇವನ ಯಾತನೆ ಯಾವುದೇ ಸಮುದಾಯದ ಮೇಲೆ ಎರಗಿದಾಗ ಅದರ ಗತಿ ಏನಾಗುತ್ತದೆಂದು ನಿಮಗೆ ತಿಳಿದಿದೆಯೇ?” ಎಂದು ಎಚ್ಚರಿಸಲಾಗಿದೆ. ಅದರ ಜತೆಗೆ ಈ ಸೂಕ್ತದಲ್ಲಿ ಸೂಕ್ಷ್ಮವಾಗಿ ಮುಸ್ಲಿಮರನ್ನೂ ಎಚ್ಚರಿಸಲಾಗಿದೆ. ಸತ್ಯನಿಷೇಧಿಗಳ ಅಕ್ರಮ ಮತ್ತು ಅವರ ಹಟಸಾಧನೆಗಳಿಂದ ಬೇಸತ್ತು ಕೆಲವು ಮುಸ್ಲಿಮರು ಅವರ ಮೇಲೆ ಯಾತನೆ ಎರಗಲೆಂದು ಪ್ರಾರ್ಥಿಸುತ್ತಿದ್ದರು. ವಾಸ್ತವದಲ್ಲಿ ಆ ಸತ್ಯನಿಷೇಧಿಗಳ ಪೈಕಿಯೇ ಮುಂದೆ ಇಸ್ಲಾಮ್ ಸ್ವೀಕರಿಸಿ ಲೋಕದಾದ್ಯಂತ ಇಸ್ಲಾಮಿನ ಧ್ವಜವಾಹಕರಾಗಿ ಬಿಡಬಲ್ಲಂತಹ ವ್ಯಕ್ತಿಗಳು ಅನೇಕ ಮಂದಿ ಇದ್ದರು. ಆದ್ದರಿಂದ ಅಲ್ಲಾಹನು ಮಾನವ ಮಹಾ ತಾಳ್ಮೆಗೆಟ್ಟವನು ಎಂದು ಹೇಳುತ್ತಿದ್ದಾನೆ. ತಕ್ಷಣ ಬೇಕೆನಿಸಿದ ಎಲ್ಲವನ್ನೂ ಅವನು ದೇವನೊಡನೆ ಯಾಚಿಸುತ್ತಾನೆ. ಆದರೆ ಅನಂತರ ತನ್ನ ಪ್ರಾರ್ಥನೆ ಆಗ ಸ್ವೀಕರಿಸಲ್ಪಡುತ್ತಿದ್ದರೆ ಅದು ತನ್ನ ಪಾಲಿಗೆ ಹಿತಕರವಾಗುತ್ತಿರಲಿಲ್ಲ ಎಂದು ಅವನೇ ಸ್ವಾನುಭವದ ಮೂಲಕ ಕಂಡುಕೊಳ್ಳುತ್ತಾನೆ.

| | |
|---|---|
| 13. ಪ್ರತಿಯೊಬ್ಬ ಮನುಷ್ಯನ ಶಕುನವನ್ನು ನಾವು ಅವನ ಕೊರಳಿಗೇ ಕಟ್ಟಿ ಬಿಡುತ್ತೇವೆ.[7] ಪುನರುತ್ಥಾನ ದಿನದಂದು ನಾವು ಅವನಿಗಾಗಿ ಒಂದು ಲಿಖಿತವನ್ನು ಹೊರಡಿಸುವೆವು. ಅವನು ಅದನ್ನು ತೆರೆದ ಗ್ರಂಥದಂತೆ ಕಾಣುವನು. | وَكُلَّ إِنسَانٍ أَلْزَمْنَاهُ طَائِرَهُ فِي عُنُقِهِ ۖ وَنُخْرِجُ لَهُ يَوْمَ الْقِيَامَةِ كِتَابًا يَلْقَاهُ مَنشُورًا ﴿١٣﴾ |
| 14. ನಿನ್ನ ಕರ್ಮ ಪತ್ರವನ್ನು ಓದು. ಇಂದು ನಿನ್ನ ಲೆಕ್ಕ ತೆಗೆಯಲು ನೀನೇ ಸಾಕು. | اقْرَأْ كِتَابَكَ كَفَىٰ بِنَفْسِكَ الْيَوْمَ عَلَيْكَ حَسِيبًا ﴿١٤﴾ |
| 15. ಸನ್ಮಾರ್ಗ ಸ್ವೀಕರಿಸಿಕೊಳ್ಳುವವನ ಸನ್ಮಾರ್ಗ ಗಮನವು ಅವನಿಗೇ ಒಳಿತಾಗಿದೆ ಮತ್ತು ಪಥಭ್ರಷ್ಟನ ಪಥಭ್ರಷ್ಟತೆಯ ವಿಪತ್ತೂ ಅವನ ಮೇಲೆಯೇ ಬೀಳುತ್ತದೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆಯನ್ನು ಹೊರಲಾರನು.[8] (ಜನರಿಗೆ ಸತ್ಯಾಸತ್ಯತೆಗಳ ಅಂತರವನ್ನು ತೋರಿಸಿ ಕೊಡಲು) ಓರ್ವ ಸಂದೇಶವಾಹಕನನ್ನು ಕಳುಹಿಸಿಕೊಡದೆ ನಾವು ಯಾತನೆ ಕೊಡುವವರಲ್ಲ. | مَّنِ اهْتَدَىٰ فَإِنَّمَا يَهْتَدِي لِنَفْسِهِ ۖ وَمَن ضَلَّ فَإِنَّمَا يَضِلُّ عَلَيْهَا ۚ وَلَا تَزِرُ وَازِرَةٌ وِزْرَ أُخْرَىٰ ۗ وَمَا كُنَّا مُعَذِّبِينَ حَتَّىٰ نَبْعَثَ رَسُولًا ﴿١٥﴾ |
| 16. ನಾವು ಒಂದು ನಾಡನ್ನು ನಾಶಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ಮತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡ ತೊಡಗುತ್ತಾರೆ. ಆಗ ಯಾತನೆಯ ತೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ ಮತ್ತು ನಾವು ಅದನ್ನು ಸಂಪೂರ್ಣ ನಾಶ ಮಾಡಿಬಿಡುತ್ತೇವೆ.[9] | وَإِذَا أَرَدْنَا أَن نُّهْلِكَ قَرْيَةً أَمَرْنَا مُتْرَفِيهَا فَفَسَقُوا فِيهَا فَحَقَّ عَلَيْهَا الْقَوْلُ فَدَمَّرْنَاهَا تَدْمِيرًا ﴿١٦﴾ |
| 17. ನೋಡಿಕೊಳ್ಳಿರಿ! ನೂಹರ ಅನಂತರ ನಮ್ಮ ಅಪ್ಪಣೆಯಿಂದ ನಾಶಗೊಂಡ ಅನೇಕ ತಲೆಮಾರುಗಳಿವೆ. ತನ್ನ ದಾಸರ ಪಾಪಗಳ ಬಗ್ಗೆ ಸಂಪೂರ್ಣ ಬೋಧವಿರಿಸಿಕೊಳ್ಳಲಿಕ್ಕೂ ಸರ್ವವನ್ನೂ ವೀಕ್ಷಿಸಲಿಕ್ಕೂ ನಿನ್ನ ಪ್ರಭುವೇ ಸಾಕು. | وَكَمْ أَهْلَكْنَا مِنَ الْقُرُونِ مِن بَعْدِ نُوحٍ ۗ وَكَفَىٰ بِرَبِّكَ بِذُنُوبِ عِبَادِهِ خَبِيرًا بَصِيرًا ﴿١٧﴾ |

7. ಅರ್ಥಾತ್- ಪ್ರತಿಯೊಬ್ಬ ಮಾನವ ಸೌಭಾಗ್ಯ-ದೌರ್ಭಾಗ್ಯಗಳು ಮತ್ತು ಅಂತಿಮ ಪರಿಣಾಮವಾಗಿ ಅವನಿಗೆ ಒದಗುವ ಒಳಿತು-ಕೆಡುಕುಗಳ ಕಾರಣಗಳು ಸ್ವತಃ ಅವನ ವ್ಯಕ್ತಿತ್ವದಲ್ಲೇ ಅಡಕವಾಗಿದೆ.

8. ಅರ್ಥಾತ್- ಪ್ರತಿಯೊಬ್ಬ ವ್ಯಕ್ತಿಯೂ ಶಾಶ್ವತವಾದ ನೈತಿಕ ಹೊಣೆಯನ್ನು ಹೊಂದಿದ್ದಾನೆ. ಅಲ್ಲಾಹನ ಮುಂದೆ ಅವನು ವ್ಯಕ್ತಿಗತವಾದ ಉತ್ತರದಾಯಿತ್ವವನ್ನು ಹೊಂದಿದ್ದಾನೆ. ಇಂತಹ ವೈಯಕ್ತಿಕ ಹೊಣೆಗಾರಿಕೆಯಲ್ಲಿ ಬೇರಾವುದೇ ವ್ಯಕ್ತಿ ಅವನ ಜತೆಗಿರಲಾರ.

9. ಒಂದು ಸಮಾಜವನ್ನು ಅಂತಿಮವಾಗಿ ನಾಶ ಪಡಿಸಿ ಬಿಡುವುದು ಆ ಸಮಾಜದ ಸ್ಥಿತಿವಂತ ಮತ್ತು ಉನ್ನತ ವರ್ಗದ ಕೆಡುಕುಗಳಾಗಿವೆ ಎಂಬ ವಾಸ್ತವಿಕತೆಯ ಬಗ್ಗೆ ಇಲ್ಲಿ ಎಚ್ಚರಿಕೆ ನೀಡಲಾಗಿದೆ. ಯಾವುದಾದರೊಂದು ಸಮಾಜ ವಿನಾಶಕ್ಕೀಡಾಗುವುದಿದ್ದರೆ ಅದರ ಸಿರಿವಂತ ಮತ್ತು ಅಧಿಕಾರ ಸ್ಥಾನದಲ್ಲಿರುವ ಜನರು ಕೆಡುಕು ಮತ್ತು ಭ್ರಷ್ಟಾಚಾರದಲ್ಲಿ ತೊಡಗುತ್ತಾರೆ. ಅಕ್ರಮ, ಅನ್ಯಾಯ, ಕೆಡುಕು ಮತ್ತು ಕಿಡಿಗೇಡಿತನಗಳನ್ನು ಎಸಗತೊಡಗುತ್ತಾರೆ. ಕೊನೆಗೆ ಈ ಕ್ಷೋಭೆ ಸಮಸ್ತ ಸಮುದಾಯವನ್ನು ಮುಳುಗಿಸಿ ಬಿಡುತ್ತದೆ. ಆದ್ದರಿಂದ ಆತ್ಮವಂಚನೆ ಮಾಡಿ ಕೊಳ್ಳಬಯಸದ ಸಮಾಜ, ತಮ್ಮ ಅಧಿಕಾರದ ಚುಕ್ಕಾಣಿ ಮತ್ತು ಸಂಪತ್ತಿನ ಚಾವಿಗಳು ಸಂಕುಚಿತ ಮತಿಗಳ ಮತ್ತು ಅನೈತಿಕತೆಗೆ ಈಡಾಗಿರುವ ವ್ಯಕ್ತಿಗಳ ಕೈಗಳಿಗೆ ಹೊರಟು ಹೋಗದಂತೆ ಸದಾ ಎಚ್ಚರಿಕೆ ವಹಿಸಬೇಕಾಗಿದೆ.

18. (ಈ ಲೋಕದಲ್ಲಿ) ಶೀಘ್ರವಾಗಿ ಪ್ರಾಪ್ತವಾಗುವ ಫಲಗಳನ್ನು ಅಪೇಕ್ಷಿಸುವವನಿಗೆ, ನಾವು ಕೊಡಲಿಚ್ಛಿಸುವುದನ್ನು ಇಲ್ಲೇ ಕೊಟ್ಟು ಬಿಡುತ್ತೇವೆ. ಅನಂತರ ಅವನ ಪಾಲಿಗೆ ನರಕವನ್ನು ಬರೆದು ಬಿಡುತ್ತೇವೆ. ಅದರಲ್ಲಿ ಅವನು ಧಿಕ್ಕರಿಸಲ್ಪಟ್ಟು ಹಾಗೂ ಕೃಪೆಯಿಂದ ವಂಚಿತನಾಗಿ ಬೇಯುತ್ತಿರುವನು.

مَنْ كَانَ يُرِيدُ الْعَاجِلَةَ عَجَّلْنَا لَهُ فِيهَا مَا نَشَاءُ لِمَنْ نُرِيدُ ثُمَّ جَعَلْنَا لَهُ جَهَنَّمَ يَصْلَاهَا مَذْمُومًا مَدْحُورًا ﴿١٨﴾

19. ಮತ್ತು ಯಾರಾದರೂ ಪರಲೋಕವನ್ನು ಇಷ್ಟಪಟ್ಟು ಅದಕ್ಕಾಗಿ ಪ್ರಯತ್ನಿಸಬೇಕಾದ ರೀತಿಯಲ್ಲಿ ಪ್ರಯತ್ನಿಸಿದರೆ ಮತ್ತು ಅವನು ಸತ್ಯವಿಶ್ವಾಸಿಯಾಗಿದ್ದರೆ - ಇಂತಹ ಪ್ರತಿಯೊಬ್ಬನ ಪ್ರಯತ್ನವು ಕೃತಾರ್ಥವಾಗುವುದು.[10]

وَمَنْ أَرَادَ الْآخِرَةَ وَسَعَىٰ لَهَا سَعْيَهَا وَهُوَ مُؤْمِنٌ فَأُولَٰئِكَ كَانَ سَعْيُهُمْ مَشْكُورًا ﴿١٩﴾

20. ನಾವು ಇವರಿಗೂ ಅವರಿಗೂ ಎರಡು ವರ್ಗದವರಿಗೂ (ಇಹ ಲೋಕದಲ್ಲಿ) ಜೀವನ ಸಾಮಗ್ರಿಯನ್ನು ಕೊಡುತ್ತಿರುತ್ತೇವೆ. ಇದು ನಿನ್ನ ಪ್ರಭುವಿನ ಕೊಡುಗೆ. ನಿನ್ನ ಪ್ರಭುವಿನ ಕೊಡುಗೆಯನ್ನು ತಡೆಯುವವನು ಯಾರೂ ಇಲ್ಲ.

كُلًّا نُمِدُّ هَٰؤُلَاءِ وَهَٰؤُلَاءِ مِنْ عَطَاءِ رَبِّكَ ۚ وَمَا كَانَ عَطَاءُ رَبِّكَ مَحْظُورًا ﴿٢٠﴾

21. ಆದರೆ ನಾವು ಇಹಲೋಕದಲ್ಲಿ ಒಂದು ವರ್ಗಕ್ಕೆ ಇನ್ನೊಂದು ವರ್ಗದ ಮೇಲೆ ಎಂತಹ ಶ್ರೇಷ್ಠತೆ ಪ್ರದಾನ ಮಾಡಿರುತ್ತೇವೆಂದು ನೋಡಿರಿ.[11] ಪರಲೋಕದಲ್ಲಿ ಅದರ ಸ್ಥಾನವು ಇನ್ನಷ್ಟು ಹೆಚ್ಚುವುದು ಮತ್ತು ಅದರ ಶ್ರೇಷ್ಠತೆ ಮತ್ತಷ್ಟು ಅಧಿಕವಾಗುವುದು.

انْظُرْ كَيْفَ فَضَّلْنَا بَعْضَهُمْ عَلَىٰ بَعْضٍ ۚ وَلَلْآخِرَةُ أَكْبَرُ دَرَجَاتٍ وَأَكْبَرُ تَفْضِيلًا ﴿٢١﴾

22. ನೀನು ಅಲ್ಲಾಹನೊಂದಿಗೆ ಬೇರಾರನ್ನೂ ಆರಾಧ್ಯನಾಗಿ ಮಾಡಿ ಕೊಳ್ಳಬೇಡ. ಅನ್ಯಥಾ ಶಪಿತನಾಗಿ ಅಸಹಾಯಕನಾಗಿ ಕುಳಿತು ಕೊಂಡಿರುವೆ.

لَا تَجْعَلْ مَعَ اللَّهِ إِلَٰهًا آخَرَ فَتَقْعُدَ مَذْمُومًا مَخْذُولًا ﴿٢٢﴾

10. ಅರ್ಥಾತ್- ಅವನ ಕರ್ಮವನ್ನು ಮಾನ್ಯ ಮಾಡಲಾಗುವುದು. ಪರಲೋಕ ವಿಜಯಕ್ಕಾಗಿ ಅವನು ಯಾವ ಮಟ್ಟದ ಪ್ರಯತ್ನಗಳನ್ನು ಮಾಡಿರುವನೋ ಅದಕ್ಕೆ ಅನುಗುಣವಾಗಿ ಅವನಿಗೆ ಪ್ರತಿಫಲ ನೀಡಲಾಗುವುದು.

11. ಪರಲೋಕವನ್ನು ಬಯಸುವವರಿಗೆ ಇಹಲೋಕಾರ್ಥಿಗಳಿಗಿಂತ ಶ್ರೇಷ್ಠತೆ ನೀಡಲಾಗಿರುವ ಆ ಅಂತರ, ಲೌಕಿಕ ಜೀವನದಲ್ಲೂ ಸ್ಪಷ್ಟವಾಗಿ ಗೋಚರಿಸುತ್ತದೆ. ಶ್ರೇಷ್ಠತೆ ಎಂದರೆ ಅವರ ಅನ್ನ-ಪಾನೀಯ, ಉಡುಗೆ-ತೊಡುಗೆ, ನಿವಾಸ, ವಾಹನ, ಸಂಸ್ಕೃತಿ ಮತ್ತು ನಾಗರಿಕತೆಗಳೆಲ್ಲವೂ ಅವರಿಗಿಂತ ಮುಂದಿರುತ್ತದೆ ಎಂದಲ್ಲ. ಬದಲಾಗಿ ಅವರು ಪಡೆಯುವುದೆಲ್ಲವನ್ನೂ ಸತ್ಯ, ಪ್ರಾಮಾಣಿಕತೆ ಮತ್ತು ನಿಸ್ಪೃಹತೆಯೊಂದಿಗೆ ಪಡೆಯುತ್ತಾರೆ. ಅದೇ ವೇಳೆ ಇಹಲೋಕಾರ್ಥಿಗಳು ಎಲ್ಲವನ್ನೂ ಅಕ್ರಮ, ಅನ್ಯಾಯ ಮತ್ತು ನಾನಾ ತರದ ನಿಷಿದ್ಧ ಉಪಭೋಗಗಳ ಮೂಲಕ ಪಡೆಯುತ್ತಾರೆ. ಮಾತ್ರವಲ್ಲ ಪರಲೋಕಾರ್ಥಿಗಳು ತಮಗೆ ದೊರೆತಿರುವುದನ್ನು ಸಂತುಲಿತ ರೂಪದಲ್ಲಿ ವ್ಯಯಿಸುತ್ತಾರೆ. ಆ ಮೂಲಕ ಹಕ್ಕುದಾರರಿಗೆ ಸಲ್ಲಬೇಕಾದ ಹಕ್ಕು ಸಂದಾಯವಾಗುತ್ತದೆ. ಯಾಚಕರ ಮತ್ತು ಅಪೇಕ್ಷಿತರ ಪಾಲನ್ನೂ ಅವರು ನೀಡುತ್ತಾರೆ. ದೇವಸಂಪ್ರೀತಿ ಗಳಿಸಲಿಕ್ಕಾಗಿ ಇತರ ಸತ್ಕಾರ್ಯಗಳಿಗೂ ಅವರು ವೆಚ್ಚಮಾಡುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಲೋಕಾರಾಧಕರು ತಮಗೆ ದೊರೆತಿರುವುದೆಲ್ಲವನ್ನೂ ಆಡಂಬರ, ವಿಲಾಸ, ನಿಷಿದ್ಧ ಕೆಲಸಗಳು, ಗೊಂದಲ ಮತ್ತು ಕ್ಷೋಭೆ ಹುಟ್ಟಿಸುವಂತಹ ಕಾರ್ಯಗಳಲ್ಲಿ ನೀರಿನಂತೆ ಪೋಲು ಮಾಡುತ್ತಾರೆ. ಹೀಗೆ ಎಲ್ಲ ರೀತಿಯಿಂದಲೂ ಪರಲೋಕಾರ್ಥಿಗಳ ಜೀವನ ಇಹಲೋಕಾರ್ಥಿಗಳಿಗಿಂತ ಉತ್ತಮವಾಗಿರುತ್ತದೆ.

23. ನಿಮ್ಮ ಪ್ರಭು (ಹೀಗೆ) ವಿಧಿಸಿ ಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕ ವಾಗಿ ಮಾತನಾಡಿರಿ.

وَقَضَىٰ رَبُّكَ أَلَّا تَعْبُدُوا إِلَّا إِيَّاهُ وَبِالْوَالِدَيْنِ إِحْسَانًا ۚ إِمَّا يَبْلُغَنَّ عِنْدَكَ الْكِبَرَ أَحَدُهُمَا أَوْ كِلَاهُمَا فَلَا تَقُلْ لَهُمَا أُفٍّ وَلَا تَنْهَرْهُمَا وَقُلْ لَهُمَا قَوْلًا كَرِيمًا ﴿٢٣﴾

24. ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. "ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆತೋರು" ಎಂದು ಪ್ರಾರ್ಥಿಸಿರಿ.

وَاخْفِضْ لَهُمَا جَنَاحَ الذُّلِّ مِنَ الرَّحْمَةِ وَقُلْ رَبِّ ارْحَمْهُمَا كَمَا رَبَّيَانِي صَغِيرًا ﴿٢٤﴾

25. ನಿಮ್ಮ ಅಂತರಂಗದಲ್ಲಿ ಏನಿದೆಯೆಂಬುದನ್ನು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು. ನೀವು ಸಜ್ಜನರಾಗಿ ಬಾಳಿಕೊಂಡಿದ್ದರೆ ತಮ್ಮ ಅಪರಾಧಗಳ ಬಗ್ಗೆ ಜಾಗೃತರಾಗಿ ದಾಸ್ಯ-ಆರಾಧನೆಯ ಕಡೆಗೆ ಮರಳಿ ಬರುವಂತಹ ಸರ್ವರನ್ನೂ ಅವನು ಕ್ಷಮಿಸುವವನಾಗಿರು ತ್ತಾನೆ.

رَبُّكُمْ أَعْلَمُ بِمَا فِي نُفُوسِكُمْ ۚ إِنْ تَكُونُوا صَالِحِينَ فَإِنَّهُ كَانَ لِلْأَوَّابِينَ غَفُورًا ﴿٢٥﴾

26. ಸಂಬಂಧಿಕನಿಗೆ ಅವನ ಹಕ್ಕನ್ನೂ, ದರಿದ್ರನಿಗೂ, ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ. ದುಂದುವೆಚ್ಚ ಮಾಡಬೇಡಿರಿ.

وَآتِ ذَا الْقُرْبَىٰ حَقَّهُ وَالْمِسْكِينَ وَابْنَ السَّبِيلِ وَلَا تُبَذِّرْ تَبْذِيرًا ﴿٢٦﴾

27. ದುಂದುಗಾರರು ಶೈತಾನನ ಸೋದರರಾಗಿರುತ್ತಾರೆ ಮತ್ತು ಶೈತಾನನು ತನ್ನ ಪ್ರಭುವಿಗೆ ಕೃತಘ್ನನು.

إِنَّ الْمُبَذِّرِينَ كَانُوا إِخْوَانَ الشَّيَاطِينِ ۖ وَكَانَ الشَّيْطَانُ لِرَبِّهِ كَفُورًا ﴿٢٧﴾

28. ನೀವು ನಿರೀಕ್ಷಿಸುತ್ತಿರುವ ಅಲ್ಲಾಹನ ಕೃಪೆಯನ್ನು ಇನ್ನೂ ಅರಸುತ್ತಿ ರುವ ಕಾರಣ ನಿಮಗೆ ಅವರಿಂದ (ನಿರ್ಗತಿಕರಾದ ಸಂಬಂಧಿಕರಿಂದ, ದರಿದ್ರರಿಂದ ಮತ್ತು ಪ್ರಯಾಣಿಕರಿಂದ) ತಪ್ಪಿಸಿಕೊಳ್ಳ ಬೇಕೆಂದಾದರೆ, ಅವರಿಗೆ ನಯವಾಗಿ ಉತ್ತರಕೊಡಿರಿ.

وَإِمَّا تُعْرِضَنَّ عَنْهُمُ ابْتِغَاءَ رَحْمَةٍ مِنْ رَبِّكَ تَرْجُوهَا فَقُلْ لَهُمْ قَوْلًا مَيْسُورًا ﴿٢٨﴾

29. ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ.[12]

وَلَا تَجْعَلْ يَدَكَ مَغْلُولَةً إِلَىٰ عُنُقِكَ وَلَا تَبْسُطْهَا كُلَّ الْبَسْطِ فَتَقْعُدَ مَلُومًا مَحْسُورًا ﴿٢٩﴾

12. ಕೈಯನ್ನು ಕಟ್ಟಿಕೊಳ್ಳುವುದು ಎಂಬುದನ್ನು ಆಲಂಕಾರಿಕವಾಗಿ ಜಿಪುಣತೆಗೆ ಉಪಯೋಗಿಸಲಾಗಿದೆ. ಅದನ್ನು ತೆರೆದು ಬಿಡುವುದೆಂದರೆ ದುಂದುವ್ಯಯ ಮಾಡುವುದಾಗಿದೆ.

30. ನಿನ್ನ ಪ್ರಭು ತನಗಿಷ್ಟ ಬಂದವರಿಗೆ ಜೀವನಾಧಾರವನ್ನು ವಿಶಾಲಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದವರಿಗೆ ಸಂಕುಚಿತ ಗೊಳಿಸುತ್ತಾನೆ. ಅವನು ತನ್ನ ದಾಸರ ಸ್ಥಿತಿ-ಗತಿಗಳನ್ನು ಅರಿತವ ನಾಗಿರುತ್ತಾನೆ ಮತ್ತು ಅವರನ್ನು ವೀಕ್ಷಿಸುತ್ತಿದ್ದಾನೆ.

إِنَّ رَبَّكَ يَبْسُطُ الرِّزْقَ لِمَنْ يَشَاءُ وَيَقْدِرُ ۚ إِنَّهُ كَانَ بِعِبَادِهِ خَبِيرًا بَصِيرًا ﴿٣٠﴾

31. ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲಬೇಡಿರಿ. ನಾವು ಅವರಿಗೂ ಆಹಾರ ನೀಡುವೆವು ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ಘೋರ ಅಪರಾಧವಾಗಿದೆ.

وَلَا تَقْتُلُوا أَوْلَادَكُمْ خَشْيَةَ إِمْلَاقٍ ۖ نَحْنُ نَرْزُقُهُمْ وَإِيَّاكُمْ ۚ إِنَّ قَتْلَهُمْ كَانَ خِطْئًا كَبِيرًا ﴿٣١﴾

32. ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ.

وَلَا تَقْرَبُوا الزِّنَىٰ ۖ إِنَّهُ كَانَ فَاحِشَةً وَسَاءَ سَبِيلًا ﴿٣٢﴾

33. ಅಲ್ಲಾಹನು ಸನ್ಮಾನಿಸಿರುವ ಜೀವವನ್ನು ನ್ಯಾಯದಿಂದಲ್ಲದೆ ಹರಣ ಮಾಡಬೇಡಿರಿ. ಅಕ್ರಮವಾಗಿ ವಧಿಸಲ್ಪಟ್ಟವನ ವಾರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ.[13] ಆದುದರಿಂದ ಅವನು ವಧೆಯಲ್ಲಿ ಹದಮೀರ ಬಾರದು.[14] ನಿಶ್ಚಯವಾಗಿಯೂ ಅವನಿಗೆ ಸಹಾಯ ಮಾಡಲಾಗುವುದು.[15]

وَلَا تَقْتُلُوا النَّفْسَ الَّتِي حَرَّمَ اللَّهُ إِلَّا بِالْحَقِّ ۗ وَمَنْ قُتِلَ مَظْلُومًا فَقَدْ جَعَلْنَا لِوَلِيِّهِ سُلْطَانًا فَلَا يُسْرِفْ فِي الْقَتْلِ ۖ إِنَّهُ كَانَ مَنْصُورًا ﴿٣٣﴾

34. ಅನಾಥನ ಸೊತ್ತನ್ನು ಉತ್ತಮ ರೀತಿಯಿಂದಲ್ಲದೆ ಸಮೀಪಿಸ ಬಾರದು - (ಇದು) ಅವನು ಯೌವನಾವಸ್ಥೆಗೆ ತಲಪುವ ತನಕ. ವಚನವನ್ನು ಪಾಲಿಸಿರಿ. ನಿಶ್ಚಯವಾಗಿಯೂ ವಚನದ ಕುರಿತು- ನಿಮ್ಮನ್ನು ಪ್ರಶ್ನಿಸಲಾಗುವುದು.

وَلَا تَقْرَبُوا مَالَ الْيَتِيمِ إِلَّا بِالَّتِي هِيَ أَحْسَنُ حَتَّىٰ يَبْلُغَ أَشُدَّهُ ۚ وَأَوْفُوا بِالْعَهْدِ ۖ إِنَّ الْعَهْدَ كَانَ مَسْئُولًا ﴿٣٤﴾

35. ಅಳತೆ ಮಾಡಿ ಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ.

وَأَوْفُوا الْكَيْلَ إِذَا كِلْتُمْ وَزِنُوا بِالْقِسْطَاسِ

13. ಮೂಲದಲ್ಲಿ 'ಅವನ ವಾರೀಸುದಾರರಿಗೆ ಸುಲ್ತಾನ್' ನೀಡಿದ್ದೇವೆ ಎಂದಿದೆ. ಸುಲ್ತಾನ್ ಎಂದರೆ ಇಲ್ಲಿ 'ಆಧಾರ ಪ್ರಮಾಣ' ಎಂದಾಗಿದೆ. ಅದರ ಆಧಾರದಲ್ಲೇ ಅವನು ಪ್ರತೀಕಾರದ ಬೇಡಿಕೆಯನ್ನು ಮುಂದಿಡಬಹುದಾಗಿದೆ.

14. ಕೊಲೆಯಲ್ಲಿ ಎಲ್ಲೆ ಮೀರುವುದರ ಅನೇಕ ವಿಧಗಳಿರಬಹುದು. ಅವುಗಳೆಲ್ಲವೂ ನಿಷಿದ್ಧ. ಉದಾಹರಣೆಗೆ ಪ್ರತೀಕಾರದ ಆವೇಶದಲ್ಲಿ ಅಪರಾಧಿಯ ಬದಲು ಇತರರನ್ನು ಕೊಲ್ಲುವುದು, ಅಥವಾ ಅಪರಾಧಿಯನ್ನು ನಿರಂತರ ದಂಡಿಸಿದ ಬಳಿಕ ವಧಿಸುವುದು, ಅಥವಾ ವಧಿಸಿದ ನಂತರ ಮೃತದೇಹದೊಂದಿಗೆ ಆಕ್ರೋಶ ಪ್ರದರ್ಶಿಸುವುದು, ಅಥವಾ ರಕ್ತಪರಿಹಾರ ಧನವನ್ನು ಪಡೆದ ಬಳಿಕ ಅವನನ್ನು ವಧಿಸುವುದು ಇತ್ಯಾದಿ.

15. ಆ ತನಕ ಇಸ್ಲಾಮೀ ಸರ್ಕಾರ ರಚಿತವಾಗಿರಲಿಲ್ಲವಾದ್ದರಿಂದ ಅವನಿಗೆ ಸಹಾಯ ಮಾಡ ಬೇಕಾದವರು ಯಾರು ಎಂಬುದನ್ನು ಇಲ್ಲಿ ವ್ಯಕ್ತಪಡಿಸಲಾಗಿಲ್ಲ. ಮದೀನಾ ವಲಸೆಯ ನಂತರ ಇಸ್ಲಾಮೀ ಸರ್ಕಾರ ಸ್ಥಾಪನೆಗೊಂಡಾಗ, ಅವನಿಗೆ ಸಹಾಯ ಮಾಡುವುದು ಅವನ ಗೋತ್ರದವರ ಅಥವಾ ಬೆಂಬಲಿಗರ ಕೆಲಸವಲ್ಲ, ಬದಲಾಗಿ ಅದು ಇಸ್ಲಾಮೀ ಸರ್ಕಾರ ಮತ್ತು ಅದರ ನ್ಯಾಯಾಂಗ ವ್ಯವಸ್ಥೆಯ ಕೆಲಸವಾಗಿದೆ ಎಂಬುದನ್ನು ನಿರ್ಧರಿಸಲಾಯಿತು. ಕೊಲೆಗೆ ಪ್ರತೀಕಾರ ತೀರಿಸುವ ಅಧಿಕಾರ ಯಾವುದೇ ವ್ಯಕ್ತಿ ಅಥವಾ ಸಮೂಹಕ್ಕೆ ಇಲ್ಲ. ಇದು ಇಸ್ಲಾಮೀ ಸರ್ಕಾರದ ಕೆಲಸ. ನ್ಯಾಯಗಳಿಕೆಗಾಗಿ ಅದರಿಂದಲೇ ಸಹಾಯ ಯಾಚಿಸಬೇಕು.

ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ.

الْمُسْتَقِيمِ ذَٰلِكَ خَيْرٌ وَأَحْسَنُ تَأْوِيلًا ﴿٣٥﴾

36. ನಿಮಗೆ ಜ್ಞಾನವಿಲ್ಲದಂತಹ ವಸ್ತುಗಳನ್ನು ಬೆಂಬತ್ತಬೇಡಿರಿ.[16] ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ.

وَلَا تَقْفُ مَا لَيْسَ لَكَ بِهِ عِلْمٌ ۚ إِنَّ السَّمْعَ وَالْبَصَرَ وَالْفُؤَادَ كُلُّ أُولَٰئِكَ كَانَ عَنْهُ مَسْئُولًا ﴿٣٦﴾

37. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡಿರಿ. ನೀವು ಭೂಮಿಯನ್ನು ಸೀಳಲಾರಿರಿ ಮತ್ತು ಪರ್ವತಗಳ ಶಿಖರಕ್ಕೂ ತಲಪಲಾರಿರಿ.

وَلَا تَمْشِ فِي الْأَرْضِ مَرَحًا ۖ إِنَّكَ لَنْ تَخْرِقَ الْأَرْضَ وَلَنْ تَبْلُغَ الْجِبَالَ طُولًا ﴿٣٧﴾

38. ಈ ವಿಷಯದಲ್ಲಿ ಪ್ರತಿಯೊಂದು ದೋಷ ಭಾಗವು ನಿಮ್ಮ ಪ್ರಭುವಿನ ಬಳಿ ಅಪ್ರಿಯವಾಗಿರುತ್ತದೆ.[17]

كُلُّ ذَٰلِكَ كَانَ سَيِّئُهُ عِنْدَ رَبِّكَ مَكْرُوهًا ﴿٣٨﴾

39. ನಿಮ್ಮ ಪ್ರಭು ನಿಮ್ಮ ಮೇಲೆ 'ದಿವ್ಯವಾಣಿ' ಮಾಡಿದ (ಅವತೀರ್ಣಗೊಳಿಸಿದ) ಯುಕ್ತಿಪೂರ್ಣ ಮಾತುಗಳಿವು. ಇದೋ ನೋಡು! ಅಲ್ಲಾಹನೊಂದಿಗೆ ಇನ್ನಾವ ಆರಾಧ್ಯನನ್ನೂ ಮಾಡಿಕೊಳ್ಳಬೇಡ. ಅನ್ಯಥಾ ನೀನು ನಿಂದ್ಯನಾಗಿ ಸಕಲ ಒಳಿತುಗಳಿಂದ ವಂಚಿತನಾಗಿ ನರಕದೊಳಗೆ ತಳ್ಳಲ್ಪಡುವೆ.[18]

ذَٰلِكَ مِمَّا أَوْحَىٰ إِلَيْكَ رَبُّكَ مِنَ الْحِكْمَةِ ۗ وَلَا تَجْعَلْ مَعَ اللَّهِ إِلَٰهًا آخَرَ فَتُلْقَىٰ فِي جَهَنَّمَ مَلُومًا مَدْحُورًا ﴿٣٩﴾

40. ನಿಮ್ಮ ಪ್ರಭು ನಿಮಗೆ ಪುತ್ರರನ್ನು ದಯಪಾಲಿಸಿ ತನಗಾಗಿ ದೇವಚರರನ್ನು ಪುತ್ರಿಯರನ್ನಾಗಿ ಮಾಡಿಕೊಂಡನೆಂಬುದು ಎಂತಹ ಸೋಜಿಗದ ವಿಷಯ. ನಿಶ್ಚಯವಾಗಿಯೂ ನೀವು ಒಂದು ಘೋರ ಸುಳ್ಳನ್ನಾಡುತ್ತಿರುವಿರಿ.

أَفَأَصْفَاكُمْ رَبُّكُمْ بِالْبَنِينَ وَاتَّخَذَ مِنَ الْمَلَائِكَةِ إِنَاثًا ۚ إِنَّكُمْ لَتَقُولُونَ قَوْلًا عَظِيمًا ﴿٤٠﴾

41. ಜನರು ಜಾಗೃತರಾಗಲೆಂದು ನಾವು ಈ ಕುರ್‌ಆನಿನಲ್ಲಿ ವಿಧ ವಿಧವಾಗಿ ಅವರಿಗೆ ಬೋಧಿಸಿದ್ದೇವು. ಆದರೆ ಅವರು ಸತ್ಯದಿಂದ ಇನ್ನಷ್ಟು ದೂರಕ್ಕೆ ಓಡುತ್ತಿದ್ದಾರೆ.

وَلَقَدْ صَرَّفْنَا فِي هَٰذَا الْقُرْآنِ لِيَذَّكَّرُوا وَمَا يَزِيدُهُمْ إِلَّا نُفُورًا ﴿٤١﴾

42. ಓ ಪೈಗಂಬರರೇ! ಇವರೊಡನೆ ಹೇಳಿರಿ- ಇವರು ಹೇಳುವ ಪ್ರಕಾರ ಅಲ್ಲಾಹನ ಸಂಗಡ ಇತರ ದೇವರೂ ಇರುತ್ತಿದ್ದರೆ ಅವರು 'ವಿಶ್ವ ಸಿಂಹಾಸನದ' ಮಾಲಕನ ಸ್ಥಾನಕ್ಕೆ ತಲಪಲು ಖಂಡಿತವಾಗಿಯೂ ಪ್ರಯತ್ನ ನಡೆಸುತ್ತಿದ್ದರು.

قُلْ لَوْ كَانَ مَعَهُ آلِهَةٌ كَمَا يَقُولُونَ إِذًا لَابْتَغَوْا إِلَىٰ ذِي الْعَرْشِ سَبِيلًا ﴿٤٢﴾

16. ಜನರು ತಮ್ಮ ವೈಯಕ್ತಿಕ ಅಥವಾ ಸಾಮೂಹಿಕ ಜೀವನದಲ್ಲಿ ಭ್ರಮೆ ಅಥವಾ ಗುಮಾನಿಗಳ ಬದಲು 'ಜ್ಞಾನ'ವನ್ನು ಅನುಸರಿಸಬೇಕು ಎಂಬುದು ಈ ಬೋಧನೆಯ ಉದ್ದೇಶ.

17. ಅರ್ಥಾತ್- ಈ ಆದೇಶಗಳ ಪೈಕಿ ಯಾವುದನ್ನು ಉಲ್ಲಂಘಿಸುವುದೂ ಅರೋಚಕ ವಿಷಯವಾಗಿದೆ.

18. ಮಾನವರೆಲ್ಲರೂ ಈ ಬೋಧನೆಯ ಸಂಬೋಧಿತರಾಗಿದ್ದಾರೆ. ಅರ್ಥಾತ್, ಓ ಮಾನವಾ! ನೀನು ಈ ಕೆಲಸವನ್ನು ಮಾಡದಿರು.

43. ಇವರು ಹೇಳುತ್ತಿರುವ ಮಾತುಗಳಿಂದ ಅವನು ಪರಿಶುದ್ಧನೂ ಅತ್ಯುನ್ನತನೂ ಆಗಿರುತ್ತಾನೆ.

سُبْحٰنَهٗ وَتَعٰلٰى عَمَّا يَقُوْلُوْنَ عُلُوًّا كَبِيْرًا ﴿٤٣﴾

44. ಸಪ್ತಗಗನಗಳೂ ಭೂಮಿಯೂ ಅವುಗಳಲ್ಲಿರುವ ಸಕಲ ವಸ್ತುಗಳೂ ಅವನ ಪಾವಿತ್ರ್ಯವನ್ನು ಕೊಂಡಾಡುತ್ತಿವೆ.[19] ಅವನ ಪ್ರಶಂಸೆಯೊಂದಿಗೆ ಅವನ 'ಜಪ' (ತಸ್ಬೀಹ್) ಮಾಡದ ಯಾವ ವಸ್ತುವೂ ಇಲ್ಲ. ಆದರೆ ನೀವು ಅವುಗಳ 'ಜಪ'ವನ್ನು ಗ್ರಹಿಸುವುದಿಲ್ಲ. ವಾಸ್ತವದಲ್ಲಿ ಅವನು ಅತ್ಯಂತ ಸಹನಶೀಲನೂ ಕ್ಷಮಾದಾನಿಯೂ ಆಗಿರುತ್ತಾನೆ.

تُسَبِّحُ لَهُ السَّمٰوٰتُ السَّبْعُ وَالْاَرْضُ
وَمَنْ فِيْهِنَّ ۚ وَاِنْ مِّنْ شَيْءٍ اِلَّا يُسَبِّحُ
بِحَمْدِهٖ وَلٰكِنْ لَّا تَفْقَهُوْنَ تَسْبِيْحَهُمْ ۗ
اِنَّهٗ كَانَ حَلِيْمًا غَفُوْرًا ﴿٤٤﴾

45. ನೀವು ಕುರ್‌ಆನ್ ಪಠಿಸುವಾಗ ನಿಮ್ಮ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸದವರ ನಡುವೆ ನಾವು ಒಂದು ತೆರೆಯನ್ನು ಹಾಕಿ ಬಿಡುತ್ತೇವೆ-

وَاِذَا قَرَاْتَ الْقُرْاٰنَ جَعَلْنَا بَيْنَكَ وَبَيْنَ
الَّذِيْنَ لَا يُؤْمِنُوْنَ بِالْاٰخِرَةِ حِجَابًا
مَّسْتُوْرًا ﴿٤٥﴾

46. ಅವರು ಏನನ್ನೂ ಗ್ರಹಿಸದಂತಾಗಲು ಅವರ ಹೃದಯಗಳ ಮೇಲೆ (ಹೊದಿಕೆಯನ್ನು) ಹಾಕಿ ಬಿಡುತ್ತೇವೆ ಮತ್ತು ಅವರ ಕಿವಿಗಳಲ್ಲಿ ಕಿವುಡುತನವನ್ನುಂಟು ಮಾಡಿ ಬಿಡುತ್ತೇವೆ.[20] ನೀವು ಕುರ್‌ಆನಿನಲ್ಲಿ ಕೇವಲ ನಿಮ್ಮ ಏಕ ಮಾತ್ರ ಪ್ರಭುವನ್ನು ಪ್ರಸ್ತಾಪಿಸುವಾಗ ಅವರು ತಿರಸ್ಕಾರದಿಂದ ಮುಖ ತಿರುಗಿಸಿ ಬಿಡುತ್ತಾರೆ.[21]

وَّجَعَلْنَا عَلٰى قُلُوْبِهِمْ اَكِنَّةً اَنْ يَّفْقَهُوْهُ
وَفِيْٓ اٰذَانِهِمْ وَقْرًا ۚ وَاِذَا ذَكَرْتَ رَبَّكَ
فِي الْقُرْاٰنِ وَحْدَهٗ وَلَّوْا عَلٰٓى اَدْبَارِهِمْ نُفُوْرًا ﴿٤٦﴾

19. ಅರ್ಥಾತ್- ನಿಸರ್ಗ ಮತ್ತು ಅದರಲ್ಲಿರುವ ಪ್ರತಿಯೊಂದು ವಸ್ತುವಿನ ಅಸ್ತಿತ್ವವೇ-ತನ್ನನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ ಪ್ರಭು ದೋಷಮುಕ್ತನು, ದೌರ್ಬಲ್ಯ ರಹಿತನು, ಸಹಭಾಗಿತ್ವದಿಂದ ಸಂಪೂರ್ಣ ಪರಿಶುದ್ಧನು ಎಂಬ ವಾಸ್ತವಿಕತೆಯ ಸಾಕ್ಷ್ಯ ನುಡಿಯುತ್ತಿದೆ.

20. ಅರ್ಥಾತ್- ಪರಲೋಕದ ಮೇಲೆ ವಿಶ್ವಾಸವಿಡದೆ ಇರುವುದರಿಂದ ಸಹಜವಾಗಿಯೇ ವ್ಯಕ್ತಿ ತನ್ನ ಮನಸ್ಸಿಗೆ ಬೀಗ ಜಡಿದುಕೊಂಡಂತಾಗುತ್ತದೆ. ಅವನ ಕಿವಿ ಕುರ್‌ಆನ್ ಸಮರ್ಪಿಸುವ ಸಂದೇಶದ ಪಾಲಿಗೆ ಮುಚ್ಚಿ ಬಿಡುತ್ತದೆ. ಲೌಕಿಕ ಜೀವನದ ಬಾಹ್ಯ ಅಂಶಗಳನ್ನು ನೋಡಿ ಮೋಸಹೋಗದಿರಿ ಎಂಬುದೇ ಕುರ್‌ಆನಿನ ಸಂದೇಶದ ಮೂಲವಾಗಿದೆ. ಒಳಿತು-ಕೆಡುಕುಗಳ ತೀರ್ಮಾನ ಈ ಲೋಕದಲ್ಲಲ್ಲ ಬದಲಾಗಿ ಪರಲೋಕದಲ್ಲಿ ನಡೆಯುತ್ತದೆ. ಪರಲೋಕದಲ್ಲಿ ಉತ್ತಮ ಪರಿಣಾಮವನ್ನು ನೀಡುವಂತಹುದೇ ಒಳಿತಾಗಿದೆ. ಲೋಕದಲ್ಲಿ ಅದರಿಂದಾಗಿ ಅವನೆಷ್ಟು ತ್ರಾಸಪಡಬೇಕಾಗಿ ಬಂದರೂ ಸರಿಯೇ. ಪರಲೋಕದಲ್ಲಿ ಕೆಟ್ಟ ಪರಿಣಾಮವನ್ನುಂಟು ಮಾಡುವಂತಹುದೇ ಕೆಡುಕಾಗಿದೆ. ಲೋಕದಲ್ಲಿ ಅದೆಷ್ಟು ಸ್ವಾದಿಷ್ಟ ಮತ್ತು ಉಪಯುಕ್ತವಾಗಿ ಕಂಡರೂ ಸರಿಯೇ. ಪರಲೋಕವನ್ನೇ ನಿರಾಕರಿಸುವ ವ್ಯಕ್ತಿ ಕುರ್‌ಆನಿನ ಈ ಸಂದೇಶದ ಕಡೆ ಹೇಗೆ ಗಮನಹರಿಸಿಯಾನು?

21. ಒಬ್ಬ ಅಲ್ಲಾಹನು ಮಾತ್ರ ಒಡೆಯನೂ ಪರಮಾಧಿಕಾರಿಯೂ ಆಗಿದ್ದಾನೆ ಎಂದು ಹೇಳುವುದು ಮತ್ತು ಅವನನ್ನೇ ಸ್ತುತಿಸುವುದು ಅವರ ಪಾಲಿಗೆ ತೀವ್ರ ಅಸಮಾಧಾನವನ್ನುಂಟು ಮಾಡುತ್ತದೆ. "ಇವನೊಬ್ಬ ವಿಚಿತ್ರ ವ್ಯಕ್ತಿ. ಇವನ ಪ್ರಕಾರ ಪರೋಕ್ಷದ ಜ್ಞಾನವಿರುವುದು ಅಲ್ಲಾಹನಿಗೆ ಮಾತ್ರ, ಪರಮಾಧಿಕಾರವಿರುವುದು ಅಲ್ಲಾಹನಿಗೆ ಮಾತ್ರ, ಅಧಿಕಾರ ಉಳ್ಳವನು ಅಲ್ಲಾಹನು ಮಾತ್ರ. ಹಾಗಾದರೆ ನಮಗೆ ಸಂತಾನ ಭಾಗ್ಯ ದೊರಕುವ, ರೋಗ ಶಮನವಾಗುವ, ವ್ಯಾಪಾರಗಳು ವೃದ್ಧಿಸುವ ಮತ್ತು ಇಷ್ಟಾರ್ಥ ಪೂರ್ತಿಯಾಗುವ ಪೀಠಗಳಿಗೆ ಯಾವುದೇ ಬೆಲೆಯೇ ಇಲ್ಲವೇ?" ಎಂದು ಅವರು ಕೇಳುತ್ತಿದ್ದರು.

47. ಅವರು ಕಿವಿಗೊಟ್ಟು ನಿಮ್ಮ ಮಾತನ್ನಾಲಿಸುವಾಗ ನಿಜಕ್ಕೂ ಅವರು ಏನನ್ನಾಲಿಸುತ್ತಾರೆಂಬುದೂ ಕುಳಿತು ಪರಸ್ಪರ ಗುಪ್ತ ಮಾತುಗಳನ್ನಾಡುತ್ತಿರುವಾಗ ಏನು ಹೇಳುತ್ತಾರೆಂಬುದೂ ನಮಗೆ ಗೊತ್ತಿದೆ. ನೀವು ಹಿಂಬಾಲಿಸುತ್ತಿರುವ ಈ ವ್ಯಕ್ತಿಯು ಓರ್ವ ಮಾಟಬಾಧಿತ ವ್ಯಕ್ತಿಯೆಂದು ಈ ಅಕ್ರಮಿಗಳು ಪರಸ್ಪರ ಹೇಳಿಕೊಳ್ಳುತ್ತಾರೆ.[22]

نَحْنُ أَعْلَمُ بِمَا يَسْتَمِعُونَ بِهِۦٓ إِذْ يَسْتَمِعُونَ إِلَيْكَ وَإِذْ هُمْ نَجْوَىٰٓ إِذْ يَقُولُ ٱلظَّٰلِمُونَ إِن تَتَّبِعُونَ إِلَّا رَجُلًا مَّسْحُورًا ﴿٤٧﴾

48. ನೋಡಿರಿ, ಇವರು ನಿಮ್ಮ ಮೇಲೆ ಎಂತಹ ವ್ಯಂಗ್ಯೋಕ್ತಿಗಳನ್ನಾಡುತ್ತಾರೆ. ಇವರು ಪಥಭ್ರಷ್ಟರಾಗಿದ್ದಾರೆ. ಇವರಿಗೆ ದಾರಿ ಕಾಣಿಸುತ್ತಿಲ್ಲ.

ٱنظُرْ كَيْفَ ضَرَبُوا۟ لَكَ ٱلْأَمْثَالَ فَضَلُّوا۟ فَلَا يَسْتَطِيعُونَ سَبِيلًا ﴿٤٨﴾

49. "ನಾವು ಬರೇ ಎಲುಬುಗಳಾಗಿ ಮತ್ತು ಮಣ್ಣಾಗಿ ಬಿಟ್ಟ ಮೇಲೆ ನಮ್ಮನ್ನು ಮತ್ತೆ ಹೊಸದಾಗಿ ಹುಟ್ಟಿಸಿ ಎಬ್ಬಿಸಲಾಗುವುದೇ?" ಎಂದು ಅವರು ಕೇಳುತ್ತಾರೆ.

وَقَالُوٓا۟ أَءِذَا كُنَّا عِظَٰمًا وَرُفَٰتًا أَءِنَّا لَمَبْعُوثُونَ خَلْقًا جَدِيدًا ﴿٤٩﴾

50. ಅವರೊಡನೆ ಹೇಳಿರಿ- "ನೀವು ಶಿಲೆ ಅಥವಾ ಕಬ್ಬಿಣವೇ ಆಗಿ ಹೋದರೂ-

قُلْ كُونُوا۟ حِجَارَةً أَوْ حَدِيدًا ﴿٥٠﴾

51. ಅಥವಾ ಅದಕ್ಕಿಂತ ಹೆಚ್ಚು ಕಠಿಣವಾಗಿದ್ದು ನಿಮ್ಮ ಊಹೆಯಂತೆ ಜೀವವನ್ನು ಸ್ವೀಕರಿಸುವುದೇ ಅಸಂಭವವನೀಯವಾಗಿರುವಂತಹ ವಸ್ತುವಾಗಿ ಬಿಟ್ಟರೂ, (ನೀವು ಎಬ್ಬಿಸಲ್ಪಟ್ಟೇ ತೀರುವಿರಿ)" "ನಮ್ಮನ್ನು ಪುನಃ ಜೀವಂತಗೊಳಿಸುವವನಾರು?" ಎಂದು ಅವರು ಖಂಡಿತ ಕೇಳುವರು. "ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದವನೇ" ಎಂದು ಉತ್ತರ ಕೊಡಿರಿ. ಅವರು ತಲೆಯಾಡಿಸುತ್ತ[23] "ಓಹೋ! ಇದೆಲ್ಲಾ ಆಗುವುದು ಯಾವಾಗ?" ಎಂದು ಕೇಳುವರು. ನೀವು ಹೇಳಿರಿ, "ಆ ಸಮಯ ಸನ್ನಿಹಿತವಾಗಿರಲೂ ಬಹುದು.

أَوْ خَلْقًا مِّمَّا يَكْبُرُ فِى صُدُورِكُمْ ۚ فَسَيَقُولُونَ مَن يُعِيدُنَا ۖ قُلِ ٱلَّذِى فَطَرَكُمْ أَوَّلَ مَرَّةٍ ۚ فَسَيُنْغِضُونَ إِلَيْكَ رُءُوسَهُمْ وَيَقُولُونَ مَتَىٰ هُوَ ۖ قُلْ عَسَىٰٓ أَن يَكُونَ قَرِيبًا ﴿٥١﴾

52. ಅವನು ನಿಮ್ಮನ್ನು ಕೂಗಿ ಕರೆಯುವಂದು ನೀವು ಅವನನ್ನು

يَوْمَ يَدْعُوكُمْ فَتَسْتَجِيبُونَ بِحَمْدِهِۦ

22. ಮಕ್ಕಾದ ಸತ್ಯನಿಷೇಧಿಗಳ ಅವಸ್ಥೆ ಹೇಗಿತ್ತೆಂದರೆ ಅವರು ಕದ್ದು ಕುರ್‌ಆನ್ ಕೇಳುತ್ತಿದ್ದರು ಮತ್ತು ಅದನ್ನು ಯಾವ ರೀತಿ ಪ್ರತಿರೋಧಿಸುವುದು ಎಂಬ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಕೆಲವೊಮ್ಮೆ ಅವರಿಗೆ ತಮ್ಮವರ ಬಗ್ಗೆಯೇ ಇವನು ಕುರ್‌ಆನನ್ನು ಕೇಳಿ ಸ್ವಲ್ಪ ಪ್ರಭಾವಿತನಾದವನಂತಿದೆ ಎಂಬ ಸಂಶಯ ಉಂಟಾಗುತ್ತಿತ್ತು. ಆದ್ದರಿಂದ ಅವರೆಲ್ಲ ಸೇರಿ ಅವನಿಗೆ ತಿಳಿ ಹೇಳುತ್ತಿದ್ದರು, "ನೀನು ಯಾರ ಬಲೆಗೆ ಬಿದ್ದಿರುವೆ? ಅವನಾದರೋ ಒಬ್ಬ ಮಾಟಕ್ಕೀಡಾದವನಾಗಿದ್ದಾನೆ. ಯಾರೋ ಶತ್ರುಗಳು ಅವನಿಗೆ ಮಾಟ ಮಾಡಿದ್ದಾರೆ. ಆದ್ದರಿಂದ ಏನೇನೋ ಮಾತನಾಡ ತೊಡಗಿದ್ದಾನೆ" ಎನ್ನುತ್ತಿದ್ದರು.

23. 'ಇನ್‌ಗಾಝ್' ಎಂದರೆ ತಲೆಯನ್ನು ಮೇಲಿನಿಂದ ಕೆಳಕ್ಕೆ ಮತ್ತು ಕೆಳಗಿನಿಂದ ಮೇಲಕ್ಕೆ ಅಲುಗಾಡಿಸುವುದಾಗಿದೆ. ಆಶ್ಚರ್ಯ ಪ್ರಕಟಣೆಗೆ ಅಥವಾ ಅಪಹಾಸ್ಯಕ್ಕಾಗಿ ತಲೆಯಲ್ಲಾಡಿಸುವಂತೆ ಅಲುಗಾಡಿಸುವುದು.

ಪ್ರಶಂಸಿಸುತ್ತಾ ಅವನ ಕರೆಗೆ ಓಗೊಟ್ಟು ಹೊರಟು ಬರುವಿರಿ. ಆಗ ನಾವೇನೋ ತುಸು ಹೊತ್ತು ಮಾತ್ರವೇ ಈ ಅವಸ್ಥೆಯಲ್ಲಿ ಬಿದ್ದುಕೊಂಡಿದ್ದೆವೆಂದು ಊಹಿಸುವಿರಿ."[24]

وَتَظُنُّونَ إِن لَّبِثْتُمْ إِلَّا قَلِيلًا ﴿٥٢﴾

53. ಓ ಪೈಗಂಬರರೇ! ನನ್ನ ದಾಸರೊಡನೆ, ಬಾಯಿಯಿಂದ ಅತ್ಯುತ್ತಮ ಮಾತನ್ನೇ ಹೊರಡಿಸಲು ಹೇಳಿರಿ.[25] ವಾಸ್ತವದಲ್ಲಿ ಶೈತಾನನು ಮಾನವರ ನಡುವೆ ಪಿತೂರಿ ನಡೆಸಲು ಯತ್ನಿಸುತ್ತಾನೆ. ವಸ್ತುತಃ ಶೈತಾನ್ ಮಾನವನ ಪ್ರತ್ಯಕ್ಷ ಶತ್ರು.

وَقُل لِّعِبَادِي يَقُولُوا الَّتِي هِيَ أَحْسَنُ ۚ إِنَّ الشَّيْطَانَ يَنزَغُ بَيْنَهُمْ ۚ إِنَّ الشَّيْطَانَ كَانَ لِلْإِنسَانِ عَدُوًّا مُّبِينًا ﴿٥٣﴾

54. ನಿಮ್ಮ ಪ್ರಭು ನಿಮ್ಮ ಪರಿಸ್ಥಿತಿಯನ್ನು ಚೆನ್ನಾಗಿ ಬಲ್ಲನು. ಅವನು ಇಷ್ಟಪಟ್ಟರೆ ನಿಮ್ಮ ಮೇಲೆ ಕೃಪೆ ತೋರಬಹುದು. ಇಷ್ಟಪಟ್ಟರೆ ಶಿಕ್ಷಿಸಲೂ ಬಹುದು.[26] ಓ ಪೈಗಂಬರರೇ! ನಾವು ನಿಮ್ಮನ್ನು ಜನರ ಮೇಲೆ ಕೊತ್ವಾಲರಾಗಿ ಮಾಡಿ ಕಳುಹಿಸಿಲ್ಲ.

رَّبُّكُمْ أَعْلَمُ بِكُمْ ۖ إِن يَشَأْ يَرْحَمْكُمْ أَوْ إِن يَشَأْ يُعَذِّبْكُمْ ۚ وَمَا أَرْسَلْنَاكَ عَلَيْهِمْ وَكِيلًا ﴿٥٤﴾

55. ನಿಮ್ಮ ಪ್ರಭು ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವ ಸೃಷ್ಟಿಗಳನ್ನು ಚೆನ್ನಾಗಿ ಅರಿಯುತ್ತಾನೆ. ನಾವು ಕೆಲವು ಪ್ರವಾದಿಗಳಿಗೆ ಬೇರೆ ಕೆಲವರಿಗಿಂತ ಹಿರಿಯ ಸ್ಥಾನಗಳನ್ನು ನೀಡಿದ್ದೆವು. ದಾವೂದರಿಗೆ ಝುಬೂರನ್ನು ನಾವೇ ಕೊಟ್ಟಿದ್ದೆವು.

وَرَبُّكَ أَعْلَمُ بِمَن فِي السَّمَاوَاتِ وَالْأَرْضِ ۗ وَلَقَدْ فَضَّلْنَا بَعْضَ النَّبِيِّينَ عَلَىٰ بَعْضٍ ۖ وَآتَيْنَا دَاوُودَ زَبُورًا ﴿٥٥﴾

56. ಇವರೊಡನೆ ಹೇಳಿರಿ, "ನೀವು ಯಾರನ್ನು ಅಲ್ಲಾಹನ ಹೊರತು (ನಿಮ್ಮ ಕಾರ್ಯ ಸಾಧಕರೆಂದು) ತಿಳಿಯುತ್ತೀರೋ ಅವರನ್ನು ಪ್ರಾರ್ಥಿಸಿ ನೋಡಿರಿ. ಅವರು ನಿಮ್ಮ ಯಾವ ಸಂಕಷ್ಟವನ್ನೂ ನೀಗಿಸಲಾರರು ಮತ್ತು ಬದಲಿಸಲಾರರು."[27]

قُلِ ادْعُوا الَّذِينَ زَعَمْتُم مِّن دُونِهِ فَلَا يَمْلِكُونَ كَشْفَ الضُّرِّ عَنكُمْ وَلَا تَحْوِيلًا ﴿٥٦﴾

24. ಅರ್ಥಾತ್- ಲೋಕದಲ್ಲಿ ನಿಧನನಾದಂದಿನಿಂದ ನಿರ್ಣಾಯಕ ದಿನದ ಪುನರುತ್ಥಾನದ ತನಕದ ಅವಧಿ, ನಿಮಗೆ ಕೆಲವೇ ಗಂಟೆಗಳಂತೆ ಭಾಸವಾಗುವುದು. ನಾವು ಸ್ವಲ್ಪ ಹೊತ್ತು ನಿದ್ರೆಯಲ್ಲಿ ಬಿದ್ದು ಕೊಂಡಿದ್ದೆವು. ಇದ್ದಕ್ಕಿದ್ದಂತೆ 'ಮಹ್‌ಷರ್'ನ ಸದ್ದುಗದ್ದಲ ನಮ್ಮನ್ನು ಎಚ್ಚರಗೊಳಿಸಿತು ಎಂದು ನೀವು ಭಾವಿಸುವಿರಿ.

25. ಅರ್ಥಾತ್- ಎದುರಾಳಿಗಳು ಎಷ್ಟು ಅರೋಚಕ ಮಾತುಗಳನ್ನಾಡಿದರೂ ಮುಸ್ಲಿಮರು ಸತ್ಯಕ್ಕೆ ವಿರುದ್ಧವಾದ ಯಾವುದೇ ಮಾತನ್ನು ನಾಲಗೆಯಿಂದ ಹೊರಡಿಸಬಾರದು. ಸಿಟ್ಟಿನಿಂದ ನಿಯಂತ್ರಣ ಕಳಕೊಂಡು ನಿರರ್ಥಕ ಮಾತುಗಳಿಗೆ ನಿರರ್ಥಕ ಮಾತುಗಳ ಮೂಲಕವೇ ಉತ್ತರ ನೀಡಬಾರದು. ಶಾಂತಚಿತ್ತದಿಂದ ಸಂತುಲಿತವಾದ, ಸತ್ಯದಿಂದ ಕೂಡಿದ ಮತ್ತು ತನ್ನ ಸಂದೇಶದ ಘನತೆಗೆ ತಕ್ಕುದಾದ ಮಾತುಗಳನ್ನೇ ಅವರು ಆಡಬೇಕು.

26. ಅರ್ಥಾತ್- ಸತ್ಯವಿಶ್ವಾಸಿಗಳ ಬಾಯಿಯಿಂದ ಎಂದೂ ನಾವು ಸ್ವರ್ಗಕ್ಕೆ ಅರ್ಹರಾದವರು ಮತ್ತು ಇಂತಹವನು ಅಥವಾ ಇಂತಹ ಗುಂಪಿಗೆ ಸೇರಿದವರು ನರಕಕ್ಕೆ ಅರ್ಹರಾದವರು ಎಂಬ ಮಾತು ಹೊರಡಬಾರದು. ಅದನ್ನು ನಿರ್ಧರಿಸುವ ಅಧಿಕಾರ ಅಲ್ಲಾಹನ ಬಳಿಯಿದೆ. ಅವನು ಎಲ್ಲಾ ಮಾನವರ ಅಂತರಂಗ-ಬಹಿರಂಗ ಮತ್ತು ವರ್ತಮಾನ ಭವಿಷ್ಯಗಳನ್ನು ಬಲ್ಲವನಾಗಿದ್ದಾನೆ. ಯಾರ ಮೇಲೆ ಅನುಗ್ರಹ ತೋರಬೇಕು ಮತ್ತು ಯಾರಿಗೆ ಶಿಕ್ಷೆ ನೀಡಬೇಕು ಎಂಬುದನ್ನೂ ಅವನೇ ತೀರ್ಮಾನಿಸಬೇಕಾಗಿದೆ. ತಾತ್ವಿಕವಾಗಿ ಅಲ್ಲಾಹನ ಗ್ರಂಥದ ಆಧಾರದಲ್ಲಿ ಯಾವ ರೀತಿಯ ಮಾನವರು ಅನುಗ್ರಹಕ್ಕೆ ಅರ್ಹರು ಮತ್ತು ಯಾರು ಶಿಕ್ಷೆಗೆ ಅರ್ಹರು ಎಂದು ಮುಸ್ಲಿಮನಾದ ಓರ್ವ ವ್ಯಕ್ತಿ ಹೇಳಬಹುದಾಗಿದೆ. ಆದರೆ ಇಂತಹವನಿಗೆ ಶಿಕ್ಷೆ ನೀಡಲಾಗುವುದು ಮತ್ತು ಇಂತಹವನು ಪಾಪವಿಮೋಚಿತನಾಗುವನು ಎಂದು ಹೇಳುವ ಅಧಿಕಾರ ಯಾರಿಗೂ ಇಲ್ಲ.

57. ಇವರು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರೇ ತಮ್ಮ ಪ್ರಭುವಿನ ಸಾಮೀಪ್ಯ ಹೊಂದಲಿಕ್ಕಾಗಿ ಮತ್ತು ಯಾರು ಅವನಿಗೆ ಹೆಚ್ಚು ನಿಕಟನಾಗುವನೆಂದು 'ಮಾರ್ಗೋಪಾಯ'ವನ್ನರಸುತ್ತಿರುತ್ತಾರೆ ಮತ್ತು ಅವರು ಅವನ ಕೃಪೆಯನ್ನು ಆಶಿಸುವವರೂ ಅವನ ಯಾತನೆಯನ್ನು ಭಯಪಡುವವರೂ ಆಗಿರುತ್ತಾರೆ.[28] ವಾಸ್ತವದಲ್ಲಿ ನಿಮ್ಮ ಪ್ರಭುವಿನ ಯಾತನೆಯು ಭಯಪಡಲು ಅರ್ಹವಾದುದೇ ಆಗಿದೆ.

أُولَٰئِكَ الَّذِينَ يَدْعُونَ يَبْتَغُونَ إِلَىٰ رَبِّهِمُ الْوَسِيلَةَ أَيُّهُمْ أَقْرَبُ وَيَرْجُونَ رَحْمَتَهُ وَيَخَافُونَ عَذَابَهُ ۚ إِنَّ عَذَابَ رَبِّكَ كَانَ مَحْذُورًا ﴿٥٧﴾

58. ನಾವು ಪುನರುತ್ಥಾನದ ದಿನಕ್ಕಿಂತ ಮುಂಚೆ ನಾಶಗೊಳಿಸದಿರುವ ಅಥವಾ ಕಠಿಣ ಯಾತನೆ ಗೊಳಪಡಿಸದಿರುವ ನಾಡೊಂದೂ ಇಲ್ಲ. ಇದು ದಾಖಲೆ ಗ್ರಂಥದಲ್ಲಿ ಲಿಖಿತಗೊಂಡಿದೆ.

وَإِن مِّن قَرْيَةٍ إِلَّا نَحْنُ مُهْلِكُوهَا قَبْلَ يَوْمِ الْقِيَامَةِ أَوْ مُعَذِّبُوهَا عَذَابًا شَدِيدًا ۚ كَانَ ذَٰلِكَ فِي الْكِتَابِ مَسْطُورًا ﴿٥٨﴾

59. ಇವರಿಗಿಂತ ಮುಂಚಿನವರು ನಿದರ್ಶನಗಳನ್ನು ಸುಳ್ಳಾಗಿಸಿದ್ದರೆಂಬುದರ ಹೊರತು ಬೇರಾವುದೇ ಕಾರಣವು ನಮ್ಮನ್ನು ಆ ನಿದರ್ಶನಗಳನ್ನು ಕಳುಹಿಸದಂತೆ ತಡೆಯಲಿಲ್ಲ.[29] (ಆ ಪ್ರಕಾರ ನೋಡಿರಿ) ನಾವು ಸಮೂದರಿಗೆ ಬಹಿರಂಗವಾಗಿ ಒಂದು ಒಂಟೆಯನ್ನು ನೀಡಿದೆವು. ಅವರು ಅದರ ಮೇಲೆ ಅಕ್ರಮವೆಸಗಿದರು. ನಾವು ನಿದರ್ಶನಗಳನ್ನು ಕಳುಹಿಸುವುದು ಜನರು ಅವುಗಳನ್ನು ಕಂಡು ಭಯಪಡಬೇಕೆಂದೇ ತಾನೆ.

وَمَا مَنَعَنَا أَن نُّرْسِلَ بِالْآيَاتِ إِلَّا أَن كَذَّبَ بِهَا الْأَوَّلُونَ ۚ وَآتَيْنَا ثَمُودَ النَّاقَةَ مُبْصِرَةً فَظَلَمُوا بِهَا ۚ وَمَا نُرْسِلُ بِالْآيَاتِ إِلَّا تَخْوِيفًا ﴿٥٩﴾

60. ಓ ಪೈಗಂಬರರೇ! ನಿಮ್ಮ ಪ್ರಭು ಇವರನ್ನು ಸುತ್ತುವರಿದಿದ್ದಾನೆಂದು ನಾವು ನಿಮ್ಮೊಡನೆ ಹೇಳಿದ್ದುದನ್ನು ಸ್ಮರಿಸಿರಿ. ಈಗಾಗಲೇ ನಾವು ನಿಮಗೆ ತೋರಿಸಿದುದನ್ನೂ[30] ಕುರ್‌ಆನಿನಲ್ಲಿ ಶಪಿಸಿರುವ ಆ

وَإِذْ قُلْنَا لَكَ إِنَّ رَبَّكَ أَحَاطَ بِالنَّاسِ ۚ وَمَا جَعَلْنَا الرُّؤْيَا الَّتِي أَرَيْنَاكَ إِلَّا فِتْنَةً

27. ಅಲ್ಲಾಹೇತರರಿಗೆ ಸಾಷ್ಟಾಂಗವೆರಗುವುದು ಮಾತ್ರವಲ್ಲ, ಅಲ್ಲಾಹೇತರ ಶಕ್ತಿಗಳೊಂದಿಗೆ ಪ್ರಾರ್ಥಿಸುವುದು ಅಥವಾ ಸಹಾಯಕ್ಕಾಗಿ ಅವರೊಡನೆ ಯಾಚಿಸುವುದು ಕೂಡ ಬಹುದೇವಾರಾಧನೆಯಾಗಿದೆ ಎಂದು ಇದರಿಂದ ವ್ಯಕ್ತವಾಗುತ್ತದೆ.

28. ಈ ಪದಗಳಿಂದ ವ್ಯಕ್ತವಾಗುವುದೇನೆಂದರೆ ಇಲ್ಲಿ ಪ್ರಸ್ತಾಪಿಸಲಾಗಿರುವ ಬಹುದೇವಾರಾಧಕರ ಆರಾಧ್ಯರು ಮತ್ತು ಸಂಕಟಹರರು ಕಲ್ಲಿನ ಮೂರ್ತಿಗಳಲ್ಲ. ಬದಲಾಗಿ ದೇವಚರರೋ ಗತ ಮಹಾಪುರುಷರೋ ಆಗಿದ್ದಾರೆ.

29. ಪ್ರವಾದಿ ಮುಹಮ್ಮದ್‌ರು(ಸ) ಯಾವುದಾದರೂ ಪವಾಡವನ್ನು ತೋರಿಸಬೇಕೆಂಬ ಸತ್ಯನಿಷೇಧಿಗಳ ಬೇಡಿಕೆಗೆ ಇಲ್ಲಿ ಉತ್ತರ ಕೊಡಲಾಗಿದೆ. ಅಂತಹ ಪವಾಡವನ್ನು ನೋಡಿದ ಬಳಿಕವೂ ಜನರು ಅದನ್ನು ಸುಳ್ಳಾಗಿಸಿದರೆ ಅವರ ಮೇಲೆ ಯಾತನೆಯನ್ನು ಎರಗಿಸುವುದು ಅನಿವಾರ್ಯವಾಗುತ್ತದೆ. ಅಂತಹ ಸಮುದಾಯವನ್ನು ನಾಶಗೊಳಿಸದೇ ಬಿಡಲಾಗುವುದಿಲ್ಲ. ಆದ್ದರಿಂದ ಅಲ್ಲಾಹನು ಇಲ್ಲಿ, "ಪವಾಡವನ್ನು ಕಳುಹಿಸದೇ ಇರುವುದು ಮಹಾ ಅನುಗ್ರಹವಾಗಿದೆ. ಆದರೆ ನೀವಾದರೋ ಮೂರ್ಖರು, ಪವಾಡವನ್ನು ಬಯಸುವ ಮೂಲಕ ಸಮೂದ್ ಗೋತ್ರದಂತಹ ದುರ್ಗತಿಯನ್ನೆದುರಿಸಲು ಹೊರಟಿರುವಿರಿ" ಎಂದು ಹೇಳುತ್ತಿದ್ದಾನೆ.

30. ಇದು 'ಮಿಅ್‌ರಾಜ್'ನ ಕಡೆಗಿರುವ ಸೂಚನೆ. ಇಲ್ಲಿ 'ರುಅ್‌ಯಾ' ಎಂಬ ಪದ 'ಕನಸು' ಎಂಬುದರ ಬದಲು 'ಪ್ರತ್ಯಕ್ಷದರ್ಶನ' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ.

| | |
|---|---|
| ವೃಕ್ಷವನ್ನೂ[31] ನಾವು ಅವರಿಗೊಂದು ಪರೀಕ್ಷಾ ಸಾಧನವನ್ನಾಗಿ ಮಾಡಿ ಬಿಟ್ಟೆವು.[32] ನಾವು ಅವರಿಗೆ ಎಚ್ಚರಿಕೆಯ ಮೇಲೆ ಎಚ್ಚರಿಕೆ ಕೊಡುತ್ತಲೇ ಇದ್ದೇವೆ. ಆದರೆ, ಪ್ರತಿಯೊಂದು ಎಚ್ಚರಿಕೆಯು ಅವರ ಉದ್ಧಟತನವನ್ನು ವೃದ್ಧಿಸುತ್ತಲೇ ಹೋಗುತ್ತಿದೆ. | لِلنَّاسِ وَالشَّجَرَةَ الْمَلْعُونَةَ فِي الْقُرْآنِ ۚ وَنُخَوِّفُهُمْ فَمَا يَزِيدُهُمْ إِلَّا طُغْيَانًا كَبِيرًا ﴿٦٠﴾ ع |
| 61. ಸ್ಮರಿಸಿರಿ- "ಆದಮರಿಗೆ ಸಾಷ್ಟಾಂಗವೆರಗಿರಿ" ಎಂದು ನಾವು ದೇವ ಚರರೊಡನೆ ಹೇಳಿದಾಗ ಎಲ್ಲರೂ ಸಾಷ್ಟಾಂಗವೆರಗಿದರು. ಆದರೆ ಇಬ್‌ಲೀಸನು ಎರಗಲಿಲ್ಲ. ಅವನು "ನೀನು ಮಣ್ಣಿನಿಂದ ಸೃಷ್ಟಿಸಿದವನ ಮುಂದೆ ನಾನು ಎರಗಬೇಕೇ?" ಎಂದು ಕೇಳಿದನು. | وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ قَالَ أَأَسْجُدُ لِمَنْ خَلَقْتَ طِينًا ﴿٦١﴾ |
| 62. ಮತ್ತು ಮುಂದುವರಿಯುತ್ತ "ನೀನೇ ನೋಡು; ಇವನು ನನಗಿಂತ ಅಧಿಕ ಶ್ರೇಷ್ಠತೆ ನೀಡಲ್ಪಡಲು ಅರ್ಹನಿದ್ದನೇ? ನೀನು ನನಗೆ ಪುನರುತ್ಥಾನದ ದಿನದ ವರೆಗೆ ಕಾಲಾವಕಾಶಕೊಟ್ಟರೆ ನಾನು ಇವನ ಸಂಪೂರ್ಣ ಸಂತತಿಯನ್ನೇ ಮೂಲೋತ್ಪಾಟನೆಗೊಳಿಸಿಬಿಡು ವೆನು. ಕೇವಲ ಕೆಲವರು ಮಾತ್ರ ನನ್ನಿಂದ ಪಾರಾಗಬಲ್ಲರು" ಎಂದು ಹೇಳಿದನು. | قَالَ أَرَأَيْتَكَ هَٰذَا الَّذِي كَرَّمْتَ عَلَيَّ لَئِنْ أَخَّرْتَنِ إِلَىٰ يَوْمِ الْقِيَامَةِ لَأَحْتَنِكَنَّ ذُرِّيَّتَهُ إِلَّا قَلِيلًا ﴿٦٢﴾ |
| 63. ಆಗ ಅಲ್ಲಾಹನು ಹೇಳಿದನು, "ಹಾಗಿದ್ದರೆ ನಡೆ. ಅವರ ಪೈಕಿ ಯಾರೆಲ್ಲ ನಿನ್ನನ್ನು ಅನುಸರಿಸುವರೋ ನಿನ್ನ ಸಹಿತ ಅವರೆಲ್ಲರಿಗೂ ನರಕವೇ ಪರಿಪೂರ್ಣ ಫಲ. | قَالَ اذْهَبْ فَمَن تَبِعَكَ مِنْهُمْ فَإِنَّ جَهَنَّمَ جَزَاؤُكُمْ جَزَاءً مَّوْفُورًا ﴿٦٣﴾ |
| 64. ನಿನ್ನ ಆಹ್ವಾನದಿಂದ ಯಾರು ಯಾರನ್ನೆಲ್ಲ ಪುಸಲಾಯಿಸಲು ನಿನ್ನಿಂದ ಸಾಧ್ಯವಿದೆಯೋ ಪುಸಲಾಯಿಸಿಕೋ. ಅವರ ಮೇಲೆ ನಿನ್ನ ಸವಾರರನ್ನೂ ಕಾಲಾಳುಗಳನ್ನೂ ಏರಿಸಿ ತಾ. ಸಂಪತ್ತು ಮತ್ತು ಸಂತಾನಗಳಲ್ಲಿ ಅವರೊಂದಿಗೆ ಭಾಗಿಯಾಗು ಮತ್ತು ಅವರನ್ನು ವಾಗ್ದಾನಗಳ ಜಾಲದಲ್ಲಿ ಸಿಲುಕಿಸು. ಶೈತಾನನ ವಾಗ್ದಾನಗಳು ಒಂದು ವಂಚನೆಯ ವಿನಾ ಇನ್ನೇನೂ ಅಲ್ಲ. | وَاسْتَفْزِزْ مَنِ اسْتَطَعْتَ مِنْهُم بِصَوْتِكَ وَأَجْلِبْ عَلَيْهِم بِخَيْلِكَ وَرَجِلِكَ وَشَارِكْهُمْ فِي الْأَمْوَالِ وَالْأَوْلَادِ وَعِدْهُمْ ۚ وَمَا يَعِدُهُمُ الشَّيْطَانُ إِلَّا غُرُورًا ﴿٦٤﴾ |

31. ಅರ್ಥಾತ್- 'ಝಕ್ಕೂಮ್.' ಅದು ನರಕದ ತಳದಲ್ಲಿ ಹುಟ್ಟುವುದು ಮತ್ತು ನರಕವಾಸಿಗಳು ಅದನ್ನು ಸೇವಿಸಬೇಕಾಗುವುದು ಎಂದು ಅದರ ಬಗ್ಗೆ ಕುರ್‌ಆನ್ ವಿವರ ನೀಡಿದೆ. ಅದನ್ನು ಶಪಿಸುವುದೆಂದರೆ ಅದು ಅಲ್ಲಾಹನ ಅನುಗ್ರಹದಿಂದ ದೂರ ಇರುವುದಾಗಿದೆ.

32. ಅವರ ಹಿತಕ್ಕಾಗಿಯೇ ನಾವು ನಿಮಗೆ 'ಮಿಅ್‌ರಾಜ್'ನ ದರ್ಶನ ಮಾಡಿಸಿದೆವು. ಆ ಮೂಲಕ ನಿಮ್ಮಂತಹ ಸತ್ಯಸಂಧ ಮತ್ತು ಪ್ರಾಮಾಣಿಕ ಮಾನವನ ಮುಖಾಂತರ ಅವರಿಗೆ ಪರಮಾರ್ಥದ ಜ್ಞಾನ ಲಭಿಸಲಿ, ಅವರು ಎಚ್ಚರಗೊಂಡು ಸನ್ಮಾರ್ಗಕ್ಕೆ ಬರುವಂತಾಗಲಿ ಎಂಬುದು ಅದರ ಉದ್ದೇಶವಾಗಿತ್ತು. ಆದರೆ ಅವರು ತದ್ವಿರುದ್ಧವಾಗಿ ನಿಮ್ಮನ್ನು ಅಪಹಾಸ್ಯ ಮಾಡಿದರು. ಇಲ್ಲಿ ನೀವು ಮಾಡುತ್ತಿರುವ ನಿಷಿದ್ಧ ವಸ್ತುಗಳ ಉಪಭೋಗ ಕೊನೆಯದಾಗಿ ನಿಮಗೆ 'ಝಕ್ಕೂಮ್'ನ ತುತ್ತನ್ನು ಉಣ್ಣುವಂತೆ ಮಾಡುವುದು - ಎಂದು ನಿಮ್ಮ ಮೂಲಕ ನಾವು ಅವರಿಗೆ ಎಚ್ಚರಿಕೆ ಕೊಟ್ಟೆವು. ಇದನ್ನು ಕೇಳಿ ಅವರು ಗೊಳ್ಳೆಂದು ನಗುತ್ತಾ ಹೇಳಿದರು, "ಇವನನ್ನು ಸ್ವಲ್ಪ ನೋಡಿ. ಒಂದೆಡೆ ಇವನು ನರಕದಲ್ಲಿ ಭೀಕರ ಅಗ್ನಿ ಭುಗಿಲೇಳುತ್ತದೆ ಎಂದು ಹೇಳುತ್ತಿದ್ದಾನೆ. ಇನ್ನೊಂದೆಡೆ ಅಲ್ಲಿ ಮರ ಹುಟ್ಟುತ್ತದೆ ಎನ್ನುತ್ತಿದ್ದಾನೆ."

65. ನಿಶ್ಚಯವಾಗಿಯೂ ನನ್ನ ದಾಸರ ಮೇಲೆ ನಿನಗೆ ಅಧಿಕಾರವೇನೂ ಪ್ರಾಪ್ತವಾಗದು ಮತ್ತು ಭರವಸೆಗೆ ನಿನ್ನ ಪ್ರಭುವೇ ಸಾಕು."

إِنَّ عِبَادِي لَيْسَ لَكَ عَلَيْهِمْ سُلْطَانٌ ۚ وَكَفَىٰ بِرَبِّكَ وَكِيلًا ﴿٦٥﴾

66. ನೀವು ಅವನ ಅನುಗ್ರಹವನ್ನರಸಲಿಕ್ಕಾಗಿ ನಿಮ್ಮ ನಾವೆಯನ್ನು ಸಮುದ್ರದಲ್ಲಿ ನಡೆಸುವವನೇ ನಿಮ್ಮ (ಯಥಾರ್ಥ) ಪ್ರಭು. ವಾಸ್ತವದಲ್ಲಿ ಅವನು ನಿಮ್ಮ ಮೇಲೆ ಕರುಣೆಯುಳ್ಳವನಾಗಿದ್ದಾನೆ.

رَّبُّكُمُ الَّذِي يُزْجِي لَكُمُ الْفُلْكَ فِي الْبَحْرِ لِتَبْتَغُوا مِن فَضْلِهِ ۚ إِنَّهُ كَانَ بِكُمْ رَحِيمًا ﴿٦٦﴾

67. ಸಮುದ್ರದಲ್ಲಿ ನಿಮ್ಮ ಮೇಲೆ ಗಂಡಾಂತರವೆರಗುವಾಗ ಅವನೊಬ್ಬನ ಹೊರತು ಇತರ ಯಾರು ಯಾರನ್ನೆಲ್ಲ ನೀವು ಕೂಗಿ ಪ್ರಾರ್ಥಿಸುತ್ತಿದ್ದಿರೋ ಅವರೆಲ್ಲ ಮಾಯವಾಗಿ ಬಿಡುತ್ತಾರೆ. ಆದರೆ ಅವನು ನಿಮ್ಮನ್ನು ರಕ್ಷಿಸಿ ದಡಕ್ಕೆ ಸೇರಿಸಿದಾಗ ನೀವು ಅವನಿಂದ ವಿಮುಖರಾಗುತ್ತೀರಿ. ನಿಜಕ್ಕೂ ಮಾನವನು ಮಹಾ ಕೃತಘ್ನ.

وَإِذَا مَسَّكُمُ الضُّرُّ فِي الْبَحْرِ ضَلَّ مَن تَدْعُونَ إِلَّا إِيَّاهُ ۖ فَلَمَّا نَجَّاكُمْ إِلَى الْبَرِّ أَعْرَضْتُمْ ۚ وَكَانَ الْإِنسَانُ كَفُورًا ﴿٦٧﴾

68. ಅಲ್ಲಾಹನು ನಿಮ್ಮನ್ನು ನೆಲದಲ್ಲೇ ಹೂತು ಬಿಡುವನು ಅಥವಾ ನಿಮ್ಮ ಮೇಲೆ ಕಲ್ಲ ಮಳೆಗರೆಯುವ ಬಿರುಗಾಳಿಯನ್ನು ಕಳುಹಿಸುವ ನೆಂಬ ಬಗ್ಗೆ ಮತ್ತು ನೀವು ಅವನಿಂದ ರಕ್ಷಿಸತಕ್ಕ ರಕ್ಷಕನನ್ನು ಪಡೆಯಲಾರಿರಿ ಎಂಬ ಬಗ್ಗೆ ನೀವು ನಿರ್ಭಯರಾಗಿರುವಿರಾ?

أَفَأَمِنتُمْ أَن يَخْسِفَ بِكُمْ جَانِبَ الْبَرِّ أَوْ يُرْسِلَ عَلَيْكُمْ حَاصِبًا ثُمَّ لَا تَجِدُوا لَكُمْ وَكِيلًا ﴿٦٨﴾

69. ಅಥವಾ ಅಲ್ಲಾಹನು ನಿಮ್ಮನ್ನು ಮತ್ತೆಂದಾದರೂ ಸಮುದ್ರಕ್ಕೆ ಕೊಂಡು ಹೋಗಿ ನಿಮ್ಮ ಕೃತಘ್ನತೆಯ ಪ್ರತಿಫಲವಾಗಿ ಪ್ರಚಂಡ ಬಿರುಗಾಳಿಯನ್ನು ಕಳುಹಿಸಿ ನಿಮ್ಮನ್ನು ಮುಳುಗಿಸಿ ಬಿಡಬಹುದೆಂಬ ಹಾಗೂ ಅವನೊಡನೆ ನಿಮಗೊದಗಿದ ಈ ಗತಿಯ ಬಗ್ಗೆ ವಿಚಾರಣೆ ನಡೆಸತಕ್ಕವನಾರೂ ನಿಮಗೆ ಸಿಗಲಾರನೆಂಬ ಭೀತಿ ನಿಮಗಿಲ್ಲವೇ?

أَمْ أَمِنتُمْ أَن يُعِيدَكُمْ فِيهِ تَارَةً أُخْرَىٰ فَيُرْسِلَ عَلَيْكُمْ قَاصِفًا مِّنَ الرِّيحِ فَيُغْرِقَكُم بِمَا كَفَرْتُمْ ۙ ثُمَّ لَا تَجِدُوا لَكُمْ عَلَيْنَا بِهِ تَبِيعًا ﴿٦٩﴾

70. ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ಪ್ರದಾನ ಮಾಡಿದ್ದುದೂ ಅವರಿಗೆ ನೆಲ, ಜಲಗಳಲ್ಲಿ ಯಾನಗಳನ್ನು ದಯ ಪಾಲಿಸಿದ್ದುದೂ ಅವರಿಗೆ ಶುದ್ಧ ವಸ್ತುಗಳಿಂದ ಜೀವನಾಧಾರ ನೀಡಿದ್ದುದೂ ನಮ್ಮ ಅನೇಕ ಸೃಷ್ಟಿಗಳ ಮೇಲೆ ಉತ್ಕೃಷ್ಟತೆ ಕೊಡ ಮಾಡಿದುದೂ ನಮ್ಮ ಅನುಗ್ರಹವಾಗಿದೆ.

وَلَقَدْ كَرَّمْنَا بَنِي آدَمَ وَحَمَلْنَاهُمْ فِي الْبَرِّ وَالْبَحْرِ وَرَزَقْنَاهُم مِّنَ الطَّيِّبَاتِ وَفَضَّلْنَاهُمْ عَلَىٰ كَثِيرٍ مِّمَّنْ خَلَقْنَا تَفْضِيلًا ﴿٧٠﴾

71. ನಾವು ಪ್ರತಿಯೊಂದು ಮನುಷ್ಯ ಕೂಟವನ್ನೂ ಅದರ ಮುಂದಾಳುವಿನ ಸಹಿತ ಕರೆಯುವ ದಿನದ ಬಗ್ಗೆ ಯೋಚಿಸಿರಿ. ಆಗ ತಮ್ಮ ಕರ್ಮಪತ್ರ ಬಲಗೈಯಲ್ಲಿ ಕೊಡಲ್ಪಟ್ಟವರು ತಮ್ಮ ಕರ್ಮಪತ್ರವನ್ನು ಓದುವರು ಮತ್ತು ಅವರ ಮೇಲೆ ಕಿಂಚಿತ್ತೂ ಅನ್ಯಾಯವಾಗದು.

يَوْمَ نَدْعُو كُلَّ أُنَاسٍ بِإِمَامِهِمْ ۖ فَمَنْ أُوتِيَ كِتَابَهُ بِيَمِينِهِ فَأُولَٰئِكَ يَقْرَءُونَ كِتَابَهُمْ وَلَا يُظْلَمُونَ فَتِيلًا ﴿٧١﴾

72. ಇಹಲೋಕದಲ್ಲಿ ಕುರುಡನಾಗಿ ಬಾಳಿದವನು ಪರಲೋಕದಲ್ಲೂ ಕುರುಡನಾಗಿಯೇ ಇರುವನು. ಮಾತ್ರವಲ್ಲ ಮಾರ್ಗ ಹೊಂದುವು ದರಲ್ಲಿ ಕುರುಡನಿಗಿಂತಲೂ ಹೆಚ್ಚು ವಿಫಲನಾಗುವನು.

وَمَنْ كَانَ فِيْ هٰذِهٖۤ اَعْمٰى فَهُوَ فِي الْاٰخِرَةِ اَعْمٰى وَاَضَلُّ سَبِيْلًا ۝٧٢

73. ಓ ಪೈಗಂಬರರೇ, ನೀವು ನಮ್ಮ ಹೆಸರಲ್ಲಿ ನಿಮ್ಮ ಕಡೆಯಿಂದ ಏನನ್ನಾದರೂ ಕೃತಕವಾಗಿ ಸೃಷ್ಟಿಸಿ ಮಾಡಲೆಂದು, ನಿಮ್ಮನ್ನು ಗೊಂದಲಕ್ಕೆ ಸಿಲುಕಿಸಿ, ನಾವು ನಿಮಗೆ ಅವತೀರ್ಣ ಗೊಳಿಸುತ್ತಿರು ವುದರಿಂದ ನಿಮ್ಮನ್ನು ತಿರುಗಿಸಿಬಿಡಬೇಕೆಂದು ಅವರು ತಮ್ಮಿಂದಾ ದಷ್ಟು ಪ್ರಯತ್ನಿಸಿದ್ದಾರೆ. ನೀವು ಹಾಗೆ ಮಾಡುತ್ತಿದ್ದರೆ ಅವರು ನಿಮ್ಮನ್ನು ತಮ್ಮ ಆಪ್ತ ಮಿತ್ರನಾಗಿ ಮಾಡಿಕೊಳ್ಳುತ್ತಿದ್ದರು.

وَاِنْ كَادُوْا لَيَفْتِنُوْنَكَ عَنِ الَّذِيْۤ اَوْحَيْنَاۤ اِلَيْكَ لِتَفْتَرِيَ عَلَيْنَا غَيْرَهٗ ۖۗ وَاِذًا لَّاتَّخَذُوْكَ خَلِيْلًا ۝٧٣

74. ನಾವು ನಿಮ್ಮನ್ನು ಸ್ಥಿರಚಿತ್ತರನ್ನಾಗಿ ಮಾಡದಿರುತ್ತಿದ್ದರೆ ನೀವು ಅವರ ಕಡೆಗೆ ಅಲ್ಪ ಸ್ವಲ್ಪವಾದರೂ ವಾಲಿ ಬಿಡುತ್ತಿದ್ದಿರಿ.

وَلَوْلَاۤ اَنْ ثَبَّتْنٰكَ لَقَدْ كِدْتَّ تَرْكَنُ اِلَيْهِمْ شَيْـًٔا قَلِيْلًا ۝٧٤

75. ನೀವು ಹಾಗೆ ಮಾಡುತ್ತಿದ್ದರೆ ನಾವು ನಿಮಗೆ ಇಹಲೋಕದಲ್ಲೂ ಪರಲೋಕದಲ್ಲೂ ಇಮ್ಮಡಿ ಯಾತನೆಯ ಸವಿಯನ್ನುಣಿಸುತ್ತಿ ದ್ದೆವು. ಅನಂತರ ನೀವು ನಮ್ಮ ವಿರುದ್ಧ ಯಾವ ಸಹಾಯಕನನ್ನೂ ಪಡೆಯುತ್ತಿರಲಿಲ್ಲ.

اِذًا لَّاَذَقْنٰكَ ضِعْفَ الْحَيٰوةِ وَضِعْفَ الْمَمَاتِ ثُمَّ لَا تَجِدُ لَكَ عَلَيْنَا نَصِيْرًا ۝٧٥

76. ಇವರು ನಿಮ್ಮನ್ನು ಈ ಭೂಭಾಗದಿಂದ ಕಿತ್ತು ಹಾಕಿ ಇಲ್ಲಿಂದ ಹೊರಕ್ಕಟ್ಟಿ ಬಿಡಲು ಸಜ್ಜಾಗಿದ್ದಾರೆ. ಇವರು ಹೀಗೆ ಮಾಡಿದರೆ ನಿಮ್ಮ ತರುವಾಯ ಇವರು ಸ್ವತಃ ಇಲ್ಲಿ ಹೆಚ್ಚು ಕಾಲ ಉಳಿಯಲಾರರು.

وَاِنْ كَادُوْا لَيَسْتَفِزُّوْنَكَ مِنَ الْاَرْضِ لِيُخْرِجُوْكَ مِنْهَا وَاِذًا لَّا يَلْبَثُوْنَ خِلٰفَكَ اِلَّا قَلِيْلًا ۝٧٦

77. ಇದು ನಮ್ಮ ಸ್ಥಾಯಿ ಕಾರ್ಯ ವಿಧಾನ. ಇದನ್ನು ನಾವು ನಿಮಗಿಂತ ಮುಂಚೆ ರವಾನಿಸಿದ ಎಲ್ಲ ಸಂದೇಶವಾಹಕರ ವಿಷಯದಲ್ಲೂ ಬಳಸಿದ್ದೆವು. ನಮ್ಮ ಕಾರ್ಯ ವಿಧಾನದಲ್ಲಿ ನೀವು ಯಾವ ಬದಲಾವಣೆಯನ್ನೂ ಕಾಣಲಾರಿರಿ.

سُنَّةَ مَنْ قَدْ اَرْسَلْنَا قَبْلَكَ مِنْ رُّسُلِنَا وَلَا تَجِدُ لِسُنَّتِنَا تَحْوِيْلًا ۝٧٧

78. ಸೂರ್ಯನ ಇಳಿಮುಖಾರಂಭದಿಂದ ನಿಶಾಂಧಕಾರದ ತನಕ[33]

اَقِمِ الصَّلٰوةَ لِدُلُوْكِ الشَّمْسِ اِلٰى غَسَقِ

33. ಇದರಲ್ಲಿ 'ಝುಹರ್'ನಿಂದ 'ಇಶಾ'ದ ತನಕದ ನಾಲ್ಕು ನಮಾಝ್‌ಗಳು ಸೇರಿವೆ.

ನಮಾಝನ್ನು ಸಂಸ್ಥಾಪಿಸಿರಿ ಮತ್ತು ಪ್ರಾತಃಕಾಲದ ಕುರ್‌ಆನನ್ನು ರೂಢಿಗೊಳಿಸಿ ಕೊಳ್ಳಿರಿ. ಏಕೆಂದರೆ ಪ್ರಾತಃಕಾಲದ ಕುರ್‌ಆನ್ ಪ್ರಮಾಣಿತವಾಗಿರುತ್ತದೆ.[34]

الَّيْلِ وَقُرْاٰنَ الْفَجْرِ ؕ اِنَّ قُرْاٰنَ الْفَجْرِ كَانَ مَشْهُوْدًا ﴿۷۸﴾

79. ಮತ್ತು ರಾತ್ರಿ ಕಾಲದಲ್ಲಿ ತಹಜ್ಜುದ್ ನಿರ್ವಹಿಸಿರಿ.[35] ಇದು ನಿಮಗೆ ಐಚ್ಛಿಕ ಕರ್ಮ ಆಗಿದೆ. ನಿಮ್ಮ ಪ್ರಭು ನಿಮ್ಮನ್ನು ಪ್ರಶಂಸಿತ ಸ್ಥಾನಕ್ಕೆ ತಲುಪಿಸಲೂ ಬಹುದು.[36]

وَمِنَ الَّيْلِ فَتَهَجَّدْ بِهٖ نَافِلَةً لَّكَ ۖ عَسٰۤى اَنْ يَّبْعَثَكَ رَبُّكَ مَقَامًا مَّحْمُوْدًا ﴿۷۹﴾

80. "ಓ ನನ್ನ ಪ್ರಭೂ! ನೀನು ನನ್ನನ್ನು ಎಲ್ಲಿಗೆ ಕೊಂಡೊಯ್ಯುವುದಿದ್ದರೂ ಸತ್ಯದೊಂದಿಗೇ ಒಯ್ಯು, ಎಲ್ಲಿಂದ ಹೊರಡಿಸುವುದಿದ್ದರೂ ಸತ್ಯ ಸಹಿತವೇ ಹೊರಡಿಸು ಮತ್ತು ನಿನ್ನ ಕಡೆಯಿಂದ ಒಂದು ಅಧಿಕಾರವನ್ನು ನನಗೆ ನೆರವಾಗಿಸು"[37] ಎಂದು ಪ್ರಾರ್ಥಿಸಿರಿ.

وَقُلْ رَّبِّ اَدْخِلْنِىْ مُدْخَلَ صِدْقٍ وَّاَخْرِجْنِىْ مُخْرَجَ صِدْقٍ وَّاجْعَلْ لِّىْ مِنْ لَّدُنْكَ سُلْطٰنًا نَّصِيْرًا ﴿۸۰﴾

81. "ಸತ್ಯ ಬಂದು ಬಿಟ್ಟಿತು. ಮಿಥ್ಯ ಅಳಿದು ಹೋಯಿತು. ಮಿಥ್ಯವು ಅಳಿದು ಹೋಗುವಂತಹದ್ದೇ" ಎಂದು ಘೋಷಿಸಿರಿ.

وَقُلْ جَآءَ الْحَقُّ وَزَهَقَ الْبَاطِلُ ؕ اِنَّ الْبَاطِلَ كَانَ زَهُوْقًا ﴿۸۱﴾

82. ನಾವು ಈ ಕುರ್‌ಆನಿನ ಅವತರಣಾ ಸರಣಿಯಲ್ಲಿ ವಿಶ್ವಾಸಿಗಳಿಗೆ ಗುಣೌಷಧ ಮತ್ತು ಅನುಗ್ರಹವನ್ನು ಅವತೀರ್ಣಗೊಳಿಸಿರುತ್ತೇವೆ. ಆದರೆ ಅಕ್ರಮಿಗಳಿಗೆ ಅದು ನಷ್ಟದ ವಿನಾ ಇನ್ನಾವುದನ್ನೂ ವರ್ಧಿಸುವುದಿಲ್ಲ.

وَنُنَزِّلُ مِنَ الْقُرْاٰنِ مَا هُوَ شِفَآءٌ وَّرَحْمَةٌ لِّلْمُؤْمِنِيْنَ ۙ وَلَا يَزِيْدُ الظّٰلِمِيْنَ اِلَّا خَسَارًا ﴿۸۲﴾

83. ಮಾನವನಿಗೆ ನಾವು 'ಕೊಡುಗೆ'ಯನ್ನು ದಯಪಾಲಿಸಿದಾಗ ಅವನು ಬೀಗುತ್ತಾನೆ ಹಾಗೂ ಬೆನ್ನು ತಿರುಗಿಸಿ ಕೊಳ್ಳುತ್ತಾನೆ ಮತ್ತು ಸ್ವಲ್ಪವೇನಾದರೂ ಕಷ್ಟ ಬಾಧಿಸಿದರೆ ನಿರಾಶನಾಗ ತೊಡಗುತ್ತಾನೆ.

وَاِذَآ اَنْعَمْنَا عَلَى الْاِنْسَانِ اَعْرَضَ وَنَاٰ بِجَانِبِهٖ ۚ وَاِذَا مَسَّهُ الشَّرُّ كَانَ يَـُٔوْسًا ﴿۸۳﴾

84. ಓ ಪೈಗಂಬರರೇ, ಅವರೊಡನೆ (ಹೀಗೆ) ಹೇಳಿ ಬಿಡಿರಿ -"ಪ್ರತಿಯೊಬ್ಬನೂ ತನ್ನದೇ ರೀತಿಯಲ್ಲಿ ಕಾರ್ಯವೆಸಗುತ್ತಾನೆ. ನೇರ ಮಾರ್ಗದಲ್ಲಿ ಯಾರಿದ್ದಾನೆ ಎಂಬುದನ್ನು ನಿಮ್ಮ ಪ್ರಭು ಮಾತ್ರ ಚೆನ್ನಾಗಿ ಬಲ್ಲನು."

قُلْ كُلٌّ يَّعْمَلُ عَلٰى شَاكِلَتِهٖ ؕ فَرَبُّكُمْ اَعْلَمُ بِمَنْ هُوَ اَهْدٰى سَبِيْلًا ﴿۸۴﴾ ع

34. ಪ್ರಾತಃಕಾಲದ ಕುರ್‌ಆನ್ ಎಂದರೆ ಪ್ರಾತಃಕಾಲದ ನಮಾಝ್‌ನಲ್ಲಿ ಕುರ್‌ಆನ್ ಪಠಿಸುವುದಾಗಿದೆ. ಕುರ್‌ಆನ್ ಪ್ರಮಾಣಿತವಾಗುವುದೆಂದರೆ ದೇವಚರರು ವಿಶೇಷವಾಗಿ ಆ ಬಗ್ಗೆ ಸಾಕ್ಷ್ಯವಹಿಸುತ್ತಾರೆ ಎಂದಾಗಿದೆ. ಏಕೆಂದರೆ ಅದಕ್ಕೊಂದು ವಿಶಿಷ್ಟತೆ ಇದೆ.

35. 'ತಹಜ್ಜುದ್' ಎಂದರೆ ನಿದ್ರೆ ಬಿಟ್ಟು ಏಳುವುದು ಎಂದಾಗಿದೆ. ರಾತ್ರಿಯ ವೇಳೆ ತಹಜ್ಜುದ್ ನಿರ್ವಹಿಸುವುದೆಂದರೆ ರಾತ್ರಿಯ ಒಂದು ಭಾಗ ನಿದ್ರಿಸಿದ ನಂತರ ಮತ್ತೆ ಎದ್ದು ನಮಾಝ್ ಮಾಡುವುದಾಗಿದೆ.

36. ಅರ್ಥಾತ್- ಇಹ-ಪರಗಳಲ್ಲಿ ನೀವು ಸ್ತುತ್ಯರ್ಹ ಜೀವಿಯಾಗುವ ಸ್ಥಾನಕ್ಕೆ ನಿಮ್ಮನ್ನು ತಲಪಿಸಬಹುದು. ಎಲ್ಲೆಡೆಯೂ ನಿಮ್ಮ ಮೇಲೆ ಪ್ರಶಂಸಾವರ್ಷವಾಗುತ್ತಿರಬಹುದು ಮತ್ತು ನೀವು ಶ್ಲಾಘನಾರ್ಹ ವ್ಯಕ್ತಿಯಾಗಿ ಮಾರ್ಪಡಬಹುದು.

37. ಅರ್ಥಾತ್- ಒಂದೋ ಸ್ವತಃ ನನಗೇ ಅಧಿಕಾರವನ್ನು ಕರುಣಿಸು ಅಥವಾ ಯಾವುದಾದರೂ ಸರ್ಕಾರವನ್ನು ನನ್ನ ಸಹಾಯಕನನ್ನಾಗಿ ಮಾಡು. ಆ ಮೂಲಕ ನನಗೆ ಕೆಡುಕುಗಳನ್ನು ಸರಿಪಡಿಸುವ, ಅಶ್ಲೀಲತೆ ಮತ್ತು ಪಾಪಗಳ ಮಹಾಪೂರವನ್ನು ತಡೆಯುವ ಹಾಗೂ ನಿನ್ನ ನ್ಯಾಯದ ಕಾನೂನನ್ನು ಜಾರಿಗೊಳಿಸುವ ಶಕ್ತಿಯನ್ನು ನೀಡು.

85. ಇವರು ನಿಮ್ಮೊಡನೆ 'ರೂಹ್' ಕುರಿತು ಪ್ರಶ್ನಿಸುತ್ತಾರೆ. ಹೇಳಿರಿ- ಈ 'ರೂಹ್' ನನ್ನ ಪ್ರಭುವಿನ ಅಪ್ಪಣೆಯಿಂದ ಬರುತ್ತದೆ. ಆದರೆ ನೀವು ಜ್ಞಾನದ ಅಲ್ಪಾಂಶವನ್ನು ಮಾತ್ರ ಪಡೆದಿರುತ್ತೀರಿ.[38]

وَيَسْـَٔلُونَكَ عَنِ ٱلرُّوحِ ۖ قُلِ ٱلرُّوحُ مِنْ أَمْرِ رَبِّى وَمَآ أُوتِيتُم مِّنَ ٱلْعِلْمِ إِلَّا قَلِيلًا ﴿٨٥﴾

86. ಓ ಪೈಗಂಬರರೇ, ನಾವಿಚ್ಛಿಸಿದರೆ 'ದಿವ್ಯವಾಣಿ'ಯ ಮುಖಾಂತರ ನಾವು ನಿಮಗೆ ದಯಪಾಲಿಸಿರುವುದನ್ನೆಲ್ಲಾ ಕಸಿದು ಕೊಳ್ಳುವೆವು. ಅನಂತರ ನೀವು ನಮಗೆ ಎದುರಾಗಿ ಅದನ್ನು ಮರಳಿ ಕೊಡಿಸು ವಂತಹ ಯಾವ ಬೆಂಬಲಿಗನನ್ನೂ ಹೊಂದಲಾರಿರಿ.

وَلَئِن شِئْنَا لَنَذْهَبَنَّ بِٱلَّذِىٓ أَوْحَيْنَآ إِلَيْكَ ثُمَّ لَا تَجِدُ لَكَ بِهِۦ عَلَيْنَا وَكِيلًا ﴿٨٦﴾

87. ನಿಮಗೆ ದೊರೆತುದೆಲ್ಲವೂ ನಿಮ್ಮ ಪ್ರಭುವಿನ ಕೃಪೆಯಿಂದಲೇ ದೊರೆತಿದೆ. ವಾಸ್ತವದಲ್ಲಿ ನಿಮ್ಮ ಮೇಲೆ ಅವನ ಮಹತ್ತಾದ ಅನುಗ್ರಹವಿದೆ.

إِلَّا رَحْمَةً مِّن رَّبِّكَ ۚ إِنَّ فَضْلَهُۥ كَانَ عَلَيْكَ كَبِيرًا ﴿٨٧﴾

88. ಹೇಳಿರಿ- "ಮನುಷ್ಯರೂ ಯಕ್ಷರೂ ಎಲ್ಲರೂ ಒಟ್ಟಾಗಿ ಈ ಕುರ್ಆನಿನಂತಹ ಒಂದು ವಸ್ತುವನ್ನು ತರಲು ಪ್ರಯತ್ನಿಸಿದರೆ ಅವರೆಲ್ಲರೂ ಪರಸ್ಪರ ಸಹಾಯಕರಾದರೂ ಅವರಿಗೆ ಅದನ್ನು ತರಲಿಕ್ಕಾಗದು."

قُل لَّئِنِ ٱجْتَمَعَتِ ٱلْإِنسُ وَٱلْجِنُّ عَلَىٰٓ أَن يَأْتُوا۟ بِمِثْلِ هَـٰذَا ٱلْقُرْءَانِ لَا يَأْتُونَ بِمِثْلِهِۦ وَلَوْ كَانَ بَعْضُهُمْ لِبَعْضٍ ظَهِيرًا ﴿٨٨﴾

89. ನಾವು ಈ ಕುರ್ಆನಿನಲ್ಲಿ ಜನರಿಗೆ ನಾನಾ ವಿಧಗಳಿಂದ ಬೋಧಿಸಿದೆವು. ಆದರೆ ಹೆಚ್ಚಿನವರು ನಿಷೇಧಿಸುವುದರಲ್ಲೇ ಸ್ಥಿರರಾದರು.

وَلَقَدْ صَرَّفْنَا لِلنَّاسِ فِى هَـٰذَا ٱلْقُرْءَانِ مِن كُلِّ مَثَلٍ فَأَبَىٰٓ أَكْثَرُ ٱلنَّاسِ إِلَّا كُفُورًا ﴿٨٩﴾

90. ಅವರು ಹೇಳಿದರು, "ನೀವು ನಮಗಾಗಿ ಭೂಮಿಯನ್ನು ಸೀಳಿ ಒಂದು ಚಿಲುಮೆಯನ್ನು ಹರಿಸುವ ವರೆಗೂ ನಾವು ನಿಮ್ಮ ಮಾತನ್ನು ನಂಬಲಾರೆವು.

وَقَالُوا۟ لَن نُّؤْمِنَ لَكَ حَتَّىٰ تَفْجُرَ لَنَا مِنَ ٱلْأَرْضِ يَنۢبُوعًا ﴿٩٠﴾

---

38. ಇಲ್ಲಿ 'ರೂಹ್' ಎಂದು ಹೇಳಲಾಗಿರುವುದು ಆತ್ಮದ ಕುರಿತು ಎಂದು ಸಾಮಾನ್ಯವಾಗಿ ಭಾವಿಸಲಾಗುತ್ತಿದೆ. ಅರ್ಥಾತ್ ಜನರು ಪ್ರವಾದಿವರ್ಯರೊಡನೆ(ಸ) 'ಜೀವಾತ್ಮ'ದ ಬಗ್ಗೆ ಅದರ ವಾಸ್ತವಿಕತೆ ಏನೆಂದು ಕೇಳಿದ್ದರು. ಅದಕ್ಕೆ ಉತ್ತರವಾಗಿ ಅವರು 'ಅದು ಅಲ್ಲಾಹನ ಆಜ್ಞೆಯಿಂದ ಬರುತ್ತದೆ' ಎಂದು ಹೇಳಿದ್ದರು ಎನ್ನಲಾಗುತ್ತದೆ. ಆದರೆ ವಾಕ್ಸರಣಿಯನ್ನು ಗಮನಿಸಿದರೆ ಇಲ್ಲಿ 'ರೂಹ್' ಎಂದು ಹೇಳಲಾಗಿರುವುದು 'ಪ್ರವಾದಿತ್ವದ ರೂಹ್' ಅರ್ಥಾತ್, ವಹಿಯ ಕುರಿತಾಗಿದೆ ಎಂದು ವ್ಯಕ್ತವಾಗುತ್ತದೆ. ಅನ್ನಹ್ಲ್ ಅಧ್ಯಾಯದ ಸೂಕ್ತ 2, ಅಲ್ ಮೂಮಿನ್ ಸೂಕ್ತ 15, ಅಶ್ಶೂರಃ ಸೂಕ್ತ 52ರಲ್ಲಿಯೂ ಇದೇ ವಿಷಯ ಪ್ರಸ್ತಾಪಿಸಲಾಗಿದೆ. ಪ್ರಾಚೀನ ವಿದ್ವಾಂಸರಲ್ಲಿ ಇಬ್ನ್ ಅಬ್ಬಾಸ್, ಕತಾದಃ, ಹಸನ್ ಬಸ್ರೀ(ರ) ಅವರೂ ಇದನ್ನು ಹೀಗೆಯೇ ವ್ಯಾಖ್ಯಾನಿಸಿದ್ದಾರೆ. ಹಸನ್ ಮತ್ತು ಕತಾದಃರ ವಾಕ್ಯವನ್ನು 'ರೂಹುಲ್ ಮಆನಿ'ಯ ಕರ್ತೃ ಹೀಗೆ ಉಲ್ಲೇಖಿಸಿದ್ದಾರೆ, 'ರೂಹ್' ಎಂದರೆ ಜಿಬ್ರೀಲ್(ಅ) ಆಗಿದ್ದಾರೆ. "ಅವರು ಹೇಗೆ ಇಳಿಯುತ್ತಾರೆ ಮತ್ತು ಪ್ರವಾದಿವರ್ಯರ(ಸ) ಹೃದಯದಲ್ಲಿ ಯಾವ ರೀತಿ ವಹೀ ಇಳಿಯುತ್ತದೆ" ಎಂಬುದು ಅವರ ಪ್ರಶ್ನೆಯಾಗಿತ್ತು.

| | |
|---|---|
| 91. ಅಥವಾ ನಿಮಗಾಗಿ ಖರ್ಜೂರಗಳ ಮತ್ತು ದ್ರಾಕ್ಷಿಗಳ ಒಂದು ತೋಟ ಉಂಟಾಗಬೇಕು ಮತ್ತು ನೀವು ಅದರಲ್ಲಿ ಕಾಲುವೆಗಳನ್ನು ಹರಿಸಬೇಕು- | أَوْ تَكُونَ لَكَ جَنَّةٌ مِّن نَّخِيلٍ وَعِنَبٍ فَتُفَجِّرَ الْأَنْهَارَ خِلَالَهَا تَفْجِيرًا ﴿٩١﴾ |
| 92. ಅಥವಾ ನಿಮ್ಮ ವಾದದಂತೆ ಆಕಾಶವನ್ನು ತುಂಡು ತುಂಡಾಗಿ ಮಾಡಿ ನಮ್ಮ ಮೇಲೆ ಬೀಳಿಸಬೇಕು ಇಲ್ಲವೇ ಅಲ್ಲಾಹನನ್ನೂ ದೇವಚರರನ್ನೂ ಮುಖಾಮುಖಿ ನಮ್ಮ ಮುಂದೆ ತರಬೇಕು- | أَوْ تُسْقِطَ السَّمَاءَ كَمَا زَعَمْتَ عَلَيْنَا كِسَفًا أَوْ تَأْتِيَ بِاللَّهِ وَالْمَلَائِكَةِ قَبِيلًا ﴿٩٢﴾ |
| 93. ಅಥವಾ ನಿಮಗಾಗಿ ಒಂದು ಚಿನ್ನದ ಮನೆ ತಯಾರಾಗಬೇಕು ಅಥವಾ ನೀವು ಆಕಾಶದ ಮೇಲೆ ಏರಬೇಕು. ನೀವು ನಮಗಾಗಿ ನಾವು ಓದಬಹುದಾದ ಒಂದು ಲೇಖನವನ್ನು ತರದಿದ್ದರೆ ನಿಮ್ಮ ಏರುವಿಕೆಯನ್ನೂ ನಾವು ನಂಬಲಾರೆವು"- ಓ ಪೈಗಂಬರರೇ, "ನನ್ನ ಪ್ರಭು ಪರಮ ಪಾವನನು. ನಾನೊಬ್ಬ ಸಂದೇಶ ತರುವ ಮಾನವನಾಗಿರುವೆನಲ್ಲದೆ ಇನ್ನೇನಾದರೂ ಆಗಿರುವೆನೇ?" ಎಂದು ಅವರೊಡನೆ ಕೇಳಿರಿ. | أَوْ يَكُونَ لَكَ بَيْتٌ مِّن زُخْرُفٍ أَوْ تَرْقَىٰ فِي السَّمَاءِ وَلَن نُّؤْمِنَ لِرُقِيِّكَ حَتَّىٰ تُنَزِّلَ عَلَيْنَا كِتَابًا نَّقْرَؤُهُ ۗ قُلْ سُبْحَانَ رَبِّي هَلْ كُنتُ إِلَّا بَشَرًا رَّسُولًا ﴿٩٣﴾ |
| 94. ಜನರ ಮುಂದೆ ಸನ್ಮಾರ್ಗದರ್ಶನ ಬಂದಾಗಲೆಲ್ಲ- ಅದರ ಮೇಲೆ ವಿಶ್ವಾಸವಿಡದಂತೆ ಜನರನ್ನು ತಡೆದುದು "ಅಲ್ಲಾಹನು ಸಂದೇಶ ವಾಹಕನಾಗಿ ಮಾನವನನ್ನು ಕಳುಹಿಸಿದನೇ?" ಎಂಬ ಮಾತೇ ವಿನಾ ಇನ್ನೇನೂ ಅಲ್ಲ. | وَمَا مَنَعَ النَّاسَ أَن يُؤْمِنُوا إِذْ جَاءَهُمُ الْهُدَىٰ إِلَّا أَن قَالُوا أَبَعَثَ اللَّهُ بَشَرًا رَّسُولًا ﴿٩٤﴾ |
| 95. ಭೂಮಿಯ ಮೇಲೆ ದೇವಚರರು ಇಷ್ಟಾನುಸಾರ ನಡೆದಾಡುತ್ತಿದ್ದರೆ ನಾವು ಖಂಡಿತವಾಗಿಯೂ ಆಕಾಶದಿಂದ ಒಬ್ಬ ದೇವಚರನನ್ನೇ ಅವರಿಗೆ ಸಂದೇಶವಾಹಕನನ್ನಾಗಿ ಮಾಡಿ ಕಳುಹಿಸುತ್ತಿದ್ದೆವೆಂದು ಅವರೊಡನೆ ಹೇಳಿರಿ. | قُل لَّوْ كَانَ فِي الْأَرْضِ مَلَائِكَةٌ يَمْشُونَ مُطْمَئِنِّينَ لَنَزَّلْنَا عَلَيْهِم مِّنَ السَّمَاءِ مَلَكًا رَّسُولًا ﴿٩٥﴾ |
| 96. ಓ ಪೈಗಂಬರರೇ, ಅವರೊಡನೆ (ಹೀಗೆ) ಹೇಳಿರಿ: "ನನ್ನ ಮತ್ತು ನಿಮ್ಮ ನಡುವೆ ಅಲ್ಲಾಹನ ಸಾಕ್ಷಿಯೊಂದೇ ಸಾಕು. ನಿಜಕ್ಕೂ ಅವನು ತನ್ನ ದಾಸರ ಸ್ಥಿತಿಗತಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದು ಸರ್ವವನ್ನೂ ವೀಕ್ಷಿಸುತ್ತಿದ್ದಾನೆ." | قُلْ كَفَىٰ بِاللَّهِ شَهِيدًا بَيْنِي وَبَيْنَكُمْ ۚ إِنَّهُ كَانَ بِعِبَادِهِ خَبِيرًا بَصِيرًا ﴿٩٦﴾ |
| 97. ಯಾರಿಗೆ ಅಲ್ಲಾಹನು ಮಾರ್ಗದರ್ಶನವೀಯುತ್ತಾನೋ ಅವನೇ ಮಾರ್ಗದರ್ಶನ ಹೊಂದುವನು ಮತ್ತು ಅವನು ಯಾರನ್ನಾದರೂ ಪಥಭ್ರಷ್ಟಗೊಳಿಸಿದರೆ ಅಂಥವರಿಗೆ ಅವನ ಹೊರತು ಯಾವ ರಕ್ಷಕ ಮಿತ್ರರನ್ನೂ ನೀವು ಪಡೆಯಲಾರಿರಿ. ನಾವು ಇವರನ್ನು | وَمَن يَهْدِ اللَّهُ فَهُوَ الْمُهْتَدِ ۖ وَمَن يُضْلِلْ فَلَن تَجِدَ لَهُمْ أَوْلِيَاءَ مِن دُونِهِ ۖ وَنَحْشُرُهُمْ يَوْمَ الْقِيَامَةِ عَلَىٰ وُجُوهِهِمْ |

عُمْيًا وَّبُكْمًا وَّصُمًّا ۭ مَاْوٰىهُمْ جَهَنَّمُ ۭ كُلَّمَا خَبَتْ زِدْنٰهُمْ سَعِيْرًا ۝97

ಪುನರುತ್ಥಾನದ ದಿನ ಕುರುಡರಾಗಿಯೂ ಮೂಕರಾಗಿಯೂ ಕಿವುಡರಾಗಿಯೂ ಮಾಡಿ, ಇವರ ಮುಖಗಳನ್ನು ನೆಲಕಚ್ಚಿಸುತ್ತಾ ಎಳೆದು ತರುವೆವು. ಅವರ ವಾಸಸ್ಥಳ 'ನರಕ' ಆಗಿದೆ. ಅದರ ಅಗ್ನಿಯು ಮಂದವಾಗ ತೊಡಗಿದಾಗ ನಾವು ಅದನ್ನು ಇನ್ನಷ್ಟು ತೀಕ್ಷ್ಣಗೊಳಿಸುವೆವು.

ذٰلِكَ جَزَاۗؤُهُمْ بِاَنَّهُمْ كَفَرُوْا بِاٰيٰتِنَا وَقَالُوْٓا ءَاِذَا كُنَّا عِظَامًا وَّرُفَاتًا ءَاِنَّا لَمَبْعُوْثُوْنَ خَلْقًا جَدِيْدًا ۝98

98. ನಮ್ಮ ಪ್ರತ್ಯಕ್ಷ ಪ್ರಮಾಣಗಳನ್ನು ಧಿಕ್ಕರಿಸಿ "ನಾವು ಎಲುಬುಗಳೂ ಮಣ್ಣೂ ಆಗಿ ಹೋದ ಬಳಿಕ ನಮ್ಮನ್ನು ಹೊಸದಾಗಿ ಸೃಷ್ಟಿಸಿ ಎಬ್ಬಿಸಲಾಗುವುದೇ?" ಎಂದು ಅವರು ಹೇಳಿದುದರ ಪ್ರತಿ ಫಲವಿದು.

اَوَلَمْ يَرَوْا اَنَّ اللّٰهَ الَّذِيْ خَلَقَ السَّمٰوٰتِ وَالْاَرْضَ قَادِرٌ عَلٰٓي اَنْ يَّخْلُقَ مِثْلَهُمْ وَجَعَلَ لَهُمْ اَجَلًا لَّا رَيْبَ فِيْهِ ۭ فَاَبَى الظّٰلِمُوْنَ اِلَّا كُفُوْرًا ۝99

99. ಆಕಾಶಗಳನ್ನೂ ಭೂಮಿಯನ್ನೂ ಯಾವ ದೇವನು ಸೃಷ್ಟಿಸಿರುತ್ತಾನೋ ಅವನು ಖಂಡಿತವಾಗಿಯೂ ಇವರಂಥವರನ್ನು ಸೃಷ್ಟಿಸಲು ಶಕ್ತನೆಂಬುದು ಇವರಿಗೆ ಹೊಳೆಯಲಿಲ್ಲವೇ? ಅವನು ಇವರನ್ನು ಒಂದೆಡೆ ಸೇರಿಸಲಿಕ್ಕಾಗಿ ಒಂದು ಸಮಯವನ್ನು ನಿಶ್ಚಯಿಸಿಟ್ಟಿದ್ದಾನೆ. ಅದರ ಬರುವಿಕೆಯು ಖಚಿತ. ಆದರೆ ಅದನ್ನು ನಿರಾಕರಿಸಿಯೇ ತೀರುವೆವೆಂಬುದು ಅಕ್ರಮಿಗಳ ಹಟವಾಗಿದೆ.

قُلْ لَّوْ اَنْتُمْ تَمْلِكُوْنَ خَزَاۗىِٕنَ رَحْمَةِ رَبِّيْٓ اِذًا لَّاَمْسَكْتُمْ خَشْيَةَ الْاِنْفَاقِ ۭ وَكَانَ الْاِنْسَانُ قَتُوْرًا ۝100

100. ಓ ಪೈಗಂಬರರೇ, ಅವರೊಡನೆ ಹೇಳಿರಿ - "ನನ್ನ ಪ್ರಭುವಿನ ಕೃಪಾ ಭಂಡಾರಗಳು ನಿಮ್ಮ ಸ್ವಾಧೀನದಲ್ಲಿ ಇದ್ದು ಬಿಡುತ್ತಿದ್ದರೆ, ಖರ್ಚಾಗಿ ಹೋದೀತೆಂಬ ಆಶಂಕೆಯಿಂದ ಅವುಗಳನ್ನು ಖಂಡಿತವಾಗಿಯೂ ನೀವು ತಡೆದಿಡುತ್ತಿದ್ದಿರಿ. ನಿಜಕ್ಕೂ ಮಾನವನು ಬಹಳ ಸಂಕುಚಿತ ಮನಸ್ಸಿನವನಾಗಿದ್ದಾನೆ."[39]

وَلَقَدْ اٰتَيْنَا مُوْسٰي تِسْعَ اٰيٰتٍۢ بَيِّنٰتٍ فَسْــَٔـلْ بَنِيْٓ اِسْرَاۗءِيْلَ اِذْ جَاۗءَهُمْ فَقَالَ لَهٗ فِرْعَوْنُ اِنِّىْ لَاَظُنُّكَ يٰمُوْسٰي

101. ನಾವು ಮೂಸಾರಿಗೆ ಸ್ಪಷ್ಟವಾಗಿ ತೋರುವ ಒಂಭತ್ತು ನಿದರ್ಶನಗಳನ್ನು ದಯಪಾಲಿಸಿದ್ದೆವು.[40] ಇನ್ನು ನೀವೇ ಬನೀಇಸ್ರಾಈಲರೊಡನೆ "ಮೂಸಾರು ಅವರಲ್ಲಿಗೆ ಬಂದಾಗ ಫಿರ್‌ಔನನು ಓ ಮೂಸಾ, ಖಂಡಿತವಾಗಿಯೂ ನೀನೊಬ್ಬ ಮಾಟಬಾಧಿತ ಮನುಷ್ಯ

39. ಮಕ್ಕಾದ ಬಹುದೇವಾರಾಧಕರು ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು ನಿರಾಕರಿಸುತ್ತಿದ್ದುದರ ಮನೋವೈಜ್ಞಾನಿಕ ಕಾರಣಗಳಲ್ಲಿ ಆ ಮೂಲಕ ಅವರ ಶ್ರೇಷ್ಠತೆಯನ್ನು ಸಮ್ಮತಿಸಬೇಕಾದೀತು ಎಂಬುದೂ ಒಂದಾಗಿತ್ತು. ತಮ್ಮ ಸಮಕಾಲೀನ ಮತ್ತು ಸಹಜೀವಿಯಾದ ವ್ಯಕ್ತಿಯ ಘನತೆಯನ್ನು ಒಪ್ಪಿಕೊಳ್ಳಲು ಮಾನವ ಸಾಮಾನ್ಯವಾಗಿ ಸನ್ನದ್ಧನಾಗುವುದಿಲ್ಲ. ಇದರ ಕುರಿತೇ, "ಒಬ್ಬನೇ ನೈಜ ಸ್ಥಾನಮಾನದ ಅಂಗೀಕಾರ ಮತ್ತು ಸಮ್ಮತಿಯ ವೇಳೆಯೂ ಅವರ ಮನಸ್ಸು ಮುದುಡುತ್ತದೆ. ಹಾಗಿರುವಾಗ ದೇವನು ತನ್ನ ಅನುಗ್ರಹದ ಚಾವಿಗಳನ್ನು ಅವರ ವಶಕ್ಕೆ ನೀಡಿದರೆ ಅವರು ಯಾರಿಗೂ ಚಿಕ್ಕಾಸನ್ನೂ ನೀಡುತ್ತಿರಲಿಲ್ಲ" ಎಂದು ಹೇಳಲಾಗುತ್ತಿದೆ.

40. ಈ ಒಂಬತ್ತು ದೃಷ್ಟಾಂತಗಳ ವಿವರಗಳು ಅಲ್ ಅಲ್‌ರಾಫ್ ಅಧ್ಯಾಯದಲ್ಲಿ ಬಂದಿದೆ.

ನಾಗಿರುತ್ತೀ ಎಂದು ನಾನು ಶಂಕಿಸುತ್ತೇನೆಂದೇ ಹೇಳಿದ್ದನಷ್ಟೆ?" ಎಂದು ಕೇಳಿರಿ.

مَسْحُوْرًا ﴿١٠١﴾

102. ಅದಕ್ಕುತ್ತರವಾಗಿ ಮೂಸಾ ಹೇಳಿದರು, "ಈ ಪ್ರಜ್ಞಾಪೂರ್ಣ ಪ್ರತ್ಯಕ್ಷ ಪ್ರಮಾಣಗಳನ್ನು ಆಕಾಶಗಳ ಮತ್ತು ಭೂಮಿಯ ಪ್ರಭುವಿನ ಹೊರತು ಇನ್ನಾರೂ ಅವತೀರ್ಣಗೊಳಿಸಿಲ್ಲವೆಂದು ನೀನು ಚೆನ್ನಾಗಿ ತಿಳಿದಿರುವೆ.[41] ಓ ಫಿರ್‌ಔನ್! ನನ್ನ ಅಭಿಪ್ರಾಯ ಪ್ರಕಾರ ನೀನೊಬ್ಬ ಹತಭಾಗಿ ಆಗಿರುವೆ."

قَالَ لَقَدْ عَلِمْتَ مَآ اَنْزَلَ هٰٓؤُلَآءِ اِلَّا رَبُّ السَّمٰوٰتِ وَالْاَرْضِ بَصَآئِرَ ۚ وَاِنِّيْ لَاَظُنُّكَ يٰفِرْعَوْنُ مَثْبُوْرًا ﴿١٠٢﴾

103. ಕೊನೆಗೆ ಫಿರ್‌ಔನನು ಮೂಸಾ ಮತ್ತು ಬನೀಇಸ್ರಾಈಲರನ್ನು ಭೂಮುಖದಿಂದ ಕಿತ್ತೆಸೆಯ ಬೇಕೆಂದು ನಿರ್ಧರಿಸಿದನು. ಆದರೆ ನಾವು ಅವನನ್ನೂ ಅವನ ಸಂಗಡಿಗರನ್ನೂ ಒಟ್ಟಾಗಿ ಮುಳುಗಿಸಿ ಬಿಟ್ಟೆವು.

فَاَرَادَ اَنْ يَّسْتَفِزَّهُمْ مِّنَ الْاَرْضِ فَاَغْرَقْنٰهُ وَمَنْ مَّعَهٗ جَمِيْعًا ﴿١٠٣﴾

104. ಆ ಬಳಿಕ ಬನೀಇಸ್ರಾಈಲರೊಡನೆ, "ನೀವಿನ್ನು ಭೂಮಿಯಲ್ಲಿ ನೆಲೆಸಿರಿ. ಮುಂದೆ ಪರಲೋಕದ ವಾಗ್ದಾನದ ಸಮಯ ಬಂದಾಗ ನಾವು ನಿಮ್ಮೆಲ್ಲರನ್ನೂ ಒಟ್ಟಾಗಿ ತಂದು ಹಾಜರು ಪಡಿಸುವೆವು" ಎಂದು ಹೇಳಿದೆವು.

وَّقُلْنَا مِنْۢ بَعْدِهٖ لِبَنِيْٓ اِسْرَآءِيْلَ اسْكُنُوا الْاَرْضَ فَاِذَا جَآءَ وَعْدُ الْاٰخِرَةِ جِئْنَا بِكُمْ لَفِيْفًا ﴿١٠٤﴾

105. ನಾವು ಈ ಕುರ್‌ಆನನ್ನು ಸತ್ಯ ಸಹಿತ ಅವತೀರ್ಣಗೊಳಿಸಿರುತ್ತೇವೆ ಮತ್ತು ಇದು ಸತ್ಯಸಹಿತವಾಗಿಯೇ ಅವತೀರ್ಣಗೊಂಡಿದೆ. ಓ ಪೈಗಂಬರರೇ! (ಸ್ವೀಕರಿಸುವವನಿಗೆ) ಸುವಾರ್ತೆ ನೀಡಲಿಕ್ಕಾಗಿ ಮತ್ತು (ನಿರಾಕರಿಸುವವನಿಗೆ) ಎಚ್ಚರಿಕೆ ಕೊಡಲಿಕ್ಕಾಗಿಯೇ ವಿನಾ ಇನ್ನಾವ ಕಾರ್ಯಕ್ಕೂ ನಾವು ನಿಮ್ಮನ್ನು ಕಳುಹಿಸಿರುವುದಿಲ್ಲ.

وَبِالْحَقِّ اَنْزَلْنٰهُ وَبِالْحَقِّ نَزَلَ ۗ وَمَآ اَرْسَلْنٰكَ اِلَّا مُبَشِّرًا وَّنَذِيْرًا ﴿١٠٥﴾

106. ನೀವು ಈ ಕುರ್‌ಆನನ್ನು ಸಂದರ್ಭೋಚಿತವಾಗಿ ಜನರಿಗೆ ಹೇಳಿ ಕೊಡಲಿಕ್ಕಾಗಿ ನಾವಿದನ್ನು ಸ್ವಲ್ಪ ಸ್ವಲ್ಪವಾಗಿ ಅವತೀರ್ಣಗೊಳಿಸಿದ್ದೇವೆ ಮತ್ತು ಇದನ್ನು ನಾವು (ಸಂದರ್ಭಾನುಸಾರ) ಹಂತ ಹಂತವಾಗಿ ಅವತೀರ್ಣಗೊಳಿಸಿದ್ದೇವೆ.

وَقُرْاٰنًا فَرَقْنٰهُ لِتَقْرَاَهٗ عَلَى النَّاسِ عَلٰى مُكْثٍ وَّنَزَّلْنٰهُ تَنْزِيْلًا ﴿١٠٦﴾

41. ಈ ಮಾತನ್ನು ಹ. ಮೂಸಾ(ಅ) ಹೇಳಲು ಕಾರಣವೇನೆಂದರೆ, ಇಡೀ ರಾಷ್ಟ್ರದಲ್ಲಿ ಕ್ಷಾಮ ಆವರಿಸುವುದು, ಲಕ್ಷಗಟ್ಟಲೆ ಚದರ ಮೈಲುಗಳ ವಿಸ್ತೀರ್ಣದಲ್ಲಿ ಹಬ್ಬಿರುವ ಪ್ರದೇಶದಲ್ಲಿ ಕಪ್ಪೆಗಳ ಹಾವಳಿಯುಂಟಾಗುವುದು, ದೇಶದಾದ್ಯಂತದ ಗೋದಾಮುಗಳಿಗೆ ಕೀಟಬಾಧೆ ಯುಂಟಾಗುವುದೇ ಮುಂತಾದ ಸಾರ್ವತ್ರಿಕ ಸಂಕಷ್ಟಗಳು ಒಬ್ಬ ಜಾದೂಗಾರನ ಜಾದೂ ಅಥವಾ ಮಾನವನ ಚಮತ್ಕಾರ ಶಕ್ತಿಯಿಂದಾಗಿ ಗೋಚರಿಸಲು ಸಾಧ್ಯವಿಲ್ಲ. ಜಾದೂಗಾರ ನಿರ್ದಿಷ್ಟ ಸ್ಥಳದಲ್ಲಿ ಪ್ರೇಕ್ಷಕರ ಕಣ್ಣು ಕಟ್ಟಿ ಅವರಿಗೆ ಕೆಲವು ಚಮತ್ಕಾರಗಳನ್ನು ತೋರಿಸಬಹುದು. ಅವು ವಾಸ್ತವಿಕತೆಗಳಾಗಿರುವುದಿಲ್ಲ, ಬದಲಾಗಿ ಬರೇ ಕಣ್ಣುಕಟ್ಟು ಮಾತ್ರವಾಗಿರುತ್ತವೆ.

107. ಓ ಪೈಗಂಬರರೇ, ಅವರೊಡನೆ ಹೇಳಿರಿ- ನೀವು ಇದರ ಮೇಲೆ ವಿಶ್ವಾಸವಿಟ್ಟರೂ ಇಡದಿದ್ದರೂ ಇದಕ್ಕೆ ಮುಂಚೆ ಜ್ಞಾನ ಕೊಡಲ್ಪಟ್ಟವರಿಗೆ ಇದನ್ನು ಓದಿ ಹೇಳಿದಾಗ ಅವರು ತಲೆಬಾಗಿ ಅಧೋಮುಖಿಗಳಾಗಿ ಸಾಷ್ಟಾಂಗವೆರಗಿ ಬಿಡುತ್ತಾರೆ-

قُلْ اٰمِنُوْا بِهٖٓ اَوْ لَا تُؤْمِنُوْا ؕ اِنَّ الَّذِيْنَ اُوْتُوا الْعِلْمَ مِنْ قَبْلِهٖٓ اِذَا يُتْلٰى عَلَيْهِمْ يَخِرُّوْنَ لِلْاَذْقَانِ سُجَّدًا ۙ﴿١٠٧﴾

108. ಮತ್ತು "ನಮ್ಮ ಪ್ರಭು ಪರಮಪಾವನನು. ಅವನ ವಾಗ್ದಾನ ಪೂರ್ಣಗೊಳ್ಳಲೇಬೇಕು" ಎಂದು ಉದ್ಗಾರವೆತ್ತುತ್ತಾರೆ.

وَّيَقُوْلُوْنَ سُبْحٰنَ رَبِّنَآ اِنْ كَانَ وَعْدُ رَبِّنَا لَمَفْعُوْلًا ﴿١٠٨﴾

109. ಅವರು ಪ್ರಲಾಪಿಸುತ್ತ ಅಧೋಮುಖಿಗಳಾಗಿ ಬಿಡುತ್ತಾರೆ ಮತ್ತು ಇದನ್ನು ಕೇಳಿ ಅವರ ದೀನತಾಭಾವವು ಇನ್ನಷ್ಟು ವರ್ಧಿಸುತ್ತದೆ.

وَيَخِرُّوْنَ لِلْاَذْقَانِ يَبْكُوْنَ وَيَزِيْدُهُمْ خُشُوْعًا ۩﴿١٠٩﴾

110. ಓ ಪೈಗಂಬರರೇ, ಇವರೊಡನೆ ಹೇಳಿರಿ! "ಅಲ್ಲಾಹ್ ಎಂದು ಕರೆಯಿರಿ ಅಥವಾ ಪರಮ ದಯಾಮಯ ಎಂದು ಕರೆಯಿರಿ" ಯಾವ ಹೆಸರಿಂದ ಕರೆದರೂ ಅವನಿಗೆ ಎಲ್ಲವೂ ಒಳ್ಳೆಯ ನಾಮಗಳೇ ಇವೆ[42] ಮತ್ತು ನಿಮ್ಮ ನಮಾಝನ್ನು ಬಹಳ ಉಚ್ಚ ಸ್ವರದಲ್ಲಾಗಲಿ ತೀರಾ ಮೆಲುದನಿಯಲ್ಲಾಗಲಿ ನಿರ್ವಹಿಸಬೇಡಿರಿ. ಇವೆರಡರ ನಡುವೆ ಮಧ್ಯಮ ತರದ ಧ್ವನಿಯನ್ನಿರಿಸಿಕೊಳ್ಳಿರಿ.[43]

قُلِ ادْعُوا اللّٰهَ اَوِ ادْعُوا الرَّحْمٰنَ ؕ اَيًّا مَّا تَدْعُوْا فَلَهُ الْاَسْمَآءُ الْحُسْنٰى ۚ وَلَا تَجْهَرْ بِصَلَاتِكَ وَلَا تُخَافِتْ بِهَا وَابْتَغِ بَيْنَ ذٰلِكَ سَبِيْلًا ﴿١١٠﴾

111. ಮತ್ತು ಹೇಳಿರಿ! "ಸರ್ವಸ್ತುತಿಗಳೂ ಅಲ್ಲಾಹನಿಗೇ ಮೀಸಲು. ಅವನು ಯಾರನ್ನೂ ಮಗನನ್ನಾಗಿ ಮಾಡಿಕೊಳ್ಳಲಿಲ್ಲ. ಅವನ ಪ್ರಭುತ್ವದಲ್ಲಿ ಯಾರೂ ಸಹಭಾಗಿಯಿಲ್ಲ. ಅವನಿಗೊಬ್ಬ ರಕ್ಷಕ ಮಿತ್ರನಿದ್ದಾನೆನ್ನಲು ಅವನೇನೂ ವಿವಶನಲ್ಲ. ಅವನ ಹಿರಿಮೆ ಯನ್ನು- ಪರಿಪೂರ್ಣವಾದ ಹಿರಿಮೆಯನ್ನು- ಕೊಂಡಾಡಿರಿ."

وَقُلِ الْحَمْدُ لِلّٰهِ الَّذِيْ لَمْ يَتَّخِذْ وَلَدًا وَّلَمْ يَكُنْ لَّهٗ شَرِيْكٌ فِى الْمُلْكِ وَلَمْ يَكُنْ لَّهٗ وَلِيٌّ مِّنَ الذُّلِّ وَكَبِّرْهُ تَكْبِيْرًا ۠﴿١١١﴾

---

42. ಇದು ಮಕ್ಕಾದ ಬಹುದೇವವಿಶ್ವಾಸಿಗಳ ಆಕ್ಷೇಪಕ್ಕೆ ನೀಡಲಾಗಿರುವ ಉತ್ತರ. ಸೃಷ್ಟಿಕರ್ತನಿಗೆ 'ಅಲ್ಲಾಹ್' ಎಂಬ ಹೆಸರನ್ನೇನೋ ನಾವು ಕೇಳಿದ್ದೇವೆ, ಆದರೆ ಈ 'ರಹ್ಮಾನ್' ಎಂಬ ಹೆಸರನ್ನು ನೀವು ಎಲ್ಲಿಂದ ತಂದಿರುವಿರಿ ಎಂಬುದು ಅವರ ಆಕ್ಷೇಪವಾಗಿತ್ತು. ಅವರ ಬಳಿ ಆ ಹೆಸರು ಪ್ರಚಲಿತವಿರಲಿಲ್ಲ. ಆದ್ದರಿಂದ ಅದನ್ನು ಕೇಳಿದಾಗ ಅವರು ಮೂಗಿನ ಮೇಲೆ ಬೆರಳಿಟ್ಟು ಕೊಳ್ಳುತ್ತಿದ್ದರು.

43. ಇಬ್ನ್ ಅಬ್ಬಾಸ್‌ರ(ರ) ಪ್ರಕಾರ, ಪ್ರವಾದಿವರ್ಯರು(ಸ) ಅಥವಾ ಅವರ ಇತರ ಸಂಗಾತಿಗಳು ಮಕ್ಕಾದಲ್ಲಿ ನಮಾಝ್ ನಿರ್ವಹಿಸುತ್ತಿದ್ದಾಗ ಉಚ್ಚಸ್ವರದಲ್ಲಿ ಕುರ್‌ಆನ್ ಪಠಿಸಿದರೆ ಸತ್ಯನಿಷೇಧಿಗಳು ಗದ್ದಲವೆಬ್ಬಿಸುತ್ತಿದ್ದರು. ಕೆಲವೊಮ್ಮೆ ಬೈಗುಳಗಳ ಸರಣಿಯನ್ನೇ ಆರಂಭಿಸಿ ಬಿಡುತ್ತಿದ್ದರು. ಆದ್ದರಿಂದಲೇ ಸತ್ಯನಿಷೇಧಿಗಳು ಗದ್ದಲವೆಬ್ಬಿಸಲು ಕಾರಣವಾಗುವಷ್ಟು ಉಚ್ಚಸ್ವರದಲ್ಲೂ ಓದದಿರಿ. ಹಾಗೆಯೇ ತಮ್ಮ ಸಂಗಾತಿಗಳಿಗೂ ಕೇಳಲು ಸಾಧ್ಯವಾಗದಷ್ಟು ಮೆಲುಧ್ವನಿಯಲ್ಲೂ ಓದದಿರಿ. ಈ ಆದೇಶ ಆಗಿನ ಪರಿಸ್ಥಿತಿಗೆ ಮಾತ್ರವಾಗಿದೆ. ಮದೀನಾದಲ್ಲಿ ಬದಲಾದ ಪರಿಸ್ಥಿತಿಯಲ್ಲಿ ಈ ಆದೇಶ ಬಾಕಿ ಇರಲಿಲ್ಲ. ಆದರೆ ಮುಸ್ಲಿಮರು ಮಕ್ಕಾದಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಾಗಲೆಲ್ಲಾ ಈ ನಿರ್ದೇಶದಂತೆಯೇ ವರ್ತಿಸಬೇಕು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸರ್ವಸ್ತುತಿ ಅಲ್ಲಾಹನಿಗೆ, ಅವನು ತನ್ನ ದಾಸನ ಮೇಲೆ ಈ ಗ್ರಂಥವನ್ನು ಅವತೀರ್ಣ ಗೊಳಿಸಿದನು ಮತ್ತು ಅದರಲ್ಲೇನೂ ವಕ್ರತೆಯನ್ನಿರಿಸಲಿಲ್ಲ.

اَلْحَمْدُ لِلّٰهِ الَّذِيْٓ اَنْزَلَ عَلٰى عَبْدِهِ الْكِتٰبَ وَلَمْ يَجْعَلْ لَّهٗ عِوَجًا ﴿١﴾

2-3. ನಿಖರವಾದ ನೇರ ಮಾತನ್ನಾಡುವಂತಹ ಗ್ರಂಥ. ಇದು ಜನರಿಗೆ ಅಲ್ಲಾಹನ ಘೋರ ಯಾತನೆಯ ಎಚ್ಚರಿಕೆ ನೀಡಲಿಕ್ಕಾಗಿ ಮತ್ತು ಸತ್ಯವಿಶ್ವಾಸವನ್ನಿರಿಸಿ ಸತ್ಕರ್ಮವೆಸಗುವವರಿಗೆ, ಉತ್ತಮ ಪ್ರತಿಫಲ ಸಿಗಲಿದೆಯೆಂದೂ ಅವರು ಅದರಲ್ಲಿ ಸದಾಕಾಲ ವಾಸಿಸುವರೆಂದೂ ಸುವಾರ್ತೆ ನೀಡಲಿಕ್ಕಾಗಿದೆ-

قَيِّمًا لِّيُنْذِرَ بَاْسًا شَدِيْدًا مِّنْ لَّدُنْهُ وَيُبَشِّرَ الْمُؤْمِنِيْنَ الَّذِيْنَ يَعْمَلُوْنَ الصّٰلِحٰتِ اَنَّ لَهُمْ اَجْرًا حَسَنًا ﴿٢﴾

مَّاكِثِيْنَ فِيْهِ اَبَدًا ﴿٣﴾

4. ಮತ್ತು ಅಲ್ಲಾಹನು ಯಾರನ್ನಾದರೂ ತನ್ನ ಪುತ್ರರನ್ನಾಗಿಸಿದ್ದಾನೆಂದು ಹೇಳುವವರನ್ನು ಎಚ್ಚರಿಸುವುದಕ್ಕಾಗಿದೆ.

وَّيُنْذِرَ الَّذِيْنَ قَالُوا اتَّخَذَ اللّٰهُ وَلَدًا ﴿٤﴾

5. ಇದರ ಬಗ್ಗೆ ಅವರಿಗೆ ಜ್ಞಾನವೇನೂ ಇಲ್ಲ. ಅವರ ಪೂರ್ವಿಕರಿಗೂ ಇರಲಿಲ್ಲ. ಅವರ ಬಾಯಿಯಿಂದ ಹೊರಡುವ ಈ ಮಾತು ಬಹಳ ಘೋರವಾದುದು. ಅವರು ಕೇವಲ ಹುಸಿಯನ್ನಾಡು ತ್ತಿದ್ದಾರೆ.

مَا لَهُمْ بِهٖ مِنْ عِلْمٍ وَّلَا لِاٰبَآئِهِمْ ۗ كَبُرَتْ كَلِمَةً تَخْرُجُ مِنْ اَفْوَاهِهِمْ ۗ اِنْ يَّقُوْلُوْنَ اِلَّا كَذِبًا ﴿٥﴾

6. ಓ ಪೈಗಂಬರರೇ, ಇವರು ಈ ಬೋಧನೆಯ ಮೇಲೆ ವಿಶ್ವಾಸ ವಿರಿಸದಿದ್ದರೆ ಪ್ರಾಯಶಃ ನೀವು ಇವರ ಹಿಂದೆ ವ್ಯಥೆಯಿಂದ ನಿಮ್ಮ ಜೀವವನ್ನೇ ಕಳೆದುಕೊಳ್ಳುವವರಿದ್ದೀರಿ.

فَلَعَلَّكَ بَاخِعٌ نَّفْسَكَ عَلٰٓى اٰثَارِهِمْ اِنْ لَّمْ يُؤْمِنُوْا بِهٰذَا الْحَدِيْثِ اَسَفًا ﴿٦﴾

7. ವಾಸ್ತವದಲ್ಲಿ ಇವರ ಪೈಕಿ ಯಾರು ಉತ್ತಮ ಕರ್ಮಗಳನ್ನು ಮಾಡುತ್ತಾರೆಂದು ಪರೀಕ್ಷಿಸಲಿಕ್ಕಾಗಿ ನಾವು ಈ ಭೂಮಿ ಯಲ್ಲಿರುವ ಎಲ್ಲ ವಸ್ತುಗಳನ್ನು ಭೂಮಿಗೆ ಅಲಂಕಾರವನ್ನಾಗಿ ಮಾಡಿರುತ್ತೇವೆ.

اِنَّا جَعَلْنَا مَا عَلَى الْاَرْضِ زِيْنَةً لَّهَا لِنَبْلُوَهُمْ اَيُّهُمْ اَحْسَنُ عَمَلًا ﴿٧﴾

8. ಕಟ್ಟಕಡೆಗೆ ನಾವು ಇದನ್ನೆಲ್ಲಾ ಒಂದು ಬಟ್ಟ ಬಯಲನ್ನಾಗಿ ಮಾಡಿ ಬಿಡುವವರಿದ್ದೇವೆ.

وَإِنَّا لَجَاعِلُونَ مَا عَلَيْهَا صَعِيدًا جُرُزًا ﴿٨﴾

9. ಗುಹಾವಾಸಿಗಳು ಮತ್ತು ಶಿಲಾಲೇಖನದವರು[1] ನಮ್ಮ ಅದ್ಭುತ ನಿದರ್ಶನಗಳಲ್ಲಾಗಿದ್ದರೆಂದು ನೀವು ಭಾವಿಸುತ್ತೀರಾ?

أَمْ حَسِبْتَ أَنَّ أَصْحَابَ الْكَهْفِ وَالرَّقِيمِ كَانُوا مِنْ آيَاتِنَا عَجَبًا ﴿٩﴾

10. ಆ ಕೆಲವು ಮಂದಿ ತರುಣರು ಗುಹೆಯೊಳಗೆ ಆಶ್ರಯ ಪಡೆದರು ಮತ್ತು, "ಓ ನಮ್ಮ ಪ್ರಭೂ! ನಮಗೆ ನಿನ್ನ ವಿಶಿಷ್ಟ ಕೃಪೆಯನ್ನು ದಯಪಾಲಿಸು ಮತ್ತು ನಮ್ಮ ವ್ಯವಹಾರವನ್ನು ಸುಗಮಗೊಳಿಸು" ಎಂದರು.

إِذْ أَوَى الْفِتْيَةُ إِلَى الْكَهْفِ فَقَالُوا رَبَّنَا آتِنَا مِنْ لَدُنْكَ رَحْمَةً وَهَيِّئْ لَنَا مِنْ أَمْرِنَا رَشَدًا ﴿١٠﴾

11. ಆಗ ನಾವು ಅವರನ್ನು ಕಿವಿತಟ್ಟಿ ಅದೇ ಗುಹೆಯೊಳಗೆ ಅನೇಕ ವರ್ಷಗಳ ವರೆಗೆ ಗಾಢ ನಿದ್ರೆಯಲ್ಲಿ ಮಲಗಿಸಿಬಿಟ್ಟೆವು.

فَضَرَبْنَا عَلَىٰ آذَانِهِمْ فِي الْكَهْفِ سِنِينَ عَدَدًا ﴿١١﴾

12. ಅನಂತರ ಅವರ ಎರಡು ಗುಂಪುಗಳಲ್ಲಿ ಯಾವುದು ತನ್ನ (ಗುಹಾ) ವಾಸದ ಕಾಲಾವಧಿಯನ್ನು ಸರಿಯಾಗಿ ಗಣಿಸುತ್ತದೆಂದು ನೋಡಲಿಕ್ಕಾಗಿ ನಾವು ಅವರನ್ನು ಪುನಃ ಎಬ್ಬಿಸಿದೆವು.

ثُمَّ بَعَثْنَاهُمْ لِنَعْلَمَ أَيُّ الْحِزْبَيْنِ أَحْصَىٰ لِمَا لَبِثُوا أَمَدًا ﴿١٢﴾

13. ನಾವು ಅವರ ನಿಜ ಕಥೆಯನ್ನು ನಿಮಗೆ ತಿಳಿಸುತ್ತೇವೆ. ಅವರು ತಮ್ಮ ಪ್ರಭುವಿನ ಮೇಲೆ ವಿಶ್ವಾಸವಿಟ್ಟಿದ್ದ ಕೆಲವು ಮಂದಿ ತರುಣರಾಗಿದ್ದರು. ನಾವು ಅವರಿಗೆ ಸನ್ಮಾರ್ಗದರ್ಶನವನ್ನು ವೃದ್ಧಿಗೊಳಿಸಿದ್ದೇವು.[2]

نَحْنُ نَقُصُّ عَلَيْكَ نَبَأَهُمْ بِالْحَقِّ ۚ إِنَّهُمْ فِتْيَةٌ آمَنُوا بِرَبِّهِمْ وَزِدْنَاهُمْ هُدًى ﴿١٣﴾

14. ಅವರು ಎದ್ದಾಗ ನಾವು ಅವರ ಮನಸ್ಸನ್ನು ಬಲಗೊಳಿಸಿದೆವು. ಅವರು ಹೀಗೆ ಘೋಷಿಸಿದರು- "ಆಕಾಶಗಳ ಮತ್ತು ಭೂಮಿಯ ಪ್ರಭುವೇ ನಮ್ಮ ಪ್ರಭು. ನಾವು ಅವನನ್ನು ಬಿಟ್ಟು ಇತರ ಯಾರನ್ನೂ ಆರಾಧ್ಯನೆಂದು ಕರೆದು ಪ್ರಾರ್ಥಿಸಲಾರೆವು. ನಾವು ಹಾಗೆ ಮಾಡಿದರೆ ಅದು ಅಸಂಬದ್ಧ ಮಾತಾಗುವುದು."

وَرَبَطْنَا عَلَىٰ قُلُوبِهِمْ إِذْ قَامُوا فَقَالُوا رَبُّنَا رَبُّ السَّمَاوَاتِ وَالْأَرْضِ لَنْ نَدْعُوَ مِنْ دُونِهِ إِلَٰهًا ۖ لَقَدْ قُلْنَا إِذًا شَطَطًا ﴿١٤﴾

1. ಅರ್ಥಾತ್- ತಮ್ಮ ವಿಶ್ವಾಸದ ರಕ್ಷಣೆಗಾಗಿ ಗುಹೆಯಲ್ಲಿ ಆಶ್ರಯ ಪಡೆದ ಯುವಕರು. ಅವರ ಸ್ಮರಣಾರ್ಥವಾಗಿ ಅನಂತರ ಗುಹೆಯಲ್ಲಿ ಫಲಕ ಹಚ್ಚಲಾಗಿತ್ತು.
2. ಈ ಯುವಕರು ಪ್ರವಾದಿ ಮಸೀಹ್‌ರ(ಅ) ಆರಂಭಕಾಲದ ಅನುಯಾಯಿಗಳಾಗಿದ್ದರು. ಅವರು, ಬಹುದೇವಾರಾಧನೆಯಲ್ಲಿ ನಿರತವಾಗಿದ್ದ ಮತ್ತು ಏಕದೇವವಿಶ್ವಾಸಿಗಳ ಬದ್ಧ ವೈರಿಗಳಾಗಿದ್ದ ರೋಮನ್ ಸಾಮ್ರಾಜ್ಯದ ಪ್ರಜೆಗಳಾಗಿದ್ದರು.

15. (ತರುವಾಯ ಅವರು, ಪರಸ್ಪರ ಹೀಗೆ ಹೇಳಿದರು): "ನಮ್ಮ ಜನಾಂಗವು ಜಗತ್ಪಾಲಕನನ್ನು ಬಿಟ್ಟು ಇತರರನ್ನು ತನ್ನ ಆರಾಧ್ಯರಾಗಿ ಮಾಡಿಕೊಂಡಿದೆ. ಅವರು (ಅಥವಾ ಅವುಗಳು) ಆರಾಧನೆಗೆ ಯೋಗ್ಯರೆಂಬ ಬಗ್ಗೆ ಇವರು ಸ್ಪಷ್ಟ ಪ್ರಮಾಣಗಳನ್ನೇಕೆ ತರುವುದಿಲ್ಲ? ಅಲ್ಲಾಹನ ಮೇಲೆ ಮಿಥ್ಯಾರೋಪ ಹೊರಿಸುವವನಿಗಿಂತ ಹಿರಿಯ ಅಕ್ರಮಿ ಇನ್ನಾರಿರಬಹುದು?

هَٰٓؤُلَآءِ قَوْمُنَا اتَّخَذُوْا مِنْ دُوْنِهٖٓ اٰلِهَةً ؕ لَوْلَا يَاْتُوْنَ عَلَيْهِمْ بِسُلْطٰنٍۢ بَيِّنٍ ؕ فَمَنْ اَظْلَمُ مِمَّنِ افْتَرٰى عَلَى اللّٰهِ كَذِبًا ؕ ﴿١٥﴾

16. ನೀವೀಗ ಅವರಿಂದಲೂ ಅವರ ಆರಾಧ್ಯರಾಗಿರುವ ಅಲ್ಲಾಹೇತರರಿಂದಲೂ ಬೇರ್ಪಟ್ಟಿದ್ದೀರಿ. ಆದುದರಿಂದ ನಡೆಯಿರಿ, ಆ ಗುಹೆಯೊಳಗೆ ಆಶ್ರಯ ಪಡೆಯೋಣ. ನಿಮ್ಮ ಪ್ರಭು ನಿಮ್ಮ ಮೇಲೆ ತನ್ನ ಕೃಪಾಶ್ರಯವನ್ನು ವಿಶಾಲಗೊಳಿಸುವನು ಮತ್ತು ನಿಮ್ಮ ಕಾರ್ಯಕ್ಕಾಗಿ ಸಾಧನಾನುಕೂಲತೆಗಳನ್ನು ಒದಗಿಸುವನು."

وَاِذِ اعْتَزَلْتُمُوْهُمْ وَمَا يَعْبُدُوْنَ اِلَّا اللّٰهَ فَاْوٗٓا اِلَى الْكَهْفِ يَنْشُرْ لَكُمْ رَبُّكُمْ مِّنْ رَّحْمَتِهٖ وَيُهَيِّئْ لَكُمْ مِّنْ اَمْرِكُمْ مِّرْفَقًا ﴿١٦﴾

17. ನೀವು ಅವರನ್ನು ಗುಹೆಯೊಳಗೆ ನೋಡುತ್ತಿದ್ದರೆ[3] ಸೂರ್ಯನು ಉದಯಿಸುವಾಗ ಅವರ ಗುಹೆಯನ್ನು ಬಿಟ್ಟು ಬಲಭಾಗಕ್ಕೆ ಏರುತ್ತಿರುವಂತೆಯೂ ಅಸ್ತಮಿಸುವಾಗ ಅವರನ್ನು ತಪ್ಪಿಸಿ ಎಡಭಾಗಕ್ಕೆ ಇಳಿಯುತ್ತಿರುವಂತೆಯೂ ಅವರು ಗುಹೆಯೊಳಗೆ ಒಂದು ವಿಶಾಲವಾದ ಸ್ಥಳದಲ್ಲಿ ಬಿದ್ದುಕೊಂಡಿದ್ದುದನ್ನೂ ಕಾಣುತ್ತಿದ್ದಿರಿ. ಇದು ಅಲ್ಲಾಹನ ನಿದರ್ಶನಗಳಲ್ಲೊಂದು. ಅಲ್ಲಾಹನು ಯಾರಿಗೆ ಮಾರ್ಗದರ್ಶನ ನೀಡುವನೋ ಅವನೇ ಮಾರ್ಗದರ್ಶನ ಹೊಂದುವವನು ಮತ್ತು ಯಾರನ್ನು ಅಲ್ಲಾಹನು ಪಥಭ್ರಷ್ಟಗೊಳಿಸುವನೋ ಅವನಿಗಾಗಿ ನೀವು ಯಾವ ರಕ್ಷಕ ಮಿತ್ರ- ಮಾರ್ಗದರ್ಶಕನನ್ನೂ ಪಡೆಯಲಾರಿರಿ.

وَتَرَى الشَّمْسَ اِذَا طَلَعَتْ تَّزٰوَرُ عَنْ كَهْفِهِمْ ذَاتَ الْيَمِيْنِ وَاِذَا غَرَبَتْ تَّقْرِضُهُمْ ذَاتَ الشِّمَالِ وَهُمْ فِيْ فَجْوَةٍ مِّنْهُ ؕ ذٰلِكَ مِنْ اٰيٰتِ اللّٰهِ ؕ مَنْ يَّهْدِ اللّٰهُ فَهُوَ الْمُهْتَدِ ۚ وَمَنْ يُّضْلِلْ فَلَنْ تَجِدَ لَهٗ وَلِيًّا مُّرْشِدًا ﴿١٧﴾

18. ನೀವು ಅವರನ್ನು ಕಂಡರೆ ಅವರು ಎಚ್ಚರವಿದ್ದಾರೆಂದು ತಿಳಿಯುತ್ತಿದ್ದಿರಿ. ವಸ್ತುತಃ ಅವರು ನಿದ್ರಿಸುತ್ತಿದ್ದರು. ನಾವು ಅವರನ್ನು ಬಲಕ್ಕೂ ಎಡಕ್ಕೂ ಪಾರ್ಶ್ವಪಲ್ಲಟಗೊಳಿಸುತ್ತಿದ್ದೆವು ಮತ್ತು ಅವರ ನಾಯಿಯು ಗುಹೆಯದ್ವಾರದಲ್ಲಿ ಮುಂಗಾಲುಗಳನ್ನು ಹರಡಿ ಕುಳಿತಿತ್ತು. ನೀವೆಲ್ಲಾದರೂ ಅವರನ್ನು ಇಣುಕಿ ನೋಡುತ್ತಿದ್ದರೆ ಹಿಂದಿರುಗಿ ಓಟ ಕೀಳುತ್ತಿದ್ದಿರಿ ಮತ್ತು ಅವರ ದೃಶ್ಯದಿಂದ ನಿಮ್ಮಲ್ಲಿ ಭೀತಿಯುಂಟಾಗಿ ಬಿಡುತ್ತಿತ್ತು.

وَتَحْسَبُهُمْ اَيْقَاظًا وَّهُمْ رُقُوْدٌ ۖۗ وَّنُقَلِّبُهُمْ ذَاتَ الْيَمِيْنِ وَذَاتَ الشِّمَالِ ۖۗ وَكَلْبُهُمْ بَاسِطٌ ذِرَاعَيْهِ بِالْوَصِيْدِ ؕ لَوِ اطَّلَعْتَ عَلَيْهِمْ لَوَلَّيْتَ مِنْهُمْ فِرَارًا وَّلَمُلِئْتَ مِنْهُمْ رُعْبًا ﴿١٨﴾

3. ಪರಸ್ಪರ ಒಪ್ಪಂದ ಮಾಡಿಕೊಂಡಂತೆ ಅವರು ನಗರದ ಹೊರವಲಯದ ಪರ್ವತಗಳ ನಡುವೆ ಗುಹೆಯೊಂದರ ಬಳಿ ಹೋಗಿ ಅಡಗಿ ಕುಳಿತರು. ಆ ಮೂಲಕ ಅವರು ಕಲ್ಲೆಸೆದು ಕೊಲ್ಲುವುದರಿಂದ ಅಥವಾ ಧರ್ಮಭ್ರಷ್ಟರಾಗಲು ನಿರ್ಬಂಧಿತರಾಗುವುದರಿಂದ ರಕ್ಷಣೆ ಪಡೆಯಬಯಸಿದ್ದರು. ಇದರ ಪ್ರಸ್ತಾಪವನ್ನು ಈ ಮಧ್ಯೆ ಬಿಟ್ಟು ಬಿಡಲಾಗಿದೆ.

19. ಅವರು ಪರಸ್ಪರ ವಿಚಾರಿಸಿಕೊಳ್ಳಲಿಕ್ಕಾಗಿ ಇದೇ ವೈಚಿತ್ರ್ಯದೊಂದಿಗೆ ನಾವು ಅವರನ್ನು ಎಬ್ಬಿಸಿದೆವು[4] ಅವರಲ್ಲೊಬ್ಬನು- "ಈ ಸ್ಥಿತಿಯಲ್ಲಿ ನೀವು ಎಷ್ಟು ಕಾಲ ಇದ್ದಿರಿ?" ಎಂದನು. ಆಗ ಉಳಿದವರು, "ಪ್ರಾಯಶಃ ಒಂದು ದಿನ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಇರಬಹುದು" ಎಂದರು. ತರುವಾಯ ಅವರು, "ನಮ್ಮ ಎಷ್ಟು ಕಾಲಾವಧಿಯು ಈ ಅವಸ್ಥೆಯಲ್ಲಿ ಕಳೆಯಿತೆಂಬುದನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು. ಸರಿ, ಈಗ ನಾವು ನಮ್ಮಲ್ಲೊಬ್ಬನನ್ನು ಬೆಳ್ಳಿಯ ಈ ನಾಣ್ಯ ಕೊಟ್ಟು ಪೇಟೆಗೆ ಕಳುಹಿಸೋಣ. ಅವನು ಅತ್ಯುತ್ತಮ ಆಹಾರ ಎಲ್ಲಿ ಸಿಗುತ್ತದೆಂದು ನೋಡಲಿ. ಅಲ್ಲಿಂದ ಅವನು ಸ್ವಲ್ಪ ಆಹಾರವನ್ನು ತರಲಿ. ಅವನು ಸ್ವಲ್ಪ ಜಾಗರೂಕತೆ ಯಿಂದ ಕಾರ್ಯವೆಸಗಲಿ. ಅವನಿಂದಾಗಿ ನಾವು ಇಲ್ಲಿದ್ದೇವೆಂಬ ಸುಳಿವು ಯಾರಿಗೂ ಸಿಗಬಾರದು.

وَكَذٰلِكَ بَعَثْنٰهُمْ لِيَتَسَآءَلُوْا بَيْنَهُمْ ۭ قَالَ
قَآئِلٌ مِّنْهُمْ كَمْ لَبِثْتُمْ ۭ قَالُوْا لَبِثْنَا يَوْمًا
اَوْ بَعْضَ يَوْمٍ ۭ قَالُوْا رَبُّكُمْ اَعْلَمُ بِمَا لَبِثْتُمْ ۭ
فَابْعَثُوْٓا اَحَدَكُمْ بِوَرِقِكُمْ هٰذِهٖٓ اِلَى الْمَدِيْنَةِ
فَلْيَنْظُرْ اَيُّهَآ اَزْكٰى طَعَامًا فَلْيَاْتِكُمْ
بِرِزْقٍ مِّنْهُ وَلْيَتَلَطَّفْ وَلَا يُشْعِرَنَّ
بِكُمْ اَحَدًا ⑲

20. ಅವರ ಕೈಗೆ ನಾವು ಸಿಕ್ಕಿ ಬಿಟ್ಟರೆ ಅವರು ನಮ್ಮನ್ನು ಕಲ್ಲೆಸೆದು ಕೊಂದೇ ಬಿಡುವರು ಅಥವಾ ಬಲಾತ್ಕಾರವಾಗಿ ನಮ್ಮನ್ನು ತಮ್ಮ ಮತಕ್ಕೆ ಮರಳಿ ಕೊಂಡೊಯ್ಯುವರು. ಹಾಗಾಗಿ ಬಿಟ್ಟರೆ ನಾವೆಂದೂ ಯಶಸ್ವಿಯಾಗಲಾರೆವು" ಎಂದರು.

اِنَّهُمْ اِنْ يَّظْهَرُوْا عَلَيْكُمْ يَرْجُمُوْكُمْ
اَوْ يُعِيْدُوْكُمْ فِيْ مِلَّتِهِمْ وَلَنْ
تُفْلِحُوْٓا اِذًا اَبَدًا ⑳

21. ಹೀಗೆ ಅಲ್ಲಾಹನ ವಾಗ್ದಾನವು ಸತ್ಯವೆಂದೂ ಪುನರುತ್ಥಾನದ ಆ ಘಳಿಗೆಯು ಖಂಡಿತವಾಗಿಯೂ ಬಂದೇ ತೀರುವುದೆಂದೂ ಜನರು ತಿಳಿಯುವಂತಾಗಲು ನಾವು ನಗರವಾಸಿಗಳಿಗೆ ಇವರ ಸ್ಥಿತಿಯನ್ನು ತಿಳಿಯಪಡಿಸಿದೆವು.[5] (ನಿಜವಾಗಿ ಇದುವೇ ಚಿಂತನಾರ್ಹ ವಿಷಯವಾಗಿದ್ದರೂ) ಆಗ ಅವರು ಇವರ (ಗುಹೆಯವರ) ಬಗ್ಗೆ ಹೇಗೆ ವರ್ತಿಸಬೇಕೆಂದು ತರ್ಕಿಸುತ್ತಿದ್ದರು. "ಇವರ ಮೇಲೊಂದು ಗೋಡೆ ಕಟ್ಟಿಬಿಡಿರಿ. ಇವರ ವಿಷಯ ಇವರ ಪ್ರಭುವೇ ಚೆನ್ನಾಗಿ

وَكَذٰلِكَ اَعْثَرْنَا عَلَيْهِمْ لِيَعْلَمُوْٓا اَنَّ
وَعْدَ اللّٰهِ حَقٌّ وَّاَنَّ السَّاعَةَ لَا رَيْبَ
فِيْهَا ۚ اِذْ يَتَنَازَعُوْنَ بَيْنَهُمْ اَمْرَهُمْ
فَقَالُوا ابْنُوْا عَلَيْهِمْ بُنْيَانًا ۭ رَبُّهُمْ
اَعْلَمُ بِهِمْ ۭ قَالَ الَّذِيْنَ غَلَبُوْا عَلٰٓى

4. ಅರ್ಥಾತ್- ವಿಚಿತ್ರ ರೀತಿಯಲ್ಲಿ ಅವರನ್ನು ನಿದ್ರಿಸುವಂತೆ ಮಾಡಿ ಜಗತ್ತನ್ನು ಅವರ ಬಗೆಗಿನ ತಿಳಿವಳಿಕೆಯಿಂದ ದೂರವಿಡಲಾದಂತೆಯೇ, ದೀರ್ಘಾವಧಿಯ ನಂತರ ಅವರು ಎಬ್ಬಿಸಲ್ಪಡುವುದೂ ಪವಾಡ ಸದೃಶವಾದ ವೈಚಿತ್ರ್ಯವಾಗಿತ್ತು.

5. ಅರ್ಥಾತ್- ಆ ವ್ಯಕ್ತಿ ಊಟ ತರಲಿಕ್ಕಾಗಿ ಪೇಟೆಗೆ ಹೋದಾಗ ಜಗತ್ತು ಬದಲಾಗಿತ್ತು. ಮೂರ್ತಿ ಪೂಜೆಯಲ್ಲಿ ತಲ್ಲೀನವಾಗಿದ್ದ ರೋಮ್, ಕ್ರೈಸ್ತಧರ್ಮ ಸ್ವೀಕರಿಸಿ ದೀರ್ಘ ಕಾಲ ಕಳೆದಿತ್ತು. ಭಾಷೆ, ನಾಗರಿಕತೆ, ಸಂಸ್ಕೃತಿ, ಉಡುಪು ಹೀಗೆ ಎಲ್ಲದರಲ್ಲೂ ಸ್ಪಷ್ಟ ವ್ಯತ್ಯಾಸ ಉಂಟಾಗಿತ್ತು. ಇನ್ನೂರು ವರ್ಷಪೂರ್ವದ ಆ ವ್ಯಕ್ತಿ ತನ್ನ ವೇಶಭೂಷಣ, ಭಾಷೆಗಳೆಲ್ಲದರ ಮೂಲಕ ತಕ್ಷಣ ಜನರ ಗಮನ ಕೇಂದ್ರವಾದನು. ಹಿಂದಿನ ಕಾಲದ ನಾಣ್ಯವನ್ನು ಅವನು ಊಟ ಖರೀದಿಸಲಿಕ್ಕಾಗಿ ಅಂಗಡಿಯವನಿಗೆ ನೀಡಿದಾಗ ಅವನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ವಿಚಾರಣೆ ನಡೆಸಿದಾಗ ಇವನು ಇನ್ನೂರು ವರ್ಷಗಳ ಮೊದಲು ತನ್ನ ವಿಶ್ವಾಸದ ರಕ್ಷಣೆಗಾಗಿ ಓಡಿ ಹೋಗಿದ್ದ ಮಸೀಹ್‌ರ(ಅ) ಅನುಯಾಯಿಗಳಲ್ಲೊಬ್ಬನೆಂದು ತಿಳಿದು ಬಂತು. ಕ್ರೈಸ್ತ ಜನವಾಸ ಪ್ರದೇಶಗಳಲ್ಲಿ ಈ ಸುದ್ದಿ ತಕ್ಷಣ ವ್ಯಾಪಿಸಿತು. ಆಡಳಿತಾಧಿಕಾರಿಗಳ ಜತೆಗೆ ಜನರ ಒಂದು ತಂಡವೇ ಗುಹೆಯ ಬಳಿಗೆ ತಲಪಿತು. ಇನ್ನೂರು ವರ್ಷಗಳ ನಂತರ ನಿದ್ರಿಸಿ ಎದ್ದಿರುವ ವಿಚಾರ ಅವರಿಗೆ ತಿಳಿದಾಗ ಅವರು ತಮ್ಮ ಕ್ರೈಸ್ತ ಸಹೋದರರಿಗೆ ವಂದಿಸಿ ಮಲಗಿ ಬಿಟ್ಟರು. ಅನಂತರ ಅವರ ಪ್ರಾಣ ಹಾರಿಹೋಯಿತು.

ಬಲ್ಲ"[6] ಎಂದು ಕೆಲವರು ಹೇಳಿದರು. ಆದರೆ ಅವರ ವ್ಯವಹಾರಗಳಲ್ಲಿ ಮೇಲುಗೈ ಉಳ್ಳವರು, "ನಾವು ಇವರ ಮೇಲೊಂದು ಆರಾಧನಾಲಯವನ್ನು ನಿರ್ಮಿಸುವೆವು' ಎಂದರು.[7]

أَمْرِهِمْ لَنَتَّخِذَنَّ عَلَيْهِم مَّسْجِدًا ﴿٢١﴾

22. ಅವರು ಮೂವರಿದ್ದರೆಂದೂ ನಾಲ್ಕನೆಯದು ಅವರ ನಾಯಿಯಾಗಿತ್ತೆಂದೂ ಕೆಲವರೆನ್ನುವರು. ಇನ್ನು ಕೆಲವರು ಅವರು ಐವರಿದ್ದರೆಂದೂ ಆರನೆಯದು ಅವರ ನಾಯಿಯಾಗಿತ್ತೆಂದೂ ಹೇಳುವರು. ಇವೆಲ್ಲ ಊಹೆಗಳು. ಮತ್ತೆ ಕೆಲವರು ಏಳುಮಂದಿ ಇದ್ದರೆಂದೂ ಎಂಟನೆಯದು ಅವರ ನಾಯಿಯಾಗಿತ್ತೆಂದೂ ಹೇಳುತ್ತಾರೆ.[8] ಹೇಳಿರಿ- "ಅವರು ಎಷ್ಟು ಮಂದಿ ಇದ್ದರೆಂದು ನನ್ನ ಪ್ರಭು ಮಾತ್ರ ಬಲ್ಲನು. ಅವರ ಸರಿಯಾದ ಸಂಖ್ಯೆಯನ್ನು ಕೆಲವೇ ಮಂದಿಬಲ್ಲರಷ್ಟೇ. ಆದುದರಿಂದ ಅವರ ಸಂಖ್ಯೆಯ ಬಗ್ಗೆ ಸ್ಥೂಲವಾದ ಮಾತನ್ನು ಮೀರಿ ಜನರೊಡನೆ ವಾದಿಸಬೇಡಿರಿ ಮತ್ತು ಅವರ ಕುರಿತು ಯಾರೊಡನೆಯೂ ವಿಚಾರಿಸಲೂ ಬೇಡಿರಿ.[9]

سَيَقُولُونَ ثَلَاثَةٌ رَّابِعُهُمْ كَلْبُهُمْ وَيَقُولُونَ خَمْسَةٌ سَادِسُهُمْ كَلْبُهُمْ رَجْمًا بِالْغَيْبِ ۖ وَيَقُولُونَ سَبْعَةٌ وَثَامِنُهُمْ كَلْبُهُمْ ۚ قُل رَّبِّي أَعْلَمُ بِعِدَّتِهِم مَّا يَعْلَمُهُمْ إِلَّا قَلِيلٌ ۗ فَلَا تُمَارِ فِيهِمْ إِلَّا مِرَاءً ظَاهِرًا وَلَا تَسْتَفْتِ فِيهِم مِّنْهُمْ أَحَدًا ﴿٢٢﴾

23. ಮತ್ತು[10] ಗಮನಿಸಿರಿ, ಯಾವ ವಿಷಯದ ಬಗೆಗೂ ನಾನು ನಾಳೆ ಈ ಕೆಲಸವನ್ನು ಮಾಡಿಬಿಡುವೆನು ಎನ್ನಬೇಡಿರಿ.

وَلَا تَقُولَنَّ لِشَيْءٍ إِنِّي فَاعِلٌ ذَٰلِكَ غَدًا ﴿٢٣﴾

6. ವಿವರಣಾ ಶೈಲಿಯಿಂದ ಇದು ಕ್ರೈಸ್ತರ ಪೈಕಿಯ ಸಜ್ಜನರ ಮಾತಾಗಿತ್ತೆಂದು ವ್ಯಕ್ತವಾಗುತ್ತದೆ. ಗುಹೆಯವರು, ಗುಹೆಯೊಳಗೆ ಮಲಗಿಕೊಂಡಿದ್ದಂತೆಯೇ ಮಲಗಿರಲಿ. ಗುಹೆಯ ಬಾಯಿಯಲ್ಲೊಂದು ಕಲ್ಲು ಚಪ್ಪಡಿಯನ್ನಿಟ್ಟು ಬಿಡಿರಿ. ಈ ವ್ಯಕ್ತಿಗಳು ಯಾರಾಗಿದ್ದರು, ಅವರ ಸ್ಥಾನಮಾನವೇನು, ಅವರ ಪರಿಣಾಮವೇನಾಗಲಿದೆ ಎಂಬುದನ್ನೆಲ್ಲಾ ಅವರ ಪ್ರಭುವೇ ಚೆನ್ನಾಗಿ ಬಲ್ಲನು ಎಂಬುದು ಅವರ ಅಭಿಪ್ರಾಯವಾಗಿತ್ತು.

7. ಇದಕ್ಕೆ ಕಾರಣವೇನೆಂದರೆ ಆಗ ಕ್ರೈಸ್ತರಲ್ಲಿ ಬಹುದೇವಾರಾಧನೆಯಿಂದ ಕೂಡಿದಂತಹ ವಿಚಾರಗಳು ಹರಡಿದ್ದವು. ಹಳೆಯ ಮೂರ್ತಿಗಳ ಸ್ಥಾನದಲ್ಲಿ ಅವರಿಗೆ ಆರಾಧನೆ ಮಾಡಲು ಈ ಆರಾಧ್ಯರುಗಳು ದೊರೆತಿದ್ದರು.

8. ಈ ಘಟನೆ ನಡೆದು ಇನ್ನೂರ ಎಪ್ಪತ್ತೈದು ವರ್ಷಗಳು ಕಳೆದ ಬಳಿಕವೂ ಕುರ್‌ಆನ್ ಅವತೀರ್ಣ ಗೊಂಡ ಕಾಲದಲ್ಲಿ ಅದರ ಬಗ್ಗೆ ಕ್ರೈಸ್ತರಲ್ಲಿ ಅನೇಕ ತರದ ಐತಿಹ್ಯಗಳು ಪ್ರಚಲಿತದಲ್ಲಿದ್ದವು ಎಂದು ಇದರಿಂದ ವ್ಯಕ್ತವಾಗುತ್ತದೆ. ಆದರೆ ಯಾರ ಬಳಿಯೂ ನಂಬಲರ್ಹವಾದಂತಹ ವಿವರಗಳಿರಲಿಲ್ಲ. ಅವರ ಮೂರನೆಯ ಹೇಳಿಕೆಯನ್ನು ಅಲ್ಲಾಹನು ನಿರಾಕರಿಸಿಲ್ಲ. ಆದ್ದರಿಂದ ಅವರ ನಿಜವಾದ ಸಂಖ್ಯೆ ಏಳೇ ಆಗಿರಬಹುದು ಎಂದು ಭಾವಿಸಬಹುದಾಗಿದೆ.

9. ಅರ್ಥಾತ್- ಅವರ ಸಂಖ್ಯೆ ಎಷ್ಟಿತ್ತು ಎಂಬುದು ಮುಖ್ಯವಲ್ಲ. ಬದಲಾಗಿ ಆ ಘಟನೆಯಿಂದ ದೊರೆಯುವ ಪಾಠ ಮುಖ್ಯವಾದುದಾಗಿದೆ.

10. ಇದೊಂದು ಉಪಮಾತಾಗಿದೆ. ಸೂಕ್ತದಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಕ್ಕೆ ಅನುಗುಣವಾಗಿ ವಾಕ್ಸರಣಿಯ ಮಧ್ಯದಲ್ಲಿ ಇದನ್ನು ಹೇಳಲಾಗಿದೆ. ಅಸ್ಹಾಬುಲ್ ಕಹಫ್ ಅಥವಾ ಗುಹೆಯವರ ನಿಜವಾದ ಸಂಖ್ಯೆ ಎಷ್ಟಿತ್ತು ಎಂಬುದರ ಜ್ಞಾನ ಅಲ್ಲಾಹನಿಗೆ ಮಾತ್ರವಿದೆ ಮತ್ತು ನೀವು ಅದರ ಬಗ್ಗೆ ಸಂಶೋಧನೆ ನಡೆಸುವುದು ಅನಗತ್ಯ ಎಂದು ಹಿಂದಿನ ಸೂಕ್ತದಲ್ಲಿ ನಿರ್ದೇಶಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಮುಂದಿನ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಮೊದಲು ಉಪಮಾತಿನ ರೂಪದಲ್ಲಿ ಇದನ್ನು ಹೇಳಲಾಗಿದೆ. ಜತೆಗೆ ಪ್ರವಾದಿವರ್ಯ(ಸ) ಮತ್ತು ಸತ್ಯವಿಶ್ವಾಸಿಗಳಿಗೆ ಒಂದು ಮಾರ್ಗದರ್ಶನವನ್ನೂ ನೀಡಲಾಗಿದೆ. ಅದೇನೆಂದರೆ, "ನಾನು ಈ ಕೆಲಸವನ್ನು ನಾಳೆ ಮಾಡಿ ಬಿಡುತ್ತೇನೆ" ಎಂದು ದೃಢವಾದ ಧ್ವನಿಯಲ್ಲಿ ನೀವೆಂದೂ ಹೇಳದಿರಿ. ಆ ಕೆಲಸವನ್ನು ನಿಮಗೆ ಮಾಡಲು ಸಾಧ್ಯವಿದೆಯೋ ಇಲ್ಲವೋ ಎಂದು ನಿಮಗೇನು ಗೊತ್ತು."

24. ಅಲ್ಲಾಹನು ಇಚ್ಛಿಸುವ ಹೊರತು (ನೀವೇನನ್ನೂ ಮಾಡಲಾರಿರಿ). ಮರವೆಯಿಂದ ಇಂತಹ ಮಾತು ನಿಮ್ಮ ಬಾಯಿಯಿಂದ ಬಂದು ಬಿಟ್ಟರೆ ಕೂಡಲೇ ನಿಮ್ಮ ಪ್ರಭುವನ್ನು ಸ್ಮರಿಸಿಕೊಳ್ಳಿರಿ ಮತ್ತು ನನ್ನ ಪ್ರಭು ಈ ವಿಷಯದಲ್ಲಿ ಸತ್ಯಕ್ಕೆ ಸಮೀಪವಾದುದರ ಕಡೆಗೆ ನನಗೆ ಮಾರ್ಗದರ್ಶನ ಮಾಡುವನೆಂದು ನಾನು ನಿರೀಕ್ಷಿಸುತ್ತೇನೆನ್ನಿರಿ.

إِلَّآ أَن يَشَآءَ ٱللَّهُ ۚ وَٱذْكُر رَّبَّكَ إِذَا نَسِيتَ وَقُلْ عَسَىٰٓ أَن يَهْدِيَنِ رَبِّى لِأَقْرَبَ مِنْ هَٰذَا رَشَدًا ﴿٢٤﴾

25. ಅವರು ತಮ್ಮ ಗುಹೆಯಲ್ಲಿ ಮುನ್ನೂರು ವರ್ಷಗಳಿದ್ದರು, (ಕೆಲವರ ಕಾಲಗಣನೆಯಲ್ಲಿ) ಇನ್ನೂ 9 ವರ್ಷ ಹೆಚ್ಚಿದೆ.

وَلَبِثُوا۟ فِى كَهْفِهِمْ ثَلَٰثَ مِا۟ئَةٍ سِنِينَ وَٱزْدَادُوا۟ تِسْعًا ﴿٢٥﴾

26. ಅವರು ತಂಗಿದ್ದ ಕಾಲಾವಧಿ ಎಷ್ಟೆಂಬುದು ಅಲ್ಲಾಹನಿಗೇ ಚೆನ್ನಾಗಿ ಗೊತ್ತು[11] ಎಂದು ನೀವು ಹೇಳಿರಿ- ಆಕಾಶಗಳ ಮತ್ತು ಭೂಮಿಯ ಎಲ್ಲ ರಹಸ್ಯ ಸಂಗತಿಗಳು ಅವನಿಗೆ ಮಾತ್ರ ತಿಳಿದಿದೆ. ಅವನ ವೀಕ್ಷಣವೂ ಶ್ರವಣವೂ ಅದೆಷ್ಟು ಸೂಕ್ಷ್ಮ! ಅವನ ಹೊರತು (ಭೂಮಿ-ಆಕಾಶಗಳಲ್ಲಿರುವ ಸೃಷ್ಟಿಗಳ) ರಕ್ಷಕ ಮಿತ್ರ ಇನ್ನಾರೂ ಇಲ್ಲ, ಅವನು ತನ್ನ ಆಜ್ಞಾಧಿಕಾರದಲ್ಲಿ ಯಾರನ್ನೂ ಭಾಗೀದಾರನಾಗಿ ಮಾಡುವುದಿಲ್ಲ.

قُلِ ٱللَّهُ أَعْلَمُ بِمَا لَبِثُوا۟ ۖ لَهُۥ غَيْبُ ٱلسَّمَٰوَٰتِ وَٱلْأَرْضِ ۖ أَبْصِرْ بِهِۦ وَأَسْمِعْ ۚ مَا لَهُم مِّن دُونِهِۦ مِن وَلِىٍّ وَلَا يُشْرِكُ فِى حُكْمِهِۦٓ أَحَدًا ﴿٢٦﴾

27. ಓ ಪೈಗಂಬರರೇ, ನಿಮ್ಮ ಮೇಲೆ ನಿಮ್ಮ ಪ್ರಭುವಿನ ಗ್ರಂಥದಿಂದ 'ದೇವವಾಣಿ' ಮಾಡಲಾಗಿರುವುದನ್ನು (ಇದ್ದಕ್ಕಿದ್ದಂತೆ) ಓದಿ ಹೇಳಿರಿ. ಅದರ ವಚನಗಳನ್ನು ಬದಲಾಯಿಸುವ ಅಧಿಕಾರ ಯಾರಿಗೂ ಇಲ್ಲ, (ನೀವು ಯಾರಿಗಾಗಿಯಾದರೂ ಅದರಲ್ಲಿ ಬದಲಾವಣೆಗಳನ್ನು ಮಾಡಿದರೆ) ಅವನಿಂದ ತಪ್ಪಿಸಿಕೊಂಡು ಓಡಿಹೋಗತಕ್ಕ ಯಾವ ಅಭಯಸ್ಥಾನವನ್ನೂ ಪಡೆಯಲಾರಿರಿ.

وَٱتْلُ مَآ أُوحِىَ إِلَيْكَ مِن كِتَابِ رَبِّكَ ۖ لَا مُبَدِّلَ لِكَلِمَٰتِهِۦ وَلَن تَجِدَ مِن دُونِهِۦ مُلْتَحَدًا ﴿٢٧﴾

28. ತಮ್ಮ ಪ್ರಭುವಿನ ಸಂಪ್ರೀತಿಯ ಪ್ರಾಪ್ತಿಯನ್ನು ಬಯಸಿ ಬೆಳಗುಬೈಗುಗಳಲ್ಲಿ ಅವನನ್ನು ಪ್ರಾರ್ಥಿಸುತ್ತಿರುವವರ ಸಹವಾಸ ದಲ್ಲಿರಲು ನಿಮ್ಮ ಮನಸ್ಸನ್ನು ಸಂತೃಪ್ತಗೊಳಿಸಿಕೊಳ್ಳಿರಿ ಮತ್ತು ಅವರ ಕಡೆಯಿಂದ ನಿಮ್ಮ ದೃಷ್ಟಿಯನ್ನೆಂದೂ (ಬೇರೆ ಕಡೆಗೆ) ತಿರುಗಿಸಬೇಡಿರಿ. ನೀವು ಇಹಲೋಕದ ಸೊಬಗನ್ನು ಬಯಸು ತ್ತೀರಾ? ನಾವು ನಮ್ಮ ಸ್ಮರಣೆಯಿಂದ ಬೋಧಶೂನ್ಯವಾಗಿ ಮಾಡಿರುವಂಥವನನ್ನೂ ತನ್ನ ದೇಹೇಚ್ಛೆಗಳ ಅನುಸರಣೆಯನ್ನು

وَٱصْبِرْ نَفْسَكَ مَعَ ٱلَّذِينَ يَدْعُونَ رَبَّهُم بِٱلْغَدَوٰةِ وَٱلْعَشِىِّ يُرِيدُونَ وَجْهَهُۥ ۖ وَلَا تَعْدُ عَيْنَاكَ عَنْهُمْ تُرِيدُ زِينَةَ ٱلْحَيَوٰةِ ٱلدُّنْيَا ۖ وَلَا تُطِعْ مَنْ أَغْفَلْنَا قَلْبَهُۥ عَن ذِكْرِنَا وَٱتَّبَعَ هَوَىٰهُ

11. ಅರ್ಥಾತ್- 'ಅಸ್ಹಾಬುಲ್ ಕಹಫ್' ಅಥವಾ ಗುಹೆಯವರ ಸಂಖ್ಯೆಯಂತೆಯೇ ಅವರು ತಂಗಿದ್ದ ಅವಧಿ ಎಷ್ಟು ಎಂಬ ಬಗ್ಗೆಯೂ ಜನರಲ್ಲಿ ಅಭಿಪ್ರಾಯ ವ್ಯತ್ಯಾಸವಿದೆ. ಆದರೆ ನೀವು ಅದರ ಶೋಧದಲ್ಲಿರಬೇಕಾಗಿಲ್ಲ. ಅವರು ಎಷ್ಟು ಕಾಲ ಆ ಸ್ಥಿತಿಯಲ್ಲಿದ್ದರೆಂಬುದನ್ನು ಅಲ್ಲಾಹನೇ ಬಲ್ಲ.

وَكَانَ أَمْرُهُ فُرُطًا ۝٢٨

ಸ್ವೀಕರಿಸಿಕೊಂಡಿರುವವನನ್ನೂ ಮಿತಿತಪ್ಪಿ ವರ್ತಿಸುವಂಥವನನ್ನೂ ಅನುಸರಿಸಬೇಡಿರಿ.[12]

وَقُلِ الْحَقُّ مِن رَّبِّكُمْ ۖ فَمَن شَاءَ فَلْيُؤْمِن وَمَن شَاءَ فَلْيَكْفُرْ ۚ إِنَّا أَعْتَدْنَا لِلظَّالِمِينَ نَارًا أَحَاطَ بِهِمْ سُرَادِقُهَا ۚ وَإِن يَسْتَغِيثُوا يُغَاثُوا بِمَاءٍ كَالْمُهْلِ يَشْوِي الْوُجُوهَ ۚ بِئْسَ الشَّرَابُ وَسَاءَتْ مُرْتَفَقًا ۝٢٩

29. ಸ್ಪಷ್ಟವಾಗಿ (ಹೀಗೆ) ಹೇಳಿಬಿಡಿರಿ- ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ, ಇಷ್ಟವಿದ್ದವರು ನಿರಾಕರಿಸಲಿ. (ನಿರಾಕರಿಸುವ) ಅಕ್ರಮಿಗಳಿಗೆ ನಾವು ಒಂದು ಅಗ್ನಿಯನ್ನು ಸಿದ್ಧಗೊಳಿಸಿಬಿಟ್ಟಿರುತ್ತೇವೆ. ಅದರ ಜ್ವಾಲೆಗಳು ಅವರನ್ನು ಆವರಿಸಿಕೊಂಡಿವೆ. ಅಲ್ಲಿ ಅವರು ನೀರು ಬೇಕೆಂದು ಕೇಳಿದಾಗ ಎಣ್ಣೆಯ ಮಡ್ಡಿಯಂತಹ ಹಾಗೂ ಬಾಯಿಯನ್ನು ಸುಟ್ಟು ಹಾಕುವಂತಹ ನೀರಿನಿಂದ ಅವರನ್ನು ಸತ್ಕರಿಸಲಾಗುವುದು. ಅತ್ಯಂತ ಕೆಟ್ಟ ಪೇಯವದು ಮತ್ತು ಅತಿಕೆಟ್ಟ ವಿಶ್ರಾಂತಿ ಗೃಹವದು.

إِنَّ الَّذِينَ آمَنُوا وَعَمِلُوا الصَّالِحَاتِ إِنَّا لَا نُضِيعُ أَجْرَ مَنْ أَحْسَنَ عَمَلًا ۝٣٠

30. ಇನ್ನು ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗುವವರ ವಿಷಯ. ನಾವು ಖಂಡಿತವಾಗಿಯೂ ಸತ್ಕರ್ಮಿಗಳ ಸತ್ಫಲವನ್ನು ವ್ಯರ್ಥಗೊಳಿಸುವುದಿಲ್ಲ.

أُولَٰئِكَ لَهُمْ جَنَّاتُ عَدْنٍ تَجْرِي مِن تَحْتِهِمُ الْأَنْهَارُ يُحَلَّوْنَ فِيهَا مِنْ أَسَاوِرَ مِن ذَهَبٍ وَيَلْبَسُونَ ثِيَابًا خُضْرًا مِّن سُندُسٍ وَإِسْتَبْرَقٍ مُّتَّكِئِينَ فِيهَا عَلَى الْأَرَائِكِ ۚ نِعْمَ الثَّوَابُ وَحَسُنَتْ مُرْتَفَقًا ۝٣١

31. ಅವರಿಗಾಗಿ ಸದಾ ಹಸಿರಾದ ಸ್ವರ್ಗೋದ್ಯಾನಗಳಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅಲ್ಲಿ ಅವರು ಬಂಗಾರದ ಕಂಕಣಗಳಿಂದ ಶೃಂಗರಿಸಲ್ಪಡುವರು.[13] ತೆಳ್ಳಗಿನ ರೇಶ್ಮೆ, ಜರತಾರಿ ಹಸಿರು ಬಟ್ಟೆಗಳನ್ನು ಧರಿಸುವರು ಮತ್ತು ಉನ್ನತ ಪೀಠಗಳ ಮೇಲೆ ದಿಂಬುಗಳಿಗೆ ಒರಗಿ ಕುಳಿತಿರುವರು. ಅತ್ಯುತ್ತಮ ಪ್ರತಿಫಲ ಮತ್ತು ಅತ್ಯುನ್ನತ ಮಟ್ಟದ ವಿಶ್ರಾಂತಿ ಧಾಮ!

وَاضْرِبْ لَهُم مَّثَلًا رَّجُلَيْنِ جَعَلْنَا لِأَحَدِهِمَا جَنَّتَيْنِ مِنْ أَعْنَابٍ وَحَفَفْنَاهُمَا بِنَخْلٍ وَجَعَلْنَا بَيْنَهُمَا زَرْعًا ۝٣٢

32. ಓ ಪೈಗಂಬರರೇ, ಅವರ ಮುಂದೆ ಒಂದು ಉಪಮೆಯನ್ನಿರಿಸಿರಿ. ಇಬ್ಬರಿದ್ದರು, ಅವರಲ್ಲೊಬ್ಬನಿಗೆ ನಾವು ಎರಡು ದ್ರಾಕ್ಷೆಯ ತೋಟಗಳನ್ನು ಕೊಟ್ಟೆವು. ಅವುಗಳ ಸುತ್ತಲೂ ಖರ್ಜೂರದ ಮರಗಳ ಆವರಣ ಮಾಡಿದೆವು. ಅವುಗಳ ಮಧ್ಯೆ ಕೃಷಿ ಭೂಮಿಯನ್ನಿರಿಸಿದೆವು.

12. ಅರ್ಥಾತ್- ಅವನ ಮಾತನ್ನು ಒಪ್ಪದಿರಿ, ಅವನ ಮುಂದೆ ಬಾಗದಿರಿ, ಅವನ ಇಚ್ಛೆಯನ್ನು ಪೂರ್ತಿಕರಿಸದಿರಿ, ಅವನು ಹೇಳಿದ್ದನ್ನು ಪಾಲಿಸದಿರಿ - ಹೀಗೆ ಅನುಸರಣೆ ಎಂಬ ಪದ ಇಲ್ಲಿ ವಿಶಾಲಾರ್ಥದಲ್ಲಿ ಪ್ರಯೋಗವಾಗಿದೆ.

13. ಹಿಂದಿನ ಕಾಲದಲ್ಲಿ ರಾಜರುಗಳು ಚಿನ್ನದ ಬಳೆ ಧರಿಸುತ್ತಿದ್ದರು. ಸ್ವರ್ಗದವರ ವಸ್ತ್ರದ ಜತೆಗೆ ಇದರ ಪ್ರಸ್ತಾಪ ಮಾಡಲು ಕಾರಣ ಅವರಿಗೆ ಅಲ್ಲಿ ರಾಜ ವೈಭವದ ಬಟ್ಟೆಯನ್ನು ಧರಿಸಲು ನೀಡಲಾಗುವುದು ಎಂದು ತಿಳಿಸುವುದಾಗಿದೆ. ಸತ್ಯನಿಷೇಧಿಯೂ ಕರ್ಮಭ್ರಷ್ಟನೂ ಆದ ರಾಜ ಅಲ್ಲಿ ಅತ್ಯಂತ ನಿಂದ್ಯನೂ ನೀಚನೂ ಆಗಿರುವನು. ಸತ್ಯವಿಶ್ವಾಸಿಯಾದ ಸಚ್ಚರಿತ ಕಾರ್ಮಿಕನೊಬ್ಬ, ರಾಜವೈಭವದೊಂದಿಗೆ ಅಲ್ಲಿರುವನು.

33. ಎರಡೂ ತೋಟಗಳು ತುಂಬಾ ಫಲ ಕೊಡುವುದರಲ್ಲಿ ಏನೂ ಕೊರತೆ ಮಾಡಲಿಲ್ಲ. ಆ ತೋಟಗಳಲ್ಲಿ ನಾವು ಒಂದು ಕಾಲುವೆಯನ್ನು ಹರಿಸಿದೆವು.

كِلْتَا الْجَنَّتَيْنِ آتَتْ أُكُلَهَا وَلَمْ تَظْلِمْ مِنْهُ شَيْئًا ۙ وَفَجَّرْنَا خِلَالَهُمَا نَهَرًا ﴿٣٣﴾

34. ಮತ್ತು ಅವನಿಗೆ ತುಂಬ ಲಾಭ ಸಿಕ್ಕಿತು. ಇವನ್ನೆಲ್ಲಾ ಪಡೆದು ಅವನು ತನ್ನ ನೆರೆಯವನೊಡನೆ ಮಾತಾಡುತ್ತಾ, "ನಾನು ನಿನಗಿಂತ ದೊಡ್ಡ ಧನಿಕ ಮತ್ತು ನಿನಗಿಂತಲೂ ಹೆಚ್ಚು ಜನಬಲ ಹೊಂದಿರುತ್ತೇನೆ" ಎಂದನು.

وَكَانَ لَهُ ثَمَرٌ ۚ فَقَالَ لِصَاحِبِهِ وَهُوَ يُحَاوِرُهُ أَنَا أَكْثَرُ مِنْكَ مَالًا وَأَعَزُّ نَفَرًا ﴿٣٤﴾

35. ಅನಂತರ ಅವನು ತನ್ನ ತೋಟದೊಳಗೆ ಪ್ರವೇಶಿಸಿದನು ಮತ್ತು ತನ್ನ ಪಾಲಿಗೆ ತಾನೇ ಅಕ್ರಮಿಯಾಗುತ್ತ ಇಂತೆಂದನು - "ಈ ಸಂಪತ್ತು ಎಂದಾದರೂ ನಾಶವಾಗಿ ಹೋದೀತೆಂದು ನಾನೆಣಿಸುವುದಿಲ್ಲ-

وَدَخَلَ جَنَّتَهُ وَهُوَ ظَالِمٌ لِنَفْسِهِ قَالَ مَا أَظُنُّ أَنْ تَبِيدَ هَٰذِهِ أَبَدًا ﴿٣٥﴾

36. ಮತ್ತು ಪುನರುತ್ಥಾನದ ಘಳಿಗೆಯು ಎಂದಾದರೂ ಬಂದೀತೆಂದೂ ನಾನು ಭಾವಿಸುವುದಿಲ್ಲ. ಆದರೂ ನಾನೊಂದು ವೇಳೆ ನನ್ನ ಪ್ರಭುವಿನ ಸನ್ನಿಧಿಗೆ ಮರಳಿಸಲ್ಪಟ್ಟರೂ ಇದಕ್ಕಿಂತಲೂ ಉತ್ತಮ ಸ್ಥಳವನ್ನು ಖಂಡಿತವಾಗಿಯೂ ಪಡೆಯುವೆನು."

وَمَا أَظُنُّ السَّاعَةَ قَائِمَةً وَلَئِنْ رُدِدْتُ إِلَىٰ رَبِّي لَأَجِدَنَّ خَيْرًا مِنْهَا مُنْقَلَبًا ﴿٣٦﴾

37. ಅವನ ನೆರೆಯವನು ಮಾತಾಡುತ್ತ ಅವನೊಡನೆ ಹೀಗೆಂದನು, "ನಿನ್ನನ್ನು ಮಣ್ಣಿನಿಂದ ಆ ಬಳಿಕ ವೀರ್ಯದಿಂದ ಸೃಷ್ಟಿಸಿದ ಮತ್ತು ನಿನ್ನನ್ನು ಓರ್ವ ಪರಿಪೂರ್ಣ ಮನುಷ್ಯನನ್ನಾಗಿ ಮಾಡಿ ನಿಲ್ಲಿಸಿದಾತನನ್ನು ನಿರಾಕರಿಸುವೆಯಾ?

قَالَ لَهُ صَاحِبُهُ وَهُوَ يُحَاوِرُهُ أَكَفَرْتَ بِالَّذِي خَلَقَكَ مِنْ تُرَابٍ ثُمَّ مِنْ نُطْفَةٍ ثُمَّ سَوَّاكَ رَجُلًا ﴿٣٧﴾

38. ಇನ್ನು ನನ್ನ ವಿಷಯ. ನನ್ನ ಪ್ರಭು ಆ ಅಲ್ಲಾಹನೇ. ನಾನು ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡುವುದಿಲ್ಲ.

لَٰكِنَّا هُوَ اللَّهُ رَبِّي وَلَا أُشْرِكُ بِرَبِّي أَحَدًا ﴿٣٨﴾

39. ನೀನು ನಿನ್ನ ತೋಟದೊಳಗೆ ಪ್ರವೇಶಿಸುತ್ತಿರುವಾಗ ನಿನ್ನ ಬಾಯಿಯಿಂದ 'ಮಾಶಾ ಅಲ್ಲಾಹು ಲಾಕುವ್ವತ ಇಲ್ಲಾ ಬಿಲ್ಲಾಹ್'[14] (ಎಲ್ಲವೂ ಅಲ್ಲಾಹನಿಚ್ಛಿಸಿದಂತೆಯೇ ಆಗುತ್ತದೆ

وَلَوْلَا إِذْ دَخَلْتَ جَنَّتَكَ قُلْتَ مَا شَاءَ اللَّهُ لَا قُوَّةَ إِلَّا بِاللَّهِ ۚ إِنْ تَرَنِ أَنَا أَقَلَّ

14. ಅರ್ಥಾತ್- ಅಲ್ಲಾಹನಿಚ್ಛೆಯಂತೆಯೇ ಎಲ್ಲವೂ ನಡೆಯುವುದು. ನನ್ನ ಅಥವಾ ಇತರರ ಸಾಧನೆಯೇನೂ ಇದರಲ್ಲಿಲ್ಲ. ಒಂದು ವೇಳೆ ನಮ್ಮ ಅಧಿಕಾರ ಎಲ್ಲಾದರೂ ನಡೆಯುವುದಿದ್ದರೆ ಅದೂ ಅಲ್ಲಾಹನ ಅನುಗ್ರಹ ಮತ್ತು ಸೌಭಾಗ್ಯದಿಂದಾಗಿಯೇ ಇದೆ.

مِنْكَ مَالًا وَّوَلَدًا ﴿٣٩﴾

ಅಲ್ಲಾಹನ ಹೊರತು ಇನ್ನಾವ ಶಕ್ತಿಯೂ ಇಲ್ಲ) ಎಂದೇಕೆ ಹೊರಡಲಿಲ್ಲ? ನಿನಗೆ ನಾನು ಸೊತ್ತು ಮತ್ತು ಸಂತತಿಗಳಲ್ಲಿ ನಿನಗಿಂತ ಕೀಳಾಗಿ ಕಾಣಿಸುತ್ತಿದ್ದರೆ-

فَعَسٰى رَبِّيْٓ اَنْ يُّؤْتِيَنِ خَيْرًا مِّنْ جَنَّتِكَ وَيُرْسِلَ عَلَيْهَا حُسْبَانًا مِّنَ السَّمَآءِ فَتُصْبِحَ صَعِيْدًا زَلَقًا ﴿٤٠﴾

40. ನನ್ನ ಪ್ರಭು ನನಗೆ ನಿನ್ನ ತೋಟಕ್ಕಿಂತ ಉತ್ತಮವಾದುದನ್ನು ದಯಪಾಲಿಸಲೂಬಹುದು ಮತ್ತು ನಿನ್ನ ತೋಟದ ಮೇಲೆ ಆಕಾಶದಿಂದ ಯಾವುದಾದರೂ ವಿಪತ್ತನ್ನು ಕಳುಹಿಸಿ ಅದನ್ನು ಬರಡು ಬಯಲಾಗಿಸಿ ಬಿಡಲೂ ಬಹುದು-

اَوْ يُصْبِحَ مَآؤُهَا غَوْرًا فَلَنْ تَسْتَطِيْعَ لَهٗ طَلَبًا ﴿٤١﴾

41. ಅಥವಾ ಅದರ ನೀರು ನೆಲದೊಳಕ್ಕೆ ಇಂಗಿ ಹೋಗಿ ನೀನು ಅದನ್ನು ಯಾವ ರೀತಿಯಿಂದಲೂ ಹೊರತರಲಾರದಂತೆ ಆಗಬಹುದು."

وَاُحِيْطَ بِثَمَرِهٖ فَاَصْبَحَ يُقَلِّبُ كَفَّيْهِ عَلٰى مَآ اَنْفَقَ فِيْهَا وَهِيَ خَاوِيَةٌ عَلٰى عُرُوْشِهَا وَيَقُوْلُ يٰلَيْتَنِيْ لَمْ اُشْرِكْ بِرَبِّيْٓ اَحَدًا ﴿٤٢﴾

42. ಕೊನೆಗೆ ಅವನ ಸಂಪೂರ್ಣ ಫಲಗಳು ನಾಶವಾದುವು. ಅವನು ತನ್ನ ದ್ರಾಕ್ಷಾ ತೋಟಗಳು ತಡಿಕೆಗಳ ಮೇಲೆ ಮಗುಚಿ ಬಿದ್ದಿರುವುದನ್ನು ಕಂಡು, ತಾನು ಹೂಡಿದ ಬಂಡವಾಳಕ್ಕಾಗಿ ಗೋಳಾಡುತ್ತ, "ಅಕಟ! ನಾನು ನನ್ನ ಪ್ರಭುವಿನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿಸದಿರುತ್ತಿದ್ದರೆ!" ಎನ್ನತೊಡಗಿದನು.

وَلَمْ تَكُنْ لَّهٗ فِئَةٌ يَّنْصُرُوْنَهٗ مِنْ دُوْنِ اللّٰهِ وَمَا كَانَ مُنْتَصِرًا ﴿٤٣﴾

43. ಅಲ್ಲಾಹನ ಹೊರತು ಅವನಿಗೆ ಸಹಾಯ ಮಾಡತಕ್ಕ ಯಾವ ತಂಡವೂ ಅವನ ಬಳಿ ಇಲ್ಲದಾಯಿತು ಮತ್ತು ಸ್ವತಃ ಅವನೂ ಈ ಆಪತ್ತನ್ನು ಎದುರಿಸಲಾರದಾದನು.

هُنَالِكَ الْوَلَايَةُ لِلّٰهِ الْحَقِّ هُوَ خَيْرٌ ثَوَابًا وَّخَيْرٌ عُقْبًا ﴿٤٤﴾

44. ಕಾರ್ಯ ಸಾಧನೆಯ ಸಕಲ ಅಧಿಕಾರಗಳು ಸತ್ಯಪೂರ್ಣವಾದ ಅಲ್ಲಾಹನಿಗೆ ಮಾತ್ರವೆಂದು ಆಗ ತಿಳಿಯಿತು. ಅವನು ನೀಡುವ ಪಾರಿತೋಷಕವೇ ಅತ್ಯುತ್ತಮವಾದುದು. ಅವನು ತೋರುವ ಅಂತಿಮ ಪರಿಣಾಮವೇ ಶುಭಕರವಾದುದು.

وَاضْرِبْ لَهُمْ مَّثَلَ الْحَيٰوةِ الدُّنْيَا كَمَآءٍ اَنْزَلْنٰهُ مِنَ السَّمَآءِ فَاخْتَلَطَ بِهٖ نَبَاتُ الْاَرْضِ فَاَصْبَحَ هَشِيْمًا تَذْرُوْهُ الرِّيٰحُ وَكَانَ اللّٰهُ عَلٰى كُلِّ شَيْءٍ مُّقْتَدِرًا ﴿٤٥﴾

45. ಓ ಪೈಗಂಬರರೇ, ಇವರಿಗೆ ಇಹಜೀವನದ ವಾಸ್ತವಿಕತೆಯನ್ನು ಈ ಉಪಮೆಯ ಮೂಲಕ ವಿವರಿಸಿರಿ; ನಾವಿಂದು ಆಕಾಶದಿಂದ ನೀರನ್ನು ಸುರಿಸಿದಾಗ ಭೂಮಿಯ ಸಸ್ಯ ಸೃಷ್ಟಿಯು ದಟ್ಟವಾಗಿ ಬೆಳೆಯಿತು. ನಾಳೆ ಆ ಸಸ್ಯಗಳೇ, ಗಾಳಿಯು ಹಾರಿಸುತ್ತಾ ಹೋಗು ವಂಥ ಹೊಟ್ಟಾಗಿ ಹೋದುವು. ಅಲ್ಲಾಹನು ಸಕಲ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನಾಗಿರುತ್ತಾನೆ.

46. ಈ ಸೊತ್ತು ಮತ್ತು ಈ ಸಂತತಿಗಳು ಕೇವಲ ಲೌಕಿಕ ಜೀವನದ ಕ್ಷಣಿಕ ಸೊಬಗು ಮಾತ್ರ. ವಾಸ್ತವದಲ್ಲಿ ಉಳಿಯುವ ಪುಣ್ಯ ಕಾರ್ಯಗಳೇ ನಿಮ್ಮ ಪ್ರಭುವಿನ ಬಳಿ ಪರಿಣಾಮದ ದೃಷ್ಟಿಯಿಂದ ಶ್ರೇಷ್ಠವಾಗಿರುತ್ತವೆ. ಅವುಗಳ ಮೇಲೆಯೇ ಉತ್ತಮ ನಿರೀಕ್ಷೆಗಳನ್ನಿರಿಸಿ ಕೊಳ್ಳಬಹುದು.

اَلْمَالُ وَالْبَنُوْنَ زِيْنَةُ الْحَيٰوةِ الدُّنْيَا ۚ وَالْبٰقِيٰتُ الصّٰلِحٰتُ خَيْرٌ عِنْدَ رَبِّكَ ثَوَابًا وَّخَيْرٌ اَمَلًا ﴿٤٦﴾

47. ನಾವು ಪರ್ವತಗಳಿಗೆ ಚಲನೆ ಕೊಡುವ ಆ ದಿನದ ಬಗ್ಗೆ ಚಿಂತೆ ಇರಬೇಕು. ಅಂದು ನೀವು ಭೂಮಿಯನ್ನು ಸಂಪೂರ್ಣ ನಗ್ನವಾಗಿ ಕಾಣುವಿರಿ ಮತ್ತು ನಾವು ಸಕಲ ಮಾನವರನ್ನು (ಹಿಂದಿನ ಮತ್ತು ಮುಂದಿನ ಕಾಲಗಳ) ಒಬ್ಬನೂ ಬಿಟ್ಟು ಹೋಗದಂತೆ ಸುತ್ತುಗಟ್ಟಿ ಒಟ್ಟು ಗೂಡಿಸುವೆವು.

وَيَوْمَ نُسَيِّرُ الْجِبَالَ وَتَرَى الْاَرْضَ بَارِزَةً ۙ وَّحَشَرْنٰهُمْ فَلَمْ نُغَادِرْ مِنْهُمْ اَحَدًا ﴿٤٧﴾

48. ಸರ್ವರೂ ನಿಮ್ಮ ಪ್ರಭುವಿನ ಸನ್ನಿಧಿಯಲ್ಲಿ ಸಾಲುಸಾಲಾಗಿ ತರಲ್ಪಡುವರು. ಇದೋ, ನಾವು ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದ್ದಂತೆಯೇ ನೀವೆಲ್ಲಾ ನಮ್ಮ ಬಳಿಗೆ ಬಂದು ಬಿಟ್ಟಿರಲ್ಲಾ! ನಾವು ನಿಮಗಾಗಿ ಯಾವುದೇ ವಾಗ್ದಾನದ ಸಮಯವನ್ನು ನಿಶ್ಚಯಿಸಿಯೇ ಇಲ್ಲವೆಂದು ನೀವು ತಿಳಿದು ಕೊಂಡಿದ್ದಿರಿ-

وَعُرِضُوْا عَلٰى رَبِّكَ صَفًّا ۗ لَقَدْ جِئْتُمُوْنَا كَمَا خَلَقْنٰكُمْ اَوَّلَ مَرَّةٍ ۢ بَلْ زَعَمْتُمْ اَلَّنْ نَّجْعَلَ لَكُمْ مَّوْعِدًا ﴿٤٨﴾

49. ಮತ್ತು ಕರ್ಮಪತ್ರವು ಮುಂದಿರಿಸಲ್ಪಡುವುದು. ಆಗ ಅಪರಾಧಿಗಳು ತಮ್ಮ ಜೀವನ ಗ್ರಂಥದಲ್ಲಿ ಅಡಕವಾಗಿರುವುದರ ಬಗ್ಗೆ ಭಯಭೀತರಾಗಿ, "ಅಯ್ಯೋ ನಮ್ಮ ದುರ್ಗತಿಯೇ, ಇದೆಂತಹ ಗ್ರಂಥ! ನಮ್ಮ ಯಾವುದೇ ಚಿಕ್ಕ ಹಾಗೂ ದೊಡ್ಡ ಕೃತ್ಯವು ಇದರಲ್ಲಿ ಲಿಖಿತಗೊಳ್ಳದೆ ಬಿಟ್ಟು ಹೋಗಿಲ್ಲವಲ್ಲಾ" ಎಂದು ಹೇಳುತ್ತಿರುವುದನ್ನು ನೀವು ಕಾಣುವಿರಿ. ಅವರು ಏನೆಲ್ಲ ಮಾಡಿದ್ದರೋ ಅವೆಲ್ಲವನ್ನೂ ತಮ್ಮ ಮುಂದೆ ಕಾಣುವರು ಮತ್ತು ನಿಮ್ಮ ಪ್ರಭು ಯಾರ ಮೇಲೂ ಕಿಂಚಿತ್ತೂ ಅಕ್ರಮವೆಸಗಲಾರನು.

وَوُضِعَ الْكِتٰبُ فَتَرَى الْمُجْرِمِيْنَ مُشْفِقِيْنَ مِمَّا فِيْهِ وَيَقُوْلُوْنَ يٰوَيْلَتَنَا مَالِ هٰذَا الْكِتٰبِ لَا يُغَادِرُ صَغِيْرَةً وَّلَا كَبِيْرَةً اِلَّآ اَحْصٰىهَا ۚ وَوَجَدُوْا مَا عَمِلُوْا حَاضِرًا ۗ وَلَا يَظْلِمُ رَبُّكَ اَحَدًا ﴿٤٩﴾

50. ಸ್ಮರಿಸಿರಿ! ನಾವು ದೇವಚರರೊಡನೆ, ಆದಮರಿಗೆ 'ಸಾಷ್ಟಾಂಗ' ಎರಗಿರಿ ಎಂದು ಹೇಳಿದಾಗ ಅವರು ಎರಗಿದರು. ಆದರೆ ಇಬ್‌ಲೀಸನು ಎರಗಲಿಲ್ಲ. ಅವನು 'ಯಕ್ಷ'ಗಳಲ್ಲಾಗಿದ್ದನು. ಆದುದ ರಿಂದ ಅವನು ತನ್ನ ಪ್ರಭುವಿನ ಆಜ್ಞಾನುಸರಣೆಯಿಂದ ಸರಿದು ಬಿಟ್ಟನು[15] ಇನ್ನೇನು, ನೀವು ನನ್ನನ್ನು ಬಿಟ್ಟು ಅವನನ್ನೂ

وَاِذْ قُلْنَا لِلْمَلٰٓئِكَةِ اسْجُدُوْا لِاٰدَمَ فَسَجَدُوْٓا اِلَّآ اِبْلِيْسَ ۗ كَانَ مِنَ الْجِنِّ فَفَسَقَ عَنْ اَمْرِ رَبِّهٖ ۗ اَفَتَتَّخِذُوْنَهٗ وَذُرِّيَّتَهٗٓ اَوْلِيَآءَ مِنْ دُوْنِيْ وَهُمْ لَكُمْ عَدُوٌّ ۗ بِئْسَ

15. ಅರ್ಥಾತ್- ಇಬ್‌ಲೀಸ್ ದೇವಚರರಲ್ಲಾಗಿರಲಿಲ್ಲ. ಅವನು ಜಿನ್ನ್‌ಗಳಲ್ಲಾಗಿದ್ದನು. ಆದ್ದರಿಂದ ಅನುಸರಣೆಯಿಂದ ದೂರಸರಿಯುವುದು ಅವನಿಗೆ ಸಾಧ್ಯವಾಯಿತು. ದೇವಚರರಲ್ಲಾಗಿದ್ದರೆ ಅವನು ಆಜ್ಞೋಲ್ಲಂಘನೆ ಮಾಡಲು ಸಾಧ್ಯವೇ ಇರಲಿಲ್ಲ. ಜಿನ್ನ್ ಮಾನವರಂತೆಯೇ

ಅವನ ಸಂತಾನವನ್ನೂ ನಿಮ್ಮ ರಕ್ಷಕ ಮಿತ್ರರಾಗಿ ಮಾಡುತ್ತೀರಾ? ವಸ್ತುತಃ ಅವರು ನಿಮ್ಮ ಶತ್ರುಗಳಾಗಿರುತ್ತಾರೆ. ಅಕ್ರಮಿಗಳು ಸ್ವೀಕರಿಸುತ್ತಿರುವ ಬದಲಿಯು ಅತ್ಯಂತ ಕೆಟ್ಟದ್ದಾಗಿರುತ್ತದೆ.

لِلظّٰلِمِيْنَ بَدَلًا ﴿٥٠﴾

51. ನಾನು ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸುವಾಗ ಅವರನ್ನು ಕರೆದಿರಲಿಲ್ಲ. ಸ್ವತಃ ಅವರ ಸೃಷ್ಟಿಯಲ್ಲೂ ನಾನು ಅವರನ್ನು ಸಹಭಾಗಿಗಳಾಗಿಸಿರಲಿಲ್ಲ. ದಾರಿಗೆಡಿಸುವವರನ್ನು ನನ್ನ ಸಹಾಯಕರನ್ನಾಗಿ ಮಾಡುವುದು ನನ್ನ ಕ್ರಮವಲ್ಲ.[16]

مَآ اَشْهَدْتُّهُمْ خَلْقَ السَّمٰوٰتِ وَالْاَرْضِ وَلَا خَلْقَ اَنْفُسِهِمْ ۖ وَمَا كُنْتُ مُتَّخِذَ الْمُضِلِّيْنَ عَضُدًا ﴿٥١﴾

52. ಇವರ ಪ್ರಭು ಇವರೊಡನೆ "ನೀವು ನನ್ನ ಸಹಭಾಗಿಗಳೆಂದು ಭಾವಿಸಿ ಕೊಂಡಿದ್ದವರನ್ನು ಕೂಗಿ ಕರೆಯಿರಿ" ಎಂದು ಹೇಳುವಂದು ಇವರೇನು ಮಾಡುವರು? ಇವರು ಅವರನ್ನು ಕರೆಯುವರು. ಆದರೆ ಅವರು ಇವರ ಸಹಾಯಕ್ಕೆ ಬರಲಾರರು ಮತ್ತು ನಾವು ಅವರ ನಡುವೆ ಸಮನಾಗಿ ಒಂದೇ ವಿನಾಶಕೂಪವನ್ನು ಉಂಟು ಮಾಡುವೆವು.

وَيَوْمَ يَقُوْلُ نَادُوْا شُرَكَآءِيَ الَّذِيْنَ زَعَمْتُمْ فَدَعَوْهُمْ فَلَمْ يَسْتَجِيْبُوْا لَهُمْ وَجَعَلْنَا بَيْنَهُمْ مَّوْبِقًا ﴿٥٢﴾

53. ಅಂದು ಎಲ್ಲ ಅಪರಾಧಿಗಳೂ ಅಗ್ನಿಯನ್ನು ಕಾಣುವರು ಮತ್ತು ಇನ್ನು ನಮಗೆ ಇದರಲ್ಲೇ ಬೀಳಬೇಕಾಗಿದೆಯೆಂದು ತಿಳಿದು ಕೊಳ್ಳುವರು ಮತ್ತು ಅವರು ಅದರಿಂದ ಪಾರಾಗಲು ಯಾವ ಅಭಯ ಸ್ಥಾನವನ್ನೂ ಪಡೆಯಲಾರರು.

وَرَاَ الْمُجْرِمُوْنَ النَّارَ فَظَنُّوْٓا اَنَّهُمْ مُّوَاقِعُوْهَا وَلَمْ يَجِدُوْا عَنْهَا مَصْرِفًا ﴿٥٣﴾

54. ನಾವು ಈ ಕುರ್‌ಆನಿನಲ್ಲಿ ಜನರಿಗೆ ತರತರಹದ ಉಪಮೆಗಳ ಮೂಲಕ ಬೋಧಿಸಿದೆವು. ಆದರೆ ಮಾನವನು ಮಹಾ ಜಗಳ ಗಂಟನಾಗಿದ್ದಾನೆ.

وَلَقَدْ صَرَّفْنَا فِيْ هٰذَا الْقُرْاٰنِ لِلنَّاسِ مِنْ كُلِّ مَثَلٍ ۗ وَكَانَ الْاِنْسَانُ اَكْثَرَ شَيْءٍ جَدَلًا ﴿٥٤﴾

55. ಅವರ ಮುಂದೆ ಮಾರ್ಗದರ್ಶನ ಬಂದಾಗ ಅದನ್ನು ಸ್ವೀಕರಿಸದಂತೆಯೂ, ತಮ್ಮ ಪ್ರಭುವಿನೊಡನೆ ಕ್ಷಮಾಯಾಚನೆ ಮಾಡದಂತೆಯೂ ಅವರನ್ನು ತಡೆದುದಾವುದು? ಅದು ಗತಕಾಲದ ಜನಾಂಗಗಳ ಮೇಲೆ ಸಂಭವಿಸಿದುದೆಲ್ಲ ಇವರ ಮೇಲೂ ಸಂಭವಿಸಬೇಕೆಂಬ ಅಥವಾ ಇವರು ಆ ಯಾತನೆ ಬರುತ್ತಿರುವುದನ್ನು ಕಣ್ಣಾರೆ ಕಾಣಬೇಕೆಂಬ ನಿರೀಕ್ಷೆಯಲ್ಲದೆ ಇನ್ನೇನೂ ಅಲ್ಲ.

وَمَا مَنَعَ النَّاسَ اَنْ يُّؤْمِنُوْٓا اِذْ جَآءَهُمُ الْهُدٰى وَيَسْتَغْفِرُوْا رَبَّهُمْ اِلَّآ اَنْ تَاْتِيَهُمْ سُنَّةُ الْاَوَّلِيْنَ اَوْ يَاْتِيَهُمُ الْعَذَابُ قُبُلًا ﴿٥٥﴾

ಸ್ವಾತಂತ್ರ್ಯ ನೀಡಲ್ಪಟ್ಟ ಜೀವಿಗಳಾಗಿವೆ. ಅವುಗಳನ್ನು ಅಜನ್ಮ ಆಜ್ಞಾನುಸಾರಿಗಳನ್ನಾಗಿ ಮಾಡಲಾಗಿಲ್ಲ. ಸತ್ಯವಿಶ್ವಾಸ, ಸತ್ಯನಿಷೇಧ ಹಾಗೂ ಅನುಸರಣೆ ಮತ್ತು ಪಾಪಗಳ ಪೈಕಿ ಯಾವುದನ್ನು ಬೇಕಾದರೂ ನೆಚ್ಚಿಕೊಳ್ಳುವ ಅರ್ಹತೆಯನ್ನು ಅವುಗಳಿಗೆ ನೀಡಲಾಗಿದೆ.

16. ಅರ್ಥಾತ್- ಈ ಪಿಶಾಚಿಗಳು ನಿಮ್ಮ ಅನುಸರಣೆ ಮತ್ತು ದಾಸ್ಯಕ್ಕೆ ಅರ್ಹರಾದುದು ಹೇಗೆ? ಸೃಷ್ಟಿಕರ್ತ ಮಾತ್ರ ದಾಸ್ಯಕ್ಕೆ ಅರ್ಹನಾಗಬಲ್ಲ. ಪಿಶಾಚಿಗಳು ಭೂಮಿ-ಆಕಾಶಗಳ ಸೃಷ್ಟಿಯಲ್ಲಿ ಭಾಗೀದಾರರಾಗುವುದಂತಿರಲಿ, ಅವುಗಳು ಸ್ವತಃ ಸೃಷ್ಟಿಗಳಾಗಿವೆ.

56. ನಾವು ಸಂದೇಶವಾಹಕರನ್ನು ಸುವಾರ್ತೆ ಮತ್ತು ಎಚ್ಚರಿಕೆ ಕೊಡಲಿಕ್ಕಾಗಿಯೇ ಹೊರತು ಇನ್ನಾವ ಉದ್ದೇಶಕ್ಕಾಗಿಯೂ ಕಳುಹಿಸುವುದಿಲ್ಲ. ಆದರೆ ಸತ್ಯನಿಷೇಧಿಗಳು ಮಿಥ್ಯದ ಅಸ್ತ್ರದೊಂದಿಗೆ ಸತ್ಯವನ್ನು ಸದೆಬಡಿಯಲು ಪ್ರಯತ್ನಿಸುತ್ತಾರೆ ಮತ್ತು ಅವರು ನನ್ನ ವಚನಗಳನ್ನೂ ಅವರಿಗೆ ಕೊಡಲ್ಪಟ್ಟಿದ್ದ ಎಚ್ಚರಿಕೆಗಳನ್ನೂ ಪ್ರಹಸನವಾಗಿ ಮಾಡಿಕೊಂಡಿದ್ದಾರೆ.

وَمَا نُرْسِلُ الْمُرْسَلِينَ إِلَّا مُبَشِّرِينَ وَمُنذِرِينَ ۚ وَيُجَادِلُ الَّذِينَ كَفَرُوا بِالْبَاطِلِ لِيُدْحِضُوا بِهِ الْحَقَّ ۖ وَاتَّخَذُوا آيَاتِي وَمَا أُنذِرُوا هُزُوًا ﴿٥٦﴾

57. ತನ್ನ ಪ್ರಭುವಿನ ವಚನಗಳನ್ನು ಓದಿ ಹೇಳಿ ಉಪದೇಶಿಸಿದಾಗ ಯಾರು ಅದರಿಂದ ವಿಮುಖನಾಗುವನೋ ಹಾಗೂ ತಾನು ತನ್ನ ಸ್ವಂತ ಕೈಗಳಿಂದ ತನಗಾಗಿ ಮಾಡಿಕಳುಹಿಸಿದ ಕರ್ಮಗಳ ಕೆಟ್ಟ ಪ್ರತಿಫಲವನ್ನು ಮರೆತು ಬಿಡುವನೋ ಅವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? (ಈ ಧೋರಣೆಯನ್ನಿರಿಸಿಕೊಂಡಿರುವ) ಅವರ ಹೃದಯಗಳ ಮೇಲೆ ನಾವು ತೆರೆ ಎಳೆದು ಬಿಟ್ಟಿದ್ದೇವೆ. ಅವು ಅವರಿಗೆ ಕುರ್‌ಆನನ್ನು ಗ್ರಹಿಸಲು ಬಿಡುವುದಿಲ್ಲ ಮತ್ತು ನಾವು ಅವರ ಕಿವಿಗಳಲ್ಲಿ ಕಿವುಡುತನವನ್ನುಂಟು ಮಾಡಿಬಿಟ್ಟಿದ್ದೇವೆ. ನೀವು ಅವರನ್ನು ಸನ್ಮಾರ್ಗದತ್ತ ಎಷ್ಟು ಕರೆದರೂ ಈ ಅವಸ್ಥೆಯಲ್ಲಿ ಅವರು ಎಂದೆಂದಿಗೂ ಸನ್ಮಾರ್ಗ ಪಡೆಯಲಾರರು.

وَمَنْ أَظْلَمُ مِمَّن ذُكِّرَ بِآيَاتِ رَبِّهِ فَأَعْرَضَ عَنْهَا وَنَسِيَ مَا قَدَّمَتْ يَدَاهُ ۚ إِنَّا جَعَلْنَا عَلَىٰ قُلُوبِهِمْ أَكِنَّةً أَن يَفْقَهُوهُ وَفِي آذَانِهِمْ وَقْرًا ۖ وَإِن تَدْعُهُمْ إِلَى الْهُدَىٰ فَلَن يَهْتَدُوا إِذًا أَبَدًا ﴿٥٧﴾

58. ನಿಮ್ಮ ಪ್ರಭು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ. ಅವನು ಇವರ ಕರ್ಮಗಳಿಗಾಗಿ ಇವರನ್ನು ಹಿಡಿಯಲಿಚ್ಛಿಸುತ್ತಿದ್ದರೆ ಬೇಗನೆ ಯಾತನೆ ಕಳುಹಿಸಿ ಬಿಡುತ್ತಿದ್ದನು. ಆದರೆ ಇವರಿಗಾಗಿ ವಾಗ್ದಾನವೀಯಲಾಗಿರುವ ಒಂದು ಸಮಯ ನಿಶ್ಚಿತವಿದೆ ಮತ್ತು ಅದನ್ನು ತಪ್ಪಿಸಿ ಓಡಿಹೋಗುವ ಯಾವ ದಾರಿಯನ್ನೂ ಇವರು ಕಾಣಲಾರರು.

وَرَبُّكَ الْغَفُورُ ذُو الرَّحْمَةِ ۖ لَوْ يُؤَاخِذُهُم بِمَا كَسَبُوا لَعَجَّلَ لَهُمُ الْعَذَابَ ۚ بَل لَّهُم مَّوْعِدٌ لَّن يَجِدُوا مِن دُونِهِ مَوْئِلًا ﴿٥٨﴾

59. ಈ ಯಾತನಾಗ್ರಸ್ತ ನಾಡುಗಳು ನಿಮ್ಮ ಮುಂದೆಯೇ ಇವೆ. ಅವರು ಅಕ್ರಮವೆಸಗಿದಾಗ ನಾವು ಅವರನ್ನು ನಾಶಗೊಳಿಸಿದೆವು ಮತ್ತು ಅವುಗಳಲ್ಲಿ ಪ್ರತಿಯೊಂದರ ವಿನಾಶಕ್ಕಾಗಿ ನಾವು ಸಮಯವನ್ನು ನಿಶ್ಚಯಿಸಿಟ್ಟಿದ್ದೆವು.

وَتِلْكَ الْقُرَىٰ أَهْلَكْنَاهُمْ لَمَّا ظَلَمُوا وَجَعَلْنَا لِمَهْلِكِهِم مَّوْعِدًا ﴿٥٩﴾

60. (ಮೂಸಾರಿಗೆ ಸಂಭವಿಸಿದ ಘಟನೆಯನ್ನು ಹೇಳಿರಿ) ಮೂಸಾರವರು ತಮ್ಮ ಸೇವಕನೊಡನೆ, "ನಾನು ಎರಡು ನದಿಗಳ ಸಂಗಮ ಸ್ಥಾನವನ್ನು ತಲಪದೆ ನನ್ನ ಪ್ರಯಾಣವನ್ನು ನಿಲ್ಲಿಸಲಾರೆ.

وَإِذْ قَالَ مُوسَىٰ لِفَتَاهُ لَا أَبْرَحُ حَتَّىٰ أَبْلُغَ مَجْمَعَ الْبَحْرَيْنِ أَوْ أَمْضِيَ حُقُبًا ﴿٦٠﴾

ಅನ್ಯಥಾ ನಾನೊಂದು ದೀರ್ಘ ಕಾಲದ ವರೆಗೆ ನಡೆಯುತ್ತಲೇ ಇರುವೆನು"[17] ಎಂದರು.

61. ಆ ಪ್ರಕಾರ ಅವರು ಸಂಗಮ ಸ್ಥಾನಕ್ಕೆ ತಲುಪಿದಾಗ ತಮ್ಮ ಮೀನನ್ನು ಮರೆತು ಬಿಟ್ಟರು ಮತ್ತು ಅದು ಹೊರಟು ಅಲ್ಲೊಂದು ಸುರಂಗವಿತ್ತೋ ಎಂಬಂತೆ ನದಿಗೆ ಹೋಗಿ ಬಿಟ್ಟಿತು.

فَلَمَّا بَلَغَا مَجْمَعَ بَيْنِهِمَا نَسِيَا حُوتَهُمَا فَاتَّخَذَ سَبِيلَهُ فِي الْبَحْرِ سَرَبًا ﴿٦١﴾

62. ಮೂಸಾ ಮುಂದೆ ಸಾಗಿ ತಮ್ಮ ಸೇವಕನೊಡನೆ, "ನಮ್ಮ ಬೆಳಗಿನ ಉಪಾಹಾರ ನೀಡು. ಇಂದು ನಾವು ಪ್ರಯಾಣ ಮಾಡಿ ತುಂಬಾ ದಣಿದಿದ್ದೇವೆ" ಎಂದರು.

فَلَمَّا جَاوَزَا قَالَ لِفَتَاهُ آتِنَا غَدَاءَنَا لَقَدْ لَقِينَا مِنْ سَفَرِنَا هَٰذَا نَصَبًا ﴿٦٢﴾

63. ಆಗ ಸೇವಕನು, "ತಾವು ಕಂಡಿರಾ? ಇದೇನಾಯಿತು? ನಾವು ಆ ಶಿಲೆಯ ಬಳಿ ತಂಗಿದ್ದಾಗ ನಾನು ಮೀನನ್ನು ಮರೆತೇ ಬಿಟ್ಟಿದ್ದೆ. ನಾನು ತಮ್ಮೊಡನೆ ಅದರ ಪ್ರಸ್ತಾಪವೆತ್ತದ ರೀತಿಯಲ್ಲಿ ಶೈತಾನನು ನನ್ನನ್ನು ಮರೆವೆಗೀಡು ಮಾಡಿಬಿಟ್ಟನು. ಮೀನು ವಿಚಿತ್ರ ರೀತಿಯಿಂದ ಹೊರಟು ನದಿಯೊಳಗೆ ಸೇರಿಬಿಟ್ಟಿತು" ಎಂದನು.

قَالَ أَرَأَيْتَ إِذْ أَوَيْنَا إِلَى الصَّخْرَةِ فَإِنِّي نَسِيتُ الْحُوتَ وَمَا أَنْسَانِيهُ إِلَّا الشَّيْطَانُ أَنْ أَذْكُرَهُ وَاتَّخَذَ سَبِيلَهُ فِي الْبَحْرِ عَجَبًا ﴿٦٣﴾

64. ಆಗ ಮೂಸಾ, "ನಾವು ಹುಡುಕುತ್ತಿದ್ದುದೂ ಅದನ್ನೇ"[18] ಎಂದರು. ಆ ಪ್ರಕಾರ ಅವರಿಬ್ಬರೂ ತಮ್ಮ ಪಾದ ಗುರುತುಗಳನ್ನನುಸರಿಸಿ ಹಿಂದಿರುಗಿದರು-

قَالَ ذَٰلِكَ مَا كُنَّا نَبْغِ فَارْتَدَّا عَلَىٰ آثَارِهِمَا قَصَصًا ﴿٦٤﴾

65. ಮತ್ತು ಅಲ್ಲಿ ಅವರು ನಮ್ಮ ದಾಸರ ಪೈಕಿ ಓರ್ವ ದಾಸನನ್ನು ಕಂಡರು. ನಾವು ಅವನಿಗೆ ನಮ್ಮ ಅನುಗ್ರಹ ಪ್ರದಾನ ಮಾಡಿದ್ದೆವು ಮತ್ತು ನಮ್ಮ ವತಿಯಿಂದ ಒಂದು ವಿಶಿಷ್ಟ ಜ್ಞಾನವನ್ನು ದಯಪಾಲಿಸಿದ್ದೆವು.[19]

فَوَجَدَا عَبْدًا مِنْ عِبَادِنَا آتَيْنَاهُ رَحْمَةً مِنْ عِنْدِنَا وَعَلَّمْنَاهُ مِنْ لَدُنَّا عِلْمًا ﴿٦٥﴾

66. ಮೂಸಾ ಅವರೊಡನೆ, "ನಿಮಗೆ ಕಲಿಸಿ ಕೊಡಲಾಗಿರುವ

قَالَ لَهُ مُوسَىٰ هَلْ أَتَّبِعُكَ عَلَىٰ أَنْ

17. ಪ್ರವಾದಿ ಮೂಸಾ(ಅ) ಈ ಯಾತ್ರೆಯನ್ನು ಯಾವ ಕಾಲದಲ್ಲಿ ಕೈಗೊಂಡಿದ್ದರೆಂಬ ವಿಚಾರ ಯಾವುದೇ ನಂಬಲರ್ಹ ಮೂಲಗಳಿಂದ ತಿಳಿದು ಬರುವುದಿಲ್ಲ. ಎರಡು ನದಿಗಳ ಸಂಗಮದಲ್ಲಿ ಈ ಘಟನೆ ನಡೆದಿತ್ತು ಎಂದಿದೆ, ಆ ಎರಡು ನದಿಗಳು ಯಾವುವು ಎಂದೂ ತಿಳಿದು ಬರುವುದಿಲ್ಲ. ಆದರೆ ಘಟನೆಯ ಬಗ್ಗೆ ವಿವೇಚನೆ ನಡೆಸಿದಾಗ ಇದು ಪ್ರವಾದಿ ಮೂಸಾರ(ಅ) ಈಜಿಪ್ಟ್ ವಾಸ್ತವ್ಯದ ವೇಳೆ ನಡೆದಿತ್ತು ಎಂದು ತಿಳಿದು ಬರುತ್ತದೆ. ಆಗ ಫಿರ್‌ಔನ್ ಮತ್ತು ಅವರ ನಡುವೆ ಸಂಘರ್ಷ ನಡೆಯುತ್ತಿತ್ತು. ಎರಡು ನದಿಗಳೆಂದರೆ 'ಶ್ವೇತ ನೈಲ್' ಮತ್ತು 'ನೀಲ ನೈಲ್' ಎಂಬ ಎರಡು ಉಪನದಿಗಳು. ಅವುಗಳ ಸಂಗಮದಲ್ಲೇ ಇಂದಿನ 'ಖಾರ್ತೂಮ್' ನಗರವಿದೆ. ಈ ಊಹೆಗೆ ಕಾರಣವೇನೆಂಬುದನ್ನು ನಾವು ತಫ್ಹೀಮುಲ್ ಕುರ್‌ಆನ್, ಭಾಗ ಮೂರರಲ್ಲಿ ಬರುವ ಅಲ್ ಕಹ್ಫ್ ಅಧ್ಯಾಯದ ವ್ಯಾಖ್ಯಾನದಲ್ಲಿ ವಿವರಿಸಿದ್ದೇವೆ.

18. ಅರ್ಥಾತ್ ತಲಪಬೇಕಾದ ಗುರಿಯ ಬಗ್ಗೆ ನಮಗೆ ಇದೇ ಗುರುತನ್ನು ತಿಳಿಸಲಾಗಿತ್ತು.

19. ಆ ದಾಸನ ಹೆಸರು ನಂಬಲರ್ಹವಾದ ಎಲ್ಲ ಪ್ರವಾದಿ ವಚನಗಳಲ್ಲಿ 'ಖಿಝ್‌ರ್' ಎಂದಿದೆ.

ಸುಜ್ಞಾನವನ್ನು ನನಗೂ ಹೇಳಿ ಕೊಡುವಂತೆ ನಾನು ನಿಮ್ಮ ಸಂಗಡವಿರಲೇ?" ಎಂದು ಕೇಳಿದರು.

تُعَلِّمَنِ مِمَّا عُلِّمْتَ رُشْدًا ﴿٦٦﴾

67. ಆಗ ಅವರು, "ತಾವು ನನ್ನ ಸಂಗಡ ಸಹನೆಯಿಂದಿರಲಾರಿರಿ-

قَالَ إِنَّكَ لَنْ تَسْتَطِيعَ مَعِيَ صَبْرًا ﴿٦٧﴾

68. ಮತ್ತು ತಮಗೆ ಅರಿವಿಲ್ಲದಂತಹ ವಿಷಯದ ಬಗ್ಗೆ ತಾಳ್ಮೆ ವಹಿಸುವುದಾದರೂ ಹೇಗೆ?" ಎಂದರು.

وَكَيْفَ تَصْبِرُ عَلَىٰ مَا لَمْ تُحِطْ بِهِ خُبْرًا ﴿٦٨﴾

69. ಆಗ ಮೂಸಾ, 'ಇನ್ಶಾಅಲ್ಲಾಹ್ (ಅಲ್ಲಾಹನಿಚ್ಛಿಸಿದರೆ) ತಾವು ನನ್ನನ್ನು ಸಹನೆಯುಳ್ಳವನಾಗಿ ಕಾಣುವಿರಿ ಮತ್ತು ನಾನು ಯಾವ ವಿಷಯದಲ್ಲೂ ತಮ್ಮ ಆಜ್ಞೋಲ್ಲಂಘನೆ ಮಾಡಲಾರೆ" ಎಂದರು.

قَالَ سَتَجِدُنِي إِنْ شَاءَ اللَّهُ صَابِرًا وَلَا أَعْصِي لَكَ أَمْرًا ﴿٦٩﴾

70. ಆಗ ಅವರು, "ಸರಿ ತಾವು ನನ್ನ ಸಂಗಡ ನಡೆಯುವುದಿದ್ದರೆ, ನಾನೇ ಸ್ವತಃ ತಮಗೆ ಹೇಳುವ ವರೆಗೂ ತಾವು ನನ್ನೊಡನೆ ಯಾವ ವಿಷಯದಲ್ಲೂ ಪ್ರಶ್ನಿಸಬಾರದು" ಎಂದರು.

قَالَ فَإِنِ اتَّبَعْتَنِي فَلَا تَسْأَلْنِي عَنْ شَيْءٍ حَتَّىٰ أُحْدِثَ لَكَ مِنْهُ ذِكْرًا ﴿٧٠﴾

71. ಹಾಗೆ ಅವರಿಬ್ಬರೂ ಹೊರಟರು. ಕೊನೆಗೆ ಅವರು ಒಂದು ನಾವೆಯನ್ನೇರಿದರು. ಆಗ ಆ ವ್ಯಕ್ತಿಯು ಆ ನಾವೆಯಲ್ಲಿ ಒಂದು ಬಿರುಕನ್ನುಂಟು ಮಾಡಿಬಿಟ್ಟಿತು. ಮೂಸಾ ಹೇಳಿದರು, "ನೀವು ನಾವೆಯಲ್ಲಿರುವವರನ್ನೆಲ್ಲ ಮುಳುಗಿಸಿ ಬಿಡಬೇಕೆಂದು ಇದರಲ್ಲಿ ಬಿರುಕನ್ನುಂಟು ಮಾಡಿದಿರಾ? ನಿಜಕ್ಕೂ ನೀವೊಂದು ಕಠೋರ ಕಾರ್ಯವನ್ನೆಸಗಿದಿರಿ."

فَانْطَلَقَا حَتَّىٰ إِذَا رَكِبَا فِي السَّفِينَةِ خَرَقَهَا ۖ قَالَ أَخَرَقْتَهَا لِتُغْرِقَ أَهْلَهَا لَقَدْ جِئْتَ شَيْئًا إِمْرًا ﴿٧١﴾

72. ಆಗ ಅವರು, "ನೀವು ನನ್ನ ಸಂಗಡ ಸಹನೆಯಿಂದಿರಲಾರಿರೆಂದು ನಾನು ಹೇಳಿರಲಿಲ್ಲವೇ?" ಎಂದು ಕೇಳಿದರು.

قَالَ أَلَمْ أَقُلْ إِنَّكَ لَنْ تَسْتَطِيعَ مَعِيَ صَبْرًا ﴿٧٢﴾

73. ಆಗ ಮೂಸಾ, "ಪ್ರಮಾದವಶಾತ್ ಆಗಿ ಹೋದುದಕ್ಕಾಗಿ ನನ್ನನ್ನು ಹಿಡಿಯಬೇಡಿರಿ. ನನ್ನ ವಿಷಯದಲ್ಲಿ ನೀವು ಕಠಿಣವಾಗಿ ವರ್ತಿಸಬೇಡಿರಿ" ಎಂದರು.

قَالَ لَا تُؤَاخِذْنِي بِمَا نَسِيتُ وَلَا تُرْهِقْنِي مِنْ أَمْرِي عُسْرًا ﴿٧٣﴾

74. ಅನಂತರ ಅವರಿಬ್ಬರೂ ಮುಂದೆ ನಡೆದರು. ಕೊನೆಗೆ ಅವರಿಗೆ ಒಬ್ಬ ಬಾಲಕನು ಸಿಕ್ಕಿದನು. ಆ ವ್ಯಕ್ತಿ ಅವನನ್ನು ಕೊಂದು ಹಾಕಿತು. ಮೂಸಾ ಹೇಳಿದರು, "ನೀವು ಒಬ್ಬ ನಿರಪರಾಧಿಯ ಪ್ರಾಣಹಾನಿ ಮಾಡಿದಿರಾ? ವಸ್ತುತಃ ಅವನು ಯಾರನ್ನೂ ಕೊಲೆ ಮಾಡಿರಲಿಲ್ಲ. ನೀವು ಇದೊಂದು ದುಷ್ಕೃತ್ಯವೆಸಗಿದಿರಿ."

فَانْطَلَقَا حَتَّىٰ إِذَا لَقِيَا غُلَامًا فَقَتَلَهُ قَالَ أَقَتَلْتَ نَفْسًا زَكِيَّةً بِغَيْرِ نَفْسٍ لَقَدْ جِئْتَ شَيْئًا نُكْرًا ﴿٧٤﴾

75. *ಆಗ ಅವರು, "ನೀವು ನನ್ನ ಸಂಗಡ ಸಹನೆಯಿಂದಿರಲಾರಿರೆಂದು ನಾನು ನಿಮ್ಮೊಡನೆ ಹೇಳಿರಲಿಲ್ಲವೇ?" ಎಂದು ಕೇಳಿದರು.

قَالَ أَلَمْ أَقُل لَّكَ إِنَّكَ لَن تَسْتَطِيعَ مَعِيَ صَبْرًا ﴿٧٥﴾

76. (ಆಗ ಮೂಸಾ) "ಇನ್ನು ಮುಂದೆ ನಾನು ನಿಮ್ಮೊಡನೆ ಏನಾದರೂ ಕೇಳಿದರೆ ನೀವು ನನ್ನನ್ನು ಸಂಗಡ ಇಟ್ಟುಕೊಳ್ಳಬೇಡಿರಿ. ಈಗಂತೂ ನನ್ನ ಕಡೆಯಿಂದ ನಿಮಗೊಂದು ನೆಪ ಸಿಕ್ಕಿಬಿಟ್ಟಿತು" ಎಂದರು.

قَالَ إِن سَأَلْتُكَ عَن شَيْءٍ بَعْدَهَا فَلَا تُصَاحِبْنِي ۖ قَدْ بَلَغْتَ مِن لَّدُنِّي عُذْرًا ﴿٧٦﴾

77. ಅನಂತರ ಅವರು ಮುಂದೆ ಸಾಗಿದರು. ಕೊನೆಗೆ ಒಂದು ಗ್ರಾಮಕ್ಕೆ ಬಂದರು ಮತ್ತು ಅಲ್ಲಿಯ ಜನರೊಡನೆ ಊಟ ಕೇಳಿದರು. ಆದರೆ ಅವರು ಇವರಿಬ್ಬರನ್ನೂ ಸತ್ಕರಿಸಲು ನಿರಾಕರಿಸಿದರು. ಅಲ್ಲಿ ಅವರೊಂದು ಗೋಡೆಯನ್ನು ಕಂಡರು. ಅದು ಬೀಳುವುದರಲ್ಲಿತ್ತು. ಆ ವ್ಯಕ್ತಿಯು ಆ ಗೋಡೆಯನ್ನು ಸರಿಪಡಿಸಿ ನಿಲ್ಲಿಸಿತು. ಮೂಸಾ ಹೇಳಿದರು, "ನೀವು ಇಚ್ಛಿಸುತ್ತಿದ್ದರೆ ಈ ಕೆಲಸದ ಮಜೂರಿ ಪಡೆದುಕೊಳ್ಳಬಹುದಿತ್ತು."

فَانطَلَقَا حَتَّىٰ إِذَا أَتَيَا أَهْلَ قَرْيَةٍ اسْتَطْعَمَا أَهْلَهَا فَأَبَوْا أَن يُضَيِّفُوهُمَا فَوَجَدَا فِيهَا جِدَارًا يُرِيدُ أَن يَنقَضَّ فَأَقَامَهُ ۖ قَالَ لَوْ شِئْتَ لَتَّخَذْتَ عَلَيْهِ أَجْرًا ﴿٧٧﴾

78. ಆಗ ಅವರು, "ನನ್ನ ಮತ್ತು ನಿಮ್ಮ ಸಹವಾಸ ಮುಗಿಯಿತು. ಇನ್ನು, ನಿಮ್ಮಿಂದ ಸಹಿಸಿ ಕೊಳ್ಳಲಾಗದಿದ್ದ ವಿಷಯಗಳ ವಾಸ್ತವಿಕತೆಯನ್ನು ನಾನು ನಿಮಗೆ ವಿವರಿಸುತ್ತೇನೆ-

قَالَ هَٰذَا فِرَاقُ بَيْنِي وَبَيْنِكَ ۚ سَأُنَبِّئُكَ بِتَأْوِيلِ مَا لَمْ تَسْتَطِع عَّلَيْهِ صَبْرًا ﴿٧٨﴾

79. ನಾವೆಯ ಬಗ್ಗೆ ಹೇಳುವುದಾದರೆ, ಅದು ನದಿಯಲ್ಲಿ ದುಡಿದು ಹೊಟ್ಟೆ ಹೊರೆಯುತ್ತಿದ್ದ ಕೆಲವು ಬಡವರದ್ದಾಗಿತ್ತು. ನಾನು ಅದನ್ನು ದೋಷಪೂರ್ಣಗೊಳಿಸಬೇಕೆಂದು ಭಾವಿಸಿದೆ. ಏಕೆಂದರೆ ಮುಂದೆ, ಪ್ರತಿಯೊಂದು ನಾವೆಯನ್ನೂ ಬಲಾತ್ಕಾರವಾಗಿ ವಶಪಡಿಸಿ ಕೊಳ್ಳುವಂತಹ ಒಬ್ಬ ಅರಸನ ಪ್ರದೇಶವಿತ್ತು.

أَمَّا السَّفِينَةُ فَكَانَتْ لِمَسَاكِينَ يَعْمَلُونَ فِي الْبَحْرِ فَأَرَدتُّ أَنْ أَعِيبَهَا وَكَانَ وَرَاءَهُم مَّلِكٌ يَأْخُذُ كُلَّ سَفِينَةٍ غَصْبًا ﴿٧٩﴾

80. ಆ ಬಾಲಕನ ಬಗ್ಗೆ ಹೇಳುವುದಿದ್ದರೆ ಅವನ ಮಾತಾಪಿತರು ಸತ್ಯವಿಶ್ವಾಸಿಗಳಾಗಿದ್ದರು. ಆ ಬಾಲಕನು ತನ್ನ ಅತಿಕ್ರಮ ಹಾಗೂ ಸತ್ಯನಿಷೇಧ ನೀತಿಗಳಿಂದ ಅವರಿಗೆ ತೊಂದರೆ ಕೊಡುವನೆಂಬ ಆಶಂಕೆ ನಮಗಾಯಿತು.

وَأَمَّا الْغُلَامُ فَكَانَ أَبَوَاهُ مُؤْمِنَيْنِ فَخَشِينَا أَن يُرْهِقَهُمَا طُغْيَانًا وَكُفْرًا ﴿٨٠﴾

81. ಆದುದರಿಂದ ಅವರ ಪ್ರಭು ಅವನ ಬದಲಿಗೆ ಚಾರಿತ್ರ್ಯದಲ್ಲಿ ಅವನಿಗಿಂತ ಉತ್ತಮನೂ ದಯಾದಾಕ್ಷಿಣ್ಯಗಳಲ್ಲಿ ನಿಕಟನೂ ಆದ ಸಂತತಿಯನ್ನು ಅವರಿಗೆ ದಯಪಾಲಿಸಲೆಂದು ಬಯಸಿದೆವು-

فَأَرَدْنَا أَن يُبْدِلَهُمَا رَبُّهُمَا خَيْرًا مِّنْهُ زَكٰوةً وَأَقْرَبَ رُحْمًا ﴿٨١﴾

*ಇಲ್ಲಿಂದ **16**ನೆಯ ಕಾಂಡ ಆರಂಭ.

82. ಮತ್ತು ಆ ಗೋಡೆಯ ಬಗ್ಗೆ ಹೇಳುವುದಾದರೆ ಅದು ಈ ಪಟ್ಟಣದಲ್ಲಿರುವ ಇಬ್ಬರು ಅನಾಥ ಹುಡುಗರದ್ದಾಗಿದೆ. ಈ ಗೋಡೆಯ ಅಡಿಯಲ್ಲಿ ಆ ಮಕ್ಕಳಿಗಾಗಿ ಒಂದು ನಿಧಿ ಇದೆ ಮತ್ತು ಅವರ ತಂದೆ ಒಬ್ಬ ಸಜ್ಜನನಾಗಿದ್ದನು. ಆದುದರಿಂದ ಈ ಮಕ್ಕಳಿಬ್ಬರೂ ಪ್ರೌಢಾವಸ್ಥೆಗೆ ತಲಪಿ ತಮ್ಮ ನಿಧಿಯನ್ನು ಪಡೆಯಲೆಂದು ನಿಮ್ಮ ಪ್ರಭು ಬಯಸಿದನು. ಇದು ನಿಮ್ಮ ಪ್ರಭುವಿನ ಕೃಪೆಯ ನಿಮಿತ್ತ ಮಾಡಲಾಗಿರುತ್ತದೆ. ನಾನೇನೂ ನನ್ನ ಸ್ವಂತ ಅಧಿಕಾರದಿಂದ ಮಾಡಿದುದಲ್ಲ. ನೀವು ತಾಳ್ಮೆ ವಹಿಸದಿದ್ದ ವಿಷಯಗಳ ವಾಸ್ತವಿಕತೆ ಇದು."[20]

وَ اَمَّا الْجِدَارُ فَكَانَ لِغُلٰمَيْنِ يَتِيْمَيْنِ
فِى الْمَدِيْنَةِ وَ كَانَ تَحْتَهٗ كَنْزٌ لَّهُمَا
وَ كَانَ اَبُوْهُمَا صَالِحًا ۚ فَاَرَادَ رَبُّكَ
اَنْ يَّبْلُغَاۤ اَشُدَّهُمَا وَيَسْتَخْرِجَا كَنْزَهُمَا ۖۗ
رَحْمَةً مِّنْ رَّبِّكَ ۚ وَ مَا فَعَلْتُهٗ عَنْ اَمْرِىْ ؕ
ذٰلِكَ تَاْوِيْلُ مَا لَمْ تَسْطِعْ عَّلَيْهِ صَبْرًا ﴿۸۲﴾

83. ಓ ಪೈಗಂಬರರೇ, ಇವರು ನಿಮ್ಮೊಡನೆ 'ದುಲ್‌ಕರ್ನೈನ್'ರ ಕುರಿತು ಪ್ರಶ್ನಿಸುತ್ತಾರೆ. ಅವರ ಕುರಿತು ಕೆಲವು ವಿಷಯಗಳನ್ನು ನಿಮಗೆ ತಿಳಿಸುತ್ತೇನೆಂದು ಇವರೊಡನೆ ಹೇಳಿರಿ.

وَيَسْـَٔلُوْنَكَ عَنْ ذِى الْقَرْنَيْنِ ؕ قُلْ
سَاَتْلُوْا عَلَيْكُمْ مِّنْهُ ذِكْرًا ﴿۸۳﴾

84. ನಾವು ಅವರಿಗೆ ಭೂಮಿಯಲ್ಲಿ ಪ್ರಭುತ್ವವನ್ನು ದಯಪಾಲಿಸಿದ್ದೆವು ಮತ್ತು ಅವರಿಗೆ ಎಲ್ಲಾ ತರದ ಸಾಧನಾನುಕೂಲಗಳನ್ನು ನೀಡಿದ್ದೆವು.

اِنَّا مَكَّنَّا لَهٗ فِى الْاَرْضِ وَ اٰتَيْنٰهُ مِنْ
كُلِّ شَىْءٍ سَبَبًا ﴿۸۴﴾

85. ಅವರು (ಮೊದಲು ಪಶ್ಚಿಮ ದಿಕ್ಕಿಗೆ ಒಂದು ದಂಡಯಾತ್ರೆಯ) ಸಿದ್ಧತೆ ಮಾಡಿದರು.

فَاَتْبَعَ سَبَبًا ﴿۸۵﴾

86. ಕೊನೆಗೆ ಅವರು ಸೂರ್ಯನು ಅಸ್ತಮಿಸುವಲ್ಲಿಗೆ ತಲುಪಿದಾಗ[21] ಸೂರ್ಯನು ಕಪ್ಪು ನೀರಿನಲ್ಲಿ ಮುಳುಗುತ್ತಿರುವುದಾಗಿ[22] ಕಂಡರು.

حَتّٰۤى اِذَا بَلَغَ مَغْرِبَ الشَّمْسِ وَجَدَهَا
تَغْرُبُ فِىْ عَيْنٍ حَمِئَةٍ وَّ وَجَدَ عِنْدَهَا

20. ಹ. ಖಿಝುರ್ ಮಾಡಿದ ಮೂರು ಕೆಲಸಗಳು ಅಲ್ಲಾಹನ ಆಜ್ಞೆಯಿಂದಲೇ ಆಗಿದ್ದುವು ಎಂಬುದು ಈ ಘಟನೆಯಿಂದ ಸ್ಪಷ್ಟವಾಗುತ್ತದೆ. ಅದರ ಜತೆಗೆ ಅವರು ಮಾಡಿದ ಮೊದಲಿನೆರಡು ಕೆಲಸಗಳು, ಅಲ್ಲಾಹನು ಕಳುಹಿಸಿರುವ ಶರೀಅತ್‌ನಲ್ಲಿ ಯಾವ ಮಾನವನಿಗೂ ಅನುಮತಿಸಲಾಗದ ವಿಷಯಗಳೆಂದೂ ವ್ಯಕ್ತವಾಗುತ್ತದೆ. ಯಾರದಾದರೂ ಒಡೆತನದಲ್ಲಿರುವ ದೋಣಿಯನ್ನು ಮುಂದೆ ಅದನ್ನು ಅಕ್ರಮಿಯೊಬ್ಬ ಕಿತ್ತುಕೊಳ್ಳಬಹುದೆಂಬ ಕಾರಣಕ್ಕಾಗಿ ಹಾಳುಗೆಡಹುವುದು ಅಥವಾ ಓರ್ವ ಬಾಲಕನನ್ನು ದೊಡ್ಡವನಾದ ನಂತರ ಅವನು ಅಕ್ರಮಿಯೂ ಸತ್ಯನಿಷೇಧಿಯೂ ಆಗಿ ಮಾರ್ಪಡುವವನು ಎಂಬ ಕಾರಣಕ್ಕಾಗಿ ಕೊಲೆ ಮಾಡುವುದು- ದಿವ್ಯಬೋಧನೆಯ ಆಧಾರದಲ್ಲೂ ಯಾವ ಮಾನವನಿಗೂ ಅಧಿಕಾರವಿಲ್ಲದಂತಹ ವಿಷಯವಾಗಿದೆ. ಆದ್ದರಿಂದ ಖಿಝುರ್‌ರು ಈ ಕೆಲಸವನ್ನು ಶರೀಅತ್‌ನ ಆದೇಶದಂತಲ್ಲ ಬದಲಾಗಿ ದೇವಾದೇಶದಂತೆ ಮಾಡಿದ್ದರು ಎಂದು ನಂಬುವುದಲ್ಲದೆ ನಮಗೆ ಬೇರೆ ದಾರಿಯಿಲ್ಲ. ಇಂತಹ ಕೆಲಸಗಳನ್ನು ಅಲ್ಲಾಹನು ಮಾನವೇತರ ಸೃಷ್ಟಿಗಳ ಮೂಲಕ ಮಾಡಿಸುತ್ತಾನೆ. ಘಟನೆಯ ಸ್ವರೂಪದಿಂದ ತಿಳಿದು ಬರುವುದೇನೆಂದರೆ ಅಲ್ಲಾಹನು ಮೂಸಾರನ್ನು(ಅ) ಆ ದಾಸನ ಬಳಿಗೆ ಕಳುಹಿಸುವುದರ ಉದ್ದೇಶವೇ, ಈ ದೇವನ ಕಾರ್ಯಾಗಾರದಲ್ಲಿ ಮಾನವನ ತಿಳುವಳಿಕೆಗೆ ಮೀರಿದ ಯಾವ ಯುಕ್ತಿಗಳು ಅಡಕವಾಗಿದೆ ಎಂದು ತೆರೆ ಸರಿಸಿ ಅವರಿಗೆ ಒಂದು ದೃಶ್ಯವನ್ನು ತೋರಿಸುವುದಾಗಿತ್ತು. ಅಲ್ಲಾಹನು ಹ. ಖಿಝುರ್‌ರ(ಅ) ಕುರಿತು 'ದಾಸ' ಎಂಬ ಪದ ಪ್ರಯೋಗ ಮಾಡಿರುವುದು ಅವರನ್ನು ಮಾನವ ಎಂದು ಕಲ್ಪಿಸಲು ಸಾಕಾಗಲಾರದು. ಅಲ್ ಅಂಬಿಯಾ ಅಧ್ಯಾಯದ ಸೂಕ್ತ 26, ಅಝ್ಝುಖ್‌ರುಫ್ ಅಧ್ಯಾಯದ ಸೂಕ್ತ 19 ಮತ್ತಿತರ ಕಡೆಗಳಲ್ಲಿ ದೇವಚರರಿಗೂ ಇಂತಹ ಪದ ಬಳಕೆಯಾಗಿದೆ.

21. ಅರ್ಥಾತ್- ಪಶ್ಚಿಮ ಸೀಮೆಯ ಕೊನೆಯ ತನಕ.

22. ಅರ್ಥಾತ್- ಅಲ್ಲಿ ಸೂರ್ಯಾಸ್ತಮದ ವೇಳೆ ಸೂರ್ಯ ಸಮುದ್ರದ ಕಪ್ಪು ಬಣ್ಣ ಮಿಶ್ರಿತ ನೀರಿನಲ್ಲಿ ಮುಳುಗುತ್ತಿದೆಯೇನೋ ಎಂದು ಭಾಸವಾಗುತ್ತದೆ.

ಅವರು ಅಲ್ಲೊಂದು ಜನಾಂಗವನ್ನು ನೋಡಿದರು. ನಾವು (ಹೀಗೆ) ಹೇಳಿದೆವು - "ಓ ದುಲ್‌ಕರ್ನೈನ್! ಇವರಿಗೆ ತೊಂದರೆ ಕೊಡುವ ಶಕ್ತಿಯೂ ನಿಮಗಿದೆ, ಅವರೊಂದಿಗೆ ಉತ್ತಮ ರೀತಿಯ ವ್ಯವಹಾರ ನಡೆಸುವ ಅಧಿಕಾರವೂ ನಿಮಗೆ ಇದೆ."

قَوْمًا ۬ قُلْنَا يٰذَا الْقَرْنَيْنِ اِمَّاۤ اَنْ تُعَذِّبَ وَ اِمَّاۤ اَنْ تَتَّخِذَ فِيْهِمْ حُسْنًا ﴿۸۶﴾

87. ಆಗ ಅವರು, "ಇದರಲ್ಲಿ ಅಕ್ರಮವೆಸಗಿದವನಿಗೆ ನಾವು ಶಿಕ್ಷೆ ಕೊಡುವೆವು. ಅನಂತರ ಅವನು ತನ್ನ ಪ್ರಭುವಿನ ಕಡೆಗೆ ಮರಳಿ ಸಲ್ಪಡುವನು ಮತ್ತು ಅವನು (ಅಲ್ಲಾಹ್) ಆತನಿಗೆ ಇನ್ನಷ್ಟು ಕಠಿಣ ಶಿಕ್ಷೆ ಕೊಡುವನು.

قَالَ اَمَّا مَنْ ظَلَمَ فَسَوْفَ نُعَذِّبُهٗ ثُمَّ يُرَدُّ اِلٰى رَبِّهٖ فَيُعَذِّبُهٗ عَذَابًا نُّكْرًا ﴿۸۷﴾

88. ಅವರಲ್ಲಿ ಸತ್ಯವಿಶ್ವಾಸ ಸ್ವೀಕರಿಸುವವನಿಗೆ ಹಾಗೂ ಸತ್ಕರ್ಮ ವೆಸಗುವವನಿಗೆ ಸತ್ಫಲವಿದೆ. ನಾವು ಅವನಿಗೆ ಸರಳವಾದ ಆದೇಶ ಗಳನ್ನು ನೀಡುವೆವು" ಎಂದರು.

وَ اَمَّا مَنْ اٰمَنَ وَعَمِلَ صَالِحًا فَلَهٗ جَزَآءَ ۨالْحُسْنٰى ۚ وَسَنَقُوْلُ لَهٗ مِنْ اَمْرِنَا يُسْرًا ﴿۸۸﴾

89. ಅನಂತರ ಅವರು (ಇನ್ನೊಂದು ದಂಡಯಾತ್ರೆಯ) ಸಿದ್ಧತೆ ಮಾಡಿದರು.

ثُمَّ اَتْبَعَ سَبَبًا ﴿۸۹﴾

90. ಕೊನೆಗೆ ಸೂರ್ಯನು ಉದಯಿಸುವ ಸರಹದ್ದಿನ ವರೆಗೆ ತಲಪಿದರು.[23] ಅಲ್ಲಿ ಬಿಸಿಲಿನಿಂದ ರಕ್ಷಣೆ ಪಡೆಯಲು ಯಾವುದೇ ಸಾಧನವನ್ನು ನಾವು ಮಾಡಿಕೊಟ್ಟಿರದಂತಹ ಒಂದು ಜನಾಂಗದ ಮೇಲೆ ಸೂರ್ಯನು ಉದಯಿಸುತ್ತಿದ್ದುದನ್ನು ಅವರು ಕಂಡರು.

حَتّٰۤى اِذَا بَلَغَ مَطْلِعَ الشَّمْسِ وَجَدَهَا تَطْلُعُ عَلٰى قَوْمٍ لَّمْ نَجْعَلْ لَّهُمْ مِّنْ دُوْنِهَا سِتْرًا ﴿۹۰﴾

91. ಅವರ ಅವಸ್ಥೆ ಇದಾಗಿತ್ತು ಮತ್ತು ದುಲ್‌ಕರ್ನೈನರ ಬಳಿ ಏನಿತ್ತೆಂಬುದನ್ನು ನಾವು ತಿಳಿದಿದ್ದೆವು.

كَذٰلِكَ ؕ وَقَدْ اَحَطْنَا بِمَا لَدَيْهِ خُبْرًا ﴿۹۱﴾

92. ಅನಂತರ ಅವರು (ಮತ್ತೊಂದು ದಂಡಯಾತ್ರೆಯ) ಸಿದ್ಧತೆ ಮಾಡಿದರು.

ثُمَّ اَتْبَعَ سَبَبًا ﴿۹۲﴾

93. ಕೊನೆಗೆ ಎರಡು ಪರ್ವತಗಳ ನಡುವೆ ತಲಪಿದಾಗ ಯಾವ ಮಾತನ್ನೂ ತಿಳಿಯದಂತಹ ಒಂದು ಜನಾಂಗವನ್ನು ಅವರು ಕಂಡರು.

حَتّٰۤى اِذَا بَلَغَ بَيْنَ السَّدَّيْنِ وَجَدَ مِنْ دُوْنِهِمَا قَوْمًا ۙ لَّا يَكَادُوْنَ يَفْقَهُوْنَ قَوْلًا ﴿۹۳﴾

94. ಅವರು (ಹೀಗೆ) ಹೇಳಿದರು- "ಓ ದುಲ್‌ಕರ್ನೈನರೇ! ಯಅ್‌ಜೂಜ್

قَالُوْا يٰذَا الْقَرْنَيْنِ اِنَّ يَاْجُوْجَ وَمَاْجُوْجَ

23. ಅರ್ಥಾತ್- ಪೂರ್ವ ಸೀಮೆಯ ಕೊನೆಯ ತನಕ.

ಮತ್ತು ಮಅ್‌ಜೂಜರು[24] ಈ ಪ್ರದೇಶದಲ್ಲಿ ಗೊಂದಲ ಹಬ್ಬಿಸುತ್ತಿದ್ದಾರೆ. ನೀವು ನಮ್ಮ ಮತ್ತು ಅವರ ನಡುವೆ ಒಂದು ತಡೆಯನ್ನು ನಿರ್ಮಿಸಿ ಕೊಡುವ ಕಾರ್ಯಕ್ಕೆ ನಾವು ನಿಮಗೆ ತೆರಿಗೆ ಏನಾದರೂ ಕೊಡಬೇಕೇ?"

مُفْسِدُونَ فِي الْأَرْضِ فَهَلْ نَجْعَلُ لَكَ خَرْجًا عَلَىٰ أَنْ تَجْعَلَ بَيْنَنَا وَبَيْنَهُمْ سَدًّا ﴿٩٤﴾

95. (ಅದಕ್ಕೆ) ಅವರು, "ನನ್ನ ಪ್ರಭು ನನಗೆ ದಯಪಾಲಿಸಿರುವುದೇ ಸಾಕಷ್ಟಿದೆ. ನೀವು ನಿಮ್ಮ ಪರಿಶ್ರಮದಿಂದ ನನಗೆ ಸಹಾಯ ಮಾಡಿರಿ. ನಾನು ನಿಮ್ಮ ಮತ್ತು ಅವರ ನಡುವೆ ಒಂದು ತಡೆ ನಿರ್ಮಿಸಿಕೊಡುತ್ತೇನೆ-

قَالَ مَا مَكَّنِّي فِيهِ رَبِّي خَيْرٌ فَأَعِينُونِي بِقُوَّةٍ أَجْعَلْ بَيْنَكُمْ وَبَيْنَهُمْ رَدْمًا ﴿٩٥﴾

96. ನನಗೆ ಕಬ್ಬಿಣದ ಹಾಳೆಗಳನ್ನು ತಂದುಕೊಡಿರಿ" ಎಂದರು. ಹೀಗೆ ಎರಡು ಪರ್ವತಗಳ ನಡುವಿನ ಖಾಲಿ ಸ್ಥಳವನ್ನು ತುಂಬಿಸಿದ ಬಳಿಕ ಅವರು ಜನರೊಡನೆ, "ಇನ್ನು ಬೆಂಕಿ ಉರಿಸಿರಿ" ಎಂದರು. ಕೊನೆಗೆ (ಈ ಕಬ್ಬಿಣದ ಗೋಡೆಯು) ಕೆಂಡದಂತೆ ಕೆಂಪಾದಾಗ ಅವರು, "ತನ್ನಿರಿ, ನಾನೀಗ ಇದರಲ್ಲಿ ಕರಗಿದ ತಾಮ್ರವನ್ನು ಹೊಯ್ದು ಬಿಡುವೆನು" ಎಂದರು.

آتُونِي زُبَرَ الْحَدِيدِ ۖ حَتَّىٰ إِذَا سَاوَىٰ بَيْنَ الصَّدَفَيْنِ قَالَ انْفُخُوا ۖ حَتَّىٰ إِذَا جَعَلَهُ نَارًا قَالَ آتُونِي أُفْرِغْ عَلَيْهِ قِطْرًا ﴿٩٦﴾

97. (ಈ ತಡೆಯು) ಯಅ್‌ಜೂಜ್ ಮತ್ತು ಮಅ್‌ಜೂಜರು ಅದರ ಮೇಲೆ ಹತ್ತಿಯೂ ಬರಲಾರದಂತಿತ್ತು. ಅದರಲ್ಲಿ ಕನ್ನ ಕೊರೆಯುವುದಂತೂ ಅವರಿಗೆ ಇನ್ನಷ್ಟು ಪ್ರಯಾಸಕರವಾಗಿತ್ತು.

فَمَا اسْطَاعُوا أَنْ يَظْهَرُوهُ وَمَا اسْتَطَاعُوا لَهُ نَقْبًا ﴿٩٧﴾

98. ದುಲ್‌ಕರ್ನೈನ್ ಇಂತೆಂದರು - "ಇದು ನನ್ನ ಪ್ರಭುವಿನ ಕೃಪೆಯಾಗಿರುತ್ತದೆ. ಆದರೆ ನನ್ನ ಪ್ರಭುವಿನ ವಾಗ್ದಾನದ ಕಾಲ ಬಂದಾಗ ಅವನು ಇದನ್ನು ನೆಲಸಮ ಮಾಡಿ ಬಿಡುವನು. ನನ್ನ ಪ್ರಭುವಿನ ವಾಗ್ದಾನವು ಸತ್ಯಪೂರ್ಣವಾಗಿರುತ್ತದೆ."

قَالَ هَٰذَا رَحْمَةٌ مِنْ رَبِّي ۖ فَإِذَا جَاءَ وَعْدُ رَبِّي جَعَلَهُ دَكَّاءَ ۖ وَكَانَ وَعْدُ رَبِّي حَقًّا ﴿٩٨﴾

99. ಅಂದು[25] ನಾವು ಜನರನ್ನು (ಸಮುದ್ರದ ತೆರೆಗಳಂತೆ) ಪರಸ್ಪರ

وَتَرَكْنَا بَعْضَهُمْ يَوْمَئِذٍ يَمُوجُ فِي بَعْضٍ

24. ಯಅ್‌ಜೂಜ್- ಮಅ್‌ಜೂಜ್ ಎಂದರೆ ಹಿಂದಿನ ಕಾಲದಿಂದಲೂ ನಾಗರಿಕ ರಾಷ್ಟ್ರಗಳನ್ನು ಕೊಳ್ಳೆ ಹೊಡೆಯುತ್ತಿದ್ದ ಈಶಾನ್ಯ ಏಷ್ಯಾದ ಜನಾಂಗಗಳು. ಹಲವೊಮ್ಮೆ ಅವರ ಮಹಾಪೂರ ಏಷ್ಯಾ ಮತ್ತು ಯೂರೋಪಿನ ಕಡೆಗೆ ಹರಿಯುತ್ತಿತ್ತು. ಯೆಜ್‌ಕಿಯೇಲನ ಗ್ರಂಥದಲ್ಲಿ (ಭಾಗ- 38,39) ಅವರ ಪ್ರದೇಶ ರಷ್ಯಾ ಮತ್ತು ತೋಬಲ್ (ಇಂದಿನ ಬಾಲ್ಕಿಕ್) ಮತ್ತು ಮಸ್ಕ್ (ಈಗಿನ ಮಾಸ್ಕೋ) ಎಂದು ಹೇಳಲಾಗಿದೆ. ಇಸ್ರಾಈಲೀ ಇತಿಹಾಸಜ್ಞ ಯುಸೀಫೋಸನ ಪ್ರಕಾರ ಅವರು ಸೇಥಿಯನ್ ಜನಾಂಗದವರಾಗಿದ್ದರು. ಅವರ ವಾಸ್ತವ್ಯ ಕಪ್ಪುಸಮುದ್ರದ ಉತ್ತರ ಮತ್ತು ಪೂರ್ವ ಪ್ರದೇಶದಲ್ಲಿತ್ತು. ಜೆರೋಮ್‌ನ ಪ್ರಕಾರ ಮಅ್‌ಜೂಜ್ ಕಾಕೇಸಸ್ ಪರ್ವತಗಳ ಉತ್ತರಕ್ಕೆ ಕೇಸ್ಪಿಯನ್ ಸಮುದ್ರದ ಬಳಿ ವಾಸವಾಗಿದ್ದರು.

25. ಅರ್ಥಾತ್- ನಿರ್ಣಾಯಕ ದಿನ. ನಿರ್ಣಾಯಕ ದಿನದ ನಿಶ್ಚಿತವಾದ ವಾಗ್ದಾನದ ಬಗ್ಗೆ ದುಲ್‌ಕರ್ನೈನ್ ನೀಡಿದ್ದ ಸೂಚನೆಯ ಹಿನ್ನೆಲೆಯಲ್ಲಿ ಈ ಸೂಕ್ತಗಳನ್ನು ಅವನ ಮಾತಿಗೆ ಪೂರಕವಾಗಿ ಹೇಳಲಾಗಿದೆ.

ಹೊಡೆದಾಡಿಕೊಳ್ಳಲು ಬಿಟ್ಟು ಬಿಡುವೆವು. ಕಹಳೆ ಊದಲ್ಪಡುವುದು. ಆ ಬಳಿಕ ನಾವು ಸಕಲ ಮಾನವರನ್ನು ಒಂದೆಡೆ ಒಟ್ಟು ಗೂಡಿಸುವೆವು.

وَّنُفِخَ فِي الصُّوْرِ فَجَمَعْنٰهُمْ جَمْعًا ﴿٩٩﴾

100. ಅಂದು ನಾವು ನರಕವನ್ನು ಸತ್ಯನಿಷೇಧಿಗಳ ಮುಂದೆ ತರುವೆವು.

وَّعَرَضْنَا جَهَنَّمَ يَوْمَىِٕذٍ لِّلْكٰفِرِيْنَ عَرْضًا ﴿١٠٠﴾

101. ನನ್ನ ಹಿತೋಪದೇಶದ ಬಗ್ಗೆ ಅಂಧರಾಗಿದ್ದುಕೊಂಡು ಏನನ್ನೂ ಆಲಿಸಲು ಸಿದ್ಧರಾಗಿರದ ಸತ್ಯನಿಷೇಧಿಗಳ ಮುಂದೆ.

الَّذِيْنَ كَانَتْ اَعْيُنُهُمْ فِيْ غِطَاۤءٍ عَنْ ذِكْرِيْ وَكَانُوْا لَا يَسْتَطِيْعُوْنَ سَمْعًا ﴿١٠١﴾

102. ಸತ್ಯನಿಷೇಧವನ್ನು ಸ್ವೀಕರಿಸಿಕೊಂಡವರು ನನ್ನನ್ನು ಬಿಟ್ಟು ನನ್ನ ದಾಸರನ್ನು ತಮ್ಮ ರಕ್ಷಕ ಮಿತ್ರರಾಗಿಸಿಕೊಳ್ಳಬೇಕೆಂದು ಎಣಿಸಿ ರುವರೇ? ನಾವು ಇಂತಹ ಸತ್ಯನಿಷೇಧಿಗಳ ಸತ್ಕಾರಕ್ಕಾಗಿ ನರಕವನ್ನು ಸಿದ್ಧಗೊಳಿಸಿಟ್ಟಿರುತ್ತೇವೆ.

اَفَحَسِبَ الَّذِيْنَ كَفَرُوْٓا اَنْ يَّتَّخِذُوْا عِبَادِيْ مِنْ دُوْنِيْٓ اَوْلِيَاۤءَ ۗ اِنَّآ اَعْتَدْنَا جَهَنَّمَ لِلْكٰفِرِيْنَ نُزُلًا ﴿١٠٢﴾

103. ಓ ಪೈಗಂಬರರೇ, ಇವರೊಡನೆ ಹೇಳಿರಿ; ತಮ್ಮ ಕರ್ಮಗಳಲ್ಲಿ ಅತ್ಯಧಿಕ ವಿಫಲರು ಯಾರೆಂದು ನಿಮಗೆ ತಿಳಿಸಲೇ?

قُلْ هَلْ نُنَبِّئُكُمْ بِالْاَخْسَرِيْنَ اَعْمَالًا ﴿١٠٣﴾

104. ಲೌಕಿಕ ಜೀವನದಲ್ಲಿ ಯಾರ ಸಕಲ ಪರಿಶ್ರಮಗಳು ಸನ್ಮಾರ್ಗದಿಂದ ತಪ್ಪಿಹೋಗಿದ್ದು ತಾವು ಮಾಡುತ್ತಿರುವುದೆಲ್ಲವೂ ಸರಿಯೇ ಎಂದು ತಿಳಿದುಕೊಂಡಿದ್ದರೋ ಅವರು.

اَلَّذِيْنَ ضَلَّ سَعْيُهُمْ فِى الْحَيٰوةِ الدُّنْيَا وَهُمْ يَحْسَبُوْنَ اَنَّهُمْ يُحْسِنُوْنَ صُنْعًا ﴿١٠٤﴾

105. ಇವರು ತಮ್ಮ ಪ್ರಭುವಿನ ವಚನಗಳನ್ನೂ ಅವನ ಮುಂದೆ ಹಾಜರಾಗಲಿಕ್ಕಿದೆ ಎಂಬುದನ್ನೂ ನಿರಾಕರಿಸಿದವರು. ಆದುದರಿಂದ ಇವರ ಸಕಲ ಕರ್ಮಗಳೂ ವ್ಯರ್ಥವಾಗಿ ಬಿಟ್ಟುವು. ಪುನರುತ್ಥಾನದ ದಿನ ನಾವು ಅವರಿಗೆ ಏನೂ ಮಹತ್ವ ನೀಡಲಾರೆವು.

اُولٰۤىِٕكَ الَّذِيْنَ كَفَرُوْا بِاٰيٰتِ رَبِّهِمْ وَلِقَاۤىِٕهٖ فَحَبِطَتْ اَعْمَالُهُمْ فَلَا نُقِيْمُ لَهُمْ يَوْمَ الْقِيٰمَةِ وَزْنًا ﴿١٠٥﴾

106. ಅವರು ಸತ್ಯವನ್ನು ನಿಷೇಧಿಸಿದುದಕ್ಕಾಗಿಯೂ ನನ್ನ ವಚನಗಳನ್ನು ಮತ್ತು ನನ್ನ ಸಂದೇಶವಾಹಕರನ್ನು ಅಪಹಾಸ್ಯ ಮಾಡಿದುದಕ್ಕಾ ಗಿಯೂ ಅವರ ಪ್ರತಿಫಲ ನರಕವಾಗಿರುತ್ತದೆ.

ذٰلِكَ جَزَاۤؤُهُمْ جَهَنَّمُ بِمَا كَفَرُوْا وَاتَّخَذُوْٓا اٰيٰتِيْ وَرُسُلِيْ هُزُوًا ﴿١٠٦﴾

107. ಆದರೆ ಸತ್ಯವಿಶ್ವಾಸವಿಟ್ಟವರ ಹಾಗೂ ಸತ್ಕರ್ಮವೆಸಗಿದವರ ಆತಿಥ್ಯಕ್ಕಾಗಿ 'ಫಿರ್‌ದೌಸ್'ನ ಉದ್ಯಾನಗಳಿರುವುವು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ كَانَتْ لَهُمْ جَنّٰتُ الْفِرْدَوْسِ نُزُلًا ﴿١٠٧﴾

108. ಅವರು ಅದರಲ್ಲಿ ಅನಂತ ಕಾಲ ವಾಸಿಸುವರು ಮತ್ತು ಅಲ್ಲಿಂದ ಹೊರಟು ಬೇರೆಲ್ಲಿಯೂ ಹೋಗಲು ಅವರೆಂದೂ ಇಷ್ಟಪಡಲಾರರು.

خٰلِدِيْنَ فِيْهَا لَا يَبْغُوْنَ عَنْهَا حِوَلًا ﴿١٠٨﴾

109. ಓ ಪೈಗಂಬರರೇ, ಹೇಳಿರಿ- ನನ್ನ ಪ್ರಭುವಿನ ವಚನಗಳನ್ನು ಬರೆಯಲು ಸಮುದ್ರವು ಮಸಿಯಾಗಿ ಮಾರ್ಪಟ್ಟರೂ ಅದು ಮುಗಿದು ಹೋಗುವುದು. ಆದರೆ ನನ್ನ ಪ್ರಭುವಿನ ವಚನಗಳು ಮುಗಿಯಲಾರವು. ಮಾತ್ರವಲ್ಲ ಮತ್ತೂ ಅಷ್ಟೇ ಮಸಿಯನ್ನು ನಾವು ತಂದರೂ ಅದೂ ಸಾಕಾಗದು.[26]

قُلْ لَّوْ كَانَ الْبَحْرُ مِدَادًا لِّكَلِمٰتِ رَبِّيْ لَنَفِدَ الْبَحْرُ قَبْلَ اَنْ تَنْفَدَ كَلِمٰتُ رَبِّيْ وَلَوْ جِئْنَا بِمِثْلِهٖ مَدَدًا ﴿۱۰۹﴾

110. ಓ ಪೈಗಂಬರರೇ, ಹೇಳಿರಿ- ನಾನು ನಿಮ್ಮಂತೆಯೇ ಇರುವ ಒಬ್ಬ ಮನುಷ್ಯ. ನಿಮ್ಮ ದೇವನು ಏಕ ಮಾತ್ರ ದೇವನೆಂದು ನನ್ನ ಕಡೆಗೆ 'ದಿವ್ಯವಾಣಿ' ಮಾಡಲಾಗುತ್ತಿದೆ. ಆದುದರಿಂದ ತನ್ನ ಪ್ರಭುವಿನ ಭೇಟಿಯನ್ನು ನಿರೀಕ್ಷಿಸುವವನು ಸತ್ಕರ್ಮಗಳನ್ನೆಸಗಲಿ ಮತ್ತು ಆರಾಧನೆಯಲ್ಲಿ ತನ್ನ ಪ್ರಭುವಿನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡದಿರಲಿ.

قُلْ اِنَّمَآ اَنَا بَشَرٌ مِّثْلُكُمْ يُوْحٰٓى اِلَيَّ اَنَّمَآ اِلٰهُكُمْ اِلٰهٌ وَّاحِدٌ ۚ فَمَنْ كَانَ يَرْجُوْا لِقَآءَ رَبِّهٖ فَلْيَعْمَلْ عَمَلًا صَالِحًا وَّلَا يُشْرِكْ بِعِبَادَةِ رَبِّهٖٓ اَحَدًا ﴿۱۱۰﴾

ع

---

26. ಅಲ್ಲಾಹನ 'ವಚನಗಳು' ಎಂದರೆ ಅವನ ಕಾರ್ಯ, ಕೌಶಲ್ಯ, ಪ್ರಕೃತಿಯ ಅದ್ಭುತ ಮತ್ತು ಯುಕ್ತಿಗಳಾಗಿವೆ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಕಾಫ್-ಹಾ-ಯಾ-ಐನ್-ಸ್ವಾದ್.

كٓهٰيٰعٓصٓ ①

2. ಇದು ನಿಮ್ಮ ಪ್ರಭು ತನ್ನ ದಾಸ ಝಕರಿಯ್ಯಾರ ಮೇಲೆ ತೋರಿದ ಕರುಣೆಯ ಪ್ರಸ್ತಾಪ.

ذِكْرُ رَحْمَتِ رَبِّكَ عَبْدَهٗ زَكَرِيَّا ②

3. ಅವರು ತಮ್ಮ ಪ್ರಭುವನ್ನು ಮೆಲುದನಿಯಿಂದ ಕೂಗಿ ಪ್ರಾರ್ಥಿಸುತ್ತಿದ್ದಾಗ.

اِذْ نَادٰى رَبَّهٗ نِدَآءً خَفِيًّا ③

4. ಅವರು ಹೀಗೆ ಭಿನ್ನವಿಸಿಕೊಂಡರು- "ಓ ನನ್ನ ಪ್ರಭೂ, ನನ್ನ ಎಲುಬುಗಳು ಕೂಡಾ ದುರ್ಬಲಗೊಂಡಿವೆ. ತಲೆಯು ವೃದ್ಧಾಪ್ಯ ದಿಂದಾಗಿ ಉರಿದೆದ್ದಿದೆ. ಓ ನನ್ನ ಪ್ರಭೂ, ನಿನ್ನನ್ನು ಪ್ರಾರ್ಥಿಸಿ ನಾನೆಂದೂ ನಿರಾಶನಾಗಲಿಲ್ಲ.

قَالَ رَبِّ اِنِّيْ وَهَنَ الْعَظْمُ مِنِّيْ وَاشْتَعَلَ الرَّاْسُ شَيْبًا وَّلَمْ اَكُنْۢ بِدُعَآئِكَ رَبِّ شَقِيًّا ④

5. ನಿಶ್ಚಯವಾಗಿಯೂ ನನಗೆ ನನ್ನ ಅನಂತರ ನನ್ನ ಬಂಧುಬಳಗದವರ ಕೇಡಿನ ಭಯವಿದೆ ಮತ್ತು ನನ್ನ ಪತ್ನಿ ಬಂಜೆಯಾಗಿರುತ್ತಾಳೆ. ನೀನು ನಿನ್ನ ವಿಶಿಷ್ಟ ಅನುಗ್ರಹದಿಂದ-

وَاِنِّيْ خِفْتُ الْمَوَالِيَ مِنْ وَّرَآءِيْ وَكَانَتِ امْرَاَتِيْ عَاقِرًا فَهَبْ لِيْ مِنْ لَّدُنْكَ وَلِيًّا ⑤

6. ನನ್ನ ವಾರೀಸುದಾರನೂ ಯಅ್‌ಕೂಬರ ವಂಶದ ವಾರೀಸುದಾರನೂ ಆಗತಕ್ಕ ಓರ್ವ ಉತ್ತರಾಧಿಕಾರಿಯನ್ನು ನನಗೆ ದಯಪಾಲಿಸು ಮತ್ತು ಓ ನನ್ನ ಪ್ರಭೂ, ಅವನನ್ನು ಪ್ರೀತಿ ಪಾತ್ರನಾಗಿ ಮಾಡು."

يَّرِثُنِيْ وَيَرِثُ مِنْ اٰلِ يَعْقُوْبَ وَاجْعَلْهُ رَبِّ رَضِيًّا ⑥

7. (ಉತ್ತರ ಹೀಗೆ ಬಂತು)"ಓ ಝಕರಿಯ್ಯಾ, ನಾವು ನಿಮಗೆ ಓರ್ವ ಬಾಲಕನ ಸುವಾರ್ತೆ ನೀಡುತ್ತೇವೆ. ಅವನ ಹೆಸರು ಯಹ್ಯಾ ಆಗಿರುವುದು. ನಾವು ಇದಕ್ಕೆ ಮುಂಚೆ ಈ ಹೆಸರಿರುವ ಯಾರನ್ನೂ ಸೃಷ್ಟಿಸಿಲ್ಲ."

يٰزَكَرِيَّآ اِنَّا نُبَشِّرُكَ بِغُلٰمِ اسْمُهٗ يَحْيٰى لَمْ نَجْعَلْ لَّهٗ مِنْ قَبْلُ سَمِيًّا ⑦

8. ಆಗ- "ಓ ನನ್ನ ಪ್ರಭೂ ನನ್ನ ಪತ್ನಿಯು ಬಂಜೆಯಾಗಿದ್ದು ನಾನು ಅತಿ ವೃದ್ಧಾಪ್ಯದಿಂದ ಒಣಗಿ ಹೋಗಿರುವಾಗ ನನ್ನಲ್ಲಿ ಬಾಲಕ ನುಂಟಾಗುವುದು ಹೇಗೆ?" ಎಂದು ಕೇಳಿದರು.

قَالَ رَبِّ اَنّٰى يَكُوْنُ لِيْ غُلٰمٌ وَّكَانَتِ امْرَاَتِيْ عَاقِرًا وَّقَدْ بَلَغْتُ مِنَ الْكِبَرِ عِتِيًّا ﴿٨﴾

9. ಆಗ (ಹೀಗೆ) ಉತ್ತರ ಸಿಕ್ಕಿತು- "ಹಾಗೆಯೇ ಆಗುವುದು.[1] ಇದು ನಮಗೊಂದು ಅತಿ ಚಿಕ್ಕ ವಿಷಯವೆಂದು ನಿಮ್ಮ ಪ್ರಭು ಹೇಳುತ್ತಾನೆ. ಇದಕ್ಕೆ ಮುಂಚೆ ನೀನು ಏನೂ ಆಗಿಲ್ಲದಿದ್ದಾಗ ನಾನು ನಿನ್ನನ್ನು ಸೃಷ್ಟಿಸಿದ್ದೆ ತಾನೆ!"

قَالَ كَذٰلِكَ ۚ قَالَ رَبُّكَ هُوَ عَلَيَّ هَيِّنٌ وَّقَدْ خَلَقْتُكَ مِنْ قَبْلُ وَلَمْ تَكُ شَيْئًا ﴿٩﴾

10. ಆಗ ಝುಕರಿಯ್ಯಾ, "ಓ ನನ್ನ ಪ್ರಭೂ, ನನಗೊಂದು ಸಂಕೇತವನ್ನು ನಿಶ್ಚಯಿಸಿ ಕೊಡು" ಎಂದಾಗ "ನೀನು ಎಡೆಬಿಡದೆ ಮೂರು ದಿನ ಜನರೊಡನೆ ಮಾತನಾಡಲಾಗದಿರುವುದೇ ನಿನಗೆ ಸಂಕೇತ" ಎಂದು ಹೇಳಲಾಯಿತು.

قَالَ رَبِّ اجْعَلْ لِّيْۤ اٰيَةً ؕ قَالَ اٰيَتُكَ اَلَّا تُكَلِّمَ النَّاسَ ثَلٰثَ لَيَالٍ سَوِيًّا ﴿١٠﴾

11. ಆ ಪ್ರಕಾರ ಅವರು ಕೊಠಡಿಯಿಂದ ಹೊರಟು ತನ್ನ ಜನಾಂಗದ ಮುಂದೆ ಬಂದರು ಮತ್ತು ಬೆಳಗು ಬೈಗುಗಳಲ್ಲಿ ಕೀರ್ತನೆ ಮಾಡಿರೆಂದು ಅವರಿಗೆ ಸಂಜ್ಞೆಯ ಮೂಲಕ ಆದೇಶಿಸಿದರು.

فَخَرَجَ عَلٰى قَوْمِهٖ مِنَ الْمِحْرَابِ فَاَوْحٰۤى اِلَيْهِمْ اَنْ سَبِّحُوْا بُكْرَةً وَّعَشِيًّا ﴿١١﴾

12. "ಓ ಯಹ್ಯಾ ದಿವ್ಯ ಗ್ರಂಥವನ್ನು ಬಿಗಿಹಿಡಿದುಕೋ[2] ನಾವು ಅವರಿಗೆ ಬಾಲ್ಯದಲ್ಲೇ ಹುಕ್ಮ್[3] ಪ್ರದಾನ ಮಾಡಿದೆವು-

يٰيَحْيٰى خُذِ الْكِتٰبَ بِقُوَّةٍ ؕ وَاٰتَيْنٰهُ الْحُكْمَ صَبِيًّا ﴿١٢﴾

13. ಮತ್ತು ನಮ್ಮ ಕಡೆಯಿಂದ ಅವರಿಗೆ ಕೋಮಲ ಹೃದಯ ಹಾಗೂ ಪಾವಿತ್ರ್ಯವನ್ನು ನೀಡಿದೆವು. ಅವರು ಮಹಾ ಧರ್ಮ ನಿಷ್ಠರಾಗಿದ್ದರು-

وَّحَنَانًا مِّنْ لَّدُنَّا وَزَكٰوةً ؕ وَكَانَ تَقِيًّا ﴿١٣﴾

14. ಮತ್ತು ಮಾತಾಪಿತರಿಗೆ ವಿಧೇಯರಾಗಿದ್ದರು. ಅವರು ಉದ್ಧಟ ಹಾಗೂ ಆಜ್ಞೋಲ್ಲಂಘಕರಾಗಿರಲಿಲ್ಲ.

وَّبَرًّۢا بِوَالِدَيْهِ وَلَمْ يَكُنْ جَبَّارًا عَصِيًّا ﴿١٤﴾

15. ಅವರ ಮೇಲೆ ಅವರು ಜನಿಸಿದ ದಿನವೂ ಅವರು ಮರಣ ಹೊಂದುವ ದಿನವೂ ಅವರು ಜೀವಂತಗೊಳಿಸಿ ಎಬ್ಬಿಸಲ್ಪಡುವ ದಿನವೂ ಶಾಂತಿಯಿರಲಿ.

وَسَلٰمٌ عَلَيْهِ يَوْمَ وُلِدَ وَيَوْمَ يَمُوْتُ وَيَوْمَ يُبْعَثُ حَيًّا ﴿١٥﴾

1. ಅರ್ಥಾತ್- ನಿನ್ನ ವೃದ್ಧಾಪ್ಯ ಮತ್ತು ನಿನ್ನ ಪತ್ನಿಯ ಬಂಜೆತನದ ಹೊರತಾಗಿಯೂ ನಿನಗೆ ಗಂಡು ಮಗು ಹುಟ್ಟುವುದು.
2. ದೇವಾದೇಶದಂತೆ ಹ. ಯಹ್ಯಾ(ಅ) ಹುಟ್ಟಿದರು ಮತ್ತು ಯೌವನಕ್ಕೆ ತಲಪಿದರು ಎಂಬ ವಿವರಗಳನ್ನು ಮಧ್ಯದಲ್ಲಿ ಬಿಟ್ಟು ಬಿಡಲಾಗಿದೆ.
3. 'ಹುಕ್ಮ್' ಎಂದರೆ ನಿರ್ಧಾರ ಶಕ್ತಿ, ಸಂಶೋಧನಾ ಸಾಮರ್ಥ್ಯ, ಧರ್ಮದ ಪರಿಜ್ಞಾನ, ವ್ಯವಹಾರಗಳಿಗೆ ಸಂಬಂಧಿಸಿದಂತೆ ಸರಿಯಾದ ಅಭಿಪ್ರಾಯ ತಾಳುವ ಸಾಮರ್ಥ್ಯ ಮತ್ತು ಅಲ್ಲಾಹನ ವತಿಯಿಂದ ತೀರ್ಮಾನ ಮಾಡುವ ಅಧಿಕಾರ.

16. ಓ ಪೈಗಂಬರರೇ, ಈ ಗ್ರಂಥದಲ್ಲಿ ಮರ್ಯಮರ ವಿಷಯ ಪ್ರಸ್ತಾಪಿಸಿರಿ. ಅವರು ತನ್ನವರಿಂದ ಸರಿದು ಪೂರ್ವದಿಕ್ಕಿನಲ್ಲಿ[4] ಏಕಾಂತ ವಾಸದಲ್ಲಿದ್ದಾಗ-

وَاذْكُرْ فِي الْكِتَابِ مَرْيَمَ إِذِ انتَبَذَتْ مِنْ أَهْلِهَا مَكَانًا شَرْقِيًّا ﴿١٦﴾

17. ಹಾಗೂ ತೆರೆಯನ್ನಿಳಿಸಿ ಅವರಿಂದ ಮರೆಯಾಗಿ ಕುಳಿತಿದ್ದ[5] ಸ್ಥಿತಿಯಲ್ಲಿ ನಾವು ಅವರ ಬಳಿಗೆ ನಮ್ಮ ದೇವಚರರನನ್ನು ಕಳುಹಿಸಿದೆವು. ಅವನು ಅವರ ಮುಂದೆ ಓರ್ವ ಪೂರ್ಣ ಮನುಷ್ಯ ರೂಪದಲ್ಲಿ ಪ್ರತ್ಯಕ್ಷನಾದನು.

فَاتَّخَذَتْ مِن دُونِهِمْ حِجَابًا فَأَرْسَلْنَا إِلَيْهَا رُوحَنَا فَتَمَثَّلَ لَهَا بَشَرًا سَوِيًّا ﴿١٧﴾

18. ಮರ್ಯಮ್- ಥಟ್ಟನೆ, "ನೀನೊಬ್ಬ ದೇವಭಯವುಳ್ಳವನಾಗಿದ್ದರೆ ನಾನು ನಿನ್ನಿಂದ ದಯಾಮಯನಾದ ದೇವನ ಅಭಯ ಯಾಚಿಸುತ್ತೇನೆ" ಎಂದರು.

قَالَتْ إِنِّي أَعُوذُ بِالرَّحْمَٰنِ مِنكَ إِن كُنتَ تَقِيًّا ﴿١٨﴾

19. ಆಗ ಅವನು, "ನಾನು ನಿಮ್ಮ ಪ್ರಭುವಿನ ದೂತನಾಗಿರುತ್ತೇನೆ ಮತ್ತು ನಿಮಗೆ ಓರ್ವ ಪವಿತ್ರ ಬಾಲಕನನ್ನು ಕೊಡಲಿಕ್ಕಾಗಿ ಬಂದಿರುತ್ತೇನೆ" ಎಂದನು.

قَالَ إِنَّمَا أَنَا رَسُولُ رَبِّكِ لِأَهَبَ لَكِ غُلَامًا زَكِيًّا ﴿١٩﴾

20. ಆಗ ಮರ್ಯಮ್, "ನನ್ನನ್ನು ಪುರುಷನಾರೂ ಮುಟ್ಟದೆ ಇರುವಾಗ ನನ್ನಲ್ಲಿ ಬಾಲಕನಾಗುವುದು ಹೇಗೆ? ಮತ್ತು ನಾನೇನೂ ದುರಾಚಾರಿ ಸ್ತ್ರೀಯಲ್ಲ" ಎಂದರು.

قَالَتْ أَنَّىٰ يَكُونُ لِي غُلَامٌ وَلَمْ يَمْسَسْنِي بَشَرٌ وَلَمْ أَكُ بَغِيًّا ﴿٢٠﴾

21. ಆಗ ದೇವಚರರು, "ಹಾಗೆಯೇ ಆಗುವುದು[6] ಇದು ನನಗೆ ಬಹಳ ಸುಲಭವಾದುದೆಂದೂ ಆ ಬಾಲಕನನ್ನು ಜನರಿಗೆ ಒಂದು ನಿದರ್ಶನವನ್ನಾಗಿ[7] ಮತ್ತು ನಮ್ಮ ಕಡೆಯಿಂದ ಒಂದು ಕರುಣೆಯನ್ನಾಗಿ ಮಾಡಲಿಕ್ಕೋಸ್ಕರ ನಾವು ಹಾಗೆ ಮಾಡುವೆವೆಂದೂ ನಿನ್ನ ಪ್ರಭು ಹೇಳುತ್ತಾನೆ. ಈ ಕಾರ್ಯ ಆಗಿಯೇ ತೀರಬೇಕಾಗಿದೆ" ಎಂದನು.

قَالَ كَذَٰلِكِ قَالَ رَبُّكِ هُوَ عَلَيَّ هَيِّنٌ وَلِنَجْعَلَهُ آيَةً لِّلنَّاسِ وَرَحْمَةً مِّنَّا وَكَانَ أَمْرًا مَّقْضِيًّا ﴿٢١﴾

22. ಮರ್ಯಮರಿಗೆ ಆ ಮಗುವಿನ ಗರ್ಭ ಉಂಟಾಯಿತು ಮತ್ತು ಅವರು ಆ ಗರ್ಭ ಸಹಿತ ದೂರದ ಒಂದು ಸ್ಥಳಕ್ಕೆ ಹೋದರು.

فَحَمَلَتْهُ فَانتَبَذَتْ بِهِ مَكَانًا قَصِيًّا ﴿٢٢﴾

23. ತರುವಾಯ ಪ್ರಸವ ವೇದನೆಯು ಅವರನ್ನು ಒಂದು ಖರ್ಜೂರದ

فَأَجَاءَهَا الْمَخَاضُ إِلَىٰ جِذْعِ النَّخْلَةِ

4. ಅರ್ಥಾತ್- ಬೈತುಲ್ ಮುಕದ್ದಿಸ್‌ನ ಪಶ್ಚಿಮ ಭಾಗದಲ್ಲಿ.
5. ಅರ್ಥಾತ್- ಇಅ್‌ತಿಕಾಫ್‌ನಲ್ಲಿ ಕುಳಿತಿದ್ದರು.
6. ಅರ್ಥಾತ್- ಪುರುಷನ ಸ್ಪರ್ಶವಿಲ್ಲದೆಯೇ ನಿನಗೆ ಮಗು ಹುಟ್ಟುವುದು.
7. ಅರ್ಥಾತ್- ನಾವು ಆ ಮಗುವನ್ನು ಜೀವಂತ ಪವಾಡವಾಗಿ ಮಾಡಬಯಸುತ್ತೇವೆ.

ಮರದೆಡೆಗೆ ತಲುಪಿಸಿತು. ಅವರು, "ಅಕಟ ನಾನು ಇದಕ್ಕಿಂತ ಮುಂಚೆ ಸತ್ತು ಹೋಗಿದ್ದರೆ! ಮತ್ತು ಹೇಳ ಹೆಸರಿಲ್ಲದಂತೆ ಅಳಿದು ಹೋಗಿದ್ದರೆ (ಚೆನ್ನಾಗಿತ್ತು)" ಎನ್ನತೊಡಗಿದರು.[8]

قَالَتْ يَٰلَيْتَنِى مِتُّ قَبْلَ هَٰذَا وَكُنتُ نَسْيًا مَّنسِيًّا ﴿٢٣﴾

24. ದೇವಚರನು ಕಾಲಬಳಿಯಿಂದ ಅವರನ್ನು ಕೂಗಿ ಇಂತೆಂದನು- "ಮರುಗಬೇಡಿರಿ ನಿಮ್ಮ ಪ್ರಭು ನಿಮ್ಮ ತಳಭಾಗದಲ್ಲೊಂದು ಚಿಲುಮೆಯನ್ನು ಹರಿಸಿ ಬಿಟ್ಟಿದ್ದಾನೆ.

فَنَادَىٰهَا مِن تَحْتِهَآ أَلَّا تَحْزَنِى قَدْ جَعَلَ رَبُّكِ تَحْتَكِ سَرِيًّا ﴿٢٤﴾

25. ಮತ್ತು ನೀವು ಆ ಮರದ ಕಾಂಡವನ್ನು ಹಿಡಿದು ಅಲುಗಾಡಿಸಿರಿ. ನಿಮ್ಮ ಮೇಲೆ ಹಸನಾದ ಖರ್ಜೂರದ ಹಣ್ಣುಗಳು ಉದುರಿ ಬೀಳುವುವು.

وَهُزِّىٓ إِلَيْكِ بِجِذْعِ ٱلنَّخْلَةِ تُسَٰقِطْ عَلَيْكِ رُطَبًا جَنِيًّا ﴿٢٥﴾

26. ಈ ರೀತಿಯಲ್ಲಿ ನೀವು ತಿಂದು, ಕುಡಿದು ಕಣ್ಮನಗಳನ್ನು ತಣಿಸಿರಿ. ನೀವು ಮಾನವರಾರನ್ನಾದರೂ ಕಂಡರೆ -"ನಾನು ಕರುಣಾನಿಧಿ (ಅಲ್ಲಾಹ್)ಗಾಗಿ ಉಪವಾಸ ವ್ರತದ ಹರಕೆ ಹೊತ್ತಿರುವುದರಿಂದ ಇಂದು ಯಾರೊಡನೆಯೂ ಮಾತನಾಡಲಾರೆನೆಂದು- ಹೇಳಿಬಿಡಿರಿ.

فَكُلِى وَٱشْرَبِى وَقَرِّى عَيْنًا ۖ فَإِمَّا تَرَيِنَّ مِنَ ٱلْبَشَرِ أَحَدًا فَقُولِىٓ إِنِّى نَذَرْتُ لِلرَّحْمَٰنِ صَوْمًا فَلَنْ أُكَلِّمَ ٱلْيَوْمَ إِنسِيًّا ﴿٢٦﴾

27. ಅನಂತರ ಅವರು ಆ ಮಗುವನ್ನೆತ್ತಿಕೊಂಡು ತನ್ನ ಜನಾಂಗದ ಬಳಿಗೆ ಹೋದರು. ಜನರು, "ಓ ಮರ್ಯಮ್! ನೀನು ಘೋರ ಪಾತಕವನ್ನೆಸಗಿ ಬಿಟ್ಟೆ.

فَأَتَتْ بِهِۦ قَوْمَهَا تَحْمِلُهُۥ ۖ قَالُوا۟ يَٰمَرْيَمُ لَقَدْ جِئْتِ شَيْـًٔا فَرِيًّا ﴿٢٧﴾

28. ಓ ಹಾರೂನನ ಸಹೋದರಿ![9] ನಿನ್ನ ತಂದೆ ಕೆಟ್ಟವನಾಗಿರಲಿಲ್ಲ. ನಿನ್ನ ತಾಯಿಯೂ ದುಶ್ಶೀಲೆಯಾಗಿರಲಿಲ್ಲ" ಎನ್ನತೊಡಗಿದರು.

يَٰٓأُخْتَ هَٰرُونَ مَا كَانَ أَبُوكِ ٱمْرَأَ سَوْءٍ وَمَا كَانَتْ أُمُّكِ بَغِيًّا ﴿٢٨﴾

29. ಆಗ ಮರ್ಯಮ್, ಮಗುವಿನ ಕಡೆಗೆ ಇಷಾರೆ ಮಾಡಿದರು. ಆಗ ಜನರು, "ಇದು ತೊಟ್ಟಿಲಲ್ಲಿ ಬಿದ್ದಿರುವಂತಹ ಒಂದು ಶಿಶು, ಇದರೊಡನೆ ನಾವೇನು ಮಾತನಾಡಬಹುದು?" ಎಂದರು.

فَأَشَارَتْ إِلَيْهِ ۖ قَالُوا۟ كَيْفَ نُكَلِّمُ مَن كَانَ فِى ٱلْمَهْدِ صَبِيًّا ﴿٢٩﴾

30. ಮಗು (ಹೀಗೆ) ಮಾತನಾಡತೊಡಗಿತು: "ನಾನು ಅಲ್ಲಾಹನ

قَالَ إِنِّى عَبْدُ ٱللَّهِ ءَاتَىٰنِىَ ٱلْكِتَٰبَ

8. ಈ ಮಾತಿನ ಹಿನ್ನೆಲೆಯನ್ನು ಗಮನಿಸಿದಾಗ ಇದನ್ನು ಹ. ಮರ್ಯಮ್(ಅ) ಹೆರಿಗೆ ಬೇನೆಯಿಂದಾಗಿ ಹೇಳಿರಲಿಲ್ಲವೆಂದು ತಿಳಿಯುತ್ತದೆ. ತಂದೆಯಿಲ್ಲದೆ ಹುಟ್ಟಿದ ಈ ಮಗುವನ್ನು ನಾನು ಎಲ್ಲಿಗೆ ಕೊಂಡೊಯ್ಯಲಿ ಎಂಬ ವ್ಯಥೆಯಿಂದ ಅವರು ಇದನ್ನು ಹೇಳಿದ್ದರು. ಆದ್ದರಿಂದಲೇ ಗರ್ಭವತಿಯಾಗಿದ್ದಾಗ ಅವರು ಒಬ್ಬಂಟಿಯಾಗಿ ದೂರದ ಪ್ರದೇಶಕ್ಕೆ ಹೋಗಿ ಬಿಟ್ಟಿದ್ದರು. ಇಷ್ಟಾಗಿ ಅವರ ತಾಯಿ ಮತ್ತು ಕುಟುಂಬಸ್ಥರು ಊರಿನಲ್ಲೇ ವಾಸವಾಗಿದ್ದರು.

9. ಅರ್ಥಾತ್- ಹಾರೂನರ ಸಂತತಿಯ ಪುತ್ರಿಯೇ! ಅರಬಿ ನಾಣ್ನುಡಿಯಲ್ಲಿ ಯಾವುದಾದರೂ ಗೋತ್ರಕ್ಕೆ ಸೇರಿದ ವ್ಯಕ್ತಿಯನ್ನು ಆ ಗೋತ್ರದ ಸಹೋದರ ಎನ್ನಲಾಗುತ್ತದೆ. ಅವರ ಜನಾಂಗದ ವ್ಯಕ್ತಿಗಳು ಹೀಗೆ ಹೇಳುವುದರ ಅರ್ಥ, "ನಮ್ಮ ಅತ್ಯಂತ ಶ್ರೇಷ್ಠವಾದ ಧಾರ್ಮಿಕ ಹಿನ್ನೆಲೆಯುಳ್ಳ ಮನೆತನದ ಮಹಿಳೆಯೇ! ನೀನು ಇದೆಂತಹ ಕೆಲಸ ಮಾಡಿದೆ?" ಎಂದಾಗಿತ್ತು.

ದಾಸ[10] ಅವನು ನನಗೆ ಗ್ರಂಥ ನೀಡಿದನು. ಪ್ರವಾದಿಯನ್ನಾಗಿ ಮಾಡಿದನು-

وَجَعَلَنِي نَبِيًّا

31. ಮತ್ತು ನನ್ನನ್ನು ನಾನೆಲ್ಲಿದ್ದರೂ ಅನುಗ್ರಹೀತನಾಗಿರುವಂತೆ ಮಾಡಿದನು ಮತ್ತು ನನ್ನ ಬಾಳಿನುದ್ದಕ್ಕೂ ನಮಾಝ್ ಮತ್ತು ಝಕಾತ್ ಪಾಲಿಸುತ್ತಿರಲು ಆಜ್ಞೆಯಿತ್ತನು.

وَجَعَلَنِي مُبَارَكًا أَيْنَ مَا كُنتُ وَأَوْصَانِي بِالصَّلَاةِ وَالزَّكَاةِ مَا دُمْتُ حَيًّا

32. ನನ್ನನ್ನು ನನ್ನ ಮಾತೆಯ ಋಣ ಸಂದಾಯ ಮಾಡುವವನಾಗಿಸಿದನು[11] ಮತ್ತು ನನ್ನನ್ನು ಅಹಂಕಾರಿಯನ್ನಾಗಿಯೂ ದುಷ್ಟನನ್ನಾಗಿಯೂ ಮಾಡಿರುವುದಿಲ್ಲ.

وَبَرًّا بِوَالِدَتِي وَلَمْ يَجْعَلْنِي جَبَّارًا شَقِيًّا

33. ನಾನು ಜನಿಸಿದಾಗಲೂ ಸಾಯುವಾಗಲೂ ಜೀವಂತಗೊಳಿಸಿ ಎಬ್ಬಿಸಲ್ಪಡುವಾಗಲೂ ನನ್ನ ಮೇಲೆ ಶಾಂತಿ ಇದೆ."[12]

وَالسَّلَامُ عَلَيَّ يَوْمَ وُلِدتُّ وَيَوْمَ أَمُوتُ وَيَوْمَ أُبْعَثُ حَيًّا

34. ಇವರೇ ಮರ್ಯಮರ ಪುತ್ರ ಈಸಾ. ಇವರ ಬಗ್ಗೆ ಜನರು ಸಂಶಯ ಪಡುತ್ತಿರುವುದರ ಸತ್ಯಾಂಶವಿದು.

ذَٰلِكَ عِيسَى ابْنُ مَرْيَمَ قَوْلَ الْحَقِّ الَّذِي فِيهِ يَمْتَرُونَ

35. ಯಾರನ್ನಾದರೂ ಮಗನಾಗಿ ಮಾಡಿಕೊಳ್ಳುವುದು ಅಲ್ಲಾಹನಿಗೆ ಭೂಷಣವಲ್ಲ. ಅವನು ಪರಿಶುದ್ಧನು. ಅವನು, ಏನಾದರೂ ಆಗಬೇಕೆಂದು ತೀರ್ಮಾನಿಸಿದರೆ 'ಆಗು' ಎಂದು ಬಿಡುತ್ತಾನೆ ಮತ್ತು ಅದು ಆಗಿಬಿಡುತ್ತದೆ.[13]

مَا كَانَ لِلَّهِ أَن يَتَّخِذَ مِن وَلَدٍ سُبْحَانَهُ إِذَا قَضَىٰ أَمْرًا فَإِنَّمَا يَقُولُ لَهُ كُن فَيَكُونُ

36. (ಈಸಾ ಹೀಗೆ ಹೇಳಿದ್ದರು): "ನಿಶ್ಚಯವಾಗಿಯೂ ಅಲ್ಲಾಹನು ನನ್ನ

وَإِنَّ اللَّهَ رَبِّي وَرَبُّكُمْ فَاعْبُدُوهُ

---

10. ಇದಕ್ಕೆ ಮೊದಲು 21ನೆಯ ಸೂಕ್ತದಲ್ಲಿ ಪ್ರಸ್ತಾಪಿಸಲಾಗಿರುವ 'ನಿದರ್ಶನ' ಇದುವೇ ಆಗಿತ್ತು. ತೊಟ್ಟಿಲಲ್ಲಿ ಬಿದ್ದುಕೊಂಡಿದ್ದ ನವಜಾತ ಶಿಶು ಮಾತನಾಡಲಾರಂಭಿಸಿತು. ಅದರಿಂದ ಅದೊಂದು ಪಾಪದ ಪರಿಣಾಮವಲ್ಲ ಬದಲಾಗಿ ಅಲ್ಲಾಹನು ತೋರಿಸಿರುವ ಪವಾಡವಾಗಿದೆ ಎಂಬ ವಿಷಯ ಎಲ್ಲರಿಗೂ ಸ್ಪಷ್ಟವಾಯಿತು. ಆಲಿ ಇಮ್ರಾನ್ ಅಧ್ಯಾಯದ ಸೂಕ್ತ 46 ಮತ್ತು ಅಲ್ ಮಾಇದಃ ಅಧ್ಯಾಯದ ಸೂಕ್ತ 110ರಲ್ಲಿಯೂ ಹ. ಈಸಾ(ಅ) ತೊಟ್ಟಿಲಲ್ಲೇ ಮಾತನಾಡಿದರೆಂದು ಹೇಳಲಾಗಿದೆ.

11. ಇಲ್ಲಿ ತಂದೆ-ತಾಯಿಗಳ ಬಾಧ್ಯತೆಯನ್ನು ಈಡೇರಿಸುವವನು ಎನ್ನುವ ಬದಲು ತಾಯಿಯ ಬಾಧ್ಯತೆಯನ್ನು ಈಡೇರಿಸುವವನು ಎನ್ನಲಾಗಿದೆ. ಈಸಾರಿಗೆ(ಅ) ತಂದೆ ಇರಲಿಲ್ಲ ಎಂಬುದಕ್ಕೆ ಇದೂ ಒಂದು ಆಧಾರವಾಗಿದೆ. ಕುರ್‌ಆನಿನಲ್ಲಿ ಎಲ್ಲೆಡೆ ಅವರನ್ನು 'ಈಸಾ ಬಿನ್ ಮರ್ಯಮ್' ಎಂದು ಕರೆಯಲಾಗಿರುವುದೂ ಇದಕ್ಕಿರುವ ಒಂದು ಸ್ಪಷ್ಟ ಸಾಕ್ಷ್ಯವಾಗಿದೆ.

12. ಈ ದೃಷ್ಟಾಂತವನ್ನು ತೋರಿಸುವ ಮೂಲಕ ಅಲ್ಲಾಹನು ಆಗಲೇ ಬನೀಇಸ್ರಾಈಲರ ಮುಂದೆ ತನ್ನ ಹೊಣೆಯನ್ನು ಪೂರ್ತಿಗೊಳಿಸಿದ್ದನು. ಯೌವನಾವಸ್ಥೆಗೆ ತಲಪಿದ ನಂತರ ಹ. ಈಸಾ(ಅ) ಪ್ರವಾದಿತ್ವದ ಕೆಲಸ ಆರಂಭಿಸಿದಾಗ ಅವರ ಜನಾಂಗದವರು ಅವರನ್ನು ನಿರಾಕರಿಸಿದರು. ಮಾತ್ರವಲ್ಲ ಅವರಿಗೆ ಜೀವ ಬೆದರಿಕೆಯೊಡ್ಡಿದರು. ಅವರ ಮಾತೆಯ ಮೇಲೆ ವ್ಯಭಿಚಾರದ ಆರೋಪ ಹೊರಿಸಲೂ ಅವರು ಹೇಸಲಿಲ್ಲ. ಆದ್ದರಿಂದಲೇ ಅಲ್ಲಾಹನು ಯಾವ ಜನಾಂಗಕ್ಕೂ ನೀಡದೇ ಇದ್ದಂತಹ ಶಿಕ್ಷೆಯನ್ನು ಅವರಿಗೆ ನೀಡಿದನು.

13. ಇದು ಕ್ರೈಸ್ತರ ಮಟ್ಟಿಗೆ ಅಲ್ಲಾಹನು ತನ್ನ ಹೊಣೆಯನ್ನು ಪೂರ್ತಿಗೊಳಿಸಿರುವುದಾಗಿದೆ. ಪವಾಡ ಸದೃಶವಾಗಿ ಹುಟ್ಟುವುದು ಅವರನ್ನು ದೇವಪುತ್ರ (ಶಾಂತಂ ಪಾಪಂ) ಎಂದು ಭಾವಿಸಲು ಆಧಾರವಲ್ಲ.

ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ. ಇದುವೇ ನೇರ ಮಾರ್ಗ."

هَٰذَا صِرَاطٌ مُّسْتَقِيمٌ ﴿٣٦﴾

37. ಆದರೆ ಆ ಬಳಿಕ ವಿವಿಧ ಪಂಗಡಗಳು ಪರಸ್ಪರ ಭಿನ್ನಾಭಿಪ್ರಾಯ ತಾಳಲಾರಂಭಿಸಿದುವು. ಆದುದರಿಂದ ಸತ್ಯನಿಷೇಧಿಗಳಿಗೆ ಅವರು ಕಾಣಲಿರುವ ಒಂದು ಮಹಾದಿನವು ವಿನಾಶ ಕಾಲವಾಗಿರುವುದು.

فَاخْتَلَفَ الْأَحْزَابُ مِن بَيْنِهِمْ ۖ فَوَيْلٌ لِّلَّذِينَ كَفَرُوا مِن مَّشْهَدِ يَوْمٍ عَظِيمٍ ﴿٣٧﴾

38. ಅವರು ನಮ್ಮ ಮುಂದೆ ಹಾಜರಾಗುವಂದು ಅವರ ಕಿವಿಗಳೂ ಚೆನ್ನಾಗಿ ಆಲಿಸುತ್ತಿರುವುವು ಮತ್ತು ಅವರ ಕಣ್ಣುಗಳೂ ಚೆನ್ನಾಗಿ ನೋಡುತ್ತಿರುವುವು. ಆದರೆ ಇಂದು ಈ ಅಕ್ರಮಿಗಳು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುತ್ತಾರೆ.

أَسْمِعْ بِهِمْ وَأَبْصِرْ يَوْمَ يَأْتُونَنَا ۖ لَٰكِنِ الظَّالِمُونَ الْيَوْمَ فِي ضَلَالٍ مُّبِينٍ ﴿٣٨﴾

39. ಓ ಪೈಗಂಬರರೇ, ಇವರು ಅಲಕ್ಷ್ಯರಾಗಿರುವ ಹಾಗೂ ವಿಶ್ವಾಸವಿರಿಸದಿರುವ ಈ ಸ್ಥಿತಿಯಲ್ಲಿ ತೀರ್ಪು ನೀಡಲಾಗುವ ಹಾಗೂ ವಿಷಾದಿಸುವ ಹೊರತು ಯಾವ ಅನ್ಯ ಮಾರ್ಗವೂ ಕಾಣದಿರುವಂತಹ ಆ ದಿನದ ಬಗ್ಗೆ ಇವರನ್ನು ಎಚ್ಚರಿಸಿರಿ.

وَأَنذِرْهُمْ يَوْمَ الْحَسْرَةِ إِذْ قُضِيَ الْأَمْرُ وَهُمْ فِي غَفْلَةٍ وَهُمْ لَا يُؤْمِنُونَ ﴿٣٩﴾

40. ಕಟ್ಟಕಡೆಗೆ ಈ ಭೂಮಿ ಹಾಗೂ ಇದರಲ್ಲಿರುವ ಸಕಲ ವಸ್ತುಗಳ ಉತ್ತರಾಧಿಕಾರಿಗಳು ನಾವೇ ಆಗಿರುವೆವು ಮತ್ತು ಎಲ್ಲರೂ ನಮ್ಮ ಕಡೆಗೇ ಮರಳಿಸಲ್ಪಡುವರು.

إِنَّا نَحْنُ نَرِثُ الْأَرْضَ وَمَنْ عَلَيْهَا وَإِلَيْنَا يُرْجَعُونَ ﴿٤٠﴾

41. ಈ ಗ್ರಂಥದಲ್ಲಿ ಇಬ್‌ರಾಹೀಮರ ಬಗ್ಗೆ ಪ್ರಸ್ತಾಪಿಸಿರಿ. ನಿಶ್ಚಯವಾಗಿಯೂ ಅವರೊಬ್ಬ ಸತ್ಯ ಸಂಧರೂ ಪ್ರವಾದಿಯೂ ಆಗಿದ್ದರು.

وَاذْكُرْ فِي الْكِتَابِ إِبْرَاهِيمَ ۚ إِنَّهُ كَانَ صِدِّيقًا نَّبِيًّا ﴿٤١﴾

42. ಅವರು ತಮ್ಮ ತಂದೆಯೊಡನೆ, "ಅಪ್ಪಾ, ಆಲಿಸಲಾಗದ, ನೋಡಲಾಗದ ಮತ್ತು ತಮ್ಮ ಯಾವ ಕೆಲಸಕ್ಕೂ ಬಾರದ ವಸ್ತುಗಳನ್ನು ತಾವೇಕೆ ಆರಾಧಿಸುತ್ತೀರಿ?

إِذْ قَالَ لِأَبِيهِ يَا أَبَتِ لِمَ تَعْبُدُ مَا لَا يَسْمَعُ وَلَا يُبْصِرُ وَلَا يُغْنِي عَنكَ شَيْئًا ﴿٤٢﴾

43. ಅಪ್ಪಾ, ತಮಗೆ ಬಂದಿರದ ಜ್ಞಾನವೊಂದು ನನಗೆ ಬಂದಿವೆ. ತಾವು ನನ್ನನ್ನು ಅನುಸರಿಸಿರಿ. ನಾನು ತಮಗೆ ನೇರ ಮಾರ್ಗವನ್ನು ತೋರಿಸುವೆನು.

يَا أَبَتِ إِنِّي قَدْ جَاءَنِي مِنَ الْعِلْمِ مَا لَمْ يَأْتِكَ فَاتَّبِعْنِي أَهْدِكَ صِرَاطًا سَوِيًّا ﴿٤٣﴾

44. ಅಪ್ಪಾ, ತಾವು ಶೈತಾನನ ದಾಸ್ಯ-ಆರಾಧನೆ ಮಾಡಬೇಡಿರಿ. ಶೈತಾನನು ರಹ್ಮಾನನ (ಕರುಣಾ ನಿಧಿಯ) ಆಜ್ಞೋಲ್ಲಂಘಕನು.

يَا أَبَتِ لَا تَعْبُدِ الشَّيْطَانَ ۖ إِنَّ الشَّيْطَانَ كَانَ لِلرَّحْمَٰنِ عَصِيًّا ﴿٤٤﴾

45. ಅಪ್ಪಾ, ತಾವು ರಹ್ಮಾನನ ಶಿಕ್ಷೆಗೆ ಗುರಿಯಾಗಿ ಬಿಡುವಿರಿ ಹಾಗೂ ಶೈತಾನನ ಸಂಗಾತಿಯಾಗಿ ಬಿಡುವಿರಿ ಎಂಬ ಭಯ ನನಗಿದೆ" ಎಂದು ಹೇಳಿದರು.

يَٰٓأَبَتِ إِنِّىٓ أَخَافُ أَن يَمَسَّكَ عَذَابٌ مِّنَ ٱلرَّحْمَٰنِ فَتَكُونَ لِلشَّيْطَٰنِ وَلِيًّا ﴿٤٥﴾

46. (ಈ ಸಂದರ್ಭವನ್ನೂ ಇವರಿಗೆ ನೆನಪಿಸಿರಿ) ಆಗ ತಂದೆಯು, "ಇಬ್‌ರಾಹೀಮ್, ನೀನೇನು ನನ್ನ ಆರಾಧ್ಯರಿಂದ ವಿಮುಖನಾದೆಯಾ? ನೀನು (ಈ ನೀತಿಯನ್ನು) ಕೈ ಬಿಡದಿದ್ದರೆ ನಾನು ನಿನ್ನನ್ನು ಕಲ್ಲೆಸೆದು ಕೊಂದು ಹಾಕುವೆನು. ನೀನು ನನ್ನಿಂದ ಶಾಶ್ವತವಾಗಿ ತೊಲಗಿಬಿಡು" ಎಂದನು.

قَالَ أَرَاغِبٌ أَنتَ عَنْ ءَالِهَتِى يَٰٓإِبْرَٰهِيمُ ۖ لَئِن لَّمْ تَنتَهِ لَأَرْجُمَنَّكَ ۖ وَٱهْجُرْنِى مَلِيًّا ﴿٤٦﴾

47. ಆಗ ಇಬ್‌ರಾಹೀಮರು, "ತಮಗೆ ಸಲಾಮ್, ತಮ್ಮನ್ನು ಕ್ಷಮಿಸಲಿಕ್ಕಾಗಿ ನಾನು ನನ್ನ ಪ್ರಭುವಿನೊಡನೆ ಪ್ರಾರ್ಥಿಸುವೆನು. ನನ್ನ ಪ್ರಭು ನನ್ನ ಮೇಲೆ ಅತ್ಯಧಿಕ ಕೃಪೆಯುಳ್ಳವನು.

قَالَ سَلَٰمٌ عَلَيْكَ ۖ سَأَسْتَغْفِرُ لَكَ رَبِّىٓ ۖ إِنَّهُۥ كَانَ بِى حَفِيًّا ﴿٤٧﴾

48. ನಾನು ತಮ್ಮನ್ನೂ ತಾವೆಲ್ಲರೂ ಅಲ್ಲಾಹನನ್ನು ಬಿಟ್ಟು ಕೂಗಿ ಪ್ರಾರ್ಥಿಸುತ್ತಿರುವವುಗಳನ್ನೂ ಬಿಟ್ಟಗಲಿ ಹೋಗುತ್ತೇನೆ. ನಾನಂತೂ ನನ್ನ ಪ್ರಭುವನ್ನು ಮಾತ್ರ ಪ್ರಾರ್ಥಿಸುವೆನು. ನಾನು ನನ್ನ ಪ್ರಭುವನ್ನು ಪ್ರಾರ್ಥಿಸಿ ನಿರಾಶನಾಗಲಾರೆ ಎಂದು ನನಗೆ ಭರವಸೆಯಿದೆ" ಎಂದರು.

وَأَعْتَزِلُكُمْ وَمَا تَدْعُونَ مِن دُونِ ٱللَّهِ وَأَدْعُوا۟ رَبِّى عَسَىٰٓ أَلَّآ أَكُونَ بِدُعَآءِ رَبِّى شَقِيًّا ﴿٤٨﴾

49. ಆ ಪ್ರಕಾರ ಅವರು (ಇಬ್‌ರಾಹೀಮರು) ಅವರನ್ನೂ ಅವರ ದೇವೇತರ ಆರಾಧ್ಯರನ್ನೂ ಬಿಟ್ಟಗಲಿದಾಗ ನಾವು ಅವರಿಗೆ ಇಸ್‌ಹಾಕ್ ಮತ್ತು ಯಅ್‌ಕೂಬರಂತಹ ಸಂತತಿಯನ್ನು ಪ್ರದಾನ ಮಾಡಿದೆವು ಮತ್ತು ಪ್ರತಿಯೊಬ್ಬನನ್ನೂ ಪ್ರವಾದಿಯನ್ನಾಗಿ ಮಾಡಿದೆವು.

فَلَمَّا ٱعْتَزَلَهُمْ وَمَا يَعْبُدُونَ مِن دُونِ ٱللَّهِ وَهَبْنَا لَهُۥٓ إِسْحَٰقَ وَيَعْقُوبَ ۖ وَكُلًّا جَعَلْنَا نَبِيًّا ﴿٤٩﴾

50. ಅವರಿಗೆ ನಮ್ಮ ಕರುಣೆಯನ್ನೂ ಪ್ರದಾನ ಮಾಡಿದೆವು ಮತ್ತು ನಿಜವಾದ ಖ್ಯಾತಿಯನ್ನು ನೀಡಿದೆವು.

وَوَهَبْنَا لَهُم مِّن رَّحْمَتِنَا وَجَعَلْنَا لَهُمْ لِسَانَ صِدْقٍ عَلِيًّا ﴿٥٠﴾

51. ಈ ಗ್ರಂಥದಲ್ಲಿ ಮೂಸಾರ ಕುರಿತು ಪ್ರಸ್ತಾಪಿಸಿರಿ. ಅವರೊಬ್ಬ ಆಯ್ದ ವ್ಯಕ್ತಿಯಾಗಿದ್ದರು ಮತ್ತು ರಸೂಲ್ (ಸಂದೇಶವಾಹಕ) ಹಾಗೂ ನಬೀ[14] (ಪ್ರವಾದಿ) ಆಗಿದ್ದರು.

وَٱذْكُرْ فِى ٱلْكِتَٰبِ مُوسَىٰٓ ۚ إِنَّهُۥ كَانَ مُخْلَصًا وَكَانَ رَسُولًا نَّبِيًّا ﴿٥١﴾

14. 'ರಸೂಲ್' ಎಂದರೆ ಸಂದೇಶವಾಹಕ, ಕಳುಹಿಸಲ್ಪಟ್ಟವ. 'ನಬಿ' ಎಂಬ ಪದದ ಬಗ್ಗೆ ನಿಘಂಟುಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಕೆಲವರ ಪ್ರಕಾರ 'ನಬಿ' ಎಂದರೆ ಸುದ್ದಿ ತಲುಪಿಸುವವನು. ಇನ್ನು ಕೆಲವರ ಪ್ರಕಾರ 'ನಬಿ' ಎಂದರೆ 'ಉನ್ನತ ಪದವಿ' ಮತ್ತು 'ಉಚ್ಚಸ್ಥಾನದಲ್ಲಿರುವವನು.' ಆದ್ದರಿಂದ ಯಾರನ್ನಾದರೂ 'ರಸೂಲ್-ನಬಿ' ಎಂದು ಹೇಳಿದರೆ ಅದರ ಅರ್ಥ 'ಉನ್ನತ ಸ್ಥಾನದಲ್ಲಿರುವ ಸಂದೇಶವಾಹಕ' ಅಥವಾ

52. ನಾವು ಅವರನ್ನು 'ತೂರ್' (ಪರ್ವತದ) ಬಲಗಡೆಯಿಂದ ಕರೆದೆವು. ರಹಸ್ಯ ಸಂಭಾಷಣೆಯ ಮೂಲಕ ಅವರಿಗೆ ಸಾಮೀಪ್ಯ ಪ್ರದಾನ ಮಾಡಿದೆವು.

وَنَادَيْنَاهُ مِن جَانِبِ الطُّورِ الْأَيْمَنِ وَقَرَّبْنَاهُ نَجِيًّا ﴿٥٢﴾

53. ಮತ್ತು ನಮ್ಮ ಕೃಪೆಯಿಂದ ಅವರ ಸಹೋದರ ಹಾರೂನರನ್ನು ಪ್ರವಾದಿಯಾಗಿ ಮಾಡಿ ಅವರಿಗೆ (ಸಹಾಯಕನನ್ನಾಗಿ ಮಾಡಿ) ಕೊಟ್ಟೆವು.

وَوَهَبْنَا لَهُ مِن رَّحْمَتِنَا أَخَاهُ هَارُونَ نَبِيًّا ﴿٥٣﴾

54. ಈ ಗ್ರಂಥದಲ್ಲಿ ಇಸ್ಮಾಈಲರ ಕುರಿತು ಪ್ರಸ್ತಾಪಿಸಿರಿ. ಅವರು ವಚನಪಾಲಕರಾಗಿದ್ದರು ಮತ್ತು ಸಂದೇಶವಾಹಕ ಹಾಗೂ ಪ್ರವಾದಿ ಆಗಿದ್ದರು.

وَاذْكُرْ فِي الْكِتَابِ إِسْمَاعِيلَ ۚ إِنَّهُ كَانَ صَادِقَ الْوَعْدِ وَكَانَ رَسُولًا نَّبِيًّا ﴿٥٤﴾

55. ಅವರು ತನ್ನ ಮನೆಯವರಿಗೆ ನಮಾಝ್ ಮತ್ತು ಝಕಾತ್‌ನ ಅಪ್ಪಣೆ ಕೊಡುತ್ತಿದ್ದರು ಮತ್ತು ತನ್ನ ಪ್ರಭುವಿನ ಬಳಿ ಓರ್ವ ಪ್ರೀತಿಪಾತ್ರ ವ್ಯಕ್ತಿಯಾಗಿದ್ದರು.

وَكَانَ يَأْمُرُ أَهْلَهُ بِالصَّلَاةِ وَالزَّكَاةِ وَكَانَ عِندَ رَبِّهِ مَرْضِيًّا ﴿٥٥﴾

56. ಈ ಗ್ರಂಥದಲ್ಲಿ ಇದ್‌ರೀಸರ ಕುರಿತು ಪ್ರಸ್ತಾಪಿಸಿರಿ. ಅವರೊಬ್ಬ ಸತ್ಯಸಂಧ ಹಾಗೂ ಓರ್ವ ಪ್ರವಾದಿಯಾಗಿದ್ದರು.

وَاذْكُرْ فِي الْكِتَابِ إِدْرِيسَ ۚ إِنَّهُ كَانَ صِدِّيقًا نَّبِيًّا ﴿٥٦﴾

57. ನಾವು ಅವರನ್ನು ಉನ್ನತ ಸ್ಥಾನಕ್ಕೆ ಏರಿಸಿದ್ದೆವು.

وَرَفَعْنَاهُ مَكَانًا عَلِيًّا ﴿٥٧﴾

58. ಈ ಪ್ರವಾದಿಗಳು ಅಲ್ಲಾಹನು ಅನುಗ್ರಹಿಸಿದವರಾಗಿದ್ದು, ಆದಮರ ಸಂತತಿಯಿಂದಲೂ ನಾವು ನೂಹರೊಂದಿಗೆ ನಾವೆಯಲ್ಲಿ

أُولَٰئِكَ الَّذِينَ أَنْعَمَ اللَّهُ عَلَيْهِم مِّنَ النَّبِيِّينَ مِن ذُرِّيَّةِ آدَمَ وَمِمَّنْ

'ಅಲ್ಲಾಹನ ವತಿಯಿಂದ ಸುದ್ದಿ ತಲಪಿಸುವ ಸಂದೇಶವಾಹಕ' ಎಂದಾಗುತ್ತದೆ. ಪವಿತ್ರ ಕುರ್‌ಆನಿನಲ್ಲಿ ಈ ಎರಡೂ ಪದಗಳು ಸಾಮಾನ್ಯವಾಗಿ ಸಮಾನಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ. ಆದರೆ ಕೆಲವು ಕಡೆಗಳಲ್ಲಿ ಅದರ ಪ್ರಯೋಗವನ್ನು ಗಮನಿಸಿದರೆ ಆ ಎರಡು ಪದವಿಗಳಲ್ಲಿ ಸ್ಥಾನ ಮತ್ತು ಕಾರ್ಯದ ಸ್ವರೂಪಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ವ್ಯತ್ಯಾಸವಿದೆ ಎಂದು ವ್ಯಕ್ತವಾಗುತ್ತದೆ. ಉದಾ: ಅಲ್ ಹಜ್ಜ್ ಅಧ್ಯಾಯದ 52ನೆಯ ಸೂಕ್ತದಲ್ಲಿ ಹೀಗೆನ್ನಲಾಗಿದೆ, "ನಾವು ನಿಮಗಿಂತ ಮೊದಲು ಬೇರಾವುದೇ ಕಾರ್ಯಕ್ಕಾಗಿ ರಸೂಲರನ್ನಾಗಲಿ, ನಬಿಯನ್ನಾಗಲಿ ಕಳುಹಿಸಿಲ್ಲ. ಆದರೆ....." 'ರಸೂಲ್' ಮತ್ತು 'ನಬಿ' ಬೇರೆ ಬೇರೆ ಪದಗಳು ಮತ್ತು ಅವುಗಳ ನಡುವೆ ನಿಶ್ಚಿತವಾದ ಪಾರಿಭಾಷಿಕ ವ್ಯತ್ಯಾಸವಿದೆ ಎಂದು ಇದರಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಈ ವ್ಯತ್ಯಾಸದ ಸ್ವರೂಪವೇನು ಎಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಚರ್ಚೆ ಮುಂದುವರಿದಿದೆ. ಆದರೆ ನಿಖರವಾದ ಆಧಾರಪ್ರಮಾಣಗಳ ಮೂಲಕ ಯಾರೂ 'ರಸೂಲ್' ಮತ್ತು 'ನಬಿ'ಗಳ ವಿಭಿನ್ನ ಸ್ಥಾನಮಾನಗಳನ್ನು ಗೊತ್ತುಪಡಿಸಲಿಲ್ಲ ಎಂಬುದು ಒಂದು ವಾಸ್ತವಿಕತೆಯಾಗಿದೆ. ಹೆಚ್ಚೆಂದರೆ 'ರಸೂಲ್' ಎಂಬ ಪದ 'ನಬಿ' ಎಂಬ ಪದಕ್ಕಿಂತ ವಿಶಿಷ್ಟವಾದುದು ಎಂದು ಹೇಳಬಹುದಾಗಿದೆ. ಅರ್ಥಾತ್ ಪ್ರತಿಯೊಬ್ಬ ರಸೂಲರೂ 'ನಬಿ'ಯಾಗಿರುತ್ತಾರೆ. ಆದರೆ ಪ್ರತಿಯೊಬ್ಬ 'ನಬಿ' ರಸೂಲ್ ಆಗಲು ಸಾಧ್ಯವಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಪ್ರವಾದಿಗಳ ಪೈಕಿ ಸಾಮಾನ್ಯ ಪ್ರವಾದಿಗಳಿಗಿಂತ ಪ್ರಾಮುಖ್ಯವಿರುವ ಪದವಿಯಲ್ಲಿ ನೇಮಿಸಲ್ಪಟ್ಟ ಗೌರವಾನ್ವಿತ ವ್ಯಕ್ತಿಗಳನ್ನು 'ರಸೂಲ್' ಎಂದು ಕರೆಯಲಾಗಿದೆ. ಪ್ರವಾದಿ ವಚನವೊಂದರ ಮೂಲಕವೂ ಇದಕ್ಕೆ ಪುಷ್ಟಿ ದೊರೆಯುತ್ತದೆ. ಪ್ರವಾದಿವರ್ಯರೊಡನೆ(ಸ) 'ರಸೂಲ್'ರ ಸಂಖ್ಯೆ ಕೇಳಲಾದಾಗ ಅವರು 313 ಅಥವಾ 315 ಎಂದು ಹೇಳಿದರು. 'ನಬೀ'ಗಳ ಸಂಖ್ಯೆಯ ಬಗ್ಗೆ ಕೇಳಲಾದಾಗ ಅವರು ಒಂದು ಲಕ್ಷದ ಇಪ್ಪತ್ತನಾಲ್ಕು ಸಾವಿರವೆಂದು ಹೇಳಿದರು.

ಏರಿಸಿದ್ದವರ ಸಂತತಿಯಿಂದಲೂ ಇಬ್‌ರಾಹೀಮರ ಸಂತತಿಯಿಂದಲೂ ಇಸ್ರಾಈಲರ ಸಂತತಿಯಿಂದಲೂ ಆಗಿದ್ದರು ಮತ್ತು ನಾವು ಸನ್ಮಾರ್ಗ ದರ್ಶನ ಮಾಡಿ ಪುನೀತರನ್ನಾಗಿಸಿದವರಲ್ಲೂ ಇವರಾಗಿದ್ದರು. ಇವರಿಗೆ ರಹ್ಮಾನನ ವಚನಗಳನ್ನು ಓದಿ ಹೇಳಿದಾಗ ಇವರು ಅಳುತ್ತಾ ಸಾಷ್ಟಾಂಗವೆರಗುತ್ತಿದ್ದರು.

حَمَلْنَا مَعَ نُوحٍ وَمِن ذُرِّيَّةِ إِبْرَاهِيمَ وَإِسْرَائِيلَ وَمِمَّنْ هَدَيْنَا وَاجْتَبَيْنَا ۚ إِذَا تُتْلَىٰ عَلَيْهِمْ آيَاتُ الرَّحْمَٰنِ خَرُّوا سُجَّدًا وَبُكِيًّا ۩ ﴿٥٨﴾

السجدة

59. ಅವರ ಬಳಿಕ ಅಯೋಗ್ಯರಾದವರು ಅವರ ಉತ್ತರಾಧಿಕಾರಿಗಳಾದರು. ಅವರು ನಮಾಝನ್ನು ವ್ಯರ್ಥಗೊಳಿಸಿದರು ಮತ್ತು ದೇಹೇಚ್ಛೆಗಳನ್ನು ಅನುಸರಿಸಿದರು. ಆದುದರಿಂದ ಶೀಘ್ರದಲ್ಲೇ ಅವರು ಪಥಭ್ರಷ್ಟತೆಯ ಪರಿಣಾಮವನ್ನು ಅನುಭವಿಸಲಿರುವರು.

فَخَلَفَ مِن بَعْدِهِمْ خَلْفٌ أَضَاعُوا الصَّلَاةَ وَاتَّبَعُوا الشَّهَوَاتِ ۖ فَسَوْفَ يَلْقَوْنَ غَيًّا ﴿٥٩﴾

60. ಆದರೆ ಪಶ್ಚಾತ್ತಾಪ ಪಟ್ಟವರೂ ಸತ್ಯವಿಶ್ವಾಸ ಸ್ವೀಕರಿಸಿಕೊಂಡವರೂ ಸತ್ಕರ್ಮ ಕೈಗೊಂಡವರೂ ಸ್ವರ್ಗದಲ್ಲಿ ಪ್ರವೇಶ ಪಡೆಯುವರು ಮತ್ತು ಅವರ ಹಕ್ಕುಚ್ಯುತಿ ಕಿಂಚಿತ್ತೂ ಆಗದು.

إِلَّا مَن تَابَ وَآمَنَ وَعَمِلَ صَالِحًا فَأُولَٰئِكَ يَدْخُلُونَ الْجَنَّةَ وَلَا يُظْلَمُونَ شَيْئًا ﴿٦٠﴾

61. ಅವರಿಗಾಗಿ ರಹ್ಮಾನನು ತನ್ನ ದಾಸರಿಗೆ ಪರೋಕ್ಷ ವಾಗ್ದಾನವಿತ್ತಿರುವ ಶಾಶ್ವತವಾದ ಸ್ವರ್ಗೋದ್ಯಾನಗಳಿವೆ ಮತ್ತು ನಿಶ್ಚಯವಾಗಿಯೂ ಈ ವಾಗ್ದಾನ ಪೂರ್ಣಗೊಂಡೇ ತೀರುವುದು.

جَنَّاتِ عَدْنٍ الَّتِي وَعَدَ الرَّحْمَٰنُ عِبَادَهُ بِالْغَيْبِ ۚ إِنَّهُ كَانَ وَعْدُهُ مَأْتِيًّا ﴿٦١﴾

62. ಅಲ್ಲಿ ಅವರು ಯಾವುದೇ ಅಸಭ್ಯ ಮಾತುಗಳನ್ನು ಆಲಿಸಲಾರರು. ಅವರು ಉತ್ತಮವಾದುದನ್ನೇ ಆಲಿಸುವರು. ಅವರಿಗೆ ಅವರ ಆಹಾರವೂ ಬೆಳಗುಬೈಗುಗಳಲ್ಲಿ ನಿರಂತರ ಸಿಗುತ್ತಲೇ ಇರುವುದು.

لَّا يَسْمَعُونَ فِيهَا لَغْوًا إِلَّا سَلَامًا ۖ وَلَهُمْ رِزْقُهُمْ فِيهَا بُكْرَةً وَعَشِيًّا ﴿٦٢﴾

63. ಇದುವೇ ಆ ಸ್ವರ್ಗ. ನಾವು ನಮ್ಮ ದಾಸರಲ್ಲಿ ಧರ್ಮನಿಷ್ಠರಾಗಿದ್ದವನನ್ನು ಅದರ ವಾರೀಸುದಾರನನ್ನಾಗಿ ಮಾಡುವೆವು.

تِلْكَ الْجَنَّةُ الَّتِي نُورِثُ مِنْ عِبَادِنَا مَن كَانَ تَقِيًّا ﴿٦٣﴾

64. (ಓ ಪೈಗಂಬರರೇ) ನಾವು ನಿಮ್ಮ ಪ್ರಭುವಿನ ಅಪ್ಪಣೆ ಇಲ್ಲದೆ ಇಳಿದು ಬರುವುದಿಲ್ಲ.[15] ನಮ್ಮ ಮುಂದೆ, ನಮ್ಮ ಹಿಂದೆ ಮತ್ತು ಅವುಗಳ ನಡುವೆ ಏನೆಲ್ಲ ಇರುವುದೋ ಅವೆಲ್ಲವುಗಳ ಮಾಲಕನು ಅವನೇ ಮತ್ತು ನಿಮ್ಮ ಪ್ರಭು ಮರೆತು ಬಿಡುವವನಲ್ಲ.

وَمَا نَتَنَزَّلُ إِلَّا بِأَمْرِ رَبِّكَ ۖ لَهُ مَا بَيْنَ أَيْدِينَا وَمَا خَلْفَنَا وَمَا بَيْنَ ذَٰلِكَ ۚ وَمَا كَانَ رَبُّكَ نَسِيًّا ﴿٦٤﴾

65. ಅವನು ಆಕಾಶಗಳ, ಭೂಮಿಯ ಮತ್ತು ಅವುಗಳ ನಡುವೆಯಿರುವ ಸರ್ವಸ್ವಗಳ ಪಾಲಕ ಪ್ರಭು. ಆದುದರಿಂದ ನೀವು ಅವನ ದಾಸ್ಯ-

رَّبُّ السَّمَاوَاتِ وَالْأَرْضِ وَمَا بَيْنَهُمَا فَاعْبُدْهُ وَاصْطَبِرْ لِعِبَادَتِهِ ۚ هَلْ تَعْلَمُ

15. ಇದು ಅಲ್ಲಾಹನ ವಚನವಾದರೂ ಇಲ್ಲಿ ಮಾತನಾಡುತ್ತಿರುವವರು ದೇವಚರರಾಗಿದ್ದಾರೆ. ಅರ್ಥಾತ್ ನಾವು ನಮ್ಮಿಚ್ಛೆಯಂತೆ ಬರುವುದಿಲ್ಲ, ಬದಲಾಗಿ ಅಲ್ಲಾಹನು ಕಳುಹಿಸುವಾಗ ಆಗಮಿಸುತ್ತೇವೆ ಎಂದು ದೇವಚರರು ಪ್ರವಾದಿವರ್ಯರೊಂದಿಗೆ(ಸ) ಹೇಳುತ್ತಿದ್ದಾರೆ.

ಆರಾಧನೆ ಮಾಡಿರಿ ಮತ್ತು ಅವನ ದಾಸ್ಯ-ಆರಾಧನೆಯಲ್ಲೇ ಸ್ಥಿರವಾಗಿರಿ. ನಿಮ್ಮ ತಿಳುವಳಿಕೆಯಲ್ಲಿ ಅವನಿಗೆ ಸರಿಸಮಾನನಾದವನು ಯಾರಾದರೂ ಇದ್ದಾನೆಯೇ?

لَهُ سَمِيًّا ﴿٦٥﴾

66. "ನಾನು ಸತ್ತು ಹೋದ ಮೇಲೆ ನಿಜಕ್ಕೂ ಜೀವಂತಗೊಳಿಸಿ ತರಲ್ಪಡುವೆನೇ?" ಎಂದು ಮಾನವನು ಪ್ರಶ್ನಿಸುತ್ತಾನೆ.

وَيَقُولُ الْإِنسَانُ أَإِذَا مَا مِتُّ لَسَوْفَ أُخْرَجُ حَيًّا ﴿٦٦﴾

67. ಮಾನವನು ಮೊದಲು ಏನೂ ಆಗಿಲ್ಲದಿದ್ದಾಗ ನಾವು ಅವನನ್ನು ಸೃಷ್ಟಿಸಿದ್ದುದು ಅವನಿಗೆ ನೆನಪಾಗುವುದಿಲ್ಲವೇ?

أَوَلَا يَذْكُرُ الْإِنسَانُ أَنَّا خَلَقْنَاهُ مِن قَبْلُ وَلَمْ يَكُ شَيْئًا ﴿٦٧﴾

68. ನಿಮ್ಮ ಪ್ರಭುವಿನಾಣೆ ನಾವು ಇವರೆಲ್ಲರನ್ನೂ ಇವರ ಸಂಗಡ ಶೈತಾನರನ್ನೂ ಖಂಡಿತವಾಗಿಯೂ ಸುತ್ತುಗಟ್ಟಿ ಆ ಬಳಿಕ ನರಕದ ಸುತ್ತಲೂ ತಂದು ಇವರನ್ನು ಮುಗ್ಗರಿಸಿ ಬೀಳಿಸುವೆವು.

فَوَرَبِّكَ لَنَحْشُرَنَّهُمْ وَالشَّيَاطِينَ ثُمَّ لَنُحْضِرَنَّهُمْ حَوْلَ جَهَنَّمَ جِثِيًّا ﴿٦٨﴾

69. ಅನಂತರ ಎಲ್ಲ ಗುಂಪುಗಳಿಂದಲೂ ರಹ್ಮಾನನ ವಿರುದ್ಧ ಹೆಚ್ಚು ಉದ್ಧಟನಾಗಿದ್ದ ಪ್ರತಿಯೊಬ್ಬನನ್ನೂ ಹೆಕ್ಕಿ ತೆಗೆಯುವೆವು-

ثُمَّ لَنَنزِعَنَّ مِن كُلِّ شِيعَةٍ أَيُّهُمْ أَشَدُّ عَلَى الرَّحْمَٰنِ عِتِيًّا ﴿٦٩﴾

70. ಇವರ ಪೈಕಿ ನರಕದಲ್ಲಿ ತಳ್ಳಲ್ಪಡಲು ಅತಿ ಹೆಚ್ಚು ಅರ್ಹರು ಯಾರೆಂಬುದನ್ನೂ ನಾವು ತಿಳಿದಿದ್ದೇವೆ.

ثُمَّ لَنَحْنُ أَعْلَمُ بِالَّذِينَ هُمْ أَوْلَىٰ بِهَا صِلِيًّا ﴿٧٠﴾

71. ನಿಮ್ಮ ಪೈಕಿ ನರಕವನ್ನು ಹಾದು ಹೋಗದವರು ಯಾರೂ ಇರಲಾರರು. ಇದೊಂದು ನಿರ್ಧರಿತ ವಿಷಯವಾಗಿದ್ದು ಇದನ್ನು ಪೂರ್ಣಗೊಳಿಸುವುದು ನಿಮ್ಮ ಪ್ರಭುವಿನ ಬಾಧ್ಯತೆಯಾಗಿದೆ.

وَإِن مِّنكُمْ إِلَّا وَارِدُهَا ۚ كَانَ عَلَىٰ رَبِّكَ حَتْمًا مَّقْضِيًّا ﴿٧١﴾

72. ಆ ಬಳಿಕ ನಾವು (ಭೂಲೋಕದಲ್ಲಿ) ಧರ್ಮನಿಷ್ಠರಾಗಿದ್ದವರನ್ನು ರಕ್ಷಿಸಿಕೊಳ್ಳುವೆವು ಮತ್ತು ಅಕ್ರಮಿಗಳನ್ನು ಅಲ್ಲೇ ಬಿದ್ದಿರಲು ಬಿಟ್ಟು ಬಿಡುವೆವು.

ثُمَّ نُنَجِّي الَّذِينَ اتَّقَوا وَّنَذَرُ الظَّالِمِينَ فِيهَا جِثِيًّا ﴿٧٢﴾

73. ಇವರಿಗೆ ನಮ್ಮ ಸುವ್ಯಕ್ತ ವಚನಗಳನ್ನು ಓದಿ ಹೇಳಿದಾಗ ಸತ್ಯ ನಿಷೇಧಿಗಳು ಸತ್ಯವಿಶ್ವಾಸಿಗಳೊಡನೆ, "ನಮ್ಮಿಬ್ಬ ಎರಡು ಪಂಗಡಗಳ ಪೈಕಿ ಯಾರು ಉತ್ತಮ ಸ್ಥಿತಿಯಲ್ಲಿದ್ದಾರೆ ಮತ್ತು ಯಾರ ಕೂಟಗಳು ಹೆಚ್ಚು ಶೋಭಾಯಮಾನವಾಗಿವೆ?" ಎಂದು ಕೇಳುತ್ತಾರೆ.[16]

وَإِذَا تُتْلَىٰ عَلَيْهِمْ آيَاتُنَا بَيِّنَاتٍ قَالَ الَّذِينَ كَفَرُوا لِلَّذِينَ آمَنُوا أَيُّ الْفَرِيقَيْنِ خَيْرٌ مَّقَامًا وَأَحْسَنُ نَدِيًّا ﴿٧٣﴾

16. ಮಕ್ಕಾದ ಸತ್ಯನಿಷೇಧಿಗಳು ಹೇಗೆ ವಾದಿಸುತ್ತಿದ್ದರೆಂದರೆ, ನೋಡಿ! ಲೋಕದಲ್ಲಿ ಯಾರಿಗೆ ಅಲ್ಲಾಹನ ಅನುಗ್ರಹ ಪ್ರಾಪ್ತವಾಗುತ್ತಿದೆ? ಯಾರ ಮನೆಗಳು ಹೆಚ್ಚು ಭವ್ಯವಾಗಿವೆ? ಯಾರ ಜೀವನ ಮಟ್ಟ ಉನ್ನತವಾಗಿದೆ? ಯಾರ ಸಭೆ ಸಮಾರಂಭಗಳು ವರ್ಣರಂಜಿತವಾಗಿರುತ್ತವೆ? ಇದೆಲ್ಲವೂ ನಮಗೆ ಪ್ರಾಪ್ತವಿದೆ. ಮುಸ್ಲಿಮರಾದ ನೀವು ಅದರಿಂದ ವಂಚಿತರಾಗಿದ್ದೀರಿ. ಹಾಗಾದರೆ ನೀವೇ ಯೋಚಿಸಿ. ನಾವು ಮಿಥ್ಯಮಾರ್ಗದಲ್ಲಿದ್ದು ಹೀಗೆ ಮೋಜಿನಿಂದಿರಲು ಮತ್ತು ನೀವು ಸನ್ಮಾರ್ಗದಲ್ಲಿದ್ದು ಕಷ್ಟ ಮತ್ತು ಬಡತನದಲ್ಲಿರಲು ಹೇಗೆ ಸಾಧ್ಯ?

74. ವಸ್ತುತಃ ನಾವು ಇವರಿಗಿಂತ ಮುಂಚೆ ಇವರಿಗಿಂತಲೂ ಅಧಿಕ ಸಾಧನಾನುಕೂಲತೆಗಳನ್ನು ಹೊಂದಿದ್ದ ಹಾಗೂ ತೋರಿಕೆಯ ಸುಖಾಡಂಬರಗಳಲ್ಲಿ ಇವರಿಗಿಂತಲೂ ಮಿಗಿಲಾಗಿದ್ದ ಎಷ್ಟೋ ಜನಾಂಗಗಳನ್ನು ನಾಶಗೊಳಿಸಿ ಬಿಟ್ಟಿರುತ್ತೇವೆ.

وَكَمْ أَهْلَكْنَا قَبْلَهُم مِّن قَرْنٍ هُمْ أَحْسَنُ أَثَاثًا وَرِءْيًا ﴿٧٤﴾

75. ಇವರೊಡನೆ ಹೇಳಿರಿ: ಪಥಭ್ರಷ್ಟತೆಗೊಳಗಾಗಿರುವವನಿಗೆ ಅಂತಹವರೊಡನೆ ಮಾಡಲ್ಪಟ್ಟ ವಾಗ್ದಾನವನ್ನು ಅವರು ಕಣ್ಣಾರೆ ಕಂಡುಕೊಳ್ಳುವವರೆಗೂ ರಹ್ಮಾನನು ಸಡಿಲು ಬಿಡುತ್ತಾನೆ. ಅದು ಯಾತನೆಯಾಗಿರಲಿ ಅಥವಾ ಅಂತಿಮ ಘಳಿಗೆಯಾಗಿರಲಿ - ಆಗ ಅವರಿಗೆ ಯಾರ ಸ್ಥಿತಿ ಕೆಟ್ಟಿದೆ ಮತ್ತು ಯಾವ ಕೂಟ ದುರ್ಬಲವಾಗಿದೆ ಎಂದು ಗೊತ್ತಾಗಿಬಿಡುತ್ತದೆ.

قُلْ مَن كَانَ فِي الضَّلَالَةِ فَلْيَمْدُدْ لَهُ الرَّحْمَٰنُ مَدًّا ۚ حَتَّىٰ إِذَا رَأَوْا مَا يُوعَدُونَ إِمَّا الْعَذَابَ وَإِمَّا السَّاعَةَ فَسَيَعْلَمُونَ مَنْ هُوَ شَرٌّ مَّكَانًا وَأَضْعَفُ جُندًا ﴿٧٥﴾

76. ಇದಕ್ಕೆ ವ್ಯತಿರಿಕ್ತವಾಗಿ ಸನ್ಮಾರ್ಗವನ್ನು ಕೈಗೊಂಡವರಿಗೆ ಅಲ್ಲಾಹ್, ಅವರ ಸನ್ಮಾರ್ಗದಲ್ಲಿ ವೃದ್ಧಿಯನ್ನು ದಯಪಾಲಿಸುತ್ತಾನೆ ಮತ್ತು ಬಾಕಿ ಉಳಿಯುವ ಪುಣ್ಯಗಳೇ ನಿಮ್ಮ ಪ್ರಭುವಿನ ಬಳಿ ಸತ್ಫಲ ಹಾಗೂ ಪರಿಣಾಮದ ದೃಷ್ಟಿಯಿಂದ ಉತ್ತಮವಾಗಿವೆ.

وَيَزِيدُ اللَّهُ الَّذِينَ اهْتَدَوْا هُدًى ۗ وَالْبَاقِيَاتُ الصَّالِحَاتُ خَيْرٌ عِندَ رَبِّكَ ثَوَابًا وَخَيْرٌ مَّرَدًّا ﴿٧٦﴾

77. ನಮ್ಮ ವಚನಗಳನ್ನು ನಿರಾಕರಿಸುತ್ತ, "ನಾನಂತು ಸಂಪತ್ತು ಮತ್ತು ಸಂತತಿಗಳನ್ನು ಖಂಡಿತವಾಗಿಯೂ ಪಡೆಯುತ್ತಲೇ ಇರುವೆನು" ಎನ್ನುವವನನ್ನು ಕಂಡಿರಾ?

أَفَرَأَيْتَ الَّذِي كَفَرَ بِآيَاتِنَا وَقَالَ لَأُوتَيَنَّ مَالًا وَوَلَدًا ﴿٧٧﴾

78. ಇವನಿಗೆ ಅಗೋಚರ ವಿಷಯಗಳ ಸುಳಿವು ಸಿಕ್ಕಿ ಬಿಟ್ಟಿರುವುದೇ? ಅಥವಾ ಇವನು ರಹ್ಮಾನನಿಂದ ಏನಾದರೂ ಕರಾರು ಪಡೆದಿರುವನೇ?

أَطَّلَعَ الْغَيْبَ أَمِ اتَّخَذَ عِندَ الرَّحْمَٰنِ عَهْدًا ﴿٧٨﴾

79. ಎಷ್ಟು ಮಾತ್ರಕ್ಕೂ ಇಲ್ಲ. ಇವನು ಒದರುತ್ತಿರುವುದನ್ನು ನಾವು ಬರೆದಿಟ್ಟುಕೊಳ್ಳುವೆವು ಮತ್ತು ಇವನಿಗೆ ಶಿಕ್ಷೆಯನ್ನು ಇನ್ನಷ್ಟು ವರ್ಧಿಸುವೆವು.

كَلَّا ۚ سَنَكْتُبُ مَا يَقُولُ وَنَمُدُّ لَهُ مِنَ الْعَذَابِ مَدًّا ﴿٧٩﴾

80. ಯಾವ ಸಾಧನಾನುಕೂಲತೆಗಳ ಕುರಿತು ಇವನು ಹೇಳುತ್ತಿರುವನೋ ಅವೆಲ್ಲವುಗಳಿಗೆ ನಾವೇ ವಾರೀಸುದಾರರಾಗುವೆವು ಮತ್ತು ಇವನು ಒಬ್ಬಂಟಿಗನಾಗಿ ನಮ್ಮ ಮುಂದೆ ಹಾಜರಾಗುವನು.

وَنَرِثُهُ مَا يَقُولُ وَيَأْتِينَا فَرْدًا ﴿٨٠﴾

81. ಇವರು ಅಲ್ಲಾಹನನ್ನು ಬಿಟ್ಟು ಇತರ ಕೆಲವು ದೇವರುಗಳನ್ನು ಮಾಡಿಕೊಂಡಿದ್ದಾರೆ. ಅವರು ಇವರ ಬೆಂಬಲಿಗರಾದಾರೆಂದು-

وَاتَّخَذُوا مِن دُونِ اللَّهِ آلِهَةً لِّيَكُونُوا لَهُمْ عِزًّا ﴿٨١﴾

82. ಯಾವ ಬೆಂಬಲಿಗನೂ ಇರಲಾರನು. ಅವರೆಲ್ಲರೂ ಇವರ ದಾಸ್ಯ-ಆರಾಧನೆಯನ್ನು ನಿರಾಕರಿಸುವರು ಮಾತ್ರವಲ್ಲ ತಿರುಗಿ ಇವರ ವಿರೋಧಿಗಳೇ ಆಗಿಬಿಡುವರು.

كَلَّا ۚ سَيَكْفُرُونَ بِعِبَادَتِهِمْ وَيَكُونُونَ عَلَيْهِمْ ضِدًّا ﴿٨٢﴾

83. ನಾವು ಸತ್ಯನಿಷೇಧಿಗಳ ಮೇಲೆ, ಅವರನ್ನು (ಸತ್ಯವನ್ನು ವಿರೋಧಿಸಲಿಕ್ಕಾಗಿ) ಚೆನ್ನಾಗಿ ಹುರಿದುಂಬಿಸುತ್ತಿರುವ ಶೈತಾನರನ್ನು ಬಿಟ್ಟಿರುವುದನ್ನು ನೀವು ಕಂಡಿಲ್ಲವೇ?

أَلَمْ تَرَ أَنَّا أَرْسَلْنَا الشَّيَاطِينَ عَلَى الْكَافِرِينَ تَؤُزُّهُمْ أَزًّا ﴿٨٣﴾

84. ಆದುದರಿಂದ ಇನ್ನು ಇವರ ಮೇಲೆ ಯಾತನೆಯನ್ನೆರಗಿಸಲಿಕ್ಕಾಗಿ ಕಾತರರಾಗಬೇಡಿರಿ. ನಾವು ಇವರ ದಿನಗಳನ್ನು ಎಣಿಕೆಮಾಡುತ್ತಿದ್ದೇವೆ.

فَلَا تَعْجَلْ عَلَيْهِمْ ۖ إِنَّمَا نَعُدُّ لَهُمْ عَدًّا ﴿٨٤﴾

85-86. ನಾವು 'ಧರ್ಮನಿಷ್ಠ'ರನ್ನು ರಹ್ಮಾನನ ಸನ್ನಿಧಿಯಲ್ಲಿ ಅತಿಥಿಗಳಂತೆ ಮುಂದೆ ತರುವ ಮತ್ತು ಅಪರಾಧಿಗಳನ್ನು ದಾಹಗೊಂಡ ಪ್ರಾಣಿಗಳಂತೆ ನರಕದ ಕಡೆಗೆ ಅಟ್ಟಿಕೊಂಡು ಹೋಗುವ ದಿನ ಬರಲಿದೆ.

يَوْمَ نَحْشُرُ الْمُتَّقِينَ إِلَى الرَّحْمَٰنِ وَفْدًا ﴿٨٥﴾
وَنَسُوقُ الْمُجْرِمِينَ إِلَىٰ جَهَنَّمَ وِرْدًا ﴿٨٦﴾

87. ಆಗ ರಹ್ಮಾನನ ಸನ್ನಿಧಾನದಿಂದ ಅನುಮತಿ ಪಡೆದು ಕೊಂಡವನ ಹೊರತು ಜನರು ಯಾವ ಶಿಫಾರಸನ್ನೂ ತರಲು ಶಕ್ತರಾಗಲಾರರು.

لَا يَمْلِكُونَ الشَّفَاعَةَ إِلَّا مَنِ اتَّخَذَ عِنْدَ الرَّحْمَٰنِ عَهْدًا ﴿٨٧﴾

88. ರಹ್ಮಾನನು ಪುತ್ರನನ್ನು ಹೊಂದಿದ್ದಾನೆಂದು ಅವರು ಹೇಳುತ್ತಾರೆ.

وَقَالُوا اتَّخَذَ الرَّحْمَٰنُ وَلَدًا ﴿٨٨﴾

89. ನೀವು ಸೃಷ್ಟಿಸಿ ತಂದಿರುವ ಈ ಮಾತು ತೀರಾ ಅಸಂಬದ್ಧ.

لَقَدْ جِئْتُمْ شَيْئًا إِدًّا ﴿٨٩﴾

90-91. ರಹ್ಮಾನನಿಗೆ ಪುತ್ರನಿರುವನೆಂದು ಜನರು ಆಪಾದಿಸಿದುದಕ್ಕಾಗಿ ಆಕಾಶ ಸಿಡಿದು ಬೀಳುವ, ಭೂಮಿ ಬಿರಿಯುವ ಮತ್ತು ಪರ್ವತಗಳು ಬಿದ್ದು ಹೋಗುವ ಸಮಯ ಸನ್ನಿಹಿತವಾಗಿದೆ.

تَكَادُ السَّمَاوَاتُ يَتَفَطَّرْنَ مِنْهُ وَتَنْشَقُّ الْأَرْضُ وَتَخِرُّ الْجِبَالُ هَدًّا ﴿٩٠﴾
أَنْ دَعَوْا لِلرَّحْمَٰنِ وَلَدًا ﴿٩١﴾

92. ಯಾರನ್ನಾದರೂ ತನ್ನ ಮಗನನ್ನಾಗಿ ಮಾಡಿಕೊಳ್ಳುವುದು ರಹ್ಮಾನನಿಗೆ ಶೋಭಿಸುವುದಿಲ್ಲ.

وَمَا يَنْبَغِي لِلرَّحْمَٰنِ أَنْ يَتَّخِذَ وَلَدًا ﴿٩٢﴾

93. ಭೂಮಿ-ಆಕಾಶಗಳಲ್ಲಿರುವವರೆಲ್ಲರೂ ಅಲ್ಲಾಹನ ಸನ್ನಿಧಿಯಲ್ಲಿ ದಾಸರ ನೆಲೆಯಲ್ಲಿ ಹಾಜರಾಗಲಿರುವರು.

إِنْ كُلُّ مَنْ فِي السَّمَاوَاتِ وَالْأَرْضِ إِلَّا آتِي الرَّحْمَٰنِ عَبْدًا ﴿٩٣﴾

94. ಅವನು ಎಲ್ಲರನ್ನೂ ಆವರಿಸಿಕೊಂಡಿದ್ದಾನೆ. ಅವನು ಅವರನ್ನು ಎಣಿಕೆ ಮಾಡಿಟ್ಟಿರುತ್ತಾನೆ.

لَقَدْ أَحْصَاهُمْ وَعَدَّهُمْ عَدًّا ﴿٩٤﴾

95. ಪುನರುತ್ಥಾನದ ದಿನದಂದು ಎಲ್ಲರೂ ಅವನ ಮುಂದೆ ಒಬ್ಬೊಬ್ಬ ರಾಗಿ ಹಾಜರಾಗುವರು.

وَكُلُّهُمْ اٰتِيْهِ يَوْمَ الْقِيٰمَةِ فَرْدًا ﴿٩٥﴾

96. ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸಿಕೊಂಡು ಸತ್ಕರ್ಮವೆಸಗುತ್ತಿರುವವರಿಗಾಗಿ (ಜನರ) ಹೃದಯಗಳಲ್ಲಿ ರಹ್ಮಾನನು ಸದ್ಯವೇ ಅನುರಾಗವನ್ನುಂಟು ಮಾಡುವನು.[17]

اِنَّ الَّذِيْنَ اٰمَنُوْا وَعَمِلُوا الصّٰلِحٰتِ سَيَجْعَلُ لَهُمُ الرَّحْمٰنُ وُدًّا ﴿٩٦﴾

97. ಆದುದರಿಂದ ಓ ಪೈಗಂಬರರೇ, ನೀವು ಭಯಭಕ್ತಿಯನ್ನಿರಿಸಿಕೊಂಡಿರುವವರಿಗೆ ಸುವಾರ್ತೆಯನ್ನೀಯಲಿಕ್ಕಾಗಿ ಹಾಗೂ ಹಟಸಾಧಕರಿಗೆ ಎಚ್ಚರಿಕೆ ಕೊಡಲಿಕ್ಕಾಗಿಯೇ ನಾವು ಈ ವಾಣಿಯನ್ನು ಸರಳಗೊಳಿಸಿ ನಿಮ್ಮ ಭಾಷೆಯಲ್ಲಿ ಅವತೀರ್ಣಗೊಳಿಸಿರುತ್ತೇವೆ.

فَاِنَّمَا يَسَّرْنٰهُ بِلِسَانِكَ لِتُبَشِّرَ بِهِ الْمُتَّقِيْنَ وَتُنْذِرَ بِهٖ قَوْمًا لُّدًّا ﴿٩٧﴾

98. ಇವರಿಗಿಂತ ಮುಂಚೆ ನಾವು ಎಷ್ಟೋ ಜನಾಂಗಗಳನ್ನು ನಾಶಗೊಳಿಸಿರುತ್ತೇವೆ. ಇಂದು ನಿಮಗೆ ಅವುಗಳ ಸುಳಿವೇನಾದರೂ ಸಿಗುತ್ತಿದೆಯೇ ಅಥವಾ ಕಿಂಚಿತ್ ಧ್ವನಿಯಾದರೂ ಎಲ್ಲಾದರೂ ಕೇಳಿಸುತ್ತಿದೆಯೇ?

وَكَمْ اَهْلَكْنَا قَبْلَهُمْ مِّنْ قَرْنٍ ۭ هَلْ تُحِسُّ مِنْهُمْ مِّنْ اَحَدٍ اَوْ تَسْمَعُ لَهُمْ رِكْزًا ﴿٩٨﴾

---

17. ಅರ್ಥಾತ್- ಇಂದು ಅವರನ್ನು ಮಕ್ಕಾದ ಕೇರಿಗಳಲ್ಲಿ ಅಪಮಾನಕ್ಕೆ ಗುರಿಪಡಿಸಲಾಗುತ್ತಿದೆ. ಆದರೆ ಈ ಪರಿಸ್ಥಿತಿ ದೀರ್ಘಕಾಲ ಇರಲಾರದು. ತಮ್ಮ ಸತ್ಕರ್ಮ ಮತ್ತು ಸಚ್ಚಾರಿತ್ರ್ಯದಿಂದಾಗಿ ಅವರು ಅತ್ಯಂತ ಜನಪ್ರಿಯರಾಗಿ ಮಾರ್ಪಡುವ ದಿನ ದೂರವಿಲ್ಲ. ಮನಸ್ಸುಗಳು ಅವರೆಡೆಗೆ ಸೆಳೆಯಲ್ಪಡುವುದು, ಜಗತ್ತು ಅವರನ್ನು ಗೌರವದ ದೃಷ್ಟಿಯಿಂದ ನೋಡುವುದು. ದುರಾಚಾರ, ಕೆಡುಕುಗಳು, ದುರಹಂಕಾರ, ಅಹಂಭಾವ, ಸುಳ್ಳು ಮತ್ತು ತೋರಿಕೆಯ ಆಧಾರದಲ್ಲಿ ನಡೆಯುತ್ತಿರುವ ನಾಯಕತ್ವವು ಜನರನ್ನು ತಲೆಬಾಗುವಂತೆ ಮಾಡೀತು. ಆದರೆ ಜನಮನವನ್ನು ಗೆಲ್ಲಲು ಅದಕ್ಕೆ ಸಾಧ್ಯವಾಗಲಾರದು. ಅದರ ಬದಲು ಸತ್ಯ, ಪ್ರಾಮಾಣಿಕತೆ, ನಿಸ್ವಾರ್ಥತೆ ಮತ್ತು ಸಚ್ಚಾರಿತ್ರ್ಯದೊಂದಿಗೆ ಸನ್ಮಾರ್ಗದೆಡೆಗೆ ಕರೆಯುವವರಿಂದ ಮೊದಮೊದಲು ಜಗತ್ತು ಎಷ್ಟೇ ಬೇಸತ್ತರೂ, ಕೊನೆಗೆ ಅದು ಜನಮನವನ್ನು ಗೆಲ್ಲುವುದು. ಅಪ್ರಾಮಾಣಿಕ ವ್ಯಕ್ತಿಗಳು ಹೆಣೆಯುವ ಸುಳ್ಳುಗಳು ಹೆಚ್ಚು ಕಾಲ ಅವರ ದಾರಿಯನ್ನು ತಡೆಯುವಲ್ಲಿ ಸಫಲವಾಗಲಾರವು.

95. ಪುನರುತ್ಥಾನದ ದಿನದಂದು ಎಲ್ಲರೂ ಅವನ ಮುಂದೆ ಒಬ್ಬೊಬ್ಬ ರಾಗಿ ಹಾಜರಾಗುವರು.

وَكُلُّهُمْ آتِيهِ يَوْمَ الْقِيَامَةِ فَرْدًا ﴿٩٥﴾

96. ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸಿಕೊಂಡು ಸತ್ಕರ್ಮವೆಸಗು ತ್ತಿರುವವರಿಗಾಗಿ (ಜನರ) ಹೃದಯಗಳಲ್ಲಿ ರಹ್ಮಾನನು ಸದ್ಯವೇ ಅನುರಾಗವನ್ನುಂಟು ಮಾಡುವನು.[17]

إِنَّ الَّذِينَ آمَنُوا وَعَمِلُوا الصَّالِحَاتِ سَيَجْعَلُ لَهُمُ الرَّحْمَٰنُ وُدًّا ﴿٩٦﴾

97. ಆದುದರಿಂದ ಓ ಪೈಗಂಬರರೇ, ನೀವು ಭಯಭಕ್ತಿಯನ್ನಿರಿಸಿ ಕೊಂಡಿರುವವರಿಗೆ ಸುವಾರ್ತೆಯನ್ನೀಯಲಿಕ್ಕಾಗಿ ಹಾಗೂ ಹಟ ಸಾಧಕರಿಗೆ ಎಚ್ಚರಿಕೆ ಕೊಡಲಿಕ್ಕಾಗಿಯೇ ನಾವು ಈ ವಾಣಿಯನ್ನು ಸರಳಗೊಳಿಸಿ ನಿಮ್ಮ ಭಾಷೆಯಲ್ಲಿ ಅವತೀರ್ಣಗೊಳಿಸಿರುತ್ತೇವೆ.

فَإِنَّمَا يَسَّرْنَاهُ بِلِسَانِكَ لِتُبَشِّرَ بِهِ الْمُتَّقِينَ وَتُنْذِرَ بِهِ قَوْمًا لُدًّا ﴿٩٧﴾

98. ಇವರಿಗಿಂತ ಮುಂಚೆ ನಾವು ಎಷ್ಟೋ ಜನಾಂಗಗಳನ್ನು ನಾಶಗೊಳಿಸಿರುತ್ತೇವೆ. ಇಂದು ನಿಮಗೆ ಅವುಗಳ ಸುಳಿವೇನಾದರೂ ಸಿಗುತ್ತಿದೆಯೇ ಅಥವಾ ಕಿಂಚಿತ್ ಧ್ವನಿಯಾದರೂ ಎಲ್ಲಾದರೂ ಕೇಳಿಸುತ್ತಿದೆಯೇ?

وَكَمْ أَهْلَكْنَا قَبْلَهُمْ مِنْ قَرْنٍ هَلْ تُحِسُّ مِنْهُمْ مِنْ أَحَدٍ أَوْ تَسْمَعُ لَهُمْ رِكْزًا ﴿٩٨﴾

---

17. ಅರ್ಥಾತ್- ಇಂದು ಅವರನ್ನು ಮಕ್ಕಾದ ಕೇರಿಗಳಲ್ಲಿ ಅಪಮಾನಕ್ಕೆ ಗುರಿಪಡಿಸಲಾಗುತ್ತಿದೆ. ಆದರೆ ಈ ಪರಿಸ್ಥಿತಿ ದೀರ್ಘಕಾಲ ಇರಲಾರದು. ತಮ್ಮ ಸತ್ಕರ್ಮ ಮತ್ತು ಸಚ್ಚಾರಿತ್ರ್ಯದಿಂದಾಗಿ ಅವರು ಅತ್ಯಂತ ಜನಪ್ರಿಯರಾಗಿ ಮಾರ್ಪಡುವ ದಿನ ದೂರವಿಲ್ಲ. ಮನಸ್ಸುಗಳು ಅವರೆಡೆಗೆ ಸೆಳೆಯಲ್ಪಡುವುದು, ಜಗತ್ತು ಅವರನ್ನು ಗೌರವದ ದೃಷ್ಟಿಯಿಂದ ನೋಡುವುದು. ದುರಾಚಾರ, ಕೆಡುಕುಗಳು, ದುರಹಂಕಾರ, ಅಹಂಭಾವ, ಸುಳ್ಳು ಮತ್ತು ತೋರಿಕೆಯ ಆಧಾರದಲ್ಲಿ ನಡೆಯುತ್ತಿರುವ ನಾಯಕತ್ವವು ಜನರನ್ನು ತಲೆಬಾಗುವಂತೆ ಮಾಡೀತು. ಆದರೆ ಜನಮನವನ್ನು ಗೆಲ್ಲಲು ಅದಕ್ಕೆ ಸಾಧ್ಯವಾಗಲಾರದು. ಅದರ ಬದಲು ಸತ್ಯ, ಪ್ರಾಮಾಣಿಕತೆ, ನಿಸ್ವಾರ್ಥತೆ ಮತ್ತು ಸಚ್ಚಾರಿತ್ರ್ಯದೊಂದಿಗೆ ಸನ್ಮಾರ್ಗದೆಡೆಗೆ ಕರೆಯುವವರಿಂದ ಮೊದಮೊದಲು ಜಗತ್ತು ಎಷ್ಟೇ ಬೇಸತ್ತರೂ, ಕೊನೆಗೆ ಅದು ಜನಮನವನ್ನು ಗೆಲ್ಲುವುದು. ಅಪ್ರಾಮಾಣಿಕ ವ್ಯಕ್ತಿಗಳು ಹೆಣೆಯುವ ಸುಳ್ಳುಗಳು ಹೆಚ್ಚು ಕಾಲ ಅವರ ದಾರಿಯನ್ನು ತಡೆಯುವಲ್ಲಿ ಸಫಲವಾಗಲಾರವು.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ತಾ ಹಾ.

طٰهٰ ﴿١﴾

2. ನಾವು ಈ ಕುರ್‌ಆನನ್ನು ನಿಮ್ಮ ಮೇಲೆ ಅವತೀರ್ಣಗೊಳಿಸಿರುವುದು ನಿಮ್ಮನ್ನು ಸಂಕಷ್ಟಕ್ಕೀಡು ಮಾಡಲಿಕ್ಕಲ್ಲ.

مَآ اَنْزَلْنَا عَلَيْكَ الْقُرْاٰنَ لِتَشْقٰٓى ﴿٢﴾

3. ಇದು ಭಯವಿರಿಸುವ ಪ್ರತಿಯೊಬ್ಬನಿಗೆ ನೆನಪಿಸುವ ಒಂದು ಸಾಧನವಾಗಿದೆ.[1]

اِلَّا تَذْكِرَةً لِّمَنْ يَّخْشٰى ﴿٣﴾

4. ಭೂಮಿಯನ್ನೂ ಉನ್ನತ ಆಕಾಶಗಳನ್ನೂ ಸೃಷ್ಟಿಸಿದವನ ಕಡೆಯಿಂದ ಇದು ಅವತೀರ್ಣಗೊಂಡಿದೆ.

تَنْزِيْلًا مِّمَّنْ خَلَقَ الْاَرْضَ وَالسَّمٰوٰتِ الْعُلٰى ﴿٤﴾

5. ಆ ದಯಾಮಯನು (ವಿಶ್ವ) ಸಿಂಹಾಸನದ ಮೇಲೆ ವಿರಾಜಿಸುತ್ತಿದ್ದಾನೆ.

اَلرَّحْمٰنُ عَلَى الْعَرْشِ اسْتَوٰى ﴿٥﴾

6. ಅವನು, ಆಕಾಶಗಳಲ್ಲೂ ಭೂಮಿಯಲ್ಲೂ ಅವೆರಡರ ನಡುವೆಯೂ ಹಾಗೂ ಮಣ್ಣಿನಡಿಯಲ್ಲಿಯೂ ಇರುವ ಸಕಲ ವಸ್ತುಗಳ ಮಾಲಿಕನಾಗಿರುತ್ತಾನೆ.

لَهٗ مَا فِى السَّمٰوٰتِ وَمَا فِى الْاَرْضِ وَمَا بَيْنَهُمَا وَمَا تَحْتَ الثَّرٰى ﴿٦﴾

7. ನೀವು ನಿಮ್ಮ ಮಾತನ್ನು ಉಚ್ಚ ಸ್ವರದಲ್ಲೇ ಹೇಳಿದರೂ

وَاِنْ تَجْهَرْ بِالْقَوْلِ فَاِنَّهٗ يَعْلَمُ

1. ಅರ್ಥಾತ್- ಓ ಪ್ರವಾದಿಯೇ! ಈ ಕುರ್‌ಆನನ್ನು ಅವತೀರ್ಣಗೊಳಿಸಿ ನಾವು ನಿಮ್ಮಿಂದ ಯಾವುದೇ ದುಸ್ಸಾಧ್ಯವಾದ ಕೆಲಸವನ್ನು ಮಾಡಿಸಬಯಸುವುದಿಲ್ಲ. ವಿಶ್ವಾಸವಿಡಲು ಸಿದ್ಧವಿಲ್ಲದವರನ್ನೂ ನಂಬಿಸಿಯೇ ತೀರಬೇಕೆಂಬ ಹೊಣೆಯನ್ನು ನಾವು ನಿಮಗೆ ವಹಿಸಿಲ್ಲ. ವಿಶ್ವಾಸಕ್ಕೆ ಸಂಬಂಧಿಸಿದಂತೆ ತಮ್ಮ ಹೃದಯವನ್ನು, ಮುಚ್ಚಿಕೊಂಡಿರುವವರಿಗೂ ನೀವು ವಿಶ್ವಾಸವನ್ನು ಕರಗತ ಮಾಡಿಸಿಯೇ ತೀರಬೇಕೆಂದಿಲ್ಲ. ಇದೊಂದು ಉದ್ಬೋಧೆ ಮತ್ತು ಸ್ಮರಣೆ ಮಾತ್ರ. ತಮ್ಮ ಹೃದಯದಲ್ಲಿ ದೇವಭಯವುಳ್ಳವರು ಇದನ್ನು ಕೇಳಿ ಎಚ್ಚೆತ್ತುಕೊಳ್ಳಲೆಂದು ಇದನ್ನು ಕಳುಹಿಸಲಾಗಿದೆ.

ಅವನಂತು ಮೆಲುದನಿಯ ಮಾತನ್ನು ಮಾತ್ರವಲ್ಲ ಅದಕ್ಕಿಂತಲೂ ರಹಸ್ಯವಾದ ಮಾತನ್ನೂ ಅರಿಯುತ್ತಾನೆ.

السِّرَّ وَأَخْفَى ﴿٧﴾

8. ಅವನು ಅಲ್ಲಾಹ್. ಅವನ ಹೊರತು ಅನ್ಯ ದೇವನಿಲ್ಲ. ಅವನಿಗೆ ಅತ್ಯುತ್ತಮ ನಾಮಗಳಿವೆ.

اللَّهُ لَا إِلَٰهَ إِلَّا هُوَ لَهُ الْأَسْمَاءُ الْحُسْنَىٰ ﴿٨﴾

9. ನಿಮಗೆ ಮೂಸಾರ ವೃತ್ತಾಂತವೇನಾದರೂ ತಲುಪಿದೆಯೇ?

وَهَلْ أَتَاكَ حَدِيثُ مُوسَىٰ ﴿٩﴾

10. ಅವರು ಒಂದು ಬೆಂಕಿಯನ್ನು ಕಂಡಾಗ[2] ತನ್ನ ಮನೆಯವರೊಡನೆ, "ಸ್ವಲ್ಪ ತಡೆಯಿರಿ, ನಾನೊಂದು ಬೆಂಕಿಯನ್ನು ಕಂಡಿದ್ದೇನೆ. ನಾನು ನಿಮಗಾಗಿ ಕೆಂಡವೊಂದನ್ನು ತರಬಹುದು ಅಥವಾ ಆ ಬೆಂಕಿಯಿಂದ (ದಾರಿಯ ಕುರಿತು) ನನಗೆ ಮಾರ್ಗದರ್ಶನ ಸಿಗಲೂಬಹುದು" ಎಂದು ಹೇಳಿದ ಸಂದರ್ಭ.[3]

إِذْ رَأَىٰ نَارًا فَقَالَ لِأَهْلِهِ امْكُثُوا إِنِّي آنَسْتُ نَارًا لَّعَلِّي آتِيكُم مِّنْهَا بِقَبَسٍ أَوْ أَجِدُ عَلَى النَّارِ هُدًى ﴿١٠﴾

11. ಅಲ್ಲಿಗೆ ತಲಪಿದಾಗ (ಹೀಗೆ) ಕರೆಯಲಾಯಿತು:

فَلَمَّا أَتَاهَا نُودِيَ يَا مُوسَىٰ ﴿١١﴾

12. "ಓ ಮೂಸಾ, ನಾನೇ ನಿಮ್ಮ ಪ್ರಭು. ನಿಮ್ಮ ಪಾದರಕ್ಷೆಗಳನ್ನು ಕಳಚಿ ಬಿಡಿರಿ. ನೀವು ಪವಿತ್ರ ಕಣಿವೆ 'ತುವಾ'ದಲ್ಲಿದ್ದೀರಿ.

إِنِّي أَنَا رَبُّكَ فَاخْلَعْ نَعْلَيْكَ ۖ إِنَّكَ بِالْوَادِ الْمُقَدَّسِ طُوًى ﴿١٢﴾

13. ಮತ್ತು ನಾನು ನಿಮ್ಮನ್ನು ಆರಿಸಿ ಕೊಂಡಿದ್ದೇನೆ. ನಿಮಗೆ ಮಾಡಲಾಗುವ 'ದಿವ್ಯವಾಣಿ'ಯ ಅವತೀರ್ಣವನ್ನು ಆಲಿಸಿರಿ.

وَأَنَا اخْتَرْتُكَ فَاسْتَمِعْ لِمَا يُوحَىٰ ﴿١٣﴾

14. ನಿಶ್ಚಯವಾಗಿಯೂ ನಾನೇ ಅಲ್ಲಾಹ್. ನನ್ನ ಹೊರತು ಇನ್ನಾವ ದೇವನೂ ಇಲ್ಲ. ಆದುದರಿಂದ ನೀವು ನನ್ನ ದಾಸ್ಯ-ಆರಾಧನೆ ಮಾಡಿರಿ ಮತ್ತು ನನ್ನ ಸ್ಮರಣೆಗಾಗಿ ನಮಾಝನ್ನು ಸಂಸ್ಥಾಪಿಸಿರಿ.

إِنَّنِي أَنَا اللَّهُ لَا إِلَٰهَ إِلَّا أَنَا فَاعْبُدْنِي وَأَقِمِ الصَّلَاةَ لِذِكْرِي ﴿١٤﴾

15. ಪುನರುತ್ಥಾನದ ಘಳಿಗೆಯು ಖಂಡಿತವಾಗಿಯೂ ಬರಲಿದೆ. ಪ್ರತಿಯೊಬ್ಬ ಜೀವಿಯೂ ತನ್ನ ಪರಿಶ್ರಮಕ್ಕನುಸಾರ ಪ್ರತಿಫಲ ಪಡೆಯುವಂತಾಗಲು ನಾನು ಆ ಸಮಯವನ್ನು ರಹಸ್ಯವಾಗಿಡಲಿಚ್ಛಿಸುತ್ತೇನೆ.

إِنَّ السَّاعَةَ آتِيَةٌ أَكَادُ أُخْفِيهَا لِتُجْزَىٰ كُلُّ نَفْسٍ بِمَا تَسْعَىٰ ﴿١٥﴾

2. ಇದು ಹ. ಮೂಸಾ(ಅ) ಕೆಲವು ವರ್ಷಗಳ ಕಾಲ 'ಮದ್‌ಯನ್'ನಲ್ಲಿ ದೇಶಾಂತರ ವಾಸವನ್ನು ಕಳೆದ ನಂತರ, ಮದ್‌ಯನ್‌ನಲ್ಲೇ ಅವರು ವಿವಾಹವಾಗಿದ್ದ ತಮ್ಮ ಪತ್ನಿಯ ಜತೆಗೆ ಈಜಿಪ್ಟ್‌ನ ಕಡೆಗೆ ಮರಳಿ ಬರುತ್ತಿದ್ದ ಕಾಲದ ಘಟನೆ.

3. ಅದು ರಾತ್ರಿಯ ಹೊತ್ತು ಮತ್ತು ಚಳಿಗಾಲವಾಗಿತ್ತೆಂದು ಭಾಸವಾಗುತ್ತದೆ. ಹ. ಮೂಸಾ(ಅ) ಸೀನಾಯ್ ಪರ್ಯಾಯ ದ್ವೀಪದ ದಕ್ಷಿಣ ಭಾಗದಿಂದ ಸಾಗುತ್ತಿದ್ದರು. ದೂರದಿಂದ ಬೆಂಕಿಯನ್ನು ಕಂಡು ಅವರು ಅಲ್ಲಿ ಸ್ವಲ್ಪ ಬೆಂಕಿ ದೊರೆಯಬಹುದು ಮತ್ತು ಮಕ್ಕಳನ್ನು ರಾತ್ರಿ ಪೂರ್ತಿ ಬೆಚ್ಚಗಿರಿಸುವ ಏರ್ಪಾಟಾಗುವುದು. ಇಲ್ಲವೇ ಕನಿಷ್ಠಪಕ್ಷ ಮುಂದಿನ ದಾರಿಯಾದರೂ ತಿಳಿಯುವುದು ಎಂದು ಅವರು ಭಾವಿಸಿದರು. ಅವರು ಭಾವಿಸಿದ್ದುದು ಲೋಕದ ಮಾರ್ಗದ ಕುರಿತು. ಆದರೆ ಅಲ್ಲಿ ಅವರಿಗೆ ಪರಲೋಕದ ಮಾರ್ಗ ಲಭ್ಯವಾಯಿತು.

| | |
|---|---|
| 16. ಆದುದರಿಂದ ಅದರ ಮೇಲೆ ವಿಶ್ವಾಸವಿರಿಸದವನು ಮತ್ತು ತನ್ನ ಸ್ವೇಚ್ಛೆಗಳ ದಾಸನಾಗಿ ಬಿಟ್ಟವನು ನಿಮ್ಮನ್ನು ಆ ಘಳಿಗೆಯ ಚಿಂತೆ ಯಿಂದ ತಡೆಯದಿರಲಿ. ಅನ್ಯಥಾ ನೀವು ವಿನಾಶದಲ್ಲಿ ಬೀಳುವಿರಿ- | فَلَا يَصُدَّنَّكَ عَنْهَا مَنْ لَّا يُؤْمِنُ بِهَا وَاتَّبَعَ هَوٰىهُ فَتَرْدٰى ﴿١٦﴾ |
| 17. ಮತ್ತು ಓ ಮೂಸಾ, ನಿಮ್ಮ ಬಲಗೈಯಲ್ಲಿರುವುದೇನು?" | وَمَا تِلْكَ بِيَمِيْنِكَ يٰمُوْسٰى ﴿١٧﴾ |
| 18. ಮೂಸಾ (ಹೀಗೆ) ಉತ್ತರ ಕೊಟ್ಟರು- "ಇದು ನನ್ನ ಲಾಠಿ. ನಾನು ಇದನ್ನು ಊರಿಕೊಂಡು ನಡೆಯುತ್ತೇನೆ. ಇದರಿಂದ ಆಡುಗಳಿಗಾಗಿ ಎಲೆಗಳನ್ನು ಝಾಡಿಸುತ್ತೇನೆ. ಇದರಿಂದ ನಾನು ಇನ್ನೂ ಅನೇಕ ಪ್ರಯೋಜನಗಳನ್ನು ಪಡೆಯುತ್ತೇನೆ." | قَالَ هِيَ عَصَايَ ۚ أَتَوَكَّؤُا عَلَيْهَا وَأَهُشُّ بِهَا عَلٰى غَنَمِيْ وَلِيَ فِيْهَا مَاٰرِبُ أُخْرٰى ﴿١٨﴾ |
| 19. ಆಗ, "ಓ ಮೂಸಾ, ಅದನ್ನು ಎಸೆದು ಬಿಡಿರಿ" ಎಂದನು. | قَالَ أَلْقِهَا يٰمُوْسٰى ﴿١٩﴾ |
| 20. ಅವರು ಎಸೆದು ಬಿಟ್ಟರು -ಹಠಾತ್ತನೆ ಅದೊಂದು ಓಡುತ್ತಿರುವ ಹಾವಾಗಿತ್ತು. | فَأَلْقٰىهَا فَإِذَا هِيَ حَيَّةٌ تَسْعٰى ﴿٢٠﴾ |
| 21. "ಅದನ್ನು ಹಿಡಿದು ಕೊಳ್ಳಿರಿ. ಹೆದರಬೇಡಿರಿ. ನಾವು ಅದನ್ನು ಪೂರ್ವಸ್ಥಿತಿಗೇ ತರುವೆವು. | قَالَ خُذْهَا وَلَا تَخَفْ ۗ سَنُعِيْدُهَا سِيْرَتَهَا الْأُوْلٰى ﴿٢١﴾ |
| 22. ನಿಮ್ಮ ಕೈಯನ್ನು ಬಗಲಿನಲ್ಲಿಡಿರಿ. ಏನೊಂದೂ ಪ್ರಯಾಸವಿಲ್ಲದೆ ಹೊಳೆಯುತ್ತ ಹೊರಬರುವುದು. [4]ಇದು ಎರಡನೆಯ ನಿದರ್ಶನ. | وَاضْمُمْ يَدَكَ إِلٰى جَنَاحِكَ تَخْرُجْ بَيْضَاءَ مِنْ غَيْرِ سُوْءٍ اٰيَةً أُخْرٰى ﴿٢٢﴾ |
| 23. ಏಕೆಂದರೆ ನಾವು ನಿಮಗೆ ನಮ್ಮ ದೊಡ್ಡ ನಿದರ್ಶನಗಳನ್ನು ತೋರಿಸುವವರಿದ್ದೇವೆ. | لِنُرِيَكَ مِنْ اٰيٰتِنَا الْكُبْرٰى ﴿٢٣﴾ |
| 24. ಇನ್ನು ನೀವು ಫಿರ್‌ಔನನ ಬಳಿಗೆ ಹೋಗಿರಿ. ಅವನು ಅತಿಕ್ರಮಿಯಾಗಿದ್ದಾನೆ" ಎನ್ನಲಾಯಿತು. | اِذْهَبْ إِلٰى فِرْعَوْنَ إِنَّهُ طَغٰى ﴿٢٤﴾ |
| 25. ಮೂಸಾ (ಹೀಗೆ) ಹೇಳಿದರು- "ಓ ನನ್ನ ಪ್ರಭೂ, ನನ್ನ ಹೃದಯವನ್ನು ವಿಶಾಲಗೊಳಿಸು- | قَالَ رَبِّ اشْرَحْ لِيْ صَدْرِيْ ﴿٢٥﴾ |
| 26. ನನ್ನ ಕಾರ್ಯವನ್ನು ನನಗೆ ಸುಲಭಗೊಳಿಸು- | وَيَسِّرْ لِيْ أَمْرِيْ ﴿٢٦﴾ |
| 27-28. ಜನರು ನನ್ನ ಮಾತನ್ನು ತಿಳಿಯುವಂತಾಗಲು ನನ್ನ ನಾಲಗೆಯ ತೊಡಕನ್ನು ನೀಗಿಸು- | وَاحْلُلْ عُقْدَةً مِّنْ لِّسَانِيْ ﴿٢٧﴾ يَفْقَهُوْا قَوْلِيْ ﴿٢٨﴾ |

4. ಅರ್ಥಾತ್- ಅದು ಸೂರ್ಯನಂತೆ ಪ್ರಜ್ವಲಿಸುವುದು. ಆದರೆ ಅದರಿಂದ ನಿಮಗೇನೂ ತೊಂದರೆಯಾಗಲಾರದು.

29. ಮತ್ತು ನನಗಾಗಿ ನನ್ನದೇ ಕುಟುಂಬದಿಂದ ಒಬ್ಬ ಮಂತ್ರಿಯನ್ನು ನೇಮಿಸು.

وَاجْعَلْ لِّيْ وَزِيْرًا مِّنْ اَهْلِيْ ﴿٢٩﴾

30-35. ನಾವು ನಿನ್ನ ಪಾವಿತ್ರ್ಯವನ್ನು ಬಹಳವಾಗಿ ಕೊಂಡಾಡಲು ಹಾಗೂ ಬಹಳವಾಗಿ ನಿನ್ನನ್ನು ಪ್ರಸ್ತಾಪಿಸಲು ನನ್ನ ಸಹೋದರ ರಾಗಿರುವ ಹಾರೂನರ ಮೂಲಕ ನನ್ನ ಕೈ ಬಲಪಡಿಸು ಮತ್ತು ಅವರನ್ನು ನನ್ನ ಕೆಲಸದಲ್ಲಿ ಸಹಭಾಗಿಯಾಗಿ ಮಾಡು. ನೀನು ಸದಾ ನಮ್ಮ ವೀಕ್ಷಕನಾಗಿರುತ್ತೀ."

هٰرُوْنَ اَخِي ۙ اشْدُدْ بِهٖٓ اَزْرِيْ ۙ وَاَشْرِكْهُ فِيْٓ اَمْرِيْ ۙ كَيْ نُسَبِّحَكَ كَثِيْرًا ۙ وَّنَذْكُرَكَ كَثِيْرًا ۗ اِنَّكَ كُنْتَ بِنَا بَصِيْرًا

36. ಆಗ (ಹೀಗೆ) ಹೇಳಲಾಯಿತು, "ಓ ಮೂಸಾ, ನೀವು ಕೇಳಿ ಕೊಂಡದ್ದನ್ನು ನಿಮಗೆ ಕೊಡಲಾಗಿದೆ.

قَالَ قَدْ اُوْتِيْتَ سُؤْلَكَ يٰمُوْسٰى ﴿٣٦﴾

37. ನಾವು ಇನ್ನೊಮ್ಮೆ ನಿಮ್ಮ ಮೇಲೆ ಅನುಗ್ರಹ ತೋರಿದೆವು.

وَلَقَدْ مَنَنَّا عَلَيْكَ مَرَّةً اُخْرٰٓى ﴿٣٧﴾

38. ನಾವು ನಿಮ್ಮ ತಾಯಿಗೆ ಸೂಚನೆಕೊಟ್ಟ ಸಂದರ್ಭವನ್ನೂ ಸ್ಮರಿಸಿರಿ. ಇಂತಹ ಸೂಚನೆಯನ್ನು 'ದಿವ್ಯವಾಣಿ'ಯ ಮುಖಾಂತರವೇ ಕೊಡಲಾಗುತ್ತದೆ."

اِذْ اَوْحَيْنَآ اِلٰٓى اُمِّكَ مَا يُوْحٰٓى ﴿٣٨﴾

39. "ಈ ಮಗುವನ್ನು ಪೆಟ್ಟಿಗೆಯೊಳಗೆ ಇರಿಸಿ ಬಿಡು. ಪೆಟ್ಟಿಗೆಯನ್ನು ನದಿಯಲ್ಲಿ ಬಿಟ್ಟು ಬಿಡು. ನದಿಯು ಅದನ್ನು ದಡಕ್ಕೆ ಎಸೆದು ಬಿಡುವುದು ಮತ್ತು ಅದನ್ನು ನನ್ನ ಶತ್ರು ಹಾಗೂ ಈ ಮಗುವಿನ ಶತ್ರು ಎತ್ತಿಕೊಳ್ಳುವನು" (ಎಂಬ ಸೂಚನೆ). ನಾನು ನನ್ನ ಕಡೆಯಿಂದ ನಿಮ್ಮ ಮೇಲೆ ಅನುರಾಗವನ್ನು ಆವರಿಸಿ ಬಿಟ್ಟೆನು ಮತ್ತು ನನ್ನ ಮೇಲ್ನೋಟದಲ್ಲೇ ನಿಮ್ಮ ಪೋಷಣೆಯ ವ್ಯವಸ್ಥೆ ಮಾಡಿದೆನು.

اَنِ اقْذِفِيْهِ فِي التَّابُوْتِ فَاقْذِفِيْهِ فِي الْيَمِّ فَلْيُلْقِهِ الْيَمُّ بِالسَّاحِلِ يَاْخُذْهُ عَدُوٌّ لِّيْ وَعَدُوٌّ لَّهٗ ۗ وَاَلْقَيْتُ عَلَيْكَ مَحَبَّةً مِّنِّيْ ۚ وَلِتُصْنَعَ عَلٰى عَيْنِيْ ﴿٣٩﴾

40. ನಿಮ್ಮ ಸಹೋದರಿ ನಡೆಯುತ್ತಲಿದ್ದ ಸಂದರ್ಭವನ್ನು ಸ್ಮರಿಸಿರಿ. ಅವಳು ಹೋಗಿ, "ಈ ಶಿಶುವನ್ನು ಅತ್ಯುತ್ತಮ ರೀತಿಯಿಂದ ಪಾಲನೆ ಪೋಷಣೆ ಮಾಡಬಲ್ಲವಳನ್ನು ನಿಮಗೆ ತೋರಿಸಿಕೊಡಲೇ?" ಎಂದು ಹೇಳುತ್ತಾಳೆ.[5] ಹೀಗೆ ನಿಮ್ಮ ತಾಯಿಯ ಕಣ್ತಣಿಯುವಂತಾಗಲು ಹಾಗೂ ಅವಳು ದುಃಖಿತಳಾಗದಂತಾಗಲು ನಾವು ನಿಮ್ಮನ್ನು ಪುನಃ ನಿಮ್ಮ ತಾಯಿಯ ಬಳಿಗೆ ತಲುಪಿಸಿ ಬಿಟ್ಟೆವು ಮತ್ತು (ಇದನ್ನೂ ಸ್ಮರಿಸಿರಿ) ನೀವು ಒಬ್ಬನನ್ನು ವಧಿಸಿ ಬಿಟ್ಟಿದ್ದಿರಿ. ನಾವು

اِذْ تَمْشِيْٓ اُخْتُكَ فَتَقُوْلُ هَلْ اَدُلُّكُمْ عَلٰى مَنْ يَّكْفُلُهٗ ۗ فَرَجَعْنٰكَ اِلٰٓى اُمِّكَ كَيْ تَقَرَّ عَيْنُهَا وَلَا تَحْزَنَ ۗ وَقَتَلْتَ نَفْسًا فَنَجَّيْنٰكَ مِنَ الْغَمِّ وَفَتَنّٰكَ فُتُوْنًا ۗ فَلَبِثْتَ سِنِيْنَ فِيْٓ اَهْلِ

5. ಅರ್ಥಾತ್- ಆಕೆ ನದಿ ತೀರದಲ್ಲಿ ಬುಟ್ಟಿಯ ಜತೆಗೇ ನಡೆಯುತ್ತಿದ್ದಳು. ಅನಂತರ ಫಿರ್‌ಔನನ ಮನೆಯವರು ಮಗುವನ್ನು ಎತ್ತಿಕೊಂಡಾಗ ಅವರಿಗೆ ದಾದಿಯ ಅವಶ್ಯಕತೆ ತಲೆದೋರಿತು. ಆಗ ಮೂಸಾರ(ಅ) ಸಹೋದರಿ ಅವರೊಡನೆ ಹೀಗೆ ಹೇಳಿದಳು.

ನಿಮ್ಮನ್ನು ಈ ತೊಂದರೆಯಿಂದ ಪಾರುಗೊಳಿಸಿದೆವು ಮತ್ತು ನಿಮ್ಮನ್ನು ವಿವಿಧ ಪರೀಕ್ಷಣಗಳಿಂದ ಪಾರುಗಾಣಿಸಿದೆವು ಮತ್ತು ನೀವು ಮದಯನಿನವರ ಜೊತೆ ಅನೇಕ ವರ್ಷ ವಾಸಿಸಿದಿರಿ. ಅನಂತರ ನೀವೀಗ ಸಕಾಲದಲ್ಲಿ ಬಂದಿರುವಿರಿ.

مَدْيَنَ ۬ۙ ثُمَّ جِئْتَ عَلٰى قَدَرٍ يّٰمُوْسٰى ﴿٤٠﴾

41. ಓ ಮೂಸಾ, "ನಾನು ನಿಮ್ಮನ್ನು ನನ್ನ ಕಾರ್ಯಕ್ಕಾಗಿ ಆಯ್ದು ಕೊಂಡಿರುತ್ತೇನೆ.

وَاصْطَنَعْتُكَ لِنَفْسِيْ ﴿٤١﴾

42. ನೀವು ಮತ್ತು ನಿಮ್ಮ ಸಹೋದರ ನನ್ನ ನಿದರ್ಶನಗಳ ಸಹಿತ ಹೋಗಿರಿ ಮತ್ತು ನೀವು ನನ್ನ ಸ್ಮರಣೆಯಲ್ಲಿ ಲೋಪ ಮಾಡಬೇಡಿರಿ.

اِذْهَبْ اَنْتَ وَاَخُوْكَ بِاٰيٰتِيْ وَلَا تَنِيَا فِيْ ذِكْرِيْ ﴿٤٢﴾

43. ನೀವಿಬ್ಬರೂ ಫಿರ್‌ಔನನ ಬಳಿಗೆ ಹೋಗಿರಿ. ಅವನು ವಿದ್ರೋಹಿ ಯಾಗಿ ಬಿಟ್ಟಿದ್ದಾನೆ.

اِذْهَبَآ اِلٰى فِرْعَوْنَ اِنَّهٗ طَغٰى ﴿٤٣﴾

44 ಅವನೊಡನೆ ನಯವಾಗಿ ಮಾತನಾಡಿರಿ. ಅವನು ಉಪದೇಶ ಸ್ವೀಕರಿಸಬಹುದು ಅಥವಾ ಭಯಪಡಬಹುದು."

فَقُوْلَا لَهٗ قَوْلًا لَّيِّنًا لَّعَلَّهٗ يَتَذَكَّرُ اَوْ يَخْشٰى ﴿٤٤﴾

45. ಇಬ್ಬರೂ ಇಂತೆಂದರು,[6] "ಓ ನಮ್ಮ ಪ್ರಭೂ, ಅವನು ನಮ್ಮ ಮೇಲೆ ಅತಿರೇಕವೆಸಗಬಹುದು. ನಮ್ಮ ಮೇಲೆ ಮುಗಿಬೀಳ ಬಹುದೆಂಬ ಆತಂಕ ನಮಗಿದೆ."

قَالَا رَبَّنَآ اِنَّنَا نَخَافُ اَنْ يَّفْرُطَ عَلَيْنَآ اَوْ اَنْ يَّطْغٰى ﴿٤٥﴾

46. ಆಗ, "ಹೆದರಬೇಡಿರಿ, ನಾನು ನಿಮ್ಮ ಸಂಗಡವಿದ್ದೇನೆ. ಎಲ್ಲವನ್ನೂ ಆಲಿಸುತ್ತಿದ್ದೇನೆ ಮತ್ತು ವೀಕ್ಷಿಸುತ್ತಿದ್ದೇನೆ.

قَالَ لَا تَخَافَآ اِنَّنِيْ مَعَكُمَآ اَسْمَعُ وَاَرٰى ﴿٤٦﴾

47. ಅವನ ಬಳಿಗೆ ಹೋಗಿರಿ ಮತ್ತು ನಾವು ನಿನ್ನ ಪ್ರಭುವಿನ ಕಡೆಯಿಂದ ಕಳುಹಿಸಲ್ಪಟ್ಟವರು. ಬನೀಇಸ್ರಾಈಲರನ್ನು ನಮ್ಮ ಸಂಗಡ ಕಳುಹಿಸಿ ಬಿಡು, ಅವರಿಗೆ ಕಾಟ ಕೊಡಬೇಡ. ನಾವು ನಿನ್ನ ಬಳಿಗೆ ನಿನ್ನ ಪ್ರಭುವಿನ ನಿದರ್ಶನವನ್ನು ತಂದಿರುತ್ತೇವೆ ಮತ್ತು ಸನ್ಮಾರ್ಗವನ್ನನುಸರಿಸುವವನಿಗೆ ರಕ್ಷಣೆಯಿದೆ.

فَاْتِيٰهُ فَقُوْلَآ اِنَّا رَسُوْلَا رَبِّكَ فَاَرْسِلْ مَعَنَا بَنِيْٓ اِسْرَآءِيْلَ ۬ۙ وَلَا تُعَذِّبْهُمْ ؕ قَدْ جِئْنٰكَ بِاٰيَةٍ مِّنْ رَّبِّكَ ؕ وَالسَّلٰمُ عَلٰى مَنِ اتَّبَعَ الْهُدٰى ﴿٤٧﴾

48. ಸುಳ್ಳಾಗಿಸುವವನಿಗೂ ವಿಮುಖನಾದವನಿಗೂ ಯಾತನೆ ಇದೆಯೆಂದು ನಮಗೆ 'ದಿವ್ಯವಾಣಿ'ಯ ಮೂಲಕ ತಿಳಿಸಿಕೊಡಲಾಗಿದೆ ಎಂದು ಹೇಳಿರಿ" ಎಂದು ಅಲ್ಲಾಹನು ಹೇಳಿದನು.

اِنَّا قَدْ اُوْحِيَ اِلَيْنَآ اَنَّ الْعَذَابَ عَلٰى مَنْ كَذَّبَ وَتَوَلّٰى ﴿٤٨﴾

6. ಇದು ಮೂಸಾರು(ಅ) ಈಜಿಪ್ಟಿಗೆ ತಲುಪಿದಾಗಿನ ವೃತ್ತಾಂತ. ಹ. ಹಾರೂನ್(ಅ) ಆಗ ಅವರ ಜೊತೆಗಾರರಾಗಿ ಮಾರ್ಪಟ್ಟಿದ್ದರು. ಆಗ ಫಿರ್‌ಔನ್‌ನ ಬಳಿ ಹೋಗುವುದಕ್ಕಿಂತ ಮೊದಲು ಇಬ್ಬರೂ ಹೀಗೆ ಅಲ್ಲಾಹನೊಡನೆ ಪ್ರಾರ್ಥಿಸಿರಬಹುದು.

49. ಆಗ ಫಿರ್‌ಔನ್ ಇಂತೆಂದನು;[7] "ಸರಿ, ಹಾಗಾದರೆ ನಿಮ್ಮಿಬ್ಬರ ಪ್ರಭು ಯಾರು ಮೂಸಾ?"

قَالَ فَمَنْ رَّبُّكُمَا يٰمُوْسٰى ﴿٤٩﴾

50. ಮೂಸಾ ಉತ್ತರವಿತ್ತರು, "ಪ್ರತಿಯೊಂದು ವಸ್ತುವಿಗೆ ಅದರ ಆಕೃತಿ ಪ್ರದಾನ ಮಾಡಿ ಆ ಬಳಿಕ ಅದಕ್ಕೆ ದಾರಿ ತೋರಿದವನೇ[8] ನಮ್ಮ ಪ್ರಭು."

قَالَ رَبُّنَا الَّذِيْٓ اَعْطٰى كُلَّ شَيْءٍ خَلْقَهٗ ثُمَّ هَدٰى ﴿٥٠﴾

51. ಫಿರ್‌ಔನ್ ಹೇಳಿದನು- "ಹಾಗಾದರೆ ಗತ ಪೀಳಿಗೆಗಳ ಸ್ಥಿತಿ ಏನಾಗಿತ್ತು?"[9]

قَالَ فَمَا بَالُ الْقُرُوْنِ الْاُوْلٰى ﴿٥١﴾

52. ಮೂಸಾ ಹೇಳಿದರು, "ಅದರ ಜ್ಞಾನವು ನನ್ನ ಪ್ರಭುವಿನ ಬಳಿಯಿರುವ ಒಂದು ಗ್ರಂಥದಲ್ಲಿ ಸುರಕ್ಷಿತವಾಗಿದೆ. ನನ್ನ ಪ್ರಭು ತಪ್ಪುವುದೂ ಇಲ್ಲ, ಮರೆಯುವುದೂ ಇಲ್ಲ.[10]

قَالَ عِلْمُهَا عِنْدَ رَبِّيْ فِيْ كِتٰبٍ ۚ لَا يَضِلُّ رَبِّيْ وَلَا يَنْسَى ﴿٥٢﴾

53. [11]ನಿಮಗಾಗಿ ಭೂಮಿಯನ್ನು ಹಾಸಿದವನೂ ಅದರಲ್ಲಿ ನಿಮಗೆ ಸಂಚರಿಸಲು ದಾರಿಗಳನ್ನು ಮಾಡಿದವನೂ ಆಕಾಶದಿಂದ ನೀರನ್ನು ಸುರಿಸಿದವನೂ ಅನಂತರ ಅದರ ಮೂಲಕ ತರತರದ ಉತ್ಪನ್ನಗಳನ್ನು ಹೊರ ತಂದವನೂ ಅವನೇ.

الَّذِيْ جَعَلَ لَكُمُ الْاَرْضَ مَهْدًا وَّسَلَكَ لَكُمْ فِيْهَا سُبُلًا وَّاَنْزَلَ مِنَ السَّمَآءِ مَآءً ۗ فَاَخْرَجْنَا بِهٖٓ اَزْوَاجًا مِّنْ نَّبَاتٍ شَتّٰى ﴿٥٣﴾

54. ನೀವೂ ತಿನ್ನಿರಿ ಮತ್ತು ನಿಮ್ಮ ಜಾನುವಾರುಗಳನ್ನೂ ಮೇಯಿಸಿರಿ. ನಿಶ್ಚಯವಾಗಿಯೂ ಬುದ್ಧಿವಂತರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

كُلُوْا وَارْعَوْا اَنْعَامَكُمْ ۗ اِنَّ فِيْ ذٰلِكَ لَاٰيٰتٍ لِّاُولِي النُّهٰى ﴿٥٤﴾

ع

7. ಇಲ್ಲಿಂದ ಈ ಇಬ್ಬರು ಸಹೋದರರು ಫಿರ್‌ಔನ್‌ನ ಬಳಿಗೆ ತಲಪಿದ ನಂತರದ ವೃತ್ತಾಂತ ಆರಂಭಗೊಳ್ಳುತ್ತದೆ.
8. ಅರ್ಥಾತ್- ಲೋಕದ ಪ್ರತಿಯೊಂದು ವಸ್ತುವನ್ನೂ ಅದರದೇ ಆದ ವಿಶಿಷ್ಟ ರೂಪದಲ್ಲಿ ಸೃಷ್ಟಿಸಲಾಗಿದೆ. ಅನಂತರ ಅದಕ್ಕೆ ವಿಶಿಷ್ಟ ರೂಪವನ್ನು ನೀಡಿ ಅವನು ಅದನ್ನು ಹಾಗೆಯೇ ಬಿಟ್ಟು ಬಿಟ್ಟಿಲ್ಲ. ಅವನೇ ಅದಕ್ಕೆ ಮಾರ್ಗದರ್ಶನವನ್ನೂ ನೀಡುತ್ತಾನೆ. ತನ್ನ ಪ್ರಕೃತಿಯಂತೆ ವರ್ತಿಸುವ ಮತ್ತು ತನ್ನ ಸೃಷ್ಟಿಯ ಉದ್ದೇಶವನ್ನು ಈಡೇರಿಸುವ ವಿಧಾನವನ್ನು ಅವನು ಯಾವ ಸೃಷ್ಟಿಗೂ ಕಲಿಸದೆ ಬಿಟ್ಟಿಲ್ಲ. ಕಿವಿಗೆ ಕೇಳುವುದನ್ನು, ಕಣ್ಣಿಗೆ ನೋಡುವುದನ್ನು, ಮೀನಿಗೆ ಈಜುವುದನ್ನು ಮತ್ತು ಹಕ್ಕಿಗೆ ಹಾರುವುದನ್ನು ಅವನೇ ಕಲಿಸಿದ್ದಾನೆ. ಅವನು ಪ್ರತಿಯೊಂದು ವಸ್ತುವಿನ ಸೃಷ್ಟಿಕರ್ತ- ಮಾತ್ರವಲ್ಲ, ಅದರ ಮಾರ್ಗದರ್ಶಿ ಮತ್ತು ಶಿಕ್ಷಕನೂ ಆಗಿದ್ದಾನೆ.
9. ಅರ್ಥಾತ್- ದೇವನು ಏಕೈಕನಾದ ಆ ಪ್ರಭುವೇ ಆಗಿದ್ದರೆ, ನೂರಾರು ವರ್ಷದಿಂದ ಅನೇಕ ಪೀಳಿಗೆಗಳನ್ನು ಕಳೆದ ನಮ್ಮ ತಾತ ಮುತ್ತಾತಂದಿರು ಇತರ ಅನೇಕ ಆರಾಧ್ಯರುಗಳನ್ನು ಆರಾಧಿಸುತ್ತಾ ಬಂದಿದ್ದಾರಲ್ಲವೇ? ನಿಮ್ಮ ದೃಷ್ಟಿಯಲ್ಲಿ ಅವರ ಸ್ಥಿತಿ ಹೇಗಿರುವುದು. ಅವರೆಲ್ಲರೂ ಶಿಕ್ಷೆಗೆ ಅರ್ಹರೇ? ಅವರೆಲ್ಲರ ಬುದ್ಧಿ ಮಂಕಾಗಿತ್ತೇ?
10. ಫಿರ್‌ಔನನ ಪ್ರಶ್ನೆಯ ಉದ್ದೇಶ, ಸಭಿಕರ ಮತ್ತು ಅವರಿಂದಾಗಿ ಸಮಸ್ತ ಜನಾಂಗದವರ ಮನಸ್ಸಿನಲ್ಲಿ ಪಕ್ಷಪಾತದ ಕಿಡಿಹೊತ್ತಿಸುವುದಾಗಿತ್ತು. ಹ. ಮೂಸಾರ(ಅ) ಈ ಉತ್ತರದಿಂದ ಅವನ ವಿಷದ ಹಲ್ಲುಗಳೆಲ್ಲವೂ ಉದುರಿದಂತಾದವು. ಆ ಜನರು ಯಾವ ಸ್ಥಿತಿಯಲ್ಲಿ ಇದ್ದಿದ್ದರೂ ಈಗ ತಮ್ಮ ಕರ್ಮವನ್ನು ಮುಗಿಸಿ ಪ್ರಭುವಿನ ಬಳಿಗೆ ಹೊರಟು ಹೋಗಿದ್ದಾರೆ. ಅವರ ಪ್ರತಿಯೊಂದು ಕರ್ಮ ಮತ್ತು ಅದರ ಪ್ರೇರಣೆಗಳನ್ನು ದೇವನು ಬಲ್ಲನು. ಅವರೊಂದಿಗೆ ಯಾವ ರೀತಿ ವ್ಯವಹರಿಸಬೇಕೆಂದೂ ಅವನಿಗೆ ತಿಳಿದಿದೆ ಎಂದು ಅವರು ಹೇಳಿದ್ದರು.
11. ವಿವರಣಾ ಶೈಲಿಯಿಂದ "ಮರೆಯುವುದೂ ಇಲ್ಲ" ಎಂಬಲ್ಲಿಗೆ ಮೂಸಾರ(ಅ) ಉತ್ತರ ಕೊನೆಗೊಳ್ಳುತ್ತದೆ ಎಂದು ಸ್ಪಷ್ಟವಾಗುತ್ತದೆ. ಅಲ್ಲಿಂದ 55ನೆಯ ಸೂಕ್ತದ ತನಕದ ಉದ್ಧರಣೆಯನ್ನು ಅಲ್ಲಾಹನು ವಿವರಣೆ ಮತ್ತು ಉದ್ಬೋಧೆಯ ಉದ್ದೇಶದಿಂದ ನೀಡಿದ್ದಾನೆ.

55. ಇದೇ ಮಣ್ಣಿನಿಂದ ನಾವು ನಿಮ್ಮನ್ನು ಸೃಷ್ಟಿಸಿರುತ್ತೇವೆ. ಇದರೊಳಕ್ಕೆ ನಿಮ್ಮನ್ನು ಮರಳಿ ಒಯ್ಯುವೆವು ಮತ್ತು ಇದರಿಂದಲೇ ನಾವು ನಿಮ್ಮನ್ನು ಪುನಃ ಹೊರತರುವೆವು.

مِنْهَا خَلَقْنٰكُمْ وَفِيْهَا نُعِيْدُكُمْ وَمِنْهَا نُخْرِجُكُمْ تَارَةً اُخْرٰى ﴿٥٥﴾

56. ನಾವು ಫಿರ್‌ಔನನಿಗೆ ನಮ್ಮ ಎಲ್ಲ ನಿದರ್ಶನಗಳನ್ನೂ ತೋರಿಸಿದೆವು. ಆದರೆ ಅವನು ಸುಳ್ಳಾಗಿಸುತ್ತಲೇ ಹೋದನು ಮತ್ತು ನಿರಾಕರಿಸಿದನು.

وَلَقَدْ اَرَيْنٰهُ اٰيٰتِنَا كُلَّهَا فَكَذَّبَ وَاَبٰى ﴿٥٦﴾

57. ಅವನು ಹೀಗೆಂದನು- "ಓ ಮೂಸಾ, ನೀನು ನಿನ್ನ ಜಾದೂವಿನ ಬಲದಿಂದ ನಮ್ಮನ್ನು ನಮ್ಮ ದೇಶದಿಂದ ಹೊರಕ್ಕಟ್ಟಲಿಕ್ಕಾಗಿ ಬಂದಿರುವೆಯೋ?

قَالَ اَجِئْتَنَا لِتُخْرِجَنَا مِنْ اَرْضِنَا بِسِحْرِكَ يٰمُوْسٰى ﴿٥٧﴾

58. ಸರಿ, ನಾವೂ ನಿನಗೆದುರು ಅಂತಹದೇ ಜಾದೂವನ್ನು ತರುತ್ತೇವೆ. ಸ್ಪರ್ಧೆ ಎಲ್ಲಿ ಮತ್ತು ಯಾವಾಗ ನಡೆಯಬೇಕೆಂದು ನಿರ್ಧರಿಸಿಕೋ. ನಾವಾಗಲಿ, ನೀನಾಗಲಿ ಈ ಕರಾರನ್ನು ಉಲ್ಲಂಘಿಸಬಾರದು. ಬಹಿರಂಗ ಬಯಲಲ್ಲಿ ಮುಂದೆ ಬಾ."

فَلَنَاْتِيَنَّكَ بِسِحْرٍ مِّثْلِهٖ فَاجْعَلْ بَيْنَنَا وَبَيْنَكَ مَوْعِدًا لَّا نُخْلِفُهٗ نَحْنُ وَلَاۤ اَنْتَ مَكَانًا سُوًى ﴿٥٨﴾

59. ಮೂಸಾ ಹೇಳಿದರು, "ಉತ್ಸವದ ದಿನವು ಸ್ಪರ್ಧೆಗೆ ನಿಶ್ಚಯವಾಯಿತು ಮತ್ತು ಹೊತ್ತೇರಿದಾಗ ಜನರು ಒಟ್ಟು ಸೇರಲಿ.[12]"

قَالَ مَوْعِدُكُمْ يَوْمُ الزِّيْنَةِ وَاَنْ يُّحْشَرَ النَّاسُ ضُحًى ﴿٥٩﴾

60. ಫಿರ್‌ಔನನು ಮರಳಿ ತನ್ನ ಎಲ್ಲ ತಂತ್ರಗಳನ್ನು ಒಟ್ಟುಗೂಡಿಸಿದನು ಮತ್ತು ಸ್ಪರ್ಧೆಗೆ ಬಂದು ಬಿಟ್ಟನು.

فَتَوَلّٰى فِرْعَوْنُ فَجَمَعَ كَيْدَهٗ ثُمَّ اَتٰى ﴿٦٠﴾

61. ಮೂಸಾರು (ತಕ್ಕ ಸಮಯದಲ್ಲಿ ವಿರೋಧಿ ಪಂಗಡವನ್ನು ಕರೆದು) ಇಂತೆಂದರು "ಹತಭಾಗಿಗಳೇ, ಅಲ್ಲಾಹನ ಮೇಲೆ ಸುಳ್ಳಾರೋಪಗಳನ್ನು ಹೊರಿಸಬೇಡಿರಿ.[13] ಅನ್ಯಥಾ ಅವನೊಂದು ಘೋರ ಯಾತನೆಯ ಮೂಲಕ ನಿಮ್ಮನ್ನು ಸರ್ವನಾಶಗೊಳಿಸಿ ಬಿಡುವನು. ಮಿಥ್ಯಾರೋಪವನ್ನು ಯಾರೇ ಹೊರಿಸಲಿ, ಅವನು ಭಗ್ನಾಶನಾದನು."

قَالَ لَهُمْ مُّوْسٰى وَيْلَكُمْ لَا تَفْتَرُوْا عَلَى اللّٰهِ كَذِبًا فَيُسْحِتَكُمْ بِعَذَابٍ ۚ وَقَدْ خَابَ مَنِ افْتَرٰى ﴿٦١﴾

12. ಒಮ್ಮೆ ಜಾದೂಗಾರರ ಮೂಲಕ ಲಾಠಿ ಮತ್ತು ಹಗ್ಗವನ್ನು ಸರ್ಪವನ್ನಾಗಿ ಮಾಡಿ ತೋರಿಸಿದರೆ ಮೂಸಾರ(ಅ) ಪವಾಡದಿಂದ ಜನರ ಮೇಲೆ ಆಗಿರುವ ಪ್ರಭಾವ ದೂರವಾಗುವುದು ಎಂಬುದು ಫಿರ್‌ಔನನ ಉದ್ದೇಶವಾಗಿತ್ತು. ಇದು ಮೂಸಾರು(ಅ) ಸ್ವತಃ ಬಯಸಿದ್ದೇ ಆಗಿತ್ತು. ಅದಕ್ಕಾಗಿ ಪ್ರತ್ಯೇಕ ದಿನ ಮತ್ತು ಸ್ಥಳವನ್ನು ಗೊತ್ತುಪಡಿಸಬೇಕಾಗಿಲ್ಲ. ದೇಶದ ಜನರೆಲ್ಲರೂ ರಾಜಧಾನಿಗೆ ಒತ್ತರಿಸಿ ಬರುವ ಹಬ್ಬದ ದಿನ ಸಮೀಪವಿದೆ. ಆಗ ಜಾತ್ರೆಯ ಬಯಲಿನಲ್ಲೇ ಸ್ಪರ್ಧೆ ನಡೆಯಲಿ. ಜನಾಂಗದ ಜನರೆಲ್ಲರೂ ನೋಡುವಂತಾಗಲಿ. ಅಲ್ಲದೇ ಅದು ಹಗಲು ಹೊತ್ತಿನಲ್ಲಾಗಿರಬೇಕು. ಏಕೆಂದರೆ ಯಾರಿಗೂ ಸಂಶಯಕ್ಕೆ ಆಸ್ಪದವಿರಕೂಡದು ಎಂದು ಅವರು ಹೇಳಿದ್ದರು.

13. ಅರ್ಥಾತ್- ಈ ಪವಾಡವನ್ನು ಜಾದೂವೆನ್ನದಿರಿ. ಅಂತೆಯೇ ಅದನ್ನು ಪ್ರದರ್ಶಿಸುತ್ತಿರುವ ಪ್ರವಾದಿಯನ್ನು ಸುಳ್ಳನಾದ ಜಾದೂಗಾರನೆಂದೂ ಹೇಳದಿರಿ.

62. ಇದನ್ನು ಕೇಳಿದಾಗ ಅವರೊಳಗೆ ಭಿನ್ನಾಭಿಪ್ರಾಯ ಉಂಟಾಯಿತು ಮತ್ತು ಅವರು ರಹಸ್ಯವಾಗಿ ಪರಸ್ಪರ ಸಮಾಲೋಚಿಸಲಾರಂಭಿಸಿದರು.[14]

فَتَنَازَعُوٓا أَمۡرَهُم بَيۡنَهُمۡ وَأَسَرُّوا۟ ٱلنَّجۡوَىٰ ﴿٦٢﴾

63. ಕೊನೆಗೆ ಕೆಲವರು (ಹೀಗೆ) ಹೇಳಿದರು: "ಇವರಿಬ್ಬರೂ ಕೇವಲ ಜಾದೂಗಾರರು. ಇವರ ಉದ್ದೇಶವು ತಮ್ಮ ಜಾದೂವಿನ ಬಲದಿಂದ ನಿಮ್ಮನ್ನು ನಿಮ್ಮ ನಾಡಿನಿಂದ ಹೊರಹಾಕುವುದು ಮತ್ತು ಆದರ್ಶಪ್ರಾಯವಾದ ನಿಮ್ಮ ಜೀವನ ಕ್ರಮವನ್ನು ಕೊನೆಗೊಳಿಸಿ ಬಿಡುವುದಾಗಿದೆ.

قَالُوٓا۟ إِنۡ هَٰذَٰنِ لَسَٰحِرَٰنِ يُرِيدَانِ أَن يُخۡرِجَاكُم مِّنۡ أَرۡضِكُم بِسِحۡرِهِمَا وَيَذۡهَبَا بِطَرِيقَتِكُمُ ٱلۡمُثۡلَىٰ ﴿٦٣﴾

64. ಆದುದರಿಂದ ನಿಮ್ಮ ಸಕಲ ತಂತ್ರಗಳನ್ನೂ ಇಂದು ಒಟ್ಟುಗೂಡಿಸಿಕೊಳ್ಳಿರಿ ಮತ್ತು ಒಂದಾಗಿ ರಂಗಕ್ಕೆ ಇಳಿದು ಬಿಡಿರಿ. ಇಂದು ಯಾರ ಕೈ ಮೇಲಾಗುವುದೋ ಅವನೇ ವಿಜಯಿಯಾಗುವನೆಂದು ತಿಳಿದುಕೊಳ್ಳಿರಿ."

فَأَجۡمِعُوا۟ كَيۡدَكُمۡ ثُمَّ ٱئۡتُوا۟ صَفًّاۚ وَقَدۡ أَفۡلَحَ ٱلۡيَوۡمَ مَنِ ٱسۡتَعۡلَىٰ ﴿٦٤﴾

65. "ಮೂಸಾ, ನೀವು ಮೊದಲು ಎಸೆಯುತ್ತೀರೋ ಅಥವಾ ನಾವು ಎಸೆಯಬೇಕೋ?" ಎಂದು ಜಾದೂಗಾರರು ಕೇಳಿದರು.

قَالُوا۟ يَٰمُوسَىٰٓ إِمَّآ أَن تُلۡقِيَ وَإِمَّآ أَن نَّكُونَ أَوَّلَ مَنۡ أَلۡقَىٰ ﴿٦٥﴾

66. ಆಗ ಮೂಸಾ, "ಇಲ್ಲ ನೀವೇ ಎಸೆಯಿರಿ" ಎಂದರು. ಹಠಾತ್ತನೆ ಅವರ ಹಗ್ಗಗಳೂ ಅವರ ಲಾಠಿಗಳೂ ಅವರ ಇಂದ್ರಜಾಲದ ಬಲದಿಂದ ಓಡುತ್ತಿರುವಂತೆ ಮೂಸಾರಿಗೆ ಭಾಸವಾಯಿತು.

قَالَ بَلۡ أَلۡقُوا۟ۖ فَإِذَا حِبَالُهُمۡ وَعِصِيُّهُمۡ يُخَيَّلُ إِلَيۡهِ مِن سِحۡرِهِمۡ أَنَّهَا تَسۡعَىٰ ﴿٦٦﴾

67. ಮತ್ತು ಮೂಸಾ ತನ್ನ ಮನದೊಳಗೇ ಹೆದರಿದರು.[15]

فَأَوۡجَسَ فِي نَفۡسِهِۦ خِيفَةً مُّوسَىٰ ﴿٦٧﴾

14. ಮನದೊಳಗೆ ಅವರು ತಮ್ಮ ದೌರ್ಬಲ್ಯವನ್ನು ಸ್ವತಃ ಅರಿತಿದ್ದರು ಎಂದು ಇದರಿಂದ ವ್ಯಕ್ತವಾಗುತ್ತದೆ. ಮೂಸಾರು(ಅ) ಫಿರ್‌ಔನನ ಆಸ್ಥಾನದಲ್ಲಿ ತೋರಿಸಿದ್ದೆಲ್ಲವೂ ಜಾದೂವಾಗಿರಲಿಲ್ಲ ಎಂದು ಅವರಿಗೆ ತಿಳಿದಿತ್ತು. ಸ್ಪರ್ಧೆಗೆ ಬರುವಾಗಲೇ ಅವರು ಭಯ ಮತ್ತು ಸಂಕೋಚದೊಂದಿಗೆ ಬಂದಿದ್ದರು. ಅದೇ ವೇಳೆ ಮೂಸಾ(ಅ) ಅವರನ್ನು ಹೋರಾಟಕ್ಕೆ ಕರೆದು ಎಚ್ಚರಿಸಿದಾಗ ಅವರ ವಿಶ್ವಾಸದಾರ್ಢ್ಯತೆ ಕುಸಿಯಿತು. ಈ ಮಹಾ ಹಬ್ಬದ ದಿನದಂದು ಸಮಸ್ತ ದೇಶದ ಜನರೆಲ್ಲರೂ ಸೇರಿರುವಾಗ ತೆರೆದ ಬಯಲಿನಲ್ಲಿ ಹಗಲು ಹೊತ್ತಿನಲ್ಲಿ ಈ ಸ್ಪರ್ಧೆ ನಡೆಸುವುದು ಸರಿಯೋ-ತಪ್ಪೋ ಎಂಬ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯ ಉಂಟಾಗಿರಬಹುದು. ಇಲ್ಲಿ ಒಂದು ವೇಳೆ ನಾವು ಸೋಲನುಭವಿಸಿದರೆ ಮತ್ತು ಜಾದೂ ಹಾಗೂ ಪವಾಡದ ನಡುವಿನ ಅಂತರ ಎಲ್ಲರ ಮುಂದೆ ಅನಾವರಣಗೊಂಡರೆ ಪರಿಸ್ಥಿತಿ ಕೈಮೀರಿ ಹೋಗುವುದು ಎಂಬುದು ಅವರ ಅಭಿಪ್ರಾಯವಾಗಿತ್ತು.

15. ಅರ್ಥಾತ್- ಮೂಸಾರ(ಅ) ಬಾಯಿಯಿಂದ 'ಎಸೆಯಿರಿ' ಎಂಬ ಶಬ್ದ ಹೊರಟ ಕೂಡಲೇ ಜಾದೂಗಾರರು ತಟ್ಟನೆ ತಮ್ಮ ಲಾಠಿಗಳನ್ನೂ ಹಗ್ಗಗಳನ್ನೂ ಅವರೆಡೆಗೆ ಎಸೆದು ಬಿಟ್ಟರು. ಹಠಾತ್ತನೆ ನೂರಾರು ಸರ್ಪಗಳು ಅವರೆಡೆಗೆ ಧಾವಿಸುತ್ತಿರುವಂತೆ ಒಮ್ಮೆಗೆ ಅವರಿಗೆ ಭಾಸವಾಯಿತು. ಈ ದೃಶ್ಯದಿಂದಾಗಿ ತಟ್ಟನೆ ಹ. ಮೂಸಾರ(ಅ) ಮನಸ್ಸಿನಲ್ಲಿ ಭಯ ಮೂಡಿದ್ದರೆ ಆಶ್ಚರ್ಯವಿಲ್ಲ. ಏಕೆಂದರೆ ಮಾನವ

68. ಆಗ ನಾವು, "ಹೆದರಬೇಡಿರಿ, ನೀವೇ ವಿಜಯಿಯಾಗುವಿರಿ.

قُلْنَا لَا تَخَفْ إِنَّكَ أَنْتَ الْأَعْلَىٰ ﴿٦٨﴾

69. ನಿಮ್ಮ ಬಲ ಕೈಯಲ್ಲಿರುವುದನ್ನು ಎಸೆದು ಬಿಡಿರಿ. ಈಗಲೇ ಅದು ಅವರ ಕೃತಕ ವಸ್ತುಗಳನ್ನೆಲ್ಲ ನುಂಗಿ ಬಿಡುವುದು. ಅವರು ಮಾಡಿ ತಂದಿರುವುದೆಲ್ಲಾ ಕೇವಲ ಜಾದೂಗಾರನ ಮಾಯೆ- ಜಾದೂಗಾರನು ಅದೆಷ್ಟೇ ಠೀವಿಯೊಂದಿಗೆ ಬರಲಿ, ಅವನೆಂದೂ ಯಶಸ್ವಿಯಾಗಲಾರ" ಎಂದೆವು.

وَأَلْقِ مَا فِي يَمِينِكَ تَلْقَفْ مَا صَنَعُوا ۖ إِنَّمَا صَنَعُوا كَيْدُ سَاحِرٍ ۖ وَلَا يُفْلِحُ السَّاحِرُ حَيْثُ أَتَىٰ ﴿٦٩﴾

70. ಕೊನೆಗೆ ಎಲ್ಲ ಜಾದೂಗಾರರೂ ಸಾಷ್ಟಾಂಗವೆರಗುವಂತೆ ಮಾಡಲಾಯಿತು[16] ಮತ್ತು "ನಾವು ಮೂಸಾ ಮತ್ತು ಹಾರೂನರ ಪ್ರಭುವಿನ ಮೇಲೆ ವಿಶ್ವಾಸವಿಟ್ಟೆವು" ಎಂದು ಅವರು ಕೂಗಿ ಹೇಳಿದರು.

فَأُلْقِيَ السَّحَرَةُ سُجَّدًا قَالُوا آمَنَّا بِرَبِّ هَارُونَ وَمُوسَىٰ ﴿٧٠﴾

71. ಫಿರ್‌ಔನ್ (ಹೀಗೆ) ಹೇಳಿದನು, "ನಾನು ನಿಮಗೆ ಅನುಮತಿ ಕೊಡುವುದಕ್ಕೆ ಮುಂಚೆಯೇ ನೀವು ಅವನ ಮೇಲೆ ವಿಶ್ವಾಸ ವಿಟ್ಟಿರಾ? ಇವನು ನಿಮಗೆ ಇಂದ್ರಜಾಲ ವಿದ್ಯೆಯನ್ನು ಕಲಿಸಿದ್ದ ಗುರು ಎಂದು ತಿಳಿಯಿತು. ಸರಿ. ಇನ್ನು ನಾನು ನಿಮ್ಮ ಕೈಕಾಲು ಗಳನ್ನು ವಿರುದ್ಧ ದಿಕ್ಕುಗಳಿಂದ ಕತ್ತರಿಸಿ ಹಾಕುತ್ತೇನೆ. ಮತ್ತು ಖರ್ಜೂರ ವೃಕ್ಷದ ಕಾಂಡಗಳ ಮೇಲೆ ನಿಮ್ಮನ್ನು ಶಿಲುಬೆಗೇರಿಸು ತ್ತೇನೆ. ಆಗ ನಮ್ಮಿಬ್ಬರ ಪೈಕಿ ಯಾರ ಯಾತನೆ ಕಠಿಣ ಹಾಗೂ ದೀರ್ಘವಾದುದೆಂದು (ಅರ್ಥಾತ್ ನಿಮಗೆ ಕಠಿಣ ಶಿಕ್ಷೆ ನೀಡಲು ಶಕ್ತನು ನಾನೋ ಅಥವಾ ಮೂಸಾರೋ ಎಂದು) ನಿಮಗೆ ಚೆನ್ನಾಗಿ ತಿಳಿಯುವುದು."

قَالَ آمَنْتُمْ لَهُ قَبْلَ أَنْ آذَنَ لَكُمْ ۖ إِنَّهُ لَكَبِيرُكُمُ الَّذِي عَلَّمَكُمُ السِّحْرَ ۖ فَلَأُقَطِّعَنَّ أَيْدِيَكُمْ وَأَرْجُلَكُمْ مِنْ خِلَافٍ وَلَأُصَلِّبَنَّكُمْ فِي جُذُوعِ النَّخْلِ وَلَتَعْلَمُنَّ أَيُّنَا أَشَدُّ عَذَابًا وَأَبْقَىٰ ﴿٧١﴾

72. ಜಾದೂಗಾರರು ಹೀಗೆ ಉತ್ತರಕೊಟ್ಟರು, "ನಮ್ಮನ್ನು ಸೃಷ್ಟಿಸಿ ದವನಾಣೆ! ಪ್ರತ್ಯಕ್ಷ ಪ್ರಮಾಣಗಳು ಮುಂದೆ ಬಂದ ಬಳಿಕವೂ

قَالُوا لَنْ نُؤْثِرَكَ عَلَىٰ مَا جَاءَنَا مِنَ الْبَيِّنَاتِ وَالَّذِي فَطَرَنَا ۖ فَاقْضِ مَا أَنْتَ

---

ಎಂತಹ ಸ್ಥಿತಿಯಲ್ಲೂ ಮಾನವನೇ ಆಗಿರುತ್ತಾನೆ. ಪ್ರವಾದಿಗಳೂ ಮಾನವ ಸಹಜ ಗುಣಗಳಿಂದ ಮುಕ್ತರಾಗಿರುವುದಿಲ್ಲ. ಸಾಮಾನ್ಯ ಮನುಷ್ಯರಂತೆ ಪ್ರವಾದಿಗಳೂ ಜಾದೂವಿನ ಪ್ರಭಾವಕ್ಕೊಳಗಾಗಬಹುದು ಎಂಬುದನ್ನು ಪವಿತ್ರ ಕುರ್‌ಆನ್ ದೃಢೀಕರಿಸುತ್ತಿರುವುದು ಇಲ್ಲಿ ಅತ್ಯಂತ ಪ್ರಸ್ತಾವನೀಯ ವಿಷಯವಾಗಿದೆ. ಜಾದೂ ಅವರ ಪ್ರವಾದಿತ್ವದ ಕೆಲಸವನ್ನು ಪ್ರಭಾವಿತಗೊಳಿಸಲಾರದು. ಆದರೆ ಅವರ ಮಾನವೀಯ ಗುಣದ ಮೇಲೆ ಅದು ಪ್ರಭಾವ ಬೀರಬಹುದು. ಪ್ರವಾದಿವಚನಗಳಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಮೇಲೆ ಜಾದೂವಿನ ಪ್ರಭಾವ ಉಂಟಾದ ಬಗ್ಗೆ ಇರುವ ಉಲ್ಲೇಖಗಳನ್ನು ನಿರಾಕರಿಸುವ, ಮಾತ್ರವಲ್ಲ ಇನ್ನಷ್ಟು ಮುಂದುವರಿದು ಆ ಪ್ರವಾದಿ ವಚನಗಳಾವುವೂ ನಂಬಲರ್ಹವಲ್ಲ ಎಂದು ಸಾರುವವರ ತಪ್ಪುಕಲ್ಪನೆ ಇದರಿಂದ ವ್ಯಕ್ತವಾಗುತ್ತದೆ.

16. ಅರ್ಥಾತ್- ಅವರು ಹ. ಮೂಸಾರ(ಅ) ಲಾಠಿಯ ಚಮತ್ಕಾರವನ್ನು ನೋಡಿದಾಗ ಇದು ಪವಾಡವೇ ಆಗಿದೆ. ನಾವು ಅರಗಿಸಿಕೊಂಡಿರುವಂತಹ ಕಲೆ ಇದಲ್ಲ ಎಂದು ತಕ್ಷಣ ಅವರಿಗೆ ದೃಢವಾಯಿತು. ಆದ್ದರಿಂದ ಅವರು ತಮಗರಿವಿಲ್ಲದಂತೆಯೇ, ಯಾರೋ ತಮ್ಮನ್ನು ಎತ್ತಿ ಬೀಳಿಸುತ್ತಿರುವರೇನೋ ಎಂಬಂತೆ ಒಮ್ಮೆಲೇ ಸಾಷ್ಟಾಂಗವೆರಗಿದರು.

(ಸತ್ಯಕ್ಕಿಂತ ಹೆಚ್ಚು) ನಿನಗೆ ಪ್ರಾಶಸ್ತ್ಯ ಕೊಡಲು ನಮ್ಮಿಂದ ಎಷ್ಟು ಮಾತ್ರಕ್ಕೂ ಆಗದು. ನೀನು ಮಾಡಲಿಚ್ಛಿಸಿದ್ದೆಲ್ಲವನ್ನೂ ಮಾಡು. ಅತಿ ಹೆಚ್ಚೆಂದರೆ ನೀನು ಇಹಲೋಕ ಜೀವನದ ತೀರ್ಮಾನ ಮಾತ್ರ ಮಾಡಬಲ್ಲೆ.

قَاضٍ ۖ اِنَّمَا تَقْضِىْ هٰذِهِ الْحَيٰوةَ الدُّنْيَا ﴿٧٢﴾

73. ನಮ್ಮ ಪ್ರಭು ನಮ್ಮ ಅಪರಾಧಗಳನ್ನೂ ನೀನು ನಮ್ಮ ಮೇಲೆ ನಿರ್ಬಂಧಗೊಳಿಸಿದ ಇಂದ್ರಜಾಲವನ್ನೂ ಕ್ಷಮಿಸಲಿಕ್ಕಾಗಿ ನಾವು ನಮ್ಮ ಪ್ರಭುವಿನ ಮೇಲೆ ವಿಶ್ವಾಸವಿರಿಸಿದ್ದೇವೆ. ಅಲ್ಲಾಹನೇ ಶುಭಕರನು ಮತ್ತು ಅವನೇ ಚಿರಂತನನೂ ಆಗಿರುತ್ತಾನೆ."

اِنَّآ اٰمَنَّا بِرَبِّنَا لِيَغْفِرَ لَنَا خَطٰيٰنَا وَمَآ اَكْرَهْتَنَا عَلَيْهِ مِنَ السِّحْرِ ۗ وَاللّٰهُ خَيْرٌ وَّاَبْقٰى ﴿٧٣﴾

74. ವಾಸ್ತವದಲ್ಲಿ[17] ಅಪರಾಧಿಯಾಗಿ ತನ್ನ ಪ್ರಭುವಿನ ಸನ್ನಿಧಿಯಲ್ಲಿ ಹಾಜರಾದವನಿಗೆ ನರಕವಿದೆ. ಅದರಲ್ಲಿ ಅವನು ಸಾಯಲಿಕ್ಕೂ ಇಲ್ಲ, ಬದುಕಲಿಕ್ಕೂ ಇಲ್ಲ.

اِنَّهٗ مَنْ يَّاْتِ رَبَّهٗ مُجْرِمًا فَاِنَّ لَهٗ جَهَنَّمَ ۗ لَا يَمُوْتُ فِيْهَا وَلَا يَحْيٰى ﴿٧٤﴾

75. ಅವನ ಸನ್ನಿಧಿಯಲ್ಲಿ ಯಾರು ಸತ್ಯವಿಶ್ವಾಸಿಯ ನೆಲೆಯಲ್ಲಿ ಹಾಜರಾದವನೋ, ಯಾರು ಸತ್ಕರ್ಮವೆಸಗಿದವನೋ ಇಂತಹವರಿಗೆ ಉನ್ನತ ಸ್ಥಾನಗಳಿವೆ.

وَمَنْ يَّاْتِهٖ مُؤْمِنًا قَدْ عَمِلَ الصّٰلِحٰتِ فَاُولٰٓئِكَ لَهُمُ الدَّرَجٰتُ الْعُلٰى ﴿٧٥﴾

76. ಸದಾ ಹಸಿರಾಗಿರುವ ಉದ್ಯಾನಗಳು. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುತ್ತಿರುವರು. ತನ್ನನ್ನು ಪರಿಶುದ್ಧಗೊಳಿಸುವವನಿಗೆ ಪ್ರತಿಫಲವಿದು.

جَنّٰتُ عَدْنٍ تَجْرِىْ مِنْ تَحْتِهَا الْاَنْهٰرُ خٰلِدِيْنَ فِيْهَا ۗ وَذٰلِكَ جَزٰٓؤُا مَنْ تَزَكّٰى ﴿٧٦﴾

77. ನಾವು[18] ಮೂಸಾರಿಗೆ ಈ 'ದಿವ್ಯವಾಣಿ' ಮಾಡಿದೆವು- "ನೀವಿನ್ನು ರಾತೋರಾತ್ರಿ ನನ್ನ ದಾಸರನ್ನು ಕರೆದು ಕೊಂಡು ಹೊರಟು ಹೋಗಿ ಬಿಡಿರಿ. ಅವರಿಗೆ ಸಮುದ್ರದಲ್ಲಿ ಶುಷ್ಕ ಮಾರ್ಗವೊಂದನ್ನು ಮಾಡಿಕೊಳ್ಳಿರಿ. ಯಾರಾದರೂ ಹಿಂಬಾಲಿಸಿ ಬರುವರೆಂಬ ಭಯ ನಿಮಗೆ ಕಿಂಚಿತ್ತೂ ಬೇಡ ಮತ್ತು (ಸಮುದ್ರದ ನಡುವಿನಿಂದ ಹಾದು ಹೋಗುವಾಗ) ಹೆದರಲೂ ಬೇಡಿರಿ."

وَلَقَدْ اَوْحَيْنَآ اِلٰى مُوْسٰٓى ۙ اَنْ اَسْرِ بِعِبَادِىْ فَاضْرِبْ لَهُمْ طَرِيْقًا فِى الْبَحْرِ يَبَسًا ۙ لَّا تَخٰفُ دَرَكًا وَّلَا تَخْشٰى ﴿٧٧﴾

78. ಫಿರ್‌ಔನನು ತನ್ನ ಸೇನೆಯ ಸಹಿತ ಹಿಂಬಾಲಿಸಿ ಬಂದನು.

فَاَتْبَعَهُمْ فِرْعَوْنُ بِجُنُوْدِهٖ فَغَشِيَهُمْ مِّنَ

17. ಇದು ಜಾದೂಗಾರರ ಮಾತಿನೊಂದಿಗೆ ಅಲ್ಲಾಹನು ಸೇರಿಸಿರುವ ವಚನವಾಗಿದೆ. ವಿವರಣಾ ಶೈಲಿಯಿಂದಲೇ ಇದು ಜಾದೂಗಾರರ ಮಾತಲ್ಲವೆಂದು ವ್ಯಕ್ತವಾಗುತ್ತದೆ.

18. ಈಜಿಪ್ಟ್‌ನ ಸುದೀರ್ಘ ಕಾಲದ ವಾಸ್ತವ್ಯದ ವೇಳೆ ಸಂಭವಿಸಿದ ಘಟನೆಗಳನ್ನು ನಡುವೆ ಬಿಟ್ಟು ಬಿಡಲಾಗಿದೆ. ಬನೀಇಸ್ರಾಈಲರ ಜತೆಗೆ ಈಜಿಪ್ಟಿನಿಂದ ಹೊರಡಿರಿ ಎಂದು ಮೂಸಾರಿಗೆ(ಅ) ಆದೇಶ ನೀಡಿದ ಸಮಯದ ಪ್ರಸ್ತಾಪ ಇಲ್ಲಿಂದ ಆರಂಭಗೊಳ್ಳುತ್ತದೆ.

ತರುವಾಯ ಸಮುದ್ರವು ಅವರನ್ನು ಆವರಿಸಬೇಕಾಗಿದ್ದ ರೀತಿಯಲ್ಲಿ ಸಂಪೂರ್ಣವಾಗಿ ಆವರಿಸಿತು.

الْيَمِّ مَا غَشِيَهُمْ ﴿٧٨﴾

79. ಫಿರ್‌ಔನ್ ತನ್ನ ಜನಾಂಗವನ್ನು ದಾರಿಗೆಡಿಸಿಯೇ ಬಿಟ್ಟಿದ್ದನು. ಸರಿಯಾದ ಮಾರ್ಗದರ್ಶನವನ್ನೇನೂ ಮಾಡಿರಲಿಲ್ಲ.

وَأَضَلَّ فِرْعَوْنُ قَوْمَهُ وَمَا هَدَىٰ ﴿٧٩﴾

80. ಓ ಬನೀಇಸ್ರಾಈಲರೇ![19] ನಾವು ನಿಮ್ಮನ್ನು ನಿಮ್ಮ ಶತ್ರುವಿನಿಂದ ರಕ್ಷಿಸಿದೆವು ಮತ್ತು ತೂರ್ ಪರ್ವತದ ಬಲಗಡೆಯಲ್ಲಿ ನಿಮ್ಮ ಹಾಜರಿಗಾಗಿ ಸಮಯವನ್ನು ನಿಶ್ಚಯಿಸಿದೆವು ಮತ್ತು ನಿಮ್ಮ ಮೇಲೆ 'ಮನ್ನ್' ಮತ್ತು 'ಸಲ್ವ' ಇಳಿಸಿದೆವು.

يَا بَنِي إِسْرَائِيلَ قَدْ أَنجَيْنَاكُم مِّنْ عَدُوِّكُمْ وَوَاعَدْنَاكُمْ جَانِبَ الطُّورِ الْأَيْمَنَ وَنَزَّلْنَا عَلَيْكُمُ الْمَنَّ وَالسَّلْوَىٰ ﴿٨٠﴾

81. ನಾವು ನೀಡಿರುವ ಶುದ್ಧ ಆಹಾರವನ್ನು ಉಣ್ಣಿರಿ ಮತ್ತು ಅದನ್ನುಂಡು ವಿದ್ರೋಹ ಮಾಡದಿರಿ. ಅನ್ಯಥಾ ನಿಮ್ಮ ಮೇಲೆ ನನ್ನ ಪ್ರಕೋಪವೆರಗುವುದು. ಯಾರ ಮೇಲೆ ನನ್ನ ಪ್ರಕೋಪ ವೆರಗಿತೋ ಅವನು ಪತನಗೊಂಡೇ ಬಿಟ್ಟನು.

كُلُوا مِن طَيِّبَاتِ مَا رَزَقْنَاكُمْ وَلَا تَطْغَوْا فِيهِ فَيَحِلَّ عَلَيْكُمْ غَضَبِي ۖ وَمَن يَحْلِلْ عَلَيْهِ غَضَبِي فَقَدْ هَوَىٰ ﴿٨١﴾

82. ಆದರೆ ಪಶ್ಚಾತ್ತಾಪ ಪಟ್ಟು- ವಿಶ್ವಾಸವಿರಿಸಿ, ಸತ್ಕರ್ಮವೆಸಗಿ, ಆ ಬಳಿಕ ನೇರ ಮಾರ್ಗದಲ್ಲೇ ನಡೆಯುತ್ತಿರುವವನನ್ನು ನಾನು ಅತಿಯಾಗಿ ಕ್ಷಮಿಸುವವನಾಗಿರುತ್ತೇನೆ.

وَإِنِّي لَغَفَّارٌ لِّمَن تَابَ وَآمَنَ وَعَمِلَ صَالِحًا ثُمَّ اهْتَدَىٰ ﴿٨٢﴾

83. "ಮತ್ತು ನೀವು ನಿಮ್ಮ ಜನಾಂಗಕ್ಕಿಂತ ಮೊದಲು ಇಲ್ಲಿಗೆ ಬಂದುದೇಕೆ, ಓ ಮೂಸಾ!"[20]

وَمَا أَعْجَلَكَ عَن قَوْمِكَ يَا مُوسَىٰ ﴿٨٣﴾

84. ಅವರು ಇಂತೆಂದರು: "ಓ ನನ್ನ ಪ್ರಭೂ, ಅವರು ನನ್ನ ಬೆನ್ನಲ್ಲೇ ಬರುತ್ತಲಿದ್ದಾರೆ. ನೀನು ನನ್ನಿಂದ ಪ್ರಸನ್ನನಾಗಬೇಕೆಂದು ಬಯಸಿ ನಾನು ಬೇಗ ಬೇಗನೇ ನಿನ್ನ ಸನ್ನಿಧಿಗೆ ಬಂದಿರುತ್ತೇನೆ."

قَالَ هُمْ أُولَاءِ عَلَىٰ أَثَرِي وَعَجِلْتُ إِلَيْكَ رَبِّ لِتَرْضَىٰ ﴿٨٤﴾

85. ಆಗ, "ಸರಿ, ಹಾಗಿದ್ದರೆ ಕೇಳಿರಿ- ನಿಮ್ಮ ಅನುಪಸ್ಥಿತಿಯಲ್ಲಿ ನಾವು

قَالَ فَإِنَّا قَدْ فَتَنَّا قَوْمَكَ مِن

---

19. ಸಮುದ್ರವನ್ನು ದಾಟಿದ ನಂತರ ಸೀನಾಯ್ ಶಿಖರದ ತಪ್ಪಲಿನ ತನಕ ತಲಪಿದ ವಿವರಗಳನ್ನು ನಡುವೆ ಬಿಟ್ಟು ಬಿಡಲಾಗಿದೆ. ಅದರ ವಿವರಗಳನ್ನು ಸೂರಃ ಅಲ್‌ಅ್‌ರಾಫ್‌ನ 16-17ನೆಯ ರುಕೂಅ್‌ನಲ್ಲಿ ಪ್ರಸ್ತಾಪಿಸಲಾಗಿದೆ.

20. ಈ ಸಂದರ್ಭದಲ್ಲಿ ಹ. ಮೂಸಾ(ಅ) ಬನೀಇಸ್ರಾಈಲರನ್ನು ತೂರ್ ಪರ್ವತದ ತಪ್ಪಲಲ್ಲಿ ಬಿಟ್ಟು ಶರೀಅತ್‌ನ ಆದೇಶಗಳನ್ನು ಪಡೆಯಲಿಕ್ಕಾಗಿ ತೂರ್ ಶಿಖರಕ್ಕೆ ಹೋದ ಘಟನೆಯ ಪ್ರಸ್ತಾಪ ಆರಂಭಗೊಳ್ಳುತ್ತದೆ. ಅಲ್ಲಾಹನ ಈ ವಚನದಿಂದ ಮೂಸಾ(ಅ) ತಮ್ಮ ಜನಾಂಗವನ್ನು ದಾರಿಯಲ್ಲೇ ಬಿಟ್ಟು ತಮ್ಮ ಪ್ರಭುವನ್ನು ಭೇಟಿಯಾಗುವ ಉತ್ಸಾಹದಲ್ಲಿ ಮುಂದೆ ಸಾಗಿದ್ದರು ಎಂದು ವ್ಯಕ್ತವಾಗುತ್ತದೆ.

بَعْدِكَ وَأَضَلَّهُمُ السَّامِرِيُّ ﴿٨٥﴾

ನಿಮ್ಮ ಜನಾಂಗವನ್ನು ಪರೀಕ್ಷೆಗೆ ಗುರಿಪಡಿಸಿಬಿಟ್ಟೆವು ಮತ್ತು 'ಸಾಮಿರೀ' ಅವರನ್ನು ಪಥಭ್ರಷ್ಟಗೊಳಿಸಿ ಬಿಟ್ಟನು."[21]

فَرَجَعَ مُوسَىٰ إِلَىٰ قَوْمِهِ غَضْبَانَ أَسِفًا ۚ قَالَ يَا قَوْمِ أَلَمْ يَعِدْكُمْ رَبُّكُمْ وَعْدًا حَسَنًا ۚ أَفَطَالَ عَلَيْكُمُ الْعَهْدُ أَمْ أَرَدتُّمْ أَن يَحِلَّ عَلَيْكُمْ غَضَبٌ مِّن رَّبِّكُمْ فَأَخْلَفْتُم مَّوْعِدِي ﴿٨٦﴾

86. ಮೂಸಾ ಅತ್ಯಂತ ಕ್ರೋಧ ಹಾಗೂ ಖೇದಗೊಂಡು ತನ್ನ ಜನಾಂಗದ ಕಡೆಗೆ ಮರಳಿ ಹೀಗೆಂದರು- "ಓ ನನ್ನ ಜನಾಂಗದವರೇ, ನಿಮ್ಮ ಪ್ರಭು ನಿಮ್ಮೊಡನೆ ಉತ್ತಮ ವಾಗ್ದಾನಗಳನ್ನು ಮಾಡಿರಲಿಲ್ಲವೇ ?"[22] ನಿಮಗೆ ಹೆಚ್ಚು ಕಾಲ ತಗುಲಿತೇ? ಅಥವಾ ನೀವು ನಿಮ್ಮ ಪ್ರಭುವಿನ ಪ್ರಕೋಪವನ್ನೇ ನಿಮ್ಮ ಮೇಲೆ ಎರಗಿಸಿಕೊಳ್ಳಲಿಚ್ಛಿಸಿದುದರಿಂದ ನೀವು ನನಗೆ ಕೊಟ್ಟಿದ್ದ ವಚನವನ್ನು ಭಂಗಗೊಳಿಸಿದಿರಾ?"

قَالُوا مَا أَخْلَفْنَا مَوْعِدَكَ بِمَلْكِنَا وَلَٰكِنَّا حُمِّلْنَا أَوْزَارًا مِّن زِينَةِ الْقَوْمِ فَقَذَفْنَاهَا فَكَذَٰلِكَ أَلْقَى السَّامِرِيُّ ﴿٨٧﴾

87. ಅವರು ಹೀಗೆಂದರು- "ನಾವು ನಿಮಗೆ ಕೊಟ್ಟಿದ್ದ ವಚನವನ್ನು ನಮ್ಮ ಸ್ವಂತ ಇಚ್ಛೆಯಿಂದ ಭಂಗಗೊಳಿಸಲಿಲ್ಲ. ನಾವು ಜನರ ಆಭರಣಗಳ ಹೊರೆಯಿಂದ ಹೇರಲ್ಪಟ್ಟಿದ್ದೆವು. ನಾವು ಅವುಗಳನ್ನು ಕೇವಲ ಎಸೆದು ಬಿಟ್ಟಿದ್ದೆವು."[23] ಅನಂತರ[24] ಅದೇ ರೀತಿಯಲ್ಲಿ ಸಾಮಿರೀಯೂ ಏನನ್ನೋ ಹಾಕಿದನು.

فَأَخْرَجَ لَهُمْ عِجْلًا جَسَدًا لَّهُ خُوَارٌ فَقَالُوا هَٰذَا إِلَٰهُكُمْ وَإِلَٰهُ مُوسَىٰ فَنَسِيَ ﴿٨٨﴾

88. ಮತ್ತು ಅವರಿಗಾಗಿ ಒಂದು ಕರುವಿನ ಮೂರ್ತಿಯನ್ನು ಮಾಡಿ ಹೊರತಂದನು. ಅದರೊಳಗಿನಿಂದ ಎತ್ತಿನಂತಹ ಧ್ವನಿ ಹೊರಡುತ್ತಿತ್ತು. ಜನರು, "ಇದುವೇ ನಿಮ್ಮ ದೇವರು ಮತ್ತು ಮೂಸಾರ ದೇವರು. ಮೂಸಾ ಇದನ್ನು ಮರೆತು ಬಿಟ್ಟರು" ಎಂದು ಕೂಗಿದರು.

أَفَلَا يَرَوْنَ أَلَّا يَرْجِعُ إِلَيْهِمْ قَوْلًا

89. ಅದು ಅವರ ಮಾತಿಗೆ ಉತ್ತರಿಸುವುದಿಲ್ಲ ಎಂಬುದನ್ನಾಗಲಿ,

21. ಅರ್ಥಾತ್- ಚಿನ್ನದ ಕರುವನ್ನು ಮಾಡಿ ಅವರನ್ನು ಅದರ ಆರಾಧನೆಯಲ್ಲಿ ತೊಡಗಿಸಿದನು.

22. ಅರ್ಥಾತ್- ಅಲ್ಲಾಹನು ಯಾವೆಲ್ಲಾ ಹಿತಗಳ ಬಗ್ಗೆ ನಿಮಗೆ ವಾಗ್ದಾನವಿತ್ತಿದ್ದನೋ ಅದೆಲ್ಲವೂ ಈ ತನಕ ನಿಮಗೆ ಲಭ್ಯವಾಗುತ್ತಿದೆ. ನಿಮ್ಮನ್ನು ಅವನು ಈಜಿಪ್ಟ್‌ನಿಂದ ಸುರಕ್ಷಿತವಾಗಿ ಹೊರಡಿಸಿದನು. ಗುಲಾಮತನದಿಂದ ನಿಮಗೆ ವಿಮೋಚನೆ ನೀಡಿದನು. ನಿಮ್ಮ ಶತ್ರುವನ್ನು ಸರ್ವನಾಶಗೊಳಿಸಿದನು. ನಿಮಗಾಗಿ ಮರಳುಗಾಡು ಮತ್ತು ಪರ್ವತ ಪ್ರದೇಶಗಳಲ್ಲಿ ಅವನು ನೆರಳು ಮತ್ತು ಆಹಾರದ ಏರ್ಪಾಡು ಮಾಡಿದನು. ಈ ಒಳ್ಳೆಯ ವಾಗ್ದಾನಗಳೆಲ್ಲವೂ ಈಡೇರಲಿಲ್ಲವೇ? ಹಾಗಿರುವಾಗ ಶರೀಅತ್ ಮತ್ತು ಮಾರ್ಗದರ್ಶನವನ್ನು ದಯಪಾಲಿಸುವ ಬಗ್ಗೆ ಅವನು ಮಾಡಿರುವ ವಾಗ್ದಾನ ನಿಮಗೆ ಒಳಿತಿನಿಂದ ಕೂಡಿದ ಹಿತವಾದ ವಾಗ್ದಾನವೆಂದು ತೋಚಲಿಲ್ಲವೇ?

23. ಇದು ಸಾಮಿರಿಯ ತಂತ್ರಕ್ಕೆ ಬಲಿಯಾದವರು ಮುಂದಿಟ್ಟ ನೆಪವಾಗಿತ್ತು. ಅವರ ಪ್ರಕಾರ ಅವರು ಒಡವೆಗಳನ್ನು ಎಸೆದು ಬಿಟ್ಟಿದ್ದರು. ಕರುವನ್ನುಂಟು ಮಾಡುವುದು ನಮ್ಮ ಉದ್ದೇಶವಾಗಿರಲಿಲ್ಲ. ಮಾತ್ರವಲ್ಲ ಏನು ಉಂಟಾಗುತ್ತದೆ ಎಂಬುದೂ ನಮಗೆ ತಿಳಿದಿರಲಿಲ್ಲ. ಅನಂತರ ನಮಗೆದುರಾದ ಪ್ರಸಂಗ ಎಂತಹುದಾಗಿತ್ತೆಂದರೆ ಅದನ್ನು ನೋಡುತ್ತಲೇ ನಾವು ನಮಗರಿವಿಲ್ಲದಂತೆಯೇ ಬಹುದೇವಾರಾಧನೆಯಲ್ಲಿ ನಿರತರಾದೆವು.

24. ಇಲ್ಲಿಂದ 91ನೆಯ ಸೂಕ್ತದ ಕೊನೆಯ ತನಕದ ಉಲ್ಲೇಖವನ್ನು ಗಮನಿಸಿದರೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಜನಾಂಗದ ಉತ್ತರ, "ಎಸೆದು ಬಿಟ್ಟೆವು" ಎಂಬಲ್ಲಿಗೆ ಮುಗಿಯುತ್ತದೆ. ಅನಂತರದ ವಿವರಗಳನ್ನು ಅಲ್ಲಾಹನು ಸ್ವತಃ ನೀಡುತ್ತಿದ್ದಾನೆ.

وَلَا يَمْلِكُ لَهُمْ ضَرًّا وَلَا نَفْعًا ٨٩

ಅವರ ಲಾಭ ನಷ್ಟಗಳ ಯಾವ ಅಧಿಕಾರವನ್ನೂ ಪಡೆದಿಲ್ಲ ಎಂಬುದನ್ನಾಗಲಿ ಅವರು ನೋಡುತ್ತಿರಲಿಲ್ಲವೇ?

وَلَقَدْ قَالَ لَهُمْ هَارُونُ مِن قَبْلُ يَا قَوْمِ إِنَّمَا فُتِنتُم بِهِ ۖ وَإِنَّ رَبَّكُمُ الرَّحْمَٰنُ فَاتَّبِعُونِي وَأَطِيعُوا أَمْرِي ٩٠

90. ಹಾರೂನ್ (ಮೂಸಾರು ಬರುವುದಕ್ಕಿಂತ) ಮೊದಲೇ ಅವರೊಡನೆ ಸಾರಿ ಹೇಳಿದ್ದರು:- "ಹೇ ಜನರೇ, ನೀವು ಇದರ ಕಾರಣದಿಂದಾಗಿ ಪರೀಕ್ಷೆಗೆ ಗುರಿಯಾಗಿರುತ್ತೀರಿ. ರಹ್ಮಾನನೇ (ಪರಮ ದಯಾಳುವೇ) ನಿಮ್ಮ ಪ್ರಭು. ಆದುದರಿಂದ ನೀವು ನನ್ನನ್ನು ಅನುಸರಿಸಿರಿ ಮತ್ತು ನನ್ನ ಆಜ್ಞೆಯನ್ನು ಪಾಲಿಸಿರಿ."

قَالُوا لَن نَّبْرَحَ عَلَيْهِ عَاكِفِينَ حَتَّىٰ يَرْجِعَ إِلَيْنَا مُوسَىٰ ٩١

91. ಆದರೆ ಅವರು ಇವರೊಡನೆ- "ಮೂಸಾ ನಮ್ಮ ಬಳಿಗೆ ಮರಳಿ ಬರುವ ವರೆಗೂ ನಾವು ಇದರ ಉಪಾಸನೆಯನ್ನೇ ಮಾಡುತ್ತಿರುವೆವು" ಎಂದು ಹೇಳಿ ಬಿಟ್ಟರು.

قَالَ يَا هَارُونُ مَا مَنَعَكَ إِذْ رَأَيْتَهُمْ ضَلُّوا ٩٢ أَلَّا تَتَّبِعَنِ ۖ أَفَعَصَيْتَ أَمْرِي ٩٣

92-93. ಮೂಸಾ (ತನ್ನ ಜನಾಂಗವನ್ನು ಗದರಿಸಿದ ತರುವಾಯ ಹಾರೂನ್‌ರ ಕಡೆಗೆ ತಿರುಗಿ) ಇಂತೆಂದರು- "ಓ ಹಾರೂನ್, ಇವರು ಪಥಭ್ರಷ್ಟರಾಗುತ್ತಿರುವುದನ್ನು ನೀವು ಕಂಡಾಗ, ನನ್ನ ಮಾರ್ಗದರ್ಶನವನ್ನು ಅನುಸರಿಸದಂತೆ ನಿಮ್ಮನ್ನು ತಡೆದವರಾರು? ನೀವು ನನ್ನ ಅಪ್ಪಣೆಯ ವಿರುದ್ಧ ನಡೆದಿರಾ?"[25]

قَالَ يَا ابْنَ أُمَّ لَا تَأْخُذْ بِلِحْيَتِي وَلَا بِرَأْسِي ۖ إِنِّي خَشِيتُ أَن تَقُولَ فَرَّقْتَ بَيْنَ بَنِي إِسْرَائِيلَ وَلَمْ تَرْقُبْ قَوْلِي ٩٤

94. ಹಾರೂನ್ ಉತ್ತರ ಕೊಟ್ಟರು- "ಓ ನನ್ನ ಮಾತೆಯ ಪುತ್ರನೇ! ನನ್ನ ಗಡ್ಡವನ್ನು ಹಿಡಿಯಬೇಡ ಮತ್ತು ನನ್ನ ತಲೆ ಕೂದಲನ್ನೂ ಎಳೆಯಬೇಡ. ನೀನು ಬಂದು- ನೀವು ಬನೀಇಸ್ರಾಈಲರಲ್ಲಿ ಒಡಕನ್ನುಂಟು ಮಾಡಿದಿರಿ ಮತ್ತು ನನ್ನ ಮಾತಿಗೆ ಬೆಲೆಯೇ ಕೊಡಲಿಲ್ಲ- ಎಂದು ಹೇಳುವಿಯೆಂಬ ಭಯ ನನಗಿತ್ತು."[26]

25. ಅಪ್ಪಣೆ ಎಂದರೆ ಪರ್ವತಕ್ಕೆ ಹೋಗುವಾಗ ಮತ್ತು ತನ್ನ ಸ್ಥಾನದಲ್ಲಿ ಹ. ಹಾರೂನ್‌ರಿಗೆ(ಅ) ಬನೀಇಸ್ರಾಈಲ್‌ರ ನಾಯಕತ್ವ ವಹಿಸಿದಾಗ ಹ. ಮೂಸಾ(ಅ) ನೀಡಿದ ಅಪ್ಪಣೆಯಾಗಿದೆ. ಮೂಸಾ(ಅ) ಹೊರಡುವ ವೇಳೆ ತಮ್ಮ ಸಹೋದರರಾದ ಹಾರೂನರಿಗೆ, ನೀವು ನನ್ನ ಜನಾಂಗದಲ್ಲಿ ನನ್ನ ಉತ್ತರಾಧಿಕಾರ ವಹಿಸಬೇಕು. ಜಾಗ್ರತೆ, ಸುಧಾರಣೆ ಮಾಡಬೇಕು, ಕ್ಷೋಭೆಯುಂಟು ಮಾಡುವವರ ನೀತಿಯನ್ನು ಅನುಸರಿಸಬಾರದು ಎಂದು ಹೇಳಿದ್ದರು. ಈ ವಿವರ ಅಲ್‌ರಾಫ್ ಅಧ್ಯಾಯದ ಸೂಕ್ತ 142ರಲ್ಲಿ ಬಂದಿದೆ.

26. ಹ. ಹಾರೂನ್‌ರ(ಅ) ಈ ಉತ್ತರದ ಅರ್ಥ, ಜನಾಂಗ ಸುಸಂಘಟಿತವಾಗಿರುವುದು ಅದು ಸನ್ಮಾರ್ಗದಲ್ಲಿರುವುದಕ್ಕಿಂತ ಮುಖ್ಯವಾದುದು, ಹಾಗೂ ಐಕಮತ್ಯವು ಬಹುದೇವಾರಾಧನೆಯ ಆಧಾರದಲ್ಲಾದರೂ ಅದು ವಿಭಜನೆಗಿಂತ ಉತ್ತಮವಾದುದು ಎಂದಲ್ಲ. ಪ್ರಸ್ತುತ ಸೂಕ್ತವನ್ನು ಈ ರೀತಿ ಅರ್ಥೈಸುವವನು ಕುರ್‌ಆನ್‌ನಿಂದ ಸನ್ಮಾರ್ಗದ ಬದಲು ಪಥಭ್ರಷ್ಟತೆಯನ್ನು ಪಡೆಯುವನು. ಹ.ಹಾರೂನ್‌ರ(ಅ) ಮಾತನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಅದನ್ನು ಅಲ್‌ರಾಫ್ ಅಧ್ಯಾಯದ 150ನೆಯ ಸೂಕ್ತದೊಂದಿಗೆ ಸೇರಿಸಿ ಓದಬೇಕಾಗಿದೆ. ಅಲ್ಲಿ ಹ.ಹಾರೂನ್‌ರು(ಅ) ಹೀಗೆನ್ನುತ್ತಾರೆ, "ಓ ನನ್ನ ಮಾತೆಯ ಪುತ್ರನೇ! ಇವರು ನನ್ನನ್ನು ದಬಾಯಿಸಿದರು. ಇನ್ನೇನು ನನ್ನನ್ನು ಕೊಂದು ಬಿಡುತ್ತಿದ್ದರು. ಆದ್ದರಿಂದ ಶತ್ರುಗಳು ನನ್ನನ್ನು ಕಂಡು ನಗಲು ಆಸ್ಪದ ಕೊಡಬೇಡ ಮತ್ತು ನನ್ನನ್ನು ಅಕ್ರಮಿಗಳ ಸಾಲಿನಲ್ಲಿ ಸೇರಿಸಬೇಡ." ಈ ವಸ್ತುಸ್ಥಿತಿಯಿಂದ ಮೂಡುವ ಚಿತ್ರಣವೇನೆಂದರೆ, ಹ.ಹಾರೂನ್(ಅ) ಜನರನ್ನು ಪಥಭ್ರಷ್ಟತೆಯಿಂದ ತಡೆಯಲು ಗರಿಷ್ಠ ಪ್ರಯತ್ನ ಮಾಡಿದರು. ಆದರೆ ಅವರು ಹ.ಹಾರೂನ್‌ರ(ಅ) ವಿರುದ್ಧ ಕ್ಷೋಭೆಯುಂಟು ಮಾಡಿದರು. ಮಾತ್ರವಲ್ಲ ಅವರನ್ನು ಕೊಂದು ಬಿಡಲಿಕ್ಕೂ ಸಿದ್ಧರಾದರು.

95. ಆಗ ಮೂಸಾ, "ಓ ಸಾಮಿರೀ, ನಿನ್ನ ಸಂಗತಿಯೇನು?" ಎಂದು ಕೇಳಿದರು.

قَالَ فَمَا خَطْبُكَ يٰسَامِرِيُّ ﴿٩٥﴾

96. ಅವನು, "ಇವರಿಗೆ ಕಾಣಿಸದಿದ್ದ ಒಂದು ವಸ್ತುವನ್ನು ನಾನು ಕಂಡೆನು. ಆದುದರಿಂದ ರಸೂಲರ ಪಾದ ಚಿಹ್ನೆಯಿಂದ ನಾನು ಒಂದು ಹಿಡಿ ತೆಗೆದುಕೊಂಡು ಅದಕ್ಕೆ ಹಾಕಿ ಬಿಟ್ಟೆ. ನನ್ನ ಚಿತ್ತವೇನೋ ನನಗೆ ಹೀಗೆಯೇ ಹೊಳೆಯಿಸಿತು" ಎಂದನು.[27]

قَالَ بَصُرْتُ بِمَا لَمْ يَبْصُرُوْا بِهٖ فَقَبَضْتُ قَبْضَةً مِّنْ اَثَرِ الرَّسُوْلِ فَنَبَذْتُهَا وَكَذٰلِكَ سَوَّلَتْ لِيْ نَفْسِيْ ﴿٩٦﴾

97. ಮೂಸಾ ಹೀಗೆ ಹೇಳಿದರು, "ಹಾಗಾದರೆ ನಡೆ, ನೀನಿನ್ನು ಜೀವ ಮಾನವಿಡೀ- ನನ್ನನ್ನು ಮುಟ್ಟಬೇಡಿರಿ ಎಂದು ಕೂಗುತ್ತಿರಬೇಕು.[28] ನಿಶ್ಚಯವಾಗಿಯೂ ನಿನ್ನ ವಿಚಾರಣೆ ನಡೆಸಲಾಗುವ ದಿನವೊಂದಿದೆ. ಅದು ನಿನ್ನಿಂದ ಎಷ್ಟು ಮಾತ್ರಕ್ಕೂ ಸರಿದು ಹೋಗಲಾರದು. ನೀನು ಮೋಹಗೊಂಡಿದ್ದ ಈ ಆರಾಧ್ಯ ವಸ್ತುವನ್ನು ನೋಡು, ನಾವಿನ್ನು ಇದನ್ನು ಸುಟ್ಟು ಬಿಡುವೆವು ಮತ್ತು ಚೂರುಚೂರಾಗಿ ಮಾಡಿ ಸಮುದ್ರದಲ್ಲಿ ಹರಿಸಿ ಬಿಡುವೆವು."

قَالَ فَاذْهَبْ فَاِنَّ لَكَ فِي الْحَيٰوةِ اَنْ تَقُوْلَ لَا مِسَاسَ وَاِنَّ لَكَ مَوْعِدًا لَّنْ تُخْلَفَهٗ وَانْظُرْ اِلٰٓى اِلٰهِكَ الَّذِيْ ظَلْتَ عَلَيْهِ عَاكِفًا لَنُحَرِّقَنَّهٗ ثُمَّ لَنَنْسِفَنَّهٗ فِي الْيَمِّ نَسْفًا ﴿٩٧﴾

98. ಜನರೇ, ನಿಮ್ಮ ದೇವನು ಏಕಮಾತ್ರ ಅಲ್ಲಾಹನಾಗಿದ್ದು ಅವನ ಹೊರತು ಅನ್ಯ ದೇವನಾರೂ ಇಲ್ಲ. ಅವನ ಜ್ಞಾನವು ಸಕಲ ವಸ್ತುಗಳನ್ನು ಆವರಿಸಿಕೊಂಡಿದೆ."

اِنَّمَآ اِلٰهُكُمُ اللّٰهُ الَّذِيْ لَآ اِلٰهَ اِلَّا هُوَ وَسِعَ كُلَّ شَيْءٍ عِلْمًا ﴿٩٨﴾

99. ಓ ಪೈಗಂಬರರೇ, ಈ ರೀತಿ ನಾವು ನಿಮಗೆ ಗತ ವೃತ್ತಾಂತವನ್ನು ತಿಳಿಸುತ್ತೇವೆ. ನಾವು ನಮ್ಮಲ್ಲಿಂದಲೇ ನಿಮಗೊಂದು 'ಉದ್ಬೋಧ' ಪ್ರದಾನ ಮಾಡಿರುತ್ತೇವೆ.

كَذٰلِكَ نَقُصُّ عَلَيْكَ مِنْ اَنْۢبَآءِ مَا قَدْ سَبَقَ وَقَدْ اٰتَيْنٰكَ مِنْ لَّدُنَّا ذِكْرًا ﴿٩٩﴾

100. ಇದರಿಂದ ವಿಮುಖನಾದವನು ನಿಶ್ಚಯವಾಗಿಯೂ ಪುನರುತ್ಥಾನದ ದಿನ ಕಠಿಣವಾದ ಪಾಪಗಳ ಹೊರೆ ಹೊರುವನು.

مَنْ اَعْرَضَ عَنْهُ فَاِنَّهٗ يَحْمِلُ يَوْمَ الْقِيٰمَةِ وِزْرًا ﴿١٠٠﴾

---

ಕೊನೆಗೆ ನಿರ್ವಾಹವಿಲ್ಲದೆ ಹ.ಮೂಸಾರ(ಅ) ಆಗಮನಕ್ಕೆ ಮೊದಲು ಅಂತರ್‌ಕಲಹ ಉಂಟಾಗದಿರಲಿ ಹಾಗೂ ಮೂಸಾರು(ಅ) ಬಂದ ನಂತರ, "ನಿಮಗೆ ಪರಿಸ್ಥಿತಿಯನ್ನು ಎದುರಿಸಲಾಗದಿದ್ದರೆ ನಾನು ಬರುವ ತನಕ ಯಾಕೆ ಕಾಯಲಿಲ್ಲ. ಪರಿಸ್ಥಿತಿಯನ್ನು ಯಾಕಿಷ್ಟು ಕೆಟ್ಟು ಹೋಗುವಂತೆ ಮಾಡಿದಿರಿ" ಎಂದು ಆಕ್ಷೇಪವೆತ್ತದಿರಲೆಂದು ಅವರು ಮೌನ ತಾಳಿದರು.

27. ರಸೂಲ್ ಎಂದರೆ ಪ್ರಾಯಶಃ ಸ್ವತಃ ಮೂಸಾರೇ(ಅ) ಆಗಿದ್ದಾರೆ. ಸಾಮಿರಿ ಮೋಸಗಾರ ವ್ಯಕ್ತಿಯಾಗಿದ್ದನು. ಅವನು ಮೂಸಾರನ್ನೂ(ಅ) ತನ್ನ ಮೋಸದ ಜಾಲದಲ್ಲಿ ಸಿಲುಕಿಸ ಬಯಸಿದನು. ಆದ್ದರಿಂದ ಅವನು ಅವರೊಡನೆ, ಮಾನ್ಯರೇ! ಇದು ನಿಮ್ಮ ಪಾದ ಧೂಳಿಯ ಮಹಿಮೆಯಾಗಿದೆ. ನಾನು ಅದನ್ನು ಕರಗಿದ ಚಿನ್ನದಲ್ಲಿ ಹಾಕಿದಾಗ ಅದು ಇಂತಹ ತೇಜೋಮಯ ಕರುವಾಗಿ ಹೊರಬಂತು" ಎಂದು ಹೇಳಿದನು.

28. ಅರ್ಥಾತ್- ಸಮಾಜದೊಂದಿಗೆ ಅವನಿಗಿದ್ದ ಸಂಬಂಧವನ್ನು ಜೀವನದಾದ್ಯಂತ ಮುರಿಯಲಾಯಿತು. ಮಾತ್ರವಲ್ಲ ಅವನನ್ನು ಅಸ್ಪೃಶ್ಯನನ್ನಾಗಿ ಮಾಡಲಾಯಿತು. ಅವನು ಸ್ವತಃ ತನ್ನ ಅಸ್ಪೃಶ್ಯತೆಯನ್ನು ಸಾರಬೇಕು ಮತ್ತು ದೂರದಿಂದಲೇ ನಾನು ಅಸ್ಪೃಶ್ಯನಾಗಿದ್ದೇನೆ, ನನಗೆ ಕೈ ತಾಗಿಸದಿರಿ ಎಂದು ಜನರಿಗೆ ತಿಳಿಯಪಡಿಸಬೇಕೆಂಬ ಹೊಣೆಗಾರಿಕೆಯನ್ನು ಅವನಿಗೆ ವಹಿಸಲಾಯಿತು.

101. ಇಂತಹವರೆಲ್ಲರೂ ಸದಾ ಅದರ ಸಂಕಟದಲ್ಲೇ ಬಿದ್ದಿರುವರು ಮತ್ತು ಪುನರುತ್ಥಾನದ ದಿನ (ಈ ಅಪರಾಧದ ಹೊಣೆಯು) ಅವರಿಗೆ ಅತ್ಯಂತ ಅಸಹನೀಯ ಹೊರೆಯಾಗಿರುವುದು.

خَٰلِدِينَ فِيهِ ۖ وَسَآءَ لَهُمْ يَوْمَ ٱلْقِيَٰمَةِ حِمْلًا ﴿١٠١﴾

102. 'ಸೂರ್' (ಕಹಳೆ) ಊದಲಾಗುವ ದಿನ ನಾವು, ಅಪರಾಧಿಗಳ ಕಣ್ಣುಗಳು (ಭಯ ಭೀತಿಯಿಂದ) ನಿಶ್ಚಲವಾಗಿರುವ ಸ್ಥಿತಿಯಲ್ಲಿ ಅವರನ್ನು ಸುತ್ತುಗಟ್ಟಿ ತರುವೆವು.

يَوْمَ يُنفَخُ فِى ٱلصُّورِ ۚ وَنَحْشُرُ ٱلْمُجْرِمِينَ يَوْمَئِذٍ زُرْقًا ﴿١٠٢﴾

103. ಅವರು ಪರಸ್ಪರ ಪಿಸು ಮಾತಿನಲ್ಲಿ, "ನೀವು ಭೂಲೋಕ ದಲ್ಲೇನೋ ಕೇವಲ ಹತ್ತು ದಿನಗಳನ್ನು ಮಾತ್ರ ಕಳೆದಿರಬಹುದು" ಎನ್ನುವರು.

يَتَخَٰفَتُونَ بَيْنَهُمْ إِن لَّبِثْتُمْ إِلَّا عَشْرًا ﴿١٠٣﴾

104. ಅವರೇನು ಹೇಳುತ್ತಿರುವರೆಂದು ನಮಗೆ ಚೆನ್ನಾಗಿ ಗೊತ್ತಿದೆ. ಆಗ ಅವರಲ್ಲಿ ಅತ್ಯಧಿಕ ಜಾಗರೂಕತೆಯಿಂದ ಅಂದಾಜು ಮಾಡುವಾತನು, "ನಿಮ್ಮ ಭೂಲೋಕದ ಜೀವನಾವಧಿಯು ಒಂದು ದಿನ ಮಾತ್ರವಿತ್ತು" ಎಂದು ಹೇಳುವನು (ಎಂಬುದನ್ನೂ ನಾವು ಬಲ್ಲೆವು.)

نَّحْنُ أَعْلَمُ بِمَا يَقُولُونَ إِذْ يَقُولُ أَمْثَلُهُمْ طَرِيقَةً إِن لَّبِثْتُمْ إِلَّا يَوْمًا ﴿١٠٤﴾

105. ಅಂದು ಈ ಪರ್ವತಗಳು ಎಲ್ಲಿ ಹೋಗಿ ಬಿಡುವುವು? ಎಂದು ಇವರು ನಿಮ್ಮೊಡನೆ ಕೇಳುತ್ತಾರೆ. ನನ್ನ ಪ್ರಭು ಅವುಗಳನ್ನು ಧೂಳನ್ನಾಗಿ ಮಾಡಿ ಹಾರಿಸಿ ಬಿಡುವನೆಂದೂ,

وَيَسْـَٔلُونَكَ عَنِ ٱلْجِبَالِ فَقُلْ يَنسِفُهَا رَبِّى نَسْفًا ﴿١٠٥﴾

106-107. ಮತ್ತು ಭೂಮಿಯನ್ನು ಯಾವುದೇ ಓರೆಕೋರೆ, ಏರುತಗ್ಗುಗಳು ಕಾಣಿಸದಂತಹ ಬಟ್ಟ ಬಯಲನ್ನಾಗಿ ಮಾಡಿ ಬಿಡುವನು ಎಂದು ಹೇಳಿರಿ.

فَيَذَرُهَا قَاعًا صَفْصَفًا ﴿١٠٦﴾
لَّا تَرَىٰ فِيهَا عِوَجًا وَلَآ أَمْتًا ﴿١٠٧﴾

108. ಅಂದು ಎಲ್ಲರೂ ಘೋಷಿಸುವವನ ಕೂಗಿಗನುಸಾರ ನೇರವಾಗಿ ಸಾಗಿ ಬರುವರು. ಯಾವನೂ ಕಿಂಚಿತ್ತೂ ಜಂಭ ತೋರಲಾರನು. ಸದ್ದು-ಗದ್ದಲಗಳೆಲ್ಲವೂ ರಹ್ಮಾನನ ಮುಂದೆ ಅಡಗಿ ಹೋಗುವುವು. ಒಂದು ಕ್ಷೀಣ ಗೊಣಗಾಟದ ಹೊರತು ಇನ್ನೇನನ್ನೂ ನೀವು ಕೇಳಲಾರಿರಿ.

يَوْمَئِذٍ يَتَّبِعُونَ ٱلدَّاعِىَ لَا عِوَجَ لَهُۥ ۖ وَخَشَعَتِ ٱلْأَصْوَاتُ لِلرَّحْمَٰنِ فَلَا تَسْمَعُ إِلَّا هَمْسًا ﴿١٠٨﴾

109. ಅಂದು ರಹ್ಮಾನನು ಯಾರಿಗೆ ಅನುಮತಿ ನೀಡುವನೋ ಮತ್ತು ಯಾರ ಮಾತನ್ನು ಕೇಳಲು ಇಚ್ಛಿಸುವನೋ ಅವರ ಹೊರತು ಯಾರ ಶಿಫಾರಸೂ ಫಲಕಾರಿಯಾಗದು.

يَوْمَئِذٍ لَّا تَنفَعُ ٱلشَّفَٰعَةُ إِلَّا مَنْ أَذِنَ لَهُ ٱلرَّحْمَٰنُ وَرَضِىَ لَهُۥ قَوْلًا ﴿١٠٩﴾

110. ಅವನು ಜನರ ಮುಂದಿನ ಮತ್ತು ಹಿಂದಿನ ಎಲ್ಲ ಸ್ಥಿತಿಯನ್ನೂ ಅರಿತಿರುತ್ತಾನೆ ಮತ್ತು ಇತರರಿಗೆ ಅದರ ಸಂಪೂರ್ಣ ಜ್ಞಾನವಿಲ್ಲ.

يَعْلَمُ مَا بَيْنَ أَيْدِيهِمْ وَمَا خَلْفَهُمْ وَلَا يُحِيطُونَ بِهِ عِلْمًا ﴿١١٠﴾

111. ಜನರ ಶಿರಗಳು ಆ ಚಿರಂತನನ ಹಾಗೂ ಸ್ವಯಂಸ್ಥಿರನ ಮುಂದೆ ಬಾಗುವುವು. ಆಗ ಅಕ್ರಮದ ಪಾಪ ಭಾರ ಹೊತ್ತಿರುವವನು ವಿಫಲನಾಗುವನು.

وَعَنَتِ الْوُجُوهُ لِلْحَيِّ الْقَيُّومِ ۖ وَقَدْ خَابَ مَنْ حَمَلَ ظُلْمًا ﴿١١١﴾

112. ಸತ್ಕರ್ಮಗಳನ್ನು ಮಾಡಿರುವುದರೊಂದಿಗೆ ಸತ್ಯವಿಶ್ವಾಸಿಯೂ ಆಗಿರುವಾತನಿಗೆ ಯಾವುದೇ ಅನ್ಯಾಯ ಮತ್ತು ಹಕ್ಕುಚ್ಯುತಿಯ ಭಯವಿರಲಾರದು.

وَمَنْ يَعْمَلْ مِنَ الصَّالِحَاتِ وَهُوَ مُؤْمِنٌ فَلَا يَخَافُ ظُلْمًا وَلَا هَضْمًا ﴿١١٢﴾

113. ಓ ಪೈಗಂಬರರೇ, ಈ ರೀತಿ ನಾವು ಇದನ್ನು ಅರಬೀ ಭಾಷೆಯ ಕುರ್‌ಆನ್ ಆಗಿ ಮಾಡಿ ಅವತೀರ್ಣಗೊಳಿಸಿರುವೆವು[29] ಮತ್ತು ಇದರಲ್ಲಿ ಬಗೆ ಬಗೆಯಾಗಿ ಎಚ್ಚರಿಕೆಯನ್ನಿತ್ತಿರುವೆವು. ಇವರು ಪಥಭ್ರಷ್ಟತೆಯಿಂದ ದೂರವಿರಲಿಕ್ಕಾಗಿ ಅಥವಾ ಅದರ ಮೂಲಕ ಇವರಲ್ಲಿ ಚೈತನ್ಯದ ಚಿಹ್ನೆ ಮೂಡಿಬರಬಹುದೆಂದು ನಿರೀಕ್ಷಿಸಿ (ಹೀಗೆ ಮಾಡಿದ್ದೇವೆ.)

وَكَذَٰلِكَ أَنْزَلْنَاهُ قُرْآنًا عَرَبِيًّا وَصَرَّفْنَا فِيهِ مِنَ الْوَعِيدِ لَعَلَّهُمْ يَتَّقُونَ أَوْ يُحْدِثُ لَهُمْ ذِكْرًا ﴿١١٣﴾

114. ಅಲ್ಲಾಹನು ಮಹೋನ್ನತನು. ಯಥಾರ್ಥ ಸಾಮ್ರಾಟನು.[30] ನಿಮ್ಮ ಮೇಲೆ ಕುರ್‌ಆನಿನ 'ದಿವ್ಯವಾಣಿ' ಪರಿಪೂರ್ಣಗೊಳ್ಳು ವುದಕ್ಕೆ ಮುಂಚೆಯೇ ಅದನ್ನು ಪಠಿಸುವುದರಲ್ಲಿ ತವಕ ಪಡಬೇಡಿರಿ. "ಓ ನನ್ನ ಪ್ರಭೂ ನನಗೆ ಇನ್ನಷ್ಟು ಜ್ಞಾನ ದಯಪಾಲಿಸು" ಎಂದು ಪ್ರಾರ್ಥಿಸಿರಿ.[31]

فَتَعَالَى اللَّهُ الْمَلِكُ الْحَقُّ ۗ وَلَا تَعْجَلْ بِالْقُرْآنِ مِنْ قَبْلِ أَنْ يُقْضَىٰ إِلَيْكَ وَحْيُهُ ۖ وَقُلْ رَبِّ زِدْنِي عِلْمًا ﴿١١٤﴾

115. ನಾವು ಇದಕ್ಕೆ ಮುಂಚೆ ಆದಮರಿಗೊಂದು ಅಪ್ಪಣೆ ಕೊಟ್ಟಿದ್ದೆವು.

وَلَقَدْ عَهِدْنَا إِلَىٰ آدَمَ مِنْ قَبْلُ

29. ಅರ್ಥಾತ್- ಅಂತಹುದೇ ವಿಷಯ, ಬೋಧನೆ ಮತ್ತು ಉಪದೇಶಗಳನ್ನೊಳಗೊಂಡ ಗ್ರಂಥ. ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿರುವ ಎಲ್ಲ ವಿಷಯಗಳ ಕಡೆಗೆ ಇದರಲ್ಲಿ ಸೂಚಿಸಲಾಗಿದೆ.

30. ಕುರ್‌ಆನಿನಲ್ಲಿ ಸಾಮಾನ್ಯವಾಗಿ ಉಪನ್ಯಾಸವೊಂದರ ಕೊನೆಯಲ್ಲಿ ಇಂತಹ ಉದ್ಧರಣೆಗಳು ಬರುತ್ತವೆ. ಮಾತಿನ ಸಮಾಪ್ತಿ, ಅಲ್ಲಾಹನ ಸ್ತುತಿ ಮತ್ತು ಕೀರ್ತನೆಯೊಂದಿಗೆ ಆಗಬೇಕು ಎಂಬುದೇ ಇದರ ಉದ್ದೇಶ. ವಿವರಣಾಶೈಲಿ ಮತ್ತು ಹಿನ್ನೆಲೆಯನ್ನು ಗಮನಿಸಿದರೆ ಇಲ್ಲಿಗೆ ಒಂದು ಉಪನ್ಯಾಸ ಮುಕ್ತಾಯವಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. 115ನೆಯ ಸೂಕ್ತದಿಂದ ಎರಡನೆಯ ಉಪನ್ಯಾಸ ಆರಂಭಗೊಳ್ಳುತ್ತದೆ.

31. ಈ ಶಬ್ದಗಳಿಂದ ಸ್ಪಷ್ಟವಾಗಿ ವ್ಯಕ್ತವಾಗುವುದೇನೆಂದರೆ ಪ್ರವಾದಿವರ್ಯರು(ಸ) ವಹೀಯನ್ನು ಸ್ವೀಕರಿಸುವಾಗ ಅದನ್ನು ಕಂಠಪಾಠ ಮಾಡಲು ಮತ್ತು ನಾಲಗೆಯಿಂದ ಪುನರಾವರ್ತಿಸಲು ಪ್ರಯತ್ನಿಸುತ್ತಿದ್ದಿರಬಹುದು. ಅದರಿಂದಾಗಿ ದಿವ್ಯಸಂದೇಶವನ್ನು ಆಲಿಸಲಿಕ್ಕಾಗಿ ಗಮನವನ್ನು ಕೇಂದ್ರೀಕರಿಸಲು ಅವರಿಗೆ ಸಾಧ್ಯವಾಗದೆ ಇದ್ದಿರಬಹುದು. ಈ ಸ್ಥಿತಿಯನ್ನು ಕಂಡು "ವಹೀ ಅವತೀರ್ಣಗೊಳ್ಳುವ ಸಂದರ್ಭದಲ್ಲಿ ಅದನ್ನು ಕಂಠಪಾಠ ಮಾಡಲು ಪ್ರಯತ್ನಿಸದಿರಿ" ಎಂದು ಅವರಿಗೆ ಆದೇಶ ನೀಡಲಾಗುತ್ತಿದೆ.

فَنَسِيَ وَلَمْ نَجِدْ لَهُۥ عَزْمًا ﴿١١٥﴾

ಆದರೆ ಅವರು ಮರೆತು ಬಿಟ್ಟರು ಮತ್ತು ನಾವು ಅವರಲ್ಲಿ ಸ್ಥಿರಚಿತ್ತವನ್ನು ಕಾಣಲಿಲ್ಲ.[32]

وَإِذْ قُلْنَا لِلْمَلَٰٓئِكَةِ ٱسْجُدُوا۟ لِءَادَمَ فَسَجَدُوٓا۟ إِلَّآ إِبْلِيسَ أَبَىٰ ﴿١١٦﴾

116. ನಾವು ದೇವಚರರೊಡನೆ ಆದಮರಿಗೆ ಸಾಷ್ಟಾಂಗವೆರಗಿರೆಂದು ಹೇಳಿದ್ದ ಆ ಸಂದರ್ಭವನ್ನು ಸ್ಮರಿಸಿರಿ. ಅವರೆಲ್ಲರೂ ಸಾಷ್ಟಾಂಗ ವೆರಗಿದರು. ಆದರೆ 'ಇಬ್‌ಲೀಸ'ನೊಬ್ಬನು ಮಾತ್ರ ನಿರಾಕರಿಸಿ ಬಿಟ್ಟನು.

فَقُلْنَا يَٰٓـَٔادَمُ إِنَّ هَٰذَا عَدُوٌّ لَّكَ وَلِزَوْجِكَ فَلَا يُخْرِجَنَّكُمَا مِنَ ٱلْجَنَّةِ فَتَشْقَىٰٓ ﴿١١٧﴾

117. ಆಗ ನಾವು ಆದಮರೊಡನೆ, "ಇವನು ನಿಮ್ಮ ಮತ್ತು ನಿಮ್ಮ ಪತ್ನಿಯ ಶತ್ರು. ಇವನು ನಿಮ್ಮಿಬ್ಬರನ್ನೂ ಸ್ವರ್ಗದಿಂದ ಹೊರ ಹಾಕಿಸಿ ನಿಮ್ಮನ್ನು ಗಂಡಾಂತರಕ್ಕೆ ಒಳಪಡಿಸದಿರಲಿ.

إِنَّ لَكَ أَلَّا تَجُوعَ فِيهَا وَلَا تَعْرَىٰ ﴿١١٨﴾

118. ಇಲ್ಲಿರುವ ಸೌಕರ್ಯಗಳಿಂದಾಗಿ ನಿಮಗೆ ಹಸಿವೆ ಹಾಗೂ ನಗ್ನತೆ ಬಾಧಿಸುವುದಿಲ್ಲ.

وَأَنَّكَ لَا تَظْمَؤُا۟ فِيهَا وَلَا تَضْحَىٰ ﴿١١٩﴾

119. ಮತ್ತು ನಿಮ್ಮನ್ನು ನೀರಡಿಕೆಯೂ ಬಿಸಿಲಿನ ಬೇಗೆಯೂ ಸತಾಯಿಸದು" ಎಂದೆವು.

فَوَسْوَسَ إِلَيْهِ ٱلشَّيْطَٰنُ قَالَ يَٰٓـَٔادَمُ هَلْ أَدُلُّكَ عَلَىٰ شَجَرَةِ ٱلْخُلْدِ وَمُلْكٍ لَّا يَبْلَىٰ ﴿١٢٠﴾

120. ಆದರೆ ಶೈತಾನನು ಅವರನ್ನು ಪುಸಲಾಯಿಸಿದನು. "ಓ ಆದಮ್, ನಾನು ನಿಮಗೆ ಅಮರ ಜೀವನವೂ ಅನಂತ ಸಾಮ್ರಾಜ್ಯವೂ ಸಿಗುವಂತಹ ವೃಕ್ಷವನ್ನು ತೋರಿಸಲೇ?" ಎಂದು ಕೇಳ ತೊಡಗಿದನು.

فَأَكَلَا مِنْهَا فَبَدَتْ لَهُمَا سَوْءَٰتُهُمَا وَطَفِقَا يَخْصِفَانِ عَلَيْهِمَا مِن وَرَقِ ٱلْجَنَّةِ وَعَصَىٰٓ ءَادَمُ رَبَّهُۥ فَغَوَىٰ ﴿١٢١﴾

121. ಕೊನೆಗೆ ಇಬ್ಬರೂ (ದಂಪತಿಗಳು) ಆ ಮರದ ಫಲವನ್ನು ತಿಂದು ಬಿಟ್ಟರು. ಪರಿಣಾಮವಾಗಿ ತಕ್ಷಣವೇ ಅವರ ಗುಪ್ತಾಂಗಗಳು ಪರಸ್ಪರರಿಗೆ ಗೋಚರವಾದುವು ಮತ್ತು ಇಬ್ಬರೂ ತಮ್ಮನ್ನು ತಾವೇ ಸ್ವರ್ಗದ ಎಲೆಗಳಿಂದ ಮರೆಸತೊಡಗಿದರು.[33] ಆದಮ್ ತಮ್ಮ ಪ್ರಭುವಿನ ಆಜ್ಞೋಲ್ಲಂಘನೆ ಮಾಡಿದರು ಮತ್ತು ಸನ್ಮಾರ್ಗ ಭ್ರಷ್ಟರಾದರು.

32. ಆದಮ್(ಅ), ಉದ್ದೇಶಪೂರ್ವಕವಾದ ಆಜ್ಞೋಲ್ಲಂಘನೆಯಿಂದಾಗಿ ಈ ಆಜ್ಞೆಗೆ ತಪ್ಪಿ ನಡೆದಿರಲಿಲ್ಲ. ಬದಲಾಗಿ ನಿರ್ಲಕ್ಷ್ಯ, ಮರೆಗುಳಿತನ ಮತ್ತು ದೃಢನಿರ್ಧಾರದ ಕೊರತೆಯಿಂದಾಗಿ ಹಾಗೆ ಮಾಡಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ.

33. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆಜ್ಞೋಲ್ಲಂಘನೆ ಪ್ರಕಟವಾಗುತ್ತಲೇ ಅವರಿಗೆ ಆಡಳಿತ ವ್ಯವಸ್ಥೆಯ ಮೂಲಕ ಒದಗಿಸಲಾಗುತ್ತಿದ್ದ ಸೌಕರ್ಯಗಳೆಲ್ಲವೂ ಹಿಂದೆಗೆಯಲ್ಪಟ್ಟವು. ಆಡಳಿತ ವ್ಯವಸ್ಥೆಯ ಮೂಲಕ ನೀಡಲಾದ ಬಟ್ಟೆ ಕಸಿಯಲ್ಪಡುವ ಮೂಲಕ ಅದು ಮೊಟ್ಟಮೊದಲು ಪ್ರಕಟ ಗೊಂಡಿತು. ಆಹಾರ-ನೀರು ಮತ್ತು ನಿವಾಸದಿಂದ ವಂಚಿಸಲಾದ ಪ್ರಸಂಗ ಅನಂತರ ಎದುರಾಯಿತು.

122. ಅನಂತರ ಅವರ ಪ್ರಭು ಅವರನ್ನು ಪುನೀತಗೊಳಿಸಿದನು. ಅವರ ಪಶ್ಚಾತ್ತಾಪ ಸ್ವೀಕರಿಸಿದನು. ಅವರಿಗೆ ಸನ್ಮಾರ್ಗದರ್ಶನ ಮಾಡಿದನು[34]-

ثُمَّ اجْتَبٰىهُ رَبُّهٗ فَتَابَ عَلَيْهِ وَهَدٰى ﴿١٢٢﴾

123. ಮತ್ತು ನೀವಿಬ್ಬರೂ (ಮಾನವ ಮತ್ತು ಶೈತಾನ) ಇಲ್ಲಿಂದ ಇಳಿದು ಬಿಡಿರಿ. ನೀವು ಪರಸ್ಪರ ಶತ್ರುಗಳಾಗಿರುವಿರಿ. ಮುಂದೆ ನನ್ನ ವತಿಯಿಂದ ನಿಮಗೇನಾದರೂ ಮಾರ್ಗದರ್ಶನ ತಲುಪಿದರೆ, ನನ್ನ ಈ ಮಾರ್ಗದರ್ಶನವನ್ನು ಅನುಸರಿಸಿದವನು ದಾರಿಗೆಡಲಾರನು ಮತ್ತು ದುರದೃಷ್ಟಕ್ಕೆ ಒಳಗಾಗಲಾರನು.

قَالَ اهْبِطَا مِنْهَا جَمِيْعًا بَعْضُكُمْ لِبَعْضٍ عَدُوٌّ ۚ فَاِمَّا يَاْتِيَنَّكُمْ مِّنِّيْ هُدًى ۙ فَمَنِ اتَّبَعَ هُدَايَ فَلَا يَضِلُّ وَلَا يَشْقٰى ﴿١٢٣﴾

124. ನನ್ನ ಉದ್ಬೋಧ'ದಿಂದ ವಿಮುಖನಾದವನ ಜೀವನವು ಭೂಲೋಕ ದಲ್ಲಿ ಸಂಕೀರ್ಣವಾಗುವುದು[35] ಮತ್ತು ಪುನರುತ್ಥಾನದ ದಿನ ನಾವು ಅವನನ್ನು ಕುರುಡನನ್ನಾಗಿ ಮಾಡಿ ಎಬ್ಬಿಸುವೆವು" ಎಂದು ಹೇಳಿದನು.

وَمَنْ اَعْرَضَ عَنْ ذِكْرِيْ فَاِنَّ لَهٗ مَعِيْشَةً ضَنْكًا وَّنَحْشُرُهٗ يَوْمَ الْقِيٰمَةِ اَعْمٰى ﴿١٢٤﴾

125. ಅವನು, "ಓ ನನ್ನ ಪ್ರಭೂ ಭೂಲೋಕದಲ್ಲಿ ನಾನು ದೃಷ್ಟಿಯುಳ್ಳವ ನಾಗಿದ್ದೆ. ನನ್ನನ್ನು ಇಲ್ಲೇಕೆ ಕುರುಡನಾಗಿ ಎಬ್ಬಿಸಿದೆ?" ಎಂದು ಕೇಳುವನು.

قَالَ رَبِّ لِمَ حَشَرْتَنِيْٓ اَعْمٰى وَقَدْ كُنْتُ بَصِيْرًا ﴿١٢٥﴾

126. ಆಗ ಅಲ್ಲಾಹನು, "ನಮ್ಮ ವಚನಗಳು ನಿನ್ನ ಬಳಿಗೆ ಬಂದಿದ್ದಾಗ ನೀನು ಇದೇ ರೀತಿಯಲ್ಲಿ ಮರೆತು ಬಿಟ್ಟಿದ್ದೆ. ಹಾಗೆಯೇ ಇಂದು ನೀನು ಮರೆಯಲ್ಪಡುತ್ತಿರುವೆ" ಎನ್ನುವನು.

قَالَ كَذٰلِكَ اَتَتْكَ اٰيٰتُنَا فَنَسِيْتَهَا ۚ وَكَذٰلِكَ الْيَوْمَ تُنْسٰى ﴿١٢٦﴾

127. ಹೀಗೆ ನಾವು ಹದ ತಪ್ಪಿ ಸಾಗುವವನಿಗೂ ತನ್ನ ಪ್ರಭುವಿನ ವಚನ ಗಳ ಮೇಲೆ ವಿಶ್ವಾಸವಿರಿಸದವನಿಗೂ (ಭೂಲೋಕದಲ್ಲಿ) ಪ್ರತಿಫಲ ಕೊಡುತ್ತೇವೆ ಮತ್ತು ಪರಲೋಕದ ಯಾತನೆಯು ಅಧಿಕ ಪ್ರಚಂಡವೂ ಹೆಚ್ಚು ಶಾಶ್ವತವೂ ಆಗಿರುತ್ತದೆ.

وَكَذٰلِكَ نَجْزِيْ مَنْ اَسْرَفَ وَلَمْ يُؤْمِنْ بِاٰيٰتِ رَبِّهٖ ۗ وَلَعَذَابُ الْاٰخِرَةِ اَشَدُّ وَاَبْقٰى ﴿١٢٧﴾

---

34. ಅರ್ಥಾತ್- ಅವರನ್ನು ಶೈತಾನನಂತೆ ದೇವಸನ್ನಿಧಿಯಿಂದ ಬಹಿಷ್ಕರಿಸಲಾಗಲಿಲ್ಲ. ಅವರು ಸಂಕೋಚಪಟ್ಟು ಲಜ್ಜೆಯೊಂದಿಗೆ ಮರಳಿದಾಗ ಅಲ್ಲಾಹನು ಅವರೊಂದಿಗೆ ಕಾರುಣ್ಯದಿಂದ ವರ್ತಿಸಿದನು.

35. ಲೋಕದಲ್ಲಿ ಜೀವನವನ್ನು ಇಕ್ಕಟ್ಟಿಗೆ ಸಿಲುಕಿಸುವುದೆಂದರೆ ಅವನಿಗೆ ಬಡತನ ಎದುರಾಗುವುದು ಎಂದಲ್ಲ. ಅರ್ಥಾತ್, ಇಲ್ಲಿ ಅವನಿಗೆ ಶಾಂತಿ ದೊರೆಯಲಾರದು. ಕೋಟ್ಯಾಧಿಪತಿಯಾದರೂ ಅವನು ನೆಮ್ಮದಿಯಿಂದಿರಲಾರನು. ಸಪ್ತಖಂಡಗಳ ಆಡಳಿತಾಧಿಕಾರಿಯಾಗಿ ಮಾರ್ಪಟ್ಟರೂ ತಳಮಳ, ಕಾತರ ಮತ್ತು ಅಶಾಂತ ಸ್ಥಿತಿಯಿಂದ ಮುಕ್ತವಾಗಿರಲಾರನು. ಸಾವಿರಾರು ರೀತಿಯ ಅಕ್ರಮ ಯೋಜನೆಗಳ ಮೂಲಕ ಅವನು ಕೆಲವು ಲೌಕಿಕ ಯಶಸ್ಸನ್ನು ದಕ್ಕಿಸಿಕೊಳ್ಳುವನು. ಅದೇ ವೇಳೆ ತನ್ನ ಆತ್ಮಸಾಕ್ಷಿಯೊಂದಿಗೂ ಸುತ್ತಮುತ್ತಲಿನ ಸಮಸ್ತ ಸಾಮಾಜಿಕ ವಾತಾವರಣದೊಂದಿಗೂ ಅವನ ಸಂಘರ್ಷ ಮುಂದುವರಿದಿರುವುದು. ಅದರಿಂದಾಗಿ ಶಾಂತಿ-ಸಮಾಧಾನ ಮತ್ತು ನೈಜ ಸಂತೋಷ ಅವನಿಗೆಂದೂ ಪ್ರಾಪ್ತವಾಗಲಾರದು.

128. ಇವರಿಗಿಂತ ಮುಂಚೆ ನಾವು ಅದೆಷ್ಟೋ ಜನಾಂಗಗಳನ್ನು ನಾಶಗೊಳಿಸಿರುತ್ತೇವೆ. ಅವರ (ಪಾಳು ಬಿದ್ದ) ನಾಡುಗಳಲ್ಲಿ ಇವರು ಸಂಚರಿಸುತ್ತಾರೆ. (ಇತಿಹಾಸದ ಈ ಪಾಠದಿಂದ) ಇವರಿಗೇನೂ ಮಾರ್ಗದರ್ಶನ ಸಿಗಲಿಲ್ಲವೇ? ವಾಸ್ತವದಲ್ಲಿ ಬುದ್ಧಿಶಾಲಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

أَفَلَمْ يَهْدِ لَهُمْ كَمْ أَهْلَكْنَا قَبْلَهُم مِّنَ الْقُرُونِ يَمْشُونَ فِي مَسَاكِنِهِمْ ۗ إِنَّ فِي ذَٰلِكَ لَآيَاتٍ لِّأُولِي النُّهَىٰ ﴿١٢٨﴾

129. ಒಂದು ವಿಷಯವು ನಿನ್ನ ಪ್ರಭುವಿನ ಕಡೆಯಿಂದ ಮೊದಲೇ ನಿರ್ಧರಿಸಲ್ಪಡದಿರುತ್ತಿದ್ದರೆ ಹಾಗೂ ಕಾಲಾವಕಾಶದ ಅವಧಿಯೊಂದು ನಿಶ್ಚಿತವಾಗದಿರುತ್ತಿದ್ದರೆ ಇವರ ತೀರ್ಮಾನವನ್ನೂ ಮಾಡಿ ಮುಗಿಸಿಯೇ ಬಿಡಲಾಗುತ್ತಿತ್ತು.

وَلَوْلَا كَلِمَةٌ سَبَقَتْ مِن رَّبِّكَ لَكَانَ لِزَامًا وَأَجَلٌ مُّسَمًّى ﴿١٢٩﴾

130. ಆದುದರಿಂದ ಓ ಪೈಗಂಬರರೇ, ಅವರ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸೂರ್ಯೋದಯಕ್ಕೆ ಹಾಗೂ ಸೂರ್ಯಾಸ್ತಮಾನಕ್ಕೆ ಮುಂಚೆ ನಿಮ್ಮ ಪ್ರಭುವಿನ ಸ್ತುತಿಸ್ತೋತ್ರದೊಂದಿಗೆ ಅವನ ಪಾವಿತ್ರ್ಯವನ್ನು ಕೊಂಡಾಡಿರಿ ಮತ್ತು ರಾತ್ರೆ ವೇಳೆಗಳಲ್ಲಿಯೂ ಹಗಲಿನ ಕಿನಾರೆಗಳಲ್ಲಿಯೂ[36] ಅವನ ಪಾವಿತ್ರ್ಯವನ್ನು ಸ್ತುತಿಸಿರಿ. ಇದರಿಂದ ನೀವು ಸಂತೃಪ್ತರಾಗಲೂ ಬಹುದು.[37]

فَاصْبِرْ عَلَىٰ مَا يَقُولُونَ وَسَبِّحْ بِحَمْدِ رَبِّكَ قَبْلَ طُلُوعِ الشَّمْسِ وَقَبْلَ غُرُوبِهَا ۖ وَمِنْ آنَاءِ اللَّيْلِ فَسَبِّحْ وَأَطْرَافَ النَّهَارِ لَعَلَّكَ تَرْضَىٰ ﴿١٣٠﴾

131. ನಾವು ಇವರ ಪೈಕಿ ನಾನಾ ವಿಧದ ಜನರಿಗೆ ನೀಡುವ ಐಹಿಕ ಭೋಗ ವಿಲಾಸಗಳತ್ತ ಕಣ್ಣೆತ್ತಿಯೂ ನೋಡಬೇಡಿರಿ. ಅವುಗಳನ್ನಂತು ನಾವು ಪರೀಕ್ಷಿಸಲಿಕ್ಕಾಗಿ ಅವರಿಗೆ ಕೊಟ್ಟಿರುತ್ತೇವೆ ಮತ್ತು ನಿನ್ನ ಪ್ರಭು ನೀಡಿರುವ ಧರ್ಮಸಮ್ಮತ ಜೀವನಾಧಾರವೇ[38] ಶ್ರೇಷ್ಠವೂ ಶಾಶ್ವತವೂ ಆಗಿರುತ್ತದೆ.

وَلَا تَمُدَّنَّ عَيْنَيْكَ إِلَىٰ مَا مَتَّعْنَا بِهِ أَزْوَاجًا مِّنْهُمْ زَهْرَةَ الْحَيَاةِ الدُّنْيَا لِنَفْتِنَهُمْ فِيهِ ۚ وَرِزْقُ رَبِّكَ خَيْرٌ وَأَبْقَىٰ ﴿١٣١﴾

132. ನಿಮ್ಮ ಮನೆಯವರಿಗೆ ನಮಾಝಿನ ಅಪ್ಪಣೆ ಕೊಡಿರಿ ಮತ್ತು

وَأْمُرْ أَهْلَكَ بِالصَّلَاةِ وَاصْطَبِرْ عَلَيْهَا ۖ

36. 'ಪ್ರಭುವಿನ ಸ್ತುತಿ ಸ್ತೋತ್ರಗಳೊಂದಿಗೆ ಅವನ ಪಾವಿತ್ರ್ಯವನ್ನು ಕೊಂಡಾಡಿರಿ' ಎಂದರೆ ನಮಾಝ್ ಮಾಡುವುದಾಗಿದೆ. ಅದರ ಸಮಯದ ಕುರಿತೂ ಇಲ್ಲಿ ಸ್ಪಷ್ಟವಾಗಿ ಸೂಚಿಸಲಾಗಿದೆ. ಸೂರ್ಯೋದಯಕ್ಕೆ ಮೊದಲು ಫಜ್ರ್ ನಮಾಝ್, ಸೂರ್ಯಾಸ್ತಮಕ್ಕೆ ಮೊದಲು ಅಸರ್ ನಮಾಝ್, ರಾತ್ರಿಯ ವೇಳೆ ಇಷಾ ಮತ್ತು ತಹಜ್ಜುದ್ ನಮಾಝ್. ಇನ್ನು ಹಗಲಿನ ಕಿನಾರೆಗಳೆಂದರೆ ಅವು ಮೂರು ವೇಳೆಗಳಾಗಲು ಸಾಧ್ಯ. ಮೊದಲನೆಯ ಕಿನಾರೆ ಪ್ರಾತಃಕಾಲ, ಎರಡನೆಯ ಕಿನಾರೆ ಸೂರ್ಯ ನಡುನೆತ್ತಿಯಿಂದ ಕೆಳಗಿಳಿಯುವ ಸಮಯ, ಮೂರನೆಯ ಕಿನಾರೆ ಮುಸ್ಸಂಜೆ. ಆದ್ದರಿಂದ ಹಗಲಿನ ಕಿನಾರೆಗಳೆಂದರೆ ಫಜ್ರ್, ಝುಹರ್ ಮತ್ತು ಮಗ್ರಿಬ್ ನಮಾಝ್‌ಗಳಾಗಿವೆ.

37. ಇದಕ್ಕೆ ಎರಡು ಅರ್ಥಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ನೀವು ಸತ್ಯಪ್ರಚಾರ ಕಾರ್ಯಕ್ಕಾಗಿ ತರತರದ ಅರೋಚಕ ಮಾತುಗಳನ್ನು ಕೇಳಬೇಕಾಗಿ ಬರುತ್ತಿರುವ ಇಂದಿನ ಪರಿಸ್ಥಿತಿಯಲ್ಲೇ ಸಂತೃಪ್ತರಾಗಿರಿ. ಎರಡನೆಯದಾಗಿ ನೀವು ಈ ಕಾರ್ಯವನ್ನು ಮಾಡಿ ನೋಡಿ. ಅದರಿಂದ ನಿಮ್ಮ ಮನಸ್ಸಿಗೆ ಸಂತೋಷ ಉಂಟಾಗುವಂತಹ ಪರಿಣಾಮ ಹೊರಬರುವುದು.

38. 'ರಿಝ್ಕ್' ಎಂಬುದನ್ನು ನಾವು 'ಧರ್ಮಸಮ್ಮತ ಜೀವನಾಧಾರ'ವೆಂದು ಅನುವಾದಿಸಿದ್ದೇವೆ. ಏಕೆಂದರೆ ಅಲ್ಲಾಹನು ನಿಷಿದ್ಧ ಸಂಪತ್ತನ್ನು 'ಅಲ್ಲಾಹನ ರಿಝ್ಕ್' ಎಂದು ಎಲ್ಲೂ ಕರೆದಿಲ್ಲ.

لَا نَسْـَٔلُكَ رِزْقًا ۖ نَّحْنُ نَرْزُقُكَ ۗ وَالْعَاقِبَةُ لِلتَّقْوٰى ﴿١٣٢﴾

ಸ್ವಂತ ನೀವೂ ಅದನ್ನು ಸಂಸ್ಥಾಪಿಸಿರಿ. ನಾವು ನಿಮ್ಮಿಂದ ಜೀವನಾಧಾರವನ್ನೇನೂ ಕೇಳುವುದಿಲ್ಲ. ಜೀವನಾಧಾರವನ್ನಾದರೋ ನಾವೇ ನಿಮಗೆ ಕೊಡುತ್ತಿದ್ದೇವೆ. ಪರಿಣಾಮದ ಶ್ರೇಷ್ಠತೆಯು, 'ಧರ್ಮನಿಷ್ಠೆ'ಗೆ ಮಾತ್ರವಿರುತ್ತದೆ.

وَقَالُوْا لَوْلَا يَأْتِيْنَا بِاٰيَةٍ مِّنْ رَّبِّهٖ ۚ اَوَلَمْ تَأْتِهِمْ بَيِّنَةُ مَا فِى الصُّحُفِ الْاُوْلٰى ﴿١٣٣﴾

133. ಈ ವ್ಯಕ್ತಿ ತನ್ನ ಪ್ರಭುವಿನ ಕಡೆಯಿಂದ ನಿದರ್ಶನ (ಪವಾಡ) ವನ್ನೇನೂ ತರುವುದಿಲ್ಲವೇಕೆ ಎಂದು ಅವರು ಕೇಳುತ್ತಾರೆ. ಅವರ ಬಳಿಗೆ ಹಿಂದಿನ ಗ್ರಂಥಗಳ ಸಕಲ ಶಿಕ್ಷಣಗಳ ಸುಸ್ಪಷ್ಟ ವಿವರಣೆ ಬರಲಿಲ್ಲವೇ?[39]

وَلَوْ اَنَّاۤ اَهْلَكْنٰهُمْ بِعَذَابٍ مِّنْ قَبْلِهٖ لَقَالُوْا رَبَّنَا لَوْلَاۤ اَرْسَلْتَ اِلَيْنَا رَسُوْلًا فَنَتَّبِعَ اٰيٰتِكَ مِنْ قَبْلِ اَنْ نَّذِلَّ وَنَخْزٰى ﴿١٣٤﴾

134. ಅದು ಬರುವುದಕ್ಕೆ ಮುಂಚೆ ನಾವು ಅವರನ್ನು ಯಾವುದಾದರೊಂದು ಯಾತನೆಯಿಂದ ನಾಶಗೊಳಿಸಿ ಬಿಡುತ್ತಿದ್ದರೆ, "ಓ ನಮ್ಮ ಪ್ರಭೂ, ನೀನು ನಮ್ಮ ಬಳಿಗೆ ಓರ್ವ ಸಂದೇಶವಾಹಕನನ್ನೇಕೆ ಕಳುಹಿಸಲಿಲ್ಲ? ನಾವು ನಿಂದ್ಯರೂ ನೀಚರೂ ಆಗುವುದಕ್ಕೆ ಮುಂಚೆಯೇ ನಾವು ನಿನ್ನ ವಚನಗಳ ಅನುಸರಣೆ ಮಾಡಿಕೊಳ್ಳುತ್ತಿದ್ದೆವಲ್ಲ!" ಎಂದು ಇವರೇ ಹೇಳುತ್ತಿದ್ದರು.

قُلْ كُلٌّ مُّتَرَبِّصٌ فَتَرَبَّصُوْا ۚ فَسَتَعْلَمُوْنَ مَنْ اَصْحٰبُ الصِّرَاطِ السَّوِيِّ وَمَنِ اهْتَدٰى ﴿١٣٥﴾

135. ಓ ಪೈಗಂಬರರೇ,- ಪ್ರತಿಯೊಬ್ಬನೂ ಕರ್ಮಫಲದ ಪ್ರತೀಕ್ಷೆಯಲ್ಲೇ ಇದ್ದಾನೆ, ಆದ್ದರಿಂದ ನಿರೀಕ್ಷಿಸುತ್ತಲಿರಿ, ಯಾರು ನೇರ ಮಾರ್ಗದಲ್ಲಿ ನಡೆಯುವವರು ಮತ್ತು ಯಾರು ಸನ್ಮಾರ್ಗದರ್ಶನ ಹೊಂದಿದವರೆಂದು ಸದ್ಯವೇ ನಿಮಗೆ ತಿಳಿದು ಬರುವುದು, ಎಂದು ಅವರೊಡನೆ ಹೇಳಿರಿ.

---

39. ಅರ್ಥಾತ್- ನಿಮ್ಮ ಪೈಕಿಯ ನಿರಕ್ಷರಿಯೊಬ್ಬ, ಆರಂಭದಿಂದ ಈತನಕ ದಿವ್ಯಗ್ರಂಥಗಳಲ್ಲಿ ಬಂದಿರುವ ವಿಷಯ ಮತ್ತು ಬೋಧನೆಗಳ ಸಾರವನ್ನು ಹೊಂದಿರುವಂತಹ ಗ್ರಂಥವೊಂದನ್ನು ಸಮರ್ಪಿಸಿರುವುದು ಪವಾಡವೆನ್ನಲು ಸಾಕಾಗದೇ? ಮಾನವನ ಮಾರ್ಗದರ್ಶನಕ್ಕೆ ಆ ಗ್ರಂಥಗಳಲ್ಲಿದ್ದುದನ್ನೆಲ್ಲಾ ಇದರಲ್ಲಿ ಕ್ರೋಡೀಕರಿಸಲಾಗಿದೆ. ಮಾತ್ರವಲ್ಲ ಮರಳುಗಾಡಿನ ಬದ್ದೂಗಳು ಅದನ್ನು ತಿಳಿದು ಅದರಿಂದ ಪ್ರಯೋಜನ ಪಡೆಯುವಂತಹ ರೂಪದಲ್ಲಿ ಅದನ್ನು ಸುವ್ಯಕ್ತ ಗೊಳಿಸಲಾಗಿದೆ.






# 21. ಅಲ್ ಅಂಬಿಯಾ

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. *ಜನರ ಲೆಕ್ಕಾಚಾರದ ಸಮಯ ಸಮೀಪಿಸಿದೆ ಮತ್ತು ಅವರಾದರೋ ನಿರ್ಲಕ್ಷ್ಯದಿಂದ ಮುಖ ತಿರುಗಿಸಿಕೊಂಡಿದ್ದಾರೆ.

اِقْتَرَبَ لِلنَّاسِ حِسَابُهُمْ وَهُمْ فِيْ غَفْلَةٍ مُّعْرِضُوْنَ ①

2. ಅವರ ಪ್ರಭುವಿನ ಕಡೆಯಿಂದ ಅವರ ಬಳಿಗೆ ಬರುವ ಯಾವುದೇ ಹೊಸ ಉಪದೇಶವನ್ನು ಆಟೋಟಗಳಲ್ಲಿ ತಲ್ಲೀನರಾಗಿದ್ದುಕೊಂಡು ಅಲಕ್ಷ್ಯಭಾವದಿಂದ ಕೇಳುತ್ತಾರೆ.

مَا يَاْتِيْهِمْ مِّنْ ذِكْرٍ مِّنْ رَّبِّهِمْ مُّحْدَثٍ اِلَّا اسْتَمَعُوْهُ وَهُمْ يَلْعَبُوْنَ ②

3. ಅವರ ಮನಸ್ಸು (ಬೇರೆಯೇ ವಿಚಾರಗಳಲ್ಲಿ) ತನ್ಮಯವಾಗಿವೆ. "ಇವನು ನಿಮ್ಮಂತೆಯೇ ಇರುವ ಓರ್ವ ಮನುಷ್ಯನೇ ತಾನೇ! ಹೀಗಿರುವಾಗ ನೀವು ಕಣ್ಣಾರೆ ಕಾಣುತ್ತ ಮಾಟದ ಬಲೆಯಲ್ಲಿ ಸಿಕ್ಕಿ ಬೀಳುವಿರಾ?" ಎಂದು ಅಕ್ರಮಿಗಳು ಪರಸ್ಪರ ಪಿಸು ಗುಟ್ಟುತ್ತಾರೆ.

لَاهِيَةً قُلُوْبُهُمْ ؕ وَاَسَرُّوا النَّجْوَى ۖ الَّذِيْنَ ظَلَمُوْا ۖ هَلْ هٰذَاۤ اِلَّا بَشَرٌ مِّثْلُكُمْ ۚ اَفَتَاْتُوْنَ السِّحْرَ وَاَنْتُمْ تُبْصِرُوْنَ ③

4. ಸಂದೇಶವಾಹಕರು ಹೇಳಿದರು: "ನನ್ನ ಪ್ರಭು ಆಕಾಶದಲ್ಲೂ ಭೂಮಿಯಲ್ಲೂ ಆಡಲಾಗುವ ಪ್ರತಿಯೊಂದು ಮಾತನ್ನೂ ಅರಿಯುತ್ತಾನೆ. ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ."[1]

قٰلَ رَبِّيْ يَعْلَمُ الْقَوْلَ فِي السَّمَآءِ وَالْاَرْضِ ۡ وَهُوَ السَّمِيْعُ الْعَلِيْمُ ④

5. "ವಾಸ್ತವದಲ್ಲಿ ದಿಕ್ಕೆಟ್ಟ ಕನಸುಗಳಿವು- ನಿಜವಾಗಿ ಇದೆಲ್ಲ ಇವನ

بَلْ قَالُوْۤا اَضْغَاثُ اَحْلَامٍ بَلِ

***ಇಲ್ಲಿಂದ 17ನೆಯ ಕಾಂಡ ಆರಂಭ.**

1. ಅರ್ಥಾತ್- ಪ್ರವಾದಿಯು ಆ ಸುಳ್ಳು ಪ್ರಚಾರ ಮತ್ತು ರಹಸ್ಯ ಮಾತುಗಳ ಅಭಿಯಾನಕ್ಕೆ ಕೊಟ್ಟ ಉತ್ತರವಿಷ್ಟೆ: "ನೀವು ಹೇಳುತ್ತಿರುವ ಮಾತುಗಳನ್ನೆಲ್ಲಾ ಅಲ್ಲಾಹನು ಕೇಳುವವನೂ ಅರಿಯುವವನೂ ಆಗಿದ್ದಾನೆ. ಅದನ್ನು ನೀವು ಜೋರಾಗಿ ಹೇಳಿದರೂ ಮೆಲುಧ್ವನಿಯಲ್ಲಿ ಕಿವಿಯಲ್ಲಿ ಉಸುರಿದರೂ ಸರಿಯೇ" ಅನ್ಯಾಯದಿಂದ ವರ್ತಿಸಲು ಆ ಶತ್ರುಗಳಿಗೆ ಅವರೆಂದೂ ನೇರವಾದ ಪ್ರತ್ಯುತ್ತರವನ್ನು ಕೊಡಲು ಮುಂದಾಗಲಿಲ್ಲ.

ಸ್ವಂತ ಕಲ್ಪನೆ. ನಿಜವಾಗಿ ಇವನೊಬ್ಬ ಕವಿ ಅನ್ಯಥಾ ಗತಕಾಲದ ಸಂದೇಶವಾಹಕರು ನಿದರ್ಶನಗಳೊಂದಿಗೆ ಕಳುಹಿಸಲ್ಪಟ್ಟಿರುವಂತೆ ಇವನೂ ಒಂದು ನಿದರ್ಶನ ತರಲಿ" ಎಂದು ಅವರು ಹೇಳುತ್ತಾರೆ.

افْتَرَاهُ بَلْ هُوَ شَاعِرٌ فَلْيَأْتِنَا بِآيَةٍ كَمَا أُرْسِلَ الْأَوَّلُونَ ٥

6. ವಸ್ತುತಃ ಇವರಿಗಿಂತ ಮುಂಚೆ ನಾವು ನಾಶಗೊಳಿಸಿದ ಯಾವ ನಾಡೂ ವಿಶ್ವಾಸವಿರಿಸಲಿಲ್ಲ. ಈಗ ಇವರು ವಿಶ್ವಾಸವಿರಿಸುವರೇ?

مَا آمَنَتْ قَبْلَهُمْ مِنْ قَرْيَةٍ أَهْلَكْنَاهَا أَفَهُمْ يُؤْمِنُونَ ٦

7. ಪೈಗಂಬರರೇ, ನಾವು ನಿಮಗಿಂತ ಮುಂಚೆಯೂ ಮನುಷ್ಯರನ್ನೇ ಸಂದೇಶವಾಹಕರಾಗಿ ರವಾನಿಸಿದ್ದೆವು. ಅವರ ಮೇಲೆ ನಾವು 'ದಿವ್ಯವಾಣಿ' ಮಾಡುತ್ತಿದ್ದೆವು. ನಿಮಗೆ ಗೊತ್ತಿಲ್ಲದಿದ್ದರೆ ಗ್ರಂಥದವರೊಡನೆ ಕೇಳಿರಿ.

وَمَا أَرْسَلْنَا قَبْلَكَ إِلَّا رِجَالًا نُوحِي إِلَيْهِمْ فَاسْأَلُوا أَهْلَ الذِّكْرِ إِنْ كُنْتُمْ لَا تَعْلَمُونَ ٧

8. ನಾವು ಆ ಸಂದೇಶವಾಹಕರಿಗೆ ಆಹಾರವನ್ನು ಸೇವಿಸದಂತಹ ಶರೀರವನ್ನು ನೀಡಿರಲಿಲ್ಲ ಮತ್ತು ಅವರು ಸದಾ ಕಾಲ ಬದುಕುವವರೂ ಆಗಿರಲಿಲ್ಲ.

وَمَا جَعَلْنَاهُمْ جَسَدًا لَا يَأْكُلُونَ الطَّعَامَ وَمَا كَانُوا خَالِدِينَ ٨

9. ಕೊನೆಗೆ ನಾವು ಅವರೊಡನೆ ಮಾಡಿದ ನಮ್ಮ ವಾಗ್ದಾನವನ್ನು ಪೂರೈಸಿದೆವು ಮತ್ತು ಅವರನ್ನೂ ನಾವಿಚ್ಛಿಸಿದ ಇತರರನ್ನೂ ರಕ್ಷಿಸಿದೆವು ಮತ್ತು ಹದಮೀರಿದವರನ್ನು ನಾಶಗೊಳಿಸಿ ಬಿಟ್ಟೆವು.

ثُمَّ صَدَقْنَاهُمُ الْوَعْدَ فَأَنْجَيْنَاهُمْ وَمَنْ نَشَاءُ وَأَهْلَكْنَا الْمُسْرِفِينَ ٩

10. ಜನರೇ, ನಾವು ನಿಮ್ಮದೇ ಪ್ರಸ್ತಾಪವಿರುವಂತಹ ಒಂದು ಗ್ರಂಥವನ್ನು ನಿಮ್ಮ ಕಡೆಗೆ ಕಳುಹಿಸಿರುವೆವು. ನೀವು ವಿವೇಚಿಸುವುದಿಲ್ಲವೇ?[2]

لَقَدْ أَنْزَلْنَا إِلَيْكُمْ كِتَابًا فِيهِ ذِكْرُكُمْ أَفَلَا تَعْقِلُونَ ١٠

11. ಎಷ್ಟೋ ಅಕ್ರಮಿ ನಾಡುಗಳನ್ನು ನಾವು ಧ್ವಂಸಗೊಳಿಸಿ ಬಿಟ್ಟೆವು ಮತ್ತು ಅವರ ಬಳಿಕ ಬೇರೊಂದು ಜನಾಂಗವನ್ನು ಮೇಲಕ್ಕೆ ತಂದೆವು.

وَكَمْ قَصَمْنَا مِنْ قَرْيَةٍ كَانَتْ ظَالِمَةً وَأَنْشَأْنَا بَعْدَهَا قَوْمًا آخَرِينَ ١١

12. ಅವರಿಗೆ ನಮ್ಮ ಯಾತನೆಯ ಅರಿವಾದಾಗ ಅಲ್ಲಿಂದ ಪಲಾಯನ ಮಾಡತೊಡಗಿದರು.

فَلَمَّا أَحَسُّوا بَأْسَنَا إِذَا هُمْ مِنْهَا يَرْكُضُونَ ١٢

2. ಅರ್ಥಾತ್- ಇದರಲ್ಲಿ ಭ್ರಾಮಕ ವಿಷಯಗಳೇನೂ ಇಲ್ಲ. ನಿಮ್ಮ ಪ್ರಸ್ತಾಪವೇ ಇದೆ. ನಿಮ್ಮ ಮನೋಭಾವ ಮತ್ತು ಜೀವನದ ವ್ಯವಹಾರಗಳನ್ನು ಇದರಲ್ಲಿ ಚರ್ಚಿಸಲಾಗಿದೆ. ನಿಮ್ಮ ಪ್ರಕೃತಿ, ಸೃಷ್ಟಿಯ ಸ್ವರೂಪ ಮತ್ತು ಉಗಮ-ಅಂತ್ಯಗಳ, ಬಗ್ಗೆ ಇದರಲ್ಲಿ ಪ್ರಸ್ತಾಪವಿದೆ. ಸತ್ಯವನ್ನು ಸೂಚಿಸುತ್ತಿರುವಂತಹ ನಿಮ್ಮ ನಡುವೆಯೇ ಇರುವ ದೃಷ್ಟಾಂತಗಳನ್ನು ಆಯ್ದು ಸಮರ್ಪಿಸಲಾಗಿದೆ. ನಿಮ್ಮ ಚಾರಿತ್ರ್ಯದಲ್ಲಿನ ಸದ್ಗುಣ-ದುರ್ಗುಣಗಳ ನಡುವಿನ ಅಂತರವನ್ನು ಸ್ಪಷ್ಟಪಡಿಸಿ ತೋರಿಸಲಾಗಿದೆ. ಅವುಗಳೆಲ್ಲವೂ ಸರಿಯಾಗಿವೆ ಎಂದು ನಿಮ್ಮ ಆತ್ಮಸಾಕ್ಷಿಯೇ ಹೇಳುತ್ತದೆ. ಹಾಗಿರುವಾಗ ನಿಮ್ಮ ಬುದ್ಧಿಗೆ ಎಟುಕಲಾರದಂತಹ ಗೊಂದಲಮಯ ಮತ್ತು ಅಸ್ಪಷ್ಟ ವಿಚಾರ ಅದರಲ್ಲಿ ಯಾವುದಿದೆ?

13. (ಆಗ ಹೇಳಲಾಯಿತು:) "ಓಡಬೇಡಿರಿ, ನೀವು ಸುಖಿಸುತ್ತಿದ್ದಂತಹ ಆ ಭೋಗ ಸಾಮಗ್ರಿಗಳ ಕಡೆಗೆ ಮತ್ತು ನಿಮ್ಮ ಆ ಮನೆಗಳಿಗೇ ಹೋಗಿರಿ, ನೀವು ಪ್ರಶ್ನಿಸಲ್ಪಡಲೂ ಬಹುದು."[3]

لَا تَرْكُضُوا وَارْجِعُوا إِلَىٰ مَا أُتْرِفْتُمْ
فِيهِ وَمَسَاكِنِكُمْ لَعَلَّكُمْ تُسْأَلُونَ ﴿١٣﴾

14. ಆಗ ಅವರು, "ಅಯ್ಯೋ, ನಮ್ಮ ದುರದೃಷ್ಟವೇ! ನಿಜಕ್ಕೂ ನಾವು ಅಪರಾಧಿಗಳಾಗಿದ್ದೆವು" ಎನ್ನತೊಡಗಿದರು.

قَالُوا يَا وَيْلَنَا إِنَّا كُنَّا ظَالِمِينَ ﴿١٤﴾

15. ಮತ್ತು ನಾವು ಅವರನ್ನು ಕೊಯ್ದು ಪೈರಾಗಿ ಹಾಗೂ ಕಿಡಿಯಾರಿದ ಬೂದಿಯ ರಾಶಿಯಾಗಿ ಮಾಡುವ ವರೆಗೂ ಅವರು ಹಾಗೆಯೇ ರೋದಿಸುತ್ತಿದ್ದರು.

فَمَا زَالَت تِّلْكَ دَعْوَاهُمْ حَتَّىٰ
جَعَلْنَاهُمْ حَصِيدًا خَامِدِينَ ﴿١٥﴾

16. ನಾವು ಆಕಾಶವನ್ನೂ ಭೂಮಿಯನ್ನೂ ಅವುಗಳಲ್ಲಿ ಇರುವುದೆಲ್ಲವನ್ನೂ ಬರಿಯ ಲೀಲೆಗಾಗಿ ಸೃಷ್ಟಿಸಲಿಲ್ಲ.

وَمَا خَلَقْنَا السَّمَاءَ وَالْأَرْضَ وَمَا
بَيْنَهُمَا لَاعِبِينَ ﴿١٦﴾

17. ನಾವು ಒಂದು ಆಟದ ವಸ್ತುವನ್ನು ತಯಾರಿಸಲಿಚ್ಛಿಸಿದ್ದರೆ ಮತ್ತು ಅಷ್ಟು ಮಾತ್ರ ನಮಗೆ ಮಾಡಲಿಕ್ಕಿರುತ್ತಿದ್ದರೆ ನಾವದನ್ನು ನಮ್ಮ ಬಳಿಯೇ ಮಾಡಿಕೊಳ್ಳುತ್ತಿದ್ದೆವು.[4]

لَوْ أَرَدْنَا أَن نَّتَّخِذَ لَهْوًا لَّاتَّخَذْنَاهُ
مِن لَّدُنَّا إِن كُنَّا فَاعِلِينَ ﴿١٧﴾

18. ಆದರೆ ನಾವಂತು ಮಿಥ್ಯದ ಮೇಲೆ ಸತ್ಯದ ಹೊಡೆತ ಬೀಳಿಸುತ್ತೇವೆ. ಇದು ಮಿಥ್ಯದ ತಲೆಯನ್ನು ಒಡೆದು ಹಾಕುತ್ತದೆ ಮತ್ತು ಅದು ನೋಡುತ್ತಿದ್ದಂತೆಯೇ ಅಳಿದು ಹೋಗುತ್ತದೆ. ನೀವು ಸೃಷ್ಟಿಸುವ ಮಾತುಗಳಿಂದಾಗಿಯೇ (ನಿಮಗೆ) ವಿನಾಶ ಕಾದಿದೆ.

بَلْ نَقْذِفُ بِالْحَقِّ عَلَى الْبَاطِلِ
فَيَدْمَغُهُ فَإِذَا هُوَ زَاهِقٌ ۚ وَلَكُمُ
الْوَيْلُ مِمَّا تَصِفُونَ ﴿١٨﴾

19. ಆಕಾಶದಲ್ಲೂ ಭೂಮಿಯಲ್ಲೂ ಇರುವ ಸೃಷ್ಟಿಗಳೆಲ್ಲವೂ ಅಲ್ಲಾಹನವು ಮತ್ತು ಅವನ ಬಳಿಯಲ್ಲಿರುವವರು (ದೇವಚರರು) ತಾವು ದೊಡ್ಡವರೆಂದೆಣಿಸಿ ಅವನ ದಾಸ್ಯ-ಆರಾಧನೆಯಿಂದ ವಿಮುಖರಾಗುವುದೂ ಇಲ್ಲ ಬಳಲುವುದೂ ಇಲ್ಲ.[5]

وَلَهُ مَن فِي السَّمَاوَاتِ وَالْأَرْضِ ۚ
وَمَنْ عِندَهُ لَا يَسْتَكْبِرُونَ عَنْ
عِبَادَتِهِ وَلَا يَسْتَحْسِرُونَ ﴿١٩﴾

3. ಇದಕ್ಕೆ ಅನೇಕ ಅರ್ಥಗಳಿರಲು ಸಾಧ್ಯವಿದೆ ಉದಾ: ನಾಳೆ ಯಾರಾದರೂ ಯಾತನೆಯ ಸ್ವರೂಪ ಹೇಗಿತ್ತೆಂದು ಕೇಳಿದರೆ ಹೇಳಲಿಕ್ಕಾಗಿ ಆ ಯಾತನೆಯನ್ನು ಚೆನ್ನಾಗಿ ಪರಿಶೀಲಿಸಿರಿ. ತಮ್ಮ ವೈಭವೋಪೇತವಾದ ಸಭೆಗಳನ್ನು ಮತ್ತೆ ಜರಗಿಸಿರಿ. ಪ್ರಾಯಶಃ ಈಗಲೂ ನಿಮ್ಮ ನೌಕರ ಚಾಕರರು ಬಂದು ಕೈ ಕಟ್ಟಿ, 'ಏನಪ್ಪಣೆ' ಎಂದು ಕೇಳಲೂಬಹುದು. ನಿಮ್ಮ ಅದೇ ಸಮಿತಿಗಳನ್ನು ಸಮಾವೇಶಗೊಳಿಸಿರಿ. ಪ್ರಾಯಶಃ ಈಗಲೂ ನಿಮ್ಮ ವಿವೇಕಪೂರ್ಣ ಸಲಹೆಗಳಿಂದ ಪ್ರಯೋಜನ ಪಡೆಯಲು ಜಗತ್ತು ಸಿದ್ಧವಿರಬಹುದು.
4. ಅರ್ಥಾತ್- ಆಟವಾಡಲಿಕ್ಕಿದ್ದರೆ ನಾವು ಆಟಿಕೆಗಳನ್ನು ಸಿದ್ಧಪಡಿಸಿ ಸ್ವತಃ ಆಡಿಕೊಳ್ಳುತ್ತಿದ್ದೆವು. ಅದಕ್ಕಾಗಿ ನಾವು ನಿರರ್ಥಕವಾಗಿ ಪ್ರಜ್ಞೆ, ವಿವೇಕ ಮತ್ತು ಜವಾಬ್ದಾರಿ ಇರುವ ಒಂದು ಸೃಷ್ಟಿಯನ್ನು ಸೃಷ್ಟಿಸಿ ಅವರ ನಡುವೆ ಸತ್ಯ-ಮಿಥ್ಯದ ಈ ಸಂಘರ್ಷ ಮತ್ತು ಹಗ್ಗಜಗ್ಗಾಟವನ್ನು ಏರ್ಪಡಿಸುವ ಅಕ್ರಮವೆಸಗುತ್ತಿರಲಿಲ್ಲ. ನಮ್ಮ ವಿನೋದ ಮತ್ತು ವಿಹಾರಕ್ಕಾಗಿ ಸಜ್ಜನ ದಾಸರನ್ನು ನಾವು ವಿನಾ ಕಾರಣ ಸಂಕಷ್ಟಕ್ಕೀಡು ಮಾಡುತ್ತಿರಲಿಲ್ಲ.
5. ಅರ್ಥಾತ್- ದೇವನದಾಸ್ಯ ಕೈಗೊಳ್ಳುವುದು ಅವರ ಪಾಲಿಗೆ ಅಪ್ರಿಯ ಕಾರ್ಯವಲ್ಲ. ಆದ್ದರಿಂದ ಅವರು ಒಲ್ಲದ ಮನಸ್ಸಿನಿಂದ ದಾಸ್ಯ ಕೈಗೊಂಡು ದುಃಖಿತರಾಗುವುದಿಲ್ಲ. ದೇವಾದೇಶಗಳನ್ನು ಪಾಲಿಸುವುದರಲ್ಲಿ ಅವರು ದಣಿಯುವುದೂ ಇಲ್ಲ.

20. ಹಗಲೂ ಇರುಳೂ ಅವನ ಕೀರ್ತನೆ ಮಾಡುತ್ತಿರುತ್ತಾರೆ; ವಿಶ್ರಮಿಸುವುದಿಲ್ಲ.

يُسَبِّحُونَ الَّيْلَ وَالنَّهَارَ لَا يَفْتُرُونَ ﴿٢٠﴾

21. ಇವರು ಈ ಭೂಮಿಯಿಂದ ಮಾಡಿದಂತಹ ದೇವರುಗಳು (ನಿರ್ಜೀವಿಗಳಿಗೆ ಜೀವದಾನ ಮಾಡಿ) ಎಬ್ಬಿಸಿ ನಿಲ್ಲಿಸಬಲ್ಲರೇ?

أَمِ اتَّخَذُوٓا ءَالِهَةً مِّنَ الْأَرْضِ
هُمْ يُنشِرُونَ ﴿٢١﴾

22. ಭೂಮಿ-ಆಕಾಶಗಳಲ್ಲಿ ಏಕೈಕ ಅಲ್ಲಾಹನ ಹೊರತು ಇತರ ದೇವರುಗಳೂ ಇರುತ್ತಿದ್ದರೆ (ಭೂಮಿ ಮತ್ತು ಆಕಾಶ) ಇವೆರಡರ ವ್ಯವಸ್ಥೆಯೂ ಕೆಟ್ಟು ಹೋಗುತ್ತಿತ್ತು. ಆದುದರಿಂದ 'ವಿಶ್ವ ಸಿಂಹಾಸನ'ದ ಪ್ರಭುವಾಗಿರುವ ಅಲ್ಲಾಹನು ಇವರು ಹೊರಿಸುವ ಆರೋಪಗಳಿಂದ ಪರಿಶುದ್ಧನಾಗಿರುತ್ತಾನೆ.

لَوْ كَانَ فِيهِمَآ ءَالِهَةٌ إِلَّا اللَّهُ لَفَسَدَتَا ۚ
فَسُبْحَٰنَ اللَّهِ رَبِّ الْعَرْشِ عَمَّا يَصِفُونَ ﴿٢٢﴾

23. ಅವನು ತನ್ನ ಕಾರ್ಯಗಳಿಗಾಗಿ (ಯಾರ ಮುಂದೆಯೂ) ಪ್ರಶ್ನಿಸಲ್ಪಡುವವನಲ್ಲ. ಉಳಿದವರೆಲ್ಲರೂ ಪ್ರಶ್ನಿಸಲ್ಪಡುವವರು.

لَا يُسْـَٔلُ عَمَّا يَفْعَلُ وَهُمْ يُسْـَٔلُونَ ﴿٢٣﴾

24. ಇವರು ಅವನನ್ನು ಬಿಟ್ಟು ಇತರ ದೇವರುಗಳನ್ನು ಮಾಡಿಕೊಂಡಿದ್ದಾರೆಯೇ? ಪೈಗಂಬರರೇ, ಇವರೊಡನೆ ಹೇಳಿರಿ; "ನಿಮ್ಮ ಪುರಾವೆಯನ್ನು ತನ್ನಿರಿ. ನನ್ನ ಕಾಲದವರಿಗೆ ಬೋಧನೆಯಾಗಿರುವ ಈ ಗ್ರಂಥವೂ ಇದೆ. ನನಗಿಂತ ಮುಂಚಿನವರಿಗೆ ಬೋಧನೆಯಾಗಿದ್ದ ಆ ಗ್ರಂಥಗಳೂ ಇವೆ." ಆದರೆ ಇವರಲ್ಲಿ ಹೆಚ್ಚಿನವರಿಗೆ ವಸ್ತುಸ್ಥಿತಿಯ ಅರಿವಿಲ್ಲ. ಆದುದರಿಂದ ವಿಮುಖರಾಗಿದ್ದಾರೆ.

أَمِ اتَّخَذُوا مِن دُونِهِۦٓ ءَالِهَةً ۖ قُلْ
هَاتُوا بُرْهَٰنَكُمْ ۖ هَٰذَا ذِكْرُ مَن مَّعِىَ
وَذِكْرُ مَن قَبْلِى ۗ بَلْ أَكْثَرُهُمْ لَا
يَعْلَمُونَ الْحَقَّ ۖ فَهُم مُّعْرِضُونَ ﴿٢٤﴾

25. ನಾವು ನಿಮಗಿಂತ ಮುಂಚೆ ಕಳುಹಿಸಿದ ಪ್ರತಿಯೊಬ್ಬ ಸಂದೇಶವಾಹಕರಿಗೂ, "ನನ್ನ ಹೊರತು ಅನ್ಯ ದೇವರಿಲ್ಲ. ಆದ್ದರಿಂದ ನೀವು ನನ್ನ ದಾಸ್ಯ-ಆರಾಧನೆಯನ್ನೇ ಮಾಡಿರಿ" ಎಂದು 'ದಿವ್ಯವಾಣಿ' ಮಾಡಿದ್ದೆವು.

وَمَآ أَرْسَلْنَا مِن قَبْلِكَ مِن رَّسُولٍ
إِلَّا نُوحِىٓ إِلَيْهِ أَنَّهُۥ لَآ إِلَٰهَ إِلَّآ
أَنَا۠ فَاعْبُدُونِ ﴿٢٥﴾

26. ರಹ್ಮಾನನಿಗೆ ಮಕ್ಕಳಿದ್ದಾರೆಂದು ಇವರು ಹೇಳುತ್ತಾರೆ. 'ಅಲ್ಲಾಹನು ಪರಮ ಪಾವನನು' ಅವರಂತು (ದೇವಚರರಂತು) ಸನ್ಮಾನಿತ ದಾಸರಾಗಿರುತ್ತಾರೆ.

وَقَالُوا اتَّخَذَ الرَّحْمَٰنُ وَلَدًا ۗ سُبْحَٰنَهُۥ ۚ
بَلْ عِبَادٌ مُّكْرَمُونَ ﴿٢٦﴾

27. ಅವರು ಅವನಿಗೆದುರು ಮಾತಾಡಲಾರರು ಮತ್ತು ಅವನ ಅಪ್ಪಣೆಯಂತೆ ಕಾರ್ಯವೆಸಗುತ್ತಾರೆ.

لَا يَسْبِقُونَهُۥ بِالْقَوْلِ وَهُم بِأَمْرِهِۦ
يَعْمَلُونَ ﴿٢٧﴾

28. ಅವರ ಮುಂದಿರುವುದನ್ನೂ ಅವರಿಗೆ ಮರೆಯಾಗಿರುವುದನ್ನೂ ಅವನು ಬಲ್ಲನು. ಯಾರ ಪರವಾಗಿ ಶಿಫಾರಸನ್ನು ಕೇಳಲು

يَعْلَمُ مَا بَيْنَ أَيْدِيهِمْ وَمَا خَلْفَهُمْ
وَلَا يَشْفَعُونَ إِلَّا لِمَنِ ارْتَضَىٰ

ಅಲ್ಲಾಹನು ಸಮ್ಮತಿಸುವನೋ ಅವನ ಹೊರತು ಯಾರ ಬಗ್ಗೆಯೂ ಅವರು ಶಿಫಾರಸು ಮಾಡುವುದಿಲ್ಲ ಮತ್ತು ಅವರು ಅವನ ಭಯದಿಂದ ಭೀತರಾಗಿರುತ್ತಾರೆ.

وَهُمْ مِّنْ خَشْيَتِهٖ مُشْفِقُوْنَ ﴿٢٨﴾

29. ಅಲ್ಲಾಹನ ಹೊರತು ನಾನೂ ಒಬ್ಬ ದೇವನೆಂದು ಅವರ ಪೈಕಿ ಯಾರಾದರೂ ಹೇಳಿಬಿಟ್ಟನೆಂದರೆ ಅವನಿಗೆ ನಾವು ನರಕಾಗ್ನಿಯ ಶಿಕ್ಷೆ ಕೊಡುವೆವು. ನಮ್ಮಲ್ಲಿ ಅಕ್ರಮಿಗಳಿಗೆ ಇದೇ ಪ್ರತಿಫಲವಿದೆ.

وَمَنْ يَّقُلْ مِنْهُمْ اِنِّيْٓ اِلٰهٌ مِّنْ دُوْنِهٖ فَذٰلِكَ نَجْزِيْهِ جَهَنَّمَ ؕ كَذٰلِكَ نَجْزِي الظّٰلِمِيْنَ ﴿٢٩﴾

30. (ಪ್ರವಾದಿಯ ಮಾತನ್ನು ಪಾಲಿಸಲು) ನಿರಾಕರಿಸಿದವರು, ಆಕಾಶಗಳೂ ಭೂಮಿಯೂ ಕೂಡಿ ಕೊಂಡಿದ್ದು ಅನಂತರ ನಾವು ಅವುಗಳನ್ನು ಬೇರ್ಪಡಿಸಿದ್ದನ್ನೂ ಪ್ರತಿಯೊಂದು ಜೀವಿಯನ್ನೂ ನೀರಿನಿಂದ ಸೃಷ್ಟಿಸಿದ್ದನ್ನೂ ಕಾಣಲಿಲ್ಲವೇ? ಅವರು (ನಮ್ಮ ಸೃಷ್ಟಿಕರ್ತೃತ್ವದ ಮೇಲೆ) ವಿಶ್ವಾಸವಿರಿಸುವುದಿಲ್ಲವೇ?

اَوَلَمْ يَرَ الَّذِيْنَ كَفَرُوْٓا اَنَّ السَّمٰوٰتِ وَالْاَرْضَ كَانَتَا رَتْقًا فَفَتَقْنٰهُمَا ؕ وَجَعَلْنَا مِنَ الْمَآءِ كُلَّ شَيْءٍ حَيٍّ ؕ اَفَلَا يُؤْمِنُوْنَ ﴿٣٠﴾

31. ನಾವು ಭೂಮಿಯಲ್ಲಿ ಪರ್ವತಗಳನ್ನು ನಾಟಿ ಅದು ಇವರೊಂದಿಗೆ ಉರುಳಿ ಬಿಡದಂತೆ ಮಾಡಿದೆವು ಮತ್ತು ಜನರು ತಮ್ಮ ದಾರಿಯನ್ನು ಕಂಡುಕೊಳ್ಳುವಂತಾಗಲು ಅದರಲ್ಲಿ ವಿಶಾಲವಾದ ಮಾರ್ಗಗಳನ್ನು ಮಾಡಿದೆವು.

وَجَعَلْنَا فِي الْاَرْضِ رَوَاسِيَ اَنْ تَمِيْدَ بِهِمْ ۪ وَجَعَلْنَا فِيْهَا فِجَاجًا سُبُلًا لَّعَلَّهُمْ يَهْتَدُوْنَ ﴿٣١﴾

32. ನಾವು ಆಕಾಶವನ್ನು ಒಂದು ಭದ್ರ ಮೇಲು ಛಾವಣಿಯನ್ನಾಗಿ ಮಾಡಿದೆವು. ಆದರೆ ಇವರಾದರೋ ವಿಶ್ವದ ನಿದರ್ಶನಗಳ ಕಡೆಗೆ ಗಮನಿಸುವುದೇ ಇಲ್ಲ.

وَجَعَلْنَا السَّمَآءَ سَقْفًا مَّحْفُوْظًا ۚ وَّهُمْ عَنْ اٰيٰتِهَا مُعْرِضُوْنَ ﴿٣٢﴾

33. ರಾತ್ರಿ ಹಗಲುಗಳನ್ನು ಉಂಟು ಮಾಡಿದವನೂ ಸೂರ್ಯ-ಚಂದ್ರನನ್ನು ಸೃಷ್ಟಿಸಿದವನೂ ಅಲ್ಲಾಹನೇ. ಎಲ್ಲವೂ ಒಂದೊಂದು ಕಕ್ಷೆಯಲ್ಲಿ(ಫಲಕ್‌ನಲ್ಲಿ) ತೇಲುತ್ತಿವೆ.[6]

وَهُوَ الَّذِيْ خَلَقَ الَّيْلَ وَالنَّهَارَ وَالشَّمْسَ وَالْقَمَرَ ؕ كُلٌّ فِيْ فَلَكٍ يَّسْبَحُوْنَ ﴿٣٣﴾

34. ಪೈಗಂಬರರೇ, ನಾವು ಅಮರತ್ವವನ್ನು ನಿಮಗಿಂತ ಮುಂಚೆಯೂ ಯಾವ ಮನುಷ್ಯನಿಗೂ ನೀಡಲಿಲ್ಲ. ನೀವು ಮರಣ ಹೊಂದಿದರೆ ಇವರೇನು ಶಾಶ್ವತವಾಗಿ ಬದುಕಿರುವರೇ?

وَمَا جَعَلْنَا لِبَشَرٍ مِّنْ قَبْلِكَ الْخُلْدَ ؕ اَفَا۟ئِنْ مِّتَّ فَهُمُ الْخٰلِدُوْنَ ﴿٣٤﴾

6. 'ಫಲಕ್' ಎಂಬ ಪದವು ಫಾರ್ಸಿಯ 'ಚರಖ್' ಅಥವಾ 'ಗರ್ದೂಂ' ಎಂಬ ಪದಕ್ಕೆ ಸಮಾನಾರ್ಥವಾಗಿದೆ. ಇದು ಅರಬಿಯಲ್ಲಿ ಆಕಾಶಕ್ಕೆ ಬಳಸುವ ಚಿರಪರಿಚಿತ ಪದಗಳಲ್ಲೊಂದಾಗಿದೆ. "ಎಲ್ಲವೂ ಒಂದೊಂದು 'ಫಲಕ್'ನಲ್ಲಿ ತೇಲುತ್ತಿವೆ" ಎಂಬುದರಿಂದ ಎರಡು ವಿಷಯಗಳು ಸ್ಪಷ್ಟವಾಗುತ್ತದೆ. ಮೊದಲನೆಯದಾಗಿ ಈ ನಕ್ಷತ್ರಗಳೆಲ್ಲಾ ಒಂದೇ 'ಫಲಕ್'ನಲ್ಲಿಲ್ಲ. ಬದಲಾಗಿ ಪ್ರತಿಯೊಂದಕ್ಕೂ ವಿಭಿನ್ನ 'ಫಲಕ್'ಗಳಿವೆ. ಎರಡನೆಯದಾಗಿ 'ಫಲಕ್' ಎಂದರೆ ನಕ್ಷತ್ರಗಳು ಮೊಳೆಗಳಂತೆ ಲಗತ್ತಿಸಲ್ಪಟ್ಟು ಅದರ ಜತೆಗೆ ತಿರುಗುತ್ತಿರುವಂತಹ ವಸ್ತುವಲ್ಲ. ಅದು ತೇಲುವ ಅಥವಾ ಅಂತರಿಕ್ಷ ಯಾ ಶೂನ್ಯದ ಸ್ವರೂಪದ ವಸ್ತುವಾಗಿದೆ. ಇದರಲ್ಲಿ ಈ ನಕ್ಷತ್ರಗಳ ಚಲನೆ ತೇಲುವುದನ್ನು ಹೋಲುತ್ತದೆ.

35. ಪ್ರತಿಯೊಂದು ಜೀವಿಗೂ ಮರಣದ ಸವಿಯನ್ನು ಅನುಭವಿಸಲಿಕ್ಕಿದೆ ಮತ್ತು ನಾವು ನಿಮ್ಮೆಲ್ಲರನ್ನೂ ಸುಸ್ಥಿತಿ-ದುಸ್ಥಿತಿಗಳಲ್ಲಿಟ್ಟು ಪರೀಕ್ಷಿಸುತ್ತಿದ್ದೇವೆ, ಕೊನೆಗೆ ನೀವು ನಮ್ಮ ಕಡೆಗೇ ಮರಳಲಿದ್ದೀರಿ.

كُلُّ نَفْسٍ ذَآئِقَةُ الْمَوْتِ ۗ وَنَبْلُوكُم بِالشَّرِّ وَالْخَيْرِ فِتْنَةً ۖ وَإِلَيْنَا تُرْجَعُونَ ﴿٣٥﴾

36. ಈ ಸತ್ಯನಿಷೇಧಿಗಳು ನಿಮ್ಮನ್ನು ಕಂಡಾಗಲೆಲ್ಲಾ ಅಪಹಾಸ್ಯ ಮಾಡದೇ ಬಿಡುವುದಿಲ್ಲ. ನಿಮ್ಮ ದೇವರುಗಳ ಪ್ರಸ್ತಾಪವೆತ್ತುತ್ತಿರುವವನು ಇವನೇ ತಾನೆ?" ಎಂದು ಕೇಳುತ್ತಾರೆ. ಅವರಂತು ರಹ್ಮಾನನ ಪ್ರಸ್ತಾಪವನ್ನು ತಿರಸ್ಕರಿಸುವವರಾಗಿದ್ದಾರೆ.

وَإِذَا رَآكَ الَّذِينَ كَفَرُوا إِن يَتَّخِذُونَكَ إِلَّا هُزُوًا أَهَٰذَا الَّذِي يَذْكُرُ آلِهَتَكُمْ وَهُم بِذِكْرِ الرَّحْمَٰنِ هُمْ كَافِرُونَ ﴿٣٦﴾

37. ಮಾನವನು ದುಡುಕು ಸ್ವಭಾವದ ಸೃಷ್ಟಿ. ನಾನೀಗಲೇ ನಿಮಗೆ ನನ್ನ ನಿದರ್ಶನಗಳನ್ನು ತೋರಿಸಿ ಕೊಡುತ್ತೇನೆ. ನನ್ನೊಡನೆ ದುಡುಕಬೇಡಿರಿ.

خُلِقَ الْإِنسَانُ مِنْ عَجَلٍ ۚ سَأُورِيكُمْ آيَاتِي فَلَا تَسْتَعْجِلُونِ ﴿٣٧﴾

38. "ನೀವು ಸತ್ಯವಾದಿಯಾಗಿದ್ದರೆ ಈ ಬೆದರಿಕೆಯು ಈಡೇರುವುದು ಯಾವಾಗ?" ಎಂದು ಇವರು ಕೇಳುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ﴿٣٨﴾

39. ಈ ಸತ್ಯನಿಷೇಧಿಗಳು ತಮ್ಮ ಮುಖಗಳನ್ನಾಗಲಿ ತಮ್ಮ ಬೆನ್ನುಗಳನ್ನಾಗಲಿ ಅಗ್ನಿಯಿಂದ ರಕ್ಷಿಸಿಕೊಳ್ಳಲಾರದಂತಹ ಹಾಗೂ ಇವರಿಗೆ ಎಲ್ಲಿಂದಲೂ ಸಹಾಯ ಒದಗದಂತಹ ಸಂದರ್ಭದ ಬಗ್ಗೆ ಅರಿಯುತ್ತಿದ್ದರೆ!

لَوْ يَعْلَمُ الَّذِينَ كَفَرُوا حِينَ لَا يَكُفُّونَ عَن وُجُوهِهِمُ النَّارَ وَلَا عَن ظُهُورِهِمْ وَلَا هُمْ يُنصَرُونَ ﴿٣٩﴾

40. ಆ ವಿಪತ್ತು ಹಠಾತ್ತನೆ ಬಂದು ಬಿಡುವುದು ಮತ್ತು ಅದು ಇವರನ್ನು ಥಟ್ಟನೆ ಹೇಗೆ ಆವರಿಸಿ ಗಾಬರಿಗೊಳಿಸುವುದೆಂದರೆ, ಇವರಿಗೆ ಅದನ್ನು ನಿವಾರಿಸಲಿಕ್ಕೂ ಸಾಧ್ಯವಾಗದು ಮತ್ತು ಕ್ಷಣ ಮಾತ್ರದ ಸಮಯಾವಕಾಶವೂ ಸಿಗಲಾರದು.

بَلْ تَأْتِيهِم بَغْتَةً فَتَبْهَتُهُمْ فَلَا يَسْتَطِيعُونَ رَدَّهَا وَلَا هُمْ يُنظَرُونَ ﴿٤٠﴾

41. ನಿಮಗಿಂತ ಮುಂಚೆಯೂ ಸಂದೇಶವಾಹಕರನ್ನು ಅಪಹಾಸ್ಯ ಮಾಡಲಾಗಿದೆ. ಆದರೆ ಅವರನ್ನು ಗೇಲಿ ಮಾಡಿದವರು ತಾವು ಅಪಹಾಸ್ಯ ಮಾಡುತ್ತಿದ್ದುದರ ಸುಳಿಯಲ್ಲೇ ಸಿಕ್ಕಿ ಹೋದರು.

وَلَقَدِ اسْتُهْزِئَ بِرُسُلٍ مِّن قَبْلِكَ فَحَاقَ بِالَّذِينَ سَخِرُوا مِنْهُم مَّا كَانُوا بِهِ يَسْتَهْزِئُونَ ﴿٤١﴾

42. ಪೈಗಂಬರರೇ, ನಿಮ್ಮನ್ನು ಹಗಲೂ ರಾತ್ರಿಯೂ ರಹ್ಮಾನನಿಂದ ರಕ್ಷಿಸುವವನು ಯಾರಿದ್ದಾನೆಂದು ಇವರನ್ನು ಕೇಳಿರಿ. ಆದರೆ ಇವರು ತಮ್ಮ ಪ್ರಭುವಿನ ಉಪದೇಶದಿಂದ ವಿಮುಖರಾಗುತ್ತಿದ್ದಾರೆ.

قُلْ مَن يَكْلَؤُكُم بِاللَّيْلِ وَالنَّهَارِ مِنَ الرَّحْمَٰنِ ۗ بَلْ هُمْ عَن ذِكْرِ رَبِّهِم مُّعْرِضُونَ ﴿٤٢﴾

43. ನಮ್ಮ ವಿರುದ್ಧ ಇವರನ್ನು ಬೆಂಬಲಿಸುವಂತಹ ದೇವರು ಯಾರಾದರೂ ಇವರಿಗೆ ಇದ್ದಾರೆಯೇ? ಆ ದೇವರುಗಳು ಸ್ವಯಂ ತಮಗೇ ಸಹಾಯ ಮಾಡಿಕೊಳ್ಳಲಾರರು ಮತ್ತು ನಮ್ಮ ಸಮರ್ಥನೆಯೂ ಅವರಿಗಿಲ್ಲ.

أَمْ لَهُمْ آلِهَةٌ تَمْنَعُهُم مِّن دُونِنَا ۚ لَا يَسْتَطِيعُونَ نَصْرَ أَنفُسِهِمْ وَلَا هُم مِّنَّا يُصْحَبُونَ ﴿٤٣﴾

44. ವಾಸ್ತವದಲ್ಲಿ ನಾವು ಇವರಿಗೂ ಇವರ ಪೂರ್ವಜರಿಗೂ ಜೀವನ ಸಾಧನಗಳನ್ನು ಕೊಡುತ್ತಾ ಹೋದೆವು. ಹೀಗೆ ಅವರ ಜೀವನಾವಧಿ ದೀರ್ಘವಾಯಿತು. ಆದರೆ ನಾವು ಭೂಮಿಯನ್ನು ಅದರ ವಿವಿಧ ದಿಸೆಗಳಿಂದ ಕಡಿತಗೊಳಿಸುತ್ತ ಬರುತ್ತಿರುವುದು ಇವರಿಗೆ ತೋರುವುದಿಲ್ಲವೇ?[7] ಹೀಗಿರುವಾಗ ಇವರು ಮೇಲುಗೈ ಸಾಧಿಸುವರೇ?

بَلْ مَتَّعْنَا هَٰؤُلَاءِ وَآبَاءَهُمْ حَتَّىٰ طَالَ عَلَيْهِمُ الْعُمُرُ ۗ أَفَلَا يَرَوْنَ أَنَّا نَأْتِي الْأَرْضَ نَنقُصُهَا مِنْ أَطْرَافِهَا ۚ أَفَهُمُ الْغَالِبُونَ ﴿٤٤﴾

45. ನಾನಂತು 'ದಿವ್ಯವಾಣಿ'ಯ ಆಧಾರದಲ್ಲಿ ನಿಮಗೆ ಎಚ್ಚರಿಕೆ ಕೊಡುತ್ತಿದ್ದೇನೆಂದು ಇವರೊಡನೆ ಹೇಳಿರಿ. ಆದರೆ ಕಿವುಡರಿಗೆ ಎಷ್ಟು ಎಚ್ಚರಿಸಿದರೂ ಅವರು ಕರೆಯನ್ನು ಕೇಳುವುದಿಲ್ಲ.

قُلْ إِنَّمَا أُنذِرُكُم بِالْوَحْيِ ۚ وَلَا يَسْمَعُ الصُّمُّ الدُّعَاءَ إِذَا مَا يُنذَرُونَ ﴿٤٥﴾

46. ನಿನ್ನ ಪ್ರಭುವಿನ ಯಾತನೆಯು ಇವರಿಗೆ ಕಿಂಚಿತ್ತಾದರೂ ಸೋಂಕಿ ಬಿಟ್ಟರೆ. "ಅಯ್ಯೋ ನಮ್ಮ ದುರದೃಷ್ಟವೇ! ನಿಜಕ್ಕೂ ನಾವು ಅಪರಾಧಿಗಳೇ ಆಗಿದ್ದೆವು" ಎಂದು ಚೀತ್ಕರಿಸುವರು.

وَلَئِن مَّسَّتْهُمْ نَفْحَةٌ مِّنْ عَذَابِ رَبِّكَ لَيَقُولُنَّ يَا وَيْلَنَا إِنَّا كُنَّا ظَالِمِينَ ﴿٤٦﴾

47. ಪುನರುತ್ಥಾನ ದಿನ ನಾವು ನಿಖರವಾಗಿ ತೂಗುವ ತಕ್ಕಡಿಯನ್ನಿಟ್ಟು ಬಿಡುವೆವು. ಅನಂತರ ಯಾರ ಮೇಲೂ ಸ್ವಲ್ಪವೂ ಅಕ್ರಮವಾಗದು. ಯಾರಾದರೂ ಸಾಸಿವೆ ಕಾಳಿನಷ್ಟಾದರೂ ಏನಾದರೂ ಮಾಡಿದ್ದರೆ ನಾವು ಅದನ್ನು ಮುಂದೆ ತರುವೆವು ಮತ್ತು ಲೆಕ್ಕ ಪರಿಶೋಧನೆಗೆ ನಾವೇ ಸಾಕು.

وَنَضَعُ الْمَوَازِينَ الْقِسْطَ لِيَوْمِ الْقِيَامَةِ فَلَا تُظْلَمُ نَفْسٌ شَيْئًا ۖ وَإِن كَانَ مِثْقَالَ حَبَّةٍ مِّنْ خَرْدَلٍ أَتَيْنَا بِهَا ۗ وَكَفَىٰ بِنَا حَاسِبِينَ ﴿٤٧﴾

48-49. ಈ ಮುಂಚೆ ನಾವು ಮೂಸಾ ಮತ್ತು ಹಾರೂನರಿಗೆ 'ಸತ್ಯ ಅಸತ್ಯಗಳ ಮಾನದಂಡ' ಪ್ರಕಾಶ ಮತ್ತು (ದಿಕ್ರ್) ಬೋಧನೆಗಳನ್ನು, ತಮ್ಮ ಪ್ರಭುವನ್ನು ಪ್ರತ್ಯಕ್ಷವಾಗಿ ನೋಡದೆಯೇ ಭಯಪಡುವ ಹಾಗೂ (ವಿಚಾರಣೆಯ) ಆ ಘಳಿಗೆಯ ಬಗ್ಗೆ ಸದಾ ಭೀತರಾಗಿರುವ 'ಧರ್ಮನಿಷ್ಠ'ರ ಶ್ರೇಯಸ್ಸಿಗಾಗಿ ನೀಡಿದ್ದೆವು-

وَلَقَدْ آتَيْنَا مُوسَىٰ وَهَارُونَ الْفُرْقَانَ وَضِيَاءً وَذِكْرًا لِّلْمُتَّقِينَ ﴿٤٨﴾ الَّذِينَ يَخْشَوْنَ رَبَّهُم بِالْغَيْبِ وَهُم مِّنَ السَّاعَةِ مُشْفِقُونَ ﴿٤٩﴾

7. ಅರ್ಥಾತ್- ಭೂಮಿಯಲ್ಲಿ ಬರ, ಸಾಂಕ್ರಾಮಿಕ ರೋಗ, ನೆರೆ, ಭೂಕಂಪ, ತೀವ್ರ ಚಳಿ ಅಥವಾ ಸುಡುಬಿಸಿಲು ಇತ್ಯಾದಿಗಳ ರೂಪದಲ್ಲಿ ನಮ್ಮ ಪ್ರಬಲಶಕ್ತಿಯ ಕೌಶಲ್ಯದ ಕುರುಹುಗಳು ಬಹಿರಂಗವಾಗಿ ಕಾಣಿಸುತ್ತಿರುತ್ತವೆ. ಅದು ಮಾನವನ ಸಾಧನೆಗಳನ್ನೆಲ್ಲಾ ಮಣ್ಣುಗೂಡಿಸಿ ಬಿಡುತ್ತದೆ. ಸಾವಿರಾರು ಅಥವಾ ಲಕ್ಷಗಟ್ಟಲೆ ಜನರು ಸಾಯುತ್ತಾರೆ. ಜನವಾಸ ಪ್ರದೇಶಗಳು ನಾಶ ಹೊಂದುತ್ತವೆ. ಬೆಳೆದು ನಿಂತಿರುವ ತೆನೆಯುವ ಗದ್ದೆಗಳು ಸೂರೆಗೊಳ್ಳುತ್ತವೆ. ಉತ್ಪನ್ನದಲ್ಲಿ ಕೊರತೆಯುಂಟಾಗುತ್ತದೆ. ವ್ಯಾಪಾರ ಸ್ಥಗಿತಗೊಳ್ಳುತ್ತದೆ. ಒಟ್ಟಿನಲ್ಲಿ ಮಾನವ ಜೀವನದ ಸಂಪನ್ಮೂಲಗಳಲ್ಲಿ ಒಂದಲ್ಲೊಂದು ಮಾರ್ಗದಿಂದ ಕಡಿತ ಉಂಟಾಗುತ್ತಲೇ ಇರುತ್ತದೆ. ಮಾನವ ತನ್ನೆಲ್ಲಾ ಪ್ರಯತ್ನಗಳ ಹೊರತಾಗಿಯೂ ಈ ನಷ್ಟಗಳನ್ನು ತಡೆಯುವಲ್ಲಿ ವಿಫಲನಾಗುತ್ತಾನೆ.

50. ಮತ್ತು ಈಗ ನಾವು ಈ ಶುಭಕರ 'ಬೋಧನೆ'ಯನ್ನು (ನಿಮಗಾಗಿ) ಅವತೀರ್ಣಗೊಳಿಸಿರುವೆವು. ನೀವೇನು ಇದನ್ನು ನಿರಾಕರಿಸುವವರಾಗುತ್ತೀರಾ?

وَهٰذَا ذِكْرٌ مُّبٰرَكٌ اَنْزَلْنٰهُ ؕ اَفَاَنْتُمْ لَهٗ مُنْكِرُوْنَ ﴿٥٠﴾

51. ಅದಕ್ಕಿಂತಲೂ ಮುಂಚೆ ನಾವು ಇಬ್‌ರಾಹೀಮರಿಗೆ ಅವರ ವಿವೇಕವನ್ನು ದಯಪಾಲಿಸಿದ್ದೆವು ಮತ್ತು ನಾವು ಅವರನ್ನು ಚೆನ್ನಾಗಿ ಅರಿತಿದ್ದೆವು.

وَلَقَدْ اٰتَيْنَاۤ اِبْرٰهِيْمَ رُشْدَهٗ مِنْ قَبْلُ وَكُنَّا بِهٖ عٰلِمِيْنَ ﴿٥١﴾

52. ಅವರು ತಮ್ಮ ತಂದೆ ಹಾಗೂ ತಮ್ಮ ಜನಾಂಗದೊಡನೆ, "ನೀವು ಮಾರು ಹೋಗುತ್ತಿರುವ ಈ ವಿಗ್ರಹಗಳು ಎಂತಹವು?" ಎಂದು ಕೇಳಿದ್ದ ಸಂದರ್ಭವನ್ನು ಸ್ಮರಿಸಿರಿ.

اِذْ قَالَ لِاَبِيْهِ وَقَوْمِهٖ مَا هٰذِهِ التَّمَاثِيْلُ الَّتِيْۤ اَنْتُمْ لَهَا عٰكِفُوْنَ ﴿٥٢﴾

53. ಆಗ ಅವರು, "ನಮ್ಮ ಪೂರ್ವಜರು ಇವುಗಳನ್ನು ಪೂಜಿಸುತ್ತಿರುವುದನ್ನು ನಾವು ಕಂಡಿದ್ದೇವೆ" ಎಂದು ಉತ್ತರ ಕೊಟ್ಟರು.

قَالُوْا وَجَدْنَاۤ اٰبَآءَنَا لَهَا عٰبِدِيْنَ ﴿٥٣﴾

54. ಇವರು, "ನೀವೂ ನಿಮ್ಮ ಪೂರ್ವಜರೂ ಸ್ಪಷ್ಟ ಪಥಭ್ರಷ್ಟತೆಗೊಳಗಾಗಿದ್ದೀರಿ" ಎಂದಾಗ-

قَالَ لَقَدْ كُنْتُمْ اَنْتُمْ وَاٰبَآؤُكُمْ فِيْ ضَلٰلٍ مُّبِيْنٍ ﴿٥٤﴾

55. ಅವರು, "ನೀನು ನಮ್ಮ ಮುಂದೆ ನಿನ್ನ ನೈಜ ಭಾವನೆಗಳನ್ನು ಪ್ರಕಟಿಸುತ್ತಿರುವೆಯೋ ಅಥವಾ ಅಪಹಾಸ್ಯ ಮಾಡುತ್ತೀಯೋ?" ಎಂದು ಕೇಳಿದರು.

قَالُوْۤا اَجِئْتَنَا بِالْحَقِّ اَمْ اَنْتَ مِنَ اللّٰعِبِيْنَ ﴿٥٥﴾

56. ಆಗ ಇವರು, "ಇಲ್ಲ, ವಾಸ್ತವದಲ್ಲಿ ಭೂಮಿ-ಆಕಾಶಗಳನ್ನು ಸೃಷ್ಟಿಸಿದ ಪ್ರಭುವೇ ನಿಮ್ಮ ಪ್ರಭುವಾಗಿರುವನು. ಈ ಬಗ್ಗೆ ನಾನು ನಿಮ್ಮ ಮುಂದೆ ಸಾಕ್ಷಿ ಹೇಳುತ್ತೇನೆ-

قَالَ بَلْ رَّبُّكُمْ رَبُّ السَّمٰوٰتِ وَالْاَرْضِ الَّذِيْ فَطَرَهُنَّ ۖ وَاَنَا عَلٰى ذٰلِكُمْ مِّنَ الشّٰهِدِيْنَ ﴿٥٦﴾

57. ಮತ್ತು ಅಲ್ಲಾಹನಾಣೆ, ನಾನು ನಿಮ್ಮ ಅನುಪಸ್ಥಿತಿಯಲ್ಲಿ ಖಂಡಿತವಾಗಿಯೂ ನಿಮ್ಮ ವಿಗ್ರಹಗಳನ್ನು ನೋಡಿ ಕೊಳ್ಳುವೆನು" ಎಂದರು.

وَتَاللّٰهِ لَاَكِيْدَنَّ اَصْنَامَكُمْ بَعْدَ اَنْ تُوَلُّوْا مُدْبِرِيْنَ ﴿٥٧﴾

58. ಆ ಪ್ರಕಾರ ಇವರು ಅವುಗಳನ್ನು ತುಂಡು ತುಂಡಾಗಿ ಮುರಿದು ಹಾಕಿದರು ಮತ್ತು ಅದರ ಕಡೆಗೆ ಅವರು ಗಮನಹರಿಸಲೆಂದು ಅವುಗಳಲ್ಲಿ ದೊಡ್ಡದನ್ನು ಬಿಟ್ಟುಬಿಟ್ಟರು.

فَجَعَلَهُمْ جُذٰذًا اِلَّا كَبِيْرًا لَّهُمْ لَعَلَّهُمْ اِلَيْهِ يَرْجِعُوْنَ ﴿٥٨﴾

59. (ಅವರು ಬಂದು ವಿಗ್ರಹಗಳ ಈ ದುರವಸ್ಥೆಯನ್ನು ಕಂಡು)

قَالُوْا مَنْ فَعَلَ هٰذَا بِاٰلِهَتِنَاۤ اِنَّهٗ

"ನಮ್ಮ ದೇವರುಗಳಿಗೆ ಈ ಗತಿ ಮಾಡಿದವನಾರು? ಅವನೊಬ್ಬ ಮಹಾ ಅಕ್ರಮಿಯಾಗಿರಬೇಕು" ಎಂದರು.

لَمِنَ الظّٰلِمِيْنَ ۝٥٩

60. ಕೆಲವರು ಹೀಗೆ ಹೇಳಿದರು; "ಓರ್ವ ತರುಣನು ಅವುಗಳ ಬಗ್ಗೆ ಪ್ರಸ್ತಾಪಿಸುತ್ತಿದ್ದುದನ್ನು ನಾವು ಕೇಳಿದ್ದೇವು. ಅವನ ಹೆಸರು ಇಬ್‌ರಾಹೀಮ್ ಎಂದಾಗಿದೆ."

قَالُوْا سَمِعْنَا فَتًى يَّذْكُرُهُمْ يُقَالُ لَهٗٓ اِبْرٰهِيْمُ ۝٦٠

61. ಆಗ ಅವರು, "ಹಾಗಾದರೆ ಅವನನ್ನು ಹಿಡಿದು ಎಲ್ಲರ ಮುಂದೆ ತನ್ನಿರಿ. ಅವನನ್ನು (ಹೇಗೆ ಶಿಕ್ಷಿಸಲಾಗುತ್ತದೆಯೆಂದು) ನೋಡುವಂತಾಗಲಿ" ಎಂದರು.

قَالُوْا فَأْتُوْا بِهٖ عَلٰٓى اَعْيُنِ النَّاسِ لَعَلَّهُمْ يَشْهَدُوْنَ ۝٦١

62. (ಇಬ್‌ರಾಹೀಮರು ಬಂದಾಗ) "ಓ ಇಬ್‌ರಾಹೀಮ್! ನಮ್ಮ ದೇವರುಗಳೊಂದಿಗೆ ಹೀಗೆ ವರ್ತಿಸಿರುವುದು ನೀನೇ?" ಎಂದು ಕೇಳಿದರು.

قَالُوْٓا ءَاَنْتَ فَعَلْتَ هٰذَا بِاٰلِهَتِنَا يٰٓاِبْرٰهِيْمُ ۝٦٢

63. ಅವರು, "ಇದನ್ನೆಲ್ಲ ಅವರ ಈ ಹಿರಿಯನು ಮಾಡಿರುತ್ತಾನೆ. ಅವು ಮಾತಾಡುವುದಿದ್ದರೆ ಅವುಗಳನ್ನೇ ಕೇಳಿಕೊಳ್ಳಿರಿ" ಎಂದರು.[8]

قَالَ بَلْ فَعَلَهٗ ۖ كَبِيْرُهُمْ هٰذَا فَسْـَٔلُوْهُمْ اِنْ كَانُوْا يَنْطِقُوْنَ ۝٦٣

64. ಇದನ್ನು ಕೇಳಿ ತಮ್ಮ ಜನರು ಅಂತಃಕರಣದ ಕಡೆಗೆ ಮರಳಿದರು ಮತ್ತು (ತಮ್ಮ ಮನಸ್ಸಿನಲ್ಲಿ) "ನಿಜಕ್ಕೂ ನೀವೇ ಅಕ್ರಮಿಗಳು" ಎನ್ನತೊಡಗಿದರು.

فَرَجَعُوْٓا اِلٰٓى اَنْفُسِهِمْ فَقَالُوْٓا اِنَّكُمْ اَنْتُمُ الظّٰلِمُوْنَ ۝٦٤

65. ಆದರೂ ಅವರು ಅಭಿಪ್ರಾಯ ಬದಲಾಯಿಸಿ, "ಇವು ಮಾತನಾಡುವುದಿಲ್ಲವೆಂದು ನಿನಗೆ ಗೊತ್ತಿದೆ" ಎಂದರು.

ثُمَّ نُكِسُوْا عَلٰى رُءُوْسِهِمْ ۚ لَقَدْ عَلِمْتَ مَا هٰٓؤُلَاۤءِ يَنْطِقُوْنَ ۝٦٥

66. ಆಗ ಇಬ್‌ರಾಹೀಮ್, "ಹಾಗಾದರೆ ನೀವು ಅಲ್ಲಾಹನನ್ನು ಬಿಟ್ಟು ನಿಮಗೆ ಲಾಭವನ್ನಾಗಲೀ ನಷ್ಟವನ್ನಾಗಲೀ ಉಂಟು ಮಾಡಲು ಶಕ್ತರಲ್ಲದವರನ್ನು ಪೂಜಿಸುತ್ತೀರಾ?

قَالَ اَفَتَعْبُدُوْنَ مِنْ دُوْنِ اللّٰهِ مَا لَا يَنْفَعُكُمْ شَيْـًٔا وَّلَا يَضُرُّكُمْ ۝٦٦

67. ಥೂ, ನಿಮಗೆ ಮತ್ತು ಅಲ್ಲಾಹನನ್ನು ಬಿಟ್ಟು ನೀವು ಪೂಜಿಸುತ್ತಿರುವ

اُفٍّ لَّكُمْ وَلِمَا تَعْبُدُوْنَ مِنْ دُوْنِ

8. ಈ ಆರಾಧ್ಯರುಗಳು ತೀರಾ ಅಸಹಾಯಕರು, ಅವರಿಂದ ಯಾವ ಕೆಲಸವನ್ನೂ ನಿರೀಕ್ಷಿಸುವಂತಿಲ್ಲ ಎಂದು ಅವರು ತಮ್ಮ ಉತ್ತರದ ಮೂಲಕ ಒಪ್ಪಿಕೊಳ್ಳಲೆಂದೇ ಹ. ಇಬ್‌ರಾಹೀಮ್(ಅ) ಈ ಮಾತನ್ನು ಹೇಳಿದ್ದರೆಂದು ಈ ಪದಗಳೇ ಸೂಚಿಸುತ್ತವೆ. ಇಂತಹ ಸಂದರ್ಭದಲ್ಲಿ ಪುರಾವೆಗಾಗಿ ಒಬ್ಬನು ಹೇಳುವಂತಹ ಅವಾಸ್ತವಿಕವಾದ ಮಾತನ್ನು ಸುಳ್ಳೆಂದು ಹೇಳುವಂತಿಲ್ಲ. ಏಕೆಂದರೆ ಅದನ್ನು ಹೇಳುವವನು ಸುಳ್ಳು ಹೇಳುವ ಇರಾದೆಯಿಂದ ಹೇಳುವುದಿಲ್ಲ. ಹಾಗೆಯೇ ಕೇಳುವವರೂ ಅದನ್ನು ಸುಳ್ಳೆಂದು ಭಾವಿಸುವುದಿಲ್ಲ. ಹೇಳುವವನು ಅದನ್ನು ತನ್ನ ನಿಲುವನ್ನು ಸಮರ್ಥಿಸಲಿಕ್ಕಾಗಿ ಹೇಳುತ್ತಾನೆ. ಕೇಳುವವನೂ ಅದನ್ನು ಅದೇ ಭಾವನೆಯೊಂದಿಗೆ ಕೇಳುತ್ತಾನೆ.

| | |
|---|---|
| ನಿಮ್ಮ ಆರಾಧ್ಯ ವಸ್ತುಗಳಿಗೆ! ನಿಮಗೆ ಸ್ವಲ್ಪವೂ ಬುದ್ಧಿ ಇಲ್ಲವೇ?" ಎಂದರು. | اللّٰهِ ۗ اَفَلَا تَعْقِلُوْنَ ﴿٦٧﴾ |
| 68. ಆಗ ಅವರು, "ನಿಮಗೇನಾದರೂ ಮಾಡ ಬೇಕೆಂದಿದ್ದರೆ ಇವನನ್ನು ಸುಟ್ಟು ಹಾಕಿರಿ ಮತ್ತು ನಿಮ್ಮ ದೇವರುಗಳಿಗೆ ನೆರವಾಗಿರಿ" ಎಂದರು. | قَالُوْا حَرِّقُوْهُ وَانْصُرُوْٓا اٰلِهَتَكُمْ اِنْ كُنْتُمْ فٰعِلِيْنَ ﴿٦٨﴾ |
| 69. ನಾವು ಹೇಳಿದೆವು: "ಓ ಅಗ್ನಿಯೇ, ತಣ್ಣಗಾಗಿ ಬಿಡು ಮತ್ತು ಇಬ್‌ರಾಹೀಮ್‌ರ ಪಾಲಿಗೆ ಸುರಕ್ಷೆಯಾಗು."[9] | قُلْنَا يٰنَارُ كُوْنِيْ بَرْدًا وَّسَلٰمًا عَلٰٓى اِبْرٰهِيْمَ ﴿٦٩﴾ |
| 70. ಅವರು, ಇಬ್‌ರಾಹೀಮರಿಗೆ ಕೇಡುಂಟು ಮಾಡಬಯಸಿದ್ದರು. ಆದರೆ ನಾವು ಅವರನ್ನು ಸಂಪೂರ್ಣ ವಿಫಲಗೊಳಿಸಿಬಿಟ್ಟೆವು- | وَاَرَادُوْا بِهٖ كَيْدًا فَجَعَلْنٰهُمُ الْاَخْسَرِيْنَ ﴿٧٠﴾ |
| 71. ಮತ್ತು ನಾವು ಅವರನ್ನೂ ಲೂತರನ್ನೂ ರಕ್ಷಿಸಿ ನಾವು ಲೋಕ ವಾಸಿಗಳಿಗೆ ಸಮೃದ್ಧಿಯನ್ನಿರಿಸಿರುವಂತಹ ಭೂಭಾಗಕ್ಕೆ ಕೊಂಡೊಯ್ದೆವು. | وَنَجَّيْنٰهُ وَلُوْطًا اِلَى الْاَرْضِ الَّتِيْ بٰرَكْنَا فِيْهَا لِلْعٰلَمِيْنَ ﴿٧١﴾ |
| 72. ನಾವು ಅವರಿಗೆ ಇಸ್‌ಹಾಕರನ್ನು ಮಾತ್ರವಲ್ಲ ಯಅ್‌ಕೂಬರನ್ನೂ[10] ದಯಪಾಲಿಸಿದೆವು ಮತ್ತು (ಅವರಲ್ಲಿ) ಪ್ರತಿಯೊಬ್ಬನನ್ನು ಸಜ್ಜನನಾಗಿ ಮಾಡಿದೆವು. | وَوَهَبْنَا لَهٗٓ اِسْحٰقَ ۗ وَيَعْقُوْبَ نَافِلَةً ۗ وَكُلًّا جَعَلْنَا صٰلِحِيْنَ ﴿٧٢﴾ |
| 73. ನಾವು ಅವರನ್ನು ನಮ್ಮ ಅಪ್ಪಣೆಯಂತೆ ಮಾರ್ಗದರ್ಶನ ನೀಡುತ್ತಿದ್ದ ನಾಯಕರನ್ನಾಗಿ ಮಾಡಿದೆವು ಮತ್ತು ನಾವು ಅವರಿಗೆ 'ದಿವ್ಯವಾಣಿ' ಮೂಲಕ ಸತ್ಕರ್ಮವೆಸಗುವ, ನಮಾಝ್ ಸಂಸ್ಥಾಪಿಸುವ ಮತ್ತು ಝಕಾತ್ ನೀಡುವ ಆದೇಶ ನೀಡಿದೆವು ಮತ್ತು ಅವರು ನಮ್ಮ ಉಪಾಸಕರಾಗಿದ್ದರು. | وَجَعَلْنٰهُمْ اَىِٕمَّةً يَّهْدُوْنَ بِاَمْرِنَا وَاَوْحَيْنَآ اِلَيْهِمْ فِعْلَ الْخَيْرٰتِ وَاِقَامَ الصَّلٰوةِ وَاِيْتَاۤءَ الزَّكٰوةِ ۚ وَكَانُوْا لَنَا عٰبِدِيْنَ ﴿٧٣﴾ |
| 74. ಲೂತರಿಗೆ ನಾವು 'ನಿರ್ಧಾರ ಶಕ್ತಿ' ಮತ್ತು ಜ್ಞಾನ ದಯಪಾಲಿಸಿದೆವು. ಅವರನ್ನು ದುಷ್ಕರ್ಮವೆಸಗುತ್ತಿದ್ದ ಆ ನಾಡಿನಿಂದ ರಕ್ಷಿಸಿ ಕೊಂಡೊಯ್ದೆವು. ವಾಸ್ತವದಲ್ಲಿ ಅದು ಅತ್ಯಂತ ದುಷ್ಟ, ಕರ್ಮಭ್ರಷ್ಟ ಜನಾಂಗವಾಗಿತ್ತು. | وَلُوْطًا اٰتَيْنٰهُ حُكْمًا وَّعِلْمًا وَّنَجَّيْنٰهُ مِنَ الْقَرْيَةِ الَّتِيْ كَانَتْ تَّعْمَلُ الْخَبٰۤىِٕثَ ۗ اِنَّهُمْ كَانُوْا قَوْمَ سَوْءٍ فٰسِقِيْنَ ﴿٧٤﴾ |

9. ಅವರು ವಸ್ತುಶಃ ತಮ್ಮ ತೀರ್ಮಾನವನ್ನು ಕಾರ್ಯಗತಗೊಳಿಸಿದರು. ಅಗ್ನಿಕುಂಡವನ್ನು ಸಿದ್ಧಪಡಿಸಿ ಅವರು ಹ. ಇಬ್‌ರಾಹೀಮ್‌ರನ್ನು(ಅ) ಅದರಲ್ಲಿ ಎಸೆದಾಗ ಅಲ್ಲಾಹನು ಅಗ್ನಿಗೆ, ಇಬ್‌ರಾಹೀಮ್‌ರ(ಅ) ಪಾಲಿಗೆ ತಣ್ಣಗಾಗುವಂತೆ ಮತ್ತು ಹಾನಿರಹಿತವಾಗುವಂತೆ ಆಜ್ಞಾಪಿಸಿದನು ಎಂದು ಈ ಪದಗಳಿಂದ ವ್ಯಕ್ತವಾಗುತ್ತದೆ. ವಿಷಯಾನುಬಂಧವೂ ಇದನ್ನೇ ಪುಷ್ಟೀಕರಿಸುತ್ತದೆ. ಇದೂ ಕುರ್‌ಆನಿನಲ್ಲಿ ವಿವರಿಸಲಾಗಿರುವ ಪವಾಡಗಳಲ್ಲಿ ಒಂದಾಗಿದೆ.

10. ಅರ್ಥಾತ್- ಮಗನ ನಂತರ ಮೊಮ್ಮಗನನ್ನೂ ಪ್ರವಾದಿತ್ವದ ಪದವಿಗೆ ನೇಮಿಸಲಾಯಿತು.

75. ಮತ್ತು ಲೂತರನ್ನು ನಾವು ನಮ್ಮ ಕೃಪೆಯೊಳಗೆ ಪ್ರವೇಶಗೊಳಿಸಿದೆವು. ಅವರು ಸಜ್ಜನರಲ್ಲಾಗಿದ್ದರು.

وَأَدْخَلْنَٰهُ فِى رَحْمَتِنَآ ۖ إِنَّهُۥ مِنَ ٱلصَّٰلِحِينَ ٧٥

76. ಮತ್ತು ನಾವು ಇದೇ ಅನುಗ್ರಹವನ್ನು ನೂಹರಿಗೆ ನೀಡಿದ್ದೆವು. ಇವರೆಲ್ಲರಿಗಿಂತಲೂ ಮುಂಚೆ ಅವರು ನಮ್ಮನ್ನು ಕೂಗಿ ಕರೆದಿದ್ದುದನ್ನು ಸ್ಮರಿಸಿರಿ. ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು. ಅವರನ್ನೂ ಅವರ ಮನೆಯವರನ್ನೂ ಮಹಾ ಸಂಕಷ್ಟದಿಂದ ಪಾರುಗಾಣಿಸಿದೆವು-

وَنُوحًا إِذْ نَادَىٰ مِن قَبْلُ فَٱسْتَجَبْنَا لَهُۥ فَنَجَّيْنَٰهُ وَأَهْلَهُۥ مِنَ ٱلْكَرْبِ ٱلْعَظِيمِ ٧٦

77. ಮತ್ತು ನಮ್ಮ ನಿದರ್ಶನಗಳನ್ನು ಸುಳ್ಳಾಗಿಸಿದ್ದ ಜನಾಂಗದ ವಿರುದ್ಧ ಅವರಿಗೆ ಸಹಾಯ ಮಾಡಿದೆವು. ಅವರು ಬಹಳ ಕೆಟ್ಟವರಾಗಿದ್ದರು. ಆದುದರಿಂದ ನಾವು ಅವರೆಲ್ಲರನ್ನೂ ಮುಳುಗಿಸಿಬಿಟ್ಟೆವು.

وَنَصَرْنَٰهُ مِنَ ٱلْقَوْمِ ٱلَّذِينَ كَذَّبُوا۟ بِـَٔايَٰتِنَآ ۚ إِنَّهُمْ كَانُوا۟ قَوْمَ سَوْءٍ فَأَغْرَقْنَٰهُمْ أَجْمَعِينَ ٧٧

78. ಇದೇ ಅನುಗ್ರಹವನ್ನು ನಾವು ದಾವೂದ್ ಮತ್ತು ಸುಲೈಮಾನರಿಗೂ ದಯಪಾಲಿಸಿದೆವು. ರಾತ್ರಿ ವೇಳೆ ಇತರರ ಆಡುಗಳು ಚದುರಿಕೊಂಡಿದ್ದ ಒಂದು ಹೊಲದ ಮೊಕದ್ದಮೆಯಲ್ಲಿ (ಅವರಿಬ್ಬರೂ) ತೀರ್ಪು ನೀಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ನಾವು ಅವರ ನ್ಯಾಯ ತೀರ್ಮಾನವನ್ನು ಸ್ವತಃ ವೀಕ್ಷಿಸುತ್ತಿದ್ದೆವು.

وَدَاوُۥدَ وَسُلَيْمَٰنَ إِذْ يَحْكُمَانِ فِى ٱلْحَرْثِ إِذْ نَفَشَتْ فِيهِ غَنَمُ ٱلْقَوْمِ وَكُنَّا لِحُكْمِهِمْ شَٰهِدِينَ ٧٨

79. ಆ ವೇಳೆ ನಾವು ಸರಿಯಾದ ತೀರ್ಮಾನವನ್ನು ಸುಲೈಮಾನರಿಗೆ ಮನವರಿಕೆ ಮಾಡಿಕೊಟ್ಟೆವು. ವಸ್ತುತಃ ತೀರ್ಮಾನದ ಶಕ್ತಿ ಮತ್ತು ಜ್ಞಾನಗಳನ್ನು ನಾವು ಇಬ್ಬರಿಗೂ ದಯಪಾಲಿಸಿದ್ದೆವು. ನಾವು ದಾವೂದರ ಜೊತೆಗೆ 'ಸ್ತುತಿಸುವ' ಪರ್ವತಗಳನ್ನೂ ಪಕ್ಷಿಗಳನ್ನೂ ಅಧೀನಗೊಳಿಸಿ ಕೊಟ್ಟೆವು, ಇದನ್ನು ಮಾಡಿದವರು ನಾವೇ ಆಗಿದ್ದೆವು.

فَفَهَّمْنَٰهَا سُلَيْمَٰنَ ۚ وَكُلًّا ءَاتَيْنَا حُكْمًا وَعِلْمًا ۚ وَسَخَّرْنَا مَعَ دَاوُۥدَ ٱلْجِبَالَ يُسَبِّحْنَ وَٱلطَّيْرَ ۚ وَكُنَّا فَٰعِلِينَ ٧٩

80. (ಯುದ್ಧದ ವೇಳೆ) ನಿಮ್ಮನ್ನು ಪರಸ್ಪರರ ಹೊಡೆತದಿಂದ ರಕ್ಷಿಸಲಿಕ್ಕಾಗಿ ನಾವು ಅವರಿಗೆ ನಿಮ್ಮ ಪ್ರಯೋಜನಕ್ಕಾಗಿ ಕವಚ ಮಾಡುವ ಉದ್ಯಮವನ್ನು ಕಲಿಸಿದ್ದೆವು. ಹೀಗಿರುವಾಗ ನೀವು ಕೃತಜ್ಞರಾಗುವಿರಾ?

وَعَلَّمْنَٰهُ صَنْعَةَ لَبُوسٍ لَّكُمْ لِتُحْصِنَكُم مِّنۢ بَأْسِكُمْ ۖ فَهَلْ أَنتُمْ شَٰكِرُونَ ٨٠

81. ನಾವು ಸುಲೈಮಾನರಿಗೆ ಪ್ರಬಲ ಗಾಳಿಯನ್ನು ಅಧೀನಗೊಳಿಸಿಕೊಟ್ಟಿದ್ದೆವು. ಅದು (ಅವರ ಅಪ್ಪಣೆಯಿಂದ) ನಾವು ಸಮೃದ್ಧಿ

وَلِسُلَيْمَٰنَ ٱلرِّيحَ عَاصِفَةً تَجْرِى بِأَمْرِهِۦٓ إِلَى ٱلْأَرْضِ ٱلَّتِى بَٰرَكْنَا فِيهَا ۚ

ಯನ್ನಿರಿಸಿರುವ ಭೂಭಾಗದ ಕಡೆಗೆ ಬೀಸುತ್ತಿತ್ತು. ನಾವು ಸಕಲ ವಸ್ತುಗಳ ಜ್ಞಾನವುಳ್ಳವರಾಗಿರುತ್ತೇವೆ.

وَكُنَّا بِكُلِّ شَيْءٍ عٰلِمِيْنَ ﴿٨١﴾

82. ಮತ್ತು ಶೈತಾನರ ಪೈಕಿ ಅನೇಕರನ್ನು ನಾವು ಅವರ ನಿಯಂತ್ರಣಕ್ಕೆ ತಂದುಕೊಟ್ಟಿದ್ದೆವು. ಅವರು ಅವರಿಗಾಗಿ (ಸುಲೈಮಾನರಿಗಾಗಿ) ಮುಳುಗೇಳುತ್ತಿದ್ದರು ಮಾತ್ರವಲ್ಲದೆ ಇತರ ಕೆಲಸಗಳನ್ನೂ ಮಾಡುತ್ತಿದ್ದರು. ಇವರೆಲ್ಲರ ಮೇಲ್ವಿಚಾರಕರು ನಾವೇ ಆಗಿದ್ದೆವು.

وَمِنَ الشَّيٰطِيْنِ مَنْ يَّغُوْصُوْنَ لَهٗ وَيَعْمَلُوْنَ عَمَلًا دُوْنَ ذٰلِكَ ۚ وَكُنَّا لَهُمْ حٰفِظِيْنَ ﴿٨٢﴾

83. ಮತ್ತು ಇವನ್ನೇ (ವಿವೇಕ, ತೀರ್ಪುಶಕ್ತಿ ಮತ್ತು ಜ್ಞಾನದ ಅನುಗ್ರಹಗಳನ್ನೇ) ನಾವು ಅಯ್ಯೂಬರಿಗೂ ನೀಡಿದ್ದೆವು. ಅವರು, "ನನಗೆ ರೋಗ ತಗಲಿ ಹೋಗಿದೆ. ನೀನು ಕರುಣಾಳುಗಳಲ್ಲಿ ಅತ್ಯಂತ ಕರುಣಾಳು ಆಗಿರುತ್ತೀ" ಎಂದು ತಮ್ಮ ಪ್ರಭುವನ್ನು ಕೂಗಿ ಕರೆದ ಸಂದರ್ಭವನ್ನು ಸ್ಮರಿಸಿರಿ.

وَاَيُّوْبَ اِذْ نَادٰى رَبَّهٗٓ اَنِّيْ مَسَّنِيَ الضُّرُّ وَاَنْتَ اَرْحَمُ الرّٰحِمِيْنَ ﴿٨٣﴾

84. ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು. ಅವರಿಗಿದ್ದ ಬಾಧೆಯನ್ನು ದೂರೀಕರಿಸಿದೆವು ಮತ್ತು ಅವರಿಗೆ ಅವರ ಮಕ್ಕಳು ಮರಿಗಳನ್ನು ಮಾತ್ರ ನೀಡಿದುದಲ್ಲ, ನಮ್ಮ ವಿಶಿಷ್ಟ ಅನುಗ್ರಹ ವೆಂಬಂತೆ ಅವರೊಂದಿಗೆ ಅಷ್ಟೇ ಮತ್ತೂ ಕೊಟ್ಟೆವು. ಉಪಾಸಕ ದಾಸರಿಗೆ ಇದೊಂದು ಪಾಠವಾಗಲೆಂದು.

فَاسْتَجَبْنَا لَهٗ فَكَشَفْنَا مَا بِهٖ مِنْ ضُرٍّ وَّاٰتَيْنٰهُ اَهْلَهٗ وَمِثْلَهُمْ مَّعَهُمْ رَحْمَةً مِّنْ عِنْدِنَا وَذِكْرٰى لِلْعٰبِدِيْنَ ﴿٨٤﴾

85. ಇದೇ ಅನುಗ್ರಹವನ್ನು ಇಸ್ಮಾಈಲ್, ಇದ್ರೀಸ್ ಮತ್ತು ದುಲ್ ಕಿಫ್ಲ್‌ರಿಗೂ ನೀಡಿದೆವು. ಇವರೆಲ್ಲರೂ ಸಹನಶೀಲರಾಗಿದ್ದರು.

وَاِسْمٰعِيْلَ وَاِدْرِيْسَ وَذَا الْكِفْلِ ۖ كُلٌّ مِّنَ الصّٰبِرِيْنَ ﴿٨٥﴾

86. ಇವರು ಸಜ್ಜನರಲ್ಲಾಗಿದ್ದ ಕಾರಣ ಇವರನ್ನು ನಾವು ನಮ್ಮ ಕೃಪೆಯೊಳಗೆ ಸೇರಿಸಿಕೊಂಡೆವು.

وَاَدْخَلْنٰهُمْ فِيْ رَحْمَتِنَا ۖ اِنَّهُمْ مِّنَ الصّٰلِحِيْنَ ﴿٨٦﴾

87. ಮತ್ಸ್ಯದವರನ್ನು[11] ನಾವು ಗೌರವಿಸಿದೆವು. ಅವರು ಕೋಪಗೊಂಡು ಹೊರಟು ಹೋಗಿದ್ದ ಸಂದರ್ಭವನ್ನು ಸ್ಮರಿಸಿರಿ.[12] ಅವರನ್ನು ನಾವು ಹಿಡಿಯಲಾರೆವೆಂದು ಅವರು ಭಾವಿಸಿದ್ದರು. ಕೊನೆಗೆ

وَذَا النُّوْنِ اِذْ ذَّهَبَ مُغَاضِبًا فَظَنَّ اَنْ لَّنْ نَّقْدِرَ عَلَيْهِ فَنَادٰى فِى الظُّلُمٰتِ

11. ಅರ್ಥಾತ್- ಹ. ಯೂನುಸ್(ಅ)- ಕೆಲವೆಡೆ ಅವರ ಹೆಸರು ಹೇಳಲಾಗಿದ್ದರೆ ಇನ್ನು ಕೆಲವೆಡೆ 'ದುನ್ನೂನ್' ಮತ್ತು 'ಸಾಹಿಬಿಲ್ ಹೂತ್' ಎನ್ನಲಾಗಿದೆ. ಅರ್ಥಾತ್ 'ಮತ್ಸ್ಯದವರು' ಎಂಬ ಬಿರುದಿನಿಂದ ಅವರನ್ನು ಸ್ಮರಿಸಲಾಗಿದೆ. ಅದರ ಅರ್ಥ ಅವರು ಮೀನನ್ನು ಹಿಡಿಯುತ್ತಿದ್ದರು ಅಥವಾ ಅದನ್ನು ಮಾರುತ್ತಿದ್ದರು ಎಂದಲ್ಲ. ಅಲ್ಲಾಹನ ಇಚ್ಛೆಯಂತೆ ಅವರನ್ನು ಮೀನೊಂದು ನುಂಗಿ ಬಿಟ್ಟಿತ್ತಾದ್ದರಿಂದ ಈ ಮಾತು ಹೇಳಲಾಗಿದೆ. ಅದರ ವೃತ್ತಾಂತವನ್ನು ಅಸ್ಸಾಫ್ಫಾತ್ ಅಧ್ಯಾಯ 142ನೆಯ ಸೂಕ್ತದಲ್ಲಿ ವಿವರಿಸಲಾಗಿದೆ.

12. ಅರ್ಥಾತ್- ಅವರು ತಮ್ಮ ಜನಾಂಗದ ಬಗ್ಗೆ ಅಸಮಾಧಾನ ತಾಳಿ ದೇವನ ವತಿಯಿಂದ ವಲಸೆಯ ಆದೇಶ ಬರುವುದಕ್ಕೆ ಹಾಗೂ ತಮ್ಮ ಕರ್ತವ್ಯಪಾಲನೆ ಮಾಡಬೇಕಾದ ಸ್ಥಳದಿಂದ ಹೊರಡುವುದು ಸಿಂಧುವಾಗಿ ಬಿಡುವುದಕ್ಕೆ ಮೊದಲೇ ಅಲ್ಲಿಂದ ಹೊರಟು ಹೋದರು.

ಅವರು ಅಂಧಕಾರದೊಳಗಿಂದ ಕೂಗಿ ಪ್ರಾರ್ಥಿಸಿದರು;[13] "ನಿನ್ನ ಹೊರತು ಅನ್ಯ ದೇವನಿಲ್ಲ. ನೀನು ಪರಮ ಪಾವನನು ನಿಶ್ಚಯ ವಾಗಿಯೂ ನಾನು ಅಪರಾಧವೆಸಗಿದೆನು."

أَن لَّآ إِلَٰهَ إِلَّآ أَنتَ سُبْحَٰنَكَ إِنِّى كُنتُ مِنَ ٱلظَّٰلِمِينَ ۝٨٧

88. ಆಗ ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು ಮತ್ತು ಅವರನ್ನು ದುಃಖದಿಂದ ಪಾರುಗಾಣಿಸಿದೆವು. ಇದೇ ರೀತಿ ನಾವು ಸತ್ಯವಿಶ್ವಾಸಿಗಳನ್ನು ರಕ್ಷಿಸಿಕೊಳ್ಳುತ್ತೇವೆ.

فَٱسْتَجَبْنَا لَهُۥ وَنَجَّيْنَٰهُ مِنَ ٱلْغَمِّ ۚ وَكَذَٰلِكَ نُـۨجِى ٱلْمُؤْمِنِينَ ۝٨٨

89. 'ಝುಕರಿಯ್ಯಾ' (ರಿಗೂ ನಾವು ಅನುಗ್ರಹ ನೀಡಿದೆವು) ಅವರು, "ನನ್ನ ಪ್ರಭೂ ನನ್ನನ್ನು ಏಕಾಂಗಿಯಾಗಿ ಬಿಟ್ಟು ಬಿಡಬೇಡ. ಅತ್ಯುತ್ತಮ ವಾರೀಸುದಾರ ನೀನೇ ಆಗಿರುತ್ತೀ" ಎಂದು ತನ್ನ ಪ್ರಭುವನ್ನು ಕೂಗಿ ಕರೆದ ಸಂದರ್ಭವನ್ನು ಸ್ಮರಿಸಿರಿ.

وَزَكَرِيَّآ إِذْ نَادَىٰ رَبَّهُۥ رَبِّ لَا تَذَرْنِى فَرْدًا وَأَنتَ خَيْرُ ٱلْوَٰرِثِينَ ۝٨٩

90. ಆ ಪ್ರಕಾರ ನಾವು ಅವರ ಪ್ರಾರ್ಥನೆಯನ್ನು ಸ್ವೀಕರಿಸಿದೆವು ಮತ್ತು ಅವರಿಗೆ ಯಹ್ಯಾರನ್ನು ನೀಡಿದೆವು. ಅವರ ಪತ್ನಿಯನ್ನು ಅವರಿಗಾಗಿ ಸರಿಪಡಿಸಿದೆವು. ಇವರೆಲ್ಲರೂ ಪುಣ್ಯ ಕಾರ್ಯಗಳಲ್ಲಿ ಉತ್ಸುಕರಾಗಿದ್ದರು. ನಮ್ಮನ್ನು ಒಲವು ಹಾಗೂ ಭಯದೊಂದಿಗೆ ಪ್ರಾರ್ಥಿಸುತ್ತಿದ್ದರು ಮತ್ತು ನಮ್ಮ ಮುಂದೆ ಬಾಗಿಕೊಂಡಿದ್ದರು.

فَٱسْتَجَبْنَا لَهُۥ وَوَهَبْنَا لَهُۥ يَحْيَىٰ وَأَصْلَحْنَا لَهُۥ زَوْجَهُۥٓ ۚ إِنَّهُمْ كَانُوا۟ يُسَٰرِعُونَ فِى ٱلْخَيْرَٰتِ وَيَدْعُونَنَا رَغَبًا وَرَهَبًا ۖ وَكَانُوا۟ لَنَا خَٰشِعِينَ ۝٩٠

91. ಮತ್ತು ತನ್ನ ಪಾವಿತ್ರ್ಯವನ್ನು ರಕ್ಷಿಸಿಕೊಂಡ ಆ ಸ್ತ್ರೀಯ ವಿಷಯ[14] ನಾವು ಅವಳಲ್ಲಿ ನಮ್ಮ ಆತ್ಮದಿಂದ ಊದಿದೆವು ಮತ್ತು ಅವಳನ್ನೂ ಅವಳ ಪುತ್ರನನ್ನೂ ಇಡೀ ಜಗತ್ತಿಗೆ ನಿದರ್ಶನ ವಾಗಿ ಮಾಡಿಬಿಟ್ಟೆವು.

وَٱلَّتِىٓ أَحْصَنَتْ فَرْجَهَا فَنَفَخْنَا فِيهَا مِن رُّوحِنَا وَجَعَلْنَٰهَا وَٱبْنَهَآ ءَايَةً لِّلْعَٰلَمِينَ ۝٩١

92. ಈ ನಿಮ್ಮ ಸಮುದಾಯವು ವಾಸ್ತವದಲ್ಲಿ ಒಂದೇ ಸಮುದಾಯ ವಾಗಿದೆ ಮತ್ತು ನಾನು ನಿಮ್ಮ ಪ್ರಭುವಾಗಿದ್ದೇನೆ. ಆದುದರಿಂದ ನೀವು ನನ್ನ ದಾಸ್ಯ-ಆರಾಧನೆ ಮಾಡಿರಿ.

إِنَّ هَٰذِهِۦٓ أُمَّتُكُمْ أُمَّةً وَٰحِدَةً وَأَنَا۠ رَبُّكُمْ فَٱعْبُدُونِ ۝٩٢

93. ಆದರೆ ಅವರು ಪರಸ್ಪರ ತಮ್ಮ ಧರ್ಮವನ್ನು ಛಿನ್ನವಿಚ್ಛಿನ್ನವಾಗಿ ಮಾಡಿ ಬಿಟ್ಟರು. ಎಲ್ಲರಿಗೂ ನಮ್ಮ ಕಡೆಗೇ ಮರಳಲಿಕ್ಕಿದೆ.

وَتَقَطَّعُوٓا۟ أَمْرَهُم بَيْنَهُمْ ۖ كُلٌّ إِلَيْنَا رَٰجِعُونَ ۝٩٣

13. ಅರ್ಥಾತ್- ಮೇಲಿನಿಂದ ಸಮುದ್ರದ ಕಗ್ಗತ್ತಲು ಆವರಿಸಿರುವ ಮತ್ತು ಮೊದಲೇ ಕತ್ತಲಿನಿಂದ ಕೂಡಿರುವ ಮೀನಿನ ಹೊಟ್ಟೆಯಲ್ಲಿ.

14. ಅರ್ಥಾತ್- ಹ. ಮರ್ಯಮ್(ಅ)

94. ಇನ್ನು ಯಾರು ಸತ್ಯವಿಶ್ವಾಸಿಯಾಗಿರುವ ಸ್ಥಿತಿಯಲ್ಲಿ ಸತ್ಕರ್ಮ ವೆಸಗುವನೋ ಅವನ ಕರ್ಮವು ತಿರಸ್ಕೃತವಾಗದು ಮತ್ತು ನಾವು ಅದನ್ನು ಲಿಖಿತಗೊಳಿಸುತ್ತಿದ್ದೇವೆ.

فَمَنْ يَّعْمَلْ مِنَ الصّٰلِحٰتِ وَهُوَ مُؤْمِنٌ فَلَا كُفْرَانَ لِسَعْيِهٖ ۚ وَاِنَّا لَهٗ كٰتِبُوْنَ ﴿٩٤﴾

95-96. ಯಅ್‌ಜೂಜ್ ಮಅ್‌ಜೂಜರು ಬಿಡುಗಡೆಗೊಳಿಸಲ್ಪಡುವ ವರೆಗೂ ನಾವು ನಾಶಗೊಳಿಸಿರುವ ನಾಡು ಪುನಃ ಮರಳುವುದು ಸಾಧ್ಯವಿಲ್ಲ. ಅವರು ಪ್ರತಿಯೊಂದು ಉನ್ನತ ಸ್ಥಳದಿಂದ ಹೊರ ಬರುವರು.

وَحَرٰمٌ عَلٰى قَرْيَةٍ اَهْلَكْنٰهَآ اَنَّهُمْ لَا يَرْجِعُوْنَ ﴿٩٥﴾
حَتّٰٓى اِذَا فُتِحَتْ يَاْجُوْجُ وَمَاْجُوْجُ وَهُمْ مِّنْ كُلِّ حَدَبٍ يَّنْسِلُوْنَ ﴿٩٦﴾

97. ಮತ್ತು ಸತ್ಯಪೂರ್ಣ ವಾಗ್ದಾನ ನೆರವೇರುವ ಸಮಯ ಸನ್ನಿಹಿತ ವಾದಾಗ[15] ಹಠಾತ್ತನೆ ಸತ್ಯನಿಷೇಧಿಗಳ ತೆರೆದ ಕಣ್ಣುಗಳು ತೆರೆದೇ ಇದ್ದು ಬಿಡುವುವು. ಅವರು ಹೇಳುವರು; "ಅಯ್ಯೋ, ನಮ್ಮ ದುರದೃಷ್ಟವೇ! ನಾವು ಈ ವಿಷಯದ ಬಗ್ಗೆ ಅಲಕ್ಷ್ಯರಾಗಿದ್ದೆವು. ನಿಜವಾಗಿ ನಾವು ಅಕ್ರಮಿಗಳಾಗಿದ್ದೆವು."

وَاقْتَرَبَ الْوَعْدُ الْحَقُّ فَاِذَا هِيَ شَاخِصَةٌ اَبْصَارُ الَّذِيْنَ كَفَرُوْا ۗ يٰوَيْلَنَا قَدْ كُنَّا فِيْ غَفْلَةٍ مِّنْ هٰذَا بَلْ كُنَّا ظٰلِمِيْنَ ﴿٩٧﴾

98. ನೀವು ಮತ್ತು ಅಲ್ಲಾಹನನ್ನು ಬಿಟ್ಟು ನೀವು ಪೂಜಿಸುವ ಆರಾಧ್ಯ ವಸ್ತುಗಳು ನರಕಾಗ್ನಿಯ ಇಂಧನಗಳು" ನಿಮಗೆ ಅಲ್ಲಿಗೇ ಹೋಗ ಬೇಕಾಗಿದೆ.[16]

اِنَّكُمْ وَمَا تَعْبُدُوْنَ مِنْ دُوْنِ اللّٰهِ حَصَبُ جَهَنَّمَ ۗ اَنْتُمْ لَهَا وٰرِدُوْنَ ﴿٩٨﴾

99. ಇವುಗಳು ನಿಜಕ್ಕೂ ದೇವರಾಗಿರುತ್ತಿದ್ದರೆ ಅಲ್ಲಿ ಹೋಗುತ್ತಿರಲಿಲ್ಲ. ಇವರೆಲ್ಲರಿಗೂ ಸದಾ ಅಲ್ಲೇ ಇರಬೇಕಾಗಿದೆ.

لَوْ كَانَ هٰٓؤُلَآءِ اٰلِهَةً مَّا وَرَدُوْهَا ۗ وَكُلٌّ فِيْهَا خٰلِدُوْنَ ﴿٩٩﴾

100. ಅಲ್ಲಿ ಅವರು ಬುಸುಗುಟ್ಟುವರು ಮತ್ತು ಅಲ್ಲಿ ಅವರಿಗೆ ಮತ್ತೇನೂ ಕೇಳಿಸದು.

لَهُمْ فِيْهَا زَفِيْرٌ وَّهُمْ فِيْهَا لَا يَسْمَعُوْنَ ﴿١٠٠﴾

101. ಇನ್ನು ನಮ್ಮ ಕಡೆಯಿಂದ ಯಾರ ಪರವಾಗಿ ಮೊದಲೇ ಒಳಿತಿನ ನಿರ್ಧಾರವಾಗಿರುವುದೋ ಅವರು ಖಂಡಿತವಾಗಿಯೂ ಅದರಿಂದ ದೂರವಿರಿಸಲ್ಪಡುವರು.

اِنَّ الَّذِيْنَ سَبَقَتْ لَهُمْ مِّنَّا الْحُسْنٰٓى ۙ اُولٰٓئِكَ عَنْهَا مُبْعَدُوْنَ ﴿١٠١﴾

15. ಅರ್ಥಾತ್- ನಿರ್ಣಾಯಕ ದಿನ ಸನ್ನಿಹಿತವಾಗುವ ಸಮಯ.

16. ಕೆಲವು ಉಲ್ಲೇಖಗಳಲ್ಲಿ ಬಂದಿರುವಂತೆ ಈ ಸೂಕ್ತದ ಬಗ್ಗೆ ಬಹುದೇವವಿಶ್ವಾಸಿಗಳ ನಾಯಕರ ಪೈಕಿ ಒಬ್ಬನು ಆಕ್ಷೇಪವೆತ್ತುತ್ತಾ ಹೇಳಿದನು, "ಹಾಗಾದರೆ ನಮ್ಮ ಆರಾಧ್ಯರುಗಳು ಮಾತ್ರವಲ್ಲ ಮಸೀಹ್, ಉಝೈರ್ ಮತ್ತು ದೇವಚರರೂ ನರಕಕ್ಕೆ ಹೋಗುವರು. ಏಕೆಂದರೆ ಲೋಕದಲ್ಲಿ ಅವರ ಆರಾಧನೆಯನ್ನೂ ಕೈಗೊಳ್ಳಲಾಗುತ್ತಿದೆ." ಅದಕ್ಕೆ ಪ್ರವಾದಿವರ್ಯರು(ಸ) ಹೇಳಿದರು, "ಹೌದು! ಅಲ್ಲಾಹನ ಹೊರತು ತನ್ನ ಆರಾಧನೆ ನಡೆಯಬೇಕು ಎಂದು ಬಯಸಿದ ಪ್ರತಿಯೊಬ್ಬನೂ ಅವರ ಆರಾಧನೆ ಮಾಡಿದವರ ಜತೆಗಿರುವನು."

102. ಅದರ ಕಿರು ಧ್ವನಿಯನ್ನೂ ಅವರು ಕೇಳಲಾರರು ಮತ್ತು ಅವರು ಶಾಶ್ವತವಾಗಿ ತಮ್ಮ ಮನಮೆಚ್ಚುಗೆಯ ವಸ್ತುಗಳ ನಡುವೆ ಇರುವರು.

لَا يَسْمَعُونَ حَسِيسَهَا ۖ وَهُمْ فِي مَا اشْتَهَتْ أَنفُسُهُمْ خَالِدُونَ ﴿١٠٢﴾

103. ಅತ್ಯಂತ ಭಯಭೀತಿಯ ಆ ಕಾಲವು ಅವರಿಗೆ ಕೊಂಚವೂ ವ್ಯಾಕುಲತೆಯನ್ನುಂಟು ಮಾಡಲಾರದು ಮತ್ತು ದೇವಚರರು ಇದಿರ್ಗೊಂಡು ಇದು ನಿಮಗೆ ವಾಗ್ದಾನ ಮಾಡಲಾಗುತ್ತಿದ್ದ ಅದೇ ನಿಮ್ಮ ದಿನ ಎನ್ನುತ್ತಾ ಅವರನ್ನು ಬರಮಾಡಿಕೊಳ್ಳುವರು.

لَا يَحْزُنُهُمُ الْفَزَعُ الْأَكْبَرُ وَتَتَلَقَّاهُمُ الْمَلَائِكَةُ هَٰذَا يَوْمُكُمُ الَّذِي كُنتُمْ تُوعَدُونَ ﴿١٠٣﴾

104. ಗ್ರಂಥಗಳಿಗಾಗಿ ಸುರುಳಿಯಲ್ಲಿ ಹಾಳೆಗಳನ್ನು ಸುತ್ತುವ ಹಾಗೆ ನಾವು ಅಂದು ಆಕಾಶವನ್ನು ಸುತ್ತಿಟ್ಟು ಬಿಡುವೆವು. ನಾವು ಹಿಂದೆ ಸೃಷ್ಟಿಯ ಆರಂಭ ಮಾಡಿದಂತೆಯೇ ಅದನ್ನು ಪುನರಾವರ್ತಿಸುವೆವು. ಇದು ನಮ್ಮ ಹೊಣೆಯಲ್ಲಿರುವ ಒಂದು ವಾಗ್ದಾನವಾಗಿದೆ ಮತ್ತು ಈ ಕಾರ್ಯವನ್ನು ನಾವು ಮಾಡಿಯೇ ತೀರುವೆವು.

يَوْمَ نَطْوِي السَّمَاءَ كَطَيِّ السِّجِلِّ لِلْكُتُبِ ۚ كَمَا بَدَأْنَا أَوَّلَ خَلْقٍ نُّعِيدُهُ ۚ وَعْدًا عَلَيْنَا ۚ إِنَّا كُنَّا فَاعِلِينَ ﴿١٠٤﴾

105. ನಮ್ಮ ಸಜ್ಜನದಾಸರು ಭೂಮಿಯ ವಾರೀಸುದಾರರಾಗುವರೆಂದು[17] ನಾವು ಝುಬೂರಿನಲ್ಲಿ ಉಪದೇಶದ ಬಳಿಕ ಬರೆದಿರುತ್ತೇವೆ.

وَلَقَدْ كَتَبْنَا فِي الزَّبُورِ مِن بَعْدِ الذِّكْرِ أَنَّ الْأَرْضَ يَرِثُهَا عِبَادِيَ الصَّالِحُونَ ﴿١٠٥﴾

106. ಇದರಲ್ಲಿ ದೇವೋಪಾಸಕರಿಗೆ ಒಂದು ದೊಡ್ಡ ವಾರ್ತೆ ಇದೆ.

إِنَّ فِي هَٰذَا لَبَلَاغًا لِّقَوْمٍ عَابِدِينَ ﴿١٠٦﴾

107. ಪೈಗಂಬರರೇ, ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ.

وَمَا أَرْسَلْنَاكَ إِلَّا رَحْمَةً لِّلْعَالَمِينَ ﴿١٠٧﴾

108. ಅವರೊಡನೆ ಹೇಳಿರಿ; "ನಿಮ್ಮ ದೇವನು ಏಕೈಕ ದೇವನೆಂದು ನನ್ನ ಬಳಿಗೆ 'ದಿವ್ಯವಾಣಿ' ಬಂದಿರುತ್ತದೆ. ನೀವು ಆಜ್ಞಾನುಸಾರಿಗಳಾಗುತ್ತೀರಾ?"

قُلْ إِنَّمَا يُوحَىٰ إِلَيَّ أَنَّمَا إِلَٰهُكُمْ إِلَٰهٌ وَاحِدٌ ۖ فَهَلْ أَنتُم مُّسْلِمُونَ ﴿١٠٨﴾

109. ಅವರು ವಿಮುಖರಾದರೆ ಅವರೊಡನೆ ಹೇಳಿರಿ, "ನಾನು ಘಂಟಾಘೋಷವಾಗಿ ನಿಮಗೆ ಎಚ್ಚರಿಕೆ ನೀಡಿರುತ್ತೇನೆ. ಇನ್ನು ನಿಮ್ಮೊಡನೆ ವಾಗ್ದಾನ ಮಾಡಲ್ಪಟ್ಟಿರುವಂತಹ ವಿಷಯವು ಸಮೀಪವಿದೆಯೋ ಅಥವಾ ದೂರವಿದೆಯೋ ಎಂಬುದು ನನಗರಿಯದು.

فَإِن تَوَلَّوْا فَقُلْ آذَنتُكُمْ عَلَىٰ سَوَاءٍ ۖ وَإِنْ أَدْرِي أَقَرِيبٌ أَم بَعِيدٌ مَّا تُوعَدُونَ ﴿١٠٩﴾

17. ಈ ಸೂಕ್ತವನ್ನು ತಿಳಿಯಲಿಕ್ಕಾಗಿ ಅಝ್ಝುಮರ್ ಅಧ್ಯಾಯದ 73-74ನೆಯ ಸೂಕ್ತವನ್ನು ನೋಡಿರಿ.

110. ನೀವು ಉಚ್ಚ ಸ್ವರದಿಂದ ಹೇಳುವುದನ್ನೂ ಗುಪ್ತವಾಗಿ ಹೇಳುವುದನ್ನೂ ಅಲ್ಲಾಹನು ಅರಿಯುತ್ತಾನೆ.

إِنَّهُۥ يَعْلَمُ ٱلْجَهْرَ مِنَ ٱلْقَوْلِ وَيَعْلَمُ مَا تَكْتُمُونَ ١١٠

111. ಪ್ರಾಯಶಃ ಇದು (ಈ ವಿಳಂಬವು) ನಿಮಗೊಂದು ಪರೀಕ್ಷೆಯಾಗಿದೆಯೆಂದು ನಾನು ಭಾವಿಸುತ್ತೇನೆ ಮತ್ತು ನಿಮಗೆ ಒಂದು ನಿರ್ದಿಷ್ಟ ಕಾಲದ ವರೆಗೆ ಸುಖಿಸುವ ಅವಕಾಶ ಕೊಡಲಾಗುತ್ತಿದೆ."

وَإِنْ أَدْرِى لَعَلَّهُۥ فِتْنَةٌ لَّكُمْ وَمَتَٰعٌ إِلَىٰ حِينٍ ١١١

112. (ಕೊನೆಗೆ) ಸಂದೇಶವಾಹಕರು, "ಓ ನನ್ನ ಪ್ರಭೂ! ಸತ್ಯಸಹಿತ ತೀರ್ಮಾನಿಸಿ ಬಿಡು ಮತ್ತು ಜನರೇ, ನಮ್ಮ ದಯಾಮಯನಾದ ಪ್ರಭು ನೀವು ಸೃಷ್ಟಿಸುತ್ತಿರುವ ಮಾತುಗಳ ವಿರುದ್ಧ ನಮಗೆ ಸಹಾಯಾಧಾರವಾಗಿರುತ್ತಾನೆಂದು" ಹೇಳಿದರು.

قَٰلَ رَبِّ ٱحْكُم بِٱلْحَقِّ ۗ وَرَبُّنَا ٱلرَّحْمَٰنُ ٱلْمُسْتَعَانُ عَلَىٰ مَا تَصِفُونَ ١١٢







**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللَّهِ الرَّحْمَٰنِ الرَّحِيمِ ○

1. ಜನರೇ ನಿಮ್ಮ ಪ್ರಭುವಿನ ಕ್ರೋಧವನ್ನು ಭಯಪಡಿರಿ. ವಾಸ್ತವದಲ್ಲಿ ಪುನರುತ್ಥಾನದ ಘಳಿಗೆಯ ಮಹಾಕಂಪನವು (ಭಯಾನಕ) ವಿಷಯವಾಗಿದೆ.

يَا أَيُّهَا النَّاسُ اتَّقُوا رَبَّكُمْ ۚ إِنَّ زَلْزَلَةَ السَّاعَةِ شَيْءٌ عَظِيمٌ ①

2. ನೀವು ಅದನ್ನು ಕಾಣುವಂದು ಹಾಲುಣಿಸುವವಳು ಹಾಲುಣ್ಣುವ ತನ್ನ ಶಿಶುವನ್ನು ಮರೆತು ಬಿಡುವಳು. ಪ್ರತಿಯೊಬ್ಬ ಗರ್ಭಿಣಿಗೆ ಗರ್ಭಪಾತವಾಗಿ ಬಿಡುವುದು. ಜನರು ನಿಮಗೆ ಉನ್ಮತ್ತರಂತೆ ತೋರುವರು. ವಸ್ತುತಃ ಅವರು ಉನ್ಮತ್ತರಾಗಿರಲಾರರು. ನಿಜವಾಗಿ ಅಲ್ಲಾಹನ ಯಾತನೆಯೇ ಅಷ್ಟು ಭೀಕರವಾಗಿರುವುದು.

يَوْمَ تَرَوْنَهَا تَذْهَلُ كُلُّ مُرْضِعَةٍ عَمَّا أَرْضَعَتْ وَتَضَعُ كُلُّ ذَاتِ حَمْلٍ حَمْلَهَا وَتَرَى النَّاسَ سُكَارَىٰ وَمَا هُمْ بِسُكَارَىٰ وَلَٰكِنَّ عَذَابَ اللَّهِ شَدِيدٌ ②

3. ಜನರಲ್ಲಿ ಕೆಲವರು ತಿಳುವಳಿಕೆ ಇಲ್ಲದೆಯೇ ಅಲ್ಲಾಹನ ಬಗ್ಗೆ ವಾದ - ವಿವಾದ ನಡೆಸುತ್ತಾರೆ ಮತ್ತು ಪ್ರತಿಯೋರ್ವ ಉದ್ಧಟ ಶೈತಾನನನ್ನು ಅನುಸರಿಸುತ್ತಾರೆ.

وَمِنَ النَّاسِ مَنْ يُجَادِلُ فِي اللَّهِ بِغَيْرِ عِلْمٍ وَيَتَّبِعُ كُلَّ شَيْطَانٍ مَرِيدٍ ③

4. ವಸ್ತುತಃ ಅವನನ್ನು ತನ್ನ ಮಿತ್ರನಾಗಿ ಮಾಡಿಕೊಳ್ಳುವವನನ್ನು ಆತನು ಪಥಭ್ರಷ್ಟಗೊಳಿಸಿಯೇ ತೀರುವನು ಮತ್ತು ನರಕದ ಯಾತನೆಯ ದಾರಿ ತೋರಿಸುವನು ಎಂದು ಅವನ ಅದೃಷ್ಟದಲ್ಲೇ ಬರೆದಿದೆ.

كُتِبَ عَلَيْهِ أَنَّهُ مَنْ تَوَلَّاهُ فَأَنَّهُ يُضِلُّهُ وَيَهْدِيهِ إِلَىٰ عَذَابِ السَّعِيرِ ④

5. ಜನರೇ, ನಿಮಗೆ ಮರಣಾ ನಂತರದ ಜೀವನದ ಬಗೆಗೇನಾದರೂ ಸಂಶಯವಿದ್ದರೆ, ನಾವು ನಿಮ್ಮನ್ನು ಮಣ್ಣಿನಿಂದಲೂ ಅನಂತರ ವೀರ್ಯದಿಂದಲೂ ಆಮೇಲೆ ರಕ್ತ ಪಿಂಡದಿಂದಲೂ ಆ ಬಳಿಕ ರೂಪವಿರುವ ಮತ್ತು ರೂಪವಿಲ್ಲದ ಮಾಂಸದ ತುಣುಕಿನಿಂದಲೂ

يَا أَيُّهَا النَّاسُ إِنْ كُنْتُمْ فِي رَيْبٍ مِنَ الْبَعْثِ فَإِنَّا خَلَقْنَاكُمْ مِنْ تُرَابٍ ثُمَّ مِنْ نُطْفَةٍ ثُمَّ مِنْ عَلَقَةٍ ثُمَّ مِنْ

ಸೃಷ್ಟಿಸಿದೆವು ಎಂಬುದು ನಿಮಗೆ ತಿಳಿದಿರಲಿ. ನಿಮಗೆ ವಸ್ತುಸ್ಥಿತಿ ವಿವರಿಸಲಿಕ್ಕಾಗಿ (ನಾವು ಇದನ್ನು ತಿಳಿಸುತ್ತಿದ್ದೇವೆ). ನಾವು ನಮಗಿಷ್ಟವಿರುವುದನ್ನು (ವೀರ್ಯವನ್ನು) ಒಂದು ನಿರ್ದಿಷ್ಟ ಅವಧಿಯ ತನಕ ಗರ್ಭಾಶಯದೊಳಗೆ ತಡೆದಿರಿಸುತ್ತೇವೆ. ಅನಂತರ ನಿಮ್ಮನ್ನು ಒಂದು ಶಿಶುವಿನ ರೂಪದಲ್ಲಿ ಹೊರ ತರುತ್ತೇವೆ. (ತರುವಾಯ) ನೀವು ತಾರುಣ್ಯಕ್ಕೆ ತಲುಪುವಂತಾಗಲು (ನಿಮ್ಮನ್ನು ಪೋಷಿಸುತ್ತೇವೆ) ಮತ್ತು ನಿಮ್ಮಲ್ಲಿ ಕೆಲವರನ್ನು ಮೊದಲೇ ಹಿಂದಕ್ಕೆ ಕರೆಸಿ ಕೊಳ್ಳಲಾಗುತ್ತದೆ ಮತ್ತು ಕೆಲವರನ್ನು ಎಲ್ಲವನ್ನೂ ತಿಳಿದುಕೊಂಡ ಬಳಿಕ ಏನೂ ತಿಳಿಯದಂತಾಗಲು ಅತಿ ವೃದ್ಧಾಪ್ಯದೆಡೆಗೆ ತಿರುಗಿಸಿ ಬಿಡಲಾಗುತ್ತದೆ. ನೆಲವು ಒಣಗಿರುವುದನ್ನು ನೀವು ನೋಡುತ್ತೀರಿ. ಅನಂತರ ನಾವು ಅದರ ಮೇಲೆ ಮಳೆಗೆರೆದಾಗ ಅದು ಒಮ್ಮೆಲೇ ಮೊಳೆಯಿತು, ಉಬ್ಬಿತು ಮತ್ತು ಎಲ್ಲ ಬಗೆಯ ನಯನ ಮನೋಹರ ಸಸ್ಯಗಳನ್ನು ಹೊರಗೆಡಹ ತೊಡಗಿಬಿಟ್ಟಿತು.

مُّضْغَةٍ مُّخَلَّقَةٍ وَّغَيْرِ مُخَلَّقَةٍ لِّنُبَيِّنَ لَكُمْ ۚ وَنُقِرُّ فِي الْاَرْحَامِ مَا نَشَآءُ اِلٰٓى اَجَلٍ مُّسَمًّى ثُمَّ نُخْرِجُكُمْ طِفْلًا ثُمَّ لِتَبْلُغُوْٓا اَشُدَّكُمْ ۚ وَمِنْكُمْ مَّنْ يُّتَوَفّٰى وَمِنْكُمْ مَّنْ يُّرَدُّ اِلٰٓى اَرْذَلِ الْعُمُرِ لِكَيْلَا يَعْلَمَ مِنْۢ بَعْدِ عِلْمٍ شَيْـًٔا ۗ وَتَرَى الْاَرْضَ هَامِدَةً فَاِذَآ اَنْزَلْنَا عَلَيْهَا الْمَآءَ اهْتَزَّتْ وَرَبَتْ وَاَنْۢبَتَتْ مِنْ كُلِّ زَوْجٍۢ بَهِيْجٍ ﴿٥﴾

6. ಇವೆಲ್ಲ ಆಗುವುದಕ್ಕೆ ಕಾರಣ ಅಲ್ಲಾಹನೇ ಪರಮ ಸತ್ಯವಾಗಿರುವುದು. ಅವನು ಮೃತರನ್ನು ಜೀವಂತಗೊಳಿಸುತ್ತಾನೆ ಮತ್ತು ಸರ್ವ ವಿಷಯಗಳ ಮೇಲೆ ಸಾಮರ್ಥ್ಯವುಳ್ಳವನಾಗಿರುತ್ತಾನೆ.

ذٰلِكَ بِاَنَّ اللّٰهَ هُوَ الْحَقُّ وَاَنَّهٗ يُحْيِ الْمَوْتٰى وَاَنَّهٗ عَلٰى كُلِّ شَيْءٍ قَدِيْرٌ ﴿٦﴾

7. ಪುನರುತ್ಥಾನದ ಘಳಿಗೆಯು ಬಂದೇ ತೀರುವುದು (ಎಂಬುದಕ್ಕಿದು ಆಧಾರವಾಗಿದೆ) ಇದರಲ್ಲಿ ಸಂಶಯಕ್ಕೆ ಅವಕಾಶವೇ ಇಲ್ಲ ಮತ್ತು ಸಮಾಧಿಗಳೊಳಗೆ ಹೋಗಿರುವವರನ್ನು ಅಲ್ಲಾಹನು ಖಂಡಿತವಾಗಿಯೂ ಎಬ್ಬಿಸುವನು.

وَّاَنَّ السَّاعَةَ اٰتِيَةٌ لَّا رَيْبَ فِيْهَا ۙ وَاَنَّ اللّٰهَ يَبْعَثُ مَنْ فِي الْقُبُوْرِ ﴿٧﴾

8. ಮತ್ತೆ ಕೆಲವರು ಯಾವುದೇ ಜ್ಞಾನ, ಸನ್ಮಾರ್ಗದರ್ಶನ ಮತ್ತು ಪ್ರಕಾಶ ನೀಡುವಂತಹ ಗ್ರಂಥದ ಹೊರತಾಗಿಯೇ ಅಲ್ಲಾಹನ ವಿಷಯದಲ್ಲಿ ಜಗಳಾಡುವವರಿದ್ದಾರೆ.

وَمِنَ النَّاسِ مَنْ يُّجَادِلُ فِي اللّٰهِ بِغَيْرِ عِلْمٍ وَّلَا هُدًى وَّلَا كِتٰبٍ مُّنِيْرٍ ﴿٨﴾

9. ಕೊರಳನ್ನು ಸೆಟೆಯುತ್ತ ಜನರನ್ನು ದೇವ ಮಾರ್ಗದಿಂದ ತಪ್ಪಿಸಲಿಕ್ಕಾಗಿ (ಅವರು ಹೀಗೆ ಮಾಡುತ್ತಾರೆ). ಇಂತಹವನಿಗೆ ಈ ಲೋಕದಲ್ಲಿ ಅಪಮಾನವಿದೆ. ಪುನರುತ್ಥಾನದ ದಿನ ನಾವು ಅವನಿಗೆ ನರಕಾಗ್ನಿಯ ಶಿಕ್ಷೆಯ ಸವಿಯನ್ನು ಉಣಿಸುವೆವು.

ثَانِيَ عِطْفِهٖ لِيُضِلَّ عَنْ سَبِيْلِ اللّٰهِ ۗ لَهٗ فِي الدُّنْيَا خِزْيٌ وَّنُذِيْقُهٗ يَوْمَ الْقِيٰمَةِ عَذَابَ الْحَرِيْقِ ﴿٩﴾

10. ನಿನ್ನ ಸ್ವಂತ ಕೈಗಳು ನಿನಗಾಗಿ ಸಿದ್ಧಗೊಳಿಸಿರುವ ನಿನ್ನ ಭವಿಷ್ಯವಿದು. ಅನ್ಯಥಾ ಅಲ್ಲಾಹನು ತನ್ನ ದಾಸರ ಮೇಲೆ ಅಕ್ರಮವೆಸಗುವವನಲ್ಲ.

ذٰلِكَ بِمَا قَدَّمَتْ يَدٰكَ وَاَنَّ اللّٰهَ لَيْسَ بِظَلَّامٍ لِّلْعَبِيْدِ ﴿١٠﴾

ع

11. ಗಡಿಯಲ್ಲಿದ್ದುಕೊಂಡು ಅಲ್ಲಾಹನ ದಾಸ್ಯ-ಆರಾಧನೆ ಮಾಡುವವನೂ ಜನರಲ್ಲಿದ್ದಾನೆ.[1] ಲಾಭವಾದರೆ ತೃಪ್ತನಾಗುತ್ತಾನೆ ಮತ್ತು ಏನಾದರೂ ಸಂಕಷ್ಟ ಬಂದರೆ ಹಿಂದಕ್ಕೆ ತಿರುಗಿ ಬಿಡುತ್ತಾನೆ. ಅವನ ಪಾಲಿಗೆ ಇಹಲೋಕವೂ ನಷ್ಟವಾಯಿತು, ಪರಲೋಕವೂ ನಷ್ಟವಾಯಿತು. ಇದುವೇ ಸುಸ್ಪಷ್ಟ ನಷ್ಟ.

وَمِنَ النَّاسِ مَن يَعْبُدُ اللَّهَ عَلَىٰ حَرْفٍ ۖ فَإِنْ أَصَابَهُ خَيْرٌ اطْمَأَنَّ بِهِ ۖ وَإِنْ أَصَابَتْهُ فِتْنَةٌ انقَلَبَ عَلَىٰ وَجْهِهِ خَسِرَ الدُّنْيَا وَالْآخِرَةَ ۚ ذَٰلِكَ هُوَ الْخُسْرَانُ الْمُبِينُ ﴿١١﴾

12. ಅವನು ಅಲ್ಲಾಹನನ್ನು ಬಿಟ್ಟು ಅವನಿಗೆ ಹಾನಿಯನ್ನಾಗಲಿ, ಲಾಭವನ್ನಾಗಲಿ ಒದಗಿಸಲಾಗದಂತಹವರನ್ನು ಪ್ರಾರ್ಥಿಸುತ್ತಾನೆ, ಇದುವೇ ಪಥಭ್ರಷ್ಟತೆಯ ಪರಮಾವಧಿ.

يَدْعُو مِن دُونِ اللَّهِ مَا لَا يَضُرُّهُ وَمَا لَا يَنفَعُهُ ۚ ذَٰلِكَ هُوَ الضَّلَالُ الْبَعِيدُ ﴿١٢﴾

13. ಯಾರ ಹಾನಿಯು ಅವರ ಲಾಭಕ್ಕಿಂತ ಸಮೀಪವಿದೆಯೋ ಅವರನ್ನು ಅವನು ಪ್ರಾರ್ಥಿಸುತ್ತಾನೆ. ಅವನ ಸಂರಕ್ಷಕನು ಅತ್ಯಂತ ನಿಕೃಷ್ಟನು ಮತ್ತು ಅವನ ಮಿತ್ರನು ಅತ್ಯಂತ ನಿಕೃಷ್ಟನು.

يَدْعُو لَمَن ضَرُّهُ أَقْرَبُ مِن نَّفْعِهِ ۚ لَبِئْسَ الْمَوْلَىٰ وَلَبِئْسَ الْعَشِيرُ ﴿١٣﴾

14. (ಇದಕ್ಕೆ ವ್ಯತಿರಿಕ್ತವಾಗಿ) ಸತ್ಯವಿಶ್ವಾಸವಿರಿಸಿಕೊಂಡು ಸತ್ಕರ್ಮವೆಸಗಿದವರನ್ನು ಖಂಡಿತವಾಗಿಯೂ ಅಲ್ಲಾಹನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಅಲ್ಲಾಹನು ತಾನಿಚ್ಛಿಸಿದುದನ್ನು ಮಾಡುತ್ತಾನೆ.

إِنَّ اللَّهَ يُدْخِلُ الَّذِينَ آمَنُوا وَعَمِلُوا الصَّالِحَاتِ جَنَّاتٍ تَجْرِي مِن تَحْتِهَا الْأَنْهَارُ ۚ إِنَّ اللَّهَ يَفْعَلُ مَا يُرِيدُ ﴿١٤﴾

15. ಅಲ್ಲಾಹನು ಇಹ-ಪರಗಳಲ್ಲಿ ತನಗೇನೂ ಸಹಾಯ ಮಾಡಲಾರನೆಂದು ಭಾವಿಸಿಕೊಂಡವನು ಒಂದು ಹಗ್ಗದ ಮೂಲಕ ಆಕಾಶಕ್ಕೆ ತಲುಪಿ ಬಿರುಕನ್ನು ಉಂಟು ಮಾಡಲಿ. ಅನಂತರ ಅವನ ಪ್ರಯ ತ್ನವು ಅವನಿಗೆ ಹಿತಕರವಲ್ಲದ ವಿಷಯವನ್ನು ರದ್ದುಗೊಳಿಸುತ್ತದೋ ಎಂದು ನೋಡಿಕೊಳ್ಳಲಿ.

مَن كَانَ يَظُنُّ أَن لَّن يَنصُرَهُ اللَّهُ فِي الدُّنْيَا وَالْآخِرَةِ فَلْيَمْدُدْ بِسَبَبٍ إِلَى السَّمَاءِ ثُمَّ لْيَقْطَعْ فَلْيَنظُرْ هَلْ يُذْهِبَنَّ كَيْدُهُ مَا يَغِيظُ ﴿١٥﴾

16. ನಾವು ಈ ಕುರ್‌ಆನನ್ನು ಇಂತಹ ಸುಸ್ಪಷ್ಟವಾದ ಸೂಕ್ತಗಳೊಂದಿಗೆ ಅವತೀರ್ಣ ಗೊಳಿಸಿದ್ದೇವೆ ಮತ್ತು ಅಲ್ಲಾಹನು ತಾನಿಚ್ಛಿಸಿದವನಿಗೆ ಸನ್ಮಾರ್ಗದರ್ಶನವನ್ನು ನೀಡುತ್ತಾನೆ.

وَكَذَٰلِكَ أَنزَلْنَاهُ آيَاتٍ بَيِّنَاتٍ وَأَنَّ اللَّهَ يَهْدِي مَن يُرِيدُ ﴿١٦﴾

17. ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸಿದವರು, ಯಹೂದಿಗಳಾದವರು, ಸಾಬಿಈಗಳು, ನಸಾರಾಗಳು (ಕ್ರೈಸ್ತರು), ಮಜೂಸಿಗಳು (ಅಗ್ನಿ ಆರಾಧಕರು) ಮತ್ತು ಬಹುದೇವಾರಾಧಕರು ಇವರೆಲ್ಲರ ನಡುವೆ ಅಲ್ಲಾಹನು ಪುನರುತ್ಥಾನದ ದಿನ ತೀರ್ಮಾನ ಮಾಡಿಬಿಡುವನು. ಪ್ರತಿಯೊಂದು ವಿಷಯವೂ ಅಲ್ಲಾಹನ ದೃಷ್ಟಿಯಲ್ಲಿದೆ.

إِنَّ الَّذِينَ آمَنُوا وَالَّذِينَ هَادُوا وَالصَّابِئِينَ وَالنَّصَارَىٰ وَالْمَجُوسَ وَالَّذِينَ أَشْرَكُوا إِنَّ اللَّهَ يَفْصِلُ بَيْنَهُمْ يَوْمَ الْقِيَامَةِ ۚ إِنَّ اللَّهَ عَلَىٰ كُلِّ شَيْءٍ شَهِيدٌ ﴿١٧﴾

1. ಅರ್ಥಾತ್- ಸತ್ಯನಿಷೇಧ ಮತ್ತು ಇಸ್ಲಾಮಿನ ಸರಹದ್ದಿನಲ್ಲಿ ನಿಂತುಕೊಂಡು ದಾಸ್ಯ ಕೈಗೊಳ್ಳುತ್ತಾನೆ. ಅವನ ಸ್ಥಿತಿ ಜಯ ದೊರೆತರೆ ಜತೆ ಸೇರುವ ಮತ್ತು ಸೋಲುಂಟಾದರೆ ಮೆಲ್ಲನೆ ಸರಿದು ಬಿಡುವ ಸೇನೆಯ ಬದಿಯಲ್ಲಿ ನಿಂತ ಗೊಂದಲದಲ್ಲಿರುವ ವ್ಯಕ್ತಿಯಂತಿದೆ.

18. ಆಕಾಶಗಳಲ್ಲಿಯೂ ಭೂಮಿಯಲ್ಲಿಯೂ ಇರುವ ಸಕಲವೂ ಸೂರ್ಯ ಚಂದ್ರ ನಕ್ಷತ್ರಗಳೂ ಪರ್ವತಗಳೂ ಮರಗಳೂ ಪ್ರಾಣಿಗಳೂ ಅನೇಕ ಮನುಷ್ಯರೂ ಯಾತನೆಗೆ ಅರ್ಹರಾಗಿರುವ ಅನೇಕರೂ ಅಲ್ಲಾಹನ ಮುಂದೆ ಸಾಷ್ಟಾಂಗ ವೆರಗುತ್ತಿರುವುದನ್ನು ನೀವು ನೋಡುತ್ತಿಲ್ಲವೇ? ಯಾರನ್ನು ಅಲ್ಲಾಹ್ ಅವಮಾನಗೊಳಿಸಿ ಬಿಡುವನೋ ಅವನನ್ನು ಬೇರೆ ಯಾರೂ ಗೌರವಿಸುವವರಿಲ್ಲ. ಅಲ್ಲಾಹ್ ತಾನಿಚ್ಛಿಸಿದ್ದನ್ನೇ ಮಾಡುತ್ತಾನೆ.

أَلَمْ تَرَ أَنَّ اللَّهَ يَسْجُدُ لَهُ مَنْ فِي السَّمَاوَاتِ وَمَنْ فِي الْأَرْضِ وَالشَّمْسُ وَالْقَمَرُ وَالنُّجُومُ وَالْجِبَالُ وَالشَّجَرُ وَالدَّوَابُّ وَكَثِيرٌ مِنَ النَّاسِ ۖ وَكَثِيرٌ حَقَّ عَلَيْهِ الْعَذَابُ ۗ وَمَنْ يُهِنِ اللَّهُ فَمَا لَهُ مِنْ مُكْرِمٍ ۚ إِنَّ اللَّهَ يَفْعَلُ مَا يَشَاءُ ۩ ﴿١٨﴾

19. ತಮ್ಮ ಪ್ರಭುವಿನ ವಿಷಯದಲ್ಲಿ ಪರಸ್ಪರ ಕಲಹವಿರುವ ಎರಡು ಪಂಗಡಗಳಿವು[2]. ಇವರಲ್ಲಿ ಸತ್ಯನಿಷೇಧಿಗಳಿಗೆ ನರಕಾಗ್ನಿಯ ಉಡುಪು ಕತ್ತರಿಸಲ್ಪಟ್ಟಿದೆ. ಅವರ ತಲೆಗಳ ಮೇಲೆ ಕುದಿಯುವ ನೀರನ್ನು ಸುರಿಸಲಾಗುವುದು.

هَٰذَانِ خَصْمَانِ اخْتَصَمُوا فِي رَبِّهِمْ ۖ فَالَّذِينَ كَفَرُوا قُطِّعَتْ لَهُمْ ثِيَابٌ مِنْ نَارٍ يُصَبُّ مِنْ فَوْقِ رُءُوسِهِمُ الْحَمِيمُ ﴿١٩﴾

20. ಅದರಿಂದ ಅವರ ಚರ್ಮಗಳು ಮಾತ್ರವಲ್ಲ ಹೊಟ್ಟೆಯೊಳಗಿರುವ ಭಾಗಗಳೂ ಕರಗಿ ಹೋಗುವುವು-

يُصْهَرُ بِهِ مَا فِي بُطُونِهِمْ وَالْجُلُودُ ﴿٢٠﴾

21. ಮತ್ತು ಅವರನ್ನು ಶಿಕ್ಷಿಸಲಿಕ್ಕಾಗಿ ಕಬ್ಬಿಣದ ಗದೆಗಳಿರುವುವು.

وَلَهُمْ مَقَامِعُ مِنْ حَدِيدٍ ﴿٢١﴾

22. ಅವರು ಭಯಭೀತರಾಗಿ ನರಕದಿಂದ ಹೊರ ಹೋಗಿ ಬಿಡಲು ಪ್ರಯತ್ನಿಸಿದಾಗಲೆಲ್ಲ ಸುಡುವ ಶಿಕ್ಷೆಯ ರುಚಿಯನ್ನು ಸವಿಯಿರಿ ಎನ್ನುತ್ತ ಪುನಃ ಅದರೊಳಗೇ ದೂಡಲ್ಪಡುವರು.

كُلَّمَا أَرَادُوا أَنْ يَخْرُجُوا مِنْهَا مِنْ غَمٍّ أُعِيدُوا فِيهَا وَذُوقُوا عَذَابَ الْحَرِيقِ ﴿٢٢﴾

23. (ಇನ್ನೊಂದು ಕಡೆ) ಅಲ್ಲಾಹನು ಸತ್ಯವಿಶ್ವಾಸವಿರಿಸಿದವರನ್ನು ಮತ್ತು ಸತ್ಕರ್ಮವೆಸಗಿದವರನ್ನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಅಲ್ಲಿ ಅವರು ಚಿನ್ನದ ಕಂಕಣಗಳಿಂದಲೂ ಮುತ್ತುಗಳಿಂದಲೂ ಅಲಂಕರಿಸಲ್ಪಡುವರು. ಅವರ ಉಡುಪು ರೇಶ್ಮೆಯದ್ದಾಗಿರುವುದು.

إِنَّ اللَّهَ يُدْخِلُ الَّذِينَ آمَنُوا وَعَمِلُوا الصَّالِحَاتِ جَنَّاتٍ تَجْرِي مِنْ تَحْتِهَا الْأَنْهَارُ يُحَلَّوْنَ فِيهَا مِنْ أَسَاوِرَ مِنْ ذَهَبٍ وَلُؤْلُؤًا ۖ وَلِبَاسُهُمْ فِيهَا حَرِيرٌ ﴿٢٣﴾

2. ಇಲ್ಲಿ ದೇವನ ಬಗ್ಗೆ ಜಗಳ ಕಾಯುತ್ತಿರುವ ಎಲ್ಲಾ ಗುಂಪುಗಳನ್ನು ಅವುಗಳ ಸಂಖ್ಯಾಧಿಕ್ಯದ ಹೊರತಾಗಿಯೂ ಎರಡು ಪಂಗಡಗಳು ಎಂದು ಹೇಳಲಾಗಿದೆ. ಪ್ರವಾದಿಗಳ ಮಾತನ್ನು ನಂಬಿ ನಿಜಾರ್ಥದಲ್ಲಿ ದೇವನ ಅನುಸರಣೆ ಮಾಡುವ ಒಂದು ಪಂಗಡ. ಪ್ರವಾದಿಗಳ ಮಾತನ್ನು ನಂಬದೆ ಸತ್ಯನಿಷೇಧದಲ್ಲಿ ತೊಡಗಿರುವವರನ್ನೊಳಗೊಂಡ ಇನ್ನೊಂದು ಪಂಗಡ. ಅವರ ನಡುವೆ ಎಷ್ಟೇ ವ್ಯತ್ಯಾಸಗಳಿದ್ದರೂ ಅವರು ಸತ್ಯನಿಷೇಧದ ಎಂತಹ ವಿಭಿನ್ನ ಪ್ರಕಾರಗಳನ್ನು ಅಳವಡಿಸಿಕೊಂಡವರಾಗಿದ್ದರೂ ಅವರು ಅದೇ ಪಂಗಡಕ್ಕೆ ಸೇರಿದವರಾಗಿದ್ದಾರೆ.

24. ಅವರಿಗೆ ಪರಿಶುದ್ಧ ಮಾತನ್ನು ಸ್ವೀಕರಿಸುವಂತಹ ಮಾರ್ಗದರ್ಶನ ನೀಡಲಾಯಿತು ಮತ್ತು ಅವರಿಗೆ ಸ್ತುತ್ಯರ್ಹನಾದವನ ಮಾರ್ಗವನ್ನು ತೋರಿಸಲಾಯಿತು.

وَهُدُوا إِلَى الطَّيِّبِ مِنَ الْقَوْلِ وَهُدُوا إِلَىٰ صِرَاطِ الْحَمِيدِ ﴿٢٤﴾

25. ಸತ್ಯನಿಷೇಧ ಕೈಗೊಂಡವರು, (ಇಂದು) ಅಲ್ಲಾಹನ ಮಾರ್ಗದಿಂದ ಮತ್ತು ನಾವು ಸಕಲ ಮಾನವರಿಗಾಗಿ ಮಾಡಿರುವ, ಸ್ಥಳೀಯರ ಹಾಗೂ ಹೊರಗಿನಿಂದ ಬರುವವರ ಹಕ್ಕುಗಳು ಸರಿಸಮಾನವಾಗಿ ರುವ ಮಸ್ಜಿದುಲ್ ಹರಾಮ್‌ನ ಸಂದರ್ಶನದಿಂದ ಜನರನ್ನು ತಡೆಯುತ್ತಿರುವವರು.[3] (ಅವರ ವರ್ತನೆಯು ಖಂಡಿತವಾಗಿಯೂ ಶಿಕ್ಷಾರ್ಹವಾಗಿದೆ) ಇದರಲ್ಲಿ (ಮಸ್ಜಿದುಲ್ ಹರಾಮ್)ನಲ್ಲಿ ಸತ್ಯದಿಂದ ದೂರ ಸರಿದು ಅಕ್ರಮ ಮಾರ್ಗ ಕೈಗೊಂಡವನು ಯಾರೇ ಇರಲಿ, ಅವನಿಗೆ ನಾವು ವೇದನಾಯುಕ್ತ ಯಾತನೆಯ ರುಚಿಯನ್ನು ಸವಿಸುವೆವು.

إِنَّ الَّذِينَ كَفَرُوا وَيَصُدُّونَ عَن سَبِيلِ اللَّهِ وَالْمَسْجِدِ الْحَرَامِ الَّذِي جَعَلْنَاهُ لِلنَّاسِ سَوَاءً الْعَاكِفُ فِيهِ وَالْبَادِ ۚ وَمَن يُرِدْ فِيهِ بِإِلْحَادٍ بِظُلْمٍ نُّذِقْهُ مِنْ عَذَابٍ أَلِيمٍ ﴿٢٥﴾

26. ನಾವು ಇಬ್‌ರಾಹೀಮರಿಗೆ ಈ ಭವನ(ಕಅಬಾ)ದ ಸ್ಥಳವನ್ನು ಗೊತ್ತುಪಡಿಸಿ ಕೊಟ್ಟ ಸಂದರ್ಭವನ್ನು ಸ್ಮರಿಸಿರಿ. (ಅವರಿಗೆ ಹೀಗೆ ಆದೇಶಿಸಲಾಗಿತ್ತು;) "ನನ್ನ ಜೊತೆ ಯಾವುದೇ ವಸ್ತುವನ್ನೂ ಸಹಭಾಗಿಯಾಗಿ ಮಾಡದಿರಿ. ನನ್ನ ಭವನವನ್ನು ಪ್ರದಕ್ಷಿಣೆ ಮಾಡುವವರಿಗಾಗಿಯೂ (ನಮಾಝಿಗೆ) ನಿಲ್ಲುವವರಿಗಾಗಿಯೂ ಬಾಗುವವರಿಗಾಗಿಯೂ ಸಾಷ್ಟಾಂಗ ಮಾಡುವವರಿಗಾಗಿಯೂ ನಿರ್ಮಲವಾಗಿರಿಸಿರಿ-

وَإِذْ بَوَّأْنَا لِإِبْرَاهِيمَ مَكَانَ الْبَيْتِ أَن لَّا تُشْرِكْ بِي شَيْئًا وَطَهِّرْ بَيْتِيَ لِلطَّائِفِينَ وَالْقَائِمِينَ وَالرُّكَّعِ السُّجُودِ ﴿٢٦﴾

27. ಮತ್ತು ಜನರಿಗೆ ಹಜ್ಜ್ ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ. ಅವರು ದೂರ ದೂರದ ಪ್ರದೇಶಗಳಿಂದೆಲ್ಲ ಕಾಲ್ನಡಿಗೆಯಲ್ಲೂ ಒಂಟೆಗಳ ಮೇಲೆ ಸವಾರಿ ಮಾಡಿಕೊಂಡೂ ನಿಮ್ಮ ಬಳಿಗೆ ಬರು ವಂತಾಗಲಿ."

وَأَذِّن فِي النَّاسِ بِالْحَجِّ يَأْتُوكَ رِجَالًا وَعَلَىٰ كُلِّ ضَامِرٍ يَأْتِينَ مِن كُلِّ فَجٍّ عَمِيقٍ ﴿٢٧﴾

28. (ಈ ರೀತಿ) ಅವರು ಇಲ್ಲಿ ಅವರಿಗಾಗಿ ಇರಿಸಲಾಗಿರುವ ಪ್ರಯೋಜನಗಳನ್ನು ಪ್ರತ್ಯಕ್ಷವಾಗಿ ನೋಡುವಂತಾಗಲಿ ಮತ್ತು ಅವರು ಕೆಲವು ನಿಶ್ಚಿತ ದಿನಗಳಲ್ಲಿ ಅಲ್ಲಾಹನು ಅವರಿಗೆ ದಯ ಪಾಲಿಸಿರುವ ಜಾನುವಾರುಗಳ ಮೇಲೆ ಅವನ ನಾಮವನ್ನುಚ್ಚರಿಸಲಿ. ಸ್ವತಃ ತಿನ್ನಲಿ ಮತ್ತು ಬಡ ಬಗ್ಗರಿಗೂ ಕೊಡಲಿ.

لِّيَشْهَدُوا مَنَافِعَ لَهُمْ وَيَذْكُرُوا اسْمَ اللَّهِ فِي أَيَّامٍ مَّعْلُومَاتٍ عَلَىٰ مَا رَزَقَهُم مِّن بَهِيمَةِ الْأَنْعَامِ ۖ فَكُلُوا مِنْهَا وَأَطْعِمُوا الْبَائِسَ الْفَقِيرَ ﴿٢٨﴾

3. ಅರ್ಥಾತ್- ಪ್ರವಾದಿವರ್ಯರು(ಸ) ಮತ್ತು ಅವರ ಅನುಯಾಯಿಗಳನ್ನು ಅವರು ಹಜ್ಜ್ ಮತ್ತು ಉಮ್ರಾಗಳಿಂದ ತಡೆಯುತ್ತಿದ್ದಾರೆ.

29. ಆ ಬಳಿಕ ತಮ್ಮ ಕೊಳೆ-ಕಶ್ಮಲಗಳನ್ನು ಹೋಗಲಾಡಿಸಲಿ. ತಮ್ಮ ಹರಕೆಗಳನ್ನು ಸಲ್ಲಿಸಲಿ ಮತ್ತು ಈ ಪುರಾತನ ಭವನಕ್ಕೆ ಪ್ರದಕ್ಷಿಣೆ ಮಾಡಲಿ.

ثُمَّ لْيَقْضُوْا تَفَثَهُمْ وَلْيُوْفُوْا نُذُوْرَهُمْ وَلْيَطَّوَّفُوْا بِالْبَيْتِ الْعَتِيْقِ ﴿٢٩﴾

30. (ಕಅಬಾ ನಿರ್ಮಾಣದ ಉದ್ದೇಶ) ಇದಾಗಿತ್ತು ಮತ್ತು ಅಲ್ಲಾಹ ನಿಂದ ನಿಶ್ಚಯಿಸಲ್ಪಟ್ಟ ಕರ್ಮವಿಧಿಗಳನ್ನು ಯಾರಾದರೂ ಗೌರವಿಸಿ ದರೆ ಅದು ಅವನ ಪ್ರಭುವಿನ ಬಳಿ ಸ್ವತಃ ಅವನಿಗೇ ಉತ್ತಮ ವಾಗಿರುವುದು. ಜಾನುವಾರುಗಳನ್ನು ನಿಮ್ಮ ಪಾಲಿಗೆ 'ಧರ್ಮ ಸಮ್ಮತ'ಗೊಳಿಸಲಾಗಿದೆ.[4] ಆದರೆ ನಿಮಗೆ ಸೂಚಿಸಲಾಗಿರುವವುಗಳ ಹೊರತು. ನೀವಿನ್ನು ವಿಗ್ರಹಗಳ ಮಾಲಿನ್ಯದಿಂದ ದೂರವಿರಿ. ಅಸತ್ಯ ಮಾತುಗಳಿಂದಲೂ ದೂರವಿರಿ.

ذٰلِكَ وَمَنْ يُّعَظِّمْ حُرُمٰتِ اللّٰهِ فَهُوَ خَيْرٌ لَّهٗ عِنْدَ رَبِّهٖ ؕ وَاُحِلَّتْ لَكُمُ الْاَنْعَامُ اِلَّا مَا يُتْلٰى عَلَيْكُمْ فَاجْتَنِبُوا الرِّجْسَ مِنَ الْاَوْثَانِ وَاجْتَنِبُوْا قَوْلَ الزُّوْرِ ﴿٣٠﴾

31. ಏಕನಿಷ್ಠರಾಗಿ ಅಲ್ಲಾಹನ ದಾಸರಾಗಿರಿ. ಅವನೊಂದಿಗೆ ಯಾರನ್ನೂ ಭಾಗೀದಾರನಾಗಿ ಮಾಡಬೇಡಿರಿ. ಅಲ್ಲಾಹನೊಂದಿಗೆ ಸಹಭಾಗಿತ್ವ ಎಸಗುವವನು ಆಕಾಶದಿಂದ ಕೆಳಗೆ ಬಿದ್ದಂತೆ. ಆಗ ಅವನನ್ನು ಒಂದೋ ಪಕ್ಷಿಗಳು ಕಿತ್ತುಕೊಂಡು ಹೋಗುವುವು ಅಥವಾ ಗಾಳಿಯು ಅವನನ್ನು ಒಯ್ದು, ಅವನು ನುಚ್ಚುನೂರಾಗಿ ಬಿಡು ವಂತಹ ಸ್ಥಳಕ್ಕೆ ಅಪ್ಪಳಿಸಿ ಬಿಡುವುದು.[5]

حُنَفَآءَ لِلّٰهِ غَيْرَ مُشْرِكِيْنَ بِهٖ ؕ وَمَنْ يُّشْرِكْ بِاللّٰهِ فَكَاَنَّمَا خَرَّ مِنَ السَّمَآءِ فَتَخْطَفُهُ الطَّيْرُ اَوْ تَهْوِيْ بِهِ الرِّيْحُ فِيْ مَكَانٍ سَحِيْقٍ ﴿٣١﴾

32. ಇದಾಗಿದೆ ವಾಸ್ತವಿಕ ವಿಷಯ. (ಇದನ್ನು ತಿಳಿದುಕೊಳ್ಳಿರಿ) ಮತ್ತು ಯಾರಾದರೂ ಅಲ್ಲಾಹನು ನಿಶ್ಚಯಿಸಿದ ಲಾಂಛನಗಳನ್ನು ಗೌರವಿಸಿದರೆ ಇದು ಹೃದಯಗಳ 'ಭಕ್ತಿ'ಯಿಂದಾಗಿದೆ.[6]

ذٰلِكَ وَمَنْ يُّعَظِّمْ شَعَآئِرَ اللّٰهِ فَاِنَّهَا مِنْ تَقْوَى الْقُلُوْبِ ﴿٣٢﴾

4. ಈ ಸಂದರ್ಭದಲ್ಲಿ ಜಾನುವಾರುಗಳನ್ನು ಧರ್ಮಸಮ್ಮತಗೊಳಿಸಲಾಗಿರುವುದನ್ನು ಪ್ರಸ್ತಾವಿಸುವುದರ ಉದ್ದೇಶ, ಎರಡು ತಪ್ಪುಕಲ್ಪನೆಗಳನ್ನು ದೂರ ಮಾಡುವುದಾಗಿದೆ. ಮೊದಲನೆಯದಾಗಿ ಮುಶ್ರಿಕರು ಮತ್ತು ಕುರೈಶರು ಬಹೀರಃ, ಸಾಯಿಬಾ, ವಸೀಲ ಮತ್ತು ಹಾಮ್‌ಗಳೂ ಅಲ್ಲಾಹನು ಗೊತ್ತುಪಡಿಸಿದ ನಿಷೇಧಗಳೇ ಆಗಿವೆ ಎಂದು ಭಾವಿಸುತ್ತಿದ್ದರು. ಆದ್ದರಿಂದ ಇವಾವುದೂ ಅಲ್ಲಾಹನು ವಿಧಿಸಿದ ನಿಷೇಧಗಳಲ್ಲ. ಆ ಜಾನುವಾರುಗಳೆಲ್ಲವೂ ನಿಮ್ಮ ಪಾಲಿಗೆ ಧರ್ಮಸಮ್ಮತವೆಂದು ಹೇಳಲಾಗಿದೆ. ಎರಡನೆಯದಾಗಿ ಇಹ್ರಾಮ್ ಧರಿಸಿರುವ ಸ್ಥಿತಿಯಲ್ಲಿ ಬೇಟೆಯಾಡುವುದು ನಿಷಿದ್ಧವಾಗಿರುವುದರಿಂದ ಜಾನುವಾರುಗಳನ್ನು ದಿಬಹ್ ಮಾಡುವುದು ಮತ್ತು ಸೇವಿಸುವುದು ಕೂಡ ನಿಷಿದ್ಧವೆಂದು ಯಾರೂ ಭಾವಿಸಬಾರದು. ಅದಕ್ಕಾಗಿ ಇವಾವುದೂ ಅಲ್ಲಾಹನು ಗೊತ್ತುಪಡಿಸಿದ ನಿಷೇಧಗಳಲ್ಲಿ ಸೇರಿಲ್ಲವೆಂದು ಹೇಳಲಾಗುತ್ತಿದೆ.
5. ಈ ಉದಾಹರಣೆಯಲ್ಲಿ ಆಕಾಶವೆಂದು ಹೇಳಲಾಗಿರುವುದು ಮಾನವನ ನೈಸರ್ಗಿಕ ಅವಸ್ಥೆಯ ಕುರಿತಾಗಿದೆ. ಅವನು ನೈಸರ್ಗಿಕವಾಗಿ ದೇವನ ಹೊರತು ಬೇರಾರ ದಾಸನೂ ಆಗಿರುವುದಿಲ್ಲ. ಅವನ ಪ್ರಕೃತಿ ಏಕದೇವತ್ವವಲ್ಲದೆ ಬೇರಾವ ಧರ್ಮವನ್ನೂ ಅರಿಯದು. ಮಾನವನು ಪ್ರವಾದಿಗಳ ಮಾರ್ಗದರ್ಶನವನ್ನು ಸ್ವೀಕರಿಸಿದರೆ ಅವನು ತನ್ನ ಜ್ಞಾನ ಮತ್ತು ಅಂತರ್ದೃಷ್ಟಿಯೊಂದಿಗೆ ಆ ನೈಸರ್ಗಿಕ ಅವಸ್ಥೆಯಲ್ಲೇ ನೆಲೆಗೊಳ್ಳುತ್ತಾನೆ. ಅನಂತರ ಅವನು ಉನ್ನತಿಯೆಡೆಗೇ ಸಾಗುತ್ತಾನೆ, ಪತನದ ಕಡೆಗಲ್ಲ. ಆದರೆ ಬಹುದೇವಾರಾಧನೆ ಮತ್ತು ನಾಸ್ತಿಕತೆಯನ್ನು ಅಳವಡಿಸಿಕೊಂಡ ತಕ್ಷಣ ಅವನು ತನ್ನ ಪ್ರಕೃತಿಯೆಂಬ ಆಗಸದಿಂದ ಹಠಾತ್ತನೆ ಬಿದ್ದು ಬಿಡುತ್ತಾನೆ. ಅನಂತರ ಅವನು ಖಂಡಿತವಾಗಿ ಈ ಕೆಳಗಿನ ಎರಡು ಪರಿಸ್ಥಿತಿಯಲ್ಲೊಂದನ್ನು ಎದುರಿಸುತ್ತಾನೆ. ಒಂದೋ ಪಿಶಾಚಿಗಳು ಮತ್ತು ಪಥಭ್ರಷ್ಟಗೊಳಿಸುವ ಮಾನವರು ಅವನ ಮೇಲೆ ಮುಗಿ ಬೀಳುತ್ತಾರೆ. ಪ್ರತಿಯೊಬ್ಬರೂ ಅವನನ್ನು ಕುಕ್ಕಿ ಕೊಂಡೊಯ್ಯಲು ಪ್ರಯತ್ನಿಸುತ್ತಾರೆ. ಇಲ್ಲವೇ ಅವನ ಸ್ವೇಚ್ಛೆ, ಭಾವನೆಗಳು ಮತ್ತು ಕಲ್ಪನೆಗಳು ಅವನನ್ನು ಯಾವ್ಯಾವುದೋ ಭ್ರಾಮಕ ಜಗತ್ತಿಗೆ ಕೊಂಡೊಯ್ದು ಕೊನೆಗೆ ಯಾವುದಾದರೊಂದು ಕಂದರದಲ್ಲಿ ಎಸೆದು ಬಿಡುತ್ತವೆ.
6. ಅರ್ಥಾತ್- ಈ ಗೌರವ ಹೃದಯದಲ್ಲಿರುವ ದೇವಭಯದ ಪರಿಣಾಮವಾಗಿದೆ. ಅವನ ಮನಸ್ಸಿನಲ್ಲಿ ಕಿಂಚಿತ್ತಾದರೂ ದೇವಭಯ ಇದೆ

33. ನಿಮಗೆ ಒಂದು ನಿಶ್ಚಿತ ಕಾಲದ ವರೆಗೆ (ಬಲಿ ಮೃಗಗಳಿಂದ) ಪ್ರಯೋಜನ ಪಡೆಯುವ ಹಕ್ಕಿದೆ.[7] ಅನಂತರ ಅವುಗಳನ್ನು ಬಲಿ ದಾನ ಮಾಡುವ ಸ್ಥಾನವು ಅದೇ ಪುರಾತನ ಭವನದ ಸಮೀಪವಿದೆ.

لَكُمْ فِيهَا مَنَافِعُ إِلَىٰ أَجَلٍ مُسَمًّى ثُمَّ مَحِلُّهَا إِلَى الْبَيْتِ الْعَتِيقِ ﴿٣٣﴾

34. ನಾವು ಪ್ರತಿಯೊಂದು ಸಮುದಾಯಕ್ಕೆ ಬಲಿದಾನದ ಒಂದು ಕಾಯಿದೆಯನ್ನು ನಿಶ್ಚಯಿಸಿ ಕೊಟ್ಟಿದ್ದೇವೆ. ಇದು, (ಆ ಸಮುದಾಯದ) ಜನರು ತಮಗೆ ಅಲ್ಲಾಹನು ದಯಪಾಲಿಸಿರುವ ಪ್ರಾಣಿಗಳ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸಲೆಂದು.[8] (ಈ ವಿವಿಧ ಕ್ರಮಗಳಲ್ಲಿರುವ ಉದ್ದೇಶವು ಒಂದೇ). ನಿಮ್ಮ ದೇವನಂತು ಏಕಮಾತ್ರ ದೇವನು. ಆದುದರಿಂದ ನೀವು ಅವನ ಆಜ್ಞಾಪಾಲಕರಾಗಿಯೇ ಇರಿ. ಪೈಗಂಬರರೇ, ವಿನಯಶೀಲರಿಗೆ ಶುಭವಾರ್ತೆ ನೀಡಿರಿ.

وَلِكُلِّ أُمَّةٍ جَعَلْنَا مَنْسَكًا لِيَذْكُرُوا اسْمَ اللَّهِ عَلَىٰ مَا رَزَقَهُمْ مِنْ بَهِيمَةِ الْأَنْعَامِ ۗ فَإِلَٰهُكُمْ إِلَٰهٌ وَاحِدٌ فَلَهُ أَسْلِمُوا ۗ وَبَشِّرِ الْمُخْبِتِينَ ﴿٣٤﴾

35. ಅಲ್ಲಾಹನ ಪ್ರಸ್ತಾಪವನ್ನು ಕೇಳಿದೊಡನೆ ಅವರ ಹೃದಯಗಳು ಕಂಪಿಸತೊಡಗುತ್ತವೆ. ಅವರ ಮೇಲೆ ಯಾವ ಸಂಕಷ್ಟಗಳು ಬಂದರೂ ತಾಳ್ಮೆ ವಹಿಸುತ್ತಾರೆ, ನಮಾಝನ್ನು ಸಂಸ್ಥಾಪಿಸುತ್ತಾರೆ ಮತ್ತು ನಾವು ಅವರಿಗೆ ನೀಡಿದ ಜೀವನಾಧಾರದಿಂದ ವ್ಯಯಿಸುತ್ತಾರೆ.

الَّذِينَ إِذَا ذُكِرَ اللَّهُ وَجِلَتْ قُلُوبُهُمْ وَالصَّابِرِينَ عَلَىٰ مَا أَصَابَهُمْ وَالْمُقِيمِي الصَّلَاةِ وَمِمَّا رَزَقْنَاهُمْ يُنْفِقُونَ ﴿٣٥﴾

36. ನಾವು (ಬಲಿದಾನದ) ಒಂಟೆಗಳನ್ನು ನಿಮಗಾಗಿ ಅಲ್ಲಾಹನ ಲಾಂಛನಗಳಾಗಿ ಮಾಡಿದ್ದೇವೆ. ನಿಮಗೆ ಅವುಗಳಲ್ಲಿ ಒಳಿತಿದೆ, ಆದುದರಿಂದ ಅವುಗಳನ್ನು ನಿಲ್ಲಿಸಿ ಅವುಗಳ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸಿರಿ[9] ಮತ್ತು (ಬಲಿಯರ್ಪಿಸಿದ ಬಳಿಕ)

وَالْبُدْنَ جَعَلْنَاهَا لَكُمْ مِنْ شَعَائِرِ اللَّهِ لَكُمْ فِيهَا خَيْرٌ ۖ فَاذْكُرُوا اسْمَ اللَّهِ عَلَيْهَا صَوَافَّ ۖ فَإِذَا وَجَبَتْ جُنُوبُهَا

ಎಂಬುದನ್ನು ಅದು ಸೂಚಿಸುತ್ತದೆ. ಅನ್ಯಥಾ ಅವನು ದೇವನ ಲಾಂಛನಗಳನ್ನು ಗೌರವಿಸಲು ಸಾಧ್ಯವಿರಲಿಲ್ಲ.

7. ಮೊದಲನೆಯ ಸೂಕ್ತದಲ್ಲಿ ಅಲ್ಲಾಹನ ಲಾಂಛನಗಳನ್ನು ಗೌರವಿಸುವ ಆದೇಶ ನೀಡಿದ ಬಳಿಕ ತಪ್ಪುಕಲ್ಪನೆಯೊಂದನ್ನು ನೀಗಿಸಲಿಕ್ಕಾಗಿ ಈ ಮಾತು ಹೇಳಲಾಗಿದೆ. ಅಲ್ಲಾಹನ ಲಾಂಛನಗಳಲ್ಲಿ ಬಲಿಯರ್ಪಿಸಲಿಕ್ಕಾಗಿ ಇರುವ ಜಾನುವಾರುಗಳೂ ಸೇರಿವೆ. ಅವುಗಳನ್ನು ಅಲ್ಲಾಹನ ಭವನದತ್ತ ಕೊಂಡೊಯ್ಯುವಾಗ ಅವುಗಳ ಮೇಲೆ ಸವಾರಿ ನಡೆಸಬಾರದು, ಸಾಮಾನು ಹೊರಿಸ ಬಾರದು, ಹಾಲು ಕರೆಯಬಾರದು ಎಂದು ಅರಬರು ಭಾವಿಸಿದ್ದರು. ಆದ್ದರಿಂದ ಆ ತಪ್ಪುಕಲ್ಪನೆಯನ್ನು ನೀಗಿಸಲಿಕ್ಕಾಗಿ ಅವುಗಳಿಂದ ಅಗತ್ಯಬಿದ್ದರೆ ಪ್ರಯೋಜನ ಪಡೆಯಬಹುದು ಎಂದು ಹೇಳಲಾಗುತ್ತಿದೆ.

8. ಈ ಸೂಕ್ತದಿಂದ ಎರಡು ವಿಷಯಗಳು ತಿಳಿದು ಬರುತ್ತವೆ. ಮೊದಲನೆಯದಾಗಿ ಪ್ರಾಣಿಬಲಿ ಎಲ್ಲಾ ದಿವ್ಯ ಶರೀಅತ್‌ನ ಆರಾಧನಾ ಪದ್ಧತಿಯ ಭಾಗವಾಗಿತ್ತು. ಎರಡನೆಯದಾಗಿ ಅಲ್ಲಾಹನ ಹೆಸರಲ್ಲಿ ಮಾಡಲಾಗುವ ಪ್ರಾಣಿ ಬಲಿ ಎಲ್ಲಾ ಶರೀಅತ್‌ಗಳಲ್ಲಿ ಸಮಾನ ರೂಪದಲ್ಲಿತ್ತು. ಇನ್ನು ಅದರ ಸಂದರ್ಭ, ಸಮಯ ಮತ್ತಿತರ ವಿವರಗಳ ಬಗ್ಗೆ ವಿವಿಧ ಕಾಲದ ಶರೀಅತ್‌ನಲ್ಲಿ ವಿಭಿನ್ನ ಆದೇಶಗಳಿದ್ದುವು.

9. ಅವುಗಳ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸುವುದೆಂದರೆ ಅವುಗಳನ್ನು ದಿಬಃ ಮಾಡುವಾಗ ಅಲ್ಲಾಹನ ಹೆಸರೆತ್ತುವುದಾಗಿದೆ. ಒಂಟೆಯನ್ನು ಮೊದಲು ನಿಲ್ಲಿಸಿ ಅದರ ಕೊರಳಿಗೆ ಭರ್ಜಿಯಿಂದ ತಿವಿಯಲಾಗುತ್ತದೆ. ಇದನ್ನು 'ನಹ್ರ್' ಮಾಡುವುದು ಎನ್ನುತ್ತಾರೆ.

ಅವುಗಳ ಬೆನ್ನುಗಳು ನೆಲಕ್ಕೆ ತಾಗಿದ ಮೇಲೆ[10] ಅವುಗಳಿಂದ ಸ್ವತಃ ತಿನ್ನಿರಿ ಹಾಗೂ(ಇದ್ದುದರಲ್ಲಿ) ಸಂತೃಪ್ತಿ ಪಡುವವರಿಗೂ ಅಪೇಕ್ಷೆ ಪ್ರಕಟಿಸುವವರಿಗೂ ತಿನ್ನಿಸಿರಿ. ನೀವು ಕೃತಜ್ಞರಾಗಲಿಕ್ಕಾಗಿ ನಾವು ಈ ರೀತಿಯಲ್ಲಿ ನಿಮಗಾಗಿ ಆ ಪ್ರಾಣಿಗಳನ್ನು ನಿಯಂತ್ರಿಸಿ ಕೊಟ್ಟಿದ್ದೇವೆ.

فَكُلُوا مِنْهَا وَأَطْعِمُوا الْقَانِعَ وَالْمُعْتَرَّ ۚ كَذَٰلِكَ سَخَّرْنَاهَا لَكُمْ لَعَلَّكُمْ تَشْكُرُونَ ٣٦

37. ಅವುಗಳ ಮಾಂಸವಾಗಲಿ, ರಕ್ತವಾಗಲಿ ಅಲ್ಲಾಹನಿಗೆ ತಲಪುವುದಿಲ್ಲ. ಆದರೆ ಅವನಿಗೆ ನಿಮ್ಮ 'ಧರ್ಮನಿಷ್ಠೆ' ತಲಪುತ್ತದೆ. ಅವನು ನಿಮಗೆ ಸನ್ಮಾರ್ಗವನ್ನು ದಯಪಾಲಿಸಿದ್ದಕ್ಕಾಗಿ ನೀವು ಅವನ ಮಹಾನತೆಯನ್ನು ಕೊಂಡಾಡಬೇಕೆಂದು ಅವನು ಅವುಗಳನ್ನು ನಿಮಗಾಗಿ ಹೀಗೆ ನಿಯಂತ್ರಿಸಿಕೊಟ್ಟಿರುತ್ತಾನೆ[11] ಮತ್ತು ಪೈಗಂಬರರೇ, ಸಜ್ಜನರಿಗೆ ಸುವಾರ್ತೆ ನೀಡಿರಿ.

لَن يَنَالَ اللَّهَ لُحُومُهَا وَلَا دِمَاؤُهَا وَلَٰكِن يَنَالُهُ التَّقْوَىٰ مِنكُمْ ۚ كَذَٰلِكَ سَخَّرَهَا لَكُمْ لِتُكَبِّرُوا اللَّهَ عَلَىٰ مَا هَدَاكُمْ ۗ وَبَشِّرِ الْمُحْسِنِينَ ٣٧

38. ನಿಶ್ಚಯವಾಗಿಯೂ ಅಲ್ಲಾಹನು ಸತ್ಯವಿಶ್ವಾಸಿಗಳ ಪರವಾಗಿ ರಕ್ಷಣೆ ಮಾಡುತ್ತಾನೆ. ಖಂಡಿತವಾಗಿಯೂ ಅಲ್ಲಾಹನು ಯಾವುದೇ ವಿಶ್ವಾಸ ಘಾತುಕ ಕೃತಘ್ನನನ್ನು ಮೆಚ್ಚುವುದಿಲ್ಲ.

إِنَّ اللَّهَ يُدَافِعُ عَنِ الَّذِينَ آمَنُوا ۗ إِنَّ اللَّهَ لَا يُحِبُّ كُلَّ خَوَّانٍ كَفُورٍ ٣٨

39. ಯಾರ ವಿರುದ್ಧ ಯುದ್ಧ ನಡೆಸಲಾಗುತ್ತಿದೆಯೋ ಅವರಿಗೆ ಅನುಮತಿ ನೀಡಲಾಗಿದೆ. ಏಕೆಂದರೆ ಅವರು ಮರ್ದಿತರು.[12] ಮತ್ತು ನಿಶ್ಚಯವಾಗಿಯೂ ಅಲ್ಲಾಹನು ಅವರಿಗೆ ಸಹಾಯ ಮಾಡಲು ಸಮರ್ಥನು.

أُذِنَ لِلَّذِينَ يُقَاتَلُونَ بِأَنَّهُمْ ظُلِمُوا ۚ وَإِنَّ اللَّهَ عَلَىٰ نَصْرِهِمْ لَقَدِيرٌ ٣٩

40. ಇವರು, "ನಮ್ಮ ಪ್ರಭು ಅಲ್ಲಾಹ್" ಎಂದಿಷ್ಟೇ ಹೇಳಿದ

الَّذِينَ أُخْرِجُوا مِن دِيَارِهِم بِغَيْرِ

10. ಬೆನ್ನು ನೆಲಕ್ಕೆ ತಾಗುವುದೆಂದರೆ ಅವು ಭೂಮಿಗೆ ಬಿದ್ದು ಬಿಡುವುದು ಎಂದು ಮಾತ್ರವಲ್ಲ, ಬದಲಾಗಿ ಬಿದ್ದು ಸ್ತಬ್ಧವಾಗಿ ಬಿಡುವುದು, ಹೊರಳಾಟ ನಿಂತು ಪ್ರಾಣ ಸಂಪೂರ್ಣ ಹೋಗಿ ಬಿಡುವುದು.

11. ಅರ್ಥಾತ್- ಅವನ ಮಹಾನತೆ ಮತ್ತು ಶ್ರೇಷ್ಠತೆಯನ್ನು ಮನಃಪೂರ್ವಕ ಒಪ್ಪಿಕೊಳ್ಳಿರಿ. ನಿಮ್ಮ ವರ್ತನೆಯ ಮೂಲಕ ಅದನ್ನು ಬಹಿರಂಗಪಡಿಸಿರಿ. ಇದು ಪ್ರಾಣಿ ಬಲಿಯ ಆದೇಶದ ಉದ್ದೇಶ ಮತ್ತು ಔಚಿತ್ಯದ ಕಡೆಗಿರುವ ಸೂಚನೆ. ಪ್ರಾಣಿಗಳನ್ನು ನಿಯಂತ್ರಣಕ್ಕೆ ಕೊಡಲಾದ ಬಗ್ಗೆ ಕೃತಜ್ಞತೆ ಪ್ರಕಟಿಸುವುದು ಮಾತ್ರ ಪ್ರಾಣಿಬಲಿಯ ಉದ್ದೇಶವಲ್ಲ. ಈ ಪ್ರಾಣಿಗಳು ಯಾರಿಗೆ ಸೇರಿವೆಯೋ ಮತ್ತು ಯಾರು ಅದನ್ನು ನಮ್ಮ ನಿಯಂತ್ರಣಕ್ಕೆ ಕೊಟ್ಟಿದ್ದಾನೋ ಅವನ ಒಡೆತನದ ಹಕ್ಕುಗಳನ್ನು ಮನಸಾರೆಯೂ ಕ್ರಿಯಾತ್ಮಕವಾಗಿಯೂ ಸಮ್ಮತಿಸುವುದು ಹಾಗೂ ಈ ಸೊತ್ತುಗಳೆಲ್ಲವೂ ನಮಗೆ ಸೇರಿದ್ದೆಂಬ ಭ್ರಮೆಗೆ ಎಂದೂ ಈಡಾಗದಿರುವುದು ಕೂಡ ಪ್ರಾಣಿಬಲಿಯ ಆದೇಶದ ಉದ್ದೇಶವಾಗಿದೆ.

12. ಇದು ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವ ಕುರಿತು ಅವತೀರ್ಣಗೊಂಡ ಚೊಚ್ಚಲ ಸೂಕ್ತ. ಈ ಸೂಕ್ತದಲ್ಲಿ ಅನುಮತಿ ಮಾತ್ರ ನೀಡಲಾಗಿತ್ತು. ಅನಂತರ ಅಲ್ ಬಕರಃ ಅಧ್ಯಾಯದ ಸೂಕ್ತ 190ರಿಂದ 193, 216 ಮತ್ತು 224 ಅವತೀರ್ಣಗೊಂಡವು. ಅವುಗಳಲ್ಲಿ ಯುದ್ಧದ ಆದೇಶ ಕೊಡಲಾಯಿತು. ಈ ಆದೇಶಗಳ ನಡುವೆ ಕೇವಲ ಕೆಲವು ತಿಂಗಳುಗಳ ಅಂತರವಿದೆ. ನಮ್ಮ ಸಂಶೋಧನೆಯ ಪ್ರಕಾರ ಹಿಜರಿಶಕೆ ಒಂದರ ದುಲ್‌ಹಜ್ಜ್ ತಿಂಗಳಲ್ಲಿ 'ಅನುಮತಿ'ಯ ಸೂಕ್ತ ಅವತೀರ್ಣಗೊಂಡಿತು. ಯುದ್ಧದ ಆದೇಶ ಬದ್ರ್ ಯುದ್ಧಕ್ಕೆ ಸ್ವಲ್ಪ ಮೊದಲು ಹಿಜರಿ ಶಕೆ ಎರಡರ ರಜಬ್ ಅಥವಾ ಶಅಬಾನ್ ತಿಂಗಳಲ್ಲಿ ಅವತೀರ್ಣಗೊಂಡಿತು.

ತಪ್ಪಿಗಾಗಿ ತಮ್ಮ ಮನೆಗಳಿಂದ ಅನ್ಯಾಯವಾಗಿ ಹೊರ ಹಾಕಲ್ಪಟ್ಟವರು. ಅಲ್ಲಾಹನು ಜನರಲ್ಲಿ ಕೆಲವರನ್ನು ಬೇರೆ ಕೆಲವರ ಮೂಲಕ ನೀಗಿಸದಿರುತ್ತಿದ್ದರೆ ಅಲ್ಲಾಹನ ನಾಮವನ್ನು ಅತಿ ಹೆಚ್ಚಾಗಿ ಸ್ಮರಿಸಲಾಗುತ್ತಿರುವ ಆಶ್ರಮಗಳೂ ಇಗರ್ಜಿಗಳೂ ಯಹೂದಿಯರ ಆರಾಧನಾಲಯಗಳೂ ಮಸೀದಿಗಳೂ ಧ್ವಂಸಗೊಳ್ಳುತ್ತಿದ್ದುವು. ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನು ಖಂಡಿತ ಸಹಾಯ ಮಾಡುವನು.[13] ಅಲ್ಲಾಹನು ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ.

حَقٍّ إِلَّآ أَن يَقُولُوا۟ رَبُّنَا ٱللَّهُ ۗ وَلَوْ
لَا دَفْعُ ٱللَّهِ ٱلنَّاسَ بَعْضَهُم بِبَعْضٍ
لَّهُدِّمَتْ صَوَٰمِعُ وَبِيَعٌ وَصَلَوَٰتٌ وَ
مَسَٰجِدُ يُذْكَرُ فِيهَا ٱسْمُ ٱللَّهِ كَثِيرًا ۗ
وَلَيَنصُرَنَّ ٱللَّهُ مَن يَنصُرُهُۥٓ ۗ إِنَّ
ٱللَّهَ لَقَوِىٌّ عَزِيزٌ ﴿٤٠﴾

41. (ಇವರು ಎಂಥವರೆಂದರೆ) ನಾವು ಇವರಿಗೆ ಭೂಮಿಯಲ್ಲಿ ಅಧಿಕಾರ ಪ್ರದಾನ ಮಾಡಿದರೆ ಇವರು ನಮಾಝ್ ಸಂಸ್ಥಾಪಿಸುವರು, ಝಕಾತ್ ಕೊಡುವರು, ಒಳಿತಿನ ಆಜ್ಞೆ ಕೊಡುವರು ಮತ್ತು ಕೆಡುಕಿನಿಂದ ತಡೆಯುವರು ಮತ್ತು ಸಕಲ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯಲ್ಲಿದೆ.

ٱلَّذِينَ إِن مَّكَّنَّٰهُمْ فِى ٱلْأَرْضِ
أَقَامُوا۟ ٱلصَّلَوٰةَ وَءَاتَوُا۟ ٱلزَّكَوٰةَ وَأَمَرُوا۟
بِٱلْمَعْرُوفِ وَنَهَوْا۟ عَنِ ٱلْمُنكَرِ ۗ
وَلِلَّهِ عَٰقِبَةُ ٱلْأُمُورِ ﴿٤١﴾

42-43 ಪೈಗಂಬರರೇ, ಅವರು (ಸತ್ಯನಿಷೇಧಿಗಳು) ನಿಮ್ಮನ್ನು ಸುಳ್ಳಾಗಿಸುತ್ತಿದ್ದರೆ ಅವರಿಗಿಂತ ಮುಂಚೆ ನೂಹರ ಜನಾಂಗ, ಆದ್, ಸಮೂದ್, ಇಬ್ರಾಹೀಮರ ಜನಾಂಗ, ಲೂತರ ಜನಾಂಗ-

وَإِن يُكَذِّبُوكَ فَقَدْ كَذَّبَتْ قَبْلَهُمْ
قَوْمُ نُوحٍ وَعَادٌ وَثَمُودُ ﴿٤٢﴾
وَقَوْمُ إِبْرَٰهِيمَ وَقَوْمُ لُوطٍ ﴿٤٣﴾

44. ಮತ್ತು ಮದ್‌ಯನಿನವರು ಸಹ ಸುಳ್ಳಾಗಿಸಿದ್ದಾರೆ ಮತ್ತು ಮೂಸಾ ಸಹ ಸುಳ್ಳಾಗಿಸಲ್ಪಟ್ಟಿದ್ದಾರೆ. ನಾನು ಈ ಎಲ್ಲ ಸತ್ಯನಿಷೇಧಿಗಳಿಗೆ ಮೊದಲು ಕಾಲಾವಕಾಶ ನೀಡಿದೆನು, ಅನಂತರ ಹಿಡಿದು ಬಿಟ್ಟೆನು. ನನ್ನ ಶಿಕ್ಷೆ ಹೇಗಿತ್ತೆಂಬುದನ್ನು ನೋಡಿಕೊಳ್ಳಿರಿ.

وَأَصْحَٰبُ مَدْيَنَ ۖ وَكُذِّبَ مُوسَىٰ
فَأَمْلَيْتُ لِلْكَٰفِرِينَ ثُمَّ أَخَذْتُهُمْ ۖ
فَكَيْفَ كَانَ نَكِيرِ ﴿٤٤﴾

45. ಎಷ್ಟೋ ಅಪರಾಧಿ ನಾಡುಗಳನ್ನು ನಾವು ನಾಶಗೊಳಿಸಿದೆವು. ಇಂದು ಅವುಗಳು ಬುಡಮೇಲಾಗಿ ಬಿದ್ದಿವೆ. ಎಷ್ಟೋ ಬಾವಿಗಳು ಪಾಳುಬಿದ್ದಿವೆ. ಎಷ್ಟೋ ಅರಮನೆಗಳು ಭಗ್ನಾವಶೇಷಗಳಾಗಿ ಹೋಗಿವೆ.

فَكَأَيِّن مِّن قَرْيَةٍ أَهْلَكْنَٰهَا وَهِىَ
ظَالِمَةٌ فَهِىَ خَاوِيَةٌ عَلَىٰ عُرُوشِهَا
وَبِئْرٍ مُّعَطَّلَةٍ وَقَصْرٍ مَّشِيدٍ ﴿٤٥﴾

46. ಇವರ ಹೃದಯಗಳು ಗ್ರಹಿಸುವಂತಾಗಲು ಅಥವಾ ಇವರ ಕಿವಿಗಳು ಆಲಿಸುವಂತಾಗಲು ಇವರು ಭೂಮಿಯಲ್ಲಿ ಸಂಚರಿಸ

أَفَلَمْ يَسِيرُوا۟ فِى ٱلْأَرْضِ فَتَكُونَ
لَهُمْ قُلُوبٌ يَعْقِلُونَ بِهَآ أَوْ ءَاذَانٌ

13. ಈ ವಿಷಯ ಪವಿತ್ರ ಕುರ್‌ಆನಿನಲ್ಲಿ ಅನೇಕ ಕಡೆ ಪ್ರಸ್ತಾವಿಸಲ್ಪಟ್ಟಿದೆ. ದೇವನ ಸೃಷ್ಟಿಗಳನ್ನು ಏಕದೇವತ್ವದ ಕಡೆಗೆ ಕರೆಯುವ, ಸತ್ಯಧರ್ಮದ ಸಂಸ್ಥಾಪನೆ ಮಾಡುವ ಮತ್ತು ಕೆಡುಕಿನ ಜಾಗದಲ್ಲಿ ಒಳಿತನ್ನು ಪ್ರಚುರ ಪಡಿಸಲು ಶ್ರಮಿಸುವವರನ್ನು ಇಲ್ಲಿ ಅಲ್ಲಾಹನ ಸಹಾಯಕರು ಎಂದು ಕರೆಯಲಾಗಿದೆ. ಏಕೆಂದರೆ ಅದು ಅಲ್ಲಾಹನ ಕೆಲಸವಾಗಿದೆ. ಅದನ್ನು ನೆರವೇರಿಸಲು ಅವರು ಸಹಾಯ ಮಾಡುತ್ತಾರೆ.

ಲಿಲ್ಲವೇ? ವಾಸ್ತವದಲ್ಲಿ ಕಣ್ಣುಗಳು ಕುರುಡಾಗುವುದಿಲ್ಲ, ಆದರೆ ಎದೆಗಳೊಳಗಿರುವ ಹೃದಯಗಳು ಕುರುಡಾಗಿ ಬಿಡುತ್ತವೆ.

يَسْمَعُونَ بِهَا ۖ فَإِنَّهَا لَا تَعْمَى الْأَبْصَارُ وَلَٰكِن تَعْمَى الْقُلُوبُ الَّتِي فِي الصُّدُورِ ﴿٤٦﴾

47. ಇವರು ಯಾತನೆಗಾಗಿ ತವಕ ಪಡುತ್ತಾರೆ. ಅಲ್ಲಾಹನು ಎಂದೆಂದಿಗೂ ತನ್ನ ವಾಗ್ದಾನವನ್ನು ಉಲ್ಲಂಘಿಸಲಾರ. ಆದರೆ ನಿನ್ನ ಪ್ರಭುವಿನ ಬಳಿಯ ಒಂದು ದಿವಸವು ನಿಮ್ಮ ಗಣನೆಯ ಸಾವಿರ ವರ್ಷಗಳಿಗೆ ಸಮಾನವಾಗಿದೆ.[14]

وَيَسْتَعْجِلُونَكَ بِالْعَذَابِ وَلَن يُخْلِفَ اللَّهُ وَعْدَهُ ۚ وَإِنَّ يَوْمًا عِندَ رَبِّكَ كَأَلْفِ سَنَةٍ مِّمَّا تَعُدُّونَ ﴿٤٧﴾

48. ಅಕ್ರಮಿಗಳಾಗಿದ್ದ ಅವೆಷ್ಟೋ ನಾಡುಗಳಿದ್ದುವು. ನಾನು ಅವುಗಳಿಗೆ ಮೊದಲು ಕಾಲಾವಕಾಶ ನೀಡಿದೆನು, ಅನಂತರ ಹಿಡಿದುಬಿಟ್ಟೆನು ಮತ್ತು ಎಲ್ಲರೂ ಮರಳಿ ಬರಬೇಕಾದುದು ನನ್ನ ಕಡೆಗೇ ಆಗಿದೆ.

وَكَأَيِّن مِّن قَرْيَةٍ أَمْلَيْتُ لَهَا وَهِيَ ظَالِمَةٌ ثُمَّ أَخَذْتُهَا وَإِلَيَّ الْمَصِيرُ ﴿٤٨﴾

ع ٦ ١٣

49. ಪೈಗಂಬರರೇ ಹೇಳಿರಿ - "ಜನರೇ, ನಾನಂತು ನಿಮಗೆ (ಆಪತ್ಕಾಲ ಬರುವುದಕ್ಕೆ ಮುಂಚೆ) ಸುಸ್ಪಷ್ಟ ಎಚ್ಚರಿಕೆ ಕೊಡುವ ಓರ್ವ ವ್ಯಕ್ತಿ ಮಾತ್ರವಾಗಿರುತ್ತೇನೆ.

قُلْ يَا أَيُّهَا النَّاسُ إِنَّمَا أَنَا لَكُمْ نَذِيرٌ مُّبِينٌ ﴿٤٩﴾

50. ಇನ್ನು ಸತ್ಯವಿಶ್ವಾಸವಿರಿಸುವವರಿಗೆ ಮತ್ತು ಸತ್ಕರ್ಮವೆಸಗುವವರಿಗೆ ಕ್ಷಮೆಯೂ ಗೌರವಪೂರ್ಣ ಜೀವನಾಧಾರವೂ ಇವೆ.

فَالَّذِينَ آمَنُوا وَعَمِلُوا الصَّالِحَاتِ لَهُم مَّغْفِرَةٌ وَرِزْقٌ كَرِيمٌ ﴿٥٠﴾

51. ಮತ್ತು ನಮ್ಮ ವಚನಗಳನ್ನು ಕೀಳಾಗಿಸಲು ಪ್ರಯತ್ನಿಸುವವರು ನರಕಾಗ್ನಿಯವರಾಗಿದ್ದಾರೆ."

وَالَّذِينَ سَعَوْا فِي آيَاتِنَا مُعَاجِزِينَ أُولَٰئِكَ أَصْحَابُ الْجَحِيمِ ﴿٥١﴾

52. ಪೈಗಂಬರರೇ, ನಾವು ನಿಮಗಿಂತ ಮುಂಚೆ ಯಾವ ಸಂದೇಶವಾಹಕ ಅಥವಾ ಪ್ರವಾದಿಯವರನ್ನು ಕಳುಹಿಸಿದ್ದೆವೋ ಅವರು ಇಚ್ಛಿಸಿದಾಗ ಅವರ ಸದಿಚ್ಛೆಯಲ್ಲಿ ಶೈತಾನನು ತಡೆಯನ್ನು ಉಂಟುಮಾಡದೆ ಇರಲಿಲ್ಲ. ಹೀಗೆ ಶೈತಾನನು ಉಂಟು ಮಾಡುವ ಪ್ರತಿಯೊಂದು ತಡೆಯನ್ನು ಅಲ್ಲಾಹನು ಅಳಿಸಿ ಬಿಡುತ್ತಾನೆ ಮತ್ತು ತನ್ನ ವಚನಗಳನ್ನು ಸುದೃಢಗೊಳಿಸಿ ಬಿಡುತ್ತಾನೆ. ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَمَا أَرْسَلْنَا مِن قَبْلِكَ مِن رَّسُولٍ وَلَا نَبِيٍّ إِلَّا إِذَا تَمَنَّىٰ أَلْقَى الشَّيْطَانُ فِي أُمْنِيَّتِهِ فَيَنسَخُ اللَّهُ مَا يُلْقِي الشَّيْطَانُ ثُمَّ يُحْكِمُ اللَّهُ آيَاتِهِ ۗ وَاللَّهُ عَلِيمٌ حَكِيمٌ ﴿٥٢﴾

14. ಅರ್ಥಾತ್- ಮಾನವ ಇತಿಹಾಸದಲ್ಲಿ ದೇವನ ತೀರ್ಮಾನಗಳು ನಿಮ್ಮ ಘಳಿಗೆ ಮತ್ತು ಪಂಚಾಂಗವನ್ನು ಅನುಸರಿಸಿ ನಡೆಯುವುದಿಲ್ಲ. ಇಂದು ತಳೆಯಲಾದ ಸರಿಯೋ ತಪ್ಪೋ ಆದ ಒಂದು ಧೋರಣೆಯ ಫಲಿತಾಂಶ ನಾಳೆಯೇ ಪ್ರಕಟವಾಗಿ ಬಿಡುವುದಿಲ್ಲ. ಇಂತಿಂತಹ ಧೋರಣೆ ಕೈಗೊಂಡರೆ ಅದರ ಪರಿಣಾಮ ನಿಮ್ಮ ವಿನಾಶವಾಗುವುದು ಎಂದ ತಕ್ಷಣ, "ನಾವಂತೂ ಹತ್ತಿಪ್ಪತ್ತು ಅಥವಾ ಇಪ್ಪತ್ತೈದು ವರ್ಷಗಳಿಂದ ಇದೇ ಧೋರಣೆಯಲ್ಲಿದ್ದೇವೆ. ನಮಗೇನೂ ಕೇಡುಂಟಾಗಲಿಲ್ಲ" ಎಂದು ಸಮರ್ಥನೆ ಮಾಡುವ ಜನಾಂಗದ ನಿಲುವು ಮೂರ್ಖತನದಿಂದ ಕೂಡಿದ್ದಾಗಿದೆ. ಐತಿಹಾಸಿಕ ಪರಿಣಾಮ ಗೋಚರಿಸಲು ದಿನ, ತಿಂಗಳು ಮತ್ತು ವರ್ಷಗಳೇ ಏಕೆ ಶತಮಾನಗಳು ಕಳೆದರೂ ಆಶ್ಚರ್ಯವಿಲ್ಲ.

53. ಹೃದಯಗಳಿಗೆ (ಕಾಪಟ್ಯದ) ರೋಗ ತಗಲಿದವರಿಗೆ ಹಾಗೂ ಕಲುಷಿತ ಹೃದಯದವರಿಗೆ ಶೈತಾನನು ಉಂಟು ಮಾಡಿದ ಕೇಡನ್ನು ಪರೀಕ್ಷಾ ಸಾಧನವನ್ನಾಗಿ ಮಾಡಲಿಕ್ಕಾಗಿ (ಅಲ್ಲಾಹನು ಹೀಗೆ ಮಾಡಲು ಬಿಡುತ್ತಾನೆ.) ವಾಸ್ತವದಲ್ಲಿ ಈ ಅಕ್ರಮಿಗಳು ದ್ವೇಷದಲ್ಲಿ ಬಹುದೂರ ಹೋಗಿಬಿಟ್ಟಿದ್ದಾರೆ.

لِّيَجْعَلَ مَا يُلْقِى ٱلشَّيْطَٰنُ فِتْنَةً لِّلَّذِينَ
فِى قُلُوبِهِم مَّرَضٌ وَٱلْقَاسِيَةِ قُلُوبُهُمْ ۗ
وَإِنَّ ٱلظَّٰلِمِينَ لَفِى شِقَاقٍۭ بَعِيدٍ ﴿٥٣﴾

54. ಇದು ನಿನ್ನ ಪ್ರಭುವಿನ ಕಡೆಯಿಂದ ಬಂದಿರುವ ಸತ್ಯವೆಂದು ಜ್ಞಾನ ಸಂಪತ್ತು ಹೊಂದಿದವರು ಅರಿತು ಕೊಳ್ಳುವಂತಾಗಲು, ಅವರು ಇದರ ಮೇಲೆ ವಿಶ್ವಾಸವಿರಿಸುವಂತಾಗಲು ಮತ್ತು ಅವರ ಹೃದಯಗಳು ಇದರ ಮುಂದೆ ಬಾಗುವಂತಾಗಲು (ಅಲ್ಲಾಹನು ಹೀಗಾಗಲು ಬಿಡುತ್ತಾನೆ) ನಿಶ್ಚಯವಾಗಿಯೂ ಅಲ್ಲಾಹನು ವಿಶ್ವಾಸವಿರಿಸುವವರಿಗೆ ಸದಾ ಸನ್ಮಾರ್ಗವನ್ನು ತೋರಿಸುತ್ತಾನೆ.[15]

وَلِيَعْلَمَ ٱلَّذِينَ أُوتُوا۟ ٱلْعِلْمَ أَنَّهُ
ٱلْحَقُّ مِن رَّبِّكَ فَيُؤْمِنُوا۟ بِهِۦ فَتُخْبِتَ
لَهُۥ قُلُوبُهُمْ ۗ وَإِنَّ ٱللَّهَ لَهَادِ ٱلَّذِينَ
ءَامَنُوٓا۟ إِلَىٰ صِرَٰطٍ مُّسْتَقِيمٍ ﴿٥٤﴾

55. ಸತ್ಯನಿಷೇಧಿಗಳ ಮೇಲೆ ಪುನರುತ್ಥಾನದ ಘಳಿಗೆ ಹಠಾತ್ತನೆ ಬರುವ ವರೆಗೂ ಇಲ್ಲವೇ ಒಂದು ಅಶುಭ ದಿನದ ಯಾತನೆ ಅವರ ಮೇಲೆ ಎರಗುವ ವರೆಗೂ ಅವರು ಇದರ ಬಗ್ಗೆ ಸಂದೇಹ ದಲ್ಲೇ ಬಿದ್ದುಕೊಂಡಿರುವರು.

وَلَا يَزَالُ ٱلَّذِينَ كَفَرُوا۟ فِى مِرْيَةٍ
مِّنْهُ حَتَّىٰ تَأْتِيَهُمُ ٱلسَّاعَةُ بَغْتَةً
أَوْ يَأْتِيَهُمْ عَذَابُ يَوْمٍ عَقِيمٍ ﴿٥٥﴾

56. ಅಂದು ಪ್ರಭುತ್ವ ಅಲ್ಲಾಹನದ್ದಾಗಿರುವುದು ಮತ್ತು ಅವನು ಇವರ ನಡುವೆ ತೀರ್ಮಾನ ಮಾಡಿ ಬಿಡುವನು. ಸತ್ಯವಿಶ್ವಾಸ ವಿರಿಸುವವರೂ ಸತ್ಕರ್ಮವೆಸಗುವವರೂ ಸರ್ವ ಸಂಪದ್ಭರಿತ ಸ್ವರ್ಗೋದ್ಯಾನಗಳಿಗೆ ಹೋಗುವರು.

ٱلْمُلْكُ يَوْمَئِذٍ لِّلَّهِ يَحْكُمُ بَيْنَهُمْ ۚ
فَٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ فِى
جَنَّٰتِ ٱلنَّعِيمِ ﴿٥٦﴾

15. ಅರ್ಥಾತ್- ಪಿಶಾಚಿಯ ಪ್ರಲೋಭನೆಗಳನ್ನು ಅಲ್ಲಾಹನು ಪರೀಕ್ಷೆಯನ್ನಾಗಿಯೂ, ಅಸಲಿ ನಕಲಿಗಳನ್ನು ಬೇರ್ಪಡಿಸುವ ಸಾಧನವನ್ನಾಗಿಯೂ ಮಾಡಿದ್ದಾನೆ. ಆದರೆ ಕೆಟ್ಟ ಮನೋಭಾವದ ವ್ಯಕ್ತಿಗಳು ಅದರಿಂದ ತಪ್ಪಾದ ಫಲಿತಾಂಶಗಳನ್ನು ಪಡೆಯುತ್ತಾರೆ. ಅದು ಅವರ ಪಾಲಿಗೆ ಪಥಭ್ರಷ್ಟತೆಯ ಸಾಧನವಾಗಿ ಮಾರ್ಪಡುತ್ತದೆ. ಶುದ್ಧ ಮನಸ್ಸಿನ ಜನರಿಗೆ ಇವುಗಳು ಪ್ರವಾದಿಗಳು ಮತ್ತು ಅಲ್ಲಾಹನ ಸತ್ಯತೆಯ ಬಗ್ಗೆ ಭರವಸೆಯುಂಟು ಮಾಡುತ್ತವೆ. ಶೈತಾನನ ಪ್ರಲೋಭನೆಗಳನ್ನು ಅವರು ಸ್ಪಷ್ಟವಾಗಿ ಗುರುತಿಸುತ್ತಾರೆ. ಈ ಸಂದೇಶ ಖಂಡಿತವಾಗಿಯೂ ಸತ್ಯ ಮತ್ತು ಸನ್ಮಾರ್ಗದ ಸಂದೇಶವಾಗಿದೆ, ಅನ್ಯಥಾ ಪಿಶಾಚಿ ಇಷ್ಟು ಕಳವಳಕ್ಕೆ ಈಡಾಗುತ್ತಿರಲಿಲ್ಲ ಎಂಬ ಬಗ್ಗೆ ಅವರು ಸಂತೃಪ್ತರಾಗುತ್ತಾರೆ. ಪ್ರವಾದಿವರ್ಯರ(ಸ) ಸಂದೇಶ ಆಗ ಯಾವ ಘಟ್ಟದಲ್ಲಿತ್ತೋ ಅದನ್ನು ಕಂಡು ಕೇವಲ ಬಾಹ್ಯದೃಷ್ಟಿಯಿಂದ ನೋಡುವವರು ಅವರು ತಮ್ಮ ಉದ್ದೇಶದಲ್ಲಿ ಪರಾಜಿತರಾದರು ಎಂಬ ತಪ್ಪುಕಲ್ಪನೆಗೆ ಒಳಗಾಗಿದ್ದರು. ಅಲ್ಲಿ ಪ್ರತ್ಯಕ್ಷದರ್ಶಿಗಳಿಗೆ ಕಾಣುತ್ತಿದ್ದುದೇನೆಂದರೆ ಒಬ್ಬ ವ್ಯಕ್ತಿಯಿದ್ದಾನೆ, ಸಮಸ್ತ ಜನಾಂಗ ತನ್ನ ಮೇಲೆ ವಿಶ್ವಾಸವಿಡಬೇಕೆಂದು ಅವನು ತವಕಿಸುತ್ತಿದ್ದಾನೆ. ಕೊನೆಗೆ ಅವನು ಮಕ್ಕಾ ಬಿಟ್ಟು ವಲಸೆ ಹೋಗಬೇಕಾಯಿತು. ಹೀಗೆ ಮಕ್ಕಾದ ಸತ್ಯನಿಷೇಧಿಗಳು ಸಫಲರಾದರು. ಇಂತಹ ಸಂದರ್ಭದಲ್ಲಿ ನಾನು ಅಲ್ಲಾಹನ ಪ್ರವಾದಿ ಮತ್ತು ಅಲ್ಲಾಹನ ಬೆಂಬಲ ತನಗೆ ಸದಾ ಪ್ರಾಪ್ತವಿದೆ ಎಂಬ ಅವರ ಮಾತು ಹಾಗೂ ಪ್ರವಾದಿಯನ್ನು ಸುಳ್ಳಾಗಿಸುವ ಸಮುದಾಯದ ಮೇಲೆ ಅಲ್ಲಾಹನ ಯಾತನೆ ಎರಗುತ್ತದೆ ಎಂಬ ಕುರ್‌ಆನಿನ ಪ್ರಕಟಣೆಯನ್ನು ಕಂಡಾಗ ಅವರ ಮತ್ತು ಕುರ್‌ಆನಿನ ಸತ್ಯತೆಯ ಬಗ್ಗೆಯೇ ಅವರು ಸಂಶಯ ತಾಳುತ್ತಿದ್ದರು. ಪ್ರವಾದಿವರ್ಯರ(ಸ) ವಿರೋಧಿಗಳು, “ಎಲ್ಲಿ ಹೋಯಿತು ಅಲ್ಲಾಹನ ಸಹಾಯ, ಯಾತನೆ ಎರಗುವ ಬಗೆಗಿನ ಎಚ್ಚರಿಕೆ ಏನಾಯಿತು, ನಮ್ಮನ್ನು ಎಚ್ಚರಿಸಲಾಗುತ್ತಿರುವಂತಹ ಆ ಯಾತನೆ ಈಗಲೇ ಏಕೆ ಎರಗುವುದಿಲ್ಲ” ಎಂದು ಅವರೊಡನೆ ಕೇಳುತ್ತಿದ್ದರು. ಅದರ ಉತ್ತರವನ್ನೇ ಈ ಸೂಕ್ತಗಳಲ್ಲಿ ನೀಡಲಾಗಿದೆ.

57. ಸತ್ಯವನ್ನು ನಿಷೇಧಿಸಿದವರಿಗೂ ನಮ್ಮ ವಚನಗಳನ್ನು ಸುಳ್ಳಾಗಿಸಿದವರಿಗೂ ಅಪಮಾನಕರ ಯಾತನೆ ಸಿಗುವುದು.

وَالَّذِينَ كَفَرُوا وَكَذَّبُوا بِآيَاتِنَا فَأُولَٰئِكَ لَهُمْ عَذَابٌ مُهِينٌ ﴿٥٧﴾

58. ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋದವರು, ತರುವಾಯ ವಧಿಸಲ್ಪಟ್ಟವರು ಅಥವಾ ಮೃತರಾದವರು- ಇವರಿಗೆ ಅಲ್ಲಾಹನು ಶ್ರೇಷ್ಠ ಜೀವನಾಧಾರವನ್ನು ದಯಪಾಲಿಸುವನು. ನಿಶ್ಚಯವಾಗಿಯೂ ಅಲ್ಲಾಹನೇ ಅತ್ಯುತ್ತಮ ಜೀವನಾಧಾರ ದಯಪಾಲಿಸುವವನಾಗಿದ್ದಾನೆ.

وَالَّذِينَ هَاجَرُوا فِي سَبِيلِ اللَّهِ ثُمَّ قُتِلُوا أَوْ مَاتُوا لَيَرْزُقَنَّهُمُ اللَّهُ رِزْقًا حَسَنًا ۚ وَإِنَّ اللَّهَ لَهُوَ خَيْرُ الرَّازِقِينَ ﴿٥٨﴾

59. ಅವರು ಪರಮ ಸಂತುಷ್ಟರಾಗುವಂತಹ ಸ್ಥಾನಕ್ಕೆ ಅವನು ಅವರನ್ನು ತಲುಪಿಸಿ ಬಿಡುವನು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ.

لَيُدْخِلَنَّهُمْ مُدْخَلًا يَرْضَوْنَهُ ۗ وَإِنَّ اللَّهَ لَعَلِيمٌ حَلِيمٌ ﴿٥٩﴾

60. ಇದು ಅವರ ಅಂತಿಮ ಪರಿಣಾಮವಾಯಿತು. ಒಬ್ಬನು ತನಗೆ ಮಾಡಿದಷ್ಟು ಮಾತ್ರ ಮಾಡಿ ಸೇಡು ತೀರಿಸಿದರೆ ಮತ್ತು ಅವನ ಮೇಲೆ ಅತಿರೇಕವೂ ನಡೆದಿದ್ದರೆ ಅಲ್ಲಾಹನು ಖಂಡಿತವಾಗಿಯೂ ಅವನಿಗೆ ಸಹಾಯ ಮಾಡುವನು. ಅಲ್ಲಾಹನು ಮನ್ನಿಸುವವನೂ ಕ್ಷಮಾಶೀಲನೂ ಆಗಿರುತ್ತಾನೆ.

ذَٰلِكَ ۖ وَمَنْ عَاقَبَ بِمِثْلِ مَا عُوقِبَ بِهِ ثُمَّ بُغِيَ عَلَيْهِ لَيَنْصُرَنَّهُ اللَّهُ ۗ إِنَّ اللَّهَ لَعَفُوٌّ غَفُورٌ ﴿٦٠﴾

61. ಇದೇಕೆಂದರೆ ಇರುಳಿನಿಂದ ಹಗಲನ್ನೂ ಹಗಲಿನಿಂದ ಇರುಳನ್ನೂ ಹೊರತರುವವನು ಅಲ್ಲಾಹನೇ ಆಗಿರುತ್ತಾನೆ. ಅವನು ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.

ذَٰلِكَ بِأَنَّ اللَّهَ يُولِجُ اللَّيْلَ فِي النَّهَارِ وَيُولِجُ النَّهَارَ فِي اللَّيْلِ وَأَنَّ اللَّهَ سَمِيعٌ بَصِيرٌ ﴿٦١﴾

62. ಇದೇಕೆಂದರೆ ಅಲ್ಲಾಹನೇ ಪರಮ ಸತ್ಯ. ಅಲ್ಲಾಹನನ್ನು ಬಿಟ್ಟು ಇವರು ಪ್ರಾರ್ಥಿಸುವಂತಹವುಗಳೆಲ್ಲವೂ ಮಿಥ್ಯ. ಅಲ್ಲಾಹನೇ ಸರ್ವೋನ್ನತನೂ ಮಹಾನನೂ ಆಗಿರುತ್ತಾನೆ.

ذَٰلِكَ بِأَنَّ اللَّهَ هُوَ الْحَقُّ وَأَنَّ مَا يَدْعُونَ مِنْ دُونِهِ هُوَ الْبَاطِلُ وَأَنَّ اللَّهَ هُوَ الْعَلِيُّ الْكَبِيرُ ﴿٦٢﴾

63. ಅಲ್ಲಾಹ್ ಆಕಾಶದಿಂದ ನೀರು ಸುರಿಸುವುದನ್ನೂ ಅದರಿಂದಾಗಿ ಭೂಮಿಯು ಸಸ್ಯಶ್ಯಾಮಲವಾಗುವುದನ್ನೂ ನೀವು ನೋಡುತ್ತಿಲ್ಲವೇ? ವಾಸ್ತವದಲ್ಲಿ ಅವನು ಸೂಕ್ಷ್ಮಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.[16]

أَلَمْ تَرَ أَنَّ اللَّهَ أَنْزَلَ مِنَ السَّمَاءِ مَاءً فَتُصْبِحُ الْأَرْضُ مُخْضَرَّةً ۗ إِنَّ اللَّهَ لَطِيفٌ خَبِيرٌ ﴿٦٣﴾

16. ಅರ್ಥಾತ್- ಸತ್ಯನಿಷೇಧ ಮತ್ತು ಅಕ್ರಮದ ಧೋರಣೆ ತಳೆಯುವವರ ಮೇಲೆ ಯಾತನೆ ಎರಗಿಸುವುದು, ಸತ್ಯವಿಶ್ವಾಸಿಗಳಾದ ಸಜ್ಜನ ದಾಸರನ್ನು ಪುರಸ್ಕರಿಸುವುದು, ಸನ್ಮಾರ್ಗಗಾಮಿಗಳಾದ ಶೋಷಿತ ಜನರನ್ನು ಸಾಂತ್ವನ ಪಡಿಸುವುದು, ಶಕ್ತಿಮೀರಿ ಅಕ್ರಮವನ್ನು ಎದುರಿಸುತ್ತಿರುವ ಸತ್ಯದ ವಾಹಕರಿಗೆ ನೆರವಾಗುವುದು- ಇವೆಲ್ಲದಕ್ಕೂ ಕಾರಣ ಅಲ್ಲಾಹನ ಈ ಗುಣವಿಶೇಷತೆಗಳೇ ಆಗಿವೆ.

64. ಆಕಾಶಗಳಲ್ಲಿರುವುದೂ ಭೂಮಿಯಲ್ಲಿರುವುದೂ ಆತನದೇ. ನಿಶ್ಚಯವಾಗಿಯೂ ಅವನು ನಿರಪೇಕ್ಷನೂ ಪ್ರಶಂಸಾರ್ಹನೂ ಆಗಿರುತ್ತಾನೆ.

لَهُ مَا فِي السَّمٰوٰتِ وَمَا فِي الْأَرْضِ ۗ وَإِنَّ اللّٰهَ لَهُوَ الْغَنِيُّ الْحَمِيدُ ﴿٦٤﴾

65. ಅವನು ಭೂಮಿಯಲ್ಲಿರುವುದೆಲ್ಲವನ್ನೂ ನಿಮಗೆ ಅಧೀನಗೊಳಿಸಿ ರುವುದನ್ನೂ ನಾವೆಯು ಅವನ ಅಪ್ಪಣೆಯಂತೆ ಸಮುದ್ರದಲ್ಲಿ ಚಲಿಸುವಂತೆ ಅವನೇ ಅದನ್ನು ನಿಯಮಬದ್ಧ ಗೊಳಿಸಿರುವುದನ್ನೂ ಅವನ ಅಪ್ಪಣೆಯಿಲ್ಲದೆ ಆಕಾಶವು ಭೂಮಿಯ ಮೇಲೆ ಬೀಳದಂತೆ ಅವನೇ ಅದನ್ನು ಈ ರೀತಿ ಆಧರಿಸಿರುವುದನ್ನೂ ನೀವು ಕಾಣುತ್ತಿಲ್ಲವೇ? ವಾಸ್ತವದಲ್ಲಿ ಅಲ್ಲಾಹನು ಜನರ ಬಗ್ಗೆ ಮಹಾ ವತ್ಸಲನೂ ಅತ್ಯಂತ ಕರುಣಾನಿಧಿಯೂ ಆಗಿರುತ್ತಾನೆ.

أَلَمْ تَرَ أَنَّ اللّٰهَ سَخَّرَ لَكُمْ مَّا فِي الْأَرْضِ وَالْفُلْكَ تَجْرِي فِي الْبَحْرِ بِأَمْرِهِ ۗ وَيُمْسِكُ السَّمَاءَ أَنْ تَقَعَ عَلَى الْأَرْضِ إِلَّا بِإِذْنِهِ ۗ إِنَّ اللّٰهَ بِالنَّاسِ لَرَءُوفٌ رَّحِيمٌ ﴿٦٥﴾

66. ಅವನೇ ನಿಮಗೆ ಜೀವನ ಪ್ರದಾನ ಮಾಡಿದವನು, ಅವನೇ ನಿಮಗೆ ಮರಣ ಕೊಡುತ್ತಾನೆ ಮತ್ತು ಅವನೇ ನಿಮ್ಮನ್ನು ಪುನಃ ಜೀವಂತ ಗೊಳಿಸುವವನು. ವಾಸ್ತವದಲ್ಲಿ ಮಾನವನು ಮಹಾ ಸತ್ಯನಿಷೇಧಿ ಯಾಗಿರುವನು.[17]

وَهُوَ الَّذِي أَحْيَاكُمْ ثُمَّ يُمِيتُكُمْ ثُمَّ يُحْيِيكُمْ ۗ إِنَّ الْإِنْسَانَ لَكَفُورٌ ﴿٦٦﴾

67. ಪ್ರತಿಯೊಂದು ಸಮುದಾಯಕ್ಕೂ ನಾವು ಒಂದು ಉಪಾಸನಾ ಕ್ರಮವನ್ನು ನಿಶ್ಚಯಿಸಿದ್ದೇವೆ. ಅದನ್ನು ಅದು ಅನುಸರಿಸುತ್ತದೆ. ಆದುದರಿಂದ ಪೈಗಂಬರರೇ, ಅವರು ಈ ವಿಷಯದಲ್ಲಿ ನಿಮ್ಮೊಡನೆ ಜಗಳಾಡದಿರಲಿ.[18] ನೀವು ನಿಮ್ಮ ಪ್ರಭುವಿನ ಕಡೆಗೆ ಕರೆ ನೀಡಿರಿ. ನಿಶ್ಚಯವಾಗಿಯೂ ನೀವು ನೇರಮಾರ್ಗದಲ್ಲಿದ್ದೀರಿ.

لِكُلِّ أُمَّةٍ جَعَلْنَا مَنْسَكًا هُمْ نَاسِكُوهُ فَلَا يُنَازِعُنَّكَ فِي الْأَمْرِ وَادْعُ إِلَىٰ رَبِّكَ ۗ إِنَّكَ لَعَلَىٰ هُدًى مُّسْتَقِيمٍ ﴿٦٧﴾

68. ಇನ್ನು ಅವರು ನಿಮ್ಮೊಡನೆ ಜಗಳಾಡಿದರೆ "ನೀವು ಮಾಡುತ್ತಿರುವುದೆಲ್ಲವೂ ಅಲ್ಲಾಹನಿಗೆ ಚೆನ್ನಾಗಿ ಗೊತ್ತಿದೆ.

وَإِنْ جَادَلُوكَ فَقُلِ اللّٰهُ أَعْلَمُ بِمَا تَعْمَلُونَ ﴿٦٨﴾

69. ನೀವು ಭಿನ್ನಾಭಿಪ್ರಾಯ ತಾಳಿಕೊಂಡಿದ್ದ ಸಕಲ ವಿಷಯಗಳ ಬಗ್ಗೆ ಅಲ್ಲಾಹನು ಪುನರುತ್ಥಾನದ ದಿನ ನಿಮ್ಮ ನಡುವೆ ತೀರ್ಮಾನ ಮಾಡಿ ಬಿಡುವನು" ಎಂದು ಹೇಳಿ ಬಿಡಿರಿ.

اللّٰهُ يَحْكُمُ بَيْنَكُمْ يَوْمَ الْقِيٰمَةِ فِيمَا كُنْتُمْ فِيهِ تَخْتَلِفُونَ ﴿٦٩﴾

70. ಆಕಾಶಗಳ ಮತ್ತು ಭೂಮಿಯ ಪ್ರತಿಯೊಂದು ವಿಷಯವೂ

أَلَمْ تَعْلَمْ أَنَّ اللّٰهَ يَعْلَمُ مَا فِي السَّمَاءِ

17. ಅರ್ಥಾತ್- ಇದೆಲ್ಲವನ್ನು ನೋಡಿಯೂ ಅವನು ಪ್ರವಾದಿಗಳು ಸಮರ್ಪಿಸುವ ಸತ್ಯವನ್ನು ನಿರಾಕರಿಸುತ್ತಾ ಸಾಗುತ್ತಾನೆ.

18. ಅರ್ಥಾತ್- ಇದಕ್ಕಿಂತ ಮೊದಲು ಪ್ರವಾದಿಗಳು ತಮ್ಮ ಕಾಲದ ಜನಾಂಗಗಳಿಗಾಗಿ ಒಂದು ಆರಾಧನಾ ಪದ್ಧತಿಯನ್ನು ತಂದಿದ್ದರು. ಹಾಗೆಯೇ ಈ ಕಾಲದ ಜನಾಂಗಕ್ಕಾಗಿಯೂ ನೀವು ಒಂದು ಆರಾಧನಾ ಪದ್ಧತಿಯನ್ನು ತಂದಿರುವಿರಿ. ಆದ್ದರಿಂದ ಈಗ ಯಾರಿಗೂ ಆ ಬಗ್ಗೆ ಆಕ್ಷೇಪ ಮಾಡುವ ಅಧಿಕಾರವಿಲ್ಲ. ಈ ಕಾಲದ ನೈಜ ಆರಾಧನಾ ವಿಧಾನ ಇದುವೇ ಆಗಿದೆ.

ಅಲ್ಲಾಹನ ತಿಳುವಳಿಕೆಯಲ್ಲಿರುವುದು ನಿಮಗೆ ತಿಳಿಯದೇ? ಎಲ್ಲವೂ ಒಂದು ಗ್ರಂಥದಲ್ಲಿ ಉಲ್ಲೇಖಿತವಿದೆ. ಅಲ್ಲಾಹನಿಗೆ ಇದೇನೂ ಕಷ್ಟ ಸಾಧ್ಯವಲ್ಲ.

وَالْأَرْضِ ۗ إِنَّ ذَٰلِكَ فِي كِتَابٍ ۚ إِنَّ ذَٰلِكَ عَلَى اللَّهِ يَسِيرٌ ﴿٧٠﴾

71. ಇವರು ಅಲ್ಲಾಹನನ್ನು ಬಿಟ್ಟು ಅವನು ಯಾವುದೇ ಆಧಾರವನ್ನಿಳಿಸಿರದ ಹಾಗೂ ಸ್ವತಃ ಅವರಿಗೇ ತಿಳಿಯದಂತಹ ವಸ್ತುಗಳ ದಾಸ್ಯ-ಆರಾಧನೆ ಮಾಡುತ್ತಾರೆ. ಈ ಅಕ್ರಮಿಗಳಿಗೆ ಯಾರೂ ಸಹಾಯಕರಿಲ್ಲ.

وَيَعْبُدُونَ مِن دُونِ اللَّهِ مَا لَمْ يُنَزِّلْ بِهِ سُلْطَانًا وَمَا لَيْسَ لَهُم بِهِ عِلْمٌ ۗ وَمَا لِلظَّالِمِينَ مِن نَّصِيرٍ ﴿٧١﴾

72. ಮತ್ತು ಇವರಿಗೆ ನಮ್ಮ ಸುಸ್ಪಷ್ಟ ವಚನಗಳನ್ನು ಪಠಿಸಿ ಹೇಳಿದಾಗ ಸತ್ಯನಿಷೇಧಿಗಳ ಮುಖಗಳು ವಿಕಾರಗೊಳ್ಳುವುದನ್ನು ನೀವು ನೋಡುತ್ತೀರಿ. ಇವರಿಗೆ ನಮ್ಮ ವಚನಗಳನ್ನು ಓದಿ ಹೇಳುವವರ ಮೇಲೆ ಇವರು ಈಗಲೇ ಮುಗಿಬೀಳುವರೋ ಎಂಬಂತೆ ಭಾಸವಾಗುತ್ತದೆ. ಇವರೊಡನೆ ಹೇಳಿರಿ- "ಇದಕ್ಕಿಂತಲೂ ಕೆಟ್ಟದ್ದೇನೆಂಬುದನ್ನು ನಾನು ನಿಮಗೆ ಹೇಳಲೇ? ಅಗ್ನಿ. ಸತ್ಯನಿಷೇಧಿಗಳಿಗೆ ಅಲ್ಲಾಹನು ಅದನ್ನೇ ವಾಗ್ದಾನ ಮಾಡಿದ್ದಾನೆ ಮತ್ತು ಅದು ಅತ್ಯಂತ ನಿಕೃಷ್ಟ ಸ್ಥಾನವಾಗಿದೆ."

وَإِذَا تُتْلَىٰ عَلَيْهِمْ آيَاتُنَا بَيِّنَاتٍ تَعْرِفُ فِي وُجُوهِ الَّذِينَ كَفَرُوا الْمُنكَرَ ۖ يَكَادُونَ يَسْطُونَ بِالَّذِينَ يَتْلُونَ عَلَيْهِمْ آيَاتِنَا ۗ قُلْ أَفَأُنَبِّئُكُم بِشَرٍّ مِّن ذَٰلِكُمُ ۗ النَّارُ وَعَدَهَا اللَّهُ الَّذِينَ كَفَرُوا ۖ وَبِئْسَ الْمَصِيرُ ﴿٧٢﴾

73. ಜನರೇ, ಒಂದು ಉದಾಹರಣೆ ಕೊಡಲಾಗುತ್ತಿದೆ. ಗಮನವಿಟ್ಟು ಕೇಳಿರಿ: ನೀವು ಅಲ್ಲಾಹನನ್ನು ಬಿಟ್ಟು ಯಾವ ಆರಾಧ್ಯರನ್ನು ಪ್ರಾರ್ಥಿಸುತ್ತೀರೋ ಅವರೆಲ್ಲರೂ ಒಟ್ಟಾಗಿ ಒಂದು ನೊಣವನ್ನೂ ಸೃಷ್ಟಿಸಲಾರರು. ಮಾತ್ರವಲ್ಲ ನೊಣವು ಅವರಿಂದೇನನ್ನಾದರೂ ಕಸಿದು ಕೊಂಡೊಯ್ದರೆ ಅವರಿಗೆ ಅದನ್ನು ಬಿಡಿಸಿಕೊಳ್ಳಲಿಕ್ಕೂ ಸಾಧ್ಯವಾಗದು. ಸಹಾಯಾರ್ಥಿಗಳೂ ದುರ್ಬಲರು, ಯಾರಿಂದ ಸಹಾಯ ಬೇಡಲಾಗುತ್ತದೋ ಅವರೂ ದುರ್ಬಲರು.

يَا أَيُّهَا النَّاسُ ضُرِبَ مَثَلٌ فَاسْتَمِعُوا لَهُ ۚ إِنَّ الَّذِينَ تَدْعُونَ مِن دُونِ اللَّهِ لَن يَخْلُقُوا ذُبَابًا وَلَوِ اجْتَمَعُوا لَهُ ۖ وَإِن يَسْلُبْهُمُ الذُّبَابُ شَيْئًا لَّا يَسْتَنقِذُوهُ مِنْهُ ۚ ضَعُفَ الطَّالِبُ وَالْمَطْلُوبُ ﴿٧٣﴾

74. ಇವರು ಅಲ್ಲಾಹನ ಮಹತ್ವವನ್ನು ಹೇಗೆ ಅರಿಯಬೇಕಿತ್ತೋ ಹಾಗೆ ಅರಿತುಕೊಳ್ಳಲೇ ಇಲ್ಲ. ವಾಸ್ತವದಲ್ಲಿ ಶಕ್ತಿಪೂರ್ಣನೂ ಮಹಾ ಪ್ರತಾಪಿಯೂ ಅಲ್ಲಾಹನೇ ಆಗಿರುತ್ತಾನೆ.

مَا قَدَرُوا اللَّهَ حَقَّ قَدْرِهِ ۗ إِنَّ اللَّهَ لَقَوِيٌّ عَزِيزٌ ﴿٧٤﴾

75. ಅಲ್ಲಾಹನು(ತನ್ನ ಆದೇಶಗಳನ್ನು ರವಾನಿಸಲಿಕ್ಕಾಗಿ) ದೇವಚರರಿಂದಲೂ ಮನುಷ್ಯರಿಂದಲೂ ಸಂದೇಶವಾಹಕರನ್ನು ಆಯ್ದು ಕೊಳ್ಳುತ್ತಾನೆ. ಅವನು ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.

اللَّهُ يَصْطَفِي مِنَ الْمَلَائِكَةِ رُسُلًا وَمِنَ النَّاسِ ۚ إِنَّ اللَّهَ سَمِيعٌ بَصِيرٌ ﴿٧٥﴾

يَعْلَمُ مَا بَيْنَ أَيْدِيهِمْ وَمَا خَلْفَهُمْ ۗ وَإِلَى اللَّهِ تُرْجَعُ الْأُمُورُ ﴿٧٦﴾

76. ಅವನು ಜನರ ಮುಂದೆ ಮತ್ತು ಮರೆಯಲ್ಲಿ ಇರುವ ಎಲ್ಲವನ್ನೂ ಬಲ್ಲವನಾಗಿರುತ್ತಾನೆ. ಸಕಲ ವ್ಯವಹಾರಗಳೂ ಅವನ ಕಡೆಗೇ ಮರಳುತ್ತವೆ.

يَا أَيُّهَا الَّذِينَ آمَنُوا ارْكَعُوا وَاسْجُدُوا وَاعْبُدُوا رَبَّكُمْ وَافْعَلُوا الْخَيْرَ لَعَلَّكُمْ تُفْلِحُونَ ۩ ﴿٧٧﴾

السجدة عند الشافعي

77. ಸತ್ಯವಿಶ್ವಾಸಿಗಳೇ 'ಬಾಗಿರಿ' ಮತ್ತು 'ಸಾಷ್ಟಾಂಗವೆರಗಿರಿ' ಮತ್ತು ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ, ಸತ್ಕರ್ಮಗಳನ್ನೆಸಗಿರಿ-ಇದರಿಂದಲೇ ನಿಮಗೆ ಯಶಸ್ಸು ಸಿಗುವುದೆಂದು ನಿರೀಕ್ಷಿಸಬಹುದು.

وَجَاهِدُوا فِي اللَّهِ حَقَّ جِهَادِهِ ۚ هُوَ اجْتَبَاكُمْ وَمَا جَعَلَ عَلَيْكُمْ فِي الدِّينِ مِنْ حَرَجٍ ۚ مِلَّةَ أَبِيكُمْ إِبْرَاهِيمَ ۚ هُوَ سَمَّاكُمُ الْمُسْلِمِينَ مِنْ قَبْلُ وَفِي هَٰذَا لِيَكُونَ الرَّسُولُ شَهِيدًا عَلَيْكُمْ وَتَكُونُوا شُهَدَاءَ عَلَى النَّاسِ ۚ فَأَقِيمُوا الصَّلَاةَ وَآتُوا الزَّكَاةَ وَاعْتَصِمُوا بِاللَّهِ هُوَ مَوْلَاكُمْ ۖ فَنِعْمَ الْمَوْلَىٰ وَنِعْمَ النَّصِيرُ ﴿٧٨﴾

78. ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ ರೀತಿಯಲ್ಲಿ ಹೋರಾಡಿರಿ. ಅವನು ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿಸಿ ಕೊಂಡಿರುತ್ತಾನೆ ಮತ್ತು ಧರ್ಮದಲ್ಲಿ ನಿಮಗೇನೂ ಸಂಕೀರ್ಣತೆಯನ್ನಿರಿಸಿಲ್ಲ. ನಿಮ್ಮ ಪಿತಾಮಹರಾದ ಇಬ್‌ರಾಹೀಮರ ಸಮುದಾಯದಲ್ಲಿ ಸ್ಥಿರವಾಗಿರಿ. ಅಲ್ಲಾಹನು ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನಿನಲ್ಲೂ ನಿಮಗೆ ಇದೇ ಹೆಸರಿದೆ.) ಇದು ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ ಮತ್ತು ನೀವು ಜನರ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ (ಆಗಿರುತ್ತದೆ.) ಆದುದರಿಂದ ನಮಾಝನ್ನು ಸಂಸ್ಥಾಪಿಸಿರಿ; ಝಕಾತ್ ಕೊಡಿರಿ ಮತ್ತು ಅಲ್ಲಾಹನೊಂದಿಗೆ ಸಂಬಂಧ ಸ್ಥಾಪಿಸಿಕೊಂಡಿರಿ. ಅವನೇ ನಿಮ್ಮ ರಕ್ಷಕ ಮಿತ್ರ. ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನು ಮತ್ತು ಅತ್ಯುತ್ತಮ ಸಹಾಯಕನವನು.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. *ಖಂಡಿತವಾಗಿಯೂ ಸತ್ಯವಿಶ್ವಾಸಿಗಳು ವಿಜಯಿಗಳಾದರು-

قَدْ اَفْلَحَ الْمُؤْمِنُوْنَ ۝١

2. ಅವರು ತಮ್ಮ ನಮಾಝಿನಲ್ಲಿ ಭಯಭಕ್ತಿ ತೋರುತ್ತಾರೆ-

الَّذِيْنَ هُمْ فِيْ صَلَاتِهِمْ خٰشِعُوْنَ ۝٢

3. ನಿರರ್ಥಕ ಕಾರ್ಯಗಳಿಂದ ದೂರವಿರುತ್ತಾರೆ-

وَالَّذِيْنَ هُمْ عَنِ اللَّغْوِ مُعْرِضُوْنَ ۝٣

4. ಝಕಾತಿನ ನಿಯಮವನ್ನು ಪಾಲಿಸುತ್ತಾರೆ-

وَالَّذِيْنَ هُمْ لِلزَّكٰوةِ فٰعِلُوْنَ ۝٤

5-6. ತಮ್ಮ ಪತ್ನಿಯರು ಹಾಗೂ ತಮ್ಮ ಅಧೀನವಿರುವ ದಾಸಿಯರ[1] ಹೊರತು ಇತರರಿಂದ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳುತ್ತಾರೆ-[2] ಅವರಿಂದ ರಕ್ಷಿಸದಿದ್ದುದರಲ್ಲಿ ಅವರು ದೂಷಣೀಯರಲ್ಲ.

وَالَّذِيْنَ هُمْ لِفُرُوْجِهِمْ حٰفِظُوْنَ ۝٥
اِلَّا عَلٰٓى اَزْوَاجِهِمْ اَوْ مَا مَلَكَتْ اَيْمَانُهُمْ فَاِنَّهُمْ غَيْرُ مَلُوْمِيْنَ ۝٦

7. ಆದರೆ ಇದರ ಹೊರತು ಇನ್ನೇನಾದರೂ ಬಯಸುವವರೇ ಅತಿರೇಕವೆಸಗುವವರು.

فَمَنِ ابْتَغٰى وَرَآءَ ذٰلِكَ فَاُولٰٓئِكَ هُمُ الْعٰدُوْنَ ۝٧

8. ತಮ್ಮ ವಿಶ್ವಸ್ಥ ಸೊತ್ತುಗಳನ್ನು ಹಾಗೂ ತಮ್ಮ ವಾಗ್ದಾನಗಳನ್ನು ಪಾಲಿಸುತ್ತಾರೆ-

وَالَّذِيْنَ هُمْ لِاَمٰنٰتِهِمْ وَعَهْدِهِمْ رٰعُوْنَ ۝٨

***ಇಲ್ಲಿಂದ 18ನೆಯ ಕಾಂಡ ಆರಂಭ.**

1. ಅರ್ಥಾತ್- ಯುದ್ಧದಲ್ಲಿ ಸೆರೆಯಾಳುಗಳಾಗಿ ಸಿಗುವ ದಾಸಿಯರು. ಯುದ್ಧಕೈದಿಗಳ ವಿನಿಮಯ ನಡೆಯದಿದ್ದರೆ ಇಸ್ಲಾಮೀ ಸರ್ಕಾರದ ವತಿಯಿಂದ ಅವರನ್ನು ಯಾರದಾದರೂ ಒಡೆತನಕ್ಕೆ ಕೊಟ್ಟು ಬಿಡಲಾಗುತ್ತದೆ.
2. ಇದಕ್ಕೆ ಎರಡು ಅರ್ಥಗಳಿರಬಹುದು. ಮೊದಲನೆಯದಾಗಿ ತಮ್ಮ ದೇಹದ ಲಜ್ಜಾಂಗಗಳನ್ನು ಮರೆಸಿರುತ್ತಾರೆ. ಅರ್ಥಾತ್ ಅಶ್ಲೀಲತೆಯಿಂದ ದೂರವಿರುತ್ತಾರೆ ಮತ್ತು ತಮ್ಮ ಗುಪ್ತಾಂಗಗಳನ್ನು ಇತರರ ಮುಂದೆ ತೆರೆಯುವುದಿಲ್ಲ. ಎರಡನೆಯದಾಗಿ ಅವರು ತಮ್ಮ ಲಜ್ಜೆ ಮತ್ತು ಮಾನವನ್ನು ಸಂರಕ್ಷಿಸುತ್ತಾರೆ. ಅರ್ಥಾತ್ ಲೈಂಗಿಕ ವಿಷಯಗಳಲ್ಲಿ ಸ್ವಚ್ಛಂದರಾಗುವುದಿಲ್ಲ. ವಿಷಯಾಸಕ್ತಿ ಯನ್ನು ತೀರಿಸುವಲ್ಲಿ ಅನಿಯಂತ್ರಿತರಾಗಿ ಬಿಡುವುದಿಲ್ಲ.

9. ಮತ್ತು ತಮ್ಮ ನಮಾಝ್‌ಗಳನ್ನು ರಕ್ಷಿಸಿಕೊಳ್ಳುತ್ತಾರೆ.

وَالَّذِينَ هُمْ عَلَىٰ صَلَوَاتِهِمْ يُحَافِظُونَ ﴿٩﴾

10. ಇವರೇ ವಾರೀಸುದಾರರು.

أُولَٰئِكَ هُمُ الْوَارِثُونَ ﴿١٠﴾

11. ವಾರೀಸಿನಲ್ಲಿ 'ಮಹೋನ್ನತ ಸ್ವರ್ಗ' ಪಡೆಯುವರು ಮತ್ತು ಅದರಲ್ಲಿ ಸದಾ ವಾಸಿಸುವರು.

الَّذِينَ يَرِثُونَ الْفِرْدَوْسَ هُمْ فِيهَا خَالِدُونَ ﴿١١﴾

12. ನಾವು ಮಾನವನನ್ನು ಮಣ್ಣಿನ ಸತ್ವದಿಂದ ಸೃಷ್ಟಿಸಿದೆವು.

وَلَقَدْ خَلَقْنَا الْإِنسَانَ مِن سُلَالَةٍ مِّن طِينٍ ﴿١٢﴾

13. ತರುವಾಯ ಅದನ್ನು ಒಂದು ಸುರಕ್ಷಿತ ಸ್ಥಳದಲ್ಲಿ ತೊಟ್ಟಿಕ್ಕಿದ ಹನಿಯಾಗಿ ಮಾರ್ಪಡಿಸಿದೆವು.

ثُمَّ جَعَلْنَاهُ نُطْفَةً فِي قَرَارٍ مَّكِينٍ ﴿١٣﴾

14. ಅನಂತರ ಆ ಹನಿಗೆ ಮಾಂಸಪಿಂಡದ ರೂಪ ಕೊಟ್ಟೆವು. ಬಳಿಕ ಮಾಂಸಪಿಂಡವನ್ನು ಮಾಂಸಖಂಡವನ್ನಾಗಿ ಮಾಡಿದೆವು. ಆಮೇಲೆ ಮಾಂಸಖಂಡವನ್ನು ಎಲುಬುಗಳಾಗಿ ಮಾಡಿದೆವು. ತರುವಾಯ ಎಲುಬುಗಳ ಮೇಲೆ ಮಾಂಸ ತೊಡಿಸಿದೆವು. ಆ ಬಳಿಕ ಅದನ್ನೊಂದು ಬೇರೆಯೇ ಸೃಷ್ಟಿಯನ್ನಾಗಿ ಮಾಡಿ ನಿಲ್ಲಿಸಿದೆವು.[3] ಅಲ್ಲಾಹನು ಮಹಾ ಸಮೃದ್ಧನು; ಸಕಲ ಶಿಲ್ಪಿಗಳಿಗಿಂತ ಶ್ರೇಷ್ಠ ಶಿಲ್ಪಿ.

ثُمَّ خَلَقْنَا النُّطْفَةَ عَلَقَةً فَخَلَقْنَا الْعَلَقَةَ مُضْغَةً فَخَلَقْنَا الْمُضْغَةَ عِظَامًا فَكَسَوْنَا الْعِظَامَ لَحْمًا ثُمَّ أَنشَأْنَاهُ خَلْقًا آخَرَ ۚ فَتَبَارَكَ اللَّهُ أَحْسَنُ الْخَالِقِينَ ﴿١٤﴾

15. ಅದಾದ ಬಳಿಕ ನಿಮಗೆ ಖಂಡಿತವಾಗಿಯೂ ಸಾಯಲಿಕ್ಕಿದೆ.

ثُمَّ إِنَّكُم بَعْدَ ذَٰلِكَ لَمَيِّتُونَ ﴿١٥﴾

16. ಮತ್ತೆ ಪುನರುತ್ಥಾನದ ದಿನ ಖಂಡಿತವಾಗಿಯೂ ನೀವು ಎಬ್ಬಿಸಲ್ಪಡುವಿರಿ.

ثُمَّ إِنَّكُمْ يَوْمَ الْقِيَامَةِ تُبْعَثُونَ ﴿١٦﴾

17. ನಾವು ನಿಮ್ಮ ಮೇಲ್ಭಾಗದಲ್ಲಿ ಏಳು ಮಾರ್ಗಗಳನ್ನು ರಚಿಸಿದೆವು.[4] ಸೃಷ್ಟಿಸುವ ಕಾರ್ಯದ ಬಗ್ಗೆ ನಾವೇನೂ ಅಜ್ಞರಾಗಿರಲಿಲ್ಲ.[5]

وَلَقَدْ خَلَقْنَا فَوْقَكُمْ سَبْعَ طَرَائِقَ وَمَا كُنَّا عَنِ الْخَلْقِ غَافِلِينَ ﴿١٧﴾

---

3. ಅರ್ಥಾತ್- ಇದೆಲ್ಲವೂ ಪ್ರಾಣಿಗಳ ಸೃಷ್ಟಿಯ ವೇಳೆಯೂ ಸಂಭವಿಸುತ್ತದೆ. ಆದರೆ ಅಲ್ಲಾಹನು ಈ ಸೃಷ್ಟಿಯ ವಿಧಾನದ ಮೂಲಕ ಮಾನವನನ್ನು ಪ್ರಾಣಿಗಳಿಗಿಂತ ಸಂಪೂರ್ಣ ಭಿನ್ನವಾದ ಬೇರೆಯೇ ಸ್ವರೂಪದ ಜೀವಿಯಾಗಿ ಮಾಡಿ ಸೃಷ್ಟಿಸಿದನು.

4. ಪ್ರಾಯಶಃ ಇದರ ಅರ್ಥ ಏಳು ಗ್ರಹಗಳು ಪರಿಭ್ರಮಿಸುವ ಕಕ್ಷೆಯಾಗಿರಬಹುದು. ಆ ಕಾಲದ ಮಾನವ ಏಳು ನಕ್ಷತ್ರಗಳ ಬಗ್ಗೆ ಮಾತ್ರ ತಿಳಿದಿದ್ದನು. ಆದ್ದರಿಂದ ಇಲ್ಲಿ ಏಳು ಕಕ್ಷೆಗಳ ಬಗ್ಗೆ ಮಾತ್ರ ಪ್ರಸ್ತಾಪಿಸಲಾಗಿದೆ. ಅದರ ಅರ್ಥ ಇತರ ಕಕ್ಷೆಗಳು ಅಸ್ತಿತ್ವದಲ್ಲೇ ಇಲ್ಲವೆಂದಲ್ಲ.

5. ಇನ್ನೊಂದು ಭಾಷಾಂತರ ಹೀಗಾಗಬಹುದು, "ಸೃಷ್ಟಿಗಳಿಂದ ನಾವು ಅಲಕ್ಷ್ಯರಾಗಿರುವುದಿಲ್ಲ ಅಥವಾ ಅಲಕ್ಷ್ಯರಾಗಿಲ್ಲ" ಮೊದಲನೆಯ ಭಾಷಾಂತರದ ಪ್ರಕಾರ ಈ ಸೂಕ್ತದ ಅರ್ಥವೇನೆಂದರೆ ನಾವು ಸೃಷ್ಟಿಸಿರುವುದೆಲ್ಲವೂ ಯಾವುದಾದರೊಬ್ಬ ಅಜ್ಞಾನಿಯ ಮೂಲಕ ಹಠಾತ್ತನೆ ಸೃಷ್ಟಿಸಲ್ಪಟ್ಟದ್ದಲ್ಲ. ಅದನ್ನು ಪೂರ್ವಯೋಜಿತ ರೀತಿಯಲ್ಲಿ ಸಂಪೂರ್ಣ ಜ್ಞಾನದೊಂದಿಗೆ ಸೃಷ್ಟಿಸಲಾಗಿದೆ. ಅನೇಕ ಪ್ರಮುಖ ನಿಯಮಗಳು ಅದರ ಹಿಂದೆ ಕಾರ್ಯಪ್ರವೃತ್ತವಾಗಿವೆ. ಸಣ್ಣ ವಸ್ತುವಿನಿಂದ ದೊಡ್ಡ ವಸ್ತುಗಳ ತನಕ ಸಮಸ್ತ ನಿಸರ್ಗ ವ್ಯವಸ್ಥೆಯಲ್ಲಿ

18. ಮತ್ತು ನಾವು ಆಕಾಶದಿಂದ ಸರಿಯಾದ ಲೆಕ್ಕ ಪ್ರಕಾರ ನಿರ್ದಿಷ್ಟ ಪ್ರಮಾಣದಲ್ಲಿ ನೀರನ್ನು ಸುರಿಸಿದೆವು ಮತ್ತು ಅದನ್ನು ನೆಲದಲ್ಲಿ ನಿಲ್ಲಿಸಿ ಬಿಟ್ಟೆವು. ನಾವು ಹೇಗೆ ಬೇಕಿದ್ದರೂ ಅದನ್ನು ಅದೃಶ್ಯ ಗೊಳಿಸಬಲ್ಲೆವು.

وَاَنْزَلْنَا مِنَ السَّمَآءِ مَآءًۢ بِقَدَرٍ فَاَسْكَنّٰهُ فِي الْاَرْضِ ۖ وَاِنَّا عَلٰى ذَهَابٍۢ بِهٖ لَقٰدِرُوْنَ ﴿١٨﴾

19. ತರುವಾಯ ಆ ನೀರಿನ ಮೂಲಕ ನಾವು ನಿಮಗಾಗಿ ಖರ್ಜೂರ ಮತ್ತು ದ್ರಾಕ್ಷಾ ತೋಟಗಳನ್ನು ಉಂಟು ಮಾಡಿದೆವು. ಈ ತೋಟಗಳಲ್ಲಿ ನಿಮಗಾಗಿ ರುಚಿಕರವಾದ ಅನೇಕ ಫಲಗಳಿವೆ ಮತ್ತು ನೀವು ಅವುಗಳಿಂದ ಆಹಾರ ಪಡೆಯುತ್ತೀರಿ-

فَاَنْشَاْنَا لَكُمْ بِهٖ جَنّٰتٍ مِّنْ نَّخِيْلٍ وَّاَعْنَابٍ ۘ لَكُمْ فِيْهَا فَوَاكِهُ كَثِيْرَةٌ وَّمِنْهَا تَاْكُلُوْنَ ﴿١٩﴾

20. ಮತ್ತು ಸಿನಾಯ್ ಪರ್ವತದಲ್ಲಿ ಬೆಳೆಯುವ ಮರವನ್ನೂ ನಾವು ಸೃಷ್ಟಿಸಿದೆವು.[6] ಅದು ಎಣ್ಣೆಯನ್ನೂ ತಿನ್ನುವವರಿಗಾಗಿ ಪದಾರ್ಥ ವನ್ನೂ ಹೊತ್ತು ಬೆಳೆಯುತ್ತದೆ.

وَشَجَرَةً تَخْرُجُ مِنْ طُوْرِ سَيْنَآءَ تَنْۢبُتُ بِالدُّهْنِ وَصِبْغٍ لِّلْاٰكِلِيْنَ ﴿٢٠﴾

21. ವಾಸ್ತವದಲ್ಲಿ ಜಾನುವಾರುಗಳಲ್ಲಿಯೂ ನಿಮಗೊಂದು ಪಾಠವಿದೆ. ಅವುಗಳ ಉದರದೊಳಗೆ ಏನಿರುವುದೋ ಅದರಿಂದಲೇ ನಾವು ನಿಮಗೊಂದು ವಸ್ತುವನ್ನು ಕುಡಿಸುತ್ತೇವೆ ಮತ್ತು ನಿಮಗೆ ಅವುಗಳಲ್ಲಿ ಬೇರೆ ಅನೇಕ ಪ್ರಯೋಜನಗಳೂ ಇವೆ. ಅವುಗಳನ್ನು ನೀವು ತಿನ್ನುತ್ತೀರಿ-

وَاِنَّ لَكُمْ فِي الْاَنْعَامِ لَعِبْرَةً ۚ نُسْقِيْكُمْ مِّمَّا فِيْ بُطُوْنِهَا وَلَكُمْ فِيْهَا مَنَافِعُ كَثِيْرَةٌ وَّمِنْهَا تَاْكُلُوْنَ ﴿٢١﴾

22. ಮತ್ತು ಅವುಗಳ ಮೇಲೂ ನಾವೆಗಳ ಮೇಲೂ ನೀವು ಸವಾರಿ ಮಾಡುತ್ತೀರಿ.

وَعَلَيْهَا وَعَلَى الْفُلْكِ تُحْمَلُوْنَ ﴿٢٢﴾

23. ನಾವು ನೂಹರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅವರು ಹೀಗೆಂದರು- "ನನ್ನ ಜನಾಂಗದವರೇ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ ಅವನ ಹೊರತು ನಿಮಗೆ ಇನ್ನಾವ ಆರಾಧ್ಯನೂ ಇಲ್ಲ. ನೀವು ಭಯಪಡುವುದಿಲ್ಲವೇ!"

وَلَقَدْ اَرْسَلْنَا نُوْحًا اِلٰى قَوْمِهٖ فَقَالَ يٰقَوْمِ اعْبُدُوا اللّٰهَ مَا لَكُمْ مِّنْ اِلٰهٍ غَيْرُهٗ ۗ اَفَلَا تَتَّقُوْنَ ﴿٢٣﴾

ಸರ್ವಾಂಗೀಣ ಸಮತೋಲನವಿದೆ. ಈ ಮಹಾನ್ ಕಾರ್ಯಾಗಾರದಲ್ಲಿ ಎಲ್ಲೆಡೆ ಒಂದು ಉದ್ದೇಶ ಗೋಚರಿಸುತ್ತದೆ. ಅದು ಸೃಷ್ಟಿಕರ್ತನ ಜಾಣ್ಮೆಗೆ ಸಾಕ್ಷ್ಯ ವಹಿಸುತ್ತದೆ. ಎರಡನೆಯ ಭಾಷಾಂತರದ ಆಧಾರದಲ್ಲಿ ಪ್ರಸ್ತುತ ಸೂಕ್ತದ ಅರ್ಥವೇನೆಂದರೆ ಈ ನಿಸರ್ಗದಲ್ಲಿ ನಾವು ಸೃಷ್ಟಿಸಿರುವ ಯಾವುದೇ ಸೃಷ್ಟಿಯ ಅವಶ್ಯಕತೆಗಳ ಬಗ್ಗೆ ನಾವು ಅಲಕ್ಷ್ಯರಾಗಿಲ್ಲ. ಯಾವುದೇ ಪರಿಸ್ಥಿತಿಯ ಬಗ್ಗೆ ನಾವೆಂದೂ ಅಲಕ್ಷ್ಯರಾಗಿರಲಿಲ್ಲ. ನಮ್ಮ ಯೋಜನೆಗೆ ವಿರುದ್ಧವಾಗಿ ವರ್ತಿಸಲು ನಾವು ಯಾರಿಗೂ ಅವಕಾಶ ಕೊಟ್ಟಿಲ್ಲ. ಯಾವುದೇ ವಸ್ತುವಿನ ನೈಸರ್ಗಿಕ ಬೇಡಿಕೆಗಳನ್ನು ಈಡೇರಿಸುವಲ್ಲಿ ನಾವು ಯಾವುದೇ ರೀತಿಯ ಚ್ಯುತಿ ಮಾಡಿಲ್ಲ. ಒಂದೊಂದು ಕಣ ಮತ್ತು ಎಲೆಯ ಸ್ಥಿತಿಯನ್ನೂ ನಾವು ಬಲ್ಲವರಾಗಿದ್ದೇವೆ.

6. ಅರ್ಥಾತ್- ಜೀತವೃಕ್ಷ(Olive) ಭೂಮಧ್ಯ ಸಮುದ್ರದ ಸುತ್ತಮುತ್ತಲಿನ ಪ್ರದೇಶದ ಬೆಳೆಗಳಲ್ಲಿ ಅದು ಅತ್ಯಂತ ಪ್ರಮುಖವಾದುದು. ಸೀನಾಯ್ ಪರ್ವತವನ್ನು ಪ್ರಮುಖ ಪ್ರದೇಶವಾಗಿ ಹೊಂದಿರುವ ಭೂಭಾಗವೇ ಈ ವೃಕ್ಷದ ಮೂಲ ಸ್ಥಾನವಾಗಿರುವುದರಿಂದ ಪ್ರಾಯಶಃ ಇದನ್ನು ಸೀನಾಯ್ ಪರ್ವತದ ಜತೆಗೆ ಪ್ರಸ್ತಾಪಿಸಲಾಗಿರಬಹುದು.

24. ಸತ್ಯವನ್ನು ನಿಷೇಧಿಸಿದ ಅವರ ಜನಾಂಗದ ಸರದಾರರು (ಹೀಗೆ) ಹೇಳತೊಡಗಿದರು - "ಇವನು ನಿಮ್ಮಂತೆಯೇ ಇರುವ ಒಬ್ಬ ಮನುಷ್ಯನಲ್ಲದೆ ಇನ್ನೇನೂ ಅಲ್ಲ. ನಿಮ್ಮ ಮೇಲೆ ಹಿರಿಮೆಯನ್ನು ಗಳಿಸುವುದೇ ಇವನ ಉದ್ದೇಶ, ಅಲ್ಲಾಹನು ಕಳುಹಿಸಲಿಚ್ಛಿಸಿದರೆ ದೇವಚರರನ್ನು ಕಳುಹಿಸುತ್ತಿದ್ದನು. (ಮಾನವರು ಸಂದೇಶವಾಹಕ ರಾಗಿ ಬಂದರೆಂಬ) ಇಂತಹ ವಿಷಯವನ್ನು ನಾವು ನಮ್ಮ ಪೂರ್ವಿಕರ ಕಾಲದಲ್ಲೆಂದೂ ಕೇಳಿಯೇ ಇರಲಿಲ್ಲ.

فَقَالَ الْمَلَأُ الَّذِينَ كَفَرُوا مِن قَوْمِهِ مَا هَٰذَا إِلَّا بَشَرٌ مِّثْلُكُمْ يُرِيدُ أَن يَتَفَضَّلَ عَلَيْكُمْ وَلَوْ شَاءَ اللَّهُ لَأَنزَلَ مَلَائِكَةً مَّا سَمِعْنَا بِهَٰذَا فِي آبَائِنَا الْأَوَّلِينَ ﴿٢٤﴾

25. ಏನೂ ಇಲ್ಲ, ಇವನಿಗೆ ಸ್ವಲ್ಪ ಹುಚ್ಚು ಹಿಡಿದಿದೆ. ಸ್ವಲ್ಪ ಕಾಲ ಕಾದು ನೋಡಿರಿ. (ಗುಣವಾಗಲೂ ಬಹುದು)."

إِنْ هُوَ إِلَّا رَجُلٌ بِهِ جِنَّةٌ فَتَرَبَّصُوا بِهِ حَتَّىٰ حِينٍ ﴿٢٥﴾

26. ನೂಹ್ ಹೇಳಿದರು - "ನನ್ನ ಪ್ರಭೂ, ಇವರು ನನ್ನನ್ನು ಸುಳ್ಳಾಗಿಸಿ ರುವುದರಿಂದ ಇನ್ನು ನೀನೇ ನನಗೆ ಸಹಾಯ ಮಾಡು."

قَالَ رَبِّ انصُرْنِي بِمَا كَذَّبُونِ ﴿٢٦﴾

27. ನಾವು ಅವರ ಮೇಲೆ (ಈ ರೀತಿ) 'ದಿವ್ಯಬೋಧನೆ' ಮಾಡಿದೆವು- ನಮ್ಮ ಮೇಲ್ನೋಟದಲ್ಲಿ ಮತ್ತು ನಮ್ಮ 'ದಿವ್ಯಬೋಧನೆ' ಪ್ರಕಾರ ನಾವೆಯನ್ನು ತಯಾರಿಸಿರಿ. ಅನಂತರ ನಮ್ಮ ಆಜ್ಞೆ ಬಂದಾಗ ಹಾಗೂ ಭಟ್ಟಿಯು ಉಕ್ಕೇರಿದಾಗ ಪ್ರತಿಯೊಂದು ವಿಧದ ಪ್ರಾಣಿಗಳಿಂದ ಒಂದೊಂದು ಜೊತೆ ತೆಗೆದುಕೊಂಡು ಅದರಲ್ಲಿ ಹತ್ತಿಕೊಳ್ಳಿರಿ. ಯಾರ ವಿರುದ್ಧ ಮೊದಲೇ ತೀರ್ಮಾನ ವಾಗಿ ಬಿಟ್ಟಿದೆಯೋ ಅವರನ್ನು ಬಿಟ್ಟು ನಿಮ್ಮ ಬಂಧುಗಳನ್ನೂ ಜೊತೆಗೆ ಕರೆದುಕೊಳ್ಳಿರಿ ಮತ್ತು ಅಕ್ರಮಿಗಳ ವಿಷಯದಲ್ಲಿ ನನ್ನೊಡನೆ ಏನೂ ಹೇಳಬಾರದು ಇವರಿನ್ನು ಮುಳುಗಲಿದ್ದಾರೆ.

فَأَوْحَيْنَا إِلَيْهِ أَنِ اصْنَعِ الْفُلْكَ بِأَعْيُنِنَا وَوَحْيِنَا فَإِذَا جَاءَ أَمْرُنَا وَفَارَ التَّنُّورُ فَاسْلُكْ فِيهَا مِن كُلٍّ زَوْجَيْنِ اثْنَيْنِ وَأَهْلَكَ إِلَّا مَن سَبَقَ عَلَيْهِ الْقَوْلُ مِنْهُمْ وَلَا تُخَاطِبْنِي فِي الَّذِينَ ظَلَمُوا إِنَّهُم مُّغْرَقُونَ ﴿٢٧﴾

28. ಅನಂತರ ನೀವು ನಿಮ್ಮ ಜೊತೆಗಾರರ ಸಹಿತ ನಾವೆಯ ಮೇಲೆ ಏರಿದಾಗ, "ಅಕ್ರಮಿಗಳಿಂದ ನಮ್ಮನ್ನು ಪಾರುಗೊಳಿಸಿದ ಅಲ್ಲಾಹ ನಿಗೆ ಕೃತಜ್ಞತೆಗಳು" ಎಂದು ಹೇಳಿರಿ.

فَإِذَا اسْتَوَيْتَ أَنتَ وَمَن مَّعَكَ عَلَى الْفُلْكِ فَقُلِ الْحَمْدُ لِلَّهِ الَّذِي نَجَّانَا مِنَ الْقَوْمِ الظَّالِمِينَ ﴿٢٨﴾

29. ಮತ್ತು "ನನ್ನ ಪ್ರಭೂ, ನನ್ನನ್ನು ಸಮೃದ್ಧಿಯಿಂದ ಕೂಡಿದ ಸ್ಥಳದಲ್ಲಿ ಇಳಿಸು, ನೀನು ಅತ್ಯುತ್ತಮ ಸ್ಥಾನವೊದಗಿಸುವವನಾಗಿ ರುವೆ" ಎಂದೂ ಹೇಳಿರಿ.

وَقُل رَّبِّ أَنزِلْنِي مُنزَلًا مُّبَارَكًا وَأَنتَ خَيْرُ الْمُنزِلِينَ ﴿٢٩﴾

30. ಈ ಕಥೆಯಲ್ಲಿ ದೊಡ್ಡ ನಿದರ್ಶನಗಳಿವೆ ಮತ್ತು ಸತ್ವಪರೀಕ್ಷೆ ಯನ್ನಂತೂ ನಾವು ಮಾಡಿಯೇ ತೀರುತ್ತೇವೆ.

إِنَّ فِي ذَٰلِكَ لَآيَاتٍ وَإِن كُنَّا لَمُبْتَلِينَ ﴿٣٠﴾

31. ಅವರ ತರುವಾಯ ನಾವು ಇನ್ನೊಂದು ಯುಗದ ಜನಾಂಗವನ್ನು ಎಬ್ಬಿಸಿದೆವು.

ثُمَّ أَنْشَأْنَا مِنْ بَعْدِهِمْ قَرْنًا آخَرِينَ ﴿٣١﴾

32. ಆ ಬಳಿಕ ಅವರಲ್ಲಿಗೆ ಅವರ ಜನಾಂಗದವರೇ ಆದ ಒಬ್ಬ ಸಂದೇಶವಾಹಕರನ್ನು ಕಳುಹಿಸಿದೆವು. (ಅವರು) ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ನಿಮಗೆ ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ನೀವೇನು ಭಯ ಪಡುವುದಿಲ್ಲವೇ? (ಎಂದು ಅವರಿಗೆ ಕರೆ ನೀಡಿದರು)

فَأَرْسَلْنَا فِيهِمْ رَسُولًا مِنْهُمْ أَنِ اعْبُدُوا اللَّهَ مَا لَكُمْ مِنْ إِلَٰهٍ غَيْرُهُ ۖ أَفَلَا تَتَّقُونَ ﴿٣٢﴾

ع

33. ಸತ್ಯವನ್ನು ನಿಷೇಧಿಸಿದವರೂ ಪರಲೋಕದ ಸಂದರ್ಶನವನ್ನು ಸುಳ್ಳಾಗಿಸಿದವರೂ ಲೌಕಿಕ ಜೀವನದಲ್ಲಿ ನಾವು ಸಂಪನ್ನಗೊಳಿಸಿದ್ದವರೂ ಆದ ಆ ಜನಾಂಗದ ಸರದಾರರು (ಹೀಗೆ) ಹೇಳತೊಡಗಿದರು- ಈತನು ನಿಮ್ಮಂತೆಯೇ ಇರುವ ಒಬ್ಬ ಮಾನವನಲ್ಲದೆ ಬೇರೇನೂ ಅಲ್ಲ. ನೀವು ತಿನ್ನುವುದನ್ನೇ ಇವನೂ ತಿನ್ನುತ್ತಾನೆ; ನೀವು ಕುಡಿಯುವುದನ್ನೇ ಇವನೂ ಕುಡಿಯುತ್ತಾನೆ.

وَقَالَ الْمَلَأُ مِنْ قَوْمِهِ الَّذِينَ كَفَرُوا وَكَذَّبُوا بِلِقَاءِ الْآخِرَةِ وَأَتْرَفْنَاهُمْ فِي الْحَيَاةِ الدُّنْيَا مَا هَٰذَا إِلَّا بَشَرٌ مِثْلُكُمْ يَأْكُلُ مِمَّا تَأْكُلُونَ مِنْهُ وَيَشْرَبُ مِمَّا تَشْرَبُونَ ﴿٣٣﴾

34. ಈಗ ನೀವು ನಿಮ್ಮಂತೆಯೇ ಇರುವ ಒಬ್ಬ ಮಾನವನ ಆಜ್ಞಾನುಸರಣೆಯನ್ನು ಸ್ವೀಕರಿಸಿದರೆ ಖಂಡಿತವಾಗಿಯೂ ನೀವು ನಷ್ಟದಲ್ಲೇ ಇರುವಿರಿ.

وَلَئِنْ أَطَعْتُمْ بَشَرًا مِثْلَكُمْ إِنَّكُمْ إِذًا لَخَاسِرُونَ ﴿٣٤﴾

35. ನೀವು ಸತ್ತು ಮಣ್ಣಾಗಿ ಹೋದ ಬಳಿಕ ಮತ್ತು ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನೀವು (ಸಮಾಧಿಗಳಿಂದ) ಹೊರ ತೆಗೆಯಲ್ಪಡುವಿರೆಂದು ಇವನು ನಿಮಗೆ ತಿಳಿಸುತ್ತಿದ್ದಾನೆಯೇ?

أَيَعِدُكُمْ أَنَّكُمْ إِذَا مِتُّمْ وَكُنْتُمْ تُرَابًا وَعِظَامًا أَنَّكُمْ مُخْرَجُونَ ﴿٣٥﴾

36. ಅಸಾಧ್ಯ, ನಿಮಗೆ ನೀಡಲಾಗುತ್ತಿರುವ ಈ ವಾಗ್ದಾನ ತೀರಾ ಅಸಾಧ್ಯವಾದುದು.

هَيْهَاتَ هَيْهَاتَ لِمَا تُوعَدُونَ ﴿٣٦﴾

37. ಜೀವನವೆಂದರೆ ಕೇವಲ ಈ ಲೋಕದ ಜೀವನವಲ್ಲದೆ ಮತ್ತೇನೂ ಇಲ್ಲ. ಇಲ್ಲೇ ನಾವು ಸಾಯಬೇಕಾಗಿದೆ, ಇಲ್ಲೇ ಬದುಕಬೇಕಾಗಿದೆ. ಖಂಡಿತವಾಗಿಯೂ ನಾವು ಎಬ್ಬಿಸಲ್ಪಡುವವರಲ್ಲ.

إِنْ هِيَ إِلَّا حَيَاتُنَا الدُّنْيَا نَمُوتُ وَنَحْيَا وَمَا نَحْنُ بِمَبْعُوثِينَ ﴿٣٧﴾

38. ಈತ ಅಲ್ಲಾಹನ ಹೆಸರಲ್ಲಿ ಬರಿಯ ಸುಳ್ಳು ಸೃಷ್ಟಿಸುತ್ತಿದ್ದಾನೆ. ನಾವೆಂದಿಗೂ ಇವನನ್ನು ನಂಬುವವರಲ್ಲ.

إِنْ هُوَ إِلَّا رَجُلٌ افْتَرَىٰ عَلَى اللَّهِ كَذِبًا وَمَا نَحْنُ لَهُ بِمُؤْمِنِينَ ﴿٣٨﴾

39. ಸಂದೇಶವಾಹಕರು ಹೇಳಿದರು, "ನನ್ನ ಪ್ರಭೂ, ಇವರು ನನ್ನನ್ನು ಸುಳ್ಳಾಗಿಸಿರುವುದರಿಂದ ಈಗ ನೀನೇ ನನಗೆ ಸಹಾಯ ಮಾಡು."

قَالَ رَبِّ انْصُرْنِي بِمَا كَذَّبُونِ ﴿٣٩﴾

40. ಉತ್ತರ ಬಂತು: "ಇವರು ತಮ್ಮ ಕರ್ಮಗಳಿಗಾಗಿ ಪಶ್ಚಾತ್ತಾಪ ಪಡುವ ಸಮಯ ಸಮೀಪಿಸಿದೆ."

قَالَ عَمَّا قَلِيلٍ لَّيُصْبِحُنَّ نَٰدِمِينَ ٤٠

41. ಕೊನೆಗೆ ಸಂಪೂರ್ಣ ನ್ಯಾಯದೊಂದಿಗೆ ಒಂದು ಮಹಾ ಕೋಲಾಹಲವು ಅವರನ್ನು ಬಿಗಿಹಿಡಿದು ಬಿಟ್ಟಿತು ಮತ್ತು ನಾವು ಅವರನ್ನು ಕಸವನ್ನಾಗಿ ಮಾಡಿ ಒಗೆದು ಬಿಟ್ಟೆವು. ಅಕ್ರಮಿ ಜನಾಂಗ ತೊಲಗಲಿ!

فَأَخَذَتْهُمُ ٱلصَّيْحَةُ بِٱلْحَقِّ فَجَعَلْنَٰهُمْ غُثَآءً ۚ فَبُعْدًا لِّلْقَوْمِ ٱلظَّٰلِمِينَ ٤١

42. ತರುವಾಯ ನಾವು ಅವರ ಬಳಿಕ ಇತರ ಜನಾಂಗಗಳನ್ನು ಎಬ್ಬಿಸಿದೆವು.

ثُمَّ أَنشَأْنَا مِنۢ بَعْدِهِمْ قُرُونًا ءَاخَرِينَ ٤٢

43. ಯಾವ ಜನಾಂಗವೂ ತನ್ನ ಅವಧಿಗಿಂತ ಮುಂಚೆ ಕೊನೆಗೊಳ್ಳಲೂ ಇಲ್ಲ ಆ ಬಳಿಕ ಉಳಿಯಲೂ ಇಲ್ಲ.

مَا تَسْبِقُ مِنْ أُمَّةٍ أَجَلَهَا وَمَا يَسْتَـْٔخِرُونَ ٤٣

44. ತರುವಾಯ ನಾವು ನಿರಂತರವಾಗಿ ನಮ್ಮ ಸಂದೇಶವಾಹಕರನ್ನು ಕಳುಹಿಸಿದೆವು. ಯಾವೆಲ್ಲ ಜನಾಂಗಗಳ ಬಳಿಗೆ ಅದರ ಸಂದೇಶವಾಹಕರು ಬಂದರೋ ಆ ಎಲ್ಲಾ ಜನಾಂಗಗಳು ತಮ್ಮ ಸಂದೇಶವಾಹಕರನ್ನು ಸುಳ್ಳಾಗಿಸಿ ಬಿಟ್ಟವು ಮತ್ತು ನಾವು ಒಂದರ ಹಿಂದೆ ಇನ್ನೊಂದರಂತೆ ಆ ಜನಾಂಗಗಳನ್ನು ನಾಶ ಮಾಡುತ್ತಾ ಹೋದೆವು. ಹೀಗೆ ಅವರನ್ನು ನಾವು ಕೇವಲ ಕಥೆಯಾಗಿ ಮಾಡಿಬಿಟ್ಟೆವು. ಶಾಪವಿರಲಿ, ವಿಶ್ವಾಸವಿರಿಸದ ಜನಾಂಗಗಳಿಗೆ.

ثُمَّ أَرْسَلْنَا رُسُلَنَا تَتْرَا ۖ كُلَّمَا جَآءَ أُمَّةً رَّسُولُهَا كَذَّبُوهُ ۚ فَأَتْبَعْنَا بَعْضَهُم بَعْضًا وَجَعَلْنَٰهُمْ أَحَادِيثَ ۚ فَبُعْدًا لِّقَوْمٍ لَّا يُؤْمِنُونَ ٤٤

45. ಅನಂತರ ನಾವು ಮೂಸಾ ಮತ್ತು ಅವರ ಸಹೋದರ ಹಾರೂನರನ್ನು ನಮ್ಮ ನಿದರ್ಶನಗಳೊಂದಿಗೆ ಹಾಗೂ ಸುವ್ಯಕ್ತ ಪ್ರಮಾಣ ಸಹಿತ ಫಿರ್‌ಔನನ ಹಾಗೂ ಅವನ ಆಸ್ಥಾನಿಕರ ಕಡೆಗೆ ಕಳುಹಿಸಿದೆವು.

ثُمَّ أَرْسَلْنَا مُوسَىٰ وَأَخَاهُ هَٰرُونَ بِـَٔايَٰتِنَا وَسُلْطَٰنٍ مُّبِينٍ ٤٥

46. ಆದರೆ ಅವರು ಅಹಂಕಾರ ತೋರಿದರು. ಅವರೊಂದು ಉದ್ಧಟ ಜನಾಂಗವಾಗಿದ್ದರು.

إِلَىٰ فِرْعَوْنَ وَمَلَإِي۟هِۦ فَٱسْتَكْبَرُوا۟ وَكَانُوا۟ قَوْمًا عَالِينَ ٤٦

47. ಅವರು ಹೀಗೆಂದರು- "ನಾವು ನಮ್ಮಂತೆಯೇ ಇರುವ ಇಬ್ಬರ ಮೇಲೆ ವಿಶ್ವಾಸವಿರಿಸಬೇಕೆ? ಅದರಲ್ಲೂ, ಅವರು ನಮ್ಮ ದಾಸ್ಯದಲ್ಲಿರುವ ಜನಾಂಗದವರು."

فَقَالُوٓا۟ أَنُؤْمِنُ لِبَشَرَيْنِ مِثْلِنَا وَقَوْمُهُمَا لَنَا عَٰبِدُونَ ٤٧

48. ಆ ಪ್ರಕಾರ ಅವರು ಇಬ್ಬರನ್ನೂ ಸುಳ್ಳಾಗಿಸಿಬಿಟ್ಟರು ಮತ್ತು ನಾಶ ಹೊಂದುವವರಲ್ಲಿ ಸೇರಿ ಹೋದರು.

فَكَذَّبُوهُمَا فَكَانُوا۟ مِنَ ٱلْمُهْلَكِينَ ٤٨

49. ಜನರು ಸನ್ಮಾರ್ಗದರ್ಶನ ಪಡೆಯಲೆಂದು ಮೂಸಾರಿಗೆ ನಾವು ಗ್ರಂಥವನ್ನು ದಯಪಾಲಿಸಿದೆವು.

وَلَقَدْ آتَيْنَا مُوسَى الْكِتَابَ لَعَلَّهُمْ يَهْتَدُونَ ﴿٤٩﴾

50. ಮರ್ಯಮರ ಪುತ್ರ (ಈಸಾ) ಮತ್ತು ಅವರ ಮಾತೆಯನ್ನು ನಾವು ಒಂದು ನಿದರ್ಶನವನ್ನಾಗಿ ಮಾಡಿದೆವು ಮತ್ತು ಅವರನ್ನು ಒಂದು ಉನ್ನತ ಪೀಠಭೂಮಿಯಲ್ಲಿರಿಸಿದೆವು. ಅದು ನೆಮ್ಮದಿಯ ಸ್ಥಾನವಾಗಿತ್ತು. ಅದರಲ್ಲಿ ಚಿಲುಮೆಗಳು ಹರಿಯುತ್ತಿದ್ದುವು.

وَجَعَلْنَا ابْنَ مَرْيَمَ وَأُمَّهُ آيَةً وَآوَيْنَاهُمَا إِلَىٰ رَبْوَةٍ ذَاتِ قَرَارٍ وَمَعِينٍ ﴿٥٠﴾

51. ಸಂದೇಶವಾಹಕರುಗಳೇ! ಶುದ್ಧ ವಸ್ತುಗಳನ್ನು ಉಣ್ಣಿರಿ ಮತ್ತು ಸತ್ಕರ್ಮಗಳನ್ನು ಮಾಡಿರಿ. ನಿಶ್ಚಯವಾಗಿಯೂ ನೀವು ಮಾಡುವುದೆಲ್ಲವನ್ನೂ ನಾನು ಚೆನ್ನಾಗಿ ಅರಿಯುತ್ತೇನೆ.

يَا أَيُّهَا الرُّسُلُ كُلُوا مِنَ الطَّيِّبَاتِ وَاعْمَلُوا صَالِحًا ۖ إِنِّي بِمَا تَعْمَلُونَ عَلِيمٌ ﴿٥١﴾

52. ಮತ್ತು ನಿಶ್ಚಯವಾಗಿಯೂ ನಿಮ್ಮ ಈ ಸಮುದಾಯವು ಒಂದೇ ಸಮುದಾಯವಾಗಿದೆ ಮತ್ತು ನಾನು ನಿಮ್ಮ ಪ್ರಭುವಾಗಿರುತ್ತೇನೆ. ಆದುದರಿಂದ ನನ್ನನ್ನೇ ಭಯಪಡಿರಿ.

وَإِنَّ هَٰذِهِ أُمَّتُكُمْ أُمَّةً وَاحِدَةً وَأَنَا رَبُّكُمْ فَاتَّقُونِ ﴿٥٢﴾

53. ಆದರೆ ಆ ಬಳಿಕ ಜನರು ತಮ್ಮ ಧರ್ಮವನ್ನು ಪರಸ್ಪರ ತುಂಡು ತುಂಡು ಮಾಡಿಬಿಟ್ಟರು. ಪ್ರತಿಯೊಂದು ವರ್ಗವೂ ತನ್ನ ಬಳಿ ಇರುವುದರಲ್ಲೇ ಮಗ್ನವಾಗಿದೆ.

فَتَقَطَّعُوا أَمْرَهُمْ بَيْنَهُمْ زُبُرًا ۖ كُلُّ حِزْبٍ بِمَا لَدَيْهِمْ فَرِحُونَ ﴿٥٣﴾

54. ಸರಿ, ಹಾಗಾದರೆ ಅವರನ್ನು ಬಿಟ್ಟುಬಿಡಿರಿ. ಒಂದು ನಿಶ್ಚಿತ ಅವಧಿಯ ವರೆಗೆ ತಮ್ಮ ಅನಾಸ್ಥೆಯಲ್ಲಿ ಬಿದ್ದಿರಲಿ.

فَذَرْهُمْ فِي غَمْرَتِهِمْ حَتَّىٰ حِينٍ ﴿٥٤﴾

55-56. ನಾವು ಇವರಿಗೆ ಸಂತಾನ-ಸಂಪತ್ತುಗಳ ಮೂಲಕ ಸಹಾಯ ಮಾಡುತ್ತಿರುವುದನ್ನು, ಇವರು ತಮಗೆ ಒಳಿತುಗಳನ್ನು ಕೊಡುವುದರಲ್ಲೇ ನಾವು ನಿರತರಾಗಿದ್ದೇವೆಂದು ತಿಳಿಯುತ್ತಿದ್ದಾರೆಯೇ? ಇಲ್ಲ. ಅವರಿಗೆ ಇದರ ವಾಸ್ತವಿಕತೆಯ ಪ್ರಜ್ಞೆ ಇಲ್ಲ.

أَيَحْسَبُونَ أَنَّمَا نُمِدُّهُمْ بِهِ مِنْ مَالٍ وَبَنِينَ ﴿٥٥﴾
نُسَارِعُ لَهُمْ فِي الْخَيْرَاتِ ۚ بَلْ لَا يَشْعُرُونَ ﴿٥٦﴾

57. ವಾಸ್ತವದಲ್ಲಿ ತಮ್ಮ ಪ್ರಭುವಿನ ಭಯದಿಂದ ಭೀತರಾಗಿರುವವರು,

إِنَّ الَّذِينَ هُمْ مِنْ خَشْيَةِ رَبِّهِمْ مُشْفِقُونَ ﴿٥٧﴾

58. ತಮ್ಮ ಪ್ರಭುವಿನ ನಿದರ್ಶನಗಳ ಮೇಲೆ ವಿಶ್ವಾಸವಿರಿಸುವವರು,

وَالَّذِينَ هُمْ بِآيَاتِ رَبِّهِمْ يُؤْمِنُونَ ﴿٥٨﴾

59. ತಮ್ಮ ಪ್ರಭುವಿನೊಂದಿಗೆ ಯಾರನ್ನೂ ಭಾಗೀದಾರರಾಗಿ ಮಾಡದವರು-

وَالَّذِينَ هُمْ بِرَبِّهِمْ لَا يُشْرِكُونَ ﴿٥٩﴾

60. ಮತ್ತು ಕೊಡುವುದನ್ನು ಕೊಟ್ಟು ತಮ್ಮ ಪ್ರಭುವಿನ ಕಡೆಗೆ

وَالَّذِينَ يُؤْتُونَ مَا آتَوْا وَقُلُوبُهُمْ

ಮರಳಲಿಕ್ಕಿದೆಯೆಂಬ ಪ್ರಜ್ಞೆಯಿಂದ ಕಂಪಿಸುತ್ತಿರುವ ಹೃದಯ ಗಳಿರುವವರು.

وَجِلَةٌ أَنَّهُمْ إِلَىٰ رَبِّهِمْ رَاجِعُونَ ﴿٦٠﴾

61. ಅವರೇ ಒಳಿತುಗಳ ಕಡೆಗೆ ಧಾವಿಸುವವರು ಮತ್ತು ಸ್ಪರ್ಧಿಸಿ ಅವುಗಳನ್ನು ಪಡೆದುಕೊಳ್ಳುವವರು.

أُولَٰئِكَ يُسَارِعُونَ فِي الْخَيْرَاتِ وَهُمْ لَهَا سَابِقُونَ ﴿٦١﴾

62. ನಾವು ಯಾವ ವ್ಯಕ್ತಿಗೂ ಅವನ ಶಕ್ತಿಗೆ ಮೀರಿದ ಕಷ್ಟ ಕೊಡುವುದಿಲ್ಲ. ನಮ್ಮ ಬಳಿಯಲ್ಲೊಂದು ಗ್ರಂಥವಿದೆ. ಅದು (ಪ್ರತಿಯೊಬ್ಬನ ವಿಷಯವನ್ನು) ನಿಖರವಾಗಿ ತಿಳಿಸಿ ಬಿಡುವಂತಹದ್ದಾಗಿದೆ.[7] ಹೇಗಿದ್ದರೂ ಜನರ ಮೇಲೆ ಅಕ್ರಮವೆಸಗಲಾಗದು.

وَلَا نُكَلِّفُ نَفْسًا إِلَّا وُسْعَهَا ۖ وَلَدَيْنَا كِتَابٌ يَنْطِقُ بِالْحَقِّ ۚ وَهُمْ لَا يُظْلَمُونَ ﴿٦٢﴾

63. ಆದರೆ ಇವರು ಈ ವಿಷಯದ ಬಗ್ಗೆ ಅಜ್ಞರಾಗಿದ್ದಾರೆ ಮತ್ತು ಇವರ ಕರ್ಮಗಳು (ಮೇಲೆ ಹೇಳಲಾಗಿರುವ) ಆ ಕ್ರಮದಿಂದ ಭಿನ್ನವಾಗಿವೆ.

بَلْ قُلُوبُهُمْ فِي غَمْرَةٍ مِنْ هَٰذَا وَلَهُمْ أَعْمَالٌ مِنْ دُونِ ذَٰلِكَ هُمْ لَهَا عَامِلُونَ ﴿٦٣﴾

64. ನಾವು ಅವರ ವಿಲಾಸಪ್ರಿಯರನ್ನು ಯಾತನೆಯಲ್ಲಿ ಹಿಡಿದು ಬಿಟ್ಟರೆ ಅವರು ರೋದಿಸುವ ವರೆಗೂ (ತಮ್ಮ ಈ ಕೃತ್ಯವನ್ನು) ಮಾಡುತ್ತಲೇ ಸಾಗುವರು.

حَتَّىٰ إِذَا أَخَذْنَا مُتْرَفِيهِمْ بِالْعَذَابِ إِذَا هُمْ يَجْأَرُونَ ﴿٦٤﴾

65. ಈಗ ನಿಲ್ಲಿಸಿರಿ ನಿಮ್ಮ ಗೋಳಾಟವನ್ನು- ನಮ್ಮ ಕಡೆಯಿಂದ ನಿಮಗಿನ್ನು ಯಾವ ಸಹಾಯವೂ ಸಿಗಲಾರದು.

لَا تَجْأَرُوا الْيَوْمَ ۖ إِنَّكُمْ مِنَّا لَا تُنْصَرُونَ ﴿٦٥﴾

66. ನನ್ನ ವಚನಗಳನ್ನು ನಿಮಗೆ ಓದಿ ಹೇಳುತ್ತಿದ್ದಾಗ ನೀವು (ಸಂದೇಶವಾಹಕರ ಸ್ವರ ಕೇಳಿದೊಡನೆ) ಹಿಂದಿರುಗಿ ಓಡುತ್ತಿದ್ದಿರಿ.

قَدْ كَانَتْ آيَاتِي تُتْلَىٰ عَلَيْكُمْ فَكُنْتُمْ عَلَىٰ أَعْقَابِكُمْ تَنْكِصُونَ ﴿٦٦﴾

67. ನಿಮ್ಮ ಅಹಂಕಾರದಿಂದಾಗಿ ಅವರನ್ನು ಕಡೆಗಣಿಸುತ್ತಿದ್ದಿರಿ. ನಿಮ್ಮ ಪಡಸಾಲೆಗಳಲ್ಲಿ ಅವರ ಬಗ್ಗೆ ಅಸಂಬದ್ಧ ಮಾತುಗಳನ್ನಾಡುತ್ತಿದ್ದಿರಿ.

مُسْتَكْبِرِينَ بِهِ سَامِرًا تَهْجُرُونَ ﴿٦٧﴾

68. ಇವರೆಂದೂ ಈ ವಚನದ ಬಗ್ಗೆ ವಿವೇಚಿಸಲಿಲ್ಲವೇ? ಅಥವಾ ಇವರ ಪೂರ್ವಜರ ಬಳಿಗೆ ಎಂದೂ ಬಂದಿರದಂತಹ ವಿಷಯವನ್ನೇನಾದರೂ ಅವರು ತಂದಿರುವರೇ?

أَفَلَمْ يَدَّبَّرُوا الْقَوْلَ أَمْ جَاءَهُمْ مَا لَمْ يَأْتِ آبَاءَهُمُ الْأَوَّلِينَ ﴿٦٨﴾

69. ಅಥವಾ ಇವರಿಗೆ ತಮ್ಮ ಸಂದೇಶವಾಹಕರ ಪರಿಚಯ

أَمْ لَمْ يَعْرِفُوا رَسُولَهُمْ فَهُمْ لَهُ

7. ಅರ್ಥಾತ್- ಪ್ರತಿಯೊಬ್ಬ ವ್ಯಕ್ತಿಯ ಕರ್ಮಪತ್ರ. ಅದರಲ್ಲಿ ಅವನ ಪ್ರತಿಯೊಂದು ಕರ್ಮವೂ ದಾಖಲಿಸಲ್ಪಟ್ಟಿದೆ.

مُنْكِرُوْنَ ﴿٦٩﴾

ಇರಲಿಲ್ಲವೇ? (ಅಪರಿಚಿತ ವ್ಯಕ್ತಿಯಾದ ಕಾರಣ) ಅವರನ್ನು ನಿರಾಕರಿಸುತ್ತಿರುವರೇ?

اَمْ يَقُوْلُوْنَ بِهٖ جِنَّةٌ ؕ بَلْ جَآءَهُمْ بِالْحَقِّ وَاَكْثَرُهُمْ لِلْحَقِّ كٰرِهُوْنَ ﴿٧٠﴾

70. ಅಥವಾ ಅವರಿಗೆ ಹುಚ್ಚು ಹಿಡಿದಿದೆ ಎಂದು ಇವರು ಹೇಳುತ್ತಿರುವರೇ? ಇಲ್ಲ; ವಾಸ್ತವದಲ್ಲಿ ಅವರು ಸತ್ಯವನ್ನೇ ತಂದಿದ್ದಾರೆ ಮತ್ತು ಸತ್ಯವೇ ಅವರಲ್ಲಿ ಹೆಚ್ಚಿನವರಿಗೆ ಅಪ್ರಿಯವಾಗಿದೆ.

وَلَوِ اتَّبَعَ الْحَقُّ اَهْوَآءَهُمْ لَفَسَدَتِ السَّمٰوٰتُ وَالْاَرْضُ وَمَنْ فِيْهِنَّ ؕ بَلْ اَتَيْنٰهُمْ بِذِكْرِهِمْ فَهُمْ عَنْ ذِكْرِهِمْ مُّعْرِضُوْنَ ﴿٧١﴾

71. ಒಂದು ವೇಳೆ ಸತ್ಯವು ಅವರ ಚಿತ್ತಾಕಾಂಕ್ಷೆಗಳನ್ನು ಹಿಂಬಾಲಿಸುತ್ತಿದ್ದರೆ ಭೂಮಿ-ಆಕಾಶಗಳ ಮತ್ತು ಅವುಗಳಲ್ಲಿರುವ ಸಕಲ ವಸ್ತುಗಳ ವ್ಯವಸ್ಥೆಯು ಅಸ್ತವ್ಯಸ್ತವಾಗಿ ಬಿಡುತ್ತಿತ್ತು. ಇಲ್ಲ, ವಾಸ್ತವದಲ್ಲಿ ನಾವು ಅವರ ಸ್ವಂತ 'ಬೋಧನೆ'ಯನ್ನೇ ಅವರ ಬಳಿಗೆ ತಂದಿದ್ದೇವೆ ಮತ್ತು ಅವರು ತಮ್ಮ 'ಬೋಧನೆ'ಯಿಂದ ವಿಮುಖರಾಗುತ್ತಿದ್ದಾರೆ.

اَمْ تَسْـَٔلُهُمْ خَرْجًا فَخَرَاجُ رَبِّكَ خَيْرٌ ۖ وَّهُوَ خَيْرُ الرّٰزِقِيْنَ ﴿٧٢﴾

72. ನೀವು ಅವರಿಂದೇನಾದರೂ ಬೇಡುತ್ತಿರುವಿರಾ? ನಿಮಗಂತೂ ನಿಮ್ಮ ಪ್ರಭುವಿನ ಕೊಡುಗೆಯೇ ಶ್ರೇಷ್ಠವಾಗಿದೆ ಮತ್ತು ಅವನು ಅತ್ಯುತ್ತಮ ಅನ್ನದಾತನಾಗಿದ್ದಾನೆ.

وَاِنَّكَ لَتَدْعُوْهُمْ اِلٰى صِرَاطٍ مُّسْتَقِيْمٍ ﴿٧٣﴾

73. ನೀವಂತು ಅವರನ್ನು ಸನ್ಮಾರ್ಗದ ಕಡೆಗೆ ಕರೆಯುತ್ತಿರುವಿರಿ.

وَاِنَّ الَّذِيْنَ لَا يُؤْمِنُوْنَ بِالْاٰخِرَةِ عَنِ الصِّرَاطِ لَنٰكِبُوْنَ ﴿٧٤﴾

74. ಆದರೆ, ಪರಲೋಕದ ಮೇಲೆ ವಿಶ್ವಾಸವಿರಿಸದವರು ಸನ್ಮಾರ್ಗದಿಂದ ಸರಿದು ನಡೆಯಲಿಚ್ಛಿಸುತ್ತಾರೆ.

وَلَوْ رَحِمْنٰهُمْ وَكَشَفْنَا مَا بِهِمْ مِّنْ ضُرٍّ لَّلَجُّوْا فِيْ طُغْيَانِهِمْ يَعْمَهُوْنَ ﴿٧٥﴾

75. ನಾವು ಇವರ ಮೇಲೆ ದಯೆ ತೋರಿದರೆ ಹಾಗೂ ಇವರು ಇಂದು ಸಿಲುಕಿ ಬಿದ್ದಿರುವ ಸಂಕಷ್ಟವನ್ನು[8] ದೂರೀಕರಿಸಿದರೆ ಇವರು ತಮ್ಮ ಉದ್ಧಟತನದಲ್ಲಿ ಸಂಪೂರ್ಣ ದಾರಿಗೆಡುವರು.

وَلَقَدْ اَخَذْنٰهُمْ بِالْعَذَابِ فَمَا اسْتَكَانُوْا لِرَبِّهِمْ وَمَا يَتَضَرَّعُوْنَ ﴿٧٦﴾

76. ಇವರ ಅವಸ್ಥೆಯೇನೆಂದರೆ ನಾವು ಇವರನ್ನು ಕಷ್ಟಕ್ಕೀಡು ಮಾಡಿದೆವು. ಆದರೂ ಇವರು ತಮ್ಮ ಪ್ರಭುವಿನ ಮುಂದೆ ಬಾಗಲಿಲ್ಲ ಮತ್ತು ವಿನಮ್ರತೆ ತೋರಲಿಲ್ಲ.

حَتّٰۤى اِذَا فَتَحْنَا عَلَيْهِمْ بَابًا ذَا عَذَابٍ شَدِيْدٍ اِذَا هُمْ فِيْهِ مُبْلِسُوْنَ ﴿٧٧﴾

77. ಕೊನೆಗೆ ನಾವು ಅವರ ಪಾಲಿಗೆ ಕಠಿಣ ಯಾತನೆಯ ಬಾಗಿಲನ್ನು ತೆರೆದು ಬಿಟ್ಟಾಗ, ಇವರು ಆ ಸ್ಥಿತಿಯಲ್ಲಿ ಪ್ರತಿಯೊಂದು ಶುಭದ ಬಗ್ಗೆ ಹತಾತ್ತನೆ ನಿರಾಶರಾಗಿರುವುದನ್ನು ನೀವು ಕಾಣುವಿರಿ.

---

8. ಅರ್ಥಾತ್- ಪ್ರವಾದಿವರ್ಯರ(ಸ) ಪ್ರವಾದಿತ್ವದ ನಂತರ ಕೆಲವು ವರ್ಷಗಳ ಕಾಲ ಮುಂದುವರಿದಿದ್ದ ಕ್ಷಾಮ.

78. ನಿಮಗೆ ಶ್ರವಣಶಕ್ತಿ, ದೃಕ್ಶಕ್ತಿ ಮತ್ತು ವಿಚಾರ ಮಾಡಲು ಮನಸ್ಸು ನೀಡಿದವನು ಅಲ್ಲಾಹನೇ ತಾನೇ. ಆದರೆ ನೀವು ಅಲ್ಪವೇ ಕೃತಜ್ಞರಾಗುತ್ತೀರಿ.

وَهُوَ الَّذِيٓ اَنْشَاَ لَكُمُ السَّمْعَ وَالْاَبْصَارَ وَالْاَفْـِٕدَةَ ۭ قَلِيْلًا مَّا تَشْكُرُوْنَ ۝78

79. ನಿಮ್ಮನ್ನು ಭೂಮಿಯ ಮೇಲೆ ಹಬ್ಬಿಸಿ ಬಿಟ್ಟವನೂ ಅವನೇ. ಕೊನೆಗೆ ನೀವು ಅವನ ಕಡೆಗೇ ಒಟ್ಟುಗೂಡಿಸಲ್ಪಡುವಿರಿ.

وَهُوَ الَّذِيْ ذَرَاَكُمْ فِي الْاَرْضِ وَاِلَيْهِ تُحْشَرُوْنَ ۝79

80. ಅವನೇ ಜೀವ ನೀಡುತ್ತಾನೆ ಮತ್ತು ಅವನೇ ಮರಣ ಕೊಡುತ್ತಾನೆ. ರಾತ್ರಿ-ಹಗಲುಗಳ ಆವರ್ತನವು ಅವನದೇ ಹಿಡಿತದಲ್ಲಿದೆ. ನಿಮಗೆ ಇದು ಅರ್ಥವಾಗುವುದಿಲ್ಲವೇ?

وَهُوَ الَّذِيْ يُحْيٖ وَيُمِيْتُ وَلَهُ اخْتِلَافُ الَّيْلِ وَالنَّهَارِ ۭ اَفَلَا تَعْقِلُوْنَ ۝80

81. ಆದರೆ ಇವರು ಇವರ ಪೂರ್ವಜರು ಹೇಳಿದ್ದುದನ್ನೇ ಹೇಳುತ್ತಾರೆ-

بَلْ قَالُوْا مِثْلَ مَا قَالَ الْاَوَّلُوْنَ ۝81

82. "ನಾವು ಸತ್ತು ಮಣ್ಣು ಮತ್ತು ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನಮ್ಮನ್ನು ಪುನಃ ಜೀವಂತಗೊಳಿಸಿ ಎಬ್ಬಿಸಲಾದೀತೇ?

قَالُوْٓا ءَاِذَا مِتْنَا وَكُنَّا تُرَابًا وَّعِظَامًا ءَاِنَّا لَمَبْعُوْثُوْنَ ۝82

83. ಈ ವಾಗ್ದಾನಗಳನ್ನು ನಾವು ತುಂಬಾ ಕೇಳಿದ್ದೇವೆ ಮತ್ತು ನಮಗಿಂತ ಮುಂಚೆ ನಮ್ಮ ಪೂರ್ವಜರೂ ಕೇಳುತ್ತಲೇ ಬಂದಿದ್ದಾರೆ. ಇವೆಲ್ಲ ಹಳೆಯ ಕಟ್ಟುಕತೆಗಳಲ್ಲದೆ ಇನ್ನೇನೂ ಅಲ್ಲ" ಎಂದು ಇವರು ಹೇಳುತ್ತಾರೆ.

لَقَدْ وُعِدْنَا نَحْنُ وَاٰبَاۗؤُنَا هٰذَا مِنْ قَبْلُ اِنْ هٰذَآ اِلَّآ اَسَاطِيْرُ الْاَوَّلِيْنَ ۝83

84. "ನೀವು ಬಲ್ಲವರಾಗಿದ್ದರೆ ಈ ಭೂಮಿ ಮತ್ತು ಇದರೊಳಗಿರುವುದೆಲ್ಲವೂ ಯಾರದೆಂದು ಹೇಳಿರಿ" ಎಂದು ಅವರೊಡನೆ ಕೇಳಿರಿ.

قُلْ لِّمَنِ الْاَرْضُ وَمَنْ فِيْهَآ اِنْ كُنْتُمْ تَعْلَمُوْنَ ۝84

85. ಅವರು ಖಂಡಿತವಾಗಿಯೂ 'ಅಲ್ಲಾಹನದು' ಎನ್ನುವರು. "ಹಾಗಾದರೆ ನೀವು ಪ್ರಜ್ಞಾವಂತರಾಗುವುದಿಲ್ಲವೇ?" ಎಂದು ಕೇಳಿರಿ.

سَيَقُوْلُوْنَ لِلّٰهِ ۭ قُلْ اَفَلَا تَذَكَّرُوْنَ ۝85

86. ಸಪ್ತಗಗನಗಳ ಮತ್ತು ಮಹಾ ಸಿಂಹಾಸನದ ಒಡೆಯನಾರೆಂದು ಇವರನ್ನು ಕೇಳಿರಿ.

قُلْ مَنْ رَّبُّ السَّمٰوٰتِ السَّبْعِ وَرَبُّ الْعَرْشِ الْعَظِيْمِ ۝86

87. ಅವರು ಖಂಡಿತವಾಗಿಯೂ 'ಅಲ್ಲಾಹನೇ' ಎನ್ನುವರು. ಹಾಗಾದರೆ ನೀವೇಕೆ ಭಯಪಡುವುದಿಲ್ಲವೆಂದು ಕೇಳಿರಿ.

سَيَقُوْلُوْنَ لِلّٰهِ ۭ قُلْ اَفَلَا تَتَّقُوْنَ ۝87

88. ಅವರೊಡನೆ ಕೇಳಿರಿ; "ಸಕಲ ವಸ್ತುಗಳ ಮೇಲೆ ಯಾರ ಪ್ರಭುತ್ವವಿದೆ? ಎಲ್ಲರಿಗೂ ಆಶ್ರಯ ನೀಡುವವನೂ ಅವನ ವಿರುದ್ಧ

قُلْ مَنْۢ بِيَدِهٖ مَلَكُوْتُ كُلِّ شَيْءٍ وَّهُوَ يُجِيْرُ وَلَا يُجَارُ عَلَيْهِ اِنْ

ಆಶ್ರಯ ನೀಡಲು ಯಾರಿಗೂ ಸಾಧ್ಯವಿಲ್ಲದಂತಹವನೂ ಯಾರು? ನಿಮಗೆ ಗೊತ್ತಿದ್ದರೆ ಹೇಳಿರಿ."

كُنتُمْ تَعْلَمُونَ ﴿٨٨﴾

89. ಅವರು ಖಂಡಿತವಾಗಿಯೂ "ಈ ಗುಣಗಳು ಅಲ್ಲಾಹನಿಗೇ ಇವೆ" ಎಂದು ಹೇಳುವರು. "ಹಾಗಾದರೆ ನೀವು ಮೋಸ ಹೋಗುವುದು ಹೇಗೆ?" ಎಂದು ಕೇಳಿರಿ.

سَيَقُولُونَ لِلَّهِ ۚ قُلْ فَأَنَّىٰ تُسْحَرُونَ ﴿٨٩﴾

90. ಸತ್ಯವೇನಿದೆಯೋ ಅದನ್ನು ನಾವು ಅವರ ಮುಂದೆ ತಂದಿದ್ದೇವೆ. ಇವರು ಸುಳ್ಳುಗಾರರೆಂಬುದರಲ್ಲಿ ಏನೂ ಸಂಶಯವಿಲ್ಲ.[9]

بَلْ أَتَيْنَاهُم بِالْحَقِّ وَإِنَّهُمْ لَكَاذِبُونَ ﴿٩٠﴾

91. ಅಲ್ಲಾಹನು ಯಾರನ್ನೂ ತನ್ನ ಮಕ್ಕಳನ್ನಾಗಿ ಮಾಡಿಲ್ಲ.[10] ಅವನ ಜತೆ ಇನ್ನೊಬ್ಬ ದೇವನೂ ಇಲ್ಲ. ಹಾಗಿರುತ್ತಿದ್ದರೆ ಪ್ರತಿಯೊಬ್ಬ ದೇವನೂ ತನ್ನ ಸೃಷ್ಟಿಯನ್ನು ತೆಗೆದು ಕೊಂಡು ಬೇರೆ ಹೋಗಿ ಬಿಡುತ್ತಿದ್ದನು. ಆ ಬಳಿಕ ಅವರು ಒಬ್ಬರ ಮೇಲೆ ಇನ್ನೊಬ್ಬರು ಆಕ್ರಮಣ ನಡೆಸುತ್ತಿದ್ದರು. ಇವರು ಆಡುವ ಮಾತುಗಳಿಂದೆಲ್ಲಾ ಅಲ್ಲಾಹನು ಪರಿಶುದ್ಧನಾಗಿರುತ್ತಾನೆ.

مَا اتَّخَذَ اللَّهُ مِن وَلَدٍ وَمَا كَانَ مَعَهُ مِنْ إِلَٰهٍ ۚ إِذًا لَّذَهَبَ كُلُّ إِلَٰهٍ بِمَا خَلَقَ وَلَعَلَا بَعْضُهُمْ عَلَىٰ بَعْضٍ ۚ سُبْحَانَ اللَّهِ عَمَّا يَصِفُونَ ﴿٩١﴾

92. ಅವನು ರಹಸ್ಯವಾಗಿರುವುದನ್ನೂ ಬಹಿರಂಗ ವಾಗಿರುವುದನ್ನೂ ಬಲ್ಲವನು. ಇವರು ಮಾಡುತ್ತಿರುವ 'ದೇವಸಹಭಾಗಿತ್ವ'ದಿಂದ ಅವನು ಉನ್ನತನಾಗಿರುತ್ತಾನೆ.

عَالِمِ الْغَيْبِ وَالشَّهَادَةِ فَتَعَالَىٰ عَمَّا يُشْرِكُونَ ﴿٩٢﴾

93. ಸಂದೇಶವಾಹಕರೇ, ಹೀಗೆ ಪ್ರಾರ್ಥಿಸಿರಿ, "ನನ್ನ ಪ್ರಭೂ, ಇವರಿಗೆ ಎಚ್ಚರಿಕೆ ನೀಡಲಾಗುತ್ತಿರುವ ಆ ಯಾತನೆಯನ್ನು ನೀನು ನನ್ನ ಉಪಸ್ಥಿತಿಯಲ್ಲೇ ತಂದರೆ-

قُل رَّبِّ إِمَّا تُرِيَنِّي مَا يُوعَدُونَ ﴿٩٣﴾

9. ಅರ್ಥಾತ್- ಅಲ್ಲಾಹನ ಹೊರತು ಇತರರಿಗೂ ದೇವತ್ವದ ಗುಣ, ಅಧಿಕಾರ ಮತ್ತು ಹಕ್ಕುಗಳಿವೆ ಎಂಬ ಮಾತಿನಲ್ಲಿ ಅವರು ಸುಳ್ಳರಾಗಿದ್ದಾರೆ. ಮರಣೋತ್ತರ ಜೀವನವಿಲ್ಲವೆಂಬ ಮಾತಿನಲ್ಲೂ ಅವರು ಸುಳ್ಳರಾಗಿದ್ದಾರೆ. ಅವರು ಸಮ್ಮತಿಸುವಂತಹ ವಿಚಾರಗಳಿಂದಲೇ ಅವರ ಸುಳ್ಳು ಸಾಬೀತಾಗುತ್ತದೆ. ಒಂದೆಡೆ ಭೂಮಿ-ಆಕಾಶಗಳ ಒಡೆಯ ಮತ್ತು ನಿಸರ್ಗದ ಪ್ರತಿಯೊಂದು ವಸ್ತುವಿನ ಪರಮಾಧಿಕಾರಿ ಅಲ್ಲಾಹನಾಗಿದ್ದಾನೆ ಎಂದು ಅವರು ನಂಬುತ್ತಾರೆ. ಇನ್ನೊಂದೆಡೆ ದೇವತ್ವ ಅವನಿಗೆ ಮಾತ್ರ ಸೀಮಿತವಲ್ಲ, ಇತರರಿಗೂ (ಸಹಜವಾಗಿ ಅವರು ಅಲ್ಲಾಹನ ಸೃಷ್ಟಿಗಳು ಮತ್ತು ದಾಸರು) ಅದರಲ್ಲಿ ಪಾಲಿದೆ ಎನ್ನುತ್ತಾರೆ. ಈ ಎರಡು ಮಾತುಗಳು ವಿರೋಧಾಭಾಸದಿಂದ ಕೂಡಿದೆ. ಹೀಗೆ ಒಂದೆಡೆ- ನಮ್ಮನ್ನೂ ಈ ಭವ್ಯ ನಿಸರ್ಗವನ್ನೂ ದೇವನೇ ಸೃಷ್ಟಿಸಿದ್ದಾನೆ ಎಂದು ಹೇಳುವುದು, ಮತ್ತೊಂದೆಡೆ ತಾನೇ ಸೃಷ್ಟಿಸಿದ ಸೃಷ್ಟಿಗಳನ್ನು ಅವನು ಪುನರಪಿ ಸೃಷ್ಟಿಸಲಾರನು ಎಂದು ಹೇಳುವುದು ಬುದ್ಧಿಗೆ ನಿಲುಕದಂತಹ ವಿಚಾರವಾಗಿದೆ. ಆದ್ದರಿಂದ ಅವರ ವಿಶ್ವಾಸ ಶ್ರದ್ಧೆಗಳಿಂದಲೇ ಅವರು ಮಾಡುತ್ತಿರುವ ಬಹುದೇವಾರಾಧನೆ ಮತ್ತು ಪರಲೋಕ ನಿರಾಕರಣೆ ಮಿಥ್ಯ ವಿಶ್ವಾಸಗಳಾಗಿವೆ ಎಂದು ವ್ಯಕ್ತವಾಗುತ್ತದೆ.

10. ಇದನ್ನು ಕೇವಲ ಕ್ರೈಸ್ತರ ನಂಬಿಕೆಯನ್ನು ನಿರಾಕರಿಸಲಿಕ್ಕಾಗಿ ಹೇಳಲಾಗಿದೆ ಎಂಬ ತಪ್ಪುಕಲ್ಪನೆಗೆ ಯಾರೂ ಒಳಗಾಗಬಾರದು. ಅರೇಬಿಯಾದ ಬಹುದೇವವಿಶ್ವಾಸಿಗಳೂ ತಮ್ಮ ಆರಾಧ್ಯರುಗಳನ್ನು ದೇವಪುತ್ರರೆಂದು ಹೇಳುತ್ತಿದ್ದರು. ಲೋಕದ ಹೆಚ್ಚಿನ ಬಹುದೇವವಿಶ್ವಾಸಿಗಳು ಈ ಪಥಭ್ರಷ್ಟತೆಯಲ್ಲಿ ಅವರ ಜತೆಗಿದ್ದಾರೆ.

94. ಓ ನನ್ನ ಪ್ರಭೂ! ನನ್ನನ್ನು ಈ ಅಕ್ರಮಿಗಳಲ್ಲಿ ಸೇರಿಸಬೇಡ."[11]

رَبِّ فَلَا تَجْعَلْنِي فِي الْقَوْمِ الظَّالِمِينَ ﴿٩٤﴾

95. ವಾಸ್ತವದಲ್ಲಿ ನಾವು ಅವರಿಗೆ ಎಚ್ಚರಿಕೆ ನೀಡುತ್ತಿರುವ ಆ ವಸ್ತುವನ್ನು ನಿಮ್ಮ ಕಣ್ಣ ಮುಂದೆಯೇ ತಂದು ಬಿಡುವ ಪೂರ್ಣ ಸಾಮರ್ಥ್ಯ ಹೊಂದಿದ್ದೇವೆ.

وَإِنَّا عَلَىٰ أَن نُّرِيَكَ مَا نَعِدُهُمْ لَقَادِرُونَ ﴿٩٥﴾

96. ಸಂದೇಶವಾಹಕರೇ, ಕೆಡುಕನ್ನು ಅತ್ಯುತ್ತಮ ವಿಧಾನದಿಂದ ನೀಗಿಸಿರಿ. ನಿಮ್ಮ ಮೇಲೆ ಅವರು ಹೊರಿಸುತ್ತಿರುವ ಆರೋಪಗಳನ್ನು ನಾವು ಚೆನ್ನಾಗಿ ಬಲ್ಲೆವು.

ادْفَعْ بِالَّتِي هِيَ أَحْسَنُ السَّيِّئَةَ ۚ نَحْنُ أَعْلَمُ بِمَا يَصِفُونَ ﴿٩٦﴾

97. ಮತ್ತು ಹೀಗೆ ಪ್ರಾರ್ಥಿಸಿರಿ, "ನನ್ನ ಪ್ರಭೂ, ನಾನು ಶೈತಾನರ ದುಷ್ಪ್ರೇರಣೆಗಳಿಂದ ನಿನ್ನ ಅಭಯ ಯಾಚಿಸುತ್ತೇನೆ.

وَقُل رَّبِّ أَعُوذُ بِكَ مِنْ هَمَزَاتِ الشَّيَاطِينِ ﴿٩٧﴾

98. ನನ್ನ ಪ್ರಭೂ, ಅವರು ನನ್ನ ಬಳಿ ಸುಳಿಯುವುದರಿಂದಲೂ ನಾನು ನಿನ್ನ ಅಭಯ ಯಾಚಿಸುತ್ತೇನೆ."

وَأَعُوذُ بِكَ رَبِّ أَن يَحْضُرُونِ ﴿٩٨﴾

99. ಇವರಲ್ಲಿ ಯಾರಿಗಾದರೂ ಮರಣ ಬಂದಾಗ, "ನನ್ನ ಪ್ರಭೂ ನಾನು ಬಿಟ್ಟು ಬಂದ ಲೋಕಕ್ಕೆ ನನ್ನನ್ನು ಮರಳಿ ಕಳುಹಿಸಿ ಬಿಡು.

حَتَّىٰ إِذَا جَاءَ أَحَدَهُمُ الْمَوْتُ قَالَ رَبِّ ارْجِعُونِ ﴿٩٩﴾

100. ಇನ್ನು ನಾನು ಸತ್ಕರ್ಮ ವೆಸಗುವ ನಿರೀಕ್ಷೆ ಇದೆ" ಎಂದು ಹೇಳಲಾರಂಭಿಸುವ ವರೆಗೂ (ಇವರು ತಮ್ಮ ಕುಕೃತ್ಯವನ್ನು ಬಿಡಲಾರರು), ಎಷ್ಟು ಮಾತ್ರಕ್ಕೂ ಹಾಗಾಗದು. ಇದು ಕೇವಲ ಅವನಾಡುವ ಮಾತು. (ಸಾಯುವ) ಇವರೆಲ್ಲರ ಹಿಂದೆ, ಇನ್ನೊಂದು ಜೀವನದ ದಿನದ ವರೆಗೆ 'ಬರ್ಝಖ್'[12] (ಮಧ್ಯಂತರ ಕಾಲಾವಧಿ) ಅಡ್ಡ ಇದೆ.

لَعَلِّي أَعْمَلُ صَالِحًا فِيمَا تَرَكْتُ ۚ كَلَّا ۚ إِنَّهَا كَلِمَةٌ هُوَ قَائِلُهَا ۖ وَمِن وَرَائِهِم بَرْزَخٌ إِلَىٰ يَوْمِ يُبْعَثُونَ ﴿١٠٠﴾

101. ತರುವಾಯ ಕಹಳೆ ಊದಲ್ಪಟ್ಟಾಗ ಅಂದು ಅವರ ನಡುವೆ

فَإِذَا نُفِخَ فِي الصُّورِ فَلَا أَنسَابَ

11. ಇದರ ಅರ್ಥ ಪ್ರವಾದಿವರ್ಯರೂ(ಸ) ಆ ದೇವ ಯಾತನೆಗೆ ಈಡಾಗಿ ಬಿಡುವ ಅಪಾಯವಿತ್ತು (ಶಾಂತಂ ಪಾಪಂ) ಎಂದಲ್ಲ. ಅಥವಾ ಹೀಗೆ ಪ್ರಾರ್ಥಿಸದಿದ್ದರೆ ಅವರು ಯಾತನೆಗೆ ಗುರಿಯಾಗಬಹುದು ಎಂಬುದೂ ಇದರ ಅರ್ಥವಲ್ಲ. ದೇವಯಾತನೆ ಅತ್ಯಂತ ಭಯಪಡಬೇಕಾದ ವಿಷಯವಾಗಿದೆ. ಅದು ಎಷ್ಟು ಭಯಾನಕವಾಗಿರುತ್ತದೆಂದರೆ ಪಾಪಿಗಳು ಮಾತ್ರವಲ್ಲ ಉತ್ತಮ ವ್ಯಕ್ತಿಗಳೂ ತಮ್ಮೆಲ್ಲಾ ಒಳಿತಿನ ಹೊರತಾಗಿಯೂ ಅದರಿಂದ ಅಭಯ ಯಾಚಿಸಬೇಕಾಗಿದೆ ಎಂಬ ಕಲ್ಪನೆಯನ್ನು ಮೂಡಿಸಲಿಕ್ಕಾಗಿ ಈ ವಿವರಣಾ ಶೈಲಿಯನ್ನು ಅನುಸರಿಸಲಾಗಿದೆ.

12. ಬರ್ಝಕ್ ಎಂದರೆ 'ಪರ್ದಾ' ಎಂಬ ಫಾರ್ಸೀ ಪದದ ಅರಬಿ ರೂಪಾಂತರ. ಸೂಕ್ತದ ಅರ್ಥವೇನೆಂದರೆ ಅವರ ಮತ್ತು ಲೋಕದ ನಡುವೆ ಅವರನ್ನು ಹಿಂದಿರುಗಲು ಬಿಡದಂತಹ ಒಂದು ತಡೆ ಇದೆ. ನಿರ್ಣಾಯಕ ದಿನದ ತನಕವೂ ಅವರು ಇಹಲೋಕ ಮತ್ತು ಪರಲೋಕದ ನಡುವಿನ ಈ ಗಡಿಯಲ್ಲೇ ನಿಂತುಕೊಂಡಿರುವರು.

ಯಾವುದೇ ಸಂಬಂಧ ಉಳಿಯಲಾರದು ಮತ್ತು ಅವರು ಪರಸ್ಪರರನ್ನು ವಿಚಾರಿಸಿಯೂ ನೋಡಲಾರರು.

بَيْنَهُمْ يَوْمَئِذٍ وَّلَا يَتَسَآءَلُوْنَ ﴿١٠١﴾

102. ಆಗ ಯಾರ ತಕ್ಕಡಿಯ ತಟ್ಟೆಯು ಭಾರವಾಗಿರುವುದೋ ಅವರೇ ವಿಜಯಿಗಳಾಗುವರು.

فَمَنْ ثَقُلَتْ مَوَازِيْنُهٗ فَاُولٰٓئِكَ هُمُ الْمُفْلِحُوْنَ ﴿١٠٢﴾

103. ಯಾರ ತಟ್ಟೆ ಹಗುರವಿರುವುದೋ ಅವರೇ ತಮ್ಮನ್ನು ತಾವೇ ನಷ್ಟಕ್ಕೊಳಪಡಿಸಿ ಕೊಂಡವರಾಗಿರುವರು. ಅವರು ಸದಾ ಕಾಲ ನರಕದಲ್ಲಿರುವರು.

وَمَنْ خَفَّتْ مَوَازِيْنُهٗ فَاُولٰٓئِكَ الَّذِيْنَ خَسِرُوْٓا اَنْفُسَهُمْ فِيْ جَهَنَّمَ خٰلِدُوْنَ ﴿١٠٣﴾

104. ಅಗ್ನಿಯು ಅವರ ಮುಖದ ಚರ್ಮವನ್ನು ನೆಕ್ಕಿ ಬಿಡುವುದು ಮತ್ತು ಅವರ ದವಡೆಗಳು ಹೊರಕ್ಕೆ ಬಂದು ಬಿಡುವುವು.

تَلْفَحُ وُجُوْهَهُمُ النَّارُ وَهُمْ فِيْهَا كٰلِحُوْنَ ﴿١٠٤﴾

105. "ನನ್ನ ವಚನಗಳನ್ನು ನಿಮಗೆ ಓದಿ ಹೇಳಿದಾಗ ಅದನ್ನು ಸುಳ್ಳಾಗಿಸುತ್ತಿದ್ದವರು ನೀವೇ ಅಲ್ಲವೇ?" (ಎಂದು ಅವರನ್ನು ಕೇಳಲಾಗುವುದು)

اَلَمْ تَكُنْ اٰيٰتِيْ تُتْلٰى عَلَيْكُمْ فَكُنْتُمْ بِهَا تُكَذِّبُوْنَ ﴿١٠٥﴾

106. ಆಗ ಅವರು, "ನಮ್ಮ ಪ್ರಭೂ, ನಮ್ಮ ದುರದೃಷ್ಟವು ನಮ್ಮನ್ನು ಆವರಿಸಿಕೊಂಡಿತ್ತು. ನಿಜಕ್ಕೂ ನಾವು ಪಥಭ್ರಷ್ಟರಾಗಿದ್ದೆವು.

قَالُوْا رَبَّنَا غَلَبَتْ عَلَيْنَا شِقْوَتُنَا وَكُنَّا قَوْمًا ضَآلِّيْنَ ﴿١٠٦﴾

107. ನಮ್ಮ ಪ್ರಭೂ, ಇನ್ನು ನಮ್ಮನ್ನು ಇಲ್ಲಿಂದ ವಿಮೋಚಿಸಿ ಬಿಡು. ಆ ಬಳಿಕವೂ ನಾವು ಇಂತಹ ಅಪರಾಧ ಮಾಡಿದರೆ ಅಕ್ರಮಿ ಗಳಾಗುವೆವು" ಎನ್ನುವರು.

رَبَّنَآ اَخْرِجْنَا مِنْهَا فَاِنْ عُدْنَا فَاِنَّا ظٰلِمُوْنَ ﴿١٠٧﴾

108. ಆಗ ಅಲ್ಲಾಹನು, "ತೊಲಗಿರಿ, ಅದರಲ್ಲೇ ಬಿದ್ದು ಕೊಂಡಿರಿ ಮತ್ತು ನನ್ನೊಡನೆ ಮಾತನಾಡ ಬೇಡಿರಿ."

قَالَ اخْسَــُٔوْا فِيْهَا وَلَا تُكَلِّمُوْنِ ﴿١٠٨﴾

109. ನನ್ನ ಕೆಲವು ಮಂದಿ ದಾಸರು, "ನಮ್ಮ ಪ್ರಭೂ ನಾವು ವಿಶ್ವಾಸ ವಿರಿಸಿದೆವು. ನಮ್ಮನ್ನು ಕ್ಷಮಿಸಿ ಬಿಡು, ನಮ್ಮ ಮೇಲೆ ದಯೆ ತೋರು, ನೀನು ಅತ್ಯುತ್ತಮ ಕರುಣಾನಿಧಿ ಆಗಿರುತ್ತೀ" ಎಂದು ಹೇಳುತ್ತಿದ್ದಾಗ-

اِنَّهٗ كَانَ فَرِيْقٌ مِّنْ عِبَادِيْ يَقُوْلُوْنَ رَبَّنَآ اٰمَنَّا فَاغْفِرْ لَنَا وَارْحَمْنَا وَاَنْتَ خَيْرُ الرّٰحِمِيْنَ ﴿١٠٩﴾

110. "ನೀವು ಅವರನ್ನು ಅಪಹಾಸ್ಯ ಮಾಡಿದಿರಿ. ಅವರ ಮೇಲಿನ ಹಠವು ನಿಮ್ಮನ್ನು ನನ್ನ ಅಸ್ತಿತ್ವವನ್ನೇ ಮರೆಯುವಂತೆ ಮಾಡಿತು ಮತ್ತು ನೀವು ಅವರನ್ನು ಕಂಡು ನಗುತ್ತಿದ್ದಿರಿ.

فَاتَّخَذْتُمُوْهُمْ سِخْرِيًّا حَتّٰٓى اَنْسَوْكُمْ ذِكْرِيْ وَكُنْتُمْ مِّنْهُمْ تَضْحَكُوْنَ ﴿١١٠﴾

111. ಇಂದು ನಾನು ಅವರ ಸಹನೆಗೆ ಕೊಟ್ಟ ಫಲವೇನೆಂದರೆ ಅವರೇ ಯಶಸ್ವಿಗಳಾಗಿದ್ದಾರೆ" ಎಂದು ಉತ್ತರ ಕೊಡುವನು.

إِنِّي جَزَيْتُهُمُ الْيَوْمَ بِمَا صَبَرُوا أَنَّهُمْ هُمُ الْفَائِزُونَ ١١١

112. ಅನಂತರ ಅಲ್ಲಾಹನು ಅವರೊಡನೆ; "ಭೂಮಿಯಲ್ಲಿ ನೀವು ಎಷ್ಟು ವರ್ಷ ವಾಸಿಸಿದಿರಿ?" ಎಂದು ಕೇಳುವನು.

قٰلَ كَمْ لَبِثْتُمْ فِي الْأَرْضِ عَدَدَ سِنِينَ ١١٢

113. ಅದಕ್ಕೆ ಅವರು, "ಒಂದು ದಿನ ಅಥವಾ ದಿನದ ಒಂದಂಶ ನಾವು ಅಲ್ಲಿ ವಾಸಿಸುತ್ತಿದ್ದೆವು, ಎಣಿಕೆ ಮಾಡುವವರನ್ನು ಕೇಳಿ ನೋಡಿ" ಎನ್ನುವರು.

قَالُوا لَبِثْنَا يَوْمًا أَوْ بَعْضَ يَوْمٍ فَسْـَٔلِ الْعَادِّينَ ١١٣

114. ಆಗ, "ಸ್ವಲ್ಪ ಹೊತ್ತೇ ತಂಗಿದ್ದಿರಷ್ಟೆ, ನೀವು ಅದನ್ನು ಆಗ ತಿಳಿದಿರುತ್ತಿದ್ದರೆ!

قٰلَ إِنْ لَبِثْتُمْ إِلَّا قَلِيلًا لَوْ أَنَّكُمْ كُنْتُمْ تَعْلَمُونَ ١١٤

115. ನೀವೇನು ನಾವು ನಿಮ್ಮನ್ನು ನಿರರ್ಥಕವಾಗಿ ಸೃಷ್ಟಿಸಿದ್ದೇವೆಂದೂ ನಿಮಗೆ ನಮ್ಮ ಕಡೆಗೆ ಮರಳಲಿಕ್ಕೆ ಇಲ್ಲವೆಂದೂ ತಿಳಿದು ಕೊಂಡಿದ್ದೀರಾ?" ಎಂದು ಹೇಳಲಾಗುವುದು.

أَفَحَسِبْتُمْ أَنَّمَا خَلَقْنَاكُمْ عَبَثًا وَأَنَّكُمْ إِلَيْنَا لَا تُرْجَعُونَ ١١٥

116. ಅಲ್ಲಾಹನು ಸರ್ವೋನ್ನತನು. ಯಥಾರ್ಥ ಸಾರ್ವಭೌಮನು. ಅವನ ಹೊರತು ಇನ್ನಾವ ದೇವನೂ ಇಲ್ಲ. ಮಹಾ ವಿಶ್ವಸಿಂಹಾಸನದ ಒಡೆಯ.

فَتَعَالَى اللَّهُ الْمَلِكُ الْحَقُّ لَا إِلٰهَ إِلَّا هُوَ رَبُّ الْعَرْشِ الْكَرِيمِ ١١٦

117. ಯಾರಾದರೂ ಅಲ್ಲಾಹನ ಜೊತೆಗೆ ಯಾವುದೇ ಆಧಾರ ಪ್ರಮಾಣಗಳಿಲ್ಲದ ಆರಾಧ್ಯನನ್ನು ಪ್ರಾರ್ಥಿಸಿದರೆ[13] ಅವನ ಲೆಕ್ಕಾಚಾರ ಅವನ ಪ್ರಭುವಿನ ಬಳಿಯಲ್ಲಿದೆ. ಇಂತಹ ಸತ್ಯನಿಷೇಧಿಗಳು ಎಂದೆಂದಿಗೂ ಯಶಸ್ವಿಯಾಗಲಾರರು.

وَمَنْ يَدْعُ مَعَ اللَّهِ إِلٰهًا آخَرَ لَا بُرْهَانَ لَهُ بِهِ فَإِنَّمَا حِسَابُهُ عِنْدَ رَبِّهِ إِنَّهُ لَا يُفْلِحُ الْكَافِرُونَ ١١٧

118. ಪೈಗಂಬರರೇ, ಹೇಳಿರಿ; "ನನ್ನೊಡೆಯಾ, ಕ್ಷಮಿಸು ಮತ್ತು ಕರುಣೆ ತೋರು; ನೀನು ಸಕಲ ಕರುಣಾಳುಗಳಿಗಿಂತಲೂ ಉತ್ತಮ ಕರುಣಾಮಯಿಯಾಗಿರುತ್ತೀ."

وَقُلْ رَبِّ اغْفِرْ وَارْحَمْ وَأَنْتَ خَيْرُ الرَّاحِمِينَ ١١٨

---

13. ಇನ್ನೊಂದು ಭಾಷಾಂತರ ಹೀಗಾಗಬಹುದು, "ಯಾರಾದರೂ ಅಲ್ಲಾಹನ ಜತೆಗೆ ಇತರ ಆರಾಧ್ಯರನ್ನು ಕರೆದು ಪ್ರಾರ್ಥಿಸಿದರೆ ಅವನ ಆ ಕಾರ್ಯಕ್ಕೆ ಪರವಾದ ಯಾವ ಪುರಾವೆಯೂ ಅವನಿಗಿರಲಾರದು."






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللَّهِ الرَّحْمَٰنِ الرَّحِيمِ

1. ಇದೊಂದು ಅಧ್ಯಾಯ, ಇದನ್ನು ನಾವು ಅವತೀರ್ಣಗೊಳಿಸಿದ್ದೇವೆ, ಇದನ್ನು ನಾವು ಕಡ್ಡಾಯ ಗೊಳಿಸಿರುತ್ತೇವೆ ಮತ್ತು ನೀವು ಪಾಠ ಕಲಿಯುವಂತಾಗಲು, ಇದರಲ್ಲಿ ನಾವು ಸುಸ್ಪಷ್ಟ ಆದೇಶಗಳನ್ನು ಅವತೀರ್ಣಗೊಳಿಸಿರುತ್ತೇವೆ.[1]

سُورَةٌ أَنزَلْنَاهَا وَفَرَضْنَاهَا وَأَنزَلْنَا فِيهَا آيَاتٍ بَيِّنَاتٍ لَّعَلَّكُمْ تَذَكَّرُونَ ①

2. ವ್ಯಭಿಚಾರಿ ಮತ್ತು ವ್ಯಭಿಚಾರಿಣಿ ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ ನೂರು ಛಡಿಯೇಟು ಕೊಡಿರಿ[2] ನೀವು ಅಲ್ಲಾಹನ ಹಾಗೂ ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ಧರ್ಮದ ವಿಷಯದಲ್ಲಿ ಅವರ ಮೇಲಿನ ಕನಿಕರವು ನಿಮ್ಮನ್ನು ತಡೆಯದಿರಲಿ. ಅವರಿಗೆ ಶಿಕ್ಷೆ ಕೊಡುವಾಗ ಸತ್ಯವಿಶ್ವಾಸಿಗಳ ಒಂದು ಸಮೂಹ ಅಲ್ಲಿ ಉಪಸ್ಥಿತವಿರಲಿ.[3]

الزَّانِيَةُ وَالزَّانِي فَاجْلِدُوا كُلَّ وَاحِدٍ مِّنْهُمَا مِائَةَ جَلْدَةٍ ۖ وَلَا تَأْخُذْكُم بِهِمَا رَأْفَةٌ فِي دِينِ اللَّهِ إِن كُنتُمْ تُؤْمِنُونَ بِاللَّهِ وَالْيَوْمِ الْآخِرِ ۖ وَلْيَشْهَدْ عَذَابَهُمَا طَائِفَةٌ مِّنَ الْمُؤْمِنِينَ ②

3. ವ್ಯಭಿಚಾರಿಯು ವ್ಯಭಿಚಾರಿಣಿಯೊಂದಿಗೆ ಅಥವಾ ಬಹುದೇವ ವಿಶ್ವಾಸಿನಿಯೊಂದಿಗೆ ಹೊರತು ವಿವಾಹವಾಗದಿರಲಿ ಮತ್ತು

الزَّانِي لَا يَنكِحُ إِلَّا زَانِيَةً أَوْ مُشْرِكَةً

1. ಅರ್ಥಾತ್- ಈ ಸೂಕ್ತದಲ್ಲಿರುವ ವಿಷಯಗಳು ಮನಸ್ಸಿಗೆ ತೋಚಿದರೆ ಒಪ್ಪಿಕೊಂಡು, ಇಲ್ಲದಿದ್ದರೆ ಮನಬಂದಂತೆ ವರ್ತಿಸುತ್ತಿರಲು ಇರುವ ಶಿಫಾರಸ್ಸುಗಳಲ್ಲ. ಇದು ಕಟ್ಟುನಿಟ್ಟಿನ ಆಜ್ಞೆಗಳಾಗಿವೆ. ಇದರ ಅನುಸರಣೆ ಮಾಡಲೇಬೇಕಾಗಿದೆ. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಇದರ ಪಾಲನೆ ನಿಮ್ಮ ಪಾಲಿಗೆ ಕಡ್ಡಾಯ.
2. ವ್ಯಭಿಚಾರದ ಕುರಿತು ಮೊದಲ ಆಜ್ಞೆ ಅನ್ನಿಸಾ ಅಧ್ಯಾಯದ 15ನೆಯ ಸೂಕ್ತದಲ್ಲಿ ಬಂದಿದೆ. ಈಗ ಅದರ ನಿರ್ಣಾಯಕ ಶಿಕ್ಷೆಯನ್ನು ಗೊತ್ತುಪಡಿಸಲಾಗುತ್ತಿದೆ. ಇದು ವ್ಯಭಿಚಾರಿ ಮತ್ತು ವ್ಯಭಿಚಾರಿಣಿಗಳಿಬ್ಬರೂ ಅವಿವಾಹಿತರಾಗಿದ್ದರೆ ಇರುವ ಆಜ್ಞೆ. ಪವಿತ್ರ ಕುರ್‌ಆನಿನಲ್ಲೂ, ಅನ್ನಿಸಾ ಅಧ್ಯಾಯದ 25ನೆಯ ಸೂಕ್ತದಿಂದ ವ್ಯಕ್ತವಾಗುವಂತೆ ಮತ್ತು ಅನೇಕ ಪ್ರವಾದಿವಚನಗಳು, ಪ್ರವಾದಿವರ್ಯರು(ಸ) ಮತ್ತು ನಾಲ್ವರು ಖಲೀಫಾಗಳ ಚರ್ಯೆ ಹಾಗೂ ಬಹುತೇಕ ವಿದ್ವಾಂಸರ ಒಮ್ಮತಾಭಿಪ್ರಾಯದ ಪ್ರಕಾರವೂ ವಿವಾಹಿತರು ಎಸಗುವ ವ್ಯಭಿಚಾರದ ಶಿಕ್ಷೆ ಕಲ್ಲೆಸೆದು ಕೊಲ್ಲುವುದಾಗಿದೆ.
3. ಅರ್ಥಾತ್- ಶಿಕ್ಷೆಯನ್ನು ಸಾರ್ವಜನಿಕವಾಗಿ ನೀಡಬೇಕು. ಇದರಿಂದ ಅಪರಾಧಿಯಲ್ಲಿ ನಾಚಿಕೆಯುಂಟಾಗಬೇಕು ಮತ್ತು ಇತರರೂ ಅದರಿಂದ ಪಾಠ ಕಲಿಯಬೇಕು. ಈ ಅಪರಾಧ ಮುಸ್ಲಿಮ್ ಸಮಾಜದಲ್ಲಿ ಹರಡದಂತಾಗಬೇಕು.

ವ್ಯಭಿಚಾರಿಣಿಯೊಂದಿಗೆ ವ್ಯಭಿಚಾರಿ ಅಥವಾ ಬಹುದೇವ ವಿಶ್ವಾಸಿಯ ಹೊರತು ವಿವಾಹವಾಗದಿರಲಿ, ಇದನ್ನು ಸತ್ಯವಿಶ್ವಾಸಿಗಳ ಮೇಲೆ ನಿಷಿದ್ಧಗೊಳಿಸಲಾಗಿದೆ.[4]

وَّ الزَّانِيَةُ لَا يَنْكِحُهَآ اِلَّا زَانٍ اَوْ مُشْرِكٌ ۚ وَحُرِّمَ ذٰلِكَ عَلَى الْمُؤْمِنِيْنَ ۝٣

4. ಯಾರು ಸುಶೀಲೆಯರ ಮೇಲೆ ಆರೋಪ ಹೊರಿಸುತ್ತಾರೋ,[5] ಆ ಬಳಿಕ ನಾಲ್ವರು ಸಾಕ್ಷಿದಾರರನ್ನು ತರುವುದಿಲ್ಲವೋ ಅವರಿಗೆ ಎಂಭತ್ತು ಛಡಿಯೇಟು ಕೊಡಿರಿ ಮತ್ತು ಅವರ ಸಾಕ್ಷ್ಯವನ್ನು ಎಂದಿಗೂ ಸ್ವೀಕರಿಸಬೇಡಿರಿ. ಅವರು ಸ್ವಯಂ ಕರ್ಮಭ್ರಷ್ಟರು.

وَالَّذِيْنَ يَرْمُوْنَ الْمُحْصَنٰتِ ثُمَّ لَمْ يَاْتُوْا بِاَرْبَعَةِ شُهَدَآءَ فَاجْلِدُوْهُمْ ثَمٰنِيْنَ جَلْدَةً وَّلَا تَقْبَلُوْا لَهُمْ شَهَادَةً اَبَدًا ۚ وَاُولٰٓئِكَ هُمُ الْفٰسِقُوْنَ ۝٤

5. ಈ ಕೃತ್ಯದ ಬಳಿಕ ಪಶ್ಚಾತ್ತಾಪ ಪಟ್ಟು ತಮ್ಮನ್ನು ತಾವೇ ಸುಧಾರಿಸಿಕೊಂಡವರ ಹೊರತು. ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.[6]

اِلَّا الَّذِيْنَ تَابُوْا مِنْۢ بَعْدِ ذٰلِكَ وَاَصْلَحُوْا ۚ فَاِنَّ اللّٰهَ غَفُوْرٌ رَّحِيْمٌ ۝٥

6. ತಮ್ಮ ಪತ್ನಿಯರ ಮೇಲೆ ಆರೋಪ ಹೊರಿಸುವವರ[7] ಬಳಿ ಸ್ವಯಂ ಅವರ ಹೊರತು ಬೇರೆ ಯಾರೂ ಸಾಕ್ಷಿದಾರರಿಲ್ಲದಿದ್ದರೆ ಅವರಲ್ಲಿ ಒಬ್ಬನ ಸಾಕ್ಷ್ಯವು (ಹೇಗಿರಬೇಕೆಂದರೆ) ಅವನು ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ತಾನು (ಹೊರಿಸಿದ ಆರೋಪದ ವಿಷಯದಲ್ಲಿ) ಸತ್ಯವಂತನೆಂದು ಸಾಕ್ಷ್ಯ ಹೇಳಲಿ.

وَالَّذِيْنَ يَرْمُوْنَ اَزْوَاجَهُمْ وَلَمْ يَكُنْ لَّهُمْ شُهَدَآءُ اِلَّآ اَنْفُسُهُمْ فَشَهَادَةُ اَحَدِهِمْ اَرْبَعُ شَهٰدٰتٍۢ بِاللّٰهِ ۙ اِنَّهٗ لَمِنَ الصّٰدِقِيْنَ ۝٦

7. ಮತ್ತು ಐದನೇ ಬಾರಿ, ತಾನು (ಈ ಆರೋಪದಲ್ಲಿ) ಸುಳ್ಳನಾಗಿದ್ದರೆ ತನ್ನ ಮೇಲೆ ಅಲ್ಲಾಹನ ಶಾಪವಿರಲೆಂದು ಹೇಳಲಿ.

وَالْخَامِسَةُ اَنَّ لَعْنَتَ اللّٰهِ عَلَيْهِ اِنْ كَانَ مِنَ الْكٰذِبِيْنَ ۝٧

---

4. ಅರ್ಥಾತ್- ಪಶ್ಚಾತ್ತಾಪ ಪಟ್ಟು ಮರಳದ ವ್ಯಭಿಚಾರಿಗೆ, ವ್ಯಭಿಚಾರಿಣಿ ಅಥವಾ ಬಹುದೇವಾರಾಧಕಿ ಮಾತ್ರ ಸೂಕ್ತ ಸಂಗಾತಿಯಾಗಬಲ್ಲಳು. ಸತ್ಯವಿಶ್ವಾಸಿನಿಯಾದ ಸದಾಚಾರಿ ಮಹಿಳೆಗೆ ಅವನು ಸೂಕ್ತ ಸಂಗಾತಿಯಾಗಲಾರ. ಪ್ರಜ್ಞಾಪೂರ್ವಕವಾಗಿ ತಮ್ಮ ಪುತ್ರಿಯರನ್ನು ಧರ್ಮಭ್ರಷ್ಟರಿಗೆ ವಿವಾಹ ಮಾಡಿಕೊಡುವುದು ಸತ್ಯವಿಶ್ವಾಸಿಗಳ ಪಾಲಿಗೆ ನಿಷಿದ್ಧ. ಹಾಗೆಯೇ ಪಶ್ಚಾತ್ತಾಪಪಟ್ಟು ಮರಳದ ವ್ಯಭಿಚಾರಿಣಿಗೆ ಅವಳಂತಹ ವ್ಯಭಿಚಾರಿ ಅಥವಾ ಬಹುದೇವಾರಾಧಕ ಮಾತ್ರ ಸೂಕ್ತ ವಾಗಬಹುದು. ಸತ್ಯವಿಶ್ವಾಸಿಯಾದ ಸದಾಚಾರಿ ಪುರುಷನಿಗೆ ಆಕೆ ಸೂಕ್ತ ಸಂಗಾತಿ ಆಗಲಾರಳು. ಪ್ರಜ್ಞಾಪೂರ್ವಕವಾಗಿ ದುಶ್ಶೀಲೆಯಾದ ಸ್ತ್ರೀಯೊಂದಿಗೆ ವಿವಾಹವಾಗುವುದು ಸತ್ಯವಿಶ್ವಾಸಿಗಳಿಗೆ ನಿಷಿದ್ಧ. ತಮ್ಮ ಕೆಟ್ಟ ನಡವಳಿಕೆಯಲ್ಲಿ ನೆಲೆ ನಿಲ್ಲುವಂತಹ ಸ್ತ್ರೀ-ಪುರುಷರಿಗೆ ಮಾತ್ರ ಈ ಆದೇಶ ಅನ್ವಯವಾಗುತ್ತದೆ. ಪಶ್ಚಾತ್ತಾಪ ಪಟ್ಟು ತಮ್ಮನ್ನು ಸುಧಾರಿಸಿಕೊಳ್ಳುವವರಿಗೆ ಇದು ಅನ್ವಯವಾಗುವುದಿಲ್ಲ. ಏಕೆಂದರೆ ಪಶ್ಚಾತ್ತಾಪ ಪಟ್ಟನಂತರ 'ವ್ಯಭಿಚಾರಿ' ಎನ್ನುವ ವಿಶೇಷಣ ಅವರಿಗೆ ಅಂಟಿಕೊಂಡಿರುವುದಿಲ್ಲ.
5. ಅರ್ಥಾತ್- ವ್ಯಭಿಚಾರದ ಆರೋಪ. ಸುಶೀಲ ಪುರುಷರ ಮೇಲೆ ವ್ಯಭಿಚಾರದ ಆರೋಪ ಹೊರಿಸುವವರಿಗೂ ಇದೇ ಆದೇಶ ಅನ್ವಯವಾಗುತ್ತದೆ. ಶರೀಅತ್‌ನ ಪಾರಿಭಾಷಿಕದಲ್ಲಿ ಹೀಗೆ ಆರೋಪ ಹೊರಿಸುವುದಕ್ಕೆ 'ಕಝ್ಫ್' ಎಂದು ಹೆಸರು.
6. ತೌಬಾದಿಂದ 'ಕಝ್ಫ್'ನ ಶಿಕ್ಷೆ ರದ್ದಾಗುವುದಿಲ್ಲ ಎಂಬ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಒಮ್ಮತಾಭಿಪ್ರಾಯವಿದೆ. ತೌಬಾ ಮಾಡುವವನು ಧರ್ಮಭ್ರಷ್ಟನಾಗಿ ಉಳಿಯುವುದಿಲ್ಲ ಮತ್ತು ಅಲ್ಲಾಹನು ಅವನನ್ನು ಕ್ಷಮಿಸಿ ಬಿಡುತ್ತಾನೆ ಎಂಬ ಬಗ್ಗೆಯೂ ಒಮ್ಮತಾಭಿಪ್ರಾಯವಿದೆ. ಆದರೆ ತೌಬಾ ಮಾಡಿದ ನಂತರ ಅವನ ಸಾಕ್ಷ್ಯವನ್ನು ಸ್ವೀಕರಿಸಲಾಗುವುದೋ ಇಲ್ಲವೋ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಅವರ ಸಾಕ್ಷ್ಯ ಸ್ವೀಕಾರಾರ್ಹವಲ್ಲವೆಂದು ಹನಫೀ ಕರ್ಮಶಾಸ್ತ್ರಜ್ಞರು ಅಭಿಪ್ರಾಯ ಪಟ್ಟರೆ, ಇಮಾಮ್ ಶಾಫಈ, ಇಮಾಮ್ ಮಾಲಿಕ್ ಮತ್ತು ಇಮಾಮ್ ಅಹ್ಮದ್ ಅವರ ಸಾಕ್ಷ್ಯವನ್ನು ಸ್ವೀಕಾರಾರ್ಹವೆಂದು ಭಾವಿಸುತ್ತಾರೆ.
7. ಅರ್ಥಾತ್ ವ್ಯಭಿಚಾರದ ಆರೋಪ ಹೊರಿಸುವುದು.

8. ಮತ್ತು ಆ ಸ್ತ್ರೀಯ ಮೇಲಿನಿಂದ ಶಿಕ್ಷೆಯನ್ನು ತಪ್ಪಿಸಲು ಇರುವ ಕ್ರಮವೇನೆಂದರೆ ಆಕೆ ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ಈತನು (ತನ್ನ ಆರೋಪದಲ್ಲಿ) ಸುಳ್ಳನೆಂದು ಸಾಕ್ಷ್ಯ ಹೇಳಬೇಕು-

وَيَدْرَؤُا عَنْهَا الْعَذَابَ أَنْ تَشْهَدَ أَرْبَعَ شَهَادَاتٍ بِاللَّهِ إِنَّهُ لَمِنَ الْكَاذِبِينَ ⑧

9. ಮತ್ತು ಐದನೆಯ ಬಾರಿ, ಒಂದು ವೇಳೆ ಆತನು ಸತ್ಯವಂತನಾಗಿದ್ದರೆ ನನ್ನ ಮೇಲೆ ಅಲ್ಲಾಹನ ಕ್ರೋಧವೆರಗಲಿ ಎಂದು ಹೇಳಬೇಕು.[8]

وَالْخَامِسَةَ أَنَّ غَضَبَ اللَّهِ عَلَيْهَا إِنْ كَانَ مِنَ الصَّادِقِينَ ⑨

10. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹವೂ ಅವನ ಕೃಪೆಯೂ ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹ್ ಪಶ್ಚಾತ್ತಾಪ ಸ್ವೀಕರಿಸುವವನೂ ಯುಕ್ತಿಪೂರ್ಣನೂ ಆಗಿರದಿರುತ್ತಿದ್ದರೆ (ಪತ್ನಿಯರ ಮೇಲೆ ಆರೋಪ ಹೊರಿಸುವ ಪ್ರಕರಣವು ನಿಮ್ಮನ್ನು ದೊಡ್ಡ ಪೇಚಿನಲ್ಲಿ ಸಿಲುಕಿಸಿ ಬಿಡುತ್ತಿತ್ತು).

وَلَوْلَا فَضْلُ اللَّهِ عَلَيْكُمْ وَرَحْمَتُهُ وَأَنَّ اللَّهَ تَوَّابٌ حَكِيمٌ ⑩

11. ಈ ಸುಳ್ಳಾರೋಪವನ್ನು ರಚಿಸಿ ತಂದವರು ನಿಮ್ಮೊಳಗೇ ಇರುವ ಒಂದು ಕೂಟವಾಗಿದ್ದಾರೆ.[9] ಈ ಘಟನೆಯನ್ನು ನಿಮ್ಮ ಪಾಲಿಗೆ ಕೆಟ್ಟದೆಂದು ಭಾವಿಸಬೇಡಿ. ನಿಜವಾಗಿ ಇದು ನಿಮಗೆ ಹಿತಕರವಾಗಿಯೇ ಇದೆ.[10] ಅದರಲ್ಲಿ ಯಾರು ಎಷ್ಟು ಭಾಗವಹಿಸಿದನೋ ಅಷ್ಟೇ ಪಾಪವನ್ನು ಶೇಖರಿಸಿಕೊಂಡನು. ಈ ಹೊಣೆಗಾರಿಕೆಯ ಪ್ರಮುಖ ಪಾಲು ವಹಿಸಿಕೊಂಡವನಿಗಂತೂ[11] ಮಹಾಯಾತನೆ ಇದೆ.

إِنَّ الَّذِينَ جَاءُوا بِالْإِفْكِ عُصْبَةٌ مِنْكُمْ ۚ لَا تَحْسَبُوهُ شَرًّا لَكُمْ ۖ بَلْ هُوَ خَيْرٌ لَكُمْ ۚ لِكُلِّ امْرِئٍ مِنْهُمْ مَا اكْتَسَبَ مِنَ الْإِثْمِ ۚ وَالَّذِي تَوَلَّىٰ كِبْرَهُ مِنْهُمْ لَهُ عَذَابٌ عَظِيمٌ ⑪

12. ನೀವೆಲ್ಲರೂ ಅದನ್ನು ಕೇಳಿದಾಗ ಸತ್ಯವಿಶ್ವಾಸಿ ಸ್ತ್ರೀ-ಪುರುಷರು ತಮ್ಮ ಬಗ್ಗೆ ಸದ್ಭುಮಾನಿಯನ್ನೇಕೆ ತಾಳಲಿಲ್ಲ[12] ಮತ್ತು ಇದು ಅಪ್ಪಟ ಸುಳ್ಳಾರೋಪವೆಂದೇಕೆ ಹೇಳಲಿಲ್ಲ.

لَوْلَا إِذْ سَمِعْتُمُوهُ ظَنَّ الْمُؤْمِنُونَ وَالْمُؤْمِنَاتُ بِأَنْفُسِهِمْ خَيْرًا وَقَالُوا هَٰذَا إِفْكٌ مُبِينٌ ⑫

8. ಶರೀಅತ್‌ನ ಪಾರಿಭಾಷಿಕದಲ್ಲಿ ಇದನ್ನು 'ಲಿಆನ್' ಎನ್ನುತ್ತಾರೆ. 'ಲಿಆನ್' ಅನ್ನು ಮನೆಯಲ್ಲಿ ಕಾರ್ಯಗತಗೊಳಿಸುವಂತಿಲ್ಲ. ಅದು ನ್ಯಾಯಾಲಯದಲ್ಲಿ ನಡೆಯಬೇಕಾಗಿದೆ. 'ಲಿಆನ್'ನ ಬೇಡಿಕೆಯನ್ನು ಪುರುಷನೂ ಮುಂದಿರಿಸಬಹುದು. ಅಂತೆಯೇ ಸ್ತ್ರೀಯೂ ಕೂಡ. ಆರೋಪ ಹೊರಿಸಿದ ನಂತರ ಪುರುಷ 'ಲಿಆನ್'ನಿಂದ ಮುಕ್ತನಾಗ ಬಯಸಿದರೆ, ಅಥವಾ ಸ್ತ್ರೀ ಆಣೆ ಹಾಕುವುದರಿಂದ ದೂರ ಉಳಿದರೆ ಅದಕ್ಕೆ ಕೊಡಲಾಗುವ ಶಿಕ್ಷೆ ಹನಫೀ ಕರ್ಮಶಾಸ್ತ್ರದ ಪ್ರಕಾರ 'ಲಿಆನ್' ಮಾಡುವ ತನಕದ ಸೆರೆಮನೆ ವಾಸವಾಗಿದೆ. ಎರಡೂ ಕಡೆಯಿಂದ 'ಲಿಆನ್' ಆದ ಬಳಿಕ ಸ್ತ್ರೀ-ಪುರುಷರಿಬ್ಬರೂ ಪರಸ್ಪರರ ಪಾಲಿಗೆ ನಿಷಿದ್ಧರಾಗಿ ಬಿಡುತ್ತಾರೆ.

9. ಇಲ್ಲಿಂದ 26ನೆಯ ಸೂಕ್ತದ ವರೆಗೆ ಚರಿತ್ರೆಯಲ್ಲಿ 'ಇಫ್ಕ್'ನ ಘಟನೆಯಿಂದ ಉಲ್ಲೇಖಿಸಲ್ಪಟ್ಟಿರುವ ವಿಷಯದ ಬಗ್ಗೆ ಪ್ರಸ್ತಾಪಿಸಲಾಗಿದೆ. ಅದರಲ್ಲಿ ಕಪಟ ವಿಶ್ವಾಸಿಗಳು ಹ. ಆಯಿಶಾರ(ರ) ಮೇಲೆಯೇ ವ್ಯಭಿಚಾರದ (ಶಾಂತಂ ಪಾಪಂ) ಆರೋಪ ಹೊರಿಸಿದ್ದರು. ಆ ಬಗ್ಗೆ ಅವರು ಎಷ್ಟು ಗುಲ್ಲೆಬ್ಬಿಸಿದ್ದರೆಂದರೆ ಅದರಿಂದಾಗಿ ಕೆಲವು ಮುಸ್ಲಿಮರೂ ಸಂಶಯಕ್ಕೊಳಗಾಗಿದ್ದರು.

10. ಅರ್ಥಾತ್- ಆತಂಕ ಪಡದಿರಿ. ಕಪಟವಿಶ್ವಾಸಿಗಳು ನಿಮ್ಮ ಮೇಲೆ ಪ್ರಬಲ ಪ್ರಹಾರ ಮಾಡಿರುವುದಾಗಿ ಭಾವಿಸಿಕೊಂಡಿದ್ದಾರೆ. ಆದರೆ ಅಲ್ಲಾಹನಿಚ್ಛಿಸಿದರೆ ಅದರಿಂದ ತದ್ವಿರುದ್ಧ ಪರಿಣಾಮ ಉಂಟಾಗುವುದು ಮತ್ತು ಅದು ನಿಮ್ಮ ಪಾಲಿಗೇ ಹಿತಕರವಾಗಿ ಪರಿಣಮಿಸುವುದು.

11. ಅರ್ಥಾತ್- ಅಬ್ದುಲ್ಲಾ ಬಿನ್ ಉಬೈ. ಈ ಆರೋಪವನ್ನು ಹುಟ್ಟುಹಾಕಿದ ಗೊಂದಲದ ಮೂಲ ಕಾರಣಕರ್ತ ಅವನೇ ಆಗಿದ್ದನು.

12. ಇನ್ನೊಂದು ಭಾಷಾಂತರ ಹೀಗಾಗಬಹುದು, ತಮ್ಮವರ, ತಮ್ಮ ಸಮಾಜದ ಅಥವಾ ತಮ್ಮ ಸಮುದಾಯದ ಜನರೊಂದಿಗೆ ಒಳ್ಳೆಯ

13. ಅವರು (ತಮ್ಮ ಆರೋಪಕ್ಕೆ ಆಧಾರವಾಗಿ) ನಾಲ್ಕು ಸಾಕ್ಷಿದಾರರನ್ನೇಕೆ ತರಲಿಲ್ಲ? ಅವರೀಗ ಸಾಕ್ಷಿಗಳನ್ನು ತಾರದಿರುವುದರಿಂದ ಅಲ್ಲಾಹನ ಬಳಿ ಅವರೇ ಸುಳ್ಳುಗಾರರಾಗಿರುತ್ತಾರೆ.[13]

لَوْلَا جَآءُوْ عَلَيْهِ بِاَرْبَعَةِ شُهَدَآءَ ۚ فَاِذْ لَمْ يَاْتُوْا بِالشُّهَدَآءِ فَاُولٰٓئِكَ عِنْدَ اللّٰهِ هُمُ الْكٰذِبُوْنَ ﴿١٣﴾

14. ನಿಮ್ಮ ಮೇಲೆ ಇಹಲೋಕದಲ್ಲೂ ಪರಲೋಕದಲ್ಲೂ ಅಲ್ಲಾಹನ ಅನುಗ್ರಹವೂ ಕೃಪೆಯೂ ಇಲ್ಲದಿರುತ್ತಿದ್ದರೆ, ನೀವು ಸಿಲುಕಿದಂತಹ ವಿಷಯಗಳ ಫಲವಾಗಿ ಅತಿ ದೊಡ್ಡ ಯಾತನೆ ನಿಮ್ಮ ಮೇಲೆ ಎರಗುತ್ತಿತ್ತು.

وَلَوْلَا فَضْلُ اللّٰهِ عَلَيْكُمْ وَرَحْمَتُهٗ فِى الدُّنْيَا وَالْاٰخِرَةِ لَمَسَّكُمْ فِىْ مَآ اَفَضْتُمْ فِيْهِ عَذَابٌ عَظِيْمٌ ﴿١٤﴾

15. ನಿಮ್ಮ ಒಂದು ನಾಲಿಗೆಯು ಇನ್ನೊಂದು ನಾಲಿಗೆಯಿಂದ ಈ ಸುಳ್ಳನ್ನೆತ್ತಿಕೊಂಡು ಹೋಗುತ್ತಿರುವಾಗ ಮತ್ತು ನಿಮಗೇನೂ ತಿಳಿಯದಂತಹ ವಿಷಯವನ್ನು ನಿಮ್ಮ ಬಾಯಿಯಿಂದ ಹೇಳುತ್ತ ಸಾಗುತ್ತಿದ್ದಾಗ (ನೀವೆಷ್ಟು ದೊಡ್ಡ ತಪ್ಪು ಮಾಡುತ್ತಿದ್ದೀರೆಂದು ಯೋಚಿಸಿರಿ). ನೀವು ಅದನ್ನು ಒಂದು ಸಣ್ಣ ವಿಷಯವೆಂದು ಭಾವಿಸುತ್ತಿದ್ದಿರಿ. ವಸ್ತುತಃ ಅಲ್ಲಾಹನ ಬಳಿ ಇದು ಅತ್ಯಂತ ಗಂಭೀರ ವಿಷಯವಾಗಿತ್ತು.

اِذْ تَلَقَّوْنَهٗ بِاَلْسِنَتِكُمْ وَتَقُوْلُوْنَ بِاَفْوَاهِكُمْ مَّا لَيْسَ لَكُمْ بِهٖ عِلْمٌ وَّتَحْسَبُوْنَهٗ هَيِّنًا ۖ وَّهُوَ عِنْدَ اللّٰهِ عَظِيْمٌ ﴿١٥﴾

16. ನೀವು ಅದನ್ನು ಕೇಳಿದೊಡನೆಯೇ "ಇಂತಹ ಮಾತನ್ನುಚ್ಚರಿಸುವುದು ನಮಗೆ ಭೂಷಣವಲ್ಲ. ಅಲ್ಲಾಹನು ಪರಮಪಾವನನು. ಇದಂತೂ ಒಂದು ಮಹಾ ಸುಳ್ಳಾರೋಪವಾಗಿದೆ" ಎಂದೇಕೆ ಹೇಳಲಿಲ್ಲ?

وَلَوْلَآ اِذْ سَمِعْتُمُوْهُ قُلْتُمْ مَّا يَكُوْنُ لَنَآ اَنْ نَّتَكَلَّمَ بِهٰذَا ۖ سُبْحٰنَكَ هٰذَا بُهْتَانٌ عَظِيْمٌ ﴿١٦﴾

ಗುಮಾನಿಯನ್ನಿಟ್ಟುಕೊಳ್ಳಲಿಲ್ಲವೇಕೆ. ಸೂಕ್ತದ ಪದಗಳು ಎರಡೂ ತಾತ್ಪರ್ಯಗಳನ್ನು ಒಳಗೊಂಡಿವೆ. ಆದರೆ ನಾವು ಅಳವಡಿಸಿರುವಂತಹ ಭಾಷಾಂತರ ಹೆಚ್ಚು ಅರ್ಥಪೂರ್ಣವಾಗಿದೆ. ಅರ್ಥಾತ್ ಹ. ಆಯಿಶಾರಿಗೆ(ರ) ಎದುರಾದಂತಹ ಪರಿಸ್ಥಿತಿಯೇ ತನಗೆ ಎದುರಾಗಿದ್ದರೆ ತಾನು ವ್ಯಭಿಚಾರಿಯಾಗಿ ಮಾರ್ಪಡುತ್ತೇನೆಯೇ ಎಂದು ನಿಮ್ಮಲ್ಲಿ ಪ್ರತಿಯೊಬ್ಬರೂ ಯಾಕೆ ಆಲೋಚಿಸಲಿಲ್ಲ.

13. ಆರೋಪ ಸುಳ್ಳು ಎನ್ನಲು ಆಧಾರ, ಸಾಕ್ಷಿಗಳು ಇಲ್ಲದಿರುವುದು ಮಾತ್ರವಾಗಿದೆ ಎಂಬ ತಪ್ಪುಕಲ್ಪನೆಗೆ ಯಾರೂ ಒಳಗಾಗಬಾರದು. ಅಂತೆಯೇ ನಾಲ್ಕು ಸಾಕ್ಷಿಗಳನ್ನು ತರಲು ಆರೋಪ ಹೊರಿಸಿದವರು ವಿಫಲರಾಗಿರುವುದರಿಂದ ನೀವೂ ಇದನ್ನು ಶುದ್ಧ ಸುಳ್ಳಾರೋಪ ಎಂದು ಭಾವಿಸಬೇಕಾಗಿ ಮುಸ್ಲಿಮರೊಡನೆ ಹೇಳಲಾಗುತ್ತಿದೆ ಎಂದು ಭಾವಿಸಬಾರದು. ಅಲ್ಲಿ ವಾಸ್ತವಿಕವಾಗಿ ಸಂಭವಿಸಿದ ಘಟನೆಯನ್ನು ದೃಷ್ಟಿಯಲ್ಲಿಟ್ಟುಕೊಳ್ಳದಿದ್ದಾಗ ಮಾತ್ರ ಇಂತಹ ತಪ್ಪುಕಲ್ಪನೆ ಮೂಡಲು ಸಾಧ್ಯ. ಆರೋಪ ಹೊರಿಸುವವರು ಅಥವಾ ಅವರ ಪೈಕಿ ಯಾರಾದರೊಬ್ಬರು ಪ್ರತ್ಯಕ್ಷವಾಗಿ ತಾವು ಹೇಳುತ್ತಿರುವಂತಹ ವಿಷಯವನ್ನು ಕಂಡಿದ್ದರಿಂದ ಪ್ರಸ್ತುತ ಆರೋಪ ಹೊರಿಸಿರಲಿಲ್ಲ. ಸಂದರ್ಭವಶಾತ್ ಹ. ಆಯಿಶಾ(ರ) ತಂಡದಿಂದ ಹಿಂದೆ ಉಳಿದು ಬಿಟ್ಟಿದ್ದರು ಮತ್ತು ಹ. ಸಫ್ವಾನ್(ರ) ಅನಂತರ ಅವರನ್ನು ತಮ್ಮ ಒಂಟೆಯ ಮೇಲೆ ಕುಳ್ಳಿರಿಸಿ ತಂಡದೊಂದಿಗೆ ಬಂದು ಸೇರಿದ್ದರೆಂಬ ಆಧಾರದಲ್ಲಿ ಮಾತ್ರ ಅವರು ಅಷ್ಟು ಗಂಭೀರವಾದ ಆರೋಪವನ್ನು ಹುಟ್ಟು ಹಾಕಿದ್ದರು. ಹ. ಆಯಿಶಾ(ರ) ಈ ರೀತಿ ಯೋಜನಾಬದ್ಧವಾಗಿ ಹಿಂದುಳಿದಿದ್ದರು ಎಂದು ವಿವೇಕಮತಿಯಾದ ಯಾವನೂ ಭಾವಿಸಲಾರನು. ಸೇನಾನಿಯ ಪತ್ನಿ ಮೆಲ್ಲನೆ ಒಬ್ಬ ವ್ಯಕ್ತಿಯೊಡನೆ ಹಿಂದೆ ಉಳಿದು ಬಿಡುವುದು, ಅನಂತರ ಅದೇ ವ್ಯಕ್ತಿ ಆ ಮಹಿಳೆಯನ್ನು ಒಂಟೆಯಲ್ಲಿ ಕುಳ್ಳಿರಿಸಿ ಹಾಡು ಹಗಲಲ್ಲಿ ಮಧ್ಯಾಹ್ನದ ಹೊತ್ತು ಸೇನಾ ತುಕಡಿಯನ್ನು ಬಂದು ಸೇರುವುದು - ಹೀಗೆ ಕುತಂತ್ರ ಮಾಡುವವರು ಮಾಡಲು ಸಾಧ್ಯವಿಲ್ಲ. ಇದು ಅವರಿಬ್ಬರ ಮುಗ್ಧತೆಯನ್ನು ಸಾರಿ ಹೇಳಲು ಪರ್ಯಾಪ್ತವಿದೆ. ಇಂತಹ ಪರಿಸ್ಥಿತಿಯಲ್ಲಿ ಕಣ್ಣಾರೆ ಆ ಘಟನೆಯನ್ನು ನೋಡಿದ ಆಧಾರದಲ್ಲಿ ಮಾತ್ರ ಆರೋಪ ಹೊರಿಸಬಹುದಾಗಿತ್ತು. ಅಂತಹ ಅಕ್ರಮಿಗಳು ಯಾವ ಪರಿಸ್ಥಿತಿಯ ಆಧಾರದಲ್ಲಿ ಆರೋಪ ಹೊರಿಸಿದ್ದರೋ ಅದು ಯಾವುದೇ ರೀತಿಯ ಸಂದೇಹಗಳಿಗೆ ಆಸ್ಪದ ಕೊಡುವಂತಹುದಾಗಿರಲಿಲ್ಲ.

17. ನೀವು ಸತ್ಯವಿಶ್ವಾಸಿಗಳಾಗಿದ್ದರೆ ಮುಂದೆಂದೂ ಇಂತಹ ಕೃತ್ಯವೆಸಗ ಬಾರದೆಂದು ಅಲ್ಲಾಹನು ನಿಮಗೆ ಉಪದೇಶ ಮಾಡುತ್ತಾನೆ.

يَعِظُكُمُ اللَّهُ أَن تَعُودُوا لِمِثْلِهِ أَبَدًا إِن كُنتُم مُّؤْمِنِينَ ﴿١٧﴾

18. ಅಲ್ಲಾಹನು ನಿಮಗೆ ಸುಸ್ಪಷ್ಟ ಆದೇಶಗಳನ್ನೀಯುತ್ತಾನೆ ಮತ್ತು ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَيُبَيِّنُ اللَّهُ لَكُمُ الْآيَاتِ ۚ وَاللَّهُ عَلِيمٌ حَكِيمٌ ﴿١٨﴾

19. ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದು ಬಯಸುವವರು ಇಹಲೋಕದಲ್ಲೂ ಪರಲೋಕ ದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹರಾಗಿದ್ದಾರೆ. ಅಲ್ಲಾಹನು ಬಲ್ಲವನು; ನೀವು ಬಲ್ಲವರಲ್ಲ;

إِنَّ الَّذِينَ يُحِبُّونَ أَن تَشِيعَ الْفَاحِشَةُ فِي الَّذِينَ آمَنُوا لَهُمْ عَذَابٌ أَلِيمٌ فِي الدُّنْيَا وَالْآخِرَةِ ۚ وَاللَّهُ يَعْلَمُ وَأَنتُمْ لَا تَعْلَمُونَ ﴿١٩﴾

20. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಅವನ ಕೃಪೆ ಇಲ್ಲ ದಿರುತ್ತಿದ್ದರೆ ಮತ್ತು ಅಲ್ಲಾಹನು ಮಹಾ ವತ್ಸಲನೂ ಕರುಣಾ ನಿಧಿಯೂ ಆಗಿಲ್ಲದಿರುತ್ತಿದ್ದರೆ (ಈಗ ತಾನೇ ನಿಮ್ಮ ಮಧ್ಯೆ ಹರಡಲ್ಪಟ್ಟ ವಿಷಯವು ಅತ್ಯಂತ ಕೆಟ್ಟ ಪರಿಣಾಮಗಳನ್ನು ತೋರಿಸಿ ಬಿಡುತ್ತಿತ್ತು).

وَلَوْلَا فَضْلُ اللَّهِ عَلَيْكُمْ وَرَحْمَتُهُ وَأَنَّ اللَّهَ رَءُوفٌ رَّحِيمٌ ﴿٢٠﴾

21. ಸತ್ಯವಿಶ್ವಾಸಿಗಳೇ, ಶೈತಾನನ ಹೆಜ್ಜೆ ಗುರುತುಗಳನ್ನು ಅನುಸರಿಸಿ ನಡೆಯಬೇಡಿರಿ. ಯಾರಾದರೂ ಅವನನ್ನನುಸರಿಸಿದರೆ, ಅವನು ಆತನಿಗೆ ಅಶ್ಲೀಲ ಹಾಗೂ ಪಾಪದ ಆಜ್ಞೆಯನ್ನೇ ಕೊಡುವನು. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಕೃಪೆಯಿಲ್ಲದಿರುತ್ತಿ ದ್ದರೆ, ನಿಮ್ಮ ಪೈಕಿ ಒಬ್ಬನೂ ಪರಿಶುದ್ಧನಾಗಲಾರ. ಆದರೆ ಅಲ್ಲಾ ಹನೇ ತಾನಿಚ್ಛಿಸಿದವರನ್ನು ಪರಿಶುದ್ಧಗೊಳಿಸುತ್ತಾನೆ ಮತ್ತು ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

يَا أَيُّهَا الَّذِينَ آمَنُوا لَا تَتَّبِعُوا خُطُوَاتِ الشَّيْطَانِ ۚ وَمَن يَتَّبِعْ خُطُوَاتِ الشَّيْطَانِ فَإِنَّهُ يَأْمُرُ بِالْفَحْشَاءِ وَالْمُنكَرِ ۚ وَلَوْلَا فَضْلُ اللَّهِ عَلَيْكُمْ وَرَحْمَتُهُ مَا زَكَىٰ مِنكُم مِّنْ أَحَدٍ أَبَدًا وَلَٰكِنَّ اللَّهَ يُزَكِّي مَن يَشَاءُ ۗ وَاللَّهُ سَمِيعٌ عَلِيمٌ ﴿٢١﴾

22. ನಿಮ್ಮಲ್ಲಿ ಅನುಗ್ರಹೀತರು ಮತ್ತು ಸಾಮರ್ಥ್ಯವುಳ್ಳವರು ತಮ್ಮ ಸಂಬಂಧಿಕರಿಗೂ ದರಿದ್ರರಿಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವರಿಗೂ ಸಹಾಯ ಮಾಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿ ಬಿಡಬಾರದು. ಅವರನ್ನು ಕ್ಷಮಿಸಿ ಬಿಡಬೇಕು ಮತ್ತು ಮನ್ನಿಸಬೇಕು. ಅಲ್ಲಾಹನು ನಿಮ್ಮನ್ನು ಕ್ಷಮಿಸಬೇಕೆಂದು ನೀವು ಇಚ್ಛಿಸುವುದಿಲ್ಲವೇ? ಅಲ್ಲಾಹ್ ಅತ್ಯಂತ ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತಾನೆ.[14]

وَلَا يَأْتَلِ أُولُو الْفَضْلِ مِنكُمْ وَالسَّعَةِ أَن يُؤْتُوا أُولِي الْقُرْبَىٰ وَالْمَسَاكِينَ وَالْمُهَاجِرِينَ فِي سَبِيلِ اللَّهِ ۖ وَلْيَعْفُوا وَلْيَصْفَحُوا ۗ أَلَا تُحِبُّونَ أَن يَغْفِرَ اللَّهُ لَكُمْ ۗ وَاللَّهُ غَفُورٌ رَّحِيمٌ ﴿٢٢﴾

14. ಆರೋಪ ಹೊರಿಸುವವರ ಜತೆ ಕೆಲವು ಮುಗ್ಧ ಮುಸ್ಲಿಮರೂ ಸೇರಿಕೊಂಡಿದ್ದ ಹಿನ್ನೆಲೆಯಲ್ಲಿ ಈ ಸೂಕ್ತ ಅವತೀರ್ಣಗೊಂಡಿದೆ. ಆ ಪೈಕಿ ಹ. ಅಬೂಬಕರ್‌ರ(ರ) ಹತ್ತಿರದ ಸಂಬಂಧಿಯೊಬ್ಬರೂ ಸೇರಿದ್ದರು. ಅವರಿಗೆ ಹ. ಅಬೂಬಕರ್(ರ) ಸದಾ ಉಪಕಾರ ಮಾಡುತ್ತಿದ್ದರು. ಈ ವೇದನಾಯುಕ್ತ ಘಟನೆಯ ಬಳಿಕ ಹ. ಅಬೂಬಕರ್(ರ) ಅವರಿಗೆ ಇನ್ನೆಂದೂ ಉಪಕಾರ ಮಾಡದಿರುವ ಶಪಥ

23. ಸುಶೀಲೆಯರಾದ, ಮುಗ್ಧೆಯರಾದ ಸತ್ಯವಿಶ್ವಾಸಿನಿಯರ ಮೇಲೆ ಸುಳ್ಳಾರೋಪ ಹೊರಿಸುವವರನ್ನು ಈ ಲೋಕದಲ್ಲೂ ಪರಲೋಕ ದಲ್ಲೂ ಶಪಿಸಲಾಗಿದೆ ಮತ್ತು ಅವರಿಗಾಗಿ ಮಹಾ ಯಾತನೆ ಇದೆ.

إِنَّ الَّذِينَ يَرْمُونَ الْمُحْصَنَٰتِ الْغَٰفِلَٰتِ الْمُؤْمِنَٰتِ لُعِنُوا فِي الدُّنْيَا وَالْآخِرَةِ وَلَهُمْ عَذَابٌ عَظِيمٌ ﴿٢٣﴾

24. ಅವರು ತಮ್ಮ ನಾಲಗೆಗಳೂ ಕೈಕಾಲುಗಳೂ ಅವರ ಕೃತ್ಯಗಳ ಸಾಕ್ಷ್ಯ ಹೇಳಲಿರುವ ಆ ದಿನವನ್ನು ಮರೆಯದಿರಲಿ.

يَوْمَ تَشْهَدُ عَلَيْهِمْ أَلْسِنَتُهُمْ وَأَيْدِيهِمْ وَأَرْجُلُهُمْ بِمَا كَانُوا يَعْمَلُونَ ﴿٢٤﴾

25. ಅಂದು ಅಲ್ಲಾಹನು ಅವರಿಗೆ ತಕ್ಕುದಾದ ಪ್ರತಿಫಲವನ್ನು ಸಂಪೂರ್ಣವಾಗಿ ಕೊಡುವನು ಮತ್ತು ಅಲ್ಲಾಹನೇ ಪರಮಸತ್ಯನು ಮತ್ತು ಸತ್ಯವನ್ನು ಸತ್ಯವೆಂದು ಸಾಧಿಸಿ ತೋರಿಸುವವನು ಎಂಬುದು ಅವರಿಗೆ ತಿಳಿಯುವುದು.

يَوْمَئِذٍ يُوَفِّيهِمُ اللَّهُ دِينَهُمُ الْحَقَّ وَيَعْلَمُونَ أَنَّ اللَّهَ هُوَ الْحَقُّ الْمُبِينُ ﴿٢٥﴾

26. ದುಶ್ಶೀಲೆಯರು ದುಶ್ಶೀಲರಿಗಾಗಿ ಮತ್ತು ದುಶ್ಶೀಲರು ದುಶ್ಶೀಲೆ ಯರಿಗಾಗಿರುವರು. ಸುಶೀಲೆಯರು ಸುಶೀಲರಿಗಾಗಿ ಮತ್ತು ಸುಶೀಲರು ಸುಶೀಲೆಯರಿಗಾಗಿರುವರು. ಜನರು ಆಡುತ್ತಿರುವ ಮಾತುಗಳಿಂದ ಅವರು ಮುಕ್ತರಾಗಿರುತ್ತಾರೆ. ಅವರಿಗಾಗಿ ಕ್ಷಮೆ ಇದೆ ಮತ್ತು ಸನ್ಮಾನ್ಯ ಜೀವನಾಧಾರವಿದೆ.

الْخَبِيثَٰتُ لِلْخَبِيثِينَ وَالْخَبِيثُونَ لِلْخَبِيثَٰتِ ۖ وَالطَّيِّبَٰتُ لِلطَّيِّبِينَ وَالطَّيِّبُونَ لِلطَّيِّبَٰتِ ۚ أُولَٰٓئِكَ مُبَرَّءُونَ مِمَّا يَقُولُونَ ۖ لَهُمْ مَغْفِرَةٌ وَرِزْقٌ كَرِيمٌ ﴿٢٦﴾

27. ಸತ್ಯವಿಶ್ವಾಸಿಗಳೇ[15] ನಿಮ್ಮ ಮನೆಗಳ ಹೊರತು ಇತರರ ಮನೆಗಳಿಗೆ ಅವರ ಒಪ್ಪಿಗೆ ಪಡೆಯದೆ ಹಾಗೂ ಮನೆಯವರಿಗೆ ಸಲಾಮ್ ಹೇಳದೆ ಪ್ರವೇಶಿಸಬೇಡಿ. ಈ ಕ್ರಮವು ನಿಮ್ಮ ಮಟ್ಟಿಗೆ ಉತ್ತಮ. ನೀವು ಇದನ್ನು ಗಮನದಲ್ಲಿರಿಸುವಿರೆಂದು ನಿರೀಕ್ಷಿಸಲಾಗಿದೆ.

يَٰٓأَيُّهَا الَّذِينَ آمَنُوا لَا تَدْخُلُوا بُيُوتًا غَيْرَ بُيُوتِكُمْ حَتَّىٰ تَسْتَأْنِسُوا وَتُسَلِّمُوا عَلَىٰٓ أَهْلِهَا ۚ ذَٰلِكُمْ خَيْرٌ لَكُمْ لَعَلَّكُمْ تَذَكَّرُونَ ﴿٢٧﴾

28. ಇನ್ನು ಅಲ್ಲಿ ಯಾರೂ ಕಾಣಸದಿದ್ದರೆ ನಿಮಗೆ ಅನುಮತಿ ಸಿಗುವ ವರೆಗೂ ಅದರೊಳಗೆ ಪ್ರವೇಶಿಸಬೇಡಿರಿ[16] ಮತ್ತು ಮರಳಿ

فَإِنْ لَمْ تَجِدُوا فِيهَآ أَحَدًا فَلَا تَدْخُلُوهَا

ಮಾಡಿದರು. ಆದರೆ ಅಲ್ಲಾಹನಿಗೆ ಹ. ಅಬೂಬಕರ್ ಸಿದ್ದೀಕ್‌ರಂತಹ(ರ) ವ್ಯಕ್ತಿ ಕ್ಷಮೆಯ ಧೋರಣೆಯನ್ನು ಅನುಸರಿಸದೇ ಇರುವುದು ಇಷ್ಟವಾಗಲಿಲ್ಲ.

15. ಅಧ್ಯಾಯದ ಆರಂಭದಲ್ಲಿ ನೀಡಲಾದ ಆದೇಶಗಳ ಉದ್ದೇಶ ಸಮಾಜದಲ್ಲಿ ಯಾವುದೇ ರೀತಿಯ ಕೆಡುಕು ತಲೆದೋರಿದರೆ ಅದನ್ನು ನಿವಾರಿಸುವುದು ಹೇಗೆ ಎಂಬುದಕ್ಕಾಗಿತ್ತು. ಮುಂದೆ ನೀಡಲಾಗಿರುವ ಆದೇಶಗಳಲ್ಲಿ ಕೆಡುಕುಗಳು ಸಮಾಜದಲ್ಲಿ ಹುಟ್ಟುವುದನ್ನೂ ಮೂಲದಲ್ಲೇ ತಡೆಗಟ್ಟುವ, ನಾಗರಿಕತೆಯ ರೀತಿ-ನೀತಿಗಳನ್ನು ತಿದ್ದುವ ಮತ್ತು ಕೆಡುಕಿನ ಉಗಮಕ್ಕೆ ಕಾರಣವಾದ ಅಂಶಗಳನ್ನೇ ಕೊನೆಗೊಳಿಸಿಬಿಡುವಂತಹ ಆದೇಶಗಳನ್ನು ಕೊಡಲಾಗಿದೆ.

16. ಅರ್ಥಾತ್- ಖಾಲಿಯಾಗಿರುವ ಯಾರ ಮನೆಗೂ ಪ್ರವೇಶಿಸುವುದು ಧರ್ಮಸಮ್ಮತವಲ್ಲ. ಮನೆಯ ಯಜಮಾನ ಸ್ವತಃ ಅವನಿಗೆ ಅದರ ಅನುಮತಿ ಕೊಟ್ಟಿದ್ದರೆ ಅಭ್ಯಂತರವಿಲ್ಲ. ಉದಾ: ನಾನಿಲ್ಲದಿದ್ದರೂ ನೀವು ನನ್ನ ಕೋಣೆಯಲ್ಲಿ ಕುಳಿತಿರಿ ಎಂದು ಅವನು ನಿಮ್ಮೊಡನೆ ಹೇಳಿರುವುದು ಅಥವಾ ಅವನು ಬೇರೆ ಸ್ಥಳದಲ್ಲಿದ್ದು ನೀವು ಬಂದ ಸಮಾಚಾರ ತಿಳಿದು ಮನೆಯಲ್ಲಿ ಕುಳಿತಿರಿ, ನಾನು ಈಗ ಬರುತ್ತೇನೆ ಎಂದು ಹೇಳಿ ಕಳುಹಿಸಿರುವುದೇ ಮುಂತಾದ ಸಂದರ್ಭಗಳಲ್ಲಿ.

ಹೋಗಿರೆಂದು ನಿಮ್ಮೊಡನೆ ಹೇಳಲಾದರೆ ಮರಳಿ ಬಿಡಿರಿ. ಇದು ನಿಮ್ಮ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮ[17] ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ತಿಳಿದಿರುತ್ತಾನೆ.

حتى يؤذن لكم وإن قيل لكم
ارجعوا فارجعوا هو أزكى لكم
والله بما تعملون عليم ﴿٢٨﴾

29. ಆದರೆ ಯಾರೂ ವಾಸಿಸದಂತಹ ಮತ್ತು ನಿಮಗೆ ಉಪಯೋಗದ ವಸ್ತುವೇನಾದರೂ ಇರುವಂತಹ ನಿವಾಸದೊಳಗೆ ಪ್ರವೇಶಿಸುವುದರಲ್ಲಿ ಅಡ್ಡಿಯಿಲ್ಲ.[18] ನೀವು ಪ್ರಕಟಗೊಳಿಸುವುದನ್ನೂ ಬಚ್ಚಿಡುವುದನ್ನೂ ಅಲ್ಲಾಹನು ಅರಿಯುವನು.

ليس عليكم جناح أن تدخلوا بيوتا
غير مسكونة فيها متاع لكم والله
يعلم ما تبدون وما تكتمون ﴿٢٩﴾

30. ಪೈಗಂಬರರೇ, ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿ ಕೊಳ್ಳಲಿಕ್ಕೂ[19] ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿದ್ದಾನೆ.

قل للمؤمنين يغضوا من أبصارهم
ويحفظوا فروجهم ذلك أزكى لهم
إن الله خبير بما يصنعون ﴿٣٠﴾

31. ಪೈಗಂಬರರೇ, ಸತ್ಯವಿಶ್ವಾಸಿನಿಯರೊಡನೆ ಹೇಳಿರಿ - ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಿ ಕೊಳ್ಳಲಿ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ[20] ಮತ್ತು ತಮ್ಮ ಶೃಂಗಾರಗಳನ್ನು ತೋರಿಸದಿರಲಿ (ಆದರೆ) ಸ್ವಯಂ ಪ್ರಕಟವಾಗುವಂತಹವುಗಳನ್ನು ಹೊರತು. ಮತ್ತು ತಮ್ಮ ಎದೆಯ ಮೇಲೆ ತಮ್ಮ ಮೇಲು ಹೊದಿಕೆಯ

وقل للمؤمنات يغضضن من أبصارهن
ويحفظن فروجهن ولا يبدين
زينتهن إلا ما ظهر منها وليضربن
بخمرهن على جيوبهن ولا يبدين
زينتهن إلا لبعولتهن أو آبائهن أو آباء

17. ಅರ್ಥಾತ್- ಆ ಬಗ್ಗೆ ಬೇಸರಿಸಬಾರದು. ಭೇಟಿಯಾಗ ಬಯಸದಿದ್ದರೆ ಅದನ್ನು ನಿರಾಕರಿಸುವಂತಹ ಹಕ್ಕು ಪ್ರತಿಯೊಬ್ಬ ವ್ಯಕ್ತಿಗೂ ಇದೆ. ಹಾಗೆಯೇ ಯಾವುದಾದರೂ ಕಾರ್ಯಮಗ್ನತೆಯಿಂದಾಗಿ ಭೇಟಿಯಾಗಲು ಸಾಧ್ಯವಿಲ್ಲದಿದ್ದರೆ ವಿಷಾದದೊಂದಿಗೆ ಮರಳಿಸುವ ಅಧಿಕಾರ ಅವನಿಗಿದೆ.

18. ಅರ್ಥಾತ್- ಹೋಟೆಲ್, ವಿಹಾರಧಾಮ, ಅತಿಥಿಗೃಹ, ಅಂಗಡಿ, ಪ್ರವಾಸಧಾಮ ಮುಂತಾದ ಜನರ ಪ್ರವೇಶಕ್ಕೆ ಮುಕ್ತ ಅವಕಾಶವಿರುವ ಸ್ಥಳಗಳು.

19. ಮೂಲದಲ್ಲಿ 'ಗದ್ದೆ ಬಸರ್' ಅಥವಾ ದೃಷ್ಟಿಯನ್ನು ಕೆಳಗಿರಿಸುವ ಆದೇಶ ಕೊಡಲಾಗಿದೆ. ಪ್ರಸ್ತುತ ಪದವನ್ನು 'ದೃಷ್ಟಿಯನ್ನು ಕೆಳಗಿರಿಸುವುದು' ಎಂದು ಭಾಷಾಂತರಿಸಲಾಗುತ್ತದಾದರೂ ಅದರ ಅರ್ಥ, ಸದಾ ಕೆಳಗೇ ನೋಡುತ್ತಿರಬೇಕು ಎಂದಲ್ಲ. ಬದಲಾಗಿ ಎವೆಯಿಕ್ಕದೆ ಕಣ್ತುಂಬ ನೋಡಬಾರದು ಅಥವಾ ಕಣ್ಣನ್ನು ಮುಕ್ತವಾಗಿ ಬಿಟ್ಟು ನೋಡಬಾರದು ಎಂದಾಗಿದೆ. ದೃಷ್ಟಿಯನ್ನು ನಿಯಂತ್ರಿಸುವುದು ಎಂದೂ ಅದನ್ನು ಹೇಳಬಹುದು. ಅರ್ಥಾತ್ ಯಾವುದನ್ನು ನೋಡುವುದು ಸಮಂಜಸವಲ್ಲವೋ ಅದರಿಂದ ದೃಷ್ಟಿಯನ್ನು ಬೇರೆಡೆಗೆ ಸರಿಸುವುದು, ಹಾಗೆ ಮಾಡಲಿಕ್ಕಾಗಿ ಅವನು ಕೆಳಗೆ ನೋಡಿದರೂ ಅಥವಾ ಬೇರಾವ ಕಡೆಗೆ ದೃಷ್ಟಿಹರಿಸಿದರೂ ಸರಿಯೇ. ಹಿನ್ನೆಲೆಯನ್ನು ಗಮನಿಸಿದಾಗ ಪುರುಷರು ಸ್ತ್ರೀಯರನ್ನು ನೋಡುವುದು, ಇನ್ನೊಬ್ಬರ ಲಜ್ಜಾಂಗಗಳ ಮೇಲೆ ದೃಷ್ಟಿಹರಿಸುವುದು ಅಥವಾ ಅಶ್ಲೀಲ ದೃಶ್ಯಗಳನ್ನು ನೋಡುವುದರ ಕುರಿತು ಈ ನಿರ್ಬಂಧ ವಿಧಿಸಲಾಗಿದೆ ಎಂದು ವ್ಯಕ್ತವಾಗುತ್ತದೆ.

20. ಅಲ್ಲಾಹನ ಶರೀಅತ್ ಪುರುಷರ ಮುಂದಿರಿಸಿದಷ್ಟೇ ಬೇಡಿಕೆಗಳನ್ನು ಸ್ತ್ರೀಯರ ಮುಂದೆ ಇರಿಸುವುದಿಲ್ಲವೆಂಬುದು ಗಮನಾರ್ಹ. ಅರ್ಥಾತ್ ದೃಷ್ಟಿಯನ್ನು ಕೆಳಗಿರಿಸುವುದು ಮತ್ತು ಗುಪ್ತಾಂಗಗಳನ್ನು ರಕ್ಷಿಸುವುದು ಮಾತ್ರ ಅವರ ಕರ್ತವ್ಯವಲ್ಲ. ಪುರುಷನ ಮುಂದಿಡಲಾಗದಂತಹ ಕೆಲವೊಂದು ಬೇಡಿಕೆಗಳನ್ನೂ ಅವರ ಮುಂದಿಡಲಾಗುತ್ತದೆ. ಇದರಿಂದ ಈ ವಿಷಯದಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನರಲ್ಲವೆಂದು ವ್ಯಕ್ತವಾಗುತ್ತದೆ.

ಸೆರಗನ್ನು ಹಾಕಿಕೊಂಡಿರಲಿ. ಅವರು ತಮ್ಮ ಶೃಂಗಾರವನ್ನು ಇವರ ಹೊರತು ಇತರರಿಗೆ ತೋರಿಸದಿರಲಿ- ಪತಿಯರು, ತಂದೆಯರು, ಪತಿಯ ತಂದೆಯರು[21], ತಮ್ಮ ಪುತ್ರರು, ಪತಿಯರ ಪುತ್ರರು[22], ಸಹೋದರರು[23], ಸಹೋದರ ಪುತ್ರರು, ಸಹೋದರಿಯರ ಪುತ್ರರು[24], ಆಪ್ತ ಸ್ತ್ರೀಯರು[25], ತಮ್ಮ ದಾಸಿಯರು, ಯಾವುದೇ ದುರಪೇಕ್ಷೆ ಇಲ್ಲದಂತಹ ಅಧೀನ ಸೇವಕರು[26] ಮತ್ತು ಇನ್ನೂ ಸ್ತ್ರೀಯರ ರಹಸ್ಯ ವಿಷಯಗಳನ್ನರಿಯದ ಬಾಲಕರು. ಅವರು, ತಾವು ಮರೆಸಿಟ್ಟಿರುವಂತಹ ಅಲಂಕಾರದ ಅರಿವು ಜನರಿಗಾಗುವಂತೆ ತಮ್ಮ ಪಾದಗಳನ್ನು ನೆಲಕ್ಕೆ ಬಡಿಯುತ್ತಾ ನಡೆಯದಿರಲಿ. ಸತ್ಯ ವಿಶ್ವಾಸಿಗಳೇ! ನೀವೆಲ್ಲರೂ ಸೇರಿ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿರಿ. ನಿಮಗೆ ಯಶಸ್ಸು ಪ್ರಾಪ್ತಿಯಾಗಲೂ ಬಹುದು.

بُعُوْلَتِهِنَّ اَوْ اَبْنَآئِهِنَّ اَوْ اَبْنَآءِ بُعُوْلَتِهِنَّ اَوْ اِخْوَانِهِنَّ اَوْ بَنِيْٓ اِخْوَانِهِنَّ اَوْ بَنِيْٓ اَخَوٰتِهِنَّ اَوْ نِسَآئِهِنَّ اَوْ مَا مَلَكَتْ اَيْمَانُهُنَّ اَوِ التّٰبِعِيْنَ غَيْرِ اُولِي الْاِرْبَةِ مِنَ الرِّجَالِ اَوِ الطِّفْلِ الَّذِيْنَ لَمْ يَظْهَرُوْا عَلٰى عَوْرٰتِ النِّسَآءِ ۠ وَلَا يَضْرِبْنَ بِاَرْجُلِهِنَّ لِيُعْلَمَ مَا يُخْفِيْنَ مِنْ زِيْنَتِهِنَّ ۭ وَتُوْبُوْٓا اِلَى اللّٰهِ جَمِيْعًا اَيُّهَ الْمُؤْمِنُوْنَ لَعَلَّكُمْ تُفْلِحُوْنَ ﴿٣١﴾

32. ನಿಮ್ಮಲ್ಲಿ ಒಂಟಿಯಾಗಿರುವವರ ಮತ್ತು ನಿಮ್ಮ ದಾಸ-ದಾಸಿಯ ರಲ್ಲಿ ಸಜ್ಜನರಾಗಿರುವವರ ವಿವಾಹ ಮಾಡಿ ಬಿಡಿರಿ. ಅವರು ಬಡವರಾಗಿದ್ದರೆ ಅಲ್ಲಾಹ್ ತನ್ನ ಅನುಗ್ರಹದಿಂದ ಅವರನ್ನು ಸಂಪನ್ನಗೊಳಿಸುವನು. ಅಲ್ಲಾಹ್ ಅತಿ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ.

وَاَنْكِحُوا الْاَيَامٰى مِنْكُمْ وَالصّٰلِحِيْنَ مِنْ عِبَادِكُمْ وَاِمَآئِكُمْ ۭ اِنْ يَّكُوْنُوْا فُقَرَآءَ يُغْنِهِمُ اللّٰهُ مِنْ فَضْلِهٖ ۭ وَاللّٰهُ وَاسِعٌ عَلِيْمٌ ﴿٣٢﴾

33. ವಿವಾಹಾನುಕೂಲತೆ ಒದಗದವರು ಅಲ್ಲಾಹನು ತನ್ನ ಅನುಗ್ರಹ ದಿಂದ ಅವರನ್ನು ಸಂಪನ್ನಗೊಳಿಸುವವರೆಗೂ ಸಚ್ಚಾರಿತ್ರ್ಯವನ್ನು ಕಾಯ್ದುಕೊಳ್ಳಬೇಕು ಮತ್ತು ನಿಮ್ಮ ದಾಸರ ಪೈಕಿ ವಿಮೋಚನಾ ಕರಾರಿಗಾಗಿ ನಿವೇದಿಸಿಕೊಳ್ಳುವವರಲ್ಲಿ ಒಳಿತಿದೆ ಎಂದು ನಿಮಗೆ ತಿಳಿದು ಬಂದರೆ[27] ಅವರೊಡನೆ ವಿಮೋಚನಾ ಕರಾರು

وَلْيَسْتَعْفِفِ الَّذِيْنَ لَا يَجِدُوْنَ نِكَاحًا حَتّٰى يُغْنِيَهُمُ اللّٰهُ مِنْ فَضْلِهٖ ۭ وَالَّذِيْنَ يَبْتَغُوْنَ الْكِتٰبَ مِمَّا مَلَكَتْ اَيْمَانُكُمْ فَكَاتِبُوْهُمْ اِنْ عَلِمْتُمْ فِيْهِمْ خَيْرًا ڰ

21. 'ತಂದೆ' ಎಂಬುದರಲ್ಲಿ ಅಜ್ಜ-ಮುತ್ತಜ್ಜ ಎಂಬ ಅರ್ಥವೂ ಅಡಕವಾಗಿದೆ. ಆದ್ದರಿಂದ ಸ್ತ್ರೀಯು ತನ್ನ ತಂದೆ ಮತ್ತು ಮಾವನ(ಪತಿಯ ತಂದೆ) ಮುಂದೆ ಬರುವಾಗ ಇರುವ ಸ್ಥಿತಿಯಲ್ಲೇ ಅಜ್ಜನ ಮನೆಯ ಎಲ್ಲಾ ಹಿರಿಯರ ಮುಂದೆಯೂ ಬರಬಹುದು.

22. ಪುತ್ರರು ಎಂಬ ಪದದಲ್ಲಿ ಮೊಮ್ಮಕ್ಕಳು, ಮರಿಮಕ್ಕಳು ಎಂಬ ಪದವೂ ಅಡಕವಾಗಿದೆ. ಈ ವಿಷಯದಲ್ಲಿ ಸ್ವಂತ ಮಕ್ಕಳು ಮತ್ತು ಮಲಮಕ್ಕಳು ಎಂಬ ಭೇದವನ್ನೂ ಕಲ್ಪಿಸಲಾಗಿಲ್ಲ. ತನ್ನ ಮಕ್ಕಳು ಮತ್ತು ಮೊಮ್ಮಕ್ಕಳ ಮುಂದೆ ಶೃಂಗಾರ ಪ್ರಕಟಣೆ ಮಾಡುವಂತೆಯೇ ತನ್ನ ಮಲಮಕ್ಕಳ ಸಂತಾನದ ಮುಂದೆಯೂ ಆಕೆ ಅಷ್ಟೇ ಸ್ವಾತಂತ್ರ್ಯದಿಂದ ಇರಬಹುದು.

23. 'ಸಹೋದರರು' ಎಂಬ ಪದದಲ್ಲಿ ಸ್ವಂತ ಸಹೋದರರೂ, ಮಲಸಹೋದರರೂ ಸೇರಿದ್ದಾರೆ.

24. ಸಹೋದರ-ಸಹೋದರಿಯರೆಂದರೆ ಮೂರೂ ವಿಧದ ಸಹೋದರ ಸಹೋದರಿಯರಾಗಿದ್ದಾರೆ. ಅವರ ಪುತ್ರರು ಮತ್ತು ಪೌತ್ರರು ಅವರ ಮಕ್ಕಳ ಸಾಲಿನಲ್ಲಿ ಸೇರುತ್ತಾರೆ.

25. ದುಶ್ಶೀಲೆಯರಾದ ಕೆಟ್ಟ ಸ್ತ್ರೀಯರ ಮುಂದೆ ಒಳ್ಳೆಯ ಮುಸ್ಲಿಮ್ ಸ್ತ್ರೀಯು ತಮ್ಮ ಸೌಂದರ್ಯವನ್ನು ಪ್ರಕಟಿಸಬಾರದೆಂದೂ ಇದರಿಂದ ಸಹಜವಾಗಿಯೇ ವ್ಯಕ್ತವಾಗುತ್ತದೆ.

26. ಅರ್ಥಾತ್- ಅಧೀನರಾಗಿರುವವರಾದ್ದರಿಂದ ಮನೆಯ ಸ್ತ್ರೀಯರ ಬಗ್ಗೆ ಯಾವುದೇ ಕೆಟ್ಟ ಭಾವನೆ ಹೊಂದುವ ಧೈರ್ಯ ತೋರುವ ಗುಮಾನಿಗೆ ಆಸ್ಪದ ಇಲ್ಲದಂತಹವರು.

27. ಒಳಿತು ಎಂದರೆ ಎರಡು ವಿಷಯಗಳಾಗಿವೆ. ಮೊದಲನೆಯದಾಗಿ ದಾಸನಲ್ಲಿ ವಿಮೋಚನಾ ಕರಾರಿನ ಮೊತ್ತವನ್ನು ಕೊಡಲು ಅರ್ಹತೆ

ಮಾಡಿಕೊಳ್ಳಿರಿ[28] ಮತ್ತು ಅಲ್ಲಾಹನು ಕೊಟ್ಟಿರುವ ಸಂಪತ್ತಿನಿಂದ ಅವರಿಗೆ ಕೊಡಿರಿ.[29] ನಿಮ್ಮ ದಾಸಿಯರು ಸ್ವತಃ ಸುಶೀಲೆಯರಾಗಿರಲು ಬಯಸುವಾಗ[30] ಅವರನ್ನು ಲೌಕಿಕ ಲಾಭಗಳಿಗಾಗಿ ವೇಶ್ಯಾವೃತ್ತಿಗೆ ನಿರ್ಬಂಧಿಸಬೇಡಿರಿ[31], ಅವರನ್ನು ಯಾರಾದರೂ ಒತ್ತಾಯಿಸಿದರೆ ಈ ಒತ್ತಡದ ಅನಂತರ ಅಲ್ಲಾಹ್ ಅವರ (ದಾಸಿಯರ) ಮಟ್ಟಿಗೆ ಕ್ಷಮಾದಾನಿಯೂ ಕರುಣಾನಿಧಿಯೂ ಆಗಿರುತ್ತಾನೆ.

وَآتُوهُم مِّن مَّالِ اللَّهِ الَّذِي آتَاكُمْ ۚ وَلَا تُكْرِهُوا فَتَيَاتِكُمْ عَلَى الْبِغَاءِ إِنْ أَرَدْنَ تَحَصُّنًا لِّتَبْتَغُوا عَرَضَ الْحَيَاةِ الدُّنْيَا ۚ وَمَن يُكْرِههُّنَّ فَإِنَّ اللَّهَ مِن بَعْدِ إِكْرَاهِهِنَّ غَفُورٌ رَّحِيمٌ ﴿٣٣﴾

34. ನಾವು ಸುಸ್ಪಷ್ಟ ಮಾರ್ಗದರ್ಶನ ನೀಡುವ ಸೂಕ್ತಗಳನ್ನು ನಿಮ್ಮ ಬಳಿಗೆ ಕಳುಹಿಸಿದ್ದೇವೆ. ನಿಮಗಿಂತ ಮುಂಚೆ ಗತಿಸಿದ ಜನಾಂಗಗಳ ಬೋಧಪ್ರದ ದೃಷ್ಟಾಂತಗಳನ್ನೂ ಭಯವಿರಿಸಿಕೊಳ್ಳುವವರಿಗೆ ಉಪದೇಶಗಳನ್ನೂ ನಾವು ನಿಮ್ಮ ಮುಂದಿರಿಸಿದ್ದೇವೆ.

وَلَقَدْ أَنزَلْنَا إِلَيْكُمْ آيَاتٍ مُّبَيِّنَاتٍ وَمَثَلًا مِّنَ الَّذِينَ خَلَوْا مِن قَبْلِكُمْ وَمَوْعِظَةً لِّلْمُتَّقِينَ ﴿٣٤﴾

35. ಅಲ್ಲಾಹನು ಭೂಮಿ-ಆಕಾಶಗಳ ಪ್ರಕಾಶವಾಗಿರುವನು.[32] (ವಿಶ್ವದಲ್ಲಿ) ಅವನ ಪ್ರಕಾಶದ ಉಪಮೆ ಹೀಗಿದೆ; ಒಂದು ಗೋಡೆ ಗೂಡಿನಲ್ಲಿ ಒಂದು ದೀಪವನ್ನಿಡಲಾಗಿದೆ. ದೀಪವು ಒಂದು ಗಾಜಿನ ಬುರುಡೆಯೊಳಗಿದೆ. ಬುರುಡೆಯು ಮುತ್ತಿನಂತೆ ಹೊಳೆಯುವ ತಾರೆಯಂತಿದೆ. ಆ ದೀಪವನ್ನು ಪೌರ್ವಾತ್ಯವೂ ಪಾಶ್ಚಿಮಾತ್ಯವೂ ಅಲ್ಲದ ಇಪ್ಪೆಯ(Olive) ಒಂದು ಸಮೃದ್ಧ ಮರದ ಎಣ್ಣೆಯಿಂದ ಬೆಳಗಿಸಲಾಗುತ್ತದೆ. ಅದರ ಎಣ್ಣೆಗೆ ಬೆಂಕಿ ತಾಗದಿದ್ದರೂ ಅದು ತಾನಾಗಿಯೇ ಪ್ರಜ್ವಲಿಸುತ್ತದೆ. (ಹೀಗೆ) ಪ್ರಕಾಶದ ಮೇಲೆ ಪ್ರಕಾಶ (ವನ್ನು ವರ್ಧಿಸುವ ಎಲ್ಲಾ ಸಾಧನಗಳು ಒಟ್ಟುಗೂಡಿರುತ್ತವೆ)[33] ಅಲ್ಲಾಹನು ತಾನಿಚ್ಛಿಸಿದವರಿಗೆ ತನ್ನ

اللَّهُ نُورُ السَّمَاوَاتِ وَالْأَرْضِ ۚ مَثَلُ نُورِهِ كَمِشْكَاةٍ فِيهَا مِصْبَاحٌ ۖ الْمِصْبَاحُ فِي زُجَاجَةٍ ۖ الزُّجَاجَةُ كَأَنَّهَا كَوْكَبٌ دُرِّيٌّ يُوقَدُ مِن شَجَرَةٍ مُّبَارَكَةٍ زَيْتُونَةٍ لَّا شَرْقِيَّةٍ وَلَا غَرْبِيَّةٍ يَكَادُ زَيْتُهَا يُضِيءُ وَلَوْ لَمْ تَمْسَسْهُ نَارٌ ۚ نُّورٌ عَلَىٰ نُورٍ ۗ يَهْدِي اللَّهُ لِنُورِهِ مَن يَشَاءُ ۚ وَيَضْرِبُ اللَّهُ الْأَمْثَالَ

ಇರಬೇಕು. ಎರಡನೆಯದಾಗಿ ಅವನಲ್ಲಿ ಅವನ ಮಾತಿಗೆ ಒಪ್ಪಿ ಕರಾರು ಮಾಡಬಹುದಾದಷ್ಟು ಪ್ರಾಮಾಣಿಕತೆ ಮತ್ತು ಸತ್ಯಸಂಧತೆ ಇರಬೇಕು.

28. ವಿಮೋಚನಾ ಕರಾರು ಮಾಡುವುದೆಂದರೆ, ಒಬ್ಬ ದಾಸ ಅಥವಾ ದಾಸಿ ತನ್ನ ಸ್ವಾತಂತ್ರ್ಯಕ್ಕಾಗಿ ಯಜಮಾನನಿಗೆ ಪರಿಹಾರ ನೀಡುವ ಪ್ರಸ್ತಾಪ ಮಾಡಿದಾಗ ಯಜಮಾನ ಅದನ್ನು ಸ್ವೀಕರಿಸಿಕೊಂಡರೆ ಆ ಕುರಿತು ಶರತ್ತುಗಳನ್ನು ದಾಖಲಿಸಬೇಕು.

29. ಇದು ಸಾರ್ವತ್ರಿಕ ಆದೇಶ. ಯಜಮಾನನು ಸ್ವಲ್ಪ ಮೊತ್ತವನ್ನು ಕ್ಷಮಿಸಿ ಬಿಡಬೇಕು. ಇತರ ಮುಸ್ಲಿಮರೂ ಅವನಿಗೆ ನೆರವಾಗಬೇಕು. ಬೈತುಲ್ ಮಾಲ್‌ನ ಮೂಲಕವೂ ಅವರಿಗೆ ನೆರವಾಗಬೇಕು.

30. ಅರ್ಥಾತ್- ದಾಸಿ ತನ್ನಿಚ್ಛೆಯಿಂದ ಅನೈತಿಕ ಕೆಲಸ ಮಾಡಿದ್ದರೆ ಆ ಅಪರಾಧಕ್ಕೆ ಆಕೆಯೇ ಜವಾಬ್ದಾರಳು. ಶಾಸನ ಈ ಅಪರಾಧಕ್ಕಾಗಿ ಆಕೆಯನ್ನೇ ತಪ್ಪಿತಸ್ಥಳೆಂದು ಪರಿಗಣಿಸುವುದು. ಆದರೆ ಆಕೆಯ ಯಜಮಾನ ಒತ್ತಾಯಪೂರ್ವಕವಾಗಿ ಆಕೆಯಿಂದ ಈ ಕೆಲಸ ಮಾಡಿಸಿದರೆ ಅದರ ಹೊಣೆಗಾರಿಕೆ ಯಜಮಾನನ ಮೇಲಿರುವುದು. ಆ ಅಪರಾಧಕ್ಕಾಗಿ ಅವನನ್ನೇ ತಪ್ಪಿತಸ್ಥನೆಂದು ಪರಿಗಣಿಸಲಾಗುವುದು.

31. ಅಜ್ಞಾನ ಕಾಲದಲ್ಲಿ ಅರಬರು ದಾಸಿಯರಿಂದ ವೇಶ್ಯಾವಾಟಿಕೆ ನಡೆಸುತ್ತಿದ್ದರು ಮತ್ತು ಅದರ ಸಂಪಾದನೆಯನ್ನು ಉಪಯೋಗಿಸುತ್ತಿದ್ದರು. ಇಸ್ಲಾಮ್ ಈ ವೃತ್ತಿಯನ್ನು ನಿಷೇಧಿಸಿತು.

32. ಅರ್ಥಾತ್- ನಿಸರ್ಗದಲ್ಲಿ ಗೋಚರಿಸುತ್ತಿರುವುದೆಲ್ಲವೂ ಅವನ ಪ್ರಕಾಶದಿಂದಲೇ ಆಗಿದೆ.

33. ಈ ಉದಾಹರಣೆಯಲ್ಲಿ ಅಲ್ಲಾಹನನ್ನು ದೀಪಕ್ಕೂ ನಿಸರ್ಗವನ್ನು ಗೋಡೆಗೂಡಿಗೂ ಹೋಲಿಸಲಾಗಿದೆ. ಗಾಜಿನ ಬುರುಡೆಯೆಂದರೆ ದೇವನು

ಪ್ರಕಾಶದೆಡೆಗೆ ಮಾರ್ಗದರ್ಶನ ನೀಡುತ್ತಾನೆ. ಅವನು ಜನರಿಗೆ ಉಪಮೆಗಳ ಮೂಲಕ ಮನವರಿಕೆ ಮಾಡಿಸುತ್ತಾನೆ. ಅಲ್ಲಾಹನು ಸಕಲ ವಸ್ತುಗಳನ್ನೂ ಬಲ್ಲವನಾಗಿರುತ್ತಾನೆ.

لِلنَّاسِ ۗ وَاللَّهُ بِكُلِّ شَيْءٍ عَلِيمٌ ﴿٣٥﴾

36-37. (ಅವನ ಪ್ರಕಾಶದ ಕಡೆಗೆ ಮಾರ್ಗದರ್ಶನ ಪಡೆಯುವವರು) ಅಲ್ಲಾಹನು ಉನ್ನತಗೊಳಿಸಲು ಹಾಗೂ ಅವುಗಳಲ್ಲಿ ತನ್ನ ನಾಮಸ್ಮರಣೆ ಮಾಡಲು ಅನುಮತಿ ನೀಡಿರುವಂತಹ ಮನೆಗಳಲ್ಲಿ ಕಂಡು ಬರುತ್ತಾರೆ. ಅವುಗಳೊಳಗೆ ಬೆಳಗು ಬೈಗುಗಳಲ್ಲಿ ಅವನ ಕೀರ್ತನೆ ಮಾಡುತ್ತಿರುವವರನ್ನು ವ್ಯಾಪಾರ ಮತ್ತು ಕ್ರಯ-ವಿಕ್ರಯಗಳು, ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನ ಸಂಸ್ಥಾಪನೆಯಿಂದಲೂ ಝಕಾತಿನ ಪಾವತಿಯಿಂದಲೂ ಅಲಕ್ಷ್ಯರಾಗಿ ಮಾಡುವುದಿಲ್ಲ. ಹೃದಯಗಳು ಪಲ್ಲಟಗೊಳ್ಳುವ ಮತ್ತು ದೃಷ್ಟಿಗಳು ಸ್ತಬ್ಧಗೊಳ್ಳುವಂತಹ ಆ ದಿನವನ್ನು ಅವರು ಭಯಪಡುತ್ತಿರುವರು.

فِي بُيُوتٍ أَذِنَ اللَّهُ أَنْ تُرْفَعَ وَيُذْكَرَ فِيهَا اسْمُهُ يُسَبِّحُ لَهُ فِيهَا بِالْغُدُوِّ وَالْآصَالِ ﴿٣٦﴾
رِجَالٌ لَا تُلْهِيهِمْ تِجَارَةٌ وَلَا بَيْعٌ عَنْ ذِكْرِ اللَّهِ وَإِقَامِ الصَّلَاةِ وَإِيتَاءِ الزَّكَاةِ ۙ يَخَافُونَ يَوْمًا تَتَقَلَّبُ فِيهِ الْقُلُوبُ وَالْأَبْصَارُ ﴿٣٧﴾

38. ಅಲ್ಲಾಹನು ಅವರಿಗೆ ಅವರ ಅತ್ಯುತ್ತಮ ಕರ್ಮದ ಫಲಗಳನ್ನು ಮತ್ತು ತನ್ನ ಅನುಗ್ರಹದಿಂದ ಇನ್ನಷ್ಟನ್ನು ದಯಪಾಲಿಸುವಂತಾಗಲಿಕ್ಕಾಗಿ (ಅವರು ಇದನ್ನೆಲ್ಲಾ ಮಾಡುತ್ತಾರೆ). ಅಲ್ಲಾಹನು ತಾನಿಚ್ಛಿಸಿದವರಿಗೆ ಅಪರಿಮಿತವಾಗಿ ನೀಡುತ್ತಾನೆ.

لِيَجْزِيَهُمُ اللَّهُ أَحْسَنَ مَا عَمِلُوا وَيَزِيدَهُمْ مِنْ فَضْلِهِ ۗ وَاللَّهُ يَرْزُقُ مَنْ يَشَاءُ بِغَيْرِ حِسَابٍ ﴿٣٨﴾

39. (ಇದಕ್ಕೆ ವ್ಯತಿರಿಕ್ತವಾಗಿ) ಸತ್ಯನಿಷೇಧವನ್ನು ಕೈಗೊಂಡವರ ಕರ್ಮಗಳ ಉದಾಹರಣೆ ಹೀಗಿದೆ; ನಿರ್ಜಲ ಮರುಭೂಮಿಯಲ್ಲಿರುವ ಮರೀಚಿಕೆ. ಅದನ್ನು ಬಾಯಾರಿಕೆಯಾದವನು ನೀರೆಂದು ಭ್ರಮಿಸಿದ್ದನು. ಆದರೆ ಅಲ್ಲಿಗೆ ತಲುಪಿದಾಗ ಅಲ್ಲೇನನ್ನೂ ಕಾಣಲಿಲ್ಲ. ಬದಲಾಗಿ ಅಲ್ಲಿ ಅವನು ಅಲ್ಲಾಹನನ್ನು ಕಂಡನು. ಅವನು (ಅಲ್ಲಾಹನು) ಅವನ ಲೆಕ್ಕವನ್ನು ಸಂಪೂರ್ಣವಾಗಿ ತೀರಿಸಿಬಿಟ್ಟನು ಮತ್ತು ಅಲ್ಲಾಹನಿಗೆ ಲೆಕ್ಕ ತೀರಿಸುವುದರಲ್ಲಿ ವಿಳಂಬವಾಗುವುದಿಲ್ಲ.

وَالَّذِينَ كَفَرُوا أَعْمَالُهُمْ كَسَرَابٍ بِقِيعَةٍ يَحْسَبُهُ الظَّمْآنُ مَاءً حَتَّىٰ إِذَا جَاءَهُ لَمْ يَجِدْهُ شَيْئًا وَوَجَدَ اللَّهَ عِنْدَهُ فَوَفَّاهُ حِسَابَهُ ۗ وَاللَّهُ سَرِيعُ الْحِسَابِ ﴿٣٩﴾

ತನ್ನನ್ನು ಸೃಷ್ಟಿಗಳ ದೃಷ್ಟಿಯಿಂದ ಮರೆಮಾಚಲು ಮಾಡಿರುವ ಪರದೆ. ಆದರೆ ಈ ಪರದೆ ಮರೆಮಾಚಲು ಇರುವುದಲ್ಲ. ಬದಲಾಗಿ ಅತ್ಯಂತ ತೀವ್ರವಾಗಿ ಪ್ರಶೋಭಿ ಸುವ ಪರದೆಯಂತಿದೆ. ಸೃಷ್ಟಿಗಳ ಕಣ್ಣುಗಳು ಅದನ್ನು ನೋಡಲು ಅಸಮರ್ಥವಾಗಿವೆ. ಏಕೆಂದರೆ ಅದೆಷ್ಟು ತೀಕ್ಷ್ಣ, ವಿಸ್ತೃತ ಮತ್ತು ವ್ಯಾಪಕವಾಗಿದೆಯೆಂದರೆ ಪರಿಮಿತ ಶಕ್ತಿಯನ್ನು ಹೊಂದಿರುವ ದೃಷ್ಟಿಗಳಿಂದ ಅದನ್ನು ನೋಡಲು ಸಾಧ್ಯವಿಲ್ಲ. ಇನ್ನು "ಆ ದೀಪವನ್ನು ಪೌರ್ವಾತ್ಯವೂ ಪಾಶ್ಚಿಮಾತ್ಯವೂ ಅಲ್ಲದ ಆಲಿವ್‌ನ ಎಣ್ಣೆಯಿಂದ ಬೆಳಗಿಸಲಾಗುತ್ತದೆ" ಎಂಬ ವಿಷಯ. ಇದನ್ನು ದೀಪದ ಬೆಳಕಿನ ಪರಿಪೂರ್ಣತೆ ಮತ್ತು ತೀಕ್ಷ್ಣತೆಯ ಭಾವನೆ ಮೂಡಿಸಲಿಕ್ಕಾಗಿ ಹೇಳಲಾಗಿದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಆಲಿವ್‌ನ ಎಣ್ಣೆಯಿಂದ ಹೊತ್ತಿಸಲಾಗುವ ಕಂದೀಲುಗಳಿಂದ ಗರಿಷ್ಠ ಬೆಳಕು ಸಿಗುತ್ತಿತ್ತು. ಅದರಲ್ಲೂ ಎತ್ತರವಾದ ಮತ್ತು ಬಯಲು ಪ್ರದೇಶದಲ್ಲಿ ಹುಟ್ಟಿದ ಆಲಿವ್ ಮರದಿಂದ ತೆಗೆಯ ಲಾದ ಎಣ್ಣೆಯಿಂದ ಉರಿಸುವ ದೀಪಗಳು ಅತ್ಯಂತ ಪ್ರಕಾಶಮಯವಾಗಿರುತ್ತಿದ್ದುವು. "ಬೆಂಕಿ ತಾಗಿದರೂ ಇಲ್ಲದಿದ್ದರೂ ಅದು ತಾನಾಗಿಯೇ ಉರಿದೇಳುತ್ತದೆ" ಎಂಬ ನಿರೂಪಣೆಯ ಉದ್ದೇಶವೂ ದೀಪದ ಪ್ರಕಾಶ ಅತ್ಯಂತ ತೀಕ್ಷ್ಣವಾಗಿದೆ ಎಂಬ ಭಾವನೆಯನ್ನು ಮೂಡಿಸುವುದೇ ಆಗಿದೆ.

40. ಅಥವಾ ಅವನ ಉದಾಹರಣೆ ಹೀಗಿದೆ;- ಒಂದು ಆಳವಾದ ಸಾಗರದಲ್ಲಿ ಅಂಧಕಾರ, ಮೇಲೊಂದು ತೆರೆ ಆವರಿಸಿದೆ, ಅದರ ಮೇಲೆ ಇನ್ನೊಂದು ತೆರೆ ಮತ್ತು ಅದರ ಮೇಲೆ ಮೋಡ ಆವರಿಸಿಕೊಂಡಿದೆ. ಅಂಧಕಾರದ ಮೇಲೆ ಅಂಧಕಾರ ಕವಿದಿದೆ. ಮನುಷ್ಯನು ತನ್ನ ಕೈಯನ್ನು ಹೊರ ಚಾಚಿದರೆ ಅದೂ ಅವನಿಗೆ ಕಾಣದು. ಯಾರಿಗೆ ಅಲ್ಲಾಹನು ಪ್ರಕಾಶವನ್ನು ದಯಪಾಲಿಸ ಲಿಲ್ಲವೋ ಅವನಿಗೆ ಬೇರಾವ ಪ್ರಕಾಶವೂ ಇಲ್ಲ.

أَوْ كَظُلُمَاتٍ فِي بَحْرٍ لُّجِّيٍّ يَغْشَاهُ مَوْجٌ مِّن فَوْقِهِ مَوْجٌ مِّن فَوْقِهِ سَحَابٌ ۚ ظُلُمَاتٌ بَعْضُهَا فَوْقَ بَعْضٍ ۚ إِذَا أَخْرَجَ يَدَهُ لَمْ يَكَدْ يَرَاهَا ۗ وَمَن لَّمْ يَجْعَلِ اللَّهُ لَهُ نُورًا فَمَا لَهُ مِن نُّورٍ ﴿٤٠﴾

41. ಭೂಮಿ-ಆಕಾಶಗಳಲ್ಲಿ ಇರುವವುಗಳೆಲ್ಲವೂ ರೆಕ್ಕೆ ಬಿಚ್ಚಿ ಹಾರುತ್ತಿ ರುವ ಹಕ್ಕಿಗಳೂ ಅಲ್ಲಾಹನ ಕೀರ್ತನೆ ಮಾಡುತ್ತಿರುವುದನ್ನು ನೀವು ನೋಡುತ್ತಿಲ್ಲವೇ? ಪ್ರತಿಯೊಂದಕ್ಕೂ ತನ್ನ ನಮಾಝಿನ ಮತ್ತು ಕೀರ್ತನೆಯ ಕ್ರಮ ಗೊತ್ತಿದೆ. ಇವೆಲ್ಲವೂ ಮಾಡುತ್ತಿರುವು ದನ್ನು ಅಲ್ಲಾಹನು ಅರಿತಿರುತ್ತಾನೆ.

أَلَمْ تَرَ أَنَّ اللَّهَ يُسَبِّحُ لَهُ مَن فِي السَّمَاوَاتِ وَالْأَرْضِ وَالطَّيْرُ صَافَّاتٍ ۖ كُلٌّ قَدْ عَلِمَ صَلَاتَهُ وَتَسْبِيحَهُ ۗ وَاللَّهُ عَلِيمٌ بِمَا يَفْعَلُونَ ﴿٤١﴾

42. ಭೂಮಿ-ಆಕಾಶಗಳ ಸಾರ್ವಭೌಮತೆಯು ಅಲ್ಲಾಹನಿಗೆ ಇದೆ ಮತ್ತು ಅವನ ಕಡೆಗೆ ಎಲ್ಲರಿಗೂ ಮರಳಲಿಕ್ಕಿದೆ.

وَلِلَّهِ مُلْكُ السَّمَاوَاتِ وَالْأَرْضِ ۖ وَإِلَى اللَّهِ الْمَصِيرُ ﴿٤٢﴾

43. ನೀವು ನೋಡುತ್ತಿಲ್ಲವೇ? ಅಲ್ಲಾಹನು ಮೋಡವನ್ನು ಮೆಲ್ಲ ಮೆಲ್ಲನೆ ಚಲಾಯಿಸುತ್ತಾನೆ. ಅನಂತರ ಅದರ ತುಂಡುಗಳನ್ನು ಪರಸ್ಪರ ಜೋಡಿಸುತ್ತಾನೆ. ತರುವಾಯ ಅದನ್ನು ಒಟ್ಟು ಗೂಡಿಸಿ ಒಂದು ಘನೀಕೃತ ಮೋಡವನ್ನಾಗಿ ಮಾಡುತ್ತಾನೆ. ಆ ಬಳಿಕ ಅದರ ಹೊರಾವರಣದಿಂದ ಮಳೆಯ ಬಿಂದುಗಳು ಹನಿ ಹನಿಯಾಗಿ ಬೀಳುತ್ತಿರುವುದನ್ನು ನೀವು ನೋಡುತ್ತೀರಿ ಮತ್ತು ಅವನು ಆಕಾಶದಿಂದ ಅದರಲ್ಲಿ ಉನ್ನತವಾಗಿರುವ ಪರ್ವತ ಗಳಿಂದಾಗಿ[34] ಆಲಿಕಲ್ಲುಗಳನ್ನು ಬೀಳಿಸಿ ಅದರಿಂದ ತಾನಿಚ್ಛಿಸು ವವರಿಗೆ ಹಾನಿಯುಂಟು ಮಾಡುತ್ತಾನೆ ಮತ್ತು ತಾನಿಚ್ಛಿಸುವವರನ್ನು ಅವುಗಳಿಂದ ರಕ್ಷಿಸುತ್ತಾನೆ. ಅದರ ಮಿಂಚಿನ ಹೊಳಪು ಕಣ್ಣು ಗಳನ್ನು ಕೋರೈಸಿ ಬಿಡುತ್ತದೆ.

أَلَمْ تَرَ أَنَّ اللَّهَ يُزْجِي سَحَابًا ثُمَّ يُؤَلِّفُ بَيْنَهُ ثُمَّ يَجْعَلُهُ رُكَامًا فَتَرَى الْوَدْقَ يَخْرُجُ مِنْ خِلَالِهِ وَيُنَزِّلُ مِنَ السَّمَاءِ مِن جِبَالٍ فِيهَا مِن بَرَدٍ فَيُصِيبُ بِهِ مَن يَشَاءُ وَيَصْرِفُهُ عَن مَّن يَشَاءُ ۖ يَكَادُ سَنَا بَرْقِهِ يَذْهَبُ بِالْأَبْصَارِ ﴿٤٣﴾

34. ಇದರ ಅರ್ಥ ಚಳಿಯಿಂದ ಹೆಪ್ಪುಗಟ್ಟಿದ ಮೋಡಗಳೂ ಆಗಬಹುದು. ಅವುಗಳನ್ನು ಆಲಂಕಾರಿಕವಾಗಿ ಆಕಾಶದ ಪರ್ವತಗಳು ಎನ್ನಲಾಗಿದೆ. ಗಗನದೆತ್ತರಕ್ಕೆ ಚಾಚಿ ನಿಂತಿರುವ ಭೂಮಿಯ ಪರ್ವತಗಳನ್ನೂ ಹೀಗೆ ಹೇಳಲಾಗಿರಬಹುದು. ಅವುಗಳ ಉನ್ನತ ಶಿಖರಗಳಲ್ಲಿ ಗಟ್ಟಿಯಾಗಿರುವ ಹಿಮದಿಂದ ಗಾಳಿ ಎಷ್ಟು ತಣ್ಣಗಾಗಿ ಬಿಡುತ್ತದೆಂದರೆ ಅದರ ಪ್ರಭಾವದಿಂದ ಮೋಡಗಳು ಹೆಪ್ಪುಗಟ್ಟುತ್ತವೆ. ಅನಂತರ ಉಣ್ಣೆಯಂತೆ ಗೋಚರಿಸುವ ಹಿಮದ ಮಳೆಯಾಗ ತೊಡಗುತ್ತದೆ.

44. ರಾತ್ರಿ ಹಗಲುಗಳ ಪರಿವರ್ತನೆಯನ್ನು ಅವನೇ ಮಾಡುತ್ತಿರುತ್ತಾನೆ. ನಿಶ್ಚಯವಾಗಿಯೂ ಇದರಲ್ಲಿ ಕಣ್ಣುಳ್ಳವರಿಗೆ ಒಂದು ಪಾಠವಿದೆ.

يُقَلِّبُ اللّٰهُ الَّيْلَ وَالنَّهَارَ ۗ اِنَّ فِيْ ذٰلِكَ لَعِبْرَةً لِّاُولِي الْاَبْصَارِ ﴿٤٤﴾

45. ಅಲ್ಲಾಹನು ಪ್ರತಿಯೊಂದು ಜೀವಿಯನ್ನು ಒಂದು ವಿಧದ ನೀರಿನಿಂದ ಸೃಷ್ಟಿಸಿದನು. ಆ ಪೈಕಿ ಕೆಲವು ಹೊಟ್ಟೆಯನ್ನಾಧರಿಸಿ ನಡೆದರೆ, ಇನ್ನು ಕೆಲವು ಎರಡು ಕಾಲುಗಳ ಮೇಲೂ ಮತ್ತೆ ಕೆಲವು ನಾಲ್ಕು ಕಾಲುಗಳ ಮೇಲೂ ನಡೆಯುತ್ತವೆ. ಅವನು ತಾನಿಚ್ಛಿಸಿದ್ದನ್ನು ಸೃಷ್ಟಿಸುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹನು ಸರ್ವ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನು.

وَاللّٰهُ خَلَقَ كُلَّ دَآبَّةٍ مِّنْ مَّآءٍ ۚ فَمِنْهُمْ مَّنْ يَّمْشِيْ عَلٰى بَطْنِهٖ ۚ وَمِنْهُمْ مَّنْ يَّمْشِيْ عَلٰى رِجْلَيْنِ ۚ وَمِنْهُمْ مَّنْ يَّمْشِيْ عَلٰۤى اَرْبَعٍ ؕ يَخْلُقُ اللّٰهُ مَا يَشَآءُ ؕ اِنَّ اللّٰهَ عَلٰى كُلِّ شَيْءٍ قَدِيْرٌ ﴿٤٥﴾

46. ನಾವು ಸುವ್ಯಕ್ತ ವಾಸ್ತವಿಕತೆಯನ್ನು ತಿಳಿಸುವಂತಹ ಸೂಕ್ತಗಳನ್ನು ಅವತೀರ್ಣಗೊಳಿಸಿದ್ದೇವೆ. ಮುಂದೆ ನೇರ ಮಾರ್ಗದ ಕಡೆಗೆ ಅಲ್ಲಾಹನೇ ತಾನಿಚ್ಛಿಸಿದವರಿಗೆ ಮಾರ್ಗದರ್ಶನ ಮಾಡುತ್ತಾನೆ.

لَقَدْ اَنْزَلْنَاۤ اٰيٰتٍ مُّبَيِّنٰتٍ ؕ وَاللّٰهُ يَهْدِيْ مَنْ يَّشَآءُ اِلٰى صِرَاطٍ مُّسْتَقِيْمٍ ﴿٤٦﴾

47. ನಾವು ಅಲ್ಲಾಹ್ ಮತ್ತು ಸಂದೇಶವಾಹಕರ ಮೇಲೆ ವಿಶ್ವಾಸ ವಿರಿಸಿದೆವೆಂದೂ ನಾವು ಅನುಸರಣೆಯನ್ನು ಸ್ವೀಕರಿಸಿದ್ದೇವೆಂದೂ ಅವರು ಹೇಳುತ್ತಾರೆ. ಆದರೆ ಅನಂತರ ಅವರಲ್ಲೊಂದು ವಿಭಾಗವು (ಅನುಸರಣೆಯಿಂದ) ವಿಮುಖವಾಗಿ ಬಿಡುತ್ತದೆ. ಇಂತಹವರು ಖಂಡಿತ ಸತ್ಯವಿಶ್ವಾಸಿಗಳಲ್ಲ.

وَيَقُوْلُوْنَ اٰمَنَّا بِاللّٰهِ وَبِالرَّسُوْلِ وَاَطَعْنَا ثُمَّ يَتَوَلّٰى فَرِيْقٌ مِّنْهُمْ مِّنْۢ بَعْدِ ذٰلِكَ ؕ وَمَاۤ اُولٰٓئِكَ بِالْمُؤْمِنِيْنَ ﴿٤٧﴾

48. ಅವರ ನಡುವಿನ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲಿಕ್ಕಾಗಿ ಅವರನ್ನು ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಕಡೆಗೆ ಕರೆಯಲಾದಾಗ ಅವರಲ್ಲೊಂದು ವಿಭಾಗವು ಹಿಂಜರಿಯುತ್ತದೆ.

وَاِذَا دُعُوْۤا اِلَى اللّٰهِ وَرَسُوْلِهٖ لِيَحْكُمَ بَيْنَهُمْ اِذَا فَرِيْقٌ مِّنْهُمْ مُّعْرِضُوْنَ ﴿٤٨﴾

49. ಆದರೆ ಸತ್ಯವು ಅವರ ಪರವಾಗಿದ್ದರೆ ಅತ್ಯಂತ ವಿಧೇಯರಾಗಿ ರಸೂಲರ ಬಳಿಗೆ ಬಂದು ಬಿಡುತ್ತಾರೆ.

وَاِنْ يَّكُنْ لَّهُمُ الْحَقُّ يَاْتُوْۤا اِلَيْهِ مُذْعِنِيْنَ ﴿٤٩﴾

50. ಇವರ ಹೃದಯಗಳಿಗೆ (ಕಪಟವಿಶ್ವಾಸದ) ರೋಗ ತಗಲಿದೆಯೇ? ಅಥವಾ ಇವರು ಸಂಶಯಗ್ರಸ್ತರಾಗಿರುವರೇ? ಅಥವಾ ಅವರಿಗೆ ಅಲ್ಲಾಹ್ ಮತ್ತು ರಸೂಲರು ಅವರ ಮೇಲೆ ಅನ್ಯಾಯ ಮಾಡುವರೆಂಬ ಭಯವಿದೆಯೇ? ವಾಸ್ತವದಲ್ಲಿ ಅಕ್ರಮಿಗಳಂತೂ ಅವರೇ ಆಗಿರುತ್ತಾರೆ.

اَفِيْ قُلُوْبِهِمْ مَّرَضٌ اَمِ ارْتَابُوْۤا اَمْ يَخَافُوْنَ اَنْ يَّحِيْفَ اللّٰهُ عَلَيْهِمْ وَرَسُوْلُهٗ ؕ بَلْ اُولٰٓئِكَ هُمُ الظّٰلِمُوْنَ ﴿٥٠﴾

51. ಅವರ ಮೊಕದ್ದಮೆಯ ಬಗ್ಗೆ ತೀರ್ಪು ನೀಡುವಂತಾಗಲು ಅವರನ್ನು ಅಲ್ಲಾಹ್ ಮತ್ತು ರಸೂಲರ ಕಡೆಗೆ ಕರೆಯಲಾದಾಗ,

اِنَّمَا كَانَ قَوْلَ الْمُؤْمِنِيْنَ اِذَا دُعُوْۤا اِلَى اللّٰهِ وَرَسُوْلِهٖ لِيَحْكُمَ بَيْنَهُمْ اَنْ

ನಾವು ಆಲಿಸಿದೆವು ಮತ್ತು ಅನುಸರಿಸಿದೆವು ಎಂದು ಹೇಳುವುದೇ ಸತ್ಯವಿಶ್ವಾಸಿಗಳ ಕರ್ತವ್ಯವಾಗಿರುತ್ತದೆ. ಇಂತಹವರೇ ಯಶಸ್ವಿಗಳಾಗುವವರು.

يَّقُولُوا سَمِعْنَا وَأَطَعْنَا ۚ وَأُولَٰئِكَ هُمُ الْمُفْلِحُونَ ﴿٥١﴾

52. ಅಲ್ಲಾಹ್ ಮತ್ತು ರಸೂಲರ ಆಜ್ಞಾಪಾಲನೆ ಮಾಡುವವರು ಅಲ್ಲಾಹನನ್ನು ಭಯಪಡುವವರು ಮತ್ತು ಅವನ ಆಜ್ಞೋಲ್ಲಂಘನೆಯಿಂದ ದೂರವಿರುವವರೇ ವಿಜಯಿಗಳು.

وَمَن يُطِعِ اللَّهَ وَرَسُولَهُ وَيَخْشَ اللَّهَ وَيَتَّقْهِ فَأُولَٰئِكَ هُمُ الْفَائِزُونَ ﴿٥٢﴾

53. ಅವರು (ಕಪಟವಿಶ್ವಾಸಿಗಳು) ಅಲ್ಲಾಹನ ಹೆಸರಲ್ಲಿ ಕಟ್ಟಾಣೆಗಳನ್ನು ಹಾಕುತ್ತಾ "ತಾವು ಅಪ್ಪಣೆ ಕೊಟ್ಟರೆ ನಾವು ಮನೆಗಳಿಂದ ಹೊರಟು ಬರುವೆವು" ಎನ್ನುತ್ತಾರೆ. ಇವರೊಡನೆ (ಹೀಗೆ) ಹೇಳಿರಿ- "ಆಣೆ ಹಾಕಬೇಡಿರಿ. ನಿಮ್ಮ ವಿಧೇಯತೆಯ ಸಂಗತಿ ಗೊತ್ತಿದೆ. ನಿಮ್ಮ ದುಷ್ಕೃತ್ಯಗಳ ಬಗ್ಗೆ ಅಲ್ಲಾಹನು ಅಜ್ಞನಾಗಿಲ್ಲ."

وَأَقْسَمُوا بِاللَّهِ جَهْدَ أَيْمَانِهِمْ لَئِنْ أَمَرْتَهُمْ لَيَخْرُجُنَّ ۖ قُل لَّا تُقْسِمُوا ۖ طَاعَةٌ مَّعْرُوفَةٌ ۚ إِنَّ اللَّهَ خَبِيرٌ بِمَا تَعْمَلُونَ ﴿٥٣﴾

54. ಹೇಳಿರಿ- ಅಲ್ಲಾಹ್ ಮತ್ತು ರಸೂಲರ ಆಜ್ಞಾಪಾಲಕರಾಗಿರಿ. ಒಂದು ವೇಳೆ ನೀವು ವಿಮುಖರಾದರೆ ರಸೂಲರು, ಅವರ ಮೇಲಿರುವ ಕರ್ತವ್ಯಗಳಿಗೆ ಹೊಣೆಗಾರರು ಮತ್ತು ನಿಮ್ಮ ಮೇಲಿರುವ ಕರ್ತವ್ಯಗಳಿಗೆ ನೀವೇ ಹೊಣೆಗಾರರು ಎಂಬುದು ನಿಮಗೆ ಚೆನ್ನಾಗಿ ತಿಳಿದಿರಲಿ. ಅವರ ಅನುಸರಣೆ ಮಾಡಿದರೆ ನೀವೇ ಸನ್ಮಾರ್ಗ ಹೊಂದುವಿರಿ. ಅನ್ಯಥಾ ಸುವ್ಯಕ್ತವಾಗಿ ಆದೇಶಗಳನ್ನು ತಲಪಿಸುವುದಕ್ಕಿಂತ ಹೆಚ್ಚಿನ ಹೊಣೆಯೇನೂ ರಸೂಲರ ಮೇಲಿಲ್ಲ.

قُلْ أَطِيعُوا اللَّهَ وَأَطِيعُوا الرَّسُولَ ۖ فَإِن تَوَلَّوْا فَإِنَّمَا عَلَيْهِ مَا حُمِّلَ وَعَلَيْكُم مَّا حُمِّلْتُمْ ۖ وَإِن تُطِيعُوهُ تَهْتَدُوا ۚ وَمَا عَلَى الرَّسُولِ إِلَّا الْبَلَاغُ الْمُبِينُ ﴿٥٤﴾

55. ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನು ಮಾಡುವನೆಂದು ವಾಗ್ದಾನ ಮಾಡಿರುವನು. ತಾನು ಅವರಿಗಾಗಿ ಮೆಚ್ಚಿರುವ ಅವರ ಧರ್ಮವನ್ನು ಸುಭದ್ರ ಬುನಾದಿಗಳಲ್ಲಿ ಸ್ಥಾಪಿಸುವನು ಮತ್ತು ಅವರ (ಪ್ರಚಲಿತ) ಭಯಾವಸ್ಥೆಯನ್ನು ಶಾಂತಿಯಾಗಿ ಮಾರ್ಪಡಿಸಿ ಬಿಡುವನು. ಅವರು ನನ್ನ ದಾಸ್ಯ-ಆರಾಧನೆ ಮಾತ್ರ ಮಾಡಲಿ ಮತ್ತು ನನ್ನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡದಿರಲಿ,[35]

وَعَدَ اللَّهُ الَّذِينَ آمَنُوا مِنكُمْ وَعَمِلُوا الصَّالِحَاتِ لَيَسْتَخْلِفَنَّهُمْ فِي الْأَرْضِ كَمَا اسْتَخْلَفَ الَّذِينَ مِن قَبْلِهِمْ وَلَيُمَكِّنَنَّ لَهُمْ دِينَهُمُ الَّذِي ارْتَضَىٰ لَهُمْ وَلَيُبَدِّلَنَّهُم مِّن بَعْدِ خَوْفِهِمْ أَمْنًا ۚ يَعْبُدُونَنِي لَا يُشْرِكُونَ بِي شَيْئًا ۚ وَمَن كَفَرَ بَعْدَ ذَٰلِكَ

35. ಕೆಲವರು ಇದಕ್ಕೆ ಲೋಕದಲ್ಲಿ ಅಧಿಕಾರ ಪ್ರಾಪ್ತವಿರುವವರೆಲ್ಲರಿಗೂ ದೇವನು 'ಖಿಲಾಫತ್' ಪ್ರದಾನ ಮಾಡಿದ್ದಾನೆ ಎಂಬ ಅರ್ಥ ಕಲ್ಪಿಸುತ್ತಾರೆ. ವಾಸ್ತವದಲ್ಲಿ ಈ ಸೂಕ್ತದಲ್ಲಿ ಸತ್ಯವಿಶ್ವಾಸಿಯಾದವರಿಗೇ ಅಲ್ಲಾಹನು 'ಖಿಲಾಫತ್' ಪ್ರದಾನ ಮಾಡುತ್ತಾನೆ ಎಂದು ಹೇಳಲಾಗಿದೆ.

فَأُولَٰٓئِكَ هُمُ الْفٰسِقُوْنَ ﴿٥٥﴾

ಇದಾದ ಬಳಿಕ ಯಾರು 'ದೇವಸಹಭಾಗಿತ್ವ'[36] ಮಾಡುವರೋ ಅವರೇ ಕರ್ಮಭ್ರಷ್ಟರು.

وَأَقِيْمُوا الصَّلٰوةَ وَاٰتُوا الزَّكٰوةَ وَأَطِيْعُوا الرَّسُوْلَ لَعَلَّكُمْ تُرْحَمُوْنَ ﴿٥٦﴾

56. ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ಕೊಡಿರಿ ಮತ್ತು ರಸೂಲರನ್ನು ಅನುಸರಿಸಿರಿ. ನಿಮ್ಮ ಮೇಲೆ ದಯೆ ತೋರಲ್ಪಡಲೂ ಬಹುದು.

لَا تَحْسَبَنَّ الَّذِيْنَ كَفَرُوْا مُعْجِزِيْنَ فِي الْأَرْضِ ۚ وَمَأْوٰىهُمُ النَّارُ ۖ وَلَبِئْسَ الْمَصِيْرُ ﴿٥٧﴾

57. ಸತ್ಯನಿಷೇಧಿಗಳು ಭೂಮಿಯಲ್ಲಿ ಅಲ್ಲಾಹನನ್ನು ಪರಾಜಿತಗೊಳಿಸಿ ಬಿಡುವರೆಂಬ ತಪ್ಪುಕಲ್ಪನೆಯಲ್ಲಿರಬೇಡಿರಿ. ನರಕವೇ ಅವರ ನೆಲೆ ಮತ್ತು ಅದು ಅತ್ಯಂತ ಕೆಟ್ಟ ನೆಲೆಯಾಗಿದೆ.

ربع

يٰٓأَيُّهَا الَّذِيْنَ اٰمَنُوْا لِيَسْتَأْذِنْكُمُ الَّذِيْنَ مَلَكَتْ أَيْمَانُكُمْ وَالَّذِيْنَ لَمْ يَبْلُغُوا الْحُلُمَ مِنْكُمْ ثَلٰثَ مَرّٰتٍ ۚ مِنْ قَبْلِ صَلٰوةِ الْفَجْرِ وَحِيْنَ تَضَعُوْنَ ثِيَابَكُمْ مِّنَ الظَّهِيْرَةِ وَمِنْۢ بَعْدِ صَلٰوةِ الْعِشَآءِ ۚ ثَلٰثُ عَوْرٰتٍ لَّكُمْ ۚ لَيْسَ عَلَيْكُمْ وَلَا عَلَيْهِمْ جُنَاحٌۢ بَعْدَهُنَّ ۚ طَوّٰفُوْنَ عَلَيْكُمْ بَعْضُكُمْ عَلٰى بَعْضٍ ۚ كَذٰلِكَ يُبَيِّنُ اللّٰهُ لَكُمُ الْاٰيٰتِ ۗ وَاللّٰهُ عَلِيْمٌ حَكِيْمٌ ﴿٥٨﴾

58. ಸತ್ಯವಿಶ್ವಾಸಿಗಳೇ, ನಿಮ್ಮ ದಾಸ-ದಾಸಿಯರು ಮತ್ತು ಇನ್ನೂ ಪ್ರಬುದ್ಧರಾಗದ ನಿಮ್ಮ ಮಕ್ಕಳು ಮೂರು ಹೊತ್ತುಗಳಲ್ಲಿ ನಿಮ್ಮ ಬಳಿಗೆ ಬರುವಾಗ ಅನುಮತಿ ಪಡೆದು ಬರಬೇಕಾದುದು ಅಗತ್ಯ. ಫಜ್ರ್(ಮುಂಜಾವಿನ) ನಮಾಝಿಗಿಂತ ಮುಂಚೆ, ಮಧ್ಯಾಹ್ನ ನೀವು ಉಡುಪುಗಳನ್ನು ಕಳಚಿಡುವಾಗ ಮತ್ತು ಇಷಾ(ರಾತ್ರಿಯ) ನಮಾಝಿನ ಅನಂತರ. ಇವು ಮೂರು ನಿಮಗೆ ಮರೆಯ ಸಮಯವಾಗಿದೆ. ಇವುಗಳ ನಂತರ ಅವರು ಅನುಮತಿ ಪಡೆಯದೆ ಬಂದರೆ ನಿಮ್ಮ ಮೇಲಾಗಲಿ ಅವರ ಮೇಲಾಗಲಿ ಏನೂ ದೋಷವಿಲ್ಲ. ನೀವು ಪರಸ್ಪರರ ಬಳಿಗೆ ಆಗಾಗ ಬರಲೇ ಬೇಕಾಗುತ್ತದೆ. ಈ ರೀತಿ ಅಲ್ಲಾಹನು ತನ್ನ ಆದೇಶಗಳನ್ನು ನಿಮಗಾಗಿ ವಿವರಿಸುತ್ತಾನೆ. ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَإِذَا بَلَغَ الْأَطْفَالُ مِنْكُمُ الْحُلُمَ فَلْيَسْتَأْذِنُوْا كَمَا اسْتَأْذَنَ الَّذِيْنَ مِنْ قَبْلِهِمْ ۚ كَذٰلِكَ يُبَيِّنُ اللّٰهُ لَكُمْ اٰيٰتِهٖ ۗ وَاللّٰهُ عَلِيْمٌ حَكِيْمٌ ﴿٥٩﴾

59. ನಿಮ್ಮ ಮಕ್ಕಳು ಪ್ರಬುದ್ಧರಾದಾಗ ಅವರ ಹಿರಿಯರು ಅನುಮತಿ ಪಡೆಯುವಂತೆಯೇ ಅವರೂ ಅನುಮತಿ ಪಡೆದು ಬರಬೇಕು. ಈ ರೀತಿಯಲ್ಲಿ ಅಲ್ಲಾಹನು ತನ್ನ ಸೂಕ್ತಗಳನ್ನು ನಿಮ್ಮ ಮುಂದೆ ಬಿಡಿಸಿ ಹೇಳುತ್ತಾನೆ ಮತ್ತು ಅಲ್ಲಾಹ್ ಸರ್ವಜ್ಞನೂ ಯುಕ್ತಿ ಪೂರ್ಣನೂ ಆಗಿರುತ್ತಾನೆ.

وَالْقَوَاعِدُ مِنَ النِّسَآءِ الّٰتِيْ لَا يَرْجُوْنَ نِكَاحًا فَلَيْسَ عَلَيْهِنَّ جُنَاحٌ أَنْ يَّضَعْنَ

60. ಯೌವನಾವಸ್ಥೆಯನ್ನು ದಾಟಿರುವ ವಿವಾಹಾಪೇಕ್ಷೆಯಿಲ್ಲದ ಸ್ತ್ರೀಯರ ತಮ್ಮ ಅಲಂಕಾರ ಪ್ರದರ್ಶನ ಮಾಡುವವರಲ್ಲವಾಗಿದ್ದರೆ

36. ಇದರ ಅರ್ಥ ಖಿಲಾಫತ್ ದೊರೆತ ನಂತರ ಕೃತಘ್ನತೆ ತೋರುವುದು ಎಂದೂ ಆಗಬಹುದು, ಹಾಗೆಯೇ ಮೇಲ್ನೋಟಕ್ಕೆ ಸತ್ಯವಿಶ್ವಾಸಿಯಂತಿದ್ದು ನಿಜವಾಗಿ ವಿಶ್ವಾಸಶೂನ್ಯವಾದ ಕಪಟವಿಶ್ವಾಸಿಗಳ ಧೋರಣೆಯನ್ನು ಅನುಸರಿಸುವುದು ಎಂದೂ ಆಗಬಹುದು.

ಅವರು ತಮ್ಮ ಚಾದರಗಳನ್ನು ತೆಗೆದಿರಿಸಿದರೆ ಅವರ ಮೇಲೇನೂ ದೋಷವಿಲ್ಲ. ಆದರೂ ಅವರು ಲಜ್ಜಾವಂತ ನೀತಿಯನ್ನೇ ಇಟ್ಟುಕೊಂಡರೆ ಅದು ಅವರ ಮಟ್ಟಿಗೆ ಉತ್ತಮ ವಾಗಿದೆ. ಅಲ್ಲಾಹನು ಎಲ್ಲವನ್ನೂ ಆಲಿಸುತ್ತಾನೆ ಮತ್ತು ಅರಿಯುತ್ತಾನೆ.

ثِيَابَهُنَّ غَيْرَ مُتَبَرِّجَٰتٍۭ بِزِينَةٍ ۖ وَأَن يَسْتَعْفِفْنَ خَيْرٌ لَّهُنَّ ۗ وَٱللَّهُ سَمِيعٌ عَلِيمٌ ﴿٦٠﴾

61. ಒಬ್ಬ ಕುರುಡ, ಕುಂಟ ಅಥವಾ ರೋಗಿಯು (ಇತರರ ಮನೆಯಲ್ಲಿ ಉಂಡರೆ) ದೋಷವಿಲ್ಲ. ನೀವು ನಿಮ್ಮ ಮನೆಗಳಲ್ಲಿ, ನಿಮ್ಮ ತಂದೆ-ತಾತಂದಿರ ಮನೆಗಳಲ್ಲಿ, ನಿಮ್ಮ ತಾಯಂದಿರ ಮನೆಗಳಲ್ಲಿ ಅಥವಾ ನಿಮ್ಮ ಸಹೋದರರ ಮನೆಗಳಲ್ಲಿ ಅಥವಾ ನಿಮ್ಮ ಸಹೋದರಿಯರ ಮನೆಗಳಲ್ಲಿ ಅಥವಾ ನಿಮ್ಮ ಪಿತೃ ಸಹೋದರರ ಮನೆಗಳಲ್ಲಿ ಅಥವಾ ನಿಮ್ಮ ಸೋದರತ್ತೆಯಂದಿರ ಮನೆಗಳಲ್ಲಿ ಅಥವಾ ನಿಮ್ಮ ಸೋದರ ಮಾವಂದಿರ ಮನೆಗಳಲ್ಲಿ ಅಥವಾ ನಿಮ್ಮ ಮಾತೃ ಸೋದರಿಯರ ಮನೆಗಳಲ್ಲಿ ಅಥವಾ ಬೀಗದ ಕೈಗಳು ನಿಮ್ಮ ವಶದಲ್ಲಿರುವ ಮನೆಗಳಲ್ಲಿ ಅಥವಾ ನಿಮ್ಮ ಮಿತ್ರರ ಮನೆಗಳಲ್ಲಿ ಉಣ್ಣುವುದರಲ್ಲಿ ಅಡ್ಡಿಯಿಲ್ಲ. ನೀವು ಒಟ್ಟಾಗಿ ಉಣ್ಣುವುದರಲ್ಲೂ ಬೇರೆ ಬೇರೆಯಾಗಿ ಉಣ್ಣುವುದರಲ್ಲೂ ಆಕ್ಷೇಪವಿಲ್ಲ. ಆದರೆ ಮನೆಗಳೊಳಗೆ ಪ್ರವೇಶಿಸುವಾಗ ನಿಮ್ಮ ಜನರಿಗೆ ಸಲಾಮ್ ಹೇಳಿರಿ. ಇದು ಶುಭ ಕಾಮನೆಯಾಗಿದೆ, ಅಲ್ಲಾಹನ ವತಿಯಿಂದ ನಿಶ್ಚಯಿಸಲ್ಪಟ್ಟಿದೆ, ಅತ್ಯಂತ ಸಮೃದ್ಧ ಹಾಗೂ ಪರಿಶುದ್ಧವಾಗಿದೆ. ಹೀಗೆ ಅಲ್ಲಾಹ್ ನಿಮ್ಮ ಮುಂದೆ ಸೂಕ್ತಗಳನ್ನು ವಿವರಿಸುತ್ತಾನೆ. ನೀವು ವಿವೇಕವನ್ನು ಉಪಯೋಗಿಸುವಿರೆಂದು ನಿರೀಕ್ಷಿಸಲಾಗಿದೆ.

لَيْسَ عَلَى ٱلْأَعْمَىٰ حَرَجٌ وَلَا عَلَى ٱلْأَعْرَجِ حَرَجٌ وَلَا عَلَى ٱلْمَرِيضِ حَرَجٌ وَلَا عَلَىٰٓ أَنفُسِكُمْ أَن تَأْكُلُوا۟ مِنۢ بُيُوتِكُمْ أَوْ بُيُوتِ ءَابَآئِكُمْ أَوْ بُيُوتِ أُمَّهَٰتِكُمْ أَوْ بُيُوتِ إِخْوَٰنِكُمْ أَوْ بُيُوتِ أَخَوَٰتِكُمْ أَوْ بُيُوتِ أَعْمَٰمِكُمْ أَوْ بُيُوتِ عَمَّٰتِكُمْ أَوْ بُيُوتِ أَخْوَٰلِكُمْ أَوْ بُيُوتِ خَٰلَٰتِكُمْ أَوْ مَا مَلَكْتُم مَّفَاتِحَهُۥٓ أَوْ صَدِيقِكُمْ ۚ لَيْسَ عَلَيْكُمْ جُنَاحٌ أَن تَأْكُلُوا۟ جَمِيعًا أَوْ أَشْتَاتًا ۚ فَإِذَا دَخَلْتُم بُيُوتًا فَسَلِّمُوا۟ عَلَىٰٓ أَنفُسِكُمْ تَحِيَّةً مِّنْ عِندِ ٱللَّهِ مُبَٰرَكَةً طَيِّبَةً ۚ كَذَٰلِكَ يُبَيِّنُ ٱللَّهُ لَكُمُ ٱلْءَايَٰتِ لَعَلَّكُمْ تَعْقِلُونَ ﴿٦١﴾

62. ಅಲ್ಲಾಹ್ ಮತ್ತು ಅವನ ರಸೂಲರನ್ನು ಹೃತ್ಪೂರ್ವಕ ನಂಬು ವವರೇ ಸತ್ಯವಿಶ್ವಾಸಿಗಳು. ಯಾವುದಾದರೊಂದು ಸಾಮೂಹಿಕ ಕಾರ್ಯದ ಸಂದರ್ಭದಲ್ಲಿ ಅವರು ರಸೂಲರ ಜೊತೆಗಿದ್ದರೆ ಅವರಿಂದ ಅನುಮತಿ ಪಡೆಯದೆ ಹೋಗಬಾರದು. ಪೈಗಂಬರರೇ, ನಿಮ್ಮೊಡನೆ ಅನುಮತಿ ಕೇಳುವವರೇ ಅಲ್ಲಾಹ್ ಮತ್ತು ರಸೂಲ ರನ್ನು ನಂಬುವವರು. ಆದುದರಿಂದ ಅವರು ತಮ್ಮ ಯಾವುದಾ ದರೂ ಕಾರ್ಯಕ್ಕಾಗಿ ಅನುಮತಿ ಕೇಳಿದರೆ ನೀವಿಚ್ಛಿಸುವವರಿಗೆ ಅನುಮತಿ ಕೊಟ್ಟು ಬಿಡಿರಿ ಮತ್ತು ಇಂತಹವರ ಪಾಪ ವಿಮೋಚನೆ ಗಾಗಿ ಅಲ್ಲಾಹನೊಡನೆ ಪ್ರಾರ್ಥಿಸಿರಿ. ಖಂಡಿತವಾಗಿಯೂ ಅಲ್ಲಾ ಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

إِنَّمَا ٱلْمُؤْمِنُونَ ٱلَّذِينَ ءَامَنُوا۟ بِٱللَّهِ وَرَسُولِهِۦ وَإِذَا كَانُوا۟ مَعَهُۥ عَلَىٰٓ أَمْرٍ جَامِعٍ لَّمْ يَذْهَبُوا۟ حَتَّىٰ يَسْتَـْٔذِنُوهُ ۚ إِنَّ ٱلَّذِينَ يَسْتَـْٔذِنُونَكَ أُو۟لَٰٓئِكَ ٱلَّذِينَ يُؤْمِنُونَ بِٱللَّهِ وَرَسُولِهِۦ ۚ فَإِذَا ٱسْتَـْٔذَنُوكَ لِبَعْضِ شَأْنِهِمْ فَأْذَن لِّمَن شِئْتَ مِنْهُمْ وَٱسْتَغْفِرْ لَهُمُ ٱللَّهَ ۚ إِنَّ ٱللَّهَ غَفُورٌ رَّحِيمٌ ﴿٦٢﴾

63. ಮುಸ್ಲಿಮರೇ, ನಿಮ್ಮ ನಡುವೆ ರಸೂಲರ ಕರೆಯನ್ನು ನೀವು ಪರಸ್ಪರ ಒಬ್ಬರನ್ನೊಬ್ಬರು ಕರೆಯುವಂತೆ ಭಾವಿಸಬೇಡಿರಿ. ನಿಮ್ಮ ಪೈಕಿ ಪರಸ್ಪರರನ್ನು ಅಡ್ಡವಾಗಿಟ್ಟು ಮೆಲ್ಲನೆ ಜಾರಿ ಕೊಳ್ಳುವ ಮಂದಿಯನ್ನು ಅಲ್ಲಾಹನು ಚೆನ್ನಾಗಿ ಅರಿತಿರುತ್ತಾನೆ. ರಸೂಲರ ಆಜ್ಞೆಗೆ ವಿರುದ್ಧ ವರ್ತಿಸುವವರು ತಾವು ಯಾವುದಾದರೂ ಆಪತ್ತಿನಲ್ಲಿ ಸಿಲುಕಿ ಬಿಡಬಹುದು ಅಥವಾ ತಮ್ಮ ಮೇಲೆ ವೇದನಾಯುಕ್ತ ಯಾತನೆ ಎರಗಬಹುದೆಂದು ಭಯಪಡಬೇಕು.

لَا تَجْعَلُوا دُعَاءَ الرَّسُولِ بَيْنَكُمْ كَدُعَاءِ
بَعْضِكُمْ بَعْضًا ۚ قَدْ يَعْلَمُ اللَّهُ الَّذِينَ
يَتَسَلَّلُونَ مِنْكُمْ لِوَاذًا ۚ فَلْيَحْذَرِ الَّذِينَ
يُخَالِفُونَ عَنْ أَمْرِهِ أَنْ تُصِيبَهُمْ فِتْنَةٌ
أَوْ يُصِيبَهُمْ عَذَابٌ أَلِيمٌ ﴿٦٣﴾

64. ತಿಳಿಯಿರಿ, ಭೂಮಿ-ಆಕಾಶಗಳಲ್ಲಿರುವುದೆಲ್ಲವೂ ಅಲ್ಲಾಹನದು. ನೀವು ಯಾವ ಅವಸ್ಥೆಯಲ್ಲಿದ್ದರೂ ಅದನ್ನು ಅಲ್ಲಾಹನು ಅರಿಯುತ್ತಾನೆ. ಜನರು ಆತನ ಕಡೆಗೆ ಮರಳಿಸಲ್ಪಡುವ ದಿನ ಅವರು ಏನೆಲ್ಲಾ ಮಾಡಿ ಬಂದಿರುವರೆಂಬುದನ್ನು ಅವನು ಅವರಿಗೆ ತೋರಿಸಿ ಕೊಡುವನು. ಅವನು ಸಕಲ ವಿಷಯಗಳ ಜ್ಞಾನವುಳ್ಳವನು.

أَلَا إِنَّ لِلَّهِ مَا فِي السَّمَاوَاتِ وَالْأَرْضِ ۖ
قَدْ يَعْلَمُ مَا أَنْتُمْ عَلَيْهِ وَيَوْمَ
يُرْجَعُونَ إِلَيْهِ فَيُنَبِّئُهُمْ بِمَا عَمِلُوا ۗ
وَاللَّهُ بِكُلِّ شَيْءٍ عَلِيمٌ ﴿٦٤﴾






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಈ ಫುರ್ಕಾನನ್ನು ಸಮಸ್ತ ಜಗತ್ತಿನವರಿಗೆ ಎಚ್ಚರಿಕೆಯಾಗಲಿಕ್ಕಾಗಿ- ತನ್ನ ದಾಸನ ಮೇಲೆ ಅವತೀರ್ಣಗೊಳಿಸಿದವನು ಪರಮ ಸುಮಂಗಲನು-

تَبٰرَكَ الَّذِيْ نَزَّلَ الْفُرْقَانَ عَلٰى عَبْدِهٖ لِيَكُوْنَ لِلْعٰلَمِيْنَ نَذِيْرًا ۙ①

2. ಅವನು ಭೂಮಿ-ಆಕಾಶಗಳ ಪ್ರಭುತ್ವದ ಒಡೆಯನು. ಅವನು ಯಾರನ್ನೂ ಪುತ್ರನಾಗಿಸಿ ಕೊಂಡಿಲ್ಲ. ಅವನ ಜೊತೆ ಪ್ರಭುತ್ವದಲ್ಲಿ ಯಾರೂ ಸಹಭಾಗಿ ಇಲ್ಲ. ಅವನು ಪ್ರತಿಯೊಂದು ವಸ್ತುವನ್ನೂ ಸೃಷ್ಟಿಸಿದನು. ಅನಂತರ ಅದಕ್ಕೊಂದು ವಿಧಿ ನಿಯಮವನ್ನು ನಿಶ್ಚಯಿಸಿದನು.

الَّذِيْ لَهٗ مُلْكُ السَّمٰوٰتِ وَالْاَرْضِ وَلَمْ يَتَّخِذْ وَلَدًا وَّلَمْ يَكُنْ لَّهٗ شَرِيْكٌ فِي الْمُلْكِ وَخَلَقَ كُلَّ شَيْءٍ فَقَدَّرَهٗ تَقْدِيْرًا②

3. ಜನರು ಅವನನ್ನು ಬಿಟ್ಟು, ಯಾವ ವಸ್ತುವನ್ನೂ ಸೃಷ್ಟಿಸದ ಮತ್ತು ಸ್ವತಃ ಸೃಷ್ಟಿಸಲ್ಪಟ್ಟಂತಹ ವಸ್ತುಗಳನ್ನು ಆರಾಧ್ಯರನ್ನಾಗಿ ಮಾಡಿಕೊಂಡರು. ಅವು ಸ್ವತಃ ತಮಗೂ ಯಾವುದೇ ಲಾಭ ಅಥವಾ ಹಾನಿಯನ್ನುಂಟು ಮಾಡುವ ಅಧಿಕಾರ ಹೊಂದಿಲ್ಲ. ಅವು ಕೊಲ್ಲಲಾರವು, ಜೀವಂತಗೊಳಿಸಲಾರವು ಮತ್ತು ಸತ್ತವನನ್ನು ಪುನಃ ಎಬ್ಬಿಸಲಾರವು.

وَاتَّخَذُوْا مِنْ دُوْنِهٖٓ اٰلِهَةً لَّا يَخْلُقُوْنَ شَيْـًٔا وَّهُمْ يُخْلَقُوْنَ وَلَا يَمْلِكُوْنَ لِاَنْفُسِهِمْ ضَرًّا وَّلَا نَفْعًا وَّلَا يَمْلِكُوْنَ مَوْتًا وَّلَا حَيٰوةً وَّلَا نُشُوْرًا③

4. (ಪ್ರವಾದಿಯ ಮಾತನ್ನು ನಿರಾಕರಿಸಿದ) ಸತ್ಯನಿಷೇಧಿಗಳು "ಈ ಫುರ್ಕಾನ್ ಒಂದು ಕಪೋಲ ಕಲ್ಪಿತ ವಸ್ತು. ಇದನ್ನು ಈ ವ್ಯಕ್ತಿಯು ತಾನೇ ಸೃಷ್ಟಿಸಿಕೊಂಡಿದ್ದು ಬೇರೆ ಕೆಲವರು ಈ ಕಾರ್ಯದಲ್ಲಿ ಇವನಿಗೆ ಸಹಾಯ ಮಾಡಿದ್ದಾರೆ" ಎನ್ನುತ್ತಾರೆ. ಇವರು ದೊಡ್ಡ ಅಕ್ರಮ ಹಾಗೂ ಹಸಿ ಸುಳ್ಳಿಗೆ ಇಳಿದಿದ್ದಾರೆ.

وَقَالَ الَّذِيْنَ كَفَرُوْٓا اِنْ هٰذَآ اِلَّآ اِفْكُ ۨافْتَرٰىهُ وَاَعَانَهٗ عَلَيْهِ قَوْمٌ اٰخَرُوْنَ ۚ فَقَدْ جَاۗءُوْ ظُلْمًا وَّزُوْرًا④

5. "ಇದೆಲ್ಲಾ ಹಳೇ ಕಾಲದವರು ಬರೆದಿಟ್ಟ ವಿಷಯಗಳಾಗಿವೆ.

وَقَالُوْٓا اَسَاطِيْرُ الْاَوَّلِيْنَ اكْتَتَبَهَا فَهِيَ

ಅದನ್ನೇ ಇವನು ಬರೆಯಿಸಿ ಕೊಳ್ಳುತ್ತಾನೆ ಮತ್ತು ಅದನ್ನು ಬೆಳಗು ಬೈಗುಗಳಲ್ಲಿ ಅವನಿಗೆ ಓದಿ ಹೇಳಲಾಗುತ್ತದೆ" ಎಂದೂ ಅವರು ಹೇಳುತ್ತಾರೆ.

تُمْلٰى عَلَيْهِ بُكْرَةً وَّاَصِيْلًا ﴿٥﴾

6. ಪೈಗಂಬರರೇ, "ಭೂಮಿ-ಆಕಾಶಗಳ ರಹಸ್ಯವನ್ನು ಅರಿತಿರುವಾತನು ಇದನ್ನು ಅವತೀರ್ಣ ಗೊಳಿಸಿರುತ್ತಾನೆ" ಎಂದು ಇವರೊಡನೆ ಹೇಳಿರಿ. ವಾಸ್ತವದಲ್ಲಿ ಅವನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

قُلْ اَنْزَلَهُ الَّذِيْ يَعْلَمُ السِّرَّ فِي السَّمٰوٰتِ وَالْاَرْضِ ۗ اِنَّهٗ كَانَ غَفُوْرًا رَّحِيْمًا ﴿٦﴾

7. (ಇವರು) "ಆಹಾರ ಸೇವಿಸುವ ಮತ್ತು ಪೇಟೆಗಳಲ್ಲಿ ಸಂಚರಿಸುವ ಈ ವ್ಯಕ್ತಿ ಅದೆಂತಹ ಪ್ರವಾದಿ? ಇವನ ಜೊತೆಗಿದ್ದು, (ನಿರಾಕರಿಸುವವರನ್ನು) ಗದರಿಸಲಿಕ್ಕಾಗಿ ಇವನ ಬಳಿಗೆ ಒಬ್ಬ ದೇವಚರನನ್ನೇಕೆ ಕಳುಹಿಸಲಾಗಿಲ್ಲ?

وَقَالُوْا مَالِ هٰذَا الرَّسُوْلِ يَاْكُلُ الطَّعَامَ وَيَمْشِيْ فِي الْاَسْوَاقِ ۗ لَوْلَآ اُنْزِلَ اِلَيْهِ مَلَكٌ فَيَكُوْنَ مَعَهٗ نَذِيْرًا ﴿٧﴾

8. ಅಥವಾ ಕನಿಷ್ಠ ಪಕ್ಷ ಇವನಿಗಾಗಿ ಒಂದು ನಿಧಿಯನ್ನಾದರೂ ಇಳಿಸಬಹುದಿತ್ತು ಅಥವಾ ಇವನ ಬಳಿಯಲ್ಲಿ ಒಂದು ತೋಟ ವಾದರೂ ಇದ್ದು ಅದರಿಂದ ಇವನು (ನಿಶ್ಚಿಂತನಾಗಿ) ಉಣ್ಣ ಬಹುದಿತ್ತು ಎನ್ನುತ್ತಾರೆ ಮತ್ತು ಈ ಅಕ್ರಮಿಗಳು, "ನೀವಂತೂ ಒಬ್ಬ ಮಾಟ ಪೀಡಿತನನ್ನು ಹಿಂಬಾಲಿಸುತ್ತಿರುವಿರಿ" ಎನ್ನುತ್ತಾರೆ.

اَوْ يُلْقٰٓى اِلَيْهِ كَنْزٌ اَوْ تَكُوْنُ لَهٗ جَنَّةٌ يَّاْكُلُ مِنْهَا ۗ وَقَالَ الظّٰلِمُوْنَ اِنْ تَتَّبِعُوْنَ اِلَّا رَجُلًا مَّسْحُوْرًا ﴿٨﴾

9. ನೋಡಿರಿ, ಇವರು ಎಂತೆಂತಹ ವಾದಗಳನ್ನು ನಿಮ್ಮ ಮುಂದಿ ಡುತ್ತಿದ್ದಾರೆ. ಇವರು ಎಷ್ಟರ ಮಟ್ಟಿಗೆ ದಾರಿ ತಪ್ಪಿದ್ದಾರೆಂದರೆ ಸರಿಯಾದ ಮಾತೇ ಇವರಿಗೆ ತೋಚುವುದಿಲ್ಲ.

اُنْظُرْ كَيْفَ ضَرَبُوْا لَكَ الْاَمْثَالَ فَضَلُّوْا فَلَا يَسْتَطِيْعُوْنَ سَبِيْلًا ﴿٩﴾

10. ಅವನು ಮಹಾ ಸುಮಂಗಲನು. ಅವನಿಚ್ಛಿಸಿದರೆ, ಇವರು ಹೇಳು ವಂತಹ ವಸ್ತುಗಳಿಗಿಂತಲೂ ಶ್ರೇಷ್ಠವಾದವುಗಳನ್ನು ನಿಮಗೆ ದಯಪಾಲಿಸಬಲ್ಲನು. ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿ ರುವ (ಒಂದಲ್ಲ) ಅನೇಕ ಉದ್ಯಾನಗಳನ್ನೂ ದೊಡ್ಡ ದೊಡ್ಡ ಅರಮನೆಗಳನ್ನೂ ದಯಪಾಲಿಸಬಲ್ಲನು.

تَبٰرَكَ الَّذِيْٓ اِنْ شَآءَ جَعَلَ لَكَ خَيْرًا مِّنْ ذٰلِكَ جَنّٰتٍ تَجْرِيْ مِنْ تَحْتِهَا الْاَنْهٰرُ ۙ وَيَجْعَلْ لَّكَ قُصُوْرًا ﴿١٠﴾

11. ವಾಸ್ತವದಲ್ಲಿ ಇವರು, 'ಆ ಘಳಿಗೆ'ಯನ್ನು ಸುಳ್ಳಾಗಿಸಿ ಬಿಟ್ಟಿದ್ದಾರೆ.[1] ಆ ಘಳಿಗೆಯನ್ನು ಸುಳ್ಳಾಗಿಸುವವನಿಗಾಗಿ ನಾವು ಧಗಧಗಿಸುವ ಬೆಂಕಿಯನ್ನು ಸಿದ್ಧಗೊಳಿಸಿಟ್ಟಿದ್ದೇವೆ.

بَلْ كَذَّبُوْا بِالسَّاعَةِ ۗ وَاَعْتَدْنَا لِمَنْ كَذَّبَ بِالسَّاعَةِ سَعِيْرًا ﴿١١﴾

1. ಅರ್ಥಾತ್- ನಿರ್ಣಾಯಕ ದಿನವನ್ನು.

12. ಅದು ಇವರನ್ನು ದೂರದಿಂದ ಕಂಡಾಗ ಇವರು ಅದರ ಆಕ್ರೋಶವನ್ನು ಮತ್ತು ಆವೇಶದ ಆರ್ಭಟವನ್ನು ಕೇಳುವರು.

إِذَا رَأَتْهُم مِّن مَّكَانٍ بَعِيدٍ سَمِعُوا لَهَا تَغَيُّظًا وَزَفِيرًا ﴿١٢﴾

13. ಮತ್ತು ಇವರು ಕೈಕಾಲು ಕಟ್ಟಲ್ಪಟ್ಟು ಅದರ ಒಂದು ಇಕ್ಕಟ್ಟಾದ ಜಾಗದಲ್ಲಿ ತುರುಕಿಸಲ್ಪಟ್ಟಾಗ ತಮ್ಮ ಮರಣಕ್ಕಾಗಿ ಪ್ರಾರ್ಥಿಸ ತೊಡಗುವರು.

وَإِذَا أُلْقُوا مِنْهَا مَكَانًا ضَيِّقًا مُّقَرَّنِينَ دَعَوْا هُنَالِكَ ثُبُورًا ﴿١٣﴾

14. (ಆಗ ಅವರೊಡನೆ) ಇಂದು ಒಂದು ಮರಣವನ್ನಲ್ಲ, ಅನೇಕ ಮರಣಗಳಿಗಾಗಿ ಪ್ರಾರ್ಥಿಸಿಕೊಳ್ಳಿರಿ (ಎನ್ನಲಾಗುವುದು).

لَّا تَدْعُوا الْيَوْمَ ثُبُورًا وَاحِدًا وَادْعُوا ثُبُورًا كَثِيرًا ﴿١٤﴾

15. ಈ ಪರಿಣಾಮ ಒಳ್ಳೆಯದೋ ಅಥವಾ ದೇವಭಯವುಳ್ಳ ಧರ್ಮನಿಷ್ಠರಿಗೆ ವಾಗ್ದಾನ ಮಾಡಲಾಗಿರುವ, ಅವರ ಕರ್ಮದ ಸತ್ಫಲವೂ ಪ್ರಯಾಣದ ಕೊನೆಯ ಘಟ್ಟವೂ ಆಗಿರುವ ಶಾಶ್ವತ ಸ್ವರ್ಗ ಒಳ್ಳೆಯದೋ ಎಂದು ಇವರೊಡನೆ ಕೇಳಿರಿ.

قُلْ أَذَٰلِكَ خَيْرٌ أَمْ جَنَّةُ الْخُلْدِ الَّتِي وُعِدَ الْمُتَّقُونَ ۚ كَانَتْ لَهُمْ جَزَاءً وَمَصِيرًا ﴿١٥﴾

16. ಅದರಲ್ಲಿ ಅವರ ಪ್ರತಿಯೊಂದು ಇಚ್ಛೆಯೂ ಪೂರ್ತಿಗೊಳ್ಳುವುದು. ಅವರು ಅದರಲ್ಲಿ ಸದಾ ಕಾಲ ವಾಸಿಸುವರು. ಅದನ್ನು ದಯಪಾಲಿಸುವುದು ನಿಮ್ಮ ಪ್ರಭುವಿನ ಮೇಲೆ ಬದ್ಧವಾಗಿರುವ ಒಂದು ವಾಗ್ದಾನವಾಗಿರುತ್ತದೆ.

لَّهُمْ فِيهَا مَا يَشَاءُونَ خَالِدِينَ ۚ كَانَ عَلَىٰ رَبِّكَ وَعْدًا مَّسْئُولًا ﴿١٦﴾

17. (ನಿಮ್ಮ ಪ್ರಭು) ಇವರನ್ನೂ ಇಂದು ಇವರು ಅಲ್ಲಾಹನನ್ನು ಬಿಟ್ಟು ಪೂಜಿಸುತ್ತಿರುವ ಇವರ ಆರಾಧ್ಯರನ್ನೂ ಸುತ್ತುಗಟ್ಟಿ ತರುವ ದಿನ ಅದೇ ಆಗಿರುವುದು. ತರುವಾಯ ಅವರೊಡನೆ, "ನಮ್ಮ ಈ ದಾಸರನ್ನು ಪಥಭ್ರಷ್ಟಗೊಳಿಸಿದವರು ನೀವೋ ಅಥವಾ ಇವರು ಸ್ವತಃ ಭ್ರಷ್ಟರಾಗಿದ್ದರೋ" ಎಂದು ಅವನು ಕೇಳುವನು.

وَيَوْمَ يَحْشُرُهُمْ وَمَا يَعْبُدُونَ مِن دُونِ اللَّهِ فَيَقُولُ أَأَنتُمْ أَضْلَلْتُمْ عِبَادِي هَٰؤُلَاءِ أَمْ هُمْ ضَلُّوا السَّبِيلَ ﴿١٧﴾

18. ಆಗ ಅವರು, "ನೀನು ಪರಮ ಪಾವನನು. ನಿನ್ನ ಹೊರತು ಇತರರನ್ನು ನಮ್ಮ ರಕ್ಷಕ ಮಿತ್ರರನ್ನಾಗಿ ಮಾಡುವುದು ನಮಗೆ ಭೂಷಣವಾಗಿರಲಿಲ್ಲ. ಆದರೆ ನೀನು ಇವರಿಗೂ ಇವರ ಪೂರ್ವಿಕರಿಗೂ ಸಾಕಷ್ಟು ಜೀವನ ಸಾಧನಗಳನ್ನು ನೀಡಿದೆ. ಎಷ್ಟೆಂದರೆ, ಕೊನೆಗೆ ಇವರು ಉಪದೇಶವನ್ನು ಮರೆತುಬಿಟ್ಟರು ಮತ್ತು ದುರ್ಗತಿಗೊಳಗಾಗಿ ಬಿಟ್ಟರು" ಎನ್ನುವರು.

قَالُوا سُبْحَانَكَ مَا كَانَ يَنبَغِي لَنَا أَن نَّتَّخِذَ مِن دُونِكَ مِنْ أَوْلِيَاءَ وَلَٰكِن مَّتَّعْتَهُمْ وَآبَاءَهُمْ حَتَّىٰ نَسُوا الذِّكْرَ وَكَانُوا قَوْمًا بُورًا ﴿١٨﴾

19. ಈ ರೀತಿ (ನಿಮ್ಮ ಆರಾಧ್ಯರು) ನೀವಿಂದು ಹೇಳುತ್ತಿರುವ

فَقَدْ كَذَّبُوكُم بِمَا تَقُولُونَ فَمَا تَسْتَطِيعُونَ

ಮಾತುಗಳನ್ನು ಸುಳ್ಳಾಗಿಸುವರು[2]; ಅನಂತರ ನೀವು ನಿಮ್ಮ ದುರ್ಗತಿಯನ್ನೂ ನಿವಾರಿಸಲಾರಿರಿ. ಎಲ್ಲಿಂದಲೂ ಸಹಾಯವನ್ನೂ ಪಡೆಯಲಾರಿರಿ. ನಿಮ್ಮಲ್ಲಿ ಯಾರೇ ಅಕ್ರಮವೆಸಗಿದರೂ ಅವನಿಗೆ ನಾವು ಮಹಾ ಯಾತನೆಯ ಸವಿಯನ್ನು ಉಣಿಸುವೆವು.

صَرْفًا وَّلَا نَصْرًا ۚ وَمَنْ يَّظْلِمْ مِّنْكُمْ نُذِقْهُ عَذَابًا كَبِيْرًا ﴿١٩﴾

20. ಪೈಗಂಬರರೇ, ನಿಮಗಿಂತ ಮುಂಚೆ ನಾವು ರವಾನಿಸಿದ್ದ ಸಂದೇಶ ವಾಹಕರೆಲ್ಲರೂ ಆಹಾರ ಸೇವಿಸುವವರು ಮತ್ತು ಪೇಟೆಗಳಲ್ಲಿ ಸಂಚರಿಸುವವರೇ ಆಗಿದ್ದರು. ವಾಸ್ತವದಲ್ಲಿ ನಾವು ನಿಮ್ಮನ್ನು ಪರಸ್ಪರರ ಪಾಲಿಗೆ ಪರೀಕ್ಷಾ ಸಾಧನವನ್ನಾಗಿ ಮಾಡಿರುತ್ತೇವೆ.[3] ನೀವು ತಾಳ್ಮೆ ವಹಿಸುತ್ತೀರಾ?[4] ನಿಮ್ಮ ಪ್ರಭು ಎಲ್ಲವನ್ನೂ ವೀಕ್ಷಿಸುತ್ತಿದ್ದಾನೆ.

وَمَآ اَرْسَلْنَا قَبْلَكَ مِنَ الْمُرْسَلِيْنَ اِلَّآ اِنَّهُمْ لَيَاْكُلُوْنَ الطَّعَامَ وَيَمْشُوْنَ فِى الْاَسْوَاقِ ۗ وَجَعَلْنَا بَعْضَكُمْ لِبَعْضٍ فِتْنَةً ۗ اَتَصْبِرُوْنَ ۚ وَكَانَ رَبُّكَ بَصِيْرًا ﴿٢٠﴾

21. *ನಮ್ಮ ಮುಂದೆ ಹಾಜರಾಗಲಿಕ್ಕಿದೆಯೆಂಬ ಭಯವನ್ನಿರಿಸಿಕೊಳ್ಳದವರು, "ನಮ್ಮ ಬಳಿಗೆ ದೇವಚರರೇಕೆ ಕಳುಹಿಸಲ್ಪಡಲಿಲ್ಲ? ಅಥವಾ ನಾವು ನಮ್ಮ ಪ್ರಭುವನ್ನು ನೋಡುವಂತೆ ಯಾಕಾಗಲಿಲ್ಲ?" ಎನ್ನುತ್ತಾರೆ. ಇವರು ತಮ್ಮೊಳಗೆ ದೊಡ್ಡ ಅಹಂಭಾವವನ್ನಿರಿಸಿಕೊಂಡಿದ್ದಾರೆ ಮತ್ತು ವಿದ್ರೋಹದಲ್ಲಿ ಹದಮೀರಿ ಹೋಗಿದ್ದಾರೆ.

وَقَالَ الَّذِيْنَ لَا يَرْجُوْنَ لِقَآءَنَا لَوْلَآ اُنْزِلَ عَلَيْنَا الْمَلٰٓئِكَةُ اَوْ نَرٰى رَبَّنَا ۗ لَقَدِ اسْتَكْبَرُوْا فِىْٓ اَنْفُسِهِمْ وَعَتَوْ عُتُوًّا كَبِيْرًا ﴿٢١﴾

22. ಇವರು ದೇವಚರರನ್ನು ಕಾಣುವ ದಿನವು ಅಪರಾಧಿಗಳ ಪಾಲಿಗೆ ಸಂತಸದ ದಿನವಾಗಿರಲಾರದು- "ದೇವಾ, ಶರಣು-ಶರಣು" ಎಂದು ಚೀರಾಡುವರು.

يَوْمَ يَرَوْنَ الْمَلٰٓئِكَةَ لَا بُشْرٰى يَوْمَئِذٍ لِّلْمُجْرِمِيْنَ وَيَقُوْلُوْنَ حِجْرًا مَّحْجُوْرًا ﴿٢٢﴾

23. ಅವರು ಮಾಡಿಟ್ಟಿರುವ ಎಲ್ಲಾ ಕರ್ಮಗಳನ್ನು ನಾವು ಧೂಳಿನಂತೆ ಹಾರಿಸಿಬಿಡುವೆವು.

وَقَدِمْنَآ اِلٰى مَا عَمِلُوْا مِنْ عَمَلٍ فَجَعَلْنٰهُ هَبَآءً مَّنْثُوْرًا ﴿٢٣﴾

24. ಅಂದು ಸ್ವರ್ಗಕ್ಕೆ ಅರ್ಹರಾದವರು ಮಾತ್ರ ಒಳ್ಳೆಯ ಜಾಗದಲ್ಲಿ

اَصْحٰبُ الْجَنَّةِ يَوْمَئِذٍ خَيْرٌ مُّسْتَقَرًّا

2. ಈ ಸೂಕ್ತಗಳಲ್ಲಿ ಆರಾಧ್ಯರು ಎಂದು ಹೇಳಲಾಗಿರುವುದು ಮೂರ್ತಿ, ಸೂರ್ಯ ಅಥವಾ ಚಂದ್ರನ ಕುರಿತಲ್ಲ. ಬದಲಾಗಿ ಭೂಲೋಕದಲ್ಲಿ ಜನರು ತಮ್ಮ ಆರಾಧ್ಯರನ್ನಾಗಿ ಮಾಡಿಕೊಂಡ ದೇವಚರರು ಮತ್ತು ಮಹಾ ಪುರುಷರ ಕುರಿತಾಗಿದೆ ಎಂದು ಹಿನ್ನೆಲೆಯಿಂದ ವ್ಯಕ್ತವಾಗುತ್ತದೆ.

3. ಅರ್ಥಾತ್- ಪ್ರವಾದಿ ಮತ್ತು ಸತ್ಯವಿಶ್ವಾಸಿಗಳು ಸತ್ಯನಿಷೇಧಿಗಳ ಪಾಲಿಗೆ ಪರೀಕ್ಷಾ ಸಾಧನವಾಗಿದ್ದಾರೆ. ಅಂತೆಯೇ ಸತ್ಯನಿಷೇಧಿಗಳು, ಸತ್ಯವಿಶ್ವಾಸಿಗಳು ಮತ್ತು ಪ್ರವಾದಿಯ ಪಾಲಿಗೆ.

4. ಅರ್ಥಾತ್- ಈ ಯುಕ್ತಿಯನ್ನು ಕರಗತ ಮಾಡಿಕೊಂಡ ಬಳಿಕ ಪರೀಕ್ಷೆಯ ಈ ಸ್ಥಿತಿ, ನೀವು ಕಾರ್ಯಪ್ರವೃತ್ತರಾಗಿರುವ ಉದ್ದೇಶದ ಪಾಲಿಗೆ ಅತ್ಯಂತ ಹಿತಕರವಾದುದೆಂಬ ತಾಳ್ಮೆಯ ಭಾವ ನಿಮ್ಮಲ್ಲಿ ಬಂದು ಬಿಟ್ಟಿತೇ? ಈಗಲಾದರೂ ಪರೀಕ್ಷೆಯ ಅವಧಿಯಲ್ಲಿ ಅನಿವಾರ್ಯವಾಗಿ ತಿನ್ನಬೇಕಾದ ಏಟುಗಳನ್ನು ತಿನ್ನಲು ನೀವು ಸನ್ನದ್ಧರಾಗಿದ್ದೀರಾ?

*ಇಲ್ಲಿಂದ **19ನೆಯ** ಕಾಂಡ ಆರಂಭ.

ತಂಗುವರು ಮತ್ತು ಮಧ್ಯಾಹ್ನವನ್ನು ಕಳೆಯಲು ಉತ್ತಮ ಸ್ಥಳ ಪಡೆಯುವರು.

وَّ اَحۡسَنُ مَقِيۡلًا ﴿٢٤﴾

25. ಅಂದು ಒಂದು ಮೋಡವು ಆಕಾಶವನ್ನು ಸೀಳುತ್ತಾ ಪ್ರತ್ಯಕ್ಷ ವಾಗುವುದು ಮತ್ತು ದೇವಚರರ ತಂಡ ತಂಡಗಳೇ ಇಳಿಸಲ್ಪ ಡುವುವು.

وَيَوۡمَ تَشَقَّقُ السَّمَآءُ بِالۡغَمَامِ وَنُزِّلَ الۡمَلٰٓـئِكَةُ تَنۡزِيۡلًا ﴿٢٥﴾

26. ಅಂದು ನಿಜವಾದ ಸಾರ್ವಭೌಮತೆಯು ಕೇವಲ ರಹ್ಮಾನನದ್ದಾಗಿರು ವುದು ಮತ್ತು ಅದು ಸತ್ಯನಿಷೇಧಿಗಳಿಗೆ ಬಹಳ ಕಠಿಣ ದಿನ ವಾಗಿರುವುದು.

اَلۡمُلۡكُ يَوۡمَـئِذِ ۨالۡحَـقُّ لِلرَّحۡمٰنِ ؕ وَكَانَ يَوۡمًا عَلَى الۡكٰفِرِيۡنَ عَسِيۡرًا ﴿٢٦﴾

27. ಆ ದಿನ ಅಕ್ರಮಿಯು ತನ್ನ ಕೈಗಳನ್ನು ಕಚ್ಚಿಕೊಳ್ಳುವನು ಮತ್ತು, "ಅಕಟ! ನಾನು ಪ್ರವಾದಿಯೊಂದಿಗೆ ಸಹಕರಿಸುತ್ತಿದ್ದರೆ!

وَيَوۡمَ يَعَضُّ الظَّالِمُ عَلٰى يَدَيۡهِ يَقُوۡلُ يٰلَيۡتَنِى اتَّخَذۡتُ مَعَ الرَّسُوۡلِ سَبِيۡلًا ﴿٢٧﴾

28. ಅಯ್ಯೋ ನನ್ನ ದುರ್ದೆಸೆಯೇ! ಅಕಟ! ನಾನು ಆ ವ್ಯಕ್ತಿಯನ್ನು ಮಿತ್ರನಾಗಿ ಮಾಡಿಕೊಳ್ಳದಿರುತ್ತಿದ್ದರೆ!

يٰوَيۡلَتٰى لَيۡتَنِىۡ لَمۡ اَتَّخِذۡ فُلَانًا خَلِيۡلًا ﴿٢٨﴾

29. ಅವನ ದುರ್ಬೋಧನೆಗೆ ಮರುಳಾಗಿ ನನ್ನ ಬಳಿಗೆ ಬಂದಿದ್ದ ಸದ್ಬೋಧನೆಯನ್ನು ನಾನು ಸ್ವೀಕರಿಸಲಿಲ್ಲ. ಶೈತಾನನು ಮಾನವನ ಮಟ್ಟಿಗೆ ಮಹಾ ವಿಶ್ವಾಸ ಘಾತುಕನಾಗಿ ಬಿಟ್ಟನು" ಎಂದು ಹೇಳುವನು

لَـقَدۡ اَضَلَّنِىۡ عَنِ الذِّكۡرِ بَعۡدَ اِذۡ جَآءَنِىۡ ؕ وَكَانَ الشَّيۡطٰنُ لِلۡاِنۡسَانِ خَذُوۡلًا ﴿٢٩﴾

30. ಮತ್ತು ಸಂದೇಶವಾಹಕರು, "ನನ್ನ ಪ್ರಭೂ, ನನ್ನ ಜನಾಂಗದವರು ಈ ಕುರ್‌ಆನನ್ನು ಅಪಹಾಸ್ಯಕ್ಕೆ ಗುರಿಪಡಿಸಿದ್ದರು" ಎನ್ನುವರು.

وَقَالَ الرَّسُوۡلُ يٰرَبِّ اِنَّ قَوۡمِى اتَّخَذُوۡا هٰذَا الۡقُرۡاٰنَ مَهۡجُوۡرًا ﴿٣٠﴾

31. ಪೈಗಂಬರರೇ, ನಾವು ಇದೇ ರೀತಿಯಲ್ಲಿ ಅಪರಾಧಿಗಳನ್ನು ಪ್ರತಿಯೊಬ್ಬ ಪ್ರವಾದಿಯ ಶತ್ರುವನ್ನಾಗಿ ಮಾಡಿರುತ್ತೇವೆ ಮತ್ತು ನಿಮ್ಮ ಮಾರ್ಗದರ್ಶನಕ್ಕೂ ಸಹಾಯಕ್ಕೂ ನಿಮ್ಮ ಪ್ರಭುವೇ ಸಾಕು.

وَكَذٰلِكَ جَعَلۡنَا لِكُلِّ نَبِىٍّ عَدُوًّا مِّنَ الۡمُجۡرِمِيۡنَ ؕ وَكَفٰى بِرَبِّكَ هَادِيًا وَّنَصِيۡرًا ﴿٣١﴾

32. ಸತ್ಯನಿಷೇಧಿಗಳು, "ಇವನ ಮೇಲೆ ಇಡೀ ಕುರ್‌ಆನ್ ಏಕಕಾಲದಲ್ಲಿ ಏಕೆ ಅವತೀರ್ಣ ಗೊಳಿಸಲ್ಪಡಲಿಲ್ಲ?" ಎಂದು ಕೇಳುತ್ತಾರೆ. ಇದನ್ನು ನಿಮಗೆ ಸರಿಯಾಗಿ ಮಂದಟ್ಟು ಮಾಡಿಕೊಡಲಿಕ್ಕಾಗಿ ಹೀಗೆ ಮಾಡಲಾಗಿದೆ ಮತ್ತು (ಈ ಉದ್ದೇಶಕ್ಕಾಗಿಯೇ) ನಾವು ಇದಕ್ಕೆ ಒಂದು ನಿರ್ದಿಷ್ಟ ಕ್ರಮಕ್ಕನುಸಾರ ಬೇರೆ ಬೇರೆ ಭಾಗಗಳ ರೂಪ ಕೊಟ್ಟಿದ್ದೇವೆ.

وَقَالَ الَّذِيۡنَ كَفَرُوۡا لَوۡلَا نُزِّلَ عَلَيۡهِ الۡقُرۡاٰنُ جُمۡلَةً وَّاحِدَةً ۚۛ كَذٰلِكَ ۚۛ لِنُثَبِّتَ بِهٖ فُؤَادَكَ وَرَتَّلۡنٰهُ تَرۡتِيۡلًا ﴿٣٢﴾

33. ಅವರು ನಿಮ್ಮ ಮುಂದೆ ಯಾವುದಾದರೂ ವಿಚಿತ್ರ ವಿಷಯ (ಅಥವಾ ವಿಚಿತ್ರ ಪ್ರಶ್ನೆ) ತಂದಾಗ ನಾವು ಅದಕ್ಕೆ ಸಮರ್ಪಕವಾದ ಉತ್ತರವನ್ನು ಸಕಾಲದಲ್ಲಿ ಕೊಟ್ಟುಬಿಟ್ಟೆವು ಮತ್ತು ಅತ್ಯುತ್ತಮ ರೀತಿಯಲ್ಲಿ ವಿವರಿಸಿದೆವು.

وَلَا يَأْتُونَكَ بِمَثَلٍ إِلَّا جِئْنَاكَ بِالْحَقِّ وَأَحْسَنَ تَفْسِيرًا ﴿٣٣﴾

34. ಅಧೋಮುಖರಾಗಿ ನರಕದ ಕಡೆಗೆ ದೂಡಲ್ಪಡುವವರ ನೆಲೆಯು ಬಹಳ ಕೆಟ್ಟದ್ದು ಮತ್ತು ಅವರ ಮಾರ್ಗವು ತೀರಾ ತಪ್ಪು.

الَّذِينَ يُحْشَرُونَ عَلَىٰ وُجُوهِهِمْ إِلَىٰ جَهَنَّمَ أُولَٰئِكَ شَرٌّ مَكَانًا وَأَضَلُّ سَبِيلًا ﴿٣٤﴾

35. ನಾವು ಮೂಸಾರಿಗೆ ಗ್ರಂಥ ನೀಡಿದೆವು[5] ಮತ್ತು ಅವರ ಜೊತೆಗೆ ಅವರ ಸಹೋದರ ಹಾರೂನರನ್ನು ಸಹಾಯಕನಾಗಿ ನೇಮಿಸಿದೆವು.

وَلَقَدْ آتَيْنَا مُوسَى الْكِتَابَ وَجَعَلْنَا مَعَهُ أَخَاهُ هَارُونَ وَزِيرًا ﴿٣٥﴾

36. ನಮ್ಮ ಸೂಕ್ತಗಳನ್ನು ಸುಳ್ಳಾಗಿಸಿ ಬಿಟ್ಟಿರುವ ಆ ಜನಾಂಗದ ಕಡೆಗೆ ಹೋಗಿರೆಂದು ಅವರೊಡನೆ ಹೇಳಿದೆವು. ಕೊನೆಗೆ ನಾವು ಅವರನ್ನು ನಾಶಗೊಳಿಸಿ ಬಿಟ್ಟೆವು.

فَقُلْنَا اذْهَبَا إِلَى الْقَوْمِ الَّذِينَ كَذَّبُوا بِآيَاتِنَا فَدَمَّرْنَاهُمْ تَدْمِيرًا ﴿٣٦﴾

37. ನೂಹರ ಜನಾಂಗವು ಸಂದೇಶವಾಹಕರನ್ನು ಸುಳ್ಳಾಗಿಸಿದಾಗ ಅವರ ಗತಿಯೂ ಇದೇ ಆಗಿತ್ತು. ನಾವು ಅವರನ್ನು ಮುಳುಗಿಸಿ ಬಿಟ್ಟೆವು ಮತ್ತು ಸಮಸ್ತ ಲೋಕದವರಿಗೆ ಒಂದು ಪಾಠವಾಗಿ ಮಾಡಿ ಬಿಟ್ಟೆವು ಮತ್ತು ಆ ಅಕ್ರಮಿಗಳಿಗೆ ನಾವು ಒಂದು ವೇದನಾಯುಕ್ತ ಯಾತನೆಯನ್ನು ಸಿದ್ಧಗೊಳಿಸಿ ಇಟ್ಟಿದ್ದೇವೆ.

وَقَوْمَ نُوحٍ لَمَّا كَذَّبُوا الرُّسُلَ أَغْرَقْنَاهُمْ وَجَعَلْنَاهُمْ لِلنَّاسِ آيَةً وَأَعْتَدْنَا لِلظَّالِمِينَ عَذَابًا أَلِيمًا ﴿٣٧﴾

38. ಇದೇ ರೀತಿ 'ಆದ್', 'ಸಮೂದ್' ಮತ್ತು 'ರಸ್ಸ್'ನವರ[6] ಮಧ್ಯದ ಶತಮಾನಗಳ ಅನೇಕರೂ ನಾಶಗೊಳಿಸಲ್ಪಟ್ಟಿದ್ದಾರೆ.

وَعَادًا وَثَمُودَا وَأَصْحَابَ الرَّسِّ وَقُرُونًا بَيْنَ ذَٰلِكَ كَثِيرًا ﴿٣٨﴾

39. ನಾವು ಅವರ ಪೈಕಿ ಪ್ರತಿಯೊಬ್ಬರಿಗೂ (ಹಿಂದೆ ನಾಶ ಹೊಂದಿದವರ) ದೃಷ್ಟಾಂತಗಳನ್ನು ಕೊಡುತ್ತಾ ಬೋಧಿಸಿದೆವು ಮತ್ತು ಕೊನೆಗೆ ಎಲ್ಲರನ್ನೂ ನಾಶಗೊಳಿಸಿಬಿಟ್ಟೆವು.

وَكُلًّا ضَرَبْنَا لَهُ الْأَمْثَالَ وَكُلًّا تَبَّرْنَا تَتْبِيرًا ﴿٣٩﴾

5. ಇಲ್ಲಿ ಗ್ರಂಥವೆಂದು ಹೇಳಲಾಗಿರುವುದು ಪ್ರಾಯಶಃ ಈಜಿಪ್ಟ್‌ನಿಂದ ಹೊರಟ ಬಳಿಕ ಹ. ಮೂಸಾರಿಗೆ(ಅ) ನೀಡಲಾದ ಗ್ರಂಥದ ಕುರಿತಲ್ಲ. ಪ್ರವಾದಿತ್ವದ ಪದವಿಗೆ ನೇಮಕಗೊಂಡ ನಂತರ ಈಜಿಪ್ಟ್‌ನಿಂದ ಹೊರಡುವ ತನಕದ ಅವಧಿಯಲ್ಲಿ ಹ. ಮೂಸಾರಿಗೆ(ಅ) ನೀಡಲಾಗುತ್ತಿದ್ದ ನಿರ್ದೇಶನಗಳ ಕುರಿತು ಈ ಮಾತು ಹೇಳಲಾಗಿದೆ. ಇದರಲ್ಲಿ ಹ. ಮೂಸಾ(ಅ) ಅಲ್ಲಾಹನ ಆಜ್ಞೆಯಂತೆ ಫಿರ್‌ಔನನ ಆಸ್ಥಾನದಲ್ಲಿ ನೀಡಿದ ಪ್ರವಚನಗಳೂ ಸೇರಿವೆ. ಅಂತೆಯೇ ಫಿರ್‌ಔನ್‌ನ ವಿರುದ್ಧ ಹೋರಾಟದ ವೇಳೆ ಅವರಿಗೆ ನೀಡಲಾಗುತ್ತಿದ್ದ ಮಾರ್ಗದರ್ಶನಗಳೂ ಅದರಲ್ಲಿ ಸೇರಿವೆ. ಕುರ್‌ಆನಿನಲ್ಲಿ ಅಲ್ಲಲ್ಲಿ ಈ ವಿಷಯಗಳ ಪ್ರಸ್ತಾಪವಿದೆ. ಆದರೆ ಈ ವಿಷಯಗಳು ತೌರಾತ್‌ನಲ್ಲಿ ಸೇರಿಸಲ್ಪಟ್ಟಿಲ್ಲವೆಂಬುದೇ ಪ್ರಬಲ ಗುಮಾನಿಯಾಗಿದೆ. ತೌರಾತ್‌ನ ಆರಂಭ, ಈಜಿಪ್ಟ್‌ನಿಂದ ಹೊರಟ ನಂತರ ಸೀನಾಯ್ ಪರ್ವತದಲ್ಲಿ ಶಿಲಾಫಲಕಗಳ ರೂಪದಲ್ಲಿ ಕೊಡಲಾದ ಹತ್ತು ಆದೇಶಗಳಿಂದಾಗುತ್ತದೆ.

6. 'ರಸ್ಸ್' ಎಂದು ಅರಬಿ ಭಾಷೆಯಲ್ಲಿ ಹಳೆಯದಾದ ಪಾಳು ಬಾವಿಗೆ ಹೇಳುತ್ತಾರೆ. ತಮ್ಮ ಪ್ರವಾದಿಯನ್ನು ಬಾವಿಗೆಸೆದು ಅಥವಾ ನೇತಾಡಿಸಿ ಸಾಯಿಸಿದ್ದ ಜನರು 'ಅಸ್ಹಾಬುರ್ರಸ್ಸ್' ಅಥವಾ 'ರಸ್ಸ್'ನವರಾಗಿದ್ದಾರೆ.

40. ಅತ್ಯಂತ ಕೆಟ್ಟ ಮಳೆಗೆರೆಯಲಾಗಿದ್ದ ಆ ನಾಡನ್ನು ಇವರು ಹಾದು ಹೋಗಿದ್ದಾರೆ.[7] ಇವರು ಅವರ ಅವಸ್ಥೆಯನ್ನು ಕಂಡಿರಲಿಕ್ಕಿಲ್ಲವೇ? ಆದರೆ ಇವರು ಮರಣಾನಂತರ ಇನ್ನೊಂದು ಜೀವನದ ನಿರೀಕ್ಷೆಯನ್ನೇ ಇಟ್ಟುಕೊಂಡಿಲ್ಲ.

وَلَقَدْ أَتَوْا عَلَى الْقَرْيَةِ الَّتِي أُمْطِرَتْ مَطَرَ السَّوْءِ ۚ أَفَلَمْ يَكُونُوا يَرَوْنَهَا ۚ بَلْ كَانُوا لَا يَرْجُونَ نُشُورًا ﴿٤٠﴾

41. ಇವರು ನಿಮ್ಮನ್ನು ಕಂಡಾಗಲೆಲ್ಲಾ ಅಪಹಾಸ್ಯ ಮಾಡುತ್ತಾರೆ. "ಅಲ್ಲಾಹನು ಸಂದೇಶವಾಹಕನಾಗಿ ಮಾಡಿ ಕಳುಹಿಸಿದುದು ಇವನನ್ನೇ?

وَإِذَا رَأَوْكَ إِنْ يَتَّخِذُونَكَ إِلَّا هُزُوًا أَهَٰذَا الَّذِي بَعَثَ اللَّهُ رَسُولًا ﴿٤١﴾

42. ನಾವು ನಮ್ಮ ಆರಾಧ್ಯರ ಭಕ್ತಿಯಲ್ಲಿ ಅಚಲರಾಗದೆ ಇದ್ದಿದ್ದರೆ ಇವನು ನಮ್ಮನ್ನು ದಾರಿಗೆಡಿಸಿ ಅವುಗಳಿಂದ ಬೇರ್ಪಡಿಸಿಯೇ ಬಿಡುತ್ತಿದ್ದನು" (ಎನ್ನುತ್ತಾರೆ). ಸರಿ, ಯಾತನೆಯನ್ನು ಕಂಡಾಗ ಯಾರು ಪಥಭ್ರಷ್ಟತೆಯಲ್ಲಿ ಬಹುದೂರ ಸಾಗಿದ್ದನೆಂಬುದು ಸ್ವತಃ ಇವರಿಗೇ ತಿಳಿದು ಬರುವ ಕಾಲ ದೂರವಿಲ್ಲ.

إِنْ كَادَ لَيُضِلُّنَا عَنْ آلِهَتِنَا لَوْلَا أَنْ صَبَرْنَا عَلَيْهَا ۚ وَسَوْفَ يَعْلَمُونَ حِينَ يَرَوْنَ الْعَذَابَ مَنْ أَضَلُّ سَبِيلًا ﴿٤٢﴾

43. ತನ್ನ ಚಿತ್ತಾಕಾಂಕ್ಷೆಯನ್ನು ತನ್ನ ದೇವನಾಗಿ ಮಾಡಿಕೊಂಡಿರುವಾತನ ಸ್ಥಿತಿಯ ಬಗ್ಗೆ ನೀವೆಂದಾದರೂ ವಿವೇಚಿಸಿದಿರಾ? ನೀವು ಇಂತಹವರನ್ನು ಸರಿದಾರಿಗೆ ತರುವ ಹೊಣೆಯನ್ನು ವಹಿಸಿಕೊಳ್ಳಬಲ್ಲಿರಾ?

أَرَأَيْتَ مَنِ اتَّخَذَ إِلَٰهَهُ هَوَاهُ أَفَأَنْتَ تَكُونُ عَلَيْهِ وَكِيلًا ﴿٤٣﴾

44. ಇವರಲ್ಲಿ ಹೆಚ್ಚಿನವರು ಆಲಿಸುತ್ತಾರೆಂದೂ ಗ್ರಹಿಸುತ್ತಾರೆಂದೂ ಭಾವಿಸುತ್ತೀರಾ? ಇವರಂತು ಪ್ರಾಣಿಗಳಂತಿದ್ದಾರೆ. ಅಷ್ಟೇ ಅಲ್ಲ ಅದಕ್ಕಿಂತಲೂ ನಿಕೃಷ್ಟರು.

أَمْ تَحْسَبُ أَنَّ أَكْثَرَهُمْ يَسْمَعُونَ أَوْ يَعْقِلُونَ ۚ إِنْ هُمْ إِلَّا كَالْأَنْعَامِ ۖ بَلْ هُمْ أَضَلُّ سَبِيلًا ﴿٤٤﴾

45. ನಿಮ್ಮ ಪ್ರಭು ಹೇಗೆ ನೆರಳನ್ನು ಹರಡಿಸಿ ಬಿಡುತ್ತಾನೆಂಬುದನ್ನು ನೀವು ಕಂಡಿಲ್ಲವೇ? ಅವನು ಇಚ್ಛಿಸಿದ್ದರೆ ಅದನ್ನು ಶಾಶ್ವತ ನೆರಳಾಗಿಸಿ ಬಿಡುತ್ತಿದ್ದನು. ನಾವು ಸೂರ್ಯನನ್ನು ಅವರ ಮಾರ್ಗದರ್ಶಿಯಾಗಿ ಮಾಡಿರುವೆವು.[8]

أَلَمْ تَرَ إِلَىٰ رَبِّكَ كَيْفَ مَدَّ الظِّلَّ وَلَوْ شَاءَ لَجَعَلَهُ سَاكِنًا ثُمَّ جَعَلْنَا الشَّمْسَ عَلَيْهِ دَلِيلًا ﴿٤٥﴾

46. ಅನಂತರ (ಸೂರ್ಯನು ಮೇಲೇರುತ್ತಿದ್ದ ಹಾಗೆ) ನಾವು ಆ ನೆರಳನ್ನು ಕ್ರಮೇಣ ನಮ್ಮ ಕಡೆಗೆ ಸೆಳೆಯುತ್ತ ಹೋಗುತ್ತೇವೆ.[9]

ثُمَّ قَبَضْنَاهُ إِلَيْنَا قَبْضًا يَسِيرًا ﴿٤٦﴾

7. ಅರ್ಥಾತ್- ಲೂತ್ ಸಮುದಾಯದ ಪ್ರದೇಶ. ಕೆಟ್ಟ ಮಳೆಯೆಂದರೆ ಕಲ್ಲಿನ ಮಳೆ.
8. ನಾವಿಕರ ಪಾರಿಭಾಷಿಕದಲ್ಲಿ 'ದಲೀಲ್' ಎಂದರೆ ನಾವೆಗಳಿಗೆ ದಾರಿ ತೋರಿಸುವ ವ್ಯಕ್ತಿ. ನೆರಳನ್ನು ಸೂರ್ಯನ ಮೇಲೆ 'ದಲೀಲ್' ಮಾಡುವುದೆಂದರೇ - ನೆರಳಿನ ಸಂಕುಚನ-ವಿಕಸನ, ಸೂರ್ಯನ ಮೇಲೇರುವಿಕೆ-ಕೆಳಗಿಳಿಯುವಿಕೆ ಹಾಗೂ ಉದಯ - ಅಸ್ತಮಾನಗಳನ್ನು ಹೊಂದಿಕೊಂಡಿದೆ ಎಂದಾಗಿದೆ.
9. ತನ್ನ ಬಳಿಗೆ ಸೆಳೆಯುವುದೆಂದರೆ ಅದೃಶ್ಯಗೊಳಿಸುವುದು ಮತ್ತು ನಾಶ ಪಡಿಸುವುದು. ಏಕೆಂದರೆ ನಾಶವಾಗುವುದೆಲ್ಲವೂ ಅಲ್ಲಾಹನೆಡೆಗೇ

47. ರಾತ್ರಿಯನ್ನು ನಿಮಗೆ ಉಡುಪಾಗಿಯೂ ನಿದ್ದೆಯನ್ನು ಪ್ರಶಾಂತಿಯಾಗಿಯೂ ಹಗಲನ್ನು ಎದ್ದೇಳುವ ಸಮಯವಾಗಿಯೂ ಮಾಡಿದವನು ಅಲ್ಲಾಹನೇ ಆಗಿರುತ್ತಾನೆ.

وَهُوَ الَّذِي جَعَلَ لَكُمُ اللَّيْلَ لِبَاسًا وَالنَّوْمَ سُبَاتًا وَجَعَلَ النَّهَارَ نُشُورًا ﴿٤٧﴾

48. ತನ್ನ ಕೃಪೆಗೆ ಮುಂಚಿತವಾಗಿ ಮಾರುತಗಳನ್ನು ಸುವಾರ್ತೆಯಾಗಿ ಕಳುಹಿಸುವವನು ಅವನೇ. ಅನಂತರ ಆಕಾಶದಿಂದ ಶುದ್ಧ ನೀರನ್ನಿಳಿಸುತ್ತಾನೆ.

وَهُوَ الَّذِي أَرْسَلَ الرِّيَاحَ بُشْرًا بَيْنَ يَدَيْ رَحْمَتِهِ ۚ وَأَنزَلْنَا مِنَ السَّمَاءِ مَاءً طَهُورًا ﴿٤٨﴾

49. (ಇದು) ಅದರ ಮೂಲಕ ಒಂದು ನಿರ್ಜೀವ ಪ್ರದೇಶಕ್ಕೆ ಜೀವದಾನ ಮಾಡಲಿಕ್ಕಾಗಿ ಮತ್ತು ತನ್ನ ಸೃಷ್ಟಿಯ ಪೈಕಿ ಅನೇಕ ಪ್ರಾಣಿಗಳಿಗೂ ಮನುಷ್ಯರಿಗೂ ಕುಡಿಸಲಿಕ್ಕಾಗಿ.

لِّنُحْيِيَ بِهِ بَلْدَةً مَّيْتًا وَنُسْقِيَهُ مِمَّا خَلَقْنَا أَنْعَامًا وَأَنَاسِيَّ كَثِيرًا ﴿٤٩﴾

50. ಅವರು ಒಂದಿಷ್ಟು ಪಾಠ ಕಲಿಯಲೆಂದು ನಾವು ಈ ಅದ್ಭುತವನ್ನು ಪದೇ ಪದೇ ಅವರ ಮುಂದೆ ತರುತ್ತೇವೆ. ಆದರೆ ಹೆಚ್ಚಿನವರು ಸತ್ಯನಿಷೇಧ ಮತ್ತು ಕೃತಘ್ನತೆಯ ಹೊರತು ಬೇರಾವುದೇ ನಿಲುಮೆಯನ್ನು ಅಂಗೀಕರಿಸಲು ನಿರಾಕರಿಸಿ ಬಿಡುತ್ತಾರೆ.

وَلَقَدْ صَرَّفْنَاهُ بَيْنَهُمْ لِيَذَّكَّرُوا فَأَبَىٰ أَكْثَرُ النَّاسِ إِلَّا كُفُورًا ﴿٥٠﴾

51. ನಾವಿಚ್ಛಿಸುತ್ತಿದ್ದರೆ ಪ್ರತಿಯೊಂದು ನಾಡಿನಲ್ಲಿಯೂ ಒಬ್ಬೊಬ್ಬ ಎಚ್ಚರಿಕೆ ನೀಡುವಾತನನ್ನು ನಿಯೋಗಿಸುತ್ತಿದ್ದೆವು.[10]

وَلَوْ شِئْنَا لَبَعَثْنَا فِي كُلِّ قَرْيَةٍ نَّذِيرًا ﴿٥١﴾

52. ಆದುದರಿಂದ ಪೈಗಂಬರರೇ, ಸತ್ಯನಿಷೇಧಿಗಳ ಮಾತನ್ನು ಅನುಸರಿಸಲೇ ಬೇಡಿರಿ ಮತ್ತು ಈ ಕುರ್‌ಆನನ್ನು ತೆಗೆದುಕೊಂಡು ಅವರ ವಿರುದ್ಧ ಉಗ್ರ ಹೋರಾಟ ನಡೆಸಿರಿ.

فَلَا تُطِعِ الْكَافِرِينَ وَجَاهِدْهُم بِهِ جِهَادًا كَبِيرًا ﴿٥٢﴾

53. ಎರಡು ಸಮುದ್ರಗಳನ್ನು ಸೇರಿಸಿಟ್ಟಿರುವವನು ಅವನೇ. ಒಂದು ರುಚಿಕರವೂ ಸಿಹಿಯೂ ಆಗಿದೆ. ಇನ್ನೊಂದು ಉಪ್ಪೂ ಕಹಿಯೂ ಆಗಿದೆ. ಇವೆರಡರ ಮಧ್ಯೆ ಒಂದು ತೆರೆ ಇದೆ. ಅವು ಪರಸ್ಪರ ಬೆರೆಯದಂತೆ ಮಾಡುವ ಒಂದು ತಡೆ ಇದೆ.[11]

وَهُوَ الَّذِي مَرَجَ الْبَحْرَيْنِ هَٰذَا عَذْبٌ فُرَاتٌ وَهَٰذَا مِلْحٌ أُجَاجٌ وَجَعَلَ بَيْنَهُمَا بَرْزَخًا وَحِجْرًا مَّحْجُورًا ﴿٥٣﴾

---

ಮರಳುತ್ತದೆ. ಎಲ್ಲ ವಸ್ತುಗಳೂ ಅವನೆಡೆಯಿಂದಲೇ ಬರುತ್ತವೆ ಮತ್ತು ಅವನೆಡೆಗೇ ಮರಳುತ್ತವೆ.

10. ಅರ್ಥಾತ್- ಹಾಗೆ ಮಾಡುವುದು ನಮ್ಮ ಸಾಮರ್ಥ್ಯಕ್ಕೆ ಅತೀತವಾಗಿರಲಿಲ್ಲ. ನಾವು ಬಯಸಿದ್ದರೆ ಅಲ್ಲಲ್ಲಿ ಪ್ರವಾದಿಗಳನ್ನು ಹುಟ್ಟಿಸುತ್ತಿದ್ದೆವು. ಆದರೆ ನಾವು ಹಾಗೆ ಮಾಡಲಿಲ್ಲ. ಸಮಸ್ತ ಜಗತ್ತಿಗಾಗಿ ನಾವು ಓರ್ವ ಪ್ರವಾದಿಯನ್ನು ನೇಮಿಸಿದೆವು. ಒಂದೇ ಸೂರ್ಯ ಸಮಸ್ತ ಜಗತ್ತಿಗೆ ಸಾಕಾಗುವಂತೆ ಈ ಏಕೈಕ ಮಾರ್ಗದರ್ಶನದ ಸೂರ್ಯ ಲೋಕದ ಸಮಸ್ತ ಜನರಿಗೆ ಸಾಕಾಗುವುದು.

11. ದೊಡ್ಡ ನದಿಯೊಂದು ಸಮುದ್ರಕ್ಕೆ ಬಂದು ಸೇರುವೆಡೆಗಳಲ್ಲಿ ಈ ಸ್ಥಿತಿ ತಲೆದೋರುತ್ತದೆ. ಅಲ್ಲದೆ ಸಮುದ್ರದಲ್ಲೂ ಹಲವೆಡೆ ಸಿಹಿನೀರಿನ ಬುಗ್ಗೆಗಳಿವೆ. ಅದರ ನೀರು ಸಮುದ್ರದ ಅತ್ಯಂತ ಕಹಿಯಾದ ನೀರಿನ ನಡುವೆ ಇದ್ದರೂ ತನ್ನ ಸಿಹಿತನವನ್ನು ಕಾಪಾಡಿಕೊಂಡಿರುತ್ತದೆ. ಉದಾ: ಬಹ್ರೇನ್ ಮತ್ತು ಪರ್ಶಿಯನ್ ಕೊಲ್ಲಿಯ ತಳದಿಂದ ಇಂತಹ ಅನೇಕ ಬುಗ್ಗೆಗಳು ಪುಟಿದೆದ್ದಿವೆ. ಅವುಗಳಿಂದ ಜನರು ಸಿಹಿ ನೀರು ಪಡೆಯುತ್ತಾರೆ.

| | |
|---|---|
| 54. ನೀರಿನಿಂದ ಒಬ್ಬ ಮಾನವನನ್ನು ಸೃಷ್ಟಿಸಿದವನೂ ಅವನೇ. ತರುವಾಯ ಅವನಿಂದ ವಂಶೀಯ ಮತ್ತು ವೈವಾಹಿಕ ಎಂಬ ಎರಡು ಬೇರೆ ಬೇರೆ ಪರಂಪರೆಗಳನ್ನು ಹೊರಡಿಸಿದನು. ನಿನ್ನ ಪ್ರಭು ಮಹಾ ಸಮರ್ಥನು. | وَهُوَ الَّذِي خَلَقَ مِنَ الْمَاءِ بَشَرًا فَجَعَلَهُ نَسَبًا وَصِهْرًا ۗ وَكَانَ رَبُّكَ قَدِيرًا ﴿٥٤﴾ |
| 55. ಜನರು ಆ ಅಲ್ಲಾಹನನ್ನು ಬಿಟ್ಟು ಅವರಿಗೆ ಲಾಭವಾಗಲಿ, ನಷ್ಟವಾಗಲಿ ಉಂಟು ಮಾಡಲಾರದವುಗಳನ್ನು ಆರಾಧಿಸುತ್ತಾರೆ. ಸತ್ಯನಿಷೇಧಿಯು ತನ್ನ ಪ್ರಭುವಿನ ವಿರುದ್ಧ ಪ್ರತಿಯೊಬ್ಬ ಬಂಡುಕೋರನ ಸಹಾಯಕನಾಗಿ ಬಿಟ್ಟಿದ್ದಾನೆ. | وَيَعْبُدُونَ مِن دُونِ اللَّهِ مَا لَا يَنفَعُهُمْ وَلَا يَضُرُّهُمْ ۗ وَكَانَ الْكَافِرُ عَلَىٰ رَبِّهِ ظَهِيرًا ﴿٥٥﴾ |
| 56. ಪೈಗಂಬರರೇ, ನಾವು ನಿಮ್ಮನ್ನು ಓರ್ವ ಶುಭವಾರ್ತೆ ಹಾಗೂ ಎಚ್ಚರಿಕೆ ನೀಡುವವರಾಗಿ ಕಳುಹಿಸಿರುತ್ತೇವೆ.[12] | وَمَا أَرْسَلْنَاكَ إِلَّا مُبَشِّرًا وَنَذِيرًا ﴿٥٦﴾ |
| 57. ಇವರೊಡನೆ, "ನಾನು ಈ ಕಾರ್ಯಕ್ಕಾಗಿ ನಿಮ್ಮಿಂದ ಯಾವುದೇ ಪ್ರತಿಫಲ ಕೇಳುವುದಿಲ್ಲ. ಇಷ್ಟವಿದ್ದವನು ತನ್ನ ಪ್ರಭುವಿನ ಮಾರ್ಗವನ್ನನುಸರಿಸುವುದೇ ನನ್ನ ಪ್ರತಿಫಲ" ಎಂದು ಹೇಳಿರಿ. | قُلْ مَا أَسْأَلُكُمْ عَلَيْهِ مِنْ أَجْرٍ إِلَّا مَن شَاءَ أَن يَتَّخِذَ إِلَىٰ رَبِّهِ سَبِيلًا ﴿٥٧﴾ |
| 58. ಪೈಗಂಬರರೇ, ಸ್ವಯಂ ಜೀವಂತನೂ ಅಮರನೂ ಆಗಿರುವ ದೇವನ ಮೇಲೆ ಭರವಸೆಯಿಡಿರಿ. ಅವನ ಪ್ರಶಂಸೆಯೊಂದಿಗೆ ಅವನನ್ನು ಸ್ತುತಿಸಿರಿ. ತನ್ನ ದಾಸರ ಪಾಪಗಳ ಬಗ್ಗೆ ಅವನು ಮಾತ್ರ ಅರಿತಿದ್ದರೆ ಸಾಕು. | وَتَوَكَّلْ عَلَى الْحَيِّ الَّذِي لَا يَمُوتُ وَسَبِّحْ بِحَمْدِهِ ۚ وَكَفَىٰ بِهِ بِذُنُوبِ عِبَادِهِ خَبِيرًا ﴿٥٨﴾ |
| 59. ಅವನು ಭೂಮಿ-ಆಕಾಶಗಳನ್ನೂ ಅವುಗಳ ನಡುವೆ ಇರುವ ಸಕಲ ವಸ್ತುಗಳನ್ನೂ ಆರು ದಿನಗಳಲ್ಲಿ ಸೃಷ್ಟಿಸಿದನು. ತರುವಾಯ ಸ್ವಯಂ ಸಿಂಹಾಸನಾ ರೂಢನಾದನು. ರಹ್ಮಾನ್! ಅವನ ಘನತೆಯನ್ನು ಬಲ್ಲವರೊಡನೆ ಕೇಳಿಕೊಳ್ಳಿರಿ. | الَّذِي خَلَقَ السَّمَاوَاتِ وَالْأَرْضَ وَمَا بَيْنَهُمَا فِي سِتَّةِ أَيَّامٍ ثُمَّ اسْتَوَىٰ عَلَى الْعَرْشِ ۚ الرَّحْمَٰنُ فَاسْأَلْ بِهِ خَبِيرًا ﴿٥٩﴾ |
| 60. ಆ ರಹ್ಮಾನನಿಗೆ ಸಾಷ್ಟಾಂಗವೆರಗಿರಿ ಎಂದು ಅವರೊಡನೆ ಹೇಳಿದಾಗ, "ರಹ್ಮಾನ್ ಎಂದರೇನು? ನೀನು ಹೇಳುವವರಿಗೆ ನಾವು ಸಾಷ್ಟಾಂಗವೆರಗಬೇಕೇ?" ಎಂದು ಕೇಳುತ್ತಾರೆ. ಈ ಕರೆಯು ಅವರ ತಿರಸ್ಕಾರವನ್ನು ಇನ್ನಷ್ಟು ವೃದ್ಧಿಸುತ್ತದೆ. | وَإِذَا قِيلَ لَهُمُ اسْجُدُوا لِلرَّحْمَٰنِ قَالُوا وَمَا الرَّحْمَٰنُ أَنَسْجُدُ لِمَا تَأْمُرُنَا وَزَادَهُمْ نُفُورًا ۩ ﴿٦٠﴾ |

12. ಅರ್ಥಾತ್- ಸತ್ಯವಿಶ್ವಾಸಿಗೆ ಪ್ರತಿಫಲ ನೀಡುವುದಾಗಲಿ, ಸತ್ಯನಿಷೇಧಿಗೆ ಶಿಕ್ಷೆ ನೀಡುವುದಾಗಲಿ ನಿಮ್ಮ ಕೆಲಸವಲ್ಲ. ಯಾರನ್ನಾದರೂ ಸತ್ಯವಿಶ್ವಾಸದೆಡೆಗೆ ಬಲವಂತದಿಂದ ಎಳೆದು ತರಲು ಅಥವಾ ಸತ್ಯನಿಷೇಧದಿಂದ ಒತ್ತಾಯಪೂರ್ವಕ ತಡೆಯಲು ನಿಮ್ಮನ್ನು ನೇಮಿಸಲಾಗಿಲ್ಲ. ಸನ್ಮಾರ್ಗವನ್ನು ಸ್ವೀಕರಿಸುವವನಿಗೆ ಸತ್ಪರಿಣಾಮದ ಶುಭವಾರ್ತೆ ನೀಡುವುದು ಮತ್ತು ತನ್ನ ಕೆಡುಕಿನಲ್ಲಿ ದೃಢವಾಗಿ ನಿಲ್ಲುವವನಿಗೆ ಅಲ್ಲಾಹನ ಹಿಡಿತದ ಬಗ್ಗೆ ಎಚ್ಚರಿಸುವುದಷ್ಟೇ ನಿಮ್ಮ ಕೆಲಸ.

61. ಆಕಾಶದಲ್ಲಿ ಬುರುಜುಗಳನ್ನು ಮಾಡಿದವನು ಮತ್ತು ಅದರಲ್ಲಿ ಒಂದು ದೀಪ ಮತ್ತು ಹೊಳೆಯುವ ಚಂದ್ರನನ್ನು ಬೆಳಗಿಸಿದವನು ಪರಮ ಮಂಗಳಮಯನು.

تَبٰرَكَ الَّذِيْ جَعَلَ فِي السَّمَآءِ بُرُوْجًا وَّجَعَلَ فِيْهَا سِرٰجًا وَّقَمَرًا مُّنِيْرًا ﴿٦١﴾

62. ಪಾಠ ಕಲಿಯಲು ಅಥವಾ ಕೃತಜ್ಞನಾಗಲು ಬಯಸುವ ಪ್ರತಿಯೊಬ್ಬನಿಗಾಗಿ ರಾತ್ರೆ ಹಗಲುಗಳನ್ನು ಪರಸ್ಪರ ಉತ್ತರಾಧಿಕಾರಿಗಳನ್ನಾಗಿ ಮಾಡಿದವನು ಅವನೇ.

وَهُوَ الَّذِيْ جَعَلَ الَّيْلَ وَالنَّهَارَ خِلْفَةً لِّمَنْ اَرَادَ اَنْ يَّذَّكَّرَ اَوْ اَرَادَ شُكُوْرًا ﴿٦٢﴾

63. ರಹ್ಮಾನನ ನಿಜವಾದ ದಾಸರು ಭೂಮಿಯ ಮೇಲೆ ಸೌಮ್ಯ ನಡಿಗೆ ನಡೆಯುತ್ತಾರೆ.[13] ತಿಳಿಗೇಡಿಗಳು ವ್ಯರ್ಥ ತಕರಾರಿಗೆ ಬಂದಾಗ, "ನಿಮಗೆ ಸಲಾಮ್" ಎಂದು ಬಿಡುತ್ತಾರೆ.

وَعِبَادُ الرَّحْمٰنِ الَّذِيْنَ يَمْشُوْنَ عَلَى الْاَرْضِ هَوْنًا وَّاِذَا خَاطَبَهُمُ الْجٰهِلُوْنَ قَالُوْا سَلٰمًا ﴿٦٣﴾

64. ಅವರು ತಮ್ಮ ಪ್ರಭುವಿನ ಮುಂದೆ ಸಾಷ್ಟಾಂಗವೆರಗುತ್ತಲೂ ನಿಲ್ಲುತ್ತಲೂ ರಾತ್ರಿಗಳನ್ನು ಕಳೆಯುತ್ತಾರೆ.

وَالَّذِيْنَ يَبِيْتُوْنَ لِرَبِّهِمْ سُجَّدًا وَّقِيَامًا ﴿٦٤﴾

65. ಅವರು ಹೀಗೆ ಪ್ರಾರ್ಥಿಸುತ್ತಾರೆ, "ನಮ್ಮ ಪ್ರಭೂ, ನಮ್ಮನ್ನು ನರಕದ ಯಾತನೆಯಿಂದ ರಕ್ಷಿಸು. ಅದರ ಯಾತನೆಯಂತೂ ಪ್ರಾಣಾಂತಿಕವಾಗಿದೆ.

وَالَّذِيْنَ يَقُوْلُوْنَ رَبَّنَا اصْرِفْ عَنَّا عَذَابَ جَهَنَّمَ ۖ اِنَّ عَذَابَهَا كَانَ غَرَامًا ﴿٦٥﴾

66. ಅದು ಅತ್ಯಂತ ನಿಕೃಷ್ಟ ನೆಲೆ ಮತ್ತು ಸ್ಥಾನವಾಗಿರುತ್ತದೆ."

اِنَّهَا سَآءَتْ مُسْتَقَرًّا وَّمُقَامًا ﴿٦٦﴾

67. ಅವರು ಖರ್ಚು ಮಾಡುವಾಗ ದುಂದುವೆಚ್ಚವನ್ನೂ ಮಾಡುವುದಿಲ್ಲ. ಜಿಪುಣತೆಯನ್ನೂ ತೋರುವುದಿಲ್ಲ. ಅವರ ಖರ್ಚು ಇವೆರಡರ ನಡುವೆ ಸಮತೂಕದಲ್ಲಿ ನಿಂತಿರುತ್ತದೆ.

وَالَّذِيْنَ اِذَآ اَنْفَقُوْا لَمْ يُسْرِفُوْا وَلَمْ يَقْتُرُوْا وَكَانَ بَيْنَ ذٰلِكَ قَوَامًا ﴿٦٧﴾

68. ಅವರು ಅಲ್ಲಾಹನ ಹೊರತು ಇತರ ಯಾವ ಆರಾಧ್ಯನನ್ನೂ ಪ್ರಾರ್ಥಿಸುವುದಿಲ್ಲ. ಅಲ್ಲಾಹನು ಗೌರವಿಸಿರುವ ಯಾವ ಜೀವವನ್ನೂ ಅನ್ಯಾಯವಾಗಿ ಸಂಹರಿಸುವುದಿಲ್ಲ. ವ್ಯಭಿಚಾರವೆಸಗುವುದೂ ಇಲ್ಲ. ಈ ಕಾರ್ಯಗಳನ್ನು ಯಾರೇ ಮಾಡಿದರೂ ಅವನು ತನ್ನ ಪಾಪಗಳ ಫಲವನ್ನು ಪಡೆಯುವನು.

وَالَّذِيْنَ لَا يَدْعُوْنَ مَعَ اللّٰهِ اِلٰهًا اٰخَرَ وَلَا يَقْتُلُوْنَ النَّفْسَ الَّتِيْ حَرَّمَ اللّٰهُ اِلَّا بِالْحَقِّ وَلَا يَزْنُوْنَ ۚ وَمَنْ يَّفْعَلْ ذٰلِكَ يَلْقَ اَثَامًا ﴿٦٨﴾

69. ನಿರ್ಣಾಯಕ ದಿನದಂದು ಅವನಿಗೆ ಇಮ್ಮಡಿ ಯಾತನೆ ನೀಡಲಾಗು

يُّضٰعَفْ لَهُ الْعَذَابُ يَوْمَ الْقِيٰمَةِ وَ

13. ಅರ್ಥಾತ್- ದುರಹಂಕಾರದೊಂದಿಗೆ ಸೆಟೆಯುತ್ತಾ ಸೊಕ್ಕಿನಿಂದ ನಡೆಯುವುದಿಲ್ಲ. ಸರ್ವಾಧಿಕಾರಿಗಳು ಮತ್ತು ಕ್ಷೋಭೆಯುಂಟು ಮಾಡುವವರಂತೆ ನಡಿಗೆಯಿಂದ ತಮ್ಮ ಬಲಪ್ರದರ್ಶನ ಮಾಡಲು ಪ್ರಯತ್ನಿಸುವುದಿಲ್ಲ. ಸಭ್ಯನೂ, ಸತ್‌ಸ್ವಭಾವಿಯೂ ಆದ ಓರ್ವ ಉತ್ತಮ ನಡತೆಯ ವ್ಯಕ್ತಿಯಂತೆ ಅವರು ನಡೆಯುತ್ತಾರೆ.

ವುದು ಮತ್ತು ಅವನು ಅದರಲ್ಲೇ ಸದಾ ಅವಮಾನಿತನಾಗಿ ಬಿದ್ದು ಕೊಂಡಿರುವನು.

يَخْلُدْ فِيهِ مُهَانًا ﴿٦٩﴾

70. (ಈ ಪಾಪಗಳನ್ನು ಮಾಡಿದ ಬಳಿಕ) ಪಶ್ಚಾತ್ತಾಪ ಪಟ್ಟು ಸತ್ಯ ವಿಶ್ವಾಸವನ್ನು ಸ್ವೀಕರಿಸಿ, ಸತ್ಕರ್ಮಗಳನ್ನು ಮಾಡಲಾರಂಭಿಸಿದವರ ಹೊರತು. ಇಂತಹವರ ಕೆಡುಕುಗಳನ್ನು ಅಲ್ಲಾಹನು ಒಳಿತುಗಳಾಗಿ ಪರಿವರ್ತಿಸುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತಾನೆ.

إِلَّا مَن تَابَ وَآمَنَ وَعَمِلَ عَمَلًا صَالِحًا فَأُولَٰئِكَ يُبَدِّلُ اللَّهُ سَيِّئَاتِهِمْ حَسَنَاتٍ ۗ وَكَانَ اللَّهُ غَفُورًا رَّحِيمًا ﴿٧٠﴾

71. ಪಶ್ಚಾತ್ತಾಪ ಪಟ್ಟು ಸತ್ಕರ್ಮಗಳನ್ನು ಮಾಡಲಾರಂಭಿಸುವವನಂತು ಅಲ್ಲಾಹನ ಕಡೆಗೆ ಮರಳಬೇಕಾದ ರೀತಿಯಲ್ಲಿ ಮರಳುತ್ತಾನೆ.

وَمَن تَابَ وَعَمِلَ صَالِحًا فَإِنَّهُ يَتُوبُ إِلَى اللَّهِ مَتَابًا ﴿٧١﴾

72. (ರಹ್ಮಾನನ ದಾಸರು) ಸುಳ್ಳಿಗೆ ಸಾಕ್ಷಿಗಳಾಗುವುದಿಲ್ಲ ಮತ್ತು ಅವರಿಗೆ ವ್ಯರ್ಥ ವಿಷಯಗಳ ಸಮೀಪದಿಂದ ಹಾದು ಹೋಗ ಬೇಕಾಗಿ ಬಂದಾಗ ಸಂಭಾವಿತರಂತೆ ಹಾದು ಹೋಗುತ್ತಾರೆ.

وَالَّذِينَ لَا يَشْهَدُونَ الزُّورَ وَإِذَا مَرُّوا بِاللَّغْوِ مَرُّوا كِرَامًا ﴿٧٢﴾

73. ಅವರ ಪ್ರಭುವಿನ 'ಸೂಕ್ತ'ಗಳನ್ನು ಹೇಳಿ ಉಪದೇಶ ಮಾಡಿದಾಗ ಅವರು ಅದರ ಬಗ್ಗೆ ಕುರುಡರೂ ಕಿವುಡರೂ ಆಗಿದ್ದು ಬಿಡುವು ದಿಲ್ಲ.

وَالَّذِينَ إِذَا ذُكِّرُوا بِآيَاتِ رَبِّهِمْ لَمْ يَخِرُّوا عَلَيْهَا صُمًّا وَعُمْيَانًا ﴿٧٣﴾

74. ಅವರು, "ನಮ್ಮ ಪ್ರಭೂ, ನಮ್ಮ ಪತ್ನಿಯರಿಂದಲೂ ಮಕ್ಕ ಳಿಂದಲೂ ನಮ್ಮ ಕಣ್ಮನಗಳನ್ನು ತಣಿಸು ಮತ್ತು ನಮ್ಮನ್ನು ಧರ್ಮನಿಷ್ಠರ ನಾಯಕರಾಗಿ ಮಾಡು" ಎಂದು ಪ್ರಾರ್ಥಿಸುತ್ತಾರೆ.[14]

وَالَّذِينَ يَقُولُونَ رَبَّنَا هَبْ لَنَا مِنْ أَزْوَاجِنَا وَذُرِّيَّاتِنَا قُرَّةَ أَعْيُنٍ وَاجْعَلْنَا لِلْمُتَّقِينَ إِمَامًا ﴿٧٤﴾

75. ಇವರೇ ತಮ್ಮ ಸಹನೆಯ ಫಲವನ್ನು ಉನ್ನತ ಅಂತಸ್ತಿನ ರೂಪದಲ್ಲಿ ಪಡೆಯಲಿರುವವರು. ಅವರನ್ನು ಗೌರವಪೂರ್ಣ ಅಭಿನಂದನೆಗಳೊಂದಿಗೆ ಸ್ವಾಗತಿಸಲಾಗುವುದು.

أُولَٰئِكَ يُجْزَوْنَ الْغُرْفَةَ بِمَا صَبَرُوا وَيُلَقَّوْنَ فِيهَا تَحِيَّةً وَسَلَامًا ﴿٧٥﴾

76. ಅಲ್ಲಿ ಅವರು ಅನಂತಾನಂತ ಕಾಲ ವಾಸಿಸುವರು. ಆ ನೆಲೆ ಮತ್ತು ಆ ಸ್ಥಾನ ಅದೆಷ್ಟು ಉತ್ತಮವಾದುದು!

خَالِدِينَ فِيهَا ۚ حَسُنَتْ مُسْتَقَرًّا وَمُقَامًا ﴿٧٦﴾

14. ಅರ್ಥಾತ್- ದೇವಭಕ್ತಿ ಮತ್ತು ಅನುಸರಣೆಯಲ್ಲಿ ನಾವು ಎಲ್ಲರಿಗಿಂತ ಮುಂದಿರಬೇಕು. ಒಳಿತು ಮತ್ತು ಸದಾಚಾರದಲ್ಲಿ ಅತ್ಯಂತ ಮುಂದುವರಿದವರಾಗಿ ಬಿಡಬೇಕು. ನಾವು ಸದಾಚಾರಿಗಳಾಗಿ ಮಾರ್ಪಟ್ಟರೆ ಸಾಲದು, ಅವರ ನಾಯಕರಾಗಿ ಮಾರ್ಪಡಬೇಕು. ನಮ್ಮಿಂದಾಗಿ ಲೋಕದಾದ್ಯಂತ ಒಳಿತು ಪಸರಿಸಬೇಕು. ಇಲ್ಲಿ ಇದನ್ನು ಪ್ರಸ್ತಾಪಿಸಲಾಗಿರುವುದರ ಉದ್ದೇಶ, ಇವರು ಸಿರಿಸಂಪತ್ತು ಮತ್ತು ಸ್ಥಾನಮಾನಗಳ ಬದಲು ಒಳಿತು ಮತ್ತು ಧರ್ಮನಿಷ್ಠೆಯಲ್ಲಿ ಪರಸ್ಪರ ಸ್ಪರ್ಧೆ ನಡೆಸುವವರಾಗಿದ್ದಾರೆ ಎಂದು ತಿಳಿಯಪಡಿಸುವುದಾಗಿದೆ.

77. ಪೈಗಂಬರರೇ, ಜನರೊಡನೆ, "ನೀವು ನನ್ನ ಪ್ರಭುವನ್ನು ಪ್ರಾರ್ಥಿಸದಿದ್ದರೆ ಅವನಿಗೇನಾಗ ಬೇಕಾಗಿದೆ.[15] ಈಗಂತು ನೀವು ಸುಳ್ಳಾಗಿಸಿಬಿಟ್ಟಿದ್ದೀರಿ, ಸದ್ಯವೇ ಜೀವ ಬಿಡಿಸಿಕೊಂಡು ತಪ್ಪಿಸಿಕೊಳ್ಳಲಾಗದಂತಹ ಶಿಕ್ಷೆಯನ್ನು ನೀವು ಪಡೆಯಲಿದ್ದೀರಿ" ಎಂದು ಹೇಳಿರಿ.

قُلْ مَا يَعْبَؤُا بِكُمْ رَبِّي لَوْلَا دُعَاؤُكُمْ ۖ فَقَدْ كَذَّبْتُمْ فَسَوْفَ يَكُونُ لِزَامًا ﴿٧٧﴾

15. ಅರ್ಥಾತ್- ನೀವು ಅಲ್ಲಾಹನೊಡನೆ ಪ್ರಾರ್ಥಿಸದಿದ್ದರೆ, ಅವನ ದಾಸ್ಯ-ಆರಾಧನೆ ಮಾಡದಿದ್ದರೆ, ನಿಮ್ಮ ಅವಶ್ಯಕತೆಗಳ ವೇಳೆ ನೆರವಿಗಾಗಿ ಅವನೊಡನೆ ಮೊರೆಯಿಡದಿದ್ದರೆ ಅಲ್ಲಾಹನ ಬಳಿ ನಿಮಗೆ ಯಾವ ಬೆಲೆಯೂ ಇರಲಾರದು. ಅವನು ನಿಮ್ಮನ್ನು ಎಳ್ಳಷ್ಟು ಲೆಕ್ಕಿಸಲಾರನು. ಸೃಷ್ಟಿ ಎಂಬ ನೆಲೆಯಲ್ಲಿ ನಿಮ್ಮ ಮತ್ತು ಕಲ್ಲುಗಳ ನಡುವೆ ಯಾವ ವ್ಯತ್ಯಾಸವೂ ಇರಲಾರದು. ಅಲ್ಲಾಹನಿಗೆ ನಿಮ್ಮಿಂದ ಯಾವ ನಿರೀಕ್ಷೆಯೂ ಇಲ್ಲ. ನೀವು ದಾಸ್ಯ-ಆರಾಧನೆ ಮಾಡದಿದ್ದರೆ ಅವನ ಯಾವ ಕೆಲಸವೂ ಸ್ಥಗಿತಗೊಳ್ಳುವುದಿಲ್ಲ. ಅವನ ಮುಂದೆ ಕೈಯೊಡ್ಡುವುದು ಮತ್ತು ಅವನಿಂದ ಪ್ರಾರ್ಥಿಸುವುದೇ ನಿಮ್ಮೆಡೆಗೆ ಕರುಣಾ ದೃಷ್ಟಿ ಬೀರುವಂತೆ ಮಾಡುವ ಸಾಧನಗಳಾಗಿವೆ. ನೀವು ಹಾಗೆ ಮಾಡದಿದ್ದರೆ ಕಸ ಕಡ್ಡಿಗಳಂತೆ ತಿರಸ್ಕರಿಸಲ್ಪಡುವಿರಿ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ತಾ ಸೀನ್ ಮೀಮ್.

طٰسٓمّٓ ①

2. ಇವು ಸುಸ್ಪಷ್ಟ ಗ್ರಂಥದ ಸೂಕ್ತಗಳಾಗಿವೆ.[1]

تِلْكَ اٰيٰتُ الْكِتٰبِ الْمُبِيْنِ ②

3. ಸಂದೇಶವಾಹಕರೇ, ಇವರು ಸತ್ಯವಿಶ್ವಾಸವನ್ನು ಸ್ವೀಕರಿಸುವುದಿಲ್ಲ ವೆಂಬ ವ್ಯಥೆಯಿಂದ ಪ್ರಾಯಶಃ ನೀವು ನಿಮ್ಮ ಜೀವವನ್ನೇ ಸೊರಗಿಸಿಕೊಳ್ಳುವಿರಿ.

لَعَلَّكَ بَاخِعٌ نَّفْسَكَ اَلَّا يَكُوْنُوْا مُؤْمِنِيْنَ ③

4. ನಾವಿಚ್ಛಿಸಿದರೆ ಇವರ ಕೊರಳುಗಳನ್ನು ಬಾಗಿಸಿ ಬಿಡುವಂತಹ ನಿದರ್ಶನವನ್ನು ಆಕಾಶದಿಂದ ಇಳಿಸಬಲ್ಲೆವು.[2]

اِنْ نَّشَاْ نُنَزِّلْ عَلَيْهِمْ مِّنَ السَّمَآءِ اٰيَةً فَظَلَّتْ اَعْنَاقُهُمْ لَهَا خٰضِعِيْنَ ④

5. ಇವರ ಬಳಿಗೆ ರಹ್ಮಾನನ ಕಡೆಯಿಂದ ಬರುವ ಪ್ರತಿಯೊಂದು ಹೊಸ ಉಪದೇಶದಿಂದ ಇವರು ವಿಮುಖರಾಗುತ್ತಾರೆ.

وَمَا يَاْتِيْهِمْ مِّنْ ذِكْرٍ مِّنَ الرَّحْمٰنِ مُحْدَثٍ اِلَّا كَانُوْا عَنْهُ مُعْرِضِيْنَ ⑤

6. ಈಗ ಇವರು ಸುಳ್ಳಾಗಿಸಿ ಬಿಟ್ಟಿರುವುದರಿಂದ, ಯಾವುದನ್ನಿವರು ಅಪಹಾಸ್ಯ ಮಾಡುತ್ತಿರುವರೋ ಅದರ ವಾಸ್ತವಿಕತೆಯು ಇವರಿಗೆ ಸದ್ಯವೇ (ನಾನಾ ರೂಪಗಳಲ್ಲಿ) ತಿಳಿದು ಬರಲಿದೆ.

فَقَدْ كَذَّبُوْا فَسَيَاْتِيْهِمْ اَنْۢبٰٓؤُا مَا كَانُوْا بِهٖ يَسْتَهْزِءُوْنَ ⑥

---

1. ಅರ್ಥಾತ್- ತನ್ನ ಇಂಗಿತವನ್ನು ಅತ್ಯಂತ ಸ್ಪಷ್ಟವಾಗಿ ವಿವರಿಸುವ ಗ್ರಂಥದ ಸೂಕ್ತಗಳು. ಅದನ್ನು ಓದುವ ಅಥವಾ ಕೇಳುವ ಪ್ರತಿಯೊಬ್ಬ ವ್ಯಕ್ತಿಗೂ ಅದು ಯಾವುದರ ಕಡೆಗೆ ಕರೆಯುತ್ತದೆ, ಯಾವುದರಿಂದ ತಡೆಯುತ್ತದೆ, ಯಾವುದನ್ನು ಸತ್ಯವೆಂದು ಸಾರುತ್ತದೆ ಹಾಗೂ ಯಾವುದನ್ನು ಮಿಥ್ಯವೆನ್ನುತ್ತದೆ ಎಂದು ತಿಳಿಯುತ್ತದೆ. ಅದನ್ನು ನಂಬುವುದು ಅಥವಾ ನಂಬದಿರುವುದು ಬೇರೆ ವಿಷಯ. ಆದರೆ ಅದರ ಬೋಧನೆ ತಿಳಿಯಲಿಲ್ಲ ಅಥವಾ ಅದು ಯಾವ ವಿಷಯವನ್ನು ಅಂಗೀಕರಿಸುವ ಮತ್ತು ಯಾವುದನ್ನು ಬಿಟ್ಟುಬಿಡುವ ಕರೆ ಕೊಡುತ್ತದೆ ಎಂದು ವ್ಯಕ್ತವಾಗಲಿಲ್ಲ ಎಂಬ ನೆಪವನ್ನು ಯಾವ ವ್ಯಕ್ತಿಯೂ ಮುಂದಿಡುವಂತಿಲ್ಲ.
2. ಅರ್ಥಾತ್- ಸಮಸ್ತ ಸತ್ಯನಿಷೇಧಿಗಳು ಸತ್ಯವಿಶ್ವಾಸ ಮತ್ತು ಅನುಸರಣೆಯ ಧೋರಣೆ ಕೈಗೊಳ್ಳಲು ನಿರ್ಬಂಧಿತರಾಗಿ ಬಿಡುವಂತಹ ದೃಷ್ಟಾಂತವನ್ನು ಇಳಿಸಿ ಬಿಡುವುದು ಅಲ್ಲಾಹನ ಪಾಲಿಗೆ ತ್ರಾಸದಾಯಕವೇನಲ್ಲ. ಆದರೆ ಅವನು ಹಾಗೆ ಮಾಡುವುದಿಲ್ಲ. ಅದಕ್ಕೆ ಕಾರಣ ಅವನಿಗದರ ಸಾಮರ್ಥ್ಯವಿಲ್ಲವೆಂಬುದಲ್ಲ. ಬದಲಾಗಿ ಯಾರೂ ಒತ್ತಾಯಪೂರ್ವಕ ವಿಶ್ವಾಸ ಸ್ವೀಕರಿಸುವ ಅಗತ್ಯ ಅವನಿಗಿಲ್ಲ ಎಂಬುದು ಮಾತ್ರವಾಗಿದೆ.

7. ನಾವು ಎಷ್ಟೊಂದು ಅಧಿಕ ಪ್ರಮಾಣದಲ್ಲಿ ಎಲ್ಲ ವಿಧದ ಅತ್ಯುತ್ತಮ ಸಸ್ಯಗಳನ್ನು ಸೃಷ್ಟಿಸಿದ್ದೇವೆ ಎಂಬುದನ್ನು ಇವರು ಭೂಮಿಯಲ್ಲಿ ಎಂದಾದರೂ ಕಂಡಿಲ್ಲವೇ?

أَوَلَمْ يَرَوْا إِلَى الْأَرْضِ كَمْ أَنْبَتْنَا فِيهَا مِنْ كُلِّ زَوْجٍ كَرِيمٍ ﴿٧﴾

8. ನಿಶ್ಚಯವಾಗಿಯೂ ಇದರಲ್ಲೊಂದು ನಿದರ್ಶನವಿದೆ.[3] ಆದರೆ ಇವರಲ್ಲಿ ಹೆಚ್ಚಿನವರು ವಿಶ್ವಾಸವಿರಿಸುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُمْ مُؤْمِنِينَ ﴿٨﴾

9. ವಾಸ್ತವದಲ್ಲಿ ನಿಮ್ಮ ಪ್ರಭು ಪ್ರಬಲನೂ ಕರುಣಾನಿಧಿಯೂ ಆಗಿರುವನು.[4]

وَإِنَّ رَبَّكَ لَهُوَ الْعَزِيزُ الرَّحِيمُ ﴿٩﴾

10. ನಿನ್ನ ಪ್ರಭು ಮೂಸಾರನ್ನು ಕೂಗಿ ಕರೆದು, "ಅಕ್ರಮಿ ಜನಾಂಗದ ಕಡೆಗೆ ಹೋಗು-

وَإِذْ نَادَىٰ رَبُّكَ مُوسَىٰ أَنِ ائْتِ الْقَوْمَ الظَّالِمِينَ ﴿١٠﴾

11. ಫಿರ್‌ಔನನ ಜನಾಂಗದ ಕಡೆಗೆ- ಅವರು ಭಯಪಡುವುದಿಲ್ಲವೇ?" ಎಂದು ಹೇಳಿದ ವೃತ್ತಾಂತವನ್ನು ಇವರಿಗೆ ತಿಳಿಸಿರಿ.

قَوْمَ فِرْعَوْنَ ۚ أَلَا يَتَّقُونَ ﴿١١﴾

12. ಆಗ ಅವರು, "ನನ್ನ ಪ್ರಭೂ, ಅವರು ನನ್ನನ್ನು ಸುಳ್ಳಾಗಿಸಿ ಬಿಡುವರೆಂಬ ಭಯ ನನಗಿದೆ.

قَالَ رَبِّ إِنِّي أَخَافُ أَنْ يُكَذِّبُونِ ﴿١٢﴾

13. ನನ್ನ ಹೃದಯ ಮುದುಡುತ್ತಿದೆ. ನನ್ನ ನಾಲಿಗೆ ಚಲಿಸುವುದಿಲ್ಲ. ನೀನು ಹಾರೂನರ ಬಳಿಗೆ ಸಂದೇಶವಾಹಕತ್ವವನ್ನು ಕಳುಹಿಸು.

وَيَضِيقُ صَدْرِي وَلَا يَنْطَلِقُ لِسَانِي فَأَرْسِلْ إِلَىٰ هَارُونَ ﴿١٣﴾

14. ಅವರ ಬಳಿ ನನ್ನ ಮೇಲೆ ಒಂದು ಅಪರಾಧದ ಆರೋಪವೂ ಇದೆ. ಆದುದರಿಂದ ಅವರು ನನ್ನನ್ನು ವಧಿಸಿ ಬಿಡುವರೆಂದು ನಾನು ಹೆದರುತ್ತೇನೆ" ಎಂದು ಭಿನ್ನವಿಸಿದರು.

وَلَهُمْ عَلَيَّ ذَنْبٌ فَأَخَافُ أَنْ يَقْتُلُونِ ﴿١٤﴾

15. ಆಗ ಅಲ್ಲಾಹನು, "ಖಂಡಿತ ಇಲ್ಲ, ನೀವಿಬ್ಬರೂ ನಮ್ಮ ನಿದರ್ಶನಗಳನ್ನು ತೆಗೆದುಕೊಂಡು ಹೋಗಿರಿ. ನಾವು ನಿಮ್ಮೊಂದಿಗಿದ್ದು ಎಲ್ಲವನ್ನೂ ಆಲಿಸುತ್ತಿರುವೆವು.

قَالَ كَلَّا ۖ فَاذْهَبَا بِآيَاتِنَا ۖ إِنَّا مَعَكُمْ مُسْتَمِعُونَ ﴿١٥﴾

3. ಅರ್ಥಾತ್- ಸತ್ಯಶೋಧನೆಗಾಗಿ ಯಾರಾದರೂ ದೃಷ್ಟಾಂತವನ್ನೇ ನೋಡಬೇಕಿದ್ದರೆ ಅದಕ್ಕಾಗಿ ಅವನು ದೂರ ಹೋಗಬೇಕಾಗಿಲ್ಲ. ಅವನು ಕಣ್ತೆರೆದು ಭೂಮಿಯ ಸಸ್ಯಶ್ಯಾಮಲತೆಯನ್ನೊಮ್ಮೆ ನೋಡಲಿ. ನಿಸರ್ಗ ವ್ಯವಸ್ಥೆಯ ಬಗ್ಗೆ ಪ್ರವಾದಿಗಳು ಸಮರ್ಪಿಸುವ ಏಕದೇವತ್ವದ ವಾಸ್ತವಿಕತೆ ಸರಿಯೋ ಅಥವಾ ಬಹುದೇವಾರಾಧಕರು ಹಾಗೂ ದೇವಧಿಕ್ಕಾರಿಗಳು ವಿವರಿಸುವ ಸಿದ್ಧಾಂತಗಳೋ ಎಂದು ಅವರಿಗೆ ತಿಳಿದು ಬರುವುದು.

4. ಅರ್ಥಾತ್- ಅವನು ಎಷ್ಟು ಸಮರ್ಥನೆಂದರೆ ಯಾರನ್ನಾದರೂ ಶಿಕ್ಷಿಸಬಯಸಿದರೆ ಕ್ಷಣಾರ್ಧದಲ್ಲಿ ನಾಶಗೊಳಿಸಿ ಬಿಡುವನು. ಆದರೂ ಶಿಕ್ಷೆಯನ್ನು ಶೀಘ್ರ ಕೊಡದಿರುವುದು ಅವನ ಕರುಣೆಯ ಫಲವೇ ಆಗಿದೆ. ವರ್ಷಗಟ್ಟಲೆ ಅಥವಾ ಶತಮಾನಗಳ ಕಾಲ ಅವನು ಸಡಿಲು ಧೋರಣೆ ಕೈಗೊಳ್ಳುತ್ತಾನೆ. ಯೋಚಿಸಲು, ತಿಳಿದುಕೊಳ್ಳಲು ಮತ್ತು ಸುಧಾರಿಸಿಕೊಳ್ಳಲು ಅವನು ಕಾಲಾವಕಾಶ ನೀಡುತ್ತಾನೆ. ಅನೇಕ ವರ್ಷಗಳ ಆಜ್ಞೋಲ್ಲಂಘನೆಯನ್ನು ಒಂದು ಕ್ಷಮಾಯಾಚನೆಯ ಪ್ರತಿಯಾಗಿ ಕ್ಷಮಿಸಿ ಬಿಡಲು ಅವನು ಸಿದ್ಧನಿರುತ್ತಾನೆ.

16-17. ಫಿರ್‌ಔನನ ಬಳಿಗೆ ಹೋಗಿರಿ ಮತ್ತು - ನೀನು ಬನೀಇಸ್ರಾಈಲರನ್ನು ನಮ್ಮ ಜೊತೆ ಕಳುಹಿಸಬೇಕೆಂದು ಸರ್ವಲೋಕಗಳ ಪ್ರಭು ನಮ್ಮನ್ನು ರವಾನಿಸಿದ್ದಾನೆ- ಎಂದು ಅವನೊಡನೆ ಹೇಳಿರಿ" ಎಂದನು.

فَأْتِيَا فِرْعَوْنَ فَقُولَا إِنَّا رَسُولُ رَبِّ الْعَالَمِينَ ﴿١٦﴾
أَنْ أَرْسِلْ مَعَنَا بَنِي إِسْرَائِيلَ ﴿١٧﴾

18. ಫಿರ್‌ಔನನು, "ನಾವು ನಿನ್ನನ್ನು ನಮ್ಮಲ್ಲಿ ಮಗುವಿನಂತೆ ಸಾಕಿರಲಿಲ್ಲವೇ? ನೀನು ನಿನ್ನ ಜೀವಮಾನದ ಅನೇಕ ವರ್ಷಗಳನ್ನು ನಮ್ಮಲ್ಲಿ ಕಳೆದಿರುವೆ.

قَالَ أَلَمْ نُرَبِّكَ فِينَا وَلِيدًا وَلَبِثْتَ فِينَا مِنْ عُمُرِكَ سِنِينَ ﴿١٨﴾

19. ಅನಂತರ ನೀನು ಏನು ಮಾಡಿದೆಯೋ ಅದನ್ನು ಮಾಡಿದೆ. ನೀನು ಮಹಾ ಕೃತಘ್ನನಾಗಿರುವೆ" ಎಂದನು.

وَفَعَلْتَ فَعْلَتَكَ الَّتِي فَعَلْتَ وَأَنْتَ مِنَ الْكَافِرِينَ ﴿١٩﴾

20. ಆಗ ಮೂಸಾ, "ನಾನು ಆಗ ಆ ಕೃತ್ಯವನ್ನು ಗೊತ್ತಿಲ್ಲದೆ ಮಾಡಿಬಿಟ್ಟಿದ್ದೆ.

قَالَ فَعَلْتُهَا إِذًا وَأَنَا مِنَ الضَّالِّينَ ﴿٢٠﴾

21. ಅನಂತರ ನಾನು ನಿಮಗೆ ಹೆದರಿ ಓಡಿ ಹೋದೆ. ಆ ಬಳಿಕ ನನ್ನ ಪ್ರಭು ನನಗೆ ನಿರ್ದೇಶನವನ್ನು ದಯಪಾಲಿಸಿದನು ಮತ್ತು ನನ್ನನ್ನು ಸಂದೇಶವಾಹಕರಲ್ಲಿ ಸೇರಿಸಿಕೊಂಡನು.

فَفَرَرْتُ مِنْكُمْ لَمَّا خِفْتُكُمْ فَوَهَبَ لِي رَبِّي حُكْمًا وَجَعَلَنِي مِنَ الْمُرْسَلِينَ ﴿٢١﴾

22. ಇನ್ನು ನೀನು ನನ್ನ ಮೇಲೆ ಉಪಕಾರ ಭಾರವನ್ನಿರಿಸುತ್ತಿರುವ ವಿಷಯ. ಅದರ ವಾಸ್ತವಿಕತೆಯೇನೆಂದರೆ, ನೀನು ಬನೀಇಸ್ರಾಈಲರನ್ನು ಗುಲಾಮರನ್ನಾಗಿ ಮಾಡಿಕೊಂಡಿದ್ದೆ" ಎಂದು ಉತ್ತರಿಸಿದರು.[5]

وَتِلْكَ نِعْمَةٌ تَمُنُّهَا عَلَيَّ أَنْ عَبَّدْتَ بَنِي إِسْرَائِيلَ ﴿٢٢﴾

23. ಆಗ ಫಿರ್‌ಔನನು, "ಈ ಸರ್ವಲೋಕಗಳ ಪ್ರಭು ಎಂದರೇನು?" ಎಂದು ಕೇಳಿದನು.

قَالَ فِرْعَوْنُ وَمَا رَبُّ الْعَالَمِينَ ﴿٢٣﴾

24. (ಆಗ) ಮೂಸಾ, "ಭೂಮಿ - ಆಕಾಶಗಳ ಪ್ರಭು ಮತ್ತು ಭೂಮಿ - ಆಕಾಶಗಳ ನಡುವೆ ಇರುವ ಸಕಲ ವಸ್ತುಗಳ ಪ್ರಭು - ನೀವು ದೃಢ ವಿಶ್ವಾಸವಿರಿಸುವವರಾಗಿದ್ದರೆ" - ಎಂದು ಹೇಳಿದರು.

قَالَ رَبُّ السَّمَاوَاتِ وَالْأَرْضِ وَمَا بَيْنَهُمَا إِنْ كُنْتُمْ مُوقِنِينَ ﴿٢٤﴾

25. ಫಿರ್‌ಔನನು ತನ್ನ ಸುತ್ತಮುತ್ತಲಿದ್ದ ಜನರೊಡನೆ, 'ಕೇಳಿದಿರಾ?' ಎಂದನು.

قَالَ لِمَنْ حَوْلَهُ أَلَا تَسْتَمِعُونَ ﴿٢٥﴾

5. ನೀನು ಬನೀಇಸ್ರಾಈಲರ ಮೇಲೆ ಅಕ್ರಮವೆಸಗದೆ ಹೋಗಿದ್ದರೆ ನಾನು ನಿನ್ನ ಮನೆಯಲ್ಲಿ ಬೆಳೆಯುವ ಪ್ರಮೇಯವೇ ಎದುರಾಗುತ್ತಿರಲಿಲ್ಲ. ನಿನ್ನ ಅಕ್ರಮಗಳಿಂದಾಗಿಯೇ ನನ್ನ ತಾಯಿಯು ನನ್ನನ್ನು ಬುಟ್ಟಿಯಲ್ಲಿ ಮಲಗಿಸಿ ನದಿಯಲ್ಲಿ ತೇಲಿಸಿ ಬಿಟ್ಟಿದ್ದಳು. ಅನ್ಯಥಾ ನನ್ನ ಪೋಷಣೆಗೆ ತನ್ನ ಮನೆಯೇ ಇರಲಿಲ್ಲವೇ? ಆದ್ದರಿಂದ ಪೋಷಣೆ ಮಾಡಿದ್ದಕ್ಕಾಗಿ ಉಪಕಾರ ಭಾರವಿರಿಸುವುದು ನಿನಗೆ ಶೋಭಿಸುವುದಿಲ್ಲ.

26. (ಆಗ) ಮೂಸಾ - "ನಿಮ್ಮ ಪ್ರಭುವೂ ಗತಿಸಿ ಹೋಗಿರುವ ನಿಮ್ಮ ಪೂರ್ವಿಕರ ಪ್ರಭುವೂ" ಎಂದರು.

قَالَ رَبُّكُمْ وَرَبُّ آبَائِكُمُ الْأَوَّلِينَ ﴿٢٦﴾

27. ಫಿರ್‌ಔನನು (ನೆರೆದಿದ್ದ ಜನರೊಡನೆ)- "ನಿಮ್ಮ ಕಡೆಗೆ ರವಾನಿಸಲ್ಪಟ್ಟಿರುವ ಈ ರಸೂಲರು ಸಂಪೂರ್ಣ ಹುಚ್ಚರಾಗಿರುವಂತೆ ತೋರುತ್ತದೆ" ಎಂದನು.

قَالَ إِنَّ رَسُولَكُمُ الَّذِي أُرْسِلَ إِلَيْكُمْ لَمَجْنُونٌ ﴿٢٧﴾

28. (ಆಗ) ಮೂಸಾ, "ಪೂರ್ವ ಪಶ್ಚಿಮ ಮತ್ತು ಅವೆರಡರ ನಡುವೆ ಇರುವ ಎಲ್ಲವುಗಳ ಪ್ರಭು- ನೀವು ಒಂದಿಷ್ಟು ಬುದ್ಧಿಯುಳ್ಳವರಾಗಿದ್ದರೆ!" ಎಂದರು.

قَالَ رَبُّ الْمَشْرِقِ وَالْمَغْرِبِ وَمَا بَيْنَهُمَا ۖ إِن كُنتُمْ تَعْقِلُونَ ﴿٢٨﴾

29. ಆಗ ಫಿರ್‌ಔನನು, "ನೀನು ನನ್ನ ಹೊರತು ಇತರ ಯಾರನ್ನಾದರೂ ಆರಾಧ್ಯನಾಗಿ ಒಪ್ಪಿ ಕೊಂಡರೆ ನಿನ್ನನ್ನೂ ಸೆರೆಮನೆಗಳಲ್ಲಿ ಕೊಳೆಯುತ್ತಿರುವವರೊಂದಿಗೆ ಸೇರಿಸಿ ಬಿಡುವೆನು" ಎಂದು ಹೇಳಿದನು.

قَالَ لَئِنِ اتَّخَذْتَ إِلَٰهًا غَيْرِي لَأَجْعَلَنَّكَ مِنَ الْمَسْجُونِينَ ﴿٢٩﴾

30. ಆಗ ಮೂಸಾ, "ನಾನು ನಿನ್ನ ಮುಂದೆ ಒಂದು ಸುಸ್ಪಷ್ಟ ವಸ್ತುವನ್ನು ತಂದರೂ?" ಎಂದು ಕೇಳಿದರು.

قَالَ أَوَلَوْ جِئْتُكَ بِشَيْءٍ مُّبِينٍ ﴿٣٠﴾

31. ಆಗ ಫಿರ್‌ಔನನು, "ಸರಿ, ನೀನು ಸತ್ಯವಾದಿಯಾಗಿದ್ದರೆ ಅದನ್ನು ಮುಂದೆ ತಾ" ಎಂದನು.

قَالَ فَأْتِ بِهِ إِن كُنتَ مِنَ الصَّادِقِينَ ﴿٣١﴾

32. (ಅವನ ಬಾಯಿಯಿಂದ ಈ ಮಾತು ಹೊರ ಬಿದ್ದೊಡನೆ) ಮೂಸಾ ತಮ್ಮ ಲಾಠಿಯನ್ನು ಎಸೆದರು ಮತ್ತು ಅದು ಹಠಾತ್ತನೆ ಒಂದು ಪ್ರತ್ಯಕ್ಷ ಹೆಬ್ಬಾವಾಗಿತ್ತು.

فَأَلْقَىٰ عَصَاهُ فَإِذَا هِيَ ثُعْبَانٌ مُّبِينٌ ﴿٣٢﴾

33. ತರುವಾಯ ಅವರು ತಮ್ಮ ಹಸ್ತವನ್ನು (ಬಗಲಿನಿಂದ) ಹೊರಕ್ಕೆಳೆದರು ಮತ್ತು ಅದು ಪ್ರೇಕ್ಷಕರ ಮುಂದೆ ಪ್ರಜ್ವಲಿಸುತ್ತಿತ್ತು.[6]

وَنَزَعَ يَدَهُ فَإِذَا هِيَ بَيْضَاءُ لِلنَّاظِرِينَ ﴿٣٣﴾

34. ಫಿರ್‌ಔನನು ತನ್ನ ಸುತ್ತಮುತ್ತಲಿದ್ದ ಸರದಾರರೊಡನೆ, "ಈತನು ಖಂಡಿತವಾಗಿಯೂ ಒಬ್ಬ ನುರಿತ ಜಾದುಗಾರ.

قَالَ لِلْمَلَإِ حَوْلَهُ إِنَّ هَٰذَا لَسَاحِرٌ عَلِيمٌ ﴿٣٤﴾

35. ತನ್ನ ಜಾದುವಿನ ಬಲದಿಂದ ನಿಮ್ಮನ್ನು ನಿಮ್ಮ ದೇಶದಿಂದ

يُرِيدُ أَن يُخْرِجَكُم مِّنْ أَرْضِكُم

6. ಹ.ಮೂಸಾ(ಅ) ತಮ್ಮ ಬಗಲಿನಿಂದ ಕೈಯನ್ನು ಹೊರತೆಗೆದ ತಕ್ಷಣ ಹಠಾತ್ತನೆ ಸಮಸ್ತ ವಾತಾವರಣ ಪ್ರಜ್ವಲಿಸಿತು. ಸೂರ್ಯ ಮೂಡಿ ಬಂತೇ ಎಂದು ಭಾಸವಾಯಿತು.

ಹೊರಗಟ್ಟಬಯಸುತ್ತಾನೆ.[7] ಈಗ ನಿಮ್ಮದೇನು ಅಪ್ಪಣೆ?" ಎಂದನು.

بِسِحْرِهِۦ فَمَاذَا تَأْمُرُونَ ﴿٣٥﴾

36. ಆಗ ಅವರು, "ಇವನನ್ನೂ, ಇವನ ಸಹೋದರನನ್ನೂ ತಡೆದಿರಿಸಿ ಕೊಳ್ಳಿರಿ-

قَالُوٓا أَرْجِهْ وَأَخَاهُ وَابْعَثْ فِى الْمَدَآئِنِ حٰشِرِينَ ﴿٣٦﴾

37. ಮತ್ತು ಸಕಲ ನುರಿತ ಜಾದುಗಾರರನ್ನು ತಮ್ಮ ಬಳಿಗೆ ಕರೆತರಲಿಕ್ಕಾಗಿ ನಗರಗಳಿಗೆ ಹರಿಕಾರರನ್ನು ಕಳುಹಿಸಿ ಬಿಡಿರಿ" ಎಂದರು.

يَأْتُوكَ بِكُلِّ سَحَّارٍ عَلِيمٍ ﴿٣٧﴾

38. ಆ ಪ್ರಕಾರ ಒಂದು ದಿನ ನಿಶ್ಚಿತ ಸಮಯದಲ್ಲಿ ಜಾದುಗಾರರು ಒಟ್ಟುಗೂಡಿಸಲ್ಪಟ್ಟರು-

فَجُمِعَ السَّحَرَةُ لِمِيقٰتِ يَوْمٍ مَّعْلُومٍ ﴿٣٨﴾

39. ಮತ್ತು ಜನರೊಡನೆ, "ನೀವು ಸಮ್ಮೇಳನಕ್ಕೆ ಬರುತ್ತೀರಾ?

وَقِيلَ لِلنَّاسِ هَلْ أَنتُم مُّجْتَمِعُونَ ﴿٣٩﴾

40. ಜಾದುಗಾರರು ವಿಜಯಿಗಳಾದರೆ ನಾವು ಅವರ ಧರ್ಮದಲ್ಲೇ ಉಳಿಯಬಹುದು" ಎನ್ನಲಾಯಿತು.[8]

لَعَلَّنَا نَتَّبِعُ السَّحَرَةَ إِن كَانُوا هُمُ الْغٰلِبِينَ ﴿٤٠﴾

41. ಜಾದುಗಾರರು ರಂಗಕ್ಕಿಳಿದು ಬಂದಾಗ ಅವರು ಫಿರ್‌ಔನನೊಡನೆ, "ನಾವು ವಿಜಯಿಗಳಾದರೆ ನಮಗೆ ಬಹುಮಾನ ಸಿಗಬಹುದಲ್ಲವೇ?" ಎಂದು ಕೇಳಿದರು.

فَلَمَّا جَآءَ السَّحَرَةُ قَالُوا لِفِرْعَوْنَ أَئِنَّ لَنَا لَأَجْرًا إِن كُنَّا نَحْنُ الْغٰلِبِينَ ﴿٤١﴾

42. ಅದಕ್ಕೆ ಅವನು, "ಹೌದು, ಆಗಂತೂ ನೀವು ಆಪ್ತರಲ್ಲಿ ಸೇರಿ ಬಿಡುವಿರಿ" ಎಂದನು.

قَالَ نَعَمْ وَإِنَّكُمْ إِذًا لَّمِنَ الْمُقَرَّبِينَ ﴿٤٢﴾

---

7. ಎರಡೂ ಪವಾಡಗಳ ಮಹಾನತೆಯನ್ನು ಇದರಿಂದ ಅಂದಾಜಿಸಬಹುದಾಗಿದೆ. ಒಂದು ಕ್ಷಣದ ಮೊದಲು ತನ್ನ ದೇಶದ ವ್ಯಕ್ತಿಯೊಬ್ಬ ಆಸ್ಥಾನದ ಮುಂದೆ ಬಂದು ತನ್ನ ಪ್ರವಾದಿತ್ವ ಮತ್ತು ಬನೀಇಸ್ರಾಈಲರ ವಿಮೋಚನೆಯ ಬೇಡಿಕೆಯನ್ನು ಮುಂದಿರಿಸಿದಾಗ ಫಿರ್‌ಔನ್ ಅವನನ್ನು ಹುಚ್ಚನೆಂದಿದ್ದನು. ಮಾತ್ರವಲ್ಲ ತನ್ನ ಹೊರತು ಇತರರನ್ನು ಆರಾಧ್ಯರೆಂದು ಭಾವಿಸಿದರೆ ಸೆರೆಮನೆಯಲ್ಲಿ ಕೊಳೆಯುವಂತೆ ಮಾಡಿ ಕೊಲ್ಲುವೆನೆಂಬ ಬೆದರಿಕೆಯೊಡ್ಡಿದ್ದನು. ಆದರೆ ಈ ದೃಷ್ಟಾಂತಗಳನ್ನು ಕಂಡ ತಕ್ಷಣ ಅವನಲ್ಲಿ ಎಂತಹ ಭಯವಿಹ್ವಲತೆ ಆವರಿಸಿತೆಂದರೆ ಅವನು ತನ್ನ ಅರಸೊತ್ತಿಗೆ ಮತ್ತು ಸಾಮ್ರಾಜ್ಯ ಕಿತ್ತು ಹೋಗುವ ಅಪಾಯವಿದೆ ಎಂದು ಭಾವಿಸತೊಡಗಿದನು.
8. ಅರ್ಥಾತ್ ಪ್ರಕಟಣೆ ಮತ್ತು ಜಾಹೀರಾತುಗಳಿಗೆ ಸಾಕು ಮಾಡಲಿಲ್ಲ. ಈ ಸ್ಪರ್ಧೆಯನ್ನು ವೀಕ್ಷಿಸಲು ಜನರಿಗೆ ಪ್ರೇರೇಪಣೆ ನೀಡಿ ಕರೆತರಲು ಸಿಬ್ಬಂದಿಗಳನ್ನೂ ಕಳುಹಿಸಲಾಯಿತು. ತುಂಬಿದ ಸಭೆಯಲ್ಲಿ ಹ. ಮೂಸಾ(ಅ) ತೋರಿಸಿದ ಪವಾಡಗಳ ಸುದ್ದಿ ಜನಸಾಮಾನ್ಯರಲ್ಲಿಯೂ ಹರಡಿತ್ತು ಎಂದು ಇದರಿಂದ ವ್ಯಕ್ತವಾಗುತ್ತದೆ. ದೇಶವಾಸಿಗಳು ಇದರಿಂದ ಪ್ರಭಾವಿತರಾಗಿ ಬಿಡಬಹುದೆಂಬ ಭಯ ಫಿರ್‌ಔನನಿಗೆ ಉಂಟಾಯಿತು. ಈ ಪವಾಡಗಳನ್ನು ನೋಡಿದ ಆಸ್ಥಾನದಲ್ಲಿ ಉಪಸ್ಥಿತರಿದ್ದವರ ಹಾಗೂ ಈ ಬಗ್ಗೆ ಅಧಿಕೃತ ವರದಿಗಳು ತಲಪಿದ್ದ ಜನರ, ಪೂರ್ವಜರ ಧರ್ಮದ ಮೇಲಿನ ವಿಶ್ವಾಸದಲ್ಲಿ ಏರುಪೇರುಂಟಾಗತೊಡಗಿತ್ತು. ಮೂಸಾ(ಅ) ಮಾಡಿದಂತಹ ಕೆಲಸವನ್ನು ಜಾದೂಗಾರರೂ ಹೇಗಾದರೂ ಮಾಡಿ ತೋರಿಸುವುದರಲ್ಲೇ ಈಗ ಅವರ ಧಾರ್ಮಿಕ ಶ್ರದ್ಧೆ ಅಧಿಷ್ಠಿತವಾಯಿತು. ಸ್ವತಃ ಫಿರ್‌ಔನ್ ಮತ್ತು ಅವನ ಆಸ್ಥಾನದ ಪ್ರಮುಖರು ಇದನ್ನು ಅತ್ಯಂತ ನಿರ್ಣಾಯಕ ಸ್ಪರ್ಧೆ ಎಂದು ಭಾವಿಸತೊಡಗಿದ್ದರು. ಅವರಿಂದ ಕಳುಹಿಸಲ್ಪಟ್ಟ ಜನರೇ, “ಜಾದೂಗಾರರು ಜಯಶೀಲರಾದರೆ ನಾವು ಮೂಸಾರ ಧರ್ಮವನ್ನು ಸ್ವೀಕರಿಸುವುದು ತಪ್ಪುತ್ತದೆ. ಅನ್ಯಥಾ ನಮ್ಮ ಧರ್ಮ ಮತ್ತು ವಿಶ್ವಾಸಕ್ಕೆ ಉಳಿಗಾಲವಿಲ್ಲ” ಎಂಬ ಭಾವನೆಯನ್ನು ಜನಸಾಮಾನ್ಯರ ಮನದಲ್ಲಿ ಮೂಡಿಸುತ್ತಿದ್ದರು.

43. (ಆಗ) ಮೂಸಾ, "ನೀವು ಎಸೆಯ ಬೇಕಾದುದನ್ನು ಎಸೆಯಿರಿ" ಎಂದರು.

قَالَ لَهُم مُّوسَىٰ أَلْقُوا مَا أَنتُم مُّلْقُونَ ﴿٤٣﴾

44. ಅವರು ತಕ್ಷಣ ತಮ್ಮ ಹಗ್ಗಗಳನ್ನೂ ಲಾಠಿಗಳನ್ನೂ ಎಸೆದರು ಮತ್ತು "ಫಿರ್‌ಔನನ ಪ್ರತಾಪದಿಂದ ನಾವೇ ವಿಜಯಿಗಳಾಗುವೆವು" ಎಂದು ಉದ್ಗರಿಸಿದರು.

فَأَلْقَوْا حِبَالَهُمْ وَعِصِيَّهُمْ وَقَالُوا بِعِزَّةِ فِرْعَوْنَ إِنَّا لَنَحْنُ الْغَالِبُونَ ﴿٤٤﴾

45. ತರುವಾಯ ಮೂಸಾ ತಮ್ಮ ಲಾಠಿಯನ್ನು ಎಸೆದಾಗ ಹಠಾತ್ತನೆ ಅದು ಅವರ ಮಿಥ್ಯ ಚಮತ್ಕಾರಗಳನ್ನು ನುಂಗುತ್ತಾ ಸಾಗುತ್ತಿತ್ತು.

فَأَلْقَىٰ مُوسَىٰ عَصَاهُ فَإِذَا هِيَ تَلْقَفُ مَا يَأْفِكُونَ ﴿٤٥﴾

46. ಆಗ ಎಲ್ಲ ಜಾದುಗಾರರು ತಾವಾಗಿಯೇ ಸಾಷ್ಟಾಂಗವೆರಗಿಬಿಟ್ಟರು-

فَأُلْقِيَ السَّحَرَةُ سَاجِدِينَ ﴿٤٦﴾

47. ಮತ್ತು ಹೀಗೆ ಹೇಳಿದರು, "ನಾವು ನಂಬಿದೆವು- ಸರ್ವಲೋಕಗಳ ಪಾಲಕ ಪ್ರಭುವನ್ನು,

قَالُوا آمَنَّا بِرَبِّ الْعَالَمِينَ ﴿٤٧﴾

48. ಮೂಸಾ ಮತ್ತು ಹಾರೂನರ ಪ್ರಭುವನ್ನು."

رَبِّ مُوسَىٰ وَهَارُونَ ﴿٤٨﴾

49. ಆಗ ಫಿರ್‌ಔನನು, "ನಾನು ನಿಮಗೆ ಅನುಮತಿ ಕೊಡುವುದಕ್ಕೆ ಮುಂಚೆ ನೀವು ಮೂಸಾನ ಮಾತನ್ನು ನಂಬಿದಿರಾ? ಖಂಡಿತ ವಾಗಿಯೂ ಇವನು ನಿಮಗೆ ಜಾದುಗಾರಿಕೆಯನ್ನು ಕಲಿಸಿದ ನಿಮ್ಮ ಹಿರಿಯನಾಗಿದ್ದಾನೆ. ಸರಿ ನಿಮಗೆ ಈಗಲೇ ತಿಳಿಯಲಿದೆ. ನಾನು ನಿಮ್ಮ ಕೈ ಕಾಲುಗಳನ್ನು ವಿರುದ್ಧ ದಿಕ್ಕುಗಳಿಂದ ಕಡಿಸುವೆನು ಮತ್ತು ನಿಮ್ಮೆಲ್ಲರನ್ನೂ ಶಿಲುಬೆಗೇರಿಸಿ ಬಿಡುವೆನು" ಎಂದನು.

قَالَ آمَنتُمْ لَهُ قَبْلَ أَنْ آذَنَ لَكُمْ ۖ إِنَّهُ لَكَبِيرُكُمُ الَّذِي عَلَّمَكُمُ السِّحْرَ فَلَسَوْفَ تَعْلَمُونَ ۚ لَأُقَطِّعَنَّ أَيْدِيَكُمْ وَأَرْجُلَكُم مِّنْ خِلَافٍ وَلَأُصَلِّبَنَّكُمْ أَجْمَعِينَ ﴿٤٩﴾

50. ಅದಕ್ಕೆ ಅವರು ಹೀಗೆ ಉತ್ತರಿಸಿದರು, "ಪರವಾಗಿಲ್ಲ. ನಾವು ನಮ್ಮ ಪ್ರಭುವಿನ ಸನ್ನಿಧಿಗೆ ತಲುಪಿ ಬಿಡುವೆವು.

قَالُوا لَا ضَيْرَ ۖ إِنَّا إِلَىٰ رَبِّنَا مُنقَلِبُونَ ﴿٥٠﴾

51. ನಮ್ಮ ಪ್ರಭು ಪಾಪಗಳನ್ನು ಕ್ಷಮಿಸಿ ಬಿಡುವನೆಂದು ನಮಗೆ ನಿರೀಕ್ಷೆ ಇದೆ. ಏಕೆಂದರೆ ನಾವು ಎಲ್ಲರಿಗಿಂತಲೂ ಮೊದಲು ಸತ್ಯವಿಶ್ವಾಸ ಸ್ವೀಕರಿಸಿದವರಾಗಿದ್ದೇವೆ."

إِنَّا نَطْمَعُ أَن يَغْفِرَ لَنَا رَبُّنَا خَطَايَانَا أَن كُنَّا أَوَّلَ الْمُؤْمِنِينَ ﴿٥١﴾

52. "ನನ್ನ ದಾಸರನ್ನು ಕರೆದುಕೊಂಡು ರಾತೋರಾತ್ರಿ ಹೊರಟು ಹೋಗಿರಿ. ನಿಮ್ಮನ್ನು ಬೆನ್ನಟ್ಟಲಾಗುವುದು" ಎಂದು ನಾವು ಮೂಸಾರಿಗೆ 'ದಿವ್ಯಬೋಧನೆ' ಕಳುಹಿಸಿದೆವು.[9]

وَأَوْحَيْنَا إِلَىٰ مُوسَىٰ أَنْ أَسْرِ بِعِبَادِي إِنَّكُم مُّتَّبَعُونَ ﴿٥٢﴾

9. ಇದೀಗ ದೀರ್ಘಕಾಲಿಕ ವೃತ್ತಾಂತವನ್ನು ಬಿಟ್ಟು ಹ.ಮೂಸಾರಿಗೆ(ಅ) ಈಜಿಪ್ಟ್‌ನಿಂದ ವಲಸೆ ಹೋಗುವ ಆದೇಶ ಕೊಡಲಾದ ಸಂದರ್ಭದ ಕುರಿತು ಪ್ರಸ್ತಾಪಿಸಲಾಗುತ್ತಿದೆ.

53. ಆಗ ಫಿರ್‌ಔನನು (ಸೇನೆಗಳನ್ನು ಸಜ್ಜುಗೊಳಿಸಲಿಕ್ಕಾಗಿ) ರಾಜಘೋಷಕರನ್ನು ನಗರಗಳಿಗೆ (ಹೀಗೆ ಹೇಳಿ) ಕಳುಹಿಸಿದನು-

فَأَرْسَلَ فِرْعَوْنُ فِي الْمَدَائِنِ حَاشِرِينَ ﴿٥٣﴾

54. "ಇವರು ಕೇವಲ ಬೆರಳೆಣಿಕೆಯಲ್ಲಿದ್ದಾರೆ-

إِنَّ هَٰؤُلَاءِ لَشِرْذِمَةٌ قَلِيلُونَ ﴿٥٤﴾

55. ಮತ್ತು ಇವರು ನನ್ನನ್ನು ಬಹಳ ಕುಪಿತಗೊಳಿಸಿದ್ದಾರೆ-

وَإِنَّهُمْ لَنَا لَغَائِظُونَ ﴿٥٥﴾

56. ನಾವು ಸದಾ ಜಾಗೃತರಾಗಿರುವಂತಹ ಸಮೂಹವಾಗಿದ್ದೇವೆ."

وَإِنَّا لَجَمِيعٌ حَاذِرُونَ ﴿٥٦﴾

57. ಈ ರೀತಿಯಲ್ಲಿ ನಾವು ಅವರನ್ನು ಅವರ ಉದ್ಯಾನಗಳಿಂದಲೂ ಚಿಲುಮೆಗಳಿಂದಲೂ-

فَأَخْرَجْنَاهُمْ مِنْ جَنَّاتٍ وَعُيُونٍ ﴿٥٧﴾

58. ಖಜಾನೆಗಳಿಂದಲೂ ಅತ್ಯುತ್ತಮ ನಿವಾಸಗಳಿಂದಲೂ ಹೊರ ತಂದೆವು-

وَكُنُوزٍ وَمَقَامٍ كَرِيمٍ ﴿٥٨﴾

59. ಇದು ಅವರ ಮೇಲೆ ಗತಿಸಿದುದಾಯಿತು. (ಇನ್ನೊಂದು ಕಡೆ) ಬನೀಇಸ್ರಾಈಲರನ್ನು ನಾವು ಇವೆಲ್ಲವುಗಳ ಉತ್ತರಾಧಿಕಾರಿಗಳಾಗಿ ಮಾಡಿದೆವು.

كَذَٰلِكَ وَأَوْرَثْنَاهَا بَنِي إِسْرَائِيلَ ﴿٥٩﴾

60. ಬೆಳಗಾಗುತ್ತಲೇ ಇವರು, ಅವರನ್ನು ಬೆನ್ನಟ್ಟಿ ಹೋದರು.

فَأَتْبَعُوهُمْ مُشْرِقِينَ ﴿٦٠﴾

61. ಎರಡು ಸಮೂಹಗಳು ಎದುರಾದಾಗ ಮೂಸಾರ ಸಂಗಾತಿಗಳು, "ನಾವು ಸಿಕ್ಕಿ ಬಿದ್ದೆವು" ಎಂದು ಕೂಗಿದರು.

فَلَمَّا تَرَاءَى الْجَمْعَانِ قَالَ أَصْحَابُ مُوسَىٰ إِنَّا لَمُدْرَكُونَ ﴿٦١﴾

62. ಆಗ ಮೂಸಾ, "ಖಂಡಿತ ಇಲ್ಲ. ನನ್ನ ಸಂಗಡ ನನ್ನ ಪ್ರಭು ಇದ್ದಾನೆ. ಅವನು ಖಂಡಿತವಾಗಿಯೂ ನನಗೆ ದಾರಿ ತೋರುವನು" ಎಂದರು.

قَالَ كَلَّا ۖ إِنَّ مَعِيَ رَبِّي سَيَهْدِينِ ﴿٦٢﴾

63. ನಾವು ಮೂಸಾರಿಗೆ 'ದಿವ್ಯವಾಣಿ' ಮೂಲಕ, "ನಿಮ್ಮ ಲಾಠಿಯನ್ನು ಸಮುದ್ರಕ್ಕೆ ಹೊಡೆಯಿರಿ" ಎಂದು ಅಪ್ಪಣೆ ಕೊಟ್ಟೆವು. ಹಠಾತ್ತನೆ ಸಮುದ್ರ ಸೀಳಾಯಿತು ಮತ್ತು ಅದರ ಪ್ರತಿಯೊಂದು ಭಾಗವು ಒಂದು ಮಹಾ ಪರ್ವತದಂತಾಗಿ ಬಿಟ್ಟಿತು.

فَأَوْحَيْنَا إِلَىٰ مُوسَىٰ أَنِ اضْرِبْ بِعَصَاكَ الْبَحْرَ ۖ فَانْفَلَقَ فَكَانَ كُلُّ فِرْقٍ كَالطَّوْدِ الْعَظِيمِ ﴿٦٣﴾

64. ನಾವು ಅಲ್ಲೇ ಇನ್ನೊಂದು ಸಮೂಹವನ್ನು ಸಮೀಪಕ್ಕೆ ತಂದೆವು.

وَأَزْلَفْنَا ثَمَّ الْآخَرِينَ ﴿٦٤﴾

65. ಮೂಸಾ ಮತ್ತು ಅವರ ಜೊತೆಗಿದ್ದವರೆಲ್ಲರನ್ನೂ ನಾವು ರಕ್ಷಿಸಿದೆವು.

وَأَنْجَيْنَا مُوسَىٰ وَمَنْ مَعَهُ أَجْمَعِينَ ﴿٦٥﴾

66. ಮತ್ತು ಇತರರನ್ನು ಮುಳುಗಿಸಿಬಿಟ್ಟೆವು.

ثُمَّ أَغْرَقْنَا الْآخَرِينَ ﴿٦٦﴾

67. ನಿಶ್ಚಯವಾಗಿಯೂ ಈ ಘಟನೆಯಲ್ಲೊಂದು ನಿದರ್ಶನವಿದೆ. ಆದರೆ ಇವರಲ್ಲಿ ಹೆಚ್ಚಿನವರು ನಂಬುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُمْ مُؤْمِنِينَ ﴿٦٧﴾

68. ನಿಶ್ಚಯವಾಗಿಯೂ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿٦٨﴾

69. ಇವರಿಗೆ ಇಬ್‌ರಾಹೀಮರ ವೃತ್ತಾಂತವನ್ನು ತಿಳಿಸಿರಿ.

وَاتْلُ عَلَيْهِمْ نَبَأَ إِبْرَاهِيمَ ﴿٦٩﴾

70. ಅವರು ತಮ್ಮ ತಂದೆ ಮತ್ತು ಜನಾಂಗದೊಡನೆ, "ನೀವು ಇದೆಂತಹ ವಸ್ತುಗಳನ್ನು ಪೂಜಿಸುತ್ತಿರುವಿರಿ?" ಎಂದು ಕೇಳಿದಾಗ-

إِذْ قَالَ لِأَبِيهِ وَقَوْمِهِ مَا تَعْبُدُونَ ﴿٧٠﴾

71. ಅವರು, "ಇವು ಕೆಲವು ವಿಗ್ರಹಗಳು, ನಾವು ಇವುಗಳನ್ನು ಪೂಜಿಸುತ್ತೇವೆ ಮತ್ತು ಇವುಗಳ ಸೇವೆಯಲ್ಲೇ ನಿರತರಾಗಿರುತ್ತೇವೆ" ಎಂದರು.

قَالُوا نَعْبُدُ أَصْنَامًا فَنَظَلُّ لَهَا عَاكِفِينَ ﴿٧١﴾

72. ಆಗ ಇವರು ಕೇಳಿದರು, "ನೀವು ಇವುಗಳನ್ನು ಕರೆದು ಪ್ರಾರ್ಥಿಸಿದಾಗ ಇವು ಕೇಳುತ್ತವೆಯೇ?

قَالَ هَلْ يَسْمَعُونَكُمْ إِذْ تَدْعُونَ ﴿٧٢﴾

73. ಅಥವಾ ಇವು ನಿಮಗೇನಾದರೂ ಲಾಭವನ್ನಾಗಲಿ, ಹಾನಿಯನ್ನಾಗಲಿ ಉಂಟು ಮಾಡುತ್ತವೆಯೇ?"

أَوْ يَنْفَعُونَكُمْ أَوْ يَضُرُّونَ ﴿٧٣﴾

74. ಅದಕ್ಕೆ ಅವರು, "ಇಲ್ಲ, ಆದರೆ ನಮ್ಮ ಪೂರ್ವಿಕರು ಹೀಗೆಯೇ ಮಾಡುತ್ತಿರುವುದನ್ನು ನಾವು ಕಂಡಿದ್ದೇವೆ" ಎಂದರು.

قَالُوا بَلْ وَجَدْنَا آبَاءَنَا كَذَٰلِكَ يَفْعَلُونَ ﴿٧٤﴾

75-76. ಆಗ ಇಬ್‌ರಾಹೀಮರು ಕೇಳಿದರು: "ನೀವು ಮತ್ತು ನಿಮ್ಮ ಪೂರ್ವಿಕರು ಪೂಜಿಸುತ್ತಾ ಬಂದಿರುವ ವಸ್ತುಗಳನ್ನು ನೀವೆಂದಾ ದರೂ (ಕಣ್ತೆರೆದು) ನೋಡಿದ್ದುಂಟೇ?

قَالَ أَفَرَأَيْتُمْ مَا كُنْتُمْ تَعْبُدُونَ ﴿٧٥﴾ أَنْتُمْ وَآبَاؤُكُمُ الْأَقْدَمُونَ ﴿٧٦﴾

77. ಇವೆಲ್ಲವೂ ನನ್ನ ಶತ್ರುಗಳು. ಸರ್ವಲೋಕಗಳ ಪಾಲಕ ಪ್ರಭುವೊಬ್ಬನ ಹೊರತು-

فَإِنَّهُمْ عَدُوٌّ لِي إِلَّا رَبَّ الْعَالَمِينَ ﴿٧٧﴾

78. ಅವನು ನನ್ನನ್ನು ಸೃಷ್ಟಿಸಿದನು ಮತ್ತು ಅವನೇ ನನಗೆ ಮಾರ್ಗದರ್ಶನ ನೀಡುತ್ತಾನೆ-

الَّذِي خَلَقَنِي فَهُوَ يَهْدِينِ ﴿٧٨﴾

79. ಅವನು ನನಗೆ ಉಣಿಸುತ್ತಾನೆ ಮತ್ತು ಕುಡಿಸುತ್ತಾನೆ-

وَالَّذِيْ هُوَ يُطْعِمُنِيْ وَيَسْقِيْنِ ﴿٧٩﴾

80. ನಾನು ಕಾಯಿಲೆ ಬಿದ್ದಾಗ ಅವನೇ ನನ್ನನ್ನು ಗುಣ ಪಡಿಸುತ್ತಾನೆ-

وَإِذَا مَرِضْتُ فَهُوَ يَشْفِيْنِ ﴿٨٠﴾

81. ಅವನೇ ನನಗೆ ಮರಣ ಕೊಡುವವನು ಮತ್ತು ಪುನಃ ಜೀವಂತ ಗೊಳಿಸುವವನು-

وَالَّذِيْ يُمِيْتُنِيْ ثُمَّ يُحْيِيْنِ ﴿٨١﴾

82. ಪ್ರತಿಫಲ ನೀಡಲಾಗುವ ಆ ದಿನ ಅವನು ನನ್ನ ತಪ್ಪುಗಳನ್ನು ಕ್ಷಮಿಸುವನೆಂದೂ ನಾನು ಅವನಿಂದ ನಿರೀಕ್ಷಿಸುತ್ತಿದ್ದೇನೆ" ಎಂದು ಹೇಳಿದರು.

وَالَّذِيْٓ أَطْمَعُ أَنْ يَّغْفِرَ لِيْ خَطِيْٓـَٔتِيْ يَوْمَ الدِّيْنِ ﴿٨٢﴾

83. (ತರುವಾಯ ಇಬ್‌ರಾಹೀಮರು ಹೀಗೆ ಪ್ರಾರ್ಥಿಸಿದರು:) "ನನ್ನ ಪ್ರಭೂ, ನನಗೆ 'ನಿರ್ಧಾರ ಶಕ್ತಿ' ನೀಡು ಮತ್ತು ನನ್ನನ್ನು ಸಜ್ಜನರೊಂದಿಗೆ ಸೇರಿಸು.

رَبِّ هَبْ لِيْ حُكْمًا وَّأَلْحِقْنِيْ بِالصّٰلِحِيْنَ ﴿٨٣﴾

84. ಮುಂದಿನ ಪೀಳಿಗೆಗಳಲ್ಲಿ ನನಗೆ ಸತ್ಕೀರ್ತಿಯನ್ನು ದಯಪಾಲಿಸು-

وَاجْعَلْ لِّيْ لِسَانَ صِدْقٍ فِي الْاٰخِرِيْنَ ﴿٨٤﴾

85. ಮತ್ತು ಸಂಪತ್‌ಭರಿತವಾದ ಸ್ವರ್ಗದ ಉತ್ತರಾಧಿಕಾರಿಗಳಲ್ಲಿ ನನ್ನನ್ನು ಸೇರಿಸು-

وَاجْعَلْنِيْ مِنْ وَّرَثَةِ جَنَّةِ النَّعِيْمِ ﴿٨٥﴾

86. ನನ್ನ ತಂದೆಗೆ ಕ್ಷಮೆ ನೀಡು. ನಿಜಕ್ಕೂ ಅವರು ಪಥಭ್ರಷ್ಟರ ಲ್ಲಾಗಿದ್ದಾರೆ-

وَاغْفِرْ لِأَبِيْٓ إِنَّهٗ كَانَ مِنَ الضَّآلِّيْنَ ﴿٨٦﴾

87. ಎಲ್ಲರೂ ಜೀವಂತಗೊಳಿಸಿ ಎಬ್ಬಿಸಲ್ಪಡುವ ಆ ದಿನ ನನ್ನನ್ನು ಅವಮಾನಿಸದಿರು-

وَلَا تُخْزِنِيْ يَوْمَ يُبْعَثُوْنَ ﴿٨٧﴾

88 ಅಂದು ಸೊತ್ತಾಗಲಿ, ಸಂತತಿಗಳಾಗಲಿ ಸ್ವಲ್ಪವೂ ಫಲಕಾರಿ ಯಾಗಲಾರವು,

يَوْمَ لَا يَنْفَعُ مَالٌ وَّلَا بَنُوْنَ ﴿٨٨﴾

89. ನಿಷ್ಕಳಂಕ ಹೃದಯದೊಂದಿಗೆ ಅಲ್ಲಾಹನ ಸನ್ನಿಧಿಯಲ್ಲಿ ಹಾಜ ರಾಗುವವನ ಹೊರತು."

إِلَّا مَنْ أَتَى اللّٰهَ بِقَلْبٍ سَلِيْمٍ ﴿٨٩﴾

90. (ಅಂದು)[10] ಸ್ವರ್ಗವನ್ನು ಧರ್ಮನಿಷ್ಠರ ಬಳಿಗೆ ತರಲಾಗುವುದು.

وَأُزْلِفَتِ الْجَنَّةُ لِلْمُتَّقِيْنَ ﴿٩٠﴾

10. ಇಲ್ಲಿಂದ 102ನೆಯ ಸೂಕ್ತದ ತನಕವಿರುವ ಉಲ್ಲೇಖ ಹ. ಇಬ್‌ರಾಹೀಮ್‌ರ(ಅ) ಮಾತಲ್ಲ. ಅದು ಅಲ್ಲಾಹನು ಅದಕ್ಕೆ ಸೇರಿಸಿರುವ ಹೆಚ್ಚುವರಿ ವಿಷಯಗಳಾಗಿವೆ.

91. ಮತ್ತು ನರಕವು ಪಥಭ್ರಷ್ಟರ ಮುಂದೆ ತೆರೆಯಲ್ಪಡುವುದು-

وَبُرِّزَتِ الْجَحِيمُ لِلْغَاوِينَ ﴿٩١﴾

92-93. "ನೀವು ಅಲ್ಲಾಹನನ್ನು ಬಿಟ್ಟು ಪೂಜಿಸುತ್ತಿದ್ದವರೆಲ್ಲಾ ಈಗ ಎಲ್ಲಿದ್ದಾರೆ? ಅವರು ನಿಮಗೇನಾದರೂ ಸಹಾಯ ಮಾಡುತ್ತಿದ್ದಾರೆಯೇ? ಅಥವಾ ತಮ್ಮ ರಕ್ಷಣೆಯನ್ನಾದರೂ ಮಾಡಿಕೊಳ್ಳ ಬಲ್ಲರೇ?" ಎಂದು ಅವರೊಡನೆ ಕೇಳಲಾಗುವುದು.

وَقِيلَ لَهُمْ أَيْنَمَا كُنتُمْ تَعْبُدُونَ ﴿٩٢﴾ مِن دُونِ اللَّهِ ۖ هَلْ يَنصُرُونَكُمْ أَوْ يَنتَصِرُونَ ﴿٩٣﴾

94-95. ತರುವಾಯ ಆ ಆರಾಧ್ಯರೂ ಪಥಭ್ರಷ್ಟ ಜನರೂ ಇಬ್‌ಲೀಸನ ಸೇನೆಯೂ ಎಲ್ಲರೂ ಅದರೊಳಗೆ ಒಂದರ ಮೇಲೊಂದರಂತೆ ತಳ್ಳಲ್ಪಡುವರು.

فَكُبْكِبُوا فِيهَا هُمْ وَالْغَاوُونَ ﴿٩٤﴾ وَجُنُودُ إِبْلِيسَ أَجْمَعُونَ ﴿٩٥﴾

96. ಅಲ್ಲಿ ಇವರೆಲ್ಲರೂ ಪರಸ್ಪರ ಜಗಳಾಡುವರು ಮತ್ತು ಈ ಪಥ ಭ್ರಷ್ಟ ಜನರು (ತಮ್ಮ ಆರಾಧ್ಯರೊಡನೆ ಹೀಗೆ ಹೇಳುವರು)-

قَالُوا وَهُمْ فِيهَا يَخْتَصِمُونَ ﴿٩٦﴾

97-98. "ಅಲ್ಲಾಹನಾಣೆ! ನಾವು ನಿಮಗೆ ಸರ್ವಲೋಕಗಳ ಪಾಲಕ ಪ್ರಭುವಿಗೆ ಸಮಾನವಾದ ಸ್ಥಾನ ನೀಡುತ್ತಿರುವಾಗ ಪ್ರತ್ಯಕ್ಷ ಪಥ ಭ್ರಷ್ಟತೆಗೊಳಗಾಗಿದ್ದೆವು.

تَاللَّهِ إِن كُنَّا لَفِي ضَلَالٍ مُّبِينٍ ﴿٩٧﴾ إِذْ نُسَوِّيكُم بِرَبِّ الْعَالَمِينَ ﴿٩٨﴾

99. ನಮ್ಮನ್ನು ಈ ಪಥಭ್ರಷ್ಟತೆಗೆ ಗುರಿಪಡಿಸಿದವರು ಅಪರಾಧಿಗಳೇ ಆಗಿದ್ದರು.

وَمَا أَضَلَّنَا إِلَّا الْمُجْرِمُونَ ﴿٩٩﴾

100. ಈಗ ನಮಗೆ ಯಾವ ಶಿಫಾರಸುದಾರನೂ ಇಲ್ಲ,

فَمَا لَنَا مِن شَافِعِينَ ﴿١٠٠﴾

101. ಆಪ್ತ ಸ್ನೇಹಿತನೂ ಇಲ್ಲ.

وَلَا صَدِيقٍ حَمِيمٍ ﴿١٠١﴾

102. ಅಯ್ಯೋ! ನಮಗೆ ಭೂಲೋಕಕ್ಕೆ ಮರಳುವ ಒಂದವಕಾಶ ಸಿಕ್ಕಿಬಿಟ್ಟಿದ್ದರೆ ನಾವು ಸತ್ಯವಿಶ್ವಾಸಿಗಳಾಗುತ್ತಿದ್ದೆವು."

فَلَوْ أَنَّ لَنَا كَرَّةً فَنَكُونَ مِنَ الْمُؤْمِنِينَ ﴿١٠٢﴾

103. ನಿಶ್ಚಯವಾಗಿಯೂ ಇದರಲ್ಲೊಂದು ದೊಡ್ಡ ನಿದರ್ಶನವಿದೆ.[11] ಆದರೆ ಇವರಲ್ಲಿ ಹೆಚ್ಚಿನವರು ವಿಶ್ವಾಸವಿಡುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٠٣﴾

104. ನಿಜಕ್ಕೂ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٠٤﴾ ع

11. ಅರ್ಥಾತ್ ಹ. ಇಬ್‌ರಾಹೀಮ್‌ರ(ಅ) ಘಟನೆಯಲ್ಲಿ.

| | |
|---|---|
| 105. ನೂಹರ ಜನಾಂಗವು ಸಂದೇಶವಾಹಕರನ್ನು ಸುಳ್ಳಾಗಿಸಿತು. | كَذَّبَتْ قَوْمُ نُوحٍ الْمُرْسَلِينَ ﴿١٠٥﴾ |
| 106. ಅವರ ಸಹೋದರ ನೂಹರು, ಅವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನೀವು ಭಯ ಪಡುವುದಿಲ್ಲವೇ? | إِذْ قَالَ لَهُمْ أَخُوهُمْ نُوحٌ أَلَا تَتَّقُونَ ﴿١٠٦﴾ |
| 107. ನಾನು ನಿಮ್ಮ ಪಾಲಿಗೆ ಒಬ್ಬ ಪ್ರಾಮಾಣಿಕ ಸಂದೇಶವಾಹಕನಾಗಿದ್ದೇನೆ. | إِنِّي لَكُمْ رَسُولٌ أَمِينٌ ﴿١٠٧﴾ |
| 108. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ. | فَاتَّقُوا اللَّهَ وَأَطِيعُونِ ﴿١٠٨﴾ |
| 109. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಬಯಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ. | وَمَا أَسْأَلُكُمْ عَلَيْهِ مِنْ أَجْرٍ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٠٩﴾ |
| 110. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು (ನಿಸ್ಸಂಕೋಚವಾಗಿ) ನನ್ನನ್ನು ಅನುಸರಿಸಿರಿ." | فَاتَّقُوا اللَّهَ وَأَطِيعُونِ ﴿١١٠﴾ |
| 111. ಅದಕ್ಕೆ ಅವರು, "ನಾವು ನಿನ್ನನ್ನು ನಂಬಬೇಕೇ? ನಿನ್ನನ್ನು ಅನುಸರಿಸುವವರಂತೂ ಅತ್ಯಂತ ನೀಚರಾಗಿದ್ದಾರೆ" ಎಂದು ಉತ್ತರಿಸಿದರು. | قَالُوا أَنُؤْمِنُ لَكَ وَاتَّبَعَكَ الْأَرْذَلُونَ ﴿١١١﴾ |
| 112. ನೂಹರು ಹೇಳಿದರು, "ಅವರ ಕರ್ಮ ಹೇಗಿದೆಯೆಂದು ನನಗೇನು ಗೊತ್ತು? | قَالَ وَمَا عِلْمِي بِمَا كَانُوا يَعْمَلُونَ ﴿١١٢﴾ |
| 113. ಅವರ ವಿಚಾರಣೆಯ ಹೊಣೆ ನನ್ನ ಪ್ರಭುವಿನ ಮೇಲಿದೆ. ನೀವು ಒಂದಿಷ್ಟು ವಿವೇಕದಿಂದ ವರ್ತಿಸುತ್ತಿದ್ದರೆ! | إِنْ حِسَابُهُمْ إِلَّا عَلَىٰ رَبِّي لَوْ تَشْعُرُونَ ﴿١١٣﴾ |
| 114. ಸತ್ಯವಿಶ್ವಾಸ ಸ್ವೀಕರಿಸಿದವರನ್ನು ಧಿಕ್ಕರಿಸುವುದು ನನ್ನ ಕೆಲಸವಲ್ಲ. | وَمَا أَنَا بِطَارِدِ الْمُؤْمِنِينَ ﴿١١٤﴾ |
| 115. ನಾನೊಬ್ಬ ಸುಸ್ಪಷ್ಟ ಎಚ್ಚರಿಕೆ ಕೊಡುವವನು ಮಾತ್ರ." | إِنْ أَنَا إِلَّا نَذِيرٌ مُبِينٌ ﴿١١٥﴾ |
| 116. ಆಗ ಅವರು, "ನೂಹ್, ನೀನು ಇದನ್ನು ತೊರೆಯದಿದ್ದರೆ ಖಂಡಿತವಾಗಿಯೂ ನೀನು ಕಲ್ಲೆಸೆದು ಕೊಲ್ಲಲ್ಪಡುವವರಲ್ಲಾಗುವೆ" ಎಂದರು. | قَالُوا لَئِنْ لَمْ تَنْتَهِ يَا نُوحُ لَتَكُونَنَّ مِنَ الْمَرْجُومِينَ ﴿١١٦﴾ |

117. ನೂಹರು ಪ್ರಾರ್ಥಿಸಿದರು, "ನನ್ನ ಪ್ರಭೂ, ನನ್ನ ಜನಾಂಗವು ನನ್ನನ್ನು ಸುಳ್ಳಾಗಿಸಿ ಬಿಟ್ಟಿತು.

قَالَ رَبِّ إِنَّ قَوْمِي كَذَّبُونِ ﴿١١٧﴾

118. ಇನ್ನು ನನ್ನ ಮತ್ತು ಅವರ ನಡುವೆ ನಿರ್ಣಾಯಕ ತೀರ್ಮಾನ ಮಾಡಿಬಿಡು. ನನ್ನನ್ನೂ ನನ್ನೊಂದಿಗಿರುವ ಸತ್ಯವಿಶ್ವಾಸಿಗಳನ್ನೂ ರಕ್ಷಿಸು."

فَافْتَحْ بَيْنِي وَبَيْنَهُمْ فَتْحًا وَنَجِّنِي وَمَن مَّعِيَ مِنَ الْمُؤْمِنِينَ ﴿١١٨﴾

119. ಕೊನೆಗೆ ನಾವು ಅವರನ್ನೂ ಅವರ ಜೊತೆಗಾರರನ್ನೂ ಒಂದು ತುಂಬಿದ ನಾವೆಯಲ್ಲಿ ರಕ್ಷಿಸಿದೆವು.[12]

فَأَنجَيْنَاهُ وَمَن مَّعَهُ فِي الْفُلْكِ الْمَشْحُونِ ﴿١١٩﴾

120. ತರುವಾಯ ಉಳಿದವರನ್ನು ಮುಳುಗಿಸಿ ಬಿಟ್ಟೆವು.

ثُمَّ أَغْرَقْنَا بَعْدُ الْبَاقِينَ ﴿١٢٠﴾

121. ನಿಶ್ಚಯವಾಗಿಯೂ ಇದರಲ್ಲೊಂದು ನಿದರ್ಶನವಿದೆ. ಆದರೆ ಇವರಲ್ಲಿ ಹೆಚ್ಚಿನವರು ನಂಬುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٢١﴾

122. ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٢٢﴾

123. ಆದ್ (ಜನಾಂಗವು) ರಸೂಲರನ್ನು ಸುಳ್ಳಾಗಿಸಿತು.

كَذَّبَتْ عَادٌ الْمُرْسَلِينَ ﴿١٢٣﴾

124. ಅವರ ಸಹೋದರ ಹೂದರು ಅವರೊಡನೆ ಹೇಳಿದ್ದ ಸಂದರ್ಭ ವನ್ನು ಸ್ಮರಿಸಿರಿ; "ನೀವೇನು ಭಯ ಪಡುವುದಿಲ್ಲವೇ?

إِذْ قَالَ لَهُمْ أَخُوهُمْ هُودٌ أَلَا تَتَّقُونَ ﴿١٢٤﴾

125. ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕನಾಗಿ ರುತ್ತೇನೆ-

إِنِّي لَكُمْ رَسُولٌ أَمِينٌ ﴿١٢٥﴾

126. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٢٦﴾

127. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಬಯಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ.

وَمَا أَسْأَلُكُمْ عَلَيْهِ مِنْ أَجْرٍ ۖ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٢٧﴾

128 ಇದೇನು ನೀವು ಪ್ರತಿಯೊಂದು ಉನ್ನತ ಸ್ಥಳದಲ್ಲಿ ವೃಥಾ ಒಂದು ಸ್ಮಾರಕ ಕಟ್ಟಡವನ್ನು ಕಟ್ಟುತ್ತೀರಿ-

أَتَبْنُونَ بِكُلِّ رِيعٍ آيَةً تَعْبَثُونَ ﴿١٢٨﴾

12. "ತುಂಬಿದ ನಾವೆ" ಎಂದರೆ ನಾವೆಯು ವಿಶ್ವಾಸವಿಟ್ಟ ಮಾನವರು ಹಾಗೂ ನಮ್ಮೊಡನೆ ಇರಿಸಲು ಸೂಚಿಸಲಾಗಿದ್ದ ಒಂದೊಂದು ಜೊತೆ ಪ್ರಾಣಿಗಳಿಂದ ತುಂಬಿತ್ತು ಎಂದರ್ಥ. ಹೂದ್ ಅಧ್ಯಾಯದ 40ನೆಯ ಸೂಕ್ತದಲ್ಲಿ ಅದರ ಉಲ್ಲೇಖವಿದೆ.

129. ಮತ್ತು ನಿಮಗೆ ಸದಾ ಇಲ್ಲೇ ಉಳಿಯಲಿಕ್ಕಿದೆಯೋ ಎಂಬಂತೆ ದೊಡ್ಡ ದೊಡ್ಡ ಸೌಧಗಳನ್ನು ನಿರ್ಮಿಸುತ್ತೀರಿ.

وَتَتَّخِذُونَ مَصَانِعَ لَعَلَّكُمْ تَخْلُدُونَ ﴿١٢٩﴾

130. ಮತ್ತು ಯಾರ ಮೇಲಾದರೂ ಕೈ ಹಾಕುವಾಗ ಮದವೇರಿದವರಂತೆ ಕೈ ಹಾಕುತ್ತೀರಿ.

وَإِذَا بَطَشْتُمْ بَطَشْتُمْ جَبَّارِينَ ﴿١٣٠﴾

131. ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٣١﴾

132. ನೀವು ತಿಳಿದಿರುವ ವಸ್ತುಗಳನ್ನೆಲ್ಲ ನಿಮಗೆ ಕೊಟ್ಟಿರುವಾತನನ್ನು ಭಯಪಡಿರಿ.

وَاتَّقُوا الَّذِي أَمَدَّكُمْ بِمَا تَعْلَمُونَ ﴿١٣٢﴾

133. ಅವನು ನಿಮಗೆ ಪ್ರಾಣಿಗಳನ್ನು ಕೊಟ್ಟನು, ಸಂತತಿ ಕೊಟ್ಟನು,

أَمَدَّكُمْ بِأَنْعَامٍ وَبَنِينَ ﴿١٣٣﴾

134. ತೋಟಗಳನ್ನೂ ಚಿಲುಮೆಗಳನ್ನೂ ಕೊಟ್ಟನು.

وَجَنَّاتٍ وَعُيُونٍ ﴿١٣٤﴾

135. ನನಗೆ ನಿಮ್ಮ ವಿಷಯದಲ್ಲಿ ಒಂದು ಮಹಾ ದಿನದ ಯಾತನೆಯ ಭಯವಿದೆ."

إِنِّي أَخَافُ عَلَيْكُمْ عَذَابَ يَوْمٍ عَظِيمٍ ﴿١٣٥﴾

136. ಆಗ ಅವರು - "ನೀನು ಉಪದೇಶ ಮಾಡಿದರೂ ಮಾಡದಿದ್ದರೂ ನಮ್ಮ ಮಟ್ಟಿಗೆ ಎಲ್ಲಾ ಒಂದೇ-

قَالُوا سَوَاءٌ عَلَيْنَا أَوَعَظْتَ أَمْ لَمْ تَكُنْ مِنَ الْوَاعِظِينَ ﴿١٣٦﴾

137. ಈ ವಿಷಯಗಳೆಲ್ಲಾ ಹಿಂದಿನಿಂದಲೂ ಹೀಗೆಯೇ ನಡೆಯುತ್ತ ಬಂದಿವೆ-

إِنْ هَٰذَا إِلَّا خُلُقُ الْأَوَّلِينَ ﴿١٣٧﴾

138. ನಾವು ಯಾತನೆಗೊಳಪಡುವವರಲ್ಲ".

وَمَا نَحْنُ بِمُعَذَّبِينَ ﴿١٣٨﴾

139. ಹೀಗೆ ಅವರು ಅವರನ್ನು, (ಹ. ಹೂದರನ್ನು) ಸುಳ್ಳಾಗಿಸಿದರು ಮತ್ತು ನಾವು ಅವರನ್ನು ನಾಶಗೊಳಿಸಿದೆವು. ನಿಶ್ಚಯವಾಗಿಯೂ ಇದರಲ್ಲೊಂದು ನಿದರ್ಶನವಿದೆ. ಆದರೆ, ಇವರಲ್ಲಿ ಹೆಚ್ಚಿನವರು ನಂಬುವುದಿಲ್ಲ.

فَكَذَّبُوهُ فَأَهْلَكْنَاهُمْ ۗ إِنَّ فِي ذَٰلِكَ لَآيَةً ۖ وَمَا كَانَ أَكْثَرُهُمْ مُؤْمِنِينَ ﴿١٣٩﴾

140. ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٤٠﴾

141. ಸಮೂದ್ (ಜನಾಂಗವು) ರಸೂಲರನ್ನು ಸುಳ್ಳಾಗಿಸಿತು.

كَذَّبَتْ ثَمُودُ الْمُرْسَلِينَ ﴿١٤١﴾

142. ಅವರ ಸಹೋದರ ಸಾಲಿಹರು ಅವರೊಡನೆ ಹೇಳಿದ ಸಂದರ್ಭ ವನ್ನು ಸ್ಮರಿಸಿರಿ; "ನೀವು ಭಯ ಪಡುವುದಿಲ್ಲವೇ?

إِذْ قَالَ لَهُمْ أَخُوهُمْ صَٰلِحٌ أَلَا تَتَّقُونَ ﴿١٤٢﴾

143. ನಾನು ನಿಮ್ಮ ಪಾಲಿಗೆ ಒಬ್ಬ ಪ್ರಾಮಾಣಿಕ ಸಂದೇಶವಾಹಕ ನಾಗಿರುತ್ತೇನೆ-

إِنِّي لَكُمْ رَسُولٌ أَمِينٌ ﴿١٤٣﴾

144. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٤٤﴾

145. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಾದ ಅಲ್ಲಾಹನ ಬಳಿ ಇದೆ.

وَمَا أَسْأَلُكُمْ عَلَيْهِ مِنْ أَجْرٍ ۖ إِنْ أَجْرِيَ إِلَّا عَلَىٰ رَبِّ الْعَٰلَمِينَ ﴿١٤٥﴾

146. ನೀವು ಇಲ್ಲಿರುವ ಸಕಲ ವಸ್ತುಗಳ ಮಧ್ಯೆ ಹೀಗೆಯೇ ನಿಶ್ಚಿಂತರಾಗಿ ಉಳಿದುಕೊಂಡಿರಲು ನಿಮ್ಮನ್ನು ಬಿಟ್ಟು ಬಿಡಲಾಗುವುದೇ?

أَتُتْرَكُونَ فِي مَا هَٰهُنَا آمِنِينَ ﴿١٤٦﴾

147. ಈ ಉದ್ಯಾನಗಳಲ್ಲೂ ಕಾಲುವೆಗಳಲ್ಲೂ-

فِي جَنَّٰتٍ وَعُيُونٍ ﴿١٤٧﴾

148. ಈ ಹೊಲಗಳಲ್ಲೂ ರಸಭರಿತ ಗೊಂಚಲುಗಳಿರುವ ಖರ್ಜೂರದ ತೋಟಗಳಲ್ಲೂ? (ಉಳಿದುಕೊಂಡಿರಲು ಬಿಡಲಾಗುವುದೇ?)

وَزُرُوعٍ وَنَخْلٍ طَلْعُهَا هَضِيمٌ ﴿١٤٨﴾

149. ನೀವು ಹೆಗ್ಗಳಿಕೆಗಾಗಿ ಪರ್ವತಗಳನ್ನು ಕೊರೆದು ಅವುಗಳೊಳಗೆ ಕಟ್ಟಡಗಳನ್ನು ನಿರ್ಮಿಸುತ್ತೀರಿ.

وَتَنْحِتُونَ مِنَ الْجِبَالِ بُيُوتًا فَرِهِينَ ﴿١٤٩﴾

150. ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٥٠﴾

151. ಆ ಅತಿರೇಕಿಗಳನ್ನು ಅನುಸರಿಸಬೇಡಿರಿ.

وَلَا تُطِيعُوا أَمْرَ الْمُسْرِفِينَ ﴿١٥١﴾

152. ಅವರು ಭೂಮಿಯಲ್ಲಿ ಗೊಂದಲವನ್ನುಂಟು ಮಾಡುತ್ತಾರೆ. ಯಾವ ಸುಧಾರಣಾ ಕಾರ್ಯವನ್ನೂ ಮಾಡುವುದಿಲ್ಲ."

الَّذِينَ يُفْسِدُونَ فِي الْأَرْضِ وَلَا يُصْلِحُونَ ﴿١٥٢﴾

153. ಆಗ ಅವರು ಹೇಳಿದರು, "ನೀನು ಕೇವಲ ಒಬ್ಬ ಮಾಟಬಾಧಿತ ವ್ಯಕ್ತಿ.

قَالُوا إِنَّمَا أَنْتَ مِنَ الْمُسَحَّرِينَ ﴿١٥٣﴾

154. ನೀನು ನಮ್ಮಂತೆಯೇ ಇರುವ ಒಬ್ಬ ಮನುಷ್ಯನಲ್ಲದೆ ಇನ್ನೇನು? ನೀನು ಸತ್ಯವಂತನಾಗಿದ್ದರೆ ಏನಾದರೊಂದು ನಿದರ್ಶನವನ್ನು ತಾ."

مَا أَنْتَ إِلَّا بَشَرٌ مِثْلُنَا ۖ فَأْتِ بِآيَةٍ إِنْ كُنْتَ مِنَ الصَّٰدِقِينَ ﴿١٥٤﴾

155. ಆಗ ಸಾಲಿಹ್‌ರು ಹೇಳಿದರು, "ಇದೊಂದು ಒಂಟೆ. ಒಂದು ದಿನ ನೀರು ಕುಡಿಯುವ ಹಕ್ಕು ಇದಕ್ಕೆ, ಇನ್ನೊಂದು ದಿನ ನೀರು ಪಡೆಯುವ ಹಕ್ಕು ನಿಮಗೆ.

قَالَ هَٰذِهِۦ نَاقَةٌ لَّهَا شِرْبٌ وَلَكُمْ شِرْبُ يَوْمٍ مَّعْلُومٍ ﴿١٥٥﴾

156. ಇದನ್ನು ಎಷ್ಟು ಮಾತ್ರಕ್ಕೂ ಕೆಣಕಬೇಡಿರಿ. ಅನ್ಯಥಾ ಒಂದು ಮಹಾ ದಿನದ ಯಾತನೆ ನಿಮ್ಮ ಮೇಲೆ ಎರಗುವುದು."

وَلَا تَمَسُّوهَا بِسُوٓءٍ فَيَأْخُذَكُمْ عَذَابُ يَوْمٍ عَظِيمٍ ﴿١٥٦﴾

157. ಆದರೆ ಅವರು ಅದರ ಮೊಣಕಾಲುಗಳನ್ನು ಕಡಿದು ಬಿಟ್ಟರು ಮತ್ತು ಕೊನೆಗೆ ಪಶ್ಚಾತ್ತಾಪ ಪಟ್ಟರು-

فَعَقَرُوهَا فَأَصْبَحُوا نَٰدِمِينَ ﴿١٥٧﴾

158. ಯಾತನೆಯು ಅವರ ಮೇಲೆ ಎರಗಿಯೇ ಬಿಟ್ಟಿತು. ನಿಶ್ಚಯ ವಾಗಿಯೂ ಇದರಲ್ಲೊಂದು ನಿದರ್ಶನವಿದೆ. ಆದರೆ ಇವರಲ್ಲಿ ಹೆಚ್ಚಿನವರು ನಂಬುವವರಲ್ಲ-

فَأَخَذَهُمُ الْعَذَابُ ۗ إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٥٨﴾

159. ಮತ್ತು ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٥٩﴾

160. ಲೂತರ ಜನಾಂಗವು ರಸೂಲರನ್ನು ಸುಳ್ಳಾಗಿಸಿತು.

كَذَّبَتْ قَوْمُ لُوطٍ الْمُرْسَلِينَ ﴿١٦٠﴾

161. ಅವರ ಸಹೋದರ ಲೂತರು ಅವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನೀವು ಭಯಪಡುವುದಿಲ್ಲವೇ?

إِذْ قَالَ لَهُمْ أَخُوهُمْ لُوطٌ أَلَا تَتَّقُونَ ﴿١٦١﴾

162. ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕ ನಾಗಿರುತ್ತೇನೆ-

إِنِّي لَكُمْ رَسُولٌ أَمِينٌ ﴿١٦٢﴾

163. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٦٣﴾

164. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ.

وَمَا أَسْأَلُكُمْ عَلَيْهِ مِنْ أَجْرٍ ۖ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٦٤﴾

165. ನೀವು ಜಗತ್ತಿನ ಸೃಷ್ಟಿಗಳ ಪೈಕಿ ಪುರುಷರ ಬಳಿಗೇ ಹೋಗುತ್ತೀರಾ?

أَتَأْتُونَ الذُّكْرَانَ مِنَ الْعَالَمِينَ ﴿١٦٥﴾

166. ಮತ್ತು ನಿಮ್ಮ ಪತ್ನಿಯರಲ್ಲಿ ನಿಮ್ಮ ಪ್ರಭು ನಿಮಗಾಗಿ

وَتَذَرُونَ مَا خَلَقَ لَكُمْ رَبُّكُم مِّنْ

ಸೃಷ್ಟಿಸಿರುವುದನ್ನು ಬಿಟ್ಟು ಬಿಡುತ್ತೀರಾ? ವಾಸ್ತವದಲ್ಲಿ ನೀವು ಹದಮೀರಿದ ಜನಾಂಗವಾಗಿದ್ದೀರಿ."

أَزْوَاجِكُمْ ۚ بَلْ أَنتُمْ قَوْمٌ عَادُونَ ﴿١٦٦﴾

167. ಆಗ ಅವರು, "ಲೂತ್, ನೀನು ಈ ಮಾತುಗಳನ್ನು ತೊರೆಯದಿದ್ದರೆ ನಮ್ಮ ನಾಡಿನಿಂದ ಹೊರಕ್ಕೆ ಅಟ್ಟಲ್ಪಟ್ಟವರ ಸಾಲಿಗೆ ನೀನೂ ಸೇರುವೆ" ಎಂದರು.

قَالُوا لَئِن لَّمْ تَنتَهِ يَا لُوطُ لَتَكُونَنَّ مِنَ الْمُخْرَجِينَ ﴿١٦٧﴾

168. ಆಗ ಅವರು ಹೇಳಿದರು, "ನಿಮ್ಮ ದುಷ್ಕೃತ್ಯಗಳಿಗಾಗಿ ಮರುಗುವವರಲ್ಲಿ ನಾನು ಸೇರಿದ್ದೇನೆ.

قَالَ إِنِّي لِعَمَلِكُم مِّنَ الْقَالِينَ ﴿١٦٨﴾

169. ಪ್ರಭೂ, ನನ್ನನ್ನೂ ನನ್ನ ಕುಟುಂಬವನ್ನೂ ಇವರು ಮಾಡುತ್ತಿರುವ ದುರಾಚಾರಗಳಿಂದ ರಕ್ಷಿಸು."[13]

رَبِّ نَجِّنِي وَأَهْلِي مِمَّا يَعْمَلُونَ ﴿١٦٩﴾

170. ಕೊನೆಗೆ ಹಿಂದೆ ಉಳಿದವರಲ್ಲಾಗಿದ್ದ ಓರ್ವ ವೃದ್ಧೆಯ ಹೊರತು-

فَنَجَّيْنَاهُ وَأَهْلَهُ أَجْمَعِينَ ﴿١٧٠﴾

171. ಅವರನ್ನೂ ಅವರ ಎಲ್ಲ ಕುಟುಂಬದವರನ್ನೂ ನಾವು ರಕ್ಷಿಸಿದೆವು.

إِلَّا عَجُوزًا فِي الْغَابِرِينَ ﴿١٧١﴾

172. ಅನಂತರ ಉಳಿದವರನ್ನೆಲ್ಲ ನಾಶಗೊಳಿಸಿ ಬಿಟ್ಟೆವು.

ثُمَّ دَمَّرْنَا الْآخَرِينَ ﴿١٧٢﴾

173. ಮತ್ತು ಅವರ ಮೇಲೆ ಒಂದು ಮಳೆಯನ್ನು ಸುರಿಸಿದೆವು. ಎಚ್ಚರಿಕೆ ಕೊಡಲ್ಪಟ್ಟಿದ್ದವರ ಮೇಲೆ ಇಳಿದಂತಹ ಅತ್ಯಂತ ಕೆಟ್ಟ ಮಳೆ.

وَأَمْطَرْنَا عَلَيْهِم مَّطَرًا ۖ فَسَاءَ مَطَرُ الْمُنذَرِينَ ﴿١٧٣﴾

174. ನಿಶ್ಚಯವಾಗಿಯೂ ಇದರಲ್ಲೊಂದು ನಿದರ್ಶನವಿದೆ. ಆದರೆ ಇವರಲ್ಲಿ ಹೆಚ್ಚಿನವರು ನಂಬುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٧٤﴾

175. ಮತ್ತು ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٧٥﴾

176. ಐಕಃದವರು[14] ರಸೂಲರನ್ನು ಸುಳ್ಳಾಗಿಸಿದರು.

كَذَّبَ أَصْحَابُ لْـَٔيْكَةِ الْمُرْسَلِينَ ﴿١٧٦﴾

177. ಶುಐಬರು ಅವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನೀವು ಭಯಪಡುವುದಿಲ್ಲವೇ?

إِذْ قَالَ لَهُمْ شُعَيْبٌ أَلَا تَتَّقُونَ ﴿١٧٧﴾

13. ಅರ್ಥಾತ್- ಹ. ಲೂತ್‌ರ(ಅ) ಪತ್ನಿ.

14. 'ಐಕಃದವರ' ಸಂಕ್ಷಿಪ್ತ ಉಲ್ಲೇಖ ಅಲ್ ಹಿಜ್ರ್ ಅಧ್ಯಾಯದ ಸೂಕ್ತ 78-84ರಲ್ಲಿ ಈ ಮೊದಲು ಬಂದಿದೆ.

178. ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕನಾಗಿರುತ್ತೇನೆ-

إِنِّي لَكُمْ رَسُولٌ أَمِينٌ ﴿١٧٨﴾

179. ಆದುದರಿಂದ ನೀವು ಅಲ್ಲಾಹನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

فَاتَّقُوا اللَّهَ وَأَطِيعُونِ ﴿١٧٩﴾

180. ಈ ಕಾರ್ಯಕ್ಕಾಗಿ ನಾನು ನಿಮ್ಮಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸುವುದಿಲ್ಲ. ನನ್ನ ಪ್ರತಿಫಲವು ಸರ್ವಲೋಕಗಳ ಪಾಲಕ ಪ್ರಭುವಿನ ಬಳಿ ಇದೆ.

وَمَا أَسْأَلُكُمْ عَلَيْهِ مِنْ أَجْرٍ إِنْ أَجْرِيَ إِلَّا عَلَىٰ رَبِّ الْعَالَمِينَ ﴿١٨٠﴾

181. ಅಳತೆ ಪಾತ್ರೆಯನ್ನು ಸರಿಯಾಗಿ ತುಂಬಿರಿ ಮತ್ತು ಯಾರಿಗೂ ಕಡಿಮೆ ಕೊಡಬೇಡಿರಿ.

أَوْفُوا الْكَيْلَ وَلَا تَكُونُوا مِنَ الْمُخْسِرِينَ ﴿١٨١﴾

182. ಸರಿಯಾದ ತಕ್ಕಡಿಯಲ್ಲಿ ತೂಗಿರಿ.

وَزِنُوا بِالْقِسْطَاسِ الْمُسْتَقِيمِ ﴿١٨٢﴾

183. ಜನರಿಗೆ ಅವರ ವಸ್ತುಗಳನ್ನು ಕಡಿತಗೊಳಿಸಿ ಕೊಡಬೇಡಿರಿ ಮತ್ತು ಭೂಮಿಯಲ್ಲಿ ಗೊಂದಲವನ್ನು ಹರಡುತ್ತಿರಬೇಡಿರಿ.

وَلَا تَبْخَسُوا النَّاسَ أَشْيَاءَهُمْ وَلَا تَعْثَوْا فِي الْأَرْضِ مُفْسِدِينَ ﴿١٨٣﴾

184. ನಿಮ್ಮನ್ನೂ ಗತಪೀಳಿಗೆಗಳನ್ನೂ ಸೃಷ್ಟಿಸಿದಾತನನ್ನು ಭಯಪಡಿರಿ."

وَاتَّقُوا الَّذِي خَلَقَكُمْ وَالْجِبِلَّةَ الْأَوَّلِينَ ﴿١٨٤﴾

185. ಆಗ ಅವರು ಹೇಳಿದರು, "ನೀನೊಬ್ಬ ಮಾಟಬಾಧಿತನಾಗಿರುವೆ-

قَالُوا إِنَّمَا أَنْتَ مِنَ الْمُسَحَّرِينَ ﴿١٨٥﴾

186. ಮತ್ತು ನೀನು ನಮ್ಮ ಹಾಗೆಯೇ ಇರುವ ಓರ್ವ ಮಾನವನಲ್ಲದೆ ಬೇರೇನೂ ಅಲ್ಲ. ನಾವಂತು ನಿನ್ನನ್ನು ಬರಿಯ ಸುಳ್ಳುಗಾರನೆಂದು ಭಾವಿಸುತ್ತೇವೆ.

وَمَا أَنْتَ إِلَّا بَشَرٌ مِثْلُنَا وَإِنْ نَظُنُّكَ لَمِنَ الْكَاذِبِينَ ﴿١٨٦﴾

187. ನೀನು ಸತ್ಯವಾದಿಯಾಗಿದ್ದರೆ ನಮ್ಮ ಮೇಲೆ ಆಕಾಶದ ಒಂದು ತುಂಡನ್ನು ಬೀಳಿಸಿ ಬಿಡು."

فَأَسْقِطْ عَلَيْنَا كِسَفًا مِنَ السَّمَاءِ إِنْ كُنْتَ مِنَ الصَّادِقِينَ ﴿١٨٧﴾

188. ಆಗ ಶುಐಬರು, "ನೀವು ಮಾಡುತ್ತಿರುವುದನ್ನೆಲ್ಲ ನನ್ನ ಪ್ರಭು ತಿಳಿದಿರುವನು" ಎಂದರು.

قَالَ رَبِّي أَعْلَمُ بِمَا تَعْمَلُونَ ﴿١٨٨﴾

189. ಅವರು, ಅವರನ್ನು (ಶುಐಬರನ್ನು) ಸುಳ್ಳಾಗಿಸಿ ಬಿಟ್ಟರು. ಕೊನೆಗೆ ಛತ್ರಿಯ ದಿನದ ಯಾತನೆ ಅವರ ಮೇಲೆ ಎರಗಿ ಬಿಟ್ಟಿತು.[15] ಅದೊಂದು ಅತಿ ಭಯಾನಕ ದಿನದ ಯಾತನೆಯಾಗಿತ್ತು.

فَكَذَّبُوهُ فَأَخَذَهُمْ عَذَابُ يَوْمِ الظُّلَّةِ إِنَّهُ كَانَ عَذَابَ يَوْمٍ عَظِيمٍ ﴿١٨٩﴾

15. ಈ ಪದಗಳಿಂದ ಸ್ಪಷ್ಟವಾಗುವುದೇನೆಂದರೆ ಅವರು ದೇವ ಯಾತನೆಯನ್ನು ಬಯಸಿದ್ದರು. ಆದ್ದರಿಂದ ಅಲ್ಲಾಹನು ಅವರ ಕಡೆಗೆ

190. ನಿಶ್ಚಯವಾಗಿಯೂ ಇದರಲ್ಲೊಂದು ನಿದರ್ಶನವಿದೆ. ಆದರೆ ಇವರಲ್ಲಿ ಹೆಚ್ಚಿನವರು ನಂಬುವವರಲ್ಲ.

إِنَّ فِي ذَٰلِكَ لَآيَةً ۖ وَمَا كَانَ أَكْثَرُهُم مُّؤْمِنِينَ ﴿١٩٠﴾

191. ಮತ್ತು ವಾಸ್ತವದಲ್ಲಿ ನಿಮ್ಮ ಪ್ರಭು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

وَإِنَّ رَبَّكَ لَهُوَ الْعَزِيزُ الرَّحِيمُ ﴿١٩١﴾

192. ಇದು ಸರ್ವಲೋಕಗಳ ಪಾಲಕ ಪ್ರಭುವಿನಿಂದ ಅವತೀರ್ಣಗೊಂಡಿದೆ.[16]

وَإِنَّهُ لَتَنزِيلُ رَبِّ الْعَالَمِينَ ﴿١٩٢﴾

193-194. ನೀವು (ದೇವವತಿಯಿಂದ ದೇವ ಸೃಷ್ಟಿಗಳಿಗೆ) ಎಚ್ಚರಿಕೆ ನೀಡುವವರಲ್ಲಿ ಸೇರಲಿಕ್ಕಾಗಿ, ಪ್ರಾಮಾಣಿಕ ಆತ್ಮವು[17] ಇದರ ಜೊತೆ ನಿಮ್ಮ ಹೃದಯಕ್ಕೆ ಇಳಿದಿದೆ,

نَزَلَ بِهِ الرُّوحُ الْأَمِينُ ﴿١٩٣﴾
عَلَىٰ قَلْبِكَ لِتَكُونَ مِنَ الْمُنذِرِينَ ﴿١٩٤﴾

195. ಇದು ಸುಸ್ಪಷ್ಟ ಅರಬೀ ಭಾಷೆಯಲ್ಲಿದೆ.

بِلِسَانٍ عَرَبِيٍّ مُّبِينٍ ﴿١٩٥﴾

196. ಮತ್ತು ಗತ ಜನಾಂಗಗಳ ಗ್ರಂಥಗಳಲ್ಲೂ ಇದು ಇದೆ.[18]

وَإِنَّهُ لَفِي زُبُرِ الْأَوَّلِينَ ﴿١٩٦﴾

197. ಇದನ್ನು ಬನೀಇಸ್ರಾಈಲರ ವಿದ್ವಾಂಸರು ತಿಳಿದಿರುವುದು ಇವರಿಗೆ (ಮಕ್ಕಾ ವಾಸಿಗಳಿಗೆ) ಒಂದು ನಿದರ್ಶನವಲ್ಲವೇ?[19]

أَوَلَمْ يَكُن لَّهُمْ آيَةً أَن يَعْلَمَهُ عُلَمَاءُ بَنِي إِسْرَائِيلَ ﴿١٩٧﴾

198. (ಆದರೆ ಇವರ ಹಟಮಾರಿತನವು ಯಾವ ಮಟ್ಟಕ್ಕೇರಿದೆಯೆಂದರೆ) ನಾವು ಇದನ್ನು ಓರ್ವ ಅರಬೇತರನ ಮೇಲೆ ಅವತೀರ್ಣಗೊಳಿಸಿ ಬಿಡುತ್ತಿದ್ದರೆ,

وَلَوْ نَزَّلْنَاهُ عَلَىٰ بَعْضِ الْأَعْجَمِينَ ﴿١٩٨﴾

199. ಹಾಗೂ ಅವನು ಇದನ್ನು (ಶುದ್ಧ ಅರಬೀ ಭಾಷೆಯ ಈ ವಾಣಿಯನ್ನು) ಓದಿ ಹೇಳುತ್ತಿದ್ದರೆ ಆಗಲೂ ಇವರು ನಂಬುತ್ತಿರಲಿಲ್ಲ.[20]

فَقَرَأَهُ عَلَيْهِم مَّا كَانُوا بِهِ مُؤْمِنِينَ ﴿١٩٩﴾

---

ಮೋಡವೊಂದನ್ನು ಕಳುಹಿಸಿದನು. ಯಾತನೆಯ ವರ್ಷವು ಅವರನ್ನು ಸಂಪೂರ್ಣ ನಾಶಪಡಿಸಿ ಬಿಡುವವರೆಗೂ ಪ್ರಸ್ತುತ ಮೋಡವು ಕೊಡೆಯಂತೆ ಅವರ ಮೇಲೆ ಆಚ್ಛಾದಿಸಿಕೊಂಡಿತ್ತು. ಹ. ಶುಐಬ್(ಅ) ಮದಿಯನ್ ಜನಾಂಗದ ಜತೆಗೆ ಐಕಃದವರ ಕಡೆಗೂ ಕಳುಹಿಸಲ್ಪಟ್ಟಿದ್ದರು ಎಂಬುದು ಇಲ್ಲಿ ಗಮನಾರ್ಹ. ಎರಡೂ ಜನಾಂಗಗಳ ಮೇಲೆ ವಿಭಿನ್ನ ರೀತಿಯ ಯಾತನೆ ಎರಗಿತು.

16. ಅರ್ಥಾತ್- ಯಾವುದರ ಸೂಕ್ತಗಳನ್ನು ನಿಮಗೆ ಓದಿ ಕೇಳಿಸಲಾಗುತ್ತಿದೆಯೋ ಆ ಕುರ್‌ಆನ್.

17. ಅರ್ಥಾತ್- ಜಿಬ್‌ರೀಲ್(ಅ).

18. ಅರ್ಥಾತ್- ಇದೇ ಪ್ರಸ್ತಾಪ, ದಿವ್ಯ ಸಂದೇಶ ಮತ್ತು ದೈವಿಕ ಬೋಧನೆಗಳು ಪೂರ್ವದ ದೈವಿಕ ಗ್ರಂಥಗಳಲ್ಲೂ ಇವೆ.

19. ಅರ್ಥಾತ್- ಕುರ್‌ಆನಿನಲ್ಲಿ ನೀಡಲಾಗಿರುವಂತಹ ಬೋಧನೆಗಳು ಸಾಕ್ಷಾತ್ ಪೂರ್ವ ಗ್ರಂಥಗಳಲ್ಲಿ ನೀಡಲಾಗಿರುವ ಬೋಧನೆಗಳೇ ಆಗಿವೆ ಎಂಬುದನ್ನು ಬನೀಇಸ್ರಾಈಲ್‌ನ ವಿದ್ವಾಂಸರೂ ಬಲ್ಲರು. ಪೂರ್ವಗ್ರಂಥಗಳ ಬೋಧನೆಗಳು ಅದಕ್ಕಿಂತ ಭಿನ್ನವಾಗಿದ್ದುವು ಎಂದು ಅವರು ಹೇಳುವಂತಿಲ್ಲ.

20. ಅರ್ಥಾತ್- ಸತ್ಯದ ವಾಹಕರ ಹೃದಯಗಳಂತೆ ಮನಸ್ಸಿನ ಸಂತೃಪ್ತಿ ಮತ್ತು ಹೃದಯದ ಗುಣೌಷಧವಾಗಿ ಅವರ ಹೃದಯದಲ್ಲಿ

| | |
|---|---|
| 200. ಹಾಗೆಯೇ ನಾವು ಇದನ್ನು (ಈ ಬೋಧನೆಯನ್ನು) ಅಪರಾಧಿಗಳ ಹೃದಯಗಳಿಂದ ಹಾಯಿಸಿದ್ದೇವೆ. | كَذَٰلِكَ سَلَكْنَاهُ فِي قُلُوبِ الْمُجْرِمِينَ ٢٠٠ |
| 201. ವೇದನಾತ್ಮಕ ಯಾತನೆಯನ್ನು ಕಂಡುಕೊಳ್ಳುವ ವರೆಗೂ ಅವರು ಇದರಲ್ಲಿ ವಿಶ್ವಾಸವಿರಿಸಲಾರರು. | لَا يُؤْمِنُونَ بِهِ حَتَّىٰ يَرَوُا الْعَذَابَ الْأَلِيمَ ٢٠١ |
| 202. ಅದು ಅವರಿಗೆ ಅರಿವಿಲ್ಲದಂತೆ ಅವರ ಮೇಲೆ ಬಂದೆರಗುವಾಗ- | فَيَأْتِيَهُم بَغْتَةً وَهُمْ لَا يَشْعُرُونَ ٢٠٢ |
| 203. ಅವರು, "ನಮಗೀಗ ಏನಾದರೂ ಕಾಲಾವಕಾಶ ಸಿಗಬಹುದೇ?" ಎಂದು ಕೇಳುವರು. | فَيَقُولُوا هَلْ نَحْنُ مُنظَرُونَ ٢٠٣ |
| 204. ಹಾಗಾದರೆ ಇವರು ನಮ್ಮ ಯಾತನೆಗಾಗಿ ತವಕ ಪಡುತ್ತಿರುವರೇ? | أَفَبِعَذَابِنَا يَسْتَعْجِلُونَ ٢٠٤ |
| 205. ಇವರಿಗೆ ನಾವು ವರ್ಷಗಟ್ಟಲೆ ಸುಖಭೋಗಗಳಲ್ಲಿರಲು ಕಾಲಾವಕಾಶ ಕೊಟ್ಟರೂ- | أَفَرَأَيْتَ إِن مَّتَّعْنَاهُمْ سِنِينَ ٢٠٥ |
| 206. ಅನಂತರ ಇವರಿಗೆ ಎಚ್ಚರಿಕೆ ಕೊಡಲಾಗುತ್ತಿರುವ ವಸ್ತುವೇ ಇವರ ಮೇಲೆ ಬಂದೆರಗಿ ಬಿಟ್ಟರೆ- | ثُمَّ جَاءَهُم مَّا كَانُوا يُوعَدُونَ ٢٠٦ |
| 207. ಇವರಿಗೆ ಒದಗಿರುವ ಜೀವನ ಸಾಧನಗಳೆಲ್ಲ ಯಾವ ಪ್ರಯೋಜನಕ್ಕೆ ಬರುವವೆಂದು ನೀವು ವಿವೇಚಿಸಿದಿರಾ? | مَا أَغْنَىٰ عَنْهُم مَّا كَانُوا يُمَتَّعُونَ ٢٠٧ |
| 208-209. (ನೋಡಿರಿ) ನಾವು ಎಂದೂ ಯಾವ ನಾಡನ್ನೂ ಅದಕ್ಕೆ ಎಚ್ಚರಿಕೆ ಕೊಡುವ ಉದ್ಬೋಧಕರಿಲ್ಲದೆ ನಾಶಗೊಳಿಸಲಿಲ್ಲ ಮತ್ತು ನಾವು ಅಕ್ರಮಿಗಳಾಗಿರಲಿಲ್ಲ. | وَمَا أَهْلَكْنَا مِن قَرْيَةٍ إِلَّا لَهَا مُنذِرُونَ ٢٠٨ ذِكْرَىٰ وَمَا كُنَّا ظَالِمِينَ ٢٠٩ |
| 210. ಇದನ್ನು (ಈ ಸುಸ್ಪಷ್ಟ ಗ್ರಂಥವನ್ನು) ಶೈತಾನರು ತಂದಿಳಿಸಲಿಲ್ಲ. | وَمَا تَنَزَّلَتْ بِهِ الشَّيَاطِينُ ٢١٠ |
| 211. ಈ ಕಾರ್ಯ ಅವರಿಗೆ ಶೋಭಿಸುವುದೂ ಇಲ್ಲ ಮತ್ತು ಅವರಿಗೆ ಇದರ ಸಾಮರ್ಥ್ಯವೂ ಇಲ್ಲ. | وَمَا يَنبَغِي لَهُمْ وَمَا يَسْتَطِيعُونَ ٢١١ |
| 212. ಅವರಂತು ಇದನ್ನು ಆಲಿಸುವುದರಿಂದಲೂ ದೂರವಿರಿಸಲ್ಪಟ್ಟಿರುತ್ತಾರೆ.[21] | إِنَّهُمْ عَنِ السَّمْعِ لَمَعْزُولُونَ ٢١٢ |

ಇಳಿಯುವುದಿಲ್ಲ. ಅವರು ಬೇಗೆಯಿಂದ ಬೆಂದು ಹೋಗುವಂತೆ ಕಾದ ಕಬ್ಬಿಣದ ಸಲಾಕೆಯ ರೂಪದಲ್ಲಿ ಅದು ಅವರ ಹೃದಯದಿಂದ ಹಾದು ಹೋಗುತ್ತದೆ. ಅವರು ಅದರ ವಿಷಯಗಳ ಬಗ್ಗೆ ಪರ್ಯಾಲೋಚನೆ ನಡೆಸುವ ಬದಲು ಅದರ ನಿರಾಕರಣೆಗಾಗಿ ಅಸ್ತ್ರಗಳನ್ನು ಹುಡುಕತೊಡಗುತ್ತಾರೆ.

21. ಅರ್ಥಾತ್- ಈ ಪವಿತ್ರ ಕುರ್‌ಆನ್ ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಳ್ಳುತ್ತಿದ್ದಾಗ ಶೈತಾನರು ಅದನ್ನು ಆಲಿಸುವಂತೆಯೂ

213. ಆದುದರಿಂದ ಸಂದೇಶವಾಹಕರೇ, ಅಲ್ಲಾಹನೊಂದಿಗೆ ಇತರ ಯಾವ ಆರಾಧ್ಯನನ್ನೂ ಪ್ರಾರ್ಥಿಸಬೇಡಿರಿ. ಅನ್ಯಥಾ ನೀವು ಶಿಕ್ಷೆ ಹೊಂದುವವರಲ್ಲಾಗುವಿರಿ.

فَلَا تَدْعُ مَعَ اللّٰهِ اِلٰهًا اٰخَرَ فَتَكُوْنَ مِنَ الْمُعَذَّبِيْنَ ﴿۲۱۳﴾

214. ನಿಮ್ಮ ಅತ್ಯಂತ ನಿಕಟ ಸಂಬಂಧಿಕರಿಗೆ ಎಚ್ಚರಿಕೆ ನೀಡಿರಿ.

وَاَنْذِرْ عَشِيْرَتَكَ الْاَقْرَبِيْنَ ﴿۲۱۴﴾

215. ಸತ್ಯವಿಶ್ವಾಸಿಗಳ ಪೈಕಿ ನಿಮ್ಮನ್ನು ಅನುಸರಿಸುವವರೊಂದಿಗೆ ಸೌಜನ್ಯದಿಂದ ವರ್ತಿಸಿರಿ.

وَاخْفِضْ جَنَاحَكَ لِمَنِ اتَّبَعَكَ مِنَ الْمُؤْمِنِيْنَ ﴿۲۱۵﴾

216. ಆದರೆ ಅವರು ನಿಮ್ಮ ಆಜ್ಞೋಲ್ಲಂಘನೆ ಮಾಡಿದರೆ, ನೀವು ಮಾಡುವ ಕಾರ್ಯಗಳಿಂದ ನಾನು ಹೊಣೆಮುಕ್ತನಾಗಿದ್ದೇನೆಂದು ಹೇಳಿ ಬಿಡಿರಿ.

فَاِنْ عَصَوْكَ فَقُلْ اِنِّيْ بَرِيْٓءٌ مِّمَّا تَعْمَلُوْنَ ﴿۲۱۶﴾

217. ಮತ್ತು ಆ ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುವವನ ಮೇಲೆ ಭರವಸೆಯನ್ನಿಡಿರಿ-

وَتَوَكَّلْ عَلَى الْعَزِيْزِ الرَّحِيْمِ ﴿۲۱۷﴾

218. ನೀವು ಏಳುವಾಗ ಅವನು ನಿಮ್ಮನ್ನು ನೋಡುತ್ತಿರುತ್ತಾನೆ[22]-

الَّذِيْ يَرٰىكَ حِيْنَ تَقُوْمُ ﴿۲۱۸﴾

219. ಮತ್ತು ಸಾಷ್ಟಾಂಗವೆರಗುವವರ ಮಧ್ಯೆ ನಿಮ್ಮ ಚಲನವಲನಗಳ ಮೇಲೆ ಕಣ್ಣಿಟ್ಟಿರುತ್ತಾನೆ.

وَتَقَلُّبَكَ فِي السّٰجِدِيْنَ ﴿۲۱۹﴾

220. ನಿಶ್ಚಯವಾಗಿಯೂ ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

اِنَّهٗ هُوَ السَّمِيْعُ الْعَلِيْمُ ﴿۲۲۰﴾

221. ಜನರೇ, ಶೈತಾನರು ಯಾರ ಮೇಲೆ ಇಳಿಯುತ್ತಾರೆಂದು ನಾನು ನಿಮಗೆ ಹೇಳಲೇ?

هَلْ اُنَبِّئُكُمْ عَلٰى مَنْ تَنَزَّلُ الشَّيٰطِيْنُ ﴿۲۲۱﴾

222. ಅವರು ಪ್ರತಿಯೊಬ್ಬ ಸುಳ್ಳುಗಾರ ಪಾಪಿಯ ಮೇಲೆ ಇಳಿಯುತ್ತಾರೆ-

تَنَزَّلُ عَلٰى كُلِّ اَفَّاكٍ اَثِيْمٍ ﴿۲۲۲﴾

223. ವದಂತಿಗಳನ್ನು ಕಿವಿಗೆ ತುಂಬುತ್ತಾರೆ ಮತ್ತು ಅವರಲ್ಲಿ ಹೆಚ್ಚಿನವರು ಸುಳ್ಳುಗಾರರಾಗಿರುತ್ತಾರೆ.[23]

يُّلْقُوْنَ السَّمْعَ وَاَكْثَرُهُمْ كٰذِبُوْنَ ﴿۲۲۳﴾

---

ಇರಲಿಲ್ಲ. ಆದ್ದರಿಂದ ಅವರ ಮೇಲೆ ಏನು ಅವತೀರ್ಣಗೊಳ್ಳುತ್ತದೆ ಎಂದು ತಿಳಿಯುವ ಪ್ರಶ್ನೆ ದೂರವೇ ಉಳಿಯಿತು.

22. ಏಳುವುದೆಂದರೆ ರಾತ್ರಿ ನಮಾಝ್‌ಗಾಗಿ ಏಳುವುದೂ ಆಗಿರಬಹುದು. ಹಾಗೆಯೇ ಪ್ರವಾದಿತ್ವದ ಹೊಣೆಗಾರಿಕೆಗಳನ್ನು ಈಡೇರಿಸುವುದಕ್ಕಾಗಿ ಏಳುವುದೂ ಆಗಿರಬಹುದು.

23. ಪ್ರವಾದಿವರ್ಯರನ್ನು(ಸ) ಮಾಟಗಾರ ಎಂದು ಕರೆಯುತ್ತಿದ್ದವರ ಆಕ್ಷೇಪಕ್ಕೆ ಈ ಮೂಲಕ ಉತ್ತರಿಸಲಾಗಿದೆ.

224. ಇನ್ನು ಕವಿಗಳು[24]- ಅವರ ಹಿಂದೆ ದಾರಿಗೆಟ್ಟವರು ನಡೆಯುತ್ತಿರುತ್ತಾರೆ.

وَالشُّعَرَآءُ يَتَّبِعُهُمُ الْغَاوٗنَ ﴿٢٢٤﴾

225. ಅವರು ಪ್ರತಿಯೊಂದು ಕಣಿವೆಯಲ್ಲಿ ಅಲೆದಾಡುವುದನ್ನು ನೀವು ಕಾಣುತ್ತಿಲ್ಲವೇ?

اَلَمْ تَرَ اَنَّهُمْ فِىْ كُلِّ وَادٍ يَّهِيْمُوْنَ ﴿٢٢٥﴾

226. ಮತ್ತು ಅವರು ತಾವು ಮಾಡದಿದ್ದುದನ್ನು ಆಡುತ್ತಾರೆ-

وَاَنَّهُمْ يَقُوْلُوْنَ مَا لَا يَفْعَلُوْنَ ﴿٢٢٦﴾

227. ಸತ್ಯವಿಶ್ವಾಸವನ್ನು ಸ್ವೀಕರಿಸಿ, ಸತ್ಕರ್ಮಗಳನ್ನು ಮಾಡುತ್ತ ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುತ್ತ, ತಮ್ಮ ಮೇಲೆ ಅಕ್ರಮವಾದಾಗ ಮಾತ್ರ ಅಷ್ಟೇ ಪ್ರತೀಕಾರ ತೀರಿಸುವವರು ಇದಕ್ಕೆ ಹೊರತಾಗಿದ್ದಾರೆ.[25] ಅಕ್ರಮವೆಸಗುವವರಿಗೆ ಅವರು ಯಾವ ಪರಿಣಾಮಕ್ಕೊಳಗಾಗಲಿದ್ದಾರೆಂದು ಸದ್ಯದಲ್ಲೇ ತಿಳಿದು ಬರುವುದು.[26]

اِلَّا الَّذِيْنَ اٰمَنُوْا وَعَمِلُوا الصّٰلِحٰتِ وَذَكَرُوا اللّٰهَ كَثِيْرًا وَّانْتَصَرُوْا مِنْۢ بَعْدِ مَا ظُلِمُوْا ؕ وَسَيَعْلَمُ الَّذِيْنَ ظَلَمُوْۤا اَىَّ مُنْقَلَبٍ يَّنْقَلِبُوْنَ ﴿٢٢٧﴾

---

24. ಇದು ಪ್ರವಾದಿವರ್ಯರನ್ನು(ಸ) 'ಕವಿ' ಎಂದು ಆಕ್ಷೇಪಿಸುತ್ತಿದ್ದವರಿಗೆ ನೀಡಲಾದ ಉತ್ತರವಾಗಿದೆ.

25. ಇಲ್ಲಿ ಕವಿಗಳ ಕುರಿತು ಮಾಡಲಾದ ಸಾರ್ವತ್ರಿಕ ಖಂಡನೆಯ ನಂತರ ನಾಲ್ಕು ವಿಶೇಷತೆಗಳನ್ನು ಹೊಂದಿರುವ ಕವಿಗಳನ್ನು ಅದರಿಂದ ಹೊರತುಪಡಿಸಲಾಗಿದೆ. ಮೊದಲನೆಯದಾಗಿ ಅವರು ಸತ್ಯವಿಶ್ವಾಸಿಯಾಗಿರಬೇಕು, ಎರಡನೆಯದಾಗಿ ತಮ್ಮ ವ್ಯಾವಹಾರಿಕ ಜೀವನದಲ್ಲಿ ಸಚ್ಚರಿತರಾಗಿರಬೇಕು, ಮೂರನೆಯದಾಗಿ ಅಲ್ಲಾಹನನ್ನು ಯಥೇಚ್ಛ ಸ್ಮರಿಸುವವರಾಗಿರಬೇಕು, ನಾಲ್ಕನೆಯದಾಗಿ ವೈಯಕ್ತಿಕ ಲಾಭಕ್ಕಾಗಿ ಅವರು ಯಾರನ್ನೂ ನಿಂದಿಸುವವರಾಗಿರಬಾರದು. ಮಾತ್ರವಲ್ಲ ಅಕ್ರಮಿಗಳ ವಿರುದ್ಧ ಸತ್ಯದ ಪರ ವಹಿಸುವ ಅವಶ್ಯಕತೆ ಇದ್ದರೆ ವೀರ ಕಲಿಗಳು ಬಿಲ್ಲು ಮತ್ತು ಖಡ್ಗವನ್ನು ಉಪಯೋಗಿಸುವಂತೆ ತಮ್ಮ ನಾಲಗೆಯನ್ನು ಉಪಯೋಗಿಸುವವರಾಗಿರಬೇಕು.

26. ಅಕ್ರಮವೆಸಗುವವರೆಂದರೆ ಇಲ್ಲಿ ಸತ್ಯದ ಪರಾಜಯಕ್ಕಾಗಿ ಹಟಸಾಧನೆಯ ಮಾರ್ಗ ಅನುಸರಿಸುವವರು ಮತ್ತು ಪ್ರವಾದಿವರ್ಯರ(ಸ) ಮೇಲೆ ಕವಿ, ಜಾದೂಗಾರ, ಮಾಟಗಾರ, ಹುಚ್ಚ ಮುಂತಾದ ಆರೋಪ ಹೊರಿಸುವ ಮೂಲಕ ಅಜ್ಞಾನದಲ್ಲಿರುವವರು ಅವರ ಸಂದೇಶದ ಬಗ್ಗೆ ಶಂಕೆ ತಾಳಿ ಅವರ ಬೋಧನೆಗಳಿಂದ ದೂರ ಸರಿಯಬೇಕೆಂದು ಬಯಸುವವರು.







# 27. ಅನ್ನಮ್ಲ್

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ತಾ ಸೀನ್. ಇವು ಕುರ್‌ಆನ್ ಮತ್ತು ಸುವ್ಯಕ್ತ ಗ್ರಂಥದ ಸೂಕ್ತಗಳು.[1]

طٰسٓ ۚ تِلْكَ اٰيٰتُ الْقُرْاٰنِ وَكِتَابٍ مُّبِيْنٍ ①

2-3. (ಇದು) ಮಾರ್ಗದರ್ಶನ ಮತ್ತು ಸುವಾರ್ತೆಯಾಗಿದೆ- ನಮಾಝನ್ನು ಸಂಸ್ಥಾಪಿಸುವ ಹಾಗೂ ಝಕಾತ್ ಕೊಡುವ ಸತ್ಯವಿಶ್ವಾಸಿಗಳಿಗೆ; ಮತ್ತು ಅವರು ಪರಲೋಕದ ಮೇಲೆ ಸಂಪೂರ್ಣ ವಿಶ್ವಾಸ ವನ್ನಿರಿಸುವವರಾಗಿರುತ್ತಾರೆ.

هُدًى وَّبُشْرٰى لِلْمُؤْمِنِيْنَ ② الَّذِيْنَ يُقِيْمُوْنَ الصَّلٰوةَ وَيُؤْتُوْنَ الزَّكٰوةَ وَهُمْ بِالْاٰخِرَةِ هُمْ يُوْقِنُوْنَ ③

4. ವಾಸ್ತವದಲ್ಲಿ ನಾವು ಪರಲೋಕದ ಮೇಲೆ ವಿಶ್ವಾಸವಿರಿಸದವರಿಗೆ ಅವರ ದುಷ್ಕೃತ್ಯಗಳನ್ನು ಮನೋಹರವಾಗಿಸಿ ಬಿಟ್ಟಿದ್ದೇವೆ. ಆದುದ ರಿಂದ ಅವರು ದಾರಿ ತಪ್ಪಿ ಅಲೆದಾಡುತ್ತಾರೆ.

اِنَّ الَّذِيْنَ لَا يُؤْمِنُوْنَ بِالْاٰخِرَةِ زَيَّنَّا لَهُمْ اَعْمَالَهُمْ فَهُمْ يَعْمَهُوْنَ ④

5. ಇವರಿಗಾಗಿ ಅತ್ಯಂತ ಕೆಟ್ಟ ಯಾತನೆ ಇದೆ ಮತ್ತು ಇವರೇ ಪರಲೋಕದಲ್ಲಿ ಅತ್ಯಧಿಕ ನಷ್ಟಕ್ಕೆ ಒಳಗಾಗುವವರು.

اُولٰٓئِكَ الَّذِيْنَ لَهُمْ سُوْٓءُ الْعَذَابِ وَهُمْ فِي الْاٰخِرَةِ هُمُ الْاَخْسَرُوْنَ ⑤

6. (ಪೈಗಂಬರರೇ) ನಿಶ್ಚಯವಾಗಿಯೂ ನೀವು ಈ ಕುರ್‌ಆನನ್ನು ಓರ್ವ ಧೀಮಂತನೂ ಸರ್ವಜ್ಞನೂ ಆಗಿರುವವನ ಕಡೆಯಿಂದ ಪಡೆಯುತ್ತಿರುವಿರಿ.

وَاِنَّكَ لَتُلَقَّى الْقُرْاٰنَ مِنْ لَّدُنْ حَكِيْمٍ عَلِيْمٍ ⑥

7. ಮೂಸಾರು ತಮ್ಮ ಮನೆಯವರೊಡನೆ, "ನನಗೆ ಒಂದು ಬೆಂಕಿ ಕಂಡಿದೆ. ನಾನು ಈಗಲೇ ಅಲ್ಲಿಂದೇನಾದರೂ ಸುದ್ದಿ ತರುತ್ತೇನೆ. ಇಲ್ಲವೇ ನೀವು ಚಳಿ ಕಾಯಿಸಿಕೊಳ್ಳುವಂತಾಗಲು ಕೆಂಡವನ್ನಾದರೂ ಹೆಕ್ಕಿ ತರುತ್ತೇನೆ" ಎಂದು ಹೇಳಿದ ಸಂದರ್ಭ(ವನ್ನು ಇವರಿಗೆ ತಿಳಿಸಿರಿ).

اِذْ قَالَ مُوْسٰى لِاَهْلِهٖٓ اِنِّيْٓ اٰنَسْتُ نَارًا ۭ سَاٰتِيْكُمْ مِّنْهَا بِخَبَرٍ اَوْ اٰتِيْكُمْ بِشِهَابٍ قَبَسٍ لَّعَلَّكُمْ تَصْطَلُوْنَ ⑦

1. ಅರ್ಥಾತ್- ತನ್ನ ಬೋಧನೆಗಳನ್ನು ಮತ್ತು ತನ್ನ ಆದೇಶ-ನಿರ್ದೇಶಗಳನ್ನು ಅತ್ಯಂತ ಸ್ಪಷ್ಟವಾಗಿ ಸಾರುವ ಗ್ರಂಥದ ಸೂಕ್ತಗಳು.

8. ಅಲ್ಲಿ ತಲಪಿದಾಗ ಹೀಗೆ ಕರೆ ಕೇಳಿಸಿತು, "ಈ ಬೆಂಕಿಯಲ್ಲಿ ಇರುವವನು ಮತ್ತು ಇದರ ಪರಿಸರದಲ್ಲಿರುವವನು ಸುಮಂಗಲನು ಮತ್ತು ಸರ್ವಲೋಕಗಳ ಪಾಲಕ ಪ್ರಭುವಾಗಿರುವ ಅಲ್ಲಾಹನು ಪರಮ ಪಾವನನು.

فَلَمَّا جَآءَهَا نُودِيَ أَنْۢ بُورِكَ مَن فِي ٱلنَّارِ وَمَنْ حَوْلَهَا وَسُبْحَٰنَ ٱللَّهِ رَبِّ ٱلْعَٰلَمِينَ ٨

9. ಮೂಸಾ, ಇದು ನಾನು! ಮಹಾ ಪ್ರಬಲನೂ ಧೀಮಂತನೂ ಆಗಿರುವ ಅಲ್ಲಾಹ್,

يَٰمُوسَىٰٓ إِنَّهُۥٓ أَنَا ٱللَّهُ ٱلْعَزِيزُ ٱلْحَكِيمُ ٩

10. ನಿಮ್ಮ ಲಾಠಿಯನ್ನು ಎಸೆಯಿರಿ." ಲಾಠಿಯು ಹಾವಿನಂತೆ ತೆವಳುತ್ತಿರುವುದನ್ನು ಕಂಡೊಡನೆ ಮೂಸಾ ಬೆನ್ನು ತಿರುಗಿಸಿ ಓಟಕಿತ್ತರು ಮತ್ತು ಹಿಂದೆ ತಿರುಗಿಯೂ ನೋಡಲಿಲ್ಲ. "ಮೂಸಾ, ಹೆದರಬೇಡಿರಿ. ನನ್ನ ಸನ್ನಿಧಿಯಲ್ಲಿ ಸಂದೇಶವಾಹಕರು ಅಂಜುವುದಿಲ್ಲ.

وَأَلْقِ عَصَاكَ فَلَمَّا رَءَاهَا تَهْتَزُّ كَأَنَّهَا جَآنٌّ وَلَّىٰ مُدْبِرًا وَلَمْ يُعَقِّبْ يَٰمُوسَىٰ لَا تَخَفْ إِنِّي لَا يَخَافُ لَدَيَّ ٱلْمُرْسَلُونَ ١٠

11. ಆದರೆ ಅಪರಾಧ ಮಾಡಿದವನ ಹೊರತು. ಇನ್ನು ಅವನು ಕೆಡುಕಿನ ಬಳಿಕ (ತನ್ನ ಕರ್ಮವನ್ನು) ಒಳಿತಾಗಿ ಮಾರ್ಪಡಿಸಿಕೊಂಡರೆ ನಾನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತೇನೆ.

إِلَّا مَن ظَلَمَ ثُمَّ بَدَّلَ حُسْنًۢا بَعْدَ سُوٓءٍ فَإِنِّي غَفُورٌ رَّحِيمٌ ١١

12. ನಿಮ್ಮ ಕೈಯನ್ನು ನಿಮ್ಮ ಜೇಬಿನಲ್ಲಿ ಹಾಕಿರಿ. ಅದು ಯಾವ ತೊಂದರೆಯೂ ಇಲ್ಲದೆ ಪ್ರಕಾಶಿಸುತ್ತ ಹೊರ ಬರುವುದು. ಇವು ಫಿರ್‌ಔನ್ ಮತ್ತು ಅವನ ಜನಾಂಗದ ಕಡೆಗೆ (ಕೊಂಡು ಹೋಗಲಿಕ್ಕಾಗಿರುವ) ಒಂಭತ್ತು ನಿದರ್ಶನಗಳಲ್ಲಿ (ಎರಡು) ಆಗಿರುತ್ತವೆ. ಅವರು ಮಹಾ ದುಷ್ಕರ್ಮಿಗಳು."

وَأَدْخِلْ يَدَكَ فِي جَيْبِكَ تَخْرُجْ بَيْضَآءَ مِنْ غَيْرِ سُوٓءٍ فِي تِسْعِ ءَايَٰتٍ إِلَىٰ فِرْعَوْنَ وَقَوْمِهِۦٓ إِنَّهُمْ كَانُوا۟ قَوْمًا فَٰسِقِينَ ١٢

13. ನಮ್ಮ ಸುವ್ಯಕ್ತ ನಿದರ್ಶನಗಳು ಅವರ ಮುಂದೆ ಬಂದಾಗ ಅವರು- ಇದು ಸ್ಪಷ್ಟ ಜಾದುವೆಂದು ಬಿಟ್ಟರು.

فَلَمَّا جَآءَتْهُمْ ءَايَٰتُنَا مُبْصِرَةً قَالُوا۟ هَٰذَا سِحْرٌ مُّبِينٌ ١٣

14. ಅವರು ಸಂಪೂರ್ಣ ಅಕ್ರಮ ಹಾಗೂ ಅಹಂಕಾರದ ಮಾರ್ಗದಿಂದ ಆ ನಿದರ್ಶನಗಳನ್ನು ನಿಷೇಧಿಸಿದರು. ವಸ್ತುತಃ ಅವರ ಮನಸ್ಸುಗಳು ಅವನ್ನು ಒಪ್ಪಿಕೊಂಡಿದ್ದುವು. ಆ ಕಿಡಿಗೇಡಿಗಳ ಪರಿಣಾಮವೇನಾಯಿತೆಂಬುದನ್ನು ನೋಡಿಕೊಳ್ಳಿರಿ.

وَجَحَدُوا۟ بِهَا وَٱسْتَيْقَنَتْهَآ أَنفُسُهُمْ ظُلْمًا وَعُلُوًّا فَٱنظُرْ كَيْفَ كَانَ عَٰقِبَةُ ٱلْمُفْسِدِينَ ١٤

15. (ಇನ್ನೊಂದೆಡೆ) ನಾವು ದಾವೂದ್ ಮತ್ತು ಸುಲೈಮಾನ್‌ರಿಗೆ ಜ್ಞಾನವಿತ್ತೆವು. ಅವರು, "ನಮಗೆ ಅನೇಕ ಸತ್ಯವಿಶ್ವಾಸಿ ದಾಸರ ಮೇಲೆ ಶ್ರೇಷ್ಠತೆಯನ್ನು ಪ್ರದಾನ ಮಾಡಿರುವ ಅಲ್ಲಾಹನಿಗೆ ಕೃತಜ್ಞತೆಗಳು" ಎಂದರು.

وَلَقَدْ ءَاتَيْنَا دَاوُۥدَ وَسُلَيْمَٰنَ عِلْمًا وَقَالَا ٱلْحَمْدُ لِلَّهِ ٱلَّذِي فَضَّلَنَا عَلَىٰ كَثِيرٍ مِّنْ عِبَادِهِ ٱلْمُؤْمِنِينَ ١٥

16. ಸುಲೈಮಾನರು ದಾವೂದರ ಉತ್ತರಾಧಿಕಾರಿಯಾದರು ಮತ್ತು ಅವರು, "ಜನರೇ, ನಮಗೆ ಪಕ್ಷಿಗಳ ಮಾತುಗಳನ್ನು ಕಲಿಸಿಕೊಡಲಾಗಿದೆ ಮತ್ತು ನಮಗೆ ಎಲ್ಲ ತರದ ವಸ್ತುಗಳನ್ನು ಕೊಡಲಾಗಿದೆ.[2] ನಿಶ್ಚಯವಾಗಿಯೂ ಇದು(ಅಲ್ಲಾಹನ) ಸುಸ್ಪಷ್ಟ ಅನುಗ್ರಹವಾಗಿದೆ" ಎಂದರು.

وَوَرِثَ سُلَيْمٰنُ دَاوٗدَ وَقَالَ يٰۤاَيُّهَا النَّاسُ عُلِّمْنَا مَنْطِقَ الطَّيْرِ وَاُوْتِيْنَا مِنْ كُلِّ شَيْءٍ ؕ اِنَّ هٰذَا لَهُوَ الْفَضْلُ الْمُبِيْنُ ﴿۱۶﴾

17. ಸುಲೈಮಾನರಿಗಾಗಿ ಯಕ್ಷರ, ಮಾನವ ಮತ್ತು ಪಕ್ಷಿಗಳ ಸೇನೆಗಳನ್ನು ಜಮಾಯಿಸಲಾಗಿತ್ತು. ಅವುಗಳನ್ನು ಸಂಪೂರ್ಣ ಶಿಸ್ತಿನೊಂದಿಗೆ ಇಡಲಾಗಿತ್ತು.

وَحُشِرَ لِسُلَيْمٰنَ جُنُوْدُهٗ مِنَ الْجِنِّ وَالْاِنْسِ وَالطَّيْرِ فَهُمْ يُوْزَعُوْنَ ﴿۱۷﴾

18. (ಒಮ್ಮೆ ಸುಲೈಮಾನರು ಈ ಸೇನೆಯ ಜೊತೆ ಪ್ರಯಾಣಿಸುತ್ತಾ) ಇವರೆಲ್ಲರೂ ಇರುವೆಗಳ ಕಣಿವೆಗೆ ತಲುಪಿದಾಗ ಒಂದು ಇರುವೆಯು, "ಇರುವೆಗಳೇ ನಿಮ್ಮ ಬಿಲಗಳೊಳಗೆ ನುಗ್ಗಿಕೊಳ್ಳಿರಿ. ಸುಲೈಮಾನರೂ ಅವರ ಸೇನೆಗಳೂ ಅರಿಯದೇ ನಿಮ್ಮನ್ನು ತುಳಿದು ಬಿಡುವಂತಾಗದಿರಲಿ" ಎಂದಿತು.

حَتّٰۤى اِذَاۤ اَتَوْا عَلٰى وَادِ النَّمْلِ ۙ قَالَتْ نَمْلَةٌ يّٰۤاَيُّهَا النَّمْلُ ادْخُلُوْا مَسٰكِنَكُمْ ۚ لَا يَحْطِمَنَّكُمْ سُلَيْمٰنُ وَجُنُوْدُهٗ ۙ وَهُمْ لَا يَشْعُرُوْنَ ﴿۱۸﴾

19. ಸುಲೈಮಾನರು ಅದರ ಈ ಮಾತಿಗೆ ಮಂದಹಾಸ ಬೀರಿ, ನಕ್ಕು ಬಿಟ್ಟರು ಮತ್ತು ಹೀಗೆಂದರು; "ನನ್ನ ಪ್ರಭೂ, ನೀನು ನನ್ನ ಮೇಲೂ ನನ್ನ ಮಾತಾಪಿತರ ಮೇಲೂ ಮಾಡಿದಂತಹ ಉಪಕಾರಕ್ಕಾಗಿ ನಾನು ಕೃತಜ್ಞತೆ ತೋರಿಸುತ್ತಿರುವಂತೆಯೂ ನೀನು ಮೆಚ್ಚುವಂತಹ ಸತ್ಕರ್ಮವೆಸಗುವಂತೆಯೂ ನನ್ನನ್ನು ನಿಯಂತ್ರಿಸಿಡು.[3] ನಿನ್ನ ಕೃಪೆಯಿಂದ ನನ್ನನ್ನು ನಿನ್ನ ಸಜ್ಜನ ದಾಸರಲ್ಲಿ ಸೇರಿಸು."

فَتَبَسَّمَ ضَاحِكًا مِّنْ قَوْلِهَا وَقَالَ رَبِّ اَوْزِعْنِيْۤ اَنْ اَشْكُرَ نِعْمَتَكَ الَّتِيْۤ اَنْعَمْتَ عَلَيَّ وَعَلٰى وَالِدَيَّ وَاَنْ اَعْمَلَ صَالِحًا تَرْضٰىهُ وَاَدْخِلْنِيْ بِرَحْمَتِكَ فِيْ عِبَادِكَ الصّٰلِحِيْنَ ﴿۱۹﴾

20. (ಇನ್ನೊಂದು ಸಂದರ್ಭದಲ್ಲಿ) ಸುಲೈಮಾನರು ಪಕ್ಷಿಗಳ ಪರಿಶೀಲನೆ ನಡೆಸಿದರು ಮತ್ತು ಹೀಗೆಂದರು, "ನನಗೆ ಆ 'ಹುದ್‌ಹುದ್' ಕಾಣುವುದಿಲ್ಲವೇಕೆ? ಅದೆಲ್ಲಾದರೂ ಕಣ್ಮರೆಯಾಗಿದೆಯೇ?

وَتَفَقَّدَ الطَّيْرَ فَقَالَ مَا لِيَ لَاۤ اَرَى الْهُدْهُدَ ۖ اَمْ كَانَ مِنَ الْغَآئِبِيْنَ ﴿۲۰﴾

---

2. ಅರ್ಥಾತ್- ಅಲ್ಲಾಹನು ದಯಪಾಲಿಸಿರುವ ಸರ್ವಸ್ವವೂ ನಮ್ಮ ಬಳಿ ಇದೆ.

3. ಅರ್ಥಾತ್- ನೀನು ದಯಪಾಲಿಸಿರುವಂತಹ ಯೋಗ್ಯತಾರ್ಹತೆಗಳು ಎಷ್ಟು ಮಹತ್ತಾದುದೆಂದರೆ, ನಾನು ಸ್ವಲ್ಪವಾದರೂ ಅಲಕ್ಷ್ಯನಾಗಿ ಬಿಟ್ಟರೆ ದಾಸ್ಯದ ಮಿತಿಯಿಂದ ಹೊರ ನಡೆದು ಬಿಡುವ ಮತ್ತು ದುರಹಂಕಾರದ ಮತ್ತಿನಲ್ಲಿ ಎಲ್ಲಿಂದೆಲ್ಲಿಗೋ ತಲಪಿ ಬಿಡುವ ಸಾಧ್ಯತೆ ಇದೆ. ಆದ್ದರಿಂದಲೇ ಓ ಪರಿಪಾಲಕನೇ! ನನ್ನನ್ನು ನಿಯಂತ್ರಣದಲ್ಲಿಡು. ಏಕೆಂದರೆ ನಾನು ಅನುಗ್ರಹಗಳಿಗೆ ಕೃತಘ್ನತೆ ತೋರುವವನಾಗುವ ಬದಲು ಕೃತಜ್ಞತಾ ಭಾವದಲ್ಲಿ ನೆಲೆನಿಲ್ಲುವವನಾಗಬೇಕು.

21. ನಾನು ಅದಕ್ಕೆ ಕಠಿಣ ಶಿಕ್ಷೆ ಕೊಡುವೆನು, ಇಲ್ಲವೇ ಅದನ್ನು ಕೊಯ್ದು ಬಿಡುವೆನು. ಅನ್ಯಥಾ ಅದು ನನ್ನ ಮುಂದೆ ಸಮರ್ಪಕವಾದ ಕಾರಣ ಕೊಡಬೇಕಾದೀತು."

لَأُعَذِّبَنَّهُ عَذَابًا شَدِيدًا أَوْ لَأَاذْبَحَنَّهُ أَوْ لَيَأْتِيَنِّي بِسُلْطَانٍ مُّبِينٍ ﴿٢١﴾

22. ಸ್ವಲ್ಪ ಹೊತ್ತಿನಲ್ಲೇ ಅದು ಬಂದು ಹೀಗೆಂದಿತು; "ನಾನು ತಮಗೆ ತಿಳಿಯದಿರುವಂತಹ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ನಾನು 'ಸಬಾ'ದಿಂದ[4] ಖಾತರಿಯಾದ ಸುದ್ದಿ ತಂದಿದ್ದೇನೆ."

فَمَكَثَ غَيْرَ بَعِيدٍ فَقَالَ أَحَطتُ بِمَا لَمْ تُحِطْ بِهِ وَجِئْتُكَ مِن سَبَإٍ بِنَبَإٍ يَقِينٍ ﴿٢٢﴾

23. "ನಾನು ಅಲ್ಲಿ ಆ ಜನಾಂಗದ ಆಡಳಿತಗಾರಳಾಗಿರುವ ಓರ್ವ ಸ್ತ್ರೀಯನ್ನು ಕಂಡೆನು. ಅವಳಿಗೆ ಸಕಲ ಸಾಧನ ಸಾಮಗ್ರಿಗಳು ಒದಗಿಸಲ್ಪಟ್ಟಿವೆ ಮತ್ತು ಅವಳ ಸಿಂಹಾಸನವು ಅತ್ಯುತ್ಕೃಷ್ಟವಾಗಿದೆ.

إِنِّي وَجَدتُّ امْرَأَةً تَمْلِكُهُمْ وَأُوتِيَتْ مِن كُلِّ شَيْءٍ وَلَهَا عَرْشٌ عَظِيمٌ ﴿٢٣﴾

24. ಅವಳೂ ಅವಳ ಜನಾಂಗವೂ ಅಲ್ಲಾಹನ ಬದಲು ಸೂರ್ಯನಿಗೆ ಸಾಷ್ಟಾಂಗ ವೆರಗುವುದನ್ನು ನಾನು ಕಂಡೆನು. ಶೈತಾನನು ಅವರ ಪಾಲಿಗೆ ಅವರ ಕರ್ಮಗಳನ್ನು ಮನೋಹರಗೊಳಿಸಿಬಿಟ್ಟನು[5] ಮತ್ತು ಅವರನ್ನು ನೇರ ಮಾರ್ಗದಿಂದ ತಡೆದು ಬಿಟ್ಟನು. ಆದುದರಿಂದ ಅವರು ಸನ್ಮಾರ್ಗವನ್ನು ಹೊಂದುವುದಿಲ್ಲ-

وَجَدتُّهَا وَقَوْمَهَا يَسْجُدُونَ لِلشَّمْسِ مِن دُونِ اللَّهِ وَزَيَّنَ لَهُمُ الشَّيْطَانُ أَعْمَالَهُمْ فَصَدَّهُمْ عَنِ السَّبِيلِ فَهُمْ لَا يَهْتَدُونَ ﴿٢٤﴾

25. ಈ ಕಾರಣದಿಂದಲೇ ಅವರು ಆಕಾಶಗಳಲ್ಲೂ ಭೂಮಿಯಲ್ಲೂ ಅಡಗಿರುವ ವಸ್ತುಗಳನ್ನು ಹೊರ ತರುವ ಮತ್ತು ನೀವು ಬಚ್ಚಿಡುವುದನ್ನೂ ವ್ಯಕ್ತಪಡಿಸುವವುಗಳನ್ನೂ ಅರಿತಿರುವ ಅಲ್ಲಾಹನಿಗೆ ಸಾಷ್ಟಾಂಗವೆರಗುವುದಿಲ್ಲ.

أَلَّا يَسْجُدُوا لِلَّهِ الَّذِي يُخْرِجُ الْخَبْءَ فِي السَّمَاوَاتِ وَالْأَرْضِ وَيَعْلَمُ مَا تُخْفُونَ وَمَا تُعْلِنُونَ ﴿٢٥﴾

26. ವಿಶ್ವಸಿಂಹಾಸನದ ಒಡೆಯನಾಗಿರುವ ಅಲ್ಲಾಹನ ಹೊರತು ಇನ್ನಾವ ಆರಾಧ್ಯನೂ ಇಲ್ಲ."

اللَّهُ لَا إِلَٰهَ إِلَّا هُوَ رَبُّ الْعَرْشِ الْعَظِيمِ ۩ ﴿٢٦﴾

السجدة

27. ಆಗ ಸುಲೈಮಾನರು ಹೀಗೆ ಹೇಳಿದರು, "ನೀನು ನಿಜ ಹೇಳಿದೆಯೋ ಅಥವಾ ಸುಳ್ಳಾಡುವವರಲ್ಲಾಗಿರುವಿಯೋ ಎಂದು ಈಗಲೇ ನಾವು ಕಂಡುಕೊಳ್ಳುತ್ತೇವೆ.

قَالَ سَنَنظُرُ أَصَدَقْتَ أَمْ كُنتَ مِنَ الْكَاذِبِينَ ﴿٢٧﴾

28. ನನ್ನ ಈ ಪತ್ರವನ್ನು ಒಯ್ದು ಅವರ ಮುಂದೆ ಹಾಕಿಬಿಡು. ಅನಂತರ ಸರಿದು ನಿಂತು ಅವರು ಹೇಗೆ ಪ್ರತಿಕ್ರಿಯಿಸುತ್ತಾರೆಂದು ನೋಡು."

اذْهَب بِّكِتَابِي هَٰذَا فَأَلْقِهْ إِلَيْهِمْ ثُمَّ تَوَلَّ عَنْهُمْ فَانظُرْ مَاذَا يَرْجِعُونَ ﴿٢٨﴾

4. 'ಸಬಾ' ದಕ್ಷಿಣ ಅರೇಬಿಯಾದ ಪ್ರಸಿದ್ಧ ವ್ಯಾಪಾರಿ ಜನಾಂಗವಾಗಿತ್ತು. ಯಮನ್‌ನ ರಾಜಧಾನಿ ಸನ್‌ಆದಿಂದ 55ಮೈಲಿಗಳ ಅಂತರದಲ್ಲಿರುವ 'ಮಾರಿಬ್' ಅದರ ರಾಜಧಾನಿಯಾಗಿತ್ತು.

5. ಇಲ್ಲಿಂದ ಸೂಕ್ತ 26ರ ತನಕದ ವಿವರಗಳು 'ಹುದ್‌ಹುದ್'ನ ಮಾತಿಗೆ ಸೇರ್ಪಡೆಯಾಗಿದೆ ಎಂದು ವಿವರಣಾ ಶೈಲಿಯಿಂದ ವ್ಯಕ್ತವಾಗುತ್ತದೆ.

29. ರಾಣಿಯು[6] ಹೀಗೆ ಹೇಳಿದಳು- "ಆಸ್ಥಾನದವರೇ, ನನ್ನ ಕಡೆಗೆ ಒಂದು ಮಹತ್ವಪೂರ್ಣ ಪತ್ರವು ಎಸೆಯಲ್ಪಟ್ಟಿದೆ.

قَالَتْ يَٰٓأَيُّهَا ٱلْمَلَؤُا۟ إِنِّىٓ أُلْقِىَ إِلَىَّ كِتَٰبٌ كَرِيمٌ ﴿٢٩﴾

30. ಅದು ಸುಲೈಮಾನರ ಕಡೆಯಿಂದ ಬಂದಿದೆ ಮತ್ತು ಅದನ್ನು ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹನ ನಾಮದಿಂದ ಆರಂಭಿಸಲಾಗಿದೆ.

إِنَّهُۥ مِن سُلَيْمَٰنَ وَإِنَّهُۥ بِسْمِ ٱللَّهِ ٱلرَّحْمَٰنِ ٱلرَّحِيمِ ﴿٣٠﴾

31. ಅದರಲ್ಲಿ, ನನ್ನ ವಿರುದ್ಧ ಬಂಡಾಯವೇಳಬೇಡಿರಿ ಮತ್ತು ಮುಸ್ಲಿಮ್[7] ಆಗಿ ನನ್ನ ಬಳಿ ಹಾಜರಾಗಿರಿ, ಎಂದಿದೆ."

أَلَّا تَعْلُوا۟ عَلَىَّ وَأْتُونِى مُسْلِمِينَ ﴿٣١﴾

32. (ಪತ್ರವನ್ನು ಓದಿ ಹೇಳಿ) ರಾಣಿಯು, "ಜನಾಂಗದ ಸರದಾರರೇ, ನನ್ನ ಈ ವಿಷಯದ ಬಗ್ಗೆ ನನಗೆ ಸಲಹೆ ಕೊಡಿರಿ. ನಾನು ಯಾವ ವಿಷಯದಲ್ಲೂ ನಿಮ್ಮನ್ನು ಬಿಟ್ಟು ತೀರ್ಮಾನ ಕೈಗೊಳ್ಳುವುದಿಲ್ಲ" ಎಂದು ಹೇಳಿದಳು.

قَالَتْ يَٰٓأَيُّهَا ٱلْمَلَؤُا۟ أَفْتُونِى فِىٓ أَمْرِى مَا كُنتُ قَاطِعَةً أَمْرًا حَتَّىٰ تَشْهَدُونِ ﴿٣٢﴾

33. ಆಗ ಅವರು, "ನಾವು ಬಲಶಾಲಿಗಳೂ ರಣಶೂರರೂ ಆಗಿರುತ್ತೇವೆ. ಮುಂದಿನ ತೀರ್ಮಾನ ನಿಮ್ಮ ಕೈಯಲ್ಲಿದೆ. ಏನಪ್ಪಣೆ ಕೊಡ ಬೇಕೆಂದು ನೀವೇ ನಿರ್ಧರಿಸಿಕೊಳ್ಳಿರಿ" ಎಂದು ಉತ್ತರ ಕೊಟ್ಟರು.

قَالُوا۟ نَحْنُ أُو۟لُوا۟ قُوَّةٍ وَأُو۟لُوا۟ بَأْسٍ شَدِيدٍ وَٱلْأَمْرُ إِلَيْكِ فَٱنظُرِى مَاذَا تَأْمُرِينَ ﴿٣٣﴾

34. ಆಗ ರಾಣಿ ಹೇಳಿದಳು, "ಅರಸರು ಒಂದು ನಾಡಿನೊಳಗೆ ನುಗ್ಗಿ ಬಂದಾಗ ಅದನ್ನು ಹಾಳುಗೆಡಹುತ್ತಾರೆ ಮತ್ತು ಅದರಲ್ಲಿರುವ ಮರ್ಯಾದಸ್ಥರನ್ನು ಅವಮಾನಗೊಳಿಸುತ್ತಾರೆ. ಅವರು ಹೀಗೆಯೇ ಮಾಡುತ್ತಾರೆ,

قَالَتْ إِنَّ ٱلْمُلُوكَ إِذَا دَخَلُوا۟ قَرْيَةً أَفْسَدُوهَا وَجَعَلُوٓا۟ أَعِزَّةَ أَهْلِهَآ أَذِلَّةً ۖ وَكَذَٰلِكَ يَفْعَلُونَ ﴿٣٤﴾

35. ನಾನು ಅವರಿಗೆ ಒಂದು ಉಡುಗೊರೆಯನ್ನು ಕಳುಹಿಸುತ್ತೇನೆ. ತರುವಾಯ ನನ್ನ ರಾಯಭಾರಿಗಳು ಯಾವ ಉತ್ತರದೊಂದಿಗೆ ಮರಳುತ್ತಾರೆಂದು ನೋಡುತ್ತೇನೆ."

وَإِنِّى مُرْسِلَةٌ إِلَيْهِم بِهَدِيَّةٍ فَنَاظِرَةٌۢ بِمَ يَرْجِعُ ٱلْمُرْسَلُونَ ﴿٣٥﴾

36. ಅವರು (ರಾಣಿಯ ದೂತರು) ಸುಲೈಮಾನರ ಬಳಿಗೆ ಬಂದಾಗ ಅವರು ಹೇಳಿದರು, "ನೀವು ಧನದ ಮೂಲಕ ನನಗೆ ಸಹಾಯ ಮಾಡಲಿಚ್ಛಿಸುತ್ತೀರಾ? ಅಲ್ಲಾಹನು ನನಗೆ ನೀಡಿರುವುದು ನಿಮಗೆ

فَلَمَّا جَآءَ سُلَيْمَٰنَ قَالَ أَتُمِدُّونَنِ بِمَالٍ فَمَآ ءَاتَىٰنِۦَ ٱللَّهُ خَيْرٌ مِّمَّآ ءَاتَىٰكُم بَلْ أَنتُم بِهَدِيَّتِكُمْ تَفْرَحُونَ ﴿٣٦﴾

6. ನಡುವಿನ ವೃತ್ತಾಂತವನ್ನು ಬಿಟ್ಟು 'ಹುದ್‌ಹುದ್' ಪತ್ರವನ್ನು ರಾಣಿಯ ಮುಂದೆ ಎಸೆದು ಬಿಟ್ಟ ಸಂದರ್ಭದ ಬಗ್ಗೆ ಪ್ರಸ್ತಾಪಿಸಲಾಗುತ್ತಿದೆ.

7. ಅರ್ಥಾತ್- ಇಸ್ಲಾಮ್ ಸ್ವೀಕರಿಸಿ ಅಥವಾ ಆಜ್ಞಾಪಾಲಕರಾಗಿ.

ಕೊಟ್ಟಿರುವುದಕ್ಕಿಂತ ಎಷ್ಟೋ ಅಧಿಕವಿದೆ. ನಿಮ್ಮ ಉಡುಗೊರೆ ನಿಮಗೇ ಭೂಷಣವಾಗಿರಲಿ.

37. (ರಾಯಭಾರಿಯೇ!) ನಿನ್ನನ್ನು ಕಳುಹಿಸಿದವರ ಕಡೆಗೆ ಮರಳು. ನಾವು ಅವರ ಮೇಲೆ ಅವರಿಂದ ಎದುರಿಸಲಾಗದಂತಹ ಸೇನೆಯನ್ನು ತರುವೆವು ಮತ್ತು ಅವರು ನಿಂದ್ಯರಾಗಿ ಹೋಗುವಂತೆ ಅವರನ್ನು ಅವಮಾನಿಸಿ ಹೊರಕ್ಕಟ್ಟುವೆವು."

ارْجِعْ إِلَيْهِمْ فَلَنَأْتِيَنَّهُمْ بِجُنُودٍ لَا
قِبَلَ لَهُمْ بِهَا وَلَنُخْرِجَنَّهُمْ مِنْهَا
أَذِلَّةً وَهُمْ صَاغِرُونَ ﴿٣٧﴾

38. ಸುಲೈಮಾನರು, "ಆಸ್ಥಾನದವರೇ, ಅವರು ಶರಣಾಗತರಾಗಿ ನನ್ನ ಮುಂದೆ ಹಾಜರಾಗುವುದ ಕ್ಕಿಂತ ಮುಂಚೆಯೇ ಅವಳ ಸಿಂಹಾ ಸನವನ್ನು ನನ್ನ ಬಳಿಗೆ ತರಬಲ್ಲವರು ನಿಮ್ಮಲ್ಲಿ ಯಾರಿದ್ದಾರೆ?" ಎಂದು ಕೇಳಿದರು.

قَالَ يَا أَيُّهَا الْمَلَؤُا أَيُّكُمْ يَأْتِينِي
بِعَرْشِهَا قَبْلَ أَنْ يَأْتُونِي مُسْلِمِينَ ﴿٣٨﴾

39. ಯಕ್ಷರ ಪೈಕಿ ಓರ್ವ ದೃಢಕಾಯನು, "ತಾವು ತಮ್ಮ ಸ್ಥಾನದಿಂದ ಏಳುವುದಕ್ಕೆ ಮುಂಚೆಯೇ ನಾನು ಅದನ್ನು ತಂದು ಹಾಜರು ಪಡಿಸುವೆನು. ನಾನು ಅದಕ್ಕೆ ಶಕ್ತನೂ ಪ್ರಾಮಾಣಿಕನೂ ಆಗಿದ್ದೇನೆ" ಎಂದು ಬಿನ್ನವಿಸಿದನು.

قَالَ عِفْرِيتٌ مِنَ الْجِنِّ أَنَا آتِيكَ
بِهِ قَبْلَ أَنْ تَقُومَ مِنْ مَقَامِكَ ۖ
وَإِنِّي عَلَيْهِ لَقَوِيٌّ أَمِينٌ ﴿٣٩﴾

40. ಗ್ರಂಥ ಜ್ಞಾನವೊಂದನ್ನು ಹೊಂದಿದವನೊಬ್ಬನು, "ತಾವು ರೆಪ್ಪೆ ಬಡಿಯುವುದಕ್ಕೆ ಮುಂಚೆ ನಾನು ಅದನ್ನು ತರುತ್ತೇನೆ" ಎಂದನು. ಆಗಲೇ ಸುಲೈಮಾನರು ಆ ಸಿಂಹಾಸನವು ತನ್ನ ಮುಂದೆ ಇಡಲ್ಪಟ್ಟಿರುವುದನ್ನು ಕಂಡಾಗ, "ನಾನು ಕೃತಜ್ಞತೆ ತೋರುತ್ತೇನೋ, ಕೃತಘ್ನನಾಗಿ ಬಿಡುತ್ತೇನೋ ಎಂದು ನನ್ನನ್ನು ಪರೀಕ್ಷಿಸಲಿಕ್ಕಾಗಿ ಇದು ನನ್ನ ಪ್ರಭುವಿನ ಅನುಗ್ರಹವಾಗಿರುತ್ತದೆ. ಕೃತಜ್ಞತೆ ತೋರುವವನ ಕೃತಜ್ಞತೆಯು ಅವನಿಗೇ ಲಾಭದಾಯಕವಾಗಿದೆ. ಯಾರಾದರೂ ಕೃತಘ್ನತೆ ತೋರಿದರೆ ನನ್ನ ಪ್ರಭು ನಿರಪೇಕ್ಷನೂ ಸ್ವಯಂ ಸನ್ಮಾನ್ಯನೂ ಆಗಿರುತ್ತಾನೆ" ಎಂದು ಉದ್ಗರಿಸಿದರು.

قَالَ الَّذِي عِنْدَهُ عِلْمٌ مِنَ الْكِتَابِ أَنَا
آتِيكَ بِهِ قَبْلَ أَنْ يَرْتَدَّ إِلَيْكَ طَرْفُكَ ۚ
فَلَمَّا رَآهُ مُسْتَقِرًّا عِنْدَهُ قَالَ هَٰذَا
مِنْ فَضْلِ رَبِّي لِيَبْلُوَنِي أَأَشْكُرُ
أَمْ أَكْفُرُ ۖ وَمَنْ شَكَرَ فَإِنَّمَا يَشْكُرُ
لِنَفْسِهِ ۖ وَمَنْ كَفَرَ فَإِنَّ رَبِّي غَنِيٌّ كَرِيمٌ ﴿٤٠﴾

41. ಸುಲೈಮಾನರು,[8] "ಅವಳಿಗೆ ತಿಳಿಯದಂತೆ ಅವಳ ಸಿಂಹಾಸನವನ್ನು ಅವಳ ಮುಂದಿರಿಸಿ ಬಿಡಿರಿ. ಅವಳು ಸರಿ ದಾರಿಗೆ ತಲಪುತ್ತಾಳೋ, ಪಥಭ್ರಷ್ಟರಲ್ಲಾಗಿದ್ದಾಳೋ ಎಂದು ನೋಡೋಣ" ಎಂದರು.

قَالَ نَكِّرُوا لَهَا عَرْشَهَا نَنْظُرْ أَتَهْتَدِي
أَمْ تَكُونُ مِنَ الَّذِينَ لَا يَهْتَدُونَ ﴿٤١﴾

42. ರಾಣಿಯು ಹಾಜರಾದಾಗ ಅವಳೊಡನೆ, "ನಿನ್ನ ಸಿಂಹಾಸನ ಹೀಗೆಯೇ ಇದೆಯೇ" ಎಂದು ಕೇಳಲಾಯಿತು. ಆಗ ಅವಳು, "ಇದು ಅದುವೇ

فَلَمَّا جَاءَتْ قِيلَ أَهَٰكَذَا عَرْشُكِ ۖ
قَالَتْ كَأَنَّهُ هُوَ ۚ وَأُوتِينَا الْعِلْمَ

8. ಸಬಾದ ರಾಣಿ, ಹ. ಸುಲೈಮಾನ್‌ರನ್ನು(ಅ) ಭೇಟಿಯಾಗಲು ಹಾಜರಾದ ಸಂದರ್ಭದ ಪ್ರಸ್ತಾಪ ಇಲ್ಲಿಂದ ಆರಂಭವಾಗುತ್ತದೆ.

ಎಂಬಂತಿದೆ. ನಾವಂತೂ ಮೊದಲೇ ತಿಳಿದುಕೊಂಡಿದ್ದೆವು ಮತ್ತು ನಾವು ಮುಸ್ಲಿಮರಾಗಿ (ಶರಣಾಗತರಾಗಿ) ಬಿಟ್ಟಿದ್ದೆವು"[9] ಎಂದಳು.

مِن قَبۡلِهَا وَكُنَّا مُسۡلِمِينَ ﴿٤٢﴾

43. ಅಲ್ಲಾಹನನ್ನು ಬಿಟ್ಟು ಅವಳು ಪೂಜಿಸುತ್ತಿದ್ದ ಆರಾಧ್ಯರ ಆರಾಧನೆಯೇ ಅವಳನ್ನು (ಸತ್ಯವಿಶ್ವಾಸ ಸ್ವೀಕಾರದಿಂದ) ತಡೆದಿತ್ತು. ಏಕೆಂದರೆ ಅವಳೊಂದು ಸತ್ಯನಿಷೇಧಿ ಜನಾಂಗದವಳಾಗಿದ್ದಳು.

وَصَدَّهَا مَا كَانَت تَّعۡبُدُ مِن دُونِ ٱللَّهِۖ إِنَّهَا كَانَتۡ مِن قَوۡمٖ كَٰفِرِينَ ﴿٤٣﴾

44. ಅರಮನೆಯೊಳಗೆ ಪ್ರವೇಶಿಸು ಎಂದು ಅವಳೊಡನೆ ಹೇಳಲಾಯಿತು. ಅವಳು ಅದನ್ನು ಕಂಡಾಗ ನೀರಿನ ಕೊಳವೆಂದು ಭಾವಿಸಿ ಇಳಿಯಲಿಕ್ಕಾಗಿ ಇಜಾರಿನ ಕಾಲುಗಳನ್ನು ಮೇಲೇರಿಸಿ ಕೊಂಡಳು. ಆಗ ಸುಲೈಮಾನರು, "ಇದು ಗಾಜಿನ ನುಣುಪಾದ ಹಾಸು" ಎಂದರು. ಆಗ ಅವಳು, "ಓ ನನ್ನ ಪ್ರಭೂ! (ಇಷ್ಟರವರೆಗೆ) ನಾನು ನನ್ನ ಮೇಲೆಯೇ ಅಕ್ರಮವೆಸಗುತ್ತಿದ್ದೆ. ಈಗ ನಾನು ಸುಲೈಮಾನರೊಂದಿಗೆ, ಸಕಲ ಲೋಕಗಳ ಪಾಲಕ ಪ್ರಭುವಾದ ಅಲ್ಲಾಹನ ವಿಧೇಯತೆಯನ್ನು ಸ್ವೀಕರಿಸಿಕೊಂಡೆ" ಎಂದು ಉದ್ಗರಿಸಿದಳು.

قِيلَ لَهَا ٱدۡخُلِي ٱلصَّرۡحَۖ فَلَمَّا رَأَتۡهُ حَسِبَتۡهُ لُجَّةٗ وَكَشَفَتۡ عَن سَاقَيۡهَاۚ قَالَ إِنَّهُۥ صَرۡحٞ مُّمَرَّدٞ مِّن قَوَارِيرَۗ قَالَتۡ رَبِّ إِنِّي ظَلَمۡتُ نَفۡسِي وَأَسۡلَمۡتُ مَعَ سُلَيۡمَٰنَ لِلَّهِ رَبِّ ٱلۡعَٰلَمِينَ ﴿٤٤﴾

45. ಮತ್ತು ನಾವು ಸಮೂದರ ಕಡೆಗೆ ಅವರ ಸಹೋದರ ಸಾಲಿಹರನ್ನು ಅಲ್ಲಾಹನ ದಾಸ್ಯ ಕೈಗೊಳ್ಳಿರೆಂದು (ಸಂದೇಶ ಕೊಟ್ಟು) ಕಳುಹಿಸಿದೆವು. ಆಗ ಅವರು ಹಠಾತ್ತನೆ ಎರಡು ಜಗಳಾಡುವ ತಂಡಗಳಾಗಿ ಬಿಟ್ಟರು.

وَلَقَدۡ أَرۡسَلۡنَآ إِلَىٰ ثَمُودَ أَخَاهُمۡ صَٰلِحًا أَنِ ٱعۡبُدُواْ ٱللَّهَ فَإِذَا هُمۡ فَرِيقَانِ يَخۡتَصِمُونَ ﴿٤٥﴾

46. ಸಾಲಿಹರು, "ನನ್ನ ಜನಾಂಗದವರೇ, ಒಳಿತಿಗಿಂತ ಮೊದಲು ಕೆಡುಕಿಗಾಗಿ ತ್ವರೆ ಮಾಡುವಿರೇಕೆ? ನಿಮ್ಮ ಮೇಲೆ ಕೃಪೆ ತೋರುವಂತಾಗಲು ನೀವು ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುವುದಿಲ್ಲವೇಕೆ?" ಎಂದರು.

قَالَ يَٰقَوۡمِ لِمَ تَسۡتَعۡجِلُونَ بِٱلسَّيِّئَةِ قَبۡلَ ٱلۡحَسَنَةِۖ لَوۡلَا تَسۡتَغۡفِرُونَ ٱللَّهَ لَعَلَّكُمۡ تُرۡحَمُونَ ﴿٤٦﴾

47. ಆಗ ಅವರು, "ನಾವು ನಿನ್ನನ್ನೂ, ನಿನ್ನ ಜೊತೆಗಾರರನ್ನೂ ಅಪಶಕುನವಾಗಿ ಕಂಡಿದ್ದೇವೆ" ಎಂದರು. ಅದಕ್ಕೆ ಸಾಲಿಹರು, "ನಿಮ್ಮ ಶುಭಾಶುಭ ಶಕುನಗಳ ಮೂಲ ಅಲ್ಲಾಹನ ಬಳಿ ಇದೆ. ವಾಸ್ತವದಲ್ಲಿ ನಿಮ್ಮೆಲ್ಲರ ಪರೀಕ್ಷೆ ನಡೆಯುತ್ತಲಿದೆ" ಎಂದು ಉತ್ತರಿಸಿದರು.

قَالُواْ ٱطَّيَّرۡنَا بِكَ وَبِمَن مَّعَكَۚ قَالَ طَٰٓئِرُكُمۡ عِندَ ٱللَّهِۖ بَلۡ أَنتُمۡ قَوۡمٞ تُفۡتَنُونَ ﴿٤٧﴾

48. ಆ ನಗರದಲ್ಲಿ ಒಂಭತ್ತು ಗುಂಪಿನವರಿದ್ದರು. ಅವರು ನಾಡಿನೊಳಗೆ ಗೊಂದಲ ಹಬ್ಬಿಸುತ್ತಿದ್ದರು ಮತ್ತು ಯಾವ ಸುಧಾರಣಾ ಕಾರ್ಯವನ್ನೂ ಮಾಡುತ್ತಿರಲಿಲ್ಲ.

وَكَانَ فِي ٱلۡمَدِينَةِ تِسۡعَةُ رَهۡطٖ يُفۡسِدُونَ فِي ٱلۡأَرۡضِ وَلَا يُصۡلِحُونَ ﴿٤٨﴾

9. ಅರ್ಥಾತ್- ಈ ಪವಾಡವನ್ನು ನೋಡುವ ಮೊದಲೇ ನಮಗೆ ತಿಳಿದಿದ್ದ ಹ. ಸುಲೈಮಾನ್‌ರ(ಅ) ಗುಣವಿಶೇಷತೆ ಮತ್ತು ವಿವರಣೆಗಳಿಂದಾಗಿ ಅವರು ಅಲ್ಲಾಹನ ಪ್ರವಾದಿಯಾಗಿದ್ದಾರೆ. ಕೇವಲ ಒಂದು ಸಾಮ್ರಾಜ್ಯದ ಆಡಳಿತಾಧಿಕಾರಿ ಮಾತ್ರವಲ್ಲ ಎಂದು ನಮಗೆ ಖಾತ್ರಿಯಾಗಿತ್ತು.

49. ಅವರು ಪರಸ್ಪರ ಹೀಗೆಂದರು; "ನಾವು ಸಾಲಿಹ್ ಮತ್ತು ಅವನ ಮನೆಯವರ ಮೇಲೆ ನಿಶಾಕ್ರಮಣಗೈದು ಕೊಲ್ಲುವೆವೆಂದು ದೇವ ನಾಣೆ ಹಾಕಿ ಪ್ರತಿಜ್ಞೆ ಮಾಡಿಕೊಳ್ಳಿರಿ. ಅನಂತರ ಅವನ ಆಶ್ರಯದಾತ ನೊಡನೆ ಆ ಕುಟುಂಬವು ನಾಶಗೊಂಡ ಸಂದರ್ಭದಲ್ಲಿ ನಾವಿರಲೇ ಇಲ್ಲ, ನಾವು ನಿಜವನ್ನೇ ಹೇಳುತ್ತೇವೆ ಎಂದು ಹೇಳೋಣ."[10]

قَالُوا تَقَاسَمُوا بِاللَّهِ لَنُبَيِّتَنَّهُ وَأَهْلَهُ ثُمَّ لَنَقُولَنَّ لِوَلِيِّهِ مَا شَهِدْنَا مَهْلِكَ أَهْلِهِ وَإِنَّا لَصَادِقُونَ ﴿٤٩﴾

50. ಈ ಕುತಂತ್ರವನ್ನು ಅವರು ಹೂಡಿದರು ಮತ್ತು ಒಂದು ಪ್ರತಿ ತಂತ್ರವನ್ನು ನಾವೂ ಹೂಡಿದೆವು. ಅದು ಅವರಿಗೆ ತಿಳಿದಿರಲಿಲ್ಲ.

وَمَكَرُوا مَكْرًا وَمَكَرْنَا مَكْرًا وَهُمْ لَا يَشْعُرُونَ ﴿٥٠﴾

51. ಅವರ ಕುತಂತ್ರದ ಪರಿಣಾಮ ಏನಾಯಿತೆಂದು ಇದೀಗ ನೋಡಿ ಕೊಳ್ಳಿರಿ. ನಾವು ಅವರನ್ನೂ ಅವರ ಇಡೀ ಜನಾಂಗವನ್ನೂ ನಾಶ ಗೊಳಿಸಿ ಬಿಟ್ಟೆವು.

فَانظُرْ كَيْفَ كَانَ عَاقِبَةُ مَكْرِهِمْ أَنَّا دَمَّرْنَاهُمْ وَقَوْمَهُمْ أَجْمَعِينَ ﴿٥١﴾

52. ಅವರು ಮಾಡುತ್ತಿದ್ದ ಅಕ್ರಮದ ಫಲವಾಗಿ ಅದೋ ಅವರ ಮನೆಗಳು ಪಾಳುಬಿದ್ದಿವೆ. ತಿಳುವಳಿಕೆ ಇರುವವರಿಗೆ ಇದರಲ್ಲೊಂದು ನಿದರ್ಶನವಿದೆ.

فَتِلْكَ بُيُوتُهُمْ خَاوِيَةً بِمَا ظَلَمُوا ۗ إِنَّ فِي ذَٰلِكَ لَآيَةً لِّقَوْمٍ يَعْلَمُونَ ﴿٥٢﴾

53. ಮತ್ತು ಸತ್ಯವಿಶ್ವಾಸವಿರಿಸಿಕೊಂಡಿದ್ದವರನ್ನೂ ಆಜ್ಞೋಲ್ಲಂಘನೆ ಯಿಂದ ದೂರವಿದ್ದವರನ್ನೂ ನಾವು ರಕ್ಷಿಸಿದೆವು.

وَأَنجَيْنَا الَّذِينَ آمَنُوا وَكَانُوا يَتَّقُونَ ﴿٥٣﴾

54. ಮತ್ತು ಲೂತರನ್ನು ನಾವು ಕಳುಹಿಸಿದೆವು. ಅವರು ತಮ್ಮ ಜನಾಂಗದವರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನೀವು ಕಣ್ಣಾರೆ ಕಾಣುತ್ತ ದುಷ್ಕೃತ್ಯವೆಸಗುತ್ತೀರಾ?[11]

وَلُوطًا إِذْ قَالَ لِقَوْمِهِ أَتَأْتُونَ الْفَاحِشَةَ وَأَنتُمْ تُبْصِرُونَ ﴿٥٤﴾

55. ಸ್ತ್ರೀಯರನ್ನು ಬಿಟ್ಟು ಪುರುಷರ ಬಳಿಗೆ ಕಾಮಾಪೇಕ್ಷೆ ನೀಗಿಸಲಿಕ್ಕಾಗಿ ಹೋಗುವುದೇ ನಿಮ್ಮ ಚಾಳಿಯೇ? ವಾಸ್ತವದಲ್ಲಿ ನೀವು ಅತ್ಯಂತ ತಿಳಿಗೇಡಿ ಕಾರ್ಯವನ್ನೆಸಗುತ್ತೀರಿ."

أَئِنَّكُمْ لَتَأْتُونَ الرِّجَالَ شَهْوَةً مِّن دُونِ النِّسَاءِ ۚ بَلْ أَنتُمْ قَوْمٌ تَجْهَلُونَ ﴿٥٥﴾

10. ಅರ್ಥಾತ್- ಹ. ಸಾಲಿಹ್‌ರ(ಅ) ಗೋತ್ರದ ಸರದಾರರೊಡನೆ ಪುರಾತನ ಕಾಲದ ಪದ್ಧತಿಯಂತೆ ಅವರಿಗೆ ತಮ್ಮ ಗೋತ್ರದ ಪರವಾಗಿ ರಕ್ತ ಪರಿಹಾರ ಕೇಳುವ ಹಕ್ಕಿತ್ತು. ಇದು ಪ್ರವಾದಿವರ್ಯರ(ಸ) ಕಾಲದಲ್ಲಿ ಅವರ ಚಿಕ್ಕಪ್ಪ ಅಬೂತಾಲಿಬ್‌ಗೆ ಇದ್ದ ಸ್ಥಾನಕ್ಕೆ ಸಮಾನವಾಗಿದೆ. ಪ್ರವಾದಿವರ್ಯರನ್ನು(ಸ) ಕೊಲೆ ಮಾಡಿದರೆ ಬನೀಹಾಶಿಮ್ ಗೋತ್ರದ ಸರದಾರ ಅಬೂತಾಲಿಬ್ ತಮ್ಮ ಗೋತ್ರದ ಪರವಾಗಿ ರಕ್ತ ಪರಿಹಾರದ ಹಕ್ಕು ಯಾಚಿಸಬಹುದೆಂಬ ಭಯದಿಂದಲೇ ಕುರೈಶ್‌ರ ಪೈಕಿಯ ಸತ್ಯನಿಷೇಧಿಗಳು ತಮ್ಮನ್ನು ತಡೆದಿರಿಸಿಕೊಂಡಿದ್ದರು.

11. ಅರ್ಥಾತ್- ಪರಸ್ಪರರ ಎದುರಿನಲ್ಲೇ ಕೆಟ್ಟ ಕೆಲಸ ಮಾಡುತ್ತೀರಿ. ಮುಂದೆ ಸೂರಃ ಅಂಕಬೂತ್‌ನ 29ನೆಯ ಸೂಕ್ತದಲ್ಲೂ ಅವರು ತಮ್ಮ ಸಭೆಗಳಲ್ಲಿ ಈ ರೀತಿಯ ದುಷ್ಕೃತ್ಯವೆಸಗುತ್ತಿದ್ದರು ಎಂದು ಸ್ಪಷ್ಟಪಡಿಸಲಾಗಿದೆ.

56. ಆದರೆ ಅವರ ಜನಾಂಗದ ಉತ್ತರವು- "ಲೂತರ ಮನೆಯವರನ್ನು ನಿಮ್ಮ ನಾಡಿನಿಂದ ಹೊರಕ್ಕಟ್ಟಿ ಬಿಡಿರಿ. ಮಹಾ ಪರಿಶುದ್ಧರಾಗ ಹೊರಟಿದ್ದಾರಿವರು!" ಎಂದಿಷ್ಟೇ ಹೊರತು ಬೇರೇನೂ ಆಗಿರಲಿಲ್ಲ.

فَمَا كَانَ جَوَابَ قَوْمِهِ إِلَّا أَنْ قَالُوا أَخْرِجُوا آلَ لُوطٍ مِنْ قَرْيَتِكُمْ إِنَّهُمْ أُنَاسٌ يَتَطَهَّرُونَ ﴿٥٦﴾

57. ಕೊನೆಗೆ ನಾವು ಅವರನ್ನೂ ಅವರ ಮನೆಯವರನ್ನೂ- ಅವರ ಪತ್ನಿಯನ್ನು ಹೊರತುಪಡಿಸಿ- ರಕ್ಷಿಸಿದೆವು. ಅವಳು ಹಿಂದೆ ಉಳಿಯುವವಳಾಗಿರಬೇಕು ಎಂಬುದನ್ನು ನಾವು ನಿರ್ಧರಿಸಿ ಬಿಟ್ಟಿದ್ದೆವು.

فَأَنْجَيْنَاهُ وَأَهْلَهُ إِلَّا امْرَأَتَهُ قَدَّرْنَاهَا مِنَ الْغَابِرِينَ ﴿٥٧﴾

58. ಮತ್ತು ನಾವು ಅವರ ಮೇಲೆ ಒಂದು ಮಳೆ ಸುರಿಸಿದೆವು. ಎಚ್ಚರಿಕೆ ನೀಡಲ್ಪಟ್ಟವರ ಪಾಲಿಗೆ ಅದು ಅತ್ಯಂತ ಕೆಟ್ಟ ಮಳೆಯಾಗಿತ್ತು.

وَأَمْطَرْنَا عَلَيْهِمْ مَطَرًا فَسَاءَ مَطَرُ الْمُنْذَرِينَ ﴿٥٨﴾

59. (ಪೈಗಂಬರರೇ) ಪ್ರಶಂಸೆಗಳೆಲ್ಲ ಅಲ್ಲಾಹನಿಗೆ ಮತ್ತು ಅವನು ಪುನೀತಗೊಳಿಸಿದ ಅವನ ದಾಸರ ಮೇಲೆ ಶಾಂತಿ ಇರಲೆಂದು ಹೇಳಿರಿ. (ಇವರೊಡನೆ ಕೇಳಿರಿ) ಅಲ್ಲಾಹನು ಉತ್ತಮನೋ ಅಥವಾ ಇವರು ಅವನ ಸಹಭಾಗಿಗಳಾಗಿ ಮಾಡುವ ಆರಾಧ್ಯರುಗಳು ಉತ್ತಮರೋ?

قُلِ الْحَمْدُ لِلَّهِ وَسَلَامٌ عَلَى عِبَادِهِ الَّذِينَ اصْطَفَى آللَّهُ خَيْرٌ أَمَّا يُشْرِكُونَ ﴿٥٩﴾

60. *ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನೂ ನಿಮಗಾಗಿ ಆಕಾಶದಿಂದ ನೀರನ್ನು ಸುರಿಸಿದವನೂ ತನ್ಮೂಲಕ ನಿಮ್ಮಿಂದ ಬೆಳೆಸಲು ಸಾಧ್ಯವಿಲ್ಲದ ಮರಗಳಿರುವ ಸುಂದರ ಉದ್ಯಾನಗಳನ್ನು ಬೆಳೆಸಿದವನೂ ಯಾರು? ಅಲ್ಲಾಹನೊಂದಿಗೆ ಇತರ ದೇವರೂ (ಈ ಕಾರ್ಯಗಳಲ್ಲಿ ಸಹಭಾಗಿಯಾಗಿ) ಇರುವರೇ?(ಇಲ್ಲ.) ವಾಸ್ತವದಲ್ಲಿ ಇವರೇ ನೇರ ಮಾರ್ಗದಿಂದ ಸರಿದು ನಡೆಯುತ್ತಿದ್ದಾರೆ.

أَمَّنْ خَلَقَ السَّمَاوَاتِ وَالْأَرْضَ وَأَنْزَلَ لَكُمْ مِنَ السَّمَاءِ مَاءً فَأَنْبَتْنَا بِهِ حَدَائِقَ ذَاتَ بَهْجَةٍ مَا كَانَ لَكُمْ أَنْ تُنْبِتُوا شَجَرَهَا أَإِلَٰهٌ مَعَ اللَّهِ بَلْ هُمْ قَوْمٌ يَعْدِلُونَ ﴿٦٠﴾

61. ಭೂಮಿಯನ್ನು ವಾಸಸ್ಥಾನವನ್ನಾಗಿ ಮಾಡಿದವನೂ ಅದರೊಳಗೆ ನದಿಗಳನ್ನು ಹರಿಸಿದವನೂ ಅದರಲ್ಲಿ (ಪರ್ವತಗಳ) ಮೊಳೆಗಳನ್ನು ನಾಟಿದವನೂ ಎರಡು ಜಲಾಗಾರಗಳ ಮಧ್ಯೆ ತಡೆಯನ್ನಿರಿಸಿದವನೂ ಯಾರು? ಅಲ್ಲಾಹನೊಂದಿಗೆ ಇತರ ದೇವರೂ (ಈ ಕಾರ್ಯಗಳಲ್ಲಿ ಸಹಭಾಗಿಯಾಗಿ) ಇರುವರೇ? ಇಲ್ಲ; ಆದರೆ ಇವರಲ್ಲಿ ಹೆಚ್ಚಿನವರು ತಿಳಿಗೇಡಿಗಳು.

أَمَّنْ جَعَلَ الْأَرْضَ قَرَارًا وَجَعَلَ خِلَالَهَا أَنْهَارًا وَجَعَلَ لَهَا رَوَاسِيَ وَجَعَلَ بَيْنَ الْبَحْرَيْنِ حَاجِزًا أَإِلَٰهٌ مَعَ اللَّهِ بَلْ أَكْثَرُهُمْ لَا يَعْلَمُونَ ﴿٦١﴾

62. ಕಳವಳಗೊಂಡವನು ಅವನನ್ನು ಪ್ರಾರ್ಥಿಸಿದಾಗ ಅವನ

أَمَّنْ يُجِيبُ الْمُضْطَرَّ إِذَا دَعَاهُ وَيَكْشِفُ

* ಇಲ್ಲಿಂದ **20ನೆಯ** ಕಾಂಡ ಆರಂಭ.

ಪ್ರಾರ್ಥನೆಯನ್ನು ಆಲಿಸುವವನಾರು? ಅವನ ಸಂಕಷ್ಟವನ್ನು ನಿವಾರಿಸುವವನು ಯಾರು? ಮತ್ತು ನಿಮ್ಮನ್ನು ಭೂಮಿಯ ಪ್ರತಿನಿಧಿಯಾಗಿ ಮಾಡುವವನು ಯಾರು? ಅಲ್ಲಾಹನೊಂದಿಗೆ ಇತರ ದೇವರೂ (ಈ ಕಾರ್ಯವನ್ನೆಸಗಲು) ಇರುವರೇ? ನೀವು ಅಲ್ಪವೇ ವಿವೇಚಿಸುತ್ತೀರಿ.

السُّوٓءَ وَيَجْعَلُكُمْ خُلَفَآءَ الْأَرْضِ ۗ أَءِلَٰهٌ مَّعَ اللَّهِ ۚ قَلِيلًا مَّا تَذَكَّرُونَ ٦٢

63. ನೆಲ ಹಾಗೂ ಸಾಗರಗಳ ಅಂಧಕಾರಗಳಲ್ಲಿ ನಿಮಗೆ ದಾರಿ ತೋರಿಸುವವನೂ ತನ್ನ ಕೃಪೆಗಿಂತ ಮುಂಚಿತವಾಗಿ ಮಾರುತಗಳನ್ನು ಸುವಾರ್ತೆಯೊಂದಿಗೆ ಕಳುಹಿಸುವವನೂ ಯಾರು? ಅಲ್ಲಾಹನೊಂದಿಗೆ ಇತರ ದೇವರೂ ಇರುವರೇ? ಅಲ್ಲಾಹನು ಇವರು ಮಾಡುತ್ತಿರುವ 'ದೇವ ಸಹಭಾಗಿತ್ವ'ಗಿಂತ ಮಹೋನ್ನತನು.

أَمَّن يَهْدِيكُمْ فِى ظُلُمَٰتِ الْبَرِّ وَالْبَحْرِ وَمَن يُرْسِلُ الرِّيَٰحَ بُشْرًۢا بَيْنَ يَدَىْ رَحْمَتِهِۦٓ ۗ أَءِلَٰهٌ مَّعَ اللَّهِ ۚ تَعَٰلَى اللَّهُ عَمَّا يُشْرِكُونَ ٦٣

64. ಸೃಷ್ಟಿಯನ್ನಾರಂಭಿಸುವವನೂ ಆ ಬಳಿಕ ಅದರ ಪುನರಾವರ್ತನೆ ಮಾಡುವವನೂ ಯಾರು? ನಿಮಗೆ ಆಕಾಶಗಳಿಂದಲೂ ಭೂಮಿಯಿಂದಲೂ ಜೀವನಾಧಾರ ಕೊಡುವವನಾರು? ಅಲ್ಲಾಹನ ಜೊತೆ ಇತರ ದೇವರೂ(ಈ ಕಾರ್ಯಗಳಲ್ಲಿ ಪಾಲುದಾರರಾಗಿ) ಇರುವರೇ? ಹೇಳಿರಿ- ನೀವು ಸತ್ಯವಾದಿಗಳಾಗಿದ್ದರೆ ಪುರಾವೆಗಳನ್ನು ತನ್ನಿರಿ.

أَمَّن يَبْدَؤُا الْخَلْقَ ثُمَّ يُعِيدُهُۥ وَمَن يَرْزُقُكُم مِّنَ السَّمَآءِ وَالْأَرْضِ ۗ أَءِلَٰهٌ مَّعَ اللَّهِ ۚ قُلْ هَاتُوا بُرْهَٰنَكُمْ إِن كُنتُمْ صَٰدِقِينَ ٦٤

65. ಇವರೊಡನೆ ಹೇಳಿರಿ: ಭೂಮಿ-ಆಕಾಶಗಳಲ್ಲಿ, ಪರೋಕ್ಷದ ಜ್ಞಾನವುಳ್ಳವರು ಅಲ್ಲಾಹನ ಹೊರತು ಯಾರೂ ಇಲ್ಲ ಮತ್ತು ಅವರಿಗಂತೂ (ಆ ನಿಮ್ಮ ಆರಾಧ್ಯರಿಗಂತೂ) ಅವರು ಯಾವಾಗ ಎಬ್ಬಿಸಲ್ಪಡುವರೆಂಬುದೂ ತಿಳಿದಿಲ್ಲ.

قُل لَّا يَعْلَمُ مَن فِى السَّمَٰوَٰتِ وَالْأَرْضِ الْغَيْبَ إِلَّا اللَّهُ ۚ وَمَا يَشْعُرُونَ أَيَّانَ يُبْعَثُونَ ٦٥

66. ವಾಸ್ತವದಲ್ಲಿ ಪರಲೋಕದ ಬಗೆಗಿರುವ ಜ್ಞಾನವೇ ಇವರಿಂದ ಕಳೆದು ಹೋಗಿದೆ. ಅಲ್ಲ, ಇವರು ಅದರ ಬಗ್ಗೆ ಸಂದೇಹದಲ್ಲಿದ್ದಾರೆ. ಅಲ್ಲ, ಇವರು ಅದರಿಂದ ಕುರುಡರಾಗಿದ್ದಾರೆ.

بَلِ ادَّٰرَكَ عِلْمُهُمْ فِى الْءَاخِرَةِ ۚ بَلْ هُمْ فِى شَكٍّ مِّنْهَا ۖ بَلْ هُم مِّنْهَا عَمُونَ ٦٦

67. ಈ ಸತ್ಯನಿಷೇಧಿಗಳು ಹೇಳುತ್ತಾರೆ, "ನಾವೂ ನಮ್ಮ ಪೂರ್ವಿಕರೂ ಮಣ್ಣಾಗಿ ಹೋದ ಬಳಿಕ ನಿಜಕ್ಕೂ ನಮ್ಮನ್ನು ಸಮಾಧಿಗಳಿಂದ ಹೊರ ತರಲಾಗುವುದೇ?

وَقَالَ الَّذِينَ كَفَرُوٓا أَءِذَا كُنَّا تُرَٰبًا وَءَابَآؤُنَآ أَئِنَّا لَمُخْرَجُونَ ٦٧

68. ಇಂತಹ ವಾಗ್ದಾನಗಳು ನಮಗೂ ತುಂಬಾ ಕೊಡಲ್ಪಟ್ಟಿವೆ ಮತ್ತು ಹಿಂದೆ ನಮ್ಮ ಪೂರ್ವಿಕರಿಗೂ ಕೊಡಲ್ಪಟ್ಟಿದ್ದುವು, ಆದರೆ ಇವೆಲ್ಲ ಗತ ಕಾಲಗಳಿಂದಲೇ ಕೇಳುತ್ತ ಬಂದಿರುವ ಬರಿಯ ಕಟ್ಟುಕತೆಗಳೇ ಆಗಿರುತ್ತವೆ."

لَقَدْ وُعِدْنَا هَٰذَا نَحْنُ وَءَابَآؤُنَا مِن قَبْلُ إِنْ هَٰذَآ إِلَّآ أَسَٰطِيرُ الْأَوَّلِينَ ٦٨

69. "ಭೂಮಿಯ ಮೇಲೆ ಒಂದಿಷ್ಟು ಸಂಚಾರ ಮಾಡಿ ಅಪರಾಧಿಗಳ ಪರಿಣಾಮ ಏನಾಗಿತ್ತೆಂದು ನೋಡಿರಿ" ಎಂದು ಹೇಳಿರಿ.

قُلْ سِيرُوا فِي الْأَرْضِ فَانظُرُوا كَيْفَ كَانَ عَاقِبَةُ الْمُجْرِمِينَ ﴿٦٩﴾

70. ಪೈಗಂಬರರೇ, ಇವರ ಅವಸ್ಥೆಗೆ ಮರುಗಬೇಡಿರಿ ಮತ್ತು ಇವರ ಸಂಚುಗಳ ಬಗ್ಗೆ ವ್ಯಾಕುಲಗೊಳ್ಳಬೇಡಿರಿ.

وَلَا تَحْزَنْ عَلَيْهِمْ وَلَا تَكُن فِي ضَيْقٍ مِّمَّا يَمْكُرُونَ ﴿٧٠﴾

71. ಅವರು, "ನೀವು ಸತ್ಯವಾದಿಗಳಾಗಿದ್ದರೆ ಈ ಬೆದರಿಕೆ ಈಡೇರುವುದು ಯಾವಾಗ?" ಎನ್ನುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ﴿٧١﴾

72. "ನೀವು ಯಾವ ಯಾತನೆಗಾಗಿ ತವಕ ಪಡುತ್ತಿರುವಿರೋ ಅದರ ಒಂದಂಶವು ನಿಮ್ಮ ಹತ್ತಿರವೇ ಬಂದು ಬಿಟ್ಟಿರಲೂಬಹುದು" ಎಂದು ಹೇಳಿರಿ.

قُلْ عَسَىٰ أَن يَكُونَ رَدِفَ لَكُم بَعْضُ الَّذِي تَسْتَعْجِلُونَ ﴿٧٢﴾

73. ನಿಶ್ಚಯವಾಗಿಯೂ ನಿಮ್ಮ ಪ್ರಭು ಜನರ ಮೇಲೆ ಮಹಾ ಅನುಗ್ರಹಶಾಲಿ. ಆದರೆ ಹೆಚ್ಚಿನವರು ಕೃತಜ್ಞತೆ ತೋರುವುದಿಲ್ಲ.

وَإِنَّ رَبَّكَ لَذُو فَضْلٍ عَلَى النَّاسِ وَلَٰكِنَّ أَكْثَرَهُمْ لَا يَشْكُرُونَ ﴿٧٣﴾

74. ಅವರ ಹೃದಯಗಳು ತಮ್ಮೊಳಗೆ ಬಚ್ಚಿಟ್ಟುಕೊಂಡಿರುವುದನ್ನೂ ಅವರು ಪ್ರಕಟಗೊಳಿಸುತ್ತಿರುವುದನ್ನೂ ಖಂಡಿತವಾಗಿಯೂ ನಿಮ್ಮ ಪ್ರಭು ಚೆನ್ನಾಗಿ ಬಲ್ಲನು.

وَإِنَّ رَبَّكَ لَيَعْلَمُ مَا تُكِنُّ صُدُورُهُمْ وَمَا يُعْلِنُونَ ﴿٧٤﴾

75. ಭೂಮಿ, ಆಕಾಶಗಳಲ್ಲಿ ಒಂದು ಸುವ್ಯಕ್ತ ಗ್ರಂಥದಲ್ಲಿ ಬರೆಯಲ್ಪಡದ ಯಾವ ಸುಪ್ತವಸ್ತುವೂ ಇಲ್ಲ.[12]

وَمَا مِنْ غَائِبَةٍ فِي السَّمَاءِ وَالْأَرْضِ إِلَّا فِي كِتَابٍ مُّبِينٍ ﴿٧٥﴾

76 ನಿಶ್ಚಯವಾಗಿಯೂ ಈ ಕುರ್‌ಆನ್ ಬನೀಇಸ್ರಾಈಲರಿಗೆ ಅವರು ಭಿನ್ನಾಭಿಪ್ರಾಯವಿರಿಸಿ ಕೊಂಡಿರುವ ಹೆಚ್ಚಿನ ವಿಷಯಗಳ ವಸ್ತುಸ್ಥಿತಿಯನ್ನು ತೋರಿಸಿ ಕೊಡುತ್ತದೆ.

إِنَّ هَٰذَا الْقُرْآنَ يَقُصُّ عَلَىٰ بَنِي إِسْرَائِيلَ أَكْثَرَ الَّذِي هُمْ فِيهِ يَخْتَلِفُونَ ﴿٧٦﴾

77. ಮತ್ತು ಇದು ಸತ್ಯವಿಶ್ವಾಸಿಗಳ ಪಾಲಿಗೆ ಮಾರ್ಗದರ್ಶನವೂ ಕೃಪೆಯೂ ಆಗಿದೆ.

وَإِنَّهُ لَهُدًى وَرَحْمَةٌ لِّلْمُؤْمِنِينَ ﴿٧٧﴾

78. ನಿಶ್ಚಯವಾಗಿಯೂ (ಇದೇ ರೀತಿಯಲ್ಲಿ) ನಿಮ್ಮ ಪ್ರಭು ತನ್ನ ಅಪ್ಪಣೆಯಿಂದ ಇವರೊಳಗೂ[13] ತೀರ್ಮಾನ ಮಾಡಿ ಬಿಡುವನು. ಅವನು ಮಹಾ ಪ್ರಬಲನೂ ಸರ್ವಜ್ಞನೂ ಆಗಿರುತ್ತಾನೆ.

إِنَّ رَبَّكَ يَقْضِي بَيْنَهُم بِحُكْمِهِ ۚ وَهُوَ الْعَزِيزُ الْعَلِيمُ ﴿٧٨﴾

12. ಸುಸ್ಪಷ್ಟ ಗ್ರಂಥವೆಂದರೆ ವಿಧಿಯ ದಾಖಲೆ.

13. ಅರ್ಥಾತ್- ಕುರೈಶರ ಪೈಕಿಯ ಸತ್ಯನಿಷೇಧಿಗಳು ಮತ್ತು ಸತ್ಯವಿಶ್ವಾಸಿಗಳ ನಡುವೆ.

79. ಆದುದರಿಂದ ಪೈಗಂಬರರೇ, ಅಲ್ಲಾಹನ ಮೇಲೆ ಭರವಸೆ ಇಡಿರಿ. ನಿಶ್ಚಯವಾಗಿಯೂ ನೀವು ಸುಸ್ಪಷ್ಟ ಸತ್ಯದಲ್ಲಿದ್ದೀರಿ.

فَتَوَكَّلْ عَلَى اللّٰهِ ۖ اِنَّكَ عَلَى الْحَقِّ الْمُبِيْنِ ﴿٧٩﴾

80. ನೀವು ಮೃತರಿಗೆ ಕೇಳಿಸಲಾರಿರಿ,[14] ಬೆನ್ನು ತಿರುಗಿಸಿ ಓಡಿ ಹೋಗುತ್ತಿರುವ ಕಿವುಡರವರೆಗೂ ನಿಮ್ಮ ಕೂಗನ್ನು ಮುಟ್ಟಿಸಲಾರಿರಿ.

اِنَّكَ لَا تُسْمِعُ الْمَوْتٰى وَلَا تُسْمِعُ الصُّمَّ الدُّعَآءَ اِذَا وَلَّوْا مُدْبِرِيْنَ ﴿٨٠﴾

81. ಮತ್ತು ಕುರುಡರಿಗೆ ದಾರಿ ತೋರಿಸಿ ಅವರನ್ನು ದಾರಿ ತಪ್ಪುವುದರಿಂದ ರಕ್ಷಿಸಲಾರಿರಿ. ನೀವು ನಮ್ಮ ಸೂಕ್ತಗಳ ಮೇಲೆ ವಿಶ್ವಾಸವಿರಿಸುವವರಿಗೆ ಹಾಗೂ ಆಜ್ಞಾನುಸರಣೆ ಮಾಡುವವರಿಗೆ ಮಾತ್ರ ನಿಮ್ಮ ಮಾತನ್ನು ಕೇಳಿಸಬಲ್ಲಿರಿ.

وَمَآ اَنْتَ بِهٰدِى الْعُمْىِ عَنْ ضَلٰلَتِهِمْ ۗ اِنْ تُسْمِعُ اِلَّا مَنْ يُّؤْمِنُ بِاٰيٰتِنَا فَهُمْ مُّسْلِمُوْنَ ﴿٨١﴾

82. ನಮ್ಮ ವಚನವು ಪೂರ್ಣಗೊಳ್ಳುವ ಕಾಲವು ಅವರ ಮೇಲೆ ಬಂದು ಮುಟ್ಟಿದಾಗ ನಾವು ಅವರಿಗಾಗಿ ಒಂದು ಪ್ರಾಣಿಯನ್ನು ನೆಲದಿಂದ ಹೊರ ತರುವೆವು. ಜನರು ನಮ್ಮ ಸೂಕ್ತಗಳನ್ನು ನಂಬುತ್ತಿರಲಿಲ್ಲವೆಂದು ಅದು ಅವರೊಡನೆ ಮಾತಾಡುವುದು.[15]

وَاِذَا وَقَعَ الْقَوْلُ عَلَيْهِمْ اَخْرَجْنَا لَهُمْ دَآبَّةً مِّنَ الْاَرْضِ تُكَلِّمُهُمْ ۙ اَنَّ النَّاسَ كَانُوْا بِاٰيٰتِنَا لَا يُوْقِنُوْنَ ﴿٨٢﴾

83. ನಾವು ಪ್ರತಿಯೊಂದು ಸಮುದಾಯದಿಂದ ನಮ್ಮ ಸೂಕ್ತಗಳನ್ನು ಸುಳ್ಳಾಗಿಸುತ್ತಿದ್ದ ಒಂದು ಸೇನೆಯನ್ನೇ ಸುತ್ತುಗಟ್ಟಿ ತರುವ ದಿನವನ್ನು ಊಹಿಸಿರಿ. ತರುವಾಯ ಅವರನ್ನು (ಅವರ ವಿಧಗಳಿಗನುಸಾರ ವರ್ಗಗಳಾಗಿ) ವಿಂಗಡಿಸಲಾಗುವುದು.

وَيَوْمَ نَحْشُرُ مِنْ كُلِّ اُمَّةٍ فَوْجًا مِّمَّنْ يُّكَذِّبُ بِاٰيٰتِنَا فَهُمْ يُوْزَعُوْنَ ﴿٨٣﴾

84. ಹೀಗೆ ಎಲ್ಲರೂ ಬಂದಾಗ (ಅವರ ಪ್ರಭು ಅವರೊಡನೆ), "ನೀವು ನನ್ನ ಸೂಕ್ತಗಳನ್ನು ಸುಳ್ಳಾಗಿಸಿ ಬಿಟ್ಟಿರಾ? ವಾಸ್ತವದಲ್ಲಿ ನೀವು

حَتّٰٓى اِذَا جَآءُوْ قَالَ اَكَذَّبْتُمْ بِاٰيٰتِىْ وَلَمْ تُحِيْطُوْا بِهَا عِلْمًا اَمَّا ذَا

14. ಅರ್ಥಾತ್- ಆತ್ಮಸಾಕ್ಷಿ ಸತ್ತು ಹೋಗಿರುವಂತಹ ಜನರು. ತಮ್ಮ ಮೊಂಡುತನ ಮತ್ತು ಸಂಪ್ರದಾಯ ಶರಣತೆಯಿಂದಾಗಿ ಸತ್ಯ-ಮಿಥ್ಯದ ನಡುವಿನ ಅಂತರವನ್ನರಿಯುವ ಸಾಮರ್ಥ್ಯವನ್ನು ಕಳಕೊಂಡಂತಹ ವ್ಯಕ್ತಿಗಳು.

15. ಭೂಮಿಯಲ್ಲಿ ಒಳಿತಿನ ಆದೇಶಕೊಡುವ ಮತ್ತು ಕೆಡುಕಿನಿಂದ ತಡೆಯುವ ಒಬ್ಬನೇ ಒಬ್ಬ ವ್ಯಕ್ತಿ ಇಲ್ಲದಾಗಿ ಬಿಟ್ಟಾಗ ಇದು ಸಂಭವಿಸುತ್ತದೆ ಎಂದು ಹ. ಇಬ್ನ್ ಉಮರ್(ರ) ಹೇಳಿದ್ದಾರೆ. ಅಬೂಸಈದ್ ಖುದ್ರಿಯವರಿಂದ(ರ) ಉಧ್ಧೃತವಾದ ಪ್ರವಾದಿವಚನವೊಂದರಲ್ಲಿ ಅವರು ತಾನು ಇದೇ ಮಾತನ್ನು ಪ್ರವಾದಿವರ್ಯರಿಂದ(ಸ) ಕೇಳಿರುವುದಾಗಿ ಹೇಳಿದ್ದಾರೆ. ಮಾನವರು ಒಳಿತಿನ ಆದೇಶ ಕೊಡುವ ಮತ್ತು ಕೆಡುಕಿನಿಂದ ತಡೆಯುವ ಕೆಲಸವನ್ನು ಬಿಟ್ಟು ಬಿಟ್ಟಾಗ ಅಲ್ಲಾಹನು ಪ್ರಾಣಿಯೊಂದರ ಮೂಲಕ ಕೊನೆಯ ಬಾರಿಗೆ ನೆಪಗಳು ಬಾಕಿಯುಳಿಯದಂತೆ ಆಜ್ಞೆಯನ್ನು ತಲಪಿಸುವನು. ಇದು ಒಂದೇ ಪ್ರಾಣಿಯಾಗಿರುವುದೋ ಅಥವಾ ಹೇರಳ ಸಂಖ್ಯೆಯಲ್ಲಿ ಭೂಮಿಯಲ್ಲಿ ಹರಡಿ ಬಿಡುವ ಒಂದೇ ಬಗೆಯ ಪ್ರಾಣಿಯಾಗಿರುವುದೋ ಎಂಬ ವಿಷಯವನ್ನು ಇಲ್ಲಿ ಸ್ಪಷ್ಟಪಡಿಸಲಾಗಿಲ್ಲ. 'ದಾಬ್ಬತುಮ್ಮಿನಲ್ ಅರ್ದ್' (ಒಂದು ಪ್ರಾಣಿಯನ್ನು ನೆಲದಿಂದ ಹೊರತರುವೆವು) ಎಂಬ ಪದ ಪ್ರಯೋಗದಲ್ಲಿ ಎರಡೂ ಸಾಧ್ಯತೆಗಳಿಗೆ ಅವಕಾಶವಿದೆ. ಆ ಪ್ರಾಣಿಯು ಹೊರಡುವ ಕಾಲ ಯಾವುದು ಎಂಬ ಕುರಿತು ಪ್ರವಾದಿವರ್ಯರು(ಸ) ಹೀಗೆ ಹೇಳಿದ್ದಾರೆ, "ಸೂರ್ಯ ಪಶ್ಚಿಮದಿಂದ ಉದಯಿಸುವುದು ಮತ್ತು ಒಂದು ದಿನ ಹಾಡುಹಗಲೇ ಈ ಪ್ರಾಣಿ ಹೊರಬರುವುದು" ಪ್ರಾಣಿಯು ಮಾನವರೊಡನೆ ಮಾನವರ ಭಾಷೆಯಲ್ಲಿ ಮಾತನಾಡುವುದು ದೇವಲೀಲೆಯಾಗಿದೆ. ಅವನು ಇಚ್ಛಿಸಿದರೆ ಯಾರಿಗೂ ವಾಕ್‌ಶಕ್ತಿಯನ್ನು ನೀಡಬಲ್ಲನು. ನಿರ್ಣಾಯಕ ದಿನಕ್ಕೆ ಮೊದಲು ಅವನು ಪ್ರಾಣಿಯೊಂದಕ್ಕೆ ಮಾತ್ರ ವಾಕ್‌ಶಕ್ತಿಯನ್ನು ದಯಪಾಲಿಸುವನು. ಆದರೆ ನಿರ್ಣಾಯಕ ದಿನ ಎದುರಾದಾಗ ಅಲ್ಲಾಹನ ನ್ಯಾಯಾಲಯದಲ್ಲಿ ಮಾನವರ ಕಣ್ಣು, ಕಿವಿ ಮತ್ತು ದೇಹದ ಚರ್ಮವೂ ಮಾತನಾಡಲಾರಂಭಿಸುವುದು. ಕುರ್‌ಆನಿನಲ್ಲಿ ಈ ಕುರಿತು ಸ್ಪಷ್ಟವಾಗಿ ವಿವರಿಸಲಾಗಿದೆ. (ಹಾಮ್ಮೀಮ್ ಅಸ್ಸಜ್‌ದಃ 20-21)

ಅವುಗಳನ್ನು ಗ್ರಹಿಸಿರಲಿಲ್ಲ. ಇದಲ್ಲವಾದರೆ ನೀವು ಇನ್ನೇನು ಮಾಡುತ್ತಿದ್ದಿರಿ?" ಎಂದು ಕೇಳುವನು.

كُنْتُمْ تَعْمَلُونَ ﴿٨٤﴾

85. ಮತ್ತು ಅವರ ಅಕ್ರಮದ ಕಾರಣದಿಂದ ಅವರ ಮೇಲೆ ಯಾತನೆಯ ವಾಗ್ದಾನವು ಪೂರ್ತಿಗೊಳ್ಳುವುದು. ಆಗ ಅವರು ಏನನ್ನೂ ಹೇಳಲಾರರು.

وَوَقَعَ الْقَوْلُ عَلَيْهِمْ بِمَا ظَلَمُوا فَهُمْ لَا يَنْطِقُونَ ﴿٨٥﴾

86. ನಾವು ರಾತ್ರಿಯನ್ನು ಅವರ ಪ್ರಶಾಂತಿಗಾಗಿಯೂ, ಹಗಲನ್ನು ಅವರಿಗೆ ಪ್ರಕಾಶಮಾನವಾಗಿಯೂ ಮಾಡಿರುವುದು ತೋಚುತ್ತಿರಲಿಲ್ಲವೇ? ಇದರಲ್ಲಿ ಸತ್ಯವಿಶ್ವಾಸವಿಟ್ಟವರಿಗೆ ಅನೇಕ ನಿದರ್ಶನಗಳಿದ್ದುವು.

أَلَمْ يَرَوْا أَنَّا جَعَلْنَا اللَّيْلَ لِيَسْكُنُوا فِيهِ وَالنَّهَارَ مُبْصِرًا ۚ إِنَّ فِي ذَٰلِكَ لَآيَاتٍ لِقَوْمٍ يُؤْمِنُونَ ﴿٨٦﴾

87. ಸೂರ್ (ಕಹಳೆ) ಊದಲ್ಪಡುವ ಹಾಗೂ ಆಕಾಶಗಳಲ್ಲೂ ಭೂಮಿಯಲ್ಲೂ ಇರುವವುಗಳೆಲ್ಲವೂ ದಿಗಿಲುಗೊಳ್ಳುವ ಆ ದಿನ ಹೇಗಿರುವುದು? ಅಲ್ಲಾಹನು ಆ ದಿಗಿಲಿನಿಂದ ರಕ್ಷಿಸಲಿಚ್ಛಿಸುವವರ ಹೊರತು ಮಿಕ್ಕವರೆಲ್ಲರೂ ಕಿವಿಯೊತ್ತಿಕೊಂಡು ಅವನ ಸನ್ನಿಧಿಯಲ್ಲಿ ಹಾಜರಾಗುವರು.

وَيَوْمَ يُنْفَخُ فِي الصُّورِ فَفَزِعَ مَنْ فِي السَّمَاوَاتِ وَمَنْ فِي الْأَرْضِ إِلَّا مَنْ شَاءَ اللَّهُ ۚ وَكُلٌّ أَتَوْهُ دَاخِرِينَ ﴿٨٧﴾

88. ಇಂದು ನೀವು ಪರ್ವತಗಳನ್ನು ನೋಡುತ್ತೀರಿ ಮತ್ತು ಅವು ಚೆನ್ನಾಗಿ ನಾಟಿಕೊಂಡಿವೆಯೆಂದು ತಿಳಿಯುತ್ತೀರಿ. ಆದರೆ, ಅಂದು ಅವು ಮೋಡಗಳಂತೆ ಹಾರಾಡುತ್ತಿರುವುವು. ಇದು ಸಕಲವನ್ನೂ ಯುಕ್ತಿಯೊಂದಿಗೆ ಸುಭದ್ರಗೊಳಿಸಿರುವ ಅಲ್ಲಾಹನ ಮಹಿಮೆಯ ಅದ್ಭುತ ಕಾರ್ಯವಾಗಿರುವುದು. ನೀವೇನು ಮಾಡುತ್ತೀರೆಂಬುದನ್ನು ಅವನು ಚೆನ್ನಾಗಿ ಅರಿತಿರುತ್ತಾನೆ.

وَتَرَى الْجِبَالَ تَحْسَبُهَا جَامِدَةً وَهِيَ تَمُرُّ مَرَّ السَّحَابِ ۚ صُنْعَ اللَّهِ الَّذِي أَتْقَنَ كُلَّ شَيْءٍ ۚ إِنَّهُ خَبِيرٌ بِمَا تَفْعَلُونَ ﴿٨٨﴾

89. ಒಳಿತಿನೊಂದಿಗೆ ಬಂದವನಿಗೆ ಅದಕ್ಕಿಂತ ಉತ್ತಮ ಪ್ರತಿಫಲ ಸಿಗುವುದು, ಇಂತಹವರು ಆ ದಿನದ ದಿಗಿಲಿನಿಂದ ಸುರಕ್ಷಿತರಾಗಿರುವರು.

مَنْ جَاءَ بِالْحَسَنَةِ فَلَهُ خَيْرٌ مِنْهَا وَهُمْ مِنْ فَزَعٍ يَوْمَئِذٍ آمِنُونَ ﴿٨٩﴾

90. ಕೆಡುಕುಗಳೊಂದಿಗೆ ಬರುವವರೆಲ್ಲರೂ ಅಧೋಮುಖವಾಗಿ ನರಕಕ್ಕೆ ಎಸೆಯಲ್ಪಡುವರು. ಮಾಡಿದ್ದನ್ನುಣ್ಣುವ ಹೊರತು ನೀವು ಇನ್ನಾವುದಾದರೂ ಪ್ರತಿಫಲ ಪಡೆಯಬಲ್ಲಿರಾ?

وَمَنْ جَاءَ بِالسَّيِّئَةِ فَكُبَّتْ وُجُوهُهُمْ فِي النَّارِ هَلْ تُجْزَوْنَ إِلَّا مَا كُنْتُمْ تَعْمَلُونَ ﴿٩٠﴾

91-92. (ಪೈಗಂಬರರೇ), "ನನಗಂತು ಈ ನಗರದ (ಮಕ್ಕಾದ) ಪ್ರಭುವಿನ ಆರಾಧನೆ ಮಾಡಬೇಕೆಂದು ಅಪ್ಪಣೆ ಕೊಡಲಾಗಿದೆ. ಅವನು ಇದನ್ನು

إِنَّمَا أُمِرْتُ أَنْ أَعْبُدَ رَبَّ هَٰذِهِ الْبَلْدَةِ الَّذِي حَرَّمَهَا وَلَهُ كُلُّ شَيْءٍ ۖ وَأُمِرْتُ

'ಸನ್ಮಾನ್ಯ ಸ್ಥಳ' ಆಗಿ ಮಾಡಿರುತ್ತಾನೆ ಮತ್ತು ಅವನು ಸಕಲ ವಸ್ತುಗಳ ಒಡೆಯನಾಗಿದ್ದಾನೆ. ನಾನು ಮುಸ್ಲಿಮ(ಶರಣಾಗತ) ನಾಗಿರಬೇಕೆಂದೂ ಕುರ್‌ಆನನ್ನು ಓದಿ ಹೇಳಬೇಕೆಂದೂ ಆಜ್ಞಾಪಿಸಲ್ಪಟ್ಟಿದ್ದೇನೆ" (ಎಂದು ಹೇಳಿರಿ) ಇನ್ನು ಯಾರು ಸನ್ಮಾರ್ಗವನ್ನನುಸರಿಸುವನೋ ಅವನು ತನ್ನ ಹಿತಕ್ಕಾಗಿಯೇ ಸನ್ಮಾರ್ಗವನ್ನನುಸರಿಸುವನು ಮತ್ತು ಯಾರು ಪಥಭ್ರಷ್ಟನಾಗುವನೋ ಅವನೊಡನೆ, "ನಾನು ಎಚ್ಚರಿಕೆ ನೀಡುವವನು ಮಾತ್ರ" ಎಂದು ಹೇಳಿ ಬಿಡಿರಿ.

أَنْ أَكُونَ مِنَ الْمُسْلِمِينَ ﴿٩١﴾ وَأَنْ أَتْلُوَ الْقُرْآنَ ۖ فَمَنِ اهْتَدَىٰ فَإِنَّمَا يَهْتَدِي لِنَفْسِهِ ۖ وَمَنْ ضَلَّ فَقُلْ إِنَّمَا أَنَا مِنَ الْمُنْذِرِينَ ﴿٩٢﴾

93. ಸಕಲ ಸ್ತೋತ್ರಗಳೂ ಅಲ್ಲಾಹನಿಗೆ. ಅವನು ಸದ್ಯವೇ ತನ್ನ ನಿದರ್ಶನಗಳನ್ನು ನಿಮಗೆ ತೋರಿಸಿ ಕೊಡುವನು ಮತ್ತು ನೀವು ಅವುಗಳನ್ನು ಗುರುತಿಸಿಕೊಳ್ಳುವಿರಿ. ನಿಮ್ಮ ಪ್ರಭು ನೀವು ಮಾಡುತ್ತಿರುವ ಕರ್ಮಗಳ ಬಗ್ಗೆ ಬೋಧರಹಿತನಲ್ಲವೆಂದೂ ಅವರೊಡನೆ ಹೇಳಿರಿ.

وَقُلِ الْحَمْدُ لِلَّهِ سَيُرِيكُمْ آيَاتِهِ فَتَعْرِفُونَهَا ۚ وَمَا رَبُّكَ بِغَافِلٍ عَمَّا تَعْمَلُونَ ﴿٩٣﴾

---






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ತಾ ಸೀ ಮ್ಮೀಮ್.

طٰسٓمّٓ ۝١

2. ಇವು ಸುವ್ಯಕ್ತ ಗ್ರಂಥದ ಸೂಕ್ತಗಳು.

تِلْكَ اٰيٰتُ الْكِتٰبِ الْمُبِيْنِ ۝٢

3. ನಾವು ನಿಮಗೆ ಮೂಸಾ ಮತ್ತು ಫಿರ್‌ಔನರ ಕೆಲವು ವೃತ್ತಾಂತ ಗಳನ್ನು ನಿಖರವಾಗಿ ತಿಳಿಸುತ್ತೇವೆ- ಸತ್ಯವಿಶ್ವಾಸ ಸ್ವೀಕರಿಸುವವರ ಪ್ರಯೋಜನಕ್ಕಾಗಿ.

نَتْلُوْا عَلَيْكَ مِنْ نَّبَاِ مُوْسٰى وَفِرْعَوْنَ
بِالْحَقِّ لِقَوْمٍ يُّؤْمِنُوْنَ ۝٣

4. ವಿಷಯವೇನೆಂದರೆ- ಫಿರ್‌ಔನನು ಭೂಮಿಯಲ್ಲಿ ಬಂಡಾಯವೆದ್ದನು ಮತ್ತು ಅದರ ನಿವಾಸಿಗಳನ್ನು ಪಂಗಡಗಳಾಗಿ ವಿಂಗಡಿಸಿಬಿಟ್ಟನು. ಆ ಪೈಕಿ ಒಂದು ಪಂಗಡವನ್ನು ಅವನು ಅವಮಾನಿಸುತ್ತಿದ್ದನು. ಅವರ ಗಂಡು ಮಕ್ಕಳನ್ನು ವಧಿಸುತ್ತಿದ್ದನು ಮತ್ತು ಹೆಣ್ಣು ಮಕ್ಕಳನ್ನು ಬದುಕಿರಲು ಬಿಡುತ್ತಿದ್ದನು. ನಿಜಕ್ಕೂ ಅವನು ದಂಗೆಕೋರರಲ್ಲಾಗಿದ್ದನು.

اِنَّ فِرْعَوْنَ عَلَا فِى الْاَرْضِ وَجَعَلَ
اَهْلَهَا شِيَعًا يَّسْتَضْعِفُ طَآئِفَةً مِّنْهُمْ
يُذَبِّحُ اَبْنَآءَهُمْ وَيَسْتَحْيٖ نِسَآءَهُمْ ۗ
اِنَّهٗ كَانَ مِنَ الْمُفْسِدِيْنَ ۝٤

5. ನಾವು ಭೂಮಿಯಲ್ಲಿ ತುಳಿಯಲ್ಪಟ್ಟವರ ಮೇಲೆ ಕೃಪೆ ತೋರಬೇಕೆಂದೂ ಅವರನ್ನು ನಾಯಕರಾಗಿ ಮಾಡಿ ಬಿಡಬೇಕೆಂದೂ ಅವರನ್ನೇ ಉತ್ತರಾಧಿಕಾರಿಗಳಾಗಿ ಮಾಡಬೇಕೆಂದೂ-

وَنُرِيْدُ اَنْ نَّمُنَّ عَلَى الَّذِيْنَ اسْتُضْعِفُوْا
فِى الْاَرْضِ وَنَجْعَلَهُمْ اَئِمَّةً وَّنَجْعَلَهُمُ
الْوٰرِثِيْنَ ۝٥

6. ಭೂಮಿಯಲ್ಲಿ ಅವರಿಗೆ ಪ್ರಭುತ್ವ ನೀಡಬೇಕೆಂದೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೇನೆಗಳಿಗೆ ಯಾವುದರ ಭಯವಿತ್ತೋ ಅದನ್ನೇ ತೋರಿಸಿಕೊಡಬೇಕೆಂದೂ ಬಯಸಿದ್ದೆವು.

وَنُمَكِّنَ لَهُمْ فِى الْاَرْضِ وَنُرِىَ فِرْعَوْنَ
وَهَامٰنَ وَجُنُوْدَهُمَا مِنْهُمْ مَّا كَانُوْا
يَحْذَرُوْنَ ۝٦

7. ನಾವು ಮೂಸಾರ ತಾಯಿಗೆ, "ಇದಕ್ಕೆ ಮೊಲೆಹಾಲುಣಿಸು.

وَاَوْحَيْنَآ اِلٰٓى اُمِّ مُوْسٰٓى اَنْ اَرْضِعِيْهِ ۚ

ಮುಂದೆ ನಿನಗೆ ಇದರ ಪ್ರಾಣದ ಬಗ್ಗೆ ಭಯವುಂಟಾದರೆ ಇದನ್ನು ನದಿಯಲ್ಲಿ ಹಾಕಿ ಬಿಡು. ನೀನು ಕೊಂಚವೂ ಭಯ ಪಡಬೇಡ. ವ್ಯಥೆ ಪಡಬೇಡ. ನಾವು ಇದನ್ನು ನಿನ್ನ ಬಳಿಗೇ ಮರಳಿ ತರುವೆವು ಮತ್ತು ಇದನ್ನು ಸಂದೇಶವಾಹಕರಲ್ಲಿ ಸೇರಿಸುವೆವು" ಎಂದು ಸೂಚನೆ ನೀಡಿದೆವು.[1]

فَإِذَا خِفْتِ عَلَيْهِ فَأَلْقِيهِ فِي الْيَمِّ وَلَا تَخَافِي وَلَا تَحْزَنِي ۖ إِنَّا رَادُّوهُ إِلَيْكِ وَجَاعِلُوهُ مِنَ الْمُرْسَلِينَ ﴿٧﴾

8. ಕೊನೆಗೆ ಫಿರ್‌ಔನನ ಮನೆಯವರು- ತಮ್ಮ ಶತ್ರುವಾಗಲು ಮತ್ತು ತಮ್ಮ ವ್ಯಥೆಗೆ ಕಾರಣವಾಗಲು ಅದನ್ನು (ನದಿಯಿಂದ) ಎತ್ತಿಕೊಂಡರು. ನಿಜಕ್ಕೂ ಫಿರ್‌ಔನನೂ ಹಾಮಾನನೂ ಅವನ ಸೇನೆಗಳೂ (ತಮ್ಮ ತಂತ್ರದಲ್ಲಿ) ತಪ್ಪಿ ಬಿದ್ದಿದ್ದರು.

فَالْتَقَطَهُ آلُ فِرْعَوْنَ لِيَكُونَ لَهُمْ عَدُوًّا وَحَزَنًا ۗ إِنَّ فِرْعَوْنَ وَهَامَانَ وَجُنُودَهُمَا كَانُوا خَاطِئِينَ ﴿٨﴾

9. ಫಿರ್‌ಔನನ ಪತ್ನಿಯು (ಅವನೊಡನೆ) "ಇದು ನನಗೂ, ನಿನಗೂ ಕಣ್ಮನಗಳಿಗೆ ತಂಪಾಗಿದೆ. ಇದನ್ನು ವಧಿಸಬೇಡ. ಇದು ನಮಗೆ ಲಾಭದಾಯಕವಾಗಲೂಬಹುದು ಅಥವಾ ನಾವು ಇದನ್ನು ಮಗನಾಗಿ ಮಾಡಿಕೊಳ್ಳಲೂಬಹುದು" ಎಂದಳು. ಅವರು (ಪರಿಣಾಮದ ಬಗ್ಗೆ) ಅಜ್ಞರಾಗಿದ್ದರು.

وَقَالَتِ امْرَأَتُ فِرْعَوْنَ قُرَّتُ عَيْنٍ لِي وَلَكَ ۖ لَا تَقْتُلُوهُ عَسَىٰ أَنْ يَنْفَعَنَا أَوْ نَتَّخِذَهُ وَلَدًا وَهُمْ لَا يَشْعُرُونَ ﴿٩﴾

10. ಅತ್ತ 'ಮೂಸಾ'ರ ತಾಯಿಯ ಹೃದಯ ತಳಮಳಿಸುತ್ತಿತ್ತು. ಅವಳು (ನಮ್ಮ ವಾಗ್ದಾನದ ಮೇಲೆ) ವಿಶ್ವಾಸವಿರಿಸುವವರಲ್ಲಾಗಲೆಂದು ನಾವು ಅವಳಿಗೆ ಸಾಂತ್ವನ ನೀಡದಿರುತ್ತಿದ್ದರೆ ಅವಳು ಗುಟ್ಟನ್ನು ರಟ್ಟುಮಾಡಿ ಬಿಡುತ್ತಿದ್ದಳು.

وَأَصْبَحَ فُؤَادُ أُمِّ مُوسَىٰ فَارِغًا ۖ إِنْ كَادَتْ لَتُبْدِي بِهِ لَوْلَا أَنْ رَبَطْنَا عَلَىٰ قَلْبِهَا لِتَكُونَ مِنَ الْمُؤْمِنِينَ ﴿١٠﴾

11. ಅವಳು ಮಗುವಿನ ಸಹೋದರಿಯೊಡನೆ ಅದರ ಹಿಂದೆಯೇ ಹೋಗೆಂದಳು. ಆ ಪ್ರಕಾರ ಅವಳು (ಶತ್ರುಗಳಿಗೆ) ಅದರ ಸುಳಿವು ಸಿಗದ ರೀತಿಯಲ್ಲಿ ಬದಿಯಿಂದ ನೋಡುತ್ತಲೇ ಇದ್ದಳು-

وَقَالَتْ لِأُخْتِهِ قُصِّيهِ ۖ فَبَصُرَتْ بِهِ عَنْ جُنُبٍ وَهُمْ لَا يَشْعُرُونَ ﴿١١﴾

12. ಮತ್ತು ನಾವು ಆ ಮಗುವಿನ ಪಾಲಿಗೆ ಹಾಲುಣಿಸುವ ಸ್ತ್ರೀಯರ ಸ್ತನಗಳನ್ನು ಮೊದಲೇ ನಿಷಿದ್ಧಗೊಳಿಸಿ ಬಿಟ್ಟಿದ್ದೆವು. (ಇದನ್ನು ಕಂಡು) ಆ ಹುಡುಗಿಯು ಅವರೊಡನೆ, "ಹಿತಾಕಾಂಕ್ಷೆಯೊಂದಿಗೆ ಇದರ ಪೋಷಣೆಯ ಹೊಣೆ ವಹಿಸತಕ್ಕಂತಹ ಮನೆಯವರನ್ನು ನಾನು ನಿಮಗೆ ತೋರಿಸಿ ಕೊಡಲೇ?" ಎಂದು ಕೇಳಿದಳು.

وَحَرَّمْنَا عَلَيْهِ الْمَرَاضِعَ مِنْ قَبْلُ فَقَالَتْ هَلْ أَدُلُّكُمْ عَلَىٰ أَهْلِ بَيْتٍ يَكْفُلُونَهُ لَكُمْ وَهُمْ لَهُ نَاصِحُونَ ﴿١٢﴾

13. ಈ ರೀತಿ ನಾವು ಮೂಸಾರನ್ನು ಅವರ ಮಾತೆಯ ಬಳಿಗೆ ಮರಳಿಸಿ

فَرَدَدْنَاهُ إِلَىٰ أُمِّهِ كَيْ تَقَرَّ عَيْنُهَا

1. ಇಂತಹುದೇ ಸನ್ನಿವೇಶದಲ್ಲಿ ಇಸ್ರಾಈಲರ ಪೈಕಿಯ ಒಂದು ಮನೆತನದಲ್ಲಿ ಮಗುವೊಂದು ಹುಟ್ಟಿತು. ಅದನ್ನೇ ಜಗತ್ತು ಮೂಸಾ(ಅ) ಎಂಬ ಹೆಸರಿನಿಂದ ಅರಿಯಿತು ಎಂಬ ವಿಷಯವನ್ನು ನಡುವೆ ಬಿಟ್ಟು ಬಿಡಲಾಗಿದೆ.

ದೆವು. ಆಕೆಯ ಕಣ್ಣುಗಳು ತಂಪಾಗಲೆಂದು, ಆಕೆ ದುಃಖಿಸದಿರಲೆಂದು ಮತ್ತು ಅಲ್ಲಾಹನ ವಾಗ್ದಾನವು ಸತ್ಯವಾಗಿತ್ತೆಂಬುದನ್ನು ಆಕೆ ತಿಳಿಯಲೆಂದು. ಆದರೆ ಹೆಚ್ಚಿನವರು ಇದನ್ನು ತಿಳಿಯುವುದಿಲ್ಲ.

وَلَا تَحْزَنَ وَلِتَعْلَمَ أَنَّ وَعْدَ اللَّهِ حَقٌّ وَلَٰكِنَّ أَكْثَرَهُمْ لَا يَعْلَمُونَ ﴿١٣﴾

14. ಮೂಸಾ ತಮ್ಮ ತುಂಬು ಯೌವನಕ್ಕೆ ತಲಪಿದಾಗ ಹಾಗೂ ಅವರ ಬೆಳವಣಿಗೆ ಪೂರ್ತಿಗೊಂಡಾಗ ನಾವು ಅವರಿಗೆ 'ನಿರ್ಧಾರಶಕ್ತಿ' ಯನ್ನೂ ಜ್ಞಾನವನ್ನೂ ನೀಡಿದೆವು. ನಾವು ಸಜ್ಜನರಿಗೆ ಇದೇ ರೀತಿ ಸತ್ಫಲವನ್ನು ದಯಪಾಲಿಸುತ್ತೇವೆ.

وَلَمَّا بَلَغَ أَشُدَّهُ وَاسْتَوَىٰ آتَيْنَاهُ حُكْمًا وَعِلْمًا ۚ وَكَذَٰلِكَ نَجْزِي الْمُحْسِنِينَ ﴿١٤﴾

15. (ಒಂದು ದಿನ) ನಗರವಾಸಿಗಳು ಅಲಕ್ಷ್ಯರಾಗಿದ್ದಾಗ ಅವರು ನಗರದೊಳಗೆ ಪ್ರವೇಶಿಸಿದರು. ಅಲ್ಲಿ ಅವರು ಇಬ್ಬರು ಜಗಳಾಡುತ್ತಿರುವುದನ್ನು ಕಂಡರು. ಒಬ್ಬನು ಅವರ ಸ್ವಂತ ಜನಾಂಗದವನಾಗಿದ್ದನು. ಇನ್ನೊಬ್ಬನು ಅವರ ಶತ್ರು ಜನಾಂಗಕ್ಕೆ ಸೇರಿದವನಾಗಿದ್ದನು. ಅವರ ಜನಾಂಗದವನು ಶತ್ರು ಜನಾಂಗದವನ ವಿರುದ್ಧ ಅವರನ್ನು ಸಹಾಯಕ್ಕಾಗಿ ಕೂಗಿದನು. ಮೂಸಾ ಅವನಿಗೆ ಒಂದು ಗುದ್ದು ಕೊಟ್ಟರು ಮತ್ತು ಅವನನ್ನು ಕೊನೆಗಾಣಿಸಿ ಬಿಟ್ಟರು. (ಈ ಕೃತ್ಯ ಸಂಭವಿಸಿ ಬಿಟ್ಟೊಡನೆ) ಮೂಸಾ, "ಇದು ಶೈತಾನನ ಕೆಲಸ. ಅವನು ಮಹಾ ಶತ್ರುವೂ ಸುಸ್ಪಷ್ಟ ದಾರಿಗೆಡಿಸುವವನೂ ಆಗಿರುತ್ತಾನೆ" ಎಂದರು.

وَدَخَلَ الْمَدِينَةَ عَلَىٰ حِينِ غَفْلَةٍ مِّنْ أَهْلِهَا فَوَجَدَ فِيهَا رَجُلَيْنِ يَقْتَتِلَانِ هَٰذَا مِن شِيعَتِهِ وَهَٰذَا مِنْ عَدُوِّهِ ۖ فَاسْتَغَاثَهُ الَّذِي مِن شِيعَتِهِ عَلَى الَّذِي مِنْ عَدُوِّهِ فَوَكَزَهُ مُوسَىٰ فَقَضَىٰ عَلَيْهِ ۖ قَالَ هَٰذَا مِنْ عَمَلِ الشَّيْطَانِ ۖ إِنَّهُ عَدُوٌّ مُّضِلٌّ مُّبِينٌ ﴿١٥﴾

16. ತರುವಾಯ ಅವರು, "ನನ್ನ ಪ್ರಭೂ, ನನ್ನ ಮೇಲೆ ನಾನೇ ಅಕ್ರಮವೆಸಗಿ ಬಿಟ್ಟೆ. ನನ್ನನ್ನು ಕ್ಷಮಿಸು" ಎಂದರು. ಆ ಪ್ರಕಾರ ಅಲ್ಲಾಹನು ಅವರನ್ನು ಕ್ಷಮಿಸಿದನು.[2] ಅವನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

قَالَ رَبِّ إِنِّي ظَلَمْتُ نَفْسِي فَاغْفِرْ لِي فَغَفَرَ لَهُ ۚ إِنَّهُ هُوَ الْغَفُورُ الرَّحِيمُ ﴿١٦﴾

17. ಮೂಸಾ ಹೀಗೆ ಪ್ರತಿಜ್ಞೆ ಮಾಡಿದರು, "ನನ್ನ ಪ್ರಭೂ, ನೀನು ನನ್ನ ಮೇಲೆ ಈ ಉಪಕಾರವೆಸಗಿರುವೆ.[3] ಇನ್ನು ಮುಂದೆ ನಾನೆಂದೂ ಅಪರಾಧಿಗಳ ಸಹಾಯಕನಾಗಲಾರೆ."

قَالَ رَبِّ بِمَا أَنْعَمْتَ عَلَيَّ فَلَنْ أَكُونَ ظَهِيرًا لِّلْمُجْرِمِينَ ﴿١٧﴾

18. ಮರುದಿನ ಮುಂಜಾನೆ ಹೆದರುತ್ತ, ಎಲ್ಲೆಲ್ಲೂ ಅಪಾಯವನ್ನೇ

فَأَصْبَحَ فِي الْمَدِينَةِ خَائِفًا يَتَرَقَّبُ

2. 'ಮಗ್ಫಿರತ್'ನ ಅರ್ಥ ಕ್ಷಮಿಸುವುದು, ಮನ್ನಿಸುವುದು ಎಂದಲ್ಲದೆ 'ಮರೆಸುವುದು' ಎಂದೂ ಆಗುತ್ತದೆ. ಹ. ಮೂಸಾರ(ಅ) ಪ್ರಾರ್ಥನೆಯ ಅರ್ಥ, "ನೀನು ತಿಳಿದಿರುವಂತೆ ನಾನು ಉದ್ದೇಶ ಪೂರ್ವಕವಾಗಿ ಮಾಡಿರದ ಪಾಪವನ್ನು ನೀನು ಮನ್ನಿಸು. ಅಂತೆಯೇ ಶತ್ರುಗಳಿಗೆ ಆ ಬಗ್ಗೆ ತಿಳಿಯದಂತೆ ಅದನ್ನು ಮರೆಯಲ್ಲಿರಿಸು" ಎಂದಾಗಿದೆ.

3. ಅರ್ಥಾತ್- ನನ್ನ ಕರ್ಮ ಮರೆಯಲ್ಲುಳಿಯಿತು. ಶತ್ರು ಸಮುದಾಯದ ಯಾವ ವ್ಯಕ್ತಿಯೂ ನನ್ನನ್ನು ನೋಡಲಿಲ್ಲ. ಹಾಗೆಯೇ ನನಗೆ ಸುರಕ್ಷಿತವಾಗಿ ಪಾರಾಗುವ ಅವಕಾಶ ಸಿಕ್ಕಿತು.

فَإِذَا الَّذِي اسْتَنصَرَهُ بِالْأَمْسِ يَسْتَصْرِخُهُ ۚ قَالَ لَهُ مُوسَىٰ إِنَّكَ لَغَوِيٌّ مُّبِينٌ ﴿١٨﴾

ಅನುಮಾನಿಸುತ್ತ ನಗರದಲ್ಲಿ ಹೋಗುತ್ತಿದ್ದಾಗ, ನಿನ್ನೆ ಅವರನ್ನು ಸಹಾಯಕ್ಕಾಗಿ ಕೂಗಿದ್ದ ವ್ಯಕ್ತಿಯೇ ಇಂದು ಪುನಃ ಕೂಗುತ್ತಿರುವುದನ್ನು ಕಂಡರು. ಮೂಸಾ ಅವನೊಡನೆ, "ನೀನು ಮಹಾ ದಾರಿಗೆಟ್ಟವ" ಎಂದರು.

فَلَمَّا أَنْ أَرَادَ أَن يَبْطِشَ بِالَّذِي هُوَ عَدُوٌّ لَّهُمَا قَالَ يَا مُوسَىٰ أَتُرِيدُ أَن تَقْتُلَنِي كَمَا قَتَلْتَ نَفْسًا بِالْأَمْسِ ۖ إِن تُرِيدُ إِلَّا أَن تَكُونَ جَبَّارًا فِي الْأَرْضِ وَمَا تُرِيدُ أَن تَكُونَ مِنَ الْمُصْلِحِينَ ﴿١٩﴾

19. ಅನಂತರ ಮೂಸಾ ಶತ್ರು ಜನಾಂಗದವನ ಮೇಲೆ ಆಕ್ರಮಣ ಮಾಡಲಿಚ್ಛಿಸಿದಾಗ ಅವನು- "ಮೂಸಾ, ನೀನು ನಿನ್ನೆ ಒಬ್ಬನನ್ನು ಕೊಲೆ ಮಾಡಿದಂತೆಯೇ ಇಂದು ನನ್ನನ್ನೂ ಕೊಲೆ ಮಾಡಲು ಹೊರಟಿರುವೆಯಾ? ನೀನು ಈ ದೇಶದಲ್ಲಿ ದೊಡ್ಡ ವಿಧ್ವಂಸಕನಾಗ ಲಿಚ್ಛಿಸುತ್ತೀ,- ಸುಧಾರಕನಾಗ ಬಯಸುವುದಿಲ್ಲ" ಎಂದು ಕೂಗಿದನು.[4]

وَجَاءَ رَجُلٌ مِّنْ أَقْصَى الْمَدِينَةِ يَسْعَىٰ قَالَ يَا مُوسَىٰ إِنَّ الْمَلَأَ يَأْتَمِرُونَ بِكَ لِيَقْتُلُوكَ فَاخْرُجْ إِنِّي لَكَ مِنَ النَّاصِحِينَ ﴿٢٠﴾

20. ಅನಂತರ ಒಬ್ಬನು ನಗರದ ಆ ತುದಿಯಿಂದ ಓಡುತ್ತಾ ಬಂದನು ಮತ್ತು "ಮೂಸಾ, ಸರದಾರರ ನಡುವೆ ನಿನ್ನನ್ನು ಕೊಲೆ ಮಾಡುವ ಸಮಾಲೋಚನೆ ನಡೆಯುತ್ತಿದೆ. ಇಲ್ಲಿಂದ ಹೊರಟು ಹೋಗಿ ಬಿಡು. ನಾನು ನಿನ್ನ ಹಿತಚಿಂತಕನಾಗಿದ್ದೇನೆ" ಎಂದು ಹೇಳಿದನು.[5]

فَخَرَجَ مِنْهَا خَائِفًا يَتَرَقَّبُ ۖ قَالَ رَبِّ نَجِّنِي مِنَ الْقَوْمِ الظَّالِمِينَ ﴿٢١﴾

21. ಈ ಸುದ್ದಿಯನ್ನು ಕೇಳಿದೊಡನೆ ಮೂಸಾ ಭಯಭೀತರಾಗಿ ಹೊರಟು ಬಿಟ್ಟರು ಮತ್ತು ಅವರು, "ನನ್ನ ಪ್ರಭೂ, ನನ್ನನ್ನು ಅಕ್ರಮಿಗಳಿಂದ ರಕ್ಷಿಸು" ಎಂದು ಪ್ರಾರ್ಥಿಸಿದರು.

وَلَمَّا تَوَجَّهَ تِلْقَاءَ مَدْيَنَ قَالَ عَسَىٰ رَبِّي أَن يَهْدِيَنِي سَوَاءَ السَّبِيلِ ﴿٢٢﴾

22. ಮೂಸಾ (ಈಜಿಪ್ಟ್‌ನಿಂದ) ಮದ್‌ಯನಿನ ಕಡೆಗೆ ಹೊರಟರು ಮತ್ತು "ನನ್ನ ಪ್ರಭು, ನನ್ನನ್ನು ಸರಿಯಾದ ಮಾರ್ಗದಲ್ಲಿ ನಡೆಸುವನೆಂಬ ನಿರೀಕ್ಷೆ ಇದೆ" ಎಂದರು.[6]

وَلَمَّا وَرَدَ مَاءَ مَدْيَنَ وَجَدَ عَلَيْهِ أُمَّةً مِّنَ النَّاسِ يَسْقُونَ

23. ಅವರು ಮದ್‌ಯನಿನ ಬಾವಿಯ ಬಳಿಗೆ ತಲುಪಿದಾಗ ಅನೇಕ ಜನರು ತಮ್ಮ ಜಾನುವಾರುಗಳಿಗೆ ನೀರು ಕುಡಿಸುತ್ತಿರುವುದನ್ನೂ

4. ಈ ಕೂಗುವವನು, ಮೂಸಾರ(ಅ) ನೆರವಿಗೆ ಮುಂದಾಗಿದ್ದ ಪ್ರಸ್ತುತ ಇಸ್ರಾಈಲ್ ಜನಾಂಗದವನೇ ಆಗಿದ್ದನು. ಅವನನ್ನು ಗದರಿಸಿದ ನಂತರ ಅವರು ಈಜಿಪ್ಟ್‌ನವರಿಗೆ ಹೊಡೆಯಲು ಹೊರಟಾಗ ಇಸ್ರಾಈಲಿಯನು ಇವರು ತನ್ನನ್ನು ಹೊಡೆಯಲು ಬರುತ್ತಿದ್ದಾರೆಂದು ಭಾವಿಸಿದನು. ಆದ್ದರಿಂದ ಅವನು ಕೂಗಲಾರಂಭಿಸಿದನು. ಹೀಗೆ ಹಿಂದಿನ ದಿನ ಸಂಭವಿಸಿದ್ದ ವಧೆಯ ರಹಸ್ಯವನ್ನು ಅವನು ತನ್ನ ಮೂರ್ಖತನದಿಂದ ಬಯಲುಗೊಳಿಸಿ ಬಿಟ್ಟನು.

5. ಅರ್ಥಾತ್- ಈ ಎರಡನೆಯ ಜಗಳದಲ್ಲಿ ಕೊಲೆಯ ರಹಸ್ಯ ಬಯಲಾದಾಗ ಮತ್ತು ಈಜಿಪ್ಟ್‌ನವರು ಹೋಗಿ ಸುದ್ದಿ ಮುಟ್ಟಿಸಿದಾಗ ಈ ಘಟನೆ ನಡೆಯಿತು.

6. ಅರ್ಥಾತ್- ಸುರಕ್ಷಿತವಾಗಿ ಮದ್‌ಯನ್ ತಲುಪಲು ಸಾಧ್ಯವಿರುವ ಮಾರ್ಗದಲ್ಲಿ.

ಅವರಿಂದ ದೂರ ಒಂದೆಡೆ ಇಬ್ಬರು ಮಹಿಳೆಯರು ತಮ್ಮ ಜಾನುವಾರುಗಳನ್ನು ತಡೆಯುತ್ತಿರುವುದನ್ನೂ ಕಂಡರು. ಮೂಸಾ ಆ ಮಹಿಳೆಯರೊಡನೆ, "ನಿಮಗೇನು ತೊಂದರೆಯಾಗಿದೆ"? ಎಂದು ಕೇಳಿದರು. ಆಗ ಅವರು, ಈ ಕುರುಬರು ತಮ್ಮ ಜಾನುವಾರು ಗಳನ್ನು ಕೊಂಡು ಹೋಗುವ ವರೆಗೂ ನಾವು ನಮ್ಮ ಜಾನುವಾರು ಗಳಿಗೆ ನೀರು ಕುಡಿಸುವಂತಿಲ್ಲ ಮತ್ತು ನಮ್ಮ ತಂದೆ ಓರ್ವ ಅತಿ ವೃದ್ಧರಾಗಿದ್ದಾರೆ ಎಂದರು.

وَوَجَدَ مِن دُونِهِمُ امْرَأَتَيْنِ تَذُودَانِ ۖ قَالَ مَا خَطْبُكُمَا ۖ قَالَتَا لَا نَسْقِي حَتَّىٰ يُصْدِرَ الرِّعَاءُ ۖ وَأَبُونَا شَيْخٌ كَبِيرٌ ﴿٢٣﴾

24. ಇದನ್ನು ಕೇಳಿ ಮೂಸಾ, ಅವರ ಜಾನುವಾರುಗಳಿಗೆ ನೀರು ಕುಡಿಸಿದರು. ತರುವಾಯ ಒಂದು ನೆರಳಿರುವ ಜಾಗಕ್ಕೆ ಹೋಗಿ ಕುಳಿತರು ಮತ್ತು "ಪ್ರಭೂ, ನೀನು ನನ್ನ ಮೇಲೆ ಯಾವ ಹಿತವನ್ನಿಳಿಸಿದರೂ ನಾನು ಅದರ ಅಪೇಕ್ಷಕನಾಗಿದ್ದೇನೆ" ಎಂದರು.

فَسَقَىٰ لَهُمَا ثُمَّ تَوَلَّىٰ إِلَى الظِّلِّ فَقَالَ رَبِّ إِنِّي لِمَا أَنزَلْتَ إِلَيَّ مِنْ خَيْرٍ فَقِيرٌ ﴿٢٤﴾

25. (ಸ್ವಲ್ಪ ಹೊತ್ತಿನಲ್ಲೇ) ಆ ಇಬ್ಬರು ಮಹಿಳೆಯರಲ್ಲಿ ಒಬ್ಬಳು ಲಜ್ಜೆಯೊಂದಿಗೆ ನಡೆಯುತ್ತಾ ಅವರ ಬಳಿಗೆ ಬಂದಳು ಮತ್ತು, "ತಾವು ನಮಗಾಗಿ ಜಾನುವಾರುಗಳಿಗೆ ನೀರು ಕುಡಿಸಿದುದರ ಪ್ರತಿಫಲವನ್ನು ತಮಗೆ ಕೊಡಲಿಕ್ಕಾಗಿ ನನ್ನ ತಂದೆ ತಮ್ಮನ್ನು ಕರೆಯುತ್ತಿದ್ದಾರೆ" ಎಂದಳು. ಮೂಸಾ ಅವರ ಬಳಿಗೆ ತಲಪಿದಾಗ ಮತ್ತು ತಮ್ಮ ಸಂಪೂರ್ಣ ವೃತ್ತಾಂತವನ್ನು ಅವರಿಗೆ ಹೇಳಿ ತಿಳಿಸಿದಾಗ ಅವರು, "ಕೊಂಚವೂ ಹೆದರಬೇಡಿರಿ. ಈಗ ನೀವು ಅಕ್ರಮಿಗಳಿಂದ ಪಾರಾಗಿ ಬಿಟ್ಟಿದ್ದೀರಿ" ಎಂದರು.

فَجَاءَتْهُ إِحْدَاهُمَا تَمْشِي عَلَى اسْتِحْيَاءٍ قَالَتْ إِنَّ أَبِي يَدْعُوكَ لِيَجْزِيَكَ أَجْرَ مَا سَقَيْتَ لَنَا ۚ فَلَمَّا جَاءَهُ وَقَصَّ عَلَيْهِ الْقَصَصَ قَالَ لَا تَخَفْ ۖ نَجَوْتَ مِنَ الْقَوْمِ الظَّالِمِينَ ﴿٢٥﴾

26. ಆ ಇಬ್ಬರು ಮಹಿಳೆಯರಲ್ಲಿ ಒಬ್ಬಳು ತನ್ನ ತಂದೆಯೊಡನೆ, "ಅಪ್ಪಾ ಇವರನ್ನು ನೌಕರನಾಗಿ ಇರಿಸಿಕೊಳ್ಳಿರಿ. ನೀವು ನೌಕರನಾಗಿ ಇರಿಸಿಕೊಳ್ಳುವವನು ಬಲಿಷ್ಠನೂ ಪ್ರಾಮಾಣಿಕನೂ ಆಗಿರಬೇಕಲ್ಲವೇ" ಎಂದಳು.

قَالَتْ إِحْدَاهُمَا يَا أَبَتِ اسْتَأْجِرْهُ ۖ إِنَّ خَيْرَ مَنِ اسْتَأْجَرْتَ الْقَوِيُّ الْأَمِينُ ﴿٢٦﴾

27. ಅವಳ ತಂದೆಯು (ಮೂಸಾರೊಡನೆ), "ನೀವು ಎಂಟು ವರ್ಷಗಳ ವರೆಗೆ ನನ್ನಲ್ಲಿ ನೌಕರಿ ಮಾಡಬೇಕೆಂಬ ಶರತ್ತಿನ ಮೇಲೆ ನಾನು ನನ್ನ ಈ ಇಬ್ಬರು ಪುತ್ರಿಯರಲ್ಲಿ ಒಬ್ಬಳನ್ನು ನಿಮಗೆ ವಿವಾಹ ಮಾಡಿಸಲಿಚ್ಛಿಸುತ್ತೇನೆ. ಇನ್ನು ನೀವು ಹತ್ತು ವರ್ಷ ಪೂರ್ತಿಗೊಳಿಸಿ ಬಿಟ್ಟರೆ ಅದು ನಿಮ್ಮಿಷ್ಟ. ನಾನು ನಿಮಗೆ ಕಷ್ಟಕೊಡಲಿಚ್ಛಿಸುವುದಿಲ್ಲ. ಅಲ್ಲಾಹನಿಚ್ಛಿಸಿದರೆ ನೀವು ನನ್ನನ್ನು ಸಜ್ಜನನಾಗಿ ಕಾಣುವಿರಿ" ಎಂದರು.

قَالَ إِنِّي أُرِيدُ أَنْ أُنكِحَكَ إِحْدَى ابْنَتَيَّ هَاتَيْنِ عَلَىٰ أَن تَأْجُرَنِي ثَمَانِيَ حِجَجٍ ۖ فَإِنْ أَتْمَمْتَ عَشْرًا فَمِنْ عِندِكَ ۖ وَمَا أُرِيدُ أَنْ أَشُقَّ عَلَيْكَ ۚ سَتَجِدُنِي إِن شَاءَ اللَّهُ مِنَ الصَّالِحِينَ ﴿٢٧﴾

28. ಆಗ ಮೂಸಾ, "ಇದು ನನ್ನ ಮತ್ತು ನಿಮ್ಮ ನಡುವೆ ಇತ್ಯರ್ಥ ಗೊಂಡಿತು. ನಾನು ಈ ಎರಡು ಅವಧಿಗಳಲ್ಲಿ ಯಾವುದನ್ನೇ ಪೂರ್ತಿಗೊಳಿಸಿದರೂ ಆ ಬಳಿಕ ಬೇರೇನೂ ಅತಿರೇಕ ನನ್ನ ಮೇಲಾಗಬಾರದು. ನಾವು ಮಾಡುತ್ತಿರುವ ಈ ಎಲ್ಲ ಕರಾರುಗಳ ಬಗ್ಗೆ ಅಲ್ಲಾಹನು ಕಾವಲಾಗಿರುತ್ತಾನೆ" ಎಂದು ಉತ್ತರಿಸಿದರು.

قَالَ ذٰلِكَ بَيْنِيْ وَبَيْنَكَ ؕ اَيَّمَا الْاَجَلَيْنِ قَضَيْتُ فَلَا عُدْوَانَ عَلَيَّ ؕ وَاللّٰهُ عَلٰى مَا نَقُوْلُ وَكِيْلٌ ﴿٢٨﴾

29. ಮೂಸಾ, ಅವಧಿ ಪೂರ್ತಿಗೊಳಿಸಿದ ನಂತರ ತಮ್ಮ ಕುಟುಂಬವನ್ನು ಕರೆದುಕೊಂಡು ಹೊರಟಾಗ ತೂರ್ ಪರ್ವತದ ಕಡೆ, ಅವರಿಗೊಂದು ಬೆಂಕಿ ಕಂಡಿತು. ಅವರು ಮನೆಯವರೊಡನೆ, "ನಿಲ್ಲಿರಿ, ನಾನೊಂದು ಬೆಂಕಿಯನ್ನು ಕಂಡಿದ್ದೇನೆ. ಪ್ರಾಯಶಃ ನಾನು ಅಲ್ಲಿಂದೇನಾದರೂ ಸುದ್ದಿ ತರಬಹುದು ಅಥವಾ ಆ ಬೆಂಕಿಯಿಂದ ಒಂದು ಕೆಂಡವನ್ನಾದರೂ ತರಬಹುದು. ಅದರಿಂದ ನೀವು ಚಳಿ ಕಾಯಿಸಿಕೊಳ್ಳಬಹುದು" ಎಂದರು.

فَلَمَّا قَضٰى مُوْسَى الْاَجَلَ وَسَارَ بِاَهْلِهٖۤ اٰنَسَ مِنْ جَانِبِ الطُّوْرِ نَارًا ۚ قَالَ لِاَهْلِهِ امْكُثُوْۤا اِنِّيْۤ اٰنَسْتُ نَارًا لَّعَلِّيْۤ اٰتِيْكُمْ مِّنْهَا بِخَبَرٍ اَوْ جَذْوَةٍ مِّنَ النَّارِ لَعَلَّكُمْ تَصْطَلُوْنَ ﴿٢٩﴾

30. ಅಲ್ಲಿಗೆ ತಲಪಿದಾಗ ಕಣಿವೆಯ ಬಲ ಬದಿಯ[7] ಮಂಗಳದಾಯಕ ಸ್ಥಳದಲ್ಲಿ ಒಂದು ಮರದಿಂದ ಹೀಗೆ ಕೂಗಲಾಯಿತು, "ಮೂಸಾ! ನಾನೇ ಅಲ್ಲಾಹ್, ಸರ್ವ ಲೋಕಗಳ ಪ್ರಭು"

فَلَمَّاۤ اَتٰىهَا نُوْدِيَ مِنْ شَاطِئِ الْوَادِ الْاَيْمَنِ فِي الْبُقْعَةِ الْمُبٰرَكَةِ مِنَ الشَّجَرَةِ اَنْ يّٰمُوْسٰۤى اِنِّيْۤ اَنَا اللّٰهُ رَبُّ الْعٰلَمِيْنَ ﴿٣٠﴾

31. ಮತ್ತು "ನಿಮ್ಮ ಲಾಠಿಯನ್ನು ಎಸೆದು ಬಿಡಿರಿ" (ಎಂದು ಅಪ್ಪಣೆ ಯಾಯಿತು) ಆ ಲಾಠಿಯು ಹಾವಿನಂತೆ ತೆವಳುತ್ತಿರುವುದನ್ನು ಕಂಡೊಡನೆ ಮೂಸಾ ಬೆನ್ನು ತಿರುಗಿಸಿ ಓಟಕ್ಕಿತ್ತರು ಮತ್ತು ಅವರು ತಿರುಗಿಯೂ ನೋಡಲಿಲ್ಲ. (ಅಪ್ಪಣೆಯಾಯಿತು) "ಮೂಸಾ, ಮರಳಿ ಬನ್ನಿರಿ, ಹೆದರಬೇಡಿರಿ, ನೀವು ಸಂಪೂರ್ಣ ಸುರಕ್ಷಿತರಾಗಿದ್ದೀರಿ.

وَاَنْ اَلْقِ عَصَاكَ ؕ فَلَمَّا رَاٰهَا تَهْتَزُّ كَاَنَّهَا جَآنٌّ وَّلّٰى مُدْبِرًا وَّلَمْ يُعَقِّبْ ؕ يٰمُوْسٰۤى اَقْبِلْ وَلَا تَخَفْ ۫ اِنَّكَ مِنَ الْاٰمِنِيْنَ ﴿٣١﴾

32. ನಿಮ್ಮ ಕೈಯನ್ನು ಜೇಬಿನೊಳಗೆ ಹಾಕಿರಿ, ಅದು ಪ್ರಕಾಶಿಸುತ್ತಾ ನಿರಾಯಾಸವಾಗಿ ಹೊರಬರುವುದು ಮತ್ತು ಭೀತಿಯಿಂದ ಪಾರಾಗಲಿಕ್ಕಾಗಿ ನಿಮ್ಮ ಬಾಹುಗಳನ್ನು ಬಿಗಿದು ಕೊಳ್ಳಿರಿ[8] ನಿಮ್ಮ ಪ್ರಭುವಿನ ಕಡೆಯಿಂದ ಫಿರ್‌ಔನ್ ಮತ್ತು ಅವನ ಆಸ್ಥಾನಿಗರ ಮುಂದಿಡಲಿಕ್ಕಾಗಿ, ಇವೆರಡು ಪ್ರತ್ಯಕ್ಷ ನಿದರ್ಶನಗಳಾಗಿವೆ. ಅವರು ಮಹಾ ಆಜ್ಞೋಲ್ಲಂಘಕರಾಗಿದ್ದಾರೆ."

اُسْلُكْ يَدَكَ فِيْ جَيْبِكَ تَخْرُجْ بَيْضَآءَ مِنْ غَيْرِ سُوْٓءٍ ۫ وَّاضْمُمْ اِلَيْكَ جَنَاحَكَ مِنَ الرَّهْبِ فَذٰنِكَ بُرْهَانٰنِ مِنْ رَّبِّكَ اِلٰى فِرْعَوْنَ وَمَلَا۟ئِهٖ ؕ اِنَّهُمْ كَانُوْا قَوْمًا فٰسِقِيْنَ ﴿٣٢﴾

7. ಅರ್ಥಾತ್- ಮೂಸಾರ(ಅ) ಬಲಬದಿ.

8. ಅರ್ಥಾತ್- ನಿಮ್ಮ ಮನಸ್ಸಿನಲ್ಲಿ ಭಯ ಉಂಟು ಮಾಡುವಂತಹ ಯಾವುದೇ ಅಪಾಯಕರ ಸಂದರ್ಭ ಎದುರಾದಾಗ ನಿಮ್ಮ ಬಾಹುವನ್ನು ಬಿಗಿದುಕೊಳ್ಳಿರಿ. ಇದರಿಂದ ನಿಮ್ಮ ಹೃದಯ ಬಲಗೊಳ್ಳುವುದು. ಭಯಾತಂಕದ ಯಾವುದೇ ಭಾವನೆ ನಿಮ್ಮೊಳಗೆ ಬಾಕಿಯುಳಿಯಲಾರದು.

33. ಆಗ ಮೂಸಾ ಭಿನ್ನವಿಸಿದರು, "ನನ್ನ ಪ್ರಭೂ, ನಾನು ಅವರ ಒಬ್ಬ ವ್ಯಕ್ತಿಯನ್ನು ಕೊಲೆ ಮಾಡಿದ್ದೇನೆ. ಅವರು ನನ್ನನ್ನು ಕೊಂದು ಹಾಕುವರೆಂದು ನನಗೆ ಭಯವಿದೆ.

قَالَ رَبِّ إِنِّي قَتَلْتُ مِنْهُمْ نَفْسًا فَأَخَافُ أَن يَقْتُلُونِ ﴿٣٣﴾

34. ನನ್ನ ಸಹೋದರ ಹಾರೂನರು ನನಗಿಂತ ಉತ್ತಮ ಮಾತುಗಾರ. ಅವರು ನನ್ನನ್ನು ಸಮರ್ಥಿಸುವಂತೆ ಅವರನ್ನು ಸಹಾಯಕನಾಗಿ ನನ್ನ ಜೊತೆ ಕಳುಹಿಸು, ಆ ಜನರು ನನ್ನನ್ನು ಸುಳ್ಳಾಗಿಸುವರೆಂಬ ಆಶಂಕೆ ನನಗಿದೆ."

وَأَخِي هَارُونُ هُوَ أَفْصَحُ مِنِّي لِسَانًا فَأَرْسِلْهُ مَعِيَ رِدْءًا يُصَدِّقُنِي ۖ إِنِّي أَخَافُ أَن يُكَذِّبُونِ ﴿٣٤﴾

35. ಆಗ, "ನಿಮ್ಮ ಸಹೋದರನ ಮುಖಾಂತರ ನಾವು ನಿಮಗೆ ಬೆಂಬಲ ನೀಡುವೆವು ಮತ್ತು ಅವರು ನಿಮಗೇನೂ ಹಾನಿ ಮಾಡ ಲಾಗದಂತಹ ವರ್ಚಸ್ಸನ್ನು ನಿಮಗಿಬ್ಬರಿಗೂ ದಯಪಾಲಿಸುವೆವು. ನಮ್ಮ ನಿದರ್ಶನಗಳ ಬಲದಿಂದ ವಿಜಯವು ನಿಮ್ಮ ಹಾಗೂ ನಿಮ್ಮ ಅನುಯಾಯಿಗಳದ್ದೇ ಆಗಿರುವುದು" ಎಂದು (ಅಲ್ಲಾಹನು) ಹೇಳಿದನು.

قَالَ سَنَشُدُّ عَضُدَكَ بِأَخِيكَ وَنَجْعَلُ لَكُمَا سُلْطَانًا فَلَا يَصِلُونَ إِلَيْكُمَا ۚ بِآيَاتِنَا أَنتُمَا وَمَنِ اتَّبَعَكُمَا الْغَالِبُونَ ﴿٣٥﴾

36. ತರುವಾಯ ಮೂಸಾ ನಮ್ಮ ಸುವ್ಯಕ್ತ ನಿದರ್ಶನಗಳೊಂದಿಗೆ ಅವರ ಬಳಿಗೆ ತಲಪಿದರು. ಆಗ ಅವರು, "ಇದು ಕೃತಕ ಜಾದುವೇ ಹೊರತು ಬೇರೇನೂ ಅಲ್ಲ ಮತ್ತು ನಾವು ಇಂತಹ ಮಾತುಗಳನ್ನು ನಮ್ಮ ಪೂರ್ವಿಕರ ಕಾಲದಲ್ಲಿ ಎಂದೂ ಕೇಳಿರ ಲಿಲ್ಲ" ಎಂದರು.

فَلَمَّا جَاءَهُم مُّوسَىٰ بِآيَاتِنَا بَيِّنَاتٍ قَالُوا مَا هَٰذَا إِلَّا سِحْرٌ مُّفْتَرًى وَمَا سَمِعْنَا بِهَٰذَا فِي آبَائِنَا الْأَوَّلِينَ ﴿٣٦﴾

37. ಮೂಸಾ ಹೀಗೆಂದರು, "ನನ್ನ ಪ್ರಭು ತನ್ನ ವತಿಯಿಂದ ಮಾರ್ಗದರ್ಶನ ಪಡೆದು ಬಂದಿರುವವನನ್ನು ಚೆನ್ನಾಗಿ ಬಲ್ಲನು. ಯಾರ ಅಂತಿಮ ಪರಿಣಾಮವು ಉತ್ತಮವಾಗಬೇಕಾಗಿದೆ ಎಂಬು ದನ್ನೂ ಅವನೇ ಚೆನ್ನಾಗಿ ತಿಳಿದಿರುವನು. ವಾಸ್ತವದಲ್ಲಿ ಅಕ್ರಮಿಗಳು ಎಂದೂ ಯಶಸ್ವಿಯಾಗುವುದಿಲ್ಲ."

وَقَالَ مُوسَىٰ رَبِّي أَعْلَمُ بِمَن جَاءَ بِالْهُدَىٰ مِنْ عِندِهِ وَمَن تَكُونُ لَهُ عَاقِبَةُ الدَّارِ ۖ إِنَّهُ لَا يُفْلِحُ الظَّالِمُونَ ﴿٣٧﴾

38. ಫಿರ್‌ಔನನು, "ಆಸ್ಥಾನಿಕರೇ ನನ್ನ ಹೊರತು ನಿಮ್ಮ ಇನ್ನಾವ ದೇವನನ್ನೂ ನಾನರಿಯೆನು. ಹಾಮಾನ್! ಇಟ್ಟಿಗೆಗಳನ್ನು ಸುಟ್ಟು ನನಗಾಗಿ ಒಂದು ಎತ್ತರವಾದ ಕಟ್ಟಡವನ್ನು ನಿರ್ಮಿಸು. ಬಹುಶಃ ಅದರ ಮೇಲೇರಿದರೆ ನನಗೆ ಮೂಸಾರ ದೇವರು ಕಾಣಿಸಲೂ ಬಹುದು, ನಾನಂತೂ ಇವನನ್ನು ಸುಳ್ಳುಗಾರನೆಂದು ಭಾವಿಸುತ್ತೇನೆ" ಎಂದನು.

وَقَالَ فِرْعَوْنُ يَا أَيُّهَا الْمَلَأُ مَا عَلِمْتُ لَكُم مِّنْ إِلَٰهٍ غَيْرِي فَأَوْقِدْ لِي يَا هَامَانُ عَلَى الطِّينِ فَاجْعَل لِّي صَرْحًا لَّعَلِّي أَطَّلِعُ إِلَىٰ إِلَٰهِ مُوسَىٰ وَإِنِّي لَأَظُنُّهُ مِنَ الْكَاذِبِينَ ﴿٣٨﴾

39. ಅವನೂ ಅವನ ಸೇನೆಗಳೂ ಭೂಮಿಯಲ್ಲಿ ಯಾವ ಹಕ್ಕೂ ಇಲ್ಲದೆ ಅಹಂಭಾವ ತೋರಿದರು ಮತ್ತು ಅವರಿಗೆಂದೂ ನಮ್ಮ ಬಳಿ ಮರಳಲಿಕ್ಕಿಲ್ಲವೆಂದೇ ತಿಳಿದುಕೊಂಡರು.

وَاسْتَكْبَرَ هُوَ وَجُنُودُهُ فِي الْأَرْضِ بِغَيْرِ الْحَقِّ وَظَنُّوا أَنَّهُمْ إِلَيْنَا لَا يُرْجَعُونَ ﴿٣٩﴾

40. ಕೊನೆಗೆ ನಾವು ಅವನನ್ನೂ ಅವನ ಸೇನೆಗಳನ್ನೂ ಹಿಡಿದೆವು ಮತ್ತು ಸಮುದ್ರಕ್ಕೆ ಎಸೆದು ಬಿಟ್ಟೆವು. ಆ ಅಕ್ರಮಿಗಳ ಗತಿಯೇ ನಾಯಿತೆಂಬುದನ್ನು ನೋಡಿರಿ.

فَأَخَذْنَاهُ وَجُنُودَهُ فَنَبَذْنَاهُمْ فِي الْيَمِّ ۖ فَانْظُرْ كَيْفَ كَانَ عَاقِبَةُ الظَّالِمِينَ ﴿٤٠﴾

41. ನಾವು ಅವರನ್ನು ನರಕದ ಕಡೆಗೆ ಆಹ್ವಾನಿಸುವ ಮುಂದಾಳು ಗಳನ್ನಾಗಿ ಮಾಡಿದೆವು ಮತ್ತು ಅವರು ಪುನರುತ್ಥಾನ ದಿನ ಎಲ್ಲಿಂದಲೂ ಯಾವ ಸಹಾಯವನ್ನೂ ಪಡೆಯಲಾರರು.

وَجَعَلْنَاهُمْ أَئِمَّةً يَدْعُونَ إِلَى النَّارِ ۖ وَيَوْمَ الْقِيَامَةِ لَا يُنْصَرُونَ ﴿٤١﴾

42. ನಾವು ಈ ಲೋಕದಲ್ಲಿ ಅವರ ಹಿಂದೆ ಶಾಪವನ್ನಿರಿಸಿದ್ದೇವೆ ಮತ್ತು ಪುನರುತ್ಥಾನ ದಿನ ಅವರು ಮಹಾ ಹಾನಿಗೊಳಗಾಗುವರು.

وَأَتْبَعْنَاهُمْ فِي هَٰذِهِ الدُّنْيَا لَعْنَةً ۖ وَيَوْمَ الْقِيَامَةِ هُمْ مِنَ الْمَقْبُوحِينَ ﴿٤٢﴾

43. ಹಿಂದಿನ ಪೀಳಿಗೆಗಳನ್ನು ನಾಶಗೊಳಿಸಿದ ಬಳಿಕ ನಾವು ಜನರಿಗೆ ಸತ್ಯದರ್ಶನದ ಸಾಧನವಾಗಿಯೂ ಮಾರ್ಗದರ್ಶನ ಮತ್ತು ಅನುಗ್ರಹ ವಾಗಿಯೂ ಮೂಸಾರಿಗೆ ಗ್ರಂಥವನ್ನು ದಯಪಾಲಿಸಿದೆವು- ಜನರು ಪಾಠ ಕಲಿಯುವಂತಾಗಲೆಂದು.

وَلَقَدْ آتَيْنَا مُوسَى الْكِتَابَ مِنْ بَعْدِ مَا أَهْلَكْنَا الْقُرُونَ الْأُولَىٰ بَصَائِرَ لِلنَّاسِ وَهُدًى وَرَحْمَةً لَعَلَّهُمْ يَتَذَكَّرُونَ ﴿٤٣﴾

44. (ಮುಹಮ್ಮದ್‌ರೇ!) ನಾವು ಮೂಸಾರಿಗೆ ಈ ಧರ್ಮಾದೇಶವನ್ನು ನೀಡಿದಾಗ ನೀವು ಪಶ್ಚಿಮ ಭಾಗದಲ್ಲಿರಲಿಲ್ಲ[9] ಮತ್ತು ನೀವು ಸಾಕ್ಷಿದಾರರಲ್ಲೂ ಸೇರಿರಲಿಲ್ಲ,

وَمَا كُنْتَ بِجَانِبِ الْغَرْبِيِّ إِذْ قَضَيْنَا إِلَىٰ مُوسَى الْأَمْرَ وَمَا كُنْتَ مِنَ الشَّاهِدِينَ ﴿٤٤﴾

45. ಅಲ್ಲದೆ ಆ ಬಳಿಕ (ನಿಮ್ಮ ಕಾಲದ ವರೆಗೆ) ನಾವು ಅನೇಕ ಪೀಳಿಗೆ ಗಳನ್ನು ಎಬ್ಬಿಸಿದೆವು ಮತ್ತು ಅವರ ಮೇಲೆ ದೀರ್ಘಕಾಲ ಕಳೆದು ಹೋಗಿದೆ. ಮದ್‌ಯನ್‌ನವರಿಗೆ ನಮ್ಮ ಸೂಕ್ತಗಳನ್ನು ಕೇಳಿಸಲು ನೀವು ಅವರ ಮಧ್ಯೆಯೂ ಇರಲಿಲ್ಲ. ವಾಸ್ತವದಲ್ಲಿ (ಆ ಕಾಲದ ಸುದ್ದಿಗಳನ್ನು) ಕಳುಹಿಸುವವರು ನಾವೇ ಆಗಿರುತ್ತೇವೆ.

وَلَٰكِنَّا أَنْشَأْنَا قُرُونًا فَتَطَاوَلَ عَلَيْهِمُ الْعُمُرُ ۚ وَمَا كُنْتَ ثَاوِيًا فِي أَهْلِ مَدْيَنَ تَتْلُو عَلَيْهِمْ آيَاتِنَا وَلَٰكِنَّا كُنَّا مُرْسِلِينَ ﴿٤٥﴾

46. ನಾವು (ಮೂಸಾರನ್ನು ಪ್ರಥಮ ಬಾರಿ) ಕೂಗಿದಾಗ ನೀವು ತೂರ್ ಪರ್ವತದ ಮಗ್ಗುಲಲ್ಲೂ ಇರಲಿಲ್ಲ. ವಾಸ್ತವದಲ್ಲಿ ನಿಮಗಿಂತ ಮುಂಚೆ ಎಚ್ಚರಿಕೆ ನೀಡುವವರಾರೂ ಬಾರದಿದ್ದ ಜನರಿಗೆ ಎಚ್ಚರಿಕೆ ನೀಡಲಿಕ್ಕಾಗಿ ಇದು (ನಿಮಗೆ ಈ ತಿಳುವಳಿಕೆಯನ್ನು

وَمَا كُنْتَ بِجَانِبِ الطُّورِ إِذْ نَادَيْنَا وَلَٰكِنْ رَحْمَةً مِنْ رَبِّكَ لِتُنْذِرَ قَوْمًا مَا أَتَاهُمْ مِنْ نَذِيرٍ مِنْ قَبْلِكَ

9. ಪಶ್ಚಿಮ ಭಾಗ ಎಂದರೆ ಹಿಜಾಝ್‌ನ ಪಶ್ಚಿಮ ದಿಕ್ಕಿನಲ್ಲಿರುವ ಸೀನಾಯ್ ಪರ್ವತ.

ನೀಡಲಾಗುತ್ತಿರುವುದು) ನಿಮ್ಮ ಪ್ರಭುವಿನ ಕೃಪೆಯಾಗಿರುತ್ತದೆ. ಪ್ರಾಯಶಃ ಅವರು ಪ್ರಜ್ಞಾವಂತರಾಗಲೂ ಬಹುದು.

لَعَلَّهُمْ يَتَذَكَّرُونَ ﴿٤٦﴾

47. ಅವರ ಸ್ವಂತ ದುಷ್ಕೃತ್ಯಗಳ ಫಲವಾಗಿ ಅವರ ಮೇಲೇನಾದರೂ ವಿಪತ್ತು ಬಂದಾಗ ಅವರು, "ಪ್ರಭೂ, ನಾವು ನಿನ್ನ ಸೂಕ್ತಗಳ ಅನುಸರಣೆ ಮಾಡುವಂತಾಗಲು ಹಾಗೂ ಸತ್ಯವಿಶ್ವಾಸಿಗಳಾಗುವಂತಾಗಲು ನೀನು ನಮ್ಮ ಕಡೆಗೊಬ್ಬ ಸಂದೇಶವಾಹಕನನ್ನೇಕೆ ಕಳುಹಿಸಲಿಲ್ಲ?" ಎಂದು ಹೇಳುವಂತಾಗಬಾರದೆಂದು (ನಾವು ಹೀಗೆ ಮಾಡಿರುವೆವು.)

وَلَوْلَا أَن تُصِيبَهُم مُّصِيبَةٌ بِمَا قَدَّمَتْ أَيْدِيهِمْ فَيَقُولُوا رَبَّنَا لَوْلَا أَرْسَلْتَ إِلَيْنَا رَسُولًا فَنَتَّبِعَ آيَاتِكَ وَنَكُونَ مِنَ الْمُؤْمِنِينَ ﴿٤٧﴾

48. ಆದರೆ ನಮ್ಮ ಕಡೆಯಿಂದ ಅವರ ಬಳಿಗೆ ಸತ್ಯವು ಬಂದಾಗ ಅವರು, "ಮೂಸಾರಿಗೆ ಕೊಡಲಾಗಿದ್ದುದನ್ನೇ ಇವರಿಗೇಕೆ ಕೊಡಲಾಗಿಲ್ಲ?" ಎಂದು ಕೇಳ ತೊಡಗಿದರು. ಇದಕ್ಕಿಂತ ಮುಂಚೆ ಮೂಸಾರಿಗೆ ಕೊಡಲಾಗಿದ್ದುದನ್ನು ಇವರು ನಿರಾಕರಿಸಲಿಲ್ಲವೇ?[10] ಎರಡೂ[11] ಒಂದಿನ್ನೊಂದನ್ನು ಸಮರ್ಥಿಸುವ ಜಾದು ಆಗಿವೆಯೆಂದೂ ನಾವು ಯಾರನ್ನೂ ನಂಬುವುದಿಲ್ಲವೆಂದೂ ಅವರು ಹೇಳಿದರು.

فَلَمَّا جَاءَهُمُ الْحَقُّ مِنْ عِندِنَا قَالُوا لَوْلَا أُوتِيَ مِثْلَ مَا أُوتِيَ مُوسَىٰ ۚ أَوَلَمْ يَكْفُرُوا بِمَا أُوتِيَ مُوسَىٰ مِن قَبْلُ ۖ قَالُوا سِحْرَانِ تَظَاهَرَا وَقَالُوا إِنَّا بِكُلٍّ كَافِرُونَ ﴿٤٨﴾

49. (ಪ್ರವಾದಿಗಳೇ!) ನೀವು ಇವರೊಡನೆ,- "ಸರಿ, ನೀವು ಸತ್ಯವಾದಿಗಳಾಗಿದ್ದರೆ ಇವೆರಡಕ್ಕಿಂತಲೂ ಹೆಚ್ಚು ಸನ್ಮಾರ್ಗ ನೀಡತಕ್ಕಂತಹ ಒಂದು ಗ್ರಂಥವನ್ನು ಅಲ್ಲಾಹನ ಕಡೆಯಿಂದ ತನ್ನಿರಿ. ನಾನು ಅದರ ಅನುಸರಣೆಯನ್ನೇ ಮಾಡುವೆನು" ಎಂದು ಹೇಳಿರಿ.

قُلْ فَأْتُوا بِكِتَابٍ مِّنْ عِندِ اللَّهِ هُوَ أَهْدَىٰ مِنْهُمَا أَتَّبِعْهُ إِن كُنتُمْ صَادِقِينَ ﴿٤٩﴾

50. ಇನ್ನು ಅವರು ನಿಮ್ಮ ಬೇಡಿಕೆಯನ್ನು ಪೂರ್ತಿಗೊಳಿಸದಿದ್ದರೆ ವಾಸ್ತವದಲ್ಲಿ ಅವರು ತಮ್ಮ ಸ್ವೇಚ್ಛೆಗಳ ದಾಸರಾಗಿದ್ದಾರೆಂದು ತಿಳಿದುಕೊಳ್ಳಿರಿ. ದೇವ ಮಾರ್ಗದರ್ಶನದ ಹೊರತು ಕೇವಲ ತನ್ನ ಸ್ವೇಚ್ಛೆಗಳನ್ನು ಅನುಸರಿಸುವವನಿಗಿಂತ ಹೆಚ್ಚು ದಾರಿಗೆಟ್ಟವನು ಇನ್ನಾರಿರಬಹುದು? ಅಲ್ಲಾಹನು ಇಂತಹ ಅಕ್ರಮಿಗಳಿಗೆ ಎಷ್ಟು ಮಾತ್ರಕ್ಕೂ ಸನ್ಮಾರ್ಗದರ್ಶನ ನೀಡುವುದಿಲ್ಲ.

فَإِن لَّمْ يَسْتَجِيبُوا لَكَ فَاعْلَمْ أَنَّمَا يَتَّبِعُونَ أَهْوَاءَهُمْ ۚ وَمَنْ أَضَلُّ مِمَّنِ اتَّبَعَ هَوَاهُ بِغَيْرِ هُدًى مِّنَ اللَّهِ ۚ إِنَّ اللَّهَ لَا يَهْدِي الْقَوْمَ الظَّالِمِينَ ﴿٥٠﴾

51. ಮತ್ತು ಅವರು ಅಲಕ್ಷ್ಯದಿಂದ ಎಚ್ಚರಗೊಳ್ಳಬೇಕೆಂದು ನಾವು ಅವರಿಗೆ ಸತತವಾಗಿ (ಉಪದೇಶದ) ಮಾತನ್ನು ತಲುಪಿಸಿದ್ದೇವೆ.

وَلَقَدْ وَصَّلْنَا لَهُمُ الْقَوْلَ لَعَلَّهُمْ يَتَذَكَّرُونَ ﴿٥١﴾

10. ಅರ್ಥಾತ್- ಮೂಸಾರಿಗೆ(ಅ) ನೀಡಲಾಗಿದ್ದಂತಹ ಪವಾಡಗಳನ್ನು ಮುಹಮ್ಮದ್‌ರಿಗೆ(ಸ) ಯಾಕೆ ನೀಡಲಾಗಿಲ್ಲವೆಂದು ಈಗ ಅವರು ಕೇಳುತ್ತಿದ್ದಾರೆ. ಆದರೆ ಮಕ್ಕಾದ ಸತ್ಯನಿಷೇಧಿಗಳು ಮೂಸಾರನ್ನು(ಅ) ಎಲ್ಲಿ ನಂಬಿದ್ದರು?

11. ಅರ್ಥಾತ್- ಕುರ್‌ಆನ್ ಮತ್ತು ತೌರಾತ್‌ಗಳೆರಡೂ.

52. ನಾವು ಇದಕ್ಕೆ ಮುಂಚೆ ಯಾರಿಗೆ ಗ್ರಂಥ ನೀಡಿದ್ದೆವೋ ಅವರು ಇದರ (ಕುರ್‌ಆನಿನ) ಮೇಲೆ ವಿಶ್ವಾಸವಿರಿಸುತ್ತಾರೆ[12]

ٱلَّذِينَ ءَاتَيْنَٰهُمُ ٱلْكِتَٰبَ مِن قَبْلِهِۦ هُم بِهِۦ يُؤْمِنُونَ ﴿٥٢﴾

53. ಮತ್ತು ಇದನ್ನು ಅವರಿಗೆ ಓದಿ ಹೇಳಿದಾಗ ಅವರು, "ನಾವು ಇದರ ಮೇಲೆ ವಿಶ್ವಾಸವಿರಿಸಿದೆವು. ಇದು ನಿಜಕ್ಕೂ ನಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯವೇ ಆಗಿರುತ್ತದೆ. ನಾವು ಮೊದಲೇ ಮುಸ್ಲಿಮರಾಗಿದ್ದೆವು" ಎನ್ನುತ್ತಾರೆ.

وَإِذَا يُتْلَىٰ عَلَيْهِمْ قَالُوٓا۟ ءَامَنَّا بِهِۦٓ إِنَّهُ ٱلْحَقُّ مِن رَّبِّنَآ إِنَّا كُنَّا مِن قَبْلِهِۦ مُسْلِمِينَ ﴿٥٣﴾

54. ಇವರಿಗೆ ಇವರ ಸತ್ಫಲವನ್ನು ಎರಡು ಬಾರಿ ಕೊಡಲಾಗುವುದು.[13] (ಇದು) ಇವರು ತೋರಿಸಿದ ಸ್ಥೈರ್ಯದ ಪ್ರತಿಫಲವಾಗಿದೆ. ಇವರು ಕೆಡುಕುಗಳನ್ನು ಒಳಿತಿನಿಂದ ದೂರೀಕರಿಸುತ್ತಾರೆ. ನಾವು ಇವರಿಗೆ ನೀಡಿರುವುದರಿಂದ ಖರ್ಚು ಮಾಡುತ್ತಾರೆ.

أُو۟لَٰٓئِكَ يُؤْتَوْنَ أَجْرَهُم مَّرَّتَيْنِ بِمَا صَبَرُوا۟ وَيَدْرَءُونَ بِٱلْحَسَنَةِ ٱلسَّيِّئَةَ وَمِمَّا رَزَقْنَٰهُمْ يُنفِقُونَ ﴿٥٤﴾

55. ಇವರು ಅಸಂಗತ ಮಾತನ್ನು ಕೇಳಿದಾಗ, "ನಮ್ಮ ಕರ್ಮ ನಮಗೆ ನಿಮ್ಮ ಕರ್ಮ ನಿಮಗೆ, ನಿಮಗೆ ಸಲಾಮ್. ತಿಳಿಗೇಡಿಗಳಂತೆ ವರ್ತಿಸಲು ನಾವು ಸಿದ್ಧರಿಲ್ಲ"[14] ಎನ್ನುತ್ತಾ ದೂರ ಸರಿದು ಬಿಟ್ಟರು.

وَإِذَا سَمِعُوا۟ ٱللَّغْوَ أَعْرَضُوا۟ عَنْهُ وَقَالُوا۟ لَنَآ أَعْمَٰلُنَا وَلَكُمْ أَعْمَٰلُكُمْ سَلَٰمٌ عَلَيْكُمْ لَا نَبْتَغِى ٱلْجَٰهِلِينَ ﴿٥٥﴾

56. ಪ್ರವಾದಿಗಳೇ, ನೀವಿಚ್ಛಿಸಿದವರಿಗೆ ಸನ್ಮಾರ್ಗ ನೀಡಲು ನಿಮ್ಮಿಂದಾಗದು. ಆದರೆ ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗ ನೀಡುತ್ತಾನೆ. ಅವನು ಸನ್ಮಾರ್ಗ ಸ್ವೀಕರಿಸುವವರನ್ನು ಚೆನ್ನಾಗಿ ಅರಿತಿರುತ್ತಾನೆ.

إِنَّكَ لَا تَهْدِى مَنْ أَحْبَبْتَ وَلَٰكِنَّ ٱللَّهَ يَهْدِى مَن يَشَآءُ وَهُوَ أَعْلَمُ بِٱلْمُهْتَدِينَ ﴿٥٦﴾

57. "ನಾವು ನಿಮ್ಮೊಂದಿಗೆ ಈ ಸನ್ಮಾರ್ಗದ ಅನುಸರಣೆಯನ್ನು ಸ್ವೀಕರಿಸಿಕೊಂಡರೆ ನಾವು ನಮ್ಮ ನಾಡಿನಿಂದ ಕಿತ್ತೊಗೆಯಲ್ಪಡುವೆವು"[15] ಎಂದು ಅವರು ಹೇಳುತ್ತಾರೆ. ಎಲ್ಲ ತರದ ಹಣ್ಣು

وَقَالُوٓا۟ إِن نَّتَّبِعِ ٱلْهُدَىٰ مَعَكَ نُتَخَطَّفْ مِنْ أَرْضِنَآ أَوَلَمْ نُمَكِّن

12. ಗ್ರಂಥದವರಾದ ಯಹೂದಿಯರು ಮತ್ತು ಕ್ರೈಸ್ತರೆಲ್ಲರೂ ಇದರ ಮೇಲೆ ವಿಶ್ವಾಸವಿಡುತ್ತಾರೆಂದು ಇದರ ಅರ್ಥವಲ್ಲ. ಬದಲಾಗಿ ಇದು ಈ ಸೂಕ್ತದ ಅವತೀರ್ಣದ ಸಂದರ್ಭದಲ್ಲಿ ಸಂಭವಿಸಿದ ಘಟನೆಯ ಕಡೆಗಿರುವ ಸೂಚನೆ. ನೀವು ನಿಮ್ಮ ಮನೆಯ ಬಳಿ ಬಂದಿರುವ ಅನುಗ್ರಹವನ್ನು ನಿರಾಕರಿಸುತ್ತಿದ್ದೀರಿ. ಅದೇ ವೇಳೆ ಈ ಸುದ್ದಿ ತಲುಪಿದ ನಂತರ ದೂರದೂರದ ಜನರು ಅದರ ಬಳಿ ಬರುತ್ತಿದ್ದಾರೆ. ಅದರ ಮಹತ್ವವರಿತು ಅದರಿಂದ ಪ್ರಯೋಜನ ಪಡೆಯುತ್ತಿದ್ದಾರೆ ಎಂದು ಮಕ್ಕಾದವರಲ್ಲಿ ಒಂದು ರೀತಿಯ ಸಂಕೋಚವನ್ನು ಮೂಡಿಸುವುದು ಇದರ ಉದ್ದೇಶ. ಹಬಶ್‌ನಿಂದ (ಇಥಿಯೋಪಿಯಾ ಸುಮಾರು ಇಪ್ಪತ್ತು ಮಂದಿ ಕ್ರೈಸ್ತರು ಪ್ರವಾದಿವರ್ಯರ(ಸ) ಬಳಿ ಬಂದು ಅವರಿಂದ ಕುರ್‌ಆನನ್ನು ಆಲಿಸಿ ಇಸ್ಲಾಮ್ ಸ್ವೀಕಾರ ಮಾಡಿದ್ದರು. ಆ ಘಟನೆಯ ಕಡೆಗೇ ಇಲ್ಲಿ ಸೂಚಿಸಲಾಗಿದೆ.

13. ಅರ್ಥಾತ್- ಪೂರ್ವದ ಗ್ರಂಥಗಳ ಮೇಲೆ ವಿಶ್ವಾಸವಿಟ್ಟಿದ್ದಕ್ಕಾಗಿ ಒಂದು ಸತ್ಫಲ ಮತ್ತು ಕುರ್‌ಆನಿನ ಮೇಲೆ ವಿಶ್ವಾಸವಿಟ್ಟಿದ್ದಕ್ಕಾಗಿ ಇನ್ನೊಂದು ಸತ್ಫಲ.

14. ಅವರು ವಿಶ್ವಾಸವಿರಿಸಿದಾಗ ಅಬೂಜಹಲ್ ಅವರನ್ನು ಬಯ್ದನು. ಇದನ್ನೇ ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ.

15. ಇದು ಇಸ್ಲಾಮ್ ಸ್ವೀಕರಿಸದಿರಲು ಕುರೈಶ್ ಸತ್ಯನಿಷೇಧಿಗಳು ಮುಂದಿಡುತ್ತಿದ್ದ ನೆಪ. ಅವರ ಮಾತಿನ ಇಂಗಿತವೇನೆಂದರೆ, ಇಂದು ನಾವು ಸಮಸ್ತ ಅರೇಬಿಯಾದ ಬಹುದೇವಾರಾಧಕರ ನಾಯಕರಾಗಿದ್ದೇವೆ. ಆದರೆ ನಾವು ಮುಹಮ್ಮದ್‌ರ(ಸ) ಮಾತು ಕೇಳಿದರೆ ಸಮಸ್ತ ಅರೇಬಿಯಾ ನಮ್ಮ ಶತ್ರುವಾಗಿ ಮಾರ್ಪಡುವುದು.

ಹಂಪಲುಗಳು ನಮ್ಮ ಕಡೆಯಿಂದ ಜೀವನಾಧಾರವಾಗಿ ಹರಿದು ಬರುವಂತಹ ಒಂದು ಶಾಂತಿಮಯ 'ಹರಮನ್ನು' (ಸನ್ಮಾನ್ಯಸ್ಥಳ) ನಾವು ಇವರಿಗೆ ವಾಸಸ್ಥಾನವಾಗಿ ಮಾಡಿಲ್ಲವೇ? ಆದರೆ ಇವರಲ್ಲಿ ಹೆಚ್ಚಿನವರು ತಿಳಿಯುವುದಿಲ್ಲ.[16]

لَهُمْ حَرَمًا آمِنًا يُجْبَىٰ إِلَيْهِ ثَمَرَاتُ كُلِّ شَيْءٍ رِّزْقًا مِّن لَّدُنَّا وَلَٰكِنَّ أَكْثَرَهُمْ لَا يَعْلَمُونَ ﴿٥٧﴾

58. ತಮ್ಮ ಸಂಪತ್ಸೌಕರ್ಯಗಳ ಬಗ್ಗೆ ಅಹಂಭಾವ ಹೊಂದಿದ್ದ ಎಷ್ಟೋ ನಾಡುಗಳನ್ನು ನಾವು ನಾಶಗೊಳಿಸಿದ್ದೇವೆ. ಅದೋ ಅವರ ನಿವಾಸಗಳು ಪಾಳು ಬಿದ್ದಿರುವುದನ್ನು ನೋಡಿಕೊಳ್ಳಿರಿ. ಅವುಗಳಲ್ಲಿ ಅನಂತರ ಯಾರಾದರೂ ವಾಸಿಸಿದ್ದೇ ಅಪರೂಪ. ಕೊನೆಗೆ ನಾವೇ ಅವುಗಳ ವಾರೀಸುದಾರರಾದೆವು.[17]

وَكَمْ أَهْلَكْنَا مِن قَرْيَةٍ بَطِرَتْ مَعِيشَتَهَا ۖ فَتِلْكَ مَسَاكِنُهُمْ لَمْ تُسْكَن مِّن بَعْدِهِمْ إِلَّا قَلِيلًا ۖ وَكُنَّا نَحْنُ الْوَارِثِينَ ﴿٥٨﴾

59. ಅವರ ಕೇಂದ್ರದಲ್ಲಿ, ಅವರಿಗೆ ನಮ್ಮ ಸೂಕ್ತಗಳನ್ನು ಓದಿ ಹೇಳುವ ಸಂದೇಶವಾಹಕನೊಬ್ಬನನ್ನು ಕಳುಹಿಸುವ ವರೆಗೂ ನಿಮ್ಮ ಪ್ರಭು ನಾಡುಗಳನ್ನು ನಾಶಗೊಳಿಸುವವನಾಗಿರಲಿಲ್ಲ. ಆ ನಾಡುಗಳಲ್ಲಿರುವವರು ಅಕ್ರಮಿಗಳಾಗಿ ಬಿಡುವವರೆಗೂ ನಾವು ಅವುಗಳನ್ನು ನಾಶಗೊಳಿಸುವವರಾಗಿರಲಿಲ್ಲ.[18]

وَمَا كَانَ رَبُّكَ مُهْلِكَ الْقُرَىٰ حَتَّىٰ يَبْعَثَ فِي أُمِّهَا رَسُولًا يَتْلُو عَلَيْهِمْ آيَاتِنَا ۚ وَمَا كُنَّا مُهْلِكِي الْقُرَىٰ إِلَّا وَأَهْلُهَا ظَالِمُونَ ﴿٥٩﴾

60. ನಿಮಗೆ ಕೊಡಲಾಗಿರುವುದೆಲ್ಲವೂ ಕೇವಲ ಲೌಕಿಕ ಜೀವನದ ಸಾಧನ ಹಾಗೂ ಅದರ ಅಲಂಕಾರವಾಗಿದೆ ಮತ್ತು ಅಲ್ಲಾಹನ ಬಳಿಯಲ್ಲಿರುವುದೆಲ್ಲವೂ ಇದಕ್ಕಿಂತ ಉತ್ತಮ ಹಾಗೂ ಶಾಶ್ವತ ವಾಗಿ ಉಳಿಯುವವುಗಳಾಗಿವೆ. ನೀವು ಬುದ್ಧಿಯನ್ನುಪಯೋಗಿಸು ವುದಿಲ್ಲವೇ?

وَمَا أُوتِيتُم مِّن شَيْءٍ فَمَتَاعُ الْحَيَاةِ الدُّنْيَا وَزِينَتُهَا ۚ وَمَا عِندَ اللَّهِ خَيْرٌ وَأَبْقَىٰ ۚ أَفَلَا تَعْقِلُونَ ﴿٦٠﴾

61. ನಾವು ಒಬ್ಬನಿಗೆ ಉತ್ತಮ ವಾಗ್ದಾನ ಮಾಡಿದ್ದು, ಅದನ್ನವನು ಪಡೆಯ ಲಿರುವನು. ಇಂಥವನು, ನಾವು ಕೇವಲ ಲೌಕಿಕ ಜೀವನದ

أَفَمَن وَعَدْنَاهُ وَعْدًا حَسَنًا فَهُوَ لَاقِيهِ كَمَن مَّتَّعْنَاهُ مَتَاعَ الْحَيَاةِ

16. ಇದು ಅವರ ನೆಪಗಳಿಗೆ ಅಲ್ಲಾಹನು ನೀಡಿರುವ ಮೊದಲನೇ ಉತ್ತರವಾಗಿದೆ. ಅರ್ಥಾತ್ ಶಾಂತಿಧಾಮವಾದ ಮತ್ತು ಕೇಂದ್ರೀಯ ಸ್ಥಾನವಾದ 'ಹರಮ್'ನಿಂದಾಗಿಯೇ ಇಂದು ಲೋಕದಾದ್ಯಂತದ ವ್ಯಾಪಾರಿ ಸರಕು ಮರಳುಗಾಡಿನ ಈ ಬರಡು ಕಣಿವೆಗೆ ಹರಿದು ಬರುತ್ತಿದೆ. ಇದರ ಶಾಂತಿ, ನೆಮ್ಮದಿ ಮತ್ತು ಕೇಂದ್ರೀಯತೆಗೆ ನಿಮ್ಮ ಜಾಣ್ಮೆ ಕಾರಣವೇ?

17. ಇದು ಅವರ ನೆಪಕ್ಕೆ ನೀಡಲಾದ ಎರಡನೆಯ ಉತ್ತರವಾಗಿದೆ. ಅರ್ಥಾತ್ ಯಾವ ಸಿರಿ-ಸಂಪತ್ತು ಮತ್ತು ಸುಭಿಕ್ಷೆಯ ಬಗ್ಗೆ ನೀವು ದುರಹಂಕಾರ ಪಡುತ್ತಿದ್ದೀರೋ ಮತ್ತು ಯಾವುದರ ನಷ್ಟದ ಭಯದಿಂದ ಸತ್ಯದಿಂದ ವಿಮುಖರಾಗಿ ಸತ್ಯನಿಷೇಧದಲ್ಲಿ ದೃಢವಾಗಿ ನಿಲ್ಲಬಯಸುತ್ತೀರೋ, ಆ ಅನುಗ್ರಹಗಳು ಒಂದೊಮ್ಮೆ ಆದ್, ಸಮೂದ್ ಮತ್ತು ಇತರ ಸಮುದಾಯಗಳಿಗೂ ಪ್ರಾಪ್ತವಿದ್ದುವು. ಹಾಗಿದ್ದರೂ ಅವು ಅವರನ್ನು ವಿನಾಶದಿಂದ ಸಂರಕ್ಷಿಸಿತೇ?

18. ಇದು ಅವರ ನೆಪದ ಮೂರನೆಯ ಉತ್ತರವಾಗಿದೆ. ಮೊದಲು ನಾಶ ಹೊಂದಿದ ಸಮುದಾಯಗಳ ಜನರು ಅಕ್ರಮಿಗಳಾಗಿ ಮಾರ್ಪಟ್ಟಿದ್ದರು. ಆದರೆ ವಿನಾಶಕ್ಕೆ ಮೊದಲು ಅಲ್ಲಾಹನು ಪ್ರವಾದಿಯನ್ನು ಕಳುಹಿಸುವ ಮೂಲಕ ಅವರಿಗೆ ಎಚ್ಚರಿಕೆ ನೀಡಿದನು. ಎಚ್ಚರಿಕೆಯಿಂದಲೂ ಅವರು ಪಥಭ್ರಷ್ಟತೆಯಿಂದ ಮುಕ್ತರಾಗದಿದ್ದಾಗ ಅವರನ್ನು ನಾಶಪಡಿಸಿದನು. ಇದೇ ಪರಿಸ್ಥಿತಿ ಈಗ ನಿಮಗೂ ಎದುರಾಗಿದೆ.

ಸಾಧನಗಳನ್ನು ನೀಡಿದ್ದು ಆ ಬಳಿಕ ಪರಲೋಕದಲ್ಲಿ ಶಿಕ್ಷೆಗಾಗಿ ಹಾಜರುಗೊಳಿಸಲ್ಪಡಲಿರುವ ವ್ಯಕ್ತಿಯಂತೆ ಆಗಬಲ್ಲನೇ?

الدُّنْيَا ثُمَّ هُوَ يَوْمَ الْقِيٰمَةِ مِنَ الْمُحْضَرِيْنَ ﴿٦١﴾

62. ಅವನು ಇವರನ್ನು ಕೂಗಿ ಕರೆದು, "ನೀವು ಕಲ್ಪಿಸಿಕೊಂಡಿದ್ದ ಆ ನನ್ನ ಸಹಭಾಗಿಗಳು ಎಲ್ಲಿದ್ದಾರೆ?" ಎಂದು ಕೇಳುವ ಆ ದಿನ(ವನ್ನು ಇವರು ಮರೆಯದಿರಲಿ).

وَيَوْمَ يُنَادِيْهِمْ فَيَقُوْلُ اَيْنَ شُرَكَآءِيَ الَّذِيْنَ كُنْتُمْ تَزْعُمُوْنَ ﴿٦٢﴾

63. ಈ ಮಾತು ಯಾರಿಗೆ ಅನ್ವಯಿಸುವುದೋ ಅವರು, "ನಮ್ಮ ಪ್ರಭೂ, ನಾವು ಖಂಡಿತವಾಗಿಯೂ ಇವರನ್ನೇ ದಾರಿಗೆಡಿಸಿದ್ದೆವು. ನಾವು ಸ್ವತಃ ದಾರಿಗೆಟ್ಟಂತೆಯೇ ಇವರನ್ನೂ ದಾರಿಗೆಡಿಸಿದ್ದೆವು.[19] ನಾವು ನಿನ್ನ ಮುಂದೆ ಹೊಣೆ ಮುಕ್ತತೆಯನ್ನು ಪ್ರಕಟಿಸುತ್ತೇವೆ. ಇವರು ನಮ್ಮ ಆರಾಧನೆಯನ್ನಂತು ಮಾಡುತ್ತಿರಲಿಲ್ಲ"[20] ಎಂದು ಹೇಳುವರು.

قَالَ الَّذِيْنَ حَقَّ عَلَيْهِمُ الْقَوْلُ رَبَّنَا هٰٓؤُلَآءِ الَّذِيْنَ اَغْوَيْنَا ۚ اَغْوَيْنٰهُمْ كَمَا غَوَيْنَا ۚ تَبَرَّاْنَآ اِلَيْكَ ۖ مَا كَانُوْٓا اِيَّانَا يَعْبُدُوْنَ ﴿٦٣﴾

64. ತರುವಾಯ ಇವರೊಡನೆ, "ನೀವೀಗ ನೀವು ನೇಮಿಸಿಕೊಂಡಿದ್ದ ಸಹಭಾಗಿಗಳನ್ನು ಕೂಗಿ ಕರೆಯಿರಿ" ಎನ್ನಲಾಗುವುದು. ಇವರು ಅವರನ್ನು ಕೂಗಿ ಕರೆಯುವರು. ಆದರೆ ಅವರು ಇವರಿಗೆ ಏನೂ ಉತ್ತರ ಕೊಡಲಾರರು ಮತ್ತು ಇವರು ಯಾತನೆಯನ್ನು ಕಣ್ಣಾರೆ ಕಾಣುವರು. ಅಕಟ! ಇವರು ಸನ್ಮಾರ್ಗ ಸ್ವೀಕರಿಸುವವರಾಗಿದ್ದರೆ!

وَقِيْلَ ادْعُوْا شُرَكَآءَكُمْ فَدَعَوْهُمْ فَلَمْ يَسْتَجِيْبُوْا لَهُمْ وَرَاَوُا الْعَذَابَ ۚ لَوْ اَنَّهُمْ كَانُوْا يَهْتَدُوْنَ ﴿٦٤﴾

65. ಅವನು ಇವರನ್ನು ಕೂಗಿ ಕರೆಯುವ ಹಾಗೂ "ನಿಮಗೆ ಕಳುಹಿಸಲಾಗಿದ್ದ ಸಂದೇಶವಾಹಕರಿಗೆ ನೀವೇನು ಉತ್ತರ ಕೊಟ್ಟಿದ್ದೀರಿ?" ಎಂದು ಕೇಳಲಿರುವ ಆ ದಿನ(ವನ್ನು ಇವರು ಮರೆತು ಬಿಡದಿರಲಿ)

وَيَوْمَ يُنَادِيْهِمْ فَيَقُوْلُ مَاذَآ اَجَبْتُمُ الْمُرْسَلِيْنَ ﴿٦٥﴾

66. ಆಗ ಇವರಿಗೆ ಯಾವ ಉತ್ತರವೂ ಹೊಳೆಯಲಾರದು ಮತ್ತು ಇವರು ಪರಸ್ಪರರೊಡನೆ ಕೇಳಿಕೊಳ್ಳಲಿಕ್ಕೂ ಸಾಧ್ಯವಾಗದು.

فَعَمِيَتْ عَلَيْهِمُ الْاَنْۢبَآءُ يَوْمَىِٕذٍ فَهُمْ لَا يَتَسَآءَلُوْنَ ﴿٦٦﴾

67. ಆದರೆ ಇಂದು ಪಶ್ಚಾತ್ತಾಪ ಪಟ್ಟು ಸತ್ಯವಿಶ್ವಾಸ ಸ್ವೀಕರಿಸಿ

فَاَمَّا مَنْ تَابَ وَاٰمَنَ وَعَمِلَ صَالِحًا

19. ಅರ್ಥಾತ್- ಭೂಮಿಯಲ್ಲಿ ದೇವನಿಗೆ ಭಾಗೀದಾರರೆಂದು ಪರಿಗಣಿಸಲಾದ ಮಾನವರ ಮತ್ತು ಜಿನ್ನ್‌ಗಳ ಪೈಕಿಯ ಪಿಶಾಚಿಗಳು. ಅವರ ಮಾತಿನ ಆಧಾರದಲ್ಲಿ ಅಲ್ಲಾಹನ ಮತ್ತು ಪ್ರವಾದಿಯ ಮಾತನ್ನು ಉಲ್ಲಂಘಿಸಲಾಗಿತ್ತು. ಅವರ ಮೇಲಿನ ವಿಶ್ವಾಸದಿಂದ ಸನ್ಮಾರ್ಗವನ್ನು ಬಿಟ್ಟು ಜೀವನದ ತಪ್ಪು ಮಾರ್ಗಗಳನ್ನು ಅನುಸರಿಸಲಾಗಿತ್ತು. ಇಂತಹವರನ್ನು ಯಾರಾದರೂ ಆರಾಧ್ಯ ಅಥವಾ ಪ್ರಭು ಎಂದು ಕರೆದಿರಲಿ ಕರೆಯದೆ ಇರಲಿ ಅವರ ಅನುಸರಣೆ ಮತ್ತು ಆಜ್ಞಾಪಾಲನೆಯನ್ನು ದೇವನ ಅನುಸರಣೆ ಮತ್ತು ಆಜ್ಞಾಪಾಲನೆ ಮಾಡುವಂತೆ ಮಾಡಿದರೆ ಅವರನ್ನು ದೇವತ್ವದಲ್ಲಿ ಸಹಭಾಗಿಯೆಂದು ಪರಿಗಣಿಸಿದಂತೆಯೇ ಸರಿ.

20. ಅರ್ಥಾತ್- ಇವರು ನಮ್ಮ ದಾಸರಲ್ಲ. ಬದಲಾಗಿ ತಮ್ಮ ಚಿತ್ತದ ದಾಸ್ಯವನ್ನು ಸ್ವೀಕರಿಸಿದವರಾಗಿದ್ದಾರೆ.

ಸತ್ಕರ್ಮವೆಸಗಿದವನು ಅಲ್ಲಿ ತಾನು ವಿಜಯಿಗಳಲ್ಲಾಗುವೆನೆಂದು ನಿರೀಕ್ಷಿಸಬಹುದು.

فَعَسٰۤى اَنۡ يَّكُوۡنَ مِنَ الۡمُفۡلِحِيۡنَ ﴿٦٧﴾

68. ನಿಮ್ಮ ಪ್ರಭು ತಾನಿಚ್ಛಿಸಿದ್ದನ್ನು ಸೃಷ್ಟಿಸುತ್ತಾನೆ ಮತ್ತು (ಅವನು ತಾನಿಚ್ಛಿಸಿದವರನ್ನು ತನ್ನ ಕಾರ್ಯಕ್ಕಾಗಿ ಸ್ವತಃ) ಆರಿಸಿಕೊಳ್ಳುತ್ತಾನೆ. ಈ ಆಯ್ಕೆ ಇವರು ಮಾಡುವ ಕಾರ್ಯವಲ್ಲ. ಅಲ್ಲಾಹನು ಪರಮ ಪಾವನನು ಮತ್ತು ಇವರು ಮಾಡುತ್ತಿರುವ 'ದೇವಸಹಭಾಗಿತ್ವ' ದಿಂದ ಬಹಳ ಉನ್ನತನಾಗಿರುತ್ತಾನೆ.

وَرَبُّكَ يَخۡلُقُ مَا يَشَآءُ وَيَخۡتَارُ ؕ مَا كَانَ لَهُمُ الۡخِيَرَةُ ؕ سُبۡحٰنَ اللّٰهِ وَتَعٰلٰى عَمَّا يُشۡرِكُوۡنَ ﴿٦٨﴾

69. ಇವರು ತಮ್ಮ ಹೃದಯಗಳಲ್ಲಿ ಬಚ್ಚಿಟ್ಟಿರುವುದನ್ನೂ ಪ್ರಕಟಗೊಳಿಸುವುದನ್ನೂ ನಿಮ್ಮ ಪ್ರಭು ತಿಳಿದಿರುವನು.

وَرَبُّكَ يَعۡلَمُ مَا تُكِنُّ صُدُوۡرُهُمۡ وَمَا يُعۡلِنُوۡنَ ﴿٦٩﴾

70. ಅವನೇ ಏಕೈಕ ಅಲ್ಲಾಹ್. ಅವನ ಹೊರತು ಬೇರಾರೂ ಉಪಾಸನೆಗೆ ಅರ್ಹರಿಲ್ಲ. ಈ ಲೋಕದಲ್ಲೂ ಪರಲೋಕದಲ್ಲೂ ಸಕಲ ಸ್ತುತಿ ಸ್ತೋತ್ರಗಳು ಅವನಿಗೇ ಮೀಸಲು. ಪರಮಾಧಿಕಾರ ಅವನದು. ನೀವೆಲ್ಲರೂ ಅವನ ಕಡೆಗೇ ಮರಳಿಸಲ್ಪಡಲಿರುವಿರಿ.

وَهُوَ اللّٰهُ لَاۤ اِلٰهَ اِلَّا هُوَ ؕ لَهُ الۡحَمۡدُ فِى الۡاُوۡلٰى وَالۡاٰخِرَةِ وَلَهُ الۡحُكۡمُ وَاِلَيۡهِ تُرۡجَعُوۡنَ ﴿٧٠﴾

71. ಸಂದೇಶವಾಹಕರೇ, ಅಲ್ಲಾಹನು ಪುನರುತ್ಥಾನ ದಿನದ ವರೆಗೂ ನಿಮ್ಮ ಮೇಲೆ ಶಾಶ್ವತವಾಗಿ ರಾತ್ರಿಯನ್ನೇ ಕವಿಸಿಬಿಟ್ಟರೆ, ನಿಮಗೆ ಪ್ರಕಾಶವನ್ನು ತಂದು ಕೊಡಲು ಅಲ್ಲಾಹನ ಹೊರತು ಬೇರಾವ ದೇವರು ತಾನೇ ಇದ್ದಾನೆಂದು ನೀವೆಂದಾದರೂ ಆಲೋಚಿಸಿರುವಿರಾ? ನೀವು ಆಲಿಸುತ್ತಿಲ್ಲವೇ? ಎಂದು ಇವರೊಡನೆ ಕೇಳಿರಿ.

قُلۡ اَرَءَيۡتُمۡ اِنۡ جَعَلَ اللّٰهُ عَلَيۡكُمُ الَّيۡلَ سَرۡمَدًا اِلٰى يَوۡمِ الۡقِيٰمَةِ مَنۡ اِلٰـهٌ غَيۡرُ اللّٰهِ يَاۡتِيۡكُمۡ بِضِيَآءٍ ؕ اَفَلَا تَسۡمَعُوۡنَ ﴿٧١﴾

72. ಅಲ್ಲಾಹನು ನಿಮ್ಮ ಮೇಲೆ ಪುನರುತ್ಥಾನ ದಿನದ ವರೆಗೆ ಶಾಶ್ವತವಾಗಿ ಹಗಲನ್ನೇ ಆವರಿಸಿ ಬಿಟ್ಟರೆ ನೀವು ವಿಶ್ರಾಂತಿ ಪಡೆಯುವಂತಹ ರಾತ್ರಿಯನ್ನು ನಿಮಗೆ ತಂದು ಕೊಡಲು ಅಲ್ಲಾಹನ ಹೊರತು ಬೇರಾವ ಆರಾಧ್ಯನು ತಾನೇ ಇದ್ದಾನೆಂದು ನೀವೆಂದಾದರೂ ಆಲೋಚಿಸಿರುವಿರಾ? ನಿಮಗೆ ತೋರುವುದಿಲ್ಲವೇ? ಎಂದು ಇವರೊಡನೆ ಕೇಳಿರಿ.

قُلۡ اَرَءَيۡتُمۡ اِنۡ جَعَلَ اللّٰهُ عَلَيۡكُمُ النَّهَارَ سَرۡمَدًا اِلٰى يَوۡمِ الۡقِيٰمَةِ مَنۡ اِلٰهٌ غَيۡرُ اللّٰهِ يَاۡتِيۡكُمۡ بِلَيۡلٍ تَسۡكُنُوۡنَ فِيۡهِ ؕ اَفَلَا تُبۡصِرُوۡنَ ﴿٧٢﴾

73. ನೀವು ಕೃತಜ್ಞರಾಗುವಿರೆಂದು ನಿರೀಕ್ಷಿಸಿ, ನೀವು (ರಾತ್ರಿ ಕಾಲದಲ್ಲಿ) ವಿಶ್ರಾಂತಿ ಪಡೆಯುವಂತೆಯೂ (ಹಗಲು ಹೊತ್ತಿನಲ್ಲಿ) ನಿಮ್ಮ ಪ್ರಭುವಿನ ಅನುಗ್ರಹವನ್ನು ಅರಸುವಂತೆಯೂ ರಾತ್ರಿ ಹಗಲುಗಳನ್ನು ಉಂಟು ಮಾಡಿದುದು ಅವನದೇ ಕೃಪೆಯಾಗಿದೆ.

وَمِنۡ رَّحۡمَتِهٖ جَعَلَ لَـكُمُ الَّيۡلَ وَالنَّهَارَ لِتَسۡكُنُوۡا فِيۡهِ وَلِتَبۡتَغُوۡا مِنۡ فَضۡلِهٖ وَلَعَلَّكُمۡ تَشۡكُرُوۡنَ ﴿٧٣﴾

74. ಅವನು ಇವರನ್ನು ಕೂಗಿ ಕರೆದು, "ನೀವು ಕಲ್ಪಿಸಿಕೊಂಡಿದ್ದ ನನ್ನ ಸಹಭಾಗಿಗಳು ಎಲ್ಲಿದ್ದಾರೆ?" ಎಂದು ಕೇಳಲಿರುವ ಆ ದಿನ(ವನ್ನು ಇವರು ನೆನಪಿಟ್ಟುಕೊಂಡಿರಲಿ).

وَيَوْمَ يُنَادِيهِمْ فَيَقُولُ أَيْنَ شُرَكَائِيَ الَّذِينَ كُنتُمْ تَزْعُمُونَ ﴿٧٤﴾

75. ನಾವು ಪ್ರತಿಯೊಂದು ಸಮುದಾಯದಿಂದ ಒಬ್ಬ ಸಾಕ್ಷಿಯನ್ನು ಹೊರ ತೆಗೆದು, "ಈಗ ನಿಮ್ಮ ಪುರಾವೆ ತನ್ನಿರಿ" ಎಂದು ಹೇಳುವೆವು. ಆಗ ಸತ್ಯ ಅಲ್ಲಾಹನ ಕಡೆಗಿದೆಯೆಂದು ಇವರಿಗೆ ತಿಳಿದು ಬರುವುದು. ಇವರು ಸೃಷ್ಟಿಸಿಕೊಂಡಿರುವ ಎಲ್ಲಾ ಮಿಥ್ಯಗಳೂ ಮಾಯವಾಗಿ ಹೋಗುವುವು.

وَنَزَعْنَا مِن كُلِّ أُمَّةٍ شَهِيدًا فَقُلْنَا هَاتُوا بُرْهَانَكُمْ فَعَلِمُوا أَنَّ الْحَقَّ لِلَّهِ وَضَلَّ عَنْهُم مَّا كَانُوا يَفْتَرُونَ ﴿٧٥﴾

76. (ಇದೊಂದು ಘಟನೆ). ಕಾರೂನ್, ಮೂಸಾರ ಜನಾಂಗದ ಒಬ್ಬ ವ್ಯಕ್ತಿಯಾಗಿದ್ದನು. ಅವನು ತನ್ನ ಜನಾಂಗದ ವಿರುದ್ಧ ಬಂಡಾಯವೆದ್ದನು. ನಾವು ಅವನಿಗೆ ಅದೆಷ್ಟು ಭಂಡಾರಗಳನ್ನು ನೀಡಿದ್ದೆವೆಂದರೆ ಅವುಗಳ ಬೀಗದ ಕೈಗಳನ್ನು ಬಲಶಾಲಿಗಳ ಒಂದು ಸಮೂಹವು ಬಹಳ ಕಷ್ಟದಿಂದ ಎತ್ತಬಹುದಾಗಿತ್ತು. ಒಮ್ಮೆ ಅವನ ಜನಾಂಗದವರು ಅವನೊಡನೆ- "ಅಹಂಕಾರ ಪಡಬೇಡ. ಅಹಂಕಾರ ಪಡುವವರನ್ನು ಅಲ್ಲಾಹನು ಮೆಚ್ಚುವುದಿಲ್ಲ.

إِنَّ قَارُونَ كَانَ مِن قَوْمِ مُوسَىٰ فَبَغَىٰ عَلَيْهِمْ ۖ وَآتَيْنَاهُ مِنَ الْكُنُوزِ مَا إِنَّ مَفَاتِحَهُ لَتَنُوءُ بِالْعُصْبَةِ أُولِي الْقُوَّةِ إِذْ قَالَ لَهُ قَوْمُهُ لَا تَفْرَحْ ۖ إِنَّ اللَّهَ لَا يُحِبُّ الْفَرِحِينَ ﴿٧٦﴾

77. ಅಲ್ಲಾಹನು ನಿನಗೆ ನೀಡಿರುವ ಸಂಪತ್ತಿನಿಂದ ನೀನು ಪರಲೋಕಗೃಹ ನಿರ್ಮಾಣ ಮಾಡುವ ಕುರಿತು ಚಿಂತಿಸು ಮತ್ತು ಇಹಲೋಕ ದಿಂದಲೂ ನಿನ್ನ ಪಾಲನ್ನು ಮರೆಯಬೇಡ. ಅಲ್ಲಾಹನು ನಿನಗೆ ಉಪಕಾರ ಮಾಡಿದಂತೆಯೇ ನೀನೂ ಪರೋಪಕಾರ ಮಾಡು ಮತ್ತು ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡಲು ಪ್ರಯತ್ನಿಸ ಬೇಡ. ಅಲ್ಲಾಹನು ಕ್ಷೋಭೆಯನ್ನುಂಟು ಮಾಡುವವರನ್ನು ಮೆಚ್ಚುವುದಿಲ್ಲ."

وَابْتَغِ فِيمَا آتَاكَ اللَّهُ الدَّارَ الْآخِرَةَ ۖ وَلَا تَنسَ نَصِيبَكَ مِنَ الدُّنْيَا ۖ وَأَحْسِن كَمَا أَحْسَنَ اللَّهُ إِلَيْكَ ۖ وَلَا تَبْغِ الْفَسَادَ فِي الْأَرْضِ ۖ إِنَّ اللَّهَ لَا يُحِبُّ الْمُفْسِدِينَ ﴿٧٧﴾

78. ಅದಕ್ಕೆ ಅವನು, "ಇವೆಲ್ಲ ನನಗೆ ಪ್ರಾಪ್ತವಾಗಿರುವ ಜ್ಞಾನದಿಂದಾಗಿ ನನಗೆ ಒದಗಿವೆ" ಎಂದನು. ಅಲ್ಲಾಹನು ಇದಕ್ಕಿಂತ ಮುಂಚೆ ಅವನಿಗಿಂತಲೂ ಹೆಚ್ಚು ಶಕ್ತಿ ಹಾಗೂ ಜನಬಲವನ್ನು ಹೊಂದಿದ್ದ ವರನ್ನು ನಾಶಗೊಳಿಸಿರುವನೆಂಬುದು ಅವನಿಗೆ ತಿಳಿದಿರಲಿಲ್ಲವೇ? ಅಪರಾಧಿಗಳೊಡನೆ ಅವರ ಪಾಪಗಳ ಕುರಿತು ಪ್ರಶ್ನಿಸ ಲಾಗುವುದಿಲ್ಲ.[21]

قَالَ إِنَّمَا أُوتِيتُهُ عَلَىٰ عِلْمٍ عِندِي ۚ أَوَلَمْ يَعْلَمْ أَنَّ اللَّهَ قَدْ أَهْلَكَ مِن قَبْلِهِ مِنَ الْقُرُونِ مَنْ هُوَ أَشَدُّ مِنْهُ قُوَّةً وَأَكْثَرُ جَمْعًا ۚ وَلَا يُسْأَلُ عَن ذُنُوبِهِمُ الْمُجْرِمُونَ ﴿٧٨﴾

21. ಅರ್ಥಾತ್- ಅಪರಾಧಿಗಳು ನಾವು ಮಹಾ ಸಚ್ಚರಿತ ವ್ಯಕ್ತಿಗಳಾಗಿದ್ದೇವೆ ಎಂದೇ ವಾದಿಸುತ್ತಾರೆ, ತಮ್ಮೊಳಗೆ ಯಾವುದಾದರೂ ಕೆಡುಕು ಇದೆ ಎಂಬುದನ್ನು ಅವರು ಒಪ್ಪಿಕೊಳ್ಳುವುದಿಲ್ಲ. ಆದರೆ ಅವರಿಗೆ ನೀಡಲಾಗುವ ಶಿಕ್ಷೆ ಅವರ ತಪ್ಪೊಪ್ಪಿಗೆಯನ್ನು ಹೊಂದಿಕೊಂಡಿರುವುದಿಲ್ಲ. ಅವರನ್ನು ಹಿಡಿಯಲಾಗುವಾಗ ನಿಮ್ಮ ಪಾಪಗಳಾವುವು ಎಂದು ಕೇಳಿ ಹಿಡಿಯಲಾಗುವುದಿಲ್ಲ.

79. ಒಂದು ದಿನ ಅವನು ತನ್ನ ಜನಾಂಗದ ಮುಂದೆ ತನ್ನ ಸಂಪೂರ್ಣ ಠೀವಿಯೊಂದಿಗೆ ಹೊರಟನು. ಲೌಕಿಕ ಜೀವನವನ್ನು ಬಯಸುವವರು ಅವನನ್ನು ಕಂಡು "ಕಾರೂನನಿಗೆ ನೀಡಲಾಗಿರುವುದೇ ನಮಗೂ ಸಿಗುತ್ತಿದ್ದರೆ! ಎನ್ನ ತೊಡಗಿದರು. ಇವನು ಮಹಾ ಅದೃಷ್ಟಶಾಲಿ."

فَخَرَجَ عَلَىٰ قَوْمِهِ فِي زِينَتِهِ ۖ قَالَ الَّذِينَ يُرِيدُونَ الْحَيَاةَ الدُّنْيَا يَا لَيْتَ لَنَا مِثْلَ مَا أُوتِيَ قَارُونُ إِنَّهُ لَذُو حَظٍّ عَظِيمٍ ﴿٧٩﴾

80. ಆದರೆ ಜ್ಞಾನವಿದ್ದವರು, "ಅಯ್ಯೋ ನಿಮ್ಮ ಅವಸ್ಥೆಯೇ! ಸತ್ಯವಿಶ್ವಾಸವನ್ನು ಸ್ವೀಕರಿಸಿ, ಸತ್ಕರ್ಮವೆಸಗಿದವರಿಗೆ ಅಲ್ಲಾಹನ ಪುಣ್ಯಫಲವೇ ಮೇಲು. ಈ ಸಂಪತ್ತು, ಸಹನೆ ಯುಳ್ಳವರಿಗಲ್ಲದೆ ಬೇರಾರಿಗೂ ಸಿಗುವುದಿಲ್ಲ" ಎಂದು ಹೇಳಿದರು.

وَقَالَ الَّذِينَ أُوتُوا الْعِلْمَ وَيْلَكُمْ ثَوَابُ اللَّهِ خَيْرٌ لِمَنْ آمَنَ وَعَمِلَ صَالِحًا ۚ وَلَا يُلَقَّاهَا إِلَّا الصَّابِرُونَ ﴿٨٠﴾

81. ಕೊನೆಗೆ ನಾವು ಅವನನ್ನೂ ಅವನ ಮನೆಯನ್ನೂ ನೆಲದೊಳಕ್ಕೆ ಹುದುಗಿಸಿ ಬಿಟ್ಟೆವು. ಆಗ ಅಲ್ಲಾಹನಿಗೆದುರು ಅವನ ನೆರವಿಗೆ ಬರಲು ಅವನಿಗೆ ಯಾವ ಸಹಾಯಕ ತಂಡವೂ ಇರಲಿಲ್ಲ ಮತ್ತು ಸ್ವತಃ ತನಗೆ ಸಹಾಯ ಮಾಡಿಕೊಳ್ಳಲಿಕ್ಕೂ ಅವನಿಂದಾಗಲಿಲ್ಲ.

فَخَسَفْنَا بِهِ وَبِدَارِهِ الْأَرْضَ فَمَا كَانَ لَهُ مِنْ فِئَةٍ يَنْصُرُونَهُ مِنْ دُونِ اللَّهِ وَمَا كَانَ مِنَ الْمُنْتَصِرِينَ ﴿٨١﴾

82. ನಿನ್ನೆಯ ವರೆಗೆ ಅವನ ಸ್ಥಾನಮಾನಕ್ಕೆ ಆಶೆಪಡುತ್ತಿದ್ದವರು, "ಅಯ್ಯೋ ಅಲ್ಲಾಹ್ ತನ್ನ ದಾಸರ ಪೈಕಿ ತಾನಿಚ್ಛಿಸಿದವರಿಗೆ ಜೀವನಾಧಾರವನ್ನು ಸಮೃದ್ಧವಾಗಿ ನೀಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಅದನ್ನು ಪರಿಮಿತವಾಗಿ ಕೊಡುತ್ತಾನೆಂಬುದನ್ನು ನಾವು ಮರೆತು ಬಿಟ್ಟಿದ್ದೆವು. ಅಲ್ಲಾಹನು ನಮ್ಮ ಮೇಲೆ ದಯೆ ತೋರದಿರು ತ್ತಿದ್ದರೆ ನಮ್ಮನ್ನೂ ನೆಲದಲ್ಲಿ ಹುದುಗಿಸಿ ಬಿಡುತ್ತಿದ್ದನು. ಅಯ್ಯೋ ಸತ್ಯನಿಷೇಧಿಗಳು ಯಶಸ್ವಿಯಾಗುವುದಿಲ್ಲ ವೆಂಬುದು ನಮಗೆ ಮರತೇ ಹೋಗಿತ್ತು" ಎಂದರು.

وَأَصْبَحَ الَّذِينَ تَمَنَّوْا مَكَانَهُ بِالْأَمْسِ يَقُولُونَ وَيْكَأَنَّ اللَّهَ يَبْسُطُ الرِّزْقَ لِمَنْ يَشَاءُ مِنْ عِبَادِهِ وَيَقْدِرُ ۖ لَوْلَا أَنْ مَنَّ اللَّهُ عَلَيْنَا لَخَسَفَ بِنَا ۖ وَيْكَأَنَّهُ لَا يُفْلِحُ الْكَافِرُونَ ﴿٨٢﴾

83. ನಾವು ಆ ಪರಲೋಕದ[22] ಗೃಹವನ್ನು ಭೂಮಿಯಲ್ಲಿ ತಮ್ಮ ದೊಡ್ಡಸ್ತಿಕೆಯನ್ನು ಬಯಸದವರಿಗಾಗಿ ಹಾಗೂ ಕ್ಷೋಭೆಯನ್ನುಂಟು ಮಾಡಬಯಸದವರಿಗಾಗಿ ಕಾದಿರಿಸುವೆವು. ಅಂತಿಮ ವಿಜಯವು ಧರ್ಮನಿಷ್ಠರಿಗಾಗಿಯೇ ಇದೆ.

تِلْكَ الدَّارُ الْآخِرَةُ نَجْعَلُهَا لِلَّذِينَ لَا يُرِيدُونَ عُلُوًّا فِي الْأَرْضِ وَلَا فَسَادًا ۚ وَالْعَاقِبَةُ لِلْمُتَّقِينَ ﴿٨٣﴾

84. ಯಾರು ಒಳಿತಿನೊಂದಿಗೆ ಬರುವನೋ ಅವನಿಗಾಗಿ ಅದಕ್ಕಿಂತ ಉತ್ತಮ ಒಳಿತು ಇದೆ. ಇನ್ನು ಯಾರಾದರೂ ಕೆಡುಕುಗಳೊಂದಿಗೆ

مَنْ جَاءَ بِالْحَسَنَةِ فَلَهُ خَيْرٌ مِنْهَا ۖ وَمَنْ جَاءَ بِالسَّيِّئَةِ فَلَا يُجْزَى الَّذِينَ عَمِلُوا

22. ಅರ್ಥಾತ್- ನೈಜ ಯಶಸ್ಸಿನ ತಾಣವಾದ ಸ್ವರ್ಗ.

ಬಂದರೆ, ಅವರು ಎಸಗುತ್ತಿದ್ದ ಕೆಡುಕುಗಳಿಗೆ ತಕ್ಕುದಾಗಿಯೇ ಪ್ರತಿಫಲ ಸಿಗುವುದು.

السَّيِّاٰتِ اِلَّا مَا كَانُوْا يَعْمَلُوْنَ ﴿۸۴﴾

85. ಪೈಗಂಬರರೇ, ನಿಮ್ಮ ಮೇಲೆ ಈ ಕುರ್‌ಆನನ್ನು ಕಡ್ಡಾಯಗೊಳಿಸಿರುವವನು[23] ನಿಮ್ಮನ್ನು ಖಂಡಿತ ಒಂದು ಅತ್ಯುತ್ತಮ ಪರಿಣಾಮಕ್ಕೆ ಮುಟ್ಟಿಸಲಿರುವನು. "ಸನ್ಮಾರ್ಗವನ್ನು ತೆಗೆದುಕೊಂಡು ಬಂದಿರುವವನು ಯಾರು ಮತ್ತು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಸಿಲುಕಿದವನಾರು ಎಂಬುದನ್ನು ನನ್ನ ಪ್ರಭು ಚೆನ್ನಾಗಿ ಬಲ್ಲನು" ಎಂದು ಇವರೊಡನೆ ಹೇಳಿ ಬಿಡಿರಿ.

اِنَّ الَّذِيْ فَرَضَ عَلَيْكَ الْقُرْاٰنَ لَرَآدُّكَ اِلٰى مَعَادٍ ؕ قُلْ رَّبِّيْٓ اَعْلَمُ مَنْ جَآءَ بِالْهُدٰى وَمَنْ هُوَ فِيْ ضَلٰلٍ مُّبِيْنٍ ﴿۸۵﴾

86. ನಿಮ್ಮ ಮೇಲೆ ಗ್ರಂಥವು ಇಳಿಸಲ್ಪಡುವುದೆಂದು ನೀವು ಖಂಡಿತ ನಿರೀಕ್ಷಿಸಿರಲಿಲ್ಲ. ಇದು ಕೇವಲ ನಿಮ್ಮ ಪ್ರಭುವಿನ ಕೃಪೆಯಿಂದ (ನಿಮ್ಮ ಮೇಲೆ ಅವತೀರ್ಣಗೊಂಡಿದೆ.) ಆದುದರಿಂದ ನೀವು ಸತ್ಯನಿಷೇಧಿಗಳ ಸಹಕಾರಿಗಳಾಗಬೇಡಿರಿ.

وَمَا كُنْتَ تَرْجُوْٓا اَنْ يُّلْقٰٓى اِلَيْكَ الْكِتٰبُ اِلَّا رَحْمَةً مِّنْ رَّبِّكَ فَلَا تَكُوْنَنَّ ظَهِيْرًا لِّلْكٰفِرِيْنَ ﴿۸۶﴾

87. ಅಲ್ಲಾಹನ ಸೂಕ್ತಗಳು ನಿಮ್ಮ ಮೇಲೆ ಅವತೀರ್ಣಗೊಂಡರೆ ಸತ್ಯನಿಷೇಧಿಗಳು ಎಂದಿಗೂ ನಿಮ್ಮನ್ನು ಅವುಗಳಿಂದ ತಡೆಯದಿರಲಿ. ನಿಮ್ಮ ಪ್ರಭುವಿನ ಕಡೆಗೆ ಆಹ್ವಾನಿಸಿರಿ ಮತ್ತು ಎಷ್ಟು ಮಾತ್ರಕ್ಕೂ ಬಹುದೇವವಿಶ್ವಾಸಿಗಳಲ್ಲಾಗಬೇಡಿರಿ.

وَلَا يَصُدُّنَّكَ عَنْ اٰيٰتِ اللّٰهِ بَعْدَ اِذْ اُنْزِلَتْ اِلَيْكَ وَادْعُ اِلٰى رَبِّكَ وَلَا تَكُوْنَنَّ مِنَ الْمُشْرِكِيْنَ ﴿۸۷﴾

88. ಅಲ್ಲಾಹನೊಂದಿಗೆ ಇತರ ಯಾವುದೇ ದೇವರನ್ನು ಪ್ರಾರ್ಥಿಸಬೇಡಿರಿ. ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅವನ ಅಸ್ತಿತ್ವದ ಹೊರತು ಎಲ್ಲ ವಸ್ತುಗಳೂ ನಾಶ ಹೊಂದಲಿವೆ. ಸಾರ್ವಭೌಮತೆ ಅವನಿಗೇ ಮೀಸಲು ಮತ್ತು ನೀವೆಲ್ಲರೂ ಅವನ ಕಡೆಗೇ ಮರಳಲಿರುವಿರಿ.

وَلَا تَدْعُ مَعَ اللّٰهِ اِلٰهًا اٰخَرَ ۘ لَآ اِلٰهَ اِلَّا هُوَ ۟ كُلُّ شَيْءٍ هَالِكٌ اِلَّا وَجْهَهٗ ؕ لَهُ الْحُكْمُ وَاِلَيْهِ تُرْجَعُوْنَ ﴿۸۸﴾

---

23. ಅರ್ಥಾತ್- ಈ ಕುರ್‌ಆನನ್ನು ದೇವ ಸೃಷ್ಟಿಗಳಿಗೆ ತಲಪಿಸುವ, ಅದರ ಬೋಧನೆ ನೀಡುವ ಮತ್ತು ಅದರ ಮಾರ್ಗದರ್ಶನದಂತೆ ಲೋಕದ ಸುಧಾರಣೆ ಮಾಡುವ ಕರ್ತವ್ಯ ನಿಮ್ಮ ಮೇಲಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ಮೀಮ್.

الٓمّٓ ①

2. "ನಾವು ವಿಶ್ವಾಸವಿರಿಸಿದೆವು" ಎಂದ ಮಾತ್ರಕ್ಕೆ ಅವರನ್ನು ಬಿಟ್ಟು ಬಿಡಲಾಗುವುದೆಂದೂ ಅವರನ್ನು ಪರೀಕ್ಷೆಗೊಳಪಡಿಸಲಾಗದೆಂದೂ ಜನರು ತಿಳಿದುಕೊಂಡಿರುವರೇ?

اَحَسِبَ النَّاسُ اَنْ يُّتْرَكُوْۤا اَنْ يَّقُوْلُوْۤا اٰمَنَّا وَهُمْ لَا يُفْتَنُوْنَ ②

3. ವಸ್ತುತಃ ನಾವು ಇವರಿಗಿಂತ ಮುಂಚೆ ಗತಿಸಿ ಹೋದವರನ್ನು ಪರೀಕ್ಷೆಗೊಳಪಡಿಸಿದ್ದೆವು. ಯಾರು ಸತ್ಯವಾದಿಗಳು ಮತ್ತು ಯಾರು ಸುಳ್ಳುಗಾರರೆಂದು ಅಲ್ಲಾಹನಿಗೆ ನಿಶ್ಚಯವಾಗಿಯೂ ನೋಡ ಬೇಕಾಗಿದೆ.

وَلَقَدْ فَتَنَّا الَّذِيْنَ مِنْ قَبْلِهِمْ فَلَيَعْلَمَنَّ اللّٰهُ الَّذِيْنَ صَدَقُوْا وَلَيَعْلَمَنَّ الْكٰذِبِيْنَ ③

4. ದುಷ್ಕರ್ಮವೆಸಗುತ್ತಿರುವವರು[1], ಅವರು ನಮ್ಮನ್ನು ಸೋಲಿಸು ವರೆಂದು ಭಾವಿಸುತ್ತಿದ್ದಾರೆಯೇ? ಮಹಾ ತಪ್ಪು ತೀರ್ಮಾನವನ್ನು ಅವರು ಕೈಗೊಳ್ಳುತ್ತಿದ್ದಾರೆ.

اَمْ حَسِبَ الَّذِيْنَ يَعْمَلُوْنَ السَّيِّاٰتِ اَنْ يَّسْبِقُوْنَا ؕ سَآءَ مَا يَحْكُمُوْنَ ④

5. ಅಲ್ಲಾಹನ ಭೇಟಿಯನ್ನು ನಿರೀಕ್ಷಿಸುತ್ತಿರುವವನು ಅಲ್ಲಾಹನು ನಿಗದಿಗೊಳಿಸಿರುವ ಸಮಯವು ಖಂಡಿತವಾಗಿಯೂ ಬರಲಿದೆ (ಎಂದು ತಿಳಿದಿರಬೇಕು) ಮತ್ತು ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

مَنْ كَانَ يَرْجُوْا لِقَآءَ اللّٰهِ فَاِنَّ اَجَلَ اللّٰهِ لَاٰتٍ ؕ وَهُوَ السَّمِيْعُ الْعَلِيْمُ ⑤

6. ಹೋರಾಟ ನಡೆಸುವವನು ತನ್ನ ಹಿತಕ್ಕಾಗಿಯೇ ನಡೆಸುವನು.[2]

وَمَنْ جَاهَدَ فَاِنَّمَا يُجَاهِدُ لِنَفْسِهٖ ؕ

---

1. ಸತ್ಯವಿಶ್ವಾಸ ಸ್ವೀಕರಿಸಿದವರ ಮೇಲೆ ಅಕ್ರಮವೆಸಗುತ್ತಿದ್ದ ಮತ್ತು ಇಸ್ಲಾಮಿನ ಸಂದೇಶಕ್ಕೆ ಮಸಿ ಬಳಿಯಲು ಅತ್ಯಂತ ಹೇಯತಂತ್ರಗಳನ್ನು ಬಳಸುತ್ತಿದ್ದವರ ಕುರಿತು ಈ ಮಾತು ಹೇಳಲಾಗಿದೆ ಎಂದು ವಿವರಣಾಶೈಲಿಯಿಂದ ವ್ಯಕ್ತವಾಗುತ್ತದೆ.
2. ಮುಜಾಹಿದಃ ಅಥವಾ ಹೋರಾಟ ಎಂದರೆ ಸತ್ಯಧರ್ಮದ ಉತ್ತುಂಗತೆಗಾಗಿ ಪ್ರಾಣವನ್ನು ಪಣಕ್ಕಿಟ್ಟು ಹೋರಾಡುವುದಾಗಿದೆ.

ನಿಶ್ಚಯವಾಗಿಯೂ ಅಲ್ಲಾಹನು ಸಕಲ ಲೋಕದವರಿಂದ ನಿರಪೇಕ್ಷನು.[3]

إِنَّ اللَّهَ لَغَنِيٌّ عَنِ الْعَٰلَمِينَ ﴿٦﴾

7. ಮತ್ತು ಸತ್ಯವಿಶ್ವಾಸವಿರಿಸುವವರ ಮತ್ತು ಸತ್ಕರ್ಮವೆಸಗುವವರ ಪಾಪಗಳನ್ನು ನಾವು ಅವರಿಂದ ದೂರೀಕರಿಸುವೆವು ಮತ್ತು ಅವರಿಗೆ ಅವರ ಅತ್ಯುತ್ತಮ ಕರ್ಮಗಳ ಸತ್ಫಲ ನೀಡುವೆವು.

وَالَّذِينَ آمَنُوا وَعَمِلُوا الصَّٰلِحَٰتِ لَنُكَفِّرَنَّ عَنْهُمْ سَيِّـَٔاتِهِمْ وَلَنَجْزِيَنَّهُمْ أَحْسَنَ الَّذِي كَانُوا يَعْمَلُونَ ﴿٧﴾

8. ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಉಪದೇಶಿಸಿದೆವು. ಆದರೆ (ನನ್ನ ಸಹಭಾಗಿಯೆಂದು) ನೀನು ಅರಿಯದಿರುವ ಯಾವುದಾದರೊಂದನ್ನು (ಆರಾಧ್ಯನನ್ನು) ನನ್ನ ಸಹಭಾಗಿಯನ್ನಾಗಿ ಮಾಡಬೇಕೆಂದು ಅವರು ನಿನ್ನ ಮೇಲೆ ಒತ್ತಡ ಹಾಕಿದರೆ, ಅವರನ್ನು ಅನುಸರಿಸಬೇಡ.[4] ನೀವೆಲ್ಲರೂ ನನ್ನ ಕಡೆಗೇ ಮರಳಿ ಬರ ಬೇಕಾಗಿದೆ. ಆಗ ನೀವು ಏನು ಮಾಡುತ್ತಿದ್ದಿರಿ ಎಂಬುದನ್ನು ನಾನು ನಿಮಗೆ ತೋರಿಸಿ ಕೊಡುವೆನು.

وَوَصَّيْنَا الْإِنسَٰنَ بِوَٰلِدَيْهِ حُسْنًا ۖ وَإِن جَٰهَدَاكَ لِتُشْرِكَ بِي مَا لَيْسَ لَكَ بِهِ عِلْمٌ فَلَا تُطِعْهُمَا ۚ إِلَيَّ مَرْجِعُكُمْ فَأُنَبِّئُكُم بِمَا كُنتُمْ تَعْمَلُونَ ﴿٨﴾

9. ಸತ್ಯವಿಶ್ವಾಸ ಸ್ವೀಕಾರ ಮಾಡಿದವರನ್ನು ಮತ್ತು ಸತ್ಕರ್ಮವೆಸಗಿದವರನ್ನು ನಾವು ಖಂಡಿತ ಸಜ್ಜನರ ಸಾಲಿಗೆ ಸೇರಿಸಿಕೊಳ್ಳುವೆವು.

وَالَّذِينَ آمَنُوا وَعَمِلُوا الصَّٰلِحَٰتِ لَنُدْخِلَنَّهُمْ فِي الصَّٰلِحِينَ ﴿٩﴾

10. ನಾವು ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ್ದೇವೆಂದು ಹೇಳುವವನು ಜನರಲ್ಲಿದ್ದಾನೆ. ಆದರೆ, ಅವನು ಅಲ್ಲಾಹನ ವಿಷಯದಲ್ಲಿ ಸತಾಯಿಸಲ್ಪಟ್ಟಾಗ ಜನರ ಕಡೆಯಿಂದ ಬರುವಂತಹ ಪರೀಕ್ಷೆಯನ್ನು ಅಲ್ಲಾಹನ ಯಾತನೆಯಂತೆ ಗ್ರಹಿಸಿಕೊಂಡನು. ನಿನ್ನ ಪ್ರಭುವಿನ ಕಡೆಯಿಂದ ಸಹಾಯವೊದಗಿದಾಗ ಇವನೇ, "ನಾವಂತೂ ನಿಮ್ಮ ಜೊತೆಗಿದ್ದೆವು" ಎಂದು ಹೇಳುವನು. ಲೋಕವಾಸಿಗಳ ಮನಸ್ಸಿನ ಸ್ಥಿತಿಯು ಅಲ್ಲಾಹನಿಗೆ ಚೆನ್ನಾಗಿ ತಿಳಿದಿಲ್ಲವೇ?

وَمِنَ النَّاسِ مَن يَقُولُ آمَنَّا بِاللَّهِ فَإِذَا أُوذِيَ فِي اللَّهِ جَعَلَ فِتْنَةَ النَّاسِ كَعَذَابِ اللَّهِ ۖ وَلَئِن جَاءَ نَصْرٌ مِّن رَّبِّكَ لَيَقُولُنَّ إِنَّا كُنَّا مَعَكُمْ ۚ أَوَلَيْسَ اللَّهُ بِأَعْلَمَ بِمَا فِي صُدُورِ الْعَٰلَمِينَ ﴿١٠﴾

11. ಸತ್ಯವಿಶ್ವಾಸಿಗಳು ಯಾರು ಹಾಗೂ ಕಪಟವಿಶ್ವಾಸಿಗಳು ಯಾರು ಎಂಬುದು ನಿಶ್ಚಯವಾಗಿಯೂ ಅಲ್ಲಾಹನಿಗೆ ಅರಿಯಲೇಬೇಕಾಗಿದೆ.

وَلَيَعْلَمَنَّ اللَّهُ الَّذِينَ آمَنُوا وَلَيَعْلَمَنَّ الْمُنَٰفِقِينَ ﴿١١﴾

3. ಅರ್ಥಾತ್- ಅಲ್ಲಾಹನು ನಿಮ್ಮೊಡನೆ ಹೋರಾಟದ ಬೇಡಿಕೆಯನ್ನು ಮುಂದಿಡಲು ಕಾರಣ ಅವನಿಗೆ ಅದರ ಅಗತ್ಯವಿದೆ ಎಂದಲ್ಲ (ಶಾಂತಂ ಪಾಪಂ) ಬದಲಾಗಿ ಇದು ನಿಮ್ಮ ನೈತಿಕ ಮತ್ತು ಆಧ್ಯಾತ್ಮಿಕ ಪ್ರಗತಿಯ ಉಪಾಧಿಯಾಗಿದೆ.

4. ಮಕ್ಕಾದಲ್ಲಿ ವಿಶ್ವಾಸ ಸ್ವೀಕರಿಸಿದ್ದ ಯುವಕರ ಮೇಲೆ ಅವರ ತಂದೆ-ತಾಯಿಗಳು ಸತ್ಯವಿಶ್ವಾಸದಿಂದ ದೂರವಿರುವಂತೆ ಒತ್ತಾಯಿಸುತ್ತಿದ್ದರು. ಅದಕ್ಕಾಗಿ, ತಂದೆ-ತಾಯಿಗಳ ಮೇಲೆ ಕೆಲವೊಂದು ಹಕ್ಕುಗಳು ಇವೆ ನಿಜ. ಆದರೆ ಮಕ್ಕಳನ್ನು ದೇವ ಮಾರ್ಗದಿಂದ ತಡೆಯುವ ಹಕ್ಕು ಅವರಿಗಿಲ್ಲ ಎಂದು ಹೇಳಲಾಗುತ್ತಿದೆ.

12. ಈ ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳೊಡನೆ, "ನೀವು ನಮ್ಮ ಮಾರ್ಗವನ್ನನುಸರಿಸಿರಿ. ನಿಮ್ಮ ದೋಷಗಳನ್ನು ನಾವು ನಮ್ಮ ಮೇಲೆ ಹೊತ್ತುಕೊಳ್ಳುತ್ತೇವೆ" ಎನ್ನುತ್ತಾರೆ. ವಸ್ತುತಃ ಇವರ ದೋಷಗಳ ಪೈಕಿ ಸ್ವಲ್ಪವನ್ನೂ ಅವರು ತಮ್ಮ ಮೇಲೆ ಹೊತ್ತು ಕೊಳ್ಳುವವರಲ್ಲ. ನಿಸ್ಸಂದೇಹವಾಗಿಯೂ ಅವರು ಸುಳ್ಳು ಹೇಳು ತ್ತಿದ್ದಾರೆ.

وَقَالَ الَّذِيْنَ كَفَرُوْا لِلَّذِيْنَ اٰمَنُوا
اتَّبِعُوْا سَبِيْلَنَا وَلْنَحْمِلْ خَطٰيٰكُمْ ؕ
وَمَا هُمْ بِحٰمِلِيْنَ مِنْ خَطٰيٰهُمْ مِّنْ
شَيْءٍ ؕ اِنَّهُمْ لَكٰذِبُوْنَ ﴿١٢﴾

13. ಖಂಡಿತವಾಗಿಯೂ ಅವರು ತಮ್ಮ ಹೊರೆಯನ್ನೂ ಹೊರುವರು ಮತ್ತು ತಮ್ಮ ಹೊರೆಗಳೊಂದಿಗೆ ಇತರ ಅನೇಕ ಹೊರೆಗಳನ್ನೂ ಹೊರುವರು.[5] ಪುನರುತ್ಥಾನ ದಿನ, ಅವರು ಮಾಡುತ್ತಿದ್ದ ಸುಳ್ಳು ಸೃಷ್ಟನೆಗಳ ವಿಚಾರಣೆಯು ಖಂಡಿತವಾಗಿಯೂ ನಡೆಯುವುದು.

وَلَيَحْمِلُنَّ اَثْقَالَهُمْ وَاَثْقَالًا مَّعَ
اَثْقَالِهِمْ ۫ وَلَيُسْـَٔلُنَّ يَوْمَ الْقِيٰمَةِ
عَمَّا كَانُوْا يَفْتَرُوْنَ ﴿١٣﴾

14. ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದೆವು. ಅವರು ಅವರ ನಡುವೆ ಐವತ್ತು ಕಡಿಮೆ ಒಂದು ಸಾವಿರ ವರ್ಷ ಗಳಿದ್ದರು. ಕೊನೆಗೆ ಆ ಜನರು ಅಕ್ರಮಿಗಳಾಗಿದ್ದ ಸ್ಥಿತಿಯಲ್ಲಿ ಅವರನ್ನು ಚಂಡಮಾರುತವು ಬಂದಾವರಿಸಿತು.

وَلَقَدْ اَرْسَلْنَا نُوْحًا اِلٰى قَوْمِهٖ فَلَبِثَ
فِيْهِمْ اَلْفَ سَنَةٍ اِلَّا خَمْسِيْنَ عَامًا ؕ
فَاَخَذَهُمُ الطُّوْفَانُ وَهُمْ ظٰلِمُوْنَ ﴿١٤﴾

15. ತರುವಾಯ ನೂಹರನ್ನೂ ನಾವೆಯವರನ್ನೂ ನಾವು ರಕ್ಷಿಸಿ ಕೊಂಡೆವು ಮತ್ತು ಲೋಕದ ಜನತೆಗಾಗಿ ಅದನ್ನೊಂದು ಪಾಠ ಬೋಧಕ ಸಂಕೇತವಾಗಿ ಮಾಡಿಬಿಟ್ಟೆವು.[6]

فَاَنْجَيْنٰهُ وَاَصْحٰبَ السَّفِيْنَةِ وَجَعَلْنٰهَاۤ
اٰيَةً لِّلْعٰلَمِيْنَ ﴿١٥﴾

16. ಮತ್ತು ಇಬ್‌ರಾಹೀಮರನ್ನು ರವಾನಿಸಿದೆವು. ಅವರು ತಮ್ಮ ಜನಾಂಗದೊಡನೆ ಹೀಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ:) "ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ ಮತ್ತು ಅವನನ್ನು ಭಯಪಡಿರಿ. ನೀವು ಅರಿಯುವವರಾಗಿದ್ದರೆ ಇದು ನಿಮಗೆ ಉತ್ತಮವಾಗಿದೆ.

وَاِبْرٰهِيْمَ اِذْ قَالَ لِقَوْمِهِ اعْبُدُوا
اللّٰهَ وَاتَّقُوْهُ ؕ ذٰلِكُمْ خَيْرٌ لَّكُمْ
اِنْ كُنْتُمْ تَعْلَمُوْنَ ﴿١٦﴾

17. ನೀವು ಅಲ್ಲಾಹನನ್ನು ಬಿಟ್ಟು ಯಾವುದನ್ನೆಲ್ಲಾ ಪೂಜಿಸುತ್ತೀರೋ ಅವು ಕೇವಲ ವಿಗ್ರಹಗಳಾಗಿವೆ ಮತ್ತು ನೀವು ಒಂದು ಸುಳ್ಳನ್ನು ಸೃಷ್ಟಿಸುತ್ತಿರುವಿರಿ. ವಾಸ್ತವದಲ್ಲಿ ಅಲ್ಲಾಹನ ಹೊರತು ನೀವು ಯಾರನ್ನು ಪೂಜಿಸುತ್ತೀರೋ ಅವರು ನಿಮಗೆ ಯಾವುದೇ

اِنَّمَا تَعْبُدُوْنَ مِنْ دُوْنِ اللّٰهِ اَوْثَانًا
وَّتَخْلُقُوْنَ اِفْكًا ؕ اِنَّ الَّذِيْنَ
تَعْبُدُوْنَ مِنْ دُوْنِ اللّٰهِ لَا يَمْلِكُوْنَ

5. ಅರ್ಥಾತ್- ಸ್ವತಃ ಪಥಭ್ರಷ್ಟನಾದುದರ ಹೊರೆ ಒಂದಾದರೆ ಇತರರನ್ನು ಪಥಭ್ರಷ್ಟಗೊಳಿಸಿದ ಅಥವಾ ಪಥಭ್ರಷ್ಟನಾಗಲು ನಿರ್ಬಂಧಿಸಿದ ಇತರ ಹೊರೆಗಳು.
6. ಅರ್ಥಾತ್- ಆ ನೌಕೆಯನ್ನು ಅಥವಾ ನೂಹ್‌ರ(ಅ) ಸಮುದಾಯದ ಮೇಲೆ ಯಾತನೆ ಎರಗಿಸಿದ ಆ ಘಟನೆಯನ್ನು ಪಾಠಬೋಧಕ ಕುರುಹನ್ನಾಗಿ ಮಾಡಿದನು.

لَكُمْ رِزْقًا فَابْتَغُوا عِندَ اللَّهِ الرِّزْقَ وَاعْبُدُوهُ وَاشْكُرُوا لَهُ ۖ إِلَيْهِ تُرْجَعُونَ ﴿١٧﴾

ಜೀವನಾಧಾರ ನೀಡುವ ಅಧಿಕಾರ ಹೊಂದಿಲ್ಲ. ಅಲ್ಲಾಹನಿಂದ ಜೀವನಾಧಾರ ಯಾಚಿಸಿರಿ. ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನೀವು ಅವನ ಕಡೆಗೇ ಮರಳಿಸಲ್ಪಡಲಿರುವಿರಿ.

وَإِن تُكَذِّبُوا فَقَدْ كَذَّبَ أُمَمٌ مِّن قَبْلِكُمْ ۖ وَمَا عَلَى الرَّسُولِ إِلَّا الْبَلَاغُ الْمُبِينُ ﴿١٨﴾

18. ನೀವು ಸುಳ್ಳಾಗಿಸುತ್ತೀರಾದರೆ ನಿಮಗಿಂತ ಮುಂಚೆ ಅನೇಕ ಜನಾಂಗಗಳು ಸುಳ್ಳಾಗಿಸಿವೆ. ಸುಸ್ಪಷ್ಟವಾಗಿ ಸಂದೇಶವನ್ನು ತಲಪಿಸಿ ಬಿಡುವ ಹೊರತು ಯಾವ ಹೊಣೆಗಾರಿಕೆಯೂ ಸಂದೇಶವಾಹಕನ ಮೇಲಿಲ್ಲ."

أَوَلَمْ يَرَوْا كَيْفَ يُبْدِئُ اللَّهُ الْخَلْقَ ثُمَّ يُعِيدُهُ ۚ إِنَّ ذَٰلِكَ عَلَى اللَّهِ يَسِيرٌ ﴿١٩﴾

19. ಅಲ್ಲಾಹನು ಸೃಷ್ಟಿಯ ಆರಂಭ ಹೇಗೆ ಮಾಡುತ್ತಾನೆ ಅನಂತರ ಹೇಗೆ ಅದರ ಪುನರಾವರ್ತನೆ ಮಾಡುತ್ತಾನೆ ಎಂಬುದನ್ನು ಇವರೆಂದೂ ನೋಡಲಿಲ್ಲವೇ? ನಿಶ್ಚಯವಾಗಿಯೂ ಇದು (ಈ ಪುನರಾವರ್ತನೆ) ಅಲ್ಲಾಹನಿಗೆ ಅತಿ ಸುಲಭವಾಗಿದೆ.

قُلْ سِيرُوا فِي الْأَرْضِ فَانظُرُوا كَيْفَ بَدَأَ الْخَلْقَ ۚ ثُمَّ اللَّهُ يُنشِئُ النَّشْأَةَ الْآخِرَةَ ۚ إِنَّ اللَّهَ عَلَىٰ كُلِّ شَيْءٍ قَدِيرٌ ﴿٢٠﴾

20. ಅವನು ಸೃಷ್ಟಿಯ ಆರಂಭ ಹೇಗೆ ಮಾಡಿರುತ್ತಾನೆಂಬುದನ್ನು ಭೂಮಿಯ ಮೇಲೆ ಸಂಚರಿಸಿ ನೋಡಿರಿ, ಎಂದು ಅವರೊಡನೆ ಹೇಳಿರಿ. ಮುಂದೆ ಅಲ್ಲಾಹನು ಎರಡನೆಯ ಬಾರಿಯೂ ಜೀವ ನೀಡುವನು. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನು.

يُعَذِّبُ مَن يَشَاءُ وَيَرْحَمُ مَن يَشَاءُ ۖ وَإِلَيْهِ تُقْلَبُونَ ﴿٢١﴾

21. ಅವನು ತಾನಿಚ್ಛಿಸುವವರಿಗೆ ಶಿಕ್ಷೆ ನೀಡುತ್ತಾನೆ. ತಾನಿಚ್ಛಿಸುವವರ ಮೇಲೆ ಕೃಪೆ ತೋರುತ್ತಾನೆ. ನೀವು ಅವನ ಕಡೆಗೆ ಮರಳಿಸಲ್ಪಡುವಿರಿ.

وَمَا أَنتُم بِمُعْجِزِينَ فِي الْأَرْضِ وَلَا فِي السَّمَاءِ ۖ وَمَا لَكُم مِّن دُونِ اللَّهِ مِن وَلِيٍّ وَلَا نَصِيرٍ ﴿٢٢﴾

22. ನೀವು ಭೂಮಿಯಲ್ಲಾಗಲಿ ಆಕಾಶದಲ್ಲಾಗಲಿ (ಅವನನ್ನು) ಸೋಲಿಸಲಾರಿರಿ. ಅಲ್ಲಾಹನಿಂದ ರಕ್ಷಿಸತಕ್ಕ ಯಾವ ರಕ್ಷಕ ಮಿತ್ರನೂ ಸಹಾಯಕನೂ ನಿಮಗಿಲ್ಲ.

وَالَّذِينَ كَفَرُوا بِآيَاتِ اللَّهِ وَلِقَائِهِ أُولَٰئِكَ يَئِسُوا مِن رَّحْمَتِي وَأُولَٰئِكَ لَهُمْ عَذَابٌ أَلِيمٌ ﴿٢٣﴾

23. ಯಾರು ಅಲ್ಲಾಹನ ಸೂಕ್ತಗಳನ್ನೂ ಅವನ ಭೇಟಿಯನ್ನೂ ನಿಷೇಧಿಸಿದ್ದಾರೋ ಅವರು ನನ್ನ ಕೃಪೆಯಿಂದ ನಿರಾಶರಾಗಿ ಹೋಗಿದ್ದಾರೆ[7] ಮತ್ತು ಅವರಿಗೆ ವೇದನಾಯುಕ್ತ ಶಿಕ್ಷೆ ಇದೆ.

7. ಅರ್ಥಾತ್- ಅವರಿಗೆ ನನ್ನ ಅನುಗ್ರಹದಲ್ಲಿ ಯಾವುದೇ ರೀತಿಯ ಪಾಲಿಲ್ಲ. ನನ್ನ ಅನುಗ್ರಹದಲ್ಲಿ ಪಾಲು ಪಡೆಯುವ ನಿರೀಕ್ಷೆಯನ್ನಿಟ್ಟುಕೊಳ್ಳುವಂತಹ ಯಾವುದೇ ಅವಕಾಶ ಅವರಿಗಿಲ್ಲ. ಅವರು ಪರಲೋಕವನ್ನೇ ನಿರಾಕರಿಸಿದರು. ದೇವನ ಮುಂದೆ ಹಾಜರಾಗಲಿಕ್ಕಿದೆ ಎಂಬುದನ್ನು ಸಮ್ಮತಿಸಲಿಲ್ಲ. ಅದರ ಅರ್ಥ ಅವರು ದೇವನ ಕ್ಷಮೆ ಮತ್ತು ಪಾಪ ವಿಮೋಚನೆ ಬಗ್ಗೆ ಯಾವುದೇ ನಿರೀಕ್ಷೆ ಇಟ್ಟುಕೊಂಡಿರಲಿಲ್ಲ ಎಂದಾಗಿದೆ.

24. ಇನ್ನು, ಇಬ್‌ರಾಹೀಮರ ಜನಾಂಗದ ಉತ್ತರವು, "ಇವನನ್ನು ಕೊಂದು ಹಾಕಿರಿ ಇಲ್ಲವೇ ಇವನನ್ನು ಸುಟ್ಟು ಹಾಕಿರಿ" ಎನ್ನುವ ಹೊರತು ಬೇರೇನೂ ಇರಲಿಲ್ಲ. ಕೊನೆಗೆ ಅಲ್ಲಾಹನು ಅವರನ್ನು ಅಗ್ನಿಯಿಂದ ರಕ್ಷಿಸಿದನು. ನಿಶ್ಚಯವಾಗಿಯೂ ಇದರಲ್ಲಿ ಸತ್ಯ ವಿಶ್ವಾಸವಿರಿಸುವವರಿಗೆ  ನಿದರ್ಶನಗಳಿವೆ.

فَمَا كَانَ جَوَابَ قَوْمِهِ إِلَّا أَنْ قَالُوا اقْتُلُوهُ أَوْ حَرِّقُوهُ فَأَنْجَاهُ اللَّهُ مِنَ النَّارِ ۚ إِنَّ فِي ذَٰلِكَ لَآيَاتٍ لِقَوْمٍ يُؤْمِنُونَ ﴿٢٤﴾

25. ಮತ್ತು ಅವರು ಹೀಗೆಂದರು; "ನೀವು ಲೌಕಿಕ ಜೀವನದಲ್ಲಂತೂ ಅಲ್ಲಾಹನನ್ನು ಬಿಟ್ಟು, ವಿಗ್ರಹಗಳನ್ನು ಪರಸ್ಪರ ಪ್ರೇಮದ ಸಾಧನ ವನ್ನಾಗಿ ಮಾಡಿಕೊಂಡಿರುವಿರಿ.[8] ಆದರೆ ಪುನರುತ್ಥಾನ ದಿನ ನೀವು ಪರಸ್ಪರರನ್ನು ನಿರಾಕರಿಸುವಿರಿ ಮತ್ತು ಪರಸ್ಪರರನ್ನು ಶಪಿಸುವಿರಿ. ನರಕಾಗ್ನಿಯು ನಿಮ್ಮ ನಿವಾಸವಾಗುವುದು ಮತ್ತು ಯಾರೂ ನಿಮ್ಮ  ಸಹಾಯಕನಾಗಲಾರನು."

وَقَالَ إِنَّمَا اتَّخَذْتُمْ مِنْ دُونِ اللَّهِ أَوْثَانًا مَوَدَّةَ بَيْنِكُمْ فِي الْحَيَاةِ الدُّنْيَا ۖ ثُمَّ يَوْمَ الْقِيَامَةِ يَكْفُرُ بَعْضُكُمْ بِبَعْضٍ وَيَلْعَنُ بَعْضُكُمْ بَعْضًا وَمَأْوَاكُمُ النَّارُ وَمَا لَكُمْ مِنْ نَاصِرِينَ ﴿٢٥﴾

26. ಆಗ ಲೂತರು ಅವರ ಮೇಲೆ ವಿಶ್ವಾಸವಿರಿಸಿದರು ಮತ್ತು ಇಬ್‌ರಾಹೀಮರು, ನಾನು ನನ್ನ ಪ್ರಭುವಿನತ್ತ 'ವಲಸೆ' ಹೋಗು ತ್ತೇನೆ. ಅವನು ಮಹಾ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆಂದರು.

فَآمَنَ لَهُ لُوطٌ ۘ وَقَالَ إِنِّي مُهَاجِرٌ إِلَىٰ رَبِّي ۖ إِنَّهُ هُوَ الْعَزِيزُ الْحَكِيمُ ﴿٢٦﴾

27. ತರುವಾಯ ನಾವು ಅವರಿಗೆ ಇಸ್‌ಹಾಕ್ ಮತ್ತು ಯಅ್‌ಕೂಬ್ (ರಂತಹ ಸಂತಾನ) ದಯಪಾಲಿಸಿದೆವು. ಅವರ ಸಂತತಿಯಲ್ಲಿ ಪ್ರವಾದಿತ್ವವನ್ನೂ ಗ್ರಂಥವನ್ನೂ ಇರಿಸಿಬಿಟ್ಟೆವು. ಅವರಿಗೆ ಈ ಲೋಕದಲ್ಲಿ ಅದರ ಸತ್ಫಲವನ್ನು ನೀಡಿದೆವು ಮತ್ತು ಪರಲೋಕದಲ್ಲಿ ಅವರು ಖಂಡಿತವಾಗಿಯೂ ಸಜ್ಜನರಲ್ಲಾಗುವರು.

وَوَهَبْنَا لَهُ إِسْحَاقَ وَيَعْقُوبَ وَجَعَلْنَا فِي ذُرِّيَّتِهِ النُّبُوَّةَ وَالْكِتَابَ وَآتَيْنَاهُ أَجْرَهُ فِي الدُّنْيَا ۖ وَإِنَّهُ فِي الْآخِرَةِ لَمِنَ الصَّالِحِينَ ﴿٢٧﴾

28. ನಾವು ಲೂತರನ್ನು ಕಳುಹಿಸಿದೆವು. ಅವರು ತಮ್ಮ ಜನಾಂಗದೊಡನೆ ಹೇಳಿದ ಆ ಸಂದರ್ಭ (ವನ್ನು ಸ್ಮರಿಸಿರಿ); "ನಿಮಗಿಂತ ಮುಂಚೆ ಲೋಕವಾಸಿಗಳಲ್ಲಿ ಯಾರೂ ಮಾಡಿರದಂತಹ ಅಶ್ಲೀಲ ಕಾರ್ಯವನ್ನು ನೀವು ಮಾಡುತ್ತೀರಿ.

وَلُوطًا إِذْ قَالَ لِقَوْمِهِ إِنَّكُمْ لَتَأْتُونَ الْفَاحِشَةَ مَا سَبَقَكُمْ بِهَا مِنْ أَحَدٍ مِنَ الْعَالَمِينَ ﴿٢٨﴾

29. ನೀವೇನು ಪುರುಷರ ಬಳಿಗೆ ಹೋಗುತ್ತೀರಾ? ದರೋಡೆ

أَئِنَّكُمْ لَتَأْتُونَ الرِّجَالَ وَتَقْطَعُونَ السَّبِيلَ ۙ وَتَأْتُونَ فِي نَادِيكُمُ

8. ಅರ್ಥಾತ್- ನೀವು ನಿಮ್ಮ ಸಾಮೂಹಿಕ ಜೀವನವನ್ನು ದೇವೋಪಾಸನೆಯ ಬದಲಿಗೆ ಮೂರ್ತಿಪೂಜೆಯ ಆಧಾರದಲ್ಲಿ ರೂಪಿಸಿದ್ದೀರಿ. ಲೌಕಿಕ ಜೀವನದ ಮಟ್ಟಿಗೆ ಅದು ನಿಮ್ಮ ಜನಾಂಗೀಯ ಐಕ್ಯವನ್ನು ಕಾಯ್ದಿಡಬಹುದು. ಏಕೆಂದರೆ ಇಲ್ಲಿ ಯಾವುದೇ ವಿಶ್ವಾಸದ ಆಧಾರದಲ್ಲಿ ಜನರು ಜತೆಗೂಡಬಹುದು. ಆ ವಿಶ್ವಾಸ ಸತ್ಯವಾಗಿದ್ದರೂ ಮಿಥ್ಯವಾಗಿದ್ದರೂ ಸರಿ. ಯಾವುದೇ ರೀತಿಯ ಒಮ್ಮತ ಅಥವಾ ಮಿಲನವು, ಅದೆಷ್ಟೇ ತಪ್ಪು ವಿಶ್ವಾಸದಿಂದ ಕೂಡಿದ್ದರೂ ಪರಸ್ಪರ ಸ್ನೇಹ, ನೆಂಟಸ್ತಿಕೆ, ಸೋದರತೆ ಹಾಗೂ ಇನ್ನಿತರ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಂಬಂಧಗಳ ಸ್ಥಾಪನೆಗೆ ಆಧಾರವಾಗಬಹುದು.

ಮಾಡುತ್ತೀರಾ? ಹಾಗೂ ನಿಮ್ಮ ಸಮಾರಂಭಗಳಲ್ಲಿ ದುಷ್ಕರ್ಮಗಳನ್ನೆಸಗುತ್ತೀರಾ? " ಅದಕ್ಕೆ- "ನೀನು ಸತ್ಯವಾದಿಯಾಗಿದ್ದರೆ ಅಲ್ಲಾಹನ ಯಾತನೆಯನ್ನು ತಾ" ಎನ್ನುವ ಹೊರತು ಅವರ ಜನಾಂಗದ ಬಳಿ ಬೇರೆ ಉತ್ತರವಿರಲಿಲ್ಲ.

الْمُنْكَرَ ۖ فَمَا كَانَ جَوَابَ قَوْمِهٖٓ إِلَّآ أَنْ قَالُوا ائْتِنَا بِعَذَابِ اللّٰهِ إِنْ كُنْتَ مِنَ الصّٰدِقِيْنَ ﴿٢٩﴾

30. ಆಗ ಲೂತರು, "ನನ್ನ ಪ್ರಭೂ, ಈ ಕಿಡಿಗೇಡಿಗಳ ವಿರುದ್ಧ ನನಗೆ ಸಹಾಯ ನೀಡು" ಎಂದರು.

قَالَ رَبِّ انْصُرْنِيْ عَلَى الْقَوْمِ الْمُفْسِدِيْنَ ﴿٣٠﴾

31. ನಮ್ಮ ದೂತರು ಇಬ್‌ರಾಹೀಮರ ಬಳಿ ಸುವಾರ್ತೆಯೊಂದಿಗೆ ಬಂದು ತಲಪಿದಾಗ ಅವರು ಇವರೊಡನೆ, "ನಾವು ಈ ನಾಡಿನ ಜನರನ್ನು ನಾಶಗೊಳಿಸುವವರಿದ್ದೇವೆ[9] ಇದರ ನಿವಾಸಿಗಳು ಮಹಾ ಅಕ್ರಮಿಗಳಾಗಿ ಬಿಟ್ಟಿದ್ದಾರೆ" ಎಂದರು.

وَلَمَّا جَآءَتْ رُسُلُنَآ إِبْرٰهِيْمَ بِالْبُشْرٰى ۙ قَالُوْٓا إِنَّا مُهْلِكُوْٓا أَهْلِ هٰذِهِ الْقَرْيَةِ ۚ إِنَّ أَهْلَهَا كَانُوْا ظٰلِمِيْنَ ﴿٣١﴾

32. ಆಗ ಇಬ್‌ರಾಹೀಮರು, "ಅಲ್ಲಿ ಲೂತರಿದ್ದಾರಲ್ಲಾ"! ಎಂದಾಗ ಅವರು, "ಅಲ್ಲಿ ಯಾರ್‍ಯಾರಿದ್ದಾರೆಂಬುದನ್ನು ನಾವು ಚೆನ್ನಾಗಿ ಬಲ್ಲೆವು. ನಾವು ಅವರನ್ನೂ ಅವರ ಪತ್ನಿಯ ಹೊರತು ಅವರ ಮನೆಯವರೆಲ್ಲರನ್ನೂ ರಕ್ಷಿಸಿಕೊಳ್ಳುವೆವು" ಎಂದರು. ಅವರ ಪತ್ನಿ ಹಿಂದೆ ಉಳಿಯುವವರಲ್ಲಾಗಿದ್ದಳು.

قَالَ إِنَّ فِيْهَا لُوْطًا ۚ قَالُوْا نَحْنُ أَعْلَمُ بِمَنْ فِيْهَا ۫ لَنُنَجِّيَنَّهٗ وَأَهْلَهٗٓ إِلَّا امْرَأَتَهٗ ۫ كَانَتْ مِنَ الْغٰبِرِيْنَ ﴿٣٢﴾

33. ಅನಂತರ ನಮ್ಮ ದೂತರು ಲೂತರ ಬಳಿಗೆ ತಲುಪಿದಾಗ ಅವರ ಆಗಮನದಿಂದ ಅವರು(ಲೂತರು) ತುಂಬಾ ಗಾಬರಿ ಮತ್ತು ಕಳವಳಗೊಂಡರು. ಅವರು ಹೇಳಿದರು, "ಹೆದರಬೇಡಿರಿ ಮತ್ತು ವ್ಯಥೆ ಪಡಬೇಡಿರಿ. ಹಿಂದೆ ಉಳಿದು ಬಿಡುವವರಲ್ಲಾಗಿರುವ ನಿಮ್ಮ ಪತ್ನಿಯ ಹೊರತು ನಿಮ್ಮನ್ನೂ ನಿಮ್ಮ ಮನೆಯವರನ್ನೂ ನಾವು ರಕ್ಷಿಸಿಕೊಳ್ಳುವೆವು.

وَلَمَّآ أَنْ جَآءَتْ رُسُلُنَا لُوْطًا سِيْٓءَ بِهِمْ وَضَاقَ بِهِمْ ذَرْعًا وَّقَالُوْا لَا تَخَفْ وَلَا تَحْزَنْ ۫ إِنَّا مُنَجُّوْكَ وَأَهْلَكَ إِلَّا امْرَأَتَكَ كَانَتْ مِنَ الْغٰبِرِيْنَ ﴿٣٣﴾

34. ಇವರು ಮಾಡುತ್ತ ಬಂದಿರುವ ದುಷ್ಕರ್ಮಗಳ ಕಾರಣ ನಾವು ಈ ನಾಡಿನವರ ಮೇಲೆ ಆಕಾಶದಿಂದ ಯಾತನೆಯನ್ನು ಇಳಿಸುವವರಿದ್ದೇವೆ."

إِنَّا مُنْزِلُوْنَ عَلٰٓى أَهْلِ هٰذِهِ الْقَرْيَةِ رِجْزًا مِّنَ السَّمَآءِ بِمَا كَانُوْا يَفْسُقُوْنَ ﴿٣٤﴾

9. 'ಈ ನಾಡು' ಎಂಬುದು ಲೂತ್ ಸಮುದಾಯದ ಪ್ರದೇಶದ ಕಡೆಗೆ ಇರುವ ಸೂಚನೆಯಾಗಿದೆ. ಹ. ಇಬ್‌ರಾಹೀಮ್(ಅ) ಆಗ ಫೆಲಸ್ತೀನಿನ 'ಹಬರೂನ್' (ಇಂದಿನ ಅಲ್‌ಖಲೀಲ್) ನಗರದಲ್ಲಿ ವಾಸಿಸುತ್ತಿದ್ದರು. ಆ ನಗರದ ಪೂರ್ವದಲ್ಲಿ ಕೆಲವು ಮೈಲುಗಳ ಅಂತರದಲ್ಲಿ ಹಿಂದೆ ಲೂತ್‌ರ(ಅ) ಜನಾಂಗ ವಾಸಿಸುತ್ತಿದ್ದ 'ಶಾಂತ ಸಾಗರ'ದ ಆ ಭಾಗವಿದೆ. ಈಗ ಸಾಗರದ ನೀರು ಅದನ್ನು ಆವರಿಸಿಕೊಂಡಿದೆ. ಈ ಪ್ರದೇಶ ತಗ್ಗಿನಲ್ಲಿರುವುದರಿಂದ 'ಹಬರೂನ್'ನ ಪರ್ವತ ಶಿಖರಗಳಿಂದ ಅದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದ್ದರಿಂದಲೇ ದೇವಚರರು ಅದರೆಡೆಗೆ ಬೊಟ್ಟು ಮಾಡಿ ಪ್ರವಾದಿ ಹ. ಇಬ್‌ರಾಹೀಮ್‌ರೊಡನೆ(ಅ), "ನಾವು ಈ ಪ್ರದೇಶವನ್ನು ನಾಶ ಮಾಡಲಿದ್ದೇವೆ" ಎಂದು ಹೇಳಿದರು.

35. ನಾವು ಬುದ್ಧಿಯನ್ನು ಉಪಯೋಗಿಸುವ ಜನರಿಗಾಗಿ ಆ ನಾಡಿನ ಒಂದು ಬಹಿರಂಗ ನಿದರ್ಶನವನ್ನು[10] ಬಿಟ್ಟಿರುತ್ತೇವೆ.

وَلَقَد تَّرَكْنَا مِنْهَا آيَةً بَيِّنَةً
لِّقَوْمٍ يَعْقِلُونَ ﴿٣٥﴾

36. ನಾವು ಮದ್‌ಯನ್‌ನ ಕಡೆಗೆ ಅವರ ಸಹೋದರ ಶುಐಬರನ್ನು ರವಾನಿಸಿದೆವು. ಅವರು, "ನನ್ನ ಜನಾಂಗದವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅಂತಿಮ ದಿನವನ್ನು ನಿರೀಕ್ಷಿಸಿರಿ. ಮತ್ತು ಭೂಮಿಯಲ್ಲಿ ಕಿಡಿಗೇಡಿಗಳಾಗಿ ಅತಿರೇಕಗಳನ್ನೆಸಗುತ್ತ ತಿರುಗಾಡಬೇಡಿರಿ" ಎಂದರು.

وَإِلَىٰ مَدْيَنَ أَخَاهُمْ شُعَيْبًا فَقَالَ
يَا قَوْمِ اعْبُدُوا اللَّهَ وَارْجُوا الْيَوْمَ الْآخِرَ
وَلَا تَعْثَوْا فِي الْأَرْضِ مُفْسِدِينَ ﴿٣٦﴾

37. ಆದರೆ ಅವರು ಇವರನ್ನು ಸುಳ್ಳಾಗಿಸಿ ಬಿಟ್ಟರು. ಕೊನೆಗೆ ಒಂದು ಉಗ್ರ ಭೂಕಂಪವುಂಟಾಯಿತು ಮತ್ತು ಅವರು ತಮ್ಮ ಮನೆಗಳೊಳಗೆ ಬಿದ್ದಲ್ಲೇ ಬಿದ್ದು ಬಿಟ್ಟರು.

فَكَذَّبُوهُ فَأَخَذَتْهُمُ الرَّجْفَةُ
فَأَصْبَحُوا فِي دَارِهِمْ جَاثِمِينَ ﴿٣٧﴾

38. ಆದ್ ಮತ್ತು ಸಮೂದರನ್ನು ನಾವು ನಾಶಗೊಳಿಸಿದ್ದೆವು. ಅವರು ವಾಸಿಸುತ್ತಿದ್ದ ಸ್ಥಳಗಳನ್ನು ನೀವು ನೋಡಿರುತ್ತೀರಿ. ಶೈತಾನನು ಅವರ ಕರ್ಮಗಳನ್ನು ಅವರಿಗೆ ಮನೋಹರವಾಗಿ ಮಾಡಿದನು ಮತ್ತು ಅವರನ್ನು ನೇರ ಮಾರ್ಗದಿಂದ ಸರಿಸಿ ಬಿಟ್ಟನು. ವಸ್ತುತಃ ಅವರು ಬುದ್ಧಿಯುಳ್ಳವರೇ ಆಗಿದ್ದರು.

وَعَادًا وَثَمُودَ وَقَد تَّبَيَّنَ لَكُم مِّن
مَّسَاكِنِهِمْ ۖ وَزَيَّنَ لَهُمُ الشَّيْطَانُ
أَعْمَالَهُمْ فَصَدَّهُمْ عَنِ السَّبِيلِ
وَكَانُوا مُسْتَبْصِرِينَ ﴿٣٨﴾

39. ಮತ್ತು ಕಾರೂನ್, ಫಿರ್‌ಔನ್ ಹಾಗೂ ಹಾಮಾನ್‌ರನ್ನೂ ನಾವು ನಾಶಗೊಳಿಸಿದೆವು. ಮೂಸಾ, ಅವರ ಬಳಿಗೆ ಪ್ರತ್ಯಕ್ಷ ಪ್ರಮಾಣಗಳನ್ನು ತಂದರು. ಆದರೆ, ಅವರು ಭೂಮಿಯಲ್ಲಿ ದುರಹಂಕಾರದಿಂದ ಮೆರೆದರು. ವಸ್ತುತಃ ಅವರು ಮೀರಿಸುವವರಾಗಿರಲಿಲ್ಲ.

وَقَارُونَ وَفِرْعَوْنَ وَهَامَانَ ۖ وَلَقَدْ
جَاءَهُم مُّوسَىٰ بِالْبَيِّنَاتِ فَاسْتَكْبَرُوا
فِي الْأَرْضِ وَمَا كَانُوا سَابِقِينَ ﴿٣٩﴾

40. ಕೊನೆಗೆ ನಾವು ಪ್ರತಿಯೊಬ್ಬನನ್ನೂ ಅವನ ಪಾಪಗಳಿಗಾಗಿ ಹಿಡಿದೆವು. ತರುವಾಯ ನಾವು ಅವರಲ್ಲಿ ಕೆಲವರ ಮೇಲೆ, ಕಲ್ಲುಗಳ ಮಳೆಗರೆಯುವ ಬಿರುಗಾಳಿಯನ್ನು ಕಳುಹಿಸಿದೆವು. ಇನ್ನು ಕೆಲವರ ಮೇಲೆ ಒಂದು ಭಯಂಕರ ಸ್ಫೋಟವು ಬಂದೆರಗಿತು. ಮತ್ತೆ ಕೆಲವರನ್ನು ನಾವು ಭೂಮಿಯಲ್ಲಿ ಹುದುಗಿಸಿಬಿಟ್ಟೆವು. ಬೇರೆ ಕೆಲವರನ್ನು ಮುಳುಗಿಸಿಬಿಟ್ಟೆವು. ಅಲ್ಲಾಹನು ಅವರ ಮೇಲೆ ಅಕ್ರಮ ವೆಸಗುವವನಾಗಿರಲಿಲ್ಲ. ಆದರೆ ಅವರು ತಾವೇ ತಮ್ಮ ಮೇಲೆ ಅಕ್ರಮವೆಸಗುತ್ತಿದ್ದರು.

فَكُلًّا أَخَذْنَا بِذَنبِهِ ۖ فَمِنْهُم مَّنْ أَرْسَلْنَا
عَلَيْهِ حَاصِبًا وَمِنْهُم مَّنْ أَخَذَتْهُ
الصَّيْحَةُ وَمِنْهُم مَّنْ خَسَفْنَا بِهِ الْأَرْضَ
وَمِنْهُم مَّنْ أَغْرَقْنَا ۚ وَمَا كَانَ اللَّهُ لِيَظْلِمَهُمْ
وَلَٰكِن كَانُوا أَنفُسَهُمْ يَظْلِمُونَ ﴿٤٠﴾

10. ಬಹಿರಂಗ ನಿದರ್ಶನವೆಂದರೆ 'ಮೃತ ಸಾಗರ'(Dead Sea). ಅದನ್ನು 'ಲೂತ್ ಸಮುದ್ರ'ವೆಂದೂ ಹೇಳುತ್ತಾರೆ. ಪವಿತ್ರ ಕುರ್‌ಆನಿನ ಅನೇಕ ಕಡೆಗಳಲ್ಲಿ ಮಕ್ಕಾದ ಸತ್ಯನಿಷೇಧಿಗಳನ್ನುದ್ದೇಶಿಸಿ, "ಆ ಅಕ್ರಮಿ ಜನಾಂಗದ ಮೇಲೆ ಅವರ ಕುಕೃತ್ಯಗಳ ಫಲವಾಗಿ ಬಂದೆರಗಿದ ಯಾತನೆಯ ನಿದರ್ಶನವೊಂದು ಇಂದಿಗೂ ಹೆದ್ದಾರಿಯಲ್ಲಿದೆ. ಅದನ್ನು ನೀವು ಸಿರಿಯಾದ ಕಡೆಗೆ ಮಾಡುವ ವ್ಯಾಪಾರ ಯಾತ್ರೆಯ ವೇಳೆ ಅಹೋರಾತ್ರಿ ನೋಡುತ್ತಿರುತ್ತೀರಿ" ಎಂದು ಹೇಳಲಾಗಿದೆ.

41. ಅಲ್ಲಾಹನನ್ನು ಬಿಟ್ಟು ಬೇರೆ ರಕ್ಷಕ ಮಿತ್ರರನ್ನು ಮಾಡಿಕೊಂಡವರ ಉದಾಹರಣೆಯು ಜೇಡರ ಹುಳುವಿನಂತಿದೆ. ಅದು ತನಗೊಂದು ಮನೆ ಕಟ್ಟುತ್ತದೆ. ಎಲ್ಲ ಮನೆಗಳಿಗಿಂತಲೂ ದುರ್ಬಲವಾದ ಮನೆಯು ಜೇಡರ ಹುಳುವಿನ ಮನೆಯೇ ಆಗಿರುತ್ತದೆ. ಇವರು ಅರಿತಿರುತ್ತಿದ್ದರೆ!

مَثَلُ الَّذِينَ اتَّخَذُوا مِن دُونِ اللَّهِ أَوْلِيَاءَ كَمَثَلِ الْعَنكَبُوتِ اتَّخَذَتْ بَيْتًا ۖ وَإِنَّ أَوْهَنَ الْبُيُوتِ لَبَيْتُ الْعَنكَبُوتِ ۖ لَوْ كَانُوا يَعْلَمُونَ ﴿٤١﴾

42. ಇವರು ಅಲ್ಲಾಹನನ್ನು ಬಿಟ್ಟು ಯಾವ ವಸ್ತುವನ್ನೇ ಪ್ರಾರ್ಥಿಸಿದರೂ ಅಲ್ಲಾಹನು ಅದನ್ನು ಚೆನ್ನಾಗಿ ತಿಳಿದಿರುತ್ತಾನೆ. ಅವನೇ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

إِنَّ اللَّهَ يَعْلَمُ مَا يَدْعُونَ مِن دُونِهِ مِن شَيْءٍ ۚ وَهُوَ الْعَزِيزُ الْحَكِيمُ ﴿٤٢﴾

43. ನಾವು ಈ ಉಪಮೆಗಳನ್ನು ಜನರಿಗೆ ಬೋಧಿಸಲಿಕ್ಕಾಗಿ ಕೊಡುತ್ತಿದ್ದೇವೆ. ಆದರೆ, ತಿಳುವಳಿಕೆಯುಳ್ಳವರು ಮಾತ್ರ ಇವುಗಳನ್ನು ಅರಿಯಬಲ್ಲರು.

وَتِلْكَ الْأَمْثَالُ نَضْرِبُهَا لِلنَّاسِ ۖ وَمَا يَعْقِلُهَا إِلَّا الْعَالِمُونَ ﴿٤٣﴾

44. ಅಲ್ಲಾಹನು ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿರುತ್ತಾನೆ. ನಿಜಕ್ಕೂ ಇದರಲ್ಲಿ ಸತ್ಯವಿಶ್ವಾಸಿಗಳಿಗೆ ಒಂದು ನಿದರ್ಶನವಿದೆ.

خَلَقَ اللَّهُ السَّمَاوَاتِ وَالْأَرْضَ بِالْحَقِّ ۚ إِنَّ فِي ذَٰلِكَ لَآيَةً لِّلْمُؤْمِنِينَ ﴿٤٤﴾

45. *(ಪೈಗಂಬರರೇ) ನಿಮ್ಮ ಕಡೆಗೆ ದಿವ್ಯವಾಣಿಯ ಮೂಲಕ ಕಳುಹಿ ಸಲ್ಪಟ್ಟಿರುವ ಈ ಗ್ರಂಥವನ್ನು ಪಠಿಸಿರಿ ಮತ್ತು ನಮಾಝನ್ನು ಸಂಸ್ಥಾಪಿಸಿರಿ. ನಿಶ್ಚಯವಾಗಿಯೂ ನಮಾಝ್ ಅಶ್ಲೀಲ ಹಾಗೂ ದುಷ್ಕೃತ್ಯಗಳಿಂದ ತಡೆಯುತ್ತದೆ[11] ಮತ್ತು ಅಲ್ಲಾಹನ ಧ್ಯಾನ ಇದಕ್ಕಿಂತಲೂ ದೊಡ್ಡದು. ನೀವು ಮಾಡುವುದೆಲ್ಲವನ್ನೂ ಅಲ್ಲಾಹನು ಅರಿಯುತ್ತಾನೆ.

اتْلُ مَا أُوحِيَ إِلَيْكَ مِنَ الْكِتَابِ وَأَقِمِ الصَّلَاةَ ۖ إِنَّ الصَّلَاةَ تَنْهَىٰ عَنِ الْفَحْشَاءِ وَالْمُنكَرِ ۗ وَلَذِكْرُ اللَّهِ أَكْبَرُ ۗ وَاللَّهُ يَعْلَمُ مَا تَصْنَعُونَ ﴿٤٥﴾

46. ಗ್ರಂಥದವರೊಡನೆ ಉತ್ತಮ ರೀತಿಯಿಂದ ವಿನಾ ಚರ್ಚಿಸಬೇಡಿರಿ - ಆದರೆ ಅವರ ಪೈಕಿ ಅಕ್ರಮಿಗಳ ಹೊರತು[12] ಮತ್ತು

وَلَا تُجَادِلُوا أَهْلَ الْكِتَابِ إِلَّا بِالَّتِي هِيَ أَحْسَنُ إِلَّا الَّذِينَ ظَلَمُوا مِنْهُمْ

***ಇಲ್ಲಿಂದ 21ನೆಯ ಕಾಂಡ ಆರಂಭ**

11. ಅರ್ಥಾತ್- ಅಶ್ಲೀಲ ಕೆಲಸಗಳಿಂದ ತಡೆಯುವುದು ಒಂದು ಸಣ್ಣ ವಿಷಯವಾಯಿತು. ಅಲ್ಲಾಹನ ದಿಕ್ರ್ ಅರ್ಥಾತ್ ನಮಾಝ್‌ನ ಸತ್ಫಲಗಳು ಅದಕ್ಕಿಂತ ಎಷ್ಟೋ ಹೆಚ್ಚಿದೆ.

12. ಅರ್ಥಾತ್- ಅಕ್ರಮದ ಧೋರಣೆ ತಳೆಯುವವರೊಂದಿಗೆ ಅವರ ಅಕ್ರಮಕ್ಕೆ ಅನುಗುಣವಾಗಿ ಭಿನ್ನ ಧೋರಣೆಯನ್ನೂ ಅನುಸರಿಸಬಹುದು. ಪ್ರತಿ ಬಾರಿ, ಪ್ರತಿ ಸಂದರ್ಭದಲ್ಲಿ ಎಲ್ಲಾ ರೀತಿಯ ಜನರೊಡನೆ ಸುಮಧುರವಾದ ನಿಲುವನ್ನೇ ತಳೆಯಬಾರದು. ಸತ್ಯಪ್ರಚಾರಕನ ಸಜ್ಜನಿಕೆಯನ್ನು ಜಗತ್ತು ದೌರ್ಬಲ್ಯ ಮತ್ತು ದೀನತೆಯೆಂದು ಭಾವಿಸಬಾರದು. ಇಸ್ಲಾಮ್ ತನ್ನ ಅನುಯಾಯಿಗಳಿಗೆ ಸಭ್ಯತೆ, ಶಿಷ್ಟಾಚಾರ

ಅವರೊಡನೆ ಹೇಳಿರಿ; "ನಮ್ಮ ಕಡೆಗೆ ಕಳುಹಿಸಲಾಗಿರುವುದರ ಮೇಲೂ ನಿಮ್ಮ ಕಡೆಗೆ ಕಳುಹಿಸಲಾಗಿದ್ದುದರ ಮೇಲೂ ನಾವು ವಿಶ್ವಾಸವಿರಿಸಿದ್ದೇವೆ. ನಮ್ಮ ದೇವನೂ ನಿಮ್ಮ ದೇವನೂ ಒಬ್ಬನೇ ಮತ್ತು ನಾವು ಅವನ ಮುಸ್ಲಿಮರೇ (ಆಜ್ಞಾನುಸಾರಿಗಳೇ) ಆಗಿರುತ್ತೇವೆ."

وَقُولُوٓا۟ ءَامَنَّا بِٱلَّذِىٓ أُنزِلَ إِلَيْنَا وَأُنزِلَ إِلَيْكُمْ وَإِلَٰهُنَا وَإِلَٰهُكُمْ وَٰحِدٌ وَنَحْنُ لَهُۥ مُسْلِمُونَ ﴿٤٦﴾

47. (ಪೈಗಂಬರರೇ) ನಾವು ಇದೇ ರೀತಿಯಲ್ಲಿ ನಿಮ್ಮ ಕಡೆಗೆ ಗ್ರಂಥ ಅವತೀರ್ಣಗೊಳಿಸಿದ್ದೇವೆ.[13] ಆದುದರಿಂದ ಈ ಮುಂಚೆ ನಾವು ಯಾರಿಗೆ ಗ್ರಂಥ ನೀಡಿದ್ದೆವೋ ಅವರು ಇದರ ಮೇಲೆ ವಿಶ್ವಾಸ ವಿರಿಸುತ್ತಾರೆ[14] ಮತ್ತು ಇವರಲ್ಲಿಯೂ ಅನೇಕರು ಇದರ ಮೇಲೆ ವಿಶ್ವಾಸ ವಿರಿಸುತ್ತಿದ್ದಾರೆ.[15] ಕೇವಲ ಸತ್ಯನಿಷೇಧಿಗಳು ನಮ್ಮ ಸೂಕ್ತಗಳನ್ನು ಧಿಕ್ಕರಿಸುತ್ತಾರೆ.

وَكَذَٰلِكَ أَنزَلْنَآ إِلَيْكَ ٱلْكِتَٰبَ ۚ فَٱلَّذِينَ ءَاتَيْنَٰهُمُ ٱلْكِتَٰبَ يُؤْمِنُونَ بِهِۦ ۖ وَمِنْ هَٰٓؤُلَآءِ مَن يُؤْمِنُ بِهِۦ ۚ وَمَا يَجْحَدُ بِـَٔايَٰتِنَآ إِلَّا ٱلْكَٰفِرُونَ ﴿٤٧﴾

48. (ಪೈಗಂಬರರೇ) ನೀವು ಇದಕ್ಕೆ ಮುಂಚೆ ಯಾವುದೇ ಗ್ರಂಥ ಪಠಿಸುತ್ತಿರಲಿಲ್ಲ ಮತ್ತು ನಿಮ್ಮ ಕೈಯಿಂದ ಬರೆಯುತ್ತಲೂ ಇರಲಿಲ್ಲ. ಹಾಗಾಗುತ್ತಿದ್ದರೆ ಮಿಥ್ಯವಾದಿಗಳು ಸಂಶಯ ಗ್ರಸ್ತ ರಾಗಲು ಸಾಧ್ಯವಿತ್ತು.

وَمَا كُنتَ تَتْلُوا۟ مِن قَبْلِهِۦ مِن كِتَٰبٍ وَلَا تَخُطُّهُۥ بِيَمِينِكَ ۖ إِذًا لَّٱرْتَابَ ٱلْمُبْطِلُونَ ﴿٤٨﴾

49. ವಾಸ್ತವದಲ್ಲಿ ಯಾರಿಗೆ ಜ್ಞಾನ ನೀಡಲ್ಪಟ್ಟಿರುವುದೋ ಅವರ ಹೃದಯಗಳಲ್ಲಿ ಈ ಸುಸ್ಪಷ್ಟ ಪ್ರಮಾಣಗಳಿವೆ.[16] ಅಕ್ರಮಿಗಳ ಹೊರತು ಮತ್ತಾರೂ ನಮ್ಮ ನಿದರ್ಶನಗಳನ್ನು ಧಿಕ್ಕರಿಸುವುದಿಲ್ಲ.

بَلْ هُوَ ءَايَٰتٌۢ بَيِّنَٰتٌ فِى صُدُورِ ٱلَّذِينَ أُوتُوا۟ ٱلْعِلْمَ ۚ وَمَا يَجْحَدُ بِـَٔايَٰتِنَآ إِلَّا ٱلظَّٰلِمُونَ ﴿٤٩﴾

50. "ಇವನ ಪ್ರಭುವಿನ ಕಡೆಯಿಂದ ಇವನ ಮೇಲೆ ನಿದರ್ಶನಗಳೇಕೆ ಇಳಿಸಲ್ಪಡಲಿಲ್ಲ?" ಎಂದು ಇವರು ಕೇಳುತ್ತಾರೆ. ಹೇಳಿರಿ,

وَقَالُوا۟ لَوْلَآ أُنزِلَ عَلَيْهِ ءَايَٰتٌ مِّن رَّبِّهِۦ ۖ قُلْ إِنَّمَا ٱلْءَايَٰتُ عِندَ ٱللَّهِ وَ

ಮತ್ತು ವಿಚಾರಶೀಲತೆಯನ್ನು ಕಲಿಸುತ್ತಿದೆ ನಿಜ. ಆದರೆ ಪ್ರತಿಯೊಬ್ಬ ಅಕ್ರಮಿಯೊಡನೆಯೂ ಮೃದು ಸ್ವಭಾವವನ್ನೇ ಅನುಸರಿಸುವಂತಹ ವಿನಮ್ರತೆ ಮತ್ತು ದೈನ್ಯತೆಯನ್ನು ಕಲಿಸುವುದಿಲ್ಲ.

13. ಇದಕ್ಕೆ ಎರಡು ಅರ್ಥಗಳಿರಲು ಸಾಧ್ಯ. ಮೊದಲನೆಯದಾಗಿ ಹಿಂದಿನ ಪ್ರವಾದಿಗಳಿಗೆ ಗ್ರಂಥವನ್ನು ಅವತೀರ್ಣಗೊಳಿಸಿದಂತೆ ಈಗ ಈ ಗ್ರಂಥವನ್ನು ನಿಮ್ಮ ಮೇಲೆ ಅವತೀರ್ಣ ಗೊಳಿಸಿದ್ದೇವೆ. ಎರಡನೆಯದಾಗಿ ಹಿಂದಿನ ಎಲ್ಲಾ ಗ್ರಂಥಗಳ ನಿರಾಕರಣೆಯ ಬದಲು ಅದನ್ನು ಸಮ್ಮತಿಸುತ್ತಲೇ ಈ ಗ್ರಂಥದ ಮೇಲೆ ವಿಶ್ವಾಸವಿಡಬೇಕೆಂಬ ಬೋಧನೆಯೊಂದಿಗೆ ನಾವು ಇದನ್ನು ಅವತೀರ್ಣಗೊಳಿಸಿದ್ದೇವೆ.

14. ಗ್ರಂಥದವರ ಪೈಕಿ ಎಲ್ಲರೂ ಅಲ್ಲ. ಬದಲಾಗಿ ದಿವ್ಯ ಗ್ರಂಥಗಳ ನೈಜ ಪರಿಜ್ಞಾನವಿದ್ದ ಮತ್ತು ನಿಜಾರ್ಥದಲ್ಲಿ ಗ್ರಂಥದವರಾಗಿದ್ದ ಜನರು ಎಂದು ಹಿನ್ನೆಲೆಯಿಂದ ವ್ಯಕ್ತವಾಗುತ್ತದೆ.

15. ಇಲ್ಲಿ ಅರಬ್ ನಿವಾಸಿಗಳ ಕುರಿತು 'ಇವರಲ್ಲಿಯೂ' ಎಂದು ಹೇಳಲಾಗಿದೆ. ಸತ್ಯಪ್ರಿಯ ವ್ಯಕ್ತಿಗಳು ಎಲ್ಲೆಡೆಯೂ ವಿಶ್ವಾಸ ಸ್ವೀಕರಿಸುತ್ತಿದ್ದಾರೆ. ಅವರು ಗ್ರಂಥದವರ ಪೈಕಿಯವರಾಗಿದ್ದರೂ ಅಲ್ಲದಿದ್ದರೂ ಸರಿಯೇ ಎಂಬುದು ಇದರ ಇಂಗಿತ.

16. ಅರ್ಥಾತ್- ನಿರಕ್ಷರಿಯೊಬ್ಬರು ಕುರ್‌ಆನಿನಂತಹ ಉದ್ಗ್ರಂಥವನ್ನು ಸಮರ್ಪಿಸುವುದು ಮತ್ತು ಏಕಾಏಕಿಯಾಗಿ ಯಾವುದೇ ಪೂರ್ವಸಿದ್ಧತೆಯ ಕುರುಹನ್ನೂ ಯಾರೂ ಕಂಡಿರದಂತಹ ಅಸಾಮಾನ್ಯ ಚಮತ್ಕಾರಗಳನ್ನು ಪ್ರದರ್ಶಿಸುವುದು ಸ್ವತಃ ಬುದ್ಧಿಮತ್ತೆ ಮತ್ತು ದೃಷ್ಟಿ ಇರುವವರಿಗೆ ಅವರ ಪ್ರವಾದಿತ್ವದ ಸಾಕ್ಷ್ಯ ವಹಿಸುವ ಸುವ್ಯಕ್ತ ದೃಷ್ಟಾಂತಗಳಾಗಿ ಗೋಚರಿಸುತ್ತವೆ.

إِنَّمَآ أَنَا نَذِيرٌ مُّبِينٌ ﴿٥٠﴾

"ನಿದರ್ಶನಗಳಂತೂ ಅಲ್ಲಾಹನ ಬಳಿ ಇವೆ. ನಾನು ಕೇವಲ ಸುಸ್ಪಷ್ಟ ಎಚ್ಚರಿಕೆ ನೀಡುವವನು ಮಾತ್ರ."

أَوَلَمْ يَكْفِهِمْ أَنَّآ أَنزَلْنَا عَلَيْكَ الْكِتَٰبَ يُتْلَىٰ عَلَيْهِمْ ۚ إِنَّ فِى ذَٰلِكَ لَرَحْمَةً وَذِكْرَىٰ لِقَوْمٍ يُؤْمِنُونَ ﴿٥١﴾

51. ನಾವು ಇವರಿಗೆ ಓದಿ ಹೇಳಲಾಗುತ್ತಿರುವ ಗ್ರಂಥವನ್ನು ನಿಮ್ಮ ಮೇಲೆ ಅವತೀರ್ಣಗೊಳಿಸಿರುವುದು ಇವರಿಗೆ (ನಿದರ್ಶನಕ್ಕೆ) ಸಾಕಾಗದೇ? ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸುವವರಿಗೆ ಇದರಲ್ಲಿ ಕೃಪೆ ಹಾಗೂ ಉಪದೇಶವಿದೆ.

قُلْ كَفَىٰ بِاللَّهِ بَيْنِى وَبَيْنَكُمْ شَهِيدًا ۖ يَعْلَمُ مَا فِى السَّمَٰوَٰتِ وَالْأَرْضِ ۗ وَالَّذِينَ ءَامَنُوا۟ بِالْبَٰطِلِ وَكَفَرُوا۟ بِاللَّهِ أُو۟لَٰٓئِكَ هُمُ الْخَٰسِرُونَ ﴿٥٢﴾

52. (ಪೈಗಂಬರರೇ) "ನನ್ನ ಮತ್ತು ನಿಮ್ಮ ನಡುವೆ ಸಾಕ್ಷ್ಯಕ್ಕೆ ಅಲ್ಲಾಹನೇ ಸಾಕು. ಅವನು ಭೂಮಿ-ಆಕಾಶಗಳಲ್ಲಿ ಎಲ್ಲವನ್ನೂ ಬಲ್ಲವನು. ಮಿಥ್ಯದ ಮೇಲೆ ವಿಶ್ವಾಸವಿರಿಸುವವರು ಮತ್ತು ಅಲ್ಲಾಹನನ್ನು ನಿಷೇಧಿಸುವವರೇ ನಷ್ಟದಲ್ಲಿರುವವರಾಗಿರುತ್ತಾರೆ."

وَيَسْتَعْجِلُونَكَ بِالْعَذَابِ ۚ وَلَوْلَآ أَجَلٌ مُّسَمًّى لَّجَآءَهُمُ الْعَذَابُ وَلَيَأْتِيَنَّهُم بَغْتَةً وَهُمْ لَا يَشْعُرُونَ ﴿٥٣﴾

53. ಇವರು ನಿಮ್ಮೊಡನೆ ಯಾತನೆಯನ್ನು ಬೇಗನೇ ತರಬೇಕೆಂದು ಆಗ್ರಹಿಸುತ್ತಾರೆ. ಒಂದು ಸಮಯವು ನಿಶ್ಚಯಿಸಲ್ಪಡದಿರುತ್ತಿದ್ದರೆ ಇವರ ಮೇಲೆ ಯಾತನೆ ಇಷ್ಟರಲ್ಲೇ ಬಂದು ಬಿಡುತ್ತಿತ್ತು ಮತ್ತು ನಿಶ್ಚಯವಾಗಿಯೂ ಅದು (ತಕ್ಕ ಸಮಯದಲ್ಲಿ) ಹಠಾತ್ತಾಗಿ, ಇವರಿಗೆ ಸುಳಿವೂ ಇಲ್ಲದ ವೇಳೆಯಲ್ಲಿ ಬಂದೇ ತೀರುವುದು.

يَسْتَعْجِلُونَكَ بِالْعَذَابِ وَإِنَّ جَهَنَّمَ لَمُحِيطَةٌۢ بِالْكَٰفِرِينَ ﴿٥٤﴾

54. ಇವರು ನಿಮ್ಮೊಡನೆ ಯಾತನೆಯನ್ನು ಬೇಗನೆ ತರಬೇಕೆಂದು ಆಗ್ರಹಿಸುತ್ತಾರೆ. ವಸ್ತುತಃ ನರಕವು ಈ ಸತ್ಯನಿಷೇಧಿಗಳನ್ನು ಸುತ್ತುವರಿದು ಬಿಟ್ಟಿದೆ.

يَوْمَ يَغْشَىٰهُمُ الْعَذَابُ مِن فَوْقِهِمْ وَمِن تَحْتِ أَرْجُلِهِمْ وَيَقُولُ ذُوقُوا۟ مَا كُنتُمْ تَعْمَلُونَ ﴿٥٥﴾

55. ಯಾತನೆಯು ಇವರನ್ನು ಮೇಲ್ಭಾಗದಿಂದಲೂ ಕಾಲಿನಡಿಯಿಂದಲೂ ಆವರಿಸಿಕೊಂಡ ದಿನ ಮತ್ತು ಅದು "ನೀವು ಮಾಡುತ್ತಿದ್ದ ದುಷ್ಕೃತ್ಯಗಳ ಸವಿಯನ್ನುಣ್ಣಿರಿ ಎನ್ನುವಾಗ (ಇವರಿಗೆ ತಿಳಿದೀತು)".

يَٰعِبَادِىَ الَّذِينَ ءَامَنُوٓا۟ إِنَّ أَرْضِى وَٰسِعَةٌ فَإِيَّٰىَ فَاعْبُدُونِ ﴿٥٦﴾

56. ಸತ್ಯವಿಶ್ವಾಸಿಗಳಾದ ಓ ನನ್ನ ದಾಸರೇ! ನನ್ನ ಭೂಮಿ ವಿಶಾಲವಾಗಿದೆ. ಆದುದರಿಂದ ನೀವು ನನ್ನ ದಾಸ್ಯ-ಆರಾಧನೆಯನ್ನೇ ಮಾಡಿರಿ.[17]

كُلُّ نَفْسٍ ذَآئِقَةُ الْمَوْتِ ۖ ثُمَّ إِلَيْنَا تُرْجَعُونَ ﴿٥٧﴾

57. ಪ್ರತಿಯೊಂದು ಜೀವಿಗೂ ಮೃತ್ಯುವಿನ ರುಚಿಯನ್ನು ಸವಿಯಲಿಕ್ಕಿದೆ. ತರುವಾಯ ನೀವೆಲ್ಲರೂ ನಮ್ಮ ಕಡೆಗೆ ಮರಳಿಸಿ ತರಲ್ಪಡುವಿರಿ.

17. ಇದು ಹಿಜ್ರತ್‌ನ ಕಡೆಗಿರುವ ಸೂಚನೆ. ಅರ್ಥಾತ್ ಮಕ್ಕಾದಲ್ಲಿ ದೇವನ ದಾಸ್ಯ ದುಸ್ತರವಾಗುತ್ತಿದ್ದರೆ ದೇಶ ಬಿಟ್ಟು ಹೊರಡಿರಿ. ದೇವನ ಭೂಮಿ ಇಕ್ಕಟ್ಟಾಗಿಲ್ಲ. ದೇವನ ದಾಸರಾಗಿ ಇರಲು ಎಲ್ಲಿ ಸಾಧ್ಯವಿದೆಯೋ ಅಲ್ಲಿಗೆ ಹೊರಟು ಹೋಗಿರಿ.

58. ಸತ್ಯವಿಶ್ವಾಸ ಸ್ವೀಕಾರ ಮಾಡಿದವರನ್ನೂ, ಸತ್ಕರ್ಮವೆಸಗಿದವರನ್ನೂ ನಾವು ಸ್ವರ್ಗದ ಅತ್ಯುತ್ತಮ ಭವನಗಳಲ್ಲಿರಿಸುವೆವು. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅಲ್ಲಿ ಅವರು ಸದಾ ಕಾಲ ವಾಸಿಸುವರು. ಸತ್ಕರ್ಮವೆಸಗುವವರಿಗೆ ಅದೆಷ್ಟು ಉತ್ತಮ ಸತ್ಫಲ!

وَالَّذِينَ آمَنُوا وَعَمِلُوا الصَّالِحَاتِ لَنُبَوِّئَنَّهُم مِّنَ الْجَنَّةِ غُرَفًا تَجْرِي مِن تَحْتِهَا الْأَنْهَارُ خَالِدِينَ فِيهَا ۚ نِعْمَ أَجْرُ الْعَامِلِينَ ﴿٥٨﴾

59. ತಾಳ್ಮೆ ವಹಿಸಿದವರಿಗೆ ಮತ್ತು ತಮ್ಮ ಪ್ರಭುವಿನ ಮೇಲೆ ಭರವಸೆಯನ್ನಿರಿಸುವವರಿಗೆ!

الَّذِينَ صَبَرُوا وَعَلَىٰ رَبِّهِمْ يَتَوَكَّلُونَ ﴿٥٩﴾

60. ತಮ್ಮ ಆಹಾರವನ್ನು ಹೊತ್ತುಕೊಂಡು ತಿರುಗಾಡದಿರುವ ಎಷ್ಟೋ ಪ್ರಾಣಿಗಳಿವೆ. ಅಲ್ಲಾಹನು ಅವುಗಳಿಗೆ ಅಹಾರ ಕೊಡುತ್ತಾನೆ, ನಿಮ್ಮ ಅನ್ನದಾತನೂ ಅವನೇ. ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.

وَكَأَيِّن مِّن دَابَّةٍ لَّا تَحْمِلُ رِزْقَهَا اللَّهُ يَرْزُقُهَا وَإِيَّاكُمْ ۚ وَهُوَ السَّمِيعُ الْعَلِيمُ ﴿٦٠﴾

61. ನೀವು[18] ಭೂಮಿ-ಆಕಾಶಗಳನ್ನು ಯಾರು ಸೃಷ್ಟಿಸಿದನೆಂದೂ ಸೂರ್ಯ ಚಂದ್ರರನ್ನು ಯಾರು ನಿಯಂತ್ರಿಸಿರುತ್ತಾನೆಂದೂ ಇವರೊಡನೆ ಕೇಳಿದರೆ ಇವರು ಖಂಡಿತ 'ಅಲ್ಲಾಹನು' ಎನ್ನುವರು. ಹಾಗಾದರೆ ಇವರು ಮೋಸ ಹೋಗುತ್ತಿರುವುದೆಲ್ಲಿಂದ?

وَلَئِن سَأَلْتَهُم مَّنْ خَلَقَ السَّمَاوَاتِ وَالْأَرْضَ وَسَخَّرَ الشَّمْسَ وَالْقَمَرَ لَيَقُولُنَّ اللَّهُ ۖ فَأَنَّىٰ يُؤْفَكُونَ ﴿٦١﴾

62. ಅಲ್ಲಾಹನೇ ತನ್ನ ದಾಸರ ಪೈಕಿ, ತಾನಿಚ್ಛಿಸಿದವನ ಜೀವನಾಧಾರವನ್ನು ವಿಸ್ತೃತಗೊಳಿಸುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಅದನ್ನು ಸಂಕುಚಿತಗೊಳಿಸುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳನ್ನೂ ಬಲ್ಲವನಾಗಿದ್ದಾನೆ.

اللَّهُ يَبْسُطُ الرِّزْقَ لِمَن يَشَاءُ مِنْ عِبَادِهِ وَيَقْدِرُ لَهُ ۚ إِنَّ اللَّهَ بِكُلِّ شَيْءٍ عَلِيمٌ ﴿٦٢﴾

63. ಆಕಾಶದಿಂದ ನೀರನ್ನು ಸುರಿಸಿದವನೂ ಅದರ ಮೂಲಕ, ನಿರ್ಜೀವವಾಗಿ ಬಿದ್ದಿರುವ ಭೂಮಿಯನ್ನು ಸಜೀವಗೊಳಿಸಿದವನೂ ಯಾರೆಂದು ನೀವು ಇವರೊಡನೆ ಕೇಳಿದರೆ, ಇವರು ಖಂಡಿತವಾಗಿಯೂ ಅಲ್ಲಾಹನೆನ್ನುವರು. "ಸರ್ವಸ್ತುತಿಗಳೂ ಅಲ್ಲಾಹನಿಗೇ ಮೀಸಲು" ಎನ್ನಿರಿ.[19] ಆದರೆ ಇವರಲ್ಲಿ ಹೆಚ್ಚಿನವರು ಗ್ರಹಿಸುವುದಿಲ್ಲ.

وَلَئِن سَأَلْتَهُم مَّن نَّزَّلَ مِنَ السَّمَاءِ مَاءً فَأَحْيَا بِهِ الْأَرْضَ مِن بَعْدِ مَوْتِهَا لَيَقُولُنَّ اللَّهُ ۚ قُلِ الْحَمْدُ لِلَّهِ ۚ بَلْ أَكْثَرُهُمْ لَا يَعْقِلُونَ ﴿٦٣﴾ ع

18. ಇಲ್ಲಿಂದ ಪುನಃ ಮಕ್ಕಾದ ಸತ್ಯನಿಷೇಧಿಗಳನ್ನು ಸಂಬೋಧಿಸಲಾಗಿದೆ.

19. ಇಲ್ಲಿ 'ಅಲ್‌ಹಮ್ದುಲಿಲ್ಲಾಹ್' ಎಂಬ ಪದ ಎರಡು ಅರ್ಥಗಳನ್ನು ಕೊಡುತ್ತದೆ. ಮೊದಲನೆಯದಾಗಿ ಈ ಕೆಲಸಗಳೆಲ್ಲವೂ ಅಲ್ಲಾಹನದ್ದಾಗಿರುವುದರಿಂದ ಅವನೇ ಸ್ತುತಿಸ್ತೋತ್ರಗಳಿಗೆ ಅರ್ಹನು. ಇತರರಿಗೆ ಸ್ತುತಿಸ್ತೋತ್ರಗಳ ಹಕ್ಕು ಸಲ್ಲುವುದಾದರೂ ಹೇಗೆ? ಎರಡನೆಯದಾಗಿ ನೀವು ಸ್ವತಃ ಈ ವಿಷಯವನ್ನು ಸಮ್ಮತಿಸುತ್ತೀರಿ ಅಲ್ಲಾಹನಿಗೆ ಸ್ತುತಿ.

64. ಈ ಲೌಕಿಕ ಜೀವನವು ಒಂದು ಆಟ ಮತ್ತು ಮನೋರಂಜನೆಯಲ್ಲದೆ ಇನ್ನೇನೂ ಅಲ್ಲ. ನೈಜ ಜೀವನ ಗೃಹವು ಪರಲೋಕ ಗೃಹವೇ ಆಗಿದೆ. ಇವರು ಅರಿಯುತ್ತಿದ್ದರೆ!

وَمَا هٰذِهِ الْحَيٰوةُ الدُّنْيَآ اِلَّا لَهْوٌ وَّلَعِبٌ ۭ وَاِنَّ الدَّارَ الْاٰخِرَةَ لَهِىَ الْحَيَوَانُ ۘ لَوْ كَانُوْا يَعْلَمُوْنَ ﴿٦٤﴾

65-66. ಇವರು ನಾವೆಯಲ್ಲಿ ಪ್ರಯಾಣಿಸುವಾಗ ತಮ್ಮ ಧರ್ಮವನ್ನು ಅಲ್ಲಾಹನಿಗೆ ಮೀಸಲಾಗಿಸಿಟ್ಟು ಅವನನ್ನು ಪ್ರಾರ್ಥಿಸುತ್ತಾರೆ. ತರುವಾಯ ಅವನು ಇವರನ್ನು ಸಂರಕ್ಷಿಸಿ ದಡಕ್ಕೆ ತಂದಾಗ ಒಮ್ಮೆಲೇ ಇವರು ಅಲ್ಲಾಹನಿಂದ ನೀಡಲ್ಪಟ್ಟ ಸಂರಕ್ಷಣೆಗೆ ಕೃತಘ್ನತೆ ತೋರಲಿಕ್ಕಾಗಿ ಮತ್ತು(ಲೌಕಿಕ ಜೀವನದ) ಸವಿಯನ್ನು ಅನುಭವಿಸಲಿಕ್ಕಾಗಿ 'ದೇವ ಸಹಭಾಗಿತ್ವ' ಎಸಗತೊಡಗುತ್ತಾರೆ. ಸರಿ, ಸದ್ಯದಲ್ಲೇ ಇವರಿಗೆ ತಿಳಿದೀತು.

فَاِذَا رَكِبُوْا فِى الْفُلْكِ دَعَوُا اللّٰهَ مُخْلِصِيْنَ لَهُ الدِّيْنَ ۥ فَلَمَّا نَجّٰىهُمْ اِلَى الْبَرِّ اِذَا هُمْ يُشْرِكُوْنَ ﴿٦٥﴾ لِيَكْفُرُوْا بِمَآ اٰتَيْنٰهُمْ ۚ وَلِيَتَمَتَّعُوْا ۗ فَسَوْفَ يَعْلَمُوْنَ ﴿٦٦﴾

67. ನಾವು ಒಂದು ಶಾಂತಿಪೂರ್ಣ 'ಹರಮ್' (ಸನ್ಮಾನ್ಯ ಸ್ಥಳ) ಮಾಡಿರುವುದನ್ನು ಇವರು ನೋಡುವುದಿಲ್ಲವೇ? ವಸ್ತುತಃ ಇವರ ಆಸುಪಾಸಿನಲ್ಲಿ ಜನರು ಅಪಹರಿಸಲ್ಪಡುತ್ತಾರೆ.[20] ಹೀಗಿದ್ದೂ ಇವರು ಮಿಥ್ಯದ ಮೇಲೆ ವಿಶ್ವಾಸವಿರಿಸಿ ಅಲ್ಲಾಹನ ಕೊಡುಗೆಯ ಬಗ್ಗೆ ಕೃತಘ್ನರಾಗುತ್ತಾರೆಯೇ?

اَوَلَمْ يَرَوْا اَنَّا جَعَلْنَا حَرَمًا اٰمِنًا وَّيُتَخَطَّفُ النَّاسُ مِنْ حَوْلِهِمْ ۭ اَفَبِالْبَاطِلِ يُؤْمِنُوْنَ وَبِنِعْمَةِ اللّٰهِ يَكْفُرُوْنَ ﴿٦٧﴾

68. ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುವವನಿಗಿಂತ ಅಥವಾ ಸತ್ಯವು ತನ್ನ ಬಳಿ ಬಂದಾಗ ಅದನ್ನು ಸುಳ್ಳಾಗಿಸುವವನಿಗಿಂತ ದೊಡ್ಡ ಅಕ್ರಮಿ ಯಾರಿರಬಹುದು? ಇಂತಹ ಸತ್ಯನಿಷೇಧಿಗಳ ವಾಸಸ್ಥಾನ ನರಕವೇ ಅಲ್ಲವೇ?

وَمَنْ اَظْلَمُ مِمَّنِ افْتَرٰى عَلَى اللّٰهِ كَذِبًا اَوْ كَذَّبَ بِالْحَقِّ لَمَّا جَاۗءَهٗ ۭ اَلَيْسَ فِيْ جَهَنَّمَ مَثْوًى لِّلْكٰفِرِيْنَ ﴿٦٨﴾

69. ನಮಗಾಗಿ ಹೋರಾಡುವವರಿಗೆ ನಾವು ನಮ್ಮ ಮಾರ್ಗಗಳನ್ನು ತೋರಿಸಿ ಕೊಡುವೆವು[21] ಮತ್ತು ನಿಶ್ಚಯವಾಗಿಯೂ ಅಲ್ಲಾಹ್ ಸಜ್ಜನರ ಜೊತೆಯಲ್ಲೇ ಇದ್ದಾನೆ.

وَالَّذِيْنَ جَاهَدُوْا فِيْنَا لَنَهْدِيَنَّهُمْ سُبُلَنَا ۭ وَاِنَّ اللّٰهَ لَمَعَ الْمُحْسِنِيْنَ ﴿٦٩﴾

---

20. ಅರ್ಥಾತ್- ಅವರಿಗೆ ಪರಮಾವಧಿ ಶಾಂತಿ ಪ್ರಾಪ್ತವಿರುವ ಈ ಮಕ್ಕಾ ನಗರವನ್ನು 'ಹರಮ್' ಅಥವಾ ಪವಿತ್ರ ಸ್ಥಳವನ್ನಾಗಿ ಮಾಡಿರುವುದು ಯಾವುದಾದರೂ ಲಾತ್ ಮತ್ತು ಹುಬುಲ್‌ಗಳೇ? ಅರೇಬಿಯಾದ ಅತ್ಯಂತ ಅಶಾಂತ ಪರಿಸ್ಥಿತಿಯಲ್ಲಿ ಎರಡೂವರೆ ಸಾವಿರ ವರ್ಷಗಳ ಕಾಲ ಆ ಪ್ರದೇಶವನ್ನು ಎಲ್ಲಾ ವಿಧದ ಕ್ಷೋಭೆಯಿಂದ ಸುರಕ್ಷಿತವಾಗಿರಿಸಿದವರು ಯಾರು? ಅದರ ಪಾವಿತ್ರ್ಯವನ್ನು ಕಾಪಾಡಿದವರು ನಾವಲ್ಲದೆ ಮತ್ತಾರು?

21. ಅರ್ಥಾತ್- ಅಲ್ಲಾಹನ ಮಾರ್ಗದಲ್ಲಿ ಪ್ರಾಮಾಣಿಕತೆಯೊಂದಿಗೆ ಸಮಸ್ತ ಜಗತ್ತಿನೊಡನೆ ಸಂಘರ್ಷಕ್ಕಿಳಿಯುವ ಅಪಾಯವನ್ನು ತಂದೊಡ್ಡಿಕೊಳ್ಳುವವರನ್ನು ಅಲ್ಲಾಹನು ಹಾಗೆಯೇ ಬಿಟ್ಟು ಬಿಡುವುದಿಲ್ಲ. ಅವರ ಕೈಹಿಡಿದು ಅವರಿಗೆ ಮಾರ್ಗದರ್ಶನವೀಯುತ್ತಾನೆ. ತನ್ನೆಡೆಗೆ ಬರುವ ದಾರಿಗಳನ್ನು ಅವರ ಪಾಲಿಗೆ ಸುಗಮಗೊಳಿಸುತ್ತಾನೆ. ಯಾವ ರೀತಿ ತನ್ನ ಸಂಪ್ರೀತಿಗಳಿಸ ಬಹುದೆಂಬುದನ್ನು ಅವನು ಹೆಜ್ಜೆಹೆಜ್ಜೆಗೂ ತಿಳಿಸುತ್ತಾನೆ. ಸನ್ಮಾರ್ಗ ಎಲ್ಲಿದೆ, ದುರ್ಮಾರ್ಗಗಳು ಯಾವುವು ಎಂಬುದರ ಬಗ್ಗೆ ಅವನು ಪ್ರತಿಯೊಂದು ಹಂತದಲ್ಲೂ ಬೆಳಕು ಚೆಲ್ಲುತ್ತಾನೆ. ಅವರಲ್ಲಿ ಎಷ್ಟು ಸಂಕಲ್ಪಶುದ್ಧಿ ಮತ್ತು ಹಿತಾಕಾಂಕ್ಷೆ ಇರುತ್ತದೋ ಅಲ್ಲಾಹನ ಸಹಾಯ, ಸೌಭಾಗ್ಯ ಮತ್ತು ಸನ್ಮಾರ್ಗದರ್ಶನವೂ ಅಷ್ಟೇ ಪ್ರಮಾಣದಲ್ಲಿ ಅವರ ಜತೆಗಿರುತ್ತದೆ.







# 30. ಅರ್ರೂಮ್

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಅಲಿಫ್ ಲಾಮ್ಮೀಮ್.

الٓمّٓ ۝١

2-5. ರೋಮನರು ಸಮೀಪದ ಭೂಭಾಗದಲ್ಲಿ ಪರಾಜಿತರಾದರು ಮತ್ತು ತಮ್ಮ ಈ ಪರಾಜಯದ ತರುವಾಯ ಕೆಲವೇ ವರ್ಷಗಳಲ್ಲಿ ಅವರು ವಿಜಯಿಗಳಾಗುವರು.[1] ಹಿಂದೆಯೂ ಇನ್ನು ಮುಂದೆಯೂ ಅಲ್ಲಾಹನದೇ ಪ್ರಭುತ್ವವಿದೆ. ಆ ದಿನವು ಅಲ್ಲಾಹ್ ದಯಪಾಲಿಸಿದ ವಿಜಯಕ್ಕಾಗಿ ಮುಸ್ಲಿಮರು ಸಂತೋಷವನ್ನಾಚರಿಸುವ ದಿನವಾಗಿರುವುದು.[2] ಅಲ್ಲಾಹನು ತಾನಿಚ್ಛಿಸಿದವರಿಗೆ ಸಹಾಯ ನೀಡುತ್ತಾನೆ ಮತ್ತು ಅವನು ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

غُلِبَتِ الرُّوۡمُ ۝٢ فِيۡۤ اَدۡنَى الۡاَرۡضِ وَهُمۡ مِّنۡۢ بَعۡدِ غَلَبِهِمۡ سَيَغۡلِبُوۡنَ ۝٣ فِيۡ بِضۡعِ سِنِيۡنَ ؕ لِلّٰهِ الۡاَمۡرُ مِنۡ قَبۡلُ وَمِنۡۢ بَعۡدُ ؕ وَيَوۡمَئِذٍ يَّفۡرَحُ الۡمُؤۡمِنُوۡنَ ۝٤ بِنَصۡرِ اللّٰهِ ؕ يَنۡصُرُ مَنۡ يَّشَآءُ ؕ وَهُوَ الۡعَزِيۡزُ الرَّحِيۡمُ ۝٥

6. ಇದು ಅಲ್ಲಾಹನು ಮಾಡಿದ ವಾಗ್ದಾನ. ಅಲ್ಲಾಹನು ಎಂದೂ ತನ್ನ ವಾಗ್ದಾನವನ್ನು ಉಲ್ಲಂಘಿಸುವುದಿಲ್ಲ. ಆದರೆ ಹೆಚ್ಚಿನವರು ತಿಳಿಯುವುದಿಲ್ಲ.

وَعۡدَ اللّٰهِ ؕ لَا يُخۡلِفُ اللّٰهُ وَعۡدَهٗ وَلٰكِنَّ اَكۡثَرَ النَّاسِ لَا يَعۡلَمُوۡنَ ۝٦

7. ಜನರು ಲೌಕಿಕ ಜೀವನದ ಬಾಹ್ಯ ಮುಖವನ್ನು ಮಾತ್ರ ತಿಳಿಯುತ್ತಾರೆ ಮತ್ತು ಪರಲೋಕದ ಕುರಿತು ಸ್ವಯಂ ಬೋಧ ಶೂನ್ಯರಾಗಿದ್ದಾರೆ.

يَعۡلَمُوۡنَ ظَاهِرًا مِّنَ الۡحَيٰوةِ الدُّنۡيَا ۖۚ وَهُمۡ عَنِ الۡاٰخِرَةِ هُمۡ غٰفِلُوۡنَ ۝٧

8. ಇವರೆಂದಾದರೂ ಸ್ವಯಂ ತಮ್ಮ ಕುರಿತಾಗಿ ವಿವೇಚಿಸಲಿಲ್ಲವೇ?

اَوَلَمۡ يَتَفَكَّرُوۡا فِيۡۤ اَنۡفُسِهِمۡ ۫ مَا خَلَقَ

---

1. ಇದು ಆ ಕಾಲದಲ್ಲಿ ರೋಮ್ ಮತ್ತು ಇರಾನಿನ ಸಾಮ್ರಾಜ್ಯಗಳ ನಡುವೆ ನಡೆಯುತ್ತಿದ್ದ ಯುದ್ಧದ ಕಡೆಗಿರುವ ಸೂಚನೆ. ಆಗ ರೋಮನ್ನರು ದಯನೀಯ ಸೋಲನುಭವಿಸಿದ್ದರು. ಅವರು ಮತ್ತೆ ಮೇಲೇಳುವರೆಂದು ಯಾರಿಗೂ ಕಲ್ಪಿಸಲಿಕ್ಕೂ ಸಾಧ್ಯವಿರಲಿಲ್ಲ. ಆದರೆ ಕೆಲವೇ ವರ್ಷಗಳಲ್ಲಿ ರೋಮನ್ನರು ಮತ್ತೆ ಪ್ರಬಲರಾಗುವರು ಎಂದು ಅಲ್ಲಾಹನು ಈ ಸೂಕ್ತದಲ್ಲಿ ಭವಿಷ್ಯ ನುಡಿದಿದ್ದಾನೆ.
2. ಇದು ಎರಡನೆಯ ಭವಿಷ್ಯವಾಣಿಯಾಗಿತ್ತು. ಒಂದೆಡೆ ಬದ್ರ್ ಯುದ್ಧದಲ್ಲಿ ಮುಸ್ಲಿಮರು ಜಯಗಳಿಸಿ, ಇನ್ನೊಂದೆಡೆ ರೋಮ್ ಮತ್ತು ಇರಾನಿನ ನಡುವಿನ ಯುದ್ಧದಲ್ಲಿ ರೋಮ್ ಜಯಗಳಿಸಿದ ಸಂದರ್ಭದಲ್ಲಿ ಜನರಿಗೆ ಇದರ ಅರ್ಥ ತಿಳಿಯಿತು.

ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಅವುಗಳ ನಡುವೆ ಇರುವುದೆಲ್ಲವನ್ನೂ ಸತ್ಯಪೂರ್ಣವಾಗಿ ಮತ್ತು ಒಂದು ನಿರ್ದಿಷ್ಟ ಕಾಲಾವಧಿಗಾಗಿಯೇ ಸೃಷ್ಟಿಸಿದ್ದಾನೆ. ಆದರೆ ಅನೇಕರು ತಮ್ಮ ಪ್ರಭುವಿನ ಭೇಟಿಯನ್ನು ನಿರಾಕರಿಸುವವರಾಗಿರುತ್ತಾರೆ.[3]

اللّٰهُ السَّمٰوٰتِ وَالْاَرْضَ وَمَا بَيْنَهُمَآ اِلَّا بِالْحَقِّ وَاَجَلٍ مُّسَمًّى ۗ وَاِنَّ كَثِيْرًا مِّنَ النَّاسِ بِلِقَآئِ رَبِّهِمْ لَكٰفِرُوْنَ ۝٨

9. ಇವರಿಗಿಂತ ಮುಂಚೆ ಗತಿಸಿ ಹೋದವರ ಅಂತಿಮ ಪರಿಣಾಮ ಏನಾಯಿತೆಂದು ನೋಡಲು ಇವರೆಂದೂ ಭೂಮಿಯ ಮೇಲೆ ಸಂಚರಿಸಲಿಲ್ಲವೇ? ಅವರು ಇವರಿಗಿಂತಲೂ ಹೆಚ್ಚು ಬಲಶಾಲಿಗಳಾಗಿದ್ದರು. ಅವರು ಭೂಮಿಯನ್ನು ಚೆನ್ನಾಗಿ ಅಗೆದಿದ್ದರು ಮತ್ತು ಅದನ್ನು ಇವರು ಮಾಡಿರುವುದಕ್ಕಿಂತ ಅಧಿಕ ಸಮೃದ್ಧವಾಗಿ ಮಾಡಿದ್ದರು. ಅವರ ಬಳಿಗೆ ಅವರ ಸಂದೇಶವಾಹಕರು ಸುವ್ಯಕ್ತ ನಿದರ್ಶನಗಳನ್ನು ತಂದರು. ಅಲ್ಲಾಹನು ಅವರ ಮೇಲೆ ಅಕ್ರಮ ವೆಸಗುವವನಾಗಿರಲಿಲ್ಲ. ಆದರೆ ಅವರು ತಾವೇ ತಮ್ಮ ಮೇಲೆ ಅಕ್ರಮವೆಸಗುತ್ತಿದ್ದರು.

اَوَلَمْ يَسِيْرُوْا فِي الْاَرْضِ فَيَنْظُرُوْا كَيْفَ كَانَ عَاقِبَةُ الَّذِيْنَ مِنْ قَبْلِهِمْ ۗ كَانُوْٓا اَشَدَّ مِنْهُمْ قُوَّةً وَّاَثَارُوا الْاَرْضَ وَعَمَرُوْهَآ اَكْثَرَ مِمَّا عَمَرُوْهَا وَجَآءَتْهُمْ رُسُلُهُمْ بِالْبَيِّنٰتِ ۗ فَمَا كَانَ اللّٰهُ لِيَظْلِمَهُمْ وَلٰكِنْ كَانُوْٓا اَنْفُسَهُمْ يَظْلِمُوْنَ ۝٩

10. ಕೊನೆಗೆ ಪಾಪಕರ್ಮಗಳನ್ನು ಎಸಗಿದ್ದವರ ಪರಿಣಾಮವು ಬಹಳ ಕೆಟ್ಟದಾಯಿತು. ಏಕೆಂದರೆ ಅವರು ಅಲ್ಲಾಹನ ಸೂಕ್ತಗಳನ್ನು ಸುಳ್ಳಾಗಿಸಿದ್ದರು ಮತ್ತು ಅವರು ಅವುಗಳನ್ನು ಅಪಹಾಸ್ಯ ಮಾಡುತ್ತಿದ್ದರು.

ثُمَّ كَانَ عَاقِبَةَ الَّذِيْنَ اَسَآءُوا السُّوْٓاٰى اَنْ كَذَّبُوْا بِاٰيٰتِ اللّٰهِ وَكَانُوْا بِهَا يَسْتَهْزِءُوْنَ ۝١٠

ع

11. ಅಲ್ಲಾಹನೇ ಸೃಷ್ಟಿಯ ಆರಂಭ ಮಾಡುತ್ತಾನೆ. ಅವನೇ ಅದರ ಪುನರಾವರ್ತನೆ ಮಾಡುವನು. ಮುಂದೆ ಅವನ ಕಡೆಗೇ ನೀವು ಮರಳಿಸಲ್ಪಡುವಿರಿ.

اَللّٰهُ يَبْدَؤُا الْخَلْقَ ثُمَّ يُعِيْدُهٗ ثُمَّ اِلَيْهِ تُرْجَعُوْنَ ۝١١

12. ಆ ಘಳಿಗೆ ಬಂದೆರಗುವ ದಿನ ಅಪರಾಧಿಗಳು ಮೂಕವಿಸ್ಮಿತರಾಗಿ ಬಿಡುವರು.[4]

وَيَوْمَ تَقُوْمُ السَّاعَةُ يُبْلِسُ الْمُجْرِمُوْنَ ۝١٢

13. ಅವರು ಮಾಡಿಕೊಂಡಿದ್ದ ಸಹಭಾಗಿಗಳಲ್ಲಿ ಯಾರೂ ಅವರ

وَلَمْ يَكُنْ لَّهُمْ مِّنْ شُرَكَآئِهِمْ شُفَعٰٓؤُا

3. ಅರ್ಥಾತ್- ನಿಸರ್ಗ ವ್ಯವಸ್ಥೆಯನ್ನು ಮಾನವ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿ ನೋಡಿದರೆ ಅವನಿಗೆ ಎರಡು ವಾಸ್ತವಿಕತೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಮೊದಲನೆಯದಾಗಿ ಇದು ಯಾವುದಾದರೊಬ್ಬ ಆಡುವವನ ಆಟಿಕೆಯಲ್ಲ. ಬದಲಾಗಿ ಯುಕ್ತಿಪೂರ್ಣವಾದ ಮತ್ತು ಉದ್ದೇಶವನ್ನು ಹೊಂದಿರುವ ಒಂದು ವ್ಯವಸ್ಥೆಯಾಗಿದೆ. ಎರಡನೆಯದಾಗಿ ಇದು ಶಾಶ್ವತವಾದ ವ್ಯವಸ್ಥೆಯೇನಲ್ಲ. ಬದಲಾಗಿ ಒಂದು ದಿನ ಇದು ಕೊನೆಗೊಂಡೇ ತೀರುವುದು. ಈ ಎರಡೂ ವಿಷಯಗಳು ಪರಲೋಕ ಜೀವನಕ್ಕೆ ಸಾಕ್ಷ್ಯ ಒದಗಿಸುತ್ತವೆ. ಆದರೆ ಇದೆಲ್ಲವನ್ನು ನೋಡುತ್ತಲೂ ಜನರು ಅದನ್ನು ನಿರಾಕರಿಸುತ್ತಾರೆ.

4. ಮೂಲದಲ್ಲಿ 'ಮುಬ್ಲಿಸೂನ್' ಎಂಬ ಪದ ಪ್ರಯೋಗವಾಗಿದೆ. 'ಇಬ್ಲಾಸ್' ಎಂದರೆ ದುಃಖ ಮತ್ತು ನಿರಾಶೆಯಿಂದ ಒಬ್ಬ ವ್ಯಕ್ತಿ ಖಿನ್ನನಾಗಿ ಮೌನಿಯಾಗಿ ಮಾರ್ಪಡುವುದು.

ಶಿಫಾರಸುದಾರರಾಗಲಾರರು ಮತ್ತು ಅವರು ತಮ್ಮ ಸಹಭಾಗಿಗಳ ನಿಷೇಧಕರಾಗುವರು.[5]

وَكَانُوا بِشُرَكَآئِهِمْ كَٰفِرِينَ ۝١٣

14. ಆ ಘಳಿಗೆಯು ಬಂದೆರಗುವ ದಿನ (ಸಕಲ ಮಾನವರೂ) ಬೇರೆ ಬೇರೆ ಪಂಗಡಗಳಲ್ಲಿ ಹಂಚಿ ಹೋಗುವರು.

وَيَوْمَ تَقُومُ السَّاعَةُ يَوْمَئِذٍ يَتَفَرَّقُونَ ۝١٤

15. ಸತ್ಯವಿಶ್ವಾಸವಿರಿಸಿದವರು ಮತ್ತು ಸತ್ಕರ್ಮವೆಸಗಿದವರು ಒಂದು ಉದ್ಯಾನದಲ್ಲಿ ಹರ್ಷೋಲ್ಲಾಸದೊಂದಿಗೆ ಇರಿಸಲ್ಪಡುವರು.

فَأَمَّا الَّذِينَ آمَنُوا وَعَمِلُوا الصَّٰلِحَٰتِ فَهُمْ فِي رَوْضَةٍ يُحْبَرُونَ ۝١٥

16. ಸತ್ಯನಿಷೇಧಿಗಳು ಮತ್ತು ನಮ್ಮ ಸೂಕ್ತಗಳನ್ನೂ ಪರಲೋಕದ ಭೇಟಿಯನ್ನೂ ಸುಳ್ಳಾಗಿಸಿದವರು ಯಾತನೆಯಲ್ಲಿ ಉಪಸ್ಥಿತರಾಗಿ ಇರಿಸಲ್ಪಡುವರು.

وَأَمَّا الَّذِينَ كَفَرُوا وَكَذَّبُوا بِآيَٰتِنَا وَلِقَآئِ الْآخِرَةِ فَأُولَٰٓئِكَ فِي الْعَذَابِ مُحْضَرُونَ ۝١٦

17. ಆದುದರಿಂದ ನೀವು ಸಂಧ್ಯಾಕಾಲ ಬಂದಾಗಲೂ ಪ್ರಾತಃಕಾಲವಾದಾಗಲೂ ಅಲ್ಲಾಹನ ಗುಣಗಾನ ಮಾಡಿರಿ.

فَسُبْحَٰنَ اللَّهِ حِينَ تُمْسُونَ وَحِينَ تُصْبِحُونَ ۝١٧

18. ಭೂಮಿ-ಆಕಾಶಗಳಲ್ಲಿ ಸ್ತುತಿಸ್ತೋತ್ರಗಳು ಅವನಿಗೇ ಮೀಸಲು ಮತ್ತು ಮೂರನೆಯ ಜಾವದಲ್ಲೂ ನಿಮಗೆ 'ಝುಹರ್' ಸಮಯ ಬಂದಾಗಲೂ (ಅವನ ಗುಣಗಾನ ಮಾಡಿರಿ).[6]

وَلَهُ الْحَمْدُ فِي السَّمَٰوَٰتِ وَالْأَرْضِ وَعَشِيًّا وَحِينَ تُظْهِرُونَ ۝١٨

19. ಅವನು ಸಜೀವಿಯನ್ನು ನಿರ್ಜೀವಿಯಿಂದ ಹೊರತೆಗೆಯುತ್ತಾನೆ, ನಿರ್ಜೀವಿಯನ್ನು ಸಜೀವಿಯಿಂದ ಹೊರ ತೆಗೆಯುತ್ತಾನೆ ಮತ್ತು ಭೂಮಿಗೆ ಅದರ ಮರಣದ ಬಳಿಕ ಮತ್ತೆ ಜೀವದಾನ ಮಾಡುತ್ತಾನೆ. ಇದೇ ರೀತಿಯಲ್ಲಿ ನೀವು (ಮರಣಾವಸ್ಥೆಯಿಂದ) ಹೊರ ತೆಗೆಯಲ್ಪಡುವಿರಿ.

يُخْرِجُ الْحَيَّ مِنَ الْمَيِّتِ وَيُخْرِجُ الْمَيِّتَ مِنَ الْحَيِّ وَيُحْيِي الْأَرْضَ بَعْدَ مَوْتِهَا ۚ وَكَذَٰلِكَ تُخْرَجُونَ ۝١٩ ع

20. ಅವನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದುದು, ತರುವಾಯ ಒಮ್ಮೆಲೇ ನೀವು ಮಾನವರಾಗಿ (ಭೂಮಿಯಲ್ಲಿ) ಹಬ್ಬುತ್ತಾ ಹೋಗುತ್ತಿರುವುದು ಅವನ ನಿದರ್ಶನಗಳಲ್ಲೊಂದಾಗಿದೆ.

وَمِنْ آيَٰتِهِ أَنْ خَلَقَكُم مِّن تُرَابٍ ثُمَّ إِذَآ أَنتُم بَشَرٌ تَنتَشِرُونَ ۝٢٠

21. ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು

وَمِنْ آيَٰتِهِ أَنْ خَلَقَ لَكُم مِّنْ أَنفُسِكُمْ

5. ಅರ್ಥಾತ್- ಆಗ ಬಹುದೇವವಿಶ್ವಾಸಿಗಳು ಸ್ವತಃ ನಾವು ಇವರನ್ನು ದೇವನಿಗೆ ಭಾಗೀದಾರರನ್ನಾಗಿ ನಿಶ್ಚಯಿಸುವಲ್ಲಿ ತಪ್ಪಿದ್ದೇವು ಎಂದು ಸಮ್ಮತಿಸುವರು.

6. ಈ ಸೂಕ್ತದಲ್ಲಿ ನಮಾಝ್‌ನ ನಾಲ್ಕು ಸಮಯಗಳ ಕಡೆಗೆ ಸ್ಪಷ್ಟವಾದ ಸೂಚನೆ ಇದೆ. ಫಜ್ರ್, ಮಗ್ರಿಬ್, ಅಸರ್ ಮತ್ತು ಝುಹರ್ ನಮಾಝ್‌ಗಳು. ಇದರ ಜತೆಗೆ ಹೂದ್ ಅಧ್ಯಾಯದ 114, ಬನೀಇಸ್ರಾಈಲ್‌ನ 78, ಮತ್ತು ತಾಹಾದ 130ನೆಯ ಸೂಕ್ತವನ್ನು ಸೇರಿಸಿ ಓದಿದರೆ ನಮಾಝ್‌ನ ಐದೂ ಹೊತ್ತಿನ ಆದೇಶ ಹೊರಡುತ್ತದೆ.

ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪ ವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

أَزْوَاجًا لِّتَسْكُنُوا إِلَيْهَا وَجَعَلَ بَيْنَكُم مَّوَدَّةً وَرَحْمَةً ۚ إِنَّ فِي ذَٰلِكَ لَآيَاتٍ لِّقَوْمٍ يَتَفَكَّرُونَ ﴿٢١﴾

22. ಆಕಾಶಗಳ ಮತ್ತು ಭೂಮಿಯ ಸೃಷ್ಟಿಯೂ ನಿಮ್ಮ ಭಾಷೆಗಳ ಹಾಗೂ ವರ್ಣಗಳ ತಾರತಮ್ಯವೂ ಅವನ ನಿದರ್ಶನಗಳಲ್ಲಿ ಒಂದಾಗಿದೆ. ನಿಶ್ಚಯವಾಗಿಯೂ ಜ್ಞಾನಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

وَمِنْ آيَاتِهِ خَلْقُ السَّمَاوَاتِ وَالْأَرْضِ وَاخْتِلَافُ أَلْسِنَتِكُمْ وَأَلْوَانِكُمْ ۚ إِنَّ فِي ذَٰلِكَ لَآيَاتٍ لِّلْعَالِمِينَ ﴿٢٢﴾

23. ಇರುಳು ಹಗಲುಗಳಲ್ಲಿ ನಿಮ್ಮ ನಿದ್ರೆಯೂ ನೀವು ಅವನ ಅನುಗ್ರಹವನ್ನರಸುವುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ಲಕ್ಷ್ಯವಿಟ್ಟು ಆಲಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

وَمِنْ آيَاتِهِ مَنَامُكُم بِاللَّيْلِ وَالنَّهَارِ وَابْتِغَاؤُكُم مِّن فَضْلِهِ ۚ إِنَّ فِي ذَٰلِكَ لَآيَاتٍ لِّقَوْمٍ يَسْمَعُونَ ﴿٢٣﴾

24. ಅವನು ನಿಮಗೆ ಭಯದೊಂದಿಗೂ ನಿರೀಕ್ಷೆಯೊಂದಿಗೂ ಮಿಂಚಿನ ಹೊಳಪನ್ನು ತೋರಿಸುವುದು ಹಾಗೂ ಆಕಾಶದಿಂದ ನೀರನ್ನು ಸುರಿಸುವುದು ಅನಂತರ ಅದರ ಮೂಲಕ- ನೆಲಕ್ಕೆ ಅದರ ಮರಣದ ಬಳಿಕ- ಮತ್ತೆ ಜೀವ ನೀಡುವುದು ಅವನ ನಿದರ್ಶನ ಗಳಲ್ಲಿ ಸೇರಿವೆ. ನಿಶ್ಚಯವಾಗಿಯೂ ವಿವೇಕಿಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.

وَمِنْ آيَاتِهِ يُرِيكُمُ الْبَرْقَ خَوْفًا وَطَمَعًا وَيُنَزِّلُ مِنَ السَّمَاءِ مَاءً فَيُحْيِي بِهِ الْأَرْضَ بَعْدَ مَوْتِهَا ۚ إِنَّ فِي ذَٰلِكَ لَآيَاتٍ لِّقَوْمٍ يَعْقِلُونَ ﴿٢٤﴾

25. ಆಕಾಶ ಮತ್ತು ಭೂಮಿ ಅವನ ಅಪ್ಪಣೆಯಿಂದ ಸ್ಥಾಪಿತವಾಗಿರು ವುದು ಅವನ ನಿದರ್ಶನಗಳಲ್ಲೊಂದಾಗಿದೆ. ಮುಂದೆ ಅವನು ನಿಮ್ಮನ್ನು ಭೂಮಿಯಿಂದ ಕೂಗಿ ಕರೆದೊಡನೆ ಒಂದೇ ಕರೆಗೆ ನೀವು ಥಟ್ಟನೆ ಹೊರಟು ಬರುವಿರಿ.

وَمِنْ آيَاتِهِ أَن تَقُومَ السَّمَاءُ وَالْأَرْضُ بِأَمْرِهِ ۚ ثُمَّ إِذَا دَعَاكُمْ دَعْوَةً مِّنَ الْأَرْضِ إِذَا أَنتُمْ تَخْرُجُونَ ﴿٢٥﴾

26. ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲರೂ ಅವನ ದಾಸರು. ಎಲ್ಲರೂ ಅವನ ಆಜ್ಞಾಧೀನರೇ ಆಗಿರುತ್ತಾರೆ.

وَلَهُ مَن فِي السَّمَاوَاتِ وَالْأَرْضِ ۖ كُلٌّ لَّهُ قَانِتُونَ ﴿٢٦﴾

27. ಸೃಷ್ಟಿಯ ಆರಂಭ ಮಾಡುವವನೂ ಅವನೇ ಮತ್ತು ಅದರ ಪುನರಾವರ್ತನೆ ಮಾಡುವವನೂ ಅವನೇ. ಇದು ಅವನಿಗೆ ಅತ್ಯಂತ ಸುಲಭವಾದುದು. ಭೂಮಿ-ಆಕಾಶಗಳಲ್ಲಿ ಅವನ ಗುಣವು ಸರ್ವಶ್ರೇಷ್ಠವಾಗಿದ್ದು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَهُوَ الَّذِي يَبْدَأُ الْخَلْقَ ثُمَّ يُعِيدُهُ وَهُوَ أَهْوَنُ عَلَيْهِ ۚ وَلَهُ الْمَثَلُ الْأَعْلَىٰ فِي السَّمَاوَاتِ وَالْأَرْضِ ۚ وَهُوَ الْعَزِيزُ الْحَكِيمُ ﴿٢٧﴾

28. ಅವನು ನಿಮಗೆ ನಿಮ್ಮಿಂದಲೇ ಒಂದು ಉಪಮೆ ಕೊಡುತ್ತಾನೆ. ನಿಮ್ಮ ಸ್ವಾಧೀನವಿರುವ ನಿಮ್ಮ ಗುಲಾಮರಲ್ಲಿ ಕೆಲವರು ನಾವು ನಿಮಗೆ ನೀಡಿರುವ ಸಂಪತ್ತಿನಲ್ಲಿ ನಿಮ್ಮೊಂದಿಗೆ ಸರಿಸಮಾನ ಪಾಲುದಾರರಾಗಿದ್ದಾರೆಯೇ ಮತ್ತು ನೀವು ನಿಮ್ಮ ಸರಿಸಾಟಿಯಾಗಿ ರುವವರನ್ನು ಹೆದರುವಂತೆಯೇ ಅವರನ್ನೂ ಹೆದರುತ್ತೀರಾ?[7] - ಈ ರೀತಿಯಲ್ಲಿ ನಾವು ವಿವೇಕವನ್ನು ಬಳಸುವವರಿಗಾಗಿ ನಮ್ಮ ಸೂಕ್ತಗಳನ್ನು ಸ್ಪಷ್ಟವಾಗಿ ವಿವರಿಸುತ್ತೇವೆ.

ضَرَبَ لَكُم مَّثَلًا مِّنْ أَنفُسِكُمْ ۖ هَل لَّكُم مِّن مَّا مَلَكَتْ أَيْمَانُكُم مِّن شُرَكَاءَ فِي مَا رَزَقْنَاكُمْ فَأَنتُمْ فِيهِ سَوَاءٌ تَخَافُونَهُمْ كَخِيفَتِكُمْ أَنفُسَكُمْ ۚ كَذَٰلِكَ نُفَصِّلُ الْآيَاتِ لِقَوْمٍ يَعْقِلُونَ ﴿٢٨﴾

29. ಆದರೆ ಈ ಅಕ್ರಮಿಗಳು ಏನೂ ಅರ್ಥ ಮಾಡಿಕೊಳ್ಳದೆ ತಮ್ಮ ಊಹೆಗಳನ್ನು ಅನುಸರಿಸುತ್ತಿದ್ದಾರೆ. ಅಲ್ಲಾಹನೇ ದಾರಿಗೆಡಿಸಿ ಬಿಟ್ಟವನಿಗೆ ಮಾರ್ಗದರ್ಶನ ನೀಡುವವನು ಇನ್ನಾರಿದ್ದಾನೆ? ಇಂತಹ ವರಿಗೆ ಯಾರೂ ಸಹಾಯಕನಾಗಲಾರ.

بَلِ اتَّبَعَ الَّذِينَ ظَلَمُوا أَهْوَاءَهُم بِغَيْرِ عِلْمٍ ۖ فَمَن يَهْدِي مَنْ أَضَلَّ اللَّهُ ۖ وَمَا لَهُم مِّن نَّاصِرِينَ ﴿٢٩﴾

30. ಆದುದರಿಂದ (ಸಂದೇಶವಾಹಕರೇ ಮತ್ತವರ ಅನುಯಾಯಿಗಳೇ) ನೀವು ಏಕನಿಷ್ಠೆಯಿಂದ ನಿಮ್ಮ ಮುಖವನ್ನು ಈ ಧರ್ಮದ ಕಡೆ ಕೇಂದ್ರೀಕರಿಸಿರಿ. ಅಲ್ಲಾಹನು ಮಾನವನನ್ನು ಸೃಷ್ಟಿಸಿದ ಪ್ರಕೃತಿ ಯಲ್ಲೇ ಸ್ಥಿರವಾಗಿರಿ. ಅಲ್ಲಾಹನು ಮಾಡಿದ ರಚನೆಯನ್ನು ಬದ ಲಾಯಿಸಲಾಗದು.[8] ಇದುವೇ ಸತ್ಯ ಮತ್ತು ಸರಿಯಾದ ಧರ್ಮ ವಾಗಿದೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.

فَأَقِمْ وَجْهَكَ لِلدِّينِ حَنِيفًا ۚ فِطْرَتَ اللَّهِ الَّتِي فَطَرَ النَّاسَ عَلَيْهَا ۚ لَا تَبْدِيلَ لِخَلْقِ اللَّهِ ۚ ذَٰلِكَ الدِّينُ الْقَيِّمُ وَلَٰكِنَّ أَكْثَرَ النَّاسِ لَا يَعْلَمُونَ ﴿٣٠﴾

31-32. ಅಲ್ಲಾಹನೆಡೆಗೆ ಮರಳುತ್ತ ಮತ್ತು ಅವನನ್ನು ಭಯಪಡುತ್ತ (ಇದರಲ್ಲೇ ಸ್ಥಿರವಾಗಿರಿ) ಹಾಗೂ ನಮಾಝನ್ನು ಸಂಸ್ಥಾಪಿಸಿರಿ ಮತ್ತು ತಮ್ಮ ತಮ್ಮ ಧರ್ಮವನ್ನು ಭಿನ್ನವಾಗಿರಿಸಿಕೊಂಡ ಹಾಗೂ ಪಂಗಡಗಳಾಗಿ ವಿಂಗಡಿತರಾಗಿರುವ ಬಹುದೇವ ವಿಶ್ವಾಸಿ

مُنِيبِينَ إِلَيْهِ وَاتَّقُوهُ وَأَقِيمُوا الصَّلَاةَ وَلَا تَكُونُوا مِنَ الْمُشْرِكِينَ ﴿٣١﴾ مِنَ الَّذِينَ فَرَّقُوا دِينَهُمْ وَكَانُوا

7. ಇದು ಅನ್ನಹ್ಲ್ ಅಧ್ಯಾಯದ 62ನೇಯ ಸೂಕ್ತದಲ್ಲಿ ಬಂದ ವಿಷಯವೇ ಆಗಿದೆ. 'ನೀವು ನಿಮ್ಮ ಸೊತ್ತಿನಲ್ಲಿ ನಿಮ್ಮ ದಾಸರನ್ನು ಭಾಗಿದಾರರೆಂದು ಕಲ್ಪಿಸಲಾರಿರಿ ಎಂದಾದರೆ' ದೇವನು ತನ್ನ ದೇವತ್ವದಲ್ಲಿ ದಾಸರನ್ನು ಭಾಗೀದಾರರನ್ನಾಗಿ ಮಾಡುತ್ತಾನೆಂಬ ವಿಷಯ ಹೇಗೆ ನಿಮ್ಮ ತಲೆಗೆ ಹೊಕ್ಕಿತು ಎಂಬ ವಿಷಯದ ಬಗ್ಗೆಯೇ ಎರಡೂ ಕಡೆ ಒತ್ತು ಕೊಡಲಾಗಿದೆ.

8. ಅರ್ಥಾತ್- ದೇವನು ಮಾನವನನ್ನು ತನ್ನ ದಾಸನಾಗಿ ಮಾಡಿದ್ದಾನೆ. ತನ್ನ ದಾಸ್ಯಕ್ಕಾಗಿಯೇ ಅವನು ಮಾನವನನ್ನು ಸೃಷ್ಟಿಸಿದ್ದಾನೆ. ಅವನ ಈ ಸ್ಥಿತಿಯನ್ನು ಯಾರಿಗೂ ಬದಲಿಸಲು ಸಾಧ್ಯವಿಲ್ಲ. ವ್ಯಕ್ತಿ, ದಾಸ್ಯದ ತನ್ನ ಸ್ಥಾನದಿಂದ ಮುಕ್ತನಾಗಲು ಸಾಧ್ಯವಿಲ್ಲ. ಹಾಗೆಯೇ ಅಲ್ಲಾಹನ ಹೊರತು ಬೇರೆ ಯಾರನ್ನಾದರೂ ದೇವನೆಂದು ಪರಿಗಣಿಸಿದರೆ ಅದು ನಿಜಾರ್ಥದಲ್ಲಿ ದೇವನಾಗಿ ಬಿಡಲು ಸಾಧ್ಯವಿಲ್ಲ. ಮಾನವನು ತನ್ನ ಪಾಲಿಗೆ ಎಷ್ಟೇ ದೇವರನ್ನು ಮಾಡಿಕೊಂಡರೂ ಅವನು ಒಬ್ಬ ದೇವನ ಹೊರತು ಬೇರಾರ ದಾಸನೂ ಅಲ್ಲ ಎಂಬ ವಾಸ್ತವಿಕತೆ ಅತ್ಯಂತ ನಿಶ್ಚಿತವಾದುದು. ಅದರ ಇನ್ನೊಂದು ಭಾಷಾಂತರ "ಅಲ್ಲಾಹನ ರಚನೆಯಲ್ಲಿ ಬದಲಾವಣೆ ಮಾಡದಿರಿ" ಎಂದಾಗಬಹುದು. ಅರ್ಥಾತ್, ಅಲ್ಲಾಹನು ಯಾವ ಪ್ರಕೃತಿಯಲ್ಲಿ ಮಾನವನನ್ನು ಸೃಷ್ಟಿಸಿದ್ದಾನೋ ಅದನ್ನು ಕೆಡಿಸುವುದು ಅಥವಾ ವಿರೂಪಗೊಳಿಸುವುದು ಸರಿಯಲ್ಲ.

شِيَعًا ۖ كُلُّ حِزْبٍ بِمَا لَدَيْهِمْ فَرِحُونَ ٣٢

ಗಳಲ್ಲಾಗಬೇಡಿರಿ. ಪ್ರತಿಯೊಂದು ಪಂಗಡವೂ ತನ್ನ ಬಳಿ ಏನಿದೆಯೋ ಅದರಲ್ಲೇ ತಲ್ಲೀನವಾಗಿದೆ.

وَإِذَا مَسَّ النَّاسَ ضُرٌّ دَعَوْا رَبَّهُمْ مُنِيبِينَ إِلَيْهِ ثُمَّ إِذَا أَذَاقَهُمْ مِنْهُ رَحْمَةً إِذَا فَرِيقٌ مِنْهُمْ بِرَبِّهِمْ يُشْرِكُونَ ٣٣
لِيَكْفُرُوا بِمَا آتَيْنَاهُمْ ۚ فَتَمَتَّعُوا فَسَوْفَ تَعْلَمُونَ ٣٤

33-34. ಜನರಿಗೇನಾದರೂ ಕಷ್ಟ ಬಂದಾಗ ಅವರು ತಮ್ಮ ಪ್ರಭುವಿನ ಕಡೆಗೆ ಮರಳಿ ಅವನನ್ನು ಪ್ರಾರ್ಥಿಸುತ್ತಾರೆ. ತರುವಾಯ ಅವನು ಅವರಿಗೆ ತನ್ನ ಕರುಣೆಯ ರಸಾಸ್ವಾದನ ಮಾಡಿಸಿದಾಗ ಹಠಾತ್ತನೆ ಅವರಲ್ಲಿ ಕೆಲವರು ನಾವು ಮಾಡಿದ ಉಪಕಾರಕ್ಕೆ ಕೃತಘ್ನತೆ ತೋರಿಸಲಿಕ್ಕಾಗಿ 'ದೇವಸಹಭಾಗಿತ್ವ' ಮಾಡತೊಡಗುತ್ತಾರೆ. ಸರಿ, ಸುಖ ಪಟ್ಟುಕೊಳ್ಳಿರಿ. ಸದ್ಯದಲ್ಲೇ ನಿಮಗೆ ತಿಳಿದೀತು.

أَمْ أَنْزَلْنَا عَلَيْهِمْ سُلْطَانًا فَهُوَ يَتَكَلَّمُ بِمَا كَانُوا بِهِ يُشْرِكُونَ ٣٥

35. ಇವರು ಮಾಡುತ್ತಿರುವ 'ದೇವಸಹಭಾಗಿತ್ವ' ಸತ್ಯವೆಂಬ ಬಗ್ಗೆ ಸಾಕ್ಷ್ಯ ನೀಡುವಂತಹ ಯಾವುದಾದರೂ ಪುರಾವೆಯನ್ನು ನಾವು ಇವರ ಮೇಲೆ ಅವತೀರ್ಣಗೊಳಿಸಿದ್ದುಂಟೇ?

وَإِذَا أَذَقْنَا النَّاسَ رَحْمَةً فَرِحُوا بِهَا ۖ وَإِنْ تُصِبْهُمْ سَيِّئَةٌ بِمَا قَدَّمَتْ أَيْدِيهِمْ إِذَا هُمْ يَقْنَطُونَ ٣٦

36. ನಾವು ಜನರಿಗೆ ಕೃಪೆಯ ಸವಿಯುಣಿಸಿದಾಗ ಅವರು ಅದರಿಂದ ಹಿಗ್ಗಿ ಬಿಡುತ್ತಾರೆ ಮತ್ತು ಅವರ ಸ್ವಯಂಕೃತ ದುಷ್ಕೃತ್ಯಗಳಿಂದಾಗಿ ಅವರ ಮೇಲೇನಾದರೂ ಕಷ್ಟ ಬಂದಾಗ ಕೂಡಲೇ ಅವರು ನಿರಾಶರಾಗುತ್ತಾರೆ.

أَوَلَمْ يَرَوْا أَنَّ اللَّهَ يَبْسُطُ الرِّزْقَ لِمَنْ يَشَاءُ وَيَقْدِرُ ۚ إِنَّ فِي ذَٰلِكَ لَآيَاتٍ لِقَوْمٍ يُؤْمِنُونَ ٣٧

37. ಅಲ್ಲಾಹನೇ ತಾನಿಚ್ಛಿಸಿದವರಿಗೆ ಜೀವನಾಧಾರ ವಿಸ್ತೃತಗೊಳಿಸುತ್ತಾನೆ ಮತ್ತು (ತಾನಿಚ್ಛಿಸಿದವರಿಗೆ) ಸಂಕುಚಿತಗೊಳಿಸುತ್ತಾನೆಂಬುದನ್ನು ಇವರು ನೋಡುತ್ತಿಲ್ಲವೇ? ಇದರಲ್ಲಿ ಸತ್ಯವಿಶ್ವಾಸಿಗಳಿಗೆ ಅನೇಕ ದೃಷ್ಟಾಂತಗಳಿವೆ.

فَآتِ ذَا الْقُرْبَىٰ حَقَّهُ وَالْمِسْكِينَ وَابْنَ السَّبِيلِ ۚ ذَٰلِكَ خَيْرٌ لِلَّذِينَ يُرِيدُونَ وَجْهَ اللَّهِ ۖ وَأُولَٰئِكَ هُمُ الْمُفْلِحُونَ ٣٨

38. ಆದುದರಿಂದ (ಸತ್ಯವಿಶ್ವಾಸಿಗಳೇ) ಸಂಬಂಧಿಕನಿಗೆ ಅವನ ಹಕ್ಕನ್ನು ಕೊಡು ಮತ್ತು ದರಿದ್ರನಿಗೂ ಪ್ರಯಾಣಿಕನಿಗೂ (ಅವನವನ ಹಕ್ಕನ್ನು ಕೊಡು)[9] ಅಲ್ಲಾಹನ ಸಂಪ್ರೀತಿಯನ್ನು ಬಯಸುವವರಿಗೆ ಈ ಕ್ರಮ ಉತ್ತಮವಾಗಿದೆ ಮತ್ತು ಅವರೇ ಯಶಸ್ವಿಗಳಾಗುವವರು.

وَمَا آتَيْتُمْ مِنْ رِبًا لِيَرْبُوَ فِي أَمْوَالِ النَّاسِ فَلَا يَرْبُو عِنْدَ اللَّهِ ۖ وَمَا

39. ಜನರ ಸೊತ್ತಿನಲ್ಲಿ ಸೇರಿ ವೃದ್ಧಿಯಾಗಬೇಕೆಂದು ನೀವು ಕೊಡುವ ಬಡ್ಡಿಯು ಅಲ್ಲಾಹನ ಬಳಿ ವೃದ್ಧಿಸುವುದಿಲ್ಲ.[10] ನೀವು ಅಲ್ಲಾಹನ

9. ಇಲ್ಲಿ ಕುಟುಂಬಸ್ಥರಿಗೆ ಹಾಗೂ ದರಿದ್ರರು ಮತ್ತು ಯಾತ್ರಿಕರಿಗೆ ದಾನ ನೀಡಿರಿ ಎಂದು ಹೇಳಲಾಗಿಲ್ಲ. ಇದು ನೀನು ಕೊಡಲೇಬೇಕಾದ ಹಕ್ಕು ಎಂದು ಹೇಳಲಾಗಿದೆ. ಆದ್ದರಿಂದ ಅದನ್ನು ಅವರ ಹಕ್ಕೆಂದೇ ಬಗೆದು ಪಾವತಿಸಬೇಕಾಗಿದೆ.

10. ಇದು ಬಡ್ಡಿಯನ್ನು ಖಂಡಿಸಿ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಮೊದಲನೆಯ ಸೂಕ್ತವಾಗಿದೆ. ನಂತರದ ಆದೇಶಗಳಿಗಾಗಿ

| | |
|---|---|
| ಸಂಪ್ರೀತಿ ಬಯಸಿ ಕೊಡುವ ಝಕಾತ್- ಇದನ್ನು ನೀಡುವವರೇ ವಾಸ್ತವದಲ್ಲಿ ತಮ್ಮ ಸಂಪತ್ತನ್ನು ವೃದ್ಧಿಸಿಕೊಳ್ಳುತ್ತಾರೆ. | ءَاتَيْتُم مِّن زَكَوٰةٍ تُرِيدُونَ وَجْهَ ٱللَّهِ فَأُو۟لَٰٓئِكَ هُمُ ٱلْمُضْعِفُونَ ٣٩ |
| 40. ಅಲ್ಲಾಹನೇ ನಿಮ್ಮನ್ನು ಸೃಷ್ಟಿಸಿದವನು, ತರುವಾಯ ನಿಮಗೆ ಜೀವನಾಧಾರ ನೀಡಿದವನು, ಅನಂತರ ಅವನು ನಿಮಗೆ ಮರಣ ಕೊಡುತ್ತಾನೆ ಮತ್ತೆ ಅವನು ನಿಮ್ಮನ್ನು ಜೀವಂತಗೊಳಿಸುವನು. ನೀವು ಮಾಡಿಕೊಂಡಿರುವ ಭಾಗೀದಾರರಲ್ಲಿ ಯಾರಾದರೂ ಈ ಕಾರ್ಯಗಳ ಪೈಕಿ ಯಾವುದನ್ನಾದರೂ ಮಾಡುವವರಿದ್ದಾರೆಯೇ? ಇವರು ಮಾಡುತ್ತಿರುವ 'ದೇವ ಸಹಭಾಗಿತ್ವ'ದಿಂದ ಅವನು ಪರಮ ಪಾವನನೂ ಅತ್ಯುನ್ನತನೂ ಆಗಿರುತ್ತಾನೆ. | ٱللَّهُ ٱلَّذِى خَلَقَكُمْ ثُمَّ رَزَقَكُمْ ثُمَّ يُمِيتُكُمْ ثُمَّ يُحْيِيكُمْ ۖ هَلْ مِن شُرَكَآئِكُم مَّن يَفْعَلُ مِن ذَٰلِكُم مِّن شَىْءٍ ۚ سُبْحَٰنَهُۥ وَتَعَٰلَىٰ عَمَّا يُشْرِكُونَ ٤٠ |
| 41. ಜನರ ಸ್ವಂತ ಕೈಗಳ ದುಡಿಮೆಯಿಂದ ನೆಲ-ಜಲಗಳಲ್ಲಿ ಕ್ಷೋಭೆ ಯುಂಟಾಗಿ ಬಿಟ್ಟಿದೆ.[11] ಇದು ಜನರಿಗೆ ಅವರ ಕೆಲವು ಕರ್ಮಗಳ ಸವಿಯನ್ನುಣಿಸಲಿಕ್ಕಾಗಿಯೂ ಅವರು ಮರಳಲೂ ಬಹುದೆಂಬ ನಿರೀಕ್ಷೆಯಿಂದಲೂ (ಆಗಿದೆ). | ظَهَرَ ٱلْفَسَادُ فِى ٱلْبَرِّ وَٱلْبَحْرِ بِمَا كَسَبَتْ أَيْدِى ٱلنَّاسِ لِيُذِيقَهُم بَعْضَ ٱلَّذِى عَمِلُوا۟ لَعَلَّهُمْ يَرْجِعُونَ ٤١ |
| 42. ಸಂದೇಶವಾಹಕರೇ, ಭೂಮಿಯಲ್ಲಿ ಸಂಚರಿಸಿ, ಹಿಂದೆ ಗತಿಸಿ ಹೋದವರ ಅಂತಿಮ ಪರಿಣಾಮವೇನಾಗಿದೆ ಎಂಬುದನ್ನು ನೋಡಿರಿ ಎಂದು ಅವರೊಡನೆ ಹೇಳಿರಿ. ಅವರಲ್ಲಿ ಹೆಚ್ಚಿನವರು ಬಹುದೇವಾರಾಧಕರಾಗಿದ್ದರು. | قُلْ سِيرُوا۟ فِى ٱلْأَرْضِ فَٱنظُرُوا۟ كَيْفَ كَانَ عَٰقِبَةُ ٱلَّذِينَ مِن قَبْلُ ۚ كَانَ أَكْثَرُهُم مُّشْرِكِينَ ٤٢ |
| 43. ಆದುದರಿಂದ ನಿವಾರಣೆಯಾಗುವ ಯಾವ ಸಾಧ್ಯತೆಯೂ ಅಲ್ಲಾಹನ ಕಡೆಯಿಂದ ಇಲ್ಲದಿರುವಂತಹ ಆ ದಿನವು ಬರುವುದಕ್ಕೆ ಮುಂಚಿತವಾಗಿ ನಿಮ್ಮ ಮುಖವನ್ನು ಈ ಸತ್ಯಧರ್ಮದ ಕಡೆಗೆ ಸ್ಥಿರವಾಗಿರಿಸಿಕೊಳ್ಳಿರಿ. ಅಂದು ಜನರು ಸಿಡಿದು ಪರಸ್ಪರ ಬೇರ್ಪಡುವರು. | فَأَقِمْ وَجْهَكَ لِلدِّينِ ٱلْقَيِّمِ مِن قَبْلِ أَن يَأْتِىَ يَوْمٌ لَّا مَرَدَّ لَهُۥ مِنَ ٱللَّهِ ۖ يَوْمَئِذٍ يَصَّدَّعُونَ ٤٣ |
| 44. ಯಾರು ಸತ್ಯವನ್ನು ನಿಷೇಧಿಸುವನೋ ಅವನ ನಿಷೇಧದ ಅಪರಾಧ ಅವನ ಮೇಲೆಯೇ ಇದೆ. ಸತ್ಕರ್ಮವೆಸಗಿದವರು ತಮಗಾಗಿಯೇ (ಯಶಸ್ಸಿನ ಮಾರ್ಗವನ್ನು) ಸುಗಮಗೊಳಿಸುತ್ತಿದ್ದಾರೆ. | مَن كَفَرَ فَعَلَيْهِ كُفْرُهُۥ ۖ وَمَنْ عَمِلَ صَٰلِحًا فَلِأَنفُسِهِمْ يَمْهَدُونَ ٤٤ |
| 45. (ಇದು) ಸತ್ಯವಿಶ್ವಾಸ ಸ್ವೀಕಾರ ಮಾಡಿದವರಿಗೂ ಸತ್ಕರ್ಮವೆಸಗಿದವರಿಗೂ ಅಲ್ಲಾಹನು ತನ್ನ ಅನುಗ್ರಹದಿಂದ ಸತ್ಫಲ ನೀಡುವಂತಾಗಲು. ನಿಶ್ಚಯವಾಗಿಯೂ ಅವನು ಸತ್ಯನಿಷೇಧಿಗಳನ್ನು ಮೆಚ್ಚುವುದಿಲ್ಲ. | لِيَجْزِىَ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ مِن فَضْلِهِۦٓ ۚ إِنَّهُۥ لَا يُحِبُّ ٱلْكَٰفِرِينَ ٤٥ |

ಆಲಿ ಇಮ್ರಾನ್ ಅಧ್ಯಾಯದ 130 ಹಾಗೂ ಅಲ್ ಬಕರಃದ 275ರಿಂದ 281ರ ವರೆಗಿನ ಸೂಕ್ತಗಳನ್ನು ನೋಡಿರಿ.

11. ಇದು ಆ ಕಾಲದಲ್ಲಿ ಜಗತ್ತಿನ ಮಹಾ ಶಕ್ತಿಗಳಾಗಿದ್ದ ರೋಮ್ ಮತ್ತು ಇರಾನಿನ ನಡುವೆ ನಡೆದ ಯುದ್ಧದ ಕಡೆಗಿರುವ ಸೂಚನೆ.

46. ಸುವಾರ್ತೆ ನೀಡಲು, ನಿಮಗೆ ತನ್ನ ಕೃಪೆಯನ್ನು ಒದಗಿಸಲು, ನಾವೆಗಳು ಅವನ ಆಜ್ಞೆಯಿಂದ ಚಲಿಸುತ್ತಿರಲು, ನೀವು ಅವನ ಅನುಗ್ರಹವನ್ನು ಅರಸಲು ಮತ್ತು ಅವನಿಗೆ ಕೃತಜ್ಞರಾಗಿರಲು ಅವನು ಮಾರುತಗಳನ್ನು ಕಳುಹಿಸುವುದು ಅವನ ನಿದರ್ಶನ ಗಳಲ್ಲಾಗಿದೆ.

وَمِنْ آيَاتِهِ أَنْ يُرْسِلَ الرِّيَاحَ
مُبَشِّرَاتٍ وَلِيُذِيقَكُمْ مِنْ رَحْمَتِهِ
وَلِتَجْرِيَ الْفُلْكُ بِأَمْرِهِ وَلِتَبْتَغُوا
مِنْ فَضْلِهِ وَلَعَلَّكُمْ تَشْكُرُونَ ﴿٤٦﴾

47. ನಾವು ನಿಮಗಿಂತ ಮುಂಚೆ ಸಂದೇಶವಾಹಕರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು ಮತ್ತು ಅವರು ಅವರ ಮುಂದೆ ಸುವ್ಯಕ್ತ ನಿದರ್ಶನಗಳನ್ನು ತಂದರು. ತರುವಾಯ ಅಪರಾಧವೆಸಗಿದವರ ವಿರುದ್ಧ ನಾವು ಪ್ರತೀಕಾರ ತೀರಿಸಿದೆವು. ಸತ್ಯವಿಶ್ವಾಸಿಗಳಿಗೆ ಸಹಾಯ ಮಾಡುವುದು ನಮ್ಮ ಹೊಣೆಯಾಗಿತ್ತು.

وَلَقَدْ أَرْسَلْنَا مِنْ قَبْلِكَ رُسُلًا إِلَىٰ
قَوْمِهِمْ فَجَاءُوهُمْ بِالْبَيِّنَاتِ فَانْتَقَمْنَا
مِنَ الَّذِينَ أَجْرَمُوا ۖ وَكَانَ حَقًّا
عَلَيْنَا نَصْرُ الْمُؤْمِنِينَ ﴿٤٧﴾

48. ಮಾರುತಗಳನ್ನು ಕಳುಹಿಸುವವನು ಅಲ್ಲಾಹನೇ ಆಗಿರುತ್ತಾನೆ. ಅವು ಮೋಡಗಳನ್ನು ಎತ್ತುತ್ತವೆ. ಅನಂತರ ಅವನು ತಾನಿಚ್ಛಿಸು ವಂತೆ ಮೋಡಗಳನ್ನು ಆಕಾಶದಲ್ಲಿ ಹರಡುತ್ತಾನೆ. ಅವುಗಳನ್ನು ವಿಭಾಗಗಳಾಗಿ ಹಂಚುತ್ತಾನೆ. ಆ ಬಳಿಕ ಮಳೆ ಹನಿಗಳು ಮೋಡ ದಿಂದ ತೊಟ್ಟಿಕ್ಕುತ್ತ ಸಾಗುವುದನ್ನು ತಾವು ನೋಡುತ್ತೀರಿ. ಈ ಮಳೆಯನ್ನು ಅವನು ತನ್ನ ದಾಸರಲ್ಲಿ ತನಗಿಷ್ಟ ಬಂದವರ ಮೇಲೆ ಸುರಿಸಿದಾಗ ಅವರು ಒಮ್ಮೆಲೇ ಆನಂದ ತುಂದಿಲರಾಗುತ್ತಾರೆ.

اللَّهُ الَّذِي يُرْسِلُ الرِّيَاحَ فَتُثِيرُ
سَحَابًا فَيَبْسُطُهُ فِي السَّمَاءِ كَيْفَ
يَشَاءُ وَيَجْعَلُهُ كِسَفًا فَتَرَى الْوَدْقَ
يَخْرُجُ مِنْ خِلَالِهِ ۖ فَإِذَا أَصَابَ بِهِ
مَنْ يَشَاءُ مِنْ عِبَادِهِ إِذَا هُمْ
يَسْتَبْشِرُونَ ﴿٤٨﴾

49. ವಸ್ತುತಃ ಅದರ ಅವತರಣಕ್ಕಿಂತ ಮುಂಚೆ ಅವರು ನಿರಾಶ ರಾಗತೊಡಗಿದ್ದರು.

وَإِنْ كَانُوا مِنْ قَبْلِ أَنْ يُنَزَّلَ
عَلَيْهِمْ مِنْ قَبْلِهِ لَمُبْلِسِينَ ﴿٤٩﴾

50. ಅಲ್ಲಾಹನ ಕೃಪೆಯ ಪರಿಣಾಮವನ್ನು ನೋಡಿರಿ. ಸತ್ತು ಬಿದ್ದಿದ್ದ ನೆಲವನ್ನು ಅವನು ಹೇಗೆ ಜೀವಂತಗೊಳಿಸಿ ಎಬ್ಬಿಸುತ್ತಾನೆ. ನಿಶ್ಚಯವಾಗಿಯೂ ಅವನು ಮೃತರನ್ನು ಜೀವಂತ ಗೊಳಿಸುವವನು ಮತ್ತು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು.

فَانْظُرْ إِلَىٰ آثَارِ رَحْمَتِ اللَّهِ كَيْفَ
يُحْيِي الْأَرْضَ بَعْدَ مَوْتِهَا ۚ إِنَّ ذَٰلِكَ
لَمُحْيِي الْمَوْتَىٰ ۖ وَهُوَ عَلَىٰ كُلِّ شَيْءٍ قَدِيرٌ ﴿٥٠﴾

51. ಅವರು ತಮ್ಮ ಹೊಲಗಳನ್ನು ಹಳದಿಯಾಗಿ ಕಾಣುವಂತಹ ಒಂದು ಗಾಳಿಯನ್ನು ನಾವು ಕಳುಹಿಸಿಬಿಟ್ಟರೆ ಆಗ ಅವರು ಸತ್ಯನಿಷೇಧಿಗಳಾಗಿ ಬಿಡುತ್ತಾರೆ.[12]

وَلَئِنْ أَرْسَلْنَا رِيحًا فَرَأَوْهُ مُصْفَرًّا
لَظَلُّوا مِنْ بَعْدِهِ يَكْفُرُونَ ﴿٥١﴾

12. ಅರ್ಥಾತ್- ಆಗ ಅವರು ದೇವನನ್ನು ಹಳಿಯ ತೊಡಗುತ್ತಾರೆ. ಅವನು ನಮ್ಮ ಮೇಲೆ ಎಂತಹ ಕಷ್ಟ ಕಾರ್ಪಣ್ಯಗಳನ್ನು ಹೇರಿದ್ದಾನೆ ಎಂದು ಪ್ರಲಾಪಿಸತೊಡಗುತ್ತಾರೆ. ವಾಸ್ತವದಲ್ಲಿ ದೇವನು ಅವರ ಮೇಲೆ ಅನುಗ್ರಹದ ಮಳೆಗರೆದಿದ್ದಾಗ ಅವರು ಕೃತಜ್ಞರಾಗುವ ಬದಲು ಅವನಿಗೆ ಕೃತಘ್ನತೆ ತೋರಿದ್ದರು.

52. (ಪೈಗಂಬರರೇ) ನೀವು ಮೃತರಿಗೆ ಕೇಳಿಸಲಾರಿರಿ,[13] ಬೆನ್ನು ತಿರುಗಿಸಿ ನಡೆಯುತ್ತಿರುವ ಕಿವುಡರಿಗೂ ನೀವು ಕೇಳಿಸಲಾರಿರಿ.

فَإِنَّكَ لَا تُسْمِعُ الْمَوْتَىٰ وَلَا تُسْمِعُ الصُّمَّ الدُّعَاءَ إِذَا وَلَّوْا مُدْبِرِينَ ﴿٥٢﴾

53. ಮತ್ತು ನೀವು ಕುರುಡರನ್ನು ಅವರ ಪಥಭ್ರಷ್ಟತೆಯಿಂದ ಮುಕ್ತಗೊಳಿಸಿ ಅವರಿಗೆ ಸನ್ಮಾರ್ಗದರ್ಶನ ಮಾಡಲಾರಿರಿ. ನೀವು ನಮ್ಮ ಸೂಕ್ತಗಳ ಮೇಲೆ ವಿಶ್ವಾಸವಿರಿಸುವ ಹಾಗೂ ವಿಧೇಯರಾಗುವವರಿಗೆ ಮಾತ್ರ ಕೇಳಿಸಬಲ್ಲಿರಿ.

وَمَا أَنتَ بِهَادِ الْعُمْيِ عَن ضَلَالَتِهِمْ ۖ إِن تُسْمِعُ إِلَّا مَن يُؤْمِنُ بِآيَاتِنَا فَهُم مُّسْلِمُونَ ﴿٥٣﴾

54. ದುರ್ಬಲಾವಸ್ಥೆಯಿಂದ ನಿಮ್ಮ ಜನನದ ಆರಂಭವನ್ನು ಮಾಡಿದವನು ಅಲ್ಲಾಹನೇ ತಾನೆ. ಈ ದುರ್ಬಲಾವಸ್ಥೆಯ ತರುವಾಯ ಅವನು ನಿಮಗೆ ಶಕ್ತಿ ಪ್ರದಾನ ಮಾಡಿದನು. ಈ ಶಕ್ತಿಯ ನಂತರ ನಿಮ್ಮನ್ನು ಅಶಕ್ತ ಹಾಗೂ ವೃದ್ಧರನ್ನಾಗಿ ಮಾಡಿದನು. ಅವನು ತಾನಿಚ್ಛಿಸಿದುದನ್ನು ಸೃಷ್ಟಿಸುತ್ತಾನೆ ಮತ್ತು ಅವನು ಸರ್ವಜ್ಞನೂ ಸರ್ವ ಸಮರ್ಥನೂ ಆಗಿರುತ್ತಾನೆ.

اللَّهُ الَّذِي خَلَقَكُم مِّن ضَعْفٍ ثُمَّ جَعَلَ مِن بَعْدِ ضَعْفٍ قُوَّةً ثُمَّ جَعَلَ مِن بَعْدِ قُوَّةٍ ضَعْفًا وَشَيْبَةً ۚ يَخْلُقُ مَا يَشَاءُ ۖ وَهُوَ الْعَلِيمُ الْقَدِيرُ ﴿٥٤﴾

55. ಆ ಘಳಿಗೆ ಬಂದಾಗ[14] ಅಪರಾಧಿಗಳು ನಾವು ಒಂದು ಘಳಿಗೆಗಿಂತ ಹೆಚ್ಚು ಕಾಲ ತಂಗಿರಲಿಲ್ಲವೆಂದು ಆಣೆ ಹಾಕುತ್ತ ಹೇಳುವರು. ಅವರು ಲೌಕಿಕ ಜೀವನದಲ್ಲಿ ಹೀಗೆಯೇ ಮೋಸ ಹೋಗುತ್ತಿದ್ದರು.

وَيَوْمَ تَقُومُ السَّاعَةُ يُقْسِمُ الْمُجْرِمُونَ مَا لَبِثُوا غَيْرَ سَاعَةٍ ۚ كَذَٰلِكَ كَانُوا يُؤْفَكُونَ ﴿٥٥﴾

56. ಆದರೆ ಜ್ಞಾನ ಹಾಗೂ ಸತ್ಯವಿಶ್ವಾಸವನ್ನು ಹೊಂದಿದವರು, "ದೇವ ದಾಖಲೆಯ ಪ್ರಕಾರ ನೀವು ಪುನರುತ್ಥಾನ ದಿನದ ವರೆಗೂ ಬಿದ್ದುಕೊಂಡಿದ್ದಿರಿ. ಇದು ಅದೇ ಪುನರುತ್ಥಾನ ದಿನ. ಆದರೆ ನೀವು ತಿಳಿದಿರಲಿಲ್ಲ" ಎಂದು ಹೇಳುವರು.

وَقَالَ الَّذِينَ أُوتُوا الْعِلْمَ وَالْإِيمَانَ لَقَدْ لَبِثْتُمْ فِي كِتَابِ اللَّهِ إِلَىٰ يَوْمِ الْبَعْثِ ۖ فَهَٰذَا يَوْمُ الْبَعْثِ وَلَٰكِنَّكُمْ كُنتُمْ لَا تَعْلَمُونَ ﴿٥٦﴾

57. ಅಂತೂ ಅದು ಅಕ್ರಮಿಗಳಿಗೆ ಅವರ ನೆಪವೇನೂ ಫಲ ಕೊಡದ ದಿನವಾಗಿರುವುದು ಮತ್ತು ಅವರೊಡನೆ ಕ್ಷಮಾಯಾಚನೆ ಮಾಡಲಿಕ್ಕೂ ಹೇಳಲಾಗದು.[15]

فَيَوْمَئِذٍ لَّا يَنفَعُ الَّذِينَ ظَلَمُوا مَعْذِرَتُهُمْ وَلَا هُمْ يُسْتَعْتَبُونَ ﴿٥٧﴾

13. ಅರ್ಥಾತ್- ಆತ್ಮಸಾಕ್ಷಿ ಮತ್ತು ಸತ್ತುಹೋದವರಿಗೆ.

14. ಅರ್ಥಾತ್- ನಿರ್ಣಾಯಕ ದಿನ. ಅದು ಬರಲಿದೆ ಎಂದು ಈ ಮೂಲಕ ತಿಳಿಯಪಡಿಸಲಾಗುತ್ತಿದೆ.

15. ಇನ್ನೊಂದು ಭಾಷಾಂತರ ಹೀಗಾಗಬಹುದು, "ತಮ್ಮ ಪ್ರಭುವನ್ನು ಸಂತುಷ್ಟಗೊಳಿಸಬೇಕೆಂದು ಅವರಿಂದ ಬಯಸಲಾಗುವುದಿಲ್ಲ."

58. ನಾವು ಈ ಕುರ್‌ಆನಿನಲ್ಲಿ ಜನರಿಗೆ ನಾನಾ ವಿಧವಾಗಿ ಬೋಧಿಸಿದ್ದೇವೆ. ನೀವು ಎಂತಹ ನಿದರ್ಶನಗಳನ್ನೇ ತಂದರೂ ಸತ್ಯ ನಿಷೇಧಿಗಳು ನೀವು ಮಿಥ್ಯದಲ್ಲಿ ಇರುವಿರೆಂದೇ ಹೇಳುವರು.

وَلَقَدْ ضَرَبْنَا لِلنَّاسِ فِي هَٰذَا الْقُرْآنِ مِن كُلِّ مَثَلٍ ۚ وَلَئِن جِئْتَهُم بِآيَةٍ لَّيَقُولَنَّ الَّذِينَ كَفَرُوا إِنْ أَنتُمْ إِلَّا مُبْطِلُونَ ﴿٥٨﴾

59. ಹೀಗೆ ಅಲ್ಲಾಹನು ಅಜ್ಞಾನಿಗಳ ಹೃದಯಗಳಿಗೆ ಮುದ್ರೆಯೊತ್ತಿಬಿಡುತ್ತಾನೆ.

كَذَٰلِكَ يَطْبَعُ اللَّهُ عَلَىٰ قُلُوبِ الَّذِينَ لَا يَعْلَمُونَ ﴿٥٩﴾

60. ಆದುದರಿಂದ (ಪೈಗಂಬರರೇ) ತಾಳ್ಮೆ ವಹಿಸಿರಿ. ಖಂಡಿತವಾಗಿಯೂ ಅಲ್ಲಾಹನ ವಾಗ್ದಾನ ಸತ್ಯವಾದುದು. ನಂಬಿಕೆ ಇರಿಸದ ಜನರು ಎಷ್ಟು ಮಾತ್ರಕ್ಕೂ ನಿಮ್ಮನ್ನು ಲಘುವಾಗಿ ಕಾಣದಿರಲಿ.[16]

فَاصْبِرْ إِنَّ وَعْدَ اللَّهِ حَقٌّ ۖ وَلَا يَسْتَخِفَّنَّكَ الَّذِينَ لَا يُوقِنُونَ ﴿٦٠﴾ ع

---

16. ಅರ್ಥಾತ್- ಶತ್ರುಗಳ ದೃಷ್ಟಿಯಲ್ಲಿ ನೀವು ದುರ್ಬಲವಾಗಿ ಉಳಿಯಲಾರಿರಿ. ಅವರ ಸದ್ದುಗದ್ದಲದಿಂದಲೇ ನಿಮ್ಮ ಸದ್ದಡಗಿ ಹೋಗುತ್ತದೆ, ಅವರ ಸತತ ಆರೋಪಗಳಿಂದ ನೀವು ಅಂಜಿ ಸುಮ್ಮನಾಗುತ್ತೀರಿ, ಅವರ ಬೆದರಿಕೆ ಮತ್ತು ಅಪಹಾಸ್ಯಗಳಿಂದ ನಿಮ್ಮ ಶಕ್ತಿ ಉಡುಗಿ ಹೋಗುತ್ತದೆ, ಅವರ ಎಚ್ಚರಿಕೆ, ಶಕ್ತಿಪ್ರದರ್ಶನ ಮತ್ತು ಅಕ್ರಮ-ಅನ್ಯಾಯಗಳಿಂದ ನೀವು ಭಯಗ್ರಸ್ತರಾಗುವಿರಿ ಅಥವಾ ಅವರ ಆಸೆ ಆಮಿಷಗಳ ಪ್ರವಾಹದಲ್ಲಿ ನೀವು ಕೊಚ್ಚಿ ಹೋಗುತ್ತೀರಿ ಎಂದು ಶತ್ರುಗಳು ನಿಮ್ಮ ಬಗ್ಗೆ ಭಾವಿಸಲಾರರು.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ಮೀಮ್.

الٓمّٓ ﴿١﴾

2. ಇವು ಯುಕ್ತಿಪೂರ್ಣ ಗ್ರಂಥದ ಸೂಕ್ತಗಳು.[1]

تِلْكَ اٰيٰتُ الْكِتٰبِ الْحَكِيْمِ ﴿٢﴾

3. ಸದ್ಭಕ್ತರಿಗೆ ಮಾರ್ಗದರ್ಶನವೂ ಅನುಗ್ರಹವೂ ಆಗಿವೆ.

هُدًى وَّ رَحْمَةً لِّلْمُحْسِنِيْنَ ﴿٣﴾

4. ಇವರು ನಮಾಝನ್ನು ಸಂಸ್ಥಾಪಿಸುವವರು ಝಕಾತ್ ಕೊಡುವವರು ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವವರಾಗಿದ್ದಾರೆ.

الَّذِيْنَ يُقِيْمُوْنَ الصَّلٰوةَ وَ يُؤْتُوْنَ الزَّكٰوةَ وَهُمْ بِالْاٰخِرَةِ هُمْ يُوْقِنُوْنَ ﴿٤﴾

5. ಇವರೇ ತಮ್ಮ ಪ್ರಭುವಿನ ಕಡೆಯಿಂದ ಸನ್ಮಾರ್ಗದಲ್ಲಿದ್ದಾರೆ ಮತ್ತು ಇವರೇ ಯಶಸ್ಸು ಗಳಿಸುವವರಾಗಿದ್ದಾರೆ.

اُولٰٓئِكَ عَلٰى هُدًى مِّنْ رَّبِّهِمْ وَ اُولٰٓئِكَ هُمُ الْمُفْلِحُوْنَ ﴿٥﴾

6. ಜನರಲ್ಲಿ ಒಬ್ಬನು, ಜನರನ್ನು ಅಲ್ಲಾಹನ ಮಾರ್ಗದಿಂದ ಜ್ಞಾನ ರಹಿತವಾಗಿ ದಾರಿಗೆಡಿಸಲಿಕ್ಕಾಗಿ ಮತ್ತು ಈ ಮಾರ್ಗದ ಕಡೆಗಿರುವ ಕರೆಯನ್ನು ತಮಾಷೆಯಲ್ಲಿ ಹಾರಿಸಿಬಿಡಲಿಕ್ಕಾಗಿ ಮನಮೋಹಕ ವಾಣಿಯನ್ನು[2] ಖರೀದಿಸಿ ತರುತ್ತಾನೆ. ಇಂತಹವರಿಗೆ ಬಹಳ ಅಪಮಾನಕರ ಯಾತನೆ ಇದೆ.

وَمِنَ النَّاسِ مَنْ يَّشْتَرِيْ لَهْوَ الْحَدِيْثِ لِيُضِلَّ عَنْ سَبِيْلِ اللّٰهِ بِغَيْرِ عِلْمٍ ۖ وَّ يَتَّخِذَهَا هُزُوًا ؕ اُولٰٓئِكَ لَهُمْ عَذَابٌ مُّهِيْنٌ ﴿٦﴾

---

1. ಅರ್ಥಾತ್- ಜಾಣ್ಮೆಯಿಂದ ಸಂಪನ್ನವಾಗಿರುವ ಮತ್ತು ಪ್ರತಿಯೊಂದು ಮಾತಿನಲ್ಲೂ ಯುಕ್ತಿ ಅಡಕವಾಗಿರುವ ಗ್ರಂಥದ ಸೂಕ್ತಗಳು.
2. ಮೂಲದಲ್ಲಿ 'ಲಹ್ವಲ್ ಹದೀಸ್' ಎಂಬ ಪದ ಪ್ರಯೋಗವಾಗಿದೆ. ಅರ್ಥಾತ್, ಮಾನವನ ಗಮನ ಸೆಳೆದು ಇತರೆಲ್ಲ ವಸ್ತುಗಳಿಂದ ಅವನನ್ನು ವಿಮುಖಗೊಳಿಸುವಂತಹ ವಿಷಯ. ವರದಿಗಳಿಂದ ವ್ಯಕ್ತವಾಗುವಂತೆ ಕುರೈಶರ ಎಲ್ಲಾ ವಿಧದ ಪ್ರಯತ್ನಗಳ ಹೊರತಾಗಿಯೂ ಪ್ರವಾದಿವರ್ಯರ(ಸ) ಬೋಧನೆಯ ಪರಿಣಾಮ ವ್ಯಾಪಕವಾಗುತ್ತಾ ಹೋಗುವುದಕ್ಕೆ ಯಾವುದೇ ಅಡ್ಡಿಯಿರಲಿಲ್ಲ. ಆಗ ಅವರು ಇರಾನ್‌ನಿಂದ ರುಸ್ತುಮ್ ಮತ್ತು ಅಸ್ಫಂದಿಯಾರ್‌ನ ಕಥೆಗಳನ್ನು ತರಿಸಿ 'ಕಥಾಪ್ರಸಂಗ'ದ ಸರಣಿ ಆರಂಭಿಸಿದರು. ಡೋಲು ಬಾರಿಸುವ ಮತ್ತು ಹಾಡುವ ದಾಸಿಯರ ಏರ್ಪಾಟು ಮಾಡಿದರು. ಜನರು ಅವುಗಳಲ್ಲಿ ತಲ್ಲೀನರಾಗಿ ಪ್ರವಾದಿಯ ಮಾತು ಕೇಳದಿರಲಿ ಎಂಬುದೇ ಅವರ ಉದ್ದೇಶವಾಗಿತ್ತು.

7. ಅವನಿಗೆ ನಮ್ಮ ಸೂಕ್ತಗಳನ್ನು ಓದಿ ಕೇಳಿಸಲಾದಾಗ ಅವನು ಅವುಗಳನ್ನು ತಾನು ಕೇಳಲೇ ಇಲ್ಲವೋ ಎಂಬಂತೆ, ಅವನ ಕಿವಿಗಳು ಕಿವುಡೋ ಎಂಬಂತೆ ದುರಹಂಕಾರದಿಂದ ಮುಖ ತಿರುಗಿಸಿ ಬಿಡುತ್ತಾನೆ. ಅವನಿಗೆ ಒಂದು ವೇದನಾಯುಕ್ತ ಯಾತನೆಯ ಸುವಾರ್ತೆ ಕೊಟ್ಟು ಬಿಡಿರಿ.

وَإِذَا تُتْلَىٰ عَلَيْهِ آيَاتُنَا وَلَّىٰ مُسْتَكْبِرًا كَأَن لَّمْ يَسْمَعْهَا كَأَنَّ فِي أُذُنَيْهِ وَقْرًا ۖ فَبَشِّرْهُ بِعَذَابٍ أَلِيمٍ ⑦

8. ಆದರೆ, ಸತ್ಯವಿಶ್ವಾಸ ಸ್ವೀಕರಿಸುವವರಿಗೂ ಸತ್ಕರ್ಮವೆಸಗುವವರಿಗೂ ಅನುಗ್ರಹಗಳು ತುಂಬಿದ ಸ್ವರ್ಗೋದ್ಯಾನಗಳಿವೆ.

إِنَّ الَّذِينَ آمَنُوا وَعَمِلُوا الصَّالِحَاتِ لَهُمْ جَنَّاتُ النَّعِيمِ ⑧

9. ಅವುಗಳಲ್ಲಿ ಅವರು ಸದಾ ಕಾಲ ವಾಸಿಸುವರು. ಇದು ಅಲ್ಲಾಹನ ದೃಢವಾದ ವಾಗ್ದಾನವಾಗಿದೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

خَالِدِينَ فِيهَا ۖ وَعْدَ اللَّهِ حَقًّا ۚ وَهُوَ الْعَزِيزُ الْحَكِيمُ ⑨

10. ಅವನು ನಿಮಗೆ ಕಾಣುವ ಸ್ತಂಭಗಳಿಲ್ಲದೆ ಆಕಾಶಗಳನ್ನು ಸೃಷ್ಟಿಸಿದನು. ಭೂಮಿಯು ನಿಮ್ಮ ಸಹಿತ ಉರುಳಿ ಬಿಡದಂತೆ ಅವನು ಅದರಲ್ಲಿ ಪರ್ವತಗಳನ್ನು ನಾಟಿದನು. ಅವನು ಎಲ್ಲ ತರದ ಪ್ರಾಣಿಗಳನ್ನು ಭೂಮಿಯಲ್ಲಿ ಹಬ್ಬಿಸಿಬಿಟ್ಟನು. ಆಕಾಶದಿಂದ ನೀರನ್ನು ಸುರಿಸಿದನು ಮತ್ತು ಭೂಮಿಯಲ್ಲಿ ತರತರದ ಉತ್ತಮ ವಸ್ತುಗಳನ್ನು ಮೊಳೆಯಿಸಿದನು.

خَلَقَ السَّمَاوَاتِ بِغَيْرِ عَمَدٍ تَرَوْنَهَا ۖ وَأَلْقَىٰ فِي الْأَرْضِ رَوَاسِيَ أَن تَمِيدَ بِكُمْ وَبَثَّ فِيهَا مِن كُلِّ دَابَّةٍ ۚ وَأَنزَلْنَا مِنَ السَّمَاءِ مَاءً فَأَنبَتْنَا فِيهَا مِن كُلِّ زَوْجٍ كَرِيمٍ ⑩

11. ಇದೆಲ್ಲಾ ಅಲ್ಲಾಹನ ಸೃಷ್ಟಿ. ಈಗ ಅವನ ಹೊರತು ಆ ಇತರರು ಏನನ್ನು ಸೃಷ್ಟಿಸಿದ್ದಾರೆಂಬುದನ್ನು ನನಗೆ ತೋರಿಸಿರಿ. ವಾಸ್ತವದಲ್ಲಿ ಈ ಅಕ್ರಮಿಗಳು ಸುವ್ಯಕ್ತ ಪಥಭ್ರಷ್ಟತೆಗೊಳಗಾಗಿದ್ದಾರೆ.

هَٰذَا خَلْقُ اللَّهِ فَأَرُونِي مَاذَا خَلَقَ الَّذِينَ مِن دُونِهِ ۚ بَلِ الظَّالِمُونَ فِي ضَلَالٍ مُّبِينٍ ⑪

12. ಲುಕ್ಮಾನರು ಅಲ್ಲಾಹನಿಗೆ ಕೃತಜ್ಞರಾಗಲೆಂದು ನಾವು ಅವರಿಗೆ ಯುಕ್ತಿಯನ್ನು ದಯಪಾಲಿಸಿದೆವು. ಕೃತಜ್ಞನ ಕೃತಜ್ಞತೆಯು ಅವನ ಸ್ವಂತಕ್ಕೇ ಲಾಭದಾಯಕವಾಗಿದೆ ಮತ್ತು ಯಾರಾದರೂ ಧಿಕ್ಕರಿಸಿದರೆ ವಾಸ್ತವದಲ್ಲಿ ಅಲ್ಲಾಹನು ನಿರಪೇಕ್ಷನೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ.

وَلَقَدْ آتَيْنَا لُقْمَانَ الْحِكْمَةَ أَنِ اشْكُرْ لِلَّهِ ۚ وَمَن يَشْكُرْ فَإِنَّمَا يَشْكُرُ لِنَفْسِهِ ۖ وَمَن كَفَرَ فَإِنَّ اللَّهَ غَنِيٌّ حَمِيدٌ ⑫

13. ಲುಕ್ಮಾನರು ತಮ್ಮ ಪುತ್ರನಿಗೆ ಉಪದೇಶವೀಯುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ಅವರು, "ಮಗನೇ ಅಲ್ಲಾಹನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡಬೇಡ ನಿಜವಾಗಿಯೂ 'ಬಹುದೇವವಿಶ್ವಾಸ' ಮಹಾ ಅಕ್ರಮವಾಗಿದೆ" ಎಂದರು.

وَإِذْ قَالَ لُقْمَانُ لِابْنِهِ وَهُوَ يَعِظُهُ يَا بُنَيَّ لَا تُشْرِكْ بِاللَّهِ ۖ إِنَّ الشِّرْكَ لَظُلْمٌ عَظِيمٌ ⑬

14. ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು).

وَوَصَّيْنَا الْإِنسَانَ بِوَالِدَيْهِ حَمَلَتْهُ أُمُّهُ وَهْنًا عَلَىٰ وَهْنٍ وَفِصَالُهُ فِي عَامَيْنِ أَنِ اشْكُرْ لِي وَلِوَالِدَيْكَ إِلَيَّ الْمَصِيرُ ﴿١٤﴾

15. ಆದರೆ, ಅವರು ನಿನಗೆ ತಿಳಿಯದುದನ್ನು[3] ನನ್ನೊಂದಿಗೆ ಸಹಭಾಗಿ ಯಾಗಿ ಮಾಡಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ್ಕೂ ಕೇಳಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ಮಾಡುತ್ತಿರು. ಆದರೆ, ಯಾರು ನನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು. ಮುಂದೆ ನಿಮಗೆಲ್ಲರಿಗೂ ನನ್ನ ಕಡೆಗೇ ಮರಳಲಿಕ್ಕಿದೆ. ಆಗ ನೀವು ಯಾವ ತರದ ಕರ್ಮಗಳನ್ನು ಮಾಡುತ್ತಿದ್ದಿರೆಂದು ನಾನು ನಿಮಗೆ ತೋರಿಸುವೆನು.

وَإِن جَاهَدَاكَ عَلَىٰ أَن تُشْرِكَ بِي مَا لَيْسَ لَكَ بِهِ عِلْمٌ فَلَا تُطِعْهُمَا وَصَاحِبْهُمَا فِي الدُّنْيَا مَعْرُوفًا وَاتَّبِعْ سَبِيلَ مَنْ أَنَابَ إِلَيَّ ثُمَّ إِلَيَّ مَرْجِعُكُمْ فَأُنَبِّئُكُم بِمَا كُنتُمْ تَعْمَلُونَ ﴿١٥﴾

16. (ಲುಕ್ಮಾನರು ಹೀಗೆಂದಿದ್ದರು) ಮಗನೇ! ಸಾಸಿವೆ ಕಾಳಿನಷ್ಟಿರುವ ಒಂದು ವಸ್ತುವೇ ಇರಲಿ ಅದು ಒಂದು ಬಂಡೆಯಲ್ಲಿ ಅಥವಾ ಆಕಾಶಗಳಲ್ಲಿ ಅಥವಾ ಭೂಮಿಯೊಳಗೆ ಎಲ್ಲಾದರೂ ಅಡಗಿರಲಿ ಅಲ್ಲಾಹನು ಅದನ್ನು ಹೊರ ತರುವನು. ಅವನು ಸೂಕ್ಷ್ಮದರ್ಶಿ ಮತ್ತು ವಿವರಪೂರ್ಣನಾಗಿರುತ್ತಾನೆ.

يَا بُنَيَّ إِنَّهَا إِن تَكُ مِثْقَالَ حَبَّةٍ مِّنْ خَرْدَلٍ فَتَكُن فِي صَخْرَةٍ أَوْ فِي السَّمَاوَاتِ أَوْ فِي الْأَرْضِ يَأْتِ بِهَا اللَّهُ إِنَّ اللَّهَ لَطِيفٌ خَبِيرٌ ﴿١٦﴾

17. ಮಗನೇ ನಮಾಝನ್ನು ಸಂಸ್ಥಾಪಿಸು, ಒಳಿತಿನ ಆದೇಶ ಕೊಡು, ಕೆಡುಕಿನಿಂದ ತಡೆ ಮತ್ತು ಯಾವ ಕಷ್ಟವೇ ಬರಲಿ ಸಹನೆ ವಹಿಸು. ಇವು ಅತಿ ಹೆಚ್ಚು ತಾಕೀತು ಮಾಡಲ್ಪಟ್ಟ ವಿಷಯಗಳು.[4]

يَا بُنَيَّ أَقِمِ الصَّلَاةَ وَأْمُرْ بِالْمَعْرُوفِ وَانْهَ عَنِ الْمُنكَرِ وَاصْبِرْ عَلَىٰ مَا أَصَابَكَ إِنَّ ذَٰلِكَ مِنْ عَزْمِ الْأُمُورِ ﴿١٧﴾

18. ಜನರೊಡನೆ ಮುಖ ತಿರುಗಿಸಿ ಮಾತಾಡಬೇಡ. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡ, ದುರಭಿಮಾನ ಹಾಗೂ ಅಹಂಕಾರ ಪಡುವವನನ್ನು ಅಲ್ಲಾಹನು ಮೆಚ್ಚುವುದಿಲ್ಲ.

وَلَا تُصَعِّرْ خَدَّكَ لِلنَّاسِ وَلَا تَمْشِ فِي الْأَرْضِ مَرَحًا إِنَّ اللَّهَ لَا يُحِبُّ كُلَّ مُخْتَالٍ فَخُورٍ ﴿١٨﴾

19. ನಿನ್ನ ನಡೆಯಲ್ಲಿ ಇತಿಮಿತಿಯನ್ನಿರಿಸು. ನಿನ್ನ ಸ್ವರವನ್ನು ಸ್ವಲ್ಪ

وَاقْصِدْ فِي مَشْيِكَ وَاغْضُضْ مِن

3. ಅರ್ಥಾತ್- ನನ್ನ ಭಾಗೀದಾರರಲ್ಲವೆಂದು ನಿನಗೆ ತಿಳಿದಿರುವ.

4. ಇದರ ಇನ್ನೊಂದು ಅರ್ಥ 'ಇದು ಬಹಳ ಧೈರ್ಯದ ಕೆಲಸವಾಗಿದೆ' ಎಂದೂ ಆಗಬಹುದು.

ತಗ್ಗಿಸು. ಎಲ್ಲ ಸ್ವರಗಳಿಗಿಂತ ಕೆಟ್ಟ ಸ್ವರವು ಕತ್ತೆಯ ಸ್ವರ ವಾಗಿರುತ್ತದೆ.

صَوْتِكَ ۚ إِنَّ أَنكَرَ الْأَصْوَاتِ لَصَوْتُ الْحَمِيرِ ﴿١٩﴾

20. ಅಲ್ಲಾಹನು ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲ ವಸ್ತುಗಳನ್ನು ನಿಮಗೆ ಅಧೀನಗೊಳಿಸಿರುವುದನ್ನೂ[5] ತನ್ನ ಪ್ರತ್ಯಕ್ಷ ಹಾಗೂ ರಹಸ್ಯ ಅನುಗ್ರಹಗಳನ್ನು ನಿಮಗೆ ಪೂರ್ತಿಗೊಳಿಸಿ ಕೊಟ್ಟಿರುವುದನ್ನೂ ನೀವು ನೋಡುತ್ತಿಲ್ಲವೇ? ಹೀಗಿದ್ದೂ ಮಾನವ ರಲ್ಲಿ ಕೆಲವರು ತಮ್ಮ ಬಳಿ ಯಾವುದೇ ಜ್ಞಾನವಾಗಲಿ, ಸನ್ಮಾರ್ಗ ದರ್ಶನವಾಗಲಿ ಬೆಳಕು ತೋರಿಸುವ ಯಾವುದಾದರೂ ಗ್ರಂಥ ವಾಗಲಿ ಇಲ್ಲದೆ ಅಲ್ಲಾಹನ ವಿಷಯದಲ್ಲಿ ಜಗಳಾಡುತ್ತಾರೆ.

أَلَمْ تَرَوْا أَنَّ اللَّهَ سَخَّرَ لَكُم مَّا فِي السَّمَاوَاتِ وَمَا فِي الْأَرْضِ وَأَسْبَغَ عَلَيْكُمْ نِعَمَهُ ظَاهِرَةً وَبَاطِنَةً ۗ وَمِنَ النَّاسِ مَن يُجَادِلُ فِي اللَّهِ بِغَيْرِ عِلْمٍ وَلَا هُدًى وَلَا كِتَابٍ مُّنِيرٍ ﴿٢٠﴾

21. ಅಲ್ಲಾಹನು ಅವತೀರ್ಣಗೊಳಿಸಿರುವುದನ್ನು ಅನುಸರಿಸಿರೆಂದು ಅವರೊಡನೆ ಹೇಳಲಾದಾಗ ಅವರು- "ನಾವು ನಮ್ಮ ಪೂರ್ವಜರನ್ನು ಯಾವುದರಲ್ಲಿ ಕಂಡಿದ್ದೇವೋ ಅದನ್ನೇ ಅನುಸರಿಸುವೆವು" ಎನ್ನುತ್ತಾರೆ. ಶೈತಾನನು ಅವರನ್ನು ಧಗಧಗಿಸುವ ಅಗ್ನಿಯ ಕಡೆಗೇ ಕರೆಯುತ್ತಿದ್ದರೂ ಇವರು ಅವರನ್ನೇ ಅನುಸರಿಸುವರೇ?

وَإِذَا قِيلَ لَهُمُ اتَّبِعُوا مَا أَنزَلَ اللَّهُ قَالُوا بَلْ نَتَّبِعُ مَا وَجَدْنَا عَلَيْهِ آبَاءَنَا ۚ أَوَلَوْ كَانَ الشَّيْطَانُ يَدْعُوهُمْ إِلَىٰ عَذَابِ السَّعِيرِ ﴿٢١﴾

22. ತನ್ನನ್ನು ಅಲ್ಲಾಹನಿಗೆ ಅರ್ಪಿಸಿಕೊಂಡು ಕಾರ್ಯತಃ ಸತ್ಕರ್ಮಿಯೂ ಆದವನು ವಾಸ್ತವದಲ್ಲಿ ಭರವಸೆಗೆ ಯೋಗ್ಯವಾದ ಒಂದು ಆಧಾರವನ್ನು ಬಿಗಿ ಹಿಡಿದುಕೊಂಡನು. ಸಕಲ ವಿಷಯಗಳ ಅಂತಿಮ ತೀರ್ಮಾನವು ಅಲ್ಲಾಹನ ಕೈಯಲ್ಲೇ ಇದೆ.

وَمَن يُسْلِمْ وَجْهَهُ إِلَى اللَّهِ وَهُوَ مُحْسِنٌ فَقَدِ اسْتَمْسَكَ بِالْعُرْوَةِ الْوُثْقَىٰ ۗ وَإِلَى اللَّهِ عَاقِبَةُ الْأُمُورِ ﴿٢٢﴾

23. ಸತ್ಯವನ್ನು ನಿಷೇಧಿಸುವವನ ನಿಷೇಧವು ನಿಮ್ಮನ್ನು ವ್ಯಥೆಗೀಡು ಮಾಡದಿರಲಿ. ಅವರಿಗೆ ಮರಳಿ ಬರಬೇಕಾದುದಂತೂ ನಮ್ಮ ಕಡೆಗೇ ಆಗಿದೆ. ಅನಂತರ ಅವರು ಏನೆಲ್ಲ ಮಾಡಿ ಬಂದಿರುವ ರೆಂದು ನಾವು ಅವರಿಗೆ ತೋರಿಸುವೆವು. ನಿಶ್ಚಯವಾಗಿಯೂ ಅಲ್ಲಾಹನು ಹೃದಯಗಳೊಳಗೆ ಅವಿತಿರುವ ರಹಸ್ಯಗಳನ್ನೂ ತಿಳಿದಿರುತ್ತಾನೆ.

وَمَن كَفَرَ فَلَا يَحْزُنكَ كُفْرُهُ ۚ إِلَيْنَا مَرْجِعُهُمْ فَنُنَبِّئُهُم بِمَا عَمِلُوا ۚ إِنَّ اللَّهَ عَلِيمٌ بِذَاتِ الصُّدُورِ ﴿٢٣﴾

5. ಯಾವುದಾದರೂ ವಸ್ತುವನ್ನು ಎರಡು ರೀತಿಯಲ್ಲಿ ಒಬ್ಬನ ಅಧೀನಗೊಳಿಸಬಹುದು. ಒಂದನೆಯದಾಗಿ ಅದನ್ನು ಅವನಿಗೊಪ್ಪಿಸುವುದು. ಅದನ್ನು ಯಾವ ರೀತಿ ಬೇಕಾದರೂ ವ್ಯಯಿಸುವ ಮತ್ತು ಹೇಗೆ ಬೇಕಾದರೂ ಉಪಯೋಗಿಸುವ ಸ್ವಾತಂತ್ರ್ಯ ನೀಡುವುದು. ಎರಡನೆಯದಾಗಿ ಆ ವಸ್ತುವನ್ನು ನಿರ್ದಿಷ್ಟ ನಿಯಮಗಳಿಗೆ ಬದ್ಧಗೊಳಿಸುವುದು. ಅದರಿಂದಾಗಿ ಅದು ಆ ವ್ಯಕ್ತಿಗೆ ಫಲಪ್ರದವಾಗಿ ಮಾರ್ಪಡಬೇಕು. ಅವನ ಹಿತಕ್ಕಾಗಿ ಅದು ಕಾರ್ಯೋನ್ಮುಖವಾಗಿರಬೇಕು. ಭೂಮಿ-ಆಕಾಶಗಳ ಎಲ್ಲಾ ವಸ್ತುಗಳನ್ನು ಅಲ್ಲಾಹನು ಒಂದೇ ಅರ್ಥದಲ್ಲಿ ಮಾನವನಿಗೆ ಅಧೀನಗೊಳಿಸಿಲ್ಲ. ಕೆಲವನ್ನು ಮೊದಲನೆಯ ಅರ್ಥದಲ್ಲಿ ಅಧೀನಗೊಳಿಸಿದ್ದರೆ ಮತ್ತೆ ಕೆಲವನ್ನು ಎರಡನೆಯ ಅರ್ಥದಲ್ಲಿ ಅಧೀನಗೊಳಿಸಿದ್ದಾನೆ. ಉದಾ: ನೀರು, ಗಾಳಿ, ಮಣ್ಣು, ಬೆಂಕಿ, ಸಸ್ಯಗಳು, ಖನಿಜ ವಸ್ತುಗಳು, ಜಾನುವಾರುಗಳು ಇತ್ಯಾದಿ ಅಸಂಖ್ಯ ವಸ್ತುಗಳು ಮೊದಲನೆಯ ಅರ್ಥದಲ್ಲಿ ಮಾನವನಿಗೆ ಅಧೀನವಾಗಿವೆ. ಸೂರ್ಯ-ಚಂದ್ರಗಳೆಲ್ಲವೂ ಎರಡನೆಯ ಅರ್ಥದಲ್ಲಿ ಮಾನವನಿಗೆ ಅಧೀನವಾಗಿವೆ.

24. ನಾವು ಅವರಿಗೆ ಸ್ವಲ್ಪ ಕಾಲ ಭೂಮಿಯಲ್ಲಿ ಸುಖಪಡುವ ಅವಕಾಶ ನೀಡುತ್ತಿದ್ದೇವೆ. ಆ ಬಳಿಕ ಅವರನ್ನು ವಿವಶರನ್ನಾಗಿ ಮಾಡಿ, ಒಂದು ಕಠಿಣ ಯಾತನೆಯ ಕಡೆಗೆ ಎಳೆದೊಯ್ಯುವೆವು.

نُمَتِّعُهُمْ قَلِيلًا ثُمَّ نَضْطَرُّهُمْ إِلَىٰ عَذَابٍ غَلِيظٍ ﴿٢٤﴾

25. ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವರು ಯಾರು ಎಂದು ನೀವು ಇವರೊಡನೆ ಕೇಳಿದಾಗ, ಇವರು ಅಲ್ಲಾಹನೆಂದೇ ಹೇಳುವರು. 'ಅಲ್‌ಹಮ್ದುಲಿಲ್ಲಾಹ್' (ಅಲ್ಲಾಹನಿಗೆ ಸ್ತುತಿ) ಎನ್ನಿರಿ. ಆದರೆ ಇವರಲ್ಲಿ ಹೆಚ್ಚಿನವರು ತಿಳಿಯುವುದಿಲ್ಲ.

وَلَئِن سَأَلْتَهُم مَّنْ خَلَقَ السَّمَاوَاتِ وَالْأَرْضَ لَيَقُولُنَّ اللَّهُ ۚ قُلِ الْحَمْدُ لِلَّهِ ۚ بَلْ أَكْثَرُهُمْ لَا يَعْلَمُونَ ﴿٢٥﴾

26. ಆಕಾಶಗಳಲ್ಲೂ ಭೂಮಿಯಲ್ಲೂ ಇರುವುದೆಲ್ಲವೂ ಅಲ್ಲಾಹನದು. ನಿಶ್ಚಯವಾಗಿಯೂ ಅಲ್ಲಾಹನು ನಿರಪೇಕ್ಷನೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ.

لِلَّهِ مَا فِي السَّمَاوَاتِ وَالْأَرْضِ ۚ إِنَّ اللَّهَ هُوَ الْغَنِيُّ الْحَمِيدُ ﴿٢٦﴾

27. ಭೂಮಿಯಲ್ಲಿರುವ ಮರಗಳೆಲ್ಲ ಲೇಖನಿಗಳಾಗಿ ಮಾರ್ಪಟ್ಟು ಸಾಗರವು (ಮಸಿಯಾಗಿ) ಅದಕ್ಕೆ ಇನ್ನೂ ಸಪ್ತ ಸಾಗರಗಳು ಮಸಿಯನ್ನು ಒದಗಿಸಿದರೂ ಅಲ್ಲಾಹನ ವಚನಗಳು (ಬರೆದು) ತೀರಲಾರವು.[6] ನಿಶ್ಚಯವಾಗಿಯೂ ಅಲ್ಲಾಹನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَلَوْ أَنَّمَا فِي الْأَرْضِ مِن شَجَرَةٍ أَقْلَامٌ وَالْبَحْرُ يَمُدُّهُ مِن بَعْدِهِ سَبْعَةُ أَبْحُرٍ مَّا نَفِدَتْ كَلِمَاتُ اللَّهِ ۗ إِنَّ اللَّهَ عَزِيزٌ حَكِيمٌ ﴿٢٧﴾

28. ನಿಮ್ಮೆಲ್ಲರನ್ನು ಸೃಷ್ಟಿಸುವುದೂ ಅನಂತರ ಪುನಃ ಜೀವಂತಗೊಳಿಸಿ ಎಬ್ಬಿಸುವುದೂ(ಅವನ ಮಟ್ಟಿಗೆ) ಕೇವಲ ಒಂದು ಜೀವಿಯ(ನ್ನು ಸೃಷ್ಟಿಸುವ ಮತ್ತು ಪುನಃ ಜೀವಂತ ಗೊಳಿಸುವ) ಹಾಗಿದೆ. ನಿಜವಾಗಿಯೂ ಅಲ್ಲಾಹನು ಸರ್ವಶ್ರುತನೂ ಸರ್ವ ವೀಕ್ಷಕನೂ ಆಗಿರುತ್ತಾನೆ.

مَّا خَلْقُكُمْ وَلَا بَعْثُكُمْ إِلَّا كَنَفْسٍ وَاحِدَةٍ ۗ إِنَّ اللَّهَ سَمِيعٌ بَصِيرٌ ﴿٢٨﴾

29. ಅಲ್ಲಾಹನು ಇರುಳನ್ನು ಹಗಲಿನೊಳಗೂ ಹಗಲನ್ನು ಇರುಳಿನೊಳಗೂ ಪೋಣಿಸುತ್ತ ತರುವುದನ್ನು ನೀವು ನೋಡುವುದಿಲ್ಲವೇ? ಅವನು ಸೂರ್ಯ-ಚಂದ್ರರನ್ನು ನಿಯಂತ್ರಿಸಿಟ್ಟಿರುತ್ತಾನೆ. ಎಲ್ಲವೂ ಒಂದು ನಿಶ್ಚಿತ ಕಾಲದ ವರೆಗೆ ಚಲಿಸುತ್ತಿರುತ್ತವೆ[7]

أَلَمْ تَرَ أَنَّ اللَّهَ يُولِجُ اللَّيْلَ فِي النَّهَارِ وَيُولِجُ النَّهَارَ فِي اللَّيْلِ وَسَخَّرَ الشَّمْسَ وَالْقَمَرَ كُلٌّ يَجْرِي إِلَىٰ أَجَلٍ مُّسَمًّى

6. ಅಲ್ ಕಹ್ಫ್ ಅಧ್ಯಾಯದ 109ನೆಯ ಸೂಕ್ತದಲ್ಲಿ ಇದೇ ವಿಷಯವನ್ನು ಸ್ವಲ್ಪ ಭಿನ್ನ ರೂಪದಲ್ಲಿ ವಿವರಿಸಲಾಗಿದೆ. ಇಷ್ಟು ದೊಡ್ಡ ನಿಸರ್ಗವನ್ನು ಸೃಷ್ಟಿಸಿರುವ ದೇವನ ಸಾಮರ್ಥ್ಯ ಮತ್ತು ಚಮತ್ಕಾರಗಳು ನಿಸ್ಸೀಮವಾದುದು. ಹಾಗಿರುವಾಗ ಅವನ ದೇವತ್ವದಲ್ಲಿ ಯಾವುದೇ ಸೃಷ್ಟಿ ಸಹಭಾಗಿಯಾಗುವುದಾದರೂ ಹೇಗೆ ಎಂಬ ಕಲ್ಪನೆಯನ್ನು ಮೂಡಿಸುವುದು ಇದರ ಉದ್ದೇಶ.

7. ಇಲ್ಲಿ ಪ್ರತಿಯೊಂದು ವಸ್ತುವಿಗೂ ಗೊತ್ತುಪಡಿಸಲಾಗಿರುವ ಜೀವಿತಾವಧಿಯ ತನಕ ಅದು ನಡೆಯುತ್ತಿರುತ್ತದೆ. ಯಾವುದೇ ವಸ್ತು ಅನಾದಿಯೂ ಅಲ್ಲ ಅನಂತವೂ ಅಲ್ಲ.

ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ವಿವರವಾಗಿ ತಿಳಿದಿರುತ್ತಾನೆ (ಎಂದು ನಿಮಗೆ ಗೊತ್ತಿಲ್ಲವೇ?).

وَأَنَّ اللَّهَ بِمَا تَعْمَلُونَ خَبِيرٌ ﴿٢٩﴾

30. ಇದಕ್ಕೆಲ್ಲಾ ಕಾರಣವೇನೆಂದರೆ ಅಲ್ಲಾಹನೇ ಸತ್ಯವಾಗಿದ್ದಾನೆ ಮತ್ತು ಅವನನ್ನು ಬಿಟ್ಟು ಇವರು ಪ್ರಾರ್ಥಿಸುತ್ತಿರುವ ಇತರ ಎಲ್ಲವೂ ಮಿಥ್ಯವಾಗಿದೆ. ಅಲ್ಲಾಹನೇ ಮಹೋನ್ನತ ಹಾಗೂ ಮಹಾನನಾಗಿರುತ್ತಾನೆ.

ذَٰلِكَ بِأَنَّ اللَّهَ هُوَ الْحَقُّ وَأَنَّ مَا يَدْعُونَ مِن دُونِهِ الْبَاطِلُ وَأَنَّ اللَّهَ هُوَ الْعَلِيُّ الْكَبِيرُ ﴿٣٠﴾

31. ನಿಮಗೆ ಕೆಲವು ನಿದರ್ಶನಗಳನ್ನು ತೋರಿಸಿ ಕೊಡಲಿಕ್ಕಾಗಿ ನಾವೆಯು ಸಮುದ್ರದಲ್ಲಿ ಅಲ್ಲಾಹನ ಅನುಗ್ರಹದಿಂದ ಚಲಿಸುತ್ತಿರುವುದನ್ನು ನೀವು ನೋಡುವುದಿಲ್ಲವೇ? ವಾಸ್ತವದಲ್ಲಿ ಸಹನಶೀಲನೂ ಕೃತಜ್ಞನೂ ಆಗಿರುವ ಪ್ರತಿಯೊಬ್ಬನಿಗೂ ಇದರಲ್ಲಿ ಅನೇಕ ದೃಷ್ಟಾಂತಗಳಿವೆ.

أَلَمْ تَرَ أَنَّ الْفُلْكَ تَجْرِي فِي الْبَحْرِ بِنِعْمَتِ اللَّهِ لِيُرِيَكُم مِّنْ آيَاتِهِ ۚ إِنَّ فِي ذَٰلِكَ لَآيَاتٍ لِّكُلِّ صَبَّارٍ شَكُورٍ ﴿٣١﴾

32. (ಸಮುದ್ರದಲ್ಲಿ) ಒಂದು ಅಲೆಯು ಇವರ ಮೇಲೆ ಚಪ್ಪರದಂತೆ ಆವರಿಸಿದಾಗ ಇವರು ತಮ್ಮ ಧರ್ಮವನ್ನು ಸಂಪೂರ್ಣವಾಗಿ ಅಲ್ಲಾಹನಿಗೇ ಮೀಸಲಾಗಿಸಿ ಅವನನ್ನು ಪ್ರಾರ್ಥಿಸುತ್ತಾರೆ. ತರುವಾಯ ಅವನು ಇವರನ್ನು ರಕ್ಷಿಸಿ ದಡದ ವರೆಗೆ ತಲಪಿಸಿದಾಗ ಅವರಲ್ಲೊಬ್ಬನು ಸುಮಧ್ಯ ನೀತಿಯನ್ನನುಸರಿಸುತ್ತಾನೆ[8] ಮತ್ತು ನಮ್ಮ ದೃಷ್ಟಾಂತಗಳನ್ನು ನಿಷೇಧಿಸುವುದಿಲ್ಲ. ಆದರೆ ವಿದ್ರೋಹಿ ಮತ್ತು ಕೃತಘ್ನರು ಇದಕ್ಕೆ ಹೊರತಾಗಿದ್ದಾರೆ.

وَإِذَا غَشِيَهُم مَّوْجٌ كَالظُّلَلِ دَعَوُا اللَّهَ مُخْلِصِينَ لَهُ الدِّينَ فَلَمَّا نَجَّاهُمْ إِلَى الْبَرِّ فَمِنْهُم مُّقْتَصِدٌ ۚ وَمَا يَجْحَدُ بِآيَاتِنَا إِلَّا كُلُّ خَتَّارٍ كَفُورٍ ﴿٣٢﴾

33. ಜನರೇ, ನಿಮ್ಮ ಪ್ರಭುವಿನ ಕ್ರೋಧದಿಂದ ತಪ್ಪಿಸಿಕೊಳ್ಳಿರಿ ಮತ್ತು ಯಾವ ತಂದೆಯೂ ತನ್ನ ಮಗನ ಪರವಾಗಿ ಪರಿಹಾರ ಕೊಡದ ಮತ್ತು ಯಾವ ಮಗನೂ ತನ್ನ ತಂದೆಯ ಪರವಾಗಿ ಯಾವುದೇ ಪರಿಹಾರ ಕೊಡದ ದಿನವನ್ನು ಭಯಪಡಿರಿ. ನಿಶ್ಚಯವಾಗಿಯೂ ಅಲ್ಲಾಹನ ವಾಗ್ದಾನವು[9] ಸತ್ಯವಾಗಿದೆ. ಆದುದರಿಂದ ಈ ಲೌಕಿಕ ಜೀವನವು ನಿಮ್ಮನ್ನು ವಂಚನೆ ಗೊಳಪಡಿಸದಿರಲಿ ಮತ್ತು ವಂಚಕನು ನಿಮ್ಮನ್ನು ಅಲ್ಲಾಹನ ವಿಷಯದಲ್ಲಿ ವಂಚಿಸದಿರಲಿ.

يَا أَيُّهَا النَّاسُ اتَّقُوا رَبَّكُمْ وَاخْشَوْا يَوْمًا لَّا يَجْزِي وَالِدٌ عَن وَلَدِهِ وَلَا مَوْلُودٌ هُوَ جَازٍ عَن وَالِدِهِ شَيْئًا ۚ إِنَّ وَعْدَ اللَّهِ حَقٌّ ۖ فَلَا تَغُرَّنَّكُمُ الْحَيَاةُ الدُّنْيَا وَلَا يَغُرَّنَّكُم بِاللَّهِ الْغَرُورُ ﴿٣٣﴾

8. ಇದಕ್ಕೆ ಎರಡು ಅರ್ಥಗಳಿರಲು ಸಾಧ್ಯ. 'ಇಕ್‌ತಿಸಾದ್' ಪದವನ್ನು ಸನ್ಮಾರ್ಗದ ಅನುಸರಣೆ ಎಂದು ಅರ್ಥೈಸುವುದಾದರೆ ಅವರಲ್ಲಿ ಕೆಲವರು ಕಾಲ ಕಳೆದ ನಂತರವೂ ಏಕದೇವತ್ವದಲ್ಲಿ ಸ್ಥಿರವಾಗಿರುತ್ತಾರೆ ಎಂದಾಗುತ್ತದೆ. ಅದನ್ನು 'ಸುಮಧ್ಯತೆ' ಮತ್ತು 'ಸಮತೋಲನ' ಎಂದು ಅರ್ಥೈಸುವುದಾದರೆ ಅದರ ಅರ್ಥ ಕೆಲವರು ತಮ್ಮ ಬಹುದೇವಾರಾಧನೆ ಮತ್ತು ನಾಸ್ತಿಕತೆಯಲ್ಲಿ ದೃಢವಾಗಿ ನೆಲೆ ನಿಲ್ಲುವುದಿಲ್ಲ ಅಥವಾ ಕೆಲವರಲ್ಲಿ ಮೊದಲು ಹುಟ್ಟಿದಂತಹ ನಿಷ್ಠೆಯು ತಣ್ಣಗಾಗಿ ಬಿಡುತ್ತದೆ ಎಂದಾಗುತ್ತದೆ.

9. ಅರ್ಥಾತ್- ನಿರ್ಣಾಯಕ ದಿನದ ವಾಗ್ದಾನ.

34. ಆ ಘಳಿಗೆಯ ಜ್ಞಾನ ಅಲ್ಲಾಹನ ಬಳಿಯಲ್ಲೇ ಇದೆ. ಅವನೇ ಮಳೆ ಸುರಿಸುತ್ತಾನೆ. ತಾಯಂದಿರ ಗರ್ಭಗಳಲ್ಲಿ ಬೆಳೆಯುತ್ತಿರುವುದೇನೆಂಬುದನ್ನು ಅವನೇ ಬಲ್ಲನು. ಯಾವ ಜೀವಿಯೂ ತಾನು ನಾಳೆ ಏನನ್ನು ಗಳಿಸುವೆನು ಎಂಬುದನ್ನು ತಿಳಿದಿರುವುದಿಲ್ಲ ಮತ್ತು ತನಗೆ ಯಾವ ಭೂಭಾಗದಲ್ಲಿ ಮರಣ ಬರುವುದೆಂಬ ಅರಿವು ಯಾರಿಗೂ ಇಲ್ಲ. ನಿಶ್ಚಯವಾಗಿಯೂ ಅಲ್ಲಾಹನೇ ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.

إِنَّ اللَّهَ عِندَهُ عِلْمُ السَّاعَةِ وَيُنَزِّلُ الْغَيْثَ وَيَعْلَمُ مَا فِي الْأَرْحَامِ ۖ وَمَا تَدْرِي نَفْسٌ مَّاذَا تَكْسِبُ غَدًا ۖ وَمَا تَدْرِي نَفْسٌ بِأَيِّ أَرْضٍ تَمُوتُ ۚ إِنَّ اللَّهَ عَلِيمٌ خَبِيرٌ ﴿٣٤﴾

---






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲಿಫ್ ಲಾಮ್ಮೀಮ್.

الٓمّٓ ①

2. ಈ ಗ್ರಂಥದ ಅವತೀರ್ಣವು ನಿಸ್ಸಂದೇಹವಾಗಿಯೂ ಸರ್ವಲೋಕಗಳ ಪಾಲಕ ಪ್ರಭುವಿನ ಕಡೆಯಿಂದಾಗಿರುತ್ತದೆ.

تَنْزِيْلُ الْكِتٰبِ لَا رَيْبَ فِيْهِ مِنْ رَّبِّ الْعٰلَمِيْنَ ②

3. ಇದನ್ನು ಈ ವ್ಯಕ್ತಿಯು ಸ್ವತಃ ಸೃಷ್ಟಿಸಿಕೊಂಡಿದ್ದಾನೆಂದು ಇವರು ಹೇಳುತ್ತಾರೆಯೇ? ಅಲ್ಲ; ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯವಾಗಿದೆ. (ಇದು) ನಿಮಗಿಂತ ಮುಂಚೆ ಎಚ್ಚರಿಕೆ ನೀಡುವವರಾರೂ ಬಂದಿಲ್ಲದಂತಹ ಒಂದು ಜನಾಂಗಕ್ಕೆ ನೀವು ಎಚ್ಚರಿಕೆ ನೀಡಲಿಕ್ಕಾಗಿದೆ. ತನ್ಮೂಲಕ ಅವರು ಸನ್ಮಾರ್ಗ ಪಡೆಯಲೂಬಹುದು.

اَمْ يَقُوْلُوْنَ افْتَرٰىهُ ۚ بَلْ هُوَ الْحَقُّ مِنْ رَّبِّكَ لِتُنْذِرَ قَوْمًا مَّآ اَتٰىهُمْ مِّنْ نَّذِيْرٍ مِّنْ قَبْلِكَ لَعَلَّهُمْ يَهْتَدُوْنَ ③

4. ಆಕಾಶಗಳನ್ನೂ ಭೂಮಿಯನ್ನೂ ಅವುಗಳ ನಡುವೆ ಇರುವ ಸಕಲ ವಸ್ತುಗಳನ್ನೂ ಆರು ದಿನಗಳಲ್ಲಿ ಸೃಷ್ಟಿಸಿ, ಅನಂತರ ವಿಶ್ವಸಿಂಹಾಸನಾರೂಢನಾದವನು- ಅಲ್ಲಾಹನೇ. ಅವನ ಹೊರತು ನಿಮಗೆ ಯಾರೂ ರಕ್ಷಕ ಮಿತ್ರನೂ ಇಲ್ಲ. ಅವನ ಮುಂದೆ ಶಿಫಾರಸು ಮಾಡುವವನೂ ಇಲ್ಲ. ಹೀಗಿರುತ್ತ ನೀವೇನು ಜಾಗೃತರಾಗಲಾರಿರಾ?

اَللّٰهُ الَّذِيْ خَلَقَ السَّمٰوٰتِ وَالْاَرْضَ وَمَا بَيْنَهُمَا فِيْ سِتَّةِ اَيَّامٍ ثُمَّ اسْتَوٰى عَلَى الْعَرْشِ ۗ مَا لَكُمْ مِّنْ دُوْنِهِ مِنْ وَّلِيٍّ وَّلَا شَفِيْعٍ ۗ اَفَلَا تَتَذَكَّرُوْنَ ④

5. ಅವನು ಆಕಾಶದಿಂದ ಭೂಮಿಯವರೆಗೂ ಲೋಕಾಡಳಿತ ವ್ಯವಸ್ಥೆ ನಡೆಸುತ್ತಾನೆ. ಈ ವ್ಯವಸ್ಥೆಯ ವರದಿಯು ನಿಮ್ಮ ಗಣನೆಯ ಪ್ರಕಾರ ಒಂದು ಸಾವಿರ ವರ್ಷವಾಗಿರುವ ಒಂದು ದಿನದಂದು[1] ಮೇಲಕ್ಕೆ ಅವನ ಸನ್ನಿಧಿಗೆ ಹೋಗುತ್ತದೆ.

يُدَبِّرُ الْاَمْرَ مِنَ السَّمَآءِ اِلَى الْاَرْضِ ثُمَّ يَعْرُجُ اِلَيْهِ فِيْ يَوْمٍ كَانَ مِقْدَارُهٗٓ اَلْفَ سَنَةٍ مِّمَّا تَعُدُّوْنَ ⑤

1. ಅರ್ಥಾತ್- ನಿಮ್ಮ ಬಳಿ ಇರುವ ಒಂದು ಸಾವಿರ ವರ್ಷಗಳ ಚರಿತ್ರೆಯು ಅಲ್ಲಾಹನ ಮಟ್ಟಿಗೆ ಒಂದು ದಿನದ ಕೆಲಸವಾಗಿದೆ. ಅದರ

6. ಸಕಲ ಪ್ರತ್ಯಕ್ಷಾಪ್ರತ್ಯಕ್ಷಗಳ ಜ್ಞಾನವುಳ್ಳವನು ಅವನೇ. ಅವನು ಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

ذٰلِكَ عٰلِمُ الْغَيْبِ وَالشَّهَادَةِ الْعَزِيْزُ الرَّحِيْمُ ﴿٦﴾

7. ಅವನು ಮಾಡಿರುವುದೆಲ್ಲವನ್ನೂ ಚೆನ್ನಾಗಿಯೇ ಮಾಡಿರುತ್ತಾನೆ. ಅವನು ಮಾನವ ಸೃಷ್ಟಿಯ ಆರಂಭವನ್ನು ಮಣ್ಣಿನ ಗಾರೆಯಿಂದ ಮಾಡಿದನು.

الَّذِيْٓ اَحْسَنَ كُلَّ شَيْءٍ خَلَقَهٗ وَبَدَاَ خَلْقَ الْاِنْسَانِ مِنْ طِيْنٍ ﴿٧﴾

8. ತರುವಾಯ ಅವನ ಸಂತತಿಯನ್ನು ತುಚ್ಛವಾದ ನೀರಿನಂತಹ ದ್ರವ್ಯದಿಂದ ಮುಂದುವರಿಸಿದನು.

ثُمَّ جَعَلَ نَسْلَهٗ مِنْ سُلٰلَةٍ مِّنْ مَّآءٍ مَّهِيْنٍ ﴿٨﴾

9. ತರುವಾಯ ಅದನ್ನು ನಖಶಿಖಾಂತ ಸುರೂಪಗೊಳಿಸಿದನು ಮತ್ತು ಅದರೊಳಗೆ ತನ್ನ ಆತ್ಮವನ್ನು ಊದಿದನು. ನಿಮಗೆ ಕಿವಿಗಳನ್ನೂ ಕಣ್ಣುಗಳನ್ನೂ ಹೃದಯಗಳನ್ನೂ ಕೊಟ್ಟನು. ನೀವು ಅಲ್ಪವೇ ಕೃತಜ್ಞರಾಗುತ್ತೀರಿ.

ثُمَّ سَوّٰىهُ وَنَفَخَ فِيْهِ مِنْ رُّوْحِهٖ وَجَعَلَ لَكُمُ السَّمْعَ وَالْاَبْصَارَ وَالْاَفْـِٕدَةَ ۗ قَلِيْلًا مَّا تَشْكُرُوْنَ ﴿٩﴾

10. "ನಾವು ಮಣ್ಣು ಪಾಲಾಗಿ ಹೋದ ಬಳಿಕ ಪುನಃ ಹೊಸತಾಗಿ ಸೃಷ್ಟಿಸಲ್ಪಡುತ್ತೇವೆಯೇ?" ಎಂದು ಇವರು ಕೇಳುತ್ತಾರೆ. ವಾಸ್ತವದಲ್ಲಿ ಇವರು ತಮ್ಮ ಪ್ರಭುವಿನ ಭೇಟಿಯನ್ನು ನಿರಾಕರಿಸುವವರಾಗಿದ್ದಾರೆ.

وَقَالُوْٓا ءَاِذَا ضَلَلْنَا فِي الْاَرْضِ ءَاِنَّا لَفِيْ خَلْقٍ جَدِيْدٍ ۗ بَلْ هُمْ بِلِقَآئِ رَبِّهِمْ كٰفِرُوْنَ ﴿١٠﴾

11. ನಿಮ್ಮ ಮೇಲೆ ನಿಯುಕ್ತನಾಗಿರುವ ಮೃತ್ಯುದೂತನು ನಿಮ್ಮನ್ನು ಸರ್ವಸಂಪೂರ್ಣವಾಗಿ ತನ್ನ ಹಿಡಿತಕ್ಕೆ ತೆಗೆದುಕೊಳ್ಳುವನು. ತರುವಾಯ ನೀವು ನಿಮ್ಮ ಪ್ರಭುವಿನ ಕಡೆಗೆ ಮರಳಿಸಲ್ಪಡುವಿರಿ ಎಂದು ಇವರೊಡನೆ ಹೇಳಿರಿ.

قُلْ يَتَوَفّٰىكُمْ مَّلَكُ الْمَوْتِ الَّذِيْ وُكِّلَ بِكُمْ ثُمَّ اِلٰى رَبِّكُمْ تُرْجَعُوْنَ ﴿١١﴾

12. ಈ ಅಪರಾಧಿಗಳು ತಲೆ ಬಾಗಿಸಿ ತಮ್ಮ ಪ್ರಭುವಿನ ಮುಂದೆ ನಿಂತಿರುವ ಸಂದರ್ಭವನ್ನು ನೀವು ನೋಡುತ್ತಿದ್ದರೆ! (ಆಗ ಇವರು) "ನಮ್ಮ ಪ್ರಭೂ, ನಾವು ಚೆನ್ನಾಗಿ ನೋಡಿಕೊಂಡೆವು ಮತ್ತು ಕೇಳಿದೆವು. ಇನ್ನು ನಮ್ಮನ್ನು ಸತ್ಕರ್ಮವೆಸಗಲಿಕ್ಕಾಗಿ ಮರಳಿ ಕಳುಹಿಸಿ ಬಿಡು. ಈಗ ನಮಗೆ ಖಾತ್ರಿಯಾಗಿ ತಿಳಿಯಿತು" (ಎನ್ನುತ್ತಿರುವರು).

وَلَوْ تَرٰٓى اِذِ الْمُجْرِمُوْنَ نَاكِسُوْا رُءُوْسِهِمْ عِنْدَ رَبِّهِمْ ۗ رَبَّنَآ اَبْصَرْنَا وَسَمِعْنَا فَارْجِعْنَا نَعْمَلْ صَالِحًا اِنَّا مُوْقِنُوْنَ ﴿١٢﴾

ಯೋಜನೆಯನ್ನು, ವಿಧಿಯನ್ನು ದಾಖಲಿಸುವ ಕಾರ್ಯಕರ್ತರಿಗೆ ಒಪ್ಪಿಸಲಾದರೆ ಮರುದಿನ ಅವರು ಅದರ ವರದಿಯನ್ನು ಅಲ್ಲಾಹನ ಮುಂದೆ ಸಮರ್ಪಿಸುತ್ತಾರೆ ಮತ್ತು ಮರುದಿನದ ಅರ್ಥಾತ್ ನಿಮ್ಮ ಗಣನೆಯ ಪ್ರಕಾರ ಒಂದು ಸಾವಿರ ವರ್ಷದ ಕೆಲಸವನ್ನು ತಮಗೆ ಒಪ್ಪಿಸಲಾಗುವುದೆಂದು ನಿರೀಕ್ಷಿಸುತ್ತಾರೆ.

13. "ನಾವಿಚ್ಛಿಸುತ್ತಿದ್ದರೆ ಮೊದಲೇ ಪ್ರತಿಯೊಂದು ಜೀವಕ್ಕೂ ಅದರ ಮಾರ್ಗದರ್ಶನ ನೀಡಿ ಬಿಡುತ್ತಿದ್ದೆವು. ಆದರೆ ನಾನು ನರಕವನ್ನು ಯಕ್ಷಗಳಿಂದಲೂ ಮಾನವರಿಂದಲೂ ತುಂಬಿ ಬಿಡುವೆನೆಂದು ಹೇಳಿದ್ದ ನನ್ನ ಮಾತು ಸರಿಯಾಯಿತು.

وَلَوْ شِئْنَا لَاٰتَيْنَا كُلَّ نَفْسٍ هُدٰىهَا وَلٰكِنْ حَقَّ الْقَوْلُ مِنِّيْ لَاَمْلَئَنَّ جَهَنَّمَ مِنَ الْجِنَّةِ وَالنَّاسِ اَجْمَعِيْنَ ﴿۱۳﴾

14. ಆದುದರಿಂದ ಈಗ ನೀವು ಇಂದಿನ ಭೇಟಿಯನ್ನು ಮರೆತು ಬಿಟ್ಟುದರ ರುಚಿಯನ್ನು ಸವಿಯಿರಿ. ನಾವೂ ಈಗ ನಿಮ್ಮನ್ನು ಮರೆತು ಬಿಟ್ಟಿದ್ದೇವೆ. ನಿಮ್ಮ ದುಷ್ಕೃತ್ಯಗಳ ಫಲವಾಗಿ ಶಾಶ್ವತ ಯಾತನೆಯ ರುಚಿಯನ್ನು ಸವಿಯಿರಿ" (ಎಂದು ಉತ್ತರ ಕೊಡ ಲಾಗುವುದು).

فَذُوْقُوْا بِمَا نَسِيْتُمْ لِقَآءَ يَوْمِكُمْ هٰذَا ۚ اِنَّا نَسِيْنٰكُمْ وَذُوْقُوْا عَذَابَ الْخُلْدِ بِمَا كُنْتُمْ تَعْمَلُوْنَ ﴿۱۴﴾

15. ನಮ್ಮ ಸೂಕ್ತಗಳನ್ನು ಓದಿ ಹೇಳಿ ಉಪದೇಶಿಸಿದಾಗ ಸಾಷ್ಟಾಂಗವೆರ ಗುವವರೂ ತಮ್ಮ ಪ್ರಭುವಿನ ಸ್ತುತಿಯೊಂದಿಗೆ ಅವನನ್ನು ಜಪಿಸುವವರೂ ಅಹಂಕಾರ ಪ್ರಕಟಿಸದವರೂ ನಮ್ಮ ಸೂಕ್ತಗಳ ಮೇಲೆ ವಿಶ್ವಾಸವಿರಿಸುತ್ತಾರೆ.

اِنَّمَا يُؤْمِنُ بِاٰيٰتِنَا الَّذِيْنَ اِذَا ذُكِّرُوْا بِهَا خَرُّوْا سُجَّدًا وَّسَبَّحُوْا بِحَمْدِ رَبِّهِمْ وَهُمْ لَا يَسْتَكْبِرُوْنَ ﴿۱۵﴾

السجدة ۹

16. ಅವರ ಬೆನ್ನುಗಳು ಹಾಸಿಗೆಗಳನ್ನು ಬಿಟ್ಟಿರುತ್ತವೆ. ತಮ್ಮ ಪ್ರಭುವನ್ನು ಭಯ ಹಾಗೂ ನಿರೀಕ್ಷೆಯೊಂದಿಗೆ ಪ್ರಾರ್ಥಿಸುತ್ತಾರೆ. ನಾವು ಅವರಿಗೆ ದಯಪಾಲಿಸಿರುವ ಜೀವನಾಧಾರದಿಂದ ಖರ್ಚು ಮಾಡುತ್ತಾರೆ.

تَتَجَافٰى جُنُوْبُهُمْ عَنِ الْمَضَاجِعِ يَدْعُوْنَ رَبَّهُمْ خَوْفًا وَّطَمَعًا ۙ وَّمِمَّا رَزَقْنٰهُمْ يُنْفِقُوْنَ ﴿۱۶﴾

17. ಮುಂದೆ ಅವರ ಕರ್ಮಗಳಿಗೆ ಪ್ರತಿಫಲವಾಗಿ ಅವರ ಕಣ್ಮನಗಳನ್ನು ತಣಿಸುವಂತಹ ಯಾವ ಸತ್ಫಲಗಳನ್ನು ಅವರಿಗಾಗಿ ಬಚ್ಚಿಡಲಾಗಿ ದೆಯೋ ಅದರ ಅರಿವು ಯಾವ ಜೀವಿಗೂ ಇಲ್ಲ.

فَلَا تَعْلَمُ نَفْسٌ مَّآ اُخْفِيَ لَهُمْ مِّنْ قُرَّةِ اَعْيُنٍ ۚ جَزَآءًۢ بِمَا كَانُوْا يَعْمَلُوْنَ ﴿۱۷﴾

18. ಸತ್ಯವಿಶ್ವಾಸಿಯಾದವನು ಕರ್ಮಭ್ರಷ್ಟನಂತಾಗಿರಲು ಎಂದಾದರೂ ಸಾಧ್ಯವಿದೆಯೆ? ಇವರಿಬ್ಬರೂ ಸರಿ ಸಮಾನರಾಗಲಾರರು.

اَفَمَنْ كَانَ مُؤْمِنًا كَمَنْ كَانَ فَاسِقًا ؕ لَا يَسْتَوٗنَ ﴿۱۸﴾

وقف غفران

19. ಸತ್ಯವಿಶ್ವಾಸವನ್ನಿರಿಸಿದವರಿಗಾಗಿ ಮತ್ತು ಸತ್ಕರ್ಮವೆಸಗಿದವರಿಗಾಗಿ ಅವರ ಸತ್ಕರ್ಮಗಳ ಪ್ರತಿಫಲವಾಗಿ ಆತಿಥ್ಯ ರೂಪದಲ್ಲಿ ಸ್ವರ್ಗೋ ದ್ಯಾನಗಳ ವಸತಿಗಳಿವೆ

اَمَّا الَّذِيْنَ اٰمَنُوْا وَعَمِلُوا الصّٰلِحٰتِ فَلَهُمْ جَنّٰتُ الْمَاْوٰى ۫ نُزُلًاۢ بِمَا كَانُوْا يَعْمَلُوْنَ ﴿۱۹﴾

20. ಮತ್ತು ಕರ್ಮಭ್ರಷ್ಟ ನೀತಿ ಕೈಗೊಂಡವರ ವಾಸಸ್ಥಾನವು ನರಕಾಗ್ನಿಯಾಗಿದೆ. ಅವರು ಅಲ್ಲಿಂದ ಹೊರ ಹೊರಡಲಿಚ್ಛಿಸಿದಾಗ ಲೆಲ್ಲ ಅದರೊಳಕ್ಕೇ ತಳ್ಳಲ್ಪಡುವರು ಮತ್ತು ನೀವು ಸುಳ್ಳಾಗಿಸುತ್ತಿದ್ದ ಅದೇ ನರಕಾಗ್ನಿಯ ರುಚಿಯನ್ನು ಸವಿಯಿರೆಂದು ಅವರೊಡನೆ ಹೇಳಲಾಗುವುದು.

وَاَمَّا الَّذِيْنَ فَسَقُوْا فَمَاْوٰىهُمُ النَّارُ ؕ كُلَّمَآ اَرَادُوْٓا اَنْ يَّخْرُجُوْا مِنْهَآ اُعِيْدُوْا فِيْهَا وَقِيْلَ لَهُمْ ذُوْقُوْا عَذَابَ النَّارِ الَّذِيْ كُنْتُمْ بِهٖ تُكَذِّبُوْنَ ﴿۲۰﴾

21. ಇವರು (ತಮ್ಮ ಬಂಡಾಯ ನೀತಿಯಿಂದ) ಹಿಂಜರಿಯಬಹು ದೆಂದು ನಾವು ಇವರಿಗೆ ಆ ಮಹಾ ಯಾತನೆಗೆ ಮುಂಚೆ ಈ ಲೋಕದಲ್ಲೇ (ಒಂದಲ್ಲೊಂದು ಚಿಕ್ಕ ಪುಟ್ಟ) ಯಾತನೆಯ ರುಚಿಯನ್ನು ಸವಿಸುತ್ತಲೇ ಇರುವೆವು.

وَلَنُذِيقَنَّهُم مِّنَ الْعَذَابِ الْأَدْنَىٰ دُونَ الْعَذَابِ الْأَكْبَرِ لَعَلَّهُمْ يَرْجِعُونَ ﴿٢١﴾

22. ತನ್ನ ಪ್ರಭುವಿನ ನಿದರ್ಶನಗಳ ಮೂಲಕ ಉಪದೇಶ ನೀಡಲಾದ ಬಳಿಕವೂ ಅವುಗಳಿಂದ ವಿಮುಖನಾಗುವವನಿಗಿಂತ ದೊಡ್ಡ ಅಕ್ರಮಿ ಯಾರಿರಬಹುದು? ಇಂತಹ ಅಪರಾಧಿಗಳಿಂದ ನಾವು ಪ್ರತೀಕಾರ ಪಡೆದೇ ತೀರುವೆವು.

وَمَنْ أَظْلَمُ مِمَّن ذُكِّرَ بِآيَاتِ رَبِّهِ ثُمَّ أَعْرَضَ عَنْهَا ۚ إِنَّا مِنَ الْمُجْرِمِينَ مُنتَقِمُونَ ﴿٢٢﴾

23. ನಾವು ಇದಕ್ಕೆ ಮುಂಚೆ ಮೂಸಾರಿಗೆ ಗ್ರಂಥ ನೀಡಿದ್ದೇವೆ. ಆದುದರಿಂದ ಅದೇ ವಸ್ತು ಸಿಗುವಾಗ ನಿಮಗೇನೂ ಸಂಶಯ ಉಂಟಾಗಬಾರದು. ಆ ಗ್ರಂಥವನ್ನು ನಾವು ಬನೀಇಸ್ರಾಈಲರಿಗೆ ಸನ್ಮಾರ್ಗದರ್ಶಕವಾಗಿ ಮಾಡಿದ್ದೆವು.

وَلَقَدْ آتَيْنَا مُوسَى الْكِتَابَ فَلَا تَكُن فِي مِرْيَةٍ مِّن لِّقَائِهِ ۖ وَجَعَلْنَاهُ هُدًى لِّبَنِي إِسْرَائِيلَ ﴿٢٣﴾

24. ಅವರು ತಾಳ್ಮೆ ವಹಿಸಿದಾಗ ಮತ್ತು ನಮ್ಮ ಸೂಕ್ತಗಳನ್ನು ನಂಬು ತ್ತಿದ್ದಾಗ ನಾವು ಅವರೊಳಗಿಂದ, ನಮ್ಮ ಆಜ್ಞೆಯಿಂದ ಮಾರ್ಗ ದರ್ಶನ ಮಾಡುತ್ತಿದ್ದಂತಹ ಮುಂದಾಳುಗಳನ್ನು ಎಬ್ಬಿಸಿದೆವು.

وَجَعَلْنَا مِنْهُمْ أَئِمَّةً يَهْدُونَ بِأَمْرِنَا لَمَّا صَبَرُوا ۖ وَكَانُوا بِآيَاتِنَا يُوقِنُونَ ﴿٢٤﴾

25. (ಬನೀಇಸ್ರಾಈಲರು) ಪರಸ್ಪರ ಭಿನ್ನಾಭಿಪ್ರಾಯ ತಾಳುತ್ತಾ ಬಂದಿರುವ ವಿಷಯಗಳ ತೀರ್ಮಾನವನ್ನು ಖಂಡಿತವಾಗಿಯೂ ನಿಮ್ಮ ಪ್ರಭುವೇ ಪುನರುತ್ಥಾನದಿನ ಮಾಡುವನು.

إِنَّ رَبَّكَ هُوَ يَفْصِلُ بَيْنَهُمْ يَوْمَ الْقِيَامَةِ فِيمَا كَانُوا فِيهِ يَخْتَلِفُونَ ﴿٢٥﴾

26. ಇವರಿಗಿಂತ ಮುಂಚೆ ನಾವೆಷ್ಟೋ ಜನಾಂಗಗಳನ್ನು ನಾಶಗೊಳಿಸಿ ದ್ದೇವೆ. ಅವರು ವಾಸಿಸುತ್ತಿದ್ದ ಸ್ಥಳಗಳಲ್ಲಿ ಈಗ ಇವರು ಸಂಚರಿಸುತ್ತಾರೆ. (ಈ ಐತಿಹಾಸಿಕ ಘಟನೆಗಳಿಂದ) ಇವರಿಗೇನೂ ಮಾರ್ಗದರ್ಶನ ಸಿಗಲಿಲ್ಲವೇ? ಇದರಲ್ಲಿ ದೊಡ್ಡ ನಿದರ್ಶನಗಳಿವೆ. ಇವರಿಗೆ ಕೇಳಿಸುವುದಿಲ್ಲವೇ?

أَوَلَمْ يَهْدِ لَهُمْ كَمْ أَهْلَكْنَا مِن قَبْلِهِم مِّنَ الْقُرُونِ يَمْشُونَ فِي مَسَاكِنِهِمْ ۚ إِنَّ فِي ذَٰلِكَ لَآيَاتٍ ۖ أَفَلَا يَسْمَعُونَ ﴿٢٦﴾

27. ನಾವು ಒಂದು ಬಂಜರು ಭೂಭಾಗದ ಕಡೆಗೆ ನೀರನ್ನು ಹರಿಸಿ ತರುವುದನ್ನೂ ತರುವಾಯ ಅದೇ ನೆಲದಿಂದ ಇವರ ಜಾನುವಾರು ಗಳಿಗೆ ಮೇವು ಸಿಗುವ ಹಾಗೂ ಇವರು ಸ್ವತಃ ಉಣ್ಣುವಂತಹ ಬೆಳೆಯನ್ನು ಬೆಳೆಸುತ್ತಿರುವ ದೃಶ್ಯವನ್ನೂ ಇವರೆಂದೂ ಕಂಡಿಲ್ಲವೇ? ಇವರಿಗೇನೂ ತೋಚುವುದಿಲ್ಲವೇ?

أَوَلَمْ يَرَوْا أَنَّا نَسُوقُ الْمَاءَ إِلَى الْأَرْضِ الْجُرُزِ فَنُخْرِجُ بِهِ زَرْعًا تَأْكُلُ مِنْهُ أَنْعَامُهُمْ وَأَنفُسُهُمْ ۖ أَفَلَا يُبْصِرُونَ ﴿٢٧﴾

وَيَقُولُونَ مَتَىٰ هَٰذَا الْفَتْحُ إِن كُنتُمْ صَادِقِينَ ﴿٢٨﴾

28. "ನೀವು ಸತ್ಯವಾದಿಯಾಗಿದ್ದರೆ, ಈ ತೀರ್ಮಾನ ಆಗುವುದು ಯಾವಾಗ?" ಎಂದು ಇವರು ಕೇಳುತ್ತಾರೆ.

قُلْ يَوْمَ الْفَتْحِ لَا يَنفَعُ الَّذِينَ كَفَرُوا إِيمَانُهُمْ وَلَا هُمْ يُنظَرُونَ ﴿٢٩﴾

29. "ತೀರ್ಪಿನ ದಿನ ವಿಶ್ವಾಸವಿರಿಸುವುದರಿಂದ ಸತ್ಯನಿಷೇಧಿಗಳಿಗೆ ಏನೂ ಪ್ರಯೋಜನವಾಗದು. ಆ ಬಳಿಕ ಅವರಿಗೆ ಸ್ವಲ್ಪವೂ ಕಾಲಾವಕಾಶ ಸಿಗದು" ಎಂದು ಇವರೊಡನೆ ಹೇಳಿರಿ.

فَأَعْرِضْ عَنْهُمْ وَانتَظِرْ إِنَّهُم مُّنتَظِرُونَ ﴿٣٠﴾

30. ಸರಿ; ಇವರನ್ನು ಇವರಷ್ಟಕ್ಕೆ ಬಿಟ್ಟು ಬಿಡಿರಿ ಮತ್ತು ಕಾಯುತ್ತಲಿರಿ. ಇವರೂ ಕಾಯುತ್ತಿದ್ದಾರೆ.

---







**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಪೈಗಂಬರರೇ, ಅಲ್ಲಾಹನನ್ನು ಭಯಪಡಿರಿ ಮತ್ತು ಸತ್ಯನಿಷೇಧಿಗಳ ಹಾಗೂ ಕಪಟವಿಶ್ವಾಸಿಗಳ ಅನುಸರಣೆ ಮಾಡಬೇಡಿರಿ. ವಾಸ್ತವದಲ್ಲಿ ಸರ್ವಜ್ಞನೂ ಯುಕ್ತಿಪೂರ್ಣನೂ ಅಲ್ಲಾಹನೇ ಆಗಿರುತ್ತಾನೆ.

يٰۤاَيُّهَا النَّبِيُّ اتَّقِ اللّٰهَ وَلَا تُطِعِ الْكٰفِرِيْنَ
وَالْمُنٰفِقِيْنَ ؕ اِنَّ اللّٰهَ كَانَ عَلِيْمًا حَكِيْمًا ۙ﴿۱﴾

2. ನಿಮ್ಮ ಪ್ರಭುವಿನ ಕಡೆಯಿಂದ ನಿಮಗೆ ನೀಡಲಾಗುತ್ತಿರುವ ಬೋಧನೆಯನ್ನು ಅನುಸರಿಸಿರಿ. ಅಲ್ಲಾಹನು, ನೀವು ಮಾಡುತ್ತಿರುವ ಪ್ರತಿಯೊಂದು ಕಾರ್ಯದ ಅರಿವುಳ್ಳವನಾಗಿದ್ದಾನೆ-

وَّاتَّبِعْ مَا يُوْحٰۤى اِلَيْكَ مِنْ رَّبِّكَ ؕ
اِنَّ اللّٰهَ كَانَ بِمَا تَعْمَلُوْنَ خَبِيْرًا ۙ﴿۲﴾

3. ಮತ್ತು ಅಲ್ಲಾಹನ ಮೇಲೆಯೇ ಭರವಸೆಯನ್ನಿಡಿರಿ. ಕಾರ್ಯ ನಿರ್ವಾಹಕನಾಗಲು ಅಲ್ಲಾಹನೇ ಸಾಕು.

وَّتَوَكَّلْ عَلَى اللّٰهِ ؕ وَكَفٰى بِاللّٰهِ وَكِيْلًا ﴿۳﴾

4. ಅಲ್ಲಾಹನು ಯಾವ ಮನುಷ್ಯನ ಶರೀರದೊಳಗೂ ಎರಡು ಹೃದಯಗಳನ್ನಿರಿಸಿಲ್ಲ. ನೀವು 'ಝಿಹಾರ್'[1] ಮಾಡುವ ನಿಮ್ಮ ಪತ್ನಿಯರನ್ನು ಅವನು ನಿಮ್ಮ ತಾಯಂದಿರನ್ನಾಗಿ ಮಾಡಲೂ ಇಲ್ಲ ಮತ್ತು ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿರುವುದೂ ಇಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ ಮಾತುಗಳು. ಆದರೆ ಅಲ್ಲಾಹನು ಕೇವಲ ಸತ್ಯವಾದುದನ್ನೇ ಹೇಳುತ್ತಾನೆ. ಅವನೇ ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ನೀಡುತ್ತಾನೆ.

مَا جَعَلَ اللّٰهُ لِرَجُلٍ مِّنْ قَلْبَيْنِ فِيْ
جَوْفِهٖ ۚ وَمَا جَعَلَ اَزْوَاجَكُمُ الّٰٓـِٔيْ
تُظٰهِرُوْنَ مِنْهُنَّ اُمَّهٰتِكُمْ ۚ وَمَا جَعَلَ
اَدْعِيَآءَكُمْ اَبْنَآءَكُمْ ؕ ذٰلِكُمْ قَوْلُكُمْ
بِاَفْوَاهِكُمْ ؕ وَاللّٰهُ يَقُوْلُ الْحَقَّ وَهُوَ
يَهْدِى السَّبِيْلَ ﴿۴﴾

5. ದತ್ತು ಮಕ್ಕಳನ್ನು ಅವರ ಪಿತರಿಗೆ ಸಂಬಂಧಿಸಿ ಕರೆಯಿರಿ. ಇದು ಅಲ್ಲಾಹನ ಬಳಿ ಹೆಚ್ಚು ನ್ಯಾಯೋಚಿತವಾದ ವಿಷಯವಾಗಿದೆ

اُدْعُوْهُمْ لِاٰبَآئِهِمْ هُوَ اَقْسَطُ عِنْدَ
اللّٰهِ ۚ فَاِنْ لَّمْ تَعْلَمُوْۤا اٰبَآءَهُمْ فَاِخْوَانُكُمْ

1. 'ಝಿಹಾರ್' ಎಂದರೆ ಪತ್ನಿಯನ್ನು ತಾಯಿಯಂತೆ ಎಂದು ಸಾರುವುದು.

ಮತ್ತು ನಿಮಗೆ ಅವರ ಪಿತರು ಯಾರೆಂದು ತಿಳಿದಿರದಿದ್ದರೆ ಅವರು ನಿಮ್ಮ ಧರ್ಮ ಸಹೋದರರು ಮತ್ತು ಮಿತ್ರರಾಗಿರುತ್ತಾರೆ. ನೀವು ತಿಳಿಯದೆ ಹೇಳಿ ಬಿಟ್ಟ ಮಾತಿಗಾಗಿ ನಿಮ್ಮ ಮೇಲೇನೂ ದೋಷವಿಲ್ಲ. ಆದರೂ ನೀವು ಉದ್ದೇಶಪೂರ್ವಕವಾಗಿ ಹೇಳಿದ ಮಾತಿನ ಬಗ್ಗೆ ಖಂಡಿತ ದೋಷವಿದೆ. ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

فِي الدِّينِ وَمَوَالِيكُمْ ۚ وَلَيْسَ عَلَيْكُمْ جُنَاحٌ فِيمَا أَخْطَأْتُم بِهِ وَلَٰكِن مَّا تَعَمَّدَتْ قُلُوبُكُمْ ۚ وَكَانَ اللَّهُ غَفُورًا رَّحِيمًا ﴿٥﴾

6. ನಿಶ್ಚಯವಾಗಿಯೂ ಪ್ರವಾದಿಯು ಸತ್ಯವಿಶ್ವಾಸಿಗಳಿಗೆ ಅವರ ಸ್ವಂತ ಅಸ್ತಿತ್ವಕ್ಕಿಂತಲೂ ಪ್ರಧಾನರಾಗಿದ್ದಾರೆ ಮತ್ತು ಪ್ರವಾದಿಯ ಪತ್ನಿಯರು ಅವರ ಮಾತೆಯರಾಗಿದ್ದಾರೆ. ಆದರೆ ದೇವ ಗ್ರಂಥದ ದೃಷ್ಟಿಯಿಂದ ಸಾಮಾನ್ಯ ಸತ್ಯವಿಶ್ವಾಸಿಗಳು ಹಾಗೂ ಮುಹಾಜಿರರಿಗಿಂತಲೂ ಸಂಬಂಧಿಕರು ಪರಸ್ಪರರ ಪಾಲಿಗೆ ಅಧಿಕ ಹಕ್ಕುದಾರರಾಗಿದ್ದಾರೆ. ಆದರೆ, ತಮ್ಮ ಮಿತ್ರರೊಂದಿಗೆ ನೀವೇನಾದರೂ ಒಳಿತು (ಮಾಡಲಿಚ್ಛಿಸುತ್ತೀರಾದರೆ) ಮಾಡಬಹುದು. ಈ ಆಜ್ಞೆಯು ದೇವ ಗ್ರಂಥದಲ್ಲಿ ಬರೆದಿದೆ.

النَّبِيُّ أَوْلَىٰ بِالْمُؤْمِنِينَ مِنْ أَنفُسِهِمْ ۖ وَأَزْوَاجُهُ أُمَّهَاتُهُمْ ۗ وَأُولُو الْأَرْحَامِ بَعْضُهُمْ أَوْلَىٰ بِبَعْضٍ فِي كِتَابِ اللَّهِ مِنَ الْمُؤْمِنِينَ وَالْمُهَاجِرِينَ إِلَّا أَن تَفْعَلُوا إِلَىٰ أَوْلِيَائِكُم مَّعْرُوفًا ۚ كَانَ ذَٰلِكَ فِي الْكِتَابِ مَسْطُورًا ﴿٦﴾

7. ಮತ್ತು (ಪೈಗಂಬರರೇ) ನಾವು ಎಲ್ಲ ಪ್ರವಾದಿಗಳಿಂದ ಪಡೆದಿರುವ ಕರಾರನ್ನು ನೆನಪಿಡಿರಿ. ನಿಮ್ಮಿಂದಲೂ ನೂಹ್, ಇಬ್‌ರಾಹೀಮ್, ಮೂಸಾ ಮತ್ತು ಮರ್ಯಮರ ಪುತ್ರ ಈಸಾರಿಂದಲೂ ಎಲ್ಲರಿಂದಲೂ ನಾವು ಬಲವಾದ ಕರಾರನ್ನು ಪಡೆದಿರುತ್ತೇವೆ.[2]

وَإِذْ أَخَذْنَا مِنَ النَّبِيِّينَ مِيثَاقَهُمْ وَمِنكَ وَمِن نُّوحٍ وَإِبْرَاهِيمَ وَمُوسَىٰ وَعِيسَى ابْنِ مَرْيَمَ ۖ وَأَخَذْنَا مِنْهُم مِّيثَاقًا غَلِيظًا ﴿٧﴾

8. (ಇದು, ಅವರ ಪ್ರಭು) ಸತ್ಯಸಂಧರಿಂದ ಅವರ ಸತ್ಯಸಂಧತೆಯ ಕುರಿತು ಪ್ರಶ್ನಿಸಲಿಕ್ಕಾಗಿ (ಆಗಿರುತ್ತದೆ) ಮತ್ತು ಸತ್ಯನಿಷೇಧಿಗಳಿಗಾಗಿ ಅವನು ವೇದನಾಯುಕ್ತ ಯಾತನೆಯನ್ನು ಸಿದ್ಧಪಡಿಸಿಯೇ ಇಟ್ಟಿದ್ದಾನೆ.

لِّيَسْأَلَ الصَّادِقِينَ عَن صِدْقِهِمْ ۚ وَأَعَدَّ لِلْكَافِرِينَ عَذَابًا أَلِيمًا ﴿٨﴾

9. ಸತ್ಯವಿಶ್ವಾಸಿಗಳೇ,[3] ಅಲ್ಲಾಹನು(ಇದೀಗ) ನಿಮಗೆ ಮಾಡಿರುವ

يَا أَيُّهَا الَّذِينَ آمَنُوا اذْكُرُوا نِعْمَةَ اللَّهِ

2. ಎಲ್ಲಾ ಪ್ರವಾದಿಗಳಂತೆ ತಮ್ಮಿಂದಲೂ ಅಲ್ಲಾಹನು ದೃಢವಾದ ಪ್ರತಿಜ್ಞೆಯನ್ನು ಪಡೆದಿದ್ದಾನೆ. ಅದನ್ನು ತಾವು ಕಟ್ಟುನಿಟ್ಟಿನಿಂದ ಪಾಲಿಸಬೇಕಾಗಿದೆ ಎಂದು ಈ ಸೂಕ್ತದ ಮೂಲಕ ಅಲ್ಲಾಹನು ಪ್ರವಾದಿವರ್ಯರಿಗೆ(ಸ) ನೆನಪಿಸುತ್ತಿದ್ದಾನೆ. ಪ್ರವಾದಿಗಳು ಅಲ್ಲಾಹನ ಆದೇಶಗಳನ್ನು ಸ್ವತಃ ಪಾಲಿಸುವರು ಹಾಗೂ ಇತರರನ್ನೂ ಪಾಲಿಸುವಂತೆ ಮಾಡುವರು. ಅಲ್ಲಾಹನ ಮಾತುಗಳನ್ನು ಚಾಚೂ ತಪ್ಪದಂತೆ ಜನರಿಗೆ ತಲಪಿಸುವರು. ಅದನ್ನು ಕಾರ್ಯತಃ ಜಾರಿಗೊಳಿಸುವ ಪ್ರಯತ್ನಗಳಲ್ಲಿ ಯಾವ ಚ್ಯುತಿಯನ್ನೂ ಮಾಡಲಾರರು ಎಂಬುದೇ ಈ ಪ್ರತಿಜ್ಞೆಯ ಅರ್ಥವಾಗಿದೆ. ಹಿಂದಿನಿಂದಲೂ ಅನುಸರಿಸಲಾಗಿರುವ ವಾಕ್ಯರಚಣೆಯನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಪವಿತ್ರ ಕುರ್‌ಆನಿನ ವಿವಿಧೆಡೆಗಳಲ್ಲಿ ಈ ಪ್ರತಿಜ್ಞೆಯ ಪ್ರಸ್ತಾಪವಿದೆ. ಉದಾ: ಸೂರಃ ಅಲ್ ಬಕರಃ - 83, ಆಲಿ ಇಮ್ರಾನ್ - 187, ಅಲ್ ಮಾಇದಃ - 7, ಅಲ್ ಅಅ್‌ರಾಫ್ - 169,171, ಅಶ್ಶೂರಾ - 13.

3. ಇಲ್ಲಿಂದ 27ನೆಯ ಸೂಕ್ತದ ಕಡೆಗೆ ಅಹ್‌ಝಾಬ್ ಮತ್ತು ಬನೀಕುರೈಝಾ ಮಹಾಯುದ್ಧಗಳ ಬಗ್ಗೆ ಪ್ರಸ್ತಾಪಿಸಲಾಗಿದೆ.

ಉಪಕಾರವನ್ನು ಸ್ಮರಿಸಿರಿ. ನಿಮ್ಮ ಮೇಲೆ ಸೈನ್ಯಗಳು ಏರಿ ಬಂದಾಗ ನಾವು ಅವರ ಮೇಲೆ ಒಂದು ಬಲವಾದ ಬಿರುಗಾಳಿಯನ್ನು ಕಳುಹಿಸಿದೆವು ಮತ್ತು ನಿಮಗೆ ಕಾಣಿಸದಂತಹ ಸೈನ್ಯಗಳನ್ನು ರವಾನಿಸಿದೆವು.[4] ನೀವು ಆಗ ಮಾಡುತ್ತಿದ್ದುದನ್ನೆಲ್ಲ ಅಲ್ಲಾಹನು ನೋಡುತ್ತಿದ್ದನು.

عَلَيْكُمْ إِذْ جَآءَتْكُمْ جُنُودٌ فَأَرْسَلْنَا عَلَيْهِمْ رِيحًا وَجُنُودًا لَّمْ تَرَوْهَا ۚ وَكَانَ اللَّهُ بِمَا تَعْمَلُونَ بَصِيرًا ⑨

10. ಶತ್ರುಗಳು ಮೇಲಿಂದಲೂ ಕೆಳಗಿಂದಲೂ ನಿಮ್ಮ ಮೇಲೆ ಏರಿ ಬಂದಾಗ, ಭಯದಿಂದ ಕಣ್ಣುಗಳು ನಿಶ್ಚಲಗೊಂಡಾಗ, ಹೃದಯಗಳು ಬಾಯಿಗೆ ಬಂದಾಗ ಮತ್ತು ನೀವು ಅಲ್ಲಾಹನ ವಿಷಯದಲ್ಲಿ ತರತರದ ಗುಮಾನಿಗಳನ್ನಿರಿಸಲು ತೊಡಗಿದಾಗ,

إِذْ جَآءُوكُم مِّن فَوْقِكُمْ وَمِنْ أَسْفَلَ مِنكُمْ وَإِذْ زَاغَتِ الْأَبْصَارُ وَبَلَغَتِ الْقُلُوبُ الْحَنَاجِرَ وَتَظُنُّونَ بِاللَّهِ الظُّنُونَا ⑩

11. ಸತ್ಯವಿಶ್ವಾಸಿಗಳು ಚೆನ್ನಾಗಿ ಪರೀಕ್ಷಿಸಲ್ಪಟ್ಟರು ಮತ್ತು ತೀವ್ರವಾಗಿ ನಡುಗಿಸಲ್ಪಟ್ಟರು.

هُنَالِكَ ابْتُلِيَ الْمُؤْمِنُونَ وَزُلْزِلُوا زِلْزَالًا شَدِيدًا ⑪

12. ಕಪಟವಿಶ್ವಾಸಿಗಳೂ ಹೃದಯಗಳಲ್ಲಿ ರೋಗವಿದ್ದವರೂ- ಅಲ್ಲಾಹ್ ಮತ್ತು ಅವನ ಪ್ರವಾದಿ ನಮ್ಮೊಡನೆ ಮಾಡಿದ್ದ ವಾಗ್ದಾನಗಳೆಲ್ಲಾ ವಂಚನೆಯೇ ವಿನಾ ಇನ್ನೇನೂ ಅಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.

وَإِذْ يَقُولُ الْمُنَافِقُونَ وَالَّذِينَ فِي قُلُوبِهِم مَّرَضٌ مَّا وَعَدَنَا اللَّهُ وَرَسُولُهُ إِلَّا غُرُورًا ⑫

13. ಅವರಲ್ಲೊಂದು ತಂಡವು, "ಯಸ್ರಿಬ್‌ನವರೇ, ನಿಮಗಿನ್ನು ನಿಲ್ಲುವ ಅವಕಾಶವೇನೂ ಇಲ್ಲ, ಮರಳಿ ಹೋಗಿರಿ" ಎಂದು ಹೇಳಿದಾಗ ಮತ್ತು ಅವರ ಒಂದು ಕೂಟವು, "ನಮ್ಮ ಮನೆಗಳು ಅಪಾಯಕ್ಕೊಳಗಾಗಿವೆ" ಎನ್ನುತ್ತ ತಮ್ಮ ಪ್ರವಾದಿಯಿಂದ ಅನುಮತಿ ಕೇಳತೊಡಗಿದಾಗ, ಅವು ನಿಜವಾಗಿ ಅಪಾಯದಲ್ಲಿರಲಿಲ್ಲ. ವಾಸ್ತವದಲ್ಲಿ ಅವರು (ರಣರಂಗದಿಂದ) ಪರಾರಿಯಾಗಲು ಇಚ್ಛಿಸುತ್ತಿದ್ದರು.

وَإِذْ قَالَت طَّائِفَةٌ مِّنْهُمْ يَا أَهْلَ يَثْرِبَ لَا مُقَامَ لَكُمْ فَارْجِعُوا ۚ وَيَسْتَأْذِنُ فَرِيقٌ مِّنْهُمُ النَّبِيَّ يَقُولُونَ إِنَّ بُيُوتَنَا عَوْرَةٌ ۖ وَمَا هِيَ بِعَوْرَةٍ ۖ إِن يُرِيدُونَ إِلَّا فِرَارًا ⑬

14. ಪಟ್ಟಣದ ಸುತ್ತಮುತ್ತಲಿಂದ ಶತ್ರುಗಳು ನುಗ್ಗಿ ಬರುತ್ತಿದ್ದರೆ ಮತ್ತು ಆ ವೇಳೆ ಇವರಿಗೆ ಪಿತೂರಿಯ ಕರೆ ನೀಡಲಾಗುತ್ತಿದ್ದರೆ ಇವರು ಅದರಲ್ಲಿ ಬೀಳುತ್ತಿದ್ದರು ಮತ್ತು ಪಿತೂರಿಯಲ್ಲಿ ಪಾಲ್ಗೊಳ್ಳಲು ಇವರಿಗೆ ಸ್ವಲ್ಪವೂ ಅಳುಕುಂಟಾಗುತ್ತಿರಲಿಲ್ಲ.

وَلَوْ دُخِلَتْ عَلَيْهِم مِّنْ أَقْطَارِهَا ثُمَّ سُئِلُوا الْفِتْنَةَ لَآتَوْهَا وَمَا تَلَبَّثُوا بِهَا إِلَّا يَسِيرًا ⑭

15. ತಾವು ಬೆನ್ನು ತೋರಿಸಲಿಕ್ಕಿಲ್ಲವೆಂದು ಇದಕ್ಕೆ ಮುಂಚೆ ಇವರು

وَلَقَدْ كَانُوا عَاهَدُوا اللَّهَ مِن قَبْلُ

4. ಅರ್ಥಾತ್- ದೇವಚರರ ಸೈನ್ಯಗಳು.

ಅಲ್ಲಾಹನೊಡನೆ ಕರಾರು ಮಾಡಿದ್ದರು ಮತ್ತು ಅಲ್ಲಾಹನೊಂದಿಗೆ ಮಾಡಿದ ಕರಾರಿನ ವಿಚಾರಣೆ ನಡೆದೇ ತೀರಲಿಕ್ಕಿತ್ತು.

لَا يُوَلُّونَ الْأَدْبَارَ ۚ وَكَانَ عَهْدُ
اللَّهِ مَسْئُولًا ﴿١٥﴾

16. ಪೈಗಂಬರರೇ, ಇವರೊಡನೆ ಹೇಳಿರಿ- "ನೀವು ಮರಣ ಅಥವಾ ಹತ್ಯೆಯನ್ನು ಹೆದರಿ ಓಡುವುದಿದ್ದರೆ ನಿಮ್ಮ ಈ ಪಲಾಯನವು ನಿಮಗೇನೂ ಫಲಕಾರಿಯಾಗದು. ಆ ಬಳಿಕ ನಿಮಗೆ ಜೀವನದ ಸುಖವನ್ನು ಅನುಭವಿಸಲು ಅಲ್ಪಕಾಲ ಮಾತ್ರವೇ ಅವಕಾಶ ಸಿಗುವುದು."

قُلْ لَنْ يَنْفَعَكُمُ الْفِرَارُ إِنْ فَرَرْتُمْ
مِنَ الْمَوْتِ أَوِ الْقَتْلِ وَإِذًا لَا تُمَتَّعُونَ
إِلَّا قَلِيلًا ﴿١٦﴾

17. ಇವರೊಡನೆ ಹೇಳಿರಿ, "ಅಲ್ಲಾಹ್ ನಿಮಗೆ ಹಾನಿಯುಂಟು ಮಾಡಲಿಚ್ಛಿಸಿದರೆ ನಿಮ್ಮನ್ನು ಅವನಿಂದ ರಕ್ಷಿಸುವವನಾರು? ಅವನು ನಿಮ್ಮ ಮೇಲೆ ಕರುಣೆ ತೋರ ಬಯಸಿದರೆ, ಅವನ ಕೃಪೆಯನ್ನು ತಡೆಯುವವನಾರು? ಅಲ್ಲಾಹನಿಗೆದುರು ಇವರು ಯಾವ ರಕ್ಷಕ ಮಿತ್ರನನ್ನೂ ಸಹಾಯಕನನ್ನೂ ಪಡೆಯಲಾರರು."

قُلْ مَنْ ذَا الَّذِي يَعْصِمُكُمْ مِنَ اللَّهِ
إِنْ أَرَادَ بِكُمْ سُوءًا أَوْ أَرَادَ بِكُمْ
رَحْمَةً ۚ وَلَا يَجِدُونَ لَهُمْ مِنْ دُونِ
اللَّهِ وَلِيًّا وَلَا نَصِيرًا ﴿١٧﴾

18. ನಿಮ್ಮಲ್ಲಿ (ಯುದ್ಧ ಕಾರ್ಯದಲ್ಲಿ) ತಡೆಗಳನ್ನು ಉಂಟು ಮಾಡುವವರನ್ನು ಅಲ್ಲಾಹನು ಚೆನ್ನಾಗಿ ಬಲ್ಲನು. ಅವರು ತಮ್ಮ ಸಹೋದರರೊಡನೆ, "ನಮ್ಮ ಕಡೆಗೆ ಬನ್ನಿರಿ" ಎನ್ನುತ್ತಾರೆ. ಅವರು ಯುದ್ಧದಲ್ಲಿ ಭಾಗವಹಿಸುವುದಿದ್ದರೂ ಕೇವಲ ನಾಮ ಮಾತ್ರಕ್ಕೆ.

قَدْ يَعْلَمُ اللَّهُ الْمُعَوِّقِينَ مِنْكُمْ
وَالْقَائِلِينَ لِإِخْوَانِهِمْ هَلُمَّ إِلَيْنَا ۖ
وَلَا يَأْتُونَ الْبَأْسَ إِلَّا قَلِيلًا ﴿١٨﴾

19. ಅವರು ನಿಮಗೆ ಸಹಕಾರ ಕೊಡುವುದರಲ್ಲಿ ಮಹಾ ಜಿಪುಣರು. ಅಪಾಯದ ಸಂದರ್ಭ ಬಂದಾಗ ಅವರು ಸಾಯುವವನಿಗೆ ಮೂರ್ಛೆ ಬರುವಂತೆ ಕಣ್ಣು ಗೊಂಬೆಗಳನ್ನು ತಿರುಗಿಸುತ್ತ ನಿಮ್ಮ ಕಡೆಗೆ ನೋಡುತ್ತಾರೆ. ಆದರೆ ಅಪಾಯ ನೀಗಿದ ಬಳಿಕ ಅದೇ ಜನರು ಲಾಭಗಳ ದುರಾಸೆಯಿಂದ ಹರಿತವಾದ ನಾಲಗೆಯೊಂದಿಗೆ ನಿಮ್ಮನ್ನು ಸ್ವಾಗತಿಸಲು ಬಂದು ಬಿಡುತ್ತಾರೆ. ಅವರು ಎಷ್ಟು ಮಾತ್ರಕ್ಕೂ ಸತ್ಯವಿಶ್ವಾಸವನ್ನು ಸ್ವೀಕರಿಸಲಿಲ್ಲ. ಆದುದರಿಂದಲೇ ಅಲ್ಲಾಹನು ಅವರ ಎಲ್ಲ ಕರ್ಮಗಳನ್ನೂ ನಿರರ್ಥಕಗೊಳಿಸಿ ಬಿಟ್ಟನು. ಹೀಗೆ ಮಾಡುವುದು ಅಲ್ಲಾಹನಿಗೆ ಬಹಳ ಸುಲಭ.

أَشِحَّةً عَلَيْكُمْ ۖ فَإِذَا جَاءَ الْخَوْفُ
رَأَيْتَهُمْ يَنْظُرُونَ إِلَيْكَ تَدُورُ أَعْيُنُهُمْ
كَالَّذِي يُغْشَىٰ عَلَيْهِ مِنَ الْمَوْتِ ۖ فَإِذَا
ذَهَبَ الْخَوْفُ سَلَقُوكُمْ بِأَلْسِنَةٍ حِدَادٍ
أَشِحَّةً عَلَى الْخَيْرِ ۚ أُولَٰئِكَ لَمْ يُؤْمِنُوا
فَأَحْبَطَ اللَّهُ أَعْمَالَهُمْ ۚ وَكَانَ ذَٰلِكَ
عَلَى اللَّهِ يَسِيرًا ﴿١٩﴾

20. ಆಕ್ರಮಣಕಾರರು ಇನ್ನೂ ಹೋಗಿಲ್ಲವೆಂದು ಇವರು ಭಾವಿಸುತ್ತಾರೆ ಮತ್ತು ಅವರು ಪುನಃ ಆಕ್ರಮಣ ನಡೆಸಿ ಬಿಟ್ಟರೆ, ಆ ಸಂದರ್ಭದಲ್ಲಿ ಮರುಭೂಮಿಯಲ್ಲಿ ಎಲ್ಲಾದರೂ ಹಳ್ಳಿಗರ ನಡುವೆ ಇದ್ದುಕೊಂಡು ಅಲ್ಲಿಂದಲೇ ನಿಮ್ಮ ಸ್ಥಿತಿಗತಿಗಳನ್ನು

يَحْسَبُونَ الْأَحْزَابَ لَمْ يَذْهَبُوا ۖ وَ
إِنْ يَأْتِ الْأَحْزَابُ يَوَدُّوا لَوْ أَنَّهُمْ
بَادُونَ فِي الْأَعْرَابِ يَسْأَلُونَ عَنْ أَنْبَائِكُمْ ۖ

وَلَوْ كَانُوْا فِيْكُمْ مَّا قٰتَلُوْٓا اِلَّا قَلِيْلًا ۝٢٠

ವಿಚಾರಿಸಿಕೊಂಡು ಇರಬಹುದೆಂದು ಅವರಿಗೆ ಅನಿಸುತ್ತದೆ. ಒಂದು ವೇಳೆ ಅವರು ನಿಮ್ಮ ನಡುವಿನಲ್ಲಿದ್ದರೂ ಯುದ್ಧದಲ್ಲಿ ಅತ್ಯಲ್ಪವೇ ಭಾಗವಹಿಸುವರು.

لَقَدْ كَانَ لَكُمْ فِيْ رَسُوْلِ اللّٰهِ اُسْوَةٌ حَسَنَةٌ لِّمَنْ كَانَ يَرْجُوا اللّٰهَ وَالْيَوْمَ الْاٰخِرَ وَذَكَرَ اللّٰهَ كَثِيْرًا ۝٢١

21. ನಿಶ್ಚಯವಾಗಿಯೂ ಅಲ್ಲಾಹನ ಸಂದೇಶವಾಹಕರಲ್ಲಿ ನಿಮಗಾಗಿ ಒಂದು ಅತ್ಯುತ್ತಮ ಮಾದರಿ ಇತ್ತು.[5] (ಇದು) ಅಲ್ಲಾಹ್ ಹಾಗೂ ಅಂತಿಮ ದಿನವನ್ನು ನಿರೀಕ್ಷಿಸುವವನಿಗೆ ಮತ್ತು ಅಲ್ಲಾಹನನ್ನು ಬಹಳವಾಗಿ ಸ್ಮರಿಸುವವನಿಗೆ.

وَلَمَّا رَاَ الْمُؤْمِنُوْنَ الْاَحْزَابَ ۙ قَالُوْا هٰذَا مَا وَعَدَنَا اللّٰهُ وَرَسُوْلُهٗ وَصَدَقَ اللّٰهُ وَرَسُوْلُهٗ ۡ وَمَا زَادَهُمْ اِلَّآ اِيْمَانًا وَّتَسْلِيْمًا ۝٢٢

22. ನಿಜವಾದ ಸತ್ಯವಿಶ್ವಾಸಿಗಳು ಆಕ್ರಮಣಕಾರಿ ಸೇನೆಗಳನ್ನು ಕಂಡಾಗ, "ಅಲ್ಲಾಹ್ ಮತ್ತು ಪೈಗಂಬರರು ನಮಗೆ ವಾಗ್ದಾನ ಮಾಡಿದ್ದುದು ಇದನ್ನೇ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮಾತು ನಿಜವಾಗಿತ್ತು" ಎಂದು ಉದ್ಗರಿಸಿದರು. ಈ ಘಟನೆಯು ಅವರ ವಿಶ್ವಾಸವನ್ನೂ ಅವರ ಸಮರ್ಪಣಾಭಾವವನ್ನೂ ಇನ್ನಷ್ಟು ವರ್ಧಿಸಿ ಬಿಟ್ಟಿತು.

مِنَ الْمُؤْمِنِيْنَ رِجَالٌ صَدَقُوْا مَا عَاهَدُوا اللّٰهَ عَلَيْهِ ۚ فَمِنْهُمْ مَّنْ قَضٰى نَحْبَهٗ وَمِنْهُمْ مَّنْ يَّنْتَظِرُ ۖ وَمَا بَدَّلُوْا تَبْدِيْلًا ۝٢٣

23. ಅಲ್ಲಾಹನೊಡನೆ ಮಾಡಿದ ಕರಾರನ್ನು ನಿಜವೆಂದು ಸಾಧಿಸಿ ತೋರಿಸಿದವರು ಸತ್ಯವಿಶ್ವಾಸ ಸ್ವೀಕಾರ ಮಾಡಿದವರಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಪ್ರತಿಜ್ಞೆಯನ್ನು ಪೂರ್ಣ ಗೊಳಿಸಿದರು. ಇನ್ನು ಕೆಲವರು ಸಮಯ ಕಾಯುತ್ತಿದ್ದಾರೆ. ಅವರು ತಮ್ಮ ನಿಲುಮೆಯಲ್ಲಿ ಏನೂ ಬದಲಾವಣೆ ಮಾಡಲಿಲ್ಲ.

لِّيَجْزِيَ اللّٰهُ الصّٰدِقِيْنَ بِصِدْقِهِمْ وَيُعَذِّبَ الْمُنٰفِقِيْنَ اِنْ شَآءَ اَوْ يَتُوْبَ عَلَيْهِمْ ۭ اِنَّ اللّٰهَ كَانَ غَفُوْرًا رَّحِيْمًا ۝٢٤

24. ಅಲ್ಲಾಹ್ ಸತ್ಯಸಂಧರಿಗೆ ಅವರ ಸತ್ಯಸಂಧತೆಯ ಸತ್ಫಲ ನೀಡು ವಂತಾಗಲಿಕ್ಕೂ ತಾನಿಚ್ಛಿಸಿದರೆ ಕಪಟವಿಶ್ವಾಸಿಗಳನ್ನು ಶಿಕ್ಷಿಸಲಿಕ್ಕೂ ಅಥವಾ ಅವರ ಪಶ್ಚಾತ್ತಾಪವನ್ನು ಸ್ವೀಕರಿಸಲಿಕ್ಕೂ (ಹೀಗೆಲ್ಲ ಆಯಿತು). ನಿಶ್ಚಯವಾಗಿಯೂ ಅಲ್ಲಾಹ್ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَرَدَّ اللّٰهُ الَّذِيْنَ كَفَرُوْا بِغَيْظِهِمْ لَمْ يَنَالُوْا خَيْرًا ۭ وَكَفَى اللّٰهُ الْمُؤْمِنِيْنَ الْقِتَالَ ۭ وَكَانَ اللّٰهُ قَوِيًّا عَزِيْزًا ۝٢٥

25. ಅಲ್ಲಾಹನು ಸತ್ಯನಿಷೇಧಕರ ಮುಖ ತಿರುಗಿಸಿ ಬಿಟ್ಟನು. ಅವರು ಏನೂ ಪ್ರಯೋಜನ ಪಡೆಯದೆ ತಮ್ಮ ಹೃದಯ ಬೇಗುದಿ ಯೊಂದಿಗೆ ಹಾಗೆಯೇ ಮರಳಿ ಹೋದರು. ಸತ್ಯವಿಶ್ವಾಸಿಗಳ ಕಡೆ ಯಿಂದ ಯುದ್ಧ ಮಾಡಲು ಅಲ್ಲಾಹನೇ ಸಾಕಾದನು. ಅಲ್ಲಾಹ್ ಪ್ರಬಲನೂ ಅಜೇಯನೂ ಆಗಿರುತ್ತಾನೆ.

5. ಅತ್ಯುತ್ತಮ ಮಾದರಿ ಇದೆ ಎಂದೂ ಇದನ್ನು ಭಾಷಾಂತರಿಸಬಹುದು.

26. ಗ್ರಂಥದವರಲ್ಲಿ ಈ ಆಕ್ರಮಣಕಾರರಿಗೆ ನೆರವಾದವರನ್ನು[6] ಅಲ್ಲಾಹ್ ಅವರ ಕೋಟೆಗಳಿಂದ ಇಳಿಸಿ ತಂದನು ಮತ್ತು ಅವರ ಹೃದಯಗಳಲ್ಲಿ ಎಂತಹ ಭೀತಿಯನ್ನಿರಿಸಿ ಬಿಟ್ಟನೆಂದರೆ, ಅವರ ಒಂದು ಗುಂಪನ್ನು ನೀವು ವಧಿಸುತ್ತಿರುವಿರಿ ಮತ್ತು ಇನ್ನೊಂದು ಗುಂಪನ್ನು ಸೆರೆ ಹಿಡಿಯುತ್ತಿರುವಿರಿ.

وَ اَنْزَلَ الَّذِيْنَ ظَاهَرُوْهُمْ مِّنْ اَهْلِ الْكِتٰبِ مِنْ صَيَاصِيْهِمْ وَقَذَفَ فِيْ قُلُوْبِهِمُ الرُّعْبَ فَرِيْقًا تَقْتُلُوْنَ وَتَاْسِرُوْنَ فَرِيْقًا ﴿٢٦﴾

27. ಅವನು ನಿಮ್ಮನ್ನು ಅವರ ಭೂಮಿಯ, ಅವರ ಮನೆಗಳ ಮತ್ತು ಅವರ ಸಂಪತ್ತಿನ ಉತ್ತರಾಧಿಕಾರಿಗಳಾಗಿ ಮಾಡಿ ಬಿಟ್ಟನು. ನೀವೆಂದೂ ಕಾಲಿಟ್ಟಿರದ ಪ್ರದೇಶವನ್ನು ಅವನು ನಿಮಗೆ ಕೊಟ್ಟನು. ಅಲ್ಲಾಹನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು.

وَ اَوْرَثَكُمْ اَرْضَهُمْ وَ دِيَارَهُمْ وَ اَمْوَالَهُمْ وَ اَرْضًا لَّمْ تَطَـُٔوْهَا ؕ وَ كَانَ اللّٰهُ عَلٰى كُلِّ شَيْءٍ قَدِيْرًا ﴿٢٧﴾

28. ಪೈಗಂಬರರೇ, ನಿಮ್ಮ ಪತ್ನಿಯರೊಡನೆ ಹೇಳಿರಿ- "ನೀವು ಈ ಲೋಕ ಮತ್ತು ಇದರ ವೈಭವಗಳನ್ನು ಇಚ್ಛಿಸುತ್ತೀರಾದರೆ- ಬನ್ನಿರಿ, ನಾನು ನಿಮಗೇನಾದರೂ ಕೊಡಿಸಿ ನಿಮ್ಮನ್ನು ಉತ್ತಮ ರೀತಿಯಲ್ಲಿ ಬೀಳ್ಕೊಡುತ್ತೇನೆ[7].

يٰۤاَيُّهَا النَّبِيُّ قُلْ لِّاَزْوَاجِكَ اِنْ كُنْتُنَّ تُرِدْنَ الْحَيٰوةَ الدُّنْيَا وَ زِيْنَتَهَا فَتَعَالَيْنَ اُمَتِّعْكُنَّ وَ اُسَرِّحْكُنَّ سَرَاحًا جَمِيْلًا ﴿٢٨﴾

29. ಮತ್ತು ನೀವು ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಪರಲೋಕದ ಬೀಡನ್ನು ಇಚ್ಛಿಸುತ್ತೀರಾದರೆ, ನಿಮ್ಮಲ್ಲಿ ಸಜ್ಜನರಾಗಿರುವವರಿಗೆ ಅಲ್ಲಾಹ್ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿರುತ್ತಾನೆಂಬುದನ್ನು ತಿಳಿದುಕೊಳ್ಳಿರಿ."

وَ اِنْ كُنْتُنَّ تُرِدْنَ اللّٰهَ وَ رَسُوْلَهٗ وَ الدَّارَ الْاٰخِرَةَ فَاِنَّ اللّٰهَ اَعَدَّ لِلْمُحْسِنٰتِ مِنْكُنَّ اَجْرًا عَظِيْمًا ﴿٢٩﴾

30. ಪೈಗಂಬರರ ಪತ್ನಿಯರೇ, ನಿಮ್ಮಲ್ಲಿ ವ್ಯಕ್ತವಾದ ಅಶ್ಲೀಲ ಕಾರ್ಯವೆಸಗುವವಳಿಗೆ ಇಮ್ಮಡಿ ಯಾತನೆ ಕೊಡಲಾಗುವುದು.[8] ಇದು ಅಲ್ಲಾಹನಿಗೆ ಅತಿ ಸುಲಭವಾದ ಕೆಲಸ.

يٰنِسَآءَ النَّبِيِّ مَنْ يَّاْتِ مِنْكُنَّ بِفَاحِشَةٍ مُّبَيِّنَةٍ يُّضٰعَفْ لَهَا الْعَذَابُ ضِعْفَيْنِ ؕ وَ كَانَ ذٰلِكَ عَلَى اللّٰهِ يَسِيْرًا ﴿٣٠﴾

31. *ಅದಲ್ಲದೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವಳಿಗೆ ಮತ್ತು ಸತ್ಕರ್ಮವೆಸಗುವವಳಿಗೆ ನಾವು ಇಮ್ಮಡಿ ಸತ್ಫಲವನ್ನೀಯುವೆವು. ನಾವು ಅವಳಿಗಾಗಿ ಗೌರವಪೂರ್ಣ ಜೀವನಾಧಾರವನ್ನು ಸಿದ್ಧಗೊಳಿಸಿಟ್ಟಿದ್ದೇವೆ.

وَ مَنْ يَّقْنُتْ مِنْكُنَّ لِلّٰهِ وَ رَسُوْلِهٖ وَ تَعْمَلْ صَالِحًا نُّؤْتِهَاۤ اَجْرَهَا مَرَّتَيْنِ ۙ وَ اَعْتَدْنَا لَهَا رِزْقًا كَرِيْمًا ﴿٣١﴾

6. ಅರ್ಥಾತ್- ಕುರೈಝಾ ಗೋತ್ರದ ಯಹೂದಿಯರು.
7. ಪ್ರವಾದಿವರ್ಯರ(ಸ) ಮನೆಯಲ್ಲಿ ಒಪ್ಪೊತ್ತಿನ ಊಟಕ್ಕೂ ಕಷ್ಟವಾಗಿದ್ದ ಮತ್ತು ಪ್ರವಾದಿವರ್ಯರ(ಸ) ಪತ್ನಿಯರು ಕಂಗಾಲಾಗಿದ್ದ ಕಾಲದಲ್ಲಿ ಈ ಸೂಕ್ತ ಅವತೀರ್ಣಗೊಂಡಿತ್ತು.
8. ಪ್ರವಾದಿವರ್ಯರ(ಸ) ಪತ್ನಿಯರ ಬಗ್ಗೆ ಯಾವುದೇ ಅಶ್ಲೀಲ ಕೆಲಸದ ಸಂಶಯವಿತ್ತೆಂಬುದು ಈ ಸೂಕ್ತದ ಅರ್ಥವಲ್ಲ(ಶಾಂತಂ ಪಾಪಂ). ನೀವು ಸಮಸ್ತ ಸಮುದಾಯದ ಮಾತೆಯರಾಗಿದ್ದೀರಿ. ಆದ್ದರಿಂದ ನಿಮ್ಮ ಘನತೆಗೆ ತಕ್ಕುದಲ್ಲದ ಯಾವುದೇ ಕೆಲಸವನ್ನು ಮಾಡದಿರಿ ಎಂಬ ಪ್ರಜ್ಞೆಯನ್ನು ಮೂಡಿಸುವುದೇ ಇದರ ಉದ್ದೇಶ.

***ಇಲ್ಲಿಂದ 22ನೇ ಕಾಂಡ ಆರಂಭ.**

32. ಪೈಗಂಬರರ ಪತ್ನಿಯರೇ, ನೀವು ಸಾಮಾನ್ಯ ಸ್ತ್ರೀಯರಂತಲ್ಲ. ನೀವು ಅಲ್ಲಾಹನನ್ನು ಭಯಪಡುವವರಾಗಿದ್ದರೆ ಮಾನಸಿಕ ಕೇಡಿ ಗೊಳಗಾದ ವ್ಯಕ್ತಿಯು ಪ್ರಲೋಭನಕ್ಕೊಳಗಾಗಿ ಬಿಡುವ ರೀತಿಯಲ್ಲಿ ಮೋಹಕ ದನಿಯಲ್ಲಿ ಮಾತಾಡಬೇಡಿರಿ. ನಿಖರವಾಗಿ ಮಾತಾಡಿರಿ.

يٰنِسَآءَ النَّبِيِّ لَسْتُنَّ كَاَحَدٍ مِّنَ النِّسَآءِ اِنِ اتَّقَيْتُنَّ فَلَا تَخْضَعْنَ بِالْقَوْلِ فَيَطْمَعَ الَّذِيْ فِيْ قَلْبِهٖ مَرَضٌ وَّقُلْنَ قَوْلًا مَّعْرُوْفًا ۚ﴿۳۲﴾

33. ನಿಮ್ಮ ಮನೆಗಳಲ್ಲೇ ಇದ್ದುಕೊಳ್ಳಿರಿ. ಗತ ಅಜ್ಞಾನ ಕಾಲದಂತಹ ಸೌಂದರ್ಯ ಪ್ರದರ್ಶನ ಮಾಡುತ್ತ ತಿರುಗಾಡಬೇಡಿರಿ. ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ಕೊಡಿರಿ, ಅಲ್ಲಾಹ್ ಮತ್ತು ಅವನ ರಸೂಲನ್ನು ಅನುಸರಿಸಿರಿ. ರಸೂಲರ ಮನೆಯವರಾದ ನಿಮ್ಮಿಂದ ಮಾಲಿನ್ಯವನ್ನು ದೂರೀಕರಿಸಿ ನಿಮ್ಮನ್ನು ಸಂಪೂರ್ಣ ವಾಗಿ ಶುದ್ಧಿಗೊಳಿಸಲು ಅಲ್ಲಾಹ್ ಇಚ್ಛಿಸುತ್ತಾನೆ.

وَقَرْنَ فِيْ بُيُوْتِكُنَّ وَلَا تَبَرَّجْنَ تَبَرُّجَ الْجَاهِلِيَّةِ الْاُوْلٰى وَاَقِمْنَ الصَّلٰوةَ وَاٰتِيْنَ الزَّكٰوةَ وَاَطِعْنَ اللّٰهَ وَرَسُوْلَهٗ ۗ اِنَّمَا يُرِيْدُ اللّٰهُ لِيُذْهِبَ عَنْكُمُ الرِّجْسَ اَهْلَ الْبَيْتِ وَيُطَهِّرَكُمْ تَطْهِيْرًا ۚ﴿۳۳﴾

34. ನಿಮ್ಮ ಮನೆಗಳಲ್ಲಿ ಓದಿ ಹೇಳಲಾಗುತ್ತಿರುವ ಅಲ್ಲಾಹನ ಸೂಕ್ತ ಗಳನ್ನೂ ಯುಕ್ತಿಪೂರ್ಣ ಮಾತುಗಳನ್ನೂ ಚೆನ್ನಾಗಿ ನೆನಪಿಡಿರಿ. ನಿಶ್ಚಯವಾಗಿಯೂ ಅಲ್ಲಾಹ್ ಸೂಕ್ಷ್ಮಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.[9]

وَاذْكُرْنَ مَا يُتْلٰى فِيْ بُيُوْتِكُنَّ مِنْ اٰيٰتِ اللّٰهِ وَالْحِكْمَةِ ۗ اِنَّ اللّٰهَ كَانَ لَطِيْفًا خَبِيْرًا ﴿۳۴﴾

35. ನಿಶ್ಚಯವಾಗಿಯೂ ಮುಸ್ಲಿಮರೂ ಸತ್ಯವಿಶ್ವಾಸಿಗಳೂ ಆಜ್ಞಾಪಾಲಕರೂ ಸತ್ಯಸಂಧರೂ ಸಹನಶೀಲರೂ ವಿನಮ್ರರೂ ದಾನಶೀಲರೂ ಉಪವಾಸ ವ್ರತವನ್ನಾಚರಿಸುವವರೂ ತಮ್ಮ ಗುಪ್ತಾಂಗಗಳ ರಕ್ಷಣೆ ಮಾಡಿಕೊಳ್ಳುವವರೂ ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುವವರೂ ಆದ ಎಲ್ಲಾ ಪುರುಷರು ಮತ್ತು ಸ್ತ್ರೀಯರಿಗೆ ಅಲ್ಲಾಹನು ಕ್ಷಮೆ ಮತ್ತು ಅತಿ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿದ್ದಾನೆ.

اِنَّ الْمُسْلِمِيْنَ وَالْمُسْلِمٰتِ وَالْمُؤْمِنِيْنَ وَالْمُؤْمِنٰتِ وَالْقٰنِتِيْنَ وَالْقٰنِتٰتِ وَالصّٰدِقِيْنَ وَالصّٰدِقٰتِ وَالصّٰبِرِيْنَ وَالصّٰبِرٰتِ وَالْخٰشِعِيْنَ وَالْخٰشِعٰتِ وَالْمُتَصَدِّقِيْنَ وَالْمُتَصَدِّقٰتِ وَالصَّآىِٕمِيْنَ وَالصّٰٓىِٕمٰتِ وَالْحٰفِظِيْنَ فُرُوْجَهُمْ وَالْحٰفِظٰتِ وَالذّٰكِرِيْنَ اللّٰهَ كَثِيْرًا وَّالذّٰكِرٰتِ ۙ اَعَدَّ اللّٰهُ لَهُمْ مَّغْفِرَةً وَّاَجْرًا عَظِيْمًا ﴿۳۵﴾

36. ಅಲ್ಲಾಹ್ ಮತ್ತು ಅವನ ಸಂದೇಶವಾಹಕರು ಯಾವುದಾದರೊಂದು ವಿಷಯದ ತೀರ್ಮಾನ ಮಾಡಿಬಿಟ್ಟರೆ ಆ ವಿಷಯದಲ್ಲಿ ಸ್ವತಃ ತೀರ್ಮಾನ ಕೈಗೊಳ್ಳುವ ಹಕ್ಕು (ಸತ್ಯವಿಶ್ವಾಸಿಗಳಾದ) ಯಾವ ಸ್ತ್ರೀ-ಪುರುಷರಿಗೂ ಇಲ್ಲ. ಯಾರಾದರೂ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದರೆ, ಅವನು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದುಬಿಟ್ಟನು.

وَمَا كَانَ لِمُؤْمِنٍ وَّلَا مُؤْمِنَةٍ اِذَا قَضَى اللّٰهُ وَرَسُوْلُهٗٓ اَمْرًا اَنْ يَّكُوْنَ لَهُمُ الْخِيَرَةُ مِنْ اَمْرِهِمْ ۗ وَمَنْ يَّعْصِ اللّٰهَ وَرَسُوْلَهٗ فَقَدْ ضَلَّ ضَلٰلًا مُّبِيْنًا ﴿۳۶﴾

9. ಅರ್ಥಾತ್- ಅತ್ಯಂತ ಗೌಪ್ಯವಾದ ವಿಷಯಗಳನ್ನೂ ಬಲ್ಲವನು.

37. ಪೈಗಂಬರರೇ, ಅಲ್ಲಾಹನೂ ನೀವೂ ಯಾರಿಗೆ ಉಪಕಾರ ಮಾಡಿದ್ದಿರೋ ಆ ವ್ಯಕ್ತಿಯೊಡನೆ ನೀವು, "ನಿನ್ನ ಪತ್ನಿಯನ್ನು ಬಿಡಬೇಡ ಮತ್ತು ಅಲ್ಲಾಹನನ್ನು ಭಯಪಡು" ಎಂದು ಹೇಳುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.[10] ಆ ವೇಳೆ ಅಲ್ಲಾಹ್ ಬಹಿರಂಗ ಗೊಳಿಸಲು ಇಚ್ಛಿಸಿದ್ದ ವಿಷಯವನ್ನು ನೀವು ನಿಮ್ಮ ಹೃದಯ ದೊಳಗೆ ಬಚ್ಚಿಟ್ಟಿದ್ದಿರಿ. ನೀವು ಜನರಿಗೆ ಹೆದರುತ್ತಿದ್ದಿರಿ. ನಿಜವಾಗಿ ಭಯಪಡಲು ಅಲ್ಲಾಹನು ಅಧಿಕ ಹಕ್ಕುದಾರನಾಗಿದ್ದಾನೆ.[11] ತರುವಾಯ ಝೈದ್ ಅವಳಿಂದ ತನ್ನ ಅಪೇಕ್ಷೆಯನ್ನು ಪೂರ್ತಿಗೊಳಿಸಿ ಕೊಂಡ ಬಳಿಕ[12] ನಾವು ಅವಳ ವಿವಾಹವನ್ನು ನಿಮ್ಮೊಂದಿಗೆ ಮಾಡಿದೆವು. (ಇದು) ದತ್ತುಪುತ್ರರು ತಮ್ಮ ಪತ್ನಿಯರೊಂದಿಗೆ ತಮ್ಮ ಅಪೇಕ್ಷೆ ಪೂರ್ತಿಗೊಳಿಸಿ ಕೊಂಡ ಬಳಿಕ ಅವರ (ವಿಚ್ಛೇದಿತೆಯರ) ವಿಷಯದಲ್ಲಿ ಸತ್ಯವಿಶ್ವಾಸಿಗಳಿಗೆ ಯಾವುದೇ ಅಡಚಣೆ ಇಲ್ಲದಂತಾಗಲಿಕ್ಕಾಗಿ (ಆಗಿದೆ). ಅಲ್ಲಾಹನ ಆಜ್ಞೆಯಂತು ಜಾರಿಗೆ ಬಂದೇ ತೀರಬೇಕಿತ್ತು.

وَإِذْ تَقُولُ لِلَّذِي أَنْعَمَ اللَّهُ عَلَيْهِ
وَأَنْعَمْتَ عَلَيْهِ أَمْسِكْ عَلَيْكَ زَوْجَكَ
وَاتَّقِ اللَّهَ وَتُخْفِي فِي نَفْسِكَ مَا اللَّهُ
مُبْدِيهِ وَتَخْشَى النَّاسَ ۚ وَاللَّهُ أَحَقُّ
أَنْ تَخْشَاهُ ۖ فَلَمَّا قَضَىٰ زَيْدٌ مِنْهَا
وَطَرًا زَوَّجْنَاكَهَا لِكَيْ لَا يَكُونَ عَلَى
الْمُؤْمِنِينَ حَرَجٌ فِي أَزْوَاجِ أَدْعِيَائِهِمْ
إِذَا قَضَوْا مِنْهُنَّ وَطَرًا ۚ وَكَانَ
أَمْرُ اللَّهِ مَفْعُولًا ﴿٣٧﴾

38. ಅಲ್ಲಾಹನು ಪ್ರವಾದಿಗಾಗಿ ನಿಶ್ಚಯಿಸಿ ಬಿಟ್ಟಿರುವಂತಹ ಕಾರ್ಯದಲ್ಲಿ ಪ್ರವಾದಿಗೆ ಯಾವ ಅಡಚಣೆಯೂ ಇಲ್ಲ. ಅಲ್ಲಾಹನ ಇದೇ ನಿಯಮವು ಹಿಂದೆ ಗತಿಸಿ ಹೋಗಿದ್ದ ಪ್ರವಾದಿಗಳ ವಿಷಯದಲ್ಲೂ ಜಾರಿಯಲ್ಲಿತ್ತು. ಅಲ್ಲಾಹನ ಆಜ್ಞೆಯು ಒಂದು ಖಚಿತವಾಗಿ ನಿರ್ಧರಿಸಿದ ತೀರ್ಪಾಗಿರುತ್ತದೆ.

مَا كَانَ عَلَى النَّبِيِّ مِنْ حَرَجٍ فِيمَا
فَرَضَ اللَّهُ لَهُ ۖ سُنَّةَ اللَّهِ فِي الَّذِينَ
خَلَوْا مِنْ قَبْلُ ۚ وَكَانَ أَمْرُ اللَّهِ
قَدَرًا مَقْدُورًا ﴿٣٨﴾

39. ಅಲ್ಲಾಹನ ಸಂದೇಶಗಳನ್ನು ತಲುಪಿಸುವ ಅವನನ್ನೇ ಭಯಪಡುವ ಮತ್ತು ಒಬ್ಬ ದೇವನ ಹೊರತು ಯಾರನ್ನೂ ಭಯಪಡದವರಿಗೆ (ಇರುವ, ಅಲ್ಲಾಹನ ನಿಯಮವಿದು) ಮತ್ತು ವಿಚಾರಣೆ ನಡೆಸಲು ಅಲ್ಲಾಹನೇ ಸಾಕು.

الَّذِينَ يُبَلِّغُونَ رِسَالَاتِ اللَّهِ وَيَخْشَوْنَهُ
وَلَا يَخْشَوْنَ أَحَدًا إِلَّا اللَّهَ ۗ وَكَفَىٰ
بِاللَّهِ حَسِيبًا ﴿٣٩﴾

10. ಆ ವ್ಯಕ್ತಿಯೆಂದರೆ ಹ. ಝೈದ್ ಬಿನ್ ಹಾರಿಸ್(ರ). ಅವರು ಪ್ರವಾದಿವರ್ಯರು(ಸ) ಸ್ವತಂತ್ರ ಗೊಳಿಸಿದ ಗುಲಾಮ ಮತ್ತು ಅವರ ದತ್ತು ಪುತ್ರರಾಗಿದ್ದರು. ಅವರ ಪತ್ನಿಯೆಂದರೆ ಪ್ರವಾದಿವರ್ಯರ(ಸ) ಸೋದರತ್ತೆಯ ಮಗಳಾದ ಹ. ಝೈನಬ್(ರ). ಪ್ರವಾದಿವರ್ಯರು(ಸ) ಅವರನ್ನು ಹ. ಝೈನಬ್‌ರ(ರ) ಜತೆ ವಿವಾಹ ಮಾಡಿಸಿದ್ದರು. ಆದರೆ ಅವರಿಬ್ಬರ ನಡುವೆ ಹೊಂದಾಣಿಕೆಯಾಗುತ್ತಿರಲಿಲ್ಲ. ಹ. ಝೈದ್(ರ) ಅವರಿಗೆ ವಿವಾಹ ವಿಚ್ಛೇದನ ಕೊಡಲು ಸನ್ನದ್ಧರಾಗಿದ್ದರು.

11. ಅರ್ಥಾತ್- ಹ. ಝೈದ್(ರ), ಹ. ಝೈನಬ್‌ರಿಗೆ(ರ) ತಲಾಕ್ ನೀಡಿದಾಗ ಪ್ರವಾದಿವರ್ಯರು(ಸ) ಸ್ವತಃ ಅವರನ್ನು ವಿವಾಹವಾಗಿ, ದತ್ತು ಪುತ್ರನನ್ನು ನಿಜವಾದ ಪುತ್ರನೆಂದೇ ಭಾವಿಸಲಾಗುತ್ತಿದ್ದ ಅರೇಬಿಯಾದ ಪುರಾತನ ಸಂಪ್ರದಾಯವನ್ನು ಮುರಿಯಬೇಕೆಂಬುದು ಅಲ್ಲಾಹನ ಇಚ್ಛೆಯಾಗಿತ್ತು. ಆದರೆ ಈ ಬಗ್ಗೆ ಅರಬ್ ನಿವಾಸಿಗಳು ತೀವ್ರ ಟೀಕೆಗಳನ್ನು ಮಾಡುವರೆಂಬ ಆಶಂಕೆಯಿಂದ ಪ್ರವಾದಿವರ್ಯರು(ಸ) ಈ ಪರೀಕ್ಷೆಯಿಂದ ದೂರ ಉಳಿಯಬಯಸಿದ್ದರು. ಆದ್ದರಿಂದ ಝೈದ್ ತಮ್ಮ ಪತ್ನಿಗೆ ತಲಾಕ್ ಕೊಡದಂತೆ ಪ್ರವಾದಿವರ್ಯರು(ಸ) ಪ್ರಯತ್ನಿಸಿದರು.

12. ಅರ್ಥಾತ್- ತಲಾಕ್ ಕೊಡುವ ತಮ್ಮ ಬಯಕೆಯನ್ನು ಈಡೇರಿಸಿದರು. ಹೀಗೆ ವಿಚ್ಛೇದಿತ ಪತ್ನಿಗೂ ಅವರಿಗೂ ಯಾವುದೇ ಸಂಬಂಧ ಇಲ್ಲದಂತಾಯಿತು.

40. (ಜನರೇ) ಮುಹಮ್ಮದ್‌ರು ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ. ಅಲ್ಲಾಹನು ಸಕಲ ವಸ್ತುಗಳ ಪರಿಜ್ಞಾನವುಳ್ಳವನು.[13]

مَا كَانَ مُحَمَّدٌ أَبَا أَحَدٍ مِّن رِّجَالِكُمْ وَلَٰكِن رَّسُولَ اللَّهِ وَخَاتَمَ النَّبِيِّينَ ۗ وَكَانَ اللَّهُ بِكُلِّ شَيْءٍ عَلِيمًا ﴿٤٠﴾

41. ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಬಹಳವಾಗಿ ಸ್ಮರಿಸಿರಿ-

يَا أَيُّهَا الَّذِينَ آمَنُوا اذْكُرُوا اللَّهَ ذِكْرًا كَثِيرًا ﴿٤١﴾

42. ಮತ್ತು ಬೆಳಗು ಬೈಗುಗಳಲ್ಲಿ ಅವನ ಗುಣಗಾನ ಮಾಡುತ್ತಲಿರಿ.

وَسَبِّحُوهُ بُكْرَةً وَأَصِيلًا ﴿٤٢﴾

43. ಅವನೇ ನಿಮ್ಮ ಮೇಲೆ ಕೃಪೆ ತೋರುವವನು ಮತ್ತು ಅವನು ನಿಮ್ಮನ್ನು ಅಂಧಕಾರಗಳಿಂದ ಪ್ರಕಾಶದ ಕಡೆಗೆ ತರುವಂತೆ ಅವನ ದೇವಚರರು ನಿಮಗಾಗಿ ಕೃಪಾ ಪ್ರಾರ್ಥನೆ ಮಾಡುತ್ತಾರೆ. ಅವನು ಸತ್ಯವಿಶ್ವಾಸಿಗಳ ಮೇಲೆ ತುಂಬಾ ಕರುಣೆಯುಳ್ಳವನು.

هُوَ الَّذِي يُصَلِّي عَلَيْكُمْ وَمَلَائِكَتُهُ لِيُخْرِجَكُم مِّنَ الظُّلُمَاتِ إِلَى النُّورِ ۚ وَكَانَ بِالْمُؤْمِنِينَ رَحِيمًا ﴿٤٣﴾

44. ಅವನನ್ನು ಅವರು ಭೇಟಿಯಾಗುವ ದಿನ ಅವರನ್ನು 'ಸಲಾಮ್' ನೊಂದಿಗೆ ಸ್ವಾಗತಿಸಲಾಗುವುದು ಮತ್ತು ಅಲ್ಲಾಹನು ಅವರಿಗಾಗಿ ಅತ್ಯಂತ ಗೌರವಪೂರ್ಣ ಸತ್ಫಲವನ್ನು ಸಿದ್ಧಗೊಳಿಸಿಟ್ಟಿದ್ದಾನೆ.

تَحِيَّتُهُمْ يَوْمَ يَلْقَوْنَهُ سَلَامٌ ۚ وَأَعَدَّ لَهُمْ أَجْرًا كَرِيمًا ﴿٤٤﴾

45. ಪೈಗಂಬರರೇ, ನಾವು ನಿಮ್ಮನ್ನು ಸಾಕ್ಷಿದಾರರಾಗಿಯೂ ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿಯೂ-

يَا أَيُّهَا النَّبِيُّ إِنَّا أَرْسَلْنَاكَ شَاهِدًا وَمُبَشِّرًا وَنَذِيرًا ﴿٤٥﴾

46. ಅಲ್ಲಾಹನ ಅನುಮತಿಯಿಂದ ಅವನ ಕಡೆಗೆ ಕರೆ ನೀಡುವವರಾಗಿಯೂ ಪ್ರಕಾಶಮಯ ಜ್ಯೋತಿಯಾಗಿಯೂ ಮಾಡಿ ಕಳುಹಿಸಿರುತ್ತೇವೆ.

وَدَاعِيًا إِلَى اللَّهِ بِإِذْنِهِ وَسِرَاجًا مُّنِيرًا ﴿٤٦﴾

13. ಪ್ರವಾದಿವರ್ಯರ(ಸ) ಪ್ರಸ್ತುತ ವಿವಾಹದ ಕುರಿತು ವಿರೋಧಿಗಳು ಮಾಡುತ್ತಿದ್ದ ಎಲ್ಲಾ ಆಕ್ಷೇಪಗಳ ಬುಡವನ್ನೇ ಈ ಸೂಕ್ತದ ಮೂಲಕ ಕಿತ್ತೊಗೆಯಲಾಗಿದೆ. ಅವರು ತಮ್ಮ ಸೊಸೆಯನ್ನೇ ವಿವಾಹವಾಗಿದ್ದಾರೆ ಎಂಬುದು ಅವರ ಮೊಟ್ಟ ಮೊದಲ ಆಕ್ಷೇಪವಾಗಿತ್ತು. ಅದಕ್ಕುತ್ತರವಾಗಿ 'ಮುಹಮ್ಮದ್(ಸ) ನಿಮ್ಮ ಪುರುಷರ ಪೈಕಿ ಯಾರ ತಂದೆಯೂ ಅಲ್ಲ' ಎಂದು ಹೇಳಲಾಗಿದೆ. ಅರ್ಥಾತ್ ಅವರ ವಿಚ್ಛೇದಿತ ಪತ್ನಿ ನಿಷಿದ್ಧವಾಗಲು ಅವರು ನೈಜ ಪುತ್ರರಾಗಿದ್ದುದು ಯಾವಾಗ? ದತ್ತುಪುತ್ರನು ನಿಜವಾದ ಪುತ್ರನಂತೆ ಅಲ್ಲದಿದ್ದರೂ ಅವರ ವಿಚ್ಛೇದಿತ ಪತ್ನಿಯೊಂದಿಗೆ ವಿವಾಹವಾಗುವ ಔಚಿತ್ಯವೇನಿತ್ತು ಎಂಬುದು ಅವರ ಎರಡನೇ ಆಕ್ಷೇಪವಾಗಿತ್ತು. ಅದಕ್ಕುತ್ತರವಾಗಿ 'ಆದರೆ ಅವರು ಅಲ್ಲಾಹನ ಪ್ರವಾದಿಯಾಗಿದ್ದಾರೆ' ಎಂದು ಹೇಳಲಾಗಿದೆ. ಅರ್ಥಾತ್ ಯಾವ ಸಿಂಧು ಕಾರ್ಯಗಳನ್ನು ನಿಮ್ಮ ಸಂಪ್ರದಾಯಗಳು ವಿನಾಕಾರಣ ನಿಷಿದ್ಧಗೊಳಿಸಿಬಿಟ್ಟಿದೆಯೋ ಆ ಬಗ್ಗೆ ಇರುವ ಎಲ್ಲಾ ಪೂರ್ವಗ್ರಹಗಳನ್ನು ಅಳಿಸಿ ಬಿಡುವುದು ಮತ್ತು ಅದರ ಸಿಂಧುತ್ವದ ಬಗ್ಗೆ ಯಾವುದೇ ಆಶಂಕೆಯನ್ನು ಬಾಕಿಯುಳಿಸದಿರುವುದು ಪ್ರವಾದಿಯ ಮೇಲಿನ ಬಾಧ್ಯತೆಯಾಗಿದೆ. ಅನಂತರ ಮುಂದುವರಿದು, 'ಅವರು ಅಂತಿಮ ಪ್ರವಾದಿಯಾಗಿದ್ದಾರೆ' ಎಂದು ಹೇಳಲಾಯಿತು. ಅರ್ಥಾತ್ ಅವರ ನಂತರ ಯಾವುದೇ 'ರಸೂಲ'ರು ಬರುವುದಂತಿರಲಿ, ಯಾವುದೇ 'ನಬಿ'ಯೂ ಬರಲಿಕ್ಕಿಲ್ಲ. ಆದ್ದರಿಂದ ಸಮಾಜದ ಯಾವುದೇ ಕಾನೂನಿನ ಸುಧಾರಣೆ ಅವರ ಕಾಲದಲ್ಲಿ ಜಾರಿಗೆ ಬರದೇ ಹೋದರೆ ನಂತರ ಆ ಲೋಪವನ್ನು ತುಂಬಲು ಪ್ರವಾದಿಯ ಆಗಮನವಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದ್ದರಿಂದ ಈ ಅಜ್ಞಾನಕಾಲದ ಸಂಪ್ರದಾಯವನ್ನು ಅವರು ಸ್ವತಃ ಅಳಿಸುವ ಅವಶ್ಯಕತೆ ಇದೆ. ಅನಂತರ ಇನ್ನಷ್ಟು ಒತ್ತುಕೊಟ್ಟು, 'ಅಲ್ಲಾಹನು ಎಲ್ಲಾ ವಿಷಯಗಳ ಬಗ್ಗೆ ಜ್ಞಾನ ಉಳ್ಳವನು' ಎಂದು ಹೇಳಲಾಗಿದೆ. ಅರ್ಥಾತ್ ಪ್ರವಾದಿವರ್ಯರ(ಸ) ಮೂಲಕ ಆ ಅಜ್ಞಾನಜನ್ಯ ಸಂಪ್ರದಾಯವನ್ನು ಕೊನೆಗೊಳಿಸಿ ಬಿಡುವುದರ ಔಚಿತ್ಯವೇನು ಮತ್ತು ಹಾಗೆ ಮಾಡದೆ ಇರುವುದರಲ್ಲಿ ಯಾವ ಕೇಡಿದೆ ಎಂಬುದನ್ನು ಅಲ್ಲಾಹನು ಬಲ್ಲನು.

47. ಅಲ್ಲಾಹನ ಕಡೆಯಿಂದ ಅವರಿಗಾಗಿ ಮಹಾ ಅನುಗ್ರಹವಿದೆ ಎಂಬ ಸುವಾರ್ತೆಯನ್ನು ಸತ್ಯವಿಶ್ವಾಸಿಗಳಿಗೆ ತಿಳಿಸಿ ಬಿಡಿರಿ.

وَبَشِّرِ الْمُؤْمِنِينَ بِأَنَّ لَهُمْ مِنَ اللَّهِ فَضْلًا كَبِيرًا ﴿٤٧﴾

48. ಮತ್ತು ಸತ್ಯನಿಷೇಧಿಗಳಿಗೂ ಕಪಟವಿಶ್ವಾಸಿಗಳಿಗೂ ಎಷ್ಟು ಮಾತ್ರಕ್ಕೂ ಮಣಿಯದಿರಿ. ಅವರ ಕಿರುಕುಳಗಳನ್ನು ಕಡೆಗಣಿಸಿರಿ.[14] ಅಲ್ಲಾಹನ ಮೇಲೆ ಭರವಸೆ ಇಡಿರಿ. ಮನುಷ್ಯನು ತನ್ನ ವ್ಯವಹಾರ ಗಳನ್ನು ಒಪ್ಪಿಸಲು ಅಲ್ಲಾಹನೇ ಸಾಕು.

وَلَا تُطِعِ الْكَافِرِينَ وَالْمُنَافِقِينَ وَدَعْ أَذَاهُمْ وَتَوَكَّلْ عَلَى اللَّهِ ۚ وَكَفَىٰ بِاللَّهِ وَكِيلًا ﴿٤٨﴾

49. ಸತ್ಯವಿಶ್ವಾಸಿಗಳೇ, ನೀವು ಸತ್ಯವಿಶ್ವಾಸಿನಿಯರೊಂದಿಗೆ ನಿಕಾಹ್ ಮಾಡಿ ಅವರನ್ನು ಮುಟ್ಟುವುದಕ್ಕೆ ಮುಂಚೆ ತಲಾಕ್ ಕೊಟ್ಟು ಬಿಟ್ಟರೆ, ನಿಮ್ಮ ಕಡೆಯಿಂದ ಅವರ ಮೇಲೆ ಯಾವುದೇ ಇದ್ದತ್ ಪೂರ್ಣಗೊಳ್ಳಬೇಕೆಂದಿಲ್ಲ. ಆದುದರಿಂದ ಏನಾದರೂ ಸಂಭಾವನೆ ಕೊಡಿರಿ ಮತ್ತು ಉತ್ತಮ ರೀತಿಯಿಂದ ಬೀಳ್ಕೊಡಿರಿ.

يَا أَيُّهَا الَّذِينَ آمَنُوا إِذَا نَكَحْتُمُ الْمُؤْمِنَاتِ ثُمَّ طَلَّقْتُمُوهُنَّ مِنْ قَبْلِ أَنْ تَمَسُّوهُنَّ فَمَا لَكُمْ عَلَيْهِنَّ مِنْ عِدَّةٍ تَعْتَدُّونَهَا ۖ فَمَتِّعُوهُنَّ وَسَرِّحُوهُنَّ سَرَاحًا جَمِيلًا ﴿٤٩﴾

50. ಪೈಗಂಬರರೇ, ನೀವು 'ವಿವಾಹ ಧನ' ಕೊಟ್ಟಿರುವಂತಹ ನಿಮ್ಮ ಪತ್ನಿಯರನ್ನೂ[15] ಅಲ್ಲಾಹನಿಂದ ಪ್ರದಾನವಾಗಿರುವ ದಾಸಿಯರ ಪೈಕಿ ನಿಮ್ಮ ಸ್ವಾಧೀನತೆಗೆ ಬಂದಿರುವವರನ್ನೂ ನಿಮ್ಮ ಜೊತೆ ವಲಸೆ ಬಂದಿರುವ ನಿಮ್ಮ ತಂದೆಯ ಸಹೋದರ-ಸಹೋದರಿಯರ ಮತ್ತು ತಾಯಿಯ ಸಹೋದರ-ಸಹೋದರಿಯರ ಪುತ್ರಿಯರನ್ನೂ ನಾವು ನಿಮಗೆ 'ಧರ್ಮಸಮ್ಮತ'ಗೊಳಿಸಿರುತ್ತೇವೆ. ತನ್ನನ್ನು ತಾನೇ ಪ್ರವಾದಿಗೆ 'ಹಿಬಃ' ರೂಪದಲ್ಲಿ(ಕೊಡುಗೆಯಾಗಿ) ಕೊಟ್ಟಿದ್ದು, ಪ್ರವಾದಿಯು ಅವಳನ್ನು ತನ್ನ ನಿಕಾಹ್‌ದಲ್ಲಿ ಸ್ವೀಕರಿ ಸಲು ಒಪ್ಪಿಕೊಂಡರೆ,[16] ಅಂತಹ ಸತ್ಯವಿಶ್ವಾಸಿನಿಯರನ್ನೂ ನಾವು ನಿಮಗಾಗಿ 'ಧರ್ಮಸಮ್ಮತ'ಗೊಳಿಸಿರುತ್ತೇವೆ. ಈ ಅನುಮತಿಯು ನಿಮಗಾಗಿ ಮಾತ್ರವಿದೆ, ಬೇರೆ ಸತ್ಯವಿಶ್ವಾಸಿಗಳಿಗೆ ಇಲ್ಲ. ನಾವು

يَا أَيُّهَا النَّبِيُّ إِنَّا أَحْلَلْنَا لَكَ أَزْوَاجَكَ اللَّاتِي آتَيْتَ أُجُورَهُنَّ وَمَا مَلَكَتْ يَمِينُكَ مِمَّا أَفَاءَ اللَّهُ عَلَيْكَ وَبَنَاتِ عَمِّكَ وَبَنَاتِ عَمَّاتِكَ وَبَنَاتِ خَالِكَ وَبَنَاتِ خَالَاتِكَ اللَّاتِي هَاجَرْنَ مَعَكَ وَامْرَأَةً مُؤْمِنَةً إِنْ وَهَبَتْ نَفْسَهَا لِلنَّبِيِّ إِنْ أَرَادَ النَّبِيُّ أَنْ يَسْتَنْكِحَهَا خَالِصَةً لَكَ مِنْ دُونِ الْمُؤْمِنِينَ ۗ قَدْ

14. ಅರ್ಥಾತ್- ಈ ನಿಕಾಹ್‌ನ ಬಗ್ಗೆ ಅವರು ಮಾಡುತ್ತಿರುವ ಆಕ್ಷೇಪಗಳ ಕುರಿತು.

15. ಇತರರು ಒಂದು ಬಾರಿಗೆ ನಾಲ್ಕಕ್ಕಿಂತ ಹೆಚ್ಚು ವಿವಾಹವಾಗುವುದು ನಿಷಿದ್ಧವೆಂದು ಪ್ರವಾದಿವರ್ಯರು(ಸ) ಸಾರುತ್ತಾರೆ. ಆದರೆ ಅವರು ಸ್ವತಃ ಈ ಐದನೆಯ ಪತ್ನಿಯನ್ನು ಹೇಗೆ ಇಟ್ಟುಕೊಂಡರು? ಎಂದು ಅವರು ಮಾಡುತ್ತಿದ್ದ ಆಕ್ಷೇಪಗಳಿಗೆ ಈ ಮೂಲಕ ಉತ್ತರಿಸಲಾಗಿದೆ. ಆ ವೇಳೆ ಪ್ರವಾದಿವರ್ಯರ(ಸ) ಮನೆಯಲ್ಲಿ ನಾಲ್ವರು ಪತ್ನಿಯರು, ಹ.ಆಯಿಶಾ, ಹ.ಸೌದಾ, ಹ.ಹಫ್ಸಾ ಮತ್ತು ಹ.ಉಮ್ಮುಸಲ್ಮಾ(ರ) ಉಪಸ್ಥಿತರಿದ್ದರೆಂಬುದು ಗಮನಾರ್ಹ.

16. ಅರ್ಥಾತ್- ಪ್ರಸ್ತುತ ಐದು ಪತ್ನಿಯರಲ್ಲದೆ ಸೂಕ್ತದಲ್ಲಿ ಪ್ರಸ್ತಾಪಿಸಲಾಗಿರುವಂತಹ ಇತರ ಸ್ತ್ರೀಯರನ್ನೂ ಪತ್ನಿಯಾಗಿ ಪಡೆಯುವ ಅನುಮತಿ ಪ್ರವಾದಿವರ್ಯರಿಗೆ(ಸ) ಇದೆ.

ಸಾಮಾನ್ಯ ಸತ್ಯವಿಶ್ವಾಸಿಗಳ ಮೇಲೆ ಅವರ ಪತ್ನಿಯರ ಹಾಗೂ ದಾಸಿಯರ ವಿಷಯದಲ್ಲಿ ಯಾವ ಮಿತಿಗಳನ್ನು ಹೇರಿರುತ್ತೇವೆ ಎಂಬುದು ನಮಗೆ ಗೊತ್ತಿದೆ. ನಿಮ್ಮ ಮೇಲೆ ಯಾವ ಜಟಿಲತೆಯೂ ಇರದಂತಾಗಲು (ನಾವು ನಿಮ್ಮನ್ನು ಈ ಮಿತಿ ಮೇರೆಗಳಿಂದ ಮುಕ್ತಗೊಳಿಸಿದ್ದೇವೆ.) ಅಲ್ಲಾಹನು ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತಾನೆ.

عَلِمْنَا مَا فَرَضْنَا عَلَيْهِمْ فِيٓ أَزْوَاجِهِمْ وَمَا مَلَكَتْ أَيْمَانُهُمْ لِكَيْلَا يَكُونَ عَلَيْكَ حَرَجٌ ۗ وَكَانَ اللّٰهُ غَفُورًا رَّحِيمًا ﴿٥٠﴾

51. ನಿಮ್ಮ ಪತ್ನಿಯರ ಪೈಕಿ ನಿಮಗೆ ಇಷ್ಟವಿದ್ದವರನ್ನು ನಿಮ್ಮಿಂದ ದೂರವಿರಿಸಲಿಕ್ಕೂ ನಿಮಗೆ ಇಷ್ಟ ಬಂದವರನ್ನು ಜೊತೆ ಇರಿಸಿ ಕೊಳ್ಳಲಿಕ್ಕೂ ದೂರವಿರಿಸಿದ ಬಳಿಕ ನಿಮಗೆ ಇಷ್ಟವಿದ್ದವರನ್ನು ನಿಮ್ಮ ಬಳಿಗೆ ಕರೆಸಿಕೊಳ್ಳಲಿಕ್ಕೂ ನಿಮಗೆ ಅಧಿಕಾರ ಕೊಡಲಾಗು ತ್ತದೆ. ಈ ವಿಷಯದಲ್ಲಿ ನಿಮಗೇನೂ ಆತಂಕವಿಲ್ಲ. ಇದರಿಂದ ಅವರ ಕಣ್ಣುಗಳು ತಣಿದಿರುವುದೆಂದೂ ಅವರು ಬೇಸರಿಸ ಲಾರರೆಂದೂ ನಿರೀಕ್ಷೆ ಇದೆ ಮತ್ತು ನೀವು ಅವರಿಗೆ ಕೊಟ್ಟುದರಲ್ಲಿ ಅವರೆಲ್ಲರೂ ತೃಪ್ತಿ ಪಟ್ಟುಕೊಂಡಿರುವರು. ನಿಮ್ಮ ಹೃದಯಗಳಲ್ಲಿ ಇರುವುದೆಲ್ಲವನ್ನೂ ಅಲ್ಲಾಹನು ಅರಿಯುತ್ತಾನೆ ಮತ್ತು ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ.

تُرْجِي مَنْ تَشَآءُ مِنْهُنَّ وَتُـْٔوِيٓ إِلَيْكَ مَنْ تَشَآءُ ۖ وَمَنِ ابْتَغَيْتَ مِمَّنْ عَزَلْتَ فَلَا جُنَاحَ عَلَيْكَ ۚ ذٰلِكَ أَدْنٰىٓ أَنْ تَقَرَّ أَعْيُنُهُنَّ وَلَا يَحْزَنَّ وَيَرْضَيْنَ بِمَآ اٰتَيْتَهُنَّ كُلُّهُنَّ ۚ وَاللّٰهُ يَعْلَمُ مَا فِي قُلُوبِكُمْ ۚ وَكَانَ اللّٰهُ عَلِيمًا حَلِيمًا ﴿٥١﴾

52. ಇನ್ನು ಮುಂದೆ ನಿಮಗೆ ಇತರ ಸ್ತ್ರೀಯರು 'ಧರ್ಮಸಮ್ಮತ' ಆಗಿರುವುದಿಲ್ಲ. ಇತರ ಪತ್ನಿಯರನ್ನು ಅವರ ಸೌಂದರ್ಯವು ನಿಮಗೆ ಎಷ್ಟೇ ಮೆಚ್ಚುಗೆಯಾಗಿದ್ದರೂ (ಇವರ ಸ್ಥಾನದಲ್ಲಿ) ತರುವ ಅನುಮತಿ ಇಲ್ಲ.[17] ಆದರೆ ದಾಸಿಯರನ್ನು ತರಲು ಅನು ಮತಿ ಇದೆ.[18] ಅಲ್ಲಾಹ್ ಸಕಲ ವಸ್ತುಗಳ ಮೇಲ್ವಿಚಾರಕ ನಾಗಿರುತ್ತಾನೆ.

لَا يَحِلُّ لَكَ النِّسَآءُ مِنْۢ بَعْدُ وَلَآ أَنْ تَبَدَّلَ بِهِنَّ مِنْ أَزْوَاجٍ وَّلَوْ أَعْجَبَكَ حُسْنُهُنَّ إِلَّا مَا مَلَكَتْ يَمِينُكَ ۗ وَكَانَ اللّٰهُ عَلٰى كُلِّ شَيْءٍ رَّقِيبًا ﴿٥٢﴾

53. ಸತ್ಯವಿಶ್ವಾಸಿಗಳೇ, ಪ್ರವಾದಿಯ ಮನೆಗಳೊಳಗೆ ಅನುಮತಿಯಿಲ್ಲದೆ ಪ್ರವೇಶಿಸಬೇಡಿರಿ. ಊಟದ ಸಮಯವನ್ನು ಕಾದುಕೊಂಡಿರಲೂ

يٰٓأَيُّهَا الَّذِينَ اٰمَنُوا لَا تَدْخُلُوا بُيُوتَ النَّبِيِّ إِلَّآ أَنْ يُؤْذَنَ لَكُمْ إِلٰى طَعَامٍ

17. ಈ ಬೋಧನೆಗೆ ಎರಡು ಅರ್ಥಗಳಿವೆ: ಮೊದಲನೆಯದಾಗಿ ಪೂರ್ವೋಕ್ತ 50ನೆಯ ಸೂಕ್ತದಲ್ಲಿ ಪ್ರವಾದಿವರ್ಯರಿಗೆ(ಸ) ಧರ್ಮಸಮ್ಮತಗೊಳಿ ಸಲಾಗಿರುವ ಸ್ತ್ರೀಯರಲ್ಲದೆ ಇತರ ಸ್ತ್ರೀಯರು ಅವರಿಗೆ ಧರ್ಮಸಮ್ಮತವಲ್ಲ. ಎರಡನೆಯದಾಗಿ ಆರ್ಥಿಕ ಮುಗ್ಗಟ್ಟಿನಲ್ಲಿ ನಿಮ್ಮ ಜತೆ ಸಹಕರಿಸಲು, ಪರಲೋಕಕ್ಕೆ, ಇಹಲೋಕಕ್ಕಿಂತ ಪ್ರಾಮುಖ್ಯ ಕಲ್ಪಿಸಲು ಮತ್ತು ಅವರ ಜತೆ ನೀವು ತೋರುವ ಎಲ್ಲಾ ಬಗೆಯ ಧೋರಣೆಯ ಬಗ್ಗೆ ಸಂತೃಪ್ತರಾಗಿರಲು ನಿಮ್ಮ ಪಾವನ ಪತ್ನಿಯರು ಸನ್ನದ್ಧರಾದರೆ, ಅವರ ಪೈಕಿ ಯಾರಿಗಾದರೂ ತಲಾಕ್ ನೀಡಿ ಅವರ ಸ್ಥಾನದಲ್ಲಿ ಬೇರೆ ಪತ್ನಿಯನ್ನು ತರುವುದು ನಿಮ್ಮ ಪಾಲಿಗೆ ಧರ್ಮಸಮ್ಮತವಲ್ಲ.

18. ನಿಕಾಹ್ ಆದ ಪತ್ನಿಯರಲ್ಲದೆ ಅಧೀನಕ್ಕೆ ಬಂದ ಸ್ತ್ರೀಯರೊಂದಿಗೂ ಸಂಸರ್ಗದ ಅನುಮತಿ ಇದೆ ಮತ್ತು ಅವರಿಗೆ ಸಂಖ್ಯಾಮಿತಿ ಇಲ್ಲವೆಂದು ಈ ಸೂಕ್ತ ಸ್ಪಷ್ಟಪಡಿಸುತ್ತದೆ. ಅನ್ನಿಸಾ ಅಧ್ಯಾಯದ - 30, ಅಲ್ ಮೂಮಿನೂನ್ - 6 ಮತ್ತು ಮಆರಿಜ್‌ನ - 30ರಲ್ಲಿಯೂ ಇದೇ ವಿಷಯದ ಸ್ಪಷ್ಟೀಕರಣವಿದೆ.

ಬೇಡಿರಿ. ನಿಮ್ಮನ್ನು ಊಟಕ್ಕೆ ಕರೆದರೆ ಖಂಡಿತ ಹೋಗಿರಿ. ಆದರೆ ಊಟ ಮಾಡಿಯಾದೊಡನೆ ಚದುರಿ ಬಿಡಿರಿ, ಮಾತಾಡುತ್ತ ಕುಳಿತಿರಬೇಡಿರಿ. ನಿಮ್ಮ ಈ ವರ್ತನೆಗಳು ಪ್ರವಾದಿಗೆ ತೊಂದರೆ ಕೊಡುತ್ತಿವೆ. ಆದರೆ ಅವರು ಸಂಕೋಚದಿಂದ ಏನೂ ಹೇಳುವುದಿಲ್ಲ ಮತ್ತು ಅಲ್ಲಾಹನು ಸತ್ಯಸಂಗತಿಯನ್ನು ಹೇಳಲು ನಾಚುವುದಿಲ್ಲ. ಪ್ರವಾದಿಯವರ ಪತ್ನಿಯರಿಂದ ನಿಮಗೇನಾದರೂ ವಸ್ತುವನ್ನು ಕೇಳಬೇಕಾಗಿದ್ದರೆ ತೆರೆಯ ಹಿಂದಿನಿಂದ ಕೇಳಿ ಪಡಕೊಳ್ಳಿರಿ. ಇದು ನಿಮ್ಮ ಹಾಗೂ ಅವರ ಹೃದಯಗಳ ಶುದ್ಧಿಗೆ ಹೆಚ್ಚು ಸೂಕ್ತವಾದ ಕ್ರಮವಾಗಿದೆ. ಅಲ್ಲಾಹನ ಸಂದೇಶವಾಹಕರಿಗೆ ಕೀಟಲೆ ಕೊಡುವುದು ನಿಮಗೆ ಎಷ್ಟು ಮಾತ್ರಕ್ಕೂ ಸೂಕ್ತವಲ್ಲ. ಅವರ ಕಾಲಾನಂತರ ಅವರ ಪತ್ನಿಯರೊಂದಿಗೆ ವಿವಾಹ ಮಾಡಿಕೊಳ್ಳುವುದೂ ಎಂದೆಂದಿಗೂ ನಿಮಗೆ ಧರ್ಮಸಮ್ಮತವಾದುದಲ್ಲ. ಇದು ಅಲ್ಲಾಹನ ಬಳಿ ಮಹಾ ಪಾಪಕಾರ್ಯ.

غَيْرَ نٰظِرِيْنَ اِنٰىهُ وَلٰكِنْ اِذَا دُعِيْتُمْ
فَادْخُلُوْا فَاِذَا طَعِمْتُمْ فَانْتَشِرُوْا وَلَا
مُسْتَاْنِسِيْنَ لِحَدِيْثٍ اِنَّ ذٰلِكُمْ كَانَ
يُؤْذِي النَّبِيَّ فَيَسْتَحْيٖ مِنْكُمْ وَاللّٰهُ
لَا يَسْتَحْيٖ مِنَ الْحَقِّ وَاِذَا سَاَلْتُمُوْهُنَّ
مَتَاعًا فَسْـَٔلُوْهُنَّ مِنْ وَّرَآءِ حِجَابٍ
ذٰلِكُمْ اَطْهَرُ لِقُلُوْبِكُمْ وَقُلُوْبِهِنَّ وَمَا
كَانَ لَكُمْ اَنْ تُؤْذُوْا رَسُوْلَ اللّٰهِ وَلَا
اَنْ تَنْكِحُوْا اَزْوَاجَهٗ مِنْ بَعْدِهٖ اَبَدًا
اِنَّ ذٰلِكُمْ كَانَ عِنْدَ اللّٰهِ عَظِيْمًا ﴿٥٣﴾

54. ನೀವು ಯಾವುದನ್ನಾದರೂ ಪ್ರಕಟಗೊಳಿಸಿದರೂ ಬಚ್ಚಿಟ್ಟರೂ ಅಲ್ಲಾಹನು ಪ್ರತಿಯೊಂದು ವಿಷಯದ ಬಗ್ಗೆ ಸಂಪೂರ್ಣ ಜ್ಞಾನವಿರುವವನಾಗಿರುತ್ತಾನೆ.

اِنْ تُبْدُوْا شَيْـًٔا اَوْ تُخْفُوْهُ فَاِنَّ اللّٰهَ
كَانَ بِكُلِّ شَيْءٍ عَلِيْمًا ﴿٥٤﴾

55. ಪ್ರವಾದಿಯವರ ಪತ್ನಿಯರ ಮನೆಗಳಿಗೆ ಅವರ ತಂದೆಯಂದಿರಾಗಲಿ, ಪುತ್ರರಾಗಲಿ, ಸಹೋದರರಾಗಲಿ, ಸೋದರ ಪುತ್ರರಾಗಲಿ, ಸೋದರಿ ಪುತ್ರರಾಗಲಿ, ಅವರ ಒಡನಾಟದ ಸ್ತ್ರೀಯರಾಗಲಿ, ಅವರ ಗುಲಾಮರಾಗಲಿ, ಬರುವುದರಲ್ಲಿ ದೋಷವಿಲ್ಲ. (ಸ್ತ್ರೀಯರೇ) ನೀವು ಅಲ್ಲಾಹನ ಆಜ್ಞೋಲ್ಲಂಘನೆಯಿಂದ ದೂರವಿರಬೇಕು. ಅಲ್ಲಾಹನು ಸಕಲ ವಸ್ತುಗಳ ಬಗ್ಗೆ ಸಾಕ್ಷಿಯಾಗಿದ್ದಾನೆ.

لَا جُنَاحَ عَلَيْهِنَّ فِيْٓ اٰبَآئِهِنَّ وَلَآ اَبْنَآئِهِنَّ
وَلَآ اِخْوَانِهِنَّ وَلَآ اَبْنَآءِ اِخْوَانِهِنَّ وَلَآ
اَبْنَآءِ اَخَوٰتِهِنَّ وَلَا نِسَآئِهِنَّ وَلَا
مَا مَلَكَتْ اَيْمَانُهُنَّ وَاتَّقِيْنَ اللّٰهَ
اِنَّ اللّٰهَ كَانَ عَلٰى كُلِّ شَيْءٍ شَهِيْدًا ﴿٥٥﴾

56. ನಿಶ್ಚಯವಾಗಿಯೂ ಅಲ್ಲಾಹ್ ಮತ್ತು ಅವನ ದೂತರು ಪ್ರವಾದಿಯವರಿಗೆ 'ಸಲಾತ್' (ಸ್ವಸ್ತಿ ವಚನ) ಹೇಳುತ್ತಾರೆ. ಸತ್ಯವಿಶ್ವಾಸಿಗಳೇ, ನೀವೂ ಅವರ ಮೇಲೆ ಸಲಾತ್ ಮತ್ತು ಸಲಾಮ್ (ಅಭಿವಂದನೆ) ಸಲ್ಲಿಸುತ್ತಲಿರಿ.[19]

اِنَّ اللّٰهَ وَمَلٰٓئِكَتَهٗ يُصَلُّوْنَ عَلَى النَّبِيِّ
يٰٓاَيُّهَا الَّذِيْنَ اٰمَنُوْا صَلُّوْا عَلَيْهِ
وَسَلِّمُوْا تَسْلِيْمًا ﴿٥٦﴾

19. ಅಲ್ಲಾಹನು ಪ್ರವಾದಿವರ್ಯರ(ಸ) ಮೇಲೆ ಸ್ವಸ್ತಿವಚನ ಕಳುಹಿಸುವುದೆಂದರೆ ಅವನು ಅವರ ಪಾಲಿಗೆ ಅತ್ಯಂತ ಕರುಣಾಮಯಿಯಾಗಿದ್ದಾನೆಂದರ್ಥ. ಅವನು ಅವರನ್ನು ಶ್ಲಾಘಿಸುತ್ತಾನೆ, ಅವರ ಕೆಲಸಗಳಲ್ಲಿ ಸಮೃದ್ಧಿ ದಯಪಾಲಿಸುತ್ತಾನೆ, ಅವರ ಹೆಸರನ್ನು ಉನ್ನತಗೊಳಿಸುತ್ತಾನೆ ಮತ್ತು ಅವರ ಮೇಲೆ ಅನುಗ್ರಹದ ಮಳೆಗರೆಸುತ್ತಾನೆ. ದೇವಚರರು ಅವರ ಮೇಲೆ ಸ್ವಸ್ತಿವಚನ ಕಳುಹಿಸುವುದೆಂದರೆ ಅವರು ಪ್ರವಾದಿಯವರ(ಸ) ಬಗ್ಗೆ ಅತೀವ ಪ್ರೀತಿಯನ್ನು ಹೊಂದಿದ್ದಾರೆ. ಅವರ ಕುರಿತು ಅಲ್ಲಾಹನೊಡನೆ ಮೊರೆಯಿಡುತ್ತಾರೆ ಮತ್ತು ಅವರಿಗೆ ಉನ್ನತ ಪದವಿ ದಯಪಾಲಿಸುವಂತೆ

57. ಅಲ್ಲಾಹ್ ಮತ್ತು ಅವನ ಸಂದೇಶವಾಹಕರಿಗೆ ಕೀಟಲೆ ಕೊಡುವವರನ್ನು ಅಲ್ಲಾಹ್ ಈ ಲೋಕದಲ್ಲೂ ಪರಲೋಕದಲ್ಲೂ ಶಪಿಸಿರುತ್ತಾನೆ ಮತ್ತು ಅವರಿಗಾಗಿ ಅಪಮಾನಕಾರಕ ಯಾತನೆಯನ್ನು ಸಿದ್ಧಗೊಳಿಸಿಟ್ಟಿರುತ್ತಾನೆ.

إِنَّ الَّذِينَ يُؤْذُونَ اللَّهَ وَرَسُولَهُ لَعَنَهُمُ اللَّهُ فِي الدُّنْيَا وَالْآخِرَةِ وَأَعَدَّ لَهُمْ عَذَابًا مُهِينًا ۝٥٧

58. ಸತ್ಯವಿಶ್ವಾಸಿಗಳಿಗೂ ಸತ್ಯವಿಶ್ವಾಸಿನಿಯರಿಗೂ ವಿನಾಕಾರಣ ಕೀಟಲೆ ಕೊಡುವವರು ಒಂದು ಅತಿ ದೊಡ್ಡ ಸುಳ್ಳಾರೋಪ ಹಾಗೂ ಸುವ್ಯಕ್ತ ಪಾಪದ ಹೊರೆಯನ್ನು ಹೊತ್ತುಕೊಂಡರು.

وَالَّذِينَ يُؤْذُونَ الْمُؤْمِنِينَ وَالْمُؤْمِنَاتِ بِغَيْرِ مَا اكْتَسَبُوا فَقَدِ احْتَمَلُوا بُهْتَانًا وَإِثْمًا مُبِينًا ۝٥٨

59. ಪೈಗಂಬರರೇ, ತಮ್ಮ ಪತ್ನಿಯರೊಡನೆಯೂ ಪುತ್ರಿಯರೊಡನೆಯೂ ಸತ್ಯವಿಶ್ವಾಸಿನಿಯರೊಡನೆಯೂ ತಮ್ಮ ಮೇಲೆ ತಮ್ಮ ಚಾದರಗಳ ಸೆರಗನ್ನು ಇಳಿಸಿಕೊಳ್ಳಬೇಕೆಂದು ಹೇಳಿಬಿಡಿರಿ.[20] ಅವರು ಗುರುತಿಸಲ್ಪಡುವಂತಾಗಲಿಕ್ಕೂ ಸತಾಯಿಸಲ್ಪಡದಿರಲಿಕ್ಕೂ ಇದು ಹೆಚ್ಚು ಸೂಕ್ತವಾದ ವಿಧಾನ.[21] ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

يَا أَيُّهَا النَّبِيُّ قُلْ لِأَزْوَاجِكَ وَبَنَاتِكَ وَنِسَاءِ الْمُؤْمِنِينَ يُدْنِينَ عَلَيْهِنَّ مِنْ جَلَابِيبِهِنَّ ۚ ذَٰلِكَ أَدْنَىٰ أَنْ يُعْرَفْنَ فَلَا يُؤْذَيْنَ ۗ وَكَانَ اللَّهُ غَفُورًا رَحِيمًا ۝٥٩

60. ಕಪಟವಿಶ್ವಾಸಿಗಳೂ ಹೃದಯದಲ್ಲಿ ಕೆಡುಕುಳ್ಳವರೂ ಮದೀನಾದಲ್ಲಿ ಉದ್ರೇಕಕಾರಿ ವದಂತಿಗಳನ್ನು ಹಬ್ಬಿಸುವವರೂ ತಮ್ಮ ದುಷ್ಕೃತ್ಯಗಳನ್ನು ಬಿಡದಿದ್ದರೆ ನಾವು ಅವರ ವಿರುದ್ಧ ಕಾರ್ಯಾಚರಣೆಗಾಗಿ ನಿಮ್ಮನ್ನು ಎಬ್ಬಿಸಿ ನಿಲ್ಲಿಸುವೆವು. ಅನಂತರ ಅವರು ಈ ನಗರದಲ್ಲಿ ನಿಮ್ಮ ಜೊತೆ ಇರುವುದು ಕಷ್ಟ ಸಾಧ್ಯ.

لَئِنْ لَمْ يَنْتَهِ الْمُنَافِقُونَ وَالَّذِينَ فِي قُلُوبِهِمْ مَرَضٌ وَالْمُرْجِفُونَ فِي الْمَدِينَةِ لَنُغْرِيَنَّكَ بِهِمْ ثُمَّ لَا يُجَاوِرُونَكَ فِيهَا إِلَّا قَلِيلًا ۝٦٠

61. ಅವರ ಮೇಲೆ ಎಲ್ಲ ಕಡೆಗಳಿಂದಲೂ ಛೀಮಾರಿ ಬೀಳುತ್ತಿರುವುದು. ಅವರು ಕಂಡಕಂಡಲ್ಲಿ ಸೆರೆ ಹಿಡಿಯಲ್ಪಡುವರು ಮತ್ತು ನಿರ್ದಾಕ್ಷಿಣ್ಯವಾಗಿ ಕೊಲ್ಲಲ್ಪಡುವರು.

مَلْعُونِينَ ۖ أَيْنَمَا ثُقِفُوا أُخِذُوا وَقُتِّلُوا تَقْتِيلًا ۝٦١

62. ಇದು ಇಂತಹವರ ವಿಷಯದಲ್ಲಿ ಹಿಂದಿನಿಂದಲೂ ನಡೆದು ಬಂದಿರುವ ಅಲ್ಲಾಹನ ನಿಯಮವಾಗಿದೆ ಮತ್ತು ನೀವು ಅಲ್ಲಾಹನ ನಿಯಮದಲ್ಲಿ ಯಾವ ಬದಲಾವಣೆಯನ್ನೂ ಕಾಣಲಾರಿರಿ.

سُنَّةَ اللَّهِ فِي الَّذِينَ خَلَوْا مِنْ قَبْلُ ۖ وَلَنْ تَجِدَ لِسُنَّةِ اللَّهِ تَبْدِيلًا ۝٦٢

ಕೋರುತ್ತಾರೆ. ಸತ್ಯವಿಶ್ವಾಸಿಗಳು ಅವರ ಕುರಿತು ಸ್ವಸ್ತಿವಚನ ಹೇಳುವುದೆಂದರೆ, ಅವರ ಮೇಲೆ ಅನುಗ್ರಹಗಳನ್ನು ವರ್ಷಿಸುವಂತೆ ಅಲ್ಲಾಹನೊಡನೆ ಪ್ರಾರ್ಥಿಸುವುದಾಗಿದೆ.

20. ಅರ್ಥಾತ್- ಚಾದರ ಹೊದ್ದು ಮೇಲಿನಿಂದ ಸೆರಗನ್ನು ಎಳೆದುಕೊಳ್ಳಿರಿ. ಬೇರೆ ಪದಗಳಲ್ಲಿ ಹೇಳುವುದಾದರೆ ಮುಖ ತೆರೆದು ನಡೆಯಬೇಡಿರಿ.

21. 'ಗುರುತಿಸುವಂತಾಗಲು' ಎಂದರೆ ಅವರನ್ನು ಸರಳವಾದ ಮತ್ತು ಮಾನಾರ್ಹವಾದ ಉಡುಪಿನಲ್ಲಿರುವುದನ್ನು ಕಾಣುವ ಪ್ರತಿಯೊಬ್ಬನೂ ಇವರು ಸಭ್ಯ ಮತ್ತು ಕುಲೀನ ಸ್ತ್ರೀಯರು, ಸ್ವಚ್ಛಂದ ಮತ್ತು ದುಶ್ಶೀಲೆಯರಾದ ಸ್ತ್ರೀಯರಲ್ಲ ಎಂದು ಮನಗಾಣಬೇಕು. ಚಾರಿತ್ರ್ಯಹೀನರಾದ ವ್ಯಕ್ತಿಗಳು ಅವರಿಂದ ತಮ್ಮ ಮನಸೇಚ್ಛೆಯನ್ನು ಈಡೇರಿಸುವ ನಿರೀಕ್ಷೆಯನ್ನಿಟ್ಟುಕೊಳ್ಳುವಂತಾಗಬಾರದು. 'ಸತಾಯಿಸಲ್ಪಡಬಾರದು' ಎಂದರೆ ಅವರನ್ನು ಯಾರೂ ಕಾಡಿಸಲು ಮತ್ತು ಪೀಡಿಸಲು ಹೋಗುವಂತಾಗಬಾರದು.

63. ಪ್ರಳಯಕಾಲದ ಘಳಿಗೆ ಯಾವಾಗ ಬರುವುದೆಂದು ಜನರು ನಿಮ್ಮೊಡನೆ ಕೇಳುತ್ತಾರೆ. ಅದರ ಜ್ಞಾನವಿರುವುದು ಅಲ್ಲಾಹನಿಗೆ ಮಾತ್ರ ಎಂದು ಹೇಳಿರಿ. ಅದು ಬಹಳ ಸಮೀಪದಲ್ಲೇ ಇರಬಹುದು ನಿಮಗೇನು ಗೊತ್ತು.

يَسْأَلُكَ النَّاسُ عَنِ السَّاعَةِ ۖ قُلْ إِنَّمَا عِلْمُهَا عِندَ اللَّهِ ۚ وَمَا يُدْرِيكَ لَعَلَّ السَّاعَةَ تَكُونُ قَرِيبًا ﴿٦٣﴾

64. ಹೇಗಿದ್ದರೂ ಅಲ್ಲಾಹನು ಸತ್ಯನಿಷೇಧಕರನ್ನು ಶಪಿಸಿದ್ದಾನೆ ಮತ್ತು ಅವರಿಗಾಗಿ ಧಗಧಗಿಸುವ ನರಕಾಗ್ನಿಯನ್ನು ಸಿದ್ಧಪಡಿಸಿಟ್ಟಿರುತ್ತಾನೆಂಬುದು ಖಚಿತ.

إِنَّ اللَّهَ لَعَنَ الْكَافِرِينَ وَأَعَدَّ لَهُمْ سَعِيرًا ﴿٦٤﴾

65. ಅವರು ಅದರಲ್ಲಿ ಶಾಶ್ವತವಾಗಿ ಉಳಿಯುವರು. ಅವರು ಯಾವ ಮಿತ್ರನನ್ನೂ ಸಹಕಾರಿಯನ್ನೂ ಪಡೆಯಲಾರರು.

خَالِدِينَ فِيهَا أَبَدًا ۖ لَّا يَجِدُونَ وَلِيًّا وَلَا نَصِيرًا ﴿٦٥﴾

66. ಅವರ ಮುಖಗಳು ನರಕಾಗ್ನಿಯಲ್ಲಿ ಹೊರಳಾಡಿಸಲ್ಪಡುವ ದಿನ ಅವರು, "ಅಯ್ಯೋ! ನಾವು ಅಲ್ಲಾಹ್ ಮತ್ತು ಪೈಗಂಬರರ ಅನುಸರಣೆ ಮಾಡುತ್ತಿದ್ದರೆ!" ಎನ್ನುವರು.

يَوْمَ تُقَلَّبُ وُجُوهُهُمْ فِي النَّارِ يَقُولُونَ يَا لَيْتَنَا أَطَعْنَا اللَّهَ وَأَطَعْنَا الرَّسُولَا ﴿٦٦﴾

67. ಮತ್ತೂ ಮುಂದುವರಿದು, "ನಮ್ಮ ಪ್ರಭೂ ನಾವು ನಮ್ಮ ಸರದಾರರನ್ನು ಹಾಗೂ ಹಿರಿಯರನ್ನು ಅನುಸರಿಸಿದೆವು. ಅವರು ನಮ್ಮನ್ನು ದಾರಿಗೆಡಿಸಿ ಬಿಟ್ಟರು.

وَقَالُوا رَبَّنَا إِنَّا أَطَعْنَا سَادَتَنَا وَكُبَرَاءَنَا فَأَضَلُّونَا السَّبِيلَا ﴿٦٧﴾

68. ನಮ್ಮ ಪ್ರಭೂ! ಅವರಿಗೆ ಇಮ್ಮಡಿ ಯಾತನೆ ಕೊಡು ಮತ್ತು ಅವರನ್ನು ಅತ್ಯುಗ್ರವಾಗಿ ಶಪಿಸು" ಎಂದೂ ಹೇಳುವರು.

رَبَّنَا آتِهِمْ ضِعْفَيْنِ مِنَ الْعَذَابِ وَالْعَنْهُمْ لَعْنًا كَبِيرًا ﴿٦٨﴾

69. ಸತ್ಯವಿಶ್ವಾಸಿಗಳೇ, ನೀವು ಮೂಸಾರಿಗೆ ಕೀಟಲೆ ಕೊಟ್ಟವರಂತೆ ಆಗಬೇಡಿರಿ. ತರುವಾಯ ಅಲ್ಲಾಹನು ಆ ಜನರು ಸೃಷ್ಟಿಸಿದ ಮಾತುಗಳಿಂದ ಅವರನ್ನು (ಮೂಸಾರನ್ನು) ಮುಕ್ತಗೊಳಿಸಿದನು. ಅವರು ಅಲ್ಲಾಹನ ಬಳಿ ಗೌರವಾನ್ವಿತರಾಗಿದ್ದರು.

يَا أَيُّهَا الَّذِينَ آمَنُوا لَا تَكُونُوا كَالَّذِينَ آذَوْا مُوسَىٰ فَبَرَّأَهُ اللَّهُ مِمَّا قَالُوا ۚ وَكَانَ عِندَ اللَّهِ وَجِيهًا ﴿٦٩﴾

70. ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಸರಿಯಾದ ಮಾತನ್ನೇ ಹೇಳಿರಿ-

يَا أَيُّهَا الَّذِينَ آمَنُوا اتَّقُوا اللَّهَ وَقُولُوا قَوْلًا سَدِيدًا ﴿٧٠﴾

71. ಅಲ್ಲಾಹ್ ನಿಮ್ಮ ಕರ್ಮಗಳನ್ನು ಸರಿಪಡಿಸುವನು ಮತ್ತು ನಿಮ್ಮ ಅಪರಾಧಗಳನ್ನು ಕ್ಷಮಿಸುವನು. ಯಾರು ಅಲ್ಲಾಹ್ ಮತ್ತು

يُصْلِحْ لَكُمْ أَعْمَالَكُمْ وَيَغْفِرْ لَكُمْ ذُنُوبَكُمْ ۗ وَمَن يُطِعِ اللَّهَ وَرَسُولَهُ

فَقَدْ فَازَ فَوْزًا عَظِيمًا ﴿٧١﴾

ಅವನ ಸಂದೇಶವಾಹಕರ ಅನುಸರಣೆ ಮಾಡಿದನೋ ಅವನು ಮಹಾ ಯಶಸ್ಸನ್ನು ಪಡೆದನು.

إِنَّا عَرَضْنَا الْأَمَانَةَ عَلَى السَّمَاوَاتِ وَالْأَرْضِ وَالْجِبَالِ فَأَبَيْنَ أَن يَحْمِلْنَهَا وَأَشْفَقْنَ مِنْهَا وَحَمَلَهَا الْإِنسَانُ ۖ إِنَّهُ كَانَ ظَلُومًا جَهُولًا ﴿٧٢﴾

72. ನಾವು ಈ ಅಮಾನತ್ತನ್ನು[22] ಆಕಾಶಗಳ, ಭೂಮಿಯ ಮತ್ತು ಪರ್ವತಗಳ ಮುಂದಿರಿಸಿದೆವು. ಆಗ ಅವು ಅದನ್ನು ಎತ್ತಿಕೊಳ್ಳಲು ಸಿದ್ಧವಾಗಲಿಲ್ಲ ಮತ್ತು ಅದರಿಂದ ಭೀತರಾದವು. ಆದರೆ, ಮಾನವನು ಅದನ್ನು ಎತ್ತಿಕೊಂಡನು. ನಿಶ್ಚಯವಾಗಿಯೂ ಅವನು ದೊಡ್ಡ ಅಕ್ರಮಿಯೂ ತಿಳಿಗೇಡಿಯೂ ಆಗಿರುತ್ತಾನೆ.[23]

لِّيُعَذِّبَ اللَّهُ الْمُنَافِقِينَ وَالْمُنَافِقَاتِ وَالْمُشْرِكِينَ وَالْمُشْرِكَاتِ وَيَتُوبَ اللَّهُ عَلَى الْمُؤْمِنِينَ وَالْمُؤْمِنَاتِ ۗ وَكَانَ اللَّهُ غَفُورًا رَّحِيمًا ﴿٧٣﴾

73. (ಈ ಅಮಾನತ್ತಿನ ಹೊರೆಯನ್ನು ಹೊತ್ತುದರ ಪರಿಣಾಮ ವೇನೆಂದರೆ) ಇದು, ಅಲ್ಲಾಹನು ಕಪಟವಿಶ್ವಾಸಿಗಳಿಗೂ ಕಪಟ ವಿಶ್ವಾಸಿನಿಯರಿಗೂ ಬಹುದೇವಾರಾಧಕರಾದ ಪುರುಷರಿಗೂ ಸ್ತ್ರೀಯರಿಗೂ ಶಿಕ್ಷೆ ಕೊಡುವಂತಾಗಲು ಮತ್ತು ಸತ್ಯವಿಶ್ವಾಸಿಗಳಾದ ಪುರುಷರು ಮತ್ತು ಸ್ತ್ರೀಯರ ಪಶ್ಚಾತ್ತಾಪವನ್ನು ಅಲ್ಲಾಹನು ಸ್ವೀಕರಿಸುವಂತಾಗಲು. ಅಲ್ಲಾಹ್ ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

---

22. 'ಅಮಾನತ್ತು' ಎಂದರೆ ಮಾನವನಿಗೆ ಭೂಮಿಯಲ್ಲಿ ಅಧಿಕಾರವನ್ನೂ ಬುದ್ಧಿಶಕ್ತಿಯನ್ನೂ ಪ್ರದಾನ ಮಾಡುವ ಮೂಲಕ ಅಲ್ಲಾಹನು ವಿಧಿಸಿರುವ ಕರ್ತವ್ಯಗಳ ಹೊರೆ.
23. ಅರ್ಥಾತ್- ಈ 'ಅಮಾನತ್ತು'ಗಳ ವಾಹಕನಾಗಿಯೂ ಅವನು ತನ್ನ ಕರ್ತವ್ಯವನ್ನರಿಯುವುದಿಲ್ಲ. ಕರ್ತವ್ಯಚ್ಯುತಿ ಮಾಡಿ ಅವನು ತನ್ನ ಮೇಲೆಯೇ ಅಕ್ರಮವೆಸಗುತ್ತಾನೆ.






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸರ್ವ ಪ್ರಶಂಸೆಗಳೂ ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವಿನ ಒಡೆಯನಾಗಿರುವ ಅಲ್ಲಾಹನಿಗೆ ಮೀಸಲು ಮತ್ತು ಪರಲೋಕದಲ್ಲೂ ಪ್ರಶಂಸೆಗಳು ಅವನಿಗೇ ಇದೆ. ಅವನು ವಿವೇಕಪೂರ್ಣನೂ ವಿವರಪೂರ್ಣನೂ ಆಗಿರುತ್ತಾನೆ.

اَلْحَمْدُ لِلّٰهِ الَّذِيْ لَهٗ مَا فِي السَّمٰوٰتِ
وَمَا فِي الْاَرْضِ وَلَهُ الْحَمْدُ فِي الْاٰخِرَةِ ۗ
وَهُوَ الْحَكِيْمُ الْخَبِيْرُ ①

2. ಭೂಮಿಯೊಳಗೆ ಹೋಗುವ ಹಾಗೂ ಅದರೊಳಗಿಂದ ಹೊರ ಬರುವ ಮತ್ತು ಆಕಾಶದಿಂದ ಇಳಿಯುವ ಹಾಗೂ ಅದರ ಮೇಲೇರುವ ಸಕಲವನ್ನೂ ಅವನು ಬಲ್ಲವನಾಗಿರುತ್ತಾನೆ. ಅವನು ಕರುಣಾನಿಧಿಯೂ ಕ್ಷಮಾಶೀಲನೂ ಆಗಿರುತ್ತಾನೆ.

يَعْلَمُ مَا يَلِجُ فِي الْاَرْضِ وَمَا يَخْرُجُ
مِنْهَا وَمَا يَنْزِلُ مِنَ السَّمَآءِ وَمَا يَعْرُجُ
فِيْهَا ۗ وَهُوَ الرَّحِيْمُ الْغَفُوْرُ ②

3. ನಮ್ಮ ಮೇಲೆ ಪುನರುತ್ಥಾನದ ಘಳಿಗೆ ಬರುವುದಿಲ್ಲವಲ್ಲ ಎಂದು ಸತ್ಯನಿಷೇಧಿಗಳು ಹೇಳುತ್ತಾರೆ. ಹೇಳಿರಿ- "ಪರೋಕ್ಷ ಜ್ಞಾನಿಯಾದ ನನ್ನ ಪ್ರಭುವಿನಾಣೆಗೂ ಅದು ನಿಮ್ಮ ಮೇಲೆ ಬಂದೇ ತೀರುವುದು. ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ, ಅಣು ಮಾತ್ರದಷ್ಟು ವಸ್ತುವೂ ಅವನಿಂದ ಅಡಗಿರುವುದಿಲ್ಲ. ಅಣುವಿಗಿಂತ ದೊಡ್ಡದೂ ಇಲ್ಲ ಅದಕ್ಕಿಂತ ಚಿಕ್ಕದೂ ಇಲ್ಲ. ಎಲ್ಲವೂ ಒಂದು ಸುಸ್ಪಷ್ಟ ಗ್ರಂಥದಲ್ಲಿ ಲಿಖಿತವಿದೆ."

وَقَالَ الَّذِيْنَ كَفَرُوْا لَا تَاْتِيْنَا السَّاعَةُ ۗ
قُلْ بَلٰى وَرَبِّيْ لَتَاْتِيَنَّكُمْ ۙ عٰلِمِ الْغَيْبِ ۚ
لَا يَعْزُبُ عَنْهُ مِثْقَالُ ذَرَّةٍ فِي السَّمٰوٰتِ
وَلَا فِي الْاَرْضِ وَلَآ اَصْغَرُ مِنْ ذٰلِكَ
وَلَآ اَكْبَرُ اِلَّا فِيْ كِتٰبٍ مُّبِيْنٍ ③

4. ಈ ಪುನರುತ್ಥಾನ ದಿನವು ಸತ್ಯವಿಶ್ವಾಸವನ್ನು ಸ್ವೀಕರಿಸಿದವರಿಗೂ ಸತ್ಕರ್ಮಗಳನ್ನೆಸಗಿದವರಿಗೂ ಪ್ರತಿಫಲ ನೀಡಲಿಕ್ಕಾಗಿ ಬರುವುದು. ಅವರಿಗಾಗಿ ಕ್ಷಮೆಯೂ ಸನ್ಮಾನ್ಯ ಜೀವನಾಧಾರವೂ ಇವೆ.

لِّيَجْزِيَ الَّذِيْنَ اٰمَنُوْا وَعَمِلُوا الصّٰلِحٰتِ ۗ
اُولٰٓئِكَ لَهُمْ مَّغْفِرَةٌ وَّرِزْقٌ كَرِيْمٌ ④

5. ನಮ್ಮ ಸೂಕ್ತಗಳನ್ನು ಕೀಳಾಗಿಸಲು ಶ್ರಮಿಸಿದವರಿಗೆ ಅತಿ ನಿಕೃಷ್ಟ ತರದ ವೇದನಾತ್ಮಕ ಯಾತನೆ ಇದೆ.

وَالَّذِيْنَ سَعَوْ فِيْٓ اٰيٰتِنَا مُعٰجِزِيْنَ
اُولٰٓئِكَ لَهُمْ عَذَابٌ مِّنْ رِّجْزٍ اَلِيْمٌ ⑤

6. ಪೈಗಂಬರರೇ, ನಿಮ್ಮ ಪ್ರಭುವಿನ ವತಿಯಿಂದ ನಿಮ್ಮ ಮೇಲೆ ಅವತೀರ್ಣ ಗೊಳಿಸಲ್ಪಟ್ಟಿರುವುದೆಲ್ಲಾ ಪರಮ ಸತ್ಯವೆಂದೂ ಪ್ರಬಲನೂ ಪ್ರಶಂಸಾರ್ಹನೂ ಆದ ಅಲ್ಲಾಹನ ಮಾರ್ಗವನ್ನು ಅದು ತೋರಿಸುತ್ತದೆಂದೂ ಜ್ಞಾನ ನೀಡಲ್ಪಟ್ಟವರು ಚೆನ್ನಾಗಿ ತಿಳಿದಿರುತ್ತಾರೆ.

وَيَرَى الَّذِينَ أُوتُوا الْعِلْمَ الَّذِي أُنزِلَ إِلَيْكَ مِن رَّبِّكَ هُوَ الْحَقَّ وَيَهْدِي إِلَىٰ صِرَاطِ الْعَزِيزِ الْحَمِيدِ ⑥

7. "ನಿಮ್ಮ ದೇಹದ ಪ್ರತಿಯೊಂದು ಕಣವೂ ಚೆಲ್ಲಾಪಿಲ್ಲಿಯಾಗಿ ಹೋಗಿ ಬಿಟ್ಟ ಬಳಿಕ ನೀವು ಪುನಃ ಹೊಸತಾಗಿ ಸೃಷ್ಟಿಸಲ್ಪಡುವಿರೆಂಬ ಸುದ್ದಿಯನ್ನು ತಿಳಿಸುವಂತಹ ಒಬ್ಬ ವ್ಯಕ್ತಿಯನ್ನು ನಾವು ನಿಮಗೆ ತೋರಿಸಿ ಕೊಡಲೇ?

وَقَالَ الَّذِينَ كَفَرُوا هَلْ نَدُلُّكُمْ عَلَىٰ رَجُلٍ يُنَبِّئُكُمْ إِذَا مُزِّقْتُمْ كُلَّ مُمَزَّقٍ إِنَّكُمْ لَفِي خَلْقٍ جَدِيدٍ ⑦

8. ಇವನು ಅಲ್ಲಾಹನ ಹೆಸರಿನಿಂದ ಸುಳ್ಳನ್ನು ಸೃಷ್ಟಿಸುತ್ತಾನೋ ಅಥವಾ ಇವನಿಗೆ ಹುಚ್ಚು ಹಿಡಿದಿದೆಯೋ ಎಂಬುದು ತಿಳಿಯದು" ಎಂದು ಸತ್ಯನಿಷೇಧಿಗಳು ಜನರೊಡನೆ ಹೇಳುತ್ತಾರೆ. ಹಾಗಲ್ಲ, ವಾಸ್ತವದಲ್ಲಿ ಪರಲೋಕವನ್ನು ನಂಬದವರು ಯಾತನೆಗೊಳಗಾಗುವರು ಮತ್ತು ಅವರೇ ಅತ್ಯಂತ ಪಥಭ್ರಷ್ಟರು.

أَفْتَرَىٰ عَلَى اللَّهِ كَذِبًا أَم بِهِ جِنَّةٌ ۗ بَلِ الَّذِينَ لَا يُؤْمِنُونَ بِالْآخِرَةِ فِي الْعَذَابِ وَالضَّلَالِ الْبَعِيدِ ⑧

9. ಇವರನ್ನು ಮುಂದಿನಿಂದಲೂ ಹಿಂದಿನಿಂದಲೂ ಸುತ್ತುವರಿದು ಕೊಂಡಿರುವ ಭೂಮಿ-ಆಕಾಶಗಳನ್ನು ಇವರೆಂದೂ ಕಂಡಿಲ್ಲವೇ? ನಾವಿಷ್ಟಪಟ್ಟರೆ ಇವರನ್ನು ಭೂಮಿಯಲ್ಲಿ ಹುಗಿದು ಬಿಡುವೆವು ಅಥವಾ ಆಕಾಶದ ಕೆಲವು ತುಂಡುಗಳನ್ನು ಇವರ ಮೇಲೆ ಬೀಳಿಸಿ ಬಿಡುವೆವು. ವಾಸ್ತವದಲ್ಲಿ ಪಶ್ಚಾತ್ತಾಪ ಪಟ್ಟು ಅಲ್ಲಾಹನ ಕಡೆಗೆ ಮರಳುವಂತಹ ಪ್ರತಿಯೊಬ್ಬ ದಾಸನಿಗೂ ಇದರಲ್ಲೊಂದು ನಿದರ್ಶನವಿದೆ.

أَفَلَمْ يَرَوْا إِلَىٰ مَا بَيْنَ أَيْدِيهِمْ وَمَا خَلْفَهُم مِّنَ السَّمَاءِ وَالْأَرْضِ ۚ إِن نَّشَأْ نَخْسِفْ بِهِمُ الْأَرْضَ أَوْ نُسْقِطْ عَلَيْهِمْ كِسَفًا مِّنَ السَّمَاءِ ۚ إِنَّ فِي ذَٰلِكَ لَآيَةً لِّكُلِّ عَبْدٍ مُّنِيبٍ ⑨

10-11. ನಾವು ದಾವೂದರಿಗೆ ನಮ್ಮ ಕಡೆಯಿಂದ ಮಹಾ ಅನುಗ್ರಹ ಪ್ರದಾನ ಮಾಡಿದ್ದೆವು. "ಪರ್ವತಗಳೇ, ಇವರೊಡನೆ ಸಾಮರಸ್ಯ ಹೊಂದಿರಿ" (ಎಂದು ನಾವು ಅಪ್ಪಣೆ ಕೊಟ್ಟೆವು ಮತ್ತು ಇದೇ ಆಜ್ಞೆಯನ್ನು) ಪಕ್ಷಿಗಳಿಗೆ ಕೊಟ್ಟೆವು. ಕವಚಗಳನ್ನು ತಯಾರಿಸಿರಿ ಮತ್ತು ಅವುಗಳ ಕುಣಿಕೆಗಳನ್ನು ಸರಿಯಾದ ಪ್ರಮಾಣದಲ್ಲಿರಿಸಿರಿ ಎಂಬ ಮಾರ್ಗದರ್ಶನದೊಂದಿಗೆ ನಾವು ಅವರಿಗಾಗಿ ಕಬ್ಬಿಣವನ್ನು ಮೃದುಗೊಳಿಸಿದೆವು. (ದಾವೂದರ ಸಂತತಿಗಳೇ) ಸತ್ಕರ್ಮವೆಸಗಿರಿ, ನೀವು ಮಾಡುವುದನ್ನೆಲ್ಲ ನಾನು ನೋಡುತ್ತಿದ್ದೇನೆ.

وَلَقَدْ آتَيْنَا دَاوُودَ مِنَّا فَضْلًا ۖ يَا جِبَالُ أَوِّبِي مَعَهُ وَالطَّيْرَ ۖ وَأَلَنَّا لَهُ الْحَدِيدَ ⑩

أَنِ اعْمَلْ سَابِغَاتٍ وَقَدِّرْ فِي السَّرْدِ ۖ وَاعْمَلُوا صَالِحًا ۖ إِنِّي بِمَا تَعْمَلُونَ بَصِيرٌ ⑪

12. ನಾವು ಸುಲೈಮಾನರಿಗೆ ಗಾಳಿಯನ್ನು ನಿಯಂತ್ರಿಸಿಕೊಟ್ಟೆವು. ಅದರ

وَلِسُلَيْمَانَ الرِّيحَ غُدُوُّهَا شَهْرٌ وَ

ಬೆಳಗಿನ ಚಲನೆ ಒಂದು ತಿಂಗಳ ದಾರಿಯ ವರೆಗೆ ಮತ್ತು ಸಂಜೆಯ ಚಲನೆ ಒಂದು ತಿಂಗಳ ದಾರಿಯ ವರೆಗೆ. ನಾವು ಅವರಿಗಾಗಿ ಕರಗಿದ ತಾಮ್ರದ ಚಿಲುಮೆಯನ್ನು ಹರಿಸಿದೆವು ಮತ್ತು ತಮ್ಮ ಪ್ರಭುವಿನ ಅಪ್ಪಣೆ ಪ್ರಕಾರ ಅವರ ಮುಂದೆ ಕೆಲಸ ಮಾಡುತ್ತಿದ್ದ ಯಕ್ಷಗಳನ್ನು ಅವರ ಅಧೀನಕ್ಕೆ ಕೊಟ್ಟೆವು. ಅವರ ಪೈಕಿ ನಮ್ಮ ಆಜ್ಞೋಲ್ಲಂಘನೆ ಮಾಡುತ್ತಿದ್ದವನಿಗೆ ನಾವು ಧಗಧಗಿಸುವ ಅಗ್ನಿಯ ಸವಿಯನ್ನುಣಿಸುತ್ತಿದ್ದೆವು.

رَوَاحُهَا شَهْرٌ ۚ وَأَسَلْنَا لَهُ عَيْنَ الْقِطْرِ ۖ وَمِنَ الْجِنِّ مَنْ يَعْمَلُ بَيْنَ يَدَيْهِ بِإِذْنِ رَبِّهِ ۖ وَمَنْ يَزِغْ مِنْهُمْ عَنْ أَمْرِنَا نُذِقْهُ مِنْ عَذَابِ السَّعِيرِ ﴿١٢﴾

13. ಅವರು ಇವರಿಗಾಗಿ (ಸುಲೈಮಾನರಿಗಾಗಿ) ಇವರು ಇಚ್ಛಿಸಿದುದನ್ನೆಲ್ಲ ಮಾಡುತ್ತಿದ್ದರು. ಉನ್ನತ ಕಟ್ಟಡಗಳು, ಚಿತ್ರಗಳು,[1] ದೊಡ್ಡ ದೊಡ್ಡ ಕೊಳಗಳಂತಹ ಹರಿವಾಣಗಳು ಮತ್ತು ತಮ್ಮ ಸ್ಥಾನದಿಂದ ಸರಿಯದ ಬೃಹತ್ ಕಡಾಯಗಳು. ದಾವೂದರ ಸಂತತಿಯೇ ಕೃತಜ್ಞತೆಯ ರೀತಿಯಲ್ಲಿ ಕರ್ಮವೆಸಗಿರಿ.[2] ನನ್ನ ದಾಸರಲ್ಲಿ ಕೆಲವು ಮಂದಿ ಮಾತ್ರ ಕೃತಜ್ಞರಾಗಿದ್ದಾರೆ.

يَعْمَلُونَ لَهُ مَا يَشَاءُ مِنْ مَحَارِيبَ وَتَمَاثِيلَ وَجِفَانٍ كَالْجَوَابِ وَقُدُورٍ رَاسِيَاتٍ ۚ اعْمَلُوا آلَ دَاوُودَ شُكْرًا ۚ وَقَلِيلٌ مِنْ عِبَادِيَ الشَّكُورُ ﴿١٣﴾

14. ಅನಂತರ ನಾವು ಸುಲೈಮಾನರಿಗೆ ಮರಣವನ್ನು ವಿಧಿಸಿದಾಗ ಯಕ್ಷಗಳಿಗೆ ಅವರ ಮರಣದ ಸುಳಿವು ಕೊಡಲು ಅವರ ಲಾಠಿಯನ್ನು ತಿನ್ನುತ್ತಿದ್ದ ಕೀಟದ ಹೊರತು ಬೇರಾವ ವಸ್ತುವೂ ಇರಲಿಲ್ಲ. ಹೀಗೆ ಸುಲೈಮಾನರು ಬಿದ್ದಾಗ ತಮಗೆ ಪರೋಕ್ಷ ಜ್ಞಾನವಿರುತ್ತಿದ್ದರೆ ತಾವು ಇಂತಹ ಅಪಮಾನಕರ ಯಾತನೆಯಲ್ಲಿ ಬೀಳುತ್ತಿರಲಿಲ್ಲವೆಂಬ ಮಾತು ಯಕ್ಷಗಳಿಗೆ ಬಯಲಾಯಿತು.

فَلَمَّا قَضَيْنَا عَلَيْهِ الْمَوْتَ مَا دَلَّهُمْ عَلَىٰ مَوْتِهِ إِلَّا دَابَّةُ الْأَرْضِ تَأْكُلُ مِنْسَأَتَهُ ۖ فَلَمَّا خَرَّ تَبَيَّنَتِ الْجِنُّ أَنْ لَوْ كَانُوا يَعْلَمُونَ الْغَيْبَ مَا لَبِثُوا فِي الْعَذَابِ الْمُهِينِ ﴿١٤﴾

15. 'ಸಬಾ'ದವರಿಗೆ ಅವರ ಸ್ವಂತ ವಾಸಸ್ಥಾನದಲ್ಲೇ ಒಂದು ನಿದರ್ಶನ ವಿತ್ತು. ಬಲಭಾಗದಲ್ಲೂ ಎಡಭಾಗದಲ್ಲೂ ಎರಡು ತೋಟಗಳು.[3] ನಿಮ್ಮ ಪ್ರಭು ಕೊಟ್ಟ ಆಹಾರವನ್ನುಣ್ಣಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನಾಡು ಉತ್ತಮವೂ ಪರಿಶುದ್ಧವೂ ಆಗಿತ್ತು. ಪ್ರಭು ಕ್ಷಮಾಶೀಲನಾಗಿದ್ದನು.

لَقَدْ كَانَ لِسَبَإٍ فِي مَسْكَنِهِمْ آيَةٌ ۖ جَنَّتَانِ عَنْ يَمِينٍ وَشِمَالٍ ۖ كُلُوا مِنْ رِزْقِ رَبِّكُمْ وَاشْكُرُوا لَهُ ۚ بَلْدَةٌ طَيِّبَةٌ وَرَبٌّ غَفُورٌ ﴿١٥﴾

16. ಆದರೆ ಅವರು ವಿಮುಖರಾಗಿ ಹೋದರು. ಕೊನೆಗೆ ನಾವು ಅವರ

فَأَعْرَضُوا فَأَرْسَلْنَا عَلَيْهِمْ سَيْلَ

1. ಚಿತ್ರಗಳು ಎಂದರೆ ಅವು ಮಾನವರ ಅಥವಾ ಪ್ರಾಣಿಗಳ ಚಿತ್ರಗಳೇ ಆಗಿರಬೇಕಾಗಿಲ್ಲ. ಹ. ಸುಲೈಮಾನ್, ಮೂಸಾರ(ಅ) ಶರೀಅತ್‌ನ ಪಾಲಕರಾಗಿದ್ದರು. ಮಾನವರ ಮತ್ತು ಪ್ರಾಣಿಗಳ ಚಿತ್ರ ತಯಾರಿಸುವುದು ಮುಹಮ್ಮದ್‌ರ(ಸ) ಶರೀಅತ್‌ನಲ್ಲಿ ನಿಷಿದ್ಧವಾಗಿರುವಂತೆಯೇ ಹ. ಮೂಸಾರ(ಅ) ಶರೀಅತ್‌ನಲ್ಲೂ ನಿಷಿದ್ಧವಾಗಿತ್ತು.
2. ಅರ್ಥಾತ್- ಕೃತಜ್ಞ ದಾಸರಂತೆ ಕಾರ್ಯವೆಸಗಿರಿ.
3. ಇದರ ಅರ್ಥ ಸಮಸ್ತ ದೇಶದಲ್ಲಿ ಎರಡೇ ತೋಟಗಳಿದ್ದುವು ಎಂದಲ್ಲ. ಸಬಾದ ಸಮಸ್ತ ಸಾಮ್ರಾಜ್ಯ ಉದ್ಯಾನವನವಾಗಿ ಮಾರ್ಪಟ್ಟಿತ್ತು ಎಂಬುದು ಇದರ ಅರ್ಥ. ವ್ಯಕ್ತಿಯೊಬ್ಬ ಎಲ್ಲೇ ನಿಂತು ನೋಡಿದರೂ ಎಡಕ್ಕೂ ಬಲಕ್ಕೂ ಅವನಿಗೆ ಉದ್ಯಾನಗಳೇ ಗೋಚರಿಸುತ್ತವೆ.

ಮೇಲೆ ಅಣೆಕಟ್ಟು ಮುರಿದ ಮಹಾಪೂರವನ್ನು ಕಳುಹಿಸಿಬಿಟ್ಟೆವು ಮತ್ತು ಅವರ ಹಿಂದಿನ ಎರಡು ತೋಟಗಳ ಸ್ಥಾನದಲ್ಲಿ ಅತ್ಯಂತ ಕಹಿಫಲಗಳು ಝಾವಕ ವೃಕ್ಷಗಳು ಮತ್ತು ಕೆಲವು ಬೋರೆ ಮರಗಳಿಂದ ಕೂಡಿದ ಬೇರೆ ಎರಡು ತೋಟಗಳನ್ನು ಅವರಿಗೆ ಕೊಟ್ಟೆವು.

الْعَرِمِ وَبَدَّلْنٰهُمْ بِجَنَّتَيْهِمْ جَنَّتَيْنِ ذَوَاتَيْ اُكُلٍ خَمْطٍ وَّاَثْلٍ وَّشَيْءٍ مِّنْ سِدْرٍ قَلِيْلٍ ﴿١٦﴾

17. ಇದು, ನಾವು ಅವರ ಸತ್ಯನಿಷೇಧಕ್ಕೆ ನೀಡಿದ ಪ್ರತಿಫಲವಾಗಿತ್ತು. ಇಂತಹ ಪ್ರತಿಫಲವನ್ನು ಕೃತಘ್ನರ ಹೊರತು ಇನ್ನಾರಿಗೂ ನಾವು ಕೊಡುವುದಿಲ್ಲ.

ذٰلِكَ جَزَيْنٰهُمْ بِمَا كَفَرُوْا ۗ وَهَلْ نُجٰزِيْٓ اِلَّا الْكَفُوْرَ ﴿١٧﴾

18. ಅವರ ಮತ್ತು ನಾವು ಸಮೃದ್ಧಗೊಳಿಸಿದ್ದಂತಹ ನಾಡುಗಳ ನಡುವೆ ಸ್ಪಷ್ಟವಾದ ನಾಡುಗಳನ್ನು ನಾವು ನೆಲೆಗೊಳಿಸಿದ್ದೆವು ಮತ್ತು ಅವುಗಳಲ್ಲಿ ಪ್ರಯಾಣದ ದೂರಗಳನ್ನು ಒಂದು ಪ್ರಮಾಣ ದಲ್ಲಿರಿಸಿದ್ದೆವು.[4] ಆಹೋರಾತ್ರಿ ಸಂಪೂರ್ಣ ನೆಮ್ಮದಿಯೊಂದಿಗೆ ಈ ದಾರಿಗಳಲ್ಲಿ ಸಂಚರಿಸಿರಿ.

وَجَعَلْنَا بَيْنَهُمْ وَبَيْنَ الْقُرَى الَّتِيْ بٰرَكْنَا فِيْهَا قُرًى ظَاهِرَةً وَّقَدَّرْنَا فِيْهَا السَّيْرَ ۗ سِيْرُوْا فِيْهَا لَيَالِيَ وَاَيَّامًا اٰمِنِيْنَ ﴿١٨﴾

19. ಆದರೆ ಅವರು, "ನಮ್ಮ ಪ್ರಭೂ! ನಮ್ಮ ಪ್ರಯಾಣದ ದೂರವನ್ನು ಹೆಚ್ಚಿಸು"[5] ಎಂದರು. ಅವರು ತಮ್ಮ ಮೇಲೆ ತಾವೇ ಅಕ್ರಮವೆಸಗಿದರು. ಕೊನೆಗೆ ನಾವು ಅವರನ್ನು ಕಥೆಯನ್ನಾಗಿ ಮಾಡಿಬಿಟ್ಟೆವು ಮತ್ತು ಅವರನ್ನು ಸಂಪೂರ್ಣ ಛಿನ್ನ ಭಿನ್ನಗೊಳಿಸಿ ಬಿಟ್ಟೆವು. ನಿಶ್ಚಯವಾಗಿಯೂ ಸಹನಶೀಲ ಹಾಗೂ ಕೃತಜ್ಞನಾಗಿರುವ ಪ್ರತಿಯೊಬ್ಬನಿಗೂ ಇದರಲ್ಲಿ ನಿದರ್ಶನಗಳಿವೆ.

فَقَالُوْا رَبَّنَا بٰعِدْ بَيْنَ اَسْفَارِنَا وَظَلَمُوْٓا اَنْفُسَهُمْ فَجَعَلْنٰهُمْ اَحَادِيْثَ وَمَزَّقْنٰهُمْ كُلَّ مُمَزَّقٍ ۗ اِنَّ فِيْ ذٰلِكَ لَاٰيٰتٍ لِّكُلِّ صَبَّارٍ شَكُوْرٍ ﴿١٩﴾

20. ಅವರ ವಿಷಯದಲ್ಲಿ ಇಬ್‌ಲೀಸನು ತನ್ನ ಗುಮಾನಿಯನ್ನು ಸತ್ಯವಾಗಿ ಕಂಡನು. ಸತ್ಯವಿಶ್ವಾಸಿಗಳಾಗಿದ್ದ ಕೆಲವೇ ಮಂದಿಯ ಒಂದು ಗುಂಪಿನ ಹೊರತು ಅವರೆಲ್ಲರೂ ಅವನನ್ನೇ ಅನುಸರಿಸಿ ದರು.

وَلَقَدْ صَدَّقَ عَلَيْهِمْ اِبْلِيْسُ ظَنَّهٗ فَاتَّبَعُوْهُ اِلَّا فَرِيْقًا مِّنَ الْمُؤْمِنِيْنَ ﴿٢٠﴾

4. ಸಮೃದ್ಧ ನಾಡುಗಳು ಎಂದರೆ ಸಿರಿಯಾ ಮತ್ತು ಫೆಲೆಸ್ತೀನಿನ ಪ್ರದೇಶಗಳು. ಸುಸ್ಪಷ್ಟ ನಾಡುಗಳು ಎಂದರೆ ಹೆದ್ದಾರಿಯಲ್ಲಿರುವ ಮತ್ತು ಮರೆಯಲ್ಲಿ ಅಡಗಿರುವ ನಾಡುಗಳು. 'ಪ್ರಯಾಣದ ದೂರವನ್ನು ಒಂದು ಪ್ರಮಾಣದಲ್ಲಿರಿಸಿದ್ದೆವು' ಎಂದರೆ ಯಮನ್‌ನಿಂದ ಸಿರಿಯಾದ ತನಕದ ಪ್ರಯಾಣವನ್ನು ನಿರಂತರ ಜನವಾಸವಿರುವ ಪ್ರದೇಶಗಳ ಮೂಲಕವೇ ಕ್ರಮಿಸಬೇಕಾಗುತ್ತದೆ. ಅದರಲ್ಲಿ ಪ್ರತಿಯೊಂದು ತಾಣದಿಂದ ಇನ್ನೊಂದು ತಾಣದ ತನಕದ ದೂರ ನಿರ್ದಿಷ್ಟ ಮತ್ತು ನಿಶ್ಚಿತವಾಗಿದೆ.

5. ಅವರು ಬಾಯಿಯ ಮೂಲಕ ಹೀಗೆ ಪ್ರಾರ್ಥಿಸಿರಬೇಕಾಗಿಲ್ಲ. ಹಲವೊಮ್ಮೆ ವ್ಯಕ್ತಿಯ ಕರ್ಮದಿಂದ ದೇವನೊಡನೆ ಅವರು, "ನೀನು ನೀಡಿರುವಂತಹ ಕರ್ಮಗಳಿಗೆ ನಾನು ಬಾಧ್ಯಸ್ಥನಲ್ಲ" ಎಂದು ಹೇಳುತ್ತಿರುವಂತೆ ಭಾಸವಾಗುತ್ತದೆ. ಸೂಕ್ತದ ಪದಗಳಿಂದ ಸ್ಪಷ್ಟವಾಗುವುದೇನೆಂದರೆ ಆ ಸಮುದಾಯವು ಜನಸಂಖ್ಯೆಯ ಹೆಚ್ಚಳವನ್ನು ಒಂದು ಪಿಡುಗೆಂದು ಭಾವಿಸುತ್ತಿತ್ತು. ಆದ್ದರಿಂದ ಪ್ರಯಾಣದ ವೇಳೆ ದೂರದೂರಕ್ಕೊಂದು ತಾಣ ಸಿಗುವಷ್ಟು ಜನಸಂಖ್ಯೆ ಕಡಿಮೆಯಾಗಬೇಕು ಎಂದು ಆ ಸಮುದಾಯ ಬಯಸುತ್ತಿತ್ತು.

21. ಇಬ್‌ಲೀಸನಿಗೆ ಅವರ ಮೇಲೇನೂ ಅಧಿಕಾರ ಪ್ರಾಪ್ತವಿರಲಿಲ್ಲ. ಆದರೆ ಪರಲೋಕವನ್ನು ನಂಬುವವನಾರು ಮತ್ತು ಅದರ ಬಗ್ಗೆ ಸಂಶಯಗ್ರಸ್ತನಾರು ಎಂದು ನಾವು ತಿಳಿಯ ಬಯಸಿದ್ದುದರಿಂದ ಹೀಗೆಲ್ಲ ಆಯಿತು. ನಿನ್ನ ಪ್ರಭು ಪ್ರತಿಯೊಂದು ವಿಷಯದ ಮೇಲ್ನೋಟವುಳ್ಳವನಾಗಿರುತ್ತಾನೆ.

وَمَا كَانَ لَهُۥ عَلَيْهِم مِّن سُلْطَٰنٍ إِلَّا لِنَعْلَمَ مَن يُؤْمِنُ بِٱلْءَاخِرَةِ مِمَّنْ هُوَ مِنْهَا فِى شَكٍّ ۗ وَرَبُّكَ عَلَىٰ كُلِّ شَىْءٍ حَفِيظٌ ﴿٢١﴾

22. (ಪೈಗಂಬರರೇ, ಈ ಬಹುದೇವವಿಶ್ವಾಸಿಗಳೊಡನೆ) ಹೇಳಿರಿ, "ನೀವು ಅಲ್ಲಾಹನ ಹೊರತಾಗಿ ನಿಮ್ಮ ಆರಾಧ್ಯರೆಂದು ಭಾವಿಸಿ ಕೊಂಡಿರುವವುಗಳನ್ನು ಪ್ರಾರ್ಥಿಸಿ ನೋಡಿರಿ. ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ಅವರು ಅಣುಗಾತ್ರದ ವಸ್ತುವಿಗೂ ಒಡೆಯ ರಲ್ಲ. ಅವರು ಭೂಮಿ-ಆಕಾಶಗಳ ಸೊತ್ತಿನಲ್ಲಿ ಪಾಲುದಾರರೂ ಅಲ್ಲ, ಅವರಲ್ಲಾರೂ ಅಲ್ಲಾಹನ ಸಹಾಯಕನೂ ಅಲ್ಲ.

قُلِ ٱدْعُوا۟ ٱلَّذِينَ زَعَمْتُم مِّن دُونِ ٱللَّهِ ۖ لَا يَمْلِكُونَ مِثْقَالَ ذَرَّةٍ فِى ٱلسَّمَٰوَٰتِ وَلَا فِى ٱلْأَرْضِ وَمَا لَهُمْ فِيهِمَا مِن شِرْكٍ وَمَا لَهُۥ مِنْهُم مِّن ظَهِيرٍ ﴿٢٢﴾

23. ಅಲ್ಲಾಹನು ಶಿಫಾರಸು ಮಾಡಲು ಅನುಮತಿ ನೀಡಿದ ವ್ಯಕ್ತಿಯ ಹೊರತು ಅಲ್ಲಾಹನ ಸನ್ನಿಧಿಯಲ್ಲಿ ಯಾವ ಶಿಫಾರಸೂ ಯಾರ ಬಗೆಗೂ ಫಲಕಾರಿಯಾಗದು. ಎಷ್ಟರವರೆಗೆಂದರೆ- ಜನರ ಹೃದಯ ದಿಂದ ಭೀತಿಯು ದೂರವಾದಾಗ ಅವರು (ಶಿಫಾರಸುದಾರರೊಡನೆ) ನಿಮ್ಮ ಪ್ರಭು ಏನುತ್ತರ ಕೊಟ್ಟನೆಂದು ಕೇಳುವರು. ಸರಿಯಾದ ಉತ್ತರ ಸಿಕ್ಕಿದೆ ಮತ್ತು ಅವನು ಮಹೋನ್ನತನೂ ಮಹಾನನೂ ಆಗಿರುತ್ತಾನೆ" ಎಂದು ಅವರು ಹೇಳುವರು.

وَلَا تَنفَعُ ٱلشَّفَٰعَةُ عِندَهُۥٓ إِلَّا لِمَنْ أَذِنَ لَهُۥ ۚ حَتَّىٰٓ إِذَا فُزِّعَ عَن قُلُوبِهِمْ قَالُوا۟ مَاذَا قَالَ رَبُّكُمْ ۖ قَالُوا۟ ٱلْحَقَّ ۖ وَهُوَ ٱلْعَلِىُّ ٱلْكَبِيرُ ﴿٢٣﴾

24. (ಪೈಗಂಬರರೇ) ನಿಮಗೆ ಭೂಮಿ-ಆಕಾಶಗಳಿಂದ ಜೀವನಾಧಾರ ಕೊಡುವವನಾರೆಂದು ಇವರೊಡನೆ ಕೇಳಿರಿ. ಹೇಳಿರಿ- "ಅಲ್ಲಾಹ್. ಈಗ ನಿಶ್ಚಯವಾಗಿಯೂ ನಮ್ಮ ಮತ್ತು ನಿಮ್ಮ ಪೈಕಿ ಕೇವಲ ಒಬ್ಬನೇ ಸನ್ಮಾರ್ಗದಲ್ಲಿದ್ದಾನೆ ಅಥವಾ ಸುವ್ಯಕ್ತ ಪಥಭ್ರಷ್ಟತೆ ಯಲ್ಲಿದ್ದಾನೆ."

قُلْ مَن يَرْزُقُكُم مِّنَ ٱلسَّمَٰوَٰتِ وَٱلْأَرْضِ ۖ قُلِ ٱللَّهُ ۖ وَإِنَّآ أَوْ إِيَّاكُمْ لَعَلَىٰ هُدًى أَوْ فِى ضَلَٰلٍ مُّبِينٍ ﴿٢٤﴾

25. ಇವರೊಡನೆ ಹೇಳಿರಿ, "ನಾವು ಮಾಡಿದ ಅಪರಾಧದ ಕುರಿತು ನಿಮ್ಮೊಡನೆ ಪ್ರಶ್ನಿಸಲಾಗದು ಮತ್ತು ನೀವು ಮಾಡುತ್ತಿರುವುದರ ಕುರಿತು ನಮ್ಮೊಡನೆ ಪ್ರಶ್ನಿಸಲಾಗದು."

قُل لَّا تُسْـَٔلُونَ عَمَّآ أَجْرَمْنَا وَلَا نُسْـَٔلُ عَمَّا تَعْمَلُونَ ﴿٢٥﴾

26. ಹೇಳಿರಿ- ನಮ್ಮ ಪ್ರಭು ನಮ್ಮನ್ನು ಒಟ್ಟುಗೂಡಿಸುವನು ತರುವಾಯ ನಮ್ಮ ನಡುವೆ ಸರಿಯಾದ ತೀರ್ಮಾನ ಮಾಡುವನು. ಅವನು ಸರ್ವವನ್ನೂ ಅರಿತಿರುವಂತಹ ಪ್ರಬಲ ನ್ಯಾಯಾಧೀಶನಾಗಿರುತ್ತಾನೆ.

قُلْ يَجْمَعُ بَيْنَنَا رَبُّنَا ثُمَّ يَفْتَحُ بَيْنَنَا بِٱلْحَقِّ وَهُوَ ٱلْفَتَّاحُ ٱلْعَلِيمُ ﴿٢٦﴾

27. ಇವರೊಡನೆ- "ನೀವು ಅವನೊಂದಿಗೆ ಸಹಭಾಗಿಗಳಾಗಿ ಮಾಡಿಟ್ಟು ಕೊಂಡಿರುವವರನ್ನು ನನಗೊಮ್ಮೆ ತೋರಿಸಿ ಕೊಡಿರಿ ನೋಡೋಣ" ಎಂದು ಹೇಳಿರಿ. ಎಷ್ಟು ಮಾತ್ರಕ್ಕೂ ಇಲ್ಲ, ಅತ್ಯಂತ ಪ್ರಬಲನೂ ಧೀಮಂತನೂ ಆಗಿರುವಾತನು ಅಲ್ಲಾಹನು ಮಾತ್ರ.

قُلْ أَرُونِيَ الَّذِينَ أَلْحَقْتُم بِهِ شُرَكَاءَ
كَلَّا ۚ بَلْ هُوَ اللَّهُ الْعَزِيزُ الْحَكِيمُ ﴿٢٧﴾

28. (ಪೈಗಂಬರರೇ,) ನಾವು ನಿಮ್ಮನ್ನು ಸಕಲ ಮಾನವರಿಗೆ ಸುವಾರ್ತೆ ಕೊಡುವವರಾಗಿಯೂ ಎಚ್ಚರಿಕೆ ನೀಡುವವರಾಗಿಯೂ ಮಾಡಿ ಕಳುಹಿಸಿರುತ್ತೇವೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.

وَمَا أَرْسَلْنَاكَ إِلَّا كَافَّةً لِّلنَّاسِ بَشِيرًا
وَنَذِيرًا وَلَٰكِنَّ أَكْثَرَ النَّاسِ
لَا يَعْلَمُونَ ﴿٢٨﴾

29. "ನೀವು ಸತ್ಯವಂತರಾಗಿದ್ದರೆ, ಆ (ಪ್ರಳಯ ಕಾಲದ) ವಾಗ್ದಾನ ಯಾವಾಗ ನೆರವೇರುವುದು?" ಎಂದು ಕೇಳುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن
كُنتُمْ صَادِقِينَ ﴿٢٩﴾

30. ಹೇಳಿರಿ- "ನಿಮಗೆ ನಾವು ಒಂದು ಘಳಿಗೆಯೂ ತಡ ಮಾಡಿ ತರಲು ಸಾಧ್ಯವಾಗದ ಹಾಗೂ ಒಂದು ಘಳಿಗೆಯೂ ಮುಂದಾಗಿ ತರಲಿಕ್ಕಾಗದ ಒಂದು ನಿಶ್ಚಿತ ದಿನದ ವಾಗ್ದಾನವಿದೆ."

قُل لَّكُم مِّيعَادُ يَوْمٍ لَّا تَسْتَأْخِرُونَ
عَنْهُ سَاعَةً وَلَا تَسْتَقْدِمُونَ ﴿٣٠﴾

31. ಈ ಕುರ್‌ಆನನ್ನೂ ಇದಕ್ಕಿಂತ ಮುಂಚೆ ಬಂದಿರುವಂತಹ ಯಾವ ಗ್ರಂಥವನ್ನೂ ನಾವು ಎಷ್ಟು ಮಾತ್ರಕ್ಕೂ ಒಪ್ಪಲಾರೆವೆಂದು ಈ ಸತ್ಯನಿಷೇಧಿಗಳು ಹೇಳುತ್ತಾರೆ. ಅಕಟ! ಈ ಅಕ್ರಮಿಗಳು ತಮ್ಮ ಪ್ರಭುವಿನ ಮುಂದೆ ನಿಲ್ಲುವಾಗಿನ ಇವರ ಅವಸ್ಥೆಯನ್ನು ನೀವು ಕಾಣುತ್ತಿದ್ದರೆ! ಆಗ ಇವರು ಪರಸ್ಪರ ಆರೋಪ ಹೊರಿಸುವರು. ಈ ಲೋಕದಲ್ಲಿ ಮರ್ದಿತರಾಗಿದ್ದವರು ಅಹಂಕಾರಿಗಳೊಡನೆ, "ನೀವಿಲ್ಲದಿರುತ್ತಿದ್ದರೆ ನಾವು ಸತ್ಯವಿಶ್ವಾಸಿಗಳಾಗುತ್ತಿದ್ದೆವು" ಎನ್ನುವರು.

وَقَالَ الَّذِينَ كَفَرُوا لَن نُّؤْمِنَ بِهَٰذَا
الْقُرْآنِ وَلَا بِالَّذِي بَيْنَ يَدَيْهِ ۗ
وَلَوْ تَرَىٰ إِذِ الظَّالِمُونَ مَوْقُوفُونَ عِندَ
رَبِّهِمْ يَرْجِعُ بَعْضُهُمْ إِلَىٰ بَعْضٍ الْقَوْلَ
يَقُولُ الَّذِينَ اسْتُضْعِفُوا لِلَّذِينَ
اسْتَكْبَرُوا لَوْلَا أَنتُمْ لَكُنَّا مُؤْمِنِينَ ﴿٣١﴾

32. ಆ ಅಹಂಕಾರಿಗಳು ಈ ಮರ್ದಿತರೊಡನೆ, "ನಾವು ನಿಮ್ಮ ಬಳಿಗೆ ಬಂದಿದ್ದಂತಹ ಸನ್ಮಾರ್ಗದಿಂದ ನಿಮ್ಮನ್ನು ತಡೆದಿದ್ದೇವೆ? ಇಲ್ಲ, ವಾಸ್ತವದಲ್ಲಿ ಸ್ವತಃ ನೀವೇ ಅಪರಾಧಿಗಳಾಗಿದ್ದಿರಿ" ಎಂದು ಉತ್ತರಿಸುವರು.

قَالَ الَّذِينَ اسْتَكْبَرُوا لِلَّذِينَ اسْتُضْعِفُوا
أَنَحْنُ صَدَدْنَاكُمْ عَنِ الْهُدَىٰ بَعْدَ إِذْ
جَاءَكُم ۖ بَلْ كُنتُم مُّجْرِمِينَ ﴿٣٢﴾

33. ಆ ಮರ್ದಿತರು ಅಹಂಕಾರಿಗಳೊಡನೆ, ಅಲ್ಲ ವಾಸ್ತವದಲ್ಲಿ (ಅದು ನಿಮ್ಮದೇ) ಆಹೋರಾತ್ರಿಯ ಕುತಂತ್ರವಾಗಿತ್ತು. ನಾವು ಅಲ್ಲಾಹನನ್ನು ನಿಷೇಧಿಸಬೇಕೆಂದೂ ಇತರರನ್ನು ಅವನಿಗೆ ಸರಿ ಸಮಾನರಾಗಿ ಪರಿಗಣಿಸಬೇಕೆಂದೂ ನೀವು ನಮ್ಮೊಡನೆ ಹೇಳುತ್ತಿದ್ದಿರಿ ಎಂದು ಹೇಳುವರು. ಕೊನೆಗೆ ಇವರು ಯಾತನೆಯನ್ನು

وَقَالَ الَّذِينَ اسْتُضْعِفُوا لِلَّذِينَ اسْتَكْبَرُوا
بَلْ مَكْرُ اللَّيْلِ وَالنَّهَارِ إِذْ تَأْمُرُونَنَا أَن
نَّكْفُرَ بِاللَّهِ وَنَجْعَلَ لَهُ أَندَادًا ۚ وَأَسَرُّوا
النَّدَامَةَ لَمَّا رَأَوُا الْعَذَابَ ۚ وَجَعَلْنَا

ಕಾಣುವಾಗ ತಮ್ಮ ಮನಸ್ಸಿನಲ್ಲಿ ಪಶ್ಚಾತ್ತಾಪ ಪಡುವರು ಮತ್ತು ನಾವು ಈ ಸತ್ಯನಿಷೇಧಿಗಳ ಕೊರಳುಗಳಿಗೆ ಸಂಕೋಲೆಗಳನ್ನು ಹಾಕಿ ಬಿಡುವೆವು. ಜನರಿಗೆ ಅವರ ಕರ್ಮಗಳಿಗೆ ತಕ್ಕುದಾದ ಫಲವನ್ನೇ ಹೊರತು ಬೇರೆ ಪ್ರತಿಫಲವನ್ನು ಕೊಡಲು ಸಾಧ್ಯವೇ?

الْأَغْلَالَ فِي أَعْنَاقِ الَّذِينَ كَفَرُوا ۚ هَلْ يُجْزَوْنَ إِلَّا مَا كَانُوا يَعْمَلُونَ ﴿٣٣﴾

34. ನಾವು ಯಾವುದಾದರೊಂದು ನಾಡಿಗೆ ಎಚ್ಚರಿಕೆ ನೀಡುವವನನ್ನು ಕಳುಹಿಸಿದಾಗಲೆಲ್ಲಾ ಆ ನಾಡಿನ ಸ್ಥಿತಿವಂತರು- "ನೀವು ತಂದಿರುವ ಸಂದೇಶವನ್ನು ನಾವು ಸ್ವೀಕರಿಸುವುದಿಲ್ಲ" ಎಂದು ಹೇಳದೆ ಇರಲಿಲ್ಲ.

وَمَا أَرْسَلْنَا فِي قَرْيَةٍ مِّن نَّذِيرٍ إِلَّا قَالَ مُتْرَفُوهَا إِنَّا بِمَا أُرْسِلْتُم بِهِ كَافِرُونَ ﴿٣٤﴾

35. ನಾವು ನಿಮಗಿಂತ ಹೆಚ್ಚು ಸಂಪತ್ತನ್ನೂ ಸಂತತಿಯನ್ನೂ ಹೊಂದಿದ್ದೇವೆ. ನಾವು ಎಂದಿಗೂ ಶಿಕ್ಷೆ ಹೊಂದುವವರಲ್ಲವೆಂದೇ ಅವರು ಪ್ರತಿ ಸಲವೂ ಹೇಳಿದ್ದರು.

وَقَالُوا نَحْنُ أَكْثَرُ أَمْوَالًا وَأَوْلَادًا وَمَا نَحْنُ بِمُعَذَّبِينَ ﴿٣٥﴾

36. ಪೈಗಂಬರರೇ, ಇವರೊಡನೆ (ಹೀಗೆ) ಹೇಳಿರಿ- "ನನ್ನ ಪ್ರಭು ತಾನಿಚ್ಛಿಸಿದವರಿಗೆ ಯಥೇಷ್ಟ ಜೀವನಾಧಾರವನ್ನು ನೀಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಪರಿಮಿತಗೊಳಿಸುತ್ತಾನೆ. ಆದರೆ ಹೆಚ್ಚಿನವರು ಇದರ ವಾಸ್ತವಿಕತೆಯನ್ನು ತಿಳಿದಿರುವುದಿಲ್ಲ."

قُلْ إِنَّ رَبِّي يَبْسُطُ الرِّزْقَ لِمَن يَشَاءُ وَيَقْدِرُ وَلَٰكِنَّ أَكْثَرَ النَّاسِ لَا يَعْلَمُونَ ﴿٣٦﴾

ربع

37. "ನಿಮ್ಮನ್ನು ನಮಗೆ ನಿಕಟಗೊಳಿಸುವ ಸಾಧನ ನಿಮ್ಮ ಸಂಪತ್ತಾಗಲೀ ನಿಮ್ಮ ಸಂತಾನವಾಗಲೀ ಅಲ್ಲ. ಯಾರು ಸತ್ಯವಿಶ್ವಾಸ ಸ್ವೀಕರಿಸಿ ಸತ್ಕರ್ಮವೆಸಗುವರೋ ಅವರು ಇದಕ್ಕೆ ಹೊರತಾಗಿರುವರು. ಅವರಿಗೆ ಅವರ ಕರ್ಮದ ಇಮ್ಮಡಿ ಪ್ರತಿಫಲವಿದೆ ಮತ್ತು ಅವರು ಅತ್ಯುನ್ನತ ಭವನಗಳಲ್ಲಿ ನಿಶ್ಚಿಂತರಾಗಿರುವರು.

وَمَا أَمْوَالُكُمْ وَلَا أَوْلَادُكُم بِالَّتِي تُقَرِّبُكُمْ عِندَنَا زُلْفَىٰ إِلَّا مَنْ آمَنَ وَعَمِلَ صَالِحًا فَأُولَٰئِكَ لَهُمْ جَزَاءُ الضِّعْفِ بِمَا عَمِلُوا وَهُمْ فِي الْغُرُفَاتِ آمِنُونَ ﴿٣٧﴾

38. ಇನ್ನು ನಮ್ಮ ಸೂಕ್ತಗಳನ್ನು ಕೀಳಾಗಿಸಲಿಕ್ಕಾಗಿ ಶ್ರಮಿಸುವವರು ಅವರು ಯಾತನೆಗೊಳಗಾಗುವರು."

وَالَّذِينَ يَسْعَوْنَ فِي آيَاتِنَا مُعَاجِزِينَ أُولَٰئِكَ فِي الْعَذَابِ مُحْضَرُونَ ﴿٣٨﴾

39. ಪೈಗಂಬರರೇ ಇವರೊಡನೆ ಹೇಳಿರಿ- "ನನ್ನ ಪ್ರಭು ತನ್ನ ದಾಸರಲ್ಲಿ ತಾನಿಚ್ಛಿಸಿದವರಿಗೆ ವಿಸ್ತೃತ ಜೀವನಾಧಾರವನ್ನೀಯುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಪರಿಮಿತಗೊಳಿಸಿ ಕೊಡುತ್ತಾನೆ. ನೀವು ಖರ್ಚು ಮಾಡುವುದರ ಸ್ಥಾನದಲ್ಲಿ ಅವನೇ ನಿಮಗೆ ಇನ್ನಷ್ಟು ಕೊಡುತ್ತಾನೆ. ಅವನು ಜೀವನಾಧಾರ ನೀಡುವವರಲ್ಲಿ ಅತ್ಯುತ್ತಮನಾಗಿರುತ್ತಾನೆ."

قُلْ إِنَّ رَبِّي يَبْسُطُ الرِّزْقَ لِمَن يَشَاءُ مِنْ عِبَادِهِ وَيَقْدِرُ لَهُ ۚ وَمَا أَنفَقْتُم مِّن شَيْءٍ فَهُوَ يُخْلِفُهُ ۖ وَهُوَ خَيْرُ الرَّازِقِينَ ﴿٣٩﴾

40. ಅವನು ಸಕಲ ಮಾನವರನ್ನು ಒಟ್ಟುಗೂಡಿಸುವ ದಿನ ದೇವಚರರೊಡನೆ - "ಇವರು ನಿಮ್ಮ ಆರಾಧನೆಯನ್ನೇ ಮಾಡುತ್ತಿದ್ದರೇ?" ಎಂದು ಕೇಳುವನು.

وَيَوْمَ يَحْشُرُهُمْ جَمِيعًا ثُمَّ يَقُولُ لِلْمَلَٰٓئِكَةِ أَهَٰٓؤُلَآءِ إِيَّاكُمْ كَانُوا يَعْبُدُونَ ﴿٤٠﴾

41. ಆಗ ಅವರು, "ನೀನು ಪರಮ ಪಾವನನು. ನಮ್ಮ ಸಂಬಂಧವು ನಿನ್ನೊಂದಿಗಿದೆ- ಇವರೊಂದಿಗಲ್ಲ ವಾಸ್ತವದಲ್ಲಿ ಇವರು ಯಕ್ಷಗಳನ್ನು ಆರಾಧಿಸುತ್ತಿದ್ದರೇ ಹೊರತು ನಮ್ಮನ್ನಲ್ಲ. ಇವರಲ್ಲಿ ಹೆಚ್ಚಿನವರು ಅವರ ಮೇಲೆಯೇ ವಿಶ್ವಾಸವಿರಿಸಿದರು"[6] ಎಂದು ಉತ್ತರ ಕೊಡುವರು.

قَالُوا سُبْحَٰنَكَ أَنتَ وَلِيُّنَا مِن دُونِهِم ۖ بَلْ كَانُوا يَعْبُدُونَ الْجِنَّ ۖ أَكْثَرُهُم بِهِم مُّؤْمِنُونَ ﴿٤١﴾

42. (ಆಗ ನಾವು) "ಇಂದು ನಿಮ್ಮಲ್ಲಾರೂ ಯಾರಿಗೂ ಲಾಭವನ್ನಾಗಲಿ, ನಷ್ಟವನ್ನಾಗಲಿ ಉಂಟು ಮಾಡಲಾರನು" ಮತ್ತು ಅಕ್ರಮಿಗಳೊಡನೆ, "ನೀವು ಸುಳ್ಳಾಗಿಸುತ್ತಿದ್ದ ನರಕ ಯಾತನೆಯ ರುಚಿಯನ್ನು ಈಗ ಸವಿಯಿರಿ" ಎಂದು ಹೇಳುವೆವು.

فَالْيَوْمَ لَا يَمْلِكُ بَعْضُكُمْ لِبَعْضٍ نَّفْعًا وَلَا ضَرًّا وَنَقُولُ لِلَّذِينَ ظَلَمُوا ذُوقُوا عَذَابَ النَّارِ الَّتِي كُنتُم بِهَا تُكَذِّبُونَ ﴿٤٢﴾

43. ಇವರಿಗೆ ನಮ್ಮ ಸುವ್ಯಕ್ತ ಸೂಕ್ತಗಳನ್ನು ಓದಿ ಹೇಳಿದಾಗ ಇವರು, "ನಿಮ್ಮ ಪೂರ್ವಜರು ಪೂಜಿಸುತ್ತಾ ಬಂದಿದ್ದಂತಹ ಆರಾಧ್ಯರಿಂದ ನಿಮ್ಮನ್ನು ತಿರುಗಿಸಿ ಬಿಡಬೇಕೆಂದೇ ಇವನ ಇಚ್ಛೆ" ಎನ್ನುತ್ತಾರೆ ಮತ್ತು "ಇದು (ಕುರ್‌ಆನ್) ಕೇವಲ ಒಂದು ಕಲ್ಪಿತ ಸುಳ್ಳು" ಎಂದು ಹೇಳುತ್ತಾರೆ. ಈ ಸತ್ಯನಿಷೇಧಿಗಳ ಮುಂದೆ ಸತ್ಯವು ಬಂದಾಗ ಇವರು, "ಇದು ಸ್ಪಷ್ಟವಾದ ಮಾಟವೇ ಹೊರತು ಇನ್ನೇನೂ ಅಲ್ಲ" ಎಂದು ಹೇಳಿ ಬಿಟ್ಟರು.

وَإِذَا تُتْلَىٰ عَلَيْهِمْ ءَايَٰتُنَا بَيِّنَٰتٍ قَالُوا مَا هَٰذَآ إِلَّا رَجُلٌ يُرِيدُ أَن يَصُدَّكُمْ عَمَّا كَانَ يَعْبُدُ ءَابَآؤُكُمْ وَقَالُوا مَا هَٰذَآ إِلَّآ إِفْكٌ مُّفْتَرًى ۚ وَقَالَ الَّذِينَ كَفَرُوا لِلْحَقِّ لَمَّا جَآءَهُمْ إِنْ هَٰذَآ إِلَّا سِحْرٌ مُّبِينٌ ﴿٤٣﴾

44. ವಸ್ತುತಃ ನಾವು ಈ ಮುಂಚೆ ಇವರಿಗೆ ಓದತಕ್ಕ ಯಾವುದೇ ಗ್ರಂಥವನ್ನು ಕೊಡಲೂ ಇಲ್ಲ ಮತ್ತು ನಿಮಗಿಂತ ಮುಂಚೆ ಇವರ ಕಡೆಗೆ ಎಚ್ಚರಿಕೆ ಕೊಡುವಂತಹವನನ್ನು ಕಳುಹಿಸಿದ್ದೂ ಇಲ್ಲ.

وَمَآ ءَاتَيْنَٰهُم مِّن كُتُبٍ يَدْرُسُونَهَا ۖ وَمَآ أَرْسَلْنَآ إِلَيْهِمْ قَبْلَكَ مِن نَّذِيرٍ ﴿٤٤﴾

45. ಇವರಿಗಿಂತ ಮುಂಚೆ ಗತಿಸಿದವರು ಸುಳ್ಳಾಗಿಸಿದ್ದರು. ನಾವು ಅವರಿಗೆ ನೀಡಿದುದರ ದಶಾಂಶವನ್ನೂ ಇವರು ತಲುಪಿಲ್ಲ.

وَكَذَّبَ الَّذِينَ مِن قَبْلِهِمْ وَمَا بَلَغُوا مِعْشَارَ مَآ ءَاتَيْنَٰهُمْ فَكَذَّبُوا

6. ಅರೇಬಿಯಾದ ಬಹುದೇವವಿಶ್ವಾಸಿಗಳು ದೇವಚರರನ್ನು ಆರಾಧ್ಯರೆಂದು ಭಾವಿಸುತ್ತಿದ್ದರು. ಆದ್ದರಿಂದ ಅಲ್ಲಾಹನು, ನಿರ್ಣಾಯಕ ದಿನದಂದು ದೇವಚರರೊಂದಿಗೆ ಈ ಬಗ್ಗೆ ಕೇಳಲಾದಾಗ, "ಇವರು ನಮ್ಮ ಹೆಸರೆತ್ತಿ ಪಿಶಾಚಿಯ ಆರಾಧನೆ ಮಾಡುತ್ತಿದ್ದರೆಂದು ಹೇಳುವರು" ಎಂದಿದ್ದಾನೆ. ಏಕೆಂದರೆ ಅಲ್ಲಾಹನನ್ನು ಬಿಟ್ಟು ಇತರರನ್ನು ತಮ್ಮ ಇಷ್ಟಾರ್ಥ ಈಡೇರಿಸುವವರೆಂದು ಭಾವಿಸಿ ಅವರ ಮುಂದೆ ಹರಕೆ ಕಾಣಿಕೆಗಳನ್ನು ಒಪ್ಪಿಸಬೇಕೆಂಬ ವಿಧಾನವನ್ನು ಕಲಿಸಿದವನು ಪಿಶಾಚಿಯೇ ಆಗಿದ್ದಾನೆ.

رُسُلِيْ فَكَيْفَ كَانَ نَكِيْرِ ﴿٤٥﴾

ಆದರೆ ಅವರು ನನ್ನ ಸಂದೇಶವಾಹಕರನ್ನು ಸುಳ್ಳಾಗಿಸಿದಾಗ ನನ್ನ ಶಿಕ್ಷೆ ಎಷ್ಟು ಕಠಿಣವಾಗಿತ್ತೆಂದು ನೋಡಿಕೊಳ್ಳಿರಿ.

قُلْ اِنَّمَآ اَعِظُكُمْ بِوَاحِدَةٍ ۚ اَنْ تَقُوْمُوْا لِلّٰهِ مَثْنٰى وَ فُرَادٰى ثُمَّ تَتَفَكَّرُوْا ۗ مَا بِصَاحِبِكُمْ مِّنْ جِنَّةٍ ۭ اِنْ هُوَ اِلَّا نَذِيْرٌ لَّكُمْ بَيْنَ يَدَيْ عَذَابٍ شَدِيْدٍ ﴿٤٦﴾

46. ಪೈಗಂಬರರೇ, ಇವರೊಡನೆ ಹೇಳಿರಿ- "ನಾನು ನಿಮಗೆ ಕೇವಲ ಒಂದು ವಿಷಯದ ಉಪದೇಶ ನೀಡುತ್ತೇನೆ. ನೀವು ಅಲ್ಲಾಹನಿಗಾಗಿ ಒಬ್ಬೊಬ್ಬರಾಗಿಯೂ ಇಬ್ಬಿಬ್ಬರು ಸೇರಿಕೊಂಡೂ ಚಿಂತನೆ ನಡೆಸಿರಿ ಮತ್ತು ನಿಮ್ಮ ಸಂಗಾತಿಯಲ್ಲಿ[7] ಉನ್ಮಾದದಂತಹ ವಿಷಯ ಏನಿದೆಯೆಂದು ಯೋಚಿಸಿರಿ. ಅವರಂತು ಒಂದು ಘೋರ ಯಾತನೆ ಬರುವುದಕ್ಕೆ ಮುಂಚೆ ನಿಮಗೆ ಎಚ್ಚರಿಕೆ ನೀಡುವವರಾಗಿದ್ದಾರೆ."

قُلْ مَا سَاَلْتُكُمْ مِّنْ اَجْرٍ فَهُوَ لَكُمْ ۭ اِنْ اَجْرِيَ اِلَّا عَلَى اللّٰهِ ۚ وَهُوَ عَلٰى كُلِّ شَيْءٍ شَهِيْدٌ ﴿٤٧﴾

47. ಇವರೊಡನೆ ಹೇಳಿರಿ- "ನಾನು ನಿಮ್ಮಿಂದೇನಾದರೂ ಪ್ರತಿಫಲ ಕೇಳಿದ್ದರೆ ಅದು ನಿಮಗೇ ಇರಲಿ. ನನ್ನ ಪ್ರತಿಫಲ ಕೇವಲ ಅಲ್ಲಾಹನಲ್ಲಿದೆ ಮತ್ತು ಅವನು ಪ್ರತಿಯೊಂದಕ್ಕೆ ಸಾಕ್ಷಿ ಯಾಗಿರುತ್ತಾನೆ."

قُلْ اِنَّ رَبِّيْ يَقْذِفُ بِالْحَقِّ ۚ عَلَّامُ الْغُيُوْبِ ﴿٤٨﴾

48. ಇವರೊಡನೆ ಹೇಳಿರಿ- "ನನ್ನ ಪ್ರಭು (ನನ್ನ ಮೇಲೆ) ಸತ್ಯವನ್ನು ಇಳಿಸುತ್ತಾನೆ ಮತ್ತು ಅವನು ಸಕಲ ಪರೋಕ್ಷ ವಾಸ್ತವಿಕತೆಗಳನ್ನು ಬಲ್ಲವನು."

قُلْ جَآءَ الْحَقُّ وَمَا يُبْدِئُ الْبَاطِلُ وَمَا يُعِيْدُ ﴿٤٩﴾

49. ಹೇಳಿರಿ- "ಈಗ ಸತ್ಯವು ಬಂದು ಬಿಟ್ಟಿತು ಇನ್ನು ಮಿಥ್ಯದಿಂದ ಏನು ಮಾಡಲಿಕ್ಕೂ ಆಗದು."

قُلْ اِنْ ضَلَلْتُ فَاِنَّمَآ اَضِلُّ عَلٰى نَفْسِيْ ۚ وَاِنِ اهْتَدَيْتُ فَبِمَا يُوْحِيْٓ اِلَيَّ رَبِّيْ ۭ اِنَّهٗ سَمِيْعٌ قَرِيْبٌ ﴿٥٠﴾

50. ಹೇಳಿರಿ- "ನಾನು ಪಥಭ್ರಷ್ಟನಾಗಿ ಹೋದರೆ ನನ್ನ ಪಥಭ್ರಷ್ಟತೆಯ ಪಾತಕ ನನ್ನ ಮೇಲಿರುವುದು ಮತ್ತು ನಾನು ಸನ್ಮಾರ್ಗದಲ್ಲಿದ್ದರೆ, ನನ್ನ ಪ್ರಭು ನನ್ನ ಮೇಲೆ ಅವತೀರ್ಣ ಗೊಳಿಸುವ (ದಿವ್ಯವಾಣಿಯ) ಆಧಾರದಲ್ಲಿರುತ್ತೇನೆ. ಅವನು ಸರ್ವಶ್ರುತನೂ ಅತ್ಯಂತ ನಿಕಟನೂ ಆಗಿರುತ್ತಾನೆ."

وَلَوْ تَرٰٓى اِذْ فَزِعُوْا فَلَا فَوْتَ وَاُخِذُوْا مِنْ مَّكَانٍ قَرِيْبٍ ﴿٥١﴾

51. ಇವರು ಗಾಬರಿಗೊಂಡು ಅಲೆದಾಡುತ್ತಿರುವಾಗ ಹಾಗೂ ಎಲ್ಲೂ ತಪ್ಪಿಸಿಕೊಳ್ಳಲಾಗದಿರುವಾಗ ಮಾತ್ರವಲ್ಲ ಹತ್ತಿರದಿಂದಲೇ ಸೆರೆ ಹಿಡಿಯಲ್ಪಡುವಾಗ ನೀವು ಇವರನ್ನು ನೋಡುತ್ತಿದ್ದರೆ!

7. ಅರ್ಥಾತ್- ಪ್ರವಾದಿವರ್ಯರು(ಸ). ಪ್ರವಾದಿವರ್ಯರು(ಸ) ಅವರ ಪಾಲಿಗೆ ಅಪರಿಚಿತ ವ್ಯಕ್ತಿಯಾಗಿರಲಿಲ್ಲ. ಬದಲಾಗಿ ಅವರ ನಗರದ ನಿವಾಸಿ ಮತ್ತು ಗೋತ್ರಜರೇ ಆಗಿದ್ದರು. ಆದ್ದರಿಂದ ಅವರ ಕುರಿತು 'ಸಾಹಿಬ್' ಅಥವಾ ಸಂಗಾತಿ ಎಂಬ ಪದ ಬಳಸಲಾಗಿದೆ.

52. ಆಗ ಇವರು, "ನಾವು ಅದರ ಮೇಲೆ ವಿಶ್ವಾಸವಿರಿಸಿದೆವು" ಎನ್ನುವರು. ವಸ್ತುತಃ ದೂರ ಹೋಗಿಬಿಟ್ಟ ವಸ್ತು ಈಗ ಕೈ ಸೇರುವುದು ಹೇಗೆ?

وَقَالُوا آمَنَّا بِهِ وَأَنَّىٰ لَهُمُ التَّنَاوُشُ مِن مَّكَانٍ بَعِيدٍ ﴿٥٢﴾

53. ಇದಕ್ಕೆ ಮುಂಚೆ ಇವರು ಇದನ್ನು ನಿರಾಕರಿಸಿದ್ದರು ಮತ್ತು (ಪರಾಮರ್ಶೆಯೇನೂ ನಡೆಸದೆ) ಗಾಳಿಮಾತುಗಳನ್ನು ಆಡುತ್ತಿದ್ದರು.

وَقَدْ كَفَرُوا بِهِ مِن قَبْلُ وَيَقْذِفُونَ بِالْغَيْبِ مِن مَّكَانٍ بَعِيدٍ ﴿٥٣﴾

54. ಇವರಂತೆ ಇದ್ದ ಇವರ ಪೂರ್ವಜರು ವಂಚಿಸಲ್ಪಟ್ಟಿರುವಂತೆಯೇ, ಇವರು ಕೂಡಾ ಯಾವುದನ್ನು ಆಶಿಸುತ್ತಿರುವರೋ ಅದರಿಂದ ವಂಚಿಸಲ್ಪಡುವರು. ಇವರೊಂದು ಭಾರೀ ದಾರಿಗೆಡಿಸುವ ಸಂಶಯ ದಲ್ಲಿ ಬಿದ್ದುಕೊಂಡಿದ್ದರು.

وَحِيلَ بَيْنَهُمْ وَبَيْنَ مَا يَشْتَهُونَ كَمَا فُعِلَ بِأَشْيَاعِهِم مِّن قَبْلُ ۚ إِنَّهُمْ كَانُوا فِي شَكٍّ مُّرِيبٍ ﴿٥٤﴾







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللهِ الرَّحْمٰنِ الرَّحِيْمِ ۝

1. ಸರ್ವ ಪ್ರಶಂಸೆಗಳು ಅಲ್ಲಾಹನಿಗೆ ಮೀಸಲು. ಅವನು ಭೂಮಿ-ಆಕಾಶಗಳ ಸೃಷ್ಟಿಕರ್ತನು. ಎರಡೆರಡು, ಮೂರು ಮೂರು ಹಾಗೂ ನಾಲ್ಕು ನಾಲ್ಕು ರೆಕ್ಕೆಗಳಿರುವ ದೇವಚರರನ್ನು ದೂತರನ್ನಾಗಿ ನೇಮಿಸುವವನು. ಅವನು ತನ್ನ ಸೃಷ್ಟಿಯ ರಚನೆಯಲ್ಲಿ ತಾನಿಚ್ಛಿಸು ವಂತೆ ವೃದ್ಧಿಯನ್ನು ಮಾಡುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹನು ಪ್ರತಿಯೊಂದು ಕಾರ್ಯಕ್ಕೂ ಸಾಮರ್ಥ್ಯವುಳ್ಳವನು.

اَلْحَمْدُ لِلّٰهِ فَاطِرِ السَّمٰوٰتِ وَالْاَرْضِ جَاعِلِ الْمَلٰٓئِكَةِ رُسُلًا اُولِيْٓ اَجْنِحَةٍ مَّثْنٰى وَثُلٰثَ وَرُبٰعَ ۭ يَزِيْدُ فِي الْخَلْقِ مَا يَشَاۗءُ ۭ اِنَّ اللّٰهَ عَلٰي كُلِّ شَيْءٍ قَدِيْرٌ ①

2. ಅಲ್ಲಾಹನು ಜನರಿಗಾಗಿ ಯಾವ ಕೃಪಾದ್ವಾರವನ್ನು ತೆರೆದರೂ ಅವನನ್ನು ಯಾರೂ ತಡೆಯುವವನಿಲ್ಲ. ಅವನು ಯಾವುದನ್ನು ಮುಚ್ಚಿಬಿಟ್ಟನೋ ಅವನ ಹೊರತು ಇನ್ನಾರೂ ಅದನ್ನು ತೆರೆಯು ವವನಿಲ್ಲ. ಅವನು ಅತ್ಯಂತ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

مَا يَفْتَحِ اللّٰهُ لِلنَّاسِ مِنْ رَّحْمَةٍ فَلَا مُمْسِكَ لَهَا ۚ وَمَا يُمْسِكْ ۙ فَلَا مُرْسِلَ لَهٗ مِنْۢ بَعْدِهٖ ۭ وَهُوَ الْعَزِيْزُ الْحَكِيْمُ ②

3. ಜನರೇ, ನಿಮ್ಮ ಮೇಲಿರುವ ಅಲ್ಲಾಹನ ಅನುಗ್ರಹಗಳನ್ನು ಸ್ಮರಿಸಿರಿ. ಅಲ್ಲಾಹನ ಹೊರತು ಆಕಾಶ ಮತ್ತು ಭೂಮಿಯಿಂದ ನಿಮಗೆ ಆಹಾರ ನೀಡುವಂತಹ ಸೃಷ್ಟಿಕರ್ತನಾರಾದರೂ ಇರುವನೇ? ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ನೀವು ಮೋಸ ಹೋಗುತ್ತಿರುವುದಾದರೂ ಎಲ್ಲಿಂದ?

يٰٓاَيُّهَا النَّاسُ اذْكُرُوْا نِعْمَتَ اللّٰهِ عَلَيْكُمْ ۭ هَلْ مِنْ خَالِقٍ غَيْرُ اللّٰهِ يَرْزُقُكُمْ مِّنَ السَّمَاۗءِ وَالْاَرْضِ ۭ لَآ اِلٰهَ اِلَّا هُوَ ڮ فَاَنّٰى تُؤْفَكُوْنَ ③

4. ಈಗ (ಪೈಗಂಬರರೇ,) ಇವರು ನಿಮ್ಮನ್ನು ಸುಳ್ಳಾಗಿಸುತ್ತಿದ್ದರೆ, (ಇದೇನೂ ಹೊಸತಲ್ಲ.) ನಿಮಗಿಂತ ಮುಂಚೆಯೂ ಅನೇಕ ಸಂದೇಶವಾಹಕರು ಸುಳ್ಳಾಗಿಸಲ್ಪಟ್ಟಿದ್ದಾರೆ. ಸಕಲ ವ್ಯವಹಾರಗಳೂ ಅಂತಿಮವಾಗಿ ಅಲ್ಲಾಹನ ಕಡೆಗೇ ಮರಳಲಿವೆ.

وَاِنْ يُّكَذِّبُوْكَ فَقَدْ كُذِّبَتْ رُسُلٌ مِّنْ قَبْلِكَ ۭ وَاِلَى اللّٰهِ تُرْجَعُ الْاُمُوْرُ ④

5. ಜನರೇ, ಅಲ್ಲಾಹನ ವಾಗ್ದಾನವು ನಿಶ್ಚಯವಾಗಿಯೂ ಪರಮ ಸತ್ಯವಾಗಿದೆ. ಆದುದರಿಂದ ಲೌಕಿಕ ಜೀವನವು ನಿಮ್ಮನ್ನು ವಂಚಿಸದಿರಲಿ ಮತ್ತು ಆ ಮಹಾ ವಂಚಕನು ಅಲ್ಲಾಹನ ವಿಷಯದಲ್ಲಿ ನಿಮ್ಮನ್ನು ವಂಚಿಸದಿರಲಿ.

يَا أَيُّهَا النَّاسُ إِنَّ وَعْدَ اللَّهِ حَقٌّ فَلَا تَغُرَّنَّكُمُ الْحَيَاةُ الدُّنْيَا وَلَا يَغُرَّنَّكُمْ بِاللَّهِ الْغَرُورُ ٥

6. ವಾಸ್ತವದಲ್ಲಿ ಶೈತಾನನು ನಿಮ್ಮ ಶತ್ರುವಾಗಿದ್ದಾನೆ. ಆದುದರಿಂದ ನೀವೂ ಅವನನ್ನು ನಿಮ್ಮ ಶತ್ರುವೆಂದೇ ತಿಳಿಯಿರಿ. ಅವನು ತನ್ನ ಅನುಯಾಯಿಗಳನ್ನು ಅವರು ನರಕವಾಸಿಗಳಲ್ಲಾಗಲೆಂದೇ ತನ್ನ ಮಾರ್ಗದ ಕಡೆಗೆ ಕರೆಯುತ್ತಿದ್ದಾನೆ.

إِنَّ الشَّيْطَانَ لَكُمْ عَدُوٌّ فَاتَّخِذُوهُ عَدُوًّا إِنَّمَا يَدْعُو حِزْبَهُ لِيَكُونُوا مِنْ أَصْحَابِ السَّعِيرِ ٦

7. ಯಾರು ಸತ್ಯವನ್ನು ನಿಷೇಧಿಸುವರೋ ಅವರಿಗೆ ಘೋರ ಯಾತನೆ ಕಾದಿದೆ. ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗುವವರಿಗಾಗಿ ಕ್ಷಮೆಯೂ ಮಹಾ ಸತ್ಫಲವೂ ಇದೆ.

الَّذِينَ كَفَرُوا لَهُمْ عَذَابٌ شَدِيدٌ وَالَّذِينَ آمَنُوا وَعَمِلُوا الصَّالِحَاتِ لَهُمْ مَغْفِرَةٌ وَأَجْرٌ كَبِيرٌ ٧

8. ಯಾರ ಪಾಲಿಗೆ ಅವನ ದುಷ್ಕರ್ಮವು ಮನೋಹರಗೊಳಿಸಲ್ಪಟ್ಟು ಅವನು ಅದನ್ನು ಉತ್ತಮವಾದುದೆಂದು ಗ್ರಹಿಸುತ್ತಾನೋ (ಅವನ ಪಥಭ್ರಷ್ಟತೆಗೆ ಮಿತಿ ಇದೆಯೇ?) ವಾಸ್ತವದಲ್ಲಿ ಅಲ್ಲಾಹನು ತಾನಿಚ್ಛಿಸಿದವರನ್ನು ಪಥಭ್ರಷ್ಟಗೊಳಿಸಿ ಬಿಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಸನ್ಮಾರ್ಗ ತೋರಿಸುತ್ತಾನೆ. ಆದುದರಿಂದ (ಪೈಗಂಬರರೇ) ನಿಮ್ಮ ಜೀವನವು ಇವರಿಗಾಗಿ ಖೇದ ಹಾಗೂ ಕಳವಳಗಳಲ್ಲಿ ಕೊರಗದಿ ರಲಿ. ನಿಶ್ಚಯವಾಗಿಯೂ ಇವರು ಮಾಡುತ್ತಿರುವುದನ್ನು ಅಲ್ಲಾಹನು ಚೆನ್ನಾಗಿ ಅರಿಯುತ್ತಾನೆ.

أَفَمَنْ زُيِّنَ لَهُ سُوءُ عَمَلِهِ فَرَآهُ حَسَنًا فَإِنَّ اللَّهَ يُضِلُّ مَنْ يَشَاءُ وَيَهْدِي مَنْ يَشَاءُ فَلَا تَذْهَبْ نَفْسُكَ عَلَيْهِمْ حَسَرَاتٍ إِنَّ اللَّهَ عَلِيمٌ بِمَا يَصْنَعُونَ ٨

9. ಅಲ್ಲಾಹನೇ ಮಾರುತಗಳನ್ನು ಕಳುಹಿಸುತ್ತಾನೆ, ಅನಂತರ ಅವುಗಳು ಮೋಡವನ್ನೆಬ್ಬಿಸುತ್ತವೆ, ತರುವಾಯ ನಾವು ಅದನ್ನು ಒಂದು ಬಂಜರು ಪ್ರದೇಶದ ಕಡೆಗೆ ಒಯ್ಯುತ್ತೇವೆ ಮತ್ತು ಅದರ ಮೂಲಕ ಸತ್ತು ಬಿದ್ದಿದ್ದ ಅದೇ ಭೂಮಿಯನ್ನು ಜೀವಂತಗೊಳಿಸುತ್ತೇವೆ. ಸತ್ತವರ ಪುನರುಜ್ಜೀವನವೂ ಹೀಗೆಯೇ ಆಗುವುದು.

وَاللَّهُ الَّذِي أَرْسَلَ الرِّيَاحَ فَتُثِيرُ سَحَابًا فَسُقْنَاهُ إِلَىٰ بَلَدٍ مَيِّتٍ فَأَحْيَيْنَا بِهِ الْأَرْضَ بَعْدَ مَوْتِهَا كَذَٰلِكَ النُّشُورُ ٩

10. ಗೌರವವನ್ನು ಇಚ್ಛಿಸುವವನು ಗೌರವವು ಸರ್ವ ಸಂಪೂರ್ಣವಾಗಿ ಅಲ್ಲಾಹನದೆಂಬುದನ್ನು ತಿಳಿದಿರಬೇಕು. ಅವನಲ್ಲಿಗೆ ಮೇಲೇರುವಂತಹ ವಸ್ತು 'ಪರಿಶುದ್ಧವಚನ' ಮಾತ್ರ. ಸತ್ಕರ್ಮವು ಅದನ್ನು ಮೇಲಕ್ಕೇರಿಸುತ್ತದೆ. ಇನ್ನು ದುಷ್ಟ ಕುತಂತ್ರಗಳನ್ನೆಸಗುವವರ ವಿಷಯ- ಅವರಿಗಾಗಿ ಕಠಿಣ ಯಾತನೆ ಇದೆ. ಅವರ ಕುತಂತ್ರವು ಸ್ವತಃ ನಾಶವಾಗಲಿದೆ.

مَنْ كَانَ يُرِيدُ الْعِزَّةَ فَلِلَّهِ الْعِزَّةُ جَمِيعًا إِلَيْهِ يَصْعَدُ الْكَلِمُ الطَّيِّبُ وَالْعَمَلُ الصَّالِحُ يَرْفَعُهُ وَالَّذِينَ يَمْكُرُونَ السَّيِّئَاتِ لَهُمْ عَذَابٌ شَدِيدٌ وَمَكْرُ أُولَٰئِكَ هُوَ يَبُورُ ١٠

11. ಅಲ್ಲಾಹನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದನು. ತರುವಾಯ ವೀರ್ಯದಿಂದ, ಅನಂತರ ನಿಮ್ಮನ್ನು (ಗಂಡು-ಹೆಣ್ಣೆಂಬ) ಜೊತೆಗಳಾಗಿ ಮಾಡಿದನು. ಅಲ್ಲಾಹನಿಗೆ ಅರಿವಿಲ್ಲದೆ ಯಾವ ಸ್ತ್ರೀಯೂ ಗರ್ಭವತಿಯಾಗುವುದೂ ಇಲ್ಲ ಪ್ರಸವಿಸುವುದೂ ಇಲ್ಲ. ಯಾವುದೇ ವೃದ್ಧನು ದೀರ್ಘಾಯುಸ್ಸನ್ನು ಪಡೆಯುವುದಾಗಲಿ, ಯಾರದಾದರೂ ಆಯುಷ್ಯದಲ್ಲಿ ತುಸು ಕಡಿತವಾಗುವುದಾಗಲಿ ಇವೆಲ್ಲವೂ ಒಂದು ಗ್ರಂಥದಲ್ಲಿ ಲಿಖಿತವಾಗಿರದೆ ಸಂಭವಿಸುವುದಿಲ್ಲ. ಇದು ಅಲ್ಲಾಹನಿಗೆ ಅತಿ ಸುಲಭವಾದ ಕೆಲಸ.

وَاللّٰهُ خَلَقَكُمْ مِّنْ تُرَابٍ ثُمَّ مِنْ نُّطْفَةٍ ثُمَّ جَعَلَكُمْ اَزْوَاجًا ؕ وَمَا تَحْمِلُ مِنْ اُنْثٰى وَلَا تَضَعُ اِلَّا بِعِلْمِهٖ ؕ وَمَا يُعَمَّرُ مِنْ مُّعَمَّرٍ وَّلَا يُنْقَصُ مِنْ عُمُرِهٖۤ اِلَّا فِيْ كِتٰبٍ ؕ اِنَّ ذٰلِكَ عَلَى اللّٰهِ يَسِيْرٌ ﴿۱۱﴾

12. ನೀರಿನ ಎರಡು ಸಂಗ್ರಹಗಳು ಸಮವಾಗಿಲ್ಲ. ಒಂದು ಸಿಹಿಯಾಗಿದ್ದು ಬಾಯಾರಿಕೆಯನ್ನು ನೀಗಿಸುವಂತಹದ್ದೂ ಕುಡಿಯಲು ರುಚಿಕರವೂ ಆಗಿದೆ, ಇನ್ನೊಂದು ಗಂಟಲು ಸುಲಿದು ಹೋಗುವಷ್ಟು ಉಪ್ಪಾಗಿದೆ. ಆದರೆ ನೀವು ಇವೆರಡರಿಂದಲೂ ತಾಜಾ ಮಾಂಸವನ್ನು ಪಡೆಯುತ್ತೀರಿ. ಧರಿಸಲು ಅಲಂಕಾರ ಸಾಧನಗಳನ್ನು ಹೊರ ತೆಗೆಯುತ್ತೀರಿ ಮತ್ತು ಅದೇ ನೀರಿನಲ್ಲಿ ನಾವೆಗಳು ಅದರ ಎದೆಯನ್ನು ಸೀಳುತ್ತಾ ಸಾಗುತ್ತಿರುವುದನ್ನು ನೀವು ನೋಡುತ್ತೀರಿ. ಇವೆಲ್ಲ ನೀವು ಅಲ್ಲಾಹನ ಅನುಗ್ರಹವನ್ನರಸಲಿಕ್ಕಾಗಿಯೂ ಅವನಿಗೆ ಕೃತಜ್ಞರಾಗಲಿಕ್ಕಾಗಿಯೂ ಆಗಿದೆ.

وَمَا يَسْتَوِي الْبَحْرٰنِ ۖۗ هٰذَا عَذْبٌ فُرَاتٌ سَآئِغٌ شَرَابُهٗ وَهٰذَا مِلْحٌ اُجَاجٌ ؕ وَمِنْ كُلٍّ تَاْكُلُوْنَ لَحْمًا طَرِيًّا وَّتَسْتَخْرِجُوْنَ حِلْيَةً تَلْبَسُوْنَهَا ۚ وَتَرَى الْفُلْكَ فِيْهِ مَوَاخِرَ لِتَبْتَغُوْا مِنْ فَضْلِهٖ وَلَعَلَّكُمْ تَشْكُرُوْنَ ﴿۱۲﴾

13. ಅವನು ಹಗಲಿನೊಳಗೆ ರಾತ್ರಿಯನ್ನೂ ರಾತ್ರಿಯೊಳಗೆ ಹಗಲನ್ನೂ ಪೋಣಿಸುತ್ತ ತರುತ್ತಾನೆ. ಸೂರ್ಯ ಚಂದ್ರರನ್ನು ಅವನು ನಿಯಂತ್ರಿಸಿ ಟ್ಟಿದ್ದಾನೆ. ಇದೆಲ್ಲವೂ ಒಂದು ನಿಶ್ಚಿತ ಸಮಯದ ವರೆಗೆ ನಡೆಯುತ್ತ ಸಾಗುತ್ತಿದೆ. (ಇವೆಲ್ಲವನ್ನೂ ಮಾಡುತ್ತಿರುವ) ಅಲ್ಲಾಹನೇ ನಿಮ್ಮ ಪ್ರಭು. ಸಾರ್ವಭೌಮತೆ ಅವನದೇ ಆಗಿರುತ್ತದೆ. ಅವನನ್ನು ಬಿಟ್ಟು ನೀವು ಇತರ ಯಾರನ್ನೆಲ್ಲ ಪ್ರಾರ್ಥಿಸುತ್ತೀರೋ ಅವರು ಒಂದು ಹುಲು ಕಡ್ಡಿಯ ಒಡೆಯರೂ ಅಲ್ಲ.

يُوْلِجُ الَّيْلَ فِي النَّهَارِ وَيُوْلِجُ النَّهَارَ فِي الَّيْلِ ۙ وَسَخَّرَ الشَّمْسَ وَالْقَمَرَ ۖ كُلٌّ يَّجْرِيْ لِاَجَلٍ مُّسَمًّى ؕ ذٰلِكُمُ اللّٰهُ رَبُّكُمْ لَهُ الْمُلْكُ ؕ وَالَّذِيْنَ تَدْعُوْنَ مِنْ دُوْنِهٖ مَا يَمْلِكُوْنَ مِنْ قِطْمِيْرٍ ﴿۱۳﴾

14. ನೀವು ಅವರನ್ನು ಪ್ರಾರ್ಥಿಸಿದರೆ ಅವರು ನಿಮ್ಮ ಪ್ರಾರ್ಥನೆಗಳನ್ನು ಕೇಳಲಾರರು ಮತ್ತು ಕೇಳಿದರೂ ಅವುಗಳ ಉತ್ತರವನ್ನು ನಿಮಗೆ ಕೊಡಲಾರರು. ಪುನರುತ್ಥಾನದಿನ ಅವರು ನೀವೆಸಗಿದ ದೇವಸಹಭಾಗಿತ್ವವನ್ನು ನಿರಾಕರಿಸಿ ಬಿಡುವರು. ವಸ್ತುಸ್ಥಿತಿಯ ಇಂತಹ ಸರಿಯಾದ ವಿವರವನ್ನು ನಿಮಗೆ ಓರ್ವ ವಿವರಪೂರ್ಣನಲ್ಲದೆ ಇನ್ನಾರೂ ಕೊಡಲಾರನು.

اِنْ تَدْعُوْهُمْ لَا يَسْمَعُوْا دُعَآءَكُمْ ۚ وَلَوْ سَمِعُوْا مَا اسْتَجَابُوْا لَكُمْ ؕ وَيَوْمَ الْقِيٰمَةِ يَكْفُرُوْنَ بِشِرْكِكُمْ ؕ وَلَا يُنَبِّئُكَ مِثْلُ خَبِيْرٍ ﴿۱۴﴾

15. ಜನರೇ, ನೀವೇ ಅಲ್ಲಾಹನ ಅವಲಂಬಿತರಾಗಿದ್ದೀರಿ ಮತ್ತು ಅಲ್ಲಾಹನು ನಿರಪೇಕ್ಷನೂ ಸ್ತುಯಂಸ್ತುತ್ಯನೂ ಆಗಿರುತ್ತಾನೆ.

يَا أَيُّهَا النَّاسُ أَنتُمُ الْفُقَرَاءُ إِلَى اللَّهِ ۖ وَاللَّهُ هُوَ الْغَنِيُّ الْحَمِيدُ ﴿١٥﴾

16. ಅವನಿಚ್ಛಿಸಿದರೆ ನಿಮ್ಮನ್ನು ಸರಿಸಿ ಯಾವುದಾದರೊಂದು ಹೊಸ ಸೃಷ್ಟಿಯನ್ನು ನಿಮ್ಮ ಸ್ಥಾನಕ್ಕೆ ತರಬಲ್ಲನು.

إِن يَشَأْ يُذْهِبْكُمْ وَيَأْتِ بِخَلْقٍ جَدِيدٍ ﴿١٦﴾

17. ಹೀಗೆ ಮಾಡುವುದು ಅಲ್ಲಾಹನಿಗೆ ಏನೂ ಕಷ್ಟಸಾಧ್ಯವಲ್ಲ.

وَمَا ذَٰلِكَ عَلَى اللَّهِ بِعَزِيزٍ ﴿١٧﴾

18. ಯಾವ ಹೊರೆ ಹೊರುವವನೂ ಇನ್ನೊಬ್ಬನ ಹೊರೆಯನ್ನು ಹೊರಲಾರನು. ಹೊರೆ ಹೊತ್ತ ವ್ಯಕ್ತಿಯು ತನ್ನ ಹೊರೆಯನ್ನು ಹೊರಲು ಕೂಗುವಾಗ, ಅವನ ನಿಕಟ ಬಂಧುವೇ ಆಗಿದ್ದರೂ ಅವನ ಹೊರೆಯ ಅಲ್ಪಾಂಶವನ್ನು ಕೂಡಾ ಹಂಚಿಕೊಳ್ಳಲು ಬರಲಾರನು. (ಪೈಗಂಬರರೇ,) ಪರೋಕ್ಷವಾಗಿ ತಮ್ಮ ಪ್ರಭುವನ್ನು ಭಯಪಡುವವರಿಗೆ ಮತ್ತು ನಮಾಝ್ ಸಂಸ್ಥಾಪಿಸುವವರಿಗೆ ಮಾತ್ರ ನೀವು ಎಚ್ಚರಿಕೆ ಕೊಡಬಲ್ಲಿರಿ. ಆತ್ಮಸಂಸ್ಕರಣೆ ಮಾಡಿ ಕೊಳ್ಳುವವನು ತನ್ನ ಹಿತಕ್ಕಾಗಿಯೇ ಮಾಡಿಕೊಳ್ಳುತ್ತಾನೆ. ಎಲ್ಲ ರಿಗೂ ಅಲ್ಲಾಹನ ಕಡೆಗೇ ಮರಳಲಿಕ್ಕಿದೆ.

وَلَا تَزِرُ وَازِرَةٌ وِزْرَ أُخْرَىٰ ۚ وَإِن تَدْعُ مُثْقَلَةٌ إِلَىٰ حِمْلِهَا لَا يُحْمَلْ مِنْهُ شَيْءٌ وَلَوْ كَانَ ذَا قُرْبَىٰ ۗ إِنَّمَا تُنذِرُ الَّذِينَ يَخْشَوْنَ رَبَّهُم بِالْغَيْبِ وَأَقَامُوا الصَّلَاةَ ۚ وَمَن تَزَكَّىٰ فَإِنَّمَا يَتَزَكَّىٰ لِنَفْسِهِ ۚ وَإِلَى اللَّهِ الْمَصِيرُ ﴿١٨﴾

19. ಕುರುಡನೂ ಕಣ್ಣುಳ್ಳವನೂ ಸಮಾನರಲ್ಲ-

وَمَا يَسْتَوِي الْأَعْمَىٰ وَالْبَصِيرُ ﴿١٩﴾

20. ಅಂಧಕಾರಗಳೂ ಪ್ರಕಾಶವೂ ಸಮಾನವಲ್ಲ-

وَلَا الظُّلُمَاتُ وَلَا النُّورُ ﴿٢٠﴾

21. ತಂಪಾದ ನೆರಳೂ ಬಿಸಿಲ ತಾಪವೂ ಸರಿಸಮಾನವಲ್ಲ.

وَلَا الظِّلُّ وَلَا الْحَرُورُ ﴿٢١﴾

22. ಜೀವಂತರೂ ಮೃತರೂ ಸಮಾನರಲ್ಲ. ಅಲ್ಲಾಹನು ತಾನಿಚ್ಛಿಸಿದ ವರಿಗೆ ಕೇಳಿಸುತ್ತಾನೆ. ಆದರೆ (ಪೈಗಂಬರರೇ,) ಸಮಾಧಿಗಳಲ್ಲಿ ದಫನರಾಗಿರುವವರಿಗೆ ನೀವು ಕೇಳಿಸಲಾರಿರಿ.[1]

وَمَا يَسْتَوِي الْأَحْيَاءُ وَلَا الْأَمْوَاتُ ۚ إِنَّ اللَّهَ يُسْمِعُ مَن يَشَاءُ ۖ وَمَا أَنتَ بِمُسْمِعٍ مَّن فِي الْقُبُورِ ﴿٢٢﴾

23. ನೀವು ಕೇವಲ ಓರ್ವ ಎಚ್ಚರಿಕೆ ಕೊಡುವವರಾಗಿರುತ್ತೀರಿ.

إِنْ أَنتَ إِلَّا نَذِيرٌ ﴿٢٣﴾

24. ನಾವು ನಿಮ್ಮನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿ ಸತ್ಯಸಹಿತ ಕಳುಹಿಸಿರುತ್ತೇವೆ. ಎಚ್ಚರಿಕೆ ಕೊಡುವವರಾರೂ ಬಂದಿರ ದಂತಹ ಸಮುದಾಯವೊಂದೂ ಗತಿಸಿಲ್ಲ.

إِنَّا أَرْسَلْنَاكَ بِالْحَقِّ بَشِيرًا وَنَذِيرًا ۚ وَإِن مِّنْ أُمَّةٍ إِلَّا خَلَا فِيهَا نَذِيرٌ ﴿٢٤﴾

1. ಅರ್ಥಾತ್- ಅಲ್ಲಾಹನ ಇಚ್ಛೆಯ ವಿಷಯ ಬೇರೆ. ಅವನು ಬಯಸಿದರೆ ಕಲ್ಲುಗಳಿಗೂ ಶ್ರವಣಶಕ್ತಿಯನ್ನು ದಯಪಾಲಿಸಬಹುದು. ಆದರೆ ಆತ್ಮಸಾಕ್ಷಿಯನ್ನು ಹೃದಯದಲ್ಲಿ ದಫನ ಮಾಡಿಕೊಂಡವರ ಮನಸ್ಸಿಗೆ ತಮ್ಮ ಮಾತುಗಳನ್ನು ಇಳಿಸುವುದು ಪ್ರವಾದಿವರ್ಯರಿಗೆ(ಸ) ಸಾಧ್ಯವಾದ ಕೆಲಸವಲ್ಲ. ಅಂತೆಯೇ ಕೇಳಲೊಲ್ಲದ ಕಿವುಡು ಕಿವಿಯುಳ್ಳವರಿಗೆ ಸತ್ಯದ ಮಾತನ್ನು ತಲಪಿಸುವುದು ಅವರಿಂದ ಸಾಧ್ಯವಿಲ್ಲ. ಉತ್ತಮ ಮಾತಿಗೆ ಕಿವಿಗೊಡಲು ಸಿದ್ಧರಾಗುವ ಜನರಿಗೆ ಮಾತ್ರ ಅವರು ಕೇಳಿಸಬಲ್ಲರು.

25. ಇದೀಗ ಇವರು ನಿಮ್ಮನ್ನು ಸುಳ್ಳಾಗಿಸುತ್ತಾರಾದರೆ ಇವರಿಗಿಂತ ಮುಂಚೆ ಗತಿಸಿದವರೂ ಸುಳ್ಳಾಗಿಸಿದ್ದರು. ಅವರ ಸಂದೇಶವಾಹಕರು ಅವರ ಬಳಿಗೆ ಸುಸ್ಪಷ್ಟ ಆಧಾರಗಳನ್ನು, ಕಿರುಗ್ರಂಥಗಳನ್ನು ಮತ್ತು ಸ್ಪಷ್ಟ ಮಾರ್ಗದರ್ಶನಗಳನ್ನೀಯುವ ಗ್ರಂಥವನ್ನು ತಂದಿದ್ದರು.

وَاِنْ يُّكَذِّبُوْكَ فَقَدْ كَذَّبَ الَّذِيْنَ مِنْ قَبْلِهِمْ ۚ جَآءَتْهُمْ رُسُلُهُمْ بِالْبَيِّنٰتِ وَبِالزُّبُرِ وَبِالْكِتٰبِ الْمُنِيْرِ ﴿٢٥﴾

26. ಅನಂತರ ನಿರಾಕರಿಸಿದವರನ್ನು ನಾನು ಹಿಡಿದು ಬಿಟ್ಟೆನು. ನನ್ನ ಶಿಕ್ಷೆ ಎಷ್ಟು ಕಠಿಣವಾಗಿತ್ತೆಂದು ನೋಡಿಕೊಳ್ಳಿರಿ.

ثُمَّ اَخَذْتُ الَّذِيْنَ كَفَرُوْا فَكَيْفَ كَانَ نَكِيْرِ ﴿٢٦﴾

ع ١٢ ٣ ١٥

27. ಅಲ್ಲಾಹನು ಆಕಾಶದಿಂದ ನೀರನ್ನು ಸುರಿಸುವುದನ್ನೂ ಆ ಬಳಿಕ ಅದರ ಮೂಲಕ ನಾವು ನಾನಾ ಬಣ್ಣಗಳಿರುವ ತರತರದ ಫಲ ಗಳನ್ನು ಹೊರ ತರುವುದನ್ನೂ ನೀವು ನೋಡುವುದಿಲ್ಲವೇ? ಪರ್ವತಗಳಲ್ಲೂ ಬಿಳಿ, ಕೆಂಪು, ಕಡುಕಪ್ಪು ಹಾಗೂ ವಿವಿಧ ಬಣ್ಣಗಳ ಬರೆಗಳಿರುತ್ತವೆ.

اَلَمْ تَرَ اَنَّ اللّٰهَ اَنْزَلَ مِنَ السَّمَآءِ مَآءً ۚ فَاَخْرَجْنَا بِهٖ ثَمَرٰتٍ مُّخْتَلِفًا اَلْوَانُهَا ؕ وَمِنَ الْجِبَالِ جُدَدٌۢ بِيْضٌ وَّحُمْرٌ مُّخْتَلِفٌ اَلْوَانُهَا وَغَرَابِيْبُ سُوْدٌ ﴿٢٧﴾

28. ಮತ್ತು ಇದೇ ರೀತಿಯಲ್ಲಿ ಮನುಷ್ಯರ, ಪ್ರಾಣಿಗಳ ಮತ್ತು ಜಾನುವಾರುಗಳ ಬಣ್ಣಗಳೂ ವಿಭಿನ್ನವಾಗಿವೆ. ವಾಸ್ತವದಲ್ಲಿ ಅಲ್ಲಾಹನ ದಾಸರಲ್ಲಿ ಜ್ಞಾನವುಳ್ಳವರು ಮಾತ್ರ ಅವನನ್ನು ಭಯಪಡುತ್ತಾರೆ.[2] ನಿಶ್ಚಯವಾಗಿಯೂ ಅಲ್ಲಾಹನು ಪ್ರಬಲನೂ ಕ್ಷಮಾಶೀಲನೂ ಆಗಿರುತ್ತಾನೆ.

وَمِنَ النَّاسِ وَالدَّوَآبِّ وَالْاَنْعَامِ مُخْتَلِفٌ اَلْوَانُهٗ كَذٰلِكَ ؕ اِنَّمَا يَخْشَى اللّٰهَ مِنْ عِبَادِهِ الْعُلَمٰٓؤُا ؕ اِنَّ اللّٰهَ عَزِيْزٌ غَفُوْرٌ ﴿٢٨﴾

29. ಅಲ್ಲಾಹನ ಗ್ರಂಥವನ್ನು ಪಠಿಸುವವರೂ ನಮಾಝನ್ನು ಸಂಸ್ಥಾಪಿಸು ವವರೂ ನಾವು ಅವರಿಗೆ ಕೊಟ್ಟಿರುವ ಜೀವನಾಧಾರದಿಂದ ರಹಸ್ಯವಾಗಿಯೂ ಬಹಿರಂಗವಾಗಿಯೂ ಖರ್ಚು ಮಾಡುವವರೂ ನಿಶ್ಚಯವಾಗಿಯೂ ನಷ್ಟವುಂಟಾಗದಂತಹ ಒಂದು ವ್ಯಾಪಾರವನ್ನು ನಿರೀಕ್ಷಿಸುವವರಾಗಿದ್ದಾರೆ.

اِنَّ الَّذِيْنَ يَتْلُوْنَ كِتٰبَ اللّٰهِ وَاَقَامُوا الصَّلٰوةَ وَاَنْفَقُوْا مِمَّا رَزَقْنٰهُمْ سِرًّا وَّعَلَانِيَةً يَّرْجُوْنَ تِجَارَةً لَّنْ تَبُوْرَ ﴿٢٩﴾

30. ಅಲ್ಲಾಹ್ ಅವರ ಸತ್ಫಲವನ್ನು ಸರ್ವಸಂಪೂರ್ಣವಾಗಿ ಅವರಿಗೆ ಕೊಡಲೆಂದು ಮತ್ತು ಅವನ ಅನುಗ್ರಹದಿಂದ ಅವರಿಗೆ ಇನ್ನಷ್ಟು ದಯಪಾಲಿಸಲೆಂದು (ಅವರು ಈ ವ್ಯಾಪಾರದಲ್ಲಿ ತಮ್ಮ ಸರ್ವಸ್ವವನ್ನು ತೊಡಗಿಸಿದ್ದಾರೆ.) ನಿಶ್ಚಯವಾಗಿಯೂ ಅಲ್ಲಾಹನು ಮಹಾಕ್ಷಮಾಶೀಲನೂ ಗುಣಗ್ರಾಹಿಯೂ ಆಗಿರುತ್ತಾನೆ.

لِيُوَفِّيَهُمْ اُجُوْرَهُمْ وَيَزِيْدَهُمْ مِّنْ فَضْلِهٖ ؕ اِنَّهٗ غَفُوْرٌ شَكُوْرٌ ﴿٣٠﴾

2. ಜ್ಞಾನಿಯು ಪುಸ್ತಕಜ್ಞಾನವಿರುವವನು ಮಾತ್ರವಲ್ಲ, ಬದಲಾಗಿ ದೇವನನ್ನು ಭಯಪಡುವವನಾಗಿದ್ದಾನೆಂದು ಇದರಿಂದ ವ್ಯಕ್ತವಾಗುತ್ತದೆ.

31. (ಪೈಗಂಬರರೇ), ನಾವು ನಿಮ್ಮ ಕಡೆಗೆ ದಿವ್ಯವಾಣಿಯ ಮೂಲಕ ಕಳುಹಿಸಿದ ಗ್ರಂಥವೇ ಸತ್ಯವಾಗಿದ್ದು ಈ ಮುಂಚೆ ಬಂದಿದ್ದ ಗ್ರಂಥಗಳನ್ನು ದೃಢೀಕರಿಸಲು ಬಂದಿದೆ. ನಿಶ್ಚಯವಾಗಿಯೂ ಅಲ್ಲಾಹನು ತನ್ನ ದಾಸರ ಬಗ್ಗೆ ವಿವರ ಪೂರ್ಣನೂ ಪ್ರತಿಯೊಂದರ ಮೇಲೆ ನಿಗಾ ಇರಿಸುವವನೂ ಆಗಿರುತ್ತಾನೆ.

وَالَّذِي أَوْحَيْنَا إِلَيْكَ مِنَ الْكِتَابِ
هُوَ الْحَقُّ مُصَدِّقًا لِمَا بَيْنَ يَدَيْهِ ۗ
إِنَّ اللَّهَ بِعِبَادِهِ لَخَبِيرٌ بَصِيرٌ ﴿٣١﴾

32. ಅನಂತರ ನಾವು ನಮ್ಮ ದಾಸರಲ್ಲಿ ಆಯ್ದುಕೊಂಡವರನ್ನು ಈ ಗ್ರಂಥದ ಉತ್ತರಾಧಿಕಾರಿಗಳಾಗಿ ಮಾಡಿದೆವು. ಇದೀಗ ಅವರಲ್ಲಿ ತನ್ನ ಮೇಲೆ ತಾನೇ ಅಕ್ರಮವೆಸಗಿಕೊಳ್ಳುವವನೂ ಇದ್ದಾನೆ. ಮಧ್ಯಮ ತರದವನೂ ಇದ್ದಾನೆ. ಅಲ್ಲಾಹನ ಅಪ್ಪಣೆಯಂತೆ ಪುಣ್ಯ ಕಾರ್ಯಗಳಲ್ಲಿ ಮುಂದಾಗುವವನೂ ಇದ್ದಾನೆ. ಮಹಾ ಅನುಗ್ರಹವು ಇದುವೇ ಆಗಿದೆ.

ثُمَّ أَوْرَثْنَا الْكِتَابَ الَّذِينَ اصْطَفَيْنَا
مِنْ عِبَادِنَا ۖ فَمِنْهُمْ ظَالِمٌ لِنَفْسِهِ
وَمِنْهُمْ مُقْتَصِدٌ وَمِنْهُمْ سَابِقٌ بِالْخَيْرَاتِ
بِإِذْنِ اللَّهِ ۚ ذَٰلِكَ هُوَ الْفَضْلُ الْكَبِيرُ ﴿٣٢﴾

33. ಇವರು ಶಾಶ್ವತವಾದ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಿಸುವವರು. ಅಲ್ಲಿ ಇವರನ್ನು ಬಂಗಾರದ ಕಂಕಣಗಳಿಂದಲೂ ಮತ್ತು ಗಳಿಂದಲೂ ಅಲಂಕರಿಸಲಾಗುವುದು. ಅಲ್ಲಿ ಅವರ ಉಡುಪು ರೇಶ್ಮೆಯದ್ದಾಗಿರುವುದು.

جَنَّاتُ عَدْنٍ يَدْخُلُونَهَا يُحَلَّوْنَ فِيهَا
مِنْ أَسَاوِرَ مِنْ ذَهَبٍ وَلُؤْلُؤًا ۖ
وَلِبَاسُهُمْ فِيهَا حَرِيرٌ ﴿٣٣﴾

34. ಮತ್ತು ಅವರು, "ನಮ್ಮಿಂದ ದುಃಖವನ್ನು ದೂರೀಕರಿಸಿದ ಅಲ್ಲಾಹನಿಗೆ ಕೃತಜ್ಞತೆಗಳು. ಖಂಡಿತವಾಗಿಯೂ ನಮ್ಮ ಪ್ರಭು ಮಹಾ ಕ್ಷಮಾದಾನಿಯೂ ಗುಣಗ್ರಾಹಿಯೂ ಆಗಿರುತ್ತಾನೆ.

وَقَالُوا الْحَمْدُ لِلَّهِ الَّذِي أَذْهَبَ عَنَّا
الْحَزَنَ ۖ إِنَّ رَبَّنَا لَغَفُورٌ شَكُورٌ ﴿٣٤﴾

35. ಅವನು ತನ್ನ ಅನುಗ್ರಹದಿಂದ ನಮ್ಮನ್ನು ಶಾಶ್ವತ ನಿವಾಸದಲ್ಲಿ ತಂದಿರಿಸಿದನು. ಇನ್ನು ಇಲ್ಲಿ ನಮಗೆ ಯಾವುದೇ ಸಂಕಷ್ಟವೂ ಇಲ್ಲ, ಆಯಾಸವೂ ಉಂಟಾಗುವುದಿಲ್ಲ" ಎನ್ನುವರು.

الَّذِي أَحَلَّنَا دَارَ الْمُقَامَةِ مِنْ فَضْلِهِ
لَا يَمَسُّنَا فِيهَا نَصَبٌ وَلَا يَمَسُّنَا
فِيهَا لُغُوبٌ ﴿٣٥﴾

36. ಸತ್ಯನಿಷೇಧಿಗಳಿಗಾಗಿ ನರಕಾಗ್ನಿ ಇದೆ. ಅವರಿಗೆ ಮರಣ ಕೊಟ್ಟು ಅವರನ್ನು ಮುಗಿಸಿ ಬಿಡಲಾಗುವುದೂ ಇಲ್ಲ ಮತ್ತು ಅವರ ನರಕ ಯಾತನೆಯಲ್ಲಿ ಕಡಿತ ಮಾಡಲಾಗುವುದೂ ಇಲ್ಲ. ನಾವು ಪ್ರತಿಯೊಬ್ಬ ಸತ್ಯನಿಷೇಧಿಗೂ ಇದೇ ರೀತಿ ಪ್ರತಿಫಲ ಕೊಡುತ್ತೇವೆ.

وَالَّذِينَ كَفَرُوا لَهُمْ نَارُ جَهَنَّمَ ۖ لَا
يُقْضَىٰ عَلَيْهِمْ فَيَمُوتُوا وَلَا يُخَفَّفُ
عَنْهُمْ مِنْ عَذَابِهَا ۚ كَذَٰلِكَ
نَجْزِي كُلَّ كَفُورٍ ﴿٣٦﴾

37. ಅಲ್ಲಿ ಅವರು ಚೀರಾಡುತ್ತಾ, "ನಮ್ಮ ಪ್ರಭೂ, ನಾವು ಹಿಂದೆ ಮಾಡುತ್ತಿದ್ದಂತಹ ಕರ್ಮಗಳಿಗಿಂತ ಭಿನ್ನವಾದ ಸತ್ಕರ್ಮವನ್ನು ಮಾಡಲಿಕ್ಕಾಗಿ ನಮ್ಮನ್ನು ಇಲ್ಲಿಂದ ಹೊರ ತೆಗೆದುಬಿಡು" ಎನ್ನುವರು. (ಆಗ ಅವರಿಗೆ) "ಉಪದೇಶ ಪಡೆಯುವ ಇಚ್ಛೆ

وَهُمْ يَصْطَرِخُونَ فِيهَا ۖ رَبَّنَا أَخْرِجْنَا
نَعْمَلْ صَالِحًا غَيْرَ الَّذِي كُنَّا نَعْمَلُ ۚ
أَوَلَمْ نُعَمِّرْكُمْ مَا يَتَذَكَّرُ فِيهِ مَنْ

ಇರುತ್ತಿದ್ದರೆ ಉಪದೇಶ ಪಡೆಯಲು ಸಾಕಾಗುವಷ್ಟು ಆಯುಷ್ಯವನ್ನು ನಾವು ನಿಮಗೆ ಕೊಟ್ಟಿರಲಿಲ್ಲವೇ? ನಿಮ್ಮ ಬಳಿಗೆ ಎಚ್ಚರಿಕೆ ಕೊಡುವವನೂ ಬಂದಿದ್ದನು. ಈಗ ಸವಿಯಿರಿ, ಅಕ್ರಮಿಗಳಿಗೆ ಇಲ್ಲಿ ಯಾರೂ ಸಹಾಯಕನಿಲ್ಲ" (ಎಂದು ಉತ್ತರಿಸಲಾಗುವುದು).

تَذَكَّرَ وَجَآءَكُمُ النَّذِيرُ ۖ فَذُوقُوا
فَمَا لِلظَّٰلِمِينَ مِن نَّصِيرٍ ﴿٣٧﴾

38. ನಿಶ್ಚಯವಾಗಿಯೂ ಅಲ್ಲಾಹ್ ಭೂಮಿ-ಆಕಾಶಗಳ ಪ್ರತಿಯೊಂದು ರಹಸ್ಯವನ್ನೂ ಅರಿತಿರುತ್ತಾನೆ. ಅವನು ಹೃದಯಗಳೊಳಗೆ ಅವಿತಿರುವ ರಹಸ್ಯವನ್ನೂ ಅರಿಯುತ್ತಾನೆ.

إِنَّ اللَّهَ عَٰلِمُ غَيْبِ السَّمَٰوَٰتِ وَالْأَرْضِ ۚ
إِنَّهُ عَلِيمٌۢ بِذَاتِ الصُّدُورِ ﴿٣٨﴾

39. ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದವನು ಅವನೇ ತಾನೆ. ಇನ್ನೂ ಯಾರಾದರೂ ಸತ್ಯವನ್ನು ನಿಷೇಧಿಸಿದರೆ ಅವನ ನಿಷೇಧದ ಪಾತಕ ಅವನ ಮೇಲೆಯೇ ಇದೆ. ಸತ್ಯನಿಷೇಧಿಗಳಿಗೆ ಅವರ ನಿರಾಕರಣೆಯಿಂದ ಅವರ ಪ್ರಭುವಿನ ಪ್ರಕೋಪವಲ್ಲದೆ ಇನ್ನೇನೂ ವೃದ್ಧಿಸುವುದಿಲ್ಲ. ಸತ್ಯನಿಷೇಧಿಗಳಿಗೆ ಅವರ ನಿರಾಕರಣೆಯಿಂದ ಹಾನಿಯಲ್ಲೇ ಹೊರತು ಬೇರಾವುದರಲ್ಲೂ ವೃದ್ಧಿ ಉಂಟಾಗುವುದಿಲ್ಲ.

هُوَ الَّذِي جَعَلَكُمْ خَلَٰٓئِفَ فِي الْأَرْضِ ۚ
فَمَن كَفَرَ فَعَلَيْهِ كُفْرُهُۥ ۖ وَلَا يَزِيدُ
الْكَٰفِرِينَ كُفْرُهُمْ عِندَ رَبِّهِمْ إِلَّا مَقْتًا ۖ
وَلَا يَزِيدُ الْكَٰفِرِينَ كُفْرُهُمْ إِلَّا خَسَارًا ﴿٣٩﴾

40. (ಪೈಗಂಬರರೇ), ಇವರೊಡನೆ ಹೇಳಿರಿ- "ನೀವು ಅಲ್ಲಾಹನನ್ನು ಬಿಟ್ಟು ಪ್ರಾರ್ಥಿಸುತ್ತಿರುವ ನಿಮ್ಮ ಸಹಭಾಗಿಗಳನ್ನು ಎಂದಾದರೂ ಕಂಡಿದ್ದೀರಾ? ಅವರು ಭೂಮಿಯಲ್ಲಿ ಏನನ್ನು ಸೃಷ್ಟಿಸಿದ್ದಾರೆ? ಅಥವಾ ಆಕಾಶಗಳಲ್ಲಿ ಅವರ ಪಾಲು ಏನಿದೆಯೆಂಬುದನ್ನು ನನಗೆ ತೋರಿಸಿರಿ" (ಇದನ್ನು ಇವರು ತೋರಿಸಲಾರರೆಂದಾದರೆ ಇವರೊಡನೆ ಕೇಳಿರಿ). ನಾವು ಅವರಿಗೆ ಯಾವುದೇ ದಾಖಲೆಯನ್ನು ಬರೆದು ಕೊಟ್ಟಿದ್ದು ಅದರ ಆಧಾರದಲ್ಲಿ ಅವರು (ತಮ್ಮ ಬಹುದೇವ ವಾದಕ್ಕೆ) ಸುಸ್ಪಷ್ಟ ಪುರಾವೆಯನ್ನು ಹೊಂದಿದ್ದಾರೆಯೇ? ಇಲ್ಲ, ವಾಸ್ತವದಲ್ಲಿ ಈ ಅಕ್ರಮಿಗಳು ಪರಸ್ಪರ ಮೋಸದ ಭರವಸೆಗಳನ್ನು ಮಾತ್ರ ನೀಡುತ್ತಲಿದ್ದಾರೆ.

قُلْ أَرَءَيْتُمْ شُرَكَآءَكُمُ الَّذِينَ تَدْعُونَ
مِن دُونِ اللَّهِ أَرُونِي مَاذَا خَلَقُوا مِنَ
الْأَرْضِ أَمْ لَهُمْ شِرْكٌ فِي السَّمَٰوَٰتِ
أَمْ ءَاتَيْنَٰهُمْ كِتَٰبًا فَهُمْ عَلَىٰ بَيِّنَتٍ مِّنْهُ ۚ
بَلْ إِن يَعِدُ الظَّٰلِمُونَ بَعْضُهُم بَعْضًا
إِلَّا غُرُورًا ﴿٤٠﴾

41. ವಾಸ್ತವದಲ್ಲಿ ಭೂಮಿ-ಆಕಾಶಗಳು ಸರಿದು ಹೋಗದಂತೆ ತಡೆದಿಟ್ಟಿರುವವನು ಅಲ್ಲಾಹನೇ. ಅವು ಸರಿದು ಹೋದರೆ, ಅಲ್ಲಾಹನ ಹೊರತು ಅವುಗಳನ್ನಾಧರಿಸುವವನು ಬೇರಾರೂ ಇಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯಂತ ಸಹನಶೀಲನೂ ಕ್ಷಮಾಶೀಲನೂ ಆಗಿರುತ್ತಾನೆ.

إِنَّ اللَّهَ يُمْسِكُ السَّمَٰوَٰتِ وَالْأَرْضَ
أَن تَزُولَا ۚ وَلَئِن زَالَتَآ إِنْ
أَمْسَكَهُمَا مِنْ أَحَدٍ مِّنۢ بَعْدِهِۦٓ ۚ إِنَّهُۥ
كَانَ حَلِيمًا غَفُورًا ﴿٤١﴾

42. ಓರ್ವ ಎಚ್ಚರಿಕೆ ಕೊಡುವವನು ಇವರ ಬಳಿಗೆ ಬಂದು ಬಿಡುತ್ತಿದ್ದರೆ

وَأَقْسَمُوا بِاللَّهِ جَهْدَ أَيْمَٰنِهِمْ لَئِن

ಇವರು ಜಗತ್ತಿನ ಇತರೆಲ್ಲ ಜನಾಂಗಗಳಿಗಿಂತ ಹೆಚ್ಚು ಸನ್ಮಾರ್ಗ ಗಾಮಿಗಳಾಗುತ್ತಿದ್ದರೆಂದು ಇವರು ದೃಢವಾಗಿ ಅಲ್ಲಾಹನ ಆಣೆ ಹಾಕುತ್ತಾ ಹೇಳುತ್ತಿದ್ದರು. ಆದರೆ, ಎಚ್ಚರಿಕೆ ಕೊಡುವವನು ಇವರ ಬಳಿಗೆ ಬಂದಾಗ ಅವನ ಆಗಮನವು ಇವರಲ್ಲಿ ಸತ್ಯದ ಬಗ್ಗೆ ದ್ವೇಷದ ಹೊರತು ಇನ್ನಾವುದನ್ನೂ ವೃದ್ಧಿಸಲಿಲ್ಲ.

جَآءَهُمْ نَذِيرٌ لَّيَكُونُنَّ أَهْدَىٰ مِنْ إِحْدَى ٱلْأُمَمِ ۖ فَلَمَّا جَآءَهُمْ نَذِيرٌ مَّا زَادَهُمْ إِلَّا نُفُورًا ﴿٤٢﴾

43. ಇವರು ಭೂಮಿಯಲ್ಲಿ ಇನ್ನಷ್ಟು ಹೆಚ್ಚು ಅತಿಕ್ರಮವೆಸಗತೊಡಗಿದರು ಮತ್ತು ಕುತಂತ್ರಗಳನ್ನು ಹೂಡತೊಡಗಿದರು. ವಸ್ತುತಃ ಕುತಂತ್ರಗಳು ಅವುಗಳನ್ನು ಹೂಡುವವರನ್ನೇ ಅಧೋಗತಿಗೆ ಇಳಿಸಿ ಬಿಡುತ್ತವೆ. ಇನ್ನು, ಗತ ಜನಾಂಗಗಳೊಂದಿಗೆ ಅಲ್ಲಾಹನು ತೋರಿದ ಕಾರ್ಯನೀತಿ ಇವರೊಂದಿಗೂ ತೋರಬೇಕೆಂದು ಇವರು ನಿರೀಕ್ಷಿಸುತ್ತಿರುವರೇ? ಹಾಗಿದ್ದರೆ ನೀವು ಅಲ್ಲಾಹನ ಕಾರ್ಯನೀತಿಯಲ್ಲಿ ಯಾವುದೇ ಬದಲಾವಣೆಯನ್ನು ಕಾಣಲಾರಿರಿ ಮತ್ತು ಯಾವುದೇ ಶಕ್ತಿಯು ಅಲ್ಲಾಹನ ಕಾರ್ಯನೀತಿಯನ್ನು ಅದರ ನಿಶ್ಚಿತ ಪಥದಿಂದ ಬದಲಾಯಿಸಬಲ್ಲುದೆಂಬುದನ್ನು ನೀವು ಕಾಣಲಾರಿರಿ.

ٱسْتِكْبَارًا فِى ٱلْأَرْضِ وَمَكْرَ ٱلسَّيِّئِ ۚ وَلَا يَحِيقُ ٱلْمَكْرُ ٱلسَّيِّئُ إِلَّا بِأَهْلِهِۦ ۚ فَهَلْ يَنظُرُونَ إِلَّا سُنَّتَ ٱلْأَوَّلِينَ ۚ فَلَن تَجِدَ لِسُنَّتِ ٱللَّهِ تَبْدِيلًا ۖ وَلَن تَجِدَ لِسُنَّتِ ٱللَّهِ تَحْوِيلًا ﴿٤٣﴾

44. ಇವರಿಗಿಂತ ಮುಂಚೆ ಗತಿಸಿದವರ ಪರಿಣಾಮವೇನಾಯಿತೆಂದು ಕಂಡುಕೊಳ್ಳಲು ಇವರು ಭೂಮಿಯ ಮೇಲೆಂದೂ ಸಂಚರಿಸಲಿಲ್ಲವೇ? ಅವರು ಇವರಿಗಿಂತ ಅಧಿಕ ಬಲಶಾಲಿಗಳಾಗಿದ್ದರು. ಆಕಾಶಗಳಲ್ಲಾಗಲಿ, ಭೂಮಿಯಲ್ಲಾಗಲಿ ಅಲ್ಲಾಹನನ್ನು ಸೋಲಿಸಬಲ್ಲ ಯಾವ ಶಕ್ತಿಯೂ ಇಲ್ಲ. ಅವನು ಸರ್ವವನ್ನೂ ಬಲ್ಲವನು ಮತ್ತು ಸರ್ವಶಕ್ತನು.

أَوَلَمْ يَسِيرُوا۟ فِى ٱلْأَرْضِ فَيَنظُرُوا۟ كَيْفَ كَانَ عَٰقِبَةُ ٱلَّذِينَ مِن قَبْلِهِمْ وَكَانُوٓا۟ أَشَدَّ مِنْهُمْ قُوَّةً ۚ وَمَا كَانَ ٱللَّهُ لِيُعْجِزَهُۥ مِن شَىْءٍ فِى ٱلسَّمَٰوَٰتِ وَلَا فِى ٱلْأَرْضِ ۚ إِنَّهُۥ كَانَ عَلِيمًا قَدِيرًا ﴿٤٤﴾

45. ಅವನು ಜನರನ್ನು ಅವರು ಮಾಡಿದ ದುಷ್ಕರ್ಮಗಳಿಗಾಗಿ ಹಿಡಿಯುತ್ತಿದ್ದರೆ, ಭೂಮಿಯ ಮೇಲೆ ಒಂದು ಜೀವಿಯನ್ನೂ ಜೀವಂತ ಬಿಡುತ್ತಿರಲಿಲ್ಲ. ಆದರೆ, ಅವನು ಅವರಿಗೆ ಒಂದು ನಿಶ್ಚಿತ ಸಮಯದ ವರೆಗೆ ಕಾಲಾವಕಾಶ ಕೊಡುತ್ತಿದ್ದಾನೆ. ಅನಂತರ ಅವರ ನಿಶ್ಚಿತ ಕಾಲ ಬಂದಾಗ ಅಲ್ಲಾಹನು ತನ್ನ ದಾಸರನ್ನು ನೋಡಿಕೊಳ್ಳುವನು.

وَلَوْ يُؤَاخِذُ ٱللَّهُ ٱلنَّاسَ بِمَا كَسَبُوا۟ مَا تَرَكَ عَلَىٰ ظَهْرِهَا مِن دَآبَّةٍ وَلَٰكِن يُؤَخِّرُهُمْ إِلَىٰٓ أَجَلٍ مُّسَمًّى ۖ فَإِذَا جَآءَ أَجَلُهُمْ فَإِنَّ ٱللَّهَ كَانَ بِعِبَادِهِۦ بَصِيرًۢا ﴿٤٥﴾







(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسْمِ اللّٰهِ الرَّحْمٰنِ الرَّحِيْمِ ○ |
| 1. ಯಾಸೀನ್. | يٰسٓ ۚ ﴿١﴾ |
| 2. ಯುಕ್ತಿಪೂರ್ಣವಾದ ಕುರ್‌ಆನಿನಾಣೆ- | وَالْقُرْاٰنِ الْحَكِيْمِ ﴿٢﴾ |
| 3. ನಿಶ್ಚಯವಾಗಿಯೂ ನೀವು ಅಲ್ಲಾಹನ ಸಂದೇಶವಾಹಕರಲ್ಲಾಗಿರುತ್ತೀರಿ. | اِنَّكَ لَمِنَ الْمُرْسَلِيْنَ ﴿٣﴾ |
| 4. ನೇರ ಮಾರ್ಗದಲ್ಲಿದ್ದೀರಿ. | عَلٰى صِرَاطٍ مُّسْتَقِيْمٍ ﴿٤﴾ |
| 5. (ಈ ಕುರ್‌ಆನ್) ಅತ್ಯಂತ ಪ್ರಬಲನೂ ಕರುಣಾನಿಧಿಯೂ ಆದವನಿಂದ ಅವತೀರ್ಣ ಗೊಂಡುದಾಗಿದೆ- | تَنْزِيْلَ الْعَزِيْزِ الرَّحِيْمِ ﴿٥﴾ |
| 6. (ಇದು) ಪೂರ್ವಿಕರು ಎಚ್ಚರಿಸಲ್ಪಟ್ಟಿರದ ಕಾರಣದಿಂದ ಪ್ರಜ್ಞಾಹೀನರಾಗಿ ಬಿಟ್ಟಿರುವಂತಹ ಒಂದು ಜನಾಂಗಕ್ಕೆ ನೀವು ಎಚ್ಚರಿಕೆ ಕೊಡುವಂತಾಗಲು. | لِتُنْذِرَ قَوْمًا مَّآ اُنْذِرَ اٰبَآؤُهُمْ فَهُمْ غٰفِلُوْنَ ﴿٦﴾ |
| 7. ಇವರಲ್ಲಿ ಹೆಚ್ಚಿನವರು (ಯಾತನೆಯ) ತೀರ್ಪಿಗೆ ಅರ್ಹರಾಗಿ ಬಿಟ್ಟಿದ್ದಾರೆ. ಆದುದರಿಂದಲೇ ಅವರು ವಿಶ್ವಾಸವಿರಿಸುವುದಿಲ್ಲ.[1] | لَقَدْ حَقَّ الْقَوْلُ عَلٰٓى اَكْثَرِهِمْ فَهُمْ لَا يُؤْمِنُوْنَ ﴿٧﴾ |
| 8. ನಾವು ಅವರ ಕೊರಳುಗಳಿಗೆ ಕಂಠ ಕಡಗಗಳನ್ನು ಹಾಕಿರುತ್ತೇವೆ. | اِنَّا جَعَلْنَا فِيْٓ اَعْنَاقِهِمْ اَغْلٰلًا فَهِيَ |

1. ಪ್ರವಾದಿವರ್ಯರ(ಸ) ಬೋಧನೆಗೆ ಪ್ರತಿಯಾಗಿ ಹಟ ಮತ್ತು ಮೊಂಡುಪ್ರವೃತ್ತಿ ತಳೆಯುತ್ತಿದ್ದ ಮತ್ತು ಅವರ ಮಾತನ್ನು ಒಪ್ಪುವುದಿಲ್ಲವೆಂಬ ನಿರ್ಧಾರ ಕೈಗೊಂಡಿದ್ದ ವ್ಯಕ್ತಿಗಳ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ. "ಇವರು ನಿಶ್ಚಿತ ಯಾತನೆಗೆ ಬಾಧ್ಯಸ್ಥರಾಗಿ ಮಾರ್ಪಟ್ಟಿದ್ದಾರೆ. ಆದ್ದರಿಂದ ಇವರು ವಿಶ್ವಾಸವಿಡುವುದಿಲ್ಲ" ಎಂದು ಅವರ ಬಗ್ಗೆ ಹೇಳಲಾಗಿದೆ.

إِلَى الْأَذْقَانِ فَهُمْ مُقْمَحُونَ ⑧

ಅವುಗಳಿಂದಾಗಿ ಅವರು ಗಲ್ಲದ ವರೆಗೆ ಬಿಗಿಯಲ್ಪಟ್ಟಿದ್ದಾರೆ. ಆದುದರಿಂದಲೇ ಅವರು ತಲೆಯನ್ನೆತ್ತಿಕೊಂಡು ನಿಂತಿದ್ದಾರೆ.[2]

وَجَعَلْنَا مِنْ بَيْنِ أَيْدِيهِمْ سَدًّا وَمِنْ خَلْفِهِمْ سَدًّا فَأَغْشَيْنَاهُمْ فَهُمْ لَا يُبْصِرُونَ ⑨

9. ನಾವು ಒಂದು ಗೋಡೆಯನ್ನು ಅವರ ಮುಂದೆಯೂ ಒಂದು ಗೋಡೆಯನ್ನು ಅವರ ಹಿಂದೆಯೂ ನಿಲ್ಲಿಸಿದ್ದೇವೆ. ಹೀಗೆ ನಾವು ಅವರನ್ನು ಮುಚ್ಚಿ ಬಿಟ್ಟಿದ್ದೇವೆ. ಅವರಿಗೆ ಈಗ ಏನೂ ತೋಚುವುದಿಲ್ಲ.[3]

وَسَوَاءٌ عَلَيْهِمْ أَأَنْذَرْتَهُمْ أَمْ لَمْ تُنْذِرْهُمْ لَا يُؤْمِنُونَ ⑩

10. ಅವರಿಗೆ ನೀವು ಎಚ್ಚರಿಕೆ ಕೊಟ್ಟರೂ ಕೊಡದಿದ್ದರೂ ಸರಿಯೇ. ಅವರು ವಿಶ್ವಾಸ ಸ್ವೀಕರಿಸುವವರಲ್ಲ.

إِنَّمَا تُنْذِرُ مَنِ اتَّبَعَ الذِّكْرَ وَخَشِيَ الرَّحْمَٰنَ بِالْغَيْبِ ۖ فَبَشِّرْهُ بِمَغْفِرَةٍ وَأَجْرٍ كَرِيمٍ ⑪

11. ಉಪದೇಶವನ್ನು ಅನುಸರಿಸುವವನಿಗೆ ಮತ್ತು ದಯಾಮಯನಾದ ದೇವನನ್ನು ಪ್ರತ್ಯಕ್ಷ ನೋಡದೆಯೇ ಭಯಪಡುವವನಿಗೆ ಮಾತ್ರ ನೀವು ಎಚ್ಚರಿಕೆ ನೀಡಬಲ್ಲಿರಿ. ಅವನಿಗೆ ಕ್ಷಮೆ ಮತ್ತು ಸನ್ಮಾನ್ಯ ಪ್ರತಿಫಲದ ಶುಭವಾರ್ತೆ ನೀಡಿರಿ.

إِنَّا نَحْنُ نُحْيِي الْمَوْتَىٰ وَنَكْتُبُ مَا قَدَّمُوا وَآثَارَهُمْ ۚ وَكُلَّ شَيْءٍ أَحْصَيْنَاهُ فِي إِمَامٍ مُبِينٍ ⑫

12. ನಿಶ್ಚಯವಾಗಿಯೂ ನಾವು ಒಂದು ದಿನ ಮೃತರನ್ನು ಜೀವಂತಗೊಳಿಸಲಿರುವೆವು. ಅವರು ಮಾಡಿದ ಕರ್ಮಗಳನ್ನೂ ಬಿಟ್ಟು ಹೋಗಿರುವ ಕುರುಹುಗಳನ್ನೂ ನಾವು ಬರೆಯುತ್ತಿದ್ದೇವೆ. ನಾವು ಎಲ್ಲಾ ವಿಷಯಗಳನ್ನು ಒಂದು ತೆರೆದ ಗ್ರಂಥದಲ್ಲಿ ಲಿಖಿತಗೊಳಿಸಿ ಬಿಟ್ಟಿದ್ದೇವೆ.

وَاضْرِبْ لَهُمْ مَثَلًا أَصْحَابَ الْقَرْيَةِ إِذْ جَاءَهَا الْمُرْسَلُونَ ⑬

13. ಇವರಿಗೆ ದೃಷ್ಟಾಂತಕ್ಕಾಗಿ ಸಂದೇಶವಾಹಕರು ಬಂದಿದ್ದ ಆ ನಾಡಿನವರ ವೃತ್ತಾಂತವನ್ನು ತಿಳಿಸಿರಿ.

إِذْ أَرْسَلْنَا إِلَيْهِمُ اثْنَيْنِ فَكَذَّبُوهُمَا فَعَزَّزْنَا بِثَالِثٍ فَقَالُوا إِنَّا إِلَيْكُمْ مُرْسَلُونَ ⑭

14. ನಾವು ಅವರ ಕಡೆಗೆ ಇಬ್ಬರು ಸಂದೇಶವಾಹಕರನ್ನು ರವಾನಿಸಿದೆವು. ಅವರು ಇಬ್ಬರನ್ನೂ ಸುಳ್ಳಾಗಿಸಿಬಿಟ್ಟರು. ಅನಂತರ ನಾವು ಸಹಾಯಕ್ಕಾಗಿ ಮೂರನೆಯವನನ್ನು ಕಳುಹಿಸಿದೆವು. ಅವರೆಲ್ಲರೂ "ನಾವು ನಿಮ್ಮ ಕಡೆಗೆ ಸಂದೇಶವಾಹಕರಾಗಿ ಕಳುಹಿಸಲ್ಪಟ್ಟಿದ್ದೇವೆ" ಎಂದರು.

2. 'ಕೊರಳ ಪಟ್ಟಿ'ಯೆಂದರೆ ಸತ್ಯ ಸ್ವೀಕರಿಸಲು ಅವರ ಪಾಲಿಗೆ ಅಡ್ಡಿಯಾಗುತ್ತಿದ್ದ ಹಟಸಾಧನೆ. "ಗಲ್ಲದ ವರೆಗೆ ಬಿಗಿಯಲ್ಪಟ್ಟಿದ್ದಾರೆ" ಮತ್ತು "ತಲೆ ಎತ್ತಿ ನಿಂತಿದ್ದಾರೆ" ಎಂದರೆ ದುರಹಂಕಾರದಿಂದಾಗಿ ಅವರು ಕತ್ತನ್ನು ಸೆಟೆಯುತ್ತಿದ್ದರು ಎಂದಾಗಿದೆ.

3. "ಒಂದು ಗೋಡೆಯನ್ನು ಅವರ ಮುಂದೆಯೂ ಮತ್ತೊಂದು ಗೋಡೆಯನ್ನು ಅವರ ಹಿಂದೆಯೂ ನಿಲ್ಲಿಸಿದ್ದೇವೆ" ಎಂದರೆ ತಮ್ಮ ದುರಹಂಕಾರದಿಂದಾಗಿ ಸಹಜವೆಂಬಂತೆ ಅವರು ಹಿಂದಿನ ಇತಿಹಾಸದಿಂದ ಪಾಠಕಲಿಯುವುದಾಗಲಿ, ಭವಿಷ್ಯದ ಪರಿಣಾಮದ ಬಗ್ಗೆ ಆಲೋಚಿಸುವುದಾಗಲಿ ಮಾಡುವುದಿಲ್ಲ. ಅವರ ಪೂರ್ವಗ್ರಹಗಳು ನಾಲ್ಕೂ ನಿಟ್ಟಿನಿಂದ ಅವರನ್ನು ಆವರಿಸಿಕೊಂಡಿವೆ. ಅವರ ತಪ್ಪು ಕಲ್ಪನೆಗಳಿಂದಾಗಿ ಅವರ ಕಣ್ಣುಗಳ ಮೇಲೆ ಪರದೆ ಬಿದ್ದಿದೆ. ಆದ್ದರಿಂದ ಪ್ರತಿಯೊಬ್ಬ ಸತ್‌ಸ್ವಭಾವದ ನಿಷ್ಪಕ್ಷಮತಿ ವ್ಯಕ್ತಿಗೂ ಗೋಚರಿಸುವಂತಹ ಸುಸ್ಪಷ್ಟವಾದ ವಾಸ್ತವಿಕತೆಗಳು ಅವರಿಗೆ ಕಾಣುವುದಿಲ್ಲ.

15. ನಾಡಿನವರು, "ನೀವು ನಮ್ಮಂತಹ ಮನುಷ್ಯರಲ್ಲದೆ ಇನ್ನೇನೂ ಅಲ್ಲ. ದಯಾಮಯನಾದ ದೇವನು ಏನನ್ನೂ ಇಳಿಸಿಲ್ಲ. ನೀವು ಕೇವಲ ಸುಳ್ಳಾಡುತ್ತಿರುವಿರಿ" ಎಂದರು.

قَالُوا مَا أَنْتُمْ إِلَّا بَشَرٌ مِثْلُنَا وَمَا أَنْزَلَ الرَّحْمَٰنُ مِنْ شَيْءٍ إِنْ أَنْتُمْ إِلَّا تَكْذِبُونَ ﴿١٥﴾

16. "ನಾವು ಖಂಡಿತವಾಗಿಯೂ ನಿಮ್ಮ ಕಡೆಗೆ ಸಂದೇಶವಾಹಕರಾಗಿ ಕಳುಹಿಸಲ್ಪಟ್ಟಿದ್ದೇವೆಂಬುದನ್ನು ನಮ್ಮ ಪ್ರಭು ಅರಿತಿರುತ್ತಾನೆ.

قَالُوا رَبُّنَا يَعْلَمُ إِنَّا إِلَيْكُمْ لَمُرْسَلُونَ ﴿١٦﴾

17. ಸುಸ್ಪಷ್ಟ ಸಂದೇಶವನ್ನು ತಲುಪಿಸುವ ಹೊರತು ಇನ್ನಾವ ಹೊಣೆಯೂ ನಮ್ಮ ಮೇಲಿಲ್ಲ" ಎಂದು ಸಂದೇಶವಾಹಕರು ಹೇಳಿದರು.

وَمَا عَلَيْنَا إِلَّا الْبَلَاغُ الْمُبِينُ ﴿١٧﴾

18. ನಾಡಿನವರು ಹೇಳತೊಡಗಿದರು- "ನಾವಂತು ನಿಮ್ಮನ್ನು ನಮ್ಮ ಪಾಲಿಗೆ ಅಪಶಕುನವೆಂದು ತಿಳಿಯುತ್ತೇವೆ. ನೀವು ಈ ಕಾರ್ಯವನ್ನು ಕೈ ಬಿಡದಿದ್ದರೆ, ನಾವು ನಿಮ್ಮನ್ನು ಕಲ್ಲೆಸೆದು ಕೊಲ್ಲುವೆವು ಮತ್ತು ನೀವು ನಮ್ಮಿಂದ ವೇದನಾಯುಕ್ತ ಶಿಕ್ಷೆ ಪಡೆಯುವಿರಿ."

قَالُوا إِنَّا تَطَيَّرْنَا بِكُمْ لَئِنْ لَمْ تَنْتَهُوا لَنَرْجُمَنَّكُمْ وَلَيَمَسَّنَّكُمْ مِنَّا عَذَابٌ أَلِيمٌ ﴿١٨﴾

19. (ಅದಕ್ಕೆ) ಸಂದೇಶವಾಹಕರು- "ನಿಮ್ಮ ಅಪಶಕುನವಂತು ನಿಮ್ಮಲ್ಲೇ ಇದೆ. ನಿಮಗೆ ಉಪದೇಶ ಮಾಡಿದುದಕ್ಕಾಗಿ ನೀವು ಹೀಗೆ ಹೇಳುತ್ತಿರುವಿರಾ? ವಾಸ್ತವದಲ್ಲಿ ನೀವು ಹದಮೀರಿದವರಾಗಿರುತ್ತೀರಿ" ಎಂದು ಉತ್ತರ ಕೊಟ್ಟರು.

قَالُوا طَائِرُكُمْ مَعَكُمْ أَئِنْ ذُكِّرْتُمْ بَلْ أَنْتُمْ قَوْمٌ مُسْرِفُونَ ﴿١٩﴾

20. ಅಷ್ಟರಲ್ಲಿ ಪಟ್ಟಣದ ದೂರದ ಮೂಲೆಯಿಂದ ಒಬ್ಬನು ಓಡುತ್ತಾ ಬಂದು ಹೀಗೆಂದನು, "ಓ ನನ್ನ ಜನಾಂಗದವರೇ! ಸಂದೇಶವಾಹಕರನ್ನು ಅನುಸರಿಸಿರಿ-

وَجَاءَ مِنْ أَقْصَى الْمَدِينَةِ رَجُلٌ يَسْعَىٰ قَالَ يَا قَوْمِ اتَّبِعُوا الْمُرْسَلِينَ ﴿٢٠﴾

21. ನಿಮ್ಮಿಂದ ಯಾವ ಪ್ರತಿಫಲವನ್ನೂ ಬಯಸದ ಹಾಗೂ ಸ್ವತಃ ನೇರ ಮಾರ್ಗದಲ್ಲಿ ಇರುವ ಇವರನ್ನು ಅನುಸರಿಸಿರಿ-

اتَّبِعُوا مَنْ لَا يَسْأَلُكُمْ أَجْرًا وَهُمْ مُهْتَدُونَ ﴿٢١﴾

22. *ಯಾರು ನನ್ನನ್ನು ಸೃಷ್ಟಿಸಿರುವನೋ ಮತ್ತು ಯಾರ ಕಡೆಗೆ ನೀವೆಲ್ಲರೂ ಮರಳಿ ಹೋಗಲಿಕ್ಕಿದೆಯೋ ಅವನ ದಾಸ್ಯ-ಆರಾಧನೆಯನ್ನು ನಾನೇಕೆ ಮಾಡಬಾರದು?

وَمَا لِيَ لَا أَعْبُدُ الَّذِي فَطَرَنِي وَإِلَيْهِ تُرْجَعُونَ ﴿٢٢﴾

***ಇಲ್ಲಿಂದ 23ನೆಯ ಕಾಂಡ ಆರಂಭ.**

23. ನಾನು ಅವನನ್ನು ಬಿಟ್ಟು ಇತರರನ್ನು ಆರಾಧ್ಯರಾಗಿ ಮಾಡಿ ಕೊಳ್ಳಬೇಕೇ? ವಸ್ತುತಃ ದಯಾಮಯನಾದ ದೇವನು ನನಗೇನಾದರೂ ಹಾನಿಯನ್ನುಂಟು ಮಾಡಲಿಚ್ಛಿಸಿದರೆ ಅವರ ಶಿಫಾರಸು ನನಗೇನೂ ಫಲಕಾರಿಯಾಗದು ಮತ್ತು ಅವರು ನನ್ನನ್ನು ಬಿಡುಗಡೆಗೊಳಿಸ ಲಾರರು.

ءَاَتَّخِذُ مِنْ دُوْنِهٖٓ اٰلِهَةً اِنْ يُّرِدْنِ الرَّحْمٰنُ بِضُرٍّ لَّا تُغْنِ عَنِّيْ شَفَاعَتُهُمْ شَيْـًٔا وَّلَا يُنْقِذُوْنِ ﴿٢٣﴾

24. ಹಾಗೆ ಮಾಡಿದರೆ ನಾನು ಸ್ಪಷ್ಟ ಪಥಭ್ರಷ್ಟತೆಯಲ್ಲಿ ಸಿಲುಕಿ ಬಿಡುವೆನು.

اِنِّيْٓ اِذًا لَّفِيْ ضَلٰلٍ مُّبِيْنٍ ﴿٢٤﴾

25. ನಾನಂತು ನಿಮ್ಮ ಪ್ರಭುವಿನ ಮೇಲೆ ವಿಶ್ವಾಸವಿರಿಸಿದೆನು. ನೀವೂ ನನ್ನ ಮಾತನ್ನು ಒಪ್ಪಿಕೊಳ್ಳಿರಿ".

اِنِّيْٓ اٰمَنْتُ بِرَبِّكُمْ فَاسْمَعُوْنِ ﴿٢٥﴾

26-27. (ಕೊನೆಗೆ ಅವರು ಅವನನ್ನು ವಧಿಸಿ ಬಿಟ್ಟರು) "ಸ್ವರ್ಗದಲ್ಲಿ ಪ್ರವೇಶಿಸು" ಎಂದು ಆ ವ್ಯಕ್ತಿಯೊಡನೆ ಹೇಳಲಾಯಿತು. ಅವನು, "ಅಯ್ಯೋ! ನನ್ನ ಪ್ರಭು ಯಾವುದಕ್ಕಾಗಿ ನನ್ನನ್ನು ಕ್ಷಮಿಸಿದನು ಮತ್ತು ನನ್ನನ್ನು ಸನ್ಮಾನ್ಯ ಜನರಲ್ಲಿ ಸೇರಿಸಿದನೆಂಬುದು ನನ್ನ ಜನಾಂಗಕ್ಕೆ ತಿಳಿದಿರುತ್ತಿದ್ದರೆ!" ಎಂದನು.

قِيْلَ ادْخُلِ الْجَنَّةَ ۭ قَالَ يٰلَيْتَ قَوْمِيْ يَعْلَمُوْنَ ﴿٢٦﴾ بِمَا غَفَرَ لِيْ رَبِّيْ وَجَعَلَنِيْ مِنَ الْمُكْرَمِيْنَ ﴿٢٧﴾

28. ಅನಂತರ ನಾವು ಅವನ ಜನಾಂಗದ ಮೇಲೆ ಆಕಾಶದಿಂದ ಸೈನ್ಯವನ್ನೇನೂ ಇಳಿಸಲಿಲ್ಲ. ನಮಗೆ ಸೇನೆಯನ್ನು ಕಳುಹಿಸುವ ಅಗತ್ಯವೂ ಇರಲಿಲ್ಲ.

وَمَآ اَنْزَلْنَا عَلٰي قَوْمِهٖ مِنْۢ بَعْدِهٖ مِنْ جُنْدٍ مِّنَ السَّمَاۗءِ وَمَا كُنَّا مُنْزِلِيْنَ ﴿٢٨﴾

29. ಕೇವಲ ಒಂದು ಘನಸ್ಫೋಟವಾಯಿತು ಮತ್ತು ಅವರೆಲ್ಲರೂ ಹಠಾತ್ತನೆ ನಂದಿ ಹೋದರು.

اِنْ كَانَتْ اِلَّا صَيْحَةً وَّاحِدَةً فَاِذَا هُمْ خٰمِدُوْنَ ﴿٢٩﴾

30. ಅಯ್ಯೋ; ದಾಸರ ಅವಸ್ಥೆಯೇ! ಅವರ ಬಳಿಗೆ ಯಾವ ಸಂದೇಶವಾಹಕನು ಬಂದರೂ ಅವರು ಅವನ ಅಪಹಾಸ್ಯವನ್ನೇ ಮಾಡುತ್ತಿದ್ದರು.

يٰحَسْرَةً عَلَي الْعِبَادِ ۚ مَا يَاْتِيْهِمْ مِّنْ رَّسُوْلٍ اِلَّا كَانُوْا بِهٖ يَسْتَهْزِءُوْنَ ﴿٣٠﴾

31. ನಾವು ಅವರಿಗಿಂತ ಮುಂಚೆ ಎಷ್ಟೋ ಜನಾಂಗಗಳನ್ನು ನಾಶ ಗೊಳಿಸಿದ್ದನ್ನೂ ಅನಂತರ ಅವು ಎಂದೂ ಮರಳಿ ಅವರ ಕಡೆಗೆ ಬಾರದಿದ್ದುದನ್ನೂ ಅವರು ಕಂಡಿಲ್ಲವೇ?

اَلَمْ يَرَوْا كَمْ اَهْلَكْنَا قَبْلَهُمْ مِّنَ الْقُرُوْنِ اَنَّهُمْ اِلَيْهِمْ لَا يَرْجِعُوْنَ ﴿٣١﴾

32. ಇವರೆಲ್ಲರನ್ನೂ ಒಂದು ದಿನ ನಮ್ಮ ಮುಂದೆ ಹಾಜರು ಪಡಿಸಲಿಕ್ಕಿದೆ.

وَاِنْ كُلٌّ لَّمَّا جَمِيْعٌ لَّدَيْنَا مُحْضَرُوْنَ ﴿٣٢﴾

33. ನಿರ್ಜೀವ ಭೂಮಿಯು ಇವರಿಗೊಂದು ನಿದರ್ಶನವಾಗಿದೆ. ನಾವು ಅದಕ್ಕೆ ಜೀವದಾನ ಮಾಡಿದೆವು ಮತ್ತು ಅದರಿಂದ ಧಾನ್ಯಗಳನ್ನು ಹೊರತಂದೆವು, ಅದನ್ನು ಇವರು ಉಣ್ಣುತ್ತಾರೆ.

وَاٰيَةٌ لَّهُمُ الْاَرْضُ الْمَيْتَةُ ۚۖ اَحْيَيْنٰهَا وَاَخْرَجْنَا مِنْهَا حَبًّا فَمِنْهُ يَاْكُلُوْنَ ﴿٣٣﴾

34. ನಾವು ಅದರಲ್ಲಿ ಖರ್ಜೂರ ಮತ್ತು ದ್ರಾಕ್ಷಿಗಳ ತೋಟಗಳನ್ನುಂಟು ಮಾಡಿದೆವು ಮತ್ತು ಅದರೊಳಗಿಂದ ಚಿಲುಮೆಗಳನ್ನು ಹೊಮ್ಮಿಸಿದೆವು.

وَجَعَلْنَا فِيْهَا جَنّٰتٍ مِّنْ نَّخِيْلٍ وَّاَعْنَابٍ وَّفَجَّرْنَا فِيْهَا مِنَ الْعُيُوْنِ ﴿٣٤﴾

35. (ಇದು) ಇವರು ಅದರ ಫಲವನ್ನುಣ್ಣಲಿಕ್ಕಾಗಿ. ಇವೆಲ್ಲ ಇವರ ಸ್ವಂತ ಕೈಗಳಿಂದ ನಿರ್ಮಿತವಾದುದಲ್ಲ. ಹಾಗಿದ್ದೂ ಇವರು ಕೃತಜ್ಞರಾಗುವುದಿಲ್ಲವೇ?

لِيَاْكُلُوْا مِنْ ثَمَرِهٖ ۙ وَمَا عَمِلَتْهُ اَيْدِيْهِمْ ؕ اَفَلَا يَشْكُرُوْنَ ﴿٣٥﴾

36. ಎಲ್ಲ ತರದ ಜೋಡಿಗಳನ್ನು- ಅವುಗಳು ಭೂಮಿಯ ವನಸ್ಪತಿ ಗಳಲ್ಲಿರಲಿ, ಸ್ವತಃ ಇವರ (ಮನುಷ್ಯರ) ವರ್ಗದಲ್ಲಿರಲಿ- ಅಥವಾ ಇವರಿಗೆ ತಿಳಿದೇ ಇಲ್ಲದಂತಹ ವಸ್ತುಗಳಲ್ಲಿರಲಿ- ಸೃಷ್ಟಿಸಿದವನು ಪರಮ ಪಾವನನು.

سُبْحٰنَ الَّذِيْ خَلَقَ الْاَزْوَاجَ كُلَّهَا مِمَّا تُنْۢبِتُ الْاَرْضُ وَمِنْ اَنْفُسِهِمْ وَمِمَّا لَا يَعْلَمُوْنَ ﴿٣٦﴾

37. ಇವರಿಗೆ ರಾತ್ರಿಯು ಇನ್ನೊಂದು ನಿದರ್ಶನವಾಗಿದೆ. ನಾವು ಅದರ ಮೇಲಿಂದ ಹಗಲನ್ನು ಸರಿಸಿಬಿಡುತ್ತೇವೆ. ಆಗ ಇವರ ಮೇಲೆ ಕತ್ತಲೆ ಕವಿಯುತ್ತದೆ-

وَاٰيَةٌ لَّهُمُ الَّيْلُ ۚۖ نَسْلَخُ مِنْهُ النَّهَارَ فَاِذَا هُمْ مُّظْلِمُوْنَ ﴿٣٧﴾

38. ಮತ್ತು ಸೂರ್ಯನು ತನ್ನ ಸ್ಥಾನದ ಕಡೆಗೆ ಚಲಿಸುತ್ತಿದ್ದಾನೆ. ಪ್ರಬಲನೂ ಸರ್ವಜ್ಞನೂ ಆದವನ ನಿರ್ಣಯವಿದು-

وَالشَّمْسُ تَجْرِيْ لِمُسْتَقَرٍّ لَّهَا ؕ ذٰلِكَ تَقْدِيْرُ الْعَزِيْزِ الْعَلِيْمِ ﴿٣٨﴾

39. ಮತ್ತು ಚಂದ್ರ - ಅದಕ್ಕೆ ನಾವು ಘಟ್ಟಗಳನ್ನು ನಿಶ್ಚಯಿಸಿಕೊಟ್ಟಿದ್ದು, ಅವುಗಳನ್ನು ಹಾದು ಹೋಗುತ್ತಾ ಕೊನೆಗೆ ಅದು ಖರ್ಜೂರದ ಒಣಗೆಲ್ಲಿನಂತಾಗಿ ಬಿಡುತ್ತದೆ.

وَالْقَمَرَ قَدَّرْنٰهُ مَنَازِلَ حَتّٰى عَادَ كَالْعُرْجُوْنِ الْقَدِيْمِ ﴿٣٩﴾

40. ಚಂದ್ರನನ್ನು ಹಿಡಿಯಲು ಸೂರ್ಯನಿಂದಾಗದು ಮತ್ತು ರಾತ್ರಿಯು ಹಗಲನ್ನು ಮೀರಿ ಹೋಗಲಾರದು. ಎಲ್ಲವೂ ಒಂದೊಂದು ಕಕ್ಷೆಯಲ್ಲಿ ತೇಲುತ್ತಿವೆ.

لَا الشَّمْسُ يَنْۢبَغِيْ لَهَآ اَنْ تُدْرِكَ الْقَمَرَ وَلَا الَّيْلُ سَابِقُ النَّهَارِ ؕ وَكُلٌّ فِيْ فَلَكٍ يَّسْبَحُوْنَ ﴿٤٠﴾

41. ನಾವು ತುಂಬಿದ ನಾವೆಯಲ್ಲಿ ಇವರ ಸಂತತಿಯನ್ನು ಸವಾರಿ ಮಾಡಿಸಿದುದೂ ಇವರಿಗೊಂದು ನಿದರ್ಶನವಾಗಿದೆ.[4]

وَاٰيَةٌ لَّهُمْ اَنَّا حَمَلْنَا ذُرِّيَّتَهُمْ فِي الْفُلْكِ الْمَشْحُوْنِ ﴿٤١﴾

4. ನಾವೆ ಎಂದರೆ ಹ. ನೂಹ್‌ರ(ಅ) ನಾವೆ.

42. ಅನಂತರ ಇವರಿಗಾಗಿ ಅದೇ ತರದ ನಾವೆಗಳನ್ನು ಮತ್ತೂ ಸೃಷ್ಟಿಸಿದೆವು. ಅವುಗಳ ಮೇಲೆ ಇವರು ಸವಾರಿ ಮಾಡುತ್ತಾರೆ.

وَخَلَقْنَا لَهُمْ مِّنْ مِّثْلِهِ مَا يَرْكَبُوْنَ ﴿٤٢﴾

43. ನಾವಿಚ್ಛಿಸಿದರೆ, ಇವರನ್ನು ಮುಳುಗಿಸಿ ಬಿಡಬಲ್ಲೆವು, ಇವರ ಮೊರೆಯನ್ನು ಕೇಳುವವರಾರೂ ಇರಲಾರರು ಮತ್ತು ಯಾವ ರೀತಿಯಿಂದಲೂ ಇವರು ರಕ್ಷಿಸಲ್ಪಡಲಾರರು.

وَاِنْ نَّشَاْ نُغْرِقْهُمْ فَلَا صَرِيْخَ لَهُمْ
وَلَا هُمْ يُنْقَذُوْنَ ﴿٤٣﴾

44. ಕೇವಲ ನಮ್ಮ ಕೃಪೆ ಮಾತ್ರ ಇವರನ್ನು ಪಾರುಗಾಣಿಸುತ್ತಿದೆ ಮತ್ತು ಒಂದು ನಿರ್ದಿಷ್ಟ ಸಮಯದ ವರೆಗೆ ಜೀವನದ ಸುಖೋಪ ಭೋಗಗಳನ್ನು ಅನುಭವಿಸುವ ಅವಕಾಶ ಕೊಡುತ್ತಿದೆ.

اِلَّا رَحْمَةً مِّنَّا وَمَتَاعًا اِلٰى حِيْنٍ ﴿٤٤﴾

45. ನಿಮ್ಮ ಮುಂದೆ ಬರುತ್ತಿರುವ ಮತ್ತು ನಿಮ್ಮ ಹಿಂದೆ ಗತಿಸಿರುವ ದುರ್ಗತಿಯಿಂದ ತಪ್ಪಿಸಿಕೊಳ್ಳಿರಿ, "ನಿಮ್ಮ ಮೇಲೆ ಕರುಣೆ ತೋರಲ್ಪಡಲೂಬಹುದು" ಎಂದು ಇವರೊಡನೆ ಹೇಳಿದಾಗ, (ಇವರು ಕೇಳಿಯೂ ಕೇಳದಂತೆ ಮಾಡುತ್ತಾರೆ.)

وَاِذَا قِيْلَ لَهُمُ اتَّقُوْا مَا بَيْنَ اَيْدِيْكُمْ
وَمَا خَلْفَكُمْ لَعَلَّكُمْ تُرْحَمُوْنَ ﴿٤٥﴾

46. ಇವರ ಮುಂದೆ ಇವರ ಪ್ರಭುವಿನ ನಿದರ್ಶನಗಳ ಪೈಕಿ ಯಾವ ನಿದರ್ಶನ ಬಂದರೂ ಇವರು ಅದರ ಕಡೆಗೆ ಗಮನಹರಿಸುವುದಿಲ್ಲ.

وَمَا تَاْتِيْهِمْ مِّنْ اٰيَةٍ مِّنْ اٰيٰتِ
رَبِّهِمْ اِلَّا كَانُوْا عَنْهَا مُعْرِضِيْنَ ﴿٤٦﴾

47. ಅಲ್ಲಾಹನು ನಿಮಗೆ ನೀಡಿರುವ ಜೀವನಾಧಾರದಿಂದ ಒಂದಿಷ್ಟನ್ನು ಅಲ್ಲಾಹನ ಮಾರ್ಗದಲ್ಲೂ ಖರ್ಚು ಮಾಡಿರಿ ಎಂದು ಹೇಳಲಾದಾಗ, ಈ ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳೊಡನೆ- "ಅಲ್ಲಾಹನು ಇಚ್ಛಿಸುತ್ತಿದ್ದರೆ ಸ್ವತಃ ತಾನೇ ಯಾರಿಗೆ ಉಣಿಸುತ್ತಿದ್ದನೋ ಅವರಿಗೆ ನಾವು ಉಣಿಸಬೇಕೇ? ನೀವಂತೂ ಸಂಪೂರ್ಣವಾಗಿ ದಾರಿಗೆಟ್ಟು ಹೋಗಿದ್ದೀರಿ" ಎಂದು ಹೇಳುತ್ತಾರೆ.

وَاِذَا قِيْلَ لَهُمْ اَنْفِقُوْا مِمَّا رَزَقَكُمُ
اللّٰهُ قَالَ الَّذِيْنَ كَفَرُوْا لِلَّذِيْنَ اٰمَنُوْٓا
اَنُطْعِمُ مَنْ لَّوْ يَشَآءُ اللّٰهُ اَطْعَمَهٗٓ
اِنْ اَنْتُمْ اِلَّا فِيْ ضَلٰلٍ مُّبِيْنٍ ﴿٤٧﴾

48. "(ಪ್ರಳಯ ದಿನದ) ಈ ಬೆದರಿಕೆ ಈಡೇರುವುದಾದರೂ ಯಾವಾಗ? ನೀವು ಸತ್ಯವಂತರಾಗಿದ್ದರೆ ತಿಳಿಸಿರಿ" ಎಂದು ಇವರು ಹೇಳುತ್ತಾರೆ.

وَيَقُوْلُوْنَ مَتٰى هٰذَا الْوَعْدُ اِنْ
كُنْتُمْ صٰدِقِيْنَ ﴿٤٨﴾

49. ವಾಸ್ತವದಲ್ಲಿ ಇವರು ಯಾವುದನ್ನು ಕಾಯುತ್ತಿರುವರೋ ಅದೊಂದು ಘನಸ್ಫೋಟವಾಗಿರುತ್ತದೆ. ಅದು- ಇವರು (ತಮ್ಮ ಲೌಕಿಕ ವ್ಯವಹಾರಗಳಲ್ಲಿ) ಜಗಳಾಡುತ್ತಿರುವಾಗ ಹಠಾತ್ತನೆ ಬಂದೆರಗುವುದು.

مَا يَنْظُرُوْنَ اِلَّا صَيْحَةً وَّاحِدَةً
تَاْخُذُهُمْ وَهُمْ يَخِصِّمُوْنَ ﴿٤٩﴾

50. ಆಗ ಇವರಿಗೆ 'ಉಯಿಲು' ಮಾಡಲಿಕ್ಕೂ ಸಾಧ್ಯವಾಗದು ಮತ್ತು ತಮ್ಮ ಮನೆಯವರೆಡೆಗೆ ಮರಳಲಿಕ್ಕೂ ಆಗದು.

فَلَا يَسْتَطِيْعُوْنَ تَوْصِيَةً وَّلَآ اِلٰٓى
اَهْلِهِمْ يَرْجِعُوْنَ ﴿٥٠﴾

51. ಅನಂತರ ಒಂದು ಕಹಳೆಯನ್ನೂದಲಾಗುವುದು. ಆಗ ಇವರು ಒಮ್ಮೆಲೆ ತಮ್ಮ ಪ್ರಭುವಿನ ಮುಂದೆ ಹಾಜರಾಗಲಿಕ್ಕಾಗಿ ತಮ್ಮ ಸಮಾಧಿಗಳಿಂದ ಹೊರಟು ಬರುವರು.

وَنُفِخَ فِي الصُّورِ فَإِذَا هُم مِّنَ الْأَجْدَاثِ إِلَىٰ رَبِّهِمْ يَنسِلُونَ ﴿٥١﴾

52. ಅವರು ಭಯಭೀತರಾಗಿ, "ನಮ್ಮನ್ನು ನಮ್ಮ ಶಯನಗೃಹದಿಂದ ಎಬ್ಬಿಸಿದವರಾರು?" ಎಂದು ಕೇಳುವರು. "ಇದು ದಯಾಮಯನಾದ ದೇವನು ವಾಗ್ದಾನ ಮಾಡಿದುದೇ ಆಗಿದೆ ಮತ್ತು ಸಂದೇಶವಾಹಕರ ಮಾತು ಸತ್ಯವಾಗಿತ್ತು.[5]

قَالُوا يَا وَيْلَنَا مَن بَعَثَنَا مِن مَّرْقَدِنَا ۜ ۗ هَٰذَا مَا وَعَدَ الرَّحْمَٰنُ وَصَدَقَ الْمُرْسَلُونَ ﴿٥٢﴾

53. ಅದೊಂದು ಘನಸ್ಫೋಟವಾಗಿರುವುದು ಮತ್ತು ಎಲ್ಲರೂ ನಮ್ಮ ಮುಂದೆ ಹಾಜರುಗೊಳಿಸಲ್ಪಡುವರು."

إِن كَانَتْ إِلَّا صَيْحَةً وَاحِدَةً فَإِذَا هُمْ جَمِيعٌ لَّدَيْنَا مُحْضَرُونَ ﴿٥٣﴾

54. ಇಂದು ಯಾರ ಮೇಲೂ ಸ್ವಲ್ಪವೂ ಅನ್ಯಾಯವಾಗದು. ನಿಮಗೆ ನೀವು ಮಾಡುತ್ತಿದ್ದ ಕರ್ಮಗಳಿಗನುಸಾರವಾದ ಪ್ರತಿಫಲವನ್ನೇ ಕೊಡಲಾಗುವುದು.

فَالْيَوْمَ لَا تُظْلَمُ نَفْسٌ شَيْئًا وَلَا تُجْزَوْنَ إِلَّا مَا كُنتُمْ تَعْمَلُونَ ﴿٥٤﴾

55. ಇಂದು ಸ್ವರ್ಗವಾಸಿಗಳು ಸುಖಿಸುವುದರಲ್ಲೇ ತಲ್ಲೀನರಾಗಿದ್ದಾರೆ.

إِنَّ أَصْحَابَ الْجَنَّةِ الْيَوْمَ فِي شُغُلٍ فَاكِهُونَ ﴿٥٥﴾

56. ಅವರೂ ಅವರ ಪತ್ನಿಯರೂ ದಟ್ಟ ನೆರಳುಗಳಲ್ಲಿ ಪೀಠಗಳ ಮೇಲೆ ಒರಗಿಕೊಂಡಿರುವರು.

هُمْ وَأَزْوَاجُهُمْ فِي ظِلَالٍ عَلَى الْأَرَائِكِ مُتَّكِئُونَ ﴿٥٦﴾

57. ಉಣ್ಣಲು, ಕುಡಿಯಲು ಎಲ್ಲ ತರದ ಸ್ವಾದಿಷ್ಟ ವಸ್ತುಗಳು ಅವರಿಗಲ್ಲಿ ಲಭ್ಯವಾಗಿವೆ. ಅವರು ಕೇಳಿದ್ದೆಲ್ಲವೂ ಅವರಿಗಾಗಿ ಸಿದ್ಧವಿದೆ.

لَهُمْ فِيهَا فَاكِهَةٌ وَلَهُم مَّا يَدَّعُونَ ﴿٥٧﴾

58. ಸಲಾಮ್(ಶಾಂತಿ)- ಎಂದು ಕರುಣಾನಿಧಿಯಾದ ಪ್ರಭುವಿನ ಕಡೆಯಿಂದ ಅವರಿಗೆ ಹೇಳಲಾಗಿದೆ.

سَلَامٌ قَوْلًا مِّن رَّبٍّ رَّحِيمٍ ﴿٥٨﴾

59. ಮತ್ತು ಅಪರಾಧಿಗಳೇ, ಇಂದು ನೀವು ಬೇರ್ಪಡಿರಿ.

وَامْتَازُوا الْيَوْمَ أَيُّهَا الْمُجْرِمُونَ ﴿٥٩﴾

60. ಆದಮನ ಮಕ್ಕಳೇ, ನೀವು ಶೈತಾನನ ದಾಸ್ಯ-ಆರಾಧನೆ ಮಾಡಬೇಡಿರಿ, ಅವನು ನಿಮ್ಮ ಪ್ರತ್ಯಕ್ಷ ಶತ್ರು-

أَلَمْ أَعْهَدْ إِلَيْكُمْ يَا بَنِي آدَمَ أَن لَّا تَعْبُدُوا الشَّيْطَانَ ۖ إِنَّهُ لَكُمْ عَدُوٌّ مُّبِينٌ ﴿٦٠﴾

5. ಈ ಉತ್ತರವನ್ನು ಕೊಡುವವರು ಸತ್ಯವಿಶ್ವಾಸಿಗಳಾಗಿರಲಿಕ್ಕೂ ಸಾಧ್ಯವಿದೆ. ಸ್ವಲ್ಪ ಹೊತ್ತಿನ ನಂತರ, ಇದು ಪ್ರವಾದಿಗಳು ಸೂಚಿಸುತ್ತಿದ್ದ ಆ ದಿನವೇ ಆಗಿದೆ ಎಂದು ಸ್ವತಃ ಅವರೂ ತಿಳಿದುಕೊಳ್ಳಲು ಸಾಧ್ಯವಿದೆ. ಅಂತೆಯೇ ಈ ಉತ್ತರವನ್ನು ಕೊಡುವವರು ದೇವಚರರಾಗಿರಲೂಬಹುದು ಅಥವಾ ನಿರ್ಣಾಯಕ ದಿನದ ಸಮಸ್ತ ವಾತಾವರಣವೇ ಅವರಿಗೆ ಈ ವಿಷಯವನ್ನು ತಿಳಿಸಬಹುದು.

61. ಮತ್ತು ನನ್ನ ದಾಸ್ಯ- ಆರಾಧನೆಯನ್ನೇ ಮಾಡಿರಿ. ಇದು ನೇರ ಮಾರ್ಗವಾಗಿರುತ್ತದೆ ಎಂದು ನಾನು ನಿಮಗೆ ಆದೇಶಿಸಲಿಲ್ಲವೇ?

وَّاَنِ اعْبُدُوْنِيْ ؔ هٰذَا صِرَاطٌ مُّسْتَقِيْمٌ ۝٦١

وقف غفران

62. ಆದರೆ, ಇಷ್ಟಾಗಿಯೂ ಅವನು ನಿಮ್ಮ ಪೈಕಿ ಒಂದು ದೊಡ್ಡ ಸಮೂಹವನ್ನು ಪಥಭ್ರಷ್ಟಗೊಳಿಸಿಬಿಟ್ಟನು. ನೀವು ವಿವೇಕವಂತರಾಗಿರಲಿಲ್ಲವೇ?

وَلَقَدْ اَضَلَّ مِنْكُمْ جِبِلًّا كَثِيْرًا ؕ اَفَلَمْ تَكُوْنُوْا تَعْقِلُوْنَ ۝٦٢

63. ನಿಮಗೆ ಎಚ್ಚರಿಕೆ ನೀಡಲಾಗುತ್ತಿದ್ದ ನರಕವು ಇದುವೇ ಆಗಿದೆ.

هٰذِهٖ جَهَنَّمُ الَّتِيْ كُنْتُمْ تُوْعَدُوْنَ ۝٦٣

64. ನೀವು ಭೂಲೋಕದಲ್ಲಿ ಮಾಡುತ್ತಿದ್ದ ಸತ್ಯನಿಷೇಧದ ಫಲವಾಗಿ ಈಗ ಇದರ ಇಂಧನವಾಗಿರಿ.

اِصْلَوْهَا الْيَوْمَ بِمَا كُنْتُمْ تَكْفُرُوْنَ ۝٦٤

65. ಇಂದು ನಾವು ಇವರ ಬಾಯಿಗಳಿಗೆ ಮುದ್ರೆಯನ್ನೊತ್ತಿ ಬಿಡುವೆವು. ಇವರು ಭೂಲೋಕದಲ್ಲಿ ಏನು ಸಂಪಾದಿಸುತ್ತಿದ್ದರೆಂದು ಇವರ ಕೈಗಳು ನಮ್ಮೊಡನೆ ಮಾತಾಡುವುವು ಮತ್ತು ಇವರ ಕಾಲುಗಳು ಸಾಕ್ಷ್ಯ ಹೇಳುವುವು.

اَلْيَوْمَ نَخْتِمُ عَلٰٓى اَفْوَاهِهِمْ وَتُكَلِّمُنَآ اَيْدِيْهِمْ وَتَشْهَدُ اَرْجُلُهُمْ بِمَا كَانُوْا يَكْسِبُوْنَ ۝٦٥

66. ನಾವಿಚ್ಛಿಸಿದರೆ, ಇವರ ಕಣ್ಣುಗಳನ್ನು ಮುಚ್ಚಿ ಬಿಡಬಲ್ಲೆವು, ಅನಂತರ ಇವರು ದಾರಿಯೆಡೆಗೆ ಧಾವಿಸಿ ನೋಡಲಿ. ಇವರಿಗೆ ದಾರಿ ತೋರುವುದೆಲ್ಲಿಂದ?

وَلَوْ نَشَآءُ لَطَمَسْنَا عَلٰٓى اَعْيُنِهِمْ فَاسْتَبَقُوا الصِّرَاطَ فَاَنّٰى يُبْصِرُوْنَ ۝٦٦

67. ನಾವಿಚ್ಛಿಸಿದರೆ, ಇವರನ್ನು ಮುಂದೆ ನಡೆಯದಂತೆಯೂ ಹಿಂದಕ್ಕೆ ಮರಳದಂತೆಯೂ ಇವರ ಸ್ಥಾನದಲ್ಲೇ ವಿಕೃತಗೊಳಿಸಿ ಬಿಡುವೆವು.

وَلَوْ نَشَآءُ لَمَسَخْنٰهُمْ عَلٰى مَكَانَتِهِمْ فَمَا اسْتَطَاعُوْا مُضِيًّا وَّلَا يَرْجِعُوْنَ ۝٦٧

68. ನಾವು ಯಾರಿಗೆ ದೀರ್ಘಾಯುಷ್ಯ ನೀಡುತ್ತೇವೋ ಅವನ ಸ್ವರೂಪವನ್ನು ಪಲ್ಲಟಿಸಿಯೇ ಬಿಡುವೆವು. (ಈ ಅವಸ್ಥೆಯನ್ನು ಕಂಡೂ) ಇವರಿಗೆ ಬುದ್ಧಿ ಬರುವುದಿಲ್ಲವೇ?

وَمَنْ نُّعَمِّرْهُ نُنَكِّسْهُ فِي الْخَلْقِ ؕ اَفَلَا يَعْقِلُوْنَ ۝٦٨

69. ನಾವು ಇವರಿಗೆ (ಈ ಪ್ರವಾದಿಗೆ) ಕಾವ್ಯವನ್ನು ಕಲಿಸಿ ಕೊಡಲಿಲ್ಲ. ಕಾವ್ಯವು ಇವರಿಗೆ ಭೂಷಣವೂ ಅಲ್ಲ. ಇದೊಂದು ಉಪದೇಶ ಮತ್ತು ಸ್ಪಷ್ಟವಾಗಿ ಓದಲ್ಪಡುವ ಗ್ರಂಥವಾಗಿದೆ.

وَمَا عَلَّمْنٰهُ الشِّعْرَ وَمَا يَنْۢبَغِيْ لَهٗ ؕ اِنْ هُوَ اِلَّا ذِكْرٌ وَّقُرْاٰنٌ مُّبِيْنٌ ۝٦٩

70. ಇದು ಜೀವವುಳ್ಳ ಪ್ರತಿಯೊಬ್ಬನಿಗೆ ಎಚ್ಚರಿಕೆ ನೀಡಲಿಕ್ಕಾಗಿ ಮತ್ತು ನಿರಾಕರಿಸುವವರ ವಿರುದ್ಧ ಸತ್ಯದ ಸಮರ್ಥನೆಗಾಗಿರುತ್ತದೆ.

لِّيُنْذِرَ مَنْ كَانَ حَيًّا وَّيَحِقَّ الْقَوْلُ عَلَى الْكٰفِرِيْنَ ۝٧٠

71. ನಾವು ನಮ್ಮ ಕೈಗಳಿಂದಲೇ ಮಾಡಿರುವ ವಸ್ತುಗಳ ಪೈಕಿ

اَوَلَمْ يَرَوْا اَنَّا خَلَقْنَا لَهُمْ مِّمَّا عَمِلَتْ

ಇವರಿಗಾಗಿ ಜಾನುವಾರುಗಳನ್ನು ಸೃಷ್ಟಿಸಿರುವುದನ್ನೂ ಈಗ ಇವರು ಅವುಗಳ ಮಾಲಿಕರಾಗಿರುವುದನ್ನೂ ಇವರು ನೋಡುವುದಿಲ್ಲವೇ?

أَيْدِينَآ أَنْعَامًا فَهُمْ لَهَا مَٰلِكُونَ ﴿٧١﴾

72. ನಾವು ಈ ರೀತಿ ಅವುಗಳನ್ನು ಇವರ ಹತೋಟಿಯಲ್ಲಿರಿಸಿದ್ದೇವೆ. ಅವುಗಳಲ್ಲಿ ಕೆಲವದರ ಮೇಲೆ ಇವರು ಸವಾರಿ ಮಾಡುತ್ತಾರೆ. ಇನ್ನು ಕೆಲವದರ ಮಾಂಸ ಇವರು ತಿನ್ನುತ್ತಾರೆ-

وَذَلَّلْنَٰهَا لَهُمْ فَمِنْهَا رَكُوبُهُمْ وَمِنْهَا يَأْكُلُونَ ﴿٧٢﴾

73. ಮತ್ತು ಅವುಗಳಲ್ಲಿ ಇವರಿಗಾಗಿ ತರತರದ ಪ್ರಯೋಜನಗಳೂ ಪೇಯಗಳೂ ಇವೆ. ಆದರೂ ಇವರು ಕೃತಜ್ಞರಾಗುವುದಿಲ್ಲವೇ?

وَلَهُمْ فِيهَا مَنَٰفِعُ وَمَشَارِبُ ۖ أَفَلَا يَشْكُرُونَ ﴿٧٣﴾

74. ಇಷ್ಟಾಗಿಯೂ ಇವರು ಅಲ್ಲಾಹನ ಹೊರತು ಇತರರನ್ನೂ ದೇವರುಗಳಾಗಿ ಮಾಡಿಕೊಂಡಿದ್ದು ತಮಗೆ ಸಹಾಯ ಮಾಡಲಾಗು ವುದೆಂದು ನಿರೀಕ್ಷಿಸುತ್ತಾರೆ.

وَٱتَّخَذُوا مِن دُونِ ٱللَّهِ ءَالِهَةً لَّعَلَّهُمْ يُنصَرُونَ ﴿٧٤﴾

75. ಅವರು ಇವರಿಗೆ ಏನೂ ಸಹಾಯ ಮಾಡಲಾರರು. ವಾಸ್ತವದಲ್ಲಿ ಇವರೇ ಅವರ ಪಾಲಿಗೆ ಸದಾ ಸನ್ನದ್ಧ ಸೈನ್ಯವಾಗಿ ಬಿಟ್ಟಿದ್ದಾರೆ.

لَا يَسْتَطِيعُونَ نَصْرَهُمْ وَهُمْ لَهُمْ جُندٌ مُّحْضَرُونَ ﴿٧٥﴾

76. ಸರಿ ಇವರ ಮಾತುಗಳು ನಿಮ್ಮನ್ನು ದುಃಖಕ್ಕೀಡು ಮಾಡದಿರಲಿ. ಇವರು ಅಡಗಿಸುವ ಮತ್ತು ವ್ಯಕ್ತಪಡಿಸುವ ಎಲ್ಲ ವಿಷಯಗಳನ್ನು ನಾವು ಬಲ್ಲೆವು.

فَلَا يَحْزُنكَ قَوْلُهُمْ ۘ إِنَّا نَعْلَمُ مَا يُسِرُّونَ وَمَا يُعْلِنُونَ ﴿٧٦﴾

77. ನಾವು ಮಾನವನನ್ನು ವೀರ್ಯಾಣುವಿನಿಂದ ಸೃಷ್ಟಿಸಿರುವುದನ್ನೂ ಅವನು ನೋಡುವುದಿಲ್ಲವೇ? ಮತ್ತೆ ಅವನು ಸ್ಪಷ್ಟ ಜಗಳ ಗಂಟನಾಗಿ ನಿಂತು ಬಿಟ್ಟನು.

أَوَلَمْ يَرَ ٱلْإِنسَٰنُ أَنَّا خَلَقْنَٰهُ مِن نُّطْفَةٍ فَإِذَا هُوَ خَصِيمٌ مُّبِينٌ ﴿٧٧﴾

78. ಈಗ ಅವನು ನಮಗೆ ಹೋಲಿಕೆ ಕೊಡುತ್ತಾನೆ ಮತ್ತು ತನ್ನ ಸೃಷ್ಟಿಯನ್ನು ಮರೆತು ಬಿಡುತ್ತಾನೆ. "ಈ ಎಲುಬುಗಳು ಶಿಥಿಲವಾಗಿ ಹೋದ ಬಳಿಕ ಇವುಗಳನ್ನು ಜೀವಂತ ಗೊಳಿಸುವವನಾರು?" ಎಂದು ಕೇಳುತ್ತಾನೆ.

وَضَرَبَ لَنَا مَثَلًا وَنَسِىَ خَلْقَهُۥ ۖ قَالَ مَن يُحْىِ ٱلْعِظَٰمَ وَهِىَ رَمِيمٌ ﴿٧٨﴾

79. ಇವರೊಡನೆ ಹೇಳಿರಿ, ಇವುಗಳನ್ನು ಪ್ರಥಮ ಬಾರಿ ಸೃಷ್ಟಿಸಿದವನೇ ಪುನಃ ಜೀವಂತ ಗೊಳಿಸುವನು. ಅವನು ಸೃಷ್ಟಿಯ ಪ್ರತಿಯೊಂದು ಕಾರ್ಯವನ್ನೂ ಬಲ್ಲನು.

قُلْ يُحْيِيهَا ٱلَّذِىٓ أَنشَأَهَآ أَوَّلَ مَرَّةٍ ۖ وَهُوَ بِكُلِّ خَلْقٍ عَلِيمٌ ﴿٧٩﴾

80. ನಿಮಗಾಗಿ ಹಚ್ಚಹಸಿರಾದ ಮರದಿಂದ ಬೆಂಕಿಯನ್ನುಂಟು

ٱلَّذِى جَعَلَ لَكُم مِّنَ ٱلشَّجَرِ ٱلْأَخْضَرِ

ಮಾಡಿದವನು ಅವನೇ. ನೀವು ಅದರಿಂದ ನಿಮ್ಮ ಒಲೆಗಳನ್ನು ಉರಿಸುತ್ತೀರಿ.

نَارًا فَإِذَآ أَنتُم مِّنْهُ تُوقِدُونَ ﴿٨٠﴾

81. ಭೂಮಿ-ಆಕಾಶಗಳನ್ನು ಸೃಷ್ಟಿಸಿದವನು ಇವರಂತಹವರನ್ನು ಸೃಷ್ಟಿಸಲು ಅಶಕ್ತನೇ? ಯಾಕಿಲ್ಲ? ಅವನಂತೂ ಮಹಾ ನಿಪುಣ ಸೃಷ್ಟಿಕರ್ತನಾಗಿದ್ದಾನೆ.

أَوَلَيْسَ ٱلَّذِى خَلَقَ ٱلسَّمَٰوَٰتِ وَٱلْأَرْضَ بِقَٰدِرٍ عَلَىٰٓ أَن يَخْلُقَ مِثْلَهُم ۚ بَلَىٰ وَهُوَ ٱلْخَلَّٰقُ ٱلْعَلِيمُ ﴿٨١﴾

82. ಅವನು ಯಾವುದಾದರೊಂದು ವಿಷಯದ ಸಂಕಲ್ಪ ಮಾಡಿದಾಗ ಅದಕ್ಕೆ 'ಆಗಿ ಬಿಡು' ಎಂಬ ಅಪ್ಪಣೆ ಕೊಡುವುದೇ ತಡ, ಅದು ಆಗಿ ಬಿಡುತ್ತದೆ.

إِنَّمَآ أَمْرُهُۥٓ إِذَآ أَرَادَ شَيْـًٔا أَن يَقُولَ لَهُۥ كُن فَيَكُونُ ﴿٨٢﴾

83. ಸಕಲ ವಸ್ತುಗಳ ಮೇಲೆ ಸಂಪೂರ್ಣ ಅಧಿಕಾರವಿರುವವನು ಪರಮ ಪಾವನನು ಮತ್ತು ನೀವು ಅವನ ಕಡೆಗೇ ಮರಳಿಸಲ್ಪಡಲಿರುವಿರಿ.

فَسُبْحَٰنَ ٱلَّذِى بِيَدِهِۦ مَلَكُوتُ كُلِّ شَىْءٍ وَإِلَيْهِ تُرْجَعُونَ ﴿٨٣﴾






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಕ್ರಮಬದ್ಧವಾಗಿ ಸಾಲು ಕಟ್ಟುವವರಾಣೆ,

وَالصّٰٓفّٰتِ صَفًّا ۙ﴿١﴾

2. ಗದರಿಸುವವರಾಣೆ-

فَالزّٰجِرٰتِ زَجْرًا ۙ﴿٢﴾

3. ಮತ್ತು ಉಪದೇಶ ವಾಣಿಯನ್ನು ಕೇಳಿಸುವವರಾಣೆ,[1]

فَالتّٰلِيٰتِ ذِكْرًا ۙ﴿٣﴾

4. ನಿಮ್ಮ ನೈಜ ಆರಾಧ್ಯನು ಏಕೈಕನಾಗಿರುವನು.

اِنَّ اِلٰهَكُمْ لَوَاحِدٌ ۗ﴿٤﴾

5. ಅವನು ಭೂಮಿ - ಆಕಾಶಗಳ ಹಾಗೂ ಅವುಗಳಲ್ಲಿರುವ ಸಕಲ ವಸ್ತುಗಳ ಮಾಲಕನು ಮತ್ತು ಸಕಲ ಪೂರ್ವಗಳ ಒಡೆಯನು.[2]

رَبُّ السَّمٰوٰتِ وَالْاَرْضِ وَمَا بَيْنَهُمَا وَرَبُّ الْمَشَارِقِ ۗ﴿٥﴾

6. ನಾವು ಜಗದಾಕಾಶವನ್ನು[3] ನಕ್ಷತ್ರಗಳ ಚೆಲುವಿನಿಂದ ಅಲಂಕೃತಗೊಳಿಸಿರುವೆವು-

اِنَّا زَيَّنَّا السَّمَآءَ الدُّنْيَا بِزِيْنَةِ ۨالْكَوَاكِبِ ۙ﴿٦﴾

7. ಮತ್ತು ಅದನ್ನು ಪ್ರತಿಯೊಬ್ಬ ಉದ್ಧಟ ಶೈತಾನನಿಂದ ರಕ್ಷಿಸಿಟ್ಟಿರುವೆವು.

وَحِفْظًا مِّنْ كُلِّ شَيْطٰنٍ مَّارِدٍ ۚ﴿٧﴾

1. ಈ ಮೂರೂ ಗುಂಪುಗಳೆಂದರೆ ದೇವಚರರ ಗುಂಪುಗಳು ಎಂದು ವ್ಯಾಖ್ಯಾನಕಾರರಲ್ಲಿ ಹೆಚ್ಚಿನವರಿಗೆ ಒಮ್ಮತಾಭಿಪ್ರಾಯವಿದೆ. ಅವರು ಅಲ್ಲಾಹನ ಆಜ್ಞಾಪಾಲನೆಗೆ ಸದಾ ಸಿದ್ಧರಿರುತ್ತಾರೆ. ಅವನ ಆಜ್ಞೋಲ್ಲಂಘನೆ ಮಾಡುವವರನ್ನು ಗದರಿಸುತ್ತಾರೆ ಹಾಗೂ ವಿವಿಧ ರೀತಿಯಲ್ಲಿ ಅಲ್ಲಾಹನ ನೆನಪು ಮೂಡಿಸುತ್ತಾರೆ ಮತ್ತು ಉಪದೇಶದ ಮಾತುಗಳನ್ನಾಡುತ್ತಾರೆ.
2. ಸೂರ್ಯ ಸದಾ ಒಂದೇ ದಿಗಂತದಿಂದ ಮೂಡುವುದಿಲ್ಲ. ಪ್ರತಿದಿನ ಅದು ವಿಭಿನ್ನ ಕೋನದಿಂದ ಉದಯಿಸುತ್ತದೆ. ಹಾಗೆಯೇ ಸಮಸ್ತ ಭೂಮಿಗೆ ಅದು ಒಮ್ಮೆಲೇ ಉದಯಿಸುವುದಿಲ್ಲ. ಬದಲಾಗಿ ಭೂಮಿಯ ವಿವಿಧ ಭಾಗಗಳಲ್ಲಿ ಅದು ವಿಭಿನ್ನ ವೇಳೆಗಳಲ್ಲಿ ಉದಯಿಸುತ್ತದೆ. ಆದ್ದರಿಂದಲೇ ಇಲ್ಲಿ 'ಪೂರ್ವ'ದ ಬದಲು ಪೂರ್ವಗಳು ಎಂಬ ಪದ ಬಳಸಲಾಗಿದೆ. ಅದರ ಜತೆಗೆ 'ಪಶ್ಚಿಮಗಳು' ಎನ್ನಲಾಗಿಲ್ಲ. ಏಕೆಂದರೆ 'ಪೂರ್ವಗಳು' ಎಂಬ ಪದವೇ 'ಪಶ್ಚಿಮಗಳು' ಎಂಬುದಕ್ಕೂ ಆಧಾರ ಒದಗಿಸುತ್ತದೆ.
3. ಜಗದಾಕಾಶವೆಂದರೆ ಸೂಕ್ಷ್ಮದರ್ಶಕದ ಸಹಾಯವಿಲ್ಲದೆ ಬರಿಗಣ್ಣಿನಿಂದ ನೋಡಲು ಸಾಧ್ಯವಿರುವ ಹತ್ತಿರದ ಆಕಾಶ.

| | |
|---|---|
| 8-9. ಈ ಶೈತಾನರು "ಮಲಇಲ್ ಅಲ್‌ಲಾ"[4] (ದೇವಚರರ) ಮಾತನ್ನು ಆಲಿಸಲಾರರು, ಎಲ್ಲ ದಿಕ್ಕುಗಳಿಂದಲೂ ಹೊಡೆದು ಅಟ್ಟಲ್ಪಡುತ್ತಾರೆ ಮತ್ತು ಅವರಿಗಾಗಿ ನಿರಂತರ ಯಾತನೆ ಇದೆ. | لَا يَسَّمَّعُوْنَ اِلَى الْمَلَاِ الْاَعْلٰى وَيُقْذَفُوْنَ مِنْ كُلِّ جَانِبٍ ۝٨ دُحُوْرًا وَّلَهُمْ عَذَابٌ وَّاصِبٌ ۝٩ |
| 10. ಆದರೂ ಅವರ ಪೈಕಿ ಯಾರಾದರೂ ಕದ್ದಾಲಿಸಿದರೆ ಒಂದು ತೀಕ್ಷ್ಣ ಜ್ವಾಲೆಯು ಅವರನ್ನು ಬೆನ್ನಟ್ಟುತ್ತದೆ. | اِلَّا مَنْ خَطِفَ الْخَطْفَةَ فَاَتْبَعَهٗ شِهَابٌ ثَاقِبٌ ۝١٠ |
| 11. ಇನ್ನು, ಇವರ ಸೃಷ್ಟಿಯು ಹೆಚ್ಚು ಪ್ರಯಾಸಕರವೋ ಅಥವಾ ನಾವು ಸೃಷ್ಟಿಸಿಟ್ಟಿರುವ ಆ ವಸ್ತುಗಳ ಸೃಷ್ಟಿಯೋ? ಎಂದು ಇವರೊಡನೆ ಕೇಳಿರಿ. ಇವರನ್ನಂತು ನಾವು ಅಂಟಾದ ಗಾರೆಯಿಂದ ಸೃಷ್ಟಿಸಿರುತ್ತೇವೆ. | فَاسْتَفْتِهِمْ اَهُمْ اَشَدُّ خَلْقًا اَمْ مَّنْ خَلَقْنَا ۭ اِنَّا خَلَقْنٰهُمْ مِّنْ طِيْنٍ لَّازِبٍ ۝١١ |
| 12. ನೀವು (ಅಲ್ಲಾಹನ ಮಹಿಮಾ ಕಾರ್ಯಗಳ ಕುರಿತು) ಅಚ್ಚರಿಪಡುತ್ತೀರಿ ಮತ್ತು ಇವರು ಅದನ್ನು ಅಪಹಾಸ್ಯ ಮಾಡುತ್ತಾರೆ. | بَلْ عَجِبْتَ وَيَسْخَرُوْنَ ۝١٢ |
| 13. ತಿಳಿಯ ಹೇಳಿದರೆ ಗ್ರಹಿಸುವುದಿಲ್ಲ. | وَاِذَا ذُكِّرُوْا لَا يَذْكُرُوْنَ ۝١٣ |
| 14. ನಿದರ್ಶನವನ್ನೇನಾದರೂ ಕಂಡಾಗ ಅಪಹಾಸ್ಯ ಮಾಡಿ ಬಿಡುತ್ತಾರೆ- | وَاِذَا رَاَوْا اٰيَةً يَّسْتَسْخِرُوْنَ ۝١٤ |
| 15. ಮತ್ತು ಹೀಗೆನ್ನುತ್ತಾರೆ- "ಇದು ಸ್ಪಷ್ಟವಾದ ಜಾದು. | وَقَالُوْٓا اِنْ هٰذَآ اِلَّا سِحْرٌ مُّبِيْنٌ ۝١٥ |
| 16. ನಾವು ಸತ್ತು ಮಣ್ಣಾಗಿ ಅಸ್ಥಿಪಂಜರವಾಗಿ ಬಿಟ್ಟ ಬಳಿಕ ಪುನಃ ಜೀವಂತಗೊಳಿಸಿ ಎಬ್ಬಿಸಲ್ಪಡಲಿದ್ದೇವೆಯೇ? | ءَاِذَا مِتْنَا وَكُنَّا تُرَابًا وَّعِظَامًا ءَاِنَّا لَمَبْعُوْثُوْنَ ۝١٦ |
| 17. ಗತಕಾಲದ ನಮ್ಮ ಪೂರ್ವಜರೂ ಎಬ್ಬಿಸಲ್ಪಡುವರೇ?" | اَوَاٰبَاۗؤُنَا الْاَوَّلُوْنَ ۝١٧ |
| 18. "ಹೌದು! ನೀವು (ಅಲ್ಲಾಹನೆದುರು) ಅಸಹಾಯಕರಾಗಿರುತ್ತೀರಿ" ಎಂದು ಇವರೊಡನೆ ಹೇಳಿರಿ. | قُلْ نَعَمْ وَاَنْتُمْ دَاخِرُوْنَ ۝١٨ |
| 19. ಅದು ಕೇವಲ ಒಂದು ಘರ್ಜನೆಯಾಗಿರುವುದು ಮತ್ತು ಹಠಾತ್ತನೆ ಇವರು (ಇವರಿಗೀಗ ತಿಳಿಸಲಾಗುತ್ತಿರುವ ಎಲ್ಲವನ್ನೂ) ಕಣ್ಣಾರೆ ಕಾಣುತ್ತಿರುವರು. | فَاِنَّمَا هِيَ زَجْرَةٌ وَّاحِدَةٌ فَاِذَا هُمْ يَنْظُرُوْنَ ۝١٩ |
| 20. ಆಗ ಇವರು, "ಅಯ್ಯೋ ನಮ್ಮ ದೌರ್ಭಾಗ್ಯವೇ! ಇದು ಪ್ರತಿಫಲದ ದಿನವೇ ಆಗಿದೆ" ಎನ್ನುವರು. | وَقَالُوْا يٰوَيْلَنَا هٰذَا يَوْمُ الدِّيْنِ ۝٢٠ |

4. ಅರ್ಥಾತ್- ಆಗಸಲೋಕದ ಸೃಷ್ಟಿಗಳು ಅಂದರೆ ದೇವಚರರು.

21. ಇದು ನೀವು ಸುಳ್ಳಾಗಿಸುತ್ತಿದ್ದ ಆ ನಿರ್ಣಾಯಕ ದಿನವೇ ಆಗಿದೆ.[5]

هَٰذَا يَوْمُ الْفَصْلِ الَّذِي كُنتُم بِهِ تُكَذِّبُونَ ﴿٢١﴾

22-23. (ಆಗ ಹೀಗೆ ಅಪ್ಪಣೆಯಾಗುವುದು) "ಎಲ್ಲಾ ಅಕ್ರಮಿಗಳನ್ನೂ ಅವರ ಜೊತೆಗಾರರನ್ನೂ ಅವರು ಅಲ್ಲಾಹನನ್ನು ಬಿಟ್ಟು ಆರಾಧಿಸುತ್ತಿದ್ದ ಆರಾಧ್ಯರನ್ನೂ ಸುತ್ತುವರಿದು ತನ್ನಿರಿ.[6] ಅನಂತರ ಅವರೆಲ್ಲರಿಗೂ ನರಕದ ದಾರಿಯನ್ನು ತೋರಿಸಿರಿ.

احْشُرُوا الَّذِينَ ظَلَمُوا وَأَزْوَاجَهُمْ وَمَا كَانُوا يَعْبُدُونَ ﴿٢٢﴾ مِن دُونِ اللَّهِ فَاهْدُوهُمْ إِلَىٰ صِرَاطِ الْجَحِيمِ ﴿٢٣﴾

24. ಇವರನ್ನು ಸ್ವಲ್ಪ ತಡೆಯಿರಿ, ಇವರನ್ನು ಪ್ರಶ್ನಿಸಲಿಕ್ಕಿದೆ.

وَقِفُوهُمْ إِنَّهُم مَّسْئُولُونَ ﴿٢٤﴾

25. ನಿಮಗೇನಾಗಿದೆ? ಈಗ ಪರಸ್ಪರ ಸಹಾಯ ಮಾಡುವುದಿಲ್ಲವೇಕೆ?

مَا لَكُمْ لَا تَنَاصَرُونَ ﴿٢٥﴾

26. ಇದೇನು, ಇವರಿಂದು ಸ್ವತಃ ಶರಣಾಗುತ್ತಿದ್ದಾರಲ್ಲ!"

بَلْ هُمُ الْيَوْمَ مُسْتَسْلِمُونَ ﴿٢٦﴾

27. ಆ ಬಳಿಕ ಇವರು ಪರಸ್ಪರರ ಕಡೆ ತಿರುಗಿಕೊಂಡು ಪ್ರಶ್ನಿಸ ತೊಡಗುವರು.

وَأَقْبَلَ بَعْضُهُمْ عَلَىٰ بَعْضٍ يَتَسَاءَلُونَ ﴿٢٧﴾

28. (ಅನುಯಾಯಿಗಳು ತಮ್ಮ ನಾಯಕರೊಡನೆ) "ನೀವು ನಮ್ಮ ಬಳಿಗೆ ಬಲಬದಿಯಿಂದ ಬರುತ್ತಿದ್ದಿರಿ" ಎನ್ನುವರು.[7]

قَالُوا إِنَّكُمْ كُنتُمْ تَأْتُونَنَا عَنِ الْيَمِينِ ﴿٢٨﴾

29. ಆಗ ಅವರು ಹೇಳುವರು, "ಅಲ್ಲ, ನಿಜವಾಗಿ ಸ್ವತಃ ನೀವೇ ಸತ್ಯವಿಶ್ವಾಸ ಸ್ವೀಕರಿಸುವವರಾಗಿರಲಿಲ್ಲ.

قَالُوا بَل لَّمْ تَكُونُوا مُؤْمِنِينَ ﴿٢٩﴾

30. ನಿಮ್ಮ ಮೇಲೆ ನಮ್ಮ ಪ್ರಭುತ್ವವೇನೂ ಇರಲಿಲ್ಲ. ಸ್ವತಃ ನೀವೇ ವಿದ್ರೋಹಿಗಳಾಗಿದ್ದಿರಿ.

وَمَا كَانَ لَنَا عَلَيْكُم مِّن سُلْطَانٍ بَلْ كُنتُمْ قَوْمًا طَاغِينَ ﴿٣٠﴾

5. ಈ ಮಾತನ್ನು ಅವರೊಡನೆ ಸತ್ಯವಿಶ್ವಾಸಿಗಳು ಹೇಳಲಿಕ್ಕೂ ಸಾಧ್ಯವಿದೆ. ಇದು ದೇವಚರರ ಮಾತಾಗಲಿಕ್ಕೂ ಸಾಧ್ಯವಿದೆ. ಹಶ್ರ್‌ನ ಮೈದಾನದ ವಾತಾವರಣವೇ ಹೀಗೆ ಸಾರುತ್ತಿರಲೂಬಹುದು. ಹಾಗೆಯೇ ಇದು ಸ್ವತಃ ಅವರೇ ವ್ಯಕ್ತಪಡಿಸುವ ಮತ್ತೊಂದು ಪ್ರತಿಕ್ರಿಯೆ ಆಗಿರಲೂಬಹುದು. ಅರ್ಥಾತ್, ಅವರು ತಮ್ಮ ಮನಸ್ಸನ್ನೇ ಸಂಬೋಧಿಸಿ ಹೀಗೆ ಹೇಳುವರು, "ಲೌಕಿಕ ಜೀವನದಾದ್ಯಂತ ನಿರ್ಣಾಯಕ ದಿನವೊಂದು ಬರಲಿಕ್ಕಿಲ್ಲವೆಂದು ನೀವು ಭಾವಿಸಿದ್ದಿರಿ. ಆದರೆ ಈಗ ನಿಮಗೆ ಆಪತ್ಕಾಲ ಬಂದಿದೆ. ಯಾವ ದಿನವನ್ನು ನೀವು ಸುಳ್ಳಾಗಿಸುತ್ತಿದ್ದಿರೋ ಇದೋ ಆ ದಿನವೇ ಬಂದು ಬಿಟ್ಟಿದೆ."

6. ಇಲ್ಲಿ ಆರಾಧ್ಯರು ಎಂದರೆ ದೇವಚರರು, ಮಹಾಪುರುಷರು ಮತ್ತು ಪ್ರವಾದಿಗಳೇ ಮುಂತಾದವರಲ್ಲ. ಬದಲಾಗಿ ಎರಡು ವಿಧದ ಆರಾಧ್ಯರುಗಳಾಗಿದ್ದಾರೆ. ಮೊದಲನೆಯದಾಗಿ ಜನರು ಅಲ್ಲಾಹನನ್ನು ಬಿಟ್ಟು ತಮ್ಮನ್ನು ಆರಾಧಿಸಬೇಕೆಂದು ಬಯಸಿ ಅದಕ್ಕಾಗಿ ಪ್ರಯತ್ನಿಸುತ್ತಿದ್ದ ಜನರು ಮತ್ತು ಪಿಶಾಚಿಗಳು. ಎರಡನೆಯದಾಗಿ ಲೋಕದಲ್ಲಿ ಪೂಜಿಸಲಾಗುತ್ತಿದ್ದ ಮೂರ್ತಿ ಮುಂತಾದುವುಗಳು.

7. ಮೂಲದಲ್ಲಿ 'ಯಮೀನ್' ಎಂಬ ಪದ ಪ್ರಯೋಗವಾಗಿದೆ. ಆಲಂಕಾರಿಕವಾಗಿ ಇದಕ್ಕೆ ಶಕ್ತಿ ಅಥವಾ ಬಲ ಎಂಬ ಅರ್ಥ ಕೊಡುವುದಾದರೆ ಇದರ ಅರ್ಥ, "ನೀವು ನಿಮ್ಮ ಶಕ್ತಿಯಿಂದ ನಮ್ಮನ್ನು ಪಥಭ್ರಷ್ಟತೆಯೆಡೆಗೆ ಎಳೆದಿರಿ" ಎಂದಾಗುತ್ತದೆ. ಅದಕ್ಕೆ ಒಳಿತು ಅಥವಾ ಹಿತಾಕಾಂಕ್ಷೆ ಎಂಬ ಅರ್ಥ ಕಲ್ಪಿಸುವುದಾದರೆ ಅದರ ಅರ್ಥ ನೀವು ಹಿತಾಕಾಂಕ್ಷಿಯಾಗಿ ನಮಗೆ ಮೋಸ ಮಾಡಿದಿರಿ. ಅದಕ್ಕೆ ಆಣೆ ಎಂಬ ಅರ್ಥ ಕೊಡುವುದಾದರೆ ಅದರ ಅರ್ಥ ನೀವು ನಿರಂತರ ಆಣೆ ಹಾಕುವ ಮೂಲಕ ನೀವು ಸಮರ್ಪಿಸುತ್ತಿರುವುದೇ ಸತ್ಯವೆಂಬ ಸಂತೃಪ್ತಿಯನ್ನು ನಮ್ಮಲ್ಲಿ ಮೂಡಿಸಿದಿರಿ ಎಂದಾಗುತ್ತದೆ.

31. ಕೊನೆಗೆ ನಾವು ಯಾತನೆಯ ಸವಿಯನ್ನು ಉಣ್ಣಲಿದ್ದೇವೆಂಬ ನಿಮ್ಮ ಪ್ರಭುವಿನ ಮಾತಿಗೆ ಅರ್ಹರಾಗಿ ಬಿಟ್ಟೆವು.

فَحَقَّ عَلَيْنَا قَوْلُ رَبِّنَآ ۖ إِنَّا لَذَآئِقُونَ ﴿٣١﴾

32. ಹೀಗೆ ನಾವು ನಿಮ್ಮನ್ನು ದಾರಿಗೆಡಿಸಿದೆವು, ನಾವು ಸ್ವತಃ ದಾರಿ ಗೆಟ್ಟಿದ್ದೆವು."

فَأَغْوَيْنَٰكُمْ إِنَّا كُنَّا غَٰوِينَ ﴿٣٢﴾

33. ಹೀಗೆ, ಅಂದು ಅವರೆಲ್ಲರೂ ಯಾತನೆಯಲ್ಲಿ ಸಮಭಾಗಿಗಳಾಗಿರುವರು.

فَإِنَّهُمْ يَوْمَئِذٍ فِى ٱلْعَذَابِ مُشْتَرِكُونَ ﴿٣٣﴾

34. ನಾವು ಅಪರಾಧಿಗಳೊಂದಿಗೆ ಹೀಗೆಯೇ ವರ್ತಿಸುತ್ತೇವೆ.

إِنَّا كَذَٰلِكَ نَفْعَلُ بِٱلْمُجْرِمِينَ ﴿٣٤﴾

35. ಇವರೊಡನೆ, "ಅಲ್ಲಾಹನ ಹೊರತು ಇನ್ನಾವ ನೈಜ ಆರಾಧ್ಯನೂ ಇಲ್ಲ" ಎಂದು ಹೇಳಿದಾಗ ಇವರು ದರ್ಪ ತೋರುತ್ತಿದ್ದರು.

إِنَّهُمْ كَانُوٓا۟ إِذَا قِيلَ لَهُمْ لَآ إِلَٰهَ إِلَّا ٱللَّهُ يَسْتَكْبِرُونَ ﴿٣٥﴾

36. ಮತ್ತು "ನಾವು ಒಬ್ಬ ಮತಿಭ್ರಾಂತ ಕವಿಗಾಗಿ ನಮ್ಮ ಆರಾಧ್ಯರನ್ನು ಬಿಟ್ಟು ಬಿಡಬೇಕೇ?" ಎನ್ನುತ್ತಿದ್ದರು.

وَيَقُولُونَ أَئِنَّا لَتَارِكُوٓا۟ ءَالِهَتِنَا لِشَاعِرٍ مَّجْنُونٍۭ ﴿٣٦﴾

37. ವಾಸ್ತವದಲ್ಲಿ ಆ ವ್ಯಕ್ತಿ ಸತ್ಯವನ್ನು ತಂದಿದ್ದನು ಮತ್ತು (ಗತ) ಸಂದೇಶವಾಹಕರನ್ನು ದೃಢೀಕರಿಸಿದ್ದನು.

بَلْ جَآءَ بِٱلْحَقِّ وَصَدَّقَ ٱلْمُرْسَلِينَ ﴿٣٧﴾

38. (ಆಗ ಅವರೊಡನೆ ಹೇಳಲಾಗುವುದು) ನೀವು ಖಂಡಿತವಾಗಿಯೂ ವೇದನಾತ್ಮಕ ಶಿಕ್ಷೆಯ ರುಚಿ ಸವಿಯಲಿರುವಿರಿ.

إِنَّكُمْ لَذَآئِقُوا۟ ٱلْعَذَابِ ٱلْأَلِيمِ ﴿٣٨﴾

39. ಮತ್ತು ನೀವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವನ್ನೇ ನಿಮಗೆ ಕೊಡಲಾಗುತ್ತಿದೆ.

وَمَا تُجْزَوْنَ إِلَّا مَا كُنتُمْ تَعْمَلُونَ ﴿٣٩﴾

40. ಆದರೆ ಅಲ್ಲಾಹನ ಆಯ್ದ ದಾಸರು (ಈ ದುಷ್ಪರಿಣಾಮದಿಂದ) ಸುರಕ್ಷಿತರಾಗಿರುವರು.

إِلَّا عِبَادَ ٱللَّهِ ٱلْمُخْلَصِينَ ﴿٤٠﴾

41. ಅವರಿಗಾಗಿ ಚಿರಪರಿಚಿತ ಆಹಾರ,

أُو۟لَٰٓئِكَ لَهُمْ رِزْقٌ مَّعْلُومٌ ﴿٤١﴾

42-43. ಎಲ್ಲ ವಿಧದ ರುಚಿಕರ ವಸ್ತುಗಳು ಮತ್ತು ಅನುಗ್ರಹಭರಿತ ಸ್ವರ್ಗೋದ್ಯಾನಗಳಿದ್ದು ಅವುಗಳಲ್ಲಿ ಅವರು ಗೌರವದೊಂದಿಗೆ ಇರಿಸಲ್ಪಡುವರು.

فَوَٰكِهُ ۖ وَهُم مُّكْرَمُونَ ﴿٤٢﴾ فِى جَنَّٰتِ ٱلنَّعِيمِ ﴿٤٣﴾

44. ಪೀಠಗಳಲ್ಲಿ ಎದುರು ಬದುರಾಗಿ ಕುಳಿತು ಕೊಳ್ಳುವರು.

عَلَىٰ سُرُرٍ مُّتَقَٰبِلِينَ ﴿٤٤﴾

45. ಮದಿರೆಯ ಚಿಲುಮೆಗಳಿಂದ ಪಾನಪಾತ್ರೆ ತುಂಬಿ ಅವರ ಸುತ್ತಲೂ ತರಲಾಗುವುದು.

يُطَافُ عَلَيْهِم بِكَأْسٍ مِّن مَّعِينٍ ﴿٤٥﴾

46. ಹೊಳೆಯುವ ಮದಿರೆಯು ಕುಡಿಯುವವರಿಗೆ ಅತ್ಯಂತ ರುಚಿಕರ ವಾಗಿರುವುದು.

بَيْضَاءَ لَذَّةٍ لِّلشَّارِبِينَ ﴿٤٦﴾

47. ಅದರಿಂದ ಅವರ ದೇಹಕ್ಕೆ ಹಾನಿಯಾಗದು ಮತ್ತು ಅದರಿಂದ ಅವರ ಬುದ್ಧಿಯೂ ಪ್ರಭಾವಿತವಾಗದು.

لَا فِيهَا غَوْلٌ وَلَا هُمْ عَنْهَا يُنزَفُونَ ﴿٤٧﴾

48. ಅವರ ಬಳಿಯಲ್ಲಿ ದೃಷ್ಟಿಯನ್ನು ಕಾಪಾಡಿಕೊಳ್ಳುವ ಸುಂದರ ನಯನಗಳುಳ್ಳ ಸ್ತ್ರೀಯರಿರುವರು,

وَعِندَهُمْ قَاصِرَاتُ الطَّرْفِ عِينٌ ﴿٤٨﴾

49. ಮೊಟ್ಟೆಯ ಒಳಪದರದಂತೆ ಕೋಮಲವಾಗಿರುವರು.

كَأَنَّهُنَّ بَيْضٌ مَّكْنُونٌ ﴿٤٩﴾

50. ಅನಂತರ ಅವರು ಪರಸ್ಪರರೆಡೆಗೆ ಗಮನಹರಿಸಿ ಸ್ಥಿತಿಗತಿಗಳನ್ನು ವಿಚಾರಿಸುವರು.

فَأَقْبَلَ بَعْضُهُمْ عَلَىٰ بَعْضٍ يَتَسَاءَلُونَ ﴿٥٠﴾

51. ಅವರಲ್ಲೊಬ್ಬನು ಹೀಗೆನ್ನುವನು, "ಭೂಲೋಕದಲ್ಲಿ ನನ್ನ ಸಂಗಾತಿ ಯೊಬ್ಬನಿದ್ದನು-

قَالَ قَائِلٌ مِّنْهُمْ إِنِّي كَانَ لِي قَرِينٌ ﴿٥١﴾

52. ಅವನು ನನ್ನೊಡನೆ ಹೀಗೆ ಕೇಳುತ್ತಿದ್ದನು, ನೀನೂ ಸಮರ್ಥಿಸುವವರ ಪೈಕಿ ಆಗಿರುವೆಯಾ?

يَقُولُ أَإِنَّكَ لَمِنَ الْمُصَدِّقِينَ ﴿٥٢﴾

53. ನಿಜಕ್ಕೂ ನಾವು ಸತ್ತು ಮಣ್ಣಾಗಿ, ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನಮಗೆ ಸತ್ಫಲ ದುಷ್ಫಲಗಳನ್ನು ನೀಡಲಾಗುವುದೇ?"

أَإِذَا مِتْنَا وَكُنَّا تُرَابًا وَعِظَامًا أَإِنَّا لَمَدِينُونَ ﴿٥٣﴾

54. ಆ ವ್ಯಕ್ತಿ ಈಗ ಎಲ್ಲಿರುವನೆಂದು ನೀವು ನೋಡಲಿಚ್ಛಿಸುತ್ತೀರಾ? ಎಂದು ಹೇಳಿ.

قَالَ هَلْ أَنتُم مُّطَّلِعُونَ ﴿٥٤﴾

55. ಬಗ್ಗಿ ನೋಡಿದಾಗ ನರಕದ ಆಳದಲ್ಲಿ ಅವನನ್ನು ಕಾಣುವನು.

فَاطَّلَعَ فَرَآهُ فِي سَوَاءِ الْجَحِيمِ ﴿٥٥﴾

56. ಅವನನ್ನು ಉದ್ದೇಶಿಸಿ ಹೀಗೆನ್ನುವನು,- "ಅಲ್ಲಾಹನಾಣೆ, ನೀನಂತು ನನ್ನನ್ನು ನಾಶಗೊಳಿಸಿಯೇ ಬಿಡುತ್ತಿದ್ದೆ.

قَالَ تَاللَّهِ إِن كِدتَّ لَتُرْدِينِ ﴿٥٦﴾

57. ನನ್ನ ಪ್ರಭುವಿನ ಅನುಗ್ರಹ ಇಲ್ಲದಿರುತ್ತಿದ್ದರೆ ಇಂದು ನಾನು

وَلَوْلَا نِعْمَةُ رَبِّي لَكُنتُ مِنَ

ಕೂಡಾ, ಸೆರೆ ಹಿಡಿಯಲ್ಪಟ್ಟವರಲ್ಲಾಗಿರುತ್ತಿದ್ದೆ.[8]

الْمُحْضَرِينَ ﴿٥٧﴾

58. ಸರಿ, ನಮಗಿನ್ನು ಸಾಯಲಿಕ್ಕಿಲ್ಲವಲ್ಲವೇ?

أَفَمَا نَحْنُ بِمَيِّتِينَ ﴿٥٨﴾

59. ನಮಗೆ ಬರಬೇಕಾಗಿದ್ದ ಮೃತ್ಯು ಮೊದಲೇ ಬಂದು ಬಿಟ್ಟಿತು. ಇನ್ನು ನಮಗೆ ಯಾತನೆ ಸಿಗಲಾರದು."

إِلَّا مَوْتَتَنَا الْأُولَىٰ وَمَا نَحْنُ بِمُعَذَّبِينَ ﴿٥٩﴾

60. ನಿಶ್ಚಯವಾಗಿಯೂ ಇದುವೇ ಭವ್ಯ ವಿಜಯವಾಗಿದೆ.

إِنَّ هَٰذَا لَهُوَ الْفَوْزُ الْعَظِيمُ ﴿٦٠﴾

61. ಕರ್ಮವೆಸಗುವವರು ಇಂತಹದೇ ಯಶಸ್ಸಿಗಾಗಿ ಕರ್ಮವೆಸಗಬೇಕು.

لِمِثْلِ هَٰذَا فَلْيَعْمَلِ الْعَامِلُونَ ﴿٦١﴾

62. ಹೇಳಿರಿ, ಈ ಆತಿಥ್ಯ ಉತ್ತಮವೋ 'ಝುಕ್ಕೂಮ್' ವೃಕ್ಷ ಉತ್ತಮವೋ?

أَذَٰلِكَ خَيْرٌ نُزُلًا أَمْ شَجَرَةُ الزَّقُّومِ ﴿٦٢﴾

63. ನಾವು ಆ ವೃಕ್ಷವನ್ನು ಅಕ್ರಮಿಗಳ ಪಾಲಿಗೆ ಪರೀಕ್ಷಾ ಸಾಧನವಾಗಿ ಮಾಡಿರುವೆವು.[9]

إِنَّا جَعَلْنَاهَا فِتْنَةً لِلظَّالِمِينَ ﴿٦٣﴾

64. ಅದು ನರಕದ ತಳಭಾಗದಿಂದ ಹೊರಡುವ ಒಂದು ವೃಕ್ಷವಾಗಿದೆ-

إِنَّهَا شَجَرَةٌ تَخْرُجُ فِي أَصْلِ الْجَحِيمِ ﴿٦٤﴾

65. ಅದರ ತೆನೆಗಳು ಶೈತಾನರ ತಲೆಗಳೋ ಎಂಬಂತಿವೆ.

طَلْعُهَا كَأَنَّهُ رُءُوسُ الشَّيَاطِينِ ﴿٦٥﴾

66. ನರಕವಾಸಿಗಳು ಅದನ್ನು ತಿನ್ನುವರು ಮತ್ತು ಅದರಿಂದಲೇ ಹೊಟ್ಟೆ ತುಂಬುವರು.

فَإِنَّهُمْ لَآكِلُونَ مِنْهَا فَمَالِئُونَ مِنْهَا الْبُطُونَ ﴿٦٦﴾

67. ಅದರ ಮೇಲೆ ಅವರಿಗೆ ಕುಡಿಯಲು ಕುದಿಯುತ್ತಿರುವ ನೀರು ಸಿಗುವುದು.

ثُمَّ إِنَّ لَهُمْ عَلَيْهَا لَشَوْبًا مِنْ حَمِيمٍ ﴿٦٧﴾

68. ಆ ಬಳಿಕ ಅವರ ಮರಳುವಿಕೆಯು ಅದೇ ನರಕಾಗ್ನಿಯ ಕಡೆಗಾಗಿರುವುದು.

ثُمَّ إِنَّ مَرْجِعَهُمْ لَإِلَى الْجَحِيمِ ﴿٦٨﴾

69. ಇವರು ತಮ್ಮ ಪೂರ್ವಿಕರನ್ನು ಪಥಭ್ರಷ್ಟರಾಗಿ ಕಂಡರು-

إِنَّهُمْ أَلْفَوْا آبَاءَهُمْ ضَالِّينَ ﴿٦٩﴾

8. ಈ ಸ್ವರ್ಗವಾಸಿಯು ತನ್ನ ನರಕವಾಸಿ ಮಿತ್ರನೊಡನೆ ಮಾತನಾಡುತ್ತಲೇ ಏಕಾಏಕಿಯಾಗಿ ತನ್ನನ್ನುದ್ದೇಶಿಸಿ ಮಾತನಾಡತೊಡಗುತ್ತಾನೆಂದು ವಾಕ್ಸರಣಿಯಿಂದ ಸ್ಪಷ್ಟವಾಗುತ್ತದೆ. ಒಬ್ಬ ವ್ಯಕ್ತಿ ತಾನು ಎಲ್ಲಾ ನಿರೀಕ್ಷೆ ಮತ್ತು ಅಂದಾಜಿಗಿಂತ ಉನ್ನತ ಸ್ಥಾನದಲ್ಲಿರುವುದನ್ನು ಕಂಡಾಗ ಆನಂದಾಶ್ಚರ್ಯದಿಂದ ಉದ್ಗರಿಸಿ ಬಿಡುವಂತೆಯೇ ಅವನ ಬಾಯಿಯಿಂದ ಈ ಮಾತುಗಳು ಹೊರಟಿವೆ.

9. ಅರ್ಥಾತ್- ಸತ್ಯನಿಷೇಧಿಗಳು ಈ ಮಾತಿನಿಂದ ಕುರ್‌ಆನನ್ನು ಅಣಕಿಸಲು ಮತ್ತು ಪ್ರವಾದಿವರ್ಯರನ್ನು(ಸ) ತಮಾಷೆ ಮಾಡಲು ಹೊಸ ಅವಕಾಶವನ್ನು ಗಿಟ್ಟಿಸಿಕೊಳ್ಳುತ್ತಾರೆ. ಅವರು ಗಹಗಹಿಸಿ ನಗುತ್ತಾ, "ಈ ಹೊಸ ಮಾತು ಕೇಳಿ! ನರಕದ ಉರಿಯುತ್ತಿರುವ ಅಗ್ನಿಯಲ್ಲಿ ಮರ ಬೆಳೆಯುವುದಂತೆ" ಎಂದು ಹೇಳುತ್ತಾರೆ.

| | |
|---|---|
| 70. ಮತ್ತು ಅವರನ್ನೇ ಹಿಂಬಾಲಿಸಿದರು. | فَهُمْ عَلٰٓى اٰثٰرِهِمْ يُهْرَعُوْنَ ﴿٧٠﴾ |
| 71. ವಸ್ತುತಃ ಅವರಿಗಿಂತ ಮುಂಚೆ ಅನೇಕರು ಪಥಭ್ರಷ್ಟರಾಗಿದ್ದರು- | وَلَقَدْ ضَلَّ قَبْلَهُمْ اَكْثَرُ الْاَوَّلِيْنَ ﴿٧١﴾ |
| 72. ಮತ್ತು ನಾವು ಅವರ ಮಧ್ಯೆ ಎಚ್ಚರಿಕೆ ನೀಡುವ ಸಂದೇಶ ವಾಹಕರನ್ನು ಕಳುಹಿಸಿದ್ದೆವು. | وَلَقَدْ اَرْسَلْنَا فِيْهِمْ مُّنْذِرِيْنَ ﴿٧٢﴾ |
| 73. ಎಚ್ಚರಿಕೆ ನೀಡಲ್ಪಟ್ಟಿದ್ದ ಆ ಜನರ ಗತಿಯೇನಾಯಿತು ಎಂಬುದನ್ನು ಈಗ ನೋಡಿಕೊಳ್ಳಿರಿ. | فَانْظُرْ كَيْفَ كَانَ عَاقِبَةُ الْمُنْذَرِيْنَ ﴿٧٣﴾ |
| 74. ಅಲ್ಲಾಹನು ತನಗಾಗಿ ಕಾದಿರಿಸಿಕೊಂಡ ದಾಸರು ಮಾತ್ರ ಈ ದುರ್ಗತಿಯಿಂದ ಪಾರಾಗಿದ್ದಾರೆ. | اِلَّا عِبَادَ اللّٰهِ الْمُخْلَصِيْنَ ﴿٧٤﴾ |
| 75. (ಇದಕ್ಕಿಂತ ಮುಂಚೆ) ನೂಹರು ನಮ್ಮನ್ನು ಕೂಗಿ ಕರೆದಿದ್ದರು. ನಾವು ಎಷ್ಟು ಉತ್ತಮ 'ಓ'ಗೊಡುವವರಾಗಿದ್ದೇವೆಂದು ನೋಡಿರಿ. | وَلَقَدْ نَادٰىنَا نُوْحٌ فَلَنِعْمَ الْمُجِيْبُوْنَ ﴿٧٥﴾ |
| 76. ನಾವು ಅವರನ್ನೂ ಅವರ ಮನೆಯವರನ್ನೂ ಮಹಾ ದುರಂತದಿಂದ ರಕ್ಷಿಸಿದೆವು. | وَنَجَّيْنٰهُ وَاَهْلَهٗ مِنَ الْكَرْبِ الْعَظِيْمِ ﴿٧٦﴾ |
| 77. ಮತ್ತು ಅವರ ಸಂತತಿಯನ್ನು ಮಾತ್ರ ಉಳಿಸಿದೆವು. | وَجَعَلْنَا ذُرِّيَّتَهٗ هُمُ الْبٰقِيْنَ ﴿٧٧﴾ |
| 78. ಅನಂತರದ ಪೀಳಿಗೆಗಳಲ್ಲಿ ಅವರ ಪ್ರಶಂಸೆಯನ್ನು ಉಳಿಸಿಬಿಟ್ಟೆವು. | وَتَرَكْنَا عَلَيْهِ فِى الْاٰخِرِيْنَ ﴿٧٨﴾ |
| 79. ಸಕಲ ಲೋಕವಾಸಿಗಳಲ್ಲಿ ನೂಹರಿಗೆ ಸಲಾಮ್ (ಶುಭಾಶಯ) ಇದೆ. | سَلٰمٌ عَلٰى نُوْحٍ فِى الْعٰلَمِيْنَ ﴿٧٩﴾ |
| 80. ನಾವು ಪುಣ್ಯ ಕಾರ್ಯವೆಸಗುವವರಿಗೆ ಇಂತಹ ಸತ್ಫಲವನ್ನೇ ನೀಡುತ್ತೇವೆ. | اِنَّا كَذٰلِكَ نَجْزِى الْمُحْسِنِيْنَ ﴿٨٠﴾ |
| 81. ವಾಸ್ತವದಲ್ಲಿ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು- | اِنَّهٗ مِنْ عِبَادِنَا الْمُؤْمِنِيْنَ ﴿٨١﴾ |
| 82. ಮತ್ತು ಇನ್ನೊಂದು ಪಂಗಡವನ್ನು ನಾವು ಮುಳುಗಿಸಿಬಿಟ್ಟೆವು. | ثُمَّ اَغْرَقْنَا الْاٰخَرِيْنَ ﴿٨٢﴾ |
| 83. ನೂಹರ ಮಾರ್ಗದಲ್ಲೇ ನಡೆಯುವವರು ಇಬ್‌ರಾಹೀಮರಾಗಿದ್ದರು. | وَاِنَّ مِنْ شِيْعَتِهٖ لَاِبْرٰهِيْمَ ﴿٨٣﴾ |

84. ಅವರು ತಮ್ಮ ಪ್ರಭುವಿನ ಸನ್ನಿಧಿಗೆ ನಿರ್ಮಲ ಮನಸ್ಸಿನೊಂದಿಗೆ ಬಂದಾಗ,

إِذْ جَاءَ رَبَّهُ بِقَلْبٍ سَلِيمٍ ﴿٨٤﴾

85. ಅವರು ತಮ್ಮ ತಂದೆ ಹಾಗೂ ಜನಾಂಗದೊಡನೆ ಕೇಳಿದರು, "ನೀವು ಇದೆಂತಹ ವಸ್ತುಗಳನ್ನು ಪೂಜಿಸುತ್ತಿರುವಿರಿ?

إِذْ قَالَ لِأَبِيهِ وَقَوْمِهِ مَاذَا تَعْبُدُونَ ﴿٨٥﴾

86. ಅಲ್ಲಾಹನನ್ನು ಬಿಟ್ಟು ಮಿಥ್ಯ ಆರಾಧ್ಯರನ್ನು ಬಯಸುತ್ತೀರಾ?

أَئِفْكًا آلِهَةً دُونَ اللَّهِ تُرِيدُونَ ﴿٨٦﴾

87. ಸರ್ವಲೋಕಗಳ ಪಾಲಕ ಪ್ರಭುವಿನ ಕುರಿತು ನಿಮ್ಮ ಕಲ್ಪನೆಯೇನು?"

فَمَا ظَنُّكُمْ بِرَبِّ الْعَالَمِينَ ﴿٨٧﴾

88. ತರುವಾಯ ಅವರು ನಕ್ಷತ್ರಗಳ ಕಡೆಗೆ ದೃಷ್ಟಿ ಬೀರಿದರು[10]-

فَنَظَرَ نَظْرَةً فِي النُّجُومِ ﴿٨٨﴾

89. ಮತ್ತು ನನ್ನ ಆರೋಗ್ಯ ಕೆಟ್ಟಿದೆಯೆಂದರು.[11]

فَقَالَ إِنِّي سَقِيمٌ ﴿٨٩﴾

90. ಆ ಪ್ರಕಾರ, ಆ ಜನರು ಅವರನ್ನು ಬಿಟ್ಟು ಹೋದರು.

فَتَوَلَّوْا عَنْهُ مُدْبِرِينَ ﴿٩٠﴾

91. ಅವರ ಅನುಪಸ್ಥಿತಿಯಲ್ಲಿ ಇವರು ಮೆಲ್ಲನೆ ಅವರ ಆರಾಧ್ಯರ ಮಂದಿರದೊಳಗೆ ನುಗ್ಗಿದರು ಮತ್ತು ಹೀಗೆಂದರು, "ನೀವು ತಿನ್ನುವುದಿಲ್ಲವೇಕೆ?

فَرَاغَ إِلَىٰ آلِهَتِهِمْ فَقَالَ أَلَا تَأْكُلُونَ ﴿٩١﴾

92. ನಿಮಗೇನಾಗಿದೆ? ನೀವು ಮಾತನಾಡುವುದೂ ಇಲ್ಲವಲ್ಲ."

مَا لَكُمْ لَا تَنْطِقُونَ ﴿٩٢﴾

93. ಅನಂತರ ಅವರು ಅವುಗಳ ಮೇಲೆ ಮುಗಿಬಿದ್ದರು ಮತ್ತು ಬಲಗೈಯಿಂದ ಚೆನ್ನಾಗಿ ಹೊಡೆದರು.

فَرَاغَ عَلَيْهِمْ ضَرْبًا بِالْيَمِينِ ﴿٩٣﴾

94. ಅವರು (ಮರಳಿ) ಇವರ ಬಳಿಗೆ ಓಡೋಡಿ ಬಂದರು.

فَأَقْبَلُوا إِلَيْهِ يَزِفُّونَ ﴿٩٤﴾

95. ಆಗ ಇವರು, "ನೀವೇ ಕೆತ್ತಿದ ವಸ್ತುಗಳನ್ನು ನೀವು ಪೂಜಿಸುತ್ತೀರಾ?

قَالَ أَتَعْبُدُونَ مَا تَنْحِتُونَ ﴿٩٥﴾

96. ವಸ್ತುತಃ ನಿಮ್ಮನ್ನೂ ನೀವು ನಿರ್ಮಿಸುವ ಈ ವಸ್ತುಗಳನ್ನೂ ಸೃಷ್ಟಿಸಿದವನು ಅಲ್ಲಾಹನೇ" ಎಂದರು.

وَاللَّهُ خَلَقَكُمْ وَمَا تَعْمَلُونَ ﴿٩٦﴾

---

10. ಅರಬಿ ಭಾಷೆಯಲ್ಲಿ, "ಅವನು ಆಲೋಚಿಸಿದನು ಅಥವಾ ವಿಚಾರ ಮಾಡಿದನು" ಎನ್ನುವುದಕ್ಕೆ ಈ ಪದಗಳನ್ನು ಆಲಂಕಾರಿಕವಾಗಿ ಪ್ರಯೋಗಿಸಲಾಗುತ್ತದೆ.

11. ಹ. ಇಬ್‌ರಾಹೀಮ್‌ರಿಗೆ(ಅ) ಆಗ ಯಾವುದೇ ರೀತಿಯ ತೊಂದರೆ ಇರಲಿಲ್ಲವೆಂದು ನಮಗೆ ಯಾವುದೇ ಮೂಲದಿಂದ ತಿಳಿದು ಬರುವುದಿಲ್ಲ. ಆದ್ದರಿಂದ ಹ. ಇಬ್‌ರಾಹೀಮ್‌ರು(ಅ) ಸತ್ಯಕ್ಕೆ ದೂರವಾದ ನೆಪ ಹೂಡಿದ್ದರು ಎಂದು ಹೇಳುವಂತಿಲ್ಲ.

97. ಅವರು ಪರಸ್ಪರ ಹೀಗೆಂದರು- "ಇವನಿಗಾಗಿ ಒಂದು ಅಗ್ನಿ ಕುಂಡವನ್ನು ತಯಾರಿಸಿರಿ ಇವನನ್ನು ಧಗಧಗಿಸುವ ಬೆಂಕಿಯ ರಾಶಿಗೆ ಎಸೆದು ಬಿಡಿರಿ."

قَالُوا ابْنُوا لَهُ بُنْيَانًا فَأَلْقُوهُ فِي الْجَحِيمِ ﴿٩٧﴾

98. ಅವರು ಇವರ ವಿರುದ್ಧ ಒಂದು ಕಾರ್ಯಾಚರಣೆ ನಡೆಸಲು ಬಯಸಿ ದ್ದರು. ಆದರೆ, ನಾವು ಅವರನ್ನೇ ಕೀಳಾಗಿಸಿಬಿಟ್ಟೆವು.

فَأَرَادُوا بِهِ كَيْدًا فَجَعَلْنَاهُمُ الْأَسْفَلِينَ ﴿٩٨﴾

99. ಇಬ್‌ರಾಹೀಮರು ಹೇಳಿದರು- "ನಾನು ನನ್ನ ಪ್ರಭುವಿನ ಕಡೆಗೆ ಹೋಗುತ್ತೇನೆ.[12] ಅವನೇ ನನಗೆ ಮಾರ್ಗದರ್ಶನ ಮಾಡುವನು.

وَقَالَ إِنِّي ذَاهِبٌ إِلَىٰ رَبِّي سَيَهْدِينِ ﴿٩٩﴾

100. ಪ್ರಭೂ! ನನಗೆ ಸಜ್ಜನನಾದ (ಸಜ್ಜನರ ಸಾಲಿಗೆ ಸೇರುವ) ಒಬ್ಬ ಮಗನನ್ನು ದಯಪಾಲಿಸು.

رَبِّ هَبْ لِي مِنَ الصَّالِحِينَ ﴿١٠٠﴾

101. (ಈ ಪ್ರಾರ್ಥನೆಗೆ ಉತ್ತರವಾಗಿ) ನಾವು ಅವರಿಗೆ ಒಬ್ಬ ಸಹನಶೀಲ ಪುತ್ರನ ಸುವಾರ್ತೆ ನೀಡಿದೆವು.[13]

فَبَشَّرْنَاهُ بِغُلَامٍ حَلِيمٍ ﴿١٠١﴾

102. ಆ ಬಾಲಕನು ಅವರ ಜೊತೆ ದುಡಿಯುವ ಪ್ರಾಯಕ್ಕೆ ತಲಪಿದಾಗ (ಒಂದು ದಿನ) ಇಬ್‌ರಾಹೀಮರು ಅವನೊಡನೆ, "ಮಗೂ, ನಾನು (ಬಲಿಯರ್ಪಿಸಲಿಕ್ಕಾಗಿ) ನಿನ್ನ ಕೊರಳು ಕೊಯ್ಯುತ್ತಿರುವು ದನ್ನು ಕನಸಿನಲ್ಲಿ ಕಂಡೆನು. ಈಗ ನಿನ್ನ ಅಭಿಪ್ರಾಯವೇನೆಂದು ಹೇಳು" ಎಂದರು. ಆಗ ಅವನು, "ಅಪ್ಪಾ, ತಮಗೆ ಆಜ್ಞಾಪಿಸ ಲಾಗಿರುವುದನ್ನು ಮಾಡಿಬಿಡಿರಿ, ಅಲ್ಲಾಹನಿಚ್ಛಿಸಿದರೆ ತಾವು ನನ್ನನ್ನು ಸಹನೆಯುಳ್ಳವನಾಗಿ ಕಾಣುವಿರಿ" ಎಂದನು.

فَلَمَّا بَلَغَ مَعَهُ السَّعْيَ قَالَ يَا بُنَيَّ إِنِّي أَرَىٰ فِي الْمَنَامِ أَنِّي أَذْبَحُكَ فَانظُرْ مَاذَا تَرَىٰ ۚ قَالَ يَا أَبَتِ افْعَلْ مَا تُؤْمَرُ ۖ سَتَجِدُنِي إِن شَاءَ اللَّهُ مِنَ الصَّابِرِينَ ﴿١٠٢﴾

103. ಕೊನೆಗೆ ಇಬ್ಬರೂ ವಿಧೇಯತೆಯೊಂದಿಗೆ ಶಿರಬಾಗಿದರು ಮತ್ತು ಇಬ್‌ರಾಹೀಮರು ಮಗನನ್ನು ಅಧೋಮುಖಿಯಾಗಿ ಮಲಗಿಸಿ ದರು.

فَلَمَّا أَسْلَمَا وَتَلَّهُ لِلْجَبِينِ ﴿١٠٣﴾

104. ಆಗ ನಾವು ಹೀಗೆ ಕೂಗಿ ಹೇಳಿದೆವು, "ಇಬ್‌ರಾಹೀಮ್,

وَنَادَيْنَاهُ أَن يَا إِبْرَاهِيمُ ﴿١٠٤﴾

105. ನೀವು ಸ್ವಪ್ನವನ್ನು ಸತ್ಯಗೊಳಿಸಿ ತೋರಿಸಿದಿರಿ.[14] ನಾವು ಪುಣ್ಯ

قَدْ صَدَّقْتَ الرُّؤْيَا ۚ إِنَّا كَذَٰلِكَ

12. ಅರ್ಥಾತ್- ತನ್ನ ಪ್ರಭುವಿಗಾಗಿ ಮನೆ ಮತ್ತು ಊರನ್ನು ಬಿಡುತ್ತಿದ್ದೇನೆ.

13. ಅರ್ಥಾತ್- ಹ. ಇಸ್ಮಾಈಲ್(ಅ).

14. ಕನಸಿನಲ್ಲಿ ಅವರಿಗೆ ದಿಬಹ್ ಮಾಡುತ್ತಿರುವುದಾಗಿ ತೋರಿಸಲಾಗಿತ್ತು. ದಿಬಹ್ ಮಾಡಿಬಿಟ್ಟರೆಂದು ತೋರಿಸಲಾಗಿರಲಿಲ್ಲ. ಆದ್ದರಿಂದ ಹ. ಇಬ್‌ರಾಹೀಮ್‌ರು(ಅ) ದಿಬಹ್ ಮಾಡುವ ಸಕಲ ಸಿದ್ಧತೆಗಳನ್ನೂ ಮಾಡಿದಾಗ ನೀವು ಕನಸನ್ನು ನಿಜಗೊಳಿಸಿದಿರಿ ಎಂದು ಹೇಳಲಾಯಿತು.

ಕಾರ್ಯವೆಸಗುವವರಿಗೆ ಹೀಗೆಯೇ ಸತ್ಫಲ ನೀಡುತ್ತೇವೆ.

نَجْزِى الْمُحْسِنِيْنَ ﴿١٠٥﴾

106. ನಿಶ್ಚಯವಾಗಿಯೂ ಇದೊಂದು ಪ್ರತ್ಯಕ್ಷ ಪರೀಕ್ಷೆಯಾಗಿತ್ತು."

اِنَّ هٰذَا لَهُوَ الْبَلٰٓؤُا الْمُبِيْنُ ﴿١٠٦﴾

107. ನಾವು ಒಂದು ದೊಡ್ಡ ಬಲಿದಾನವನ್ನು ಪರಿಹಾರವಾಗಿ ಕೊಟ್ಟು ಆ ಬಾಲಕನನ್ನು ಬಿಡಿಸಿದೆವು[15]-

وَفَدَيْنٰهُ بِذِبْحٍ عَظِيْمٍ ﴿١٠٧﴾

108. ಮತ್ತು ಅವನ ಪ್ರಶಂಸೆಯನ್ನು ಶಾಶ್ವತವಾಗಿ ಮುಂದಿನ ತಲೆಮಾರುಗಳಲ್ಲಿ ಉಳಿಸಿಬಿಟ್ಟೆವು.

وَتَرَكْنَا عَلَيْهِ فِى الْاٰخِرِيْنَ ﴿١٠٨﴾

109. ಇಬ್‌ರಾಹೀಮರ ಮೇಲೆ ಸಲಾಮ್ (ಶುಭಾಶಯ) ಇದೆ.

سَلٰمٌ عَلٰٓى اِبْرٰهِيْمَ ﴿١٠٩﴾

110. ನಾವು ಪುಣ್ಯ ಕಾರ್ಯವೆಸಗುವವರಿಗೆ ಇಂತಹದೇ ಸತ್ಫಲ ನೀಡುತ್ತೇವೆ.

كَذٰلِكَ نَجْزِى الْمُحْسِنِيْنَ ﴿١١٠﴾

111. ನಿಶ್ಚಯವಾಗಿಯೂ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು.

اِنَّهٗ مِنْ عِبَادِنَا الْمُؤْمِنِيْنَ ﴿١١١﴾

112. ನಾವು ಅವರಿಗೆ ಇಸ್‌ಹಾಕರ ಸುವಾರ್ತೆ ನೀಡಿದೆವು,[16] ಸಜ್ಜನರ ಪೈಕಿ ಒಬ್ಬ ಪ್ರವಾದಿ.

وَبَشَّرْنٰهُ بِاِسْحٰقَ نَبِيًّا مِّنَ الصّٰلِحِيْنَ ﴿١١٢﴾

113. ಅವರಿಗೂ ಇಸ್‌ಹಾಕರಿಗೂ ಸಮೃದ್ಧಿ ದಯಪಾಲಿಸಿದೆವು. ಈಗ ಅವರಿಬ್ಬರ ಸಂತತಿಯಲ್ಲಿ ಕೆಲವರು ಸದ್ಭಕ್ತರಿದ್ದಾರೆ. ಇನ್ನು ಕೆಲವರು ತಮ್ಮ ಮೇಲೆ ತಾವೇ ವ್ಯಕ್ತ ಅಕ್ರಮವೆಸಗುವವರಿದ್ದಾರೆ."

وَبٰرَكْنَا عَلَيْهِ وَعَلٰٓى اِسْحٰقَ ۗ وَمِنْ ذُرِّيَّتِهِمَا مُحْسِنٌ وَّظَالِمٌ لِّنَفْسِهٖ مُبِيْنٌ ﴿١١٣﴾ ع

114. ನಾವು ಮೂಸಾ ಮತ್ತು ಹಾರೂನರ ಮೇಲೆ ಅನುಗ್ರಹ ತೋರಿದೆವು.

وَلَقَدْ مَنَنَّا عَلٰى مُوْسٰى وَهٰرُوْنَ ﴿١١٤﴾

115. ಅವರನ್ನೂ ಅವರ ಜನಾಂಗವನ್ನೂ ಮಹಾ ಪೀಡನದಿಂದ ಪಾರುಗೊಳಿಸಿದೆವು.

وَنَجَّيْنٰهُمَا وَقَوْمَهُمَا مِنَ الْكَرْبِ الْعَظِيْمِ ﴿١١٥﴾

15. 'ದೊಡ್ಡ ಬಲಿದಾನ'ವೆಂದರೆ ಆ ಸಂದರ್ಭದಲ್ಲಿ ದೇವಚರರು ಹ. ಇಬ್‌ರಾಹೀಮ್‌ರಿಗೆ(ಅ) ಪುತ್ರನ ಬದಲು ದಿಬಹ್ ಮಾಡಲೆಂದು ಸಮರ್ಪಿಸಿದ ಟಗರು. ಅದನ್ನು ಹ. ಇಬ್‌ರಾಹೀಮ್‌ರಂತಹ(ಅ) ನಿಷ್ಠಾವಂತ ದಾಸರಿಗೆ ಇಬ್‌ರಾಹೀಮ್‌ರ(ಅ) ಪುತ್ರರಂತಹ ಸಹನಶೀಲ ಮತ್ತು ಪ್ರಾಣಾರ್ಪಣೆಗೂ ಸಿದ್ಧರಾದ ಪುತ್ರನ ಬದಲಿಗೆ ಪರಿಹಾರದ ರೂಪದಲ್ಲಿ ಕೊಡಲಾಗಿತ್ತು. ಆದ್ದರಿಂದ ಅದನ್ನು 'ದೊಡ್ಡ ಬಲಿದಾನ'ವೆಂದು ವರ್ಣಿಸಲಾಗಿದೆ. ಅದನ್ನು 'ದೊಡ್ಡ ಬಲಿದಾನ'ವೆನ್ನಲು ಇನ್ನೊಂದು ಕಾರಣವೇನೆಂದರೆ ನಿರ್ಣಾಯಕ ದಿನದ ತನಕ ಅಲ್ಲಾಹನು ಈ ಚರ್ಯೆಯನ್ನು ಜಾರಿಗೊಳಿಸಿದ್ದಾನೆ. ಅದೇ ದಿನ ಲೋಕದಾದ್ಯಂತದ ಸತ್ಯವಿಶ್ವಾಸಿಗಳು ಜಾನುವಾರು ಬಲಿ ನೀಡಿ ನಿಷ್ಠೆ ಮತ್ತು ಅರ್ಪಣಾ ಮನೋಭಾವದ ಆ ಮಹಾನ್ ಘಟನೆಯನ್ನು ನಿತ್ಯನೂತನಗೊಳಿಸಬೇಕೆಂದು ಅಲ್ಲಾಹನು ವಿಧಿಸಿದ್ದಾನೆ.

16. ಅರ್ಥಾತ್- ಬಲಿದಾನದ ಈ ಘಟನೆಯ ಬಳಿಕ ಹ. ಇಸ್‌ಹಾಕ್(ರ) ಹುಟ್ಟಲಿರುವ ಸುವಾರ್ತೆ ನೀಡಿದೆವು.

116. ಮತ್ತು ಅವರಿಗೆ ಸಹಾಯ ಮಾಡಿದೆವು. ಇದರಿಂದಾಗಿ ಅವರೇ ಮೇಲುಗೈ ಸಾಧಿಸಿದರು.

وَنَصَرْنٰهُمْ فَكَانُوْا هُمُ الْغٰلِبِيْنَ ١١٦

117. ಅವರಿಗೆ ಅತ್ಯಂತ ಸ್ಪಷ್ಟವಾದ ಗ್ರಂಥ ನೀಡಿದೆವು.

وَاٰتَيْنٰهُمَا الْكِتٰبَ الْمُسْتَبِيْنَ ١١٧

118. ಅವರಿಗೆ ಸನ್ಮಾರ್ಗದರ್ಶನ ಮಾಡಿಸಿದೆವು.

وَهَدَيْنٰهُمَا الصِّرَاطَ الْمُسْتَقِيْمَ ١١٨

119. ಮತ್ತು ಅನಂತರದ ತಲೆಮಾರುಗಳಲ್ಲಿ ಅವರ ಶುಭ ಸ್ಮರಣೆಯನ್ನು ಉಳಿಸಿದೆವು.

وَتَرَكْنَا عَلَيْهِمَا فِي الْاٰخِرِيْنَ ١١٩

120. ಮೂಸಾ ಮತ್ತು ಹಾರೂನರ ಮೇಲೆ ಸಲಾಮ್ (ಶುಭಾಶಯ) ಇದೆ.

سَلٰمٌ عَلٰى مُوْسٰى وَهٰرُوْنَ ١٢٠

121. ನಾವು ಪುಣ್ಯ ಕಾರ್ಯವೆಸಗುವವರಿಗೆ ಇಂತಹದೇ ಸತ್ಫಲ ನೀಡುತ್ತೇವೆ.

اِنَّا كَذٰلِكَ نَجْزِي الْمُحْسِنِيْنَ ١٢١

122. ನಿಶ್ಚಯವಾಗಿಯೂ ಅವರೀರ್ವರೂ ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು.

اِنَّهُمَا مِنْ عِبَادِنَا الْمُؤْمِنِيْنَ ١٢٢

123. ನಿಶ್ಚಯವಾಗಿ ಇಲ್ಯಾಸರೂ ಸಂದೇಶವಾಹಕರಲ್ಲಾಗಿದ್ದರು.

وَاِنَّ اِلْيَاسَ لَمِنَ الْمُرْسَلِيْنَ ١٢٣

124. ಅವರು ತಮ್ಮ ಜನಾಂಗದೊಡನೆ ಹೀಗೆ ಹೇಳಿದ್ದುದನ್ನು ಸ್ಮರಿಸಿರಿ, "ನೀವು ಭಯ ಪಡುವುದಿಲ್ಲವೇ?

اِذْ قَالَ لِقَوْمِهٖٓ اَلَا تَتَّقُوْنَ ١٢٤

125. ನೀವು 'ಬಅಲ'ನನ್ನು ಪ್ರಾರ್ಥಿಸುತ್ತೀರಾ? ಮತ್ತು ಅತ್ಯುತ್ತಮ ಸೃಷ್ಟಿಕರ್ತನನ್ನು ಬಿಟ್ಟುಬಿಡುತ್ತೀರಾ?

اَتَدْعُوْنَ بَعْلًا وَّتَذَرُوْنَ اَحْسَنَ الْخَالِقِيْنَ ١٢٥

126. ನಿಮ್ಮ ಮತ್ತು ನಿಮ್ಮ ಪೂರ್ವಜರ ಪ್ರಭುವಾಗಿರುವ ಅಲ್ಲಾಹನನ್ನು."

اللّٰهَ رَبَّكُمْ وَرَبَّ اٰبَآئِكُمُ الْاَوَّلِيْنَ ١٢٦

127. ಆದರೆ, ಅವರು ಇವರನ್ನು (ಇಲ್ಯಾಸರನ್ನು) ಸುಳ್ಳಾಗಿಸಿ ಬಿಟ್ಟರು. ಅಂತೆಯೇ ಇನ್ನು ಖಂಡಿತವಾಗಿಯೂ ಅವರೆಲ್ಲರೂ ಶಿಕ್ಷೆಗಾಗಿ ಹಾಜರುಗೊಳಿಸಲ್ಪಡುವರು.

فَكَذَّبُوْهُ فَاِنَّهُمْ لَمُحْضَرُوْنَ ١٢٧

128. ಆದರೆ ಅಲ್ಲಾಹನು ಆಯ್ಕೆ ಮಾಡಿದ್ದ ದಾಸರು ಇದಕ್ಕೆ ಹೊರತಾಗಿರುವರು.

اِلَّا عِبَادَ اللّٰهِ الْمُخْلَصِيْنَ ١٢٨

129. ಮತ್ತು ನಾವು ಇಲ್ಯಾಸರ ಶುಭ ಸ್ಮರಣೆಯನ್ನು ಅನಂತರದ ತಲೆಮಾರುಗಳಲ್ಲಿ ಉಳಿಸಿಬಿಟ್ಟೆವು-

وَتَرَكْنَا عَلَيْهِ فِي الْآخِرِينَ ﴿١٢٩﴾

130. ಇಲ್ಯಾಸರ ಮೇಲೆ ಸಲಾಮ್ (ಶುಭಾಶಯ) ಇದೆ.

سَلَامٌ عَلَىٰ إِلْ يَاسِينَ ﴿١٣٠﴾

131. ನಾವು ಪುಣ್ಯಕಾರ್ಯವೆಸಗುವವರಿಗೆ ಇಂತಹದೇ ಸತ್ಫಲವನ್ನೀಯುತ್ತೇವೆ.

إِنَّا كَذَٰلِكَ نَجْزِي الْمُحْسِنِينَ ﴿١٣١﴾

132. ನಿಶ್ಚಯವಾಗಿಯೂ ಅವರು ನಮ್ಮ ಸತ್ಯವಿಶ್ವಾಸಿ ದಾಸರಲ್ಲಾಗಿದ್ದರು.

إِنَّهُ مِنْ عِبَادِنَا الْمُؤْمِنِينَ ﴿١٣٢﴾

133. ಲೂತರೂ ಸಂದೇಶವಾಹಕರಾಗಿ ಕಳುಹಿಸಲ್ಪಟ್ಟವರಲ್ಲಾಗಿದ್ದರು.

وَإِنَّ لُوطًا لَمِنَ الْمُرْسَلِينَ ﴿١٣٣﴾

134-135. ನಾವು ಅವರನ್ನೂ ಅವರ ಮನೆಯವರೆಲ್ಲರನ್ನೂ ರಕ್ಷಿಸಿದ್ದ ಸಂದರ್ಭವನ್ನು ಸ್ಮರಿಸಿರಿ. ಹಿಂದೆ ಉಳಿದುಕೊಂಡವರಲ್ಲಾಗಿದ್ದ ಓರ್ವ ವೃದ್ಧೆಯ ಹೊರತು.

إِذْ نَجَّيْنَاهُ وَأَهْلَهُ أَجْمَعِينَ ﴿١٣٤﴾ إِلَّا عَجُوزًا فِي الْغَابِرِينَ ﴿١٣٥﴾

136. ಉಳಿದೆಲ್ಲರನ್ನು ನಾವು ನಾಶಗೊಳಿಸಿಬಿಟ್ಟೆವು.

ثُمَّ دَمَّرْنَا الْآخَرِينَ ﴿١٣٦﴾

137-138. ಇಂದು ನೀವು ಅವರ ಪಾಳುಬಿದ್ದ ನಾಡುಗಳಿಂದ ಹಗಲಿರುಳು ಹಾದು ಹೋಗುತ್ತೀರಿ. ನಿಮಗೆ ಬುದ್ಧಿಬರುವುದಿಲ್ಲವೇ?

وَإِنَّكُمْ لَتَمُرُّونَ عَلَيْهِمْ مُصْبِحِينَ ﴿١٣٧﴾ وَبِاللَّيْلِ ۗ أَفَلَا تَعْقِلُونَ ﴿١٣٨﴾

139. ನಿಶ್ಚಯವಾಗಿ ಯೂನುಸರೂ ಸಂದೇಶವಾಹಕರಲ್ಲಾಗಿದ್ದರು.

وَإِنَّ يُونُسَ لَمِنَ الْمُرْسَلِينَ ﴿١٣٩﴾

140. ಅವರು ತುಂಬಿದ ನಾವೆಯ ಕಡೆಗೆ ಓಡಿದ ಸಂದರ್ಭವನ್ನು ಸ್ಮರಿಸಿರಿ-

إِذْ أَبَقَ إِلَى الْفُلْكِ الْمَشْحُونِ ﴿١٤٠﴾

141. ತರುವಾಯ ಅದೃಷ್ಟ ಚೀಟಿ ಹಾಕುವುದರಲ್ಲಿ ಭಾಗವಹಿಸಿ ಅದರಲ್ಲಿ ಸೋತರು.

فَسَاهَمَ فَكَانَ مِنَ الْمُدْحَضِينَ ﴿١٤١﴾

142. ಕೊನೆಗೆ ಮೀನು ಅವರನ್ನು ನುಂಗಿಬಿಟ್ಟಿತು ಮತ್ತು ಅವರು ನಿಂದ್ಯರಾಗಿದ್ದರು.[17]

فَالْتَقَمَهُ الْحُوتُ وَهُوَ مُلِيمٌ ﴿١٤٢﴾

17. ಈ ಉಲ್ಲೇಖಗಳನ್ನು ಗಮನಿಸಿದಾಗ ನಮಗೆ ತಿಳಿದು ಬರುವ ವಸ್ತುಸ್ಥಿತಿ ಏನೆಂದರೆ- i) ಹ. ಯೂನುಸ್(ಅ) ಏರಿದ್ದ ನಾವೆ ಅಗತ್ಯಕ್ಕಿಂತ ಹೆಚ್ಚು ತುಂಬಿತ್ತು. ii) ಅದೃಷ್ಟ ಚೀಟಿಯನ್ನು ನಾವೆಯಲ್ಲೇ ಎತ್ತಲಾಯಿತು. ಜಲಯಾನದ ವೇಳೆ ಅತಿಯಾದ ಭಾರದಿಂದಾಗಿ ಸಮಸ್ತ ಪ್ರಯಾಣಿಕರ ಜೀವಕ್ಕೆ ಅಪಾಯವಿದೆಯೆಂದು ತಿಳಿದು ಬಂದಾಗ ಪ್ರಾಯಶಃ ಈ ಘಟನೆ ನಡೆಯಿತು. ಯಾರ ಹೆಸರು ಬರುತ್ತದೋ ಅವರನ್ನು ಸಮುದ್ರಕ್ಕೆ ಎಸೆದು ಬಿಡಲಿಕ್ಕಾಗಿ ಈ ಅದೃಷ್ಟ ಚೀಟಿಯನ್ನು ಎತ್ತಲಾಯಿತು. iii) ಅದೃಷ್ಟ ಚೀಟಿಯಲ್ಲಿ ಹ. ಯೂನುಸ್‌ರ(ಅ) ಹೆಸರು ಬಂತು. ಆದ್ದರಿಂದ ಅವರನ್ನು ಸಮುದ್ರಕ್ಕೆ ಎಸೆದು ಬಿಡಲಾಯಿತು. ಮೀನೊಂದು ಅವರನ್ನು ನುಂಗಿಬಿಟ್ಟಿತು. iv) ಈ ಸಂಕಷ್ಟಕ್ಕೆ

143. ಆಗ ಅವರು ದೇವಸ್ತುತಿ ಮಾಡುವವರಾಗಿಲ್ಲದಿರುತ್ತಿದ್ದರೆ-

فَلَوْلَآ اَنَّهٗ كَانَ مِنَ الْمُسَبِّحِيْنَ ﴿١٤٣﴾

144. ಪುನರುತ್ಥಾನ ದಿನದ ವರೆಗೂ ಅದೇ ಮೀನಿನ ಹೊಟ್ಟೆಯೊಳಗೆ ಇರುತ್ತಿದ್ದರು.[18]

لَلَبِثَ فِيْ بَطْنِهٖٓ اِلٰى يَوْمِ يُبْعَثُوْنَ ﴿١٤٤﴾

145. ಕೊನೆಗೆ ನಾವು ಅವರನ್ನು ಬಹಳ ಕ್ಷೀಣಾವಸ್ಥೆಯಲ್ಲಿ ಒಂದು ಸಮತಟ್ಟಾದ ನೆಲಕ್ಕೆ ಎಸೆದು ಬಿಟ್ಟೆವು

فَنَبَذْنٰهُ بِالْعَرَآءِ وَهُوَ سَقِيْمٌ ﴿١٤٥﴾

146. ಮತ್ತು ಅದರಲ್ಲಿ ಬಳ್ಳಿಗಳಿರುವ ಗಿಡವೊಂದನ್ನು ಬೆಳೆಸಿದೆವು.

وَاَنْۢبَتْنَا عَلَيْهِ شَجَرَةً مِّنْ يَّقْطِيْنٍ ﴿١٤٦﴾

147. ಆ ಬಳಿಕ ನಾವು ಅವರನ್ನು ಒಂದು ಲಕ್ಷ ಅಥವಾ ಅದಕ್ಕಿಂತಲೂ ಅಧಿಕ ಸಂಖ್ಯೆಯ ಜನರ ಕಡೆಗೆ ಕಳುಹಿಸಿದೆವು.[19]

وَاَرْسَلْنٰهُ اِلٰى مِائَةِ اَلْفٍ اَوْ يَزِيْدُوْنَ ﴿١٤٧﴾

148. ಅವರು ಸತ್ಯವಿಶ್ವಾಸವನ್ನು ಸ್ವೀಕರಿಸಿದರು ಮತ್ತು ನಾವು ಅವರನ್ನು ಒಂದು ನಿಶ್ಚಿತ ಕಾಲದ ವರೆಗೆ ಉಳಿಸಿದೆವು.

فَاٰمَنُوْا فَمَتَّعْنٰهُمْ اِلٰى حِيْنٍ ﴿١٤٨﴾

149. ಇವರೊಡನೆ (ಹೀಗೆ) ಕೇಳಿರಿ- "ನಿಮ್ಮ ಪ್ರಭುವಿಗೆ ಪುತ್ರಿಯರೂ ಇವರಿಗೆ ಪುತ್ರರೂ ಇರಬೇಕೇ? ಇದು ಇವರ ಮನಸ್ಸಿಗೆ ಹಿಡಿಸುತ್ತದೆಯೇ?"

فَاسْتَفْتِهِمْ اَلِرَبِّكَ الْبَنَاتُ وَلَهُمُ الْبَنُوْنَ ﴿١٤٩﴾

150. ನಿಜಕ್ಕೂ ನಾವು ದೇವಚರರನ್ನು ಸ್ತ್ರೀಯರಾಗಿ ಸೃಷ್ಟಿಸಿದ್ದೇವೆಯೇ ಮತ್ತು ಇವರು ಹೇಳುತ್ತಿರುವುದು ಕಣ್ಣಾರೆ ಕಂಡ ವಿಷಯವೇ?

اَمْ خَلَقْنَا الْمَلٰٓئِكَةَ اِنَاثًا وَّهُمْ شٰهِدُوْنَ ﴿١٥٠﴾

151-152. ಚೆನ್ನಾಗಿ ಕಿವಿಗೊಟ್ಟು ಕೇಳಿರಿ, ವಾಸ್ತವದಲ್ಲಿ ಅಲ್ಲಾಹನಿಗೆ ಸಂತತಿಯಿದೆ ಎಂಬ ಮಾತನ್ನಿವರು ಸ್ವಯಂ ಸೃಷ್ಟಿಸಿಕೊಂಡು ಹೇಳುತ್ತಿದ್ದಾರೆ ಮತ್ತು ನಿಶ್ಚಯವಾಗಿಯೂ ಇವರು ಸುಳ್ಳುಗಾರರಾಗಿರುತ್ತಾರೆ.

اَلَآ اِنَّهُمْ مِّنْ اِفْكِهِمْ لَيَقُوْلُوْنَ ﴿١٥١﴾ وَلَدَ اللّٰهُ ۙ وَاِنَّهُمْ لَكٰذِبُوْنَ ﴿١٥٢﴾

---

ಹ. ಯೂನುಸ್(ಅ) ಈಡಾಗಲು ಕಾರಣವೇನೆಂದರೆ ಅವರು ತಮ್ಮ ಪ್ರಭುವಾದ ಅಲ್ಲಾಹನ ಅನುಮತಿಯಿಲ್ಲದೆ ತಮ್ಮನ್ನು ನೇಮಿಸಲಾಗಿದ್ದ ಜಾಗದಿಂದ ಪಲಾಯನ ಮಾಡಿದ್ದರು. 'ಅಬಕ' ಎಂಬ ಪದ ಇದನ್ನೇ ಸೂಚಿಸುತ್ತದೆ. ಏಕೆಂದರೆ ಅರಬಿ ಭಾಷೆಯಲ್ಲಿ ಅದನ್ನು ಸಾಮಾನ್ಯವಾಗಿ ಓಡಿ ಹೋಗುವ ಸೇವಕನಿಗೆ ಬಳಸಲಾಗುತ್ತದೆ.

18. ಅರ್ಥಾತ್ ಹ. ಯೂನುಸ್‌ರ(ಅ) ಪಾಲಿಗೆ ನಿರ್ಣಾಯಕ ದಿನದ ತನಕ ಮೀನಿನ ಹೊಟ್ಟೆಯೇ ಗೋರಿಯಾಗಿ ಬಿಡುತ್ತಿತ್ತು.

19. 'ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚು' ಎಂದರೆ ಅಲ್ಲಾಹನಿಗೆ ಸಂಖ್ಯೆಯ ಬಗ್ಗೆ ಸಂಶಯವಿತ್ತೆಂದಲ್ಲ. ಬದಲಾಗಿ ಯಾರಾದರೂ ಆ ನಾಡನ್ನು ನೋಡಿದರೆ ಅಲ್ಲಿಯ ಜನಸಂಖ್ಯೆ ಒಂದು ಲಕ್ಷ ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚಿರಬಹುದು, ಕಡಿಮೆಯಿರಲಾರದು ಎಂದು ಅಂದಾಜಿಸಬಹುದಾಗಿತ್ತು ಎಂಬುದು ಅದರ ಅರ್ಥ.

153. ಅಲ್ಲಾಹನು ತನಗಾಗಿ ಪುತ್ರರ ಬದಲು ಪುತ್ರಿಯರನ್ನು ಇಷ್ಟ ಪಟ್ಟನೇ?

أَصْطَفَى الْبَنَاتِ عَلَى الْبَنِينَ ﴿١٥٣﴾

154. ನಿಮಗೆ ಏನಾಗಿದೆ? ಎಂತಹ ತೀರ್ಮಾನ ಕೈಗೊಳ್ಳುತ್ತಿರುವಿರಿ.

مَا لَكُمْ كَيْفَ تَحْكُمُونَ ﴿١٥٤﴾

155. ನಿಮಗೆ ಬುದ್ಧಿ ಬರುವುದಿಲ್ಲವೇ?

أَفَلَا تَذَكَّرُونَ ﴿١٥٥﴾

156. ಅಥವಾ ನಿಮ್ಮ ಬಳಿ ಈ ಮಾತುಗಳ ಪರವಾಗಿ ಸುಸ್ಪಷ್ಟವಾದ ಆಧಾರವೇನಾದರೂ ಇದೆಯೇ?

أَمْ لَكُمْ سُلْطَانٌ مُبِينٌ ﴿١٥٦﴾

157. ನೀವು ಸತ್ಯವಾದಿಗಳಾಗಿದ್ದರೆ ನಿಮ್ಮ ಆ ಗ್ರಂಥವನ್ನು ತನ್ನಿರಿ.

فَأْتُوا بِكِتَابِكُمْ إِنْ كُنْتُمْ صَادِقِينَ ﴿١٥٧﴾

158. ಇವರು ಅಲ್ಲಾಹ್ ಮತ್ತು ದೇವಚರರ[20] ನಡುವೆ ವಂಶ ಸಂಬಂಧವನ್ನು ಉಂಟು ಮಾಡಿಟ್ಟಿದ್ದಾರೆ. ವಸ್ತುತಃ ಇವರು ಅಪರಾಧಿಗಳೆಂಬ ನೆಲೆಯಲ್ಲಿ ಹಾಜರುಗೊಳಿಸಲ್ಪಡುವವರು ಎಂಬುದು ದೇವಚರರಿಗೆ ಚೆನ್ನಾಗಿ ತಿಳಿದಿದೆ.

وَجَعَلُوا بَيْنَهُ وَبَيْنَ الْجِنَّةِ نَسَبًا ۚ وَلَقَدْ عَلِمَتِ الْجِنَّةُ إِنَّهُمْ لَمُحْضَرُونَ ﴿١٥٨﴾

159-160. (ಮತ್ತು ಹೀಗೆ ಹೇಳುತ್ತಾರೆ) "ಅಲ್ಲಾಹನು, ಅವನ ನಿಷ್ಠಾವಂತ ದಾಸರ ಹೊರತು ಇತರರು ಅವನ ಮೇಲೆ ಆರೋಪಿಸುವ ಗುಣಗಳಿಂದ ಮುಕ್ತನಾಗಿದ್ದು ಪರಿಶುದ್ಧನಾಗಿದ್ದಾನೆ.

سُبْحَانَ اللَّهِ عَمَّا يَصِفُونَ ﴿١٥٩﴾ إِلَّا عِبَادَ اللَّهِ الْمُخْلَصِينَ ﴿١٦٠﴾

161. ಆದುದರಿಂದ ನೀವು ಮತ್ತು ನಿಮ್ಮ ಈ ಆರಾಧ್ಯರು,

فَإِنَّكُمْ وَمَا تَعْبُدُونَ ﴿١٦١﴾

162. ಯಾರನ್ನೂ ಅಲ್ಲಾಹನ ಕಡೆಯಿಂದ ತಿರುಗಿಸಲಾರಿರಿ.

مَا أَنْتُمْ عَلَيْهِ بِفَاتِنِينَ ﴿١٦٢﴾

163. ನರಕದ ಧಗಧಗಿಸುವ ಅಗ್ನಿಯಲ್ಲಿ ಸುಡಲ್ಪಡಲಿರುವಾತನ ಹೊರತು.

إِلَّا مَنْ هُوَ صَالِ الْجَحِيمِ ﴿١٦٣﴾

164. ನಮ್ಮಲ್ಲಿ ಪ್ರತಿಯೊಬ್ಬನ ಸ್ಥಾನ ನಿಶ್ಚಿತವಿದೆ-

وَمَا مِنَّا إِلَّا لَهُ مَقَامٌ مَعْلُومٌ ﴿١٦٤﴾

165. ನಾವು ಪಂಕ್ತಿಬದ್ಧ ಸೇವಕರಾಗಿದ್ದೇವೆ.

وَإِنَّا لَنَحْنُ الصَّافُّونَ ﴿١٦٥﴾

166. ಮತ್ತು ಕೀರ್ತನೆ ಮಾಡುವವರಾಗಿದ್ದೇವೆ."

وَإِنَّا لَنَحْنُ الْمُسَبِّحُونَ ﴿١٦٦﴾

167-169. ಇವರು ಈ ಮುಂಚೆ ಹೀಗೆ ಹೇಳುತ್ತಿದ್ದರು, "ನಮ್ಮ

وَإِنْ كَانُوا لَيَقُولُونَ ﴿١٦٧﴾

20. ಮೂಲದಲ್ಲಿ 'ಜಿನ್ನ್' ಎಂಬ ಪದ ಪ್ರಯೋಗವಾಗಿದೆ. ಆದರೆ ಮುಂದಿನ ಉಲ್ಲೇಖಗಳನ್ನು ಗಮನಿಸಿದಾಗ ಅದನ್ನು ದೇವಚರರ ಕುರಿತು ಹೇಳಲಾಗಿದೆ ಎಂದು ವ್ಯಕ್ತವಾಗುತ್ತದೆ. 'ಜಿನ್ನ್' ಎಂಬುದರ ಶಬ್ದಾರ್ಥ 'ರಹಸ್ಯ ಸೃಷ್ಟಿಗಳು' ಎಂದಾಗಿದೆ.

لَوْ اَنَّ عِنْدَنَا ذِكْرًا مِّنَ الْاَوَّلِيْنَ ﴿١٦٨﴾ لَكُنَّا عِبَادَ اللّٰهِ الْمُخْلَصِيْنَ ﴿١٦٩﴾

ಬಳಿ ಗತ ಜನಾಂಗಗಳಿಗೆ ಸಿಕ್ಕಿದ್ದಂತಹ 'ಬೋಧನೆ' ಇರುತ್ತಿದ್ದರೆ, ಖಂಡಿತವಾಗಿಯೂ ನಾವು ಅಲ್ಲಾಹನ ನಿಷ್ಠ ದಾಸರಾಗುತ್ತಿದ್ದೆವು."

فَكَفَرُوْا بِهٖ فَسَوْفَ يَعْلَمُوْنَ ﴿١٧٠﴾

170. ಆದರೆ, (ಅದು ಬಂದಾಗ) ಇವರು ಅದನ್ನು ನಿರಾಕರಿಸಿದರು. ಇನ್ನು ಸದ್ಯವೇ ಇವರಿಗೆ (ಈ ವರ್ತನೆಯ ಪರಿಣಾಮ) ತಿಳಿದು ಬರುವುದು.

وَلَقَدْ سَبَقَتْ كَلِمَتُنَا لِعِبَادِنَا الْمُرْسَلِيْنَ ﴿١٧١﴾

171. ನಾವು ನಮ್ಮ ಸಂದೇಶವಾಹಕ ದಾಸರಿಗೆ ಮೊದಲೇ ವಾಗ್ದಾನ ವಿತ್ತಿದ್ದೇವೆ.

اِنَّهُمْ لَهُمُ الْمَنْصُوْرُوْنَ ﴿١٧٢﴾

172. ಖಂಡಿತವಾಗಿಯೂ ಅವರಿಗೆ ಸಹಾಯ ಮಾಡಲಾಗುವುದು.

وَاِنَّ جُنْدَنَا لَهُمُ الْغٰلِبُوْنَ ﴿١٧٣﴾

173. ಮತ್ತು ನಮ್ಮ ಸೇನೆಯೇ ವಿಜಯಿಯಾಗುವುದು.

فَتَوَلَّ عَنْهُمْ حَتّٰى حِيْنٍ ﴿١٧٤﴾

174. ಆದುದರಿಂದ ಪೈಗಂಬರರೇ, ಸ್ವಲ್ಪ ಕಾಲದ ವರೆಗೆ ಇವರನ್ನು ಇವರ ಪಾಡಿಗೆ ಬಿಟ್ಟು ಬಿಡಿರಿ-

وَّاَبْصِرْهُمْ فَسَوْفَ يُبْصِرُوْنَ ﴿١٧٥﴾

175. ಮತ್ತು ನೋಡುತ್ತಲಿರಿ, ಸದ್ಯವೇ ಇವರು ಸ್ವತಃ ಕಂಡು ಕೊಳ್ಳುವರು.

اَفَبِعَذَابِنَا يَسْتَعْجِلُوْنَ ﴿١٧٦﴾

176. ಇವರು ನಮ್ಮ ಯಾತನೆಗಾಗಿ ತವಕ ಪಡುತ್ತಿರುವರೇನು?

فَاِذَا نَزَلَ بِسَاحَتِهِمْ فَسَآءَ صَبَاحُ الْمُنْذَرِيْنَ ﴿١٧٧﴾

177. ಅದು ಅವರ ಅಂಗಳದಲ್ಲೇ ಬಂದಿಳಿದಾಗ ಆ ದಿನವು ಎಚ್ಚರಿಕೆ ನೀಡಲ್ಪಟ್ಟವರ ಪಾಲಿಗೆ ಅತ್ಯಂತ ಕೆಟ್ಟದಾಗಿರುವುದು.

وَتَوَلَّ عَنْهُمْ حَتّٰى حِيْنٍ ﴿١٧٨﴾

178. ಆದುದರಿಂದ ಇವರನ್ನು ಸ್ವಲ್ಪ ಕಾಲ ಇವರ ಪಾಡಿಗೆ ಬಿಟ್ಟುಬಿಡಿರಿ-

وَّاَبْصِرْ فَسَوْفَ يُبْصِرُوْنَ ﴿١٧٩﴾

179. ಮತ್ತು ನೋಡುತ್ತಲಿರಿ. ಸದ್ಯವೇ ಇವರು ಸ್ವತಃ ಕಂಡು ಕೊಳ್ಳುವರು.

سُبْحٰنَ رَبِّكَ رَبِّ الْعِزَّةِ عَمَّا يَصِفُوْنَ ﴿١٨٠﴾

180. ನಿಮ್ಮ ಪ್ರಭು, ಗೌರವಾನ್ವಿತ ಪ್ರಭು ಇವರು ಸೃಷ್ಟಿಸುತ್ತಿರುವ ಎಲ್ಲಾ ಆರೋಪಗಳಿಂದ ಮುಕ್ತನಾಗಿರುವ ಪರಮಪಾವನನು.

وَسَلٰمٌ عَلَى الْمُرْسَلِيْنَ ﴿١٨١﴾

181. ಸಂದೇಶವಾಹಕರುಗಳ ಮೇಲೆ ಸಲಾಮ್(ಶುಭಾಶಯ) ಇದೆ.

وَالْحَمْدُ لِلّٰهِ رَبِّ الْعٰلَمِيْنَ ﴿١٨٢﴾

182. ಸಕಲ ಪ್ರಶಂಸೆಗಳೂ ಸರ್ವಲೋಕಗಳ ಪಾಲಕ ಪ್ರಭುವಾದ ಅಲ್ಲಾಹನಿಗೇ ಮೀಸಲು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಸ್ವಾದ್. ಉಪದೇಶ ಭರಿತವಾದ ಕುರ್‌ಆನಿನಾಣೆ.

صٓ وَالۡقُرۡاٰنِ ذِى الذِّكۡرِؕ ۝١

2. ನಿಜವಾಗಿ, ಸತ್ಯವನ್ನು ತಿರಸ್ಕರಿಸಿದ ಈ ಜನರೇ ತೀವ್ರ ಅಹಂಕಾರ ಮತ್ತು ಹಟಮಾರಿತನದಲ್ಲಿ ಸಿಕ್ಕಿ ಬಿದ್ದಿದ್ದಾರೆ.[1]

بَلِ الَّذِيۡنَ كَفَرُوۡا فِىۡ عِزَّةٍ وَّشِقَاقٍ ۝٢

3. ನಾವು ಇವರಿಗಿಂತ ಮುಂಚೆ ಇಂತಹ ಎಷ್ಟೋ ಜನಾಂಗಗಳನ್ನು ನಾಶಗೊಳಿಸಿದ್ದೇವೆ. (ದುರ್ಗತಿ ಬಂದಾಗ) ಅವರು ಗೋಳಿಟ್ಟಿದ್ದಾರೆ. ಆದರೆ ಅದು ಪಾರಾಗುವ ಸಮಯವಾಗಿರುವುದಿಲ್ಲ.

كَمۡ اَهۡلَكۡنَا مِنۡ قَبۡلِهِمۡ مِّنۡ قَرۡنٍ فَنَادَوۡا وَّلَاتَ حِيۡنَ مَنَاصٍ ۝٣

4. ಓರ್ವ ಎಚ್ಚರಿಕೆ ನೀಡುವಾತನು ಸ್ವತಃ ಇವರೊಳಗಿಂದಲೇ ಬಂದು ಬಿಟ್ಟ ಕುರಿತು ಇವರಿಗೆ ಅತ್ಯಾಶ್ಚರ್ಯವಾಯಿತು. ಸತ್ಯ ನಿಷೇಧಿಗಳು, "ಇವನೊಬ್ಬ ಜಾದುಗಾರ, ಮಹಾ ಸುಳ್ಳುಗಾರ,

وَعَجِبُوۡۤا اَنۡ جَآءَهُمۡ مُّنۡذِرٌ مِّنۡهُمۡ وَقَالَ الۡكٰفِرُوۡنَ هٰذَا سٰحِرٌ كَذَّابٌ ۝٤

5. ಇವನು ಎಲ್ಲ ದೇವರುಗಳ ಸ್ಥಾನದಲ್ಲಿ ಕೇವಲ ಒಬ್ಬನೇ ದೇವನನ್ನು ಮಾಡಿಬಿಟ್ಟನೇ? ನಿಜಕ್ಕೂ ಇದೊಂದು ಬಹಳ ವಿಚಿತ್ರ ಸಂಗತಿ" ಎಂದು ಹೇಳತೊಡಗಿದರು.

اَجَعَلَ الۡاٰلِهَةَ اِلٰهًا وَّاحِدًا ۖۚ اِنَّ هٰذَا لَشَىۡءٌ عُجَابٌ ۝٥

6. ಜನಾಂಗದ ಸರದಾರರು ಹೀಗೆ ಹೇಳುತ್ತ ಹೊರ ನಡೆದು ಬಿಟ್ಟರು; "ಹೊರಡಿರಿ ಮತ್ತು ನಿಮ್ಮ ಆರಾಧ್ಯರ ಆರಾಧನೆಯಲ್ಲೇ ಸ್ಥಿರವಾಗಿ ನಿಲ್ಲಿರಿ. ಈ ಮಾತನ್ನು ಯಾವುದೋ ಬೇರೆಯೇ ಉದ್ದೇಶದಿಂದ ಹೇಳಲಾಗುತ್ತಿದೆ.[2]

وَانۡطَلَقَ الۡمَلَاُ مِنۡهُمۡ اَنِ امۡشُوۡا وَاصۡبِرُوۡا عَلٰٓى اٰلِهَتِكُمۡ ۖۚ اِنَّ هٰذَا لَشَىۡءٌ يُّرَادُ ۝٦

---

1. ಅರ್ಥಾತ್- ಸತ್ಯನಿಷೇಧಿಗಳ ನಿರಾಕರಣೆಗೆ ಕಾರಣ ಅವರ ಮುಂದೆ ಸಮರ್ಪಿಸಲಾಗುತ್ತಿರುವ ಧರ್ಮದಲ್ಲೇ ಯಾವುದೋ ದೋಷವಿದೆ ಎಂದಲ್ಲ. ಬದಲಾಗಿ ಕೃತಕ ಜಂಭ, ಅಜ್ಞಾನಜನ್ಯ ದುರಹಂಕಾರ ಮತ್ತು ಹಟಮಾರಿತನ ಮಾತ್ರ ಅದಕ್ಕೆ ಕಾರಣವಾಗಿದೆ.
2. ಇದರಲ್ಲೇನೋ ಮೋಸವಿದೆ ಎಂಬುದು ಅವರ ಭಾವನೆಯಾಗಿತ್ತು. ನಾವೆಲ್ಲರೂ ಮುಹಮ್ಮದ್‌(ಸ) ಅಧೀನರಾಗಿ ಅವರು ನಮ್ಮ ಮೇಲೆ ಆಡಳಿತ ನಡೆಸುವಂತಾಗಬೇಕೆಂಬ ಉದ್ದೇಶದಿಂದ ಈ ಸಂದೇಶ ನೀಡಲಾಗುತ್ತಿದೆ ಎಂದು ಅವರು ಭಾವಿಸಿದ್ದರು.

7. ಈ ಮಾತನ್ನು ನಾವು ಇತ್ತೀಚಿನ ಕಾಲದ ಜನಾಂಗಗಳ ಪೈಕಿ ಯಾರಿಂದಲೂ ಕೇಳಿಲ್ಲ. ಇದು ಕೇವಲ ಒಂದು ಕಪೋಲಕಲ್ಪಿತ ವಿಷಯವಾಗಿದೆ.

مَا سَمِعْنَا بِهَٰذَا فِي الْمِلَّةِ الْآخِرَةِ إِنْ هَٰذَا إِلَّا اخْتِلَاقٌ ٧

8. ಅಲ್ಲಾಹನ ಬೋಧನೆಯು ಅವತೀರ್ಣಗೊಳ್ಳುವುದಕ್ಕೆ ನಮ್ಮ ನಡುವೆ ಕೇವಲ ಈತನೊಬ್ಬನೇ ಉಳಿದು ಸಿಕ್ಕಿದನೇ?" ವಾಸ್ತವದಲ್ಲಿ ನನ್ನ ಬೋಧನೆಯ ವಿಷಯದಲ್ಲಿ ಇವರು ಸಂಶಯಗ್ರಸ್ತರಾಗಿದ್ದಾರೆ.[3] ಇವರು ಈ ತನಕ ನನ್ನ ಯಾತನೆಯ ರುಚಿಯನ್ನು ಸವಿಯದಿರುವುದರಿಂದ ಹೀಗೆಲ್ಲ ಹೇಳುತ್ತಿದ್ದಾರೆ.

أَأُنزِلَ عَلَيْهِ الذِّكْرُ مِن بَيْنِنَا ۚ بَلْ هُمْ فِي شَكٍّ مِّن ذِكْرِي ۖ بَل لَّمَّا يَذُوقُوا عَذَابِ ٨

9. ಪ್ರಬಲನೂ ಮಹಾದಾನಿಯೂ ಆಗಿರುವ ನಿಮ್ಮ ಪ್ರಭುವಿನ ಕೃಪೆಯ ಭಂಡಾರಗಳು ಇವರ ಕೈಯಲ್ಲಿವೆಯೇ?

أَمْ عِندَهُمْ خَزَائِنُ رَحْمَةِ رَبِّكَ الْعَزِيزِ الْوَهَّابِ ٩

10. ಇವರು ಭೂಮಿ-ಆಕಾಶಗಳ ಹಾಗೂ ಅವುಗಳ ನಡುವೆ ಇರುವ ವಸ್ತುಗಳ ಮಾಲಕರೇ? ಹಾಗಿದ್ದರೆ ಇವರು ವಸ್ತುಲೋಕದ ಉನ್ನತಿಗಳಿಗೆ ಏರಿ ನೋಡಲಿ.

أَمْ لَهُم مُّلْكُ السَّمَاوَاتِ وَالْأَرْضِ وَمَا بَيْنَهُمَا ۖ فَلْيَرْتَقُوا فِي الْأَسْبَابِ ١٠

11. ಇದಂತು ಕೂಟಗಳ ಪೈಕಿ ಒಂದು ಸಣ್ಣ ಕೂಟವಾಗಿದ್ದು ಇಲ್ಲೇ ಸೋಲನ್ನು ಅನುಭವಿಸಲಿದೆ.[4]

جُندٌ مَّا هُنَالِكَ مَهْزُومٌ مِّنَ الْأَحْزَابِ ١١

12-13. ಇವರಿಗಿಂತ ಮುಂಚೆ ನೂಹರ ಜನಾಂಗ, ಆದ್, ಮೊಳೆಗಳವನಾದ ಫಿರ್‌ಔನ್, ಸಮೂದ್, ಲೂತ್ ಜನಾಂಗ ಮತ್ತು ಐಕಃದವರು ಸುಳ್ಳಾಗಿಸಿದ್ದಾರೆ. ಅವರು ಕೂಟಗಳಾಗಿದ್ದರು.

كَذَّبَتْ قَبْلَهُمْ قَوْمُ نُوحٍ وَعَادٌ وَفِرْعَوْنُ ذُو الْأَوْتَادِ ١٢ وَثَمُودُ وَقَوْمُ لُوطٍ وَأَصْحَابُ الْأَيْكَةِ ۚ أُولَٰئِكَ الْأَحْزَابُ ١٣

14. ಅವರ ಪೈಕಿ ಪ್ರತಿಯೊಂದು ಕೂಟವೂ ಸಂದೇಶವಾಹಕರನ್ನು ಸುಳ್ಳಾಗಿಸಿತು ಮತ್ತು ನನ್ನ ಶಿಕ್ಷೆಯ ತೀರ್ಪು ಅವರ ಮೇಲೆ ಎರಗಿಯೇ ಬಿಟ್ಟಿತು.

إِن كُلٌّ إِلَّا كَذَّبَ الرُّسُلَ فَحَقَّ عِقَابِ ١٤

3. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅಲ್ಲಾಹನು ಪ್ರವಾದಿವರ್ಯರೊಡನೆ(ಸ), "ಮುಹಮ್ಮದ್‌ರೇ(ಸ)! ನಿಜವಾಗಿ ಇವರು ನಿಮ್ಮನ್ನು ಸುಳ್ಳಾಗಿಸುತ್ತಿರುವುದಲ್ಲ. ಬದಲಾಗಿ ನನ್ನನ್ನೇ ಸುಳ್ಳಾಗಿಸುತ್ತಿದ್ದಾರೆ. ಅವರಿಗೆ ನಿಮ್ಮ ಸತ್ಯತೆಯ ಬಗ್ಗೆ ಶಂಕೆ ಇರುವುದಲ್ಲ, ಬದಲಾಗಿ ನನ್ನ ಬೋಧನೆಗಳ ಬಗ್ಗೆಯೇ ಶಂಕೆಯಿದೆ" ಎಂದು ಹೇಳುತ್ತಿದ್ದಾನೆ.

4. 'ಇಲ್ಲೇ' ಎನ್ನುವ ಮೂಲಕ 'ಪವಿತ್ರ ಮಕ್ಕಾ ನಗರ'ವನ್ನು ಸೂಚಿಸಲಾಗಿದೆ. ಅರ್ಥಾತ್ ಅವರು ಪರಸ್ಪರ ಮಾತನಾಡಿಕೊಳ್ಳುತ್ತಿರುವ ಈ ಸ್ಥಳದಲ್ಲೇ ಒಂದು ದಿನ ಅವರು ಪರಾಜಯ ಹೊಂದಲಿದ್ದಾರೆ. ಇಂದು ಯಾವ ವ್ಯಕ್ತಿಯನ್ನು ತುಚ್ಛೀಕರಿಸಿ 'ಪ್ರವಾದಿ'ಯೆಂದು ಒಪ್ಪಲು ಇವರು ನಿರಾಕರಿಸುತ್ತಿದ್ದಾರೋ ಅದೇ ವ್ಯಕ್ತಿಯ ಮುಂದೆ ಅವರು ಬಾಡಿದ ಮುಖಹೊತ್ತು ನಿಂತುಕೊಂಡಿರುವ ಸಂದರ್ಭ ಇದೇ ಜಾಗದಲ್ಲಿ ಎದುರಾಗಲಿದೆ.

15. ಇವರೂ ಒಂದು ಆಸ್ಫೋಟದ ನಿರೀಕ್ಷೆಯಲ್ಲಿದ್ದಾರೆ. ಆ ಬಳಿಕ ಇನ್ನಾವುದೇ ಆಸ್ಫೋಟ ಇರಲಾರದು.

وَمَا يَنْظُرُ هٰٓؤُلَآءِ اِلَّا صَيْحَةً وَّاحِدَةً مَّا لَهَا مِنْ فَوَاقٍ ﴿۱۵﴾

16. ಮತ್ತು ಇವರು, "ಓ ನಮ್ಮ ಪ್ರಭೂ, ಲೆಕ್ಕಾಚಾರ ಜರಗುವ ದಿನಕ್ಕಿಂತ ಮುಂಚೆಯೇ ನಮ್ಮ ಪಾಲು ನಮಗೆ ಬೇಗನೆ ಕೊಟ್ಟುಬಿಡು" ಎನ್ನುತ್ತಾರೆ.

وَقَالُوْا رَبَّنَا عَجِّلْ لَّنَا قِطَّنَا قَبْلَ يَوْمِ الْحِسَابِ ﴿۱۶﴾

17. ಸಂದೇಶವಾಹಕರೇ, ಇವರು ಹೇಳುವ ಮಾತುಗಳನ್ನು ಸಹಿಸಿಕೊಳ್ಳಿರಿ ಮತ್ತು ಇವರಿಗೆ ನಮ್ಮ ದಾಸ ದಾವೂದರ ವೃತ್ತಾಂತವನ್ನು ವಿವರಿಸಿರಿ. ಅವರು ಮಹಾಶಕ್ತಿಗಳನ್ನು ಹೊಂದಿದ್ದರು. ಪ್ರತಿಯೊಂದು ವಿಷಯದಲ್ಲೂ ಅಲ್ಲಾಹನ ಕಡೆಗೆ ಮರಳುವವರಾಗಿದ್ದರು.

اِصْبِرْ عَلٰى مَا يَقُوْلُوْنَ وَاذْكُرْ عَبْدَنَا دَاوٗدَ ذَا الْاَيْدِ ۚ اِنَّهٗٓ اَوَّابٌ ﴿۱۷﴾

18. ಬೆಳಗು ಬೈಗುಗಳಲ್ಲಿ ಅವರೊಂದಿಗೆ ಕೀರ್ತನೆ ಮಾಡುವಂತೆ ಪರ್ವತಗಳನ್ನು ನಾವು ಅವರಿಗೆ ನಿಯಂತ್ರಿಸಿ ಕೊಟ್ಟಿದ್ದೆವು.

اِنَّا سَخَّرْنَا الْجِبَالَ مَعَهٗ يُسَبِّحْنَ بِالْعَشِيِّ وَالْاِشْرَاقِ ﴿۱۸﴾

19. ಪಕ್ಷಿಗಳು ಒಟ್ಟಾಗಿ ಬಂದು ಸೇರುತ್ತಿದ್ದುವು ಮತ್ತು ಅವೆಲ್ಲವೂ ಅವರ ಕೀರ್ತನೆಯ ಕಡೆಗೆ ಲಕ್ಷ್ಯ ಕೊಡುತ್ತಿದ್ದವು.

وَالطَّيْرَ مَحْشُوْرَةً ۗ كُلٌّ لَّهٗٓ اَوَّابٌ ﴿۱۹﴾

20. ನಾವು ಅವರ ಸಾಮ್ರಾಜ್ಯವನ್ನು ಪ್ರಬಲ ಗೊಳಿಸಿದ್ದೆವು. ಅವರಿಗೆ ಯುಕ್ತಿಯನ್ನು ದಯಪಾಲಿಸಿದ್ದೆವು ಮತ್ತು ನಿರ್ಣಾಯಕವಾಗಿ ಮಾತನಾಡುವ ಸಾಮರ್ಥ್ಯ ನೀಡಿದ್ದೆವು.

وَشَدَدْنَا مُلْكَهٗ وَاٰتَيْنٰهُ الْحِكْمَةَ وَفَصْلَ الْخِطَابِ ﴿۲۰﴾

21. ಗೋಡೆಯ ಮೇಲೇರಿ ಅವರ ಮೇಲ್ಛಾವಡಿಯೊಳಕ್ಕೆ ನುಗ್ಗಿ ಬಂದಿದ್ದ ಆ ವ್ಯಾಜ್ಯದವರ ಸುದ್ದಿ ನಿಮಗೆ ತಲುಪಿದೆಯೇ?

وَهَلْ اَتٰىكَ نَبَؤُا الْخَصْمِ ۘ اِذْ تَسَوَّرُوا الْمِحْرَابَ ﴿۲۱﴾

22. ಅವರು ದಾವೂದರ ಬಳಿಗೆ ಬಂದಾಗ ದಾವೂದರು ಅವರನ್ನು ಕಂಡು ಬೆಚ್ಚಿಬಿದ್ದರು. ಅವರು ಹೀಗೆಂದರು- ಹೆದರಬೇಡಿರಿ, "ನಾವು ಒಂದು ವ್ಯಾಜ್ಯದ ಎರಡು ಪಕ್ಷಗಳಾಗಿದ್ದು, ನಮ್ಮ ಪೈಕಿ ಒಬ್ಬನು ಇನ್ನೊಬ್ಬನ ಮೇಲೆ ಅನ್ಯಾಯವೆಸಗಿರುವನು. ತಾವು ನಮ್ಮ ನಡುವೆ ಸತ್ಯಕ್ಕನುಗುಣವಾಗಿ ತೀರ್ಮಾನ ಮಾಡಿಬಿಡಿರಿ, ಅನ್ಯಾಯವೆಸಗಬೇಡಿರಿ ಮತ್ತು ನಮಗೆ ಸನ್ಮಾರ್ಗವನ್ನು ತೋರಿಸಿರಿ.

اِذْ دَخَلُوْا عَلٰى دَاوٗدَ فَفَزِعَ مِنْهُمْ قَالُوْا لَا تَخَفْ ۚ خَصْمٰنِ بَغٰى بَعْضُنَا عَلٰى بَعْضٍ فَاحْكُمْ بَيْنَنَا بِالْحَقِّ وَلَا تُشْطِطْ وَاهْدِنَآ اِلٰى سَوَآءِ الصِّرَاطِ ﴿۲۲﴾

23. ಇವನು ನನ್ನ ಸಹೋದರ. ಇವನ ಬಳಿ ತೊಂಭತ್ತೊಂಭತ್ತು ಕುರಿಗಳಿವೆ. ನನ್ನ ಬಳಿ ಒಂದು ಕುರಿ ಮಾತ್ರ ಇದೆ. ಇವನು ಆ ಒಂದು ಕುರಿಯನ್ನೂ ನನಗೆ ಒಪ್ಪಿಸಿ ಬಿಡು ಎಂದು

اِنَّ هٰذَآ اَخِيْ ۗ لَهٗ تِسْعٌ وَّتِسْعُوْنَ نَعْجَةً وَّلِيَ نَعْجَةٌ وَّاحِدَةٌ ۗ فَقَالَ

أَكْفِلْنِيهَا وَعَزَّنِي فِي الْخِطَابِ ٢٣

ನನ್ನೊಡನೆ ಹೇಳಿದನು ಮತ್ತು ಮಾತಿನಲ್ಲಿ ನನ್ನನ್ನು ಸೋಲಿಸಿ ಬಿಟ್ಟನು."[5]

قَالَ لَقَدْ ظَلَمَكَ بِسُؤَالِ نَعْجَتِكَ إِلَىٰ نِعَاجِهِ ۖ وَإِنَّ كَثِيرًا مِّنَ الْخُلَطَاءِ لَيَبْغِي بَعْضُهُمْ عَلَىٰ بَعْضٍ إِلَّا الَّذِينَ آمَنُوا وَعَمِلُوا الصَّالِحَاتِ وَقَلِيلٌ مَّا هُمْ ۗ وَظَنَّ دَاوُودُ أَنَّمَا فَتَنَّاهُ فَاسْتَغْفَرَ رَبَّهُ وَخَرَّ رَاكِعًا وَأَنَابَ ۩ ٢٤

24. ಆಗ ದಾವೂದರು- "ಇವನು ತನ್ನ ಕುರಿಗಳೊಂದಿಗೆ ನಿನ್ನ ಕುರಿಯನ್ನು ಸೇರಿಸಿಕೊಳ್ಳಲು ಆಗ್ರಹಿಸುವ ಮೂಲಕ ನಿಜಕ್ಕೂ ನಿನ್ನ ಮೇಲೆ ಅಕ್ರಮವೆಸಗಿರುವನು. ನಿಶ್ಚಯವಾಗಿಯೂ ಸಹಬಾಳುವೆ ನಡೆಸುವವರು ಹೆಚ್ಚಾಗಿ ಪರಸ್ಪರ ಅತಿರೇಕವೆಸಗುತ್ತಲೇ ಇರುತ್ತಾರೆ. ಸತ್ಯವಿಶ್ವಾಸಿಗಳಾದವರು ಮತ್ತು ಸತ್ಕರ್ಮವೆಸಗುವವರು ಮಾತ್ರ ಇದರಿಂದ ದೂರವಿರುತ್ತಾರೆ. ಇಂತಹವರು ಬಹಳ ಕಡಿಮೆ" ಎಂದು ಉತ್ತರ ಕೊಟ್ಟರು. (ಹೀಗೆ ಹೇಳುತ್ತಾ) ದಾವೂದರು, ವಾಸ್ತವದಲ್ಲಿ ಈ ಮೂಲಕ ನಾವು ಅವರನ್ನು ಪರೀಕ್ಷಿಸಿದೆವೆಂಬುದನ್ನು ಅರಿತುಕೊಂಡರು. ಆ ಪ್ರಕಾರ ಅವರು ತಮ್ಮ ಪ್ರಭುವಿನೊಡನೆ ಕ್ಷಮಾಯಾಚನೆ ಮಾಡಿದರು ಮತ್ತು ಸಾಷ್ಟಾಂಗವೆರಗಿ ಪಶ್ಚಾತ್ತಾಪಪಟ್ಟು ಮರಳಿದರು.

فَغَفَرْنَا لَهُ ذَٰلِكَ ۖ وَإِنَّ لَهُ عِندَنَا لَزُلْفَىٰ وَحُسْنَ مَآبٍ ٢٥

25. ಆಗ ನಾವು ಅವರ ಆ ತಪ್ಪನ್ನು ಕ್ಷಮಿಸಿದೆವು.[6] ನಿಶ್ಚಯವಾಗಿಯೂ ನಮ್ಮ ಬಳಿ ಅವರಿಗಾಗಿ ನಿಕಟಸ್ಥಾನ ಹಾಗೂ ಉತ್ತಮವಾದ ಅಂತಿಮ ನೆಲೆ ಇದೆ.

يَا دَاوُودُ إِنَّا جَعَلْنَاكَ خَلِيفَةً فِي الْأَرْضِ فَاحْكُم بَيْنَ النَّاسِ بِالْحَقِّ وَلَا تَتَّبِعِ الْهَوَىٰ فَيُضِلَّكَ عَن سَبِيلِ اللَّهِ ۚ إِنَّ الَّذِينَ يَضِلُّونَ عَن سَبِيلِ اللَّهِ لَهُمْ عَذَابٌ شَدِيدٌ بِمَا نَسُوا يَوْمَ الْحِسَابِ ٢٦

26. (ನಾವು ಅವರೊಡನೆ ಹೀಗೆಂದೆವು); "ದಾವೂದ್, ನಾವು ನಿಮ್ಮನ್ನು ಭೂಮಿಯಲ್ಲಿ ಪ್ರತಿನಿಧಿಯಾಗಿ ಮಾಡಿದ್ದೇವೆ. ಆದುದರಿಂದ ನೀವು ಜನರ ನಡುವೆ ಸತ್ಯದೊಂದಿಗೆ ಆಳ್ವಿಕೆ ನಡೆಸಿರಿ. ಸ್ವೇಚ್ಛೆಯನ್ನು ಅನುಸರಿಸಬೇಡಿರಿ. ಅದು ನಿಮ್ಮನ್ನು ಅಲ್ಲಾಹನ ಮಾರ್ಗದಿಂದ ತಪ್ಪಿಸಿಬಿಡುವುದು. ಅಲ್ಲಾಹನ ಮಾರ್ಗದಿಂದ ತಪ್ಪಿಹೋಗುವವರಿಗೆ, ಲೆಕ್ಕಾಚಾರ ನಡೆಯಲಿರುವ ದಿನವನ್ನು ಮರೆತು ಬಿಟ್ಟಿದ್ದಕ್ಕಾಗಿ ಖಂಡಿತವಾಗಿಯೂ ಕಠಿಣ ಯಾತನೆ ಇದೆ."

5. ಫಿರ್ಯಾದುದಾರ ಕುರಿಯನ್ನು ಅವನು ನನ್ನಿಂದ ಕಸಿದುಕೊಂಡ ಎಂದು ಹೇಳುತ್ತಿಲ್ಲ. ಬದಲಾಗಿ ನನ್ನ ಕುರಿಯನ್ನು ಕೇಳುತ್ತಿದ್ದಾನೆ ಮತ್ತು ಅದನ್ನು ಅವನಿಗೊಪ್ಪಿಸಿ ಬಿಡುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾನೆ. ಅವನು ದೊಡ್ಡ ವ್ಯಕ್ತಿಯಾದ್ದರಿಂದ ನಾನು ಒತ್ತಡದಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ ಎಂದು ಹೇಳುತ್ತಿದ್ದಾನೆ.

6. ಹ. ದಾವೂದ್‌ರಿಂದ(ಅ) ಖಂಡಿತವಾಗಿ ತಪ್ಪುಸಂಭವಿಸಿತ್ತೆಂದು ಇದರಿಂದ ವ್ಯಕ್ತವಾಗುತ್ತದೆ. ಅದು ಕುರಿಗಳ ಮೊಕದ್ದಮೆಯೊಂದಿಗೆ ಯಾವುದೋ ರೀತಿಯ ಹೋಲಿಕೆಯಿದ್ದಂತಹ ತಪ್ಪಾಗಿತ್ತು. ಆದ್ದರಿಂದಲೇ ಪ್ರಸ್ತುತ ಮೊಕದ್ದಮೆಯ ತೀರ್ಮಾನ ಮಾಡುತ್ತಿರುವಾಗ ಈ ಮೂಲಕ ನನ್ನನ್ನು ಪರೀಕ್ಷಿಸಲಾಗುತ್ತಿದೆ ಎಂದು ತಟ್ಟನೆ ಅವರಿಗೆ ಹೊಳೆಯಿತು. ಆದರೆ ಅದು ಕ್ಷಮಿಸಲಾಗದಷ್ಟು ಅಥವಾ ಕ್ಷಮಿಸಲಾದರೂ ತಮ್ಮ ಉನ್ನತ ಪದವಿಯಿಂದ ವಂಚಿತಗೊಳಿಸಲ್ಪಡುವಷ್ಟು ತೀವ್ರ ಸ್ವರೂಪದ ತಪ್ಪಾಗಿರಲಿಲ್ಲ. ತನ್ನಿಮಿತ್ತ ಅವರು ಸಾಷ್ಟಾಂಗವೆರಗಿ ಕ್ಷಮೆಯಾಚಿಸಿದಾಗ ಅವರನ್ನು ಕ್ಷಮಿಸಲಾಯಿತು, ಮಾತ್ರವಲ್ಲ ಇಹ-ಪರಗಳಲ್ಲಿ ಅವರಿಗಿದ್ದ ಉನ್ನತ ಸ್ಥಾನಕ್ಕೂ ಯಾವುದೇ ಬಾಧಕ ಉಂಟಾಗಲಿಲ್ಲ ಎಂದು ಅಲ್ಲಾಹನು ಸ್ವತಃ ಸ್ಪಷ್ಟಪಡಿಸುತ್ತಿದ್ದಾನೆ.

27. ನಾವು ಈ ಆಕಾಶವನ್ನೂ ಭೂಮಿಯನ್ನೂ ಅವುಗಳ ನಡುವೆ ಇರುವ ಈ ಜಗತ್ತನ್ನೂ ವ್ಯಥಾ ಸೃಷ್ಟಿಸಲಿಲ್ಲ. ಇದು ಸತ್ಯನಿಷೇಧಿಗಳ ಭ್ರಮೆಯಾಗಿದೆ ಮತ್ತು ಇಂತಹ ಸತ್ಯನಿಷೇಧಿಗಳಿಗೆ ನರಕಾಗ್ನಿಯ ಮೂಲಕ ವಿನಾಶವಿದೆ.

وَمَا خَلَقْنَا السَّمَآءَ وَالْأَرْضَ وَمَا
بَيْنَهُمَا بَاطِلًا ۚ ذَٰلِكَ ظَنُّ الَّذِينَ كَفَرُوا ۚ
فَوَيْلٌ لِّلَّذِينَ كَفَرُوا مِنَ النَّارِ ﴿٢٧﴾

28. ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗುವವರನ್ನೂ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವವರನ್ನೂ ನಾವು ಸಮಾನವಾಗಿಸಬೇಕೇ? ಧರ್ಮನಿಷ್ಠರನ್ನು ನಾವು ಧರ್ಮಭ್ರಷ್ಟರಂತೆ ಮಾಡಬೇಕೇ?

أَمْ نَجْعَلُ الَّذِينَ آمَنُوا وَعَمِلُوا الصَّالِحَاتِ
كَالْمُفْسِدِينَ فِي الْأَرْضِ أَمْ نَجْعَلُ
الْمُتَّقِينَ كَالْفُجَّارِ ﴿٢٨﴾

29. (ಪೈಗಂಬರರೇ,) ಇದೊಂದು ಅತಿ ಸಮೃದ್ಧವಾದ ಗ್ರಂಥವಾಗಿದ್ದು ಇವರು ಇದರ ಸೂಕ್ತಗಳ ಕುರಿತು ಚಿಂತನೆ ನಡೆಸಲೆಂದು ಮತ್ತು ಬುದ್ಧಿಜೀವಿಗಳು ಇದರಿಂದ ಉಪದೇಶ ಪಡೆಯುವಂತಾಗಲೆಂದು ನಾವು ಇದನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ.

كِتَابٌ أَنزَلْنَاهُ إِلَيْكَ مُبَارَكٌ لِّيَدَّبَّرُوا
آيَاتِهِ وَلِيَتَذَكَّرَ أُولُو الْأَلْبَابِ ﴿٢٩﴾

30. ನಾವು ದಾವೂದರಿಗೆ ಸುಲೈಮಾನ್(ರಂತಹ ಪುತ್ರ)ರನ್ನು ದಯಪಾಲಿಸಿದೆವು. (ಅವರು) ಅತ್ಯುತ್ತಮ ದಾಸರು. ತಮ್ಮ ಪ್ರಭುವಿನ ಕಡೆಗೆ ಅತಿ ಹೆಚ್ಚಾಗಿ ಮರಳುವವರು!

وَوَهَبْنَا لِدَاوُودَ سُلَيْمَانَ ۚ نِعْمَ الْعَبْدُ ۖ
إِنَّهُ أَوَّابٌ ﴿٣٠﴾

31. ಅದೊಂದು ಸಂದರ್ಭವೂ ಸ್ಮರಣಾರ್ಹವಾಗಿದೆ; ಒಂದು ಸಂಜೆ ಅವರ ಮುಂದೆ ಚೆನ್ನಾಗಿ ಪಳಗಿದ ಕುದುರೆಗಳನ್ನು ತರಲಾದಾಗ,

إِذْ عُرِضَ عَلَيْهِ بِالْعَشِيِّ الصَّافِنَاتُ الْجِيَادُ ﴿٣١﴾

32. ಅವರು, "ನಾನು ನನ್ನ ಪ್ರಭುವಿನ ಸ್ಮರಣೆಯ ಕಾರಣಕ್ಕಾಗಿ ಈ ಸೊತ್ತಿನ ಮೇಲೆ ಪ್ರೀತಿಯನ್ನಿರಿಸಿದ್ದೇನೆ" ಎಂದರು. ಆ ಕುದುರೆಗಳು ಕಣ್ಮರೆಯಾದಾಗ,

فَقَالَ إِنِّي أَحْبَبْتُ حُبَّ الْخَيْرِ عَن
ذِكْرِ رَبِّي حَتَّىٰ تَوَارَتْ بِالْحِجَابِ ﴿٣٢﴾

33. ಅವುಗಳನ್ನು ನನ್ನ ಬಳಿಗೆ ಮರಳಿ ತನ್ನಿರಿ" (ಎಂದು ಅವರು ಅಪ್ಪಣೆ ಕೊಟ್ಟರು). ತರುವಾಯ ಅವುಗಳ ಕಾಲು ಮತ್ತು ಕೊರಳುಗಳ ಮೇಲೆ ಕೈಯಾಡಿಸಿದರು.

رُدُّوهَا عَلَيَّ ۖ فَطَفِقَ مَسْحًا بِالسُّوقِ
وَالْأَعْنَاقِ ﴿٣٣﴾

34. ಮತ್ತು (ನೋಡಿರಿ) ಸುಲೈಮಾನರನ್ನೂ ನಾವು ಪರೀಕ್ಷೆಗೊಳಪಡಿಸಿದೆವು ಮತ್ತು ಅವರ ಪೀಠದ ಮೇಲೆ ಒಂದು ಜಡ ಶರೀರವನ್ನು ತಂದು ಹಾಕಿದೆವು. ಅನಂತರ ಅವರು ಪಶ್ಚಾತ್ತಾಪಪಟ್ಟು ಮರಳಿದರು.

وَلَقَدْ فَتَنَّا سُلَيْمَانَ وَأَلْقَيْنَا عَلَىٰ
كُرْسِيِّهِ جَسَدًا ثُمَّ أَنَابَ ﴿٣٤﴾

35. ಅವರು ಹೀಗೆಂದರು- "ನನ್ನ ಪ್ರಭೂ, ನನ್ನನ್ನು ಕ್ಷಮಿಸು. ನನ್ನ ಬಳಿಕ ಇನ್ನಾರಿಗೂ ಅರ್ಹವಾಗಿರದಂತಹ ಸಾಮ್ರಾಜ್ಯವನ್ನು ನನಗೆ

قَالَ رَبِّ اغْفِرْ لِي وَهَبْ لِي مُلْكًا لَّا
يَنبَغِي لِأَحَدٍ مِّنۢ بَعْدِي ۖ إِنَّكَ

أَنْتَ الْوَهَّابُ ﴿٣٥﴾ ದಯಪಾಲಿಸು. ನಿಜಕ್ಕೂ ನೀನೇ ನೈಜ ದಾನಿಯಾಗಿರುವೆ."[7]

فَسَخَّرْنَا لَهُ الرِّيحَ تَجْرِي بِأَمْرِهِ رُخَاءً حَيْثُ أَصَابَ ﴿٣٦﴾

36. ಆಗ ನಾವು ಅವರಿಗಾಗಿ ಗಾಳಿಯನ್ನು ನಿಯಂತ್ರಿಸಿಕೊಟ್ಟೆವು. ಅದು ಅವರ ಅಪ್ಪಣೆಯಂತೆ ಅವರು ಇಚ್ಛಿಸಿದ ದಿಕ್ಕಿಗೆ ಮಂದವಾಗಿ ಬೀಸುತ್ತಿತ್ತು-

وَالشَّيَاطِينَ كُلَّ بَنَّاءٍ وَغَوَّاصٍ ﴿٣٧﴾

37. ಮತ್ತು ಶೈತಾನರನ್ನು ನಿಯಂತ್ರಿಸಿಕೊಟ್ಟೆವು. ಎಲ್ಲ ವಿಧದ ವಾಸ್ತು ಶಿಲ್ಪಿಗಳೂ ಮುಳುಗು ಪ್ರವೀಣರೂ-

وَآخَرِينَ مُقَرَّنِينَ فِي الْأَصْفَادِ ﴿٣٨﴾

38. ಸಂಕೋಲೆಗಳಲ್ಲಿ ಬಿಗಿಯಲ್ಪಟ್ಟ ಇತರರೂ ಇದ್ದರು.

هَٰذَا عَطَاؤُنَا فَامْنُنْ أَوْ أَمْسِكْ بِغَيْرِ حِسَابٍ ﴿٣٩﴾

39. ನಾವು ಅವರೊಡನೆ, "ಇದು ನಮ್ಮ ಕೊಡುಗೆ, ನೀವಿಚ್ಛಿಸಿದವರಿಗೆ ಕೊಡಲಿಕ್ಕೂ ನೀವಿಚ್ಛಿಸಿದವರಿಗೆ ಕೊಡದಿರಲಿಕ್ಕೂ ನಿಮಗೆ ಅಧಿಕಾರ ವಿದೆ. ಯಾವ ಲೆಕ್ಕಾಚಾರವೂ ಇಲ್ಲ" ಎಂದು ಹೇಳಿದೆವು.

وَإِنَّ لَهُ عِنْدَنَا لَزُلْفَىٰ وَحُسْنَ مَآبٍ ﴿٤٠﴾ ع ۳ / ۱۲

40. ನಿಶ್ಚಯವಾಗಿಯೂ ಅವರಿಗಾಗಿ ನಮ್ಮ ಬಳಿ ನಿಕಟ ಸ್ಥಾನವೂ ಉತ್ತಮ ಅಂತಿಮ ನೆಲೆಯೂ ಇದೆ.

وَاذْكُرْ عَبْدَنَا أَيُّوبَ إِذْ نَادَىٰ رَبَّهُ أَنِّي مَسَّنِيَ الشَّيْطَانُ بِنُصْبٍ وَعَذَابٍ ﴿٤١﴾ وقف لازم

41. ನಮ್ಮ ದಾಸ ಅಯ್ಯೂಬರನ್ನು ಸ್ಮರಿಸಿರಿ. ಶೈತಾನನು ನನ್ನನ್ನು ಕಷ್ಟ ಹಾಗೂ ಯಾತನೆಗೊಳಪಡಿಸಿ ಬಿಟ್ಟಿದ್ದಾನೆಂದು ಅವರು ತಮ್ಮ ಪ್ರಭುವನ್ನು ಪ್ರಾರ್ಥಿಸಿದ ಸಂದರ್ಭ.[8]

---

7. ಅಲ್ಲಾಹನು ಹ. ದಾವೂದ್(ಅ) ಮತ್ತು ಹ. ಸುಲೈಮಾನ್‌ರಂತಹ(ಅ) ಉನ್ನತ ಪದವಿಯ ಪ್ರವಾದಿಗಳು ಮತ್ತು ಪ್ರೀತಿಪಾತ್ರರಾದ ದಾಸರನ್ನೂ ಪರೀಕ್ಷಿಸದೆ ಬಿಟ್ಟಿಲ್ಲವೆಂದು ತಿಳಿಯಪಡಿಸುವುದು ಇದರ ಉದ್ದೇಶವೆಂದು ವಿವರಣಾಶೈಲಿಯಿಂದ ಸ್ಪಷ್ಟವಾಗುತ್ತದೆ. ಯಾವ ಪರೀಕ್ಷೆಯ ಬಗ್ಗೆ ಇಲ್ಲಿ ಪ್ರಸ್ತಾವಿಸಲಾಗಿದೆಯೋ ಅದರ ಕುರಿತು ವ್ಯಾಖ್ಯಾನಕಾರರಿಗೆ ಒಮ್ಮತಾಭಿಪ್ರಾಯ ಇರುವಂತಹ ಯಾವುದೇ ವಿವರಣೆಗಳಿರುವುದು ನಮಗೆ ತಿಳಿದಿಲ್ಲ. ಇಲ್ಲಿ ಹ. ಸುಲೈಮಾನ್(ಅ), "ನನ್ನ ಪ್ರಭೂ! ನನ್ನನ್ನು ಕ್ಷಮಿಸು, ನನ್ನ ಬಳಿಕ ಇನ್ನಾರಿಗೂ ಅರ್ಹವಾಗಿರದಂತಹ ಸಾಮ್ರಾಜ್ಯವನ್ನು ನನಗೆ ದಯಪಾಲಿಸು" ಎಂದು ಪ್ರಾರ್ಥಿಸಿದ್ದಾರೆ. ಈ ಪ್ರಾರ್ಥನೆಯನ್ನು ಬನೀಇಸ್ರಾಈಲರ ಚರಿತ್ರೆಯ ಬೆಳಕಿನಲ್ಲಿ ಓದಿದರೆ, ಅವರ ಮನಸ್ಸಿನಲ್ಲಿ ಅವರ ನಂತರ ಅವರ ಮಗ ಉತ್ತರಾಧಿಕಾರಿಯಾಗಬೇಕು, ಆಡಳಿತ ನಿರ್ವಹಣೆ ಅವರ ಸಂತತಿಯಲ್ಲೇ ಮುಂದುವರಿಯಬೇಕು ಎಂಬ ಇಚ್ಛೆ ಪ್ರಾಯಶಃ ಇತ್ತೆಂದು ಭಾಸವಾಗುತ್ತದೆ. ಇದನ್ನೇ ಅಲ್ಲಾಹನು ಅವರ ಪಾಲಿನ ಪರೀಕ್ಷೆ ಎಂದು ಹೇಳಿದ್ದಾನೆ. ಅವರ ಉತ್ತರಾಧಿಕಾರಿ 'ರುಹುಬ್‌ಆಮ್' ಓರ್ವ ಅಯೋಗ್ಯ ಯುವಕನಾಗಿ ಬೆಳೆದಾಗ ಅವರು ಈ ಬಗ್ಗೆ ಎಚ್ಚರಗೊಂಡರು. ದಾವೂದ್ ಮತ್ತು ಸುಲೈಮಾನ್‌ರ(ಅ) ಸಾಮ್ರಾಜ್ಯವನ್ನು ನಾಲ್ಕು ದಿನವೂ ಸರಿಯಾಗಿ ನಿಯಂತ್ರಿಸಲಾಗದಂತಹ ಲಕ್ಷಣಗಳು ಅವನಲ್ಲಿ ಕಂಡು ಬಂದಿದ್ದವು. 'ಅವರ ಪೀಠದ ಮೇಲೆ ಒಂದು ಜಡ ದೇಹವನ್ನು ತಂದು ಹಾಕಲಾಯಿತು' ಎಂಬುದರ ಅರ್ಥ ಪ್ರಾಯಶಃ ಯಾವ ಪುತ್ರನನ್ನು ಅವರು ತಮ್ಮ ಕುರ್ಚಿಯಲ್ಲಿ ಕುಳ್ಳಿರಿಸ ಬಯಸಿದ್ದರೋ ಅವನು ಮಹಾ ಅಯೋಗ್ಯನಾಗಿದ್ದನು ಎಂದೇ ಆಗಿರಬಹುದು.

8. ಇದರ ಅರ್ಥ ಪಿಶಾಚಿಯು ನನ್ನನ್ನು ರೋಗಕ್ಕೀಡು ಮಾಡಿದೆ ಮತ್ತು ನನ್ನ ಮೇಲೆ ಸಂಕಷ್ಟವನ್ನು ಇಳಿಸಿದೆ ಎಂದಲ್ಲ. ಇದರ ನಿಜವಾದ ಅರ್ಥವೇನೆಂದರೆ ರೋಗದ ತೀವ್ರತೆ, ಸಂಪತ್ತಿನ ನಷ್ಟ ಮತ್ತು ಬಂಧುಬಳಗದವರ ಅಗಲಿಕೆಗಳೆಲ್ಲದಕ್ಕಿಂತಲೂ ಮಿಗಿಲಾಗಿ ಪಿಶಾಚಿಯ ಪ್ರಲೋಭನೆಗಳು ನನ್ನನ್ನು ದಂಗುಪಡಿಸಿದೆ, ಇಂತಹ ಪರಿಸ್ಥಿತಿಯಲ್ಲಿ ಅದು ನನ್ನನ್ನು ಪ್ರಭುವಿನ ಬಗ್ಗೆ ನಿರಾಶೆ ತಾಳುವಂತೆ ಮಾಡಲು ಪ್ರಯತ್ನಿಸುತ್ತಿದೆ, ನನ್ನನ್ನು ಪ್ರಭುವಿನ ಬಗ್ಗೆ ಕೃತಘ್ನತೆ ತೋರುವವನಾಗಿ ಮಾಡಬಯಸುತ್ತಿದೆ, ನಾನು ತಾಳ್ಮೆಯನ್ನು ಕೈಬಿಡಬೇಕೆಂದು ಅದು ಹೊಂಚುಹಾಕುತ್ತಿದೆ.

42. "ನಿಮ್ಮ ಕಾಲನ್ನು ನೆಲಕ್ಕೆ ಬಡಿಯಿರಿ" (ಎಂದು ನಾವು ಆಜ್ಞಾಪಿಸಿದೆವು). ಇದೋ ತಣ್ಣೀರು, ಸ್ನಾನಕ್ಕಾಗಿ ಮತ್ತು ಕುಡಿಯಲಿಕ್ಕಾಗಿ.

ارْكُضْ بِرِجْلِكَ ۖ هَٰذَا مُغْتَسَلٌ بَارِدٌ وَشَرَابٌ ﴿٤٢﴾

43. ನಾವು ಅವರಿಗೆ ಅವರ ಮನೆಯವರನ್ನು ಮರಳಿ ಕೊಟ್ಟೆವು ಮತ್ತು ಅದರೊಂದಿಗೆ ಪುನಃ ಅಷ್ಟನ್ನೇ ಕೊಟ್ಟೆವು. ಇದು ನಮ್ಮ ವತಿಯಿಂದ ಕರುಣೆಯ ರೂಪದಲ್ಲಿ ಮತ್ತು ಬುದ್ಧಿಜೀವಿಗಳಿಗೆ ಪಾಠವಾಗಿ ನೀಡಿದುದಾಗಿತ್ತು.

وَوَهَبْنَا لَهُ أَهْلَهُ وَمِثْلَهُمْ مَعَهُمْ رَحْمَةً مِنَّا وَذِكْرَىٰ لِأُولِي الْأَلْبَابِ ﴿٤٣﴾

44. (ನಾವು ಅವರೊಡನೆ ಹೀಗೆ ಹೇಳಿದೆವು) "ಹುಲ್ಲುಕಡ್ಡಿಗಳ ಒಂದು ಸೂಡಿಯನ್ನು ತೆಗೆದುಕೊಳ್ಳಿರಿ, ಅದರಿಂದ ಹೊಡೆಯಿರಿ ಮತ್ತು ನಿಮ್ಮ ಶಪಥವನ್ನು ಮುರಿಯಬೇಡಿರಿ."[9] ನಾವು ಅವರನ್ನು ಸಹನೆಯುಳ್ಳವರಾಗಿ ಕಂಡೆವು. (ಅವರು) ಅತ್ಯುತ್ತಮ ದಾಸರು. ತಮ್ಮ ಪ್ರಭುವಿನ ಕಡೆಗೆ ಬಹಳಷ್ಟು ಮರಳುವವರು.

وَخُذْ بِيَدِكَ ضِغْثًا فَاضْرِبْ بِهِ وَلَا تَحْنَثْ ۗ إِنَّا وَجَدْنَاهُ صَابِرًا ۚ نِعْمَ الْعَبْدُ ۖ إِنَّهُ أَوَّابٌ ﴿٤٤﴾

45. ನಮ್ಮ ದಾಸರಾದ ಇಬ್‌ರಾಹೀಮ್, ಇಸ್‌ಹಾಕ್ ಮತ್ತು ಯಅ್‌ಕೂಬರನ್ನು ಸ್ಮರಿಸಿರಿ. ಅವರು ಮಹಾ ಕರ್ಮಸಾಮರ್ಥ್ಯವಿರುವವರೂ ದೂರದೃಷ್ಟಿಯುಳ್ಳವರೂ ಆಗಿದ್ದರು.

وَاذْكُرْ عِبَادَنَا إِبْرَاهِيمَ وَإِسْحَاقَ وَيَعْقُوبَ أُولِي الْأَيْدِي وَالْأَبْصَارِ ﴿٤٥﴾

46. ನಾವು ಅವರನ್ನು ಒಂದು ವಿಶಿಷ್ಟ ಗುಣದಿಂದಾಗಿ ಪುನೀತರಾಗಿ ಮಾಡಿದೆವು. ಅದು ಪರಲೋಕ ಗೃಹದ ಸ್ಮರಣೆಯಾಗಿತ್ತು.

إِنَّا أَخْلَصْنَاهُمْ بِخَالِصَةٍ ذِكْرَى الدَّارِ ﴿٤٦﴾

47. ನಿಶ್ಚಯವಾಗಿಯೂ ಅವರು ನಮ್ಮ ಬಳಿ ಆಯ್ದ ಸಜ್ಜನರಲ್ಲಿ ಗಣಿಸಲ್ಪಡುತ್ತಾರೆ.

وَإِنَّهُمْ عِنْدَنَا لَمِنَ الْمُصْطَفَيْنَ الْأَخْيَارِ ﴿٤٧﴾

48. ಮತ್ತು ಇಸ್ಮಾಈಲ್‌ರನ್ನೂ ಅಲ್‌ಯಸಅರನ್ನೂ ದುಲ್‌ಕಿಫ್ಲರನ್ನೂ ಸ್ಮರಿಸಿರಿ. ಇವರೆಲ್ಲರೂ ಸಜ್ಜನರಲ್ಲಾಗಿದ್ದರು.

وَاذْكُرْ إِسْمَاعِيلَ وَالْيَسَعَ وَذَا الْكِفْلِ ۖ وَكُلٌّ مِنَ الْأَخْيَارِ ﴿٤٨﴾

9. ಹ. ಅಯ್ಯೂಬ್(ಅ) ರೋಗದ ಅವಸ್ಥೆಯಲ್ಲಿ ಅಸಮಾಧಾನದಿಂದ ಯಾರಿಗೋ ಹೊಡೆಯುವ ಶಪಥ ಮಾಡಿದ್ದರೆಂದು ಈ ಪದಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. (ಅವರು ಪತ್ನಿಯನ್ನು ಹೊಡೆಯುವ ಶಪಥ ಹೂಡಿದ್ದರೆಂದು ವರದಿಗಳಲ್ಲಿದೆ) 'ನಿನಗೆ ಇಂತಿಷ್ಟು ಕೊರಡೆಯೇಟುಗಳನ್ನು ಬಾರಿಸುತ್ತೇನೆ' ಎಂದು ಅವರು ಶಪಥ ಹೂಡಿದ್ದರು. ಅಲ್ಲಾಹನು ಅವರಿಗೆ ಪೂರ್ಣ ಆರೋಗ್ಯವನ್ನು ದಯಪಾಲಿಸಿ, ರೋಗಾವಸ್ಥೆಯ ಸಿಟ್ಟು ದೂರವಾದಾಗ ಅವರು ಉಭಯ ಸಂಕಟಕ್ಕೆ ಸಿಲುಕಿದರು. ಶಪಥವನ್ನು ಈಡೇರಿಸಿದರೆ ಅನ್ಯಾಯವಾಗಿ ನಿರ್ದೋಷಿಯೊಬ್ಬರಿಗೆ ಥಳಿಸ ಬೇಕಾಗುತ್ತದೆ. ಶಪಥವನ್ನು ಮುರಿದರೆ ಒಂದು ಪಾಪವನ್ನೆಸಗಿದಂತಾಗುತ್ತದೆ. ಈ ಉಭಯ ಸಂಕಟದಿಂದ ಅವರನ್ನು ಪಾರು ಮಾಡಲಿಕ್ಕಾಗಿ ಅಲ್ಲಾಹನು ಹೀಗೆ ಆಜ್ಞಾಪಿಸಿದನು, "ಒಂದು ಹಿಡಿಸೂಡಿಯನ್ನು ತೆಗೆದುಕೊಳ್ಳಿರಿ. ಅದರಲ್ಲಿ ನೀವು ಎಷ್ಟು ಕೊರಡೆಯೇಟುಗಳನ್ನು ಬಾರಿಸ ಬೇಕೆಂದಿದ್ದಿರೋ ಅಷ್ಟೇ ಕಡ್ಡಿಗಳಿರಲಿ. ಅದರ ಮೂಲಕ ನೀವು ಹೊಡೆಯಬಯಸಿರುವ ವ್ಯಕ್ತಿಗೆ ಒಂದು ಏಟು ಕೊಡಿರಿ. ಈ ರೀತಿ ನಿಮ್ಮ ಶಪಥವೂ ಈಡೇರುತ್ತದೆ ಮತ್ತು ಅವನು ಅನ್ಯಾಯವಾಗಿ ಕಷ್ಟಕ್ಕೀಡಾಗುವುದೂ ತಪ್ಪುತ್ತದೆ."

49. ಇದೊಂದು ಬೋಧನೆಯಾಗಿತ್ತು. (ಇನ್ನು ಕೇಳಿರಿ) ಧರ್ಮನಿಷ್ಠರಿಗಾಗಿ ನಿಶ್ಚಯವಾಗಿಯೂ ಅತ್ಯುತ್ತಮ ನಿವಾಸವಿದೆ.

هَٰذَا ذِكْرٌ ۚ وَإِنَّ لِلْمُتَّقِينَ لَحُسْنَ مَآبٍ ﴿٤٩﴾

50. ಶಾಶ್ವತವಾದ ಸ್ವರ್ಗೋದ್ಯಾನಗಳಿದ್ದು ಅವುಗಳ ಕದಗಳು ಅವರ ಪಾಲಿಗೆ ತೆರೆದಿರುವುವು.

جَنَّاتِ عَدْنٍ مُّفَتَّحَةً لَّهُمُ الْأَبْوَابُ ﴿٥٠﴾

51. ಅವರು ಅವುಗಳಲ್ಲಿ ದಿಂಬುಗಳಿಗೆ ಒರಗಿ ಕುಳಿತಿರುವರು. ಹೇರಳ ಫಲಗಳನ್ನೂ ಪಾನೀಯಗಳನ್ನೂ ತರಿಸುತ್ತಿರುವರು-

مُتَّكِئِينَ فِيهَا يَدْعُونَ فِيهَا بِفَاكِهَةٍ كَثِيرَةٍ وَشَرَابٍ ﴿٥١﴾

52. ಮತ್ತು ಅವರ ಬಳಿ ಲಜ್ಜಾಶೀಲೆಯರಾದ ಸಮವಯಸ್ಕ ಸ್ತ್ರೀಯರಿರುವರು.

وَعِندَهُمْ قَاصِرَاتُ الطَّرْفِ أَتْرَابٌ ﴿٥٢﴾

53. ಇವೆಲ್ಲ, ವಿಚಾರಣೆಯ ದಿನ ನಿಮಗೆ ನೀಡಲಾಗುವುದೆಂದು ವಾಗ್ದಾನ ಮಾಡಲಾಗುತ್ತಿರುವ ವಸ್ತುಗಳು.

هَٰذَا مَا تُوعَدُونَ لِيَوْمِ الْحِسَابِ ﴿٥٣﴾

54. ಇದು ನಮ್ಮ ಕೊಡುಗೆಯಾಗಿದ್ದು, ಇದಕ್ಕೆ ಎಂದೂ ಅಳಿವಿಲ್ಲ.

إِنَّ هَٰذَا لَرِزْقُنَا مَا لَهُ مِن نَّفَادٍ ﴿٥٤﴾

55. ಇದಂತು ಧರ್ಮನಿಷ್ಠರ ಅಂತಿಮ ಪರಿಣಾಮವಾಯಿತು. (ಅತ್ತ) ವಿದ್ರೋಹಿಗಳಿಗೆ ಅತ್ಯಂತ ನಿಕೃಷ್ಟ ನಿವಾಸವಿದೆ.

هَٰذَا ۚ وَإِنَّ لِلطَّاغِينَ لَشَرَّ مَآبٍ ﴿٥٥﴾

56. ನರಕ, ಅದರಲ್ಲಿ ಅವರು ಸುಟ್ಟು ಹೋಗುವರು. ಅತ್ಯಂತ ಕೆಟ್ಟ ನಿವಾಸ.

جَهَنَّمَ يَصْلَوْنَهَا فَبِئْسَ الْمِهَادُ ﴿٥٦﴾

57. ಇದು ಅವರಿಗಾಗಿದೆ. ಆದುದರಿಂದ ಅವರು ಕುದಿಯುತ್ತಿರುವ ನೀರು, ಕೀವು, ರಕ್ತ ಮತ್ತು ಇಂತಹದೇ-

هَٰذَا فَلْيَذُوقُوهُ حَمِيمٌ وَغَسَّاقٌ ﴿٥٧﴾

58. ಇತರ ಕಹಿಗಳ ರುಚಿಯನ್ನು ಸವಿಯಲಿ.

وَآخَرُ مِن شَكْلِهِ أَزْوَاجٌ ﴿٥٨﴾

59. (ತಮ್ಮ ಅನುಯಾಯಿಗಳು ನರಕದ ಕಡೆಗೆ ಬರುತ್ತಿರುವುದನ್ನು ಕಂಡು ಅವರು ಪರಸ್ಪರ ಹೀಗೆ ಹೇಳುವರು;) "ಇದೊಂದು ಸೈನ್ಯವು ನಿಮ್ಮ ಬಳಿಗೆ ನುಗ್ಗಿ ಬರುತ್ತಿದೆ. ಇವರಿಗಾಗಿ ಯಾವ ಸ್ವಾಗತವೂ ಇಲ್ಲ. ಇವರು ಅಗ್ನಿಯಲ್ಲಿ ಸುಡಲ್ಪಡುವವರಾಗಿದ್ದಾರೆ."

هَٰذَا فَوْجٌ مُّقْتَحِمٌ مَّعَكُمْ ۖ لَا مَرْحَبًا بِهِمْ ۚ إِنَّهُمْ صَالُو النَّارِ ﴿٥٩﴾

60. ಆಗ ಅವರು ಇವರಿಗೆ (ಹೀಗೆ) ಉತ್ತರ ಕೊಡುವರು; "ಅಲ್ಲ, ವಾಸ್ತವದಲ್ಲಿ ನೀವೇ ಸುಟ್ಟು ಹೋಗುತ್ತಿರುವಿರಿ. ಯಾವ ಸ್ವಾಗತವೂ ನಿಮಗಾಗಿ ಇಲ್ಲ. ನಮ್ಮ ಮುಂದೆ ಈ ದುರ್ಗತಿಯನ್ನು ತಂದವರು ನೀವೇ ತಾನೇ? ಈ ನಿವಾಸವು ಎಷ್ಟೊಂದು ನಿಕೃಷ್ಟವಾಗಿದೆ!"

قَالُوا بَلْ أَنتُمْ لَا مَرْحَبًا بِكُمْ ۖ أَنتُمْ قَدَّمْتُمُوهُ لَنَا ۖ فَبِئْسَ الْقَرَارُ ﴿٦٠﴾

61. ತರುವಾಯ ಅವರು, "ನಮ್ಮ ಪ್ರಭೂ, ಯಾರು ನಮಗೆ ಈ ದುರ್ಗತಿಯನ್ನೊದಗಿಸುವ ವ್ಯವಸ್ಥೆ ಮಾಡಿದನೋ ಅವನಿಗೆ ನರಕದ ಇಮ್ಮಡಿ ಯಾತನೆ ಕೊಡು" ಎಂದು ಹೇಳುವರು.

قَالُوا رَبَّنَا مَنْ قَدَّمَ لَنَا هٰذَا فَزِدْهُ عَذَابًا ضِعْفًا فِي النَّارِ ﴿٦١﴾

62. ಮತ್ತು ಅವರು ಪರಸ್ಪರ ಹೀಗೆ ಹೇಳುವರು- "ನಾವು ಭೂಲೋಕದಲ್ಲಿ ಕೆಟ್ಟವರೆಂದು ಭಾವಿಸುತ್ತಿದ್ದವರು ಇಲ್ಲೆಲ್ಲೂ ನಮಗೆ ತೋರದಿರಲು ಕಾರಣವೇನು?

وَقَالُوا مَا لَنَا لَا نَرٰى رِجَالًا كُنَّا نَعُدُّهُمْ مِّنَ الْأَشْرَارِ ﴿٦٢﴾

63. ನಾವು ಅವರನ್ನು ವೃಥಾ ಅಪಹಾಸ್ಯ ಮಾಡುತ್ತಿದ್ದೆವೋ ಅಥವಾ ಅವರು ಎಲ್ಲಿಯಾದರೂ ಕಣ್ಮರೆಯಾಗಿರುವರೋ?"

أَتَّخَذْنٰهُمْ سِخْرِيًّا أَمْ زَاغَتْ عَنْهُمُ الْأَبْصَارُ ﴿٦٣﴾

64. ನಿಶ್ಚಯವಾಗಿಯೂ ಇದು ಸತ್ಯ. ನರಕವಾಸಿಗಳಲ್ಲಿ ಇದೇ ತರದ ಕಲಹಗಳಾಗಲಿಕ್ಕಿವೆ.

إِنَّ ذٰلِكَ لَحَقٌّ تَخَاصُمُ أَهْلِ النَّارِ ﴿٦٤﴾

65. (ಪೈಗಂಬರರೇ) ಇವರೊಡನೆ ಹೇಳಿರಿ, ನಾನು ಕೇವಲ ಎಚ್ಚರಿಕೆ ಕೊಡುವವನು. ಏಕಮಾತ್ರನೂ ಅಜೇಯನೂ ಆಗಿರುವ ಅಲ್ಲಾಹನ ಹೊರತು ಇತರ ಯಥಾರ್ಥ ಆರಾಧ್ಯರಿಲ್ಲ.

قُلْ إِنَّمَا أَنَا مُنْذِرٌ ۖ وَمَا مِنْ إِلٰهٍ إِلَّا اللّٰهُ الْوَاحِدُ الْقَهَّارُ ﴿٦٥﴾

66. ಅವನು ಭೂಮಿ- ಆಕಾಶಗಳ ಹಾಗೂ ಅವುಗಳ ನಡುವೆ ಇರುವ ಸಕಲ ವಸ್ತುಗಳ ಒಡೆಯನೂ ಪ್ರಬಲನೂ ಅತ್ಯಂತ ಕ್ಷಮಾ ಶೀಲನೂ ಆಗಿರುತ್ತಾನೆ.

رَبُّ السَّمٰوٰتِ وَالْأَرْضِ وَمَا بَيْنَهُمَا الْعَزِيزُ الْغَفَّارُ ﴿٦٦﴾

67. ಇವರೊಡನೆ ಹೇಳಿರಿ- ಇದೊಂದು ದೊಡ್ಡ ಸುದ್ದಿ-

قُلْ هُوَ نَبَؤٌا عَظِيمٌ ﴿٦٧﴾

68. ಇದನ್ನು ಕೇಳಿ ನೀವು ವಿಮುಖರಾಗುತ್ತೀರಿ.

أَنْتُمْ عَنْهُ مُعْرِضُونَ ﴿٦٨﴾

69. 'ಮಲಇಲ್ ಅಅ್‌ಲಾ'(ಸರ್ವೋನ್ನತ ದರಬಾರ)ದಲ್ಲಿ ವಾದ ವಿವಾದ ಗಳಾಗುತ್ತಿರುವಾಗಿನ ಸುದ್ದಿ ನನಗೆ ತಿಳಿದಿರಲೇ ಇಲ್ಲ.

مَا كَانَ لِيَ مِنْ عِلْمٍ بِالْمَلَإِ الْأَعْلٰى إِذْ يَخْتَصِمُونَ ﴿٦٩﴾

70. ನಾನು ಸುಸ್ಪಷ್ಟ ಎಚ್ಚರಿಕೆ ಕೊಡುವವನಾಗಿರುವುದರಿಂದ ಮಾತ್ರ ನನಗೆ 'ದಿವ್ಯವಾಣಿ' ಮೂಲಕ ಈ ವಿಷಯಗಳನ್ನು ತಿಳಿಸ ಲಾಗುತ್ತದೆ."

إِنْ يُوحٰى إِلَيَّ إِلَّا أَنَّمَا أَنَا نَذِيرٌ مُّبِينٌ ﴿٧٠﴾

71. ನಿಮ್ಮ ಪ್ರಭು ದೇವಚರರೊಡನೆ ಹೇಳಿದ ಸಂದರ್ಭವನ್ನು ಸ್ಮರಿಸಿರಿ; "ನಾನು ಮಣ್ಣಿನಿಂದ ಒಬ್ಬ ಮಾನವನನ್ನು ಸೃಷ್ಟಿಸುವವನಿದ್ದೇನೆ.

إِذْ قَالَ رَبُّكَ لِلْمَلَٰٓئِكَةِ إِنِّى خَٰلِقٌۢ بَشَرًا مِّن طِينٍ ﴿٧١﴾

72. ತರುವಾಯ ನಾನು ಅವನನ್ನು ಪೂರ್ಣವಾಗಿ ನಿರ್ಮಿಸಿದಾಗ ಮತ್ತು ಅವನೊಳಗೆ ನನ್ನ ಆತ್ಮವನ್ನು ಊದಿದಾಗ, ನೀವು ಅವನ ಮುಂದೆ ಸಾಷ್ಟಾಂಗವೆರಗಿ ಬಿಡಿರಿ."

فَإِذَا سَوَّيْتُهُۥ وَنَفَخْتُ فِيهِ مِن رُّوحِى فَقَعُوا۟ لَهُۥ سَٰجِدِينَ ﴿٧٢﴾

73. ಈ ಆಜ್ಞೆಯ ಪ್ರಕಾರ ದೇವಚರರೆಲ್ಲರೂ ಸಾಷ್ಟಾಂಗವೆರಗಿದರು-

فَسَجَدَ ٱلْمَلَٰٓئِكَةُ كُلُّهُمْ أَجْمَعُونَ ﴿٧٣﴾

74. ಆದರೆ ಇಬ್‌ಲೀಸನು ತನ್ನ ದೊಡ್ಡಸ್ತಿಕೆಯ ಅಹಂಭಾವ ಪ್ರಕಟಿಸಿದನು ಮತ್ತು ಅವನು ಸತ್ಯನಿಷೇಧಿಗಳಲ್ಲಾಗಿ ಬಿಟ್ಟನು.

إِلَّآ إِبْلِيسَ ٱسْتَكْبَرَ وَكَانَ مِنَ ٱلْكَٰفِرِينَ ﴿٧٤﴾

75. ಆಗ ಅಲ್ಲಾಹನು, "ಇಬ್‌ಲೀಸ್! ನಾನು ನನ್ನೆರಡೂ ಕೈಗಳಿಂದ ನಿರ್ಮಿಸಿದಂತಹವನ ಮುಂದೆ ಸಾಷ್ಟಾಂಗವೆರಗುವುದರಿಂದ ಯಾವ ವಸ್ತು ನಿನ್ನನ್ನು ತಡೆಯಿತು? ನೀನು ಅಹಂಭಾವ ತೋರಿಸುವೆಯಾ? ಅಥವಾ ನೀನೇ ಉನ್ನತ ಮಟ್ಟದವರಲ್ಲಾಗಿರುವೆಯಾ?" ಎಂದು ಕೇಳಿದನು.

قَالَ يَٰٓإِبْلِيسُ مَا مَنَعَكَ أَن تَسْجُدَ لِمَا خَلَقْتُ بِيَدَىَّ ۖ أَسْتَكْبَرْتَ أَمْ كُنتَ مِنَ ٱلْعَالِينَ ﴿٧٥﴾

76. ಅವನು ಹೀಗೆ ಉತ್ತರ ಕೊಟ್ಟನು; "ನಾನು ಇವನಿಗಿಂತ ಶ್ರೇಷ್ಠನು, ನೀನು ನನ್ನನ್ನು ಅಗ್ನಿಯಿಂದ ಮತ್ತು ಇವನನ್ನು ಮಣ್ಣಿನಿಂದ ಸೃಷ್ಟಿಸಿರುವೆ."

قَالَ أَنَا۠ خَيْرٌ مِّنْهُ ۖ خَلَقْتَنِى مِن نَّارٍ وَخَلَقْتَهُۥ مِن طِينٍ ﴿٧٦﴾

77. ಆಗ (ಅಲ್ಲಾಹನು) ಹೇಳಿದನು, "ಸರಿ, ಹಾಗಾದರೆ ಇಲ್ಲಿಂದ ತೊಲಗು. ನೀನು ಧಿಕ್ಕರಿಸಲ್ಪಟ್ಟವನು.

قَالَ فَٱخْرُجْ مِنْهَا فَإِنَّكَ رَجِيمٌ ﴿٧٧﴾

78. ನಿರ್ಣಾಯಕ ದಿನದ ವರೆಗೂ ನಿನ್ನ ಮೇಲೆ ನನ್ನ ಅಭಿಶಾಪವಿದೆ."

وَإِنَّ عَلَيْكَ لَعْنَتِىٓ إِلَىٰ يَوْمِ ٱلدِّينِ ﴿٧٨﴾

79. ಆಗ ಅವನು, "ಪ್ರಭೂ, ಹಾಗಿದ್ದರೆ ಈ ಜನರು ಪುನಃ ಎಬ್ಬಿಸಲ್ಪಡುವ ವರೆಗೆ ನನಗೆ ಕಾಲಾವಕಾಶ ಕೊಟ್ಟು ಬಿಡು" ಎಂದನು.

قَالَ رَبِّ فَأَنظِرْنِىٓ إِلَىٰ يَوْمِ يُبْعَثُونَ ﴿٧٩﴾

80. ಆಗ ಅಲ್ಲಾಹನು ಹೇಳಿದನು, "ಸರಿ, ನಿನಗೆ ಸಮಯಾವಕಾಶವಿದೆ-

قَالَ فَإِنَّكَ مِنَ ٱلْمُنظَرِينَ ﴿٨٠﴾

81. ನನಗೆ ತಿಳಿದಿರುವಂತಹ ಆ ದಿನದ ವರೆಗೆ."

إِلَىٰ يَوْمِ ٱلْوَقْتِ ٱلْمَعْلُومِ ﴿٨١﴾

82. ಆಗ ಅವನು ಹೇಳಿದನು, "ನಿನ್ನ ಪ್ರತಿಷ್ಠೆಯಾಣೆ! ಅವರೆಲ್ಲರನ್ನು ನಾನು ಖಂಡಿತವಾಗಿಯೂ ದಾರಿಗೆಡಿಸಿ ಬಿಡುವೆನು-

قَالَ فَبِعِزَّتِكَ لَأُغْوِيَنَّهُمْ أَجْمَعِينَ ﴿٨٢﴾

83. ನೀನು ಆರಿಸಿಕೊಂಡಿರುವ ನಿನ್ನ ದಾಸರ ಹೊರತು".

إِلَّا عِبَادَكَ مِنْهُمُ الْمُخْلَصِينَ ﴿٨٣﴾

84. "ಇದು ಸತ್ಯವಾಗಿದೆ ಮತ್ತು ನಾನು ಸತ್ಯವನ್ನೇ ಹೇಳುತ್ತೇನೆ" ಎಂದನು.

قَالَ فَالْحَقُّ وَالْحَقَّ أَقُولُ ﴿٨٤﴾

85. ಆಗ ಅಲ್ಲಾಹನು ಹೇಳಿದನು, "ನಾನು ನರಕವನ್ನು ನಿನ್ನಿಂದಲೂ ನಿನ್ನನ್ನು ಅನುಸರಿಸುವ ಸಕಲ ಮಾನವರಿಂದಲೂ ತುಂಬಿಸಿ ಬಿಡುವೆನು."

لَأَمْلَأَنَّ جَهَنَّمَ مِنْكَ وَمِمَّنْ تَبِعَكَ مِنْهُمْ أَجْمَعِينَ ﴿٨٥﴾

86. (ಸಂದೇಶವಾಹಕರೇ) ಇವರೊಡನೆ ಹೇಳಿರಿ; "ನಾನು ಈ ಸತ್ಯ ಪ್ರಚಾರಕ್ಕಾಗಿ ನಿಮ್ಮಿಂದ ಯಾವ ಪ್ರತಿಫಲವನ್ನೂ ಕೇಳುವುದಿಲ್ಲ. ನಾನು ಡಂಬಾಚಾರಿಗಳ ಪಾಲಿಗೆ ಸೇರಿದವನೂ ಅಲ್ಲ.

قُلْ مَا أَسْأَلُكُمْ عَلَيْهِ مِنْ أَجْرٍ وَمَا أَنَا مِنَ الْمُتَكَلِّفِينَ ﴿٨٦﴾

87. ಇದು ಸಕಲ ಲೋಕದವರಿಗಾಗಿ ಒಂದು ಉಪದೇಶವಾಗಿರುತ್ತದೆ.

إِنْ هُوَ إِلَّا ذِكْرٌ لِلْعَالَمِينَ ﴿٨٧﴾

88. ಮತ್ತು ಸ್ವಲ್ಪವೇ ಕಾಲ ಕಳೆದಾಗ ನಿಮಗೆ ಇದರ ವಾಸ್ತವಿಕತೆಯು ತಾನಾಗಿಯೇ ತಿಳಿಯುವುದು."

وَلَتَعْلَمُنَّ نَبَأَهُ بَعْدَ حِينٍ ﴿٨٨﴾







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಈ ಗ್ರಂಥದ ಅವತೀರ್ಣವು ಪ್ರಬಲನೂ ಯುಕ್ತಿಪೂರ್ಣನೂ ಆದ ಅಲ್ಲಾಹನ ಕಡೆಯಿಂದಾಗಿರುತ್ತದೆ.

تَنْزِيْلُ الْكِتٰبِ مِنَ اللّٰهِ الْعَزِيْزِ الْحَكِيْمِ ①

2. (ಸಂದೇಶವಾಹಕರೇ) ಈ ಗ್ರಂಥವನ್ನು ನಾವು ನಿಮ್ಮ ಕಡೆಗೆ ಪರಮ ಸತ್ಯವಾಗಿ ಅವತೀರ್ಣಗೊಳಿಸಿರುತ್ತೇವೆ. ಆದುದರಿಂದ ನೀವು ಧರ್ಮವನ್ನು ಅಲ್ಲಾಹನಿಗಾಗಿಯೇ ಮೀಸಲಿರಿಸುತ್ತ ಅವನ ದಾಸ್ಯವನ್ನೇ ಮಾಡಿರಿ.

اِنَّآ اَنْزَلْنَآ اِلَيْكَ الْكِتٰبَ بِالْحَقِّ فَاعْبُدِ اللّٰهَ مُخْلِصًا لَّهُ الدِّيْنَ ②

3. ಎಚ್ಚರಿಕೆ! ಧರ್ಮವು ನಿಷ್ಕಳಂಕವಾಗಿ ಕೇವಲ ಅಲ್ಲಾಹನ ಹಕ್ಕಾಗಿದೆ. ಇನ್ನು ಅವನ ಹೊರತು ಇತರರನ್ನು ರಕ್ಷಕ ಮಿತ್ರರಾಗಿ ಮಾಡಿಕೊಂಡವರ ವಿಷಯ- "ಅವರು ನಮ್ಮನ್ನು ಅಲ್ಲಾಹನಿಗೆ ನಿಕಟಗೊಳಿಸಲಿಕ್ಕಾಗಿ ಮಾತ್ರ ನಾವು ಅವರ ಆರಾಧನೆ ಮಾಡುತ್ತೇವೆ" (ಎಂದು ಅವರು ವಾದಿಸುತ್ತಾರೆ.) ಖಂಡಿತವಾಗಿಯೂ ಅಲ್ಲಾಹನು ಅವರು ಭಿನ್ನತೆ ತೋರಿದ ಎಲ್ಲ ವಿಷಯಗಳ ತೀರ್ಮಾನ ಮಾಡಿಬಿಡುವನು. ಸುಳ್ಳುಗಾರನೂ ಸತ್ಯನಿಷೇಧಿಯೂ ಆಗಿರುವಂತಹವನಿಗೆ ಅಲ್ಲಾಹನು ಸನ್ಮಾರ್ಗದರ್ಶನವೀಯುವುದಿಲ್ಲ.

اَلَا لِلّٰهِ الدِّيْنُ الْخَالِصُ ۗ وَالَّذِيْنَ اتَّخَذُوْا مِنْ دُوْنِهٖٓ اَوْلِيَآءَ ۘ مَا نَعْبُدُهُمْ اِلَّا لِيُقَرِّبُوْنَآ اِلَى اللّٰهِ زُلْفٰى ۗ اِنَّ اللّٰهَ يَحْكُمُ بَيْنَهُمْ فِيْ مَا هُمْ فِيْهِ يَخْتَلِفُوْنَ ۗ اِنَّ اللّٰهَ لَا يَهْدِيْ مَنْ هُوَ كٰذِبٌ كَفَّارٌ ③

4. ಅಲ್ಲಾಹನು ಯಾರನ್ನಾದರೂ ಪುತ್ರನಾಗಿ ಮಾಡಿಕೊಳ್ಳಲು ಇಚ್ಛಿಸುತ್ತಿದ್ದರೆ, ತನ್ನ ಸೃಷ್ಟಿಯಲ್ಲಿ ತಾನಿಚ್ಛಿಸಿದವರನ್ನು ಪುನೀತನಾಗಿ ಮಾಡಿಕೊಳ್ಳುತ್ತಿದ್ದನು. ಅವನು(ಪುತ್ರನನ್ನಿರಿಸಿಕೊಳ್ಳುವುದರಿಂದ) ಪರಿಶುದ್ಧನಾಗಿರುತ್ತಾನೆ. ಅವನು ಅಲ್ಲಾಹನು, ಏಕೈಕನು ಮತ್ತು ಎಲ್ಲರ ಮೇಲೆ ಪ್ರಾಬಲ್ಯವುಳ್ಳವನು.

لَوْ اَرَادَ اللّٰهُ اَنْ يَّتَّخِذَ وَلَدًا لَّاصْطَفٰى مِمَّا يَخْلُقُ مَا يَشَآءُ ۙ سُبْحٰنَهٗ ۗ هُوَ اللّٰهُ الْوَاحِدُ الْقَهَّارُ ④

5. ಅವನು ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿರುವನು.

خَلَقَ السَّمٰوٰتِ وَالْاَرْضَ بِالْحَقِّ ۚ

ಅವನೇ ಹಗಲಿನ ಮೇಲೆ ಇರುಳನ್ನೂ ಇರುಳಿನ ಮೇಲೆ ಹಗಲನ್ನೂ ಸುತ್ತುತ್ತಾನೆ. ಅವನೇ ಸೂರ್ಯ ಮತ್ತು ಚಂದ್ರನನ್ನು ನಿಯಂತ್ರಿಸಿರುತ್ತಾನೆ. ಅವುಗಳಲ್ಲಿ ಪ್ರತಿಯೊಂದೂ ಒಂದು ನಿರ್ದಿಷ್ಟ ಕಾಲದ ವರೆಗೆ ಚಲಿಸುತ್ತಿರುವುದು. ಅವನು ಪ್ರಬಲನೂ ಮಹಾ ಕ್ಷಮಾಶೀಲನೂ ಆಗಿರುತ್ತಾನೆಂಬುದನ್ನು ತಿಳಿದುಕೊಳ್ಳಿರಿ.

يُكَوِّرُ الَّيْلَ عَلَى النَّهَارِ وَيُكَوِّرُ النَّهَارَ عَلَى الَّيْلِ وَسَخَّرَ الشَّمْسَ وَالْقَمَرَ ۖ كُلٌّ يَّجْرِيْ لِاَجَلٍ مُّسَمًّى ۗ اَلَا هُوَ الْعَزِيْزُ الْغَفَّارُ ٥

6. ಅವನೇ ನಿಮ್ಮನ್ನು ಒಂದೇ ಜೀವದಿಂದ ಸೃಷ್ಟಿಸಿದನು. ತರುವಾಯ ಆ ಜೀವದಿಂದ ಅದರ ಜೊತೆಯನ್ನು ಸೃಷ್ಟಿಸಿದವನೂ ಅವನೇ ಮತ್ತು ನಿಮ್ಮ ಜಾನುವಾರುಗಳಿಂದ ನಿಮಗಾಗಿ ಎಂಟು ಗಂಡು-ಹೆಣ್ಣುಗಳನ್ನು ಒದಗಿಸಿದವನೂ ಅವನೇ.[1] ಅವನು ನಿಮ್ಮ ಮಾತೆಯರ ಉದರಗಳೊಳಗೆ, ಮೂರು ಕತ್ತಲು ಪರದೆಗಳೊಳಗೆ (ನಿಮಗೆ) ಒಂದರ ನಂತರ ಒಂದು ರೂಪ ಕೊಡುತ್ತಾ ಸಾಗುತ್ತಾನೆ.[2] (ಇವೆಲ್ಲ ಕಾರ್ಯಗಳನ್ನು ಮಾಡುತ್ತಿರುವ) ಈ ಅಲ್ಲಾಹನೇ ನಿಮ್ಮ ಪಾಲಕ ಪ್ರಭು. ಪ್ರಭುತ್ವವು ಅವನಿಗೇ ಸೇರಿದೆ. ಅವನ ಹೊರತು ಯಾವ ಆರಾಧ್ಯನೂ ಇಲ್ಲ. ಹೀಗಿರುತ್ತ ನೀವು ಅದೆಲ್ಲಿಂದ ದಾರಿಗೆಡಿಸಲ್ಪಡುತ್ತಿರುವಿರಿ?

خَلَقَكُمْ مِّنْ نَّفْسٍ وَّاحِدَةٍ ثُمَّ جَعَلَ مِنْهَا زَوْجَهَا وَاَنْزَلَ لَكُمْ مِّنَ الْاَنْعَامِ ثَمٰنِيَةَ اَزْوَاجٍ ۗ يَخْلُقُكُمْ فِيْ بُطُوْنِ اُمَّهٰتِكُمْ خَلْقًا مِّنْۢ بَعْدِ خَلْقٍ فِيْ ظُلُمٰتٍ ثَلٰثٍ ۗ ذٰلِكُمُ اللّٰهُ رَبُّكُمْ لَهُ الْمُلْكُ ۗ لَآ اِلٰهَ اِلَّا هُوَ ۚ فَاَنّٰى تُصْرَفُوْنَ ٦

7. ನೀವು ಸತ್ಯವನ್ನು ನಿಷೇಧಿಸಿದರೆ, ಅಲ್ಲಾಹನು ನಿಮ್ಮಿಂದ ನಿರಪೇಕ್ಷ ನಾಗಿದ್ದಾನೆ. ಆದರೆ ಅವನು ತನ್ನ ದಾಸರ ಪಾಲಿಗೆ ಸತ್ಯನಿಷೇಧವನ್ನು ಮೆಚ್ಚುವುದಿಲ್ಲ ಮತ್ತು ನೀವು ಕೃತಜ್ಞರಾದರೆ ಅದನ್ನು ಅವನು ನಿಮ್ಮ ಪಾಲಿಗೆ ಮೆಚ್ಚುತ್ತಾನೆ. ಹೊರೆ ಹೊರುವವನಾರೂ ಇನ್ನೊಬ್ಬನ ಹೊರೆಯನ್ನು ಹೊರಲಾರನು. ಕೊನೆಗೆ ನಿಮಗೆಲ್ಲರಿಗೂ ನಿಮ್ಮ ಪ್ರಭುವಿನ ಕಡೆಗೇ ಮರಳಲಿಕ್ಕಿದೆ. ನೀವು ಏನು ಮಾಡುತ್ತಿದ್ದಿರೆಂದು ಆಗ ಅವನು ನಿಮಗೆ ತೋರಿಸಿ ಬಿಡುವನು. ಅವನಂತು ಮನದೊಳಗಿನ ಸಂಗತಿಯನ್ನೂ ಬಲ್ಲವನಾಗಿರುತ್ತಾನೆ.

اِنْ تَكْفُرُوْا فَاِنَّ اللّٰهَ غَنِيٌّ عَنْكُمْ ۗ وَلَا يَرْضٰى لِعِبَادِهِ الْكُفْرَ ۚ وَاِنْ تَشْكُرُوْا يَرْضَهُ لَكُمْ ۗ وَلَا تَزِرُ وَازِرَةٌ وِّزْرَ اُخْرٰى ۗ ثُمَّ اِلٰى رَبِّكُمْ مَّرْجِعُكُمْ فَيُنَبِّئُكُمْ بِمَا كُنْتُمْ تَعْمَلُوْنَ ۗ اِنَّهٗ عَلِيْمٌ ۢ بِذَاتِ الصُّدُوْرِ ٧

8. ಮನುಷ್ಯನಿಗೇನಾದರೂ ವಿಪತ್ತು ಬಂದೆರಗಿದಾಗ ಅವನು ತನ್ನ ಪ್ರಭುವಿನ ಕಡೆಗೆ ಮರಳಿ ಅವನನ್ನು ಪ್ರಾರ್ಥಿಸುತ್ತಾನೆ. ತರುವಾಯ ಅವನ ಪ್ರಭು ಅವನನ್ನು ತನ್ನ ಕೊಡುಗೆಯಿಂದ ಅನುಗ್ರಹಿಸಿದಾಗ ಅವನು, ಹಿಂದೆ ತಾನು ಯಾವ ಸಂಕಷ್ಟದ ಬಗ್ಗೆ ಪ್ರಾರ್ಥಿಸಿದ್ದನೋ ಅದನ್ನು ಮರೆತು ಬಿಡುತ್ತಾನೆ ಮತ್ತು ಅಲ್ಲಾಹನ ಮಾರ್ಗದಿಂದ ಭ್ರಷ್ಟಗೊಳಿಸಲಿಕ್ಕಾಗಿ ಇತರರನ್ನು ಅವನ ಸಮಾನರೆಂದು

وَاِذَا مَسَّ الْاِنْسَانَ ضُرٌّ دَعَا رَبَّهٗ مُنِيْبًا اِلَيْهِ ثُمَّ اِذَا خَوَّلَهٗ نِعْمَةً مِّنْهُ نَسِيَ مَا كَانَ يَدْعُوْٓا اِلَيْهِ مِنْ قَبْلُ وَجَعَلَ لِلّٰهِ اَنْدَادًا لِّيُضِلَّ عَنْ سَبِيْلِهٖ ۗ قُلْ تَمَتَّعْ بِكُفْرِكَ قَلِيْلًا ۖ اِنَّكَ مِنْ

1. ಜಾನುವಾರುಗಳೆಂದರೆ ಒಂಟೆ, ದನ, ಆಡು ಮತ್ತು ಕುರಿ. ಅದರ ನಾಲ್ಕು ಜತೆಗಳು ಸೇರಿದರೆ ಎಂಟು ಗಂಡು-ಹೆಣ್ಣುಗಳಾಗುತ್ತವೆ.
2. ಮೂರು ಪರದೆಗಳೆಂದರೆ ಹೊಟ್ಟೆ, ಗರ್ಭಕೋಶ ಮತ್ತು ಭ್ರೂಣವನ್ನು ಸುತ್ತುವರಿದಿರುವ ಪೊರೆ.

ಪರಿಗಣಿಸುತ್ತಾನೆ. (ಸಂದೇಶವಾಹಕರೇ) "ಸ್ವಲ್ಪ ಕಾಲ ನಿನ್ನ ಸತ್ಯ ನಿಷೇಧವನ್ನು ಆಸ್ವದಿಸುತ್ತಿರು, ಖಂಡಿತವಾಗಿಯೂ ನೀನು ನರಕಕ್ಕೆ ಹೋಗುವವನಾಗಿರುವೆ"- ಎಂದು ಅವನೊಡನೆ ಹೇಳಿರಿ.

أَصْحَابِ النَّارِ ﴿٨﴾

9. (ಇವನ ನಿಲುಮೆ ಸರಿಯೋ ಅಥವಾ) ಆಜ್ಞಾಪಾಲಕನಾಗಿರುವ, ರಾತ್ರಿಯ ಜಾವಗಳಲ್ಲಿ (ನಮಾಝ್‌ಗೆ) ನಿಲ್ಲುವ, ಸಾಷ್ಟಾಂಗವೆರಗುವ, ಪರಲೋಕವನ್ನು ಭಯಪಡುವ ಮತ್ತು ತನ್ನ ಪ್ರಭುವಿನ ಕೃಪೆಯನ್ನು ನಿರೀಕ್ಷಿಸುವ ವ್ಯಕ್ತಿಯ (ನಿಲುಮೆ ಸರಿಯೋ)? ಜ್ಞಾನಿಗಳು ಮತ್ತು ಅಜ್ಞಾನಿಗಳು ಇವರಿಬ್ಬರೂ ಎಂದಾದರೂ ಸರಿಸಮಾನರಾಗಬಲ್ಲರೇ? ಎಂದು ಇವರೊಡನೆ ಕೇಳಿರಿ. ಬುದ್ಧಿಜೀವಿಗಳು ಮಾತ್ರ ಉಪದೇಶ ಸ್ವೀಕರಿಸುತ್ತಾರೆ.

أَمَّنْ هُوَ قَانِتٌ آنَاءَ اللَّيْلِ سَاجِدًا وَقَائِمًا يَحْذَرُ الْآخِرَةَ وَيَرْجُو رَحْمَةَ رَبِّهِ ۗ قُلْ هَلْ يَسْتَوِي الَّذِينَ يَعْلَمُونَ وَالَّذِينَ لَا يَعْلَمُونَ ۗ إِنَّمَا يَتَذَكَّرُ أُولُو الْأَلْبَابِ ﴿٩﴾

10. (ಸಂದೇಶವಾಹಕರೇ) ಹೇಳಿರಿ- "ಸತ್ಯವಿಶ್ವಾಸಿಗಳಾದ ನನ್ನ ದಾಸರೇ! ನಿಮ್ಮ ಪ್ರಭುವನ್ನು ಭಯಪಡಿರಿ. ಈ ಲೋಕದಲ್ಲಿ ಒಳಿತಿನ ನಿಲುಮೆಯನ್ನಿರಿಸಿಕೊಂಡವರಿಗೆ ಹಿತವಿದೆ ಮತ್ತು ಅಲ್ಲಾಹನ ಭೂಮಿ ವಿಶಾಲವಾಗಿದೆ.[3] ತಾಳ್ಮೆ ವಹಿಸುವವರಿಗೆ ಅವರ ಪ್ರತಿಫಲವನ್ನು ಅಗಣಿತವಾಗಿ ಕೊಡಲಾಗುವುದು."

قُلْ يَا عِبَادِ الَّذِينَ آمَنُوا اتَّقُوا رَبَّكُمْ ۚ لِلَّذِينَ أَحْسَنُوا فِي هَٰذِهِ الدُّنْيَا حَسَنَةٌ ۗ وَأَرْضُ اللَّهِ وَاسِعَةٌ ۗ إِنَّمَا يُوَفَّى الصَّابِرُونَ أَجْرَهُمْ بِغَيْرِ حِسَابٍ ﴿١٠﴾

11. (ಸಂದೇಶವಾಹಕರೇ) ಇವರೊಡನೆ ಹೇಳಿರಿ- ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೇ ಮೀಸಲಾಗಿಟ್ಟು ಅವನ ದಾಸ್ಯ ಮಾಡಬೇಕೆಂದು ನನಗೆ ಅಪ್ಪಣೆ ಕೊಡಲಾಗಿದೆ-

قُلْ إِنِّي أُمِرْتُ أَنْ أَعْبُدَ اللَّهَ مُخْلِصًا لَهُ الدِّينَ ﴿١١﴾

12. ಮತ್ತು ಎಲ್ಲರಿಗಿಂತಲೂ ಮೊದಲು ನಾನು ಸ್ವತಃ ಮುಸ್ಲಿಮನಾಗಬೇಕೆಂದು ನನಗೆ ಆಜ್ಞಾಪಿಸಲಾಗಿದೆ.

وَأُمِرْتُ لِأَنْ أَكُونَ أَوَّلَ الْمُسْلِمِينَ ﴿١٢﴾

13. ಹೇಳಿರಿ- ನಾನು ನನ್ನ ಪ್ರಭುವಿನ ಆಜ್ಞೋಲ್ಲಂಘನೆ ಮಾಡಿದರೆ, ನನಗೆ ಒಂದು ಮಹಾದಿನದ ಯಾತನೆಯ ಭಯವಿದೆ.

قُلْ إِنِّي أَخَافُ إِنْ عَصَيْتُ رَبِّي عَذَابَ يَوْمٍ عَظِيمٍ ﴿١٣﴾

14. ಹೇಳಿರಿ- ನಾನಂತು ನನ್ನ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮೀಸಲಾಗಿಟ್ಟು ಅವನದೇ ದಾಸ್ಯ ಮಾಡುವೆನು.

قُلِ اللَّهَ أَعْبُدُ مُخْلِصًا لَهُ دِينِي ﴿١٤﴾

15. ನೀವು ಅವನ ಹೊರತು ಯಾರೆಲ್ಲರ ದಾಸ್ಯ-ಆರಾಧನೆ ಮಾಡಲಿಚ್ಛಿಸುತ್ತೀರೋ ಮಾಡುತ್ತಲಿರಿ. ಹೇಳಿರಿ- ವಾಸ್ತವದಲ್ಲಿ

فَاعْبُدُوا مَا شِئْتُمْ مِنْ دُونِهِ ۗ قُلْ إِنَّ الْخَاسِرِينَ الَّذِينَ خَسِرُوا أَنْفُسَهُمْ

3. ಅರ್ಥಾತ್- ಅಲ್ಲಾಹನ ದಾಸ್ಯ-ಆರಾಧನೆ ಕೈಗೊಳ್ಳಲು ಒಂದು ಸ್ಥಳ ದುಸ್ತರವಾದರೆ, ಅಂತಹ ಸಂಕಷ್ಟಗಳಿಲ್ಲದ ಇನ್ನೊಂದು ಸ್ಥಳಕ್ಕೆ ಹೋಗಿ ಬಿಡಿರಿ.

ಪುನರುತ್ಥಾನ ದಿನ ತನ್ನನ್ನೂ ತನ್ನವರನ್ನೂ ನಷ್ಟಕ್ಕೊಳಪಡಿಸಿ ಕೊಂಡವರೇ ನಿಜವಾದ ದಿವಾಳಿಕೋರರು. ಚೆನ್ನಾಗಿ ತಿಳಿದಿರಿ, ಇದುವೇ ಸುಸ್ಪಷ್ಟ ದಿವಾಳಿಕೋರತನವಾಗಿದೆ.

وَأَهْلِيهِمْ يَوْمَ الْقِيَامَةِ ۗ أَلَا ذَٰلِكَ هُوَ الْخُسْرَانُ الْمُبِينُ ﴿١٥﴾

16. ಅಗ್ನಿಯ ಕೊಡೆಗಳು ಅವರ ಮೇಲ್ಭಾಗದಲ್ಲೂ ಹರಡಿಕೊಂಡಿರುವುವು ಮತ್ತು ಕೆಳಭಾಗದಲ್ಲೂ ಹರಡಿಕೊಂಡಿರುವುವು. ಅಲ್ಲಾಹನು ತನ್ನ ದಾಸರನ್ನು ಎಚ್ಚರಿಸುತ್ತಿರುವುದು ಈ ಅಂತಿಮ ಗತಿಯ ಕುರಿತೇ ಆಗಿದೆ. ಆದುದರಿಂದ, "ನನ್ನ ದಾಸರೇ ನನ್ನ ಕ್ರೋಧವನ್ನು ಭಯಪಡಿರಿ.

لَهُم مِّن فَوْقِهِمْ ظُلَلٌ مِّنَ النَّارِ وَمِن تَحْتِهِمْ ظُلَلٌ ۚ ذَٰلِكَ يُخَوِّفُ اللَّهُ بِهِ عِبَادَهُ ۚ يَا عِبَادِ فَاتَّقُونِ ﴿١٦﴾

17-18. ಇದಕ್ಕೆ ವ್ಯತಿರಿಕ್ತವಾಗಿ 'ತಾಗೂತ್'ನ ದಾಸ್ಯದಿಂದ ಮುಕ್ತರಾಗಿ ಅಲ್ಲಾಹನ ಕಡೆಗೆ ಮರಳುವವರಿಗೆ ಶುಭವಾರ್ತೆಯಿದೆ. ಆದುದರಿಂದ (ಪೈಗಂಬರರೇ) ಮಾತನ್ನು ಚೆನ್ನಾಗಿ ಆಲಿಸುವ ಹಾಗೂ ಅದರ ಅತ್ಯುತ್ತಮ ಭಾಗವನ್ನು ಅನುಸರಿಸುವ ನನ್ನ ದಾಸರಿಗೆ ಶುಭವಾರ್ತೆ ನೀಡಿರಿ. ಇವರೇ ಅಲ್ಲಾಹನಿಂದ ಸನ್ಮಾರ್ಗ ನೀಡಲ್ಪಟ್ಟವರು ಮತ್ತು ಇವರೇ ಬುದ್ಧಿವಂತರು.

وَالَّذِينَ اجْتَنَبُوا الطَّاغُوتَ أَن يَعْبُدُوهَا وَأَنَابُوا إِلَى اللَّهِ لَهُمُ الْبُشْرَىٰ ۚ فَبَشِّرْ عِبَادِ ﴿١٧﴾ الَّذِينَ يَسْتَمِعُونَ الْقَوْلَ فَيَتَّبِعُونَ أَحْسَنَهُ ۚ أُولَٰئِكَ الَّذِينَ هَدَاهُمُ اللَّهُ ۖ وَأُولَٰئِكَ هُمْ أُولُو الْأَلْبَابِ ﴿١٨﴾

19. (ಪೈಗಂಬರರೇ) ಯಾರ ಮೇಲೆ ಅಲ್ಲಾಹನ ಯಾತನೆಯ ತೀರ್ಮಾನವು ಅನ್ವಯಿಸಿ ಬಿಟ್ಟಿದೆಯೋ ಅವನನ್ನು ರಕ್ಷಿಸುವವನಾರು? ಅಗ್ನಿಯಲ್ಲಿ ಬಿದ್ದುಬಿಟ್ಟಿರುವವನನ್ನು ನೀವು ರಕ್ಷಿಸಬಲ್ಲಿರಾ?

أَفَمَنْ حَقَّ عَلَيْهِ كَلِمَةُ الْعَذَابِ ۖ أَفَأَنتَ تُنقِذُ مَن فِي النَّارِ ﴿١٩﴾

20. ಆದರೆ ತಮ್ಮ ಪ್ರಭುವನ್ನು ಭಯಪಡುತ್ತಿದ್ದವರಿಗಾಗಿ ಅಂತಸ್ತಿನ ಮೇಲೆ ಅಂತಸ್ತಿರುವ ಉನ್ನತ ಭವನಗಳಿರುವುವು. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವವು. ಇದು ಅಲ್ಲಾಹನ ವಾಗ್ದಾನ. ಅಲ್ಲಾಹನು ತನ್ನ ವಾಗ್ದಾನವನ್ನೆಂದೂ ಉಲ್ಲಂಘಿಸುವುದಿಲ್ಲ.

لَٰكِنِ الَّذِينَ اتَّقَوْا رَبَّهُمْ لَهُمْ غُرَفٌ مِّن فَوْقِهَا غُرَفٌ مَّبْنِيَّةٌ تَجْرِي مِن تَحْتِهَا الْأَنْهَارُ ۖ وَعْدَ اللَّهِ ۖ لَا يُخْلِفُ اللَّهُ الْمِيعَادَ ﴿٢٠﴾

21. ನೀವು ನೋಡುತ್ತಿಲ್ಲವೇ? ಅಲ್ಲಾಹನು ಆಕಾಶದಿಂದ ನೀರು ಸುರಿಸಿದನು. ಅನಂತರ ಅದನ್ನು ಚಿಲುಮೆ ಮತ್ತು ನದಿಗಳ[4] ರೂಪದಲ್ಲಿ ಭೂಮಿಯೊಳಗೆ ಹರಿಸಿದನು. ತರುವಾಯ ಆ ನೀರಿನ ಮೂಲಕ ಅವನು ವಿವಿಧ ಜಾತಿಯ ವಿಭಿನ್ನ ಬೆಳೆಗಳನ್ನು ಹೊರ ತೆಗೆಯುತ್ತಾನೆ. ಅನಂತರ ಆ ಬೆಳೆಗಳು ಹಣ್ಣಾಗಿ ಒಣಗುತ್ತವೆ. ಆಗ ಅವು ಹಳದಿಯಾಗಿ ಬಿಡುವುದನ್ನು ನೀವು

أَلَمْ تَرَ أَنَّ اللَّهَ أَنزَلَ مِنَ السَّمَاءِ مَاءً فَسَلَكَهُ يَنَابِيعَ فِي الْأَرْضِ ثُمَّ يُخْرِجُ بِهِ زَرْعًا مُّخْتَلِفًا أَلْوَانُهُ ثُمَّ يَهِيجُ فَتَرَاهُ مُصْفَرًّا ثُمَّ يَجْعَلُهُ حُطَامًا ۚ إِنَّ فِي ذَٰلِكَ

4. ಮೂಲದಲ್ಲಿ 'ಯನಾಬೀಅ್' ಎಂಬ ಪದ ಪ್ರಯೋಗವಾಗಿದೆ. ಇದು ಮೂರು ವಿಷಯಗಳಿಗೂ ಅನ್ವಯವಾಗುತ್ತದೆ.

لَذِكْرٰى لِاُولِى الْاَلْبَابِ ﴿٢١﴾

ನೋಡುತ್ತೀರಿ. ಕೊನೆಗೆ ಅಲ್ಲಾಹನು ಅವುಗಳನ್ನು ಹೊಟ್ಟಾಗಿ ಮಾಡಿ ಬಿಡುತ್ತಾನೆ. ವಾಸ್ತವದಲ್ಲಿ ಇದರಲ್ಲಿ ಬುದ್ಧಿಜೀವಿಗಳಿಗೆ ಒಂದು ಪಾಠವಿದೆ.

اَفَمَنْ شَرَحَ اللّٰهُ صَدْرَهٗ لِلْاِسْلَامِ فَهُوَ عَلٰى نُوْرٍ مِّنْ رَّبِّهٖ ۭ فَوَيْلٌ لِّلْقٰسِيَةِ قُلُوْبُهُمْ مِّنْ ذِكْرِ اللّٰهِ ۭ اُولٰۗىِٕكَ فِيْ ضَلٰلٍ مُّبِيْنٍ ﴿٢٢﴾

22. ಅಲ್ಲಾಹನು ಯಾರ ಹೃದಯವನ್ನು ಇಸ್ಲಾಮಿಗಾಗಿ ತೆರೆದುಬಿಟ್ಟನೋ ಹಾಗೂ ಯಾರು ತನ್ನ ಪ್ರಭುವಿನ ಕಡೆಯಿಂದ ಒಂದು ಪ್ರಕಾಶದಲ್ಲಿ ನಡೆಯುತ್ತಿರುವನೋ ಅವನು (ಇವುಗಳಿಂದ ಯಾವ ಪಾಠವನ್ನೂ ಕಲಿಯದವನಂತೆ ಆಗಬಲ್ಲನೇ?) ಯಾರ ಹೃದಯಗಳು ಅಲ್ಲಾಹನ ಬೋಧನೆಯಿಂದ ಇನ್ನಷ್ಟು ಕಠಿಣವಾಗಿ ಹೋದುವೋ ಅವರಿಗಾಗಿ ವಿನಾಶವಿದೆ. ಅವರು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುತ್ತಾರೆ.

اَللّٰهُ نَزَّلَ اَحْسَنَ الْحَدِيْثِ كِتٰبًا مُّتَشَابِهًا مَّثَانِيَ ڰ تَقْشَعِرُّ مِنْهُ جُلُوْدُ الَّذِيْنَ يَخْشَوْنَ رَبَّهُمْ ۚ ثُمَّ تَلِيْنُ جُلُوْدُهُمْ وَقُلُوْبُهُمْ اِلٰى ذِكْرِ اللّٰهِ ۭ ذٰلِكَ هُدَى اللّٰهِ يَهْدِيْ بِهٖ مَنْ يَّشَاۗءُ ۭ وَمَنْ يُّضْلِلِ اللّٰهُ فَمَا لَهٗ مِنْ هَادٍ ﴿٢٣﴾

23. ಅಲ್ಲಾಹನು ಅತ್ಯುತ್ತಮ ವಾಣಿಯನ್ನು ಅವತರಿಸಿರುವನು. ಎಲ್ಲ ಭಾಗಗಳೂ ಸಮಾನ ಸ್ವರೂಪವಾಗಿರುವಂತಹ ಗ್ರಂಥವಿದು. ಇದರಲ್ಲಿ ವಿಷಯಗಳು ಪುನರಾವರ್ತಿಸಲ್ಪಟ್ಟಿವೆ. ಇದನ್ನು ಕೇಳಿದಾಗ, ತಮ್ಮ ಪ್ರಭುವನ್ನು ಭಯಪಡುವವರಿಗೆ ರೋಮಾಂಚನವಾಗುತ್ತದೆ ಮತ್ತು ಅವರ ಶರೀರ ಹಾಗೂ ಹೃದಯಗಳು ಮೃದುವಾಗಿ ಅಲ್ಲಾಹನ ಸ್ಮರಣೆಯ ಕಡೆಗೆ ವಾಲಿ ಬಿಡುತ್ತವೆ. ಇದು ಅಲ್ಲಾಹನ ಮಾರ್ಗದರ್ಶನ. ಇದರ ಮೂಲಕ ಅವನು ತಾನಿಚ್ಛಿಸಿದವರನ್ನು ಸನ್ಮಾರ್ಗಕ್ಕೆ ತರುತ್ತಾನೆ ಮತ್ತು ಅಲ್ಲಾಹನೇ ಸನ್ಮಾರ್ಗ ತೋರದಿದ್ದರೆ ಅಂತಹವನಿಗೆ ಬೇರಾವ ಮಾರ್ಗದರ್ಶಕನೂ ಇಲ್ಲ.

اَفَمَنْ يَّتَّقِيْ بِوَجْهِهٖ سُوْۗءَ الْعَذَابِ يَوْمَ الْقِيٰمَةِ ۭ وَقِيْلَ لِلظّٰلِمِيْنَ ذُوْقُوْا مَا كُنْتُمْ تَكْسِبُوْنَ ﴿٢٤﴾

24. ಪುನರುತ್ಥಾನದಿನ (ತನ್ನ ಮುಖದ ಮೇಲೆ) ಯಾತನೆಯ ಉಗ್ರ ಹೊಡೆತವನ್ನು ತಿನ್ನುವವನ ದುರವಸ್ಥೆಯನ್ನು ನೀವು ಊಹಿಸಬಲ್ಲಿರಾ? ಇಂತಹ ಅಕ್ರಮಿಗಳೊಡನೆ "ಈಗ ನೀವು ಮಾಡುತ್ತಿದ್ದ ಗಳಿಕೆಯ ರುಚಿಯನ್ನು ಸವಿಯಿರಿ" ಎಂದು ಹೇಳಲಾಗುವುದು.

كَذَّبَ الَّذِيْنَ مِنْ قَبْلِهِمْ فَاَتٰىهُمُ الْعَذَابُ مِنْ حَيْثُ لَا يَشْعُرُوْنَ ﴿٢٥﴾

25. ಇವರಿಗಿಂತ ಮುಂಚೆಯೂ ಅನೇಕರು ಇದೇ ರೀತಿ ಸುಳ್ಳಾಗಿಸಿದ್ದಾರೆ. ಕೊನೆಗೆ ಅವರ ಯೋಚನೆಗೂ ನಿಲುಕದ ಕಡೆಯಿಂದ ಅವರ ಮೇಲೆ ಯಾತನೆ ಬಂತು.

فَاَذَاقَهُمُ اللّٰهُ الْخِزْيَ فِي الْحَيٰوةِ الدُّنْيَا ۚ وَلَعَذَابُ الْاٰخِرَةِ اَكْبَرُ ۘ لَوْ كَانُوْا يَعْلَمُوْنَ ﴿٢٦﴾

26. ತರುವಾಯ ಅಲ್ಲಾಹನು ಅವರಿಗೆ ಲೌಕಿಕ ಜೀವನದಲ್ಲೇ ಅಪಮಾನದ ರುಚಿಯನ್ನು ಸವಿಸಿದನು ಮತ್ತು ಪರಲೋಕದ ಯಾತನೆಯಂತೂ ಇದಕ್ಕಿಂತಲೂ ಉಗ್ರವಾಗಿದೆ. ಇವರು ಅರಿಯುತ್ತಿದ್ದರೆ!

27. ಜನರು ಪ್ರಜ್ಞಾವಂತರಾಗಲೆಂದು ನಾವು ಈ ಕುರ್‌ಆನಿನಲ್ಲಿ ಅವರಿಗೆ ತರತರದ ಉದಾಹರಣೆಗಳನ್ನು ನೀಡಿದ್ದೇವೆ.

وَلَقَدْ ضَرَبْنَا لِلنَّاسِ فِي هَٰذَا الْقُرْآنِ مِن كُلِّ مَثَلٍ لَّعَلَّهُمْ يَتَذَكَّرُونَ ﴿٢٧﴾

28. ಅರಬೀ ಭಾಷೆಯಲ್ಲಿರುವ ಕುರ್‌ಆನ್ ಇದರಲ್ಲಿ ಯಾವ ವಕ್ರತೆಯೂ ಇಲ್ಲ. (ಇದು) ಇವರು ರಕ್ಷಣೆ ಹೊಂದಲಿಕ್ಕಾಗಿದೆ.

قُرْآنًا عَرَبِيًّا غَيْرَ ذِي عِوَجٍ لَّعَلَّهُمْ يَتَّقُونَ ﴿٢٨﴾

29. ಅಲ್ಲಾಹನು ಒಂದು ಉದಾಹರಣೆ ಕೊಡುತ್ತಾನೆ. ಒಬ್ಬನಿಗೆ ದುಷ್ಟ ಸ್ವಭಾವದ ಅನೇಕ ಯಜಮಾನರಿದ್ದು ಅವರೆಲ್ಲಾ ಆತನನ್ನು ತಮ್ಮ ತಮ್ಮೆಡೆಗೆ ಎಳೆಯುತ್ತಿದ್ದಾರೆ. ಇನ್ನೊಬ್ಬನು ಸಂಪೂರ್ಣವಾಗಿ ಕೇವಲ ಒಬ್ಬ ಯಜಮಾನನ ದಾಸನು. ಇವರಿಬ್ಬರ ಸ್ಥಿತಿ ಏಕರೂಪವಾಗಿರಲು ಸಾಧ್ಯವೇ?- 'ಸರ್ವಸ್ತುತಿಗಳೂ ಅಲ್ಲಾಹನಿಗೆ ಮೀಸಲು.' ಆದರೆ ಹೆಚ್ಚಿನವರು ಅಜ್ಞಾನದಲ್ಲಿ ಬಿದ್ದಿದ್ದಾರೆ.[5]

ضَرَبَ اللَّهُ مَثَلًا رَّجُلًا فِيهِ شُرَكَاءُ مُتَشَاكِسُونَ وَرَجُلًا سَلَمًا لِّرَجُلٍ هَلْ يَسْتَوِيَانِ مَثَلًا ۚ الْحَمْدُ لِلَّهِ ۚ بَلْ أَكْثَرُهُمْ لَا يَعْلَمُونَ ﴿٢٩﴾

30. (ಸಂದೇಶವಾಹಕರೇ) ನಿಮಗೂ ಮರಣ ಹೊಂದಲಿಕ್ಕಿದೆ ಮತ್ತು ಇವರಿಗೂ ಮರಣ ಹೊಂದಲಿಕ್ಕಿದೆ-

إِنَّكَ مَيِّتٌ وَإِنَّهُم مَّيِّتُونَ ﴿٣٠﴾

31. ಕೊನೆಗೆ ಪುನರುತ್ಥಾನ ದಿನ ನೀವೆಲ್ಲರೂ ನಿಮ್ಮ ಪ್ರಭುವಿನ ಸನ್ನಿಧಿಯಲ್ಲಿ ನಿಮ್ಮ ನಿಮ್ಮ ದಾವೆಗಳನ್ನು ಹೂಡಲಿರುವಿರಿ.

ثُمَّ إِنَّكُمْ يَوْمَ الْقِيَامَةِ عِندَ رَبِّكُمْ تَخْتَصِمُونَ ﴿٣١﴾

الجزء ٢٤

32. *ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿದ ಮತ್ತು ಸತ್ಯವು ತನ್ನ ಮುಂದೆ ಬಂದಾಗ ಅದನ್ನು ಸುಳ್ಳಾಗಿಸಿ ಬಿಟ್ಟವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರಬಹುದು? ಇಂತಹ ಸತ್ಯನಿಷೇಧಿಗಳಿಗೆ ನರಕದಲ್ಲಿ ನೆಲೆಯಿಲ್ಲವೇ?

فَمَنْ أَظْلَمُ مِمَّن كَذَبَ عَلَى اللَّهِ وَكَذَّبَ بِالصِّدْقِ إِذْ جَاءَهُ ۚ أَلَيْسَ فِي جَهَنَّمَ مَثْوًى لِّلْكَافِرِينَ ﴿٣٢﴾

33. ಸತ್ಯವನ್ನು ತಂದವನು ಮತ್ತು ಅದನ್ನು ಸತ್ಯವೆಂದು ನಂಬಿದವರು ಮಾತ್ರ ಯಾತನೆಯಿಂದ ರಕ್ಷಣೆ ಪಡೆಯುವರು.

وَالَّذِي جَاءَ بِالصِّدْقِ وَصَدَّقَ بِهِ ۙ أُولَٰئِكَ هُمُ الْمُتَّقُونَ ﴿٣٣﴾

34. ಅವರು ಬಯಸಿದ್ದೆಲ್ಲವೂ ಅವರ ಪ್ರಭುವಿನ ಬಳಿ ಅವರಿಗೆ ಸಿಗುವುದು. ಇದು ಪುಣ್ಯ ಮಾಡಿದವರಿಗೆ ಇರುವ ಸತ್ಫಲ.

لَهُم مَّا يَشَاءُونَ عِندَ رَبِّهِمْ ۚ ذَٰلِكَ جَزَاءُ الْمُحْسِنِينَ ﴿٣٤﴾

35. (ಇದು) ಅವರು ಮಾಡಿದ್ದ ಅತ್ಯಂತ ನಿಕೃಷ್ಟ ಕರ್ಮಗಳನ್ನು ಅಲ್ಲಾಹನು ಅವರ ಲೆಕ್ಕದಿಂದ ಅಳಿಸಿ ಹಾಕಲು ಮತ್ತು ಅವರಿಗೆ,

لِيُكَفِّرَ اللَّهُ عَنْهُمْ أَسْوَأَ الَّذِي عَمِلُوا وَيَجْزِيَهُمْ أَجْرَهُم بِأَحْسَنِ الَّذِي

5. ಅರ್ಥಾತ್- ಓರ್ವ ಪ್ರಭುವಿನ ದಾಸ್ಯ ಮತ್ತು ಅನೇಕ ಪ್ರಭುಗಳ ದಾಸ್ಯದ ನಡುವಿನ ವ್ಯತ್ಯಾಸವನ್ನು ಅವರು ಚೆನ್ನಾಗಿ ಮನಗಾಣುತ್ತಾರೆ. ಆದರೆ ಏಕದೇವನ ದಾಸ್ಯ ಮತ್ತು ಅನೇಕ ದೇವರುಗಳ ದಾಸ್ಯದ ನಡುವಿನ ವ್ಯತ್ಯಾಸವನ್ನು ತಿಳಿಸಲು ಪ್ರಯತ್ನಿಸಿದರೆ ಅವರು ತಿಳಿಗೇಡಿಗಳಾಗಿ ಬಿಡುತ್ತಾರೆ.

*ಇಲ್ಲಿಂದ **24ನೆಯ ಕಾಂಡ ಆರಂಭ.**

ಅವರು ಮಾಡುತ್ತಿದ್ದ ಅತ್ಯುತ್ಕೃಷ್ಟ ಕರ್ಮಗಳಿಗನುಸಾರ ಪ್ರತಿಫಲ ನೀಡಲು(ಆಗಿರುತ್ತದೆ).

كَانُوا يَعْمَلُونَ ۝٣٥

36. (ಸಂದೇಶವಾಹಕರೇ) ಅಲ್ಲಾಹನು ತನ್ನ ದಾಸನಿಗೆ ಸಾಕಾಗಲಾರನೇ? ಇವರು ಅವನ ಹೊರತಾಗಿರುವ ಇತರರ ಬಗ್ಗೆ ನಿಮ್ಮನ್ನು ಹೆದರಿಸುತ್ತಾರೆ. ವಸ್ತುತಃ ಯಾರನ್ನು ಅಲ್ಲಾಹನೇ ಪಥಭ್ರಷ್ಟ ಗೊಳಿಸಿಬಿಟ್ಟನೋ ಅವನಿಗೆ ದಾರಿ ತೋರಿಸುವವನಾರೂ ಇಲ್ಲ-

أَلَيْسَ اللَّهُ بِكَافٍ عَبْدَهُ ۖ وَيُخَوِّفُونَكَ
بِالَّذِينَ مِن دُونِهِ ۚ وَمَن يُضْلِلِ
اللَّهُ فَمَا لَهُ مِنْ هَادٍ ۝٣٦

37. ಮತ್ತು ಯಾರಿಗೆ ಅಲ್ಲಾಹನೇ ಮಾರ್ಗದರ್ಶನ ಮಾಡಿದನೋ ಅವನನ್ನು ದಾರಿಗೆಡಿಸುವವನೂ ಯಾರೂ ಇಲ್ಲ. ಅಲ್ಲಾಹನು ಮಹಾಪ್ರಬಲನೂ ಪ್ರತೀಕಾರ ಪಡೆಯುವವನೂ ಅಲ್ಲವೇ?

وَمَن يَهْدِ اللَّهُ فَمَا لَهُ مِن مُّضِلٍّ ۗ
أَلَيْسَ اللَّهُ بِعَزِيزٍ ذِي انتِقَامٍ ۝٣٧

38. ಭೂಮಿ-ಆಕಾಶಗಳನ್ನು ಸೃಷ್ಟಿಸಿದವನಾರೆಂದು ನೀವು ಇವರೊಡನೆ ಕೇಳಿದರೆ, ಅಲ್ಲಾಹನೆಂದು ಇವರೇ ಸ್ವತಃ ಹೇಳುವರು. ವಸ್ತುಸ್ಥಿತಿ ಹೀಗಿರುವಾಗ ಅಲ್ಲಾಹನು ನನಗೇನಾದರೂ ಹಾನಿಯನ್ನುಂಟು ಮಾಡಲಿಚ್ಛಿಸಿದರೆ ನೀವು ಅಲ್ಲಾಹನನ್ನು ಬಿಟ್ಟು ಪ್ರಾರ್ಥಿಸುತ್ತಿರುವ ನಿಮ್ಮ ಈ ದೇವತೆಗಳು, ಆತನು ಮಾಡುವ ಹಾನಿಯಿಂದ ನನ್ನನ್ನು ರಕ್ಷಿಸಬಲ್ಲರೇ ಅಥವಾ ಅಲ್ಲಾಹನು ನನ್ನ ಮೇಲೆ ಕೃಪೆ ತೋರಲಿಚ್ಛಿಸಿದರೆ ಇವರು ಅವನ ಕೃಪೆಯನ್ನು ತಡೆಯಬಲ್ಲರೇ? ಎಂದು ಅವರೊಡನೆ ಕೇಳಿರಿ. ನನಗೆ ಅಲ್ಲಾಹನೇ ಸಾಕು. ಭರವಸೆ ಇಡುವವರು ಅವನ ಮೇಲೆಯೇ ಭರವಸೆಯನ್ನಿಡುತ್ತಾರೆ ಎಂದು ಅವರೊಡನೆ ಹೇಳಿ ಬಿಡಿರಿ.

وَلَئِن سَأَلْتَهُم مَّنْ خَلَقَ السَّمَاوَاتِ
وَالْأَرْضَ لَيَقُولُنَّ اللَّهُ ۚ قُلْ أَفَرَأَيْتُم
مَّا تَدْعُونَ مِن دُونِ اللَّهِ إِنْ أَرَادَنِيَ
اللَّهُ بِضُرٍّ هَلْ هُنَّ كَاشِفَاتُ ضُرِّهِ أَوْ
أَرَادَنِي بِرَحْمَةٍ هَلْ هُنَّ مُمْسِكَاتُ
رَحْمَتِهِ ۚ قُلْ حَسْبِيَ اللَّهُ ۖ عَلَيْهِ
يَتَوَكَّلُ الْمُتَوَكِّلُونَ ۝٣٨

39. ಇವರೊಡನೆ ಸ್ಪಷ್ಟವಾಗಿ ಹೇಳಿ ಬಿಡಿರಿ- "ನನ್ನ ಜನಾಂಗದವರೇ, ನೀವು ನಿಮ್ಮಿಷ್ಟಕ್ಕೆ ನಿಮ್ಮ ಕೆಲಸ ಮಾಡುತ್ತಲಿರಿ. ನಾನು ನನ್ನ ಕೆಲಸವನ್ನು ಮಾಡುತ್ತಲಿರುವೆನು-

قُلْ يَا قَوْمِ اعْمَلُوا عَلَىٰ مَكَانَتِكُمْ إِنِّي
عَامِلٌ ۖ فَسَوْفَ تَعْلَمُونَ ۝٣٩

40. ಯಾರ ಮೇಲೆ ಅಪಮಾನಕರ ಯಾತನೆ ಬರುತ್ತದೆ ಮತ್ತು ಎಂದೆಂದೂ ಸಿಗದಂತಹ ಶಿಕ್ಷೆ ಯಾರಿಗೆ ಸಿಗುತ್ತದೆಂದು ಸದ್ಯದಲ್ಲೇ ನಿಮಗೆ ತಿಳಿದು ಬರುವುದು."

مَن يَأْتِيهِ عَذَابٌ يُخْزِيهِ وَيَحِلُّ
عَلَيْهِ عَذَابٌ مُّقِيمٌ ۝٤٠

41. (ಸಂದೇಶವಾಹಕರೇ) ನಾವು ಸಕಲ ಮಾನವರಿಗಾಗಿ ಈ ಪರಮ ಸತ್ಯಗ್ರಂಥವನ್ನು ನಿಮಗೆ ಅವತೀರ್ಣಗೊಳಿಸಿದ್ದೇವೆ. ಇನ್ನು ನೇರ ಮಾರ್ಗವನ್ನನುಸರಿಸುವವನು ತನಗಾಗಿಯೇ ಅನುಸರಿಸುವನು

إِنَّا أَنزَلْنَا عَلَيْكَ الْكِتَابَ لِلنَّاسِ
بِالْحَقِّ ۖ فَمَنِ اهْتَدَىٰ فَلِنَفْسِهِ ۖ وَ
مَن ضَلَّ فَإِنَّمَا يَضِلُّ عَلَيْهَا ۖ وَمَا

ಮತ್ತು ಪಥಭ್ರಷ್ಟನಾಗುವವನ ಪಥಭ್ರಷ್ಟತೆಯ ದೋಷವು ಅವನ ಮೇಲೆಯೇ ಇರುವುದು. ನೀವು ಅವರ ಹೊಣೆಗಾರರಲ್ಲ.

أنت عليهم بوكيل ﴿٤١﴾

42. ಮರಣದ ವೇಳೆ ಆತ್ಮಗಳನ್ನು ವಶಪಡಿಸಿಕೊಳ್ಳುವವನು ಅಲ್ಲಾಹನೇ ಮತ್ತು ಇನ್ನೂ ಸಾಯದಿದ್ದವನ ಆತ್ಮವನ್ನು ನಿದ್ರಾವಸ್ಥೆಯಲ್ಲಿ ವಶಪಡಿಸಿಕೊಳ್ಳುವವನೂ ಅವನೇ. ಅವನು ಯಾವುದರ ಮೇಲೆ ಮರಣದ ತೀರ್ಮಾನವನ್ನು ಜಾರಿಗೊಳಿಸುತ್ತಾನೋ ಅದನ್ನು ತಡೆ ಹಿಡಿಯುತ್ತಾನೆ ಮತ್ತು ಇತರ ಆತ್ಮಗಳನ್ನು ಒಂದು ನಿರ್ದಿಷ್ಟ ಕಾಲದವರೆಗಾಗಿ ಹಿಂದಕ್ಕೆ ಕಳುಹಿಸುತ್ತಾನೆ. ನಿಶ್ಚಯವಾಗಿಯೂ ವಿಚಾರಶೀಲರಿಗೆ ಇದರಲ್ಲಿ ದೊಡ್ಡ ನಿದರ್ಶನಗಳಿವೆ.

الله يتوفى الأنفس حين موتها والتي لم تمت في منامها ۖ فيمسك التي قضى عليها الموت ويرسل الأخرى إلى أجل مسمى ۚ إن في ذلك لآيات لقوم يتفكرون ﴿٤٢﴾

43. ಇವರು ಆ ಅಲ್ಲಾಹನನ್ನು ಬಿಟ್ಟು ಇತರರನ್ನು ಶಿಫಾರಸುದಾರರಾಗಿ ಮಾಡಿಬಿಟ್ಟಿರುವರೇ?[6] ಅವರ ಅಧಿಕಾರದಲ್ಲಿ ಏನೂ ಇಲ್ಲದಿದ್ದರೂ ಅವರು ಅವಿವೇಕಿಗಳಾಗಿದ್ದರೂ ಶಿಫಾರಸು ಮಾಡುವರೇ? ಎಂದು ಕೇಳಿರಿ.

أم اتخذوا من دون الله شفعاء ۚ قل أولو كانوا لا يملكون شيئا ولا يعقلون ﴿٤٣﴾

44. ಶಿಫಾರಸ್ಸು ಸಂಪೂರ್ಣವಾಗಿ ಅಲ್ಲಾಹನ ಅಧಿಕಾರದಲ್ಲಿದೆ.[7] ಭೂಮಿ-ಆಕಾಶಗಳ ಪ್ರಭುತ್ವಕ್ಕೆ ಅವನೇ ಒಡೆಯನಾಗಿರುತ್ತಾನೆ. ಅನಂತರ ನೀವು ಅವನ ಕಡೆಗೇ ಮರಳಿಸಲ್ಪಡಲಿರುವಿರಿ ಎಂದು ಹೇಳಿರಿ.

قل لله الشفاعة جميعا ۖ له ملك السماوات والأرض ۖ ثم إليه ترجعون ﴿٤٤﴾

45. ಏಕಮಾತ್ರ ಅಲ್ಲಾಹನ ಪ್ರಸ್ತಾಪವೆತ್ತಲಾದಾಗ ಪರಲೋಕದ ಮೇಲೆ ವಿಶ್ವಾಸವಿಲ್ಲದವರ ಹೃದಯಗಳು ಮರುಗಲಾರಂಭಿಸುತ್ತವೆ ಮತ್ತು ಅವನ ಹೊರತು ಇತರರ ಪ್ರಸ್ತಾಪ ಬರುವಾಗ ಅವರು ಒಮ್ಮೆಲೇ ಆನಂದ ತುಂದಿಲರಾಗುತ್ತಾರೆ.[8]

وإذا ذكر الله وحده اشمأزت قلوب الذين لا يؤمنون بالآخرة ۖ وإذا ذكر الذين من دونه إذا هم يستبشرون ﴿٤٥﴾

6. ಅರ್ಥಾತ್- ಅಲ್ಲಾಹನ ಬಳಿ ಕೆಲವು ವ್ಯಕ್ತಿಗಳು ಬಹಳ ಪ್ರಭಾವಶಾಲಿಗಳಾಗಿದ್ದಾರೆ, ಅವರ ಶಿಫಾರಸನ್ನು ಯಾವ ರೀತಿಯಲ್ಲೂ ತಳ್ಳಿಹಾಕಲು ಸಾಧ್ಯವಿಲ್ಲವೆಂದು ಅವರು ಸ್ವತಃ ಲೆಕ್ಕಹಾಕಿಕೊಂಡಿದ್ದಾರೆ. ಆದರೆ ಅವರು ಶಿಫಾರಸುದಾರರಾಗಿದ್ದಾರೆಂಬುದಕ್ಕೆ ಯಾವುದೇ ಆಧಾರವಿಲ್ಲ. ಅಲ್ಲಾಹನೂ ತನ್ನ ಬಳಿ ಅವರಿಗೆ ಉನ್ನತ ಪದವಿ ಪ್ರಾಪ್ತವಿದೆಯೆಂದು ಹೇಳಿಲ್ಲ. ಹಾಗೆಯೇ ಆ ವ್ಯಕ್ತಿಗಳು ಸ್ವತಃ ನಾವು ನಮ್ಮ ಪ್ರಾಬಲ್ಯದಿಂದ ನಿಮ್ಮ ಕೆಲಸ ಮಾಡಿಸಿಯೇ ಬಿಡುತ್ತೇವೆ ಎಂದು ವಾದಿಸಿಲ್ಲ. ಮಾತ್ರವಲ್ಲ ಈ ಕಪೋಲಕಲ್ಪಿತ ಶಿಫಾರಸುದಾರರನ್ನೇ ಸರ್ವಸ್ವ ಎಂದು ಭಾವಿಸಿ ತಮ್ಮೆಲ್ಲಾ ಹರಕೆಗಳನ್ನು ಅವರಿಗೇ ಒಪ್ಪಿಸುತ್ತಿರುವುದು ಅವರ ಮೂರ್ಖತನದ ಪರಮಾವಧಿಯಾಗಿದೆ.

7. ಅರ್ಥಾತ್- ಅಲ್ಲಾಹನ ಆಸ್ಥಾನದಲ್ಲಿ ಶಿಫಾರಸುದಾರರಾಗಿ ಎದ್ದುನಿಲ್ಲುವಷ್ಟು ಧೈರ್ಯವನ್ನು ಯಾರೂ ಹೊಂದಿಲ್ಲ. ಇನ್ನು ಶಿಫಾರಸನ್ನು ಈಡೇರಿಸಿಯೇ ತೀರುವ ಮಾತು ದೂರವೇ ಉಳಿಯಿತು. ಶಿಫಾರಸಿನ ಅನುಮತಿಯನ್ನು ಯಾರಿಗೆ ಬೇಕಾದರೂ ನೀಡುವ ಮತ್ತು ಯಾರಿಗೆ ಬೇಕಾದರೂ ನಿರಾಕರಿಸುವ ಅಧಿಕಾರ ಅಲ್ಲಾಹನಿಗೆ ಮಾತ್ರವಿದೆ. ಹಾಗೆಯೇ ಯಾರ ಪರವಾಗಿ ಬೇಕಾದರೂ ಶಿಫಾರಸು ಅನುಮತಿಸುವ ಮತ್ತು ಯಾರ ಬಗ್ಗೆ ಬೇಕಾದರೂ ನಿರಾಕರಿಸುವ ಅಧಿಕಾರವೂ ಅವನಿಗೇ ಇದೆ.

8. ಇದು ಬಹುದೇವಾರಾಧನೆಯ ಆಸಕ್ತಿ ಹೊಂದಿರುವ ಜಗತ್ತಿನ ಎಲ್ಲಾ ಜನಾಂಗಗಳಲ್ಲಿ ಕಂಡು ಬರುವ ಸಮಾನ ಅಂಶವಾಗಿದೆ. ಮುಸ್ಲಿಮರ ಪೈಕಿಯೂ ಬಹುದೇವಾರಾಧನೆಯ ಸೋಂಕು ತಗಲಿರುವ ದುರ್ವ್ಯವಿಗಳಲ್ಲಿ ಈ ದೋಷ ಕಂಡುಬರುತ್ತದೆ. ನಾಲಗೆಯಿಂದ ನಾವು

46. ಹೇಳಿರಿ- "ಅಲ್ಲಾಹ್! ಭೂಮಿ-ಆಕಾಶಗಳ ಸೃಷ್ಟಿಕರ್ತನೇ! ಪ್ರತ್ಯಕ್ಷ-ಪರೋಕ್ಷಗಳ ಜ್ಞಾನಿಯೇ, ನಿನ್ನ ದಾಸರು ಭಿನ್ನಾಭಿಪ್ರಾಯ ತಾಳುತ್ತಾ ಬಂದಿರುವ ವಿಷಯದಲ್ಲಿ ಅವರ ನಡುವೆ ನೀನೇ ತೀರ್ಮಾನ ಮಾಡಲಿರುವೆ.

قُلِ اللّٰهُمَّ فَاطِرَ السَّمٰوٰتِ وَالْاَرْضِ عٰلِمَ الْغَيْبِ وَالشَّهَادَةِ اَنْتَ تَحْكُمُ بَيْنَ عِبَادِكَ فِيْ مَا كَانُوْا فِيْهِ يَخْتَلِفُوْنَ ﴿٤٦﴾

47. ಈ ಅಕ್ರಮಿಗಳ ವಶದಲ್ಲಿ ಭೂಮಿಯ ಸಕಲ ಸಂಪತ್ತು ಇದ್ದರೂ ಮತ್ತು ಅಷ್ಟೇ ಇನ್ನೂ ಇದ್ದರೂ ಅವರು ಇದೆಲ್ಲವನ್ನೂ ಪುನರುತ್ಥಾನ ದಿನದ ಕೆಟ್ಟ ಯಾತನೆಯಿಂದ ಪಾರಾಗಲಿಕ್ಕಾಗಿ ಪರಿಹಾರವಾಗಿ ಕೊಡಲು ಸಿದ್ಧರಾಗುವರು. ಅಲ್ಲಿ ಅಲ್ಲಾಹನ ಕಡೆಯಿಂದ ಇವರು ನಿರೀಕ್ಷಿಸದೆ ಇದ್ದುದೆಲ್ಲವೂ ಇವರ ಮುಂದೆ ಬರುವುದು.

وَلَوْ اَنَّ لِلَّذِيْنَ ظَلَمُوْا مَا فِي الْاَرْضِ جَمِيْعًا وَّمِثْلَهٗ مَعَهٗ لَافْتَدَوْا بِهٖ مِنْ سُوْٓءِ الْعَذَابِ يَوْمَ الْقِيٰمَةِ ؕ وَبَدَا لَهُمْ مِّنَ اللّٰهِ مَا لَمْ يَكُوْنُوْا يَحْتَسِبُوْنَ ﴿٤٧﴾

48. ಅಲ್ಲಿ ಇವರಿಗೆ, ಇವರ ಗಳಿಕೆಯ ದುಷ್ಪರಿಣಾಮಗಳೆಲ್ಲವೂ ಬಯಲಾಗಿ ಬಿಡುವುವು. ಯಾವುದನ್ನು ಇವರು ಅಪಹಾಸ್ಯ ಮಾಡುತ್ತಿದ್ದರೋ ಅದುವೇ ಇವರ ಮೇಲೆ ಎರಗುವುದು.

وَبَدَا لَهُمْ سَيِّاٰتُ مَا كَسَبُوْا وَحَاقَ بِهِمْ مَّا كَانُوْا بِهٖ يَسْتَهْزِءُوْنَ ﴿٤٨﴾

49. ಇದೇ ಮಾನವನಿಗೆ ಒಂದಿಷ್ಟು ಸಂಕಷ್ಟವು ಬಂದಾಗ ಅವನು ನಮ್ಮನ್ನು ಪ್ರಾರ್ಥಿಸುತ್ತಾನೆ ಮತ್ತು ನಾವು ಅವನಿಗೆ ನಮ್ಮ ಕಡೆಯಿಂದ ಕೊಡುಗೆಗಳನ್ನು ಕೊಟ್ಟು ಉಬ್ಬಿಸಿದಾಗ, "ಇದನ್ನು ನನಗೆ ಜ್ಞಾನದ ಆಧಾರದಲ್ಲಿ ಕೊಡಲಾಗಿದೆ" ಎನ್ನುತ್ತಾನೆ. ಅಲ್ಲ, ವಾಸ್ತವದಲ್ಲಿ ಇದು ಪರೀಕ್ಷೆಯಾಗಿದೆ. ಆದರೆ ಇವರಲ್ಲಿ ಹೆಚ್ಚಿನವರು ಅರಿಯುವುದಿಲ್ಲ.

فَاِذَا مَسَّ الْاِنْسَانَ ضُرٌّ دَعَانَا ۡ ثُمَّ اِذَا خَوَّلْنٰهُ نِعْمَةً مِّنَّا ۙ قَالَ اِنَّمَآ اُوْتِيْتُهٗ عَلٰى عِلْمٍ ؕ بَلْ هِيَ فِتْنَةٌ وَّلٰكِنَّ اَكْثَرَهُمْ لَا يَعْلَمُوْنَ ﴿٤٩﴾

50. ಈ ಮಾತನ್ನೇ ಇವರಿಗಿಂತ ಮುಂಚೆ ಗತಿಸಿದವರೂ ಹೇಳಿದ್ದಾರೆ. ಆದರೆ ಅವರು ಗಳಿಸುತ್ತಿದ್ದುದು ಅವರಿಗೇನೂ ಫಲಕಾರಿ ಯಾಗಲಿಲ್ಲ.

قَدْ قَالَهَا الَّذِيْنَ مِنْ قَبْلِهِمْ فَمَآ اَغْنٰى عَنْهُمْ مَّا كَانُوْا يَكْسِبُوْنَ ﴿٥٠﴾

51. ಅನಂತರ ಅವರು ತಮ್ಮ ಗಳಿಕೆಯ ಕೆಟ್ಟ ಫಲವನ್ನು ಅನುಭವಿಸಿದರು ಮತ್ತು ಇವರ ಪೈಕಿಯೂ ಅಕ್ರಮಿಯಾಗುವವರು ಸದ್ಯದಲ್ಲೇ ತಮ್ಮ ಗಳಿಕೆಯ ದುಷ್ಫಲವನ್ನು ಅನುಭವಿಸುವರು. ಇವರು ನಮ್ಮನ್ನು ಮಣಿಸಲಾರರು.

فَاَصَابَهُمْ سَيِّاٰتُ مَا كَسَبُوْا ؕ وَالَّذِيْنَ ظَلَمُوْا مِنْ هٰٓؤُلَآءِ سَيُصِيْبُهُمْ سَيِّاٰتُ مَا كَسَبُوْا ۙ وَمَا هُمْ بِمُعْجِزِيْنَ ﴿٥١﴾

ಅಲ್ಲಾಹನನ್ನು ನಂಬುತ್ತೇವೆ ಎಂದು ಅವರು ಹೇಳುತ್ತಾರೆ. ಆದರೆ ಏಕದೇವನ ಪ್ರಸ್ತಾಪ ಮಾಡಿದಾಗ ಅವರು ಮುಖ ಗಂಟಿಕ್ಕಿಕೊಳ್ಳುತ್ತಾರೆ. 'ಇವರು ಮಹಾಪುರುಷರನ್ನು ಮತ್ತು ಔಲಿಯಾಗಳನ್ನು ನಂಬುವುದಿಲ್ಲ. ಆದ್ದರಿಂದ ಅಲ್ಲಾಹನ ಬಗ್ಗೆ ಪ್ರಸ್ತಾಪಿಸುತ್ತಿದ್ದಾರೆ' ಎಂದು ಹೇಳುತ್ತಾರೆ. ಬೇರೆಯವರ ಬಗ್ಗೆ ಪ್ರಸ್ತಾಪಿಸಿದರೆ ಅವರ ಹೃದಯ ಕೇವಲ ಅರಳುತ್ತದೆ ಮತ್ತು ಮುಖ ಪ್ರಫುಲ್ಲಿತವಾಗುತ್ತದೆ.

52. ಅಲ್ಲಾಹನು ತಾನಿಚ್ಛಿಸಿದವರ ಜೀವನಾಧಾರವನ್ನು ವಿಸ್ತೃತಗೊಳಿಸಿ ಬಿಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಅದನ್ನು ಪರಿಮಿತಗೊಳಿಸು ತ್ತಾನೆಂಬುದು ಇವರಿಗೆ ಗೊತ್ತಿಲ್ಲವೇ? ವಿಶ್ವಾಸವಿರಿಸುವವರಿಗೆ ಇದರಲ್ಲಿ ನಿದರ್ಶನಗಳಿವೆ.

أَوَلَمْ يَعْلَمُوٓا۟ أَنَّ ٱللَّهَ يَبْسُطُ ٱلرِّزْقَ لِمَن يَشَآءُ وَيَقْدِرُ ۚ إِنَّ فِى ذَٰلِكَ لَءَايَٰتٍ لِّقَوْمٍ يُؤْمِنُونَ ﴿٥٢﴾

ع

53. (ಸಂದೇಶವಾಹಕರೇ, ನನ್ನ ಪರವಾಗಿ) ಹೇಳಿರಿ; ತಮ್ಮ ಮೇಲೆಯೇ ಅತಿರೇಕವೆಸಗಿಕೊಂಡಿರುವ ನನ್ನ ದಾಸರೇ![9] ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನ ಸಕಲ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಅವನಂತು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

قُلْ يَٰعِبَادِىَ ٱلَّذِينَ أَسْرَفُوا۟ عَلَىٰٓ أَنفُسِهِمْ لَا تَقْنَطُوا۟ مِن رَّحْمَةِ ٱللَّهِ ۚ إِنَّ ٱللَّهَ يَغْفِرُ ٱلذُّنُوبَ جَمِيعًا ۚ إِنَّهُۥ هُوَ ٱلْغَفُورُ ٱلرَّحِيمُ ﴿٥٣﴾

54. ನಿಮ್ಮ ಪ್ರಭುವಿನೆಡೆಗೆ ಮರಳಿ ಬನ್ನಿರಿ ಮತ್ತು ಅವನ ಶರಣಾಗತ ದಾಸರಾಗಿ ಬಿಡಿರಿ - ನಿಮ್ಮ ಮೇಲೆ ಯಾತನೆ ಎರಗಿ ಬಿಡುವ ಹಾಗೂ ಮತ್ತೆಲ್ಲಿಂದಲೂ ನಿಮಗೆ ಸಹಾಯ ಸಿಗಲಾರದ ಸ್ಥಿತಿ ಬರುವುದಕ್ಕೆ ಮುಂಚೆ.

وَأَنِيبُوٓا۟ إِلَىٰ رَبِّكُمْ وَأَسْلِمُوا۟ لَهُۥ مِن قَبْلِ أَن يَأْتِيَكُمُ ٱلْعَذَابُ ثُمَّ لَا تُنصَرُونَ ﴿٥٤﴾

55. ಮತ್ತು ನಿಮ್ಮ ಕಡೆಗೆ ನಿಮ್ಮ ಪ್ರಭುವಿನ ಕಡೆಯಿಂದ ಕಳುಹಿಸಲಾಗಿ ರುವ ಗ್ರಂಥದ ಅತ್ಯುತ್ತಮ ತಾತ್ಪರ್ಯವನ್ನು ಅನುಸರಿಸಿರಿ-[10] ನಿಮಗೆ ಅರಿವೇ ಇಲ್ಲದಂತೆ ನಿಮ್ಮ ಮೇಲೆ ಹಠಾತ್ತನೆ ಯಾತನೆಯು ಬಂದೆರಗುವುದಕ್ಕೆ ಮುಂಚೆ-

وَٱتَّبِعُوٓا۟ أَحْسَنَ مَآ أُنزِلَ إِلَيْكُم مِّن رَّبِّكُم مِّن قَبْلِ أَن يَأْتِيَكُمُ ٱلْعَذَابُ بَغْتَةً وَأَنتُمْ لَا تَشْعُرُونَ ﴿٥٥﴾

56. ಅನಂತರ ಯಾರಾದರೂ "ನಾನು ಅಲ್ಲಾಹನ ಮುಂದೆ ಮಾಡುತ್ತಲಿದ್ದ ಅಪರಾಧವು ಖೇದನೀಯ, ನಾನಂತು ಅಪಹಾಸ್ಯ ಮಾಡುವವರ ಸಾಲಿಗೆ ಸೇರಿದ್ದೆನು" ಎಂದು ಹೇಳುವಂತಾಗದಿರಲಿ-

أَن تَقُولَ نَفْسٌ يَٰحَسْرَتَىٰ عَلَىٰ مَا فَرَّطتُ فِى جَنۢبِ ٱللَّهِ وَإِن كُنتُ لَمِنَ ٱلسَّٰخِرِينَ ﴿٥٦﴾

9. ಕೆಲವರು ಈ ಪದವನ್ನು ವಿಚಿತ್ರ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅಲ್ಲಾಹನು ಪ್ರವಾದಿವರ್ಯರಿಗೆ(ಸ) ಸ್ವತಃ, "ಓ ನನ್ನ ದಾಸರೇ!" ಎಂದು ಜನರನ್ನು ಕರೆಯಲು ಆದೇಶಿಸಿದ್ದಾನೆ. ಆದ್ದರಿಂದ ಮಾನವರೆಲ್ಲರೂ ಪ್ರವಾದಿವರ್ಯರ(ಸ) ದಾಸರಾಗಿದ್ದಾರೆ ಎನ್ನುತ್ತಾರೆ. ಇದು ವಾಸ್ತವದಲ್ಲಿ ವ್ಯಾಖ್ಯಾನವಲ್ಲ- ದುರ್ವ್ಯಾಖ್ಯಾನವಾಗಿದೆ. ಇದನ್ನು ಪವಿತ್ರ ಕುರ್‌ಆನಿನ ಅತ್ಯಂತ ಹೇಯವಾದ ಅರ್ಥವಿಕೃತಿಯೆಂದೂ ಅಲ್ಲಾಹನ ವಾಣಿಯೊಂದಿಗೆ ಆಡುವ ಆಟವೆಂದೂ ಹೇಳಲಾಗಿದೆ. ಈ ವ್ಯಾಖ್ಯಾನ ಸರಿಯೆಂದಾದರೆ ಅನಂತರ ಪವಿತ್ರ ಕುರ್‌ಆನ್ ಸಾದ್ಯಂತ ತಪ್ಪೆನ್ನಬೇಕಾಗುತ್ತದೆ. ಏಕೆಂದರೆ ಪವಿತ್ರ ಕುರ್‌ಆನ್ ಸಾದ್ಯಂತ ಮಾನವ, ಅಲ್ಲಾಹನ ದಾಸರು ಮಾತ್ರ ಆಗಿದ್ದಾರೆಂದು ಸಾರುತ್ತದೆ. ನೀವು ಓರ್ವ ಅಲ್ಲಾಹನನ್ನಲ್ಲದೆ ಯಾರ ದಾಸ್ಯವನ್ನೂ ಕೈಗೊಳ್ಳಬಾರದೆಂದು ಅದು ಕರೆ ನೀಡುತ್ತದೆ.

10. ಅಲ್ಲಾಹನ ಗ್ರಂಥದ ಅತ್ಯುತ್ತಮ ತಾತ್ಪರ್ಯವನ್ನು ಅನುಸರಿಸುವುದೆಂದರೆ ಅಲ್ಲಾಹನು ಯಾವ ಕೆಲಸವನ್ನು ಮಾಡುವ ಆದೇಶ ಕೊಟ್ಟಿದ್ದಾನೋ ಅದನ್ನು ಅನುಸರಿಸುವುದು, ಯಾವ ಕಾರ್ಯಗಳಿಂದ ತಡೆದಿದ್ದಾನೋ ಅದರಿಂದ ದೂರ ನಿಲ್ಲುವುದು, ಉದಾಹರಣೆ ಮತ್ತು ಘಟನೆಯ ರೂಪದಲ್ಲಿ ಅವನು ಯಾವುದನ್ನೆಲ್ಲಾ ವಿವರಿಸಿದ್ದಾನೋ ಅದರಿಂದ ಪಾಠಕಲಿಯುವುದು. ಅದಕ್ಕೆ ಪ್ರತಿಯಾಗಿ ಯಾರು ಆಜ್ಞೋಲ್ಲಂಘನೆ ಮಾಡುತ್ತಾನೋ, ನಿಷಿದ್ಧ ಕಾರ್ಯಗಳನ್ನು ಮಾಡುತ್ತಾನೋ, ಅಲ್ಲಾಹನ ಉಪದೇಶ ಮತ್ತು ಬೋಧನೆಗಳಿಂದ ಪಾಠ ಕಲಿಯುವುದಿಲ್ಲವೋ ಅವನು ಅಲ್ಲಾಹನ ಗ್ರಂಥದ ಕೆಟ್ಟ ತಾತ್ಪರ್ಯವನ್ನು ಅನುಸರಿಸಿದನು. ಅರ್ಥಾತ್, ಅಲ್ಲಾಹನ ಗ್ರಂಥ ಕೆಟ್ಟದ್ದೆಂದು ಸಾರಿದ ಅಂಶಗಳನ್ನು ಅನುಸರಿಸಿದನು.

57. ಅಥವಾ "ಅಯ್ಯೋ, ಅಲ್ಲಾಹನು ನನಗೆ ಮಾರ್ಗದರ್ಶನ ನೀಡಿರುತ್ತಿದ್ದರೆ ನಾನೂ ದೇವನಿಷ್ಠರಲ್ಲಾಗುತ್ತಿದ್ದೆ" ಎಂದು-

أَوْ تَقُولَ لَوْ أَنَّ اللَّهَ هَدَانِي لَكُنتُ مِنَ الْمُتَّقِينَ ﴿٥٧﴾

58. ಅಥವಾ ಯಾತನೆಯನ್ನು ಕಣ್ಣಾರೆ ಕಂಡು, "ಅಯ್ಯೋ ನನಗೆ ಇನ್ನೊಂದು ಅವಕಾಶ ಸಿಕ್ಕಿ ಬಿಟ್ಟರೆ ನಾನೂ ಸತ್ಕರ್ಮವೆಸಗುವವರಲ್ಲಾಗಿ ಬಿಡುತ್ತಿದ್ದೆ" ಎಂದು ಹೇಳುವಂತಾಗದಿರಲಿ.

أَوْ تَقُولَ حِينَ تَرَى الْعَذَابَ لَوْ أَنَّ لِي كَرَّةً فَأَكُونَ مِنَ الْمُحْسِنِينَ ﴿٥٨﴾

59. (ಆಗ ಅವನಿಗೆ) "ಏಕೆ? ನನ್ನ ವಚನಗಳು ನಿನ್ನ ಬಳಿಗೆ ಬಂದಿದ್ದುವು. ಅನಂತರ ನೀನು ಅವುಗಳನ್ನು ಸುಳ್ಳಾಗಿಸಿದೆ ಮತ್ತು ದುರಹಂಕಾರ ತೋರಿದೆ, ನೀನು ಸತ್ಯನಿಷೇಧಿಗಳಲ್ಲಾದೆ" (ಎಂಬ ಉತ್ತರ ಸಿಗುವಂತೆಯೂ ಆಗಬಾರದು).

بَلَىٰ قَدْ جَاءَتْكَ آيَاتِي فَكَذَّبْتَ بِهَا وَاسْتَكْبَرْتَ وَكُنتَ مِنَ الْكَافِرِينَ ﴿٥٩﴾

60. ಇಂದು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿದವರ ಮುಖವು ಪುನರುತ್ಥಾನದಿನ ಕಪ್ಪಾಗಿ ಬಿಟ್ಟಿರುವುದನ್ನು ನೀವು ಕಾಣುವಿರಿ. ದುರಹಂಕಾರಿಗಳಿಗೆ ನರಕದಲ್ಲಿ ಸಾಕಷ್ಟು ಸ್ಥಳವಿಲ್ಲವೇ?

وَيَوْمَ الْقِيَامَةِ تَرَى الَّذِينَ كَذَبُوا عَلَى اللَّهِ وُجُوهُهُم مُّسْوَدَّةٌ ۚ أَلَيْسَ فِي جَهَنَّمَ مَثْوًى لِّلْمُتَكَبِّرِينَ ﴿٦٠﴾

61. ಇದಕ್ಕೆ ವ್ಯತಿರಿಕ್ತವಾಗಿ, ಇಲ್ಲಿ ದೇವಭಯವುಳ್ಳವರಾಗಿದ್ದ ಜನರ ವಿಜಯ ಸಾಧನಗಳ ಕಾರಣ, ಅಲ್ಲಾಹನು ಅವರಿಗೆ ಮೋಕ್ಷ ನೀಡುವನು. ಅಲ್ಲಿ ಅವರಿಗೆ ಯಾವ ಹಾನಿಯೂ ತಟ್ಟದು ಮತ್ತು ಅವರು ದುಃಖಿತರಾಗಲಾರರು.

وَيُنَجِّي اللَّهُ الَّذِينَ اتَّقَوْا بِمَفَازَتِهِمْ لَا يَمَسُّهُمُ السُّوءُ وَلَا هُمْ يَحْزَنُونَ ﴿٦١﴾

62. ಅಲ್ಲಾಹನು ಸಕಲ ವಸ್ತುಗಳ ಸೃಷ್ಟಿಕರ್ತನು ಮತ್ತು ಅವನೇ ಸಕಲ ವಸ್ತುಗಳ ಮೇಲ್ವಿಚಾರಕನಾಗಿರುವನು.

اللَّهُ خَالِقُ كُلِّ شَيْءٍ ۖ وَهُوَ عَلَىٰ كُلِّ شَيْءٍ وَكِيلٌ ﴿٦٢﴾

63. ಭೂಮಿ-ಆಕಾಶಗಳ ಭಂಡಾರಗಳ ಬೀಗದ ಕೈಗಳು ಅವನ ವಶದಲ್ಲೇ ಇವೆ ಮತ್ತು ಅಲ್ಲಾಹನ ಸೂಕ್ತಗಳನ್ನು ನಿಷೇಧಿಸುವವರೇ ನಷ್ಟ ಹೊಂದುವವರಾಗಿದ್ದಾರೆ.

لَّهُ مَقَالِيدُ السَّمَاوَاتِ وَالْأَرْضِ ۗ وَالَّذِينَ كَفَرُوا بِآيَاتِ اللَّهِ أُولَٰئِكَ هُمُ الْخَاسِرُونَ ﴿٦٣﴾

64. (ಸಂದೇಶವಾಹಕರೇ) ಇವರೊಡನೆ ಹೇಳಿರಿ; "ತಿಳಿಗೇಡಿಗಳೇ, ನೀವು ಅಲ್ಲಾಹನ ಹೊರತು ಇತರರ ಆರಾಧನೆ ಮಾಡಲು ನನ್ನೊಡನೆ ಹೇಳುತ್ತೀರಾ?"

قُلْ أَفَغَيْرَ اللَّهِ تَأْمُرُونِّي أَعْبُدُ أَيُّهَا الْجَاهِلُونَ ﴿٦٤﴾

65. (ನೀವು ಇದನ್ನು ಅವರೊಡನೆ ಸ್ಪಷ್ಟವಾಗಿ ಹೇಳಿ ಬಿಡಬೇಕು. ಏಕೆಂದರೆ) ನೀವು ಬಹು ದೇವತ್ವವೆಸಗಿದರೆ ನಿಮ್ಮ ಕರ್ಮವು ನಿರರ್ಥಕಗೊಳ್ಳುವುದು ಮತ್ತು ನೀವು ನಷ್ಟ ಹೊಂದುವವರಲ್ಲಾಗು

وَلَقَدْ أُوحِيَ إِلَيْكَ وَإِلَى الَّذِينَ مِن قَبْلِكَ لَئِنْ أَشْرَكْتَ لَيَحْبَطَنَّ عَمَلُكَ

ವಿರೆಂದು ನಿಮ್ಮ ಕಡೆಗೂ ನಿಮಗಿಂತ ಮುಂಚೆ ಗತಿಸಿದ ಸಕಲ ಪ್ರವಾದಿಗಳ ಕಡೆಗೂ 'ದಿವ್ಯವಾಣಿ' ಕಳುಹಿಸಲಾಗಿದೆ.

وَلَتَكُونَنَّ مِنَ الْخٰسِرِينَ ﴿٦٥﴾

66. ಆದುದರಿಂದ (ಸಂದೇಶವಾಹಕರೇ) ನೀವು ಕೇವಲ ಅಲ್ಲಾಹನ ಆರಾಧನೆಯನ್ನು ಮಾಡಿರಿ ಮತ್ತು ಕೃತಜ್ಞ ದಾಸರಲ್ಲಾಗಿರಿ.

بَلِ اللّٰهَ فَاعْبُدْ وَكُنْ مِّنَ الشّٰكِرِينَ ﴿٦٦﴾

67. ಇವರು ಅಲ್ಲಾಹನನ್ನು ಗೌರವಿಸಬೇಕಾದ ರೀತಿಯಲ್ಲಿ ಗೌರವಿಸಲಿಲ್ಲ. (ಅವನೆಂತಹ ಮಹಿಮಾವಂತನೆಂದರೆ) ಪುನರುತ್ಥಾನ ದಿನ ಇಡೀ ಭೂಮಿಯು ಅವನ ಮುಷ್ಟಿಯೊಳಗಿರುವುದು ಮತ್ತು ಆಕಾಶಗಳು ಅವನ ಬಲಗೈಯಲ್ಲಿ ಸುತ್ತಿಕೊಂಡಿರುವುವು.[11] ಇವರು ಮಾಡುತ್ತಿರುವ ಬಹು ದೇವತ್ವದಿಂದ ಅವನು ಪಾವನನೂ ಅತ್ಯುನ್ನತನೂ ಆಗಿರುತ್ತಾನೆ.

وَمَا قَدَرُوا اللّٰهَ حَقَّ قَدْرِهٖ ۖ وَالْأَرْضُ جَمِيعًا قَبْضَتُهٗ يَوْمَ الْقِيٰمَةِ وَالسَّمٰوٰتُ مَطْوِيّٰتٌۢ بِيَمِينِهٖ ۚ سُبْحٰنَهٗ وَتَعٰلٰى عَمَّا يُشْرِكُونَ ﴿٦٧﴾

68. ಅಂದು ಸೂರ್ (ಕಹಳೆ) ಊದಲ್ಪಡುವುದು ಮತ್ತು ಅಲ್ಲಾಹ್ ಯಾರನ್ನು ಜೀವಂತವಾಗಿರಿಸಲಿಚ್ಛಿಸುವನೋ ಅವನ ಹೊರತು ಭೂಮಿ-ಆಕಾಶಗಳಲ್ಲಿರುವವರೆಲ್ಲರೂ ಸತ್ತು ಬೀಳುವರು. ತರುವಾಯ ಇನ್ನೊಂದು ಕಹಳೆ ಊದಲ್ಪಡುವುದು ಮತ್ತು ಒಮ್ಮೆಲೇ ಎಲ್ಲರೂ ಎದ್ದು ನೋಡ ತೊಡಗುವರು.

وَنُفِخَ فِي الصُّورِ فَصَعِقَ مَنْ فِي السَّمٰوٰتِ وَمَنْ فِي الْأَرْضِ إِلَّا مَنْ شَآءَ اللّٰهُ ۖ ثُمَّ نُفِخَ فِيهِ أُخْرٰى فَإِذَا هُمْ قِيَامٌ يَّنْظُرُونَ ﴿٦٨﴾

69. ಭೂಮಿಯು ತನ್ನ ಪ್ರಭುವಿನ ಜ್ಯೋತಿಯಿಂದ ಬೆಳಗುವುದು. ಕರ್ಮಗ್ರಂಥವು ತಂದಿರಿಸಲ್ಪಡುವುದು. ಪ್ರವಾದಿಗಳೂ ಎಲ್ಲ ಸಾಕ್ಷಿಗಳೂ ಹಾಜರುಗೊಳಿಸಲ್ಪಡುವರು. ಜನರ ನಡುವೆ ಸರಿಯಾಗಿ ನ್ಯಾಯಸಹಿತ ತೀರ್ಮಾನ ಮಾಡಿ ಬಿಡಲಾಗುವುದು. ಅವರ ಮೇಲೆ ಯಾವ ಅಕ್ರಮವೂ ಆಗದು-

وَأَشْرَقَتِ الْأَرْضُ بِنُورِ رَبِّهَا وَوُضِعَ الْكِتٰبُ وَجِاىٓءَ بِالنَّبِيّٖنَ وَالشُّهَدَآءِ وَقُضِيَ بَيْنَهُمْ بِالْحَقِّ وَهُمْ لَا يُظْلَمُونَ ﴿٦٩﴾

70. ಮತ್ತು ಪ್ರತಿಯೊಬ್ಬ ವ್ಯಕ್ತಿಗೂ ಅವನು ಮಾಡಿದ್ದ ಕರ್ಮಗಳ ಸರ್ವಸಂಪೂರ್ಣ ಪ್ರತಿಫಲ ನೀಡಲಾಗುವುದು. ಜನರು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ಅರಿತಿರುತ್ತಾನೆ.

وَوُفِّيَتْ كُلُّ نَفْسٍ مَّا عَمِلَتْ وَهُوَ أَعْلَمُ بِمَا يَفْعَلُونَ ﴿٧٠﴾

11. ಭೂಮಿ-ಆಕಾಶಗಳಲ್ಲಿ ಅಲ್ಲಾಹನಿಗೆ ಪರಮಾಧಿಕಾರವಿದೆ ಎಂಬ ಚಿತ್ರಣವನ್ನು ನೀಡಲಿಕ್ಕಾಗಿ 'ಮುಷ್ಟಿಯೊಳಗಿರುವ' ಮತ್ತು 'ಕೈಯಲ್ಲಿ ಸುತ್ತಿಕೊಂಡಿರುವ' ಅಲಂಕಾರವನ್ನು ಬಳಸಲಾಗಿದೆ. ವ್ಯಕ್ತಿ ಸಣ್ಣ ಚೆಂಡೊಂದನ್ನು ಅಂಗೈಯಲ್ಲಿ ಅದುಮಿ ಹಿಡಿಯುತ್ತಾನೆ. ಅವನ ಪಾಲಿಗೆ ಇದೊಂದು ಸುಲಭದ ಕೆಲಸವಾಗಿದೆ. ಹಾಗೆಯೇ ಒಬ್ಬ ವ್ಯಕ್ತಿ ಕರವಸ್ತ್ರವನ್ನು ಕೈಗೆ ಸುತ್ತಿಕೊಳ್ಳುತ್ತಾನೆ. ಅವನ ಪಾಲಿಗೆ ಅದು ತ್ರಾಸದಾಯಕ ಕೆಲಸವೇನೂ ಅಲ್ಲ. ಹಾಗೆಯೇ ಅಲ್ಲಾಹನ ಮಹಾನತೆ ಮತ್ತು ಹಿರಿತನವನ್ನು ಅಂದಾಜಿಸಲು ಅಶಕ್ತರಾದ ಮಾನವರೆಲ್ಲರೂ ನಿರ್ಣಾಯಕ ದಿನದಂದು ಭೂಮಿ-ಆಕಾಶಗಳು ಅಲ್ಲಾಹನ ಸಾಮರ್ಥ್ಯದ ಮುಂದೆ ಕ್ಷುಲ್ಲಕವಾದ ಚೆಂಡು ಅಥವಾ ಸಣ್ಣ ಕರವಸ್ತ್ರದಂತೆ ಆಗಿ ಬಿಡುವುದನ್ನು ಕಣ್ಣಾರೆ ಕಾಣುವರು.

71. (ಈ ತೀರ್ಮಾನದ ಬಳಿಕ) ಸತ್ಯನಿಷೇಧಿಗಳು ಗುಂಪು ಗುಂಪುಗಳಾಗಿ ನರಕದ ಕಡೆಗೆ ಅಟ್ಟಲ್ಪಡುವರು. ಅವರು ಅಲ್ಲಿಗೆ ತಲುಪಿದಾಗ ಅದರ ದ್ವಾರಗಳು ತೆರೆಯಲ್ಪಡುವುವು ಮತ್ತು ಅದರ ಕಾವಲು ಗಾರರು ಅವರೊಡನೆ, "ನಿಮಗೆ ನಿಮ್ಮ ಪ್ರಭುವಿನ ವಚನಗಳನ್ನು ತಿಳಿಸುವ ಹಾಗೂ ನಿಮಗೊಮ್ಮೆ ಈ ದಿನವನ್ನೂ ಕಾಣ ಬೇಕಾಗುವುದೆಂದು ಎಚ್ಚರಿಸುವ ಸಂದೇಶವಾಹಕರು ನಿಮ್ಮೊಳ ಗಿಂದಲೇ ನಿಮ್ಮ ಕಡೆಗೆ ಬಂದಿರಲಿಲ್ಲವೇ?" ಎಂದು ಕೇಳುವರು. ಅವರು ಹೀಗೆ ಉತ್ತರ ಕೊಡುವರು; "ಹೌದು ಬಂದಿದ್ದರು, ಆದರೆ ಯಾತನೆಯ ತೀರ್ಮಾನವು ಸತ್ಯನಿಷೇಧಿಗಳನ್ನು ಅಂಟಿ ಕೊಂಡಿತು."

وَسِيقَ الَّذِينَ كَفَرُوا إِلَى جَهَنَّمَ زُمَرًا ۖ حَتَّىٰ إِذَا جَاءُوهَا فُتِحَتْ أَبْوَابُهَا وَقَالَ لَهُمْ خَزَنَتُهَا أَلَمْ يَأْتِكُمْ رُسُلٌ مِّنكُمْ يَتْلُونَ عَلَيْكُمْ آيَاتِ رَبِّكُمْ وَيُنذِرُونَكُمْ لِقَاءَ يَوْمِكُمْ هَٰذَا ۚ قَالُوا بَلَىٰ وَلَٰكِنْ حَقَّتْ كَلِمَةُ الْعَذَابِ عَلَى الْكَافِرِينَ ﴿٧١﴾

72. ಆಗ ಅವರೊಡನೆ, "ನರಕದ ದ್ವಾರಗಳಲ್ಲಿ ಪ್ರವೇಶಿಸಿರಿ. ಇನ್ನು ನಿಮಗೆ ಇಲ್ಲೇ ಸದಾಕಾಲ ಇರಬೇಕಾಗಿದೆ. ದುರಹಂಕಾರಿ ಗಳಿಗಾಗಿರುವ ಅತ್ಯಂತ ಕೆಟ್ಟ ನಿವಾಸವಿದು" ಎನ್ನಲಾಗುವುದು.

قِيلَ ادْخُلُوا أَبْوَابَ جَهَنَّمَ خَالِدِينَ فِيهَا ۖ فَبِئْسَ مَثْوَى الْمُتَكَبِّرِينَ ﴿٧٢﴾

73. ತಮ್ಮ ಪ್ರಭುವಿನ ಆಜ್ಞೋಲ್ಲಂಘನೆಯಿಂದ ದೂರವಿರುತ್ತಿದ್ದವ ರನ್ನು ಗುಂಪು ಗುಂಪುಗಳಾಗಿ ಸ್ವರ್ಗದ ಕಡೆಗೆ ಒಯ್ಯಲಾಗುವುದು. ಅವರು ಅಲ್ಲಿಗೆ ತಲಪುವಾಗ ಅದರ ದ್ವಾರಗಳು ಮೊದಲೇ ತೆರೆದಿರಿಸಲ್ಪಟ್ಟಿರುವುವು. ಆಗ ಅದರ ವ್ಯವಸ್ಥಾಪಕರು ಅವರೊಡನೆ, "ನಿಮಗೆ ಸಲಾಮ್ (ನಿಮ್ಮ ಮೇಲೆ ಶಾಂತಿ ಇರಲಿ) ಬಹಳ ಚೆನ್ನಾಗಿದ್ದಿರಿ. ಇದರೊಳಗೆ ಸದಾಕಾಲಕ್ಕಾಗಿ ಪ್ರವೇಶಿಸಿಕೊಳ್ಳಿರಿ" ಎನ್ನುವರು.

وَسِيقَ الَّذِينَ اتَّقَوْا رَبَّهُمْ إِلَى الْجَنَّةِ زُمَرًا ۖ حَتَّىٰ إِذَا جَاءُوهَا وَفُتِحَتْ أَبْوَابُهَا وَقَالَ لَهُمْ خَزَنَتُهَا سَلَامٌ عَلَيْكُمْ طِبْتُمْ فَادْخُلُوهَا خَالِدِينَ ﴿٧٣﴾

74. ಆಗ ಇವರು ಹೇಳುವರು; "ನಮ್ಮೊಂದಿಗೆ ತನ್ನ ವಾಗ್ದಾನವನ್ನು ಸತ್ಯಗೊಳಿಸಿದ ಹಾಗೂ ನಮ್ಮನ್ನು ಭೂಮಿಯ ವಾರೀಸುದಾರರಾಗಿ ಮಾಡಿದ ಅಲ್ಲಾಹನಿಗೆ ಕೃತಜ್ಞತೆಗಳು. ಇನ್ನು ನಾವು ಸ್ವರ್ಗದಲ್ಲಿ ನಮಗಿಷ್ಟ ಬಂದ ಕಡೆ ನಮ್ಮ ನಿವಾಸ ಮಾಡಿಕೊಳ್ಳಬಹುದು." ಹೀಗೆ, ಕರ್ಮವೆಸಗುವವರಿಗೆ ಅತ್ಯುತ್ತಮ ಪ್ರತಿಫಲವಿದೆ.

وَقَالُوا الْحَمْدُ لِلَّهِ الَّذِي صَدَقَنَا وَعْدَهُ وَأَوْرَثَنَا الْأَرْضَ نَتَبَوَّأُ مِنَ الْجَنَّةِ حَيْثُ نَشَاءُ ۖ فَنِعْمَ أَجْرُ الْعَامِلِينَ ﴿٧٤﴾

75. ದೇವಚರರು 'ವಿಶ್ವಸಿಂಹಾಸನದ' ಸುತ್ತಲೂ ಸಾಲುಗಟ್ಟಿ ತಮ್ಮ ಪ್ರಭುವಿನ ಪ್ರಶಂಸೆ ಮತ್ತು ಕೀರ್ತನೆ ಮಾಡುತ್ತಿರುವುದನ್ನು ನೀವು ನೋಡುವಿರಿ ಮತ್ತು ಜನರ ನಡುವೆ ಸರಿಯಾಗಿ ನ್ಯಾಯ ಪೂರ್ಣ ತೀರ್ಮಾನ ಮಾಡಿಬಿಡಲಾಗುವುದು ಮತ್ತು ಸರ್ವಲೋಕ ಪಾಲಕನಾದ ಅಲ್ಲಾಹನಿಗೇ ಸಕಲ ಸ್ತೋತ್ರಗಳೂ ಮೀಸಲೆಂದು ಸಾರಿ ಹೇಳಲಾಗುವುದು.

وَتَرَى الْمَلَائِكَةَ حَافِّينَ مِنْ حَوْلِ الْعَرْشِ يُسَبِّحُونَ بِحَمْدِ رَبِّهِمْ ۖ وَقُضِيَ بَيْنَهُم بِالْحَقِّ وَقِيلَ الْحَمْدُ لِلَّهِ رَبِّ الْعَالَمِينَ ﴿٧٥﴾






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹಾ ಮೀಮ್.

حٰمٓ ①

2. ಈ ಗ್ರಂಥದ ಅವತೀರ್ಣವು ಅಲ್ಲಾಹನ ಕಡೆಯಿಂದಾಗಿರುತ್ತದೆ. ಅವನು ಪ್ರಬಲನೂ ಸರ್ವಜ್ಞನೂ-

تَنْزِيْلُ الْكِتٰبِ مِنَ اللّٰهِ الْعَزِيْزِ الْعَلِيْمِ ②

3. ಪಾಪಗಳನ್ನು ಕ್ಷಮಿಸುವವನೂ ಪಶ್ಚಾತ್ತಾಪ ಸ್ವೀಕರಿಸುವವನೂ ಕಠಿಣ ಶಿಕ್ಷೆ ಕೊಡುವವನೂ ಮಹಾ ಅನುಗ್ರಹಿಯೂ ಆಗಿರುತ್ತಾನೆ. ಅವನ ಹೊರತು ಬೇರೆ ಆರಾಧ್ಯರಿಲ್ಲ, ಸರ್ವರಿಗೂ ಅವನ ಕಡೆಗೇ ಮರಳಬೇಕಾಗಿದೆ.

غَافِرِ الذَّنْبِ وَقَابِلِ التَّوْبِ شَدِيْدِ الْعِقَابِ ذِى الطَّوْلِ لَآ اِلٰهَ اِلَّا هُوَ اِلَيْهِ الْمَصِيْرُ ③

4. ಸತ್ಯವನ್ನು ನಿಷೇಧಿಸಿದವರ ಹೊರತು ಇನ್ನಾರೂ ಅಲ್ಲಾಹನ ವಚನಗಳ ಬಗ್ಗೆ ಜಗಳಾಡುವುದಿಲ್ಲ. ಆದುದರಿಂದ ಜಗತ್ತಿನ ನಾಡುಗಳಲ್ಲಿ ಅವರ ಚಲನವಲನಗಳು ನಿಮ್ಮನ್ನು ವಂಚಿಸದಿರಲಿ.

مَا يُجَادِلُ فِيْٓ اٰيٰتِ اللّٰهِ اِلَّا الَّذِيْنَ كَفَرُوْا فَلَا يَغْرُرْكَ تَقَلُّبُهُمْ فِى الْبِلَادِ ④

5. ಇವರಿಗಿಂತ ಮುಂಚೆ ನೂಹರ ಜನಾಂಗವೂ ಸುಳ್ಳಾಗಿಸಿದೆ. ಆ ಬಳಿಕ ಇತರ ಅನೇಕ ಕೂಟಗಳೂ ಹೀಗೆ ಮಾಡಿವೆ. ಪ್ರತಿಯೊಂದು ಜನಾಂಗವೂ ತನ್ನ ಸಂದೇಶವಾಹಕನನ್ನು ಸೆರೆ ಹಿಡಿಯಲಿಕ್ಕಾಗಿ ಅವನ ಮೇಲೆ ಎರಗಿತು. ಅವರೆಲ್ಲರೂ ಮಿಥ್ಯದ ಅಸ್ತ್ರಗಳಿಂದ ಸತ್ಯವನ್ನು ಕೀಳಾಗಿಸಲು ಯತ್ನಿಸಿದರು. ಆದರೆ ಕೊನೆಗೆ ನಾನು ಅವರನ್ನು ಹಿಡಿದು ಬಿಟ್ಟೆನು. ನನ್ನ ಶಿಕ್ಷೆಯು ಎಷ್ಟು ಕಠಿಣ ವಾಗಿತ್ತೆಂದು ನೋಡಿರಿ.

كَذَّبَتْ قَبْلَهُمْ قَوْمُ نُوْحٍ وَّالْاَحْزَابُ مِنْ بَعْدِهِمْ وَهَمَّتْ كُلُّ اُمَّةٍ بِرَسُوْلِهِمْ لِيَاْخُذُوْهُ وَجٰدَلُوْا بِالْبَاطِلِ لِيُدْحِضُوْا بِهِ الْحَقَّ فَاَخَذْتُهُمْ فَكَيْفَ كَانَ عِقَابِ ⑤

6. ಇದೇ ರೀತಿಯಲ್ಲಿ ಅವರು ಖಂಡಿತವಾಗಿಯೂ ನರಕ ವಾಸಿಗಳಾಗಲಿರುವರೆಂಬ ನಿಮ್ಮ ಪ್ರಭುವಿನ ತೀರ್ಮಾನವು ಸತ್ಯ ನಿಷೇಧಿಗಳಾಗಿರುವ ಎಲ್ಲರಿಗೆ ಅನ್ವಯವಾಗಿ ಬಿಟ್ಟಿದೆ.

وَكَذٰلِكَ حَقَّتْ كَلِمَتُ رَبِّكَ عَلَى الَّذِيْنَ كَفَرُوْٓا اَنَّهُمْ اَصْحٰبُ النَّارِ ⑥

7. 'ವಿಶ್ವಸಿಂಹಾಸನ'ವನ್ನು ಹೊತ್ತ ದೇವಚರರು ಮತ್ತು ಅದರ ಸುತ್ತಲೂ ಉಪಸ್ಥಿತರಿರುವವರು ತಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನನ್ನು ಸ್ತುತಿಸುತ್ತಿರುತ್ತಾರೆ. ಅವರು ಅವನ ಮೇಲೆ ವಿಶ್ವಾಸವಿರಿಸುತ್ತಾರೆ ಮತ್ತು ಸತ್ಯವಿಶ್ವಾಸಿಗಳ ಪಾಪ ವಿಮೋಚನೆಗಾಗಿ ಪ್ರಾರ್ಥಿಸುತ್ತಾರೆ. ಅವರು ಹೇಳುತ್ತಾರೆ; ನಮ್ಮ ಪ್ರಭೂ, ನೀನು ನಿನ್ನ ಕೃಪೆ ಮತ್ತು ನಿನ್ನ ಜ್ಞಾನದೊಂದಿಗೆ ಸಕಲ ವಸ್ತುಗಳನ್ನು ಆವರಿಸಿಕೊಂಡಿರುವೆ. ಆದುದರಿಂದ ಪಶ್ಚಾತ್ತಾಪ ಪಟ್ಟವರನ್ನು ಹಾಗೂ ನಿನ್ನ ಮಾರ್ಗವನ್ನು ಸ್ವೀಕರಿಸಿಕೊಂಡವರನ್ನು ಕ್ಷಮಿಸು ಮತ್ತು ನರಕ ಯಾತನೆಯಿಂದ ರಕ್ಷಿಸು.

ٱلَّذِينَ يَحْمِلُونَ ٱلْعَرْشَ وَمَنْ حَوْلَهُۥ يُسَبِّحُونَ بِحَمْدِ رَبِّهِمْ وَيُؤْمِنُونَ بِهِۦ وَيَسْتَغْفِرُونَ لِلَّذِينَ ءَامَنُوا۟ ۖ رَبَّنَا وَسِعْتَ كُلَّ شَىْءٍ رَّحْمَةً وَعِلْمًا فَٱغْفِرْ لِلَّذِينَ تَابُوا۟ وَٱتَّبَعُوا۟ سَبِيلَكَ وَقِهِمْ عَذَابَ ٱلْجَحِيمِ ⑦

8. ನಮ್ಮ ಪ್ರಭೂ, ನೀನು ಅವರಿಗೆ ವಾಗ್ದಾನ ಮಾಡಿರುವ ಶಾಶ್ವತವಾದ ಸ್ವರ್ಗೋದ್ಯಾನಗಳಲ್ಲಿ ಅವರನ್ನು ಪ್ರವೇಶಗೊಳಿಸು. ಅವರ ಪಿತರ, ಪತ್ನಿಯರ ಮತ್ತು ಮಕ್ಕಳ ಪೈಕಿ ಸಜ್ಜನರಾದವರನ್ನು ಕೂಡಾ ಅವರೊಂದಿಗೆ ಅಲ್ಲಿಗೆ ತಲುಪಿಸು. ನಿಶ್ಚಯವಾಗಿಯೂ ನೀನು ಪ್ರಬಲನೂ ಯುಕ್ತಿವಂತನೂ ಆಗಿರುವೆ.

رَبَّنَا وَأَدْخِلْهُمْ جَنَّٰتِ عَدْنٍ ٱلَّتِى وَعَدتَّهُمْ وَمَن صَلَحَ مِنْ ءَابَآئِهِمْ وَأَزْوَٰجِهِمْ وَذُرِّيَّٰتِهِمْ ۚ إِنَّكَ أَنتَ ٱلْعَزِيزُ ٱلْحَكِيمُ ⑧

9. ಅವರನ್ನು ಕೇಡುಗಳಿಂದ ರಕ್ಷಿಸು. ನೀನು ಆ ದಿನ ಯಾರನ್ನು ಕೇಡುಗಳಿಂದ ರಕ್ಷಿಸಿದೆಯೋ ಅವನ ಮೇಲೆ ನೀನು ಮಹಾ ಕೃಪೆಗೈದೆ. ಇದುವೇ ಮಹಾ ಯಶಸ್ಸಾಗಿದೆ.

وَقِهِمُ ٱلسَّيِّـَٔاتِ ۚ وَمَن تَقِ ٱلسَّيِّـَٔاتِ يَوْمَئِذٍ فَقَدْ رَحِمْتَهُۥ ۚ وَذَٰلِكَ هُوَ ٱلْفَوْزُ ٱلْعَظِيمُ ⑨ ع

10. ಸತ್ಯನಿಷೇಧಿಗಳೊಡನೆ ಪುನರುತ್ಥಾನ ದಿನ ಹೀಗೆ ಕೂಗಿ ಹೇಳಲಾಗುವುದು- "ಇಂದು ನಿಮಗೆ ನಿಮ್ಮ ಮೇಲೆ ಎಷ್ಟು ತೀವ್ರವಾದ ಕೋಪ ಬರುತ್ತಿದೆಯೋ ಅದಕ್ಕಿಂತಲೂ ತೀವ್ರವಾದ ಕೋಪವು ನಿಮ್ಮನ್ನು ಸತ್ಯವಿಶ್ವಾಸದ ಕಡೆಗೆ ಕರೆಯಲಾಗುತ್ತಿದ್ದ ವೇಳೆ ನೀವು ನಿರಾಕರಿಸುತ್ತಿದ್ದಾಗ, ಅಲ್ಲಾಹನಿಗೆ ನಿಮ್ಮ ಮೇಲೆ ಬರುತ್ತಿತ್ತು."

إِنَّ ٱلَّذِينَ كَفَرُوا۟ يُنَادَوْنَ لَمَقْتُ ٱللَّهِ أَكْبَرُ مِن مَّقْتِكُمْ أَنفُسَكُمْ إِذْ تُدْعَوْنَ إِلَى ٱلْإِيمَٰنِ فَتَكْفُرُونَ ⑩

11. ಆಗ ಅವರು ಹೇಳುವರು; "ನಮ್ಮ ಪ್ರಭೂ, ನಿಜಕ್ಕೂ ನೀನು ನಮಗೆ ಎರಡು ಸಲ ಮರಣವನ್ನೂ ಎರಡು ಸಲ ಜೀವನವನ್ನೂ ನೀಡಿರುವೆ.[1] ಈಗ ನಾವು ನಮ್ಮ ಅಪರಾಧಗಳನ್ನು ಒಪ್ಪಿಕೊಳ್ಳುತ್ತೇವೆ. ಈಗ ಇಲ್ಲಿಂದ ಹೊರ ಹೋಗುವ ದಾರಿ ಯಾವುದಾದರೂ ಇದೆಯೇ?" ಎನ್ನುವರು.

قَالُوا۟ رَبَّنَآ أَمَتَّنَا ٱثْنَتَيْنِ وَأَحْيَيْتَنَا ٱثْنَتَيْنِ فَٱعْتَرَفْنَا بِذُنُوبِنَا فَهَلْ إِلَىٰ خُرُوجٍ مِّن سَبِيلٍ ⑪

12. (ಆಗ ಅವರಿಗೆ ಹೀಗೆ ಉತ್ತರ ಸಿಗುವುದು;) "ನೀವು ಈ ಅವಸ್ಥೆಗೆ

ذَٰلِكُم بِأَنَّهُۥٓ إِذَا دُعِىَ ٱللَّهُ وَحْدَهُۥ

1. ಎರಡು ಬಾರಿ ಮರಣ ಮತ್ತು ಎರಡು ಬಾರಿ ಜೀವನ ನೀಡುವುದೆಂದರೆ ಅಲ್ ಬಕರಃ ಅಧ್ಯಾಯದ ಸೂಕ್ತ 28ರಲ್ಲಿ ವಿವರಿಸಿರುವುದೇ ಆಗಿದೆ.

ತುತ್ತಾಗಲು ಕಾರಣವೇನೆಂದರೆ- ನಿಮ್ಮನ್ನು ಏಕಮಾತ್ರ ಅಲ್ಲಾಹನ ಕಡೆಗೆ ಕರೆಯುತ್ತಿದ್ದಾಗ ನೀವು ನಿರಾಕರಿಸಿದ್ದೀರಿ ಮತ್ತು ಅವನ ಜೊತೆ ಇತರರನ್ನು ಸಹಭಾಗಿಗಳಾಗಿ ಮಾಡಿದಾಗ ನೀವು ಒಪ್ಪಿ ಕೊಳ್ಳುತ್ತಿದ್ದಿರಿ. ಈಗ ತೀರ್ಮಾನವು ಅತ್ಯುನ್ನತನೂ ಮಹಾನನೂ ಆದ ಅಲ್ಲಾಹನ ಕೈಯಲ್ಲಿದೆ."

كَفَرْتُمْ ۖ وَإِن يُشْرَكْ بِهِ تُؤْمِنُوا ۚ فَالْحُكْمُ لِلَّهِ الْعَلِيِّ الْكَبِيرِ ﴿١٢﴾

13. ಅವನೇ ನಿಮಗೆ ತನ್ನ ನಿದರ್ಶನಗಳನ್ನು ತೋರಿಸುತ್ತಾನೆ ಮತ್ತು ಆಕಾಶದಿಂದ ನಿಮಗಾಗಿ ಆಹಾರವನ್ನು ಇಳಿಸುತ್ತಾನೆ.[2] ಆದರೆ ಅಲ್ಲಾಹನ ಕಡೆಗೆ ಮರಳುವವನು ಮಾತ್ರ (ಈ ನಿದರ್ಶನಗಳನ್ನು ಕಂಡು) ಪಾಠ ಕಲಿಯುತ್ತಾನೆ.

هُوَ الَّذِي يُرِيكُمْ آيَاتِهِ وَيُنَزِّلُ لَكُم مِّنَ السَّمَاءِ رِزْقًا ۚ وَمَا يَتَذَكَّرُ إِلَّا مَن يُنِيبُ ﴿١٣﴾

14. (ಆದುದರಿಂದ ಮರಳುವವರೇ) ನಿಮ್ಮ ಧರ್ಮವನ್ನು ಅಲ್ಲಾಹನಿ ಗಾಗಿಯೇ ಮುಡಿಪಾಗಿರಿಸಿರಿ, ಅವನನ್ನೇ ಪ್ರಾರ್ಥಿಸಿರಿ. ಇದು ಸತ್ಯನಿಷೇಧಿಗಳಿಗೆ ಎಷ್ಟು ಅಪ್ರಿಯವಾಗಿದ್ದರೂ ಸರಿಯೇ.

فَادْعُوا اللَّهَ مُخْلِصِينَ لَهُ الدِّينَ وَلَوْ كَرِهَ الْكَافِرُونَ ﴿١٤﴾

15. ಅವನು ಅತ್ಯುನ್ನತ ಪದವಿಯುಳ್ಳವನೂ ವಿಶ್ವ ಸಿಂಹಾಸನದ ಒಡೆಯನೂ ಆಗಿರುತ್ತಾನೆ. ಭೇಟಿಯಾಗುವ ದಿನದ ಬಗ್ಗೆ ಎಚ್ಚ ರಿಕೆ ಕೊಡಲಿಕ್ಕಾಗಿ ಅವನು ತನ್ನ ದಾಸರ ಪೈಕಿ ತಾನಿಚ್ಛಿಸಿದವರ ಮೇಲೆ ತನ್ನ ಅಪ್ಪಣೆಯಿಂದ 'ದಿವ್ಯವಾಣಿ'ಯನ್ನು ಅವತೀರ್ಣ ಗೊಳಿಸುತ್ತಾನೆ.

رَفِيعُ الدَّرَجَاتِ ذُو الْعَرْشِ يُلْقِي الرُّوحَ مِنْ أَمْرِهِ عَلَىٰ مَن يَشَاءُ مِنْ عِبَادِهِ لِيُنذِرَ يَوْمَ التَّلَاقِ ﴿١٥﴾

16. ಎಲ್ಲ ಜನರೂ ಬಹಿರಂಗಗೊಳ್ಳುವ ಆ ದಿನ ಅವರ ಯಾವ ವಿಷಯವೂ ಅಲ್ಲಾಹನಿಂದ ಅಡಗಿರಲಾರದು. ಇಂದು ಪ್ರಭುತ್ವ ಯಾರದು? (ಎಂದು ಆ ದಿನ ಕೂಗಿ ಕೇಳಲಾಗುವುದು) ಏಕೈಕನೂ ಅಜೇಯನೂ ಆದ ಅಲ್ಲಾಹನದು. (ಎಂದು ಇಡೀ ವಿಶ್ವವು ಕೂಗಿ ಹೇಳುವುದು)

يَوْمَ هُم بَارِزُونَ ۖ لَا يَخْفَىٰ عَلَى اللَّهِ مِنْهُمْ شَيْءٌ ۚ لِّمَنِ الْمُلْكُ الْيَوْمَ ۖ لِلَّهِ الْوَاحِدِ الْقَهَّارِ ﴿١٦﴾

17. (ಆಗ) ಇಂದು ಪ್ರತಿಯೊಬ್ಬ ಜೀವಿಗೆ ಅವನು ಸಂಪಾದಿಸಿದುದರ ಪ್ರತಿಫಲ ನೀಡಲಾಗುವುದು. ಇಂದು ಯಾರ ಮೇಲೂ ಅನ್ಯಾಯ ಆಗದು. (ಎಂದು ಹೇಳಲಾಗುವುದು) ನಿಶ್ಚಯವಾಗಿಯೂ ಅಲ್ಲಾಹನು ಲೆಕ್ಕ ಪರಿಶೋಧನೆಯಲ್ಲಿ ಅತಿ ಶೀಘ್ರನಾಗಿರುತ್ತಾನೆ.

الْيَوْمَ تُجْزَىٰ كُلُّ نَفْسٍ بِمَا كَسَبَتْ ۚ لَا ظُلْمَ الْيَوْمَ ۚ إِنَّ اللَّهَ سَرِيعُ الْحِسَابِ ﴿١٧﴾

18. ಸಂದೇಶವಾಹಕರೇ, ಸನ್ನಿಹಿತವಾಗಿರುವ ಆ ದಿನದ ಬಗ್ಗೆ ಈ

وَأَنذِرْهُمْ يَوْمَ الْآزِفَةِ إِذِ الْقُلُوبُ

2. ಅರ್ಥಾತ್- ಜೀವನಾಧಾರಗಳಿಗೆ ಮೂಲವಾದ ಮಳೆ ಸುರಿಸುತ್ತಾನೆ. ಜೀವನಾಧಾರಗಳ ಉತ್ಪಾದನೆಗೆ ಕಾರಣವಾದ ಬೇಸಿಗೆ ಮತ್ತು ಚಳಿಯನ್ನು ಇಳಿಸುತ್ತಾನೆ.

ಜನರಿಗೆ ಎಚ್ಚರಿಕೆ ನೀಡಿರಿ. ಆಗ ಹೃದಯಗಳು ಗಂಟಲಿಗೇರಿ ಜನರು ಶೋಕತಪ್ತರಾಗಿ ನಿಂತಿರುವರು. ಅಕ್ರಮಿಗಳಿಗೆ ಆಪ್ತ ಮಿತ್ರನಾಗಲಿ ಪ್ರಭಾವಶಾಲೀ ಶಿಫಾರಸುದಾರನಾಗಲಿ ಇರಲಾರನು.

لَدَى الْحَنَاجِرِ كَاظِمِينَ ۚ مَا لِلظَّالِمِينَ مِنْ حَمِيمٍ وَلَا شَفِيعٍ يُطَاعُ ﴿١٨﴾

19. ಅಲ್ಲಾಹನು ದೃಷ್ಟಿಯ ಚೌರ್ಯಗಳನ್ನೂ ಹೃದಯದೊಳಗೆ ಬಚ್ಚಿಟ್ಟಿರುವ ರಹಸ್ಯಗಳನ್ನೂ ತಿಳಿಯುತ್ತಾನೆ.

يَعْلَمُ خَائِنَةَ الْأَعْيُنِ وَمَا تُخْفِي الصُّدُورُ ﴿١٩﴾

20. ಅಲ್ಲಾಹ್ ನ್ಯಾಯಪೂರ್ಣ ತೀರ್ಮಾನವೆಸಗುವವನು. (ಈ ಬಹು ದೇವವಿಶ್ವಾಸಿಗಳು) ಅಲ್ಲಾಹನನ್ನು ಬಿಟ್ಟು ಯಾರನ್ನು ಪ್ರಾರ್ಥಿಸುತ್ತಾರೋ ಅವರು ಯಾವ ವಿಷಯವನ್ನೂ ತೀರ್ಮಾನಿಸುವವರಲ್ಲ. ನಿಶ್ಚಯವಾಗಿಯೂ ಅಲ್ಲಾಹನೇ ಎಲ್ಲವನ್ನೂ ಕೇಳುವವನೂ ಕಾಣುವವನೂ ಆಗಿರುವನು.

وَاللَّهُ يَقْضِي بِالْحَقِّ ۖ وَالَّذِينَ يَدْعُونَ مِنْ دُونِهِ لَا يَقْضُونَ بِشَيْءٍ ۗ إِنَّ اللَّهَ هُوَ السَّمِيعُ الْبَصِيرُ ﴿٢٠﴾ ع

21. ಇವರಿಗಿಂತ ಮುಂಚೆ ಗತಿಸಿದವರ ಪರಿಣಾಮವೇನಾಯಿತೆಂಬುದು ಇವರಿಗೆ ಕಾಣಿಸುವಂತಾಗಲು ಇವರು ಭೂಮಿಯಲ್ಲೆಂದೂ ಸಂಚರಿಸಿಲ್ಲವೇ? ಅವರು ಇವರಿಗಿಂತ ಹೆಚ್ಚು ಬಲಶಾಲಿಗಳಾಗಿದ್ದರು ಮತ್ತು ಇವರಿಗಿಂತ ಭದ್ರ ಸ್ಮಾರಕಗಳನ್ನು ಭೂಮಿಯಲ್ಲಿ ಬಿಟ್ಟು ಹೋಗಿರುವರು. ಆದರೆ ಅಲ್ಲಾಹನು ಅವರನ್ನು ಅವರ ಪಾಪಗಳಿಗಾಗಿ ಹಿಡಿದು ಬಿಟ್ಟನು. ಅವರನ್ನು ಅಲ್ಲಾಹನಿಂದ ರಕ್ಷಿಸುವವನಾರೂ ಇರಲಿಲ್ಲ.

أَوَلَمْ يَسِيرُوا فِي الْأَرْضِ فَيَنْظُرُوا كَيْفَ كَانَ عَاقِبَةُ الَّذِينَ كَانُوا مِنْ قَبْلِهِمْ ۚ كَانُوا هُمْ أَشَدَّ مِنْهُمْ قُوَّةً وَآثَارًا فِي الْأَرْضِ فَأَخَذَهُمُ اللَّهُ بِذُنُوبِهِمْ ۖ وَمَا كَانَ لَهُمْ مِنَ اللَّهِ مِنْ وَاقٍ ﴿٢١﴾

22. ಅವರ ಗತಿ ಹೀಗಾದುದೇಕೆಂದರೆ ಅವರ ಬಳಿಗೆ ಅವರ ಸಂದೇಶ ವಾಹಕರು ಸುಸ್ಪಷ್ಟ ನಿದರ್ಶನಗಳನ್ನು[3] ತಂದಿದ್ದರು. ಅವರು ನಿರಾಕರಿಸಿಬಿಟ್ಟರು. ಕೊನೆಗೆ ಅಲ್ಲಾಹನು ಅವರನ್ನು ಹಿಡಿದು ಬಿಟ್ಟನು. ನಿಶ್ಚಯವಾಗಿಯೂ ಅವನು ಪ್ರಬಲನೂ ಕಠಿಣವಾಗಿ ಶಿಕ್ಷಿಸುವವನೂ ಆಗಿರುತ್ತಾನೆ.

ذَٰلِكَ بِأَنَّهُمْ كَانَتْ تَأْتِيهِمْ رُسُلُهُمْ بِالْبَيِّنَاتِ فَكَفَرُوا فَأَخَذَهُمُ اللَّهُ ۚ إِنَّهُ قَوِيٌّ شَدِيدُ الْعِقَابِ ﴿٢٢﴾

23-24. ನಾವು ಮೂಸಾರನ್ನು ಫಿರ್‌ಔನ್, ಹಾಮಾನ್ ಮತ್ತು ಕಾರೂನ್‌ರ ಕಡೆಗೆ, ನಮ್ಮ ನಿದರ್ಶನಗಳು ಹಾಗೂ ಸುವ್ಯಕ್ತವಾದ ಪ್ರಮಾಣದೊಂದಿಗೆ ರವಾನಿಸಿದೆವು. ಆದರೆ ಅವರು, "ಮಾಟಗಾರ, ಸುಳ್ಳುಗಾರ" ಎಂದರು.

وَلَقَدْ أَرْسَلْنَا مُوسَىٰ بِآيَاتِنَا وَسُلْطَانٍ مُبِينٍ ﴿٢٣﴾ إِلَىٰ فِرْعَوْنَ وَهَامَانَ وَقَارُونَ فَقَالُوا سَاحِرٌ كَذَّابٌ ﴿٢٤﴾

3. 'ಬಯ್ಯಿನಾತ್' ಎಂದರೆ ಮೂರು ವಿಷಯಗಳಾಗಿವೆ. ಮೊದಲನೆಯದಾಗಿ ಅವರು ಅಲ್ಲಾಹನ ವತಿಯಿಂದ ನೇಮಿಸಲ್ಪಟ್ಟವರು ಎಂಬುದಕ್ಕೆ ಇರುವ ಸುಸ್ಪಷ್ಟ ನಿದರ್ಶನಗಳು. ಎರಡನೆಯದಾಗಿ ಅವರ ಬೋಧನೆಗಳು ಸತ್ಯವಾದುದೆಂದು ಸಾಬೀತುಪಡಿಸುವ ಸುಸ್ಪಷ್ಟ ಆಧಾರ ಪ್ರಮಾಣಗಳು. ಮೂರನೆಯದಾಗಿ ಜೀವನದ ಸಮಸ್ಯೆ ಮತ್ತು ವ್ಯವಹಾರಗಳ ಕುರಿತು ಸುವ್ಯಕ್ತ ಮಾರ್ಗದರ್ಶನಗಳು. ಅದನ್ನು ನೋಡಿದ ಪ್ರತಿಯೊಬ್ಬ ವ್ಯಕ್ತಿಗೂ ಇಂತಹ ಪಾವನ ಬೋಧನೆಗಳನ್ನು ಯಾವುದೇ ಸುಳ್ಳುಗಾರ ಅಥವಾ ಸ್ವಾರ್ಥಿಯಾದ ವ್ಯಕ್ತಿಗೆ ನೀಡಲು ಸಾಧ್ಯವಿಲ್ಲ ಎಂದು ಮನವರಿಕೆಯಾಗಬೇಕು.

25. ತರುವಾಯ ಅವರು ನಮ್ಮ ಕಡೆಯಿಂದ ಸತ್ಯವನ್ನು ಅವರ ಮುಂದೆ ತಂದಾಗ ಅವರು, "ವಿಶ್ವಾಸವಿರಿಸಿ ಇವನ ಜೊತೆ ಸೇರಿಕೊಂಡವರೆಲ್ಲರ ಗಂಡು ಮಕ್ಕಳನ್ನು ವಧಿಸಿರಿ ಮತ್ತು ಹೆಣ್ಣು ಮಕ್ಕಳನ್ನು ಬದುಕಿರಲು ಬಿಡಿರಿ" ಎಂದರು. ಆದರೆ ಸತ್ಯ ನಿಷೇಧಿಗಳ ಕುತಂತ್ರವು ವ್ಯರ್ಥವಾಗಿಯೇ ಹೋಯಿತು.

فَلَمَّا جَآءَهُم بِالْحَقِّ مِنْ عِندِنَا قَالُوا اقْتُلُوٓا أَبْنَآءَ الَّذِينَ ءَامَنُوا مَعَهُۥ وَاسْتَحْيُوا نِسَآءَهُمْ ۚ وَمَا كَيْدُ الْكَٰفِرِينَ إِلَّا فِى ضَلَٰلٍ ﴿٢٥﴾

26. ಒಂದು ದಿನ ಫಿರ್‌ಔನನು ತನ್ನ ಆಸ್ಥಾನದವರೊಡನೆ, "ನನ್ನನ್ನು ಬಿಡಿರಿ, ನಾನು ಈ ಮೂಸಾನನ್ನು ವಧಿಸಿ ಬಿಡುತ್ತೇನೆ. ಇವನು ತನ್ನ ಪ್ರಭುವನ್ನು ಕರೆದು ನೋಡಲಿ, ಇವನು ನಿಮ್ಮ ಧರ್ಮವನ್ನು ಬದಲಿಸಿ ಬಿಡುವನು ಅಥವಾ ದೇಶದಲ್ಲಿ ಗೊಂದಲವನ್ನುಂಟು ಮಾಡುವನು ಎಂಬ ಭಯ ನನಗೆ ಉಂಟಾಗಿದೆ" ಎಂದನು.

وَقَالَ فِرْعَوْنُ ذَرُونِىٓ أَقْتُلْ مُوسَىٰ وَلْيَدْعُ رَبَّهُۥٓ ۖ إِنِّىٓ أَخَافُ أَن يُبَدِّلَ دِينَكُمْ أَوْ أَن يُظْهِرَ فِى الْأَرْضِ الْفَسَادَ ﴿٢٦﴾

27. ಆಗ ಮೂಸಾ, "ವಿಚಾರಣೆಯ ದಿನದ ಮೇಲೆ ವಿಶ್ವಾಸವಿರಿಸದಿರುವಂತಹ ಪ್ರತಿಯೊಬ್ಬ ದುರಹಂಕಾರಿಯ ವಿರುದ್ಧ ನಾನು ನನ್ನ ಪ್ರಭು ಹಾಗೂ ನಿಮ್ಮ ಪ್ರಭುವಿನ ಅಭಯ ಪಡೆದಿರುತ್ತೇನೆ" ಎಂದರು.

وَقَالَ مُوسَىٰٓ إِنِّى عُذْتُ بِرَبِّى وَرَبِّكُم مِّن كُلِّ مُتَكَبِّرٍ لَّا يُؤْمِنُ بِيَوْمِ الْحِسَابِ ﴿٢٧﴾

28. ಈ ಸಂದರ್ಭದಲ್ಲಿ ತನ್ನ ಸತ್ಯವಿಶ್ವಾಸವನ್ನು ಬಚ್ಚಿಟ್ಟುಕೊಂಡಿದ್ದ ಫಿರ್‌ಔನನ ವಂಶದ ಓರ್ವ ಸತ್ಯವಿಶ್ವಾಸಿಯು ಹೀಗೆ ಹೇಳಿದನು, "ನನ್ನ ಪ್ರಭು ಅಲ್ಲಾಹನಾಗಿರುತ್ತಾನೆಂದು ಹೇಳಿದುದಕ್ಕಾಗಿ ಮಾತ್ರ ನೀವು ಒಬ್ಬನನ್ನು ವಧಿಸಿ ಬಿಡುವಿರಾ? ವಸ್ತುತಃ ಅವರು ನಿಮ್ಮ ಪ್ರಭುವಿನ ಕಡೆಯಿಂದ ನಿಮ್ಮ ಬಳಿಗೆ ಸುವ್ಯಕ್ತ ಪ್ರಮಾಣಗಳನ್ನು ತಂದಿದ್ದಾರೆ. ಅವರು ಸುಳ್ಳುಗಾರರಾಗಿದ್ದರೆ ಅವರ ಸುಳ್ಳು ಸ್ವಯಂ ಅವರ ಮೇಲೆಯೇ ತಿರುಗಿ ಬೀಳುವುದು. ಅವರು ಸತ್ಯವಾದಿಯಾಗಿದ್ದರೆ ಯಾವ ಭಯಾನಕ ದುಷ್ಪರಿಣಾಮಗಳ ಕುರಿತು ಅವರು ನಿಮ್ಮನ್ನು ಎಚ್ಚರಿಸುತ್ತಿರುವರೋ ಅವುಗಳಲ್ಲಿ ಕೆಲವಂತು ನಿಮ್ಮ ಮೇಲೆ ಖಂಡಿತವಾಗಿಯೂ ಬಂದು ಬಿಡುವುವು. ಮಿತಿ ಮೀರುವಾತನಿಗೆ ಮತ್ತು ಸುಳ್ಳುಗಾರನಿಗೆ ಅಲ್ಲಾಹನು ಸನ್ಮಾರ್ಗ ದರ್ಶನ ನೀಡುವುದಿಲ್ಲ."

وَقَالَ رَجُلٌ مُّؤْمِنٌ مِّنْ ءَالِ فِرْعَوْنَ يَكْتُمُ إِيمَٰنَهُۥٓ أَتَقْتُلُونَ رَجُلًا أَن يَقُولَ رَبِّىَ اللَّهُ وَقَدْ جَآءَكُم بِالْبَيِّنَٰتِ مِن رَّبِّكُمْ ۖ وَإِن يَكُ كَٰذِبًا فَعَلَيْهِ كَذِبُهُۥ ۖ وَإِن يَكُ صَادِقًا يُصِبْكُم بَعْضُ الَّذِى يَعِدُكُمْ ۖ إِنَّ اللَّهَ لَا يَهْدِى مَنْ هُوَ مُسْرِفٌ كَذَّابٌ ﴿٢٨﴾

29. ನನ್ನ ಜನಾಂಗ ಬಾಂಧವರೇ, "ಇಂದು ನಿಮಗೆ ಅಧಿಕಾರ ಪ್ರಾಪ್ತವಿದೆ ಮತ್ತು ಭೂಮಿಯಲ್ಲಿ ನೀವು ಮೇಲುಗೈಯುಳ್ಳವರಾಗಿದ್ದೀರಿ. ಆದರೆ, ಅಲ್ಲಾಹನ ಯಾತನೆ ನಮ್ಮ ಮೇಲೆ ಬಂದು ಬಿಟ್ಟರೆ ಯಾರು ತಾನೇ ನಮಗೆ ನೆರವಾಗಬಲ್ಲರು?" ಆಗ ಫಿರ್‌ಔನನು, "ನಾನು ನನಗೆ ಯುಕ್ತ ಕಂಡ ಸಲಹೆಯನ್ನೇ ನಿಮಗೆ ನೀಡುತ್ತಿದ್ದೇನೆ

يَٰقَوْمِ لَكُمُ الْمُلْكُ الْيَوْمَ ظَٰهِرِينَ فِى الْأَرْضِ فَمَن يَنصُرُنَا مِنۢ بَأْسِ اللَّهِ إِن جَآءَنَا ۚ قَالَ فِرْعَوْنُ مَآ أُرِيكُمْ إِلَّا مَآ أَرَىٰ وَمَآ أَهْدِيكُمْ

ಮತ್ತು ಸರಿಯಾದ ಮಾರ್ಗದ ಕಡೆಗೆ ನಾನು ನಿಮಗೆ ಮಾರ್ಗದರ್ಶನ ನೀಡುತ್ತೇನೆ" ಎಂದನು.

إِلَّا سَبِيلَ الرَّشَادِ ﴿٢٩﴾

30. ಆ ಸತ್ಯವಿಶ್ವಾಸಿ ಹೇಳಿದನು, "ನನ್ನ ಜನಾಂಗದವರೇ, ಈ ಮುಂಚೆ ಅನೇಕ ಸಮೂಹಗಳ ಮೇಲೆ ಬಂದೆರಗಿದಂತಹ ದಿನವೇ ನಿಮ್ಮ ಮೇಲೂ ಬಂದು ಬಿಡುವುದೋ ಎಂಬ ಭಯ ನನಗಿದೆ-

وَقَالَ الَّذِي آمَنَ يَا قَوْمِ إِنِّي أَخَافُ
عَلَيْكُم مِّثْلَ يَوْمِ الْأَحْزَابِ ﴿٣٠﴾

31. ಉದಾಹರಣೆಗಾಗಿ ನೂಹರ ಜನಾಂಗ, ಆದ್, ಸಮೂದ್ ಮತ್ತು ಅವರ ನಂತರದ ಜನಾಂಗಗಳ ಮೇಲೆ ಬಂದೆರಗಿದಂತಹ ದಿನ. ವಾಸ್ತವದಲ್ಲಿ ಅಲ್ಲಾಹನಿಗೆ ತನ್ನ ದಾಸರ ಮೇಲೆ ಅಕ್ರಮವೆಸಗ ಬೇಕೆಂಬ ಉದ್ದೇಶವೇನೂ ಇಲ್ಲ.

مِثْلَ دَأْبِ قَوْمِ نُوحٍ وَعَادٍ وَثَمُودَ
وَالَّذِينَ مِن بَعْدِهِمْ ۚ وَمَا اللَّهُ
يُرِيدُ ظُلْمًا لِّلْعِبَادِ ﴿٣١﴾

32. ಓ ಜನಾಂಗವೇ! ನಾವು ಗೋಳಾಡುವಂತಹ ದಿನವು ನಿಮ್ಮ ಮೇಲೆ ಬಂದೆರಗಿ ಬಿಡುವುದೋ ಎಂದು ನಾನು ಭಯ ಪಡುತ್ತೇನೆ.

وَيَا قَوْمِ إِنِّي أَخَافُ عَلَيْكُمْ يَوْمَ التَّنَادِ ﴿٣٢﴾

33. ಅಂದು ನೀವು ಪರಸ್ಪರರನ್ನು ಕೂಗಿ ಕರೆಯುವಿರಿ; ಬೆನ್ನು ತಿರುಗಿಸಿ ಓಡುವಿರಿ. ಆದರೆ, ಆಗ ನಿಮ್ಮನ್ನು ಅಲ್ಲಾಹನಿಂದ ರಕ್ಷಿಸುವವರು ಯಾರೂ ಇರಲಾರರು. ವಾಸ್ತವದಲ್ಲಿ ಯಾರನ್ನು ಅಲ್ಲಾಹನು ದಾರಿಗೆಡಿಸಿಬಿಡುವನೋ ಅವನಿಗೆ ಬೇರಾರೂ ದಾರಿ ತೋರಿಸುವವರಿಲ್ಲ."

يَوْمَ تُوَلُّونَ مُدْبِرِينَ مَا لَكُم مِّنَ
اللَّهِ مِنْ عَاصِمٍ ۗ وَمَن يُضْلِلِ اللَّهُ
فَمَا لَهُ مِنْ هَادٍ ﴿٣٣﴾

34-35. ಇದಕ್ಕೆ ಮುಂಚೆ ಯೂಸುಫರು ನಿಮ್ಮ ಬಳಿಗೆ ಸುವ್ಯಕ್ತ ನಿದರ್ಶನಗಳನ್ನು ತಂದಿದ್ದರು. ಆದರೆ ನೀವು ಅವರು ತಂದ ಶಿಕ್ಷಣದ ಬಗ್ಗೆ ಸಂಶಯದಲ್ಲೇ ಬಿದ್ದುಬಿಟ್ಟಿರಿ. ತರುವಾಯ ಅವರು ನಿಧನರಾದಾಗ ನೀವು, ಇನ್ನು ಅವರ ಬಳಿಕ ಎಷ್ಟು ಮಾತ್ರಕ್ಕೂ ಅಲ್ಲಾಹನು ಸಂದೇಶವಾಹಕರನ್ನು ಕಳುಹಿಸಲಿಕ್ಕಿಲ್ಲ ಎಂದಿರಿ. ಇದೇ ರೀತಿಯಲ್ಲಿ[4] ಅಲ್ಲಾಹನು, ಮಿತಿಮೀರುವವರನ್ನು, ಸಂಶಯಗ್ರಸ್ತರನ್ನು ಮತ್ತು ತಮ್ಮ ಬಳಿಗೆ ಯಾವುದೇ ಪ್ರಮಾಣವಾಗಲಿ ಪುರಾವೆಯಾಗಲಿ, ಬಂದಿರದಿದ್ದರೂ ಅಲ್ಲಾಹನ ಸೂಕ್ತಗಳ ಬಗ್ಗೆ ಜಗಳ ಮಾಡುವವರನ್ನು ಪಥಭ್ರಷ್ಟತೆಯಲ್ಲಿ

وَلَقَدْ جَاءَكُمْ يُوسُفُ مِن قَبْلُ
بِالْبَيِّنَاتِ فَمَا زِلْتُمْ فِي شَكٍّ مِّمَّا
جَاءَكُم بِهِ ۖ حَتَّىٰ إِذَا هَلَكَ قُلْتُمْ
لَن يَبْعَثَ اللَّهُ مِن بَعْدِهِ رَسُولًا ۚ
كَذَٰلِكَ يُضِلُّ اللَّهُ مَنْ هُوَ مُسْرِفٌ مُّرْتَابٌ ﴿٣٤﴾
الَّذِينَ يُجَادِلُونَ فِي آيَاتِ اللَّهِ بِغَيْرِ
سُلْطَانٍ أَتَاهُمْ ۖ كَبُرَ مَقْتًا عِندَ اللَّهِ

4. ಮೇಲ್ನೋಟಕ್ಕೆ ವ್ಯಕ್ತವಾಗುವುದೇನೆಂದರೆ, ಫಿರ್‌ಔನನ ಆಸ್ಥಾನದ ಸತ್ಯವಿಶ್ವಾಸಿಯ ಮಾತಿಗೆ ಪೂರಕವಾಗಿ ಮತ್ತು ವಿವರಣೆಯ ರೂಪದಲ್ಲಿ ಈ ಮಾತನ್ನು ಅಲ್ಲಾಹನು ಹೇಳಿದ್ದಾನೆ.

ಹಾಕಿ ಬಿಡುತ್ತಾನೆ. ಈ ಧೋರಣೆಯು ಅಲ್ಲಾಹ್ ಮತ್ತು ಸತ್ಯ ವಿಶ್ವಾಸಿಗಳ ಬಳಿ ಅತ್ಯಂತ ತಿರಸ್ಕಾರಾರ್ಹವಾಗಿದೆ. ಇದೇ ರೀತಿ ಯಲ್ಲಿ ಅಲ್ಲಾಹ್ ಪ್ರತಿಯೊಬ್ಬ ಅಹಂಕಾರಿ ಹಾಗೂ ಮದಾಂಧನ ಹೃದಯಕ್ಕೆ ಮುದ್ರೆಯೊತ್ತಿ ಬಿಡುತ್ತಾನೆ."

وَعِنْدَ الَّذِيْنَ اٰمَنُوْا ؕ كَذٰلِكَ يَطْبَعُ
اللّٰهُ عَلٰى كُلِّ قَلْبِ مُتَكَبِّرٍ جَبَّارٍ ﴿٣٥﴾

36-37. ಫಿರ್‌ಔನ್ ಹೇಳಿದನು: "ಹಾಮಾನ್, ನಾನು ಮಾರ್ಗಗಳವರೆಗೆ, ಆಕಾಶಗಳ ಮಾರ್ಗಗಳ ವರೆಗೆ ತಲುಪುವಂತಾಗಲು ಮತ್ತು ಮೂಸಾನ ದೇವನನ್ನು ಇಣುಕಿ ನೋಡುವಂತಾಗಲು ನನಗಾಗಿ ಒಂದು ಉನ್ನತ ಕಟ್ಟಡವನ್ನು ನಿರ್ಮಿಸು. ನನಗಂತೂ ಈ ಮೂಸಾ ಸುಳ್ಳುಗಾರನೆಂದೇ ತೋರುತ್ತಾನೆ." ಹೀಗೆ ಫಿರ್‌ಔನ್‌ನಿಗೆ ಅವನ ದುಷ್ಕರ್ಮವು ಮನೋಹರಗೊಳಿಸಲ್ಪಟ್ಟಿತು ಮತ್ತು ಅವನು ಸನ್ಮಾರ್ಗದಿಂದ ತಡೆಯಲ್ಪಟ್ಟನು. ಫಿರ್‌ಔನಿನ ಕುತಂತ್ರ ವೆಲ್ಲಾ (ಸ್ವತಃ ಅವನದೇ) ವಿನಾಶಕ್ಕಾಗಿ ವ್ಯಯವಾಯಿತು.

وَقَالَ فِرْعَوْنُ يٰهَامٰنُ ابْنِ لِيْ
صَرْحًا لَّعَلِّيْٓ اَبْلُغُ الْاَسْبَابَ ﴿٣٦﴾
اَسْبَابَ السَّمٰوٰتِ فَاَطَّلِعَ اِلٰٓى اِلٰهِ
مُوْسٰى وَاِنِّيْ لَاَظُنُّهٗ كَاذِبًا ؕ وَكَذٰلِكَ
زُيِّنَ لِفِرْعَوْنَ سُوْٓءُ عَمَلِهٖ وَصُدَّ
عَنِ السَّبِيْلِ ؕ وَمَا كَيْدُ فِرْعَوْنَ
اِلَّا فِيْ تَبَابٍ ﴿٣٧﴾

38. ಆ ಸತ್ಯವಿಶ್ವಾಸಿ ಹೇಳಿದನು, "ನನ್ನ ಜನಾಂಗದವರೇ, ನನ್ನ ಮಾತನ್ನು ಸ್ವೀಕರಿಸಿರಿ. ನಾನು ನಿಮಗೆ ಸರಿಯಾದ ಮಾರ್ಗವನ್ನೇ ತೋರಿಸುತ್ತೇನೆ.

وَقَالَ الَّذِيْٓ اٰمَنَ يٰقَوْمِ اتَّبِعُوْنِ
اَهْدِكُمْ سَبِيْلَ الرَّشَادِ ﴿٣٨﴾

39. ಓ ಜನಾಂಗವೇ! ಈ ಲೌಕಿಕ ಜೀವನವು ಕೆಲವೇ ದಿನಗಳ ಸಾಧನವಾಗಿದೆ. ಶಾಶ್ವತ ನಿವಾಸವು ಪರಲೋಕವೇ ಆಗಿದೆ.

يٰقَوْمِ اِنَّمَا هٰذِهِ الْحَيٰوةُ الدُّنْيَا مَتَاعٌ ؗ
وَّاِنَّ الْاٰخِرَةَ هِيَ دَارُ الْقَرَارِ ﴿٣٩﴾

40. ದೋಷವೆಸಗಿದವನಿಗೆ ಅವನು ಮಾಡಿದ ದೋಷದಷ್ಟೇ ಪ್ರತಿಫಲ ಸಿಗುವುದು. ಸತ್ಕರ್ಮವೆಸಗಿದವನು ಪುರುಷನಿರಲಿ ಸ್ತ್ರೀ ಇರಲಿ, ಸತ್ಯವಿಶ್ವಾಸಿಯಾಗಿದ್ದರೆ ಇಂತಹವರೆಲ್ಲರೂ ಸ್ವರ್ಗವನ್ನು ಪ್ರವೇಶಿಸು ವರು, ಅಲ್ಲಿ ಅವರಿಗೆ ಅಪಾರ ಜೀವನಾಧಾರ ನೀಡಲ್ಪಡುವುದು.

مَنْ عَمِلَ سَيِّئَةً فَلَا يُجْزٰٓى اِلَّا
مِثْلَهَا ۚ وَمَنْ عَمِلَ صَالِحًا مِّنْ
ذَكَرٍ اَوْ اُنْثٰى وَهُوَ مُؤْمِنٌ فَاُولٰٓئِكَ
يَدْخُلُوْنَ الْجَنَّةَ يُرْزَقُوْنَ فِيْهَا
بِغَيْرِ حِسَابٍ ﴿٤٠﴾

41. ಓ ಜನಾಂಗವೇ, ಇದೇನು, ನಾನಂತು ನಿಮ್ಮನ್ನು ವಿಮೋಚನೆಯ ಕಡೆಗೆ ಕರೆಯುತ್ತಿದ್ದೇನೆ ಮತ್ತು ನೀವಾದರೋ ನನ್ನನ್ನು ನರಕಾಗ್ನಿಯತ್ತ ಆಹ್ವಾನಿಸುತ್ತಿರುವಿರಿ!

وَيٰقَوْمِ مَا لِيْٓ اَدْعُوْكُمْ اِلَى النَّجٰوةِ وَ
تَدْعُوْنَنِيْٓ اِلَى النَّارِ ﴿٤١﴾

42. ನಾನು ಅಲ್ಲಾಹನನ್ನು ನಿರಾಕರಿಸಬೇಕೆಂದೂ ಅವನೊಂದಿಗೆ ನಾನರಿ ಯದಂತಹ[5] ಅಸ್ತಿತ್ವಗಳನ್ನು ಸಹಭಾಗಿಗಳಾಗಿ ಮಾಡಬೇಕೆಂದೂ ನೀವು ನನಗೆ ಕರೆ ಕೊಡುತ್ತಿದ್ದೀರಿ. ನಾನಾದರೋ ನಿಮ್ಮನ್ನು

تَدْعُوْنَنِيْ لِاَكْفُرَ بِاللّٰهِ وَاُشْرِكَ
بِهٖ مَا لَيْسَ لِيْ بِهٖ عِلْمٌ ؗ وَّاَنَا

5. ಅರ್ಥಾತ್- ದೇವತ್ವದಲ್ಲಿ ಅವರಿಗೂ ಪಾಲಿದೆ ಎಂಬುದು ನನಗೆ ತಿಳಿದಿಲ್ಲ.

ಪ್ರಬಲನೂ ಮಹಾ ಕ್ಷಮಾದಾನಿಯೂ ಆಗಿರುವ ಆ ದೇವನ ಕಡೆಗೆ ಕರೆಯುತ್ತಿದ್ದೇನೆ.

أَدْعُوكُمْ إِلَى الْعَزِيزِ الْغَفَّارِ ﴿٤٢﴾

43. ಅಲ್ಲ, ಇದು ಸತ್ಯ. ಇದಕ್ಕೆ ವಿರುದ್ಧ ಸಾಧ್ಯವೇ ಇಲ್ಲ. ನೀವು ನನ್ನನ್ನು ಯಾರ ಕಡೆಗೆ ಕರೆಯುತ್ತಿರುವಿರೋ ಅವರಿಗೆ ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಯಾವುದೇ ಕರೆ ಇಲ್ಲ.[6] ನಮಗೆಲ್ಲರಿಗೂ ಅಲ್ಲಾಹನ ಕಡೆಗೇ ಮರಳಿ ಹೋಗಬೇಕಾಗಿದೆ ಮತ್ತು ಮಿತಿಮೀರಿ ನಡೆಯುವವರು ನರಕಾಗ್ನಿಗೆ ಹೋಗಲಿರುವರು.

لَا جَرَمَ أَنَّمَا تَدْعُونَنِي إِلَيْهِ لَيْسَ لَهُ دَعْوَةٌ فِي الدُّنْيَا وَلَا فِي الْآخِرَةِ وَأَنَّ مَرَدَّنَا إِلَى اللَّهِ وَأَنَّ الْمُسْرِفِينَ هُمْ أَصْحَابُ النَّارِ ﴿٤٣﴾

44. ಇಂದು ನಾನು ಹೇಳುತ್ತಿರುವ ಮಾತನ್ನು ನೀವು ಜ್ಞಾಪಿಸಿಕೊಳ್ಳುವ ಕಾಲ ಸದ್ಯದಲ್ಲೇ ಬರಲಿದೆ. ನಾನು ನನ್ನ ವಿಷಯವನ್ನು ಅಲ್ಲಾಹನಿಗೆ ಒಪ್ಪಿಸಿ ಬಿಡುತ್ತೇನೆ. ಅವನು ತನ್ನ ದಾಸರ ಮೇಲ್ವಿಚಾರಕನಾಗಿರುತ್ತಾನೆ."

فَسَتَذْكُرُونَ مَا أَقُولُ لَكُمْ ۚ وَأُفَوِّضُ أَمْرِي إِلَى اللَّهِ ۚ إِنَّ اللَّهَ بَصِيرٌ بِالْعِبَادِ ﴿٤٤﴾

45. ಕೊನೆಗೆ ಅವರು ಆ ಸತ್ಯವಿಶ್ವಾಸಿಯ ವಿರುದ್ಧ ನಡೆಸಿದ್ದ ಅತ್ಯಂತ ದುಷ್ಟವಾದ ಎಲ್ಲ ಕುತಂತ್ರಗಳಿಂದ ಅಲ್ಲಾಹನು ಅವನನ್ನು ಕಾಪಾಡಿದನು[7] ಮತ್ತು ಫಿರ್‌ಔನನ ಜೊತೆಗಾರರು ಸ್ವಯಂ ಅತ್ಯಂತ ಕೆಟ್ಟ ಯಾತನೆಯ ಸುಳಿಗೆ ಸಿಕ್ಕಿಬಿಟ್ಟರು.

فَوَقَاهُ اللَّهُ سَيِّئَاتِ مَا مَكَرُوا ۖ وَحَاقَ بِآلِ فِرْعَوْنَ سُوءُ الْعَذَابِ ﴿٤٥﴾

46. ನರಕಾಗ್ನಿ! ಅದರ ಮುಂದೆ ಅವರು ಬೆಳಗು ಬೈಗುಗಳಲ್ಲಿ ತರಲ್ಪಡುತ್ತಾರೆ. ಪುನರುತ್ಥಾನದ ಘಳಿಗೆ ಬಂದಾಗ ಫಿರ್‌ಔನನ ಜನರನ್ನು ಅತ್ಯುಗ್ರ ಯಾತನೆಯಲ್ಲಿ ಪ್ರವೇಶಗೊಳಿಸಿರೆಂದು ಅಪ್ಪಣೆಯಾಗುವುದು.

النَّارُ يُعْرَضُونَ عَلَيْهَا غُدُوًّا وَعَشِيًّا ۖ وَيَوْمَ تَقُومُ السَّاعَةُ أَدْخِلُوا آلَ فِرْعَوْنَ أَشَدَّ الْعَذَابِ ﴿٤٦﴾

47. ಇವರು ನರಕಾಗ್ನಿಯಲ್ಲಿ ಪರಸ್ಪರ ಜಗಳಾಡುತ್ತಿರುವ ಸನ್ನಿವೇಶವನ್ನು ಊಹಿಸಿರಿ. ಭೂಲೋಕದಲ್ಲಿ ದುರ್ಬಲರಾಗಿದ್ದವರು ದೊಡ್ಡಸ್ತಿಕೆ

وَإِذْ يَتَحَاجُّونَ فِي النَّارِ فَيَقُولُ الضُّعَفَاءُ لِلَّذِينَ اسْتَكْبَرُوا إِنَّا كُنَّا لَكُمْ تَبَعًا فَهَلْ

6. ಈ ವಾಕ್ಯಕ್ಕೆ ಅನೇಕ ಅರ್ಥಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ತಮ್ಮ ದೇವತ್ವವನ್ನು ಒಪ್ಪಿಕೊಳ್ಳುವಂತೆ ದೇವನ ಸೃಷ್ಟಿಗಳಿಗೆ ಕರೆ ಕೊಡುವ ಹಕ್ಕು ಅವರಿಗೆ ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಇಲ್ಲ. ಎರಡನೆಯದಾಗಿ ಜನರು ಅವರನ್ನು ಬಲವಂತದಿಂದ ದೇವತ್ವದ ಸ್ಥಾನಕ್ಕೇರಿಸಿದ್ದಾರೆ, ಅನ್ಯಥಾ ಅವರು ಈ ಲೋಕದಲ್ಲಿ ದೇವತ್ವವನ್ನು ವಾದಿಸಿರಲಿಲ್ಲ. ಹಾಗೆಯೇ ಪರಲೋಕದಲ್ಲೂ ಅವರು 'ನಾವು ದೇವರಾಗಿದ್ದೆವು. ನೀವು ನಮ್ಮನ್ನೇಕೆ ನಂಬಲಿಲ್ಲ' ಎಂದು ವಾದಿಸಲಾರರು. ಮೂರನೆಯದಾಗಿ ಅವರೊಡನೆ ಮೊರೆಯಿಡುವುದರಿಂದ ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಯಾವುದೇ ಪ್ರಯೋಜನವಾಗಲಾರದು. ಏಕೆಂದರೆ ಅವರು ಯಾವುದೇ ರೀತಿಯ ಅಧಿಕಾರ ಇಲ್ಲದವರು. ಆದ್ದರಿಂದ ಅವರೊಡನೆ ಮೊರೆಯಿಡುವುದು ನಿರರ್ಥಕವಾಗಿದೆ.

7. ಇದರಿಂದ ತಿಳಿದು ಬರುವುದೇನೆಂದರೆ, ಅವನು ಫಿರ್‌ಔನನ ಸಾಮ್ರಾಜ್ಯದಲ್ಲಿ ಪ್ರಮುಖ ವ್ಯಕ್ತಿತ್ವವನ್ನು ಹೊಂದಿದ್ದನು. ಆದ್ದರಿಂದಲೇ ತುಂಬಿದ ಸಭೆಯಲ್ಲಿ ಫಿರ್‌ಔನನ ಮುಂದೆ ಸತ್ಯನುಡಿದಾಗಲೂ ಅವನನ್ನು ಶಿಕ್ಷಿಸುವ ಧೈರ್ಯವನ್ನು ತೋರಲಾಗಿರಲಿಲ್ಲ. ಈ ಕಾರಣದಿಂದಲೇ ಫಿರ್‌ಔನ್ ಮತ್ತು ಅವನ ಬೆಂಬಲಿಗರು ಅವನನ್ನು ಕೊಲ್ಲಲು ಸಂಚು ಹೂಡಬೇಕಾಯಿತು. ಆದರೆ ಅವರ ಈ ತಂತ್ರಗಳನ್ನು ಅಲ್ಲಾಹನು ವಿಫಲಗೊಳಿಸಿದನು.

ತೋರಿಸುತ್ತಿದ್ದವರೊಡನೆ (ಹೀಗೆ) ಹೇಳುವರು, "ನಾವು ನಿಮಗೆ ಅಧೀನರಾಗಿದ್ದೆವು. ಈಗ ನೀವು ಇಲ್ಲಿ ನರಕಾಗ್ನಿಯ ಯಾತನೆಯ ಸ್ವಲ್ಪಾಂಶದಿಂದಾದರೂ ನಮ್ಮನ್ನು ರಕ್ಷಿಸುವಿರಾ?"

أَنتُم مُّغْنُونَ عَنَّا نَصِيبًا مِّنَ النَّارِ ﴿٤٧﴾

48. ದೊಡ್ಡಸ್ತಿಕೆ ತೋರುತ್ತಿದ್ದವರು (ಹೀಗೆ) ಉತ್ತರ ಕೊಡುವರು:- "ನಾವೆಲ್ಲರೂ ಇಲ್ಲಿ ಒಂದೇ ಸ್ಥಿತಿಯಲ್ಲಿದ್ದೇವೆ. ಅಲ್ಲಾಹನು ದಾಸರ ನಡುವೆ ತೀರ್ಮಾನ ಮಾಡಿ ಬಿಟ್ಟಿರುತ್ತಾನೆ."

قَالَ الَّذِينَ اسْتَكْبَرُوا إِنَّا كُلٌّ فِيهَا إِنَّ اللَّهَ قَدْ حَكَمَ بَيْنَ الْعِبَادِ ﴿٤٨﴾

49. ತರುವಾಯ ನರಕದಲ್ಲಿ ಬಿದ್ದಿರುವವರು ನರಕಪಾಲಕರೊಡನೆ, "ನಮ್ಮ ಯಾತನೆಯಲ್ಲಿ ಒಂದು ದಿನದ ಕಡಿತ ಮಾಡಲಿಕ್ಕಾಗಿ ನಿಮ್ಮ ಪ್ರಭುವನ್ನು ಪ್ರಾರ್ಥಿಸಿರಿ" ಎನ್ನುವರು.

وَقَالَ الَّذِينَ فِي النَّارِ لِخَزَنَةِ جَهَنَّمَ ادْعُوا رَبَّكُمْ يُخَفِّفْ عَنَّا يَوْمًا مِّنَ الْعَذَابِ ﴿٤٩﴾

50. ಆಗ ಅವರು, "ನಿಮ್ಮ ಬಳಿಗೆ ನಿಮ್ಮ ಸಂದೇಶವಾಹಕರು ಸುವ್ಯಕ್ತ ನಿದರ್ಶನಗಳೊಂದಿಗೆ ಬರುತ್ತಲಿರಲಿಲ್ಲವೇ?" ಎಂದು ಕೇಳುವರು. ಆಗ ಅವರು 'ಹೌದು' ಎನ್ನುವರು. ಆಗ ನರಕ ಪಾಲಕರು, "ಹಾಗಾದರೆ, ನೀವೇ ಪ್ರಾರ್ಥಿಸಿರಿ. ಸತ್ಯನಿಷೇಧಿಗಳ ಪ್ರಾರ್ಥನೆ ವ್ಯರ್ಥವೇ ಆಗಲಿದೆ" ಎನ್ನುವರು.

قَالُوا أَوَلَمْ تَكُ تَأْتِيكُمْ رُسُلُكُم بِالْبَيِّنَاتِ ۖ قَالُوا بَلَىٰ ۚ قَالُوا فَادْعُوا ۗ وَمَا دُعَاءُ الْكَافِرِينَ إِلَّا فِي ضَلَالٍ ﴿٥٠﴾

51. ನಾವು ಖಂಡಿತವಾಗಿಯೂ ನಮ್ಮ ಸಂದೇಶವಾಹಕರಿಗೆ ಹಾಗೂ ಸತ್ಯವಿಶ್ವಾಸಿಗಳಿಗೆ ಈ ಲೋಕದ ಜೀವನದಲ್ಲಿಯೂ ಸಹಾಯ ಮಾಡುತ್ತೇವೆ ಮತ್ತು ಸಾಕ್ಷಿದಾರರು ಎದ್ದು ನಿಲ್ಲುವ ದಿನದಂದೂ ಮಾಡುವೆವು-

إِنَّا لَنَنصُرُ رُسُلَنَا وَالَّذِينَ آمَنُوا فِي الْحَيَاةِ الدُّنْيَا وَيَوْمَ يَقُومُ الْأَشْهَادُ ﴿٥١﴾

52. ಅಂದು ಅಕ್ರಮಿಗಳಿಗೆ ಅವರ ನೆಪಗಳು ಯಾವುದೇ ಪ್ರಯೋಜನ ಕೊಡಲಾರವು. ಅವರ ಮೇಲೆ ಶಾಪವೆರಗುವುದು ಮತ್ತು ಅತ್ಯಂತ ನಿಕೃಷ್ಟ ವಾಸಸ್ಥಾನವು ಅವರ ಪಾಲಿಗೆ ಬರುವುದು.

يَوْمَ لَا يَنفَعُ الظَّالِمِينَ مَعْذِرَتُهُمْ ۖ وَلَهُمُ اللَّعْنَةُ وَلَهُمْ سُوءُ الدَّارِ ﴿٥٢﴾

53. ಕೊನೆಗೆ ನಾವು ಮೂಸಾರಿಗೆ ಮಾರ್ಗದರ್ಶನ ಮಾಡಿದೆವು ಮತ್ತು ಬನೀಇಸ್ರಾಈಲರನ್ನು ಗ್ರಂಥದ ವಾರೀಸುದಾರರಾಗಿ ಮಾಡಿದೆವು-

وَلَقَدْ آتَيْنَا مُوسَى الْهُدَىٰ وَأَوْرَثْنَا بَنِي إِسْرَائِيلَ الْكِتَابَ ﴿٥٣﴾

54. ಅದು ಬುದ್ಧಿಜೀವಿಗಳಿಗೆ ಸನ್ಮಾರ್ಗದರ್ಶನ ಹಾಗೂ ಬೋಧನೆ ಯಾಗಿತ್ತು.

هُدًى وَذِكْرَىٰ لِأُولِي الْأَلْبَابِ ﴿٥٤﴾

55. ಆದುದರಿಂದ ಸಂದೇಶವಾಹಕರೇ, ತಾಳ್ಮೆ ವಹಿಸಿರಿ. ಅಲ್ಲಾಹನ ವಾಗ್ದಾನವು ಪರಮ ಸತ್ಯವಾಗಿದೆ. ನಿಮ್ಮ ತಪ್ಪಿನ ಬಗ್ಗೆ ಕ್ಷಮೆ

فَاصْبِرْ إِنَّ وَعْدَ اللَّهِ حَقٌّ وَاسْتَغْفِرْ لِذَنبِكَ وَسَبِّحْ بِحَمْدِ رَبِّكَ بِالْعَشِيِّ

ಯಾಚಿಸಿರಿ[8] ಮತ್ತು ಬೆಳಗು ಬೈಗುಗಳಲ್ಲಿ ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನನ್ನು ಸ್ತುತಿಸುತ್ತಿರಿ.

وَالْإِبْكَارِ ﴿٥٥﴾

56. ವಾಸ್ತವದಲ್ಲಿ ಯಾವುದೇ ಪ್ರಮಾಣವಾಗಲಿ, ಆಧಾರವಾಗಲಿ ತಮ್ಮ ಬಳಿ ಬಾರದಿದ್ದರೂ ಅಲ್ಲಾಹನ ಸೂಕ್ತಗಳ ವಿಷಯದಲ್ಲಿ ಜಗಳವಾಡುವವರ ಹೃದಯಗಳಲ್ಲಿ ಅಹಂಕಾರ ತುಂಬಿಕೊಂಡಿದೆ. ಆದರೆ ಅವರು ತಾವು ಅಹಂಕಾರ ಪಡುವಂತಹ ಔನ್ನತ್ಯವನ್ನು ತಲುಪುವವರಲ್ಲ. ಅಲ್ಲಾಹನ ಅಭಯವನ್ನು ಯಾಚಿಸಿರಿ. ಅವನು ಸರ್ವವನ್ನೂ ಕೇಳುವವನೂ ಸರ್ವವನ್ನೂ ನೋಡುವವನೂ ಆಗಿರುತ್ತಾನೆ.

إِنَّ الَّذِينَ يُجَادِلُونَ فِي آيَاتِ اللَّهِ بِغَيْرِ سُلْطَانٍ أَتَاهُمْ إِنْ فِي صُدُورِهِمْ إِلَّا كِبْرٌ مَا هُمْ بِبَالِغِيهِ فَاسْتَعِذْ بِاللَّهِ إِنَّهُ هُوَ السَّمِيعُ الْبَصِيرُ ﴿٥٦﴾

57. ಖಂಡಿತವಾಗಿಯೂ ಆಕಾಶಗಳನ್ನು ಮತ್ತು ಭೂಮಿಯನ್ನು ಸೃಷ್ಟಿಸುವುದು ಮಾನವನನ್ನು ಸೃಷ್ಟಿಸುವುದಕ್ಕಿಂತ ದೊಡ್ಡದಾದ ಕಾರ್ಯವಾಗಿದೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.

لَخَلْقُ السَّمَاوَاتِ وَالْأَرْضِ أَكْبَرُ مِنْ خَلْقِ النَّاسِ وَلَٰكِنَّ أَكْثَرَ النَّاسِ لَا يَعْلَمُونَ ﴿٥٧﴾

58. ಕುರುಡನೂ ಕಣ್ಣಿದ್ದವನೂ ಸಮಾನರಾಗಲಾರರು- ಸತ್ಯವಿಶ್ವಾಸಿಗಳಾದ ಸದಾಚಾರಿಗಳು ಹಾಗೂ ದುಷ್ಕರ್ಮಿಗಳು ಸಮಾನರಾಗಲಾರರು. ಆದರೆ ನೀವು ಸ್ವಲ್ಪವೇ ಅರ್ಥ ಮಾಡಿಕೊಳ್ಳುತ್ತೀರಿ.

وَمَا يَسْتَوِي الْأَعْمَىٰ وَالْبَصِيرُ وَالَّذِينَ آمَنُوا وَعَمِلُوا الصَّالِحَاتِ وَلَا الْمُسِيءُ قَلِيلًا مَا تَتَذَكَّرُونَ ﴿٥٨﴾

59. ಖಂಡಿತವಾಗಿಯೂ ಪುನರುತ್ಥಾನದ ಘಳಿಗೆ ಬರಲಿದೆ. ಅದು ಬರುವುದರಲ್ಲಿ ಏನೂ ಸಂದೇಹವಿಲ್ಲ. ಆದರೆ ಹೆಚ್ಚಿನವರು ನಂಬುವುದಿಲ್ಲ.

إِنَّ السَّاعَةَ لَآتِيَةٌ لَا رَيْبَ فِيهَا وَلَٰكِنَّ أَكْثَرَ النَّاسِ لَا يُؤْمِنُونَ ﴿٥٩﴾

60. ನಿಮ್ಮ ಪ್ರಭು ಹೀಗೆ ಹೇಳುತ್ತಾನೆ- ನನ್ನನ್ನು ಪ್ರಾರ್ಥಿಸಿರಿ. ನಾನು ನಿಮ್ಮ ಪ್ರಾರ್ಥನೆಗಳನ್ನು ಸ್ವೀಕರಿಸುವೆನು.[9] ಅಹಂಕಾರಪಟ್ಟು ನನ್ನ ದಾಸ್ಯ ಮತ್ತು ಆರಾಧನೆಯಿಂದ ವಿಮುಖರಾಗುವವರು

وَقَالَ رَبُّكُمُ ادْعُونِي أَسْتَجِبْ لَكُمْ إِنَّ الَّذِينَ يَسْتَكْبِرُونَ عَنْ عِبَادَتِي

8. ಈ ಮಾತನ್ನು ಹೇಳಲಾಗಿರುವ ಹಿನ್ನೆಲೆಯನ್ನು ಗಮನಿಸಿದರೆ ಇಲ್ಲಿ 'ಅಸಹನೆ'ಯನ್ನು 'ತಪ್ಪು' ಎಂದು ಹೇಳಲಾಗಿದೆಯೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ತೀವ್ರ ಪ್ರತಿರೋಧದ ವಾತಾವರಣದಲ್ಲಿ, ಅದರಲ್ಲೂ ವಿಶೇಷವಾಗಿ ತಮ್ಮ ಸಂಗಾತಿಗಳ ಮೇಲೆ ಮಾಡಲಾಗುವ ಅನ್ಯಾಯವನ್ನು ನೋಡಿ ಪ್ರವಾದಿವರ್ಯರಲ್ಲಿ(ಸ) ಅಸಹನೆಯ ಮನೋಭಾವ ಉಂಟಾಗಿತ್ತು. ಸತ್ಯನಿಷೇಧಿಗಳು ಸತ್ಯವನ್ನು ಒಪ್ಪಿಕೊಳ್ಳುವಂತಾಗಲು ಶೀಘ್ರವೇ ಪವಾಡವೊಂದು ತೋರಿಸಲ್ಪಡಬೇಕು ಅಥವಾ ಪ್ರತಿರೋಧದ ಬಿರುಗಾಳಿ ಶಾಂತವಾಗುವಂತಹ ಯಾವುದಾದರೂ ಬೆಳವಣಿಗೆ ಅಲ್ಲಾಹನ ವತಿಯಿಂದ ಆಗಬೇಕು ಎಂದು ಪ್ರವಾದಿವರ್ಯರು(ಸ) ಬಯಸುತ್ತಿದ್ದರು. ಈ ಬಯಕೆ ಪಶ್ಚಾತ್ತಾಪ ಪಡಬೇಕಾದ ಮತ್ತು ಕ್ಷಮೆಯಾಚಿಸಬೇಕಾದಂತಹ ತಪ್ಪೇನೂ ಆಗಿರಲಿಲ್ಲ. ಆದರೆ ಪ್ರವಾದಿವರ್ಯರನ್ನು(ಸ) ಅಲ್ಲಾಹನು ಯಾವ ಉನ್ನತ ಪದವಿಯಲ್ಲಿ ನೇಮಿಸಿದ್ದನೋ ಅದು ತೀವ್ರತರವಾದ ದೃಢಚಿತ್ತತೆಯನ್ನು ಅಪೇಕ್ಷಿಸುತ್ತದೆ. ಆದ್ದರಿಂದ ಕಿಂಚಿತ್ ಅಸಹನೆಯೂ ಅವರ ಸ್ಥಾನಕ್ಕೆ ತಕ್ಕುದಾದುದಲ್ಲವೆಂದು ಅಲ್ಲಾಹನು ಭಾವಿಸಿದನು. ಆದ್ದರಿಂದಲೇ ಈ ದೌರ್ಬಲ್ಯಕ್ಕಾಗಿ ನಿಮ್ಮ ಪ್ರಭುವಿನೊಡನೆ ಕ್ಷಮೆ ಯಾಚಿಸಿರಿ. ತಮ್ಮ ನಿರ್ಧಾರದಲ್ಲಿ ಬಂಡೆಯಂತೆ ಅಚಲವಾಗಿ ನಿಲ್ಲಿರಿ. ನಿಮ್ಮಂತಹ ಉನ್ನತ ಪದವಿಯ ವ್ಯಕ್ತಿಗೆ ತಕ್ಕುದಾದ ವಿಷಯ ಇದುವೇ ಆಗಿದೆ ಎಂದು ಅವರೊಡನೆ ಹೇಳಲಾಗುತ್ತಿದೆ.

9. ಅರ್ಥಾತ್- ಪ್ರಾರ್ಥನೆಯನ್ನು ಸ್ವೀಕರಿಸುವ ಅಧಿಕಾರಗಳೆಲ್ಲವೂ ನನಗೇ ಸೇರಿದೆ, ಆದ್ದರಿಂದ ನೀವು ಇತರರಲ್ಲಿ ಪ್ರಾರ್ಥಿಸದಿರಿ. ನನ್ನಲ್ಲಿಯೇ ಪ್ರಾರ್ಥಿಸಿರಿ.

ಖಂಡಿತವಾಗಿಯೂ ಅಪಮಾನಿತರಾಗಿ ನರಕದಲ್ಲಿ ಪ್ರವೇಶಿಸುವರು.[10]

سَيَدْخُلُونَ جَهَنَّمَ دَاخِرِينَ ﴿٦٠﴾

61. ನೀವು ವಿಶ್ರಾಂತಿ ಪಡೆಯಲೆಂದು ನಿಮಗಾಗಿ ರಾತ್ರಿಯನ್ನುಂಟು ಮಾಡಿದವನೂ ಹಗಲನ್ನು ಪ್ರಕಾಶಮಾನವಾಗಿ ಮಾಡಿದವನೂ ಅಲ್ಲಾಹನೇ ತಾನೆ. ವಾಸ್ತವದಲ್ಲಿ ಅಲ್ಲಾಹನು ಜನರ ಮೇಲೆ ಮಹಾ ಅನುಗ್ರಹ ತೋರುವವನಾಗಿರುತ್ತಾನೆ. ಆದರೆ ಹೆಚ್ಚಿನವರು ಕೃತಜ್ಞತೆ ಸಲ್ಲಿಸುವುದಿಲ್ಲ.

اللَّهُ الَّذِي جَعَلَ لَكُمُ اللَّيْلَ لِتَسْكُنُوا فِيهِ وَالنَّهَارَ مُبْصِرًا ۚ إِنَّ اللَّهَ لَذُو فَضْلٍ عَلَى النَّاسِ وَلَٰكِنَّ أَكْثَرَ النَّاسِ لَا يَشْكُرُونَ ﴿٦١﴾

62. (ನಿಮಗಾಗಿ ಇಷ್ಟನ್ನೆಲ್ಲಾ ಮಾಡಿರುವ) ಅಲ್ಲಾಹನೇ ನಿಮ್ಮ ಪ್ರಭು. ಸಕಲ ವಸ್ತುಗಳ ಕರ್ತೃ. ಅವನ ಹೊರತು ಇನ್ನಾರೂ ಆರಾಧ್ಯರಿಲ್ಲ. ಹೀಗಿರುತ್ತಾ ಎಲ್ಲಿಂದ ನೀವು ದಾರಿಗೆಡಿಸಲ್ಪಡುತ್ತಿರುವಿರಿ?

ذَٰلِكُمُ اللَّهُ رَبُّكُمْ خَالِقُ كُلِّ شَيْءٍ لَا إِلَٰهَ إِلَّا هُوَ ۖ فَأَنَّىٰ تُؤْفَكُونَ ﴿٦٢﴾

63. ಅಲ್ಲಾಹನ ವಚನಗಳನ್ನು ನಿರಾಕರಿಸುತ್ತಿದ್ದವರೆಲ್ಲರೂ ಇದೇ ರೀತಿಯಲ್ಲಿ ವಂಚಿಸಲ್ಪಡುತ್ತಿದ್ದರು.

كَذَٰلِكَ يُؤْفَكُ الَّذِينَ كَانُوا بِآيَاتِ اللَّهِ يَجْحَدُونَ ﴿٦٣﴾

64. ಅಲ್ಲಾಹನೇ ಭೂಮಿಯನ್ನು ನಿಮ್ಮ ಪಾಲಿಗೆ ವಾಸಸ್ಥಾನವಾಗಿ ಮಾಡಿದವನು ಮತ್ತು ಮೇಲೆ ಆಕಾಶದ ಗುಂಬಜವನ್ನು ಮಾಡಿದವನು. ಅವನು ನಿಮಗೆ ರೂಪ ಕೊಟ್ಟನು. ಬಹಳ ಸುಂದರ ರೂಪವನ್ನೇ ಕೊಟ್ಟನು. ಅವನು ನಿಮಗೆ ಶುದ್ಧ ವಸ್ತುಗಳಿಂದ ಆಹಾರ ನೀಡಿದನು. ಈ (ಕಾರ್ಯಗಳನ್ನು ಮಾಡಿರುವಂತಹ) ಅಲ್ಲಾಹನೇ ನಿಮ್ಮ ಪ್ರಭು. ಅಗಣಿತ ಸಮೃದ್ಧಿಯುಳ್ಳವನು, ಅವನು ಸಕಲ ಲೋಕಗಳ ಪ್ರಭು.

اللَّهُ الَّذِي جَعَلَ لَكُمُ الْأَرْضَ قَرَارًا وَالسَّمَاءَ بِنَاءً وَصَوَّرَكُمْ فَأَحْسَنَ صُوَرَكُمْ وَرَزَقَكُمْ مِنَ الطَّيِّبَاتِ ۚ ذَٰلِكُمُ اللَّهُ رَبُّكُمْ ۖ فَتَبَارَكَ اللَّهُ رَبُّ الْعَالَمِينَ ﴿٦٤﴾

65. ಅವನೇ ಚಿರಂತನನು. ಅವನ ಹೊರತು ಇನ್ನಾರೂ ಆರಾಧ್ಯರಿಲ್ಲ. ನಿಮ್ಮ ಧರ್ಮವನ್ನು ಅವನಿಗಾಗಿಯೇ ಮೀಸಲಾಗಿಟ್ಟು ಅವನನ್ನೇ ಪ್ರಾರ್ಥಿಸಿರಿ. ಸಕಲ ಪ್ರಶಂಸೆಗಳೂ ಸಕಲ ಲೋಕಗಳ ಪಾಲಕ ಪ್ರಭುವಾದ ಅಲ್ಲಾಹನಿಗೆ ಮೀಸಲು.

هُوَ الْحَيُّ لَا إِلَٰهَ إِلَّا هُوَ فَادْعُوهُ مُخْلِصِينَ لَهُ الدِّينَ ۗ الْحَمْدُ لِلَّهِ رَبِّ الْعَالَمِينَ ﴿٦٥﴾

10. ಈ ಸೂಕ್ತದಲ್ಲಿ ಎರಡು ವಿಷಯಗಳು ಅತ್ಯಂತ ಗಮನಾರ್ಹವಾಗಿವೆ. ಮೊದಲನೆಯದಾಗಿ 'ದುಆ' ಮತ್ತು 'ಇಬಾದತ್'ನ್ನು ಇಲ್ಲಿ ಸಮಾನ ಅರ್ಥ ಬರುವ ಪದಗಳ ರೂಪದಲ್ಲಿ ಪ್ರಯೋಗಿಸಲಾಗಿದೆ. ಮೊದಲನೇ ವಾಕ್ಯದಲ್ಲಿ ಯಾವುದಕ್ಕೆ 'ದುಆ' ಎಂಬ ಪದ ಬಳಸಲಾಗಿದೆಯೋ ಎರಡನೆಯ ವಾಕ್ಯದಲ್ಲಿ ಅದಕ್ಕೆ 'ಇಬಾದತ್' ಎಂಬ ಪದ ಬಳಸಲಾಗಿದೆ. ಇದರಿಂದ ದುಆ ಅಥವಾ ಪ್ರಾರ್ಥನೆಯಲ್ಲಿ ಇಬಾದತ್ ಅಥವಾ ಇಬಾದತ್‌ನ ಸ್ಫೂರ್ತಿ ಅಡಕವಾಗಿದೆ ಎಂದು ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಅಲ್ಲಾಹನಲ್ಲಿ ಪ್ರಾರ್ಥಿಸದವರಿಗೆ 'ಅಹಂಕಾರ ಪಟ್ಟು ನನ್ನ ದಾಸ್ಯ ಮತ್ತು ಆರಾಧನೆಯಿಂದ ವಿಮುಖರಾಗುವವರು' ಎಂಬ ಪದಗಳನ್ನು ಪ್ರಯೋಗಿಸಲಾಗಿದೆ. ಅಲ್ಲಾಹನಲ್ಲಿ ಪ್ರಾರ್ಥಿಸುವುದು ದಾಸ್ಯದ ಬೇಡಿಕೆಯಾಗಿದೆ. ಅದರಿಂದ ವಿಮುಖನಾಗುವವನು ದುರಹಂಕಾರದಲ್ಲಿದ್ದಾನೆಂದರ್ಥ ಎಂದು ಇದರಿಂದ ತಿಳಿದು ಬರುತ್ತದೆ.

| | |
|---|---|
| 66. ಸಂದೇಶವಾಹಕರೇ, ಇವರೊಡನೆ ಹೇಳಿರಿ- "ನೀವು ಅಲ್ಲಾಹನನ್ನು ಬಿಟ್ಟು ಯಾರನ್ನೆಲ್ಲಾ ಪ್ರಾರ್ಥಿಸುತ್ತಿರುವಿರೋ ಅವರ ದಾಸ್ಯ-ಆರಾಧನೆ ಮಾಡುವುದರಿಂದ ನನ್ನನ್ನು ತಡೆಯಲಾಗಿದೆ. ನನ್ನ ಬಳಿಗೆ ನನ್ನ ಪ್ರಭುವಿನ ಕಡೆಯಿಂದ ಸುಸ್ಪಷ್ಟ ನಿದರ್ಶನಗಳು ಬಂದಿರುವಾಗ (ನಾನು ಈ ಕಾರ್ಯವೆಸಗುವುದಾದರೂ ಹೇಗೆ?) ನಾನು ಸಕಲ ಲೋಕಪಾಲಕನ ಮುಂದೆ ಶರಣಾಗತನಾಗಬೇಕೆಂದು ನನಗೆ ಅಪ್ಪಣೆ ಕೊಡಲಾಗಿದೆ." | قُلْ إِنِّي نُهِيتُ أَنْ أَعْبُدَ الَّذِينَ تَدْعُونَ مِنْ دُونِ اللَّهِ لَمَّا جَاءَنِيَ الْبَيِّنَاتُ مِنْ رَبِّي وَأُمِرْتُ أَنْ أُسْلِمَ لِرَبِّ الْعَالَمِينَ ٦٦ |
| 67. ನಿಮ್ಮನ್ನು ಮಣ್ಣಿನಿಂದ ತರುವಾಯ ವೀರ್ಯದಿಂದ, ಅನಂತರ ರಕ್ತಪಿಂಡದಿಂದ ಸೃಷ್ಟಿಸಿದವನು ಅವನೇ ತಾನೇ. ಆಮೇಲೆ ಅವನು ನಿಮ್ಮನ್ನು ಶಿಶುವಿನ ರೂಪದಲ್ಲಿ ಹೊರ ತರುತ್ತಾನೆ. ಆ ಬಳಿಕ ನೀವು ನಿಮ್ಮ ಸಂಪೂರ್ಣ ಪ್ರೌಢಾವಸ್ಥೆಗೆ ತಲಪಲು ನಿಮ್ಮನ್ನು ಬೆಳೆಸುತ್ತಾನೆ. ಅನಂತರ ನೀವು ವೃದ್ಧಾಪ್ಯಕ್ಕೆ ತಲಪಲಿಕ್ಕಾಗಿ ಇನ್ನಷ್ಟು ಬೆಳೆಸುತ್ತಾನೆ ಮತ್ತು ನಿಮ್ಮಲ್ಲಿ ಕೆಲವರನ್ನು ಮೊದಲೇ ಹಿಂದಕ್ಕೆ ಕರೆಸಿಕೊಳ್ಳಲಾಗುತ್ತದೆ. ನೀವು ನಿಮ್ಮ ನಿಶ್ಚಿತ ಸಮಯವನ್ನು ತಲುಪಲಿಕ್ಕಾಗಿ ಹಾಗೂ ನೀವು ವಸ್ತುಸ್ಥಿತಿಯನ್ನು ಅರಿತುಕೊಳ್ಳಲಿಕ್ಕಾಗಿ ಹೀಗೆಲ್ಲಾ ಮಾಡಲಾಗುತ್ತದೆ. | هُوَ الَّذِي خَلَقَكُمْ مِنْ تُرَابٍ ثُمَّ مِنْ نُطْفَةٍ ثُمَّ مِنْ عَلَقَةٍ ثُمَّ يُخْرِجُكُمْ طِفْلًا ثُمَّ لِتَبْلُغُوا أَشُدَّكُمْ ثُمَّ لِتَكُونُوا شُيُوخًا ۚ وَمِنْكُمْ مَنْ يُتَوَفَّىٰ مِنْ قَبْلُ ۖ وَلِتَبْلُغُوا أَجَلًا مُسَمًّى وَلَعَلَّكُمْ تَعْقِلُونَ ٦٧ |
| 68. ಜೀವಂತಗೊಳಿಸುವವನೂ ಮರಣ ಕೊಡುವವನೂ ಅವನೇ. ಅವನು ಯಾವ ವಿಷಯದ ಬಗ್ಗೆ ತೀರ್ಮಾನ ಮಾಡುವಾಗಲೂ 'ಆಗಿ ಬಿಡು' ಎಂಬ ಅಪ್ಪಣೆಯೊಂದನ್ನು ಮಾತ್ರ ಕೊಟ್ಟು ಬಿಡುತ್ತಾನೆ ಮತ್ತು ಅದು ಆಗಿ ಬಿಡುತ್ತದೆ. | هُوَ الَّذِي يُحْيِي وَيُمِيتُ ۖ فَإِذَا قَضَىٰ أَمْرًا فَإِنَّمَا يَقُولُ لَهُ كُنْ فَيَكُونُ ٦٨ |
| 69. ಅಲ್ಲಾಹನ ವಚನಗಳ ಬಗ್ಗೆ ಜಗಳ ಮಾಡುವವರನ್ನು ನೀವು ಕಂಡಿರಾ? ಅವರು ಎಲ್ಲಿಂದ ದಾರಿಗೆಡಿಸಲ್ಪಡುತ್ತಿದ್ದಾರೆ? | أَلَمْ تَرَ إِلَى الَّذِينَ يُجَادِلُونَ فِي آيَاتِ اللَّهِ أَنَّىٰ يُصْرَفُونَ ٦٩ |
| 70. ಇವರು ಈ ಗ್ರಂಥವನ್ನೂ ನಾವು ನಮ್ಮ ಸಂದೇಶವಾಹಕರೊಂದಿಗೆ ಕಳುಹಿಸಿದ್ದ ಎಲ್ಲಾ ಗ್ರಂಥಗಳನ್ನೂ ಸುಳ್ಳಾಗಿಸುತ್ತಾರೆ. ಸದ್ಯವೇ ಇವರಿಗೆ ಗೊತ್ತಾಗಲಿದೆ- | الَّذِينَ كَذَّبُوا بِالْكِتَابِ وَبِمَا أَرْسَلْنَا بِهِ رُسُلَنَا ۖ فَسَوْفَ يَعْلَمُونَ ٧٠ |
| 71-72. ಆಗ ಕಂಠ ಕಡಗಗಳು ಮತ್ತು ಸಂಕೋಲೆಗಳು ಅವರ ಕೊರಳುಗಳಲ್ಲಿರುವುವು. ಅವುಗಳನ್ನು ಹಿಡಿದು ಅವರು ಕುದಿಯುತ್ತಿರುವ ನೀರಿನ ಕಡೆಗೆ ಎಳೆಯಲ್ಪಡುವರು. ತರುವಾಯ ನರಕಾಗ್ನಿಗೆ ಎಸೆಯಲ್ಪಡುವರು. | إِذِ الْأَغْلَالُ فِي أَعْنَاقِهِمْ وَالسَّلَاسِلُ يُسْحَبُونَ ٧١ فِي الْحَمِيمِ ثُمَّ فِي النَّارِ يُسْجَرُونَ ٧٢ |

73-74. ಅನಂತರ ಅವರೊಡನೆ, "ನೀವು ಅಲ್ಲಾಹನನ್ನು ಬಿಟ್ಟು ಸಹಭಾಗಿಗಳನ್ನಾಗಿಸಿಕೊಂಡಿದ್ದ ಇತರ ದೇವರುಗಳು ಈಗ ಎಲ್ಲಿದ್ದಾರೆ?" ಎಂದು ಕೇಳಲಾಗುವುದು. ಆಗ ಅವರು, "ಅವು ನಮ್ಮಿಂದ ಕಳೆದು ಹೋದವು, ಮಾತ್ರವಲ್ಲ ನಾವು ಇದಕ್ಕೆ ಮುಂಚೆ ಯಾವುದನ್ನೂ ಕರೆದು ಪ್ರಾರ್ಥಿಸುತ್ತಿರಲಿಲ್ಲ" ಎಂದು ಉತ್ತರಿಸುವರು. ಹೀಗೆ ಸತ್ಯನಿಷೇಧಿಗಳು ಪಥಭ್ರಷ್ಟರಾಗಿರುವುದನ್ನು ಅಲ್ಲಾಹನು ಸಾಬೀತುಪಡಿಸಿ ಬಿಡುವನು.

ثُمَّ قِيلَ لَهُمْ أَيْنَ مَا كُنتُمْ تُشْرِكُونَ ﴿٧٣﴾ مِن دُونِ اللَّهِ ۖ قَالُوا ضَلُّوا عَنَّا بَل لَّمْ نَكُن نَّدْعُو مِن قَبْلُ شَيْئًا ۚ كَذَٰلِكَ يُضِلُّ اللَّهُ الْكَافِرِينَ ﴿٧٤﴾

75. ಅವರೊಡನೆ ಹೀಗೆ ಹೇಳಲಾಗುವುದು, "ನೀವು ಭೂಲೋಕದಲ್ಲಿ ಅಸತ್ಯದಲ್ಲೇ ಮಗ್ನರಾಗಿದ್ದು ಅದರ ಮೇಲೆ ದರ್ಪ ತೋರುತ್ತಿದ್ದುದರಿಂದ ನಿಮ್ಮ ಗತಿ ಹೀಗಾಯಿತು.

ذَٰلِكُم بِمَا كُنتُمْ تَفْرَحُونَ فِي الْأَرْضِ بِغَيْرِ الْحَقِّ وَبِمَا كُنتُمْ تَمْرَحُونَ ﴿٧٥﴾

76. ಈಗ ನಡೆಯಿರಿ, ನರಕ ದ್ವಾರಗಳಲ್ಲಿ ಪ್ರವೇಶಿಸಿರಿ. ನಿಮಗೆ ಸದಾ ಅಲ್ಲೇ ಇರಬೇಕಾಗಿದೆ. ಅಹಂಕಾರಿಗಳ ಅತ್ಯಂತ ಕೆಟ್ಟ ವಾಸಸ್ಥಾನ."

ادْخُلُوا أَبْوَابَ جَهَنَّمَ خَالِدِينَ فِيهَا ۖ فَبِئْسَ مَثْوَى الْمُتَكَبِّرِينَ ﴿٧٦﴾

77. ಆದುದರಿಂದ ಸಂದೇಶವಾಹಕರೇ, ತಾಳ್ಮೆ ವಹಿಸಿರಿ. ಅಲ್ಲಾಹನ ವಾಗ್ದಾನವು ಪರಮ ಸತ್ಯವಾಗಿದೆ. ಇನ್ನು ನಾವು ಇವರಿಗೆ ಎಚ್ಚರಿಕೆ ನೀಡುತ್ತಿರುವಂತಹ ದುಷ್ಪರಿಣಾಮಗಳ ಒಂದಂಶವನ್ನು ನಿಮ್ಮೆದುರಲ್ಲೇ ಇವರಿಗೆ ತೋರಿಸಿದರೂ ಅಥವಾ (ಅದಕ್ಕೆ ಮುಂಚೆಯೇ) ನಿಮ್ಮನ್ನು ಇಹಲೋಕದಿಂದ ಎತ್ತಿಕೊಂಡರೂ ಇವರಿಗಂತೂ ನಮ್ಮ ಕಡೆಗೇ ಮರಳಿ ಬರಬೇಕಾಗಿದೆ.

فَاصْبِرْ إِنَّ وَعْدَ اللَّهِ حَقٌّ ۚ فَإِمَّا نُرِيَنَّكَ بَعْضَ الَّذِي نَعِدُهُمْ أَوْ نَتَوَفَّيَنَّكَ فَإِلَيْنَا يُرْجَعُونَ ﴿٧٧﴾

78. ಸಂದೇಶವಾಹಕರೇ, ನಾವು ನಿಮಗಿಂತ ಮುಂಚೆ ಅನೇಕ ಸಂದೇಶವಾಹಕರನ್ನು ರವಾನಿಸಿರುತ್ತೇವೆ. ಅವರಲ್ಲಿ ಕೆಲವರ ವೃತ್ತಾಂತಗಳನ್ನು ನಾವು ನಿಮಗೆ ತಿಳಿಸಿದ್ದೇವೆ ಮತ್ತು ಕೆಲವರ ವೃತ್ತಾಂತಗಳನ್ನು ತಿಳಿಸಿಲ್ಲ. ಅಲ್ಲಾಹನ ಅಪ್ಪಣೆ ಇಲ್ಲದೆ ತಾನಾಗಿಯೇ ನಿದರ್ಶನವನ್ನು ತರುವ ಸಾಮರ್ಥ್ಯ ಯಾವ ಸಂದೇಶವಾಹಕರಿಗೂ ಇರಲಿಲ್ಲ. ಅಲ್ಲಾಹನ ಆಜ್ಞೆ ಬಂದು ಬಿಟ್ಟಾಗ ಸತ್ಯಕ್ಕನುಸಾರ ತೀರ್ಮಾನ ಮಾಡಿ ಬಿಡಲಾಯಿತು ಮತ್ತು ಆಗ ದುಷ್ಕರ್ಮಿಗಳು ನಷ್ಟದಲ್ಲಿ ಬಿದ್ದುಬಿಟ್ಟರು.

وَلَقَدْ أَرْسَلْنَا رُسُلًا مِّن قَبْلِكَ مِنْهُم مَّن قَصَصْنَا عَلَيْكَ وَمِنْهُم مَّن لَّمْ نَقْصُصْ عَلَيْكَ ۗ وَمَا كَانَ لِرَسُولٍ أَن يَأْتِيَ بِآيَةٍ إِلَّا بِإِذْنِ اللَّهِ ۚ فَإِذَا جَاءَ أَمْرُ اللَّهِ قُضِيَ بِالْحَقِّ وَخَسِرَ هُنَالِكَ الْمُبْطِلُونَ ﴿٧٨﴾

79. ಅಲ್ಲಾಹನೇ ನಿಮಗಾಗಿ ಈ ಜಾನುವಾರುಗಳನ್ನು ಉಂಟು ಮಾಡಿರುತ್ತಾನೆ. ಅವುಗಳ ಪೈಕಿ ಕೆಲವನ್ನು, ನೀವು ಸವಾರಿಗಾಗಿಯೂ ಇನ್ನು ಕೆಲವನ್ನು ಆಹಾರಕ್ಕಾಗಿಯೂ ಉಪಯೋಗಿಸುವಂತೆ ಮಾಡಿರುತ್ತಾನೆ.

اللَّهُ الَّذِي جَعَلَ لَكُمُ الْأَنْعَامَ لِتَرْكَبُوا مِنْهَا وَمِنْهَا تَأْكُلُونَ ﴿٧٩﴾

80. ಅವುಗಳಲ್ಲಿ ನಿಮಗೆ ಇನ್ನೂ ಅನೇಕ ಪ್ರಯೋಜನಗಳಿವೆ. ನೀವು ಅವುಗಳ ಮೇಲೇರಿ, ನಿಮ್ಮ ಮನಗಳಲ್ಲಿ ಎಲ್ಲಿ ಹೋಗಬೇಕೆಂಬ ಇಚ್ಛೆ ಇದೆಯೋ ಅಲ್ಲಿಗೆ ತಲುಪಬಲ್ಲಿರಿ. ಅವುಗಳ ಮೇಲೂ ನಾವೆಗಳ ಮೇಲೂ ನೀವು ಸವಾರಿ ಮಾಡಿಸಲ್ಪಡುತ್ತೀರಿ.

وَلَكُمْ فِيهَا مَنَافِعُ وَلِتَبْلُغُوا عَلَيْهَا حَاجَةً فِي صُدُورِكُمْ وَعَلَيْهَا وَعَلَى الْفُلْكِ تُحْمَلُونَ ﴿٨٠﴾

81. ಅಲ್ಲಾಹನು ತನ್ನ ಈ ನಿದರ್ಶನಗಳನ್ನು ನಿಮಗೆ ತೋರಿಸಿ ಕೊಡುತ್ತಿದ್ದಾನೆ. ನೀವು ಅವನ ಯಾವ ಯಾವ ನಿದರ್ಶನಗಳನ್ನು ನಿರಾಕರಿಸಬಲ್ಲಿರಿ?

وَيُرِيكُمْ آيَاتِهِ فَأَيَّ آيَاتِ اللَّهِ تُنكِرُونَ ﴿٨١﴾

82. ಇವರಿಗಿಂತ ಮುಂಚೆ ಗತಿಸಿದವರ ಗತಿಯೇನಾಯಿತೆಂದು ನೋಡಲಿಕ್ಕಾಗಿ ಇವರು ಈ ಭೂಮಿಯಲ್ಲಿ ಸಂಚರಿಸಲಿಲ್ಲವೇ? ಅವರು ಸಂಖ್ಯೆಯಲ್ಲಿ ಇವರಿಗಿಂತ ಹೆಚ್ಚಿದ್ದರು, ಇವರಿಗಿಂತಲೂ ಹೆಚ್ಚು ಬಲಶಾಲಿಗಳಾಗಿದ್ದರು ಮತ್ತು ಭೂಮಿಯಲ್ಲಿ ಇವರಿಗಿಂತಲೂ ಅಧಿಕ ವೈಭವಯುಕ್ತ ಕುರುಹುಗಳನ್ನು ಬಿಟ್ಟು ಹೋಗಿರುವರು. ಅವರು ಸಂಪಾದಿಸಿದುದು ಅವರ ಯಾವ ಕೆಲಸಕ್ಕೂ ಬರಲಿಲ್ಲ.

أَفَلَمْ يَسِيرُوا فِي الْأَرْضِ فَيَنظُرُوا كَيْفَ كَانَ عَاقِبَةُ الَّذِينَ مِن قَبْلِهِمْ ۚ كَانُوا أَكْثَرَ مِنْهُمْ وَأَشَدَّ قُوَّةً وَآثَارًا فِي الْأَرْضِ فَمَا أَغْنَىٰ عَنْهُم مَّا كَانُوا يَكْسِبُونَ ﴿٨٢﴾

83. ಅವರ ಸಂದೇಶವಾಹಕರು ಅವರ ಬಳಿಗೆ ಪ್ರತ್ಯಕ್ಷ ಪ್ರಮಾಣಗಳನ್ನು ತಂದಾಗ ಅವರು ತಮ್ಮಲ್ಲಿದ್ದ ವಿದ್ಯೆಯಲ್ಲೇ ಮಗ್ನರಾಗಿದ್ದರು ಮತ್ತು ಅಪಹಾಸ್ಯ ಮಾಡುತ್ತಿದ್ದುದರ ಸುಳಿಯಲ್ಲೇ ಸಿಲುಕಿಕೊಂಡರು.

فَلَمَّا جَاءَتْهُمْ رُسُلُهُم بِالْبَيِّنَاتِ فَرِحُوا بِمَا عِندَهُم مِّنَ الْعِلْمِ وَحَاقَ بِهِم مَّا كَانُوا بِهِ يَسْتَهْزِئُونَ ﴿٨٣﴾

84. ಅವರು ನಮ್ಮ ಯಾತನೆಯನ್ನು ಕಂಡುಕೊಂಡಾಗ ನಾವು ಏಕಮಾತ್ರನೂ ಸಹಭಾಗಿಗಳಾರೂ ಇಲ್ಲದವನೂ ಆದ ಅಲ್ಲಾಹನನ್ನು ನಂಬಿದೆವು. ನಾವು ಅವನ ಸಹಭಾಗಿಗಳೆಂದು ಪರಿಗಣಿಸುತ್ತಿದ್ದ ಸಕಲ ಆರಾಧ್ಯರನ್ನು ನಿರಾಕರಿಸುತ್ತೇವೆ ಎಂದು ಕೂಗಾಡಿದರು.

فَلَمَّا رَأَوْا بَأْسَنَا قَالُوا آمَنَّا بِاللَّهِ وَحْدَهُ وَكَفَرْنَا بِمَا كُنَّا بِهِ مُشْرِكِينَ ﴿٨٤﴾

85. ಆದರೆ, ನಮ್ಮ ಯಾತನೆಯನ್ನು ಕಂಡ ಬಳಿಕ ಅವರ ವಿಶ್ವಾಸವು ಅವರಿಗೆ ಏನೂ ಫಲಕಾರಿಯಾಗುವಂತಿರಲಿಲ್ಲ. ಏಕೆಂದರೆ ಅಲ್ಲಾಹನ ದಾಸರ ಮಧ್ಯೆ ಸದಾ ಜಾರಿಯಲ್ಲಿದ್ದ ನಿಶ್ಚಿತ ನಿಯಮ ಇದೇ ಆಗಿತ್ತು ಮತ್ತು ಆಗ ಸತ್ಯನಿಷೇಧಿಗಳು ನಷ್ಟದಲ್ಲಿ ಬಿದ್ದು ಬಿಟ್ಟರು.

فَلَمْ يَكُ يَنفَعُهُمْ إِيمَانُهُمْ لَمَّا رَأَوْا بَأْسَنَا ۖ سُنَّتَ اللَّهِ الَّتِي قَدْ خَلَتْ فِي عِبَادِهِ ۖ وَخَسِرَ هُنَالِكَ الْكَافِرُونَ ﴿٨٥﴾






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹಾಮೀಮ್.

حٰمٓ ﴿١﴾

2. ಇದು ಪರಮ ದಯಾಮಯನೂ ಕರುಣಾನಿಧಿಯೂ ಆದವನ ಕಡೆಯಿಂದ ಅವತೀರ್ಣ ಗೊಳಿಸಲ್ಪಟ್ಟುದಾಗಿದೆ.

تَنْزِيْلٌ مِّنَ الرَّحْمٰنِ الرَّحِيْمِ ﴿٢﴾

3. ಸೂಕ್ತಗಳು ಸುಸ್ಪಷ್ಟವಾಗಿ ವಿವರಿಸಲ್ಪಟ್ಟಿರುವ ಗ್ರಂಥವಿದು. ಜ್ಞಾನವುಳ್ಳವರಿಗಾಗಿ ಅರಬೀ ಭಾಷೆಯ ಕುರ್‌ಆನ್.

كِتٰبٌ فُصِّلَتْ اٰيٰتُهٗ قُرْاٰنًا عَرَبِيًّا لِّقَوْمٍ يَّعْلَمُوْنَ ﴿٣﴾

4. ಸುವಾರ್ತೆ ಹಾಗೂ ಎಚ್ಚರಿಕೆ ನೀಡುವಂತಹದು. ಆದರೆ ಇವರಲ್ಲಿ ಹೆಚ್ಚಿನವರು ಇದರಿಂದ ವಿಮುಖರಾದರು ಮತ್ತು ಅವರು ಕಿವಿ ಗೊಡುವುದಿಲ್ಲ.

بَشِيْرًا وَّنَذِيْرًا ۚ فَاَعْرَضَ اَكْثَرُهُمْ فَهُمْ لَا يَسْمَعُوْنَ ﴿٤﴾

5. "ನೀವು ಯಾವುದರ ಕಡೆಗೆ ನಮ್ಮನ್ನು ಕರೆಯುತ್ತಿರುವಿರೋ ಅದರ ಬಗ್ಗೆ ನಮ್ಮ ಹೃದಯಗಳ ಮೇಲೆ ಹೊದಿಕೆಗಳು ಹೊದಿಸಲ್ಪಟ್ಟಿವೆ. ನಮ್ಮ ಕಿವಿಗಳು ಕಿವುಡಾಗಿ ಬಿಟ್ಟಿವೆ. ನಮ್ಮ ಮತ್ತು ನಿಮ್ಮ ನಡುವೆ ಒಂದು ತೆರೆ ಬಿದ್ದಿದೆ. ನೀವು ನಿಮ್ಮ ಕೆಲಸ ಮಾಡಿರಿ, ನಾವು ನಮ್ಮ ಕೆಲಸ ಮಾಡುತ್ತ ಹೋಗುವೆವು" ಎನ್ನುತ್ತಾರೆ.

وَقَالُوْا قُلُوْبُنَا فِيْٓ اَكِنَّةٍ مِّمَّا تَدْعُوْنَآ اِلَيْهِ وَفِيْٓ اٰذَانِنَا وَقْرٌ وَّمِنْۢ بَيْنِنَا وَبَيْنِكَ حِجَابٌ فَاعْمَلْ اِنَّنَا عٰمِلُوْنَ ﴿٥﴾

6. ಸಂದೇಶವಾಹಕರೇ, ಇವರೊಡನೆ ಹೇಳಿರಿ, "ನಾನು ನಿಮ್ಮಂತೆಯೇ ಇರುವ ಒಬ್ಬ ಮನುಷ್ಯನೇ ಆಗಿದ್ದೇನೆ. ನಿಮ್ಮ ಆರಾಧ್ಯನು ಏಕಮಾತ್ರ ಆರಾಧ್ಯನಾಗಿರುವನೆಂದು ನನಗೆ 'ದಿವ್ಯವಾಣಿ' ಮೂಲಕ ತಿಳಿಸಲಾಗುತ್ತದೆ. ಆದುದರಿಂದ ನೀವು ನೇರವಾಗಿ ಅವನದೇ ದಿಕ್ಕನ್ನು ಅನುಸರಿಸಿರಿ ಮತ್ತು ಅವನೊಡನೆ ಕ್ಷಮೆ ಯಾಚಿಸಿರಿ. ಬಹುದೇವವಿಶ್ವಾಸಿಗಳಿಗೆ ವಿನಾಶವಿದೆ.

قُلْ اِنَّمَآ اَنَا بَشَرٌ مِّثْلُكُمْ يُوْحٰٓى اِلَيَّ اَنَّمَآ اِلٰهُكُمْ اِلٰهٌ وَّاحِدٌ فَاسْتَقِيْمُوْٓا اِلَيْهِ وَاسْتَغْفِرُوْهُ ۗ وَوَيْلٌ لِّلْمُشْرِكِيْنَ ﴿٦﴾

7. ಅವರು ಝಕಾತ್ ಕೊಡದವರು ಹಾಗೂ ಪರಲೋಕ ಜೀವನವನ್ನು ನಿರಾಕರಿಸುವವರು.

الَّذِينَ لَا يُؤْتُونَ الزَّكٰوةَ وَهُمْ بِالْاٰخِرَةِ هُمْ كٰفِرُونَ ۝٧

8. ಆದರೆ ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗಿದವರಿಗಾಗಿ ಖಂಡಿತವಾಗಿಯೂ ಎಂದೂ ಕೊನೆಗೊಳ್ಳದಂತಹ ಸತ್ಫಲವಿದೆ."

إِنَّ الَّذِينَ اٰمَنُوا وَعَمِلُوا الصّٰلِحٰتِ لَهُمْ أَجْرٌ غَيْرُ مَمْنُونٍ ۝٨

9. ಸಂದೇಶವಾಹಕರೇ, ಇವರೊಡನೆ ಹೇಳಿರಿ- "ಭೂಮಿಯನ್ನು ಎರಡೇ ದಿನಗಳಲ್ಲಿ ಸೃಷ್ಟಿಸಿದಂತಹ ದೇವನನ್ನು ನೀವು ನಿರಾಕರಿಸುತ್ತೀರಾ? ಮತ್ತು ಇತರರನ್ನು ಅವನಿಗೆ ಸರಿಸಮಾನರಾಗಿ ಮಾಡುತ್ತೀರಾ? ಸಕಲ ಲೋಕಗಳ ಪಾಲಕ ಪ್ರಭು ಅವನೇ ತಾನೆ.

قُلْ أَئِنَّكُمْ لَتَكْفُرُونَ بِالَّذِي خَلَقَ الْأَرْضَ فِي يَوْمَيْنِ وَتَجْعَلُونَ لَهُ أَنْدَادًا ۚ ذٰلِكَ رَبُّ الْعٰلَمِينَ ۝٩

10. ಅವನು (ಭೂಮಿಯನ್ನು ಅಸ್ತಿತ್ವಕ್ಕೆ ತಂದ ಬಳಿಕ) ಅದರ ಮೇಲೆ ಪರ್ವತಗಳನ್ನು ನಾಟಿದನು. ಅದರಲ್ಲಿ ಸಮೃದ್ಧಿಗಳನ್ನಿರಿಸಿದನು ಮತ್ತು ಅದರಲ್ಲಿ ಎಲ್ಲ ಅಪೇಕ್ಷಕರಿಗಾಗಿ[1] ಅವರವರ ಅಗತ್ಯಾನುಸಾರ, ಸರಿಯಾದ ಪ್ರಮಾಣದಲ್ಲಿ ಆಹಾರ ವಸ್ತುಗಳನ್ನು ಒದಗಿಸಿದನು. ಈ ಕಾರ್ಯಗಳೆಲ್ಲ ನಾಲ್ಕು ದಿನಗಳಲ್ಲಾದವು."

وَجَعَلَ فِيهَا رَوَاسِيَ مِنْ فَوْقِهَا وَبٰرَكَ فِيهَا وَقَدَّرَ فِيهَا أَقْوَاتَهَا فِي أَرْبَعَةِ أَيَّامٍ ۖ سَوَاءً لِلسَّائِلِينَ ۝١٠

11. ತರುವಾಯ ಅವನು ಆಕಾಶದ ಕಡೆಗೆ ಗಮನ ಹರಿಸಿದನು.[2] ಆಗ ಅದು ಕೇವಲ ಹೊಗೆಯಾಗಿತ್ತು. ಅವನು ಆಕಾಶ-ಭೂಮಿಗಳೊಡನೆ, "ನೀವು ಬಯಸಿದರೂ ಬಯಸದಿದ್ದರೂ ಅಸ್ತಿತ್ವಕ್ಕೆ ಬಂದು ಬಿಡಿರಿ" ಎಂದನು. ಅವೆರಡೂ, "ನಾವು ಆಜ್ಞಾಪಾಲಕರಂತೆ ಬಂದು ಬಿಟ್ಟೆವು" ಎಂದವು.

ثُمَّ اسْتَوٰى إِلَى السَّمَاءِ وَهِيَ دُخَانٌ فَقَالَ لَهَا وَلِلْأَرْضِ ائْتِيَا طَوْعًا أَوْ كَرْهًا ۚ قَالَتَا أَتَيْنَا طَائِعِينَ ۝١١

12. ಆಗ ಅವನು ಎರಡು ದಿನಗಳೊಳಗೆ ಸಪ್ತಗಗನಗಳನ್ನು ಉಂಟು ಮಾಡಿದನು ಮತ್ತು ಎಲ್ಲ ಆಕಾಶಗಳಲ್ಲೂ ಅದರ ಕಾನೂನನ್ನು 'ದಿವ್ಯವಾಣಿ' ಮಾಡಿಬಿಟ್ಟನು. ಭೂಲೋಕದ ಆಕಾಶವನ್ನು ನಾವು ದೀಪಗಳಿಂದ ಅಲಂಕರಿಸಿದೆವು ಮತ್ತು ಅದನ್ನು ಚೆನ್ನಾಗಿ ಸುರಕ್ಷಿತಗೊಳಿಸಿದೆವು. ಇವೆಲ್ಲವೂ ಓರ್ವ ಪ್ರಬಲನೂ ಸರ್ವಜ್ಞನೂ ಆಗಿರುವಾತನ ಯೋಜನೆಯಾಗಿದೆ.

فَقَضٰهُنَّ سَبْعَ سَمٰوٰتٍ فِي يَوْمَيْنِ وَأَوْحٰى فِي كُلِّ سَمَاءٍ أَمْرَهَا ۚ وَزَيَّنَّا السَّمَاءَ الدُّنْيَا بِمَصَابِيحَ ۖ وَحِفْظًا ۚ ذٰلِكَ تَقْدِيرُ الْعَزِيزِ الْعَلِيمِ ۝١٢

1. ಅರ್ಥಾತ್- ಆಹಾರವನ್ನು ಬಯಸುವ ಪ್ರತಿಯೊಂದು ಜೀವಿಗೆ.
2. ಭೂಮಿಯನ್ನು ಸೃಷ್ಟಿಸಿದ ಮತ್ತು ಅದನ್ನು ಜನವಾಸಕ್ಕೆ ಅರ್ಹಗೊಳಿಸಿದ ನಂತರ ಅವನು ಆಕಾಶವನ್ನು ಸೃಷ್ಟಿಸಿದನು ಎಂದು ಇದರ ಅರ್ಥವಲ್ಲ. ಇಲ್ಲಿ 'ತರುವಾಯ' ಎಂಬ ಪದ ಕಾಲಕ್ರಮಕ್ಕಾಗಿ ಉಪಯೋಗವಾಗಿಲ್ಲ ಬದಲಾಗಿ ಅನುಕ್ರಮವಾದ ವರ್ಣನೆಗೆ ಉಪಯೋಗವಾಗಿದೆ. ಅನಂತರದ ವಾಕ್ಯಗಳು ಇದನ್ನು ಸ್ಪಷ್ಟಪಡಿಸುತ್ತವೆ.

13. ಇವರೀಗ ವಿಮುಖರಾಗುತ್ತಾರೆಂದಾದರೆ ಇವರೊಡನೆ ಹೇಳಿರಿ, "ನಾನು ನಿಮ್ಮನ್ನು, ಆದ್ ಮತ್ತು ಸಮೂದರ ಮೇಲೆ ಎರಗಿ ದ್ದಂತಹ, ಹಠಾತ್ತನೆ ಸಿಡಿದು ಬೀಳುವ ಒಂದು ಯಾತನೆಯ ಬಗ್ಗೆ ಎಚ್ಚರಿಸುತ್ತೇನೆ."

فَإِنْ أَعْرَضُوا فَقُلْ أَنذَرْتُكُمْ صَاعِقَةً مِّثْلَ صَاعِقَةِ عَادٍ وَثَمُودَ ﴿١٣﴾

14. ದೇವ ಸಂದೇಶವಾಹಕರು ಅವರ ಮುಂದಿನಿಂದಲೂ ಹಿಂದಿ ನಿಂದಲೂ ಎಲ್ಲ ದಿಕ್ಕುಗಳಿಂದಲೂ ಅವರ ಬಳಿ ಬಂದು, "ನೀವು ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡ ಬೇಡಿರಿ" ಎಂದು ಹೇಳಿದಾಗ ಅವರು, "ನಮ್ಮ ಪ್ರಭು ಇಚ್ಛಿಸು ತ್ತಿದ್ದರೆ ದೇವಚರರನ್ನು ಕಳುಹಿಸುತ್ತಿದ್ದನು. ಆದುದರಿಂದ ನೀವು ಯಾವುದಕ್ಕಾಗಿ ಕಳುಹಿಸಲ್ಪಟ್ಟಿರುವಿರೋ ಅದನ್ನು ನಾವು ನಿರಾಕರಿ ಸುತ್ತೇವೆ" ಎಂದರು.

إِذْ جَاءَتْهُمُ الرُّسُلُ مِن بَيْنِ أَيْدِيهِمْ وَمِنْ خَلْفِهِمْ أَلَّا تَعْبُدُوا إِلَّا اللَّهَ ۖ قَالُوا لَوْ شَاءَ رَبُّنَا لَأَنزَلَ مَلَائِكَةً فَإِنَّا بِمَا أُرْسِلْتُم بِهِ كَافِرُونَ ﴿١٤﴾

15. ಆದ್ (ಜನಾಂಗದವರು) ಯಾವ ಹಕ್ಕೂ ಇಲ್ಲದೆ ಭೂಮಿಯಲ್ಲಿ ಅಹಂಕಾರ ಪಡುತ್ತಿದ್ದರು. "ನಮಗಿಂತ ಶಕ್ತಿಶಾಲಿಗಳು ಯಾರಿ ದ್ದಾರೆ?" ಎನ್ನತೊಡಗಿದರು. ಅವರನ್ನು ಸೃಷ್ಟಿಸಿದ ಅಲ್ಲಾಹ್ ಅವರಿಗಿಂತ ಎಷ್ಟೋ ಅಧಿಕ ಶಕ್ತಿಶಾಲಿಯೆಂದು ಅವರಿಗೆ ಹೊಳೆಯ ಲಿಲ್ಲವೇ? ಅವರು ನಮ್ಮ ಸೂಕ್ತಗಳನ್ನು ನಿರಾಕರಿಸುತ್ತಲೇ ಇದ್ದರು.

فَأَمَّا عَادٌ فَاسْتَكْبَرُوا فِي الْأَرْضِ بِغَيْرِ الْحَقِّ وَقَالُوا مَنْ أَشَدُّ مِنَّا قُوَّةً ۖ أَوَلَمْ يَرَوْا أَنَّ اللَّهَ الَّذِي خَلَقَهُمْ هُوَ أَشَدُّ مِنْهُمْ قُوَّةً ۖ وَكَانُوا بِآيَاتِنَا يَجْحَدُونَ ﴿١٥﴾

16. ಕೊನೆಗೆ ನಾವು ಅವರಿಗೆ ಲೌಕಿಕ ಜೀವನದಲ್ಲೇ ಅಪಮಾನಕರ ಯಾತನೆಯ ಸವಿಯನ್ನು ಉಣಿಸಲಿಕ್ಕಾಗಿ ಕೆಲವು ಅಶುಭ ದಿನಗಳಲ್ಲಿ ಅವರ ಮೇಲೆ ತೀವ್ರವಾದ ಚಂಡಮಾರುತವನ್ನು ಕಳುಹಿಸಿಬಿಟ್ಟೆವು. ಪರಲೋಕದ ಯಾತನೆಯಂತು ಇದಕ್ಕಿಂತಲೂ ಹೆಚ್ಚು ಅಪಮಾನ ಕರವಾಗಿದೆ. ಅಲ್ಲಿ ಅವರಿಗೆ ಸಹಾಯ ಮಾಡುವವರು ಯಾರೂ ಇರಲಾರರು.

فَأَرْسَلْنَا عَلَيْهِمْ رِيحًا صَرْصَرًا فِي أَيَّامٍ نَّحِسَاتٍ لِّنُذِيقَهُمْ عَذَابَ الْخِزْيِ فِي الْحَيَاةِ الدُّنْيَا ۖ وَلَعَذَابُ الْآخِرَةِ أَخْزَىٰ ۖ وَهُمْ لَا يُنصَرُونَ ﴿١٦﴾

17. ಇನ್ನು ಸಮೂದರು, ನಾವು ನೇರ ಮಾರ್ಗವನ್ನು ಅವರ ಮುಂದಿ ರಿಸಿದೆವು. ಆದರೆ ಅವರು ದಾರಿಗಾಣುವ ಬದಲು ಕುರುಡ ರಾಗಿರುವುದನ್ನೇ ಮೆಚ್ಚಿಕೊಂಡರು. ಕೊನೆಗೆ ಅವರ ದುಷ್ಕರ್ಮ ಗಳಿಂದಾಗಿ ಅವರ ಮೇಲೆ ಅಪಮಾನಕಾರಕ ಯಾತನೆ ಎರಗಿತು.

وَأَمَّا ثَمُودُ فَهَدَيْنَاهُمْ فَاسْتَحَبُّوا الْعَمَىٰ عَلَى الْهُدَىٰ فَأَخَذَتْهُمْ صَاعِقَةُ الْعَذَابِ الْهُونِ بِمَا كَانُوا يَكْسِبُونَ ﴿١٧﴾

18. ಮತ್ತು ಸತ್ಯವಿಶ್ವಾಸವನ್ನು ಸ್ವೀಕರಿಸಿ ಕರ್ಮಭ್ರಷ್ಟತೆಯಿಂದ ದೂರವಿರುತ್ತಿದ್ದವರನ್ನು ನಾವು ರಕ್ಷಿಸಿಕೊಂಡೆವು.

وَنَجَّيْنَا الَّذِينَ آمَنُوا وَكَانُوا يَتَّقُونَ ﴿١٨﴾

19. ಅಲ್ಲಾಹನ ಈ ಶತ್ರುಗಳು ನರಕಾಗ್ನಿಯ ಕಡೆಗೆ ಸುತ್ತುಗಟ್ಟಿ ತರಲ್ಪಡುವಂತಹ ದಿನದ ಬಗ್ಗೆ ಯೋಚಿಸಿರಿ.[3] ಅಂದು, ಅವರ ಹಿಂದಿನ ಕಾಲದವರನ್ನು ಮುಂದಿನ ಕಾಲದವರು ಬರುವವರೆಗೆ ತಡೆದಿರಿಸಲಾಗುವುದು.[4]

وَيَوْمَ يُحْشَرُ أَعْدَاءُ اللَّهِ إِلَى النَّارِ فَهُمْ يُوزَعُونَ ﴿١٩﴾

20. ಅವರೆಲ್ಲರೂ ಅಲ್ಲಿಗೆ ತಲಪಿದಾಗ ಅವರ ಕಿವಿಗಳೂ ಕಣ್ಣುಗಳೂ ಅವರ ದೇಹದ ಚರ್ಮಗಳೂ ಅವರು ಭೂಲೋಕದಲ್ಲಿ ಏನು ಮಾಡುತ್ತಿದ್ದರೆಂಬ ಕುರಿತು ಸಾಕ್ಷಿ ಹೇಳುವುವು.

حَتَّىٰ إِذَا مَا جَاءُوهَا شَهِدَ عَلَيْهِمْ سَمْعُهُمْ وَأَبْصَارُهُمْ وَجُلُودُهُم بِمَا كَانُوا يَعْمَلُونَ ﴿٢٠﴾

21. ಅವರು ತಮ್ಮ ಚರ್ಮಗಳೊಡನೆ- ನೀವು ನಮ್ಮ ವಿರುದ್ಧ ಸಾಕ್ಷಿ ಹೇಳಿದುದೇಕೆಂದು ಕೇಳುವರು. ಆಗ ಅವುಗಳು ಹೇಳುವವು: "ಸಕಲ ವಸ್ತುಗಳಿಗೆ ವಾಕ್ಸಾಮರ್ಥ್ಯ ನೀಡಿರುವ ದೇವನೇ ನಮಗೂ ವಾಕ್ಸಾಮರ್ಥ್ಯವನ್ನು ನೀಡಿರುವನು. ಅವನೇ ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದ್ದನು ಮತ್ತು ಈಗ ಅವನ ಕಡೆಗೇ ನೀವು ಮರಳಿ ತರಲ್ಪಡುತ್ತಿರುವಿರಿ.

وَقَالُوا لِجُلُودِهِمْ لِمَ شَهِدتُّمْ عَلَيْنَا ۖ قَالُوا أَنطَقَنَا اللَّهُ الَّذِي أَنطَقَ كُلَّ شَيْءٍ وَهُوَ خَلَقَكُمْ أَوَّلَ مَرَّةٍ وَإِلَيْهِ تُرْجَعُونَ ﴿٢١﴾

22. ನೀವು ಭೂಲೋಕದಲ್ಲಿ ಅಡಗಿಕೊಂಡು ಅಪರಾಧಗಳನ್ನೆಸಗುತ್ತಿದ್ದಾಗ ನಿಮ್ಮ ಕಿವಿಗಳು, ಕಣ್ಣುಗಳು ಮತ್ತು ಚರ್ಮಗಳು ನಿಮ್ಮ ವಿರುದ್ಧ ಸಾಕ್ಷಿ ಹೇಳಲಿವೆ ಎಂಬ ಯೋಚನೆಯೇ ನಿಮಗಿರಲಿಲ್ಲ. ನೀವಂತು ನಿಮ್ಮ ಹಲವಾರು ಕರ್ಮಗಳ ಬಗ್ಗೆ ಅಲ್ಲಾಹನಿಗೂ ಅರಿವಿಲ್ಲ ಎಂದು ಭಾವಿಸಿಕೊಂಡಿದ್ದಿರಿ.

وَمَا كُنتُمْ تَسْتَتِرُونَ أَن يَشْهَدَ عَلَيْكُمْ سَمْعُكُمْ وَلَا أَبْصَارُكُمْ وَلَا جُلُودُكُمْ وَلَٰكِن ظَنَنتُمْ أَنَّ اللَّهَ لَا يَعْلَمُ كَثِيرًا مِّمَّا تَعْمَلُونَ ﴿٢٢﴾

23. ನೀವು ನಿಮ್ಮ ಪ್ರಭುವಿನ ಬಗ್ಗೆ ಇರಿಸಿಕೊಂಡಿದ್ದ ಈ ಭಾವನೆಯೇ ನಿಮ್ಮನ್ನು ಕೆಡಿಸಿಬಿಟ್ಟಿತು ಮತ್ತು ಇದರಿಂದಾಗಿಯೇ ನೀವು ನಷ್ಟಕ್ಕೊಳಗಾಗಿಬಿಟ್ಟಿರಿ."

وَذَٰلِكُمْ ظَنُّكُمُ الَّذِي ظَنَنتُم بِرَبِّكُمْ أَرْدَاكُمْ فَأَصْبَحْتُم مِّنَ الْخَاسِرِينَ ﴿٢٣﴾

3. ಅಲ್ಲಾಹನ ಆಸ್ಥಾನದಲ್ಲಿ ಹಾಜರುಪಡಿಸಲು ಅವರನ್ನು ಕಲೆಹಾಕಲಾದಾಗ ಎಂದು ಹೇಳುವುದು ಇದರ ಇಂಗಿತವಾಗಿದೆ. ಆದರೆ ನರಕದೆಡೆಗೆ ಹೋಗಲು ಅವರನ್ನು ಕಲೆಹಾಕಲಾದಾಗ ಎಂಬ ಪದಗಳನ್ನು ಇಲ್ಲಿ ಪ್ರಯೋಗಿಸಲಾಗಿದೆ. ಏಕೆಂದರೆ ನರಕಪ್ರವೇಶ ಮಾಡುವುದೇ ಅವರ ಅಂತಿಮ ಗತಿಯಾಗಿದೆ.

4. ಒಂದೊಂದು ಜನಾಂಗ ಮತ್ತು ಒಂದೊಂದು ವಂಶವನ್ನು ಗಣನೆಗೆ ತೆಗೆದುಕೊಂಡು ಒಂದರ ನಂತರ ಒಂದರಂತೆ ಅದರ ತೀರ್ಮಾನ ಮಾಡಲಾಗುವುದಿಲ್ಲ. ಬದಲಾಗಿ ಹಿಂದಿನ ಮತ್ತು ಮುಂದಿನ ಜನಾಂಗಗಳನ್ನೆಲ್ಲಾ ಏಕಕಾಲಕ್ಕೆ ಒಟ್ಟು ಸೇರಿಸಿ ಒಂದೇ ಬಾರಿಗೆ ಅವುಗಳ ವಿಚಾರಣೆ ನಡೆಸಲಾಗುವುದು. ಏಕೆಂದರೆ ಪ್ರತಿಯೊಂದು ಜನಾಂಗವು ಉತ್ತಮವಾಗುವ ಅಥವಾ ಕೆಟ್ಟದ್ದಾಗುವ ಪ್ರಕ್ರಿಯೆಯಲ್ಲಿ ಮೊದಲು ಗತಿಸಿದ ಜನಾಂಗದ ಧಾರ್ಮಿಕ ಮತ್ತು ನೈತಿಕ ಬಳುವಳಿಯ ಪಾಲೂ ಇದೆ.

24. ಇಂತಹ ಸ್ಥಿತಿಯಲ್ಲಿ ಅವರು ತಾಳ್ಮೆ ವಹಿಸಿದರೂ (ವಹಿಸದಿದ್ದರೂ) ನರಕಾಗ್ನಿಯೇ ಅವರ ವಾಸಸ್ಥಾನವಾಗುವುದು. ಅವರು ಮರಳಲು ಬಯಸಿದರೂ ಅವರಿಗೆ ಅದಕ್ಕೆ ಅವಕಾಶ ಕೊಡಲಾಗದು.

فَإِن يَصْبِرُوا فَالنَّارُ مَثْوًى لَّهُمْ ۖ وَإِن يَسْتَعْتِبُوا فَمَا هُم مِّنَ الْمُعْتَبِينَ ﴿٢٤﴾

25. ಅವರಿಗೆ ಅವರ ಮುಂದೆ ಮತ್ತು ಹಿಂದೆ ಇರುವ ವಸ್ತುಗಳನ್ನೆಲ್ಲ ಮನೋಹರಗೊಳಿಸಿ ತೋರಿಸುತ್ತಿದ್ದಂತಹ ಸಂಗಾತಿಗಳನ್ನು ನಾವು ಅವರ ಮೇಲೆ ಹೇರಿ ಬಿಟ್ಟಿದ್ದೆವು. ಕೊನೆಗೆ ಇವರಿಗಿಂತ ಮುಂಚೆ ಗತಿಸಿಹೋಗಿದ್ದ ಯಕ್ಷ ಮತ್ತು ಮಾನವ ಸಮುದಾಯಗಳಿಗೆ ಅನ್ವಯಗೊಂಡಿದ್ದ ಶಿಕ್ಷೆಯ ತೀರ್ಮಾನವೇ ಅವರಿಗೂ ಅನ್ವಯ ವಾಗಿ ಬಿಟ್ಟಿತು. ಖಂಡಿತವಾಗಿಯೂ ಅವರು ನಷ್ಟ ಹೊಂದು ವವರಾಗಿದ್ದರು.

وَقَيَّضْنَا لَهُمْ قُرَنَاءَ فَزَيَّنُوا لَهُم مَّا بَيْنَ أَيْدِيهِمْ وَمَا خَلْفَهُمْ وَحَقَّ عَلَيْهِمُ الْقَوْلُ فِي أُمَمٍ قَدْ خَلَتْ مِن قَبْلِهِم مِّنَ الْجِنِّ وَالْإِنسِ ۖ إِنَّهُمْ كَانُوا خَاسِرِينَ ﴿٢٥﴾

26. "ಈ ಕುರ್‌ಆನನ್ನು ಎಷ್ಟು ಮಾತ್ರಕ್ಕೂ ಆಲಿಸಬೇಡಿರಿ. ಇದನ್ನು ಕೇಳಿಸಲಾದಾಗ ಆತಂಕಗಳನ್ನೊಡ್ಡಿರಿ. ಈ ಮೂಲಕ ನೀವು ವಿಜಯಿಗಳಾಗಲೂಬಹುದು" ಎಂದು ಈ ಸತ್ಯನಿಷೇಧಿಗಳು ಹೇಳುತ್ತಾರೆ.

وَقَالَ الَّذِينَ كَفَرُوا لَا تَسْمَعُوا لِهَٰذَا الْقُرْآنِ وَالْغَوْا فِيهِ لَعَلَّكُمْ تَغْلِبُونَ ﴿٢٦﴾

27. ನಾವು ಸತ್ಯನಿಷೇಧಿಗಳಿಗೆ ಘೋರ ಯಾತನೆಯ ಸವಿಯನ್ನು ಉಣಿಸಿಯೇ ತೀರುವೆವು. ಇವರು ಮಾಡುತ್ತಿದ್ದ ಅತ್ಯಂತ ಕೆಟ್ಟ ಕೃತ್ಯಗಳ ಪ್ರತಿಫಲವನ್ನು ಇವರಿಗೆ ಸಂಪೂರ್ಣವಾಗಿ ಕೊಡುವೆವು.

فَلَنُذِيقَنَّ الَّذِينَ كَفَرُوا عَذَابًا شَدِيدًا وَلَنَجْزِيَنَّهُمْ أَسْوَأَ الَّذِي كَانُوا يَعْمَلُونَ ﴿٢٧﴾

28. ಪ್ರತಿಫಲವಾಗಿ ಅಲ್ಲಾಹನ ಶತ್ರುಗಳಿಗೆ ಸಿಗಲಿರುವುದು ನರಕಾಗ್ನಿ ಯಾಗಿದೆ. ಇವರ ನೆಲೆಯು ಶಾಶ್ವತವಾಗಿ ಅದರಲ್ಲೇ ಇರುವುದು. ಅವರು ನಮ್ಮ ವಚನಗಳನ್ನು ತಿರಸ್ಕರಿಸುತ್ತಿದ್ದ ಅಪರಾಧಕ್ಕೆ ಶಿಕ್ಷೆಯಿದು.

ذَٰلِكَ جَزَاءُ أَعْدَاءِ اللَّهِ النَّارُ ۖ لَهُمْ فِيهَا دَارُ الْخُلْدِ ۖ جَزَاءً بِمَا كَانُوا بِآيَاتِنَا يَجْحَدُونَ ﴿٢٨﴾

29. ಅಲ್ಲಿ ಈ ಸತ್ಯನಿಷೇಧಿಗಳು, "ನಮ್ಮ ಪ್ರಭೂ, ನಮ್ಮನ್ನು ಪಥ ಭ್ರಷ್ಟಗೊಳಿಸಿದ್ದ ಯಕ್ಷ ಮತ್ತು ಮಾನವರನ್ನು ನಮಗೊಮ್ಮೆ ತೋರಿಸಿಬಿಡು. ಅವರು ಚೆನ್ನಾಗಿ ಅಪಮಾನಿತರಾಗುವಂತೆ ನಾವು ಅವರನ್ನು ತುಳಿದು ಬಿಡುವೆವು" ಎಂದು ಹೇಳುವರು.

وَقَالَ الَّذِينَ كَفَرُوا رَبَّنَا أَرِنَا الَّذَيْنِ أَضَلَّانَا مِنَ الْجِنِّ وَالْإِنسِ نَجْعَلْهُمَا تَحْتَ أَقْدَامِنَا لِيَكُونَا مِنَ الْأَسْفَلِينَ ﴿٢٩﴾

30. ನಮ್ಮ ಪ್ರಭು ಅಲ್ಲಾಹನು ಎಂದು ಹೇಳಿ ಆ ಬಳಿಕ ಅದರಲ್ಲೇ ಸ್ಥಿರವಾಗಿ ನಿಂತು ಬಿಟ್ಟವರ ಮೇಲೆ[5] ಖಂಡಿತವಾಗಿಯೂ

إِنَّ الَّذِينَ قَالُوا رَبُّنَا اللَّهُ ثُمَّ اسْتَقَامُوا تَتَنَزَّلُ عَلَيْهِمُ الْمَلَائِكَةُ أَلَّا تَخَافُوا

5. ಅರ್ಥಾತ್- ಆಕಸ್ಮಿಕವಾಗಿ ಅಲ್ಲಾಹನನ್ನು ತಮ್ಮ ಪ್ರಭುವೆಂದು ಹೇಳಿಬಿಟ್ಟಿಲ್ಲ. ಹಾಗೆಯೇ ಅಲ್ಲಾಹನನ್ನು ಪ್ರಭುವೆಂದು ಹೇಳುತ್ತಲೇ ಇತರರನ್ನೂ ತಮ್ಮ ಪ್ರಭುವನ್ನಾಗಿ ಮಾಡುವ ತಪ್ಪನ್ನೆಸಗಲಿಲ್ಲ. ಬದಲಾಗಿ ಈ ವಿಶ್ವಾಸವನ್ನು ಒಮ್ಮೆ ಸ್ವೀಕರಿಸಿದ ನಂತರ ಜೀವನ ಪರ್ಯಂತ

ದೇವಚರರು ಇಳಿಯುತ್ತಾರೆ ಮತ್ತು ಹೇಳುತ್ತಾರೆ; "ಹೆದರ ಬೇಡಿರಿ, ಖೇದಿಸಬೇಡಿರಿ ನಿಮಗೆ ವಾಗ್ದಾನ ಮಾಡಲಾಗಿರುವ ಸ್ವರ್ಗದ ಸುವಾರ್ತೆಯಿಂದ ಸಂತಸಗೊಳ್ಳಿರಿ.

وَلَا تَحْزَنُوا وَأَبْشِرُوا بِالْجَنَّةِ الَّتِي كُنتُمْ تُوعَدُونَ ٣٠

31. ನಾವು ಈ ಲೋಕದ ಜೀವನದಲ್ಲೂ ಪರಲೋಕದಲ್ಲೂ ನಿಮ್ಮ ಸಂಗಾತಿಗಳಾಗಿದ್ದೇವೆ. ಅಲ್ಲಿ ನೀವು ಬಯಸಿದ್ದೆಲ್ಲವೂ ನಿಮಗೆ ಸಿಗುವುದು. ನೀವು ಆಶಿಸಿದ ಪ್ರತಿಯೊಂದು ವಸ್ತುವೂ ನಿಮ್ಮದಾಗುವುದು.

نَحْنُ أَوْلِيَاؤُكُمْ فِي الْحَيَاةِ الدُّنْيَا وَفِي الْآخِرَةِ ۖ وَلَكُمْ فِيهَا مَا تَشْتَهِي أَنفُسُكُمْ وَلَكُمْ فِيهَا مَا تَدَّعُونَ ٣١

32. ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುವವನ ಕಡೆಯಿಂದ ನಿಮಗಿರುವ ಆತಿಥ್ಯವಿದು."

نُزُلًا مِّنْ غَفُورٍ رَّحِيمٍ ٣٢

33. ಅಲ್ಲಾಹನ ಕಡೆಗೆ ಆಹ್ವಾನಿಸಿದ, ಸತ್ಕರ್ಮವೆಸಗಿದ ಮತ್ತು 'ನಾನು ಮುಸ್ಲಿಮ್' ಎಂದು ಹೇಳುತ್ತಿದ್ದ ವ್ಯಕ್ತಿಯ ಮಾತಿಗಿಂತ ಶ್ರೇಷ್ಠವಾದ ಮಾತು ಇನ್ನಾರದಾಗಿರಲು ಸಾಧ್ಯ!

وَمَنْ أَحْسَنُ قَوْلًا مِّمَّن دَعَا إِلَى اللَّهِ وَعَمِلَ صَالِحًا وَقَالَ إِنَّنِي مِنَ الْمُسْلِمِينَ ٣٣

34. ಸಂದೇಶವಾಹಕರೇ, ಒಳಿತು ಮತ್ತು ಕೆಡುಕು ಸರಿಸಮಾನವಲ್ಲ. ನೀವು ಕೆಡುಕನ್ನು ಅತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವನು ನಿಮ್ಮ ಆಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ.

وَلَا تَسْتَوِي الْحَسَنَةُ وَلَا السَّيِّئَةُ ۚ ادْفَعْ بِالَّتِي هِيَ أَحْسَنُ فَإِذَا الَّذِي بَيْنَكَ وَبَيْنَهُ عَدَاوَةٌ كَأَنَّهُ وَلِيٌّ حَمِيمٌ ٣٤

35. ಈ ಗುಣವಿಶೇಷವು ಸಹನಶೀಲರಿಗಲ್ಲದೆ ಇನ್ನಾರಿಗೂ ಲಭ್ಯವಾಗುವುದಿಲ್ಲ. ಈ ಸ್ಥಾನವು ಮಹಾ ಅದೃಷ್ಟಶಾಲಿಗಳ ಹೊರತು ಮತ್ತಾರಿಗೂ ಪ್ರಾಪ್ತವಾಗುವುದಿಲ್ಲ.

وَمَا يُلَقَّاهَا إِلَّا الَّذِينَ صَبَرُوا وَمَا يُلَقَّاهَا إِلَّا ذُو حَظٍّ عَظِيمٍ ٣٥

36. ನಿಮಗೆ ಶೈತಾನನ ಕಡೆಯಿಂದೇನಾದರೂ ಪ್ರಚೋದನೆಯುಂಟಾದರೆ ನೀವು ಅಲ್ಲಾಹನ ಅಭಯವನ್ನು ಯಾಚಿಸಿರಿ.[6] ನಿಶ್ಚಯವಾಗಿಯೂ ಅವನು ಸಕಲವನ್ನೂ ಆಲಿಸುತ್ತಾನೆ ಮತ್ತು ಸಕಲವನ್ನೂ ಅರಿತಿದ್ದಾನೆ.

وَإِمَّا يَنزَغَنَّكَ مِنَ الشَّيْطَانِ نَزْغٌ فَاسْتَعِذْ بِاللَّهِ ۖ إِنَّهُ هُوَ السَّمِيعُ الْعَلِيمُ ٣٦

ಅದರಲ್ಲಿ ನೆಲೆ ನಿಂತರು. ಅದಕ್ಕೆ ವಿರುದ್ಧವಾದ ಯಾವುದೇ ಇತರ ವಿಶ್ವಾಸವನ್ನು ಅಂಗೀಕರಿಸಿ ಕೊಳ್ಳಲಿಲ್ಲ. ಹಾಗೆಯೇ ಆ ವಿಶ್ವಾಸವನ್ನು ಮಿಥ್ಯವಿಶ್ವಾಸಗಳಿಂದ ಕಲಸುಮೇಲೋಗರಗೊಳಿಸಲಿಲ್ಲ. ಮಾತ್ರವಲ್ಲ ತಮ್ಮ ವ್ಯಾವಹಾರಿಕ ಜೀವನದಲ್ಲೂ ಏಕದೇವ ವಿಶ್ವಾಸದ ಬೇಡಿಕೆಗಳನ್ನು ನಿರಂತರ ಈಡೇರಿಸುತ್ತಿದ್ದರು.

6. ಪಿಶಾಚಿಯ ಪ್ರಲೋಭನೆ ಎಂದರೆ ಸಿಟ್ಟು ಬರಿಸುವುದಾಗಿದೆ. ಬಯ್ಯುವ ಮತ್ತು ಆರೋಪ ಹೊರಿಸುವ ವಿರೋಧಿಗಳ ಬಗ್ಗೆ ಮನಸ್ಸಿನಲ್ಲಿ ಸಿಟ್ಟು ಹುಟ್ಟಿಕೊಳ್ಳುತ್ತಿದ್ದು ಸೂಕ್ತವಾದ ಪ್ರತ್ಯುತ್ತರ ನೀಡಬೇಕೆಂದು ಅನಿಸುತ್ತಿದ್ದರೆ ಕೂಡಲೇ ನೀವು ಅದು ಪಿಶಾಚಿಯ ಪ್ರಲೋಭನೆಯಾಗಿದೆ, ನಿಮ್ಮನ್ನು ಅದು ಅಸಭ್ಯರಾದ ವಿರೋಧಿಗಳ ಮಟ್ಟಕ್ಕೆ ಇಳಿಸಬಯಸುತ್ತಿದೆ ಎಂದು ತಿಳಿದುಕೊಳ್ಳಬೇಕು.

37. ಈ ಇರುಳೂ ಹಗಲೂ ಸೂರ್ಯ-ಚಂದ್ರರೂ ಅಲ್ಲಾಹನ ನಿದರ್ಶನಗಳಲ್ಲಾಗಿವೆ. ಸೂರ್ಯ-ಚಂದ್ರರಿಗೆ ಸಾಷ್ಟಾಂಗವೆರಗಬೇಡಿರಿ; ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಸಾಷ್ಟಾಂಗವೆರಗಿರಿ. ನೀವು ನಿಜಕ್ಕೂ ಅವನನ್ನೇ ಆರಾಧಿಸುವವರಾಗಿದ್ದರೆ (ಹೀಗೆ ಮಾಡಿರಿ).

وَمِنْ آيَاتِهِ اللَّيْلُ وَالنَّهَارُ وَالشَّمْسُ وَالْقَمَرُ ۚ لَا تَسْجُدُوا لِلشَّمْسِ وَلَا لِلْقَمَرِ وَاسْجُدُوا لِلَّهِ الَّذِي خَلَقَهُنَّ إِن كُنتُمْ إِيَّاهُ تَعْبُدُونَ ﴿٣٧﴾

38. ಇವರು ದುರಹಂಕಾರದಿಂದ ತಮ್ಮ ಮಾತಿನಲ್ಲೇ ಪಟ್ಟು ಹಿಡಿದು ನಿಂತುಕೊಳ್ಳುವರೆಂದಾದರೆ ಏನೂ ಚಿಂತಿಲ್ಲ. ನಿಮ್ಮ ಪ್ರಭುವಿಗೆ ನಿಕಟವಾಗಿರುವ ದೇವಚರರು ಆಹೋರಾತ್ರಿ ಅವನನ್ನು ಸ್ತುತಿಸುತ್ತಿದ್ದಾರೆ ಮತ್ತು ಅವರು ಎಂದಿಗೂ ಬಳಲುವುದಿಲ್ಲ.

فَإِنِ اسْتَكْبَرُوا فَالَّذِينَ عِندَ رَبِّكَ يُسَبِّحُونَ لَهُ بِاللَّيْلِ وَالنَّهَارِ وَهُمْ لَا يَسْأَمُونَ ﴿٣٨﴾

39. ಇದು ಅಲ್ಲಾಹನ ನಿದರ್ಶನಗಳಲ್ಲೊಂದು, ಭೂಮಿಯು ಬರಡಾಗಿ ಬಿದ್ದಿರುವುದನ್ನು ನೀವು ಕಾಣುತ್ತೀರಿ, ಆ ಬಳಿಕ ನಾವು ಅದರ ಮೇಲೆ ನೀರನ್ನು ಸುರಿದ ತಕ್ಷಣ ಅದು ಹಿಗ್ಗುತ್ತದೆ ಮತ್ತು ಅರಳಿಕೊಳ್ಳುತ್ತದೆ. ಖಂಡಿತವಾಗಿಯೂ, ಯಾವ ದೇವನು ಈ ಸತ್ತು ಹೋಗಿದ್ದ ಭೂಮಿಯನ್ನು ಜೀವಂತಗೊಳಿಸುತ್ತಾನೋ ಅವನೇ ಮೃತರನ್ನೂ ಪುನಃ ಜೀವಂತ ಗೊಳಿಸಲಿರುವನು. ನಿಶ್ಚಯವಾಗಿಯೂ ಅವನು ಎಲ್ಲ ಕಾರ್ಯಗಳ ಸಾಮರ್ಥ್ಯವುಳ್ಳವನು.

وَمِنْ آيَاتِهِ أَنَّكَ تَرَى الْأَرْضَ خَاشِعَةً فَإِذَا أَنزَلْنَا عَلَيْهَا الْمَاءَ اهْتَزَّتْ وَرَبَتْ ۚ إِنَّ الَّذِي أَحْيَاهَا لَمُحْيِي الْمَوْتَىٰ ۚ إِنَّهُ عَلَىٰ كُلِّ شَيْءٍ قَدِيرٌ ﴿٣٩﴾

40. ನಮ್ಮ ವಚನಗಳಿಗೆ ಅಪಾರ್ಥಗಳನ್ನು ಕಟ್ಟುವವರು ನಮ್ಮಿಂದೇನೂ ಮರೆಯಾಗಿಲ್ಲ. ನರಕಾಗ್ನಿಗೆ ತಳ್ಳಲ್ಪಡುವವನು ಉತ್ತಮನೋ ಅಥವಾ ಪುನರುತ್ಥಾನ ದಿನ ಪ್ರಶಾಂತ ಸ್ಥಿತಿಯಲ್ಲಿ ಹಾಜರಾಗುವವನು ಉತ್ತಮನೋ ಎಂದು ನೀವೇ ಯೋಚಿಸಿಕೊಳ್ಳಿರಿ. ನಿಮಗೆ ಇಷ್ಟವಿರುವುದನ್ನು ಮಾಡುತ್ತಲಿರಿ. ನಿಮ್ಮ ಎಲ್ಲ ಚಟುವಟಿಕೆಗಳನ್ನೂ ಅಲ್ಲಾಹನು ವೀಕ್ಷಿಸುತ್ತಿದ್ದಾನೆ.

إِنَّ الَّذِينَ يُلْحِدُونَ فِي آيَاتِنَا لَا يَخْفَوْنَ عَلَيْنَا ۗ أَفَمَن يُلْقَىٰ فِي النَّارِ خَيْرٌ أَم مَّن يَأْتِي آمِنًا يَوْمَ الْقِيَامَةِ ۚ اعْمَلُوا مَا شِئْتُمْ ۖ إِنَّهُ بِمَا تَعْمَلُونَ بَصِيرٌ ﴿٤٠﴾

41. ಇವರು, ಬೋಧನೆಯು ತಮ್ಮ ಮುಂದೆ ಬಂದಾಗ ಅದನ್ನು ತಿರಸ್ಕರಿಸಿದವರಾಗಿದ್ದಾರೆ. ಆದರೆ ಇದೊಂದು ಪ್ರತಾಪವುಳ್ಳ ಗ್ರಂಥವೆಂಬುದೇ ವಾಸ್ತವಿಕತೆ.

إِنَّ الَّذِينَ كَفَرُوا بِالذِّكْرِ لَمَّا جَاءَهُمْ ۖ وَإِنَّهُ لَكِتَابٌ عَزِيزٌ ﴿٤١﴾

42. ಮಿಥ್ಯವು ಇದರ ಮುಂದಿನಿಂದಾಗಲಿ, ಹಿಂದಿನಿಂದಾಗಲಿ ಇದರೊಳಗೆ ಬರಲಾರದು.[7] ಇದು ಯುಕ್ತಿಪೂರ್ಣನೂ ಪ್ರಶಂಸಾರ್ಹನೂ ಆದವನಿಂದ ಅವತೀರ್ಣಗೊಂಡುದಾಗಿದೆ.

لَّا يَأْتِيهِ الْبَاطِلُ مِن بَيْنِ يَدَيْهِ وَلَا مِنْ خَلْفِهِ ۖ تَنزِيلٌ مِّنْ حَكِيمٍ حَمِيدٍ ﴿٤٢﴾

7. 'ಮುಂದಿನಿಂದ ಬರಲಾರದು' ಎಂದರೆ ಪವಿತ್ರ ಕುರ್‌ಆನಿನ ಮೇಲೆ ನೇರವಾದ ಆಕ್ರಮಣ ನಡೆಸಿ ಅದರ ಮಾತನ್ನು ತಪ್ಪೆಂದು ಮತ್ತು

43. ಸಂದೇಶವಾಹಕರೇ, ನಿಮಗಿಂತ ಮುಂಚೆ ಗತಿಸಿದ ಸಂದೇಶವಾಹಕರೊಡನೆ ಹೇಳದಿದ್ದಂತಹ ವಿಷಯವನ್ನೇನೂ ನಿಮಗೆ ಹೇಳಲಾಗುತ್ತಿಲ್ಲ. ನಿಸ್ಸಂದೇಹವಾಗಿಯೂ ನಿಮ್ಮ ಪ್ರಭು ಮಹಾ ಕ್ಷಮಾಶೀಲನಾಗಿದ್ದಾನೆ. ಅದರೊಂದಿಗೆ ವೇದನಾಜನಕ ಶಿಕ್ಷೆ ಕೊಡುವವನೂ ಆಗಿದ್ದಾನೆ.

مَا يُقَالُ لَكَ اِلَّا مَا قَدْ قِيْلَ لِلرُّسُلِ مِنْ قَبْلِكَ ؕ اِنَّ رَبَّكَ لَذُوْ مَغْفِرَةٍ وَّ ذُوْ عِقَابٍ اَلِيْمٍ ﴿۴۳﴾

44. ನಾವು ಇದನ್ನು 'ಅರಬಿಯೇತರ' ಕುರ್‌ಆನನ್ನಾಗಿ ಮಾಡಿ ಕಳುಹಿಸುತ್ತಿದ್ದರೆ ಇವರು ಹೇಳುತ್ತಿದ್ದರು: "ಇದರ ಸೂಕ್ತಗಳನ್ನು ಸುಸ್ಪಷ್ಟವಾಗಿ ವಿವರಿಸಲಾಗಿಲ್ಲವೇಕೆ? ಸಂದೇಶವು ಅರಬೇತರ ಭಾಷೆಯದ್ದು ಮತ್ತು ಅಭಿಸಂಬೋಧಿತರು ಅರಬರು[8]- ಇದೆಂತಹ ವಿಪರ್ಯಾಸ!" ಇವರೊಡನೆ ಹೇಳಿರಿ, ಈ ಕುರ್‌ಆನ್ ಸತ್ಯವಿಶ್ವಾಸ ಸ್ವೀಕರಿಸುವವರ ಪಾಲಿಗಂತೂ ಮಾರ್ಗದರ್ಶನ ಮತ್ತು ದಿವ್ಯ ಔಷಧವಾಗಿದೆ. ಆದರೆ ಸತ್ಯನಿಷೇಧಿಗಳ ಪಾಲಿಗೆ ಇದು ಕಿವಿಯ ಗಂಟು ಮತ್ತು ಕಣ್ಣಿನ ಪಟ್ಟಿಯಾಗಿದೆ. ಅವರ ಅವಸ್ಥೆಯು ಅವರನ್ನು ದೂರದಿಂದ ಕರೆಯಲಾಗುತ್ತಿದೆಯೋ ಎಂಬಂತಿದೆ.

وَلَوْ جَعَلْنٰهُ قُرْاٰنًا اَعْجَمِيًّا لَّقَالُوْا لَوْلَا فُصِّلَتْ اٰيٰتُهٗ ؕ ءَاَعْجَمِيٌّ وَّ عَرَبِيٌّ ؕ قُلْ هُوَ لِلَّذِيْنَ اٰمَنُوْا هُدًى وَّ شِفَآءٌ ؕ وَالَّذِيْنَ لَا يُؤْمِنُوْنَ فِيْۤ اٰذَانِهِمْ وَقْرٌ وَّ هُوَ عَلَيْهِمْ عَمًى ؕ اُولٰٓئِكَ يُنَادَوْنَ مِنْ مَّكَانٍۭ بَعِيْدٍ ﴿۴۴﴾

قرء حفص بتسهيل الهمزة الثانية ١٢

ع ٥ ١٩

45. ಇದಕ್ಕಿಂತ ಮುಂಚೆ ನಾವು ಮೂಸಾರಿಗೆ ಗ್ರಂಥ ನೀಡಿದ್ದೆವು. ಅದರ ವಿಷಯದಲ್ಲೂ ಇದೇ ಭಿನ್ನಾಭಿಪ್ರಾಯವುಂಟಾಗಿತ್ತು. ನಿಮ್ಮ ಪ್ರಭು ಮೊದಲೇ ಒಂದು ವಿಷಯದ ನಿರ್ಧಾರ ಮಾಡದಿರುತ್ತಿದ್ದರೆ ಈ ಭಿನ್ನಾಭಿಪ್ರಾಯದವರ ನಡುವೆ ತೀರ್ಮಾನ ಮಾಡಿ

وَلَقَدْ اٰتَيْنَا مُوْسَى الْكِتٰبَ فَاخْتُلِفَ فِيْهِ ؕ وَلَوْلَا كَلِمَةٌ سَبَقَتْ مِنْ رَّبِّكَ لَقُضِيَ بَيْنَهُمْ ؕ وَاِنَّهُمْ لَفِيْ

---

ಅದರ ಬೋಧನೆಗಳನ್ನು ಮಿಥ್ಯವೆಂದು ಸಾಬೀತು ಪಡಿಸಲು ಯಾರಾದರೂ ಪ್ರಯತ್ನಿಸಿದರೆ ಅವನು ಅದರಲ್ಲಿ ಯಶಸ್ವಿಯಾಗಲಾರನು. 'ಹಿಂದಿನಿಂದ ಬರಲಾರದು' ಎಂದರೆ ಕುರ್‌ಆನ್ ಸಮರ್ಪಿಸಿದಂತಹ ವಾಸ್ತವಿಕತೆಗಳನ್ನು ವಿರೋಧಿಸುವಂತಹ ಯಾವುದೇ 'ಸತ್ಯ' ನಿರ್ಣಾಯಕದಿನದ ತನಕವೂ ಸಂಶೋಧಿಸಲ್ಪಡಲಾರದು. ಕುರ್‌ಆನ್ ವಿವರಿಸುವಂತಹ ಯಾವುದೇ 'ಜ್ಞಾನ'ವನ್ನು ನಿರಾಕರಿಸುವಂತಹ ಯಾವುದೇ ನೈಜ 'ಜ್ಞಾನ' ಆಗತವಾಗಲಾರದು. ವಿಶ್ವಾಸ, ಚಾರಿತ್ರ್ಯ, ಕಾನೂನು, ನಾಗರಿಕತೆ, ಸಂಸ್ಕೃತಿ, ಆರ್ಥಿಕತೆ, ಸಾಮಾಜಿಕ ಸಂಬಂಧ ಮತ್ತು ರಾಜಕೀಯ ವಿಷಯಗಳಲ್ಲಿ ಪವಿತ್ರ ಕುರ್‌ಆನ್ ಮಾನವನಿಗೆ ನೀಡಿರುವ ಮಾರ್ಗದರ್ಶನವನ್ನು ತಪ್ಪೆಂದು ಸಾಬೀತುಪಡಿಸುವಂತಹ ಯಾವುದೇ ಪ್ರಯೋಗ ಅಥವಾ ಸಂಶೋಧನೆ ಬೆಳಕಿಗೆ ಬರಲಾರದು.

8. ಇದು ಪ್ರವಾದಿವರ್ಯರ(ಸ) ವಿರುದ್ಧ ತೋರಲಾಗುತ್ತಿದ್ದ ಹಟಮಾರಿತನದ ಒಂದು ಮಾದರಿಯಾಗಿದೆ. ಮುಹಮ್ಮದ್(ಸ) ಅರಬರಾಗಿದ್ದಾರೆ. ಆದ್ದರಿಂದ ಅರಬಿ ಭಾಷೆಯಲ್ಲಿ ಕುರ್‌ಆನನ್ನು ಸಮರ್ಪಿಸಿದರೆ ಈ ವಾಣಿಯನ್ನು ಅವರು ಸ್ವತಃ ಹುಟ್ಟು ಹಾಕಿಲ್ಲ, ಬದಲಾಗಿ ದೇವನು ಅವರ ಮೇಲೆ ಅವತೀರ್ಣ ಗೊಳಿಸಿದ್ದಾನೆ ಎಂದು ಕಲ್ಪಿಸಲು ಹೇಗೆ ಸಾಧ್ಯ? ಫಾರ್ಸಿ, ರೋಮನ್ ಅಥವಾ ಗ್ರೀಕ್ ಭಾಷೆಯಲ್ಲಿ ಇದ್ದಕ್ಕಿದ್ದಂತೆ ಅವರು ನಿರರ್ಗಳ ಭಾಷಣ ಮಾಡತೊಡಗಿದರೆ ಈ ವಾಣಿ ದೇವನಿಂದ ಅವತೀರ್ಣಗೊಂಡ ವಾಣಿಯೆಂದು ಒಪ್ಪಬಹುದಾಗಿತ್ತು ಎಂದು ಸತ್ಯನಿಷೇಧಿಗಳು ಹೇಳುತ್ತಿದ್ದರು. ಅದಕ್ಕೆ ಅಲ್ಲಾಹನು ಹೀಗೆ ಉತ್ತರವೀಯುತ್ತಿದ್ದಾನೆ. ಇವರಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಿರುವ ಇವರದೇ ಭಾಷೆಯಲ್ಲಿ ಕುರ್‌ಆನನ್ನು ಕಳುಹಿಸಲಾದರೆ ಅರಬನಾದ ಒಬ್ಬ ವ್ಯಕ್ತಿಯ ಮೂಲಕ ಅರಬಿಯಲ್ಲೇ ಯಾಕೆ ವಾಣಿಯನ್ನು ಅವತೀರ್ಣಗೊಳಿಸಲಾಗಿದೆ ಎಂದು ಇವರು ಆಕ್ಷೇಪ ವ್ಯಕ್ತಪಡಿಸುತ್ತಾರೆ. ಆದರೆ ಅದನ್ನು ಬೇರೆ ಭಾಷೆಯಲ್ಲಿ ಕಳುಹಿಸಲಾಗಿರುತ್ತಿದ್ದರೆ ಅವರು ಆಕ್ಷೇಪ ವ್ಯಕ್ತಪಡಿಸುತ್ತಾ ಹೇಳುತ್ತಿದ್ದರು, 'ಚೆನ್ನಾಗಿದೆ- ಅರಬ್ ಸಮುದಾಯಕ್ಕೆ ಅರಬರ ಪೈಕಿಯವರೇ ಆದ ಒಬ್ಬರನ್ನು ಪ್ರವಾದಿಯನ್ನಾಗಿ ಮಾಡಿ ಕಳುಹಿಸಲಾಯಿತು. ಆದರೆ ಅವರ ಮೇಲೆ ಸ್ವತಃ ಪ್ರವಾದಿಯಾಗಲಿ, ಸಮುದಾಯವಾಗಲಿ ತಿಳಿಯದಂತಹ ಭಾಷೆಯಲ್ಲಿ ವಾಣಿಯನ್ನು ಅವತೀರ್ಣ ಗೊಳಿಸಲಾಯಿತು.'

ಬಿಡಲಾಗುತ್ತಿತ್ತು. ವಾಸ್ತವದಲ್ಲಿ ಇವರು ಅದರ ವಿಷಯದಲ್ಲಿ ತೀವ್ರ ಕಳವಳದಾಯಕ ಸಂದೇಹದಲ್ಲಿ ಬಿದ್ದುಕೊಂಡಿದ್ದಾರೆ.

شَكٍّ مِّنْهُ مُرِيبٍ ﴿٤٥﴾

46. ಪುಣ್ಯ ಕಾರ್ಯಗಳನ್ನು ಮಾಡುವವನು ತನ್ನ ಹಿತಕ್ಕಾಗಿಯೇ ಮಾಡುವನು. ಪಾಪ ಮಾಡುವವನ ದುಷ್ಪರಿಣಾಮವು ಅವನನ್ನೇ ಬಾಧಿಸುವುದು. ನಿಮ್ಮ ಪ್ರಭು ತನ್ನ ದಾಸರ ಪಾಲಿಗೆ ಅಕ್ರಮಿಯಲ್ಲ.

مَنْ عَمِلَ صَالِحًا فَلِنَفْسِهِ وَمَنْ
أَسَاءَ فَعَلَيْهَا ۗ وَمَا رَبُّكَ بِظَلَّامٍ لِّلْعَبِيدِ ﴿٤٦﴾

47. *ಆ ಘಳಿಗೆಯ[9] ಜ್ಞಾನವು ಅಲ್ಲಾಹನ ಕಡೆಗೇ ಮರಳುತ್ತದೆ. ತಮ್ಮ ಮೊಗ್ಗುಗಳಿಂದ ಹೊರಬರುವ ಎಲ್ಲ ಫಲಗಳನ್ನು ಬಲ್ಲವನು ಅವನೇ. ಯಾವ ಹೆಣ್ಣು ಗರ್ಭ ಧರಿಸಿದೆಯೆಂದೂ ಯಾವುದು ಪ್ರಸವಿಸಿದೆಯೆಂದೂ ಅವನಿಗೆ ಮಾತ್ರ ಗೊತ್ತು. ನನ್ನ ಸಹಭಾಗಿಗಳು ಎಲ್ಲಿದ್ದಾರೆ? ಎಂದು ಅವನು ಇವರನ್ನು ಕೂಗಿ ಕೇಳುವಂದು ಇವರು, ಇಂದು ನಮ್ಮಲ್ಲಾರೂ ಇದರ ಸಾಕ್ಷಿ ಹೇಳುವವನಿಲ್ಲವೆಂಬುದನ್ನು ನಾವು ಆಗಲೇ ನಿವೇದಿಸಿದ್ದೇವೆಂದು ಹೇಳುವರು.

إِلَيْهِ يُرَدُّ عِلْمُ السَّاعَةِ ۚ وَمَا
تَخْرُجُ مِن ثَمَرَاتٍ مِّنْ أَكْمَامِهَا
وَمَا تَحْمِلُ مِنْ أُنثَىٰ وَلَا تَضَعُ
إِلَّا بِعِلْمِهِ ۚ وَيَوْمَ يُنَادِيهِمْ أَيْنَ
شُرَكَائِي قَالُوا آذَنَّاكَ مَا مِنَّا مِن شَهِيدٍ ﴿٤٧﴾

48. ಈ ಹಿಂದೆ ಇವರು ಪ್ರಾರ್ಥಿಸುತ್ತಿದ್ದ ಎಲ್ಲ ಆರಾಧ್ಯರೂ ಆಗ ಇವರಿಂದ ಕಳೆದು ಹೋಗುವರು. ತಮಗಿನ್ನೂ ಯಾವುದೇ ಅಭಯ ಸ್ಥಾನ ಇಲ್ಲವೆಂಬುದನ್ನು ಆಗ ಇವರು ತಿಳಿದು ಕೊಳ್ಳುವರು.

وَضَلَّ عَنْهُم مَّا كَانُوا يَدْعُونَ مِن
قَبْلُ ۖ وَظَنُّوا مَا لَهُم مِّن مَّحِيصٍ ﴿٤٨﴾

49. ಮಾನವನು ಒಳಿತಿಗಾಗಿ ಪ್ರಾರ್ಥಿಸಿ ದಣಿಯುವುದಿಲ್ಲ ಮತ್ತು ತನ್ನ ಮೇಲೆ ವಿಪತ್ತೇನಾದರೂ ಬಂದಾಗ ನಿರಾಶನೂ ಹತಾಶನೂ ಆಗಿ ಬಿಡುತ್ತಾನೆ.

لَّا يَسْأَمُ الْإِنسَانُ مِن دُعَاءِ الْخَيْرِ
وَإِن مَّسَّهُ الشَّرُّ فَيَئُوسٌ قَنُوطٌ ﴿٤٩﴾

50. ಆದರೆ ಕಷ್ಟಕಾಲ ಕಳೆದು ಹೋದ ಬಳಿಕ ನಾವು ಇವನಿಗೆ ನಮ್ಮ ಕೃಪೆಯ ಸವಿಯನ್ನುಣಿಸಿದಾಗ ಇವನು, "ನಾನು ಇದಕ್ಕೆ ಅರ್ಹನು. ಪುನರುತ್ಥಾನವು ಎಂದಾದರೂ ಬರಲಿಕ್ಕಿದೆಯೆಂದು ನಾನು ಭಾವಿಸುವುದಿಲ್ಲ. ಒಂದು ವೇಳೆ ನಾನು ನನ್ನ ಪ್ರಭುವಿನ ಕಡೆಗೆ ಮರಳಿಸಲ್ಪಟ್ಟರೂ ಅಲ್ಲೂ ನನಗೆ ಸುಖವೇ ಇರುವುದು" ಎನ್ನುತ್ತಾನೆ. ವಾಸ್ತವದಲ್ಲಿ ನಾವು ಸತ್ಯನಿಷೇಧಿಗಳಿಗೆ, ಅವರೇನು ಮಾಡಿ ಬಂದಿರುವರೆಂಬುದನ್ನು ಖಂಡಿತ ತಿಳಿಸುವೆವು ಮತ್ತು

وَلَئِنْ أَذَقْنَاهُ رَحْمَةً مِّنَّا مِن بَعْدِ
ضَرَّاءَ مَسَّتْهُ لَيَقُولَنَّ هَٰذَا لِي
وَمَا أَظُنُّ السَّاعَةَ قَائِمَةً وَلَئِن
رُّجِعْتُ إِلَىٰ رَبِّي إِنَّ لِي عِندَهُ لَلْحُسْنَىٰ ۚ
فَلَنُنَبِّئَنَّ الَّذِينَ كَفَرُوا بِمَا عَمِلُوا

*ಇಲ್ಲಿಂದ **25ನೆಯ ಕಾಂಡ ಆರಂಭ.**

9. ಅರ್ಥಾತ್- ಪುನರುತ್ಥಾನ ದಿನ.

وَلَنُذِيقَنَّهُمْ مِّنْ عَذَابٍ غَلِيظٍ ﴿٥٠﴾

ನಾವು ಅವರಿಗೆ ಬಹಳ ಹೊಲಸಾದ ಯಾತನೆಯ ಸವಿಯನ್ನು ಣಿಸುವೆವು.

وَإِذَا أَنْعَمْنَا عَلَى الْإِنسَانِ أَعْرَضَ وَنَأَىٰ بِجَانِبِهِ وَإِذَا مَسَّهُ الشَّرُّ فَذُو دُعَاءٍ عَرِيضٍ ﴿٥١﴾

51. ನಾವು ಮಾನವನಿಗೆ ಕೊಡುಗೆಗಳನ್ನು ನೀಡಿದಾಗ ಅವನು ವಿಮುಖ ನಾಗುತ್ತಾನೆ ಮತ್ತು ದರ್ಪ ತೋರುತ್ತಾನೆ. ಅವನಿಗೇನಾದರೂ ವಿಪತ್ತು ಸೋಂಕಿದರೆ ಉದ್ದುದ್ದ ಪ್ರಾರ್ಥನೆಗಳನ್ನು ಸಲ್ಲಿಸುತ್ತಾನೆ.

قُلْ أَرَأَيْتُمْ إِن كَانَ مِنْ عِندِ اللَّهِ ثُمَّ كَفَرْتُم بِهِ مَنْ أَضَلُّ مِمَّنْ هُوَ فِي شِقَاقٍ بَعِيدٍ ﴿٥٢﴾

52. ಸಂದೇಶವಾಹಕರೇ, ಇವರೊಡನೆ ಹೇಳಿರಿ, "ನಿಜಕ್ಕೂ ಈ ಕುರ್‌ಆನ್ ಅಲ್ಲಾಹನ ಕಡೆಯಿಂದಲೇ ಬಂದಿದ್ದರೆ ಮತ್ತು ನೀವು ಇದನ್ನು ನಿರಾಕರಿಸುತ್ತಲೇ ಇದ್ದರೆ, ಇದನ್ನು ವಿರೋಧಿಸುವುದರಲ್ಲಿ ಬಹುದೂರ ಹೋಗಿಬಿಟ್ಟವನಿಗಿಂತ ದೊಡ್ಡ ಪಥಭ್ರಷ್ಟನು ಇನ್ನಾರಿರ ಬಹುದೆಂದು ನೀವೆಂದಾದರೂ ಆಲೋಚಿಸಿದಿರಾ?"

سَنُرِيهِمْ آيَاتِنَا فِي الْآفَاقِ وَفِي أَنفُسِهِمْ حَتَّىٰ يَتَبَيَّنَ لَهُمْ أَنَّهُ الْحَقُّ أَوَلَمْ يَكْفِ بِرَبِّكَ أَنَّهُ عَلَىٰ كُلِّ شَيْءٍ شَهِيدٌ ﴿٥٣﴾

53. ಶೀಘ್ರವೇ, ನಾವು ಇವರಿಗೆ ಈ ಜಗತ್ತಿನಲ್ಲೂ, ಸ್ವತಃ ಇವರೊಳಗೂ ಇರುವ ನಮ್ಮ ದೃಷ್ಟಾಂತಗಳನ್ನು ತೋರಿಸಿಕೊಡುವೆವು- ಈ ಕುರ್‌ಆನ್ ನಿಜವಾಗಿಯೂ ಸತ್ಯವಾಗಿದೆ ಎಂಬುದು ಇವರಿಗೆ ವ್ಯಕ್ತವಾಗುವ ತನಕ, ನಿಮ್ಮ ಪ್ರಭು ಸಕಲ ವಿಷಯಗಳಿಗೂ ಸಾಕ್ಷಿಯಾಗಿರುತ್ತಾನೆಂಬುದು ಸಾಲದೇ?

أَلَا إِنَّهُمْ فِي مِرْيَةٍ مِّن لِّقَاءِ رَبِّهِمْ أَلَا إِنَّهُ بِكُلِّ شَيْءٍ مُّحِيطٌ ﴿٥٤﴾

54. ಚೆನ್ನಾಗಿ ತಿಳಿದುಕೊಳ್ಳಿರಿ. ಇವರು ತಮ್ಮ ಪ್ರಭುವನ್ನು ಭೇಟಿಯಾಗ ಲಿರುವ ಕುರಿತು ಸಂದೇಹದಲ್ಲಿದ್ದಾರೆ. ಚೆನ್ನಾಗಿ ತಿಳಿದಿರಿ. ಅವನು ಸಕಲ ವಸ್ತುಗಳನ್ನು ಆವರಿಸಿರುತ್ತಾನೆ.[10]

---

10. ಅರ್ಥಾತ್- ಯಾವುದೇ ವಸ್ತು ಅವನ ಹಿಡಿತದಿಂದ ಮುಕ್ತವಾಗಿಯಾಗಲಿ ಅವನ ಜ್ಞಾನದಿಂದ ಮರೆಯಾಗಿಯಾಗಲಿ ಇಲ್ಲ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹಾಮೀಮ್

حٰمٓ ۚ ①

2. ಐನ್ ಸೀನ್ ಕಾಫ್.

عٓسٓقٓ ②

3. ಮಹಾಪ್ರಬಲನೂ ಮಹಾಯುಕ್ತಿವಂತನೂ ಆಗಿರುವ ಅಲ್ಲಾಹನು ನಿಮ್ಮ ಕಡೆಗೂ ನಿಮಗಿಂತ ಮುಂಚೆ ಗತಿಸಿ ಹೋದವರ (ಸಂದೇಶವಾಹಕರ) ಕಡೆಗೂ ಇದೇ ರೀತಿಯಲ್ಲಿ 'ದಿವ್ಯವಾಣಿ' ಕಳುಹಿಸುತ್ತಲಿದ್ದಾನೆ.[1]

كَذٰلِكَ يُوْحِيْٓ اِلَيْكَ وَاِلَى الَّذِيْنَ مِنْ قَبْلِكَ ۙ اللّٰهُ الْعَزِيْزُ الْحَكِيْمُ ③

4. ಭೂಮಿ-ಆಕಾಶಗಳಲ್ಲಿ ಇರುವುದೆಲ್ಲವೂ ಅವನದೇ. ಅವನು ಪರಮೋನ್ನತನೂ ಮಹಾನನೂ ಆಗಿರುತ್ತಾನೆ.

لَهٗ مَا فِي السَّمٰوٰتِ وَمَا فِي الْاَرْضِ ۭ وَهُوَ الْعَلِيُّ الْعَظِيْمُ ④

5. ಮೇಲ್ಭಾಗದಿಂದ ಆಕಾಶಗಳು ಸಿಡಿದು ಬೀಳುವುದರಲ್ಲಿದೆ.[2] ದೇವಚರರು ತಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಕೀರ್ತನೆ ಮಾಡುತ್ತಿದ್ದಾರೆ ಮತ್ತು ಭೂವಾಸಿಗಳಿಗಾಗಿ ಕ್ಷಮಾಯಾಚನೆ ಮಾಡುತ್ತಿರುತ್ತಾರೆ. ತಿಳಿಯಿರಿ, ನಿಜಕ್ಕೂ ಅಲ್ಲಾಹನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

تَكَادُ السَّمٰوٰتُ يَتَفَطَّرْنَ مِنْ فَوْقِهِنَّ وَالْمَلٰۗىِٕكَةُ يُسَبِّحُوْنَ بِحَمْدِ رَبِّهِمْ وَيَسْتَغْفِرُوْنَ لِمَنْ فِي الْاَرْضِ ۭ اَلَآ اِنَّ اللّٰهَ هُوَ الْغَفُوْرُ الرَّحِيْمُ ⑤

6. ಯಾರು ಅವನನ್ನು ಬಿಟ್ಟು ಇತರರನ್ನು ತಮ್ಮ ರಕ್ಷಕ[3]ರಾಗಿ

وَالَّذِيْنَ اتَّخَذُوْا مِنْ دُوْنِهٖٓ اَوْلِيَاۗءَ

1. ಅರ್ಥಾತ್- ಕುರ್‌ಆನಿನಲ್ಲಿ ವಿವರಿಸಲಾಗುತ್ತಿರುವುದನ್ನೇ ದೇವವಾಣಿಯ ಮೂಲಕ ಅಲ್ಲಾಹನು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಳಿಸಿದ್ದಾನೆ. ಹಿಂದಿನ ಪ್ರವಾದಿಗಳ ಮೇಲೂ ಅವನು ಅಂತಹ ವಿಷಯಗಳನ್ನೇ ಅವತೀರ್ಣಗೊಳಿಸಿದ್ದನು.
2. ಅರ್ಥಾತ್- ಅಲ್ಲಾಹನ ಜತೆಗೆ ದೇವತ್ವದಲ್ಲಿ ಯಾವುದಾದರೂ ಸೃಷ್ಟಿಯನ್ನು ಭಾಗೀದಾರರೆಂದು ತಿಳಿಯುವುದು ಸಾಮಾನ್ಯ ವಿಷಯವೇನೂ ಅಲ್ಲ. ಆದರಿಂದ ಆಕಾಶವೇ ಕಳಚಿ ಬಿದ್ದರೆ ಆಶ್ಚರ್ಯವಿಲ್ಲ. ಅದು ಅಂತಹ ಗಂಭೀರ ವಿಷಯ.
3. ಮೂಲದಲ್ಲಿ 'ಔಲಿಯಾ' ಎಂಬ ಪದ ಪ್ರಯೋಗವಾಗಿದೆ. ಅರಬಿ ಭಾಷೆಯಲ್ಲಿ ಅದಕ್ಕೆ ಬಹಳ ವಿಸ್ತಾರವಾದ ವ್ಯಾಖ್ಯೆ ಇದೆ. ಮಿಥ್ಯ

ಮಾಡಿಕೊಂಡಿರುವರೋ ಅವರ ಮೇಲ್ವಿಚಾರಕನು ಅಲ್ಲಾಹನೇ ಆಗಿರುತ್ತಾನೆ. ನೀವು ಅವರ ಕಾವಲುಗಾರರಲ್ಲ.

اللهُ حَفِيظٌ عَلَيْهِمْ وَمَا أَنتَ عَلَيْهِم بِوَكِيلٍ ⑥

7. ಸಂದೇಶವಾಹಕರೇ, ಇದೇ ರೀತಿಯಲ್ಲಿ ಈ ಅರಬೀ ಕುರ್‌ಆನನ್ನು ನಾವು ನಿಮ್ಮ ಕಡೆಗೆ 'ದಿವ್ಯವಾಣಿ' ಮಾಡಿರುತ್ತೇವೆ. (ಇದು) ನಾಡುಗಳ ಕೇಂದ್ರ (ಮಕ್ಕಾ ಪಟ್ಟಣ) ಹಾಗೂ ಅದರ ಸುತ್ತಮುತ್ತ ಇರುವವರನ್ನು ನೀವು ಎಚ್ಚರಿಸುವಂತಾಗಲು ಮತ್ತು ನಿಸ್ಸಂದೇಹ ವಾಗಿ ಬರಲಿರುವ, ಸಮಾವೇಶದ ದಿನದ ಬಗ್ಗೆ ಎಚ್ಚರಿಕೆ ನೀಡುವಂತಾಗಲು. ಒಂದು ಕೂಟವು ಸ್ವರ್ಗಕ್ಕೆ ಇನ್ನೊಂದು ಕೂಟವು ನರಕಕ್ಕೆ ಹೋಗಲಿಕ್ಕಿದೆ.

وَكَذَٰلِكَ أَوْحَيْنَا إِلَيْكَ قُرْآنًا عَرَبِيًّا لِّتُنذِرَ أُمَّ الْقُرَىٰ وَمَنْ حَوْلَهَا وَتُنذِرَ يَوْمَ الْجَمْعِ لَا رَيْبَ فِيهِ فَرِيقٌ فِي الْجَنَّةِ وَفَرِيقٌ فِي السَّعِيرِ ⑦

8. ಅಲ್ಲಾಹನು ಇಚ್ಛಿಸುತ್ತಿದ್ದರೆ ಇವರೆಲ್ಲರನ್ನೂ ಒಂದೇ ಸಮುದಾಯ ವಾಗಿ ಮಾಡಿ ಬಿಡುತ್ತಿದ್ದನು. ಆದರೆ ಅವನು ತನಗೆ ಇಷ್ಟವಿದ್ದ ವರನ್ನು ತನ್ನ ಕೃಪೆಯೊಳಗೆ ಸೇರಿಸಿಕೊಳ್ಳುತ್ತಾನೆ ಮತ್ತು ಅಕ್ರಮಿಗಳಿಗೆ ರಕ್ಷಕ ಮಿತ್ರರಾಗಲಿ, ಸಹಾಯಕರಾಗಲಿ ಯಾರೂ ಇಲ್ಲ.

وَلَوْ شَاءَ اللَّهُ لَجَعَلَهُمْ أُمَّةً وَاحِدَةً وَلَٰكِن يُدْخِلُ مَن يَشَاءُ فِي رَحْمَتِهِ وَالظَّالِمُونَ مَا لَهُم مِّن وَلِيٍّ وَلَا نَصِيرٍ ⑧

9. ಇವರು ಅವನನ್ನು ಬಿಟ್ಟು ಇತರರನ್ನು ರಕ್ಷಕ ಮಿತ್ರರಾಗಿ ಮಾಡಿ ಕೊಳ್ಳುವ(ಷ್ಟು ಮೂರ್ಖ)ರೇ? ರಕ್ಷಕ ಮಿತ್ರನಂತೂ ಅಲ್ಲಾಹನೇ ಆಗಿದ್ದಾನೆ. ಅವನೇ ಮೃತರನ್ನು ಜೀವಂತಗೊಳಿಸುತ್ತಾನೆ ಮತ್ತು ಸಕಲ ವಿಷಯಗಳಿಗೂ ಸಾಮರ್ಥ್ಯವುಳ್ಳವನಾಗಿದ್ದಾನೆ.

أَمِ اتَّخَذُوا مِن دُونِهِ أَوْلِيَاءَ فَاللَّهُ هُوَ الْوَلِيُّ وَهُوَ يُحْيِي الْمَوْتَىٰ وَهُوَ عَلَىٰ كُلِّ شَيْءٍ قَدِيرٌ ⑨

10. ನಿಮ್ಮೊಳಗೆ[4] ಯಾವ ವಿಷಯದಲ್ಲೇ ಮತಭೇದವುಂಟಾದರೂ ಅದರ ತೀರ್ಮಾನ ಮಾಡುವುದು ಅಲ್ಲಾಹನ ಕೆಲಸ. ಆ ಅಲ್ಲಾಹನೇ

وَمَا اخْتَلَفْتُمْ فِيهِ مِن شَيْءٍ فَحُكْمُهُ إِلَى اللَّهِ ذَٰلِكُمُ اللَّهُ رَبِّي عَلَيْهِ تَوَكَّلْتُ

ಆರಾಧ್ಯರುಗಳ ಕುರಿತು ಪಥಭ್ರಷ್ಟ ಜನರು ವಿಭಿನ್ನ ವಿಶ್ವಾಸ ಮತ್ತು ಧೋರಣೆಯನ್ನು ಹೊಂದಿದ್ದಾರೆ. ಅದನ್ನು ಪವಿತ್ರ ಕುರ್‌ಆನ್ 'ಅಲ್ಲಾಹನ ಹೊರತು ಇತರರನ್ನು ರಕ್ಷಕನನ್ನಾಗಿ ಮಾಡುವುದು' ಎಂದು ಕರೆದಿದೆ. ಕುರ್‌ಆನಿನ ಆಧಾರದಲ್ಲಿ ಈ ಕೆಳಗಿನವುಗಳನ್ನು ಮಾನವ ತನ್ನ ರಕ್ಷಕನನ್ನಾಗಿ ಮಾಡಿಕೊಂಡಂತಾಗುತ್ತದೆ. 1) ಯಾರ ಮಾತಿನಂತೆ ನಡೆಯುತ್ತಾನೋ, ಯಾರ ಮಾರ್ಗದರ್ಶನದಂತೆ ವರ್ತಿಸುತ್ತಾನೋ, ಯಾರು ಗೊತ್ತು ಪಡಿಸಿದ ವಿಧಾನ, ಸಂಪ್ರದಾಯ ಮತ್ತು ವಿಧಿಗಳನ್ನು ಪಾಲಿಸುತ್ತಾನೋ. 2) ಯಾರ ಮಾರ್ಗದರ್ಶನಗಳ ಬಗ್ಗೆ ವಿಶ್ವಾಸವಿರಿಸುತ್ತಾನೋ ಯಾರ ಕುರಿತು ಸರಿಯಾದ ದಾರಿ ತೋರುವವನು ಮತ್ತು ತಪ್ಪುದಾರಿಯಿಂದ ತಡೆಯುವವನು ಎಂದು ಭಾವಿಸುತ್ತಾನೋ. 3) ಯಾರ ಬಗ್ಗೆ ಲೋಕದಲ್ಲಿ ನಾನು ಏನೇ ಮಾಡುತ್ತಿದ್ದರೂ ಅದರ ಕೆಟ್ಟ ಪರಿಣಾಮದಿಂದ ರಕ್ಷಿಸುವನು, ದೇವನಿದ್ದರೂ, ನಿರ್ಣಾಯಕ ದಿನ ಬರಲಿದ್ದರೂ ಅವನು ನನ್ನನ್ನು ಯಾತನೆಯಿಂದ ರಕ್ಷಿಸುವನು ಎಂದು ಭಾವಿಸುವನೋ 4) ಯಾರ ಬಗ್ಗೆ ಲೋಕದಲ್ಲಿ ಅಸಾಮಾನ್ಯ ರೀತಿಯಲ್ಲಿ ಸಹಾಯ ಮಾಡುವವನು, ವಿಪತ್ತು ಮತ್ತು ಸಂಕಷ್ಟಗಳಿಂದ ರಕ್ಷಿಸುವವನು, ಜೀವನಾಧಾರಗಳನ್ನು ಒದಗಿಸುವವನು, ಸಂತಾನ ಪ್ರದಾನ ಮಾಡುವವನು, ಇಷ್ಟಾರ್ಥ ಈಡೇರಿಸುವವನು ಮತ್ತು ಎಲ್ಲಾ ವಿಧದ ಬಯಕೆಗಳನ್ನು ಪೂರ್ತೀಕರಿಸುವವನು ಎಂದು ಕಲ್ಪಿಸುವನೋ.

4. ಇಲ್ಲಿಂದ 12ನೆಯ ಸೂಕ್ತದ ತನಕದ ಉದ್ಧರಣೆ ಅಲ್ಲಾಹನ ವಾಣಿಯಾಗಿದ್ದರೂ, ಇದರಲ್ಲಿ ಅಲ್ಲಾಹನು ಸಂಬೋಧನೆ ಮಾಡುವವನಲ್ಲ. ಬದಲಾಗಿ ಇದು ಪ್ರವಾದಿವರ್ಯರ(ಸ) ಸಂಬೋಧನೆಯಾಗಿದೆ. ನೀವು ಹೀಗೆ ಪ್ರಕಟಿಸಿರಿ ಎಂದು ಅಲ್ಲಾಹನು ತನ್ನ ಪ್ರವಾದಿಗೆ ಆದೇಶಿಸುತ್ತಿದ್ದಾನೆ. ಸೂರಃ ಫಾತಿಹಾ ಕೂಡ ಇಂತಹುದೇ ಒಂದು ಉದಾಹರಣೆಯಾಗಿದೆ. ಅದು ಅಲ್ಲಾಹನ ವಾಣಿಯೇ ಆಗಿದೆ. ಆದರೆ ದಾಸರು ಅದನ್ನು ಪ್ರಾರ್ಥನೆಯ ರೂಪದಲ್ಲಿ ಅಲ್ಲಾಹನ ಮುಂದಿಡುತ್ತಾರೆ.

ನನ್ನ ಪ್ರಭು. ನಾನು ಅವನ ಮೇಲೆಯೇ ಭರವಸೆಯನ್ನಿರಿಸಿದೆ ಮತ್ತು ಅವನ ಕಡೆಗೇ ನಾನು ಮರಳುತ್ತೇನೆ.

وَإِلَيْهِ أُنِيبُ ﴿١٠﴾

11. ಭೂಮಿ-ಆಕಾಶಗಳ ನಿರ್ಮಾಪಕ, ಅವನು ನಿಮ್ಮ ವರ್ಗದಿಂದಲೇ ನಿಮಗಾಗಿ ಜೊತೆಗಳನ್ನು ಸೃಷ್ಟಿಸಿದನು, ಹಾಗೆಯೇ ಪ್ರಾಣಿಗಳಲ್ಲೂ (ಅವುಗಳ ವರ್ಗದಿಂದಲೇ) ಜೋಡಿಗಳನ್ನು ಉಂಟು ಮಾಡಿದನು. ಈ ರೀತಿಯಲ್ಲಿ ಅವನು ನಿಮ್ಮ ಸಂತತಿಗಳನ್ನು ಹಬ್ಬಿಸುತ್ತಾನೆ. ವಿಶ್ವದ ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ. ಅವನು ಎಲ್ಲವನ್ನು ಆಲಿಸುವವನೂ ವೀಕ್ಷಿಸುವವನೂ ಆಗಿದ್ದಾನೆ.

فَاطِرُ السَّمٰوٰتِ وَالْأَرْضِ ۚ جَعَلَ لَكُمْ
مِّنْ أَنْفُسِكُمْ أَزْوَاجًا وَّمِنَ الْأَنْعَامِ
أَزْوَاجًا ۖ يَذْرَؤُكُمْ فِيهِ ۚ لَيْسَ كَمِثْلِهِ
شَيْءٌ ۖ وَهُوَ السَّمِيعُ الْبَصِيرُ ﴿١١﴾

12. ಭೂಮಿ-ಆಕಾಶಗಳ ಭಂಡಾರಗಳ ಬೀಗದ ಕೈಗಳು ಅವನಲ್ಲೇ ಇವೆ. ತಾನಿಚ್ಛಿಸಿದವರಿಗೆ ಧಾರಾಳ ಜೀವನಾಧಾರ ನೀಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಪರಿಮಿತವಾಗಿ ಕೊಡುತ್ತಾನೆ. ಅವನಿಗೆ ಸಕಲ ವಿಷಯಗಳ ಜ್ಞಾನವಿದೆ.

لَهُ مَقَالِيدُ السَّمٰوٰتِ وَالْأَرْضِ ۖ يَبْسُطُ
الرِّزْقَ لِمَنْ يَشَاءُ وَيَقْدِرُ ۚ إِنَّهُ
بِكُلِّ شَيْءٍ عَلِيمٌ ﴿١٢﴾

13. ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮಗಾಗಿಯೂ ನಿಶ್ಚಯಿಸಿ ಕೊಟ್ಟಿದ್ದಾನೆ ಮತ್ತು (ಮುಹಮ್ಮದರೇ) ಈಗ ನಾವು ಅದನ್ನೇ ದಿವ್ಯವಾಣಿಯ ಮೂಲಕ ನಿಮ್ಮ ಕಡೆಗೆ ಕಳುಹಿಸಿರುತ್ತೇವೆ. ಇದನ್ನೇ ನಾವು ಇಬ್‌ರಾಹೀಮ್, ಮೂಸಾ ಮತ್ತು ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ವಿಭಿನ್ನರಾಗದಿರಿ ಎಂಬ ಆದೇಶದೊಂದಿಗೆ. (ಸಂದೇಶವಾಹಕರೇ) ನೀವು ಕರೆ ನೀಡುತ್ತಿರುವ ಈ ವಿಷಯವು ಬಹುದೇವವಿಶ್ವಾಸಿಗಳಿಗೆ ಅತ್ಯಂತ ಅಸಹನೀಯವಾಗಿದೆ. ಅಲ್ಲಾಹನು ತಾನಿಚ್ಛಿಸುವವರನ್ನು ತನ್ನವರಾಗಿ ಮಾಡಿಕೊಳ್ಳುತ್ತಾನೆ ಮತ್ತು ತನ್ನತ್ತ ಮರಳುವವರಿಗೆ ಮಾತ್ರ ತನ್ನ ಕಡೆಗೆ ಬರುವ ಮಾರ್ಗವನ್ನು ತೋರಿಸಿಕೊಡುತ್ತಾನೆ.

شَرَعَ لَكُمْ مِّنَ الدِّينِ مَا وَصّٰى بِهِ
نُوحًا وَّالَّذِي أَوْحَيْنَا إِلَيْكَ وَمَا
وَصَّيْنَا بِهِ إِبْرٰهِيمَ وَمُوسٰى وَعِيسٰى
أَنْ أَقِيمُوا الدِّينَ وَلَا تَتَفَرَّقُوا فِيهِ ۚ
كَبُرَ عَلَى الْمُشْرِكِينَ مَا تَدْعُوهُمْ إِلَيْهِ ۚ
اللّٰهُ يَجْتَبِي إِلَيْهِ مَنْ يَشَاءُ وَيَهْدِي
إِلَيْهِ مَنْ يُنِيبُ ﴿١٣﴾

14. ಜನರಲ್ಲಿ ಭಿನ್ನತೆ ಕಂಡು ಬಂದುದು ಅವರ ಬಳಿಗೆ ಜ್ಞಾನ ಬಂದ ಬಳಿಕವಾಗಿತ್ತು. ಅವರು ಪರಸ್ಪರರ ಮೇಲೆ ಅತಿರೇಕವೆಸಗಲು ಬಯಸಿದುದರಿಂದಲೇ ಹೀಗಾಯಿತು. ಒಂದು ನಿಶ್ಚಿತ ಸಮಯದ ವರೆಗೆ ತೀರ್ಪನ್ನು ಮುಂದೂಡಲಾಗುವುದೆಂದು ನಿಮ್ಮ ಪ್ರಭು ಮೊದಲೇ ಹೇಳದಿರುತ್ತಿದ್ದರೆ ಅವರೊಳಗೆ ತೀರ್ಮಾನ ಮಾಡಿ ಬಿಡಲಾಗುತ್ತಿತ್ತು. ವಾಸ್ತವದಲ್ಲಿ ಮುಂಚಿನವರ ಬಳಿಕ ಗ್ರಂಥದ

وَمَا تَفَرَّقُوا إِلَّا مِنْ بَعْدِ مَا جَاءَهُمُ
الْعِلْمُ بَغْيًا بَيْنَهُمْ ۚ وَلَوْلَا كَلِمَةٌ
سَبَقَتْ مِنْ رَّبِّكَ إِلَىٰ أَجَلٍ مُّسَمًّى
لَّقُضِيَ بَيْنَهُمْ ۚ وَإِنَّ الَّذِينَ أُورِثُوا
الْكِتٰبَ مِنْ بَعْدِهِمْ لَفِي شَكٍّ

مِّنْهُ مُرِيبٍ ﴿١٤﴾

ವಾರೀಸುದಾರರಾಗಿ ಮಾಡಲ್ಪಟ್ಟವರು ಅದರ ಕುರಿತು ಕಳವಳಕಾರಿ ಅನುಮಾನದಲ್ಲಿ ಬಿದ್ದಿರುತ್ತಾರೆ.[5]

فَلِذَٰلِكَ فَادْعُ ۖ وَاسْتَقِمْ كَمَا أُمِرْتَ ۖ وَلَا تَتَّبِعْ أَهْوَاءَهُمْ ۖ وَقُلْ آمَنتُ بِمَا أَنزَلَ اللَّهُ مِن كِتَابٍ ۖ وَأُمِرْتُ لِأَعْدِلَ بَيْنَكُمُ ۖ اللَّهُ رَبُّنَا وَرَبُّكُمْ ۖ لَنَا أَعْمَالُنَا وَلَكُمْ أَعْمَالُكُمْ ۖ لَا حُجَّةَ بَيْنَنَا وَبَيْنَكُمُ ۖ اللَّهُ يَجْمَعُ بَيْنَنَا ۖ وَإِلَيْهِ الْمَصِيرُ ﴿١٥﴾

15. (ಈ ಪರಿಸ್ಥಿತಿ ಉಂಟಾಗಿ ಬಿಟ್ಟಿದೆ) ಆದುದರಿಂದ ಸಂದೇಶ ವಾಹಕರೇ ನೀವಿನ್ನು ಅದೇ ಧರ್ಮದ ಕಡೆಗೆ ಕರೆ ನೀಡಿರಿ ಮತ್ತು ನಿಮಗೆ ಆಜ್ಞಾಪಿಸಲಾಗಿರುವ ಪ್ರಕಾರ ಅದರಲ್ಲೇ ಸ್ಥಿರವಾಗಿರಿ. ಇವರ ಇಚ್ಛೆಗಳನ್ನು ಅನುಸರಿಸಬೇಡಿರಿ ಮತ್ತು ಇವರೊಡನೆ (ಹೀಗೆ) ಹೇಳಿರಿ- "ಅಲ್ಲಾಹನು ಅವತೀರ್ಣಗೊಳಿಸಿದ ಪ್ರತಿಯೊಂದು ಗ್ರಂಥದ ಮೇಲೆ ನಾನು ವಿಶ್ವಾಸವಿರಿಸಿದೆನು. ನಿಮ್ಮ ನಡುವೆ ನ್ಯಾಯ ಪಾಲಿಸಬೇಕೆಂದು ನನಗೆ ಆದೇಶಿಸಲಾಗಿದೆ. ಅಲ್ಲಾಹನೇ ನಮ್ಮ ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ. ನಮ್ಮ ಕರ್ಮಗಳು ನಮಗೆ, ನಿಮ್ಮ ಕರ್ಮಗಳು ನಿಮಗೆ. ನಮ್ಮ ನಿಮ್ಮೊಳಗೆ ಯಾವ ಕಲಹವೂ ಇಲ್ಲ.[6] ಅಲ್ಲಾಹನು ಒಂದು ದಿನ ನಮ್ಮೆಲ್ಲರನ್ನು ಒಟ್ಟುಗೂಡಿಸುವನು ಮತ್ತು ಎಲ್ಲರಿಗೂ ಅವನ ಕಡೆಗೇ ಮರಳಲಿಕ್ಕಿದೆ."

وَالَّذِينَ يُحَاجُّونَ فِي اللَّهِ مِن بَعْدِ مَا اسْتُجِيبَ لَهُ حُجَّتُهُمْ دَاحِضَةٌ عِندَ رَبِّهِمْ وَعَلَيْهِمْ غَضَبٌ وَلَهُمْ عَذَابٌ شَدِيدٌ ﴿١٦﴾

16. ಅಲ್ಲಾಹನ ಕರೆಯು ಸ್ವೀಕರಿಸಲ್ಪಟ್ಟ ಬಳಿಕ (ಅದನ್ನು ಸ್ವೀಕರಿಸಿದವರೊಂದಿಗೆ) ಯಾರು ಅಲ್ಲಾಹನ ವಿಷಯದಲ್ಲಿ ಜಗಳಾಡುತ್ತಾರೋ ಅವರ ತರ್ಕವು ಅವರ ಪ್ರಭುವಿನ ದೃಷ್ಟಿಯಲ್ಲಿ ನಿರರ್ಥಕವಾಗಿದೆ. ಅವರ ಮೇಲೆ ಅವನ ಪ್ರಕೋಪವಿದೆ ಮತ್ತು ಅವರಿಗೆ ಘೋರ ಯಾತನೆ ಇದೆ.

اللَّهُ الَّذِي أَنزَلَ الْكِتَابَ بِالْحَقِّ وَالْمِيزَانَ ۗ وَمَا يُدْرِيكَ لَعَلَّ السَّاعَةَ قَرِيبٌ ﴿١٧﴾

17. ಈ ಗ್ರಂಥವನ್ನೂ ನ್ಯಾಯ ತಕ್ಕಡಿಯನ್ನೂ ಸತ್ಯದೊಂದಿಗೆ ಇಳಿಸಿದವನು ಅಲ್ಲಾಹನೇ.[7] ನಿಮಗೇನು ಗೊತ್ತು? ತೀರ್ಮಾನದ ಘಳಿಗೆಯು ಹತ್ತಿರವೇ ಬಂದಿರಲೂಬಹುದು.

يَسْتَعْجِلُ بِهَا الَّذِينَ لَا يُؤْمِنُونَ بِهَا ۖ وَالَّذِينَ آمَنُوا مُشْفِقُونَ مِنْهَا وَيَعْلَمُونَ أَنَّهَا الْحَقُّ ۗ أَلَا إِنَّ الَّذِينَ

18. ಅದರ ಆಗಮನದ ಮೇಲೆ ನಂಬಿಕೆಯಿಲ್ಲದವರು ಅದಕ್ಕಾಗಿ ಅವಸರ ಪಡುತ್ತಿದ್ದಾರೆ. ಆದರೆ ಅದರ ಮೇಲೆ ನಂಬಿಕೆಯುಳ್ಳವರು ಅದನ್ನು ಭಯಪಡುತ್ತಾರೆ ಮತ್ತು ಅದು ಖಂಡಿತ ಬರಲಿದೆ ಎಂಬುದನ್ನು ಅರಿತಿದ್ದಾರೆ. ಆ ಘಳಿಗೆಯ ಆಗಮನದ ವಿಷಯದಲ್ಲಿ

5. ಅರ್ಥಾತ್- ನಂತರದ ಜನಾಂಗಗಳಿಗೆ ತಮ್ಮ ಬಳಿಗೆ ತಲಪಿರುವ ಗ್ರಂಥಗಳು ಎಷ್ಟರ ಮಟ್ಟಿಗೆ ನಿಜಸ್ವರೂಪದಲ್ಲಿವೆ ಮತ್ತು ಎಷ್ಟರ ಮಟ್ಟಿಗೆ ಕಲಸುಮೇಲೋಗರಗೊಂಡಿವೆ ಎಂಬ ಸಂತೃಪ್ತಿ ಇರಲಿಲ್ಲ. ತಮ್ಮ ಪ್ರವಾದಿಗಳು ಯಾವ ಬೋಧನೆಗಳನ್ನು ತಂದಿದ್ದರು ಎಂದೂ ಅವರಿಗೆ ನಿಖರವಾಗಿ ತಿಳಿದಿರಲಿಲ್ಲ. ಅವರಲ್ಲಿರುವುದೆಲ್ಲವೂ ಸಂಶಯಾಸ್ಪದವಾಗಿದ್ದು ಅವು ಮನಸ್ಸಿನಲ್ಲಿ ಗೊಂದಲ ಮೂಡಿಸುತ್ತಿತ್ತು.

6. ಅರ್ಥಾತ್- ನ್ಯಾಯೋಚಿತವಾದ ಸಾಕ್ಷ್ಯಾಧಾರಗಳ ಸಹಿತ ವಿಷಯವನ್ನು ಸಾದರಪಡಿಸುವ ನಮ್ಮ ಕರ್ತವ್ಯವನ್ನು ನಾವು ಈಡೇರಿಸಿದೆವು. ಈಗ ವೃಥಾ ಜಗಳಾಡುವುದರಿಂದೇನು ಪ್ರಯೋಜನ. ನೀವು ಒಂದು ವೇಳೆ ಜಗಳಾಡಿದರೂ ನಾವು ನಿಮ್ಮೊಡನೆ ಜಗಳಾಡಲು ಸಿದ್ಧರಿಲ್ಲ.

ಸಂಶಯಾತ್ಮಕ ಚರ್ಚೆಗಳನ್ನು ನಡೆಸುವವರು ಪಥಭ್ರಷ್ಟತೆಯಲ್ಲಿ ಬಹುದೂರ ಸಾಗಿ ಬಿಟ್ಟಿದ್ದಾರೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ.

يُمَارُونَ فِي السَّاعَةِ لَفِي ضَلَالٍ بَعِيدٍ ﴿١٨﴾

19. ಅಲ್ಲಾಹನು ತನ್ನ ದಾಸರ ಮೇಲೆ ಅತ್ಯಂತ ಕರುಣೆಯುಳ್ಳವನು. ತಾನಿಚ್ಛಿಸಿದ್ದನ್ನು ತಾನಿಚ್ಛಿಸಿದವರಿಗೆ ದಯಪಾಲಿಸುತ್ತಾನೆ. ಅವನು ಮಹಾಬಲಿಷ್ಠನೂ ಪ್ರಬಲನೂ ಆಗಿರುತ್ತಾನೆ.

اللَّهُ لَطِيفٌ بِعِبَادِهِ يَرْزُقُ مَنْ يَشَاءُ ۖ وَهُوَ الْقَوِيُّ الْعَزِيزُ ﴿١٩﴾

20. ಯಾರು ಪರಲೋಕದ ಬೆಳೆಯನ್ನು ಬಯಸುತ್ತಾನೋ ಅವನ ಬೆಳೆಯನ್ನು ನಾವು ವೃದ್ಧಿಸುತ್ತೇವೆ ಮತ್ತು ಯಾರು ಈ ಲೋಕದ ಬೆಳೆಯನ್ನು ಬಯಸುತ್ತಾನೋ ಅವನಿಗೆ ನಾವು ಈ ಲೋಕದಿಂದಲೇ ಕೊಟ್ಟು ಬಿಡುತ್ತೇವೆ. ಆದರೆ ಪರಲೋಕದಲ್ಲಿ ಅವನಿಗೆ ಯಾವ ಪಾಲೂ ಇಲ್ಲ.

مَنْ كَانَ يُرِيدُ حَرْثَ الْآخِرَةِ نَزِدْ لَهُ فِي حَرْثِهِ ۖ وَمَنْ كَانَ يُرِيدُ حَرْثَ الدُّنْيَا نُؤْتِهِ مِنْهَا وَمَا لَهُ فِي الْآخِرَةِ مِنْ نَصِيبٍ ﴿٢٠﴾

21. ಇವರ ಬಳಿ, ಇವರಿಗಾಗಿ ಧರ್ಮದ ಸ್ವರೂಪದಲ್ಲಿರುವ ಮತ್ತು ಅಲ್ಲಾಹನು ಅನುಮತಿಸಿಲ್ಲದ ಜೀವನ ವಿಧಾನವೊಂದನ್ನು ನಿಶ್ಚಯಿಸಿಕೊಟ್ಟಂತಹ ದೇವಸಹಭಾಗಿಗಳು ಇದ್ದಾರೆಯೇ?[8] ತೀರ್ಮಾನದ ಮಾತು ಮೊದಲೇ ನಿಶ್ಚಿತವಾಗಿಲ್ಲದಿರುತ್ತಿದ್ದರೆ ಇವರ ಮಧ್ಯೆ ಈಗಾಗಲೇ ತೀರ್ಮಾನ ಮಾಡಿ ಬಿಡಲಾಗುತ್ತಿತ್ತು. ನಿಶ್ಚಯವಾಗಿಯೂ ಈ ಅಕ್ರಮಿಗಳಿಗೆ ವೇದನಾಯುಕ್ತ ಯಾತನೆ ಯಿದೆ.

أَمْ لَهُمْ شُرَكَاءُ شَرَعُوا لَهُمْ مِنَ الدِّينِ مَا لَمْ يَأْذَنْ بِهِ اللَّهُ ۚ وَلَوْلَا كَلِمَةُ الْفَصْلِ لَقُضِيَ بَيْنَهُمْ ۗ وَإِنَّ الظَّالِمِينَ لَهُمْ عَذَابٌ أَلِيمٌ ﴿٢١﴾

22. ಆಗ ಈ ಅಕ್ರಮಿಗಳು ತಮ್ಮ ಕರ್ಮಗಳ ಪರಿಣಾಮದಿಂದ ಭೀತರಾಗುತ್ತಿರುವುದನ್ನು ನೀವು ಕಾಣುವಿರಿ ಮತ್ತು ಅದು ಅವರ ಮೇಲೆ ಬಂದೇ ತೀರುವುದು. ಇದಕ್ಕೆ ವ್ಯತಿರಿಕ್ತವಾಗಿ ಸತ್ಯವಿಶ್ವಾಸ ಸ್ವೀಕರಿಸಿದವರು ಹಾಗೂ ಸತ್ಕರ್ಮವೆಸಗಿದವರು ಸ್ವರ್ಗೋದ್ಯಾನ ಗಳಲ್ಲಿರುವರು. ಅವರು ಬಯಸಿದುದನ್ನೆಲ್ಲ ತಮ್ಮ ಪ್ರಭುವಿನ ಬಳಿ ಪಡೆಯುವರು. ಇದುವೇ ಮಹಾ ಅನುಗ್ರಹವಾಗಿದೆ.

تَرَى الظَّالِمِينَ مُشْفِقِينَ مِمَّا كَسَبُوا وَهُوَ وَاقِعٌ بِهِمْ ۗ وَالَّذِينَ آمَنُوا وَعَمِلُوا الصَّالِحَاتِ فِي رَوْضَاتِ الْجَنَّاتِ ۖ لَهُمْ مَا يَشَاءُونَ عِنْدَ رَبِّهِمْ ۚ ذَٰلِكَ هُوَ الْفَضْلُ الْكَبِيرُ ﴿٢٢﴾

7. 'ಮೀಝಾನ್' (ತಕ್ಕಡಿ) ಎಂದರೆ ಸತ್ಯ-ಮಿಥ್ಯ, ಸರಿ-ತಪ್ಪು, ನ್ಯಾಯ-ಅನ್ಯಾಯ ಮತ್ತು ಹಿತ-ಅಹಿತಗಳ ನಡುವಿನ ವ್ಯತ್ಯಾಸವನ್ನು ತಕ್ಕಡಿಯಂತೆ ಅಳೆದು ತಿಳಿಸುವ ಅಲ್ಲಾಹನ ಶರೀಅತ್ ಆಗಿದೆ.

8. ಈ ಸೂಕ್ತದಲ್ಲಿ 'ಸಹಭಾಗಿಗಳು'(ಶುರಕಾ) ಎಂದು ಹೇಳಲಾಗಿರುವುದು ಜನರು ಪ್ರಾರ್ಥಿಸುವ, ಹರಕೆಗಳನ್ನೊಪ್ಪಿಸುವ ಮತ್ತು ಪೂಜಾವಿಧಿಗಳನ್ನು ನೆರವೇರಿಸುವ ಸಹಭಾಗಿಗಳ ಕುರಿತಲ್ಲ ಎಂಬುದು ವ್ಯಕ್ತ. ಯಾರನ್ನು ಜನರು ಆಜ್ಞಾಧಿಕಾರಿ ಎಂದು ಭಾವಿಸಿದ್ದಾರೋ ಯಾರ ವಿಚಾರ, ಸಿದ್ಧಾಂತ ಮತ್ತು ತತ್ವಗಳ ಮೇಲೆ ವಿಶ್ವಾಸವಿರಿಸುತ್ತಾರೋ ಯಾರ ನೈತಿಕ ನಿಯಮಗಳು ಹಾಗೂ ನಾಗರಿಕತೆ ಮತ್ತು ಸಂಸ್ಕೃತಿಯ ಮಾನದಂಡಗಳನ್ನು ಅಂಗೀಕರಿಸುತ್ತಾರೋ ಯಾರು ಗೊತ್ತುಪಡಿಸಿದ ನಿಯಮಗಳನ್ನು ತಮ್ಮ ಧಾರ್ಮಿಕ ಸಂಪ್ರದಾಯ-ಆರಾಧನೆಗಳಲ್ಲಿ ತಮ್ಮ ವೈಯಕ್ತಿಕ ಜೀವನದಲ್ಲಿ, ಸಾಮಾಜಿಕ ರಂಗದಲ್ಲಿ, ಸಂಸ್ಕೃತಿಯಲ್ಲಿ, ವ್ಯಾಪಾರ-ವಹಿವಾಟುಗಳಲ್ಲಿ, ತಮ್ಮ ರಾಜಕೀಯ ಮತ್ತು ಆಡಳಿತ ನಿರ್ವಹಣೆಯಲ್ಲಿ- ಇದುವೇ ಶರೀಅತ್ ಆಗಿದೆಯೇ ಎಂಬಂತೆ ಅಂಗೀಕರಿಸುತ್ತಾರೋ ಅವರನ್ನೇ ಇಲ್ಲಿ ಸಹಭಾಗಿಗಳು ಎಂದು ಕರೆಯಲಾಗಿದೆ.

23. ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗಿದಂತಹ ತನ್ನ ದಾಸರಿಗೆ ಅಲ್ಲಾಹನು ನೀಡುತ್ತಿರುವ ಸುವಾರ್ತೆಯು ಇದುವೇ ಆಗಿದೆ. ಸಂದೇಶವಾಹಕರೇ! ಇವರೊಡನೆ (ಹೀಗೆ) ಹೇಳಿ ಬಿಡಿರಿ- "ನಾನು ಈ ಕಾರ್ಯಕ್ಕಾಗಿ ನಿಮ್ಮಿಂದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸುತ್ತಿಲ್ಲ. ಆದರೆ ಬಾಂಧವ್ಯದ ಪ್ರೀತಿಯನ್ನು ಖಂಡಿತ ಅಪೇಕ್ಷಿಸುತ್ತೇನೆ."[9] ಒಳಿತನ್ನು ಗಳಿಸುವವನಿಗೆ ನಾವು ಆ ಒಳಿತಿನಲ್ಲಿ ಉತ್ತಮವಾಗಿ ವರ್ಧಿಸಿ ಕೊಡುವೆವು. ನಿಸ್ಸಂದೇಹವಾಗಿಯೂ ಅಲ್ಲಾಹನು ಮಹಾ ಕ್ಷಮಾಶೀಲನೂ ಗುಣಗ್ರಾಹಿಯೂ ಆಗಿರುತ್ತಾನೆ.

ذَٰلِكَ الَّذِي يُبَشِّرُ اللَّهُ عِبَادَهُ الَّذِينَ
آمَنُوا وَعَمِلُوا الصَّالِحَاتِ ۗ قُل لَّا
أَسْأَلُكُمْ عَلَيْهِ أَجْرًا إِلَّا الْمَوَدَّةَ فِي
الْقُرْبَىٰ ۗ وَمَن يَقْتَرِفْ حَسَنَةً نَّزِدْ لَهُ
فِيهَا حُسْنًا ۚ إِنَّ اللَّهَ غَفُورٌ شَكُورٌ ﴿٢٣﴾

24. ಈ ವ್ಯಕ್ತಿಯು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿರುವನೆಂದು ಇವರು ಹೇಳುತ್ತಾರೆಯೇ? ಅಲ್ಲಾಹನು ಇಚ್ಛಿಸಿದರೆ ನಿಮ್ಮ ಹೃದಯಕ್ಕೆ ಮುದ್ರೆಯೊತ್ತಿ ಬಿಡಬಹುದಾಗಿತ್ತು.[10] ಅವನು ಮಿಥ್ಯವನ್ನು ಅಳಿಸಿ ಬಿಡುತ್ತಾನೆ ಮತ್ತು ತನ್ನ ವಚನಗಳ

أَمْ يَقُولُونَ افْتَرَىٰ عَلَى اللَّهِ كَذِبًا ۖ
فَإِن يَشَإِ اللَّهُ يَخْتِمْ عَلَىٰ قَلْبِكَ ۗ وَ
يَمْحُ اللَّهُ الْبَاطِلَ وَيُحِقُّ الْحَقَّ بِكَلِمَاتِهِ

9. ಈ ಸೂಕ್ತವನ್ನು ಮೂರು ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ: 1) ನಾನು ಈ ಕೆಲಸಕ್ಕಾಗಿ ನಿಮ್ಮಿಂದ ಯಾವುದೇ ಪ್ರತಿಫಲ ನಿರೀಕ್ಷಿಸುವುದಿಲ್ಲ. ಆದರೆ ನೀವು (ಕುರೈಶರು) ನಿಮ್ಮ ಮತ್ತು ನನ್ನ ನಡುವೆ ಇರುವ ಕುಟುಂಬ ಸಂಬಂಧವನ್ನಾದರೂ ಕನಿಷ್ಠಪಕ್ಷ ಗಮನದಲ್ಲಿರಿಸಬೇಕು. ನೀವೇ ನನ್ನ ಶತ್ರುತ್ವಕ್ಕೆ ಅಣಿಯಾಗುವುದೆಂದರೆ ಎಂತಹ ಅನ್ಯಾಯ. 2) ನಿಮ್ಮಲ್ಲಿ ಅಲ್ಲಾಹನ ಸಾಮೀಪ್ಯದ ಬಯಕೆಯುಂಟಾಗಬೇಕೆಂಬುದನ್ನು ಬಿಟ್ಟರೆ ಬೇರಾವುದೇ ಪ್ರತಿಫಲವನ್ನು ನಾನು ಈ ಕೆಲಸಕ್ಕಾಗಿ ನಿಮ್ಮಿಂದ ನಿರೀಕ್ಷಿಸುವುದಿಲ್ಲ. 3) ಮೂರನೆಯ ವಿಧದ ವ್ಯಾಖ್ಯಾನ ನೀಡಿರುವ ವ್ಯಾಖ್ಯಾನಕಾರರಲ್ಲಿ ಕೆಲವರ ಪ್ರಕಾರ 'ಅಕಾರಿಬ್' ಎಂದರೆ ಅಬ್ದುಲ್ ಮುತ್ತಲಿಬ್‌ರ ಸಮಸ್ತ ಸಂತತಿಯಾಗಿದೆ. ಮತ್ತೆ ಕೆಲವರು ಅದನ್ನು ಹ. ಅಲೀ ಫಾತಿಮ(ರ) ಮತ್ತು ಅವರ ಸಂತಾನಕ್ಕೆ ಸೀಮಿತಗೊಳಿಸುತ್ತಾರೆ. ಆದರೆ ವಿಭಿನ್ನ ಕಾರಣಗಳಿಂದ ಈ ವ್ಯಾಖ್ಯಾನವನ್ನು ಸೂಕ್ತವೆಂದು ಹೇಳುವಂತಿಲ್ಲ. ಮೊದಲನೆಯದಾಗಿ ಪವಿತ್ರ ಮಕ್ಕಾ ನಗರದಲ್ಲಿ ಅಶ್ಶೂರಾ ಅಧ್ಯಾಯ ಅವತೀರ್ಣಗೊಂಡಾಗ ಹ.ಅಲೀ ಮತ್ತು ಫಾತಿಮಾರ(ರ) ವಿವಾಹವಾಗಿರಲಿಲ್ಲ. ಆದ್ದರಿಂದ ಅವರಿಗೆ ಸಂತಾನವಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ, ಅಲ್ಲದೆ ಅಬ್ದುಲ್ ಮುತ್ತಲಿಬ್‌ರ ಸಂತತಿಯಲ್ಲಿ ಎಲ್ಲರೂ ಪ್ರವಾದಿವರ್ಯರಿಗೆ(ಸ) ನೆರವಾಗುತ್ತಿರಲಿಲ್ಲ. ಕೆಲವರು ಬಹಿರಂಗವಾಗಿಯೇ ಶತ್ರುಗಳಿಗೆ ನೆರವಾಗುತ್ತಿದ್ದರು. ಅಬೂಲಹಬ್‌ನ ಶತ್ರುತ್ವ ಸರ್ವವಿಧಿತ. ಪ್ರವಾದಿವರ್ಯರ(ಸ) ಕುಟುಂಬಸ್ಥರು ಅಬ್ದುಲ್ ಮುತ್ತಲಿಬ್‌ರ ಸಂತಾನ ಮಾತ್ರವಾಗಿರಲಿಲ್ಲ. ಅವರ ತಾಯಿ, ಅವರ ತಂದೆ, ಅವರ ಪತ್ನಿಯಾದ ಹ.ಖದೀಜಾರಿಂದಾಗಿ(ರ) ಕುರೈಶರ ಎಲ್ಲಾ ಮನೆತನದಲ್ಲಿ ಅವರ ಕುಟುಂಬ ಸಂಬಂಧವಿತ್ತು. ಈ ಎಲ್ಲಾ ಮನೆತನಗಳಲ್ಲಿ ಅವರ ಮಹಾ ಬೆಂಬಲಿಗರೂ ಇದ್ದರು, ಹಾಗೆಯೇ ಕಡು ವೈರಿಗಳೂ ಇದ್ದರು. ಈ ನಿಟ್ಟಿನಲ್ಲಿ ಅತ್ಯಂತ ಪ್ರಮುಖವಾದ ಇನ್ನೊಂದು ವಿಷಯವೂ ಇದೆ. ಪ್ರವಾದಿವರ್ಯರು(ಸ) ಯಾವ ಉನ್ನತ ಸ್ಥಾನದಲ್ಲಿ ನಿಂತುಕೊಂಡು ಅಲ್ಲಾಹನೆಡೆಗೆ ಕರೆಯುತ್ತಾರೋ ಆ ಉನ್ನತ ಸ್ಥಾನದಿಂದ ತಮ್ಮ ಮಹತ್ಕಾರ್ಯಕ್ಕೆ ಪ್ರತಿಯಾಗಿ ತಮ್ಮ ಕುಟುಂಬಸ್ಥರನ್ನು ಪ್ರೀತಿಸುವಂತೆ ಕೋರುವುದು ಅತ್ಯಂತ ಕುತ್ಸಿತ ವಿಷಯವಾಗಿದೆ. ಅಲ್ಲಾಹನು ತನ್ನ ಪ್ರವಾದಿಗೆ ಇಂತಹ ಮಾತು ಕಲಿಸಿರಬಹುದು ಮತ್ತು ಪ್ರವಾದಿ ಕುರೈಶರ ಮುಂದೆ ನಿಂತುಕೊಂಡು ಈ ಮಾತು ಹೇಳಿರಬಹುದು ಎಂದು ಸತ್‌ಸ್ವಭಾವದ ಯಾವ ವ್ಯಕ್ತಿಯೂ ಕಲ್ಪಿಸಲಾರ. ಅಲ್ಲದೆ ಈ ಮಾತಿನ ಸಂಬೋಧಿತರು ಸತ್ಯವಿಶ್ವಾಸಿಗಳಲ್ಲ, ಸತ್ಯನಿಷೇಧಿಗಳಾಗಿದ್ದಾರೆ. ಅವರನ್ನು ಸಂಬೋಧಿಸಿಯೇ ಈ ಉಪನ್ಯಾಸ ಮಾಡಲಾಗಿದೆ. ಮುಂದೆಯೂ ಅವರನ್ನೇ ಸಂಬೋಧಿಸಲಾಗಿದೆ. ಆದ್ದರಿಂದ ಇದು ಇನ್ನಷ್ಟು ಅಸಂಬದ್ಧವಾಗಿ ಕಂಡು ಬರುತ್ತದೆ. ಈ ವಾಕ್ಸರಣಿಯಲ್ಲಿ ವಿರೋಧಿಗಳಿಂದ ಯಾವುದೇ ರೀತಿಯ ಪ್ರತಿಫಲವನ್ನು ನಿರೀಕ್ಷಿಸುವ ಔಚಿತ್ಯವಾದರೂ ಏನಿದೆ? ತಮಗಾಗಿ ಮಾಡಲಾಗುತ್ತಿರುವ ಕೆಲಸದ ಬಗ್ಗೆ ಕಿಂಚಿತ್ತಾದರೂ ಬೆಲೆ ಕಲ್ಪಿಸುವವರೊಡನೆ ಮಾತ್ರ ಪ್ರತಿಫಲವನ್ನು ನಿರೀಕ್ಷಿಸಲು ಸಾಧ್ಯ.

10. ಅರ್ಥಾತ್- ಓ ಪ್ರವಾದಿಯೇ! ಅವರು ನಿಮ್ಮನ್ನೂ ಅವರ ಮಟ್ಟದ ವ್ಯಕ್ತಿಯೆಂದು ಭಾವಿಸುತ್ತಾರೆ. ಇವರು ತಮ್ಮ ಸ್ವಾರ್ಥಕ್ಕಾಗಿ ದೊಡ್ಡ ದೊಡ್ಡ ಸುಳ್ಳನ್ನು ಹೇಳಿಬಿಡುವಂತೆ ನೀವೂ ಸ್ವಾರ್ಥ ಸಾಧನೆಗಾಗಿ ಸುಳ್ಳು ಹೇಳುತ್ತಿರಬಹುದೆಂದು ಕಲ್ಪಿಸುತ್ತಾರೆ. ಅವರ ಹೃದಯಗಳಿಗೆ ಮುದ್ರೆಯೊತ್ತಿರುವಂತೆ ನಿಮ್ಮ ಹೃದಯಕ್ಕೆ ಮುದ್ರೆಯೊತ್ತದೆ ಇರುವುದು ಅಲ್ಲಾಹನ ಅನುಗ್ರಹವಾಗಿದೆ.

| | |
|---|---|
| ಮೂಲಕ ಸತ್ಯವನ್ನು ಸತ್ಯವೆಂದು ಸಾಧಿಸಿ ತೋರಿಸುತ್ತಾನೆ. ನಿಶ್ಚಯವಾಗಿಯೂ ಅವನು ಹೃದಯಗಳಲ್ಲಿ ಅವಿತಿರುವ ರಹಸ್ಯ ಗಳನ್ನು ಬಲ್ಲನು. | إِنَّهُۥ عَلِيمٌۢ بِذَاتِ ٱلصُّدُورِ ﴿٢٤﴾ |
| 25. ತನ್ನ ದಾಸರಿಂದ ಪಶ್ಚಾತ್ತಾಪ ಸ್ವೀಕರಿಸುವವನು ಮತ್ತು ಪಾಪಗಳನ್ನು ಕ್ಷಮಿಸುವವನು ಅವನೇ. ವಸ್ತುತಃ ನಿಮ್ಮ ಕರ್ಮಗಳ ಅರಿವು ಅವನಿಗಿದೆ. | وَهُوَ ٱلَّذِى يَقْبَلُ ٱلتَّوْبَةَ عَنْ عِبَادِهِۦ وَيَعْفُوا۟ عَنِ ٱلسَّيِّـَٔاتِ وَيَعْلَمُ مَا تَفْعَلُونَ ﴿٢٥﴾ |
| 26. ಅವನು ಸತ್ಯವಿಶ್ವಾಸಿಗಳ ಹಾಗೂ ಸತ್ಕರ್ಮಿಗಳ ಪ್ರಾರ್ಥನೆ ಸ್ವೀಕರಿಸುತ್ತಾನೆ ಮತ್ತು ಅವರಿಗೆ ತನ್ನ ಅನುಗ್ರಹದಿಂದ ಇನ್ನಷ್ಟು ಹೆಚ್ಚು ನೀಡುತ್ತಾನೆ. ಇನ್ನು ಸತ್ಯನಿಷೇಧಿಗಳ ವಿಷಯ, ಅವರಿಗಂತೂ ಘೋರ ಯಾತನೆ ಕಾದಿದೆ. | وَيَسْتَجِيبُ ٱلَّذِينَ ءَامَنُوا۟ وَعَمِلُوا۟ ٱلصَّٰلِحَٰتِ وَيَزِيدُهُم مِّن فَضْلِهِۦ ۚ وَٱلْكَٰفِرُونَ لَهُمْ عَذَابٌ شَدِيدٌ ﴿٢٦﴾ |
| 27. ಅಲ್ಲಾಹನು ತನ್ನ ಎಲ್ಲ ದಾಸರಿಗೂ ವಿಶಾಲ ಜೀವನಾಧಾರ ಕೊಟ್ಟು ಬಿಡುತ್ತಿದ್ದರೆ, ಅವರು ಭೂಮಿಯಲ್ಲಿ ದಂಗೆ ಎದ್ದು ಬಿಡುತ್ತಿದ್ದರು. ಆದರೆ ಅವನು ಒಂದು ಪ್ರಮಾಣಕ್ಕನುಸಾರವಾಗಿ ತಾನಿಚ್ಛಿಸಿದಷ್ಟು ಇಳಿಸುತ್ತಾನೆ. ಖಂಡಿತವಾಗಿಯೂ ಅವನು ತನ್ನ ದಾಸರ ಬಗ್ಗೆ ತಿಳಿದಿರುವವನೂ ಅವರನ್ನು ನೋಡುತ್ತಿರುವವನೂ ಆಗಿರುವನು. | وَلَوْ بَسَطَ ٱللَّهُ ٱلرِّزْقَ لِعِبَادِهِۦ لَبَغَوْا۟ فِى ٱلْأَرْضِ وَلَٰكِن يُنَزِّلُ بِقَدَرٍ مَّا يَشَآءُ ۚ إِنَّهُۥ بِعِبَادِهِۦ خَبِيرٌۢ بَصِيرٌ ﴿٢٧﴾ |
| 28. ಜನರು ನಿರಾಶರಾಗಿ ಬಿಟ್ಟ ಬಳಿಕ ಮಳೆಗರೆಯುವವನೂ ಮತ್ತು ತನ್ನ ಕೃಪೆಯನ್ನು ಹರಡುವವನೂ ಅವನೇ. ಪ್ರಶಂಸಾರ್ಹನಾದ ರಕ್ಷಕ ಮಿತ್ರನೂ ಅವನೇ. | وَهُوَ ٱلَّذِى يُنَزِّلُ ٱلْغَيْثَ مِنۢ بَعْدِ مَا قَنَطُوا۟ وَيَنشُرُ رَحْمَتَهُۥ ۚ وَهُوَ ٱلْوَلِىُّ ٱلْحَمِيدُ ﴿٢٨﴾ |
| 29. ಭೂಮಿ - ಆಕಾಶಗಳ ಸೃಷ್ಟಿಯೂ ಅವನು ಇವೆರಡರಲ್ಲಿ ಹರಡಿಸಿ ರುವ ಈ ಜೀವಿಗಳೂ ಅವನ ನಿದರ್ಶನಗಳಲ್ಲಾಗಿವೆ. ತಾನಿಚ್ಛಿಸಿದಾಗ ಅವನು ಅವುಗಳನ್ನು ಒಟ್ಟುಗೂಡಿಸಬಲ್ಲನು. | وَمِنْ ءَايَٰتِهِۦ خَلْقُ ٱلسَّمَٰوَٰتِ وَٱلْأَرْضِ وَمَا بَثَّ فِيهِمَا مِن دَآبَّةٍ ۚ وَهُوَ عَلَىٰ جَمْعِهِمْ إِذَا يَشَآءُ قَدِيرٌ ﴿٢٩﴾ |
| 30. ನಿಮಗೆ ಒದಗಿರುವ ಯಾವುದೇ ಸಂಕಷ್ಟವು ನಿಮ್ಮ ಕೈಗಳ ಗಳಿಕೆಯಿಂದಲೇ ಆಗಿದೆ.[11] ಅನೇಕ ಪಾಪಗಳನ್ನು ಅವನು ಹಾಗೆಯೇ ಕ್ಷಮಿಸಿ ಬಿಡುತ್ತಾನೆ. | وَمَآ أَصَٰبَكُم مِّن مُّصِيبَةٍ فَبِمَا كَسَبَتْ أَيْدِيكُمْ وَيَعْفُوا۟ عَن كَثِيرٍ ﴿٣٠﴾ |
| 31. ನೀವು ಭೂಮಿಯಲ್ಲಿ ಅವನನ್ನು ಸೋಲಿಸಬಲ್ಲವರಲ್ಲ ಮತ್ತು | وَمَآ أَنتُم بِمُعْجِزِينَ فِى ٱلْأَرْضِ ۖ وَمَا |

ربع الحزب

11. ಇದು ಆ ಕಾಲದಲ್ಲಿ ಮಕ್ಕಾದಲ್ಲಿ ಬಂದಿದ್ದ ಕ್ಷಾಮದ ಕಡೆಗಿರುವ ಸೂಚನೆ.

ನಿಮಗೆ ಅಲ್ಲಾಹನ ವಿರುದ್ಧ ಯಾವುದೇ ಬೆಂಬಲಿಗನಾಗಲಿ ಸಹಾಯಕನಾಗಲಿ ಇಲ್ಲ.

لَكُمْ مِّنْ دُوْنِ اللّٰهِ مِنْ وَّلِيٍّ وَّلَا نَصِيْرٍ ۝٣١

32. ಸಮುದ್ರದಲ್ಲಿ ಪರ್ವತಗಳಂತೆ ತೋರುತ್ತಿರುವ ಈ ಹಡಗುಗಳು ಅವನ ನಿದರ್ಶನಗಳಲ್ಲಾಗಿವೆ.

وَمِنْ اٰيٰتِهِ الْجَوَارِ فِي الْبَحْرِ كَالْاَعْلَامِ ۝٣٢

33. ಅಲ್ಲಾಹನು ತಾನಿಚ್ಛಿಸಿದಾಗ ಗಾಳಿಯನ್ನು ಸ್ತಬ್ಧಗೊಳಿಸಬಲ್ಲನು ಮತ್ತು ಆಗ ಇವುಗಳು ಸಮುದ್ರದ ಬೆನ್ನ ಮೇಲೆ ನಿಂತಲ್ಲೇ ನಿಂತು ಬಿಡುವವು. ಅತ್ಯಂತ ಸಹನಶೀಲ ಹಾಗೂ ಕೃತಜ್ಞನಿಗೆ ಇದರಲ್ಲಿ ದೊಡ್ಡ ನಿದರ್ಶನಗಳಿವೆ-

اِنْ يَّشَاْ يُسْكِنِ الرِّيْحَ فَيَظْلَلْنَ رَوَاكِدَ عَلٰى ظَهْرِهٖ ۗ اِنَّ فِيْ ذٰلِكَ لَاٰيٰتٍ لِّكُلِّ صَبَّارٍ شَكُوْرٍ ۝٣٣

34. ಅಥವಾ ಅವನು (ಆ ಹಡಗಿನಲ್ಲಿರುವ ಪ್ರಯಾಣಿಕರ) ಅನೇಕ ಪಾಪಗಳನ್ನು ಕ್ಷಮಿಸಿ ಅವರ ಕೆಲವೊಂದು ದುಷ್ಕೃತ್ಯಗಳ ಫಲವಾಗಿ ಅವರನ್ನು ಮುಳುಗಿಸಿ ಬಿಡಲೂಬಹುದು.

اَوْ يُوْبِقْهُنَّ بِمَا كَسَبُوْا وَيَعْفُ عَنْ كَثِيْرٍ ۝٣٤

35. ಆಗ ನಮ್ಮ ನಿದರ್ಶನಗಳ ಕುರಿತು ಜಗಳಾಡುವವರಿಗೆ, ತಮಗೆಲ್ಲೂ ಅಭಯ ಸ್ಥಾನವಿಲ್ಲವೆಂದು ತಿಳಿದು ಬರುವುದು.

وَّيَعْلَمَ الَّذِيْنَ يُجَادِلُوْنَ فِيْٓ اٰيٰتِنَا ۗ مَا لَهُمْ مِّنْ مَّحِيْصٍ ۝٣٥

36. ನಿಮಗೆ ನೀಡಲಾಗಿರುವುದೆಲ್ಲವೂ ಕೇವಲ ಇಹಲೋಕದ ಕೆಲವೇ ದಿನಗಳ ಜೀವನ ಸಾಧನಗಳಾಗಿವೆ ಮತ್ತು ಅಲ್ಲಾಹನ ಬಳಿಯಲ್ಲಿ ರುವುದೆಲ್ಲ ಉತ್ತಮವೂ ಶಾಶ್ವತವೂ ಆಗಿರುತ್ತದೆ. ಅದು ಇರುವುದು ಸತ್ಯವಿಶ್ವಾಸಿಗಳಿಗಾಗಿ ಮತ್ತು ತಮ್ಮ ಪ್ರಭುವಿನ ಮೇಲೆ ಭರವಸೆ ಇಡುವವರಿಗಾಗಿ.

فَمَآ اُوْتِيْتُمْ مِّنْ شَيْءٍ فَمَتَاعُ الْحَيٰوةِ الدُّنْيَا ۚ وَمَا عِنْدَ اللّٰهِ خَيْرٌ وَّاَبْقٰى لِلَّذِيْنَ اٰمَنُوْا وَعَلٰى رَبِّهِمْ يَتَوَكَّلُوْنَ ۝٣٦

37. ಅವರು ದೊಡ್ಡ ದೊಡ್ಡ ಪಾಪಗಳಿಂದ ಮತ್ತು ಅಶ್ಲೀಲ ಕಾರ್ಯಗಳಿಂದ ದೂರವಿರುವವರೂ ಸಿಟ್ಟು ಬಂದಾಗ ಕ್ಷಮಿಸಿ ಬಿಡುವವರೂ ಆಗಿರುತ್ತಾರೆ.

وَالَّذِيْنَ يَجْتَنِبُوْنَ كَبٰٓئِرَ الْاِثْمِ وَالْفَوَاحِشَ وَاِذَا مَا غَضِبُوْا هُمْ يَغْفِرُوْنَ ۝٣٧

38. ಅವರು ತಮ್ಮ ಪ್ರಭುವಿನ ಆಜ್ಞೆಗಳನ್ನು ಪಾಲಿಸುತ್ತಾರೆ, ನಮಾಝನ್ನು ಸಂಸ್ಥಾಪಿಸುತ್ತಾರೆ, ತಮ್ಮ ವ್ಯವಹಾರಗಳನ್ನು ಪರಸ್ಪರ ಸಮಾಲೋಚನೆಯಿಂದ ನಡೆಸುತ್ತಾರೆ, ನಾವು ಅವರಿಗೆ ಕೊಟ್ಟಿರುವ ಜೀವನಾಧಾರಗಳಿಂದ ಖರ್ಚು ಮಾಡುತ್ತಾರೆ-

وَالَّذِيْنَ اسْتَجَابُوْا لِرَبِّهِمْ وَاَقَامُوا الصَّلٰوةَ ۪ وَاَمْرُهُمْ شُوْرٰى بَيْنَهُمْ ۪ وَمِمَّا رَزَقْنٰهُمْ يُنْفِقُوْنَ ۝٣٨

39. ಮತ್ತು ಅವರ ಮೇಲೆ ಅತಿರೇಕವೆಸಗಲ್ಪಟ್ಟರೆ ಅದನ್ನು ಪ್ರತಿ ರೋಧಿಸುತ್ತಾರೆ.

وَالَّذِيْنَ اِذَآ اَصَابَهُمُ الْبَغْيُ هُمْ يَنْتَصِرُوْنَ ۝٣٩

40. ಕೆಡುಕಿನ ಪ್ರತಿಫಲ[12] ಅದಕ್ಕೆ ಸಮಾನವಾದ ಕೆಡುಕಾಗಿದೆ. ಇನ್ನು ಯಾರಾದರೂ ಕ್ಷಮಿಸಿಬಿಟ್ಟರೆ ಹಾಗೂ ಸುಧಾರಿಸಿಕೊಂಡರೆ ಅದರ ಪ್ರತಿಫಲದ ಹೊಣೆ ಅಲ್ಲಾಹನ ಮೇಲಿದೆ. ನಿಶ್ಚಯವಾಗಿಯೂ ಅವನು ಅಕ್ರಮಿಗಳನ್ನು ಮೆಚ್ಚುವುದಿಲ್ಲ.

وَجَزٰٓؤُا سَيِّئَةٍ سَيِّئَةٌ مِّثْلُهَا ۚ فَمَنْ عَفَا وَاَصْلَحَ فَاَجْرُهٗ عَلَى اللّٰهِ ۗ اِنَّهٗ لَا يُحِبُّ الظّٰلِمِيْنَ ﴿٤٠﴾

41. ತಮ್ಮ ಮೇಲೆ ಅಕ್ರಮವಾದ ಬಳಿಕ ಪ್ರತೀಕಾರವೆಸಗಿದವರನ್ನು ಆಕ್ಷೇಪಿಸಲಾಗದು.

وَلَمَنِ انْتَصَرَ بَعْدَ ظُلْمِهٖ فَاُولٰٓئِكَ مَا عَلَيْهِمْ مِّنْ سَبِيْلٍ ﴿٤١﴾

42. ವಾಸ್ತವದಲ್ಲಿ ಇತರರ ಮೇಲೆ ಅಕ್ರಮವೆಸಗುವವರು ಮತ್ತು ಭೂಮಿಯಲ್ಲಿ ಅನ್ಯಾಯವಾಗಿ ಅತಿರೇಕವೆಸಗುವವರೇ ಆಕ್ಷೇಪಕ್ಕೆ ಅರ್ಹರು. ಇಂತಹವರಿಗೆ ವೇದನಾಯುಕ್ತ ಯಾತನೆ ಇದೆ.

اِنَّمَا السَّبِيْلُ عَلَى الَّذِيْنَ يَظْلِمُوْنَ النَّاسَ وَيَبْغُوْنَ فِى الْاَرْضِ بِغَيْرِ الْحَقِّ ۗ اُولٰٓئِكَ لَهُمْ عَذَابٌ اَلِيْمٌ ﴿٤٢﴾

43. ಆದರೆ ಯಾರಾದರೂ ಸಹನೆಯಿಂದ ವರ್ತಿಸಿದರೆ ಹಾಗೂ ಕ್ಷಮಿಸಿದರೆ ಇದೊಂದು ಮಹಾ ಸಾಹಸದ ಕಾರ್ಯಗಳಲ್ಲಾಗುವುದು.

وَلَمَنْ صَبَرَ وَغَفَرَ اِنَّ ذٰلِكَ لَمِنْ عَزْمِ الْاُمُوْرِ ﴿٤٣﴾

44. ಯಾರನ್ನು ಅಲ್ಲಾಹನೇ ಪಥಭ್ರಷ್ಟಗೊಳಿಸಿ ಬಿಡುವನೋ ಅವನನ್ನು ರಕ್ಷಿಸಬಲ್ಲವರು ಅಲ್ಲಾಹನ ಹೊರತು ಬೇರಾರೂ ಇಲ್ಲ. ಈ ಅಕ್ರಮಿಗಳು ಯಾತನೆಯನ್ನು ಕಂಡಾಗ, ಇನ್ನು ಮರಳಿ ಹೋಗಲು ದಾರಿಯೇನಾದರೂ ಇದೆಯೇ? ಎಂದು ಹೇಳುವುದನ್ನು ನೀವು ಕಾಣುವಿರಿ.

وَمَنْ يُّضْلِلِ اللّٰهُ فَمَا لَهٗ مِنْ وَّلِيٍّ مِّنْۢ بَعْدِهٖ ۗ وَتَرَى الظّٰلِمِيْنَ لَمَّا رَاَوُا الْعَذَابَ يَقُوْلُوْنَ هَلْ اِلٰى مَرَدٍّ مِّنْ سَبِيْلٍ ﴿٤٤﴾

45. ಇವರು ನರಕಾಗ್ನಿಯ ಮುಂದೆ ತರಲ್ಪಡುವಾಗ ಅವಮಾನಿತರಾಗಿ ತಲೆ ತಗ್ಗಿಸುತ್ತಿರುವುದನ್ನೂ ಅದನ್ನು ಕುಡಿನೋಟದೊಂದಿಗೆ ಕದ್ದು ನೋಡುವುದನ್ನೂ ನೀವು ಕಾಣುವಿರಿ. ಪುನರುತ್ಥಾನದ ಈ ದಿನ ತಮ್ಮನ್ನೂ ತಮ್ಮ ಸಂಬಂಧಿಕರನ್ನೂ ನಷ್ಟಕ್ಕೊಳಪಡಿಸಿಕೊಂಡವರೇ ನಿಜವಾದ ಹಾನಿಗೊಳಗಾದವರೆಂದು ಸತ್ಯವಿಶ್ವಾಸಿಗಳು ಆಗ ಹೇಳುವರು. ಎಚ್ಚರಿಕೆ! ಅಕ್ರಮಿಗಳು ಶಾಶ್ವತವಾದ ಯಾತನೆಯಲ್ಲಿರುವರು.

وَتَرٰىهُمْ يُعْرَضُوْنَ عَلَيْهَا خٰشِعِيْنَ مِنَ الذُّلِّ يَنْظُرُوْنَ مِنْ طَرْفٍ خَفِيٍّ ۗ وَقَالَ الَّذِيْنَ اٰمَنُوْٓا اِنَّ الْخٰسِرِيْنَ الَّذِيْنَ خَسِرُوْٓا اَنْفُسَهُمْ وَاَهْلِيْهِمْ يَوْمَ الْقِيٰمَةِ ۗ اَلَآ اِنَّ الظّٰلِمِيْنَ فِيْ عَذَابٍ مُّقِيْمٍ ﴿٤٥﴾

46. ಅಲ್ಲಾಹನಿಗೆದುರಾಗಿ ಅವರ ಸಹಾಯಕ್ಕೆ ಬರಬಲ್ಲ ಯಾವ ರಕ್ಷಕರೂ ಅವರಿಗಿರಲಾರರು. ಅಲ್ಲಾಹನೇ ಯಾರನ್ನು ಪಥಭ್ರಷ್ಟಗೊಳಿಸಿರುವನೋ ಅವನ ಪಾಲಿಗೆ ರಕ್ಷಣೆಯ ಯಾವ ಮಾರ್ಗವೂ ಇಲ್ಲ.

وَمَا كَانَ لَهُمْ مِّنْ اَوْلِيَآءَ يَنْصُرُوْنَهُمْ مِّنْ دُوْنِ اللّٰهِ ۗ وَمَنْ يُّضْلِلِ اللّٰهُ فَمَا لَهٗ مِنْ سَبِيْلٍ ﴿٤٦﴾

12. ಇಲ್ಲಿಂದ 43ನೆಯ ಸೂಕ್ತದ ಕೊನೆಯ ತನಕದ ವಚನಗಳು ಹಿಂದಿನ ಸೂಕ್ತದ ವಿವರಣೆಯಾಗಿದೆ.

47. ಯಾವ ದಿನದ ನಿವಾರಣೆಗೆ ಅಲ್ಲಾಹನು ಯಾವುದೇ ಅವಕಾಶವನ್ನಿಟ್ಟಿಲ್ಲವೋ ಆ ದಿನವು ಬರುವುದಕ್ಕೆ ಮುಂಚೆ ನಿಮ್ಮ ಪ್ರಭುವಿನ ಕರೆಗೆ 'ಓ'ಗೊಡಿರಿ. ಅಂದು ನಿಮಗಾಗಿ ಯಾವುದೇ ಅಭಯಸ್ಥಾನ ಇರಲಾರದು-

اِسْتَجِيْبُوْا لِرَبِّكُمْ مِّنْ قَبْلِ اَنْ يَّاْتِيَ
يَوْمٌ لَّا مَرَدَّ لَهٗ مِنَ اللّٰهِ ؕ مَا لَكُمْ
مِّنْ مَّلْجَاٍ يَّوْمَىِٕذٍ وَّمَا لَكُمْ مِّنْ نَّكِيْرٍ ﴿۴۷﴾

48. ಮತ್ತು ನಿಮ್ಮ ಅವಸ್ಥೆಯನ್ನು ಬದಲಾಯಿಸಲು ಯತ್ನಿಸುವವನೂ ಯಾರೂ ಇರಲಾರನು.[13] ಹೀಗಿದ್ದೂ ಇವರು ವಿಮುಖರಾದರೆ ಸಂದೇಶವಾಹಕರೇ, ನಾವು ನಿಮ್ಮನ್ನು ಇವರ ಕಾವಲುಗಾರನಾಗಿಯಂತು ಕಳುಹಿಸಿಲ್ಲ. ನಿಮ್ಮ ಮೇಲಂತೂ ವಿಷಯವನ್ನು ತಲುಪಿಸಿ ಬಿಡುವ ಹೊಣೆಗಾರಿಕೆ ಮಾತ್ರ ಇದೆ. ಮಾನವನ ಅವಸ್ಥೆಯೇನೆಂದರೆ, ನಾವು ಅವನಿಗೆ ನಮ್ಮ ಕೃಪೆಯ ಸವಿಯನ್ನು ಉಣಿಸಿದಾಗ ಅವನು ಅದರಿಂದ ಉಬ್ಬಿಕೊಳ್ಳುತ್ತಾನೆ. ಆದರೆ ಅವನು ಸ್ವತಃ ಮಾಡಿದ ಕರ್ಮಗಳ ಯಾವುದಾದರೂ ಫಲವು ಸಂಕಷ್ಟದ ರೂಪದಲ್ಲಿ ಅವನ ಮೇಲೆ ಎರಗಿ ಬಿಟ್ಟಾಗ ಅವನು ಮಹಾ ಕೃತಘ್ನನಾಗಿ ಬಿಡುತ್ತಾನೆ.

فَاِنْ اَعْرَضُوْا فَمَاۤ اَرْسَلْنٰكَ عَلَيْهِمْ
حَفِيْظًا ؕ اِنْ عَلَيْكَ اِلَّا الْبَلٰغُ ؕ وَاِنَّاۤ
اِذَاۤ اَذَقْنَا الْاِنْسَانَ مِنَّا رَحْمَةً فَرِحَ
بِهَا ۚ وَاِنْ تُصِبْهُمْ سَيِّئَةٌ ۢبِمَا قَدَّمَتْ
اَيْدِيْهِمْ فَاِنَّ الْاِنْسَانَ كَفُوْرٌ ﴿۴۸﴾

49. ಅಲ್ಲಾಹನು ಭೂಮಿ-ಆಕಾಶಗಳ ಪ್ರಭುತ್ವದ ಒಡೆಯನು. ತಾನಿಚ್ಛಿಸಿದ್ದನ್ನು ಅವನು ಸೃಷ್ಟಿಸುತ್ತಾನೆ, ತಾನಿಚ್ಛಿಸಿದವರಿಗೆ ಹೆಣ್ಣು ಮಕ್ಕಳನ್ನು ಕೊಡುತ್ತಾನೆ, ತಾನಿಚ್ಛಿಸಿದವರಿಗೆ ಗಂಡು ಮಕ್ಕಳನ್ನು ಕೊಡುತ್ತಾನೆ,

لِلّٰهِ مُلْكُ السَّمٰوٰتِ وَالْاَرْضِ ؕ يَخْلُقُ
مَا يَشَآءُ ؕ يَهَبُ لِمَنْ يَّشَآءُ اِنَاثًا
وَّيَهَبُ لِمَنْ يَّشَآءُ الذُّكُوْرَ ﴿۴۹﴾

50. ತಾನಿಚ್ಛಿಸಿದವರಿಗೆ ಗಂಡು-ಹೆಣ್ಣುಗಳೆರಡನ್ನೂ ಸೇರಿಸಿ ಕೊಡುತ್ತಾನೆ, ತಾನಿಚ್ಛಿಸಿದವರನ್ನು ಬಂಜೆಯಾಗಿ ಮಾಡುತ್ತಾನೆ. ಅವನು ಸರ್ವಜ್ಞನೂ ಸರ್ವ ಸಮರ್ಥನೂ ಆಗಿರುತ್ತಾನೆ.

اَوْ يُزَوِّجُهُمْ ذُكْرَانًا وَّاِنَاثًا ۚ وَ
يَجْعَلُ مَنْ يَّشَآءُ عَقِيْمًا ؕ اِنَّهٗ
عَلِيْمٌ قَدِيْرٌ ﴿۵۰﴾

51. ಯಾವ ದಾಸನೂ ಅಲ್ಲಾಹನು ಅವನ ಜೊತೆ ಮುಖಾಮುಖಿ ಮಾತನಾಡುವಷ್ಟು ಸ್ಥಾನಮಾನವುಳ್ಳವನಲ್ಲ. ಅವನ ಮಾತು 'ವಹ್ಯ್'ನ (ಸೂಚನೆ) ರೂಪದಲ್ಲಿರುತ್ತದೆ[14] ಅಥವಾ ತೆರೆಯಮರೆಯಿಂದಾಗಿರುತ್ತದೆ[15] ಅಥವಾ ಅವನು ಯಾರಾದರೂ ದೂತ

وَمَا كَانَ لِبَشَرٍ اَنْ يُّكَلِّمَهُ اللّٰهُ اِلَّا
وَحْيًا اَوْ مِنْ وَّرَآئِ حِجَابٍ اَوْ يُرْسِلَ
رَسُوْلًا فَيُوْحِيَ بِاِذْنِهٖ مَا يَشَآءُ ؕ اِنَّهٗ

13. ಮೂಲದಲ್ಲಿ 'ಮಾಲಕುಮ್ ಮಿನ್ನಕೀರ್' ಎಂಬ ಪದ ಪ್ರಯೋಗವಾಗಿದೆ. ಈ ಉದ್ಧರಣೆಗೆ ಇತರ ಅನೇಕ ವಿವರಣೆಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ನೀವು ನಿಮ್ಮ ಕೃತ್ಯಗಳ ಪೈಕಿ ಯಾವುದನ್ನೂ ನಿರಾಕರಿಸಲಾರಿರಿ. ಎರಡನೆಯದಾಗಿ ನೀವು ವೇಷ ಬದಲಿಸಿಕೊಂಡು ಎಲ್ಲೂ ಅಡಗಲಾರಿರಿ. ಮೂರನೆಯದಾಗಿ ನಿಮ್ಮೊಡನೆ ಮಾಡಲಾಗುವ ಯಾವುದೇ ವರ್ತನೆಗೆ ನೀವು ಪ್ರತಿಭಟನೆ ಅಥವಾ ಅಸಮಾಧಾನ ವ್ಯಕ್ತಪಡಿಸಲಾರಿರಿ. ನಾಲ್ಕನೆಯದಾಗಿ ಯಾವ ಪರಿಸ್ಥಿತಿಯಲ್ಲಿ ನಿಮ್ಮನ್ನು ಸಿಲುಕಿಸಲಾಗಿದೆಯೋ ಅದನ್ನು ನೀವು ಬದಲಿಸಲಾರಿರಿ.

14. ಇಲ್ಲಿ 'ವಹ್ಯ್'ಯೆಂದರೆ ದಿವ್ಯಜ್ಞಾನ, ಜ್ಞಾನೋದಯ, ಮನಸ್ಸಿನಲ್ಲಿ ವಿಷಯ ಹೊಳೆಯುವಂತೆ ಮಾಡುವುದು, ಹ. ಇಬ್‌ರಾಹೀಮ್ ಮತ್ತು ಹ. ಯೂಸುಫ್‌ರಿಗೆ(ಅ) ತೋರಿಸಲಾದಂತೆ ಕನಸಿನಲ್ಲಿ ಯಾವುದನ್ನಾದರೂ ತೋರಿಸುವುದು ಇತ್ಯಾದಿಗಳಾಗಿವೆ.

15. ಅರ್ಥಾತ್- ದಾಸ ಒಂದು ಶಬ್ದ ಕೇಳುತ್ತಾನೆ. ಆದರೆ ಹೇಳುವವರು ಅವನಿಗೆ ಗೋಚರಿಸುವುದಿಲ್ಲ. ಮೂಸಾರಿಗೆ(ಅ) ಹೀಗೆಯೇ ತೂರ್

(ದೇವಚರ)ನನ್ನು ಕಳುಹಿಸುತ್ತಾನೆ ಮತ್ತು ಆ ದೂತನು ಅವನ ಆದೇಶದಂತೆ ಅವನು ಬಯಸಿದ್ದನ್ನು 'ವಹ್ಯ್' ಮಾಡುತ್ತಾನೆ.[16] ಅವನು ಮಹೋನ್ನತನೂ ಮಹಾಯುಕ್ತಿವಂತನೂ ಆಗಿರುತ್ತಾನೆ-

عَلِيٌّ حَكِيمٌ ۝٥١

52. ಮತ್ತು ಇದೇ ರೀತಿಯಲ್ಲಿ (ಸಂದೇಶವಾಹಕರೇ) ನಾವು ನಮ್ಮ ಅಪ್ಪಣೆಯಿಂದ ಒಂದು 'ರೂಹ'ನ್ನು ನಿಮ್ಮ ಕಡೆಗೆ ವಹ್ಯ್ ಮಾಡಿರುತ್ತೇವೆ.[17] ಗ್ರಂಥವೆಂದರೆ ಏನೆಂದೂ ಸತ್ಯವಿಶ್ವಾಸ ಎಂದರೆ ಏನೆಂದೂ ನಿಮಗೆ ಗೊತ್ತಿರಲಿಲ್ಲ. ಆದರೆ ಆ 'ರೂಹ'ನ್ನು ನಾವು ಒಂದು ಪ್ರಕಾಶವಾಗಿ ಮಾಡಿದೆವು. ಆ ಮೂಲಕ ನಾವು ನಮ್ಮ ದಾಸರ ಪೈಕಿ ನಾವಿಚ್ಛಿಸುವವರಿಗೆ ದಾರಿ ತೋರಿಸುತ್ತೇವೆ. ನಿಸ್ಸಂದೇಹವಾಗಿಯೂ ನೀವು ನೇರ ಮಾರ್ಗದ ಕಡೆಗೆ ಮಾರ್ಗ ದರ್ಶನ ಮಾಡುತ್ತಿರುವಿರಿ-

وَكَذَٰلِكَ أَوْحَيْنَا إِلَيْكَ رُوحًا مِّنْ أَمْرِنَا ۚ مَا كُنتَ تَدْرِي مَا الْكِتَابُ وَلَا الْإِيمَانُ وَلَٰكِن جَعَلْنَاهُ نُورًا نَّهْدِي بِهِ مَن نَّشَاءُ مِنْ عِبَادِنَا ۚ وَإِنَّكَ لَتَهْدِي إِلَىٰ صِرَاطٍ مُّسْتَقِيمٍ ۝٥٢

53. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವಿನ ಒಡೆಯನಾಗಿರುವ ಅಲ್ಲಾಹನ ಮಾರ್ಗದೆಡೆಗೆ. ಎಚ್ಚರಿಕೆ! ಎಲ್ಲ ವಿಷಯಗಳೂ ಕೊನೆಗೆ ಅಲ್ಲಾಹನೆಡೆಗೇ ಮರಳುತ್ತವೆ.

صِرَاطِ اللَّهِ الَّذِي لَهُ مَا فِي السَّمَاوَاتِ وَمَا فِي الْأَرْضِ ۗ أَلَا إِلَى اللَّهِ تَصِيرُ الْأُمُورُ ۝٥٣

---

ಪರ್ವತದ ತಪ್ಪಲಿನಲ್ಲಿ ಇದ್ದಕ್ಕಿದ್ದಂತೆ ಒಂದು ಶಬ್ದ ಕೇಳಿಸಿತು. ಆದರೆ ಹೇಳುವವನು ಅವರ ದೃಷ್ಟಿಯಿಂದ ಮರೆಯಾಗಿದ್ದನು.

16. ಇದು ಎಲ್ಲಾ ದಿವ್ಯಗ್ರಂಥಗಳನ್ನು ಪ್ರವಾದಿಗಳಿಗೆ ತಲಪಿಸಲಾದಂತಹ 'ವಹ್ಯ್'ಯ ಪ್ರಕಾರವಾಗಿದೆ.

17. ಇದೇ ರೀತಿಯಲ್ಲಿ ಎಂದರೆ ಕೊನೆಯ ವಿಧಾನದಂತೆ ಎಂದಲ್ಲ. ಬದಲಾಗಿ ಮೇಲಿನ ಸೂಕ್ತದಲ್ಲಿ ಪ್ರಸ್ತಾಪಿಸಲಾಗಿರುವ ಮೂರೂ ವಿಧಾನದಂತೆ ಎಂದಾಗಿದೆ. 'ರೂಹ್' ಎಂದರೆ 'ದಿವ್ಯವಾಣಿ' ಅಥವಾ ದಿವ್ಯವಾಣಿಯ ಮೂಲಕ ಪ್ರವಾದಿವರ್ಯರಿಗೆ(ಸ) ನೀಡಲಾದ ಬೋಧನೆ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹಾಮೀಮ್.

حٰمٓ ۚ ①

2. ಈ ಸುಸ್ಪಷ್ಟ ಗ್ರಂಥದಾಣೆ-

وَالْكِتٰبِ الْمُبِيْنِ ۙ ②

3. ನೀವು ಇದನ್ನು ಗ್ರಹಿಸಿಕೊಳ್ಳಲಿಕ್ಕಾಗಿ ನಾವು ಇದನ್ನು ಅರಬೀ ಭಾಷೆಯ ಕುರ್‌ಆನನ್ನಾಗಿ ಮಾಡಿರುತ್ತೇವೆ.[1]

اِنَّا جَعَلْنٰهُ قُرْءٰنًا عَرَبِيًّا لَّعَلَّكُمْ تَعْقِلُوْنَ ۚ ③

4. ವಾಸ್ತವದಲ್ಲಿ ಇದು 'ಉಮ್ಮುಲ್ ಕಿತಾಬ್'(ಮಾತೃ ಗ್ರಂಥ)ನಲ್ಲಿ ಲಿಖಿತವಿದೆ.[2] ನಮ್ಮಲ್ಲಿ ಅತ್ಯುನ್ನತ ಸ್ಥಾನವುಳ್ಳ ಮತ್ತು ಯುಕ್ತಿಭರಿತ ಗ್ರಂಥ.

وَاِنَّهٗ فِيْٓ اُمِّ الْكِتٰبِ لَدَيْنَا لَعَلِيٌّ حَكِيْمٌ ۗ ④

5. ನೀವು ಮಿತಿ ಮೀರಿದವರಾಗಿರುವ ಮಾತ್ರಕ್ಕೆ ನಾವು ಬೇಸರಗೊಂಡು ಈ ಬೋಧನೆಯನ್ನು ನಿಮ್ಮಲ್ಲಿಗೆ ಕಳುಹಿಸಿ ಕೊಡುವುದನ್ನು ಬಿಟ್ಟುಬಿಡಬೇಕೇ?

اَفَنَضْرِبُ عَنْكُمُ الذِّكْرَ صَفْحًا اَنْ كُنْتُمْ قَوْمًا مُّسْرِفِيْنَ ⑤

6. ಗತ ಜನಾಂಗಗಳಲ್ಲೂ ನಾವು ಆಗಾಗ ಪ್ರವಾದಿಗಳನ್ನು ಕಳುಹಿಸಿರುತ್ತೇವೆ.

وَكَمْ اَرْسَلْنَا مِنْ نَّبِيٍّ فِي الْاَوَّلِيْنَ ⑥

7. ಅವರ ಬಳಿಗೆ ಬಂದ ಯಾವ ಪ್ರವಾದಿಯನ್ನೂ ಅವರು ಅಪಹಾಸ್ಯ ಮಾಡದೆ ಬಿಟ್ಟದ್ದಿಲ್ಲ.

وَمَا يَاْتِيْهِمْ مِّنْ نَّبِيٍّ اِلَّا كَانُوْا بِهٖ يَسْتَهْزِءُوْنَ ⑦

1. ಈ ಗ್ರಂಥದ ಕರ್ತೃ 'ನಾವಾಗಿದ್ದೇವೆ', ಮುಹಮ್ಮದ್‌ರಲ್ಲ(ಸ) ಎಂದು ಕುರ್‌ಆನಿನ ಆಣೆ ಹಾಕಲಾಗಿದೆ. ಇದು 'ಸುಸ್ಪಷ್ಟ ಗ್ರಂಥ' ಎಂಬ ಕುರ್‌ಆನಿನ ಗುಣವಿಶೇಷತೆಯನ್ನು ಆಣೆ ಹಾಕಲು ಆರಿಸಲಾಗಿದೆ. ಈ ಗುಣವಿಶೇಷತೆಯೊಂದಿಗೆ 'ಕುರ್‌ಆನ್ ದಿವ್ಯವಾಣಿ'ಯಾಗಿದೆ ಎಂದು ಸ್ವತಃ ಆ ಗ್ರಂಥವೇ ಆಣೆ ಹಾಕುತ್ತಿದೆ. ಆ ಮೂಲಕ ಅದು ಸಾರುತ್ತಿರುವುದೇನೆಂದರೆ, "ಜನರೇ! ಈ ಸುಸ್ಪಷ್ಟ ಗ್ರಂಥ ನಿಮ್ಮ ಮುಂದೆ ಇದೆ. ಅದನ್ನು ಕಣ್ತೆರೆದು ನೋಡಿರಿ. ಅದರ ವಿಷಯಗಳು, ಬೋಧನೆಗಳು, ಭಾಷೆ ಇತ್ಯಾದಿಗಳೆಲ್ಲವೂ ಈ ಗ್ರಂಥದ ಕರ್ತೃ ವಿಶ್ವದೊಡೆಯನಲ್ಲದೆ ಬೇರಾರೂ ಅಲ್ಲ ಎಂಬ ವಾಸ್ತವಿಕತೆಯನ್ನು ದೃಢೀಕರಿಸುತ್ತಿವೆ.
2. 'ಉಮ್ಮುಲ್ ಕಿತಾಬ್' ಎಂದರೆ ಮೂಲಗ್ರಂಥ. ಅರ್ಥಾತ್ ಸಮಸ್ತ ಪ್ರವಾದಿಗಳ(ಅ) ಮೇಲೆ ಅವತೀರ್ಣಗೊಂಡ ಗ್ರಂಥಗಳಿಗೆ ಮೂಲಾಧಾರವಾದ

8. ಇವರಿಗಿಂತ ಅದೆಷ್ಟೋ ಅಧಿಕ ಬಲಶಾಲಿಗಳಾಗಿದ್ದವರನ್ನು ನಾವು ನಾಶಗೊಳಿಸಿ ಬಿಟ್ಟೆವು. ಗತ ಜನಾಂಗಗಳ ಉದಾಹರಣೆಗಳು ಗತಿಸಿ ಹೋಗಿವೆ.

فَأَهْلَكْنَا أَشَدَّ مِنْهُم بَطْشًا وَمَضَىٰ مَثَلُ الْأَوَّلِينَ ﴿٨﴾

9. ಭೂಮಿ-ಆಕಾಶಗಳನ್ನು ಸೃಷ್ಟಿಸಿದವನಾರೆಂದು ನೀವು ಇವರೊಡನೆ ಕೇಳಿದರೆ, ಅವುಗಳನ್ನು ಪ್ರಬಲನೂ ಸರ್ವಜ್ಞನೂ ಆದವನು ಸೃಷ್ಟಿಸಿದನೆಂದು ಇವರು ಹೇಳುವರು.

وَلَئِن سَأَلْتَهُم مَّنْ خَلَقَ السَّمَاوَاتِ وَالْأَرْضَ لَيَقُولُنَّ خَلَقَهُنَّ الْعَزِيزُ الْعَلِيمُ ﴿٩﴾

10. ನಿಮಗಾಗಿ ಈ ಭೂಮಿಯನ್ನು ತೊಟ್ಟಿಲಾಗಿ ಮಾಡಿದವನು ಮತ್ತು ನಿಮಗೆ ಗುರಿ ಮುಟ್ಟುವಂತಾಗಲು ನಿಮಗಾಗಿ ಮಾರ್ಗಗಳನ್ನು ಮಾಡಿದವನೂ ಅವನೇ.[3]

الَّذِي جَعَلَ لَكُمُ الْأَرْضَ مَهْدًا وَجَعَلَ لَكُمْ فِيهَا سُبُلًا لَّعَلَّكُمْ تَهْتَدُونَ ﴿١٠﴾

11. ಅವನು ಆಕಾಶದಿಂದ ಒಂದು ನಿಶ್ಚಿತ ಪ್ರಮಾಣದಲ್ಲಿ ನೀರನ್ನು ಸುರಿಸಿದನು ಮತ್ತು ನಾವು ಅದರ ಮೂಲಕ ಮೃತ ಭೂಮಿಯನ್ನು ಜೀವಂತಗೊಳಿಸಿದೆವು. ಇದೇ ರೀತಿಯಲ್ಲಿ ಒಂದು ದಿನ ನೀವು ಭೂಮಿಯಿಂದ ಹೊರತರಲ್ಪಡುವಿರಿ.

وَالَّذِي نَزَّلَ مِنَ السَّمَاءِ مَاءً بِقَدَرٍ فَأَنشَرْنَا بِهِ بَلْدَةً مَّيْتًا ۚ كَذَٰلِكَ تُخْرَجُونَ ﴿١١﴾

12. ಇವೆಲ್ಲ ಜೋಡಿಗಳನ್ನು ಸೃಷ್ಟಿಸಿದವನು ಅವನೇ ಮತ್ತು ಅವನೇ ನಿಮಗಾಗಿ ನಾವೆಗಳನ್ನೂ ಪ್ರಾಣಿಗಳನ್ನೂ ವಾಹನಗಳಾಗಿ ಮಾಡಿದನು.

وَالَّذِي خَلَقَ الْأَزْوَاجَ كُلَّهَا وَجَعَلَ لَكُم مِّنَ الْفُلْكِ وَالْأَنْعَامِ مَا تَرْكَبُونَ ﴿١٢﴾

13. (ಇದು) ನೀವು ಅವುಗಳ ಬೆನ್ನ ಮೇಲೆ ಸವಾರಿ ಮಾಡುವಂತಾಗಲಿಕ್ಕಾಗಿ ಮತ್ತು ಅವುಗಳ ಮೇಲೆ ಕುಳಿತಾಗ, ನಿಮ್ಮ ಪ್ರಭುವಿನ ಉಪಕಾರವನ್ನು ಸ್ಮರಿಸುತ್ತಾ, ಹೀಗೆ ಹೇಳುವಂತಾಗಲಿಕ್ಕಾಗಿ, "ಇವುಗಳನ್ನು ನಮಗಾಗಿ ನಿಯಂತ್ರಿಸಿ ಕೊಟ್ಟವನು ಪರಮ ಪಾವನನು. ಅನ್ಯಥಾ ನಾವು ಇವುಗಳನ್ನು ಹತೋಟಿಗೆ ತರಲು ಶಕ್ತರಾಗಿರಲಿಲ್ಲ-

لِتَسْتَوُوا عَلَىٰ ظُهُورِهِ ثُمَّ تَذْكُرُوا نِعْمَةَ رَبِّكُمْ إِذَا اسْتَوَيْتُمْ عَلَيْهِ وَتَقُولُوا سُبْحَانَ الَّذِي سَخَّرَ لَنَا هَٰذَا وَمَا كُنَّا لَهُ مُقْرِنِينَ ﴿١٣﴾

14. ಮತ್ತು ನಮಗೊಂದು ದಿನ ನಮ್ಮ ಪ್ರಭುವಿನ ಕಡೆಗೇ ಮರಳಲಿಕ್ಕಿದೆ."

وَإِنَّا إِلَىٰ رَبِّنَا لَمُنقَلِبُونَ ﴿١٤﴾

ಗ್ರಂಥ. ಇದಕ್ಕೆ ಬುರೂಜ್ ಅಧ್ಯಾಯದಲ್ಲಿ 'ಲೌಹಿನ್ ಮಹ್‌ಫೂಝ್' ಎಂಬ ಪದ ಬಳಕೆಯಾಗಿದೆ. ಅರ್ಥಾತ್ ಬರೆದದ್ದನ್ನು ಅಳಿಸಲಾಗದ ಮತ್ತು ಎಲ್ಲಾ ವಿಧದ ಹಸ್ತಕ್ಷೇಪಗಳಿಂದ ಸುರಕ್ಷಿತವಾದ ಗ್ರಂಥ.

3. ಪರ್ವತಗಳ ನಡು-ನಡುವೆ ಇರುವ ಕಣಿವೆಗಳು. ಗುಡ್ಡಗಾಡು ಮತ್ತು ಬಯಲು ಪ್ರದೇಶದಲ್ಲಿ ಹರಿಯುವ ನದಿಗಳೆಲ್ಲವೂ ಅಲ್ಲಾಹನು ಭೂಮುಖದಲ್ಲಿ ಮಾಡಿರುವ ನೈಸರ್ಗಿಕ ದಾರಿಗಳಾಗಿವೆ. ಅವುಗಳ ನೆರವಿನಿಂದ ಮಾನವ ಭೂಮಿಯಾದ್ಯಂತ ಹರಡಿದ್ದಾನೆ. ಭೂಮುಖವನ್ನು ಸಮಾನ ರೀತಿಯಲ್ಲಿರಿಸದೆ ಅದರಲ್ಲಿ ತರತರದ ವಿವಿಧತೆಯ ಕುರುಹುಗಳನ್ನಿರಿಸಿರುವುದೂ ಅಲ್ಲಾಹನ ಅನುಗ್ರಹವಾಗಿದೆ. ಅವುಗಳ ಆಧಾರದಲ್ಲಿ ಮಾನವ ವಿಭಿನ್ನ ಪ್ರದೇಶಗಳನ್ನು ಗುರುತಿಸುತ್ತಾನೆ ಹಾಗೂ ಎರಡು ಪ್ರದೇಶಗಳ ನಡುವಿನ ವ್ಯತ್ಯಾಸವನ್ನು ಮನಗಾಣುತ್ತಾನೆ.

15. (ಇದನ್ನೆಲ್ಲ ತಿಳಿದಿರುತ್ತ) ಇವರು ಅವನ ದಾಸರಲ್ಲಿ ಕೆಲವರನ್ನು ಅವನ ಅಂಗವಾಗಿ ಮಾಡಿ ಬಿಟ್ಟರು. ವಾಸ್ತವದಲ್ಲಿ ಮಾನವನು ಪ್ರತ್ಯಕ್ಷ ಕೃತಘ್ನನಾಗಿರುತ್ತಾನೆ.

وَجَعَلُوا لَهُ مِنْ عِبَادِهِ جُزْءًا ۚ إِنَّ الْإِنسَانَ لَكَفُورٌ مُّبِينٌ ﴿١٥﴾

16. ಅಲ್ಲಾಹನು ತನ್ನ ಸೃಷ್ಟಿಯಿಂದ ತನಗಾಗಿ ಪುತ್ರಿಯರನ್ನು ಆಯ್ದುಕೊಂಡು ನಿಮಗೆ ಪುತ್ರರನ್ನು ಪ್ರದಾನ ಮಾಡಿರುವನೇ?

أَمِ اتَّخَذَ مِمَّا يَخْلُقُ بَنَاتٍ وَأَصْفَاكُم بِالْبَنِينَ ﴿١٦﴾

17. ಇವರು ಯಾವ ಸಂತತಿಯನ್ನು ರಹ್ಮಾನನದೆಂದು (ಅಲ್ಲಾಹನದೆಂದು) ಹೇಳುತ್ತಾರೋ ಅದರ ಜನನದ ಸುವಾರ್ತೆಯನ್ನು ಸ್ವತಃ ಇವರ ಪೈಕಿ ಯಾರಿಗಾದರೂ ನೀಡಲಾದಾಗ ಅವನ ಮುಖ ಕಪ್ಪಿಡುತ್ತದೆ ಮತ್ತು ಅವನು ದುಃಖತಪ್ತನಾಗಿ ಬಿಡುತ್ತಾನೆ.

وَإِذَا بُشِّرَ أَحَدُهُم بِمَا ضَرَبَ لِلرَّحْمَٰنِ مَثَلًا ظَلَّ وَجْهُهُ مُسْوَدًّا وَهُوَ كَظِيمٌ ﴿١٧﴾

18. ಅಲ್ಲಾಹನ ಪಾಲಿಗೆ ಆಭರಣಗಳಲ್ಲಿ ಸಾಕಲ್ಪಡುವ ಹಾಗೂ ವಾದ-ವಿವಾದದಲ್ಲಿ ತನ್ನ ಮನದಿಂಗಿತವನ್ನು ಚೆನ್ನಾಗಿ ವ್ಯಕ್ತಗೊಳಿಸಲಿಕ್ಕೂ ಸಾಧ್ಯವಾಗದ ಸಂತತಿ ಬಂದಿತೇ?

أَوَمَن يُنَشَّأُ فِي الْحِلْيَةِ وَهُوَ فِي الْخِصَامِ غَيْرُ مُبِينٍ ﴿١٨﴾

19. ಇವರು ರಹ್ಮಾನನ ಆಪ್ತ ದಾಸರಾಗಿರುವ ದೇವಚರರನ್ನು ಸ್ತ್ರೀಯರೆಂದು ಪರಿಗಣಿಸಿಕೊಂಡರು. ಅವರ ಶರೀರ ರಚನೆಯನ್ನು ಇವರು ಕಂಡಿದ್ದಾರೆಯೇ? ಇವರ ಸಾಕ್ಷಿಯನ್ನು ಬರೆದಿರಿಸಿಕೊಳ್ಳಲಾಗುವುದು ಮತ್ತು ಇವರು ಇದಕ್ಕೆ ಉತ್ತರ ಕೊಡಬೇಕಾಗುವುದು.

وَجَعَلُوا الْمَلَائِكَةَ الَّذِينَ هُمْ عِبَادُ الرَّحْمَٰنِ إِنَاثًا ۚ أَشَهِدُوا خَلْقَهُمْ ۚ سَتُكْتَبُ شَهَادَتُهُمْ وَيُسْأَلُونَ ﴿١٩﴾

20. "(ನಾವು ಅವರನ್ನು ಆರಾಧಿಸಬಾರದೆಂದು) ರಹ್ಮಾನನು ಇಚ್ಛಿಸುತ್ತಿದ್ದರೆ ನಾವೆಂದೂ ಅವರನ್ನು ಆರಾಧಿಸುತ್ತಿರಲಿಲ್ಲ" ಎಂದು ಅವರು ಹೇಳುತ್ತಾರೆ.[4] ಇವರಿಗೆ ಇದರ ವಾಸ್ತವಿಕತೆ ಸ್ವಲ್ಪವೂ ತಿಳಿದಿಲ್ಲ. ಇವರು ಕೇವಲ ಊಹಿಸುತ್ತಿದ್ದಾರಷ್ಟೆ.

وَقَالُوا لَوْ شَاءَ الرَّحْمَٰنُ مَا عَبَدْنَاهُم ۗ مَّا لَهُم بِذَٰلِكَ مِنْ عِلْمٍ ۖ إِنْ هُمْ إِلَّا يَخْرُصُونَ ﴿٢٠﴾

21. (ದೇವಚರರನ್ನು ಆರಾಧಿಸುವ ಈ ಕೃತ್ಯಕ್ಕೆ ಆಧಾರವಾಗಿ) ಯಾವುದಾದರೂ ಗ್ರಂಥವನ್ನು ನಾವು ಇವರಿಗೆ ನೀಡಿದ್ದುಂಟೇ?

أَمْ آتَيْنَاهُمْ كِتَابًا مِّن قَبْلِهِ فَهُم بِهِ مُسْتَمْسِكُونَ ﴿٢١﴾

22. ಇಲ್ಲ, ವಾಸ್ತವದಲ್ಲಿ ಇವರು ನಮ್ಮ ಪೂರ್ವಜರು ಒಂದು

بَلْ قَالُوا إِنَّا وَجَدْنَا آبَاءَنَا عَلَىٰ

4. ಹೀಗೆ ಅವರು ತಮ್ಮ ಪಥಭ್ರಷ್ಟತೆಯನ್ನು ಅದೃಷ್ಟದ ಆಧಾರದಲ್ಲಿ ಸಮರ್ಥಿಸುತ್ತಿದ್ದರು. ಎಲ್ಲಾ ಕಾಲಗಳಲ್ಲೂ ದುಷ್ಕೃತ್ಯವೆಸಗುವವರ ಧೋರಣೆ ಇದುವೇ ಆಗಿತ್ತು.

ಪದ್ಧತಿಯಲ್ಲಿದ್ದುದಾಗಿ ನಾವು ಕಂಡಿದ್ದೇವೆ ಮತ್ತು ನಾವು ಅವರ ಹೆಜ್ಜೆ ಗುರುತುಗಳನ್ನೇ ಅನುಸರಿಸುತ್ತೇವೆ ಎಂದು ಹೇಳುತ್ತಾರೆ.

أُمَّةٍ وَّإِنَّا عَلَىٰٓ ءَاثَٰرِهِم مُّهۡتَدُونَ ٢٢

23. ಈ ರೀತಿ ನಿಮಗಿಂತ ಮುಂಚೆ ನಾವು ಎಚ್ಚರಿಕೆ ನೀಡುವವರನ್ನು ಕಳುಹಿಸಿದ ಪ್ರತಿಯೊಂದು ನಾಡಿನಲ್ಲೂ ಅದರ ಅನುಕೂಲಸ್ಥ ಜನರು, "ನಮ್ಮ ಪೂರ್ವಜರು ಒಂದು ಪದ್ಧತಿಯಲ್ಲಿದ್ದುದಾಗಿ ನಾವು ಕಂಡಿದ್ದೇವೆ ಮತ್ತು ನಾವು ಅವರ ಹೆಜ್ಜೆ ಗುರುತುಗಳನ್ನೇ ಅನುಸರಿಸುತ್ತೇವೆ" ಎಂದೇ ಹೇಳಿದ್ದರು.

وَكَذَٰلِكَ مَآ أَرۡسَلۡنَا مِن قَبۡلِكَ فِي قَرۡيَةٍ مِّن نَّذِيرٍ إِلَّا قَالَ مُتۡرَفُوهَآ إِنَّا وَجَدۡنَآ ءَابَآءَنَا عَلَىٰٓ أُمَّةٍ وَّإِنَّا عَلَىٰٓ ءَاثَٰرِهِم مُّقۡتَدُونَ ٢٣

24. ಪ್ರತಿಯೊಬ್ಬ ಪ್ರವಾದಿಯೂ ಅವರೊಡನೆ, "ನೀವು ನಿಮ್ಮ ಪೂರ್ವಿಕರನ್ನು ಕಂಡಿದ್ದ ಆ ಮಾರ್ಗಕ್ಕಿಂತ ಹೆಚ್ಚು ಸರಿಯಾದ ಮಾರ್ಗವನ್ನು ನಾನು ನಿಮಗೆ ತೋರಿಸಿಕೊಟ್ಟರೆ ಆಗಲೂ ನೀವು ಅದೇ ಮಾರ್ಗದಲ್ಲಿ ನಡೆಯುವಿರಾ?" ಎಂದು ಕೇಳಿದರು. ಅವರು ಎಲ್ಲ ಪ್ರವಾದಿಗಳಿಗೂ "ನೀವು ಯಾವ ಧರ್ಮದೆಡೆಗೆ ಆಹ್ವಾನಿಸಲು ಕಳುಹಿಸಲ್ಪಟ್ಟಿರುವಿರೋ ನಾವು ಅದನ್ನು ನಿರಾಕರಿಸುವವರಾಗಿದ್ದೇವೆ" ಎಂಬ ಉತ್ತರವನ್ನೇ ಕೊಟ್ಟರು.

قَٰلَ أَوَلَوۡ جِئۡتُكُم بِأَهۡدَىٰ مِمَّا وَجَدتُّمۡ عَلَيۡهِ ءَابَآءَكُمۡ قَالُوٓاْ إِنَّا بِمَآ أُرۡسِلۡتُم بِهِۦ كَٰفِرُونَ ٢٤

25. ಕೊನೆಗೆ ನಾವು ಅವರನ್ನು ಶಿಕ್ಷಿಸಿದೆವು ಮತ್ತು ಸುಳ್ಳಾಗಿಸುವವರ ಗತಿ ಏನಾಯಿತೆಂಬುದನ್ನು ನೋಡಿಕೊಳ್ಳಿರಿ.

فَٱنتَقَمۡنَا مِنۡهُمۡ فَٱنظُرۡ كَيۡفَ كَانَ عَٰقِبَةُ ٱلۡمُكَذِّبِينَ ٢٥

26. ಇಬ್‌ರಾಹೀಮರು ತಮ್ಮ ತಂದೆಯೊಡನೆ ಹಾಗೂ ತಮ್ಮ ಜನಾಂಗದೊಡನೆ, ಹೇಳಿದ್ದ ಸಂದರ್ಭವನ್ನು ಸ್ಮರಿಸಿರಿ- "ನೀವು ಯಾರ ಆರಾಧನೆ ಮಾಡುತ್ತೀರೋ ಅವರೊಂದಿಗೆ ನನಗೆ ಯಾವ ಸಂಬಂಧವೂ ಇಲ್ಲ-

وَإِذۡ قَالَ إِبۡرَٰهِيمُ لِأَبِيهِ وَقَوۡمِهِۦٓ إِنَّنِي بَرَآءٌ مِّمَّا تَعۡبُدُونَ ٢٦

27. ನನಗೆ ಸಂಬಂಧವಿರುವುದು ನನ್ನನ್ನು ಸೃಷ್ಟಿಸಿದವನೊಂದಿಗೆ ಮಾತ್ರ. ಅವನೇ ನನಗೆ ಮಾರ್ಗದರ್ಶನ ಮಾಡುವನು".

إِلَّا ٱلَّذِي فَطَرَنِي فَإِنَّهُۥ سَيَهۡدِينِ ٢٧

28. ಇಬ್‌ರಾಹೀಮರು ಇದೇ ವಚನವನ್ನು ತಮ್ಮ ಬಳಿಕ ತಮ್ಮ ಸಂತತಿಗೆ ಬಿಟ್ಟು ಹೋದರು- ಅವರು ಅದರ ಕಡೆಗೆ ಮರಳುವಂತಾಗಲು.[5]

وَجَعَلَهَا كَلِمَةً بَاقِيَةً فِي عَقِبِهِۦ لَعَلَّهُمۡ يَرۡجِعُونَ ٢٨

5. ಅರ್ಥಾತ್- ಸನ್ಮಾರ್ಗದಿಂದ ಸ್ವಲ್ಪವಾದರೂ ಪಾದ ವಿಚಲಿತವಾದರೆ ಈ ವಚನ ಅವರ ಮಾರ್ಗದರ್ಶನಕ್ಕೆ ಸಿದ್ಧವಿರುತ್ತದೆ. ಆದ್ದರಿಂದ ಅವರು ಇದರೆಡೆಗೇ ಮರಳಬೇಕಾಗಿದೆ. ಕುರೈಶರ ಪೈಕಿಯ ಸತ್ಯನಿಷೇಧಿಗಳು ಪೂರ್ವಜರ ಅನುಸರಣೆ ಮಾಡುವಾಗಲೂ ಇಬ್‌ರಾಹೀಮ್ ಮತ್ತು ಇಸ್ಮಾಈಲ್‌ರಂತಹ(ಅ) ಅತ್ಯುತ್ತಮ ಪೂರ್ವಜರ ಬದಲು ಕೆಟ್ಟ ಪೂರ್ವಜರನ್ನು ಅನುಸರಿಸಿದರು. ಈ ಬಗ್ಗೆ ಅವರಲ್ಲಿ ನಾಚಿಕೆ ಹುಟ್ಟಿಸುವ ಉದ್ದೇಶದಿಂದ ಈ ಘಟನೆಯನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ.

29. (ಇಷ್ಟಾಗಿಯೂ ಇವರು ಇತರರ ದಾಸ್ಯ ಮಾಡಲಾರಂಭಿಸಿದಾಗ ನಾನು ಇವರನ್ನು ಅಳಿಸಿ ಬಿಡಲಿಲ್ಲ) ಬದಲಾಗಿ ನಾನು ಇವರಿಗೆ ಮತ್ತು ಇವರ ಪೂರ್ವಜರಿಗೆ ಇವರ ಬಳಿ ಸತ್ಯ ಹಾಗೂ ಸುವ್ಯಕ್ತವಾಗಿ ವಿವರಿಸಿ ಹೇಳುವ ಸಂದೇಶವಾಹಕ ಬರುವವರೆಗೂ ಜೀವನ ಸಾಧನವನ್ನು ಕೊಡುತ್ತಲೇ ಇದ್ದೆನು.

بَلْ مَتَّعْتُ هٰٓؤُلَآءِ وَاٰبَآءَهُمْ حَتّٰى جَآءَهُمُ الْحَقُّ وَرَسُوْلٌ مُّبِيْنٌ ۝٢٩

30. ಆದರೆ ಇವರ ಬಳಿಗೆ ಆ ಸತ್ಯವು ಬಂದಾಗ ಇವರು, "ಇದಂತು ಇಂದ್ರಜಾಲ. ನಾವಿದನ್ನು ನಿರಾಕರಿಸುತ್ತೇವೆ" ಎಂದು ಹೇಳಿ ಬಿಟ್ಟರು.

وَلَمَّا جَآءَهُمُ الْحَقُّ قَالُوْا هٰذَا سِحْرٌ وَّاِنَّا بِهٖ كٰفِرُوْنَ ۝٣٠

31. ಈ ಕುರ್‌ಆನನ್ನು ಎರಡು ನಗರಗಳ ದೊಡ್ಡವರ ಪೈಕಿ ಯಾರಾದರೊಬ್ಬರ ಮೇಲೆ ಅವತೀರ್ಣಗೊಳಿಸಲಿಲ್ಲವೇಕೆ? ಎಂದು ಕೇಳುತ್ತಾರೆ.[6]

وَقَالُوْا لَوْلَا نُزِّلَ هٰذَا الْقُرْاٰنُ عَلٰى رَجُلٍ مِّنَ الْقَرْيَتَيْنِ عَظِيْمٍ ۝٣١

32. ನಿಮ್ಮ ಪ್ರಭುವಿನ ಕೃಪೆಯನ್ನು ವಿತರಿಸುವವರು ಇವರೇನು? ಲೌಕಿಕ ಜೀವನದಲ್ಲಿ ಇವರ ಉಪಜೀವನ ಸಾಧನಗಳನ್ನು ನಾವು ಇವರ ನಡುವೆ ಹಂಚಿದ್ದೇವೆ ಮತ್ತು ಇವರು ಪರಸ್ಪರರಿಂದ ಸೇವೆ ಪಡೆಯುವಂತಾಗಲು ನಾವು ಇವರಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅನೇಕ ಮೇಲ್ಮೆ ನೀಡಿರುವೆವು. ನಿಮ್ಮ ಪ್ರಭುವಿನ ಕೃಪೆಯು (ಪ್ರವಾದಿತ್ವವು) ಇವರು (ಶ್ರೀಮಂತರು) ಶೇಖರಿಸುತ್ತಿರುವ ಸಂಪತ್ತಿಗಿಂತ ಅಧಿಕ ಬೆಲೆಯುಳ್ಳದ್ದಾಗಿದೆ.

اَهُمْ يَقْسِمُوْنَ رَحْمَتَ رَبِّكَ ۗ نَحْنُ قَسَمْنَا بَيْنَهُمْ مَّعِيْشَتَهُمْ فِى الْحَيٰوةِ الدُّنْيَا وَرَفَعْنَا بَعْضَهُمْ فَوْقَ بَعْضٍ دَرَجٰتٍ لِّيَتَّخِذَ بَعْضُهُمْ بَعْضًا سُخْرِيًّا ۗ وَرَحْمَتُ رَبِّكَ خَيْرٌ مِّمَّا يَجْمَعُوْنَ ۝٣٢

33-35. ಎಲ್ಲರೂ ಒಂದೇ ಸಮುದಾಯವಾಗಿ ಬಿಡುವರೆಂಬ ಭಯವಿಲ್ಲದಿರುತ್ತಿದ್ದರೆ, ನಾವು "ರಹ್ಮಾನನನ್ನು ನಿರಾಕರಿಸುವವರ ಮನೆಗಳ ಮಾಡುಗಳನ್ನೂ ಅವರು ತಮ್ಮ ಮಾಳಿಗೆ(ಉಪ್ಪರಿಗೆ)ಗಳಿಗೇರುವ ಮೆಟ್ಟಲುಗಳನ್ನೂ ಅವರ ಬಾಗಿಲುಗಳನ್ನೂ ಅವರು ಒರಗಿ ಕುಳಿತುಕೊಳ್ಳುವ ಪೀಠಗಳನ್ನೂ ಎಲ್ಲವನ್ನೂ ಬೆಳ್ಳಿ ಬಂಗಾರಗಳನ್ನಾಗಿ ಮಾಡಿ ಬಿಡುತ್ತಿದ್ದೆವು. ಇದಂತು ಕೇವಲ ಲೌಕಿಕ ಜೀವನದ ಸಂಪತ್ತಾಗಿದೆ ಮತ್ತು ಪರಲೋಕವು ನಿಮ್ಮ ಪ್ರಭುವಿನ ಬಳಿ ಧರ್ಮನಿಷ್ಠರಿಗಾಗಿ ಮಾತ್ರ ಇದೆ."

وَلَوْلَآ اَنْ يَّكُوْنَ النَّاسُ اُمَّةً وَّاحِدَةً لَّجَعَلْنَا لِمَنْ يَّكْفُرُ بِالرَّحْمٰنِ لِبُيُوْتِهِمْ سُقُفًا مِّنْ فِضَّةٍ وَّمَعَارِجَ عَلَيْهَا يَظْهَرُوْنَ ۝٣٣ وَلِبُيُوْتِهِمْ اَبْوَابًا وَّسُرُرًا عَلَيْهَا يَتَّكِـُٔوْنَ ۝٣٤ وَزُخْرُفًا ۗ وَاِنْ كُلُّ ذٰلِكَ لَمَّا مَتَاعُ الْحَيٰوةِ الدُّنْيَا ۗ وَالْاٰخِرَةُ عِنْدَ رَبِّكَ لِلْمُتَّقِيْنَ ۝٣٥

6. ಎರಡೂ ನಗರಗಳೆಂದರೆ ಮಕ್ಕಾ ಮತ್ತು ತಾಯಿಫ್. ಪ್ರವಾದಿಯನ್ನು ಕಳುಹಿಸಿ ಅವರ ಮೇಲೆ ಗ್ರಂಥ ಅವತೀರ್ಣಗೊಳಿಸುವ ಇರಾದೆ ಅಲ್ಲಾಹನಿಗೆ ಇದ್ದಿದ್ದರೆ ನಮ್ಮ ಈ ಎರಡು ಕೇಂದ್ರೀಯ ನಗರಗಳಲ್ಲಿರುವ ಯಾರಾದರೊಬ್ಬ ದೊಡ್ಡ ವ್ಯಕ್ತಿಯನ್ನು ಈ ಉದ್ದೇಶಕ್ಕಾಗಿ ಆರಿಸುತ್ತಿದ್ದ ಎಂಬುದು ಸತ್ಯನಿಷೇಧಿಗಳ ವಾದವಾಗಿತ್ತು.

36. ರಹ್ಮಾನನ 'ಸ್ಮರಣೆ'ಯ ಬಗ್ಗೆ ಅನಾಸ್ಥೆ ವಹಿಸುವವನ ಮೇಲೆ ನಾವೊಬ್ಬ ಶೈತಾನನನ್ನು ನೇಮಿಸಿ ಬಿಡುತ್ತೇವೆ ಮತ್ತು ಅವನು ಆತನ ಆಪ್ತಮಿತ್ರನಾಗಿ ಬಿಡುತ್ತಾನೆ.

وَمَنْ يَّعْشُ عَنْ ذِكْرِ الرَّحْمٰنِ نُقَيِّضْ لَهٗ شَيْطٰنًا فَهُوَ لَهٗ قَرِيْنٌ ﴿٣٦﴾

37. ಈ ಶೈತಾನರು ಇಂತಹವರನ್ನು ಸನ್ಮಾರ್ಗದಿಂದ ತಡೆಯುತ್ತಾರೆ ಮತ್ತು ನಾವು ಸನ್ಮಾರ್ಗದಲ್ಲೇ ಸಾಗುತ್ತಿದ್ದೇವೆಂದು ಅವರು ತಮ್ಮಷ್ಟಕ್ಕೆ ತಿಳಿದುಕೊಂಡಿರುತ್ತಾರೆ.

وَاِنَّهُمْ لَيَصُدُّوْنَهُمْ عَنِ السَّبِيْلِ وَيَحْسَبُوْنَ اَنَّهُمْ مُّهْتَدُوْنَ ﴿٣٧﴾

38. ಕೊನೆಗೆ ಈ ವ್ಯಕ್ತಿ ನಮ್ಮ ಬಳಿಗೆ ಬಂದಾಗ ತನ್ನ ಶೈತಾನನೊಡನೆ, "ಅಯ್ಯೋ! ನನ್ನ ಮತ್ತು ನಿನ್ನ ಮಧ್ಯೆ ಪೂರ್ವ ಪಶ್ಚಿಮಗಳ ಅಂತರವಿರುತ್ತಿದ್ದರೆ! ನೀನಂತು ಅತ್ಯಂತ ನಿಕೃಷ್ಟ ಸಂಗಾತಿಯಾಗಿ ಬಿಟ್ಟೆ" ಎಂದು ಹೇಳುವನು.

حَتّٰٓى اِذَا جَآءَنَا قَالَ يٰلَيْتَ بَيْنِيْ وَبَيْنَكَ بُعْدَ الْمَشْرِقَيْنِ فَبِئْسَ الْقَرِيْنُ ﴿٣٨﴾

39. ಆಗ ಇವರೊಡನೆ- "ನೀವು ಅಕ್ರಮವೆಸಗಿ ಬಿಟ್ಟಿರುವಾಗ, ಇಂದು ಯಾತನೆಯಲ್ಲಿ ನೀವು ಮತ್ತು ನಿಮ್ಮ ಶೈತಾನರು ಸಮಾನ ಪಾಲುದಾರರೆಂಬುದು ನಿಮಗೇನೂ ಫಲಕಾರಿಯಲ್ಲ" ಎನ್ನಲಾಗುವುದು.

وَلَنْ يَّنْفَعَكُمُ الْيَوْمَ اِذْ ظَّلَمْتُمْ اَنَّكُمْ فِي الْعَذَابِ مُشْتَرِكُوْنَ ﴿٣٩﴾

40. ಸಂದೇಶವಾಹಕರೇ, ನೀವೇನು ಕಿವುಡರಿಗೆ ಕೇಳಿಸುವಿರಾ? ಅಥವಾ ಕುರುಡರಿಗೆ ಮತ್ತು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುವವರಿಗೆ ಮಾರ್ಗದರ್ಶನ ನೀಡುವಿರಾ?

اَفَاَنْتَ تُسْمِعُ الصُّمَّ اَوْ تَهْدِي الْعُمْيَ وَمَنْ كَانَ فِيْ ضَلٰلٍ مُّبِيْنٍ ﴿٤٠﴾

41-42. ಈಗ ನಾವು ನಿಮ್ಮನ್ನು ಈ ಲೋಕದಿಂದ ಎತ್ತಿಕೊಂಡರೂ ಅಥವಾ ನಾವು ಇವರಿಗೆ ವಾಗ್ದಾನವಿತ್ತಿರುವ ಇವರ ಅಂತಿಮ ಗತಿಯನ್ನು ನಿಮಗೆ ಕಣ್ಣಾರೆ ತೋರಿಸಿದರೂ ನಾವು ಇವರಿಗೆ ಶಿಕ್ಷೆಯನ್ನಂತೂ ಕೊಡಲೇಬೇಕಾಗಿದೆ. ನಮಗೆ ಇವರ ಮೇಲೆ ಸಂಪೂರ್ಣ ನಿಯಂತ್ರಣವಿದೆ.

فَاِمَّا نَذْهَبَنَّ بِكَ فَاِنَّا مِنْهُمْ مُّنْتَقِمُوْنَ ﴿٤١﴾ اَوْ نُرِيَنَّكَ الَّذِيْ وَعَدْنٰهُمْ فَاِنَّا عَلَيْهِمْ مُّقْتَدِرُوْنَ ﴿٤٢﴾

43. ಏನಿದ್ದರೂ ನೀವು 'ದಿವ್ಯವಾಣಿ' ಮೂಲಕ ನಿಮ್ಮ ಬಳಿಗೆ ಕಳುಹಿಸಲಾಗಿರುವ ಈ ಗ್ರಂಥವನ್ನು ಭದ್ರವಾಗಿ ಹಿಡಿದುಕೊಳ್ಳಿರಿ. ಖಂಡಿತವಾಗಿಯೂ ನೀವು ನೇರ ಮಾರ್ಗದಲ್ಲಿದ್ದೀರಿ.

فَاسْتَمْسِكْ بِالَّذِيْٓ اُوْحِيَ اِلَيْكَ اِنَّكَ عَلٰى صِرَاطٍ مُّسْتَقِيْمٍ ﴿٤٣﴾

44. ವಾಸ್ತವದಲ್ಲಿ ಈ ಗ್ರಂಥವು ನಿಮಗೂ ನಿಮ್ಮ ಜನಾಂಗಕ್ಕೂ

وَاِنَّهٗ لَذِكْرٌ لَّكَ وَلِقَوْمِكَ وَسَوْفَ

تُسْـَٔلُونَ ﴿٤٤﴾

ಒಂದು ಬಹು ದೊಡ್ಡ ಗೌರವವಾಗಿದೆ. ಸದ್ಯದಲ್ಲೇ ನೀವೆಲ್ಲರೂ ಪ್ರಶ್ನಿಸಲ್ಪಡುವಿರಿ.[7]

وَسْـَٔلْ مَنْ أَرْسَلْنَا مِن قَبْلِكَ مِن رُّسُلِنَآ أَجَعَلْنَا مِن دُونِ ٱلرَّحْمَٰنِ ءَالِهَةً يُعْبَدُونَ ﴿٤٥﴾

45. ನಾವು ನಿಮಗಿಂತ ಮುಂಚೆ ಕಳುಹಿಸಿದ್ದ ಎಲ್ಲ ಸಂದೇಶವಾಹಕರೊಡನೆ ಕೇಳಿ ನೋಡಿರಿ: ನಾವು ದಾಸ್ಯಕ್ಕಾಗಿ ರಹ್ಮಾನನ ಹೊರತು ಬೇರೆ ಕೆಲವು ಆರಾಧ್ಯರನ್ನೂ ನಿಶ್ಚಯಿಸಿದ್ದೇವೆಯೇ?"[8]

وَلَقَدْ أَرْسَلْنَا مُوسَىٰ بِـَٔايَٰتِنَآ إِلَىٰ فِرْعَوْنَ وَمَلَإِي۟هِۦ فَقَالَ إِنِّى رَسُولُ رَبِّ ٱلْعَٰلَمِينَ ﴿٤٦﴾

46. ನಾವು ಮೂಸಾರನ್ನು ನಮ್ಮ ನಿದರ್ಶನಗಳೊಂದಿಗೆ ಫಿರ್‌ಔನ್ ಮತ್ತು ಅವನ ಆಸ್ಥಾನಿಗರ ಬಳಿಗೆ ರವಾನಿಸಿದೆವು. ಅವರು ಹೋಗಿ, ನಾನು ಸರ್ವಲೋಕ ಪಾಲಕ ಪ್ರಭುವಿನ ಸಂದೇಶವಾಹಕನಾಗಿದ್ದೇನೆಂದು ಹೇಳಿದರು.

فَلَمَّا جَآءَهُم بِـَٔايَٰتِنَآ إِذَا هُم مِّنْهَا يَضْحَكُونَ ﴿٤٧﴾

47. ತರುವಾಯ ಅವರು ನಮ್ಮ ನಿದರ್ಶನಗಳನ್ನು ಅವರ ಮುಂದಿಟ್ಟಾಗ ಅವರು ಗೊಳ್ಳೆಂದು ನಕ್ಕುಬಿಟ್ಟರು.

وَمَا نُرِيهِم مِّنْ ءَايَةٍ إِلَّا هِىَ أَكْبَرُ مِنْ أُخْتِهَا ۖ وَأَخَذْنَٰهُم بِٱلْعَذَابِ لَعَلَّهُمْ يَرْجِعُونَ ﴿٤٨﴾

48. ನಾವು ಅವರಿಗೆ ಒಂದಕ್ಕಿಂತ ಒಂದು ಮಿಗಿಲಾದ ನಿದರ್ಶನಗಳನ್ನು ತೋರಿಸುತ್ತಲೇ ಹೋದೆವು. ಅವರು ತಮ್ಮ ನಿಲುಮೆಯಿಂದ ಹಿಮ್ಮೆಟ್ಟುವಂತಾಗಲು ನಾವು ಅವರನ್ನು ಯಾತನೆಯಲ್ಲಿ ಸಿಲುಕಿಸಿದೆವು.

وَقَالُوا۟ يَٰٓأَيُّهَ ٱلسَّاحِرُ ٱدْعُ لَنَا رَبَّكَ بِمَا عَهِدَ عِندَكَ إِنَّنَا لَمُهْتَدُونَ ﴿٤٩﴾

49. ಪ್ರತಿಯೊಂದು ಯಾತನೆಯ ವೇಳೆ ಅವರು, "ಜಾದೂಗಾರನೇ, ನಿನ್ನ ಪ್ರಭುವಿನ ವತಿಯಿಂದ ನಿನಗೆ ಪ್ರಾಪ್ತವಾಗಿರುವ ಪದವಿಯ ಆಧಾರದಲ್ಲಿ ನಮಗಾಗಿ ಅವನನ್ನು ಪ್ರಾರ್ಥಿಸು. ನಾವು ಖಂಡಿತವಾಗಿಯೂ ಸನ್ಮಾರ್ಗಕ್ಕೆ ಬಂದು ಬಿಡುವೆವು" ಎನ್ನುತ್ತಿದ್ದರು.

فَلَمَّا كَشَفْنَا عَنْهُمُ ٱلْعَذَابَ إِذَا هُمْ يَنكُثُونَ ﴿٥٠﴾

50. ಆದರೆ, ನಾವು ಅವರ ಮೇಲಿಂದ ಯಾತನೆಯನ್ನು ಸರಿಸಿದ ಕೂಡಲೇ ಅವರು ತಮ್ಮ ಮಾತಿಗೆ ತಪ್ಪಿ ಬಿಡುತ್ತಿದ್ದರು.

وَنَادَىٰ فِرْعَوْنُ فِى قَوْمِهِۦ قَالَ يَٰقَوْمِ

51. ಒಂದು ದಿನ ಫಿರ್‌ಔನನು ತನ್ನ ಜನಾಂಗದವರ ನಡುವೆ ಕೂಗಿ

---

7. ಅರ್ಥಾತ್- ಒಬ್ಬ ವ್ಯಕ್ತಿಯ ಪಾಲಿಗೆ, ಇತರೆಲ್ಲಾ ವ್ಯಕ್ತಿಗಳನ್ನು ಬಿಟ್ಟು ತನ್ನ ಗ್ರಂಥವನ್ನು ಅವತೀರ್ಣಗೊಳಿಸಲು ಅಲ್ಲಾಹನು ಅವನನ್ನು ಆರಿಸಿಕೊಳ್ಳುವುದಕ್ಕಿಂತ ಮಿಗಿಲಾದ ಸೌಭಾಗ್ಯ ಯಾವುದೂ ಇರಲಾರದು. ಹಾಗೆಯೇ ಒಂದು ಜನಾಂಗದ ಪಾಲಿಗೆ, ಇತರೆಲ್ಲಾ ಜನಾಂಗಗಳನ್ನು ಬಿಟ್ಟು ಆ ಜನಾಂಗದಲ್ಲಿ ಅಲ್ಲಾಹನು ತನ್ನ ಪ್ರವಾದಿಯನ್ನು ಹುಟ್ಟಿಸುವುದು, ಆ ಜನಾಂಗದ ಭಾಷೆಯಲ್ಲೇ ಗ್ರಂಥ ಅವತೀರ್ಣಗೊಳಿಸುವುದು ಮತ್ತು ಅದನ್ನು ಲೋಕದಲ್ಲಿ ದಿವ್ಯಸಂದೇಶದ ವಾಹಕವನ್ನಾಗಿ ಮಾಡುವುದಕ್ಕಿಂತ ಮಿಗಿಲಾದ ಸೌಭಾಗ್ಯ ಬೇರೆ ಇರಲಾರದು. ಈ ಮಹಾನ್ ಸುದೈವದ ಪ್ರಜ್ಞೆ ಕುರೈಶರಿಗೆ ಮತ್ತು ಅರಬರಿಗೆ ಇಲ್ಲವೆಂದಾದರೆ ಮತ್ತು ಅವರು ಅದರ ಬಗ್ಗೆ ಕೃತಘ್ನತೆ ತೋರಬಯಸಿದರೆ ಅದಕ್ಕಾಗಿ ಉತ್ತರ ನೀಡಬೇಕಾದಂತಹ ಕಾಲ ಅವರಿಗೆ ಎದುರಾಗಲಿದೆ.

8. ಪ್ರವಾದಿಗಳೊಂದಿಗೆ ಕೇಳುವುದೆಂದರೆ ಅವರು ತಂದಿರುವ ಗ್ರಂಥಗಳಿಂದ ತಿಳಿದುಕೊಳ್ಳುವುದು.

ಹೇಳಿದನು; "ಜನರೇ, ಈಜಿಪ್ಟಿನ ಚಕ್ರಾಧಿಪತ್ಯ ನನ್ನದಲ್ಲವೇ? ಮತ್ತು ಈ ಕಾಲುವೆಗಳು ನನ್ನ ಅಧೀನದಲ್ಲಿ ಹರಿಯುತ್ತಿಲ್ಲವೇ? ನಿಮಗೇನು ಕಾಣುವುದಿಲ್ಲವೇ?

أَلَيْسَ لِي مُلْكُ مِصْرَ وَهَٰذِهِ الْأَنْهَارُ تَجْرِي مِن تَحْتِي ۖ أَفَلَا تُبْصِرُونَ ﴿٥١﴾

52. ನಾನು ಮೇಲೋ ಅಥವಾ ಹೀನನೂ ನಿಂದ್ಯನೂ ಆಗಿರುವ ಮತ್ತು ತನ್ನ ಮಾತನ್ನು ಕೂಡಾ ವ್ಯಕ್ತವಾಗಿ ವಿವರಿಸಲಾಗದ ಈ ವ್ಯಕ್ತಿ ಮೇಲೋ?

أَمْ أَنَا خَيْرٌ مِّنْ هَٰذَا الَّذِي هُوَ مَهِينٌ وَلَا يَكَادُ يُبِينُ ﴿٥٢﴾

53. ಇವನ ಮೇಲೆ ಬಂಗಾರದ ಕಂಕಣಗಳೇಕೆ ಇಳಿಸಲ್ಪಟ್ಟಿಲ್ಲ? ಅಥವಾ ಇವನ ಅಂಗರಕ್ಷಕರಾಗಿ ದೇವಚರರ ತುಕಡಿಯೇಕೆ ಬಂದಿಲ್ಲ?"

فَلَوْلَا أُلْقِيَ عَلَيْهِ أَسْوِرَةٌ مِّن ذَهَبٍ أَوْ جَاءَ مَعَهُ الْمَلَائِكَةُ مُقْتَرِنِينَ ﴿٥٣﴾

54. ಅವನು ತನ್ನ ಜನಾಂಗವನ್ನು ಕೀಳಾಗಿ ಕಂಡನು ಮತ್ತು ಅವರು ಅವನನ್ನು ಅನುಸರಿಸಿದರು. ವಾಸ್ತವದಲ್ಲಿ ಅವರು 'ಕರ್ಮಭ್ರಷ್ಟ'ರೇ ಆಗಿದ್ದರು.[9]

فَاسْتَخَفَّ قَوْمَهُ فَأَطَاعُوهُ ۚ إِنَّهُمْ كَانُوا قَوْمًا فَاسِقِينَ ﴿٥٤﴾

55. ಕೊನೆಗೆ ಅವರು ನಮ್ಮನ್ನು ರೇಗಿಸಿದಾಗ ನಾವು ಅವರ ಮೇಲೆ ಪ್ರತೀಕಾರ ತೀರಿಸಿದೆವು ಮತ್ತು ಅವರೆಲ್ಲರನ್ನೂ ಮುಳುಗಿಸಿ ಬಿಟ್ಟೆವು-

فَلَمَّا آسَفُونَا انتَقَمْنَا مِنْهُمْ فَأَغْرَقْنَاهُمْ أَجْمَعِينَ ﴿٥٥﴾

56. ಹಾಗೂ ಅವರನ್ನು ಅನಂತರದವರ ಪಾಲಿಗೆ ಮುಂಗಾಮಿಗಳಾಗಿಯೂ ಪಾಠಪ್ರದ ಮಾದರಿಗಳಾಗಿಯೂ ಮಾಡಿಬಿಟ್ಟೆವು-

فَجَعَلْنَاهُمْ سَلَفًا وَمَثَلًا لِّلْآخِرِينَ ﴿٥٦﴾

57. ಮರ್ಯಮರ ಪುತ್ರ ಈಸಾರ ಉದಾಹರಣೆಯನ್ನೇ ಮುಂದಿಟ್ಟ ತಕ್ಷಣ ನಿಮ್ಮ ಜನಾಂಗದವರು ಆ ಕುರಿತು ಗುಲ್ಲೆಬ್ಬಿಸಿ ಬಿಟ್ಟರು-

وَلَمَّا ضُرِبَ ابْنُ مَرْيَمَ مَثَلًا إِذَا قَوْمُكَ مِنْهُ يَصِدُّونَ ﴿٥٧﴾

58. ಮತ್ತು ನಮ್ಮ ಆರಾಧ್ಯರು ಉತ್ತಮರೋ ಅಥವಾ ಅವರೋ?

وَقَالُوا أَآلِهَتُنَا خَيْرٌ أَمْ هُوَ ۚ مَا ضَرَبُوهُ

9. ಈ ಸಂಕ್ಷಿಪ್ತವಾದ ವಚನದ ಮೂಲಕ ದೊಡ್ಡ ವಾಸ್ತವಿಕತೆಯೊಂದನ್ನು ತಿಳಿಸಲಾಗಿದೆ. ಒಬ್ಬ ವ್ಯಕ್ತಿ ಯಾವುದೇ ರಾಷ್ಟ್ರದಲ್ಲಿ ತನ್ನ ಸರ್ವಾಧಿಕಾರವನ್ನು ನಡೆಸಲು ಪ್ರಯತ್ನಿಸಿದಾಗ, ಅದಕ್ಕಾಗಿ ಬಹಿರಂಗವಾಗಿ ಎಲ್ಲಾ ವಿಧದ ಕುತಂತ್ರಗಳನ್ನು ನಡೆಸಿದಾಗ, ಮೋಸ ಮತ್ತು ವಂಚನೆಯ ಎಲ್ಲಾ ವಿಧಗಳನ್ನು ಅನುಸರಿಸಿದಾಗ, ಬಹಿರಂಗವಾಗಿಯೇ ಹಣದ ಬಲದಿಂದ ಜನರ ಒಲವನ್ನು ಖರೀದಿಸುವ ವ್ಯಾಪಾರ ನಡೆಸಿದಾಗ, ಖರೀದಿಸಲು ಸಾಧ್ಯವಾಗದವರನ್ನು ನಿಸ್ಸಂಕೋಚವಾಗಿ ತುಳಿದು ಮಣಿಸಿದಾಗ ಅವನ ವರ್ತನೆ- ಅವನು ದೇಶವಾಸಿಗಳನ್ನು ಬುದ್ಧಿ, ಚಾರಿತ್ರ್ಯ ಮತ್ತು ಸಾಮರ್ಥ್ಯಗಳಲ್ಲಿ ಅಲ್ಪರು ಎಂದು ಭಾವಿಸಿದ್ದಾನೆ ಎಂಬುದನ್ನು ಸೂಚಿಸುತ್ತದೆ. ಈ ಆತ್ಮಸಾಕ್ಷಿಯಿಲ್ಲದ ಹೇಡಿಗಳೂ ಮೂರ್ಖರೂ ಆದ ಜನರನ್ನು ಎಲ್ಲಿಗೆ ಬೇಕಾದರೂ ನಾನು ಅಟ್ಟಬಲ್ಲೆ ಎಂಬ ಅವನ ಮನೋಭಾವವನ್ನು ತಿಳಿಸುತ್ತದೆ. ಅವನು ಅದನ್ನು ಮಾತಿನಿಂದ ವ್ಯಕ್ತಪಡಿಸಬೇಕಾಗಿಲ್ಲ. ಒಂದು ವೇಳೆ ಅವನ ತಂತ್ರಗಳು ಫಲಿಸಿ, ದೇಶವಾಸಿಗಳು ಅವನ ಅಡಿಯಾಳುಗಳಾಗಿ ಮಾರ್ಪಟ್ಟರೆ ಅವರು ತಮ್ಮ ನಿಷ್ಕ್ರೀಯತೆಯ ಮೂಲಕ ತಮ್ಮ ಸ್ಥಿತಿ ಅವನ ಕಲ್ಪನೆಯಂತೆಯೇ ಇದೆ ಎಂಬುದನ್ನು ಸಾಬೀತುಪಡಿಸುತ್ತಾರೆ. ಅವರು ಈ ಹೀನಾಯ ಸ್ಥಿತಿಗೆ ಈಡಾಗಲು ಮೂಲ ಕಾರಣ ಅವರು ಮೂಲತಃ ಧರ್ಮಭ್ರಷ್ಟರಾಗಿರುವುದಾಗಿದೆ.

ಎಂದು ಕೇಳತೊಡಗಿದರು.[10] ಅವರು ಈ ಉದಾಹರಣೆಯನ್ನು ನಿಮ್ಮ ಮುಂದಿಟ್ಟಿರುವುದು ಜಗಳಕ್ಕಾಗಿ ಮಾತ್ರ. ವಾಸ್ತವದಲ್ಲಿ ಇವರು ಜಗಳಗಂಟರೇ ಆಗಿರುತ್ತಾರೆ.

لَكَ اِلَّا جَدَلًا ۭ بَلْ هُمْ قَوْمٌ خَصِمُوْنَ ۝٥٨

59. ಮರ್ಯಮರ ಪುತ್ರ ಓರ್ವ ದಾಸನೆಂಬುದರ ಹೊರತು ಇನ್ನೇನೂ ಆಗಿರಲಿಲ್ಲ. ನಾವು ಅವರಿಗೆ ಅನುಗ್ರಹ ಪ್ರದಾನ ಮಾಡಿದ್ದೆವು ಮತ್ತು ಅವರನ್ನು ಬನೀಇಸ್ರಾಈಲರ ಪಾಲಿಗೆ ನಮ್ಮ ಮಹಿಮೆಯ ದೃಷ್ಟಾಂತವಾಗಿ ಮಾಡಿಬಿಟ್ಟೆವು.

اِنْ هُوَ اِلَّا عَبْدٌ اَنْعَمْنَا عَلَيْهِ وَجَعَلْنٰهُ مَثَلًا لِّبَنِيْٓ اِسْرَاۗءِيْلَ ۝٥٩

60. ನಾವಿಚ್ಛಿಸಿದರೆ ಭೂಲೋಕದಲ್ಲಿ ನಿಮ್ಮ ಉತ್ತರಾಧಿಕಾರಿಗಳಾಗಲು ನಿಮ್ಮಿಂದಲೇ ದೇವಚರರನ್ನು ಸೃಷ್ಟಿಸಬಲ್ಲೆವು-

وَلَوْ نَشَاۗءُ لَجَعَلْنَا مِنْكُمْ مَّلٰۗىِٕكَةً فِي الْاَرْضِ يَخْلُفُوْنَ ۝٦٠

61. ಮತ್ತು ಅವರು(ಮರ್ಯಮರ ಪುತ್ರ) ವಾಸ್ತವದಲ್ಲಿ ಪುನರುತ್ಥಾನದ ಒಂದು ಕುರುಹಾಗಿದ್ದಾರೆ.[11] ಆದುದರಿಂದ ನೀವು ಈ ವಿಷಯದಲ್ಲಿ ಸಂಶಯಪಡಬೇಡಿರಿ. ನನ್ನ ಮಾತನ್ನು ಒಪ್ಪಿಕೊಳ್ಳಿರಿ. ಇದು ನೇರವಾದ ಮಾರ್ಗ.

وَاِنَّهٗ لَعِلْمٌ لِّلسَّاعَةِ فَلَا تَمْتَرُنَّ بِهَا وَاتَّبِعُوْنِ ۭ هٰذَا صِرَاطٌ مُّسْتَقِيْمٌ ۝٦١

62. ಶೈತಾನನು ನಿಮ್ಮನ್ನು ಅದರಿಂದ ತಡೆಯುವಂತಾಗದಿರಲಿ, ಅವನು ನಿಮ್ಮ ಪ್ರತ್ಯಕ್ಷ ಶತ್ರು.

وَلَا يَصُدَّنَّكُمُ الشَّيْطٰنُ ۚ اِنَّهٗ لَكُمْ عَدُوٌّ مُّبِيْنٌ ۝٦٢

10. ಇದಕ್ಕೆ ಮೊದಲು 45ನೆಯ ಸೂಕ್ತದಲ್ಲಿ, "ನಾವು ರಹ್ಮಾನನ ಹೊರತು ಬೇರೆ ಆರಾಧ್ಯರನ್ನೂ ನಿಶ್ಚಯಿಸಿದ್ದುಂಟೇ? ಎಂದು ನಿಮಗೆ ಮುಂಚೆ ನಾವು ಕಳುಹಿಸಿದ್ದ ಎಲ್ಲಾ ಸಂದೇಶವಾಹಕರೊಡನೆ ಕೇಳಿ ನೋಡಿರಿ" ಎನ್ನಲಾಗಿತ್ತು. ಈ ಉಪನ್ಯಾಸವನ್ನು ಮಕ್ಕಾ ವಾಸಿಗಳ ಮುಂದೆ ಮಾಡಲಾದಾಗ ಒಬ್ಬ ವ್ಯಕ್ತಿ ಆಕ್ಷೇಪ ವ್ಯಕ್ತಪಡಿಸುತ್ತಾ ಹೇಳಿದನು, "ಕ್ರೈಸ್ತರು ಮರ್ಯಮರ ಪುತ್ರರನ್ನು ದೇವನ ಮಗನೆಂದು ಸಾರಿ ಆರಾಧನೆ ಮಾಡುವುದಿಲ್ಲವೇ? ಹಾಗಿರುವಾಗ ನಮ್ಮ ಆರಾಧ್ಯರುಗಳನ್ನು ಆರಾಧಿಸಬಾರದೇಕೆ?" ಹೀಗೆನ್ನುವಾಗ ಸತ್ಯನಿಷೇಧಿಗಳ ಕೂಟದಿಂದ ದೊಡ್ಡ ಅಟ್ಟಹಾಸ ಮೊಳಗಿತು. ಇದಕ್ಕೆ ನೀವೇನೆನ್ನುವಿರಿ ಎಂದು ಅವರು ಕೇಕೆ ಹಾಕತೊಡಗಿದರು.

11. ಇದರ ಇನ್ನೊಂದು ಭಾಷಾಂತರ, "ಅವರು ಪುನರುತ್ಥಾನ ದಿನದ ಬಗೆಗಿನ ಜ್ಞಾನಕ್ಕೆ ಆಧಾರವಾಗಿದ್ದಾರೆ" ಎಂದಾಗಬಹುದು. ಅವರನ್ನು "ನಿರ್ಣಾಯಕ ದಿನದ ಕುರುಹು" ಅಥವಾ "ನಿರ್ಣಾಯಕ ದಿನದ ಜ್ಞಾನದ ಆಧಾರ" ಎಂದು ಯಾವ ಅರ್ಥದಲ್ಲಿ ಹೇಳಲಾಗಿದೆ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಅನೇಕ ವ್ಯಾಖ್ಯಾನಕಾರರ ಪ್ರಕಾರ, ಹೆಚ್ಚಿನ ಪ್ರವಾದಿವಚನಗಳಲ್ಲಿ ಉಲ್ಲೇಖಿಸಲಾಗಿರುವ ಹ.ಈಸಾರ(ಅ) ಎರಡನೆಯ ಅವತರಣದ ಕುರಿತು ಈ ಮಾತು ಹೇಳಲಾಗಿದೆ. ಆದರೆ ನಂತರದ ಉದ್ಧರಣೆ ಈ ರೀತಿಯ ಅರ್ಥ ಕಲ್ಪಿಸಲು ಅವಕಾಶ ಕೊಡುವುದಿಲ್ಲ. ಈಸಾರ(ಅ) ಎರಡನೆಯ ಅವತರಣ, ಆ ಕಾಲದಲ್ಲಿರುವ ಅಥವಾ ಅದರ ನಂತರ ಹುಟ್ಟುವ ಜನರ ಪಾಲಿಗೆ ಮಾತ್ರ ನಿರ್ಣಾಯಕ ದಿನದ ಜ್ಞಾನಕ್ಕೆ ಆಧಾರವಾಗಿರಲು ಸಾಧ್ಯ. ಮಕ್ಕಾದ ಸತ್ಯನಿಷೇಧಿಗಳೊಡನೆ, "ಆದ್ದರಿಂದ ನೀವು ಇದರ ಬಗ್ಗೆ ಸಂಶಯ ಪಡಬೇಡಿ" ಎಂದು ಹೇಳುವಂತಹ ರೀತಿಯಲ್ಲಿ ಅದು ಅವರಿಗೆ ನಿರ್ಣಾಯಕ ದಿನದ ಜ್ಞಾನಮೂಲವಾಗಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ದೃಷ್ಟಿಯಲ್ಲಿ ಇತರ ವ್ಯಾಖ್ಯಾನಕಾರರ ವ್ಯಾಖ್ಯಾನವೇ ಸರಿಯಾಗಿದೆ. ಅವರು, ಹ.ಈಸಾರು(ಅ) ತಂದೆಯಿಲ್ಲದೆ ಹುಟ್ಟುವುದು, ಮಣ್ಣಿನಿಂದ ಹಕ್ಕಿಗಳನ್ನು ತಯಾರಿಸುವುದು, ಮೃತರನ್ನು ಜೀವಂತಗೊಳಿಸುವುದೆಲ್ಲವೂ ನಿರ್ಣಾಯಕ ದಿನದ ಆಧಾರವೆಂದು ಸಾರಿದ್ದಾರೆ. ಈ ದೇವವಾಣಿಯ ಇಂಗಿತವೇನೆಂದರೆ, "ಯಾವ ದೇವ ತಂದೆಯಿಲ್ಲದೆ ಮಗುವನ್ನು ಹುಟ್ಟಿಸಬಲ್ಲನೋ ಹಾಗೂ ದೇವನ ದಾಸನೊಬ್ಬ ಮಣ್ಣಿನ ಮೂರ್ತಿಯಲ್ಲಿ ಜೀವತುಂಬ ಬಲ್ಲನೋ ಮತ್ತು ಮೃತರನ್ನು ಜೀವಂತಗೊಳಿಸಬಲ್ಲನೋ ಆ ದೇವನು ಮರಣದ ನಂತರ ನಿಮ್ಮೆಲ್ಲರನ್ನು ಪುನರಪಿ ಸೃಷ್ಟಿಸುವುದು ಸಾಧ್ಯವಿಲ್ಲವೆಂದು ನೀವೇಕೆ ಭಾವಿಸುತ್ತೀರಿ?

63. ಈಸಾ ಪ್ರತ್ಯಕ್ಷ ನಿದರ್ಶನಗಳೊಂದಿಗೆ ಬಂದಾಗ ಹೇಳಿದ್ದರು, "ನಾನು ನಿಮ್ಮ ಬಳಿಗೆ ಸದ್ವಿವೇಕವನ್ನು ತಂದಿದ್ದೇನೆ ಮತ್ತು ನೀವು ಪರಸ್ಪರ ಭಿನ್ನಾಭಿಪ್ರಾಯವಿಟ್ಟು ಕೊಂಡಿರುವ ಕೆಲವು ವಿಷಯಗಳ ವಾಸ್ತವಿಕತೆಯನ್ನು ನಿಮ್ಮ ಮುಂದೆ ಪ್ರಕಟಗೊಳಿಸಲಿಕ್ಕಾಗಿ ಬಂದಿದ್ದೇನೆ. ಆದುದರಿಂದ ನೀವು ಅಲ್ಲಾಹನನ್ನೇ ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

وَلَمَّا جَاءَ عِيسَىٰ بِالْبَيِّنَاتِ قَالَ قَدْ جِئْتُكُم بِالْحِكْمَةِ وَلِأُبَيِّنَ لَكُم بَعْضَ الَّذِي تَخْتَلِفُونَ فِيهِ ۖ فَاتَّقُوا اللَّهَ وَأَطِيعُونِ ﴿٦٣﴾

64. ವಾಸ್ತವದಲ್ಲಿ ಅಲ್ಲಾಹನೇ ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ. ನೀವು ಅವನನ್ನೇ ಆರಾಧಿಸಿರಿ, ಇದುವೇ ನೇರ ಮಾರ್ಗ."[12]

إِنَّ اللَّهَ هُوَ رَبِّي وَرَبُّكُمْ فَاعْبُدُوهُ ۚ هَٰذَا صِرَاطٌ مُّسْتَقِيمٌ ﴿٦٤﴾

65. ಆದರೆ (ಅವರ ಈ ಸುಸ್ಪಷ್ಟ ಬೋಧನೆಯ ಹೊರತಾಗಿಯೂ) ಪಂಗಡಗಳು ಪರಸ್ಪರ ಭಿನ್ನಾಭಿಪ್ರಾಯ ತಾಳಿದುವು.[13] ಆದುದರಿಂದ ಅಕ್ರಮವೆಸಗುವವರಿಗೆ ಒಂದು ವೇದನಾಯುಕ್ತ ದಿನದ ಯಾತನೆಯಿಂದ ವಿನಾಶವಿದೆ.

فَاخْتَلَفَ الْأَحْزَابُ مِن بَيْنِهِمْ ۖ فَوَيْلٌ لِّلَّذِينَ ظَلَمُوا مِنْ عَذَابِ يَوْمٍ أَلِيمٍ ﴿٦٥﴾

66. ಇವರಿಗೆ ಸುದ್ದಿಯೇ ಇಲ್ಲದಂತೆ ಪುನರುತ್ಥಾನ ದಿನವು ಇವರ ಮೇಲೆ ಹಠಾತ್ತನೆ ಬಂದೆರಗುವುದನ್ನೇ ಇವರು ಕಾಯುತ್ತಿರುವರೇ?

هَلْ يَنظُرُونَ إِلَّا السَّاعَةَ أَن تَأْتِيَهُم بَغْتَةً وَهُمْ لَا يَشْعُرُونَ ﴿٦٦﴾

67. ಆ ದಿನ ಬಂದಾಗ ಧರ್ಮನಿಷ್ಠರ ಹೊರತು ಇತರೆಲ್ಲ ಮಿತ್ರರೂ ಪರಸ್ಪರ ಶತ್ರುಗಳಾಗಿ ಬಿಡುವರು.

الْأَخِلَّاءُ يَوْمَئِذٍ بَعْضُهُمْ لِبَعْضٍ عَدُوٌّ إِلَّا الْمُتَّقِينَ ﴿٦٧﴾

68-69. ಅಂದು ನಮ್ಮ ಸೂಕ್ತಗಳ ಮೇಲೆ ವಿಶ್ವಾಸವಿರಿಸಿದವರೊಡನೆ ಹಾಗೂ ಆಜ್ಞಾಪಾಲಕರಾಗಿದ್ದವರೊಡನೆ ಹೀಗೆ ಹೇಳಲಾಗುವುದು- "ನನ್ನ ದಾಸರೇ, ಇಂದು ನಿಮಗೇನೂ ಭಯವಿಲ್ಲ ಮತ್ತು ನಿಮಗೆ ದುಃಖವೂ ಉಂಟಾಗದು-

يَا عِبَادِ لَا خَوْفٌ عَلَيْكُمُ الْيَوْمَ وَلَا أَنتُمْ تَحْزَنُونَ ﴿٦٨﴾
الَّذِينَ آمَنُوا بِآيَاتِنَا وَكَانُوا مُسْلِمِينَ ﴿٦٩﴾

70. ನೀವೂ ನಿಮ್ಮ ಪತ್ನಿಯರೂ ಸ್ವರ್ಗದೊಳಗೆ ಪ್ರವೇಶಿಸಿರಿ. ನಿಮ್ಮನ್ನು ಸಂತುಷ್ಟಗೊಳಿಸಲಾಗುವುದು."

ادْخُلُوا الْجَنَّةَ أَنتُمْ وَأَزْوَاجُكُمْ تُحْبَرُونَ ﴿٧٠﴾

12. ಅರ್ಥಾತ್- ಕ್ರೈಸ್ತರು ಏನೇ ಹೇಳುತ್ತಿರಲಿ ಅಥವಾ ಮಾಡುತ್ತಿರಲಿ. ಈಸಾರಂತೂ(ಅ) ನಾನು ದೇವನಾಗಿದ್ದೇನೆ, ಅಥವಾ ದೇವಪುತ್ರನಾಗಿದ್ದೇನೆ, ಆದ್ದರಿಂದ ನನ್ನನ್ನು ಆರಾಧಿಸಿ ಎಂದು ಯಾವತ್ತೂ ಹೇಳಿರಲಿಲ್ಲ. ಅವರ ಸಂದೇಶವೂ ಎಲ್ಲಾ ಪ್ರವಾದಿಗಳು ನೀಡಿದ ಸಂದೇಶವೇ ಆಗಿತ್ತು. ಪ್ರವಾದಿವರ್ಯರೂ(ಸ) ಈಗ ಅದರೆಡೆಗೆ ಕರೆಯುತ್ತಿದ್ದಾರೆ.

13. ಅರ್ಥಾತ್- ಒಂದು ಗುಂಪು ಅವರನ್ನು ನಿರಾಕರಿಸಿತು. ಅವರು ನಿರಾಕರಣೆಯಲ್ಲಿ ಯಾವ ಮಟ್ಟಕ್ಕೆ ಹೋದರೆಂದರೆ ಅವರ ಮೇಲೆ ಜಾರಸಂತಾನವಾಗಿರುವ ಆರೋಪ ಹೊರಿಸಿದರು. ಇನ್ನೊಂದು ಗುಂಪು ಅವರನ್ನು ಸಮ್ಮತಿಸಿತು. ಅವರು ತಮ್ಮ ವಿಶ್ವಾಸದಲ್ಲಿ ಅನಿಯಂತ್ರಿತವಾಗಿ ಅತಿರೇಕವೆಸಗಿ ಅವರನ್ನು ದೇವಪುತ್ರನನ್ನಾಗಿ ಮಾಡಿದರು. ಅನಂತರ ಮಾನವನನ್ನು ದೇವನನ್ನಾಗಿ ಮಾಡಿದ್ದು ಅವರ ಪಾಲಿಗೆ ದೊಡ್ಡ ಸಮಸ್ಯೆಯಾಗಿ ಕಾಡಿತು. ಅದನ್ನು ಪರಿಹರಿಸುವುದರಲ್ಲೇ ಅವರು ಅನೇಕ ಗುಂಪುಗಳಾಗಿ ಒಡೆದು ಹೋದರು.

71. ಅವರ ಮುಂದೆ ಬಂಗಾರದ ತಟ್ಟೆಗಳೂ ಲೋಟೆಗಳೂ ಸುತ್ತು ತರಲ್ಪಡುವುವು ಮತ್ತು ಮನಮೋಹಕ ಹಾಗೂ ಕಣ್ತಣಿಸುವ ಸಕಲ ವಸ್ತುಗಳೂ ಅಲ್ಲಿ ಸಿದ್ಧವಿರುವುವು. "ನೀವಿಲ್ಲಿ ಸದಾ ವಾಸಿಸುವಿರಿ.

يُطَافُ عَلَيْهِم بِصِحَافٍ مِّن ذَهَبٍ وَأَكْوَابٍ ۖ وَفِيهَا مَا تَشْتَهِيهِ الْأَنفُسُ وَتَلَذُّ الْأَعْيُنُ ۖ وَأَنتُمْ فِيهَا خَالِدُونَ ﴿٧١﴾

72. ನೀವು ಭೂಲೋಕದಲ್ಲಿ ಮಾಡುತ್ತಿದ್ದ ನಿಮ್ಮ ಸತ್ಕರ್ಮಗಳ ನಿಮಿತ್ತ ಈ ಸ್ವರ್ಗಕ್ಕೆ ಉತ್ತರಾಧಿಕಾರಿಗಳಾದಿರಿ.

وَتِلْكَ الْجَنَّةُ الَّتِي أُورِثْتُمُوهَا بِمَا كُنتُمْ تَعْمَلُونَ ﴿٧٢﴾

73. ಇಲ್ಲಿ ನಿಮಗಾಗಿ ಧಾರಾಳ ಹಣ್ಣು ಹಂಪಲುಗಳಿದ್ದು ಅವುಗಳನ್ನು ನೀವು ತಿನ್ನುವಿರಿ."

لَكُمْ فِيهَا فَاكِهَةٌ كَثِيرَةٌ مِّنْهَا تَأْكُلُونَ ﴿٧٣﴾

74. ಅಪರಾಧಿಗಳಂತು ಸದಾ ನರಕ ಯಾತನೆಯಲ್ಲಿ ನರಳುತ್ತಿರುವರು.

إِنَّ الْمُجْرِمِينَ فِي عَذَابِ جَهَنَّمَ خَالِدُونَ ﴿٧٤﴾

75. ಅವರ ಯಾತನೆಯಲ್ಲಿ ಎಂದೂ ಕಡಿತವಾಗದು. ಅವರು ನಿರಾಶರಾಗಿ ಅದರಲ್ಲಿ ಬಿದ್ದು ಕೊಂಡಿರುವರು.

لَا يُفَتَّرُ عَنْهُمْ وَهُمْ فِيهِ مُبْلِسُونَ ﴿٧٥﴾

76. ಅವರ ಮೇಲೆ ನಾವು ಅಕ್ರಮವೆಸಗಲಿಲ್ಲ. ವಾಸ್ತವದಲ್ಲಿ ಸ್ವತಃ ಅವರೇ ತಮ್ಮ ಮೇಲೆ ಅಕ್ರಮವೆಸಗುತ್ತಲಿದ್ದರು.

وَمَا ظَلَمْنَاهُمْ وَلَٰكِن كَانُوا هُمُ الظَّالِمِينَ ﴿٧٦﴾

77. ಅವರು, "ಮಾಲಿಕ್[14], ನಿನ್ನ ಪ್ರಭು ನಮ್ಮನ್ನು ಮುಗಿಸಿಯೇ ಬಿಟ್ಟರೆ ಲೇಸು" ಎಂದು ರೋದಿಸುವರು. ಆಗ ಅವನು ಉತ್ತರ ಕೊಡುವನು, "ನೀವು ಹೀಗೆಯೇ ಬಿದ್ದುಕೊಂಡಿರುವಿರಿ.

وَنَادَوْا يَا مَالِكُ لِيَقْضِ عَلَيْنَا رَبُّكَ ۖ قَالَ إِنَّكُم مَّاكِثُونَ ﴿٧٧﴾

78. ನಾವು ಸತ್ಯದೊಂದಿಗೆ ನಿಮ್ಮ ಬಳಿಗೆ ಬಂದಿದ್ದೆವು. ಆದರೆ, ನಿಮ್ಮಲ್ಲಿ ಅನೇಕರಿಗೆ ಸತ್ಯವೇ ಅಪ್ರಿಯವಾಗಿತ್ತು."[15]

لَقَدْ جِئْنَاكُم بِالْحَقِّ وَلَٰكِنَّ أَكْثَرَكُمْ لِلْحَقِّ كَارِهُونَ ﴿٧٨﴾

79. ಇವರೇನಾದರೂ ಕಾರ್ಯಾಚರಣೆ ಮಾಡಲು ತೀರ್ಮಾನಿಸಿರುವರೇ?[16] ಸರಿ, ಹಾಗಾದರೆ ನಾವೂ ಒಂದು ತೀರ್ಮಾನ ಮಾಡಿಕೊಳ್ಳುತ್ತೇವೆ.

أَمْ أَبْرَمُوا أَمْرًا فَإِنَّا مُبْرِمُونَ ﴿٧٩﴾

14. ಮಾತಿನ ಧಾಟಿಯಿಂದಲೇ ವ್ಯಕ್ತವಾಗುವಂತೆ ಇಲ್ಲಿ ನರಕದ ಮೇಲ್ವಿಚಾರಕನನ್ನು 'ಮಾಲಿಕ್' ಎನ್ನಲಾಗಿದೆ.

15. ಸರಕಾರದ ಯಾವುದೇ ಅಧಿಕಾರಿ 'ನಾವು' ಎಂಬ ಪದ ಪ್ರಯೋಗಿಸಿದರೆ ಅದರ ಅರ್ಥ ನಮ್ಮ ಸರ್ಕಾರ ಈ ಕೆಲಸ ಮಾಡಿದೆ ಅಥವಾ ಈ ಆಜ್ಞೆ ಕೊಟ್ಟಿದೆ ಎಂದಾಗುತ್ತದೆ. ಇಲ್ಲಿ ನರಕದ ಮೇಲ್ವಿಚಾರಕ, "ನಾವು ನಿಮ್ಮ ಬಳಿಗೆ ಸತ್ಯವನ್ನು ತಂದಿದ್ದೆವು" ಎಂದು ಹೇಳುವುದು ಇದೇ ಧಾಟಿಯಲ್ಲಾಗಿದೆ.

16. ಖುರೈಶರ ಸರದಾರರು ತಮ್ಮ ನಿಗೂಢ ಸಭೆಗಳಲ್ಲಿ ಪ್ರವಾದಿವರ್ಯರ(ಸ) ವಿರುದ್ಧ ಯಾವುದಾದರೂ ನಿರ್ಣಾಯಕ ಕ್ರಮ ಕೈಗೊಳ್ಳುವ ಬಗ್ಗೆ ಚರ್ಚಿಸುತ್ತಲಿದ್ದರು. ಅದರ ಕಡೆಗೆ ಬೊಟ್ಟು ಮಾಡಿ ಈ ಮಾತು ಹೇಳಲಾಗಿದೆ.

80. ನಾವು ಇವರ ರಹಸ್ಯ ಮಾತುಗಳನ್ನೂ ಪಿಸು ನುಡಿಗಳನ್ನೂ ಕೇಳುವುದಿಲ್ಲವೆಂದು ಇವರು ಗ್ರಹಿಸಿಕೊಂಡಿರುವರೇ? ನಾವು ಎಲ್ಲವನ್ನೂ ಆಲಿಸುತ್ತಿದ್ದೇವೆ ಮತ್ತು ನಮ್ಮ ದೂತರು (ದೇವ ಚರರು) ಇವರ ಬಳಿಯಲ್ಲೇ ಬರೆಯುತ್ತಿದ್ದಾರೆ.

أَمْ يَحْسَبُونَ أَنَّا لَا نَسْمَعُ سِرَّهُمْ وَنَجْوَاهُمْ ۚ بَلَىٰ وَرُسُلُنَا لَدَيْهِمْ يَكْتُبُونَ ﴿٨٠﴾

81. ನಿಜಕ್ಕೂ ರಹ್ಮಾನನಿಗೆ ಸಂತತಿ ಇರುತ್ತಿದ್ದರೆ ಎಲ್ಲರಿಗಿಂತಲೂ ಮುಂಚೆ ಆರಾಧಿಸುವವನು ನಾನೇ ಆಗಿರುತ್ತಿದ್ದೆನೆಂದು ಇವರೊಡನೆ ಹೇಳಿರಿ.

قُلْ إِنْ كَانَ لِلرَّحْمَٰنِ وَلَدٌ فَأَنَا أَوَّلُ الْعَابِدِينَ ﴿٨١﴾

82. ಭೂಮಿ-ಆಕಾಶಗಳ ಸಾರ್ವಭೌಮ ಮತ್ತು ವಿಶ್ವಸಿಂಹಾಸನದ ಪ್ರಭುವು, ಇವರು ಅವನ ಮೇಲೆ ಆರೋಪಿಸುತ್ತಿರುವ ಸಕಲ ದೋಷಗಳಿಂದ ಮುಕ್ತನಾಗಿರುತ್ತಾನೆ.

سُبْحَانَ رَبِّ السَّمَاوَاتِ وَالْأَرْضِ رَبِّ الْعَرْشِ عَمَّا يَصِفُونَ ﴿٨٢﴾

83. ಇವರಿಗೆ ಎಚ್ಚರಿಕೆ ನೀಡಲಾಗುತ್ತಿರುವ ಆ ದಿನವನ್ನು ಇವರು ಕಾಣುವ ವರೆಗೂ ಇವರನ್ನು ಇವರ ಮಿಥ್ಯ ವಿಚಾರಗಳಲ್ಲಿ ಮುಳುಗಿರಲು ಮತ್ತು ಆಟ ವಿನೋದಗಳಲ್ಲಿ ಮೈಮರೆತಿರಲು ಬಿಟ್ಟು ಬಿಡಿರಿ.

فَذَرْهُمْ يَخُوضُوا وَيَلْعَبُوا حَتَّىٰ يُلَاقُوا يَوْمَهُمُ الَّذِي يُوعَدُونَ ﴿٨٣﴾

84. ಅವನೊಬ್ಬನೇ ಆಕಾಶದಲ್ಲೂ ಆರಾಧ್ಯನು ಮತ್ತು ಭೂಮಿಯಲ್ಲೂ ಆರಾಧ್ಯನು. ಅವನೇ ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುತ್ತಾನೆ.

وَهُوَ الَّذِي فِي السَّمَاءِ إِلَٰهٌ وَفِي الْأَرْضِ إِلَٰهٌ ۚ وَهُوَ الْحَكِيمُ الْعَلِيمُ ﴿٨٤﴾

85. ಅವನು ಅತ್ಯುನ್ನತನಾಗಿದ್ದು ಭೂಮಿ-ಆಕಾಶಗಳು ಮತ್ತು ಅವುಗಳ ನಡುವೆ ಇರುವ ಪ್ರತಿಯೊಂದು ವಸ್ತುವು ಅವನದೇ ಪ್ರಭುತ್ವ ದಲ್ಲಿದೆ. ಪುನರುತ್ಥಾನದ ಘಳಿಗೆಯ ಜ್ಞಾನವೂ ಅವನಿಗೇ ಇದೆ ಮತ್ತು ನೀವೆಲ್ಲರೂ ಅವನ ಕಡೆಗೇ ಮರಳಿಸಲ್ಪಡುವಿರಿ.

وَتَبَارَكَ الَّذِي لَهُ مُلْكُ السَّمَاوَاتِ وَالْأَرْضِ وَمَا بَيْنَهُمَا وَعِنْدَهُ عِلْمُ السَّاعَةِ وَإِلَيْهِ تُرْجَعُونَ ﴿٨٥﴾

86. ಅವನನ್ನು ಬಿಟ್ಟು ಇವರು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರಿಗೆ ಯಾವುದೇ ಶಿಫಾರಸಿನ ಅಧಿಕಾರವಿಲ್ಲ- ಯಾರಾದರೂ ಜ್ಞಾನದ ಆಧಾರದಲ್ಲಿ ಸತ್ಯದ ಸಾಕ್ಷಿ ಹೇಳುವುದರ ಹೊರತು.[17]

وَلَا يَمْلِكُ الَّذِينَ يَدْعُونَ مِنْ دُونِهِ الشَّفَاعَةَ إِلَّا مَنْ شَهِدَ بِالْحَقِّ وَهُمْ يَعْلَمُونَ ﴿٨٦﴾

87. ಇವರನ್ನು ಸೃಷ್ಟಿಸಿದವನಾರೆಂದು ನೀವು ಇವರೊಡನೆ ಕೇಳಿದರೆ

وَلَئِنْ سَأَلْتَهُمْ مَنْ خَلَقَهُمْ لَيَقُولُنَّ

17. ಅರ್ಥಾತ್- ಒಬ್ಬ ವ್ಯಕ್ತಿ ತಾನು ಯಾರನ್ನು ಆರಾಧ್ಯರಾಗಿ ಮಾಡಿಕೊಂಡಿದ್ದನೋ ಅವರು ಖಂಡಿತವಾಗಿಯೂ ಶಿಫಾರಸು ಮಾಡುವ ಸಾಮರ್ಥ್ಯ ಹೊಂದಿದ್ದಾರೆ ಮತ್ತು ಅವರು ಯಾರಿಗೆ ಬೇಕಾದರೂ ಕ್ಷಮೆ ದೊರಕಿಸಿ ಕೊಡುವಷ್ಟು ಪ್ರಭಾವವನ್ನು ಅಲ್ಲಾಹನ ಬಳಿ ಹೊಂದಿದ್ದಾರೆ ಎಂದು ಹೇಳುವುದಾದರೆ,- ಅವರು ಜ್ಞಾನದ ಆಧಾರದಲ್ಲಿ ತಮ್ಮ ಮಾತು ಸತ್ಯವಾದುದೆಂದು ಸಾಕ್ಷ್ಯವಹಿಸಬಲ್ಲರೇ?

ಅಲ್ಲಾಹನೆಂದು ಸ್ವತಃ ಇವರೇ ಹೇಳುವರು.[18] ಹೀಗಿರುತ್ತ ಇವರು ಎಲ್ಲಿಂದ ಮೋಸ ಹೋಗುತ್ತಿದ್ದಾರೆ?

اللّٰهُ فَاَنّٰى يُؤْفَكُوْنَ ﴿٨٧﴾

88. "ಪ್ರಭೂ, ಇವರು ವಿಶ್ವಾಸವಿಡುವವರಲ್ಲ" ಎಂಬ ಸಂದೇಶವಾಹಕರ ಮಾತಿನಾಣೆ![19]

وَقِيْلِهٖ يٰرَبِّ اِنَّ هٰٓؤُلَآءِ قَوْمٌ لَّا يُؤْمِنُوْنَ ﴿٨٨﴾

89. ಸಂದೇಶವಾಹಕರೇ ಇವರನ್ನು ಮನ್ನಿಸಿರಿ ಮತ್ತು ನಿಮಗೆ ಸಲಾಮ್(ಶಾಂತಿ) ಎಂದು ಹೇಳಿರಿ. ಸದ್ಯವೇ ಇವರಿಗೆ ತಿಳಿದು ಬರುವುದು.

فَاصْفَحْ عَنْهُمْ وَقُلْ سَلٰمٌ ۗ فَسَوْفَ يَعْلَمُوْنَ ﴿٨٩﴾

---

18. ಈ ಸೂಕ್ತಕ್ಕೆ ಎರಡು ಅರ್ಥಗಳಿವೆ. ಮೊದಲನೆಯದಾಗಿ ನೀವು ಅವರೊಡನೆಯೇ, "ನಿಮ್ಮನ್ನು ಸೃಷ್ಟಿಸಿದವರು ಯಾರು?" ಎಂದು ಕೇಳಿದರೆ ಅವರು 'ಅಲ್ಲಾಹ್' ಎಂದು ಹೇಳುವರು. ಎರಡನೆಯದಾಗಿ ನೀವು ಅವರೊಡನೆ, "ನಿಮ್ಮ ಈ ಆರಾಧ್ಯರುಗಳ ಸೃಷ್ಟಿಕರ್ತ ಯಾರು?" ಎಂದು ಕೇಳಿದರೆ ಅವರು 'ಅಲ್ಲಾಹ್' ಎಂದು ಹೇಳುವರು.

19. ಅರ್ಥಾತ್- "ಓ ಪ್ರಭೂ! ಇವರು ವಿಶ್ವಾಸವಿಡುವವರಲ್ಲ" ಎಂಬ ಪ್ರವಾದಿಯ ಮಾತಿನ ಆಣೆ, ಇವರು ವಿಚಿತ್ರ ರೀತಿಯ ಆತ್ಮವಂಚನೆಯಲ್ಲಿ ಸಿಲುಕಿದ್ದಾರೆ. ಅವರ ಮತ್ತು ಅವರ ಆರಾಧ್ಯರುಗಳ ಸೃಷ್ಟಿಕರ್ತ ಅಲ್ಲಾಹನೇ ಆಗಿದ್ದಾನೆಂದು ಅವರು ಸ್ವತಃ ಒಪ್ಪಿಕೊಳ್ಳುತ್ತಾರೆ. ಆದರೂ ಸೃಷ್ಟಿಕರ್ತನನ್ನು ಬಿಟ್ಟು ಸೃಷ್ಟಿಯ ಆರಾಧನೆಗಾಗಿ ಅವರು ಪಟ್ಟು ಹಿಡಿದಿದ್ದಾರೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹಾಮೀಮ್.

حٰمٓ ۚ ﴿١﴾

2. ಈ ಸುವ್ಯಕ್ತ ಗ್ರಂಥದಾಣೆ-

وَالْكِتٰبِ الْمُبِيْنِ ۙ ﴿٢﴾

3. ನಿಶ್ಚಯವಾಗಿಯೂ ನಾವು ಇದನ್ನು ಒಂದು ಮಹಾ ಸಮೃದ್ಧ ರಾತ್ರಿಯಲ್ಲಿ ಅವತೀರ್ಣಗೊಳಿಸಿದೆವು.[1] ಏಕೆಂದರೆ, ನಾವು ಜನರಿಗೆ ಎಚ್ಚರಿಕೆ ನೀಡಲಿಚ್ಛಿಸಿದೆವು.

اِنَّاۤ اَنْزَلْنٰهُ فِيْ لَيْلَةٍ مُّبٰرَكَةٍ اِنَّا كُنَّا مُنْذِرِيْنَ ﴿٣﴾

4-5. ಅದು ನಮ್ಮ ಅಪ್ಪಣೆಯಿಂದ ಸಕಲ ವಿಷಯಗಳ ಯುಕ್ತಿಪೂರ್ಣವಾದ ತೀರ್ಪು ಸಾದರ ಗೊಳಿಸುವಂತಹ ರಾತ್ರಿಯಾಗಿತ್ತು.[2] ನಾವು ಓರ್ವ ಸಂದೇಶವಾಹಕನನ್ನು ಕಳುಹಿಸಲಿದ್ದೆವು.

فِيْهَا يُفْرَقُ كُلُّ اَمْرٍ حَكِيْمٍ ﴿٤﴾ اَمْرًا مِّنْ عِنْدِنَا ؕ اِنَّا كُنَّا مُرْسِلِيْنَ ﴿٥﴾

6. ನಿನ್ನ ಪ್ರಭುವಿನ ಅನುಗ್ರಹದ ರೂಪದಲ್ಲಿ! ನಿಶ್ಚಯವಾಗಿಯೂ ಅವನೇ ಸರ್ವವನ್ನೂ ಆಲಿಸುವವನು ಮತ್ತು ಸರ್ವವನ್ನೂ ಅರಿಯುವವನಾಗಿದ್ದಾನೆ.

رَحْمَةً مِّنْ رَّبِّكَ ؕ اِنَّهٗ هُوَ السَّمِيْعُ الْعَلِيْمُ ﴿٦﴾

7. ಭೂಮಿ-ಆಕಾಶಗಳ ಹಾಗೂ ಅವುಗಳ ನಡುವೆ ಇರುವ ಪ್ರತಿಯೊಂದು ವಸ್ತುವಿನ ಪ್ರಭು; ನೀವು ನಿಜಕ್ಕೂ ನಂಬಿಕೆಯುಳ್ಳವರಾಗಿದ್ದರೆ.

رَبِّ السَّمٰوٰتِ وَالْاَرْضِ وَمَا بَيْنَهُمَا ۘ اِنْ كُنْتُمْ مُّوْقِنِيْنَ ﴿٧﴾

8. ಅವನ ಹೊರತು ಇತರ ಆರಾಧ್ಯರಾರೂ ಇಲ್ಲ.[3] ಅವನೇ

لَاۤ اِلٰهَ اِلَّا هُوَ يُحْيٖ وَيُمِيْتُ ؕ رَبُّكُمْ

1. ಅರ್ಥಾತ್- 'ಲೈಲತುಲ್ ಕದ್ರ್' ಅಥವಾ ವಿಧಿನಿರ್ಣಾಯಕ ರಾತ್ರಿ.
2. ಅಲ್ಲಾಹನ ದಿವ್ಯ ವ್ಯವಸ್ಥೆಯಲ್ಲಿ ವ್ಯಕ್ತಿ, ಜನಾಂಗ ಮತ್ತು ರಾಷ್ಟ್ರಗಳ ವಿಧಿಯನ್ನು ನಿಶ್ಚಯಿಸಿ ಅದನ್ನು ದೇವಚರರಿಗೆ ಒಪ್ಪಿಸಿ ಬಿಡುವಂತಹ ರಾತ್ರಿಯೊಂದಿದೆ. ಅನಂತರ ಅವರು ಅದನ್ನೇ ಕೃತಿಗಿಳಿಸುತ್ತಾರೆ ಎಂದು ಇದರಿಂದ ತಿಳಿದು ಬರುತ್ತದೆ.
3. ಆರಾಧ್ಯ ಎಂದರೆ ದಾಸ್ಯ-ಆರಾಧನೆಗಳಿಗೆ ಅರ್ಹನಾದ ನೈಜ ಆರಾಧ್ಯ.

ಜೀವಂತಗೊಳಿಸುತ್ತಾನೆ ಮತ್ತು ಅವನೇ ಮರಣ ಕೊಡುತ್ತಾನೆ. ಅವನೇ ನಿಮ್ಮ ಪ್ರಭು ಮತ್ತು ನಿಮಗಿಂತ ಮುಂಚೆ ಗತಿಸಿದ ಪೂರ್ವಜರ ಪ್ರಭು.

وَرَبُّ اٰبَآئِكُمُ الْاَوَّلِيْنَ ﴿٨﴾

9. (ಆದರೆ ವಾಸ್ತವದಲ್ಲಿ ಇವರಿಗೆ ನಂಬಿಕೆ ಇಲ್ಲ.) ಅಷ್ಟೇ ಅಲ್ಲ ಇವರು ಸಂಶಯದಲ್ಲೇ ಬಿದ್ದು ಆಟವಾಡುತ್ತಿದ್ದಾರೆ.

بَلْ هُمْ فِيْ شَكٍّ يَّلْعَبُوْنَ ﴿٩﴾

10-11. ಸರಿ, ಆಕಾಶವು ಸ್ಪಷ್ಟವಾದ ಹೊಗೆಯೊಂದಿಗೆ ಬಂದು ಜನರನ್ನು ಆವರಿಸಿಕೊಳ್ಳಲಿರುವ ಆ ದಿನಕ್ಕಾಗಿ ಕಾಯಿರಿ. ಇದುವೇ ಯಾತನಾಮಯ ಶಿಕ್ಷೆಯಾಗಿದೆ.

فَارْتَقِبْ يَوْمَ تَاْتِي السَّمَآءُ بِدُخَانٍ مُّبِيْنٍ ﴿١٠﴾
يَّغْشَى النَّاسَ ؕ هٰذَا عَذَابٌ اَلِيْمٌ ﴿١١﴾

12. (ಇವರೀಗ) ನಮ್ಮ ಪ್ರಭು! ನಮ್ಮ ಮೇಲಿಂದ ಈ ಯಾತನೆಯನ್ನು ನೀಗಿಸು, ನಾವು ಸತ್ಯವಿಶ್ವಾಸಿಗಳಾಗುತ್ತೇವೆ (ಎನ್ನುತ್ತಿದ್ದಾರೆ)[4] -

رَبَّنَا اكْشِفْ عَنَّا الْعَذَابَ اِنَّا مُؤْمِنُوْنَ ﴿١٢﴾

13. ಇವರ ಅನಾಸ್ಥೆಯು ದೂರವಾಗುವುದೆಂದು? ಇವರ ಬಳಿಗೆ ಪ್ರತ್ಯಕ್ಷ ಸಂದೇಶವಾಹಕ ಬಂದಿದ್ದರು.[5]

اَنّٰى لَهُمُ الذِّكْرٰى وَقَدْ جَآءَهُمْ رَسُوْلٌ مُّبِيْنٌ ﴿١٣﴾

14. ಆದರೂ ಇವರು ಅವರ ಕಡೆಗೆ ಗಮನ ಹರಿಸಲಿಲ್ಲ ಮತ್ತು "ಇವನೊಬ್ಬ ಕಲಿಸಲ್ಪಟ್ಟ ಹುಚ್ಚ" ಎಂದರು.

ثُمَّ تَوَلَّوْا عَنْهُ وَقَالُوْا مُعَلَّمٌ مَّجْنُوْنٌ ﴿١٤﴾

15. ನಾವು ಯಾತನೆಯನ್ನು ಕಿಂಚಿತ್ ಸರಿಸಿಬಿಟ್ಟರೆ ನೀವು ಮೊದಲು ಮಾಡುತ್ತಿದ್ದುದನ್ನೇ ಪುನಃ ಮಾಡುವಿರಿ.

اِنَّا كَاشِفُوا الْعَذَابِ قَلِيْلًا اِنَّكُمْ عَآئِدُوْنَ ﴿١٥﴾

16. ನಾವು ಭಾರೀ ಹೊಡೆತ ನೀಡಲಿರುವ ದಿನವೇ ನಾವು ನಿಮ್ಮ ಮೇಲೆ ಸೇಡು ತೀರಿಸುವ ದಿನವಾಗಿರುವುದು.

يَوْمَ نَبْطِشُ الْبَطْشَةَ الْكُبْرٰى ۚ اِنَّا مُنْتَقِمُوْنَ ﴿١٦﴾

17. ನಾವು ಇವರಿಗಿಂತ ಮುಂಚೆ ಫಿರ್‌ಔನನ ಜನಾಂಗವನ್ನು ಇದೇ ಪರೀಕ್ಷೆಗೆ ಒಳಪಡಿಸಿದ್ದೆವು. ಅವರ ಬಳಿಗೆ ಓರ್ವ ಸನ್ಮಾನ್ಯ ಸಂದೇಶವಾಹಕರು ಬಂದರು-

وَلَقَدْ فَتَنَّا قَبْلَهُمْ قَوْمَ فِرْعَوْنَ وَجَآءَهُمْ
رَسُوْلٌ كَرِيْمٌ ﴿١٧﴾

18. (ಅವರು ಹೀಗೆ ಹೇಳಿದರು)- "ಅಲ್ಲಾಹನ ದಾಸರನ್ನು ನನ್ನ ವಶಕ್ಕೆ ಒಪ್ಪಿಸಿ ಬಿಡಿರಿ. ನಾನು ನಿಮ್ಮ ಪಾಲಿಗೆ ಓರ್ವ ಪ್ರಾಮಾಣಿಕ ಸಂದೇಶವಾಹಕನಾಗಿದ್ದೇನೆ-

اَنْ اَدُّوْۤا اِلَيَّ عِبَادَ اللّٰهِ ؕ اِنِّيْ لَكُمْ
رَسُوْلٌ اَمِيْنٌ ﴿١٨﴾

4. ಈ ಸೂಕ್ತ ಮತ್ತು 16ನೆಯ ಸೂಕ್ತದಲ್ಲಿ ನಿರ್ಣಾಯಕ ದಿನದ ಯಾತನೆಯ ಪ್ರಸ್ತಾಪವಿದೆ. 15ನೆಯ ಸೂಕ್ತದಲ್ಲಿರುವ ಯಾತನೆಯ ಪ್ರಸ್ತಾಪ ಈ ಅಧ್ಯಾಯದ ಅವತೀರ್ಣದ ವೇಳೆ ಮಕ್ಕಾದ ಜನರು ಈಡಾಗಿದ್ದ 'ಬರಗಾಲ'ದ ಯಾತನೆಯಾಗಿದೆ.

5. ಅರ್ಥಾತ್- ಪ್ರವಾದಿತ್ವವು ಅತ್ಯಂತ ವ್ಯಕ್ತವಾಗಿರುವಂತಹ ಪ್ರವಾದಿ.

19. ಅಲ್ಲಾಹನ ವಿರುದ್ಧ ವಿದ್ರೋಹವೆಸಗಬೇಡಿ. ನಾನು (ನನ್ನ ಪ್ರವಾದಿತ್ವದ ಬಗ್ಗೆ) ಸುಸ್ಪಷ್ಟ ಪುರಾವೆಯನ್ನು ನಿಮ್ಮ ಮುಂದಿಡುತ್ತೇನೆ.

وَأَنْ لَا تَعْلُوا عَلَى اللَّهِ ۖ إِنِّي آتِيكُمْ بِسُلْطَانٍ مُبِينٍ ١٩

20. ನೀವು ನನ್ನ ಮೇಲೆ ಹಲ್ಲೆ ನಡೆಸುವುದರ ಬಗ್ಗೆ ನಾನು ನನ್ನ ಮತ್ತು ನಿಮ್ಮ ಪ್ರಭುವಿನ ಅಭಯ ಪಡೆದಿರುತ್ತೇನೆ.

وَإِنِّي عُذْتُ بِرَبِّي وَرَبِّكُمْ أَنْ تَرْجُمُونِ ٢٠

21. ನೀವು ನನ್ನ ಮಾತು ಕೇಳದಿದ್ದರೆ ನನ್ನ ಮೇಲೆ ಕೈ ಮಾಡುವುದರಿಂದ ದೂರವಿರಿ."

وَإِنْ لَمْ تُؤْمِنُوا لِي فَاعْتَزِلُونِ ٢١

22. ಕೊನೆಗೆ ಅವರು ತಮ್ಮ ಪ್ರಭುವನ್ನು ಕೂಗಿ, "ಇವರೊಂದು ಅಪರಾಧಿ ಜನಾಂಗದವರಾಗಿದ್ದಾರೆ" ಎಂದರು.

فَدَعَا رَبَّهُ أَنَّ هَٰؤُلَاءِ قَوْمٌ مُجْرِمُونَ ٢٢

23. (ಅದಕ್ಕೆ ಉತ್ತರವಾಗಿ ಹೀಗೆ ಹೇಳಲಾಯಿತು) "ಹಾಗಿದ್ದರೆ ನೀವು ರಾತೋರಾತ್ರಿ ನನ್ನ ದಾಸರನ್ನು ಕರೆದುಕೊಂಡು ಹೋಗಿಬಿಡಿರಿ. ನಿಮ್ಮನ್ನು ಬೆನ್ನಟ್ಟಲಾಗುವುದು-

فَأَسْرِ بِعِبَادِي لَيْلًا إِنَّكُمْ مُتَّبَعُونَ ٢٣

24. ಸಮುದ್ರವನ್ನು ಅದರ ಪಾಡಿಗೆ ತೆರೆದೇ ಇಡಲು ಬಿಡಿರಿ. ಈ ಸೇನೆಯು ಸಂಪೂರ್ಣ ಮುಳುಗಿ ಹೋಗುವುದು."

وَاتْرُكِ الْبَحْرَ رَهْوًا ۖ إِنَّهُمْ جُنْدٌ مُغْرَقُونَ ٢٤

25-26. ಅವರು ಅದೆಷ್ಟೋ ಉದ್ಯಾನಗಳನ್ನೂ ಚಿಲುಮೆಗಳನ್ನೂ ಹೊಲಗಳನ್ನೂ ಭವ್ಯ ಅರಮನೆಗಳನ್ನೂ ಬಿಟ್ಟು ಹೋದರು.

كَمْ تَرَكُوا مِنْ جَنَّاتٍ وَعُيُونٍ ٢٥ وَزُرُوعٍ وَمَقَامٍ كَرِيمٍ ٢٦

27. ಅವರು ಸುಖಿಸುತ್ತಿದ್ದ ಎಷ್ಟೋ ಭೋಗ ಸಾಮಗ್ರಿಗಳು ಅವರ ಹಿಂದೆಯೇ ಉಳಿದು ಬಿಟ್ಟವು-

وَنَعْمَةٍ كَانُوا فِيهَا فَاكِهِينَ ٢٧

28. ಅವರ ಅಂತ್ಯ ಹೀಗಾಯಿತು. ನಾವು ಇತರರನ್ನು ಈ ವಸ್ತುಗಳ ವಾರೀಸುದಾರರಾಗಿ ಮಾಡಿದೆವು.

كَذَٰلِكَ ۖ وَأَوْرَثْنَاهَا قَوْمًا آخَرِينَ ٢٨

29. ತರುವಾಯ ಆಕಾಶವಾಗಲಿ-ಭೂಮಿಯಾಗಲಿ ಅವರಿಗಾಗಿ ರೋದಿಸಲಿಲ್ಲ ಮತ್ತು ಒಂದಿಷ್ಟು ಕಾಲಾವಕಾಶವನ್ನೂ ಅವರಿಗೆ ನೀಡಲಾಗಲಿಲ್ಲ.

فَمَا بَكَتْ عَلَيْهِمُ السَّمَاءُ وَالْأَرْضُ وَمَا كَانُوا مُنْظَرِينَ ٢٩

30-31. ಹೀಗೆ ನಾವು ಬನೀಇಸ್ರಾಈಲರನ್ನು ನಿಂದನೀಯ

وَلَقَدْ نَجَّيْنَا بَنِي إِسْرَائِيلَ مِنَ الْعَذَابِ الْمُهِينِ ٣٠

ಯಾತನೆಯಿಂದಲೂ ಮಿತಿಮೀರಿ ಸಾಗುವವರ ಪೈಕಿ ನಿಜಕ್ಕೂ ಅತ್ಯಂತ ಮೇಲ್ಮಟ್ಟದವನಾಗಿದ್ದ ಫಿರ್‌ಔನನಿಂದಲೂ ಮುಕ್ತಿ ನೀಡಿದೆವು.

مِنْ فِرْعَوْنَ ۚ إِنَّهُ كَانَ عَالِيًا مِّنَ الْمُسْرِفِينَ ﴿٣١﴾

32. ನಾವು, ಅವರ ಅವಸ್ಥೆಯನ್ನು ತಿಳಿದಿರುತ್ತಲೇ ಅವರಿಗೆ ಜಗತ್ತಿನ ಇತರ ಜನಾಂಗಗಳ ಮೇಲೆ ಪ್ರಾಶಸ್ತ್ಯ ನೀಡಿದೆವು-

وَلَقَدِ اخْتَرْنَاهُمْ عَلَىٰ عِلْمٍ عَلَى الْعَالَمِينَ ﴿٣٢﴾

33. ಮತ್ತು ಸುಸ್ಪಷ್ಟ ಪರೀಕ್ಷೆಯಿದ್ದ ನಿದರ್ಶನಗಳನ್ನು ಅವರಿಗೆ ತೋರಿಸಿ ಕೊಟ್ಟೆವು.

وَآتَيْنَاهُم مِّنَ الْآيَاتِ مَا فِيهِ بَلَاءٌ مُّبِينٌ ﴿٣٣﴾

34. ಇವರು ಹೇಳುತ್ತಾರೆ:

إِنَّ هَٰؤُلَاءِ لَيَقُولُونَ ﴿٣٤﴾

35. "ನಮ್ಮ ಪ್ರಥಮ ಬಾರಿಯ ಮೃತ್ಯುವಿನ ಹೊರತು ಬೇರೇನೂ ಇಲ್ಲ. ಆ ಬಳಿಕ ನಾವು ಪುನಃ ಎಬ್ಬಿಸಲ್ಪಡಲಾರೆವು.

إِنْ هِيَ إِلَّا مَوْتَتُنَا الْأُولَىٰ وَمَا نَحْنُ بِمُنشَرِينَ ﴿٣٥﴾

36. ನೀವು ಸತ್ಯವಾದಿಯಾಗಿದ್ದರೆ ನಮ್ಮ ಪೂರ್ವಜರನ್ನು ಎಬ್ಬಿಸಿ ತನ್ನಿರಿ."

فَأْتُوا بِآبَائِنَا إِن كُنتُمْ صَادِقِينَ ﴿٣٦﴾

37. ಇವರು ಉತ್ತಮರೋ ಅಥವಾ 'ತುಬ್ಬಅ್' ಜನಾಂಗ ಮತ್ತು ಅದಕ್ಕಿಂತ ಹಿಂದಿನವರು ಉತ್ತಮರೋ[6] ಅವರು ಅಪರಾಧಿಗಳಾಗಿದ್ದುದರಿಂದಲೇ ನಾವು ಅವರನ್ನು ನಾಶಗೊಳಿಸಿದೆವು.

أَهُمْ خَيْرٌ أَمْ قَوْمُ تُبَّعٍ وَالَّذِينَ مِن قَبْلِهِمْ ۚ أَهْلَكْنَاهُمْ ۖ إِنَّهُمْ كَانُوا مُجْرِمِينَ ﴿٣٧﴾

38. ಈ ಭೂಮಿ-ಆಕಾಶಗಳನ್ನೂ ಅವುಗಳ ನಡುವೆ ಇರುವ ವಸ್ತುಗಳನ್ನೂ ನಾವೇನೂ ಲೀಲೆಗಾಗಿ ಉಂಟು ಮಾಡಿದುದಲ್ಲ.

وَمَا خَلَقْنَا السَّمَاوَاتِ وَالْأَرْضَ وَمَا بَيْنَهُمَا لَاعِبِينَ ﴿٣٨﴾

39. ನಾವು ಅವುಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿದ್ದೇವೆ. ಆದರೆ ಇವರಲ್ಲಿ ಹೆಚ್ಚಿನವರು ಅರಿಯುವುದಿಲ್ಲ.

مَا خَلَقْنَاهُمَا إِلَّا بِالْحَقِّ وَلَٰكِنَّ أَكْثَرَهُمْ لَا يَعْلَمُونَ ﴿٣٩﴾

40. ಇವರೆಲ್ಲರೂ ಎಬ್ಬಿಸಲ್ಪಡಲು ನಿಶ್ಚಿತವಾಗಿರುವ ಸಮಯವು ತೀರ್ಪಿನ ದಿನವಾಗಿದೆ.

إِنَّ يَوْمَ الْفَصْلِ مِيقَاتُهُمْ أَجْمَعِينَ ﴿٤٠﴾

41. ಅಂದು ಯಾವನೇ ನಿಕಟ ಬಂಧು ತನ್ನ ನಿಕಟಬಂಧುವಿಗೆ ಸ್ವಲ್ಪವೂ ಉಪಯುಕ್ತನಾಗಲಾರನು ಮತ್ತು ಅವರಿಗೆ ಎಲ್ಲಿಂದಲೂ ಸಹಾಯ ಒದಗಲಾರದು.

يَوْمَ لَا يُغْنِي مَوْلًى عَن مَّوْلًى شَيْئًا وَلَا هُمْ يُنصَرُونَ ﴿٤١﴾

6. 'ತುಬ್ಬಅ್' ಎಂಬುದು 'ಹಿಮ್‌ಯರ್' ಗೋತ್ರದ ರಾಜರುಗಳ ಬಿರುದಾಗಿತ್ತು. ಇದು ಬೇರೆ ಬೇರೆ ದೇಶದ ರಾಜರುಗಳಿಗೆ 'ಕಿಸ್ರಾ', 'ಕೈಸರ್' ಮತ್ತು 'ಫಿರ್‌ಔನ್' ಮುಂತಾದ ಹೆಸರುಗಳಿದ್ದಂತೆಯೇ ಇದೆ. ಇವರು 'ಸಬಾ' ಜನಾಂಗದ ಒಂದು ಶಾಖೆಯಾಗಿದ್ದರು. ಅರೇಬಿಯಾದಲ್ಲಿ ಇವರು ಶತಮಾನಗಳ ಕಾಲ ಆಡಳಿತ ನಡೆಸುತ್ತಿದ್ದರು.

42. ಯಾರ ಮೇಲಾದರೂ ಅಲ್ಲಾಹನೇ ಕೃಪೆ ತೋರುವುದರ ಹೊರತು. ಅವನು ಮಹಾಪ್ರಬಲನೂ ಕರುಣಾನಿಧಿಯೂ ಆಗಿರುತ್ತಾನೆ.

إِلَّا مَن رَّحِمَ اللَّهُ ۚ إِنَّهُ هُوَ الْعَزِيزُ الرَّحِيمُ ﴿٤٢﴾

43. 'ಝಕ್ಕೂಮ್' ವೃಕ್ಷವು-

إِنَّ شَجَرَتَ الزَّقُّومِ ﴿٤٣﴾

44. ಪಾಪಿಗಳ ಆಹಾರವಾಗಿರುವುದು-

طَعَامُ الْأَثِيمِ ﴿٤٤﴾

45. ಎಣ್ಣೆಯ ಮಡ್ಡಿಯಂತೆ.- ಅದು ಹೊಟ್ಟೆಯೊಳಗೆ ಕುದಿಯುತ್ತಿರುವುದು.

كَالْمُهْلِ يَغْلِي فِي الْبُطُونِ ﴿٤٥﴾

46. ಬಿಸಿ ನೀರು ಕುದಿಯುತ್ತಿರುವಂತೆ.

كَغَلْيِ الْحَمِيمِ ﴿٤٦﴾

47. "ಇವನನ್ನು ಹಿಡಿಯಿರಿ, ದರದರನೆ ಎಳೆಯುತ್ತ ನರಕದ ನಡು ಮಧ್ಯಕ್ಕೆ ಒಯ್ಯಿರಿ-

خُذُوهُ فَاعْتِلُوهُ إِلَىٰ سَوَاءِ الْجَحِيمِ ﴿٤٧﴾

48. ಮತ್ತು ಇವನ ತಲೆಯ ಮೇಲೆ ಕುದಿಯುವ ನೀರಿನ ಯಾತನೆಯನ್ನು ಸುರಿದು ಬಿಡಿರಿ.

ثُمَّ صُبُّوا فَوْقَ رَأْسِهِ مِنْ عَذَابِ الْحَمِيمِ ﴿٤٨﴾

49. ಇದರ ರುಚಿಯನ್ನು ಸವಿದುಕೋ. ನೀನೊಬ್ಬ ಮಹಾ ಮರ್ಯಾದಸ್ಥ!

ذُقْ إِنَّكَ أَنتَ الْعَزِيزُ الْكَرِيمُ ﴿٤٩﴾

50. ನೀವೆಲ್ಲ ಸಂದೇಹ ಪಡುತ್ತಿದ್ದುದು ಇದರ ಬಗೆಗೇ ಆಗಿದೆ."

إِنَّ هَٰذَا مَا كُنتُم بِهِ تَمْتَرُونَ ﴿٥٠﴾

51. ದೇವಭಯವುಳ್ಳವರು ಶಾಂತಿಧಾಮದಲ್ಲಿರುವರು,

إِنَّ الْمُتَّقِينَ فِي مَقَامٍ أَمِينٍ ﴿٥١﴾

52. ಸ್ವರ್ಗೋದ್ಯಾನಗಳಲ್ಲೂ ಚಿಲುಮೆಗಳಲ್ಲೂ-

فِي جَنَّاتٍ وَعُيُونٍ ﴿٥٢﴾

53. 'ರೇಶ್ಮೆ- ಜರತಾರಿ' ಬಟ್ಟೆಗಳನ್ನು ಉಟ್ಟುಕೊಂಡು ಎದುರು ಬದುರಾಗಿ ಕುಳಿತಿರುವರು.

يَلْبَسُونَ مِن سُندُسٍ وَإِسْتَبْرَقٍ مُّتَقَابِلِينَ ﴿٥٣﴾

54. ಇದು ಅವರ ವೈಭವ ಮತ್ತು ನಾವು ಹರಿಣಾಕ್ಷಿಗಳುಳ್ಳ ಸುಂದರಾಂಗನೆಯರೊಂದಿಗೆ ಅವರ ವಿವಾಹ ಮಾಡಿಸುವೆವು.

كَذَٰلِكَ وَزَوَّجْنَاهُم بِحُورٍ عِينٍ ﴿٥٤﴾

55. ಅಲ್ಲಿ ಅವರು ನಿಶ್ಚಿಂತರಾಗಿ ಎಲ್ಲ ತರದ ರುಚಿಕರವಾದ ವಸ್ತುಗಳನ್ನು ತರಿಸಿಕೊಳ್ಳುವರು.

يَدْعُونَ فِيهَا بِكُلِّ فَاكِهَةٍ آمِنِينَ ﴿٥٥﴾

56-57. ಭೂಲೋಕದಲ್ಲಿ ಬಂದ ಮರಣದ ಹೊರತು ಅಲ್ಲಿ ಅವರೆಂದೂ ಮರಣದ ರುಚಿಯನ್ನು ಸವಿಯಲಾರರು. ಅಲ್ಲಾಹನು ತನ್ನ ಅನುಗ್ರಹದಿಂದ ಅವರನ್ನು ನರಕ ಯಾತನೆಯಿಂದ ರಕ್ಷಿಸುವನು. ಇದುವೇ ಅತಿ ದೊಡ್ಡ ಯಶಸ್ಸು.

لَا يَذُوقُونَ فِيهَا الْمَوْتَ إِلَّا الْمَوْتَةَ الْأُولَىٰ ۖ وَوَقَاهُمْ عَذَابَ الْجَحِيمِ ﴿٥٦﴾ فَضْلًا مِّن رَّبِّكَ ۚ ذَٰلِكَ هُوَ الْفَوْزُ الْعَظِيمُ ﴿٥٧﴾

58. ಸಂದೇಶವಾಹಕರೇ, ಇವರು ಉಪದೇಶ ಪಡೆಯಲೆಂದು ನಾವು ಈ ಗ್ರಂಥವನ್ನು ನಿಮ್ಮ ಭಾಷೆಯಲ್ಲಿ ಸರಳಗೊಳಿಸಿದ್ದೇವೆ.

فَإِنَّمَا يَسَّرْنَاهُ بِلِسَانِكَ لَعَلَّهُمْ يَتَذَكَّرُونَ ﴿٥٨﴾

59. ಇನ್ನು ನೀವೂ ಕಾಯಿರಿ, ಇವರೂ ಕಾಯುತ್ತಿದ್ದಾರೆ.

فَارْتَقِبْ إِنَّهُم مُّرْتَقِبُونَ ﴿٥٩﴾

---







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللهِ الرَّحْمٰنِ الرَّحِيْمِ

1. ಹಾಮೀಮ್.

حٰمٓ ①

2. ಈ ಗ್ರಂಥದ ಅವತೀರ್ಣವು ಪ್ರಬಲನೂ ಯುಕ್ತಿಪೂರ್ಣನೂ ಆದ ಅಲ್ಲಾಹನ ಕಡೆಯಿಂದ ಆಗಿರುತ್ತದೆ.

تَنْزِيْلُ الْكِتٰبِ مِنَ اللهِ الْعَزِيْزِ الْحَكِيْمِ ②

3. ನಿಶ್ಚಯವಾಗಿಯೂ ಸತ್ಯವಿಶ್ವಾಸಿಗಳಿಗೆ ಭೂಮಿ-ಆಕಾಶಗಳಲ್ಲಿ ಅನೇಕ ನಿದರ್ಶನಗಳಿವೆ.

اِنَّ فِي السَّمٰوٰتِ وَالْاَرْضِ لَاٰيٰتٍ لِّلْمُؤْمِنِيْنَ ③

4. ನಿಮ್ಮ ಸ್ವಂತ ಸೃಷ್ಟಿಯಲ್ಲಿ ಮತ್ತು (ಭೂಮಿಯ ಮೇಲೆ) ಅಲ್ಲಾಹನು ಹಬ್ಬಿಸುತ್ತಿರುವ ಪ್ರಾಣಿಗಳಲ್ಲಿ, ದೃಢ ನಂಬಿಕೆಯುಳ್ಳವರಿಗೆ ದೊಡ್ಡ ನಿದರ್ಶನಗಳಿವೆ.

وَفِيْ خَلْقِكُمْ وَمَا يَبُثُّ مِنْ دَآبَّةٍ اٰيٰتٌ لِّقَوْمٍ يُّوْقِنُوْنَ ④

5. ರಾತ್ರೆ ಹಗಲುಗಳ ವ್ಯತ್ಯಾಸದಲ್ಲಿ, ಅಲ್ಲಾಹನು ಆಕಾಶದಿಂದ ಜೀವನಾಧಾರವನ್ನಿಳಿಸಿ ಆ ಮೂಲಕ ಸತ್ತ ಭೂಮಿಯನ್ನು ಜೀವಂತಗೊಳಿಸುವುದರಲ್ಲಿ ಮತ್ತು ಮಾರುತಗಳ ಸಂಚಲನದಲ್ಲಿ ಬುದ್ಧಿಶಕ್ತಿಯುಳ್ಳವರಿಗೆ ಅನೇಕ ನಿದರ್ಶನಗಳಿವೆ.

وَاخْتِلَافِ الَّيْلِ وَالنَّهَارِ وَمَآ اَنْزَلَ اللهُ مِنَ السَّمَآءِ مِنْ رِّزْقٍ فَاَحْيَا بِهِ الْاَرْضَ بَعْدَ مَوْتِهَا وَتَصْرِيْفِ الرِّيٰحِ اٰيٰتٌ لِّقَوْمٍ يَّعْقِلُوْنَ ⑤

6. ಇವು ಅಲ್ಲಾಹನ ನಿದರ್ಶನಗಳಾಗಿದ್ದು ಇವುಗಳನ್ನು ನಾವು ನಿಮ್ಮ ಮುಂದೆ ಸುವ್ಯಕ್ತವಾಗಿ ವಿವರಿಸುತ್ತಿದ್ದೇವೆ. ಹೀಗಿರುತ್ತಾ ಅಲ್ಲಾಹನ ಹಾಗೂ ಅವನ ವಚನಗಳ ಬಳಿಕ ಇನ್ನಾವ ವಿಷಯದ ಮೇಲೆ ಜನರು ವಿಶ್ವಾಸವಿರಿಸುವರು.

تِلْكَ اٰيٰتُ اللهِ نَتْلُوْهَا عَلَيْكَ بِالْحَقِّ ۚ فَبِاَيِّ حَدِيْثٍ بَعْدَ اللهِ وَاٰيٰتِهٖ يُؤْمِنُوْنَ ⑥

7. ಪ್ರತಿಯೊಬ್ಬ ಸುಳ್ಳಾರೋಪಿ ದುಷ್ಟನಿಗೆ ವಿನಾಶವಿದೆ-

وَيْلٌ لِّكُلِّ اَفَّاكٍ اَثِيْمٍ ⑦

8. ಅವನ ಮುಂದೆ ಅಲ್ಲಾಹನ ಸೂಕ್ತಗಳನ್ನು ಓದಿ ಹೇಳಲಾಗುತ್ತದೆ.

يَّسْمَعُ اٰيٰتِ اللهِ تُتْلٰى عَلَيْهِ ثُمَّ يُصِرُّ

ಅವನು ಅದನ್ನು ಆಲಿಸುತ್ತಾನೆ. ಅನಂತರ ಅಹಂಕಾರದಿಂದ ಅವನು ಕೇಳಲೇ ಇಲ್ಲವೋ ಎಂಬಂತೆ ತನ್ನ ನಿಷೇಧ ನೀತಿಯಲ್ಲಿ ಸ್ಥಿರವಾಗಿರುತ್ತಾನೆ. ಇಂತಹವನಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ಕೊಟ್ಟುಬಿಡಿರಿ.

مستكبرا كأن لم يسمعها ۖ فبشره بعذاب أليم ⑧

9. ನಮ್ಮ ಸೂಕ್ತಗಳ ಪೈಕಿ ಏನಾದರೊಂದು ವಿಷಯ ಅವನಿಗೆ ತಿಳಿದಾಗ ಅವನು ಅವುಗಳನ್ನು ಗೇಲಿ ಮಾಡಲಾರಂಭಿಸುತ್ತಾನೆ. ಇಂತಹ ಎಲ್ಲರಿಗೆ ಅಪಮಾನಕಾರಿ ಯಾತನೆಯಿದೆ.

وإذا علم من آياتنا شيئا اتخذها هزوا ۚ أولئك لهم عذاب مهين ⑨

10. ಅವರ ಮುಂದೆ ನರಕವಿದೆ. ಅವರ ಇಹಲೋಕದ ಯಾವ ಸಂಪಾದನೆಯೂ ಅವರ ಪಾಲಿಗೆ ಕಿಂಚಿತ್ತೂ ಉಪಯುಕ್ತವಾಗ ಲಾರದು ಮತ್ತು ಅವರು ಅಲ್ಲಾಹನನ್ನು ಬಿಟ್ಟು ತಮ್ಮ ರಕ್ಷಕ ಮಿತ್ರರಾಗಿ ಮಾಡಿಕೊಂಡಿರುವವರೂ ಅವರಿಗಾಗಿ ಏನನ್ನೂ ಮಾಡಲಾರರು. ಅವರಿಗೆ ಘೋರ ಯಾತನೆ ಇದೆ.

من ورائهم جهنم ۖ ولا يغني عنهم ما كسبوا شيئا ولا ما اتخذوا من دون الله أولياء ۖ ولهم عذاب عظيم ⑩

11. ಈ ಕುರ್‌ಆನ್ ಸಾದ್ಯಂತ ಮಾರ್ಗದರ್ಶನವಾಗಿದೆ- ಮತ್ತು ತಮ್ಮ ಪ್ರಭುವಿನ ಸೂಕ್ತಗಳನ್ನು ನಿರಾಕರಿಸುವವರಿಗೆ ತೀವ್ರ ವೇದನಾಯುಕ್ತವಾದ ಯಾತನೆ ಇದೆ.

هذا هدى ۖ والذين كفروا بآيات ربهم لهم عذاب من رجز أليم ⑪

12. ಅಲ್ಲಾಹನೇ ನಿಮಗಾಗಿ ಸಮುದ್ರವನ್ನು ನಿಯಂತ್ರಿಸಿ, ಅವನ ಅಪ್ಪಣೆಯಿಂದ ಅದರಲ್ಲಿ ನಾವೆಗಳು ಚಲಿಸುವಂತೆಯೂ ನೀವು ಅವನ ಅನುಗ್ರಹವನ್ನರಸುವಂತೆಯೂ ಕೃತಜ್ಞರಾಗುವಂತೆಯೂ ಮಾಡಿರುವನು.

الله الذي سخر لكم البحر لتجري الفلك فيه بأمره ولتبتغوا من فضله ولعلكم تشكرون ⑫

13. ಅವನು ಭೂಮಿ ಮತ್ತು ಆಕಾಶಗಳ ಸಕಲ ವಸ್ತುಗಳನ್ನು ನಿಮಗಾಗಿ ನಿಯಂತ್ರಿಸಿ ಕೊಟ್ಟನು. ಇವೆಲ್ಲವನ್ನೂ ತನ್ನ ಕಡೆ ಯಿಂದಲೇ[1] ಮಾಡಿದನು. ಆಲೋಚಿಸುವ ಜನರಿಗೆ ಇದರಲ್ಲಿ ಧಾರಾಳ ನಿದರ್ಶನಗಳಿವೆ.

وسخر لكم ما في السماوات وما في الأرض جميعا منه ۚ إن في ذلك لآيات لقوم يتفكرون ⑬

14. ಸಂದೇಶವಾಹಕರೇ, ಅಲ್ಲಾಹನ ಕಡೆಯಿಂದ ದುರ್ದಿನಗಳು ಬರಬಹುದೆಂಬ ಭಯವೇ ಇಲ್ಲದ ಜನರ ದುರ್ವರ್ತನೆಗಳ ಬಗ್ಗೆ

قل للذين آمنوا يغفروا للذين لا يرجون أيام الله ليجزي قوما بما

1. ಇದಕ್ಕೆ ಎರಡು ಅರ್ಥಗಳಿವೆ: ಮೊದಲನೆಯದಾಗಿ ಅಲ್ಲಾಹನ ಈ ಕೊಡುಗೆ ಲೋಕದ ರಾಜರುಗಳಂತಹ ಕೊಡುಗೆಯಲ್ಲ. ಅವರು ಪ್ರಜೆಗಳಂತೆ ಗಳಿಸಿದ ಸಂಪತ್ತನ್ನು ಪ್ರಜೆಗಳ ಪೈಕಿಯೇ ಕೆಲವರಿಗೆ ನೀಡುತ್ತಾರೆ. ಅದಕ್ಕೆ ಪ್ರತಿಯಾಗಿ ನಿಸರ್ಗದ ಸಂಪತ್ತೆಲ್ಲವನ್ನೂ ಅಲ್ಲಾಹನೇ ಸೃಷ್ಟಿಸಿದ್ದಾನೆ ಮತ್ತು ಅವನು ತನ್ನ ವತಿಯಿಂದ ಅದನ್ನು ಮಾನವರಿಗೆ ಪ್ರದಾನ ಮಾಡಿದ್ದಾನೆ. ಎರಡನೆಯದಾಗಿ ಈ ಸಂಪತ್ತನ್ನು ಸೃಷ್ಟಿಸುವಲ್ಲಿ ಅಲ್ಲಾಹನಿಗೆ ಯಾರೂ ಸಹಭಾಗಿಗಳಿಲ್ಲ. ಹಾಗೆಯೇ ಅದನ್ನು ಮನುಷ್ಯರ ಅಧೀನಕ್ಕೆ ಕೊಡುವಲ್ಲಿಯೂ ಇತರ ಯಾರ ಪಾತ್ರವೂ ಇಲ್ಲ. ಅಲ್ಲಾಹನು ಮಾತ್ರ ಅದರ ಸೃಷ್ಟಿಕರ್ತ. ಅವನೇ ಅದನ್ನು ಮಾನವರಿಗೆ ಪ್ರದಾನ ಮಾಡಿದ್ದಾನೆ.

ಕ್ಷಮಾಶೀಲರಾಗಿರಬೇಕೆಂದು ಸತ್ಯವಿಶ್ವಾಸಿಗಳೊಡನೆ ಹೇಳಿರಿ. (ಏಕೆಂದರೆ) ಒಂದು ಪಂಗಡಕ್ಕೆ ಅದರ ದುಡಿಮೆಯ ಫಲವನ್ನು ಸ್ವತಃ ಅಲ್ಲಾಹನೇ ನೀಡುವಂತಾಗಲಿ.

كَانُوا يَكْسِبُونَ ﴿١٤﴾

15. ಯಾರಾದರೂ ಸತ್ಕರ್ಮ ಮಾಡಿದರೆ ಅದರ ಫಲ ಅವನಿಗೇ ಸಿಗುವುದು ಮತ್ತು ದುಷ್ಕರ್ಮವೆಸಗುವವನು ಅದರ ಪರಿಣಾಮವನ್ನು ತಾನೇ ಅನುಭವಿಸುವನು. ಎಲ್ಲರಿಗೂ ತಮ್ಮ ಪ್ರಭುವಿನ ಕಡೆಗೇ ಮರಳಬೇಕಾಗಿದೆ.

مَنْ عَمِلَ صَالِحًا فَلِنَفْسِهِ ۖ وَمَنْ أَسَاءَ فَعَلَيْهَا ۖ ثُمَّ إِلَىٰ رَبِّكُمْ تُرْجَعُونَ ﴿١٥﴾

16. ಇದಕ್ಕೆ ಮುಂಚೆ ನಾವು ಬನೀಇಸ್ರಾಈಲರಿಗೆ ಗ್ರಂಥ, 'ನಿರ್ಧಾರ ಶಕ್ತಿ' ಮತ್ತು ಪ್ರವಾದಿತ್ವ ಪ್ರದಾನ ಮಾಡಿದ್ದೆವು. ನಾವು ಅವರಿಗೆ ಅತ್ಯುತ್ತಮ ಜೀವನ ಸಾಧನಗಳನ್ನು ಕರುಣಿಸಿದೆವು. ಅಖಿಲ ಜಗತ್ತಿನವರ ಮೇಲೆ ಅವರಿಗೆ ಶ್ರೇಷ್ಠತೆ ದಯಪಾಲಿಸಿದೆವು.

وَلَقَدْ آتَيْنَا بَنِي إِسْرَائِيلَ الْكِتَابَ وَالْحُكْمَ وَالنُّبُوَّةَ وَرَزَقْنَاهُمْ مِنَ الطَّيِّبَاتِ وَفَضَّلْنَاهُمْ عَلَى الْعَالَمِينَ ﴿١٦﴾

17. ಧರ್ಮದ ವಿಷಯದಲ್ಲಿ ಅವರಿಗೆ ಸುವ್ಯಕ್ತ ನಿರ್ದೇಶನಗಳನ್ನು ಕೊಟ್ಟೆವು. ಅನಂತರ ಅವರೊಳಗೆ ಭಿನ್ನಾಭಿಪ್ರಾಯಗಳು ತಲೆದೋರಿದುದು (ತಿಳುವಳಿಕೆಯಿಲ್ಲದ ಕಾರಣದಿಂದ ಆಗಿರಲಿಲ್ಲ) ಜ್ಞಾನ ಬಂದ ಬಳಿಕವಾಗಿತ್ತು ಮತ್ತು ಅವರು ಪರಸ್ಪರ ಅತಿರೇಕವೆಸಗಲು ಇಚ್ಛಿಸಿದುದರಿಂದಾಗಿತ್ತು. ಖಂಡಿತವಾಗಿಯೂ ನಿನ್ನ ಪ್ರಭು ಅವರು ಭಿನ್ನಾಭಿಪ್ರಾಯ ತಾಳುತ್ತಾ ಬಂದಿರುವ ವಿಷಯಗಳ ತೀರ್ಮಾನವನ್ನು ಪುನರುತ್ಥಾನದ ದಿನ ಮಾಡುವನು.

وَآتَيْنَاهُمْ بَيِّنَاتٍ مِنَ الْأَمْرِ ۖ فَمَا اخْتَلَفُوا إِلَّا مِنْ بَعْدِ مَا جَاءَهُمُ الْعِلْمُ بَغْيًا بَيْنَهُمْ ۚ إِنَّ رَبَّكَ يَقْضِي بَيْنَهُمْ يَوْمَ الْقِيَامَةِ فِيمَا كَانُوا فِيهِ يَخْتَلِفُونَ ﴿١٧﴾

18. ಇನ್ನು ಪೈಗಂಬರರೇ, ನಾವು ನಿಮ್ಮನ್ನು ಧರ್ಮದ ವಿಷಯದಲ್ಲಿ ಒಂದು ಸುಸ್ಪಷ್ಟ ರಾಜಮಾರ್ಗ(ಧರ್ಮಶಾಸ್ತ್ರ)ದಲ್ಲಿ ಸ್ಥಿರವಾಗಿರಿಸಿದ್ದೇವೆ. ಆದುದರಿಂದ ನೀವು ಅದರಲ್ಲೇ ನಡೆಯಿರಿ. ಮತ್ತು ಅಜ್ಞಾನಿಗಳ ಅಭಿಲಾಷೆಗಳನ್ನು ಅನುಸರಿಸಬೇಡಿರಿ.

ثُمَّ جَعَلْنَاكَ عَلَىٰ شَرِيعَةٍ مِنَ الْأَمْرِ فَاتَّبِعْهَا وَلَا تَتَّبِعْ أَهْوَاءَ الَّذِينَ لَا يَعْلَمُونَ ﴿١٨﴾

19. ಅಲ್ಲಾಹನಿಗೆದುರಾಗಿ ಅವರು ನಿಮಗೆ ಯಾವ ಸಹಾಯವನ್ನೂ ಮಾಡಲಾರರು.[2] ಅಕ್ರಮಿಗಳು ಪರಸ್ಪರ ಮಿತ್ರರು ಮತ್ತು ಧರ್ಮನಿಷ್ಠರ ಮಿತ್ರನು ಅಲ್ಲಾಹನಾಗಿದ್ದಾನೆ.

إِنَّهُمْ لَنْ يُغْنُوا عَنْكَ مِنَ اللَّهِ شَيْئًا ۚ وَإِنَّ الظَّالِمِينَ بَعْضُهُمْ أَوْلِيَاءُ بَعْضٍ ۖ وَاللَّهُ وَلِيُّ الْمُتَّقِينَ ﴿١٩﴾

20. ಇವು ಸಕಲ ಮಾನವರಿಗಾಗಿರುವ ದಿವ್ಯಜ್ಞಾನದ ಪ್ರಕಾಶಗಳು ಮತ್ತು ಇದು ದೃಢವಿಶ್ವಾಸವುಳ್ಳವರಿಗೆ ಸನ್ಮಾರ್ಗ ದರ್ಶನವೂ ಕೃಪೆಯೂ ಆಗಿದೆ.

هَٰذَا بَصَائِرُ لِلنَّاسِ وَهُدًى وَرَحْمَةٌ لِقَوْمٍ يُوقِنُونَ ﴿٢٠﴾

2. ಅರ್ಥಾತ್- ಅವರ ಸಂಪ್ರೀತಿ ಗಳಿಸಲಿಕ್ಕಾಗಿ ಅಲ್ಲಾಹನ ಧರ್ಮದಲ್ಲಿ ಯಾವುದೇ ರೀತಿಯ ಏರುಪೇರು ಮಾಡಿದರೆ ಅಲ್ಲಾಹನ ವಿಚಾರಣೆಯಿಂದ ಅವರು ನಿಮ್ಮನ್ನು ರಕ್ಷಿಸಲಾರರು.

21. ದುಷ್ಕರ್ಮಗಳೆನ್ನೆಸಗಿದವರು, ನಾವು ಅವರನ್ನು ಸತ್ಯವಿಶ್ವಾಸವನ್ನಿರಿಸಿ ಸತ್ಕರ್ಮವೆಸಗಿದವರಿಗೆ ಸಮಾನರಾಗಿ ಮಾಡುವೆವೆಂದೂ ಅವರಿಬ್ಬರ ಜೀವನ ಮರಣಗಳು ಸಮಾನ ಸ್ವರೂಪದ್ದಾಗಿರುವುದೆಂದೂ ಭಾವಿಸಿಕೊಂಡಿರುವರೇ? ಇವರು ಮಾಡುವ ತೀರ್ಮಾನ ಬಹಳ ಕೆಟ್ಟದು.

أَمْ حَسِبَ الَّذِينَ اجْتَرَحُوا السَّيِّئَاتِ أَنْ نَجْعَلَهُمْ كَالَّذِينَ آمَنُوا وَعَمِلُوا الصَّالِحَاتِ سَوَاءً مَحْيَاهُمْ وَمَمَاتُهُمْ ۚ سَاءَ مَا يَحْكُمُونَ ﴿٢١﴾

22. ಅಲ್ಲಾಹನು ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿರುತ್ತಾನೆ. ಪ್ರತಿಯೊಬ್ಬ ಜೀವಿಗೆ ಅದರ ದುಡಿಮೆಯ ಪ್ರತಿಫಲ ನೀಡಲಿಕ್ಕಾಗಿ, ಖಂಡಿತವಾಗಿಯೂ ಜನರ ಮೇಲೆ ಅಕ್ರಮ ವೆಸಗಲಾಗದು.

وَخَلَقَ اللَّهُ السَّمَاوَاتِ وَالْأَرْضَ بِالْحَقِّ وَلِتُجْزَىٰ كُلُّ نَفْسٍ بِمَا كَسَبَتْ وَهُمْ لَا يُظْلَمُونَ ﴿٢٢﴾

23. ತನ್ನ ಸ್ವೇಚ್ಛೆಗಳನ್ನೇ ತನ್ನ ದೇವರಾಗಿ ಮಾಡಿಕೊಂಡವನ ಕುರಿತು ನೀವೆಂದಾದರೂ ವಿವೇಚಿಸಿದಿರಾ? ಅಲ್ಲಾಹನು ಜ್ಞಾನದ ಹೊರತಾಗಿಯೂ[3] ಅವನನ್ನು ಪಥಭ್ರಷ್ಟತೆಗೆ ಎಸೆದು ಬಿಟ್ಟನು. ಅವನ ಹೃದಯ ಹಾಗೂ ಕಿವಿಗಳಿಗೆ ಮುದ್ರೆಯನ್ನು ಒತ್ತಿ ಬಿಟ್ಟನು ಮತ್ತು ಅವನ ದೃಷ್ಟಿಗಳ ಮೇಲೆ ತೆರೆಯೆಳೆದು ಬಿಟ್ಟನು. ಅಲ್ಲಾಹನ ಬಳಿಕ ಅವನಿಗೆ ಸನ್ಮಾರ್ಗ ನೀಡಲು ಇನ್ನಾರಿದ್ದಾರೆ? ನೀವು ಪಾಠ ಕಲಿಯುವುದಿಲ್ಲವೇ?

أَفَرَأَيْتَ مَنِ اتَّخَذَ إِلَٰهَهُ هَوَاهُ وَأَضَلَّهُ اللَّهُ عَلَىٰ عِلْمٍ وَخَتَمَ عَلَىٰ سَمْعِهِ وَقَلْبِهِ وَجَعَلَ عَلَىٰ بَصَرِهِ غِشَاوَةً فَمَنْ يَهْدِيهِ مِنْ بَعْدِ اللَّهِ ۚ أَفَلَا تَذَكَّرُونَ ﴿٢٣﴾

24. ಜೀವನವೆಂದರೆ ನಮ್ಮ ಈ ಲೋಕದ ಜೀವನ ಮಾತ್ರ. ನಮ್ಮ ಸಾವು ಮತ್ತು ಬದುಕು ಇಲ್ಲೇ. ಕಾಲಚಕ್ರದ ಹೊರತು ಇನ್ನಾವುದೂ ನಮ್ಮನ್ನು ನಾಶಗೊಳಿಸುವುದಿಲ್ಲವೆಂದು ಇವರು ಹೇಳುತ್ತಾರೆ. ವಾಸ್ತವದಲ್ಲಿ ಇವರ ಬಳಿ ಈ ಕುರಿತು ಯಾವ ಜ್ಞಾನವೂ ಇಲ್ಲ. ಇವರು ಕೇವಲ ಊಹೆಯ ಆಧಾರದಲ್ಲಿ ಹೀಗೆ ಹೇಳುತ್ತಿದ್ದಾರೆ.

وَقَالُوا مَا هِيَ إِلَّا حَيَاتُنَا الدُّنْيَا نَمُوتُ وَنَحْيَا وَمَا يُهْلِكُنَا إِلَّا الدَّهْرُ ۚ وَمَا لَهُمْ بِذَٰلِكَ مِنْ عِلْمٍ ۖ إِنْ هُمْ إِلَّا يَظُنُّونَ ﴿٢٤﴾

25. ನಮ್ಮ ಸುವ್ಯಕ್ತ ಸೂಕ್ತಗಳನ್ನು ಇವರಿಗೆ ಕೇಳಿಸಲಾದಾಗ, ಇವರ ಬಳಿ- "ನೀವು ಸತ್ಯವಂತರಾಗಿದ್ದರೆ ನಮ್ಮ ಪೂರ್ವಜರನ್ನು ಎಬ್ಬಿಸಿ ತನ್ನಿರಿ" ಎಂದು ಹೇಳುವುದರ ಹೊರತು ಬೇರಾವ ವಾದವೂ ಇರುವುದಿಲ್ಲ.

وَإِذَا تُتْلَىٰ عَلَيْهِمْ آيَاتُنَا بَيِّنَاتٍ مَا كَانَ حُجَّتَهُمْ إِلَّا أَنْ قَالُوا ائْتُوا بِآبَائِنَا إِنْ كُنْتُمْ صَادِقِينَ ﴿٢٥﴾

3. ಮೂಲದಲ್ಲಿ 'ಅದಲ್ಲಹುಲ್ಲಾಹು ಅಲಾ ಇಲ್‌ಮಿನ್' ಪದ ಪ್ರಯೋಗವಾಗಿದೆ. ಅವನು ಜ್ಞಾನಿಯಾಗಿದ್ದುದರ ಹೊರತಾಗಿಯೂ ಅಲ್ಲಾಹನ ವತಿಯಿಂದ ಪಥಭ್ರಷ್ಟತೆಗೆ ಎಸೆಯಲ್ಪಟ್ಟನು. ಏಕೆಂದರೆ ಅವನು ತನ್ನ ಸ್ವೇಚ್ಛೆಯ ದಾಸನಾಗಿದ್ದನು ಎಂಬುದು ಇದರ ಒಂದು ಅರ್ಥ. ಅವನು ತನ್ನ ಸ್ವೇಚ್ಛೆಯನ್ನೇ ದೇವನನ್ನಾಗಿ ಮಾಡಿಕೊಂಡಿರುವನೆಂದು ತಿಳಿದು ಅಲ್ಲಾಹನು ಅವನನ್ನು ಪಥಭ್ರಷ್ಟತೆಗೆ ಈಡು ಮಾಡಿ ಬಿಟ್ಟನು' ಎಂಬುದು ಅದರ ಇನ್ನೊಂದು ಅರ್ಥ.

26. ಸಂದೇಶವಾಹಕರೇ, ಇವರೊಡನೆ ಹೇಳಿರಿ- "ಅಲ್ಲಾಹನೇ ನಿಮಗೆ ಜೀವನ ಪ್ರದಾನ ಮಾಡುತ್ತಾನೆ. ಅನಂತರ ಅವನೇ ನಿಮಗೆ ಮರಣ ಕೊಡುತ್ತಾನೆ. ಆ ಬಳಿಕ ಪುನರುತ್ಥಾನದ ದಿನ ಅವನೇ ನಿಮ್ಮನ್ನು ಒಟ್ಟುಗೂಡಿಸುವನು. ಅದು ಬರುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಹೆಚ್ಚಿನವರು ತಿಳಿಯುವುದಿಲ್ಲ.

قُلِ اللَّهُ يُحْيِيكُمْ ثُمَّ يُمِيتُكُمْ ثُمَّ يَجْمَعُكُمْ إِلَىٰ يَوْمِ الْقِيَامَةِ لَا رَيْبَ فِيهِ وَلَٰكِنَّ أَكْثَرَ النَّاسِ لَا يَعْلَمُونَ ٢٦

27. ಭೂಮಿ-ಆಕಾಶಗಳ ಪ್ರಭುತ್ವ ಅಲ್ಲಾಹನದ್ದೇ ಆಗಿದೆ. ಪುನರುತ್ಥಾನದ ಘಳಿಗೆ ಬರುವ ದಿನದಂದು ಮಿಥ್ಯಾರಾಧಕರು ನಷ್ಟಕ್ಕೊಳಗಾಗುವರು."

وَلِلَّهِ مُلْكُ السَّمَاوَاتِ وَالْأَرْضِ ۚ وَيَوْمَ تَقُومُ السَّاعَةُ يَوْمَئِذٍ يَخْسَرُ الْمُبْطِلُونَ ٢٧

28. ಆಗ ನೀವು ಪ್ರತಿಯೊಂದು ಸಮುದಾಯವೂ ಮೊಣಕಾಲೂರಿ ಬಿದ್ದುಕೊಂಡಿರುವುದನ್ನು ಕಾಣುವಿರಿ. ಪ್ರತಿಯೊಂದು ಕೂಟವನ್ನು ತನ್ನ ಕರ್ಮಪತ್ರವನ್ನು ನೋಡಲಿಕ್ಕಾಗಿ ಕರೆಯಲಾಗುವುದು. ಅವರೊಡನೆ (ಹೀಗೆ) ಹೇಳಲಾಗುವುದು, "ಇಂದು ನಿಮಗೆ ನೀವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವನ್ನು ನೀಡಲಾಗುವುದು.

وَتَرَىٰ كُلَّ أُمَّةٍ جَاثِيَةً ۚ كُلُّ أُمَّةٍ تُدْعَىٰ إِلَىٰ كِتَابِهَا الْيَوْمَ تُجْزَوْنَ مَا كُنتُمْ تَعْمَلُونَ ٢٨

29. ಇದು ನಾವು ಸಿದ್ಧಪಡಿಸಿದ್ದ ಕರ್ಮಪತ್ರವಾಗಿದ್ದು ಇದು ನಿಮ್ಮ ಬಗ್ಗೆ ಸರಿಯಾದ ಸಾಕ್ಷಿ ನೀಡುತ್ತದೆ. ನೀವು ಮಾಡುತ್ತಿದ್ದ ಎಲ್ಲವನ್ನೂ ನಾವು ಬರೆಸುತ್ತಲೇ ಇದ್ದೆವು."

هَٰذَا كِتَابُنَا يَنطِقُ عَلَيْكُم بِالْحَقِّ ۚ إِنَّا كُنَّا نَسْتَنسِخُ مَا كُنتُمْ تَعْمَلُونَ ٢٩

30. ಅನಂತರ ಸತ್ಯವಿಶ್ವಾಸವಿರಿಸಿ ಸತ್ಕರ್ಮ ಮಾಡುತ್ತಿದ್ದವರನ್ನು ಅವರ ಪ್ರಭು ತನ್ನ ಕೃಪೆಯೊಳಗೆ ಪ್ರವೇಶಗೊಳಿಸುವನು. ಇದುವೇ ಸುವ್ಯಕ್ತ ವಿಜಯ.

فَأَمَّا الَّذِينَ آمَنُوا وَعَمِلُوا الصَّالِحَاتِ فَيُدْخِلُهُمْ رَبُّهُمْ فِي رَحْمَتِهِ ۚ ذَٰلِكَ هُوَ الْفَوْزُ الْمُبِينُ ٣٠

31. ಸತ್ಯನಿಷೇಧಿಗಳೊಡನೆ (ಹೀಗೆ ಹೇಳಲಾಗುವುದು), "ನನ್ನ ಸೂಕ್ತಗಳನ್ನು ನಿಮಗೆ ಓದಿ ಹೇಳಲಾಗುತ್ತಿರಲಿಲ್ಲವೇ? ಆದರೆ, ನೀವು ಅಹಂಕಾರಪಟ್ಟಿರಿ ಮತ್ತು ಅಪರಾಧಿಗಳಾಗಿ ಬಾಳಿದಿರಿ.

وَأَمَّا الَّذِينَ كَفَرُوا أَفَلَمْ تَكُنْ آيَاتِي تُتْلَىٰ عَلَيْكُمْ فَاسْتَكْبَرْتُمْ وَكُنتُمْ قَوْمًا مُّجْرِمِينَ ٣١

32. ಅಲ್ಲಾಹನ ವಾಗ್ದಾನ ಸತ್ಯಪೂರ್ಣವಾಗಿದೆ ಮತ್ತು ಪುನರುತ್ಥಾನ ದಿನವು ಬರುವುದರಲ್ಲಿ ಯಾವ ಸಂದೇಹವೂ ಇಲ್ಲ, ಎಂದು ಹೇಳಲಾದಾಗ ನೀವು, ಪುನರುತ್ಥಾನವೆಂದರೇನೆಂದು ನಮಗೆ ತಿಳಿಯದು. ನಮಗೊಂದು ಊಹೆ ಮಾತ್ರ ಇದೆ, ನಮಗೆ ನಂಬಿಕೆ ಇಲ್ಲ ಎಂದು ಹೇಳುತ್ತಿದ್ದಿರಿ."

وَإِذَا قِيلَ إِنَّ وَعْدَ اللَّهِ حَقٌّ وَالسَّاعَةُ لَا رَيْبَ فِيهَا قُلْتُم مَّا نَدْرِي مَا السَّاعَةُ إِن نَّظُنُّ إِلَّا ظَنًّا وَمَا نَحْنُ بِمُسْتَيْقِنِينَ ٣٢

33. ಆಗ ಅವರ ಮುಂದೆ ಅವರ ಕರ್ಮಗಳ ದೋಷಗಳು ವ್ಯಕ್ತವಾಗುವುವು ಮತ್ತು ಅವರು ಯಾವುದನ್ನು ಗೇಲಿ ಮಾಡುತ್ತಿದ್ದರೋ ಅದರ ಸುಳಿಯಲ್ಲೇ ಸಿಲುಕಿಕೊಳ್ಳುವರು.

وَبَدَا لَهُمْ سَيِّاٰتُ مَا عَمِلُوْا وَحَاقَ بِهِمْ مَّا كَانُوْا بِهٖ يَسْتَهْزِءُوْنَ ﴿٣٣﴾

34. ಮತ್ತು ಅವರೊಡನೆ (ಹೀಗೆ) ಹೇಳಲಾಗುವುದು, "ನೀವು ಈ ದಿನದ ಭೇಟಿಯನ್ನು ಮರೆತು ಬಿಟ್ಟಿದ್ದಂತೆಯೇ ಇಂದು ನಾವು ನಿಮ್ಮನ್ನು ಮರೆತು ಬಿಡುತ್ತೇವೆ. ಇನ್ನು ನರಕಾಗ್ನಿಯೇ ನಿಮ್ಮ ನೆಲೆಯಾಗಿದೆ ಮತ್ತು ನಿಮಗಾರೂ ಸಹಾಯಕರಿಲ್ಲ.

وَقِيْلَ الْيَوْمَ نَنْسٰىكُمْ كَمَا نَسِيْتُمْ لِقَآءَ يَوْمِكُمْ هٰذَا وَمَاْوٰىكُمُ النَّارُ وَمَا لَكُمْ مِّنْ نّٰصِرِيْنَ ﴿٣٤﴾

35. ನೀವು ಅಲ್ಲಾಹನ ಸೂಕ್ತಗಳನ್ನು ಅಪಹಾಸ್ಯ ಮಾಡಿದ್ದುದರಿಂದಲೂ ನಿಮ್ಮನ್ನು ಭೂಲೋಕದ ಜೀವನವು ವಂಚಿಸಿ ಬಿಟ್ಟಿದ್ದರಿಂದಲೂ ನಿಮ್ಮ ಗತಿ ಹೀಗಾಯಿತು. ಆದುದರಿಂದ ಇಂದು ಇವರು ನರಕದಿಂದ ಬಿಡುಗಡೆ ಪಡೆಯಲಾರರು ಮತ್ತು ಕ್ಷಮೆ ಬೇಡಿ ನಿಮ್ಮ ಪ್ರಭುವನ್ನು ಮೆಚ್ಚಿಸಿಕೊಳ್ಳಿ ಎಂದೂ ಇವರೊಡನೆ ಹೇಳಲಾಗದು."[4]

ذٰلِكُمْ بِاَنَّكُمُ اتَّخَذْتُمْ اٰيٰتِ اللّٰهِ هُزُوًا وَّغَرَّتْكُمُ الْحَيٰوةُ الدُّنْيَا فَالْيَوْمَ لَا يُخْرَجُوْنَ مِنْهَا وَلَا هُمْ يُسْتَعْتَبُوْنَ ﴿٣٥﴾

36. ಆದುದರಿಂದ ಸರ್ವ ಪ್ರಶಂಸೆಯೂ ಭೂಮಿ-ಆಕಾಶಗಳ ಒಡೆಯನಾಗಿರುವ ಮತ್ತು ಸಕಲ ಲೋಕವಾಸಿಗಳ ಪಾಲಕಪ್ರಭುವಾಗಿರುವ ಅಲ್ಲಾಹನಿಗೇ ಮೀಸಲು.

فَلِلّٰهِ الْحَمْدُ رَبِّ السَّمٰوٰتِ وَرَبِّ الْاَرْضِ رَبِّ الْعٰلَمِيْنَ ﴿٣٦﴾

37. ಭೂಮಿ-ಆಕಾಶಗಳಲ್ಲಿ ಮಹಾನತೆಯು ಅವನಿಗೇ ಇದೆ ಮತ್ತು ಅವನೇ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَلَهُ الْكِبْرِيَآءُ فِى السَّمٰوٰتِ وَالْاَرْضِ وَهُوَ الْعَزِيْزُ الْحَكِيْمُ ﴿٣٧﴾

---

4. ಒಬ್ಬ ಯಜಮಾನ ತನ್ನ ಸೇವಕರನ್ನು ಗದರಿಸಿದ ನಂತರ ಇತರರನ್ನುದ್ದೇಶಿಸಿ, 'ಇರಲಿ ಈ ಅಯೋಗ್ಯರಿಗೆ ಇದೇ ಶಿಕ್ಷೆ' ಎಂದು ಹೇಳುವಂತೆಯೇ ಇದೆ ಈ ಕೊನೆಯ ಉಲ್ಲೇಖ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. *ಹಾಮೀಮ್.

حٰمٓ ①

2. ಈ ಗ್ರಂಥದ ಅವತೀರ್ಣವು ಪ್ರಬಲನೂ ಯುಕ್ತಿಪೂರ್ಣನೂ ಆದ ಅಲ್ಲಾಹನ ಕಡೆಯಿಂದಾಗಿರುತ್ತದೆ.

تَنْزِيْلُ الْكِتٰبِ مِنَ اللّٰهِ الْعَزِيْزِ الْحَكِيْمِ ②

3. ನಾವು ಭೂಮಿ-ಆಕಾಶಗಳನ್ನೂ ಅವುಗಳ ನಡುವೆ ಇರುವುದೆಲ್ಲವನ್ನೂ ಪರಮ ಸತ್ಯವಾಗಿ ಹಾಗೂ ಒಂದು ನಿಶ್ಚಿತ ಅವಧಿಯನ್ನು ನಿರ್ಧರಿಸಿ ಸೃಷ್ಟಿಸಿದ್ದೇವೆ. ಆದರೆ ಈ ಸತ್ಯನಿಷೇಧಿಗಳು ಇವರಿಗೆ ಎಚ್ಚರಿಕೆ ನೀಡಲಾಗಿರುವಂತಹ ವಾಸ್ತವಿಕತೆಯ ಕಡೆಯಿಂದ ಮುಖ ತಿರುಗಿಸಿ ಕೊಂಡಿದ್ದಾರೆ.

مَا خَلَقْنَا السَّمٰوٰتِ وَ الْاَرْضَ وَ مَا بَيْنَهُمَاۤ اِلَّا بِالْحَقِّ وَ اَجَلٍ مُّسَمًّى ؕ وَ الَّذِيْنَ كَفَرُوْا عَمَّاۤ اُنْذِرُوْا مُعْرِضُوْنَ ③

4. ಸಂದೇಶವಾಹಕರೇ, ಇವರೊಡನೆ (ಹೀಗೆ) ಹೇಳಿರಿ: "ನೀವು ಅಲ್ಲಾಹನನ್ನು ಬಿಟ್ಟು ಪ್ರಾರ್ಥಿಸುತ್ತಿರುವವುಗಳು ಏನಾಗಿರುತ್ತವೆ ಎಂಬುದನ್ನು ನೀವು ಕಣ್ತೆರೆದು ನೋಡಿದಿರಾ? ಅವರು ಈ ಭೂಮಿಯಲ್ಲಿ ಏನನ್ನು ಸೃಷ್ಟಿಸಿದ್ದಾರೆಂಬುದನ್ನು ಅಥವಾ ಆಕಾಶಗಳ ಸೃಷ್ಟಿ ಹಾಗೂ ವ್ಯವಸ್ಥಾಪನೆಯಲ್ಲಿ ಅವರದ್ದೇನಾದರೂ ಪಾಲಿದೆಯೇ ಎಂಬುದನ್ನು ನನಗೆ ತೋರಿಸುವಿರಾ? ನೀವು ಸತ್ಯವಾದಿಗಳಾಗಿದ್ದರೆ ಇದಕ್ಕಿಂತ ಮುಂಚೆ ಬಂದ ಯಾವುದಾದರೂ ಗ್ರಂಥ ಅಥವಾ ಜ್ಞಾನದ ಯಾವುದಾದರೂ ಪಳಿಯುಳಿಕೆಯು (ಈ ನಿಮ್ಮ ನಂಬಿಕೆಗಳಿಗೆ ಆಧಾರವಾಗಿ) ನಿಮ್ಮ ಬಳಿಯಲ್ಲಿದ್ದರೆ ಅದನ್ನೇ ತನ್ನಿರಿ.

قُلْ اَرَءَيْتُمْ مَّا تَدْعُوْنَ مِنْ دُوْنِ اللّٰهِ اَرُوْنِيْ مَاذَا خَلَقُوْا مِنَ الْاَرْضِ اَمْ لَهُمْ شِرْكٌ فِي السَّمٰوٰتِ ؕ اِيْتُوْنِيْ بِكِتٰبٍ مِّنْ قَبْلِ هٰذَاۤ اَوْ اَثٰرَةٍ مِّنْ عِلْمٍ اِنْ كُنْتُمْ صٰدِقِيْنَ ④

5. ಅಲ್ಲಾಹನನ್ನು ಬಿಟ್ಟು, ಪುನರುತ್ಥಾನ ದಿನದ ವರೆಗೂ ಅವನಿಗೆ

وَ مَنْ اَضَلُّ مِمَّنْ يَّدْعُوْا مِنْ دُوْنِ

*ಇಲ್ಲಿಂದ 26ನೆಯ ಕಾಂಡ ಆರಂಭ.

ಉತ್ತರ ಕೊಡಲಾಗದಂತಹವರನ್ನು ಪ್ರಾರ್ಥಿಸುವವನಿಗಿಂತಲೂ ಹೆಚ್ಚು ದಾರಿಗೆಟ್ಟವನು ಇನ್ನಾರಿರಬಹುದು?[1] ಮಾತ್ರವಲ್ಲ, ಅವರಿಗಂತೂ ಪ್ರಾರ್ಥಿಸುವವರು ತಮ್ಮನ್ನು ಪ್ರಾರ್ಥಿಸುತ್ತಿದ್ದಾರೆಂಬ ಅರಿವು ಕೂಡಾ ಇಲ್ಲ.

اللّٰهِ مَنْ لَّا يَسْتَجِيبُ لَهٗٓ اِلٰى يَوْمِ الْقِيٰمَةِ وَهُمْ عَنْ دُعَآئِهِمْ غٰفِلُوْنَ ﴿٥﴾

6. ಸಕಲ ಮಾನವರೂ ಒಟ್ಟುಗೂಡಿಸಲ್ಪಡುವಂದು ಅವರು ತಮ್ಮನ್ನು ಪ್ರಾರ್ಥಿಸುತ್ತಿದ್ದವರ ಶತ್ರುಗಳಾಗಿ ಬಿಡುವರು ಮತ್ತು ಅವರು ತಮ್ಮನ್ನು ಆರಾಧಿಸುತ್ತಿದ್ದರೆಂಬುದನ್ನೇ ನಿರಾಕರಿಸಿ ಬಿಡುವರು.[2]

وَاِذَا حُشِرَ النَّاسُ كَانُوْا لَهُمْ اَعْدَآءً وَّكَانُوْا بِعِبَادَتِهِمْ كٰفِرِيْنَ ﴿٦﴾

7. ಇವರಿಗೆ ನಮ್ಮ ಸುಸ್ಪಷ್ಟವಾದ ಸೂಕ್ತಗಳನ್ನು ಓದಿ ಹೇಳುವಾಗ ಹಾಗೂ ಸತ್ಯವು ಇವರ ಮುಂದೆ ಬಂದು ಬಿಡುವಾಗ ಈ ಸತ್ಯ ನಿಷೇಧಿಗಳು ಅದರ ಕುರಿತು, "ಇದು ಸ್ಪಷ್ಟವಾದ ಜಾದೂಗಾರಿಕೆ" ಎಂದು ಹೇಳುತ್ತಾರೆ.

وَاِذَا تُتْلٰى عَلَيْهِمْ اٰيٰتُنَا بَيِّنٰتٍ قَالَ الَّذِيْنَ كَفَرُوْا لِلْحَقِّ لَمَّا جَآءَهُمْ ۙ هٰذَا سِحْرٌ مُّبِيْنٌ ﴿٧﴾ؕ

8. ಸಂದೇಶವಾಹಕರು ಇದನ್ನು ಸ್ವತಃ ಸೃಷ್ಟಿಸಿದ್ದೆಂದು ಇವರು ಹೇಳುತ್ತಿರುವರೇ? ಇವರೊಡನೆ ಹೇಳಿರಿ- "ಇದನ್ನು ಸ್ವತಃ ನಾನೇ ರಚಿಸಿದ್ದರೆ, ನೀವು ನನ್ನನ್ನು ಅಲ್ಲಾಹನ ಶಿಕ್ಷೆಯಿಂದ ಸ್ವಲ್ಪವೂ ರಕ್ಷಿಸಲಾರಿರಿ. ನೀವು ಕಟ್ಟುತ್ತಿರುವ ಮಾತುಗಳನ್ನು ಅಲ್ಲಾಹನು ಚೆನ್ನಾಗಿ ಬಲ್ಲನು. ನನ್ನ ಮತ್ತು ನಿಮ್ಮ ನಡುವೆ ಸಾಕ್ಷಿ ಹೇಳಲು ಅವನೇ ಸಾಕು. ಅವನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ."[3]

اَمْ يَقُوْلُوْنَ افْتَرٰىهُ ؕ قُلْ اِنِ افْتَرَيْتُهٗ فَلَا تَمْلِكُوْنَ لِيْ مِنَ اللّٰهِ شَيْـًٔا ؕ هُوَ اَعْلَمُ بِمَا تُفِيْضُوْنَ فِيْهِ ؕ كَفٰى بِهٖ شَهِيْدًاۢ بَيْنِيْ وَبَيْنَكُمْ ؕ وَهُوَ الْغَفُوْرُ الرَّحِيْمُ ﴿٨﴾

9. ಇವರೊಡನೆ ಹೇಳಿರಿ - "ನಾನೊಬ್ಬ ಅಪೂರ್ವ ಸಂದೇಶವಾಹಕ ನಲ್ಲ.[4] ನಾಳೆ ನನಗೇನಾಗಲಿದೆ ಎಂಬುದಾಗಲಿ, ನಿಮಗೇನಾಗಲಿದೆ

قُلْ مَا كُنْتُ بِدْعًا مِّنَ الرُّسُلِ وَمَآ اَدْرِيْ مَا يُفْعَلُ بِيْ وَلَا بِكُمْ ؕ

1. ಉತ್ತರಿಸುವುದು ಎಂದರೆ ಒಬ್ಬನ ಬೇಡಿಕೆಯಂತೆ ತೀರ್ಪು ನೀಡುವುದು. ಅರ್ಥಾತ್, ಅವರ ಪ್ರಾರ್ಥನೆ ಮತ್ತು ಬೇಡಿಕೆಗಳಂತೆ ಯಾವುದೇ ತೀರ್ಮಾನ ಕೈಗೊಳ್ಳುವಂತಹ ಅಧಿಕಾರವೇ ಅವರಿಗಿಲ್ಲ.
2. ಅರ್ಥಾತ್- ಅವರು ಸ್ಪಷ್ಟವಾಗಿ ಹೀಗೆನ್ನುವರು, "ನೀವು ಸಹಾಯಕ್ಕಾಗಿ ನಮ್ಮನ್ನು ಕರೆಯಿರಿ. ನಾವು ನಿಮ್ಮ ಬಯಕೆಗಳನ್ನು ಈಡೇರಿಸುವವರಾಗಿದ್ದೇವೆ ಎಂದು ನಾವು ಯಾವತ್ತೂ ಇವರೊಡನೆ ಹೇಳಿರಲಿಲ್ಲ. ಇವರು ನಮ್ಮನ್ನು ಕೂಗಿ ಕರೆಯುತ್ತಿದ್ದರೆಂದೂ ನಮಗೆ ತಿಳಿದಿರಲಿಲ್ಲ. ಇವರು ತಾವಾಗಿಯೇ ನಮ್ಮನ್ನು ಬೇಡಿಕೆಗಳನ್ನು ಈಡೇರಿಸುವವರೆಂದು ಕಲ್ಪಿಸಿಕೊಂಡರು ಮತ್ತು ನಮ್ಮನ್ನು ಕೂಗಿ ಕರೆಯಲಾರಂಭಿಸಿದರು."
3. ಇಲ್ಲಿ ಈ ವಚನ ಎರಡು ಅರ್ಥಗಳನ್ನು ಕೊಡುತ್ತದೆ. ಮೊದಲನೆಯದಾಗಿ ಅಲ್ಲಾಹನ ಕರುಣೆ ಮತ್ತು ಕ್ಷಮೆಯಿಂದಾಗಿಯೇ ದೇವವಾಣಿಯನ್ನು ಸುಳ್ಳೆಂದು ಸಾರಲು ಹಿಂಜರಿಯದಂತಹ ಜನರು ಭೂಮಿಯಲ್ಲಿ ಉಸಿರಾಡುತ್ತಿದ್ದಾರೆ. ನಿಷ್ಕರುಣೆ ಮತ್ತು ಕಠೋರನಾದ ದೇವನು ನಿಸರ್ಗದ ಮಾಲಕನಾಗಿರುತ್ತಿದ್ದರೆ ಇಂತಹ ಭಂಡತನವನ್ನು ಪ್ರದರ್ಶಿಸುವವನಿಗೆ ಒಂದು ಉಸಿರಿನ ನಂತರ ಇನ್ನೊಂದು ಉಸಿರನ್ನೆಳೆಯುವ ಸೌಭಾಗ್ಯವೂ ದೊರೆಯುತ್ತಿರಲಿಲ್ಲ. ಇದರ ಎರಡನೆಯ ಅರ್ಥವೇನೆಂದರೆ, ಅಕ್ರಮಿಗಳೇ! ಈಗಲೂ ಈ ಹಟಮಾರಿತನದಿಂದ ನೀವು ದೂರ ಸರಿಯುವುದಾದರೆ ದೇವನ ಅನುಗ್ರಹದ ದ್ವಾರ ನಿಮ್ಮ ಪಾಲಿಗೆ ತೆರೆದುಕೊಂಡಿದೆ. ನೀವು ಈ ತನಕ ಎಸಗಿರುವ ತಪ್ಪುಗಳೆಲ್ಲವೂ ಕ್ಷಮಿಸಲ್ಪಡಲಿಕ್ಕೂ ಸಾಧ್ಯವಿದೆ.
4. ಅರ್ಥಾತ್- ಯಾವ ರೀತಿ ಹಿಂದಿನ ಪ್ರವಾದಿಗಳೆಲ್ಲರೂ ಮಾನವರೇ ಆಗಿದ್ದರೋ ದೇವನ ಗುಣವಿಶೇಷತೆ ಮತ್ತು ಅಧಿಕಾರಗಳಲ್ಲಿ ಹೇಗೆ ಅವರಿಗೆ ಯಾವುದೇ ರೀತಿಯ ಪಾಲಿರಲಿಲ್ಲವೋ ನಾನೂ ಅಂತಹ ಒಬ್ಬ ಪ್ರವಾದಿ.

إِنْ أَتَّبِعُ إِلَّا مَا يُوحَىٰ إِلَيَّ وَمَا أَنَا إِلَّا نَذِيرٌ مُبِينٌ ٩

ಎಂಬುದಾಗಲಿ ನನಗರಿಯದು. ನಾನಂತು ನನ್ನ ಬಳಿಗೆ ಕಳುಹಿಸ ಲಾಗುತ್ತಿರುವ ದಿವ್ಯವಾಣಿಯನ್ನು ಅನುಸರಿಸುತ್ತೇನೆ. ನಾನೊಬ್ಬ ಸುಸ್ಪಷ್ಟ ಎಚ್ಚರಿಕೆ ನೀಡುವವನೇ ಹೊರತು ಇನ್ನೇನೂ ಅಲ್ಲ."

قُلْ أَرَأَيْتُمْ إِنْ كَانَ مِنْ عِنْدِ اللَّهِ وَكَفَرْتُمْ بِهِ وَشَهِدَ شَاهِدٌ مِنْ بَنِي إِسْرَائِيلَ عَلَىٰ مِثْلِهِ فَآمَنَ وَاسْتَكْبَرْتُمْ ۖ إِنَّ اللَّهَ لَا يَهْدِي الْقَوْمَ الظَّالِمِينَ ١٠

10. ಸಂದೇಶವಾಹಕರೇ ಇವರೊಡನೆ ಹೇಳಿರಿ: "ಒಂದು ವೇಳೆ ಈ ಸಂದೇಶವು ಅಲ್ಲಾಹನ ಕಡೆಯಿಂದಲೇ ಬಂದಿದ್ದು ನೀವಿದನ್ನು ತಿರಸ್ಕರಿಸಿ ಬಿಟ್ಟರೆ (ನಿಮ್ಮ ಗತಿ ಏನಾದೀತು) ಎಂದು ನೀವೆಂದಾ ದರೂ ಯೋಚಿಸಿರುವಿರಾ? ಇದರಂತಹ ಒಂದು ವಾಣಿಯ ಬಗ್ಗೆ ಬನೀಇಸ್ರಾಈಲರ ಒಬ್ಬ ಸಾಕ್ಷಿದಾರನು ಸಾಕ್ಷ್ಯಯನ್ನೂ ಹೇಳಿದ್ದಾನೆ. ಅವನು ವಿಶ್ವಾಸವಿಟ್ಟನು ಮತ್ತು ನೀವು ನಿಮ್ಮ ಅಹಂಕಾರದಲ್ಲೇ ಬಿದ್ದುಬಿಟ್ಟಿರಿ.[5] ಇಂತಹ ಅಕ್ರಮಿಗಳಿಗೆ ಅಲ್ಲಾಹನು ಸನ್ಮಾರ್ಗ ನೀಡುವುದಿಲ್ಲ.

وَقَالَ الَّذِينَ كَفَرُوا لِلَّذِينَ آمَنُوا لَوْ كَانَ خَيْرًا مَا سَبَقُونَا إِلَيْهِ ۚ وَإِذْ لَمْ يَهْتَدُوا بِهِ فَسَيَقُولُونَ هَٰذَا إِفْكٌ قَدِيمٌ ١١

11. ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳ ಕುರಿತು, "ಈ ಗ್ರಂಥವನ್ನು ನಂಬುವುದು ಒಂದು ಸತ್ಕಾರ್ಯವಾಗಿರುತ್ತಿದ್ದರೆ ಇವರು ಈ ವಿಷಯದಲ್ಲಿ ನಮಗಿಂತ ಮುಂದಾಗಲು ಸಾಧ್ಯವಾಗುತ್ತಿರಲಿಲ್ಲ" ಎನ್ನುತ್ತಾರೆ. ಇವರು ಅದರಿಂದ ಮಾರ್ಗದರ್ಶನ ಪಡೆಯಲಿಲ್ಲ ವಾದ್ದರಿಂದ ಇವರೀಗ, "ಇದಂತು ಹಳೆಯ ಸುಳ್ಳಾಗಿದೆ" ಎಂದು ಖಂಡಿತ ಹೇಳುವರು.[6]

وَمِنْ قَبْلِهِ كِتَابُ مُوسَىٰ إِمَامًا وَرَحْمَةً ۚ وَهَٰذَا كِتَابٌ مُصَدِّقٌ لِسَانًا عَرَبِيًّا لِيُنْذِرَ الَّذِينَ ظَلَمُوا وَبُشْرَىٰ لِلْمُحْسِنِينَ ١٢

12. ವಸ್ತುತಃ ಇದಕ್ಕೆ ಮುಂಚೆ ಮೂಸಾರ ಗ್ರಂಥವು ಮಾರ್ಗದರ್ಶಿ ಮತ್ತು ಕೃಪೆಯಾಗಿ ಬಂದಿತ್ತು ಮತ್ತು ಅದನ್ನು ಸಮರ್ಥಿಸುವ ಈ ಗ್ರಂಥವು ಅರಬೀ ಭಾಷೆಯಲ್ಲಿ ಬಂದಿದೆ- ಅಕ್ರಮಿಗಳಿಗೆ ಎಚ್ಚರಿಕೆ ಕೊಡಲಿಕ್ಕಾಗಿ ಹಾಗೂ ಸಜ್ಜನರಿಗೆ ಸುವಾರ್ತೆ ನೀಡಲಿಕ್ಕಾಗಿ.

إِنَّ الَّذِينَ قَالُوا رَبُّنَا اللَّهُ ثُمَّ اسْتَقَامُوا فَلَا خَوْفٌ عَلَيْهِمْ وَلَا هُمْ يَحْزَنُونَ ١٣

13. ನಿಸ್ಸಂದೇಹವಾಗಿಯೂ ಅಲ್ಲಾಹನೇ ನಮ್ಮ ಪ್ರಭು ಎಂದು ಹೇಳಿ ಅದರಲ್ಲೇ ಸ್ಥಿರಗೊಂಡವರಿಗೆ ಯಾವ ಭಯವೂ ಇಲ್ಲ. ಅವರು ದುಃಖಿತಪ್ಪರೂ ಆಗಲಿಕ್ಕಿಲ್ಲ.

5. ಇಲ್ಲಿ ಸಾಕ್ಷಿದಾರ ಎಂದರೆ ಬನೀಇಸ್ರಾಈಲ್‌ನ ಯಾವುದೇ ವಿಶೇಷ ವ್ಯಕ್ತಿಯಲ್ಲ. ಬದಲಾಗಿ ಬನೀ ಇಸ್ರಾಈಲ್‌ನ ಓರ್ವ ಸಾಮಾನ್ಯ ವ್ಯಕ್ತಿ. ಅಲ್ಲಾಹನ ಈ ಮಾತಿನ ಇಂಗಿತವೇನೆಂದರೆ ಪವಿತ್ರ ಕುರ್‌ಆನ್ ನಿಮ್ಮ ಮುಂದಿಡುವ ಬೋಧನೆ ಅನುಪಮವಾದುದೇನಲ್ಲ. ಅದು ಜಗತ್ತಿನ ಮುಂದೆ ಮೊಟ್ಟ ಮೊದಲ ಬಾರಿ ಸಮರ್ಪಿಸಲ್ಪಟ್ಟಿಲ್ಲ. ಆದ್ದರಿಂದ ಮನುಷ್ಯರ ಮುಂದೆ ಹಿಂದೆಂದೂ ಬಂದಿರದಂತಹ ಈ ಅಪರಿಚಿತ ಮಾತುಗಳನ್ನು ಸಮ್ಮತಿಸುವುದು ಹೇಗೆ ಎಂಬ ನೆಪವನ್ನು ನೀವು ಮುಂದಿಡುವಂತಿಲ್ಲ. ತೌರಾತ್ ಮತ್ತು ಇತರ ದಿವ್ಯ ಗ್ರಂಥಗಳ ರೂಪದಲ್ಲಿ ಇದಕ್ಕೆ ಮೊದಲೂ ಬನೀಇಸ್ರಾಈಲರಿಗೆ ಇಂತಹುದೇ ಬೋಧನೆಗಳನ್ನು ನೀಡಲಾಗಿತ್ತು. ಮಾತ್ರವಲ್ಲ ಬನೀಇಸ್ರಾಈಲರ ಒಬ್ಬ ಸಾಮಾನ್ಯ ವ್ಯಕ್ತಿಯೂ ಅದರ ಮೇಲೆ ವಿಶ್ವಾಸವಿಟ್ಟಿದ್ದನು.

6. ಕುರ್‌ಆನಿನ ಮೇಲೆ ಕೆಲವು ಅವಿವೇಕಿಗಳಷ್ಟೇ ವಿಶ್ವಾಸವಿರಿಸಿದ್ದಾರೆ. ಅನ್ಯಥಾ ಅದೊಂದು ಒಳ್ಳೆಯ ಕೆಲಸವಾಗಿದ್ದರೆ ನಮ್ಮಂತಹ ಬುದ್ಧಿಜೀವಿಗಳು ಅದನ್ನು ನಂಬುವುದರಲ್ಲಿ ಹಿಂದೆ ಬೀಳಲು ಸಾಧ್ಯವಿರಲಿಲ್ಲ ಎಂಬುದು ಅವರ ಇಂಗಿತವಾಗಿತ್ತು.

14. ಇಂತಹವರು ಸ್ವರ್ಗಕ್ಕೆ ಹೋಗುವವರಾಗಿದ್ದಾರೆ. ಅವರು ಇಹ ಲೋಕದಲ್ಲಿ ಮಾಡುತ್ತಿದ್ದ ಸತ್ಕರ್ಮಗಳ ಪ್ರತಿಫಲವಾಗಿ ಅಲ್ಲಿ ಸದಾಕಾಲ ಇರುವರು.

أُولَٰٓئِكَ أَصْحَٰبُ ٱلْجَنَّةِ خَٰلِدِينَ فِيهَا
جَزَآءًۢ بِمَا كَانُوا۟ يَعْمَلُونَ ⑭

15. ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ಅವನ ತಾಯಿಯು ಬಹಳ ಕಷ್ಟಪಟ್ಟು ಅವನನ್ನು ಗರ್ಭದಲ್ಲಿರಿಸಿದಳು ಮತ್ತು ಕಷ್ಟಪಟ್ಟೇ ಅವನನ್ನು ಹೆತ್ತಳು. ಅವನ ಗರ್ಭಾವಧಿಯಲ್ಲಿ ಮತ್ತು ಮೊಲೆ ಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು. ಅವನು ಸಂಪೂರ್ಣ ಪ್ರಾಬಲ್ಯಕ್ಕೆ ಬಂದು ನಲ್ವತ್ತು ವರ್ಷದವನಾದಾಗ, "ನನ್ನ ಪ್ರಭೂ, ನೀನು ನನಗೂ ನನ್ನ ಮಾತಾಪಿತರಿಗೂ ಕರುಣಿಸಿರುವ ಅನುಗ್ರಹಗಳ ಬಗ್ಗೆ ಕೃತಜ್ಞತೆ ಸಲ್ಲಿಸುವ ಹಾಗೂ ನೀನು ಸಂತೃಪ್ತನಾಗುವಂತಹ ಸತ್ಕರ್ಮಗಳನ್ನು ಮಾಡುವ ಸೌಭಾಗ್ಯವನ್ನು ನನಗೆ ನೀಡು ಮತ್ತು ನನ್ನ ಮಕ್ಕಳನ್ನೂ ಸಜ್ಜನರಾಗಿ ಮಾಡಿ ನನಗೆ ಸುಖ ನೀಡು. ನಾನು ನಿನ್ನ ಸನ್ನಿಧಿಯಲ್ಲಿ ಪಶ್ಚಾತ್ತಾಪ ಪಡುತ್ತೇನೆ ಮತ್ತು ಖಂಡಿತವಾಗಿಯೂ ನಾನು ಶರಣಾಗತ(ಮುಸ್ಲಿಮ್) ದಾಸರಲ್ಲಾಗಿರುತ್ತೇನೆ" ಎಂದನು.

وَوَصَّيْنَا ٱلْإِنسَٰنَ بِوَٰلِدَيْهِ إِحْسَٰنًا ۖ
حَمَلَتْهُ أُمُّهُۥ كُرْهًا وَوَضَعَتْهُ كُرْهًا ۖ
وَحَمْلُهُۥ وَفِصَٰلُهُۥ ثَلَٰثُونَ شَهْرًا ۚ حَتَّىٰٓ
إِذَا بَلَغَ أَشُدَّهُۥ وَبَلَغَ أَرْبَعِينَ سَنَةً
قَالَ رَبِّ أَوْزِعْنِىٓ أَنْ أَشْكُرَ نِعْمَتَكَ
ٱلَّتِىٓ أَنْعَمْتَ عَلَىَّ وَعَلَىٰ وَٰلِدَىَّ وَأَنْ
أَعْمَلَ صَٰلِحًا تَرْضَىٰهُ وَأَصْلِحْ لِى
فِى ذُرِّيَّتِىٓ ۖ إِنِّى تُبْتُ إِلَيْكَ وَإِنِّى
مِنَ ٱلْمُسْلِمِينَ ⑮

16. ನಾವು ಇಂತಹವರ ಅತ್ಯುತ್ತಮ ಕರ್ಮಗಳನ್ನು ಸ್ವೀಕರಿಸುತ್ತೇವೆ ಮತ್ತು ಅವರ ಪಾಪಗಳನ್ನು ಮನ್ನಿಸುತ್ತೇವೆ. ಅವರೊಡನೆ ಮಾಡಲಾಗುತ್ತಿರುವ ಸತ್ಯವಾಗ್ದಾನಗಳ ಪ್ರಕಾರ ಅವರು ಸ್ವರ್ಗದವರೊಂದಿಗೆ ಸೇರಿಕೊಳ್ಳುವರು.

أُولَٰٓئِكَ ٱلَّذِينَ نَتَقَبَّلُ عَنْهُمْ أَحْسَنَ
مَا عَمِلُوا۟ وَنَتَجَاوَزُ عَن سَيِّـَٔاتِهِمْ
فِىٓ أَصْحَٰبِ ٱلْجَنَّةِ ۖ وَعْدَ ٱلصِّدْقِ
ٱلَّذِى كَانُوا۟ يُوعَدُونَ ⑯

17. ಇನ್ನು ತನ್ನ ಮಾತಾಪಿತರೊಡನೆ, "ಛೀ, ನಿಮ್ಮದೆಂತಹ ಕಿರುಕುಳ! ನಾನು ಮರಣಾನಂತರ ಗೋರಿಯಿಂದ ಹೊರ ತರಲ್ಪಡುವೆನೆಂದು ನೀವು ನನ್ನನ್ನು ಹೆದರಿಸುತ್ತಿರುವಿರಾ? ವಸ್ತುತಃ ನನಗಿಂತ ಮುಂಚೆ ಅನೇಕ ವಂಶಗಳು ಗತಿಸಿವೆ. (ಅವರಲ್ಲಾರೂ ಎದ್ದು ಬಂದದ್ದಿಲ್ಲ)" ಎಂದು ಹೇಳಿದನು. ಅವನ ಮಾತಾಪಿತರು ಅಲ್ಲಾಹನಿಗೆ ಮೊರೆಯಿಟ್ಟು, "ಓ ಭಾಗ್ಯಹೀನನೇ! ಒಪ್ಪಿಕೋ. ಅಲ್ಲಾಹನ ವಾಗ್ದಾನವು ಸತ್ಯವಾದುದು" ಎನ್ನುತ್ತಾರೆ. ಆದರೆ ಅವನು, "ಇವೆಲ್ಲ ಪೂರ್ವಕಾಲದ ಕಟ್ಟುಕತೆಗಳಾಗಿವೆ" ಎನ್ನುತ್ತಾನೆ.

وَٱلَّذِى قَالَ لِوَٰلِدَيْهِ أُفٍّ لَّكُمَآ
أَتَعِدَانِنِىٓ أَنْ أُخْرَجَ وَقَدْ خَلَتِ
ٱلْقُرُونُ مِن قَبْلِى وَهُمَا يَسْتَغِيثَانِ
ٱللَّهَ وَيْلَكَ ءَامِنْ إِنَّ وَعْدَ ٱللَّهِ حَقٌّ
فَيَقُولُ مَا هَٰذَآ إِلَّآ أَسَٰطِيرُ ٱلْأَوَّلِينَ ⑰

18. ಯಾತನೆಯ ತೀರ್ಮಾನವು ಅನ್ವಯವಾಗಿರುವುದು ಇದೇ ಜನರ ಮೇಲೆ. ಇವರಿಗಿಂತ ಮೊದಲು ಗತಿಸಿರುವ (ಇದೇ ತರದ) ಯಕ್ಷ ಮತ್ತು ಮಾನವರ ಹಿಂಡುಗಳ ಸಾಲಿಗೆ ಇವರೂ

أُولَٰٓئِكَ ٱلَّذِينَ حَقَّ عَلَيْهِمُ ٱلْقَوْلُ فِىٓ
أُمَمٍ قَدْ خَلَتْ مِن قَبْلِهِم مِّنَ ٱلْجِنِّ

ಸೇರಿಕೊಳ್ಳುವರು. ನಿಸ್ಸಂದೇಹವಾಗಿಯೂ ಇವರು ನಷ್ಟಕ್ಕೊಳಗಾದವರಾಗಿದ್ದಾರೆ.

وَالْإِنسِ ۖ إِنَّهُمْ كَانُوا خَاسِرِينَ ﴿١٨﴾

19. ಎರಡು ತಂಡಗಳ ಪೈಕಿ ಪ್ರತಿಯೊಂದು ತಂಡದವರಿಗೂ ಅವರವರ ಕರ್ಮಕ್ಕನುಸಾರವಾದ ಸ್ಥಾನವಿದೆ. ಅಲ್ಲಾಹನು ಅವರಿಗೆ ಅವರ ಕರ್ಮಗಳ ಪರಿಪೂರ್ಣ ಪ್ರತಿಫಲ ನೀಡುವಂತಾಗಲಿಕ್ಕಾಗಿ ಅವರ ಮೇಲೆ ಖಂಡಿತ ಅನ್ಯಾಯವಾಗದು.

وَلِكُلٍّ دَرَجَاتٌ مِّمَّا عَمِلُوا ۖ وَلِيُوَفِّيَهُمْ أَعْمَالَهُمْ وَهُمْ لَا يُظْلَمُونَ ﴿١٩﴾

20. ಈ ಸತ್ಯನಿಷೇಧಿಗಳು ಅಗ್ನಿಯ ಮುಂದೆ ಬಂದು ನಿಲ್ಲಿಸಲ್ಪಟ್ಟಾಗ ಅವರೊಡನೆ, "ನೀವು ನಿಮ್ಮ ಪಾಲಿನ ಅನುಗ್ರಹಗಳನ್ನು ನಿಮ್ಮ ಲೌಕಿಕ ಜೀವನದಲ್ಲೇ ಮುಗಿಸಿಬಿಟ್ಟಿರಿ ಮತ್ತು ಅವುಗಳ ಸವಿಯನ್ನು ಅನುಭವಿಸಿಕೊಂಡಿರಿ. ನೀವು ಭೂಮಿಯಲ್ಲಿ ಯಾವುದೇ ಹಕ್ಕಿಲ್ಲದೆ ತೋರುತ್ತಿದ್ದ ಅಹಂಕಾರದ ಹಾಗೂ ನೀವು ಮಾಡಿದ ಆಜ್ಞೋಲ್ಲಂಘನೆಯ ಫಲವಾಗಿ ಇಂದು ನಿಮಗೆ ಅಪಮಾನಕಾರಕ ಯಾತನೆ ಕೊಡಲಾಗುವುದು" ಎಂದು ಹೇಳಲಾಗುವುದು.

وَيَوْمَ يُعْرَضُ الَّذِينَ كَفَرُوا عَلَى النَّارِ أَذْهَبْتُمْ طَيِّبَاتِكُمْ فِي حَيَاتِكُمُ الدُّنْيَا وَاسْتَمْتَعْتُم بِهَا ۖ فَالْيَوْمَ تُجْزَوْنَ عَذَابَ الْهُونِ بِمَا كُنتُمْ تَسْتَكْبِرُونَ فِي الْأَرْضِ بِغَيْرِ الْحَقِّ وَبِمَا كُنتُمْ تَفْسُقُونَ ﴿٢٠﴾

21. ಇವರಿಗೆ 'ಆದ್'ರ ಸಹೋದರನ (ಹೂದ್‌ರ) ವೃತ್ತಾಂತವನ್ನು ತಿಳಿಸಿರಿ. ಅವರು 'ಅಹ್‌ಕಾಫ್'ನಲ್ಲಿ ತಮ್ಮ ಜನಾಂಗಕ್ಕೆ, "ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನು ಮಾಡಬೇಡಿರಿ, ನನಗೆ ನಿಮ್ಮ ವಿಷಯದಲ್ಲಿ ಒಂದು ಭಯಾನಕ ದಿನದ ಯಾತನೆಯ ಭಯವಿದೆ" ಎಂಬ ಎಚ್ಚರಿಕೆ ಕೊಟ್ಟಾಗ- ಇಂತಹ ಎಚ್ಚರಿಕೆ ನೀಡುವವರು ಅವರಿಗಿಂತ ಮುಂಚೆಯೂ ಬಂದಿದ್ದರು ಮತ್ತು ಅವರ ನಂತರವೂ ಬರುತ್ತಿದ್ದರು.-

وَاذْكُرْ أَخَا عَادٍ إِذْ أَنذَرَ قَوْمَهُ بِالْأَحْقَافِ وَقَدْ خَلَتِ النُّذُرُ مِن بَيْنِ يَدَيْهِ وَمِنْ خَلْفِهِ أَلَّا تَعْبُدُوا إِلَّا اللَّهَ إِنِّي أَخَافُ عَلَيْكُمْ عَذَابَ يَوْمٍ عَظِيمٍ ﴿٢١﴾

22. 'ಅವರು ಹೀಗೆಂದರು, "ನೀನು ನಮ್ಮನ್ನು ಮೋಸಗೊಳಿಸಿ ನಮ್ಮ ಆರಾಧ್ಯರಿಂದ ಬೇರ್ಪಡಿಸಿ ಬಿಡಲಿಕ್ಕಾಗಿ ಬಂದಿರುವೆಯಾ? ನೀನು ನಿಜಕ್ಕೂ ಸತ್ಯವಾದಿಯಾಗಿದ್ದರೆ ನಮ್ಮನ್ನು ಬೆದರಿಸುತ್ತಿರುವಂತಹ ನಿನ್ನ ಆ ಯಾತನೆಯನ್ನು ತಂದು ಬಿಡು."

قَالُوا أَجِئْتَنَا لِتَأْفِكَنَا عَنْ آلِهَتِنَا فَأْتِنَا بِمَا تَعِدُنَا إِن كُنتَ مِنَ الصَّادِقِينَ ﴿٢٢﴾

23. ಆಗ ಅವರು; "ಅದರ ಜ್ಞಾನವಂತು ಅಲ್ಲಾಹನಿಗಿದೆ.[7] ನಾನು ನನಗೆ ಕೊಟ್ಟು ಕಳುಹಿಸಲಾಗಿರುವಂತಹ ಸಂದೇಶವನ್ನು ಮಾತ್ರ ನಿಮಗೆ ತಲುಪಿಸುತ್ತಿದ್ದೇನೆ. ಆದರೆ, ನೀವು ಮೌಢ್ಯತೆ ಪ್ರಕಟಿಸುತ್ತಿರುವುದನ್ನು ನಾನು ಕಾಣುತ್ತಿದ್ದೇನೆ" ಎಂದರು.

قَالَ إِنَّمَا الْعِلْمُ عِندَ اللَّهِ وَأُبَلِّغُكُم مَّا أُرْسِلْتُ بِهِ وَلَٰكِنِّي أَرَاكُمْ قَوْمًا تَجْهَلُونَ ﴿٢٣﴾

7. ಅರ್ಥಾತ್- ಯಾತನೆಯನ್ನು ಯಾವಾಗ ಕಳುಹಿಸಲಾಗುವುದು ಮತ್ತು ಎಲ್ಲಿಯ ತನಕ ನಿಮಗೆ ಕಾಲಾವಕಾಶ ನೀಡಲಾಗುವುದು ಎಂಬುದರ ಜ್ಞಾನ.

24. ತರುವಾಯ ಅವರು ಆ ಯಾತನೆಯು ತಮ್ಮ ಕಣಿವೆಗಳತ್ತ ಬರುತ್ತಿದ್ದುದನ್ನು ಕಂಡು, "ಇದು ನಮ್ಮ ಮೇಲೆ ಮಳೆ ಸುರಿಸಲಿಕ್ಕಾಗಿ ಬರುತ್ತಿರುವ ಮೋಡ" ಎಂದರು. "ಅಲ್ಲ![8] ವಾಸ್ತವದಲ್ಲಿ ಇದು ನೀವು ಆತುರ ಪಡುತ್ತಿರುವ ವಸ್ತುವೇ ಆಗಿದೆ. ಇದು ಬಿರುಗಾಳಿಯಾಗಿದ್ದು ಇದರಲ್ಲಿ ವೇದನಾಜನಕ ಯಾತನೆ ಇದೆ.

فَلَمَّا رَاَوْهُ عَارِضًا مُّسْتَقْبِلَ اَوْدِيَتِهِمْ قَالُوْا هٰذَا عَارِضٌ مُّمْطِرُنَا ۚ بَلْ هُوَ مَا اسْتَعْجَلْتُمْ بِهٖ ۚ رِيْحٌ فِيْهَا عَذَابٌ اَلِيْمٌ ﴿٢٤﴾

25. ಇದು ತನ್ನ ಪ್ರಭುವಿನ ಅಪ್ಪಣೆಯಂತೆ ಸಕಲ ವಸ್ತುಗಳನ್ನೂ ನಾಶಗೊಳಿಸಿ ಬಿಡುವುದು." ಕೊನೆಗೆ ಅವರ ಪಾಡೇನಾಯಿತೆಂದರೆ, ಅವರ ವಾಸಸ್ಥಾನಗಳ ಹೊರತು ಅಲ್ಲಿ ಬೇರೇನೂ ಕಂಡು ಬರುತ್ತಿರಲಿಲ್ಲ. ಈ ರೀತಿಯಲ್ಲಿ ನಾವು ಅಪರಾಧಿಗಳಿಗೆ ಪ್ರತಿಫಲ ಕೊಡುತ್ತೇವೆ.

تُدَمِّرُ كُلَّ شَيْءٍۢ بِاَمْرِ رَبِّهَا فَاَصْبَحُوْا لَا يُرٰٓى اِلَّا مَسٰكِنُهُمْ ۚ كَذٰلِكَ نَجْزِى الْقَوْمَ الْمُجْرِمِيْنَ ﴿٢٥﴾

26. ನಾವು ನಿಮಗೆ ಕೊಟ್ಟಿರದಂತಹವುಗಳನ್ನೆಲ್ಲ ಅವರಿಗೆ ಕೊಟ್ಟಿದ್ದೆವು. ನಾವು ಅವರಿಗೆ ಕಿವಿ, ಕಣ್ಣು ಮತ್ತು ಮನಸ್ಸು ಇವೆಲ್ಲವನ್ನೂ ಕೊಟ್ಟಿದ್ದೆವು. ಆದರೆ ಅವರ ಕಿವಿಗಳಾಗಲಿ, ಕಣ್ಣುಗಳಾಗಲಿ, ಮನಸ್ಸುಗಳಾಗಲಿ ಅವರ ಯಾವ ಕೆಲಸಕ್ಕೂ ಬರಲಿಲ್ಲ. ಏಕೆಂದರೆ ಅವರು ಅಲ್ಲಾಹನ ಸೂಕ್ತಗಳನ್ನು ನಿರಾಕರಿಸುತ್ತಿದ್ದರು. ಅವರು ಯಾವುದನ್ನು ಅಪಹಾಸ್ಯ ಮಾಡುತ್ತಿದ್ದರೋ ಅದರ ಸುಳಿಯಲ್ಲೇ ಸಿಲುಕಿ ಬಿಟ್ಟರು.

وَلَقَدْ مَكَّنّٰهُمْ فِيْمَآ اِنْ مَّكَّنّٰكُمْ فِيْهِ وَجَعَلْنَا لَهُمْ سَمْعًا وَّاَبْصَارًا وَّاَفْـِٕدَةً ۖ فَمَآ اَغْنٰى عَنْهُمْ سَمْعُهُمْ وَلَآ اَبْصَارُهُمْ وَلَآ اَفْـِٕدَتُهُمْ مِّنْ شَيْءٍ اِذْ كَانُوْا يَجْحَدُوْنَ ۙ بِاٰيٰتِ اللّٰهِ وَحَاقَ بِهِمْ مَّا كَانُوْا بِهٖ يَسْتَهْزِءُوْنَ ﴿٢٦﴾

27. ನಾವು ನಿಮ್ಮ ಪರಿಸರದ ಪ್ರದೇಶಗಳಲ್ಲಿ ಅನೇಕ ನಾಡುಗಳನ್ನು ನಾಶಗೊಳಿಸಿ ಬಿಟ್ಟಿದ್ದೇವೆ. ಅವರು ಮರಳಲೂಬಹುದೆಂದು ನಿರೀಕ್ಷಿಸಿ, ನಾವು ಪದೇಪದೇ ತರತರದ ನಿದರ್ಶನಗಳನ್ನು ಕಳುಹಿಸಿ ಅವರಿಗೆ ತಿಳಿ ಹೇಳಿದೆವು.

وَلَقَدْ اَهْلَكْنَا مَا حَوْلَكُمْ مِّنَ الْقُرٰى وَصَرَّفْنَا الْاٰيٰتِ لَعَلَّهُمْ يَرْجِعُوْنَ ﴿٢٧﴾

28. ಅವರು ಅಲ್ಲಾಹನನ್ನು ಬಿಟ್ಟು, ದೇವ ಸಾಮೀಪ್ಯದ ಮಾಧ್ಯಮಗಳೆಂದು ಭಾವಿಸಿ ಯಾರನ್ನು ಆರಾಧ್ಯರಾಗಿ ಮಾಡಿ ಕೊಂಡಿದ್ದರೋ, ಅವರೇಕೆ ಇವರಿಗೆ ನೆರವಾಗಲಿಲ್ಲ?[9] ವಾಸ್ತವದಲ್ಲಿ

فَلَوْلَا نَصَرَهُمُ الَّذِيْنَ اتَّخَذُوْا مِنْ دُوْنِ اللّٰهِ قُرْبَانًا اٰلِهَةً ۗ بَلْ ضَلُّوْا عَنْهُمْ ۚ وَذٰلِكَ اِفْكُهُمْ وَمَا

8. ಅವರಿಗೆ ಈ ಉತ್ತರವನ್ನು ಯಾರು ನೀಡಿದ್ದರು ಎಂಬುದರ ವಿವರಣೆ ಇಲ್ಲ. ಮಾತಿನ ಧಾಟಿಯಿಂದ ಆಗಿನ ಪರಿಸ್ಥಿತಿಯೇ ಕಾರ್ಯತಃ ಅವರಿಗೆ ಈ ಉತ್ತರವನ್ನು ನೀಡಿತ್ತೆಂದು ವ್ಯಕ್ತವಾಗುತ್ತದೆ. ತಮ್ಮ ಕಣಿವೆಗಳನ್ನು ಸಂಪದ್ಯುಕ್ತಗೊಳಿಸಲಿಕ್ಕಾಗಿ ಈ ಮೋಡಗಳು ಕವಿದಿವೆ ಎಂದವರು ಭಾವಿಸಿದ್ದರು. ನಿಜವಾಗಿ ಅದು ಅವರನ್ನು ಸರ್ವನಾಶಗೊಳಿಸಲು ಮುಂದೊತ್ತಿ ಬರುತ್ತಿದ್ದ ಬಿರುಗಾಳಿಯಾಗಿತ್ತು.

9. ಅರ್ಥಾತ್ ಇವರು ಅಲ್ಲಾಹನ ಆಪ್ತ ದಾಸರು, ಆದ್ದರಿಂದ 'ಇವರ ಮೂಲಕ ನಮಗೆ ದೇವನೆಡೆಗೆ ತಲುಪಲು ಸಾಧ್ಯವಿದೆ' ಎಂಬ ಭರವಸೆಯೊಂದಿಗೆ ವ್ಯಕ್ತಿಗಳ ಜತೆ ಅವರು ಶ್ರದ್ಧೆಯನ್ನು ಬೆಳೆಸಲಾರಂಭಿಸಿದರು. ಆದ್ದರಿಂದ ಅವರನ್ನೇ ಸಹಾಯಕ್ಕಾಗಿ ಕರೆಯತೊಡಗಿದರು. ಪ್ರಾರ್ಥನೆಗಳನ್ನೂ ಅವರೊಡನೆಯೇ ಮಾಡತೊಡಗಿದರು. ಅವರನ್ನೇ ಅಧಿಪತಿಯೆಂದು ಭಾವಿಸಿದರು. ನಮ್ಮ ಮೊರೆಯನ್ನು ಕೇಳಿ ಕಷ್ಟಗಳನ್ನು ನೀಗಿಸುವವರು ಅವರೇ ಆಗಿದ್ದಾರೆಂದುಕೊಂಡರು. ಅವರನ್ನು ಈ ಪಥಭ್ರಷ್ಟತೆಯಿಂದ ಮುಕ್ತಗೊಳಿಸಲಿಕ್ಕಾಗಿಯೇ

ಅವರಂತು ಇವರಿಂದ ಕಳೆದು ಹೋದರು. ಇದು ಅವರ ಅಸತ್ಯ ಹಾಗೂ ಅವರು ಕಟ್ಟಿಕೊಂಡಿದ್ದ ಕೃತಕ ವಿಶ್ವಾಸಗಳ ಪರಿಣಾಮ ವಾಗಿತ್ತು.

كَانُوْا يَفْتَرُوْنَ ﴿٢٨﴾

29. ಕುರ್‌ಆನನ್ನು ಆಲಿಸಲಿಕ್ಕಾಗಿ ಯಕ್ಷಗಳ ಒಂದು ತಂಡವನ್ನು ನಾವು ನಿಮ್ಮ ಕಡೆಗೆ ತಂದಿದ್ದ (ಘಟನೆಯೂ ಸ್ಮರಣಾರ್ಹ ವಾಗಿದೆ.)[10] ಅವರು (ನೀವು ಕುರ್‌ಆನ್ ಪಠಿಸುತ್ತಿದ್ದ) ಆ ಸ್ಥಳವನ್ನು ತಲಪಿದಾಗ 'ಮೌನವಾಗಿರಿ' ಎಂದು ಪರಸ್ಪರ ಹೇಳಿದರು. ಓದಿ ಮುಗಿದಾಗ ಅವರು ಎಚ್ಚರಿಕೆ ನೀಡುವವರಾಗಿ ತಮ್ಮ ಜನಾಂಗದ ಕಡೆಗೆ ಮರಳಿದರು.

وَاِذْ صَرَفْنَآ اِلَيْكَ نَفَرًا مِّنَ الْجِنِّ يَسْتَمِعُوْنَ الْقُرْاٰنَ ۚ فَلَمَّا حَضَرُوْهُ قَالُوْٓا اَنْصِتُوْا ۚ فَلَمَّا قُضِيَ وَلَّوْا اِلٰى قَوْمِهِمْ مُّنْذِرِيْنَ ﴿٢٩﴾

30. ಅವರು ಹೋಗಿ ಹೇಳಿದರು, "ನಮ್ಮ ಜನಾಂಗದವರೇ, ನಾವು ಒಂದು ಗ್ರಂಥವನ್ನು ಆಲಿಸಿದೆವು. ಅದು 'ಮೂಸಾ'ರ ಬಳಿಕ ಅವತೀರ್ಣಗೊಳಿಸಲ್ಪಟ್ಟಿದೆ. ಅದು ತನಗಿಂತ ಮುಂಚೆ ಬಂದ ಗ್ರಂಥಗಳನ್ನು ಸಮರ್ಥಿಸುತ್ತದೆ ಮತ್ತು ಸತ್ಯ ಹಾಗೂ ಸನ್ಮಾರ್ಗ ದೆಡೆಗೆ ಮಾರ್ಗದರ್ಶನ ಮಾಡುತ್ತದೆ.[11]

قَالُوْا يٰقَوْمَنَآ اِنَّا سَمِعْنَا كِتٰبًا اُنْزِلَ مِنْۢ بَعْدِ مُوْسٰى مُصَدِّقًا لِّمَا بَيْنَ يَدَيْهِ يَهْدِيْٓ اِلَى الْحَقِّ وَاِلٰى طَرِيْقٍ مُّسْتَقِيْمٍ ﴿٣٠﴾

31. ನಮ್ಮ ಜನಾಂಗದವರೇ, ಅಲ್ಲಾಹನತ್ತ ಕರೆಯುವವನ ಕರೆಯನ್ನು ಸ್ವೀಕರಿಸಿಕೊಳ್ಳಿರಿ ಮತ್ತು ಅದರ ಮೇಲೆ ವಿಶ್ವಾಸವಿಡಿರಿ. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ದುಃಖದಾಯಕ ಯಾತನೆಯಿಂದ ನಿಮ್ಮನ್ನು ರಕ್ಷಿಸುವನು".

يٰقَوْمَنَآ اَجِيْبُوْا دَاعِيَ اللّٰهِ وَاٰمِنُوْا بِهٖ يَغْفِرْ لَكُمْ مِّنْ ذُنُوْبِكُمْ وَيُجِرْكُمْ مِّنْ عَذَابٍ اَلِيْمٍ ﴿٣١﴾

---

ಅಲ್ಲಾಹನು ಪ್ರವಾದಿಗಳ ಮೂಲಕ ತನ್ನ ಸೂಕ್ತಗಳನ್ನು ಕಳುಹಿಸಿ ಅವರನ್ನು ಸುಧಾರಿಸಲು ಪ್ರಯತ್ನಿಸಿದನು. ಆದರೆ ಅವರು ಆ ಮಿಥ್ಯ ದೇವರುಗಳ ದಾಸ್ಯಕ್ಕೆ ಕಟ್ಟು ಬಿದ್ದಿದ್ದರು. ನಾವು ಅಲ್ಲಾಹನ ಹೊರತು ಈ ಮಿಥ್ಯ ದೇವರುಗಳನ್ನೇ ನೆಚ್ಚಿಕೊಳ್ಳುತ್ತೇವೆಂದು ಅವರು ಪಟ್ಟು ಹಿಡಿದರು. ಈಗ ಈ ಬಹುದೇವಾರಾಧಕರ ಮೇಲೆ ಅವರ ಪಥಭ್ರಷ್ಟತೆಯಿಂದಾಗಿ ಅಲ್ಲಾಹನ ಯಾತನೆ ಎರಗುತ್ತಿರುವಾಗ ಮೊರೆಯನ್ನು ಕೇಳುವವರೂ ಸಂಕಟಹರರೂ ಆದ ಆ ಆರಾಧ್ಯರು ಎಲ್ಲಿ ಹೋದರು? ಈ ಕಷ್ಟಕಾಲದಲ್ಲಿ ಅವರೇಕೆ ಇವರ ಕೈ ಹಿಡಿಯಲು ಧಾವಿಸಿ ಬರಲಿಲ್ಲ?

10. ಇದು ಪ್ರವಾದಿವರ್ಯರು(ಸ) ತಾಯಿಫ್ ಯಾತ್ರೆಯಿಂದ ಮಕ್ಕಾಕ್ಕೆ ಮರಳುತ್ತಿರುವಾಗ ದಾರಿಯ ಮಧ್ಯೆ ಸಂಭವಿಸಿದ ಘಟನೆಯ ಪ್ರಸ್ತಾಪ. ಅವರು ನಮಾಝ್‌ನಲ್ಲಿ ಕುರ್‌ಆನ್ ಪಠಿಸುತ್ತಿದ್ದಾಗ ಜಿನ್ನ್(ಯಕ್ಷ)ಗಳ ಒಂದು ಗುಂಪು ಆ ಮಾರ್ಗವಾಗಿ ಸಾಗುತ್ತಿತ್ತು. ಅವರ ಪಠಣವನ್ನು ಕೇಳಿ ಅವು ನಿಂತು ಬಿಟ್ಟವು. ಈ ನಿಟ್ಟಿನಲ್ಲಿ ಬಂದಿರುವ ಎಲ್ಲಾ ವರದಿಗಳಲ್ಲಿ ಒಂದು ವಿಷಯದ ಬಗ್ಗೆ ಒಮ್ಮತಾಭಿಪ್ರಾಯವಿದೆ. ಅದೇನೆಂದರೆ, ಆ ಸಂದರ್ಭದಲ್ಲಿ ಜಿನ್ನ್‌ಗಳು ಪ್ರವಾದಿವರ್ಯರ(ಸ) ಮುಂದೆ ಬಂದಿರಲಿಲ್ಲ. ಹಾಗೆಯೇ ಜಿನ್ನ್‌ಗಳ ಆಗಮನ ಅವರ ಗಮನಕ್ಕೆ ಬಂದಿರಲೂ ಇಲ್ಲ. ತದನಂತರ ಅಲ್ಲಾಹನು ದಿವ್ಯವಾಣಿಯ ಮೂಲಕ ಅವರು ಬಂದು ಕುರ್‌ಆನ್ ಕೇಳಿದುದರ ಬಗ್ಗೆ ಸುದ್ದಿ ತಿಳಿಸಿದನು.

11. ಈ ಜಿನ್ನ್‌ಗಳು ಹಿಂದೆಯೇ ಹ. ಮೂಸಾ(ಅ) ಮತ್ತು ದಿವ್ಯಗ್ರಂಥಗಳ ಮೇಲೆ ವಿಶ್ವಾಸವಿಟ್ಟಿದ್ದವು ಎಂದು ಇದರಿಂದ ವ್ಯಕ್ತವಾಗುತ್ತದೆ. ಕುರ್‌ಆನನ್ನು ಕೇಳಿದ ನಂತರ ಅವರಿಗೆ ಇದು ಹಿಂದಿನ ಪ್ರವಾದಿಗಳು ನೀಡಿದಂತಹ ಬೋಧನೆಯೇ ಆಗಿದೆ ಎಂದು ಮನವರಿಕೆಯಾಯಿತು. ಆದ್ದರಿಂದ ಅವರು ಈ ಗ್ರಂಥ ಮತ್ತು ಅದನ್ನು ತಂದ ಪ್ರವಾದಿವರ್ಯರ(ಸ) ಮೇಲೆಯೂ ವಿಶ್ವಾಸವಿರಿಸಿದರು.

32. ಅಲ್ಲಾಹನ ಕಡೆಗೆ ಕರೆ ನೀಡುವವನ ಮಾತನ್ನು ಸ್ವೀಕರಿಸದಿದ್ದವನು ಭೂಮಿಯಲ್ಲಿ ಅಲ್ಲಾಹನನ್ನು ಸೋಲಿಸಲು ಶಕ್ತನಲ್ಲ ಮತ್ತು ಅಲ್ಲಾಹನಿಂದ ಅವನನ್ನು ರಕ್ಷಿಸತಕ್ಕಂತಹ ರಕ್ಷಕ ಮಿತ್ರರೂ ಅವನಿಗೆ ಇಲ್ಲ. ಇಂತಹವರು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುವರು.

وَمَنْ لَّا يُجِبْ دَاعِيَ اللّٰهِ فَلَيْسَ بِمُعْجِزٍ فِي الْاَرْضِ وَلَيْسَ لَهٗ مِنْ دُوْنِهٖٓ اَوْلِيَآءُ ؕ اُولٰٓئِكَ فِيْ ضَلٰلٍ مُّبِيْنٍ ﴿۳۲﴾

33. ಈ ಭೂಮಿ-ಆಕಾಶಗಳನ್ನು ಸೃಷ್ಟಿಸಿದ ಹಾಗೂ ಇವುಗಳನ್ನು ಉಂಟು ಮಾಡುವುದರಲ್ಲಿ ದಣಿಯದ ಅಲ್ಲಾಹನು ಮೃತರನ್ನು ಪುನಃ ಜೀವಂತಗೊಳಿಸಲು ಖಂಡಿತ ಶಕ್ತನೆಂಬುದು ಇವರಿಗೆ ತೋಚುವುದಿಲ್ಲವೇ? ಏಕಿಲ್ಲ! ನಿಶ್ಚಯವಾಗಿಯೂ ಅವನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು.

اَوَلَمْ يَرَوْا اَنَّ اللّٰهَ الَّذِيْ خَلَقَ السَّمٰوٰتِ وَالْاَرْضَ وَلَمْ يَعْيَ بِخَلْقِهِنَّ بِقٰدِرٍ عَلٰٓى اَنْ يُّحْيِۦَ الْمَوْتٰى ؕ بَلٰٓى اِنَّهٗ عَلٰى كُلِّ شَيْءٍ قَدِيْرٌ ﴿۳۳﴾

34. ಈ ಸತ್ಯನಿಷೇಧಿಗಳು ಅಗ್ನಿಯ ಮುಂದೆ ತರಲ್ಪಡುವಾಗ ಇವರೊಡನೆ, "ಇದು ಸತ್ಯವಲ್ಲವೇ?" ಎಂದು ಕೇಳಲಾಗುವುದು. ಆಗ ಇವರು, "ಹೌದು! ನಮ್ಮ ಪ್ರಭುವಿನಾಣೆ (ಇದು ನಿಜಕ್ಕೂ ಸತ್ಯ)" ಎನ್ನುವರು. ಆಗ ಅಲ್ಲಾಹನು- "ಹಾಗಿದ್ದರೆ ನೀವು ಮಾಡುತ್ತಿದ್ದ ನಿರಾಕರಣೆಯ ಫಲವಾಗಿ ಈಗ ಯಾತನೆಯ ಸವಿಯನ್ನು ಅನುಭವಿಸಿರಿ" ಎನ್ನುವನು.

وَيَوْمَ يُعْرَضُ الَّذِيْنَ كَفَرُوْا عَلَى النَّارِ ؕ اَلَيْسَ هٰذَا بِالْحَقِّ ؕ قَالُوْا بَلٰى وَرَبِّنَا ؕ قَالَ فَذُوْقُوا الْعَذَابَ بِمَا كُنْتُمْ تَكْفُرُوْنَ ﴿۳۴﴾

35. ಆದುದರಿಂದ ಸಂದೇಶವಾಹಕರೇ, ದೃಢಚಿತ್ತರಾಗಿದ್ದ ಸಂದೇಶವಾಹಕರು ತಾಳ್ಮೆ ವಹಿಸಿದಂತೆ ತಾಳ್ಮೆ ವಹಿಸಿರಿ ಮತ್ತು ಇವರ ವಿಷಯದಲ್ಲಿ ಅವಸರ ಪಡಬೇಡಿರಿ. ಇವರಿಗೆ ಎಚ್ಚರಿಕೆ ನೀಡಲಾಗುತ್ತಿರುವ ವಸ್ತುವನ್ನು ಇವರು ಕಣ್ಣಾರೆ ಕಾಣುವಂದು ತಾವು ಭೂಲೋಕದಲ್ಲಿ ದಿನದ ಒಂದು ಘಳಿಗೆಗಿಂತ ಹೆಚ್ಚು ಕಾಲ ಇರಲಿಲ್ಲವೋ ಎಂಬಂತೆ ಇವರಿಗೆ ಭಾಸವಾಗುವುದು. ವಿಷಯವು ಮುಟ್ಟಿಸಲ್ಪಟ್ಟಿತು, ಇನ್ನು ಆಜ್ಞೋಲ್ಲಂಘಕರಲ್ಲದೆ ಇನ್ನಾರಾದರೂ ನಾಶ ಹೊಂದುವರೇ?

فَاصْبِرْ كَمَا صَبَرَ اُولُوا الْعَزْمِ مِنَ الرُّسُلِ وَلَا تَسْتَعْجِلْ لَّهُمْ ؕ كَاَنَّهُمْ يَوْمَ يَرَوْنَ مَا يُوْعَدُوْنَ ۙ لَمْ يَلْبَثُوْٓا اِلَّا سَاعَةً مِّنْ نَّهَارٍ ؕ بَلٰغٌ ۚ فَهَلْ يُهْلَكُ اِلَّا الْقَوْمُ الْفٰسِقُوْنَ ﴿۳۵﴾






**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللَّهِ الرَّحْمَٰنِ الرَّحِيمِ ○

1. ಸತ್ಯವನ್ನು ನಿರಾಕರಿಸಿದವರ ಹಾಗೂ ಅಲ್ಲಾಹನ ಮಾರ್ಗದಿಂದ ತಡೆದವರ ಕರ್ಮಗಳನ್ನು ಅಲ್ಲಾಹನು ವ್ಯರ್ಥಗೊಳಿಸಿಬಿಟ್ಟನು-

الَّذِينَ كَفَرُوا وَصَدُّوا عَن سَبِيلِ اللَّهِ أَضَلَّ أَعْمَالَهُمْ ①

2. ಮತ್ತು ಸತ್ಯವಿಶ್ವಾಸ ಸ್ವೀಕರಿಸಿದ ಹಾಗೂ ಸತ್ಕರ್ಮ ಮಾಡಿದ, ಮುಹಮ್ಮದರ ಮೇಲೆ ಅವತೀರ್ಣಗೊಂಡದ್ದನ್ನು ಅವರ ಪ್ರಭುವಿನ ಕಡೆಯಿಂದ ಪರಮ ಸತ್ಯವಾದುದೆಂದು ನಂಬಿದವರ ಪಾಪಗಳನ್ನು ಅಲ್ಲಾಹನು ಅವರಿಂದ ದೂರೀಕರಿಸಿದನು ಮತ್ತು ಅವರ ಸ್ಥಿತಿಯನ್ನು ಸರಿ ಪಡಿಸಿದನು.

وَالَّذِينَ آمَنُوا وَعَمِلُوا الصَّالِحَاتِ وَآمَنُوا بِمَا نُزِّلَ عَلَىٰ مُحَمَّدٍ وَهُوَ الْحَقُّ مِن رَّبِّهِمْ ۙ كَفَّرَ عَنْهُمْ سَيِّئَاتِهِمْ وَأَصْلَحَ بَالَهُمْ ②

3. ಇದೇಕೆಂದರೆ- ಸತ್ಯನಿಷೇಧಿಗಳು ಮಿಥ್ಯವನ್ನು ಅನುಸರಿಸಿದರು ಮತ್ತು ಸತ್ಯವಿಶ್ವಾಸಿಗಳು ಅವರ ಪ್ರಭುವಿನ ಕಡೆಯಿಂದ ಬಂದಿರುವ ಸತ್ಯವನ್ನು ಅನುಸರಿಸಿದರು. ಈ ರೀತಿಯಲ್ಲಿ ಅಲ್ಲಾಹನು ಜನರಿಗೆ ಅವರ ಸರಿಯಾದ ನೆಲೆಯನ್ನು ತಿಳಿಸಿ ಬಿಡುತ್ತಾನೆ.

ذَٰلِكَ بِأَنَّ الَّذِينَ كَفَرُوا اتَّبَعُوا الْبَاطِلَ وَأَنَّ الَّذِينَ آمَنُوا اتَّبَعُوا الْحَقَّ مِن رَّبِّهِمْ ۚ كَذَٰلِكَ يَضْرِبُ اللَّهُ لِلنَّاسِ أَمْثَالَهُمْ ③

4. ಆದುದರಿಂದ ಈ ಸತ್ಯನಿಷೇಧಿಗಳನ್ನು ಯುದ್ಧದಲ್ಲಿ ನೀವು ಎದುರಿಸಿದಾಗ, ಪ್ರಥಮ ಕೆಲಸ ಕತ್ತು ಕಡಿಯುವುದಾಗಿರುತ್ತದೆ. ನೀವು ಅವರನ್ನು ಚೆನ್ನಾಗಿ ಸದೆಬಡಿದ ಬಳಿಕ ಕೈದಿಗಳನ್ನು ಬಿಗಿಯಾಗಿ ಕಟ್ಟಿರಿ. ಆ ಬಳಿಕ ನೀವು ಅವರ ಮೇಲೆ ಸೌಜನ್ಯ ತೋರಬಹುದು ಅಥವಾ ಪರಿಹಾರಧನ ಸ್ವೀಕರಿಸಬಹುದು. ಇದು ಯುದ್ಧ ಮುಗಿಯುವ ತನಕ.[1] ಇದು ನೀವು ಮಾಡಬೇಕಾದ

فَإِذَا لَقِيتُمُ الَّذِينَ كَفَرُوا فَضَرْبَ الرِّقَابِ حَتَّىٰ إِذَا أَثْخَنتُمُوهُمْ فَشُدُّوا الْوَثَاقَ فَإِمَّا مَنًّا بَعْدُ وَإِمَّا فِدَاءً حَتَّىٰ تَضَعَ الْحَرْبُ أَوْزَارَهَا ۚ ذَٰلِكَ

1. ಈ ಸೂಕ್ತದ ಪದಗಳು ಮತ್ತು ಅವತೀರ್ಣದ ಹಿನ್ನೆಲೆಯನ್ನು ಗಮನಿಸಿದರೆ ಇದು ಯುದ್ಧದ ಆದೇಶ ಬಂದ ನಂತರ ಮತ್ತು ಯುದ್ಧ ಆರಂಭಗೊಳ್ಳುವುದಕ್ಕೆ ಮೊದಲು ಅವತೀರ್ಣಗೊಂಡಿತ್ತು ಎಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. "ಸತ್ಯನಿಷೇಧಿಗಳನ್ನು ಯುದ್ಧದಲ್ಲಿ ನೀವು ಎದುರಿಸಿದಾಗ" ಎಂಬ ಪದಗಳು ಇನ್ನೂ ಯುದ್ಧ ಸಂಭವಿಸಿಲ್ಲ ಎಂಬುದಕ್ಕೆ ಆಧಾರ ಒದಗಿಸುತ್ತದೆ. ಅದಕ್ಕೆ ಮೊದಲೇ, ಯುದ್ಧ ಆರಂಭಗೊಂಡರೆ ಮುಸ್ಲಿಮರು ಮೊಟ್ಟಮೊದಲು ಶತ್ರುಗಳ ಹೋರಾಟದ ಶಕ್ತಿಯನ್ನು ಸಂಪೂರ್ಣವಾಗಿ ಉಡುಗಿಸಲು ಮೊದಲ ಗಮನ

ಕಾರ್ಯ. ಅಲ್ಲಾಹನಿಚ್ಛಿಸುತ್ತಿದ್ದರೆ ಸ್ವತಃ ಅವನೇ ಅವರನ್ನು ನೋಡಿಕೊಳ್ಳುತ್ತಿದ್ದನು. ಆದರೆ, ನಿಮ್ಮನ್ನು ಪರಸ್ಪರರ ಮೂಲಕ ಪರೀಕ್ಷಿಸಲಿಕ್ಕಾಗಿ (ಅವನು ಈ ಕ್ರಮ ಕೈಗೊಂಡನು).[2] ಅಲ್ಲಾಹನು, ತನ್ನ ಮಾರ್ಗದಲ್ಲಿ ಹತರಾಗುವವರ ಕರ್ಮಗಳನ್ನು ಖಂಡಿತ ವ್ಯರ್ಥಗೊಳಿಸಲಾರನು.

وَلَوْ يَشَآءُ اللّٰهُ لَانْتَصَرَ مِنْهُمْ وَلٰكِنْ لِّيَبْلُوَا۟ بَعْضَكُمْ بِبَعْضٍ ۗ وَالَّذِيْنَ قُتِلُوْا فِيْ سَبِيْلِ اللّٰهِ فَلَنْ يُّضِلَّ اَعْمَالَهُمْ ﴿٤﴾

5. ಅವನು ಅವರಿಗೆ ಮಾರ್ಗದರ್ಶನ ಮಾಡುವನು.[3] ಅವರ ಸ್ಥಿತಿಯನ್ನು ಸುಧಾರಿಸುವನು ಮತ್ತು-

سَيَهْدِيْهِمْ وَيُصْلِحُ بَالَهُمْ ﴿٥﴾

6. ಅವನು ಅವರಿಗೆ ಪರಿಚಯಿಸಿರುವಂತಹ ಸ್ವರ್ಗದಲ್ಲಿ ಅವರನ್ನು ಪ್ರವೇಶ ಗೊಳಿಸುವನು.

وَيُدْخِلُهُمُ الْجَنَّةَ عَرَّفَهَا لَهُمْ ﴿٦﴾

7. ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗೆ ಸಹಾಯ ಮಾಡಿದರೆ, ಅವನು ನಿಮಗೆ ಸಹಾಯ ಮಾಡುವನು[4] ಮತ್ತು ನಿಮ್ಮ ಪಾದಗಳನ್ನು ಸ್ಥಿರಗೊಳಿಸುವನು.

يٰٓاَيُّهَا الَّذِيْنَ اٰمَنُوْٓا اِنْ تَنْصُرُوا اللّٰهَ يَنْصُرْكُمْ وَيُثَبِّتْ اَقْدَامَكُمْ ﴿٧﴾

8. ಇನ್ನು ಸತ್ಯನಿಷೇಧಿಗಳ ವಿಷಯ. ಅವರಿಗಂತೂ ವಿನಾಶ ಕಾದಿದೆ ಮತ್ತು ಅಲ್ಲಾಹನು ಅವರ ಕರ್ಮಗಳನ್ನು ಭ್ರಷ್ಟಗೊಳಿಸಿ ಬಿಟ್ಟಿರುವನು.

وَالَّذِيْنَ كَفَرُوْا فَتَعْسًا لَّهُمْ وَاَضَلَّ اَعْمَالَهُمْ ﴿٨﴾

9. ಏಕೆಂದರೆ ಅವರು ಅಲ್ಲಾಹನು ಅವತೀರ್ಣಗೊಳಿಸಿದುದನ್ನು ಇಷ್ಟಪಡಲಿಲ್ಲ. ಆದುದರಿಂದ ಅಲ್ಲಾಹನು ಅವರ ಕರ್ಮಗಳನ್ನು ವ್ಯರ್ಥಗೊಳಿಸಿಬಿಟ್ಟನು.

ذٰلِكَ بِاَنَّهُمْ كَرِهُوْا مَآ اَنْزَلَ اللّٰهُ فَاَحْبَطَ اَعْمَالَهُمْ ﴿٩﴾

10. ಅವರಿಗಿಂತ ಮುಂಚೆ ಗತಿಸಿದವರ ಗತಿಯೇನಾಯಿತೆಂಬುದನ್ನು

اَفَلَمْ يَسِيْرُوْا فِى الْاَرْضِ فَيَنْظُرُوْا كَيْفَ كَانَ عَاقِبَةُ الَّذِيْنَ مِنْ

---

ಹರಿಸಬೇಕು ಎಂಬ ನಿರ್ದೇಶವನ್ನು ಕೊಡಲಾಗುತ್ತಿದೆ. ಅನಂತರ ಬಂಧಿಸಲ್ಪಟ್ಟವರಿಗೆ ಸಂಬಂಧಿಸಿದಂತೆ ಅವರನ್ನು ಪರಿಹಾರ ಧನ ಪಡೆದು ಅಥವಾ ಕೈದಿಗಳ ವಿನಿಮಯದ ಮೂಲಕ ಬಿಟ್ಟು ಬಿಡುವ, ಅಥವಾ ಸೆರೆವಾಸದಲ್ಲಿಟ್ಟು ಅವರೊಂದಿಗೆ ಔದಾರ್ಯದ ಧೋರಣೆ ಕೈಗೊಳ್ಳುವ ಅಥವಾ ಔದಾರ್ಯ ತೋರಿ ಬಂಧಮುಕ್ತಗೊಳಿಸುವುದರ ಪೈಕಿ ಯಾವುದನ್ನು ಬೇಕಾದರೂ ಅನುಸರಿಸಲು ಮುಸ್ಲಿಮರಿಗೆ ಹಕ್ಕಿದೆ.

2. ಅರ್ಥಾತ್- ಮಿಥ್ಯವಾದಿಗಳನ್ನು ಸದೆಬಡಿಯುವುದಷ್ಟೇ ಅಲ್ಲಾಹನ ಉದ್ದೇಶವಾಗಿದ್ದರೆ ಈ ಕೆಲಸಕ್ಕಾಗಿ ಅವನಿಗೆ ನಿಮ್ಮ ಅವಶ್ಯಕತೆ ಇರಲಿಲ್ಲ. ಅವನ ಒಂದು ಭೂಕಂಪ ಅಥವಾ ಒಂದು ಚಂಡಮಾರುತ ಎವೆಯಿಕ್ಕುವುದರೊಳಗೆ ಈ ಕೆಲಸವನ್ನು ಮಾಡಿ ಮುಗಿಸುತ್ತಿತ್ತು. ಮಾನವರ ಪೈಕಿಯ ಸತ್ಯವಾದಿಗಳು ಮಿಥ್ಯವಾದಿಗಳೊಂದಿಗೆ ಸೆಣಸಾಡಬೇಕು. ಅವರ ವಿರುದ್ಧ ಜಿಹಾದ್ ಮಾಡಬೇಕೆಂದು ಅಲ್ಲಾಹನು ಬಯಸಿದ್ದನು. ಏಕೆಂದರೆ ಈ ಪರೀಕ್ಷೆಯ ಮೂಲಕ ಎಲ್ಲರಲ್ಲಿರುವ ಗುಣವಿಶೇಷತೆಗಳು ಹೊರಬೀಳಬೇಕು. ಅನಂತರ ಎಲ್ಲರೂ ತಂತಮ್ಮ ವರ್ತನೆಯ ಮೂಲಕ ಯಾವ ಸ್ಥಾನಮಾನಕ್ಕೆ ಅರ್ಹರೋ ಅದನ್ನು ಪಡೆಯಬೇಕು.
3. ಅರ್ಥಾತ್- ಸ್ವರ್ಗದೆಡೆಗೆ ಹೋಗಲು ಮಾರ್ಗದರ್ಶನ ಮಾಡುವನು.
4. ಅಲ್ಲಾಹನಿಗೆ ನೆರವಾಗುವುದೆಂದರೆ ಅಲ್ಲಾಹನ ವಚನವನ್ನು ಉನ್ನತಗೊಳಿಸುವ ಮತ್ತು ಸತ್ಯದ ಉತ್ತುಂಗದ ಕೆಲಸದಲ್ಲಿ ಭಾಗಿಯಾಗುವುದು.

ಕಂಡುಕೊಳ್ಳಲು ಅವರು ಭೂಮಿಯಲ್ಲಿ ಸಂಚರಿಸಲಿಲ್ಲವೇ? ಅಲ್ಲಾಹನು ಅವರ ಸರ್ವಸ್ವವನ್ನೂ ಧ್ವಂಸ ಗೊಳಿಸಿದನು. ಈ ಸತ್ಯನಿಷೇಧಿಗಳಿಗೆ ಇಂತಹದೇ ಗತಿ ವಿಧಿಸಲ್ಪಟ್ಟಿದೆ.[5]

قَبْلِهِمْ ۚ دَمَّرَ اللَّهُ عَلَيْهِمْ ۖ وَلِلْكَافِرِينَ أَمْثَالُهَا ﴿١٠﴾

11. ಇದೇಕೆಂದರೆ ಸತ್ಯವಿಶ್ವಾಸಿಗಳ ಸಹಾಯಕನು ಅಲ್ಲಾಹನಾಗಿದ್ದಾನೆ ಮತ್ತು ಸತ್ಯನಿಷೇಧಿಗಳಿಗೆ ಯಾರೂ ಸಹಾಯಕರಿಲ್ಲ.

ذَٰلِكَ بِأَنَّ اللَّهَ مَوْلَى الَّذِينَ آمَنُوا وَأَنَّ الْكَافِرِينَ لَا مَوْلَىٰ لَهُمْ ﴿١١﴾

12. ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗುವವರನ್ನು ಅಲ್ಲಾಹನು ತಳಭಾಗದಲ್ಲಿ ಕಾಲುವೆಗಳು ಹರಿಯುವಂತಹ ಸ್ವರ್ಗೋದ್ಯಾನ ಗಳಲ್ಲಿ ಪ್ರವೇಶಗೊಳಿಸುವನು. ಸತ್ಯನಿಷೇಧಿಗಳು ಕೆಲವೇ ದಿನಗಳ ಲೌಕಿಕ ಜೀವನದ ಸುಖವನ್ನು ಭೋಗಿಸುತ್ತಿದ್ದಾರೆ, ಪ್ರಾಣಿ ಗಳುಂಡಂತೆ ಉಣ್ಣುತ್ತಾರೆ, ನರಕವೇ ಅವರ ಅಂತಿಮ ನೆಲೆಯಾಗಿದೆ.

إِنَّ اللَّهَ يُدْخِلُ الَّذِينَ آمَنُوا وَعَمِلُوا الصَّالِحَاتِ جَنَّاتٍ تَجْرِي مِن تَحْتِهَا الْأَنْهَارُ ۖ وَالَّذِينَ كَفَرُوا يَتَمَتَّعُونَ وَيَأْكُلُونَ كَمَا تَأْكُلُ الْأَنْعَامُ وَالنَّارُ مَثْوًى لَّهُمْ ﴿١٢﴾

13. ಸಂದೇಶವಾಹಕರೇ, ನಿಮ್ಮನ್ನು ಹೊರಹಾಕಿದ ನಾಡಿಗಿಂತ ಬಹಳಷ್ಟು ಬಲಿಷ್ಠವಾಗಿದ್ದ ಅದೆಷ್ಟೋ ನಾಡುಗಳು ಈ ಹಿಂದೆ ಗತಿಸಿವೆ.[6] ನಾವು ಅವರನ್ನು ನಾಶಗೊಳಿಸಿಬಿಟ್ಟೆವು. ಅವರನ್ನು ರಕ್ಷಿಸು ವವರಾರೂ ಇರಲಿಲ್ಲ.

وَكَأَيِّن مِّن قَرْيَةٍ هِيَ أَشَدُّ قُوَّةً مِّن قَرْيَتِكَ الَّتِي أَخْرَجَتْكَ أَهْلَكْنَاهُمْ فَلَا نَاصِرَ لَهُمْ ﴿١٣﴾

14. ತನ್ನ ಪ್ರಭುವಿನ ಕಡೆಯಿಂದ ಒಂದು ಸುಸ್ಪಷ್ಟ ಸನ್ಮಾರ್ಗದಲ್ಲಿರು ವವನು -ಯಾರ ಪಾಲಿಗೆ ಅವರ ದುಷ್ಕೃತ್ಯಗಳು ಸುಂದರ ಗೊಳಿಸಲ್ಪಟ್ಟಿವೆಯೋ ಮತ್ತು ಯಾರು ತಮ್ಮ ಸ್ವೇಚ್ಛೆಗಳ ಅನುಯಾಯಿಗಳಾಗಿ ಬಿಟ್ಟಿರುವರೋ- ಅವರಂತೆ ಆಗಬಲ್ಲನೇ?

أَفَمَن كَانَ عَلَىٰ بَيِّنَةٍ مِّن رَّبِّهِ كَمَن زُيِّنَ لَهُ سُوءُ عَمَلِهِ وَاتَّبَعُوا أَهْوَاءَهُم ﴿١٤﴾

15. ಧರ್ಮನಿಷ್ಠರಿಗೆ ವಾಗ್ದಾನ ಮಾಡಲಾಗಿರುವ ಆ ಸ್ವರ್ಗದ ವಿಶೇಷತೆ ಯೇನೆಂದರೆ ಅದರಲ್ಲಿ ತಿಳಿನೀರಿನ ಕಾಲುವೆಗಳು ಹರಿಯು ತ್ತಿರುವುವು, ಸ್ವಲ್ಪವೂ ರುಚಿ ಬದಲಾಗಿರದಂತಹ ಹಾಲಿನ ಕಾಲುವೆಗಳು ಹರಿಯುತ್ತಿರುವುವು. ಕುಡಿಯುವವರಿಗೆ ಅತ್ಯಂತ ರುಚಿಕರವಾಗಿರುವ ಮದಿರೆಯ ಕಾಲುವೆಗಳು ಹರಿಯುತ್ತಿರುವುವು, ಅತ್ಯಂತ ತಿಳಿಯಾದ ಜೇನಿನ ಕಾಲುವೆಗಳು ಹರಿಯುತ್ತಿರುವುವು.[7]

مَّثَلُ الْجَنَّةِ الَّتِي وُعِدَ الْمُتَّقُونَ ۖ فِيهَا أَنْهَارٌ مِّن مَّاءٍ غَيْرِ آسِنٍ وَأَنْهَارٌ مِّن لَّبَنٍ لَّمْ يَتَغَيَّرْ طَعْمُهُ وَأَنْهَارٌ مِّنْ خَمْرٍ لَّذَّةٍ لِّلشَّارِبِينَ وَأَنْهَارٌ مِّنْ عَسَلٍ مُّصَفًّى ۖ وَلَهُمْ

5. ಇದಕ್ಕೆ ಎರಡು ಅರ್ಥಗಳಿವೆ. ಒಂದನೆಯದಾಗಿ, ಆ ಸತ್ಯನಿಷೇಧಿಗಳು ಯಾವ ರೀತಿಯ ವಿನಾಶಕ್ಕೆ ಈಡಾದರೋ ಅಂತಹುದೇ ವಿನಾಶಕ್ಕೆ ಮುಹಮ್ಮದ್‌ರ(ಸ) ಸಂದೇಶವನ್ನು ಒಪ್ಪದ ಸತ್ಯನಿಷೇಧಿಗಳೂ ಈಡಾಗಲಿದ್ದಾರೆ. ಎರಡನೆಯದಾಗಿ ಲೌಕಿಕ ಜೀವನದ ಯಾತನೆಗಷ್ಟೇ ಅವರ ವಿನಾಶ ಸೀಮಿತವಾಗಿರಲಾರದು, ಬದಲಾಗಿ ಪರಲೋಕದಲ್ಲೂ ಅವರು ಅದೇ ಗತಿಯನ್ನು ಕಾಣುವರು.
6. ಅರ್ಥಾತ್- ಕುರೈಶರು ವಲಸೆ ಹೋಗುವಂತೆ ಪ್ರವಾದಿವರ್ಯರನ್ನು(ಸ) ನಿರ್ಬಂಧಿಸಿದ ಮಕ್ಕಾ ನಗರ.
7. ಪ್ರವಾದಿ ವಚನಗಳಲ್ಲಿ ಬಂದಿರುವ ವಿವರಣೆಯ ಪ್ರಕಾರ ಆ ಹಾಲು, ಜಾನುವಾರುಗಳ ಕೆಚ್ಚಲಿನಿಂದ ಹೊರಟ ಹಾಲಾಗಿರಲಾರದು. ಆ ಮದಿರೆಯು ಹಣ್ಣುಗಳನ್ನು ಕೊಳೆಯಿಸಿ ಭಟ್ಟಿಯಿಳಿಸಿದ ಮದಿರೆಯಾಗಿರಲಾರದು, ಹಾಗೆಯೇ ಆ ಜೇನು, ಜೇನ್ನೊಣದ ಹೊಟ್ಟೆಯಿಂದ ಹೊರಟ ಜೇನಾಗಿರಲಾರದು. ಬದಲಾಗಿ ಇದೆಲ್ಲವೂ ನೈಸರ್ಗಿಕ ಚಿಲುಮೆಗಳಿಂದ ಹೊರಹೊಮ್ಮುವುವು.

ಅದರಲ್ಲಿ ಅವರಿಗಾಗಿ ಎಲ್ಲ ಬಗೆಯ ಫಲಗಳಿರುವುವು ಮತ್ತು ಅವರ ಪ್ರಭುವಿನ ಕಡೆಯಿಂದ ಕ್ಷಮೆ ಇರುವುದು. (ಇಂತಹ ಸ್ವರ್ಗ ಯಾರ ಪಾಲಿಗೆ ಬರಲಿದೆಯೋ ಅವನು) ಸದಾಕಾಲ ನರಕ ದಲ್ಲೇ ವಾಸಿಸಲಿರುವ ಮತ್ತು ಕರುಳುಗಳನ್ನು ಕತ್ತರಿಸಿ ಬಿಡುವಂತಹ ಕುದಿಯುವ ನೀರನ್ನು ಕುಡಿಸಲ್ಪಡಲಿರುವ ಜನರಿಗೆ ಸಮಾನ ನಾಗಬಲ್ಲನೇ?

فِيهَا مِن كُلِّ الثَّمَرَاتِ وَمَغْفِرَةٌ
مِّن رَّبِّهِمْ ۖ كَمَنْ هُوَ خَالِدٌ فِي
النَّارِ وَسُقُوا مَاءً حَمِيمًا فَقَطَّعَ
أَمْعَاءَهُمْ ﴿١٥﴾

16. ಇವರಲ್ಲಿ ಕೆಲವರು ನಿಮ್ಮ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಾರೆ. ಆ ಬಳಿಕ ನಿಮ್ಮಲ್ಲಿಂದ ಹೊರಟು ಹೋದಾಗ, ಜ್ಞಾನದ ಅನುಗ್ರಹ ನೀಡಲ್ಪಟ್ಟವರೊಡನೆ, "ಈಗ ತಾನೆ ಇವರು ಹೇಳಿದ್ದೇನು?" ಎಂದು ಕೇಳುತ್ತಾರೆ.[8] ಅಲ್ಲಾಹನು ಮುದ್ರೆಯೊತ್ತಿರುವುದು ಇವರದೇ ಹೃದಯಗಳಿಗೆ ಮತ್ತು ಇವರು ತಮ್ಮ ಸ್ವೇಚ್ಛೆಗಳ ಅನುಯಾಯಿಗಳಾಗಿ ಬಿಟ್ಟಿರುವರು.

وَمِنْهُم مَّن يَسْتَمِعُ إِلَيْكَ حَتَّىٰ
إِذَا خَرَجُوا مِنْ عِندِكَ قَالُوا لِلَّذِينَ
أُوتُوا الْعِلْمَ مَاذَا قَالَ آنِفًا ۚ أُولَٰئِكَ
الَّذِينَ طَبَعَ اللَّهُ عَلَىٰ قُلُوبِهِمْ
وَاتَّبَعُوا أَهْوَاءَهُمْ ﴿١٦﴾

17. ಸನ್ಮಾರ್ಗ ಹೊಂದಿದವರಿಗೆ ಅಲ್ಲಾಹನು ಇನ್ನಷ್ಟು ಹೆಚ್ಚು ಮಾರ್ಗದರ್ಶನ ನೀಡುತ್ತಾನೆ ಮತ್ತು ಅವರಿಗೆ ಅವರ ಪಾಲಿನ 'ಧರ್ಮನಿಷ್ಠೆ'ಯನ್ನು ದಯಪಾಲಿಸುತ್ತಾನೆ.

وَالَّذِينَ اهْتَدَوْا زَادَهُمْ هُدًى
وَآتَاهُمْ تَقْوَاهُمْ ﴿١٧﴾

18. ಈಗ ಇವರೇನು, ಲೋಕಾಂತ್ಯವು ಹಠಾತ್ತನೆ ತಮ್ಮ ಮೇಲೆ ಬಂದೆರಗುವುದನ್ನು ಕಾಯುತ್ತಿರುವರೇ? ಅದರ ಕುರುಹುಗಳಂತು ಬಂದು ಬಿಟ್ಟಿವೆ. ಇನ್ನು ಅದುವೇ ಬಂದು ಬಿಟ್ಟಾಗ, ಇವರಿಗೆ ಉಪದೇಶ ಸ್ವೀಕರಿಸಲು ಯಾವ ಅವಕಾಶ ತಾನೇ ಉಳಿದಿರುವುದು?

فَهَلْ يَنظُرُونَ إِلَّا السَّاعَةَ أَن تَأْتِيَهُم
بَغْتَةً ۖ فَقَدْ جَاءَ أَشْرَاطُهَا ۚ فَأَنَّىٰ لَهُمْ
إِذَا جَاءَتْهُمْ ذِكْرَاهُمْ ﴿١٨﴾

19. ಆದುದರಿಂದ ಸಂದೇಶವಾಹಕರೇ, ಅಲ್ಲಾಹನ ಹೊರತು ಇತರ ಆರಾಧ್ಯರಾರೂ ಇಲ್ಲವೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ ಮತ್ತು ಕ್ಷಮೆ ಯಾಚಿಸಿರಿ. ನಿಮ್ಮ ತಪ್ಪಿಗಾಗಿಯೂ ಸತ್ಯವಿಶ್ವಾಸಿ ಸ್ತ್ರೀ-ಪುರುಷರಿಗಾಗಿಯೂ.[9] ಅಲ್ಲಾಹನು ನಿಮ್ಮ ಚಟುವಟಿಕೆಗಳನ್ನು ಬಲ್ಲನು ಮತ್ತು ನಿಮ್ಮ ಅಂತಿಮ ನೆಲೆಯನ್ನೂ ಬಲ್ಲನು.

فَاعْلَمْ أَنَّهُ لَا إِلَٰهَ إِلَّا اللَّهُ وَاسْتَغْفِرْ
لِذَنبِكَ وَلِلْمُؤْمِنِينَ وَالْمُؤْمِنَاتِ ۗ
وَاللَّهُ يَعْلَمُ مُتَقَلَّبَكُمْ وَمَثْوَاكُمْ ﴿١٩﴾

8. ಇದು ಪ್ರವಾದಿವರ್ಯರ(ಸ) ಸಭೆಗಳಿಗೆ ಬಂದು ಕೂರುತ್ತಿದ್ದ ಸತ್ಯನಿಷೇಧಿಗಳು, ಕಪಟವಿಶ್ವಾಸಿಗಳು ಮತ್ತು ಗ್ರಂಥದವರ ಪ್ರಸ್ತಾಪವಾಗಿದೆ. ಅವರು ಪ್ರವಾದಿವರ್ಯರ(ಸ) ಮಾತುಗಳು ಮತ್ತು ಕುರ್‌ಆನಿನ ಸೂಕ್ತಗಳನ್ನು ಕೇಳುತ್ತಿದ್ದರು. ಆದರೆ ಅವರ ಮನಸ್ಸು ಪ್ರವಾದಿವರ್ಯರ(ಸ) ಬಾಯಿಯಿಂದ ಹೊರಡುತ್ತಿದ್ದ ವಿಷಯಗಳಿಂದ ದೂರವಿರುತ್ತಿತ್ತು. ಆದ್ದರಿಂದ ಅವರ ಪರಿಸ್ಥಿತಿ ಎಲ್ಲವನ್ನೂ ಕೇಳಿಯೂ ಏನೂ ಕೇಳದವರಂತಾಗಿರುತ್ತಿತ್ತು. ಸಭೆಯಿಂದ ಹೊರಬಂದ ಬಳಿಕ ಅವರು ಮುಸ್ಲಿಮರೊಡನೆ "ಈಗ ತಾನೇ ಅವರು ಹೇಳುತ್ತಿದ್ದುದೇನು?" ಎಂದು ಕೇಳುತ್ತಿದ್ದರು.

9. ದಾಸ ತನ್ನ ಪ್ರಭುವಿನ ದಾಸ್ಯ ಕೈಗೊಳ್ಳಲು ಮತ್ತು ಧರ್ಮಕ್ಕಾಗಿ ಜೀವದ ಹಂಗು ತೊರೆದು ಹೋರಾಡಲು ತನ್ನ ಮಟ್ಟಿಗೆ ಎಷ್ಟೇ ಪ್ರಯತ್ನ ಮಾಡಿದ್ದರೂ ನನ್ನ ಪಾಲಿನ ಕೆಲಸ ಮುಗಿಯಿತು ಎಂಬ ಭಾವನೆಯಲ್ಲಿರಬಾರದು. ನನಗೆ ನನ್ನ ಪ್ರಭುವಿನ ಮೇಲಿದ್ದ ಕರ್ತವ್ಯವನ್ನು ಈಡೇರಿಸಲು ಸಾಧ್ಯವಾಗಲಿಲ್ಲ ಎಂದೇ ಅವನು ಸದಾ ಭಾವಿಸುತ್ತಿರಬೇಕು. ಇದು ಇಸ್ಲಾಮ್ ಕಲಿಸಿರುವ ಶಿಷ್ಟಾಚಾರಗಳಲ್ಲೊಂದು. ಅವನು ಸದಾ ತನ್ನ ತಪ್ಪನ್ನು ಒಪ್ಪಿಕೊಂಡು, "ನಿನ್ನ ಸನ್ನಿಧಿಯಲ್ಲಿ ನನ್ನಿಂದ ಆಗಿರುವ ದೌರ್ಬಲ್ಯಗಳನ್ನು ಕ್ಷಮಿಸು" ಎಂದು

20. ಸತ್ಯವಿಶ್ವಾಸಿಗಳು,[10] (ಯುದ್ಧದ ಆಜ್ಞೆ ಕೊಡುವಂತಹ) ಒಂದು ಅಧ್ಯಾಯ ಅವತೀರ್ಣ ಗೊಳಿಸಲ್ಪಡುವುದಿಲ್ಲವೇಕೆ? ಎಂದು ಕೇಳುತ್ತಿದ್ದರು. ಆದರೆ ಯುದ್ಧದ ಪ್ರಸ್ತಾಪವಿದ್ದ ಸುದೃಢ ಅಧ್ಯಾಯವೊಂದನ್ನು ಅವತೀರ್ಣಗೊಳಿಸಲಾದಾಗ, ಹೃದಯದೊಳಗೆ ರೋಗವಿದ್ದವರು, ಮೃತ್ಯು ಆವರಿಸಿದವರು ನೋಡುವಂತೆ ನಿಮ್ಮ ಕಡೆ ನೋಡುತ್ತಾರೆ. ಅಯ್ಯೋ ಅವರ ಪಾಡೇ!

وَيَقُولُ الَّذِينَ آمَنُوا لَوْلَا نُزِّلَتْ سُورَةٌ ۖ فَإِذَا أُنزِلَتْ سُورَةٌ مُّحْكَمَةٌ وَذُكِرَ فِيهَا الْقِتَالُ ۙ رَأَيْتَ الَّذِينَ فِي قُلُوبِهِم مَّرَضٌ يَنظُرُونَ إِلَيْكَ نَظَرَ الْمَغْشِيِّ عَلَيْهِ مِنَ الْمَوْتِ ۖ فَأَوْلَىٰ لَهُمْ ﴿٢٠﴾

21. (ಅವರ ಬಾಯಲ್ಲಿರುವುದು) ಅನುಸರಣೆಯ ಕರಾರು ಹಾಗೂ ಹಿತಮಾತು. ಆದರೆ ಖಚಿತ ಆದೇಶವು ನೀಡಲ್ಪಟ್ಟಾಗ ಅವರು ಅಲ್ಲಾಹನೊಂದಿಗೆ ಮಾಡಿಕೊಂಡ ಕರಾರಿನಲ್ಲಿ ಸತ್ಯವಂತರಾಗಿರುತ್ತಿದ್ದರೆ ಅದು ಅವರಿಗೇ ಹಿತಕರವಾಗಿರುತ್ತಿತ್ತು.

طَاعَةٌ وَقَوْلٌ مَّعْرُوفٌ ۚ فَإِذَا عَزَمَ الْأَمْرُ فَلَوْ صَدَقُوا اللَّهَ لَكَانَ خَيْرًا لَّهُمْ ﴿٢١﴾

22. ನೀವು ವಿಮುಖರಾಗಿ ಬಿಟ್ಟರೆ ಭೂಮಿಯಲ್ಲಿ ಪುನಃ ಕ್ಷೋಭೆಯನ್ನುಂಟು ಮಾಡುವ ಹಾಗೂ ಪರಸ್ಪರ ಕತ್ತು ಕೊಯ್ಯುವ ಹೊರತು ನಿಮ್ಮಿಂದ ಬೇರೇನನ್ನಾದರೂ ನಿರೀಕ್ಷಿಸಬಹುದೇ?[11]

فَهَلْ عَسَيْتُمْ إِن تَوَلَّيْتُمْ أَن تُفْسِدُوا فِي الْأَرْضِ وَتُقَطِّعُوا أَرْحَامَكُمْ ﴿٢٢﴾

23. ಅಲ್ಲಾಹನು ಶಪಿಸಿರುವುದು ಹಾಗೂ ಕಿವುಡರಾಗಿಯೂ ಕುರುಡರಾಗಿಯೂ ಮಾಡಿ ಬಿಟ್ಟಿರುವುದು ಇವರನ್ನೇ.

أُولَٰئِكَ الَّذِينَ لَعَنَهُمُ اللَّهُ فَأَصَمَّهُمْ وَأَعْمَىٰ أَبْصَارَهُمْ ﴿٢٣﴾

24. ಅವರು ಕುರ್‌ಆನಿನ ಬಗ್ಗೆ ಚಿಂತನೆ ನಡೆಸಲಿಲ್ಲವೇ? ಅಥವಾ ಅವರ ಹೃದಯಗಳಿಗೆ ಬೀಗಮುದ್ರೆ ಬಿದ್ದಿದೆಯೇ?

أَفَلَا يَتَدَبَّرُونَ الْقُرْآنَ أَمْ عَلَىٰ قُلُوبٍ أَقْفَالُهَا ﴿٢٤﴾

25. ವಾಸ್ತವದಲ್ಲಿ ಸನ್ಮಾರ್ಗವು ಸ್ಪಷ್ಟಗೊಂಡ ಬಳಿಕ ಅದರಿಂದ ವಿಮುಖರಾಗಿ ಬಿಟ್ಟವರಿಗೆ ಶೈತಾನನು ಈ ಧೋರಣೆಯನ್ನು ಸುಲಭಗೊಳಿಸಿರುವನು ಮತ್ತು ಅವರಿಗಾಗಿ ಹುಸಿ ನಿರೀಕ್ಷೆಗಳ ಸರಣಿಯನ್ನು ದೀರ್ಘಗೊಳಿಸಿರುವನು.

إِنَّ الَّذِينَ ارْتَدُّوا عَلَىٰ أَدْبَارِهِم مِّن بَعْدِ مَا تَبَيَّنَ لَهُمُ الْهُدَى ۙ الشَّيْطَانُ سَوَّلَ لَهُمْ وَأَمْلَىٰ لَهُمْ ﴿٢٥﴾

---

ಪ್ರಾರ್ಥಿಸುತ್ತಿರಬೇಕು. "ಪ್ರವಾದಿಗಳೇ! ನಿಮ್ಮ ತಪ್ಪಿಗಾಗಿ ಕ್ಷಮೆ ಯಾಚಿಸಿರಿ" ಎಂಬ ಅಲ್ಲಾಹನ ವಾಣಿಯ ನಿಜವಾದ ಸ್ಫೂರ್ತಿಯೂ ಇದೇ ಆಗಿದೆ.

10. ನೈಜ ಮುಸ್ಲಿಮರು ಯುದ್ಧದ ಆಜ್ಞೆಯನ್ನು ಕಾತರದಿಂದ ಕಾಯುತ್ತಿದ್ದರು. ಆದರೆ ಕಪಟ ವಿಶ್ವಾಸದೊಂದಿಗೆ ಮುಸ್ಲಿಮರ ಗುಂಪಿನಲ್ಲಿ ಸೇರಿಕೊಂಡಿದ್ದ ಜನರಿಗೆ ಯುದ್ಧದ ಆಜ್ಞೆ ಬರುತ್ತಲೇ ಪ್ರಾಣವೇ ಹಾರಿ ಹೋದಂತಾಯಿತು.

11. ಈ ಮಾತಿನ ಅರ್ಥವೇನೆಂದರೆ - ಪ್ರವಾದಿವರ್ಯರು(ಸ) ಮತ್ತು ಸತ್ಯವಿಶ್ವಾಸಿಗಳು ಯಾವ ಉಜ್ವಲ ಸುಧಾರಣಾತ್ಮಕ ಕೆಲಸಕ್ಕಾಗಿ ಮತ್ತು ಇಸ್ಲಾಮಿನ ಪ್ರತಿರೋಧಕ್ಕಾಗಿ ತನು-ಮನ-ಧನದಿಂದ ಪ್ರಯತ್ನಿಸುತ್ತಿದ್ದರೋ ಅದರ ಬಗ್ಗೆ ನೀವು ಮೈಗಳ್ಳತನ ಪ್ರದರ್ಶಿಸಿದರೆ ಅದರ ಪರಿಣಾಮವಾಗಿ ನೀವು ಅದೇ ಅಜ್ಞಾನದಿಂದ ಕೂಡಿದ ವ್ಯವಸ್ಥೆಯೆಡೆಗೆ ಮರಳಬೇಕಾಗುತ್ತದೆ. ಅದರಲ್ಲಿ ನೀವು ಶತಮಾನಗಳಿಂದ ಪರಸ್ಪರರ ಕತ್ತು ಕೊಯ್ಯುತ್ತಾ ಬಿದ್ದುಕೊಂಡಿದ್ದಿರಿ. ಸ್ವಂತ ಮಕ್ಕಳನ್ನೇ ಜೀವಂತ ಹೂಳುತ್ತಿದ್ದಿರಿ. ದೇವನ ಭೂಮಿಯಲ್ಲಿ ಅಕ್ರಮ ಮತ್ತು ಕ್ಷೋಭೆಯನ್ನು ಹರಡುತ್ತಿದ್ದಿರಿ.

26. ಆದುದರಿಂದಲೇ ಅವರು ಅಲ್ಲಾಹನು ಅವತೀರ್ಣಗೊಳಿಸಿದ ಧರ್ಮವನ್ನು ಮೆಚ್ಚದವರೊಡನೆ, "ಕೆಲವು ವಿಷಯಗಳಲ್ಲಿ ನಾವು ನಿಮ್ಮನ್ನು ಅನುಸರಿಸುವೆವು" ಎಂದು ಹೇಳಿಬಿಟ್ಟರು.[12] ಅವರ ಈ ರಹಸ್ಯ ಮಾತುಗಳನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.

ذَٰلِكَ بِأَنَّهُمْ قَالُوا لِلَّذِينَ كَرِهُوا مَا نَزَّلَ اللَّهُ سَنُطِيعُكُمْ فِي بَعْضِ الْأَمْرِ ۖ وَاللَّهُ يَعْلَمُ إِسْرَارَهُمْ ﴿٢٦﴾

27. ದೇವಚರರು ಇವರ ಆತ್ಮಗಳನ್ನು ವಶಪಡಿಸಿಕೊಳ್ಳುವಾಗ ಮತ್ತು ಇವರ ಮುಖಗಳಿಗೂ ಬೆನ್ನುಗಳಿಗೂ ಹೊಡೆಯುತ್ತ ಇವರನ್ನು ಕೊಂಡೊಯ್ಯುವಾಗ ಇವರ ಅವಸ್ಥೆ ಏನಾದೀತು?

فَكَيْفَ إِذَا تَوَفَّتْهُمُ الْمَلَائِكَةُ يَضْرِبُونَ وُجُوهَهُمْ وَأَدْبَارَهُمْ ﴿٢٧﴾

28. ಇವರು ಅಲ್ಲಾಹನನ್ನು ಕೋಪಗೊಳಿಸುವಂತಹ ಮಾರ್ಗವನ್ನು ಅನುಸರಿಸಿದರು ಮತ್ತು ಅವನ ಮೆಚ್ಚುಗೆಯ ಮಾರ್ಗವನ್ನು ಅನುಸರಿಸಲು ಇಷ್ಟ ಪಡಲಿಲ್ಲವೆಂಬ ಕಾರಣದಿಂದಲೇ ಹೀಗಾಗುವುದು. ಆದುದರಿಂದಲೇ ಅವನು ಇವರ ಸಕಲ ಕರ್ಮಗಳನ್ನು ನಿರರ್ಥಕಗೊಳಿಸಿ ಬಿಟ್ಟನು.[13]

ذَٰلِكَ بِأَنَّهُمُ اتَّبَعُوا مَا أَسْخَطَ اللَّهَ وَكَرِهُوا رِضْوَانَهُ فَأَحْبَطَ أَعْمَالَهُمْ ﴿٢٨﴾

29. ಹೃದಯಗಳಲ್ಲಿ ರೋಗವುಳ್ಳವರು, ಅಲ್ಲಾಹನು ಅವರ ಹೃದಯಗಳ ಮಾಲಿನ್ಯವನ್ನು ವ್ಯಕ್ತಗೊಳಿಸಲಾರನೆಂದು ಭಾವಿಸಿಕೊಂಡಿರುವರೇ?

أَمْ حَسِبَ الَّذِينَ فِي قُلُوبِهِمْ مَرَضٌ أَنْ لَنْ يُخْرِجَ اللَّهُ أَضْغَانَهُمْ ﴿٢٩﴾

30. ನಾವಿಚ್ಛಿಸಿದರೆ ಅವರನ್ನು ನಿಮಗೆ ಕಣ್ಣಾರೆ ತೋರಿಸುವೆವು. ಆಗ ನೀವು ಅವರನ್ನು ಅವರ ಮುಖಭಾವಗಳಿಂದಲೇ ಗುರುತಿಸಬಲ್ಲಿರಿ. ಅವರು ಮಾತನಾಡುವ ರೀತಿಯಿಂದಂತೂ ನೀವು ಅವರನ್ನು ಗುರುತಿಸಿಯೇ ತೀರುವಿರಿ. ಅಲ್ಲಾಹನು ನಿಮ್ಮೆಲ್ಲರ ಕರ್ಮಗಳನ್ನು ಚೆನ್ನಾಗಿ ಬಲ್ಲನು.

وَلَوْ نَشَاءُ لَأَرَيْنَاكَهُمْ فَلَعَرَفْتَهُمْ بِسِيمَاهُمْ ۚ وَلَتَعْرِفَنَّهُمْ فِي لَحْنِ الْقَوْلِ ۚ وَاللَّهُ يَعْلَمُ أَعْمَالَكُمْ ﴿٣٠﴾

31. ನಿಮ್ಮಲ್ಲಿ ಧರ್ಮಯೋಧರೂ ಸ್ಥೈರ್ಯವುಳ್ಳವರೂ ಯಾರೆಂದು ನೋಡಲಿಕ್ಕಾಗಿ ಹಾಗೂ ನಿಮ್ಮ ಸ್ಥಿತಿಯನ್ನು ಅಳೆಯಲಿಕ್ಕಾಗಿ ನಾವು ಖಂಡಿತವಾಗಿಯೂ ನಿಮ್ಮನ್ನು ಪರೀಕ್ಷೆಗೆ ಒಳಪಡಿಸುವೆವು.

وَلَنَبْلُوَنَّكُمْ حَتَّىٰ نَعْلَمَ الْمُجَاهِدِينَ مِنْكُمْ وَالصَّابِرِينَ وَنَبْلُوَ أَخْبَارَكُمْ ﴿٣١﴾

12. ಅರ್ಥಾತ್- ವಿಶ್ವಾಸವನ್ನು ಪ್ರಕಟಿಸಿ ಮುಸ್ಲಿಮರ ಕೂಟದೊಂದಿಗೆ ಸೇರಿದ ನಂತರವೂ ಅವರು ಒಳಗೊಳಗೇ ಇಸ್ಲಾಮಿನ ಶತ್ರುಗಳೊಂದಿಗೆ ಸೇರಿ ಸಂಚುಗಳನ್ನು ಹೂಡುತ್ತಿದ್ದರು. ಕೆಲವು ವಿಷಯಗಳಲ್ಲಿ ನಾವು ನಿಮ್ಮ ಜತೆಗಿದ್ದೇವೆ ಎಂದು ಅವರೊಡನೆ ವಾಗ್ದಾನ ಮಾಡುತ್ತಿದ್ದರು.

13. ಕರ್ಮಗಳು ಎಂದರೆ ಮುಸ್ಲಿಮರಾಗಿ ಅವರು ನಿರ್ವಹಿಸುತ್ತಿದ್ದ ಕರ್ಮಗಳು. ಅವರ ನಮಾಝ್, ಉಪವಾಸ ವ್ರತ, ಅವರ ಝಕಾತ್ ಮತ್ತು ಮೇಲ್ನೋಟಕ್ಕೆ ಸತ್ಕರ್ಮಗಳೆಂದು ಪರಿಗಣಿಸಲ್ಪಡುವ ಎಲ್ಲಾ ಆರಾಧನೆ ಮತ್ತು ಒಳಿತುಗಳು ನಷ್ಟವಾದವು. ಏಕೆಂದರೆ ಮುಸ್ಲಿಮರಾಗಿಯೂ ಅಲ್ಲಾಹ್, ಅವನ ಧರ್ಮ ಮತ್ತು ಮುಸ್ಲಿಮ್ ಸಮಾಜದ ಜತೆಗೆ ಅವರು ಪ್ರಾಮಾಣಿಕತೆ ಮತ್ತು ನಿಷ್ಠೆಯ ಧೋರಣೆ ಅನುಸರಿಸಲಿಲ್ಲ. ಕೇವಲ ತಮ್ಮ ಲೌಕಿಕ ಹಿತಕ್ಕಾಗಿ ಧರ್ಮವಿರೋಧಿಗಳ ಜತೆಗೆ ಸೇರಿ ಸಂಚು ಹೂಡಿದರು. ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ ಸಂದರ್ಭ ಬಂದಾಗ ತಮ್ಮನ್ನು ಅಪಾಯದಿಂದ ರಕ್ಷಿಸಿಕೊಳ್ಳುವ ಬಗ್ಗೆ ಚಿಂತಾಮಗ್ನರಾದರು.

32. ಸನ್ಮಾರ್ಗವು ಸ್ಪಷ್ಟವಾಗಿ ತಿಳಿದ ಬಳಿಕವೂ ಸತ್ಯವನ್ನು ನಿರಾಕರಿಸಿದವರು, ಅಲ್ಲಾಹನ ಮಾರ್ಗದಿಂದ ತಡೆದವರು ಮತ್ತು ಸಂದೇಶವಾಹಕರೊಡನೆ ಜಗಳವಾಡಿದವರು- ವಾಸ್ತವದಲ್ಲಿ ಅವರು ಅಲ್ಲಾಹನಿಗೆ ಯಾವ ಹಾನಿಯನ್ನೂ ಮಾಡಲಾರರು, ಅವರು ಮಾಡಿದ್ದೆಲ್ಲವನ್ನೂ ಅಲ್ಲಾಹನೇ ಅಳಿಸಿ ಬಿಡುವನು.

إِنَّ الَّذِينَ كَفَرُوا وَصَدُّوا عَن سَبِيلِ
اللَّهِ وَشَاقُّوا الرَّسُولَ مِن بَعْدِ مَا
تَبَيَّنَ لَهُمُ الْهُدَىٰ لَن يَضُرُّوا اللَّهَ
شَيْئًا وَسَيُحْبِطُ أَعْمَالَهُمْ ﴿٣٢﴾

33. ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಅನುಸರಿಸಿರಿ. ಸಂದೇಶವಾಹಕರನ್ನೂ ಅನುಸರಿಸಿರಿ ಮತ್ತು ನಿಮ್ಮ ಕರ್ಮಗಳನ್ನು ನಿರರ್ಥಕಗೊಳಿಸಬೇಡಿರಿ.[14]

يَا أَيُّهَا الَّذِينَ آمَنُوا أَطِيعُوا اللَّهَ وَ
أَطِيعُوا الرَّسُولَ وَلَا تُبْطِلُوا أَعْمَالَكُمْ ﴿٣٣﴾

34. ಸತ್ಯನಿಷೇಧಿಗಳನ್ನೂ ದೇವಮಾರ್ಗದಿಂದ ತಡೆಯುವವರನ್ನೂ ಸಾಯುವ ವರೆಗೂ ಸತ್ಯನಿಷೇಧಿಗಳಾಗಿಯೇ ಇದ್ದವರನ್ನೂ ಅಲ್ಲಾಹನು ಖಂಡಿತ ಕ್ಷಮಿಸಲಾರನು.

إِنَّ الَّذِينَ كَفَرُوا وَصَدُّوا عَن سَبِيلِ
اللَّهِ ثُمَّ مَاتُوا وَهُمْ كُفَّارٌ فَلَن
يَغْفِرَ اللَّهُ لَهُمْ ﴿٣٤﴾

35. ಆದುದರಿಂದ ನೀವು ಅಂಜುಬುರುಕರಾಗಬೇಡಿರಿ ಮತ್ತು ಸಂಧಾನಕ್ಕಾಗಿ ನಿವೇದಿಸಬೇಡಿರಿ.[15] ನೀವೇ ವಿಜಯಿಗಳಾಗುವಿರಿ, ಅಲ್ಲಾಹನು ನಿಮ್ಮ ಜೊತೆಗಿದ್ದಾನೆ ಮತ್ತು ಅವನು ನಿಮ್ಮ ಕರ್ಮಗಳನ್ನು ಖಂಡಿತ ವ್ಯರ್ಥಗೊಳಿಸಲಾರನು.

فَلَا تَهِنُوا وَتَدْعُوا إِلَى السَّلْمِ وَ
أَنتُمُ الْأَعْلَوْنَ وَاللَّهُ مَعَكُمْ وَلَن
يَتِرَكُمْ أَعْمَالَكُمْ ﴿٣٥﴾

36. ಈ ಲೋಕದ ಜೀವನವಂತು ಕೇವಲ ಆಟ ಮತ್ತು ವಿನೋದವಾಗಿದೆ. ನೀವು ವಿಶ್ವಾಸವಿರಿಸಿ ಧರ್ಮನಿಷ್ಠೆಯ ನೀತಿಯನ್ನು ಅನುಸರಿಸುತ್ತಲಿದ್ದರೆ ಅಲ್ಲಾಹನು ನಿಮಗೆ ನಿಮ್ಮ ಪ್ರತಿಫಲವನ್ನು ನೀಡುವನು ಮತ್ತು ಅವನು ನಿಮ್ಮಿಂದ ನಿಮ್ಮ ಸಂಪತ್ತನ್ನು ಕೇಳಲಾರನು.[16]

إِنَّمَا الْحَيَاةُ الدُّنْيَا لَعِبٌ وَلَهْوٌ وَإِن
تُؤْمِنُوا وَتَتَّقُوا يُؤْتِكُمْ أُجُورَكُمْ
وَلَا يَسْأَلْكُمْ أَمْوَالَكُمْ ﴿٣٦﴾

37. ಒಂದು ವೇಳೆ ಅವನು ನಿಮ್ಮಿಂದ ನಿಮ್ಮ ಸಂಪತ್ತನ್ನು ಕೇಳಿದರೆ ಮತ್ತು ನಿಮ್ಮಿಂದ ಸರ್ವಸ್ವವನ್ನೂ ಅಪೇಕ್ಷಿಸಿದರೆ ನೀವು ಜಿಪುಣತೆ

إِن يَسْأَلْكُمُوهَا فَيُحْفِكُمْ تَبْخَلُوا وَ

14. ಬೇರೆ ಮಾತುಗಳಲ್ಲಿ ಹೇಳುವುದಾದರೆ ಕರ್ಮಗಳು ಪರಿಣಾಮಕಾರಿ ಮತ್ತು ಫಲಪ್ರದವಾಗುವುದು ಅಲ್ಲಾಹ್ ಮತ್ತು ಅವನ ಪ್ರವಾದಿಯ ಅನುಸರಣೆಯನ್ನೇ ಆಧರಿಸಿದೆ. ಅನುಸರಣೆಯಿಂದ ವಿಮುಖವಾದ ಬಳಿಕ ಯಾವ ಕರ್ಮವೂ ಸತ್ಕರ್ಮವಾಗಿ ಉಳಿಯುವುದಿಲ್ಲ ಮತ್ತು ವ್ಯಕ್ತಿ ಯಾವುದೇ ರೀತಿಯ ಪ್ರತಿಫಲಕ್ಕೆ ಬಾಧ್ಯಸ್ಥನಾಗುವುದಿಲ್ಲ.

15. ಮದೀನಾದ ಸಣ್ಣ ಗ್ರಾಮದಲ್ಲಿ ಕೆಲವು ನೂರು ಮುಹಾಜಿರ್ ಮತ್ತು ಅನ್ಸಾರ್‌ಗಳು ಮಾತ್ರ ಇಸ್ಲಾಮಿನ ಧ್ವಜವಾಹಕರಾಗಿದ್ದ ಕಾಲದಲ್ಲಿ ಈ ಮಾತು ಹೇಳಲಾಗಿದೆ ಎಂಬುದು ಗಮನಾರ್ಹ. ಕುರೈಶರ ಬಲಿಷ್ಠ ಶಕ್ತಿ ಮತ್ತು ಸಮಸ್ತ ಅರಬ್ ರಾಷ್ಟ್ರದ ಸತ್ಯನಿಷೇಧಿಗಳನ್ನು ಅವರು ಎದುರಿಸಬೇಕಾಗಿತ್ತು. ಆ ಸಂದರ್ಭದಲ್ಲಿ ಅಧೀರರಾಗಿ ಶತ್ರುಗಳೊಂದಿಗೆ ಸಂಧಾನದ ಬೇಡಿಕೆಯನ್ನು ಮುಂದಿರಿಸದಿರಿ, ಬದಲಾಗಿ ಪ್ರಾಣದ ಹಂಗು ತೊರೆದು ಹೋರಾಡಲು ಸಿದ್ಧರಾಗಿರಿ ಎಂದು ಅವರೊಡನೆ ಹೇಳಲಾಗುತ್ತಿದೆ.

16. ಅರ್ಥಾತ್- ಅವನು ನಿರಪೇಕ್ಷನು. ತನಗಾಗಿ ನಿಮ್ಮಿಂದ ಏನನ್ನಾದರೂ ಪಡೆಯುವ ಅವಶ್ಯಕತೆ, ಅವನಿಗಿಲ್ಲ. ತನ್ನ ಮಾರ್ಗದಲ್ಲಿ ಖರ್ಚು ಮಾಡಲು ಅವನು ನಿಮ್ಮಿಂದ ಬಯಸುತ್ತಿದ್ದರೆ ಅದರ ಉದ್ದೇಶ ನಿಮ್ಮ ಹಿತವೇ ಆಗಿದೆ.

يُخْرِجْ اَضْغَانَكُمْ ۝

ತೋರುವಿರಿ ಮತ್ತು ಅವನು ನಿಮ್ಮ ಮಾಲಿನ್ಯವನ್ನು ಹೊರಗೆಡಹುವನು.

هٰٓاَنْتُمْ هٰٓؤُلَآءِ تُدْعَوْنَ لِتُنْفِقُوْا فِيْ سَبِيْلِ اللّٰهِ ۚ فَمِنْكُمْ مَّنْ يَّبْخَلُ ۚ وَمَنْ يَّبْخَلْ فَاِنَّمَا يَبْخَلُ عَنْ نَّفْسِهٖ ۭ وَاللّٰهُ الْغَنِيُّ وَاَنْتُمُ الْفُقَرَاۗءُ ۚ وَاِنْ تَتَوَلَّوْا يَسْتَبْدِلْ قَوْمًا غَيْرَكُمْ ۙ ثُمَّ لَا يَكُوْنُوْٓا اَمْثَالَكُمْ ۝

38. ನೋಡಿರಿ, ಅಲ್ಲಾಹನ ಮಾರ್ಗದಲ್ಲಿ ಸಂಪತ್ತನ್ನು ಖರ್ಚು ಮಾಡಬೇಕೆಂದು ನಿಮಗೆ ಕರೆ ನೀಡಲಾಗುತ್ತಿದೆ. ಈ ಬಗ್ಗೆ ನಿಮ್ಮಲ್ಲಿ ಕೆಲವರು ಜಿಪುಣತೆ ತೋರುತ್ತಿದ್ದಾರೆ. ಜಿಪುಣತೆ ತೋರುವಾತನು ವಾಸ್ತವದಲ್ಲಿ ತನ್ನ ಮೇಲೆ ತಾನೇ ಜಿಪುಣತೆ ತೋರುತ್ತಿದ್ದಾನೆ. ಅಲ್ಲಾಹನಂತೂ ನಿರಪೇಕ್ಷನು. ನೀವೇ ಅವನ ಅವಲಂಬಿತರು. ನೀವು ವಿಮುಖರಾದರೆ ಅಲ್ಲಾಹನು ನಿಮ್ಮ ಸ್ಥಾನದಲ್ಲಿ ಬೇರಾವುದಾದರೂ ಜನಾಂಗವನ್ನು ತರುವನು ಮತ್ತು ಅವರು ನಿಮ್ಮಂತೆ ಇರಲಾರರು.







**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸಂದೇಶವಾಹಕರೇ, ನಾವು ನಿಮಗೆ ಸುಸ್ಪಷ್ಟ ವಿಜಯ ಪ್ರದಾನ ಮಾಡಿದೆವು-[1]

إِنَّا فَتَحْنَا لَكَ فَتْحًا مُّبِيْنًا ①

2. ಅಲ್ಲಾಹನು ನಿಮ್ಮ ಹಿಂದಿನ ಹಾಗೂ ಮುಂದಿನ ಎಲ್ಲ ತಪ್ಪುಗಳನ್ನು ಕ್ಷಮಿಸಲಿಕ್ಕಾಗಿ,[2] ನಿಮ್ಮ ಮೇಲೆ ತನ್ನ ಅನುಗ್ರಹವನ್ನು ಪರಿಪೂರ್ಣಗೊಳಿಸಲಿಕ್ಕಾಗಿ, ನಿಮಗೆ ಸನ್ಮಾರ್ಗವನ್ನು ತೋರಿಸಲಿಕ್ಕಾಗಿ-[3]

لِّيَغْفِرَ لَكَ اللّٰهُ مَا تَقَدَّمَ مِنْ ذَنْبِكَ وَمَا تَأَخَّرَ وَيُتِمَّ نِعْمَتَهُ عَلَيْكَ وَيَهْدِيَكَ صِرَاطًا مُّسْتَقِيْمًا ②

3. ಮತ್ತು ನಿಮಗೆ ಪ್ರಚಂಡ ಸಹಾಯವನ್ನು ನೀಡಲಿಕ್ಕಾಗಿ.

وَّيَنْصُرَكَ اللّٰهُ نَصْرًا عَزِيْزًا ③

4. ಅವನೇ, ಸತ್ಯವಿಶ್ವಾಸಿಗಳ ಹೃದಯಗಳಲ್ಲಿ ಪ್ರಶಾಂತತೆಯನ್ನು ಇಳಿಸಿದವನು.[4] ಅವರು ತಮ್ಮ ವಿಶ್ವಾಸದ ಮೇಲೆ ವಿಶ್ವಾಸವನ್ನು

هُوَ الَّذِيْٓ أَنْزَلَ السَّكِيْنَةَ فِيْ قُلُوْبِ الْمُؤْمِنِيْنَ لِيَزْدَادُوْٓا إِيْمَانًا مَّعَ

---

1. ಹುದೈಬಿಯಾ ಸಂಧಿಯ ನಂತರ 'ವಿಜಯ' ಎಂಬ ಸುವಾರ್ತೆಯನ್ನು ತಿಳಿಸಲಾದಾಗ ಇದೆಂತಹ ವಿಜಯ! ಇದರಲ್ಲಿ ಮೇಲ್ನೋಟಕ್ಕೆ ಕಾಣುವಂತೆ ಸತ್ಯನಿಷೇಧಿಗಳು ನಮಗೆ ಒಡ್ಡ ಬಯಸಿದ್ದ ಶರತ್ತುಗಳನ್ನೆಲ್ಲಾ ನಾವು ಒಪ್ಪಿಕೊಂಡಿದ್ದೇವೆ ಎಂದು ಜನರು ಅಚ್ಚರಿಗೊಂಡಿದ್ದರು. ಆದರೆ ಕೆಲವೇ ಸಮಯದ ನಂತರ ನಿಜವಾಗಿಯೂ ಅದೊಂದು ಮಹಾನ್ ವಿಜಯವಾಗಿತ್ತು ಎಂದು ಅವರಿಗೆ ಮನವರಿಕೆಯಾಯಿತು.
2. ಈ ಮಾತನ್ನು ಹೇಳಲಾದ ಹಿನ್ನೆಲೆಯನ್ನು ಗಮನಿಸಿದರೆ, ಇಲ್ಲಿ ಯಾವ ದೋಷಗಳನ್ನು ಕ್ಷಮಿಸುವ ಬಗ್ಗೆ ಹೇಳಲಾಗಿದೆಯೋ ಅದು ಕಳೆದ 19 ವರ್ಷಗಳಲ್ಲಿ ಪ್ರವಾದಿವರ್ಯರ(ಸ) ನೇತೃತ್ವದಲ್ಲಿ ಇಸ್ಲಾಮಿನ ವಿಜಯ ಮತ್ತು ಉತ್ತುಂಗತೆಗಾಗಿ ನಡೆಸಿದ ಹೋರಾಟದ ವೇಳೆ ಸಂಭವಿಸಿರಬಹುದಾದ ದೋಷಗಳಾಗಿವೆ ಎಂದು ಭಾಸವಾಗುತ್ತದೆ. ಆ ದೋಷಗಳ ಬಗ್ಗೆ ಯಾವುದೇ ವ್ಯಕ್ತಿಗೆ ತಿಳುವಳಿಕೆ ಇರಲು ಸಾಧ್ಯವಿಲ್ಲ. ಮಾನವನ ಬುದ್ಧಿ ಆ ಹೋರಾಟದಲ್ಲಿ ಯಾವುದೇ ರೀತಿಯ ದೋಷ ಹುಡುಕಲು ಅಸಮರ್ಥವಾಗಿದೆ. ಆದರೆ ಅಲ್ಲಾಹನ ದೃಷ್ಟಿಯಲ್ಲಿರುವ ಪರಿಪೂರ್ಣತೆಯ ಉನ್ನತ ಮಾನದಂಡದ ಆಧಾರದಲ್ಲಿ ಅದರಲ್ಲಿ ಕೆಲವು ದೋಷಗಳು ಇದ್ದುವು. ಅದರ ಆಧಾರದಲ್ಲಿ ಅರೇಬಿಯಾದ ಮುಶ್ರಿಕರ ವಿರುದ್ಧ ಮುಸ್ಲಿಮರಿಗೆ ಅಷ್ಟು ತ್ವರಿತವಾದ ವಿಜಯ ಪ್ರಾಪ್ತವಾಗಲು ಸಾಧ್ಯವಿರಲಿಲ್ಲ. ಅರ್ಥಾತ್ ಈ ದೋಷಗಳ ಜತೆಗೆ ಹೋರಾಡಿದರೆ ಅರೇಬಿಯಾವನ್ನು ನೀವು ಅಧೀನಗೊಳಿಸಲು ಇನ್ನೂ ಹಲವಾರು ದೌರ್ಬಲ್ಯಗಳನ್ನು ಮನ್ನಿಸಿ ನಮ್ಮ ಅನುಗ್ರಹದ ಮೂಲಕ ನಿಮಗೆ ಕ್ಷಮೆ ನೀಡಿದೆವು. ನಿಮಗೆ ನಿಮ್ಮ ಪ್ರಯತ್ನಗಳಿಂದ ಮಾತ್ರ ದೊರಕಲು ಸಾಧ್ಯವಿಲ್ಲದಂತಹ ವಿಜಯದ ಬಾಗಿಲನ್ನು ಹುದೈಬಿಯಾದ ಬಳಿ ನಿಮ್ಮ ಪಾಲಿಗೆ ತೆರೆದೆವು.
3. ಇಲ್ಲಿ ಪ್ರವಾದಿವರ್ಯರಿಗೆ(ಸ) ನೇರಮಾರ್ಗ ತೋರಿಸುವುದೆಂದರೆ ಅವರಿಗೆ ವಿಜಯ ಮತ್ತು ಯಶಸ್ಸಿನ ಮಾರ್ಗ ತೋರಿಸುವುದಾಗಿದೆ.
4. 'ಸಕೀನತ್'(ಪ್ರಶಾಂತತೆ) ಎಂದರೆ ನೆಮ್ಮದಿ ಮತ್ತು ಚಿತ್ತ ಸಮಾಧಾನವಾಗಿದೆ. ಹುದೈಬಿಯಾ ಸಂಧಿಯ ವೇಳೆ ಎದುರಾದ ಪ್ರಕ್ಷುಬ್ಧ

ಹೆಚ್ಚಿಸಿಕೊಳ್ಳುವಂತಾಗಲಿಕ್ಕಾಗಿ. ಭೂಮಿ- ಆಕಾಶಗಳ ಸಕಲ ಸೇನೆ ಗಳೂ ಅಲ್ಲಾಹನ ನಿಯಂತ್ರಣದಲ್ಲಿವೆ ಮತ್ತು ಅವನು ಸರ್ವಜ್ಞನೂ ಯುಕ್ತಿವಂತನೂ ಆಗಿರುತ್ತಾನೆ.

إِيمَانِهِمْ ۗ وَلِلَّهِ جُنُودُ السَّمَاوَاتِ وَ
الْأَرْضِ ۚ وَكَانَ اللَّهُ عَلِيمًا حَكِيمًا ﴿٤﴾

5. ಸತ್ಯವಿಶ್ವಾಸಿ ಪುರುಷರನ್ನು ಮತ್ತು ಸ್ತ್ರೀಯರನ್ನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಗೊಳಿಸಲಿಕ್ಕಾಗಿ ಮತ್ತು ಅವರ ದೋಷಗಳನ್ನು ಅವರಿಂದ ದೂರ ಗೊಳಿಸಲಿಕ್ಕಾಗಿ (ಅವನು ಹೀಗೆ ಮಾಡಿರುವನು)- ಅಲ್ಲಾಹನ ಬಳಿ ಇದು ಮಹಾ ವಿಜಯವಾಗಿದೆ-

لِيُدْخِلَ الْمُؤْمِنِينَ وَالْمُؤْمِنَاتِ جَنَّاتٍ
تَجْرِي مِنْ تَحْتِهَا الْأَنْهَارُ خَالِدِينَ فِيهَا
وَيُكَفِّرَ عَنْهُمْ سَيِّئَاتِهِمْ ۚ وَكَانَ ذَٰلِكَ
عِنْدَ اللَّهِ فَوْزًا عَظِيمًا ﴿٥﴾

6. ಮತ್ತು ಅವನು, ಅಲ್ಲಾಹನ ಕುರಿತು ಕೆಟ್ಟ ಭಾವನೆಗಳನ್ನಿಟ್ಟು ಕೊಂಡಿದ್ದ ಕಪಟವಿಶ್ವಾಸಿ ಸ್ತ್ರೀ-ಪುರುಷರನ್ನೂ ಬಹುದೇವಾರಾಧಕ ಸ್ತ್ರೀ-ಪುರುಷರನ್ನೂ ಶಿಕ್ಷಿಸಲಿಕ್ಕಾಗಿ (ಹೀಗೆ ಮಾಡಿರುವನು). ಅವರು ತಾವಾಗಿಯೇ ಕೆಡುಕಿನ ಸುಳಿಗೆ ಸಿಲುಕಿಕೊಂಡರು. ಅವರ ಮೇಲೆ ಅಲ್ಲಾಹನ ಕ್ರೋಧವೆರಗಿತು, ಅವನು ಅವರನ್ನು ಶಪಿಸಿದನು ಮತ್ತು ಅವರಿಗಾಗಿ ಅತ್ಯಂತ ಕೆಟ್ಟ ವಾಸಸ್ಥಾನವಾಗಿರುವ ನರಕವನ್ನು ಸಿದ್ಧಪಡಿಸಿಟ್ಟನು.

وَيُعَذِّبَ الْمُنَافِقِينَ وَالْمُنَافِقَاتِ وَ
الْمُشْرِكِينَ وَالْمُشْرِكَاتِ الظَّانِّينَ
بِاللَّهِ ظَنَّ السَّوْءِ ۚ عَلَيْهِمْ دَائِرَةُ السَّوْءِ ۖ
وَغَضِبَ اللَّهُ عَلَيْهِمْ وَلَعَنَهُمْ وَأَعَدَّ
لَهُمْ جَهَنَّمَ ۖ وَسَاءَتْ مَصِيرًا ﴿٦﴾

7. ಭೂಮಿ-ಆಕಾಶಗಳ ಸೇನೆಗಳೆಲ್ಲ ಅಲ್ಲಾಹನ ನಿಯಂತ್ರಣದಲ್ಲಿವೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَلِلَّهِ جُنُودُ السَّمَاوَاتِ وَالْأَرْضِ ۚ
وَكَانَ اللَّهُ عَزِيزًا حَكِيمًا ﴿٧﴾

8. ಸಂದೇಶವಾಹಕರೇ, ನಾವು ನಿಮ್ಮನ್ನು ಸಾಕ್ಷ್ಯ ನೀಡುವವರಾಗಿ,[5] ಸುವಾರ್ತೆ ನೀಡುವವರಾಗಿ ಮತ್ತು ಎಚ್ಚರಿಕೆ ನೀಡುವವರಾಗಿ ಮಾಡಿ ಕಳುಹಿಸಿರುತ್ತೇವೆ-

إِنَّا أَرْسَلْنَاكَ شَاهِدًا وَمُبَشِّرًا
وَنَذِيرًا ﴿٨﴾

9. ಜನರೇ, ನೀವು ಅಲ್ಲಾಹನ ಹಾಗೂ ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಬೇಕು, ಅವರಿಗೆ(ಪ್ರವಾದಿಗೆ) ನೆರವಾಗಬೇಕು, ಅವರನ್ನು ಗೌರವಿಸಬೇಕು ಮತ್ತು ಬೆಳಗು ಬೈಗುಗಳಲ್ಲಿ ಅಲ್ಲಾಹನನ್ನು ಸ್ತುತಿಸಬೇಕೆಂದು.

لِتُؤْمِنُوا بِاللَّهِ وَرَسُولِهِ وَتُعَزِّرُوهُ
وَتُوَقِّرُوهُ ۚ وَتُسَبِّحُوهُ بُكْرَةً
وَأَصِيلًا ﴿٩﴾

10. ಸಂದೇಶವಾಹಕರೇ, ನಿಮ್ಮೊಂದಿಗೆ ಆಜ್ಞಾನುಸರಣೆಯ ಕರಾರು

إِنَّ الَّذِينَ يُبَايِعُونَكَ إِنَّمَا يُبَايِعُونَ

---

ಸ್ಥಿತಿಯಲ್ಲಿ ಮುಸ್ಲಿಮರು ತೋರಿದ ಸಹನೆ ಮತ್ತು ಪ್ರವಾದಿವರ್ಯರ(ಸ) ನಾಯಕತ್ವದ ಬಗ್ಗೆ ಪ್ರಕಟಿಸಿದ ಪರಿಪೂರ್ಣ ವಿಶ್ವಾಸ ಮತ್ತು ಆ ಸನ್ನಿವೇಶಗಳಿಂದ ಸಾಂಗವಾಗಿ ಪಾರಾದ ರೀತಿ ಎಲ್ಲವೂ ಅಲ್ಲಾಹನ ಅನುಗ್ರಹದ ಪರಿಣಾಮವಾಗಿದೆ. ಅನ್ಯಥಾ ಆ ಸಂದರ್ಭದ ಕಿಂಚಿತ್ ತಪ್ಪು ಕೂಡ ಕೆಲಸವನ್ನೆಲ್ಲಾ ಕೆಡಿಸಿ ಬಿಡಬಹುದಾಗಿತ್ತು.

5. ಶಾ ವಲಿಯುಲ್ಲಾಃರವರು(ರ) 'ಶಾಹಿದ್' ಪದವನ್ನು 'ಸತ್ಯವನ್ನು ಪ್ರಕಟಿಸುವವನು' ಎಂದು ಅನುವಾದಿಸಿದ್ದಾರೆ. ಅದರ ಅರ್ಥ 'ಸತ್ಯದ ಸಾಕ್ಷ್ಯವಹಿಸುವವನು' ಎಂದಾಗಿದೆ.

ಮಾಡುತ್ತಿದ್ದವರು[6] ವಾಸ್ತವದಲ್ಲಿ ಅಲ್ಲಾಹನೊಂದಿಗೆ ಆಜ್ಞಾನುಸರಣೆಯ ಕರಾರು ಮಾಡುತ್ತಿದ್ದರು. ಅವರ ಹಸ್ತಗಳ ಮೇಲೆ ಅಲ್ಲಾಹನ ಹಸ್ತವಿತ್ತು.[7] ಇನ್ನು ಈ ಕರಾರನ್ನು ಉಲ್ಲಂಘಿಸುವವನ ಮೇಲೆಯೇ ಆ ಉಲ್ಲಂಘನೆಯ ಅಪರಾಧವಿರುವುದು. ಯಾರು ಅಲ್ಲಾಹನೊಂದಿಗೆ ಮಾಡಿದ ಈ ಕರಾರನ್ನು ಪಾಲಿಸುವನೋ ಅವನಿಗೆ ಅಲ್ಲಾಹನು ಶೀಘ್ರವೇ ಭಾರೀ ಪ್ರತಿಫಲವನ್ನು ದಯಪಾಲಿಸುವನು.

اللّٰهَ ۚ يَدُ اللّٰهِ فَوْقَ اَيْدِيْهِمْ ۚ فَمَنْ نَّكَثَ فَاِنَّمَا يَنْكُثُ عَلٰى نَفْسِهٖ ۚ وَمَنْ اَوْفٰى بِمَا عٰهَدَ عَلَيْهُ اللّٰهَ فَسَيُؤْتِيْهِ اَجْرًا عَظِيْمًا ﴿١٠﴾

11. ಸಂದೇಶವಾಹಕರೇ, ಹಿಂದೆ ಬಿಡಲ್ಪಟ್ಟಿದ್ದ ಅರಬ್ ಹಳ್ಳಿಗರು[8] ಖಂಡಿತ ನಿಮ್ಮ ಬಳಿ ಬಂದು- "ನಮ್ಮ ಸಂಪತ್ತು ಮತ್ತು ಮನೆ ಮಂದಿಯ ಚಿಂತೆಯು ನಮ್ಮನ್ನು ಕಾರ್ಯಮಗ್ನವಾಗಿರಿಸಿತ್ತು. ನಮ್ಮ ಕ್ಷಮೆಗಾಗಿ ತಾವು ಪ್ರಾರ್ಥಿಸಿರಿ" ಎಂದು ಹೇಳುವರು. ಇವರು ತಮ್ಮ ಮನಸ್ಸುಗಳಲ್ಲಿಲ್ಲದ ಮಾತುಗಳನ್ನು ನಾಲಿಗೆಗಳಿಂದ ಆಡುತ್ತಾರೆ. ಇವರೊಡನೆ ಹೇಳಿರಿ- "ಸರಿ, ಹಾಗಾದರೆ ಅಲ್ಲಾಹನು ನಿಮಗೆ ಹಾನಿಯನ್ನುಂಟು ಮಾಡಲು ಇಚ್ಛಿಸಿದರೆ ಅಥವಾ ಲಾಭವನ್ನುಂಟು ಮಾಡಲು ಇಚ್ಛಿಸಿದರೆ, ನಿಮ್ಮ ವಿಷಯದಲ್ಲಿ ಅಲ್ಲಾಹನ ತೀರ್ಮಾನವನ್ನು ತಡೆಯಲು ಕಿಂಚಿತ್ತಾದರೂ ಅಧಿಕಾರವುಳ್ಳವರು ಯಾರಿದ್ದಾರೆ? ನಿಮ್ಮ ಕರ್ಮಗಳನ್ನಂತು ಅಲ್ಲಾಹನೇ ಬಲ್ಲನು. (ಆದರೆ ನೀವು ಹೇಳುತ್ತಿರುವುದು ಸತ್ಯವಲ್ಲ)

سَيَقُوْلُ لَكَ الْمُخَلَّفُوْنَ مِنَ الْاَعْرَابِ شَغَلَتْنَآ اَمْوَالُنَا وَاَهْلُوْنَا فَاسْتَغْفِرْ لَنَا ۚ يَقُوْلُوْنَ بِاَلْسِنَتِهِمْ مَّا لَيْسَ فِيْ قُلُوْبِهِمْ ۗ قُلْ فَمَنْ يَّمْلِكُ لَكُمْ مِّنَ اللّٰهِ شَيْـًٔا اِنْ اَرَادَ بِكُمْ ضَرًّا اَوْ اَرَادَ بِكُمْ نَفْعًا ۗ بَلْ كَانَ اللّٰهُ بِمَا تَعْمَلُوْنَ خَبِيْرًا ﴿١١﴾

12. ವಾಸ್ತವದಲ್ಲಿ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳು ತಮ್ಮ ಮನೆಗಳಿಗೆ ಖಂಡಿತ ಮರಳಲಾರರು ಎಂದು ನೀವು ಭಾವಿಸಿಕೊಂಡಿದ್ದಿರಿ. ಈ ವಿಚಾರವು ನಿಮ್ಮ ಮನಸ್ಸುಗಳಿಗೆ ಬಹಳ ಹಿತಕರವೆನಿಸಿತು. ನೀವು ಬಹಳ ಕೆಟ್ಟ ಗುಮಾನಿಗಳನ್ನು ಮಾಡಿದಿರಿ. ನೀವು ಅತ್ಯಂತ ದುಷ್ಟರಾಗಿರುತ್ತೀರಿ."

بَلْ ظَنَنْتُمْ اَنْ لَّنْ يَّنْقَلِبَ الرَّسُوْلُ وَالْمُؤْمِنُوْنَ اِلٰٓى اَهْلِيْهِمْ اَبَدًا وَّزُيِّنَ ذٰلِكَ فِيْ قُلُوْبِكُمْ وَظَنَنْتُمْ ظَنَّ السَّوْءِ ۖ وَكُنْتُمْ قَوْمًاۢ بُوْرًا ﴿١٢﴾

6. ಇದು ಹ. ಉಸ್ಮಾನ್(ರ) ಹುತಾತ್ಮರಾದರೆಂಬ ಸುದ್ದಿ ತಿಳಿದು ಪ್ರವಾದಿವರ್ಯರು(ಸ) ತಮ್ಮ ಅನುಚರರೊಂದಿಗೆ ಮಕ್ಕಾದ ಹುದೈಬಿಯಾ ಎಂಬ ಸ್ಥಳದಲ್ಲಿ ಮಾಡಿದ ಪ್ರತಿಜ್ಞೆಯ ಕಡೆಗಿರುವ ಸೂಚನೆ. ಹ. ಉಸ್ಮಾನ್(ರ) ಹುತಾತ್ಮರಾದ ಸುದ್ದಿ ನಿಜವೆಂದಾದರೆ ನಾವು ಇದೇ ಸ್ಥಳದಲ್ಲಿ ಈಗಲೇ ಕುರೈಶರನ್ನು ಎದುರು ಹಾಕಿಕೊಳ್ಳಬೇಕು. ಪರಿಣಾಮವಾಗಿ ನಾವೆಲ್ಲರೂ ಸಾಯಬೇಕಾಗಿ ಬಂದರೂ ಸರಿ ಎಂಬುದರ ಕುರಿತು ಈ ಪ್ರತಿಜ್ಞೆ ಪಡೆಯಲಾಗಿತ್ತು.

7. ಅರ್ಥಾತ್- ಯಾವ ಪ್ರವಾದಿವರ್ಯರ(ಸ) ಕೈಯಲ್ಲಿ ನೀವು ಪ್ರತಿಜ್ಞೆ ಮಾಡುತ್ತಿದ್ದೀರೋ ಅದು ಅಲ್ಲಾಹನ ಪ್ರತಿನಿಧಿಯ ಕೈಯಾಗಿದೆ. ಈ ಪ್ರತಿಜ್ಞೆ ನಿಜವಾಗಿ ಪ್ರವಾದಿವರ್ಯರ(ಸ) ಮೂಲಕ ಅಲ್ಲಾಹನ ಜತೆಗೆ ನಡೆಯುತ್ತಿದೆ.

8. ಉಮ್ರಾದ ಸಿದ್ಧತೆ ಮಾಡುವ ವೇಳೆ ಪ್ರವಾದಿವರ್ಯರು(ಸ) ಮದೀನಾದ ಸುತ್ತಮುತ್ತಲಿನ ಕೆಲವು ಜನರಿಗೆ ತಮ್ಮ ಜತೆಗೆ ಹೊರಡುವ ಕರೆ ನೀಡಿದ್ದರು. ಆದರೆ ಸತ್ಯವಿಶ್ವಾಸದ ಬಗ್ಗೆ ವಾದಿಸಿಕೊಳ್ಳುತ್ತಿದ್ದ ಅವರು ಪ್ರಾಣದ ಮೇಲಿನ ಮೋಹದಿಂದ ತಮ್ಮ ಮನೆಯನ್ನು ಬಿಟ್ಟು ಹೊರಡಲು ಸಿದ್ಧರಾಗಿರಲಿಲ್ಲ. ಈ ವೇಳೆ ಕುರೈಶರ ನಿವಾಸಕ್ಕೆ ಉಮ್ರಾ ಮಾಡಲು ಹೋಗುವುದು ಮೃತ್ಯು ದವಡೆಗೆ ಹೋದಂತೆ ಎಂದು ಅವರು ಭಾವಿಸಿದ್ದರು. ಈ ವ್ಯಕ್ತಿಗಳ ಬಗ್ಗೆಯೇ ಇಲ್ಲಿ ಪ್ರಸ್ತಾಪಿಸಲಾಗಿದೆ.

13. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿಡದ ಸತ್ಯನಿಷೇಧಿಗಳಿಗಾಗಿ ನಾವು ಧಗಧಗಿಸುವ ಅಗ್ನಿಯನ್ನು ಸಿದ್ಧ ಗೊಳಿಸಿಟ್ಟಿರುತ್ತೇವೆ.

وَمَنْ لَّمْ يُؤْمِنْ بِاللّٰهِ وَرَسُوْلِهٖ فَاِنَّآ
اَعْتَدْنَا لِلْكٰفِرِيْنَ سَعِيْرًا ﴿١٣﴾

14. ಅಲ್ಲಾಹನೇ ಭೂಮಿ-ಆಕಾಶಗಳ ಆಧಿಪತ್ಯದ ಒಡೆಯನು. ಅವನು ತಾನಿಚ್ಛಿಸಿದವರನ್ನು ಕ್ಷಮಿಸುತ್ತಾನೆ ಮತ್ತು ತಾನಿಚ್ಛಿಸಿದವರನ್ನು ಶಿಕ್ಷಿಸುತ್ತಾನೆ. ಅವನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

وَلِلّٰهِ مُلْكُ السَّمٰوٰتِ وَالْاَرْضِ ۗ يَغْفِرُ
لِمَنْ يَّشَآءُ وَيُعَذِّبُ مَنْ يَّشَآءُ ۗ وَ
كَانَ اللّٰهُ غَفُوْرًا رَّحِيْمًا ﴿١٤﴾

15. ನೀವು ಸಮರಾರ್ಜಿತ ಸೊತ್ತನ್ನು ಪಡೆಯಲು ಹೊರಟಾಗ ಹಿಂದೆ ಬಿಡಲ್ಪಟ್ಟ ಈ ಜನರು- ನಮ್ಮನ್ನೂ ನಿಮ್ಮ ಜೊತೆ ಬರಲು ಬಿಡಿ ಎಂದು ನಿಮ್ಮೊಡನೆ ಖಂಡಿತ ಹೇಳುವರು.[9] ಇವರು ಅಲ್ಲಾಹನ ಆದೇಶವನ್ನು ಬದಲಿಸಿಬಿಡಬೇಕೆಂದು ಇಚ್ಛಿಸುತ್ತಾರೆ. "ಖಂಡಿತ ನೀವು ನಮ್ಮ ಜೊತೆ ಬರುವಂತಿಲ್ಲ. ಅಲ್ಲಾಹನು ಈ ಮೊದಲೇ ಇದನ್ನು ಹೇಳಿರುತ್ತಾನೆ" ಎಂದು ಅವರೊಡನೆ ಸ್ಪಷ್ಟವಾಗಿ ಹೇಳಿ ಬಿಡಿರಿ. ಇವರು- "ಇಲ್ಲ, ನೀವು ನಮ್ಮ ಬಗ್ಗೆ ಅಸೂಯೆ ಪಡುತ್ತಿರುವಿರಿ" ಎಂದು ಹೇಳುವರು. (ನಿಜವಾಗಿ ಇದು ಅಸೂಯೆಯ ವಿಷಯವಲ್ಲ) ಆದರೆ ಇವರು ಸರಿಯಾದ ಮಾತನ್ನು ಗ್ರಹಿಸುವುದು ಅತ್ಯಲ್ಪ.

سَيَقُوْلُ الْمُخَلَّفُوْنَ اِذَا انْطَلَقْتُمْ اِلٰى
مَغَانِمَ لِتَاْخُذُوْهَا ذَرُوْنَا نَتَّبِعْكُمْ ۚ
يُرِيْدُوْنَ اَنْ يُّبَدِّلُوْا كَلٰمَ اللّٰهِ ۗ
قُلْ لَّنْ تَتَّبِعُوْنَا كَذٰلِكُمْ قَالَ اللّٰهُ
مِنْ قَبْلُ ۚ فَسَيَقُوْلُوْنَ بَلْ تَحْسُدُوْنَنَا ۗ
بَلْ كَانُوْا لَا يَفْقَهُوْنَ اِلَّا قَلِيْلًا ﴿١٥﴾

16. ಹಿಂದೆ ಬಿಡಲ್ಪಟ್ಟ ಈ ಅರಬ್ ಹಳ್ಳಿಗರೊಡನೆ ಹೇಳಿರಿ; "ಶೀಘ್ರವೇ ನಿಮ್ಮನ್ನು ಬಹಳ ಪ್ರಬಲರಾಗಿರುವ ಜನರೊಂದಿಗೆ ಯುದ್ಧ ಮಾಡಲಿಕ್ಕಾಗಿ ಕರೆಯಲಾಗುವುದು. ಒಂದೋ ನೀವು ಅವರೊಂದಿಗೆ ಯುದ್ಧ ಮಾಡಬೇಕಾದೀತು ಅಥವಾ ಅವರು ಶರಣಾಗತರಾಗುವರು. ಆಗ ನೀವು ಧರ್ಮಯುದ್ಧದ ಆಜ್ಞೆಯನ್ನು ಪಾಲಿಸಿದರೆ, ಅಲ್ಲಾಹನು ನಿಮಗೆ ಅತ್ಯುತ್ತಮ ಪ್ರತಿಫಲ ನೀಡುವನು ಮತ್ತು ನೀವು ಈ ಹಿಂದೆ ವಿಮುಖರಾದಂತೆಯೇ ಪುನಃ ವಿಮುಖ ರಾದರೆ ಅಲ್ಲಾಹನು ನಿಮಗೆ ವೇದನಾಯುಕ್ತ ಯಾತನೆ ಕೊಡುವನು.

قُلْ لِّلْمُخَلَّفِيْنَ مِنَ الْاَعْرَابِ
سَتُدْعَوْنَ اِلٰى قَوْمٍ اُولِيْ بَاْسٍ شَدِيْدٍ
تُقَاتِلُوْنَهُمْ اَوْ يُسْلِمُوْنَ ۚ فَاِنْ تُطِيْعُوْا
يُؤْتِكُمُ اللّٰهُ اَجْرًا حَسَنًا ۚ وَاِنْ تَتَوَلَّوْا
كَمَا تَوَلَّيْتُمْ مِّنْ قَبْلُ يُعَذِّبْكُمْ
عَذَابًا اَلِيْمًا ﴿١٦﴾

17. ಕುರುಡ, ಕುಂಟ ಮತ್ತು ರೋಗಿಯು ಯುದ್ಧಕ್ಕೆ ಬರದಿದ್ದರೆ ಚಿಂತಿಲ್ಲ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವನಿಗೆ ಅಲ್ಲಾಹನು ತಳಭಾಗದಲ್ಲಿ ಕಾಲುವೆಗಳು

لَيْسَ عَلَى الْاَعْمٰى حَرَجٌ وَّلَا عَلَى
الْاَعْرَجِ حَرَجٌ وَّلَا عَلَى الْمَرِيْضِ
حَرَجٌ ۗ وَمَنْ يُّطِعِ اللّٰهَ وَرَسُوْلَهٗ

9. ಅರ್ಥಾತ್- ಅಪಾಯದಿಂದ ಕೂಡಿದ ಯಾತ್ರೆಯಲ್ಲಿ ನಿಮ್ಮ ಜತೆ ಸೇರಲು ಮೈಗಳ್ಳತನ ಪ್ರದರ್ಶಿಸುತ್ತಿರುವ ಈ ವ್ಯಕ್ತಿಗಳು, ಸುಲಭದ ಜಯ ಮತ್ತು ಸಮರಾರ್ಜಿತ ಸೊತ್ತು ಸಿಗುವ ಸಾಧ್ಯತೆಯಿರುವ ದಂಡಯಾತ್ರೆಯ ವೇಳೆ ಸ್ವತಃ ಓಡೋಡಿ ಬಂದು ನಮ್ಮನ್ನೂ ಜತೆಯಲ್ಲಿ ಕೊಂಡೊಯ್ಯಿರಿ ಎಂದು ಹೇಳುವ ದಿನ ದೂರವಿಲ್ಲ.

ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಕೊಡುವನು. ವಿಮುಖನಾಗುವವನಿಗೆ ಅವನು ವೇದನಾಯುಕ್ತ ಯಾತನೆ ಕೊಡುವನು."

يُدْخِلْهُ جَنَّٰتٍ تَجْرِى مِن تَحْتِهَا ٱلْأَنْهَٰرُ ۖ وَمَن يَتَوَلَّ يُعَذِّبْهُ عَذَابًا أَلِيمًا ﴿١٧﴾

18. ವೃಕ್ಷದಡಿಯಲ್ಲಿ ನಿಮ್ಮೊಂದಿಗೆ ಸತ್ಯವಿಶ್ವಾಸಿಗಳು ಆಜ್ಞಾನುಸರಣೆಯ ಕರಾರು ಮಾಡುತ್ತಿದ್ದಾಗ ಅಲ್ಲಾಹನು ಅವರಿಂದ ಸಂತುಷ್ಟನಾದನು. ಅವರ ಮನಸ್ಸಿನಲ್ಲೇನಿತ್ತೆಂಬುದು ಅವನಿಗೆ ತಿಳಿದಿತ್ತು. ಆದುದರಿಂದ ಅವನು ಅವರ ಮೇಲೆ ಪ್ರಶಾಂತತೆಯನ್ನು ಇಳಿಸಿದನು.[10] ಪುರಸ್ಕಾರವಾಗಿ ಅವರಿಗೆ ಶೀಘ್ರ ವಿಜಯವನ್ನು ದಯಪಾಲಿಸಿದನು-

لَّقَدْ رَضِىَ ٱللَّهُ عَنِ ٱلْمُؤْمِنِينَ إِذْ يُبَايِعُونَكَ تَحْتَ ٱلشَّجَرَةِ فَعَلِمَ مَا فِى قُلُوبِهِمْ فَأَنزَلَ ٱلسَّكِينَةَ عَلَيْهِمْ وَأَثَٰبَهُمْ فَتْحًا قَرِيبًا ﴿١٨﴾

19. ಮತ್ತು ಅವನು ಅವರಿಗೆ ಧಾರಾಳ ಸಮರಾರ್ಜಿತ ಸೊತ್ತನ್ನು ನೀಡಿದ್ದು ಅದನ್ನು ಅವರು (ಶೀಘ್ರವೇ) ಪಡೆಯಲಿರುವರು.[11] ಅಲ್ಲಾಹನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَمَغَانِمَ كَثِيرَةً يَأْخُذُونَهَا ۗ وَكَانَ ٱللَّهُ عَزِيزًا حَكِيمًا ﴿١٩﴾

20. ಅಲ್ಲಾಹ್ ನಿಮಗೆ ಧಾರಾಳ ಸಮರಾರ್ಜಿತ ಸೊತ್ತಿನ ವಾಗ್ದಾನವೀಯುತ್ತಾನೆ.[12] ನೀವು ಅದನ್ನು ಪಡೆಯಲಿರುವಿರಿ. ಸದ್ಯ ಅವನು ಈ ವಿಜಯವನ್ನು ನಿಮಗೆ ದಯಪಾಲಿಸಿರುವನು[13] ಮತ್ತು ಜನರ ಕೈಗಳು ನಿಮ್ಮ ವಿರುದ್ಧ ಏಳದಂತೆ ತಡೆದನು[14]- ಸತ್ಯವಿಶ್ವಾಸಿಗಳ ಪಾಲಿಗೆ ಇದು ಒಂದು ನಿದರ್ಶನವಾಗಲೆಂದು ಮತ್ತು ಅಲ್ಲಾಹನು ನಿಮ್ಮನ್ನು ಸನ್ಮಾರ್ಗದೆಡೆಗೆ ಸಾಗಿಸಲೆಂದು (ಹೀಗೆ ಮಾಡಲಾಗಿದೆ.)

وَعَدَكُمُ ٱللَّهُ مَغَانِمَ كَثِيرَةً تَأْخُذُونَهَا فَعَجَّلَ لَكُمْ هَٰذِهِۦ وَكَفَّ أَيْدِىَ ٱلنَّاسِ عَنكُمْ وَلِتَكُونَ ءَايَةً لِّلْمُؤْمِنِينَ وَيَهْدِيَكُمْ صِرَٰطًا مُّسْتَقِيمًا ﴿٢٠﴾

21. ಇದಲ್ಲದೆ ಅಲ್ಲಾಹನು ನೀವಿನ್ನೂ ಗಳಿಸಲು ಶಕ್ತರಾಗಿಲ್ಲದಂತಹ ಮತ್ತಷ್ಟು ಸಮರಾರ್ಜಿತ ಸೊತ್ತನ್ನೂ ನಿಮಗೆ ಕೊಡುವುದಾಗಿ ವಾಗ್ದಾನ ಮಾಡುತ್ತಾನೆ. ಅಲ್ಲಾಹನು ಅವುಗಳನ್ನು ಸುತ್ತುವರಿದಿಟ್ಟಿರುತ್ತಾನೆ.[15] ಅಲ್ಲಾಹನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನಾಗಿದ್ದಾನೆ.

وَأُخْرَىٰ لَمْ تَقْدِرُوا۟ عَلَيْهَا قَدْ أَحَاطَ ٱللَّهُ بِهَا ۚ وَكَانَ ٱللَّهُ عَلَىٰ كُلِّ شَىْءٍ قَدِيرًا ﴿٢١﴾

---

10. ಇಲ್ಲಿ ಪ್ರಶಾಂತತೆ ಎಂದರೆ ಒಬ್ಬ ವ್ಯಕ್ತಿ ಮಹದುದ್ದೇಶಕ್ಕಾಗಿ ಶಾಂತ ಹೃದಯದಿಂದ ಯಾವುದೇ ರೀತಿಯ ಉದ್ವಿಗ್ನತೆಯಿಲ್ಲದೆ ತನ್ನನ್ನು ಅಪಾಯಕ್ಕೆ ಒಡ್ಡಿಕೊಳ್ಳುವುದಾಗಿದೆ. ಈ ಕೆಲಸವನ್ನು ನಾನು ಮಾಡಿಯೇ ತೀರಬೇಕು, ಅದರ ಪರಿಣಾಮ ಏನಾದರೂ ಸರಿಯೇ ಎಂಬ ತೀರ್ಮಾನವನ್ನು ಅವನು ಯಾವುದೇ ರೀತಿಯ ಭಯ ಅಥವಾ ಗಾಬರಿಯಿಲ್ಲದೆ ಕೈಗೊಳ್ಳುತ್ತಾನೆ.
11. ಇದು ಖೈಬರ್ ವಿಜಯ ಮತ್ತು ಆ ವೇಳೆ ದೊರೆತ ಸಮರಾರ್ಜಿತ ಸೊತ್ತಿನ ಕಡೆಗಿರುವ ಸೂಚನೆ.
12. ಅರ್ಥಾತ್- ಖೈಬರ್‌ನ ನಂತರ ಮುಸ್ಲಿಮರಿಗೆ ನಿರಂತರವಾಗಿ ದೊರೆತ ಸರಣಿ ವಿಜಯಗಳು.
13. ಅರ್ಥಾತ್- ಹುದೈಬಿಯಾ ಸಂಧಿ. ಅಧ್ಯಾಯದ ಆರಂಭದಲ್ಲಿ ಅದನ್ನೇ ಸುಸ್ಪಷ್ಟ ವಿಜಯವೆನ್ನಲಾಗಿದೆ.
14. ಅರ್ಥಾತ್- ಹುದೈಬಿಯಾದಲ್ಲಿ ನಿಮ್ಮೊಡನೆ ಯುದ್ಧ ಮಾಡುವ ಧೈರ್ಯವನ್ನು ಸತ್ಯನಿಷೇಧಿಗಳಿಗೆ ಕೊಡಲಿಲ್ಲ. ಇಷ್ಟಾಗಿ ಬಾಹ್ಯ ಪರಿಸ್ಥಿತಿಗಳ ಆಧಾರದಲ್ಲಿ ಅವರು ನಿಮಗಿಂತ ಎಲ್ಲ ವಿಧದಲ್ಲೂ ಉತ್ತಮ ಸ್ಥಿತಿಯಲ್ಲಿದ್ದರು. ಯುದ್ಧದ ದೃಷ್ಟಿಕೋನದಿಂದ ನೋಡುವುದಿದ್ದರೆ ಅವರ ಎದುರಿಗೆ ನೀವು ದುರ್ಬಲರಾಗಿದ್ದಿರಿ.
15. ಇದು ಮಕ್ಕಾ ವಿಜಯದ ಕಡೆಗಿರುವ ಸೂಚನೆಯಾಗಿದೆ ಎಂಬುದು ಪ್ರಬಲ ಗುಮಾನಿಯಾಗಿದೆ. ಅರ್ಥಾತ್, ಮಕ್ಕಾ ಇನ್ನೂ ನಿಮ್ಮ ವಶಕ್ಕೆ

22. ಈಗ ಈ ಸತ್ಯನಿಷೇಧಿಗಳು ನಿಮ್ಮೊಂದಿಗೆ ಯುದ್ಧ ಮಾಡುತ್ತಿದ್ದರೆ ಖಂಡಿತ ಪಲಾಯನ ಮಾಡುತ್ತಿದ್ದರು ಮತ್ತು ಅವರಿಗೆ ರಕ್ಷಕ ಮಿತ್ರರಾಗಲಿ, ಸಹಾಯಕರಾಗಲಿ ಯಾರೂ ಸಿಗುತ್ತಿರಲಿಲ್ಲ.

وَلَوْ قَاتَلَكُمُ الَّذِينَ كَفَرُوا لَوَلَّوُا الْأَدْبَارَ ثُمَّ لَا يَجِدُونَ وَلِيًّا وَلَا نَصِيرًا ﴿٢٢﴾

23. ಇದು ಹಿಂದಿನಿಂದಲೇ ನಡೆದು ಬರುತ್ತಿರುವ ಅಲ್ಲಾಹನ ಕಾರ್ಯವಿಧಾನವಾಗಿದೆ ಮತ್ತು ನೀವು ಅಲ್ಲಾಹನ ಕಾರ್ಯ ವಿಧಾನದಲ್ಲಿ ಯಾವ ಬದಲಾವಣೆಯನ್ನೂ ಕಾಣಲಾರಿರಿ.

سُنَّةَ اللَّهِ الَّتِي قَدْ خَلَتْ مِن قَبْلُ ۖ وَلَن تَجِدَ لِسُنَّةِ اللَّهِ تَبْدِيلًا ﴿٢٣﴾

24. ಮಕ್ಕಾ ಕಣಿವೆಯಲ್ಲಿ ಅವರ ಕೈಗಳನ್ನು ನಿಮ್ಮಿಂದಲೂ ನಿಮ್ಮ ಕೈಗಳನ್ನು ಅವರಿಂದಲೂ ತಡೆದವನು ಅವನೇ. ವಸ್ತುತಃ ಅವನು ನಿಮಗೆ ಅವರ ಮೇಲೆ ಪ್ರಾಬಲ್ಯ ದಯಪಾಲಿಸಿದ್ದನು ಮತ್ತು ನೀವು ಮಾಡುತ್ತಿದ್ದುದನ್ನೆಲ್ಲ ಅಲ್ಲಾಹನು ವೀಕ್ಷಿಸುತ್ತಿದ್ದನು.

وَهُوَ الَّذِي كَفَّ أَيْدِيَهُمْ عَنكُمْ وَأَيْدِيَكُمْ عَنْهُم بِبَطْنِ مَكَّةَ مِن بَعْدِ أَنْ أَظْفَرَكُمْ عَلَيْهِمْ ۚ وَكَانَ اللَّهُ بِمَا تَعْمَلُونَ بَصِيرًا ﴿٢٤﴾

25. ಸತ್ಯವನ್ನು ನಿರಾಕರಿಸಿದವರು, 'ಮಸ್ಜಿದುಲ್ ಹರಾಮ್'ನಿಂದ ನಿಮ್ಮನ್ನು ತಡೆದವರು ಮತ್ತು 'ಹದ್ಯ್'ನ (ಬಲಿಯ) ಒಂಟೆಗಳನ್ನು ಅವುಗಳ ನೆಲೆಗೆ ತಲುಪಲು ಬಿಡದವರು ಅವರೇ. (ಮಕ್ಕಾದಲ್ಲಿ) ನೀವು ಅರಿತಿರದಂತಹ ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯ ವಿಶ್ವಾಸಿ ಸ್ತ್ರೀಯರು ಇಲ್ಲದಿರುತ್ತಿದ್ದರೆ, ಹಾಗೂ ಪ್ರಮಾದವಶಾತ್ ನೀವು ಅವರನ್ನು ಧ್ವಂಸ ಮಾಡಿ ಬಿಡುವ ಮತ್ತು ಇದರಿಂದ ನಿಮಗೆ ಕಳಂಕ ಬರುವ ಅಪಾಯವಿಲ್ಲದಿರುತ್ತಿದ್ದರೆ, (ಯುದ್ಧವು ತಡೆಯಲ್ಪಡುತ್ತಿರಲಿಲ್ಲ) ಅಲ್ಲಾಹನು ತಾನಿಚ್ಛಿಸಿದವರನ್ನು ತನ್ನ ಕೃಪೆಯಲ್ಲಿ ಸೇರಿಸಿಕೊಳ್ಳುವಂತಾಗಲು(ಯುದ್ಧವು ತಡೆಯಲ್ಪ ಟ್ಟಿತು.) ಆ ಸತ್ಯವಿಶ್ವಾಸಿಗಳು ಬೇರ್ಪಟ್ಟಿರುತ್ತಿದ್ದರೆ (ಮಕ್ಕಾ ವಾಸಿಗಳಲ್ಲಿ) ಸತ್ಯನಿಷೇಧಿಗಳಿಗೆ ನಾವು ಖಂಡಿತವಾಗಿಯೂ ವೇದನಾಯುಕ್ತ ಯಾತನೆ ಕೊಡುತ್ತಿದ್ದೆವು.[16]

هُمُ الَّذِينَ كَفَرُوا وَصَدُّوكُمْ عَنِ الْمَسْجِدِ الْحَرَامِ وَالْهَدْيَ مَعْكُوفًا أَن يَبْلُغَ مَحِلَّهُ ۚ وَلَوْلَا رِجَالٌ مُّؤْمِنُونَ وَنِسَاءٌ مُّؤْمِنَاتٌ لَّمْ تَعْلَمُوهُمْ أَن تَطَئُوهُمْ فَتُصِيبَكُم مِّنْهُم مَّعَرَّةٌ بِغَيْرِ عِلْمٍ ۖ لِّيُدْخِلَ اللَّهُ فِي رَحْمَتِهِ مَن يَشَاءُ ۚ لَوْ تَزَيَّلُوا لَعَذَّبْنَا الَّذِينَ كَفَرُوا مِنْهُمْ عَذَابًا أَلِيمًا ﴿٢٥﴾

ಬಂದಿಲ್ಲ. ಆದರೆ ಅಲ್ಲಾಹನು ಅದನ್ನು ಆವರಿಸಿ ಕೊಂಡಿದ್ದಾನೆ. ಹುದೈಬಿಯಾದ ವಿಜಯದಿಂದಾಗಿ ಅದೂ ನಿಮ್ಮ ವಶವಾಗುವುದು.

16. ಅಲ್ಲಾಹನು ಹುದೈಬಿಯಾದಲ್ಲಿ ಯುದ್ಧಕ್ಕೆ ಅವಕಾಶ ಕಲ್ಪಿಸದಿರುವುದರ ಹಿಂದಿನ ಔಚಿತ್ಯ ಇದುವೇ ಆಗಿತ್ತು. ತಮ್ಮ ಸತ್ಯವಿಶ್ವಾಸವನ್ನು ಗೋಪ್ಯವಾಗಿಸಿಕೊಂಡ ಮತ್ತು ಸತ್ಯವಿಶ್ವಾಸ ಬಹಿರಂಗಗೊಂಡಿದ್ದರೂ ತಮ್ಮ ಅಸಹಾಯಕತೆಯಿಂದಾಗಿ ಮದೀನಾ ವಲಸೆ ಕೈಗೊಳ್ಳಲು ಸಾಧ್ಯವಾಗದೆ ಶೋಷಣೆ-ದಬ್ಬಾಳಿಕೆಗಳಿಗೆ ಗುರಿಯಾಗುತ್ತಿದ್ದಂತಹ ಅಸಂಖ್ಯ ಮುಸ್ಲಿಮ್ ಸ್ತ್ರೀ-ಪುರುಷರು ಮಕ್ಕಾದಲ್ಲಿದ್ದರು. ಇಂತಹ ಸಂದರ್ಭದಲ್ಲಿ ಯುದ್ಧ ನಡೆಯುತ್ತಿದ್ದರೆ ಮತ್ತು ಮುಸ್ಲಿಮರು ಸತ್ಯನಿಷೇಧಿಗಳನ್ನು ಹೊಸಕಿ ಹಾಕಿ ಮಕ್ಕಾ ಪ್ರವೇಶ ಮಾಡುತ್ತಿದ್ದರೆ ಅಲ್ಲಿನ ಸತ್ಯನಿಷೇಧಿಗಳ ಜತೆಗೆ ಮುಸ್ಲಿಮರೂ ಅಜ್ಞಾನದಿಂದಾಗಿ ಮುಸ್ಲಿಮರ ಕೈಯಿಂದಲೇ ಹತರಾಗಿ ಬಿಡುತ್ತಿದ್ದರು. ಈ ದೇವೇಚ್ಛೆಯ ಹಿಂದೆ ಇನ್ನೊಂದು ಯುಕ್ತಿಯೂ ಅಡಕವಾಗಿತ್ತು. ಅಲ್ಲಾಹನು ಕುರೈಶರನ್ನು ರಕ್ತರಂಜಿತ ಯುದ್ಧದ ಮೂಲಕ ಸೋಲಿಸಿ ಮಕ್ಕಾ ವಿಜಯವನ್ನು ದೊರಕಿಸಬೇಕೆಂದು ಬಯಸಿರಲಿಲ್ಲ. ಎರಡು ವರ್ಷಗಳ ಅವಧಿಯಲ್ಲಿ ಅವರ ಮೇಲೆ ನಾಲ್ಕೂ ನಿಟ್ಟಿನಿಂದ ಮುತ್ತಿಗೆ ಹಾಕಿ, ಯಾವುದೇ ರೀತಿಯ ಪ್ರತಿರೋಧವಿಲ್ಲದೆ ಅವರು ಅಧೀನರಾಗಿ ಬಿಡಬೇಕು ಅನಂತರ ಸಮಸ್ತ ಗೋತ್ರ ಇಸ್ಲಾಮ್ ಸ್ವೀಕರಿಸಿ ಅಲ್ಲಾಹನ ಅನುಗ್ರಹದೊಳಗೆ

26. (ಈ ಕಾರಣದಿಂದಲೇ) ಆ ಸತ್ಯನಿಷೇಧಿಗಳು ತಮ್ಮ ಹೃದಯಗಳಲ್ಲಿ ಅಜ್ಞಾನಜನ್ಯ ಅಭಿಮಾನವನ್ನಿರಿಸಿಕೊಂಡಾಗ ಅಲ್ಲಾಹನು ತನ್ನ ಸಂದೇಶವಾಹಕರ ಮತ್ತು ಸತ್ಯವಿಶ್ವಾಸಿಗಳ ಮೇಲೆ ಪ್ರಶಾಂತತೆಯನ್ನು ಇಳಿಸಿದನು[17] ಮತ್ತು ಸತ್ಯವಿಶ್ವಾಸಿಗಳನ್ನು ದೇವಭಕ್ತಿಯ ನುಡಿಗೆ ಬದ್ಧರಾಗಿರುವಂತೆ ಮಾಡಿದನು. ಏಕೆಂದರೆ ಇದಕ್ಕೆ ಅವರೇ ಹೆಚ್ಚು ಹಕ್ಕುದಾರರೂ ಅರ್ಹರೂ ಆಗಿದ್ದರು. ಅಲ್ಲಾಹನು ಸಕಲ ವಿಷಯಗಳ ಜ್ಞಾನವುಳ್ಳವನಾಗಿರುತ್ತಾನೆ.

إِذْ جَعَلَ الَّذِينَ كَفَرُوا فِي قُلُوبِهِمُ الْحَمِيَّةَ حَمِيَّةَ الْجَاهِلِيَّةِ فَأَنْزَلَ اللَّهُ سَكِينَتَهُ عَلَىٰ رَسُولِهِ وَعَلَى الْمُؤْمِنِينَ وَأَلْزَمَهُمْ كَلِمَةَ التَّقْوَىٰ وَكَانُوا أَحَقَّ بِهَا وَأَهْلَهَا ۚ وَكَانَ اللَّهُ بِكُلِّ شَيْءٍ عَلِيمًا ﴿٢٦﴾

ع

27. ನಿಜಕ್ಕೂ ಅಲ್ಲಾಹನು ತನ್ನ ಸಂದೇಶವಾಹಕರಿಗೆ ಸಂಪೂರ್ಣವಾಗಿ ಸತ್ಯಕ್ಕೆ ಅನುಗುಣವಾದ ಕನಸನ್ನೇ ತೋರಿಸಿದ್ದನು.[18] ಅಲ್ಲಾಹನಿಚ್ಛಿಸಿದರೆ, ನೀವು ಖಂಡಿತವಾಗಿಯೂ ಸಂಪೂರ್ಣ ಶಾಂತಿಯೊಂದಿಗೆ ಮಸ್ಜಿದುಲ್ ಹರಾಮನ್ನು ಪ್ರವೇಶಿಸುವಿರಿ.[19] ನಿಮ್ಮ ತಲೆ ಬೋಳಿಸಿಕೊಳ್ಳುವಿರಿ ಮತ್ತು ಕೂದಲು ಕತ್ತರಿಸಿಕೊಳ್ಳುವಿರಿ ಮತ್ತು ನಿಮಗೆ ಯಾವ ಭಯವೂ ಇರಲಾರದು. ನೀವು ಅರಿಯದಿದ್ದುದನ್ನು ಅವನು ಅರಿತಿದ್ದನು. ಆದುದರಿಂದ ಆ ಕನಸು ನೆರವೇರುವುದಕ್ಕೆ ಮುಂಚೆ ಅವನು ಈ ಸನ್ನಿಹಿತ ವಿಜಯವನ್ನು ನಿಮಗೆ ದಯಪಾಲಿಸಿದನು.

لَقَدْ صَدَقَ اللَّهُ رَسُولَهُ الرُّؤْيَا بِالْحَقِّ ۖ لَتَدْخُلُنَّ الْمَسْجِدَ الْحَرَامَ إِنْ شَاءَ اللَّهُ آمِنِينَ مُحَلِّقِينَ رُءُوسَكُمْ وَمُقَصِّرِينَ لَا تَخَافُونَ ۖ فَعَلِمَ مَا لَمْ تَعْلَمُوا فَجَعَلَ مِنْ دُونِ ذَٰلِكَ فَتْحًا قَرِيبًا ﴿٢٧﴾

28. ತನ್ನ ಸಂದೇಶವಾಹಕನನ್ನು ಸನ್ಮಾರ್ಗ ಹಾಗೂ ಸತ್ಯಧರ್ಮದೊಂದಿಗೆ ಕಳುಹಿಸಿದವನು ಅಲ್ಲಾಹನೇ ಆಗಿರುತ್ತಾನೆ. ಅದನ್ನು ಸಕಲಧರ್ಮಗಳ ಮೇಲೆ ಪ್ರಬಲಗೊಳಿಸಲಿಕ್ಕಾಗಿ (ಅವನು ಹೀಗೆ ಮಾಡಿರುವನು). ಈ ವಸ್ತುಸ್ಥಿತಿಯ ಬಗ್ಗೆ ಅಲ್ಲಾಹನ ಸಾಕ್ಷ್ಯವೇ ಸಾಕು.[20]

هُوَ الَّذِي أَرْسَلَ رَسُولَهُ بِالْهُدَىٰ وَدِينِ الْحَقِّ لِيُظْهِرَهُ عَلَى الدِّينِ كُلِّهِ ۚ وَكَفَىٰ بِاللَّهِ شَهِيدًا ﴿٢٨﴾

ಪ್ರವೇಶ ಮಾಡಬೇಕೆಂಬುದು ದೇವೇಚ್ಛೆಯಾಗಿತ್ತು. ಮಕ್ಕಾ ವಿಜಯದ ವೇಳೆ ಅದುವೇ ಸಂಭವಿಸಿತು.

17. ಇಲ್ಲಿ ಪ್ರಶಾಂತತೆ ಎಂದರೆ ಸತ್ಯನಿಷೇಧಿಗಳ ಅಜ್ಞಾನಜನ್ಯ ದುರಭಿಮಾನವನ್ನು ಎದುರಿಸಲು ಪ್ರವಾದಿವರ್ಯರು(ಸ) ಮತ್ತು ಮುಸ್ಲಿಮರು ತೋರಿದ ಸಹನೆ ಮತ್ತು ಗಾಂಭೀರ್ಯವಾಗಿದೆ. ಅವರ ಹಟಮಾರಿತನ ಮತ್ತು ವ್ಯಕ್ತವಾದ ಅತಿಕ್ರಮದಿಂದ ಉದ್ರಿಕ್ತರಾಗಿ ಅವರು ನಿಯಂತ್ರಣ ಕಳೆದುಕೊಳ್ಳಲಿಲ್ಲ. ಅವುಗಳ ವಿರುದ್ಧ ಸತ್ಯಕ್ಕೆ ವಿರುದ್ಧವಾದ ಅಥ‌ವಾ ಪರಿಸ್ಥಿತಿಯನ್ನು ಸುಧಾರಿಸುವ ಬದಲು ಬಿಗಡಾಯಿಸಿ ಬಿಡಬಹುದಾದಂತಹ ಯಾವುದೇ ಕ್ರಮವನ್ನು ಅವರು ಕೈಗೊಳ್ಳಲಿಲ್ಲ.

18. ಇದು ಬಾರಿ ಬಾರಿಗೂ ಮುಸ್ಲಿಮರ ಮನಸ್ಸನ್ನು ಕಾಡುತ್ತಿದ್ದ ಪ್ರಶ್ನೆಗೆ ನೀಡಲಾದ ಉತ್ತರ. ಮಸ್ಜಿದುಲ್ ಹರಾಮ್‌ನೊಳಗೆ ಪ್ರವೇಶಿಸಿ ಅಲ್ಲಾಹನ ಭವನದ ಪ್ರದಕ್ಷಿಣೆ ಮಾಡುತ್ತಿರುವುದಾಗಿ ಪ್ರವಾದಿವರ್ಯರು(ಸ) ಕನಸು ಕಂಡಿದ್ದಾರೆ. ಆದರೆ ನಾವಾದರೋ ಉಮ್ರಾವನ್ನೂ ಮಾಡದೆ ಹಿಂದಿರುಗುತ್ತಿದ್ದೇವೆ. ಇದೇಕೆ ಹೀಗಾಯಿತು?

19. ಈ ಆಶ್ವಾಸನೆ ಮುಂದಿನ ವರ್ಷ 'ದುಲ್‌ಕಅದ್' ಹಿ.ಶ. 7ರಲ್ಲಿ ಈಡೇರಿತು. ಇತಿಹಾಸದಲ್ಲಿ ಈ ಉಮ್ರಾ 'ಉಮ್ರತುಲ್ ಕಝಾ' ಎಂಬ ಹೆಸರಿನಿಂದ ಪ್ರಸಿದ್ಧವಿದೆ.

20. ಈ ಸಂದರ್ಭದಲ್ಲಿ ಪ್ರಸ್ತುತ ಮಾತು ಹೇಳಲು ಕಾರಣವೇನೆಂದರೆ, ಹುದೈಬಿಯಾದಲ್ಲಿ ಶಾಂತಿ ಒಡಂಬಡಿಕೆಯನ್ನು ಬರೆಯಲಾಗುತ್ತಿದ್ದ ಸಂದರ್ಭದಲ್ಲಿ ಪ್ರವಾದಿವರ್ಯರ(ಸ) ಹೆಸರಿನ ಜತೆಗೆ 'ರಸೂಲುಲ್ಲಾಹ್' (ಅಲ್ಲಾಹನ ಪ್ರವಾದಿ) ಎಂಬ ಪದವನ್ನು ಬರೆಯುವ ಬಗ್ಗೆ ಮಕ್ಕಾದ ಸತ್ಯನಿಷೇಧಿಗಳು ಆಕ್ಷೇಪ ವ್ಯಕ್ತಪಡಿಸಿದರು. ಅದಕ್ಕಾಗಿ, ಮುಹಮ್ಮದ್‌ರು(ಸ) ಓರ್ವ ಪ್ರವಾದಿಯಾಗಿದ್ದಾರೆ ಎಂಬ ವಿಚಾರ ಒಂದು

29. ಮುಹಮ್ಮದ್ ಅಲ್ಲಾಹನ ಸಂದೇಶವಾಹಕರಾಗಿರುತ್ತಾರೆ. ಅವರ ಜೊತೆಗಿರುವವರು ಸತ್ಯನಿಷೇಧಿಗಳ ಪಾಲಿಗೆ ಕಠಿಣರೂ[21] ಪರಸ್ಪರ ಕರುಣಾಳುಗಳೂ[22] ಆಗಿರುತ್ತಾರೆ. ಅವರು ಬಾಗಿರುವ ಮತ್ತು ಸಾಷ್ಟಾಂಗವೆರಗಿರುವ ಸ್ಥಿತಿಯಲ್ಲಿ ಇರುವುದನ್ನು ಹಾಗೂ ಅಲ್ಲಾಹನ ಅನುಗ್ರಹ ಮತ್ತು ಅವನ ಸಂಪ್ರೀತಿಯನ್ನು ಅರಸುವುದರಲ್ಲಿ ತಲ್ಲೀನರಾಗಿರುವುದನ್ನು ನೀವು ಕಾಣುವಿರಿ. ಸಾಷ್ಟಾಂಗ ವೆರಗಿದುದರ ಗುರುತುಗಳು ಅವರ ಮುಖಗಳಲ್ಲಿವೆ. ಆ ಮೂಲಕ ಅವರು ಪ್ರತ್ಯೇಕವಾಗಿ ಗುರುತಿಸಲ್ಪಡುತ್ತಾರೆ.[23] ಇದು ತೌರಾತ್‌ನಲ್ಲಿರುವ, ಅವರ ಗುಣವಿಶೇಷವಾಗಿದೆ. ಇಂಜೀಲ್‌ನಲ್ಲಿ ಅವರ ಉದಾಹರಣೆಯನ್ನು ಹೀಗೆ ಕೊಡಲಾಗಿದೆ. ಒಂದು ಪೈರು, ಅದು ಮೊದಲು ಮೊಳೆಯಿತು, ತರುವಾಯ ಅದನ್ನು ಬಲಪಡಿಸಿತು, ಅನಂತರ ಅದು ಪಕ್ವವಾಯಿತು, ಆ ಬಳಿಕ ತನ್ನ ಕಾಂಡದ ಮೇಲೆ ನಿಂತು ಬಿಟ್ಟಿತು. ಕೃಷಿ ಮಾಡುವವರನ್ನು ಅದು ಸಂತೋಷಪಡಿಸುತ್ತದೆ- ಸತ್ಯನಿಷೇಧಿಗಳು ಅವುಗಳ ಬೆಳವಣಿಗೆಯ ಬಗ್ಗೆ ಅಸೂಯೆ ಪಡುವಂತಾಗಲು. ಸತ್ಯವಿಶ್ವಾಸವಿರಿಸಿಕೊಂಡು ಸತ್ಕರ್ಮವೆಸಗಿದ ಕೂಟದವರಿಗೆ ಅಲ್ಲಾಹನು ಕ್ಷಮೆ ಮತ್ತು ಅತಿ ದೊಡ್ಡ ಪ್ರತಿಫಲದ ವಾಗ್ದಾನವಿತ್ತಿರುತ್ತಾನೆ.

مُحَمَّدٌ رَّسُوْلُ اللّٰهِ ؕ وَالَّذِيْنَ مَعَهٗۤ
اَشِدَّآءُ عَلَى الْكُفَّارِ رُحَمَآءُ بَيْنَهُمْ
تَرٰىهُمْ رُكَّعًا سُجَّدًا يَّبْتَغُوْنَ فَضْلًا
مِّنَ اللّٰهِ وَرِضْوَانًا ۫ سِيْمَاهُمْ فِيْ
وُجُوْهِهِمْ مِّنْ اَثَرِ السُّجُوْدِ ؕ ذٰلِكَ
مَثَلُهُمْ فِي التَّوْرٰىةِ ۛۖ وَمَثَلُهُمْ فِي
الْاِنْجِيْلِ ۛۚ كَزَرْعٍ اَخْرَجَ شَطْـَٔهٗ
فَاٰزَرَهٗ فَاسْتَغْلَظَ فَاسْتَوٰى عَلٰى
سُوْقِهٖ يُعْجِبُ الزُّرَّاعَ لِيَغِيْظَ بِهِمُ
الْكُفَّارَ ؕ وَعَدَ اللّٰهُ الَّذِيْنَ اٰمَنُوْا
وَعَمِلُوا الصّٰلِحٰتِ مِنْهُمْ مَّغْفِرَةً
وَّاَجْرًا عَظِيْمًا ﴿۲۹﴾

---

ವಾಸ್ತವಿಕತೆಯಾಗಿದೆ. ಅದನ್ನು ಯಾರಾದರೂ ನಂಬುವುದರಿಂದ ಅಥವಾ ನಂಬದಿರುವುದರಿಂದ ಯಾವುದೇ ವ್ಯತ್ಯಾಸ ಉಂಟಾಗುವುದಿಲ್ಲ. ಅದನ್ನು ಕೆಲವರು ನಂಬಲು ಸಿದ್ಧರಿಲ್ಲವೆಂದಾದರೆ ಅವರು ನಂಬದಿರಲಿ. ಅವರು ಪ್ರವಾದಿಯಾಗಿದ್ದಾರೆ ಎಂಬ ವಾಸ್ತವಿಕತೆಗೆ ಅಲ್ಲಾಹನ ಸಾಕ್ಷ್ಯವಷ್ಟೇ ಸಾಕು ಎಂದು ಹೇಳಲಾಗಿದೆ.

21. ಅರಬಿ ಭಾಷೆಯಲ್ಲಿ 'ಫುಲಾನುನ್ ಶದೀದುನ್ ಅಲೈಹಿ' ಅರ್ಥಾತ್ ಆ ವ್ಯಕ್ತಿ ಅವನ ಪಾಲಿಗೆ ಕಠೋರನಾಗಿದ್ದಾನೆ ಎಂದು ಹೇಳಲಾಗುತ್ತದೆ. ಅದರ ಅರ್ಥ ಅವನನ್ನು ಮಣಿಸುವುದು, ಅಧೀನಗೊಳಿಸುವುದು ಮತ್ತು ತನ್ನ ಅಭೀಷ್ಟಕ್ಕೆ ಬದ್ಧಗೊಳಿಸುವುದು ತ್ರಾಸದಾಯಕ ಎಂದಾಗಿದೆ. ಪ್ರವಾದಿವರ್ಯರ(ಸ) ಅನುಚರರು ಸತ್ಯನಿಷೇಧಿಗಳ ಪಾಲಿಗೆ ಕಠೋರರಾಗಿದ್ದಾರೆ ಎಂದರೆ ಅವರನ್ನು ಮೇಣದಿಂದ ರಚಿಸಿದ ಗೊಂಬೆಯಂತೆ ಸತ್ಯನಿಷೇಧಿಗಳು ಯಾವ ಕಡೆಗೆ ಬೇಕಾದರೂ ತಿರುಗಿಸಲು ಸಾಧ್ಯವಿಲ್ಲ. ಸತ್ಯನಿಷೇಧಿಗಳಿಗೆ ಸುಲಭವಾಗಿ ನುಂಗಲು ಸಾಧ್ಯವಾಗುವ ಮೇವಿನಂತೆ ಅವರು ಇರಲಾರರು. ಅವರನ್ನು ಯಾವುದೇ ರೀತಿಯ ಬೆದರಿಕೆಯಿಂದ ಮಣಿಸಲು ಸಾಧ್ಯವಿಲ್ಲ. ಯಾವುದೇ ರೀತಿಯ ಪ್ರಲೋಭನೆಯಿಂದ ಅವರನ್ನು ಖರೀದಿಸಲು ಸಾಧ್ಯವಿಲ್ಲ. ಯಾವ ಉನ್ನತ ಉದ್ದೇಶಕ್ಕಾಗಿ ಅವರು ಜೀವದ ಹಂಗು ತೊರೆದು ಪ್ರವಾದಿವರ್ಯರೊಂದಿಗೆ(ಸ) ಸಹಕರಿಸಲು ಸನ್ನದ್ಧರಾಗಿದ್ದಾರೋ ಅದರಿಂದ ವಿಮುಖಗೊಳಿಸುವ ಶಕ್ತಿ ಸತ್ಯನಿಷೇಧಿಗಳಲ್ಲಿಲ್ಲ.

22. ಅರ್ಥಾತ್- ಅವರ ಕಠೋರತೆ ಏನಿದ್ದರೂ ಅದು ಧರ್ಮದ ಶತ್ರುಗಳ ಪಾಲಿಗೆ ಮಾತ್ರ. ಸತ್ಯವಿಶ್ವಾಸಿಗಳ ಪಾಲಿಗಲ್ಲ. ಸತ್ಯವಿಶ್ವಾಸಿಗಳ ಪಾಲಿಗೆ ಅವರು ಮೃದು ಹೃದಯಿಗಳಾಗಿದ್ದಾರೆ. ಕರುಣಾಳುಗಳೂ, ಪ್ರೀತ್ಯಾದರ ಉಳ್ಳವರೂ, ಸಹಾನುಭೂತಿ ಮತ್ತು ಸ್ಪಂದನ ಹೊಂದಿದವರೂ ಆಗಿದ್ದಾರೆ. ತತ್ವಾದರ್ಶ ಮತ್ತು ಉದ್ದೇಶದ ಸಾಮ್ಯತೆಯು ಅವರ ನಡುವೆ ಪರಸ್ಪರ ಪ್ರೀತಿ, ಹಿತಚಿಂತನೆ ಮತ್ತು ಹೊಂದಾಣಿಕೆಯನ್ನು ಬೆಳೆಸಿದೆ.

23. ಕೆಲವು ನಮಾಝ್ ಮಾಡುವವರ ಹಣೆಯಲ್ಲಿ ದಡ್ಡುಗಟ್ಟಿದ ಕಲೆಯ ಕುರಿತು ಈ ಮಾತು ಹೇಳಲಾಗಿಲ್ಲ. ಬದಲಾಗಿ ಇದರ ಅರ್ಥ ದೇವನ ಮುಂದೆ ಬಾಗುವುದರಿಂದ ಸ್ವಾಭಾವಿಕವಾಗಿಯೇ ವ್ಯಕ್ತಿಯ ಮುಖದಲ್ಲಿ ವ್ಯಕ್ತವಾಗುವ ದೇವಭಯ, ಮೃದುಹೃದಯ, ಸಜ್ಜನಿಕೆ ಮತ್ತು ಸಚ್ಚಾರಿತ್ರ್ಯದ ಲಕ್ಷಣಗಳಾಗಿವೆ. ಮುಹಮ್ಮದ್‌ರ(ಸ) ಸಂಗಾತಿಗಳು ಹೇಗಿದ್ದರೆಂದರೆ ಜನರು ಅವರನ್ನು ನೋಡಿದ ತಕ್ಷಣ ಇವರು ಸಚ್ಚರಿತರಾಗಿದ್ದಾರೆ ಎಂದು ಅರಿತುಕೊಳ್ಳುತ್ತಾರೆ. ಏಕೆಂದರೆ ಅವರ ಮುಖ ದೇವಭಕ್ತಿಯ ಕಾಂತಿಯಿಂದ ಪ್ರಜ್ವಲಿಸುತ್ತಿರುತ್ತದೆ ಎಂದು ಹೇಳುವುದು ಅಲ್ಲಾಹನ ಮಾತಿನ ಇಂಗಿತವಾಗಿದೆ.






**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಸತ್ಯವಿಶ್ವಾಸಿಗಳೇ, ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ಮೀರಿ ಮುನ್ನಡೆಯ ಬೇಡಿರಿ[1] ಮತ್ತು ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನು ಸರ್ವವನ್ನೂ ಆಲಿಸುವವನು ಮತ್ತು ಬಲ್ಲವ ನಾಗಿದ್ದಾನೆ.

يٰٓاَيُّهَا الَّذِيْنَ اٰمَنُوْا لَا تُقَدِّمُوْا بَيْنَ يَدَيِ اللّٰهِ وَرَسُوْلِهٖ وَاتَّقُوا اللّٰهَ ۭ اِنَّ اللّٰهَ سَمِيْعٌ عَلِيْمٌ ①

2. ಸತ್ಯವಿಶ್ವಾಸಿಗಳೇ, ನಿಮ್ಮ ಧ್ವನಿಯನ್ನು ಪ್ರವಾದಿವರ್ಯರ ಧ್ವನಿಗಿಂತ ಎತ್ತರಿಸಬೇಡಿರಿ ಮತ್ತು ನೀವು ಪರಸ್ಪರರೊಡನೆ ಮಾತನಾಡುವಂತೆ ಪ್ರವಾದಿವರ್ಯರೊಡನೆ ಉಚ್ಚ ಸ್ವರದಿಂದ ಮಾತನಾಡಬೇಡಿರಿ- ನಿಮಗೆ ಅರಿವೇ ಇಲ್ಲದಂತೆ ನಿಮ್ಮ ಕರ್ಮಗಳೆಲ್ಲವೂ ನಷ್ಟವಾಗಿ ಬಿಡದಿರಲಿ.

يٰٓاَيُّهَا الَّذِيْنَ اٰمَنُوْا لَا تَرْفَعُوْٓا اَصْوَاتَكُمْ فَوْقَ صَوْتِ النَّبِيِّ وَلَا تَجْهَرُوْا لَهٗ بِالْقَوْلِ كَجَهْرِ بَعْضِكُمْ لِبَعْضٍ اَنْ تَحْبَطَ اَعْمَالُكُمْ وَاَنْتُمْ لَا تَشْعُرُوْنَ ②

3. ಅಲ್ಲಾಹನ ಸಂದೇಶವಾಹಕರ ಸನ್ನಿಧಿಯಲ್ಲಿ ಮಾತನಾಡುವಾಗ ತಮ್ಮ ಧ್ವನಿಯನ್ನು ತಗ್ಗಿಸಿಕೊಳ್ಳುವವರ ಹೃದಯಗಳನ್ನು ಅಲ್ಲಾಹನು 'ಧರ್ಮನಿಷ್ಠೆ'ಗಾಗಿ ಪರೀಕ್ಷಿಸಿದ್ದಾನೆ.[2] ಅವರಿಗೆ ಕ್ಷಮೆಯೂ ಅತಿ ದೊಡ್ಡ ಪ್ರತಿಫಲವೂ ಇದೆ.

اِنَّ الَّذِيْنَ يَغُضُّوْنَ اَصْوَاتَهُمْ عِنْدَ رَسُوْلِ اللّٰهِ اُولٰۗىِٕكَ الَّذِيْنَ امْتَحَنَ اللّٰهُ قُلُوْبَهُمْ لِلتَّقْوٰى ۭ لَهُمْ مَّغْفِرَةٌ وَّاَجْرٌ عَظِيْمٌ ③

4. ಸಂದೇಶವಾಹಕರೇ, ನಿಮ್ಮನ್ನು ಮನೆಗಳ ಹೊರಗಿನಿಂದ ಕೂಗಿ ಕರೆಯುವವರ ಪೈಕಿ ಹೆಚ್ಚಿನವರು ತಿಳಿಗೇಡಿಗಳಾಗಿದ್ದಾರೆ.

اِنَّ الَّذِيْنَ يُنَادُوْنَكَ مِنْ وَّرَاۗءِ الْحُجُرٰتِ اَكْثَرُهُمْ لَا يَعْقِلُوْنَ ④

1. ಅರ್ಥಾತ್- ಅಲ್ಲಾಹ್ ಮತ್ತು ರಸೂಲರನ್ನು ಮೀರಿ ನಡೆಯದಿರಿ. ಅವರ ಹಿಂದೆ ನಡೆಯಿರಿ. ಅವರ ಮುಂದಾಳುಗಳಾಗಬೇಡಿ. ಹಿಂಬಾಲಕರಾಗಿರಿ. ನಿಮ್ಮ ವ್ಯವಹಾರಗಳಿಗೆ ಸಂಬಂಧಿಸಿದಂತೆ ಮುಂದುವರಿದು ಸ್ವನಿರ್ಧಾರ ಕೈಗೊಳ್ಳದಿರಿ. ಬದಲಾಗಿ ಅಲ್ಲಾಹನ ಗ್ರಂಥ ಮತ್ತು ಅವನ ಪ್ರವಾದಿಯ ಚರ್ಯೆಯಲ್ಲಿ ಅವುಗಳ ಕುರಿತು ಯಾವ ಆದೇಶ ನೀಡಲಾಗಿದೆ ಎಂದು ಮೊದಲು ನೋಡಿಕೊಳ್ಳಿರಿ.
2. ಅರ್ಥಾತ್- ಯಾರು ಅಲ್ಲಾಹನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಾರೋ ಮತ್ತು ಯಾರು ಪರೀಕ್ಷೆಗಳ ಮೂಲಕ ದಾಟಿ ಮನಸ್ಸಿನಲ್ಲಿ ನಿಜವಾಗಿಯೂ 'ದೇವಭಕ್ತಿ' ಇದೆಯೆಂದು ಸಾಬೀತು ಪಡಿಸಿದ್ದಾರೋ ಅವರೇ ಅಲ್ಲಾಹನ ಪ್ರವಾದಿಯ ಬಗ್ಗೆ ತೋರಬೇಕಾದ ಗೌರವಾದರಗಳನ್ನು ಗಮನಿಸುವವರಾಗಿದ್ದಾರೆ. ಪ್ರವಾದಿಯ ಬಗ್ಗೆ ಗೌರವಾದರ ಇಲ್ಲದ ಹೃದಯ ದೇವಭಕ್ತಿಯಿಂದಲೂ ಮುಕ್ತವಾಗಿರುತ್ತದೆ ಎಂದೂ ಈ ವಾಣಿಯಿಂದ ವ್ಯಕ್ತವಾಗುತ್ತದೆ.

5. ನೀವು ಹೊರ ಬರುವ ತನಕ ಅವರು ತಾಳ್ಮೆ ವಹಿಸುತ್ತಿದ್ದರೆ ಅದು ಅವರಿಗೇ ಒಳ್ಳೆಯದಿತ್ತು.[3] ಅಲ್ಲಾಹನು ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತಾನೆ.

وَلَوْ أَنَّهُمْ صَبَرُوا حَتَّىٰ تَخْرُجَ إِلَيْهِمْ لَكَانَ خَيْرًا لَّهُمْ ۚ وَاللَّهُ غَفُورٌ رَّحِيمٌ ⑤

6. ಸತ್ಯವಿಶ್ವಾಸಿಗಳೇ, ಕರ್ಮಭ್ರಷ್ಟನೊಬ್ಬನು ನಿಮ್ಮ ಬಳಿಗೇನಾದರೂ ಸುದ್ದಿ ತಂದರೆ ಆ ಕುರಿತು ತನಿಖೆ ಮಾಡಿರಿ. (ಏಕೆಂದರೆ) ನೀವು ಪ್ರಮಾದವಶಾತ್ ಒಂದು ಸಮೂಹಕ್ಕೆ ಹಾನಿ ಮಾಡಿ ಆ ಬಳಿಕ ನಿಮ್ಮ ಕೃತ್ಯದ ಬಗ್ಗೆ ಪಶ್ಚಾತ್ತಾಪ ಪಡುವಂತಾಗಬಾರದು.[4]

يَا أَيُّهَا الَّذِينَ آمَنُوا إِن جَاءَكُمْ فَاسِقٌ بِنَبَإٍ فَتَبَيَّنُوا أَن تُصِيبُوا قَوْمًا بِجَهَالَةٍ فَتُصْبِحُوا عَلَىٰ مَا فَعَلْتُمْ نَادِمِينَ ⑥

7-8. ನಿಮ್ಮ ನಡುವೆ ಅಲ್ಲಾಹನ ಸಂದೇಶವಾಹಕರಿದ್ದಾರೆ ಎಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿರಿ. ಹೆಚ್ಚಿನ ವಿಷಯಗಳಲ್ಲಿ, ಅವರು ನಿಮ್ಮ ಮಾತನ್ನು ಅನುಸರಿಸಿದರೆ, ನೀವು ಸ್ವತಃ ಸಂಕಷ್ಟಕ್ಕೊಳಗಾಗುವಿರಿ. ಆದರೆ, ಅಲ್ಲಾಹನು ನಿಮಗೆ ಸತ್ಯವಿಶ್ವಾಸವನ್ನು ಪ್ರಿಯಗೊಳಿಸಿದನು. ಅದನ್ನು ನಿಮ್ಮ ಮನಸ್ಸಿಗೆ ಆಕರ್ಷಕವಾಗಿ ಮಾಡಿದನು ಮತ್ತು ಸತ್ಯನಿಷೇಧ, ಕರ್ಮಭ್ರಷ್ಟತೆ ಹಾಗೂ ಆಜ್ಞೋಲ್ಲಂಘನೆಯ ಬಗ್ಗೆ ನೀವು ಜಿಗುಪ್ಸೆ ತಾಳುವಂತೆ ಮಾಡಿದನು. ಇಂತಹವರೇ ಅಲ್ಲಾಹನ ಅನುಗ್ರಹ ಹಾಗೂ ಕೃಪೆಯಿಂದ ಸನ್ಮಾರ್ಗಗಾಮಿಗಳಾಗಿರುವರು. ಅಲ್ಲಾಹನು ಸರ್ವಜ್ಞನೂ ಯುಕ್ತಿವಂತನೂ ಆಗಿರುತ್ತಾನೆ.

وَاعْلَمُوا أَنَّ فِيكُمْ رَسُولَ اللَّهِ ۚ لَوْ يُطِيعُكُمْ فِي كَثِيرٍ مِّنَ الْأَمْرِ لَعَنِتُّمْ وَلَٰكِنَّ اللَّهَ حَبَّبَ إِلَيْكُمُ الْإِيمَانَ وَزَيَّنَهُ فِي قُلُوبِكُمْ وَكَرَّهَ إِلَيْكُمُ الْكُفْرَ وَالْفُسُوقَ وَالْعِصْيَانَ ۚ أُولَٰئِكَ هُمُ الرَّاشِدُونَ ⑦ فَضْلًا مِّنَ اللَّهِ وَنِعْمَةً ۚ وَاللَّهُ عَلِيمٌ حَكِيمٌ ⑧

9. ಸತ್ಯವಿಶ್ವಾಸಿಗಳಲ್ಲಿ ಎರಡು ಗುಂಪುಗಳು ಪರಸ್ಪರ ಜಗಳಾಡಿದರೆ,[5] ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲಿ ಒಂದು ಗುಂಪು

وَإِن طَائِفَتَانِ مِنَ الْمُؤْمِنِينَ اقْتَتَلُوا فَأَصْلِحُوا بَيْنَهُمَا ۖ فَإِن بَغَتْ إِحْدَاهُمَا

---

3. ಅರೇಬಿಯಾದ ಸುತ್ತಮುತ್ತಲಿನಿಂದ ಬರುವವರಲ್ಲಿ ಕೆಲವು ಅಸಭ್ಯ ವ್ಯಕ್ತಿಗಳೂ ಇದ್ದರು. ಅವರು ಪ್ರವಾದಿವರ್ಯರನ್ನು(ಸ) ಭೇಟಿಯಾಗಲು ಬರುವಾಗ ಸೇವಕನ ಮೂಲಕ ಸುದ್ದಿ ಮುಟ್ಟಿಸುವ ಗೊಡವೆಗೂ ಹೋಗುತ್ತಿರಲಿಲ್ಲ. ಬದಲಾಗಿ ಪ್ರವಾದಿ ಪತ್ನಿಯರ ಕೊಠಡಿಗಳನ್ನು ಸುತ್ತಿ ಹೊರಗೆಯೇ ನಿಂತು ಕೂಗಿ ಕರೆಯುತ್ತಿದ್ದರು. ಆ ವ್ಯಕ್ತಿಗಳ ಇಂತಹ ಧೋರಣೆಯಿಂದ ಪ್ರವಾದಿವರ್ಯರಿಗೆ(ಸ) ತೀವ್ರ ನೋವುಂಟಾಗುತ್ತಿತ್ತು. ಆದರೆ ಅವರು ತಮ್ಮ ಸ್ವಭಾವ ಸಹಜವಾದ ಸೌಜನ್ಯದಿಂದ ಅದನ್ನು ಸಹಿಸಿಕೊಳ್ಳುತ್ತಿದ್ದರು. ಕೊನೆಗೆ ಅಲ್ಲಾಹನು ಸ್ವತಃ ಈ ವಿಷಯದಲ್ಲಿ ಹಸ್ತಕ್ಷೇಪ ಮಾಡಿದನು. ಈ ಅರೋಚಕ ನಡವಳಿಕೆಯನ್ನು ಖಂಡಿಸುತ್ತಾ, ಜನರು ಅವರನ್ನು ಭೇಟಿಯಾಗಲು ಬರುವಾಗ ಅವರು ಅಲ್ಲಿರದಿದ್ದರೆ ನಿರಂತರ ಕೂಗಿ ಕರೆಯುವ ಬದಲು ತಾಳ್ಮೆಯಿಂದ ಕುಳಿತು ಅವರು ಸ್ವತಃ ಹೊರಗೆ ಬರುವ ವರೆಗೆ ಕಾಯಬೇಕು ಎಂದು ಅಲ್ಲಾಹನು ನಿರ್ದೇಶವಿತ್ತನು.

4. ಈ ಸೂಕ್ತದ ಮೂಲಕ ಮುಸ್ಲಿಮರಿಗೆ ಒಂದು ತಾತ್ವಿಕ ನಿರ್ದೇಶನ ಕೊಡಲಾಗಿದೆ. ದೊಡ್ಡ ಪರಿಣಾಮವನ್ನುಂಟು ಮಾಡಬಹುದಾದ ಪ್ರಮುಖ ಸುದ್ದಿ ನಿಮಗೆ ತಲಪಿದರೆ ಸುದ್ದಿ ತರುವವನು ಎಂತಹ ವ್ಯಕ್ತಿ ಎಂದು ಮೊದಲು ನೋಡಿಕೊಳ್ಳಿರಿ. ಅವನು ಧರ್ಮಭ್ರಷ್ಟನಾಗಿದ್ದರೆ, ಅರ್ಥಾತ್ ಅವನು ವಿಶ್ವಾಸಾರ್ಹ ವ್ಯಕ್ತಿಯಲ್ಲವೆಂದು ಮೇಲ್ನೋಟಕ್ಕೆ ವ್ಯಕ್ತವಾಗುತ್ತಿದ್ದರೆ ಅವನು ತಲಪಿಸಿದ ಸುದ್ದಿಯನ್ನು ಪಾಲಿಸುವ ಮೊದಲು ಸತ್ಯಸಂಗತಿ ಏನೆಂದು ಪರಾಂಬರಿಸಿ ಕೊಳ್ಳಿರಿ.

5. "ಸತ್ಯವಿಶ್ವಾಸಿಗಳ ಪೈಕಿ ಎರಡು ಗುಂಪಿನವರು ಪರಸ್ಪರ ಜಗಳಾಡಿದರೆ" ಎಂದು ಇಲ್ಲಿ ಹೇಳಲಾಗಿಲ್ಲ. ಬದಲಾಗಿ, "ಸತ್ಯವಿಶ್ವಾಸಿಗಳ ಪೈಕಿ ಎರಡು ಗುಂಪಿನ ನಡುವೆ ಜಗಳ ಆಗಿ ಬಿಟ್ಟರೆ" ಎಂದು ಹೇಳಲಾಗಿದೆ. ಪರಸ್ಪರ ಜಗಳಾಡುವುದು ಮುಸ್ಲಿಮರಿಗೆ ಭೂಷಣವಲ್ಲ ಮತ್ತು ಹಾಗೆ ಎಂದೂ ಆಗಬಾರದು ಎಂಬ ಆಶಯ ಈ ಪದಗಳಿಂದ ಧ್ವನಿಸುತ್ತವೆ. ಅವರು ಸತ್ಯವಿಶ್ವಾಸಿಗಳಾಗಿರುತ್ತಾ ಪರಸ್ಪರ

ಇನ್ನೊಂದು ಗುಂಪಿನ ಮೇಲೆ ಅತಿರೇಕವೆಸಗಿದರೆ, ಅತಿರೇಕವೆಸಗಿದವರು ಅಲ್ಲಾಹನ ಆದೇಶದೆಡೆಗೆ ಮರಳಿ ಬರುವ ವರೆಗೂ ಅವರ ವಿರುದ್ಧ ಹೋರಾಡಿರಿ. ತರುವಾಯ ಅವರು ಮರಳಿ ಬಂದರೆ, ಅವರ ಮಧ್ಯೆ ನ್ಯಾಯಪೂರ್ಣ ಸಂಧಾನ ಮಾಡಿಸಿಬಿಡಿರಿ ಮತ್ತು ನ್ಯಾಯವನ್ನು ಪಾಲಿಸಿರಿ. ಅಲ್ಲಾಹನು ನ್ಯಾಯ ಪರಿಪಾಲಕರನ್ನು ಪ್ರೀತಿಸುತ್ತಾನೆ.

عَلَى الْأُخْرَىٰ فَقَاتِلُوا الَّتِي تَبْغِي حَتَّىٰ تَفِيءَ إِلَىٰ أَمْرِ اللَّهِ ۚ فَإِن فَاءَتْ فَأَصْلِحُوا بَيْنَهُمَا بِالْعَدْلِ وَأَقْسِطُوا ۖ إِنَّ اللَّهَ يُحِبُّ الْمُقْسِطِينَ ⑨

10. ಸತ್ಯವಿಶ್ವಾಸಿಗಳಂತು ಪರಸ್ಪರ ಸಹೋದರರು. ಆದುದರಿಂದ ನಿಮ್ಮ ಸಹೋದರರ ನಡುವೆ ಸಂಬಂಧಗಳನ್ನು ಸರಿಪಡಿಸಿರಿ ಮತ್ತು ಅಲ್ಲಾಹನಿಗೆ ಭಯಪಡಿರಿ. ನಿಮ್ಮ ಮೇಲೆ ಕೃಪೆ ತೋರಲಾಗುವುದೆಂದು ನಿರೀಕ್ಷಿಸಬಹುದು.

إِنَّمَا الْمُؤْمِنُونَ إِخْوَةٌ فَأَصْلِحُوا بَيْنَ أَخَوَيْكُمْ ۚ وَاتَّقُوا اللَّهَ لَعَلَّكُمْ تُرْحَمُونَ ⑩

11. ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನೂ ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು.[6] ಪರಸ್ಪರರನ್ನು ನಿಂದಿಸಬೇಡಿರಿ[7] ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು.[8] ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು.

يَا أَيُّهَا الَّذِينَ آمَنُوا لَا يَسْخَرْ قَوْمٌ مِّن قَوْمٍ عَسَىٰ أَن يَكُونُوا خَيْرًا مِّنْهُمْ وَلَا نِسَاءٌ مِّن نِّسَاءٍ عَسَىٰ أَن يَكُنَّ خَيْرًا مِّنْهُنَّ ۖ وَلَا تَلْمِزُوا أَنفُسَكُمْ وَلَا تَنَابَزُوا بِالْأَلْقَابِ ۖ بِئْسَ الِاسْمُ الْفُسُوقُ بَعْدَ الْإِيمَانِ ۚ وَمَن لَّمْ يَتُبْ فَأُولَٰئِكَ هُمُ الظَّالِمُونَ ⑪

ಜಗಳಾಡುವುದು ನಿರೀಕ್ಷೆಗೆ ನಿಲುಕುವಂತಹ ವಿಚಾರವೂ ಅಲ್ಲ. ಆದರೆ ಅಪ್ಪಿತಪ್ಪಿ ಎಲ್ಲಾದರೂ ಹೀಗೆ ಸಂಭವಿಸಿದರೆ ಮುಂದೆ ವಿವರಿಸಲಾಗಿರುವಂತಹ ಕಾರ್ಯನೀತಿಯನ್ನು ಅನುಸರಿಸಬೇಕು.

6. ಅಪಹಾಸ್ಯ ಮಾಡುವುದೆಂದರೆ ಕೇವಲ ನಾಲಗೆಯಿಂದ ಅಪಹಾಸ್ಯ ಮಾಡುವುದಲ್ಲ. ಬದಲಾಗಿ ಯಾರದಾದರೂ ಅನುಕರಣೆ ಮಾಡುವುದು, ಯಾರನ್ನಾದರೂ ಬೊಟ್ಟು ಮಾಡಿ ತೋರಿಸುವುದು, ವ್ಯಕ್ತಿಯ ಮಾತು, ಕೃತಿ, ರೂಪ ಅಥವಾ ಉಡುಪಿನ ಬಗ್ಗೆ ನಗೆಯಾಡುವುದು, ಒಬ್ಬನ ದೌರ್ಬಲ್ಯ ಅಥವಾ ದೋಷದ ಬಗ್ಗೆ ಅವನು ನಗೆಪಾಟಲಿಗೆ ಗುರಿಯಾಗುವಂತೆ ಪ್ರಸ್ತಾಪ ಮಾಡುವುದು ಮುಂತಾದವುಗಳೆಲ್ಲವೂ ಅಪಹಾಸ್ಯದ ಸಾಲಿಗೆ ಸೇರಿವೆ.

7. ನಿಂದಿಸುವುದೆಂದರೆ ಮನನೋಯಿಸುವುದು, ವ್ಯಂಗ್ಯಕ್ಕೀಡು ಮಾಡುವುದು, ಆಕ್ಷೇಪವೆತ್ತುವುದು, ಆರೋಪ ಮಾಡುವುದು, ಹುಳುಕು ಹುಡುಕುವುದು, ಬಹಿರಂಗವಾಗಿ ಅಥವಾ ಗುಪ್ತವಾಗಿ ಯಾರನ್ನಾದರೂ ನಿಂದನೆಗೀಡು ಮಾಡುವುದು ಮುಂತಾದ ಕೆಲಸಗಳೆಲ್ಲವೂ ಸೇರಿವೆ.

8. ವ್ಯಕ್ತಿಯನ್ನು ಅಪಮಾನಕ್ಕೀಡು ಮಾಡುವಂತಹ ಹೆಸರಿನಿಂದ ಕರೆಯಬಾರದು ಮತ್ತು ಬಿರುದು ನೀಡಬಾರದು ಎಂಬುದು ಈ ಆದೇಶದ ಇಂಗಿತ. ಉದಾ: ಒಬ್ಬನನ್ನು ಧರ್ಮಭ್ರಷ್ಟ ಅಥವಾ ಕಪಟವಿಶ್ವಾಸಿ ಎಂದು ಕರೆಯುವುದು, ಒಬ್ಬನನ್ನು ಕುಂಟ, ಕುರುಡ ಅಥವಾ ಒಕ್ಕಣ್ಣನೆನ್ನುವುದು, ಒಬ್ಬನನ್ನು ಅವನ ಅಥವಾ ಅವನ ಮಾತಾಪಿತರ ಇಲ್ಲವೇ ಮನೆತನದ ಯಾವುದಾದರೂ ದೋಷದ ಆಧಾರದಲ್ಲಿ ಹೆಸರಿಟ್ಟು ಕರೆಯುವುದು, ಮುಸ್ಲಿಮನಾದ ನಂತರವೂ ಒಬ್ಬನನ್ನು ಅವನ ಹಿಂದಿನ ಧರ್ಮದ ಆಧಾರದಲ್ಲಿ ಯಹೂದಿ ಅಥವಾ ಕ್ರೈಸ್ತನೆಂದು ಕರೆಯುವುದು, ಒಬ್ಬ ವ್ಯಕ್ತಿ, ಕುಟುಂಬ, ಭ್ರಾತೃತ್ವ ಅಥವಾ ಗುಂಪಿಗೆ ಅಪಮಾನ ಜನಕವಾದ ಹೆಸರನ್ನಿಡುವುದು ಇತ್ಯಾದಿ. ಮೇಲ್ನೋಟಕ್ಕೆ ಕೆಟ್ಟದ್ದಾಗಿ ಕಂಡರೂ ನಿಂದನೆಯ ಉದ್ದೇಶವಿಲ್ಲದ ಗುರುತಿಸಲಿಕ್ಕಾಗಿ ಉಪಯೋಗಿಸಲ್ಪಡುವ ಬಿರುದುಗಳು ಇದಕ್ಕೆ ಹೊರತಾಗಿವೆ. ಉದಾ: ಕುರುಡು ವೈದ್ಯರು. ಇಂತಹ ಉದ್ಧರಣೆಗಳ ಉದ್ದೇಶ ಪರಿಚಯ ಮಾಡಿಸುವುದೇ ಹೊರತು ನಿಂದನೆಯಲ್ಲ.

12. ಸತ್ಯವಿಶ್ವಾಸಿಗಳೇ, ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿವೆ.[9] ದೋಷಾನ್ವೇಷಣೆ ಮಾಡದಿರಿ.[10] ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ ಪರದೂಷಣೆ ಮಾಡಬಾರದು.[11] ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಮಾಂಸ ತಿನ್ನುವುದನ್ನು ಇಷ್ಟಪಡುವನೇ?[12] ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ. ಅಲ್ಲಾಹನನ್ನು ಭಯಪಡಿರಿ, ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.

يَٰٓأَيُّهَا ٱلَّذِينَ ءَامَنُوا۟ ٱجْتَنِبُوا۟ كَثِيرًا مِّنَ ٱلظَّنِّ إِنَّ بَعْضَ ٱلظَّنِّ إِثْمٌ ۖ وَلَا تَجَسَّسُوا۟ وَلَا يَغْتَب بَّعْضُكُم بَعْضًا ۚ أَيُحِبُّ أَحَدُكُمْ أَن يَأْكُلَ لَحْمَ أَخِيهِ مَيْتًا فَكَرِهْتُمُوهُ ۚ وَٱتَّقُوا۟ ٱللَّهَ ۚ إِنَّ ٱللَّهَ تَوَّابٌ رَّحِيمٌ ﴿١٢﴾

13. ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ

يَٰٓأَيُّهَا ٱلنَّاسُ إِنَّا خَلَقْنَٰكُم مِّن ذَكَرٍ

9. ಗುಮಾನಿಯಿಂದ ಸಂಪೂರ್ಣವಾಗಿ ತಡೆಯಲಾಗಿಲ್ಲ. ಬದಲಾಗಿ ಹೆಚ್ಚು ಗುಮಾನಿ ಪಡುವುದರಿಂದ ಮತ್ತು ಪ್ರತಿಯೊಂದು ಗುಮಾನಿಯನ್ನೂ ಪಾಲಿಸುವುದರಿಂದ ತಡೆಯಲಾಗಿದೆ. ಕೆಲವೊಂದು ಗುಮಾನಿಗಳು ಪಾಪವಾಗಿರುತ್ತವೆ ಎಂದು ಹೇಳಿರುವುದರ ಜತೆಗೆ ಅದರ ಕಾರಣವನ್ನೂ ತಿಳಿಸಲಾಗಿದೆ. ಒಬ್ಬ ವ್ಯಕ್ತಿ ಯಾವುದೇ ವ್ಯಕ್ತಿಯ ಬಗ್ಗೆ ವಿನಾ ಕಾರಣ ಗುಮಾನಿ ಪಡುವುದು ಪಾಪವಾಗಿದೆ. ಇತರರ ಬಗ್ಗೆ ಅಭಿಪ್ರಾಯ ತಾಳುವಾಗ ಸಂಶಯದಿಂದಲೇ ಆರಂಭಿಸುವುದು ಅಥವಾ ಪ್ರತ್ಯಕ್ಷವಾಗಿಯೇ ಸಭ್ಯರೆಂದು ವ್ಯಕ್ತವಾಗುವ ವ್ಯಕ್ತಿಗಳ ಬಗ್ಗೆ ಸಂಶಯದಿಂದ ವರ್ತಿಸುವುದು ಕೂಡ ಪಾಪವಾಗಿದೆ. ಹಾಗೆಯೇ ಒಬ್ಬ ವ್ಯಕ್ತಿಯ ಮಾತು-ಕೃತಿಯಲ್ಲಿ ಒಳಿತು ಕೆಡುಕುಗಳ ಸಮಾನ ಸಾಧ್ಯತೆಯಿದ್ದರೆ ಅದರ ಬಗ್ಗೆ ಸಂಶಯ ತಾಳಿ ಕೆಡುಕು ಮಾತ್ರ ಇದೆ ಎಂದು ತೀರ್ಮಾನಿಸಿ ಬಿಡುವುದು ಸಹ ಪಾಪವಾಗಿದೆ.

10. ಅರ್ಥಾತ್- ಜನರ ರಹಸ್ಯಗಳನ್ನು ಹುಡುಕದಿರಿ. ಪರಸ್ಪರ ದೋಷಾನ್ವೇಷಣೆ ಮಾಡದಿರಿ. ಇನ್ನೊಬ್ಬನ ಸ್ಥಿತಿಗತಿ ಮತ್ತು ವ್ಯವಹಾರಗಳ ಬೆನ್ನು ಹತ್ತದಿರಿ. ಜನರ ವೈಯಕ್ತಿಕ ಪತ್ರಗಳನ್ನೋದುವುದು, ಇಬ್ಬರ ಮಾತನ್ನು ಕಿವಿಗೊಟ್ಟು ಕೇಳುವುದು, ನೆರೆಮನೆಯಲ್ಲಿ ಇಣುಕುವುದು, ವಿಭಿನ್ನ ರೀತಿಯಿಂದ ಇತರರ ವೈಯಕ್ತಿಕ ಜೀವನ ಅಥವಾ ವ್ಯವಹಾರಗಳನ್ನು ಶೋಧಿಸುವುದು ಇವೆಲ್ಲವೂ ನಿಷೇಧಿಸಲ್ಪಟ್ಟ ದೋಷಾನ್ವೇಷಣೆಯಲ್ಲಿ ಸೇರಿದೆ.

11. 'ಪರನಿಂದೆ' ಎಂದರೇನೆಂದು ಪ್ರವಾದಿವರ್ಯರೊಡನೆ(ಸ) ಕೇಳಲಾಯಿತು. ಅವರು ಹೇಳಿದರು, "ನೀನು ನಿನ್ನ ಸಹೋದರನ ಬಗ್ಗೆ ಅವನಿಗೆ ಅಸಮಾಧಾನ ಉಂಟಾಗುವಂತಹ ರೀತಿಯಲ್ಲಿ ಪ್ರಸ್ತಾಪಿಸುವುದು." "ನಾನು ಪ್ರಸ್ತಾಪಿಸುವಂತಹ ವಿಷಯ ನನ್ನ ಸಹೋದರನಲ್ಲಿದ್ದರೆ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಲಾಯಿತು. ಅದಕ್ಕೆ ಅವರು ಹೇಳಿದರು, "ಅವನಲ್ಲಿ ಆ ವಿಷಯ ಇದ್ದಾಗಲೇ ಅದು ಪರನಿಂದೆ ಎನಿಸಿಕೊಳ್ಳುತ್ತದೆ. ಇಲ್ಲದಿದ್ದರೆ ಅದು ಆರೋಪವೆನಿಸಿಕೊಳ್ಳುತ್ತದೆ." ಒಬ್ಬ ವ್ಯಕ್ತಿಯ ಬೆನ್ನ ಹಿಂದೆ ಅಥವಾ ಅವನ ನಿಧನಾನಂತರ ಅವನ ಕೆಡುಕುಗಳನ್ನು ಪ್ರಸ್ತಾಪಿಸುವ ಅನಿವಾರ್ಯತೆ ಎದುರಾದರೆ ಆ ಅನಿವಾರ್ಯತೆ ಶರೀಅತ್‌ಗೆ ಬದ್ಧವಾಗಿದ್ದರೆ ಮತ್ತು ಪರನಿಂದೆಯ ವಿನಾ ಅದು ಈಡೇರದಿದ್ದರೆ ಹಾಗೂ ಪರನಿಂದೆ ಮಾಡದಿದ್ದರೆ ಅದಕ್ಕಿಂತ ಮಿಗಿಲಾದ ಕೆಡುಕು ತಲೆದೋರುವ ಸಾಧ್ಯತೆಯಿದ್ದರೆ ಅಂತಹ ಸಂದರ್ಭಗಳು ಅದರ ನಿಷೇಧಕ್ಕೆ ಹೊರತಾಗಿವೆ. ಈ ಅಪವಾದವನ್ನು ಪ್ರವಾದಿವರ್ಯರು(ಸ) ತಾತ್ವಿಕವಾಗಿ ಹೀಗೆ ವಿವರಿಸಿದ್ದಾರೆ, "ಯಾವುದೇ ಮುಸ್ಲಿಮನ ಘನತೆಯ ಮೇಲೆ ಅನ್ಯಾಯವಾಗಿ ಆಕ್ರಮಣ ನಡೆಸುವುದು ಅತ್ಯಂತ ಹೇಯ ಅತಿಕ್ರಮವಾಗಿದೆ". ಇಲ್ಲಿ 'ಅನ್ಯಾಯವಾಗಿ' ಎಂಬ ಶರತ್ತು ಒಡ್ಡಲಾಗಿರುವುದು 'ನ್ಯಾಯೋಚಿತ'ವಾಗಿ ಹಾಗೆ ಮಾಡುವುದು ಧರ್ಮಸಮ್ಮತವೆಂದು ಸೂಚಿಸುತ್ತದೆ. ಉದಾಹರಣೆಗೆ ಶೋಷಕನ ಬಗ್ಗೆ ಶೋಷಿತನ ದೂರು. ಶೋಷಣೆಯಿಂದ ಮುಕ್ತಗೊಳಿಸಲು ಏನನ್ನಾದರೂ ಮಾಡಬಹುದೆಂಬ ನಿರೀಕ್ಷೆಯಿರುವ ಯಾರ ಮುಂದೆ ಬೇಕಾದರೂ ಅವನು ದೂರಿಕೊಳ್ಳಬಹುದು. ಸುಧಾರಣೆಯ ಉದ್ದೇಶದಿಂದ ಯಾವುದೇ ವ್ಯಕ್ತಿ ಅಥವಾ ಸಮೂಹದ ಕೆಡುಕುಗಳನ್ನು, ಅದನ್ನು ದೂರೀಕರಿಸಲು ಏನನ್ನಾದರೂ ಮಾಡಬಹುದೆಂದು ನಿರೀಕ್ಷೆಯಿರುವ ಜನರ ಮುಂದೆ ಪ್ರಸ್ತಾಪಿಸಬಹುದು. ಧರ್ಮವಿಧಿ ಕೇಳುವ ಉದ್ದೇಶದಿಂದ ಯಾವುದಾದರೂ ಮುಫ್ತಿಯ ಮುಂದೆ ಯಾವುದೇ ವ್ಯಕ್ತಿಯ ದುಷ್ಕಾರ್ಯಗಳನ್ನು ಪ್ರಸ್ತಾಪಿಸಬಹುದು. ಯಾವುದಾದರೂ ವ್ಯಕ್ತಿಯ ಕೇಡಿನಿಂದ ಸುರಕ್ಷಿತವಾಗಿರಲು ಜನರಿಗೆ ಆ ವ್ಯಕ್ತಿಯ ಕೇಡಿನ ಬಗ್ಗೆ ಎಚ್ಚರಿಕೆ ನೀಡಬಹುದು. ಧರ್ಮಭ್ರಷ್ಟತೆ ಮತ್ತು ದುರಾಚಾರಗಳನ್ನು ಹರಡುತ್ತಿರುವ, ನವೀನಾಚಾರ ಮತ್ತು ಪಥಭ್ರಷ್ಟತೆಗಳನ್ನು ಪ್ರಚುರ ಪಡಿಸುತ್ತಿರುವ ಅಥವಾ ದೇವನ ಸೃಷ್ಟಿಗಳನ್ನು ಧರ್ಮರಾಹಿತ್ಯ ಮತ್ತು ಅಕ್ರಮ ಗೊಂದಲಗಳಲ್ಲಿ ಸಿಲುಕಿಸುತ್ತಿರುವವರ ವಿರುದ್ಧ ಬಹಿರಂಗವಾಗಿ ಸ್ವರವೆಬ್ಬಿಸಬಹುದು.

12. ಹಿಂದಾಡುವುದನ್ನು ಇಲ್ಲಿ ಮೃತ ಸಹೋದರನ ಮಾಂಸ ತಿನ್ನುವುದಕ್ಕೆ ಹೋಲಿಸಲಾಗಿದೆ. ಏಕೆಂದರೆ ಯಾರ ಬಗ್ಗೆ ಅವನ ಅನುಪಸ್ಥಿತಿಯಲ್ಲಿ ನಿಂದಿಸಲಾಗುತ್ತದೋ ಆ ಬಡಪಾಯಿ ಯಾರು ಎಲ್ಲಿ ತನ್ನ ಮಾನಮರ್ಯಾದೆಯ ಮೇಲೆ ದಾಳಿ ನಡೆಸುತ್ತಿದ್ದಾನೆ ಎಂಬ ಬಗ್ಗೆ ಅಜ್ಞನಾಗಿರುತ್ತಾನೆ.

ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯ ಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರ ಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು.[13] ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.

وَّ اُنْثٰى وَجَعَلْنٰكُمْ شُعُوْبًا وَّقَبَآئِلَ لِتَعَارَفُوْا ؕ اِنَّ اَكْرَمَكُمْ عِنْدَ اللّٰهِ اَتْقٰىكُمْ ؕ اِنَّ اللّٰهَ عَلِيْمٌ خَبِيْرٌ ﴿۱۳﴾

14. ಈ ಗ್ರಾಮೀಣ ಅರಬರು, "ನಾವು ವಿಶ್ವಾಸವಿರಿಸಿಕೊಂಡೆವು" ಎನ್ನುತ್ತಾರೆ.[14] ಅವರೊಡನೆ ಹೇಳಿರಿ; ನೀವು ವಿಶ್ವಾಸವಿರಿಸಲಿಲ್ಲ, ವಾಸ್ತವದಲ್ಲಿ, "ನಾವು ಶರಣಾಗತರಾದೆವು" ಎಂದು ನೀವು ಹೇಳ ಬೇಕು. ಸತ್ಯವಿಶ್ವಾಸವು ಇನ್ನೂ ನಿಮ್ಮ ಹೃದಯಗಳಲ್ಲಿ ಪ್ರವೇಶಿಸಿಲ್ಲ. ನೀವು ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡಿದರೆ, ಅವನು ನಿಮ್ಮ ಕರ್ಮಗಳ ಪ್ರತಿಫಲದಲ್ಲಿ ಸ್ವಲ್ಪವೂ ಕಡಿತಗೊಳಿಸಲಾರನು. ನಿಶ್ಚಯವಾಗಿಯೂ ಅಲ್ಲಾಹನು ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

قَالَتِ الْاَعْرَابُ اٰمَنَّا ؕ قُلْ لَّمْ تُؤْمِنُوْا وَلٰكِنْ قُوْلُوْۤا اَسْلَمْنَا وَلَمَّا يَدْخُلِ الْاِيْمَانُ فِيْ قُلُوْبِكُمْ ؕ وَاِنْ تُطِيْعُوا اللّٰهَ وَرَسُوْلَهٗ لَا يَلِتْكُمْ مِّنْ اَعْمَالِكُمْ شَيْـًٔا ؕ اِنَّ اللّٰهَ غَفُوْرٌ رَّحِيْمٌ ﴿۱۴﴾

15. ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿದ್ದ ವರು, ಆ ಬಳಿಕ ಸ್ವಲ್ಪವೂ ಸಂಶಯಪಡದವರು ಮತ್ತು ತಮ್ಮ ಸಂಪತ್ತುಗಳಿಂದಲೂ ಶರೀರಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ

اِنَّمَا الْمُؤْمِنُوْنَ الَّذِيْنَ اٰمَنُوْا بِاللّٰهِ وَرَسُوْلِهٖ ثُمَّ لَمْ يَرْتَابُوْا وَجٰهَدُوْا

13. ಹಿಂದಿನ ಸೂಕ್ತಗಳಲ್ಲಿ ಮುಸ್ಲಿಮ್ ಸಮಾಜವನ್ನು ಕೆಡುಕಿನಿಂದ ಸುರಕ್ಷಿತವಿರಿಸಲಿಕ್ಕಾಗಿ ಅವಶ್ಯವಿರುವ ನಿರ್ದೇಶನಗಳನ್ನು ನೀಡಲಾಗಿದೆ. ಈ ಸೂಕ್ತದಲ್ಲಿ ಸಮಸ್ತ ಮಾನವಕುಲವನ್ನು ಉದ್ದೇಶಿಸಿ, ಜಗತ್ತಿನಲ್ಲಿ ಸದಾ ವಿಶ್ವವ್ಯಾಪಿಯಾದ ಕ್ಷೋಭೆಗೆ ಕಾರಣವಾದ ಮಹಾನ್ ಪಥಭ್ರಷ್ಟತೆಯನ್ನು ತಿದ್ದಲಾಗಿದೆ. ಅರ್ಥಾತ್, ವಂಶ, ವರ್ಣ, ಭಾಷೆ, ರಾಷ್ಟ್ರ ಮತ್ತು ಜನಾಂಗದ ಪಕ್ಷಪಾತ. ಈ ಸಂಕ್ಷಿಪ್ತ ಸೂಕ್ತದಲ್ಲಿ ಅಲ್ಲಾಹನು ಸಮಸ್ತ ಮಾನವಕುಲವನ್ನುದ್ದೇಶಿಸಿ ಮೂರು ಮೂಲಭೂತ ವಾಸ್ತವಿಕತೆಗಳನ್ನು ವಿವರಿಸಿದ್ದಾನೆ. ಮೊದಲನೆಯದಾಗಿ ನಿಮ್ಮೆಲ್ಲರ ಮೂಲ ಒಂದೇ ಆಗಿದೆ. ಒಂದೇ ಸ್ತ್ರೀ ಮತ್ತು ಒಂದೇ ಪುರುಷನ ಮೂಲಕ ಸಮಸ್ತ ಮಾನವಕುಲ ಅಸ್ತಿತ್ವಕ್ಕೆ ಬಂದಿದೆ. ಇಂದು ಜಗತ್ತಿನಾದ್ಯಂತ ಹರಡಿರುವ ನಿಮ್ಮ ಜನಾಂಗಗಳೆಲ್ಲವೂ ಮೂಲತಃ ಒಂದೇ ತಂದೆ-ತಾಯಿಯ ಮೂಲಕ ಆರಂಭವಾದ ಜನಾಂಗದ ಶಾಖೆಗಳಾಗಿವೆ. ಎರಡನೆಯದಾಗಿ ಮೂಲದಲ್ಲಿ ನೀವೆಲ್ಲರೂ ಒಂದೇ ಆಗಿದ್ದರೂ ಅನೇಕ ವಂಶ ಮತ್ತು ಗೋತ್ರಗಳಾಗಿ ವಿಭಜನೆಗೊಂಡಿರುವುದೂ ಅತ್ಯಂತ ಸ್ವಾಭಾವಿಕ ವಿಷಯವಾಗಿದೆ. ಆದರೆ ಅದರ ಆಧಾರದಲ್ಲಿ ಉಚ್ಚ-ನೀಚ, ಮೇಲು-ಕೀಳು, ಶ್ರೇಷ್ಠ-ಅಧಮ ಮುಂತಾದ ಭೇದಗಳನ್ನು ಕಲ್ಪಿಸುವುದು, ಒಂದು ಜನಾಂಗ ಇನ್ನೊಂದರ ಬಗ್ಗೆ ಶ್ರೇಷ್ಠತೆಯನ್ನು ಮೆರೆಯುವುದು, ಒಂದು ವರ್ಣದ ಜನರು ಇನ್ನೊಂದು ವರ್ಣದ ಜನರನ್ನು ನೀಚನೆಂದು ಪರಿಗಣಿಸುವುದು, ಒಂದು ಜನಾಂಗ ಇನ್ನೊಂದಕ್ಕಿಂತ ಮೇಲ್ಮೆಯನ್ನು ವಾದಿಸುವುದು- ಇವಾವುದೂ ಈ ಸ್ವಾಭಾವಿಕ ಅಂತರದ ಬೇಡಿಕೆಗಳಲ್ಲ. ಸೃಷ್ಟಿಕರ್ತನು ಮಾನವ ಸಮೂಹವನ್ನು ವಂಶ ಮತ್ತು ಗೋತ್ರಗಳಲ್ಲಿ ವಿಭಜನೆ ಮಾಡಿರುವುದು ಅವರ ನಡುವೆ ಪರಸ್ಪರ ಸಹಕಾರ ಮತ್ತು ಪರಿಚಯಕ್ಕಾಗಿ ಇರುವ ಸ್ವಾಭಾವಿಕ ಸ್ವರೂಪ ಇದುವೇ ಆಗಿರುವುದರಿಂದಾಗಿದೆ. ಮೂರನೆಯದಾಗಿ ಮಾನವ-ಮಾನವರ ನಡುವೆ ಶ್ರೇಷ್ಠತೆ ಮತ್ತು ಮೇಲ್ಮೆಗೆ ಯಾವುದೇ ಆಧಾರವಿದ್ದರೆ ಅದು ನೈತಿಕ ಮೇಲ್ಮೆ ಮಾತ್ರವಾಗಿದೆ.

14. ಅರ್ಥಾತ್- ಬದವೀಗಳೆಲ್ಲರೂ ಎಂದಲ್ಲ. ಬದಲಾಗಿ ಇಲ್ಲಿ ಬದವೀಗಳ ಪೈಕಿಯ ಗುಂಪುಗಳನ್ನು ಮಾತ್ರ ಪ್ರಸ್ತಾವಿಸಲಾಗುತ್ತದೆ. ಅವರು ಹೆಚ್ಚುತ್ತಿರುವ ಮುಸ್ಲಿಮರ ಶಕ್ತಿಯನ್ನು ಕಂಡು, ನಾವು ಮುಸ್ಲಿಮರ ಹೊಡೆತದಿಂದಲೂ ಸುರಕ್ಷಿತವಾಗಿರುವೆವು. ಅಂತೆಯೇ ಇಸ್ಲಾಮಿನ ವಿಜಯಗಳಿಂದಲೂ ಪ್ರಯೋಜನ ಪಡೆಯುವೆವು ಎಂಬ ಭಾವನೆಯಿಂದಲೇ ಮುಸ್ಲಿಮರಾಗಿದ್ದರು. ಅವರು ವಾಸ್ತವದಲ್ಲಿ ಮನಸಾರೆ ಸತ್ಯವಿಶ್ವಾಸ ಸ್ವೀಕರಿಸಿರಲಿಲ್ಲ. ಕೇವಲ ನಾಲಗೆಯಿಂದ ಕರಾರು ಮಾಡುವ ಮೂಲಕ ಅವರು ಸ್ವಾರ್ಥಕ್ಕಾಗಿ ಮುಸ್ಲಿಮರಲ್ಲಿ ಶಾಮೀಲಾಗಿದ್ದರು.

ಹೋರಾಡಿದವರೇ ವಾಸ್ತವದಲ್ಲಿ ಸತ್ಯವಿಶ್ವಾಸಿಗಳು- ಅವರೇ ಸತ್ಯವಂತರು.

بِأَمْوَالِهِمْ وَأَنفُسِهِمْ فِي سَبِيلِ اللَّهِ ۚ أُولَٰئِكَ هُمُ الصَّادِقُونَ ﴿١٥﴾

16. ಸಂದೇಶವಾಹಕರೇ, (ತಾವು ಸತ್ಯವಿಶ್ವಾಸಿಗಳೆಂದು ಸಾರಿಕೊಳ್ಳುತ್ತಿರುವವರೊಡನೆ) ಹೇಳಿರಿ, ನೀವೇನು ಅಲ್ಲಾಹನಿಗೆ ನಿಮ್ಮ ಧರ್ಮದ ಕುರಿತು ತಿಳಿಸುತ್ತಿರುವಿರಾ? ಅಲ್ಲಾಹನಂತೂ ಭೂಮಿ-ಆಕಾಶಗಳ ಸಕಲ ವಿಷಯಗಳನ್ನೂ ಅರಿತಿರುತ್ತಾನೆ ಮತ್ತು ಅವನು ಸಕಲ ವಿಷಯಗಳ ಜ್ಞಾನವುಳ್ಳವನಾಗಿರುತ್ತಾನೆ.

قُلْ أَتُعَلِّمُونَ اللَّهَ بِدِينِكُمْ وَاللَّهُ يَعْلَمُ مَا فِي السَّمَاوَاتِ وَمَا فِي الْأَرْضِ ۚ وَاللَّهُ بِكُلِّ شَيْءٍ عَلِيمٌ ﴿١٦﴾

17. ತಾವು ಇಸ್ಲಾಮ್ ಸ್ವೀಕರಿಸಿಕೊಂಡಿದ್ದೇವೆನ್ನುತ್ತ (ಇವರು) ನಿಮ್ಮ ಮೇಲೆ ಉಪಕಾರ ಭಾರವನ್ನಿರಿಸುತ್ತಾರೆ. ಇವರೊಡನೆ ಹೇಳಿರಿ- ನಿಮ್ಮ ಇಸ್ಲಾಮಿನ ಉಪಕಾರ ಭಾರವನ್ನು ನನ್ನ ಮೇಲಿರಿಸಬೇಡಿರಿ. ವಾಸ್ತವದಲ್ಲಿ (ಸತ್ಯವಿಶ್ವಾಸಿಗಳೆಂದು ಹೇಳಿಕೊಳ್ಳುತ್ತಿರುವುದರಲ್ಲಿ) ನೀವು ಸತ್ಯವಂತರಾಗಿದ್ದರೆ ನಿಮಗೆ ಸತ್ಯವಿಶ್ವಾಸದ ದಾರಿತೋರಿಸಿದ್ದಕ್ಕಾಗಿ ಅಲ್ಲಾಹನು ನಿಮ್ಮ ಮೇಲೆ ತನ್ನ ಉಪಕಾರ ಭಾರವನ್ನಿರಿಸುತ್ತಾನೆ.

يَمُنُّونَ عَلَيْكَ أَنْ أَسْلَمُوا ۖ قُل لَّا تَمُنُّوا عَلَيَّ إِسْلَامَكُم ۖ بَلِ اللَّهُ يَمُنُّ عَلَيْكُمْ أَنْ هَدَاكُمْ لِلْإِيمَانِ إِن كُنتُمْ صَادِقِينَ ﴿١٧﴾

18. ನಿಶ್ಚಯವಾಗಿಯೂ ಅಲ್ಲಾಹನು ಭೂಮಿ-ಆಕಾಶಗಳ ಪ್ರತಿಯೊಂದು ರಹಸ್ಯದ ಜ್ಞಾನವುಳ್ಳವನಾಗಿದ್ದಾನೆ ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅವನು ವೀಕ್ಷಿಸುತ್ತಿದ್ದಾನೆ.

إِنَّ اللَّهَ يَعْلَمُ غَيْبَ السَّمَاوَاتِ وَالْأَرْضِ ۚ وَاللَّهُ بَصِيرٌ بِمَا تَعْمَلُونَ ﴿١٨﴾

---






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಕಾಫ್. ಶ್ರೇಷ್ಠವಾದ ಕುರ್‌ಆನಿನಾಣೆ.

قٓ ۚ وَالْقُرْاٰنِ الْمَجِيْدِ ①

2. ವಾಸ್ತವದಲ್ಲಿ ಓರ್ವ ಎಚ್ಚರಿಕೆ ನೀಡುವವನು ಸ್ವತಃ ಇವರೊಳಗಿಂದಲೇ ಇವರ ಬಳಿಗೆ ಬಂದುದು ಇವರಿಗೆ ಸೋಜಿಗವೆನಿಸಿತು.[1] ತರುವಾಯ ಸತ್ಯನಿಷೇಧಿಗಳು ಹೇಳತೊಡಗಿದರು, "ಇದು ಸೋಜಿಗದ ವಿಷಯ-

بَلْ عَجِبُوْۤا اَنْ جَآءَهُمْ مُّنْذِرٌ مِّنْهُمْ فَقَالَ الْكٰفِرُوْنَ هٰذَا شَیْءٌ عَجِیْبٌ ②

3. ನಾವು ಸತ್ತು ಹೋದ ಮೇಲೆ ಹಾಗೂ ಮಣ್ಣಾಗಿ ಹೋದ ಬಳಿಕ? (ಪುನಃ ಎಬ್ಬಿಸಲ್ಪಡುವೆವೇ?) ಈ ಮರಳುವಿಕೆಯು ಬುದ್ಧಿಗೆ ಮೀರಿದ ವಿಷಯವಾಗಿದೆ."[2]

ءَاِذَا مِتْنَا وَكُنَّا تُرَابًا ۚ ذٰلِكَ رَجْعٌۢ بَعِيْدٌ ③

4. ಭೂಮಿಯು ಇವರ ಶರೀರದಿಂದ ಏನನ್ನೆಲ್ಲ ತಿಂದು ಬಿಡುತ್ತದೆಂದು ನಮಗೆ ಗೊತ್ತಿದೆ. ನಮ್ಮ ಬಳಿಯಲ್ಲೊಂದು ಗ್ರಂಥವಿದೆ. ಅದರಲ್ಲಿ ಎಲ್ಲವೂ ಸುರಕ್ಷಿತವಿದೆ.

قَدْ عَلِمْنَا مَا تَنْقُصُ الْاَرْضُ مِنْهُمْ ۚ وَعِنْدَنَا كِتٰبٌ حَفِيْظٌ ④

5. ವಾಸ್ತವದಲ್ಲಿ ಸತ್ಯವು ಇವರ ಬಳಿಗೆ ಬಂದಾಗ ಇವರು ಆಗಲೇ ಅದನ್ನು ಸ್ಪಷ್ಟವಾಗಿ ನಿರಾಕರಿಸಿಬಿಟ್ಟರು. ಆದ್ದರಿಂದಲೇ ಇವರೀಗ ಪೇಚಿಗೆ ಸಿಲುಕಿಕೊಂಡಿರುವರು.

بَلْ كَذَّبُوْا بِالْحَقِّ لَمَّا جَآءَهُمْ فَهُمْ فِیْۤ اَمْرٍ مَّرِیْجٍ ⑤

---

1. ಅರ್ಥಾತ್- ಮಕ್ಕಾ ನಿವಾಸಿಗಳು ಪ್ರವಾದಿವರ್ಯರ(ಸ) ಪ್ರವಾದಿತ್ವವನ್ನು ಯಾವುದೇ ಸೂಕ್ತ ಬುನಾದಿಯ ಆಧಾರದಲ್ಲಿ ನಿರಾಕರಿಸಿಲ್ಲ. ಬದಲಾಗಿ ಅವರಂತಹುದೇ ಒಬ್ಬ ಮಾನವ ಮತ್ತು ಅವರ ಜನಾಂಗಕ್ಕೆ ಸೇರಿದ ಒಬ್ಬ ವ್ಯಕ್ತಿ ದೇವನ ವತಿಯಿಂದ ಎಚ್ಚರಿಕೆ ಕೊಡುವವನಾಗಿ ಬರುವುದು ಅವರ ದೃಷ್ಟಿಯಲ್ಲಿ ಅತ್ಯಂತ ಆಶ್ಚರ್ಯಕರ ಸಂಗತಿಯಾಗಿದೆ ಎಂಬ ಅತ್ಯಂತ ಅನುಚಿತವಾದ ಬುನಾದಿಯಿಂದ ಅವರು ಪ್ರವಾದಿತ್ವವನ್ನು ನಿರಾಕರಿಸಿದ್ದಾರೆ.
2. ಇದು ಆ ವ್ಯಕ್ತಿಗಳ ಪಾಲಿನ ಎರಡನೆಯ ಆಶ್ಚರ್ಯದ ಸಂಗತಿ. ಮಾನವನೋರ್ವ ಪ್ರವಾದಿಯಾಗಿ ಬಂದಿದ್ದಾನೆ ಎಂಬುದು ಅವರ ಮೊದಲ ಆಶ್ಚರ್ಯವಾಗಿತ್ತು. ಮಾನವರೆಲ್ಲರೂ ಸತ್ತನಂತರ ಪುನಃ ಸೃಷ್ಟಿಸಲ್ಪಡುವರು ಮತ್ತು ಅವರನ್ನೆಲ್ಲಾ ಒಂದುಗೂಡಿಸಿ ಅಲ್ಲಾಹನ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗುವುದು ಎಂಬುದರಿಂದ ಅವರು ಪುನಃ ಆಶ್ಚರ್ಯಗೊಂಡರು.

6. ಸರಿ, ಇವರೆಂದಾದರೂ ತಮ್ಮ ಮೇಲಿರುವ ಆಕಾಶದ ಕಡೆಗೆ ನೋಡಿಲ್ಲವೇ? ನಾವು ಅದನ್ನು ಹೇಗೆ ನಿರ್ಮಿಸಿದೆವು ಮತ್ತು ಅಲಂಕರಿಸಿದೆವು. ಅದರಲ್ಲಿ ಎಲ್ಲೂ ಬಿರುಕಿಲ್ಲ.

أَفَلَمْ يَنظُرُوٓا إِلَى السَّمَآءِ فَوْقَهُمْ كَيْفَ
بَنَيْنَٰهَا وَزَيَّنَّٰهَا وَمَا لَهَا مِن فُرُوجٍ ۝٦

7. ಭೂಮಿಯನ್ನು ನಾವು ಹಾಸಿದೆವು, ಅದರಲ್ಲಿ ಪರ್ವತಗಳನ್ನು ನಾಟಿದೆವು ಮತ್ತು ಅದರೊಳಗೆ ಎಲ್ಲ ವಿಧದ ನಯನ ಮನೋಹರ ಸಸ್ಯಗಳನ್ನು ಬೆಳೆಸಿದೆವು.

وَالْأَرْضَ مَدَدْنَٰهَا وَأَلْقَيْنَا فِيهَا
رَوَٰسِيَ وَأَنۢبَتْنَا فِيهَا مِن كُلِّ
زَوْجٍۭ بَهِيجٍ ۝٧

8. ಇವೆಲ್ಲವೂ (ಸತ್ಯದ ಕಡೆಗೆ) ಮರಳುವ ಪ್ರತಿಯೊಬ್ಬ ದಾಸನ ಕಣ್ತೆರೆಸುವ ಮತ್ತು ಅವನಿಗೆ ಪಾಠ ಕೊಡುವ ವಸ್ತುಗಳಾಗಿವೆ.

تَبْصِرَةً وَذِكْرَىٰ لِكُلِّ عَبْدٍ مُّنِيبٍ ۝٨

9-10. ನಾವು ಆಕಾಶದಿಂದ ಸುಸಮೃದ್ಧ ನೀರನ್ನಿಳಿಸಿದೆವು. ತರುವಾಯ ಅದರಿಂದ ಉದ್ಯಾನಗಳನ್ನೂ ಕೊಯ್ಲಿನ ಧಾನ್ಯಗಳನ್ನೂ ಫಲಭರಿತ ಗೊಂಚಲುಗಳು ಪದರು ಪದರುಗಳಾಗಿರುವ ಎತ್ತರವಾದ ಖರ್ಜೂರದ ಮರಗಳನ್ನೂ ಸೃಷ್ಟಿಸಿದೆವು.

وَنَزَّلْنَا مِنَ السَّمَآءِ مَآءً مُّبَٰرَكًا
فَأَنۢبَتْنَا بِهِۦ جَنَّٰتٍ وَحَبَّ الْحَصِيدِ ۝٩
وَالنَّخْلَ بَاسِقَٰتٍ لَّهَا طَلْعٌ نَّضِيدٌ ۝١٠

11. ಇದು, ದಾಸರಿಗೆ ಆಹಾರವೊದಗಿಸುವ ಏರ್ಪಾಡು. ಈ ನೀರಿನಿಂದ ನಾವು ಒಂದು ನಿರ್ಜೀವ ನೆಲಕ್ಕೆ ಜೀವದಾನ ಮಾಡುತ್ತೇವೆ. (ಸತ್ತು ಹೋದ ಮಾನವರು ಭೂಮಿಯಿಂದ) ಹೊರ ಬರುವುದೂ ಹೀಗೆಯೇ.

رِّزْقًا لِّلْعِبَادِ ۖ وَأَحْيَيْنَا بِهِۦ بَلْدَةً مَّيْتًا ۚ
كَذَٰلِكَ الْخُرُوجُ ۝١١

12-14. ಇವರಿಗಿಂತ ಮುಂಚೆ ನೂಹರ ಜನಾಂಗವೂ ರಸ್ಸ್‌ನವರೂ ಸಮೂದರೂ ಆದ್‌ರೂ ಫಿರ್‌ಔನನೂ 'ಲೂತ'ರ ಸಹೋದರರೂ ಐಕಃದವರೂ 'ತುಬ್ಬಅ್' ಜನಾಂಗದವರೂ ಸುಳ್ಳಾಗಿಸಿದ್ದಾರೆ. ಎಲ್ಲರೂ ಸಂದೇಶವಾಹಕರನ್ನು ಸುಳ್ಳಾಗಿಸಿದರು. ಕೊನೆಗೆ ನನ್ನ ಎಚ್ಚರಿಕೆಯು ಅವರಿಗೆ ಅನ್ವಯವಾಗಿ ಬಿಟ್ಟಿತು.

كَذَّبَتْ قَبْلَهُمْ قَوْمُ نُوحٍ وَأَصْحَٰبُ
الرَّسِّ وَثَمُودُ ۝١٢
وَعَادٌ وَفِرْعَوْنُ وَإِخْوَٰنُ لُوطٍ ۝١٣
وَأَصْحَٰبُ الْأَيْكَةِ وَقَوْمُ تُبَّعٍ ۚ كُلٌّ
كَذَّبَ الرُّسُلَ فَحَقَّ وَعِيدِ ۝١٤

15. ನಾವೇನು ಪ್ರಥಮ ಬಾರಿ ಸೃಷ್ಟಿಸಿ ಬಳಲಿದ್ದೇವೆಯೇ? ಆದರೂ ಇವರು ಒಂದು ಹೊಸ ಸೃಷ್ಟಿಯ ಬಗ್ಗೆ ಸಂಶಯಗ್ರಸ್ತರಾಗಿದ್ದಾರೆ.

أَفَعَيِينَا بِالْخَلْقِ الْأَوَّلِ ۚ بَلْ هُمْ
فِي لَبْسٍ مِّنْ خَلْقٍ جَدِيدٍ ۝١٥

16. ನಾವು ಮಾನವನನ್ನು ಸೃಷ್ಟಿಸಿದ್ದೇವೆ ಮತ್ತು ನಾವು ಅವನ ಮನಸ್ಸಿನಲ್ಲಿ ಉದ್ಭವಿಸುವ ದುರ್ಭಾವನೆಗಳನ್ನೂ ಬಲ್ಲೆವು. ನಾವು ಅವನ ಕಂಠನಾಡಿಗಿಂತಲೂ ಹೆಚ್ಚು ಅವನಿಗೆ ಸಮೀಪವಿದ್ದೇವೆ.

وَلَقَدْ خَلَقْنَا الْإِنسَٰنَ وَنَعْلَمُ مَا
تُوَسْوِسُ بِهِۦ نَفْسُهُۥ ۖ وَنَحْنُ أَقْرَبُ
إِلَيْهِ مِنْ حَبْلِ الْوَرِيدِ ۝١٦

17. (ಮತ್ತು ನಮ್ಮ ಈ ಪ್ರತ್ಯಕ್ಷ ಜ್ಞಾನ ಮಾತ್ರವಲ್ಲದೆ) ಇಬ್ಬರು ಲೇಖಕರು ಅವನ ಬಲ ಹಾಗೂ ಎಡಭಾಗಗಳಲ್ಲಿ ಕುಳಿತು ಪ್ರತಿಯೊಂದು ವಿಷಯವನ್ನು ದಾಖಲಿಸುತ್ತಿರುವರು.

إِذْ يَتَلَقَّى الْمُتَلَقِّيَانِ عَنِ الْيَمِينِ وَعَنِ الشِّمَالِ قَعِيدٌ ﴿١٧﴾

18. ಅವನ ಬಾಯಿಯಿಂದ ಹೊರಡುವ ಯಾವ ಮಾತು ಕೂಡಾ, ಸದಾ ಸನ್ನದ್ಧನಿರುವ ಒಬ್ಬ ಕಾವಲುಗಾರನಿಂದ ದಾಖಲಿಸಲ್ಪಡದೆ ಇರುವುದಿಲ್ಲ.

مَا يَلْفِظُ مِن قَوْلٍ إِلَّا لَدَيْهِ رَقِيبٌ عَتِيدٌ ﴿١٨﴾

19. ಅದೋ ನೋಡಿರಿ, ಮರಣ ಸಂಕಟವು ಸತ್ಯದೊಂದಿಗೆ ಬಂದು ಬಿಟ್ಟಿತು. ನೀನು ತಪ್ಪಿಸಿಕೊಂಡು ಓಡುತ್ತಿದ್ದುದು ಇದರಿಂದಲೇ!

وَجَاءَتْ سَكْرَةُ الْمَوْتِ بِالْحَقِّ ذَٰلِكَ مَا كُنتَ مِنْهُ تَحِيدُ ﴿١٩﴾

20. ಮತ್ತು ಸೂರ್ (ಕಹಳೆ) ಊದಲ್ಪಟ್ಟಿತು. ಇದುವೇ ನಿನ್ನನ್ನು ಎಚ್ಚರಿಸಲಾಗುತ್ತಿದ್ದ ದಿನ.

وَنُفِخَ فِي الصُّورِ ذَٰلِكَ يَوْمُ الْوَعِيدِ ﴿٢٠﴾

21. ಪ್ರತಿಯೊಬ್ಬನು ಒಬ್ಬ ಅಟ್ಟಿ ತರುವವ ಮತ್ತು ಒಬ್ಬ ಸಾಕ್ಷಿದಾರನ ಜೊತೆ ಬಂದು ಬಿಟ್ಟನು.

وَجَاءَتْ كُلُّ نَفْسٍ مَّعَهَا سَائِقٌ وَشَهِيدٌ ﴿٢١﴾

22. ನೀನು ಇದರ ಬಗ್ಗೆ ಅಲಕ್ಷ್ಯನಾಗಿದ್ದೆ. ನಾವು ನಿನ್ನ ಮುಂದಿದ್ದ ತೆರೆಯನ್ನು ಸರಿಸಿಬಿಟ್ಟೆವು ಮತ್ತು ಇಂದು ನಿನ್ನ ದೃಷ್ಟಿಯು ಬಹಳ ತೀಕ್ಷ್ಣವಿದೆ.[3]

لَّقَدْ كُنتَ فِي غَفْلَةٍ مِّنْ هَٰذَا فَكَشَفْنَا عَنكَ غِطَاءَكَ فَبَصَرُكَ الْيَوْمَ حَدِيدٌ ﴿٢٢﴾

23. ಅವನ ಜೊತೆಗಿದ್ದವನು, "ನನ್ನ ವಶದಲ್ಲಿದ್ದವನು ಇದೋ ಹಾಜರಿದ್ದಾನೆ" ಎಂದು ಹೇಳುವನು.[4]

وَقَالَ قَرِينُهُ هَٰذَا مَا لَدَيَّ عَتِيدٌ ﴿٢٣﴾

24. ಅಪ್ಪಣೆಯಾಯಿತು- "ನರಕಕ್ಕೆ ಎಸೆದು ಬಿಡಿರಿ- ಪ್ರತಿಯೊಬ್ಬ ಕಟ್ಟಾ ಸತ್ಯನಿಷೇಧಿಯನ್ನು-

أَلْقِيَا فِي جَهَنَّمَ كُلَّ كَفَّارٍ عَنِيدٍ ﴿٢٤﴾

25. ಅವನು ಸತ್ಯವನ್ನು ದ್ವೇಷಿಸುತ್ತಿದ್ದನು. ಒಳಿತನ್ನು ತಡೆಯುವವ ನಾಗಿದ್ದನು. ಮೇರೆ ಮೀರುವವನಾಗಿದ್ದನು ಸಂಶಯಗ್ರಸ್ತನಾಗಿದ್ದನು-

مَّنَّاعٍ لِّلْخَيْرِ مُعْتَدٍ مُّرِيبٍ ﴿٢٥﴾

26. ಮತ್ತು ಅಲ್ಲಾಹನೊಂದಿಗೆ ಇತರರನ್ನು ದೇವರಾಗಿ ಮಾಡಿ ಕೊಂಡಿದ್ದನು. ಅವನನ್ನು ಘೋರ ಯಾತನೆಯಲ್ಲಿ ಹಾಕಿಬಿಡಿರಿ."

الَّذِي جَعَلَ مَعَ اللَّهِ إِلَٰهًا آخَرَ فَأَلْقِيَاهُ فِي الْعَذَابِ الشَّدِيدِ ﴿٢٦﴾

3. ಅರ್ಥಾತ್- ಅಲ್ಲಾಹನ ಪ್ರವಾದಿಯು ಅರುಹಿದ್ದೆಲ್ಲವೂ ಅಲ್ಲಿರುವುದನ್ನು ಈಗ ಸ್ವತಃ ನೀವೇ ಕಾಣುತ್ತಿರುವಿರಿ.

4. ಜೊತೆಗಿದ್ದವನು ಎಂದರೆ ಅಟ್ಟಿಸಿ ತರುವ ದೇವಚರವಾಗಿದೆ. ಅದು ದೇವನ ಸನ್ನಿಧಿಗೆ ತಲಪಿ, "ಪ್ರಭು! ನನ್ನ ವಶದಲ್ಲಿದ್ದವನನ್ನು ಇಗೋ ನಿನ್ನ ಮುಂದೆ ಹಾಜರುಪಡಿಸುತ್ತಿದ್ದೇನೆ" ಎಂದು ಹೇಳುವುದು.

5. ಇಲ್ಲಿ ಜೊತೆಗಾರನೆಂದರೆ ಅವಿಧೇಯ ವ್ಯಕ್ತಿಯ ಜತೆಗೆ ಲೋಕದಲ್ಲಿ ಜತೆಗೂಡಿರುವ ಪಿಶಾಚಿಯಾಗಿದೆ.

27. ಅವನ ಜೊತೆಗಾರನು ಹೇಳಿದನು[5]- "ನನ್ನ ಪ್ರಭೂ, ನಾನು ಇವನನ್ನು ವಿದ್ರೋಹಿಯಾಗಿ ಮಾಡಲಿಲ್ಲ. ನಿಜವಾಗಿ ಇವನು ತಾನಾಗಿಯೇ ಅತ್ಯಂತ ನಿಕೃಷ್ಟ ದರ್ಜೆಯ ಪಥಭ್ರಷ್ಟತೆಯಲ್ಲಿ ಬಿದ್ದುಕೊಂಡಿದ್ದನು."

قَالَ قَرِينُهُۥ رَبَّنَا مَآ أَطْغَيْتُهُۥ وَلَٰكِن كَانَ فِى ضَلَٰلٍۭ بَعِيدٍ ﴿٢٧﴾

28. ಉತ್ತರ ಬಂತು - "ನನ್ನ ಸಮ್ಮುಖದಲ್ಲಿ ಜಗಳಾಡಬೇಡಿರಿ. ನಾನು ನಿಮಗೆ ದುಷ್ಪರಿಣಾಮದ ಬಗ್ಗೆ ಮೊದಲೇ ಎಚ್ಚರಿಸಿದ್ದೆ.

قَالَ لَا تَخْتَصِمُوا۟ لَدَىَّ وَقَدْ قَدَّمْتُ إِلَيْكُم بِٱلْوَعِيدِ ﴿٢٨﴾

29. ನನ್ನಲ್ಲಿ ಮಾತು ಬದಲಾಯಿಸಲ್ಪಡುವುದಿಲ್ಲ ಮತ್ತು ನಾನು ನನ್ನ ದಾಸರ ಮೇಲೆ ಅಕ್ರಮವೆಸಗುವವನಲ್ಲ."

مَا يُبَدَّلُ ٱلْقَوْلُ لَدَىَّ وَمَآ أَنَا۠ بِظَلَّٰمٍ لِّلْعَبِيدِ ﴿٢٩﴾

30. ಅಂದು ನಾವು ನರಕದೊಡನೆ- "ನೀನು ತುಂಬಿದೆಯಾ?" ಎಂದು ಕೇಳುವೆವು. ಆಗ ಅದು, "ಇನ್ನಷ್ಟು ಇದೆಯೇ?" ಎಂದು ಕೇಳುವುದು.[6]

يَوْمَ نَقُولُ لِجَهَنَّمَ هَلِ ٱمْتَلَأْتِ وَتَقُولُ هَلْ مِن مَّزِيدٍ ﴿٣٠﴾

31. ಸ್ವರ್ಗವನ್ನು 'ಧರ್ಮನಿಷ್ಠರ' ಸಮೀಪಕ್ಕೆ ತರಲಾಗುವುದು. ಸ್ವಲ್ಪವೂ ದೂರವಿರಲಾರದು.

وَأُزْلِفَتِ ٱلْجَنَّةُ لِلْمُتَّقِينَ غَيْرَ بَعِيدٍ ﴿٣١﴾

32. "ನಿಮಗೆ ವಾಗ್ದಾನವೀಯಲಾಗುತ್ತಿದ್ದ ವಸ್ತು ಇದೇ ಆಗಿದೆ. ಬಹಳಷ್ಟು ಪಶ್ಚಾತ್ತಾಪ ಪಟ್ಟು ಮರಳುತ್ತಿದ್ದ[7] ಮತ್ತು ಬಹಳ ಎಚ್ಚರಿಕೆ ವಹಿಸುತ್ತಿದ್ದ[8] ಪ್ರತಿಯೊಬ್ಬನಿಗಾಗಿ.

هَٰذَا مَا تُوعَدُونَ لِكُلِّ أَوَّابٍ حَفِيظٍ ﴿٣٢﴾

33. ಅವನು ಕಣ್ಣಾರೆ ಕಾಣದೆಯೇ ರಹ್ಮಾನನಿಗೆ ಭಯಪಡುತ್ತಿದ್ದನು, ಒಲಿದ ಹೃದಯದೊಂದಿಗೆ ಬಂದಿರುವನು.

مَّنْ خَشِىَ ٱلرَّحْمَٰنَ بِٱلْغَيْبِ وَجَآءَ بِقَلْبٍ مُّنِيبٍ ﴿٣٣﴾

34. ಶಾಂತಿಯೊಂದಿಗೆ ಸ್ವರ್ಗವನ್ನು ಪ್ರವೇಶಿಸಿರಿ" ಅದು ಶಾಶ್ವತ ಜೀವನದ ದಿನವಾಗಿರುವುದು.

ٱدْخُلُوهَا بِسَلَٰمٍ ذَٰلِكَ يَوْمُ ٱلْخُلُودِ ﴿٣٤﴾

35. ಅಲ್ಲಿ ಅವರಿಗಾಗಿ ಅವರು ಬಯಸಿದ್ದೆಲ್ಲವೂ ಇರುವುದು ಮತ್ತು ಅವರಿಗಾಗಿ ಅದಕ್ಕಿಂತಲೂ ಬಹಳಷ್ಟು ಹೆಚ್ಚು ನಮ್ಮಲ್ಲಿದೆ.

لَهُم مَّا يَشَآءُونَ فِيهَا وَلَدَيْنَا مَزِيدٌ ﴿٣٥﴾

---

6. ಇದಕ್ಕೆ ಎರಡು ಅರ್ಥಗಳಿರಲು ಸಾಧ್ಯವಿದೆ. ಮೊದಲನೆಯದಾಗಿ, "ಇನ್ನಷ್ಟು ವ್ಯಕ್ತಿಗಳನ್ನು ಸೇರಿಸಲು ನನ್ನಲ್ಲಿ ಅವಕಾಶವಿಲ್ಲ" ಎರಡನೆಯದಾಗಿ, "ಇನ್ನೆಷ್ಟು ಅಪರಾಧಿಗಳಿದ್ದರೂ ಅವರನ್ನು ಕರೆತನ್ನಿರಿ."
7. ಆಜ್ಞೋಲ್ಲಂಘನೆ ಮತ್ತು ಸ್ವೇಚ್ಛಾಚಾರದ ಮಾರ್ಗವನ್ನು ಬಿಟ್ಟು ಅನುಸರಣೆ ಮತ್ತು ಅಲ್ಲಾಹನ ಸಂಪ್ರೀತಿಯ ಮಾರ್ಗವನ್ನು ಪಾಲಿಸುವವನು, ಅಲ್ಲಾಹನನ್ನು ಅತಿ ಹೆಚ್ಚು ಸ್ಮರಿಸುವವನು ಮತ್ತು ತನ್ನೆಲ್ಲಾ ವ್ಯವಹಾರಗಳಲ್ಲಿ ಅವನೆಡೆಗೆ ಮರಳುವವನು ಎಂಬುದು ಇದರ ಅರ್ಥವಾಗಿದೆ.
8. ಅರ್ಥಾತ್- ಅಲ್ಲಾಹನ ಮೇರೆಗಳು, ಕರ್ತವ್ಯಗಳು, ವಿಧಿನಿಷೇಧಗಳು ಮತ್ತು ತನ್ನ ವಶಕ್ಕೊಪ್ಪಿಸಲಾದ ಅವನ ಅಮಾನತ್ತುಗಳನ್ನು ಸಂರಕ್ಷಿಸುವವನು, ಪ್ರತಿಸಂದರ್ಭದಲ್ಲೂ ತಾನು ಮಾತು-ಕೃತಿಯಲ್ಲಿ ಪ್ರಭುವಿನ ಆಜ್ಞೋಲ್ಲಂಘನೆ ಮಾಡುತ್ತಿರುವೆನೋ ಎಂದು ಆತ್ಮವಿಮರ್ಶೆ ಮಾಡಿಕೊಳ್ಳುತ್ತಿರುವವನು.

| | |
|---|---|
| 36. ನಾವು ಇವರಿಗಿಂತ ಮುಂಚೆ ಅನೇಕ ಜನಾಂಗಗಳನ್ನು ನಾಶಗೊಳಿಸಿದ್ದೇವೆ. ಅವು ಇವರಿಗಿಂತ ತುಂಬಾ ಬಲಶಾಲಿಗಳಾಗಿದ್ದುವು ಮತ್ತು ಅವರು ಜಗತ್ತಿನ ದೇಶಗಳನ್ನು ಜಾಲಾಡಿದ್ದರು. ಮತ್ತೇನು ಅವರು ಯಾವುದಾದರೂ ಅಭಯ ಸ್ಥಾನವನ್ನು ಪಡೆದರೇ? | وَكَمْ اَهْلَكْنَا قَبْلَهُمْ مِّنْ قَرْنٍ هُمْ اَشَدُّ مِنْهُمْ بَطْشًا فَنَقَّبُوْا فِى الْبِلَادِؕ هَلْ مِنْ مَّحِيْصٍ ﴿٣٦﴾ |
| 37. ಹೃದಯವುಳ್ಳ ಅಥವಾ ಲಕ್ಷ್ಯಕೊಟ್ಟು ಮಾತು ಕೇಳುವ ಪ್ರತಿಯೊಬ್ಬನಿಗೆ ಈ ಇತಿಹಾಸದಲ್ಲಿ ಬೋಧಪ್ರದ ಪಾಠವಿದೆ. | اِنَّ فِىْ ذٰلِكَ لَذِكْرٰى لِمَنْ كَانَ لَهٗ قَلْبٌ اَوْ اَلْقَى السَّمْعَ وَهُوَ شَهِيْدٌ ﴿٣٧﴾ |
| 38. ನಾವು ಭೂಮಿ - ಆಕಾಶಗಳನ್ನೂ ಅವುಗಳ ನಡುವೆ ಇರುವ ಸಕಲ ವಸ್ತುಗಳನ್ನೂ ಆರು ದಿನಗಳಲ್ಲಿ ಸೃಷ್ಟಿಸಿದೆವು. ನಮಗೇನೂ ದಣಿವಾಗಲಿಲ್ಲ. | وَلَقَدْ خَلَقْنَا السَّمٰوٰتِ وَالْاَرْضَ وَمَا بَيْنَهُمَا فِىْ سِتَّةِ اَيَّامٍ ۖ وَّمَا مَسَّنَا مِنْ لُّغُوْبٍ ﴿٣٨﴾ |
| 39. ಆದುದರಿಂದ ಸಂದೇಶವಾಹಕರೇ, ಇವರಾಡುವ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸೂರ್ಯೋದಯಕ್ಕೆ ಮುಂಚೆಯೂ ಸೂರ್ಯಾಸ್ತಕ್ಕೆ ಮುಂಚೆಯೂ ನಿಮ್ಮ ಪ್ರಭುವಿನ ಪ್ರಶಂಸೆ ಮಾಡುತ್ತಾ ಅವನನ್ನು ಜಪಿಸಿರಿ- | فَاصْبِرْ عَلٰى مَا يَقُوْلُوْنَ وَسَبِّحْ بِحَمْدِ رَبِّكَ قَبْلَ طُلُوْعِ الشَّمْسِ وَقَبْلَ الْغُرُوْبِ ﴿٣٩﴾ |
| 40. ಮತ್ತು ಪುನಃ ರಾತ್ರಿ ವೇಳೆಯೂ ಸಾಷ್ಟಾಂಗವೆರಗಿದ ಬಳಿಕವೂ ಅವನನ್ನು ಜಪಿಸಿರಿ.[9] | وَمِنَ الَّيْلِ فَسَبِّحْهُ وَاَدْبَارَ السُّجُوْدِ ﴿٤٠﴾ |
| 41. ಕೇಳಿರಿ! ಘೋಷಿಸುವವನು (ಪ್ರತಿಯೊಬ್ಬನ) ಸಮೀಪದಿಂದಲೇ ಘೋಷಿಸುವ ದಿನ[10]- | وَاسْتَمِعْ يَوْمَ يُنَادِ الْمُنَادِ مِنْ مَّكَانٍ قَرِيْبٍ ﴿٤١﴾ |
| 42. ಮತ್ತು ಲೋಕಾಂತ್ಯದ ಕಹಳೆಯನ್ನು ಎಲ್ಲರೂ ಸರಿಯಾಗಿ ಕೇಳುತ್ತಿರುವ ದಿನವು ಭೂಮಿಯಿಂದ ಮೃತರು ಹೊರಬರುವ ದಿನವಾಗಿರುವುದು. | يَّوْمَ يَسْمَعُوْنَ الصَّيْحَةَ بِالْحَقِّ ؕ ذٰلِكَ يَوْمُ الْخُرُوْجِ ﴿٤٢﴾ |
| 43. ನಾವೇ ಜೀವದಾನ ಮಾಡುತ್ತೇವೆ ಮತ್ತು ನಾವೇ ಮರಣ ಕೊಡುತ್ತೇವೆ. | اِنَّا نَحْنُ نُحْىٖ وَنُمِيْتُ وَاِلَيْنَا الْمَصِيْرُ ﴿٤٣﴾ |

9. ಪ್ರಭುವಿನ ಪ್ರಶಂಸೆ ಮಾಡುತ್ತಾ ಅವನನ್ನು ಜಪಿಸುವುದೆಂದರೆ ನಮಾಝ್ ಮಾಡುವುದಾಗಿದೆ. ಸೂರ್ಯೋದಯಕ್ಕೆ ಮೊದಲಿನ ನಮಾಝ್ ಫಜ್ರ್ ನಮಾಝ್ ಆಗಿದೆ. ಸೂರ್ಯಾಸ್ತಮಾನಕ್ಕೆ ಮೊದಲು ಎರಡು ನಮಾಝ್‌ಗಳಿವೆ. ಒಂದು ಝುಹರ್ ಮತ್ತೊಂದು ಅಸರ್. ರಾತ್ರಿಯ ವೇಳೆ ಮಗ್ರಿಬ್ ಮತ್ತು ಇಷಾ ನಮಾಝ್‌ಗಳಿವೆ. ಮೂರನೆಯದಾಗಿ ತಹಜ್ಜುದ್ ನಮಾಝ್ ಕೂಡ ರಾತ್ರಿಯ ತಸ್ಬೀಹ್‌ನಲ್ಲಿ ಸೇರಿದೆ.

10. ಅರ್ಥಾತ್- ಯಾರು ಎಲ್ಲಿ ಸತ್ತು ಬಿದ್ದಿರುವನೋ ಅಥವಾ ಲೋಕದಲ್ಲಿ ಎಲ್ಲಿ ಅವನು ನಿಧನನಾಗಿರುವನೋ ಅಲ್ಲೇ ಅವನಿಗೆ, "ಎದ್ದೇಳು, ನಡೆ ನಿನ್ನ ಪ್ರಭುವಿನೆಡೆಗೆ, ನಿನ್ನ ಲೆಕ್ಕ ಸಮರ್ಪಣೆಗಾಗಿ" ಎಂಬ ದೇವವಾಣಿ ಕೇಳಿಸುವುದು. ಈ ವಾಣಿ ಹೇಗಿರುವುದೆಂದರೆ ಭೂಮುಖದ ಪ್ರತಿಯೊಂದು ಕ್ಷೇತ್ರದಲ್ಲಿ ಅದನ್ನು ಕೇಳುವ ಪ್ರತಿಯೊಬ್ಬನಿಗೂ ಕರೆಯುವವನು ಎಲ್ಲೋ ಹತ್ತಿರದಿಂದಲೇ ಕರೆದಿದ್ದಾನೆ ಎಂದು ಭಾಸವಾಗುವುದು.

44. ಭೂಮಿಯು ಬಿರಿದು ಜನರು ಅದರೊಳಗಿನಿಂದ ಹೊರಟು ವೇಗವಾಗಿ ಓಡುತ್ತಿರುವ ಆ ದಿನ ಎಲ್ಲರೂ ನಮ್ಮ ಕಡೆಗೇ ಮರಳಬೇಕಾಗಿದೆ. ಈ ಹಶ್ರ್ (ಒಟ್ಟುಗೂಡಿಸುವಿಕೆಯು) ನಮಗೆ ಅತಿ ಸುಲಭ.

يَوْمَ تَشَقَّقُ الْأَرْضُ عَنْهُمْ سِرَاعًا ۚ ذَٰلِكَ حَشْرٌ عَلَيْنَا يَسِيرٌ ﴿٤٤﴾

45. ಸಂದೇಶವಾಹಕರೇ, ಇವರು ಕಟ್ಟುತ್ತಿರುವ ಮಾತುಗಳನ್ನು ನಾವು ಚೆನ್ನಾಗಿ ಬಲ್ಲೆವು. ಇವರನ್ನು ಬಲಾತ್ಕಾರವಾಗಿ ಒಪ್ಪುವಂತೆ ಮಾಡುವುದು ನಿಮ್ಮ ಕೆಲಸವಲ್ಲ. ನೀವು ನನ್ನ ಎಚ್ಚರಿಕೆಯ ಭಯವಿರುವವರಿಗೆ ಈ ಕುರ್‌ಆನಿನ ಮೂಲಕ ಉಪದೇಶ ನೀಡಿರಿ.

نَحْنُ أَعْلَمُ بِمَا يَقُولُونَ ۖ وَمَا أَنتَ عَلَيْهِم بِجَبَّارٍ ۖ فَذَكِّرْ بِالْقُرْآنِ مَن يَخَافُ وَعِيدِ ﴿٤٥﴾

---







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1-4. ಧೂಳೆಬ್ಬಿಸುವ, ಜಲಭರಿತ ಮೇಘಗಳನ್ನು ಹೊರುವ, ಹಗುರವಾಗಿ ಚಲಿಸುವ ಮತ್ತು ಒಂದು ಮಹಾಕಾರ್ಯದ (ಮಳೆಯ) ವಿತರಣೆ ಮಾಡುವ ಮಾರುತಗಳಾಣೆ-

وَالذّٰرِيٰتِ ذَرْوًا ۙ فَالْحٰمِلٰتِ وِقْرًا ۙ فَالْجٰرِيٰتِ يُسْرًا ۙ فَالْمُقَسِّمٰتِ اَمْرًا ۙ

5. ವಾಸ್ತವದಲ್ಲಿ ಯಾವುದರ ಕುರಿತು ನಿಮ್ಮನ್ನು ಎಚ್ಚರಿಸಲಾಗುತ್ತಿದೆಯೋ ಅದು ಸತ್ಯವಾಗಿದೆ.

اِنَّمَا تُوْعَدُوْنَ لَصَادِقٌ ۙ

6. ಕರ್ಮಗಳ ಪ್ರತಿಫಲವು ಖಂಡಿತವಾಗಿಯೂ ಮುಂದೆ ಬರಲಿಕ್ಕಿದೆ.[1]

وَّاِنَّ الدِّيْنَ لَوَاقِعٌ ۗ

7. ವಿಭಿನ್ನ ರೂಪಗಳ ಆಕಾಶದಾಣೆ.

وَالسَّمَآءِ ذَاتِ الْحُبُكِ ۙ

8. (ಪರಲೋಕದ ಕುರಿತು) ನಿಮ್ಮ ಹೇಳಿಕೆಗಳು ಪರಸ್ಪರ ವಿಭಿನ್ನವಾಗಿವೆ-[2]

اِنَّكُمْ لَفِيْ قَوْلٍ مُّخْتَلِفٍ ۙ

---

1. ಆಣೆ ಹಾಕಲಾಗಿರುವುದು ಈ ವಿಷಯದ ಕುರಿತೇ ಆಗಿದೆ. ಈ ಆಣೆಯ ಅರ್ಥವೇನೆಂದರೆ- ಯಾವ ರೀತಿಯ ಅನುಪಮವಾದ ಕ್ರಮಬದ್ಧತೆ ಮತ್ತು ವ್ಯವಸ್ಥೆಯೊಂದಿಗೆ ಮಳೆಯ ನಿಯಮ ನಿಮ್ಮ ಕಣ್ಣ ಮುಂದೆ ಜಾರಿಯಲ್ಲಿದೆಯೋ, ಅದರಲ್ಲಿ ಯಾವೆಲ್ಲಾ ಯುಕ್ತಿ ಅಡಕವಾಗಿದೆಯೋ, ಅದೆಲ್ಲವೂ ಈ ಲೋಕ ಕೇವಲ ನಿರರ್ಥಕ ಮತ್ತು ಉದ್ದೇಶರಹಿತವಾದ ಆಟಿಕೆಯಲ್ಲ ಎಂಬುದಕ್ಕೆ ಸಾಕ್ಷ್ಯ ವಹಿಸುತ್ತಿದೆ. ಕೋಟ್ಯಾನುಕೋಟಿ ವರ್ಷಗಳಿಂದ ಇಲ್ಲಿ ನಡೆಯುತ್ತಿರುವುದೆಲ್ಲವೂ ತನ್ನಷ್ಟಕ್ಕೆ ನಡೆಯುತ್ತಿರುವ ಆಟವಲ್ಲ. ಬದಲಾಗಿ ಇದು ಅತ್ಯಂತ ಸಮಗ್ರ ಮತ್ತು ಯುಕ್ತಿಪೂರ್ಣವಾದ ವ್ಯವಸ್ಥೆಯಾಗಿದೆ. ಇಲ್ಲಿನ ಪ್ರತಿಯೊಂದು ಕೆಲಸವೂ ನಿರ್ದಿಷ್ಟ ಯುಕ್ತಿ ಮತ್ತು ಉದ್ದೇಶದೊಂದಿಗೆ ನಡೆಯುತ್ತಿದೆ. ಮಾನವನಿಗೆ ಭೂಮಿಯ ಮೇಲೆ ಅಧಿಕಾರಗಳನ್ನು ಕೊಟ್ಟು ಹಾಗೆಯೇ ಬಿಟ್ಟು ಬಿಡಲು, ತನ್ನ ಅಧಿಕಾರಗಳನ್ನು ಅವನು ಹೇಗೆ ಉಪಯೋಗಿಸಿದನೆಂದು ಎಂದೂ ವಿಚಾರಣೆ ನಡೆಸದಿರಲು ಈ ವ್ಯವಸ್ಥೆಯಲ್ಲಿ ಅವಕಾಶವಿಲ್ಲ.
2. ಅರ್ಥಾತ್- ಯಾವ ರೀತಿ ಆಕಾಶದಲ್ಲಿರುವ ಮೋಡಗಳು ಮತ್ತು ನಕ್ಷತ್ರ ಪುಂಜಗಳ ಆಕಾರಗಳು ಭಿನ್ನ ಭಿನ್ನವಾಗಿದೆಯೋ, ಅದರಲ್ಲಿ ಸಾಮ್ಯತೆ ಕಂಡು ಬರುವುದಿಲ್ಲವೋ ಅದೇ ರೀತಿ ಪರಲೋಕದ ಕುರಿತೂ ನೀವು ತರತರದ ಮಾತುಗಳನ್ನಾಡುತ್ತೀರಿ. ಪ್ರತಿಯೊಬ್ಬನ ಮಾತು ಇನ್ನೊಬ್ಬನ ಮಾತಿಗಿಂತ ಭಿನ್ನವಾಗಿದೆ. ದಿವ್ಯವಾಣಿ ಮತ್ತು ಪ್ರವಾದಿಗಳಿಂದ ನಿರಪೇಕ್ಷನಾಗಿ ಮಾನವ ತನ್ನ ಬಗ್ಗೆ ಮತ್ತು ಈ ಲೋಕದ ಪರಿಣಾಮದ ಬಗ್ಗೆ ತಳೆಯುವ ಯಾವುದೇ ನಿರ್ಧಾರ, ಜ್ಞಾನವಿಲ್ಲದೆ ತೆಗೆದುಕೊಳ್ಳುವ ನಿರ್ಧಾರವೆಂಬುದನ್ನು ಇದು ಸಾರಿ ಹೇಳುತ್ತಿದೆ. ಅನ್ಯಥಾ ಅದರ ಬಗ್ಗೆ ತಿಳಿಯಲು ಮಾನವನ ಬಳಿ ನಿಜವಾಗಿಯೂ ಯಾವುದಾದರೂ ಜ್ಞಾನ ಮೂಲವಿದ್ದರೆ ಇಷ್ಟು ವಿಭಿನ್ನ ಸ್ವರೂಪದ ಮತ್ತು ವಿರೋಧಾಭಾಸಕ್ಕೆ ಆಸ್ಪದವಿರುವಂತಹ ವಿಶ್ವಾಸಗಳು ಹುಟ್ಟುತ್ತಿರಲಿಲ್ಲ.

9. ಸತ್ಯದಿಂದ ವಿಮುಖನಾದವನು ಮಾತ್ರ ಅದರಿಂದ ತಿರುಗಿಸಲ್ಪಡುತ್ತಾನೆ.

يُؤْفَكُ عَنْهُ مَنْ أُفِكَ ﴿٩﴾

10. ಅನುಮಾನದ ಆಧಾರದಲ್ಲಿ ತೀರ್ಮಾನ ಮಾಡುವವರು ನಾಶವಾದರು-[3]

قُتِلَ الْخَرَّاصُونَ ﴿١٠﴾

11. ಅವರು ಅಜ್ಞಾನದಲ್ಲಿ ಮುಳುಗಿದ್ದಾರೆ ಮತ್ತು ನಿರ್ಲಕ್ಷ್ಯದಲ್ಲಿ ಮೈಮರೆತಿದ್ದಾರೆ-

الَّذِينَ هُمْ فِي غَمْرَةٍ سَاهُونَ ﴿١١﴾

12. "ಪ್ರತಿಫಲದ ಆ ದಿನ ಯಾವಾಗ ಬರಲಿದೆ?" ಎಂದು ಅವರು ಕೇಳುತ್ತಾರೆ.

يَسْأَلُونَ أَيَّانَ يَوْمُ الدِّينِ ﴿١٢﴾

13. ಅದು, ಇವರು ಅಗ್ನಿಯಲ್ಲಿ ಸುಡಲ್ಪಡುವಂದು ಬರಲಿದೆ.

يَوْمَ هُمْ عَلَى النَّارِ يُفْتَنُونَ ﴿١٣﴾

14. "ಈಗ ನೀವು ನಿಮ್ಮ ಕ್ಷೋಭೆಯ ರುಚಿಯನ್ನು ಸವಿಯಿರಿ. ನೀವು ಯಾವುದಕ್ಕಾಗಿ ತವಕ ಪಡುತ್ತಿದ್ದಿರೋ ಅದುವೇ ಇದು" ಎಂದು ಇವರೊಡನೆ ಹೇಳಲಾಗುವುದು.[4]

ذُوقُوا فِتْنَتَكُمْ هَٰذَا الَّذِي كُنْتُمْ بِهِ تَسْتَعْجِلُونَ ﴿١٤﴾

15. ಆದರೆ ಧರ್ಮನಿಷ್ಠರು ಮಾತ್ರ ಅಂದು ಉದ್ಯಾನಗಳಲ್ಲೂ ಚಿಲುಮೆಗಳಲ್ಲೂ ಇರುವರು.

إِنَّ الْمُتَّقِينَ فِي جَنَّاتٍ وَعُيُونٍ ﴿١٥﴾

16. ಅವರ ಪ್ರಭು ಅವರಿಗೆ ದಯಪಾಲಿಸಿದ್ದೆಲ್ಲವನ್ನೂ ಸಂತೋಷದಿಂದ ಸ್ವೀಕರಿಸುತ್ತಿರುವರು. ಅವರು ಆ ದಿನ ಬರುವುದಕ್ಕೆ ಮುಂಚೆ ಸದಾಚಾರಿಗಳಾಗಿದ್ದರು.

آخِذِينَ مَا آتَاهُمْ رَبُّهُمْ ۚ إِنَّهُمْ كَانُوا قَبْلَ ذَٰلِكَ مُحْسِنِينَ ﴿١٦﴾

17. ರಾತ್ರೆ ಸ್ವಲ್ಪವೇ ನಿದ್ರಿಸುತ್ತಿದ್ದರು-

كَانُوا قَلِيلًا مِنَ اللَّيْلِ مَا يَهْجَعُونَ ﴿١٧﴾

18. ಮತ್ತು ಅವರು ರಾತ್ರಿಯ ಕೊನೆಯ ಜಾವಗಳಲ್ಲಿ ಕ್ಷಮಾಯಾಚನೆ ಮಾಡುತ್ತಿದ್ದರು.

وَبِالْأَسْحَارِ هُمْ يَسْتَغْفِرُونَ ﴿١٨﴾

19. ಅವರ ಸೊತ್ತುಗಳಲ್ಲಿ ಬೇಡುವವರಿಗೂ ವಂಚಿತರಿಗೂ ಹಕ್ಕಿತ್ತು.[5]

وَفِي أَمْوَالِهِمْ حَقٌّ لِلسَّائِلِ وَالْمَحْرُومِ ﴿١٩﴾

3. ಅರ್ಥಾತ್- ತಮ್ಮ ಮಿಥ್ಯ ಅಂದಾಜುಗಳ ಕಾರಣದಿಂದ ಅವರು ಯಾವ ಪರಿಣಾಮದತ್ತ ಸಾಗುತ್ತಿದ್ದಾರೆಂದು ಅವರಿಗೆ ತಿಳಿದಿಲ್ಲ. ವಾಸ್ತವದಲ್ಲಿ ಪರಲೋಕದ ಬಗ್ಗೆ ತಪ್ಪು ನಿರ್ಧಾರ ತಳೆದು ಅನುಸರಿಸಲಾಗುವ ಯಾವುದೇ ಮಾರ್ಗ ವಿನಾಶದೆಡೆಗೆ ಹೋಗುತ್ತದೆ.

4. 'ಪ್ರತಿಫಲದ ಆ ದಿನ ಯಾವಾಗ ಬರಲಿದೆ?' ಎಂಬ ಸತ್ಯನಿಷೇಧಿಗಳ ಪ್ರಶ್ನೆಯಿಂದ ಧ್ವನಿಸುವ ಅರ್ಥವೇನೆಂದರೆ- ನಾವು ಅದನ್ನು ನಿರಾಕರಿಸಿದ್ದೇವೆ. ನಿರಾಕರಣೆಯ ಶಿಕ್ಷೆ ನಮ್ಮ ಪಾಲಿಗೆ ನಿಶ್ಚಿತವಾಗಿ ಬಿಟ್ಟಿದೆ. ಹಾಗಿದ್ದರೂ ಅದು ಯಾಕೆ ಎದುರಾಗುತ್ತಿಲ್ಲ?

5. ಬೇರೆ ಪದಗಳಲ್ಲಿ ಹೇಳುವುದಾದರೆ ಒಂದೆಡೆ ಅವರು ತಮ್ಮ ಪ್ರಭುವಿನ ಹಕ್ಕುಗಳನ್ನು ಗುರುತಿಸಿ ಅದನ್ನು ಈಡೇರಿಸುತ್ತಿದ್ದರು. ಇನ್ನೊಂದೆಡೆ

20. ದೃಢವಿಶ್ವಾಸವಿರಿಸುವವರಿಗೆ ಭೂಮಿಯಲ್ಲಿ ಅಸಂಖ್ಯಾತ ನಿದರ್ಶನಗಳಿವೆ- | وَفِي الْأَرْضِ آيَاتٌ لِّلْمُوقِنِينَ ﴿٢٠﴾

21. ಮತ್ತು ಸ್ವತಃ ನಿಮ್ಮ ಅಸ್ತಿತ್ವದಲ್ಲೂ ಇವೆ. ನಿಮಗೇನು ಕಾಣುವುದಿಲ್ಲವೇ? | وَفِي أَنفُسِكُمْ ۚ أَفَلَا تُبْصِرُونَ ﴿٢١﴾

22. ಆಕಾಶದಲ್ಲೇ ನಿಮ್ಮ ಜೀವನಾಧಾರವೂ ನಿಮಗೆ ವಾಗ್ದಾನ ಮಾಡಲಾಗುತ್ತಿರುವ ವಸ್ತುವೂ ಇದೆ.[6] | وَفِي السَّمَاءِ رِزْقُكُمْ وَمَا تُوعَدُونَ ﴿٢٢﴾

23. ಆದುದರಿಂದ ಆಕಾಶ ಮತ್ತು ಭೂಮಿಯ ಪ್ರಭುವಿನಾಣೆ! ಇದು ಸತ್ಯವಾಗಿದೆ. ನೀವು ಮಾತನಾಡುತ್ತಿರುವಷ್ಟೇ ಖಚಿತವಾಗಿದೆ. | فَوَرَبِّ السَّمَاءِ وَالْأَرْضِ إِنَّهُ لَحَقٌّ مِّثْلَ مَا أَنَّكُمْ تَنطِقُونَ ﴿٢٣﴾

24. ಸಂದೇಶವಾಹಕರೇ, ಇಬ್‌ರಾಹೀಮರ ಸನ್ಮಾನ್ಯ ಅತಿಥಿಗಳ ವೃತ್ತಾಂತವು ನಿಮಗೆ ತಲುಪಿದೆಯೇ? | هَلْ أَتَاكَ حَدِيثُ ضَيْفِ إِبْرَاهِيمَ الْمُكْرَمِينَ ﴿٢٤﴾

25. ಅವರು, ಅವರ (ಇಬ್‌ರಾಹೀಮರ) ಬಳಿಗೆ ಬಂದು 'ತಮಗೆ ಸಲಾಮ್' ಎಂದರು. ಅವರು, "ನಿಮಗೂ ಸಲಾಮ್ ಅಪರಿಚಿತ ಜನರು!" ಎಂದರು.[7] | إِذْ دَخَلُوا عَلَيْهِ فَقَالُوا سَلَامًا ۖ قَالَ سَلَامٌ قَوْمٌ مُّنكَرُونَ ﴿٢٥﴾

26. ತರುವಾಯ ಅವರು ಮೆಲ್ಲನೆ ತಮ್ಮ ಮನೆಯವರ ಬಳಿಗೆ ಹೋದರು ಮತ್ತು ಒಂದು (ಹುರಿದ) ಕೊಬ್ಬಿದ ಕರುವನ್ನು ತಂದರು. | فَرَاغَ إِلَىٰ أَهْلِهِ فَجَاءَ بِعِجْلٍ سَمِينٍ ﴿٢٦﴾

---

ಅಲ್ಲಾಹನು ನೀಡಿದ ಸ್ವಲ್ಪ ಅಥವಾ ಅಧಿಕ ಸಂಪತ್ತಿನಲ್ಲಿ ತಮ್ಮ ಮತ್ತು ತಮ್ಮ ಮಕ್ಕಳು-ಮರಿಗಳಿಗೆ ಮಾತ್ರ ಹಕ್ಕಿದೆ ಎಂದು ಅವರು ಭಾವಿಸುತ್ತಿರಲಿಲ್ಲ. ಸಹಾಯಾಪೇಕ್ಷಿಯಾದ ಪ್ರತಿಯೊಬ್ಬ ಮಾನವನಿಗೂ ಈ ಸಂಪತ್ತಿನಲ್ಲಿ ಹಕ್ಕಿದೆ ಎಂದು ಅವರು ಭಾವಿಸುತ್ತಿದ್ದರು. ಇದು ದಾಸರೊಂದಿಗೆ ಅವರು ವ್ಯವಹರಿಸುತ್ತಿದ್ದ ರೀತಿಯಾಗಿತ್ತು.

6. ಆಕಾಶವೆಂದು ಇಲ್ಲಿ ಬಾನಲೋಕಕ್ಕೆ ಹೇಳಲಾಗಿದೆ. ಜೀವನಾಧಾರವೆಂದರೆ ಲೋಕದಲ್ಲಿ ಮಾನವನ ಬದುಕು ಮತ್ತು ಕೆಲಸಕ್ಕಾಗಿ ನೀಡಲಾಗಿರುವ ಎಲ್ಲಾ ವಸ್ತುಗಳಾಗಿವೆ. ನಿಮಗೆ ವಾಗ್ದಾನ ಮಾಡಲಾಗುತ್ತಿರುವ ಎಲ್ಲಾ ವಸ್ತುವೂ ಎಂದರೆ ನಿರ್ಣಾಯಕ ದಿನ, ಆ ದಿನದ ಜಮಾವಣೆ ಮತ್ತು ಚದುರುವಿಕೆ, ವಿಚಾರಣೆ, ಶಿಕ್ಷೆ-ರಕ್ಷೆ, ಸ್ವರ್ಗ-ನರಕ ಇತ್ಯಾದಿಗಳಾಗಿವೆ. ಕುರ್‌ಆನಿನಲ್ಲೂ ಅಂತೆಯೇ ಎಲ್ಲಾ ಧಾರ್ಮಿಕ ಗ್ರಂಥಗಳಲ್ಲೂ ಅದರ ಬಗ್ಗೆ ವಾಗ್ದಾನ ಮಾಡಲಾಗಿದೆ. ನಿಮ್ಮಲ್ಲಿ ಯಾರಿಗೆ ಎಷ್ಟನ್ನು ಈ ಲೋಕದಲ್ಲಿ ಪ್ರದಾನ ಮಾಡಬೇಕು ಮತ್ತು ನಿಮ್ಮನ್ನು ವಿಚಾರಣೆಗೆ ಯಾವಾಗ ಕರೆಸಬೇಕು ಎಂಬ ತೀರ್ಮಾನ ಬಾನಲೋಕದಲ್ಲೇ ನಡೆಯುತ್ತದೆ ಎಂಬುದು ದಿವ್ಯವಾಣಿಯ ತಾತ್ಪರ್ಯವಾಗಿದೆ.

7. ಹಿನ್ನೆಲೆಯ ಆಧಾರದಲ್ಲಿ ಈ ಉದ್ಧರಣೆಯನ್ನು ಎರಡು ರೀತಿಯಲ್ಲಿ ಅರ್ಥೈಸಬಹುದು. ಮೊದಲನೆಯದಾಗಿ, ಇಬ್‌ರಾಹೀಮ್(ಅ) ಸ್ವತಃ ಆ ಅತಿಥಿಗಳೊಂದಿಗೆ- "ತಮ್ಮಿಂದ ಪ್ರಯೋಜನ ಪಡೆಯುವ ಅವಕಾಶ ಹಿಂದೆಂದೂ ನಮಗೆ ಲಭಿಸಿರಲಿಲ್ಲ. ಪ್ರಾಯಶಃ ನೀವು ಈ ಪ್ರದೇಶಕ್ಕೆ ಹೊಸತಾಗಿ ಬಂದವರಾಗಿರಬಹುದು" ಎಂದು ಹೇಳಿರಬಹುದು. ಎರಡನೇದಾಗಿ ಸಲಾಮ್‌ಗೆ ಉತ್ತರ ಹೇಳಿದ ನಂತರ ಹ. ಇಬ್‌ರಾಹೀಮ್(ಅ) ತಮ್ಮ ಮನಸ್ಸಿನಲ್ಲೇ ಹೀಗೆಂದಿರಬಹುದು ಅಥವಾ ಮನೆಯಲ್ಲಿ ಆತಿಥ್ಯದ ಏರ್ಪಾಟು ಮಾಡಲು ಹೋಗುತ್ತಾ ತಮ್ಮ ಸೇವಕರೊಡನೆ, "ಇವರು ಕೆಲವು ಅಪರಿಚಿತ ವ್ಯಕ್ತಿಗಳು. ಇದಕ್ಕೆ ಮೊದಲು ಇಂತಹ ಉಜ್ವಲ ವ್ಯಕ್ತಿತ್ವ ಮತ್ತು ಗಾತ್ರದ ವ್ಯಕ್ತಿಗಳು ಈ ಪ್ರದೇಶದಲ್ಲಿ ಕಂಡು ಬಂದಿರಲಿಲ್ಲ" ಎಂದಿರಬಹುದು.

27. ಅತಿಥಿಗಳ ಮುಂದಿಟ್ಟು, "ನೀವು ತಿನ್ನುವುದಿಲ್ಲವೇ?" ಎಂದು ಕೇಳಿದರು.

فَقَرَّبَهُۥٓ إِلَيْهِمْ قَالَ أَلَا تَأْكُلُونَ ٢٧

28. ತರುವಾಯ ಅವರ ಬಗ್ಗೆ ಅಂಜಿದರು. ಅವರು 'ಹೆದರಬೇಡಿ' ಎಂದರು ಮತ್ತು ಅವರಿಗೆ ಓರ್ವ ಸುಜ್ಞಾನಿ ಪುತ್ರನು ಜನಿಸುವನೆಂಬ ಸುವಾರ್ತೆ ನೀಡಿದರು.[8]

فَأَوْجَسَ مِنْهُمْ خِيفَةً ۖ قَالُوا لَا تَخَفْ ۖ وَبَشَّرُوهُ بِغُلَٰمٍ عَلِيمٍ ٢٨

29. ಇದನ್ನು ಕೇಳಿ ಅವರ ಪತ್ನಿಯು ಚೀರುತ್ತ ಮುಂದೆ ಬಂದಳು ಮತ್ತು ತನ್ನ ಮುಖಕ್ಕೆ ಬಡಿದುಕೊಳ್ಳುತ್ತ, 'ವೃದ್ಧೆ, ಬಂಜೆ!' ಎನ್ನ ತೊಡಗಿದಳು.[9]

فَأَقْبَلَتِ ٱمْرَأَتُهُۥ فِى صَرَّةٍ فَصَكَّتْ وَجْهَهَا وَقَالَتْ عَجُوزٌ عَقِيمٌ ٢٩

30. *ಆಗ ಅವರು, "ನಿನ್ನ ಪ್ರಭು ಹೀಗೆಯೇ ಹೇಳಿರುತ್ತಾನೆ. ಅವನು ಮಹಾ ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುತ್ತಾನೆ" ಎಂದರು.

قَالُوا كَذَٰلِكِ قَالَ رَبُّكِ ۖ إِنَّهُۥ هُوَ ٱلْحَكِيمُ ٱلْعَلِيمُ ٣٠

31. ಇಬ್‌ರಾಹೀಮರು ಕೇಳಿದರು, "ದೇವದೂತರೇ, ನಿಮ್ಮ ಮುಂದಿನ ಕಾರ್ಯಚರಣೆ ಏನು?"

قَالَ فَمَا خَطْبُكُمْ أَيُّهَا ٱلْمُرْسَلُونَ ٣١

32. ಅವರು ಹೇಳಿದರು, "ನಾವು ಒಂದು ಅಪರಾಧಿ ಜನಾಂಗದೆಡೆಗೆ ಕಳುಹಿಸಲ್ಪಟ್ಟಿದ್ದೇವೆ-[10]

قَالُوٓا إِنَّآ أُرْسِلْنَآ إِلَىٰ قَوْمٍ مُّجْرِمِينَ ٣٢

33. ಅವರ ಮೇಲೆ ಸುಟ್ಟಮಣ್ಣಿನ ಕಲ್ಲುಗಳ ಮಳೆಗರೆಯಲಿಕ್ಕಾಗಿ-

لِنُرْسِلَ عَلَيْهِمْ حِجَارَةً مِّن طِينٍ ٣٣

34. ನಿಮ್ಮ ಪ್ರಭುವಿನ ಬಳಿ, ಮೇರೆ ಮೀರುವವರಿಗಾಗಿ ಅವುಗಳನ್ನು ಗುರುತು ಹಾಕಿ ಇಡಲಾಗಿದೆ."[11]

مُّسَوَّمَةً عِندَ رَبِّكَ لِلْمُسْرِفِينَ ٣٤

35. ತರುವಾಯ[12] ನಾವು ಆ ನಾಡಿನಲ್ಲಿದ್ದ ಸತ್ಯವಿಶ್ವಾಸಿಗಳನ್ನೆಲ್ಲ ಅಲ್ಲಿಂದ ಹೊರತೆಗೆದೆವು-

فَأَخْرَجْنَا مَن كَانَ فِيهَا مِنَ ٱلْمُؤْمِنِينَ ٣٥

الجزء ٢٧

8. ಇದು ಹ. ಇಸ್‌ಹಾಕ್‌ರ(ಅ) ಜನನದ ಸುವಾರ್ತೆಯಾಗಿತ್ತೆಂದು ಹೂದ್ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ.

9. ಅರ್ಥಾತ್- ಮೊದಲೇ ನಾನು ವೃದ್ಧೆ. ಜತೆಗೆ ಬಂಜೆ ಕೂಡ. ಹಾಗಿರುವಾಗ ನನಗೆ ಮಗು ಹುಟ್ಟುವುದು ಹೇಗೆ? ಬೈಬಲ್‌ನ ಉದ್ಧರಣೆಯ ಪ್ರಕಾರ ಆಗ ಹ. ಇಬ್ರಾಹೀಮ್‌ರಿಗೆ(ಅ) ನೂರು ವರ್ಷ ಮತ್ತು ಹ. ಸಾರಾರಿಗೆ ತೊಂಭತ್ತು ವರ್ಷ ಪ್ರಾಯವಾಗಿತ್ತು. (ಆದಿಕಾಂಡ-18:17)

* **ಇಲ್ಲಿಂದ 27ನೇ ಕಾಂಡ ಆರಂಭ.**

10. ಅರ್ಥಾತ್- ಲೂತ್ ಸಮುದಾಯ. ಅದರ ಅಪರಾಧಗಳು ಎಷ್ಟು ಹೆಚ್ಚಾಗಿದ್ದುವೆಂದರೆ 'ಅಪರಾಧಿ ಜನಾಂಗ' ಎಂಬ ಪದವೇ ಅದು ಯಾವ ಜನಾಂಗ ಎಂಬುದನ್ನು ತಿಳಿಸಲು ಸಾಕಾಗಿತ್ತು.

11. ಅರ್ಥಾತ್- ಪ್ರತಿಯೊಂದು ಕಲ್ಲಿನ ಮೇಲೂ ಅದು ಯಾರನ್ನು ನಾಶಪಡಿಸಬೇಕೆಂದು ನಿಮ್ಮ ಪ್ರಭುವಿನ ವತಿಯಿಂದ ಗುರುತು ಹಚ್ಚಲಾಗಿದೆ.

12. ಹ. ಇಬ್‌ರಾಹೀಮ್‌ರ(ಅ) ಬಳಿಯಿಂದ ಈ ದೇವಚರರು ಯಾವ ರೀತಿ ಹ. ಲೂತ್‌ರ(ಅ) ಬಳಿಗೆ ತಲಪಿದರು. ಅಲ್ಲಿ ಅವರ ಮತ್ತು ಲೂತ್ ಸಮುದಾಯದ ನಡುವೆ ಏನು ಸಂಭವಿಸಿತು ಎಂಬ ಘಟನೆಗಳನ್ನೆಲ್ಲಾ ನಡುವೆ ಬಿಟ್ಟು ಬಿಡಲಾಗಿದೆ.

36. ಮತ್ತು ಅಲ್ಲಿ ನಾವು ಒಂದು ಮನೆಯ ಹೊರತು ಮುಸ್ಲಿಮರ ಬೇರಾವ ಮನೆಯನ್ನೂ ಕಾಣಲಿಲ್ಲ.

فَمَا وَجَدْنَا فِيهَا غَيْرَ بَيْتٍ مِّنَ الْمُسْلِمِينَ ﴿٣٦﴾

37. ಅನಂತರ ನಾವು ವೇದನಾಯುಕ್ತ ಯಾತನೆಗೆ ಭಯಪಡುವ ಜನರಿಗಾಗಿ ಒಂದು ನಿದರ್ಶನವನ್ನು ಅಲ್ಲಿ ಬಿಟ್ಟೆವು.[13]

وَتَرَكْنَا فِيهَا آيَةً لِّلَّذِينَ يَخَافُونَ الْعَذَابَ الْأَلِيمَ ﴿٣٧﴾

38. ಮೂಸಾರ ವೃತ್ತಾಂತದಲ್ಲಿ (ನಿಮಗೆ ನಿದರ್ಶನವಿದೆ). ನಾವು ಅವರನ್ನು ಸುಸ್ಪಷ್ಟ ಆಧಾರ ಪ್ರಮಾಣದೊಂದಿಗೆ ಫಿರ್‌ಔನನ ಬಳಿಗೆ ಕಳುಹಿಸಿದಾಗ-[14]

وَفِي مُوسَىٰ إِذْ أَرْسَلْنَاهُ إِلَىٰ فِرْعَوْنَ بِسُلْطَانٍ مُّبِينٍ ﴿٣٨﴾

39. ಅವನು ತನ್ನ ಅಧಿಕಾರ ಬಲದ ಬಗ್ಗೆ ಅಹಂಕಾರಪಟ್ಟು, "ಇವನು ಜಾದೂಗಾರನೋ ಹುಚ್ಚನೋ ಆಗಿದ್ದಾನೆ" ಎಂದನು.

فَتَوَلَّىٰ بِرُكْنِهِ وَقَالَ سَاحِرٌ أَوْ مَجْنُونٌ ﴿٣٩﴾

40. ಕೊನೆಗೆ ನಾವು ಅವನನ್ನೂ ಅವನ ಸೇನೆಗಳನ್ನೂ ಹಿಡಿದೆವು ಮತ್ತು ಸಮುದ್ರಕ್ಕೆ ಎಸೆದು ಬಿಟ್ಟೆವು ಮತ್ತು ಅವನು ನಿಂದ್ಯನಾಗಿ ಬಿಟ್ಟನು.

فَأَخَذْنَاهُ وَجُنُودَهُ فَنَبَذْنَاهُمْ فِي الْيَمِّ وَهُوَ مُلِيمٌ ﴿٤٠﴾

41. 'ಆದ್' ಜನಾಂಗದಲ್ಲಿ (ನಿಮಗೆ ನಿದರ್ಶನವಿದೆ). ನಾವು ಅವರ ಮೇಲೆ ಒಂದು ಅಶುಭ ಗಾಳಿಯನ್ನು ಕಳುಹಿಸಿದಾಗ-

وَفِي عَادٍ إِذْ أَرْسَلْنَا عَلَيْهِمُ الرِّيحَ الْعَقِيمَ ﴿٤١﴾

42. ಅದು ತಾನು ಹಾದು ಹೋದ ಪ್ರತಿಯೊಂದು ವಸ್ತುವನ್ನೂ ಶಿಥಿಲಗೊಳಿಸಿಬಿಟ್ಟಿತು.

مَا تَذَرُ مِن شَيْءٍ أَتَتْ عَلَيْهِ إِلَّا جَعَلَتْهُ كَالرَّمِيمِ ﴿٤٢﴾

43. 'ಸಮೂದ್' ಜನಾಂಗದಲ್ಲಿ (ನಿಮಗೆ ನಿದರ್ಶನವಿದೆ) ಒಂದು ನಿಶ್ಚಿತ ಕಾಲದ ವರೆಗೆ ಸುಖಭೋಗಗಳಲ್ಲಿ ಇದ್ದುಕೊಳ್ಳಿರೆಂದು ಅವರೊಡನೆ ಹೇಳಲಾಗಿತ್ತು.

وَفِي ثَمُودَ إِذْ قِيلَ لَهُمْ تَمَتَّعُوا حَتَّىٰ حِينٍ ﴿٤٣﴾

44. ಆದರೆ, ಈ ಎಚ್ಚರಿಕೆ ಸಿಕ್ಕಿದ ಬಳಿಕವೂ ಅವರು ತಮ್ಮ ಪ್ರಭು ವಿನ ಆಜ್ಞೋಲ್ಲಂಘನೆ ಮಾಡಿದರು. ಕೊನೆಗೆ ಅವರು ನೋಡುತ್ತಿದ್ದಂತೆಯೇ ಹಠಾತ್ತನೆ ಸಿಡಿದು ಬೀಳುವ ಒಂದು ಯಾತನೆ ಅವರ ಮೇಲೆರಗಿತು.

فَعَتَوْا عَنْ أَمْرِ رَبِّهِمْ فَأَخَذَتْهُمُ الصَّاعِقَةُ وَهُمْ يَنظُرُونَ ﴿٤٤﴾

13. ಈ ನಿದರ್ಶನವೆಂದರೆ ಮೃತ ಸಾಗರ (Dead Sea) ಅದರ ದಕ್ಷಿಣ ಭಾಗ ಇಂದಿಗೂ ಭಯಾನಕ ವಿನಾಶ ಸಂಭವಿಸಿದ್ದನ್ನು ಸಾರಿ ಹೇಳುತ್ತಿದೆ.

14. ಅರ್ಥಾತ್- ಅತ್ಯಂತ ಸ್ಪಷ್ಟವಾದ ಪವಾಡಗಳು ಮತ್ತು ವ್ಯಕ್ತವಾದ ನಿದರ್ಶನಗಳೊಂದಿಗೆ ಕಳುಹಿಸಿದೆವು. ಆ ಮೂಲಕ ಅವರು ಭೂಮಿ-ಆಕಾಶಗಳ ಒಡೆಯನ ವತಿಯಿಂದ ನೇಮಿಸಲ್ಪಟ್ಟವರು ಎಂಬ ಬಗ್ಗೆ ಯಾವುದೇ ಸಂಶಯ ಉಳಿದಿರಲಿಲ್ಲ.

| | |
|---|---|
| 45. ಅನಂತರ ಅವರಲ್ಲಿ ಎದ್ದು ನಿಲ್ಲುವ ಶಕ್ತಿಯಾಗಲಿ ತಮ್ಮನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವಾಗಲಿ ಉಳಿಯಲಿಲ್ಲ. | فَمَا اسْتَطَاعُوا مِن قِيَامٍ وَمَا كَانُوا مُنتَصِرِينَ ﴿٤٥﴾ |
| 46. ಇವರೆಲ್ಲರಿಗಿಂತ ಮುಂಚೆ ನಾವು 'ನೂಹ'ರ ಜನಾಂಗವನ್ನು ನಾಶಗೊಳಿಸಿದೆವು. ಏಕೆಂದರೆ ಅವರು ಕರ್ಮಭ್ರಷ್ಟ ಜನರಾಗಿದ್ದರು. | وَقَوْمَ نُوحٍ مِّن قَبْلُ ۖ إِنَّهُمْ كَانُوا قَوْمًا فَاسِقِينَ ﴿٤٦﴾ |
| 47. ನಾವು ಆಕಾಶವನ್ನು ನಮ್ಮ ಶಕ್ತಿಯಿಂದ ನಿರ್ಮಿಸಿರುತ್ತೇವೆ ಮತ್ತು ನಮಗೆ ಅದರ ಸಾಮರ್ಥ್ಯವಿದೆ.[15] | وَالسَّمَاءَ بَنَيْنَاهَا بِأَيْدٍ وَإِنَّا لَمُوسِعُونَ ﴿٤٧﴾ |
| 48. ಭೂಮಿಯನ್ನು ನಾವು ಹಾಸಿರುತ್ತೇವೆ, ನಾವು ಅತ್ಯುತ್ತಮವಾಗಿ ಸಮತಟ್ಟುಗೊಳಿಸುವವರಾಗಿದ್ದೇವೆ. | وَالْأَرْضَ فَرَشْنَاهَا فَنِعْمَ الْمَاهِدُونَ ﴿٤٨﴾ |
| 49. ನಾವು ಪ್ರತಿಯೊಂದು ವಸ್ತುವಿನ ಜೋಡಿಗಳನ್ನು ಮಾಡಿರುತ್ತೇವೆ,[16]- ನೀವು ಇದರಿಂದ ಪಾಠ ಕಲಿಯಬಹುದೆಂದು.[17] | وَمِن كُلِّ شَيْءٍ خَلَقْنَا زَوْجَيْنِ لَعَلَّكُمْ تَذَكَّرُونَ ﴿٤٩﴾ |
| 50. ಆದುದರಿಂದ ನೀವು ಅಲ್ಲಾಹನ ಕಡೆಗೆ ಧಾವಿಸಿರಿ. ನಾನು ನಿಮಗೆ ಅವನ ಕಡೆಯಿಂದ ಸುವ್ಯಕ್ತ ಎಚ್ಚರಿಕೆ ನೀಡುವವನಾಗಿದ್ದೇನೆ. | فَفِرُّوا إِلَى اللَّهِ ۖ إِنِّي لَكُم مِّنْهُ نَذِيرٌ مُّبِينٌ ﴿٥٠﴾ |
| 51. ಅಲ್ಲಾಹನೊಂದಿಗೆ ಇತರರನ್ನು ಆರಾಧ್ಯರಾಗಿ ಮಾಡಿಕೊಳ್ಳಬೇಡಿರಿ. ನಾನು ನಿಮಗೆ ಅವನ ಕಡೆಯಿಂದ ಸುವ್ಯಕ್ತ ಎಚ್ಚರಿಕೆ ನೀಡುವವನಾಗಿದ್ದೇನೆ.[18] | وَلَا تَجْعَلُوا مَعَ اللَّهِ إِلَٰهًا آخَرَ ۖ إِنِّي لَكُم مِّنْهُ نَذِيرٌ مُّبِينٌ ﴿٥١﴾ |

15. ಮೂಲದಲ್ಲಿ 'ವ ಇನ್ನಾ ಲ ಮೂಸಿಊನ್' ಎಂಬ ಪದ ಪ್ರಯೋಗವಾಗಿದೆ. 'ಮೂಸಿಅ್'ನ ಅರ್ಥ ಶಕ್ತಿ ಸಾಮರ್ಥ್ಯ ಹೊಂದಿರುವವನು ಎಂದೂ ಆಗುತ್ತದೆ. ಹಾಗೆಯೇ ವ್ಯಾಪಕಗೊಳಿಸುವವನೆಂದೂ ಆಗುತ್ತದೆ. ಮೊದಲನೆಯ ಅರ್ಥದ ಆಧಾರದಲ್ಲಿ, ಈ ಮಾತಿನ ಅರ್ಥ ಆಕಾಶವನ್ನು ನಾವು ಯಾರ ನೆರವಿನಿಂದಲೂ ಅಲ್ಲ, ಬದಲಾಗಿ ನಮ್ಮ ಸಾಮರ್ಥ್ಯದಿಂದ ಸೃಷ್ಟಿಸಿದೆವು, ಅದರ ಸೃಷ್ಟಿ ನಮ್ಮ ಶಕ್ತಿಗೆ ಮೀರಿದ ವಿಷಯವಾಗಿರಲಿಲ್ಲ. ಹಾಗಿರುವಾಗ ನಾವು ನಿಮ್ಮನ್ನು ಮತ್ತೊಮ್ಮೆ ಸೃಷ್ಟಿಸಲಾರೆವು ಎಂದು ನೀವು ಕಲ್ಪಿಸಿಕೊಂಡದ್ದು ಹೇಗೆ? ಎಂದಾಗುತ್ತದೆ. ಎರಡನೆಯ ಅರ್ಥದ ಆಧಾರದಲ್ಲಿ ಅದರ ಅರ್ಥ, ಈ ವಿಶಾಲ ನಿಸರ್ಗವನ್ನು ನಾವು ಒಮ್ಮೆಗೇ ಸೃಷ್ಟಿಸಿ ಬಿಟ್ಟಿಲ್ಲ. ಬದಲಾಗಿ ನಿರಂತರ ಅದನ್ನು ವಿಶಾಲಗೊಳಿಸುತ್ತಿದ್ದೇವೆ. ಪ್ರತಿಕ್ಷಣವೂ ಅದರಲ್ಲಿ ನಮ್ಮ ಸೃಷ್ಟಿ ವೈಚಿತ್ರ್ಯಗಳು ಕಾಣಿಸುತ್ತಿರುತ್ತವೆ. ಇಂತಹ ಪರಮ ಸಮರ್ಥನಾದ ಸೃಷ್ಟಿಕರ್ತನ ಬಗ್ಗೆ ಅವನಿಗೆ ಮತ್ತೊಮ್ಮೆ ಸೃಷ್ಟಿಸಲು ಸಾಧ್ಯವಿಲ್ಲವೆಂದು ನೀವೇಕೆ ಕಲ್ಪಿಸಿಕೊಳ್ಳುತ್ತೀರಿ.
16. ಅರ್ಥಾತ್- ಭೂಮಿಯಲ್ಲಿರುವ ಎಲ್ಲಾ ವಸ್ತುಗಳನ್ನು ಜೋಡಿಗಳ ರೂಪದಲ್ಲಿ ಸೃಷ್ಟಿಸಲಾಗಿದೆ. ವಿಶ್ವದ ಮಹಾ ಉದ್ಯಮ ಈ ನಿಯಮದ ಆಧಾರದಲ್ಲೇ ನಡೆಯುತ್ತಿದೆ. ಕೆಲವು ವಸ್ತುಗಳು ಮತ್ತೆ ಕೆಲವು ವಸ್ತುಗಳೊಂದಿಗೆ ಜತೆಗೂಡುತ್ತವೆ. ಈ ಜತೆ ಸೇರುವಿಕೆಯಿಂದಲೇ ತರತರದ ಸಂಯುಕ್ತ ವಸ್ತುಗಳು ಅಸ್ತಿತ್ವಕ್ಕೆ ಬರುತ್ತವೆ. ಇಲ್ಲಿರುವ ಯಾವ ವಸ್ತುವೂ ಜತೆಯನ್ನು ಹೊಂದದೆ ಒಂಟಿಯಾಗಿಲ್ಲ. ಬದಲಾಗಿ ವಸ್ತುಗಳೆಲ್ಲವೂ ತನ್ನ ಜತೆಯನ್ನು ಸೇರಿದ ನಂತರವೇ ಪರಿಣಾಮಕಾರಿ ಎನಿಸಿಕೊಳ್ಳುತ್ತವೆ.
17. ಅರ್ಥಾತ್- ಪರಲೋಕವೇ ಈ ಲೋಕದ ಜತೆಯಾಗಿದೆ ಅದರ ಹೊರತು ಲೋಕದ ಜೀವನ ಅರ್ಥಹೀನವೆನಿಸಿಕೊಳ್ಳುತ್ತದೆ ಎಂಬ ಪಾಠ.
18. ಈ ಉದ್ಧರಣೆ ಅಲ್ಲಾಹನ ವಾಣಿಯೇ ಆಗಿದ್ದರೂ, ಇದರಲ್ಲಿ ವ್ಯಕ್ತವಾಗಿರುವ ಮಾತು ಅಲ್ಲಾಹನದಲ್ಲ ಬದಲಾಗಿ ಪ್ರವಾದಿವರ್ಯರದ್ದಾಗಿದೆ(ಸ). ವಾಸ್ತವದಲ್ಲಿ ಅಲ್ಲಾಹನು ತನ್ನ ಪ್ರವಾದಿಯ ಬಾಯಿಯಿಂದ, "ಅಲ್ಲಾಹನೆಡೆಗೆ ಧಾವಿಸಿರಿ. ನಾನು ಅವನ ವತಿಯಿಂದ ನಿಮಗೆ ಎಚ್ಚರಿಕೆ ಕೊಡುವವನಾಗಿದ್ದೇನೆ" ಎಂದು ಹೇಳುತ್ತಿದ್ದಾನೆ.

52. ಹೀಗೆಯೇ ಆಗುತ್ತಾ ಬಂದಿದೆ. ಇವರಿಗಿಂತ ಮುಂಚಿನ ಜನಾಂಗಗಳ ಬಳಿಗೂ ಸಂದೇಶವಾಹಕರು ಬಂದಾಗ ಅವರನ್ನು ಇವರು ಜಾದೂಗಾರ ಅಥವಾ ಹುಚ್ಚ ಎಂದು ಹೇಳದೆ ಬಿಡಲಿಲ್ಲ.

كَذَٰلِكَ مَآ أَتَى ٱلَّذِينَ مِن قَبْلِهِم مِّن رَّسُولٍ إِلَّا قَالُوا۟ سَاحِرٌ أَوْ مَجْنُونٌ ﴿٥٢﴾

53. ಇವರೆಲ್ಲರೂ ಈ ವಿಷಯದಲ್ಲಿ ಪರಸ್ಪರ ಒಪ್ಪಂದ ಮಾಡಿಕೊಂಡಿರುವರೇ? ಇಲ್ಲ. ವಾಸ್ತವದಲ್ಲಿ ಇವರೆಲ್ಲರೂ ವಿದ್ರೋಹಿಗಳಾಗಿದ್ದಾರೆ.[19]

أَتَوَاصَوْا۟ بِهِۦ ۚ بَلْ هُمْ قَوْمٌ طَاغُونَ ﴿٥٣﴾

54. ಆದುದರಿಂದ ಸಂದೇಶವಾಹಕರೇ, ಇವರ ಕಡೆಯಿಂದ ಮುಖ ತಿರುಗಿಸಿಕೊಳ್ಳಿರಿ. ನಿಮ್ಮ ಮೇಲೇನೂ ಅಪವಾದವಿಲ್ಲ.

فَتَوَلَّ عَنْهُمْ فَمَآ أَنتَ بِمَلُومٍ ﴿٥٤﴾

55. ಆದರೆ ಉಪದೇಶ ಮಾಡುತ್ತಲಿರಿ. ಏಕೆಂದರೆ ಉಪದೇಶವು ಸತ್ಯವಿಶ್ವಾಸ ಸ್ವೀಕರಿಸುವವರ ಪಾಲಿಗೆ ಉಪಯುಕ್ತವಾಗಿರುತ್ತದೆ.

وَذَكِّرْ فَإِنَّ ٱلذِّكْرَىٰ تَنفَعُ ٱلْمُؤْمِنِينَ ﴿٥٥﴾

56. ನಾನು ಯಕ್ಷಗಳನ್ನೂ ಮನುಷ್ಯರನ್ನೂ ಸೃಷ್ಟಿಸಿರುವುದು ನನ್ನ ದಾಸ್ಯ ಮತ್ತು ಆರಾಧನೆಗಾಗಿಯೇ ಹೊರತು ಬೇರಾವುದೇ ಕಾರ್ಯಕ್ಕಾಗಿ ಅಲ್ಲ.[20]

وَمَا خَلَقْتُ ٱلْجِنَّ وَٱلْإِنسَ إِلَّا لِيَعْبُدُونِ ﴿٥٦﴾

57. ನಾನು ಅವರಿಂದ ಜೀವನಾಧಾರವನ್ನೇನೂ ಬಯಸುವುದಿಲ್ಲ ಮತ್ತು ಅವರು ನನಗೆ ಉಣಿಸಬೇಕೆಂದೂ ಅಪೇಕ್ಷಿಸುವುದಿಲ್ಲ.

مَآ أُرِيدُ مِنْهُم مِّن رِّزْقٍ وَمَآ أُرِيدُ أَن يُطْعِمُونِ ﴿٥٧﴾

58. ಅಲ್ಲಾಹನು ಸ್ವಯಂ ಮಹಾ ಅನ್ನದಾತನು, ಮಹಾಶಕ್ತಿಶಾಲಿ ಮತ್ತು ಪ್ರಚಂಡನಾಗಿದ್ದಾನೆ.

إِنَّ ٱللَّهَ هُوَ ٱلرَّزَّاقُ ذُو ٱلْقُوَّةِ ٱلْمَتِينُ ﴿٥٨﴾

59. ಆದುದರಿಂದ ಯಾರು ಅಕ್ರಮವೆಸಗಿದರೋ[21] ಅವರ ಪಾಲಿಗೆ,

فَإِنَّ لِلَّذِينَ ظَلَمُوا۟ ذَنُوبًا مِّثْلَ ذَنُوبِ

19. ಅರ್ಥಾತ್- ಪ್ರವಾದಿಗಳ ಸಂದೇಶಕ್ಕೆ ಪ್ರತಿಯಾಗಿ ವಿವಿಧ ಜನಾಂಗ ಮತ್ತು ರಾಷ್ಟ್ರಕ್ಕೆ ಸೇರಿದ ಜನರ ಧೋರಣೆ ಸಾವಿರಾರು ವರ್ಷಗಳಲ್ಲಿ ಎಲ್ಲಾ ಕಾಲಗಳಲ್ಲಿ ಸಮಾನವಾಗಿತ್ತು. ಹಿಂದಿನ ಮುಂದಿನ ಜನಾಂಗಗಳೆಲ್ಲವೂ ಒಂದು ಸಭೆ ಕರೆದು ಯಾವುದೇ ಪ್ರವಾದಿ ಸಂದೇಶ ನೀಡಿದರೆ ಅದಕ್ಕೆ ಹೀಗೆ ಉತ್ತರಿಸಬೇಕೆಂದು ತೀರ್ಮಾನಿಸಿರುವುದು ಇದಕ್ಕೆ ಕಾರಣವಲ್ಲ. ನಿಜವಾಗಿ ಅವರ ಧೋರಣೆಯಲ್ಲಿರುವ ಈ ಸಮಾನತೆಗೆ ಕಾರಣ, ಬಂಡಾಯ ಮತ್ತು ವಿದ್ರೋಹ ಅವರ ಸಮಾನ ವೈಶಿಷ್ಟ್ಯವಾಗಿರುವುದೇ ಆಗಿದೆ.

20. ಅರ್ಥಾತ್- ನಾನು ಅವರನ್ನು ಇತರರ ದಾಸ್ಯಕ್ಕಾಗಿ ಸೃಷ್ಟಿಸಿಲ್ಲ ಬದಲಾಗಿ ನನ್ನ ದಾಸ್ಯಕ್ಕಾಗಿ ಸೃಷ್ಟಿಸಿದ್ದೇನೆ. ನಾನು ಅವರ ಸೃಷ್ಟಿಕರ್ತನಾಗಿರುವುದರಿಂದ ಅವರು ನನ್ನ ದಾಸ್ಯ ಕೈಗೊಳ್ಳಬೇಕಾಗಿದೆ. ಇತರರು ಅವರನ್ನು ಸೃಷ್ಟಿಸಿಲ್ಲ. ಹಾಗಿರುವಾಗ ಅವರ ದಾಸ್ಯದ ಹಕ್ಕು ಅವರಿಗೆ ಎಲ್ಲಿಂದ ಬರುತ್ತದೆ. ಅವರ ಸೃಷ್ಟಿಕರ್ತ ನಾನಾಗಿರುವಾಗ ಅವರು ಇತರರ ದಾಸ್ಯ ಕೈಗೊಳ್ಳುತ್ತಾ ತಿರುಗುವುದು ಸಮ್ಮತವಾಗುವುದಾದರೂ ಹೇಗೆ?

21. ಅಕ್ರಮವೆಂದರೆ ಇಲ್ಲಿ ಸತ್ಯ ಮತ್ತು ವಾಸ್ತವಿಕತೆಯ ವಿರುದ್ಧ ಮತ್ತು ಸ್ವತಃ ತನ್ನ ಪ್ರಕೃತಿಯ ವಿರುದ್ಧ ನಡೆಸುವ ಅಕ್ರಮವಾಗಿದೆ.

ಅವರಂತಿದ್ದವರ ಪಾಲಿಗೆ ಸಿಕ್ಕಿದಂತಹ ಯಾತನೆಯೇ ಸಿದ್ಧವಿದೆ. ಅದಕ್ಕಾಗಿ ಇವರು ನನ್ನೊಡನೆ ತವಕ ಪಡುವುದು ಬೇಡ.

أَصْحَابِهِمْ فَلَا يَسْتَعْجِلُونِ ﴿٥٩﴾

60. ಕೊನೆಯಲ್ಲಿ ಯಾವ ದಿನದ ಬಗ್ಗೆ ಎಚ್ಚರಿಸಲಾಗುತ್ತಿದೆಯೋ ಆ ದಿನ ಸತ್ಯನಿಷೇಧಿಗಳಿಗೆ ವಿನಾಶವಿದೆ.

فَوَيْلٌ لِّلَّذِينَ كَفَرُوا مِن يَوْمِهِمُ الَّذِي يُوعَدُونَ ﴿٦٠﴾

ع ٣

---






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. 'ತೂರ್' (ಪರ್ವತ)ದ ಆಣೆ -

وَالطُّوْرِ ۝١

2-3. ಕೋಮಲವಾದ ಹಾಳೆಯ ಮೇಲೆ ಬರೆಯಲ್ಪಟ್ಟಿರುವ ತೆರೆದ ಗ್ರಂಥದ ಆಣೆ-

وَكِتٰبٍ مَّسْطُوْرٍ ۝٢
فِيْ رَقٍّ مَّنْشُوْرٍ ۝٣

4. ತುಂಬಿದ ಮನೆಯ ಆಣೆ-

وَّالْبَيْتِ الْمَعْمُوْرِ ۝٤

5. ಎತ್ತರವಾದ ಛಾವಣಿಯ ಆಣೆ-

وَالسَّقْفِ الْمَرْفُوْعِ ۝٥

6. ಮತ್ತು ತೆರೆಯೇಳುವ ಸಮುದ್ರದ ಆಣೆ-

وَالْبَحْرِ الْمَسْجُوْرِ ۝٦

7. ನಿನ್ನ ಪ್ರಭುವಿನ ಯಾತನೆ ಖಂಡಿತ ಸಂಭವಿಸಲಿದೆ,

اِنَّ عَذَابَ رَبِّكَ لَوَاقِعٌ ۝٧

8. ಅದನ್ನು ಯಾರೂ ತಡೆಯುವವರಿಲ್ಲ[1]-

مَّا لَهٗ مِنْ دَافِعٍ ۝٨

1. ಪ್ರಭುವಿನ ಯಾತನೆಯೆಂದರೆ ಪರಲೋಕ. ಸತ್ಯನಿಷೇಧಿಗಳ ಪಾಲಿಗೆ ಪರಲೋಕ ಆಸನ್ನವಾಗುವುದೆಂದರೆ, ಯಾತನೆ ಬಂದಂತೆಯೇ ಸರಿ. ಅದು ಆಸನ್ನವಾಗಲಿರುವ ಕುರಿತು ಐದು ವಿಷಯಗಳ ಆಣೆ ಹಾಕಲಾಗಿದೆ. ಅರ್ಥಾತ್, ಈ ಐದು ಸೂಕ್ತಗಳು ಅದು ಆಸನ್ನವಾಗಲಿರುವುದರ ಸಾಕ್ಷ್ಯ ನುಡಿಯುತ್ತಿವೆ-

I. ಶೋಷಿತ ಜನಾಂಗವೊಂದನ್ನು ಮೇಲೆತ್ತಿ ಶೋಷಕ ಜನಾಂಗದ ಪತನದ ತೀರ್ಮಾನ ಮಾಡಲಾದ ತೂರ್ ಪರ್ವತ. ಈ ತೀರ್ಮಾನ ದೇವನ ದೇವತ್ವ ಅವ್ಯವಸ್ಥೆಯಿಂದ ಕೂಡಿಲ್ಲ ಎಂಬುದರ ಸೂಚನೆಯಾಗಿದೆ.

II. ಪವಿತ್ರ ಗ್ರಂಥಗಳ ಸಂಕಲನ. ಪುರಾತನ ಕಾಲದಲ್ಲಿ ಅದನ್ನು ಕೋಮಲವಾದ ತೊಗಲಿನಲ್ಲಿ ಬರೆದಿಡಲಾಗುತ್ತಿತ್ತು. ಎಲ್ಲಾ ಕಾಲಗಳಲ್ಲಿ ಅಲ್ಲಾಹನ ವತಿಯಿಂದ ಬಂದ ಪ್ರವಾದಿಗಳು ಪರಲೋಕ ಬರಲಿದೆ ಎಂಬ ಸುದ್ದಿ ತಲಪಿಸಿದ್ದರೆಂಬುದಕ್ಕೆ ಇದು ಸಾಕ್ಷಿಯಾಗಿದೆ.

III. 'ತುಂಬಿದ ಮನೆ' ಎಂದರೆ ಕಅಬಾ ಭವನ. ಅದನ್ನೊಂದು ನಿರ್ಜನ ಪ್ರದೇಶದಲ್ಲಿ ನಿರ್ಮಿಸಲಾಯಿತು. ಅನಂತರ ಅಲ್ಲಾಹನು ಅಲ್ಲಿ ಬೇರಾವುದೇ ಭವನಕ್ಕೂ ದಯಪಾಲಿಸಿರದಂತಹ ಜನದಟ್ಟಣೆಯನ್ನು ದಯ ಪಾಲಿಸಿದನು. ಹ. ಇಬ್‌ರಾಹೀಮ್‌ರು(ಅ) ಅದನ್ನು ನಿರ್ಜನ ಬೆಟ್ಟದ ನಡುವೆ ನಿರ್ಮಿಸಿ ಹಜ್ಜ್‌ನ ಕರೆ ನೀಡಿದ್ದರು. ಸಾವಿರಾರು ವರ್ಷಗಳ ತನಕ ಜಗತ್ತಿನ ಜನರು ಆ ಕಡೆಗೆ ನಿರಂತರ ಹರಿದು ಬರುವರೆಂದು ಆಗ ಯಾರಿಗೂ ಅಂದಾಜಿಸಲಿಕ್ಕೂ ಸಾಧ್ಯವಿರಲಿಲ್ಲ.

IV. ಎತ್ತರವಾದ ಛಾವಣಿ ಎಂದರೆ ಆಕಾಶ.

V. ತೆರೆಯೇಳುವ ಸಮುದ್ರ. ಇವೆಲ್ಲವೂ ಅಲ್ಲಾಹನ ಸಾಮರ್ಥ್ಯದ ಸ್ಪಷ್ಟ ನಿದರ್ಶನಗಳಾಗಿವೆ. ಅವುಗಳನ್ನು ಉಂಟು ಮಾಡುವವನು

9-10. ಆಕಾಶವು ತೀವ್ರವಾಗಿ ಓಲಾಡುವ ಹಾಗೂ ಪರ್ವತಗಳು ಹಾರಾಡುವ ದಿನ ಅದು ಸಂಭವಿಸುವುದು.

يَّوْمَ تَمُوْرُ السَّمَآءُ مَوْرًا ۙ﴿٩﴾ وَّ تَسِيْرُ الْجِبَالُ سَيْرًا ؕ﴿١٠﴾

11-12. ಇಂದು ವಿನೋದಕ್ಕಾಗಿ ವಾಗ್ವಾದಗಳನ್ನು ನಡೆಸುವುದರಲ್ಲೇ ಮಗ್ನರಾಗಿರುವ ಸತ್ಯಧಿಕ್ಕಾರಿಗಳಿಗೆ ಅಂದು ವಿನಾಶವಿದೆ.

فَوَيْلٌ يَّوْمَئِذٍ لِّلْمُكَذِّبِيْنَ ۙ﴿١١﴾ الَّذِيْنَ هُمْ فِيْ خَوْضٍ يَّلْعَبُوْنَ ۘ﴿١٢﴾

وقف لازم

13. ಅವರನ್ನು ಅಟ್ಟಿಸಿಕೊಂಡು ನರಕಾಗ್ನಿಯ ಕಡೆಗೆ ಕೊಂಡೊಯ್ಯುವಂದು,

يَوْمَ يُدَعُّوْنَ اِلٰى نَارِ جَهَنَّمَ دَعًّا ؕ﴿١٣﴾

14. ಅವರೊಡನೆ ಹೇಳಲಾಗುವುದು; "ಇದು ನೀವು ಸುಳ್ಳಾಗಿಸುತ್ತಿದ್ದ ನರಕಾಗ್ನಿಯೇ ಆಗಿದೆ.

هٰذِهِ النَّارُ الَّتِيْ كُنْتُمْ بِهَا تُكَذِّبُوْنَ ﴿١٤﴾

15. ಈಗ ಹೇಳಿರಿ- ಇದು ಮಾಟವೇ ಅಥವಾ ನಿಮಗೆ ತೋಚುವುದಿಲ್ಲವೇ?

اَفَسِحْرٌ هٰذَآ اَمْ اَنْتُمْ لَا تُبْصِرُوْنَ ۚ﴿١٥﴾

16. ಇನ್ನು ಅದರೊಳಗೆ ಬಿದ್ದು ಕರಟಿ ಹೋಗಿರಿ. ನೀವು ಸಹಿಸಿದರೂ ಸಹಿಸದಿದ್ದರೂ ನಿಮ್ಮ ಮಟ್ಟಿಗೆ ಸಮಾನವಾಗಿದೆ. ನೀವು ಯಾವ ತರದ ಕರ್ಮವೆಸಗಿದ್ದಿರೋ ಅದೇ ತರದ ಪ್ರತಿಫಲವನ್ನು ನಿಮಗೆ ಕೊಡಲಾಗುತ್ತಿದೆ" ಎಂದು ಹೇಳಲಾಗುವುದು.

اِصْلَوْهَا فَاصْبِرُوْٓا اَوْ لَا تَصْبِرُوْا ۚ سَوَآءٌ عَلَيْكُمْ ؕ اِنَّمَا تُجْزَوْنَ مَا كُنْتُمْ تَعْمَلُوْنَ ﴿١٦﴾

17. 'ಧರ್ಮನಿಷ್ಠರು' ಅಲ್ಲಿ ಸ್ವರ್ಗೋದ್ಯಾನಗಳಲ್ಲಿಯೂ ಸುಖಸೌಭಾಗ್ಯಗಳಲ್ಲಿಯೂ ಇರುವರು.

اِنَّ الْمُتَّقِيْنَ فِيْ جَنّٰتٍ وَّ نَعِيْمٍ ۙ﴿١٧﴾

18. ಅವರ ಪ್ರಭು ಅವರಿಗೆ ದಯಪಾಲಿಸಲಿರುವ ವಸ್ತುಗಳನ್ನು ಆಸ್ವದಿಸುತ್ತಿರುವರು ಮತ್ತು ಅವರ ಪ್ರಭು ಅವರನ್ನು ನರಕ ಯಾತನೆಯಿಂದ ರಕ್ಷಿಸಿಕೊಳ್ಳುವನು.

فٰكِهِيْنَ بِمَآ اٰتٰهُمْ رَبُّهُمْ ۚ وَ وَقٰهُمْ رَبُّهُمْ عَذَابَ الْجَحِيْمِ ﴿١٨﴾

19. "ನೀವು ಮಾಡುತ್ತಲಿದ್ದ ಕರ್ಮಗಳ ಪ್ರತಿಫಲವಾಗಿ ಸಂತೋಷದಿಂದ ಉಣ್ಣಿರಿ ಮತ್ತು ಕುಡಿಯಿರಿ" (ಎಂದು ಅವರೊಡನೆ ಹೇಳಲಾಗುವುದು).

كُلُوْا وَ اشْرَبُوْا هَنِيْٓــًٔا بِمَا كُنْتُمْ تَعْمَلُوْنَ ۙ﴿١٩﴾

20. ಅವರು ಎದುರುಬದುರಾಗಿ ಇರಿಸಲಾಗಿರುವ ಪೀಠಗಳಲ್ಲಿ ದಿಂಬುಗಳಿಗೆ ಒರಗಿ ಕುಳಿತಿರುವರು ಮತ್ತು ನಾವು ಸುಂದರ ನಯನಗಳುಳ್ಳ 'ಹೂರ್'ಗಳನ್ನು ಅವರಿಗೆ ವಿವಾಹ ಮಾಡಿಕೊಡುವೆವು.

مُتَّكِـِٕيْنَ عَلٰى سُرُرٍ مَّصْفُوْفَةٍ ۚ وَ زَوَّجْنٰهُمْ بِحُوْرٍ عِيْنٍ ﴿٢٠﴾

---

ಪರಲೋಕವನ್ನುಂಟು ಮಾಡಲು ಅಸಮರ್ಥನಲ್ಲ ಎಂದು ಇವು ಸಾಕ್ಷ್ಯ ನುಡಿಯುತ್ತಿವೆ.

21. ಸತ್ಯವಿಶ್ವಾಸಿಗಳನ್ನೂ ವಿಶ್ವಾಸದ ಯಾವ ಮಟ್ಟದಲ್ಲಾದರೂ ಅವರನ್ನು ಅನುಸರಿಸಿದ ಅವರ ಸಂತಾನಗಳನ್ನೂ ನಾವು ಸ್ವರ್ಗದಲ್ಲಿ ಅವರೊಂದಿಗೆ ಸೇರಿಸುವೆವು ಮತ್ತು ಅವರ ಕರ್ಮದಲ್ಲೇನೂ ಅವರಿಗೆ ಕೊರತೆ ಮಾಡಲಾರೆವು. ಪ್ರತಿಯೊಬ್ಬನೂ ತನ್ನ ದುಡಿಮೆಯ ಬದಲಿಗೆ ಅಡವಾಗಿದ್ದಾನೆ.[2]

وَالَّذِيْنَ اٰمَنُوْا وَاتَّبَعَتْهُمْ ذُرِّيَّتُهُمْ بِاِيْمَانٍ اَلْحَقْنَا بِهِمْ ذُرِّيَّتَهُمْ وَمَآ اَلَتْنٰهُمْ مِّنْ عَمَلِهِمْ مِّنْ شَيْءٍ ؕ كُلُّ امْرِئٍۭ بِمَا كَسَبَ رَهِيْنٌ ﴿٢١﴾

22. ನಾವು ಅವರಿಗೆ ಎಲ್ಲ ತರದ ಫಲವನ್ನೂ ಮಾಂಸವನ್ನೂ ಅವರ ಮನಸ್ಸು ಇಷ್ಟಪಡುವಂತಹದೆಲ್ಲವನ್ನೂ ಧಾರಾಳವಾಗಿ ಕೊಡು ತ್ತಲೇ ಇರುವೆವು.

وَاَمْدَدْنٰهُمْ بِفَاكِهَةٍ وَّلَحْمٍ مِّمَّا يَشْتَهُوْنَ ﴿٢٢﴾

23. ಅವರು ಪರಸ್ಪರರಿಂದ ಪಾನಪಾತ್ರೆಗಳನ್ನು ತೆಗೆದುಕೊಳ್ಳುವರು. ಅಸಂಬದ್ಧ ಮಾತಾಗಲಿ, ದುರ್ನಡೆಯಾಗಲಿ ಅವರಲ್ಲಿರಲಾರದು.[3]

يَتَنَازَعُوْنَ فِيْهَا كَاْسًا لَّا لَغْوٌ فِيْهَا وَلَا تَاْثِيْمٌ ﴿٢٣﴾

24. ಅವರಿಗಾಗಿಯೇ (ಅವರ ಸೇವೆಗಾಗಿಯೇ) ಮೀಸಲಿರುವ ಬಾಲಕರು ಅವರ ಸೇವೆಗಾಗಿ ಧಾವಿಸುತ್ತಿರುವರು. ಅವರು ಬಚ್ಚಿಟ್ಟ ಮುತ್ತಿನಂತೆ ಸುಂದರರಾಗಿರುವರು.

وَيَطُوْفُ عَلَيْهِمْ غِلْمَانٌ لَّهُمْ كَاَنَّهُمْ لُؤْلُؤٌ مَّكْنُوْنٌ ﴿٢٤﴾

25. ಈ ಜನರು ಪರಸ್ಪರರೊಡನೆ (ಭೂಲೋಕದಲ್ಲಿ ಗತಿಸಿದ) ಪರಿಸ್ಥಿತಿಗಳನ್ನು ವಿಚಾರಿಸುವರು.

وَاَقْبَلَ بَعْضُهُمْ عَلٰى بَعْضٍ يَّتَسَآءَلُوْنَ ﴿٢٥﴾

26. ಅವರು ಹೇಳುವರು; ನಾವು ಹಿಂದೆ ನಮ್ಮ ಮನೆಯವರ ನಡುವೆ ಹೆದರುತ್ತ ಜೀವನ ನಡೆಸುತ್ತಿದ್ದೆವು.[4]

قَالُوْٓا اِنَّا كُنَّا قَبْلُ فِيْٓ اَهْلِنَا مُشْفِقِيْنَ ﴿٢٦﴾

27. ಕೊನೆಗೆ ಅಲ್ಲಾಹನು ನಮ್ಮ ಮೇಲೆ ಅನುಗ್ರಹ ತೋರಿದನು ಮತ್ತು ಸುಟ್ಟು ಹಾಕುವಂತಹ ಗಾಳಿಯ ಯಾತನೆಯಿಂದ ನಮ್ಮನ್ನು ರಕ್ಷಿಸಿ ಬಿಟ್ಟನು.

فَمَنَّ اللّٰهُ عَلَيْنَا وَوَقٰىنَا عَذَابَ السَّمُوْمِ ﴿٢٧﴾

---

2. ಅರ್ಥಾತ್- ಯಾವ ರೀತಿ ಸಾಲವನ್ನು ಪಾವತಿಸದೆ ಅಡವಿಟ್ಟ ವಸ್ತುವನ್ನು ಪಡೆಯಲು ಸಾಧ್ಯವಿಲ್ಲವೋ ಹಾಗೆಯೇ ತನ್ನ ಕರ್ತವ್ಯವನ್ನು ನಿರ್ವಹಿಸದೆ ಯಾವ ವ್ಯಕ್ತಿಯೂ ಅಲ್ಲಾಹನ ವಿಚಾರಣೆಯಿಂದ ಮುಕ್ತನಾಗಲಾರ. ಮಕ್ಕಳು ಸ್ವತಃ ಉತ್ತಮರಲ್ಲದಿದ್ದರೆ ತಂದೆ-ತಾತಂದಿರ ಒಳಿತು ಅವರ ಅಡವನ್ನು ಬಿಡಿಸಲಾರದು.
3. ಅರ್ಥಾತ್- ಆ ಮದ್ಯವು ಅಮಲು ಬರಿಸುವಂತಹುದಾಗಿರುವುದಿಲ್ಲ. ಅದನ್ನು ಕುಡಿದು ಅವರು ಮೈಮರೆಯುವುದಿಲ್ಲ. ನಿರರ್ಥಕ ಮಾತುಗಳನ್ನಾಡುವುದಿಲ್ಲ. ಅವಾಚ್ಯ ಬೈಗುಳ ಮತ್ತು ಜಗಳಕ್ಕಿಳಿಯುವುದಿಲ್ಲ. ಲೋಕದ ಮದ್ಯವ್ಯಸನಿಗಳು ಮಾಡುವಂತಹ ಅಶ್ಲೀಲ ಕೆಲಸಗಳನ್ನು ಮಾಡುವುದಿಲ್ಲ.
4. ಅರ್ಥಾತ್- ಅಲ್ಲಿ ನಾವು ಐಶಾರಾಮದಲ್ಲಿ ತಲ್ಲೀನರಾಗಿ ಮತ್ತು ತಮ್ಮದೇ ಆದ ಲೋಕದಲ್ಲಿ ಮಗ್ನರಾಗಿ ಅಲಕ್ಷ್ಯದ ಜೀವನ ಸಾಗಿಸುತ್ತಿರಲಿಲ್ಲ. ದೇವನ ಬಳಿ ನಮ್ಮ ವಿಚಾರಣೆ ನಡೆಯುವಂತಹ ಕೆಲಸವೇನಾದರೂ ನಮ್ಮಿಂದ ಸಂಭವಿಸಿ ಬಿಡುವುದೇ ಎಂದು ನಾವು ಸದಾ ಹೆದರಿಕೊಂಡಿರುತ್ತಿದ್ದೆವು. ಇಲ್ಲಿ ಮನೆಯವರ ನಡುವೆ ಅಂಜಿಕೆಯಿಂದ ಜೀವನ ಸಾಗಿಸುತ್ತಿದ್ದುದನ್ನು ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಏಕೆಂದರೆ ವ್ಯಕ್ತಿ ತನ್ನ ಮಕ್ಕಳು-ಮರಿಗಳನ್ನು ಐಶಾರಾಮದಲ್ಲಿರಿಸುವ ಮತ್ತು ತನ್ನ ಲೌಕಿಕ ಗಳಿಕೆಯ ಬಗೆಗಿನ ಚಿಂತೆಯಲ್ಲಿ ಪಾಪಕ್ಕೀಡಾಗುವಂತಹ ಸಾಧ್ಯತೆ ಅತಿ ಹೆಚ್ಚಿದೆ.

28. ನಾವು ಗತ ಜೀವನದಲ್ಲಿ ಅವನನ್ನೇ ಪ್ರಾರ್ಥಿಸುತ್ತಿದ್ದೆವು. ಅವನು ನಿಜಕ್ಕೂ ಮಹಾ ಉಪಕಾರಿಯೂ ಕರುಣಾನಿಧಿಯೂ ಆಗಿರುವನು.

إِنَّا كُنَّا مِن قَبْلُ نَدْعُوهُ ۖ إِنَّهُ هُوَ الْبَرُّ الرَّحِيمُ ﴿٢٨﴾

29. ಆದುದರಿಂದ ಸಂದೇಶವಾಹಕರೇ, ನೀವು ಉಪದೇಶ ಮಾಡುತ್ತ ಹೋಗಿರಿ. ನಿಮ್ಮ ಪ್ರಭುವಿನ ಅನುಗ್ರಹದಿಂದ, ನೀವು ಮಾಟಗಾರನೂ ಅಲ್ಲ ಹುಚ್ಚನೂ ಅಲ್ಲ.[5]

فَذَكِّرْ فَمَا أَنتَ بِنِعْمَتِ رَبِّكَ بِكَاهِنٍ وَلَا مَجْنُونٍ ﴿٢٩﴾

30. ಇವನು ಕವಿ, ಇವನ ವಿಷಯದಲ್ಲಿ ನಾವು ಕಾಲಚಕ್ರ ಉರುಳುವುದನ್ನು ಕಾಯುತ್ತಿದ್ದೇವೆಂದು ಇವರು ಹೇಳುತ್ತಿರುವರೇ?

أَمْ يَقُولُونَ شَاعِرٌ نَّتَرَبَّصُ بِهِ رَيْبَ الْمَنُونِ ﴿٣٠﴾

31. ಸರಿ, ನೀವು ಕಾಯುತ್ತಲೇ ಇರಿ, ನಿಮ್ಮ ಜೊತೆ ನಾನೂ ಕಾಯುತ್ತೇನೆ ಎಂದು ಹೇಳಿರಿ.

قُلْ تَرَبَّصُوا فَإِنِّي مَعَكُم مِّنَ الْمُتَرَبِّصِينَ ﴿٣١﴾

32. ಇವರ ಬುದ್ಧಿಯು ಇವರಿಗೆ ಇಂತಹದೇ ಮಾತುಗಳನ್ನಾಡಲು ಹೇಳುತ್ತಿದೆಯೇ? ಅಥವಾ ಇವರು ನಿಜವಾಗಿ ವಿದ್ರೋಹದಲ್ಲಿ ಮಿತಿ ಮೀರಿರುವ ಜನರಾಗಿರುವರೇ?[6]

أَمْ تَأْمُرُهُمْ أَحْلَامُهُم بِهَٰذَا ۚ أَمْ هُمْ قَوْمٌ طَاغُونَ ﴿٣٢﴾

33. ಇವನು ಕುರ್‌ಆನನ್ನು ಸ್ವತಃ ಸೃಷ್ಟಿಸಿಕೊಂಡಿರುವನೆಂದು ಇವರು ಹೇಳುತ್ತಾರೆಯೇ? ವಾಸ್ತವದಲ್ಲಿ ಇವರು ಸತ್ಯವಿಶ್ವಾಸವನ್ನು ಸ್ವೀಕರಿಸಲು ಇಚ್ಛಿಸುವುದಿಲ್ಲ.

أَمْ يَقُولُونَ تَقَوَّلَهُ ۚ بَل لَّا يُؤْمِنُونَ ﴿٣٣﴾

34. ಇವರು ಸತ್ಯ ಹೇಳುವವರಾಗಿದ್ದರೆ ಇದೇ ಮಟ್ಟದ ಒಂದು ವಾಣಿಯನ್ನು ಇವರು ರಚಿಸಿ ತರಲಿ.

فَلْيَأْتُوا بِحَدِيثٍ مِّثْلِهِ إِن كَانُوا صَادِقِينَ ﴿٣٤﴾

35. ಇವರು ಒಬ್ಬ ಸೃಷ್ಟಿಕರ್ತನಿಲ್ಲದೆ ಸ್ವಯಂ ಹುಟ್ಟಿಕೊಂಡರೇ? ಅಥವಾ ಇವರು ತಾವೇ ತಮ್ಮ ಸೃಷ್ಟಿಕರ್ತರೇ?

أَمْ خُلِقُوا مِنْ غَيْرِ شَيْءٍ أَمْ هُمُ الْخَالِقُونَ ﴿٣٥﴾

36. ಅಥವಾ ಭೂಮಿ-ಆಕಾಶಗಳನ್ನು ಇವರು ಸೃಷ್ಟಿಸಿದ್ದಾರೆಯೇ?

أَمْ خَلَقُوا السَّمَاوَاتِ وَالْأَرْضَ ۚ

5. ಪರಲೋಕದ ಚಿತ್ರಣವನ್ನು ನೀಡಲಾದ ನಂತರ, ಪ್ರವಾದಿವರ್ಯರ(ಸ) ಸಂದೇಶವನ್ನು ವಿರೋಧಿಸಲು ಮಕ್ಕಾದ ಸತ್ಯನಿಷೇಧಿಗಳು ಅನುಸರಿಸುತ್ತಿದ್ದ ಹಟಮಾರಿತನದ ಕಡೆಗೆ ಉಪನ್ಯಾಸದ ದಿಸೆಯನ್ನು ಬದಲಿಸಲಾಗಿದೆ. ಈ ಸೂಕ್ತದಲ್ಲಿ ಪ್ರವಾದಿವರ್ಯರನ್ನು(ಸ) ಅಭಿಸಂಬೋಧಿಸಲಾಗಿದ್ದರೂ ವಾಸ್ತವದಲ್ಲಿ ಈ ಮಾತನ್ನು ಮಕ್ಕಾದ ಸತ್ಯನಿಷೇಧಿಗಳಿಗೆ ಕೇಳಿಸುವುದು ಇದರ ಉದ್ದೇಶವಾಗಿದೆ.

6. ಈ ಸಂಕ್ಷಿಪ್ತ ಉದ್ಧರಣೆಗಳ ಮೂಲಕ ವಿರೋಧಿಗಳ ಕುಪ್ರಚಾರಗಳ ಪೊಳ್ಳುತನವನ್ನೆಲ್ಲಾ ಬಯಲಿಗೆಳೆಯಲಾಗಿದೆ. ಇದರ ಭಾವಾರ್ಥವೇನೆಂದರೆ- ಕುರೈಶರ ಸರದಾರರು ಮತ್ತು ಪುರೋಹಿತರು ಮಹಾ ಬುದ್ಧಿವಂತರಾಗಿ ಮೆರೆಯುತ್ತಾರೆ. ಹಾಗಿರುವಾಗ ಕವಿಯಲ್ಲದ ವ್ಯಕ್ತಿಯನ್ನು ಕವಿಯೆಂದು ಕರೆಯುವುದು, ಸಮಸ್ತ ಜನಾಂಗದವರು ವಿವೇಕಮತಿಯೆಂದು ಬಲ್ಲವನನ್ನು ಹುಚ್ಚನೆನ್ನುವುದು, ಮಾಟ ಮಂತ್ರಗಳೊಂದಿಗೆ ದೂರದ ಸಂಬಂಧವೂ ಇಲ್ಲದವರನ್ನೂ ಮಂತ್ರವಾದಿಯೆನ್ನುವುದು ಅವರ ಬುದ್ಧಿಗೆ ಹೇಗೆ ನಿಲುಕುತ್ತದೆ. ಬುದ್ಧಿಯ ಆಧಾರದಲ್ಲೇ ಇವರು ತೀರ್ಮಾನಿಸುವುದಾದರೆ ಯಾವುದಾದರೂ ಒಂದು ತೀರ್ಮಾನವನ್ನು ಕೈಗೊಳ್ಳುತ್ತಿದ್ದರು. ವಿರೋಧಾಭಾಸಕ್ಕೆ ಆಸ್ಪದವಿರುವಂತಹ ಅನೇಕ ತೀರ್ಮಾನಗಳನ್ನು ಒಮ್ಮೆಲೇ ಮಾಡಿಬಿಡುತ್ತಿರಲಿಲ್ಲ. ಒಬ್ಬ ವ್ಯಕ್ತಿ ಒಂದೇ ಬಾರಿಗೆ ಕವಿ, ಹುಚ್ಚ ಮತ್ತು ಮಂತ್ರವಾದಿಯಾಗುವುದು ಹೇಗೆ?

ವಾಸ್ತವದಲ್ಲಿ ಇವರಿಗೆ ನಂಬಿಕೆ ಇಲ್ಲ.[7]

بَل لَّا يُوقِنُونَ ۝٣٦

37. ನಿಮ್ಮ ಪ್ರಭುವಿನ ಭಂಡಾರಗಳು ಇವರ ವಶದಲ್ಲಿವೆಯೇ? ಅಥವಾ ಅವುಗಳ ಮೇಲೆ ಇವರದೇ ಅಧಿಕಾರ ನಡೆಯುತ್ತಿದೆಯೇ?[8]

أَمْ عِندَهُمْ خَزَائِنُ رَبِّكَ أَمْ هُمُ الْمُصَيْطِرُونَ ۝٣٧

38. ಇವರ ಬಳಿ ಆಕಾಶದ ರಹಸ್ಯಗಳನ್ನು ಕೇಳಲು ಅಂತಹ ಏಣಿಯೇನಾದರೂ ಇದೆಯೇ? ಇವರ ಪೈಕಿ ರಹಸ್ಯವನ್ನು ಕದ್ದು ಕೇಳಿದವನು ಯಾವುದಾದರೂ ವ್ಯಕ್ತ ಪುರಾವೆಯನ್ನು ತರಲಿ.

أَمْ لَهُمْ سُلَّمٌ يَسْتَمِعُونَ فِيهِ ۖ فَلْيَأْتِ مُسْتَمِعُهُم بِسُلْطَانٍ مُّبِينٍ ۝٣٨

39. ಏನು! ಅಲ್ಲಾಹನಿಗೆ ಪುತ್ರಿಯರು ಮತ್ತು ನಿಮಗೆ ಪುತ್ರರೇ?[9]

أَمْ لَهُ الْبَنَاتُ وَلَكُمُ الْبَنُونَ ۝٣٩

40. ಇವರು ಋಣಭಾರದಲ್ಲಿ ಮುಳುಗುವಂತಾಗಲು, ನೀವು ಇವರಿಂದೇನಾದರೂ ಸಂಭಾವನೆ ಕೇಳುತ್ತೀರಾ?

أَمْ تَسْأَلُهُمْ أَجْرًا فَهُم مِّن مَّغْرَمٍ مُّثْقَلُونَ ۝٤٠

41. ಇವರ ಬಳಿ ಅಗೋಚರ ವಾಸ್ತವಿಕತೆಗಳ ಜ್ಞಾನವಿದ್ದು ಅದರ ಆಧಾರದಲ್ಲಿ ಇವರು ಬರೆಯುತ್ತಿರುವರೇ?[10]

أَمْ عِندَهُمُ الْغَيْبُ فَهُمْ يَكْتُبُونَ ۝٤١

42. ಇವರೇನಾದರೂ ಕುತಂತ್ರವನ್ನು ಹೂಡಬಯಸುತ್ತಾರೆಯೇ? ಹಾಗಾದರೆ ಸತ್ಯನಿಷೇಧಿಗಳ ಕುತಂತ್ರವು ಅವರ ಮೇಲೆಯೇ ತಿರುಗಿ ಬೀಳಲಿದೆ.

أَمْ يُرِيدُونَ كَيْدًا ۖ فَالَّذِينَ كَفَرُوا هُمُ الْمَكِيدُونَ ۝٤٢

7. ಅರ್ಥಾತ್- ಅವರ ಮತ್ತು ಸಮಸ್ತ ಲೋಕದ ಸೃಷ್ಟಿಕರ್ತ ಅಲ್ಲಾಹನಾಗಿದ್ದಾನೆಂದು ಅವರು ನಾಲಗೆಯಿಂದ ಸಮ್ಮತಿಸುತ್ತಾರೆ. ಆದರೆ ಅವರ ದಾಸ್ಯವನ್ನೇ ಸ್ವೀಕರಿಸಿರಿ ಎಂದ ತಕ್ಷಣ ಅವರು ಜಗಳಕ್ಕಿಳಿಯುತ್ತಾರೆ. ಇದು ಅವರಿಗೆ ಅಲ್ಲಾಹನ ಮೇಲೆ ವಿಶ್ವಾಸವಿಲ್ಲವೆಂಬುದನ್ನು ಸೂಚಿಸುತ್ತದೆ.

8. ಇದು, ಮುಹಮ್ಮದ್‌ರನ್ನೇ(ಸ) ಯಾಕೆ ಪ್ರವಾದಿಯನ್ನಾಗಿ ಮಾಡಲಾಯಿತು ಎಂಬ ಮಕ್ಕಾದ ಸತ್ಯನಿಷೇಧಿಗಳ ಆಕ್ಷೇಪಕ್ಕೆ ನೀಡಲಾದ ಉತ್ತರ. ಇದರ ಅರ್ಥವೇನೆಂದರೆ- ಅವರನ್ನು ಪಥಭ್ರಷ್ಟತೆಯಿಂದ ಮುಕ್ತಗೊಳಿಸಲು ಯಾರನ್ನಾದರೂ ಪ್ರವಾದಿಯನ್ನಾಗಿ ನೇಮಕ ಮಾಡಲೇಬೇಕಿತ್ತಲ್ಲವೇ. ಹಾಗಿರುವಾಗ ದೇವನು ತನ್ನ ಪ್ರವಾದಿಯನ್ನಾಗಿ ಯಾರನ್ನು ಆರಿಸಬೇಕು ಮತ್ತು ಯಾರನ್ನು ಆರಿಸಬಾರದು ಎಂಬ ಪ್ರಶ್ನೆ ಮಾತ್ರ ಉಳಿಯುತ್ತದೆ. ಅವರು ದೇವನು ನೇಮಿಸಿರುವ ಪ್ರವಾದಿಯನ್ನು ನಿರಾಕರಿಸುತ್ತಾರೆಂದರೆ, ಅವರು ಸ್ವತಃ ತಮ್ಮನ್ನು ದೇವನ ದೇವತ್ವದ ಒಡೆತನವನ್ನು ಹೊಂದಿದವರೆಂದು ಭಾವಿಸಿದಂತಾಗುತ್ತದೆ ಅಥವಾ ದೇವತ್ವ ದೇವನಿಗೇ ಸಲ್ಲುವುದಾದರೂ ಅಲ್ಲಿ ಆಜ್ಞೆ ನಮ್ಮದು ನಡೆಯಬೇಕು ಎಂಬ ಭ್ರಮೆಯಲ್ಲಿ ಅವರು ಸಿಲುಕಿರುವಂತಿದೆ.

9. ಅರ್ಥಾತ್- ನೀವು ಒಂದು ವೇಳೆ ಪ್ರವಾದಿಯ ಮಾತನ್ನು ನಿರಾಕರಿಸುತ್ತೀರೆಂದಾದರೆ ವಾಸ್ತವಿಕತೆಯನ್ನು ಅರಿಯಲು ನಿಮ್ಮ ಬಳಿ ಇರುವ ಮೂಲವಾದರೂ ಯಾವುದು? ನಿಮ್ಮಲ್ಲಿ ಯಾರಾದರೂ ಬಾನಲೋಕಕ್ಕೆ ಸ್ವತಃ ತಲಪಿ, ಅಲ್ಲಾಹನ ಅಥವಾ ಅವನ ದೇವಚರರ ಮೂಲಕ ನೇರವಾಗಿ, ನಿಮ್ಮ ಧರ್ಮಕ್ಕೆ ಯಾವ ವಿಶ್ವಾಸಗಳನ್ನು ನೆಚ್ಚಿಕೊಂಡಿದ್ದೀರೋ ಅದೆಲ್ಲವೂ ಸತ್ಯಕ್ಕೆ ಅನುಗುಣವಾಗಿದೆ ಎಂದು ಕಂಡುಕೊಂಡಿದ್ದಾರೆಯೇ? ನೀವು ಒಂದು ವೇಳೆ ಹಾಗೆ ವಾದಿಸುತ್ತಿಲ್ಲವೆಂದಾದರೆ ವಿಶ್ವದೊಡೆಯನಿಗೆ ಸಂತಾನವಿದೆ ಎಂದು ಆರೋಪಿಸುವುದಕ್ಕಿಂತ ಮಿಗಿಲಾದ ಹಾಸ್ಯಾಸ್ಪದ ವಿಚಾರ ಬೇರಾವುದಿದೆ. ಅದರಲ್ಲೂ ನೀವು ಸ್ವತಃ ನಿಮ್ಮ ಪಾಲಿಗೆ ಅಪಮಾನಕರವೆಂದು ಭಾವಿಸುವ, ಪುತ್ರಿಯರು ದೇವನಿಗಿದ್ದಾರೆನ್ನುವುದು ಎಂತಹ ಹಾಸ್ಯಾಸ್ಪದ ವಿಚಾರ.

10. ಅರ್ಥಾತ್- ಪರೋಕ್ಷದ(ಗೈಬ್) ತೆರೆಯ ಹಿಂದೆ ನಾವು ಇಣುಕಿ ನೋಡಿದ್ದೇವೆ. ಆದ್ದರಿಂದ ಪ್ರವಾದಿವರ್ಯರು(ಸ) ಹೇಳುತ್ತಿರುವುದು ನಿಜವಲ್ಲ. ಅದಕ್ಕಾಗಿ ನಾವು ಪ್ರವಾದಿಯ ಮಾತನ್ನು ಸುಳ್ಳಾಗಿಸುತ್ತಿದ್ದೇವೆ ಎಂದು ಅವರು ಬರೆದು ಕೊಡಬಲ್ಲರೇ?

43. ಇವರಿಗೆ ಅಲ್ಲಾಹನ ಹೊರತು ಬೇರೊಬ್ಬ ಆರಾಧ್ಯನಿದ್ದಾನೆಯೇ? ಇವರು ಮಾಡುತ್ತಿರುವ ಸಹಭಾಗಿತ್ವದಿಂದ ಅಲ್ಲಾಹನು ಪರಿಶುದ್ಧನು.

أَمْ لَهُمْ إِلَٰهٌ غَيْرُ اللَّهِ ۚ سُبْحَانَ اللَّهِ عَمَّا يُشْرِكُونَ ﴿٤٣﴾

44. ಆಕಾಶದ ತುಂಡುಗಳೇ ಉದುರಿ ಬೀಳುತ್ತಿರುವುದನ್ನು ಕಂಡರೂ ಇವು ಧಾವಿಸಿ ಬರುತ್ತಿರುವ ಮೋಡಗಳು ಎಂದು ಇವರು ಹೇಳುವರು.

وَإِن يَرَوْا كِسْفًا مِّنَ السَّمَاءِ سَاقِطًا يَقُولُوا سَحَابٌ مَّرْكُومٌ ﴿٤٤﴾

45. ಆದುದರಿಂದ ಸಂದೇಶವಾಹಕರೇ, ಇವರು ಹೊಡೆದುರುಳಿಸಲ್ಪಡುವ ದಿನವನ್ನು ತಲಪುವ ವರೆಗೂ ಇವರನ್ನು ಇವರ ಪಾಡಿಗೆ ಬಿಟ್ಟು ಬಿಡಿರಿ-

فَذَرْهُمْ حَتَّىٰ يُلَاقُوا يَوْمَهُمُ الَّذِي فِيهِ يُصْعَقُونَ ﴿٤٥﴾

46. ಅಂದು ಇವರ ಯಾವ ಕುತಂತ್ರವೂ ಇವರಿಗೆ ಫಲಕಾರಿಯಾಗದು. ಇವರ ಸಹಾಯಕ್ಕೂ ಯಾರೂ ಬರಲಾರನು-

يَوْمَ لَا يُغْنِي عَنْهُمْ كَيْدُهُمْ شَيْئًا وَلَا هُمْ يُنصَرُونَ ﴿٤٦﴾

47. ಮತ್ತು ಆ ಸಮಯ ಬರುವುದಕ್ಕೆ ಮುಂಚೆಯೂ ಅಕ್ರಮಿಗಳಿಗೆ ಒಂದು ಯಾತನೆ ಇದೆ. ಆದರೆ ಇವರಲ್ಲಿ ಹೆಚ್ಚಿನವರು ತಿಳಿಯುವುದಿಲ್ಲ.

وَإِنَّ لِلَّذِينَ ظَلَمُوا عَذَابًا دُونَ ذَٰلِكَ وَلَٰكِنَّ أَكْثَرَهُمْ لَا يَعْلَمُونَ ﴿٤٧﴾

48. ಸಂದೇಶವಾಹಕರೇ, ನಿಮ್ಮ ಪ್ರಭುವಿನ ತೀರ್ಮಾನ ಬರುವ ವರೆಗೆ ತಾಳ್ಮೆ ವಹಿಸಿರಿ. ನೀವು ನಮ್ಮ ಕಣ್ಣ ಮುಂದೆಯೇ ಇದ್ದೀರಿ. ನೀವು ಏಳುವಾಗ ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನನ್ನು ಕೀರ್ತಿಸಿರಿ.[11]

وَاصْبِرْ لِحُكْمِ رَبِّكَ فَإِنَّكَ بِأَعْيُنِنَا ۖ وَسَبِّحْ بِحَمْدِ رَبِّكَ حِينَ تَقُومُ ﴿٤٨﴾

49. ಇರುಳಲ್ಲೂ ಅವನನ್ನು ಕೀರ್ತಿಸಿರಿ, ನಕ್ಷತ್ರಗಳು ಮರಳುವಾಗಲೂ (ಕೀರ್ತಿಸಿರಿ).[12]

وَمِنَ اللَّيْلِ فَسَبِّحْهُ وَإِدْبَارَ النُّجُومِ ﴿٤٩﴾

---

11. ಅರ್ಥಾತ್- ನೀವು ನಮಾಝಿಗೆ ನಿಂತುಕೊಂಡಾಗ ಅಲ್ಲಾಹನ ಸ್ತುತಿಸ್ತೋತ್ರದಿಂದ ಅದನ್ನು ಆರಂಭಿಸಿರಿ. ಈ ಆದೇಶದ ಪಾಲನೆಗಾಗಿಯೇ ಪ್ರವಾದಿವರ್ಯರು(ಸ) ನಮಾಝನ್ನು ತಕ್ಬೀರ್ ತಹ್ರೀಮದ ನಂತರ ಈ ಕೆಳಗಿನ ಪಠಣದಿಂದ ಆರಂಭಿಸಬೇಕೆಂದು ನಿರ್ದೇಶಿಸಿದ್ದರು. "ಸುಬ್‌ಹಾನಕಲ್ಲಾಹುಮ್ಮ ವಬಿಹಮ್ದಿಕ ವತಬಾರಕಸ್ಮುಕ ವತಆಲಾ ಜದ್ದುಕ ವಲಾಇಲಾಹ ಗೈರುಕ್."

12. ಅರ್ಥಾತ್- ಫಜ್ರ್ ನಮಾಝ್‌ನ ವೇಳೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ನಕ್ಷತ್ರದಾಣೆ - ಅದು ಅಸ್ತಮಿಸಿದಾಗ-[1] — وَالنَّجْمِ اِذَا هَوٰى ۙ۝١

2. ನಿಮ್ಮ ಸಂಗಾತಿ ದಾರಿಗೆಡಲೂ ಇಲ್ಲ ವಂಚಿಸಲ್ಪಡಲೂ ಇಲ್ಲ.[2] — مَا ضَلَّ صَاحِبُكُمْ وَمَا غَوٰى ۚ۝٢

3. ಅವರು ತಮ್ಮ ಸ್ವಚಿತ್ತದಿಂದ ನುಡಿಯುವುದಿಲ್ಲ. — وَمَا يَنْطِقُ عَنِ الْهَوٰى ۗ۝٣

4. ಇದು ಅವರಿಗೆ ಅವತೀರ್ಣಗೊಳ್ಳುವಂತಹ ಒಂದು 'ದಿವ್ಯವಾಣಿ' ಆಗಿದೆ. — اِنْ هُوَ اِلَّا وَحْيٌ يُّوْحٰى ۙ۝٤

5. ಅವರಿಗೆ ಮಹಾಶಕ್ತಿಶಾಲಿಯಾದವನು ಕಲಿಸಿರುತ್ತಾನೆ. — عَلَّمَهٗ شَدِيْدُ الْقُوٰى ۙ۝٥

6. ಅವನು ಬಹಳ ಯುಕ್ತಿವಂತ.[3] ಅವನು ಪ್ರತ್ಯಕ್ಷನಾದನು, — ذُوْ مِرَّةٍ ۭ فَاسْتَوٰى ۙ۝٦

7. ಅವನು ಉನ್ನತ ದಿಗಂತದಲ್ಲಿದ್ದಾಗ.[4] — وَهُوَ بِالْاُفُقِ الْاَعْلٰى ۭ۝٧

8. ತರುವಾಯ ಅವನು ಹತ್ತಿರ ಬಂದನು ಮತ್ತು ಮೇಲೆ ತೇಲತೊಡಗಿದನು- — ثُمَّ دَنَا فَتَدَلّٰى ۙ۝٨

---

1. ಅರ್ಥಾತ್- ಕೊನೆಯ ನಕ್ಷತ್ರವೂ ಅಸ್ತಮಿಸಿ ಉಜ್ವಲ ಪ್ರಭಾತ ಆವರಿಸಿದಾಗ.
2. ಸಂಗಾತಿಯೆಂದರೆ ಪ್ರವಾದಿವರ್ಯರು(ಸ). ಏಕೆಂದರೆ ಅವರು ಮಕ್ಕಾದ ಸತ್ಯನಿಷೇಧಿಗಳ ಪಾಲಿಗೆ ಅಪರಿಚಿತರಾಗಿರಲಿಲ್ಲ. ಬದಲಾಗಿ ಅವರು, ಅವರ ನಡುವೆಯೇ, ಹುಟ್ಟಿ ಬಾಲ್ಯದಿಂದ ತಾರುಣ್ಯಕ್ಕೆ ಮತ್ತು ತಾರುಣ್ಯದಿಂದ ಮಧ್ಯವಯಸ್ಸಿಗೆ ತಲಪಿದ್ದರು. ಒಟ್ಟಿನಲ್ಲಿ ಪ್ರವಾದಿವರ್ಯರು(ಸ) ನಿಮ್ಮ ಪಾಲಿಗೆ ಚಿರಪರಿಚಿತ ವ್ಯಕ್ತಿಯಾಗಿದ್ದಾರೆ. ಅವರು ದಾರಿಗೆಟ್ಟ ಅಥವಾ ಮೋಸಹೋದ ವ್ಯಕ್ತಿಯಲ್ಲವೆಂಬ ವಿಚಾರ ಹಗಲಿನಷ್ಟು ಸ್ಪಷ್ಟವಿದೆ.
3. ಇದರ ಅರ್ಥ ಅಲ್ಲಾಹನೆಂದಲ್ಲ. ಬದಲಾಗಿ ಜಿಬ್‌ರೀಲ್(ಅ) ಆಗಿದ್ದಾರೆ. ಮುಂದೆ ಪ್ರಸ್ತಾಪಿಸಲಾಗಿರುವ ವಿಷಯದಿಂದಲೂ ಇದು ಸ್ಪಷ್ಟವಾಗುತ್ತದೆ.
4. ದಿಗಂತವೆಂದರೆ ಸೂರ್ಯೋದಯವಾಗಿ ಹಗಲಿನ ಬೆಳಕು ಹರಿಯುವ ಪೂರ್ವ ದಿಗಂತ. ಅರ್ಥಾತ್, ಮೊಟ್ಟ ಮೊದಲ ಬಾರಿಗೆ ಹ. ಜಿಬ್‌ರೀಲ್(ಅ) ಪ್ರವಾದಿವರ್ಯರಿಗೆ(ಸ) ಕಾಣಿಸಿಕೊಂಡಾಗ ಅವರು ಆಕಾಶದ ಪೂರ್ವ ಕಿನಾರೆಯಿಂದ ಪ್ರತ್ಯಕ್ಷಗೊಂಡಿದ್ದರು.

| | |
|---|---|
| 9. ಎರಡು ಬಿಲ್ಲುಗಳಷ್ಟು ಅಥವಾ ಅದಕ್ಕಿಂತ ತುಸು ಕಡಿಮೆ ಅಂತರ ಇರುವ ತನಕ.[5] | فَكَانَ قَابَ قَوْسَيْنِ أَوْ أَدْنَىٰ ﴿٩﴾ |
| 10. ಆಗ ಅವನು ಅಲ್ಲಾಹನ ದಾಸನಿಗೆ ತಾನು ತಲಪಿಸಬೇಕಾಗಿದ್ದ ದಿವ್ಯವಾಣಿಯನ್ನು ತಲಪಿಸಿದನು. | فَأَوْحَىٰ إِلَىٰ عَبْدِهِ مَا أَوْحَىٰ ﴿١٠﴾ |
| 11. ಕಣ್ಣು ಯಾವುದನ್ನು ಕಂಡಿತೋ, ಮನಸ್ಸು ಅದಕ್ಕೆ ಸುಳ್ಳನ್ನು ಸೇರಿಸಲಿಲ್ಲ.[6] | مَا كَذَبَ الْفُؤَادُ مَا رَأَىٰ ﴿١١﴾ |
| 12. ನೀವೀಗ ಅವರು ಕಣ್ಣಾರೆ ಕಾಣುತ್ತಿರುವಂತಹ ವಿಷಯದ ಬಗ್ಗೆ ಅವರೊಡನೆ ಜಗಳಾಡುತ್ತೀರಾ? | أَفَتُمَارُونَهُ عَلَىٰ مَا يَرَىٰ ﴿١٢﴾ |
| 13. ಇನ್ನೊಮ್ಮೆ ಅವರು, ಆತನು ಇಳಿಯುತ್ತಿರುವುದನ್ನು ಕಂಡರು. | وَلَقَدْ رَآهُ نَزْلَةً أُخْرَىٰ ﴿١٣﴾ |
| 14. 'ಸಿದ್ರತುಲ್ ಮುಂತಹಾ'[7]ದ ಬಳಿ. | عِندَ سِدْرَةِ الْمُنتَهَىٰ ﴿١٤﴾ |
| 15. 'ಜನ್ನತುಲ್ ಮಲ್‌ವಾ'(ಸ್ವರ್ಗದ ನೆಲೆ) ಅದರ ಹತ್ತಿರದಲ್ಲೇ ಇದೆ. | عِندَهَا جَنَّةُ الْمَأْوَىٰ ﴿١٥﴾ |
| 16. ಆಗ 'ಸ್ಸಿದ್‌ರ'ವನ್ನು ಕವಿದುಕೊಂಡಿದ್ದುದು ಕವಿದುಕೊಂಡಿತ್ತು- | إِذْ يَغْشَى السِّدْرَةَ مَا يَغْشَىٰ ﴿١٦﴾ |
| 17. ದೃಷ್ಟಿ ಕೋರೈಸಲೂ ಇಲ್ಲ, ಅತಿಕ್ರಮಿಸಲೂ ಇಲ್ಲ. | مَا زَاغَ الْبَصَرُ وَمَا طَغَىٰ ﴿١٧﴾ |

5. ಅರ್ಥಾತ್- ಆಕಾಶದ ಪೂರ್ವೋನ್ನತ ದಿಗಂತದಿಂದ ಪ್ರತ್ಯಕ್ಷರಾದ ಹ. ಜಿಬ್‌ರೀಲ್(ಅ) ಪ್ರವಾದಿವರ್ಯರ(ಸ) ಕಡೆಗೆ ಮುಂದುವರಿಯಲಾರಂಭಿಸಿದರು. ಹೀಗೆ ಮುಂದುವರಿಯುತ್ತಾ ಬಂದು ಅವರು ವಾತಾವರಣದಲ್ಲಿ ತೇಲಿ ನಿಂತರು. ಅನಂತರ ಅವರು ಪ್ರವಾದಿವರ್ಯರೆಡೆಗೆ(ಸ) ಬಾಗಿದರು. ಎಲ್ಲಿಯ ವರೆಗೆಂದರೆ ಅವರ ನಡುವೆ ಎರಡು ಬಿಲ್ಲಿನಷ್ಟು ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಅಂತರ ಉಳಿಯಿತು. ಬಿಲ್ಲುಗಳೆಲ್ಲವೂ ಒಂದೇ ಗಾತ್ರದ್ದಾಗಿರುವುದಿಲ್ಲ. ಆದ್ದರಿಂದ ಅಂತರವನ್ನು ತಿಳಿಸಲಿಕ್ಕಾಗಿ ಇಲ್ಲಿ ಎರಡು ಬಿಲ್ಲುಗಳಷ್ಟು ಅಥವಾ ಸ್ವಲ್ಪ ಕಡಿಮೆ ಅಂತರವೆಂದು ಹೇಳಲಾಗಿದೆ.
6. ಹಗಲಿನ ಬೆಳಕಿನಲ್ಲಿ ಸಂಪೂರ್ಣ ಜಾಗೃತ ಸ್ಥಿತಿಯಲ್ಲಿ ತೆರೆದ ಕಣ್ಣಿನ ಮೂಲಕ ಪ್ರವಾದಿವರ್ಯರಿಗೆ(ಸ) ಈ ದರ್ಶನವಾಗಿತ್ತು. ಇದು ಕಣ್ಣಿನ ಮೋಸವೆಂದಾಗಲಿ, ಯಾವುದೇ ಜಿನ್ನ್ ಅಥವಾ ಪಿಶಾಚಿ ನನಗೆ ಕಾಣಿಸುತ್ತಿದೆಯೆಂದಾಗಲಿ, ನನ್ನ ಮುಂದೆ ಭ್ರಾಮಕ ಚಿತ್ರಣ ಮೂಡಿದೆಯೆಂದಾಗಲಿ, ಹಗಲುಗನಸೆಂದಾಗಲಿ ಅವರ ಮನಸ್ಸು ಹೇಳಿರಲಿಲ್ಲ. ಅವರ ಕಣ್ಣುಗಳು ನೋಡಿದ್ದನ್ನೇ ಅವರ ಮನಸ್ಸೂ ನೋಡಿತು. ಇದು ನಿಜವಾಗಿಯೂ ಜಿಬ್‌ರೀಲ್‌ರಾಗಿದ್ದಾರೆ(ಅ) ಮತ್ತು ಅವರು ತಲಪಿಸುವ ಸಂದೇಶ ದಿವ್ಯವಾಣಿಯೇ ಆಗಿದೆ ಎಂಬ ಬಗ್ಗೆ ಅವರಿಗೆ ಯಾವುದೇ ರೀತಿಯ ಸಂಶಯ ಉಂಟಾಗಲಿಲ್ಲ.
7. 'ಸಿದ್ರಃ' ಎಂದು ಅರಬಿ ಭಾಷೆಯಲ್ಲಿ ಬೋರೆ ಹಣ್ಣಿನ ಮರಕ್ಕೆ ಹೇಳುತ್ತಾರೆ. 'ಮುಂತಹಾ' ಎಂದರೆ 'ಕೊನೆಯ ಅಂಚು' ಎಂದಾಗಿದೆ. 'ಸಿದ್ರತುಲ್ ಮುಂತಹಾ'ದ ಶಬ್ದಾರ್ಥ ಅತ್ಯಂತ ಕೊನೆಯ ಅಂಚಿನಲ್ಲಿರುವ ಬೋರೆ ಹಣ್ಣಿನ ಮರ ಎಂದಾಗುತ್ತದೆ. ಈ ಭೌತಿಕ ಜಗತ್ತಿನ ಕೊನೆಯ ಗಡಿಯಲ್ಲಿ ಆ ಬೋರೆಹಣ್ಣಿನ ಮರ ಹೇಗಿದೆ, ಅದರ ಸ್ವರೂಪ ಮತ್ತು ರೀತಿ ಎಂತಹದು ಎಂದು ಅಂದಾಜಿಸುವುದು ನಮಗೆ ಅತ್ಯಂತ ತ್ರಾಸದಾಯಕವಾಗಿದೆ. ಇದು ದೇವ ನಿರ್ಮಿತ ನಿಸರ್ಗದಲ್ಲಿರುವ ತಮ್ಮ ತಿಳುವಳಿಕೆಗೆ ನಿಲುಕದ ರಹಸ್ಯಗಳಾಗಿವೆ. ಒಟ್ಟಿನಲ್ಲಿ ಇದು ಅಲ್ಲಾಹನ ದೃಷ್ಟಿಯಲ್ಲಿ ಮಾನವರ ಭಾಷೆಯಲ್ಲಿರುವ 'ಸಿದ್ರಃ' ಎನ್ನುವ ಪದಕ್ಕಿಂತ ಹೆಚ್ಚು ಸೂಕ್ತವಾಗಿ ವಿವರಿಸಲಾಗದಂತಹ ಯಾವುದೋ ವಸ್ತುವಾಗಿದೆ.

18. ಮತ್ತು ಅವರು ತಮ್ಮ ಪ್ರಭುವಿನ ದೊಡ್ಡ ದೊಡ್ಡ ನಿದರ್ಶನಗಳನ್ನು ಕಂಡರು.[8]

لَقَدْ رَأَىٰ مِنْ آيَاتِ رَبِّهِ الْكُبْرَىٰ ﴿١٨﴾

19-20. ಈಗ ಹೇಳಿರಿ ನೀವು 'ಲಾತ್', 'ಉಝ್ಝಾ' ಮತ್ತು ಮೂರನೆಯ ದೇವಿ 'ಮನಾತ್'ನ ವಾಸ್ತವಿಕತೆಯ ಕುರಿತು ಸ್ವಲ್ಪವಾದರೂ ವಿವೇಚಿಸಿದ್ದೀರಾ?[9]

أَفَرَأَيْتُمُ اللَّاتَ وَالْعُزَّىٰ ﴿١٩﴾ وَمَنَاةَ الثَّالِثَةَ الْأُخْرَىٰ ﴿٢٠﴾

21. ಏನು! ನಿಮಗೆ ಪುತ್ರರು ಮತ್ತು ಅಲ್ಲಾಹನಿಗೆ ಪುತ್ರಿಯರೇ?[10]

أَلَكُمُ الذَّكَرُ وَلَهُ الْأُنثَىٰ ﴿٢١﴾

22. ಇದಂತೂ ದೊಡ್ಡ ದಾಂಧಲೆಯ ವಿತರಣೆಯೇ ಸರಿ.

تِلْكَ إِذًا قِسْمَةٌ ضِيزَىٰ ﴿٢٢﴾

23. ನಿಜವಾಗಿ ಇವೆಲ್ಲ ನೀವು ಮತ್ತು ನಿಮ್ಮ ಪೂರ್ವಜರು ಇಟ್ಟುಕೊಂಡಿರುವ ಕೆಲವು ಹೆಸರುಗಳೇ ಹೊರತು ಇನ್ನೇನೂ ಅಲ್ಲ. ಅಲ್ಲಾಹನು ಇವುಗಳ ಪರವಾಗಿ ಯಾವ ಆಧಾರವನ್ನೂ ಇಳಿಸಿಲ್ಲ. ವಾಸ್ತವದಲ್ಲಿ ಜನರು ಕೇವಲ ಊಹೆಯನ್ನು ಅನುಸರಿಸುತ್ತಾರೆ ಮತ್ತು ಸ್ವೇಚ್ಛೆಗಳ ದಾಸರಾಗಿ ಬಿಟ್ಟಿದ್ದಾರೆ. ವಸ್ತುತಃ ಅವರ ಪ್ರಭುವಿನ ಕಡೆಯಿಂದ ಅವರ ಬಳಿಗೆ ಮಾರ್ಗ ದರ್ಶನ ಬಂದಿದೆ.

إِنْ هِيَ إِلَّا أَسْمَاءٌ سَمَّيْتُمُوهَا أَنتُمْ وَآبَاؤُكُم مَّا أَنزَلَ اللَّهُ بِهَا مِن سُلْطَانٍ ۚ إِن يَتَّبِعُونَ إِلَّا الظَّنَّ وَمَا تَهْوَى الْأَنفُسُ ۖ وَلَقَدْ جَاءَهُم مِّن رَّبِّهِمُ الْهُدَىٰ ﴿٢٣﴾

24. ಮನುಷ್ಯನ ಪಾಲಿಗೆ ತಾನಿಚ್ಛಿಸಿದ್ದೇ ಸತ್ಯವೇ?[11]

أَمْ لِلْإِنسَانِ مَا تَمَنَّىٰ ﴿٢٤﴾

---

8. ಪ್ರವಾದಿವರ್ಯರು(ಸ) ಅಲ್ಲಾಹನನ್ನು ನೋಡಿರಲಿಲ್ಲ. ಬದಲಾಗಿ ಅಲ್ಲಾಹನ ಭವ್ಯ ನಿದರ್ಶನಗಳನ್ನು ಕಂಡಿದ್ದರೆಂದು ಈ ಸೂಕ್ತ ಸ್ಪಷ್ಟಪಡಿಸುತ್ತದೆ. ಮೊದಲನೆಯ ಬಾರಿ ಭೇಟಿಯಾದ ವ್ಯಕ್ತಿಯೊಡನೆಯೇ ಎರಡನೆಯ ಭೇಟಿಯೂ ನಡೆದಿತ್ತು ಎಂದು ಹಿನ್ನೆಲೆಯಿಂದ ತಿಳಿದುಬರುತ್ತದೆ. ಆದ್ದರಿಂದ ಅವರು ಉನ್ನತ ದಿಗಂತದಲ್ಲಿ ಮೊದಲನೇ ಬಾರಿ ಕಂಡದ್ದಾಗಲಿ, ಸಿದ್ರತುಲ್ ಮುಂತಹಾದ ಬಳಿ ಎರಡನೆಯ ಬಾರಿ ಕಂಡದ್ದಾಗಲಿ ಅಲ್ಲಾಹನನ್ನಾಗಿರಲಿಲ್ಲವೆಂದು ನಾವು ಅನಿವಾರ್ಯವಾಗಿ ಸಮ್ಮತಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಯಾವುದೇ ಹಂತದಲ್ಲಿ ಅವರು ಅಲ್ಲಾಹನನ್ನು ಕಂಡಿದ್ದರೆ ಖಂಡಿತವಾಗಿಯೂ ಅದರ ಬಗ್ಗೆ ಇಲ್ಲಿ ವಿವರಿಸಲಾಗುತ್ತಿತ್ತು. ಏಕೆಂದರೆ ಅದು ಅಷ್ಟು ಮಹತ್ವಪೂರ್ಣವಾದ ವಿಷಯವಾಗಿದೆ.
9. ಅರ್ಥಾತ್- ಪ್ರವಾದಿವರ್ಯರು(ಸ) ನಿಮಗೆ ನೀಡುತ್ತಿರುವ ಬೋಧನೆಗಳನ್ನು ನೀವು ಪಥಭ್ರಷ್ಟತೆ ಮತ್ತು ದುರ್ಮಾರ್ಗವೆನ್ನುತ್ತೀರಿ. ಇಷ್ಟಾಗಿ ಈ ಜ್ಞಾನವನ್ನು ಅವರಿಗೆ ಅಲ್ಲಾಹನ ವತಿಯಿಂದ ನೀಡಲಾಗುತ್ತಿದೆ. ಅವರು ನಿಮ್ಮ ಮುಂದೆ ಸಾಕ್ಷ್ಯ ವಹಿಸುತ್ತಿರುವ ವಿಷಯಗಳ ವಾಸ್ತವಿಕತೆಗಳನ್ನು ಅಲ್ಲಾಹನು ಅವರಿಗೆ ಕಣ್ಣಾರೆ ತೋರಿಸಿದ್ದಾನೆ. ಇನ್ನು ನೀವು ಯಾವ ವಿಶ್ವಾಸಗಳ ಪಾಲನೆಯ ಬಗ್ಗೆ ಒತ್ತಾಯಿಸುತ್ತೀದ್ದೀರೋ ಅದು ಎಷ್ಟು ಅಸಮರ್ಪಕವಾದುದೆಂದು ಸ್ವತಃ ನೋಡಿಕೊಳ್ಳಿರಿ. ಅದಕ್ಕೆ ಪ್ರತಿಯಾಗಿ ನಿಮಗೆ ಸನ್ಮಾರ್ಗ ತೋರಿಸುತ್ತಿರುವ ವ್ಯಕ್ತಿಯನ್ನು ವಿರೋಧಿಸುವ ಮೂಲಕ ಕೊನೆಗೂ ನೀವು ಯಾರಿಗೆ ನಷ್ಟ ಉಂಟು ಮಾಡುತ್ತಿದ್ದೀರಿ?
10. ಅರ್ಥಾತ್- ಈ ದೇವತೆಗಳನ್ನು ವಿಶ್ವದೊಡೆಯನ ಪುತ್ರಿಯರೆಂದು ನೀವು ಕಲ್ಪಿಸಿಕೊಂಡಿರಿ. ನೀವು ನಿಮ್ಮ ಪಾಲಿಗೆ ಪುತ್ರಿಯ ಜನನವನ್ನು ನಿಂದ್ಯತೆ ಎಂದು ಭಾವಿಸುತ್ತೀರಿ ಮತ್ತು ಗಂಡು ಮಕ್ಕಳನ್ನೇ ಅಪೇಕ್ಷಿಸುತ್ತೀರಿ. ಆದರೆ ಅಲ್ಲಾಹನಿಗೆ ಸಂತಾನವನ್ನು ಕಲ್ಪಿಸುವಾಗ ಪುತ್ರಿಯರನ್ನು ಕಲ್ಪಿಸುತ್ತೀರಿ. ಈ ಅಂಧಶ್ರದ್ಧೆಯನ್ನು ಹುಟ್ಟು ಹಾಕುವಾಗ ನೀವು ಇದನ್ನೂ ಆಲೋಚಿಸಲಿಲ್ಲವೇ?
11. ಇದರ ಇನ್ನೊಂದು ಅರ್ಥ 'ಮಾನವನಿಗೆ ಯಾರನ್ನು ಬೇಕಾದರೂ ತನ್ನ ಆರಾಧ್ಯರನ್ನಾಗಿ ಮಾಡಿಕೊಳ್ಳುವ ಅಧಿಕಾರವಿದೆಯೇ ಎಂದೂ ಆಗುತ್ತದೆ. ಮತ್ತೊಂದು ಅರ್ಥ, 'ಈ ಆರಾಧ್ಯರುಗಳಿಂದ ತನ್ನ ಇಷ್ಟಾರ್ಥ ಈಡೇರುವ ಬಗ್ಗೆ ಮಾನವ ಇಟ್ಟುಕೊಂಡಿರುವ ವಿಶ್ವಾಸಗಳು ಎಂದಾದರೂ ಈಡೇರುತ್ತವೆಯೇ?' ಎಂದೂ ಆಗುತ್ತದೆ.

25. ಈ ಲೋಕ ಹಾಗೂ ಪರಲೋಕದ ಒಡೆಯನಂತು ಅಲ್ಲಾಹನೇ ಆಗಿರುತ್ತಾನೆ.

فَلِلّٰهِ الْاٰخِرَةُ وَ الْاُوْلٰى ﴿٢٥﴾

26. ಆಕಾಶಗಳಲ್ಲಿ ಎಷ್ಟೋ ದೇವಚರರಿದ್ದಾರೆ. ಅವರ ಶಿಫಾರಸು ಸ್ವಲ್ಪವೂ ಉಪಯುಕ್ತವಾಗಲಾರದು- ಅಲ್ಲಾಹನೇ ಯಾವುದಾದರೂ ವ್ಯಕ್ತಿಯ ಪರವಾಗಿ ಮನವಿ ಕೇಳಲು ಬಯಸಿ, ಅವನ ವಿಷಯದಲ್ಲಿ ಅದನ್ನು ಅನುಮತಿಸುವ ಮತ್ತು ಅದನ್ನು ಮೆಚ್ಚಿ ಕೊಳ್ಳುವ ವರೆಗೆ.

وَكَمْ مِّنْ مَّلَكٍ فِى السَّمٰوٰتِ لَا تُغْنِىْ شَفَاعَتُهُمْ شَيْــًٔا اِلَّا مِنْۢ بَعْدِ اَنْ يَّاْذَنَ اللّٰهُ لِمَنْ يَّشَآءُ وَ يَرْضٰى ﴿٢٦﴾

27. ಆದರೆ ಪರಲೋಕವನ್ನು ನಂಬದವರು ದೇವಚರರಿಗೆ ದೇವಿಯರ ಹೆಸರುಗಳನ್ನಿಡುತ್ತಾರೆ.

اِنَّ الَّذِيْنَ لَا يُؤْمِنُوْنَ بِالْاٰخِرَةِ لَيُسَمُّوْنَ الْمَلٰٓئِكَةَ تَسْمِيَةَ الْاُنْثٰى ﴿٢٧﴾

28. ವಸ್ತುತಃ ಈ ಕುರಿತಾದ ಯಾವ ಜ್ಞಾನವೂ ಅವರಿಗೆ ಪ್ರಾಪ್ತವಿಲ್ಲ. ಅವರು ಕೇವಲ ಊಹೆಯನ್ನು ಅನುಸರಿಸುತ್ತಾರೆ. ಊಹೆಯು ಸತ್ಯದ ಸ್ಥಾನದಲ್ಲಿ ಯಾವ ಕೆಲಸಕ್ಕೂ ಬಾರದು.

وَمَا لَهُمْ بِهٖ مِنْ عِلْمٍ ؕ اِنْ يَّتَّبِعُوْنَ اِلَّا الظَّنَّ ۚ وَاِنَّ الظَّنَّ لَا يُغْنِىْ مِنَ الْحَقِّ شَيْــًٔا ﴿٢٨﴾

29. ಆದುದರಿಂದ ಸಂದೇಶವಾಹಕರೇ, ನಮ್ಮ ಸ್ಮರಣೆಯಿಂದ ವಿಮುಖನಾಗುವವನನ್ನು ಹಾಗೂ ಲೌಕಿಕ ಜೀವನದ ಹೊರತು ಇನ್ನೇನನ್ನೂ ಬಯಸದವನನ್ನು ಅವನ ಪಾಡಿಗೆ ಬಿಟ್ಟುಬಿಡಿರಿ.

فَاَعْرِضْ عَنْ مَّنْ تَوَلّٰى ۙ عَنْ ذِكْرِنَا وَلَمْ يُرِدْ اِلَّا الْحَيٰوةَ الدُّنْيَا ﴿٢٩﴾

30. ಇವರ[12] ಜ್ಞಾನ ಬಂಡವಾಳವಿಷ್ಟೆ. ಅವನ ಮಾರ್ಗದಿಂದ ಯಾರು ತಪ್ಪಿದ್ದಾನೆ ಮತ್ತು ಯಾರು ಸನ್ಮಾರ್ಗದಲ್ಲಿದ್ದಾನೆ ಎಂಬುದನ್ನು ನಿಮ್ಮ ಪ್ರಭುವೇ ಚೆನ್ನಾಗಿ ಬಲ್ಲನು.

ذٰلِكَ مَبْلَغُهُمْ مِّنَ الْعِلْمِ ؕ اِنَّ رَبَّكَ هُوَ اَعْلَمُ بِمَنْ ضَلَّ عَنْ سَبِيْلِهٖ ۙ وَهُوَ اَعْلَمُ بِمَنِ اهْتَدٰى ﴿٣٠﴾

31. ಅಲ್ಲಾಹನೇ ಭೂಮಿ-ಆಕಾಶಗಳ ಸಕಲ ವಸ್ತುಗಳ ಒಡೆಯನು. (ಇದು) ದುಷ್ಕರ್ಮಿಗಳಿಗೆ[13] ಅಲ್ಲಾಹನು ಅವರ ಕರ್ಮಗಳ ಪ್ರತಿಫಲ ನೀಡುವಂತಾಗಲಿಕ್ಕಾಗಿ ಮತ್ತು ಉತ್ತಮ ಧೋರಣೆ ಅನುಸರಿಸಿದವರಿಗೆ ಉತ್ತಮ ಪ್ರತಿಫಲ ದಯಪಾಲಿಸುವಂತಾಗಲಿಕ್ಕಾಗಿ.

وَلِلّٰهِ مَا فِى السَّمٰوٰتِ وَمَا فِى الْاَرْضِ ۙ لِيَجْزِىَ الَّذِيْنَ اَسَآءُوْا بِمَا عَمِلُوْا وَيَجْزِىَ الَّذِيْنَ اَحْسَنُوْا بِالْحُسْنٰى ﴿٣١﴾

32. ಅವರು ದೊಡ್ಡ ದೊಡ್ಡ ಪಾಪಕೃತ್ಯಗಳಿಂದ ಮತ್ತು ಬಹಿರಂಗವಾದ ಲಜ್ಜಾಸ್ಪದ ಕೃತ್ಯಗಳಿಂದ ದೂರವಿರುತ್ತಾರೆ. ಅಲ್ಪಸ್ವಲ್ಪ ನ್ಯೂನತೆಗಳು

اَلَّذِيْنَ يَجْتَنِبُوْنَ كَبٰٓئِرَ الْاِثْمِ وَالْفَوَاحِشَ اِلَّا اللَّمَمَ ؕ اِنَّ رَبَّكَ

12. ಇದೊಂದು ಉಪವಾಕ್ಯವಾಗಿದೆ. ವಾಕ್ಸರಣಿಯನ್ನು ಮಧ್ಯದಲ್ಲಿ ಮುರಿದು ಹಿಂದಿನ ಮಾತಿನ ಸ್ಪಷ್ಟನೆಯ ರೂಪದಲ್ಲಿ ಇದನ್ನು ಹೇಳಲಾಗಿದೆ.

13. ಇಲ್ಲಿಂದ ಮತ್ತೆ ಹಿಂದಿನಿಂದ ವಿವರಿಸಲಾದ ವಿಷಯವನ್ನೇ ಮುಂದುವರಿಸಲಾಗಿದೆ. ಅರ್ಥಾತ್ ಉಪಮಾತನ್ನು ಬಿಟ್ಟರೆ ಇಲ್ಲಿನ ಉದ್ಧರಣೆ ಹೀಗಿದೆ, "ಕೆಡುಕನ್ನೆಸಗಿದವರಿಗೆ ಅಲ್ಲಾಹನು ಅವರ ಕರ್ಮಗಳ ಪ್ರತಿಫಲ ನೀಡಲಿಕ್ಕಾಗಿ ಅವರನ್ನು ಅವರ ಪಾಡಿಗೆ ಬಿಟ್ಟುಬಿಡಿರಿ."

ಅವರಿಂದ ಸಂಭವಿಸಿದರೆ ಅದು ಇದಕ್ಕೆ ಹೊರತಾಗಿದೆ. ನಿಸ್ಸಂದೇಹ ವಾಗಿಯೂ ನಿಮ್ಮ ಪ್ರಭುವಿನ ಕ್ಷಮಾಶೀಲತೆಯು ಬಹಳ ವಿಶಾಲವಾಗಿದೆ. ಅವನು ನಿಮ್ಮನ್ನು ಭೂಮಿಯಿಂದ ಸೃಷ್ಟಿಸಿದನು ಹಾಗೂ ನೀವು ನಿಮ್ಮ ಮಾತೆಯರ ಉದರಗಳಲ್ಲಿ ಭ್ರೂಣಾವಸ್ಥೆ ಯಲ್ಲಿದ್ದ ಕಾಲದಿಂದಲೇ ಅವನು ನಿಮ್ಮನ್ನು ಚೆನ್ನಾಗಿ ಬಲ್ಲನು. ಆದುದರಿಂದ ನೀವು ನಿಮ್ಮ ಆತ್ಮಶುದ್ಧತೆಯ ಬಗ್ಗೆ ಹೇಳಿಕೊಳ್ಳ ಬೇಡಿರಿ. ನಿಜವಾದ ಧರ್ಮನಿಷ್ಠನು ಯಾರೆಂಬುದನ್ನು ಅವನೇ ಹೆಚ್ಚು ಬಲ್ಲನು.

وَاسِعُ الْمَغْفِرَةِ ۚ هُوَ اَعْلَمُ بِكُمْ اِذْ اَنْشَاَكُمْ مِّنَ الْاَرْضِ وَاِذْ اَنْتُمْ اَجِنَّةٌ فِيْ بُطُوْنِ اُمَّهٰتِكُمْ ۚ فَلَا تُزَكُّوْٓا اَنْفُسَكُمْ ۚ هُوَ اَعْلَمُ بِمَنِ اتَّقٰى ﴿٣٢﴾

33. ಸಂದೇಶವಾಹಕರೇ, ನೀವು ಕಂಡಿರಾ ದೇವಮಾರ್ಗದಿಂದ ವಿಮುಖ ನಾಗಿ ಬಿಟ್ಟವನನ್ನು-

اَفَرَءَيْتَ الَّذِيْ تَوَلّٰى ﴿٣٣﴾

34. ಮತ್ತು ಸ್ವಲ್ಪ ಮಾತ್ರ ಕೊಟ್ಟು ನಿಲ್ಲಿಸಿ ಬಿಟ್ಟವನನ್ನು?[14]

وَاَعْطٰى قَلِيْلًا وَّاَكْدٰى ﴿٣٤﴾

35. ಅವನು ಸತ್ಯವನ್ನು ಕಾಣಲು, ಅವನ ಬಳಿ ಅದೃಶ್ಯದ ಜ್ಞಾನ ಇದೆಯೇ?

اَعِنْدَهٗ عِلْمُ الْغَيْبِ فَهُوَ يَرٰى ﴿٣٥﴾

36-37. ಮೂಸಾರ ಗ್ರಂಥಗಳಲ್ಲಿ ಮತ್ತು ನಿಷ್ಠೆಯ ಋಣ ತೀರಿಸಿದ ಇಬ್‌ರಾಹೀಮ್‌ರ ಗ್ರಂಥಗಳಲ್ಲಿ ತಿಳಿಸಲಾಗಿರುವ ವಿಷಯಗಳ ಬಗ್ಗೆ ಯಾವ ಸುದ್ದಿಯೂ ಅವನಿಗೆ ತಲುಪಿಲ್ಲವೇ?[15]

اَمْ لَمْ يُنَبَّاْ بِمَا فِيْ صُحُفِ مُوْسٰى ﴿٣٦﴾ وَاِبْرٰهِيْمَ الَّذِيْ وَفّٰٓى ﴿٣٧﴾

38. (ಅದೇನೆಂದರೆ) ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು.[16]

اَلَّا تَزِرُ وَازِرَةٌ وِّزْرَ اُخْرٰى ﴿٣٨﴾

39. ಮನುಷ್ಯನು ತಾನೇ ಪರಿಶ್ರಮಿಸಿದುದರ ಹೊರತು ಅವನಿಗೆ ಬೇರೇನೂ ಇಲ್ಲ.[17]

وَاَنْ لَّيْسَ لِلْاِنْسَانِ اِلَّا مَا سَعٰى ﴿٣٩﴾

14. ಇದು ಕುರೈಶರ ದೊಡ್ಡ ಸರದಾರರಲ್ಲೊಬ್ಬನಾಗಿದ್ದ ವಲೀದ್ ಬಿನ್ ಮುಗೀರನ ಕಡೆಗಿರುವ ಸೂಚನೆ. ಈ ವ್ಯಕ್ತಿ ಮೊದಲು ಪ್ರವಾದಿವರ್ಯರ(ಸ) ಸಂದೇಶವನ್ನು ಸ್ವೀಕರಿಸಲು ಸನ್ನದ್ಧನಾಗಿದ್ದನು. ಆದರೆ ಅವನು ಮುಸ್ಲಿಮನಾಗುವ ಸಂಕಲ್ಪ ಹೊಂದಿರುವುದು ಅವನ ಬಹುದೇವಾರಾಧಕ ಮಿತ್ರನೊಬ್ಬನಿಗೆ ತಿಳಿದಾಗ ಅವನು ಹೇಳಿದನು, 'ನೀನು ಪಿತ್ರಾರ್ಜಿತ ಧರ್ಮವನ್ನು ತೊರೆಯಬೇಡ. ನಿನಗೆ ಯಾತನೆಯ ಭಯವಿದ್ದರೆ ನನಗೆ ಇಂತಿಷ್ಟು ಮೊತ್ತವನ್ನು ಕೊಟ್ಟು ಬಿಡು. ನಾನು ನಿನ್ನ ಬದಲಿಗೆ ಅಲ್ಲಿನ ಯಾತನೆಯನ್ನು ಸ್ವೀಕರಿಸುವ ಹೊಣೆ ವಹಿಸುತ್ತೇನೆ, ವಲೀದ್ ಈ ಮಾತನ್ನು ಸಮ್ಮತಿಸಿ ದೇವಮಾರ್ಗಕ್ಕೆ ಹತ್ತಿರ ಬಂದವನು ಅದರಿಂದ ವಿಮುಖನಾದನು. ಅವನು ತನ್ನ ಬಹುದೇವಾರಾಧಕ ಮಿತ್ರನಿಗೆ ಕೊಡುತ್ತೇನೆಂದು ಹೇಳಿದ್ದ ಮೊತ್ತದಲ್ಲೂ ಸ್ವಲ್ಪವನ್ನೇ ಕೊಟ್ಟು ಉಳಿದುದನ್ನು ತಡೆಹಿಡಿದನು.

15. ಮುಂದೆ ಹ. ಮೂಸಾ ಮತ್ತು ಹ. ಇಬ್‌ರಾಹೀಮ್‌ರ(ಅ) ಗ್ರಂಥಗಳ ಮೂಲಕ ಅವತೀರ್ಣಗೊಂಡಿದ್ದ ಬೋಧನೆಗಳ ಸಾರಾಂಶವನ್ನು ವಿವರಿಸಲಾಗುತ್ತಿದೆ.

16. ಅರ್ಥಾತ್- ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಕರ್ಮಗಳಿಗೆ ಹೊಣೆಗಾರನಾಗಿದ್ದಾನೆ. ಒಬ್ಬ ವ್ಯಕ್ತಿಯ ಮೇಲಿನ ಹೊಣೆಯನ್ನು ಇನ್ನೊಬ್ಬನ ಮೇಲೆ ಹೇರಲಾಗುವುದಿಲ್ಲ. ನಿಜವಾದ ಅಪರಾಧಿಯನ್ನು ಅವನ ಜಾಗದಲ್ಲಿ ಶಿಕ್ಷೆ ಅನುಭವಿಸಲು ಇನ್ನೊಬ್ಬ ತಯಾರಾಗಿದ್ದಾನೆ ಎಂಬ ಕಾರಣಕ್ಕಾಗಿ ಬಿಟ್ಟು ಬಿಡಲಾಗುವುದಿಲ್ಲ.

40. ಮತ್ತು ಅವನ ಪರಿಶ್ರಮವನ್ನು ಸದ್ಯವೇ ನೋಡಲಾಗುವುದು.

وَأَنَّ سَعْيَهُۥ سَوْفَ يُرَىٰ ﴿٤٠﴾

41. ಅನಂತರ ಅವನ ಸಂಪೂರ್ಣ ಪ್ರತಿಫಲವನ್ನು ಕೊಡಲಾಗುವುದು-

ثُمَّ يُجْزَىٰهُ ٱلْجَزَآءَ ٱلْأَوْفَىٰ ﴿٤١﴾

42. ಅಂತಿಮವಾಗಿ ತಲುಪಲಿಕ್ಕಿರುವುದು ನಿಮ್ಮ ಪ್ರಭುವಿನ ಕಡೆಗೇ ಆಗಿದೆ.

وَأَنَّ إِلَىٰ رَبِّكَ ٱلْمُنتَهَىٰ ﴿٤٢﴾

43. ಅವನೇ ನಗಿಸಿದನು ಮತ್ತು ಅವನೇ ಅಳುವಂತೆ ಮಾಡಿದನು-[18]

وَأَنَّهُۥ هُوَ أَضْحَكَ وَأَبْكَىٰ ﴿٤٣﴾

44. ಅವನೇ ಮರಣ ಕೊಟ್ಟನು ಮತ್ತು ಅವನೇ ಜೀವಂತಗೊಳಿಸಿದನು.

وَأَنَّهُۥ هُوَ أَمَاتَ وَأَحْيَا ﴿٤٤﴾

45-46. ಒಂದು ಹನಿಯು ತೊಟ್ಟಿಕ್ಕುವಾಗ, ಅವನೇ ಅದರಿಂದ ಗಂಡು ಮತ್ತು ಹೆಣ್ಣುಗಳ ಜೊತೆಯನ್ನುಂಟು ಮಾಡಿದನು.

وَأَنَّهُۥ خَلَقَ ٱلزَّوْجَيْنِ ٱلذَّكَرَ وَٱلْأُنثَىٰ ﴿٤٥﴾ مِن نُّطْفَةٍ إِذَا تُمْنَىٰ ﴿٤٦﴾

47. ಇನ್ನೊಂದು ಜೀವನ ಪ್ರದಾನ ಮಾಡುವುದೂ ಅವನ ಹೊಣೆಗಾರಿಕೆಯಾಗಿದೆ-

وَأَنَّ عَلَيْهِ ٱلنَّشْأَةَ ٱلْأُخْرَىٰ ﴿٤٧﴾

48. ಅವನೇ ಶ್ರೀಮಂತಗೊಳಿಸಿದನು ಮತ್ತು ಆಸ್ತಿಪಾಸ್ತಿ ನೀಡಿದನು-

وَأَنَّهُۥ هُوَ أَغْنَىٰ وَأَقْنَىٰ ﴿٤٨﴾

49. ಅವನೇ 'ಶಿಅ್‌ರಾ' ನಕ್ಷತ್ರದ ಪ್ರಭು-[19]

وَأَنَّهُۥ هُوَ رَبُّ ٱلشِّعْرَىٰ ﴿٤٩﴾

50. ಅವನೇ ಪ್ರಥಮ 'ಆದ್' ಜನಾಂಗವನ್ನು ನಾಶಗೊಳಿಸಿದನು-

وَأَنَّهُۥٓ أَهْلَكَ عَادًا ٱلْأُولَىٰ ﴿٥٠﴾

51. ಮತ್ತು 'ಸಮೂದ್' ಜನಾಂಗವನ್ನು, ಅವರಲ್ಲಿ ಯಾರೂ ಉಳಿಯದಂತೆ ಅಳಿಸಿಬಿಟ್ಟನು-

وَثَمُودَا۟ فَمَآ أَبْقَىٰ ﴿٥١﴾

52. ಅವರಿಗಿಂತ ಮುಂಚೆ 'ನೂಹ'ರ ಜನಾಂಗವನ್ನು, ನಾಶಗೊಳಿಸಿದನು. ಏಕೆಂದರೆ, ಅವರು ಮಹಾ ಅಕ್ರಮಿಗಳು ಮತ್ತು ವಿದ್ರೋಹಿಗಳೇ ಆಗಿದ್ದರು.

وَقَوْمَ نُوحٍ مِّن قَبْلُ ۖ إِنَّهُمْ كَانُوا۟ هُمْ أَظْلَمَ وَأَطْغَىٰ ﴿٥٢﴾

---

17. ಅರ್ಥಾತ್- ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಕರ್ಮಗಳ ಪ್ರತಿಫಲವನ್ನಷ್ಟೇ ಪಡೆಯುವನು. ಒಬ್ಬ ವ್ಯಕ್ತಿಯ ಕರ್ಮಫಲ ಇನ್ನೊಬ್ಬನಿಗೆ ದೊರೆಯಲು ಸಾಧ್ಯವಿಲ್ಲ. ಪ್ರಯತ್ನ ಮತ್ತು ಕರ್ಮಗಳ ಹೊರತು ಯಾವ ವ್ಯಕ್ತಿಗೂ ಏನನ್ನೂ ಪಡೆಯಲು ಸಾಧ್ಯವಿಲ್ಲ.

18. ಅರ್ಥಾತ್- ಸುಖ-ದುಃಖಗಳೆರಡರ ಕಾರಣಗಳು ಅವನಿಂದಲೇ ಆಗಿವೆ. ಅದೃಷ್ಟ-ದುರದೃಷ್ಟಗಳೆಲ್ಲವೂ ಅವನ ಕೈಯಲ್ಲೇ ಇವೆ. ಅದೃಷ್ಟವನ್ನು ರೂಪಿಸುವಲ್ಲಿ ಅಥವಾ ಕೆಡಿಸುವಲ್ಲಿ ಹಸ್ತಕ್ಷೇಪ ಮಾಡಬಲ್ಲಂತಹ ಬೇರಾವ ಶಕ್ತಿಯೂ ಈ ವಿಶ್ವದಲ್ಲಿಲ್ಲ.

19. 'ಶಿಅ್‌ರಾ' ಎಂದರೆ ಆಕಾಶದ ಅತ್ಯುಜ್ವಲ ನಕ್ಷತ್ರ. ಈ ನಕ್ಷತ್ರ ಮಾನವರ ಅದೃಷ್ಟವನ್ನು ಪ್ರಭಾವಿತಗೊಳಿಸುತ್ತದೆ ಎಂದು ಈಜಿಪ್ಟ್ ಮತ್ತು ಅರಬ್ ನಿವಾಸಿಗಳು ವಿಶ್ವಾಸವಿಡುತ್ತಿದ್ದರು. ಈ ಕಾರಣದಿಂದಲೇ ಅವರು ನೆಚ್ಚಿಕೊಂಡಿದ್ದ ಆರಾಧ್ಯರುಗಳಲ್ಲಿ ಇದೂ ಸೇರಿತ್ತು.

53. ಅಧೋಮುಖವಾಗಿ ಬೀಳುತ್ತಿದ್ದ ನಾಡುಗಳನ್ನು ಅವನು ಕಿತ್ತೆಸೆದನು-

وَالْمُؤْتَفِكَةَ أَهْوَىٰ ﴿٥٣﴾

54. ತರುವಾಯ ಅವರ ಮೇಲೆ (ನಿಮಗೆ ತಿಳಿದಿರುವಂತೆ) ಏನನ್ನು ಆವರಿಸಿದನೋ ಅದನ್ನು ಆವರಿಸಿಬಿಟ್ಟನು.[20]

فَغَشَّاهَا مَا غَشَّىٰ ﴿٥٤﴾

55. ಆದುದರಿಂದ ಎಲೈ ಮಾನವಾ, ನಿನ್ನ ಪ್ರಭುವಿನ ಯಾವ ಯಾವ ಅನುಗ್ರಹಗಳ ಬಗ್ಗೆ ನೀನು ಸಂಶಯ ಪಡುವೆ?

فَبِأَيِّ آلَاءِ رَبِّكَ تَتَمَارَىٰ ﴿٥٥﴾

56. ಇದು, ಈ ಹಿಂದೆ ಬಂದಿದ್ದ ಎಚ್ಚರಿಕೆಗಳ ಪೈಕಿ ಒಂದು ಎಚ್ಚರಿಕೆಯಾಗಿದೆ.

هَٰذَا نَذِيرٌ مِّنَ النُّذُرِ الْأُولَىٰ ﴿٥٦﴾

57. ಬರಲಿರುವ ಘಳಿಗೆಯು ಸನ್ನಿಹಿತವಾಗಿದೆ.

أَزِفَتِ الْآزِفَةُ ﴿٥٧﴾

58. ಅಲ್ಲಾಹನ ಹೊರತು ಯಾರೂ ಅದನ್ನು ಸರಿಸುವವನಿಲ್ಲ.

لَيْسَ لَهَا مِن دُونِ اللَّهِ كَاشِفَةٌ ﴿٥٨﴾

59. ನೀವೀಗ ಇದೇ ವಿಷಯಗಳ ಬಗ್ಗೆ ಅಚ್ಚರಿಪಡುತ್ತಿರುವುದೇ?

أَفَمِنْ هَٰذَا الْحَدِيثِ تَعْجَبُونَ ﴿٥٩﴾

60. ನಗುತ್ತೀರಾ? ಅಳುವುದಿಲ್ಲವೇ?

وَتَضْحَكُونَ وَلَا تَبْكُونَ ﴿٦٠﴾

61. ಹಾಡಿ ನಲಿದು ಇವುಗಳನ್ನು ತಳ್ಳಿ ಹಾಕುತ್ತೀರಾ?

وَأَنتُمْ سَامِدُونَ ﴿٦١﴾

62. ಅಲ್ಲಾಹನ ಮುಂದೆ ಸಾಷ್ಟಾಂಗವೆರಗಿರಿ ಮತ್ತು ಅವನ ದಾಸ್ಯ ಕೈಗೊಳ್ಳಿರಿ.

فَاسْجُدُوا لِلَّهِ وَاعْبُدُوا ۩ ﴿٦٢﴾

---

20. 'ಅಧೋಮುಖವಾಗಿ ಬಿದ್ದ ನಾಡು'ಗಳೆಂದರೆ, ಹ. ಲೂತ್‌ರ(ಅ) ಜನಾಂಗದ ನಾಡುಗಳಾಗಿವೆ. "ಏನನ್ನು ಆವರಿಸಿದೆವೋ ಅದನ್ನು ಆವರಿಸಿದೆವು" ಎಂದು ಪ್ರಾಯಶಃ ಮೃತ ಸಾಗರದ ನೀರಿನ ಕುರಿತು ಹೇಳಿರಬೇಕು. ಪ್ರಸ್ತುತ ನಾಡುಗಳು ಭೂಮಿಯಲ್ಲಿ ಹೂತು ಹೋದ ಬಳಿಕ ನೀರು ಅದರ ಮೇಲೆ ಹರಡಿಬಿಟ್ಟಿತು. ಇಂದಿಗೂ ಅದು ಆ ಪ್ರದೇಶದಾದ್ಯಂತ ಹರಡಿಕೊಂಡಿದೆ.



# 54. ಅಲ್ ಕಮರ್

ಸೂ. 55 ರು. 3



سُوْرَةُ الْقَمَرِ مَكِّيَّةٌ

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಲೋಕಾಂತ್ಯದ ಘಳಿಗೆ ಸನ್ನಿಹಿತವಾಯಿತು ಮತ್ತು ಚಂದ್ರನು ಹೋಳಾದನು.[1]

اِقْتَرَبَتِ السَّاعَةُ وَانْشَقَّ الْقَمَرُ ﴿١﴾

2. ಆದರೆ ಯಾವ ನಿದರ್ಶನವನ್ನು ಕಂಡರೂ ಇವರು ವಿಮುಖ ರಾಗುತ್ತಾರೆ ಮತ್ತು ಇದೊಂದು ಪ್ರಚಲಿತ ಜಾದೂಗಾರಿಕೆ ಎನ್ನುತ್ತಾರೆ.

وَاِنْ يَّرَوْا اٰيَةً يُّعْرِضُوْا وَيَقُوْلُوْا سِحْرٌ مُّسْتَمِرٌّ ﴿٢﴾

3. ಇವರು (ಇದನ್ನೂ) ಸುಳ್ಳಾಗಿಸಿ ಬಿಟ್ಟರು ಮತ್ತು ತಮ್ಮ ಸ್ವೇಚ್ಛೆ ಗಳನ್ನೇ ಅನುಸರಿಸಿದರು. ಪ್ರತಿಯೊಂದು ಪ್ರಕರಣವೂ ಒಂದು ಪರಿಣಾಮಕ್ಕೆ ತಲಪಿಯೇ ತೀರಬೇಕಾಗಿದೆ.

وَكَذَّبُوْا وَاتَّبَعُوْٓا اَهْوَآءَهُمْ وَكُلُّ اَمْرٍ مُّسْتَقِرٌّ ﴿٣﴾

4. ವಿದ್ರೋಹದಿಂದ ತಡೆಯಬಲ್ಲಷ್ಟು ಪಾಠವುಳ್ಳ (ಗತ ಜನಾಂಗಗಳ) ವೃತ್ತಾಂತಗಳು ಇವರ ಮುಂದೆ ಬಂದಿವೆ.

وَلَقَدْ جَآءَهُمْ مِّنَ الْاَنْۢبَآءِ مَا فِيْهِ مُزْدَجَرٌ ﴿٤﴾

5. ಉಪದೇಶದ ಉದ್ದೇಶವನ್ನು ಸಂಪೂರ್ಣವಾಗಿ ಈಡೇರಿಸುವಂತಹ ಯುಕ್ತಿಯೂ ಅದರಲ್ಲಿದೆ. ಆದರೆ ಯಾವ ಎಚ್ಚರಿಕೆಯೂ ಇವರ ಮೇಲೆ ಪರಿಣಾಮ ಬೀರುವುದಿಲ್ಲ-

حِكْمَةٌۢ بَالِغَةٌ فَمَا تُغْنِ النُّذُرُ ﴿٥﴾

---

1. ಅರ್ಥಾತ್- ಚಂದ್ರನ ಹೋಳಾಗುವಿಕೆ, ಲೋಕಾಂತ್ಯದಿನ ಸಮಿಪವಿದೆ ಮತ್ತು ಯಾವ ಸಂದರ್ಭದಲ್ಲಾದರೂ ಅದು ಆಸನ್ನವಾಗಬಹುದು ಎಂಬುದನ್ನು ಸೂಚಿಸುತ್ತದೆ. ಈ ಉದ್ಧರಣೆ ಮತ್ತು ಅದರ ನಂತರದ ವಿವರಣೆ ಆ ಸಂದರ್ಭದಲ್ಲಿ ನಿಜವಾಗಿಯೂ ಹೋಳಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಘಟನೆಯನ್ನು ಕಣ್ಣಾರೆ ಕಂಡವರ ಪ್ರಕಾರ ಹುಣ್ಣಿಮೆಯ ಚಂದ್ರ ಪ್ರತ್ಯಕ್ಷವಾದ ಸ್ವಲ್ಪ ಹೊತ್ತಿನಲ್ಲೇ ಏಕಾಏಕಿಯಾಗಿ ಹೋಳಾಯಿತು. ಅದರ ಎರಡು ಹೋಳುಗಳು ಬೆಟ್ಟದ ಎರಡು ಕಡೆಗಳಲ್ಲಿ ಕಂಡು ಬಂತು. ಅನಂತರ ಕ್ಷಣ ಮಾತ್ರದಲ್ಲಿ ಅದು ಮತ್ತೆ ಒಂದುಗೂಡಿತು. ಈ ಘಟನೆ ಪ್ರವಾದಿವರ್ಯರ(ಸ) ಸೂಚನೆಯಂತೆ ನಡೆದಿತ್ತು ಮತ್ತು ಮಕ್ಕಾದ ಸತ್ಯನಿಷೇಧಿಗಳು ಪವಾಡವನ್ನು ತೋರಿಸುವ ಬೇಡಿಕೆಯನ್ನಿರಿಸಿದಾಗ ಈ ಪವಾಡವನ್ನು ತೋರಿಸಲಾಗಿತ್ತು ಎಂಬ ಪ್ರವಚನಕಾರರ ಮಾತಿಗೆ ಪ್ರವಾದಿವಚನಗಳಲ್ಲಿ ಯಾವುದೇ ಆಧಾರವಿಲ್ಲ.

6. ಆದುದರಿಂದ ಸಂದೇಶವಾಹಕರೇ, ಇವರಿಂದ ಮುಖ ತಿರುಗಿಸಿ ಕೊಳ್ಳಿರಿ. ಕೂಗುವಾತನು ಒಂದು ಅತ್ಯಂತ ಅಪ್ರಿಯ ವಸ್ತುವಿನ ಕಡೆಗೆ ಕೂಗುವಂದು,

فَتَوَلَّ عَنْهُمْ ۘ يَوْمَ يَدْعُ الدَّاعِ إِلَىٰ شَيْءٍ نُّكُرٍ ﴿٦﴾

7. ಜನರು ಭಯಗ್ರಸ್ತ ದೃಷ್ಟಿಯೊಂದಿಗೆ ತಮ್ಮ ಸಮಾಧಿಗಳಿಂದ, ಚದುರಿದ ಮಿಡತೆಗಳಂತೆ ಹೊರಬರುವರು-

خُشَّعًا أَبْصَارُهُمْ يَخْرُجُونَ مِنَ الْأَجْدَاثِ كَأَنَّهُمْ جَرَادٌ مُّنتَشِرٌ ﴿٧﴾

8. ಕೂಗುವವನ ಕಡೆಗೆ ಧಾವಿಸುತ್ತಿರುವರು. (ಭೂಲೋಕದಲ್ಲಿ ಅದನ್ನು ನಿಷೇಧಿಸುತ್ತಿದ್ದ) ಅದೇ ಸತ್ಯನಿಷೇಧಿಗಳು ಅಂದು, ಇದು ಕಠಿಣವಾದ ದಿನ ಎಂದು ಹೇಳುವರು.

مُّهْطِعِينَ إِلَى الدَّاعِ ۖ يَقُولُ الْكَافِرُونَ هَٰذَا يَوْمٌ عَسِرٌ ﴿٨﴾

9. ಇವರಿಗಿಂತ ಮುಂಚೆ ನೂಹರ ಜನಾಂಗವು ಸುಳ್ಳಾಗಿಸಿದೆ. ಅವರು ನಮ್ಮ ದಾಸನನ್ನು ಸುಳ್ಳುಗಾರನೆಂದರು. ಇವನು ಹುಚ್ಚನೆಂದರು. ಮತ್ತು ಅವರು (ನೂಹ್) ತೀವ್ರವಾಗಿ ಗದರಿಸಲ್ಪಟ್ಟರು.

كَذَّبَتْ قَبْلَهُمْ قَوْمُ نُوحٍ فَكَذَّبُوا عَبْدَنَا وَقَالُوا مَجْنُونٌ وَازْدُجِرَ ﴿٩﴾

10. ಕೊನೆಗೆ ಅವರು, "ನಾನು ಸೋತೆ. ಇನ್ನು ನೀನು ಇವರ ಮೇಲೆ ಪ್ರತೀಕಾರ ತೀರಿಸು" ಎಂದು ತಮ್ಮ ಪ್ರಭುವನ್ನು ಪ್ರಾರ್ಥಿಸಿದರು.

فَدَعَا رَبَّهُ أَنِّي مَغْلُوبٌ فَانتَصِرْ ﴿١٠﴾

11. ಆಗ ನಾವು ಧಾರಾಕಾರ ಮಳೆಯಿಂದ ಆಕಾಶದ ದ್ವಾರಗಳನ್ನು ತೆರೆದು ಬಿಟ್ಟೆವು;

فَفَتَحْنَا أَبْوَابَ السَّمَاءِ بِمَاءٍ مُّنْهَمِرٍ ﴿١١﴾

12. ನೆಲವನ್ನು ಸೀಳಿ ಚಿಲುಮೆಗಳಾಗಿ ಮಾರ್ಪಡಿಸಿ ಬಿಟ್ಟೆವು ಮತ್ತು ಈ ನೀರೆಲ್ಲ ವಿಧಿಸಲ್ಪಟ್ಟಿದ್ದ ಆ ಕಾರ್ಯವನ್ನು ಪೂರ್ತಿಗೊಳಿಸಲಿಕ್ಕಾಗಿ ಸೇರಿಕೊಂಡಿತು.

وَفَجَّرْنَا الْأَرْضَ عُيُونًا فَالْتَقَى الْمَاءُ عَلَىٰ أَمْرٍ قَدْ قُدِرَ ﴿١٢﴾

13. ನೂಹರನ್ನು ನಾವು ಹಲಗೆ ಹಾಗೂ ಮೊಳೆಗಳಿದ್ದ ವಸ್ತುವೊಂದರ[2] ಮೇಲೆ ಸವಾರಿ ಮಾಡಿಸಿದೆವು.

وَحَمَلْنَاهُ عَلَىٰ ذَاتِ أَلْوَاحٍ وَدُسُرٍ ﴿١٣﴾

14. ಅದು ನಮ್ಮ ಮೇಲ್ನೋಟದಲ್ಲಿ ಚಲಿಸುತ್ತಿತ್ತು. ಇದು ಅಪಮಾನಿಸಲ್ಪಟ್ಟ ವ್ಯಕ್ತಿಯ ಪರವಾಗಿ ಪ್ರತೀಕಾರವಾಗಿತ್ತು.

تَجْرِي بِأَعْيُنِنَا جَزَاءً لِّمَن كَانَ كُفِرَ ﴿١٤﴾

15. ಆ ನಾವೆಯನ್ನು ನಾವು ಒಂದು ನಿದರ್ಶನವಾಗಿ ಉಳಿಸಿದೆವು. ಇದರಿಂದ ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَد تَّرَكْنَاهَا آيَةً فَهَلْ مِن مُّدَّكِرٍ ﴿١٥﴾

2. ಅರ್ಥಾತ್- ಚಂಡಮಾರುತ ಬೀಸುವುದಕ್ಕೆ ಮೊದಲು ಅಲ್ಲಾಹನ ಆದೇಶದಂತೆ ಹ. ನೂಹ್(ಅ) ನಿರ್ಮಿಸಿದ್ದ ನಾವೆ.

16. ನೋಡಿರಿ, ಹೇಗಿತ್ತು ನನ್ನ ಶಿಕ್ಷೆ ಮತ್ತು ಹೇಗಿದ್ದುವು ನನ್ನ ಎಚ್ಚರಿಕೆಗಳು.

فَكَيْفَ كَانَ عَذَابِي وَنُذُرِ ﴿١٦﴾

17. ನಾವು ಈ ಕುರ್‌ಆನನ್ನು ಉಪದೇಶಕ್ಕಾಗಿ ಸುಲಭ ಸಾಧನವಾಗಿ ಮಾಡಿರುವೆವು.[3] ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَدْ يَسَّرْنَا الْقُرْآنَ لِلذِّكْرِ فَهَلْ مِنْ مُدَّكِرٍ ﴿١٧﴾

18. ಆದ್ ಜನಾಂಗದವರು ಧಿಕ್ಕರಿಸಿದರು. ನೋಡಿರಿ, ಆಗ ಹೇಗಿತ್ತು ನನ್ನ ಶಿಕ್ಷೆ ಮತ್ತು ಹೇಗಿದ್ದುವು ನನ್ನ ಎಚ್ಚರಿಕೆಗಳು?

كَذَّبَتْ عَادٌ فَكَيْفَ كَانَ عَذَابِي وَنُذُرِ ﴿١٨﴾

19. ನಾವು ಒಂದು ನಿರಂತರ ಅಶುಭದ ದಿನ ಅವರ ಮೇಲೆ ತೀವ್ರವಾದ ಬಿರುಗಾಳಿಯನ್ನು ಕಳುಹಿಸಿದೆವು-

إِنَّا أَرْسَلْنَا عَلَيْهِمْ رِيحًا صَرْصَرًا فِي يَوْمِ نَحْسٍ مُسْتَمِرٍّ ﴿١٩﴾

20. ಬೇರು ಸಹಿತ ಕಿತ್ತು ಬೀಳುವ ಖರ್ಜೂರದ ಕಾಂಡಗಳಂತೆ ಅದು ಜನರನ್ನು ಎತ್ತಿ ಎತ್ತಿ ಎಸೆಯುತ್ತಿತ್ತು.

تَنْزِعُ النَّاسَ كَأَنَّهُمْ أَعْجَازُ نَخْلٍ مُنْقَعِرٍ ﴿٢٠﴾

21. ಆದುದರಿಂದ ನೋಡಿರಿ, ಹೇಗಿತ್ತು ನನ್ನ ಶಿಕ್ಷೆ ಮತ್ತು ಹೇಗಿದ್ದುವು ನನ್ನ ಎಚ್ಚರಿಕೆಗಳು.

فَكَيْفَ كَانَ عَذَابِي وَنُذُرِ ﴿٢١﴾

22. ನಾವು ಈ ಕುರ್‌ಆನನ್ನು ಉಪದೇಶಕ್ಕಾಗಿ ಸುಲಭ ಸಾಧನವಾಗಿ ಮಾಡಿರುವೆವು. ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَدْ يَسَّرْنَا الْقُرْآنَ لِلذِّكْرِ فَهَلْ مِنْ مُدَّكِرٍ ﴿٢٢﴾

23. ಸಮೂದ್ (ಜನಾಂಗದವರು) ಎಚ್ಚರಿಕೆಗಳನ್ನು ತಿರಸ್ಕರಿಸಿದರು.

كَذَّبَتْ ثَمُودُ بِالنُّذُرِ ﴿٢٣﴾

24. ಮತ್ತು ಹೀಗೆ ಹೇಳ ತೊಡಗಿದರು- "ನಮ್ಮಲ್ಲೇ ಇರುವಂತಹ ಒಬ್ಬ ವ್ಯಕ್ತಿ. ನಾವು ಅವನನ್ನು ಹಿಂಬಾಲಿಸಬೇಕೆ? ಅವನ ಅನುಸರಣೆಯನ್ನು ಸ್ವೀಕರಿಸಿಕೊಂಡೆವೆಂದರೆ ನಾವು ದಾರಿಗೆಟ್ಟಿದ್ದೇವೆ ಹಾಗೂ ತಿಳಿಗೇಡಿಗಳಾಗಿದ್ದೇವೆಂದೇ ಅರ್ಥ.

فَقَالُوا أَبَشَرًا مِنَّا وَاحِدًا نَتَّبِعُهُ إِنَّا إِذًا لَفِي ضَلَالٍ وَسُعُرٍ ﴿٢٤﴾

25. ನಮ್ಮ ನಡುವೆ 'ದಿವ್ಯ ಬೋಧನೆ' ಇಳಿಸಲ್ಪಡಲು ಇವನೊಬ್ಬನೇ ಇದ್ದುದೇ? ವಾಸ್ತವದಲ್ಲಿ ಇವನು ಮಹಾ ಸುಳ್ಳುಗಾರ ಮತ್ತು ದುರಹಂಕಾರಿ ಆಗಿದ್ದಾನೆ."

أَؤُلْقِيَ الذِّكْرُ عَلَيْهِ مِنْ بَيْنِنَا بَلْ هُوَ كَذَّابٌ أَشِرٌ ﴿٢٥﴾

3. ಅರ್ಥಾತ್- ವಿದ್ರೋಹಿ ಜನಾಂಗಗಳ ಮೇಲೆ ಇಳಿದ ಪಾಠಬೋಧಕವಾದ ಯಾತನೆ, ಉಪದೇಶ ಪಡೆಯುವ ಉಪಾಧಿಗಳಲ್ಲೊಂದಾಗಿದೆ. ಸಾಕ್ಷ್ಯಾಧಾರ ಮತ್ತು ಉಪದೇಶಗಳೊಂದಿಗೆ ಸನ್ಮಾರ್ಗ ತೋರುವ ಈ ಪವಿತ್ರ ಕುರ್‌ಆನ್ ಉಪದೇಶ ಪಡೆಯುವ ಮತ್ತೊಂದು ಉಪಾಧಿಯಾಗಿದೆ. ಮೊದಲನೆಯ ಉಪಾಧಿಗಿಂತ ಎರಡನೆಯ ಉಪಾಧಿ ಹೆಚ್ಚು ಸರಳವಾದುದಾಗಿದೆ. ಹಾಗಿದ್ದರೂ ನೀವು ಯಾಕೆ ಅದರಿಂದ ಪ್ರಯೋಜನ ಪಡೆಯುವುದಿಲ್ಲ? ಯಾತನೆಯನ್ನು ನೋಡುವುದರ ಬಗ್ಗೆಯೇ ಯಾಕೆ ಪಟ್ಟು ಹಿಡಿಯುತ್ತಿದ್ದೀರಿ.

26. (ನಾವು ನಮ್ಮ ಸಂದೇಶವಾಹಕನೊಡನೆ ಹೀಗೆ ಹೇಳಿದೆವು.) "ಯಾರು ಮಹಾ ಸುಳ್ಳುಗಾರ ಹಾಗೂ ದುರಹಂಕಾರಿಯೆಂದು ನಾಳೆಯೇ ಇವರಿಗೆ ತಿಳಿಯಲಿದೆ.

سَيَعْلَمُونَ غَدًا مَّنِ الْكَذَّابُ الْأَشِرُ ﴿٢٦﴾

27. ನಾವು ಒಂದು ಒಂಟೆಯನ್ನು ಇವರ ಪಾಲಿಗೆ ಪರೀಕ್ಷೆಯಾಗಿ ಕಳುಹಿಸುತ್ತಿದ್ದೇವೆ. ಇನ್ನು ಇವರ ಅಂತಿಮ ಪರಿಣಾಮವೇನಾಗುತ್ತದೆಂದು ತುಸು ತಾಳ್ಮೆಯಿಂದ ನೋಡಿರಿ.

إِنَّا مُرْسِلُوا النَّاقَةِ فِتْنَةً لَّهُمْ فَارْتَقِبْهُمْ وَاصْطَبِرْ ﴿٢٧﴾

28. ನೀರನ್ನು ಇವರ ಮತ್ತು ಒಂಟೆಯ ನಡುವೆ ಹಂಚಲಾಗುವುದೆಂದೂ ಪ್ರತಿಯೊಬ್ಬನು ತನ್ನ ಸರದಿಯ ದಿನ ನೀರಿಗೆ ಬರಬೇಕೆಂದೂ ಇವರಿಗೆ ಸೂಚನೆ ಕೊಟ್ಟುಬಿಡಿರಿ.[4]

وَنَبِّئْهُمْ أَنَّ الْمَاءَ قِسْمَةٌ بَيْنَهُمْ كُلُّ شِرْبٍ مُّحْتَضَرٌ ﴿٢٨﴾

29. ಕೊನೆಗೆ ಅವರು ತಮ್ಮ ವ್ಯಕ್ತಿಯನ್ನು ಕೂಗಿ ಕರೆದರು. ಅವನು ಈ ಕಾರ್ಯದ ಹೊಣೆ ಹೊತ್ತನು ಮತ್ತು ಒಂಟೆಯನ್ನು ಕೊಂದು ಹಾಕಿದನು.

فَنَادَوْا صَاحِبَهُمْ فَتَعَاطَىٰ فَعَقَرَ ﴿٢٩﴾

30. ಅನಂತರ ನೋಡಿರಿ, ಹೇಗಿತ್ತು ನನ್ನ ಶಿಕ್ಷೆ ಮತ್ತು ಹೇಗಿದ್ದುವು ನನ್ನ ಎಚ್ಚರಿಕೆಗಳು?

فَكَيْفَ كَانَ عَذَابِي وَنُذُرِ ﴿٣٠﴾

31. ನಾವು ಅವರ ಮೇಲೆ ಒಂದೇ ಘನ ಸ್ಫೋಟವನ್ನು ಕಳುಹಿಸಿದೆವು ಮತ್ತು ಅವರು ಹಟ್ಟಿಯವರು ತುಳಿದ ಕಸದಂತೆ ಹೊಟ್ಟಾಗಿ ಬಿಟ್ಟರು.[5]

إِنَّا أَرْسَلْنَا عَلَيْهِمْ صَيْحَةً وَاحِدَةً فَكَانُوا كَهَشِيمِ الْمُحْتَظِرِ ﴿٣١﴾

32. ನಾವು ಈ ಕುರ್‌ಆನನ್ನು ಉಪದೇಶಕ್ಕಾಗಿ ಸುಲಭ ಸಾಧನವಾಗಿ ಮಾಡಿರುವೆವು. ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَدْ يَسَّرْنَا الْقُرْآنَ لِلذِّكْرِ فَهَلْ مِن مُّدَّكِرٍ ﴿٣٢﴾

---

4. ಇದು, "ಒಂಟೆಯನ್ನು ನಾವು ಅವರ ಪಾಲಿಗೆ ಫಿತ್ನವನ್ನಾಗಿ ಮಾಡಿ ಕಳುಹಿಸುತ್ತಿದ್ದೇವೆ" ಎಂಬ ಮಾತಿನ ವಿವರಣೆ. ಆ ಫಿತ್ನ ಏನಾಗಿತ್ತೆಂದರೆ, -ಹಠಾತ್ತನೆ ಒಂದು ಒಂಟೆಯನ್ನು ತಂದು ಅವರ ಮುಂದೆ ನಿಲ್ಲಿಸಲಾಯಿತು. ಒಂದು ದಿನ ಈ ಒಂಟೆ ಮಾತ್ರ ನೀರು ಕುಡಿಯುವುದು ಮತ್ತು ಮರುದಿನ ನೀವು ನಿಮಗಾಗಿ ಮತ್ತು ನಿಮ್ಮ ಜಾನುವಾರುಗಳಿಗಾಗಿ ನೀರನ್ನು ಪಡೆಯಬಹುದು. ಒಂಟೆ ನೀರು ಕುಡಿಯಬೇಕಾದ ದಿನ ನಿಮ್ಮಲ್ಲಿ ಯಾರೂ ಯಾವುದೇ ಬಾವಿ ಅಥವಾ ಚಿಲುಮೆಯಿಂದ ನೀರನ್ನು ಪಡೆಯಬಾರದು, ಅಂತೆಯೇ ಜಾನುವಾರುಗಳಿಗೂ ಕುಡಿಸಲಿಕ್ಕೂ ಬಾರದು ಎಂದು ಅವರೊಡನೆ ಹೇಳಲಾಯಿತು. ಯಾವುದೇ ಸೇನಾಬಲವಾಗಲಿ, ಜನಬೆಂಬಲವಾಗಲಿ ಇಲ್ಲದಂತಹ ವ್ಯಕ್ತಿ ಎಂದು ಅವರು ಯಾರ ಬಗ್ಗೆ ಹೇಳುತ್ತಿದ್ದರೋ ಆ ವ್ಯಕ್ತಿಯ ಕಡೆಯಿಂದಲೇ ಈ ಪಂಥಾಹ್ವಾನವನ್ನು ನೀಡಲಾಯಿತು.
5. ಜಾನುವಾರುಗಳನ್ನು ಸಾಕುವವರು ಜಾನುವಾರುಗಳಿಗಾಗಿ ಇರುವ ಬೇಲಿಯನ್ನು, ಕಟ್ಟಿಗೆ ಮತ್ತು ಮುಳ್ಳುಕಂಟಿಗಳಿಂದ ಭದ್ರಪಡಿಸುತ್ತಾರೆ. ಬೇಲಿಯ ಮುಳ್ಳುಕಂಟಿಗಳು ಕ್ರಮೇಣ ಒಣಗಿ ಉದುರಿ ಹೋಗುತ್ತವೆ. ಜಾನುವಾರುಗಳ ತುಳಿತದಿಂದ ಅವು ಧೂಳಿನ ಕಣಗಳಂತಾಗಿ ಬಿಡುತ್ತವೆ. ಸಮೂದ್ ಗೋತ್ರದ ತುಳಿಯಲ್ಪಟ್ಟ ಶಿಥಿಲ ಶವಗಳನ್ನು ಈ ಧೂಳಿನ ಕಣಗಳಿಗೆ ಹೋಲಿಸಲಾಗಿದೆ.

33. ಲೂತರ ಜನಾಂಗವು ಎಚ್ಚರಿಕೆಗಳನ್ನು ತಿರಸ್ಕರಿಸಿತು-

كَذَّبَتْ قَوْمُ لُوطٍ بِالنُّذُرِ ﴿٣٣﴾

34. ಮತ್ತು ನಾವು ಅವರ ಮೇಲೆ ಕಲ್ಲಿನ ಮಳೆಗರೆಯುವಂತಹ ಬಿರುಗಾಳಿಯನ್ನು ಕಳುಹಿಸಿದೆವು. ಲೂತರ ಮನೆಯವರು ಮಾತ್ರ ಅದರಿಂದ ರಕ್ಷಿತರಾದರು. ಅವರನ್ನು ನಾವು ನಮ್ಮ ಅನುಗ್ರಹದಿಂದ ರಾತ್ರೆಯ ಅಂತಿಮ ಜಾವದಲ್ಲಿ ಪಾರುಗೊಳಿಸಿದೆವು-

إِنَّا أَرْسَلْنَا عَلَيْهِمْ حَاصِبًا إِلَّا آلَ لُوطٍ ۖ نَجَّيْنَاهُمْ بِسَحَرٍ ﴿٣٤﴾

35. ಕೃತಜ್ಞನಾಗಿರುವಾತನಿಗೆ ನಾವು ಈ ರೀತಿ ಪ್ರತಿಫಲ ನೀಡುತ್ತೇವೆ.

نِعْمَةً مِنْ عِنْدِنَا ۚ كَذَٰلِكَ نَجْزِي مَنْ شَكَرَ ﴿٣٥﴾

36. ಲೂತರು ತಮ್ಮ ಜನಾಂಗದವರಿಗೆ ನಮ್ಮ ಹಿಡಿತದ ಕುರಿತು ಎಚ್ಚರಿಕೆ ನೀಡಿದ್ದರು. ಆದರೆ ಅವರು ಎಲ್ಲ ಎಚ್ಚರಿಕೆಗಳ ಬಗ್ಗೆ ಸಂಶಯ ತಾಳಿ ಮಾತುಗಳಲ್ಲೇ ಹಾರಿಸಿ ಬಿಡುತ್ತಿದ್ದರು.

وَلَقَدْ أَنْذَرَهُمْ بَطْشَتَنَا فَتَمَارَوْا بِالنُّذُرِ ﴿٣٦﴾

37. ಮಾತ್ರವಲ್ಲದೆ ಅವರು ಅವರನ್ನು (ಲೂತರನ್ನು) ತಮ್ಮ ಅತಿಥಿಗಳನ್ನು ರಕ್ಷಿಸದಂತೆ ತಡೆಯಲು ಪ್ರಯತ್ನಿಸಿದರು. ಕೊನೆಗೆ, ಇನ್ನು ನಮ್ಮ ಯಾತನೆಯ ಮತ್ತು ಎಚ್ಚರಿಕೆಗಳ ಸವಿಯನ್ನು ಉಣ್ಣಿರೆಂದು ನಾವು ಅವರ ಕಣ್ಣುಗಳನ್ನು ಕುರುಡಾಗಿಸಿ ಬಿಟ್ಟೆವು.

وَلَقَدْ رَاوَدُوهُ عَنْ ضَيْفِهِ فَطَمَسْنَا أَعْيُنَهُمْ فَذُوقُوا عَذَابِي وَنُذُرِ ﴿٣٧﴾

38. ಪ್ರಾತಃಕಾಲದಲ್ಲೇ ಒಂದು ಸ್ಥಿರ ಯಾತನೆಯು ಅವರನ್ನು ಆವರಿಸಿತು.

وَلَقَدْ صَبَّحَهُمْ بُكْرَةً عَذَابٌ مُسْتَقِرٌّ ﴿٣٨﴾

39. ಇನ್ನು ನನ್ನ ಯಾತನೆಯ ಮತ್ತು ನನ್ನ ಎಚ್ಚರಿಕೆಗಳ ರುಚಿಯನ್ನು ಸವಿಯಿರಿ.

فَذُوقُوا عَذَابِي وَنُذُرِ ﴿٣٩﴾

40. ನಾವು ಈ ಕುರ್‌ಆನನ್ನು ಉಪದೇಶಕ್ಕಾಗಿ ಸುಲಭ ಸಾಧನವಾಗಿ ಮಾಡಿರುವೆವು. ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَدْ يَسَّرْنَا الْقُرْآنَ لِلذِّكْرِ فَهَلْ مِنْ مُدَّكِرٍ ﴿٤٠﴾

٢ع٩

41. ಫಿರ್‌ಔನನ ಮನೆತನದ ಬಳಿಗೂ ಎಚ್ಚರಿಕೆಗಳು ಬಂದಿದ್ದುವು.

وَلَقَدْ جَاءَ آلَ فِرْعَوْنَ النُّذُرُ ﴿٤١﴾

42. ಆದರೆ ಅವರು ನಮ್ಮ ಎಲ್ಲ ನಿದರ್ಶನಗಳನ್ನು ತಿರಸ್ಕರಿಸಿ ಬಿಟ್ಟರು. ಕೊನೆಗೆ ನಾವು ಅವರನ್ನು ಹಿಡಿದೆವು- ಪ್ರಚಂಡ ಸಾಮರ್ಥ್ಯವುಳ್ಳವನೊಬ್ಬನು ಹಿಡಿಯುವಂತೆ.

كَذَّبُوا بِآيَاتِنَا كُلِّهَا فَأَخَذْنَاهُمْ أَخْذَ عَزِيزٍ مُقْتَدِرٍ ﴿٤٢﴾

43. ನಿಮ್ಮ ಸತ್ಯನಿಷೇಧಿಗಳು ಅವರಿಗಿಂತ ಉತ್ತಮರೇ?[6] ಅಥವಾ ದಿವ್ಯಗ್ರಂಥಗಳಲ್ಲಿ ನಿಮಗಾಗಿ ಕ್ಷಮೆ ಲಿಖಿತವಾಗಿದೆಯೇ?

أَكُفَّارُكُمْ خَيْرٌ مِّنْ أُولَٰٓئِكُمْ أَمْ لَكُم بَرَآءَةٌ فِى ٱلزُّبُرِ ﴿٤٣﴾

44. ಅಥವಾ ಇವರು, ನಾವು ಒಂದು ಪ್ರಬಲ ಪಂಗಡವಾಗಿದ್ದು ನಮ್ಮನ್ನು ರಕ್ಷಿಸಿಕೊಳ್ಳಬಲ್ಲೆವೆಂದು ಹೇಳುತ್ತಿರುವರೇ?

أَمْ يَقُولُونَ نَحْنُ جَمِيعٌ مُّنتَصِرٌ ﴿٤٤﴾

45. ಸದ್ಯದಲ್ಲೇ ಈ ಪಂಗಡವು ಸೋತು ಹೋಗುವುದು ಮತ್ತು ಇವರೆಲ್ಲರೂ ಬೆನ್ನು ತಿರುಗಿಸಿ ಓಡಿ ಹೋಗುವರು.

سَيُهْزَمُ ٱلْجَمْعُ وَيُوَلُّونَ ٱلدُّبُرَ ﴿٤٥﴾

46. ನಿಜವಾಗಿ ಇವರ ವಿಚಾರಣೆಗೆಂದು ವಾಗ್ದಾನ ಮಾಡಲಾಗಿರುವ ನೈಜ ಸಮಯವು ಪುನರುತ್ಥಾನ ದಿನವಾಗಿದೆ. ಅದು ಭಾರೀ ವಿಪತ್ತಿನ ಮತ್ತು ಅತ್ಯಂತ ಕಹಿಯಾದ ಘಳಿಗೆಯಾಗಿದೆ.

بَلِ ٱلسَّاعَةُ مَوْعِدُهُمْ وَٱلسَّاعَةُ أَدْهَىٰ وَأَمَرُّ ﴿٤٦﴾

47. ಈ ಅಪರಾಧಿಗಳು ವಾಸ್ತವದಲ್ಲಿ ಅಪಗ್ರಹಿಕೆಗೆ ಒಳಗಾಗಿದ್ದಾರೆ ಮತ್ತು ಇವರ ಬುದ್ಧಿ ಕೆಟ್ಟಿದೆ.

إِنَّ ٱلْمُجْرِمِينَ فِى ضَلَٰلٍ وَسُعُرٍ ﴿٤٧﴾

48. ಇವರು ಅಧೋಮುಖಿಗಳಾಗಿ ನರಕಾಗ್ನಿಯಲ್ಲಿ ಎಳೆಯಲ್ಪಡುವ ದಿನ, ಅವರೊಡನೆ- "ಈಗ ನರಕದ ಜ್ವಾಲೆಯ ರುಚಿಯನ್ನು ಸವಿಯಿರಿ" ಎನ್ನಲಾಗುವುದು.

يَوْمَ يُسْحَبُونَ فِى ٱلنَّارِ عَلَىٰ وُجُوهِهِمْ ذُوقُوا۟ مَسَّ سَقَرَ ﴿٤٨﴾

49. ನಾವು ಪ್ರತಿಯೊಂದು ವಸ್ತುವನ್ನು ಒಂದು ವಿಧಿ ನಿಯಮಕ್ಕನುಸಾರ ಸೃಷ್ಟಿಸಿರುವೆವು.[7]

إِنَّا كُلَّ شَىْءٍ خَلَقْنَٰهُ بِقَدَرٍ ﴿٤٩﴾

50. ನಮ್ಮ ಆಜ್ಞೆಯು ಕೇವಲ ಒಂದೇ ಆಜ್ಞೆಯಾಗಿರುತ್ತದೆ ಮತ್ತು ರೆಪ್ಪೆ ಬಡಿಯುವುದರೊಳಗೆ ಅದು ಕಾರ್ಯಗತವಾಗಿ ಬಿಡುತ್ತದೆ.

وَمَآ أَمْرُنَآ إِلَّا وَٰحِدَةٌ كَلَمْحٍۭ بِٱلْبَصَرِ ﴿٥٠﴾

51. ನಿಮ್ಮಂತಹ ಅನೇಕರನ್ನು ನಾವು ನಾಶಗೊಳಿಸಿರುತ್ತೇವೆ. ಹೀಗಿರುತ್ತ ಉಪದೇಶ ಪಡೆಯುವವರು ಯಾರಾದರೂ ಇದ್ದಾರೆಯೇ?

وَلَقَدْ أَهْلَكْنَآ أَشْيَاعَكُمْ فَهَلْ مِن مُّدَّكِرٍ ﴿٥١﴾

52. ಇವರು ಮಾಡಿರುವುದೆಲ್ಲವೂ ದಾಖಲೆಗಳಲ್ಲಿ ಉಲ್ಲೇಖಿತವಿದೆ.

وَكُلُّ شَىْءٍ فَعَلُوهُ فِى ٱلزُّبُرِ ﴿٥٢﴾

6. ಇದು ಕುರೈಶರ ಕುರಿತು ಇರುವ ಸಂಬೋಧನೆ. ಅರ್ಥಾತ್ ಯಾವ ಸತ್ಯನಿಷೇಧ, ಸುಳ್ಳಾಗಿಸುವಿಕೆ ಮತ್ತು ಹಟಮಾರಿತನಕ್ಕಾಗಿ ಇತರ ಜನಾಂಗಗಳಿಗೆ ಶಿಕ್ಷೆ ನೀಡಲಾಗಿದೆಯೋ, ಅದೇ ಧೋರಣೆಯನ್ನು ಕೈಗೊಂಡುದಕ್ಕಾಗಿ ನಿಮಗೂ ಯಾಕೆ ಶಿಕ್ಷೆ ನೀಡಬಾರದು? ಶಿಕ್ಷೆ ನೀಡದಿರಲು ನಿಮ್ಮಲ್ಲಿರುವ ಒಳಿತಾದರೂ ಯಾವುದು?

7. ಅರ್ಥಾತ್- ಲೋಕದ ಯಾವ ವಸ್ತುವನ್ನೂ ಹಠಾತ್ತನೆ ಸೃಷ್ಟಿಸಲಾಗಿಲ್ಲ. ಪ್ರತಿಯೊಂದು ವಸ್ತುವಿಗೂ ಒಂದು ಅದೃಷ್ಟವಿದೆ. ಅದರಂತೆ ನಿರ್ದಿಷ್ಟ ವೇಳೆಗೆ ಅದು ರೂಪುತಾಳುತ್ತದೆ. ನಿರ್ದಿಷ್ಟ ಆಕಾರವನ್ನು ಪಡೆಯುತ್ತದೆ, ನಿರ್ದಿಷ್ಟ ಹಂತದ ತನಕ ಬೆಳೆಯುತ್ತದೆ, ನಿರ್ದಿಷ್ಟ ಅವಧಿಯ ತನಕ ಬಾಕಿಯುಳಿಯುತ್ತದೆ ಮತ್ತು ನಿರ್ದಿಷ್ಟ ವೇಳೆಗೆ ಕೊನೆಗೊಳ್ಳುತ್ತದೆ.

53. ಚಿಕ್ಕದೂ ದೊಡ್ಡದೂ ಪ್ರತಿಯೊಂದು ವಿಷಯವೂ ಲಿಖಿತವಾಗಿ ಇದೆ.

وَكُلُّ صَغِيرٍ وَكَبِيرٍ مُسْتَطَرٌ ۝٥٣

54. ಆಜ್ಞೋಲ್ಲಂಘನೆಯಿಂದ ದೂರವಿರುವವರು ಖಂಡಿತವಾಗಿಯೂ ಸ್ವರ್ಗೋದ್ಯಾನಗಳಲ್ಲಿ ಮತ್ತು ಕಾಲುವೆಗಳಲ್ಲಿ ಇರುವರು-

إِنَّ الْمُتَّقِينَ فِي جَنَّاتٍ وَنَهَرٍ ۝٥٤

55. ಅದು ನೈಜ ಗೌರವದ ಸ್ಥಾನ, ಅದು ಅಧಿಕಾರ ಸಂಪನ್ನ ಸಾಮ್ರಾಟನ ಬಳಿಯಲ್ಲೇ ಇದೆ.

فِي مَقْعَدِ صِدْقٍ عِنْدَ مَلِيكٍ مُقْتَدِرٍ ۝٥٥



# 55. ಅರ್ರಹ್ಮಾನ್

ಸೂ. 78 ರು. 3



(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ರಹ್ಮಾನನು (ಪರಮ ದಯಾಮಯನು)-

اَلرَّحْمٰنُ ۝١

2. ಈ ಕುರ್‌ಆನನ್ನು ಕಲಿಸಿರುವನು.

عَلَّمَ الْقُرْاٰنَ ۝٢

3. ಅವನೇ ಮಾನವನನ್ನು ಸೃಷ್ಟಿಸಿದನು-

خَلَقَ الْاِنْسَانَ ۝٣

4. ಮತ್ತು ಅವನಿಗೆ ಮಾತಾಡಲು ಕಲಿಸಿದನು-

عَلَّمَهُ الْبَيَانَ ۝٤

5. ಸೂರ್ಯ ಚಂದ್ರರು ಒಂದು ಗಣನೆಗೆ ಅಧೀನರಾಗಿದ್ದಾರೆ-

اَلشَّمْسُ وَالْقَمَرُ بِحُسْبَانٍ ۝٥

6. ಮತ್ತು ಎಲ್ಲ ನಕ್ಷತ್ರಗಳೂ ವೃಕ್ಷಗಳೂ ಸಾಷ್ಟಾಂಗವೆರಗುತ್ತಿವೆ.[1]

وَّالنَّجْمُ وَالشَّجَرُ يَسْجُدٰنِ ۝٦

7. ಆಕಾಶವನ್ನು ಅವನು ಉನ್ನತಗೊಳಿಸಿದನು ಮತ್ತು ತಕ್ಕಡಿ ಸ್ಥಾಪಿಸಿದನು.[2]

وَالسَّمَآءَ رَفَعَهَا وَوَضَعَ الْمِيْزَانَ ۝٧

8. ಆದುದರಿಂದ ನೀವು ಸಮತೋಲನವನ್ನು ಕೆಡಿಸಬೇಡಿ.

اَلَّا تَطْغَوْا فِى الْمِيْزَانِ ۝٨

9. ನ್ಯಾಯದೊಂದಿಗೆ ಸರಿಯಾಗಿ ತೂಗಿರಿ ಮತ್ತು ತೂಕದಲ್ಲಿ ಕಡಿತ ಮಾಡಬೇಡಿರಿ.[3]

وَاَقِيْمُوا الْوَزْنَ بِالْقِسْطِ وَلَا تُخْسِرُوا الْمِيْزَانَ ۝٩

---

1. ಅರ್ಥಾತ್- ಆಜ್ಞಾನುಸಾರಿಗಳಾಗಿವೆ. ಅಲ್ಲಾಹನ ಆಜ್ಞೆಯಿಂದ ಅವು ಕೂದಲೆಳೆಯಷ್ಟು ಕದಲಲಾರವು.
2. ಬಹುತೇಕ ಎಲ್ಲ ವ್ಯಾಖ್ಯಾನಕಾರರೂ 'ಮೀಝಾನ್'(ತಕ್ಕಡಿ)ನ ಅರ್ಥ ನ್ಯಾಯವೆಂದಿದ್ದಾರೆ. 'ಮೀಝಾನನ್ನು ಸಂಸ್ಥಾಪಿಸುವುದು' ಎಂಬುದಕ್ಕೆ ಅವರು ಅಲ್ಲಾಹನು ನಿಸರ್ಗದ ಸಮಸ್ತ ವ್ಯವಸ್ಥೆಯನ್ನು ನ್ಯಾಯದೊಂದಿಗೆ ಸಂಸ್ಥಾಪಿಸಿದ್ದಾನೆ ಎಂಬ ಅರ್ಥ ನೀಡಿದ್ದಾರೆ.
3. ಅರ್ಥಾತ್- ಸಮಸ್ತ ವ್ಯವಸ್ಥೆ ನ್ಯಾಯದೊಂದಿಗೆ ಸಂಸ್ಥಾಪನೆಗೊಂಡಿರುವ ಸಂತುಲಿತ ನಿಸರ್ಗದಲ್ಲಿ ನೀವಿರುವುದರಿಂದ ನೀವೂ ನ್ಯಾಯದಲ್ಲಿ ನೆಲೆಗೊಳ್ಳಬೇಕು. ಯಾವ ಕ್ಷೇತ್ರದಲ್ಲಿ ನಿಮಗೆ ಸ್ವಾತಂತ್ರ್ಯ ನೀಡಲಾಗಿದೆಯೋ ಅದರಲ್ಲಿ ನೀವು ನ್ಯಾಯದೊಂದಿಗೆ ವರ್ತಿಸದಿದ್ದರೆ ನಿಸರ್ಗದ ಪ್ರವೃತ್ತಿಯೊಂದಿಗೆ ಬಂಡಾಯ ತೋರಿದಂತಾಗುತ್ತದೆ.

10. ಅವನು ಭೂಮಿಯನ್ನು ಸಕಲ ಸೃಷ್ಟಿಗಳಿಗಾಗಿ ಉಂಟು ಮಾಡಿದನು-

وَالْأَرْضَ وَضَعَهَا لِلْأَنَامِ ﴿١٠﴾

11. ಅದರಲ್ಲಿ ತರತರದ ಅನೇಕ ರುಚಿಕರವಾದ ಫಲಗಳಿವೆ, ಖರ್ಜೂರದ ಮರಗಳಿವೆ, ಅವುಗಳ ಫಲಗಳು ಹೊದಿಕೆಗಳಲ್ಲಿ ಸುತ್ತಿಕೊಂಡಿವೆ.

فِيهَا فَاكِهَةٌ وَالنَّخْلُ ذَاتُ الْأَكْمَامِ ﴿١١﴾

12. ತರತರದ ಧಾನ್ಯಗಳಿವೆ. ಅವುಗಳಲ್ಲಿ ಹೊಟ್ಟೂ ಇದೆ ಕಾಳೂ ಇದೆ.

وَالْحَبُّ ذُو الْعَصْفِ وَالرَّيْحَانُ ﴿١٢﴾

13. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಅನುಗ್ರಹಗಳನ್ನು[4] ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿١٣﴾

14. ಅವನು ಮಾನವನನ್ನು ಓಡಿನಂತಹ ಹಳಸಿದ ಒಣ ಗಾರೆಯಿಂದ ಉಂಟು ಮಾಡಿದನು-

خَلَقَ الْإِنْسَانَ مِنْ صَلْصَالٍ كَالْفَخَّارِ ﴿١٤﴾

15. ಮತ್ತು ಯಕ್ಷಗಳನ್ನು ಅಗ್ನಿಯ ಜ್ವಾಲೆಯಿಂದ ಸೃಷ್ಟಿಸಿದನು.

وَخَلَقَ الْجَانَّ مِنْ مَارِجٍ مِنْ نَارٍ ﴿١٥﴾

16. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಅದ್ಭುತ ಮಹಿಮೆಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿١٦﴾

17. ಎರಡು ಪೂರ್ವಗಳ ಮತ್ತು ಎರಡು ಪಶ್ಚಿಮಗಳ[5] ಪಾಲಕ ಪ್ರಭು ಅವನೇ ಆಗಿರುತ್ತಾನೆ.

رَبُّ الْمَشْرِقَيْنِ وَرَبُّ الْمَغْرِبَيْنِ ﴿١٧﴾

18. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಸಾಮರ್ಥ್ಯಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿١٨﴾

19. ಅವನು ಎರಡು ಸಮುದ್ರಗಳನ್ನು ಪರಸ್ಪರ ಒಟ್ಟು ಸೇರಲು ಬಿಟ್ಟನು-

مَرَجَ الْبَحْرَيْنِ يَلْتَقِيَانِ ﴿١٩﴾

20. ಆದರೂ ಅವುಗಳ ನಡುವೆ ಒಂದು ಪರದೆ ಅಡ್ಡವಾಗಿದ್ದು ಅದನ್ನು ಅವು ಮೀರುವುದಿಲ್ಲ.

بَيْنَهُمَا بَرْزَخٌ لَا يَبْغِيَانِ ﴿٢٠﴾

4. ಮೂಲದಲ್ಲಿ 'ಆಲಾಅ್' ಎಂಬ ಪದ ಪ್ರಯೋಗವಾಗಿದೆ. ಮುಂದಿನ ಸೂಕ್ತಗಳಲ್ಲಿ ಅದನ್ನು ಅನೇಕ ಬಾರಿ ಪುನರಾವರ್ತಿಸಲಾಗಿದೆ. ಬೇರೆ ಬೇರೆ ಕಡೆಗಳಲ್ಲಿ ನಾವು ಅದನ್ನು ವಿಭಿನ್ನ ಪದಗಳ ಮೂಲಕ ವಿವರಿಸಿದ್ದೇವೆ. ಅದರ ಅರ್ಥ ಅನುಗ್ರಹಗಳೆಂದಾಗಬಹುದು, ನಿಸರ್ಗದ ಚಮತ್ಕಾರಗಳೆಂದಾಗಬಹುದು ಅಥವಾ ಸ್ತುತ್ಯಗುಣಗಳೆಂದೂ ಆಗಬಹುದು. ಹಿನ್ನೆಲೆಗೆ ಅನುಗುಣವಾಗಿ ಪ್ರತಿಯೊಂದು ಸಂದರ್ಭದಲ್ಲೂ ಅದಕ್ಕೆ ಆಯಾ ಅರ್ಥವನ್ನು ಕಲ್ಪಿಸಲಾಗುವುದು.

5. ಎರಡು ಪೂರ್ವ ಮತ್ತು ಎರಡು ಪಶ್ಚಿಮಗಳೆಂದರೆ ಚಳಿಗಾಲದ ಅತ್ಯಂತ ಕನಿಷ್ಠ ಅವಧಿಯ ಹಗಲು ಮತ್ತು ಬೇಸಿಗೆಯ ಅತ್ಯಂತ ಗರಿಷ್ಠ ಅವಧಿಯ ಹಗಲಿನ ಪೂರ್ವ-ಪಶ್ಚಿಮಗಳು ಎಂದೂ ಆಗಬಹುದು. ಹಾಗೆಯೇ ಭೂಮಂಡಲದ ಅರ್ಧಗೋಳದ ಪೂರ್ವ-ಪಶ್ಚಿಮಗಳು ಎಂದೂ ಆಗಬಹುದು.

21. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಮಹಿಮೆಯ ಯಾವ ಯಾವ ಪವಾಡಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٢١﴾

22. ಈ ಸಮುದ್ರಗಳಿಂದ ಮುತ್ತು ಮತ್ತು ಹವಳಗಳು ಲಭಿಸುತ್ತವೆ.

يَخْرُجُ مِنْهُمَا اللُّؤْلُؤُ وَالْمَرْجَانُ ﴿٢٢﴾

23. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಚಮತ್ಕಾರಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٢٣﴾

24. ಸಮುದ್ರದಲ್ಲಿ ಪರ್ವತದಂತೆ ಮೇಲೆದ್ದಿರುವ ಹಡಗುಗಳು ಅವನದೇ ಆಗಿವೆ.

وَلَهُ الْجَوَارِ الْمُنْشَآتُ فِي الْبَحْرِ كَالْأَعْلَامِ ﴿٢٤﴾

25. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಉಪಕಾರಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٢٥﴾

26. ಈ ಭೂಮಿಯಲ್ಲಿರುವ ಪ್ರತಿಯೊಂದು ವಸ್ತುವೂ ನಾಶವಾಗಲಿದೆ-

كُلُّ مَنْ عَلَيْهَا فَانٍ ﴿٢٦﴾

27. ಮತ್ತು ನಿನ್ನ ಪ್ರಭುವಿನ ತೇಜೋಮಯ ಹಾಗೂ ಔದಾರ್ಯ ಪೂರ್ಣ ಅಸ್ತಿತ್ವ ಮಾತ್ರ ಉಳಿಯಲಿದೆ.

وَيَبْقَىٰ وَجْهُ رَبِّكَ ذُو الْجَلَالِ وَالْإِكْرَامِ ﴿٢٧﴾

28. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಚಮತ್ಕಾರಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٢٨﴾

29. ಭೂಮಿ-ಆಕಾಶಗಳಲ್ಲಿ ಇರುವವರೆಲ್ಲರೂ ತಮ್ಮ ಬೇಡಿಕೆಗಳನ್ನು ಅವನಿಂದಲೇ ಬೇಡುತ್ತಾರೆ. ಪ್ರತಿದಿನವೂ ಅವನು ವಿನೂತನ ವೈಭವದಲ್ಲಿರುತ್ತಾನೆ.[6]

يَسْأَلُهُ مَنْ فِي السَّمَاوَاتِ وَالْأَرْضِ ۚ كُلَّ يَوْمٍ هُوَ فِي شَأْنٍ ﴿٢٩﴾

30. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಸ್ತುತ್ಯ ಗುಣಗಳನ್ನು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ﴿٣٠﴾

31. ಓ ಭೂಭಾರಗಳೇ![7] ಸದ್ಯದಲ್ಲೇ ನಾವು ನಿಮ್ಮ ವಿಚಾರಣೆ ನಡೆಸಲಿಕ್ಕಾಗಿ ಬಿಡುವು ಮಾಡಿಕೊಳ್ಳಲಿದ್ದೇವೆ.[8]

سَنَفْرُغُ لَكُمْ أَيُّهَ الثَّقَلَانِ ﴿٣١﴾

---

6. ಅರ್ಥಾತ್- ಈ ವಿಶ್ವವ್ಯವಸ್ಥೆಯಲ್ಲಿ ಅವನ ಚಟುವಟಿಕೆಗಳು ಎಡೆಬಿಡದೆ ಜಾರಿಯಲ್ಲಿವೆ. ಹೊಸ ರೂಪ, ವಿನ್ಯಾಸ ಮತ್ತು ವೈಶಿಷ್ಟ್ಯಗಳೊಂದಿಗೆ ಅಸಂಖ್ಯ ವಸ್ತುಗಳನ್ನು ಅವನು ಪ್ರತಿಕ್ಷಣವೂ ಸೃಷ್ಟಿಸುತ್ತಿದ್ದಾನೆ. ಅವನ ವಿಶ್ವ ಎಂದೂ ಒಂದೇ ಸ್ಥಿತಿಯಲ್ಲಿರುವುದಿಲ್ಲ. ಪ್ರತಿಕ್ಷಣವೂ ಅದರ ಪರಿಸ್ಥಿತಿ ಬದಲಾಗುತ್ತಿರುತ್ತದೆ. ಅದರ ಸೃಷ್ಟಿಕರ್ತ ಪ್ರತಿಬಾರಿಯೂ ಅದನ್ನು ಹಿಂದಿನೆಲ್ಲಾ ವಿನ್ಯಾಸಗಳಿಗಿಂತ ಭಿನ್ನವಾದ ಹೊಸ ರೂಪದೊಂದಿಗೆ ವ್ಯವಸ್ಥೆಗೊಳಿಸುತ್ತಾನೆ.
7. ಮೂಲದಲ್ಲಿ 'ಸಕಲಾನ್' ಎಂಬ ಪದ ಪ್ರಯೋಗವಾಗಿದೆ. 'ಸಕಲ್' ಎಂದು ವಾಹನದ ಮೇಲೆ ಹೊರಿಸಲಾದ ಭಾರಕ್ಕೆ ಹೇಳುತ್ತಾರೆ. 'ಸಕಲಾನ್'ನ ಶಬ್ದಾರ್ಥ 'ಹೇರಲ್ಪಟ್ಟ ಎರಡು ಹೊರೆಗಳು' ಎಂದಾಗುತ್ತದೆ. ಇಲ್ಲಿ ಈ ಪದವನ್ನು ಮಾನವರು ಮತ್ತು ಜಿನ್ನ್‌ಗಳಿಗೆ ಪ್ರಯೋಗಿಸಲಾಗಿದೆ. ಏಕೆಂದರೆ ಇವೆರಡೂ ವರ್ಗಗಳು ಭೂಮಿಯ ಮೇಲೆ ಹೇರಲ್ಪಟ್ಟಿವೆ. ಇಲ್ಲಿ ತಮ್ಮ ಪ್ರಭುವಿನ ಅನುಸರಣೆ ಮತ್ತು ದಾಸ್ಯದಿಂದ ವಿಮುಖರಾದ

32. ನಿಮ್ಮ ಪ್ರಭುವಿನ ಯಾವ ಯಾವ ಉಪಕಾರಗಳನ್ನು ನೀವು ಸುಳ್ಳಾಗಿಸುವಿರಿ.

فَبِاَيِّ اٰلَاۤءِ رَبِّكُمَا تُكَذِّبٰنِ ﴿٣٢﴾

33. (ಎಂದು ಆಗ ನೋಡಿಕೊಳ್ಳುವೆವು). ಯಕ್ಷ ಮತ್ತು ಮಾನವ ವರ್ಗದವರೇ, ನೀವು ಭೂಮಿ-ಆಕಾಶಗಳ ಸರಹದ್ದುಗಳಿಂದ ಹೊರಗೆ ಓಡಿ ಹೋಗಬಲ್ಲಿರಾದರೆ ಓಡಿ ನೋಡಿರಿ, ನೀವು ಓಡಲಾರಿರಿ, ಅದಕ್ಕೆ ಪ್ರಚಂಡ ಶಕ್ತಿ ಬೇಕು.[9]

يٰمَعْشَرَ الْجِنِّ وَالْاِنْسِ اِنِ اسْتَطَعْتُمْ اَنْ تَنْفُذُوْا مِنْ اَقْطَارِ السَّمٰوٰتِ وَالْاَرْضِ فَانْفُذُوْا ؕ لَا تَنْفُذُوْنَ اِلَّا بِسُلْطٰنٍ ﴿٣٣﴾

34. ನಿಮ್ಮ ಪ್ರಭುವಿನ ಯಾವ ಯಾವ ಸಾಮರ್ಥ್ಯಗಳನ್ನು ನೀವು ಸುಳ್ಳಾಗಿಸುವಿರಿ?

فَبِاَيِّ اٰلَاۤءِ رَبِّكُمَا تُكَذِّبٰنِ ﴿٣٤﴾

35. (ಓಡಿ ಹೋಗಲು ಪ್ರಯತ್ನಿಸಿದರೆ) ನಿಮ್ಮ ಮೇಲೆ ಬೆಂಕಿಯ ಜ್ವಾಲೆಯನ್ನೂ ಹೊಗೆಯನ್ನೂ ಬಿಡಲಾಗುವುದು. ನೀವು ಅದನ್ನು ಎದುರಿಸಲಾರಿರಿ.

يُرْسَلُ عَلَيْكُمَا شُوَاظٌ مِّنْ نَّارٍ ۙ وَّنُحَاسٌ فَلَا تَنْتَصِرٰنِ ﴿٣٥﴾

36. ಯಕ್ಷಗಳೇ ಮತ್ತು ಮಾನವರೇ, ನೀವು ನಿಮ್ಮ ಪ್ರಭುವಿನ ಯಾವ ಯಾವ ಮಹಿಮೆಗಳನ್ನು ನಿರಾಕರಿಸುವಿರಿ?

فَبِاَيِّ اٰلَاۤءِ رَبِّكُمَا تُكَذِّبٰنِ ﴿٣٦﴾

37. ಆಕಾಶವು ಬಿರಿದಾಗ[10] ಮತ್ತು ಅದು ಕೆಂಪು ಚರ್ಮದಂತಾಗಿ ಮಾರ್ಪಟ್ಟಾಗ (ಅವಸ್ಥೆ ಏನಾದೀತು?)

فَاِذَا انْشَقَّتِ السَّمَاۤءُ فَكَانَتْ وَرْدَةً كَالدِّهَانِ ﴿٣٧﴾

38. ಯಕ್ಷಗಳೇ ಮತ್ತು ಮಾನವರೇ (ಆಗ) ನಿಮ್ಮ ಪ್ರಭುವಿನ ಯಾವ ಯಾವ ಮಹಿಮೆಗಳನ್ನು ನೀವು ಸುಳ್ಳಾಗಿಸುವಿರಿ?

فَبِاَيِّ اٰلَاۤءِ رَبِّكُمَا تُكَذِّبٰنِ ﴿٣٨﴾

---

ಮಾನವರು ಮತ್ತು ಜಿನ್ನ್‌ಗಳನ್ನು ಸಂಬೋಧಿಸಲಾಗಿದೆ. ಆದ್ದರಿಂದ ಅವರನ್ನು, "ಓ ಭೂಮಿಗೆ ಹೊರೆಯಾಗಿರುವವರೇ" ಎಂದು ಸಂಬೋಧಿಸಲಾಗಿದೆ. ಈ ಮೂಲಕ ಸೃಷ್ಟಿಕರ್ತ ತನ್ನ ಸೃಷ್ಟಿಯ ಈ ಎರಡು ನಿರುಪಯುಕ್ತ ಗುಂಪುಗಳನ್ನುದ್ದೇಶಿಸಿ ಹೀಗೆನ್ನುತ್ತಿದ್ದಾನೆ, 'ನನ್ನ ಭೂಮಿಗೆ ಭಾರವಾಗಿರುವವರೇ! ಸದ್ಯವೇ ನಾನು ನಿಮ್ಮನ್ನು ವಿಚಾರಿಸಿಕೊಳ್ಳಲು ಬಿಡುವು ಮಾಡಿಕೊಳ್ಳಲಿದ್ದೇನೆ.'

8. ಈ ಆಜ್ಞೋಲ್ಲಂಘಕರನ್ನು ವಿಚಾರಣೆ ಮಾಡಲು ಸಮಯ ಸಿಗದಷ್ಟು ಅಲ್ಲಾಹನು ಕಾರ್ಯಮಗ್ನನಾಗಿದ್ದಾನೆ ಎಂದು ಇದರ ಅರ್ಥವಲ್ಲ. ಅಲ್ಲಾಹನು, ವಿಚಾರಣೆಗೆ ನಿರ್ದಿಷ್ಟ ವೇಳೆಯನ್ನು ನಿಶ್ಚಯಿಸಿದ್ದಾನೆ. ಅದರಂತೆ ಮಾನವರು ಮತ್ತು ಜಿನ್ನ್‌ಗಳ ಅಂತಿಮ ವಿಚಾರಣೆ ನಡೆಸುವ ಕಾಲ ಇನ್ನೂ ಆಸನ್ನವಾಗಿಲ್ಲ ಎಂದು ಇದರ ಅರ್ಥವಾಗಿದೆ.

9. ಭೂಮಿ-ಆಕಾಶಗಳೆಂದರೆ ನಿಸರ್ಗ ಅಥವಾ ಬೇರೆ ಪದಗಳಲ್ಲಿ ಹೇಳುವುದಾದರೆ ದೇವನ ದೇವತ್ವವಾಗಿದೆ. ದೇವನ ಹಿಡಿತದಿಂದ ಮುಕ್ತವಾಗುವುದು ನಿಮ್ಮಿಂದ ಸಾಧ್ಯವಿಲ್ಲವೆಂದು ಈ ಸೂಕ್ತದ ಅರ್ಥವಾಗಿದೆ. ಯಾವ ವಿಚಾರಣೆಯ ಬಗ್ಗೆ ನಿಮ್ಮ ಮುಂದೆ ಪ್ರಸ್ತಾವಿಸಲಾಗುತ್ತಿದೆಯೋ ಅದರ ಸಮಯ ಆಸನ್ನವಾದಾಗ ನೀವು ಯಾವ ಸ್ಥಳದಲ್ಲಿದ್ದರೂ ನಿಮ್ಮನ್ನು ಹಿಡಿಯಲಾಗುವುದು. ಅದರಿಂದ ಮುಕ್ತನಾಗಬೇಕಾದರೆ ನೀವು ದೇವನ ದೇವತ್ವದ ಸೀಮೆಯನ್ನು ಬಿಟ್ಟೋಡಬೇಕಾಗುವುದು. ಆದರೆ ಅದು ನಿಮ್ಮಿಂದ ಸಾಧ್ಯವಿಲ್ಲ. ಅಂತಹ ದುರಹಂಕಾರ ನಿಮ್ಮ ಮನಸ್ಸಿನಲ್ಲಿದ್ದರೆ ನಿಮ್ಮ ಸಾಮರ್ಥ್ಯವನ್ನು ಮೆರೆದು ತೋರಿಸಿ.

10. ಆಕಾಶ ಬಿರಿಯುವುದೆಂದರೆ ನಭೋಮಂಡಲದ ಬಂಧನ ಕಡಿಯಲ್ಪಡುವುದು, ನಿಸರ್ಗ ವ್ಯವಸ್ಥೆ ಅಸ್ತವ್ಯಸ್ತಗೊಳ್ಳುವುದು ಮತ್ತು ಗ್ರಹ-ನಕ್ಷತ್ರಗಳು ಚದುರಿ ಹೋಗುವುದಾಗಿದೆ.

39. ಅಂದು ಯಾವ ಮಾನವನೊಂದಿಗೂ ಯಕ್ಷನೊಂದಿಗೂ ಅವನ ಪಾಪಗಳ ಕುರಿತು ಕೇಳುವ ಅಗತ್ಯ ಇರಲಾರದು.

فَيَوْمَئِذٍ لَّا يُسْـَٔلُ عَن ذَنۢبِهِۦٓ إِنسٌ وَلَا جَآنٌّ ٣٩

40. ಆಗ, ನೀವಿಬ್ಬರೂ ನಿಮ್ಮ ಪ್ರಭುವಿನ ಯಾವ ಯಾವ ಉಪಕಾರಗಳನ್ನು ನಿರಾಕರಿಸುತ್ತೀರಿ (ಎಂಬುದನ್ನು ನೋಡಿಕೊಳ್ಳಲಾಗುವುದು).

فَبِأَيِّ ءَالَآءِ رَبِّكُمَا تُكَذِّبَانِ ٤٠

41. ಅಪರಾಧಿಗಳು ಅಲ್ಲಿ ತಮ್ಮ ಮುಖ ಲಕ್ಷಣಗಳಿಂದಲೇ ಗುರುತಿಸಲ್ಪಡುವರು ಮತ್ತು ಅವರ ಜುಟ್ಟನ್ನೂ ಕಾಲುಗಳನ್ನೂ ಹಿಡಿದು ಅವರನ್ನು ಎಳೆಯಲಾಗುವುದು.

يُعْرَفُ ٱلْمُجْرِمُونَ بِسِيمَٰهُمْ فَيُؤْخَذُ بِٱلنَّوَٰصِى وَٱلْأَقْدَامِ ٤١

42. (ಆಗ) ನೀವು ನಿಮ್ಮ ಪ್ರಭುವಿನ ಯಾವ ಯಾವ ಶಕ್ತಿ ಸಾಮರ್ಥ್ಯಗಳನ್ನು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٢

43. ಅಪರಾಧಿಗಳು ಸುಳ್ಳೆಂದು ನಿರಾಕರಿಸುತ್ತಿದ್ದುದು ಇದೇ ನರಕವನ್ನು (ಎಂದು ಆಗ ಹೇಳಲಾಗುವುದು).

هَٰذِهِۦ جَهَنَّمُ ٱلَّتِى يُكَذِّبُ بِهَا ٱلْمُجْرِمُونَ ٤٣

44. ಅದೇ ನರಕ ಮತ್ತು ಕುದಿಯುತ್ತಿರುವ ನೀರಿನ ನಡುವೆ ಅವರು ಸುತ್ತುತ್ತಿರುವರು.

يَطُوفُونَ بَيْنَهَا وَبَيْنَ حَمِيمٍ ءَانٍ ٤٤

45. ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಸಾಮರ್ಥ್ಯಗಳನ್ನು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٥

46. ತನ್ನ ಪ್ರಭುವಿನ ಸನ್ನಿಧಾನದಲ್ಲಿ ಹಾಜರಾಗುವ ಭಯವಿಟ್ಟುಕೊಂಡಿರುವ ಪ್ರತಿಯೊಬ್ಬನಿಗೆ[11] ಎರಡು ಸ್ವರ್ಗೋದ್ಯಾನಗಳಿವೆ.

وَلِمَنْ خَافَ مَقَامَ رَبِّهِۦ جَنَّتَانِ ٤٦

47. ನಿಮ್ಮ ಪ್ರಭುವಿನ ಯಾವ ಯಾವ ಪುರಸ್ಕಾರಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٧

48. ಅವು ಹಚ್ಚ ಹಸುರಾದ ಕೊಂಬೆಗಳಿಂದ ತುಂಬಿರುವುವು.

ذَوَاتَآ أَفْنَانٍ ٤٨

49. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ٤٩

11. ಅರ್ಥಾತ್- ಲೋಕದಲ್ಲಿ ದೇವಭಯದೊಂದಿಗೆ ಮತ್ತು ಒಂದು ದಿನ ನಾನು ದೇವನ ಮುಂದೆ ಹಾಜರಾಗಿ ಲೆಕ್ಕ ಸಮರ್ಪಣೆ ಮಾಡಬೇಕಾಗಿದೆ ಎಂಬ ಭಾವದೊಂದಿಗೆ ಕಾರ್ಯವೆಸಗಿದವರಿಗೆ.

| | |
|---|---|
| 50. ಎರಡು ಉದ್ಯಾನಗಳಲ್ಲೂ ಎರಡು ಚಿಲುಮೆಗಳು ಹರಿಯುತ್ತಿರುವುವು. | فِيهِمَا عَيْنَانِ تَجْرِيَانِ ۝٥٠ |
| 51. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ? | فَبِأَيِّ آلَاءِ رَبِّكُمَا تُكَذِّبَانِ ۝٥١ |
| 52. ಅವೆರಡರಲ್ಲೂ ಪ್ರತಿಯೊಂದು ಫಲದ ಎರಡು ವರ್ಗಗಳಿರುವುವು.[12] | فِيهِمَا مِن كُلِّ فَاكِهَةٍ زَوْجَانِ ۝٥٢ |
| 53. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ? | فَبِأَيِّ آلَاءِ رَبِّكُمَا تُكَذِّبَانِ ۝٥٣ |
| 54. ಸ್ವರ್ಗದ ನಿವಾಸಿಗಳು ದಪ್ಪಗಿನ ರೇಶ್ಮೆಯ ಒಳ ಕವಚವಿರುವ ಹಾಸುಗಳ ಮೇಲೆ ದಿಂಬಿಗೊರಗಿ ಕುಳಿತಿರುವರು ಮತ್ತು ಉದ್ಯಾನದ ಗೆಲ್ಲುಗಳು ಫಲ ಭಾರದಿಂದ ಬಾಗುತ್ತಿರುವುವು. | مُتَّكِئِينَ عَلَىٰ فُرُشٍ بَطَائِنُهَا مِنْ إِسْتَبْرَقٍ ۚ وَجَنَى الْجَنَّتَيْنِ دَانٍ ۝٥٤ |
| 55. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ? | فَبِأَيِّ آلَاءِ رَبِّكُمَا تُكَذِّبَانِ ۝٥٥ |
| 56. ಈ ಅನುಗ್ರಹಗಳ ಮಧ್ಯೆ-ಈ ಸ್ವರ್ಗ ನಿವಾಸಿಗಳಿಗಿಂತ ಮುಂಚೆ ಯಾವ ಮಾನವನಾಗಲಿ, ಯಕ್ಷ ಆಗಲಿ ಎಂದೂ ಸ್ಪರ್ಶಿಸಿರದಂತಹ[13] ಲಜ್ಜಾಪೂರ್ಣ ನಯನೆಯರಿರುವರು.[14] | فِيهِنَّ قَاصِرَاتُ الطَّرْفِ لَمْ يَطْمِثْهُنَّ إِنسٌ قَبْلَهُمْ وَلَا جَانٌّ ۝٥٦ |

12. ಇದರ ಒಂದರ್ಥ - ಎರಡೂ ತೋಟಗಳ ಫಲಗಳು ವಿಶಿಷ್ಟ ಬಗೆಯದಾಗಿರುವುದು. ಒಂದು ತೋಟದಲ್ಲಿ ತನ್ನದೇ ಆದ ವೈಶಿಷ್ಟ್ಯಗಳುಳ್ಳ ಫಲಗಳು ರೆಂಬೆಯಲ್ಲಿ ಜೋತು ಬಿದ್ದಿದ್ದರೆ ಮತ್ತೊಂದು ತೋಟದಲ್ಲಿ ಬೇರೆಯೇ ವೈಶಿಷ್ಟ್ಯತೆಗಳನ್ನು ಹೊಂದಿರುವ ಫಲಗಳಿರುವುವು ಎಂದಾಗಬಹುದು. ಇನ್ನೊಂದರ್ಥ - ಆ ತೋಟದಲ್ಲಿರುವ ಒಂದು ವಿಧದ ಹಣ್ಣುಗಳು ಚಿರಪರಿಚಿತವಾಗಿರುವುವು. ಲೋಕದಲ್ಲೂ ಅವನು ಅದನ್ನು ಅರಿತಿದ್ದನು. ರುಚಿಯಲ್ಲಿ ಅದು ಲೋಕದ ಹಣ್ಣುಗಳಿಗಿಂತ ಎಷ್ಟೇ ಉತ್ತಮವಾಗಿದ್ದರೂ ಸರಿ. ಇನ್ನೊಂದು ವಿಧದ ಹಣ್ಣುಗಳು ಲೋಕದಲ್ಲೆಂದೂ ಯಾರೂ ಕನಸು-ಮನಸಿನಲ್ಲೂ ಕಲ್ಪಿಸಿರದ ಅಪೂರ್ವ ಫಲಗಳಾಗಿರುವುವು ಎಂದಾಗಬಹುದು.

13. ಸಚ್ಚರಿತ ಮನುಷ್ಯರಂತೆ ಸಚ್ಚರಿತ ಜಿನ್ನ್‌ಗಳೂ ಸ್ವರ್ಗ ಪ್ರವೇಶಿಸುವರೆಂದು ಇದರಿಂದ ತಿಳಿದು ಬರುತ್ತದೆ. ಅಲ್ಲಿ ಮಾನವರಿಗೆ ಮಾನವ ಸ್ತ್ರೀಯರಿದ್ದರೆ ಜಿನ್ನ್‌ಗಳಿಗೆ ಜಿನ್ನ್ ಸ್ತ್ರೀಯರಿರುವರು. ದೇವನ ಲೀಲೆಯಿಂದ ಅವರನ್ನೆಲ್ಲಾ ಕನ್ಯೆಯರನ್ನಾಗಿ ಮಾಡಲಾಗುವುದು.

14. ಇದು ಮಹಿಳೆಯ ನೈಜ ವಿಶೇಷತೆಯಾಗಿದೆ. ಆಕೆ ನಿರ್ಲಜ್ಜೆ ಮತ್ತು ನಿರ್ಭಿಡೆಯ ಸ್ವಭಾವದ ಬದಲು ಲಜ್ಜಾಪೂರ್ವಕ ದೃಷ್ಟಿ ಹೊಂದಿರಬೇಕು. ಆದ್ದರಿಂದಲೇ ಅಲ್ಲಾಹನು ಸ್ವರ್ಗದ ಅನುಗ್ರಹಗಳ ನಡುವೆ ಸ್ತ್ರೀಯರ ಬಗ್ಗೆ ಪ್ರಸ್ತಾಪಿಸುತ್ತಾ ಅವರ ಸೌಂದರ್ಯವನ್ನಲ್ಲ ಬದಲಾಗಿ ಲಜ್ಜೆ ಮತ್ತು ಪಾವಿತ್ರ್ಯವನ್ನು ಶ್ಲಾಘಿಸಿದ್ದಾನೆ. ಸ್ತ್ರೀ-ಪುರುಷರ ಸಮ್ಮಿಶ್ರ ಕೂಟ ಮತ್ತು ಸಿನಿಮಾಲಯಗಳಲ್ಲೂ ಸುಂದರಿಯರಾದ ಸ್ತ್ರೀಯರೂ ಜಮಾಯಿಸುತ್ತಾರೆ. ಸೌಂದರ್ಯ ಸ್ಪರ್ಧೆಗಳಲ್ಲಂತೂ ಬಹಳ ಸೂಕ್ಷ್ಮವಾಗಿ ಆರಿಸಿ ಒಂದೊಂದೇ ಸುಂದರಿಯರನ್ನು ತರಲಾಗುತ್ತದೆ. ಆದರೆ ಕೀಳಭಿರುಚಿ ಮತ್ತು ಕೆಟ್ಟ ಪ್ರವೃತ್ತಿ ಇರುವ ಜನರು ಮಾತ್ರ ಅವರ ಬಗ್ಗೆ ಆಸಕ್ತಿ ಬೆಳೆಸಿಕೊಳ್ಳುತ್ತಾರೆ. ಕೆಟ್ಟ ದೃಷ್ಟಿ ಬೀರುವ ಪ್ರತಿಯೊಬ್ಬನ ದೃಷ್ಟಿಯನ್ನೂ ಸೆಳೆಯುವ ಮತ್ತು ಪ್ರತಿಯೊಬ್ಬನ ಬಾಹುಗಳಿಗೂ ಒಲಿಯಲು ಸಿದ್ಧವಿರುವ ಸೌಂದರ್ಯ ಯಾವ ಸಭ್ಯ ವ್ಯಕ್ತಿಯನ್ನೂ ತನ್ನತ್ತ ಸೆಳೆಯಲಾರದು.

57. ನಿಮ್ಮ ಪ್ರಭುವಿನ ಯಾವ ಯಾವ ಪುರಸ್ಕಾರಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٥٧

58. ವಜ್ರ ಮತ್ತು ಮುತ್ತುಗಳಂತೆ ಸೌಂದರ್ಯವುಳ್ಳವರು.

كَأَنَّهُنَّ الْيَاقُوتُ وَالْمَرْجَانُ ٥٨

59. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٥٩

60. ಒಳಿತಿನ ಪ್ರತಿಫಲ ಒಳಿತಲ್ಲದೆ ಇನ್ನೇನು?

هَلْ جَزَاءُ الْإِحْسَانِ إِلَّا الْإِحْسَانُ ٦٠

61. ಯಕ್ಷಗಳೇ ಮತ್ತು ಮಾನವರೇ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಸ್ತುತ್ಯ ಗುಣಗಳನ್ನು ಸುಳ್ಳಾಗಿಸುವಿರಿ.

فَبِأَيِّ آلَاءِ رَبِّكُمَا تُكَذِّبَانِ ٦١

62. ಈ ಎರಡು ಉದ್ಯಾನಗಳಲ್ಲದೆ ಇನ್ನೂ ಎರಡು ಉದ್ಯಾನ ಗಳಿರುವುವು.[15]

وَمِن دُونِهِمَا جَنَّتَانِ ٦٢

63. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٦٣

64. ದಟ್ಟವಾದ ಸಂಪನ್ನ ಹಸಿರು ಉದ್ಯಾನಗಳು.

مُدْهَامَّتَانِ ٦٤

65. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٦٥

66. ಎರಡೂ ಉದ್ಯಾನಗಳಲ್ಲಿ ಎರಡು ಚಿಲುಮೆಗಳು ಕಾರಂಜಿಗಳಂತೆ ಉಕ್ಕುತ್ತಿರುವುವು.

فِيهِمَا عَيْنَانِ نَضَّاخَتَانِ ٦٦

67. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٦٧

68. ಅವೆರಡರಲ್ಲೂ ಧಾರಾಳ ಫಲಗಳೂ ಖರ್ಜೂರಗಳೂ ದಾಳಿಂಬೆ ಗಳೂ ಇರುವುವು.

فِيهِمَا فَاكِهَةٌ وَنَخْلٌ وَرُمَّانٌ ٦٨

69. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ آلَاءِ رَبِّكُمَا تُكَذِّبَانِ ٦٩

15. ಪ್ರಾಯಶಃ ಎರಡು ಉದ್ಯಾನಗಳು ತಂಗಲಿಕ್ಕಾಗಿ, ಮತ್ತೆರಡು ಉದ್ಯಾನಗಳು ವಿಹಾರಕ್ಕಾಗಿ ಇರುವುವು.

70. ಈ ಅನುಗ್ರಹಗಳ ನಡುವೆ ಸುಶೀಲೆಯರೂ ಸುಂದರಿಯರೂ ಆದ ಪತ್ನಿಯರಿದ್ದಾರೆ.

فِيهِنَّ خَيْرَٰتٌ حِسَانٌ ﴿٧٠﴾

71. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٧١﴾

72. ಡೇರೆಗಳಲ್ಲಿ ತಂಗಿಸಲಾಗಿರುವ ಅಪ್ಸರೆಯರಿರುವರು.[16]

حُورٌ مَّقْصُورَٰتٌ فِى ٱلْخِيَامِ ﴿٧٢﴾

73. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٧٣﴾

74. ಈ ಸ್ವರ್ಗವಾಸಿಗಳಿಗಿಂತ ಮುಂಚೆ ಯಾವ ಮಾನವನಾಗಲಿ, ಯಕ್ಷ ಆಗಲಿ ಅವರನ್ನು ಎಂದೂ ಸ್ಪರ್ಶಿಸಿರಲಾರರು.

لَمْ يَطْمِثْهُنَّ إِنسٌ قَبْلَهُمْ وَلَا جَآنٌّ ﴿٧٤﴾

75. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٧٥﴾

76. ಆ ಸ್ವರ್ಗವಾಸಿಗಳು ಹಸಿರು ರತ್ನಗಂಬಳಿಗಳ ಹಾಗೂ ನುಣುಪಾದ ಅಮೂಲ್ಯ ಹಾಸುಗಳ ಮೇಲೆ ದಿಂಬಿಗೊರಗಿ ಕುಳಿತಿರುವರು.

مُتَّكِـِٔينَ عَلَىٰ رَفْرَفٍ خُضْرٍ وَعَبْقَرِىٍّ حِسَانٍ ﴿٧٦﴾

77. ನಿಮ್ಮ ಪ್ರಭುವಿನ ಯಾವ ಯಾವ ಕೊಡುಗೆಗಳನ್ನು ನೀವು ಸುಳ್ಳಾಗಿಸುವಿರಿ?

فَبِأَيِّ ءَالَآءِ رَبِّكُمَا تُكَذِّبَانِ ﴿٧٧﴾

78. ತೇಜೋಮಯನೂ ಔದಾರ್ಯಪೂರ್ಣನೂ ಆಗಿರುವ ನಿನ್ನ ಪ್ರಭುವಿನ ನಾಮವು ಮಂಗಳಮಯವಾಗಿದೆ.

تَبَٰرَكَ ٱسْمُ رَبِّكَ ذِى ٱلْجَلَٰلِ وَٱلْإِكْرَامِ ﴿٧٨﴾

---

16. ಡೇರೆಗಳೆಂದರೆ ಪ್ರಾಯಶಃ ವಿಹಾರ ಸ್ಥಳದಲ್ಲಿ ನಾಯಕರಿಗೆ ಮತ್ತು ಶ್ರೀಮಂತರಿಗೆ ಹಾಕಲಾಗುವಂತಹ ಡೇರೆಗಳಾಗಿರಬಹುದು. ಆ ವಿಹಾರ ಸ್ಥಳದಲ್ಲಿ ಅಲ್ಲಲ್ಲಿ ಡೇರೆಗಳಿರುವುದು ಮತ್ತು ಹೂರ್‌ಗಳು (ನಾಕ ಕನ್ಯೆಯರು) ಅವರಿಗೆ ಸುಖ-ಸಂತೋಷದ ಸಾಧನಗಳನ್ನು ಒದಗಿಸುವರು.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸಂಭವಿಸಲಿರುವ ಆ ಘಟನೆ ಸಂಭವಿಸಿದಾಗ-

إِذَا وَقَعَتِ الْوَاقِعَةُ ۙ﴿١﴾

2. ಅದರ ಸಂಭವವನ್ನು ಸುಳ್ಳಾಗಿಸುವವನಾರೂ ಇರಲಾರನು.

لَيْسَ لِوَقْعَتِهَا كَاذِبَةٌ ۘ﴿٢﴾

3. ಅದು ಬುಡಮೇಲುಗೊಳಿಸಿ ಬಿಡುವಂತಹ ವಿಪತ್ತಾಗಿರುವುದು-

خَافِضَةٌ رَّافِعَةٌ ۙ﴿٣﴾

4. ಆಗ ಭೂಮಿಯು ಹಠಾತ್ತನೆ ನಡುಗಿಸಲ್ಪಡುವುದು[1]-

إِذَا رُجَّتِ الْأَرْضُ رَجًّا ۙ﴿٤﴾

5. ಮತ್ತು ಪರ್ವತಗಳನ್ನು ಚೂರುಚೂರು ಮಾಡಿಬಿಡಲಾಗುವುದು.

وَّبُسَّتِ الْجِبَالُ بَسًّا ۙ﴿٥﴾

6. ಅವು ಹಬ್ಬಿದ ಧೂಳಾಗಿ ಬಿಡುವುವು.

فَكَانَتْ هَبَآءً مُّنْبَثًّا ۙ﴿٦﴾

7. ಆಗ ನೀವು ಮೂರು ಗುಂಪುಗಳಾಗಿ ವಿಂಗಡಿಸಲ್ಪಡುವಿರಿ.

وَّكُنْتُمْ أَزْوَاجًا ثَلٰثَةً ۗ﴿٧﴾

8. ಬಲಗಡೆಯವರು. ಬಲಗಡೆಯವರ (ಸೌಭಾಗ್ಯದ) ಕುರಿತು ಹೇಳುವುದೇನು!

فَأَصْحٰبُ الْمَيْمَنَةِ ۙ مَآ أَصْحٰبُ الْمَيْمَنَةِ ۗ﴿٨﴾

9. ಮತ್ತು ಎಡಗಡೆಯವರು- ಎಡೆಗಡೆಯವರ (ದುರದೃಷ್ಟದ) ಕುರಿತು ವರ್ಣಿಸುವುದೇನು!

وَأَصْحٰبُ الْمَشْـَٔمَةِ ۙ مَآ أَصْحٰبُ الْمَشْـَٔمَةِ ۗ﴿٩﴾

10. ಅಗ್ರಗಣ್ಯರಂತು ಅಗ್ರಗಣ್ಯರೇ ಆಗಿರುತ್ತಾರೆ.

وَالسّٰبِقُوْنَ السّٰبِقُوْنَ ۚ﴿١٠﴾

11. ನಿಕಟವರ್ತಿಗಳು ಅವರೇ ತಾನೆ.

أُولٰٓئِكَ الْمُقَرَّبُوْنَ ۚ﴿١١﴾

12. ಸಂಪತ್ಸಮೃದ್ಧ ಸ್ವರ್ಗೋದ್ಯಾನಗಳಲ್ಲಿ ವಾಸಿಸುವರು.

فِيْ جَنّٰتِ النَّعِيْمِ ﴿١٢﴾

1. ಅರ್ಥಾತ್- ಅದೊಂದು ಪ್ರಾದೇಶಿಕ ಭೂಕಂಪವಾಗಿರಲಾರದು. ಬದಲಾಗಿ, ಸಮಸ್ತ ಭೂಮಿಯನ್ನು ಏಕಕಾಲಕ್ಕೆ ಕಂಪಿಸಲಾಗುವುದು.

| | |
|---|---|
| 13. ಹಿಂದಿನವರಲ್ಲಿ ಅನೇಕರಿರುವರು- | ثُلَّةٌ مِّنَ الْأَوَّلِينَ ﴿١٣﴾ |
| 14. ಮುಂದಿನವರಲ್ಲಿ ಕಡಿಮೆ ಇರುವರು. | وَقَلِيلٌ مِّنَ الْآخِرِينَ ﴿١٤﴾ |
| 15. ರತ್ನಖಚಿತ ಪೀಠಗಳ ಮೇಲೆ- | عَلَىٰ سُرُرٍ مَّوْضُونَةٍ ﴿١٥﴾ |
| 16. ದಿಂಬುಗಳಿಗೆ ಒರಗಿ ಎದುರುಬದುರಾಗಿ ಕುಳಿತುಕೊಳ್ಳುವರು- | مُّتَّكِئِينَ عَلَيْهَا مُتَقَابِلِينَ ﴿١٦﴾ |
| 17. ಅವರ ಕೂಟಗಳಲ್ಲಿ ಚಿರಬಾಲಕರು[2] ಓಡಾಡುತ್ತಿರುವರು- | يَطُوفُ عَلَيْهِمْ وِلْدَانٌ مُّخَلَّدُونَ ﴿١٧﴾ |
| 18. ಸುರಾಭರಿತ ಲೋಟೆಗಳನ್ನು, ಹೂಜೆಗಳನ್ನು ಮತ್ತು ಪಾನಪಾತ್ರೆ ಗಳನ್ನೆತ್ತಿಕೊಂಡು. | بِأَكْوَابٍ وَأَبَارِيقَ وَكَأْسٍ مِّن مَّعِينٍ ﴿١٨﴾ |
| 19. ಅದನ್ನು ಕುಡಿದಾಗ ಅವರ ತಲೆ ತಿರುಗಲಾರದು ಮತ್ತು ಅವರ ಬುದ್ಧಿಯೂ ಮಂಕಾಗಲಾರದು- | لَّا يُصَدَّعُونَ عَنْهَا وَلَا يُنزِفُونَ ﴿١٩﴾ |
| 20. ಆ ಬಾಲಕರು ಅವರ ಮುಂದೆ ತರತರದ ಹಣ್ಣುಹಂಪಲುಗಳನ್ನು -ಅವರಿಗೆ ಇಷ್ಟವಿದ್ದುದನ್ನು ಆಯ್ದುಕೊಳ್ಳಲಿಕ್ಕಾಗಿ- ತಂದಿರಿಸುವರು- | وَفَاكِهَةٍ مِّمَّا يَتَخَيَّرُونَ ﴿٢٠﴾ |
| 21. ಅವರು ತಮಗೆ ಇಷ್ಟ ಬಂದುದನ್ನು ಉಪಯೋಗಿಸಿಕೊಳ್ಳುವಂತೆ ಪಕ್ಷಿಗಳ ಮಾಂಸವನ್ನು ಮುಂದಿರಿಸಲಾಗುವುದು. | وَلَحْمِ طَيْرٍ مِّمَّا يَشْتَهُونَ ﴿٢١﴾ |
| 22. ಅವರಿಗಾಗಿ ಸುಂದರ ನಯನೆಯರಾದ ಅಪ್ಸರೆಯರಿರುವರು- | وَحُورٌ عِينٌ ﴿٢٢﴾ |
| 23. ಅವರು ಬಚ್ಚಿಡಲಾದ ಮುತ್ತುಗಳೋ ಎಂಬಂತೆ ಸುಂದರಿ ಯಾಗಿರುವರು. | كَأَمْثَالِ اللُّؤْلُؤِ الْمَكْنُونِ ﴿٢٣﴾ |
| 24. ಇವೆಲ್ಲ ಅವರು ಭೂಲೋಕದಲ್ಲಿ ಮಾಡುತ್ತಿದ್ದ ಸತ್ಕರ್ಮಗಳ ಪ್ರತಿಫಲದ ರೂಪದಲ್ಲಿ ಅವರಿಗೆ ಸಿಗುವುದು. | جَزَاءً بِمَا كَانُوا يَعْمَلُونَ ﴿٢٤﴾ |
| 25. ಅಲ್ಲಿ ಅವರು ಯಾವುದೇ ನಿರರ್ಥಕ ಅಥವಾ ಪಾಪದ ಮಾತನ್ನು ಕೇಳಲಾರರು. | لَا يَسْمَعُونَ فِيهَا لَغْوًا وَلَا تَأْثِيمًا ﴿٢٥﴾ |
| 26. ಪ್ರತಿಯೊಂದು ಮಾತೂ ಸರಿಯಾದ ಮಾತೇ ಆಗಿರುವುದು. | إِلَّا قِيلًا سَلَامًا سَلَامًا ﴿٢٦﴾ |
| 27. ಇನ್ನು ಬಲಗಡೆಯವರು, ಬಲಗಡೆಯವರ (ಸೌಭಾಗ್ಯದ) ಕುರಿತು ಹೇಳುವುದೇನು! | وَأَصْحَابُ الْيَمِينِ مَا أَصْحَابُ الْيَمِينِ ﴿٢٧﴾ |

2. ಅರ್ಥಾತ್- ಶಾಶ್ವತವಾಗಿ ಬಾಲಕರಾಗಿಯೇ ಇರುವವರು. ಅವರ ಪ್ರಾಯ ಸದಾ ಒಂದೇ ತೆರನಾಗಿರುವುದು.

28. ಅವರು ಮುಳ್ಳಿಲ್ಲದ ಬುಗರಿಗಳು,[3]

فِىۡ سِدۡرٍ مَّخۡضُوۡدٍ ﴿۲۸﴾

29. ಒಂದರ ಮೇಲೊಂದರಂತೆ ಪದರಗಳಾಗಿರುವ ಬಾಳೆಹಣ್ಣುಗಳು,

وَّطَلۡحٍ مَّنۡضُوۡدٍ ﴿۲۹﴾

30. ಬಹುದೂರದ ವರೆಗೆ ಹಬ್ಬಿರುವ ನೆರಳು,

وَّظِلٍّ مَّمۡدُوۡدٍ ﴿۳۰﴾

31. ಸದಾ ಹರಿಯುತ್ತಲೇ ಇರುವ ನೀರು-

وَّمَآءٍ مَّسۡكُوۡبٍ ﴿۳۱﴾

32-33. ಮತ್ತು ಎಂದೂ ಮುಗಿದು ಹೋಗದ ಹಾಗೂ ಅಡೆ ತಡೆಯಿಲ್ಲದೆ ಧಾರಾಳವಾಗಿ ಸಿಗುತ್ತಲಿರುವ ಹಣ್ಣು ಹಂಪಲುಗಳ ನಡುವೆ-

وَّفَاكِهَةٍ كَثِيۡرَةٍ ﴿۳۲﴾
لَّا مَقۡطُوۡعَةٍ وَّلَا مَمۡنُوۡعَةٍ ﴿۳۳﴾

34. ಉನ್ನತ ಪೀಠಗಳಲ್ಲಿರುವರು.

وَّفُرُشٍ مَّرۡفُوۡعَةٍ ﴿۳۴﴾

35. ನಾವು ಅವರ ಪತ್ನಿಯರನ್ನು ವಿಶಿಷ್ಟ ರೀತಿಯಲ್ಲಿ ಹೊಸತಾಗಿ ಸೃಷ್ಟಿಸುವೆವು-

اِنَّاۤ اَنۡشَاۡنٰهُنَّ اِنۡشَآءً ﴿۳۵﴾

36. ಮತ್ತು ಅವರನ್ನು ಕನ್ಯೆಯರನ್ನಾಗಿ ಮಾಡುವೆವು-

فَجَعَلۡنٰهُنَّ اَبۡكَارًا ﴿۳۶﴾

37. ಅವರು ತಮ್ಮ ಪತಿಯನ್ನು ಪ್ರೀತಿಸುವವರು ಮತ್ತು ಸಮಾನ ವಯಸ್ಕರಾಗಿರುವರು-

عُرُبًا اَتۡرَابًا ﴿۳۷﴾

38. ಇವೆಲ್ಲ ಬಲಗಡೆಯವರಿಗಾಗಿ.

لِّاَصۡحٰبِ الۡيَمِيۡنِ ﴿۳۸﴾

39. ಅವರು ಹಿಂದಿನವರಲ್ಲೂ ಅನೇಕರಿರುವರು-

ثُلَّةٌ مِّنَ الۡاَوَّلِيۡنَ ﴿۳۹﴾

40. ಮತ್ತು ಮುಂದಿನವರಲ್ಲೂ ಅನೇಕರಿರುವರು.

وَثُلَّةٌ مِّنَ الۡاٰخِرِيۡنَ ﴿۴۰﴾

41. ಇನ್ನು ಎಡಗಡೆಯವರು. ಎಡಗಡೆಯವರ (ದೌರ್ಭಾಗ್ಯದ) ಕುರಿತು ಹೇಳುವುದೇನು!

وَاَصۡحٰبُ الشِّمَالِ ۙ مَاۤ اَصۡحٰبُ الشِّمَالِ ﴿۴۱﴾

42. ಅವರು ಸುಡುಗಾಳಿಯ ಉರಿಯಲ್ಲೂ ಕುದಿಯುತ್ತಿರುವ ನೀರಲ್ಲೂ-

فِىۡ سَمُوۡمٍ وَّحَمِيۡمٍ ﴿۴۲﴾

3. ಅರ್ಥಾತ್- ಮುಳ್ಳುಗಳಿಲ್ಲದ ಮರದ ಬೋರೆ ಹಣ್ಣುಗಳು. ಬೋರೆ ಹಣ್ಣುಗಳು ಎಷ್ಟು ಉತ್ತಮವಾಗಿರುತ್ತವೋ ಅಷ್ಟೇ ಅವುಗಳ ಮರದಲ್ಲಿ ಮುಳ್ಳುಗಳು ಕಡಿಮೆಯಿರುತ್ತವೆ. ಆದ್ದರಿಂದಲೇ ಸ್ವರ್ಗದ ಬುಗರಿಗಳನ್ನು ಪರಿಚಯಿಸುತ್ತಾ ಅದರ ಮರದಲ್ಲಿ ಮುಳ್ಳುಗಳೇ ಇರುವುದಿಲ್ಲ ಎಂದು ಹೇಳಲಾಗಿದೆ. ಅರ್ಥಾತ್ ಅವು ಲೋಕದಲ್ಲಿ ಲಭ್ಯವಿಲ್ಲದಂತಹ ಅತ್ಯುತ್ತಮ ಗುಣಮಟ್ಟದ್ದಾಗಿರುವುವು.

43. ಕಪ್ಪುಹೊಗೆಯ ನೆರಳಲ್ಲೂ ಇರುವರು- وَّظِلٍّ مِّنْ يَّحْمُوْمٍ

44. ಅದು ತಂಪೂ ಆಗಿರದು, ಸುಖದಾಯಕವೂ ಆಗಿರದು. لَّا بَارِدٍ وَّلَا كَرِيْمٍ

45. ಇವರು ಈ ಗತಿಗೆ ಬರುವುದಕ್ಕೆ ಮುಂಚೆ ಸುಸ್ಥಿತಿಯಲ್ಲಿದ್ದರು- اِنَّهُمْ كَانُوْا قَبْلَ ذٰلِكَ مُتْرَفِيْنَ

46. ಮತ್ತು ಮಹಾಪಾತಕಗಳಿಗೇ ಅಂಟಿಕೊಂಡಿದ್ದರು. وَكَانُوْا يُصِرُّوْنَ عَلَى الْحِنْثِ الْعَظِيْمِ

47. ಅವರು ಹೇಳುತ್ತಿದ್ದರು, "ನಾವು ಸತ್ತು ಮಣ್ಣಾಗಿ ಹೋದಾಗ ಮತ್ತು ಎಲುಬುಗೂಡುಗಳಾಗಿ ಬಿಟ್ಟಾಗ ಪುನಃ ಎಬ್ಬಿಸಿ ನಿಲ್ಲಿಸಲ್ಪಡುವೆವೇ? وَكَانُوْا يَقُوْلُوْنَ اَئِذَا مِتْنَا وَكُنَّا تُرَابًا وَّعِظَامًا ءَاِنَّا لَمَبْعُوْثُوْنَ

48. ನಮಗಿಂತ ಮುಂಚೆ ಗತಿಸಿರುವ ನಮ್ಮ ಪೂರ್ವಜರೂ ಎಬ್ಬಿಸಲ್ಪಡುವರೇ?" اَوَاٰبَآؤُنَا الْاَوَّلُوْنَ

49. ಸಂದೇಶವಾಹಕರೇ, ಇವರೊಡನೆ ಹೇಳಿರಿ- ನಿಶ್ಚಯವಾಗಿಯೂ ಹಿಂದಿನವರೂ ಮುಂದಿನವರೂ- قُلْ اِنَّ الْاَوَّلِيْنَ وَالْاٰخِرِيْنَ

50. ಎಲ್ಲರೂ ಒಂದು ದಿನ ಒಟ್ಟುಗೂಡಿಸಲ್ಪಡುವರು. ಅದರ ಸಮಯ ನಿಶ್ಚಿತವಾಗಿದೆ. لَمَجْمُوْعُوْنَ اِلٰى مِيْقَاتِ يَوْمٍ مَّعْلُوْمٍ

51. ಓ ಪಥಭ್ರಷ್ಟರೇ ಮತ್ತು ಸುಳ್ಳಾಗಿಸುವವರೇ! ನೀವು ثُمَّ اِنَّكُمْ اَيُّهَا الضَّآلُّوْنَ الْمُكَذِّبُوْنَ

52. 'ಝುಕ್ಕೂಮ್' ವೃಕ್ಷದ ಆಹಾರವನ್ನು ತಿನ್ನಲಿರುವಿರಿ- لَاٰكِلُوْنَ مِنْ شَجَرٍ مِّنْ زَقُّوْمٍ

53. ಅದರಿಂದಲೇ ನೀವು ಹೊಟ್ಟೆ ತುಂಬುವಿರಿ- فَمَالِـُٔوْنَ مِنْهَا الْبُطُوْنَ

54. ಮತ್ತು ಅದರ ಮೇಲೆ ಕುದಿಯುವ ನೀರನ್ನು ಕುಡಿಯುವಿರಿ. فَشٰرِبُوْنَ عَلَيْهِ مِنَ الْحَمِيْمِ

55. ಬಾಯಾರಿಕೆಯಿಂದ ಬೆಂಡಾದ ಒಂಟೆಯು ಕುಡಿಯುವಂತೆ. فَشٰرِبُوْنَ شُرْبَ الْهِيْمِ

56. ಇದುವೇ (ಈ ಎಡಭಾಗದವರಿಗೆ) ಪ್ರತಿಫಲದ ದಿನ ಸಿಗಲಿರುವ ಆತಿಥ್ಯ. هٰذَا نُزُلُهُمْ يَوْمَ الدِّيْنِ

57. ನಾವು ನಿಮ್ಮನ್ನು ಸೃಷ್ಟಿಸಿದೆವು. ಆದರೂ ನೀವು ದೃಢೀಕರಿಸುವುದಿಲ್ಲವೇಕೆ?[4] نَحْنُ خَلَقْنٰكُمْ فَلَوْلَا تُصَدِّقُوْنَ

4. ಅರ್ಥಾತ್- ನಾವೇ ನಿಮ್ಮ ಪ್ರಭುವೂ ಆರಾಧ್ಯರೂ ಆಗಿದ್ದೇವೆ ಮತ್ತು ನಾವು ನಿಮ್ಮನ್ನು ಮತ್ತೊಮ್ಮೆ ಸೃಷ್ಟಿಸಬಲ್ಲೆವು ಎಂದು ನೀವೇಕೆ ದೃಢೀಕರಿಸುವುದಿಲ್ಲ.

| | |
|---|---|
| 58. ನೀವು ಸುರಿಸುವ ವೀರ್ಯದ ಕುರಿತು ನೀವೆಂದಾದರೂ ವಿವೇಚಿಸಿರುವಿರಾ? | أَفَرَءَيْتُم مَّا تُمْنُونَ ﴿٥٨﴾ |
| 59. ಅದರಿಂದ ಶಿಶುವನ್ನು ಉಂಟು ಮಾಡುವವರು ನೀವೋ ಅಥವಾ ಅದನ್ನುಂಟುಮಾಡುವವರು ನಾವೋ? | ءَأَنتُمْ تَخْلُقُونَهُۥٓ أَمْ نَحْنُ ٱلْخَٰلِقُونَ ﴿٥٩﴾ |
| 60-61. ನಾವು ನಿಮ್ಮೊಳಗೆ ಮರಣವನ್ನು ಹಂಚಿರುತ್ತೇವೆ. ನಿಮ್ಮ ರೂಪಗಳನ್ನು ಬದಲಾಯಿಸಿ ಬಿಡಲಿಕ್ಕೂ ನಿಮಗೆ ತಿಳಿದಿರದ ಯಾವುದಾದರೂ ರೂಪದಲ್ಲಿ ನಿಮ್ಮನ್ನು ಸೃಷ್ಟಿಸಲಿಕ್ಕೂ ನಾವು ಅಶಕ್ತರಲ್ಲ. | نَحْنُ قَدَّرْنَا بَيْنَكُمُ ٱلْمَوْتَ وَمَا نَحْنُ بِمَسْبُوقِينَ ﴿٦٠﴾ عَلَىٰٓ أَن نُّبَدِّلَ أَمْثَٰلَكُمْ وَنُنشِئَكُمْ فِى مَا لَا تَعْلَمُونَ ﴿٦١﴾ |
| 62. ನಿಮ್ಮ ಪ್ರಥಮ ಜನನದ ಕುರಿತಂತೂ ನಿಮಗೆ ತಿಳಿದೇ ಇದೆ. ಮತ್ತೇಕೆ ಪಾಠ ಕಲಿಯುವುದಿಲ್ಲ? | وَلَقَدْ عَلِمْتُمُ ٱلنَّشْأَةَ ٱلْأُولَىٰ فَلَوْلَا تَذَكَّرُونَ ﴿٦٢﴾ |
| 63. ನೀವು ಬಿತ್ತುವ ಬೀಜದ ಕುರಿತು ನೀವೆಂದಾದರೂ ವಿವೇಚಿಸಿದಿರಾ? | أَفَرَءَيْتُم مَّا تَحْرُثُونَ ﴿٦٣﴾ |
| 64. ಅವುಗಳಿಂದ ಬೆಳೆಯನ್ನು ಬೆಳೆಸುವವರು ನೀವೋ ಅಥವಾ ಅದನ್ನು ಬೆಳೆಸುವವರು ನಾವೋ? | ءَأَنتُمْ تَزْرَعُونَهُۥٓ أَمْ نَحْنُ ٱلزَّٰرِعُونَ ﴿٦٤﴾ |
| 65. ನಾವಿಚ್ಛಿಸಿದರೆ ಆ ಹೊಲಗಳನ್ನು ಹೊಟ್ಟನ್ನಾಗಿ ಮಾಡಿ ಬಿಡಬಲ್ಲೆವು. | لَوْ نَشَآءُ لَجَعَلْنَٰهُ حُطَٰمًا فَظَلْتُمْ تَفَكَّهُونَ ﴿٦٥﴾ |
| 66. ಆಗ ನೀವು- ತರತರದ ಮಾತುಗಳನ್ನಾಡುತ್ತಲೇ ಇರುವಿರಿ- | إِنَّا لَمُغْرَمُونَ ﴿٦٦﴾ |
| 67. ಎಲ್ಲವೂ ನಮ್ಮ ಮೇಲೆ ತಿರುಗಿ ಬಿತ್ತು. ನಿಜವಾಗಿ ನಮ್ಮ ಭಾಗ್ಯವೇ ಹಾಳು. | بَلْ نَحْنُ مَحْرُومُونَ ﴿٦٧﴾ |
| 68. ನೀವು ಕುಡಿಯುವ ನೀರಿನ ಬಗ್ಗೆ ಎಂದಾದರೂ ವಿವೇಚಿಸಿದ್ದುಂಟೇ? | أَفَرَءَيْتُمُ ٱلْمَآءَ ٱلَّذِى تَشْرَبُونَ ﴿٦٨﴾ |
| 69. ಅದನ್ನು ಮೋಡಗಳಿಂದ ಸುರಿಸಿದವರು ನೀವೋ ಅಥವಾ ಅದನ್ನು ಸುರಿಸಿದವರು ನಾವೋ? | ءَأَنتُمْ أَنزَلْتُمُوهُ مِنَ ٱلْمُزْنِ أَمْ نَحْنُ ٱلْمُنزِلُونَ ﴿٦٩﴾ |
| 70. ನಾವಿಚ್ಛಿಸಿದರೆ ಅದನ್ನು ಕಡು ಉಪ್ಪನ್ನಾಗಿ ಮಾಡಿ ಬಿಡಬಲ್ಲೆವು. ಹೀಗಿರುತ್ತ ನೀವೇಕೆ ಕೃತಜ್ಞರಾಗುವುದಿಲ್ಲ? | لَوْ نَشَآءُ جَعَلْنَٰهُ أُجَاجًا فَلَوْلَا تَشْكُرُونَ ﴿٧٠﴾ |
| 71. ನೀವು ಉರಿಸುತ್ತಿರುವ ಬೆಂಕಿಯ ಕುರಿತು ನೀವೆಂದಾದರೂ ವಿವೇಚನೆ ನಡೆಸಿದ್ದುಂಟೇ? | أَفَرَءَيْتُمُ ٱلنَّارَ ٱلَّتِى تُورُونَ ﴿٧١﴾ |

| | |
|---|---|
| 72. ಅದರ ಮರವನ್ನು ಉಂಟು ಮಾಡಿದವರು ನೀವೋ ಅಥವಾ ಅದನ್ನುಂಟು ಮಾಡಿದವರು ನಾವೋ?[5] | ءَاَنْتُمْ اَنْشَاْتُمْ شَجَرَتَهَاۤ اَمْ نَحْنُ الْمُنْشِــُٔوْنَ ﴿۷۲﴾ |
| 73. ನಾವು ಅದನ್ನು ಸ್ಮರಣ ಸಾಧನವಾಗಿಯೂ ಅಗತ್ಯವುಳ್ಳವರಿಗೆ ಜೀವನ ಸಾಧನವಾಗಿಯೂ ಮಾಡಿರುತ್ತೇವೆ. | نَحْنُ جَعَلْنٰهَا تَذْكِرَةً وَّمَتَاعًا لِّلْمُقْوِيْنَ ﴿۷۳﴾ |
| 74. ಆದುದರಿಂದ ಸಂದೇಶವಾಹಕರೇ, ಅತ್ಯಂತ ಮಹಾನನಾದ ನಿಮ್ಮ ಪ್ರಭುವಿನ ನಾಮವನ್ನು ಕೊಂಡಾಡಿರಿ.[6] | فَسَبِّحْ بِاسْمِ رَبِّكَ الْعَظِيْمِ ﴿۷۴﴾ |
| 75. ಹಾಗಲ್ಲ,[7] ನಾನು ನಕ್ಷತ್ರಗಳ ಸ್ಥಾನಗಳ ಆಣೆಯಿಡುತ್ತೇನೆ. | فَلَاۤ اُقْسِمُ بِمَوٰقِعِ النُّجُوْمِ ﴿۷۵﴾ |
| 76. ನೀವು ಅರಿಯುವುದಾದರೆ, ಇದು ಅತಿದೊಡ್ಡ ಆಣೆಯಾಗಿದೆ.[8] | وَاِنَّهٗ لَقَسَمٌ لَّوْ تَعْلَمُوْنَ عَظِيْمٌ ﴿۷۶﴾ |
| 77. ಇದೊಂದು ಉನ್ನತ ಮಟ್ಟದ ಕುರ್‌ಆನ್ ಎಂಬುದರ ಕುರಿತು- | اِنَّهٗ لَقُرْاٰنٌ كَرِيْمٌ ﴿۷۷﴾ |
| 78. ಇದು ಒಂದು ಸುರಕ್ಷಿತ ಗ್ರಂಥದಲ್ಲಿ ಮುದ್ರಿತವಿದೆ.[9] | فِيْ كِتٰبٍ مَّكْنُوْنٍ ﴿۷۸﴾ |
| 79. ಪರಿಶುದ್ಧರಲ್ಲದೆ ಬೇರಾರೂ ಇದನ್ನು ಸ್ಪರ್ಶಿಸಲಾರರು. | لَّا يَمَسُّهٗۤ اِلَّا الْمُطَهَّرُوْنَ ﴿۷۹﴾ |
| 80. ಇದು ಸಕಲ ಲೋಕಪಾಲಕನಿಂದ ಅವತೀರ್ಣಗೊಂಡುದಾಗಿದೆ. | تَنْزِيْلٌ مِّنْ رَّبِّ الْعٰلَمِيْنَ ﴿۸۰﴾ |
| 81. ಹೀಗಿರುತ್ತ ನೀವು ಈ ವಾಣಿಯ ಕುರಿತು ನಿರ್ಲಕ್ಷ್ಯ ತೋರುತ್ತೀರಾ? | اَفَبِهٰذَا الْحَدِيْثِ اَنْتُمْ مُّدْهِنُوْنَ ﴿۸۱﴾ |
| 82. ಮತ್ತು ಈ ಅನುಗ್ರಹದಲ್ಲಿ- ಇದನ್ನು ತಿರಸ್ಕರಿಸುವುದನ್ನೇ ನಿಮ್ಮ ಪಾಲನ್ನಾಗಿ ಮಾಡಿಕೊಂಡಿರುವಿರಾ? | وَتَجْعَلُوْنَ رِزْقَكُمْ اَنَّكُمْ تُكَذِّبُوْنَ ﴿۸۲﴾ |
| 83-87. ನೀವು ಪರಾಧೀನರಲ್ಲದಿದ್ದರೆ ಮತ್ತು ನಿಮ್ಮ ಭಾವನೆಯಲ್ಲಿ | فَلَوْلَاۤ اِذَا بَلَغَتِ الْحُلْقُوْمَ ﴿۸۳﴾ |

5. ಅರ್ಥಾತ್- ಯಾವ ಮರದ ಕಟ್ಟಿಗೆಗಳಿಂದ ನೀವು ಬೆಂಕಿ ಉರಿಸುತ್ತೀರೋ ಅದನ್ನು ಸೃಷ್ಟಿಸಿದವರು ನಾವೋ ಅಥವಾ ನೀವೋ?
6. ಅರ್ಥಾತ್- ಸತ್ಯನಿಷೇಧಿಗಳು ಮತ್ತು ಬಹುದೇವಾರಾಧಕರು ಅಲ್ಲಾಹನಿಗೆ ಗೊತ್ತುಪಡಿಸುವ ಹಾಗೂ ಸತ್ಯನಿಷೇಧ ಮತ್ತು ಬಹುದೇವಾರಾಧನೆಯ ವಿಶ್ವಾಸ ಹಾಗೂ ಪರಲೋಕದ ನಿರಾಕರಣೆಯ ಪ್ರತಿಯೊಂದು ವಾದದಲ್ಲೂ ಅಡಕವಾಗಿರುವ ದೋಷ ಮತ್ತು ದೌರ್ಬಲ್ಯಗಳೆಲ್ಲದರಿಂದಲೂ ಅವನು ಮುಕ್ತನು ಎಂದು ಅವನ ಪಾವನ ಹೆಸರಿನಿಂದ ಪ್ರಕಟಣೆ ಮಾಡಿರಿ.
7. ಅರ್ಥಾತ್- ನೀವು ನಂಬಿರುವ ವಿಷಯ ದಿಟವಲ್ಲ. ಇಲ್ಲಿ ಕುರ್‌ಆನ್ ಅಲ್ಲಾಹನ ವತಿಯಿಂದಲೇ ಕಳುಹಿಸಲ್ಪಟ್ಟಿದೆ ಎಂಬ ಬಗ್ಗೆ ಆಣೆ ಹಾಕುವ ಮೊದಲು 'ಲಾ'-'ಅಲ್ಲ' ಎಂಬ ಪದವನ್ನು ಬಳಸಲಾಗಿದೆ. ಜನರು ಈ ಪವಿತ್ರ ಗ್ರಂಥದ ಬಗ್ಗೆ ಆಡಿಕೊಳ್ಳುತ್ತಿದ್ದ ಮಾತನ್ನು ನಿರಾಕರಿಸುವುದೇ ಈ ಆಣೆ ಹಾಕುವುದರ ಉದ್ದೇಶವೆಂದು ಇದರಿಂದ ವ್ಯಕ್ತವಾಗುತ್ತದೆ.
8. ಗ್ರಹ-ನಕ್ಷತ್ರಾದಿಗಳ ಸ್ಥಾನವೆಂದರೆ ಅವುಗಳ ನೆಲೆ, ಹಂತಗಳು ಮತ್ತು ಕಕ್ಷೆಗಳಾಗಿವೆ. ಕುರ್‌ಆನ್ ಉನ್ನತಮಟ್ಟದ ಗ್ರಂಥವಾಗಿರುವ ಬಗ್ಗೆ ಅದರ ಆಣೆ ಹಾಕಲಾಗಿದೆ. ಏಕೆಂದರೆ ಉನ್ನತ ಗಗನದಲ್ಲಿರುವ ಗಗನ ಕಾಯಗಳ ವ್ಯವಸ್ಥೆ ಸುದೃಢ ಮತ್ತು ಸುಸ್ಥಿರವಾಗಿರುವಂತೆಯೇ ಈ ಗ್ರಂಥವೂ ಸುಭದ್ರ ಮತ್ತು ಸುಸ್ಥಿರವಾಗಿದೆ. ಆ ವ್ಯವಸ್ಥೆಯನ್ನು ರೂಪಿಸಿರುವ ದೇವನೇ ಈ ಗ್ರಂಥವನ್ನೂ ಅವತೀರ್ಣಗೊಳಿಸಿದ್ದಾನೆ.
9. ಅರ್ಥಾತ್- ಇದು ಪಾವನ ದೇವಚರರ ಮೂಲಕ ಅವತೀರ್ಣಗೊಂಡಿದೆ. ಪಿಶಾಚಿಗಳಿಗೆ ಇದರಲ್ಲಿ ಯಾವುದೇ ಹಸ್ತಕ್ಷೇಪವಿಲ್ಲ.

ನೀವು ಸತ್ಯವಾದಿಗಳಾಗಿದ್ದರೆ, ಮರಣ ಹೊಂದುತ್ತಿರುವವನ ಪ್ರಾಣವು ಗಂಟಲಿನ ವರೆಗೆ ತಲಪಿದ್ದಾಗ ಮತ್ತು ಅವನು ಸಾಯುತ್ತಿ ರುವುದನ್ನು ನೀವು ಕಣ್ಣಾರೆ ಕಾಣುತ್ತಿರುವಾಗ ಹೊರಟು ಹೋಗುತ್ತಿರುವ ಅವನ ಪ್ರಾಣವನ್ನು ಮರಳಿ ತರುವುದಿಲ್ಲವೇಕೆ? ಆಗ ಅವನಿಗೆ ನಿಮಗಿಂತಲೂ ನಾವು ಹೆಚ್ಚು ನಿಕಟವಾಗಿರುತ್ತೇವೆ. ಆದರೆ ನಿಮಗೆ ತೋರುವುದಿಲ್ಲ.

وَأَنتُمْ حِينَئِذٍ تَنظُرُونَ ﴿٨٤﴾ وَنَحْنُ أَقْرَبُ إِلَيْهِ مِنكُمْ وَلَٰكِن لَّا تُبْصِرُونَ ﴿٨٥﴾ فَلَوْلَا إِن كُنتُمْ غَيْرَ مَدِينِينَ ﴿٨٦﴾ تَرْجِعُونَهَا إِن كُنتُمْ صَادِقِينَ ﴿٨٧﴾

88. ಇನ್ನು ಆ ಮರಣ ಹೊಂದುವವನು ನಿಕಟವರ್ತಿಗಳಲ್ಲಾಗಿದ್ದರೆ,

فَأَمَّا إِن كَانَ مِنَ الْمُقَرَّبِينَ ﴿٨٨﴾

89. ಅವನಿಗೆ ಸುಖ ಸಂತೋಷ, ಅತ್ಯುತ್ತಮ ಜೀವನಾಧಾರ ಮತ್ತು ಅನುಗ್ರಹ ತುಂಬಿದ ಸ್ವರ್ಗೋದ್ಯಾನವಿದೆ.

فَرَوْحٌ وَرَيْحَانٌ وَجَنَّتُ نَعِيمٍ ﴿٨٩﴾

90. ಅವನು ಬಲಗಡೆಯವನಾಗಿದ್ದರೆ,

وَأَمَّا إِن كَانَ مِنْ أَصْحَابِ الْيَمِينِ ﴿٩٠﴾

91. "ನಿನ್ನ ಮೇಲೆ ಶಾಂತಿ ಇರಲಿ, ನೀನು ಬಲಗಡೆಯವರಲ್ಲಾಗಿರುತ್ತೀ" ಎಂದು ಅವನನ್ನು ಸ್ವಾಗತಿಸಲಾಗುವುದು

فَسَلَامٌ لَّكَ مِنْ أَصْحَابِ الْيَمِينِ ﴿٩١﴾

92. ಮತ್ತು ಅವನು ಸುಳ್ಳಾಗಿಸುವ ಪಥಭ್ರಷ್ಟರಲ್ಲಾಗಿದ್ದರೆ,

وَأَمَّا إِن كَانَ مِنَ الْمُكَذِّبِينَ الضَّالِّينَ ﴿٩٢﴾

93. ಅವನ ಸತ್ಕಾರಕ್ಕಾಗಿ ಕುದಿಯುವ ನೀರು,

فَنُزُلٌ مِّنْ حَمِيمٍ ﴿٩٣﴾

94. ಮತ್ತು ನರಕಕ್ಕೆ ತಳ್ಳಲ್ಪಡುವುದು ಇದೆ-

وَتَصْلِيَةُ جَحِيمٍ ﴿٩٤﴾

95. ಇದೆಲ್ಲವೂ ಖಚಿತವಾದ ಸತ್ಯವಾಗಿದೆ.

إِنَّ هَٰذَا لَهُوَ حَقُّ الْيَقِينِ ﴿٩٥﴾

96. ಆದುದರಿಂದ ಸಂದೇಶವಾಹಕರೇ, ನಿಮ್ಮ ಮಹಿಮಾಪೂರ್ಣ ಪ್ರಭುವಿನ ನಾಮವನ್ನು ಜಪಿಸಿರಿ.[10]

فَسَبِّحْ بِاسْمِ رَبِّكَ الْعَظِيمِ ﴿٩٦﴾

---

10. ಈ ಆದೇಶದ ಪ್ರಕಾರ ರುಕೂಅ್‌ನ ವೇಳೆ 'ಸುಬ್‌ಹಾನರಬ್ಬಿಯಲ್ ಅಝೀಮ್' ಎಂದು ಪಠಿಸುವಂತೆ ಪ್ರವಾದಿವರ್ಯರು(ಸ) ಆದೇಶಿಸಿದರು.







(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಅಲ್ಲಾಹನನ್ನು ಜಪಿಸಿದೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

سَبَّحَ لِلّٰهِ مَا فِي السَّمٰوٰتِ وَالْاَرْضِ ۚ وَهُوَ الْعَزِيْزُ الْحَكِيْمُ ①

2. ಭೂಮಿ-ಆಕಾಶಗಳ ಸಾಮ್ರಾಜ್ಯದ ಒಡೆಯನು ಅವನೇ ಆಗಿರುತ್ತಾನೆ, ಅವನೇ ಜೀವನ ನೀಡುತ್ತಾನೆ ಮತ್ತು ಮರಣ ಕೊಡುತ್ತಾನೆ. ಅವನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು.

لَهٗ مُلْكُ السَّمٰوٰتِ وَالْاَرْضِ ۚ يُحْيٖ وَيُمِيْتُ ۚ وَهُوَ عَلٰى كُلِّ شَيْءٍ قَدِيْرٌ ②

3. ಆದಿಯೂ ಅವನೇ ಅಂತ್ಯನೂ ಅವನೇ ಮತ್ತು ಅಭಿವ್ಯಕ್ತನೂ ಅವನೇ ರಹಸ್ಯನೂ ಅವನೇ[1] ಮತ್ತು ಅವನು ಸಕಲ ವಿಷಯಗಳ ಜ್ಞಾನವುಳ್ಳವನು.

هُوَ الْاَوَّلُ وَالْاٰخِرُ وَالظَّاهِرُ وَالْبَاطِنُ ۚ وَهُوَ بِكُلِّ شَيْءٍ عَلِيْمٌ ③

4. ಭೂಮಿ-ಆಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅವನೇ. ಅನಂತರ ವಿಶ್ವಸಿಂಹಾಸನಾರೂಢನಾದನು. ಭೂಮಿಯೊಳಗೆ ಹೋಗುವ, ಅದರಿಂದ ಹೊರಬರುವ ಮತ್ತು ಆಕಾಶದಿಂದ ಇಳಿಯುವ ಮತ್ತು ಅದಕ್ಕೆ ಏರಿ ಹೋಗುವ ಎಲ್ಲ ವಸ್ತುಗಳ ಜ್ಞಾನ ಅವನಿಗಿದೆ.[2] ನೀವೆಲ್ಲಿದ್ದರೂ ಅವನು ನಿಮ್ಮ ಜೊತೆಗಿದ್ದಾನೆ.

هُوَ الَّذِيْ خَلَقَ السَّمٰوٰتِ وَالْاَرْضَ فِيْ سِتَّةِ اَيَّامٍ ثُمَّ اسْتَوٰى عَلَى الْعَرْشِ ۚ يَعْلَمُ مَا يَلِجُ فِي الْاَرْضِ وَمَا يَخْرُجُ مِنْهَا وَمَا يَنْزِلُ مِنَ السَّمَآءِ وَمَا

---

1. ಅರ್ಥಾತ್- ಯಾವ ವಸ್ತುವೂ ಇಲ್ಲದಿದ್ದಾಗ ಅವನಿದ್ದನು ಮತ್ತು ಎಲ್ಲ ವಸ್ತುವೂ ಇಲ್ಲದಾಗುವಾಗಲೂ ಅವನಿರುವನು. ಅವನು ವ್ಯಕ್ತವಾಗುವ ಎಲ್ಲವುಗಳಿಗಿಂತಲೂ ಮಿಗಿಲಾಗಿ ವ್ಯಕ್ತವಾಗುವವನಾಗಿದ್ದಾನೆ. ಏಕೆಂದರೆ ಲೋಕದಲ್ಲಿ ವ್ಯಕ್ತವಾಗುವವುಗಳೆಲ್ಲವೂ ಅವನದೇ ಗುಣವಿಶೇಷತೆ, ಅವನದೇ ಕರ್ಮ ಮತ್ತು ಅವನದೇ ಪ್ರಕಾಶದಿಂದಾಗಿ ವ್ಯಕ್ತವಾಗಿದೆ. ಅವನು ಗುಪ್ತವಾದ ಎಲ್ಲವುಗಳಿಗಿಂತಲೂ ಹೆಚ್ಚು ಗುಪ್ತನಾಗಿದ್ದಾನೆ. ಏಕೆಂದರೆ ಇಂದ್ರಿಯಗಳಿಂದ ಅವನನ್ನು ಕಂಡುಕೊಳ್ಳುವುದಂತಿರಲಿ ಬುದ್ಧಿ ಮತ್ತು ಆಲೋಚನೆಯ ಮೂಲಕವೂ ಅವನ ಬಗೆಗಿನ ವಾಸ್ತವಿಕತೆಯನ್ನರಿಯಲು ಸಾಧ್ಯವಿಲ್ಲ.
2. ಅರ್ಥಾತ್- ಅವನು ಮೊತ್ತವನ್ನು ಮಾತ್ರವಲ್ಲದೆ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನೂ ಬಲ್ಲವನಾಗಿದ್ದಾನೆ. ಭೂತಳವನ್ನು ಸೇರುವ ಒಂದೊಂದು ಕಾಳು, ಭೂಮಿಯಿಂದ ಟಿಸಿಲೊಡೆಯುವ ಒಂದೊಂದೇ ಚಿಗುರು ಮತ್ತು ಮೊಳಕೆಯನ್ನೂ, ಆಕಾಶದಿಂದ ಸುರಿಯುವ ಮಳೆಯ ಒಂದೊಂದೇ ಹನಿಯನ್ನೂ, ಸಮುದ್ರ ಮತ್ತು ಸರೋವರಗಳಿಂದ ಆಕಾಶಕ್ಕೇರುವ ಆವಿಯ ಪ್ರಮಾಣವನ್ನೂ ಅವನು

ನೀವು ಮಾಡುವುದೆಲ್ಲವನ್ನೂ ಅವನು ನೋಡುತ್ತಿದ್ದಾನೆ.

يَعْرُجُ فِيهَا ۚ وَهُوَ مَعَكُمْ أَيْنَ مَا كُنتُمْ ۚ وَاللَّهُ بِمَا تَعْمَلُونَ بَصِيرٌ ﴿٤﴾

5. ಭೂಮಿ-ಆಕಾಶಗಳ ಸಾಮ್ರಾಜ್ಯದ ಒಡೆಯನು ಅವನೇ ಮತ್ತು ಸಕಲ ವಿಷಯಗಳು ತೀರ್ಮಾನಕ್ಕಾಗಿ ಅವನ ಕಡೆಗೆ ಮರಳಿಸಲ್ಪಡುತ್ತವೆ.

لَّهُ مُلْكُ السَّمَاوَاتِ وَالْأَرْضِ ۚ وَإِلَى اللَّهِ تُرْجَعُ الْأُمُورُ ﴿٥﴾

6. ರಾತ್ರೆಯನ್ನು ಹಗಲಿನೊಳಗೂ ಹಗಲನ್ನು ರಾತ್ರೆಯೊಳಗೂ ಅವನೇ ಪೋಣಿಸುತ್ತಾನೆ. ಹೃದಯಗಳೊಳಗೆ ಅವಿತುಕೊಂಡಿರುವ ರಹಸ್ಯಗಳನ್ನೂ ಅವನು ಬಲ್ಲನು.

يُولِجُ اللَّيْلَ فِي النَّهَارِ وَيُولِجُ النَّهَارَ فِي اللَّيْلِ ۚ وَهُوَ عَلِيمٌ بِذَاتِ الصُّدُورِ ﴿٦﴾

7. ಅಲ್ಲಾಹ್ ಮತ್ತು ಅವನ ಸಂದೇಶವಾಹಕನ ಮೇಲೆ ವಿಶ್ವಾಸವಿರಿಸಿರಿ.[3] ಅವನು ಯಾವ ವಸ್ತುಗಳ ಮೇಲೆ ನಿಮ್ಮನ್ನು ಪ್ರತಿನಿಧಿಯಾಗಿ ಮಾಡಿರುವನೋ ಅವುಗಳಿಂದ ಖರ್ಚು ಮಾಡಿರಿ. ನಿಮ್ಮ ಪೈಕಿ ಸತ್ಯವಿಶ್ವಾಸ ಸ್ವೀಕರಿಸುವವರಿಗೆ ಮತ್ತು ಸಂಪತ್ತನ್ನು ಖರ್ಚು ಮಾಡುವವರಿಗೆ ಮಹಾ ಪ್ರತಿಫಲವಿದೆ.

آمِنُوا بِاللَّهِ وَرَسُولِهِ وَأَنفِقُوا مِمَّا جَعَلَكُم مُّسْتَخْلَفِينَ فِيهِ ۖ فَالَّذِينَ آمَنُوا مِنكُمْ وَأَنفَقُوا لَهُمْ أَجْرٌ كَبِيرٌ ﴿٧﴾

8. ನಿಮಗೇನಾಗಿದೆ? ಸಂದೇಶವಾಹಕನು ನಿಮಗೆ ನಿಮ್ಮ ಒಡೆಯನ ಮೇಲೆ ವಿಶ್ವಾಸವಿರಿಸಲು ಕರೆ ನೀಡುತ್ತಿದ್ದರೂ ನೀವು ಅಲ್ಲಾಹನ ಮೇಲೆ ವಿಶ್ವಾಸವಿರಿಸುವುದಿಲ್ಲವೇಕೆ?[4] ನೀವು ನಿಜಕ್ಕೂ ವಿಶ್ವಾಸಿಗಳಾಗಿದ್ದರೆ ಅವನು ನಿಮ್ಮಿಂದ ವಚನ ಪಡೆದಿರುತ್ತಾನೆ.[5]

وَمَا لَكُمْ لَا تُؤْمِنُونَ بِاللَّهِ ۙ وَالرَّسُولُ يَدْعُوكُمْ لِتُؤْمِنُوا بِرَبِّكُمْ وَقَدْ أَخَذَ مِيثَاقَكُمْ إِن كُنتُم مُّؤْمِنِينَ ﴿٨﴾

9. ನಿಮ್ಮನ್ನು ಅಂಧಕಾರಗಳಿಂದ ಹೊರತೆಗೆದು ಪ್ರಕಾಶದೆಡೆಗೆ ತರಲಿಕ್ಕಾಗಿ ತನ್ನ ದಾಸನ ಮೇಲೆ ಸುಸ್ಪಷ್ಟ ಸೂಕ್ತಗಳನ್ನು ಅವತೀರ್ಣಗೊಳಿಸುತ್ತಿರುವವನು ಅಲ್ಲಾಹನೇ ತಾನೆ. ವಾಸ್ತವದಲ್ಲಿ ಅಲ್ಲಾಹನು ನಿಮ್ಮ ಪಾಲಿಗೆ ಮಹಾ ವತ್ಸಲನೂ ಕರುಣಾಮಯಿಯೂ ಆಗಿರುತ್ತಾನೆ.

هُوَ الَّذِي يُنَزِّلُ عَلَىٰ عَبْدِهِ آيَاتٍ بَيِّنَاتٍ لِّيُخْرِجَكُم مِّنَ الظُّلُمَاتِ إِلَى النُّورِ ۚ وَإِنَّ اللَّهَ بِكُمْ لَرَءُوفٌ رَّحِيمٌ ﴿٩﴾

10. ನೀವು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡದಿರಲು

وَمَا لَكُمْ أَلَّا تُنفِقُوا فِي سَبِيلِ اللَّهِ

---

ಬಲ್ಲವನಾಗಿದ್ದಾನೆ. ಯಾವ ಕಾಳು ಭೂಮಿಯ ಯಾವ ಪ್ರದೇಶದಲ್ಲಿ ಬಿದ್ದಿದೆ ಎಂಬುದು ಅವನಿಗೆ ತಿಳಿದಿದೆ. ಆದ್ದರಿಂದಲೇ ಅದನ್ನು ಸೀಳಿ ಮೊಳಕೆಯೊಡೆಯುವಂತೆ ಮಾಡಿ ಬೆಳೆಸಲು ಅವನಿಗೆ ಸಾಧ್ಯವಾಗುತ್ತದೆ. ಆವಿಯ ಎಷ್ಟು ಪ್ರಮಾಣ ಎಲ್ಲಿಂದ ಹೊರಟು ಎಲ್ಲಿಗೆ ತಲಪಿದೆ ಎಂದು ಅವನಿಗೆ ತಿಳಿದಿದೆ. ಆದ್ದರಿಂದಲೇ ಅವನು ಅದೆಲ್ಲವನ್ನೂ ಒಂದುಗೂಡಿಸಿ ಭೂಮಿಯ ವಿವಿಧ ಪ್ರದೇಶಗಳಲ್ಲಿ ಹರಡಿ ಪ್ರತಿಯೊಂದು ಕಡೆಯಲ್ಲೂ ನಿಶ್ಚಿತ ಪ್ರಮಾಣದಲ್ಲಿ ಮಳೆ ಸುರಿಸುತ್ತಾನೆ.

3. ಇಲ್ಲಿ ವಿಶ್ವಾಸವಿರಿಸುವುದೆಂದರೆ ಕೇವಲ ನಾಲಗೆಯ ಮೂಲಕ ಸತ್ಯವಿಶ್ವಾಸವನ್ನು ಪ್ರಕಟಿಸುವುದಲ್ಲ. ಬದಲಾಗಿ ಪ್ರಾಮಾಣಿಕ ಹೃದಯದಿಂದ ವಿಶ್ವಾಸವಿಡುವುದಾಗಿದೆ.
4. ಇಲ್ಲಿಯೂ ವಿಶ್ವಾಸವಿಡುವುದೆಂದರೆ ಪ್ರಾಮಾಣಿಕ ಹೃದಯದಿಂದ ವಿಶ್ವಾಸವಿಡುವುದಾಗಿದೆ.
5. ಅರ್ಥಾತ್- ಅನುಸರಣೆಯ ವಚನ.

ಕಾರಣವಾದರೂ ಏನು? ವಸ್ತುತಃ ಭೂಮಿ-ಆಕಾಶಗಳ ಉತ್ತರಾಧಿಕಾರವು ಅಲ್ಲಾಹನದೇ ಆಗಿದೆ.[6] ನಿಮ್ಮ ಪೈಕಿ ವಿಜಯ ಪ್ರಾಪ್ತಿಯ ಬಳಿಕ ಖರ್ಚು ಮಾಡುವವರು ಮತ್ತು ಹೋರಾಟ ನಡೆಸುವವರು, ವಿಜಯ ಪ್ರಾಪ್ತಿಗಿಂತ ಮುಂಚೆ ಖರ್ಚು ಮಾಡಿದವರಿಗೆ ಹಾಗೂ ಹೋರಾಟ ನಡೆಸಿದವರಿಗೆ ಸರಿಸಮಾನರಾಗಲಾರರು. ಅವರ ಪದವಿಯು ಅನಂತರ ಖರ್ಚು ಮಾಡಿದವರ ಹಾಗೂ ಹೋರಾಟ ನಡೆಸಿದವರಿಗಿಂತ ಉನ್ನತವಾಗಿದೆ. ಹಾಗಿದ್ದರೂ ಅಲ್ಲಾಹನು ಉಭಯತರಿಗೂ ಉತ್ತಮ ವಾಗ್ದಾನಗಳನ್ನಿತ್ತಿದ್ದಾನೆ.[7] ನೀವು ಮಾಡುವುದೆಲ್ಲವನ್ನೂ ಅಲ್ಲಾಹನು ಬಲ್ಲನು.

وَلِلَّهِ مِيرَاثُ السَّمٰوٰتِ وَالْأَرْضِ ۚ لَا يَسْتَوِي مِنكُم مَّنْ أَنفَقَ مِن قَبْلِ الْفَتْحِ وَقَاتَلَ ۚ أُولٰٓئِكَ أَعْظَمُ دَرَجَةً مِّنَ الَّذِينَ أَنفَقُوا مِن بَعْدُ وَقَاتَلُوا ۚ وَكُلًّا وَعَدَ اللَّهُ الْحُسْنٰى ۚ وَاللَّهُ بِمَا تَعْمَلُونَ خَبِيرٌ ﴿١٠﴾

11. ಅಲ್ಲಾಹನಿಗೆ ಸಾಲ ಕೊಡುವವನಾರಿದ್ದಾನೆ? ಅತ್ಯುತ್ತಮ ಸಾಲ. ಅಲ್ಲಾಹನು ಅದನ್ನು ಹಲವಾರು ಪಟ್ಟು ಹೆಚ್ಚಿಸಿಕೊಡುವನು ಮತ್ತು ಅವನಿಗೆ ಅತ್ಯುತ್ತಮ ಪ್ರತಿಫಲವಿದೆ.[8]

مَّن ذَا الَّذِي يُقْرِضُ اللَّهَ قَرْضًا حَسَنًا فَيُضٰعِفَهُ لَهُ وَلَهُ أَجْرٌ كَرِيمٌ ﴿١١﴾

12. ಅಂದು ನೀವು ಸತ್ಯವಿಶ್ವಾಸಿಗಳನ್ನೂ ಸತ್ಯವಿಶ್ವಾಸಿನಿಯರನ್ನೂ ನೋಡುವಾಗ ಅವರ ಪ್ರಕಾಶವು ಅವರ ಮುಂದೆಯೂ ಅವರ ಬಲಭಾಗದಲ್ಲೂ ಸಾಗುತ್ತಿರುವುದು.[9] (ಆಗ ಅವರೊಡನೆ) "ಇಂದು ನಿಮಗೆ ಶುಭವಾರ್ತೆ ಇದೆ" (ಎನ್ನಲಾಗುವುದು). ತಳಭಾಗದಲ್ಲಿ

يَوْمَ تَرَى الْمُؤْمِنِينَ وَالْمُؤْمِنٰتِ يَسْعٰى نُورُهُم بَيْنَ أَيْدِيهِمْ وَبِأَيْمٰنِهِم بُشْرٰىكُمُ الْيَوْمَ جَنّٰتٌ

6. ಇದಕ್ಕೆ ಎರಡು ಅರ್ಥಗಳಿವೆ. ಮೊದಲನೇಯದಾಗಿ ಈ ಸಂಪತ್ತು ನಿಮ್ಮ ಬಳಿ ಉಳಿಯುವಂತಹುದಲ್ಲ. ಒಂದು ದಿನ ನೀವು ಅದನ್ನು ಬಿಟ್ಟು ಹೋಗಲೇಬೇಕಾಗಿದೆ. ಕೊನೆಗೂ ಅಲ್ಲಾಹನೇ ಅದರ ವಾರೀಸುದಾರನಾಗಿರುತ್ತಾನೆ. ಎರಡನೆಯದಾಗಿ ಅಲ್ಲಾಹನ ಮಾರ್ಗದಲ್ಲಿ ಹಣವನ್ನು ವೆಚ್ಚ ಮಾಡುವಾಗ ನಿಮಗೆ ದಾರಿದ್ರ್ಯ ಮತ್ತು ಹಣದ ಮುಗ್ಗಟ್ಟಿನ ಬಗ್ಗೆ ಯಾವುದೇ ರೀತಿಯ ಶಂಕೆ ಹುಟ್ಟಬಾರದು. ಏಕೆಂದರೆ ಯಾವ ದೇವನಿಗಾಗಿ ನೀವು ಅದನ್ನು ವ್ಯಯಿಸುತ್ತಿದ್ದೀರೋ ಅವನು ಭೂಮಿ-ಆಕಾಶಗಳ ಎಲ್ಲ ಭಂಡಾರಗಳ ಒಡೆಯನಾಗಿದ್ದಾನೆ. ಅವನ ಬಳಿ ನಿಮಗೆ ಕೊಡಲು ಇಂದು ನಿಮಗೆ ನೀಡಲಾಗಿರುವುದಷ್ಟೇ ಇರುವುದಲ್ಲ. ಬದಲಾಗಿ ನಾಳೆ ಅವನು ನಿಮಗೆ ಅದಕ್ಕಿಂತ ಎಷ್ಟೋ ಹೆಚ್ಚು ಕೊಡಲಿಕ್ಕೂ ಅವನಿಂದ ಸಾಧ್ಯವಿದೆ.
7. ಸತ್ಯನಿಷೇಧ ಮತ್ತು ಸತ್ಯನಿಷೇಧಿಗಳ ಪ್ರಾಬಲ್ಯವಿದ್ದು ಇಸ್ಲಾಮಿನ ಮೇಲ್ಮೆಯ ಲಕ್ಷಣಗಳು ದೂರದೂರಕ್ಕೂ ಕಾಣಿಸದಂತೆ ಮೇಲ್ನೋಟಕ್ಕೆ ತೋರುವಂತಹ ಪರಿಸ್ಥಿತಿ ಇಸ್ಲಾಮಿಗೆ ಎದುರಾದರೆ- ಆ ಸಂದರ್ಭದಲ್ಲಿ ಇಸ್ಲಾಮನ್ನು ಬೆಂಬಲಿಸಲಿಕ್ಕಾಗಿ ಪ್ರಾಣದ ಹಂಗು ತೊರೆದು ಹೋರಾಡುವವರು, ಹಣ ವೆಚ್ಚ ಮಾಡುವವರು, ಉನ್ನತ ಸ್ಥಾನವನ್ನು ಹೊಂದಿದ್ದಾರೆ. ಇಸ್ಲಾಮ್ ಮತ್ತು ಸತ್ಯನಿಷೇಧದ ನಡುವಿನ ಹೋರಾಟದಲ್ಲಿ ತೀರ್ಮಾನ ಇಸ್ಲಾಮಿನ ಪರವಾಗಿ ಆದ ನಂತರ ತ್ಯಾಗಗಳನ್ನು ನೀಡುವವರಿಗೆ ಈ ಸ್ಥಾನ ಪ್ರಾಪ್ತವಾಗಲಾರದು.
8. ಒಬ್ಬ ವ್ಯಕ್ತಿ ಅಲ್ಲಾಹನು ದಯಪಾಲಿಸಿರುವ ಸಂಪತ್ತನ್ನು ಅವನ ಮಾರ್ಗದಲ್ಲಿ ವ್ಯಯಿಸಿದರೆ ಅವನು ಅದನ್ನು ತನಗೆ ನೀಡಲಾದ ಸಾಲವೆಂದು ಪರಿಗಣಿಸುತ್ತಾನೆ. ಇದು ಅಲ್ಲಾಹನ ಔದಾರ್ಯದ ಪರಮಾವಧಿಯಾಗಿದೆ. ಆದರೆ ಅದು 'ಅತ್ಯುತ್ತಮ ಸಾಲ' ಆಗಿರಬೇಕು. ಅರ್ಥಾತ್, ಪ್ರಾಮಾಣಿಕ ಮನಸ್ಸಿನೊಂದಿಗೆ ಯಾವುದೇ ಸ್ವಾರ್ಥ ಹಿತಾಸಕ್ತಿಯಿಲ್ಲದೆ ಅದನ್ನು ನೀಡಬೇಕು. ಈ ಸಾಲದ ಕುರಿತು ಅಲ್ಲಾಹನ ಎರಡು ವಾಗ್ದಾನಗಳಿವೆ. ಮೊದಲನೇಯದಾಗಿ ಅವನು ಅದನ್ನು ಅತ್ಯಧಿಕವಾಗಿ ವೃದ್ಧಿಸಿ ಮರಳಿಸುವನು. ಅಲ್ಲದೆ ಅದಕ್ಕಾಗಿ ಅವನು ತನ್ನ ವತಿಯಿಂದ ಅತ್ಯುತ್ತಮ ಪುಣ್ಯವನ್ನೂ ನೀಡುವನು.
9. ಇಲ್ಲಿ ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಒಂದು ಪ್ರಶ್ನೆ ಮೂಡಬಹುದು. ಪ್ರಕಾಶವು ಮುಂದಕ್ಕೆ ಹರಿಯುತ್ತದೆ ಎನ್ನುವುದು ಅರ್ಥವಾಗುತ್ತದೆ. ಆದರೆ ಅದು ಬಲಕ್ಕೆ ಹರಿಯುವುದು ಎಂದರೇನು? ಹಾಗಾದರೆ ಅವರ ಎಡಭಾಗದಲ್ಲಿ ಕತ್ತಲೆಯಿರುವುದೇ? ಇದರ ಉತ್ತರವೇನೆಂದರೆ ಒಬ್ಬ ವ್ಯಕ್ತಿ ಬಲಗೈಯಲ್ಲಿ ಬೆಳಕನ್ನು ಹಿಡಿದು ನಡೆಯುತ್ತಿದ್ದರೆ ಅದರಿಂದ ಎಡಭಾಗವೂ ಪ್ರಕಾಶಮಾನ ಗೊಳ್ಳುತ್ತದೆ. ಆದರೆ ಬೆಳಕು ಅವನ ಬಲಗೈಯಲ್ಲಿರುತ್ತದೆ ಎಂಬುದೇ ವಾಸ್ತವಿಕತೆಯಾಗಿದೆ.

ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿದ್ದು ಅವುಗಳಲ್ಲಿ ಅವರು ಸದಾಕಾಲ ವಾಸಿಸುವರು. ಇದುವೇ ಮಹಾ ಯಶಸ್ಸು.

تَجْرِي مِنْ تَحْتِهَا الْأَنْهَارُ خَالِدِينَ فِيهَا ۚ ذَٰلِكَ هُوَ الْفَوْزُ الْعَظِيمُ ﴿١٢﴾

13. ಅಂದು ಕಪಟವಿಶ್ವಾಸಿಗಳಾದ ಪುರುಷರು ಮತ್ತು ಸ್ತ್ರೀಯರು ಸತ್ಯವಿಶ್ವಾಸಿಗಳೊಡನೆ- "ನಿಮ್ಮ ಪ್ರಕಾಶದಿಂದ ನಾವು ಒಂದಿಷ್ಟು ಪ್ರಯೋಜನ ಪಡೆಯುವಂತಾಗಲು ನೀವು ಸ್ವಲ್ಪ ನಮ್ಮ ಕಡೆಗೆ ನೋಡಿರಿ" ಎನ್ನುವರು. ಆದರೆ ಅವರೊಡನೆ, "ಹಿಂದಕ್ಕೆ ಸರಿಯಿರಿ, ನಿಮ್ಮ ಪ್ರಕಾಶವನ್ನು ಬೇರೆಲ್ಲಾದರೂ ಹುಡುಕಿಕೊಳ್ಳಿರಿ" ಎನ್ನಲಾಗುವುದು. ತರುವಾಯ ಅವರ ನಡುವೆ ಒಂದು ಅಡ್ಡಗೋಡೆಯನ್ನು ನಿರ್ಮಿಸಲಾಗುವುದು. ಅದರಲ್ಲಿ ಒಂದು ಬಾಗಿಲಿರುವುದು, ಆ ಬಾಗಿಲಿನ ಒಳಗೆ ಕರುಣೆಯೂ ಹೊರಗೆ ಯಾತನೆಯೂ ಇರುವುದು.

يَوْمَ يَقُولُ الْمُنَافِقُونَ وَالْمُنَافِقَاتُ لِلَّذِينَ آمَنُوا انْظُرُونَا نَقْتَبِسْ مِنْ نُورِكُمْ قِيلَ ارْجِعُوا وَرَاءَكُمْ فَالْتَمِسُوا نُورًا ۖ فَضُرِبَ بَيْنَهُمْ بِسُورٍ لَهُ بَابٌ ۖ بَاطِنُهُ فِيهِ الرَّحْمَةُ وَظَاهِرُهُ مِنْ قِبَلِهِ الْعَذَابُ ﴿١٣﴾

14. ಅವರು ಸತ್ಯವಿಶ್ವಾಸಿಗಳನ್ನು ಕೂಗಿ ಕರೆಯುತ್ತ, "ನಾವು ನಿಮ್ಮ ಜೊತೆಗಿರಲಿಲ್ಲವೇ?" ಎಂದು ಕೇಳುವರು. ಆಗ ಸತ್ಯವಿಶ್ವಾಸಿಗಳು- "ಹೌದು, ಆದರೆ ಸ್ವತಃ ನೀವೇ ನಿಮ್ಮನ್ನು ವಂಚನೆಗೆ ಸಿಲುಕಿಸಿಕೊಂಡಿರಿ, ಸಂದರ್ಭ ಸಾಧಕತನವನ್ನು ತೋರಿದಿರಿ, ಸಂಶಯ ಗ್ರಸ್ತರಾದಿರಿ ಮತ್ತು ಹುಸಿ ನಿರೀಕ್ಷೆಗಳು ನಿಮ್ಮನ್ನು ಮೋಸಗೊಳಿಸುತ್ತಿದ್ದುವು. ಕೊನೆಗೆ ಅಲ್ಲಾಹನ ತೀರ್ಪು ಬಂದೇ ಬಿಟ್ಟಿತು ಮತ್ತು ಆ ಮಹಾವಂಚಕನು (ಶೈತಾನನು) ಕೊನೆಯ ವರೆಗೂ ಅಲ್ಲಾಹನ ವಿಷಯದಲ್ಲಿ ನಿಮ್ಮನ್ನು ವಂಚಿಸುತ್ತಲೇ ಇದ್ದನು.

يُنَادُونَهُمْ أَلَمْ نَكُنْ مَعَكُمْ ۖ قَالُوا بَلَىٰ وَلَٰكِنَّكُمْ فَتَنْتُمْ أَنْفُسَكُمْ وَتَرَبَّصْتُمْ وَارْتَبْتُمْ وَغَرَّتْكُمُ الْأَمَانِيُّ حَتَّىٰ جَاءَ أَمْرُ اللَّهِ وَغَرَّكُمْ بِاللَّهِ الْغَرُورُ ﴿١٤﴾

15. ಆದುದರಿಂದ ಇಂದು ನಿಮ್ಮಿಂದಾಗಲಿ, ಸತ್ಯವನ್ನು ಬಹಿರಂಗವಾಗಿ ನಿಷೇಧಿಸಿದ್ದವರಿಂದಾಗಲಿ ಯಾವ ಪರಿಹಾರವನ್ನೂ ಸ್ವೀಕರಿಸಲಾಗದು. ನರಕವು ನಿಮ್ಮ ನಿವಾಸವಾಗಿದೆ. ಅದುವೇ ನಿಮ್ಮ ಮೇಲ್ವಿಚಾರಕ ಮತ್ತು ಇದು ಅತ್ಯಂತ ಕೆಟ್ಟ ಗತಿಯಾಗಿದೆ."

فَالْيَوْمَ لَا يُؤْخَذُ مِنْكُمْ فِدْيَةٌ وَلَا مِنَ الَّذِينَ كَفَرُوا ۚ مَأْوَاكُمُ النَّارُ ۖ هِيَ مَوْلَاكُمْ ۖ وَبِئْسَ الْمَصِيرُ ﴿١٥﴾

16. ಸತ್ಯವಿಶ್ವಾಸಿಗಳಿಗೆ,[10] ಅವರ ಹೃದಯವು ಅಲ್ಲಾಹನ ಸ್ಮರಣೆಯಿಂದ ಕರಗುವ ಹಾಗೂ ಅವನಿಂದ ಅವತೀರ್ಣಗೊಂಡ ಸತ್ಯದ ಮುಂದೆ ಬಾಗುವ ಕಾಲವಿನ್ನೂ ಬರಲಿಲ್ಲವೇ? ಮತ್ತು ಅವರು ಈ ಹಿಂದೆ ಗ್ರಂಥ ನೀಡಲ್ಪಟ್ಟವರಂತಾಗಬಾರದು. (ಗ್ರಂಥ ನೀಡಲ್ಪಟ್ಟು) ಒಂದು ದೀರ್ಘಕಾಲ ಕಳೆದ ಬಳಿಕ ಅವರ ಹೃದಯಗಳು ಕಠಿಣವಾದುವು ಮತ್ತು ಇಂದು ಅವರಲ್ಲಿ ಹೆಚ್ಚಿನವರು ಕರ್ಮಭ್ರಷ್ಟರಾಗಿರುವರು.

أَلَمْ يَأْنِ لِلَّذِينَ آمَنُوا أَنْ تَخْشَعَ قُلُوبُهُمْ لِذِكْرِ اللَّهِ وَمَا نَزَلَ مِنَ الْحَقِّ وَلَا يَكُونُوا كَالَّذِينَ أُوتُوا الْكِتَابَ مِنْ قَبْلُ فَطَالَ عَلَيْهِمُ الْأَمَدُ فَقَسَتْ قُلُوبُهُمْ ۖ وَكَثِيرٌ مِنْهُمْ فَاسِقُونَ ﴿١٦﴾

10. ಇಲ್ಲಿ "ಸತ್ಯವಿಶ್ವಾಸಿಗಳು" ಎಂದರೆ ಎಲ್ಲಾ ಸತ್ಯವಿಶ್ವಾಸಿಗಳಲ್ಲ. ಬದಲಾಗಿ ಸತ್ಯವಿಶ್ವಾಸ ಸ್ವೀಕರಿಸುವ ಸಂಕಲ್ಪ ಮಾಡಿ ಪ್ರವಾದಿವರ್ಯರನ್ನು(ಸ) ನಂಬುವವರ ಕೂಟದಲ್ಲಿ ಸೇರಿಯೂ ಹೃದಯದಲ್ಲಿ ಇಸ್ಲಾಮಿನ ಬಗೆಗಿನ ಕಳಕಳಿಯನ್ನು ಹೊಂದಿರದಂತಹ ಮುಸ್ಲಿಮರ ನಿರ್ದಿಷ್ಟ ಸಮೂಹವಾಗಿದೆ.

17. ಚೆನ್ನಾಗಿ ತಿಳಿದುಕೊಳ್ಳಿರಿ. ಅಲ್ಲಾಹನು ಭೂಮಿಯನ್ನು, ಅದು ಸತ್ತ ಬಳಿಕ ಜೀವಂತ ಗೊಳಿಸುತ್ತಾನೆ.[11] ನೀವು ವಿವೇಚಿಸಬಹುದೆಂದು ನಾವು ನಿಮಗೆ ನಿದರ್ಶನಗಳನ್ನು ಸುವ್ಯಕ್ತವಾಗಿ ತೋರಿಸಿ ಕೊಟ್ಟಿದ್ದೇವೆ.

اِعْلَمُوْٓا اَنَّ اللّٰهَ يُحْيِ الْاَرْضَ بَعْدَ مَوْتِهَا ۭ قَدْ بَيَّنَّا لَكُمُ الْاٰيٰتِ لَعَلَّكُمْ تَعْقِلُوْنَ ۝١٧

18. ಪುರುಷರಲ್ಲೂ ಸ್ತ್ರೀಯರಲ್ಲೂ ದಾನಧರ್ಮ[12] ಮಾಡುವವರಿಗೆ ಮತ್ತು ಅಲ್ಲಾಹನಿಗೆ ಶ್ರೇಷ್ಠ ಸಾಲವನ್ನು ನೀಡಿದವರಿಗೆ ಖಂಡಿತ ವಾಗಿಯೂ ಎಷ್ಟೋ ಪಟ್ಟು ವರ್ಧಿಸಿ ಕೊಡಲಾಗುವುದು. ಅವರಿಗೆ ಅತ್ಯುತ್ತಮ ಪ್ರತಿಫಲವಿದೆ.

اِنَّ الْمُصَّدِّقِيْنَ وَالْمُصَّدِّقٰتِ وَاَقْرَضُوا اللّٰهَ قَرْضًا حَسَنًا يُّضٰعَفُ لَهُمْ وَلَهُمْ اَجْرٌ كَرِيْمٌ ۝١٨

19. ಅಲ್ಲಾಹನು ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸ ವಿರಿಸಿದವರೇ ತಮ್ಮ ಪ್ರಭುವಿನ ಬಳಿ ಸಿದ್ದೀಕ್[13] (ಸತ್ಯಸಂಧರು) ಮತ್ತು ಶಹೀದ್[14] (ಹುತ್ಮಾತರು) ಆಗಿರುತ್ತಾರೆ. ಅವರಿಗೆ ಅವರ ಸತ್ಫಲವೂ ಅವರ ಪ್ರಕಾಶವೂ ಇದೆ. ಸತ್ಯಧಿಕ್ಕಾರಿಗಳು ಮತ್ತು ನಮ್ಮ ಸೂಕ್ತಗಳನ್ನು ತಿರಸ್ಕರಿಸಿದವರು ನರಕದವರಾಗಿದ್ದಾರೆ.

وَالَّذِيْنَ اٰمَنُوْا بِاللّٰهِ وَرُسُلِهٖٓ اُولٰۗىِٕكَ هُمُ الصِّدِّيْقُوْنَ ڰ وَالشُّهَدَاۗءُ عِنْدَ رَبِّهِمْ ۭ لَهُمْ اَجْرُهُمْ وَنُوْرُهُمْ ۭ وَالَّذِيْنَ كَفَرُوْا وَكَذَّبُوْا بِاٰيٰتِنَآ اُولٰۗىِٕكَ اَصْحٰبُ الْجَحِيْمِ ۝١٩

20. ಚೆನ್ನಾಗಿ ತಿಳಿದುಕೊಳ್ಳಿರಿ! ಈ ಲೌಕಿಕ ಜೀವನವು ಕೇವಲ ಒಂದು ಆಟ, ವಿನೋದ, ತೋರಿಕೆಯ ವೈಭವ, ಪರಸ್ಪರರ ಮೇಲೆ ಹಿರಿಮೆ ಸಾಧಿಸುವ ಪ್ರಯತ್ನ ಮತ್ತು ಸಂಪತ್ತು ಹಾಗೂ ಸಂತಾನದ ವಿಷಯದಲ್ಲಿ ಪರಸ್ಪರರನ್ನು ಮೀರಿ ಹೋಗುವ

اِعْلَمُوْٓا اَنَّمَا الْحَيٰوةُ الدُّنْيَا لَعِبٌ وَّلَهْوٌ وَّزِيْنَةٌ وَّتَفَاخُرٌۢ بَيْنَكُمْ وَتَكَاثُرٌ فِي الْاَمْوَالِ وَالْاَوْلَادِ ۭ كَمَثَلِ

11. ಇಲ್ಲಿ ಯಾವ ಹಿನ್ನೆಲೆಯಿಂದ ಈ ಮಾತು ಹೇಳಲಾಗಿದೆ ಎಂಬುದನ್ನು ಚೆನ್ನಾಗಿ ಮನನ ಮಾಡಿ ಕೊಳ್ಳಬೇಕು. ಪವಿತ್ರ ಕುರ್‌ಆನಿನ ಅನೇಕ ಕಡೆಗಳಲ್ಲಿ ಪ್ರವಾದಿತ್ವ ಮತ್ತು ಗ್ರಂಥ ಅವತೀರ್ಣಗೊಂಡುದನ್ನು ಮಳೆಯ ಸಮೃದ್ಧಿಯೊಂದಿಗೆ ಹೋಲಿಸಲಾಗಿದೆ. ಏಕೆಂದರೆ ಅದರಿಂದ ಮಾನವಕುಲದ ಮೇಲೆ, ಮಳೆಯಿಂದ ಭೂಮಿಯ ಮೇಲಾಗುವ ಪರಿಣಾಮವೇ ಉಂಟಾಗುತ್ತದೆ. ಮಳೆಯಿಂದಾಗಿ ಸ್ವಲ್ಪವಾದರೂ ಫಲವತ್ತತೆ ಇರುವ ಭೂಮಿ ಹಸಿರಿನಿಂದ ಕಂಗೊಳಿಸುತ್ತದೆ. ಆದರೆ ಬಂಜರು ನೆಲ ಮೊದಲಿನಂತೆಯೇ ಬಂಜರಾಗಿಯೇ ಬಿದ್ದಿರುತ್ತದೆ.

12. ಉರ್ದು ಭಾಷೆಯಲ್ಲಿ 'ಸದಕ' ಎಂಬ ಪದ ಬಹಳ ಕೆಟ್ಟ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಆದರೆ ಇಸ್ಲಾಮೀ ಪಾರಿಭಾಷಿಕದಲ್ಲಿ ಪ್ರಾಮಾಣಿಕ ಹೃದಯ ಮತ್ತು ಶುದ್ಧಮನಸ್ಸಿನೊಂದಿಗೆ ಅಲ್ಲಾಹನ ಸಂಪ್ರೀತಿಗಾಗಿ ಮಾತ್ರ ನೀಡಲಾಗುವ, ಯಾವುದೇ ರೀತಿಯ ತೋರಿಕೆ ಅಥವಾ ಉಪಕಾರಭಾರದ ಭಾವವಿಲ್ಲದ ದಾನಕ್ಕೆ ಈ ಪದ ಬಳಕೆಯಾಗುತ್ತದೆ.

13. 'ಸಿದ್ದೀಕ್' ಎಂಬುದು 'ಸಿದ್ಕ್'ನ ಅತಿಶಯ ರೂಪವಾಗಿದೆ. ಸಾದಿಕ್ ಎಂದರೆ ಸತ್ಯವಂತ. ಸಿದ್ದೀಕ್ ಎಂದರೆ ಪರಮ ಸತ್ಯವಂತ. ಅರ್ಥಾತ್ ಯಾವುದೇ ರೀತಿಯ ಹುಳುಕಿಲ್ಲದ, ಸತ್ಯ ಮತ್ತು ಸನ್ಮಾರ್ಗದಿಂದ ಎಂದೂ ವಿಚಲಿತನಾಗದ, ತನ್ನ ಮನಸ್ಸಾಕ್ಷಿಯ ವಿರುದ್ಧ ಮಾತನಾಡಿಯಾನೆಂದು ಕಲ್ಪಿಸಲಿಕ್ಕೂ ಸಾಧ್ಯವಾಗದ, ಯಾವುದೇ ವಿಷಯವನ್ನು ನಂಬಿದರೆ ಪ್ರಾಮಾಣಿಕ ಸಂಕಲ್ಪದೊಂದಿಗೆ ನಂಬುವ, ಅದರ ಮೇಲಿನ ನಿಷ್ಠೆಯ ಬೇಡಿಕೆಗಳನ್ನು ಈಡೇರಿಸುವ ಮತ್ತು ಓರ್ವ ನಂಬಿಗಸ್ಥ ನಿಜವಾಗಿ ಇರಬೇಕಾದ ರೀತಿಯಲ್ಲಿ ತಾನಿದ್ದೇನೆಂದು ತನ್ನ ಕರ್ಮದಿಂದ ಸಾಬೀತುಪಡಿಸುವ ವ್ಯಕ್ತಿಯಾಗಿದ್ದಾನೆ.

14. 'ಶಹೀದ್' ಎಂದರೆ ಇಲ್ಲಿ ತನ್ನ ಮಾತು ಮತ್ತು ಕೃತಿಯ ಮೂಲಕ ಸತ್ಯದ ಸಾಕ್ಷ್ಯ ವಹಿಸುವವನಾಗಿದ್ದಾನೆ.

ಪೈಪೋಟಿ ಮಾತ್ರವಲ್ಲದೆ ಇನ್ನೇನೂ ಅಲ್ಲ. ಇದರ ಉಪಮೆ ಹೀಗಿದೆ, ಒಂದು ಮಳೆ ಬಂದೊಡನೆ ಅದರಿಂದಾಗಿ ಹುಟ್ಟುವ ಸಸ್ಯಗಳನ್ನು ಕಂಡು ಕೃಷಿಕರು ಸಂತೋಷಗೊಂಡರು. ತರುವಾಯ ಅದೇ ಬೆಳೆಯು ಬಲಿತಾಗ ಅದು ಹಳದಿಯಾಗಿ ಬಿಟ್ಟದ್ದನ್ನು ನೀವು ಕಾಣುತ್ತೀರಿ. ಅನಂತರ ಅದು ಹೊಟ್ಟಾಗಿ ಬಿಡುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಪರಲೋಕವು ಕಠಿಣ ಯಾತನೆ ಇರುವ ಮತ್ತು ಅಲ್ಲಾಹನ ಕ್ಷಮೆ ಹಾಗೂ ಸಂಪ್ರೀತಿ ಇರುವ ಸ್ಥಳವಾಗಿದೆ. ಲೌಕಿಕ ಜೀವನವು ಒಂದು ವಂಚನೆಯ ಸಾಧನವಲ್ಲದೆ ಮತ್ತೇನೂ ಅಲ್ಲ.

غَيْثٍ أَعْجَبَ الْكُفَّارَ نَبَاتُهُ ثُمَّ يَهِيجُ فَتَرَاهُ مُصْفَرًّا ثُمَّ يَكُونُ حُطَامًا ۖ وَفِي الْآخِرَةِ عَذَابٌ شَدِيدٌ وَمَغْفِرَةٌ مِّنَ اللَّهِ وَرِضْوَانٌ ۚ وَمَا الْحَيَاةُ الدُّنْيَا إِلَّا مَتَاعُ الْغُرُورِ ﴿٢٠﴾

21. ಧಾವಿಸಿರಿ ಮತ್ತು ನಿಮ್ಮ ಪ್ರಭುವಿನ ಕ್ಷಮೆ ಹಾಗೂ ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸುವಲ್ಲಿ ಪರಸ್ಪರ ಸ್ಪರ್ಧಿಸಿರಿ.[15] ಅದನ್ನು ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿದವರಿಗಾಗಿ ಸಿದ್ಧಗೊಳಿಸಲಾಗಿದೆ. ಇದು ಅಲ್ಲಾಹನ ಅನುಗ್ರಹ. ಅವನಿದನ್ನು ತಾನಿಚ್ಛಿಸಿದವರಿಗೆ ನೀಡುತ್ತಾನೆ ಮತ್ತು ಅಲ್ಲಾಹನು ಮಹಾ ಅನುಗ್ರಹಶಾಲಿಯಾಗಿದ್ದಾನೆ.

سَابِقُوا إِلَىٰ مَغْفِرَةٍ مِّن رَّبِّكُمْ وَجَنَّةٍ عَرْضُهَا كَعَرْضِ السَّمَاءِ وَالْأَرْضِ أُعِدَّتْ لِلَّذِينَ آمَنُوا بِاللَّهِ وَرُسُلِهِ ۚ ذَٰلِكَ فَضْلُ اللَّهِ يُؤْتِيهِ مَن يَشَاءُ ۚ وَاللَّهُ ذُو الْفَضْلِ الْعَظِيمِ ﴿٢١﴾

22. ಭೂಮಿಯ ಮೇಲೆ ಅಥವಾ ನಿಮ್ಮ ಮೇಲೆ ಎರಗುವ ಯಾವ ಸಂಕಷ್ಟವೂ ನಾವು ಅದನ್ನು ಸೃಷ್ಟಿಸುವುದಕ್ಕೆ ಮುಂಚೆ ಒಂದು ಗ್ರಂಥದಲ್ಲಿ (ವಿಧಿ ಲಿಖಿತದಲ್ಲಿ) ಬರೆದಿಟ್ಟುಕೊಳ್ಳದೆ ಇಲ್ಲ. ಖಂಡಿತವಾಗಿಯೂ ಹೀಗೆ ಮಾಡುವುದು ಅಲ್ಲಾಹನಿಗೆ ಅತ್ಯಂತ ಸುಲಭ ಕಾರ್ಯವಾಗಿದೆ.

مَا أَصَابَ مِن مُّصِيبَةٍ فِي الْأَرْضِ وَلَا فِي أَنفُسِكُمْ إِلَّا فِي كِتَابٍ مِّن قَبْلِ أَن نَّبْرَأَهَا ۚ إِنَّ ذَٰلِكَ عَلَى اللَّهِ يَسِيرٌ ﴿٢٢﴾

23. (ಹೀಗೇಕೆಂದರೆ) ನಿಮಗುಂಟಾಗುವ ಯಾವುದೇ ನಷ್ಟಕ್ಕಾಗಿ ನೀವು ಖೇದಿಸಬಾರದು ಮತ್ತು ಅಲ್ಲಾಹನು ನಿಮಗೆ ಏನನ್ನು ದಯಪಾಲಿಸಿರುವನೋ ಅದರ ಬಗ್ಗೆ ಹಿಗ್ಗಬಾರದು. ಅಲ್ಲಾಹನು ಆತ್ಮಪ್ರಶಂಸಕರನ್ನು ಮತ್ತು ದುರಭಿಮಾನಿಗಳನ್ನು ಮೆಚ್ಚುವುದಿಲ್ಲ.

لِّكَيْلَا تَأْسَوْا عَلَىٰ مَا فَاتَكُمْ وَلَا تَفْرَحُوا بِمَا آتَاكُمْ ۗ وَاللَّهُ لَا يُحِبُّ كُلَّ مُخْتَالٍ فَخُورٍ ﴿٢٣﴾

24. ಅವರು ಸ್ವತಃ ಜಿಪುಣತೆ ತೋರುತ್ತಾರೆ ಮತ್ತು ಇತರರನ್ನು ಜಿಪುಣತೆಗೆ ಪ್ರೇರೇಪಿಸುತ್ತಾರೆ. ಇನ್ನು ಯಾರಾದರೂ ವಿಮುಖರಾಗುತ್ತಾರಾದರೆ, ಅಲ್ಲಾಹನು ನಿರಪೇಕ್ಷನೂ ಸ್ತುತ್ಯರ್ಹನೂ ಆಗಿರುತ್ತಾನೆ.

الَّذِينَ يَبْخَلُونَ وَيَأْمُرُونَ النَّاسَ بِالْبُخْلِ ۗ وَمَن يَتَوَلَّ فَإِنَّ اللَّهَ هُوَ الْغَنِيُّ الْحَمِيدُ ﴿٢٤﴾

15. ಈ ಸೂಕ್ತವನ್ನು ಸೂರಃ ಆಲಿ ಇಮ್ರಾನ್‌ನ 133ನೆಯ ಸೂಕ್ತದೊಂದಿಗೆ ಸೇರಿಸಿ ಓದಿದರೆ ಮನಸ್ಸಿನಲ್ಲಿ ಮೂಡುವ ಚಿತ್ರಣವೇನೆಂದರೆ-ಸ್ವರ್ಗದಲ್ಲಿ ಮನುಷ್ಯನಿಗೆ ಸಿಗುವ ಉದ್ಯಾನ ಮತ್ತು ಅರಮನೆಗಳು ಅವನ ನಿವಾಸಸ್ಥಳ ಮಾತ್ರವಾಗಿರುವುದು. ಉಳಿದಂತೆ ಸಮಸ್ತ ನಿಸರ್ಗ ಅವನ ವಿಹಾರ ಕ್ಷೇತ್ರವಾಗಿರುವುದು.

25. ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾರ್ಗದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯ ದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅವರ ಜೊತೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು[16] ಮತ್ತು ನಾವು ಕಬ್ಬಿಣ ವನ್ನು ಅವತೀರ್ಣಗೊಳಿಸಿದೆವು. ಅದರಲ್ಲಿ ಭಾರೀ ಶಕ್ತಿ ಇದೆ ಮತ್ತು ಜನರಿಗೆ ಪ್ರಯೋಜನಗಳಿವೆ.[17] ಯಾರು ಅಲ್ಲಾಹನನ್ನು ಕಾಣದೆಯೇ ಅವನಿಗೆ ಹಾಗೂ ಅವನ ಸಂದೇಶವಾಹಕರಿಗೆ ನೆರವಾಗುತ್ತಾರೆಂಬುದನ್ನು ಅಲ್ಲಾಹನು ತಿಳಿಯುವಂತಾಗಲು ಹೀಗೆ ಮಾಡಲಾಗಿದೆ. ಖಂಡಿತವಾಗಿಯೂ ಅಲ್ಲಾಹನು ಅತ್ಯಂತ ಬಲಿಷ್ಠನೂ ಅಜೇಯನೂ ಆಗಿರುತ್ತಾನೆ.

لَقَدْ أَرْسَلْنَا رُسُلَنَا بِالْبَيِّنَاتِ وَأَنْزَلْنَا مَعَهُمُ الْكِتَابَ وَالْمِيزَانَ لِيَقُومَ النَّاسُ بِالْقِسْطِ ۖ وَأَنْزَلْنَا الْحَدِيدَ فِيهِ بَأْسٌ شَدِيدٌ وَمَنَافِعُ لِلنَّاسِ وَلِيَعْلَمَ اللَّهُ مَنْ يَنْصُرُهُ وَرُسُلَهُ بِالْغَيْبِ ۚ إِنَّ اللَّهَ قَوِيٌّ عَزِيزٌ ﴿٢٥﴾

٣ ع ١٩

26. ನಾವು ನೂಹರನ್ನೂ ಇಬ್‌ರಾಹೀಮರನ್ನೂ ರವಾನಿಸಿದೆವು ಮತ್ತು ಅವರಿಬ್ಬರ ಸಂತತಿಯಲ್ಲಿ ಪ್ರವಾದಿತ್ವವನ್ನೂ ಗ್ರಂಥವನ್ನೂ ಇರಿಸಿದೆವು. ತರುವಾಯ ಅವರ ಸಂತತಿಯಲ್ಲಿ ಕೆಲವರು ಸನ್ಮಾರ್ಗ ಸ್ವೀಕಾರ ಮಾಡಿದರೆ ಹೆಚ್ಚಿನವರು ಕರ್ಮಭ್ರಷ್ಟರಾದರು.

وَلَقَدْ أَرْسَلْنَا نُوحًا وَإِبْرَاهِيمَ وَجَعَلْنَا فِي ذُرِّيَّتِهِمَا النُّبُوَّةَ وَالْكِتَابَ ۖ فَمِنْهُمْ مُهْتَدٍ ۖ وَكَثِيرٌ مِنْهُمْ فَاسِقُونَ ﴿٢٦﴾

27. ಅವರ ಬಳಿಕ ನಾವು ಒಬ್ಬರ ನಂತರ ಒಬ್ಬರಂತೆ ಸಂದೇಶವಾಹಕ ರನ್ನು ಕಳುಹಿಸಿದೆವು ಮತ್ತು ಅವರೆಲ್ಲರ ಬಳಿಕ ಮರ್ಯಮರ ಪುತ್ರ ಈಸಾರನ್ನು ಕಳುಹಿಸಿದೆವು. ಅವರಿಗೆ ಇಂಜೀಲನ್ನು ದಯಪಾಲಿಸಿದೆವು. ಅವರ ಅನುಯಾಯಿಗಳ ಹೃದಯಗಳಲ್ಲಿ ನಾವು ಅನುಕಂಪ ಮತ್ತು ಕರುಣೆಯನ್ನಿಟ್ಟೆವು ಮತ್ತು ಸನ್ಯಾಸವನ್ನು[18]

ثُمَّ قَفَّيْنَا عَلَىٰ آثَارِهِمْ بِرُسُلِنَا وَقَفَّيْنَا بِعِيسَى ابْنِ مَرْيَمَ وَآتَيْنَاهُ الْإِنْجِيلَ ۖ وَجَعَلْنَا فِي قُلُوبِ الَّذِينَ اتَّبَعُوهُ رَأْفَةً وَرَحْمَةً ۚ

16. ಈ ಸಂಕ್ಷಿಪ್ತ ವಾಕ್ಯದಲ್ಲಿ ಪ್ರವಾದಿಗಳ ಜೀವಿತೋದ್ದೇಶದ ಸಮಗ್ರ ಸಾರಾಂಶವನ್ನು ಮುಂದಿಡಲಾಗಿದೆ. ಲೋಕದಲ್ಲಿ ಅಲ್ಲಾಹನ ಕಡೆಯಿಂದ ಬಂದ ಪ್ರವಾದಿಗಳೆಲ್ಲರೂ ಮೂರು ವಸ್ತುಗಳೊಂದಿಗೆ ಬಂದಿದ್ದರು. 1) ಬಯ್ಯಿನಾತ್ - ಅರ್ಥಾತ್, ಸುಸ್ಪಷ್ಟ ನಿದರ್ಶನಗಳು, ಸುವ್ಯಕ್ತ ಸಾಕ್ಷ್ಯಾಧಾರಗಳು ಮತ್ತು ಸುಸ್ಪಷ್ಟ ಮಾರ್ಗದರ್ಶನಗಳು. 2) ಗ್ರಂಥ - ಜನರು ಮಾರ್ಗದರ್ಶನಕ್ಕಾಗಿ ಅದರತ್ತಲೇ ತಿರುಗಲೆಂದು ಮಾನವನ ಮಾರ್ಗದರ್ಶನಕ್ಕೆ ಅಗತ್ಯವಿರುವ ಎಲ್ಲಾ ಬೋಧನೆಗಳನ್ನು ಅದರಲ್ಲಿ ದಾಖಲಿಸಲಾಗಿದೆ. 3) ತಕ್ಕಡಿ - ಅರ್ಥಾತ್ ಸತ್ಯ-ಮಿಥ್ಯದ ಮಾನದಂಡ. ಅದು ತಕ್ಕಡಿಯಂತೆ ತೂಗಿ- ವಿಚಾರ, ಚಾರಿತ್ರ್ಯ ಮತ್ತು ವ್ಯವಹಾರಗಳಲ್ಲಿ ಏರು-ತಗ್ಗುಗಳ ವಿಭಿನ್ನ ಅತಿರೇಕಗಳ ನಡುವೆ ನ್ಯಾಯಸಮ್ಮತವಾದ ವಿಷಯ ಯಾವುದು ಎಂಬುದನ್ನು ತಿಳಿಸುತ್ತದೆ.

17. ಪ್ರವಾದಿಗಳ(ಅ) ಜೀವಿತೋದ್ದೇಶವನ್ನು ವರ್ಣಿಸಲಾದ ತಕ್ಷಣ ಇದನ್ನು ಹೇಳಲಾಗಿದೆ. ಇಲ್ಲಿ ಕಬ್ಬಿಣವೆಂದು ರಾಜಕೀಯ ಮತ್ತು ಯುದ್ಧದ ಸಾಮರ್ಥ್ಯಕ್ಕೆ ಹೇಳಲಾಗಿದೆ ಎಂದು ಇದರಿಂದ ವ್ಯಕ್ತವಾಗುತ್ತದೆ. ಮಾತಿನ ಇಂಗಿತವೇನೆಂದರೆ, ಅಲ್ಲಾಹನು ಪ್ರವಾದಿಗಳನ್ನು ನ್ಯಾಯ ಸಂಸ್ಥಾಪನೆಯ ಯೋಜನೆಯೊಂದನ್ನು ಮುಂದಿಡಲಿಕ್ಕಾಗಿ ಮಾತ್ರ ಕಳುಹಿಸಲಿಲ್ಲ. ಅದನ್ನು ವ್ಯಾವಹಾರಿಕವಾಗಿ ಜಾರಿಗೊಳಿಸಲು ಪ್ರಯತ್ನಿಸುವುದು, ನಿಜಾರ್ಥದಲ್ಲಿ ನ್ಯಾಯದ ಸಂಸ್ಥಾಪನೆಯಾಗಲು ಬೇಕಾದ ಶಕ್ತಿಯನ್ನು ಒದಗಿಸುವುದು, ಆ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುವವರನ್ನು ಶಿಕ್ಷಿಸುವ ಮತ್ತು ಅದನ್ನು ವಿರೋಧಿಸುವವರ ಬಲ ಮುರಿಯುವ ರೀತಿಯಲ್ಲಿ ಪ್ರಯತ್ನಿಸುವುದೆಲ್ಲವೂ ಅವರ ಜೀವಿತೋದ್ದೇಶದಲ್ಲಿ ಸೇರಿತ್ತು.

18. 'ರಹ್‌ಬಾನಿಯತ್' (ಸನ್ಯಾಸ) ಎಂದರೆ ಲೋಕ ಪರಿತ್ಯಾಗಿಯಾಗುವುದು. ಲೌಕಿಕ ಜೀವನದಿಂದ ಪಲಾಯನ ಮಾಡಿ ವನ-ಪರ್ವತಗಳಲ್ಲಿ ಆಶ್ರಯ ಪಡೆಯುವುದು ಅಥವಾ ಏಕಾಂತವಾಸ ಕೈಗೊಳ್ಳುವುದು.

ಅವರು ತಾವೇ ಆವಿಷ್ಕರಿಸಿ ಕೊಂಡರು. ನಾವು ಅದನ್ನು ಅವರ ಮೇಲೆ ಕಡ್ಡಾಯಗೊಳಿಸಿರಲಿಲ್ಲ. ಆದರೆ ಅಲ್ಲಾಹನ ಸಂಪ್ರೀತಿಯ ಅಭಿಲಾಷೆಯಿಂದ ಸ್ವತಃ ಅವರೇ ಈ ನವೀನಾಚಾರವನ್ನು ಆರಂಭಿಸಿಕೊಂಡರು. ಆದರೆ ಅವರು ಅದನ್ನು ಪಾಲಿಸಬೇಕಾದ ರೀತಿಯಲ್ಲಿ ಪಾಲಿಸಲಿಲ್ಲ. ಅವರ ಪೈಕಿ ಸತ್ಯವನ್ನು ಸ್ವೀಕರಿಸಿದವರಿಗೆ ನಾವು ಅವರ ಸತ್ಫಲವನ್ನು ದಯಪಾಲಿಸಿದೆವು. ಆದರೆ ಅವರಲ್ಲಿ ಹೆಚ್ಚಿನವರು ಕರ್ಮಭ್ರಷ್ಟರಾಗಿರುತ್ತಾರೆ.

وَرَهْبَانِيَّةً ابْتَدَعُوهَا مَا كَتَبْنَاهَا عَلَيْهِمْ إِلَّا ابْتِغَاءَ رِضْوَانِ اللَّهِ فَمَا رَعَوْهَا حَقَّ رِعَايَتِهَا ۖ فَآتَيْنَا الَّذِينَ آمَنُوا مِنْهُمْ أَجْرَهُمْ ۖ وَكَثِيرٌ مِنْهُمْ فَاسِقُونَ ﴿٢٧﴾

28. ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಅವನ ಸಂದೇಶವಾಹಕ [ಹ. ಮುಹಮ್ಮದ್(ಸ)]ರ ಮೇಲೆ ವಿಶ್ವಾಸವಿರಿಸಿರಿ. ಅಲ್ಲಾಹನು ನಿಮಗೆ ತನ್ನ ಕೃಪೆಯ ಇಮ್ಮಡಿ ನೀಡುವನು ಮತ್ತು ನಿಮಗೆ ಪ್ರಕಾಶವನ್ನು ಪ್ರದಾನ ಮಾಡುವನು, ನೀವು ಅದರ ಬೆಳಕಲ್ಲಿ ನಡೆಯುವಿರಿ ಮತ್ತು ಅವನು ನಿಮ್ಮ ತಪ್ಪುಗಳನ್ನು ಕ್ಷಮಿಸುವನು. ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

يَا أَيُّهَا الَّذِينَ آمَنُوا اتَّقُوا اللَّهَ وَآمِنُوا بِرَسُولِهِ يُؤْتِكُمْ كِفْلَيْنِ مِنْ رَحْمَتِهِ وَيَجْعَلْ لَكُمْ نُورًا تَمْشُونَ بِهِ وَيَغْفِرْ لَكُمْ ۚ وَاللَّهُ غَفُورٌ رَحِيمٌ ﴿٢٨﴾

29. ಅಲ್ಲಾಹನ ಅನುಗ್ರಹದ ಮೇಲೆ ಗ್ರಂಥದವರಿಗೆ ಯಾವ ನಿಯಂತ್ರಣವೂ ಇಲ್ಲವೆಂಬುದು ಮತ್ತು ಅಲ್ಲಾಹನ ಅನುಗ್ರಹವು ಅವನ ಸ್ವಹಸ್ತದಲ್ಲೇ ಇದ್ದು ಅದನ್ನು ಅವನು ತಾನಿಚ್ಛಿಸಿದವರಿಗೆ ನೀಡುತ್ತಾನೆಂಬುದು ಗ್ರಂಥದವರಿಗೆ ತಿಳಿಯುವಂತಾಗಲು (ನೀವು ಈ ಮಾರ್ಗವನ್ನು ಅನುಸರಿಸಬೇಕು) ಅಲ್ಲಾಹನು ಮಹಾ ಅನುಗ್ರಹಶಾಲಿಯಾಗಿದ್ದಾನೆ.

لِئَلَّا يَعْلَمَ أَهْلُ الْكِتَابِ أَلَّا يَقْدِرُونَ عَلَىٰ شَيْءٍ مِنْ فَضْلِ اللَّهِ ۙ وَأَنَّ الْفَضْلَ بِيَدِ اللَّهِ يُؤْتِيهِ مَنْ يَشَاءُ ۚ وَاللَّهُ ذُو الْفَضْلِ الْعَظِيمِ ﴿٢٩﴾

ربع







(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. *ನಿಮ್ಮೊಡನೆ ತನ್ನ ಪತಿಯ ವಿಷಯದಲ್ಲಿ ವಾದಿಸುತ್ತಿರುವ ಹಾಗೂ ಅಲ್ಲಾಹನೊಡನೆ ಮೊರೆಯಿಡುತ್ತಲಿರುವ ಸ್ತ್ರೀಯ ಮಾತನ್ನು ಅಲ್ಲಾಹನು ಆಲಿಸಿದನು.[1] ಅಲ್ಲಾಹನು ನಿಮ್ಮಿಬ್ಬರ ಸಂಭಾಷಣೆಯನ್ನು ಕೇಳುತ್ತಿದ್ದಾನೆ. ಅವನು ಎಲ್ಲವನ್ನೂ ಕೇಳುವವನು ಮತ್ತು ನೋಡುವವನಾಗಿದ್ದಾನೆ.

قَدۡ سَمِعَ ٱللَّهُ قَوۡلَ ٱلَّتِي تُجَٰدِلُكَ فِي زَوۡجِهَا وَتَشۡتَكِيٓ إِلَى ٱللَّهِ وَٱللَّهُ يَسۡمَعُ تَحَاوُرَكُمَآۚ إِنَّ ٱللَّهَ سَمِيعُۢ بَصِيرٌ ①

2. ನಿಮ್ಮ ಪೈಕಿ ತಮ್ಮ ಪತ್ನಿಯರನ್ನು 'ಝಿಹಾರ್' ಮಾಡುವವರ[2] ಪತ್ನಿಯರು ಅವರ ತಾಯಂದಿರಲ್ಲ. ಅವರನ್ನು ಹೆತ್ತವರೇ ಅವರ ತಾಯಂದಿರು. ಇವರು ಅತ್ಯಂತ ಅಪ್ರಿಯ ಹಾಗೂ ಸುಳ್ಳಾದ ಒಂದು ಮಾತನ್ನು ಹೇಳುತ್ತಾರೆ. ವಾಸ್ತವದಲ್ಲಿ ಅಲ್ಲಾಹನು ಬಹಳ ಮನ್ನಿಸುವವನೂ ಮಹಾಕ್ಷಮಾಶೀಲನೂ ಆಗಿರುತ್ತಾನೆ.[3]

ٱلَّذِينَ يُظَٰهِرُونَ مِنكُم مِّن نِّسَآئِهِم مَّا هُنَّ أُمَّهَٰتِهِمۡۖ إِنۡ أُمَّهَٰتُهُمۡ إِلَّا ٱلَّٰٓـِٔي وَلَدۡنَهُمۡۚ وَإِنَّهُمۡ لَيَقُولُونَ مُنكَرٗا مِّنَ ٱلۡقَوۡلِ وَزُورٗاۚ وَإِنَّ ٱللَّهَ لَعَفُوٌّ غَفُورٞ ②

***ಇಲ್ಲಿಂದ 28ನೆಯ ಕಾಂಡ ಆರಂಭ.**

1. 'ಖೌಲ ಬಿನ್ತಿ ಸಅಲಬ' ಎಂಬ ಮಹಿಳೆಯ ಕುರಿತು ಈ ವಾಣಿ ಅವತೀರ್ಣಗೊಂಡಿತ್ತು. ಅವರೊಂದಿಗೆ ಅವರ ಪತಿ 'ಝಿಹಾರ್' ಮಾಡಿದ್ದರು. ಆದ್ದರಿಂದ ಈ ಬಗ್ಗೆ ಇಸ್ಲಾಮಿನ ವಿಧಿಯೇನು ಎಂದು ಕೇಳಲು ಅವರು ಪ್ರವಾದಿವರ್ಯರ(ಸ) ಬಳಿಗೆ ಬಂದಿದ್ದರು. ಆ ತನಕ ಈ ವಿಷಯದ ಕುರಿತು ಅಲ್ಲಾಹನ ಆಜ್ಞೆ ಬಂದಿರಲಿಲ್ಲ. ಆದ್ದರಿಂದ ಪ್ರವಾದಿವರ್ಯರು(ಸ) 'ನೀವು ನಿಮ್ಮ ಪತಿಯ ಪಾಲಿಗೆ ನಿಷಿದ್ಧರಾಗಿದ್ದೀರಿ ಎಂಬುದು ನನ್ನ ಅನಿಸಿಕೆ' ಎಂದು ಹೇಳಿದರು. ಆಗ ಆಕೆ 'ನನ್ನ ಮತ್ತು ನನ್ನ ಮಕ್ಕಳ ಜೀವನ ನಾಶವಾಗುವುದು' ಎಂದು ಮೊರೆಯಿಡತೊಡಗಿದಳು. ನನ್ನ ಮನೆ ಹಾಳಾಗದಿರಲು ಯಾವುದಾದರೊಂದು ಉಪಾಯವನ್ನು ತಿಳಿಸಿ ಎಂದು ಆಕೆ ಪ್ರವಾದಿವರ್ಯರೊಂದಿಗೆ(ಸ) ಗೋಗರೆಯುತ್ತಿದ್ದಂತೆಯೇ ಅಲ್ಲಾಹನ ವತಿಯಿಂದ ವಹ್ಯ್(ದಿವ್ಯವಾಣಿ) ಅವತೀರ್ಣಗೊಂಡಿತು ಮತ್ತು ಈ ಸಮಸ್ಯೆಗೆ ಸಂಬಂಧಿಸಿದ ವಿಧಿಯನ್ನು ತಿಳಿಸಲಾಯಿತು.
2. ಅರಬರಲ್ಲಿ ಹಲವೊಮ್ಮೆ ಇಂತಹ ಪರಿಸ್ಥಿತಿ ತಲೆದೋರುತ್ತಿತ್ತು. ಪತಿ-ಪತ್ನಿಯರಲ್ಲಿ ಜಗಳವಾದರೆ ಪತಿ ಸಿಟ್ಟಿನಿಂದ, "ನೀನು ನನ್ನ ಪಾಲಿಗೆ ತಾಯಿಯ ಬೆನ್ನಿನಂತೆ" ಎಂದು ಹೇಳಿ ಬಿಡುತ್ತಿದ್ದ. ಇದರ ತಾತ್ಪರ್ಯ "ನಿನ್ನೊಡನೆ ಸಂಸರ್ಗ ನಡೆಸುವುದು, ನನ್ನ ಪಾಲಿಗೆ ತಾಯಿಯೊಂದಿಗೆ ಸಂಸರ್ಗ ನಡೆಸಿದಂತೆ" ಎಂದಾಗಿತ್ತು. ಆಧುನಿಕ ಕಾಲದಲ್ಲೂ ಅನೇಕ ಅಜ್ಞಾನಿಗಳು ಪತ್ನಿಯೊಂದಿಗೆ ಜಗಳಾಡಿ ಆಕೆಯನ್ನು ತಾಯಿಗೆ ಅಥವಾ ಸಹೋದರಿಗೆ ಹೋಲಿಸಿ ಬಿಡುತ್ತಾರೆ. ಅರ್ಥಾತ್, ಆ ವ್ಯಕ್ತಿ ಮುಂದೆ ಆಕೆಯನ್ನು ಪತ್ನಿಯೆಂದು ಪರಿಗಣಿಸುವುದಿಲ್ಲ ಬದಲಾಗಿ ಅವನ ಪಾಲಿಗೆ ನಿಷಿದ್ಧರಾದ ಮಹಿಳೆಯರಿಗೆ ಸಮಾನ ಎಂದು ಭಾವಿಸುತ್ತಾನೆ. 'ಝಿಹಾರ್' ಎಂದರೆ ಇದುವೇ ಆಗಿದೆ. ಅಜ್ಞಾನ ಕಾಲದಲ್ಲಿ ಅರಬರ ಪಾಲಿಗೆ ಇದು ತಲಾಕ್ ಅಥವಾ ಅದಕ್ಕಿಂತ ಉಗ್ರವಾದ ವಿಚ್ಛೇದನದ ಪ್ರಕಟಣೆಯಾಗಿತ್ತು.
3. ಅರ್ಥಾತ್- ಇದು ವ್ಯಕ್ತಿಗೆ ತೀವ್ರ ತರವಾದ ಶಿಕ್ಷೆ ದೊರೆಯಬೇಕಾದಂತಹ ಕರ್ಮವಾಗಿದೆ. ಆದರೆ ಅಲ್ಲಾಹನು ತನ್ನ ಔದಾರ್ಯದ

3. ತಮ್ಮ ಪತ್ನಿಯರನ್ನು 'ಝಿಹಾರ್' ಮಾಡಿದವರು ಅನಂತರ ತಾವು ಹೇಳಿದ ಮಾತಿನಿಂದ ಮರಳಿದರೆ[4] ಅವರು ಪರಸ್ಪರರನ್ನು ಸ್ಪರ್ಶಿಸುವುದಕ್ಕೆ ಮುಂಚೆ ಒಬ್ಬ ಗುಲಾಮನನ್ನು ವಿಮೋಚಿಸ ಬೇಕಾಗುವುದು. ಹೀಗೆ ನಿಮಗೆ ಉಪದೇಶ ನೀಡಲಾಗುತ್ತದೆ ಮತ್ತು ನೀವು ಮಾಡುವುದೆಲ್ಲವನ್ನೂ ಅಲ್ಲಾಹನು ಅರಿತಿರುವನು.[5]

وَالَّذِينَ يُظٰهِرُونَ مِنْ نِّسَآئِهِمْ ثُمَّ يَعُودُونَ لِمَا قَالُوْا فَتَحْرِيرُ رَقَبَةٍ مِّنْ قَبْلِ اَنْ يَّتَمَآسَّا ؕ ذٰلِكُمْ تُوْعَظُوْنَ بِهٖ ؕ وَاللّٰهُ بِمَا تَعْمَلُوْنَ خَبِيْرٌ ③

4. ಯಾರಿಗಾದರೂ ಗುಲಾಮನು ಸಿಗದಿದ್ದರೆ- ಅವರಿಬ್ಬರು ಪರಸ್ಪರ ರನ್ನು ಸ್ಪರ್ಶಿಸುವುದಕ್ಕೆ ಮುಂಚೆ[6] - ಅವನು ನಿರಂತರವಾಗಿ ಎರಡು ತಿಂಗಳ ಉಪವಾಸ ವ್ರತವನ್ನು ಆಚರಿಸಬೇಕು. ಇದಕ್ಕೂ ಅಶಕ್ತನಾಗಿರುವವನು ಅರುವತ್ತು ಮಂದಿ ದರಿದ್ರರಿಗೆ ಊಟ ಕೊಡಬೇಕು.[7] ನೀವು ಅಲ್ಲಾಹ್ ಮತ್ತು ಅವನ ರಸೂಲರ ಮೇಲೆ ವಿಶ್ವಾಸವಿರಿಸುವಂತಾಗಲಿಕ್ಕಾಗಿ ಈ ಆಜ್ಞೆಯನ್ನು ನೀಡಲಾಗು ತ್ತಿದೆ.[8] ಇವು ಅಲ್ಲಾಹನಿಂದ ನಿಶ್ಚಯಿಸಲ್ಪಟ್ಟಿರುವ ಮೇರೆಗಳು ಮತ್ತು ಸತ್ಯನಿಷೇಧಿಗಳಿಗೆ ವೇದನಾಯುಕ್ತ ಯಾತನೆಯಿದೆ.

فَمَنْ لَّمْ يَجِدْ فَصِيَامُ شَهْرَيْنِ مُتَتَابِعَيْنِ مِنْ قَبْلِ اَنْ يَّتَمَآسَّا ۚ فَمَنْ لَّمْ يَسْتَطِعْ فَاِطْعَامُ سِتِّيْنَ مِسْكِيْنًا ؕ ذٰلِكَ لِتُؤْمِنُوْا بِاللّٰهِ وَرَسُوْلِهٖ ؕ وَتِلْكَ حُدُوْدُ اللّٰهِ ؕ وَلِلْكٰفِرِيْنَ عَذَابٌ اَلِيْمٌ ④

5. ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುವವರು ತಮಗಿಂತ ಹಿಂದಿನವರು ಅಪಮಾನಿತರಾದಂತೆಯೇ ಅಪಮಾನಿತ ರಾಗುವರು. ನಾವು ಸುಸ್ಪಷ್ಟ ಸೂಕ್ತಗಳನ್ನು ಅವತೀರ್ಣಗೊಳಿಸಿ ದ್ದೇವೆ ಮತ್ತು ಸತ್ಯನಿಷೇಧಿಗಳಿಗೆ ಅಪಮಾನಕರ ಯಾತನೆ ಇದೆ.

اِنَّ الَّذِيْنَ يُحَآدُّوْنَ اللّٰهَ وَرَسُوْلَهٗ كُبِتُوْا كَمَا كُبِتَ الَّذِيْنَ مِنْ قَبْلِهِمْ وَقَدْ اَنْزَلْنَآ اٰيٰتٍۢ بَيِّنٰتٍ ؕ وَلِلْكٰفِرِيْنَ عَذَابٌ مُّهِيْنٌ ⑤

6. ಅಲ್ಲಾಹನು ಇವರೆಲ್ಲರನ್ನೂ ಪುನಃ ಜೀವಂತಗೊಳಿಸಿ ಎಬ್ಬಿಸುವ ಮತ್ತು ಅವರು ಏನೆಲ್ಲ ಮಾಡಿ ಬಂದಿರುವರೆಂಬುದನ್ನು ಅವರಿಗೆ ತಿಳಿಸುವ ದಿನ (ಈ ಅಪಮಾನಕರ ಯಾತನೆ ಒದಗಲಿದೆ.)

يَوْمَ يَبْعَثُهُمُ اللّٰهُ جَمِيْعًا فَيُنَبِّئُهُمْ بِمَا عَمِلُوْا ؕ اَحْصٰىهُ اللّٰهُ وَنَسُوْهُ ؕ

ಮೂಲಕ ಮೊದಲನೆಯದಾಗಿ 'ಝಿಹಾರ್'ನ ಕುರಿತಾದ ಅಜ್ಞಾನ ಕಾಲದ ನಿಯಮವನ್ನು ರದ್ದುಪಡಿಸಿ ನಿಮ್ಮ ಕುಟುಂಬ ಜೀವನವನ್ನು ವಿನಾಶದಿಂದ ರಕ್ಷಿಸಿದನು. ಎರಡನೆಯದಾಗಿ ಈ ಕೃತ್ಯವನ್ನೆಸಗಿದವರಿಗೆ ಅಪರಾಧಕ್ಕೆ ನೀಡಬಹುದಾದ ಅತ್ಯಂತ ಹಗುರವಾದ ಶಿಕ್ಷೆಯನ್ನು ಗೊತ್ತು ಪಡಿಸಿದನು.

4. ಇದಕ್ಕೆ ಎರಡು ವಿವರಣೆಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ಅವರು ಹೇಳಿದ ಮಾತನ್ನು ರದ್ದು ಪಡಿಸಬಯಸಿದರೆ ಎರಡನೆಯದಾಗಿ ಆ ಮಾತಿನ ಮೂಲಕ ಅವರು ತಮ್ಮ ಪಾಲಿಗೆ ನಿಷಿದ್ಧಗೊಳಿಸಿಕೊಂಡಿದ್ದನ್ನು ಧರ್ಮಸಮ್ಮತಗೊಳಿಸಬಯಸಿದರೆ.
5. ಅರ್ಥಾತ್- ವ್ಯಕ್ತಿ ಯಾರಿಗೂ ತಿಳಿಯದಂತೆ ಮನೆಯಲ್ಲಿ ಪತ್ನಿಯೊಂದಿಗೆ 'ಝಿಹಾರ್' ಮಾಡಿ ಅನಂತರ 'ಪ್ರಾಯಶ್ಚಿತ್ತ' ಮಾಡದೆ ಪತಿ-ಪತ್ನಿಯರ ನಡುವೆ ಪೂರ್ವದ ರೀತಿಯ ದಾಂಪತ್ಯ ಸಂಬಂಧವನ್ನು ಮುಂದುವರಿಸಿದರೆ ಲೋಕದಲ್ಲಿ ಆ ವಿಷಯ ಯಾರಿಗೂ ತಿಳಿಯದಿರಬಹುದು. ಆದರೆ ಅಲ್ಲಾಹನಿಗಂತೂ ಅದು ತಿಳಿದಿರುವುದು. ಅಲ್ಲಾಹನ ವಿಚಾರಣೆಯಿಂದ ಅವರು ಯಾವ ರೀತಿಯಲ್ಲೂ ಪಾರಾಗಲಾರರು.
6. ಅರ್ಥಾತ್- ನಿರಂತರ ಎರಡು ತಿಂಗಳ ಉಪವಾಸ ಆಚರಿಸಬೇಕು. ನಡುವೆ ಒಂದು ಉಪವಾಸವೂ ಬಿಟ್ಟು ಹೋಗಬಾರದು.
7. ಅರ್ಥಾತ್- ಎರಡು ಹೊತ್ತಿನ ಪೂರ್ಣ ಭೋಜನ ನೀಡಬೇಕು. ಅದು ಬೇಯಿಸಿದ್ದಾಗಿದ್ದರೂ ಅಥವಾ ಆಹಾರ ಪದಾರ್ಥಗಳ ರೂಪದಲ್ಲಿದ್ದರೂ ಸರಿ. ಅರುವತ್ತು ಮಂದಿಗೆ ಒಂದೇ ದಿನ ಉಣಿಸಬಹುದು ಅಥವಾ ಒಬ್ಬ ವ್ಯಕ್ತಿಗೆ ಅರವತ್ತು ದಿನವೂ.
8. ಇಲ್ಲಿ ವಿಶ್ವಾಸವಿರಿಸುವುದೆಂದರೆ ಸತ್ಯಸಂಧ ಮತ್ತು ಪ್ರಾಮಾಣಿಕ ಸತ್ಯವಿಶ್ವಾಸಿಯಂತಹ ಧೋರಣೆ ಕೈಗೊಳ್ಳುವುದು.

ಅವರು ಮರೆತು ಬಿಟ್ಟಿದ್ದಾರೆ. ಆದರೆ ಅಲ್ಲಾಹನು ಅವರು ಮಾಡಿದುದೆಲ್ಲವನ್ನೂ ಎಣಿಸಿ ಕಾಯ್ದಿರಿಸಿದ್ದಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿನ ಬಗೆಗೂ ಸಾಕ್ಷಿಯಾಗಿದ್ದಾನೆ.

وَاللّٰهُ عَلٰى كُلِّ شَيْءٍ شَهِيْدٌ ۝٦

7. ಭೂಮಿ-ಆಕಾಶಗಳ[9] ಪ್ರತಿಯೊಂದು ವಸ್ತುವಿನ ಜ್ಞಾನವು ಅಲ್ಲಾಹನಿಗೆ ಇದೆ ಎಂಬುದು ನಿಮಗೆ ತಿಳಿದಿಲ್ಲವೇ? ಮೂರು ಮಂದಿಯ ನಡುವೆ ರಹಸ್ಯ ಮಾತುಕತೆ ನಡೆಯುತ್ತಿರುವಾಗ ಅವರೊಂದಿಗೆ ನಾಲ್ಕನೆಯವನಾಗಿ ಅಲ್ಲಾಹನು ಎಂದೂ ಇಲ್ಲದೆ ಇರುವುದಿಲ್ಲ ಅಥವಾ ಐವರೊಳಗೆ ರಹಸ್ಯ ಮಾತುಕತೆ ನಡೆಯುತ್ತಿರುವಾಗ ಆರನೆಯವನಾಗಿ ಅಲ್ಲಾಹನಿಲ್ಲದೆ ಇರುವುದಿಲ್ಲ. ರಹಸ್ಯ ಮಾತುಕತೆ ನಡೆಸುತ್ತಿರುವವರು ಇದಕ್ಕಿಂತ ಕಡಿಮೆ ಇರಲಿ ಅಥವಾ ಹೆಚ್ಚಿರಲಿ, ಅವರು ಎಲ್ಲೇ ಇರಲಿ, ಅಲ್ಲಾಹನು ಅವರ ಜೊತೆಗಿರುತ್ತಾನೆ ಮತ್ತು ಪುನರುತ್ಥಾನ ದಿನ ಅವನು ಅವರಿಗೆ, ಅವರು ಏನೆಲ್ಲ ಮಾಡಿದ್ದರೆಂಬುದನ್ನು ತಿಳಿಸುವನು. ಅಲ್ಲಾಹನು ಸಕಲ ವಸ್ತುಗಳ ಜ್ಞಾನವುಳ್ಳವನು.

اَلَمْ تَرَ اَنَّ اللّٰهَ يَعْلَمُ مَا فِي السَّمٰوٰتِ وَمَا فِي الْاَرْضِ ۗ مَا يَكُوْنُ مِنْ نَّجْوٰى ثَلٰثَةٍ اِلَّا هُوَ رَابِعُهُمْ وَلَا خَمْسَةٍ اِلَّا هُوَ سَادِسُهُمْ وَلَآ اَدْنٰى مِنْ ذٰلِكَ وَلَآ اَكْثَرَ اِلَّا هُوَ مَعَهُمْ اَيْنَ مَا كَانُوْا ۚ ثُمَّ يُنَبِّئُهُمْ بِمَا عَمِلُوْا يَوْمَ الْقِيٰمَةِ ۗ اِنَّ اللّٰهَ بِكُلِّ شَيْءٍ عَلِيْمٌ ۝٧

8. ಗುಪ್ತ ಸಮಾಲೋಚನೆಗಳಿಂದ ತಡೆಯಲಾಗಿದ್ದರೂ ತಮಗೆ ಪ್ರತಿಬಂಧಿಸಲಾಗಿರುವ ಆ ಕೃತ್ಯವನ್ನೇ ಮಾಡುತ್ತಿರುವ ಜನರನ್ನು ನೀವು ನೋಡಲಿಲ್ಲವೇ? ಇವರು ಗುಪ್ತವಾಗಿ ಪರಸ್ಪರರೊಡನೆ, ಪಾಪ, ಅತಿರೇಕ ಹಾಗೂ ಸಂದೇಶವಾಹಕರ ಆಜ್ಞೋಲ್ಲಂಘನೆಯ ಮಾತುಗಳನ್ನಾಡುತ್ತಾರೆ ಮತ್ತು ಇವರು ನಿಮ್ಮ ಬಳಿಗೆ ಬಂದಾಗ ಅಲ್ಲಾಹನು ನಿಮಗೆ ಸಲಾಮ್ ಮಾಡಿರದ ರೀತಿಯಲ್ಲಿ ನಿಮಗೆ ಸಲಾಮ್ ಮಾಡುತ್ತಾರೆ[10] ಮತ್ತು ನಮ್ಮ ಈ ಮಾತುಗಳಿಗಾಗಿ ಅಲ್ಲಾಹನು ನಮಗೆ ಶಿಕ್ಷೆ ನೀಡುವುದಿಲ್ಲವೇಕೆ ಎಂದು ತಮ್ಮ ಮನಸ್ಸಿನೊಳಗೆ ಹೇಳಿಕೊಳ್ಳುತ್ತಾರೆ. ಅವರಿಗೆ ನರಕವೇ ಸಾಕು. ಅವರು ಅದಕ್ಕೇ ಇಂಧನವಾಗುವರು. ಅವರ ಗತಿಯು ತೀರಾ ಕೆಟ್ಟದ್ದಾಗಿರುವುದು.

اَلَمْ تَرَ اِلَى الَّذِيْنَ نُهُوْا عَنِ النَّجْوٰى ثُمَّ يَعُوْدُوْنَ لِمَا نُهُوْا عَنْهُ وَيَتَنٰجَوْنَ بِالْاِثْمِ وَالْعُدْوَانِ وَمَعْصِيَتِ الرَّسُوْلِ ۖ وَاِذَا جَاۤءُوْكَ حَيَّوْكَ بِمَا لَمْ يُحَيِّكَ بِهِ اللّٰهُ ۙ وَيَقُوْلُوْنَ فِيْٓ اَنْفُسِهِمْ لَوْلَا يُعَذِّبُنَا اللّٰهُ بِمَا نَقُوْلُ ۗ حَسْبُهُمْ جَهَنَّمُ ۚ يَصْلَوْنَهَا ۚ فَبِئْسَ الْمَصِيْرُ ۝٨

9. ಇಲ್ಲಿಂದ 10ನೆಯ ಸೂಕ್ತದ ತನಕ ಮುಸ್ಲಿಮ್ ಸಮಾಜದಲ್ಲಿದ್ದ ಕಪಟವಿಶ್ವಾಸಿಗಳು ಅನುಸರಿಸಿದ್ದ ಧೋರಣೆಯನ್ನು ತರಾಟೆಗೆ ತೆಗೆದುಕೊಳ್ಳಲಾಗಿದೆ. ಮೇಲ್ನೋಟಕ್ಕೆ ಅವರು ಸತ್ಯವಿಶ್ವಾಸಿಗಳ ಜತೆ ಸೇರಿಕೊಂಡಿದ್ದರು. ಆದರೆ ಒಳಗೊಳಗೇ ತಮ್ಮದೇ ಆದ ಪ್ರತ್ಯೇಕ ಕೂಟವೊಂದನ್ನು ರಚಿಸಿದ್ದರು. ಮುಸ್ಲಿಮರು ನೋಡುವಾಗಲೆಲ್ಲಾ ಅವರು ಪರಸ್ಪರ ಕುಳಿತು ಗುಸುಗುಸು ಮಾತನಾಡಿಕೊಳ್ಳುತ್ತಿದ್ದರು. ಈ ಗುಪ್ತ ಸಮಾಲೋಚನೆಗಳ ಮೂಲಕ ಅವರು ಮುಸ್ಲಿಮರೊಳಗೆ ಒಡಕು ಉಂಟು ಮಾಡಲು, ಕ್ಷೋಭೆ ಹರಡಲು ಮತ್ತು ಭಯ ಹುಟ್ಟಿಸಲು ತರತರದ ಯೋಜನೆಗಳನ್ನು ಹೂಡುತ್ತಿದ್ದರು. ಹೊಸ ಹೊಸ ವದಂತಿಗಳನ್ನು ಹುಟ್ಟು ಹಾಕುತ್ತಿದ್ದರು.

10. ಇದು ಯಹೂದಿಯರ ಮತ್ತು ಕಪಟವಿಶ್ವಾಸಿಗಳ ಸಮಾನ ಧೋರಣೆಯಾಗಿತ್ತು. ಅನೇಕ ವರದಿಗಳಲ್ಲಿ ಬಂದಿರುವ ಪ್ರಕಾರ ಕೆಲವು ಯಹೂದಿಯರು ಪ್ರವಾದಿವರ್ಯರ(ಸ) ಬಳಿ ಹಾಜರಾಗಿ 'ಅಸ್ಸಾಮು ಅಲೈಕ ಯಾ ಅಬಲ್ ಕಾಸಿಮ್' ಎಂದರು. ಕೇಳುವವರು ಅವರು ಸಲಾಮ್ ಹೇಳಿದರೇನೋ ಎಂದು ಭಾವಿಸುವಂತೆ ಅವರು 'ಅಸ್ಸಾಮು ಅಲೈಕ'ವನ್ನು ಭಿನ್ನ ರೀತಿಯಲ್ಲಿ ಉಚ್ಚರಿಸಿದರು. ಆದರೆ ನಿಜವಾಗಿ ಅವರು 'ಸಾಮ್' ಎಂದು ಹೇಳಿದ್ದರು. ಅದರ ಅರ್ಥ 'ಮರಣ'ವೆಂದಾಗಿದೆ.

9. ಸತ್ಯವಿಶ್ವಾಸಿಗಳೇ, ನೀವು ಪರಸ್ಪರ ರಹಸ್ಯ ಮಾತುಗಳನ್ನಾಡುವಾಗ ಪಾಪ, ಅತಿರೇಕ ಮತ್ತು ಸಂದೇಶವಾಹಕರ ಆಜ್ಞೋಲ್ಲಂಘನೆಯ ಮಾತುಗಳನ್ನಾಡಬೇಡಿ, ಪುಣ್ಯದ ಹಾಗೂ ಧರ್ಮನಿಷ್ಠೆಯ ಮಾತುಗಳನ್ನಾಡಿರಿ ಮತ್ತು ನಿಮ್ಮನ್ನು ಒಟ್ಟುಗೂಡಿಸಲ್ಪಡುವ ದಿನ ನೀವು ಯಾರ ಮುಂದೆ ಹಾಜರಾಗಲಿಕ್ಕಿದೆಯೋ ಆ ಅಲ್ಲಾಹನನ್ನು ಭಯಪಡಿರಿ.

يٰۤاَيُّهَا الَّذِيْنَ اٰمَنُوْۤا اِذَا تَنَاجَيْتُمْ فَلَا
تَتَنَاجَوْا بِالْاِثْمِ وَالْعُدْوَانِ وَمَعْصِيَتِ
الرَّسُوْلِ وَتَنَاجَوْا بِالْبِرِّ وَالتَّقْوٰى ؕ
وَاتَّقُوا اللّٰهَ الَّذِيْۤ اِلَيْهِ تُحْشَرُوْنَ ﴿٩﴾

10. ಗುಪ್ತ ಸಮಾಲೋಚನೆಯು ಪೈಶಾಚಿಕ ಕೃತ್ಯವಾಗಿದೆ. ಸತ್ಯವಿಶ್ವಾಸಿಗಳು ಅದರಿಂದ ಬೇಸರಗೊಳ್ಳಲೆಂದು ಹಾಗೆ ಮಾಡಲಾಗುತ್ತದೆ. ಆದರೆ ಅಲ್ಲಾಹನ ಅನುಮತಿಯಿಲ್ಲದೆ ಅದು ಯಾವ ಹಾನಿಯನ್ನೂ ಮಾಡಲಾರದು. ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆ ಇಡಬೇಕು.

اِنَّمَا النَّجْوٰى مِنَ الشَّيْطٰنِ لِيَحْزُنَ الَّذِيْنَ
اٰمَنُوْا وَلَيْسَ بِضَآرِّهِمْ شَيْـًٔا اِلَّا بِاِذْنِ
اللّٰهِ ؕ وَعَلَى اللّٰهِ فَلْيَتَوَكَّلِ الْمُؤْمِنُوْنَ ﴿١٠﴾

11. ಸತ್ಯವಿಶ್ವಾಸಿಗಳೇ, ನಿಮ್ಮ ಸಭೆಗಳಲ್ಲಿ ಸ್ಥಳಾವಕಾಶ ಮಾಡಿಕೊಡಿರೆಂದು ನಿಮ್ಮೊಡನೆ ಹೇಳಿದಾಗ ಸ್ಥಳಾವಕಾಶ ಮಾಡಿಕೊಡಿರಿ. ಅಲ್ಲಾಹನು ನಿಮಗೆ ವಿಶಾಲತೆಯನ್ನು ದಯಪಾಲಿಸುವನು.[11] ನಿಮ್ಮೊಡನೆ ಎದ್ದುಬಿಡಿರಿ ಎಂದಾಗ ಎದ್ದು ಬಿಡಿರಿ.[12] ನಿಮ್ಮ ಪೈಕಿ ಸತ್ಯವಿಶ್ವಾಸವುಳ್ಳವರಿಗೆ ಮತ್ತು ಜ್ಞಾನವು ನೀಡಲ್ಪಟ್ಟಿರುವವರಿಗೆ ಅಲ್ಲಾಹನು ಉನ್ನತ ಪದವಿಗಳನ್ನು ದಯಪಾಲಿಸುವನು ಮತ್ತು ನೀವು ಮಾಡುತ್ತಿರುವುದೆಲ್ಲವೂ ಅಲ್ಲಾಹನಿಗೆ ತಿಳಿದಿದೆ.

يٰۤاَيُّهَا الَّذِيْنَ اٰمَنُوْۤا اِذَا قِيْلَ لَكُمْ
تَفَسَّحُوْا فِى الْمَجٰلِسِ فَافْسَحُوْا يَفْسَحِ
اللّٰهُ لَكُمْ ۚ وَاِذَا قِيْلَ انْشُزُوْا فَانْشُزُوْا
يَرْفَعِ اللّٰهُ الَّذِيْنَ اٰمَنُوْا مِنْكُمْ ۙ وَالَّذِيْنَ
اُوْتُوا الْعِلْمَ دَرَجٰتٍ ؕ وَاللّٰهُ بِمَا
تَعْمَلُوْنَ خَبِيْرٌ ﴿١١﴾

12. ಸತ್ಯವಿಶ್ವಾಸಿಗಳೇ, ನೀವು ಸಂದೇಶವಾಹಕರೊಡನೆ ಏಕಾಂತದಲ್ಲಿ ಮಾತಾಡುವಾಗ, ಮಾತಾಡುವುದಕ್ಕೆ ಮುಂಚೆ ದಾನಧರ್ಮ ಮಾಡಿರಿ.[13] ಇದು ನಿಮ್ಮ ಪಾಲಿಗೆ ಹೆಚ್ಚು ಉತ್ತಮವೂ ಪರಿಶುದ್ಧವೂ ಆಗಿದೆ. ನಿಮ್ಮ ಬಳಿ ದಾನಧರ್ಮ ಮಾಡಲು ಏನೂ ಇಲ್ಲದಿದ್ದರೆ, ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

يٰۤاَيُّهَا الَّذِيْنَ اٰمَنُوْۤا اِذَا نَاجَيْتُمُ
الرَّسُوْلَ فَقَدِّمُوْا بَيْنَ يَدَىْ نَجْوٰىكُمْ
صَدَقَةً ؕ ذٰلِكَ خَيْرٌ لَّكُمْ وَاَطْهَرُ ؕ
فَاِنْ لَّمْ تَجِدُوْا فَاِنَّ اللّٰهَ غَفُوْرٌ رَّحِيْمٌ ﴿١٢﴾

11. ಅಲ್ಲಾಹ್ ಮತ್ತು ಅವನ ಪ್ರವಾದಿ ಮುಸ್ಲಿಮರಿಗೆ ಕಲಿಸಿರುವ ಶಿಷ್ಟಾಚಾರಗಳಲ್ಲಿ ಇದೂ ಸೇರಿದೆ. ಮೊದಲೇ ಕೆಲವು ಮಂದಿ ಕುಳಿತುಕೊಂಡಿರುವ ಸಭೆಗೆ ನಂತರ ಇನ್ನಷ್ಟು ಜನರು ಬಂದರೆ ಹೊಸತಾಗಿ ಬರುವವರಿಗೆ ಸ್ಥಳಾವಕಾಶ ಮಾಡಿಕೊಡುವ ಮತ್ತು ಸಾಧ್ಯವಿರುವಷ್ಟು ಹತ್ತಿರವಾಗಿ ಜಾಗ ಮಾಡಿಕೊಡುವ ನಾಗರಿಕ ಪ್ರವೃತ್ತಿ ಕುಳಿತವರಲ್ಲಿ ಇರಬೇಕು. ಹಾಗೆಯೇ ನಂತರ ಬರುವವರಲ್ಲಿಯೂ ಬಲವಂತದಿಂದ ನುಗ್ಗದಿರುವ ಮತ್ತು ಯಾರನ್ನಾದರೂ ಎಬ್ಬಿಸಿ ಕೂರಲು ಪ್ರಯತ್ನಿಸದಿರುವಷ್ಟು ಸಭ್ಯತೆ ಇರಬೇಕು.

12. ಅರ್ಥಾತ್- ಸಭೆಯನ್ನು ವಿಸರ್ಜಿಸಲು ಹೇಳಿದಾಗ ಎದ್ದು ನಿಲ್ಲಬೇಕು. ಅಲ್ಲೇ ಸ್ಥಿರವಾಗಿ ಕುಳಿತಿರಬಾರದು.

13. ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರ(ರ) ಪ್ರಕಾರ ಈ ಆಜ್ಞೆಗೆ ಕಾರಣವೇನೆಂದರೆ ಜನರು ಬಹಳ ಹೆಚ್ಚು ಮತ್ತು ಅನವಶ್ಯಕವಾಗಿ ಪ್ರವಾದಿವರ್ಯರನ್ನು(ಸ) ಏಕಾಂತದಲ್ಲಿ ಭೇಟಿಯಾಗ ಬಯಸುತ್ತಿದ್ದರು.

13. ಏಕಾಂತದಲ್ಲಿ ಮಾತುಕತೆ ನಡೆಸುವುದಕ್ಕೆ ಮುಂಚೆ ದಾನಧರ್ಮ ಮಾಡಬೇಕೆಂಬ ಬಗ್ಗೆ ನೀವು ಹೆದರಿಬಿಟ್ಟಿರಾ? ಸರಿ, ನೀವು ಹಾಗೆ ಮಾಡದಿದ್ದರೆ- ಅಲ್ಲಾಹನು ಅದರ ಬಗ್ಗೆ ನಿಮ್ಮನ್ನು ಕ್ಷಮಿಸಿ ಬಿಟ್ಟನು - ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ಕೊಡುತ್ತಲಿರಿ ಮತ್ತು ಅಲ್ಲಾಹ್ ಹಾಗೂ ಸಂದೇಶವಾಹಕರ ಅನುಸರಣೆ ಮಾಡುತ್ತಲಿರಿ. ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಅರಿತಿರುತ್ತಾನೆ.[14]

ءَأَشْفَقْتُمْ أَن تُقَدِّمُوا بَيْنَ يَدَيْ نَجْوَاكُمْ صَدَقَاتٍ ۚ فَإِذْ لَمْ تَفْعَلُوا وَتَابَ اللَّهُ عَلَيْكُمْ فَأَقِيمُوا الصَّلَاةَ وَآتُوا الزَّكَاةَ وَأَطِيعُوا اللَّهَ وَرَسُولَهُ ۚ وَاللَّهُ خَبِيرٌ بِمَا تَعْمَلُونَ ﴿١٣﴾

14. ಅಲ್ಲಾಹನ ಕ್ರೋಧಕ್ಕೊಳಗಾಗಿರುವಂತಹ ಒಂದು ಕೂಟವನ್ನು ಮಿತ್ರರಾಗಿ ಮಾಡಿ ಕೊಂಡವರನ್ನು ಕಂಡಿರಾ? ಅವರು ನಿಮ್ಮವರೂ ಅಲ್ಲ, ಅವರ ಕಡೆಯವರೂ ಅಲ್ಲ. ಅವರು ತಿಳಿದೂ ತಿಳಿದೂ ಸುಳ್ಳು ಆಣೆ ಹಾಕುತ್ತಾರೆ.

أَلَمْ تَرَ إِلَى الَّذِينَ تَوَلَّوْا قَوْمًا غَضِبَ اللَّهُ عَلَيْهِم مَّا هُم مِّنكُمْ وَلَا مِنْهُمْ وَيَحْلِفُونَ عَلَى الْكَذِبِ وَهُمْ يَعْلَمُونَ ﴿١٤﴾

15. ಅಲ್ಲಾಹನು ಅವರಿಗಾಗಿ ಕಠಿಣ ಯಾತನೆಯನ್ನು ಸಿದ್ಧಪಡಿಸಿಟ್ಟಿರುವನು. ಅವರು ಮಾಡುತ್ತಿರುವ ಕೃತ್ಯಗಳು ಅತ್ಯಂತ ಕೆಟ್ಟವು.

أَعَدَّ اللَّهُ لَهُمْ عَذَابًا شَدِيدًا ۖ إِنَّهُمْ سَاءَ مَا كَانُوا يَعْمَلُونَ ﴿١٥﴾

16. ಅವರು ತಮ್ಮ ಆಣೆಗಳನ್ನು ಗುರಾಣಿಯಾಗಿ ಮಾಡಿಕೊಂಡಿದ್ದಾರೆ. ಅದರ ಮರೆಯಲ್ಲಿ ಅವರು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾರೆ. ಇದಕ್ಕಾಗಿ ಅವರಿಗೆ ಅಪಮಾನಕರ ಯಾತನೆಯಿದೆ.

اتَّخَذُوا أَيْمَانَهُمْ جُنَّةً فَصَدُّوا عَن سَبِيلِ اللَّهِ فَلَهُمْ عَذَابٌ مُّهِينٌ ﴿١٦﴾

17. ಅವರ ಸಂಪತ್ತಾಗಲಿ, ಸಂತಾನಗಳಾಗಲಿ ಅವರನ್ನು ಅಲ್ಲಾಹನಿಂದ ರಕ್ಷಿಸಲು ಕಿಂಚಿತ್ತೂ ಉಪಯುಕ್ತವಾಗಲಾರವು. ಅವರು ನರಕಾಗ್ನಿಯವರು. ಅವರು ಸದಾ ಅದರಲ್ಲೇ ಇರುವರು.

لَّن تُغْنِيَ عَنْهُمْ أَمْوَالُهُمْ وَلَا أَوْلَادُهُم مِّنَ اللَّهِ شَيْئًا ۚ أُولَٰئِكَ أَصْحَابُ النَّارِ ۖ هُمْ فِيهَا خَالِدُونَ ﴿١٧﴾

18. ಅಲ್ಲಾಹನು ಅವರೆಲ್ಲರನ್ನೂ ಎಬ್ಬಿಸುವಂದು ಅವರು ನಿಮ್ಮ ಮುಂದೆ ಆಣೆ ಹಾಕಿದಂತೆಯೇ ಅವನ ಮುಂದೆಯೂ ಹಾಕುವರು ಮತ್ತು ಇದರಿಂದ ತಮ್ಮ ಕಾರ್ಯವೇನಾದರೂ ಸಾಧಿಸಲ್ಪಡುವುದೆಂದು ಅವರು ಭಾವಿಸುವರು. ಚೆನ್ನಾಗಿ ತಿಳಿದುಕೊಳ್ಳಿರಿ, ಅವರು ಅತ್ಯಂತ ನಿಕೃಷ್ಟ ಸುಳ್ಳುಗಾರರಾಗಿದ್ದಾರೆ.

يَوْمَ يَبْعَثُهُمُ اللَّهُ جَمِيعًا فَيَحْلِفُونَ لَهُ كَمَا يَحْلِفُونَ لَكُمْ ۖ وَيَحْسَبُونَ أَنَّهُمْ عَلَىٰ شَيْءٍ ۚ أَلَا إِنَّهُمْ هُمُ الْكَاذِبُونَ ﴿١٨﴾

14. ಈ ಎರಡನೆಯ ಆಜ್ಞೆ ಪೂರ್ವೋಕ್ತ ಆಜ್ಞೆಯ ಅನತಿ ಕಾಲದ ನಂತರ ಅವತೀರ್ಣಗೊಂಡಿತು. ಆ ಮೂಲಕ ಕಡ್ಡಾಯ ದಾನವನ್ನು ರದ್ದುಪಡಿಸಲಾಯಿತು. ದಾನಕೊಡುವ ಆಜ್ಞೆ ಎಷ್ಟು ಅವಧಿಯ ವರೆಗಿತ್ತು ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. 'ಕತಾದಃ'ರ ಪ್ರಕಾರ ಈ ಆಜ್ಞೆ ಒಂದು ದಿನಕ್ಕಿಂತಲೂ ಕಡಿಮೆ ಅವಧಿ ಬಾಕಿಯುಳಿದಿತ್ತು. ಮುಕಾತಿಲ್ ಬಿನ್ ಹಯ್ಯಾನ್‌ರ ಪ್ರಕಾರ ಹತ್ತು ದಿನವಿತ್ತು. ಇದು, ಉಲ್ಲೇಖಿಸಲ್ಪಟ್ಟ ವರದಿಗಳ ಪೈಕಿ ಈ ಆಜ್ಞೆ ಜಾರಿಯಲ್ಲಿದ್ದ ಕುರಿತು ಇರುವ ಅತ್ಯಂತ ಗರಿಷ್ಠ ಅವಧಿಯಾಗಿದೆ.

19. ಶೈತಾನನು ಅವರನ್ನು ಆಕ್ರಮಿಸಿಕೊಂಡಿದ್ದಾನೆ ಮತ್ತು ಅವನು ಅಲ್ಲಾಹನ ಸ್ಮರಣೆಯನ್ನು ಅವರ ಮನದಿಂದ ಮರೆಸಿಬಿಟ್ಟಿದ್ದಾನೆ. ಅವರು ಶೈತಾನನ ಪಕ್ಷದವರು. ಎಚ್ಚರಿಕೆ! ಶೈತಾನನ ಪಕ್ಷದವರೇ ನಷ್ಟಕ್ಕೊಳಗಾಗುವವರು.

اِسۡتَحۡوَذَ عَلَيۡهِمُ الشَّيۡطٰنُ فَاَنۡسٰهُمۡ ذِكۡرَ اللّٰهِ ؕ اُولٰٓـئِكَ حِزۡبُ الشَّيۡطٰنِ ؕ اَلَاۤ اِنَّ حِزۡبَ الشَّيۡطٰنِ هُمُ الۡخٰسِرُوۡنَ ﴿۱۹﴾

20. ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸುವವರು ಖಂಡಿತವಾಗಿಯೂ ಅತ್ಯಂತ ನಿಕೃಷ್ಟ ಜೀವಿಗಳಾಗಿದ್ದಾರೆ.

اِنَّ الَّذِيۡنَ يُحَآدُّوۡنَ اللّٰهَ وَرَسُوۡلَهٗۤ اُولٰٓـئِكَ فِى الۡاَذَلِّيۡنَ ﴿۲۰﴾

21. ನಾನು ಮತ್ತು ನನ್ನ ಸಂದೇಶವಾಹಕರೇ ವಿಜಯಿಗಳಾಗುವೆವೆಂದು ಅಲ್ಲಾಹನು ವಿಧಿ ಬರೆದು ಬಿಟ್ಟಿರುವನು. ವಾಸ್ತವದಲ್ಲಿ ಅಲ್ಲಾಹನು ಅತ್ಯಂತ ಬಲಿಷ್ಠನೂ ಅಜೇಯನೂ ಆಗಿರುತ್ತಾನೆ.

كَتَبَ اللّٰهُ لَاَغۡلِبَنَّ اَنَا وَرُسُلِىۡ ؕ اِنَّ اللّٰهَ قَوِىٌّ عَزِيۡزٌ ﴿۲۱﴾

22. ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವವರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸಿದವರನ್ನು ಪ್ರೀತಿಸುವುದನ್ನು ನೀವೆಂದೂ ಕಾಣಲಾರಿರಿ - ಅಂಥವರು, ಅವರ ತಂದೆ, ಪುತ್ರರು, ಸಹೋದರರು ಮತ್ತು ಆಪ್ತಬಂಧುಗಳೇ ಆಗಿದ್ದರೂ ಸರಿಯೇ. ಅವರ ಹೃದಯಗಳಲ್ಲಿ ಅಲ್ಲಾಹನು ಸತ್ಯ ವಿಶ್ವಾಸವನ್ನು ಅಚ್ಚೊತ್ತಿ ಬಿಟ್ಟಿರುತ್ತಾನೆ. ಮಾತ್ರವಲ್ಲದೆ, ತನ್ನ ಕಡೆಯಿಂದ ಒಂದು ಆತ್ಮವನ್ನು ಪ್ರದಾನ ಮಾಡಿ ಅವರಿಗೆ ಶಕ್ತಿಯನ್ನೊದಗಿಸಿದ್ದಾನೆ. ಅವನು ಅವರನ್ನು, ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಅವುಗಳಲ್ಲಿ ಅವರು ಸದಾಕಾಲ ವಾಸಿಸುವರು. ಅಲ್ಲಾಹನು ಅವರಿಂದ ಪ್ರಸನ್ನನಾದನು ಮತ್ತು ಅವರು ಅಲ್ಲಾಹನಿಂದ ಪ್ರಸನ್ನರಾದರು. ಅವರು ಅಲ್ಲಾಹನ ಪಕ್ಷದವರು. ತಿಳಿಯಿರಿ, ಅಲ್ಲಾಹನ ಪಕ್ಷದವರೇ ವಿಜಯಿಗಳಾಗುವರು.

لَا تَجِدُ قَوۡمًا يُّؤۡمِنُوۡنَ بِاللّٰهِ وَالۡيَوۡمِ الۡاٰخِرِ يُوَآدُّوۡنَ مَنۡ حَآدَّ اللّٰهَ وَرَسُوۡلَهٗ وَلَوۡ كَانُوۡۤا اٰبَآءَهُمۡ اَوۡ اَبۡنَآءَهُمۡ اَوۡ اِخۡوَانَهُمۡ اَوۡ عَشِيۡرَتَهُمۡ ؕ اُولٰٓـئِكَ كَتَبَ فِىۡ قُلُوۡبِهِمُ الۡاِيۡمَانَ وَاَيَّدَهُمۡ بِرُوۡحٍ مِّنۡهُ ؕ وَيُدۡخِلُهُمۡ جَنّٰتٍ تَجۡرِىۡ مِنۡ تَحۡتِهَا الۡاَنۡهٰرُ خٰلِدِيۡنَ فِيۡهَا ؕ رَضِىَ اللّٰهُ عَنۡهُمۡ وَرَضُوۡا عَنۡهُ ؕ اُولٰٓـئِكَ حِزۡبُ اللّٰهِ ؕ اَلَاۤ اِنَّ حِزۡبَ اللّٰهِ هُمُ الۡمُفۡلِحُوۡنَ ﴿۲۲﴾

---

ತಮ್ಮ ಮನೆಗಳನ್ನು ಹಾಳುಗೆಡಹುತ್ತಿದ್ದರು. ಆದುದರಿಂದ ಕಣ್ಣುಳ್ಳವರೇ ಪಾಠ ಕಲಿಯಿರಿ.

بِأَيْدِيهِمْ وَأَيْدِي الْمُؤْمِنِينَ فَاعْتَبِرُوا يَا أُولِي الْأَبْصَارِ ②

3. ಅಲ್ಲಾಹನು ಅವರ ಪಾಲಿಗೆ ದೇಶಭ್ರಷ್ಟತೆಯನ್ನು ವಿಧಿಸದಿರುತ್ತಿದ್ದರೆ ಈ ಲೋಕದಲ್ಲೇ ಅವರಿಗೆ ಯಾತನೆ ಕೊಟ್ಟು ಬಿಡುತ್ತಿದ್ದನು[3] ಮತ್ತು ಪರಲೋಕದಲ್ಲಂತು ಅವರಿಗೆ ನರಕಾಗ್ನಿಯ ಯಾತನೆ ಇದ್ದೇ ಇದೆ.

وَلَوْلَا أَنْ كَتَبَ اللَّهُ عَلَيْهِمُ الْجَلَاءَ لَعَذَّبَهُمْ فِي الدُّنْيَا ۖ وَلَهُمْ فِي الْآخِرَةِ عَذَابُ النَّارِ ③

4. ಅವರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ಎದುರಿಸಿದ್ದರಿಂದ ಇದೆಲ್ಲ ಸಂಭವಿಸಿತು. ಅಲ್ಲಾಹನನ್ನು ಯಾರೇ ಎದುರಿಸಿದರೂ ಅಲ್ಲಾಹನು ಅವನಿಗೆ ಶಿಕ್ಷೆ ಕೊಡುವುದರಲ್ಲಿ ಕಠೋರನು.

ذَٰلِكَ بِأَنَّهُمْ شَاقُّوا اللَّهَ وَرَسُولَهُ ۖ وَمَنْ يُشَاقِّ اللَّهَ فَإِنَّ اللَّهَ شَدِيدُ الْعِقَابِ ④

5. ನೀವು ಖರ್ಜೂರದ ಮರಗಳನ್ನು ಕಡಿದುದು ಅಥವಾ ಅವುಗಳ ಕಾಂಡಗಳಲ್ಲಿ ನಿಲ್ಲಲು ಬಿಟ್ಟುದು ಇವೆಲ್ಲವೂ ಅಲ್ಲಾಹನ ಅನುಮತಿಯಿಂದಲೇ ಆಗಿತ್ತು[4] ಮತ್ತು 'ವಚನಭ್ರಷ್ಟ'ರನ್ನು ಅಪಮಾನಿಸಲಿಕ್ಕಾಗಿ (ಅಲ್ಲಾಹನು ಈ ಅನುಮತಿ ನೀಡಿದನು).[5]

مَا قَطَعْتُمْ مِنْ لِينَةٍ أَوْ تَرَكْتُمُوهَا قَائِمَةً عَلَىٰ أُصُولِهَا فَبِإِذْنِ اللَّهِ وَلِيُخْزِيَ الْفَاسِقِينَ ⑤

6. ಅಲ್ಲಾಹನು[6] ಅವರ ವಶದಿಂದ ತೆಗೆದು ತನ್ನ ಸಂದೇಶವಾಹಕರ

وَمَا أَفَاءَ اللَّهُ عَلَىٰ رَسُولِهِ مِنْهُمْ فَمَا

3. ಲೋಕದ ಯಾತನೆಯೆಂದರೆ ಅವರ ನಾಮಾವಶೇಷವಾಗಿದೆ. ಅವರು ಸಂಧಾನದ ಮೂಲಕ ಪ್ರಾಣ ರಕ್ಷಣೆ ಮಾಡಿಕೊಳ್ಳುವ ಬದಲು ಯುದ್ಧ ಮಾಡುತ್ತಿದ್ದರೆ ಸಂಪೂರ್ಣವಾಗಿ ನಾಶವಾಗಿ ಬಿಡುತ್ತಿದ್ದರು.

4. ಮುಸ್ಲಿಮರು ಮುತ್ತಿಗೆ ಹಾಕುವ ಬದಲು ಅದಕ್ಕೆ ಯಾವುದೇ ರೀತಿಯ ಅಡಚಣೆಯುಂಟಾಗದಿರಲು ಬನೀನಝೀರ್ ಗ್ರಾಮದ ಸುತ್ತಮುತ್ತಲ ಪ್ರದೇಶದಲ್ಲಿದ್ದ ಖರ್ಜೂರದ ತೋಟದ ಅನೇಕ ಮರಗಳನ್ನು ಕಡಿದು ಹಾಕಿದರು, ಇಲ್ಲವೇ ಬೆಂಕಿ ಹಚ್ಚಿದರು. ಸೇನಾ ಕಾರ್ಯಾಚರಣೆಗೆ ಅಡಚಣೆಯುಂಟು ಮಾಡದಂತಹ ಮರಗಳನ್ನು ಹಾಗೆಯೇ ಬಿಟ್ಟು ಬಿಡಲಾಯಿತು. ಇದರಿಂದಾಗಿ ಮದೀನಾದ ಕಪಟವಿಶ್ವಾಸಿಗಳು ಮತ್ತು ಯಹೂದಿಯರು ಮುಹಮ್ಮದ್‌ರು(ಸ) ಭೂಮಿಯಲ್ಲಿ ಕ್ಷೋಭೆಯುಂಟು ಮಾಡುವುದರಿಂದ ತಡೆಯುತ್ತಾರೆ. ಆದರೆ ಇದೇನು! ಹಸಿರಿನಿಂದ ನಳನಳಿಸುವ ಫಲಭರಿತ ಮರಗಳನ್ನು ಕಡಿಯಲಾಗುತ್ತಿದೆ. ಇದು ಭೂಮಿಯಲ್ಲಿ ಕ್ಷೋಭೆಯುಂಟು ಮಾಡುವುದಲ್ಲದಿದ್ದರೆ ಮತ್ತೇನು ಎಂದು ಗುಲ್ಲೆಬ್ಬಿಸಿದರು. ಅದಕ್ಕಾಗಿ ಅಲ್ಲಾಹನು ನೀವು ಮರಗಳನ್ನು ಕಡಿದುದಾಗಲಿ ಅಥವಾ ಹಾಗೆಯೇ ಇರಲು ಬಿಟ್ಟದ್ದಾಗಲೀ ಅಸಿಂಧು ಕಾರ್ಯವಲ್ಲ. ಬದಲಾಗಿ ಅವೆರಡೂ ಅಲ್ಲಾಹನ ಇಚ್ಛೆಗೆ ಅನುಸಾರವಾಗಿದೆ ಎಂಬ ವಾಣಿಯನ್ನು ಅವತೀರ್ಣಗೊಳಿಸಿದನು. ಈ ವಿಷಯದ ಬಗ್ಗೆಯೇ ಈ ಸೂಕ್ತದಲ್ಲಿ ಸೂಚಿಸಲಾಗಿದೆ.

5. ಅರ್ಥಾತ್- ಆ ಮರಗಳನ್ನು ಕಡಿಯುವುದರಿಂದಲೂ ಕಡಿಯದಿರುವುದರಿಂದಲೂ ಅವರು ನಿಂದ್ಯರಾಗಬೇಕೆಂದು ಅಲ್ಲಾಹನ ಇಚ್ಛೆಯಾಗಿತ್ತು. ಮರಗಳನ್ನು ಕಡಿಯುವ ಮೂಲಕ ಅವರ ನಿಂದ್ಯತೆ ಹೇಗೆಂದರೆ ಅವರು ಸ್ವಕರಗಳ ಮೂಲಕ ಯಾವ ತೋಟವನ್ನು ನೆಟ್ಟು ಬೆಳೆಸಿದ್ದರೋ ಮತ್ತು ದೀರ್ಘ ಕಾಲದಿಂದ ಯಾವ ತೋಟಗಳ ಒಡೆತನವನ್ನು ಹೊಂದಿದ್ದರೋ ಅದನ್ನು ಅವರ ಕಣ್ಣ ಮುಂದೆಯೇ ಕಡಿಯಲಾಗುತ್ತಿದೆ ಮತ್ತು ಕಡಿಯುವವರನ್ನು ತಡೆಯುವಲ್ಲಿ ಅವರು ಅಸಹಾಯಕರಾಗಿದ್ದಾರೆ. ಮರಗಳನ್ನು ಕಡಿಯದಿರುವ ಮೂಲಕ ಆಗುವ ನಿಂದ್ಯತೆ ಹೇಗೆಂದರೆ ನಿನ್ನೆಯ ತನಕ ತಮ್ಮ ಒಡೆತನದಲ್ಲಿದ್ದ ಹಸಿರು ನಸಿರಾದ ತೋಟಗಳು ಇಂದು ಮುಸ್ಲಿಮರ ವಶವಾಗುತ್ತಿರುವುದನ್ನು ಅವರು ಮದೀನಾದಿಂದ ಹೊರಡುವಾಗ ಕಣ್ಣಾರೆ ಕಾಣುತ್ತಿದ್ದರು. ಅವರಿಗೆ ಸಾಧ್ಯವಿರುತ್ತಿದ್ದರೆ ಅವರು ಒಂದು ಮರವೂ ಸುರಕ್ಷಿತವಾಗುಳಿದು ಮುಸ್ಲಿಮರ ವಶವಾಗದಂತೆ ಅದನ್ನು ಸರ್ವನಾಶಗೊಳಿಸಿ ಹೋಗುತ್ತಿದ್ದರು. ಆದರೆ ತಮ್ಮ ಅಸಹಾಯಕ ಪರಿಸ್ಥಿತಿಯಲ್ಲಿ ಅವರು ಎಲ್ಲವನ್ನೂ ಹಾಗೆಯೇ ಬಿಟ್ಟು ಹತಾಶರಾಗಿ ಹೊರಟು ಹೋದರು.

6. ಮೊದಲು ಬನೀನಝೀರ್‌ನ ಅಧೀನವಿದ್ದ ಮತ್ತು ಅವರ ದೇಶಾಂತರದ ಬಳಿಕ ಇಸ್ಲಾಮೀ ಸರಕಾರದ ಅಧೀನಕ್ಕೆ ಬಂದ ಆಸ್ತಿಪಾಸ್ತಿ

أَوْجَفْتُمْ عَلَيْهِ مِنْ خَيْلٍ وَلَا رِكَابٍ وَلَٰكِنَّ اللَّهَ يُسَلِّطُ رُسُلَهُ عَلَىٰ مَن يَشَاءُ ۚ وَاللَّهُ عَلَىٰ كُلِّ شَيْءٍ قَدِيرٌ ⑥

ಕಡೆಗೆ ಮರಳಿಸಿದ ಸೊತ್ತು-[7] ನೀವು ಕುದುರೆಗಳನ್ನು ಮತ್ತು ಒಂಟೆಗಳನ್ನು ಓಡಿಸಿ ಗಳಿಸಿದ ಸೊತ್ತಲ್ಲ. ವಾಸ್ತವದಲ್ಲಿ ಅಲ್ಲಾಹನು ತನ್ನ ಸಂದೇಶವಾಹಕರುಗಳಿಗೆ ತಾನಿಚ್ಛಿಸಿದವರ ಮೇಲೆ ಪ್ರಾಬಲ್ಯ ವನ್ನು ನೀಡುತ್ತಾನೆ ಮತ್ತು ಅಲ್ಲಾಹನು ಸಕಲ ವಿಷಯಗಳಿಗೆ ಸಾಮರ್ಥ್ಯವುಳ್ಳವನು.[8]

مَّا أَفَاءَ اللَّهُ عَلَىٰ رَسُولِهِ مِنْ أَهْلِ الْقُرَىٰ فَلِلَّهِ وَلِلرَّسُولِ وَلِذِي الْقُرْبَىٰ وَالْيَتَامَىٰ وَالْمَسَاكِينِ وَابْنِ السَّبِيلِ كَيْ لَا يَكُونَ دُولَةً بَيْنَ الْأَغْنِيَاءِ مِنكُمْ ۚ وَمَا آتَاكُمُ الرَّسُولُ فَخُذُوهُ

7. ಅಲ್ಲಾಹನು ನಾಡುಗಳ ಜನರಿಂದ ತನ್ನ ಸಂದೇಶವಾಹಕರ ಕಡೆಗೆ ಮರಳಿಸಿದ್ದೆಲ್ಲವೂ ಅಲ್ಲಾಹ್ ಮತ್ತು ಸಂದೇಶವಾಹಕರಿಗಾಗಿದೆ ಹಾಗೂ ಸಂಬಂಧಿಕರು,[9] ಅನಾಥರು, ದರಿದ್ರರು ಮತ್ತು ಪ್ರಯಾಣಿಕ ರಿಗಾಗಿದೆ. (ಅದು) ನಿಮ್ಮ ಶ್ರೀಮಂತರ ನಡುವೆ ಮಾತ್ರ ಚಲಿಸುತ್ತ ಇರಬಾರದೆಂದು (ಹೀಗೆ ಮಾಡಲಾಗಿದೆ)[10] ರಸೂಲರು ನಿಮಗೆ ಏನು ಕೊಡುವರೋ ಅದನ್ನು ಸ್ವೀಕರಿಸಿಕೊಳ್ಳಿರಿ ಮತ್ತು ಯಾವು ದರಿಂದ ಅವರು ನಿಮ್ಮನ್ನು ತಡೆಯುವರೋ ಅದರಿಂದ

ಮತ್ತು ಸೊತ್ತುಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ. ಇಲ್ಲಿಂದ 10ನೆಯ ಸೂಕ್ತದ ತನಕ ಅವುಗಳ ವ್ಯವಸ್ಥೆ ಹೇಗಿರಬೇಕು ಎಂದು ಅಲ್ಲಾಹನು ತಿಳಿಸಿದ್ದಾನೆ.

7. ಈ ಭೂಮಿ ಮತ್ತು ಅಂದು ಒಳಗೊಂಡಿರುವ ಸಕಲ ವಸ್ತುಗಳು ವಾಸ್ತವದಲ್ಲಿ ಅಲ್ಲಾಹನ ಧಿಕ್ಕಾರಿಗಳ ಸೊತ್ತಲ್ಲ ಎಂದು ಈ ಪದಗಳು ಸಾರಿ ಹೇಳುತ್ತಿವೆ. ಆದ್ದರಿಂದ ಸತ್ಯದಿಂದ ಕೂಡಿದ ಧರ್ಮಸಮ್ಮತವಾದ ಯುದ್ಧವೊಂದರ ಮೂಲಕ ಸತ್ಯನಿಷೇಧಿಗಳ ಕೈಯಿಂದ ಸತ್ಯವಿಶ್ವಾಸಿಗಳ ವಶಕ್ಕೆ ಬಂದ ಸೊತ್ತು ವಿತ್ತಗಳ ನಿಜವಾದ ಸ್ಥಿತಿ ಹೇಗಿದೆಯೆಂದರೆ, ಅದರ ಒಡೆಯನು ಅದನ್ನು ತನ್ನ ಕೃತಘ್ನ ಮತ್ತು ಧಿಕ್ಕಾರಿಗಳಾದ ದಾಸರ ಕೈಯಿಂದ ತೆಗೆದು ಆಜ್ಞಾನುಸಾರಿಗಳಾದ ದಾಸರ ಕೈಗೆ ಮರಳಿಸಿದನು. ಆದ್ದರಿಂದಲೇ ಆ ಸೊತ್ತು ವಿತ್ತಗಳನ್ನು ಇಸ್ಲಾಮೀ ಕಾನೂನಿನ ಪಾರಿಭಾಷಿಕದಲ್ಲಿ 'ಫಯೆ' (ಮರಳಿಸಿ ತರಲಾದ ಸೊತ್ತು) ಎನ್ನಲಾಗಿದೆ.

8. ಅರ್ಥಾತ್- ಯಾವುದೇ ಹೋರಾಟ ನಡೆಸುವ ಸೇನೆಯ ಜಂಘಾಬಲದಿಂದಾಗಿ ಈ ಸೊತ್ತು ಮುಸ್ಲಿಮರ ವಶವಾಗಿಲ್ಲ. ಬದಲಾಗಿ ಅಲ್ಲಾಹನು ತನ್ನ ಪ್ರವಾದಿ ಮತ್ತವರ ಸಮುದಾಯ ಹಾಗೂ ಅವರು ಸ್ಥಾಪಿಸಿರುವಂತಹ ವ್ಯವಸ್ಥೆಗೆ ದಯಪಾಲಿಸಿರುವ ಸಾಮೂಹಿಕ ಶಕ್ತಿಯಿಂದಾಗಿ ಇದು ಸಾಧ್ಯವಾಗಿದೆ. ಆದ್ದರಿಂದ ಇದು ಸಮರಾರ್ಜಿತ ಸೊತ್ತಿಗಿಂತ ಭಿನ್ನ ಸ್ವರೂಪದ್ದಾಗಿದೆ. ಸಮರಾರ್ಜಿತ ಸೊತ್ತಿನಂತೆ ಅದನ್ನೂ ಪರಸ್ಪರರಲ್ಲಿ ವಿತರಣೆ ಮಾಡಿಕೊಳ್ಳಲು ಸೇನೆಗೆ ಅಧಿಕಾರವಿಲ್ಲ. ಹೀಗೆ ಶರೀಅತ್‌ನಲ್ಲಿ ಸಮರಾರ್ಜಿತ ಸೊತ್ತು ಮತ್ತು 'ಫಯೆ'ಗೆ ವಿಭಿನ್ನ ಆದೇಶಗಳಿವೆ. ಯುದ್ಧ ಕಾರ್ಯಾಚರಣೆಯ ವೇಳೆ ಶತ್ರು ಸೈನಿಕರಿಂದ ವಶಪಡಿಸಿಕೊಳ್ಳಲಾದ ಚರ ಸೊತ್ತುಗಳು 'ಸಮರಾರ್ಜಿತ ಸೊತ್ತಾಗಿದೆ.' ಅದಕ್ಕೆ ಹೊರತಾದ ಶತ್ರುಗಳ ನಾಡಿನ ಭೂಪ್ರದೇಶ, ಮನೆ ಮತ್ತಿತರ ಸ್ಥಿರ-ಚರ ಸೊತ್ತುಗಳು 'ಸಮರಾರ್ಜಿತ ಸೊತ್ತಿನ' ಸಾಲಿಗೆ ಸೇರದೆ 'ಫಯೆ'ಯ ಸಾಲಿಗೆ ಸೇರುತ್ತದೆ.

9. ಸಂಬಂಧಿಕರು ಎಂದರೆ ಪ್ರವಾದಿವರ್ಯರ(ಸ) ಸಂಬಂಧಿಕರಾಗಿದ್ದಾರೆ. ಅರ್ಥಾತ್, ಬನೀ ಹಾಶಿಮ್ ಮತ್ತು ಬನೀಮುತ್ತಲಿಬ್ ಗೋತ್ರದವರು. ಪ್ರವಾದಿವರ್ಯರು(ಸ) ತಮ್ಮ ಮತ್ತು ತಮ್ಮ ಕುಟುಂಬಸ್ಥರ ಹಕ್ಕುಗಳನ್ನು ಪೂರೈಸಿದ ನಂತರ ಸಹಾಯದ ಅಗತ್ಯವಿರುವ ಅಥವಾ ಪ್ರವಾದಿವರ್ಯರಿಗೆ(ಸ) ಸಹಾಯಾಪೇಕ್ಷಿಗಳೆಂದು ತೋರುವ ಸಂಬಂಧಿಕರ ಹಕ್ಕುಗಳನ್ನೂ ನೀಡುವಂತಾಗಲು ಪ್ರವಾದಿವರ್ಯರಿಗೆ(ಸ) ಈ ಪಾಲನ್ನು ಗೊತ್ತುಪಡಿಸಲಾಗಿದೆ. ಪ್ರವಾದಿವರ್ಯರ(ಸ) ನಿಧನಾನಂತರ ಇದು ಪ್ರತ್ಯೇಕ ಮತ್ತು ಸ್ಥಿರವಾದ ಪಾಲಾಗಿ ಉಳಿದಿರಲಿಲ್ಲ. ಅನಂತರ ಮುಸ್ಲಿಮರ ಪೈಕಿಯ ಇತರ ಬಡವರು, ಅನಾಥರು ಮತ್ತು ಯಾತ್ರಿಕರಂತೆಯೇ ಬನೀ ಹಾಶಿಮ್ ಮತ್ತು ಬನೀಮುತ್ತಲಿಬ್‌ನ ಅಪೇಕ್ಷಿತ ವ್ಯಕ್ತಿಗಳ ಹಕ್ಕುಗಳೂ ಬೈತುಲ್‌ಮಾಲ್‌ನ ಬಾಧ್ಯತೆಯಾಯಿತು. ಆದರೆ ಝಕಾತ್‌ನಲ್ಲಿ ಅವರಿಗೆ ಪಾಲಿಲ್ಲದಿರುವುದರಿಂದ ಅವರ ಹಕ್ಕಿಗೆ ಇತರರಿಗಿಂತ ಹೆಚ್ಚು ಪ್ರಾಶಸ್ತ್ಯ ನೀಡಲಾಯಿತು.

10. ಇದು ಪವಿತ್ರ ಕುರ್‌ಆನಿನ ಪ್ರಮುಖ ತಾತ್ವಿಕ ನಿರ್ದೇಶನಗಳಲ್ಲೊಂದಾಗಿದೆ. ಇದರಲ್ಲಿ ಇಸ್ಲಾಮೀ ಸಮಾಜ ಮತ್ತು ಸರಕಾರದ ಆರ್ಥಿಕ ನೀತಿಯ ಮೂಲಭೂತ ತತ್ವವನ್ನು ವಿವರಿಸಲಾಗಿದೆ. ಸಂಪತ್ತಿನ ಚಲಾವಣೆ ಸಮಸ್ತ ಸಮಾಜದಲ್ಲಿರಬೇಕಾಗಿದೆ. ಸಂಪತ್ತು ಕೇವಲ ಸಿರಿವಂತರ ನಡುವೆಯೇ ಚಲಾವಣೆಯಲ್ಲಿರುವುದು ಅಥವಾ ಧನಿಕರು ದಿನದಿಂದ ದಿನಕ್ಕೆ ಧನಿಕರಾಗುತ್ತಾ ಸಾಗುವುದು ಮತ್ತು ಬಡವರು ದಿನದಿಂದ ದಿನಕ್ಕೆ ಬಡವರಾಗುತ್ತಾ ಸಾಗುವುದು ಸಲ್ಲದು ಎಂಬುದೇ ಈ ಮೂಲಭೂತ ತತ್ವವಾಗಿದೆ.

وَمَا نَهَاكُمْ عَنْهُ فَانْتَهُوا ۚ وَاتَّقُوا اللَّهَ ۖ إِنَّ اللَّهَ شَدِيدُ الْعِقَابِ ⑦

ದೂರವಿರಿ. ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನು ಕಠಿಣವಾಗಿ ಶಿಕ್ಷಿಸುವವನಾಗಿರುತ್ತಾನೆ.[11]

لِلْفُقَرَاءِ الْمُهَاجِرِينَ الَّذِينَ أُخْرِجُوا مِنْ دِيَارِهِمْ وَأَمْوَالِهِمْ يَبْتَغُونَ فَضْلًا مِنَ اللَّهِ وَرِضْوَانًا وَيَنْصُرُونَ اللَّهَ وَرَسُولَهُ ۚ أُولَٰئِكَ هُمُ الصَّادِقُونَ ⑧

8. (ಮಾತ್ರವಲ್ಲದೆ ಆ ಸೊತ್ತು) ತಮ್ಮ ಮನೆಗಳಿಂದಲೂ ಆಸ್ತಿಪಾಸ್ತಿಗಳಿಂದಲೂ ಹೊರಕ್ಕಟ್ಟಲ್ಪಟ್ಟಿರುವ ಬಡ ಮುಹಾಜಿರರಿಗಾಗಿಯೂ ಇದೆ. ಇವರು ಅಲ್ಲಾಹನ ಅನುಗ್ರಹವನ್ನೂ ಅವನ ಸಂಪ್ರೀತಿಯನ್ನೂ ಬಯಸುತ್ತಾರೆ ಮತ್ತು ಅಲ್ಲಾಹ್ ಮತ್ತು ಅವನ ರಸೂಲರ ಸಹಾಯಕ್ಕೆ ಸದಾ ಸನ್ನದ್ಧರಾಗಿರುತ್ತಾರೆ. ಇವರೇ ಸತ್ಯಸಂಧರು.

وَالَّذِينَ تَبَوَّءُوا الدَّارَ وَالْإِيمَانَ مِنْ قَبْلِهِمْ يُحِبُّونَ مَنْ هَاجَرَ إِلَيْهِمْ وَلَا يَجِدُونَ فِي صُدُورِهِمْ حَاجَةً مِمَّا أُوتُوا وَيُؤْثِرُونَ عَلَىٰ أَنْفُسِهِمْ وَلَوْ كَانَ بِهِمْ خَصَاصَةٌ ۚ وَمَنْ يُوقَ شُحَّ نَفْسِهِ فَأُولَٰئِكَ هُمُ الْمُفْلِحُونَ ⑨

9. (ಮತ್ತು ಆ ಸೊತ್ತು) ಈ ಮುಹಾಜಿರರ ಆಗಮನಕ್ಕೆ ಮುಂಚೆಯೇ ಸತ್ಯವಿಶ್ವಾಸ ಸ್ವೀಕಾರ ಮಾಡಿ ಮದೀನಾದಲ್ಲಿ ವಾಸವಾಗಿದ್ದವರಿಗೆ (ಸಹ ಇದೆ).[12] ಇವರು ಹಿಜ್ರತ್ ಮಾಡಿ ತಮ್ಮ ಬಳಿಗೆ ಬಂದವರನ್ನು ಪ್ರೀತಿಸುತ್ತಾರೆ. ಅವರಿಗೆ ನೀಡಲ್ಪಟ್ಟುದರ ಕುರಿತು ಇವರು ಯಾವುದೇ ಆಶೆಯನ್ನು ತಮ್ಮ ಮನಸ್ಸಿನಲ್ಲಿ ಇಟ್ಟುಕೊಳ್ಳುವುದಿಲ್ಲ. ಸ್ವತಃ ತಮಗೆ ಅಗತ್ಯವಿದ್ದರೂ ಇತರರಿಗೆ ತಮ್ಮ ಮೇಲೆ ಪ್ರಾಶಸ್ತ್ಯ ನೀಡುತ್ತಾರೆ. ವಾಸ್ತವದಲ್ಲಿ ಯಾರು ತಮ್ಮ ಮನಸ್ಸಿನ ಸಂಕುಚಿತತೆಯಿಂದ ರಕ್ಷಿಸಲ್ಪಟ್ಟರೋ ಅವರೇ ವಿಜಯಿಗಳು.

وَالَّذِينَ جَاءُوا مِنْ بَعْدِهِمْ يَقُولُونَ رَبَّنَا اغْفِرْ لَنَا وَلِإِخْوَانِنَا الَّذِينَ سَبَقُونَا بِالْإِيمَانِ وَلَا تَجْعَلْ فِي قُلُوبِنَا غِلًّا لِلَّذِينَ آمَنُوا رَبَّنَا إِنَّكَ رَءُوفٌ رَحِيمٌ ⑩

10. ಅದು, ಮುಂಚೆ ಬಂದ ಈ ಜನರ ಬಳಿಕ ಬರುವವರಿಗಾಗಿಯೂ ಇದೆ.[13] ಅವರು ಹೀಗೆ ಪ್ರಾರ್ಥಿಸುತ್ತಾರೆ: "ನಮ್ಮ ಪ್ರಭೂ, ನಮ್ಮನ್ನೂ ನಮಗಿಂತ ಮುಂಚೆ ಸತ್ಯವಿಶ್ವಾಸ ಸ್ವೀಕಾರ ಮಾಡಿದ್ದ ನಮ್ಮೆಲ್ಲ ಸಹೋದರರನ್ನೂ ಕ್ಷಮಿಸಿ ಬಿಡು ಮತ್ತು ನಮ್ಮ ಮನಗಳಲ್ಲಿ ಸತ್ಯವಿಶ್ವಾಸಿಗಳ ಬಗ್ಗೆ ಯಾವುದೇ ಹಗೆತನವನ್ನಿರಿಸದಿರು. ನಮ್ಮ ಪ್ರಭೂ, ನೀನು ಮಹಾ ವಾತ್ಸಲ್ಯಪೂರ್ಣನೂ ಕರುಣಾನಿಧಿಯೂ ಆಗಿರುವೆ."[14]

11. ಇದು 'ಬನೀನಝೀರ್'ನ ಸೊತ್ತುಗಳ ವಿತರಣೆಗೆ ಸಂಬಂಧಿಸಿದಂತೆ ನೀಡಲಾದ ಆದೇಶವಾದರೂ ಇದೊಂದು ಸಾರ್ವತ್ರಿಕ ಆದೇಶವಾಗಿದೆ. ಮುಸ್ಲಿಮರು ಎಲ್ಲಾ ವ್ಯವಹಾರಗಳಲ್ಲಿ ಪ್ರವಾದಿವರ್ಯರನ್ನು(ಸ) ಅನುಸರಿಸಬೇಕೆಂಬುದೇ ಈ ಆಜ್ಞೆಯ ಇಂಗಿತವಾಗಿದೆ. ಇಲ್ಲಿ 'ಪ್ರವಾದಿವರ್ಯರು(ಸ) ನಿಮಗೆ ಏನನ್ನು ಕೊಡುವರೋ' ಎಂಬುದಕ್ಕೆ ಪ್ರತಿಯಾಗಿ 'ಏನನ್ನು ಕೊಡುವುದಿಲ್ಲವೋ' ಎಂಬ ಮಾತನ್ನು ಪ್ರಯೋಗಿಸಲಾಗಿಲ್ಲ, ಬದಲಾಗಿ 'ಯಾವುದರಿಂದ ನಿಮ್ಮನ್ನು ತಡೆಯುವರೋ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಇದರಿಂದಲೂ ಆಜ್ಞೆಯ ಇಂಗಿತವೇನೆಂಬುದು ಸ್ಪಷ್ಟವಾಗುತ್ತದೆ.

12. ಅರ್ಥಾತ್- ಅನ್ಸಾರ್‌ಗಳು ಅಂದರೆ 'ಫಯೆ'ನಲ್ಲಿ ಕೇವಲ ಮುಹಾಜಿರ್(ವಲಸಿಗರು)ಗಳಿಗೆ ಮಾತ್ರ ಹಕ್ಕಿರುವುದಲ್ಲ. ಬದಲಾಗಿ ಮೊದಲಿನಿಂದಲೇ 'ದಾರುಲ್ ಇಸ್ಲಾಮ್'ನಲ್ಲಿ ನೆಲೆಸಿದ್ದ ಮುಸ್ಲಿಮರೂ ಪಾಲಿಗೆ ಅರ್ಹರಾಗಿದ್ದಾರೆ.

13. ಅರ್ಥಾತ್- 'ಫಯೆ' ಸೊತ್ತಿನಲ್ಲಿ ಈಗಿರುವ ಪೀಳಿಗೆಗೆ ಮಾತ್ರವಲ್ಲ ಮುಂಬರುವ ಪೀಳಿಗೆಗೂ ಹಕ್ಕಿದೆ.

14. ಈ ಸೂಕ್ತದಲ್ಲಿ ಮುಸ್ಲಿಮರಿಗೆ ಪ್ರಮುಖ ನೈತಿಕ ಬೋಧನೆಯೊಂದನ್ನು ನೀಡಲಾಗಿದೆ. ಅದೇನೆಂದರೆ ಅವರು ಯಾವ ಮುಸ್ಲಿಮರ

11. ಕಾಪಟ್ಯದ[15] ನೀತಿಯನ್ನು ಅನುಸರಿಸಿದವರನ್ನು ನೀವು ನೋಡಿಲ್ಲವೇ? ಇವರು ಗ್ರಂಥದವರಾದ ತಮ್ಮ ಸತ್ಯನಿಷೇಧಿ ಸಹೋದರರೊಡನೆ, "ನಿಮ್ಮನ್ನು ಹೊರ ಹಾಕಿದರೆ ನಿಮ್ಮ ಜೊತೆ ನಾವೂ ಹೊರಡುವೆವು ಮತ್ತು ನಿಮ್ಮ ವಿಷಯದಲ್ಲಿ ನಾವು ಖಂಡಿತ ಯಾರ ಮಾತನ್ನೂ ಒಪ್ಪಲಾರೆವು ಮತ್ತು ನಿಮ್ಮ ವಿರುದ್ಧ ಯುದ್ಧ ಮಾಡಲಾದರೆ ನಾವು ನಿಮಗೆ ಸಹಾಯ ಮಾಡುವೆವು" ಎನ್ನುತ್ತಾರೆ. ಆದರೆ ಇವರು ಶುದ್ಧ ಸುಳ್ಳುಗಾರರೆಂಬುದಕ್ಕೆ ಅಲ್ಲಾಹನು ಸಾಕ್ಷಿಯಾಗಿದ್ದಾನೆ.

أَلَمْ تَرَ إِلَى الَّذِينَ نَافَقُوا يَقُولُونَ لِإِخْوَانِهِمُ الَّذِينَ كَفَرُوا مِنْ أَهْلِ الْكِتَابِ لَئِنْ أُخْرِجْتُمْ لَنَخْرُجَنَّ مَعَكُمْ وَلَا نُطِيعُ فِيكُمْ أَحَدًا أَبَدًا وَإِنْ قُوتِلْتُمْ لَنَنْصُرَنَّكُمْ وَاللَّهُ يَشْهَدُ إِنَّهُمْ لَكَاذِبُونَ ⑪

12. ಅವರು ಹೊರ ಹಾಕಲ್ಪಟ್ಟರೆ ಇವರು ಖಂಡಿತ ಅವರ ಜೊತೆ ಹೊರಡಲಾರರು ಮತ್ತು ಅವರ ವಿರುದ್ಧ ಯುದ್ಧ ಮಾಡಲಾದರೆ ಇವರು ಖಂಡಿತ ಅವರಿಗೆ ಸಹಾಯ ಮಾಡಲಾರರು ಮತ್ತು ಒಂದು ವೇಳೆ ಇವರು ಸಹಾಯ ಮಾಡಿದರೂ ಬೆನ್ನು ತಿರುಗಿಸಿ ಓಡುವರು. ಅನಂತರ ಎಲ್ಲಿಂದಲೂ ಯಾವ ಸಹಾಯವನ್ನೂ ಪಡೆಯಲಾರರು.

لَئِنْ أُخْرِجُوا لَا يَخْرُجُونَ مَعَهُمْ وَلَئِنْ قُوتِلُوا لَا يَنْصُرُونَهُمْ وَلَئِنْ نَصَرُوهُمْ لَيُوَلُّنَّ الْأَدْبَارَ ثُمَّ لَا يُنْصَرُونَ ⑫

13. ಇವರ ಹೃದಯಗಳಲ್ಲಿ ಅಲ್ಲಾಹನಿಗಿಂತ ಅಧಿಕವಾಗಿ ನಿಮ್ಮ ಭಯವಿದೆ. ಏಕೆಂದರೆ ಇವರು ಅರಿವಿಲ್ಲದವರಾಗಿದ್ದಾರೆ.[16]

لَأَنْتُمْ أَشَدُّ رَهْبَةً فِي صُدُورِهِمْ مِنَ اللَّهِ ذَٰلِكَ بِأَنَّهُمْ قَوْمٌ لَا يَفْقَهُونَ ⑬

---

ಬಗ್ಗೆಯೂ ಮನಸ್ಸಿನಲ್ಲಿ ದ್ವೇಷಾಸೂಯೆಯನ್ನು ಹೊಂದಿರಬಾರದು. ತಮಗಿಂತ ಹಿಂದೆ ಗತಿಸಿ ಹೋದ ಮುಸ್ಲಿಮರ ಕ್ಷಮೆಗಾಗಿ ಅವರು ಪ್ರಾರ್ಥಿಸುತ್ತಿರಬೇಕು. ಅವರನ್ನೆಂದೂ ಶಪಿಸಬಾರದು ಅಥವಾ ಮೂದಲಿಸಬಾರದು.

15. ಈ ರುಕೂಅ್‌ನ (ಪರಿಚ್ಛೇದ) ಉದ್ದಕ್ಕೂ ಕಪಟವಿಶ್ವಾಸಿಗಳ ಧೋರಣೆಯ ಬಗ್ಗೆ ಚರ್ಚಿಸಲಾಗಿದೆ. ಪ್ರವಾದಿವರ್ಯರು(ಸ) ಬನೀ ನಝೀರ್ ಗೋತ್ರದವರಿಗೆ ಮದೀನಾದಿಂದ ಹೊರಟು ಹೋಗಲು ಹತ್ತು ದಿನದ ಗಡುವು ಕೊಟ್ಟಿದ್ದರು. ಅವರ ಮೇಲೆ ಮುತ್ತಿಗೆ ಹಾಕಲು ಇನ್ನು ಕೆಲವೇ ದಿನಗಳು ಉಳಿದಿದ್ದವು. ಆಗ ಕಪಟವಿಶ್ವಾಸಿಗಳ ನಾಯಕರು, ನಾವು ಎರಡು ಸಾವಿರ ಸಂಖ್ಯೆಯ ಸೇನೆಯೊಂದಿಗೆ ನಿಮ್ಮ ನೆರವಿಗೆ ಬರುವೆವು ಹಾಗೂ ಬನೀಕುರೈಝಾ ಮತ್ತು ಬನೀಗತ್‌ಫಾನ್‌ನವರೂ ನಿಮ್ಮ ನೆರವಿಗೆ ಸಿದ್ಧರಿರುವರು. ಆದ್ದರಿಂದ ನೀವು ಮುಸ್ಲಿಮರ ವಿರುದ್ಧ ಸ್ಥಿರವಾಗಿ ನಿಲ್ಲಿರಿ ಮತ್ತು ಎಂದೂ ಅವರೆದುರು ಸೋಲೊಪ್ಪಿಕೊಳ್ಳದಿರಿ. ಅವರು ನಿಮ್ಮೊಡನೆ ಹೋರಾಡಿದರೆ ನಾವೂ ನಿಮ್ಮ ಜತೆ ಸೇರಿ ಹೋರಾಡುವೆವು. ನಿಮ್ಮನ್ನು ಇಲ್ಲಿಂದ ಹೊರಹಾಕಲಾದರೆ ನಾವು ಇಲ್ಲಿಂದ ಹೊರಟು ಬಿಡುವೆವು ಎಂದು ಮುಂತಾಗಿ ಹೇಳಿ ಕಳುಹಿಸಿದರು.

16. ಈ ಸಣ್ಣ ವಾಕ್ಯದ ಮೂಲಕ ದೊಡ್ಡ ವಾಸ್ತವಿಕತೆಯೊಂದನ್ನು ವಿವರಿಸಲಾಗಿದೆ. ನಿಜವಾಗಿ ಭಯಪಡಲರ್ಹವಾದುದು ಅಲ್ಲಾಹನ ಶಕ್ತಿಯೇ ವಿನಾ ಮಾನವ ಶಕ್ತಿಯಲ್ಲವೆಂದು ಬುದ್ಧಿ-ವಿವೇಕ ಇರುವ ವ್ಯಕ್ತಿ ತಿಳಿದಿರುತ್ತಾನೆ. ಆದ್ದರಿಂದ ದೇವನ ವಿಚಾರಣೆಯನ್ನೆದುರಿಸಬೇಕಾದಂತಹ ಎಲ್ಲಾ ಕೆಲಸಗಳಿಂದಲೂ ಅವನು ದೂರವಿರುತ್ತಾನೆ. ಯಾವುದೇ ಮಾನವ ಶಕ್ತಿಯ ದೃಷ್ಟಿಯಲ್ಲಿ ಅದು ವಿಚಾರಣಾರ್ಹವೋ ಅಲ್ಲವೋ ಎಂಬುದನ್ನು ಅವನು ಗಮನಿಸುವುದಿಲ್ಲ. ದೇವನು ವಿಧಿಸಿರುವಂತಹ ಪ್ರತಿಯೊಂದು ಕರ್ತವ್ಯವನ್ನು ನಿಭಾಯಿಸಲಿಕ್ಕೂ ಅವನು ಸಿದ್ಧನಾಗುತ್ತಾನೆ. ಲೋಕದ ಶಕ್ತಿಗಳೆಲ್ಲವೂ ಅದಕ್ಕೆ ಅಡ್ಡಿಯಾಗಿ ನಿಂತರೂ ಅವನು ಲೆಕ್ಕಿಸುವುದಿಲ್ಲ. ಆದರೆ ವಿವೇಕಹೀನನಾದ ವ್ಯಕ್ತಿ ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಯಾವ ಧೋರಣೆಯನ್ನು ತಳೆಯಬೇಕೆಂದು ದೇವನ ಬದಲು ಮಾನವೀಯ ಶಕ್ತಿಗಳನ್ನು ಗಮನದಲ್ಲಿರಿಸಿ ತೀರ್ಮಾನ ಮಾಡುತ್ತಾನೆ. ಅವನು ಯಾವುದೇ ವಿಷಯದಲ್ಲಿ ತನ್ನನ್ನು ಸುರಕ್ಷಿತವಾಗಿರಿಸಿಕೊಳ್ಳುವುದು ದೇವನ ವಿಚಾರಣೆಯ ಭಯದಿಂದಲ್ಲ. ಬದಲಾಗಿ ಯಾವುದಾದರೊಂದು ಮಾನವೀಯ ಶಕ್ತಿ ನನ್ನನ್ನು ವಿಚಾರಿಸಿಕೊಳ್ಳಲಿದೆ ಎಂಬ ಕಾರಣಕ್ಕಾಗಿರುತ್ತದೆ.

14. ಇವರೆಂದೂ ಒಟ್ಟಾಗಿ (ತೆರೆದ ಮೈದಾನದಲ್ಲಿ) ನಿಮ್ಮ ವಿರುದ್ಧ ಹೋರಾಡಲಾರರು. ಇವರು ಯುದ್ಧ ಮಾಡುವುದಿದ್ದರೂ ಕೋಟೆಗಳಿಂದಾವೃತವಾದ ವಸತಿಗಳಿಂದ ಅಥವಾ ಗೋಡೆಗಳ ಮರೆಯಲ್ಲಿ ಅವಿತುಕೊಂಡು ಮಾತ್ರ. ಇವರು ತಮ್ಮ ಒಳ ಜಗಳಗಳಲ್ಲಿ ಬಹಳ ಕಠೋರರಾಗಿದ್ದಾರೆ. ನೀವು ಇವರನ್ನು ಸಂಘಟಿತರೆಂದು ಭಾವಿಸುತ್ತೀರಿ. ಆದರೆ, ಇವರ ಮನಸ್ಸುಗಳು ಪರಸ್ಪರರಿಂದ ಸಿಡಿದು ಹೋಗಿವೆ. ಇವರು ಬುದ್ಧಿಹೀನ ಜನರಾಗಿರುವುದರಿಂದ ಇವರ ಸ್ಥಿತಿ ಹೀಗಾಗಿದೆ.

لَا يُقَاتِلُونَكُمْ جَمِيعًا إِلَّا فِي قُرًى مُّحَصَّنَةٍ أَوْ مِن وَرَاءِ جُدُرٍ ۚ بَأْسُهُم بَيْنَهُمْ شَدِيدٌ ۚ تَحْسَبُهُمْ جَمِيعًا وَقُلُوبُهُمْ شَتَّىٰ ۚ ذَٰلِكَ بِأَنَّهُمْ قَوْمٌ لَّا يَعْقِلُونَ ﴿١٤﴾

15. ಇವರ ಸ್ಥಿತಿಯು, ಇವರಿಗಿಂತ ಸ್ವಲ್ಪವೇ ಕಾಲ ಹಿಂದೆ ತಮ್ಮ ಕೃತ್ಯಗಳ ದುಷ್ಪರಿಣಾಮವನ್ನು ಅನುಭವಿಸಿದ ಜನರಂತಿದೆ.[17] ಇವರಿಗಾಗಿ ವೇದನಾಯುಕ್ತ ಯಾತನೆ ಇದೆ.

كَمَثَلِ الَّذِينَ مِن قَبْلِهِمْ قَرِيبًا ۖ ذَاقُوا وَبَالَ أَمْرِهِمْ وَلَهُمْ عَذَابٌ أَلِيمٌ ﴿١٥﴾

16. ಇವರ ಉದಾಹರಣೆಯು ಶೈತಾನನಂತಿದೆ. ಮೊದಲು ಅವನು ಮನುಷ್ಯನೊಡನೆ- "ಸತ್ಯವನ್ನು ನಿರಾಕರಿಸು" ಎನ್ನುತ್ತಾನೆ ಮತ್ತು ಮನುಷ್ಯನು ಸತ್ಯವನ್ನು ನಿರಾಕರಿಸಿ ಬಿಟ್ಟಾಗ- "ನಾನು ನಿನ್ನಿಂದ ಹೊಣೆಮುಕ್ತನಾಗಿದ್ದೇನೆ. ನನಗಂತು ಸರ್ವಲೋಕಗಳ ಪಾಲಕ ಪ್ರಭುವಿನ ಭಯವಾಗುತ್ತದೆ" ಎನ್ನುತ್ತಾನೆ.

كَمَثَلِ الشَّيْطَانِ إِذْ قَالَ لِلْإِنسَانِ اكْفُرْ فَلَمَّا كَفَرَ قَالَ إِنِّي بَرِيءٌ مِّنكَ إِنِّي أَخَافُ اللَّهَ رَبَّ الْعَالَمِينَ ﴿١٦﴾

17. ಶಾಶ್ವತವಾಗಿ ನರಕಾಗ್ನಿಗೆ ಬೀಳುವುದೇ ಇವರೀರ್ವರ ಅಂತಿಮ ಗತಿ ಮತ್ತು ಇದೇ ಅಕ್ರಮಿಗಳಿಗಿರುವ ಪ್ರತಿಫಲ.

فَكَانَ عَاقِبَتَهُمَا أَنَّهُمَا فِي النَّارِ خَالِدَيْنِ فِيهَا ۚ وَذَٰلِكَ جَزَاءُ الظَّالِمِينَ ﴿١٧﴾

ع ٢ ٥

18. ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಪ್ರತಿಯೊಬ್ಬನೂ, ತಾನು ನಾಳೆಗಾಗಿ ಏನನ್ನು ಸಿದ್ಧಪಡಿಸಿಟ್ಟಿರುವೆನೆಂಬುದನ್ನು ನೋಡಿಕೊಳ್ಳಲಿ.[18] ಅಲ್ಲಾಹನನ್ನು ಭಯಪಡುತ್ತಲಿರಿ. ನಿಶ್ಚಯವಾಗಿಯೂ ನೀವು ಮಾಡುತ್ತಿರುವ ಸಕಲ ಕರ್ಮಗಳನ್ನು ಅಲ್ಲಾಹನು ಬಲ್ಲವನಾಗಿರುತ್ತಾನೆ.

يَا أَيُّهَا الَّذِينَ آمَنُوا اتَّقُوا اللَّهَ وَلْتَنظُرْ نَفْسٌ مَّا قَدَّمَتْ لِغَدٍ ۖ وَاتَّقُوا اللَّهَ ۚ إِنَّ اللَّهَ خَبِيرٌ بِمَا تَعْمَلُونَ ﴿١٨﴾

---

ದೇವನು ಆಜ್ಞಾಪಿಸಿದ್ದಾನೆಂಬ ಕಾರಣಕ್ಕಾಗಿ ಅವನು ಯಾವುದೇ ಕೆಲಸ ಮಾಡುವುದಿಲ್ಲ. ಬದಲಾಗಿ ಯಾವುದೋ ಮಾನವೀಯ ಶಕ್ತಿಯ ಆಜ್ಞೆ ಅಥವಾ ಮೆಚ್ಚುಗೆಯ ಆಧಾರದಲ್ಲಿ ಅವನು ಆ ಕೆಲಸ ಮಾಡುತ್ತಾನೆ. ವಿವೇಕ ಮತ್ತು ಅವಿವೇಕದ ಈ ಅಂತರವೇ ನಿಜವಾಗಿ ಸತ್ಯವಿಶ್ವಾಸಿ ಮತ್ತು ಸತ್ಯನಿಷೇಧಿಯ ಚಾರಿತ್ರ್ಯದಲ್ಲಿ ವ್ಯತ್ಯಾಸವನ್ನುಂಟು ಮಾಡುತ್ತದೆ.

17. ಇಂತಹ ದೌರ್ಬಲ್ಯಗಳಿಂದಾಗಿಯೇ ಕುರೈಶರ ಪೈಕಿಯ ಸತ್ಯನಿಷೇಧಿಗಳು ಮತ್ತು 'ಬನೀ ಕೈನುಕಾಅ್' ಗೋತ್ರದ ಯಹೂದಿಗಳು ತನ್ನ ಸಂಖ್ಯಾಧಿಕ್ಯ ಮತ್ತು ಸಾಧನಾನುಕೂಲತೆಗಳ ಹೊರತಾಗಿಯೂ ಸರಕು-ಸಾಧನಗಳೇನೂ ಇಲ್ಲದ ಬೆರಳೆಣಿಕೆಯಷ್ಟಿದ್ದ ಮುಸ್ಲಿಮ್ ಸಮೂಹದಿಂದ ಸೋಲನುಭವಿಸಿದ್ದರು. ಅದರ ಕಡೆಗೇ ಇಲ್ಲಿ ಸೂಚಿಸಲಾಗಿದೆ.

18. ನಾಳೆ ಎಂದರೆ ಪರಲೋಕ. ಅರ್ಥಾತ್, ಲೋಕದ ಸಮಸ್ತ ಜೀವನವು ಇಂದಿಗೆ ಸಮಾನವಾಗಿದ್ದು ಅದರ ನಂತರ ಬರಲಿರುವ ನಾಳೆಯೇ ಪರಲೋಕವಾಗಿದೆ.

19. ಯಾರು ಅಲ್ಲಾಹನನ್ನು ಮರೆತಾಗ ಅಲ್ಲಾಹನು ಅವರು ತಮ್ಮನ್ನು ತಾವೇ ಮರೆತು ಬಿಡುವಂತೆ ಮಾಡಿದನೋ ಅವರಂತೆ ನೀವಾಗ ಬಾರದು.[19] ಅವರೇ ಕರ್ಮಭ್ರಷ್ಟರು.

وَلَا تَكُونُوا كَالَّذِينَ نَسُوا اللَّهَ فَأَنسَاهُمْ أَنفُسَهُمْ ۚ أُولَٰئِكَ هُمُ الْفَاسِقُونَ ﴿١٩﴾

20. ನರಕಾಗ್ನಿಗೆ ಬೀಳುವವರು ಮತ್ತು ಸ್ವರ್ಗಕ್ಕೆ ಹೋಗುವವರು ಎಂದೂ ಸಮಾನರಾಗಲಾರರು. ಸ್ವರ್ಗಕ್ಕೆ ಹೋಗುವವರೇ ನಿಜವಾದ ವಿಜಯಿಗಳು.

لَا يَسْتَوِي أَصْحَابُ النَّارِ وَأَصْحَابُ الْجَنَّةِ ۚ أَصْحَابُ الْجَنَّةِ هُمُ الْفَائِزُونَ ﴿٢٠﴾

21. ನಾವು ಈ ಕುರ್‌ಆನನ್ನು ಒಂದು ಪರ್ವತದ ಮೇಲೆ ಇಳಿಸಿ ಬಿಡುತ್ತಿದ್ದರೆ, ಅದು ಅಲ್ಲಾಹನ ಭಯದಿಂದ ಮುದುಡಿ ನುಚ್ಚು ನೂರಾಗುವುದನ್ನು ನೀವು ಕಾಣುತ್ತಿದ್ದಿರಿ.[20] ಜನರು (ತಮ್ಮ ಅವಸ್ಥೆಯ ಕುರಿತು) ಚಿಂತಿಸಲೆಂದು ನಾವು ಅವರ ಮುಂದೆ ಈ ಉಪಮೆಗಳನ್ನು ವಿವರಿಸುತ್ತೇವೆ.

لَوْ أَنزَلْنَا هَٰذَا الْقُرْآنَ عَلَىٰ جَبَلٍ لَّرَأَيْتَهُ خَاشِعًا مُّتَصَدِّعًا مِّنْ خَشْيَةِ اللَّهِ ۚ وَتِلْكَ الْأَمْثَالُ نَضْرِبُهَا لِلنَّاسِ لَعَلَّهُمْ يَتَفَكَّرُونَ ﴿٢١﴾

22. ಅವನೇ ಅಲ್ಲಾಹ್ ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ.[21] ಅಗೋಚರವಾದ ಮತ್ತು ಗೋಚರವಾಗಿರುವ ಎಲ್ಲವನ್ನೂ ಬಲ್ಲವನು. ಅವನೇ ಪರಮ ದಯಾಮಯನೂ ಕರುಣಾನಿಧಿಯೂ ಆಗಿರುತ್ತಾನೆ.

هُوَ اللَّهُ الَّذِي لَا إِلَٰهَ إِلَّا هُوَ ۖ عَالِمُ الْغَيْبِ وَالشَّهَادَةِ ۖ هُوَ الرَّحْمَٰنُ الرَّحِيمُ ﴿٢٢﴾

23. ಅವನೇ ಅಲ್ಲಾಹ್ ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅವನು ಸಾಮ್ರಾಟನು, ಪರಮ ಪಾವನನು,[22] ಸಾದ್ಯಂತ

هُوَ اللَّهُ الَّذِي لَا إِلَٰهَ إِلَّا هُوَ الْمَلِكُ الْقُدُّوسُ السَّلَامُ الْمُؤْمِنُ الْمُهَيْمِنُ

19. ಅರ್ಥಾತ್- ದೇವವಿಸ್ಮೃತಿಯ ನಿಶ್ಚಿತವಾದ ಪರಿಣಾಮ ತನ್ನನ್ನು ತಾನೇ ಮರೆತು ಬಿಡುವುದಾಗಿದೆ. ತಾನು ಯಾರ ದಾಸನಾಗಿದ್ದೇನೆ ಎಂಬುದನ್ನು ವ್ಯಕ್ತಿ ಮರೆತು ಬಿಟ್ಟರೆ ಅವನು ಖಂಡಿತವಾಗಿ ಲೋಕದಲ್ಲಿ ತನಗೆ ಒಂದು ತಪ್ಪು ನೆಲೆಯನ್ನು ಗೊತ್ತುಪಡಿಸಿಕೊಳ್ಳುತ್ತಾನೆ. ಈ ಮೂಲಭೂತ ತಪ್ಪು ಕಲ್ಪನೆಯಿಂದಾಗಿ ಅವನ ಸಮಸ್ತ ಜೀವನವೇ ತಪ್ಪು ದಿಕ್ಕಿನಲ್ಲಿ ಸಾಗುತ್ತದೆ. ಹಾಗೆಯೇ ತಾನು ಒಬ್ಬ ದೇವನ ವಿನಾ ಮತ್ತಾರ ದಾಸನೂ ಅಲ್ಲ ಎಂಬುದನ್ನು ಅವನು ಮರೆತು ಬಿಟ್ಟಾಗ ಅವನು ನಿಜವಾಗಿ ತಾನು ಯಾರ ದಾಸನಾಗಿದ್ದೇನೋ ಅವನೊಬ್ಬನ ದಾಸ್ಯವನ್ನು ಬಿಟ್ಟು ತಾನು ನಿಜವಾಗಿ ಯಾರ ದಾಸನಲ್ಲವೋ ಅಂತಹ ಅನೇಕರ ದಾಸ್ಯವನ್ನು ಸ್ವೀಕರಿಸಿಕೊಳ್ಳುತ್ತಾನೆ.

20. ಈ ಉದಾಹರಣೆಯ ಅರ್ಥವೇನೆಂದರೆ- ಕುರ್‌ಆನ್ ಯಾವ ರೀತಿ ಅಲ್ಲಾಹನ ಮಹಾನತೆ ಮತ್ತು ಅವನ ಬಗ್ಗೆ ದಾಸನಿಗಿರುವ ಜವಾಬ್ದಾರಿಕೆ ಮತ್ತು ಉತ್ತರದಾಯಿತ್ವವನ್ನು ಸ್ಪಷ್ಟವಾಗಿ ವಿವರಿಸುತ್ತದೋ ಅದರ ಬಗ್ಗೆ ಪರ್ವತದಂತಹ ಉನ್ನತ ಸೃಷ್ಟಿಗೂ ತಿಳುವಳಿಕೆ ಪ್ರಾಪ್ತವಾಗುತ್ತಿದ್ದರೆ ಮತ್ತು ಯಾವ ಶಕ್ತಿಶಾಲಿ ಪ್ರಭುವಿನ ಮುಂದೆ ತನಗೆ ತನ್ನ ಕರ್ಮಗಳ ಉತ್ತರ ಕೊಡಬೇಕಾಗಿದೆ ಎಂದು ತಿಳಿದಿರುತ್ತಿದ್ದರೆ ಅದೂ ಭಯದಿಂದ ಕಂಪಿಸಿ ಬಿಡುತ್ತಿತ್ತು.

21. ಅರ್ಥಾತ್- ದಾಸ್ಯ ಮತ್ತು ಪೂಜೆಗೆ ಅರ್ಹವಾದ ಉನ್ನತ ಸ್ಥಾನಮಾನ ಹೊಂದಿರುವವರು ಅವನಲ್ಲದೆ ಮತ್ತಾರೂ ಇಲ್ಲ. ಅವನ ಹೊರತು ಬೇರಾರೂ ದೇವತ್ವದ ಗುಣವಿಶೇಷತೆ ಮತ್ತು ಅಧಿಕಾರಗಳನ್ನು ಹೊಂದಿಲ್ಲ. ಹಾಗಿರುವಾಗ ಅವರು ಆರಾಧ್ಯರಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

22. ಅರ್ಥಾತ್- ಅವನ ಅಸ್ತಿತ್ವ ಯಾವುದೇ ದೋಷ, ಕೊರತೆ ಅಥವಾ ಕೆಟ್ಟ ಗುಣದಿಂದ ಅತೀತವಾಗಿರುವಷ್ಟರ ಮಟ್ಟಿಗೆ ಅವನು ಉನ್ನತನೂ ಶ್ರೇಷ್ಠನೂ ಆಗಿದ್ದಾನೆ. ಅವನು ಪರಮ ಪಾವನನಾಗಿದ್ದಾನೆ. ಅವನ ಬಗ್ಗೆ ಯಾವುದೇ ಕೆಡುಕನ್ನು ಕಲ್ಪಿಸಲಿಕ್ಕೂ ಸಾಧ್ಯವಿಲ್ಲ.

ಮಂಗಲಮಯನು,[23] ಶಾಂತಿದಾತನು,[24] ಸಂರಕ್ಷಕನು,[25] ಪ್ರಬಲನು, ತನ್ನ ಆಜ್ಞೆಯನ್ನು ಶಕ್ತಿಯಿಂದ ಅನುಷ್ಠಾನಿಸಿ ಬಿಡುವವನು, ಸದಾ ಸರ್ವೋನ್ನತನಾಗಿಯೇ ಇರುವವನು, ಜನರು ಮಾಡುತ್ತಿರುವ ಸಹಭಾಗಿತ್ವದಿಂದ ಅಲ್ಲಾಹನು ಪರಿಶುದ್ಧನು.

الْعَزِيزُ الْجَبَّارُ الْمُتَكَبِّرُ ۚ سُبْحَانَ اللَّهِ عَمَّا يُشْرِكُونَ ﴿٢٣﴾

24. ಸೃಷ್ಟಿಯ ಯೋಜನೆ ಮಾಡುವವನೂ ಅದನ್ನು ಜಾರಿಗೊಳಿಸುವವನೂ ಅದರಂತೆ ರೂಪ ಕೊಡುವವನೂ ಅಲ್ಲಾಹನೇ. ಅವನಿಗೆ ಅತ್ಯುತ್ತಮ ನಾಮಗಳಿವೆ. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಅವನನ್ನು ಜಪಿಸುತ್ತಿದೆ[26] ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

هُوَ اللَّهُ الْخَالِقُ الْبَارِئُ الْمُصَوِّرُ ۖ لَهُ الْأَسْمَاءُ الْحُسْنَىٰ ۚ يُسَبِّحُ لَهُ مَا فِي السَّمَاوَاتِ وَالْأَرْضِ ۖ وَهُوَ الْعَزِيزُ الْحَكِيمُ ﴿٢٤﴾

ع

---

23. ಅರ್ಥಾತ್- ಅವನ ಅಸ್ತಿತ್ವವು ಯಾವುದೇ ಆಪತ್ತು, ದೌರ್ಬಲ್ಯ ಅಥವಾ ಕೊರತೆ ಎದುರಾಗುವುದ ರಿಂದ ಮುಕ್ತವಿದೆ. ಅವನ ಪರಿಪೂರ್ಣತೆಗೆ ಎಂದೂ ಕೊನೆಯುಂಟಾಗಲಾರದು.
24. ಅರ್ಥಾತ್- ಅವನ ಸೃಷ್ಟಿಗಳು ಅವನಿಂದಾಗಿ ಶಾಂತಿಯಲ್ಲಿರುವರು. ಅವನು ಎಂದೂ ಅವರ ಮೇಲೆ ಅಕ್ರಮವೆಸಗಲಾರ, ಅವರ ಹಕ್ಕುಚ್ಯುತಿ ಮಾಡಲಾರ, ಪುಣ್ಯಫಲವನ್ನು ನಾಶಮಾಡಲಾರ ಅಥವಾ ಅವರ ಬಗ್ಗೆ ಮಾಡಿರುವ ವಾಗ್ದಾನಗಳನ್ನು ಮುರಿಯಲಾರ.
25. ಮೂಲದಲ್ಲಿ 'ಮುಹೈಮಿನ್' ಎಂಬ ಪದ ಪ್ರಯೋಗವಾಗಿದೆ. ಅದಕ್ಕೆ ಮೂರು ಅರ್ಥಗಳಿವೆ. ಮೊದಲನೆಯದಾಗಿ ಮೇಲ್ವಿಚಾರಣೆ ಮತ್ತು ರಕ್ಷಣೆ ಮಾಡುತ್ತಿರುವವನು. ಎರಡನೆಯದಾಗಿ ಯಾರೇನು ಮಾಡುತ್ತಿದ್ದಾರೆಂದು ನೋಡುತ್ತಿರುವವನು. ಮೂರನೆಯದಾಗಿ ಜನರ ಅವಶ್ಯಕತೆ ಮತ್ತು ಬಯಕೆಗಳನ್ನು ಈಡೇರಿಸುವ ಹೊಣೆ ಹೊತ್ತವನು.
26. ಅರ್ಥಾತ್- ಅವು ತಮ್ಮ ಅಸ್ತಿತ್ವ ಅಥವಾ ಮಾತಿನ ಮೂಲಕ ತಮ್ಮ ಸೃಷ್ಟಿಕರ್ತ ಎಲ್ಲಾ ಬಗೆಯ ದೋಷ, ದೌರ್ಬಲ್ಯ ಮತ್ತು ತಪ್ಪಿನಿಂದ ಮುಕ್ತನೆಂದು ಸಾರಿ ಹೇಳುತ್ತಿವೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. [1]ಸತ್ಯವಿಶ್ವಾಸಿಗಳೇ, ನೀವು ನನ್ನ ಮಾರ್ಗದಲ್ಲಿ ಹೋರಾಡುವುದಕ್ಕಾಗಿ ಹಾಗೂ ನನ್ನ ಸಂಪ್ರೀತಿ ಪ್ರಾಪ್ತಿಗಾಗಿ (ಊರು ಬಿಟ್ಟು ನಿಮ್ಮ ಮನೆಗಳಿಂದ) ಹೊರಟಿರುವಿರಾದರೆ, ನನ್ನ ಮತ್ತು ನಿಮ್ಮ ಶತ್ರುಗಳನ್ನು ಮಿತ್ರರಾಗಿ ಮಾಡಿಕೊಳ್ಳಬೇಡಿರಿ. ನೀವು ಅವರೊಂದಿಗೆ ಸ್ನೇಹ ಬೆಳೆಸುತ್ತೀರಿ. ವಸ್ತುತಃ ನಿಮ್ಮ ಬಳಿಗೆ ಬಂದಿರುವ ಸತ್ಯವನ್ನು ಅವರು ತಿರಸ್ಕರಿಸಿ ಬಿಟ್ಟಿರುವರು. ನೀವು ನಿಮ್ಮ ಪ್ರಭುವಾಗಿರುವ ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ್ದೀರೆಂಬ ತಪ್ಪಿಗಾಗಿ ಮಾತ್ರ ಸಂದೇಶವಾಹಕರನ್ನೂ ನಿಮ್ಮನ್ನೂ ದೇಶಭ್ರಷ್ಟಗೊಳಿಸುವುದೇ ಅವರ ಧೋರಣೆಯಾಗಿದೆ. ನೀವು ಅವರಿಗೆ ಗುಪ್ತವಾಗಿ ಸ್ನೇಹ ಸಂದೇಶವನ್ನು ಕಳುಹಿಸುತ್ತೀರಿ. ವಾಸ್ತವದಲ್ಲಿ ನೀವು ಗುಪ್ತವಾಗಿ ಮಾಡುವ ಮತ್ತು ಬಹಿರಂಗವಾಗಿ ಮಾಡುವ ಸಕಲವನ್ನೂ ನಾನು ಚೆನ್ನಾಗಿ ಬಲ್ಲೆನು. ನಿಮ್ಮ ಪೈಕಿ ಹೀಗೆ ಯಾರೇ ಮಾಡಿದರೂ ಅವನು ಖಂಡಿತ ಸನ್ಮಾರ್ಗದಿಂದ ದೂರ ಸರಿದನು.

يٰۤاَيُّهَا الَّذِيۡنَ اٰمَنُوۡا لَا تَتَّخِذُوۡا عَدُوِّىۡ وَعَدُوَّكُمۡ اَوۡلِيَآءَ تُلۡقُوۡنَ اِلَيۡهِمۡ بِالۡمَوَدَّةِ وَقَدۡ كَفَرُوۡا بِمَا جَآءَكُمۡ مِّنَ الۡحَقِّ ۚ يُخۡرِجُوۡنَ الرَّسُوۡلَ وَاِيَّاكُمۡ اَنۡ تُؤۡمِنُوۡا بِاللّٰهِ رَبِّكُمۡ ؕ اِنۡ كُنۡتُمۡ خَرَجۡتُمۡ جِهَادًا فِىۡ سَبِيۡلِىۡ وَابۡتِغَآءَ مَرۡضَاتِىۡ ۖ تُسِرُّوۡنَ اِلَيۡهِمۡ بِالۡمَوَدَّةِ ۖ وَاَنَا اَعۡلَمُ بِمَاۤ اَخۡفَيۡتُمۡ وَمَاۤ اَعۡلَنۡتُمۡ ؕ وَمَنۡ يَّفۡعَلۡهُ مِنۡكُمۡ فَقَدۡ ضَلَّ سَوَآءَ السَّبِيۡلِ ①

2. ಅವರ ಧೋರಣೆ ಏನೆಂದರೆ- ನಿಮ್ಮ ಮೇಲೆ ನಿಯಂತ್ರಣ ದೊರೆತರೆ ಅವರು ನಿಮ್ಮ ವಿರುದ್ಧ ದ್ವೇಷ ಸಾಧಿಸುವರು ಮತ್ತು ಕೈಗಳಿಂದಲೂ ನಾಲಗೆಯಿಂದಲೂ ನಿಮಗೆ ಕಾಟ ಕೊಡುವರು. ಹೇಗಾದರೂ ನೀವು ಸತ್ಯನಿಷೇಧಿಗಳಾಗಿ ಬಿಡಬೇಕೆಂದೇ ಅವರು ಅಪೇಕ್ಷಿಸುತ್ತಾರೆ.

اِنۡ يَّثۡقَفُوۡكُمۡ يَكُوۡنُوۡا لَكُمۡ اَعۡدَآءً وَّيَبۡسُطُوۡۤا اِلَيۡكُمۡ اَيۡدِيَهُمۡ وَاَلۡسِنَتَهُمۡ بِالسُّوۡٓءِ وَوَدُّوۡا لَوۡ تَكۡفُرُوۡنَ ②

3. ಪುನರುತ್ಥಾನ ದಿನ ನಿಮ್ಮ ಬಾಂಧವ್ಯಗಳಾಗಲಿ, ನಿಮ್ಮ ಸಂತತಿ

لَنۡ تَنۡفَعَكُمۡ اَرۡحَامُكُمۡ وَلَاۤ اَوۡلَادُكُمۡ ۛۚ

1. ಈ ಸೂಕ್ತಗಳು ಮಕ್ಕಾದ ಬಹುದೇವಾರಾಧಕರಿಗೆ ಹ. ಹಾತಿಬ್ ಬಿನ್ ಅಬೀಬಲ್‌ತಲಃರು(ರ) ಬರೆದ ಪತ್ರ ಬಯಲಾದಾಗ ಅವತೀರ್ಣಗೊಂಡಿತೆಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಒಮ್ಮತಾಭಿಪ್ರಾಯವಿದೆ. ಅದರಲ್ಲಿ ಅವರು ಪ್ರವಾದಿವರ್ಯರು(ಸ) ಮಕ್ಕಾದ ಮೇಲೆ ದಂಡೆತ್ತಿ ಹೋಗಲಿದ್ದಾರೆಂದು ಶತ್ರುಗಳಿಗೆ ಮೊದಲೇ ಮುನ್ಸೂಚನೆ ನೀಡಿದ್ದರು.

ಗಳಾಗಲಿ ಯಾವ ಕೆಲಸಕ್ಕೂ ಬರಲಾರವು.[2] ಅಂದು ಅಲ್ಲಾಹನು ನಿಮ್ಮ ನಡುವೆ ಅಗಲಿಕೆಯನ್ನುಂಟು ಮಾಡುವನು[3] ಮತ್ತು ಅವನೇ ನಿಮ್ಮ ಕರ್ಮಗಳನ್ನು ನೋಡುವವನಾಗಿರುತ್ತಾನೆ.

يَوْمَ الْقِيَامَةِ ۚ يَفْصِلُ بَيْنَكُمْ ۚ وَاللَّهُ بِمَا تَعْمَلُونَ بَصِيرٌ ③

4. ನಿಮಗೆ ಇಬ್‌ರಾಹೀಮ್ ಮತ್ತು ಅವರ ಸಂಗಾತಿಗಳಲ್ಲಿ ಒಂದು ಉತ್ತಮ ಆದರ್ಶವಿದೆ. ಅವರು ತಮ್ಮ ಜನಾಂಗದೊಡನೆ- "ನಾವು ನಿಮ್ಮಿಂದ ಹಾಗೂ ನೀವು ಅಲ್ಲಾಹನನ್ನು ಬಿಟ್ಟು ಪೂಜಿಸುತ್ತಿರುವ ಈ ಆರಾಧ್ಯ ವಸ್ತುಗಳಿಂದ ಸಂಪೂರ್ಣ ಅಸಂತುಷ್ಟರಾಗಿದ್ದೇವೆ. ನಾವು ನಿಮ್ಮನ್ನು ಧಿಕ್ಕರಿಸಿದೆವು.[4] ನೀವು ಏಕೈಕನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುವ ವರೆಗೆ ನಮ್ಮ ನಿಮ್ಮೊಳಗೆ ಶಾಶ್ವತವಾಗಿ ದ್ವೇಷ ಮತ್ತು ವೈರತ್ವ ಉಂಟಾಯಿತು" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಆದರೆ ಇಬ್‌ರಾಹೀಮರು ತಮ್ಮ ತಂದೆಯೊಡನೆ, "ನಾನು ಖಂಡಿತ ನಿಮ್ಮ ಕ್ಷಮೆಗಾಗಿ ಪ್ರಾರ್ಥಿಸುವೆನು ಮತ್ತು ಅಲ್ಲಾಹನಿಂದ ನಿಮಗಾಗಿ ಏನಾದರೂ ಪಡಕೊಳ್ಳಲು ನನಗೆ ಸಾಧ್ಯವಿಲ್ಲ"[5] ಎಂದು ಹೇಳಿದುದು (ಇದಕ್ಕೆ ಹೊರತಾಗಿದೆ ಮತ್ತು ಇಬ್‌ರಾಹೀಮ್ ಹಾಗೂ ಅವರ ಸಂಗಾತಿಗಳ ಪ್ರಾರ್ಥನೆ ಇದಾಗಿತ್ತು;) "ನಮ್ಮ ಪ್ರಭೂ, ನಾವು ನಿನ್ನ ಮೇಲೆಯೇ ಭರವಸೆಯನ್ನಿರಿಸಿದೆವು, ನಿನ್ನ ಕಡೆಗೇ ನಾವು ವಾಲಿದೆವು ಮತ್ತು ನಿನ್ನ ಸನ್ನಿಧಿಗೇ ನಮಗೆ ಮರಳಲಿಕ್ಕಿದೆ.

قَدْ كَانَتْ لَكُمْ أُسْوَةٌ حَسَنَةٌ فِي إِبْرَاهِيمَ وَالَّذِينَ مَعَهُ ۖ إِذْ قَالُوا لِقَوْمِهِمْ إِنَّا بُرَآءُ مِنْكُمْ وَمِمَّا تَعْبُدُونَ مِنْ دُونِ اللَّهِ كَفَرْنَا بِكُمْ وَبَدَا بَيْنَنَا وَبَيْنَكُمُ الْعَدَاوَةُ وَالْبَغْضَاءُ أَبَدًا حَتَّىٰ تُؤْمِنُوا بِاللَّهِ وَحْدَهُ إِلَّا قَوْلَ إِبْرَاهِيمَ لِأَبِيهِ لَأَسْتَغْفِرَنَّ لَكَ وَمَا أَمْلِكُ لَكَ مِنَ اللَّهِ مِنْ شَيْءٍ ۖ رَبَّنَا عَلَيْكَ تَوَكَّلْنَا وَإِلَيْكَ أَنَبْنَا وَإِلَيْكَ الْمَصِيرُ ④

5. ನಮ್ಮ ಪ್ರಭೂ, ನಮ್ಮನ್ನು ಸತ್ಯನಿಷೇಧಿಗಳ ಪಾಲಿಗೆ ಪರೀಕ್ಷಾ ಸಾಧನವಾಗಿ ಮಾಡಿ ಬಿಡಬೇಡ[6] ಮತ್ತು ನಮ್ಮ ಪ್ರಭೂ, ನಮ್ಮ

رَبَّنَا لَا تَجْعَلْنَا فِتْنَةً لِلَّذِينَ كَفَرُوا وَاغْفِرْ لَنَا رَبَّنَا ۖ إِنَّكَ أَنْتَ الْعَزِيزُ

2. ಮಕ್ಕಾದಲ್ಲಿರುವ ತಮ್ಮ ಬಂಧು ಬಳಗದವರು ಯುದ್ಧದ ವೇಳೆ ಸುರಕ್ಷಿತವಾಗಿರಲೆಂದು ಹ. ಹಾತಿಬ್(ರ) ಈ ಕೆಲಸ ಮಾಡಿದ್ದರು. ಆದ್ದರಿಂದ ಯಾವ ಬಂಧು-ಬಳಗದವರಿಗಾಗಿ ನೀವು ಈ ಕೆಲಸ ಮಾಡಿದ್ದೀರೋ ಅವರು ಪರಲೋಕದಲ್ಲಿ ನಿಮ್ಮ ನೆರವಿಗೆ ಬರಲಾರರೆಂದು ಹೇಳಲಾಗುತ್ತಿದೆ.

3. ಅರ್ಥಾತ್- ಲೋಕದ ನೆಂಟಸ್ತಿಕೆ, ಸಂಬಂಧ ಮತ್ತು ಸಂಪರ್ಕಗಳನ್ನು ಅಲ್ಲಿ ಮುರಿಯಲಾಗುವುದು. ಪ್ರತಿಯೊಬ್ಬನೂ ಅಲ್ಲಿ ವೈಯಕ್ತಿಕ ನೆಲೆಯಲ್ಲಿ ಹಾಜರಾಗುವನು ಮತ್ತು ಪ್ರತಿಯೊಬ್ಬನಿಗೂ ತನ್ನ ಲೆಕ್ಕ ಸಮರ್ಪಣೆ ಮಾಡಬೇಕಾಗುವುದು. ಆದ್ದರಿಂದ ಯಾವ ವ್ಯಕ್ತಿಯೂ ಯಾವುದೇ ನೆಂಟಸ್ತಿಕೆ, ಸ್ನೇಹ ಅಥವಾ ಗುಂಪಿಗಾಗಿ ಯಾವುದೇ ನಿಷಿದ್ಧ ಕೆಲಸ ಮಾಡಬಾರದು. ಏಕೆಂದರೆ ಅವನು ಮಾಡಿದ್ದರ ಶಿಕ್ಷೆಯನ್ನು ಅವನು ಸ್ವತಃ ಅನುಭವಿಸಬೇಕಾಗುವುದು. ಅವನ ವೈಯಕ್ತಿಕ ಹೊಣೆಗಾರಿಕೆಯಲ್ಲಿ ಬೇರಾರೂ ಅವನಿಗೆ ಭಾಗೀದಾರರಾಗಲಾರರು.

4. ಅರ್ಥಾತ್- ನಾವು ನಿಮ್ಮನ್ನು ನಿರಾಕರಿಸುವವರಾಗಿದ್ದೇವೆ. ನೀವು ಸತ್ಯದಲ್ಲಿದ್ದೀರೆಂದಾಗಲಿ ನಿಮ್ಮ ಧರ್ಮವನ್ನಾಗಲಿ ನಾವು ಸಮ್ಮತಿಸುವುದಿಲ್ಲ.

5. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವರು ತಮ್ಮನ್ನು ನಿರಾಕರಿಸುವ ಬಹುದೇವಾರಾಧಕ ಜನಾಂಗದೊಂದಿಗೆ ಅತ್ಯಂತ ಸ್ಪಷ್ಟವಾಗಿ ಅಸಮಾಧಾನ ಮತ್ತು ಸಂಬಂಧರಾಹಿತ್ಯವನ್ನು ಪ್ರಕಟಿಸಿದರು. ನಿಮ್ಮ ಪಾಲಿಗೆ ಹ. ಇಬ್‌ರಾಹೀಮ್‌ರ(ಅ) ಈ ಧೋರಣೆ ಅನುಕರಣಾರ್ಹವಾಗಿದೆ. ಆದರೆ ಅವರು ತಮ್ಮ ಬಹುದೇವಾರಾಧಕ ತಂದೆಗಾಗಿ ಕ್ಷಮೆಯ ಪ್ರಾರ್ಥನೆ ಮಾಡುವ ವಚನ ಕೊಟ್ಟಿದ್ದಾಗಲಿ ಅಥವಾ ವಸ್ತುಶಃ ಅವರ ಪರವಾಗಿ ಪ್ರಾರ್ಥಿಸಿದ್ದಾಗಲಿ ನಿಮ್ಮ ಪಾಲಿಗೆ ಅನುಕರಣೀಯವಲ್ಲ.

6. ಸತ್ಯನಿಷೇಧಿಗಳಿಗೆ ಸತ್ಯವಿಶ್ವಾಸಿಗಳು ಅನೇಕ ರೂಪದಲ್ಲಿ 'ಫಿತ್ನಾ' ಅಥವಾ ಪರೀಕ್ಷಾಸಾಧನವಾಗಿ ಮಾರ್ಪಡಬಹುದು. ಉದಾಹರಣೆಗೆ ಸತ್ಯನಿಷೇಧಿಗಳು ಅವರ ಮೇಲೆ ಪ್ರಬಲರಾಗಿ ಬಿಡಬಹುದು. ಅದನ್ನು ಅವರು ನಾವು ಸತ್ಯದಲ್ಲಿದ್ದೇವೆ ಮತ್ತು ಸತ್ಯವಿಶ್ವಾಸಿಗಳು

ತಪ್ಪುಗಳನ್ನು ಕ್ಷಮಿಸು, ನಿಸ್ಸಂದೇಹವಾಗಿಯೂ ನೀನೇ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತೀ."

الْحَكِيمُ ⑤

6. ನಿಮಗೆ ಮತ್ತು ಅಲ್ಲಾಹನಲ್ಲೂ ಪುನರುತ್ಥಾನ ದಿನದಲ್ಲೂ ನಿರೀಕ್ಷೆ ಇರಿಸಿರುವ ಪ್ರತಿಯೊಬ್ಬನಿಗೆ, ಅವರ ಚರ್ಯೆಯಲ್ಲಿ ಉತ್ತಮ ಆದರ್ಶವಿದೆ. ಯಾರಾದರೂ ಇದರಿಂದ ವಿಮುಖರಾದರೆ, ಅಲ್ಲಾಹನು ನಿರಪೇಕ್ಷನೂ ಸ್ವಯಂ ಪ್ರಶಂಸಾರ್ಹನೂ ಆಗಿರುತ್ತಾನೆ.

لَقَدْ كَانَ لَكُمْ فِيهِمْ أُسْوَةٌ حَسَنَةٌ لِّمَن كَانَ يَرْجُوا اللَّهَ وَالْيَوْمَ الْآخِرَ ۚ وَمَن يَتَوَلَّ فَإِنَّ اللَّهَ هُوَ الْغَنِيُّ الْحَمِيدُ ⑥

7. ಇಂದು ನೀವು ಯಾರೊಂದಿಗೆ ವೈರ ಬೆಳೆಸಿಕೊಂಡಿರುವಿರೋ ಅವರ ಮತ್ತು ನಿಮ್ಮ ನಡುವೆ ಅಲ್ಲಾಹನು ಎಂದಾದರೂ ಸ್ನೇಹ ವನ್ನು ಉಂಟುಮಾಡಿ ಬಿಡಲೂಬಹುದು.[7] ಅಲ್ಲಾಹನು ಬಹಳ ಸಮರ್ಥನಾಗಿದ್ದಾನೆ ಮತ್ತು ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

عَسَى اللَّهُ أَن يَجْعَلَ بَيْنَكُمْ وَبَيْنَ الَّذِينَ عَادَيْتُم مِّنْهُم مَّوَدَّةً ۚ وَاللَّهُ قَدِيرٌ ۚ وَاللَّهُ غَفُورٌ رَّحِيمٌ ⑦

8. ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರದವ ರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯ ಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ.[8]

لَّا يَنْهَاكُمُ اللَّهُ عَنِ الَّذِينَ لَمْ يُقَاتِلُوكُمْ فِي الدِّينِ وَلَمْ يُخْرِجُوكُم مِّن دِيَارِكُمْ أَن تَبَرُّوهُمْ وَتُقْسِطُوا إِلَيْهِمْ ۚ إِنَّ اللَّهَ يُحِبُّ الْمُقْسِطِينَ ⑧

9. ನೀವು ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ

إِنَّمَا يَنْهَاكُمُ اللَّهُ عَنِ الَّذِينَ قَاتَلُوكُمْ فِي الدِّينِ

ಸಂಪೂರ್ಣವಾಗಿ ಮಿಥ್ಯದಲ್ಲಿದ್ದಾರೆಂಬುದಕ್ಕೆ ಆಧಾರವೆಂದು ಪರಿಗಣಿಸಬಹುದು. ಸತ್ಯವಿಶ್ವಾಸಿಗಳ ಮೇಲೆ ಸತ್ಯನಿಷೇಧಿಗಳ ಶೋಷಣೆ ಮತ್ತು ದಬ್ಬಾಳಿಕೆ ಎಲ್ಲೆ ಮೀರಬಹುದು. ಕೊನೆಗೆ ಅವರು ಅವರಿಂದ ಒತ್ತಡಕ್ಕೊಳಗಾಗಿ ತಮ್ಮ ಧರ್ಮ ಮತ್ತು ಚಾರಿತ್ರ್ಯವನ್ನು ಮಾರಿಕೊಳ್ಳಬಹುದು. ಅಥವಾ ಸತ್ಯಧರ್ಮದ ಪ್ರಾತಿನಿಧ್ಯದ ಉನ್ನತ ಪದವಿಗೆ ತಲಪಿದ ನಂತರವೂ ಆ ಸ್ಥಾನಕ್ಕೆ ಅನುಯೋಜ್ಯವಾದ ನೈತಿಕ ವೈಶಿಷ್ಟ್ಯಗಳಿಂದ ಮುಕ್ತವಾಗಿರಬಹುದು. ಅಜ್ಞಾನಪೀಡಿತ ಸಮಾಜದಲ್ಲಿ ಸಾಮಾನ್ಯವಾಗಿ ಹರಡಿರುವಂತಹ ದೋಷಗಳನ್ನೇ ಲೋಕ ಅವರಲ್ಲೂ ಕಾಣಬಹುದು. ಆಗ ನಮ್ಮ ಸತ್ಯನಿಷೇಧಕ್ಕಿಂತ ಮಿಗಿಲಾದ ಅದಾವ ವಿಶೇಷತೆ ಈ ಧರ್ಮಕ್ಕಿದೆ ಎಂದು ಕೇಳುವ ಅವಕಾಶ ಸತ್ಯನಿಷೇಧಿಗಳಿಗೆ ದೊರೆಯಬಹುದು.

7. ಮೇಲಿನ ಸೂಕ್ತದಲ್ಲಿ ಮುಸ್ಲಿಮರಿಗೆ ಸತ್ಯನಿಷೇಧದಲ್ಲಿರುವ ತಮ್ಮ ಸಂಬಂಧಿಕರೊಂದಿಗೆ ಸಂಪರ್ಕ ಕಡಿದುಕೊಳ್ಳಲು ಹೇಳಿದ ನಂತರ, ನಿಮ್ಮ ಈ ಸಂಬಂಧಿಕರೇ ಮುಸ್ಲಿಮರಾಗಿ ಬಿಡಬಹುದು ಮತ್ತು ಇಂದಿರುವ ವೈಷಮ್ಯ ನಾಳೆ ಮತ್ತೆ ಪ್ರೀತಿಯಲ್ಲಿ ಪರಿವರ್ತನೆಗೊಳ್ಳಬಹುದೆಂಬ ವಿಶ್ವಾಸವನ್ನು ಮೂಡಿಸಲಾಗುತ್ತಿದೆ.

8. ಅರ್ಥಾತ್- ನಿಮ್ಮೊಂದಿಗೆ ಯಾರು ದ್ವೇಷವನ್ನು ಹೊಂದಿಲ್ಲವೋ ಅವರ ಬಗ್ಗೆ ನೀವೂ ದ್ವೇಷದಿಂದ ವರ್ತಿಸದಿರುವುದು ನ್ಯಾಯದ ಬೇಡಿಕೆಯಾಗಿದೆ. ಶತ್ರುಗಳನ್ನು ಮತ್ತು ಶತ್ರುಗಳಲ್ಲದವರನ್ನು ಒಂದೇ ಸ್ಥಾನದಲ್ಲಿರಿಸುವುದು ಮತ್ತು ಇಬ್ಬರೊಂದಿಗೂ ಒಂದೇ ರೀತಿಯ ಧೋರಣೆ ತಳೆಯುವುದು ನ್ಯಾಯವಲ್ಲ. ವಿಶ್ವಾಸವಿರಿಸಿದ್ದಕ್ಕಾಗಿ ನಿಮ್ಮ ಮೇಲೆ ಅಕ್ರಮವೆಸಗಿದ, ನಿಮ್ಮನ್ನು ದೇಶಬಿಟ್ಟು ಹೊರಡಲು ನಿರ್ಬಂಧಿಸಿದ ಮತ್ತು ಅನಂತರವೂ ನಿಮ್ಮ ಬೆಂಬಿಡದಂತಹ ವ್ಯಕ್ತಿಗಳೊಂದಿಗೆ ಕಠೋರವಾಗಿ ವರ್ತಿಸಲು ನಿಮಗೆ ಹಕ್ಕಿದೆ. ಆದರೆ ಅಕ್ರಮಗಳಲ್ಲಿ ಯಾವುದೇ ರೀತಿ ಪಾಲ್ಗೊಳ್ಳದಂತಹ ವ್ಯಕ್ತಿಗಳೊಂದಿಗೆ ಉತ್ತಮ ವರ್ತನೆ ಕೈಗೊಳ್ಳುವುದು ಮತ್ತು ನೆಂಟಸ್ತಿಕೆಯ ಸಂಬಂಧದ ಆಧಾರದಲ್ಲಿ ಅವರೊಂದಿಗೆ ನಿಮಗಿರುವ ಹಕ್ಕುಗಳನ್ನು ತೀರಿಸುವಲ್ಲಿ ಯಾವುದೇ ಚ್ಯುತಿ ಮಾಡದಿರುವುದು ನ್ಯಾಯದ ಬೇಡಿಕೆಯಾಗಿದೆ.

ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರುವ ಮತ್ತು ನಿಮ್ಮನ್ನು ಹೊರ ಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸುವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವರೇ ಅಕ್ರಮಿಗಳು.

وأخرجوكم من دياركم وظاهروا على إخراجكم أن تولوهم ومن يتولهم فأولئك هم الظالمون ⑨

10. ಸತ್ಯವಿಶ್ವಾಸಿಗಳೇ, ಸತ್ಯವಿಶ್ವಾಸಿನಿಯರು ವಲಸೆ ಮಾಡಿ ನಿಮ್ಮ ಬಳಿಗೆ ಬಂದರೆ, (ಅವರು ಸತ್ಯವಿಶ್ವಾಸಿನಿಯರೆಂಬ ಕುರಿತು) ಪರೀಕ್ಷಿಸಿಕೊಳ್ಳಿರಿ. ಅವರ ಸತ್ಯವಿಶ್ವಾಸದ ನಿಜಸ್ಥಿತಿಯನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು. ಅವರು ಸತ್ಯವಿಶ್ವಾಸಿನಿಯರೆಂದು ನಿಮಗೆ ತಿಳಿದು ಬಂದಾಗ, ಅವರನ್ನು ಸತ್ಯನಿಷೇಧಿಗಳ ಕಡೆಗೆ ಮರಳಿಸಬೇಡಿರಿ.[9] ಅವರು ಸತ್ಯನಿಷೇಧಿಗಳ ಪಾಲಿಗೆ ಧರ್ಮಬದ್ಧರಲ್ಲ ಮತ್ತು ಸತ್ಯನಿಷೇಧಿಗಳು ಅವರ ಪಾಲಿಗೂ ಧರ್ಮಬದ್ಧರಲ್ಲ. ಅವರ ಸತ್ಯನಿಷೇಧಿ ಗಂಡಂದಿರು ಅವರಿಗೆ ಕೊಟ್ಟಿದ್ದ 'ವಿವಾಹಧನ'ವನ್ನು ಅವರಿಗೆ ಮರಳಿಸಿರಿ. ನೀವು ಅವರ 'ವಿವಾಹಧನ'ವನ್ನು ಪಾವತಿ ಮಾಡಿದ ಮೇಲೆ ನೀವು ಅವರೊಂದಿಗೆ ನಿಕಾಹ್ ಮಾಡಿಕೊಳ್ಳುವುದರಲ್ಲೇನೂ ದೋಷವಿಲ್ಲ[10] ಮತ್ತು ನೀವು ಕೂಡಾ ಸತ್ಯನಿಷೇಧಿ ಸ್ತ್ರೀಯರನ್ನು ನಿಮ್ಮ ವಿವಾಹ ಬಂಧನದಲ್ಲಿ ತಡೆದಿರಿಸಿಕೊಳ್ಳಬೇಡಿರಿ. ನೀವು ನಿಮ್ಮ ಸತ್ಯನಿಷೇಧಿ ಪತ್ನಿಯರಿಗೆ ಕೊಟ್ಟಿದ್ದ ವಿವಾಹಧನವನ್ನು ಮರಳಿ ಪಡೆದುಕೊಳ್ಳಿರಿ ಮತ್ತು ಸತ್ಯನಿಷೇಧಿಗಳು ತಮ್ಮ ಮುಸ್ಲಿಮ್ ಪತ್ನಿಯರಿಗೆ ಕೊಟ್ಟಿದ್ದ 'ವಿವಾಹಧನ'ವನ್ನು ಮರಳಿ ಪಡೆದುಕೊಳ್ಳಲಿ. ಇದು ಅಲ್ಲಾಹನ ಆದೇಶವಾಗಿದೆ. ಅವನು ನಿಮ್ಮ ನಡುವೆ ತೀರ್ಮಾನ ಮಾಡುತ್ತಾನೆ. ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

يا أيها الذين آمنوا إذا جاءكم المؤمنات مهاجرات فامتحنوهن الله أعلم بإيمانهن فإن علمتموهن مؤمنات فلا ترجعوهن إلى الكفار لا هن حل لهم ولا هم يحلون لهن وآتوهم ما أنفقوا ولا جناح عليكم أن تنكحوهن إذا آتيتموهن أجورهن ولا تمسكوا بعصم الكوافر واسألوا ما أنفقتم وليسألوا ما أنفقوا ذلكم حكم الله يحكم بينكم والله عليم حكيم ⑩

9. ಹುದೈಬಿಯಾ ಸಂಧಿಯ ಬಳಿಕ ಮೊದಮೊದಲು ಮುಸ್ಲಿಮ್ ಪುರುಷರು ಮಕ್ಕಾದಿಂದ ಓಡೋಡಿ ಮದೀನಾಕ್ಕೆ ಬರುತ್ತಿದ್ದರು ಮತ್ತು ಒಪ್ಪಂದದ ಶರತ್ತುಗನುಗುಣವಾಗಿ ಅವರನ್ನು ಮರಳಿಸಲಾಗುತ್ತಿತ್ತು. ಅನಂತರ ಮುಸ್ಲಿಮ್ ಸ್ತ್ರೀಯರೂ ಬರಲಾರಂಭಿಸಿದರು. ಆಗ ಸತ್ಯನಿಷೇಧಿಗಳು ಒಪ್ಪಂದದ ಆಧಾರದಲ್ಲಿ ಅವರನ್ನೂ ಮರಳಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು. ಹುದೈಬಿಯಾ ಸಂಧಿಯ ಶರತ್ತುಗಳು ಮಹಿಳೆಯರಿಗೂ ಅನ್ವಯಿಸುತ್ತದೆಯೇ ಎಂಬ ಪ್ರಶ್ನೆ ಆಗ ಉದ್ಭವಿಸಿತು. ಪ್ರಸ್ತುತ ಪ್ರಶ್ನೆಗೆ ಅಲ್ಲಾಹನು ಈ ಸೂಕ್ತದಲ್ಲಿ ಉತ್ತರ ನೀಡಿದ್ದಾನೆ. ಅವರು ಮುಸ್ಲಿಮರಾಗಿದ್ದು, ಸತ್ಯವಿಶ್ವಾಸಕ್ಕಾಗಿಯೇ ಅವರು ವಲಸೆ ಕೈಗೊಂಡಿದ್ದಾರೆ. ಬೇರಾವುದೇ ವಸ್ತು ಅವರನ್ನು ಎಳೆತಂದಿಲ್ಲವೆಂದು ನಿಮಗೆ ಖಾತ್ರಿಯಾದರೆ ಅವರನ್ನು ಮರಳಿಸಬೇಕಾಗಿಲ್ಲ ಎಂದು ಹೇಳಲಾಗಿದೆ. ಒಪ್ಪಂದದ ಶರತ್ತುಗಳಲ್ಲಿ 'ರಜುಲುನ್'(ಪುರುಷರು) ಎಂಬ ಪದ ಪ್ರಯೋಗವಾಗಿತ್ತು. ಇದರ ಆಧಾರದಲ್ಲೇ ಈ ಆಜ್ಞೆ ನೀಡಲಾಗಿದೆ ಎಂದು ಬುಖಾರಿಯವರ ಉಲ್ಲೇಖದಿಂದ ವ್ಯಕ್ತವಾಗುತ್ತದೆ.

10. ಅರ್ಥಾತ್- ಅವರ ಸತ್ಯನಿಷೇಧಿ ಪತಿಯಂದಿರಿಗೆ ಮರಳಿಸಲಾಗುವ 'ಮಹರ್' (ವಧುದಕ್ಷಿಣೆ) ಸ್ವತಃ ಆ ಸ್ತ್ರೀಯರ 'ಮಹರ್' ಎನಿಸಿಕೊಳ್ಳಲಾರದು. ಸದ್ಯ ಯಾವ ಮುಸ್ಲಿಮನಾದರೂ ಆ ಪೈಕಿ ಯಾವುದೇ ಸ್ತ್ರೀಯೊಂದಿಗೆ ನಿಕಾಹ್ ಮಾಡಿಕೊಳ್ಳಬಯಸಿದರೆ ಅವರ 'ಮಹರ್' ಪಾವತಿಸಿ ಅವರನ್ನು ವಿವಾಹ ಮಾಡಿಕೊಳ್ಳಬಹುದು.

11. ಇನ್ನು ನಿಮ್ಮ ಸತ್ಯನಿಷೇಧಿ ಪತ್ನಿಯರ ವಿವಾಹ ಧನದಿಂದ ಏನಾದರೂ ಸತ್ಯನಿಷೇಧಿಗಳಿಂದ ನಿಮಗೆ ಮರಳಿ ಸಿಗದಿದ್ದರೆ, ಅನಂತರ ನಿಮ್ಮ ಸರದಿ ಬಂದಾಗ ಯಾರ ಪತ್ನಿಯರು ಅತ್ತ ಉಳಿದು ಬಿಟ್ಟಿರುವರೋ ಅವರಿಗೆ ಅವರು ಕೊಟ್ಟಿರುವ ವಿವಾಹ ಧನಕ್ಕೆ ಸಮನಾದಷ್ಟು ಮೊತ್ತವನ್ನು ಕೊಟ್ಟುಬಿಡಿರಿ ಮತ್ತು ನೀವು ವಿಶ್ವಾಸವಿರಿಸಿರುವ ಅಲ್ಲಾಹನನ್ನು ಭಯ ಪಡುತ್ತಲಿರಿ.

وَإِن فَاتَكُمْ شَيْءٌ مِّنْ أَزْوَاجِكُمْ إِلَى الْكُفَّارِ فَعَاقَبْتُمْ فَآتُوا الَّذِينَ ذَهَبَتْ أَزْوَاجُهُم مِّثْلَ مَا أَنفَقُوا ۚ وَاتَّقُوا اللَّهَ الَّذِي أَنتُم بِهِ مُؤْمِنُونَ ﴿١١﴾

12. ಸಂದೇಶವಾಹಕರೇ, ಸತ್ಯವಿಶ್ವಾಸಿನಿಯರು, ನಿಷ್ಠೆಯ ಕರಾರು ಮಾಡಲು ನಿಮ್ಮ ಬಳಿಗೆ ಬಂದು[11] ತಾವು ಅಲ್ಲಾಹನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡಲಾರೆವು, ಕಳವು ಮಾಡಲಾರೆವು, ವ್ಯಭಿಚಾರವೆಸಗಲಾರೆವು, ತಮ್ಮ ಮಕ್ಕಳನ್ನು ವಧಿಸಲಾರೆವು, ತಮ್ಮ ಕೈಕಾಲುಗಳ ಮುಂದೆ ಯಾವುದೇ ಸುಳ್ಳಾರೋಪವನ್ನು ಸೃಷ್ಟಿಸಿ ತರಲಾರೆವು[12] ಮತ್ತು ಯಾವುದೇ ಸತ್ಕಾರ್ಯದ ವಿಷಯದಲ್ಲಿ ನಿಮ್ಮ ಆಜ್ಞೋಲ್ಲಂಘನೆ ಮಾಡಲಾರೆವು[13] ಎಂದು ಪ್ರತಿಜ್ಞೆ ಮಾಡಿದಾಗ, ಅವರಿಂದ ಕರಾರನ್ನು ಸ್ವೀಕರಿಸಿಕೊಳ್ಳಿರಿ ಮತ್ತು ಅವರಿಗಾಗಿ ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡಿರಿ.

يَا أَيُّهَا النَّبِيُّ إِذَا جَاءَكَ الْمُؤْمِنَاتُ يُبَايِعْنَكَ عَلَىٰ أَن لَّا يُشْرِكْنَ بِاللَّهِ شَيْئًا وَلَا يَسْرِقْنَ وَلَا يَزْنِينَ وَلَا يَقْتُلْنَ أَوْلَادَهُنَّ وَلَا يَأْتِينَ بِبُهْتَانٍ يَفْتَرِينَهُ بَيْنَ أَيْدِيهِنَّ وَأَرْجُلِهِنَّ وَلَا يَعْصِينَكَ فِي مَعْرُوفٍ فَبَايِعْهُنَّ وَاسْتَغْفِرْ لَهُنَّ

11. ಈ ಸೂಕ್ತಗಳು ಮಕ್ಕಾ ವಿಜಯಕ್ಕೆ ಸ್ವಲ್ಪ ಮೊದಲು ಅವತೀರ್ಣಗೊಂಡಿತ್ತು. ಅನಂತರ ಮಕ್ಕಾ ವಿಜಯವಾದಾಗ ಕುರೈಶರು ತಂಡೋಪತಂಡವಾಗಿ ಪ್ರವಾದಿವರ್ಯರೊಂದಿಗೆ(ಸ) 'ಬೈಅತ್' ಮಾಡಲು ಹಾಜರಾಗತೊಡಗಿದರು. ಪುರುಷರಿಂದ ಅವರು 'ಸಫಾ' ಬೆಟ್ಟದಲ್ಲಿ ಸ್ವತಃ ಬೈಅತ್ ಪಡೆದರು. ಮಹಿಳೆಯರಿಂದ ಬೈಅತ್ ಮತ್ತು ಈ ಸೂಕ್ತದಲ್ಲಿ ಉಲ್ಲೇಖಿಸಲಾಗಿರುವ ವಿಷಯಗಳ ಬಗ್ಗೆ ಕರಾರು ಪಡೆಯಲು ಅವರು ಹ. ಉಮರ್‌ರನ್ನು(ರ) ತಮ್ಮ ಪರವಾಗಿ ನೇಮಿಸಿದರು. ತರುವಾಯ ಮದೀನಾಕ್ಕೆ ಮರಳಿದ ನಂತರ ಅವರು ಮನೆಯೊಂದರಲ್ಲಿ ಅನ್ಸಾರ್‌ಗಳ ಪೈಕಿಯ ಮಹಿಳೆಯರಿಗೆ ಒಟ್ಟು ಸೇರುವಂತೆ ಆದೇಶಿಸಿ ಹ. ಉಮರ್‌ರನ್ನು(ರ) ಅವರೊಂದಿಗೆ 'ಬೈಅತ್' ಪಡೆಯಲು ಕಳುಹಿಸಿದರು.

12. ಅರ್ಥಾತ್- ಎರಡು ವಿಧದ ಆರೋಪಗಳು. ಮೊದಲನೆಯದಾಗಿ ಮಹಿಳೆಯೊಬ್ಬಳು ಇತರ ಮಹಿಳೆಯರ ಬಗ್ಗೆ ಪುರುಷರೊಂದಿಗೆ ಸರಸ ಸಂಬಂಧ ಹೊಂದಿರುವ ಬಗ್ಗೆ ಆರೋಪಿಸುವುದು ಮತ್ತು ಆ ಬಗ್ಗೆ ಅಲ್ಲಸಲ್ಲದ ಕಥೆ ಹೆಣೆಯುವುದು. ಎರಡನೆಯದಾಗಿ ಮಹಿಳೆಯೊಬ್ಬಳು ಇತರರಿಂದ ಹುಟ್ಟಿದ ಮಗುವನ್ನು ಹೆತ್ತು, ಇದು ನಿನ್ನ ಮಗುವೇ ಆಗಿದೆ ಎಂದು ಪತಿಯಲ್ಲಿ ವಿಶ್ವಾಸ ಮೂಡಿಸುವುದು.

13. ಈ ಸಂಕ್ಷಿಪ್ತ ವಾಕ್ಯದಲ್ಲಿ ಎರಡು ಪ್ರಮುಖ ಕಾನೂನಿನ ಅಂಶವನ್ನು ವಿವರಿಸಲಾಗಿದೆ. ಮೊದಲನೆಯದಾಗಿ ಪ್ರವಾದಿವರ್ಯರ(ಸ) ಅನುಸರಣೆಗೂ ಒಳಿತಿನಲ್ಲಿ ಅನುಸರಿಸುವ ಶರತ್ತು ವಿಧಿಸಲಾಗಿದೆ. ನಿಜವಾಗಿ ಪ್ರವಾದಿವರ್ಯರು(ಸ) ಎಂದಾದರೂ ಕೆಡುಕನ್ನು ಆದೇಶಿಸಿಯಾರೆಂದು ಕಿಂಚಿತ್ ಸಂಶಯ ಪಡಲಿಕ್ಕೂ ಆಸ್ಪದವಿರಲಿಲ್ಲ. ಅದರ ಹೊರತಾಗಿಯೂ ಇಂತಹ ಆದೇಶ ಕೊಡಲಾಗಿದೆ. ಇದರಿಂದ ಲೋಕದಲ್ಲಿ ದೇವನ ನಿಯಮಗಳನ್ನು ಮೀರಿ ಯಾವುದೇ ಸೃಷ್ಟಿಯನ್ನು ಅನುಸರಿಸಲಾಗುವುದಿಲ್ಲ ಎಂಬ ವಿಚಾರ ಸ್ಪಷ್ಟವಾಗುತ್ತದೆ. ಏಕೆಂದರೆ ಸ್ವತಃ ಪ್ರವಾದಿವರ್ಯರ(ಸ) ಅನುಸರಣೆಗೆ ಒಳಿತಿನಲ್ಲಿ ಅವರನ್ನು ಅನುಸರಿಸುವ ಶರತ್ತು ಒಡ್ಡಲಾಗಿದೆ. ಹಾಗಿರುವಾಗ ಇನ್ನಿತರರಿಗೆ ನಿಶ್ಶರ್ಥ ಅನುಸರಣೆ ಅಥವಾ ದೇವನಿಯಮಕ್ಕೆ ವಿರುದ್ಧವಾದ ಯಾವುದೇ ವಿಧಿ ನಿಯಮ ಇಲ್ಲವೇ ಸಂಪ್ರದಾಯದ ಪಾಲನೆಯ ಹಕ್ಕು ಅನ್ವಯವಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಎರಡನೆಯದಾಗಿ ಇಲ್ಲಿ ಸಾಂವಿಧಾನಿಕವಾಗಿ ಬಹಳ ಮಹತ್ವ ಹೊಂದಿರುವ ವಿಷಯವನ್ನು ವಿವರಿಸಲಾಗಿದೆ. ಅದೇನೆಂದರೆ ಈ ಸೂಕ್ತದಲ್ಲಿ ಐದು ನಕಾರಾತ್ಮಕ ಆದೇಶಗಳನ್ನು ನೀಡಿದ ನಂತರ ಒಂದು ಸಕಾರಾತ್ಮಕ ಆದೇಶ ಕೊಡಲಾಗಿದೆ. ಎಲ್ಲಾ ರೀತಿಯ ಒಳಿತುಗಳಲ್ಲಿ ಪ್ರವಾದಿವರ್ಯರನ್ನು(ಸ) ಅನುಸರಿಸಬೇಕೆಂಬುದೇ ಈ ಆದೇಶ. ಕೆಡುಕುಗಳಿಗೆ ಸಂಬಂಧಿಸಿದಂತೆ ಅಜ್ಞಾನ ಕಾಲದ ಸ್ತ್ರೀಯರು ನಿರತರಾಗಿದ್ದ ದೊಡ್ಡ ದೊಡ್ಡ ಕೆಡುಕುಗಳನ್ನು ಪ್ರಸ್ತಾಪಿಸಿ ಅದರಿಂದ ದೂರವಿರುವ ಕರಾರು ಪಡೆಯಲಾಗಿದೆ. ಆದರೆ ಒಳಿತುಗಳಿಗೆ ಸಂಬಂಧಿಸಿದಂತೆ ಅದರ ಯಾವುದೇ ಪಟ್ಟಿಯನ್ನು ಮುಂದಿಟ್ಟು

اللّٰهَ ۭ اِنَّ اللّٰهَ غَفُوْرٌ رَّحِيْمٌ ﴿١٢﴾

ಖಂಡಿತವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾ ನಿಧಿಯೂ ಆಗಿರುತ್ತಾನೆ.

يٰٓاَيُّهَا الَّذِيْنَ اٰمَنُوْا لَا تَتَوَلَّوْا قَوْمًا غَضِبَ اللّٰهُ عَلَيْهِمْ قَدْ يَىِٕسُوْا مِنَ الْاٰخِرَةِ كَمَا يَىِٕسَ الْكُفَّارُ مِنْ اَصْحٰبِ الْقُبُوْرِ ﴿١٣﴾

13. ಸತ್ಯವಿಶ್ವಾಸಿಗಳೇ, ಅಲ್ಲಾಹನ ಕ್ರೋಧಕ್ಕೊಳಗಾದವರನ್ನು ಮಿತ್ರರಾಗಿ ಮಾಡಿಕೊಳ್ಳಬೇಡಿರಿ. ಸಮಾಧಿಗಳೊಳಗೆ ಬಿದ್ದಿರುವ ಸತ್ಯ ನಿಷೇಧಿಗಳು ಪರಲೋಕದ ಬಗ್ಗೆ ನಿರಾಶರಾಗಿ ಬಿಟ್ಟಂತೆಯೇ ಇವರು ನಿರಾಶರಾಗಿ ಬಿಟ್ಟಿರುತ್ತಾರೆ.

---

ಇಂತಿಂತಹ ಕೆಲಸಗಳನ್ನು ಮಾಡಬೇಕೆಂಬ ಕರಾರು ಪಡೆಯಲಾಗಿಲ್ಲ. ಬದಲಾಗಿ ಪ್ರವಾದಿವರ್ಯರು(ಸ) ಯಾವುದೇ ಸತ್ಕಾರ್ಯದ ಬಗ್ಗೆ ಆದೇಶಿಸಿದರೂ ಅದನ್ನು ಅನುಸರಿಸಬೇಕು ಎಂದು ಹೇಳಲಾಗಿದೆ.







# 61. ಅಸ್ಸಫ್ಫ್

(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಅಲ್ಲಾಹನನ್ನು ಜಪಿಸಿದೆ ಮತ್ತು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

سَبَّحَ لِلّٰهِ مَا فِي السَّمٰوٰتِ وَمَا فِي الْاَرْضِ ۚ وَهُوَ الْعَزِيْزُ الْحَكِيْمُ ①

2. ಸತ್ಯವಿಶ್ವಾಸಿಗಳೇ, ನೀವು ಮಾಡದ್ದನ್ನು ಆಡುತ್ತೀರೇಕೆ?

يٰۤاَيُّهَا الَّذِيْنَ اٰمَنُوْا لِمَ تَقُوْلُوْنَ مَا لَا تَفْعَلُوْنَ ②

3. ಮಾಡದ್ದನ್ನು ಆಡುವುದು ಅಲ್ಲಾಹನ ಬಳಿ ಅತ್ಯಂತ ಅಪ್ರಿಯ ಕೃತ್ಯವಾಗಿದೆ.

كَبُرَ مَقْتًا عِنْدَ اللّٰهِ اَنْ تَقُوْلُوْا مَا لَا تَفْعَلُوْنَ ③

4. ಅಲ್ಲಾಹನಿಗಂತು, ಅವನ ಮಾರ್ಗದಲ್ಲಿ ಸೀಸದ ಎರಕ ಹೊಯ್ದ ಉಕ್ಕಿನ ಗೋಡೆಯೋ ಎಂಬಂತೆ ಪಂಕ್ತಿಬದ್ಧರಾಗಿ ಹೋರಾಡುವವರೇ ಪ್ರಿಯರು.[1]

اِنَّ اللّٰهَ يُحِبُّ الَّذِيْنَ يُقَاتِلُوْنَ فِيْ سَبِيْلِهٖ صَفًّا كَاَنَّهُمْ بُنْيَانٌ مَّرْصُوْصٌ ④

5. ಮೂಸಾ, ತಮ್ಮ ಜನಾಂಗದೊಡನೆ, "ನನ್ನ ಜನಾಂಗದವರೇ, ನಾನು ನಿಮ್ಮ ಕಡೆಗೆ ಕಳುಹಿಸಲ್ಪಟ್ಟ ದೇವಸಂದೇಶವಾಹಕನೆಂಬುದು ನಿಮಗೆ ಚೆನ್ನಾಗಿ ತಿಳಿದಿದ್ದರೂ ನೀವು ನನ್ನನ್ನೇಕೆ ಹಿಂಸಿಸುತ್ತೀರಿ?"[2] ಎಂದು ಹೇಳಿದ್ದನ್ನು ಸ್ಮರಿಸಿರಿ. ತರುವಾಯ

وَاِذْ قَالَ مُوْسٰى لِقَوْمِهٖ يٰقَوْمِ لِمَ تُؤْذُوْنَنِيْ وَقَدْ تَّعْلَمُوْنَ اَنِّيْ رَسُوْلُ اللّٰهِ اِلَيْكُمْ ۗ فَلَمَّا زَاغُوْۤا اَزَاغَ اللّٰهُ

---

1. ಮೊಟ್ಟ ಮೊದಲನೆಯದಾಗಿ ಅಲ್ಲಾಹನ ಮಾರ್ಗದಲ್ಲಿ ಪ್ರಾಣವನ್ನು ಪಣಕಿಟ್ಟು ಹೋರಾಡಲು ಮತ್ತು ಅಪಾಯಗಳನ್ನು ಸಹಿಸಲು ಸಿದ್ಧರಿರುವ ಸತ್ಯವಿಶ್ವಾಸಿಗಳು ಮಾತ್ರ ಅಲ್ಲಾಹನ ಸಂಪ್ರೀತಿಯನ್ನು ಗಳಿಸುತ್ತಾರೆಂದು ಇದರಿಂದ ತಿಳಿದು ಬರುತ್ತದೆ. ಎರಡನೆಯದಾಗಿ ಅಲ್ಲಾಹನಿಗೆ ಪ್ರೀತಿ ಪಾತ್ರವಾದ ಸೇನೆಯಲ್ಲಿ ಮೂರು ಗುಣಗಳಿರಬೇಕು. ಮೊದಲನೆಯದಾಗಿ ಅದು ಸರಿಯಾಗಿ ವಿವೇಚನೆ ನಡೆಸಿ ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕು. 'ಫೀಸಬೀಲಿಲ್ಲಾಹ್' (ಅಲ್ಲಾಹನ ಮಾರ್ಗದಲ್ಲಿ) ಎಂದು ಪರಿಗಣಿಸಲ್ಪಡದಂತಹ ಮಾರ್ಗದಲ್ಲಿ ಹೋರಾಡಬಾರದು. ಎರಡನೆಯದಾಗಿ ಅಶಿಸ್ತು ಮತ್ತು ವಿಚ್ಛಿದ್ರತೆಯಿಲ್ಲದೆ ಸುಭದ್ರವಾದ ಸಂಘಟನೆಯೊಂದಿಗೆ ಪಂಕ್ತಿಬದ್ಧರಾಗಿ ಹೋರಾಡಬೇಕು. ಮೂರನೆಯದಾಗಿ ಶತ್ರುಗಳ ಎದುರಿಗೆ ಅವರು 'ಉಕ್ಕಿನಿಂದ ಎರಕ ಹೊಯ್ದ ಗೋಡೆ'ಗಳಂತಾಗಿ ಬಿಡಬೇಕು.
2. ಬನೀಇಸ್ರಾಈಲರು ತಮ್ಮ ಪ್ರವಾದಿಯೊಂದಿಗೆ ತೋರಿದಂತಹ ಧೋರಣೆಯನ್ನು ಮುಸ್ಲಿಮರು ಅನುಸರಿಸಬಾರದೆಂದು ಈ ಮಾತು ಹೇಳಲಾಗಿದೆ. ಅನ್ಯಥಾ ಅವರು ಬನೀಇಸ್ರಾಈಲರು ಎದುರಿಸಿದಂತಹ ಪರಿಣಾಮವನ್ನು ಎದುರಿಸದೆ ಇರಲಾರರೆಂಬ ಎಚ್ಚರಿಕೆಯನ್ನೂ ನೀಡಲಾಗಿದೆ.

ಅವರು ವಕ್ರತೆ ಕೈಗೊಂಡಾಗ ಅಲ್ಲಾಹನೂ ಅವರ ಹೃದಯಗಳನ್ನು ವಕ್ರಗೊಳಿಸಿ ಬಿಟ್ಟನು. ಅಲ್ಲಾಹನು ಕರ್ಮಭ್ರಷ್ಟರಿಗೆ ಮಾರ್ಗ ದರ್ಶನ ಮಾಡುವುದಿಲ್ಲ.[3]

قُلُوْبَهُمْ ۚ وَاللّٰهُ لَا يَهْدِي الْقَوْمَ الْفٰسِقِيْنَ ۝٥

6. ಮತ್ತು ಮರ್ಯಮರ ಪುತ್ರ ಈಸಾ ಹೇಳಿದ ಮಾತನ್ನು ಸ್ಮರಿಸಿರಿ, "ಬನೀಇಸ್ರಾಈಲರೇ, ನಾನು ನಿಮ್ಮ ಕಡೆಗೆ ಅಲ್ಲಾಹನಿಂದ ಕಳುಹಿಸಲ್ಪಟ್ಟ ಸಂದೇಶವಾಹಕನಾಗಿರುತ್ತೇನೆ.[4] ನಾನು, ನನಗಿಂತ ಮೊದಲು ಬಂದಿರುವ ತೌರಾತನ್ನು ದೃಢೀಕರಿಸುವವನು ಮತ್ತು ನನ್ನ ಬಳಿಕ ಬರಲಿರುವ ಅಹ್ಮದ್[5] ಎಂಬ ಹೆಸರಿನ ರಸೂಲರ ಕುರಿತು ಸುವಾರ್ತೆ ನೀಡುವವನಾಗಿದ್ದೇನೆ." ಆದರೆ ಅವರು, ಅವರ ಬಳಿಗೆ ಸುಸ್ಪಷ್ಟ ನಿದರ್ಶನಗಳೊಂದಿಗೆ ಬಂದಾಗ ಇದು ಸ್ಪಷ್ಟವಾದ ಮೋಸಗಾರಿಕೆ ಎಂದು ಅವರು ಹೇಳಿ ಬಿಟ್ಟರು.[6]

وَاِذْ قَالَ عِيْسَى ابْنُ مَرْيَمَ يٰبَنِيْٓ اِسْرَآءِيْلَ اِنِّيْ رَسُوْلُ اللّٰهِ اِلَيْكُمْ مُّصَدِّقًا لِّمَا بَيْنَ يَدَيَّ مِنَ التَّوْرٰىةِ وَمُبَشِّرًا ۢ بِرَسُوْلٍ يَّاْتِيْ مِنْ ۢ بَعْدِي اسْمُهٗٓ اَحْمَدُ ۗ فَلَمَّا جَآءَهُمْ بِالْبَيِّنٰتِ قَالُوْا هٰذَا سِحْرٌ مُّبِيْنٌ ۝٦

7. ಒಬ್ಬನನ್ನು ಇಸ್ಲಾಮಿನೆಡೆಗೆ (ಅಲ್ಲಾಹನಿಗೆ ಶರಣಾಗುವಂತೆ) ಕರೆಯಲಾದಾಗ[7] ಅವನು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸಿದರೆ ಅವನಿಗಿಂತ ದೊಡ್ಡ ಅಕ್ರಮಿ ಯಾರಿದ್ದಾನೆ?[8] ಇಂತಹ ಅಕ್ರಮಿಗಳಿಗೆ ಅಲ್ಲಾಹನು ಮಾರ್ಗದರ್ಶನ ಮಾಡು ವುದಿಲ್ಲ.

وَمَنْ اَظْلَمُ مِمَّنِ افْتَرٰى عَلَى اللّٰهِ الْكَذِبَ وَهُوَ يُدْعٰٓى اِلَى الْاِسْلَامِ ۗ وَاللّٰهُ لَا يَهْدِي الْقَوْمَ الظّٰلِمِيْنَ ۝٧

3. ಅರ್ಥಾತ್- ಸ್ವತಃ ವಕ್ರ ಮಾರ್ಗ ಅನುಸರಿಸಬಯಸಿದವರಿಗೆ ನೇರ ಮಾರ್ಗ ತೋರುವುದು ಅಥವಾ ಅವನ ಆಜ್ಞೋಲ್ಲಂಘನೆಯಲ್ಲೇ ಅಚಲರಾಗಿ ನಿಂತವರಿಗೆ ಬಲವಂತದಿಂದ ಸನ್ಮಾರ್ಗವನ್ನು ಪ್ರದಾನ ಮಾಡುವುದು ಅಲ್ಲಾಹನ ನೀತಿಯಲ್ಲ.

4. ಇದು ಬನೀಇಸ್ರಾಈಲರ ಎರಡನೆಯ ಆಜ್ಞೋಲ್ಲಂಘನೆಯ ಪ್ರಸ್ತಾಪ. ತಮ್ಮ ಉಚ್ಛ್ರಾಯ ಕಾಲದ ಆರಂಭದಲ್ಲಿ ಅವರು ಮೊದಲನೆಯ ಆಜ್ಞೋಲ್ಲಂಘನೆಯನ್ನು ಮಾಡಿದ್ದರು. ಆ ಕಾಲದ ಕೊನೆಯ ಘಟ್ಟದಲ್ಲಿ ಅವರು ಎರಡನೆಯ ಆಜ್ಞೋಲ್ಲಂಘನೆಯನ್ನೆಸಗಿದ್ದರು. ಅನಂತರ ಅವರು ಶಾಶ್ವತವಾಗಿ ದೇವಶಾಪಕ್ಕೆ ಗುರಿಯಾದರು. ಅಲ್ಲಾಹನ ಪ್ರವಾದಿಯೊಂದಿಗೆ ಬನೀಇಸ್ರಾಈಲರು ತೋರಿದಂತಹ ವರ್ತನೆಯನ್ನು ತೋರಿದರೆ ಎದುರಾಗುವ ಪರಿಣಾಮದ ಬಗ್ಗೆ ಮುಸ್ಲಿಮರಿಗೆ ಎಚ್ಚರಿಕೆ ನೀಡುವುದೇ ಈ ಎರಡೂ ಘಟನೆಗಳನ್ನು ಪ್ರಸ್ತಾಪಿಸುವುದರ ಉದ್ದೇಶವಾಗಿದೆ.

5. ಇದು ಪ್ರವಾದಿವರ್ಯರ(ಸ) ಕುರಿತು ಹ.ಈಸಾರ(ಅ) ಸ್ಪಷ್ಟ ಭವಿಷ್ಯವಾಣಿಯ ಪ್ರಸ್ತಾಪ. ಅದರ ಸವಿವರವಾದ ಸಾಕ್ಷ್ಯಾಧಾರಗಳನ್ನು ನಾವು ತಫ್ಹೀಮುಲ್ ಕುರ್‌ಆನಿನ ಐದನೆಯ ಭಾಗದಲ್ಲಿ ಈ ಸೂಕ್ತದ ವ್ಯಾಖ್ಯಾನದ ವೇಳೆ ನೀಡಿದ್ದೇವೆ.

6. ಮೂಲದಲ್ಲಿ 'ಸಿಹ್ರ್' ಎಂಬ ಪದ ಪ್ರಯೋಗವಾಗಿದೆ. ಈ ಪದವನ್ನು ಇಲ್ಲಿ 'ಜಾದೂ' ಎಂಬರ್ಥದಲ್ಲಲ್ಲ. ಬದಲಾಗಿ ಮೋಸ ಅಥವಾ ವಂಚನೆ ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಅರಬಿ ಭಾಷೆಯಲ್ಲಿ ಇದಕ್ಕೆ 'ಜಾದೂ' ಎಂದಲ್ಲದೆ ಈ ಅರ್ಥಗಳೂ ಸಾಮಾನ್ಯವಾಗಿವೆ. ಸೂಕ್ತದ ಅರ್ಥವೇನೆಂದರೆ ಪ್ರವಾದಿ ಈಸಾ(ಅ) ಶುಭವಾರ್ತೆ ನೀಡಿದ್ದ ಆ ಪ್ರವಾದಿ ತನ್ನ ಸುಸ್ಪಷ್ಟ ನಿದರ್ಶನಗಳೊಂದಿಗೆ ಬಂದು ಬಿಟ್ಟಾಗ ಬನೀಇಸ್ರಾಈಲರು ಮತ್ತು ಈಸಾರ(ಅ) ಅನುಯಾಯಿಗಳು ಅವರ ಪ್ರವಾದಿತ್ವದ ವಾದವನ್ನು ಶುದ್ಧಮೋಸವೆಂದು ಸಾರಿದರು.

7. ಅರ್ಥಾತ್- ಸತ್ಯಪ್ರವಾದಿಯನ್ನು ಸುಳ್ಳುವಾದ ಮಾಡುವವರೆಂದು ಹೇಳುವುದೇ ಘೋರ ಅಕ್ರಮವಾಗಿದೆ. ಸಾಲದೆಂಬಂತೆ, ಕರೆಯುವವರು ದೇವನ ದಾಸ್ಯ ಮತ್ತು ಅನುಸರಣೆಯೆಡೆಗೆ ಕರೆಯುತ್ತಿರುವಾಗ ಅದಕ್ಕೆ ಪ್ರತಿಯಾಗಿ ಅವರಿಗೆ ಬಯ್ಯುವುದು ಅಥವಾ ಅವರ ಸಂದೇಶಕ್ಕೆ ಮಸಿ ಬಳಿಯಲು ಸುಳ್ಳು ಆರೋಪ ಮತ್ತು ದೂಷಣೆಯ ಮಾರ್ಗಗಳನ್ನು ಅನುಸರಿಸುವುದಕ್ಕಿಂತ ಮಿಗಿಲಾದ ಅಕ್ರಮ ಬೇರಾವುದಿದೆ.

8. ಅರ್ಥಾತ್ ಅಲ್ಲಾಹನು ಕಳುಹಿಸಿರುವ ಪ್ರವಾದಿಯನ್ನು ಸುಳ್ಳುವಾದ ಮಾಡುವವರೆಂದು ಸಾರುವುದು, ಪ್ರವಾದಿಯ ಮೇಲೆ ಅವತೀರ್ಣವಾಗುವ ಅಲ್ಲಾಹನ ವಾಣಿಯನ್ನು ಅವರು ಸ್ವತಃ ಹೆಣೆದ ವಚನಗಳೆಂದು ಬಗೆಯುವುದು.

8. ಇವರು ಅಲ್ಲಾಹನ ಜ್ಯೋತಿಯನ್ನು ತಮ್ಮ ಬಾಯಿಯಿಂದ ಊದಿ ನಂದಿಸಲಿಚ್ಛಿಸುತ್ತಾರೆ ಮತ್ತು ಅಲ್ಲಾಹನು ತನ್ನ ಜ್ಯೋತಿಯನ್ನು ಸಂಪೂರ್ಣವಾಗಿ ಹಬ್ಬಿಸಿಯೇ ತೀರಲು ನಿರ್ಧರಿಸಿದ್ದಾನೆ. ಇದು ಸತ್ಯನಿಷೇಧಿಗಳಿಗೆ ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.

يُرِيدُونَ لِيُطْفِـُٔوا نُورَ اللّٰهِ بِأَفْوَاهِهِمْ وَاللّٰهُ مُتِمُّ نُورِهِ وَلَوْ كَرِهَ الْكٰفِرُونَ ﴿٨﴾

9. ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕನನ್ನು ಕಳುಹಿಸಿರುವವನು ಅವನೇ. ಅದನ್ನು ಸಂಪೂರ್ಣ ಧರ್ಮದ ಮೇಲೆ ಪ್ರಬಲಗೊಳಿಸಲಿಕ್ಕಾಗಿ. ಬಹುದೇವ ವಿಶ್ವಾಸಿಗಳಿಗೆ ಇದು ಎಷ್ಟೇ ಅಪ್ರಿಯವಾದರೂ ಸರಿಯೆ.

هُوَ الَّذِيٓ أَرْسَلَ رَسُولَهُ بِالْهُدٰى وَدِينِ الْحَقِّ لِيُظْهِرَهُ عَلَى الدِّينِ كُلِّهِ وَلَوْ كَرِهَ الْمُشْرِكُونَ ﴿٩﴾

10. ಸತ್ಯವಿಶ್ವಾಸಿಗಳೇ, ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವಂತಹ ಒಂದು ವ್ಯಾಪಾರವನ್ನು[9] ನಾನು ನಿಮಗೆ ತೋರಿಸಿ ಕೊಡಲೇ?

يٰٓأَيُّهَا الَّذِينَ اٰمَنُوا هَلْ أَدُلُّكُمْ عَلٰى تِجَارَةٍ تُنْجِيكُمْ مِّنْ عَذَابٍ أَلِيمٍ ﴿١٠﴾

11. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ ಜೀವಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ನಿಮ್ಮ ಪಾಲಿಗೆ ಇದೇ ಉತ್ತಮವಾಗಿದೆ.

تُؤْمِنُونَ بِاللّٰهِ وَرَسُولِهِ وَتُجَاهِدُونَ فِي سَبِيلِ اللّٰهِ بِأَمْوَالِكُمْ وَأَنْفُسِكُمْ ۚ ذٰلِكُمْ خَيْرٌ لَّكُمْ إِنْ كُنْتُمْ تَعْلَمُونَ ﴿١١﴾

12. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ತಳ ಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಪ್ರವೇಶಗೊಳಿಸುವನು. ಸದಾ ನೆಲೆಸುವಂತಹ ಸ್ವರ್ಗಗಳಲ್ಲಿ ಅತ್ಯುತ್ತಮ ಭವನಗಳನ್ನು ನಿಮಗೆ ದಯಪಾಲಿಸುವನು. ಇದೇ ಮಹಾ ಯಶಸ್ಸು-

يَغْفِرْ لَكُمْ ذُنُوبَكُمْ وَيُدْخِلْكُمْ جَنّٰتٍ تَجْرِي مِنْ تَحْتِهَا الْأَنْهٰرُ وَمَسٰكِنَ طَيِّبَةً فِي جَنّٰتِ عَدْنٍ ۚ ذٰلِكَ الْفَوْزُ الْعَظِيمُ ﴿١٢﴾

13. ಮತ್ತು ನೀವು ಬಯಸುವಂತಹ ಇನ್ನೊಂದು ವಸ್ತುವನ್ನೂ ನಿಮಗೆ ಕೊಡುವನು. ಅಂದರೆ, ಅಲ್ಲಾಹನ ಕಡೆಯಿಂದ ಸಹಾಯ ಮತ್ತು ಶೀಘ್ರದಲ್ಲೇ ಸಿಗಲಿರುವ ವಿಜಯ. ಸಂದೇಶವಾಹಕರೇ, ಸತ್ಯವಿಶ್ವಾಸಿಗಳಿಗೆ ಇದರ ಸುವಾರ್ತೆ ನೀಡಿರಿ.

وَأُخْرٰى تُحِبُّونَهَا ۖ نَصْرٌ مِّنَ اللّٰهِ وَفَتْحٌ قَرِيبٌ ۗ وَبَشِّرِ الْمُؤْمِنِينَ ﴿١٣﴾

14. ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಸಹಾಯಕರಾಗಿರಿ, ಮರ್ಯಮರ ಪುತ್ರ ಈಸಾ ಹವಾರಿಗಳೊಡನೆ, "ಅಲ್ಲಾಹನ ಕಡೆಗೆ ಕರೆ ನೀಡುವಲ್ಲಿ

يٰٓأَيُّهَا الَّذِينَ اٰمَنُوا كُونُوٓا أَنْصَارَ اللّٰهِ كَمَا قَالَ عِيسَى ابْنُ مَرْيَمَ لِلْحَوَارِيِّينَ

9. ವ್ಯಾಪಾರವೆಂದರೆ ಲಾಭ ಗಳಿಸಲಿಕ್ಕಾಗಿ ವ್ಯಕ್ತಿ ತನ್ನ ಸಂಪತ್ತು, ಸಮಯ, ಪ್ರಯತ್ನ ಮತ್ತು ಪ್ರತಿಭೆಗಳನ್ನು ವ್ಯಯಿಸುವಂತಹ ಸಾಧನವಾಗಿದೆ. ಇದೇ ಆಧಾರದಲ್ಲಿ ಇಲ್ಲಿ ಸತ್ಯವಿಶ್ವಾಸ ಮತ್ತು ಅಲ್ಲಾಹನ ಮಾರ್ಗದ ಹೋರಾಟವನ್ನೂ ವ್ಯಾಪಾರವೆಂದು ಕರೆಯಲಾಗಿದೆ. ಅರ್ಥಾತ್ ಈ ಮಾರ್ಗದಲ್ಲಿ ನೀವು ಸರ್ವಸ್ವವನ್ನೂ ವ್ಯಯಿಸಿದರೆ ನಿಮಗೆ ಮುಂದೆ ಪ್ರಸ್ತಾಪಿಸಲಾಗುತ್ತಿರುವಂತಹ ಲಾಭಗಳು ದೊರೆಯಲಿವೆ.

ನನ್ನ ಸಹಾಯಕರು ಯಾರಿದ್ದಾರೆ?" ಎಂದು ಹೇಳಿದ್ದಂತೆ- ಹವಾರಿಗಳು, "ಅಲ್ಲಾಹನ ಸಹಾಯಕರಾಗಿ ನಾವಿದ್ದೇವೆ" ಎಂದು ಉತ್ತರ ಕೊಟ್ಟಿದ್ದರು. ಆಗ ಬನೀಇಸ್ರಾಈಲರ ಒಂದು ವಿಭಾಗ ಸತ್ಯವಿಶ್ವಾಸವನ್ನು ಸ್ವೀಕರಿಸಿತು ಮತ್ತು ಇನ್ನೊಂದು ವಿಭಾಗವು ನಿರಾಕರಿಸಿತು. ತರುವಾಯ ನಾವು ಸತ್ಯವಿಶ್ವಾಸಿಗಳಿಗೆ ಅವರ ಶತ್ರುಗಳ ವಿರುದ್ಧ ಬೆಂಬಲ ಕೊಟ್ಟೆವು ಮತ್ತು ಅವರೇ ಪ್ರಬಲರಾಗಿ ಬಿಟ್ಟರು.[10]

مَنْ اَنْصَارِیْٓ اِلَی اللّٰہِ ؕ قَالَ الْحَوَارِیُّوْنَ نَحْنُ اَنْصَارُ اللّٰہِ فَاٰمَنَتْ طَّآئِفَۃٌ مِّنْۢ بَنِیْٓ اِسْرَآءِیْلَ وَکَفَرَتْ طَّآئِفَۃٌ ۚ فَاَیَّدْنَا الَّذِیْنَ اٰمَنُوْا عَلٰی عَدُوِّھِمْ فَاَصْبَحُوْا ظٰھِرِیْنَ ﴿۱۴﴾

---

10. ಮಸೀಹ್‌ರನ್ನು(ಅ) ನಂಬದವರು ಯಹೂದಿಯರಾಗಿದ್ದಾರೆ. ಅವರನ್ನು ನಂಬುವವರಲ್ಲಿ ಕ್ರೈಸ್ತರೂ ಇದ್ದಾರೆ. ಮುಸ್ಲಿಮರೂ ಇದ್ದಾರೆ. ಅಲ್ಲಾಹನು ಮೊದಲು ಕ್ರೈಸ್ತರಿಗೆ ಯಹೂದಿಯರ ಮೇಲೆ ಪ್ರಾಬಲ್ಯ ನೀಡಿದನು. ಅನಂತರ ಮುಸ್ಲಿಮರೂ ಅವರ ಮೇಲೆ ಪ್ರಬಲರಾದರು. ಹೀಗೆ ಮಸೀಹ್‌ರನ್ನು(ಅ) ನಿರಾಕರಿಸುವವರು ಇಬ್ಬರಿಂದಲೂ ಅಧೀನಕ್ಕೊಳಗಾದರು. ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲಾಗಿರುವುದರ ಉದ್ದೇಶ, ಹಿಂದೆ ಈಸಾರ(ಅ) ಮೇಲೆ ವಿಶ್ವಾಸವಿಟ್ಟವರು ಅವರ ನಿಷೇಧಿಗಳ ಮೇಲೆ ಪ್ರಬಲರಾದಂತೆ, ಈಗ ಮುಹಮ್ಮದ್‌ರ(ಸ) ಮೇಲೆ ವಿಶ್ವಾಸವಿರಿಸಿದವರು ಅವರನ್ನು ನಿರಾಕರಿಸುವವರ ಮೇಲೆ ಪ್ರಬಲರಾಗುವರೆಂಬ ಬಗ್ಗೆ ಮುಸ್ಲಿಮರಲ್ಲಿ ವಿಶ್ವಾಸ ಮೂಡಿಸುವುದಾಗಿದೆ.






**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಭೂಮಿಯಲ್ಲಿರುವ ಪ್ರತಿಯೊಂದು ವಸ್ತುವೂ ಅಲ್ಲಾಹನನ್ನು ಜಪಿಸುತ್ತಿದೆ. ಅತ್ಯಂತ ಪರಿಶುದ್ಧನೂ ಪ್ರಬಲನೂ ಯುಕ್ತಿಪೂರ್ಣನೂ ಆಗಿರುವ ಸಾಮ್ರಾಟನು.

يُسَبِّحُ لِلّٰهِ مَا فِي السَّمٰوٰتِ وَمَا فِي الْاَرْضِ الْمَلِكِ الْقُدُّوْسِ الْعَزِيْزِ الْحَكِيْمِ ①

2. ಉಮ್ಮಿಗಳ[1] (ನಿರಕ್ಷರಿಗಳ) ನಡುವೆ ಅವರಿಂದಲೇ ಒಬ್ಬ ಸಂದೇಶ ವಾಹಕರನ್ನು ಎಬ್ಬಿಸಿದವನು ಅವನೇ. ಅವರು ಆ ಜನರಿಗೆ ಅವನ ಸೂಕ್ತಗಳನ್ನು ಓದಿ ಹೇಳುತ್ತಾರೆ, ಅವರ ಜೀವನವನ್ನು ಸಂಸ್ಕರಿಸುತ್ತಾರೆ ಮತ್ತು ಅವರಿಗೆ ಗ್ರಂಥ ಹಾಗೂ ಸದ್ವಿವೇಕದ ಶಿಕ್ಷಣ ನೀಡುತ್ತಾರೆ. ವಸ್ತುತಃ ಇದಕ್ಕಿಂತ ಮುಂಚೆ ಅವರು ಸುಸ್ಪಷ್ಟ ಪಥಭ್ರಷ್ಟತೆಯಲ್ಲಿ ಬಿದ್ದಿದ್ದರು-

هُوَ الَّذِيْ بَعَثَ فِي الْاُمِّيّٖنَ رَسُوْلًا مِّنْهُمْ يَتْلُوْا عَلَيْهِمْ اٰيٰتِهٖ وَيُزَكِّيْهِمْ وَيُعَلِّمُهُمُ الْكِتٰبَ وَالْحِكْمَةَ وَاِنْ كَانُوْا مِنْ قَبْلُ لَفِيْ ضَلٰلٍ مُّبِيْنٍ ②

3. ಮತ್ತು (ಇವರ ಸಂದೇಶವಾಹಕತ್ವವು) ಅವರನ್ನಿನ್ನೂ ಭೇಟಿಯಾಗಿರದ ಇತರ ಜನರಿಗೂ ಅನ್ವಯಿಸುತ್ತದೆ.[2] ಅಲ್ಲಾಹನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.[3]

وَّاٰخَرِيْنَ مِنْهُمْ لَمَّا يَلْحَقُوْا بِهِمْ وَهُوَ الْعَزِيْزُ الْحَكِيْمُ ③

---

1. ಇಲ್ಲಿ 'ಉಮ್ಮಿ' ಎಂಬ ಪದವನ್ನು ಯಹೂದಿಗಳ ಪಾರಿಭಾಷಿಕವೆಂಬ ನೆಲೆಯಲ್ಲಿ ಪ್ರಯೋಗಿಸಲಾಗಿದೆ. ಇದರಲ್ಲೊಂದು ಲಘುವಾದ ವ್ಯಂಗ್ಯವೂ ಅಡಕವಾಗಿದೆ. ಅದೇನೆಂದರೆ ಯಾವ ಅರಬರನ್ನು ಯಹೂದಿಯರು ತಾತ್ಸಾರದಿಂದ 'ಉಮ್ಮಿ' ಎಂದು ಕರೆಯುತ್ತಾರೋ ಮತ್ತು ತಮಗಿಂತ ತುಚ್ಛರೆಂದು ಭಾವಿಸುತ್ತಾರೋ ಅವರ ಪೈಕಿಯೇ ಪ್ರಬಲನೂ ಸರ್ವಜ್ಞನೂ ಆದ ಅಲ್ಲಾಹನು ಪ್ರವಾದಿಯೊಬ್ಬನನ್ನು ಆಯ್ಕೆ ಮಾಡಿದನು. ಅವರು ಸ್ವತಃ ಪ್ರವಾದಿಯಾಗಿ ಎದ್ದು ನಿಂತಿಲ್ಲ. ಬದಲಾಗಿ ಅವರನ್ನು ನಿಸರ್ಗದ ಸಾಮ್ರಾಟನೂ, ಸರ್ವಶಕ್ತನೂ, ಯುಕ್ತಿಜ್ಞನೂ ಆದ ಅಲ್ಲಾಹನು ಎಬ್ಬಿಸಿರುವನು. ಅವನ ಶಕ್ತಿಯೊಂದಿಗೆ ಸೆಣಸಾಡಿ ಅವರು ಸ್ವತಃ ತಮಗೆ ನಷ್ಟ ಉಂಟು ಮಾಡಿಕೊಳ್ಳುವರು. ಅವನಿಗೆ ಯಾವ ನಷ್ಟವನ್ನೂ ಉಂಟು ಮಾಡಲಾರರು.
2. ಅರ್ಥಾತ್- ಮುಹಮ್ಮದ್‌ರ(ಸ) ಪ್ರವಾದಿತ್ವ ಕೇವಲ ಅರಬ್ ಜನಾಂಗಕ್ಕೆ ಮಾತ್ರ ಸೀಮಿತವಾಗಿಲ್ಲ. ಇನ್ನೂ ಸತ್ಯವಿಶ್ವಾಸಿಗಳ ಕೂಟದಲ್ಲಿ ಬಂದು ಸೇರಿರದ ಮತ್ತು ಪ್ರಳಯಕಾಲದ ತನಕ ಬರಲಿರುವ ಜಗತ್ತಿನಾದ್ಯಂತದ ಇತರ ಸಮುದಾಯ ಮತ್ತು ಜನಾಂಗಗಳಿಗೂ ಅವರು ಪ್ರವಾದಿಯಾಗಿದ್ದಾರೆ.
3. ಅರ್ಥಾತ್- ಇಂತಹ ಅನಾಗರಿಕ ಮತ್ತು ನಿರಕ್ಷರಿ ಜನಾಂಗದಲ್ಲಿ ಓರ್ವ ಮಹಾನ್ ಪ್ರವಾದಿಯನ್ನು ಸೃಷ್ಟಿಸಿರುವುದು ಕೂಡ ಅವನ

4. ಇದು ಅವನ ಅನುಗ್ರಹ. ಇದನ್ನವನು, ತಾನಿಚ್ಛಿಸಿದವರಿಗೆ ನೀಡುತ್ತಾನೆ ಮತ್ತು ಅವನು ಮಹಾ ಅನುಗ್ರಹದಾನಿ.

ذٰلِكَ فَضْلُ اللّٰهِ يُؤْتِيْهِ مَنْ يَّشَآءُ ۗ وَاللّٰهُ ذُو الْفَضْلِ الْعَظِيْمِ ④

5. 'ತೌರಾತ್'ನ ವಾಹಕರಾಗಿ ನೇಮಿಸಲ್ಪಟ್ಟರೂ ಅದರ ಭಾರವನ್ನು ಹೊರದೆ ಇದ್ದವರ ಉದಾಹರಣೆಯು ಗ್ರಂಥಗಳು ಹೇರಲ್ಪಟ್ಟ ಕತ್ತೆಯಂತಿದೆ. ಅಲ್ಲಾಹನ ಸೂಕ್ತಗಳನ್ನು ಸುಳ್ಳಾಗಿಸಿದವರ ಉಪಮೆಯೂ ಇದಕ್ಕಿಂತಲೂ ಕೆಟ್ಟದು.[4] ಇಂತಹ ಅಕ್ರಮಿಗಳಿಗೆ ಅಲ್ಲಾಹನು ಮಾರ್ಗದರ್ಶನ ಮಾಡುವುದಿಲ್ಲ.

مَثَلُ الَّذِيْنَ حُمِّلُوا التَّوْرٰىةَ ثُمَّ لَمْ يَحْمِلُوْهَا كَمَثَلِ الْحِمَارِ يَحْمِلُ اَسْفَارًا ۗ بِئْسَ مَثَلُ الْقَوْمِ الَّذِيْنَ كَذَّبُوْا بِاٰيٰتِ اللّٰهِ ۗ وَاللّٰهُ لَا يَهْدِى الْقَوْمَ الظّٰلِمِيْنَ ⑤

6. ಇವರೊಡನೆ ಹೇಳಿರಿ- "ಯಹೂದಿಗಳಾಗಿ ಬಿಟ್ಟವರೇ,[5] ಇತರೆಲ್ಲರನ್ನು ಬಿಟ್ಟು, ನೀವು ಮಾತ್ರ ಅಲ್ಲಾಹನಿಗೆ ನೆಚ್ಚಿನವರೆಂಬ ದುರಭಿಮಾನ ನಿಮಗಿದ್ದರೆ[6] ಮತ್ತು ಅದರಲ್ಲಿ ನೀವು ಸತ್ಯವಂತರಾಗಿದ್ದರೆ ಮರಣವನ್ನು ಅಪೇಕ್ಷಿಸಿರಿ.

قُلْ يٰٓاَيُّهَا الَّذِيْنَ هَادُوْٓا اِنْ زَعَمْتُمْ اَنَّكُمْ اَوْلِيَآءُ لِلّٰهِ مِنْ دُوْنِ النَّاسِ فَتَمَنَّوُا الْمَوْتَ اِنْ كُنْتُمْ صٰدِقِيْنَ ⑥

7. ಆದರೆ ತಾವು ಮಾಡಿರುವಂತಹ ದುಷ್ಕೃತ್ಯಗಳ ಕಾರಣದಿಂದಾಗಿ ಇವರು ಎಷ್ಟು ಮಾತ್ರಕ್ಕೂ ಅದನ್ನು ಅಪೇಕ್ಷಿಸಲಾರರು ಮತ್ತು ಅಲ್ಲಾಹನು ಈ ಅಕ್ರಮಿಗಳನ್ನು ಚೆನ್ನಾಗಿ ಬಲ್ಲನು."

وَلَا يَتَمَنَّوْنَهٗٓ اَبَدًا ۢ بِمَا قَدَّمَتْ اَيْدِيْهِمْ ۗ وَاللّٰهُ عَلِيْمٌ ۢ بِالظّٰلِمِيْنَ ⑦

8. ಇವರೊಡನೆ ಹೇಳಿರಿ- "ನೀವು ಯಾವ ಮರಣದಿಂದ ಪಲಾಯನ

قُلْ اِنَّ الْمَوْتَ الَّذِيْ تَفِرُّوْنَ مِنْهُ

---

ಮಹಿಮೆ ಮತ್ತು ಯುಕ್ತಿಯ ಪ್ರತೀಕವೇ ಆಗಿದೆ. ಅವರೆಂತಹ ಪ್ರವಾದಿಯಾಗಿದ್ದಾರೆಂದರೆ ಅವರ ಬೋಧನೆಗಳು ಕ್ರಾಂತಿಕಾರಿಯಾಗಿವೆ. ಅದು ವಿಶ್ವಮಾನ್ಯವಾದ ಶಾಶ್ವತ ಮೌಲ್ಯಗಳನ್ನು ಹೊಂದಿದೆ. ಅದರ ಆಧಾರದಲ್ಲಿ ಸಕಲ ಮಾನವಕುಲ ಒಂದು ಸಮುದಾಯವಾಗಿ ಮಾರ್ಪಡಬಹುದಾಗಿದೆ ಮತ್ತು ಆ ತತ್ವಗಳಿಂದ ಸದಾ ಕಾಲ ಮಾರ್ಗದರ್ಶನ ಪಡೆಯುತ್ತಿರಬಹುದಾಗಿದೆ.

4. ಅರ್ಥಾತ್- ಅವರ ಪರಿಸ್ಥಿತಿ ಕತ್ತೆಗಿಂತಲೂ ಕೀಳಾಗಿದೆ. ಅದಕ್ಕೆ ಬುದ್ಧಿ-ವಿವೇಕಗಳೆಂಬುದಿಲ್ಲ. ಆದ್ದರಿಂದ ಅದು ಅಸಹಾಯಕ. ಆದರೆ ಇವರಿಗೆ ತಿಳುವಳಿಕೆ ಇದೆ. ತೌರಾತನ್ನು ಇವರು ಸ್ವತಃ ಓದುತ್ತಾರೆ ಮತ್ತು ಇತರರಿಗೂ ಓದಿಸುತ್ತಾರೆ. ಅದರ ಅರ್ಥದ ಬಗ್ಗೆಯೂ ಇವರು ಅಜ್ಞರಲ್ಲ. ಆದರೆ ಇವರು ಬೇಕಂತಲೇ ಅದರ ಆದೇಶಗಳನ್ನು ಉಲ್ಲಂಘಿಸುತ್ತಿದ್ದಾರೆ. ತೌರಾತ್‌ನ ಪ್ರಕಾರ ಸಂಪೂರ್ಣವಾಗಿ ಸತ್ಯದಲ್ಲಿರುವ ಪ್ರವಾದಿಯನ್ನು ನಂಬಲು ಇವರು ಉದ್ದೇಶಪೂರ್ವಕ ನಿರಾಕರಿಸುತ್ತಿದ್ದಾರೆ. ಇವರು ಅಜ್ಞಾನದಿಂದಾಗಿ ತಪ್ಪು ಮಾಡುತ್ತಿಲ್ಲ, ಬದಲಾಗಿ ತಿಳಿದಿದ್ದರೂ ಅಲ್ಲಾಹನ ಸೂಕ್ತಗಳನ್ನು ಸುಳ್ಳಾಗಿಸುತ್ತಿರುವ ಅಪರಾಧಿಗಳಾಗಿದ್ದಾರೆ.

5. ಇಲ್ಲಿ, "ಓ ಯಹೂದಿಯರೇ" ಎನ್ನುವ ಬದಲು "ಯಹೂದಿಯಾಗಿ ಮಾರ್ಪಟ್ಟವರೇ" ಅಥವಾ "ಯಹೂದಿತ್ವವನ್ನು ಸ್ವೀಕರಿಸಿಕೊಂಡವರೇ" ಎಂದು ಹೇಳಲಾಗಿರುವುದು ಗಮನಾರ್ಹ. ಮೂಸಾ(ಅ) ಅಥವಾ ಅವರಿಗಿಂತ ಮೊದಲಿನ ಪ್ರವಾದಿಗಳು ತಂದ ಮೂಲ ಧರ್ಮ ಇಸ್ಲಾಮ್ ಆಗಿದ್ದುದೇ ಇದಕ್ಕೆ ಕಾರಣ. ಆ ಪ್ರವಾದಿಗಳ ಪೈಕಿ ಯಾರೂ ಯಹೂದಿಯರಾಗಿರಲಿಲ್ಲ. ಅವರ ಕಾಲದಲ್ಲಿ ಯಹೂದಿತ್ವ ಹುಟ್ಟಿಕೊಂಡಿರಲೂ ಇಲ್ಲ. ಈ ಧರ್ಮ ಈ ಹೆಸರಿನೊಂದಿಗೆ ಹುಟ್ಟಿಕೊಂಡದ್ದು ಬಹಳ ನಂತರದ ಬೆಳವಣಿಗೆಯಾಗಿದೆ.

6. ಅರಬ್‌ನ ಯಹೂದಿಯರು ತಮ್ಮ ಜನಸಂಖ್ಯೆ ಮತ್ತು ಶಕ್ತಿಯಲ್ಲಿ ಮುಸ್ಲಿಮರಿಗಿಂತ ಕಡಿಮೆಯಿರಲಿಲ್ಲ. ಸಾಧನಾನುಕೂಲತೆಯಲ್ಲೂ ಅವರು ಬಹಳ ಮುಂದಿದ್ದರು. ಆದರೆ ಈ ಸ್ಪರ್ಧೆಯಲ್ಲೂ ಮುಸ್ಲಿಮರು ಪ್ರಬಲರು, ಯಹೂದಿಯರು ಅಧೀನರೂ ಆಗಿದ್ದರು. ಇದಕ್ಕೆ ಕಾರಣ, ಮುಸ್ಲಿಮರು ಮರಣದ ಬಗ್ಗೆ ಅಂಜಿಕೆಯ ಬದಲು ಅಮಿತಾಸಕ್ತಿ ಹೊಂದಿದ್ದರು. ಜೀವದ ಹಂಗು ತೊರೆದು ಅವರು ಯುದ್ಧ ಕಣಕ್ಕೆ ಇಳಿಯುತ್ತಿದ್ದರು. ಇದಕ್ಕೆ ಪ್ರತಿಯಾಗಿ ಯಹೂದಿಯರು ಯಾವ ಮಾರ್ಗದಲ್ಲೂ ಪ್ರಾಣ ತೆರಲು ಸಿದ್ಧರಿರಲಿಲ್ಲ. ಅದು ದೇವಮಾರ್ಗವಿರಲಿ, ಜನಾಂಗದ ಮಾರ್ಗವಿರಲಿ ಅಥವಾ ತಮ್ಮ ಸೊತ್ತು ವಿತ್ತಗಳ ರಕ್ಷಣೆಯ ಮಾರ್ಗವೇ ಆಗಿರಲಿ. ಅವರಿಗೆ ಬೇಕಾಗಿದ್ದುದು ಜೀವನ ಮಾತ್ರವೇ ಆಗಿತ್ತು. ಅದು ಎಂತಹ ಜೀವನವಾಗಿದ್ದರೂ ಸರಿ. ಈ ಕಾರಣದಿಂದಲೇ ಅವರು ಹೇಡಿಗಳಾಗಿ ಮಾರ್ಪಟ್ಟಿದ್ದರು.

ಮಾಡುತ್ತಿರುವಿರೋ ಅದು ನಿಮಗೆ ಬಂದೇ ತೀರುವುದು. ಅನಂತರ ನೀವು ಪ್ರತ್ಯಕ್ಷ ಪರೋಕ್ಷಗಳನ್ನು ಬಲ್ಲವನಾಗಿರುವವನ ಮುಂದೆ ಹಾಜರುಗೊಳಿಸಲ್ಪಡುವಿರಿ. ನೀವು ಏನೇನು ಮಾಡುತ್ತಿದ್ದಿರೆಂಬುದನ್ನು ಅವನು ಆಗ ನಿಮಗೆ ತಿಳಿಸುವನು."

فَإِنَّهُۥ مُلَٰقِيكُمْ ۖ ثُمَّ تُرَدُّونَ إِلَىٰ عَٰلِمِ ٱلْغَيْبِ وَٱلشَّهَٰدَةِ فَيُنَبِّئُكُم بِمَا كُنتُمْ تَعْمَلُونَ ⑧

9. ಸತ್ಯವಿಶ್ವಾಸಿಗಳೇ, ಶುಕ್ರವಾರ ದಿನ ನಮಾಝಿಗಾಗಿ ಕರೆಯಲಾದಾಗ ಅಲ್ಲಾಹನ 'ಸ್ಮರಣೆಯ' ಕಡೆಗೆ ಧಾವಿಸಿರಿ ಮತ್ತು ಕ್ರಯ-ವಿಕ್ರಯಗಳನ್ನು ಬಿಟ್ಟುಬಿಡಿರಿ.[7] ನೀವು ಅರಿತವರಾಗಿದ್ದರೆ ಇದು ನಿಮಗೆ ಅತ್ಯುತ್ತಮವಾಗಿದೆ.

يَٰٓأَيُّهَا ٱلَّذِينَ ءَامَنُوٓا۟ إِذَا نُودِىَ لِلصَّلَوٰةِ مِن يَوْمِ ٱلْجُمُعَةِ فَٱسْعَوْا۟ إِلَىٰ ذِكْرِ ٱللَّهِ وَذَرُوا۟ ٱلْبَيْعَ ۚ ذَٰلِكُمْ خَيْرٌ لَّكُمْ إِن كُنتُمْ تَعْلَمُونَ ⑨

10. ನಮಾಝ್ ಮುಗಿದ ಬಳಿಕ ಭೂಮಿಯ ಮೇಲೆ ಚದುರಿ ಬಿಡಿರಿ ಮತ್ತು ಅಲ್ಲಾಹನ ಅನುಗ್ರಹವನ್ನರಸಿರಿ.[8] ಅಲ್ಲಾಹನನ್ನು ಅತ್ಯಧಿಕ ಸ್ಮರಿಸುತ್ತಲಿರಿ. ನಿಮಗೆ ಯಶಸ್ಸು ಪ್ರಾಪ್ತವಾಗಲೂಬಹುದು.[9]

فَإِذَا قُضِيَتِ ٱلصَّلَوٰةُ فَٱنتَشِرُوا۟ فِى ٱلْأَرْضِ وَٱبْتَغُوا۟ مِن فَضْلِ ٱللَّهِ وَٱذْكُرُوا۟ ٱللَّهَ كَثِيرًا لَّعَلَّكُمْ تُفْلِحُونَ ⑩

11. ಅವರು ವ್ಯಾಪಾರ ಮತ್ತು ಮನರಂಜನೆ ನಡೆಯುತ್ತಿರುವುದನ್ನು ಕಂಡೊಡನೆ ಅದರೆಡೆಗೆ ಧಾವಿಸಿಹೋದರು ಮತ್ತು ನಿಮ್ಮನ್ನು ನಿಂತಲ್ಲೇ ಬಿಟ್ಟುಬಿಟ್ಟರು.[10] ಇವರೊಡನೆ ಹೇಳಿರಿ; ಅಲ್ಲಾಹನ

وَإِذَا رَأَوْا۟ تِجَٰرَةً أَوْ لَهْوًا ٱنفَضُّوٓا۟ إِلَيْهَا وَتَرَكُوكَ قَآئِمًا ۚ قُلْ مَا عِندَ

7. ಈ ಆಜ್ಞೆಯಲ್ಲಿ 'ದಿಕ್ರ್' ಎಂದರೆ ಖುತ್ಬಾ (ಪ್ರವಚನ) ಆಗಿದೆ. ಏಕೆಂದರೆ ಅದಾನಿನ ನಂತರ ಪ್ರವಾದಿವರ್ಯರು(ಸ) ಮಾಡುತ್ತಿದ್ದ ಮೊದಲ ಕೆಲಸ ನಮಾಝ್ ಆಗಿರಲಿಲ್ಲ, ಖುತ್ಬಾ ಆಗಿತ್ತು. ನಮಾಝನ್ನು ಅವರು ಸದಾ ಖುತ್ಬಾದ ನಂತರವೇ ನಿರ್ವಹಿಸುತ್ತಿದ್ದರು. 'ಅಲ್ಲಾಹನ ದಿಕ್ರ್‌ನೆಡೆಗೆ ಧಾವಿಸಿರಿ' ಎಂದರೆ ಓಡೋಡಿ ಬನ್ನಿರಿ ಎಂದಲ್ಲ. ಆದಷ್ಟು ಬೇಗ ಅಲ್ಲಿಗೆ ತಲಪಲು ಪ್ರಯತ್ನಿಸಿರಿ ಎಂದಾಗಿದೆ. 'ಕ್ರಯ ವಿಕ್ರಯಗಳನ್ನು ಬಿಟ್ಟು ಬಿಡಿರಿ' ಎಂದರೆ ವ್ಯಾಪಾರ-ವ್ಯವಹಾರಗಳನ್ನು ನಿಲ್ಲಿಸಿ ಬಿಡುವುದು ಮಾತ್ರವಲ್ಲ, ಬದಲಾಗಿ ನಮಾಝ್‌ಗೆ ಹೋಗುವ ಚಿಂತೆ ಮತ್ತು ಸಿದ್ಧತೆಯಲ್ಲದೆ ಬೇರೆಲ್ಲ ಕೆಲಸ ಕಾರ್ಯಗಳನ್ನು ಬಿಟ್ಟು ಬಿಡಿರಿ ಎಂದಾಗಿದೆ. ಜುಮ್‌ಆದ ಅದಾನಿನ ನಂತರ ಎಲ್ಲಾ ರೀತಿಯ ವ್ಯಾಪಾರ-ವ್ಯವಹಾರಗಳು ನಿಷಿದ್ಧವೆಂಬ ಬಗ್ಗೆ ಇಸ್ಲಾಮೀ ಕರ್ಮಶಾಸ್ತ್ರಜ್ಞರಿಗೆ ಒಮ್ಮತಾಭಿಪ್ರಾಯವಿದೆ. ಆದರೆ ಹದೀಸ್‌ನಲ್ಲಿ ಮಕ್ಕಳು, ಮಹಿಳೆಯರು, ಗುಲಾಮರು, ರೋಗಿಗಳು ಮತ್ತು ಯಾತ್ರಿಕರಿಗೆ ಈ ಕರ್ತವ್ಯದಿಂದ ವಿನಾಯಿತಿ ನೀಡಲಾಗಿದೆ.

8. ಜುಮ್‌ಆ ನಮಾಝ್‌ನ ನಂತರ ಭೂಮಿಯಲ್ಲಿ ಹರಡಿ ಜೀವನಾಧಾರ ಹುಡುಕುವ ಚಟುವಟಿಕೆಯಲ್ಲಿ ನಿರತವಾಗುವುದು ಅವಶ್ಯಕ ಎಂದು ಇದರ ಅರ್ಥವಲ್ಲ. ಬದಲಾಗಿ ಅನುಮತಿಯ ರೂಪದಲ್ಲಿ ಈ ಆಜ್ಞೆ ಕೊಡಲಾಗಿದೆ. ಶುಕ್ರವಾರದ ಅದಾನ್ ಕೇಳಿದ ತಕ್ಷಣ ವ್ಯಾಪಾರ ವಹಿವಾಟುಗಳನ್ನು ತೊರೆಯುವ ಆಜ್ಞೆ ನೀಡಲಾಗಿತ್ತಾದ್ದರಿಂದ, ನಮಾಝ್ ಮುಗಿದ ತಕ್ಷಣ ನಿಮಗೆ ಚದುರಿ ಹೋಗಿ ಯಾವ ವ್ಯಾಪಾರದಲ್ಲಿ ಬೇಕಾದರೂ ನಿರತನಾಗುವ ಅನುಮತಿ ಇದೆ ಎಂದು ಹೇಳಲಾಗುತ್ತಿದೆ. ಇದು ಇಹ್ರಾಮ್‌ನ ಸ್ಥಿತಿಯಲ್ಲಿ ಬೇಟೆಯಾಡುವುದರಿಂದ ತಡೆಯಲಾದ ನಂತರ 'ನೀವು ಇಹ್ರಾಮ್ ಬಿಚ್ಚಿದಾಗ ಬೇಟೆಯಾಡಿರಿ' (ಸೂರಃ ಮಾಇದಃ, ಸೂಕ್ತ2) ಎಂದು ಹೇಳಿರುವಂತೆಯೇ ಇದೆ. ಇದರ ಅರ್ಥ ಬೇಟೆಯಾಡಲೇ ಬೇಕು ಎಂದಲ್ಲ, ಬದಲಾಗಿ ಬೇಕಿದ್ದರೆ ಬೇಟೆಯಾಡಬಹುದು ಎಂದಾಗಿದೆ. ಆದ್ದರಿಂದ ಈ ಸೂಕ್ತದ ಆಧಾರದಲ್ಲಿ ಇಸ್ಲಾಮಿನಲ್ಲಿ ಶುಕ್ರವಾರದ ರಜೆ ಎಂಬುದಿಲ್ಲ ಎಂದು ವಾದಿಸುವವರ ಆಧಾರ ಸರಿಯಲ್ಲ. ವಾರಕ್ಕೊಂದು ರಜೆ ಆಚರಿಸಬೇಕಿದ್ದರೆ ಯಹೂದಿಯರು ಶನಿವಾರದಂದು ಮತ್ತು ಕ್ರೈಸ್ತರು ಭಾನುವಾರದಂದು ಆಚರಿಸುವಂತೆ ಮುಸ್ಲಿಮರು ಶುಕ್ರವಾರದಂದೇ ಆಚರಿಸಬೇಕು.

9. ಇಲ್ಲಿ ಇಂತಹ ಪದ ಬಳಕೆ ಪ್ರಯೋಗಿಸಿರುವುದರ ಅರ್ಥ ಅಲ್ಲಾಹನಿಗೆ ಆ ಬಗ್ಗೆ ಸಂಶಯವಿದೆಯೆಂದಲ್ಲ (ಶಾಂತಂ ಪಾಪಂ) ಬದಲಾಗಿ ಇದು ರಾಜಠೀವಿಯಿಂದ ಕೂಡಿದ ಮಾತಿನ ವೈಖರಿಯಾಗಿದೆ. ಇದು, ದಯಾಳುವಾದ ಯಜಮಾನನೊಬ್ಬ ತನ್ನ ದಾಸನೊಡನೆ, "ನೀನು ಇಂತಿಂತಹ ಕೆಲಸ ಮಾಡು. ನಿನಗೆ ಭಡ್ತಿ ಪ್ರಾಪ್ತಿಯಾಗಬಹುದು" ಎಂದು ಹೇಳುವಂತೆಯೇ ಆಗಿದೆ. ಇದರಲ್ಲೊಂದು ಲಘುವಾದ ವಾಗ್ದಾನ ಅಡಕವಾಗಿರುತ್ತದೆ. ಅದರ ಆಸೆಯಲ್ಲಿ ಸೇವಕನು ಆ ಕೆಲಸವನ್ನು ಮನಃಪೂರ್ವಕವಾಗಿ ಮತ್ತು ಆಸಕ್ತಿಯಿಂದ ನಿಭಾಯಿಸುತ್ತಾನೆ.

10. ಇದು ಮದೀನಾದ ಆರಂಭ ಕಾಲದ ಘಟನೆಯಾಗಿತ್ತು. ಜುಮ್‌ಆ ನಮಾಝಿನ ಸಮಯಕ್ಕೆ ಸರಿಯಾಗಿ ಸಿರಿಯಾದಿಂದ ವ್ಯಾಪಾರಿ

ٱللَّهِ خَيْرٌ مِّنَ ٱللَّهْوِ وَمِنَ ٱلتِّجَٰرَةِ ۚ وَٱللَّهُ خَيْرُ ٱلرَّٰزِقِينَ ﴿١١﴾

ಬಳಿ ಏನಿದೆಯೋ ಅದು ವ್ಯಾಪಾರ ಮತ್ತು ಮನರಂಜನೆಗಿಂತ ಉತ್ತಮವಾಗಿದೆ[11] ಮತ್ತು ಅಲ್ಲಾಹನು ಅತ್ಯುತ್ತಮ ಅನ್ನದಾತನಾಗಿದ್ದಾನೆ.[12]

ತಂಡವೊಂದು ಆಗಮಿಸಿತು. ತಮ್ಮ ಆಗಮನದ ಸುದ್ದಿ ಜನರಿಗೆ ತಿಳಿಯಲೆಂದು ಅವರು ಡೋಲು ನಗಾರಿಗಳನ್ನು ಬಾರಿಸತೊಡಗಿದರು. ಪ್ರವಾದಿವರ್ಯರು(ಸ) ಆ ಸಂದರ್ಭದಲ್ಲಿ ಪ್ರವಚನ ನೀಡುತ್ತಿದ್ದರು. ಡೋಲು ನಗಾರಿಗಳ ಶಬ್ದ ಕೇಳಿ ಜನರು ತಳಮಳಗೊಂಡರು ಮತ್ತು ಹನ್ನೆರಡು ಜನರನ್ನು ಬಿಟ್ಟರೆ ಉಳಿದವರೆಲ್ಲರೂ ಯಾತ್ರಾ ತಂಡದೆಡೆಗೆ ಧಾವಿಸಿದರು.

11. ಈ ಸೂಕ್ತದ ಮೂಲಕ ಪ್ರವಾದಿವರ್ಯರ(ಸ) ಸಂಗಾತಿಗಳಿಂದ ಸಂಭವಿಸಿ ಹೋದ ತಪ್ಪು ಯಾವ ಮಟ್ಟದ್ದಾಗಿತ್ತೆಂದು ವ್ಯಕ್ತವಾಗುತ್ತದೆ. ವಿಶ್ವಾಸದ ಕೊರತೆ ಮತ್ತು ಉದ್ದೇಶಪೂರ್ವಕವಾಗಿ ಲೋಕಕ್ಕೆ ಪರಲೋಕಕ್ಕಿಂತ ಪ್ರಾಶಸ್ತ್ಯ ಕೊಡುವ ಪ್ರವೃತ್ತಿ ಇದಕ್ಕೆ ಕಾರಣವಾಗಿರಲಿಲ್ಲ. (ಶಾಂತಂ ಪಾಪಂ) ಹಾಗಿದ್ದರೆ ಅಲ್ಲಾಹನ ಕ್ರೋಧ ಮತ್ತು ಎಚ್ಚರಿಕೆಯ ಸ್ವರೂಪವೇ ಭಿನ್ನವಾಗಿರುತ್ತಿತ್ತು. ಅಂತಹ ಯಾವ ಕೆಡುಕೂ ಅಲ್ಲಿರಲಿಲ್ಲ. ಆಗಿ ಹೋದ ಘಟನೆಗೆ ತರಬೇತಿಯ ಕೊರತೆಯೇ ಕಾರಣವಾಗಿತ್ತು. ಆದ್ದರಿಂದಲೇ ಮೊದಲು ಬೋಧನಾತ್ಮಕ ಧಾಟಿಯಲ್ಲಿ ಜುಮ್‌ಆದ ಶಿಷ್ಟಾಚಾರಗಳನ್ನು ಕಲಿಸಲಾಗಿದೆ. ಅನಂತರ ಈ ತಪ್ಪಿನ ಬಗ್ಗೆ ಉಪದೇಶದ ಧಾಟಿಯಲ್ಲಿ ಪ್ರಸ್ತಾಪಿಸಿ, ನಮಾಝ್ ಮಾಡುವುದರಿಂದ ಅಲ್ಲಾಹನ ಬಳಿ ನಿಮಗೆ ಸಿಗುವಂತಹುದು ಲೋಕದ ವ್ಯಾಪಾರ ಮತ್ತು ಆಟ-ವಿನೋದಗಳಿಗಿಂತ ಎಷ್ಟೋ ಉತ್ತಮವಾದುದು ಎಂದು ಹೇಳಲಾಗಿದೆ.

12. ಅರ್ಥಾತ್- ತಾತ್ಕಾಲಿಕವಾಗಿಯಾದರೂ ಈ ಲೋಕದಲ್ಲಿ ಜೀವನಾಧಾರಗಳನ್ನು ಒದಗಿಸುವ ಮಾಧ್ಯಮಗಳಾಗಿ ಬಿಡುವ ಎಲ್ಲಾ ಅನ್ನದಾತರಿಗಿಂತಲೂ ಮಿಗಿಲಾದ ಅನ್ನದಾತ ಅಲ್ಲಾಹನಾಗಿದ್ದಾನೆ.







**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸಂದೇಶವಾಹಕರೇ, ಕಪಟವಿಶ್ವಾಸಿಗಳು ನಿಮ್ಮ ಬಳಿಗೆ ಬಂದಾಗ, "ತಾವು ಖಂಡಿತ ಅಲ್ಲಾಹನ ಸಂದೇಶವಾಹಕರೆಂದು ನಾವು ಸಾಕ್ಷ್ಯ ವಹಿಸುತ್ತೇವೆ" ಎಂದು ಹೇಳುತ್ತಾರೆ. ನೀವು ಖಂಡಿತ ವಾಗಿಯೂ ಅಲ್ಲಾಹನ ಸಂದೇಶವಾಹಕರೆಂದು ಅಲ್ಲಾಹನಿಗೆ ತಿಳಿದಿದೆ. ಆದರೆ ಈ ಕಪಟವಿಶ್ವಾಸಿಗಳು ಮಹಾ ಸುಳ್ಳುಗಾರರೆಂದು ಅಲ್ಲಾಹನು ಸಾಕ್ಷ್ಯ ವಹಿಸುತ್ತಾನೆ.[1]

إِذَا جَآءَكَ الْمُنٰفِقُوْنَ قَالُوْا نَشْهَدُ إِنَّكَ لَرَسُوْلُ اللّٰهِ ۘ وَاللّٰهُ يَعْلَمُ إِنَّكَ لَرَسُوْلُهٗ ؕ وَاللّٰهُ يَشْهَدُ إِنَّ الْمُنٰفِقِيْنَ لَكٰذِبُوْنَ ۚ ﴿۱﴾

2. ಇವರು ತಮ್ಮ ಪ್ರತಿಜ್ಞೆಗಳನ್ನು ಗುರಾಣಿಗಳಾಗಿ ಮಾಡಿಕೊಂಡಿದ್ದಾರೆ. ಈ ರೀತಿಯಲ್ಲಿ ಇವರು ಸ್ವತಃ ಅಲ್ಲಾಹನ ಮಾರ್ಗದಿಂದ ತಡೆದು ನಿಲ್ಲುತ್ತಾರೆ ಮತ್ತು ಇತರರನ್ನೂ ತಡೆಯುತ್ತಾರೆ. ಇವರು ಮಾಡುತ್ತಿರುವ ಕೃತ್ಯಗಳು ಎಷ್ಟು ಕೆಟ್ಟವು!

اِتَّخَذُوْٓا أَيْمَانَهُمْ جُنَّةً فَصَدُّوْا عَنْ سَبِيْلِ اللّٰهِ ؕ إِنَّهُمْ سَآءَ مَا كَانُوْا يَعْمَلُوْنَ ﴿۲﴾

3. ಇವರು ಸತ್ಯದ ಮೇಲೆ ವಿಶ್ವಾಸವಿರಿಸಿ ಆ ಬಳಿಕ ನಿರಾಕರಿಸಿದ್ದರಿಂದ ಹೀಗೆಲ್ಲ ಆಯಿತು. ಆದುದರಿಂದ ಇವರ ಹೃದಯಗಳಿಗೆ ಮುದ್ರೆ ಹಾಕಿ ಬಿಡಲಾಯಿತು. ಇನ್ನು ಇವರು ಏನನ್ನೂ ಗ್ರಹಿಸುವುದಿಲ್ಲ.[2]

ذٰلِكَ بِأَنَّهُمْ اٰمَنُوْا ثُمَّ كَفَرُوْا فَطُبِعَ عَلٰى قُلُوْبِهِمْ فَهُمْ لَا يَفْقَهُوْنَ ﴿۳﴾

1. ಅರ್ಥಾತ್- ಅವರು ತಮ್ಮ ಬಾಯಿಯಿಂದ ಹೊರಡಿಸುತ್ತಿರುವ ಮಾತು ಸ್ವಯಂ ಸತ್ಯವಾಗಿದೆ. ಆದರೆ ಯಾವ ಮಾತನ್ನು ಅವರು ಬಾಯಿಯಿಂದ ಹೊರಡಿಸುತ್ತಿದ್ದಾರೋ ಅಂತಹ ವಿಶ್ವಾಸವನ್ನು ಅವರು ಹೊಂದಿಲ್ಲ. ಆದ್ದರಿಂದ ತಮ್ಮ ಪ್ರವಾದಿತ್ವದ ಸಾಕ್ಷ್ಯ ವಹಿಸುತ್ತೇವೆ ಎಂಬ ಅವರ ಮಾತು ಸುಳ್ಳಾಗಿದೆ.
2. ಈ ಸೂಕ್ತದಲ್ಲಿ ಸತ್ಯವಿಶ್ವಾಸ ಸ್ವೀಕರಿಸುವುದು ಎಂದರೆ ಸತ್ಯವಿಶ್ವಾಸದ ಬಗ್ಗೆ ಘೋಷಣೆ ಮಾಡಿ ಮುಸ್ಲಿಮರಲ್ಲಿ ಶಾಮೀಲಾಗುವುದಾಗಿದೆ. ಸತ್ಯನಿಷೇಧ ಕೈಗೊಳ್ಳುವುದೆಂದರೆ ಹೃತ್ಪೂರ್ವಕವಾಗಿ ವಿಶ್ವಾಸ ಸ್ವೀಕರಿಸದೆ, ಸತ್ಯವಿಶ್ವಾಸದ ಬಾಹ್ಯ ಘೋಷಣೆಗೆ ಮೊದಲಿದ್ದ ಸತ್ಯನಿಷೇಧದ ಸ್ಥಿತಿಯಲ್ಲೇ ನೆಲೆಗೊಂಡಿರುವುದಾಗಿದೆ. ಅಲ್ಲಾಹನ ವತಿಯಿಂದ ಹೃದಯಕ್ಕೆ ಮುದ್ರೆಯೊತ್ತಲ್ಪಡುವುದೆಂದರೆ ಏನೆಂದು ಸ್ಪಷ್ಟವಾಗಿ ವಿವರಿಸಲಾದಂತಹ ಸೂಕ್ತಗಳಲ್ಲಿ ಇದೂ ಒಂದಾಗಿದೆ. ಕಪಟವಿಶ್ವಾಸಿಗಳ ಈ ಸ್ಥಿತಿಗೆ ಕಾರಣ ಅಲ್ಲಾಹನು ಅವರ ಹೃದಯಕ್ಕೆ ಮುದ್ರೆಯೊತ್ತಿದ್ದನಾದ್ದರಿಂದ ಸತ್ಯವಿಶ್ವಾಸ ಅವರಿಗೆ ಅಂತರ್ಗತವಾಗಲಿಲ್ಲ ಮತ್ತು ಅನಿವಾರ್ಯವಾಗಿ ಅವರು ಕಪಟವಿಶ್ವಾಸಿಗಳಾಗಿಯೇ ಉಳಿದು ಬಿಡಬೇಕಾಯಿತು ಎಂಬುದಲ್ಲ. ಬದಲಾಗಿ ಅವರು ವಿಶ್ವಾಸದ ಘೋಷಣೆ ಮಾಡಿದ ನಂತರವೂ ಸತ್ಯನಿಷೇಧದಲ್ಲೇ ನೆಲೆಗೊಳ್ಳುವ ತೀರ್ಮಾನ ಮಾಡಿದಾಗ ಅಲ್ಲಾಹನು ಅವರ ಹೃದಯಗಳಿಗೆ ಮುದ್ರೆಯೊತ್ತಿದನು. ಅನಂತರ ಅವರಿಂದ ಪ್ರಾಮಾಣಿಕವಾದ ಸತ್ಯವಿಶ್ವಾಸದ ಸೌಭಾಗ್ಯವನ್ನು ಕಸಿದುಕೊಳ್ಳಲಾಯಿತು ಮತ್ತು ಅವರು ಸ್ವತಃ ಅನುಸರಿಸಿದ್ದ ಕಪಟವಿಶ್ವಾಸದ 'ಭಾಗ್ಯ'ವನ್ನೇ ಅವರಿಗೆ ದಯಪಾಲಿಸಲಾಯಿತು.

4. ಇವರನ್ನು ನೋಡಿದರೆ ನಿಮಗೆ ಇವರ ಶರೀರವು ಬಹಳ ವೈಭವ ಪೂರ್ಣವಾಗಿ ಕಾಣಿಸುವುದು. ಇವರು ಮಾತನಾಡಿದರೆ ನೀವು ಇವರ ಮಾತನ್ನು ಕೇಳುತ್ತಲೇ ಇದ್ದು ಬಿಡುವಿರಿ. ಆದರೆ ವಾಸ್ತವ ದಲ್ಲಿ ಇವರು ಗೋಡೆಗೆ ಒರಗಿಸಿಡಲ್ಪಟ್ಟಿರುವ ಮರದ ಕೊರಡು ಗಳಂತಿದ್ದಾರೆ.[3] ಇವರು ಪ್ರತಿಯೊಂದು ಉಚ್ಚ ಸ್ವರವನ್ನು ತಮ್ಮ ವಿರುದ್ಧವೆಂದು ಭಾವಿಸುತ್ತಾರೆ. ಇವರು ಅಪ್ಪಟ ಶತ್ರುಗಳು. ಇವರ ಬಗ್ಗೆ ಎಚ್ಚರವಾಗಿರಿ. ಇವರ ಮೇಲೆ ಅಲ್ಲಾಹನ ಶಾಪವಿದೆ. ಇವರು ಎಲ್ಲಿ ಅಲೆದಾಡಿಸಲ್ಪಡುತ್ತಿದ್ದಾರೆ?[4]

وَإِذَا رَأَيْتَهُمْ تُعْجِبُكَ أَجْسَامُهُمْ ۖ وَإِن يَقُولُوا تَسْمَعْ لِقَوْلِهِمْ ۖ كَأَنَّهُمْ خُشُبٌ مُّسَنَّدَةٌ ۖ يَحْسَبُونَ كُلَّ صَيْحَةٍ عَلَيْهِمْ ۚ هُمُ الْعَدُوُّ فَاحْذَرْهُمْ ۚ قَاتَلَهُمُ اللَّهُ ۖ أَنَّىٰ يُؤْفَكُونَ ④

5. ಅಲ್ಲಾಹನ ಸಂದೇಶವಾಹಕರು ನಿಮಗಾಗಿ ಕ್ಷಮಾಯಾಚನೆ ಮಾಡುವಂತಾಗಲು, ನೀವು ಬನ್ನಿರಿ ಎಂದು ಅವರೊಡನೆ ಹೇಳ ಲಾದಾಗ ಅವರು ತಲೆ ಕೊಡವಿಕೊಳ್ಳುತ್ತಾರೆ ಮತ್ತು ಅವರು ಬಹಳ ಅಹಂಕಾರದಿಂದ ಬಾರದಿರುವುದನ್ನು ನೀವು ಕಾಣುತ್ತೀರಿ.

وَإِذَا قِيلَ لَهُمْ تَعَالَوْا يَسْتَغْفِرْ لَكُمْ رَسُولُ اللَّهِ لَوَّوْا رُءُوسَهُمْ وَرَأَيْتَهُمْ يَصُدُّونَ وَهُم مُّسْتَكْبِرُونَ ⑤

6. ಸಂದೇಶವಾಹಕರೇ, ನೀವು ಅವರಿಗಾಗಿ ಕ್ಷಮಾಯಾಚನೆ ಮಾಡಿ ದರೂ ಮಾಡದಿದ್ದರೂ ಅವರ ಮಟ್ಟಿಗೆ ಒಂದೇ ಆಗಿದೆ. ಅಲ್ಲಾಹನು ಅವರನ್ನು ಎಂದಿಗೂ ಕ್ಷಮಿಸಲಾರನು. ಅಲ್ಲಾಹನು ಕರ್ಮಭ್ರಷ್ಟರಿಗೆ ಖಂಡಿತ ಸನ್ಮಾರ್ಗ ನೀಡುವುದಿಲ್ಲ.

سَوَاءٌ عَلَيْهِمْ أَسْتَغْفَرْتَ لَهُمْ أَمْ لَمْ تَسْتَغْفِرْ لَهُمْ ۚ لَن يَغْفِرَ اللَّهُ لَهُمْ ۚ إِنَّ اللَّهَ لَا يَهْدِي الْقَوْمَ الْفَاسِقِينَ ⑥

7. ಸಂದೇಶವಾಹಕರ ಸಂಗಾತಿಗಳಿಗಾಗಿ ಖರ್ಚು ಮಾಡುವುದನ್ನು ನಿಲ್ಲಿಸಿ ಬಿಡಿರಿ; ಇವರು ಚದುರಿ ಹೋಗಲಿ- ಎಂದು ಹೇಳುವವರು ಇವರೇ. ವಸ್ತುತಃ ಭೂಮಿ-ಆಕಾಶಗಳ ಭಂಡಾರಗಳ ಒಡೆತನ ಅಲ್ಲಾಹನ ಕೈಯಲ್ಲಿದೆ. ಆದರೆ ಈ ಕಪಟವಿಶ್ವಾಸಿಗಳು ಗ್ರಹಿಸುವುದಿಲ್ಲ.

هُمُ الَّذِينَ يَقُولُونَ لَا تُنفِقُوا عَلَىٰ مَنْ عِندَ رَسُولِ اللَّهِ حَتَّىٰ يَنفَضُّوا ۗ وَلِلَّهِ خَزَائِنُ السَّمَاوَاتِ وَالْأَرْضِ وَلَٰكِنَّ الْمُنَافِقِينَ لَا يَفْقَهُونَ ⑦

8. ನಾವು ಮದೀನಾಕ್ಕೆ ಹಿಂದಿರುಗಿದಾಗ ಗೌರವಾನ್ವಿತನು ನಿಂದ್ಯನನ್ನು

يَقُولُونَ لَئِن رَّجَعْنَا إِلَى الْمَدِينَةِ

3. ಅರ್ಥಾತ್- ಗೋಡೆಗಳಿಗೆ ಒರಗಿ ಕುಳಿತಂತಹ ಈ ವ್ಯಕ್ತಿಗಳು ಮಾನವರಲ್ಲ, ಮರದ ಕೊರಡುಗಳಾಗಿದ್ದಾರೆ. ಮರದ ಕೊರಡಿಗೆ ಹೋಲಿಸುವ ಮೂಲಕ ಮಾನವೀಯತೆಯ ನಿಜವಾದ ಲಕ್ಷಣವಾಗಿರುವ ನೈತಿಕತೆಯ ಸ್ಫೂರ್ತಿಯಿಂದ ಇವರು ಬರಿದಾಗಿದ್ದಾರೆಂದು ಹೇಳಲಾಗಿದೆ. ಗೋಡೆಗೆ ಒರಗಿಕೊಂಡಿರುವ ಮರದ ಕೊರಡುಗಳಿಗೆ ಹೋಲಿಸುವ ಮೂಲಕ ಅವರು ನಿರರ್ಥಕ ಜೀವಿಗಳು ಎಂದು ಹೇಳಲಾಗಿದೆ. ಏಕೆಂದರೆ ಮರದ ಕೊರಡು ಕೂಡ ಉಪಯುಕ್ತವಾಗಬೇಕಿದ್ದರೆ ಅದು ಯಾವುದಾದರೂ ಛಾವಣಿ, ಬಾಗಿಲು ಅಥವಾ ಪೀಠೋಪಕರಣಗಳಲ್ಲಿ ಬಳಸಲ್ಪಡಬೇಕು. ಗೋಡೆಗೆ ಒರಗಿಸಲಾದ ಮರದ ಕೊರಡಿನಿಂದ ಯಾವ ಪ್ರಯೋಜನವೂ ಇಲ್ಲ.

4. ಅವರನ್ನು ಸತ್ಯವಿಶ್ವಾಸದಿಂದ ಕಾಪಟ್ಯದೆಡೆಗೆ ತಿರುಗಿಸುವವನು ಯಾರು ಎಂದು ಇಲ್ಲಿ ತಿಳಿಸಲಾಗಿಲ್ಲ. ಹೀಗೆ ಸ್ಪಷ್ಟೀಕರಿಸದೇ ಇರುವುದರಿಂದ ಸಹಜವಾಗಿಯೇ ಹೊರಡುವ ಅರ್ಥವೇನೆಂದರೆ ಅವರ ಈ ದುರ್ವರ್ತನೆಗೆ ಕೇವಲ ಒಂದೇ ಪ್ರೇರಕವಿರುವುದಲ್ಲ. ಬದಲಾಗಿ ಅನೇಕ ಪ್ರೇರಕಗಳು ಇದರ ಹಿಂದೆ ಕಾರ್ಯತತ್ಪರವಾಗಿವೆ. ಪಿಶಾಚಿಯಿದೆ, ದುಷ್ಟ ಮಿತ್ರರಿದ್ದಾರೆ, ಸ್ವತಃ ಅವರ ಮನಸ್ಸಿನ ಸ್ವಾರ್ಥಗಳಿವೆ. ಕೆಲವರಿಗೆ ಅವರ ಪತ್ನಿಯರು, ಮತ್ತೆ ಕೆಲವರಿಗೆ ಅವರ ಮಕ್ಕಳು ಮತ್ತು ಇನ್ನು ಕೆಲವರಿಗೆ ತಮ್ಮ ಬಳಗಕ್ಕೆ ಸೇರಿದ ದುಷ್ಟ ವ್ಯಕ್ತಿಗಳೂ ಪ್ರೇರಕಗಳಾಗಿದ್ದಾರೆ. ಕೆಲವರನ್ನು ಅವರ ಈರ್ಷ್ಯೆ, ದ್ವೇಷ ಮತ್ತು ದುರಹಂಕಾರ ಈ ಮಾರ್ಗಕ್ಕೆ ಅಟ್ಟಿ ಬಿಟ್ಟಿದೆ.

ಅಲ್ಲಿಂದ ಹೊರಕ್ಕಟ್ಟಿ ಬಿಡುವನೆಂದು ಇವರು ಹೇಳುತ್ತಾರೆ.[5] ವಾಸ್ತವದಲ್ಲಿ ಗೌರವವಂತೂ ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳಿಗಾಗಿಯೇ ಇದೆ. ಆದರೆ ಈ ಕಪಟ ವಿಶ್ವಾಸಿಗಳು ತಿಳಿಯುವುದಿಲ್ಲ.

لَيُخْرِجَنَّ الْأَعَزُّ مِنْهَا الْأَذَلَّ ۚ وَلِلَّهِ الْعِزَّةُ وَلِرَسُولِهِ وَلِلْمُؤْمِنِينَ وَلَٰكِنَّ الْمُنَافِقِينَ لَا يَعْلَمُونَ ٨

9. ಸತ್ಯವಿಶ್ವಾಸಿಗಳೇ, ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತಾನಗಳು ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದ ಅಲಕ್ಷ್ಯಗೊಳಿಸದಿರಲಿ. ಹೀಗೆ ಮಾಡುವವರೇ ನಷ್ಟ ಅನುಭವಿಸುವವರು.

يَا أَيُّهَا الَّذِينَ آمَنُوا لَا تُلْهِكُمْ أَمْوَالُكُمْ وَلَا أَوْلَادُكُمْ عَنْ ذِكْرِ اللَّهِ ۚ وَمَنْ يَفْعَلْ ذَٰلِكَ فَأُولَٰئِكَ هُمُ الْخَاسِرُونَ ٩

10. ನಿಮ್ಮ ಪೈಕಿ ಯಾರದಾದರೂ ಮರಣದ ಸಮಯ ಬಂದಿದ್ದು ಆಗ ಅವನು- "ನನ್ನ ಪ್ರಭೂ ನೀನು ನನಗೆ ಇನ್ನೂ ಸ್ವಲ್ಪ ಹೆಚ್ಚು ಕಾಲಾವಧಿ ನೀಡಿರುವುದಿಲ್ಲವೇಕೆ? ಹಾಗೆ ನೀಡಿದ್ದರೆ ನಾನು ದಾನ-ಧರ್ಮ ಮಾಡುತ್ತಿದ್ದೆ ಮತ್ತು ಸಜ್ಜನರ ಸಾಲಿಗೆ ಸೇರುತ್ತಿದ್ದೆ"- ಎಂದು ಹೇಳುವುದಕ್ಕೆ ಮುಂಚೆ ನಾವು ನಿಮಗೆ ದಯಪಾಲಿಸಿರುವ ಸಂಪತ್ತಿನಿಂದ ಖರ್ಚು ಮಾಡಿರಿ.

وَأَنْفِقُوا مِنْ مَا رَزَقْنَاكُمْ مِنْ قَبْلِ أَنْ يَأْتِيَ أَحَدَكُمُ الْمَوْتُ فَيَقُولَ رَبِّ لَوْلَا أَخَّرْتَنِي إِلَىٰ أَجَلٍ قَرِيبٍ فَأَصَّدَّقَ وَأَكُنْ مِنَ الصَّالِحِينَ ١٠

11. ವಾಸ್ತವದಲ್ಲಿ ಒಬ್ಬನ ಕರ್ಮಾವಧಿಯು ಪೂರ್ಣಗೊಳ್ಳುವ ಸಮಯ ಬಂದು ಬಿಟ್ಟರೆ ಅಲ್ಲಾಹನು ಯಾರಿಗೂ ಇನ್ನಷ್ಟು ಕಾಲಾವಧಿಯನ್ನು ಕೊಡುವುದಿಲ್ಲ. ನೀವು ಮಾಡುತ್ತಿರುವುದೆಲ್ಲವನ್ನು ಅಲ್ಲಾಹನು ತಿಳಿದವನಾಗಿದ್ದಾನೆ.

وَلَنْ يُؤَخِّرَ اللَّهُ نَفْسًا إِذَا جَاءَ أَجَلُهَا ۚ وَاللَّهُ خَبِيرٌ بِمَا تَعْمَلُونَ ١١

---

5. ಅರ್ಥಾತ್- ಕ್ಷಮೆಯಾಚಿಸಲು ಪ್ರವಾದಿವರ್ಯರ(ಸ) ಬಳಿಗೆ ಬಾರದೆ ಇರುವುದಷ್ಟೇ ಅಲ್ಲ ಆ ಮಾತು ಕೇಳಿ ಅವರು ಅಹಂಭಾವ ಮತ್ತು ದರ್ಪದಿಂದ ತಮ್ಮ ತಲೆಯನ್ನು ಕೊಡವಿಕೊಳ್ಳುತ್ತಾರೆ. ಪ್ರವಾದಿವರ್ಯರ(ಸ) ಬಳಿಗೆ ಬಂದು ಕ್ಷಮೆ ಯಾಚಿಸುವುದು ತಮ್ಮ ಪಾಲಿಗೆ ಅಪಮಾನವೆಂದು ಭಾವಿಸಿ ತಮ್ಮ ಜಾಗದಲ್ಲಿ ಭದ್ರವಾಗಿ ಕುಳಿತಿರುತ್ತಾರೆ. ಇದೆಲ್ಲವೂ ಅವರು ಸತ್ಯವಿಶ್ವಾಸಿಗಳಲ್ಲ ಎಂಬುದರ ಲಕ್ಷಣಗಳಾಗಿವೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವೂ ಭೂಮಿಯಲ್ಲಿರುವ ಪ್ರತಿಯೊಂದು ವಸ್ತುವೂ ಅಲ್ಲಾಹನನ್ನು ಜಪಿಸುತ್ತಿದೆ. ಪ್ರಭುತ್ವವು ಅವನಿಗೆ ಸೇರಿದೆ, ಪ್ರಶಂಸೆಗಳು ಅವನಿಗೇ ಆಗಿದೆ ಮತ್ತು ಅವನು ಎಲ್ಲ ಕಾರ್ಯಗಳಿಗೂ ಸಮರ್ಥನಾಗಿದ್ದಾನೆ.[1]

يُسَبِّحُ لِلّٰهِ مَا فِي السَّمٰوٰتِ وَمَا فِي الْاَرْضِ ۚ لَهُ الْمُلْكُ وَلَهُ الْحَمْدُ ۡ وَهُوَ عَلٰى كُلِّ شَيْءٍ قَدِيْرٌ ①

2. ಅವನೇ ನಿಮ್ಮನ್ನು ಸೃಷ್ಟಿಸಿದನು. ಇನ್ನು ನಿಮ್ಮ ಪೈಕಿ ಒಬ್ಬನು ಸತ್ಯನಿಷೇಧಿಯಾಗಿದ್ದಾನೆ, ಇನ್ನೊಬ್ಬನು ಸತ್ಯವಿಶ್ವಾಸಿಯಾಗಿದ್ದಾನೆ. ಅಲ್ಲಾಹ್ ನೀವು ಮಾಡುತ್ತಿರುವುದೆಲ್ಲವನ್ನೂ ವೀಕ್ಷಿಸುತ್ತಿದ್ದಾನೆ.

هُوَ الَّذِيْ خَلَقَكُمْ فَمِنْكُمْ كَافِرٌ وَّمِنْكُمْ مُّؤْمِنٌ ۭ وَاللّٰهُ بِمَا تَعْمَلُوْنَ بَصِيْرٌ ②

3. ಅವನು ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿರುವವನು ಮತ್ತು ನಿಮಗೆ ರೂಪ ಕೊಟ್ಟನು, ಅತ್ಯುತ್ತಮ ಸ್ವರೂಪ ಕೊಟ್ಟನು, ಕೊನೆಗೆ ನಿಮಗೆ ಅವನ ಕಡೆಗೇ ಮರಳಲಿಕ್ಕಿದೆ.

خَلَقَ السَّمٰوٰتِ وَالْاَرْضَ بِالْحَقِّ وَصَوَّرَكُمْ فَاَحْسَنَ صُوَرَكُمْ ۚ وَاِلَيْهِ الْمَصِيْرُ ③

4. ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವಿನ ಜ್ಞಾನ ಅವನಿಗಿದೆ. ನೀವು ಅಡಗಿಸಿಡುವುದನ್ನೂ ಪ್ರಕಟಗೊಳಿಸುವುದನ್ನೂ ಅವನು ಬಲ್ಲನು[2] ಮತ್ತು ಅಲ್ಲಾಹನು ಅಂತರಾಳದ ಸ್ಥಿತಿಯನ್ನೂ ಅರಿತಿರುತ್ತಾನೆ.

يَعْلَمُ مَا فِي السَّمٰوٰتِ وَالْاَرْضِ وَيَعْلَمُ مَا تُسِرُّوْنَ وَمَا تُعْلِنُوْنَ ۭ وَاللّٰهُ عَلِيْمٌۢ بِذَاتِ الصُّدُوْرِ ④

5. ಇದಕ್ಕೆ ಮುಂಚೆ ಸತ್ಯವನ್ನು ಧಿಕ್ಕರಿಸಿದ ಹಾಗೂ ಕೊನೆಗೆ ತಮ್ಮ ದುಷ್ಕೃತ್ಯಗಳ ಫಲವನ್ನು ಸವಿದವರ ವೃತ್ತಾಂತವು ನಿಮಗೆ ತಲಪಿಲ್ಲವೇ? ಮುಂದೆ ಅವರಿಗಾಗಿ ವೇದನಾಯುಕ್ತ ಯಾತನೆ ಇದೆ.

اَلَمْ يَاْتِكُمْ نَبَؤُا الَّذِيْنَ كَفَرُوْا مِنْ قَبْلُ ۡ فَذَاقُوْا وَبَالَ اَمْرِهِمْ وَلَهُمْ عَذَابٌ اَلِيْمٌ ⑤

1. ಅರ್ಥಾತ್- ಅವನು ಸರ್ವಶಕ್ತನಾಗಿದ್ದಾನೆ. ಅವನು ಏನು ಬೇಕಾದರೂ ಮಾಡಬಲ್ಲನು. ಅವನ ಸಾಮರ್ಥ್ಯವನ್ನು ಕುಂಠಿತಗೊಳಿಸಲು ಯಾವ ಶಕ್ತಿಗೂ ಸಾಧ್ಯವಿಲ್ಲ.
2. ಇನ್ನೊಂದು ಭಾಷಾಂತರ, "ನೀವು ಮರೆಯಲ್ಲಿ ಮಾಡುವುದನ್ನು, ಬಹಿರಂಗವಾಗಿ ಮಾಡುವುದನ್ನೂ" ಎಂದೂ ಆಗಬಹುದು.

6. ಅವರು ಇಂತಹ ದುರ್ಗತಿಗೆ ಅರ್ಹರೆನಿಸಿದ್ದೇಕೆಂದರೆ, ಅವರ ಬಳಿಗೆ ಸಂದೇಶವಾಹಕರು ಸುಸ್ಪಷ್ಟ ಆಧಾರ ಪ್ರಮಾಣಗಳೊಂದಿಗೆ ಹಾಗೂ ನಿದರ್ಶನಗಳೊಂದಿಗೆ ಬರುತ್ತಲೇ ಇದ್ದರು. ಆದರೆ ಅವರು, "ಮಾನವರು ನಮಗೆ ಸನ್ಮಾರ್ಗದರ್ಶನ ನೀಡುವರೇ?" ಎಂದರು. ಹೀಗೆ ಅವರು ಸತ್ಯವನ್ನು ಧಿಕ್ಕರಿಸಿದರು ಮತ್ತು ಮುಖ ತಿರುಗಿಸಿಕೊಂಡರು. ಆಗ ಅಲ್ಲಾಹನೂ ಅವರ ಬಗ್ಗೆ ನಿರ್ಲಕ್ಷ್ಯ ತಾಳಿದನು. ಅಲ್ಲಾಹನಂತು ನಿರಪೇಕ್ಷನೂ ಸ್ವಯಂ ಸ್ತುತ್ಯರ್ಹನೂ ಆಗಿರುತ್ತಾನೆ.

ذٰلِكَ بِاَنَّهٗ كَانَتْ تَّاْتِيْهِمْ رُسُلُهُمْ بِالْبَيِّنٰتِ فَقَالُوْۤا اَبَشَرٌ يَّهْدُوْنَنَا ؗ فَكَفَرُوْا وَ تَوَلَّوْا وَّ اسْتَغْنَى اللّٰهُ ؕ وَاللّٰهُ غَنِيٌّ حَمِيْدٌ ۝

7. ಮರಣಾನಂತರ ಎಷ್ಟು ಮಾತ್ರಕ್ಕೂ ನಾವು ಪುನಃ ಎಬ್ಬಿಸಲ್ಪಡಲಾರೆವೆಂದು ಸತ್ಯನಿಷೇಧಿಗಳು ಬಹಳ ಧೈರ್ಯದಿಂದ ಸಾರಿದ್ದಾರೆ. ಅವ ರೊಡನೆ ಹೇಳಿರಿ- "ಹಾಗಲ್ಲ, ನನ್ನ ಪ್ರಭುವಿನಾಣೆ! ನೀವು ಖಂಡಿತ ವಾಗಿಯೂ ಎಬ್ಬಿಸಲ್ಪಡುವಿರಿ.[3] ತರುವಾಯ ನೀವು (ಭೂಲೋಕ ದಲ್ಲಿ) ಏನೇನು ಮಾಡಿರುವಿರೆಂಬುದನ್ನು ನಿಮಗೆ ಖಂಡಿತ ತೋರಿಸಿ ಕೊಡಲಾಗುವುದು ಮತ್ತು ಹೀಗೆ ಮಾಡುವುದು ಅಲ್ಲಾಹನ ಮಟ್ಟಿಗೆ ಬಹಳ ಸುಲಭವಾಗಿದೆ."

زَعَمَ الَّذِيْنَ كَفَرُوْۤا اَنْ لَّنْ يُّبْعَثُوْا ؕ قُلْ بَلٰى وَ رَبِّيْ لَتُبْعَثُنَّ ثُمَّ لَتُنَبَّؤُنَّ بِمَا عَمِلْتُمْ ؕ وَ ذٰلِكَ عَلَى اللّٰهِ يَسِيْرٌ ۝

8. ಆದುದರಿಂದ ಅಲ್ಲಾಹನ ಮೇಲೂ ಅವನ ಸಂದೇಶವಾಹಕರ ಮೇಲೂ ನಾವು ಅವತೀರ್ಣಗೊಳಿಸಿರುವ ಪ್ರಕಾಶದ ಮೇಲೂ ವಿಶ್ವಾಸವಿರಿಸಿರಿ[4] ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಅರಿತಿರುತ್ತಾನೆ.

فَاٰمِنُوْا بِاللّٰهِ وَرَسُوْلِهٖ وَالنُّوْرِ الَّذِيْۤ اَنْزَلْنَا ؕ وَاللّٰهُ بِمَا تَعْمَلُوْنَ خَبِيْرٌ ۝

9. ಸಮ್ಮೇಳನದ ದಿನ ಅವನು ನಿಮ್ಮೆಲ್ಲರನ್ನು ಒಟ್ಟುಗೂಡಿಸುವಾಗ (ನಿಮಗೆ ಇದರ ಅರಿವಾಗುವುದು).[5] ಅದು ಪರಸ್ಪರರೆದುರು

يَوْمَ يَجْمَعُكُمْ لِيَوْمِ الْجَمْعِ ذٰلِكَ يَوْمُ التَّغَابُنِ ؕ وَمَنْ يُّؤْمِنْ بِاللّٰهِ وَيَعْمَلْ

3. ಪರಲೋಕವನ್ನು ನಿರಾಕರಿಸುವವರ ಮುಂದೆ ಪುನರುತ್ಥಾನ ದಿನ ಆಸನ್ನವಾಗುವುದರ ಸುದ್ದಿಯನ್ನು ಆಣೆ ಹಾಕಿ ಹೇಳಿದರೂ, ಆಣೆ ಹಾಕದೆ ಹೇಳಿದರೂ ಯಾವ ವ್ಯತ್ಯಾಸ ತಲೆದೋರುತ್ತದೆ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸಬಹುದು. ಅವನು ಅದನ್ನು ಸಮ್ಮತಿಸಲು ಸಿದ್ಧನಾಗದೆ ಇರುವಾಗ ಆಣೆ ಹಾಕಿದ ಮಾತ್ರಕ್ಕೆ ಅದನ್ನು ಒಪ್ಪಲು ತಯಾರಾಗುವನೇ? ಇದರ ಉತ್ತರ ಹೀಗಿದೆ: ಈ ಮಾತಿನ ಸಂಬೋಧಿತರು ತಮ್ಮ ಜ್ಞಾನ ಮತ್ತು ಅನುಭವದಿಂದ ಪ್ರವಾದಿವರ್ಯರು(ಸ) ಜೀವನದಲ್ಲೆಂದೂ ಸುಳ್ಳು ಹೇಳದವರೆಂದು ಬಲ್ಲವರಾಗಿದ್ದರು. ಆದ್ದರಿಂದ ನಾಲಗೆಯಿಂದ ಅವರು ಎಂಥ ಆರೋಪಗಳನ್ನು ಹುಟ್ಟು ಹಾಕಿದರೂ "ಈ ಸತ್ಯಸಂಧ ವ್ಯಕ್ತಿ ತನ್ನ ಜ್ಞಾನ ಮತ್ತು ವಿಶ್ವಾಸದ ಆಧಾರದಲ್ಲಿ ಸತ್ಯವೆಂದು ಮನಗಾಣದ ವಿಷಯವನ್ನು ಆಣೆ ಹಾಕಿ ಹೇಳಬಹುದು" ಎಂದು ಅವರಿಗೆ ಊಹಿಸಲಿಕ್ಕೂ ಸಾಧ್ಯವಿರಲಿಲ್ಲ.

4. ಅಲ್ಲಾಹನು ಅವತೀರ್ಣಗೊಳಿಸಿದ ಪ್ರಕಾಶವೆಂದರೆ ಪವಿತ್ರ ಕುರ್‌ಆನ್ ಆಗಿದೆ ಎಂದು ವ್ಯಕ್ತವಾಗುತ್ತದೆ. ಬೆಳಕು ಸ್ವತಃ ಬೆಳಗಿ ಮೊದಲು ಕತ್ತಲೆಯಲ್ಲಿ ಮುಳುಗಿದ್ದ ಸುತ್ತಮುತ್ತಲಿನ ಎಲ್ಲ ವಸ್ತುಗಳನ್ನು ಬೆಳಗಿಸಿ ಬಿಡುತ್ತದೆ. ಹಾಗೆಯೇ ಕುರ್‌ಆನ್ ಕೂಡ ಒಂದು ದೀಪವಾಗಿದೆ. ಅದು ದಿಟವಾದುದೆಂದು ಸ್ವತಃ ಪ್ರಶೋಭಿಸುತ್ತದೆ. ಅದರ ಬೆಳಕಿನಲ್ಲಿ ಮಾನವ ತನ್ನ ಜ್ಞಾನ ಮತ್ತು ಬುದ್ಧಿಯ ಆಧಾರದಲ್ಲಿ ತಿಳಿದುಕೊಳ್ಳಲು ಸಾಧ್ಯವಾಗದಂತಹ ವಿಷಯಗಳನ್ನೆಲ್ಲ ತಿಳಿದು ಕೊಳ್ಳಲು ಸಾಧ್ಯವಿದೆ.

5. ಸಮ್ಮೇಳನದ ದಿನವೆಂದರೆ ಪುನರುತ್ಥಾನ ದಿನ. ಎಲ್ಲರನ್ನೂ ಒಟ್ಟು ಸೇರಿಸುವುದೆಂದರೆ - ಜಗತ್ತಿನ ಆರಂಭದಿಂದ ಹಿಡಿದು ನಿರ್ಣಾಯಕ ದಿನದ ತನಕ ಹುಟ್ಟಿದ ಸಮಸ್ತ ಜನರನ್ನು ಒಮ್ಮೆಲೇ ಜೀವಂತಗೊಳಿಸಿ ಒಂದುಗೂಡಿಸುವುದಾಗಿದೆ.

ಜನರ ಸೋಲು-ಗೆಲುವುಗಳ ದಿನವಾಗಿರುವುದು.[6] ಅಲ್ಲಾಹನ ಮೇಲೆ ವಿಶ್ವಾಸವಿರಿಸಿ ಸತ್ಕರ್ಮವೆಸಗುವವನ ಪಾಪಗಳನ್ನು ಅಲ್ಲಾಹನು ಉದುರಿಸಿ ಬಿಡುವನು ಮತ್ತು ಅವನನ್ನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಗೊಳಿಸುವನು. ಇವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಇದೇ ಮಹಾ ಯಶಸ್ಸು.

صَالِحًا يُّكَفِّرْ عَنْهُ سَيِّاٰتِهٖ وَيُدْخِلْهُ جَنّٰتٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَآ اَبَدًا ۗ ذٰلِكَ الْفَوْزُ الْعَظِيْمُ ٩

10. ಸತ್ಯನಿಷೇಧಿಗಳು ಮತ್ತು ನಮ್ಮ ಸೂಕ್ತಗಳನ್ನು ಧಿಕ್ಕರಿಸಿದವರು ನರಕವಾಸಿಗಳಾಗಿರುವರು. ಅದರಲ್ಲಿ ಅವರು ಸದಾಕಾಲ ವಾಸಿಸು ವರು ಮತ್ತು ಅದು ಅತ್ಯಂತ ನಿಕೃಷ್ಟ ವಾಸಸ್ಥಾನವಾಗಿದೆ.

وَالَّذِيْنَ كَفَرُوْا وَكَذَّبُوْا بِاٰيٰتِنَآ اُولٰٓئِكَ اَصْحٰبُ النَّارِ خٰلِدِيْنَ فِيْهَا ۗ وَبِئْسَ الْمَصِيْرُ ١٠

11. ಎಂದೂ ಯಾವ ಸಂಕಷ್ಟವೂ ಅಲ್ಲಾಹನ ಅನುಜ್ಞೆಯಿಂದಲ್ಲದೆ ಬರುವುದಿಲ್ಲ. ಅಲ್ಲಾಹನ ಮೇಲೆ ವಿಶ್ವಾಸವಿರಿಸಿದವನ ಹೃದಯಕ್ಕೆ ಅಲ್ಲಾಹನು ಮಾರ್ಗದರ್ಶನ ನೀಡುತ್ತಾನೆ. ಅಲ್ಲಾಹನಿಗೆ ಸಕಲ ವಿಷಯಗಳ ಜ್ಞಾನವಿದೆ.

مَآ اَصَابَ مِنْ مُّصِيْبَةٍ اِلَّا بِاِذْنِ اللّٰهِ ۗ وَمَنْ يُّؤْمِنْ بِاللّٰهِ يَهْدِ قَلْبَهٗ ۗ وَاللّٰهُ بِكُلِّ شَيْءٍ عَلِيْمٌ ١١

12. ಅಲ್ಲಾಹನ ಅನುಸರಣೆ ಮಾಡಿರಿ ಮತ್ತು ಸಂದೇಶವಾಹಕರ ಅನುಸರಣೆ ಮಾಡಿರಿ. ಆದರೆ, ನೀವು ಅನುಸರಣೆಯಿಂದ ವಿಮುಖರಾದರೆ, ನಮ್ಮ ಸಂದೇಶವಾಹಕರ ಮೇಲೆ ಸುಸ್ಪಷ್ಟವಾಗಿ ಸತ್ಯವನ್ನು ತಲಪಿಸುವ ಹೊರತು ಇನ್ನಾವ ಹೊಣೆಯೂ ಇಲ್ಲ.

وَاَطِيْعُوا اللّٰهَ وَاَطِيْعُوا الرَّسُوْلَ ۚ فَاِنْ تَوَلَّيْتُمْ فَاِنَّمَا عَلٰى رَسُوْلِنَا الْبَلٰغُ الْمُبِيْنُ ١٢

13. ಅಲ್ಲಾಹನು - ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ, ಆದುದರಿಂದ ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆಯಿಡಬೇಕು.[7]

اَللّٰهُ لَآ اِلٰهَ اِلَّا هُوَ ۗ وَعَلَى اللّٰهِ فَلْيَتَوَكَّلِ الْمُؤْمِنُوْنَ ١٣

6. ಅರ್ಥಾತ್- ನಿಜವಾದ ಸೋಲು-ಗೆಲುವು ನಿರ್ಣಾಯಕ ದಿನದಂದೇ ಇರುವುದು. ಯಾರು ವಾಸ್ತವದಲ್ಲಿ ನಷ್ಟ ಹೊಂದಿದವರು ಮತ್ತು ಯಾರು ಲಾಭ ಪಡೆಯುವವರೆಂದು ಅಲ್ಲಿ ಹೋದ ನಂತರವೇ ತಿಳಿಯುವುದು. ನಿಜವಾಗಿ ಯಾರು ಮೋಸ ಹೋದನು ಮತ್ತು ಯಾರು ಚತುರನೆಂದು ಸಾಬೀತಾದನು, ತಮ್ಮ ಜೀವನದ ಬಂಡವಾಳವನ್ನೆಲ್ಲಾ ತಪ್ಪು ವ್ಯಾಪಾರದಲ್ಲಿ ವ್ಯಯಿಸಿ ದಿವಾಳಿಯಾದವನಾರು? ತನ್ನ ಶಕ್ತಿ-ಸಾಮರ್ಥ್ಯ, ಪ್ರಯತ್ನ, ಸಂಪತ್ತು ಮತ್ತು ಸಮಯವನ್ನೆಲ್ಲಾ ಲಾಭದ ವ್ಯಾಪಾರದಲ್ಲಿ ವ್ಯಯಿಸುವ ಮೂಲಕ- ಲೋಕದ ವಾಸ್ತವಿಕತೆಯನ್ನರಿಯುವಲ್ಲಿ ಮೋಸ ಹೋಗದಿರುತ್ತಿದ್ದರೆ ಮೊದಲಿನವರು ಕೂಡ ಗಳಿಸಬಹುದಾಗಿದ್ದಂತಹ- ಲಾಭವನ್ನು ಗಳಿಸಿದವರು ಯಾರು ಎಂದು ಅಲ್ಲಿಗೆ ತಲಪಿದ ನಂತರವೇ ತಿಳಿಯುವುದು.

7. ಅರ್ಥಾತ್- ದೇವತ್ವದ ಅಧಿಕಾರಗಳೆಲ್ಲವೂ ಅಲ್ಲಾಹನ ಹಸ್ತದಲ್ಲಿ ಮಾತ್ರ ಇವೆ. ನಿಮ್ಮ ಪಾಲಿಗೆ ಸುದೈವ-ದುರ್ದೈವಗಳನ್ನು ರೂಪಿಸಲು ಅವನ ಹೊರತು ಇನ್ನಾರಿಗೂ ಅಧಿಕಾರವಿಲ್ಲ. ಒಳ್ಳೆಯ ಕಾಲ ಬರುವುದಿದ್ದರೆ ಅವನ ಮೂಲಕವೇ ಬರುವುದು. ಕೆಟ್ಟ ಕಾಲ ದೂರವಾಗುವುದಿದ್ದರೆ ಅವನು ದೂರ ಸರಿಸುವುದರಿಂದಲೇ ಸಾಧ್ಯವಾಗುವುದು. ಆದ್ದರಿಂದ ಪ್ರಾಮಾಣಿಕ ಹೃದಯದಿಂದ ಅಲ್ಲಾಹನನ್ನು ಏಕೈಕ ದೇವನೆಂದು ನಂಬುವವನು ಅಲ್ಲಾಹನ ಮೇಲೆ ಭರವಸೆಯಿರಿಸಬೇಕು ಮತ್ತು ಓರ್ವ ಸತ್ಯವಿಶ್ವಾಸಿಯೆಂಬ ನೆಲೆಯಲ್ಲಿ ಅಲ್ಲಾಹನು ನಿರ್ದೇಶಿಸುವ ಮಾರ್ಗದಲ್ಲೇ ಹಿತವಿದೆ ಎಂಬ ವಿಶ್ವಾಸದೊಂದಿಗೆ ತನ್ನ ಕರ್ತವ್ಯವನ್ನು ಪಾಲಿಸುತ್ತಾ ಸಾಗಬೇಕು. ಇದಲ್ಲದೆ ಅವನಿಗೆ ಅನ್ಯ ದಾರಿಯಿಲ್ಲ.

14. ಸತ್ಯವಿಶ್ವಾಸಿಗಳೇ, ನಿಮ್ಮ ಪತ್ನಿಯರಲ್ಲಿ ಮತ್ತು ನಿಮ್ಮ ಮಕ್ಕಳಲ್ಲಿ ಕೆಲವರು ನಿಮ್ಮ ಶತ್ರುಗಳಿದ್ದಾರೆ. ಅವರ ಬಗ್ಗೆ ಜಾಗರೂಕರಾಗಿರಿ ಮತ್ತು ನೀವು ಕ್ಷಮಿಸಿದರೆ, ಕಡೆಗಣಿಸಿದರೆ ಹಾಗೂ ಮನ್ನಿಸಿದರೆ ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.[8]

يَٰٓأَيُّهَا ٱلَّذِينَ ءَامَنُوٓاْ إِنَّ مِنْ أَزْوَٰجِكُمْ وَأَوْلَٰدِكُمْ عَدُوًّا لَّكُمْ فَٱحْذَرُوهُمْ ۚ وَإِن تَعْفُواْ وَتَصْفَحُواْ وَتَغْفِرُواْ فَإِنَّ ٱللَّهَ غَفُورٌ رَّحِيمٌ ﴿١٤﴾

15. ನಿಮ್ಮ ಸಂಪತ್ತು ಮತ್ತು ಸಂತತಿಗಳು ಒಂದು ಪರೀಕ್ಷೆಯಾಗಿದೆ. ಅತ್ಯುನ್ನತ ಪ್ರತಿಫಲವಂತು ಅಲ್ಲಾಹನ ಬಳಿಯಲ್ಲೇ ಇದೆ.

إِنَّمَآ أَمْوَٰلُكُمْ وَأَوْلَٰدُكُمْ فِتْنَةٌ ۚ وَٱللَّهُ عِندَهُۥٓ أَجْرٌ عَظِيمٌ ﴿١٥﴾

16. ಆದುದರಿಂದ ನಿಮ್ಮಿಂದ ಸಾಧ್ಯವಿರುವಷ್ಟು ಅಲ್ಲಾಹನನ್ನು ಭಯಪಡುತ್ತಲಿರಿ ಮತ್ತು ಆಲಿಸಿರಿ ಹಾಗೂ ಆಜ್ಞಾಪಾಲನೆ ಮಾಡಿರಿ ಮತ್ತು ಸಂಪತ್ತನ್ನು ಖರ್ಚು ಮಾಡಿರಿ. ಇದು ನಿಮಗೇ ಹಿತಕರವಾಗಿದೆ. ತಮ್ಮ ಮನಸ್ಸಿನ ಸಂಕುಚಿತತೆಯಿಂದ ಸುರಕ್ಷಿತರಾಗಿರುವವರು ಮಾತ್ರ ಯಶಸ್ವಿಗಳು.

فَٱتَّقُواْ ٱللَّهَ مَا ٱسْتَطَعْتُمْ وَٱسْمَعُواْ وَأَطِيعُواْ وَأَنفِقُواْ خَيْرًا لِّأَنفُسِكُمْ ۗ وَمَن يُوقَ شُحَّ نَفْسِهِۦ فَأُوْلَٰٓئِكَ هُمُ ٱلْمُفْلِحُونَ ﴿١٦﴾

17. ನೀವು ಅಲ್ಲಾಹನಿಗೆ ಉತ್ತಮ ಸಾಲ ನೀಡಿದರೆ ಅವನು ನಿಮಗೆ ಎಷ್ಟೋ ಪಟ್ಟು ವರ್ಧಿಸಿ ಕೊಡುವನು ಮತ್ತು ನಿಮ್ಮ ತಪ್ಪುಗಳನ್ನು ಕ್ಷಮಿಸುವನು. ಅಲ್ಲಾಹನು ಮಹಾ ಗುಣಗ್ರಾಹಿಯೂ ಸಹನಶೀಲನೂ ಆಗಿರುತ್ತಾನೆ.

إِن تُقْرِضُواْ ٱللَّهَ قَرْضًا حَسَنًا يُضَٰعِفْهُ لَكُمْ وَيَغْفِرْ لَكُمْ ۚ وَٱللَّهُ شَكُورٌ حَلِيمٌ ﴿١٧﴾

18. ವ್ಯಕ್ತ-ಅವ್ಯಕ್ತಗಳೆಲ್ಲವನ್ನೂ ಅರಿತಿರುವವನೂ ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

عَٰلِمُ ٱلْغَيْبِ وَٱلشَّهَٰدَةِ ٱلْعَزِيزُ ٱلْحَكِيمُ ﴿١٨﴾

---

8. ಅರ್ಥಾತ್- ಲೌಕಿಕ ಸಂಬಂಧದ ಆಧಾರದಲ್ಲಿ ಅವರು ಮಾನವನಿಗೆ ಅತಿ ಹೆಚ್ಚು ಪ್ರೀತಿಪಾತ್ರರಾಗಿದ್ದಾರೆ. ಆದರೆ ಧರ್ಮದ ಆಧಾರದಲ್ಲಿ ನೋಡುವುದಿದ್ದರೆ ಅವರು ನಿಮ್ಮ 'ಶತ್ರು'ಗಳಾಗಿದ್ದಾರೆ. ಅವರು ನಿಮ್ಮನ್ನು ಒಳಿತಿನಿಂದ ತಡೆದು ಕೆಡುಕಿನತ್ತ ಸಾಗಿಸುತ್ತಾರೆ ಅಥವಾ ಸತ್ಯವಿಶ್ವಾಸದಿಂದ ತಡೆದು ಸತ್ಯನಿಷೇಧದ ಕಡೆಗೆ ಸೆಳೆಯುತ್ತಾರೆ, ಇಲ್ಲವೇ ಅವರ ಸಹಾನುಭೂತಿ ಸತ್ಯನಿಷೇಧಿಗಳೊಂದಿಗಿರುತ್ತದೆ- ಮುಂತಾದ ಯಾವುದೇ ನೆಲೆಯಲ್ಲಿ ಅವರು ನಿಮ್ಮ ಶತ್ರುಗಳಾಗಿರಬಹುದು. ಒಟ್ಟಿನಲ್ಲಿ ನೀವು ಅವರ ಬಗ್ಗೆ ಎಚ್ಚರದಿಂದಿರಬೇಕಾದುದು ಅತ್ಯವಶ್ಯಕವಾಗಿದೆ. ಅವರ ಬಗೆಗಿನ ಪ್ರೀತಿಯಲ್ಲಿ ಸಿಲುಕಿ ನಿಮ್ಮ ಪರಲೋಕವನ್ನು ನಾಶಪಡಿಸಿಕೊಳ್ಳಬಾರದು. ಇದರರ್ಥ ನೀವು ಅವರನ್ನು ಶತ್ರುವೆಂದು ಬಗೆದು ಅವರೊಂದಿಗೆ ಕಠೋರ ವರ್ತನೆ ತೋರಬೇಕೆಂದಲ್ಲ, ಬದಲಾಗಿ ಅವರ ಸುಧಾರಣೆ ಮಾಡಲಾಗದಿದ್ದರೆ ಕನಿಷ್ಠಪಕ್ಷ ತಮ್ಮನ್ನಾದರೂ ಕೆಡುಕಿನಿಂದ ರಕ್ಷಿಸಿಕೊಳ್ಳಿರಿ ಎಂಬುದು ಇದರ ಇಂಗಿತವಾಗಿದೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸಂದೇಶವಾಹಕರೇ, ನೀವು ಸ್ತ್ರೀಯರಿಗೆ ತಲಾಕ್ ಕೊಡುವಾಗ ಅವರಿಗೆ ಅವರ ಇದ್ದತ್‌ಗಾಗಿ ತಲಾಕ್ ಕೊಡಿರಿ.[1] ಮತ್ತು ಇದ್ದತಿನ ಕಾಲಾವಧಿಯನ್ನು ಸರಿಯಾಗಿ ಎಣಿಸಿರಿ ಮತ್ತು ನಿಮ್ಮ ಪ್ರಭುವಾದ ಅಲ್ಲಾಹನನ್ನು ಭಯಪಡಿರಿ.[2] (ಇದ್ದತಿನ ಕಾಲಾವಧಿಯಲ್ಲಿ) ಅವರು ಸ್ಪಷ್ಟವಾದ ಅಶ್ಲೀಲ ಕಾರ್ಯವೆಸಗದಿರುವಾಗ[3] ನೀವು ಅವರನ್ನು ಅವರ ಮನೆಗಳಿಂದ ಹೊರ ಹಾಕಬಾರದು ಮತ್ತು ಅವರಾಗಿಯೂ ಹೊರಟು ಹೋಗಬಾರದು.[4] ಅಲ್ಲಾಹನು ನಿಶ್ಚಯಿಸಿದ ಮೇರೆಗಳಿವು. ಅಲ್ಲಾಹನ ಮೇರೆಗಳನ್ನು ಮೀರುವವನು ತನ್ನ ಮೇಲೆ ತಾನೇ ಅಕ್ರಮವೆಸಗುವನು. ಪ್ರಾಯಶಃ ಇದಾದ

يٰٓاَيُّهَا النَّبِيُّ اِذَا طَلَّقْتُمُ النِّسَآءَ فَطَلِّقُوْهُنَّ
لِعِدَّتِهِنَّ وَاَحْصُوا الْعِدَّةَ ۚ وَاتَّقُوا
اللّٰهَ رَبَّكُمْ ۚ لَا تُخْرِجُوْهُنَّ مِنْۢ
بُيُوْتِهِنَّ وَلَا يَخْرُجْنَ اِلَّآ اَنْ يَّاْتِيْنَ
بِفَاحِشَةٍ مُّبَيِّنَةٍ ۗ وَتِلْكَ حُدُوْدُ
اللّٰهِ ۗ وَمَنْ يَّتَعَدَّ حُدُوْدَ اللّٰهِ فَقَدْ
ظَلَمَ نَفْسَهٗ ۗ لَا تَدْرِيْ لَعَلَّ اللّٰهَ

1. 'ಇದ್ದತ್‌ಗಾಗಿ ತಲಾಕ್ ಕೊಡಿರಿ' ಎಂಬುದಕ್ಕೆ ಎರಡು ಅರ್ಥಗಳಿದ್ದು ಇಲ್ಲಿ ಈ ಎರಡೂ ಅರ್ಥಗಳು ಅನ್ವಯವಾಗುತ್ತವೆ. ಮೊದಲನೆಯದಾಗಿ ಆರ್ತವ ಕಾಲದಲ್ಲಿ ಸ್ತ್ರೀಗೆ ತಲಾಕ್ ಕೊಡದಿರಿ. ಬದಲಾಗಿ ಇದ್ದತ್‌ನ ಅವಧಿಯನ್ನು ಆರಂಭಿಸಲು ಸಾಧ್ಯವಾಗುವ ಸ್ಥಿತಿಯಲ್ಲಿ ತಲಾಕ್ ನೀಡಿರಿ. ಎರಡನೆಯದಾಗಿ ಇದ್ದತ್‌ನ ಅವಧಿಯೊಳಗೆ ಸಂಬಂಧ ಪುನರ್‌ಸ್ಥಾಪಿಸುವ ಅವಕಾಶವಿಟ್ಟುಕೊಂಡು ತಲಾಕ್ ನೀಡಿರಿ. ಸಂಬಂಧ ಪುನರ್‌ಸ್ಥಾಪಿಸುವ ಅವಕಾಶವೇ ಇಲ್ಲದ ರೂಪದಲ್ಲಿ ತಲಾಕ್ ನೀಡದಿರಿ. ಈ ಆದೇಶಕ್ಕೆ ಹದೀಸ್‌ನಲ್ಲಿ ದೊರೆಯುವ ವಿವರಣೆಯ ಆಧಾರದಲ್ಲಿ ತಲಾಕ್‌ನ ನಿಯಮ ಇಂತಿದೆ. ಆರ್ತವ ಕಾಲದಲ್ಲಿ ತಲಾಕ್ ನೀಡಬಾರದು. ಪತ್ನಿಯೊಂದಿಗೆ ಸಂಸರ್ಗ ನಡೆಸಿರದಂತಹ ಶುದ್ಧಾವಸ್ಥೆಯಲ್ಲಿ ತಲಾಕ್ ನೀಡಬೇಕು. ಇಲ್ಲವೇ ಗರ್ಭಿಣಿಯಾಗಿರುವ ವಿಷಯ ತಿಳಿದ ನಂತರ ತಲಾಕ್ ನೀಡಬೇಕು. ಹಾಗೆಯೇ ಒಂದೇ ಬಾರಿಗೆ ಮೂರು ತಲಾಕನ್ನೂ ನೀಡಬಾರದು.
2. ಅರ್ಥಾತ್- ತಲಾಕನ್ನು ತಮಾಷೆಯೆಂದು ಪರಿಗಣಿಸದಿರಿ. ತಲಾಕ್‌ನಂತಹ ಪ್ರಮುಖ ಸಮಸ್ಯೆ ತಲೆದೋರಿದಾಗ ಯಾವಾಗ ತಲಾಕ್ ನೀಡಬೇಕು, ಇದ್ದತ್ ಯಾವಾಗ ಆರಂಭಗೊಂಡು ಯಾವಾಗ ಕೊನೆಗೊಳ್ಳುತ್ತದೆ ಎಂದೂ ನೆನಪಿರದಂತಹ ಸ್ಥಿತಿ ನಿಮಗೆ ಎದುರಾಗಬಾರದು. ತಲಾಕ್ ಕೊಡುವಾಗ ಅದರ ಸಮಯ ಮತ್ತು ದಿನಾಂಕವನ್ನೂ ನೆನಪಿಡಬೇಕು. ಯಾವ ಪರಿಸ್ಥಿತಿಯಲ್ಲಿ ಸ್ತ್ರೀಗೆ ತಲಾಕ್ ನೀಡಲಾಗಿದೆ ಎಂಬುದನ್ನೂ ನೆನಪಿನಲ್ಲಿಡಬೇಕು.
3. ಅರ್ಥಾತ್- ಆಕೆ ದುರಾಚಾರಕ್ಕೀಡಾಗಿದ್ದರೆ ಅಥವಾ 'ಇದ್ದತ್' ಅವಧಿಯಲ್ಲಿ ಜಗಳಾಡುತ್ತಲೂ ಬಯ್ಯುತ್ತಲೂ ಇದ್ದರೆ.
4. ಅರ್ಥಾತ್ ಪುರುಷ ಸಿಟ್ಟಿನಿಂದ ಸ್ತ್ರೀಯನ್ನು ಮನೆಯಿಂದ ಹೊರಹಾಕಬಾರದು. ಹಾಗೆಯೇ ಸ್ತ್ರೀ ಸ್ವತಃ ಸಿಟ್ಟಾಗಿ ಮನೆಯನ್ನು ಬಿಡಬಾರದು. ಇದ್ದತ್ ಅವಧಿ ಮುಗಿಯುವ ತನಕವೂ ಅದು ಆಕೆಯ ಮನೆಯಾಗಿದೆ. ಹೊಂದಾಣಿಕೆಯ ಯಾವುದೇ ಸಾಧ್ಯತೆಯನ್ನು ಸದುಪಯೋಗಿಸಲು ಇಬ್ಬರೂ ಆ ಮನೆಯಲ್ಲೇ ಇರಬೇಕು. ಇಬ್ಬರೂ ಒಂದೇ ಮನೆಯಲ್ಲಿದ್ದರೆ ಮೂರು ತಿಂಗಳು, ಮೂರು ಆರ್ತವ ಕಾಲ ಅಥವಾ ಗರ್ಭಿಣಿಯಾಗಿದ್ದರೆ ಪ್ರಸವದ ತನಕ ಹೊಂದಾಣಿಕೆಯ ಇಂತಹ ಪ್ರಸಂಗಗಳು ಅನೇಕ ಬಾರಿ ತಲೆದೋರುತ್ತಿರಬಹುದು.

يُحْدِثُ بَعْدَ ذٰلِكَ اَمْرًا ①

ಬಳಿಕ ಅಲ್ಲಾಹನು (ಹೊಂದಾಣಿಕೆಯ) ಯಾವುದಾದರೂ ದಾರಿಯನ್ನು ಉಂಟು ಮಾಡಲೂಬಹುದು- ನಿಮಗೆ ಅರಿಯದು.

فَاِذَا بَلَغْنَ اَجَلَهُنَّ فَاَمْسِكُوْهُنَّ بِمَعْرُوْفٍ اَوْ فَارِقُوْهُنَّ بِمَعْرُوْفٍ وَّ اَشْهِدُوْا ذَوَىْ عَدْلٍ مِّنْكُمْ وَ اَقِيْمُوا الشَّهَادَةَ لِلّٰهِ ۭ ذٰلِكُمْ يُوْعَظُ بِهٖ مَنْ كَانَ يُؤْمِنُ بِاللّٰهِ وَ الْيَوْمِ الْاٰخِرِ ڛ وَمَنْ يَّتَّقِ اللّٰهَ يَجْعَلْ لَّهٗ مَخْرَجًا ②

2. ಅನಂತರ ಅವರು ತಮ್ಮ(ಇದ್ದತಿನ) ಕಾಲಾವಧಿಯ ಕೊನೆಯನ್ನು ತಲುಪಿದಾಗ ಅವರನ್ನು ಉತ್ತಮ ರೀತಿಯಿಂದ (ನಿಮ್ಮ ವಿವಾಹದಲ್ಲಿ) ತಡೆದಿರಿಸಿಕೊಳ್ಳಿರಿ. ಇಲ್ಲವೆ ಉತ್ತಮ ರೀತಿಯಿಂದ ಅವರಿಂದ ಬೇರ್ಪಡಿರಿ ಮತ್ತು ನಿಮ್ಮ ಪೈಕಿ ನ್ಯಾಯಶೀಲರಾದ ಇಬ್ಬರನ್ನು ಸಾಕ್ಷಿಗಳಾಗಿ ಮಾಡಿಕೊಳ್ಳಿರಿ[5] ಮತ್ತು (ಸಾಕ್ಷಿಗಳಾಗುವವರೇ,) ಸಾಕ್ಷ್ಯವನ್ನು ಸರಿಯಾದ ರೀತಿಯಲ್ಲಿ ಅಲ್ಲಾಹನಿಗಾಗಿಯೇ ನೀಡಿರಿ. ನಿಮಗೆ ಉಪದೇಶಿಸಲಾಗುತ್ತಿರುವ ವಿಷಯಗಳಿವು. ಅಲ್ಲಾಹನ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವ ಪ್ರತಿಯೊಬ್ಬನಿಗೆ.[6] ಅಲ್ಲಾಹನನ್ನು ಭಯಪಡುತ್ತ ಕಾರ್ಯವೆಸಗುವವನಿಗೆ ಅಲ್ಲಾಹನು ಸಂಕಷ್ಟಗಳಿಂದ ಪಾರಾಗುವ ಯಾವುದಾದರೂ ದಾರಿಯನ್ನು ತೆರೆಯುವನು-

وَّ يَرْزُقْهُ مِنْ حَيْثُ لَا يَحْتَسِبُ ۭ وَمَنْ يَّتَوَكَّلْ عَلَى اللّٰهِ فَهُوَ حَسْبُهٗ ۭ اِنَّ اللّٰهَ بَالِغُ اَمْرِهٖ ۭ قَدْ جَعَلَ اللّٰهُ لِكُلِّ شَيْءٍ قَدْرًا ③

3. ಮತ್ತು ಅವನು ಊಹಿಸಿಯೂ ಇರದಂತಹ ಕಡೆಗಳಿಂದ ಅವನಿಗೆ ಜೀವನಾಧಾರ ನೀಡುವನು. ಅಲ್ಲಾಹನ ಮೇಲೆ ಭರವಸೆ ಇಡುವವನ ಪಾಲಿಗೆ ಅವನೇ ಸಾಕು. ಅಲ್ಲಾಹನು ತಮ್ಮ ಕಾರ್ಯವನ್ನು ಪೂರ್ತಿಗೊಳಿಸಿಯೇ ತೀರುತ್ತಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿಗೂ ಒಂದು ವಿಧಿಯನ್ನು ನಿಶ್ಚಯಿಸಿಟ್ಟಿರುತ್ತಾನೆ.

وَالّٰٓـِٔيْ يَئِسْنَ مِنَ الْمَحِيْضِ مِنْ نِّسَآئِكُمْ اِنِ ارْتَبْتُمْ فَعِدَّتُهُنَّ ثَلٰثَةُ اَشْهُرٍ ۙ وَّالّٰٓـِٔيْ لَمْ يَحِضْنَ ۭ وَاُولَاتُ الْاَحْمَالِ اَجَلُهُنَّ اَنْ يَّضَعْنَ حَمْلَهُنَّ ۭ

4. ನಿಮ್ಮ ಸ್ತ್ರೀಯರ ಪೈಕಿ ಋತುಸ್ರಾವದ ಬಗ್ಗೆ ನಿರಾಶರಾದವರ ಕುರಿತು ನಿಮಗೇನಾದರೂ ಸಂಶಯ ಬಂದರೆ, ಅವರ ಇದ್ದತಿನ ಅವಧಿಯು ಮೂರು ತಿಂಗಳಾಗಿದೆ. ಇನ್ನೂ ಋತುಮತಿಯರಾಗದವರಿಗೂ ಇದೇ ನಿಯಮವಿದೆ[7] ಮತ್ತು ಗರ್ಭಿಣಿಯರ ಇದ್ದತಿನ ಅವಧಿಯು

5. ಇದರರ್ಥ ತಲಾಕ್ ಅಥವಾ ಪುನರ್‌ಮಿಲನದ ಸಂದರ್ಭದಲ್ಲಿ ಸಾಕ್ಷಿಗಳನ್ನು ನಿಶ್ಚಯಿಸಿಕೊಳ್ಳಿರಿ.

6. ಇದರಿಂದ ಮೇಲೆ ನೀಡಲಾಗಿರುವ ನಿರ್ದೇಶಗಳು ಕಾನೂನಿನ ಸ್ಥಾನವನ್ನಲ್ಲ ಬದಲಾಗಿ ಉಪದೇಶದ ಸ್ಥಾನವನ್ನು ಹೊಂದಿದೆ ಎಂದು ವ್ಯಕ್ತವಾಗುತ್ತದೆ. ವ್ಯಕ್ತಿ ಮೇಲೆ ಸೂಚಿಸಲಾಗಿರುವ ನಿರ್ದೇಶಗಳಿಂದ ದೂರವಿದ್ದು ತಲಾಕ್ ನೀಡಿಬಿಟ್ಟರೆ, ಇದ್ದತ್‌ನ ಅವಧಿಯನ್ನು ಎಣಿಸದಿದ್ದರೆ, ಪತ್ನಿಯನ್ನು ವಿನಾಕಾರಣ ಮನೆಯಿಂದ ಹೊರಗಟ್ಟಿದರೆ, ಇದ್ದತ್‌ನ ನಂತರ ಪತ್ನಿಯನ್ನು ಸತಾಯಿಸುವ ಉದ್ದೇಶದಿಂದಲೇ ಸಂಬಂಧ ಪುನರ್‌ಸ್ಥಾಪಿಸಿದರೆ, ಜಗಳ ಕಾದು ಆಕೆಯನ್ನು ಬೀಳ್ಕೊಟ್ಟರೆ ಅಥವಾ ತಲಾಕ್, ಸಂಬಂಧ ಪುನರ್‌ಸ್ಥಾಪನೆ ಅಥವಾ ವಿಚ್ಛೇದನಗಳ ವೇಳೆ ಯಾರನ್ನೂ ಸಾಕ್ಷಿಯಾಗಿ ನಿಲ್ಲಿಸದಿದ್ದರೆ ಅಂತಹ ಸಂದರ್ಭದಲ್ಲೂ ತಲಾಕ್, ಸಂಬಂಧ ಪುನರ್‌ಸ್ಥಾಪನೆ ಅಥವಾ ವಿಚ್ಛೇದನದ ಕಾನೂನು ಪರ ಪರಿಣಾಮಗಳಲ್ಲಿ ಯಾವುದೇ ವ್ಯತ್ಯಾಸ ಉಂಟಾಗುವುದಿಲ್ಲ. ಆದರೆ ಅಲ್ಲಾಹನ ಉಪದೇಶಕ್ಕೆ ವಿರುದ್ಧವಾಗಿ ಹಾಗೆ ಮಾಡುವುದು ಅವನಲ್ಲಿ ದೇವನ ಮತ್ತು ಪರಲೋಕದ ಬಗ್ಗೆ ನೈಜ ವಿಶ್ವಾಸವಿಲ್ಲ ಎಂಬುದನ್ನು ಸೂಚಿಸುತ್ತದೆ. ಆದ್ದರಿಂದಲೇ ಅವನು ನೈಜ ಸತ್ಯವಿಶ್ವಾಸಿಯು ಎಂದೂ ಅನುಸರಿಸಬಾರದಂತಹ ಧೋರಣೆಯನ್ನು ಅನುಸರಿಸಿದನು.

7. ಅಪ್ರಾಪ್ತ ವಯಸ್ಸಿನಿಂದಾಗಿ ಋತುಸ್ರಾವವಾಗದೆ ಇರಬಹುದು. ಕೆಲವು ಸ್ತ್ರೀಯರಿಗೆ ಬಹಳ ತಡವಾಗಿ ಋತುಸ್ರಾವವಾಗುತ್ತದೆ. ಆ ಕಾರಣದಿಂದಾಗಿರಬಹುದು ಅಥವಾ ಕೆಲವು ಸ್ತ್ರೀಯರಿಗೆ ಜೀವನಪರ್ಯಂತ ಋತುಸ್ರಾವವಾಗದೆ ಇರುವ ಅಪರೂಪದ ಪ್ರಸಂಗಗಳೂ

ಅವರ ಪ್ರಸವದ ವರೆಗಿದೆ.[8] ಅಲ್ಲಾಹನು, ತನ್ನನ್ನು ಭಯಪಡುವವನ ವ್ಯವಹಾರದಲ್ಲಿ ಅನುಕೂಲತೆಯನ್ನು ಒದಗಿಸುತ್ತಾನೆ.

وَمَن يَتَّقِ اللَّهَ يَجْعَل لَّهُ مِنْ أَمْرِهِ يُسْرًا ④

5. ಇದು ಅಲ್ಲಾಹನು ನಿಮ್ಮ ಕಡೆಗೆ ಅವತೀರ್ಣಗೊಳಿಸಿರುವ ಅವನ ಅಪ್ಪಣೆಯಾಗಿದೆ. ಅಲ್ಲಾಹನು ತನ್ನನ್ನು ಭಯಪಡುವವನ ದೋಷಗಳನ್ನು ಅವನಿಂದ ಹೋಗಲಾಡಿಸುವನು ಮತ್ತು ಅವನಿಗೆ ದೊಡ್ಡ ಪ್ರತಿಫಲವನ್ನೂ ಕೊಡುವನು.

ذَٰلِكَ أَمْرُ اللَّهِ أَنزَلَهُ إِلَيْكُمْ ۚ وَمَن يَتَّقِ اللَّهَ يُكَفِّرْ عَنْهُ سَيِّئَاتِهِ وَيُعْظِمْ لَهُ أَجْرًا ⑤

6. (ಇದ್ದತ್‌ನ ಅವಧಿಯಲ್ಲಿ) ಅವರನ್ನು, ನೀವಿರುವ ಸ್ಥಳದಲ್ಲೇ ನಿಮ್ಮ ಸೌಲಭ್ಯಕ್ಕನುಸಾರವಾಗಿ ವಾಸಗೊಳಿಸಿರಿ- ಮತ್ತು ಅವರಿಗೆ ಬೇಸರವುಂಟು ಮಾಡಲಿಕ್ಕಾಗಿ ಅವರನ್ನು ಸತಾಯಿಸಬೇಡಿರಿ. ಅವರು ಗರ್ಭಿಣಿಯರಾಗಿದ್ದರೆ, ಅವರ ಪ್ರಸವ ಕಾಲದ ವರೆಗೂ ಅವರಿಗಾಗಿ ಖರ್ಚು ಮಾಡುತ್ತಲಿರಿ. ಅನಂತರ ಅವರು ನಿಮಗೋಸ್ಕರ (ಶಿಶುವಿಗೆ) ಸ್ತನಪಾನ ಮಾಡಿಸಿದರೆ, ಅವರಿಗೆ ಅವರ ಸಂಭಾವನೆ ಕೊಡಿರಿ ಮತ್ತು (ಸಂಭಾವನೆಯ ವಿಷಯವನ್ನು) ಪರಸ್ಪರ ಮಾತುಕತೆಯ ಮೂಲಕ ಉತ್ತಮ ರೀತಿಯಲ್ಲಿ ತೀರ್ಮಾನಿಸಿಕೊಳ್ಳಿರಿ. ಆದರೆ ನೀವು (ಸಂಭಾವನೆ ನಿಶ್ಚಯಿಸುವ ವಿಷಯದಲ್ಲಿ) ಪರಸ್ಪರರಿಗೆ ತೊಂದರೆ ಕೊಟ್ಟರೆ ಶಿಶುವಿಗೆ ಬೇರೊಬ್ಬ ಸ್ತ್ರೀಯ ಸ್ತನಪಾನ ಮಾಡಿಸಲಿ.

أَسْكِنُوهُنَّ مِنْ حَيْثُ سَكَنتُم مِّن وُجْدِكُمْ وَلَا تُضَارُّوهُنَّ لِتُضَيِّقُوا عَلَيْهِنَّ ۚ وَإِن كُنَّ أُولَاتِ حَمْلٍ فَأَنفِقُوا عَلَيْهِنَّ حَتَّىٰ يَضَعْنَ حَمْلَهُنَّ ۚ فَإِنْ أَرْضَعْنَ لَكُمْ فَآتُوهُنَّ أُجُورَهُنَّ ۖ وَأْتَمِرُوا بَيْنَكُم بِمَعْرُوفٍ ۖ وَإِن تَعَاسَرْتُمْ فَسَتُرْضِعُ لَهُ أُخْرَىٰ ⑥

7. ಸ್ಥಿತಿವಂತನು ತನ್ನ ಸ್ಥಿತಿಗನುಸಾರ ಜೀವನಾಂಶ ನೀಡಬೇಕು. ಕಡಿಮೆ ಜೀವನಾಧಾರ ನೀಡಲ್ಪಟ್ಟಿರುವವನು, ಅಲ್ಲಾಹನು ಆತನಿಗೆ ನೀಡಿರುವುದರಿಂದಲೇ ಖರ್ಚು ಮಾಡಲಿ. ಅಲ್ಲಾಹನು ಯಾರಿಗೆ ಎಷ್ಟು ಕೊಟ್ಟಿರುತ್ತಾನೋ ಅದಕ್ಕಿಂತ ಹೆಚ್ಚಿನ ತ್ರಾಸ ಅವನಿಗೆ ಕೊಡುವುದಿಲ್ಲ. ಅಲ್ಲಾಹನು ಬಡತನದ ಬಳಿಕ ಸಂಪನ್ನತೆಯನ್ನು ನೀಡಲೂಬಹುದು.

لِيُنفِقْ ذُو سَعَةٍ مِّن سَعَتِهِ ۖ وَمَن قُدِرَ عَلَيْهِ رِزْقُهُ فَلْيُنفِقْ مِمَّا آتَاهُ اللَّهُ ۚ لَا يُكَلِّفُ اللَّهُ نَفْسًا إِلَّا مَا آتَاهَا ۚ سَيَجْعَلُ اللَّهُ بَعْدَ عُسْرٍ يُسْرًا ⑦

8. ಅದೆಷ್ಟೋ[9] ನಾಡುಗಳು ತಮ್ಮ ಪ್ರಭು ಮತ್ತು ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದವು. ಆಗ ನಾವು

وَكَأَيِّن مِّن قَرْيَةٍ عَتَتْ عَنْ أَمْرِ رَبِّهَا وَرُسُلِهِ فَحَاسَبْنَاهَا حِسَابًا

ಇವೆ. ಈ ಎಲ್ಲಾ ಸಂದರ್ಭಗಳಲ್ಲಿ ಸ್ತ್ರೀಯರ ಇದ್ದತ್ 'ನಿರಾಶೆಯ ವಯಸ್ಸಿನ' ಸ್ತ್ರೀಯರ ಇದ್ದತ್‌ನಷ್ಟೇ ಇದೆ. ಅಂದರೆ ತಲಾಕ್‌ನ ನಂತರ ಮೂರು ತಿಂಗಳು.

8. ಅರ್ಥಾತ್- ಪತಿ ನಿಧನನಾದ ತಕ್ಷಣ ಹೆರಿಗೆಯಾದರೆ ಅಥವಾ ನಾಲ್ಕು ತಿಂಗಳು ಹತ್ತು ದಿನಕ್ಕಿಂತ ಹೆಚ್ಚು ಅವಧಿ ತೆಗೆದುಕೊಂಡರೆ ಈ ಎರಡು ಸಂದರ್ಭಗಳಲ್ಲಿ ಹೆರಿಗೆಯಾದ ತಕ್ಷಣ ಆಕೆಯ ಇದ್ದತ್‌ನ ಅವಧಿ ಕೊನೆಗೊಳ್ಳುತ್ತದೆ.

9. ಈಗ ಮುಸ್ಲಿಮರನ್ನುದ್ದೇಶಿಸಿ ಅಲ್ಲಾಹನ ಗ್ರಂಥ ಮತ್ತು ಪ್ರವಾದಿಯ ಮೂಲಕ ಅವರಿಗೆ ನೀಡಲಾದ ಆದೇಶಗಳನ್ನು ಉಲ್ಲಂಘಿಸಿದರೆ ಇಹ-ಪರಗಳಲ್ಲಿ ಯಾವ ಪರಿಣಾಮವನ್ನೆದುರಿಸ ಬೇಕಾಗುತ್ತದೆ ಮತ್ತು ಅನುಸರಿಸಿದರೆ ಯಾವ ಪ್ರತಿಫಲವನ್ನು ಪಡೆಯುವಿರಿ ಎಂಬ ಆದೇಶವನ್ನು ನೀಡಲಾಗುತ್ತಿದೆ.

ಅವರನ್ನು ಉಗ್ರ ವಿಚಾರಣೆಗೆ ಒಳಪಡಿಸಿದೆವು ಮತ್ತು ಅವರನ್ನು ಉಗ್ರವಾಗಿ ಶಿಕ್ಷಿಸಿದೆವು.

شَدِيدًا وَعَذَّبْنَاهَا عَذَابًا نُّكْرًا ⑧

9. ಅವರು ತಮ್ಮ ಕರ್ಮದ ಸವಿಯನ್ನುಂಡರು ಮತ್ತು ಅವರ ಅಂತಿಮ ಗತಿಯು ನಷ್ಟವೇ ಆಗಿತ್ತು.

فَذَاقَتْ وَبَالَ أَمْرِهَا وَكَانَ عَاقِبَةُ
أَمْرِهَا خُسْرًا ⑨

10. ಅಲ್ಲಾಹನು (ಪರಲೋಕದಲ್ಲಿ) ಅವರಿಗಾಗಿ ಘೋರ ಯಾತನೆಯನ್ನು ಸಿದ್ಧಪಡಿಸಿಟ್ಟಿದ್ದಾನೆ. ಆದುದರಿಂದ ಸತ್ಯವಿಶ್ವಾಸಿಗಳಾಗಿರುವ ಬುದ್ಧಿಜೀವಿಗಳೇ, ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನು ನಿಮ್ಮ ಕಡೆಗೆ ಒಂದು ಉಪದೇಶವನ್ನು ಅವತೀರ್ಣಗೊಳಿಸಿರುತ್ತಾನೆ.

أَعَدَّ اللَّهُ لَهُمْ عَذَابًا شَدِيدًا فَاتَّقُوا
اللَّهَ يَا أُولِي الْأَلْبَابِ الَّذِينَ آمَنُوا
قَدْ أَنزَلَ اللَّهُ إِلَيْكُمْ ذِكْرًا ⑩

11. ಸತ್ಯವಿಶ್ವಾಸಿಗಳನ್ನೂ ಸತ್ಕರ್ಮವೆಸಗುವವರನ್ನೂ ಅಂಧಕಾರಗಳಿಂದ ಹೊರತೆಗೆದು ಪ್ರಕಾಶದೆಡೆಗೆ ಒಯ್ಯಲಿಕ್ಕಾಗಿ ನಿಮಗೆ ಅಲ್ಲಾಹನ ಸುಸ್ಪಷ್ಟ ಮಾರ್ಗದರ್ಶನವನ್ನು ನೀಡುತ್ತಿರುವ ಒಬ್ಬ ಸಂದೇಶವಾಹಕ.[10] ಅಲ್ಲಾಹನ ಮೇಲೆ ವಿಶ್ವಾಸವಿರಿಸುವ ಹಾಗೂ ಸತ್ಕರ್ಮ ಮಾಡುವ ವ್ಯಕ್ತಿಯನ್ನು ಅಲ್ಲಾಹನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಇವರು ಅದರಲ್ಲಿ ಸದಾಕಾಲ ವಾಸಿಸುವರು. ಇಂತಹವನಿಗೆ ಅಲ್ಲಾಹನು ಅತ್ಯುತ್ತಮ ಜೀವನಾಧಾರವನ್ನು ಇಟ್ಟಿರುವನು.

رَّسُولًا يَتْلُو عَلَيْكُمْ آيَاتِ اللَّهِ مُبَيِّنَاتٍ
لِّيُخْرِجَ الَّذِينَ آمَنُوا وَعَمِلُوا الصَّالِحَاتِ
مِنَ الظُّلُمَاتِ إِلَى النُّورِ وَمَن يُؤْمِن
بِاللَّهِ وَيَعْمَلْ صَالِحًا يُدْخِلْهُ جَنَّاتٍ
تَجْرِي مِن تَحْتِهَا الْأَنْهَارُ خَالِدِينَ
فِيهَا أَبَدًا قَدْ أَحْسَنَ اللَّهُ لَهُ رِزْقًا ⑪

12. ಸಪ್ತಗಗನಗಳನ್ನು ಮತ್ತು ಅವುಗಳಂತೆಯೇ ಭೂಮಿಯ ವಿಧದಿಂದಲೂ ಸೃಷ್ಟಿಸಿದವನು ಅಲ್ಲಾಹನೇ ಆಗಿದ್ದಾನೆ.[11] ಅವುಗಳ ನಡುವೆ ಆದೇಶಗಳು ಇಳಿಯುತ್ತಲೇ ಇರುತ್ತವೆ. ಅಲ್ಲಾಹನು ಎಲ್ಲದಕ್ಕೂ ಸಾಮರ್ಥ್ಯವುಳ್ಳವನು ಮತ್ತು ಅಲ್ಲಾಹನ ಜ್ಞಾನವು ಎಲ್ಲ ವಿಷಯಗಳಿಗೂ ವ್ಯಾಪಿಸಿಕೊಂಡಿದೆ ಎಂಬುದನ್ನು ನೀವು ತಿಳಿದುಕೊಳ್ಳುವಂತಾಗಲು (ನಿಮಗಿದನ್ನು ತಿಳಿಸಲಾಗುತ್ತಿದೆ).

اللَّهُ الَّذِي خَلَقَ سَبْعَ سَمَاوَاتٍ وَمِنَ
الْأَرْضِ مِثْلَهُنَّ يَتَنَزَّلُ الْأَمْرُ
بَيْنَهُنَّ لِتَعْلَمُوا أَنَّ اللَّهَ عَلَىٰ كُلِّ شَيْءٍ
قَدِيرٌ وَأَنَّ اللَّهَ قَدْ أَحَاطَ بِكُلِّ
شَيْءٍ عِلْمًا ⑫

---

10. ಉಪದೇಶವೆಂದರೆ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಎಂದರೆ ಮುಹಮ್ಮದ್(ಸ)ರಾಗಿದ್ದಾರೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಮತ್ತೆ ಕೆಲವರ ಪ್ರಕಾರ ಉಪದೇಶವೆಂದರೂ ಪ್ರವಾದಿವರ್ಯರೇ(ಸ) ಆಗಿದ್ದಾರೆ. ಏಕೆಂದರೆ ಅವರ ವ್ಯಕ್ತಿತ್ವವೇ ಸಾದ್ಯಂತ ಉಪದೇಶವಾಗಿತ್ತು. ನಮ್ಮ ದೃಷ್ಟಿಯಲ್ಲಿ ಎರಡನೆಯ ವ್ಯಾಖ್ಯಾನವೇ ಹೆಚ್ಚು ಸೂಕ್ತವಾಗಿದೆ.

11. 'ಅವುಗಳಂತೆಯೇ' ಎಂಬುದರ ಅರ್ಥ ಅವನು ಎಷ್ಟು ಆಕಾಶಗಳನ್ನು ಸೃಷ್ಟಿಸಿದ್ದಾನೋ ಅಷ್ಟೇ ಭೂಮಿಗಳನ್ನೂ ಸೃಷ್ಟಿಸಿದ್ದಾನೆ ಎಂದಲ್ಲ. ಬದಲಾಗಿ ಅವನು ಅನೇಕ ಆಕಾಶಗಳನ್ನು ಸೃಷ್ಟಿಸಿರುವಂತೆಯೇ ಅನೇಕ ಭೂಮಿಗಳನ್ನೂ ಸೃಷ್ಟಿಸಿದ್ದಾನೆ ಎಂದಾಗಿದೆ. 'ಭೂಮಿಯ ವಿಧದಿಂದ' ಎಂದರೆ ಯಾವ ರೀತಿ ಮಾನವರು ವಾಸಿಸುವ ಈ ಭೂಮಿ ಅದರೊಳಗೊಂಡಿರುವ ಸಕಲ ವಸ್ತುಗಳ ಪಾಲಿಗೆ ಹಾಸು ಮತ್ತು ತೊಟ್ಟಿಲಾಗಿದೆಯೋ ಅದೇ ರೀತಿ ಅಲ್ಲಾಹನು ನಿಸರ್ಗದಲ್ಲಿ ಇತರ ಭೂಮಿಗಳನ್ನೂ ಸೃಷ್ಟಿಸಿದ್ದಾನೆ. ಅವು ತಮ್ಮ ವಾಸಿಗಳ ಪಾಲಿಗೆ ಹಾಸೂ ತೊಟ್ಟಿಲೂ ಆಗಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆಕಾಶದಲ್ಲಿ ಗೋಚರಿಸುವ ಅಸಂಖ್ಯ ಗ್ರಹನಕ್ಷತ್ರಾದಿಗಳು ನಿರ್ಜನವಾಗಿ ಉಳಿದಿಲ್ಲ. ಅವುಗಳಲ್ಲೂ ಭೂಮಿಯಂತೆ ತಮ್ಮದೇ ಆದ ಜೀವಜಾಲಗಳಿವೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللهِ الرَّحْمٰنِ الرَّحِيْمِ ۝

1. ಸಂದೇಶವಾಹಕರೇ, ಅಲ್ಲಾಹನು ನಿಮಗೆ 'ಧರ್ಮಸಮ್ಮತ'ಗೊಳಿಸಿರುವ ವಸ್ತುವನ್ನು ನೀವೇಕೆ ನಿಷಿದ್ಧಗೊಳಿಸುತ್ತೀರಿ?[1] ನೀವು ನಿಮ್ಮ ಪತ್ನಿಯರ ಮೆಚ್ಚುಗೆಯನ್ನು ಬಯಸುತ್ತೀರಿ (ಎಂಬ ಕಾರಣ ದಿಂದಲೇ?)[2] ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

يٰۤاَيُّهَا النَّبِيُّ لِمَ تُحَرِّمُ مَاۤ اَحَلَّ اللّٰهُ لَكَ ۚ تَبْتَغِيْ مَرْضَاتَ اَزْوَاجِكَ ۗ وَاللّٰهُ غَفُوْرٌ رَّحِيْمٌ ۝١

2. ಅಲ್ಲಾಹನು ನಿಮಗೆ ನೀವು ಹಾಕಿದ ಆಣೆಗಳ ಪಾಲನೆಯಿಂದ ಮುಕ್ತರಾಗುವ ಕ್ರಮವನ್ನು ನಿಶ್ಚಯಿಸಿರುತ್ತಾನೆ.[3] ಅಲ್ಲಾಹನು

قَدْ فَرَضَ اللّٰهُ لَكُمْ تَحِلَّةَ اَيْمَانِكُمْ ۚ وَاللّٰهُ مَوْلٰىكُمْ ۚ وَهُوَ الْعَلِيْمُ الْحَكِيْمُ ۝٢

1. ಇದೊಂದು ಪ್ರಶ್ನೆಯಲ್ಲ ಬದಲಾಗಿ ಅಸಮಾಧಾನದ ಪ್ರಕಟಣೆಯಾಗಿದೆ. ಇಲ್ಲಿ ಪ್ರವಾದಿವರ್ಯರೊಂದಿಗೆ(ಸ) ನೀವು ಈ ಕೆಲಸವನ್ನು ಯಾಕೆ ಮಾಡಿದಿರಿ ಎಂದು ಕೇಳುವುದು ಉದ್ದೇಶವಲ್ಲ. ಬದಲಾಗಿ ಅಲ್ಲಾಹನು ಧರ್ಮಸಮ್ಮತಗೊಳಿಸಿರುವ ವಿಷಯವನ್ನು ತಾವು ತಮ್ಮ ಪಾಲಿಗೆ ನಿಷಿದ್ಧಗೊಳಿಸಿಕೊಂಡಿರುವುದು ಅಲ್ಲಾಹನಿಗೆ ಇಷ್ಟವಿಲ್ಲ ಎಂದು ಎಚ್ಚರಿಕೆ ನೀಡುವುದು ಇದರ ಉದ್ದೇಶವಾಗಿದೆ. ಅವರು ಓರ್ವ ಸಾಮಾನ್ಯ ವ್ಯಕ್ತಿಯ ಸ್ಥಾನದಲ್ಲಿರದೆ ಅಲ್ಲಾಹನ ಪ್ರವಾದಿಯ ಸ್ಥಾನದಲ್ಲಿದ್ದರು. ಅವರು ತಮ್ಮ ಪಾಲಿಗೆ ಯಾವುದನ್ನಾದರೂ ನಿಷಿದ್ಧಗೊಳಿಸಿಕೊಂಡರೆ ಸಮುದಾಯವೂ ಅದನ್ನು ತಮ್ಮ ಪಾಲಿಗೆ ನಿಷಿದ್ಧವೆಂದು ಬಗೆಯುವ ಅಥವಾ ಕನಿಷ್ಠಪಕ್ಷ ಅಪ್ರಿಯವೆಂದು ಭಾವಿಸುವ ಅಪಾಯವಿತ್ತು. ಆದ್ದರಿಂದಲೇ ಅಲ್ಲಾಹನು ಅವರ ಈ ಕೆಲಸದ ಬಗ್ಗೆ ಆಕ್ಷೇಪವೆತ್ತಿದನು ಮತ್ತು ಅವರನ್ನು ಈ ನಿಷಿದ್ಧಗೊಳಿಸಿಕೊಳ್ಳುವಿಕೆಯಿಂದ ದೂರವಿರುವಂತೆ ಆಜ್ಞಾಪಿಸಿದನು. ಇದರಿಂದ ಸ್ವತಃ ಪ್ರವಾದಿವರ್ಯರಿಗೂ(ಸ) ಯಾವುದನ್ನೂ ಧರ್ಮಸಮ್ಮತ ಅಥವಾ ನಿಷಿದ್ಧಗೊಳಿಸಿಕೊಳ್ಳುವ ಅಧಿಕಾರವಿರಲಿಲ್ಲ ಎಂದು ಸ್ಪಷ್ಟವಾಗುತ್ತದೆ.
2. ಪ್ರವಾದಿವರ್ಯರು(ಸ) ತಮ್ಮಿಚ್ಛೆಯಂತೆ ಅದನ್ನು ನಿಷಿದ್ಧಗೊಳಿಸಿಕೊಂಡಿರಲಿಲ್ಲ. ಬದಲಾಗಿ ಹಾಗೆ ಮಾಡಬೇಕೆಂಬುದು ಅವರ ಪತ್ನಿಯರ ಇಚ್ಛೆಯಾಗಿತ್ತು. ಪ್ರವಾದಿವರ್ಯರು(ಸ) ಅವರನ್ನು ಸಂತೋಷಪಡಿಸುವ ಸಲುವಾಗಿ ಧರ್ಮಸಮ್ಮತವಾದುದನ್ನು ತಮ್ಮ ಪಾಲಿಗೆ ನಿಷಿದ್ಧಗೊಳಿಸಿಕೊಂಡಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ. ನಂಬಲರ್ಹ ಪ್ರವಾದಿ ವಚನಗಳಿಂದ ತಿಳಿದು ಬರುವಂತೆ ಪ್ರವಾದಿವರ್ಯರ(ಸ) ಪತ್ನಿಯೊಬ್ಬರ (ಹ. ಝೈನಬ್‌ರ) ಬಳಿಗೆ ಎಲ್ಲಿಂದಲೋ ಜೇನುತುಪ್ಪ ಬಂದಿತ್ತು. ಅದು ಪ್ರವಾದಿವರ್ಯರಿಗೆ(ಸ) ಪಾಲಿಗೆ ಬಹಳ ಪ್ರಿಯಕರವಾಗಿತ್ತು. ಆದ್ದರಿಂದ ತಮ್ಮ ನಿತ್ಯದ ಪರಿಪಾಠಕ್ಕೆ ವ್ಯತಿರಿಕ್ತವಾಗಿ ಅವರು ಹ. ಝೈನಬ್‌ರ(ರ) ಬಳಿ ಹೆಚ್ಚು ತಂಗ ತೊಡಗಿದರು. ಇದರಿಂದ ಪ್ರವಾದಿವರ್ಯರ(ಸ) ಇತರ ಕೆಲವು ಪತ್ನಿಯರಿಗೆ ಅಸೂಯೆಯುಂಟಾಯಿತು. ಅವರೆಲ್ಲರೂ ಸೇರಿ ಅವರಲ್ಲಿ ಜೇನುತುಪ್ಪದ ಬಗ್ಗೆ ಎಂತಹ ದ್ವೇಷ ಮೂಡಿಸಿದರೆಂದರೆ ಅವರು ಜೇನನ್ನು ಎಂದೂ ಉಪಯೋಗಿಸದಿರುವ ಸಂಕಲ್ಪ ಮಾಡಿಬಿಟ್ಟರು.
3. ಅರ್ಥಾತ್- ಧರ್ಮಸಮ್ಮತವಾದುದನ್ನು ತಮ್ಮ ಪಾಲಿಗೆ ನಿಷಿದ್ಧಗೊಳಿಸಿಕೊಂಡಂತಹ ಸಂಕಲ್ಪವನ್ನು ಮುರಿದು ಬಿಡಿರಿ. ಹಾಗೆ ಮಾಡಲು ಅಲ್ಲಾಹನು ಸೂರಃ ಮಾಇದಃದ 89ನೆಯ ಸೂಕ್ತದಲ್ಲಿ ವಚನದ ನಿರ್ಬಂಧದಿಂದ ಹೊರಬರುವ ಕುರಿತು ಕಲಿಸಿರುವ ಪರಿಹಾರೋಪಾಯವನ್ನು ಅನುಸರಿಸಿರಿ.

ನಿಮ್ಮ ಸಂರಕ್ಷಕನು ಮತ್ತು ಅವನೇ ಸರ್ವಜ್ಞನೂ ಯುಕ್ತಿ ಪೂರ್ಣನೂ ಆಗಿರುತ್ತಾನೆ.

3. (ಮತ್ತು ಈ ವಿಷಯವೂ ಗಮನಾರ್ಹವಾಗಿದೆ) ಪ್ರವಾದಿಯು ತಮ್ಮ ಓರ್ವ ಪತ್ನಿಯೊಡನೆ ಒಂದು ಮಾತನ್ನು ರಹಸ್ಯವಾಗಿ ಹೇಳಿದ್ದರು. ತರುವಾಯ ಆ ಪತ್ನಿಯು (ಇನ್ನೊಬ್ಬರಿಗೆ) ಈ ರಹಸ್ಯವನ್ನು ಬಯಲುಗೊಳಿಸಿ ಬಿಟ್ಟಾಗ ಮತ್ತು ಅಲ್ಲಾಹನು ಪ್ರವಾದಿಗೆ ಈ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ, ಅವರು ಅದರ ಸ್ವಲ್ಪಾಂಶವನ್ನು (ಆ ಪತ್ನಿಗೆ) ತಿಳಿಸಿದರು ಮತ್ತು ಸ್ವಲ್ಪಾಂಶವನ್ನು ಕಡೆಗಣಿಸಿದರು. ತರುವಾಯ ಪ್ರವಾದಿಯವರು ಅವರಿಗೆ ಆ (ರಹಸ್ಯವನ್ನು ಬಯಲುಗೊಳಿಸಿದ) ಸುದ್ದಿಯನ್ನು ತಿಳಿಸಿದಾಗ ಅವರು, "ನಿಮಗೆ ಈ ಸುದ್ದಿ ಕೊಟ್ಟವರಾರು?" ಎಂದು ಕೇಳಿದರು. ಪ್ರವಾದಿಯವರು, "ನನಗೆ ಸರ್ವಜ್ಞನೂ ವಿವರಪೂರ್ಣನೂ ಆಗಿರುವವನು ಸುದ್ದಿ ತಿಳಿಸಿದನು" ಎಂದರು.[4]

وَإِذْ أَسَرَّ النَّبِيُّ إِلَىٰ بَعْضِ أَزْوَاجِهِ حَدِيثًا ۚ فَلَمَّا نَبَّأَتْ بِهِ وَأَظْهَرَهُ اللَّهُ عَلَيْهِ عَرَّفَ بَعْضَهُ وَأَعْرَضَ عَنْ بَعْضٍ ۚ فَلَمَّا نَبَّأَهَا بِهِ قَالَتْ مَنْ أَنْبَأَكَ هَٰذَا ۖ قَالَ نَبَّأَنِيَ الْعَلِيمُ الْخَبِيرُ ﴿٣﴾

4. ನೀವಿಬ್ಬರೂ ಅಲ್ಲಾಹನೊಡನೆ ಪಶ್ಚಾತ್ತಾಪ ಪಡುತ್ತೀರಾದರೆ (ಇದು ನಿಮ್ಮ ಪಾಲಿಗೆ ಉತ್ತಮವಾಗಿದೆ). ಏಕೆಂದರೆ, ನಿಮ್ಮ ಹೃದಯಗಳು ನೇರ ಮಾರ್ಗದಿಂದ ಸರಿದು ಹೋಗಿವೆ[5] ಮತ್ತು ನೀವು ಪ್ರವಾದಿಯ ವಿರುದ್ಧ ಗುಂಪುಗಾರಿಕೆ ನಡೆಸಿದರೆ, ಅಲ್ಲಾಹನು ಅವರ ಸಂರಕ್ಷಕನಾಗಿದ್ದಾನೆ ಮತ್ತು ಅವನ ನಂತರ ಜಿಬ್‌ರೀಲರು, ಎಲ್ಲ ಸಜ್ಜನ ಸತ್ಯವಿಶ್ವಾಸಿಗಳು ಮತ್ತು ಎಲ್ಲ ದೇವಚರರು ಅವರ ಸಂಗಾತಿಗಳೂ ಸಹಾಯಕರೂ ಆಗಿರುವರೆಂಬುದು ನಿಮಗೆ ತಿಳಿದಿರಲಿ.[6]

إِنْ تَتُوبَا إِلَى اللَّهِ فَقَدْ صَغَتْ قُلُوبُكُمَا ۖ وَإِنْ تَظَاهَرَا عَلَيْهِ فَإِنَّ اللَّهَ هُوَ مَوْلَاهُ وَجِبْرِيلُ وَصَالِحُ الْمُؤْمِنِينَ ۖ وَالْمَلَائِكَةُ بَعْدَ ذَٰلِكَ ظَهِيرٌ ﴿٤﴾

4. ಈ ಸೂಕ್ತ ಅವತೀರ್ಣಗೊಳ್ಳಲು ಕಾರಣವಾದ ಆ ರಹಸ್ಯದ ಮಾತು ಏನಾಗಿತ್ತೆಂದು ಯಾವುದೇ ವರದಿಗಳಿಂದ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಆ ರಹಸ್ಯ ಏನಾಗಿತ್ತೆಂದು ತಿಳಿಯುವ ಔಚಿತ್ಯವೂ ಇಲ್ಲಿ ತಲೆದೋರುವುದಿಲ್ಲ. ಪ್ರವಾದಿವರ್ಯರ(ಸ) ಪಾವನ ಪತ್ನಿಯರಿಗೆ ಮತ್ತು ಪರೋಕ್ಷವಾಗಿ ಎಲ್ಲಾ ಹೊಣೆಗಾರ ಮುಸ್ಲಿಮರ ಪತ್ನಿಯರಿಗೆ ಅವರು ರಹಸ್ಯಪಾಲನೆಯಲ್ಲಿ ಬೇಜವಾಬ್ದಾರಿತನ ತೋರಬಾರದು ಎಂದು ಎಚ್ಚರಿಕೆ ನೀಡುವುದು, ಈ ವಿಷಯವನ್ನು ಕುರ್‌ಆನಿನಲ್ಲಿ ಪ್ರಸ್ತಾಪಿಸುವುದರ ಮೂಲೋದ್ದೇಶವಾಗಿದೆ. ವ್ಯಕ್ತಿ ಎಷ್ಟು ದೊಡ್ಡ ಹೊಣೆಗಾರಿಕೆಯನ್ನು ಹೊಂದಿರುತ್ತಾನೋ ಅದಕ್ಕನುಗುಣವಾಗಿ ಅವನ ಮನೆಯಿಂದ ರಹಸ್ಯಗಳು ಸೋರಿ ಹೋಗುವುದು ಅಷ್ಟೇ ಅಪಾಯಕರ ಸಂಗತಿಯಾಗಿದೆ. ವಿಷಯ ಪ್ರಮುಖವಾದುದಾಗಿರಲಿ ಅಥವಾ ಪ್ರಮುಖವಲ್ಲದುದಾಗಿರಲಿ ರಹಸ್ಯಗಳ ಪಾಲನೆಯಲ್ಲಿ ನಿರ್ಲಕ್ಷ್ಯ ವಹಿಸುವ ಅಭ್ಯಾಸವಾಗಿ ಬಿಟ್ಟರೆ ಅಪ್ರಮುಖ ವಿಷಯಗಳಂತೆ ಯಾವುದೇ ಸಂದರ್ಭದಲ್ಲಿ ಪ್ರಮುಖ ವಿಷಯಗಳೂ ಬಹಿರಂಗಗೊಳ್ಳಬಹುದು.

5. ಹ. ಉಮರ್‌ರ(ರ) ಪ್ರಕಾರ, ಆ ಇಬ್ಬರು ಎಂದು ಹ.ಆಯಿಶಾ ಮತ್ತು ಹ.ಹಫ್ಸಾರ(ರ) ಕುರಿತು ಹೇಳಲಾಗಿದೆ. ಹ. ಉಮರ್‌ರ(ರ) ಪ್ರಕಾರ ನೇರ ಮಾರ್ಗದಿಂದ ದೂರ ಸರಿಯುವುದೆಂದರೆ, ಈ ಇಬ್ಬರು ಪತ್ನಿಯರು ಪ್ರವಾದಿವರ್ಯರೊಂದಿಗೆ(ಸ) ಹೆಚ್ಚು ಸಲಿಗೆಯಿಂದ ವ್ಯವಹರಿಸತೊಡಗಿದ್ದರು. ಅದು ಅಲ್ಲಾಹನಿಗೆ ಇಷ್ಟವಾಗಲಿಲ್ಲ ಮತ್ತು ಅವನು ಆ ಬಗ್ಗೆ ಎಚ್ಚರಿಸಿದನು.

6. ಅರ್ಥಾತ್- ಪ್ರವಾದಿವರ್ಯರ(ಸ) ವಿರುದ್ಧ ಗುಂಪುಗಾರಿಕೆ ನಡೆಸಿ ನೀವು ನಿಮಗೇ ನಷ್ಟ ಉಂಟು ಮಾಡಿಕೊಳ್ಳುವಿರಿ. ಏಕೆಂದರೆ ಯಾರ ಪ್ರಭು ಅಲ್ಲಾಹನಾಗಿದ್ದಾನೋ ಮತ್ತು ಜಿಬ್‌ರೀಲ್, ದೇವಚರರು ಮತ್ತು ಸಕಲ ಸತ್ಯಸಂಧ ಸತ್ಯವಿಶ್ವಾಸಿಗಳು ಯಾರ ಸಂಗಾತಿಗಳಾಗಿದ್ದಾರೋ ಅವರ ವಿರುದ್ಧ ಗುಂಪುಗಾರಿಕೆ ನಡೆಸಿ ಯಾರೂ ಜಯಗಳಿಸಲಾರರು.

5. ಪ್ರವಾದಿಯು ನಿಮಗೆಲ್ಲರಿಗೂ ತಲಾಕ್ ನೀಡಿದರೆ ಅಲ್ಲಾಹನು ಅವರಿಗೆ ನಿಮ್ಮ ಬದಲಿಗೆ ನಿಮಗಿಂತ ಉತ್ತಮರೂ[7] ನೈಜ ಮುಸ್ಲಿಮರೂ ಸತ್ಯವಿಶ್ವಾಸವುಳ್ಳವರೂ ವಿಧೇಯರೂ ತೌಬಾ ಮಾಡುವವರೂ ಆರಾಧನಾಶೀಲೆಯರೂ ಉಪವಾಸ ವ್ರತ ಆಚರಿಸುವವರೂ ಆದ- ಹಿಂದೆ ವಿವಾಹವಾಗಿದ್ದ ಅಥವಾ ಕುಮಾರಿಯಾಗಿರುವ ಪತ್ನಿಯರನ್ನು ದಯಪಾಲಿಸಬಹುದು.

عَسٰى رَبُّهٗۤ اِنْ طَلَّقَكُنَّ اَنْ يُّبْدِلَهٗۤ اَزْوَاجًا خَيْرًا مِّنْكُنَّ مُسْلِمٰتٍ مُّؤْمِنٰتٍ قٰنِتٰتٍ تٰٓئِبٰتٍ عٰبِدٰتٍ سٰٓئِحٰتٍ ثَيِّبٰتٍ وَّاَبْكَارًا ۝

6. ಸತ್ಯವಿಶ್ವಾಸಿಗಳೇ, ಮಾನವರೂ ಶಿಲೆಗಳೂ ಇಂಧನವಾಗಲಿರುವ ಅಗ್ನಿಯಿಂದ ನಿಮ್ಮನ್ನೂ ನಿಮ್ಮ ಕುಟುಂಬದವರನ್ನೂ ರಕ್ಷಿಸಿಕೊಳ್ಳಿರಿ.[8] ಅದರ ಮೇಲೆ ಅತ್ಯಂತ ಕಠೋರ ಮತ್ತು ಉಗ್ರರಾದ ದೇವಚರರು ನಿಯುಕ್ತರಾಗುವರು. ಅವರೆಂದೂ ಅಲ್ಲಾಹನ ಆಜ್ಞೋಲ್ಲಂಘನೆ ಮಾಡುವುದಿಲ್ಲ ಮತ್ತು ಅವರಿಗೆ ನೀಡಲಾಗುವ ಪ್ರತಿಯೊಂದು ಅಪ್ಪಣೆಯನ್ನೂ ಪಾಲಿಸುತ್ತಾರೆ.

يٰۤاَيُّهَا الَّذِيْنَ اٰمَنُوْا قُوْۤا اَنْفُسَكُمْ وَاَهْلِيْكُمْ نَارًا وَّقُوْدُهَا النَّاسُ وَالْحِجَارَةُ عَلَيْهَا مَلٰٓئِكَةٌ غِلَاظٌ شِدَادٌ لَّا يَعْصُوْنَ اللّٰهَ مَاۤ اَمَرَهُمْ وَيَفْعَلُوْنَ مَا يُؤْمَرُوْنَ ۝

7. (ಆಗ ಹೇಳಲಾಗುವುದು;) "ಸತ್ಯನಿಷೇಧಿಗಳೇ, ಇಂದು ನೆಪಗಳನ್ನೊಡ್ಡಬೇಡಿರಿ; ನಿಮಗೆ ನೀವು ಮಾಡುತ್ತಿದ್ದ ಕರ್ಮಗಳಿಗೆ ತಕ್ಕುದಾದ ಪ್ರತಿಫಲವನ್ನೇ ನೀಡಲಾಗುತ್ತಿದೆ."

يٰۤاَيُّهَا الَّذِيْنَ كَفَرُوْا لَا تَعْتَذِرُوا الْيَوْمَ ؕ اِنَّمَا تُجْزَوْنَ مَا كُنْتُمْ تَعْمَلُوْنَ ۝

8. ಸತ್ಯವಿಶ್ವಾಸಿಗಳೇ, ಅಲ್ಲಾಹನೊಡನೆ ಪಶ್ಚಾತ್ತಾಪ ಪಡಿರಿ. ನಿಷ್ಕಳಂಕವಾದ ಪಶ್ಚಾತ್ತಾಪ, ನಿಮ್ಮ ಪ್ರಭು ನಿಮ್ಮ ದೋಷಗಳನ್ನು ಅಳಿಸಬಹುದು ಮತ್ತು ನಿಮ್ಮನ್ನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸಲೂ ಬಹುದು. ಅದು ಅಲ್ಲಾಹನು ತನ್ನ ಪ್ರವಾದಿಯನ್ನಾಗಲಿ, ಅವರೊಂದಿಗೆ ವಿಶ್ವಾಸವಿರಿಸಿದ ಜನರನ್ನಾಗಲಿ ಅವಮಾನಗೊಳಿಸ

يٰۤاَيُّهَا الَّذِيْنَ اٰمَنُوْا تُوْبُوْۤا اِلَى اللّٰهِ تَوْبَةً نَّصُوْحًا ؕ عَسٰى رَبُّكُمْ اَنْ يُّكَفِّرَ عَنْكُمْ سَيِّاٰتِكُمْ وَيُدْخِلَكُمْ جَنّٰتٍ تَجْرِيْ مِنْ تَحْتِهَا الْاَنْهٰرُ

7. ಇದರಿಂದ ತಪ್ಪು ಕೇವಲ ಹ. ಆಯಿಶಾ ಮತ್ತು ಹ. ಹಫ್ಸಾರದು(ರ) ಮಾತ್ರವಾಗಿರಲಿಲ್ಲ, ಬದಲಾಗಿ ಇತರ ಪತ್ನಿಯರೂ(ರ) ಸ್ವಲ್ಪ ಮಟ್ಟಿಗೆ ತಪ್ಪಿತಸ್ಥರಾಗಿದ್ದರೆಂದು ವ್ಯಕ್ತವಾಗುತ್ತದೆ. ಆದ್ದರಿಂದ ಈ ಇಬ್ಬರನ್ನುದ್ದೇಶಿಸಲಾದ ನಂತರ ಈ ಸೂಕ್ತದಲ್ಲಿ ಉಳಿದೆಲ್ಲಾ ಪತ್ನಿಯರಿಗೂ ಎಚ್ಚರಿಕೆ ನೀಡಲಾಗಿದೆ. ಪ್ರವಾದಿ ವಚನಗಳಿಂದ ತಿಳಿದು ಬರುವಂತೆ ಆ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ತಮ್ಮ ಪತ್ನಿಯರಿಂದ ಎಷ್ಟು ಅಸಮಾಧಾನ ತಾಳಿದ್ದರೆಂದರೆ ಒಂದು ತಿಂಗಳ ತನಕ ಅವರಿಂದ ಸಂಬಂಧ ಕಡಿದುಕೊಂಡಿದ್ದರು. ಅವರು ಪತ್ನಿಯರಿಗೆ ತಲಾಕ್ ನೀಡಿದ್ದಾರೆಂದು ಅವರ ಸಂಗಾತಿಗಳಲ್ಲಿ ವದಂತಿ ಹರಡಿತ್ತು.

8. ತನ್ನನ್ನು ಮಾತ್ರ ನರಕಾಗ್ನಿಯಿಂದ ರಕ್ಷಿಸಿಕೊಳ್ಳಲು ಪ್ರಯತ್ನಿಸುವುದಷ್ಟೇ ವ್ಯಕ್ತಿಯ ಕರ್ತವ್ಯವಲ್ಲ. ಬದಲಾಗಿ ನಿಸರ್ಗ ವ್ಯವಸ್ಥೆಯು ಯಾವ ಕುಟುಂಬದ ನಾಯಕತ್ವದ ಹೊಣೆಗಾರಿಕೆಯನ್ನು ಅವನಿಗೆ ನೀಡಿದೆಯೋ ಅವರಿಗೂ ಅವರು ದೇವನ ಪ್ರೀತಿಪಾತ್ರರಾದ ದಾಸರಾಗಿ ಮಾರ್ಪಡುವಂತಹ ಶಿಕ್ಷಣ ಮತ್ತು ತರಬೇತಿ ನೀಡಲು ಪ್ರಯತ್ನಿಸಬೇಕೆಂದು ಈ ಸೂಕ್ತದಲ್ಲಿ ತಿಳಿಸಲಾಗಿದೆ. ಅವರು ನರಕದ ಹಾದಿ ಹಿಡಿದಿದ್ದರೆ ತನಗೆ ಸಾಧ್ಯವಿರುವಷ್ಟರ ಮಟ್ಟಿಗೆ ಅದನ್ನು ತಡೆಯಲು ಪ್ರಯತ್ನಿಸಬೇಕು. ಶಿಲೆಗಳು ನರಕದ ಇಂಧನವಾಗಿವೆ ಎಂದು ಪ್ರಾಯಶಃ ಕಲ್ಲಿದ್ದಲಿನ ಕುರಿತು ಹೇಳಲಾಗಿರಬಹುದು. ಇಬ್ನ್ ಮಸ್‌ಊದ್(ರ), ಇಬ್ನ್ ಅಬ್ಬಾಸ್, ಮುಜಾಹಿದ್, ಇಮಾಮ್ ಮುಹಮ್ಮದುಲ್ ಬಾಕಿರ್ ಮತ್ತು ಸುದ್ದೀ(ರ) ಅವರ ಪ್ರಕಾರ ಇದು ಗಂಧಕದ ಶಿಲೆಗಳಾಗಿವೆ.

ದಂತಹ ದಿನವಾಗಿರುವುದು.[9] ಅವರ ಜ್ಯೋತಿಯು ಅವರ ಮುಂದಿನಿಂದಲೂ ಅವರ ಬಲಬದಿಯಲ್ಲೂ ಚಲಿಸುತ್ತಿರುವುದು ಮತ್ತು ಅವರು, "ನಮ್ಮ ಪ್ರಭು, ನಮ್ಮ ಜ್ಯೋತಿಯನ್ನು ನಮಗಾಗಿ ಪರಿಪೂರ್ಣಗೊಳಿಸಿಬಿಡು ಮತ್ತು ನಮ್ಮನ್ನು ಕ್ಷಮಿಸು, ನೀನು ಸಕಲ ವಿಷಯಗಳ ಸಾಮರ್ಥ್ಯವಿರುವವನಾಗಿರುತ್ತಿ" ಎಂದು ಹೇಳುತ್ತಿರುವರು.

يَوْمَ لَا يُخْزِي اللَّهُ النَّبِيَّ وَالَّذِينَ آمَنُوا مَعَهُ ۖ نُورُهُمْ يَسْعَىٰ بَيْنَ أَيْدِيهِمْ وَبِأَيْمَانِهِمْ يَقُولُونَ رَبَّنَا أَتْمِمْ لَنَا نُورَنَا وَاغْفِرْ لَنَا ۖ إِنَّكَ عَلَىٰ كُلِّ شَيْءٍ قَدِيرٌ ﴿٨﴾

9. ಸಂದೇಶವಾಹಕರೇ, ಸತ್ಯನಿಷೇಧಿಗಳೊಂದಿಗೂ ಕಪಟವಿಶ್ವಾಸಿಗಳೊಂದಿಗೂ ಸಮರ ಹೂಡಿರಿ ಮತ್ತು ಅವರೊಡನೆ ಕಠಿಣವಾಗಿ ವರ್ತಿಸಿರಿ. ನರಕವೇ ಅವರ ನಿವಾಸವಾಗಿದೆ ಮತ್ತು ಅದು ಅತ್ಯಂತ ಕೆಟ್ಟ ನೆಲೆಯಾಗಿದೆ.

يَا أَيُّهَا النَّبِيُّ جَاهِدِ الْكُفَّارَ وَالْمُنَافِقِينَ وَاغْلُظْ عَلَيْهِمْ ۚ وَمَأْوَاهُمْ جَهَنَّمُ ۖ وَبِئْسَ الْمَصِيرُ ﴿٩﴾

10. ಅಲ್ಲಾಹನು ಸತ್ಯನಿಷೇಧಿಗಳ ವಿಷಯದಲ್ಲಿ ನೂಹ್ ಮತ್ತು ಲೂತ್‌ರ ಪತ್ನಿಯರನ್ನು ಉದಾಹರಣೆಯಾಗಿ ಮುಂದಿಡುತ್ತಾನೆ. ಅವರು ನಮ್ಮ ಇಬ್ಬರು ಸಜ್ಜನ ದಾಸರ ದಾಂಪತ್ಯ ಬಂಧನದಲ್ಲಿದ್ದರು. ಆದರೆ, ಅವರು ತಮ್ಮ ಆ ಪತಿಯರನ್ನು ವಂಚಿಸಿದರು[10] ಮತ್ತು ಅವರು (ಪತಿಯಂದಿರು) ಅಲ್ಲಾಹನೆದುರು ಅವರಿಗೆ ಯಾವ ಪ್ರಯೋಜನವನ್ನೂ ಒದಗಿಸದಾದರು. ಇಬ್ಬರೊಡನೆಯೂ, "ಹೋಗಿರಿ, ಅಗ್ನಿಯಲ್ಲಿ ಬೀಳುವವರ ಜೊತೆಗೆ ನೀವೂ ಬೀಳಿರಿ" ಎಂದು ಹೇಳಲಾಯಿತು.

ضَرَبَ اللَّهُ مَثَلًا لِّلَّذِينَ كَفَرُوا امْرَأَتَ نُوحٍ وَامْرَأَتَ لُوطٍ ۖ كَانَتَا تَحْتَ عَبْدَيْنِ مِنْ عِبَادِنَا صَالِحَيْنِ فَخَانَتَاهُمَا فَلَمْ يُغْنِيَا عَنْهُمَا مِنَ اللَّهِ شَيْئًا وَقِيلَ ادْخُلَا النَّارَ مَعَ الدَّاخِلِينَ ﴿١٠﴾

11. ಸತ್ಯವಿಶ್ವಾಸಿಗಳ ವಿಷಯದಲ್ಲಿ ಅಲ್ಲಾಹನು ಫಿರ್‌ಔನನ ಪತ್ನಿಯ ಉದಾಹರಣೆಯನ್ನು ಮುಂದಿಡುತ್ತಾನೆ. ಅವರು, "ನನ್ನ ಪ್ರಭೂ, ನನಗಾಗಿ ನಿನ್ನ ಸ್ವರ್ಗದಲ್ಲೊಂದು ಭವನವನ್ನು ನಿರ್ಮಿಸಿಕೊಡು ಮತ್ತು ನನ್ನನ್ನು ಫಿರ್‌ಔನನಿಂದಲೂ ಅವನ ಕರ್ಮಗಳಿಂದಲೂ ರಕ್ಷಿಸು ಮತ್ತು ಅಕ್ರಮಿ ಜನಾಂಗದಿಂದ ನನ್ನನ್ನು ಪಾರುಗೊಳಿಸು" ಎಂದು ಪ್ರಾರ್ಥಿಸಿದ ಸಂದರ್ಭ-

وَضَرَبَ اللَّهُ مَثَلًا لِّلَّذِينَ آمَنُوا امْرَأَتَ فِرْعَوْنَ إِذْ قَالَتْ رَبِّ ابْنِ لِي عِندَكَ بَيْتًا فِي الْجَنَّةِ وَنَجِّنِي مِن فِرْعَوْنَ وَعَمَلِهِ وَنَجِّنِي مِنَ الْقَوْمِ الظَّالِمِينَ ﴿١١﴾

12. ಮತ್ತು ಅವನು ಇಮ್ರಾನನ ಪುತ್ರಿ ಮರ್ಯಮರ[11] ಉದಾಹರಣೆ

وَمَرْيَمَ ابْنَتَ عِمْرَانَ الَّتِي أَحْصَنَتْ

9. ಅರ್ಥಾತ್- ಅವರ ಸತ್ಕರ್ಮಗಳ ಪ್ರತಿಫಲವನ್ನು ಅವನು ವ್ಯರ್ಥಗೊಳಿಸಲಾರನು. ಅವರು ದೇವಭಯದಿಂದಿದ್ದು ಏನು ಪ್ರಯೋಜನವಾಯಿತು ಎಂದು ಸತ್ಯನಿಷೇಧಿಗಳಿಗೆ ಮತ್ತು ಕಪಟವಿಶ್ವಾಸಿಗಳಿಗೆ ಹೇಳುವ ಅವಕಾಶ ಕೊಡಲಾರನು. ದೇವಧಿಕ್ಕಾರಿಗಳು ಮಾತ್ರ ನಿಂದ್ಯರಾಗುವರು. ನಿಷ್ಠಾವಂತ ಮತ್ತು ಅನುಸರಣಶೀಲ ದಾಸರಿಗೆಂದೂ ಅಂತಹ ಗತಿ ಎದುರಾಗದು.

10. ಇಲ್ಲಿ ವಂಚನೆ ಎಸಗುವುದೆಂದರೆ, ಅವರು ಅನೈತಿಕ ಕೆಲಸವನ್ನು ಮಾಡಿದರೆಂದಲ್ಲ. ಬದಲಾಗಿ ಇದರ ಅರ್ಥ ಅವರು ಸತ್ಯವಿಶ್ವಾಸದ ಹಾದಿಯಲ್ಲಿ ಹ. ನೂಹ್ ಮತ್ತು ಹ.ಲೂತ್‌ರಿಗೆ(ಅ) ನೆರವಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಅವರು ಧರ್ಮದ ಶತ್ರುಗಳಿಗೆ ನೆರವಾಗುತ್ತಿದ್ದರು ಎಂದಾಗಿದೆ.

11. ಹ. ಮರ್ಯಮ್‌ರ(ಅ) ತಂದೆಯ ಹೆಸರೇ ಇಮ್ರಾನ್ ಎಂದಾಗಿರಬಹುದು. ಅಥವಾ ಅವರು ಇಮ್ರಾನ್‌ನ ವಂಶದ ಪೈಕಿಯವರಾದ್ದರಿಂದ ಅವರನ್ನು ಇಮ್ರಾನ್‌ನ ಪುತ್ರಿ ಎಂದು ಕರೆಯಲಾಗಿರಬಹುದು.

ಯನ್ನೂ ಮುಂದಿಡುತ್ತಾನೆ; ಅವರು ತಮ್ಮ ಮಾನವನ್ನು ಕಾಪಾಡಿ ಕೊಂಡಿದ್ದರು.[12] ತರುವಾಯ ನಾವು ಅವರೊಳಗೆ ನಮ್ಮ ಕಡೆಯಿಂದ ಆತ್ಮವನ್ನು ಊದಿದೆವು[13] ಮತ್ತು ಅವರು ತಮ್ಮ ಪ್ರಭುವಿನ ಆದೇಶಗಳನ್ನೂ ಅವನ ಗ್ರಂಥಗಳನ್ನೂ ದೃಢೀಕರಿಸಿದ್ದರು ಮತ್ತು ಅವರು ಆಜ್ಞಾಪಾಲಕರಲ್ಲಾಗಿದ್ದರು.[14]

فَرْجَهَا فَنَفَخْنَا فِيْهِ مِنْ رُّوْحِنَا وَصَدَّقَتْ بِكَلِمٰتِ رَبِّهَا وَكُتُبِهٖ وَكَانَتْ مِنَ الْقٰنِتِيْنَ ۝١٢

12. ಅವರ ಉದರದಿಂದ ಹ. ಈಸಾರ(ಅ) ಜನನ, ಪಾಪದ ಪರಿಣಾಮವಾಗಿತ್ತು ಎಂಬ ಆರೋಪವನ್ನು ಈ ಮೂಲಕ ನಿರಾಕರಿಸಲಾಗಿದೆ. ಅನ್ನಿಸಾ ಅಧ್ಯಾಯದ 156ನೆಯ ಸೂಕ್ತದಲ್ಲಿ ಅವರ ಈ ಆರೋಪವನ್ನು 'ಘೋರ ಸುಳ್ಳಾರೋಪ' ಎಂದು ಹೇಳಲಾಗಿದೆ.

13. ಅರ್ಥಾತ್- ಅವರ ಜತೆ ಯಾವುದೇ ಪುರುಷನ ಸಂಪರ್ಕವಿಲ್ಲದೆಯೇ ನಾವು ನಮ್ಮ ವತಿಯಿಂದ ಅವರ ಗರ್ಭಾಶಯದಲ್ಲಿ ಜೀವವೊಂದನ್ನು ಹಾಕಿದೆವು.

14. ಇಲ್ಲಿ ಹ. ಮರ್ಯಮ್‌ರ(ಅ) ಉದಾಹರಣೆಯನ್ನು ಪ್ರಸ್ತಾಪಿಸುವ ಉದ್ದೇಶವೇನೆಂದರೆ, ಅಲ್ಲಾಹನು ಕನ್ಯಾವಸ್ಥೆಯಲ್ಲಿ ಪವಾಡದಿಂದ ಗರ್ಭಿಣಿಯನ್ನಾಗಿ ಮಾಡುವ ಮೂಲಕ ಅವರನ್ನು ಮಹಾ ಪರೀಕ್ಷೆಗೊಡ್ಡಿದ್ದನು. ಆದರೆ ಅವರು ತಾಳ್ಮೆಯೊಂದಿಗೆ ಅಲ್ಲಾಹನ ಇಚ್ಛೆಯ ಮುಂದೆ ಶಿರಬಾಗಿದರು.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. *ಅವನು ಅತ್ಯಂತ ಮಂಗಲಮಯನು. ಅವನ ಕೈಯಲ್ಲಿ (ವಿಶ್ವದ) ಪ್ರಭುತ್ವವಿದೆ ಮತ್ತು ಅವನು ಸಕಲ ವಸ್ತುಗಳ ಮೇಲೆ ಸಾಮರ್ಥ್ಯವುಳ್ಳವನಾಗಿದ್ದಾನೆ.[1]

تَبٰرَكَ الَّذِيْ بِيَدِهِ الْمُلْكُ وَهُوَ عَلٰى كُلِّ شَيْءٍ قَدِيْرُ ۙ﴿١﴾

2. ನಿಮ್ಮನ್ನು ಪರೀಕ್ಷಿಸಿ ನಿಮ್ಮ ಪೈಕಿ ಯಾರು ಸತ್ಕರ್ಮವೆಸಗುವವನೆಂದು ನೋಡಲಿಕ್ಕಾಗಿ ಅವನು ಜೀವನವನ್ನೂ ಮರಣವನ್ನೂ ಆವಿಷ್ಕರಿಸಿದನು.[2] ಅವನು ಪ್ರಬಲನೂ ಕ್ಷಮಾಶೀಲನೂ ಆಗಿರುತ್ತಾನೆ.

الَّذِيْ خَلَقَ الْمَوْتَ وَالْحَيٰوةَ لِيَبْلُوَكُمْ اَيُّكُمْ اَحْسَنُ عَمَلًا ۗ وَهُوَ الْعَزِيْزُ الْغَفُوْرُ ۙ﴿٢﴾

3. ಅವನು ಅಂತಸ್ತು ಅಂತಸ್ತುಗಳಾಗಿ ಸಪ್ತ ಗಗನಗಳನ್ನು ಉಂಟು ಮಾಡಿದನು. ದಯಾಮಯನ ಸೃಷ್ಟಿಯಲ್ಲಿ ನೀವು ಯಾವುದೇ ಅಸಾಂಗತ್ಯವನ್ನು ಕಾಣಲಾರಿರಿ.[3] ಇನ್ನೊಮ್ಮೆ ನೋಡಿರಿ, ನಿಮಗೆಲ್ಲಾದರೂ ನ್ಯೂನತೆ ಕಾಣಿಸುತ್ತಿದೆಯೇ?[4]

الَّذِيْ خَلَقَ سَبْعَ سَمٰوٰتٍ طِبَاقًا ۗ مَا تَرٰى فِيْ خَلْقِ الرَّحْمٰنِ مِنْ تَفٰوُتٍ ۗ فَارْجِعِ الْبَصَرَ ۙ هَلْ تَرٰى مِنْ فُطُوْرٍ ﴿٣﴾

4. ಪುನಃಪುನಃ ದೃಷ್ಟಿ ಹಾಯಿಸಿರಿ. ನಿಮ್ಮ ದೃಷ್ಟಿಯು ಸೋತು ಹತಾಶವಾಗಿ ಮರಳಿ ಬರುವುದು.

ثُمَّ ارْجِعِ الْبَصَرَ كَرَّتَيْنِ يَنْقَلِبْ اِلَيْكَ الْبَصَرُ خَاسِئًا وَّهُوَ حَسِيْرٌ ﴿٤﴾

---

*ಇಲ್ಲಿಂದ 29ನೆಯ ಕಾಂಡ ಆರಂಭ.

1. ಅರ್ಥಾತ್- ಏನು ಬೇಕಾದರೂ ಮಾಡಬಲ್ಲವನು. ಅವನು ಒಂದು ಕೆಲಸವನ್ನು ಮಾಡಬಯಸಿದರೆ ಅದನ್ನು ಮಾಡದಂತೆ ಅವನನ್ನು ತಡೆಯುವವರು ಯಾರೂ ಇಲ್ಲ.
2. ಅರ್ಥಾತ್- ಭೂಮಿಯಲ್ಲಿ ಮಾನವರ ಹುಟ್ಟು-ಸಾವುಗಳ ಸರಣಿಯನ್ನು ಅವನು ಆರಂಭಿಸಿದನು. ಯಾವ ಮಾನವ ಹೆಚ್ಚು ಉತ್ತಮವಾದ ಕರ್ಮಗಳನ್ನೆಸಗುತ್ತಾನೆ ಎಂದು ಪರೀಕ್ಷಿಸುವುದೇ ಇದರ ಉದ್ದೇಶ.
3. ಮೂಲದಲ್ಲಿ 'ತಫಾಉತ್' ಎಂಬ ಪದ ಬಳಕೆಯಾಗಿದೆ. ಅದರ ಅರ್ಥ ಹೊಂದಾಣಿಕೆಯಿಲ್ಲದಿರುವುದು, ಒಂದು ವಸ್ತು ಇನ್ನೊಂದರೊಂದಿಗೆ ಸರಿ ಹೊಂದದಿರುವುದು, ಒಂದಕ್ಕೊಂದು ಒಗ್ಗದಿರುವುದು.
4. ಮೂಲದಲ್ಲಿ 'ಫುತೂರ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಬಿರುಕು, ಒಡಕು ಅಥವಾ ಮುರಿದಿರುವುದು ಎಂದಾಗಿದೆ. ಅರ್ಥಾತ್, ಸಮಸ್ತ ನಿಸರ್ಗದ ಸಂಬಂಧ ಅವಿಚ್ಛಿನ್ನವಾಗಿದೆ. ಭೂಮಿಯ ಒಂದು ಕಣದಿಂದ ಹಿಡಿದು ಉಜ್ವಲ ಆಕಾಶಕಾಯಗಳ ತನಕ ಎಲ್ಲವೂ ಪರಸ್ಪರ ಬೆಸೆದುಕೊಂಡಿವೆ. ನಿಸರ್ಗ ವ್ಯವಸ್ಥೆಯ ಸರಣಿ ಎಲ್ಲಿಯೂ ಕಡಿಯಲ್ಪಟ್ಟಿಲ್ಲ. ನೀವೆಷ್ಟು ಶೋಧಿಸಿದರೂ ನಿಮಗೆ ಅದರಲ್ಲೆಲ್ಲೂ ಬಿರುಕು ಗೋಚರಿಸಲಾರದು.

5. ನಾವು ನಿಮ್ಮ ಸಮೀಪದ ಆಕಾಶವನ್ನು[5] ಉಜ್ವಲ ದೀಪಗಳಿಂದ ಅಲಂಕರಿಸಿದ್ದೇವೆ ಮತ್ತು ಅವುಗಳನ್ನು ಶೈತಾನರನ್ನು ಹೊಡೆದಟ್ಟುವ ಸಾಧನವಾಗಿ ಮಾಡಿದ್ದೇವೆ. ನಾವು ಈ ಶೈತಾನರಿಗಾಗಿ ಧಗಧಗಿಸುವ ಅಗ್ನಿಯನ್ನು ಸಿದ್ಧಪಡಿಸಿಟ್ಟಿರುತ್ತೇವೆ.

وَلَقَدْ زَيَّنَّا السَّمَاءَ الدُّنْيَا بِمَصَابِيحَ وَجَعَلْنَاهَا رُجُومًا لِّلشَّيَاطِينِ وَأَعْتَدْنَا لَهُمْ عَذَابَ السَّعِيرِ ﴿٥﴾

6. ತಮ್ಮ ಪ್ರಭುವನ್ನು ನಿಷೇಧಿಸಿದವರಿಗಾಗಿ ನರಕ ಯಾತನೆ ಇದೆ- ಮತ್ತು ಅದು ಅತ್ಯಂತ ಕೆಟ್ಟ ವಾಸಸ್ಥಾನ.

وَلِلَّذِينَ كَفَرُوا بِرَبِّهِمْ عَذَابُ جَهَنَّمَ ۖ وَبِئْسَ الْمَصِيرُ ﴿٦﴾

7. ಅವರು ಅದಕ್ಕೆ ಎಸೆಯಲ್ಪಡುವಾಗ ಅದರ ಭಯಾನಕ ಆರ್ಭಟವನ್ನು ಕೇಳುವರು[6] ಮತ್ತು ಅದು ಕುದಿಯುತ್ತಿರುವುದು.

إِذَا أُلْقُوا فِيهَا سَمِعُوا لَهَا شَهِيقًا وَهِيَ تَفُورُ ﴿٧﴾

8. ಕ್ರೋಧಾವೇಶದಿಂದ ಸಿಡಿಯುವಂತಿರುವುದು. ಪ್ರತಿ ಬಾರಿಯೂ ಯಾವುದಾದರೂ ಸಮೂಹವನ್ನು ಅದರೊಳಗೆ ಹಾಕಲಾದಾಗ, ಅದರ ಕಾರ್ಯಕರ್ತರು ಅವರೊಡನೆ,- "ನಿಮ್ಮ ಬಳಿಗೆ ಎಚ್ಚರಿಕೆ ಕೊಡುವವನಾರೂ ಬಂದಿರಲಿಲ್ಲವೇ?" ಎಂದು ಕೇಳುವರು.

تَكَادُ تَمَيَّزُ مِنَ الْغَيْظِ ۖ كُلَّمَا أُلْقِيَ فِيهَا فَوْجٌ سَأَلَهُمْ خَزَنَتُهَا أَلَمْ يَأْتِكُمْ نَذِيرٌ ﴿٨﴾

9. ಆಗ ಅವರು- "ಹೌದು, ಎಚ್ಚರಿಕೆ ಕೊಡುವವರೊಬ್ಬರು ಬಂದಿದ್ದರು. ಆದರೆ ನಾವು ಅವರನ್ನು ಸುಳ್ಳಾಗಿಸಿದೆವು ಮತ್ತು ಅಲ್ಲಾಹನು ಏನನ್ನೂ ಅವತೀರ್ಣಗೊಳಿಸಿಲ್ಲ, ನೀವು ದೊಡ್ಡ ಪಥಭ್ರಷ್ಟತೆಯಲ್ಲಿ ಬಿದ್ದುಕೊಂಡಿರುವಿರಿ ಎಂದು ಹೇಳಿದೆವು"- ಎಂದುತ್ತರಿಸುವರು.

قَالُوا بَلَىٰ قَدْ جَاءَنَا نَذِيرٌ فَكَذَّبْنَا وَقُلْنَا مَا نَزَّلَ اللَّهُ مِن شَيْءٍ إِنْ أَنتُمْ إِلَّا فِي ضَلَالٍ كَبِيرٍ ﴿٩﴾

10. ಮತ್ತು ಅವರು, "ಅಯ್ಯೋ! ನಾವು ಕೇಳಿರುತ್ತಿದ್ದರೆ ಮತ್ತು ಗ್ರಹಿಸಿರುತ್ತಿದ್ದರೆ ಇಂದು ಧಗಧಗಿಸುವ ಈ ಅಗ್ನಿಯಾತನೆಯನ್ನು ಅನುಭವಿಸುವವರಲ್ಲಿ ಸೇರುತ್ತಿರಲಿಲ್ಲ" ಎನ್ನುವರು.

وَقَالُوا لَوْ كُنَّا نَسْمَعُ أَوْ نَعْقِلُ مَا كُنَّا فِي أَصْحَابِ السَّعِيرِ ﴿١٠﴾

11. ಈ ರೀತಿಯಲ್ಲಿ ಅವರು ತಮ್ಮ ಅಪರಾಧವನ್ನು ತಾವೇ ಒಪ್ಪಿಕೊಳ್ಳುವರು. ಈ ನರಕವಾಸಿಗಳಿಗೆ ಶಾಪವಿದೆ.

فَاعْتَرَفُوا بِذَنبِهِمْ فَسُحْقًا لِّأَصْحَابِ السَّعِيرِ ﴿١١﴾

12. ಕಣ್ಣಾರೆ ಕಾಣದೆ ತಮ್ಮ ಪ್ರಭುವನ್ನು ಭಯಪಡುವವರಿಗಾಗಿ ಖಂಡಿತವಾಗಿಯೂ ಕ್ಷಮೆ ಮತ್ತು ದೊಡ್ಡ ಪ್ರತಿಫಲವಿದೆ.

إِنَّ الَّذِينَ يَخْشَوْنَ رَبَّهُم بِالْغَيْبِ لَهُم مَّغْفِرَةٌ وَأَجْرٌ كَبِيرٌ ﴿١٢﴾

---

5. ಹತ್ತಿರದ ಆಕಾಶವೆಂದರೆ- ಯಾವುದರ ಗ್ರಹ ನಕ್ಷತ್ರಗಳನ್ನು ನಾವು ದೂರದರ್ಶಕದ ಸಹಾಯವಿಲ್ಲದೆ ಬರಿಗಣ್ಣಿನಿಂದ ನೋಡಬಹುದೋ ಆ ಆಕಾಶವಾಗಿದೆ.

6. ಅದರರ್ಥ ಅದು ನರಕದ ಶಬ್ದವೇ ಆಗಿರಬಹುದು. ಅಥವಾ ನರಕದಲ್ಲಿ ಮೊದಲಿನಿಂದಲೇ ಬಿದ್ದುಕೊಂಡಿರುವ ಜನರ ಚೀರಾಟದ ಧ್ವನಿ ಅಲ್ಲಿಂದ ಕೇಳಿ ಬರುತ್ತಿರುತ್ತದೆ ಎಂದೂ ಆಗಬಹುದು.

13. ನೀವು ಮೆಲುದನಿಯಿಂದ ಮಾತನಾಡಿದರೂ ಏರಿದ ಧ್ವನಿಯಲ್ಲಿ ಮಾತನಾಡಿದರೂ (ಅಲ್ಲಾಹನ ಮಟ್ಟಿಗೆ ಅದೆಲ್ಲವೂ ಸಮಾನ ವಾಗಿದೆ) ಅವನಂತು ಹೃದ್ಗತಗಳನ್ನು ಸಹ ಬಲ್ಲವನಾಗಿರುತ್ತಾನೆ.

وَأَسِرُّوا قَوْلَكُمْ أَوِ اجْهَرُوا بِهِ ۖ إِنَّهُ عَلِيمٌ بِذَاتِ الصُّدُورِ ﴿١٣﴾

14. ಸೃಷ್ಟಿಸಿದವನು ಅರಿಯದಿರುವನೇ?[7] ವಸ್ತುತಃ ಅವನು ಅತ್ಯಂತ ಸೂಕ್ಷ್ಮಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.

أَلَا يَعْلَمُ مَنْ خَلَقَ وَهُوَ اللَّطِيفُ الْخَبِيرُ ﴿١٤﴾

15. ನಿಮಗಾಗಿ ಭೂಮಿಯನ್ನು ಅಧೀನಗೊಳಿಸಿದವನು ಅವನೇ. ಅದರ ಎದೆಯ ಮೇಲೆ ನಡೆದಾಡಿರಿ ಮತ್ತು ಅಲ್ಲಾಹನ ಅನ್ನವನ್ನು ಉಣ್ಣಿರಿ. ನಿಮಗೆ ಪುನಃ ಜೀವಂತರಾಗಿ ಅವನ ಬಳಿಗೇ ಹೋಗಲಿಕ್ಕಿದೆ.

هُوَ الَّذِي جَعَلَ لَكُمُ الْأَرْضَ ذَلُولًا فَامْشُوا فِي مَنَاكِبِهَا وَكُلُوا مِنْ رِزْقِهِ ۖ وَإِلَيْهِ النُّشُورُ ﴿١٥﴾

16. ಆಕಾಶದಲ್ಲಿರುವವನು[8] ನಿಮ್ಮನ್ನು ನೆಲದಲ್ಲಿ ಹುಗಿದು ಬಿಡುವ ಹಾಗೂ ಈ ಭೂಮಿಯು ಹಠಾತ್ತನೆ ನಡುಗಲಾರಂಭಿಸುವ ಕುರಿತು ನೀವು ನಿರ್ಭೀತರಾಗಿರುವಿರಾ?

أَأَمِنْتُمْ مَنْ فِي السَّمَاءِ أَنْ يَخْسِفَ بِكُمُ الْأَرْضَ فَإِذَا هِيَ تَمُورُ ﴿١٦﴾

17. ಆಕಾಶದಲ್ಲಿರುವಾತನು ನಿಮ್ಮ ಮೇಲೆ ಕಲ್ಲಿನ ಮಳೆ ಸುರಿಸುವಂತಹ ಗಾಳಿಯನ್ನು ಬೀಸಿ ಬಿಡುವ ಕುರಿತು ನೀವು ನಿರ್ಭೀತರಾಗಿರುವಿರಾ? ನನ್ನ ಎಚ್ಚರಿಕೆ ಹೇಗಿರುತ್ತದೆಂಬುದು ಆಗ ನಿಮಗೆ ತಿಳಿದು ಬರುವುದು.

أَمْ أَمِنْتُمْ مَنْ فِي السَّمَاءِ أَنْ يُرْسِلَ عَلَيْكُمْ حَاصِبًا ۖ فَسَتَعْلَمُونَ كَيْفَ نَذِيرِ ﴿١٧﴾

18. ಇವರಿಗಿಂತ ಮುಂಚೆ ಗತಿಸಿ ಹೋದವರು ಸುಳ್ಳಾಗಿಸಿದ್ದರು. ನನ್ನ ಹಿಡಿತವು ಎಷ್ಟು ಬಿಗಿಯಾಗಿತ್ತೆಂಬುದನ್ನು ನೋಡಿಕೊಳ್ಳಿರಿ.

وَلَقَدْ كَذَّبَ الَّذِينَ مِنْ قَبْلِهِمْ فَكَيْفَ كَانَ نَكِيرِ ﴿١٨﴾

19. ಇವರು ತಮ್ಮ ಮೇಲೆ ಹಾರಾಡುತ್ತಿರುವ ಪಕ್ಷಿಗಳು ರೆಕ್ಕೆ ಬಿಚ್ಚುವುದನ್ನೂ ಮಡಚಿ ಕೊಳ್ಳುವುದನ್ನೂ ನೋಡುತ್ತಿಲ್ಲವೇ?

أَوَلَمْ يَرَوْا إِلَى الطَّيْرِ فَوْقَهُمْ صَافَّاتٍ وَيَقْبِضْنَ ۚ مَا يُمْسِكُهُنَّ إِلَّا الرَّحْمَٰنُ ۚ

---

7. ಇನ್ನೊಂದು ಭಾಷಾಂತರ, "ಅವನು ತನ್ನ ಸೃಷ್ಟಿಗಳ ಬಗ್ಗೆಯೇ ತಿಳಿಯದಿರುವನೇ?" ಎಂದೂ ಆಗಬಹುದು.
8. ಅಲ್ಲಾಹನು ಆಕಾಶದಲ್ಲಿರುತ್ತಾನೆಂದು ಇದರ ಅರ್ಥವಲ್ಲ. ಬದಲಾಗಿ ಮನುಷ್ಯ ದೇವನೆಡೆಗೆ ತಿರುಗುವಾಗ ಸಹಜವಾಗಿಯೇ ಆಕಾಶದತ್ತ ಮುಖ ಮಾಡುವುದನ್ನು ಗಮನದಲ್ಲಿರಿಸಿ ಈ ಮಾತು ಹೇಳಲಾಗಿದೆ. ಪ್ರಾರ್ಥನೆ ಮಾಡುವಾಗ ಮಾನವ ಆಕಾಶದತ್ತ ಕೈಚಾಚುತ್ತಾನೆ. ಯಾವುದಾದರೂ ವಿಪತ್ತು ಎದುರಾಗಿ ಎಲ್ಲಾ ಆಸರೆಗಳ ಬಗ್ಗೆ ನಿರಾಶನಾದಾಗ ಅವನು ಆಕಾಶದತ್ತ ಮುಖ ಮಾಡಿ ದೇವನೊಡನೆ ಮೊರೆಯಿಡುತ್ತಾನೆ. ಯಾವುದೇ ಅನಿರೀಕ್ಷಿತ ಆಪತ್ತು ಬಂದೆರಗಿದರೆ ಇದು ಮೇಲಿನಿಂದ ಬಂದೆರಗಿದೆ ಎನ್ನುತ್ತಾನೆ. ಅಸಾಮಾನ್ಯ ರೀತಿಯಲ್ಲಿ ಗಳಿಸಿದ ವಸ್ತುವಿನ ಬಗ್ಗೆ ಇದು ಮೇಲಿನಿಂದ ಬಂದುದಾಗಿದೆ ಎನ್ನುತ್ತಾನೆ. ಅಲ್ಲಾಹನು ಕಳುಹಿಸಿರುವ ಗ್ರಂಥಗಳನ್ನು ಆಕಾಶದಿಂದ ಬಂದ ಗ್ರಂಥಗಳು ಎನ್ನಲಾಗುತ್ತದೆ. ಇದರಿಂದ ವ್ಯಕ್ತವಾಗುವುದೇನೆಂದರೆ ದೇವನ ಬಗ್ಗೆ ಕಲ್ಪಿಸುವಾಗ ಮನಸ್ಸು ಭೂಮಿಯ ಬದಲು ಆಕಾಶದ ಕಡೆಗೆ ಸುಳಿಯುವುದು ಮಾನವನ ಸ್ವಭಾವ ಸಹಜವಾದ ವಿಷಯವಾಗಿದೆ.

ಪರಮ ದಯಾಮಯನ ಹೊರತು ಅವುಗಳನ್ನು ಆಧರಿಸಿ ಕೊಂಡಿರುವವರು ಬೇರಾರೂ ಇಲ್ಲ. ಅವನೇ ಪ್ರತಿಯೊಂದು ವಸ್ತುವಿನ ವೀಕ್ಷಕನಾಗಿದ್ದಾನೆ.

إِنَّهُ بِكُلِّ شَيْءٍ بَصِيرٌ ⑲

20. ಪರಮ ದಯಾಮಯನ ವಿರುದ್ಧ ನಿಮಗೆ ಸಹಾಯ ಮಾಡ ಬಲ್ಲಂತಹ ಸೈನ್ಯವಾದರೂ ನಿಮ್ಮ ಬಳಿ ಯಾವುದಿದೆ?.[9] ವಾಸ್ತವ ದಲ್ಲಿ ಈ ಸತ್ಯನಿಷೇಧಿಗಳು ಮೋಸಕ್ಕೊಳಗಾಗಿದ್ದಾರೆ.

أَمَّنْ هَٰذَا الَّذِي هُوَ جُندٌ لَّكُمْ يَنصُرُكُم مِّن دُونِ الرَّحْمَٰنِ ۚ إِنِ الْكَافِرُونَ إِلَّا فِي غُرُورٍ ⑳

21. ಅಥವಾ ಪರಮ ದಯಾಮಯನು ತನ್ನ ಜೀವನಾಧಾರಗಳನ್ನು ತಡೆ ಹಿಡಿದರೆ, ನಿಮಗೆ ಜೀವನಾಧಾರ ನೀಡಬಲ್ಲವನು ಯಾರಿದ್ದಾ ನೆಂದು ಹೇಳಿರಿ. ವಾಸ್ತವದಲ್ಲಿ ಇವರು ವಿದ್ರೋಹದಲ್ಲಿಯೂ ಸತ್ಯದಿಂದ ನುಣುಚಿಕೊಳ್ಳುವುದರಲ್ಲಿಯೂ ಹಠಮಾರಿಗಳಾಗಿದ್ದಾರೆ.

أَمَّنْ هَٰذَا الَّذِي يَرْزُقُكُمْ إِنْ أَمْسَكَ رِزْقَهُ ۚ بَل لَّجُّوا فِي عُتُوٍّ وَنُفُورٍ ㉑

22. ಅಧೋಮುಖಿಯಾಗಿ ನಡೆಯುತ್ತಿರುವವನು ಹೆಚ್ಚು[10] ಸನ್ಮಾರ್ಗ ಪಡೆಯುವನೋ ಅಥವಾ ತಲೆಯೆತ್ತಿ ನೇರವಾಗಿ ಒಂದು ಸಮತಟ್ಟಾದ ಮಾರ್ಗದಲ್ಲಿ ನಡೆಯುವವನೋ ಎಂದು ಯೋಚಿಸಿರಿ.

أَفَمَن يَمْشِي مُكِبًّا عَلَىٰ وَجْهِهِ أَهْدَىٰ أَمَّن يَمْشِي سَوِيًّا عَلَىٰ صِرَاطٍ مُّسْتَقِيمٍ ㉒

23. ನಿಮ್ಮನ್ನು ಸೃಷ್ಟಿಸಿದವನು, ನಿಮಗೆ ಶ್ರವಣ ಹಾಗೂ ದೃಷ್ಟಿಯನ್ನು ನೀಡಿದವನು ಮತ್ತು ಚಿಂತಿಸುವ ಮನಸ್ಸುಗಳನ್ನು ನೀಡಿದವನು ಅಲ್ಲಾಹನೇ. ಆದರೆ, ನೀವು ಅತ್ಯಲ್ಪವೇ ಕೃತಜ್ಞತೆ ಸಲ್ಲಿಸುತ್ತೀರಿ- ಎಂದು ಇವರೊಡನೆ ಹೇಳಿರಿ.[11]

قُلْ هُوَ الَّذِي أَنشَأَكُمْ وَجَعَلَ لَكُمُ السَّمْعَ وَالْأَبْصَارَ وَالْأَفْئِدَةَ ۖ قَلِيلًا مَّا تَشْكُرُونَ ㉓

24. ನಿಮ್ಮನ್ನು ಭೂಮಿಯ ಮೇಲೆ ಹಬ್ಬಿಸಿದವನು ಅಲ್ಲಾಹನೇ ಮತ್ತು ಅವನ ಕಡೆಗೇ ನೀವು ಒಟ್ಟುಗೂಡಿಸಲ್ಪಡುವಿರೆಂದು ಇವರೊಡನೆ ಹೇಳಿರಿ.

قُلْ هُوَ الَّذِي ذَرَأَكُمْ فِي الْأَرْضِ وَإِلَيْهِ تُحْشَرُونَ ㉔

25. ನೀವು ಸತ್ಯವಂತರಾಗಿದ್ದರೆ, ಈ ವಾಗ್ದಾನವು ಪೂರ್ತಿಗೊಳ್ಳುವುದು ಯಾವಾಗ ಎಂದು ಇವರು ಕೇಳುತ್ತಾರೆ.

وَيَقُولُونَ مَتَىٰ هَٰذَا الْوَعْدُ إِن كُنتُمْ صَادِقِينَ ㉕

---

9. ಅದರ ಇನ್ನೊಂದು ಭಾಷಾಂತರ ಹೀಗಾಗಬಹುದು, "ಸೈನ್ಯದಂತೆ ನಿಂತು ನಿಮಗೆ ನೆರವಾಗ ಬಲ್ಲವರು ದಯಾಮಯನ ಹೊರತು ಬೇರಾರಿದ್ದಾರೆ."

10. ಅರ್ಥಾತ್- ಪ್ರಾಣಿಗಳಂತೆ ಅಧೋಮುಖರಾಗಿ ಯಾರೋ ಅಟ್ಟಿದ ಹಾದಿಯಲ್ಲಿ ತಮ್ಮಷ್ಟಕ್ಕೆ ಸಾಗುತ್ತಿರುತ್ತಾರೆ.

11. ಅರ್ಥಾತ್- ಸತ್ಯವನ್ನು ಅರಿತುಕೊಳ್ಳಲಿಕ್ಕಾಗಿ ಅಲ್ಲಾಹನು ವಿದ್ಯೆ, ಬುದ್ಧಿ, ಶ್ರವಣ ಮತ್ತು ದೃಶ್ಯಗಳ ಅನುಗ್ರಹವನ್ನು ನಿಮಗೆ ದಯಪಾಲಿಸಿದ್ದನು. ನೀವು ಅದರಿಂದ ಇತರೆಲ್ಲಾ ಪ್ರಯೋಜನಗಳನ್ನು ಪಡೆಯುತ್ತೀರಿ. ಆದರೆ ಯಾವುದಕ್ಕಾಗಿ ಅದನ್ನು ದಯಪಾಲಿಸಲಾಗಿತ್ತೋ ಆ ಕೆಲಸವನ್ನು ಮಾತ್ರ ಮಾಡುವುದಿಲ್ಲ. ಇದು ಕೃತಘ್ನತೆಯಾಗಿದೆ.

26. "ಅದರ ಜ್ಞಾನ ಅಲ್ಲಾಹನಿಗಿದೆ, ನಾನಂತು ಕೇವಲ ಸ್ಪಷ್ಟವಾದ ಎಚ್ಚರಿಕೆ ನೀಡುವವನಾಗಿದ್ದೇನೆ" ಎಂದು ಹೇಳಿರಿ.

قُلْ إِنَّمَا الْعِلْمُ عِنْدَ اللّٰهِ ۖ وَإِنَّمَآ أَنَا نَذِيرٌ مُّبِينٌ ﴿٢٦﴾

27. ಮುಂದೆ ಅದು ಸಮೀಪವಾಗಿರುವುದನ್ನು ಇವರು ಕಂಡಾಗ, ನಿರಾಕರಣೆ ಮಾಡಿದ್ದ ಎಲ್ಲ ಜನರ ಮುಖಗಳು ವಿಕಾರಗೊಳ್ಳುವುವು ಮತ್ತು ಆಗ ಅವರೊಡನೆ, "ನೀವು ಆಗ್ರಹಿಸುತ್ತಿದ್ದ ವಸ್ತು ಇದುವೇ ಆಗಿದೆ" ಎಂದು ಹೇಳಲಾಗುವುದು.

فَلَمَّا رَأَوْهُ زُلْفَةً سِيٓـَٔتْ وُجُوهُ الَّذِينَ كَفَرُوا وَقِيلَ هٰذَا الَّذِي كُنْتُمْ بِهِ تَدَّعُونَ ﴿٢٧﴾

28. ಅಲ್ಲಾಹನು ನನ್ನನ್ನೂ ನನ್ನ ಸಂಗಾತಿಗಳನ್ನೂ ನಾಶಗೊಳಿಸಲಿ ಅಥವಾ ನಮ್ಮ ಮೇಲೆ ಕೃಪೆ ತೋರಲಿ- ಸತ್ಯನಿಷೇಧಿಗಳನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವವರಾರು ಎಂಬ ಕುರಿತು ನೀವೆಂದಾದರೂ ಯೋಚಿಸಿದ್ದೀರಾ? ಎಂದು ಇವರೊಡನೆ ಕೇಳಿರಿ.[12]

قُلْ أَرَءَيْتُمْ إِنْ أَهْلَكَنِيَ اللّٰهُ وَمَنْ مَّعِيَ أَوْ رَحِمَنَا ۙ فَمَنْ يُّجِيرُ الْكٰفِرِينَ مِنْ عَذَابٍ أَلِيمٍ ﴿٢٨﴾

29. ಅವನು ಮಹಾ ಕರುಣಾನಿಧಿ, ನಾವು ಅವನ ಮೇಲೆಯೇ ವಿಶ್ವಾಸ ವಿರಿಸಿದ್ದೇವೆ ಮತ್ತು ಅವನ ಮೇಲೆಯೇ ಭರವಸೆಯನ್ನಿರಿಸಿದ್ದೇವೆ. ಸುವ್ಯಕ್ತವಾದ ಪಥಭ್ರಷ್ಟತೆಯಲ್ಲಿ ಬಿದ್ದಿರುವವನು ಯಾರೆಂದು ಸದ್ಯದಲ್ಲೇ ನಿಮಗೆ ತಿಳಿದು ಬರುವುದು ಎಂದು ಇವರೊಡನೆ ಹೇಳಿರಿ.

قُلْ هُوَ الرَّحْمٰنُ اٰمَنَّا بِهِ وَعَلَيْهِ تَوَكَّلْنَا ۚ فَسَتَعْلَمُونَ مَنْ هُوَ فِي ضَلٰلٍ مُّبِينٍ ﴿٢٩﴾

30. ನಿಮ್ಮ ಬಾವಿಗಳ ನೀರು ನೆಲದೊಳಕ್ಕೆ ಇಂಗಿ ಹೋದರೆ, ಆ ನೀರಿನ ಹರಿಯುವ ಚಿಲುಮೆಗಳನ್ನು ನಿಮಗೆ ಪುನಃ ಹೊರತಂದು ಕೊಡುವವರು ಯಾರೆಂದು ನೀವು ಯೋಚಿಸಿದ್ದೀರಾ? ಎಂದು ಇವರೊಡನೆ ಕೇಳಿರಿ.

قُلْ أَرَءَيْتُمْ إِنْ أَصْبَحَ مَآؤُكُمْ غَوْرًا فَمَنْ يَّأْتِيكُمْ بِمَآءٍ مَّعِينٍ ﴿٣٠﴾

---

12. ಮಕ್ಕಾದಲ್ಲಿ ಪ್ರವಾದಿವರ್ಯರ(ಸ) ಸಂದೇಶ ಪ್ರಚಾರ ಆರಂಭವಾದಾಗ ಕುರೈಶ್‌ನ ವಿವಿಧ ಗೋತ್ರಗಳಿಗೆ ಸೇರಿದ ಜನರು ಇಸ್ಲಾಮ್ ಸ್ವೀಕರಿಸಲಾರಂಭಿಸಿದರು. ಆಗ ಪ್ರತಿಯೊಂದು ಮನೆಯಲ್ಲೂ ಪ್ರವಾದಿವರ್ಯರು(ಸ) ಮತ್ತವರ ಸಂಗಾತಿಗಳಿಗೆ ಶಾಪ ಹಾಕಲಾಗುತ್ತಿತ್ತು. ಅವರು ನಾಶವಾಗಿ ಹೋಗಲೆಂದು ಅವರ ವಿರುದ್ಧ ಮಾಟ-ಮಂತ್ರಗಳನ್ನು ಮಾಡಲಾಯಿತು. ಎಲ್ಲಿಯ ವರೆಗೆಂದರೆ ಅವರನ್ನು ಕೊಲೆ ಮಾಡುವ ಯೋಜನೆಗಳನ್ನೂ ಹೂಡಲಾಯಿತು. ಅದಕ್ಕಾಗಿ ಅವರೊಡನೆ -"ನಾವು ನಾಶವಾದರೂ ಅಥವಾ ಅಲ್ಲಾಹನ ಅನುಗ್ರಹದಿಂದ ಬದುಕುಳಿದರೂ ಅದರಿಂದ ನಿಮಗೇನು ಲಭಿಸುವುದು. ದೇವಯಾತನೆಯಿಂದ ನಿಮ್ಮನ್ನು ಯಾರು ರಕ್ಷಿಸುವರು ಎಂಬ ಕುರಿತು, "ನೀವು ಆಲೋಚಿಸಿ" ಎಂದು ಹೇಳಲು ಆದೇಶಿಸಲಾಗುತ್ತಿದೆ.

26. "ಅದರ ಜ್ಞಾನ ಅಲ್ಲಾಹನಿಗಿದೆ, ನಾನಂತು ಕೇವಲ ಸ್ಪಷ್ಟವಾದ ಎಚ್ಚರಿಕೆ ನೀಡುವವನಾಗಿದ್ದೇನೆ" ಎಂದು ಹೇಳಿರಿ.

قُلْ إِنَّمَا ٱلْعِلْمُ عِندَ ٱللَّهِ وَإِنَّمَآ أَنَا۠ نَذِيرٌ مُّبِينٌ ﴿٢٦﴾

27. ಮುಂದೆ ಅದು ಸಮೀಪವಾಗಿರುವುದನ್ನು ಇವರು ಕಂಡಾಗ, ನಿರಾಕರಣೆ ಮಾಡಿದ್ದ ಎಲ್ಲ ಜನರ ಮುಖಗಳು ವಿಕಾರಗೊಳ್ಳುವುವು ಮತ್ತು ಆಗ ಅವರೊಡನೆ, "ನೀವು ಆಗ್ರಹಿಸುತ್ತಿದ್ದ ವಸ್ತು ಇದುವೇ ಆಗಿದೆ" ಎಂದು ಹೇಳಲಾಗುವುದು.

فَلَمَّا رَأَوْهُ زُلْفَةً سِيٓـَٔتْ وُجُوهُ ٱلَّذِينَ كَفَرُوا۟ وَقِيلَ هَٰذَا ٱلَّذِى كُنتُم بِهِۦ تَدَّعُونَ ﴿٢٧﴾

28. ಅಲ್ಲಾಹನು ನನ್ನನ್ನೂ ನನ್ನ ಸಂಗಾತಿಗಳನ್ನೂ ನಾಶಗೊಳಿಸಲಿ ಅಥವಾ ನಮ್ಮ ಮೇಲೆ ಕೃಪೆ ತೋರಲಿ- ಸತ್ಯನಿಷೇಧಿಗಳನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವವರಾರು ಎಂಬ ಕುರಿತು ನೀವೆಂದಾದರೂ ಯೋಚಿಸಿದ್ದೀರಾ? ಎಂದು ಇವರೊಡನೆ ಕೇಳಿರಿ.[12]

قُلْ أَرَءَيْتُمْ إِنْ أَهْلَكَنِىَ ٱللَّهُ وَمَن مَّعِىَ أَوْ رَحِمَنَا فَمَن يُجِيرُ ٱلْكَٰفِرِينَ مِنْ عَذَابٍ أَلِيمٍ ﴿٢٨﴾

29. ಅವನು ಮಹಾ ಕರುಣಾನಿಧಿ, ನಾವು ಅವನ ಮೇಲೆಯೇ ವಿಶ್ವಾಸ ವಿರಿಸಿದ್ದೇವೆ ಮತ್ತು ಅವನ ಮೇಲೆಯೇ ಭರವಸೆಯನ್ನಿರಿಸಿದ್ದೇವೆ. ಸುವ್ಯಕ್ತವಾದ ಪಥಭ್ರಷ್ಟತೆಯಲ್ಲಿ ಬಿದ್ದಿರುವವನು ಯಾರೆಂದು ಸದ್ಯದಲ್ಲೇ ನಿಮಗೆ ತಿಳಿದು ಬರುವುದು ಎಂದು ಇವರೊಡನೆ ಹೇಳಿರಿ.

قُلْ هُوَ ٱلرَّحْمَٰنُ ءَامَنَّا بِهِۦ وَعَلَيْهِ تَوَكَّلْنَا ۖ فَسَتَعْلَمُونَ مَنْ هُوَ فِى ضَلَٰلٍ مُّبِينٍ ﴿٢٩﴾

30. ನಿಮ್ಮ ಬಾವಿಗಳ ನೀರು ನೆಲದೊಳಕ್ಕೆ ಇಂಗಿ ಹೋದರೆ, ಆ ನೀರಿನ ಹರಿಯುವ ಚಿಲುಮೆಗಳನ್ನು ನಿಮಗೆ ಪುನಃ ಹೊರತಂದು ಕೊಡುವವರು ಯಾರೆಂದು ನೀವು ಯೋಚಿಸಿದ್ದೀರಾ? ಎಂದು ಇವರೊಡನೆ ಕೇಳಿರಿ.

قُلْ أَرَءَيْتُمْ إِنْ أَصْبَحَ مَآؤُكُمْ غَوْرًا فَمَن يَأْتِيكُم بِمَآءٍ مَّعِينٍۭ ﴿٣٠﴾

12. ಮಕ್ಕಾದಲ್ಲಿ ಪ್ರವಾದಿವರ್ಯ್ಯರ(ಸ) ಸಂದೇಶ ಪ್ರಚಾರ ಆರಂಭವಾದಾಗ ಕುರೈಶ್‌ನ ವಿವಿಧ ಗೋತ್ರಗಳಿಗೆ ಸೇರಿದ ಜನರು ಇಸ್ಲಾಮ್ ಸ್ವೀಕರಿಸಲಾರಂಭಿಸಿದರು. ಆಗ ಪ್ರತಿಯೊಂದು ಮನೆಯಲ್ಲೂ ಪ್ರವಾದಿವರ್ಯ್ಯರು(ಸ) ಮತ್ತವರ ಸಂಗಾತಿಗಳಿಗೆ ಶಾಪ ಹಾಕಲಾಗುತ್ತಿತ್ತು. ಅವರು ನಾಶವಾಗಿ ಹೋಗಲೆಂದು ಅವರ ವಿರುದ್ಧ ಮಾಟ-ಮಂತ್ರಗಳನ್ನು ಮಾಡಲಾಯಿತು. ಎಲ್ಲಿಯ ವರೆಗೆಂದರೆ ಅವರನ್ನು ಕೊಲೆ ಮಾಡುವ ಯೋಜನೆಗಳನ್ನೂ ಹೂಡಲಾಯಿತು. ಅದಕ್ಕಾಗಿ ಅವರೊಡನೆ -"ನಾವು ನಾಶವಾದರೂ ಅಥವಾ ಅಲ್ಲಾಹನ ಅನುಗ್ರಹದಿಂದ ಬದುಕುಳಿದರೂ ಅದರಿಂದ ನಿಮಗೇನು ಲಭಿಸುವುದು. ದೇವಯಾತನೆಯಿಂದ ನಿಮ್ಮನ್ನು ಯಾರು ರಕ್ಷಿಸುವರು ಎಂಬ ಕುರಿತು, "ನೀವು ಆಲೋಚಿಸಿ" ಎಂದು ಹೇಳಲು ಆದೇಶಿಸಲಾಗುತ್ತಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ನೂನ್-ಲೇಖನಿಯ ಹಾಗೂ ಲೇಖಕರು ಬರೆಯುತ್ತಿರುವುದರಾಣೆ-[1]

نٓ وَالْقَلَمِ وَمَا يَسْطُرُوْنَ ۝١

2. ನಿಮ್ಮ ಪ್ರಭುವಿನ ಅನುಗ್ರಹದಿಂದ ನೀವು ಹುಚ್ಚರಲ್ಲ.[2]

مَآ اَنْتَ بِنِعْمَةِ رَبِّكَ بِمَجْنُوْنٍ ۝٢

3. ಮತ್ತು ಖಂಡಿತವಾಗಿಯೂ ನಿಮಗಾಗಿ ಎಂದಿಗೂ ಮುಗಿದು ಹೋಗದಂತಹ ಸತ್ಫಲವಿದೆ.[3]

وَاِنَّ لَكَ لَاَجْرًا غَيْرَ مَمْنُوْنٍ ۝٣

4. ಮತ್ತು ನಿಶ್ಚಯವಾಗಿಯೂ ನೀವು ಚಾರಿತ್ರ್ಯದ ಅತ್ಯುನ್ನತ ಮಟ್ಟದಲ್ಲಿದ್ದೀರಿ.[4]

وَاِنَّكَ لَعَلٰى خُلُقٍ عَظِيْمٍ ۝٤

5. ಸದ್ಯದಲ್ಲೇ ನೀವೂ ನೋಡಿಕೊಳ್ಳುವಿರಿ ಮತ್ತು ಅವರೂ ಕಂಡುಕೊಳ್ಳುವರು-

فَسَتُبْصِرُ وَيُبْصِرُوْنَ ۝٥

6. ನಿಮ್ಮ ಪೈಕಿ ಯಾರು ಮತಿಭ್ರಾಂತಿಗೊಳಗಾದವರೆಂಬುದನ್ನು.

بِاَيِّكُمُ الْمَفْتُوْنُ ۝٦

1. ವ್ಯಾಖ್ಯಾನಕಾರರ ಇಮಾಮ್ ಎನಿಸಿಕೊಂಡಿರುವ ಮುಜಾಹಿದ್‌ರ ಪ್ರಕಾರ ಲೇಖನಿ ಎಂದರೆ ಈ ದಿಕ್ರ್- ಅರ್ಥಾತ್, ಕುರ್‌ಆನಿನನ್ನು ಬರೆಯಲಾಗುತ್ತಿರುವ ಲೇಖನಿಯಾಗಿದೆ. ಇದರಿಂದ ಬರೆಯಲಾಗುತ್ತಿದ್ದಂತಹ ಆ ವಿಷಯವೆಂದರೆ 'ಪವಿತ್ರ ಕುರ್‌ಆನ್' ಆಗಿದೆ ಎಂದು ಸ್ವಾಭಾವಿಕವಾಗಿಯೇ ಭಾವಿಸಬಹುದು.
2. ಇಲ್ಲಿ ಸಂಬೋಧನೆ ಪ್ರವಾದಿವರ್ಯರ(ಸ) ಕಡೆಗಿರುವಂತೆ ಮೇಲ್ನೋಟಕ್ಕೆ ಭಾಸವಾಗುತ್ತದೆ. ಆದರೆ ಮಕ್ಕಾದ ಸತ್ಯನಿಷೇಧಿಗಳು ಅವರನ್ನು ಹುಚ್ಚರೆಂದು ಪರಿಗಣಿಸುತ್ತಿದ್ದುದಕ್ಕೆ ಪ್ರತ್ಯುತ್ತರ ಕೊಡುವುದು ಇದರ ಮೂಲೋದ್ದೇಶವಾಗಿದೆ. ಅರ್ಥಾತ್, ಬರಹಗಾರರ ಮೂಲಕ ಬರೆಯಲ್ಪಡುತ್ತಿರುವ ಈ ಕುರ್‌ಆನ್ ಸ್ವತಃ ಅವರ ಆರೋಪದ ನಿರಾಕರಣೆಗೆ ಸಾಕು.
3. ದೇವನ ಸೃಷ್ಟಿಗಳ ಮಾರ್ಗದರ್ಶನಕ್ಕೆಂದು ಅವರು ಮಾಡುತ್ತಿರುವ ಪ್ರಯತ್ನಗಳ ಪ್ರತಿಯಾಗಿ ಅವರಿಗೆ ಅತ್ಯಂತ ವೇದನಾಯುಕ್ತವಾದ ಮಾತುಗಳನ್ನು ಕೇಳಬೇಕಾಗಿ ಬರುತ್ತಿದೆ. ಅದರ ಹೊರತಾಗಿಯೂ ಅವರು ತಮ್ಮ ಕರ್ತವ್ಯವನ್ನು ನಿರಂತರ ಪಾಲಿಸುತ್ತಿದ್ದಾರೆ. ಇದಕ್ಕೆ ಪ್ರತಿಯಾಗಿ ಅವರಿಗೆ ಅಗಣಿತ ಮತ್ತು ಅನಶ್ವರವಾದ ಪ್ರತಿಫಲಗಳಿವೆ.
4. ಅರ್ಥಾತ್- ಕುರ್‌ಆನ್ ಮಾತ್ರವಲ್ಲ ನಿಮ್ಮ ಉನ್ನತ ಚಾರಿತ್ರ್ಯವೂ ಸತ್ಯನಿಷೇಧಿಗಳು ನಿಮ್ಮ ಮೇಲೆ ಹೊರಿಸುತ್ತಿರುವ ಹುಚ್ಚಿನ ಆರೋಪ ಸುಳ್ಳು ಎಂಬುದಕ್ಕೆ ಅತ್ಯಂತ ಸ್ಪಷ್ಟವಾದ ಪುರಾವೆಯಾಗಿದೆ. ಏಕೆಂದರೆ ಉನ್ನತ ಚಾರಿತ್ರ್ಯ ಮತ್ತು ಬುದ್ಧಿಭ್ರಮಣೆ ಒಂದೇ ಕಡೆ ಸೇರಲು ಸಾಧ್ಯವಿಲ್ಲ.

| | |
|---|---|
| 7. ನಿಮ್ಮ ಪ್ರಭುವು ಅವನ ಮಾರ್ಗದಿಂದ ಭ್ರಷ್ಟರಾದವರು ಯಾರೆಂಬುದನ್ನೂ ಚೆನ್ನಾಗಿ ಅರಿತಿರುತ್ತಾನೆ ಮತ್ತು ಸನ್ಮಾರ್ಗದಲ್ಲಿ ರುವವನನ್ನೂ ಬಲ್ಲವನಾಗಿದ್ದಾನೆ. | إِنَّ رَبَّكَ هُوَ أَعْلَمُ بِمَن ضَلَّ عَن سَبِيلِهِۦ وَهُوَ أَعْلَمُ بِٱلْمُهْتَدِينَ ٧ |
| 8. ಆದುದರಿಂದ ನೀವು ಈ ಸುಳ್ಳಾಗಿಸುವವರ ಒತ್ತಡಕ್ಕೆ ಎಷ್ಟು ಮಾತ್ರಕ್ಕೂ ಮಣಿಯಬೇಡಿರಿ. | فَلَا تُطِعِ ٱلْمُكَذِّبِينَ ٨ |
| 9. ನೀವು ಸ್ವಲ್ಪ ಮಣಿದರೆ ತಾವೂ ಮಣಿಯುವೆವೆಂದು ಇವರು ಇಚ್ಛಿಸುತ್ತಾರೆ.[5] | وَدُّوا۟ لَوْ تُدْهِنُ فَيُدْهِنُونَ ٩ |
| 10. ಅತ್ಯಧಿಕ ಆಣೆ ಹಾಕುವ ನೀಚ ವ್ಯಕ್ತಿಗೆ ಎಷ್ಟು ಮಾತ್ರಕ್ಕೂ ಮಣಿಯಬೇಡಿರಿ- | وَلَا تُطِعْ كُلَّ حَلَّافٍ مَّهِينٍ ١٠ |
| 11. (ಅವನು) ಮೂದಲಿಸುತ್ತಾನೆ, ಚಾಡಿ ಹೇಳುತ್ತಾ ತಿರುಗುತ್ತಾನೆ, | هَمَّازٍ مَّشَّآءٍۭ بِنَمِيمٍ ١١ |
| 12. ಸತ್ಕಾರ್ಯಗಳನ್ನು ಮಾಡದಂತೆ ತಡೆಯುತ್ತಾನೆ, ಅಕ್ರಮ - ಅತಿರೇಕಗಳಲ್ಲಿ ಮಿತಿಮೀರುವವನಾಗಿದ್ದಾನೆ, | مَّنَّاعٍ لِّلْخَيْرِ مُعْتَدٍ أَثِيمٍ ١٢ |
| 13. ಮಹಾ ದುಷ್ಕರ್ಮಿಯಾಗಿದ್ದಾನೆ. ಪೀಡಕನಾಗಿದ್ದಾನೆ ಮತ್ತು ಇದೆಲ್ಲದರ ಜೊತೆಗೆ ಕುಲಗೆಟ್ಟವನೂ ಆಗಿದ್ದಾನೆ.- | عُتُلٍّۭ بَعْدَ ذَٰلِكَ زَنِيمٍ ١٣ |
| 14. ಅವನು ಬಹಳಷ್ಟು ಸಂಪತ್ತು ಮತ್ತು ಸಂತಾನವುಳ್ಳವನೆಂಬ ನೆಲೆಯಲ್ಲಿ ಹೀಗಾಗಿದ್ದಾನೆ.[6] | أَن كَانَ ذَا مَالٍ وَبَنِينَ ١٤ |
| 15. ಅವನಿಗೆ ನಮ್ಮ ಸೂಕ್ತಗಳನ್ನು ಓದಿ ಕೇಳಿಸಿದಾಗ, "ಇವೆಲ್ಲ ಗತಕಾಲದ ಕಟ್ಟುಕತೆಗಳು" ಎಂದು ಹೇಳುತ್ತಾನೆ. | إِذَا تُتْلَىٰ عَلَيْهِ ءَايَٰتُنَا قَالَ أَسَٰطِيرُ ٱلْأَوَّلِينَ ١٥ |
| 16. ಶೀಘ್ರವೇ ನಾವು ಅವನ ಸೊಂಡಿಲಿನ ಮೇಲೆ ಬರೆ ಎಳೆಯಲಿದ್ದೇವೆ.[7] | سَنَسِمُهُۥ عَلَى ٱلْخُرْطُومِ ١٦ |

5. ಅರ್ಥಾತ್- ನೀವು ಇಸ್ಲಾಮಿನ ಪ್ರಚಾರದಲ್ಲಿ ಸಡಿಲು ಬಿದ್ದರೆ ಅವರೂ ನಿಮ್ಮನ್ನು ವಿರೋಧಿಸುವುದರಲ್ಲಿ ಸ್ವಲ್ಪ ಮೃದು ಧೋರಣೆ ತಳೆಯಬಯಸುತ್ತಾರೆ ಅಥವಾ ಅವರ ಪಥಭ್ರಷ್ಟತೆಯ ಬಗ್ಗೆ ರಿಯಾಯಿತಿ ತೋರಿ ನಿಮ್ಮ ಧರ್ಮದಲ್ಲೇನಾದರೂ ತಿದ್ದುಪಡಿಯನ್ನು ಮಾಡಬಯಸಿದರೆ ಅವರು ನಿಮ್ಮ ಜತೆ ಸಂಧಾನ ಮಾಡಿಕೊಳ್ಳಬಯಸುತ್ತಾರೆ.

6. ಈ ವಾಕ್ಯವು ಮೇಲಿನ ವಾಕ್ಸರಣಿಗೆ ಸಂಬಂಧಿಸಿದ್ದಾಗಿರಬಹುದು ಅಥವಾ ಅನಂತರದ ವಾಕ್ಯಕ್ಕೆ ಸಂಬಂಧಿಸಿದ್ದಾಗಿರಲೂ ಬಹುದು. ಮೊದಲನೆಯದಕ್ಕೆ ಸಂಬಂಧಿಸಿದ್ದಾದರೆ ಇದರ ಅರ್ಥ- ಅವನ ಬಳಿ ಧಾರಾಳ ಸಂಪತ್ತು ಮತ್ತು ಸಂತಾನವಿರುವ ಕಾರಣಕ್ಕಾಗಿ ಅವನ ಒತ್ತಡಕ್ಕೆ ಮಣಿಯದಿರಿ ಎಂದಾಗುತ್ತದೆ. ಎರಡನೆಯದಕ್ಕೆ ಸಂಬಂಧಿಸಿದ್ದಾದರೆ ಇದರ ಅರ್ಥ- "ಧಾರಾಳ ಸಂಪತ್ತು ಮತ್ತು ಸಂತಾನವನ್ನು ಹೊಂದಿರುವುದರಿಂದಾಗಿ ಅವನು ದುರಹಂಕಾರಿಯಾಗಿ ಬಿಟ್ಟಿದ್ದಾನೆ. ನಮ್ಮ ಸೂಕ್ತಗಳನ್ನು ಅವನಿಗೆ ಓದಿ ಕೇಳಿಸಲಾದಾಗ ಇದು ಹಿಂದಿನ ಕಾಲದ ಕಟ್ಟು ಕಥೆಗಳಾಗಿವೆ ಎಂದು ಅವನು ಹೇಳುತ್ತಾನೆ" ಎಂದಾಗುತ್ತದೆ.

17. ನಾವು ಒಂದು ತೋಟದ ಮಾಲಕರನ್ನು ಪರೀಕ್ಷೆಗೆ ಗುರಿಪಡಿಸಿದ್ದಂತೆಯೇ ಇವರನ್ನು(ಮಕ್ಕಾ ವಾಸಿಗಳನ್ನು) ಪರೀಕ್ಷೆಗೊಳಪಡಿಸಿರುತ್ತೇವೆ. "ಖಂಡಿತವಾಗಿಯೂ ನಸುಕಿನಲ್ಲಿ ನಾವು ನಮ್ಮ ತೋಟದ ಫಲಗಳನ್ನು ಕೊಯ್ಯುವೆವು" ಎಂದು ಅವರು ಆಣೆ ಹಾಕುವಾಗ-

إِنَّا بَلَوْنَاهُمْ كَمَا بَلَوْنَا أَصْحَابَ الْجَنَّةِ إِذْ أَقْسَمُوا لَيَصْرِمُنَّهَا مُصْبِحِينَ ﴿١٧﴾

18. ಮತ್ತು ಅವರು ಯಾವುದೇ ವಿನಾಯಿತಿ ಮಾಡಿರಲಿಲ್ಲ.[8]

وَلَا يَسْتَثْنُونَ ﴿١٨﴾

19. ಇರುಳಲ್ಲಿ ಅವರು ನಿದ್ರಿಸುತ್ತಿದ್ದಾಗ ನಿಮ್ಮ ಪ್ರಭುವಿನ ಕಡೆಯಿಂದ ಆ ತೋಟಕ್ಕೆ ವಿಪತ್ತೊಂದು ಎರಗಿತು

فَطَافَ عَلَيْهَا طَائِفٌ مِّن رَّبِّكَ وَهُمْ نَائِمُونَ ﴿١٩﴾

20. ಮತ್ತು ಅದರ ಅವಸ್ಥೆಯು ಕೊಯ್ದು ಬೆಳೆಯಂತಾಗಿ ಬಿಟ್ಟಿತು-

فَأَصْبَحَتْ كَالصَّرِيمِ ﴿٢٠﴾

21. ಮುಂಜಾನೆ ಅವರು ಪರಸ್ಪರರನ್ನು ಕೂಗಿದರು-

فَتَنَادَوْا مُصْبِحِينَ ﴿٢١﴾

22. "ಫಲಗಳನ್ನು ಕೊಯ್ಯಬೇಕಿದ್ದರೆ ನಸುಕಿನಲ್ಲೇ ನಿಮ್ಮ ಹೊಲಗಳ ಕಡೆಗೆ ಹೊರಡಿರಿ" ಎಂದರು.

أَنِ اغْدُوا عَلَىٰ حَرْثِكُمْ إِن كُنتُمْ صَارِمِينَ ﴿٢٢﴾

23. ಹೀಗೆ ಅವರು ಹೊರಟರು ಮತ್ತು ಅವರು ಪರಸ್ಪರರೊಡನೆ ಪಿಸು ಗುಟ್ಟುತ್ತಲಿದ್ದರು-

فَانطَلَقُوا وَهُمْ يَتَخَافَتُونَ ﴿٢٣﴾

24. ಇಂದು ಬಡವನಾರೂ ನಿಮ್ಮ ತೋಟದೊಳಗೆ ಬಾರದಂತೆ ನೋಡಿಕೊಳ್ಳಬೇಕೆಂದು.

أَن لَّا يَدْخُلَنَّهَا الْيَوْمَ عَلَيْكُم مِّسْكِينٌ ﴿٢٤﴾

25. ಏನೂ ಕೊಡಬಾರದೆಂದು ನಿರ್ಧರಿಸಿಕೊಂಡು, (ಫಲ ಕೊಯ್ಯಲು) ತಾವು ಶಕ್ತರೆಂಬಂತೆ ನಸುಕಿನಲ್ಲೇ ಲಗುಬಗೆಯಿಂದ ಅಲ್ಲಿಗೆ ಹೋದರು.

وَغَدَوْا عَلَىٰ حَرْدٍ قَادِرِينَ ﴿٢٥﴾

26. ಆದರೆ ತೋಟವನ್ನು ಕಂಡಾಗ ಹೇಳ ತೊಡಗಿದರು, "ನಾವು ದಾರಿ ತಪ್ಪಿದ್ದೇವೆ-

فَلَمَّا رَأَوْهَا قَالُوا إِنَّا لَضَالُّونَ ﴿٢٦﴾

7. ಅವನು ತನ್ನನ್ನು ದೊಡ್ಡ ಮೂಗಿನವನೆಂದು ಭಾವಿಸಿಕೊಳ್ಳುತ್ತಿದ್ದನು. ಆದ್ದರಿಂದ ಅವನ ಮೂಗನ್ನು ಸೊಂಡಿಲು ಎನ್ನಲಾಗಿದೆ. ಸೊಂಡಿಲಿಗೆ ಬರೆ ಎಳೆಯುವುದೆಂದರೆ ನಿಂದ್ಯತೆಗೀಡು ಮಾಡುವುದಾಗಿದೆ. ಅರ್ಥಾತ್, ನಾವು ಅವನನ್ನು ಇಹ-ಪರಗಳಲ್ಲಿ ಯಾವ ರೀತಿ ನಿಂದ್ಯನನ್ನಾಗಿ ಮಾಡುತ್ತೇವೆಂದರೆ ಅನಂತ ಕಾಲದ ವರೆಗೂ ಈ ನಿಂದ್ಯತೆ ಅವನ ಬೆಂಬಿಡಲಾರದು.

8. ಅರ್ಥಾತ್- ಅವರಿಗೆ ತಮ್ಮ ಸಾಮರ್ಥ್ಯ ಮತ್ತು ಅಧಿಕಾರಗಳ ಬಗ್ಗೆ ಎಷ್ಟು ವಿಶ್ವಾಸವಿತ್ತೆಂದರೆ, "ನಾವು ನಾಳೆ ತೋಟದ ಫಲವನ್ನು ಕೊಯ್ದೇ ತೀರುವೆವು" ಎಂದು ಆಣೆ ಹಾಕಿ ನಿಸ್ಸಂಕೋಚವಾಗಿ ಹೇಳಿಬಿಟ್ಟರು. ಅಲ್ಲಾನಿಚ್ಛಿಸಿದರೆ ನಾವು ಈ ಕೆಲಸವನ್ನು ಮಾಡುವೆವು ಎಂದು ಹೇಳುವಂತಹ ಔಚಿತ್ಯವೇ ಅವರಿಗೆ ತಲೆದೋರಲಿಲ್ಲ.

27. ಅಲ್ಲ, ನಿಜವಾಗಿ ನಾವು ವಂಚಿತರಾಗಿ ಬಿಟ್ಟಿದ್ದೇವೆ." بَلْ نَحْنُ مَحْرُوْمُوْنَ ۝٢٧

28. ಅವರ ಪೈಕಿ ಉತ್ತಮನಾಗಿದ್ದವನು, "ನೀವು ಅಲ್ಲಾಹನನ್ನು ಸ್ತುತಿಸುವುದಿಲ್ಲವೇಕೆ ಎಂದು ನಾನು ನಿಮ್ಮೊಡನೆ ಹೇಳಿರಲಿಲ್ಲವೇ?" ಎಂದನು.[9] قَالَ اَوْسَطُهُمْ اَلَمْ اَقُلْ لَّكُمْ لَوْلَا تُسَبِّحُوْنَ ۝٢٨

29. ಆಗ ಅವರು, "ನಮ್ಮ ಪ್ರಭು ಪರಮ ಪಾವನನು, ನಿಜಕ್ಕೂ ನಾವು ಅಕ್ರಮಿಗಳಾಗಿದ್ದೆವು" ಎಂದರು. قَالُوْا سُبْحٰنَ رَبِّنَآ اِنَّا كُنَّا ظٰلِمِيْنَ ۝٢٩

30. ತರುವಾಯ ಅವರಲ್ಲಿ ಪ್ರತಿಯೊಬ್ಬನೂ ಇನ್ನೊಬ್ಬನನ್ನು ತೆಗಳತೊಡಗಿದನು. فَاَقْبَلَ بَعْضُهُمْ عَلٰى بَعْضٍ يَّتَلَاوَمُوْنَ ۝٣٠

31. ಕೊನೆಗೆ ಅವರು, "ಅಯ್ಯೋ ನಮ್ಮ ಪಾಡು! ನಿಜಕ್ಕೂ ನಾವು ವಿದ್ರೋಹಿಗಳಾಗಿ ಬಿಟ್ಟಿದ್ದೆವು. قَالُوْا يٰوَيْلَنَآ اِنَّا كُنَّا طٰغِيْنَ ۝٣١

32. ನಮ್ಮ ಪ್ರಭು ಇದಕ್ಕೆ ಬದಲಾಗಿ ಇದಕ್ಕಿಂತಲೂ ಉತ್ತಮ ತೋಟ ದಯಪಾಲಿಸಲೂ ಬಹುದು. ನಾವು ನಮ್ಮ ಪ್ರಭುವಿನ ಕಡೆಗೆ ಮರಳುತ್ತೇವೆ" ಎಂದರು. عَسٰى رَبُّنَآ اَنْ يُّبْدِلَنَا خَيْرًا مِّنْهَآ اِنَّآ اِلٰى رَبِّنَا رٰغِبُوْنَ ۝٣٢

33. ಯಾತನೆಯು ಹೀಗಿರುತ್ತದೆ ಮತ್ತು ಪರಲೋಕದ ಯಾತನೆಯಂತು ಇದಕ್ಕಿಂತಲೂ ದೊಡ್ಡದಾಗಿದೆ. ಇದನ್ನು ಇವರು ತಿಳಿದಿರುತ್ತಿದ್ದರೆ! كَذٰلِكَ الْعَذَابُ ۗ وَلَعَذَابُ الْاٰخِرَةِ اَكْبَرُ ۘ لَوْ كَانُوْا يَعْلَمُوْنَ ۝٣٣

34. ಖಂಡಿತವಾಗಿಯೂ[10] ದೇವಭಯವುಳ್ಳವರಿಗಾಗಿ ಅವರ ಪ್ರಭುವಿನ ಬಳಿ ಅನುಗ್ರಹಗಳು ತುಂಬಿರುವ ಸ್ವರ್ಗೋದ್ಯಾನಗಳಿವೆ. اِنَّ لِلْمُتَّقِيْنَ عِنْدَ رَبِّهِمْ جَنّٰتِ النَّعِيْمِ ۝٣٤

35. ನಾವು ಆಜ್ಞಾಪಾಲಕರ ಸ್ಥಿತಿಯನ್ನು ಅಪರಾಧಿಗಳಂತೆ ಮಾಡಿ ಬಿಡಬೇಕೇ? اَفَنَجْعَلُ الْمُسْلِمِيْنَ كَالْمُجْرِمِيْنَ ۝٣٥

36. ನಿಮಗೇನಾಗಿದೆ? ನೀವು ಅದೆಂತಹ ತೀರ್ಮಾನ ಮಾಡುತ್ತಿರುವಿರಿ? مَا لَكُمْ ۗ كَيْفَ تَحْكُمُوْنَ ۝٣٦

37-38. ನೀವು ಏನನ್ನು ಮೆಚ್ಚುತ್ತೀರೋ ಅದುವೇ ನಿಮಗಲ್ಲಿ اَمْ لَكُمْ كِتٰبٌ فِيْهِ تَدْرُسُوْنَ ۝٣٧

9. ಅರ್ಥಾತ್- ಅಲ್ಲಾಹನನ್ನೇಕೆ ಸ್ಮರಿಸುವುದಿಲ್ಲ. ಪರಮ ಪಾವನನಾದ ಪರಿಪಾಲಕ ಮೇಲಿದ್ದಾನೆಂಬುದನ್ನು ನೀವು ಮರೆತು ಬಿಟ್ಟಿರಾ?

10. ಮಕ್ಕಾದ ದೊಡ್ಡ ದೊಡ್ಡ ಸರದಾರರು ಮುಸ್ಲಿಮರನ್ನುದ್ದೇಶಿಸಿ ಹೀಗೆನ್ನುತ್ತಿದ್ದರು, "ನಮಗೆ ಈ ಲೋಕದಲ್ಲಿ ದೊರೆಯುತ್ತಿರುವ ಅನುಗ್ರಹಗಳು ನಾವು ದೇವನ ಪ್ರೀತಿಗೆ ಪಾತ್ರರಾಗಿರುವುದನ್ನು ಸೂಚಿಸುತ್ತದೆ. ನೀವು ಯಾವ ದುಸ್ಥಿತಿಯಲ್ಲಿ ಸಿಲುಕಿಕೊಂಡಿದ್ದೀರೋ ಅದು ದೇವನು ನಿಮ್ಮ ಬಗ್ಗೆ ಕ್ರೋಧಕ್ಕೊಳಗಾಗಿದ್ದಾನೆಂಬುದನ್ನು ಸೂಚಿಸುತ್ತದೆ. ಆದ್ದರಿಂದ ಒಂದು ವೇಳೆ ನೀವು ಹೇಳುವಂತೆ ಪುನರುತ್ಥಾನ ದಿನ ಬಂದರೂ ಅಲ್ಲಿಯೂ ನಾವೇ ಸವಿಯುಣ್ಣುತ್ತಿರುವೆವು ಮತ್ತು ಯಾತನೆಯು ನಮ್ಮ ಮೇಲಲ್ಲ ಬದಲಾಗಿ ನಿಮ್ಮ ಮೇಲಿರುವುದು." ಪ್ರಸ್ತುತ ಮಾತಿಗೆ ಈ ಸೂಕ್ತದಲ್ಲಿ ಉತ್ತರ ಕೊಡಲಾಗಿದೆ.

ಖಂಡಿತ ಸಿಗುವುದೆಂದು ನೀವು ಓದುವಂತಹ ಗ್ರಂಥವೇನಾದರೂ[11] ನಿಮ್ಮ ಬಳಿಯಿದೆಯೇ?

إِنَّ لَكُمْ فِيهِ لَمَا تَخَيَّرُونَ ﴿٣٨﴾

39. ಅಥವಾ ನೀವೇನು ಅಪ್ಪಣೆ ಮಾಡುವಿರೋ ಅದುವೇ ನಿಮಗೆ ಸಿಗುವುದೆಂದು ಪುನರುತ್ಥಾನದವರೆಗಾಗಿ ನಿಮ್ಮೊಂದಿಗೆ ಮಾಡಿ ಕೊಂಡ ಯಾವುದಾದರೂ ಒಪ್ಪಂದದ ಬಾಧ್ಯತೆ ನಮ್ಮ ಮೇಲಿ ದೆಯೇ?

أَمْ لَكُمْ أَيْمَانٌ عَلَيْنَا بَالِغَةٌ إِلَىٰ يَوْمِ الْقِيَامَةِ ۙ إِنَّ لَكُمْ لَمَا تَحْكُمُونَ ﴿٣٩﴾

40. ನಿಮ್ಮ ಪೈಕಿ ಇದಕ್ಕೆ ಜಾಮಿನುದಾರನು ಯಾರು ಎಂದು ಇವರೊಡನೆ ಕೇಳಿರಿ.

سَلْهُمْ أَيُّهُم بِذَٰلِكَ زَعِيمٌ ﴿٤٠﴾

41. ಅಥವಾ (ಇದರ ಹೊಣೆ ಹೊತ್ತಿರುವ) ಇವರೇ ನೇಮಿಸಿಕೊಂಡ ದೇವಸಹಭಾಗಿಗಳು ಯಾರಾದರೂ ಇದ್ದಾರೆಯೇ? ಇವರು ಸತ್ಯವಂತರಾಗಿದ್ದರೆ ತಮ್ಮ ಸಹಭಾಗಿಗಳನ್ನು ತರಲಿ.

أَمْ لَهُمْ شُرَكَاءُ فَلْيَأْتُوا بِشُرَكَائِهِمْ إِن كَانُوا صَادِقِينَ ﴿٤١﴾

42. ಅತ್ಯಂತ ಕಠಿಣ ಪರಿಸ್ಥಿತಿ ಎದುರಾಗುವ ದಿನ ಜನರನ್ನು ಸಾಷ್ಟಾಂಗವೆರಗಲಿಕ್ಕಾಗಿ ಕರೆಯುವಾಗ ಇವರಿಗೆ ಸಾಷ್ಟಾಂಗವೆರಗಲು ಸಾಧ್ಯವಾಗದು.

يَوْمَ يُكْشَفُ عَن سَاقٍ وَيُدْعَوْنَ إِلَى السُّجُودِ فَلَا يَسْتَطِيعُونَ ﴿٤٢﴾

43. ಇವರ ದೃಷ್ಟಿಗಳು ತಗ್ಗಿರುವುವು. ಅಪಮಾನವು ಇವರನ್ನು ಆವರಿಸಿಕೊಂಡಿರುವುದು. ಇವರು ಕ್ಷೇಮವಾಗಿದ್ದಾಗ ಇವರನ್ನು ಸಾಷ್ಟಾಂಗವೆರಗಲಿಕ್ಕಾಗಿ ಕರೆಯಲಾಗುತ್ತಿತ್ತು. (ಆಗ ಇವರು ನಿರಾಕರಿಸುತ್ತಿದ್ದರು)

خَاشِعَةً أَبْصَارُهُمْ تَرْهَقُهُمْ ذِلَّةٌ ۖ وَقَدْ كَانُوا يُدْعَوْنَ إِلَى السُّجُودِ وَهُمْ سَالِمُونَ ﴿٤٣﴾

44. ಆದುದರಿಂದ ಸಂದೇಶವಾಹಕರೇ, ಈ ವಚನವನ್ನು ತಿರಸ್ಕರಿಸು ವವರ ವಿಷಯವನ್ನು ನೀವು ನನಗೆ ಬಿಡಿರಿ. ನಾವು ಇವರಿಗೆ ಅರಿವೇ ಆಗದ ರೀತಿಯಲ್ಲಿ ಕ್ರಮೇಣ ಇವರನ್ನು ವಿನಾಶದ ಕಡೆಗೆ ಒಯ್ಯುವೆವು.

فَذَرْنِي وَمَن يُكَذِّبُ بِهَٰذَا الْحَدِيثِ ۖ سَنَسْتَدْرِجُهُم مِّنْ حَيْثُ لَا يَعْلَمُونَ ﴿٤٤﴾

45. ನಾನು ಇವರನ್ನು ಸಡಿಲು ಬಿಡುತ್ತಿದ್ದೇನೆ, ನನ್ನ ತಂತ್ರವು ಪ್ರಚಂಡವಾಗಿದೆ.

وَأُمْلِي لَهُمْ ۚ إِنَّ كَيْدِي مَتِينٌ ﴿٤٥﴾

46. ಇವರು ತೀವ್ರ ಭಾರದಡಿಯಲ್ಲಿ ನರಳುವಂತಾಗಲು, ನೀವು ಇವರಿಂದ ಏನಾದರೂ ಸಂಭಾವನೆ ಕೇಳುತ್ತಿರುವಿರಾ?

أَمْ تَسْأَلُهُمْ أَجْرًا فَهُم مِّن مَّغْرَمٍ مُّثْقَلُونَ ﴿٤٦﴾

11. ಅರ್ಥಾತ್- ಅಲ್ಲಾಹನು ಕಳುಹಿಸಿರುವ ಗ್ರಂಥ.

47. ಇವರು ಬರೆದಿಡುತ್ತಿರುವಂತಹ ಪರೋಕ್ಷಜ್ಞಾನವೇನಾದರೂ ಇವರ ಬಳಿ ಇದೆಯೇ?

أَمْ عِندَهُمُ ٱلْغَيْبُ فَهُمْ يَكْتُبُونَ ﴿٤٧﴾

48. ಸರಿ, ನೀವು ನಿಮ್ಮ ಪ್ರಭುವಿನ ತೀರ್ಪು ಪ್ರಕಟವಾಗುವ ವರೆಗೆ ತಾಳ್ಮೆ ವಹಿಸಿರಿ ಮತ್ತು ಮತ್ಸ್ಯದವರಂತೆ (ಹ. ಯೂನುಸ್) ಆಗಬೇಡಿರಿ.[12] ಅವರು ಕೂಗಿ ಪ್ರಾರ್ಥಿಸಿದಾಗ, ಅವರು ಬಹಳ ದುಃಖಪೀಡಿತರಾಗಿದ್ದರು.

فَٱصْبِرْ لِحُكْمِ رَبِّكَ وَلَا تَكُن كَصَاحِبِ ٱلْحُوتِ إِذْ نَادَىٰ وَهُوَ مَكْظُومٌ ﴿٤٨﴾

49. ಅವರ ಪ್ರಭುವಿನ ಕೃಪೆಯು ಅವರಿಗೆ ಸಿಗದೆ ಇರುತ್ತಿದ್ದರೆ, ಅವರು ಅಪಮಾನಿತರಾಗಿ ಬಟ್ಟಬಯಲಿನಲ್ಲಿ ಎಸೆಯಲ್ಪಡುತ್ತಿದ್ದರು.

لَّوْلَآ أَن تَدَٰرَكَهُۥ نِعْمَةٌ مِّن رَّبِّهِۦ لَنُبِذَ بِٱلْعَرَآءِ وَهُوَ مَذْمُومٌ ﴿٤٩﴾

50. ಕೊನೆಗೆ ಅವರ ಪ್ರಭು ಅವರನ್ನು ಆರಿಸಿಕೊಂಡನು ಮತ್ತು ಅವರನ್ನು ಸಜ್ಜನ ದಾಸರ ಪಾಲಿಗೆ ಸೇರಿಸಿಕೊಂಡನು.

فَٱجْتَبَٰهُ رَبُّهُۥ فَجَعَلَهُۥ مِنَ ٱلصَّٰلِحِينَ ﴿٥٠﴾

51. ಈ ಸತ್ಯನಿಷೇಧಿಗಳು, ಉಪದೇಶವನ್ನು (ಕುರ್‌ಆನನ್ನು) ಕೇಳಿದಾಗ ನಿಮ್ಮನ್ನು ಕಿತ್ತು ಹಾಕುವರೋ ಎಂಬಂತೆ ನಿಮ್ಮನ್ನು ದುರುಗುಟ್ಟುತ್ತಾರೆ ಮತ್ತು ಇವನು ಖಂಡಿತ ಹುಚ್ಚನೆಂದು ಹೇಳುತ್ತಾರೆ.

وَإِن يَكَادُ ٱلَّذِينَ كَفَرُوا۟ لَيُزْلِقُونَكَ بِأَبْصَٰرِهِمْ لَمَّا سَمِعُوا۟ ٱلذِّكْرَ وَيَقُولُونَ إِنَّهُۥ لَمَجْنُونٌ ﴿٥١﴾

52. ವಾಸ್ತವದಲ್ಲಿ ಇದು ಸಕಲ ವಿಶ್ವದವರಿಗೆ ಒಂದು ಉಪದೇಶವಾಗಿದೆ.

وَمَا هُوَ إِلَّا ذِكْرٌ لِّلْعَٰلَمِينَ ﴿٥٢﴾

---

12. ಅರ್ಥಾತ್- ಯೂನುಸ್‌ರಂತೆ(ಅ) ತಾಳ್ಮೆಗೇಡಿತನದಿಂದ ವರ್ತಿಸದಿರಿ. ಅವರನ್ನು ಅವರ ಅಸಹನೆಯಿಂದಾಗಿಯೇ ಮೀನಿನ ಹೊಟ್ಟೆಗೆ ತಲಪಿಸಲಾಗಿತ್ತು.






## 69. ಅಲ್ ಹಾಕ್ಕಃ

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಖಚಿತವಾದ ಸಂಭವ[1]-

اَلْحَآقَّةُ ﴿1﴾

2. ಏನದು ಖಚಿತವಾದ ಸಂಭವ?

مَا الْحَآقَّةُ ﴿2﴾

3. ಆ ಖಚಿತವಾದ ಸಂಭವ ಏನೆಂಬುದು ನಿಮಗೇನು ಗೊತ್ತು?

وَمَآ اَدْرٰىكَ مَا الْحَآقَّةُ ﴿3﴾

4. ಸಮೂದ್ ಮತ್ತು ಆದ್ (ಜನಾಂಗದವರು) ಹಠಾತ್ತನೆ ಬಂದೆರಗುವ ಆ ವಿಪತ್ತನ್ನು[2] ನಿರಾಕರಿಸಿಬಿಟ್ಟರು.

كَذَّبَتْ ثَمُوْدُ وَعَادٌۢ بِالْقَارِعَةِ ﴿4﴾

5. ಸಮೂದರಂತು ಒಂದು ಭೀಕರ ಅಪಘಾತದ ಮೂಲಕ ನಾಶಗೊಳಿಸಲ್ಪಟ್ಟರು.

فَاَمَّا ثَمُوْدُ فَاُهْلِكُوْا بِالطَّاغِيَةِ ﴿5﴾

6. ಮತ್ತು ಆದ್ ಒಂದು ತೀವ್ರ ಚಂಡಮಾರುತದಿಂದ ನಾಶ ಗೊಳಿಸಲ್ಪಟ್ಟರು-

وَاَمَّا عَادٌ فَاُهْلِكُوْا بِرِيْحٍ صَرْصَرٍ عَاتِيَةٍ ﴿6﴾

7. ಅಲ್ಲಾಹನು ಅದನ್ನು ನಿರಂತರ ಏಳು ರಾತ್ರೆ ಮತ್ತು ಎಂಟು ಹಗಲುಗಳ ಕಾಲ ಅವರ ಮೇಲೆ ಹೇರಿಟ್ಟನು. (ನೀವು ಅಲ್ಲಿರುತ್ತಿದ್ದರೆ) ಅವರು ಅಲ್ಲಿ ಖರ್ಜೂರದ ಟೊಳ್ಳಾದ ಕಾಂಡಗಳಂತೆ ಬಿದ್ದಿರುವುದನ್ನು ಕಾಣುತ್ತಿದ್ದಿರಿ.

سَخَّرَهَا عَلَيْهِمْ سَبْعَ لَيَالٍ وَّثَمٰنِيَةَ اَيَّامٍ حُسُوْمًا فَتَرَى الْقَوْمَ فِيْهَا صَرْعٰى كَاَنَّهُمْ اَعْجَازُ نَخْلٍ خَاوِيَةٍ ﴿7﴾

8. ಈಗ ಅವರ ಪೈಕಿ ಯಾರಾದರೂ ಉಳಿದಿರುವುದು ನಿಮಗೆ ಕಾಣಿಸುತ್ತಿದೆಯೇ?

فَهَلْ تَرٰى لَهُمْ مِّنْۢ بَاقِيَةٍ ﴿8﴾

---

1. ಮೂಲದಲ್ಲಿ 'ಹಾಕ್ಕಃ' ಎಂಬ ಪದ ಪ್ರಯೋಗವಾಗಿದೆ. ಅದರರ್ಥ ನಿಶ್ಚಯವಾಗಿಯೂ ಸಂಭವಿಸಲೇಬೇಕಾದ ಘಟನೆ. ಅರ್ಥಾತ್, ಅದನ್ನು ನೀವೆಷ್ಟು ನಿರಾಕರಿಸಿದರೂ ಅದಂತೂ ಖಂಡಿತ ಸಂಭವಿಸಲಿಕ್ಕಿದೆ. ನಿಮ್ಮ ನಿರಾಕರಣೆಯಿಂದ ಅದರ ಆಗಮನ ನಿಂತು ಹೋಗಲಾರದು.
2. ನಿರ್ಣಾಯಕ ದಿನವನ್ನು 'ಸಂಭವನೀಯ ಘಟನೆ' ಎಂದು ಹೇಳಿದ ನಂತರ ಅದರ ಭಯಾನಕತೆಯ ಕಲ್ಪನೆ ಮೂಡಿಸಲಿಕ್ಕಾಗಿ ಈ ಪದ ಬಳಸಲಾಗಿದೆ.

| | |
|---|---|
| 9. ಇದೇ ಮಹಾಪರಾಧವನ್ನು ಫಿರ್‌ಔನ್ ಮತ್ತು ಅವನಿಗಿಂತ ಹಿಂದಿನವರು ಮತ್ತು ಬುಡಮೇಲಾದ ನಾಡುಗಳ ಜನರು ಎಸಗಿದ್ದರು.[3] | وَجَاءَ فِرْعَوْنُ وَمَنْ قَبْلَهُ وَالْمُؤْتَفِكَاتُ بِالْخَاطِئَةِ ۝٩ |
| 10. ಅವರೆಲ್ಲರೂ ತಮ್ಮ ಪ್ರಭುವಿನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದಾಗ ಅವನು ಅವರನ್ನು ಅತ್ಯುಗ್ರವಾಗಿ ಹಿಡಿದನು. | فَعَصَوْا رَسُولَ رَبِّهِمْ فَأَخَذَهُمْ أَخْذَةً رَابِيَةً ۝١٠ |
| 11. ಜಲ ಪ್ರಳಯವು ಮಿತಿಮೀರಿದಾಗ[4] ನಾವು ನಿಮ್ಮನ್ನು ಹಡಗಿಗೆ ಹತ್ತಿಸಿ ಬಿಟ್ಟಿದ್ದೆವು.[5] | إِنَّا لَمَّا طَغَى الْمَاءُ حَمَلْنَاكُمْ فِي الْجَارِيَةِ ۝١١ |
| 12. ಈ ಘಟನೆಯನ್ನು ನಿಮ್ಮ ಪಾಲಿಗೆ ಒಂದು ಪಾಠದಾಯಕ ಸ್ಮರಣವಾಗಿ ಮಾಡಲು ಮತ್ತು ನೆನಪಿಡುವ ಕಿವಿಗಳು ಇದರ ನೆನಪನ್ನು ಸುರಕ್ಷಿತವಾಗಿಡುವಂತಾಗಲು (ಹೀಗೆ ಮಾಡಲಾಗಿತ್ತು). | لِنَجْعَلَهَا لَكُمْ تَذْكِرَةً وَتَعِيَهَا أُذُنٌ وَاعِيَةٌ ۝١٢ |
| 13. ಮುಂದೆ ಒಮ್ಮೆ ಕಹಳೆಯನ್ನೂದುವಾಗ- | فَإِذَا نُفِخَ فِي الصُّورِ نَفْخَةٌ وَاحِدَةٌ ۝١٣ |
| 14. ಹಾಗೂ ಭೂಮಿ ಮತ್ತು ಪರ್ವತಗಳನ್ನೆತ್ತಿ ಒಂದೇ ಏಟಿಗೆ ಛಿದ್ರ ವಿಚ್ಛಿದ್ರಗೊಳಿಸಲಾಗುವಾಗ, | وَحُمِلَتِ الْأَرْضُ وَالْجِبَالُ فَدُكَّتَا دَكَّةً وَاحِدَةً ۝١٤ |
| 15. ಆ ದಿನ, ಸಂಭವಿಸಲಿರುವ ಆ ಘಟನೆಯು ಸಂಭವಿಸಿ ಬಿಡುವುದು- | فَيَوْمَئِذٍ وَقَعَتِ الْوَاقِعَةُ ۝١٥ |
| 16. ಅಂದು ಆಕಾಶವು ಬಿರಿಯುವುದು ಮತ್ತು ಅದರ ಬಿಗಿತವು ಸಡಿಲವಾಗಿ ಬಿಡುವುದು. | وَانْشَقَّتِ السَّمَاءُ فَهِيَ يَوْمَئِذٍ وَاهِيَةٌ ۝١٦ |
| 17. ದೇವಚರರು ಅದರ ಸುತ್ತಮುತ್ತಲಲ್ಲಿರುವರು ಮತ್ತು ಎಂಟು ಮಂದಿ ದೇವಚರರು ಅಂದು ನಿಮ್ಮ ಪ್ರಭುವಿನ 'ವಿಶ್ವಸಿಂಹಾಸನ'ವನ್ನು ತಮ್ಮ ಮೇಲೆ ಹೊತ್ತಿರುವರು.[6] | وَالْمَلَكُ عَلَىٰ أَرْجَائِهَا ۚ وَيَحْمِلُ عَرْشَ رَبِّكَ فَوْقَهُمْ يَوْمَئِذٍ ثَمَانِيَةٌ ۝١٧ |

3. ಅರ್ಥಾತ್- ಬುಡಮೇಲುಗೊಳಿಸಲಾದ ಲೂತ್ ಸಮುದಾಯದ ಪ್ರದೇಶಗಳು.
4. ಇದು ಹ. ನೂಹ್‌ರ(ಅ) ಕಾಲದ ಚಂಡಮಾರುತದ ಕಡೆಗಿರುವ ಸೂಚನೆ.
5. ವಾಸ್ತವದಲ್ಲಿ ಸಾವಿರಾರು ವರ್ಷಗಳ ಹಿಂದೆ ಗತಿಸಿದ ಜನರನ್ನು ನಾವೆಯಲ್ಲಿ ಹತ್ತಿಸಲಾಗಿತ್ತು. ಅನಂತರದ ಮಾನವ ಜನಾಂಗ ಸಂಪೂರ್ಣವಾಗಿ ಚಂಡಮಾರುತದ ವೇಳೆ ಉಳಿಸಲ್ಪಟ್ಟಿದ್ದವರ ಸಂತಾನವಾಗಿದ್ದಾರೆ. ಆದ್ದರಿಂದಲೇ ಇಲ್ಲಿ, "ನಾವು ನಿಮ್ಮನ್ನು ನಾವೆಯಲ್ಲಿ ಹತ್ತಿಸಿದ್ದೆವು" ಎಂದು ಹೇಳಲಾಗಿದೆ.
6. ಈ ಸೂಕ್ತ 'ಮುತಶಾಬಿಹಾತ್'ಗಳ ಸಾಲಿಗೆ ಸೇರಿದೆ. ಆದ್ದರಿಂದ ಇದರ ಅರ್ಥವನ್ನು ಗೊತ್ತುಪಡಿಸುವುದು ಬಹಳ ತ್ರಾಸದಾಯಕ. 'ದೇವಸಿಂಹಾಸನ'ವೆಂದರೇನೆಂದಾಗಲಿ, ನಿರ್ಣಾಯಕ ದಿನದಂದು ಎಂಟು ದೇವಚರರು ಅದನ್ನು ಎತ್ತಿ ಹಿಡಿದಿರುವ ಸ್ವರೂಪ ಹೇಗಿರುವುದೆಂದಾಗಲಿ ತಿಳಿಯಲು ನಮಗೆ ಸಾಧ್ಯವಿಲ್ಲ. ಆದರೆ ಅಲ್ಲಾಹನು ಸಿಂಹಾಸನಾರೂಢನಾಗಿರುವನು ಮತ್ತು ಎಂಟು ದೇವಚರರು ಅವನನ್ನು ಸಿಂಹಾಸನ ಸಮೇತ

| | |
|---|---|
| 18. ಅದು ನೀವು ಹಾಜರುಗೊಳಿಸಲ್ಪಡುವ ದಿನವಾಗಿರುವುದು. ನಿಮ್ಮ ಯಾವ ರಹಸ್ಯವೂ ಅಡಗಿರಲಾರದು. | يَوْمَئِذٍ تُعْرَضُونَ لَا تَخْفَىٰ مِنكُمْ خَافِيَةٌ ﴿١٨﴾ |
| 19. ಆಗ ಯಾರ ಕರ್ಮಪತ್ರವನ್ನು ಅವನ ಬಲಗೈಯಲ್ಲಿ ಕೊಡಲಾಗುವುದೋ ಅವನು ಹೇಳುವನು, "ಇದೋ ನನ್ನ ಕರ್ಮಪತ್ರವನ್ನು ಓದಿರಿ. | فَأَمَّا مَنْ أُوتِيَ كِتَابَهُ بِيَمِينِهِ فَيَقُولُ هَاؤُمُ اقْرَءُوا كِتَابِيَهْ ﴿١٩﴾ |
| 20. ನನಗೆ ನನ್ನ ಕರ್ಮಪತ್ರವು ಖಂಡಿತವಾಗಿಯೂ ಸಿಗಲಿದೆಯೆಂದು ನಾನು ಗ್ರಹಿಸಿದ್ದೆ."[7] | إِنِّي ظَنَنتُ أَنِّي مُلَاقٍ حِسَابِيَهْ ﴿٢٠﴾ |
| 21. ಹೀಗೆ ಅವನು ಮನಮೆಚ್ಚುಗೆಯ ಸುಖಭೋಗಗಳಲ್ಲಿರುವನು- | فَهُوَ فِي عِيشَةٍ رَّاضِيَةٍ ﴿٢١﴾ |
| 22. ಅತ್ಯುನ್ನತ ಸ್ವರ್ಗೋದ್ಯಾನದಲ್ಲಿ, | فِي جَنَّةٍ عَالِيَةٍ ﴿٢٢﴾ |
| 23. ಅದರ ಫಲದ ಗೊಂಚಲುಗಳು ಬಾಗಿಕೊಂಡಿರುವುವು. | قُطُوفُهَا دَانِيَةٌ ﴿٢٣﴾ |
| 24. (ಇಂತಹವರೊಡನೆ) "ನೀವು ಕಳೆದು ಹೋದ ದಿನಗಳಲ್ಲಿ ಮಾಡಿರುವ ಸತ್ಕರ್ಮಗಳ ಪ್ರತಿಫಲವಾಗಿ ಸಂತೋಷದಿಂದ ತಿನ್ನಿರಿ ಮತ್ತು ಕುಡಿಯಿರಿ(ಎಂದು ಹೇಳಲಾಗುವುದು)." | كُلُوا وَاشْرَبُوا هَنِيئًا بِمَا أَسْلَفْتُمْ فِي الْأَيَّامِ الْخَالِيَةِ ﴿٢٤﴾ |
| 25. ಯಾರ ಕರ್ಮಪತ್ರವನ್ನು ಅವನ ಎಡಗೈಯಲ್ಲಿ ಕೊಡಲಾಗುವುದೋ ಅವನು ಹೇಳುವನು, "ಅಯ್ಯೋ! ನನ್ನ ಕರ್ಮಪತ್ರವನ್ನು ನನಗೆ ಕೊಡದೆ ಇರುತ್ತಿದ್ದರೆ! | وَأَمَّا مَنْ أُوتِيَ كِتَابَهُ بِشِمَالِهِ فَيَقُولُ يَا لَيْتَنِي لَمْ أُوتَ كِتَابِيَهْ ﴿٢٥﴾ |
| 26. ಮತ್ತು ನನ್ನ ಕರ್ಮ ವೃತ್ತಾಂತವೇನೆಂದು ನನಗೆ ತಿಳಿಯದೆ ಇರುತ್ತಿದ್ದರೆ![8] | وَلَمْ أَدْرِ مَا حِسَابِيَهْ ﴿٢٦﴾ |

ಎತ್ತಿ ಹಿಡಿಯುವರೆಂಬ ವಿಚಾರ ಕಲ್ಪನೆಗೆ ನಿಲುಕದಂತಹುದಾಗಿದೆ. ಆ ಸಂದರ್ಭದಲ್ಲಿ ಅಲ್ಲಾಹನು ಸಿಂಹಾಸನಾರೂಢನಾಗಿರುವನೆಂದೂ ಸೂಕ್ತದಲ್ಲಿ ಹೇಳಲಾಗಿಲ್ಲ. ಅಲ್ಲದೆ ಅಲ್ಲಾಹನ ಬಗ್ಗೆ ಪವಿತ್ರ ಕುರ್‌ಆನ್ ನೀಡಿರುವ ಚಿತ್ರಣದ ಆಧಾರದಲ್ಲೂ - ದೇಹ, ಆಕಾರ ಮತ್ತು ಸ್ಥಾನಗಳಂತಹ ಮಿತಿಗಳಿಂದ ಮುಕ್ತನಾದ ದೇವನು ಎಲ್ಲಾದರೂ ಕುಳಿತಿದ್ದು, ಸೃಷ್ಟಿಗಳು ಅವನನ್ನು ಎತ್ತಿಕೊಂಡಿರುವರೆಂದು ಊಹಿಸುವಂತಿಲ್ಲ. ಆದ್ದರಿಂದ ಸಂಶೋಧನೆ ನಡೆಸಿ ಅದಕ್ಕೆ ಅರ್ಥವನ್ನು ಕಲ್ಪಿಸಲು ಪ್ರಯತ್ನಿಸುವುದು ತನ್ನನ್ನು ಪಥಭ್ರಷ್ಟತೆಯ ಅಪಾಯಕ್ಕೀಡು ಮಾಡಿದಂತೆಯೇ ಸರಿ.

7. ಅರ್ಥಾತ್- ಲೋಕದಲ್ಲಿ ಪರಲೋಕದ ಬಗ್ಗೆ ಅಲಕ್ಷ್ಯನಾಗದೆ ಒಂದು ದಿನ ಅಲ್ಲಾಹನ ಮುಂದೆ ಹಾಜರಾಗಿ ಲೆಕ್ಕ ಸಮರ್ಪಣೆ ಮಾಡಬೇಕಾಗಿದೆ ಎಂಬ ಪ್ರಜ್ಞೆಯೊಂದಿಗೆ ಜೀವನ ನಡೆಸಿದ್ದೇ ನನ್ನ ಸುದೈವಕ್ಕೆ ಕಾರಣವೆಂದು ಅವನು ಹೇಳುವನು.
8. ಸೂಕ್ತದ ಇನ್ನೊಂದು ಅರ್ಥ ಹೀಗಾಗಬಹುದು. ಲೆಕ್ಕ ಸಮರ್ಪಣೆ ಎಂದರೆ ಏನೆಂದು ನನಗೆಂದೂ ತಿಳಿದಿರಲಿಲ್ಲ. ಒಂದು ದಿನ ನನಗೂ ಲೆಕ್ಕ ಸಮರ್ಪಣೆ ಮಾಡಬೇಕಾಗಿದೆ ಮತ್ತು ನಾನು ಮಾಡಿದ್ದೆಲ್ಲವನ್ನೂ ನನ್ನ ಮುಂದಿರಿಸಲಾಗುವುದು ಎಂದು ನಾನೆಂದೂ ಊಹಿಸಿಯೂ ಇರಲಿಲ್ಲ.

| | |
|---|---|
| 27. ಅಯ್ಯೋ(ಭೂಲೋಕದಲ್ಲಿ ಬಂದಿದ್ದ) ನನ್ನ ಈ ಮರಣವೇ ನಿರ್ಣಾಯಕವಾಗಿರುತ್ತಿದ್ದರೆ! | يَٰلَيْتَهَا كَانَتِ ٱلْقَاضِيَةَ ﴿٢٧﴾ |
| 28. ನನ್ನ ಸಂಪತ್ತು ಇಂದು ನನಗೇನೂ ಪ್ರಯೋಜನ ಕೊಡಲಿಲ್ಲ. | مَآ أَغْنَىٰ عَنِّى مَالِيَهْ ﴿٢٨﴾ |
| 29. ನನ್ನ ಅಧಿಕಾರವೆಲ್ಲವೂ ಕೊನೆಗೊಂಡಿತು."[9] | هَلَكَ عَنِّى سُلْطَٰنِيَهْ ﴿٢٩﴾ |
| 30. (ಆಗ ಹೀಗೆ ಅಪ್ಪಣೆಯಾಗುವುದು) ಇವನನ್ನು ಹಿಡಿಯಿರಿ ಮತ್ತು ಇವನಿಗೆ ಕಂಠ ಕಡಗವನ್ನು ಹಾಕಿರಿ. | خُذُوهُ فَغُلُّوهُ ﴿٣٠﴾ |
| 31. ಅನಂತರ ಇವನನ್ನು ನರಕದೊಳಕ್ಕೆ ತಳ್ಳಿ ಬಿಡಿರಿ, | ثُمَّ ٱلْجَحِيمَ صَلُّوهُ ﴿٣١﴾ |
| 32. ಆ ಬಳಿಕ ಅವನನ್ನು ಎಪ್ಪತ್ತು ಮೊಳ ಉದ್ದದ ಸಂಕೋಲೆಯಿಂದ ಬಿಗಿಯಿರಿ. | ثُمَّ فِى سِلْسِلَةٍ ذَرْعُهَا سَبْعُونَ ذِرَاعًا فَٱسْلُكُوهُ ﴿٣٢﴾ |
| 33. ಇವನು ಮಹಿಮಾವಂತನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತಿರಲಿಲ್ಲ- | إِنَّهُۥ كَانَ لَا يُؤْمِنُ بِٱللَّهِ ٱلْعَظِيمِ ﴿٣٣﴾ |
| 34. ಮತ್ತು ದರಿದ್ರರಿಗೆ ಊಟ ಕೊಡಲು ಪ್ರೇರೇಪಿಸುತ್ತಲೂ ಇರಲಿಲ್ಲ.[10] | وَلَا يَحُضُّ عَلَىٰ طَعَامِ ٱلْمِسْكِينِ ﴿٣٤﴾ |
| 35. ಆದುದರಿಂದ ಇಲ್ಲಿ ಅವನಿಗೆ ಅನುಕಂಪ ತೋರುವವನಾರೂ ಇಲ್ಲ- | فَلَيْسَ لَهُ ٱلْيَوْمَ هَٰهُنَا حَمِيمٌ ﴿٣٥﴾ |
| 36. ಮತ್ತು ಗಾಯದ ಕೀವಿನ ಹೊರತು ಅವನಿಗೆ ಬೇರೆ ಯಾವ ಆಹಾರವೂ ಇಲ್ಲ- | وَلَا طَعَامٌ إِلَّا مِنْ غِسْلِينٍ ﴿٣٦﴾ |
| 37. ಅದನ್ನು ಪಾಪಿಗಳ ಹೊರತು ಇನ್ನಾರೂ ತಿನ್ನುವುದಿಲ್ಲ. | لَّا يَأْكُلُهُۥٓ إِلَّا ٱلْخَٰطِـُٔونَ ﴿٣٧﴾ |
| 38. ಹಾಗಲ್ಲ, ನಾನು ಆಣೆ ಹಾಕುತ್ತೇನೆ,[11] ನೀವು ನೋಡುವ ವಸ್ತುಗಳ- | فَلَآ أُقْسِمُ بِمَا تُبْصِرُونَ ﴿٣٨﴾ |

9. ಅರ್ಥಾತ್- ಯಾವ ಶಕ್ತಿಯ ಆಧಾರದಲ್ಲಿ ನಾನು ಲೋಕದಲ್ಲಿ ದರ್ಪ ತೋರುತ್ತಿದ್ದೆನೋ ಅದು ಇಲ್ಲಿ ಕೊನೆಗೊಂಡಿದೆ. ಇಲ್ಲಿ ನನಗೆ ಯಾವುದೇ ಸೈನ್ಯವಿಲ್ಲ, ಆಜ್ಞಾಪಾಲಕರಿಲ್ಲ, ನನ್ನ ರಕ್ಷಣೆಗಾಗಿ ಏನೂ ಮಾಡಲಾಗದ ದುರ್ಬಲ ಮತ್ತು ಅಸಹಾಯಕ ದಾಸನಾಗಿ ನಾನಿಲ್ಲಿ ನಿಂತಿದ್ದೇನೆ.

10. ಅರ್ಥಾತ್- ಸ್ವತಃ ಬಡಬಗ್ಗರಿಗೆ ಉಣಿಸುವುದಂತಿರಲಿ, ದೇವನ ಬಡ ದಾಸರಿಗೆ ಉಣಬಡಿಸಿರಿ ಎಂದು ಇತರರೊಂದಿಗೆ ಹೇಳುವುದನ್ನೂ ನಾನು ಇಷ್ಟಪಡುತ್ತಿರಲಿಲ್ಲ.

11. ಅರ್ಥಾತ್- ವಸ್ತುಸ್ಥಿತಿ ನೀವು ಭಾವಿಸಿಕೊಂಡಿರುವಂತಿಲ್ಲ.

39. ಹಾಗೂ ನೋಡದ ವಸ್ತುಗಳ-

وَمَا لَا تُبْصِرُونَ ٣٩

40. ಇದು ಓರ್ವ ಗೌರವಾನ್ವಿತ ಸಂದೇಶವಾಹಕನ ಮಾತಾಗಿದೆ.

إِنَّهُ لَقَوْلُ رَسُولٍ كَرِيمٍ ٤٠

41. ಇದು ಯಾವುದೇ ಕವಿಯ ಮಾತಲ್ಲ. ನೀವು ಅತ್ಯಲ್ಪವೇ ವಿಶ್ವಾಸವಿರಿಸುತ್ತೀರಿ-

وَمَا هُوَ بِقَوْلِ شَاعِرٍ ۚ قَلِيلًا مَا تُؤْمِنُونَ ٤١

42. ಮತ್ತು ಇದು ಯಾವುದೇ ಜೋತಿಷಿಯ ಮಾತೂ ಅಲ್ಲ. ನೀವು ಅತ್ಯಲ್ಪವೇ ಚಿಂತನೆ ನಡೆಸುತ್ತೀರಿ.

وَلَا بِقَوْلِ كَاهِنٍ ۚ قَلِيلًا مَا تَذَكَّرُونَ ٤٢

43. ಇದು ಸರ್ವಲೋಕಗಳ ಪಾಲಕ ಪ್ರಭುವಿನ ಕಡೆಯಿಂದ ಅವತೀರ್ಣವಾಗಿದೆ.

تَنْزِيلٌ مِنْ رَبِّ الْعٰلَمِينَ ٤٣

44. ಮತ್ತು ಇವರು(ಪ್ರವಾದಿ) ಸ್ವಯಂ ಯಾವುದಾದರೂ ಮಾತನ್ನು ಸೃಷ್ಟಿಸಿಕೊಂಡು ನಮ್ಮದೆಂದು ಹೇಳಿರುತ್ತಿದ್ದರೆ-

وَلَوْ تَقَوَّلَ عَلَيْنَا بَعْضَ الْأَقَاوِيلِ ٤٤

45. ನಾವು ಇವರ ಬಲಗೈಯನ್ನು ಹಿಡಿದು ಬಿಡುತ್ತಿದ್ದೆವು-

لَأَخَذْنَا مِنْهُ بِالْيَمِينِ ٤٥

46. ಮತ್ತು ಇವರ ಕಂಠನಾಡಿಯನ್ನು ಕತ್ತರಿಸಿ ಬಿಡುತ್ತಿದ್ದೆವು.

ثُمَّ لَقَطَعْنَا مِنْهُ الْوَتِينَ ٤٦

47. ಆಗ, ನಿಮ್ಮ ಪೈಕಿ (ನಮ್ಮನ್ನು) ಈ ಕಾರ್ಯದಿಂದ ತಡೆಯುವವರಾರೂ ಇರುತ್ತಿರಲಿಲ್ಲ.[12]

فَمَا مِنْكُمْ مِنْ أَحَدٍ عَنْهُ حَاجِزِينَ ٤٧

48. ವಾಸ್ತವದಲ್ಲಿ ಇದು ದೇವಭಯವುಳ್ಳವರಿಗೊಂದು ಉಪದೇಶವಾಗಿದೆ-

وَإِنَّهُ لَتَذْكِرَةٌ لِلْمُتَّقِينَ ٤٨

49. ಮತ್ತು ನಿಮ್ಮಲ್ಲಿ ಕೆಲವರು ನಿರಾಕರಿಸುವವರಿದ್ದಾರೆಂಬುದನ್ನು ನಾವು ಬಲ್ಲೆವು.

وَإِنَّا لَنَعْلَمُ أَنَّ مِنْكُمْ مُكَذِّبِينَ ٤٩

12. ಪ್ರವಾದಿಗೆ ತನ್ನ ವತಿಯಿಂದ ದೇವವಾಣಿಯಲ್ಲಿ ಯಾವುದೇ ರೀತಿಯ ಏರುಪೇರು ಮಾಡುವ ಅಧಿಕಾರವಿಲ್ಲ ಮತ್ತು ಅವರು ಹಾಗೆ ಮಾಡಿದರೆ ನಾವು ಉಗ್ರ ದಂಡನೆಯನ್ನು ನೀಡುತ್ತೇವೆ ಎಂದು ತಿಳಿಸುವುದು ಇದರ ನೈಜ ಉದ್ದೇಶ. ಒಬ್ಬ ರಾಜನು ನೇಮಿಸಿರುವಂತಹ ಅಧಿಕಾರಿ ಅವನ ಹೆಸರಲ್ಲಿ ಯಾವುದೇ ಖೋಟಾ ಕೆಲಸವನ್ನು ಮಾಡಿದರೆ ರಾಜನು ಅವನ ಕೈ ಹಿಡಿದು ಶಿರಚ್ಛೇದನ ಮಾಡಿಬಿಡುವ ಚಿತ್ರಣ ಮುಂದೆ ಬರುವಂತಹ ಧಾಟಿಯಲ್ಲಿ ಈ ವಿಷಯವನ್ನು ವರ್ಣಿಸಲಾಗಿದೆ. ಕೆಲವರು ಇದರಿಂದ ತಪ್ಪು ಅರ್ಥವನ್ನು ಕಲ್ಪಿಸುತ್ತಾರೆ. ಅವರ ಪ್ರಕಾರ ಯಾರಾದರೂ ಪ್ರವಾದಿತ್ವದ ಬಗ್ಗೆ ವಾದಿಸಿದರೆ, ಅಲ್ಲಾಹನ ವತಿಯಿಂದ ಅವನ ಹೃದಯನಾಡಿ ಅಥವಾ ಕಂಠನಾಡಿ ಕತ್ತರಿಸಲ್ಪಡದಿದ್ದರೆ ಅದು ಅವನು ಪ್ರವಾದಿ ಎಂಬುದಕ್ಕೆ ಆಧಾರವಾಗಿದೆ. ವಾಸ್ತವವಾಗಿ ಈ ಸೂಕ್ತವು ನೈಜ ಪ್ರವಾದಿಗಳ ಬಗ್ಗೆ ಅವತೀರ್ಣಗೊಂಡಿದೆ. ಪ್ರವಾದಿತ್ವದ ಬಗ್ಗೆ ಮಿಥ್ಯವಾದ ಮಾಡುವವರ ಕುರಿತಲ್ಲ. ಮಿಥ್ಯ ಪ್ರವಾದಿಗಳು ಪ್ರವಾದಿತ್ವದ ಬಗ್ಗೆ ಮಾತ್ರವಲ್ಲ ದೇವತ್ವದ ಬಗ್ಗೆಯೂ ವಾದಿಸುತ್ತಾರೆ. ಮಾತ್ರವಲ್ಲ ವರ್ಷಗಟ್ಟಲೆ ಅವರು ಭೂಮಿಯಲ್ಲಿ ರಾಜಾರೋಷದಿಂದ ತಿರುಗುತ್ತಿರುತ್ತಾರೆ. ಇದು ಅವರ ಸತ್ಯತೆಗೆ ಇರುವ ಆಧಾರಗಳಲ್ಲ.

| | |
|---|---|
| 50. ಇಂತಹ ಸತ್ಯನಿಷೇಧಿಗಳಿಗೆ ಖಂಡಿತವಾಗಿಯೂ ಇದು ಖೇದದ ಹೇತುವಾಗಿದೆ. | وَاِنَّهٗ لَحَسْرَةٌ عَلَى الْكٰفِرِيْنَ ﴿٥٠﴾ |
| 51. ಇದು ಅತ್ಯಂತ ಖಚಿತವಾದ ಸತ್ಯವಾಗಿದೆ. | وَاِنَّهٗ لَحَقُّ الْيَقِيْنِ ﴿٥١﴾ |
| 52. ಆದುದರಿಂದ ಸಂದೇಶವಾಹಕರೇ, ನಿಮ್ಮ ಮಹಿಮಾಪೂರ್ಣ ಪ್ರಭುವಿನ ನಾಮವನ್ನು ಜಪಿಸಿರಿ. | فَسَبِّحْ بِاسْمِ رَبِّكَ الْعَظِيْمِ ﴿٥٢﴾ ع |






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಬೇಡುವವನೊಬ್ಬನು ಯಾತನೆಯನ್ನು ಬೇಡಿದ್ದಾನೆ. ಅದು (ಆ ಯಾತನೆಯು) ಖಂಡಿತವಾಗಿಯೂ ಸಂಭವಿಸಿಯೇ ತೀರುವುದು-

سَاَلَ سَآئِلٌۢ بِعَذَابٍ وَّاقِعٍ ﴿١﴾

2. (ಅದು) ಸತ್ಯನಿಷೇಧಿಗಳಿಗಾಗಿದೆ. ಅದನ್ನು ತಡೆಯಬಲ್ಲವರು ಯಾರೂ ಇಲ್ಲ.

لِّلْكٰفِرِيْنَ لَيْسَ لَهٗ دَافِعٌ ﴿٢﴾

3. (ಅದು) ಉನ್ನತಿಯ ಸೋಪಾನಗಳ ಒಡೆಯನಾದ ಅಲ್ಲಾಹನ ಕಡೆಯಿಂದ ಬರಲಿದೆ.

مِّنَ اللّٰهِ ذِى الْمَعَارِجِ ﴿٣﴾

4. ದೇವಚರರು ಮತ್ತು ರೂಹ್[1] ಅವನ ಸಾನ್ನಿಧ್ಯಕ್ಕೆ ಐವತ್ತು ಸಾವಿರ ವರುಷಗಳ ಅವಧಿಯುಳ್ಳ[2] ಒಂದು ದಿನದಲ್ಲಿ ಏರಿ ಹೋಗುತ್ತಾರೆ.[3]

تَعْرُجُ الْمَلٰٓئِكَةُ وَالرُّوْحُ اِلَيْهِ فِىْ يَوْمٍ كَانَ مِقْدَارُهٗ خَمْسِيْنَ اَلْفَ سَنَةٍ ﴿٤﴾

5. ಆದುದರಿಂದ ಸಂದೇಶವಾಹಕರೇ, ತಾಳ್ಮೆ ವಹಿಸಿರಿ, ಸಭ್ಯ ತಾಳ್ಮೆ.[4]

فَاصْبِرْ صَبْرًا جَمِيْلًا ﴿٥﴾

---

1. ರೂಹ್ ಎಂದರೆ ಹ. ಜಿಬ್ರೀಲ್(ಅ). ಅವರ ಶ್ರೇಷ್ಠತೆಯಿಂದಾಗಿ ಅವರನ್ನು ದೇವಚರರಿಂದ ಪ್ರತ್ಯೇಕವಾಗಿ ಪ್ರಸ್ತಾಪಿಸಲಾಗಿದೆ.
2. ಸೂರಃ ಹಜ್ಜ್‌ನ 47ನೆಯ ಸೂಕ್ತ ಮತ್ತು ಸೂರಃ ಅಸ್ಸಜದಃದ 5ನೆಯ ಸೂಕ್ತದಲ್ಲಿ ಸಾವಿರ ವರ್ಷದ ಒಂದು ದಿನದ ಬಗ್ಗೆ ಪ್ರಸ್ತಾಪಿಸಲಾಗಿದೆ. ಇಲ್ಲಿ ಯಾತನೆಯ ಅಪೇಕ್ಷೆಗೆ ಉತ್ತರವಾಗಿ ಅಲ್ಲಾಹನ ಒಂದು ದಿನದ ಪ್ರಮಾಣ ಐವತ್ತು ಸಾವಿರ ವರ್ಷವೆಂದು ಹೇಳಲಾಗಿದೆ. ಅರ್ಥಾತ್, ಜನರು ತಮ್ಮ ಮೆದುಳು ಮತ್ತು ತಮ್ಮ ವಿಚಾರ ಕ್ಷೇತ್ರದ ಸಂಕುಚಿತತೆಯಿಂದಾಗಿ ದೇವನ ವಿಷಯವನ್ನೂ ತಮ್ಮ ಮಾನದಂಡದಿಂದ ಅಳೆಯುತ್ತಾರೆ. ಅವರಿಗೆ ಐವತ್ತು-ನೂರು ವರ್ಷಗಳ ಅವಧಿಯೂ ಬಹಳ ದೀರ್ಘವೆಂದು ಭಾಸವಾಗುತ್ತದೆ. ಆದರೆ ಅಲ್ಲಾಹನ ಬಳಿ ಒಂದೊಂದು ಯೋಜನೆಯೂ ಸಾವಿರಗಟ್ಟಲೆ ಅಥವಾ ಐವತ್ತೈವತ್ತು ಸಾವಿರ ವರ್ಷಗಳದ್ದಾಗಿರುತ್ತದೆ. ಈ ಕಾಲಾವಧಿಯೂ ಕೇವಲ ಉದಾಹರಣಾರ್ಥವಾಗಿದೆ.
3. ಈ ವಿಷಯವು 'ಮುತಶಾಬಿಹಾತ್'ಗೆ ಸೇರಿದ್ದಾಗಿದೆ. ಆದ್ದರಿಂದ ಅದರ ಅರ್ಥವನ್ನು ನಿರ್ಧರಿಸಲು ಸಾಧ್ಯವಿಲ್ಲ. ನಮಗೆ ದೇವಚರರ ವಾಸ್ತವಿಕತೆಯಾಗಲಿ ಅವರು ಏರಿ ಹೋಗುವ ಸ್ವರೂಪವಾಗಲಿ ತಿಳಿದಿಲ್ಲ. ದೇವಚರರು ಏರಿ ಹೋಗುವ ಆ ಏಣಿಗಳು ಹೇಗಿರಬಹುದೆಂದು ಊಹಿಸಲಿಕ್ಕೂ ನಮ್ಮಿಂದ ಸಾಧ್ಯವಿಲ್ಲ. ಅಲ್ಲಾಹನ ಬಗ್ಗೆಯೂ ಅವನು ಯಾವ ನಿರ್ದಿಷ್ಟ ಸ್ಥಳದಲ್ಲಿರುತ್ತಾನೆಂದು ಕಲ್ಪಿಸಲು ಸಾಧ್ಯವಿಲ್ಲ. ಏಕೆಂದರೆ ಅವನ ಅಸ್ತಿತ್ವವು ಕಾಲ ಮತ್ತು ವಾಸದ ಬಂಧನಗಳಿಂದ ಮುಕ್ತವಾಗಿದೆ.
4. ಅರ್ಥಾತ್- ವಿಶಾಲ ಮನೋಭಾವದ ವ್ಯಕ್ತಿಯೊಬ್ಬನಿಗೆ ಭೂಷಣಪ್ರಾಯವಾದಂತಹ ತಾಳ್ಮೆ.

6. ಇವರು ಅದನ್ನು ದೂರವೆಂದು ಭಾವಿಸುತ್ತಾರೆ-
إِنَّهُمْ يَرَوْنَهُ بَعِيدًا ۝٦

7. ಮತ್ತು ನಾವು ಅದನ್ನು ಸಮಿಪದಲ್ಲಿ ಕಾಣುತ್ತಿದ್ದೇವೆ.
وَنَرَاهُ قَرِيبًا ۝٧

8. (ಆ ಯಾತನೆ ಸಂಭವಿಸುವ) ಆ ದಿನ ಆಕಾಶವು ಕರಗಿದ ಬೆಳ್ಳಿಯಂತಾಗುವುದು-[5]
يَوْمَ تَكُونُ السَّمَاءُ كَالْمُهْلِ ۝٨

9. ಮತ್ತು ಪರ್ವತಗಳು ಬಣ್ಣ ಬಣ್ಣದ ಹಿಂಜಿದ ಉಣ್ಣೆಯಂತಾಗುವುವು-
وَتَكُونُ الْجِبَالُ كَالْعِهْنِ ۝٩

10. ಮತ್ತು ಯಾವ ಆಪ್ತ ಮಿತ್ರನೂ ತನ್ನ ಆಪ್ತ ಮಿತ್ರನನ್ನು ವಿಚಾರಿಸಲಾರನು.
وَلَا يَسْأَلُ حَمِيمٌ حَمِيمًا ۝١٠

11-14. ವಸ್ತುತಃ ಅವರು ಪರಸ್ಪರರಿಗೆ ತೋರಿಸಲ್ಪಡುವರು. ಅಪರಾಧಿಯು ಅಂದಿನ ಯಾತನೆಯಿಂದ ಪಾರಾಗಲಿಕ್ಕಾಗಿ ತನ್ನ ಮಕ್ಕಳನ್ನು, ತನ್ನ ಪತ್ನಿಯನ್ನು, ತನ್ನ ಸಹೋದರರನ್ನು, ತನಗೆ ಆಶ್ರಯ ನೀಡುತ್ತಿದ್ದ ತನ್ನ ಅತ್ಯಂತ ಆಪ್ತ ಕುಟುಂಬವನ್ನು ಮತ್ತು ಭೂಮುಖದಲ್ಲಿರುವ ಎಲ್ಲ ಜನರನ್ನೂ ಪರಿಹಾರವಾಗಿ ಕೊಡಬಯಸುವನು ಮತ್ತು ಈ ಪರಿಹಾರವು ತನ್ನನ್ನು ಪಾರುಗೊಳಿಸಬಹುದೆಂದು ಭಾವಿಸುವನು.
يُبَصَّرُونَهُمْ ۚ يَوَدُّ الْمُجْرِمُ لَوْ يَفْتَدِي مِنْ عَذَابِ يَوْمِئِذٍ بِبَنِيهِ ۝١١
وَصَاحِبَتِهِ وَأَخِيهِ ۝١٢
وَفَصِيلَتِهِ الَّتِي تُؤْوِيهِ ۝١٣
وَمَنْ فِي الْأَرْضِ جَمِيعًا ثُمَّ يُنْجِيهِ ۝١٤

15. ಖಂಡಿತ ಇಲ್ಲ. ಅದು ಧಗಧಗಿಸುವ ಅಗ್ನಿಯ ಜ್ವಾಲೆಯಾಗಿರುವುದು-
كَلَّا ۖ إِنَّهَا لَظَىٰ ۝١٥

16. ಅದು ಮಾಂಸವನ್ನೂ ಚರ್ಮವನ್ನೂ ನೆಕ್ಕಿ ಬಿಡುವುದು.
نَزَّاعَةً لِلشَّوَىٰ ۝١٦

17-18. ಸತ್ಯದಿಂದ ವಿಮುಖನಾದ, ಬೆನ್ನು ತಿರುಗಿಸಿದ, ಸಂಪತ್ತನ್ನು ಕಲೆ ಹಾಕಿದ ಮತ್ತು ಜೋಪಾನವಾಗಿ ಸಂಗ್ರಹಿಸಿಟ್ಟ ಪ್ರತಿಯೊಬ್ಬನನ್ನೂ ಕೂಗಿ ಕೂಗಿ ತನ್ನ ಕಡೆಗೆ ಕರೆಯುವುದು.
تَدْعُو مَنْ أَدْبَرَ وَتَوَلَّىٰ ۝١٧
وَجَمَعَ فَأَوْعَىٰ ۝١٨

19. ಮಾನವನು ಚಂಚಲನಾಗಿಯೇ ಸೃಷ್ಟಿಸಲ್ಪಟ್ಟಿದ್ದಾನೆ.[6]
إِنَّ الْإِنْسَانَ خُلِقَ هَلُوعًا ۝١٩

20. ಅವನಿಗೆ ಸಂಕಷ್ಟ ಬಂದಾಗ ಗಾಬರಿಗೊಳ್ಳುತ್ತಾನೆ-
إِذَا مَسَّهُ الشَّرُّ جَزُوعًا ۝٢٠

5. ಅರ್ಥಾತ್- ಪ್ರತಿ ಬಾರಿಗೂ ಅದು ಬಣ್ಣ ಬದಲಾಯಿಸುವುದು.
6. ನಮ್ಮ ಭಾಷೆಯಲ್ಲಿ ಇದನ್ನು ನಾವು ಹೀಗೆನ್ನುತ್ತೇವೆ, "ಇದು ಅವನ ಹುಟ್ಟು ಗುಣ" ಅಥವಾ "ಇದು ಅವನ ಸಹಜ ದೌರ್ಬಲ್ಯ" ಅದನ್ನೇ ಅಲ್ಲಾಹನು, "ಮಾನವ ಹೀಗೆಯೇ ಸೃಷ್ಟಿಸಲ್ಪಟ್ಟಿದ್ದಾನೆ" ಎಂದು ವಿವರಿಸುತ್ತಿದ್ದಾನೆ.

| | |
|---|---|
| 21. ಮತ್ತು ಸೌಭಾಗ್ಯ ಪ್ರಾಪ್ತವಾದಾಗ ಲೋಭ ತೋರುತ್ತಾನೆ- | وَإِذَا مَسَّهُ الْخَيْرُ مَنُوعًا ﴿٢١﴾ |
| 22. ಆದರೆ ನಮಾಝ್ ಮಾಡುವವರು (ಈ ದೋಷದಿಂದ ಮುಕ್ತರಾಗಿದ್ದಾರೆ.) | إِلَّا الْمُصَلِّينَ ﴿٢٢﴾ |
| 23. ಅವರು ತಮ್ಮ ನಮಾಝನ್ನು ಸದಾ ಪಾಲಿಸುತ್ತಾರೆ. | الَّذِينَ هُمْ عَلَىٰ صَلَاتِهِمْ دَائِمُونَ ﴿٢٣﴾ |
| 24. ಅವರ ಸಂಪತ್ತುಗಳಲ್ಲಿ ಒಂದು ನಿಶ್ಚಿತ ಹಕ್ಕಿದೆ. | وَالَّذِينَ فِي أَمْوَالِهِمْ حَقٌّ مَّعْلُومٌ ﴿٢٤﴾ |
| 25. ಬೇಡುವವನಿಗೆ ಮತ್ತು ವಂಚಿತನಿಗೆ. | لِّلسَّائِلِ وَالْمَحْرُومِ ﴿٢٥﴾ |
| 26. ಅವರು ಪ್ರತಿಫಲ ಸಿಗಲಿರುವ ದಿನವನ್ನು ಸತ್ಯವೆಂದು ನಂಬುತ್ತಾರೆ. | وَالَّذِينَ يُصَدِّقُونَ بِيَوْمِ الدِّينِ ﴿٢٦﴾ |
| 27. ಅವರು ತಮ್ಮ ಪ್ರಭುವಿನ ಯಾತನೆಗೆ ಭಯಪಡುತ್ತಾರೆ. | وَالَّذِينَ هُم مِّنْ عَذَابِ رَبِّهِم مُّشْفِقُونَ ﴿٢٧﴾ |
| 28. ಏಕೆಂದರೆ, ಅವರ ಪ್ರಭುವಿನ ಯಾತನೆಯು ನಿರ್ಭಯವಾಗಿರತಕ್ಕ ವಸ್ತುವಲ್ಲ. | إِنَّ عَذَابَ رَبِّهِمْ غَيْرُ مَأْمُونٍ ﴿٢٨﴾ |
| 29. ಅವರು ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳುತ್ತಾರೆ- | وَالَّذِينَ هُمْ لِفُرُوجِهِمْ حَافِظُونَ ﴿٢٩﴾ |
| 30. ತಮ್ಮ ಪತ್ನಿಯರ ಅಥವಾ ತಮ್ಮ ಅಧೀನ ಸ್ತ್ರೀಯರ (ದಾಸಿಯರ) ಹೊರತು. ಇವರಿಂದ ರಕ್ಷಿಸಿಕೊಳ್ಳದಿದ್ದರೆ, ಅವರ ಮೇಲೆ ಆಕ್ಷೇಪವೇನೂ ಇಲ್ಲ. | إِلَّا عَلَىٰ أَزْوَاجِهِمْ أَوْ مَا مَلَكَتْ أَيْمَانُهُمْ فَإِنَّهُمْ غَيْرُ مَلُومِينَ ﴿٣٠﴾ |
| 31. ಆದರೆ, ಇದರ ಹೊರತು ಇನ್ನೇನಾದರೂ ಬಯಸುವವರೇ ಸೀಮೋಲ್ಲಂಘಕರು- | فَمَنِ ابْتَغَىٰ وَرَاءَ ذَٰلِكَ فَأُولَٰئِكَ هُمُ الْعَادُونَ ﴿٣١﴾ |
| 32. ಅವರು ತಮ್ಮಲ್ಲಿರಿಸಿದ ಅಮಾನತುಗಳ ರಕ್ಷಣೆ ಮಾಡುತ್ತಾರೆ ಮತ್ತು ತಮ್ಮ ವಾಗ್ದಾನಗಳನ್ನು ಪಾಲಿಸುತ್ತಾರೆ. | وَالَّذِينَ هُمْ لِأَمَانَاتِهِمْ وَعَهْدِهِمْ رَاعُونَ ﴿٣٢﴾ |
| 33. ಅವರು ತಮ್ಮ ಸಾಕ್ಷ್ಯಗಳಲ್ಲಿ ಸತ್ಯದಲ್ಲೇ ಸ್ಥಿರವಾಗಿರುತ್ತಾರೆ. | وَالَّذِينَ هُم بِشَهَادَاتِهِمْ قَائِمُونَ ﴿٣٣﴾ |
| 34. ಅವರು ತಮ್ಮ ನಮಾಝನ್ನು ರಕ್ಷಿಸುತ್ತಾರೆ. | وَالَّذِينَ هُمْ عَلَىٰ صَلَاتِهِمْ يُحَافِظُونَ ﴿٣٤﴾ |
| 35. ಇಂತಹವರು ಗೌರವದೊಂದಿಗೆ ಸ್ವರ್ಗೋದ್ಯಾನಗಳಲ್ಲಿರುವರು. | أُولَٰئِكَ فِي جَنَّاتٍ مُّكْرَمُونَ ﴿٣٥﴾ ع |

36-37. ಆದುದರಿಂದ ಸಂದೇಶವಾಹಕರೇ, ಈ ಸತ್ಯನಿಷೇಧಿಗಳು ಎಡಬಲಗಳಿಂದ ಗುಂಪು ಗುಂಪಾಗಿ ನಿಮ್ಮ ಕಡೆಗೆ ಧಾವಿಸಿ ಬರುತ್ತಿರುವುದೇಕೆ?[7]

فَمَالِ الَّذِينَ كَفَرُوا قِبَلَكَ مُهْطِعِينَ ﴿٣٦﴾ عَنِ الْيَمِينِ وَعَنِ الشِّمَالِ عِزِينَ ﴿٣٧﴾

38. ಅವರಲ್ಲಿ ಪ್ರತಿಯೊಬ್ಬನೂ ತಾನು ಸಂಪದ್ಭರಿತವಾದ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಗೊಳಿಸಲ್ಪಡುವನೆಂದು ಆಶಿಸುತ್ತಿರುವನೇ?

أَيَطْمَعُ كُلُّ امْرِئٍ مِّنْهُمْ أَن يُدْخَلَ جَنَّةَ نَعِيمٍ ﴿٣٨﴾

39. ಖಂಡಿತ ಇಲ್ಲ. ನಾವು ಯಾವ ವಸ್ತುವಿನಿಂದ ಇವರನ್ನು ಸೃಷ್ಟಿಸಿರುವೆವೋ ಅದನ್ನಿವರು ಸ್ವತಃ ಬಲ್ಲರು.

كَلَّا ۖ إِنَّا خَلَقْنَاهُم مِّمَّا يَعْلَمُونَ ﴿٣٩﴾

40. ಇಲ್ಲ, ನಾನು ಪೂರ್ವಗಳ ಮತ್ತು ಪಶ್ಚಿಮಗಳ[8] ಒಡೆಯನ ಆಣೆ ಹಾಕುತ್ತೇನೆ, ಶಕ್ತರಾಗಿದ್ದೇವೆ ನಾವು-

فَلَا أُقْسِمُ بِرَبِّ الْمَشَارِقِ وَالْمَغَارِبِ إِنَّا لَقَادِرُونَ ﴿٤٠﴾

41. ಇವರ ಸ್ಥಾನದಲ್ಲಿ ಇವರಿಗಿಂತ ಉತ್ತಮರನ್ನು ತರಲು! ನಮ್ಮನ್ನು ಮೀರಿಸುವವರು ಯಾರೂ ಇಲ್ಲ.

عَلَىٰ أَن نُّبَدِّلَ خَيْرًا مِّنْهُمْ وَمَا نَحْنُ بِمَسْبُوقِينَ ﴿٤١﴾

42. ಆದುದರಿಂದ ಇವರೊಡನೆ ವಾಗ್ದಾನ ಮಾಡಲಾಗುತ್ತಿರುವ ತಮ್ಮ ಆ ದಿನವನ್ನು ತಲುಪುವ ವರೆಗೂ ಇವರನ್ನು ಇವರ ಅಸಂಬದ್ಧ ಮಾತುಗಳಲ್ಲಿ ಮತ್ತು ಆಟಗಳಲ್ಲಿ ಬಿದ್ದುಕೊಂಡಿರಲು ಬಿಟ್ಟು ಬಿಡಿರಿ.

فَذَرْهُمْ يَخُوضُوا وَيَلْعَبُوا حَتَّىٰ يُلَاقُوا يَوْمَهُمُ الَّذِي يُوعَدُونَ ﴿٤٢﴾

43. ಅಂದು ಇವರು ತಮ್ಮ ಸಮಾಧಿಗಳಿಂದ ಹೊರಟು- ತಮ್ಮ ವಿಗ್ರಹಾಲಯಗಳ ಕಡೆಗೆ ಓಡುವಂತೆ, ಓಡಿ ಹೋಗುತ್ತಿರುವರು-

يَوْمَ يَخْرُجُونَ مِنَ الْأَجْدَاثِ سِرَاعًا كَأَنَّهُمْ إِلَىٰ نُصُبٍ يُوفِضُونَ ﴿٤٣﴾

44. ಇವರ ದೃಷ್ಟಿಗಳು ತಗ್ಗಿರುವುವು. ಅಪಮಾನವು ಇವರನ್ನು ಆವರಿಸಿಕೊಂಡಿರುವುದು. ಇವರಿಗೆ ವಾಗ್ದಾನವೀಯಲಾಗುತ್ತಿರುವ ದಿನ ಅದೇ ಆಗಿದೆ.

خَاشِعَةً أَبْصَارُهُمْ تَرْهَقُهُمْ ذِلَّةٌ ۚ ذَٰلِكَ الْيَوْمُ الَّذِي كَانُوا يُوعَدُونَ ﴿٤٤﴾

---

7. ಪ್ರವಾದಿವರ್ಯರ(ಸ) ಸಂದೇಶ ಪ್ರಚಾರ ಮತ್ತು ಕುರ್‌ಆನ್ ಪಠಣದ ಸ್ವರ ಕೇಳಿ ಅಪಹಾಸ್ಯ ಮಾಡಲು ಮತ್ತು ಗುಲ್ಲೆಬ್ಬಿಸಲು ನಾಲ್ಕೂ ಕಡೆಯಿಂದ ಓಡೋಡಿ ಬರುತ್ತಿದ್ದವರ ಕುರಿತು ಈ ಮಾತು ಹೇಳಲಾಗಿದೆ.
8. ಒಂದು ವರ್ಷದ ಅವಧಿಯಲ್ಲಿ ಸೂರ್ಯ ಪ್ರತಿದಿನ ಒಂದು ಹೊಸ ಕೋನದಿಂದ ಉದಯಿಸಿ ಹೊಸ ದಿಕ್ಕಿನಲ್ಲಿ ಅಸ್ತಮಿಸುತ್ತದೆ. ಅಲ್ಲದೆ ಭೂಮಿಯ ವಿವಿಧೆಡೆಗಳಲ್ಲಿ ಸೂರ್ಯ ಬೇರೆ ಬೇರೆ ಅವಧಿಯಲ್ಲಿ ಸರಣಿಯಂತೆ ಉದಯಾಸ್ತಮಾನವಾಗುತ್ತಿರುತ್ತದೆ. ಈ ಆಧಾರದಲ್ಲಿ ಪೂರ್ವ ಮತ್ತು ಪಶ್ಚಿಮ ಒಂದಲ್ಲ ಬದಲಾಗಿ ಅನೇಕವಿದೆ. ಆದ್ದರಿಂದ ಪೂರ್ವಗಳು ಮತ್ತು ಪಶ್ಚಿಮಗಳು ಎಂಬ ಪದ ಪ್ರಯೋಗಿಸಲಾಗಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللَّهِ الرَّحْمَٰنِ الرَّحِيمِ

1. ನಾವು ನೂಹರನ್ನು ಅವರ ಜನಾಂಗದ ಕಡೆಗೆ ರವಾನಿಸಿದೆವು. ಅವರು ತಮ್ಮ ಜನಾಂಗದವರಿಗೆ- ಅವರ ಮೇಲೆ ಒಂದು ವೇದನಾಯುಕ್ತ ಯಾತನೆ ಬಂದೆರಗುವುದಕ್ಕೆ ಮುಂಚೆಯೇ- ಎಚ್ಚರಿಕೆ ನೀಡಲೆಂದು.

إِنَّا أَرْسَلْنَا نُوحًا إِلَىٰ قَوْمِهِ أَنْ أَنذِرْ قَوْمَكَ مِن قَبْلِ أَن يَأْتِيَهُمْ عَذَابٌ أَلِيمٌ ①

2. ಅವರು ಹೇಳಿದರು; "ನನ್ನ ಜನಾಂಗದವರೇ, ನಾನು ನಿಮಗಾಗಿ ಓರ್ವ ಸುಸ್ಪಷ್ಟ ಎಚ್ಚರಿಕೆ ಕೊಡುವವ(ಸಂದೇಶವಾಹಕ)ನಾಗಿದ್ದೇನೆ.

قَالَ يَا قَوْمِ إِنِّي لَكُمْ نَذِيرٌ مُّبِينٌ ②

3. ಅಲ್ಲಾಹನ ಆರಾಧನೆ ಮಾಡಿರಿ, ಅವನನ್ನು ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ.

أَنِ اعْبُدُوا اللَّهَ وَاتَّقُوهُ وَأَطِيعُونِ ③

4. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ನಿಮ್ಮನ್ನು ಒಂದು ನಿಶ್ಚಿತ ಕಾಲದ ವರೆಗೆ ಉಳಿಸುವನು.[1] ವಾಸ್ತವದಲ್ಲಿ ಅಲ್ಲಾಹನು ನಿಶ್ಚಯಿಸಿರುವ ಕಾಲವು ಬಂದು ಬಿಟ್ಟರೆ ಮತ್ತೆ ಅದನ್ನು ಮುಂದೂಡಲಾಗುವುದಿಲ್ಲ.[2] ಅಯ್ಯೋ ನಿಮಗಿದು ತಿಳಿದಿರುತ್ತಿದ್ದರೆ!"

يَغْفِرْ لَكُم مِّن ذُنُوبِكُمْ وَيُؤَخِّرْكُمْ إِلَىٰ أَجَلٍ مُّسَمًّى ۚ إِنَّ أَجَلَ اللَّهِ إِذَا جَاءَ لَا يُؤَخَّرُ ۖ لَوْ كُنتُمْ تَعْلَمُونَ ④

5. ಅವರು[3] ಹೀಗೆ ಬಿನ್ನವಿಸಿದರು- "ನನ್ನ ಪ್ರಭೂ, ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು.

قَالَ رَبِّ إِنِّي دَعَوْتُ قَوْمِي لَيْلًا وَنَهَارًا ⑤

1. ಅರ್ಥಾತ್- ನೀವು ಈ ಮೂರು ವಿಷಯಗಳನ್ನು ಸಮ್ಮತಿಸಿದರೆ ಅಲ್ಲಾಹನು ನಿಗದಿಪಡಿಸಿರುವ ನೈಸರ್ಗಿಕ ಮರಣದ ತನಕದ ಅವಧಿಯಲ್ಲಿ ನಿಮಗೆ ಜೀವಿಸುವ ಅವಕಾಶ ನೀಡಲಾಗುವುದು.
2. ಇಲ್ಲಿ ಎರಡನೆಯ ಬಾರಿ ಪ್ರಸ್ತಾಪಿಸಲಾಗಿರುವ 'ಕಾಲ'ವೆಂದರೆ ಅಲ್ಲಾಹನು ಯಾವುದೇ ಜನಾಂಗದ ಮೇಲೆ ಯಾತನೆ ಎರಗಿಸಲು ನಿಗದಿಪಡಿಸಿರುವ ಕಾಲ. ಯಾವುದೇ ಜನಾಂಗದ ಮೇಲೆ ಯಾತನೆ ಎರಗಿಸುವ ತೀರ್ಮಾನವಾಗಿ ಬಿಟ್ಟರೆ ನಂತರ ಅವರು ವಿಶ್ವಾಸ ಸ್ವೀಕರಿಸಿದರೂ ಅವರನ್ನು ಕ್ಷಮಿಸಲಾಗುವುದಿಲ್ಲ ಎಂಬ ವಿಷಯವನ್ನು ಪವಿತ್ರ ಕುರ್‌ಆನಿನ ವಿವಿಧೆಡೆಗಳಲ್ಲಿ ಅತ್ಯಂತ ಸ್ಪಷ್ಟವಾಗಿ ಸಾರಲಾಗಿದೆ.
3. ನಡುವೆ ಸುದೀರ್ಘ ಕಾಲದ ಇತಿಹಾಸವನ್ನು ಬಿಟ್ಟು ಹ. ನೂಹ್(ಅ) ತಮ್ಮ ಪ್ರವಾದಿತ್ವದ ಕೊನೆಯ ಘಟ್ಟದಲ್ಲಿ ಅಲ್ಲಾಹನ ಮುಂದಿಟ್ಟ ಮನವಿಯನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ.

6. ಆದರೆ ನನ್ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು.

فَلَمْ يَزِدْهُمْ دُعَآءِيْٓ اِلَّا فِرَارًا ۝٦

7. ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿ ಕೊಂಡರು, ತಮ್ಮ ವಸ್ತ್ರಗಳಿಂದ ಮುಖಮುಚ್ಚಿ ಕೊಂಡರು,[4] ಹಠಮಾರಿತನ ತೋರಿದರು ಮತ್ತು ಭಾರೀ ಅಹಂಭಾವ ತೋರಿಸಿದರು.

وَاِنِّيْ كُلَّمَا دَعَوْتُهُمْ لِتَغْفِرَ لَهُمْ جَعَلُوْٓا اَصَابِعَهُمْ فِيْٓ اٰذَانِهِمْ وَاسْتَغْشَوْا ثِيَابَهُمْ وَاَصَرُّوْا وَاسْتَكْبَرُوا اسْتِكْبَارًا ۝٧

8. ತರುವಾಯ ನಾನು ಅವರಿಗೆ ಬಹಿರಂಗವಾಗಿ ಕರೆ ಕೊಟ್ಟೆನು,

ثُمَّ اِنِّيْ دَعَوْتُهُمْ جِهَارًا ۝٨

9. ಅನಂತರ ನಾನು ಘಂಟಾಘೋಷವಾಗಿ ಧರ್ಮಾಹ್ವಾನ ನೀಡಿದೆನು ಮತ್ತು ರಹಸ್ಯವಾಗಿಯೂ ಸಮಜಾಯಿಸಿದೆನು-

ثُمَّ اِنِّيْٓ اَعْلَنْتُ لَهُمْ وَاَسْرَرْتُ لَهُمْ اِسْرَارًا ۝٩

10. ನಾನು (ಹೀಗೆ) ಹೇಳಿದೆನು: ನಿಮ್ಮ ಪ್ರಭುವಿನೊಡನೆ ಕ್ಷಮಾಯಾಚನೆ ಮಾಡಿರಿ. ಖಂಡಿತವಾಗಿಯೂ ಅವನು ಮಹಾಕ್ಷಮಾಶೀಲನಾಗಿದ್ದಾನೆ-

فَقُلْتُ اسْتَغْفِرُوْا رَبَّكُمْ ۭ اِنَّهٗ كَانَ غَفَّارًا ۝١٠

11. ಅವನು ನಿಮ್ಮ ಮೇಲೆ ಆಕಾಶದಿಂದ ಧಾರಾಳವಾಗಿ ಮಳೆ ಸುರಿಸುವನು,

يُّرْسِلِ السَّمَاۗءَ عَلَيْكُمْ مِّدْرَارًا ۝١١

12. ನಿಮಗೆ ಸೊತ್ತು ಸಂತಾನಗಳನ್ನು ದಯಪಾಲಿಸುವನು, ನಿಮಗಾಗಿ ಉದ್ಯಾನಗಳನ್ನು ಸೃಷ್ಟಿಸುವನು ಮತ್ತು ನಿಮಗಾಗಿ ಕಾಲುವೆಗಳನ್ನು ಹರಿಸುವನು.

وَّيُمْدِدْكُمْ بِاَمْوَالٍ وَّبَنِيْنَ وَيَجْعَلْ لَّكُمْ جَنّٰتٍ وَّيَجْعَلْ لَّكُمْ اَنْهٰرًا ۝١٢

13. ನೀವು ಅಲ್ಲಾಹನ ಬಗ್ಗೆ ಯಾವುದೇ ಪ್ರತಿಷ್ಠೆಯನ್ನು ನಿರೀಕ್ಷಿಸದಿರಲು, ನಿಮಗೇನಾಗಿದೆ?[5]

مَا لَكُمْ لَا تَرْجُوْنَ لِلّٰهِ وَقَارًا ۝١٣

---

4. ಅವರಿಗೆ ಹ. ನೂಹ್‌ರ(ಅ) ಮಾತು ಕೇಳುವುದಂತಿರಲಿ, ಅವರ ಮುಖ ನೋಡುವುದೂ ಇಷ್ಟವಿರಲಿಲ್ಲ ಎಂಬ ಕಾರಣಕ್ಕಾಗಿ ಅವರು ಮುಖ ಮುಚ್ಚಿಕೊಳ್ಳುತ್ತಿರಬಹುದು ಅಥವಾ ಅವರ ಮುಂದಿನಿಂದ ಮುಖ ಮರೆಸಿಕೊಂಡು ಹೊರಟು ಹೋಗಿರಬೇಕು. ಹೀಗೆ ಅವರು ನಮ್ಮ ಗುರುತು ಹಿಡಿದು ಮಾತನಾಡುವ ಪ್ರಮೇಯವೇ ಎದುರಾಗಬಾರದು ಎಂಬ ಉದ್ದೇಶದಿಂದ ಅವರು ಇಂತಹ ಕೆಲಸ ಮಾಡುತ್ತಿದ್ದಿರಬಹುದು.

5. ಲೋಕದ ಸಣ್ಣ ಸಣ್ಣ ಸರದಾರರು ಮತ್ತು ಧನಿಕರ ಬಗ್ಗೆಯೂ ಅವರ ಘನತೆಗೆ ವಿರುದ್ಧವಾದ ಯಾವುದೇ ಕೆಲಸ ಮಾಡುವುದು ಅಪಾಯಕರವೆಂದು ನೀವು ಭಾವಿಸುತ್ತೀರಿ. ಆದರೆ ಲೋಕದೊಡೆಯನೂ ಅತ್ಯಂತ ಘನತರವಾದ ಅಸ್ತಿತ್ವವನ್ನು ಹೊಂದಿದ್ದಾನೆಂದು ನೀವು ಕಲ್ಪಿಸುವುದಿಲ್ಲ. ಅವನ ವಿರುದ್ಧ ನೀವು ಬಂಡಾಯವೆಸಗುತ್ತೀರಿ. ಅವನ ದೇವತ್ವದಲ್ಲಿ ಇತರರನ್ನು ಭಾಗೀದಾರರನ್ನಾಗಿ ನಿಶ್ಚಯಿಸುತ್ತೀರಿ. ಅವನ ಆದೇಶಗಳನ್ನು ಉಲ್ಲಂಘಿಸುತ್ತೀರಿ. ಇದರಿಂದ ದೇವನು ನಿಮ್ಮನ್ನು ಶಿಕ್ಷಿಸಬಹುದೆಂಬ ಶಂಕೆಯೂ ನಿಮ್ಮನ್ನು ಕಾಡುವುದಿಲ್ಲ.

14. ಅವನಂತು ನಿಮ್ಮನ್ನು ವಿವಿಧ ಹಂತಗಳಲ್ಲಿ ಸೃಷ್ಟಿಸಿರುವನು.[6]

وَقَدْ خَلَقَكُمْ أَطْوَارًا ﴿١٤﴾

15. ಅಲ್ಲಾಹನು ಸಪ್ತಗಗನಗಳನ್ನು ಅಂತಸ್ತು ಅಂತಸ್ತುಗಳಾಗಿ ಹೇಗೆ ಸೃಷ್ಟಿಸಿದನು ಎಂಬುದನ್ನು-

أَلَمْ تَرَوْا كَيْفَ خَلَقَ اللَّهُ سَبْعَ سَمَاوَاتٍ طِبَاقًا ﴿١٥﴾

16. ಮತ್ತು ಅವುಗಳಲ್ಲಿ ಚಂದ್ರನನ್ನು ಬೆಳಕಾಗಿಯೂ ಸೂರ್ಯನನ್ನು ದೀಪವಾಗಿಯೂ ಮಾಡಿರುವನೆಂಬುದನ್ನು.

وَجَعَلَ الْقَمَرَ فِيهِنَّ نُورًا وَجَعَلَ الشَّمْسَ سِرَاجًا ﴿١٦﴾

17. ಅಲ್ಲಾಹನು ನಿಮ್ಮನ್ನು ಭೂಮಿಯಿಂದ ವಿಚಿತ್ರ ರೀತಿಯಲ್ಲಿ ಬೆಳೆಸಿದನು-[7]

وَاللَّهُ أَنْبَتَكُمْ مِنَ الْأَرْضِ نَبَاتًا ﴿١٧﴾

18. ಮುಂದೆ ಅವನು ನಿಮ್ಮನ್ನು ಪುನಃ ಇದೇ ಭೂಮಿಗೆ ಮರಳಿಸುವನು ಮತ್ತು ಇದರಿಂದ ಒಮ್ಮೆಲೇ ನಿಮ್ಮನ್ನು ಹೊರತೆಗೆಯುವನು.

ثُمَّ يُعِيدُكُمْ فِيهَا وَيُخْرِجُكُمْ إِخْرَاجًا ﴿١٨﴾

19. ಮತ್ತು ಅಲ್ಲಾಹನು ಭೂಮಿಯನ್ನು ನಿಮಗಾಗಿ ಹಾಸುಗೆಯನ್ನಾಗಿ ಮಾಡಿದನು-

وَاللَّهُ جَعَلَ لَكُمُ الْأَرْضَ بِسَاطًا ﴿١٩﴾

20. ನೀವು ಇದರಲ್ಲಿ ವಿಶಾಲವಾದ ಮಾರ್ಗಗಳಲ್ಲಿ ನಡೆಯುವಂತಾಗಲು."

لِتَسْلُكُوا مِنْهَا سُبُلًا فِجَاجًا ﴿٢٠﴾

ع

21. ನೂಹರು ಹೇಳಿದರು- "ನನ್ನ ಪ್ರಭೂ, ಇವರು ನನ್ನ ಮಾತನ್ನು ತಿರಸ್ಕರಿಸಿದರು ಮತ್ತು ಸಂಪತ್ತು ಹಾಗೂ ಸಂತಾನಗಳನ್ನು ಪಡೆದು ಇನ್ನಷ್ಟು ನಷ್ಟಕ್ಕೊಳಗಾಗಿರುವವರನ್ನು (ಸರದಾರರನ್ನು) ಅನುಸರಿಸಿದರು.

قَالَ نُوحٌ رَبِّ إِنَّهُمْ عَصَوْنِي وَاتَّبَعُوا مَنْ لَمْ يَزِدْهُ مَالُهُ وَوَلَدُهُ إِلَّا خَسَارًا ﴿٢١﴾

22. ಇವರು ಬಹುದೊಡ್ಡ ಮೋಸದ ಜಾಲವನ್ನು ಹರಡಿಟ್ಟಿದ್ದಾರೆ.

وَمَكَرُوا مَكْرًا كُبَّارًا ﴿٢٢﴾

23. ಇವರು, "ಎಷ್ಟು ಮಾತ್ರಕ್ಕೂ ನಿಮ್ಮ ಆರಾಧ್ಯರನ್ನು ತ್ಯಜಿಸಬೇಡಿರಿ. ವದ್ದ್, ಸುವಾಅ್, ಯಗೂಸ್, ಯಊಕ್ ಮತ್ತು ನಸ್ರ್‌ಗಳನ್ನು ಬಿಡಬೇಡಿರಿ"- ಎಂದು ಹೇಳಿದರು.[8]

وَقَالُوا لَا تَذَرُنَّ آلِهَتَكُمْ وَلَا تَذَرُنَّ وَدًّا وَلَا سُوَاعًا وَلَا يَغُوثَ وَيَعُوقَ وَنَسْرًا ﴿٢٣﴾

6. ಅರ್ಥಾತ್- ಸೃಷ್ಟಿಯ ವಿವಿಧ ಹಂತ ಮತ್ತು ಸ್ವರೂಪಗಳ ಮೂಲಕ ದಾಟಿಸಿ ನಿಮ್ಮನ್ನು ಈಗಿನ ಸ್ಥಿತಿಗೆ ತಂದಿದ್ದಾನೆ.

7. ಇಲ್ಲಿ ಭೂಮಿಯ ಅಂಶಗಳಿಂದ ಮಾನವನನ್ನು ಸೃಷ್ಟಿಸಿರುವುದನ್ನು ಸಸ್ಯಗಳ ಉಗಮಕ್ಕೆ ಹೋಲಿಸಲಾಗಿದೆ. ಯಾವ ರೀತಿ ಸಸ್ಯಗಳೇ ಇಲ್ಲದಿದ್ದ ಈ ಭೂಮುಖದಲ್ಲಿ ಅಲ್ಲಾಹನು ಅದನ್ನು ಬೆಳೆಸಿದನೋ ಅದೇ ರೀತಿ ಭೂಮಿಯಲ್ಲಿ ಮಾನವ ಅಸ್ತಿತ್ವವೇ ಇಲ್ಲದಿದ್ದ ಒಂದು ಕಾಲವಿತ್ತು. ಅನಂತರ ಅಲ್ಲಾಹನು ಇಲ್ಲಿ ಮಾನವನ ಕೃಷಿ ಮಾಡಿದನು.

8. ಇಲ್ಲಿ ನೂಹ್‌ರ(ಅ) ಸಮುದಾಯದ ಆರಾಧ್ಯರುಗಳ ಪೈಕಿ, ತದನಂತರ ಅರೇಬಿಯಾದ ನಿವಾಸಿಗಳೂ ಪೂಜಿಸಲಾರಂಭಿಸಿದ್ದ ಆರಾಧ್ಯರುಗಳ ಹೆಸರೆತ್ತಲಾಗಿದೆ. ಇಸ್ಲಾಮಿನ ಆರಂಭದ ವೇಳೆ ಅಲ್ಲಲ್ಲಿ ಅವುಗಳ ಮಂದಿರಗಳಿದ್ದುವು.

24. ಇವರು ಅನೇಕ ಮಂದಿಯನ್ನು ದಾರಿಗೆಡಿಸಿದ್ದಾರೆ ಮತ್ತು ನೀನೂ ಈ ಅಕ್ರಮಿಗಳಿಗೆ ಪಥಭ್ರಷ್ಟತೆಯ ವಿನಾ ಇನ್ನಾವ ವಿಷಯ ದಲ್ಲಿಯೂ ಅಭಿವೃದ್ಧಿ ನೀಡಬೇಡ."[9]

وَقَدْ أَضَلُّوا كَثِيرًا ۖ وَلَا تَزِدِ
الظَّالِمِينَ إِلَّا ضَلَالًا ﴿٢٤﴾

25. ತಮ್ಮ ಅಪರಾಧಗಳ ಕಾರಣದಿಂದಾಗಿಯೇ ಅವರು ಮುಳುಗಿಸಲ್ಪಟ್ಟರು ಮತ್ತು ಅಗ್ನಿಗೆ ತಳ್ಳಲ್ಪಟ್ಟರು. ಅನಂತರ ಅವರಿಗೆ, ತಮ್ಮನ್ನು ಅಲ್ಲಾಹನಿಂದ ರಕ್ಷಿಸಬಲ್ಲ ಸಹಾಯಕನಾರೂ ಸಿಗಲಿಲ್ಲ.

مِّمَّا خَطِيئَاتِهِمْ أُغْرِقُوا فَأُدْخِلُوا
نَارًا فَلَمْ يَجِدُوا لَهُم مِّن دُونِ
اللَّهِ أَنصَارًا ﴿٢٥﴾

26. ಮತ್ತು ನೂಹರು ಹೀಗೆಂದರು- "ನನ್ನ ಪ್ರಭೂ, ಈ ಸತ್ಯನಿಷೇಧಿಗಳ ಪೈಕಿ ಯಾರನ್ನೂ ಭೂಮಿಯ ಮೇಲೆ ನೆಲೆಸಲು ಬಿಡಬೇಡ.

وَقَالَ نُوحٌ رَّبِّ لَا تَذَرْ عَلَى الْأَرْضِ
مِنَ الْكَافِرِينَ دَيَّارًا ﴿٢٦﴾

27. ನೀನು ಇವರನ್ನು ಹಾಗೆ ಬಿಟ್ಟರೆ, ಇವರು ನಿನ್ನ ದಾಸರನ್ನು ದಾರಿ ಗೆಡಿಸುವರು. ಇವರ ಸಂತತಿಯಲ್ಲಿ ಹುಟ್ಟುವ ಪ್ರತಿಯೊಬ್ಬನೂ ದುರಾಚಾರಿ ಮತ್ತು ಘೋರ ಸತ್ಯನಿಷೇಧಿಯೇ ಆಗುವನು.

إِنَّكَ إِن تَذَرْهُمْ يُضِلُّوا عِبَادَكَ
وَلَا يَلِدُوا إِلَّا فَاجِرًا كَفَّارًا ﴿٢٧﴾

28. ನನ್ನ ಪ್ರಭೂ, ನನ್ನನ್ನು, ನನ್ನ ಮಾತಾಪಿತರನ್ನು, ಸತ್ಯವಿಶ್ವಾಸಿಯಾಗಿ ನನ್ನ ಮನೆಗೆ ಪ್ರವೇಶಿಸಿದ ಪ್ರತಿಯೊಬ್ಬನನ್ನು ಮತ್ತು ಎಲ್ಲ ಸತ್ಯ ವಿಶ್ವಾಸಿ ಸ್ತ್ರೀ-ಪುರುಷರನ್ನು ಕ್ಷಮಿಸಿಬಿಡು ಮತ್ತು ಅಕ್ರಮಿಗಳಿಗೆ ವಿನಾಶದ ಹೊರತು ಇನ್ನೇನನ್ನೂ ವೃದ್ಧಿಸಬೇಡ".

رَّبِّ اغْفِرْ لِي وَلِوَالِدَيَّ وَلِمَن
دَخَلَ بَيْتِيَ مُؤْمِنًا وَلِلْمُؤْمِنِينَ
وَالْمُؤْمِنَاتِ وَلَا تَزِدِ الظَّالِمِينَ إِلَّا تَبَارًا ﴿٢٨﴾

---

9. ಹ. ನೂಹ್(ಅ) ಅಸಹನೆಯಿಂದ ಈ ಶಾಪ ಹಾಕಿರಲಿಲ್ಲ. ನೂರಾರು ವರ್ಷಗಳ ಕಾಲ ಸಂದೇಶ ಪ್ರಚಾರ ಮಾಡಿ ತಮ್ಮ ಸಮುದಾಯದಿಂದ ಸಂಪೂರ್ಣ ಬೇಸತ್ತು ಹೋದ ಬಳಿಕ ಅವರ ಬಾಯಿಯಿಂದ ಈ ಶಾಪ ಹೊರಟಿತ್ತು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಸಂದೇಶವಾಹಕರೇ, ಹೇಳಿರಿ- ನನ್ನ ಕಡೆಗೆ 'ದಿವ್ಯವಾಣಿ' ಮಾಡಲಾಗಿದೆ (ಏನೆಂದರೆ)- ಯಕ್ಷಗಳ ಒಂದು ತಂಡವು ಶ್ರದ್ಧೆಯಿಂದ ಆಲಿಸಿತು.[1] ತರುವಾಯ (ತನ್ನ ಜನಾಂಗದ ಬಳಿಗೆ ಹೋಗಿ) ಹೀಗೆ ಹೇಳಿತು- "ನಾವು ಒಂದು ಅತ್ಯದ್ಭುತ ಕುರ್ಆನನ್ನು ಆಲಿಸಿದ್ದೇವೆ.

قُلْ اُوْحِيَ اِلَيَّ اَنَّهُ اسْتَمَعَ نَفَرٌ مِّنَ الْجِنِّ فَقَالُوْٓا اِنَّا سَمِعْنَا قُرْاٰنًا عَجَبًا ①

2. ಅದು ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ಮಾಡುತ್ತದೆ. ಆದುದರಿಂದ ನಾವು ಅದರ ಮೇಲೆ ವಿಶ್ವಾಸವಿರಿಸಿದೆವು ಮತ್ತು ನಾವಿನ್ನು ಎಷ್ಟು ಮಾತ್ರಕ್ಕೂ ನಮ್ಮ ಪ್ರಭುವಿನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡಲಾರೆವು."

يَّهْدِيْٓ اِلَى الرُّشْدِ فَاٰمَنَّا بِهٖ ؕ وَلَنْ نُّشْرِكَ بِرَبِّنَآ اَحَدًا ②

3. ಅಲ್ಲದೆ, "ನಮ್ಮ ಪ್ರಭುವಿನ ಪ್ರತಿಷ್ಠೆಯು ಅತ್ಯುನ್ನತವಾಗಿದೆ. ಅವನು ಯಾರನ್ನೂ ತನ್ನ ಪತ್ನಿ ಅಥವಾ ಪುತ್ರನಾಗಿ ಮಾಡಿಕೊಂಡಿಲ್ಲ-"

وَّاَنَّهٗ تَعٰلٰى جَدُّ رَبِّنَا مَا اتَّخَذَ صَاحِبَةً وَّلَا وَلَدًا ③

4. ಅಲ್ಲದೆ, "ನಮ್ಮಲ್ಲಿನ ತಿಳಿಗೇಡಿಗಳು[2] ಅಲ್ಲಾಹನ ವಿಷಯದಲ್ಲಿ ಘೋರ ಅಸತ್ಯವನ್ನು ಹೇಳುತ್ತಿರುತ್ತಾರೆ."

وَّاَنَّهٗ كَانَ يَقُوْلُ سَفِيْهُنَا عَلَى اللّٰهِ شَطَطًا ④

---

1. ಇದರಿಂದ ವ್ಯಕ್ತವಾಗುವುದೇನೆಂದರೆ, ಆ ಸಂದರ್ಭದಲ್ಲಿ ಪ್ರವಾದಿವರ್ಯರಿಗೆ(ಸ) ಜಿನ್ನ್(ಯಕ್ಷ)ಗಳು ಕಾಣಿಸುತ್ತಿರಲಿಲ್ಲ. ಅವರು ಕುರ್ಆನ್ ಕೇಳುತ್ತಿದ್ದರೆಂದೂ ಅವರಿಗೆ ತಿಳಿದಿರಲಿಲ್ಲ. ಅನಂತರ ದಿವ್ಯವಾಣಿಯ ಮೂಲಕ ಅಲ್ಲಾಹನು ಅವರಿಗೆ ಈ ಘಟನೆಯ ಸುದ್ದಿ ತಲುಪಿಸಿದನು. ಹ.ಅಬ್ದುಲ್ಲಾ ಬಿನ್ ಅಬ್ಬಾಸ್ ಕೂಡ ಈ ಘಟನೆಯ ಬಗ್ಗೆ ಸ್ಪಷ್ಟೀಕರಣ ನೀಡುತ್ತಾ ಹೀಗೆನ್ನುತ್ತಾರೆ, "ಪ್ರವಾದಿವರ್ಯರು(ಸ) ಜಿನ್ನ್‌ಗಳ ಮುಂದೆ ಕುರ್ಆನ್ ಓದಿರಲಿಲ್ಲ ಮತ್ತು ಅವರನ್ನು ನೋಡಿರಲಿಲ್ಲ" (ಮುಸ್ಲಿಮ್, ತಿರ್ಮಿದಿ, ಮುಸ್ನದ್ ಅಹ್ಮದ್, ಇಬ್ನ್‌ಜರೀರ್)
2. ಮೂಲದಲ್ಲಿ 'ಸಫೀಹುನಾ' ಎಂಬ ಪದ ಪ್ರಯೋಗವಾಗಿದೆ. ಈ ಪದವನ್ನು ಒಬ್ಬ ವ್ಯಕ್ತಿಗೂ ಅಂತೆಯೇ ಒಂದು ಸಮೂಹಕ್ಕೂ ಪ್ರಯೋಗಿಸಬಹುದಾಗಿದೆ. ಇದನ್ನು ತಿಳಿಗೇಡಿ ವ್ಯಕ್ತಿ ಎಂದು ಅರ್ಥೈಸುವುದಾದರೆ ಈ ಪದ 'ಇಬ್ಲೀಸ್'ಗೆ ಅನ್ವಯವಾಗುವುದು. ಇದನ್ನು ಒಂದು ಸಮೂಹ ಎಂದು ಕಲ್ಪಿಸುವುದಾದರೆ ಜಿನ್ನ್‌ಗಳ ಪೈಕಿಯ ಮೂರ್ಖ ಮತ್ತು ಬುದ್ಧಿಹೀನರಾದ ಅನೇಕರು ಈ ಮಾತು ಹೇಳುತ್ತಿದ್ದರು ಎಂದಾಗುತ್ತದೆ.

5. ಅಲ್ಲದೆ, "ಮಾನವರು ಮತ್ತು ಯಕ್ಷಗಳು ಅಲ್ಲಾಹನ ವಿಷಯದಲ್ಲಿ ಎಂದೂ ಸುಳ್ಳು ಹೇಳಲಾರರೆಂದು ನಾವು ಭಾವಿಸಿಕೊಂಡಿದ್ದೆವು."

وَّاَنَّا ظَنَنَّآ اَنْ لَّنْ تَقُوْلَ الْاِنْسُ وَالْجِنُّ عَلَى اللّٰهِ كَذِبًا ﴿۵﴾

6. ಅಲ್ಲದೆ, "ಮಾನವರ ಪೈಕಿ ಕೆಲವರು ಯಕ್ಷಗಳ ಪೈಕಿ ಕೆಲವರ ಅಭಯ ಯಾಚಿಸುತ್ತಿದ್ದರು. ಹೀಗೆ ಅವರು ಯಕ್ಷಗಳ ಅಹಂಕಾರ ವನ್ನು ಇನ್ನಷ್ಟು ಹೆಚ್ಚಿಸಿದರು."

وَّاَنَّهٗ كَانَ رِجَالٌ مِّنَ الْاِنْسِ يَعُوْذُوْنَ بِرِجَالٍ مِّنَ الْجِنِّ فَزَادُوْهُمْ رَهَقًا ﴿۶﴾

7. ಅಲ್ಲದೆ, "ಮಾನವರು ಕೂಡಾ ನಿಮ್ಮಂತೆಯೇ ಅಲ್ಲಾಹನು ಯಾರನ್ನೂ ಸಂದೇಶವಾಹಕನಾಗಿ ಕಳುಹಿಸುವುದಿಲ್ಲವೆಂದು ಭಾವಿಸಿ ಕೊಂಡಿದ್ದರು."

وَّاَنَّهُمْ ظَنُّوْا كَمَا ظَنَنْتُمْ اَنْ لَّنْ يَّبْعَثَ اللّٰهُ اَحَدًا ﴿۷﴾

8. ಅಲ್ಲದೆ, "ನಾವು ಆಕಾಶವನ್ನು ಹುಡುಕಾಡಿದಾಗ, ಅದು ಕಾವಲು ಗಾರರಿಂದ ತುಂಬಿರುವುದನ್ನು ಮತ್ತು ಉಲ್ಕೆಗಳ ಮಳೆ ಸುರಿಯುತ್ತಿರುವುದನ್ನು ಕಂಡೆವು-"

وَّاَنَّا لَمَسْنَا السَّمَآءَ فَوَجَدْنٰهَا مُلِئَتْ حَرَسًا شَدِيْدًا وَّشُهُبًا ﴿۸﴾

9. ಅಲ್ಲದೆ, "ಹಿಂದೆ ನಾವು ಕದ್ದಾಲಿಸಲಿಕ್ಕಾಗಿ ಆಕಾಶದಲ್ಲಿ ಕೂರಲು ಸ್ಥಳ ಪಡೆಯುತ್ತಿದ್ದೆವು. ಆದರೆ ಈಗ ಕದ್ದಾಲಿಸಲು ಪ್ರಯತ್ನಿಸು ವವನು ತನಗಾಗಿ ಒಂದು ಉಲ್ಕೆಯು ಹೊಂಚು ಹಾಕುತ್ತಿರುವು ದನ್ನು ಕಾಣುತ್ತಾನೆ-"

وَّاَنَّا كُنَّا نَقْعُدُ مِنْهَا مَقَاعِدَ لِلسَّمْعِ فَمَنْ يَّسْتَمِعِ الْاٰنَ يَجِدْ لَهٗ شِهَابًا رَّصَدًا ﴿۹﴾

10. ಅಲ್ಲದೆ, "ಭೂಮಿಯ ನಿವಾಸಿಗಳೊಂದಿಗೆ ಏನಾದರೂ ಕೆಟ್ಟ ವ್ಯವಹಾರ ಮಾಡಲು ನಿರ್ಧರಿಸಲಾಗಿದೆಯೋ ಅಥವಾ ಅವರ ಪ್ರಭುವು ಅವರಿಗೆ ಸನ್ಮಾರ್ಗವನ್ನು ತೋರಿಸ ಬಯಸಿರುವನೋ ಎಂಬುದು ನಮಗೆ ಅರ್ಥವಾಗುತ್ತಿರಲಿಲ್ಲ."[3]

وَّاَنَّا لَا نَدْرِيْۤ اَشَرٌّ اُرِيْدَ بِمَنْ فِي الْاَرْضِ اَمْ اَرَادَ بِهِمْ رَبُّهُمْ رَشَدًا ﴿۱۰﴾

11. ಅಲ್ಲದೆ, "ನಮ್ಮಲ್ಲಿ ಕೆಲವರು ಸಜ್ಜನರಿದ್ದಾರೆ ಮತ್ತೆ ಕೆಲವರು ಅದಕ್ಕಿಂತ ಕೆಳಮಟ್ಟದವರಾಗಿದ್ದಾರೆ. ನಾವು ನಾನಾ ಪದ್ಧತಿಗಳಲ್ಲಿ ಹರಿಹಂಚಿ ಹೋಗಿದ್ದೇವೆ-

وَّاَنَّا مِنَّا الصّٰلِحُوْنَ وَمِنَّا دُوْنَ ذٰلِكَ كُنَّا طَرَآئِقَ قِدَدًا ﴿۱۱﴾

12. ಅಲ್ಲದೆ, ನಾವು ಭೂಮಿಯಲ್ಲಿಯೂ ಅಲ್ಲಾಹನನ್ನು ಸೋಲಿಸ ಲಾರೆವು ಮತ್ತು ಓಡಿ ಹೋಗಿಯೂ ಅವನನ್ನು ಸೋಲಿಸಲಾರೆವು ಎಂದು ನಾವು ತಿಳಿದು ಕೊಂಡಿದ್ದೆವು."[4]

وَّاَنَّا ظَنَنَّآ اَنْ لَّنْ نُّعْجِزَ اللّٰهَ فِي الْاَرْضِ وَلَنْ نُّعْجِزَهٗ هَرَبًا ﴿۱۲﴾

3. ಇದರಿಂದ ತಿಳಿದು ಬರುವುದೇನೆಂದರೆ ಈ ಜಿನ್ನ್‌ಗಳು ಭೂಮಿಯಲ್ಲಿ ಅಂತಹ ಯಾವ ಘಟನೆ ಸಂಭವಿಸಿದೆ, ಅದಾವ ಸುದ್ದಿಯನ್ನು ಗೌಪ್ಯವಾಗಿಡಲಿಕ್ಕಾಗಿ ಗಗನ ಲೋಕದಲ್ಲಿ ಯಾವುದೇ ವಿಷಯವನ್ನು ಕದ್ದು ಕೇಳಲು ಆಸ್ಪದವೇ ಇಲ್ಲದಂತಹ ವ್ಯವಸ್ಥೆ ಮಾಡಲಾಗಿದೆ, ಗಗನ ಲೋಕದ ಯಾವ ದಿಕ್ಕಿಗೆ ಹೋದರೂ ಯಾಕೆ ನಮ್ಮನ್ನು ಹೊಡೆದೋಡಿಸಲಾಗುತ್ತಿದೆ- ಎಂದು ಆಕಾಶದ ಈ ಸ್ವರೂಪವನ್ನು ಕಂಡು ಅವರು ಸತ್ಯವನ್ನರಸುತ್ತಾ ಹೊರಟಿದ್ದರು.

13. ಅಲ್ಲದೆ, "ನಾವು ಸನ್ಮಾರ್ಗದ ಬೋಧನೆಯನ್ನು ಕೇಳಿದಾಗ ಅದರ ಮೇಲೆ ವಿಶ್ವಾಸವಿರಿಸಿದೆವು. ಇನ್ನು ತನ್ನ ಪ್ರಭುವಿನ ಮೇಲೆ ಯಾರು ವಿಶ್ವಾಸವಿರಿಸುವನೋ ಅವನಿಗೆ ಯಾವುದೇ ಹಕ್ಕುಚ್ಯುತಿ ಅಥವಾ ಅನ್ಯಾಯದ ಭಯವಿರಲಾರದು."

وَّ اَنَّا لَمَّا سَمِعْنَا الْهُدٰۤى اٰمَنَّا بِهٖ ؕ فَمَنْ يُّؤْمِنْۢ بِرَبِّهٖ فَلَا يَخَافُ بَخْسًا وَّلَا رَهَقًا ﴿۱۳﴾

14. ಅಲ್ಲದೆ, "ನಮ್ಮಲ್ಲಿ ಕೆಲವು ಮುಸ್ಲಿಮರು (ಅಲ್ಲಾಹನಿಗೆ ವಿಧೇಯರಾದವರು) ಇದ್ದಾರೆ, ಇನ್ನು ಕೆಲವರು ಸತ್ಯದಿಂದ ವಿಮುಖರಾಗಿದ್ದಾರೆ. ಇಸ್ಲಾಮನ್ನು (ಆಜ್ಞಾಪಾಲನೆಯ ಮಾರ್ಗ ವನ್ನು) ಸ್ವೀಕರಿಸಿಕೊಂಡವರು ಮೋಕ್ಷ ಮಾರ್ಗವನ್ನು ಕಂಡು ಕೊಂಡರು-

وَّ اَنَّا مِنَّا الْمُسْلِمُوْنَ وَمِنَّا الْقٰسِطُوْنَ ؕ فَمَنْ اَسْلَمَ فَاُولٰٓئِكَ تَحَرَّوْا رَشَدًا ﴿۱۴﴾

15. ಮತ್ತು ಸತ್ಯದಿಂದ ವಿಮುಖರಾದವರು ನರಕದ ಇಂಧನ ವಾಗುವರು-"[5]

وَاَمَّا الْقٰسِطُوْنَ فَكَانُوْا لِجَهَنَّمَ حَطَبًا ﴿۱۵﴾

16. (ಸಂದೇಶವಾಹಕರೇ, ನನಗೆ ಹೀಗೆಯೂ 'ದಿವ್ಯಬೋಧನೆ' ಮಾಡ ಲಾಗಿದೆಯೆಂದು ಹೇಳಿರಿ:) ಜನರು ಸನ್ಮಾರ್ಗದಲ್ಲಿ ಸ್ಥಿರಚಿತ್ತರಾಗಿ ನಡೆಯುತ್ತಿದ್ದರೆ, ನಾವು ಅವರನ್ನು ಜಲಸಮೃದ್ಧರನ್ನಾಗಿ ಮಾಡಿ ಬಿಡುತ್ತಿದ್ದೆವು-

وَّ اَنْ لَّوِ اسْتَقَامُوْا عَلَى الطَّرِيْقَةِ لَاَسْقَيْنٰهُمْ مَّآءً غَدَقًا ﴿۱۶﴾

17. ಈ ಅನುಗ್ರಹದ ಮೂಲಕ ಅವರನ್ನು ಪರೀಕ್ಷಿಸಲಿಕ್ಕಾಗಿ. ಇನ್ನು ಯಾರು ತನ್ನ ಪ್ರಭುವಿನ ಸ್ಮರಣೆಯಿಂದ ವಿಮುಖನಾಗುವನೋ, ಅವನನ್ನು ಅವನ ಪ್ರಭುವು ಕಠಿಣ ಯಾತನೆಗೆ ಗುರಿಪಡಿಸುವನು-

لِّنَفْتِنَهُمْ فِيْهِ ؕ وَمَنْ يُّعْرِضْ عَنْ ذِكْرِ رَبِّهٖ يَسْلُكْهُ عَذَابًا صَعَدًا ﴿۱۷﴾

18. ಮತ್ತು ಮಸೀದಿಗಳು ಅಲ್ಲಾಹನಿಗಾಗಿವೆ. ಆದುದರಿಂದ ಅವುಗಳಲ್ಲಿ ಅಲ್ಲಾಹನೊಂದಿಗೆ ಇತರ ಯಾರನ್ನೂ ಪ್ರಾರ್ಥಿಸಬೇಡಿರಿ-[6]

وَّ اَنَّ الْمَسٰجِدَ لِلّٰهِ فَلَا تَدْعُوْا مَعَ اللّٰهِ اَحَدًا ﴿۱۸﴾

---

4. ಅರ್ಥಾತ್- ನಮ್ಮ ಈ ಭಾವನೆಯೇ ನಮಗೆ ಮೋಕ್ಷದ ಮಾರ್ಗ ತೋರಿತು. ನಾವು ಅಲ್ಲಾಹನ ಬಗ್ಗೆ ನಿರ್ಭಯರಾಗಿರಲಿಲ್ಲ. ಆಜ್ಞೋಲ್ಲಂಘನೆ ಮಾಡಿದರೆ ಅವನ ಹಿಡಿತದಿಂದ ರಕ್ಷಿತರಾಗಲು ಸಾಧ್ಯವಿಲ್ಲವೆಂದು ನಮಗೆ ಖಾತ್ರಿಯಿತ್ತು. ಆದ್ದರಿಂದ ಅಲ್ಲಾಹನ ವತಿಯಿಂದ ಸನ್ಮಾರ್ಗ ತೋರಲು ಬಂದ ವಾಣಿಯನ್ನು ಕೇಳಿದಾಗ, ಸತ್ಯ ಬಯಲಾದ ನಂತರವೂ, ನಮ್ಮ ಪೈಕಿಯ ಅಜ್ಞಾನಪೀಡಿತ ಜನರು ಹರಡಿಬಿಟ್ಟಿದ್ದ ವಿಶ್ವಾಸಾಚಾರಗಳಲ್ಲಿ ನೆಲೆನಿಂತಿರುವ ಭಂಡ ಧೈರ್ಯ ತೋರಲು ನಮಗೆ ಸಾಧ್ಯವಿರಲಿಲ್ಲ.
5. ಕುರ್‌ಆನಿನ ಪ್ರಕಾರ ಯಕ್ಷಗಳು ಸ್ವತಃ ಅಗ್ನಿಯಿಂದ ಸೃಷ್ಟಿಸಲ್ಪಟ್ಟವರು. ಹಾಗಿರುವಾಗ ನರಕಾಗ್ನಿ ಅವರನ್ನು ಯಾವ ರೀತಿ ಬಾಧಿಸೀತು ಎಂಬ ಪ್ರಶ್ನೆ ಇಲ್ಲಿ ಉದ್ಭವಿಸಬಹುದು. ಇದಕ್ಕೆ ಉತ್ತರವೇನೆಂದರೆ ಪವಿತ್ರ ಕುರ್‌ಆನಿನ ಪ್ರಕಾರ ಮಾನವನೂ ಮಣ್ಣಿನಿಂದಲೇ ಸೃಷ್ಟಿಸಲ್ಪಟ್ಟಿದ್ದಾನೆ, ಹಾಗಿರುವಾಗ ಮಣ್ಣಿನ ಹೆಂಟೆಯ ಮೂಲಕ ಹೊಡೆದರೆ ಅವನಿಗೆ ನೋವುಂಟಾಗುವುದು ಹೇಗೆ?
6. ಅರ್ಥಾತ್- ಅಲ್ಲಾಹನ ಜತೆ ಬೇರೆ ಯಾರ ದಾಸ್ಯ-ಆರಾಧನೆಯನ್ನೂ ಮಾಡದಿರಿ. ಬೇರೆ ಯಾರಲ್ಲಿಯೂ ಪ್ರಾರ್ಥಿಸದಿರಿ. ಸಹಾಯಕ್ಕಾಗಿ ಬೇರೆ ಯಾರನ್ನೂ ಕೂಗಿ ಕರೆಯದಿರಿ.

19. ಅಲ್ಲಾಹನ ದಾಸನು ಅವನನ್ನು ಪ್ರಾರ್ಥಿಸಲಿಕ್ಕಾಗಿ ನಿಂತಾಗ, ಜನರು ಅವನ ಮೇಲೆ ಮುಗಿಬೀಳಲು ಸಿದ್ಧರಾಗಿ ಬಿಟ್ಟರು.

وَّاَنَّهٗ لَمَّا قَامَ عَبْدُ اللّٰهِ يَدْعُوْهُ كَادُوْا يَكُوْنُوْنَ عَلَيْهِ لِبَدًا ١٩

20. ಸಂದೇಶವಾಹಕರೇ, ಹೇಳಿರಿ- "ನಾನಂತು ನನ್ನ ಪ್ರಭುವನ್ನು ಪ್ರಾರ್ಥಿಸುತ್ತೇನೆ ಮತ್ತು ಅವನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡುವುದಿಲ್ಲ."

قُلْ اِنَّمَآ اَدْعُوْا رَبِّيْ وَلَآ اُشْرِكُ بِهٖٓ اَحَدًا ٢٠

21. ಹೇಳಿರಿ- "ನಿಮಗೆ ಯಾವುದೇ ಹಾನಿ ಮಾಡಲಿಕ್ಕಾಗಲಿ, ಯಾವುದೇ ಲಾಭವನ್ನುಂಟು ಮಾಡಲಿಕ್ಕಾಗಲಿ ನನಗೆ ಅಧಿಕಾರವಿಲ್ಲ."

قُلْ اِنِّيْ لَآ اَمْلِكُ لَكُمْ ضَرًّا وَّلَا رَشَدًا ٢١

22. ಹೇಳಿರಿ- "ನನ್ನನ್ನು ಅಲ್ಲಾಹನ ಹಿಡಿತದಿಂದ ಯಾರೂ ರಕ್ಷಿಸಲಾರರು ಮತ್ತು ನನಗೆ ಅವನ ಸನ್ನಿಧಿಯ ಹೊರತು ಬೇರೆಲ್ಲೂ ಅಭಯಾಶ್ರಯವೂ ಸಿಗಲಾರದು-

قُلْ اِنِّيْ لَنْ يُّجِيْرَنِيْ مِنَ اللّٰهِ اَحَدٌ ۙ وَّلَنْ اَجِدَ مِنْ دُوْنِهٖ مُلْتَحَدًا ٢٢

23. ಅಲ್ಲಾಹನ ವಚನ ಮತ್ತು ಅವನ ಸಂದೇಶಗಳನ್ನು ತಲುಪಿಸುವ ಹೊರತು ಬೇರಾವ ಕರ್ತವ್ಯವೂ ನನ್ನ ಮೇಲಿಲ್ಲ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಆಜ್ಞೆಗಳನ್ನು ಉಲ್ಲಂಘಿಸುವವರಿಗಾಗಿ ನರಕಾಗ್ನಿ ಇದೆ ಮತ್ತು ಇಂತಹವರು ಅದರಲ್ಲಿ ಸದಾಕಾಲ ಬಿದ್ದಿರುವರು."

اِلَّا بَلٰغًا مِّنَ اللّٰهِ وَرِسٰلٰتِهٖ ۭ وَمَنْ يَّعْصِ اللّٰهَ وَرَسُوْلَهٗ فَاِنَّ لَهٗ نَارَ جَهَنَّمَ خٰلِدِيْنَ فِيْهَآ اَبَدًا ٢٣

24. ಇವರಿಗೆ ವಾಗ್ದಾನ ಮಾಡಲಾಗುತ್ತಿರುವುದನ್ನು ಕಣ್ಣಾರೆ ಕಂಡುಕೊಳ್ಳುವ ವರೆಗೂ (ಇವರು ತಮ್ಮ ಈ ನಿಲುಮೆಯನ್ನು ಕೈ ಬಿಡಲಾರರು) ಆಗ, ಯಾರ ಸಹಾಯಕರು ದುರ್ಬಲರು ಮತ್ತು ಯಾರ ಕೂಟವು ಅಲ್ಪಸಂಖ್ಯೆಯಲ್ಲಿದೆ ಎಂಬುದು ಅವರಿಗೆ ತಿಳಿದು ಬಿಡುವುದು.[7]

حَتّٰٓي اِذَا رَاَوْا مَا يُوْعَدُوْنَ فَسَيَعْلَمُوْنَ مَنْ اَضْعَفُ نَاصِرًا وَّاَقَلُّ عَدَدًا ٢٤

25. ಹೇಳಿರಿ- "ನಿಮಗೆ ಏನನ್ನು ವಾಗ್ದಾನ ಮಾಡಲಾಗುತ್ತಿದೆಯೋ ಅದು ಸಮೀಪವಿದೆಯೋ ಅಥವಾ ನನ್ನ ಪ್ರಭು ಅದಕ್ಕಾಗಿ ದೀರ್ಘವಾದ ಅವಧಿಯನ್ನೇನಾದರೂ ನಿಶ್ಚಯಿಸುವನೋ ಎಂಬುದು ನನಗೆ ತಿಳಿದಿಲ್ಲ.

قُلْ اِنْ اَدْرِيْٓ اَقَرِيْبٌ مَّا تُوْعَدُوْنَ اَمْ يَجْعَلُ لَهٗ رَبِّيْٓ اَمَدًا ٢٥

26. ಅವನು ಅದೃಶ್ಯಜ್ಞಾನಿಯಾಗಿದ್ದಾನೆ. ತನ್ನ ಅದೃಶ್ಯ ಜ್ಞಾನವನ್ನು ಅವನು ಯಾರಿಗೂ ತಿಳಿಯಪಡಿಸುವುದಿಲ್ಲ-

عٰلِمُ الْغَيْبِ فَلَا يُظْهِرُ عَلٰي غَيْبِهٖٓ اَحَدًا ٢٦

7. ಪ್ರವಾದಿವರ್ಯರು(ಸ) ಅಲ್ಲಾಹನ ಕಡೆಗೆ ಕರೆದಾಗ ಅವರ ಮೇಲೆ ಮುಗಿ ಬೀಳುತ್ತಿದ್ದ ಆ ಕಾಲದ ಕುರೈಶ್‌ನ ಜನರು, ನಮ್ಮದು ಅತ್ಯಂತ ಪ್ರಬಲವಾದ ಕೂಟ ಎಂಬ ಗುಮಾನಿಗೆ ಒಳಗಾಗಿದ್ದರು. ಪ್ರವಾದಿವರ್ಯರ(ಸ) ಬಳಿ ಹಿಡಿಯಷ್ಟು ಜನರು ಮಾತ್ರ ಇದ್ದಾರೆ. ಆದ್ದರಿಂದ ನಾವು ಅವರನ್ನು ಸುಲಭವಾಗಿ ಸೋಲಿಸಿ ಬಿಡುವೆವು ಎಂದು ಅವರು ಭಾವಿಸಿದ್ದರು.

27. (ಅದೃಶ್ಯಜ್ಞಾನವನ್ನು ನೀಡಲಿಕ್ಕಾಗಿ) ತಾನು ಮೆಚ್ಚಿಕೊಂಡ, ತನ್ನ ಸಂದೇಶವಾಹಕನ ಹೊರತು.[8] ಆಗ ಅವನ(ಸಂದೇಶವಾಹಕನ) ಮುಂದೆಯೂ ಹಿಂದೆಯೂ ಕಾವಲುಗಾರರನ್ನು ನೇಮಿಸಿ ಬಿಡುತ್ತಾನೆ-[9]

إِلَّا مَنِ ارْتَضَىٰ مِن رَّسُولٍ فَإِنَّهُ يَسْلُكُ مِنۢ بَيْنِ يَدَيْهِ وَمِنْ خَلْفِهِۦ رَصَدًا ﴿٢٧﴾

28. ಅವರು ತಮ್ಮ ಪ್ರಭುವಿನ ಸಂದೇಶಗಳನ್ನು ತಲುಪಿಸಿರುವರೆಂಬುದನ್ನು ಅವನು ತಿಳಿಯಲಿಕ್ಕಾಗಿ.[10] ಅವನು ಅವರ ಪರಿಸರವನ್ನು ಸಂಪೂರ್ಣವಾಗಿ ಸುತ್ತುಗಟ್ಟಿರುತ್ತಾನೆ ಮತ್ತು ಪ್ರತಿಯೊಂದು ವಸ್ತುವನ್ನೂ ಅವನು ಲೆಕ್ಕ ಮಾಡಿಟ್ಟಿರುತ್ತಾನೆ."[11]

لِّيَعْلَمَ أَن قَدْ أَبْلَغُوا۟ رِسَٰلَٰتِ رَبِّهِمْ وَأَحَاطَ بِمَا لَدَيْهِمْ وَأَحْصَىٰ كُلَّ شَىْءٍ عَدَدًۢا ﴿٢٨﴾

---

8. ಅರ್ಥಾತ್- ಪ್ರವಾದಿ ಸ್ವತಃ ಪರೋಕ್ಷದ ಜ್ಞಾನಿಯಾಗಿರುವುದಿಲ್ಲ. ಬದಲಾಗಿ ಅಲ್ಲಾಹನು ಅವರನ್ನು ಪ್ರವಾದಿತ್ವಕ್ಕೆ ಆಯ್ಕೆ ಮಾಡಿದಾಗ ಪರೋಕ್ಷದ ವಾಸ್ತವಿಕತೆಗಳ ಪೈಕಿ ತಾನಿಚ್ಛಿಸುವುದರ ಜ್ಞಾನವನ್ನು ಅವರಿಗೆ ದಯಪಾಲಿಸುತ್ತಾನೆ.
9. ಕಾವಲುಗಾರರು ಎಂದರೆ ದೇವಚರರಾಗಿದ್ದಾರೆ. ಅರ್ಥಾತ್ ಪರೋಕ್ಷದ ಜ್ಞಾನವನ್ನು ನೀಡುವಾಗ ಅದರ ಸಂರಕ್ಷಣೆ ಮಾಡಲಿಕ್ಕಾಗಿ ಅಲ್ಲಾಹನು ಎಲ್ಲಾ ಕಡೆಗಳಲ್ಲೂ ದೇವಚರರನ್ನು ನೇಮಕ ಗೊಳಿಸುತ್ತಾನೆ. ಆ ಜ್ಞಾನ ಅತ್ಯಂತ ಸುರಕ್ಷಿತವಾಗಿ ಪ್ರವಾದಿಗೆ ತಲುಪಲಿ ಮತ್ತು ಅದರಲ್ಲಿ ಯಾವುದೇ ರೀತಿಯ ಸೇರ್ಪಡೆಯಾಗದಿರಲಿ ಎಂಬುದೇ ಇದರ ಉದ್ದೇಶ.
10. ಪ್ರವಾದಿತ್ವದ ಕರ್ತವ್ಯವನ್ನು ನಿರ್ವಹಿಸಲಿಕ್ಕಾಗಿ ಅಪೇಕ್ಷಣೀಯವಾದ ಪರೋಕ್ಷದ ಜ್ಞಾನವನ್ನು ಪ್ರವಾದಿಗಳಿಗೆ ನೀಡಲಾಗುತ್ತದೆ. ಆ ಜ್ಞಾನ ಪ್ರವಾದಿಗಳಿಗೆ ಯಥಾವತ್ತಾಗಿ ತಲಪಿದೆಯೇ ಎಂಬ ಬಗ್ಗೆ ದೇವಚರರು ಮೇಲ್ನೋಟವನ್ನೂ ವಹಿಸುತ್ತಾರೆ. ಹಾಗೆಯೇ ಪ್ರವಾದಿಗಳು ದೇವನ ಸಂದೇಶವನ್ನು ಅವನ ದಾಸನ ಕಡೆಗೆ ಯಥಾರೂಪದಲ್ಲಿ ತಲುಪಿಸಿದ್ದಾರೆಯೇ ಎಂದೂ ನೋಡುತ್ತಾರೆಂದು ಇದರಿಂದ ವ್ಯಕ್ತವಾಗುತ್ತದೆ.
11. ಅರ್ಥಾತ್- ಪ್ರವಾದಿಗಳ ಮತ್ತು ದೇವಚರರ ಮೇಲೆ ಅಲ್ಲಾಹನ ಸಾಮರ್ಥ್ಯ ಎಷ್ಟು ಆವರಿಸಿ ಕೊಂಡಿರುತ್ತದೆ ಎಂದರೆ ಅವರು ಕೂದಲೆಳೆಯಷ್ಟಾದರೂ ಅವನಿಚ್ಛೆಯಿಂದ ಸರಿದರೆ ತಕ್ಷಣ ಅವನ ಹಿಡಿತಕ್ಕೆ ಒಳಗಾಗುತ್ತಾರೆ. ಅಲ್ಲಾಹನು ಕಳುಹಿಸುವ ಸಂದೇಶದ ಪ್ರತಿಯೊಂದು ಪದವೂ ಎಣಿಸಲ್ಪಟ್ಟಿದೆ. ಆದ್ದರಿಂದ ಅದರಲ್ಲಿ ಒಂದು ಪದದ ವ್ಯತ್ಯಾಸ ಮಾಡಲಿಕ್ಕೂ ಪ್ರವಾದಿಗಳಿಗೆ ಅಥವಾ ದೇವಚರರಿಗೆ ಸಾಧ್ಯವಿಲ್ಲ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹೊದ್ದು ಮಲಗುವವರೇ,

يٰٓاَيُّهَا الْمُزَّمِّلُ ۙ١

2. ಸ್ವಲ್ಪ ಹೊತ್ತು ಹೊರತುಪಡಿಸಿ ರಾತ್ರಿ ವೇಳೆ ನಮಾಝಿಗಾಗಿ ನಿಲ್ಲಿರಿ-

قُمِ الَّيْلَ اِلَّا قَلِيْلًا ۙ٢

3. ರಾತ್ರಿಯ ಅರ್ಧಭಾಗ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಮಾಡಿಕೊಳ್ಳಿರಿ-

نِّصْفَهٗٓ اَوِ انْقُصْ مِنْهُ قَلِيْلًا ۙ٣

4. ಅಥವಾ ಅದಕ್ಕಿಂತ ತುಸು ಹೆಚ್ಚಿಸಿಕೊಳ್ಳಿರಿ ಮತ್ತು ಕುರ್‌ಆನನ್ನು ಸರಿಯಾಗಿ, ತಡೆ ತಡೆದು ಪಠಿಸಿರಿ.

اَوْ زِدْ عَلَيْهِ وَرَتِّلِ الْقُرْاٰنَ تَرْتِيْلًا ۗ٤

5. ನಾವು ನಿಮ್ಮ ಮೇಲೆ ಒಂದು ಘನವಾದ ವಾಣಿಯನ್ನು ಅವತೀರ್ಣಗೊಳಿಸಲಿದ್ದೇವೆ.

اِنَّا سَنُلْقِيْ عَلَيْكَ قَوْلًا ثَقِيْلًا ٥

6. ವಾಸ್ತವದಲ್ಲಿ ರಾತ್ರಿಕಾಲದ ಏಳುವಿಕೆಯು ಆತ್ಮ ನಿಯಂತ್ರಣದ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿದೆ ಮತ್ತು ಕುರ್‌ಆನನ್ನು ಸರಿ ಯಾಗಿ ಪಠಿಸುವುದಕ್ಕೆ ಹೆಚ್ಚು ಯೋಗ್ಯವಾಗಿದೆ.

اِنَّ نَاشِئَةَ الَّيْلِ هِيَ اَشَدُّ وَطْاً وَّاَقْوَمُ قِيْلًا ۗ٦

7. ಹಗಲು ಹೊತ್ತಿನಲ್ಲಂತು ನಿಮಗೆ ಅನೇಕ ಕೆಲಸ ಕಾರ್ಯಗಳಿರುತ್ತವೆ.

اِنَّ لَكَ فِي النَّهَارِ سَبْحًا طَوِيْلًا ۗ٧

8. ನಿಮ್ಮ ಪ್ರಭುವಿನ ನಾಮವನ್ನು ಸ್ಮರಿಸುತ್ತಲಿರಿ ಮತ್ತು ಎಲ್ಲರಿಂದಲೂ ಬೇರ್ಪಟ್ಟು ಕೇವಲ ಅವನಿಗೆ ಸೇರಿದವರಾಗಿರಿ.

وَاذْكُرِ اسْمَ رَبِّكَ وَتَبَتَّلْ اِلَيْهِ تَبْتِيْلًا ۗ٨

9. ಅವನು ಪೂರ್ವ-ಪಶ್ಚಿಮಗಳ ಒಡೆಯನು. ಅವನ ಹೊರತು ಇನ್ನಾವ ಆರಾಧ್ಯನೂ ಇಲ್ಲ. ಆದುದರಿಂದ ಅವನನ್ನೇ ನಿಮ್ಮ ಕಾರ್ಯಸಾಧಕನಾಗಿ ಮಾಡಿಕೊಳ್ಳಿರಿ.[1]

رَبُّ الْمَشْرِقِ وَالْمَغْرِبِ لَآ اِلٰهَ اِلَّا هُوَ فَاتَّخِذْهُ وَكِيْلًا ٩

10. ಮತ್ತು ಜನರು ಆಡುತ್ತಿರುವ ಮಾತುಗಳ ಬಗ್ಗೆ ತಾಳ್ಮೆ ವಹಿಸಿರಿ ಮತ್ತು ಸಭ್ಯ ರೀತಿಯಲ್ಲಿ ಅವರಿಂದ ಬೇರ್ಪಡಿರಿ.[2]

وَاصْبِرْ عَلَىٰ مَا يَقُولُونَ وَاهْجُرْهُمْ هَجْرًا جَمِيلًا ﴿١٠﴾

11. ಸತ್ಯವನ್ನು ತಿರಸ್ಕರಿಸುವ ಈ ಸ್ಥಿತಿವಂತರೊಂದಿಗೆ ವ್ಯವಹರಿಸುವ ಕಾರ್ಯವನ್ನು ನೀವು ನನಗೆ ಬಿಟ್ಟು ಬಿಡಿರಿ ಮತ್ತು ಇವರನ್ನು ಸ್ವಲ್ಪ ಕಾಲ ಇದೇ ಸ್ಥಿತಿಯಲ್ಲಿ ಇರಲು ಬಿಡಿರಿ.

وَذَرْنِي وَالْمُكَذِّبِينَ أُولِي النَّعْمَةِ وَمَهِّلْهُمْ قَلِيلًا ﴿١١﴾

12. ನಮ್ಮ ಬಳಿ (ಇವರಿಗಾಗಿ) ಭಾರವಾದ ಬೇಡಿಗಳಿವೆ, ಧಗಧಗಿಸುವ ಅಗ್ನಿಯಿದೆ,

إِنَّ لَدَيْنَا أَنكَالًا وَجَحِيمًا ﴿١٢﴾

13. ಗಂಟಲಲ್ಲಿ ಸಿಕ್ಕಿಕೊಳ್ಳುವಂತಹ ಭೋಜನ ಮತ್ತು ವೇದನಾಯುಕ್ತ ಯಾತನೆ ಇದೆ.

وَطَعَامًا ذَا غُصَّةٍ وَعَذَابًا أَلِيمًا ﴿١٣﴾

14. ಭೂಮಿಯೂ ಪರ್ವತಗಳೂ ನಡುಗತೊಡಗುವ ಹಾಗೂ ಪರ್ವತಗಳು ಚದುರಿಹೋದ ಮರಳ ರಾಶಿಯಂತೆ ಆಗಿ ಬಿಡುವ ಆ ದಿನ ಇದು ಸಂಭವಿಸುವುದು.

يَوْمَ تَرْجُفُ الْأَرْضُ وَالْجِبَالُ وَكَانَتِ الْجِبَالُ كَثِيبًا مَّهِيلًا ﴿١٤﴾

15. ನಾವು[3] ಫಿರ್‌ಔನನ ಕಡೆಗೆ ಒಬ್ಬ ಸಂದೇಶವಾಹಕರನ್ನು ಕಳುಹಿಸಿದ್ದಂತೆಯೇ ನಿಮ್ಮ ಮೇಲೆ ಸಾಕ್ಷಿಯಾಗಿ ಒಬ್ಬ ಸಂದೇಶವಾಹಕನನ್ನು ಕಳುಹಿಸಿರುತ್ತೇವೆ.

إِنَّا أَرْسَلْنَا إِلَيْكُمْ رَسُولًا شَاهِدًا عَلَيْكُمْ كَمَا أَرْسَلْنَا إِلَىٰ فِرْعَوْنَ رَسُولًا ﴿١٥﴾

16. ಫಿರ್‌ಔನನು ಆ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದಾಗ ನಾವು ಅವನನ್ನು ಅತ್ಯಂತ ಉಗ್ರವಾಗಿ ಹಿಡಿದು ಬಿಟ್ಟೆವು (ಎಂಬುದನ್ನು ಗಮನಿಸಿರಿ).

فَعَصَىٰ فِرْعَوْنُ الرَّسُولَ فَأَخَذْنَاهُ أَخْذًا وَبِيلًا ﴿١٦﴾

---

1. ಒಬ್ಬ ವ್ಯಕ್ತಿಯ ಮೇಲೆ ವಿಶ್ವಾಸ ತಾಳಿ ಎಲ್ಲಾ ವ್ಯವಹಾರಗಳನ್ನೂ ಅವನಿಗೊಪ್ಪಿಸಲಾದರೆ ಅವನನ್ನು ವಕೀಲ್(ಕಾರ್ಯಸಾಧಕ) ಎನ್ನಲಾಗುತ್ತದೆ. ಸರಿ ಸುಮಾರು ಇದೇ ಅರ್ಥದಲ್ಲಿ ನಮ್ಮ ಭಾಷೆಯಲ್ಲೂ 'ವಕೀಲ್' ಎಂಬ ಪದ ಬಳಕೆಯಲ್ಲಿದೆ. ಯಾರಿಗೆ ತಮ್ಮ ಮೊಕದ್ದಮೆಯನ್ನು ಒಪ್ಪಿಸಿ, ಇನ್ನು ನನಗೆ ನನ್ನ ಮೊಕದ್ದಮೆಯನ್ನು ಮುಂದುವರಿಸುವ ಅವಶ್ಯಕತೆ ತಲೆದೋರದಷ್ಟರ ಮಟ್ಟಿಗೆ ಅವನು ತನ್ನ ಪರವಾಗಿ ಹೋರಾಡುತ್ತಾನೆ ಎಂಬ ಸಂತೃಪ್ತಿ ತಾಳಲಾಗುತ್ತದೋ ಅವನನ್ನು 'ವಕೀಲ್' ಎನ್ನಲಾಗುತ್ತದೆ.
2. 'ಬೇರ್ಪಡಿರಿ' ಎಂದರೆ ಅವರನ್ನು ಬಹಿಷ್ಕರಿಸಿ ನಮ್ಮ ಧರ್ಮಪ್ರಚಾರ ಕಾರ್ಯವನ್ನು ನಿಲ್ಲಿಸಿ ಬಿಡಿರಿ ಎಂದರ್ಥವಲ್ಲ. ಬದಲಾಗಿ ಅವರೊಂದಿಗೆ ಜಗಳ ಕಾಯದಿರಿ, ಅವರ ನಿರರ್ಥಕ ವಿಷಯಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿರಿ, ಅವರ ಅಸಭ್ಯತನಗಳಿಗೆ ಉತ್ತರ ಕೊಡದಿರಿ. ಹೀಗೆ ಅವರಿಂದ ದೂರಸಿಲ್ಲುವುದು ಕೂಡ ಯಾವುದೇ ರೀತಿಯ ವ್ಯಥೆ, ಕೋಪ ಅಥವಾ ಸಿಡುಕಿನಿಂದ ಕೂಡಿರಬಾರದು. ಬದಲಾಗಿ ಸಭ್ಯ ವ್ಯಕ್ತಿಯೊಬ್ಬ ಪುಂಡ-ಪೋಕರಿಗಳ ಬಯ್ಗುಳವನ್ನು ಕೇಳಿ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ನಿರ್ಲಕ್ಷಿಸಿ ಬಿಡುವಂತೆ ನೀವೂ ಅದನ್ನು ಉಪೇಕ್ಷಿಸಬೇಕೆಂದು ಇದರ ಅರ್ಥವಾಗಿದೆ.
3. ಇಲ್ಲಿ ಪ್ರವಾದಿವರ್ಯರನ್ನು(ಸ) ಸುಳ್ಳಾಗಿಸಿ ಅವರನ್ನು ವಿರೋಧಿಸುವುದರಲ್ಲಿ ತಲ್ಲೀನರಾಗಿದ್ದ ಮಕ್ಕಾದ ಸತ್ಯನಿಷೇಧಿಗಳನ್ನು ಸಂಬೋಧಿಸಲಾಗುತ್ತಿದೆ.

فَكَيْفَ تَتَّقُونَ إِن كَفَرْتُمْ يَوْمًا يَجْعَلُ الْوِلْدَانَ شِيبًا ﴿١٧﴾ السَّمَاءُ مُنفَطِرٌ بِهِ ۚ كَانَ وَعْدُهُ مَفْعُولًا ﴿١٨﴾

17-18. ನೀವು ಸತ್ಯವನ್ನು ತಿರಸ್ಕರಿಸಿದರೆ, ಮಕ್ಕಳನ್ನು ವೃದ್ಧರಾಗಿ ಮಾಡಿ ಬಿಡುವಂತಹ ಮತ್ತು ಆಕಾಶವು ಬಿರಿದು ಹೋಗುವಷ್ಟು ಕಠಿಣವಾಗಿರುವಂತಹ ಆ ದಿನ ಹೇಗೆ ರಕ್ಷಣೆ ಹೊಂದುವಿರಿ? ಅಲ್ಲಾಹನ ವಾಗ್ದಾನವಂತು ಪೂರ್ಣಗೊಂಡೇ ತೀರುವುದು.

إِنَّ هَٰذِهِ تَذْكِرَةٌ ۖ فَمَن شَاءَ اتَّخَذَ إِلَىٰ رَبِّهِ سَبِيلًا ﴿١٩﴾

19. ಇದೊಂದು ಉಪದೇಶವಾಗಿದೆ. ಇನ್ನು ಇಷ್ಟವಿದ್ದವನು ತನ್ನ ಪ್ರಭುವಿನ ಕಡೆಗೆ ಹೋಗುವ ಮಾರ್ಗವನ್ನು ಸ್ವೀಕರಿಸಿಕೊಳ್ಳಲಿ.

إِنَّ رَبَّكَ يَعْلَمُ أَنَّكَ تَقُومُ أَدْنَىٰ مِن ثُلُثَيِ اللَّيْلِ وَنِصْفَهُ وَثُلُثَهُ وَطَائِفَةٌ مِّنَ الَّذِينَ مَعَكَ ۚ وَاللَّهُ يُقَدِّرُ اللَّيْلَ وَالنَّهَارَ ۚ عَلِمَ أَن لَّن تُحْصُوهُ فَتَابَ عَلَيْكُمْ ۖ فَاقْرَءُوا مَا تَيَسَّرَ مِنَ الْقُرْآنِ ۚ عَلِمَ أَن سَيَكُونُ مِنكُم مَّرْضَىٰ ۙ وَآخَرُونَ يَضْرِبُونَ فِي الْأَرْضِ يَبْتَغُونَ مِن فَضْلِ اللَّهِ ۙ وَآخَرُونَ يُقَاتِلُونَ فِي سَبِيلِ اللَّهِ ۖ فَاقْرَءُوا مَا تَيَسَّرَ مِنْهُ ۚ وَأَقِيمُوا الصَّلَاةَ وَآتُوا الزَّكَاةَ وَأَقْرِضُوا اللَّهَ قَرْضًا حَسَنًا ۚ وَمَا تُقَدِّمُوا لِأَنفُسِكُم مِّنْ خَيْرٍ تَجِدُوهُ عِندَ اللَّهِ هُوَ خَيْرًا وَأَعْظَمَ أَجْرًا ۚ وَاسْتَغْفِرُوا اللَّهَ ۖ إِنَّ اللَّهَ غَفُورٌ رَّحِيمٌ ﴿٢٠﴾

20. ಸಂದೇಶವಾಹಕರೇ,[4] ನೀವು ಕೆಲವೊಮ್ಮೆ ರಾತ್ರಿಯ ಸುಮಾರು ಮೂರನೆಯ ಎರಡು ಭಾಗ, ಇನ್ನು ಕೆಲವೊಮ್ಮೆ ಅರ್ಧ ಭಾಗ ಮತ್ತು ಕೆಲವೊಮ್ಮೆ ಮೂರನೆಯ ಒಂದು ಭಾಗವನ್ನು ಆರಾಧನೆ ಯಲ್ಲಿ ಕಳೆಯುತ್ತೀರೆಂದು ನಿಮ್ಮ ಪ್ರಭು ತಿಳಿದಿರುತ್ತಾನೆ. ನಿಮ್ಮ ಸಂಗಾತಿಗಳ ಪೈಕಿಯೂ ಒಂದು ಗುಂಪು ಹೀಗೆ ಮಾಡುತ್ತದೆ. ಅಲ್ಲಾಹನೇ ರಾತ್ರಿ ಮತ್ತು ಹಗಲುಗಳ ಸಮಯಗಳ ಲೆಕ್ಕವಿಡು ತ್ತಾನೆ. ನೀವು ಕಾಲ ಗಣನೆಯನ್ನು ಸರಿಯಾಗಿ ಮಾಡಲಾರಿರಿ ಎಂಬುದು ಅವನಿಗೆ ತಿಳಿದಿದೆ. ಆದುದರಿಂದ ಅವನು ನಿಮ್ಮ ಮೇಲೆ ದಯೆ ತೋರಿದನು. ಇನ್ನು (ಮುಂದೆ) ಕುರ್‌ಆನ್‌ನಿಂದ, ಸುಲಭವಾಗಿ ಪಠಿಸಲು ನಿಮಗೆ ಸಾಧ್ಯವಿರುವಷ್ಟನ್ನು ಪಠಿಸಿರಿ.[5] ನಿಮ್ಮ ಪೈಕಿ ಕೆಲವರು ರೋಗಿಗಳಿರಬಹುದು, ಇನ್ನು ಕೆಲವರು ಅಲ್ಲಾಹನ ಅನುಗ್ರಹವನ್ನರಸಿಕೊಂಡು ಪ್ರಯಾಣದಲ್ಲಿರುತ್ತಾರೆ. ಮತ್ತೆ ಕೆಲವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ- ಎಂದು ಅವನಿಗೆ ತಿಳಿದಿದೆ. ಆದುದರಿಂದ ಸುಲಭವಾಗಿ ಪಠಿಸಲು ಸಾಧ್ಯವಿರುವಷ್ಟು ಕುರ್‌ಆನನ್ನು ಪಠಿಸಿರಿ. ನಮಾಝ್ ಸಂಸ್ಥಾಪಿ ಸಿರಿ, ಝಕಾತ್ ಕೊಡಿರಿ[6] ಮತ್ತು ಅಲ್ಲಾಹನಿಗೆ ಉತ್ತಮ ಸಾಲವನ್ನು ಕೊಡುತ್ತಲಿರಿ. ನೀವು ನಿಮಗಾಗಿ ಮುಂದೆ ಕಳುಹಿಸುವ ಪ್ರತಿಯೊಂದು ಸತ್ಕಾರ್ಯವನ್ನು ನೀವು ಅಲ್ಲಾಹನ ಬಳಿ ಕಾಣುವಿರಿ. ಅವನೇ ಅತ್ಯುತ್ತಮನು ಮತ್ತು ಅವನ ಸತ್ಫಲವು ಬಹಳ ಹಿರಿದಾ ಗಿದೆ. ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡುತ್ತಲಿರಿ. ಖಂಡಿತ ವಾಗಿಯೂ ಅಲ್ಲಾಹನು ಮಹಾಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ.

4. ಈ ರುಕೂಅ್ ಮೊದಲಿನ ರುಕೂಅ್‌ನ ಹತ್ತು ವರ್ಷಗಳ ನಂತರ ಮದೀನಾದಲ್ಲಿ ಅವತೀರ್ಣಗೊಂಡಿತು.
5. ನಮಾಝ್ ಸಾಮಾನ್ಯವಾಗಿ ಸುದೀರ್ಘವಾದ ಕುರ್‌ಆನ್ ವಾಚನದಿಂದಾಗಿಯೇ ದೀರ್ಘವಾಗುವುದರಿಂದ ತಹಜ್ಜುದ್ ನಮಾಝ್‌ನಲ್ಲಿ ನಿಮ್ಮ ಅನುಕೂಲಕ್ಕೆ ತಕ್ಕಂತೆ ಕುರ್‌ಆನಿನ ಎಷ್ಟು ಭಾಗವನ್ನು ಬೇಕಾದರೂ ಓದಿರಿ. ಇದರಿಂದ ಸಹಜವಾಗಿಯೇ ನಮಾಝ್‌ನ ದೀರ್ಘ ಕಡಿಮೆಯಾಗುತ್ತದೆ ಎಂದು ಹೇಳಲಾಗಿದೆ.
6. ಇದರ ಅರ್ಥ ಐದು ಹೊತ್ತಿನ ನಮಾಝ್ ಮತ್ತು ಕಡ್ಡಾಯ ಝಕಾತ್ ಆಗಿದೆ ಎಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಒಮ್ಮತಾಭಿಪ್ರಾಯವಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ಹೊದ್ದು ಮಲಗುವವರೇ![1] — يَٰٓأَيُّهَا ٱلْمُدَّثِّرُ ①

2. ಎದ್ದೇಳಿರಿ ಮತ್ತು ಎಚ್ಚರಿಸಿರಿ- — قُمْ فَأَنذِرْ ②

3. ಮತ್ತು ನಿಮ್ಮ ಪ್ರಭುವಿನ ಹಿರಿಮೆಯನ್ನು ಘೋಷಿಸಿರಿ- — وَرَبَّكَ فَكَبِّرْ ③

4. ಮತ್ತು ನಿಮ್ಮ ವಸ್ತ್ರಗಳನ್ನು ಶುಚಿಯಾಗಿರಿಸಿರಿ- — وَثِيَابَكَ فَطَهِّرْ ④

5. ಮತ್ತು ಮಾಲಿನ್ಯದಿಂದ ದೂರವಿರಿ. — وَٱلرُّجْزَ فَٱهْجُرْ ⑤

6. ಹೆಚ್ಚು ಪಡೆಯಲಿಕ್ಕಾಗಿ ಉಪಕಾರ ಮಾಡಬೇಡಿರಿ- — وَلَا تَمْنُن تَسْتَكْثِرُ ⑥

7. ಮತ್ತು ನಿಮ್ಮ ಪ್ರಭುವಿಗಾಗಿ ತಾಳ್ಮೆ ವಹಿಸಿರಿ. — وَلِرَبِّكَ فَٱصْبِرْ ⑦

8. ಕಹಳೆ ಊದಲ್ಪಡುವಾಗ,[2] — فَإِذَا نُقِرَ فِى ٱلنَّاقُورِ ⑧

9. ಆ ದಿನವು ಅತ್ಯಂತ ಕಠಿಣ ದಿನವಾಗಿರುವುದು- — فَذَٰلِكَ يَوْمَئِذٍ يَوْمٌ عَسِيرٌ ⑨

10. ಸತ್ಯನಿಷೇಧಿಗಳಿಗೆ ಅದು ಲಘುವಾಗಿರಲಾರದು. — عَلَى ٱلْكَٰفِرِينَ غَيْرُ يَسِيرٍ ⑩

---

1. ಈ ಅಧ್ಯಾಯದ ಆರಂಭದ ಏಳು ಸೂಕ್ತಗಳಲ್ಲಿ ಪ್ರವಾದಿವರ್ಯರಿಗೆ(ಸ) ಮೊಟ್ಟಮೊದಲು ಇಸ್ಲಾಮಿನ ಸಂದೇಶ ಪ್ರಚಾರ ಮಾಡುವ ಆದೇಶ ಕೊಡಲಾಗಿದೆ. ಇದು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಂಡ, (ಸಂದೇಶವಾಹಕರೇ) ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ... ಎಂಬ ಆರಂಭಿಕ ದೇವವಾಣಿಯ (ಅಲ್ ಅಲಕ್) ನಂತರ ಅವತೀರ್ಣಗೊಂಡ ಎರಡನೆಯ ದೇವವಾಣಿಯಾಗಿದೆ.
2. ಈ ಭಾಗ ಆರಂಭಿಕ ಸೂಕ್ತಗಳ ಕೆಲವು ತಿಂಗಳ ನಂತರ, ಪ್ರವಾದಿವರ್ಯರ(ಸ) ವತಿಯಿಂದ ಇಸ್ಲಾಮಿನ ಬಹಿರಂಗ ಪ್ರಚಾರ ಆರಂಭವಾದ ಬಳಿಕ ಮೊದಲ ಬಾರಿ ಹಜ್ಜ್‌ನ ಕಾಲ ಬಂದಾಗ ಅವತೀರ್ಣಗೊಂಡಿತ್ತು. ಆಗ ಕುರೈಶರ ಸರದಾರರು ಒಂದು ಸಭೆ ಕರೆದು, ಹೊರಗಿನಿಂದ ಬರುವ ಹಜ್ಜ್ ಯಾತ್ರಿಕರನ್ನು, ಕುರ್‌ಆನ್ ಮತ್ತು ಪ್ರವಾದಿವರ್ಯರ(ಸ) ಬಗ್ಗೆ ತಪ್ಪುಕಲ್ಪನೆಗೀಡಾಗುವಂತೆ ಮಾಡಲು ಪ್ರಬಲವಾದ ಅಭಿಯಾನವೊಂದನ್ನು ನಡೆಸಲು ತೀರ್ಮಾನಿಸಿದ್ದರು.

| | |
|---|---|
| 11. ನನ್ನನ್ನೂ ನಾನು ಒಬ್ಬಂಟಿಯಾಗಿ ಸೃಷ್ಟಿಸಿದವನನ್ನೂ[3] ಬಿಟ್ಟು ಬಿಡಿರಿ- | ذَرْنِي وَمَنْ خَلَقْتُ وَحِيدًا ﴿١١﴾ |
| 12. ನಾನು ಅವನಿಗೆ ಹೇರಳ ಸಂಪತ್ತನ್ನು ಕೊಟ್ಟೆನು, | وَجَعَلْتُ لَهُ مَالًا مَمْدُودًا ﴿١٢﴾ |
| 13. ಅವನ ಜೊತೆಯಲ್ಲೇ ಹಾಜರಿರುವ ಪುತ್ರರನ್ನು ಕೊಟ್ಟೆನು- | وَبَنِينَ شُهُودًا ﴿١٣﴾ |
| 14. ಮತ್ತು ಅವನ ಪಾಲಿಗೆ ನಾಯಕತ್ವದ ಮಾರ್ಗವನ್ನು ಸುಗಮಗೊಳಿಸಿದೆನು- | وَمَهَّدْتُ لَهُ تَمْهِيدًا ﴿١٤﴾ |
| 15. ಇಷ್ಟಿದ್ದೂ ಅವನು, ನಾನು ಅವನಿಗೆ ಇನ್ನಷ್ಟು ಕೊಡಬೇಕೆಂದು ಆಶಿಸುತ್ತಿದ್ದಾನೆ- | ثُمَّ يَطْمَعُ أَنْ أَزِيدَ ﴿١٥﴾ |
| 16. ಖಂಡಿತ ಇಲ್ಲ. ಅವನು ನಮ್ಮ ವಚನಗಳನ್ನು ದ್ವೇಷಿಸುತ್ತಾನೆ. | كَلَّا ۖ إِنَّهُ كَانَ لِآيَاتِنَا عَنِيدًا ﴿١٦﴾ |
| 17. ನಾನಂತು ಅವನನ್ನು ಶೀಘ್ರವೇ ಒಂದು ಕಠಿಣ ಏರನ್ನು ಏರಿಸುವೆನು. | سَأُرْهِقُهُ صَعُودًا ﴿١٧﴾ |
| 18. ಅವನು ಯೋಚಿಸಿದನು ಮತ್ತು ಮಾತನ್ನು ಸೃಷ್ಟಿಸಲು ಪ್ರಯತ್ನಿಸಿದನು- | إِنَّهُ فَكَّرَ وَقَدَّرَ ﴿١٨﴾ |
| 19. ಅವನ ಮೇಲೆ ಶಾಪವಿರಲಿ, ಅವನು ಸೃಷ್ಟಿಸಲು ಪ್ರಯತ್ನಿಸಿದ ಮಾತು ಎಂತಹದು! | فَقُتِلَ كَيْفَ قَدَّرَ ﴿١٩﴾ |
| 20. ಹೌದು, ಅವನ ಮೇಲೆ ಶಾಪವಿರಲಿ. ಅವನು ಸೃಷ್ಟಿಸ ಬಯಸಿದ ಮಾತು ಎಂತಹದು? | ثُمَّ قُتِلَ كَيْفَ قَدَّرَ ﴿٢٠﴾ |
| 21. ಆ ಬಳಿಕ ಅವನು (ಜನರ ಕಡೆಗೆ) ನೋಡಿದನು- | ثُمَّ نَظَرَ ﴿٢١﴾ |
| 22. ತರುವಾಯ ಹಣೆ ಮುದುಡಿಸಿಕೊಂಡನು ಮತ್ತು ಮುಖ ಮುರಿದುಕೊಂಡನು, | ثُمَّ عَبَسَ وَبَسَرَ ﴿٢٢﴾ |
| 23. ಅನಂತರ ಮರಳಿದನು ಮತ್ತು ಅಹಂಭಾವಕ್ಕೊಳಗಾದನು- | ثُمَّ أَدْبَرَ وَاسْتَكْبَرَ ﴿٢٣﴾ |

3. ಅರ್ಥಾತ್- ವಲೀದ್ ಬಿನ್ ಮುಗೀರಃ ಆಗಿದ್ದಾನೆ. ಅವನು ಕುರ್‌ಆನ್ ಅಲ್ಲಾಹನ ವಾಣಿಯಾಗಿದೆ ಎಂದು ಅಂತಃಪ್ರಜ್ಞೆಯಿಂದ ನಂಬುವವನಾಗಿದ್ದನು. ಆದರೆ ಮಕ್ಕಾದಲ್ಲಿ ತನ್ನ ನಾಯಕತ್ವವನ್ನು ಬಾಕಿಯುಳಿಸಲಿಕ್ಕಾಗಿ ಅವನು ಮೇಲೆ ಪ್ರಸ್ತಾಪಿಸಲಾದ ಸಭೆಯಲ್ಲಿ ಭಾಗವಹಿಸಿ ಪ್ರವಾದಿವರ್ಯ ರನ್ನು(ಸ) ಜಾದೂಗಾರನೆಂದೂ ಕುರ್‌ಆನನ್ನು ಜಾದೂವೆಂದೂ ಪ್ರಚಾರ ಮಾಡುವ ಸಲಹೆ ನೀಡಿದ್ದನು.

24. ಕೊನೆಗೆ ಹೀಗೆಂದನು, "ಇದು ಹಿಂದಿನಿಂದಲೇ ನಡೆದು ಬಂದಿರುವ ಒಂದು ಜಾದು ಅಲ್ಲದೆ ಇನ್ನೇನೂ ಅಲ್ಲ-

فَقَالَ إِنْ هَٰذَا إِلَّا سِحْرٌ يُؤْثَرُ ﴿٢٤﴾

25. ಇದೊಂದು ಮನುಷ್ಯವಾಣಿಯಾಗಿದೆ."

إِنْ هَٰذَا إِلَّا قَوْلُ الْبَشَرِ ﴿٢٥﴾

26. ನಾನು ಸದ್ಯವೇ ಅವನನ್ನು ನರಕಕ್ಕೆ ತಳ್ಳಿ ಬಿಡುವೆನು-

سَأُصْلِيهِ سَقَرَ ﴿٢٦﴾

27. ಮತ್ತು ನರಕವೇನಾಗಿರುತ್ತದೆಂದು ನಿಮಗೇನು ಗೊತ್ತು?

وَمَا أَدْرَاكَ مَا سَقَرُ ﴿٢٧﴾

28. ಅದು ಉಳಿಸಲಿಕ್ಕೂ ಇಲ್ಲ ಬಿಡಲಿಕ್ಕೂ ಇಲ್ಲ.[4]

لَا تُبْقِي وَلَا تَذَرُ ﴿٢٨﴾

29. ಚರ್ಮವನ್ನು ಸುಟ್ಟು ಹಾಕುವಂತಹದ್ದು.

لَوَّاحَةٌ لِّلْبَشَرِ ﴿٢٩﴾

30. ಅದರ ಮೇಲೆ ಹತ್ತೊಂಭತ್ತು ಕಾರ್ಯಕರ್ತರು ನಿಯುಕ್ತರಾಗಿದ್ದಾರೆ.

عَلَيْهَا تِسْعَةَ عَشَرَ ﴿٣٠﴾

31. ನಾವು[5] ನರಕದ ಕಾರ್ಯಕರ್ತರನ್ನಾಗಿ ದೇವಚರರನ್ನು ನೇಮಿಸಿದ್ದೇವೆ ಮತ್ತು ಅವರ ಸಂಖ್ಯೆಯನ್ನು ಸತ್ಯನಿಷೇಧಿಗಳ ಪಾಲಿಗೆ ಒಂದು ಪರೀಕ್ಷಾ ಸಾಧನವಾಗಿ ಮಾಡಿದ್ದೇವೆ- ಗ್ರಂಥದವರಿಗೆ ನಂಬಿಕೆ ಯುಂಟಾಗಲೆಂದು, ಸತ್ಯವಿಶ್ವಾಸಿಗಳ ವಿಶ್ವಾಸವು ವರ್ಧಿಸಲೆಂದು, ಗ್ರಂಥದವರು ಹಾಗೂ ಸತ್ಯವಿಶ್ವಾಸಿಗಳು ಯಾವುದೇ ಸಂಶಯದಲ್ಲಿ ಬಿದ್ದಿರಬಾರದೆಂದು[6] ಮತ್ತು ಮನಸ್ಸಿನಲ್ಲಿ ರೋಗವಿರುವವರು ಹಾಗೂ ಸತ್ಯನಿಷೇಧಿಗಳು- ಇಂತಹ ವಿಚಿತ್ರ ಮಾತಿನ ಮೂಲಕ ಅಲ್ಲಾಹನು ಉದ್ದೇಶಿಸುವುದಾದರೂ ಏನನ್ನು ಎಂದು ಹೇಳುವಂತಾ ಗಲು (ಹೀಗೆ ಮಾಡಿದ್ದೇವೆ). ಈ ರೀತಿ ಅಲ್ಲಾಹನು ತಾನಿಚ್ಛಿಸಿದವ ರನ್ನು ಪಥಭ್ರಷ್ಟಗೊಳಿಸಿ ಬಿಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಸನ್ಮಾರ್ಗದರ್ಶನ ಮಾಡುತ್ತಾನೆ ಮತ್ತು ನಿಮ್ಮ ಪ್ರಭುವಿನ ಸೇನೆ ಗಳನ್ನು ಸ್ವತಃ ಅವನ ಹೊರತು ಇನ್ನಾರೂ ಅರಿತಿಲ್ಲ ಮತ್ತು ಆ

وَمَا جَعَلْنَا أَصْحَابَ النَّارِ إِلَّا مَلَائِكَةً ۙ وَمَا جَعَلْنَا عِدَّتَهُمْ إِلَّا فِتْنَةً لِّلَّذِينَ كَفَرُوا لِيَسْتَيْقِنَ الَّذِينَ أُوتُوا الْكِتَابَ وَيَزْدَادَ الَّذِينَ آمَنُوا إِيمَانًا ۙ وَلَا يَرْتَابَ الَّذِينَ أُوتُوا الْكِتَابَ وَالْمُؤْمِنُونَ ۙ وَلِيَقُولَ الَّذِينَ فِي قُلُوبِهِم مَّرَضٌ وَالْكَافِرُونَ مَاذَا أَرَادَ اللَّهُ بِهَٰذَا مَثَلًا ۚ كَذَٰلِكَ يُضِلُّ اللَّهُ مَن يَشَاءُ وَيَهْدِي مَن يَشَاءُ ۚ وَمَا

4. ಅರ್ಥಾತ್- ಶಿಕ್ಷೆಗೆ ಅರ್ಹರಾದ ಯಾರನ್ನೂ ಅದು ಶಿಕ್ಷೆಗೆ ಗುರಿಯಾಗದೆ ಇರಲು ಬಿಡಲಾರದು. ಅದರ ವಶಕ್ಕೆ ಬರುವ ಪ್ರತಿಯೊಬ್ಬನನ್ನೂ ಅದು ಶಿಕ್ಷಿಸದೆ ಬಿಡಲಾರದು.

5. ಇಲ್ಲಿಂದ, "ನಿಮ್ಮ ಪ್ರಭುವಿನ ಸೇನೆಗಳನ್ನು ಸ್ವತಃ ಅವನ ಹೊರತು ಇನ್ನಾರೂ ಅರಿತಿರುವುದಿಲ್ಲ" ಎಂಬಲ್ಲಿಯ ತನಕದ ವಿಷಯಗಳು ಒಂದು ಉಪನುಡಿಯಾಗಿದೆ. ಈ ಮೂಲಕ ಉಪನ್ಯಾಸದ ನಡುವೆ ವಾಕ್ಸರಣಿಯನ್ನು ಕಡಿದು ಆಕ್ಷೇಪವೆತ್ತುವವರಿಗೆ ಉತ್ತರ ನೀಡಲಾಗಿದೆ. ನರಕದ ಕಾರ್ಯಕರ್ತರ ಸಂಖ್ಯೆ ಕೇವಲ ಹತ್ತೊಂಭತ್ತು ಎಂದು ಕೇಳಿ ಅವರು ಆ ಬಗ್ಗೆ ಅಪಹಾಸ್ಯ ಮಾಡಲಾರಂಭಿಸಿದ್ದರು. ಆದಮ್(ಅ) ಕಾಲದಿಂದ ಹಿಡಿದು ನಿರ್ಣಾಯಕ ದಿನದ ತನಕ ಸತ್ಯನಿಷೇಧ ಮತ್ತು ಮಹಾಪಾಪಗಳನ್ನೆಸಗಿದ ಮಾನವರೆಲ್ಲರನ್ನೂ ಈ ನರಕಕ್ಕೆ ಹಾಕಲಾಗುವುದು ಎಂದು ಒಂದೆಡೆ ನಮ್ಮೊಡನೆ ಹೇಳಲಾಗುತ್ತಿದೆ. ಇನ್ನೊಂದೆಡೆ ಇಷ್ಟು ದೊಡ್ಡ ನರಕದ ಅಸಂಖ್ಯ ಮಾನವರಿಗೆ ಕೇವಲ ಹತ್ತೊಂಭತ್ತು ಮಂದಿ ಕಾರ್ಯಕರ್ತರನ್ನು ನೇಮಿಸಲಾಗಿದೆ ಎಂದು ಹೇಳಲಾಗುತ್ತಿದೆ. ಈ ಮಾತು ಅವರಿಗೆ ವಿಚಿತ್ರವೆನಿಸಿತು.

6. ಗ್ರಂಥದವರು ಮತ್ತು ಸತ್ಯನಿಷೇಧಿಗಳು ದೇವಚರರ ಅಸಾಮಾನ್ಯ ಶಕ್ತಿ-ಸಾಮರ್ಥ್ಯಗಳ ಬಗ್ಗೆ ತಿಳಿದಿದ್ದುದರಿಂದ ಕೇವಲ ಹತ್ತೊಂಭತ್ತು ಮಂದಿ ದೇವಚರರು ನರಕದ ವ್ಯವಸ್ಥೆಯನ್ನು ಹೇಗೆ ನೋಡಿಕೊಳ್ಳುವರು ಎಂಬ ಬಗ್ಗೆ ಅವರಿಗೆ ಯಾವುದೇ ರೀತಿಯ ಸಂಶಯವಿರಲಾರದು.

| | |
|---|---|
| ನರಕವನ್ನು ಪ್ರಸ್ತಾಪಿಸಿರುವುದು ಜನರಿಗೆ ಉಪದೇಶ ಸಿಗಬೇಕೆಂದಲ್ಲದೆ ಬೇರಾವ ಉದ್ದೇಶದಿಂದಲೂ ಅಲ್ಲ. | يَعْلَمُ جُنُودَ رَبِّكَ إِلَّا هُوَ ۚ وَمَا هِيَ إِلَّا ذِكْرَىٰ لِلْبَشَرِ ﴿٣١﴾ |
| 32. ಖಂಡಿತ ಅಲ್ಲ.[7] ಚಂದ್ರನಾಣೆ- | كَلَّا وَالْقَمَرِ ﴿٣٢﴾ |
| 33. ಮತ್ತು ರಾತ್ರಿಯಾಣೆ. ಅದು ಮರಳುವಾಗ- | وَاللَّيْلِ إِذْ أَدْبَرَ ﴿٣٣﴾ |
| 34. ಮತ್ತು ಮುಂಜಾವಿನಾಣೆ- ಅದು ಬೆಳಗುವಾಗ- | وَالصُّبْحِ إِذَا أَسْفَرَ ﴿٣٤﴾ |
| 35. ಈ ನರಕವೂ ಮಹಾ ವಸ್ತುಗಳ ಪೈಕಿ ಒಂದಾಗಿದೆ-[8] | إِنَّهَا لَإِحْدَى الْكُبَرِ ﴿٣٥﴾ |
| 36. ಅದು ಮಾನವರ ಪಾಲಿಗೆ ಎಚ್ಚರಿಕೆಯಾಗಿದೆ- | نَذِيرًا لِلْبَشَرِ ﴿٣٦﴾ |
| 37. ನಿಮ್ಮ ಪೈಕಿ ಮುಂದುವರಿಯಲಿಚ್ಛಿಸುವ ಅಥವಾ ಹಿಂದುಳಿಯಲಿಚ್ಛಿಸುವ ಪ್ರತಿಯೊಬ್ಬನ ಪಾಲಿಗೆ ಅದು ಎಚ್ಚರಿಕೆಯಾಗಿದೆ. | لِمَنْ شَاءَ مِنْكُمْ أَنْ يَتَقَدَّمَ أَوْ يَتَأَخَّرَ ﴿٣٧﴾ |
| 38. ಪ್ರತಿಯೊಬ್ಬನೂ ತನ್ನ ದುಡಿಮೆಯ ಬದಲಿಗೆ ಅಡವಿಡಲ್ಪಟ್ಟಿದ್ದಾನೆ- | كُلُّ نَفْسٍ بِمَا كَسَبَتْ رَهِينَةٌ ﴿٣٨﴾ |
| 39. ಬಲಗಡೆಯವರ ಹೊರತು. | إِلَّا أَصْحَابَ الْيَمِينِ ﴿٣٩﴾ |
| 40-41. ಅವರು ಸ್ವರ್ಗದಲ್ಲಿರುವರು. ಅವರು ಅಪರಾಧಿಗಳೊಡನೆ ಹೀಗೆ ಕೇಳುವರು- | فِي جَنَّاتٍ يَتَسَاءَلُونَ ﴿٤٠﴾ عَنِ الْمُجْرِمِينَ ﴿٤١﴾ |
| 42. "ನಿಮ್ಮನ್ನು ನರಕಕ್ಕೆ ಒಯ್ದುದು ಯಾವುದು?"[9] | مَا سَلَكَكُمْ فِي سَقَرَ ﴿٤٢﴾ |
| 43. ಅವರು ಹೇಳುವರು; "ನಾವು ನಮಾಝ್ ಮಾಡುವವರಾಗಿರಲಿಲ್ಲ- | قَالُوا لَمْ نَكُ مِنَ الْمُصَلِّينَ ﴿٤٣﴾ |
| 44. ಮತ್ತು ದರಿದ್ರರಿಗೆ ಉಣಿಸುತ್ತಿರಲಿಲ್ಲ- | وَلَمْ نَكُ نُطْعِمُ الْمِسْكِينَ ﴿٤٤﴾ |
| 45. ಮತ್ತು ಸತ್ಯದ ವಿರುದ್ಧ ಮಾತುಗಳನ್ನು ಸೃಷ್ಟಿಸುವವರ ಜೊತೆ ಸೇರಿ ನಾವೂ ಮಾತುಗಳನ್ನು ಸೃಷ್ಟಿಸುತ್ತಿದ್ದೆವು- | وَكُنَّا نَخُوضُ مَعَ الْخَائِضِينَ ﴿٤٥﴾ |
| 46. ಮತ್ತು ನಾವು ಪ್ರತಿಫಲದ ದಿನವನ್ನು ಸುಳ್ಳೆಂದು ಹೇಳುತ್ತಿದ್ದೆವು- | وَكُنَّا نُكَذِّبُ بِيَوْمِ الدِّينِ ﴿٤٦﴾ |

7. ಅರ್ಥಾತ್- ಈ ರೀತಿ ಅಪಹಾಸ್ಯ ಮಾಡಲು ಇದೊಂದು ಗಾಳಿಮಾತಲ್ಲ.
8. ಅರ್ಥಾತ್- ಚಂದ್ರ ಮತ್ತು ದಿನ-ರಾತ್ರಿಗಳು ಅಲ್ಲಾಹನ ಮಹಿಮೆಯ ಭವ್ಯ ಕುರುಹುಗಳಾಗಿರುವಂತೆಯೇ ನರಕವೂ ಅವನ ಮಹಿಮಾದ್ಭುತಗಳ ಪೈಕಿ ಒಂದಾಗಿದೆ.
9. ಅರ್ಥಾತ್- ಸ್ವರ್ಗದಲ್ಲಿ ಕುಳಿತಿರುತ್ತಲೇ ಅವರು ನರಕವಾಸಿಗಳೊಡನೆ ಮಾತನಾಡುತ್ತಾ ಈ ಪ್ರಶ್ನೆ ಕೇಳುವರು.

47. ಕೊನೆಗೆ ಆ ಖಚಿತ ದಿನವು ನಮಗೆ ಎದುರಾಗಿಯೇ ಬಿಟ್ಟಿತು."

حَتّٰىٓ اَتٰىنَا الْيَقِيْنُ ﴿٤٧﴾

48. ಅಂದು ಶಿಫಾರಸು ಮಾಡುವವರ ಶಿಫಾರಸು ಅವರಿಗೆ ಯಾವುದೇ ಪ್ರಯೋಜನ ನೀಡದು.

فَمَا تَنْفَعُهُمْ شَفَاعَةُ الشّٰفِعِيْنَ ﴿٤٨﴾

49. ಇವರು ಈ ಉಪದೇಶದಿಂದ ವಿಮುಖರಾಗಲು ಇವರಿಗೆ ಆಗಿರುವುದಾದರೂ ಏನು?

فَمَا لَهُمْ عَنِ التَّذْكِرَةِ مُعْرِضِيْنَ ﴿٤٩﴾

50-51. ಇವರ ಅವಸ್ಥೆಯು ಸಿಂಹಕ್ಕೆ ಅಂಜಿ ಓಡುತ್ತಿರುವ ಕಾಡು ಕತ್ತೆಗಳಂತಿದೆ.[10]

كَاَنَّهُمْ حُمُرٌ مُّسْتَنْفِرَةٌ ﴿٥٠﴾ فَرَّتْ مِنْ قَسْوَرَةٍ ﴿٥١﴾

52. ವಾಸ್ತವದಲ್ಲಿ ಇವರ ಪೈಕಿ ಪ್ರತಿಯೊಬ್ಬನೂ ತನ್ನ ಹೆಸರಿಗೆ ಬಹಿರಂಗ ಪತ್ರಗಳು ಕಳುಹಿಸಲ್ಪಡಬೇಕೆಂದು ಬಯಸುತ್ತಾನೆ-[11]

بَلْ يُرِيْدُ كُلُّ امْرِئٍ مِّنْهُمْ اَنْ يُّؤْتٰى صُحُفًا مُّنَشَّرَةً ﴿٥٢﴾

53. ಖಂಡಿತ ಇಲ್ಲ. ವಾಸ್ತವದಲ್ಲಿ ಇವರಿಗೆ ಪರಲೋಕದ ಭಯವಿಲ್ಲ.

كَلَّا ۭ بَلْ لَّا يَخَافُوْنَ الْاٰخِرَةَ ﴿٥٣﴾

54. ಖಂಡಿತ ಇಲ್ಲ.[12] ಇದೊಂದು ಉಪದೇಶವಾಗಿದೆ.

كَلَّآ اِنَّهٗ تَذْكِرَةٌ ﴿٥٤﴾

55. ಇಷ್ಟವುಳ್ಳವನು ಇದರಿಂದ ಪಾಠ ಪಡೆಯಲಿ.

فَمَنْ شَآءَ ذَكَرَهٗ ﴿٥٥﴾

56. ಅಲ್ಲಾಹನೇ ಇಚ್ಛಿಸುವ ಹೊರತು ಇವರು ಯಾರೂ ಪಾಠ ಕಲಿಯಲಾರರು. ಅವನೇ ಭಯಭಕ್ತಿಗೆ ಅರ್ಹನು ಮತ್ತು ಅವನೇ (ಭಯಭಕ್ತಿಯುಳ್ಳವರನ್ನು) ಕ್ಷಮಿಸಬಲ್ಲವನಾಗಿರುತ್ತಾನೆ.

وَمَا يَذْكُرُوْنَ اِلَّآ اَنْ يَّشَآءَ اللّٰهُ ۭ هُوَ اَهْلُ التَّقْوٰى وَاَهْلُ الْمَغْفِرَةِ ﴿٥٦﴾

---

10. ಇದೊಂದು ಅರಬಿ ನಾಣ್ನುಡಿಯಾಗಿದೆ. ಕಾಡುಕತ್ತೆಗಳ ಒಂದು ಸ್ವಭಾವವೆಂದರೆ ಅವು ಅಪಾಯದ ಸುಳಿವು ಸಿಗುತ್ತಲೇ ಕಂಗಾಲಾಗಿ ದಿಕ್ಕಾಪಾಲು ಓಡತೊಡಗುತ್ತವೆ. ಇತರ ಯಾವ ಪ್ರಾಣಿಯೂ ಹಾಗೆ ಓಡುವುದಿಲ್ಲ.

11. ಅರ್ಥಾತ್- ಅಲ್ಲಾಹನು ನಿಜವಾಗಿಯೂ ಮುಹಮ್ಮದ್‌ರನ್ನು(ಸ) ಪ್ರವಾದಿಯಾಗಿ ನೇಮಿಸಿದ್ದರೆ ಅವನು ಮಕ್ಕಾದ ಪ್ರತಿಯೊಬ್ಬ ಸರದಾರ ಮತ್ತು ಪ್ರತಿಯೋರ್ವ ನಾಯಕನ ಹೆಸರಿಗೆ ಪತ್ರ ಬರೆದು 'ಇವರು ನಮ್ಮ ಪ್ರವಾದಿ ಇವರನ್ನು ಅನುಸರಿಸಿರಿ' ಎಂದು ತಿಳಿಸಬೇಕೆಂದು ಇವರು ಬಯಸುತ್ತಾರೆ.

12. ಅರ್ಥಾತ್- ಅವರ ಇಂತಹ ಬೇಡಿಕೆಯನ್ನು ಎಂದೂ ಈಡೇರಿಸಲಾಗದು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲ್ಲ;[1] ನಾನು ಪುನರುತ್ಥಾನ ದಿನದ ಆಣೆ ಹಾಕುತ್ತೇನೆ-[2]

لَآ اُقْسِمُ بِيَوْمِ الْقِيٰمَةِ ①

2. ಮತ್ತು ಅಲ್ಲ, ನಾನು ಹಳಿಯುವ ಚಿತ್ತದ ಆಣೆ ಹಾಕುತ್ತೇನೆ.[3]

وَلَآ اُقْسِمُ بِالنَّفْسِ اللَّوَّامَةِ ②

3. ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸಲಾರೆವೆಂದು ಮಾನವನು ಭಾವಿಸುತ್ತಿರುವನೇ?

اَيَحْسَبُ الْاِنْسَانُ اَلَّنْ نَّجْمَعَ عِظَامَهٗ ③

4. ಯಾಕಿಲ್ಲ? ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಾಗಿದ್ದೇವೆ.

بَلٰى قٰدِرِيْنَ عَلٰٓى اَنْ نُّسَوِّيَ بَنَانَهٗ ④

5. ಆದರೆ ಮಾನವನು ಮುಂದೆಯೂ ತಾನು ದುಷ್ಕರ್ಮಗಳನ್ನು ಮಾಡುತ್ತಿರಬೇಕೆಂದು ಇಚ್ಛಿಸುತ್ತಾನೆ.[4]

بَلْ يُرِيْدُ الْاِنْسَانُ لِيَفْجُرَ اَمَامَهٗ ⑤

6. ಆ ಪುನರುತ್ಥಾನ ದಿನ ಬರುವುದಾದರೂ ಯಾವಾಗ? ಎಂದು ಕೇಳುತ್ತಾನೆ.

يَسْـَٔلُ اَيَّانَ يَوْمُ الْقِيٰمَةِ ⑥

---

1. 'ಅಲ್ಲ' ಎಂದು ಮಾತನ್ನು ಆರಂಭಿಸಿರುವುದರಿಂದ ಸ್ವತಃ ವ್ಯಕ್ತವಾಗುವುದೇನೆಂದರೆ ಮೊದಲಿನಿಂದಲೇ ಯಾವುದೋ ವಿಷಯದ ಬಗ್ಗೆ ಚರ್ಚೆ ನಡೆಯುತ್ತಿತ್ತು. ಅದರ ನಿರಾಕರಣೆಗಾಗಿ ಈ ಅಧ್ಯಾಯವು ಅವತೀರ್ಣಗೊಂಡಿದೆ. ಇಲ್ಲಿ 'ಅಲ್ಲ' ಎಂದು ಹೇಳಿರುವುದರ ಅರ್ಥವೇನೆಂದರೆ- ನೀವು ಭಾವಿಸುತ್ತಿರುವ ವಿಷಯ ಸರಿಯಲ್ಲ. ಸತ್ಯಸಂಗತಿ ಇಂತಿದೆ ಎಂದು ನಾನು ಆಣೆ ಹಾಕಿ ಹೇಳುತ್ತೇನೆ.
2. ಪುನರುತ್ಥಾನ ದಿನದ ಆಗಮನದ ಬಗ್ಗೆ ಪುನರುತ್ಥಾನ ದಿನದ ಆಣೆಯನ್ನೇ ಹಾಕಲಾಗಿದೆ. ಏಕೆಂದರೆ ಅದರ ಆಗಮನವು ಖಚಿತವಾಗಿದೆ. ಲೋಕದ ಈ ವ್ಯವಸ್ಥೆ ಅನಾದಿಯಾಗಲಿ, ಅನಂತವಾಗಲಿ ಅಲ್ಲವೆಂಬುದಕ್ಕೆ ಲೋಕದ ಸಮಸ್ತ ವ್ಯವಸ್ಥೆಯೇ ಸಾಕ್ಷ್ಯ ನುಡಿಯುತ್ತಿದೆ. ಇದು ಅನಾದಿಯಿಂದ ಅಸ್ತಿತ್ವದಲ್ಲಿರಲಿಲ್ಲ ಮತ್ತು ಇದಕ್ಕೆ ಖಂಡಿತವಾಗಿಯೂ ಅಂತ್ಯದಿನ ಬರಲಿದೆ.
3. ಅರ್ಥಾತ್- ಯಾವುದೇ ಕೆಡುಕಿನ ವೇಳೆ ಮಾನವನನ್ನು ಹಳಿಯುವ ಆತ್ಮಸಾಕ್ಷಿಯ ಆಣೆ, ಮಾನವನಲ್ಲಿ ಈ ಪ್ರಜ್ಞೆ ಅಸ್ತಿತ್ವದಲ್ಲಿರುವುದು ಅವನು ತನ್ನ ಕರ್ಮಗಳಿಗೆ ಜವಾಬ್ದಾರನೆಂಬುದಕ್ಕೆ ಸಾಕ್ಷಿಯಾಗಿದೆ.
4. ಅರ್ಥಾತ್- ಪುನರುತ್ಥಾನ ದಿನದ ನಿರಾಕರಣೆಗೆ ಮೂಲ ಕಾರಣ, ಅದೆಂದೂ ಸಂಭವಿಸಲಾರದು ಅಥವಾ ಸಂಭವಿಸಲು ಸಾಧ್ಯವಿಲ್ಲವೆಂಬ ಯಾವುದೇ ವೈಜ್ಞಾನಿಕ ಮತ್ತು ಬೌದ್ಧಿಕ ಪುರಾವೆಗಳಲ್ಲ.

| | |
|---|---|
| 7. ದೃಷ್ಟಿಗಳು ಸ್ತಬ್ಧವಾಗಿ ಬಿಡುವಾಗ- | فَإِذَا بَرِقَ الْبَصَرُ ﴿٧﴾ |
| 8. ಮತ್ತು ಚಂದ್ರನು ಕಳೆಗುಂದುವಾಗ- | وَخَسَفَ الْقَمَرُ ﴿٨﴾ |
| 9. ಸೂರ್ಯ ಚಂದ್ರರನ್ನು ಸೇರಿಸಿ ಒಂದಾಗಿಸಿದಾಗ- | وَجُمِعَ الشَّمْسُ وَالْقَمَرُ ﴿٩﴾ |
| 10. ಆಗ ಇದೇ ಮನುಷ್ಯ, "ಎಲ್ಲಿಗೆ ಓಡಿ ಹೋಗಲಿ!" ಎಂದು ಹೇಳುವನು. | يَقُولُ الْإِنسَانُ يَوْمَئِذٍ أَيْنَ الْمَفَرُّ ﴿١٠﴾ |
| 11. ಖಂಡಿತ ಇಲ್ಲ, ಅಲ್ಲಿ ಯಾವ ಅಭಯಸ್ಥಾನವೂ ಇರಲಾರದು. | كَلَّا لَا وَزَرَ ﴿١١﴾ |
| 12. ಅಂದು ನಿನ್ನ ಪ್ರಭುವಿನ ಮುಂದೆಯೇ ಹೋಗಿ ನಿಲ್ಲಬೇಕಾಗುವುದು. | إِلَىٰ رَبِّكَ يَوْمَئِذٍ الْمُسْتَقَرُّ ﴿١٢﴾ |
| 13. ಅಂದು ಮಾನವನಿಗೆ ಅವನ ಹಿಂದಿನ-ಮುಂದಿನ ಸಕಲ ಕರ್ಮಗಳನ್ನೂ ತೋರಿಸಿ ಕೊಡಲಾಗುವುದು. | يُنَبَّأُ الْإِنسَانُ يَوْمَئِذٍ بِمَا قَدَّمَ وَأَخَّرَ ﴿١٣﴾ |
| 14. ವಾಸ್ತವದಲ್ಲಿ ಮಾನವನು ತಾನೇ ತನ್ನನ್ನು ಚೆನ್ನಾಗಿ ಬಲ್ಲನು- | بَلِ الْإِنسَانُ عَلَىٰ نَفْسِهِ بَصِيرَةٌ ﴿١٤﴾ |
| 15. ಅವನು ಎಷ್ಟೇ ನೆಪಗಳನ್ನೊಡ್ಡಿದರೂ ಸರಿ.[5] | وَلَوْ أَلْقَىٰ مَعَاذِيرَهُ ﴿١٥﴾ |
| 16. ಸಂದೇಶವಾಹಕರೇ,[6] ಈ 'ದಿವ್ಯವಾಣಿ'ಯನ್ನು ಬೇಗ ಬೇಗನೆ ಕಂಠಪಾಠ ಮಾಡಿಕೊಳ್ಳಲಿಕ್ಕಾಗಿ ನಿಮ್ಮ ನಾಲಗೆಯನ್ನು ಚಲಿಸಬೇಡಿರಿ. | لَا تُحَرِّكْ بِهِ لِسَانَكَ لِتَعْجَلَ بِهِ ﴿١٦﴾ |
| 17. ಇದನ್ನು ಕಂಠಪಾಠ ಮಾಡಿಸುವ ಮತ್ತು ಓದಿಸುವ ಹೊಣೆ ನಮ್ಮ ಮೇಲಿದೆ. | إِنَّ عَلَيْنَا جَمْعَهُ وَقُرْآنَهُ ﴿١٧﴾ |
| 18. ಆದುದರಿಂದ ನಾವು ಇದನ್ನು ಓದುತ್ತಿರುವಾಗ ನೀವು ಇದರ ಪಠಣವನ್ನು ಗಮನವಿಟ್ಟು ಆಲಿಸುತ್ತಿರಿ. | فَإِذَا قَرَأْنَاهُ فَاتَّبِعْ قُرْآنَهُ ﴿١٨﴾ |

5. ಅರ್ಥಾತ್- ವ್ಯಕ್ತಿಯ ಮುಂದೆ ಕರ್ಮಪಟ್ಟಿಯನ್ನು ಇರಿಸುವುದರ ಉದ್ದೇಶ ಅಪರಾಧಿಗೆ ಅವನ ಅಪರಾಧವನ್ನು ತೋರಿಸುವುದಲ್ಲ. ನ್ಯಾಯಾಲಯದ ಮೂಲಕ ಅಪರಾಧದ ಸಾಕ್ಷಿಗಳನ್ನು ಸಮರ್ಪಿಸದೆ ನ್ಯಾಯದ ಬೇಡಿಕೆ ಈಡೇರಲಾರದು ಎಂಬ ಕಾರಣಕ್ಕಾಗಿ ಮಾತ್ರ ಹೀಗೆ ಮಾಡಲಾಗುತ್ತದೆ. ಅನ್ಯಥಾ ತಾನೇನಾಗಿದ್ದೇನೆ ಎಂಬುದು ಮನುಷ್ಯನಿಗೆ ಸ್ವತಃ ಚೆನ್ನಾಗಿ ತಿಳಿದಿದೆ.

6. ಇಲ್ಲಿಂದ, "ಅನಂತರ ಇದರ ತಾತ್ಪರ್ಯವನ್ನು ವಿವರಿಸುವ ಹೊಣೆಯೂ ನಮ್ಮ ಮೇಲೆಯೇ ಇದೆ" ಎಂಬ ವರೆಗಿನ ಉದ್ಧರಣೆ ಒಂದು ಉಪಮಾತಾಗಿದೆ. ವಾಕ್ಸರಣಿಯನ್ನು ನಡುವೆ ಮುರಿದು ಪ್ರವಾದಿವರ್ಯರನ್ನುದ್ದೇಶಿಸಿ(ಸ) ಈ ಮಾತು ಹೇಳಲಾಗಿದೆ. ಜಿಬ್ರೀಲ್(ಅ) ಈ ಅಧ್ಯಾಯವನ್ನು ಪ್ರವಾದಿವರ್ಯರಿಗೆ(ಸ) ಕೇಳಿಸುವಾಗ ತನಗೆಲ್ಲಿ ಇದು ಮರೆತು ಹೋಗುವುದೋ ಎಂಬ ಶಂಕೆಯಿಂದ ಅವರು ಇದನ್ನು ನಾಲಗೆಯಿಂದ ಪುನರಾವರ್ತಿಸಲು ಪ್ರಯತ್ನಿಸುತ್ತಿದ್ದರು.

| | |
|---|---|
| 19. ಅನಂತರ ಇದರ ತಾತ್ಪರ್ಯವನ್ನು ವಿವರಿಸುವ ಹೊಣೆಯೂ ನಮ್ಮ ಮೇಲೆಯೇ ಇದೆ- | ثُمَّ إِنَّ عَلَيْنَا بَيَانَهُ ﴿١٩﴾ |
| 20. ಖಂಡಿತ ಅಲ್ಲ.[7] ವಾಸ್ತವದಲ್ಲಿ ನೀವು ಶೀಘ್ರ ಪ್ರಾಪ್ತವಾಗುವ ವಸ್ತುವನ್ನು (ಇಹಲೋಕವನ್ನು) ಪ್ರೀತಿಸುತ್ತೀರಿ- | كَلَّا بَلْ تُحِبُّونَ الْعَاجِلَةَ ﴿٢٠﴾ |
| 21. ಮತ್ತು ಪರಲೋಕವನ್ನು ಬಿಟ್ಟು ಬಿಡುತ್ತೀರಿ. | وَتَذَرُونَ الْآخِرَةَ ﴿٢١﴾ |
| 22. ಆ ದಿನ ಕೆಲವು ಮುಖಗಳು ಅರಳಿರುವುವು- | وُجُوهٌ يَوْمَئِذٍ نَاضِرَةٌ ﴿٢٢﴾ |
| 23. ತಮ್ಮ ಪ್ರಭುವನ್ನು ನೋಡುತ್ತಿರುವುವು- | إِلَىٰ رَبِّهَا نَاظِرَةٌ ﴿٢٣﴾ |
| 24. ಮತ್ತು ಇನ್ನು ಕೆಲವು ಮುಖಗಳು ಖಿನ್ನವಾಗಿರುವುವು- | وَوُجُوهٌ يَوْمَئِذٍ بَاسِرَةٌ ﴿٢٤﴾ |
| 25. ಮತ್ತು ತಮ್ಮೊಂದಿಗೆ ಸೊಂಟ ಮುರಿಯುವ ರೀತಿಯಲ್ಲಿ ವರ್ತಿಸಲಾಗುವುದೆಂದು ಭಾವಿಸುತ್ತಿರುವುವು. | تَظُنُّ أَنْ يُفْعَلَ بِهَا فَاقِرَةٌ ﴿٢٥﴾ |
| 26. ಖಂಡಿತ ಅಲ್ಲ,[8] ಪ್ರಾಣವು ಗಂಟಲಿಗೆ ತಲಪುವಾಗ- | كَلَّا إِذَا بَلَغَتِ التَّرَاقِيَ ﴿٢٦﴾ |
| 27. ಮಾಂತ್ರಿಕನು ಯಾರಾದರೂ ಇದ್ದಾನೆಯೇ ಎಂದು ಕೇಳಲಾಗುವಾಗ- | وَقِيلَ مَنْ ۜ رَاقٍ ﴿٢٧﴾ |
| 28. ಮತ್ತು ಇದು (ಭೂಲೋಕದಿಂದ) ಅಗಲುವ ಸಮಯವೆಂದು ಮನುಷ್ಯನಿಗೆ ಮನವರಿಕೆಯಾಗುವಾಗ- | وَظَنَّ أَنَّهُ الْفِرَاقُ ﴿٢٨﴾ |
| 29. ಮತ್ತು ಮೊಣಕಾಲಿನೊಂದಿಗೆ ಮೊಣಕಾಲು ಸೇರಿಕೊಳ್ಳುವಾಗ- | وَالْتَفَّتِ السَّاقُ بِالسَّاقِ ﴿٢٩﴾ |
| 30. ಅದು ನಿನ್ನ ಪ್ರಭುವಿನ ಕಡೆಗೆ ಹೊರಡುವ ದಿನವಾಗಿರುವುದು. | إِلَىٰ رَبِّكَ يَوْمَئِذٍ الْمَسَاقُ ﴿٣٠﴾ |
| 31. ಆದರೆ, ಅವನು ಸತ್ಯವೆಂದು ಅಂಗೀಕರಿಸಲೂ ಇಲ್ಲ, ನಮಾಝ್ ನಿರ್ವಹಿಸಲೂ ಇಲ್ಲ- | فَلَا صَدَّقَ وَلَا صَلَّىٰ ﴿٣١﴾ |
| 32. ನಿಜವಾಗಿ ಅವನು ಸುಳ್ಳಾಗಿಸಿದನು ಮತ್ತು ವಿಮುಖನಾದನು- | وَلَٰكِنْ كَذَّبَ وَتَوَلَّىٰ ﴿٣٢﴾ |

7. ಇಲ್ಲಿಂದ ಉಪಮಾತಿಗಿಂತ ಮೊದಲು ಪ್ರಸ್ತಾಪಿಸಲಾದ ವಿಷಯದ ಜತೆ ವಾಕ್ಸರಣಿ ಸೇರುತ್ತದೆ. "ಖಂಡಿತಾ ಅಲ್ಲ" ಎಂದರೆ ನೀವು ಪುನರುತ್ಥಾನ ದಿನವನ್ನು ನಿರಾಕರಿಸುವುದಕ್ಕೆ ಮೂಲ ಕಾರಣ, ನಿಸರ್ಗದ ಸೃಷ್ಟಿಕರ್ತನಿಗೆ ಪುನರುತ್ಥಾನ ದಿನವನ್ನು ತರಲು ಹಾಗೂ ಮರಣಾನಂತರ ಸೃಷ್ಟಿ ಮಾಡಲು ಸಾಧ್ಯವಿಲ್ಲವೆಂಬ ನಿಮ್ಮ ಭಾವನೆ ಕಾರಣವಲ್ಲ. ಬದಲಾಗಿ ಅದರ ನೈಜ ಕಾರಣ ಇಂತಿದೆ.
8. "ಖಂಡಿತಾ ಅಲ್ಲ" ಎಂಬ ಪದ ಮೇಲಿನಿಂದ ಪ್ರಸ್ತಾಪಿಸುತ್ತಾ ಬರಲಾಗಿರುವ ವಾಕ್ಸರಣಿಗೆ ಸಂಬಂಧಿಸಿದೆ. ಅರ್ಥಾತ್, ಸತ್ತು ನಶಿಸಿ ಹೋಗಬೇಕು ಮತ್ತು ನಿಮ್ಮ ಪ್ರಭುವಿನೆಡೆಗೆ ಮರಳ ಬೇಕಾಗಿಲ್ಲವೆಂಬ ನಿಮ್ಮ ಭಾವನೆ ತಪ್ಪು.

| | |
|---|---|
| 33. ತರುವಾಯ, ಸೆಟೆದುಕೊಂಡು ತನ್ನ ಮನೆಯವರ ಕಡೆಗೆ ನಡೆದು ಬಿಟ್ಟನು. | ثُمَّ ذَهَبَ اِلٰۤى اَهْلِهٖ يَتَمَطّٰىؕ |
| 34. ಈ ವರ್ತನೆ ನಿನಗೆ ತಕ್ಕುದಾಗಿಯೇ ಇದೆ ಮತ್ತು ಇದು ನಿನಗೇ ಭೂಷಣವಾಗಿದೆ- | اَوْلٰى لَكَ فَاَوْلٰىۙ |
| 35. ಹೌದು, ಈ ವರ್ತನೆ ನಿನಗೆ ತಕ್ಕುದಾಗಿಯೇ ಇದೆ ಮತ್ತು ಇದು ನಿನಗೇ ಭೂಷಣವಾಗಿದೆ. | ثُمَّ اَوْلٰى لَكَ فَاَوْلٰىؕ |
| 36. ಮಾನವನು ತನ್ನನ್ನು ಸುಮ್ಮನೆ ಬಿಟ್ಟುಬಿಡಲಾಗುವುದೆಂದು ಭಾವಿಸಿ ಕೊಂಡಿರುವನೇ?[9] | اَيَحْسَبُ الْاِنْسَانُ اَنْ يُّتْرَكَ سُدًىؕ |
| 37. ಅವನು (ತಾಯಿಯ ಗರ್ಭದೊಳಗೆ) ಸುರಿಸಲ್ಪಡುವಂತಹ ಒಂದು ತುಚ್ಛ ವೀರ್ಯ ಬಿಂದುವಾಗಿರಲಿಲ್ಲವೇ? | اَلَمْ يَكُ نُطْفَةً مِّنْ مَّنِىٍّ يُّمْنٰىۙ |
| 38. ತರುವಾಯ ಅವನು ಒಂದು ಪಿಂಡವಾದನು. ಅನಂತರ ಅಲ್ಲಾಹನು ಅವನ ಶರೀರವನ್ನು ನಿರ್ಮಿಸಿದನು ಮತ್ತು ಅವನ ಅಂಗಾಂಗಳನ್ನು ರೂಪಿಸಿದನು- | ثُمَّ كَانَ عَلَقَةً فَخَلَقَ فَسَوّٰىۙ |
| 39. ಆ ಬಳಿಕ ಅದರಿಂದ ಪುರುಷ ಮತ್ತು ಸ್ತ್ರೀಯ ಎರಡು ವರ್ಗಗಳನ್ನು ಮಾಡಿದನು. | فَجَعَلَ مِنْهُ الزَّوْجَيْنِ الذَّكَرَ وَالْاُنْثٰىؕ |
| 40. ಅವನು ಮೃತರನ್ನು ಪುನಃ ಜೀವಂತಗೊಳಿಸಲು ಶಕ್ತನಲ್ಲವೇ? | اَلَيْسَ ذٰلِكَ بِقٰدِرٍ عَلٰۤى اَنْ يُّحْيِۦَ الْمَوْتٰى |

---

9. ಮೂಲದಲ್ಲಿ 'ಸುದಾ' ಎಂಬ ಪದ ಪ್ರಯೋಗವಾಗಿದೆ. ಅರಬಿಯಲ್ಲಿ ಎಲ್ಲಿ ಬೇಕಾದರೂ ಸುತ್ತಾಡಲು ಬಿಟ್ಟು ನಿಯಂತ್ರಕರಾರೂ ಇಲ್ಲದ ಒಂಟೆಯನ್ನು 'ಇಬ್‌ಲುನ್ ಸುದಾ' ಎಂದು ಕರೆಯಲಾಗುತ್ತದೆ. ಅರ್ಥಾತ್, ಲಂಗುಲಗಾಮಿಲ್ಲದ ಒಂಟೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಮಾನವನ ಮೇಲೆ- ಅವನೊಂದು ಪ್ರಸ್ತಾವನೀಯ ವಸ್ತುವೇ ಆಗಿರದಂತಹ ಸುದೀರ್ಘ ಕಾಲವೊಂದು ಕಳೆದಿದೆಯೇ?[1]

هَلْ اَتٰى عَلَى الْاِنْسَانِ حِيْنٌ مِّنَ الدَّهْرِ لَمْ يَكُنْ شَيْـًٔا مَّذْكُوْرًا ①

2. ನಾವು ಮಾನವನನ್ನು ಒಂದು ಸಮ್ಮಿಶ್ರ ವೀರ್ಯದಿಂದ ಸೃಷ್ಟಿಸಿದೆವು. ಅವನನ್ನು ಪರೀಕ್ಷಿಸಲಿಕ್ಕಾಗಿ[2] ಮತ್ತು ಈ ಉದ್ದೇಶದಿಂದ ನಾವು ಅವನನ್ನು ಆಲಿಸುವವನಾಗಿ ಹಾಗೂ ವೀಕ್ಷಿಸುವವನಾಗಿ ಮಾಡಿದೆವು.

اِنَّا خَلَقْنَا الْاِنْسَانَ مِنْ نُّطْفَةٍ اَمْشَاجٍ ۖ نَّبْتَلِيْهِ فَجَعَلْنٰهُ سَمِيْعًا بَصِيْرًا ②

3. ನಾವು ಅವನಿಗೆ ಮಾರ್ಗದರ್ಶನ ಮಾಡಿದೆವು. ಅವನು ಕೃತಜ್ಞತೆ ಸಲ್ಲಿಸುವವನಾಗಲಿ ಅಥವಾ ಕೃತಘ್ನನಾಗಲಿ.[3]

اِنَّا هَدَيْنٰهُ السَّبِيْلَ اِمَّا شَاكِرًا وَّ اِمَّا كَفُوْرًا ③

4. ಸತ್ಯನಿಷೇಧಿಗಳಿಗೆ ನಾವು ಸಂಕೋಲೆಗಳನ್ನೂ ಕಂಠಕಡಗಗಳನ್ನೂ ಧಗಧಗಿಸುವ ಅಗ್ನಿಯನ್ನೂ ಸಿದ್ಧಗೊಳಿಸಿಟ್ಟಿದ್ದೇವೆ.

اِنَّآ اَعْتَدْنَا لِلْكٰفِرِيْنَ سَلٰسِلَا۠ وَاَغْلٰلًا وَّ سَعِيْرًا ④

5. ಸಜ್ಜನರು (ಸ್ವರ್ಗದಲ್ಲಿ) ಕರ್ಪೂರ ಜಲ ಮಿಶ್ರಿತ ಪಾನಪಾತ್ರೆಯಿಂದ ಕುಡಿಯುವರು.

اِنَّ الْاَبْرَارَ يَشْرَبُوْنَ مِنْ كَاْسٍ كَانَ مِزَاجُهَا كَافُوْرًا ⑤

6. ಇದೊಂದು ಹರಿಯುತ್ತಿರುವ ಚಿಲುಮೆಯಾಗಿದ್ದು ಅದರ ನೀರಿನೊಂದಿಗೆ ಅಲ್ಲಾಹನ ದಾಸರು ಮದಿರಾಪಾನ ಮಾಡುವರು ಮತ್ತು ತಾವಿಚ್ಛಿಸಿದೆಡೆ ನಿರಾಯಾಸವಾಗಿ ಅದರ ಶಾಖೆಗಳನ್ನು ಹೊರಡಿಸುವರು.

عَيْنًا يَّشْرَبُ بِهَا عِبَادُ اللّٰهِ يُفَجِّرُوْنَهَا تَفْجِيْرًا ⑥

1. ಇಲ್ಲಿ ಪ್ರಶ್ನೆ ಕೇಳುವುದು ಉದ್ದೇಶವಲ್ಲ. ಬದಲಾಗಿ, “ಹೌದು, ಅವನು ಅಂತಹ ಅವಸ್ಥೆಯ ಮೂಲಕ ದಾಟಿದ್ದಾನೆ” ಎಂದು ಮಾನವ ಸ್ವತಃ ಒಪ್ಪಿಕೊಳ್ಳುವಂತೆ ಮಾಡುವುದು ಹಾಗೂ ಮೊದಲು ಅವನನ್ನು ಶೂನ್ಯದಿಂದ ಸೃಷ್ಟಿಸಲಾಗಿರುವಾಗ ಮತ್ತೊಮ್ಮೆ ಸೃಷ್ಟಿಸಲು ಯಾಕೆ ಸಾಧ್ಯವಿಲ್ಲವೆಂದು ಅವನನ್ನು ಆಲೋಚಿಸುವಂತೆ ನಿರ್ಬಂಧಿಸುವುದು ಇದರ ಉದ್ದೇಶವಾಗಿದೆ.
2. ಅರ್ಥಾತ್- ಅವನನ್ನು ಅರಿವು ಮತ್ತು ಪ್ರಜ್ಞೆಯುಳ್ಳವನನ್ನಾಗಿ ಮಾಡಿದೆವು.
3. ಅರ್ಥಾತ್- ಸತ್ಯನಿಷೇಧ ಅಥವಾ ದೇವಸ್ತುತಿಯ ಪೈಕಿ ಯಾವುದನ್ನು ಬೇಕಾದರೂ ನೆಚ್ಚಿಕೊಳ್ಳುವ ಅಧಿಕಾರವನ್ನು ಅವನಿಗೆ ನೀಡುವುದರ ಜತೆಗೆ ಸತ್ಯನಿಷೇಧದ ಮಾರ್ಗ ಯಾವುದು, ದೇವಸ್ತುತಿಯ ಮಾರ್ಗ ಯಾವುದು ಎಂದು ಅವನಿಗೆ ತಿಳಿಸಿದೆವು.

7. ಇವರು (ಭೂಲೋಕದಲ್ಲಿ) ಹರಕೆ ಪೂರ್ತಿಗೊಳಿಸುವವರು.[4] ಎಲ್ಲೆಲ್ಲೂ ವಿಪತ್ತೇ ಹಬ್ಬಿ ಕೊಂಡಿರುವ ಆ ದಿನವನ್ನು ಭಯ ಪಡುವವರೂ ಆಗಿರುವರು.

يُوْفُوْنَ بِالنَّذْرِ وَ يَخَافُوْنَ يَوْمًا كَانَ شَرُّهٗ مُسْتَطِيْرًا ﴿۷﴾

8. ಮತ್ತು ಅಲ್ಲಾಹನ ಮೇಲಿನ ಪ್ರೇಮದಿಂದ ದರಿದ್ರರಿಗೂ ಅನಾಥರಿಗೂ ಸೆರೆಯಾಳುಗಳಿಗೂ ಊಟ ಕೊಡುತ್ತಾರೆ.

وَ يُطْعِمُوْنَ الطَّعَامَ عَلٰى حُبِّهٖ مِسْكِيْنًا وَّ يَتِيْمًا وَّ اَسِيْرًا ﴿۸﴾

9. (ಮತ್ತು ಅವರೊಡನೆ ಹೇಳುತ್ತಾರೆ,) "ನಾವು ನಿಮಗೆ ಕೇವಲ ಅಲ್ಲಾಹನಿಗಾಗಿ ಉಣಿಸುತ್ತಿದ್ದೇವೆ. ನಾವು ನಿಮ್ಮಿಂದ ಯಾವುದೇ ಪ್ರತಿಫಲವನ್ನಾಗಲಿ, ಕೃತಜ್ಞತೆಯನ್ನಾಗಲಿ ಬಯಸುವುದಿಲ್ಲ.

اِنَّمَا نُطْعِمُكُمْ لِوَجْهِ اللّٰهِ لَا نُرِيْدُ مِنْكُمْ جَزَآءً وَّ لَا شُكُوْرًا ﴿۹﴾

10. ನಮಗಂತು, ನಮ್ಮ ಪ್ರಭುವಿನಿಂದ ಆ ತೀವ್ರ ಕಾಠಿಣ್ಯದ ಅತ್ಯಂತ ಸುದೀರ್ಘ ದಿನದ ಭಯವಿದೆ."

اِنَّا نَخَافُ مِنْ رَّبِّنَا يَوْمًا عَبُوْسًا قَمْطَرِيْرًا ﴿۱۰﴾

11. ಅಲ್ಲಾಹನು ಅವರನ್ನು ಆ ದಿನದ ಕೇಡಿನಿಂದ ರಕ್ಷಿಸುವನು ಮತ್ತು ಅವರಿಗೆ ಉಲ್ಲಾಸವನ್ನೂ ಹರ್ಷವನ್ನೂ ನೀಡುವನು.

فَوَقٰىهُمُ اللّٰهُ شَرَّ ذٰلِكَ الْيَوْمِ وَ لَقّٰىهُمْ نَضْرَةً وَّ سُرُوْرًا ﴿۱۱﴾

12. ಮತ್ತು ಅವರ ಸಹನೆಯ ಪ್ರತಿಫಲವಾಗಿ[5] ಅವರಿಗೆ ಸ್ವರ್ಗೋದ್ಯಾನವನ್ನೂ ರೇಶ್ಮೆಯ ಉಡುಪನ್ನೂ ದಯಪಾಲಿಸುವನು.

وَ جَزٰىهُمْ بِمَا صَبَرُوْا جَنَّةً وَّ حَرِيْرًا ﴿۱۲﴾

13. ಅಲ್ಲಿ ಅವರು ಉನ್ನತ ಪೀಠಗಳ ಮೇಲೆ ದಿಂಬುಗಳಿಗೊರಗಿ ಕುಳಿತಿರುವರು. ಅಲ್ಲಿ ಬಿಸಿಲಿನ ಧಗೆಯಾಗಲಿ, ಚಳಿಯ ತೀವ್ರತೆಯಾಗಲಿ ಅವರನ್ನು ಬಾಧಿಸಲಾರದು.

مُّتَّكِـِٕيْنَ فِيْهَا عَلَى الْاَرَآئِكِ لَا يَرَوْنَ فِيْهَا شَمْسًا وَّ لَا زَمْهَرِيْرًا ﴿۱۳﴾

14. ಸ್ವರ್ಗೋದ್ಯಾನದ ನೆರಳು ಅವರ ಮೇಲೆ ಬಾಗಿ ಹರಡಿರುವುದು ಮತ್ತು (ಯಥೇಷ್ಟವಾಗಿ ಕೊಯ್ದುಕೊಳ್ಳುವಂತೆ) ಅದರ ಫಲಗಳು ಸದಾ ಅವರಿಗೆ ಎಟಕುತ್ತಿರುವುವು.

وَ دَانِيَةً عَلَيْهِمْ ظِلٰلُهَا وَ ذُلِّلَتْ قُطُوْفُهَا تَذْلِيْلًا ﴿۱۴﴾

15. ಅವರ ಮುಂದೆ ಬೆಳ್ಳಿಯ ಪಾತ್ರೆಗಳನ್ನೂ[6] ಗಾಜಿನ ಲೋಟಗಳನ್ನೂ ಸುತ್ತು ತರಲಾಗುವುದು-

وَ يُطَافُ عَلَيْهِمْ بِاٰنِيَةٍ مِّنْ فِضَّةٍ وَّ اَكْوَابٍ كَانَتْ قَوَارِيْرَا۠ ﴿۱۵﴾

4. ಹರಕೆಯೆಂದರೆ ದೇವನ ಜತೆ ಅವನ ಸಂಪ್ರೀತಿ ಗಳಿಸಲು ಕಡ್ಡಾಯ ಕೆಲಸವಲ್ಲದೆ ಇತರ ಯಾವುದಾದರೂ ಸತ್ಕಾರ್ಯವನ್ನೂ ಮಾಡುತ್ತೇನೆಂದು ಪ್ರತಿಜ್ಞೆ ಮಾಡುವುದು.

5. 'ಸಹನೆ' ಎಂಬ ಪದವನ್ನು ಇಲ್ಲಿ ಯಾವ ಅರ್ಥದಲ್ಲಿ ಬಳಸಲಾಗಿದೆ ಎಂದರೆ- ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಅವರು ಮರಣದ ತನಕವೂ ಅಲ್ಲಾಹನ ಆಜ್ಞಾಪಾಲನೆ ಮಾಡುತ್ತಿದ್ದರು ಮತ್ತು ಅವನ ಆಜ್ಞೋಲ್ಲಂಘನೆಯಿಂದ ದೂರವಿರುತ್ತಿದ್ದರು.

6. ಸೂರಃ ಅಝ್ಝುಖ್‌ರುಫ್‌ನ 71ನೆಯ ಸೂಕ್ತದಲ್ಲಿ ಅವರ ಮುಂದೆ ಚಿನ್ನದ ಪಾತ್ರೆಗಳನ್ನು ತಿರುಗಿಸಲಾಗುತ್ತಿರುವುದು ಎಂದು ಹೇಳಲಾಗಿದೆ.

16. ಆ ಗಾಜುಗಳು ಕೂಡಾ ಬೆಳ್ಳಿಯ ತರದವುಗಳಾಗಿರುವುವು.[7] ಅವುಗಳನ್ನು (ಸ್ವರ್ಗದ ವ್ಯವಸ್ಥಾಪಕರು) ಸರಿಯಾದ ಪ್ರಮಾಣದಲ್ಲಿ ತುಂಬಿಸಿರುವರು.

قَوَارِيرَا۟ مِن فِضَّةٍ قَدَّرُوهَا تَقْدِيرًا ١٦

17. ಅಲ್ಲಿ ಅವರಿಗೆ ಶುಂಠಿ ಬೆರೆತಿರುವಂತಹ ಮದಿರೆಯನ್ನು ಕುಡಿಸ ಲಾಗುವುದು.[8]

وَيُسْقَوْنَ فِيهَا كَأْسًا كَانَ مِزَاجُهَا زَنجَبِيلًا ١٧

18. ಇದೊಂದು ಸ್ವರ್ಗದ ಚಿಲುಮೆಯಾಗಿದ್ದು ಇದನ್ನು 'ಸಲ್‌ಸಬೀಲ್' ಎನ್ನಲಾಗುತ್ತದೆ.

عَيْنًا فِيهَا تُسَمَّىٰ سَلْسَبِيلًا ١٨

19. ಅವರ ಸೇವೆಗಾಗಿ ಸದಾ ಬಾಲಕರಾಗಿಯೇ ಇರುವಂತಹ ಬಾಲಕರು ಓಡಾಡುತ್ತಿರುವರು. ನೀವು ಅವರನ್ನು ಕಂಡರೆ ಹರಡಿರುವಂತಹ ಮುತ್ತುಗಳೆಂದೇ ಭಾವಿಸುವಿರಿ.

وَيَطُوفُ عَلَيْهِمْ وِلْدَانٌ مُّخَلَّدُونَ إِذَا رَأَيْتَهُمْ حَسِبْتَهُمْ لُؤْلُؤًا مَّنثُورًا ١٩

20. ಅಲ್ಲಿ ನೀವು ಎತ್ತ ದೃಷ್ಟಿ ಹರಿಸಿದರೂ ಅನುಗ್ರಹಗಳನ್ನೇ ಕಾಣು ವಿರಿ ಮತ್ತು ಒಂದು ಬೃಹತ್ ಸಾಮ್ರಾಜ್ಯದ ಸಂಪತ್ ಸಾಮಗ್ರಿಗಳೇ ನಿಮಗೆ ಕಾಣಿಸುವುವು.

وَإِذَا رَأَيْتَ ثَمَّ رَأَيْتَ نَعِيمًا وَمُلْكًا كَبِيرًا ٢٠

21. ಅವರ ಮೈ ಮೇಲೆ ತೆಳ್ಳಗಿನ ರೇಶ್ಮೆಯ ಹಸಿರು ಉಡುಪು ಮತ್ತು ಜರತಾರಿ ಬಟ್ಟೆಗಳಿರುವುವು. ಅವರಿಗೆ ಬೆಳ್ಳಿಯ ಕಂಕಣಗಳನ್ನು ತೊಡಿಸಲಾಗುವುದು[9] ಮತ್ತು ಅವರ ಪ್ರಭು ಅವರಿಗೆ ನಿರ್ಮಲವಾದ ಮದಿರೆಯನ್ನು ಕುಡಿಸುವನು.

عَالِيَهُمْ ثِيَابُ سُندُسٍ خُضْرٌ وَإِسْتَبْرَقٌ وَحُلُّوٓا۟ أَسَاوِرَ مِن فِضَّةٍ وَسَقَىٰهُمْ رَبُّهُمْ شَرَابًا طَهُورًا ٢١

22. ನಿಮಗಿರುವ ಪ್ರತಿಫಲವಿದು. ನಿಮ್ಮ ಸಾಧನೆಯು ಗೌರವಾರ್ಹ ವೆಂದು ಪರಿಗಣಿಸಲ್ಪಟ್ಟಿದೆ.

إِنَّ هَٰذَا كَانَ لَكُمْ جَزَآءً وَكَانَ سَعْيُكُم مَّشْكُورًا ٢٢

---

ಇದರಿಂದ ಕೆಲವೊಮ್ಮೆ ಅಲ್ಲಿ ಬಂಗಾರದ ಪಾತ್ರೆಗಳು ಉಪಯೋಗಿಸಲ್ಪಟ್ಟರೆ ಮತ್ತೆ ಕೆಲವೊಮ್ಮೆ ಬೆಳ್ಳಿಯ ಪಾತ್ರೆಗಳು ಉಪಯೋಗಿಸಲ್ಪಡುತ್ತ ದೆಂದು ವ್ಯಕ್ತವಾಗುತ್ತದೆ.

7. ಅರ್ಥಾತ್- ಅದು ಬೆಳ್ಳಿಯೇ ಆಗಿದ್ದರೂ ಗಾಜಿನಂತೆ ಶುಭ್ರವಾಗಿರುವುದು.

8. ಅರಬ್ ನಿವಾಸಿಗಳು ಮದ್ಯದ ಜತೆಗೆ ಶುಂಠಿ ಬೆರೆಸಿದ ನೀರಿನ ಮಿಶ್ರಣವನ್ನು ಇಷ್ಟಪಡುತ್ತಿದ್ದರು. ಆದ್ದರಿಂದ ಅವರೊಡನೆ ಅಲ್ಲಿ ಅವರಿಗೆ ಶುಂಠಿ ಮಿಶ್ರಿತ ಮದ್ಯವನ್ನು ಕುಡಿಸಲಾಗುವುದು ಎಂದು ಹೇಳಲಾಗುತ್ತಿದೆ.

9. ಅಲ್ ಹಜ್ಜ್ ಅಧ್ಯಾಯದ 23ನೆಯ ಸೂಕ್ತ ಮತ್ತು ಸೂರಃ ಫಾತಿರ್‌ನ 33ನೆಯ ಸೂಕ್ತದಲ್ಲಿ ಅಲ್ಲಿ ಅವರಿಗೆ ಚಿನ್ನದ ಕಂಕಣವನ್ನು ತೊಡಿಸಲಾಗುವುದು ಎಂದು ಹೇಳಲಾಗಿದೆ. ಇದರಿಂದ ತಿಳಿದುಬರುವುದೇನೆಂದರೆ ತಮ್ಮಿಚ್ಛೆಗೆ ಅನುಸಾರ ಕೆಲವೊಮ್ಮೆ ಅವರು ಚಿನ್ನದ ಕಂಕಣ ಧರಿಸಿದರೆ ಮತ್ತೆ ಕೆಲವೊಮ್ಮೆ ಬೆಳ್ಳಿಯ ಕಂಕಣ ಧರಿಸುವರು. ಹಾಗೆಯೇ ಮನಬಂದಾಗ ಎರಡನ್ನೂ ಸೇರಿಸಿ ಉಪಯೋಗಿಸುವರು.

23. ಸಂದೇಶವಾಹಕರೇ, ನಾವೇ ಈ ಕುರ್‌ಆನನ್ನು ನಿಮ್ಮ ಮೇಲೆ ಸ್ವಲ್ಪ ಸ್ವಲ್ಪವಾಗಿ ಅವತೀರ್ಣಗೊಳಿಸಿದ್ದೇವೆ.[10]

إِنَّا نَحْنُ نَزَّلْنَا عَلَيْكَ الْقُرْآنَ تَنزِيلًا ﴿٢٣﴾

24. ಆದುದರಿಂದ ನೀವು ನಿಮ್ಮ ಪ್ರಭುವಿನ ಅಪ್ಪಣೆಯ ವಿಷಯದಲ್ಲಿ ತಾಳ್ಮೆ ವಹಿಸಿರಿ[11] ಮತ್ತು ಇವರ ಪೈಕಿ ಯಾವುದೇ ಕರ್ಮಭ್ರಷ್ಟ ಅಥವಾ ಸತ್ಯನಿಷೇಧಿ ವ್ಯಕ್ತಿಯ ಮಾತನ್ನು ಅನುಸರಿಸಬೇಡಿರಿ.

فَاصْبِرْ لِحُكْمِ رَبِّكَ وَلَا تُطِعْ مِنْهُمْ آثِمًا أَوْ كَفُورًا ﴿٢٤﴾

25. ಸಂಜೆ-ಮುಂಜಾನೆಗಳಲ್ಲಿ ನಿಮ್ಮ ಪ್ರಭುವಿನ ನಾಮವನ್ನು ಸ್ಮರಿಸಿರಿ.

وَاذْكُرِ اسْمَ رَبِّكَ بُكْرَةً وَأَصِيلًا ﴿٢٥﴾

26. ಇರುಳಲ್ಲೂ ಅವನ ಮುಂದೆ ಸಾಷ್ಟಾಂಗವೆರಗಿರಿ ಮತ್ತು ರಾತ್ರೆಯ ದೀರ್ಘ ಸಮಯದಲ್ಲಿ ಅವನನ್ನು ಜಪಿಸುತ್ತಲಿರಿ.[12]

وَمِنَ اللَّيْلِ فَاسْجُدْ لَهُ وَسَبِّحْهُ لَيْلًا طَوِيلًا ﴿٢٦﴾

27. ಇವರಂತು ಶೀಘ್ರ ಪ್ರಾಪ್ತವಾಗುವ ವಸ್ತುವನ್ನು (ಇಹಲೋಕವನ್ನು) ಪ್ರೀತಿಸುತ್ತಾರೆ ಮತ್ತು ಮುಂದೆ ಬರಲಿರುವ ಮಹಾ ದಿನವನ್ನು ಕಡೆಗಣಿಸುತ್ತಾರೆ.

إِنَّ هَٰؤُلَاءِ يُحِبُّونَ الْعَاجِلَةَ وَيَذَرُونَ وَرَاءَهُمْ يَوْمًا ثَقِيلًا ﴿٢٧﴾

28. ನಾವೇ ಇವರನ್ನು ಸೃಷ್ಟಿಸಿರುತ್ತೇವೆ ಮತ್ತು ಇವರ ಸಂದುಗಳನ್ನು ಬಲಾಢ್ಯಗೊಳಿಸಿದ್ದೇವೆ. ನಾವಿಚ್ಛಿಸಿದಾಗ ಇವರ ರೂಪಗಳನ್ನು ಬದಲಿಸಿ ಬಿಡಬಲ್ಲೆವು.

نَّحْنُ خَلَقْنَاهُمْ وَشَدَدْنَا أَسْرَهُمْ وَإِذَا شِئْنَا بَدَّلْنَا أَمْثَالَهُمْ تَبْدِيلًا ﴿٢٨﴾

29. ಇದೊಂದು ಬೋಧನೆಯಾಗಿದೆ. ಇನ್ನು ಇಷ್ಟ ಉಳ್ಳವನು ತನ್ನ ಪ್ರಭುವಿನ ಕಡೆಗೆ ಹೋಗುವ ಮಾರ್ಗವನ್ನು ಅನುಸರಿಸಲಿ.

إِنَّ هَٰذِهِ تَذْكِرَةٌ فَمَن شَاءَ اتَّخَذَ إِلَىٰ رَبِّهِ سَبِيلًا ﴿٢٩﴾

30. ಮತ್ತು ಅಲ್ಲಾಹನು ಇಚ್ಛಿಸುವ ತನಕ, ನೀವು ಇಚ್ಛಿಸುವುದರಿಂದ ಏನೂ ನಡೆಯದು. ಖಂಡಿತವಾಗಿಯೂ ಅಲ್ಲಾಹನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ.

وَمَا تَشَاءُونَ إِلَّا أَن يَشَاءَ اللَّهُ إِنَّ اللَّهَ كَانَ عَلِيمًا حَكِيمًا ﴿٣٠﴾

---

10. ಇಲ್ಲಿ ಪ್ರವಾದಿವರ್ಯರನ್ನುದ್ದೇಶಿಸಿ(ಸ) ಈ ಮಾತು ಹೇಳಲಾಗಿರುವಂತೆ ಗೋಚರಿಸುತ್ತದೆ. ಆದರೆ ನಿಜವಾಗಿ ಸತ್ಯನಿಷೇಧಿಗಳ ಒಂದು ಆಕ್ಷೇಪಕ್ಕೆ ಉತ್ತರ ನೀಡಲಾಗುತ್ತಿದೆ. ಪ್ರವಾದಿವರ್ಯರು(ಸ) ಚಿಂತನ-ಮಂಥನ ನಡೆಸಿ ಈ ಕುರ್‌ಆನನ್ನು ರಚಿಸುತ್ತಿದ್ದಾರೆ. ಅನ್ಯಥಾ ಅಲ್ಲಾಹನ ವತಿಯಿಂದ ಯಾವುದೇ ಆದೇಶ ಬರುವುದಿದ್ದರೆ ಒಮ್ಮೆಲೇ ಸಂಪೂರ್ಣವಾಗಿ ಬರುತ್ತಿತ್ತು ಎಂದು ಅವರು ಆಕ್ಷೇಪ ವ್ಯಕ್ತಪಡಿಸುತ್ತಿದ್ದರು.

11. ಅರ್ಥಾತ್- ಯಾವ ಮಹತ್ಕಾರ್ಯಕ್ಕಾಗಿ ನಿಮ್ಮ ಪ್ರಭು ನಿಮ್ಮನ್ನು ನೇಮಿಸಿದ್ದಾನೋ ಅದರ ಬವಣೆ-ಬಳಲಿಕೆಗಳ ಬಗ್ಗೆ ತಾಳ್ಮೆ ವಹಿಸಿರಿ. ನಿಮಗೆ ಎದುರಾಗುವ ಎಲ್ಲಾ ವಿಷಯಗಳನ್ನು ಧೈರ್ಯದಿಂದ ಸಹಿಸಿಕೊಳ್ಳುತ್ತಾ ಸಾಗಿರಿ. ನಿಮ್ಮ ಪಾದಗಳು ಎಂದೂ ವಿಚಲಿತವಾಗದಂತೆ ನೋಡಿಕೊಳ್ಳಿರಿ.

12. ಸಮಯದ ನಿರ್ಧಾರದ ಜತೆಗೆ ಅಲ್ಲಾಹನ ಸ್ಮರಣೆಯ ಆದೇಶ ಕೊಡಲಾದರೆ ಅದರರ್ಥ ನಮಾಝ್ ಆಗಿದೆ. ಈ ಸೂಕ್ತದಲ್ಲಿ ಮೊಟ್ಟ ಮೊದಲು, 'ವದ್‌ಕುರಿಸ್ಮ ರಬ್ಬಿಕ ಬುಕ್‌ರತನ್‌ವ ಅಸೀಲ' ಎಂದು ಹೇಳಲಾಗಿದೆ. 'ಬುಕ್‌ರಃ' ಎಂದು ಅರಬಿ ಭಾಷೆಯಲ್ಲಿ ಪ್ರಭಾವಕ್ಕೆ ಹೇಳಲಾಗುತ್ತದೆ. 'ಅಸೀಲ' ಎಂಬ ಪದವನ್ನು ಸೂರ್ಯ ನಡುನೆತ್ತಿಯಿಂದ ಸರಿಯುವುದರಿಂದ ಹಿಡಿದು ಸೂರ್ಯಾಸ್ತಮಾನದ ವರೆಗಿನ ಅವಧಿಗೆ ಉಪಯೋಗಿಸಲಾಗುತ್ತದೆ. ಅದರಲ್ಲಿ ಝುಹರ್ ಮತ್ತು ಅಸರ್ ನಮಾಝಿನ ಅವಧಿ ಸೇರಿದೆ. ಅನಂತರ 'ವಮಿನಲ್ಲೈಲಿ

31. ಅವನು ತಾನಿಚ್ಛಿಸಿದವರನ್ನು ತನ್ನ ಕೃಪಾಶ್ರಯದಲ್ಲಿ ಸೇರಿಸಿಕೊಳ್ಳುತ್ತಾನೆ ಮತ್ತು ಅಕ್ರಮಿಗಳಿಗಾಗಿ ಅವನು ವೇದನಾಯುಕ್ತ ಯಾತನೆಯನ್ನು ಸಿದ್ಧಗೊಳಿಸಿ ಇಟ್ಟಿರುತ್ತಾನೆ.

يُّدۡخِلُ مَنۡ يَّشَآءُ فِىۡ رَحۡمَتِهٖ‌ؕ وَالظّٰلِمِيۡنَ اَعَدَّ لَهُمۡ عَذَابًا اَلِيۡمًا ۝٣١

ع ٢

---

ಫಸ್ಜುದ್ ಲಹು' ಎಂದು ಹೇಳಲಾಗಿದೆ. ರಾತ್ರಿಯ ಅವಧಿ ಸೂರ್ಯಾಸ್ತಮಾನದ ನಂತರದಿಂದ ಆರಂಭವಾಗುತ್ತದೆ. ಆದ್ದರಿಂದ ರಾತ್ರಿಯ ಸಾಷ್ಟಾಂಗದ ಆದೇಶದಲ್ಲಿ ಮಗ್ರಿಬ್ ಮತ್ತು ಇಷಾ ನಮಾಝಿನ ವೇಳೆಗಳು ಸೇರುತ್ತವೆ. ಅನಂತರ 'ರಾತ್ರಿಯ ದೀರ್ಘ ಸಮಯದಲ್ಲಿ ಅವನನ್ನು ಜಪಿಸುತ್ತಲಿರಿ' ಎಂದು ಹೇಳಲಾಗಿರುವುದು 'ತಹಜ್ಜುದ್' ನಮಾಝ್‌ನ ಕಡೆಗಿರುವ ಸ್ಪಷ್ಟವಾದ ಸೂಚನೆಯಾಗಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1-6. ಒಂದರ ಹಿಂದೆ ಒಂದರಂತೆ ಕಳುಹಿಸಲ್ಪಡುವ (ಮಾರುತ), ಬಳಿಕ ಬಿರುಗಾಳಿಯ ವೇಗದಲ್ಲಿ ಬೀಸುವ ಮತ್ತು (ಮೋಡಗಳನ್ನು) ಎತ್ತಿಕೊಂಡು ಹರಡುವ, ಬಳಿಕ (ಅವುಗಳನ್ನು) ಸೀಳಿ ಬೇರ್ಪಡಿಸುವ- ಆಗ ನೆಪದ ರೂಪದಲ್ಲಾಗಲಿ ಅಥವಾ ಎಚ್ಚರಿಕೆಯ ರೂಪದಲ್ಲಾಗಲಿ (ಹೃದಯಗಳಲ್ಲಿ ದೇವ) ಸ್ಮರಣೆಯನ್ನು ಮೂಡಿಸುವವುಗಳಾಣೆ![1]

وَالْمُرْسَلٰتِ عُرْفًا ﴿١﴾ فَالْعٰصِفٰتِ عَصْفًا ﴿٢﴾ وَّالنّٰشِرٰتِ نَشْرًا ﴿٣﴾ فَالْفٰرِقٰتِ فَرْقًا ﴿٤﴾ فَالْمُلْقِيٰتِ ذِكْرًا ﴿٥﴾ عُذْرًا اَوْ نُذْرًا ﴿٦﴾

7. ನಿಮಗೆ ವಾಗ್ದಾನ ಮಾಡಲಾಗುತ್ತಿರುವ ಘಟನೆಯು ಖಂಡಿತವಾಗಿಯೂ ಸಂಭವಿಸಲಿದೆ.[2]

اِنَّمَا تُوْعَدُوْنَ لَوَاقِعٌ ﴿٧﴾

8. ಇನ್ನು- ನಕ್ಷತ್ರಗಳು ಕಳೆಗುಂದಿ ಹೋಗುವಾಗ-

فَاِذَا النُّجُوْمُ طُمِسَتْ ﴿٨﴾

9. ಮತ್ತು ಆಕಾಶವು ಸೀಳಲ್ಪಡುವಾಗ-

وَاِذَا السَّمَآءُ فُرِجَتْ ﴿٩﴾

10. ಮತ್ತು ಪರ್ವತಗಳು ಹಿಂಜಲ್ಪಡುವಾಗ-

وَاِذَا الْجِبَالُ نُسِفَتْ ﴿١٠﴾

11. ಮತ್ತು ಪ್ರವಾದಿಗಳು ಹಾಜರಾಗುವ ಸಮಯ ಸನ್ನಿಹಿತವಾಗುವಾಗ[3] (ಆ ದಿನ ಆ ಘಟನೆ ಸಂಭವಿಸಿ ಬಿಡುವುದು)

وَاِذَا الرُّسُلُ اُقِّتَتْ ﴿١١﴾

1. ಅರ್ಥಾತ್- ಕೆಲವೊಮ್ಮೆ ಅವುಗಳ ಬರುವಿಕೆ ನಿಂತು ಕ್ಷಾಮದ ಅಪಾಯ ತಲೆದೋರಿದಾಗ ಮನಸ್ಸು ಮೃದುವಾಗುತ್ತದೆ. ಜನರು ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡತೊಡಗುತ್ತಾರೆ. ಕೆಲವೊಮ್ಮೆ ಅವು ಕೃಪಾವೃಷ್ಟಿ ತಂದಾಗ ಜನರು ಅಲ್ಲಾಹನನ್ನು ಸ್ತುತಿಸುತ್ತಾರೆ. ಕೆಲವೊಮ್ಮೆ ಅವು ಚಂಡಮಾರುತದ ಭೀಕರ ರೂಪ ತಾಳಿದಾಗ ಮನಸ್ಸಿನಲ್ಲಿ ಭಯ ಆವರಿಸುತ್ತದೆ. ವಿನಾಶದ ಭಯದಿಂದ ಜನರು ದೇವನತ್ತ ತಿರುಗುತ್ತಾರೆ.
2. ಅರ್ಥಾತ್- ಮಾರುತಗಳ ಈ ವ್ಯವಸ್ಥೆ ಪುನರುತ್ಥಾನವಂತೂ ಒಂದು ದಿನ ಬಂದೇ ತೀರುವುದು ಎಂಬುದರ ಸಾಕ್ಷ್ಯ ವಹಿಸುತ್ತದೆ. ಗಾಳಿಯು, ಸೃಷ್ಟಿಗಳ ಬದುಕಿನ ಅತ್ಯಂತ ಪ್ರಮುಖ ಆಧಾರವಾಗಿದೆ. ಆದರೆ ಅಲ್ಲಾಹನು ತಾನಿಚ್ಛಿಸಿದಾಗ ಅದನ್ನು ವಿನಾಶ ಸಾಧನವನ್ನಾಗಿ ಮಾಡುತ್ತಾನೆ ಮತ್ತು ಮಾಡಿದ್ದಾನೆ.
3. ಹಶ್ರ್‌ನ ಮೈದಾನದಲ್ಲಿ ಸಮಸ್ತ ಮಾನವಕುಲದ ವಿಚಾರಣೆ ನಡೆಯುವಾಗ ಪ್ರತಿಯೊಂದು ಸಮುದಾಯದ ಪ್ರವಾದಿಯನ್ನು ಸಾಕ್ಷ್ಯ

| | |
|---|---|
| 12. ಈ ಕಾರ್ಯವನ್ನು ಯಾವ ದಿನಕ್ಕಾಗಿ ಮುಂದೂಡಲಾಗಿದೆ? | لِاَيِّ يَوْمٍ اُجِّلَتْ ﴿١٢﴾ |
| 13. ತೀರ್ಮಾನದ ದಿನಕ್ಕಾಗಿ. | لِيَوْمِ الْفَصْلِ ﴿١٣﴾ |
| 14. ಆ ತೀರ್ಮಾನದ ದಿನವೇನೆಂಬುದು ನಿಮಗೇನು ಗೊತ್ತು? | وَمَآ اَدْرٰىكَ مَا يَوْمُ الْفَصْلِ ﴿١٤﴾ |
| 15. ಅಂದು, ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَّوْمَئِذٍ لِّلْمُكَذِّبِيْنَ ﴿١٥﴾ |
| 16. ನಾವು ಹಿಂದಿನವರನ್ನು ನಾಶಗೊಳಿಸಲಿಲ್ಲವೇ? | اَلَمْ نُهْلِكِ الْاَوَّلِيْنَ ﴿١٦﴾ |
| 17. ಆ ಬಳಿಕ ಅನಂತರದವರನ್ನೂ ನಾವು ಅದರ ಹಿಂದೆಯೇ ಕಳುಹಿಸುವೆವು. | ثُمَّ نُتْبِعُهُمُ الْاٰخِرِيْنَ ﴿١٧﴾ |
| 18. ನಾವು ಅಪರಾಧಿಗಳೊಂದಿಗೆ ಹೀಗೆಯೇ ವ್ಯವಹರಿಸುತ್ತೇವೆ. | كَذٰلِكَ نَفْعَلُ بِالْمُجْرِمِيْنَ ﴿١٨﴾ |
| 19. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[4] | وَيْلٌ يَّوْمَئِذٍ لِّلْمُكَذِّبِيْنَ ﴿١٩﴾ |
| 20. ನಾವು ನಿಮ್ಮನ್ನು ಒಂದು ತುಚ್ಛ ದ್ರವದಿಂದ ಸೃಷ್ಟಿಸಲಿಲ್ಲವೇ? | اَلَمْ نَخْلُقْكُّمْ مِّنْ مَّآءٍ مَّهِيْنٍ ﴿٢٠﴾ |
| 21. ಮತ್ತು ಅದನ್ನು ಒಂದು ಸುರಕ್ಷಿತ ಸ್ಥಳದಲ್ಲಿರಿಸಲಿಲ್ಲವೇ? | فَجَعَلْنٰهُ فِيْ قَرَارٍ مَّكِيْنٍ ﴿٢١﴾ |
| 22. ಒಂದು ನಿಶ್ಚಿತ ಕಾಲಾವಧಿವರೆಗೆ- | اِلٰى قَدَرٍ مَّعْلُوْمٍ ﴿٢٢﴾ |
| 23. ನೋಡಿರಿ, ನಾವು ಹಾಗೆ ಮಾಡಲು ಸಮರ್ಥರಾಗಿದ್ದೆವು. ಆದುದರಿಂದ ನಾವು ಅತ್ಯುತ್ತಮ ಸಾಮರ್ಥ್ಯವುಳ್ಳವರಾಗಿದ್ದೇವೆ. | فَقَدَرْنَا ۖ فَنِعْمَ الْقٰدِرُوْنَ ﴿٢٣﴾ |
| 24. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[5] | وَيْلٌ يَّوْمَئِذٍ لِّلْمُكَذِّبِيْنَ ﴿٢٤﴾ |
| 25. ನಾವು ಭೂಮಿಯನ್ನು ಶೇಖರಿಸಿಡುವಂತಹದ್ದಾಗಿ ಮಾಡಲಿಲ್ಲವೇ? | اَلَمْ نَجْعَلِ الْاَرْضَ كِفَاتًا ﴿٢٥﴾ |

ವಹಿಸಲು ಮುಂದೆ ತರಲಾಗುವುದು. ಅವರು ತಾನು ಅಲ್ಲಾಹನ ಸಂದೇಶವನ್ನು ಜನರಿಗೆ ತಲಪಿಸಿದ್ದೇನೆ ಎಂಬುದರ ಸಾಕ್ಷ್ಯ ವಹಿಸಬೇಕಾಗುವುದು. ಪವಿತ್ರ ಕುರ್‌ಆನಿನಲ್ಲಿ ಈ ವಿಷಯವನ್ನು ಅನೇಕ ಕಡೆ ಪ್ರಸ್ತಾಪಿಸಲಾಗಿದೆ.

4. ಲೋಕದಲ್ಲಿ ಅವರು ಯಾವ ಪರಿಣಾಮವನ್ನು ಎದುರಿಸಿದ್ದಾರೋ ಅಥವಾ ಎದುರಿಸಲಿದ್ದಾರೋ ಅದು ಅವರ ನಿಜವಾದ ಶಿಕ್ಷೆಯಲ್ಲ. ನಿಜವಾದ ಶಿಕ್ಷೆ ಅವರಿಗೆ ಫಲಿತಾಂಶದ ಆ ದಿನದಂದು ಎರಗುವುದು ಎಂದು ಹೇಳುವುದು ಇಲ್ಲಿ ಈ ವಿಷಯವನ್ನು ಪ್ರಸ್ತಾಪಿಸಲಾಗಿರುವುದರ ಉದ್ದೇಶವಾಗಿದೆ.
5. ಅರ್ಥಾತ್- ಮರಣೋತ್ತರ ಜೀವನದ ಈ ಸುಸ್ಪಷ್ಟ ಸಾಕ್ಷಿ ಮುಂದಿರುವಾಗಲೂ ಇಂದು ಅದನ್ನು ನಿರಾಕರಿಸುತ್ತಿರುವ ಜನರು ಆ ದಿನ ವಿನಾಶಕ್ಕೀಡಾಗುವರು.

26. ಜೀವಂತವಿರುವವರಿಗಾಗಿಯೂ ಮೃತರಿಗಾಗಿಯೂ

أَحْيَاءً وَأَمْوَاتًا ﴿٢٦﴾

27. ಮತ್ತು ಅದರಲ್ಲಿ ಉನ್ನತೋನ್ನತ ಪರ್ವತಗಳನ್ನು ಸ್ಥಿರವಾಗಿರಿಸಲಿಲ್ಲವೇ? ಮತ್ತು ನಿಮಗೆ ಸಿಹಿ ನೀರನ್ನು ಕುಡಿಸಲಿಲ್ಲವೇ?

وَجَعَلْنَا فِيهَا رَوَاسِيَ شَامِخَاتٍ وَأَسْقَيْنَاكُم مَّاءً فُرَاتًا ﴿٢٧﴾

28. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[6]

وَيْلٌ يَوْمَئِذٍ لِّلْمُكَذِّبِينَ ﴿٢٨﴾

29. [7]ಈಗ, ನೀವು ಯಾವುದನ್ನು ಸುಳ್ಳೆಂದು ಹೇಳುತ್ತಿದ್ದಿರೋ ಅದರೆಡೆಗೇ ನಡೆಯಿರಿ-

انطَلِقُوا إِلَىٰ مَا كُنتُم بِهِ تُكَذِّبُونَ ﴿٢٩﴾

30. ಮೂರು ಕವಲುಗಳುಳ್ಳ ನೆರಳಿನ ಕಡೆಗೆ ನಡೆಯಿರಿ-[8]

انطَلِقُوا إِلَىٰ ظِلٍّ ذِي ثَلَاثِ شُعَبٍ ﴿٣٠﴾

31. (ಅದು) ತಂಪೊದಗಿಸುವಂತಹದೂ ಅಲ್ಲ, ಅಗ್ನಿ ಜ್ವಾಲೆಯಿಂದ ರಕ್ಷಿಸುವಂತಹದೂ ಅಲ್ಲ.

لَّا ظَلِيلٍ وَلَا يُغْنِي مِنَ اللَّهَبِ ﴿٣١﴾

32. ಆ ಬೆಂಕಿಯು ದೊಡ್ಡ ದೊಡ್ಡ ಭವನದಂತಹ ಕಿಡಿಗಳನ್ನು ಉಗುಳುವುದು.

إِنَّهَا تَرْمِي بِشَرَرٍ كَالْقَصْرِ ﴿٣٢﴾

33. ಅವು (ಜಿಗಿಯುತ್ತಿರುವ) ಹಳದಿ ಒಂಟೆಗಳೋ ಎಂಬಂತಿರುವುವು.

كَأَنَّهُ جِمَالَتٌ صُفْرٌ ﴿٣٣﴾

34. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَوْمَئِذٍ لِّلْمُكَذِّبِينَ ﴿٣٤﴾

35. ಅದು, ಅವರೇನೂ ಮಾತನಾಡದ ದಿನವಾಗಿರುವುದು-

هَٰذَا يَوْمُ لَا يَنطِقُونَ ﴿٣٥﴾

36. ಮತ್ತು ಅವರಿಗೆ ಅಂದು ನೆಪಗಳನ್ನೊಡ್ಡುವ ಅನುಮತಿಯನ್ನೂ ನೀಡಲಾಗದು.[9]

وَلَا يُؤْذَنُ لَهُمْ فَيَعْتَذِرُونَ ﴿٣٦﴾

37. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَوْمَئِذٍ لِّلْمُكَذِّبِينَ ﴿٣٧﴾

6. ಅರ್ಥಾತ್- ಯಾರು ದೇವನ ಯುಕ್ತಿ ಮತ್ತು ಮಹಿಮೆಗಳ ಈ ಚಮತ್ಕಾರಗಳನ್ನು ನೋಡಿದ ನಂತರವೂ ಪರಲೋಕದ ಸಾಧ್ಯತೆ ಮತ್ತು ಸತ್ಯತೆಯನ್ನು ನಿರಾಕರಿಸುತ್ತಾರೋ ಅವರು ಅದೇ ರೀತಿಯ ಭ್ರಮೆಯಲ್ಲಿರಬಯಸಿದರೆ ಇದ್ದು ಬಿಡಲಿ. ಎಲ್ಲವೂ ಅವರ ನಿರೀಕ್ಷೆಗೆ ವಿರುದ್ಧವಾಗಿ ನಡೆಯುವ ಆ ದಿನ, ನಮ್ಮ ಮೂರ್ಖತನದ ಮೂಲಕ ನಾವು ನಮಗೇ ನಷ್ಟ ಉಂಟು ಮಾಡಿದೆವು ಎಂದು ಅವರಿಗೆ ತಿಳಿದುಬರುವುದು.

7. ಪರಲೋಕಕ್ಕೆ ಆಧಾರಗಳನ್ನು ನೀಡಲಾದ ನಂತರ, ಈಗ ಆ ದಿನ ಬಂದು ಬಿಟ್ಟಾಗ ನಿಷೇಧಿಗಳು ಯಾವ ಪರಿಣಾಮವನ್ನೆದುರಿಸುವರು ಎಂದು ಹೇಳಲಾಗುತ್ತಿದೆ.

8. ನೆರಳು ಎಂದರೆ ಹೊಗೆಯ ನೆರಳಾಗಿದೆ. ದೊಡ್ಡ ಪ್ರಮಾಣದಲ್ಲಿ ಹೊಗೆಯೆದ್ದಾಗ ಅದು ಮೇಲೆ ಹೋಗಿ ಅನೇಕ ಶಾಖೆಗಳಲ್ಲಿ ವಿಭಜನೆಯಾಗುತ್ತದೆ. ಇದನ್ನೇ ಇಲ್ಲಿ ಮೂರು ಶಾಖೆಗಳು ಎಂದು ಹೇಳಲಾಗಿದೆ.

9. ಅರ್ಥಾತ್- ಅವರ ವಿರುದ್ಧ ಎಷ್ಟು ಪ್ರಬಲವಾದ ಆಧಾರ ಪ್ರಮಾಣಗಳೊಂದಿಗೆ ಮೊಕದ್ದಮೆಯನ್ನು ಸಾಬೀತು ಪಡಿಸಲಾಗುವುದೆಂದರೆ ಅವರು ಸ್ತಂಭೀಭೂತರಾಗಿ ಬಿಡುವರು. ಅವರಿಗೆ ತಮ್ಮ ಪರವಾಗಿ ಯಾವುದೇ ಸಬೂಬು ಹೇಳುವ ಅವಕಾಶವೇ ದೊರೆಯಲಾರದು.

| | |
|---|---|
| 38. ಇದು ತೀರ್ಪಿನ ದಿನ. ನಾವು ನಿಮ್ಮನ್ನೂ ನಿಮ್ಮ ಪೂರ್ವಜರನ್ನೂ ಒಟ್ಟುಗೂಡಿಸಿ ಬಿಟ್ಟಿದ್ದೇವೆ. | هَٰذَا يَوْمُ الْفَصْلِ جَمَعْنَاكُمْ وَالْأَوَّلِينَ ﴿٣٨﴾ |
| 39. ಈಗ ನಿಮಗೆ ಸಾಧ್ಯವಿದ್ದರೆ ನನ್ನ ವಿರುದ್ಧ ಏನಾದರೂ ಕುತಂತ್ರ ನಡೆಸಿ ನೋಡಿರಿ. | فَإِن كَانَ لَكُمْ كَيْدٌ فَكِيدُونِ ﴿٣٩﴾ |
| 40. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٤٠﴾ |
| 41. ಧರ್ಮನಿಷ್ಠರು ಇಂದು ನೆರಳುಗಳಲ್ಲೂ ಚಿಲುಮೆಗಳಲ್ಲೂ ಇದ್ದಾರೆ- | إِنَّ الْمُتَّقِينَ فِي ظِلَالٍ وَعُيُونٍ ﴿٤١﴾ |
| 42. ಮತ್ತು ಅವರು ಇಷ್ಟಪಡುವ ಫಲಗಳು(ಅವರಿಗಾಗಿ ಸಿದ್ಧವಾಗಿವೆ). | وَفَوَاكِهَ مِمَّا يَشْتَهُونَ ﴿٤٢﴾ |
| 43. ನೀವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವಾಗಿ ಸಂತೋಷದಿಂದ ತಿನ್ನಿರಿ ಮತ್ತು ಕುಡಿಯಿರಿ. | كُلُوا وَاشْرَبُوا هَنِيئًا بِمَا كُنتُمْ تَعْمَلُونَ ﴿٤٣﴾ |
| 44. ನಾವು ಸಜ್ಜನರಿಗೆ ಇಂತಹದೇ ಸತ್ಫಲವನ್ನು ನೀಡುತ್ತೇವೆ. | إِنَّا كَذَٰلِكَ نَجْزِي الْمُحْسِنِينَ ﴿٤٤﴾ |
| 45. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٤٥﴾ |
| 46. ತಿನ್ನಿರಿ ಮತ್ತು ಅನುಭೋಗಿಸಿರಿ[10]- ಕೆಲವು ದಿನ ಮಾತ್ರ. ವಾಸ್ತವದಲ್ಲಿ ನೀವು ಅಪರಾಧಿಗಳಾಗಿದ್ದೀರಿ. | كُلُوا وَتَمَتَّعُوا قَلِيلًا إِنَّكُم مُّجْرِمُونَ ﴿٤٦﴾ |
| 47. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٤٧﴾ |
| 48. ಇವರೊಡನೆ (ಅಲ್ಲಾಹನ ಮುಂದೆ) ತಲೆಬಾಗಿರಿ ಎಂದಾಗ ಇವರು ತಲೆಬಾಗುವುದಿಲ್ಲ. | وَإِذَا قِيلَ لَهُمُ ارْكَعُوا لَا يَرْكَعُونَ ﴿٤٨﴾ |
| 49. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَوْمَئِذٍ لِّلْمُكَذِّبِينَ ﴿٤٩﴾ |
| 50. ಇನ್ನು ಇದರ (ಕುರ್‌ಆನಿನ) ಅನಂತರ ಇನ್ನಾವ ವಚನದ ಮೇಲೆ ತಾನೇ ಇವರು ವಿಶ್ವಾಸವಿರಿಸುವರು? | فَبِأَيِّ حَدِيثٍ بَعْدَهُ يُؤْمِنُونَ ﴿٥٠﴾ |

---

10. ಮಾತನ್ನು ಕೊನೆಗೊಳಿಸುತ್ತಾ, ಮಕ್ಕಾದ ಸತ್ಯನಿಷೇಧಿಗಳನ್ನಷ್ಟೇ ಅಲ್ಲದೆ ವಿಶ್ವದ ಸಮಸ್ತ ಸತ್ಯನಿಷೇಧಿಗಳನ್ನು ಉದ್ದೇಶಿಸಿ ಈ ಮಾತು ಹೇಳಲಾಗುತ್ತಿದೆ.






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. *ಇವರು ಯಾವ ವಿಷಯದ ಕುರಿತು ವಿಚಾರಿಸುತ್ತಿದ್ದಾರೆ?

عَمَّ يَتَسَآءَلُوْنَ ۝١

2. ಆ ಮಹಾ ವಾರ್ತೆಯ ಕುರಿತು-

عَنِ النَّبَاِ الْعَظِيْمِ ۝٢

3. ಇವರು ನಾನಾ ವಿಧದ ಪಿಸು ಮಾತುಗಳನ್ನಾಡುತ್ತಿರುವುದೇ?

الَّذِىْ هُمْ فِيْهِ مُخْتَلِفُوْنَ ۝٣

4. ಖಂಡಿತ ಅಲ್ಲ![1] ಸದ್ಯದಲ್ಲೇ ಅವರಿಗೆ ತಿಳಿದು ಬರುವುದು-

كَلَّا سَيَعْلَمُوْنَ ۝٤

5. ಹೌದು ಖಂಡಿತ ಅಲ್ಲ! ಸದ್ಯದಲ್ಲೇ ಅವರಿಗೆ ತಿಳಿದು ಬರುವುದು.

ثُمَّ كَلَّا سَيَعْلَمُوْنَ ۝٥

6. ಇವು ವಾಸ್ತವಿಕತೆಯಲ್ಲವೆ, ನಾವು ಭೂಮಿಯನ್ನು ಹಾಸನ್ನಾಗಿ ಮಾಡಿರುವುದು-

اَلَمْ نَجْعَلِ الْاَرْضَ مِهٰدًا ۝٦

7. ಪರ್ವತಗಳನ್ನು ಮೊಳೆಗಳಂತೆ ನಾಟಿ ಬಿಟ್ಟಿರುವುದು.

وَّالْجِبَالَ اَوْتَادًا ۝٧

8. ನಿಮ್ಮನ್ನು (ಸ್ತ್ರೀ ಮತ್ತು ಪುರುಷರ) ಜೋಡಿಗಳ ರೂಪದಲ್ಲಿ ಸೃಷ್ಟಿಸಿರುವುದು-

وَّخَلَقْنٰكُمْ اَزْوَاجًا ۝٨

9. ನಿಮ್ಮ ನಿದ್ರೆಯನ್ನು ವಿಶ್ರಾಂತಿಯ ಸಾಧನವಾಗಿ ಮಾಡಿರುವುದು-

وَّجَعَلْنَا نَوْمَكُمْ سُبَاتًا ۝٩

10. ರಾತ್ರೆಯನ್ನು ಮರೆಮಾಡುವ ಸಾಧನವಾಗಿ ಮಾಡಿರುವುದು-

وَّجَعَلْنَا الَّيْلَ لِبَاسًا ۝١٠

11. ಹಗಲನ್ನು ಉಪಜೀವನವನ್ನರಸುವ ಸಮಯವಾಗಿಯೂ ಮಾಡಿರುವುದು-

وَّجَعَلْنَا النَّهَارَ مَعَاشًا ۝١١

***ಇಲ್ಲಿಂದ 30ನೆಯ ಕಾಂಡ ಆರಂಭ**

1. ಅರ್ಥಾತ್- ಪರಲೋಕದ ಬಗ್ಗೆ ಜನರು ಆಡಿಕೊಳ್ಳುತ್ತಿರುವ ಮಾತುಗಳೆಲ್ಲವೂ ತಪ್ಪು. ಅವರು ಕಲ್ಪಿಸಿಕೊಂಡಿರುವುದಾವುದೂ ಸರಿಯಲ್ಲ.

12. ನಿಮ್ಮ ಮೇಲ್ಭಾಗದಲ್ಲಿ ಬಲವಾದ ಸಪ್ತ ಗಗನಗಳನ್ನು ನೆಲೆಗೊಳಿಸಿರುವುದು-

وَّبَنَيْنَا فَوْقَكُمْ سَبْعًا شِدَادًا ﴿١٢﴾

13. ಒಂದು ಪ್ರಕಾಶಮಾನವಾದ ಬಿಸಿಯಾದ ದೀಪವನ್ನು ಸೃಷ್ಟಿಸಿರುವುದು-[2]

وَّجَعَلْنَا سِرَاجًا وَّهَّاجًا ﴿١٣﴾

14. ಮೋಡಗಳಿಂದ ಎಡೆಬಿಡದೆ ಮಳೆಯನ್ನು ಸುರಿಸುವುದು-

وَّاَنْزَلْنَا مِنَ الْمُعْصِرٰتِ مَآءً ثَجَّاجًا ﴿١٤﴾

15-16. ತನ್ಮೂಲಕ ಧಾನ್ಯಗಳನ್ನೂ ಹಸಿರು ತರಕಾರಿಗಳನ್ನೂ ದಟ್ಟವಾದ ತೋಟಗಳನ್ನೂ ಬೆಳೆಸಿರುವುದು.

لِّنُخْرِجَ بِهٖ حَبًّا وَّنَبَاتًا ﴿١٥﴾
وَّجَنّٰتٍ اَلْفَافًا ﴿١٦﴾

17. ನಿಸ್ಸಂದೇಹವಾಗಿಯೂ ತೀರ್ಮಾನದ ದಿನವು ಒಂದು ನಿಶ್ಚಿತ ಸಮಯವಾಗಿದೆ-

اِنَّ يَوْمَ الْفَصْلِ كَانَ مِيْقَاتًا ﴿١٧﴾

18. ಕಹಳೆಯನ್ನು ಊದುವಂದು ನೀವು ತಂಡೋಪತಂಡಗಳಾಗಿ ಹೊರಟು ಬರುವಿರಿ-

يَّوْمَ يُنْفَخُ فِى الصُّوْرِ فَتَاْتُوْنَ اَفْوَاجًا ﴿١٨﴾

19. ಆಕಾಶವನ್ನು ತೆರೆದು ಬಿಡಲಾಗುವುದು- ಅದು ದ್ವಾರಗಳೇ ದ್ವಾರಗಳಾಗಿ ಬಿಡುವುದು-

وَّفُتِحَتِ السَّمَآءُ فَكَانَتْ اَبْوَابًا ﴿١٩﴾

20. ಮತ್ತು ಪರ್ವತಗಳು ಚಲಿಸಲ್ಪಡುವುವು- ಅವು ಮರೀಚಿಕೆಗಳಾಗಿ ಬಿಡುವುವು.

وَّسُيِّرَتِ الْجِبَالُ فَكَانَتْ سَرَابًا ﴿٢٠﴾

21. ವಾಸ್ತವದಲ್ಲಿ, ನರಕವು ಒಂದು ಬೋನಾಗಿದೆ.[3]

اِنَّ جَهَنَّمَ كَانَتْ مِرْصَادًا ﴿٢١﴾

22. ಅದು ವಿದ್ರೋಹಿಗಳ ವಾಸಸ್ಥಾನವಾಗಿದೆ-

لِّلطّٰغِيْنَ مَاٰبًا ﴿٢٢﴾

23. ಅದರಲ್ಲಿ ಅವರು ದೀರ್ಘಕಾಲ ಬಿದ್ದು ಕೊಂಡಿರುವರು.[4]

لّٰبِثِيْنَ فِيْهَآ اَحْقَابًا ﴿٢٣﴾

2. ಅರ್ಥಾತ್- ಸೂರ್ಯ. ಮೂಲದಲ್ಲಿ 'ವಹ್ಹಾಜ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಅತ್ಯಂತ ಹೆಚ್ಚು ಉಷ್ಣಾಂಶ ಉಳ್ಳದ್ದು ಎಂದೂ ಆಗುತ್ತದೆ ಮತ್ತು ಅತ್ಯಂತ ಪ್ರಕಾಶಮಯ ಎಂದೂ ಆಗುತ್ತದೆ. ಆದ್ದರಿಂದಲೇ ಅನುವಾದದಲ್ಲಿ ನಾವು ಎರಡೂ ಪದಗಳನ್ನು ಸೇರಿಸಿದ್ದೇವೆ.

3. ಬೋನು- ಎಂದರೆ ಇಲ್ಲಿ ಬೇಟೆಯ ಪ್ರಾಣಿಗೆ- ಅದು ತಿಳಿಯದೆ ಬಂದು ಸಿಕ್ಕಿಹಾಕಿಕೊಳ್ಳಲು ಸಿದ್ಧಪಡಿಸಲಾದ ಸ್ಥಳ. ನರಕಕ್ಕೆ ಈ ಪದ ಪ್ರಯೋಗವಾಗಿದೆ. ಏಕೆಂದರೆ ದೇವಧಿಕ್ಕಾರಿಗಳು ಲೋಕದಲ್ಲಿ ಅವನ ಬಗ್ಗೆ ನಿರ್ಭೀತಿಯಿಂದ ಮೆರೆಯುತ್ತಾ ತಿರುಗಾಡುತ್ತಾರೆ. ಈ ವಿಶ್ವವು ತಮಗಾಗಿಯೇ ಇರುವ ಮುಕ್ತವಾದ ಆಡುಂಬೊಲವಾಗಿದೆ, ಇಲ್ಲಿ ಯಾರ ಹಿಡಿತದ ಭಯವೂ ಇಲ್ಲವೆಂದು ಅವರು ಭಾವಿಸುತ್ತಾರೆ. ಆದರೆ ನರಕವು ಅವರನ್ನು ಹೊಂಚು ಹಾಕಿ ಹಿಡಿಯುವ ಸ್ಥಳವಾಗಿದೆ. ಒಮ್ಮೆ ಅವರು ಅದರಲ್ಲಿ ಸಿಕ್ಕಿ ಹಾಕಿಕೊಂಡರೆ ಅನಂತರ ಸದಾ ಸಿಕ್ಕಿಹಾಕಿಕೊಂಡೇ ಇರುತ್ತಾರೆ.

4. ಮೂಲದಲ್ಲಿ 'ಅಹ್‌ಕಾಬ್' ಎಂಬ ಪದ ಪ್ರಯೋಗವಾಗಿದೆ. ಅದರ ಅರ್ಥ ಅನುಕ್ರಮವಾಗಿ ಬರುವ ಸುದೀರ್ಘ ಅವಧಿಗಳು ಅಥವಾ

24. ಅದರೊಳಗೆ ಅವರು ಯಾವುದೇ ತಂಪನ್ನಾಗಲಿ, ಕುಡಿಯಲರ್ಹವಾದ ಯಾವುದೇ ವಸ್ತುವಿನ ರುಚಿಯನ್ನಾಗಲಿ ಸವಿಯಲಾರರು-

لَا يَذُوقُونَ فِيهَا بَرْدًا وَّلَا شَرَابًا ﴿٢٤﴾

25. ಏನಾದರೂ ಸಿಗುವುದಿದ್ದರೆ ಅದು ಕುದಿಯುವ ನೀರು ಮತ್ತು ಹುಣ್ಣುಗಳ ಕೀವು ಮಾತ್ರ-

إِلَّا حَمِيمًا وَّغَسَّاقًا ﴿٢٥﴾

26. (ಅವರ ದುಷ್ಕೃತ್ಯಗಳ) ಪರಿಪೂರ್ಣ ಪ್ರತಿಫಲವಿದು.

جَزَآءً وِّفَاقًا ﴿٢٦﴾

27. ಅವರು ಯಾವುದೇ ವಿಚಾರಣೆಯನ್ನು ನಿರೀಕ್ಷಿಸುತ್ತಿರಲಿಲ್ಲ-

إِنَّهُمْ كَانُوا لَا يَرْجُونَ حِسَابًا ﴿٢٧﴾

28. ಮತ್ತು ಅವರು ನಮ್ಮ ಸೂಕ್ತಗಳನ್ನು ಸಂಪೂರ್ಣವಾಗಿ ಸುಳ್ಳಾಗಿಸಿ ಬಿಟ್ಟಿದ್ದರು.

وَّكَذَّبُوا بِاٰيٰتِنَا كِذَّابًا ﴿٢٨﴾

29. ವಸ್ತುತಃ ನಾವು ಪ್ರತಿಯೊಂದನ್ನೂ ಸರಿಯಾಗಿ ಎಣಿಸಿ ಬರೆದಿಟ್ಟಿದ್ದೇವು-

وَكُلَّ شَيْءٍ أَحْصَيْنٰهُ كِتٰبًا ﴿٢٩﴾

30. ಈಗ ಇದರ ರುಚಿ ಸವಿಯಿರಿ. ನಾವು ನಿಮಗಾಗಿ ಯಾತನೆಯ ಹೊರತು ಬೇರೇನನ್ನೂ ಖಂಡಿತ ಹೆಚ್ಚಿಸಲಾರೆವು.

فَذُوقُوا فَلَنْ نَّزِيدَكُمْ إِلَّا عَذَابًا ﴿٣٠﴾ ع

31. ಖಂಡಿತವಾಗಿಯೂ ಧರ್ಮನಿಷ್ಠರಿಗಾಗಿ ಯಶಸ್ಸಿನ ಒಂದು ಸ್ಥಾನವಿದೆ.

إِنَّ لِلْمُتَّقِينَ مَفَازًا ﴿٣١﴾

32. ಅವರಿಗಾಗಿ ಉದ್ಯಾನಗಳು ಮತ್ತು ದ್ರಾಕ್ಷೆಗಳಿವೆ-

حَدَآئِقَ وَأَعْنَابًا ﴿٣٢﴾

33. ಸಮವಯಸ್ಕ ನವತರುಣಿಯರಿದ್ದಾರೆ-

وَّكَوَاعِبَ أَتْرَابًا ﴿٣٣﴾

34. ಮತ್ತು ತುಂಬಿ ತುಳುಕುವ ಪಾನಪಾತ್ರೆಗಳಿವೆ.

وَّكَأْسًا دِهَاقًا ﴿٣٤﴾

35. ಅಲ್ಲಿ ಅವರು ಯಾವುದೇ ಅಸಂಬದ್ಧ ಮತ್ತು ಸುಳ್ಳು ಮಾತನ್ನು ಕೇಳಲಾರರು.

لَا يَسْمَعُونَ فِيهَا لَغْوًا وَّلَا كِذّٰبًا ﴿٣٥﴾

36. ನಿಮ್ಮ ಪ್ರಭುವಿನ ಕಡೆಯಿಂದ ಸತ್ಫಲ ಹಾಗೂ ಸಾಕಷ್ಟು ಪುರಸ್ಕಾರ,[5]

جَزَآءً مِّنْ رَّبِّكَ عَطَآءً حِسَابًا ﴿٣٦﴾

---

ಒಂದು ಯುಗ ಕಳೆಯುತ್ತಲೇ ಮತ್ತೊಂದು ಯುಗ ಆರಂಭವಾಗುವ ನಿರಂತರವಾದ ಯುಗಗಳು ಎಂದಾಗಿದೆ.

5. 'ಸತ್ಫಲದ ನಂತರ ಸಾಕಷ್ಟು ಪುರಸ್ಕಾರ'ದ ಪ್ರಸ್ತಾಪವನ್ನು ಇಲ್ಲಿ ಮಾಡಲಾಗಿರುವುದೇಕೆಂದರೆ ಅವರಿಗೆ, ತಮ್ಮ ಸತ್ಕರ್ಮಗಳಿಂದ ಅವರು ಯಾವ ಪ್ರತಿಫಲಕ್ಕೆ ಅರ್ಹರಾಗಿದ್ದಾರೋ ಅಷ್ಟು ಪ್ರತಿಫಲವನ್ನು ಮಾತ್ರ ನೀಡಲಾಗುವುದಿಲ್ಲ. ಬದಲಾಗಿ ಆ ಬಗ್ಗೆ ಅವರಿಗೆ ಮತ್ತಷ್ಟು ಪುರಸ್ಕಾರ ಮತ್ತು ಅನುಗ್ರಹಗಳನ್ನೂ ದಯಪಾಲಿಸಲಾಗುವುದು.

37. ಭೂಮಿ-ಆಕಾಶಗಳ ಮತ್ತು ಅವುಗಳ ನಡುವಿನ ಪ್ರತಿಯೊಂದು ವಸ್ತುವಿನ ಒಡೆಯನಾಗಿರುವ ಪರಮ ದಯಾಮಯನಾದ ಪ್ರಭುವಿನ ಕಡೆಯಿಂದ ಅವನ ಮುಂದೆ ಮಾತಾಡುವ ಸಾಮರ್ಥ್ಯ ಯಾರಿಗೂ ಇಲ್ಲ.[6]

رَّبِّ السَّمٰوٰتِ وَ الْاَرْضِ وَمَا بَيْنَهُمَا الرَّحْمٰنِ لَا يَمْلِكُوْنَ مِنْهُ خِطَابًا ۝٣٧

38. 'ರೂಹ್'[7] ಮತ್ತು ದೇವಚರರು ಸಾಲು ಸಾಲಾಗಿ ನಿಲ್ಲಲಿರುವ ಆ ದಿನ ಪರಮ ದಯಾಮಯನ ಅನುಮತಿ ಪಡೆದ ಮತ್ತು ಸರಿಯಾದ ಮಾತನ್ನೇ ಆಡುವ ವ್ಯಕ್ತಿಯ ಹೊರತು ಬೇರಾರೂ ಮಾತಾಡಲಾರರು.

يَوْمَ يَقُوْمُ الرُّوْحُ وَالْمَلٰٓئِكَةُ صَفًّا ۙ لَّا يَتَكَلَّمُوْنَ اِلَّا مَنْ اَذِنَ لَهُ الرَّحْمٰنُ وَقَالَ صَوَابًا ۝٣٨

39. ಆ ದಿನ ಬರುವುದು ಸತ್ಯ. ಇನ್ನು ಇಷ್ಟವಿದ್ದವರು ತಮ್ಮ ಪ್ರಭುವಿನ ಕಡೆಗೆ ಮರಳುವ ಹಾದಿ ಹಿಡಿದುಕೊಳ್ಳಲಿ.

ذٰلِكَ الْيَوْمُ الْحَقُّ ۚ فَمَنْ شَآءَ اتَّخَذَ اِلٰى رَبِّهٖ مَاٰبًا ۝٣٩

40. ಸನ್ನಿಹಿತವಾಗಿ ಬಿಟ್ಟಿರುವ ಆ ಯಾತನೆಯ ಬಗ್ಗೆ ನಿಮ್ಮನ್ನು ನಾವು ಎಚ್ಚರಿಸಿದ್ದೇವೆ. ಅಂದು ಮಾನವನು- ತನ್ನ ಕೈಗಳು ಮುಂದೆ ಕಳುಹಿಸಿರುವುದೆಲ್ಲವನ್ನೂ ಕಂಡುಕೊಳ್ಳುವನು ಮತ್ತು ಸತ್ಯ ನಿಷೇಧಿಯು "ಅಯ್ಯೋ ನಾನು ಮಣ್ಣಾಗಿ ಬಿಡುತ್ತಿದ್ದರೆ!" ಎಂದು ಗೋಳಿಡುವನು.

اِنَّآ اَنْذَرْنٰكُمْ عَذَابًا قَرِيْبًا ۖ يَّوْمَ يَنْظُرُ الْمَرْءُ مَا قَدَّمَتْ يَدٰهُ وَيَقُوْلُ الْكٰفِرُ يٰلَيْتَنِيْ كُنْتُ تُرٰبًا ۝٤٠

---

6. ಅರ್ಥಾತ್- ಹಶ್ರ್‌ನ ಮೈದಾನದಲ್ಲಿ ಅಲ್ಲಾಹನ ದರಬಾರಿನ ಗಾಂಭೀರ್ಯ ಹೇಗಿರುವುದೆಂದರೆ ಭೂಮಿಯವರಿಗಾಗಲಿ ಆಕಾಶದವರಿಗಾಗಲಿ ಅಲ್ಲಾಹನ ಮುಂದೆ ತುಟಿ ಬಿಚ್ಚುವ ಅಥವಾ ನ್ಯಾಯಾಲಯದ ಕೆಲಸಗಳಲ್ಲಿ ಹಸ್ತಕ್ಷೇಪ ನಡೆಸುವ ಧೈರ್ಯವಿರಲಾರದು.

7. 'ರೂಹ್' ಎಂದರೆ ಜಿಬ್ರೀಲ್(ಅ) ಆಗಿದ್ದಾರೆ. ಅಲ್ಲಾಹನ ಬಳಿ ಅವರಿಗಿರುವ ಉನ್ನತ ಸ್ಥಾನಮಾನದಿಂದಾಗಿ ಅವರನ್ನು ದೇವಚರರಿಂದ ಪ್ರತ್ಯೇಕವಾಗಿ ಪ್ರಸ್ತಾಪಿಸಲಾಗಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಮುಳುಗಿ ಎಳೆಯುವವರಾಣೆ-

وَالنّٰزِعٰتِ غَرْقًا ﴿١﴾

2. ಮತ್ತು ಮೃದುವಾಗಿ ತೆಗೆದೊಯ್ಯುವವರಾಣೆ-[1]

وَّالنّٰشِطٰتِ نَشْطًا ﴿٢﴾

3. (ವಿಶ್ವದಲ್ಲಿ) ವೇಗವಾಗಿ ತೇಲುತ್ತಿರುವವರಾಣೆ-[2]

وَّالسّٰبِحٰتِ سَبْحًا ﴿٣﴾

4. ಮತ್ತು (ಆಜ್ಞಾಪಾಲನೆಗಾಗಿ) ಸ್ಪರ್ಧಿಸುವವರಾಣೆ-[3]

فَالسّٰبِقٰتِ سَبْقًا ﴿٤﴾

5. ಮತ್ತು (ದೇವಾಜ್ಞೆಗಳಿಗನುಸಾರವಾಗಿ) ವ್ಯವಹಾರಗಳನ್ನು ನೋಡಿಕೊಳ್ಳುವವರಾಣೆ-[4]

فَالْمُدَبِّرٰتِ اَمْرًا ﴿٥﴾

6. ಭೂಕಂಪದ ಆಘಾತವು ನಡುಕವನ್ನುಂಟು ಮಾಡುವಂದು-

يَوْمَ تَرْجُفُ الرَّاجِفَةُ ﴿٦﴾

7. ಮತ್ತು ಅದರ ಬೆನ್ನಿಗೇ ಇನ್ನೊಂದು ಆಘಾತವು ಉಂಟಾಗುವಂದು.

تَتْبَعُهَا الرَّادِفَةُ ﴿٧﴾

8. ಕೆಲವು ಹೃದಯಗಳು ಅಂದು ಭಯದಿಂದ ನಡುಗುತ್ತಿರುವುವು-

قُلُوْبٌ يَّوْمَئِذٍ وَّاجِفَةٌ ﴿٨﴾

9. ಅವರ ಕಣ್ಣುಗಳು ಭಯಗ್ರಸ್ತವಾಗಿರುವುವು.

اَبْصَارُهَا خَاشِعَةٌ ﴿٩﴾

10. ಇವರು ಕೇಳುತ್ತಾರೆ, ನಾವು ಪುನಃ (ಪೂರ್ವಸ್ಥಿತಿಗೆ) ಮರಳಿಸಲ್ಪಡುವೆವೇ?

يَقُوْلُوْنَ ءَاِنَّا لَمَرْدُوْدُوْنَ فِى الْحَافِرَةِ ﴿١٠﴾

---

1. ಅರ್ಥಾತ್- ಮರಣದ ವೇಳೆ ಮಾನವನ ಪ್ರಾಣವನ್ನು ಅವನ ದೇಹದ ಅಂತರಾಳದವರೆಗೆಳಿದು ಪ್ರತಿಯೊಂದು ನಾಡಿಯಿಂದ ಅದನ್ನು ಎಳೆದು ತೆಗೆಯುವ ದೇವಚರರು.
2. ಅರ್ಥಾತ್- ವಾತಾವರಣದಲ್ಲಿ ತೇಲುತ್ತಿರುವಂತೆ ಅವರು ಅಲ್ಲಾಹನ ಆಜ್ಞಾನುಪಾಲನೆಯಲ್ಲಿ ದ್ರುತಗತಿಯಲ್ಲಿ ಸಕ್ರಿಯರಾಗಿರುವರು.
3. ಸ್ಪರ್ಧಿಸುವುದೆಂದರೆ ದೇವಾಜ್ಞೆಯ ಸೂಚನೆ ಸಿಗುತ್ತಲೇ ಅವರ ಪೈಕಿ ಪ್ರತಿಯೊಬ್ಬನೂ ಆಜ್ಞಾಪಾಲನೆಗೆ ಧಾವಿಸುತ್ತಾನೆ.
4. ಇವರು ಅಲ್ಲಾಹನ ಆಜ್ಞೆಯಂತೆ ಲೋಕದ ಸಮಸ್ತ ವ್ಯವಸ್ಥೆಯನ್ನು ತಮ್ಮ ಕರಗಳಿಂದ ನಡೆಸುತ್ತಿರುವ ನಿಸರ್ಗ ಸಾಮ್ರಾಜ್ಯದ ಕಾರ್ಯಕರ್ತರಾಗಿದ್ದಾರೆ.

| | |
|---|---|
| 11. ಟೊಳ್ಳಾದ, ಕೊಳೆತ ಎಲುಬುಗಳಾಗಿ ಬಿಟ್ಟ ಬಳಿಕವೂ. | أَإِذَا كُنَّا عِظَامًا نَّخِرَةً ﴿١١﴾ |
| 12. "ಈ ಮರಳುವಿಕೆಯಂತು ಬಹಳ ನಷ್ಟದಾಯಕವಾಗಿರುವುದು" ಎನ್ನುತ್ತಾರೆ.[5] | قَالُوا تِلْكَ إِذًا كَرَّةٌ خَاسِرَةٌ ﴿١٢﴾ |
| 13. ನಿಜವಾಗಿ ಇದು ಒಂದು ಘನ ಘರ್ಜನೆಯಾಗಿರುವುದು- | فَإِنَّمَا هِيَ زَجْرَةٌ وَاحِدَةٌ ﴿١٣﴾ |
| 14. ಮತ್ತು ಹಠಾತ್ತನೆ ಇವರು ಒಂದು ತೆರೆದ ಮೈದಾನದಲ್ಲಿ ಹಾಜರಿರುವರು. | فَإِذَا هُم بِالسَّاهِرَةِ ﴿١٤﴾ |
| 15. ನಿಮಗೆ ಮೂಸಾರ ವೃತ್ತಾಂತ ತಲುಪಿದೆಯೇ? | هَلْ أَتَاكَ حَدِيثُ مُوسَىٰ ﴿١٥﴾ |
| 16. ಅವರ ಪ್ರಭು ಅವರನ್ನು 'ತುವಾ'ದ ಪವಿತ್ರ ಕಣಿವೆಯಲ್ಲಿ ಕರೆದಾಗ. | إِذْ نَادَاهُ رَبُّهُ بِالْوَادِ الْمُقَدَّسِ طُوًى ﴿١٦﴾ |
| 17. "ಫಿರ್‌ಔನನ ಬಳಿಗೆ ಹೋಗಿರಿ. ಅವನು ವಿದ್ರೋಹಿಯಾಗಿ ಬಿಟ್ಟಿದ್ದಾನೆ. | اذْهَبْ إِلَىٰ فِرْعَوْنَ إِنَّهُ طَغَىٰ ﴿١٧﴾ |
| 18. ಅವನೊಡನೆ ಕೇಳಿರಿ- "ನೀನು ಪರಿಶುದ್ಧನಾಗಲು ಸಿದ್ಧನಾಗಿರುವೆಯಾ? | فَقُلْ هَل لَّكَ إِلَىٰ أَن تَزَكَّىٰ ﴿١٨﴾ |
| 19. ಮತ್ತು ನಾನು ನಿನ್ನ ಪ್ರಭುವಿನ ಕಡೆಗೆ ನಿನಗೆ ಮಾರ್ಗದರ್ಶನ ಮಾಡಿದರೆ, (ಅವನ) ಭಯ ನಿನ್ನಲ್ಲಿ ಉಂಟಾದೀತೇ?" | وَأَهْدِيَكَ إِلَىٰ رَبِّكَ فَتَخْشَىٰ ﴿١٩﴾ |
| 20. ತರುವಾಯ ಮೂಸಾರು (ಫಿರ್‌ಔನನ ಬಳಿಗೆ ಹೋಗಿ) ಅವನಿಗೆ ದೊಡ್ಡ ನಿದರ್ಶನವನ್ನು[6] ತೋರಿಸಿದರು. | فَأَرَاهُ الْآيَةَ الْكُبْرَىٰ ﴿٢٠﴾ |
| 21. ಆದರೆ, ಅವನು ಸುಳ್ಳಾಗಿಸಿ ಬಿಟ್ಟನು ಮತ್ತು ಧಿಕ್ಕರಿಸಿದನು. | فَكَذَّبَ وَعَصَىٰ ﴿٢١﴾ |
| 22. ತರುವಾಯ ಕುತಂತ್ರಗಳನ್ನೆಸಗಲಿಕ್ಕಾಗಿ ಮರಳಿದನು. | ثُمَّ أَدْبَرَ يَسْعَىٰ ﴿٢٢﴾ |

5. ಅರ್ಥಾತ್- ಅವರಿಗೆ ಉತ್ತರವೀಯುತ್ತಾ 'ಹೌದು! ಹಾಗೆಯೇ ಸಂಭವಿಸುವುದು' ಎಂದು ಹೇಳಲಾದಾಗ ಅವರು ಅಪಹಾಸ್ಯ ಮಾಡುತ್ತಾ ಪರಸ್ಪರ ಹೀಗೆನ್ನತೊಡಗಿದರು, "ಮಿತ್ರರೇ! ನಿಜವಾಗಿಯೂ ನಾವೆಲ್ಲ ಪುನಃ ಜೀವಂತ ಸ್ಥಿತಿಗೆ ಮರಳಲಿಕ್ಕಿದೆಯೆಂದಾದರೆ ನಮ್ಮ ಪಾಲಿಗೆ ಅದು ಕಷ್ಟ ಕಾಲವೇ ಸರಿ."
6. ದೊಡ್ಡ ನಿದರ್ಶನವೆಂದರೆ ಲಾಠಿಯು ಹೆಬ್ಬಾವಾಗಿ ಮಾರ್ಪಡುವುದು. ಕುರ್‌ಆನಿನಲ್ಲಿ ಅನೇಕ ಕಡೆ ಈ ಬಗ್ಗೆ ಪ್ರಸ್ತಾಪಿಸಲಾಗಿದೆ.

23. ಮತ್ತು ಜನರನ್ನು ಒಟ್ಟುಗೂಡಿಸಿದನು.

فَحَشَرَ فَنَادَىٰ ﴿٢٣﴾

24. 'ನಾನು ನಿಮ್ಮ ಮಹಾಪ್ರಭು' ಎಂದು ಸಾರಿದನು.

فَقَالَ أَنَا رَبُّكُمُ الْأَعْلَىٰ ﴿٢٤﴾

25. ಕೊನೆಗೆ ಅಲ್ಲಾಹನು ಅವನನ್ನು ಪರಲೋಕದ ಹಾಗೂ ಈ ಲೋಕದ ಯಾತನೆಯಲ್ಲಿ ಹಿಡಿದು ಬಿಟ್ಟನು.

فَأَخَذَهُ اللَّهُ نَكَالَ الْآخِرَةِ وَالْأُولَىٰ ﴿٢٥﴾

26. ವಾಸ್ತವದಲ್ಲಿ ಭಯಪಡುವ ಪ್ರತಿಯೊಬ್ಬನಿಗೂ ಇದರಲ್ಲಿ ಪಾಠವಿದೆ.[7]

إِنَّ فِي ذَٰلِكَ لَعِبْرَةً لِمَنْ يَخْشَىٰ ﴿٢٦﴾

27. ನಿಮ್ಮನ್ನು ಸೃಷ್ಟಿಸುವ ಕಾರ್ಯ ಹೆಚ್ಚು ಪ್ರಯಾಸಕರವೋ ಅಥವಾ ಆಕಾಶವನ್ನೋ? ಅಲ್ಲಾಹನು ಅದನ್ನು ನಿರ್ಮಿಸಿದನು.

أَأَنْتُمْ أَشَدُّ خَلْقًا أَمِ السَّمَاءُ ۚ بَنَاهَا ﴿٢٧﴾

28. ಅದರ ಮಾಡನ್ನು ಬಹಳಷ್ಟು ಎತ್ತರಕ್ಕೆ ಏರಿಸಿದನು. ತರುವಾಯ ಅದನ್ನು ಸಂತುಲಿತಗೊಳಿಸಿದನು-

رَفَعَ سَمْكَهَا فَسَوَّاهَا ﴿٢٨﴾

29. ಮತ್ತು ಅದರ ರಾತ್ರಿಯನ್ನು ಹೊದಿಸಿದನು ಮತ್ತು ಅದರ ಹಗಲನ್ನು ಹೊರತೆಗೆದನು.

وَأَغْطَشَ لَيْلَهَا وَأَخْرَجَ ضُحَاهَا ﴿٢٩﴾

30. ಅನಂತರ ಅವನು ಭೂಮಿಯನ್ನು ಹಾಸಿದನು.

وَالْأَرْضَ بَعْدَ ذَٰلِكَ دَحَاهَا ﴿٣٠﴾

31. ಅದರೊಳಗಿಂದ ಅದರ ನೀರನ್ನೂ ಮೇವನ್ನೂ ಹೊರ ತೆಗೆದನು-

أَخْرَجَ مِنْهَا مَاءَهَا وَمَرْعَاهَا ﴿٣١﴾

32. ಮತ್ತು ಪರ್ವತಗಳನ್ನು ಅದರಲ್ಲಿ ನಾಟಿ ಬಿಟ್ಟನು-

وَالْجِبَالَ أَرْسَاهَا ﴿٣٢﴾

33. (ಇವೆಲ್ಲ) ನಿಮಗೂ ನಿಮ್ಮ ಜಾನುವಾರುಗಳಿಗೂ ಜೀವನ ಸಾಧನಗಳ ರೂಪದಲ್ಲಿ.

مَتَاعًا لَكُمْ وَلِأَنْعَامِكُمْ ﴿٣٣﴾

34. ಮುಂದೆ ಆ ಮಹಾ ಕೋಲಾಹಲವೆದ್ದಾಗ[8],

فَإِذَا جَاءَتِ الطَّامَّةُ الْكُبْرَىٰ ﴿٣٤﴾

35. ಅಂದು ಮಾನವನು ತಾನು ಮಾಡಿದುದೆಲ್ಲವನ್ನೂ ಸ್ಮರಿಸುವನು-

يَوْمَ يَتَذَكَّرُ الْإِنْسَانُ مَا سَعَىٰ ﴿٣٥﴾

36. ಮತ್ತು ಪ್ರತಿಯೊಬ್ಬ ನೋಡುವವನ ಮುಂದೆ ನರಕವು ತೆರೆದಿಡಲ್ಪಡುವುದು.

وَبُرِّزَتِ الْجَحِيمُ لِمَنْ يَرَىٰ ﴿٣٦﴾

---

7. ಅರ್ಥಾತ್- ಪ್ರವಾದಿಯನ್ನು ಸುಳ್ಳಾಗಿಸಿದುದರಿಂದಾಗಿ ಫಿರ್‌ಔನ್ ಎದುರಿಸಿದ ಪರಿಣಾಮದ ಬಗ್ಗೆ ಭಯವಿರಿಸಿಕೊಂಡವರಿಗೆ.

8. ಅರ್ಥಾತ್ ಪುನರುತ್ಥಾನ ದಿನ.

| | |
|---|---|
| 37. ವಿದ್ರೋಹವೆಸಗಿದವನಿಗೆ- | فَأَمَّا مَنْ طَغَىٰ ۝٣٧ |
| 38. ಹಾಗೂ ಇಹಲೋಕ ಜೀವನಕ್ಕೆ ಆದ್ಯತೆ ಕೊಟ್ಟವನಿಗೆ- | وَآثَرَ الْحَيَاةَ الدُّنْيَا ۝٣٨ |
| 39. ನರಕವೇ ನಿವಾಸವಾಗುವುದು. | فَإِنَّ الْجَحِيمَ هِيَ الْمَأْوَىٰ ۝٣٩ |
| 40. ತನ್ನ ಪ್ರಭುವಿನ ಮುಂದೆ ಹಾಜರಾಗಲಿಕ್ಕಿದೆಯೆಂದು ಭಯಪಡುತ್ತಿದ್ದವನಿಗೆ ಮತ್ತು ತನ್ನ ಚಿತ್ತದ ದುಷ್ಟ ಅಪೇಕ್ಷೆಗಳಿಂದ ತನ್ನನ್ನು ತಡೆದಿಟ್ಟುಕೊಂಡಿದ್ದವನಿಗೆ- | وَأَمَّا مَنْ خَافَ مَقَامَ رَبِّهِ وَنَهَى النَّفْسَ عَنِ الْهَوَىٰ ۝٤٠ |
| 41. ಸ್ವರ್ಗವೇ ನಿವಾಸವಾಗುವುದು. | فَإِنَّ الْجَنَّةَ هِيَ الْمَأْوَىٰ ۝٤١ |
| 42. "ಆ ಘಳಿಗೆ ಬಂದೆರಗುವುದಾದರೂ ಯಾವಾಗ?" ಎಂದು ಇವರು ನಿಮ್ಮೊಡನೆ ಕೇಳುತ್ತಾರೆ. | يَسْأَلُونَكَ عَنِ السَّاعَةِ أَيَّانَ مُرْسَاهَا ۝٤٢ |
| 43. ಅದರ ಸಮಯವನ್ನು ತಿಳಿಸುವ ಕೆಲಸ ನಿಮಗೆಲ್ಲಿದೆ? | فِيمَ أَنْتَ مِنْ ذِكْرَاهَا ۝٤٣ |
| 44. ಅದರ ಜ್ಞಾನವಂತು ನಿಮ್ಮ ಪ್ರಭುವಿಗೇ ಸೀಮಿತಗೊಂಡಿದೆ. | إِلَىٰ رَبِّكَ مُنْتَهَاهَا ۝٤٤ |
| 45. ನೀವಂತು ಅದನ್ನು ಭಯಪಡುವ ಪ್ರತಿಯೊಬ್ಬನಿಗೆ ಕೇವಲ ಎಚ್ಚರಿಕೆ ನೀಡುವವರಾಗಿದ್ದೀರಿ. | إِنَّمَا أَنْتَ مُنْذِرُ مَنْ يَخْشَاهَا ۝٤٥ |
| 46. ಇವರು ಅದನ್ನು ಕಣ್ಣಾರೆ ಕಂಡುಕೊಳ್ಳುವ ದಿನ ತಾವು (ಇಹ ಲೋಕದಲ್ಲಿ ಅಥವಾ ಮೃತಾವಸ್ಥೆಯಲ್ಲಿ) ಕೇವಲ ಒಂದು ಮುಂಜಾನೆ ಅಥವಾ ಸಂಜೆ ಮಾತ್ರ ತಂಗಿದ್ದೆವೆಂದು ಇವರಿಗೆ ಭಾಸವಾಗುವುದು. | كَأَنَّهُمْ يَوْمَ يَرَوْنَهَا لَمْ يَلْبَثُوا إِلَّا عَشِيَّةً أَوْ ضُحَاهَا ۝٤٦ |

---







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅವರು ಮುಖ ಸಿಂಡರಿಸಿಕೊಂಡರು ಮತ್ತು ನಿರ್ಲಕ್ಷ್ಯಿಸಿದರು-

عَبَسَ وَ تَوَلّٰٓى ①

2. ಅವರ ಬಳಿಗೆ ಆ 'ಅಂಧನು' ಬಂದುದಕ್ಕಾಗಿ.[1]

اَنْ جَآءَهُ الْاَعْمٰى ②

3. ನಿಮಗೇನು ಗೊತ್ತು, ಬಹುಶಃ ಅವನು ತನ್ನನ್ನು ಸಂಸ್ಕರಿಸಿ ಕೊಳ್ಳಬಹುದು-

وَ مَا يُدْرِيْكَ لَعَلَّهٗ يَزَّكّٰىٓ ③

4. ಅಥವಾ ಉಪದೇಶಕ್ಕೆ ಗಮನ ಕೊಡಬಹುದು. ಆ ಉಪದೇಶವು ಅವನ ಪಾಲಿಗೆ ಫಲಕಾರಿಯಾಗಲೂಬಹುದು.

اَوْ يَذَّكَّرُ فَتَنْفَعَهُ الذِّكْرٰى ④

5. ಯಾರು ನಿರ್ಲಕ್ಷ್ಯ ತೋರುತ್ತಾನೋ-

اَمَّا مَنِ اسْتَغْنٰى ⑤

6. ಅವನ ಕಡೆಗಂತೂ ನೀವು ಗಮನ ಕೊಡುತ್ತೀರಿ.

فَاَنْتَ لَهٗ تَصَدّٰى ⑥

7. ಅವನು ತನ್ನನ್ನು ಸಂಸ್ಕರಿಸಿಕೊಳ್ಳದಿದ್ದರೆ ನಿಮ್ಮ ಮೇಲೆ ಅವನ ಹೊಣೆಯೇನಿದೆ?

وَمَا عَلَيْكَ اَلَّا يَزَّكّٰى ⑦

8. ತಾನಾಗಿಯೇ ನಿಮ್ಮ ಬಳಿಗೆ ಧಾವಿಸಿ ಬರುವವನು-

وَ اَمَّا مَنْ جَآءَكَ يَسْعٰى ⑧

9. ಮತ್ತು(ಅಲ್ಲಾಹನನ್ನು) ಭಯಪಡುತ್ತಿರುವವನು-

وَ هُوَ يَخْشٰى ⑨

1. ನಂತರದ ಉದ್ಧರಣೆಗಳಿಂದ ತಿಳಿದು ಬರುವುದೇನೆಂದರೆ ಮುಖ ಸಿಂಡರಿಸಿಕೊಂಡವರು ಮತ್ತು ನಿರ್ಲಕ್ಷ್ಯಿಸಿದವರು ಸ್ವತಃ ಪ್ರವಾದಿವರ್ಯರಾಗಿದ್ದಾರೆ(ಸ). ಇಲ್ಲಿ ಪ್ರಸ್ತಾಪಿಸಲಾಗಿರುವ ಕುರುಡ ವ್ಯಕ್ತಿ ಹ. ಖದೀಜಾರ(ರ) ಸೋದರತ್ತೆಯ ಮಗನಾದ ಹ. ಇಬ್ನ್ ಉಮ್ಮು ಮಕ್ತೂಮ್(ರ) ಆಗಿದ್ದಾರೆ. ಪ್ರವಾದಿವರ್ಯರು(ಸ) ಆಗ ಮಕ್ಕಾದ ದೊಡ್ಡ ದೊಡ್ಡ ಸರದಾರರಿಗೆ ಇಸ್ಲಾಮಿನ ಸಂದೇಶ ನೀಡುವುದರಲ್ಲಿ ನಿರತರಾಗಿದ್ದರು. ಅಷ್ಟರಲ್ಲಿ ಓರ್ವ ಅಂಧವ್ಯಕ್ತಿ ಬಂದು ಕೆಲವು ಪ್ರಶ್ನೆಗಳನ್ನು ಕೇಳಬಯಸಿದರು. ಪ್ರವಾದಿವರ್ಯರಿಗೆ(ಸ) ಆ ಸಂದರ್ಭದಲ್ಲಿ ಅವರ ಈ ಹಸ್ತಕ್ಷೇಪ ಅರೋಚಕವೆನಿಸಿತು.

10. ಅವನನ್ನು ನೀವು ಕಡೆಗಣಿಸುತ್ತೀರಿ.

فَاَنْتَ عَنْهُ تَلَهّٰى ﴿١٠﴾

11. ಖಂಡಿತ ಅಲ್ಲ. ಇದೊಂದು ಉಪದೇಶವಾಗಿರುತ್ತದೆ.[2]

كَلَّآ اِنَّهَا تَذْكِرَةٌ ﴿١١﴾

12. ಇಷ್ಟವಿದ್ದವನು ಇದನ್ನು ಸ್ವೀಕರಿಸಲಿ.

فَمَنْ شَآءَ ذَكَرَهٗ ﴿١٢﴾

13-15. ಇದು ಗೌರವಾನ್ವಿತವಾದ, ಉನ್ನತ ಮಟ್ಟದ, ಪಾವನವಾದ[3] ಹೊತ್ತಗೆಗಳಲ್ಲಿ ಲಿಖಿತವಾಗಿದೆ-

فِىْ صُحُفٍ مُّكَرَّمَةٍ ﴿١٣﴾ مَّرْفُوْعَةٍ مُّطَهَّرَةٍۭ ﴿١٤﴾ بِاَيْدِىْ سَفَرَةٍ ﴿١٥﴾

16. ಮತ್ತು ಅವು ಮಾನ್ಯರಾದ ಶಿಷ್ಟಲಿಪಿಕಾರರ ಕೈಗಳಲ್ಲಿರುತ್ತವೆ.[4]

كِرَامٍۭ بَرَرَةٍ ﴿١٦﴾

17. ಮಾನವನ ಮೇಲೆ ಶಾಪವಿರಲಿ![5] ಎಂತಹ ಕಠೋರ ಸತ್ಯ ಧಿಕ್ಕಾರಿಯವನು!

قُتِلَ الْاِنْسَانُ مَآ اَكْفَرَهٗ ﴿١٧﴾

18. ಅಲ್ಲಾಹನು ಇವನನ್ನು ಸೃಷ್ಟಿಸಿರುವುದು ಯಾವ ವಸ್ತುವಿನಿಂದ?

مِنْ اَىِّ شَىْءٍ خَلَقَهٗ ﴿١٨﴾

19. ವೀರ್ಯದ ಒಂದು ಬಿಂದುವಿನಿಂದ. ಅಲ್ಲಾಹನು ಇವನನ್ನು ಸೃಷ್ಟಿಸಿದನು, ಆ ಬಳಿಕ ಇವನ ವಿಧಿಯನ್ನು ನಿಶ್ಚಯಿಸಿದನು,!

مِنْ نُّطْفَةٍ ؕ خَلَقَهٗ فَقَدَّرَهٗ ﴿١٩﴾

20. ತರುವಾಯ ಇವನಿಗಾಗಿ ಜೀವನದ ಮಾರ್ಗವನ್ನು ಸುಗಮಗೊಳಿಸಿದನು,

ثُمَّ السَّبِيْلَ يَسَّرَهٗ ﴿٢٠﴾

21. ಅನಂತರ ಇವನಿಗೆ ಮರಣ ಕೊಟ್ಟನು ಮತ್ತು ಸಮಾಧಿಯೊಳಕ್ಕೆ ತಲಪಿಸಿದನು-

ثُمَّ اَمَاتَهٗ فَاَقْبَرَهٗ ﴿٢١﴾

---

2. ಅರ್ಥಾತ್- ಹಾಗೆಂದೂ ಮಾಡದಿರಿ. ದೇವನನ್ನು ಮರೆತು ತಮ್ಮ ಲೌಕಿಕ ಸ್ಥಾನಮಾನದ ಬಗ್ಗೆ ಮೈಮರೆತಿರುವ ಜನರಿಗೆ ವೃಥಾ ಪ್ರಾಮುಖ್ಯ ಕಲ್ಪಿಸದಿರಿ. ಇಸ್ಲಾಮಿನ ಬೋಧನೆ ಅದರ ಬಗ್ಗೆ ವಿಮುಖರಾಗುವವರಿಗೂ ಒತ್ತಾಯಪೂರ್ವಕವಾಗಿ ಸಮರ್ಪಿಸಬೇಕಾದಂತಹ ಸಾಧನವಲ್ಲ. ನಿಮಗೆ ಅವರಿಂದ ಏನೋ ಸ್ವಾರ್ಥಸಾಧಿಸಬೇಕಾಗಿದೆ, ಇವರು ವಿಶ್ವಾಸ ಕೈಗೊಂಡರೆ ನಿಮ್ಮ ಸಂದೇಶ ವೃದ್ಧಿಸುವುದು, ಅನ್ಯಥಾ ವಿಫಲವಾಗುವುದು ಎಂಬ ತಪ್ಪುಕಲ್ಪನೆಗೆ ಅವರು ಈಡಾಗುವಂತಹ ರೀತಿಯಲ್ಲಿ ಆ ದುರಹಂಕಾರಿಗಳನ್ನು ಇಸ್ಲಾಮಿನೆಡೆಗೆ ತರಲು ಪ್ರಯತ್ನಿಸುವುದು ನಿಮ್ಮ ಸ್ಥಾನಮಾನಕ್ಕೆ ಹೇಳಿಸಿದ್ದಲ್ಲ. ಸತ್ಯದ ಬಗ್ಗೆ ಇವರೆಷ್ಟು ನಿರಪೇಕ್ಷರಾಗಿದ್ದಾರೋ ಸತ್ಯವೂ ಅವನಿಂದ ಅಷ್ಟೇ ನಿರಪೇಕ್ಷವಾಗಿದೆ.
3. ಅರ್ಥಾತ್- ಎಲ್ಲಾ ಬಗೆಯ ಕಲಸುಮೇಲೋಗರದಿಂದ ಮುಕ್ತವಾಗಿವೆ. ಅವುಗಳಲ್ಲಿ ಸತ್ಯದ ನಿಷ್ಕಳಂಕ ಬೋಧನೆಗಳನ್ನು ನೀಡಲಾಗಿದೆ. ಯಾವುದೇ ರೀತಿಯ ಮಿಥ್ಯ ಮತ್ತು ದುಷ್ಟ ವಿಚಾರ-ಸಿದ್ಧಾಂತಗಳಿಗೆ ಆಸ್ಪದ ನೀಡಲಾಗಿಲ್ಲ.
4. ಅರ್ಥಾತ್- ಅಲ್ಲಾಹನ ನೇರವಾದ ಆದೇಶದನ್ವಯ ಕುರ್‌ಆನಿನ ಆ ಗ್ರಂಥಗಳನ್ನು ಬರೆಯುತ್ತಿದ್ದ ಮತ್ತು ಸಂರಕ್ಷಿಸುತ್ತಿದ್ದ ಹಾಗೂ ಪ್ರವಾದಿವರ್ಯರಿಗೆ(ಸ) ಅದನ್ನು ಯಥಾರೂಪದಲ್ಲಿ ತಲಪಿಸುತ್ತಿದ್ದ ದೇವಚರರು.
5. ಇಲ್ಲಿಂದ ಸತ್ಯದ ಬಗ್ಗೆ ನಿರಪೇಕ್ಷತೆ ಪ್ರದರ್ಶಿಸುತ್ತಿದ್ದ ಸತ್ಯನಿಷೇಧಿಗಳನ್ನುದ್ದೇಶಿಸಿ ನೇರವಾಗಿ ಕ್ರೋಧವನ್ನು ವ್ಯಕ್ತಪಡಿಸಲಾಗಿದೆ. ಇದಕ್ಕೆ ಮೊದಲು ಅಧ್ಯಾಯದ ಆರಂಭದಿಂದ 16ನೆಯ ಸೂಕ್ತದ ತನಕ ಪ್ರವಾದಿವರ್ಯರನ್ನುದ್ದೇಶಿಸಿ(ಸ) ಬೋಧನೆ ನೀಡಲಾಗಿದೆ ಮತ್ತು ಪರೋಕ್ಷವಾಗಿ ಸತ್ಯನಿಷೇಧಿಗಳ ಬಗ್ಗೆ ಕ್ರೋಧ ವ್ಯಕ್ತಪಡಿಸಲಾಗಿದೆ. "ಓ ಪ್ರವಾದಿಯೇ! ತಾವು ಸತ್ಯಾಪೇಕ್ಷಿಯೊಬ್ಬನನ್ನು ಬಿಟ್ಟು ಅದಾವ ಜನರ ಕಡೆಗೆ ಗಮನ ಹರಿಸುತ್ತಿದ್ದೀರಿ. ಅವರಾದರೋ ಸತ್ಯಸಂದೇಶದ ದೃಷ್ಟಿಕೋನದಿಂದ ನೋಡುವುದಾದರೆ ಯಾವುದೇ ನೆಲೆ-ಬೆಲೆ ಇಲ್ಲದವರಾಗಿದ್ದಾರೆ. ತಮ್ಮಂತಹ ಮಹಾನ್ ಪ್ರವಾದಿ ಕುರ್‌ಆನಿನಂತಹ ಉನ್ನತ ಸ್ತರದ ಸಾಧನವನ್ನು ಅವರ ಮುಂದಿಡುವಂತಹ ಉನ್ನತ ಸ್ಥಾನಮಾನವನ್ನು ಅವರು ಹೊಂದಿಲ್ಲ" ಎಂಬ ಧಾಟಿಯನ್ನು ಇಲ್ಲಿ ಅನುಸರಿಸಲಾಗಿದೆ.

| | |
|---|---|
| 22. ತರುವಾಯ ತಾನಿಚ್ಛಿಸಿದಾಗ ಇವನನ್ನು ಪುನಃ ಜೀವಂತ ಗೊಳಿಸುವನು. | ثُمَّ إِذَا شَآءَ أَنشَرَهُۥ ﴿٢٢﴾ |
| 23. ಖಂಡಿತ ಅಲ್ಲ, ಅಲ್ಲಾಹನು ಇವನಿಗೆ ಆಜ್ಞಾಪಿಸಿದ್ದ ಕರ್ತವ್ಯವನ್ನು ಇವನು ನೆರವೇರಿಸಲಿಲ್ಲ. | كَلَّا لَمَّا يَقْضِ مَآ أَمَرَهُۥ ﴿٢٣﴾ |
| 24. ಇನ್ನು, ಮನುಷ್ಯನು ತನ್ನ ಆಹಾರವನ್ನೊಮ್ಮೆ ನೋಡಲಿ- | فَلْيَنظُرِ ٱلْإِنسَٰنُ إِلَىٰ طَعَامِهِۦٓ ﴿٢٤﴾ |
| 25. ನಾವು ಧಾರಾಳವಾಗಿ ನೀರನ್ನು ಸುರಿಸಿದೆವು-[6] | أَنَّا صَبَبْنَا ٱلْمَآءَ صَبًّا ﴿٢٥﴾ |
| 26. ತರುವಾಯ ನೆಲವನ್ನು ವಿಚಿತ್ರ ರೀತಿಯಿಂದ ಸೀಳಿದೆವು. | ثُمَّ شَقَقْنَا ٱلْأَرْضَ شَقًّا ﴿٢٦﴾ |
| 27. ಅನಂತರ ಅದರೊಳಗೆ ಉತ್ಪಾದಿಸಿದೆವು ಧಾನ್ಯಗಳನ್ನು- | فَأَنۢبَتْنَا فِيهَا حَبًّا ﴿٢٧﴾ |
| 28. ದ್ರಾಕ್ಷೆ ಮತ್ತು ಹಸಿರು ತರಕಾರಿಗಳನ್ನು- | وَعِنَبًا وَقَضْبًا ﴿٢٨﴾ |
| 29. ಇಪ್ಪೆ ಮತ್ತು ಖರ್ಜೂರ- | وَزَيْتُونًا وَنَخْلًا ﴿٢٩﴾ |
| 30. ದಟ್ಟವಾದ ತೋಟಗಳನ್ನು- | وَحَدَآئِقَ غُلْبًا ﴿٣٠﴾ |
| 31. ತರತರದ ಹಣ್ಣು ಹಂಪಲುಗಳು ಮತ್ತು ಮೇವನ್ನು- | وَفَٰكِهَةً وَأَبًّا ﴿٣١﴾ |
| 32. ನಿಮಗಾಗಿಯೂ ನಿಮ್ಮ ಜಾನುವಾರುಗಳಿಗಾಗಿಯೂ ಜೀವನ ಸಾಧನಗಳ ರೂಪದಲ್ಲಿ. | مَّتَٰعًا لَّكُمْ وَلِأَنْعَٰمِكُمْ ﴿٣٢﴾ |
| 33. ಕೊನೆಗೆ ಕಿವಿಗಡಚಿಕ್ಕುವ ಆ ಧ್ವನಿ ಮೊಳಗುವಾಗ-[7] | فَإِذَا جَآءَتِ ٱلصَّآخَّةُ ﴿٣٣﴾ |
| 34. ಅಂದು ಮನುಷ್ಯನು ದೂರ ಓಡುವನು- ತನ್ನ ಸಹೋದರನಿಂದ- | يَوْمَ يَفِرُّ ٱلْمَرْءُ مِنْ أَخِيهِ ﴿٣٤﴾ |
| 35. ತನ್ನ ತಾಯಿಯಿಂದ ಮತ್ತು ತನ್ನ ತಂದೆಯಿಂದ- | وَأُمِّهِۦ وَأَبِيهِ ﴿٣٥﴾ |
| 36. ತನ್ನ ಪತ್ನಿಯಿಂದ ಮತ್ತು ತನ್ನ ಮಕ್ಕಳಿಂದ. | وَصَٰحِبَتِهِۦ وَبَنِيهِ ﴿٣٦﴾ |

6. ಅರ್ಥಾತ್- ಮಳೆ.

7. ಅಂದರೆ ಕೊನೆಯ ಬಾರಿ ಕಹಳೆಯೂದಿದಾಗ ಉಂಟಾಗುವ ಪ್ರಳಯಾತಂಕ ಶಬ್ದ. ಅದು ಮೊಳಗುತ್ತಲೇ ಸತ್ತು ಹೋದ ಮಾನವರೆಲ್ಲರೂ ಜೀವಂತಗೊಳಿಸಲ್ಪಟ್ಟು ಏಳುವರು.

37. ಅವರಲ್ಲಿ ಪ್ರತಿಯೊಬ್ಬನಿಗೂ ಅಂದು, ತನ್ನ ಹೊರತು ಬೇರೆ ಯಾರ ಪ್ರಜ್ಞೆಯೂ ಇಲ್ಲದಂತಹ ಪರಿಸ್ಥಿತಿ ಬಂದೊದಗುವುದು.

لِكُلِّ امْرِئٍ مِّنْهُمْ يَوْمَئِذٍ شَأْنٌ يُغْنِيهِ ۝٣٧

38. ಕೆಲವು ಮುಖಗಳು ಅಂದು ಕಾಂತಿಪೂರ್ಣವಾಗಿರುವುವು-

وُجُوهٌ يَوْمَئِذٍ مُّسْفِرَةٌ ۝٣٨

39. ಪ್ರಸನ್ನವಾಗಿಯೂ ಆನಂದ ತುಂದಿಲವಾಗಿಯೂ ಇರುವುವು.

ضَاحِكَةٌ مُّسْتَبْشِرَةٌ ۝٣٩

40. ಮತ್ತೆ ಕೆಲವು ಮುಖಗಳ ಮೇಲೆ ಅಂದು ಧೂಳು ಕವಿದಿರುವುದು-

وَوُجُوهٌ يَوْمَئِذٍ عَلَيْهَا غَبَرَةٌ ۝٤٠

41. ಮತ್ತು ಕಪ್ಪು ಕವಿದಿರುವುದು.

تَرْهَقُهَا قَتَرَةٌ ۝٤١

42. ಇವರೇ ದುಷ್ಕರ್ಮಿಗಳಾದ ಸತ್ಯನಿಷೇಧಿಗಳು.

أُولَٰئِكَ هُمُ الْكَفَرَةُ الْفَجَرَةُ ۝٤٢

---







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸೂರ್ಯನು ಸುತ್ತಲ್ಪಡುವಾಗ,-[1]

إِذَا الشَّمْسُ كُوِّرَتْ ۝١

2. ನಕ್ಷತ್ರಗಳು ಚದುರಿ ಬಿಡುವಾಗ-

وَإِذَا النُّجُومُ انْكَدَرَتْ ۝٢

3. ಪರ್ವತಗಳು ಚಲಿಸಲ್ಪಡುವಾಗ,

وَإِذَا الْجِبَالُ سُيِّرَتْ ۝٣

4. ಮತ್ತು ಹತ್ತು ತಿಂಗಳ ಗರ್ಭಿಣಿ ಒಂಟೆಗಳನ್ನು ಅವುಗಳ ಪಾಡಿಗೆ ಬಿಟ್ಟು ಬಿಡಲಾಗುವಾಗ,[2]

وَإِذَا الْعِشَارُ عُطِّلَتْ ۝٤

5. ವನ್ಯ ಮೃಗಗಳೆಲ್ಲಾ ಒಂದೆಡೆ ಸೇರಿಸಲ್ಪಡುವಾಗ,

وَإِذَا الْوُحُوشُ حُشِرَتْ ۝٥

6. ಸಮುದ್ರಗಳನ್ನು ಕೆರಳಿಸಿ ಬಿಡಲಾಗುವಾಗ,

وَإِذَا الْبِحَارُ سُجِّرَتْ ۝٦

7. ಪ್ರಾಣಗಳನ್ನು (ಶರೀರಗಳೊಂದಿಗೆ) ಜೋಡಿಸಿ ಬಿಡಲಾಗುವಾಗ,[3]

وَإِذَا النُّفُوسُ زُوِّجَتْ ۝٧

8. ಜೀವಂತ ಹೂಳಲ್ಪಟ್ಟ ಹೆಣ್ಣು ಮಗುವಿನೊಡನೆ ಕೇಳಲಾಗುವಾಗ,

وَإِذَا الْمَوْءُودَةُ سُئِلَتْ ۝٨

9. ಯಾವ ತಪ್ಪಿಗಾಗಿ ಅವಳನ್ನು ಕೊಲ್ಲಲಾಯಿತೆಂದು.

بِأَيِّ ذَنْبٍ قُتِلَتْ ۝٩

---

1. ಅರ್ಥಾತ್- ಸೂರ್ಯದಿಂದ ಹೊರಟು ಲೋಕದಾದ್ಯಂತ ಹರಡುವ ಪ್ರಕಾಶವನ್ನು ಅದಕ್ಕೆ ಸುತ್ತಿ ಬಿಡಲಾಗುವುದು ಮತ್ತು ಅದರ ಪ್ರಸರಣ ನಿಂತು ಬಿಡುವುದು.
2. ಅರಬರ ಪಾಲಿಗೆ ಮರಿಹಾಕುವ ಕಾಲ ಸಮೀಪಿಸಿರುವ ಒಂಟೆಗಿಂತ ಬೆಲೆಬಾಳುವ ಆಸ್ತಿ ಬೇರಾವುದೂ ಇರಲಿಲ್ಲ. ಅಂತಹ ಸಂದರ್ಭದಲ್ಲಿ ಅದರ ವಿಶೇಷ ರಕ್ಷಣೆ ಮತ್ತು ಆರೈಕೆ ಮಾಡಲಾಗುತ್ತಿತ್ತು. ಇಂತಹ ಹೆಣ್ಣು ಒಂಟೆಗಳನ್ನೂ ಜನರು ನಿರ್ಲಕ್ಷಿಸಿ ಬಿಡುವುದೆಂದರೆ, ಅತ್ಯಂತ ಆತ್ಮೀಯವಾದ ಸಂಪತ್ತನ್ನು ರಕ್ಷಿಸುವ ಬಗ್ಗೆಯೂ ಪರಿವೆಯಿಲ್ಲದಂತಹ ಭೀಕರ ವಿಪತ್ತು ಬಂದೆರಗಿದೆ ಎಂದರ್ಥ.
3. ಅರ್ಥಾತ್- ಮರಣಕ್ಕೆ ಮೊದಲು ಲೋಕದಲ್ಲಿ ದೇಹ ಮತ್ತು ಆತ್ಮದ ಜತೆ ಬದುಕಿದ್ದಂತೆಯೇ ಮಾನವರನ್ನು ಪುನರಪಿ ಜೀವಂತಗೊಳಿಸಲಾಗುವುದು.

10. ಕರ್ಮಪತ್ರಗಳು ತೆರೆಯಲ್ಪಡುವಾಗ,

وَإِذَا الصُّحُفُ نُشِرَتْ ﴿١٠﴾

11. ಆಕಾಶದ ತೆರೆಯು ಸರಿಸಲ್ಪಡುವಾಗ,

وَإِذَا السَّمَاءُ كُشِطَتْ ﴿١١﴾

12. ನರಕವು ಭುಗಿಲೇಳಿಸಲ್ಪಡುವಾಗ,

وَإِذَا الْجَحِيمُ سُعِّرَتْ ﴿١٢﴾

13. ಮತ್ತು ಸ್ವರ್ಗವು ಹತ್ತಿರ ತರಲ್ಪಡುವಾಗ,

وَإِذَا الْجَنَّةُ أُزْلِفَتْ ﴿١٣﴾

14. ಪ್ರತಿಯೊಬ್ಬನಿಗೂ ತಾನೇನು ತಂದಿರುವೆನೆಂದು ತಿಳಿದು ಬಿಡುವುದು.

عَلِمَتْ نَفْسٌ مَا أَحْضَرَتْ ﴿١٤﴾

15-16. ಹಾಗಲ್ಲ,[4] ನಾನು ಆಣೆ ಹಾಕುತ್ತೇನೆ ಮರಳುವ ಹಾಗೂ ಮರೆಯಾಗುವ ತಾರೆಗಳ-

فَلَا أُقْسِمُ بِالْخُنَّسِ ﴿١٥﴾ الْجَوَارِ الْكُنَّسِ ﴿١٦﴾

17. ಮತ್ತು ರಾತ್ರಿಯ- ಅದು ತೆರಳಿದಾಗ-

وَاللَّيْلِ إِذَا عَسْعَسَ ﴿١٧﴾

18. ಮತ್ತು ಮುಂಜಾನೆಯ- ಅದು ಉಸಿರಾಡಿದಾಗ-

وَالصُّبْحِ إِذَا تَنَفَّسَ ﴿١٨﴾

19. ಇದು ನಿಜಕ್ಕೂ ಒಬ್ಬ ಸನ್ಮಾನ್ಯ ದೂತನ ಮಾತಾಗಿದೆ-[5]

إِنَّهُ لَقَوْلُ رَسُولٍ كَرِيمٍ ﴿١٩﴾

20. ಅವನು ಮಹಾಶಕ್ತಿಶಾಲಿ, ವಿಶ್ವಸಿಂಹಾಸನದ ಒಡೆಯನ ಬಳಿ ಉನ್ನತ ಸ್ಥಾನವುಳ್ಳವನು-

ذِي قُوَّةٍ عِنْدَ ذِي الْعَرْشِ مَكِينٍ ﴿٢٠﴾

21. ಅಲ್ಲಿ ಅವನ ಆದೇಶವನ್ನು ಪಾಲಿಸಲಾಗುತ್ತದೆ.[6] ಅವನು ವಿಶ್ವಾಸಾರ್ಹನಾಗಿರುತ್ತಾನೆ.

مُطَاعٍ ثَمَّ أَمِينٍ ﴿٢١﴾

22. ಮತ್ತು (ಮಕ್ಕಾವಾಸಿಗಳೇ) ನಿಮ್ಮ ಸಂಗಾತಿ[7] ಹುಚ್ಚನಲ್ಲ.

وَمَا صَاحِبُكُمْ بِمَجْنُونٍ ﴿٢٢﴾

23. ಅವರು ಆ ದೂತನನ್ನು ಪ್ರಕಾಶಮಯ ದಿಗಂತದಲ್ಲಿ ಕಂಡಿದ್ದಾರೆ.

وَلَقَدْ رَآهُ بِالْأُفُقِ الْمُبِينِ ﴿٢٣﴾

---

4. ಅರ್ಥಾತ್- ಕುರ್‌ಆನಿನಲ್ಲಿ ವಿವರಿಸಲಾಗುತ್ತಿರುವುದೆಲ್ಲವೂ ಹುಚ್ಚನ ಬಡಬಡಿಕೆ ಅಥವಾ ಪಿಶಾಚಿಯ ದುಷ್ಪ್ರೇರಣೆ ಎಂಬ ನಿಮ್ಮ ಶಂಕೆ ಸರಿಯಲ್ಲ.
5. ಇಲ್ಲಿ 'ಸನ್ಮಾನ್ಯದೂತ'(ರಸೂಲುನ್ ಕರೀಮ್) ಎಂದು ಹೇಳಲಾಗಿರುವುದು ದೇವವಾಣಿಯನ್ನು ತರುವ ದೇವಚರನ ಕುರಿತಾಗಿದೆ. ಮುಂದಿನ ಸೂಕ್ತದಿಂದ ಈ ವಿಷಯ ಸ್ಪಷ್ಟವಾಗಿ ತಿಳಿದು ಬರುತ್ತದೆ. ಕುರ್‌ಆನನ್ನು 'ದೂತನ ಮಾತು' ಎಂದು ಹೇಳಲಾಗಿರುವುದರ ಅರ್ಥ ಇದು ಸ್ವತಃ ಆ ದೇವಚರನ ಮಾತೇ ಆಗಿದೆ ಎಂದಲ್ಲ. ಬದಲಾಗಿ 'ದೂತನ ಮಾತು' ಎಂಬ ಪದವೇ ಸೂಚಿಸುವಂತೆ ಇದು ಅದನ್ನು ದೂತನನ್ನಾಗಿ ಮಾಡಿ ಕಳುಹಿಸಿದ ಆ ಶಕ್ತಿಯ ಮಾತಾಗಿದೆ.
6. ಅರ್ಥಾತ್- ಅವನು ದೇವಚರರೆಲ್ಲರ ಮೇಲಾಧಿಕಾರಿಯಾಗಿದ್ದಾನೆ. ದೇವಚರರೆಲ್ಲರೂ ಅವನ ಅಪ್ಪಣೆಯಂತೆಯೇ ಕೆಲಸ ಮಾಡುತ್ತಾರೆ.
7. ನಿಮ್ಮ ಸಂಗಾತಿಯೆಂದರೆ ಪ್ರವಾದಿವರ್ಯರು(ಸ).

24. ಮತ್ತು ಅವರು ಪರೋಕ್ಷದ (ಈ ಜ್ಞಾನವನ್ನು ಜನರಿಗೆ ತಲಪಿಸುವ) ವಿಷಯದಲ್ಲಿ ಜಿಪುಣರಲ್ಲ.

وَمَا هُوَ عَلَى الْغَيْبِ بِضَنِينٍ ﴿٢٤﴾

25. ಮತ್ತು ಇದು ಯಾವುದೇ ಬಹಿಷ್ಕೃತ ಶೈತಾನನ ಮಾತಲ್ಲ-

وَمَا هُوَ بِقَوْلِ شَيْطَانٍ رَجِيمٍ ﴿٢٥﴾

26. ಇನ್ನು ನೀವೆತ್ತ ಸಾಗುತ್ತಿರುವಿರಿ?

فَأَيْنَ تَذْهَبُونَ ﴿٢٦﴾

27. ಇದಂತು ಸಮಸ್ತ ಲೋಕದವರಿಗೊಂದು ಉಪದೇಶವಾಗಿರುತ್ತದೆ-

إِنْ هُوَ إِلَّا ذِكْرٌ لِلْعَالَمِينَ ﴿٢٧﴾

28. ನಿಮ್ಮ ಪೈಕಿ ಸನ್ಮಾರ್ಗದಲ್ಲಿ ನಡೆಯಲಿಚ್ಛಿಸುವ ಪ್ರತಿಯೊಬ್ಬನಿಗೆ.

لِمَنْ شَاءَ مِنْكُمْ أَنْ يَسْتَقِيمَ ﴿٢٨﴾

29. ಸರ್ವಲೋಕಗಳ ಪಾಲಕ ಪ್ರಭುವಾದ ಅಲ್ಲಾಹನು ಇಚ್ಛಿಸದೆ, ನಿಮ್ಮ ಇಚ್ಛೆಯಿಂದ ಏನೂ ಆಗುವುದಿಲ್ಲ.

وَمَا تَشَاءُونَ إِلَّا أَنْ يَشَاءَ اللَّهُ
رَبُّ الْعَالَمِينَ ﴿٢٩﴾






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಆಕಾಶವು ಒಡೆದು ಸೀಳಾಗುವಾಗ,

اِذَا السَّمَآءُ انْفَطَرَتْ ۙ﴿۱﴾

2. ನಕ್ಷತ್ರಗಳು ಚದುರಿ ಹೋಗುವಾಗ,

وَاِذَا الْكَوَاكِبُ انْتَثَرَتْ ۙ﴿۲﴾

3. ಸಮುದ್ರಗಳು ಭೇದಿಸಲ್ಪಡುವಾಗ-

وَاِذَا الْبِحَارُ فُجِّرَتْ ۙ﴿۳﴾

4. ಮತ್ತು ಸಮಾಧಿಗಳು ತೆರೆಯಲ್ಪಡುವಾಗ,[1]

وَاِذَا الْقُبُوْرُ بُعْثِرَتْ ۙ﴿۴﴾

5. ಪ್ರತಿಯೊಬ್ಬ ವ್ಯಕ್ತಿಗೆ ತಾನು ಮುಂದೆ ಕಳುಹಿಸಿದ ಮತ್ತು ಹಿಂದೆ ಬಿಟ್ಟಿರುವ ಕರ್ಮಗಳೇನೆಂಬುದು ತಿಳಿದು ಬರುವುದು.

عَلِمَتْ نَفْسٌ مَّا قَدَّمَتْ وَاَخَّرَتْ ؕ﴿۵﴾

6. ಓ ಮಾನವ! ಆ ನಿನ್ನ ಕರುಣಾಮಯಿ ಪ್ರಭುವಿನ ಬಗ್ಗೆ ನಿನ್ನನ್ನು ಮೋಸಕ್ಕೊಳಪಡಿಸಿದ ವಸ್ತು ಯಾವುದು?

يٰۤاَيُّهَا الْاِنْسَانُ مَا غَرَّكَ بِرَبِّكَ الْكَرِيْمِ ۙ﴿۶﴾

7. ಅವನು ನಿನ್ನನ್ನು ಸೃಷ್ಟಿಸಿದನು, ನಿನ್ನನ್ನು ನಖಶಿಖಾಂತ ಸರಿಪಡಿಸಿದನು, ನಿನ್ನನ್ನು ಸಂತುಲಿತಗೊಳಿಸಿದನು,

الَّذِيْ خَلَقَكَ فَسَوّٰىكَ فَعَدَلَكَ ۙ﴿۷﴾

8. ತಾನಿಚ್ಛಿಸಿದ ರೂಪದಲ್ಲಿ ನಿನ್ನನ್ನು ಜೋಡಿಸಿ ರಚಿಸಿದನು.

فِيْۤ اَيِّ صُوْرَةٍ مَّا شَآءَ رَكَّبَكَ ؕ﴿۸﴾

9. ಖಂಡಿತ ಅಲ್ಲ,[2] ವಾಸ್ತವದಲ್ಲಿ ನೀವು ಕರ್ಮಫಲವನ್ನು ಅಲ್ಲಗಳೆಯುತ್ತೀರಿ-[3]

كَلَّا بَلْ تُكَذِّبُوْنَ بِالدِّيْنِ ۙ﴿۹﴾

---

1. ಸಮಾಧಿಗಳು ತೆರೆಯಲ್ಪಡುವುದೆಂದರೆ ಜನರನ್ನು ಮತ್ತೊಮ್ಮೆ ಜೀವಂತಗೊಳಿಸಿ ಎಬ್ಬಿಸಲಾಗುವುದು.
2. ಅರ್ಥಾತ್- ಈ ರೀತಿಯ ಮೋಸಕ್ಕೆ ಗುರಿಯಾಗಲು ಯಾವುದೇ ಸೂಕ್ತ ಕಾರಣಗಳಿಲ್ಲ.
3. ಅರ್ಥಾತ್- ಯಾವ ವಸ್ತು ನಿಮ್ಮನ್ನು ಮೋಸಕ್ಕೀಡು ಮಾಡಿದೆಯೋ ಅದು ಸೂಕ್ತವಾದ ಆಧಾರವಲ್ಲ. ಬದಲಾಗಿ ಲೋಕದ ಈ ಕರ್ಮಭೂಮಿಯ ನಂತರ ಪ್ರತಿಫಲದ ಲೋಕವೆಂಬುದಿಲ್ಲ ಎಂಬ ನಿಮ್ಮ ಮೂರ್ಖತನದಿಂದ ಕೂಡಿದ ಭಾವನೆಯೇ ಇದಕ್ಕೆ

| | |
|---|---|
| 10. ವಸ್ತುತಃ ನಿಮ್ಮ ಮೇಲೆ ಕಾವಲುಗಾರರು ನಿಯುಕ್ತರಾಗಿರುವರು- | وَإِنَّ عَلَيْكُمْ لَحَافِظِينَ ﴿١٠﴾ |
| 11. ಗೌರವಾನ್ವಿತ ಬರಹಗಾರರು- | كِرَامًا كَاتِبِينَ ﴿١١﴾ |
| 12. ನಿಮ್ಮ ಪ್ರತಿಯೊಂದು ಕೃತ್ಯವನ್ನೂ ಬಲ್ಲವರು. | يَعْلَمُونَ مَا تَفْعَلُونَ ﴿١٢﴾ |
| 13. ನಿಸ್ಸಂದೇಹವಾಗಿಯೂ ಸಜ್ಜನರು ಪರಮಸುಖದಲ್ಲಿರುವರು. | إِنَّ الْأَبْرَارَ لَفِي نَعِيمٍ ﴿١٣﴾ |
| 14. ಮತ್ತು ಖಂಡಿತವಾಗಿಯೂ ದುಷ್ಕರ್ಮಿಗಳು ನರಕಾಗ್ನಿಯಲ್ಲಿರುವರು. | وَإِنَّ الْفُجَّارَ لَفِي جَحِيمٍ ﴿١٤﴾ |
| 15. ಪ್ರತಿಫಲದ ದಿನ ಅವರು ಅದರೊಳಗೆ ಪ್ರವೇಶಿಸುವರು. | يَصْلَوْنَهَا يَوْمَ الدِّينِ ﴿١٥﴾ |
| 16. ಮತ್ತು ಅದರಿಂದ ಖಂಡಿತ ಮಾಯವಾಗಲಾರರು. | وَمَا هُمْ عَنْهَا بِغَائِبِينَ ﴿١٦﴾ |
| 17. ಪ್ರತಿಫಲದ ಆ ದಿನ ಏನೆಂಬುದು ನಿಮಗೇನು ಗೊತ್ತು? | وَمَا أَدْرَاكَ مَا يَوْمُ الدِّينِ ﴿١٧﴾ |
| 18. ಹೌದು, ಪ್ರತಿಫಲದ ಆ ದಿನ ಏನೆಂಬುದು ನಿಮಗೇನು ಗೊತ್ತು? | ثُمَّ مَا أَدْرَاكَ مَا يَوْمُ الدِّينِ ﴿١٨﴾ |
| 19. ಅದು ಯಾರೂ ಯಾರಿಗೂ ಏನನ್ನೂ ಮಾಡಲು ಸಾಧ್ಯವಾಗದ ದಿನ. ಅಂದು ತೀರ್ಮಾನವೆಲ್ಲವೂ ಸರ್ವಸಂಪೂರ್ಣವಾಗಿ ಅಲ್ಲಾಹನ ಅಧಿಕಾರದಲ್ಲಿರುವುದು. | يَوْمَ لَا تَمْلِكُ نَفْسٌ لِنَفْسٍ شَيْئًا ۖ وَالْأَمْرُ يَوْمَئِذٍ لِلَّهِ ﴿١٩﴾ |

---

ಕಾರಣವಾಗಿದೆ. ಈ ನಿರಾಧಾರವಾದ ತಪ್ಪುಕಲ್ಪನೆಯಿಂದಾಗಿಯೇ ನೀವು ದೇವನಿಂದ ಅಲಕ್ಷ್ಯರಾಗಿದ್ದೀರಿ, ಅವನ ನ್ಯಾಯದ ಬಗ್ಗೆ ನಿರ್ಭಯರಾಗಿದ್ದೀರಿ ಮತ್ತು ನಿಮ್ಮ ನೈತಿಕ ಧೋರಣೆಯ ಬಗ್ಗೆ ಹೊಣೆಗೇಡಿಗಳಾಗಿದ್ದೀರಿ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

| | |
|---|---|
| 1. ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ- | وَيْلٌ لِّلْمُطَفِّفِيْنَ ۝١ |
| 2. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ. | الَّذِيْنَ اِذَا اكْتَالُوْا عَلَى النَّاسِ يَسْتَوْفُوْنَ ۝٢ |
| 3. ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ. | وَاِذَا كَالُوْهُمْ اَوْ وَّزَنُوْهُمْ يُخْسِرُوْنَ ۝٣ |
| 4. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ? | اَلَا يَظُنُّ اُولٰٓئِكَ اَنَّهُمْ مَّبْعُوْثُوْنَ ۝٤ |
| 5. ಒಂದು ಮಹಾದಿನದಂದು-[1] | لِيَوْمٍ عَظِيْمٍ ۝٥ |
| 6. (ಅದು) ಎಲ್ಲ ಜನರೂ ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ. | يَّوْمَ يَقُوْمُ النَّاسُ لِرَبِّ الْعٰلَمِيْنَ ۝٦ |
| 7. ಖಂಡಿತ ಅಲ್ಲ,[2] ನಿಶ್ಚಯವಾಗಿಯೂ ದುಷ್ಕರ್ಮಿಗಳ ಕರ್ಮಪತ್ರವು ಸೆರೆಮನೆಯ ದಾಖಲೆಯಲ್ಲಿದೆ. | كَلَّآ اِنَّ كِتٰبَ الْفُجَّارِ لَفِيْ سِجِّيْنٍ ۝٧ |
| 8. ಮತ್ತು ಆ ಸೆರೆಮನೆಯ ದಾಖಲೆ ಏನೆಂದು ನಿಮಗೇನು ಗೊತ್ತು? | وَمَآ اَدْرٰىكَ مَا سِجِّيْنٌ ۝٨ |
| 9. ಅದೊಂದು ಲಿಖಿತ ಗ್ರಂಥವಾಗಿದೆ. | كِتٰبٌ مَّرْقُوْمٌ ۝٩ |
| 10. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ- | وَيْلٌ يَّوْمَئِذٍ لِّلْمُكَذِّبِيْنَ ۝١٠ |

1. ಪುನರುತ್ಥಾನ ದಿನವನ್ನು ಮಹಾದಿನವೆನ್ನಲಾಗಿದೆ. ಏಕೆಂದರೆ ಆ ದಿನದಂದು ಮಾನವರು ಮತ್ತು ಜಿನ್ನ್‌ಗಳೆಲ್ಲರ ಕುರಿತು ಏಕಕಾಲಕ್ಕೆ ವಿಚಾರಣೆ ನಡೆಸಲಾಗುವುದು. ಶಿಕ್ಷೆ-ರಕ್ಷೆಗಳ ಕುರಿತಾದ ಮಹತ್ವದ ತೀರ್ಮಾನಗಳು ಆ ದಿನ ನಡೆಯುವುವು.
2. ಅರ್ಥಾತ್- ಲೋಕದಲ್ಲಿ ಅಪರಾಧಗಳೆನ್ನಸಗಿದ ನಂತರ ನಾವು ಹಾಗೆಯೇ ತಪ್ಪಿಸಿಕೊಳ್ಳುವೆವು ಎಂಬ ಅವರ ಭಾವನೆ ಖಂಡಿತ ತಪ್ಪು.

11. ಪ್ರತಿಫಲದ ದಿನವನ್ನು ಸುಳ್ಳಾಗಿಸುವವರಿಗೆ.

الَّذِينَ يُكَذِّبُونَ بِيَوْمِ الدِّينِ ۝١١

12. ಮೇರೆ ಮೀರುವ ದುಷ್ಕರ್ಮಿಯ ಹೊರತು ಇನ್ನಾರೂ ಅದನ್ನು ಸುಳ್ಳಾಗಿಸುವುದಿಲ್ಲ-

وَمَا يُكَذِّبُ بِهِۦٓ إِلَّا كُلُّ مُعْتَدٍ أَثِيمٍ ۝١٢

13. ಅವನಿಗೆ ನಮ್ಮ ಸೂಕ್ತಗಳನ್ನು ಓದಿ ಹೇಳಲಾದಾಗ[3] ಇವೆಲ್ಲ ಪೂರ್ವಕಾಲದ ಕಥೆಗಳು ಎನ್ನುತ್ತಾನೆ.

إِذَا تُتْلَىٰ عَلَيْهِ ءَايَٰتُنَا قَالَ أَسَٰطِيرُ ٱلْأَوَّلِينَ ۝١٣

14. ಖಂಡಿತ ಅಲ್ಲ! ವಾಸ್ತವದಲ್ಲಿ ಇವರ ಹೃದಯಗಳಿಗೆ ಇವರ ದುಷ್ಕರ್ಮಗಳ ತುಕ್ಕು ಹಿಡಿದು ಬಿಟ್ಟಿದೆ.[4]

كَلَّا ۖ بَلْ ۜ رَانَ عَلَىٰ قُلُوبِهِم مَّا كَانُوا۟ يَكْسِبُونَ ۝١٤

15. ಖಂಡಿತ ಅಲ್ಲ! ನಿಸ್ಸಂದೇಹವಾಗಿಯೂ ಅಂದು ಇವರು ತಮ್ಮ ಪ್ರಭುವಿನ ದರ್ಶನದಿಂದ ವಂಚಿತರಾಗುವರು.

كَلَّآ إِنَّهُمْ عَن رَّبِّهِمْ يَوْمَئِذٍ لَّمَحْجُوبُونَ ۝١٥

16. ತರುವಾಯ ಇವರು ನರಕಾಗ್ನಿಯಲ್ಲಿ ಹೋಗಿ ಬೀಳುವರು.

ثُمَّ إِنَّهُمْ لَصَالُوا۟ ٱلْجَحِيمِ ۝١٦

17. ಆ ಬಳಿಕ ಇವರೊಡನೆ- ಇದು ನೀವು ಸುಳ್ಳಾಗಿಸುತ್ತಿದ್ದ ವಸ್ತುವೇ ಆಗಿದೆ ಎಂದು ಹೇಳಲಾಗುವುದು.

ثُمَّ يُقَالُ هَٰذَا ٱلَّذِى كُنتُم بِهِۦ تُكَذِّبُونَ ۝١٧

18. ಖಂಡಿತ ಅಲ್ಲ.[5] ನಿಸ್ಸಂದೇಹವಾಗಿಯೂ ಸಜ್ಜನರ ಕರ್ಮಪತ್ರವು ಶ್ರೇಷ್ಠ ಜನರ ದಾಖಲೆಯಲ್ಲಿದೆ.

كَلَّآ إِنَّ كِتَٰبَ ٱلْأَبْرَارِ لَفِى عِلِّيِّينَ ۝١٨

19. ಮತ್ತು ಆ ಶ್ರೇಷ್ಠ ಜನರ ದಾಖಲೆ ಏನೆಂದು ನಿಮಗೇನು ಗೊತ್ತು?

وَمَآ أَدْرَىٰكَ مَا عِلِّيُّونَ ۝١٩

20. ಅದೊಂದು ಲಿಖಿತ ಗ್ರಂಥ-

كِتَٰبٌ مَّرْقُومٌ ۝٢٠

21. ಆಪ್ತ ದೇವಚರರು ಅದನ್ನು ನೋಡಿಕೊಳ್ಳುತ್ತಾರೆ.

يَشْهَدُهُ ٱلْمُقَرَّبُونَ ۝٢١

22. ನಿಸ್ಸಂದೇಹವಾಗಿಯೂ ಸಜ್ಜನರು ಬಹಳ ಸುಖ ಸಂತೋಷದಲ್ಲಿರುವರು,

إِنَّ ٱلْأَبْرَارَ لَفِى نَعِيمٍ ۝٢٢

3. ಅರ್ಥಾತ್- ಪ್ರತಿಫಲದ ದಿನದ ಬಗ್ಗೆ ಸೂಚನೆಯಿರುವ ಸೂಕ್ತಗಳು.

4. ಅರ್ಥಾತ್- ಶಿಕ್ಷೆ-ರಕ್ಷೆಗಳನ್ನು ಪೂರ್ವಕಾಲದ ಕಥೆಗಳೆಂದು ಹೇಳಲು ಯಾವುದೇ ಸಮರ್ಪಕವಾದ ಕಾರಣಗಳಿಲ್ಲ. ಅದನ್ನು ಪೂರ್ವಕಾಲದ ಕಥೆಗಳೆಂದು ಅವರು ಹೇಳಲು ಕಾರಣವೇನೆಂದರೆ ಅವರ ಹೃದಯಕ್ಕೆ ಸಂಪೂರ್ಣವಾಗಿ ಅವರು ಎಸಗುತ್ತಿರುವ ಪಾಪಗಳ ತುಕ್ಕು ಹಿಡಿದಿದೆ. ಆದ್ದರಿಂದಲೇ ಸಾದ್ಯಂತ ಸಮರ್ಪಕವಾಗಿರುವ ವಿಷಯ ಅವರಿಗೆ ಕಟ್ಟು ಕಥೆಗಳಂತೆ ಕಾಣುತ್ತದೆ.

5. ಅರ್ಥಾತ್- ಶಿಕ್ಷೆ-ರಕ್ಷೆಗಳು ಸಂಭವಿಸಲಿಕ್ಕಿಲ್ಲ ಎಂಬ ಅವರ ಭಾವನೆ ತಪ್ಪಾಗಿದೆ.

| | |
|---|---|
| 23. ಉನ್ನತ ಪೀಠಗಳಲ್ಲಿ ಕುಳಿತು ವೀಕ್ಷಿಸುತ್ತಿರುವರು- | عَلَى الْأَرَائِكِ يَنظُرُونَ ﴿٢٣﴾ |
| 24. ನೀವು ಅವರ ಮುಖಗಳಲ್ಲಿ ಸುಸ್ಥಿತಿಯ ಕಾಂತಿಯನ್ನು ಕಾಣುವಿರಿ. | تَعْرِفُ فِي وُجُوهِهِمْ نَضْرَةَ النَّعِيمِ ﴿٢٤﴾ |
| 25. ಅವರಿಗೆ ಅತ್ಯಂತ ಸ್ವಚ್ಛವಾದ, ಮುದ್ರೆ ಹಾಕಲಾದ ಮದಿರೆಯನ್ನು ಕುಡಿಸಲಾಗುವುದು- | يُسْقَوْنَ مِن رَّحِيقٍ مَّخْتُومٍ ﴿٢٥﴾ |
| 26. ಅದರ ಮೇಲೆ ಕಸ್ತೂರಿಯ ಮೊಹರು ಇರುವುದು. ಸ್ಪರ್ಧಿಸಿ ಜಯಿಸಬಯಸುವವರು ಇದನ್ನು ಪಡೆಯಲಿಕ್ಕಾಗಿ ಸ್ಪರ್ಧಿಸಿ ಜಯಿಸಲು ಪ್ರಯತ್ನಿಸಲಿ. | خِتَامُهُ مِسْكٌ ۚ وَفِي ذَٰلِكَ فَلْيَتَنَافَسِ الْمُتَنَافِسُونَ ﴿٢٦﴾ |
| 27. ಆ ಮದಿರೆಯಲ್ಲಿ 'ತಸ್ನೀಮ್' ಬೆರೆತಿರುವುದು-[6] | وَمِزَاجُهُ مِن تَسْنِيمٍ ﴿٢٧﴾ |
| 28. ಅದೊಂದು ಚಿಲುಮೆಯಾಗಿದ್ದು ಅದರ ನೀರಿನೊಂದಿಗೆ, ಅಲ್ಲಾಹನ ಸಾಮಿಪ್ಯ ಹೊಂದಿದವರು ಮದಿರೆಯನ್ನು ಕುಡಿಯುವರು. | عَيْنًا يَشْرَبُ بِهَا الْمُقَرَّبُونَ ﴿٢٨﴾ |
| 29. ಅಪರಾಧಿಗಳು ಭೂಲೋಕದಲ್ಲಿ ಸತ್ಯವಿಶ್ವಾಸಿಗಳನ್ನು ಗೇಲಿ ಮಾಡುತ್ತಿದ್ದರು. | إِنَّ الَّذِينَ أَجْرَمُوا كَانُوا مِنَ الَّذِينَ آمَنُوا يَضْحَكُونَ ﴿٢٩﴾ |
| 30. ಅವರ ಬಳಿಯಿಂದ ಹಾದು ಹೋಗುತ್ತಿದ್ದಾಗ ಕಣ್ಣು ಮಿಟುಕಿಸುತ್ತ ಅವರ ಕಡೆಗೆ ಸನ್ನೆ ಮಾಡುತ್ತಿದ್ದರು. | وَإِذَا مَرُّوا بِهِمْ يَتَغَامَزُونَ ﴿٣٠﴾ |
| 31. ತಮ್ಮ ಮನೆಗಳಿಗೆ ಮರಳುವಾಗ ಮೋಜು ಮಾಡುತ್ತಾ ಮರಳುತ್ತಿದ್ದರು- | وَإِذَا انقَلَبُوا إِلَىٰ أَهْلِهِمُ انقَلَبُوا فَكِهِينَ ﴿٣١﴾ |
| 32. ಮತ್ತು ಅವರನ್ನು ಕಂಡಾಗ, "ಇವರು ದಾರಿಗೆಟ್ಟವರು" ಎಂದು ಹೇಳುತ್ತಿದ್ದರು. | وَإِذَا رَأَوْهُمْ قَالُوا إِنَّ هَٰؤُلَاءِ لَضَالُّونَ ﴿٣٢﴾ |

6. 'ತಸ್ನೀಮ್' ಎಂದರೆ ಔನ್ನತ್ಯವೆಂದಾಗಿದೆ. ಚಿಲುಮೆಯನ್ನು 'ತಸ್ನೀಮ್' ಎಂದು ಕರೆಯುವುದರ ಅರ್ಥ ಅದು ಎತ್ತರದಿಂದ ಕೆಳಕ್ಕೆ ಹರಿಯುತ್ತಿರುವುದು ಎಂದಾಗಿದೆ.

| | |
|---|---|
| 33. ವಾಸ್ತವದಲ್ಲಿ ಇವರೇನೂ ಅವರ ಮೇಲ್ವಿಚಾರಕರಾಗಿ ಕಳುಹಿಸಲ್ಪಟ್ಟಿರಲಿಲ್ಲ. | وَمَآ أُرْسِلُوا۟ عَلَيْهِمْ حَٰفِظِينَ ٣٣ |
| 34. ಇಂದು ಸತ್ಯವಿಶ್ವಾಸಿಗಳು ಸತ್ಯನಿಷೇಧಿಗಳ ಮೇಲೆ ನಗುತ್ತಿದ್ದಾರೆ, | فَٱلْيَوْمَ ٱلَّذِينَ ءَامَنُوا۟ مِنَ ٱلْكُفَّارِ يَضْحَكُونَ ٣٤ |
| 35. ಪೀಠಗಳ ಮೇಲೆ ಕುಳಿತು ಅವರ ಅವಸ್ಥೆಯನ್ನು ನೋಡುತ್ತಿದ್ದಾರೆ. | عَلَى ٱلْأَرَآئِكِ يَنظُرُونَ ٣٥ |
| 36. ಸತ್ಯನಿಷೇಧಿಗಳಿಗೆ ಅವರು ಮಾಡುತ್ತಿದ್ದ ಕೃತ್ಯಗಳ ಫಲ ಸಿಕ್ಕಿಯೇ ಬಿಟ್ಟಿತಲ್ಲ![7] | هَلْ ثُوِّبَ ٱلْكُفَّارُ مَا كَانُوا۟ يَفْعَلُونَ ٣٦ |

---

7. ಈ ಮಾತಿನಲ್ಲಿ ಲಘುವಾದ ಒಂದು ವ್ಯಂಗ್ಯವಿದೆ. ಸತ್ಯನಿಷೇಧಿಗಳು ಪುಣ್ಯಕಾರ್ಯವೆಂದು ಭಾವಿಸಿ ಸತ್ಯವಿಶ್ವಾಸಿಗಳಿಗೆ ಉಪದ್ರವ ಕೊಡುತ್ತಿದ್ದರು. ಆದ್ದರಿಂದ ಅವರ ಕುರಿತು ಹೀಗೆನ್ನಲಾಗಿದೆ. ಪರಲೋಕದಲ್ಲಿ ಸತ್ಯವಿಶ್ವಾಸಿಗಳು ಸ್ವರ್ಗದಲ್ಲಿ ಹಾಯಾಗಿ ಕುಳಿತು ನರಕದಲ್ಲಿ ಉರಿಯುತ್ತಿರುವ ಸತ್ಯನಿಷೇಧಿಗಳ ಅವಸ್ಥೆಯನ್ನು ನೋಡುತ್ತಿರುವರು ಮತ್ತು ಮನಸ್ಸಿನಲ್ಲೇ, 'ಇವರಿಗೆ ಇವರ ಕರ್ಮಗಳ ಒಳ್ಳೆಯ ಪ್ರತಿಫಲ ಸಿಕ್ಕಿದೆ' ಎನ್ನುತ್ತಿರುವರು.





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಆಕಾಶವು ಸಿಡಿದು ಹೋಗುವಾಗ-

إِذَا السَّمَآءُ انْشَقَّتْ ﴿١﴾

2. ಮತ್ತು ತನ್ನ ಪ್ರಭುವಿನ ಆದೇಶವನ್ನು ಪಾಲಿಸುವಾಗ, ಅದುವೇ (ಆಜ್ಞಾಪಾಲನೆಯೇ) ಅದರ ಪಾಲಿನ ಸಹಜ ಬಾಧ್ಯತೆಯಾಗಿದೆ-

وَأَذِنَتْ لِرَبِّهَا وَحُقَّتْ ﴿٢﴾

3. ಭೂಮಿಯು ಹರಡಲ್ಪಡುವಾಗ,[1]

وَإِذَا الْأَرْضُ مُدَّتْ ﴿٣﴾

4. ಅದು ತನ್ನೊಳಗೆ ಇರುವ ಸಕಲವನ್ನೂ ಹೊರಗೆಸೆದು ಬರಿದಾಗಿ ಬಿಡುವಾಗ,[2]

وَأَلْقَتْ مَا فِيهَا وَتَخَلَّتْ ﴿٤﴾

5. ಅದು ತನ್ನ ಪ್ರಭುವಿನ ಆದೇಶವನ್ನು ಪಾಲಿಸುವಾಗ, ಅದುವೇ (ಆಜ್ಞಾಪಾಲನೆಯೇ) ಅದರ ಸಹಜ ಬಾಧ್ಯತೆಯಾಗಿದೆ.

وَأَذِنَتْ لِرَبِّهَا وَحُقَّتْ ﴿٥﴾

6. ಓ ಮಾನವ! ನೀನು ಮೆಲ್ಲಮೆಲ್ಲನೆ ನಿನ್ನ ಪ್ರಭುವಿನ ಕಡೆಗೆ ಸಾಗುತ್ತಿರುವೆ ಮತ್ತು ಅವನನ್ನು ಭೇಟಿಯಾಗಲಿರುವೆ.

يَا أَيُّهَا الْإِنْسَانُ إِنَّكَ كَادِحٌ إِلَىٰ رَبِّكَ كَدْحًا فَمُلَاقِيهِ ﴿٦﴾

7. ಅನಂತರ ಯಾರ ಕರ್ಮಪತ್ರವು ಅವನ ಬಲಗೈಯಲ್ಲಿ ಕೊಡಲ್ಪಡುವುದೋ-

فَأَمَّا مَنْ أُوتِيَ كِتَابَهُ بِيَمِينِهِ ﴿٧﴾

8. ಅವನಿಂದ ಲಘುವಾಗಿ ಲೆಕ್ಕಾಚಾರ ಪಡೆಯಲಾಗುವುದು-[3]

فَسَوْفَ يُحَاسَبُ حِسَابًا يَسِيرًا ﴿٨﴾

1. ಭೂಮಿಯನ್ನು ಹರಡಲಾಗುವುದೆಂದರೆ ನದಿ ಮತ್ತು ಸಮುದ್ರಗಳನ್ನು ಮುಚ್ಚಿ ಬಿಡಲಾಗುವುದು. ಪರ್ವತಗಳನ್ನು ಛಿದ್ರವಿಚ್ಛಿದ್ರಗೊಳಿಸಿ ಹರಡಿ ಬಿಡಲಾಗುವುದು. ಭೂಮಿಯ ಏರು-ತಗ್ಗುಗಳನ್ನೆಲ್ಲಾ ಸಮತಟ್ಟುಗೊಳಿಸಿ ವಿಶಾಲ ಮೈದಾನದಂತೆ ಮಾಡಲಾಗುವುದು.
2. ಅರ್ಥಾತ್- ಅದರೊಳಗಿನ ಮೃತ ಮಾನವರೆಲ್ಲರನ್ನೂ ಅದು ತೆಗೆದು ಹೊರಹಾಕುವುದು. ಅಲ್ಲದೆ ಅದರೊಳಗಿರುವ ಅವರ ಕರ್ಮಗಳ ಸಾಕ್ಷ್ಯಾಧಾರಗಳನ್ನೂ ಸಂಪೂರ್ಣವಾಗಿ ಹೊರಹಾಕಲಾಗುವುದು. ಯಾವುದೂ ಅದರೊಳಗೆ ಹೂತುಹೋಗಿ ಗುಪ್ತವಾಗಿ ಉಳಿಯಲಾರದು.
3. ಅರ್ಥಾತ್- ಅವರ ಉಗ್ರ ವಿಚಾರಣೆ ನಡೆಸಲಾಗುವುದಿಲ್ಲ. ಇಂತಿಂತಹ ಕೆಲಸಗಳನ್ನು ನೀನು ಯಾಕೆ ಮಾಡಿದೆ. ಈ ಕೆಲಸಗಳಿಗೆ ನಿಮ್ಮ ಬಳಿ ಯಾವ ನೆಪಗಳಿವೆ ಎಂದು ಅವರೊಡನೆ ಕೇಳಲಾಗುವುದಿಲ್ಲ. ಅವರ ಕರ್ಮಪಟ್ಟಿಯಲ್ಲಿ ಒಳಿತುಗಳ ಜತೆ ಕೆಡುಕುಗಳೂ ಖಂಡಿತ

| | |
|---|---|
| 9. ಮತ್ತು ಅವನು ತನ್ನವರ ಕಡೆಗೆ ಪರಮಾನಂದದೊಂದಿಗೆ ಮರಳುವನು.[4] | وَّيَنْقَلِبُ اِلٰٓى اَهْلِهٖ مَسْرُوْرًا ٩ |
| 10. ಇನ್ನು ಯಾರ ಕರ್ಮಪತ್ರವನ್ನು ಅವನ ಬೆನ್ನ ಹಿಂದಿನಿಂದ ಕೊಡಲಾಗುವುದೋ-[5] | وَاَمَّا مَنْ اُوْتِيَ كِتٰبَهٗ وَرَاۤءَ ظَهْرِهٖ ١٠ |
| 11. ಅವನು ಮೃತ್ಯುವನ್ನು ಕೂಗಿ ಕರೆಯುವನು- | فَسَوْفَ يَدْعُوْا ثُبُوْرًا ١١ |
| 12. ಮತ್ತು ಧಗಧಗಿಸುವ ನರಕಾಗ್ನಿಯಲ್ಲಿ ಬೀಳುವನು. | وَّيَصْلٰى سَعِيْرًا ١٢ |
| 13. ಅವನು ತನ್ನ ಮನೆಯವರೊಂದಿಗೆ ತಲ್ಲೀನನಾಗಿದ್ದನು. | اِنَّهٗ كَانَ فِيْٓ اَهْلِهٖ مَسْرُوْرًا ١٣ |
| 14. ತನಗೆ ಎಂದೂ ಮರಳಲಿಕ್ಕಿಲ್ಲವೆಂದು ಅವನು ಗ್ರಹಿಸಿದ್ದನು. | اِنَّهٗ ظَنَّ اَنْ لَّنْ يَّحُوْرَ ١٤ |
| 15. ಮರಳಲಿಕ್ಕಿಲ್ಲವೇಕೆ? ಅವನ ಪ್ರಭು ಅವನ ಕೃತ್ಯಗಳನ್ನು ನೋಡುತ್ತಲಿದ್ದನು. | بَلٰٓى ۚ اِنَّ رَبَّهٗ كَانَ بِهٖ بَصِيْرًا ١٥ |
| 16. ಖಂಡಿತ ಅಲ್ಲ! ನಾನು ಆಣೆ ಹಾಕುತ್ತೇನೆ ಸಂಜೆಯ ಕೆಂಬಣ್ಣದ, | فَلَآ اُقْسِمُ بِالشَّفَقِ ١٦ |
| 17. ರಾತ್ರಿಯ ಹಾಗೂ ಅದು ಬಾಚಿಕೊಳ್ಳುವವುಗಳ- | وَالَّيْلِ وَمَا وَسَقَ ١٧ |
| 18. ಮತ್ತು ಚಂದ್ರನ- ಅದು ಪೂರ್ಣಚಂದ್ರವಾಗುವಾಗ- | وَالْقَمَرِ اِذَا اتَّسَقَ ١٨ |
| 19. ನಿಮಗೆ ಖಂಡಿತವಾಗಿಯೂ ಹಂತ ಹಂತವಾಗಿ ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಯ ಕಡೆಗೆ ಹಾದು ಹೋಗುತ್ತಲೇ ಇರಬೇಕಾಗಿದೆ.[6] | لَتَرْكَبُنَّ طَبَقًا عَنْ طَبَقٍ ١٩ |

منزل ٧

ಇರುವುವು. ಆದರೆ ಒಳಿತುಗಳ ತಟ್ಟೆ ಕೆಡುಕುಗಳಿಗಿಂತ ಭಾರವಾಗಿರುವುದನ್ನು ಕಂಡು ಅವರ ತಪ್ಪುಗಳನ್ನು ಕಡೆಗಣಿಸಲಾಗುವುದು ಮತ್ತು ಅವರನ್ನು ಕ್ಷಮಿಸಲಾಗುವುದು.

4. ತನ್ನವರು ಎಂದರೆ ತಮ್ಮಂತೆಯೇ ಕ್ಷಮಿಸಲ್ಪಟ್ಟ ಕುಟುಂಬಸ್ಥರು, ಮಡದಿ ಮಕ್ಕಳು ಮತ್ತು ಸಂಗಾತಿಗಳು.

5. ಅಲ್‌ಹಾಕ್ಕ ಅಧ್ಯಾಯದಲ್ಲಿ "ಯಾರ ಕರ್ಮಪಟ್ಟಿಯನ್ನು ಎಡಗೈಯಲ್ಲಿ ನೀಡಲಾಗುವುದೋ" ಎಂದು ಹೇಳಲಾಗಿದೆ. ಇಲ್ಲಿ "ಅದನ್ನು ಬೆನ್ನ ಹಿಂದಿನಿಂದ ನೀಡಲಾಗುವುದು" ಎನ್ನಲಾಗಿದೆ. ಪ್ರಾಯಶಃ ಇದರ ಸ್ವರೂಪ ಹೀಗಿರಬಹುದು. ಸಮಸ್ತ ಸೃಷ್ಟಿಗಳ ಮುಂದೆ ಕರ್ಮಪಟ್ಟಿಯನ್ನು ಸ್ವೀಕರಿಸಲು ಸಂಕೋಚವಾಗಿ ಅವನು ತನ್ನ ಕೈಯನ್ನು ಹಿಂದಕ್ಕೆ ಸರಿಸುವನು. ಆದರೆ ಅವನು ಕೈಯನ್ನು ಮುಂದುಮಾಡಿದರೂ ಬೆನ್ನ ಹಿಂದಕ್ಕೆ ಸರಿಸಿದರೂ ಕರ್ಮಪಟ್ಟಿನ್ನಂತೂ ಅವನ ಕೈಯಲ್ಲಿ ಹಿಡಿಸಲಾಗುವುದು.

6. ಅರ್ಥಾತ್- ನೀವು ಒಂದೇ ಸ್ಥಿತಿಯಲ್ಲಿರಬೇಕಾದವರಲ್ಲ. ಯೌವನದಿಂದ ವೃದ್ಧಾಪ್ಯ, ವೃದ್ಧಾಪ್ಯದಿಂದ ಮರಣ, ಮರಣದಿಂದ ಬರ್ಝಖ್(ಆತ್ಮಗಳ ಲೋಕ), ಬರ್ಝಖ್‌ನಿಂದ ಮರಣೋತ್ತರ ಜೀವನ, ಮರಣೋತ್ತರ ಜೀವನದಿಂದ ಹಶ್ರ್‌ನ ಮೈದಾನ, ಅನಂತರ ವಿಚಾರಣೆ ಮತ್ತು ಶಿಕ್ಷೆ-ರಕ್ಷೆ ಹೀಗೆ ಹಲವು ಮಜಲುಗಳನ್ನು ನೀವು ಕಡ್ಡಾಯವಾಗಿ ದಾಟಬೇಕಾಗಿದೆ. ಇದಕ್ಕೆ ಮೂರು ವಿಷಯಗಳ ಆಣೆ ಹಾಕಲಾಗಿದೆ. 1) ಸೂರ್ಯಾಸ್ತಮಾನದ ಬಳಿಕ ಇರುವ ದಿಗಂತದ ಕೆಂಬಣ್ಣ. 2) ದಿನದ ನಂತರ ರಾತ್ರಿಯ ಕಾರ್ಗತ್ತಲೆ, ಅದರಲ್ಲಿ

20. ಆದರೂ ಇವರು ವಿಶ್ವಾಸವಿರಿಸದಿರಲು ಇವರಿಗೆ ಏನಾಗಿದೆ?

فَمَا لَهُمْ لَا يُؤْمِنُونَ ﴿٢٠﴾

21. ಇವರ ಮುಂದೆ ಕುರ್‌ಆನನ್ನು ಪಠಿಸಲಾದಾಗ ಇವರು ಸಾಷ್ಟಾಂಗ ವೆರಗುವುದಿಲ್ಲವೇಕೆ?

وَإِذَا قُرِئَ عَلَيْهِمُ الْقُرْآنُ لَا يَسْجُدُونَ ﴿٢١﴾

22. ನಿಜವಾಗಿ ಈ ಸತ್ಯನಿಷೇಧಿಗಳಂತು ಸುಳ್ಳಾಗಿಸುತ್ತಾರೆ.

بَلِ الَّذِينَ كَفَرُوا يُكَذِّبُونَ ﴿٢٢﴾

23. ವಸ್ತುತಃ ಇವರು (ತಮ್ಮ ಕರ್ಮಪತ್ರಗಳಲ್ಲಿ) ಏನನ್ನು ಸಂಗ್ರಹಿಸುತ್ತಿದ್ದಾರೆಂಬುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.[7]

وَاللَّهُ أَعْلَمُ بِمَا يُوعُونَ ﴿٢٣﴾

24. ಆದುದರಿಂದ ಇವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ಕೊಟ್ಟು ಬಿಡಿರಿ-

فَبَشِّرْهُمْ بِعَذَابٍ أَلِيمٍ ﴿٢٤﴾

25. ಆದರೆ ಸತ್ಯವಿಶ್ವಾಸ ಸ್ವೀಕಾರ ಮಾಡಿದವರಿಗೂ ಸತ್ಕರ್ಮವೆಸಗಿದವರಿಗೂ ಎಂದೆಂದಿಗೂ ಮುಗಿಯದಂತಹ ಸತ್ಫಲವಿದೆ.

إِلَّا الَّذِينَ آمَنُوا وَعَمِلُوا الصَّالِحَاتِ لَهُمْ أَجْرٌ غَيْرُ مَمْنُونٍ ﴿٢٥﴾

---

ದಿನದ ವೇಳೆ ಭೂಮಿಯಲ್ಲಿ ಹರಡಿದ್ದ ಅನೇಕ ಮಾನವರು ಮತ್ತು ಪ್ರಾಣಿಗಳು ಮರಳಿ ನೆಲೆ ಸೇರುವುದು. 3) ಬಿದಿಗೆ ಚಂದ್ರ ಹಂತಹಂತವಾಗಿ ಬೆಳೆದು ಹುಣ್ಣಿಮೆಯ ಚಂದ್ರನಾಗುವುದು. ಮಾನವನು ವಾಸಿಸುವ ಈ ನಿಸರ್ಗದಲ್ಲಿ ಎಲ್ಲೂ ನಿಶ್ಚಲತೆಯಿಲ್ಲ. ನಿರಂತರವಾದ ಬದಲಾವಣೆ ಮತ್ತು ಹಂತಹಂತದ ವ್ಯತ್ಯಾಸದ ಪ್ರಕ್ರಿಯೆ ಎಲ್ಲಾ ಕಡೆಗಳಲ್ಲಿ ಕಂಡು ಬರುತ್ತದೆ ಎಂದು ಇವು ಬಹಿರಂಗವಾಗಿ ಸಾಕ್ಷ್ಯ ವಹಿಸುತ್ತಿವೆ. ಆದ್ದರಿಂದ ಮರಣದ ಕೊನೆಯುಸಿರಿನೊಂದಿಗೆ ಎಲ್ಲವೂ ಕೊನೆಗೊಳ್ಳುತ್ತದೆ ಎಂಬ ಸತ್ಯನಿಷೇಧಿಗಳ ಭಾವನೆ ಸರಿಯಲ್ಲ.

7. ಅವರು ತಮ್ಮ ಎದೆಯಲ್ಲಿ ತುಂಬಿಕೊಂಡಿರುವ ಸತ್ಯನಿಷೇಧ, ವಿದ್ವೇಷ, ಸತ್ಯದ್ವೇಷ, ದುಷ್ಟ ಸಂಕಲ್ಪ ಮತ್ತು ಕೆಟ್ಟ ಇರಾದೆಗಳ ಮಾಲಿನ್ಯವನ್ನು ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ ಎಂಬುದು ಅದರ ಇನ್ನೊಂದು ಅರ್ಥವಾಗಿದೆ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸುಭದ್ರ ಕೋಟೆಗಳಿರುವ ಆಕಾಶದಾಣೆ,[1]

وَالسَّمَآءِ ذَاتِ الْبُرُوْجِ ①

2. ವಾಗ್ದಾನ ಮಾಡಲಾಗಿರುವ ಆ ದಿನದ ಆಣೆ-

وَالْيَوْمِ الْمَوْعُوْدِ ②

3. ಮತ್ತು ನೋಡುವವನ ಹಾಗೂ ನೋಡಲ್ಪಡುವ ವಸ್ತು[2]ವಿನ ಆಣೆ.

وَشَاهِدٍ وَّمَشْهُوْدٍ ③

4. ಹೊಂಡದವರು ನಾಶವಾದರು-

قُتِلَ اَصْحٰبُ الْاُخْدُوْدِ ④

5. ಭೀಕರವಾಗಿ ಧಗಧಗಿಸುವ ಇಂಧನದ ಬೆಂಕಿ ತುಂಬಿದ್ದ (ಹೊಂಡದವರು)-

النَّارِ ذَاتِ الْوَقُوْدِ ⑤

6. ಅವರು ಆ ಹೊಂಡದ ಅಂಚಿನಲ್ಲಿ ಕುಳಿತಿದ್ದಾಗ-

اِذْ هُمْ عَلَيْهَا قُعُوْدٌ ⑥

7. ಮತ್ತು ಸತ್ಯವಿಶ್ವಾಸಿಗಳ ಮೇಲೆ ತಾವು ಮಾಡುತ್ತಿದ್ದುದನ್ನು ವೀಕ್ಷಿಸುತ್ತಿದ್ದಾಗ.[3]

وَّهُمْ عَلٰى مَا يَفْعَلُوْنَ بِالْمُؤْمِنِيْنَ شُهُوْدٌ ⑦

8. ಆ ಸತ್ಯವಿಶ್ವಾಸಿಗಳೊಂದಿಗೆ ಅವರ ಹಗೆತನವು, ಪ್ರಚಂಡನೂ

وَمَا نَقَمُوْا مِنْهُمْ اِلَّآ اَنْ يُّؤْمِنُوْا

1. ಅರ್ಥಾತ್- ಆಕಾಶದ ಉಜ್ವಲ ನಕ್ಷತ್ರ ಮತ್ತು ಗ್ರಹಗಳು.
2. ನೋಡುವವನು ಎಂದರೆ ಪುನರುತ್ಥಾನ ದಿನದಂದು ಹಾಜರಾಗುವ ಪ್ರತಿಯೊಬ್ಬ ವ್ಯಕ್ತಿ ಎಂದಾಗಿದೆ. ನೋಡಲಾಗುವ ವಸ್ತುವೆಂದರೆ ಸಾಕ್ಷಾತ್ ಪುನರುತ್ಥಾನ ದಿನವೇ ಆಗಿದೆ. ಅದರ ಭಯಾನಕ ಸ್ಥಿತಿಯನ್ನು ನೋಡುವವರೆಲ್ಲರೂ ನೋಡುವರು.
3. 'ಹೊಂಡದವರು' ಎಂದರೆ ದೊಡ್ಡ ದೊಡ್ಡ ಹೊಂಡಗಳನ್ನು ತೋಡಿ ಅದರಲ್ಲಿ ಬೆಂಕಿಯನ್ನು ಉರಿಸಿ ಸತ್ಯವಿಶ್ವಾಸಿಗಳನ್ನು ಅದರೊಳಗೆಸೆದು ಅವರು ಹೊತ್ತಿ ಉರಿಯುವ ದೃಶ್ಯವನ್ನು ಕಂಡು ಸಂತೋಷ ಪಟ್ಟವರು. ನಾಶವಾದರು ಎಂದರೆ ಅವರು ದೇವಶಾಪಕ್ಕೆ ಈಡಾದರು ಮತ್ತು ಯಾತನೆಗೆ ಅರ್ಹರಾದರು ಎಂದಾಗಿದೆ.

ಸ್ವಯಂ ಸ್ತುತ್ಯರ್ಹನೂ ಆಗಿರುವ ಅಲ್ಲಾಹನ ಮೇಲೆ ಅವರು ವಿಶ್ವಾಸವಿರಿಸುತ್ತಾರೆಂಬುದರ ಹೊರತು ಬೇರಾವುದೇ ಕಾರಣ ದಿಂದಾಗಿರಲಿಲ್ಲ.

بِاللّٰهِ الْعَزِيْزِ الْحَمِيْدِ ﴿٨﴾

9. ಅವನು ಭೂಮಿ ಮತ್ತು ಆಕಾಶಗಳ ಸಾಮ್ರಾಜ್ಯದ ಅಧಿಪತಿಯಾಗಿದ್ದಾನೆ. ಆ ಅಲ್ಲಾಹನು ಸಕಲವನ್ನೂ ವೀಕ್ಷಿಸುತ್ತಿರುವನು.

الَّذِيْ لَهٗ مُلْكُ السَّمٰوٰتِ وَالْاَرْضِ ۭ وَاللّٰهُ عَلٰي كُلِّ شَيْءٍ شَهِيْدٌ ﴿٩﴾ۭ

10. ಯಾರು ಸತ್ಯವಿಶ್ವಾಸಿಗಳಾದ ಸ್ತ್ರೀ-ಪುರುಷರ ಮೇಲೆ ಮರ್ದನವೆಸಗಿದರೋ ಮತ್ತು ಆ ಬಳಿಕ ಪಶ್ಚಾತ್ತಾಪ ಪಡಲಿಲ್ಲವೋ ಅವರಿಗೆ ಖಂಡಿತವಾಗಿಯೂ ನರಕದ ಯಾತನೆ ಇದೆ ಮತ್ತು ಅವರಿಗೆ ಸುಡುವ ಯಾತನೆ ಇದೆ.

اِنَّ الَّذِيْنَ فَتَنُوا الْمُؤْمِنِيْنَ وَالْمُؤْمِنٰتِ ثُمَّ لَمْ يَتُوْبُوْا فَلَهُمْ عَذَابُ جَهَنَّمَ وَلَهُمْ عَذَابُ الْحَرِيْقِ ﴿١٠﴾ۭ

11. ಸತ್ಯವಿಶ್ವಾಸವನ್ನು ಸ್ವೀಕರಿಸಿದವರಿಗೆ ಮತ್ತು ಸತ್ಕರ್ಮವೆಸಗಿದವರಿಗೆ ನಿಶ್ಚಯವಾಗಿ ಸ್ವರ್ಗೋದ್ಯಾನಗಳಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಇದುವೇ ಮಹಾ ಯಶಸ್ಸು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ لَهُمْ جَنّٰتٌ تَجْرِيْ مِنْ تَحْتِهَا الْاَنْهٰرُ ڛ ذٰلِكَ الْفَوْزُ الْكَبِيْرُ ﴿١١﴾ۭ

12. ನಿಜಕ್ಕೂ ನಿಮ್ಮ ಪ್ರಭುವಿನ ಹಿಡಿತವು ಬಹಳ ಕಠಿಣವಾದುದು.

اِنَّ بَطْشَ رَبِّكَ لَشَدِيْدٌ ﴿١٢﴾ۭ

13. ಅವನೇ ಪ್ರಥಮ ಬಾರಿ ಸೃಷ್ಟಿಸುತ್ತಾನೆ ಮತ್ತು ಅವನೇ ಪುನಃ ಸೃಷ್ಟಿಸುವನು.

اِنَّهٗ هُوَ يُبْدِئُ وَيُعِيْدُ ﴿١٣﴾ۚ

14. ಮತ್ತು ಅವನು ಮಹಾಕ್ಷಮಾಶೀಲನೂ ಪ್ರೀತಿಸುವವನೂ ಆಗಿರುತ್ತಾನೆ-

وَهُوَ الْغَفُوْرُ الْوَدُوْدُ ﴿١٤﴾ۙ

15. ಅವನು ವಿಶ್ವಸಿಂಹಾಸನದ ಒಡೆಯನು,

ذُو الْعَرْشِ الْمَجِيْدُ ﴿١٥﴾ۙ

16. ಪರಮೋನ್ನತನು ಮತ್ತು ತಾನಿಚ್ಛಿಸಿದ್ದನ್ನು ಮಾಡಿಬಿಡುವವನು.

فَعَّالٌ لِّمَا يُرِيْدُ ﴿١٦﴾ۭ

17. ನಿಮಗೆ ಸೇನೆಗಳ ಸಮಾಚಾರ ತಲುಪಿದೆಯೇ?

هَلْ اَتٰىكَ حَدِيْثُ الْجُنُوْدِ ﴿١٧﴾ۙ

18. ಫಿರ್‌ಔನ್ ಮತ್ತು ಸಮೂದರ (ಸೇನೆಗಳ ಸಮಾಚಾರ?)

فِرْعَوْنَ وَثَمُوْدَ ﴿١٨﴾ۭ

19. ಆದರೆ, ಸತ್ಯನಿಷೇಧಿಗಳು ಸುಳ್ಳಾಗಿಸುವುದರಲ್ಲೇ ಮಗ್ನರಾಗಿದ್ದಾರೆ-

بَلِ الَّذِيْنَ كَفَرُوْا فِيْ تَكْذِيْبٍ ﴿١٩﴾ۙ

20. ವಸ್ತುತಃ ಅಲ್ಲಾಹನು ಅವರನ್ನು ಸುತ್ತುವರಿದಿದ್ದಾನೆ.

وَّاللّٰهُ مِنْ وَّرَاۗىِٕهِمْ مُّحِيْطٌ ﴿٢٠﴾ۚ

| | |
|---|---|
| 21. (ಅವರ ನಿರಾಕರಣೆಯಿಂದ ಈ ಕುರ್‌ಆನಿಗೇನೂ ನಷ್ಟವಿಲ್ಲ) ವಾಸ್ತವದಲ್ಲಿ ಈ ಕುರ್‌ಆನ್ ಅತ್ಯುನ್ನತ ಮಟ್ಟದ್ದಾಗಿದೆ- | بَلْ هُوَ قُرْاٰنٌ مَّجِيْدٌ ﴿٢١﴾ |
| 22. ಸುರಕ್ಷಿತವಾಗಿರುವ ಹಾಳೆಯಲ್ಲಿ (ಮುದ್ರಿತವಿದೆ).[4] | فِيْ لَوْحٍ مَّحْفُوْظٍ ﴿٢٢﴾ ع |

4. ಅರ್ಥಾತ್- ಕುರ್‌ಆನಿನಲ್ಲಿ ಲಿಖಿತವಾಗಿರುವ ವಿಷಯಗಳು ಅಚಲವಾದುದಾಗಿದೆ. ಅದು ಯಾವ ಬದಲಾವಣೆಯನ್ನೂ ಮಾಡಲಾಗದ 'ಲೌಹಿಮ್ಮಹ್‌ಫೂಝ್' (ಸುರಕ್ಷಿತ ಫಲಕ)ನಲ್ಲಿ ದಾಖಲಿಸಲ್ಪಟ್ಟಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ

1. ಆಕಾಶದಾಣೆ ಮತ್ತು ರಾತ್ರಿಯಲ್ಲಿ ಕಾಣಿಸಿಕೊಳ್ಳುವ ವಸ್ತುವಿನಾಣೆ- — وَالسَّمَآءِ وَالطَّارِقِ ﴿١﴾
2. ರಾತ್ರಿ ಕಾಣಿಸಿಕೊಳ್ಳುವ ಆ ವಸ್ತುವೇನೆಂದು ನಿಮಗೇನು ಗೊತ್ತು? — وَمَآ اَدْرٰىكَ مَا الطَّارِقُ ﴿٢﴾
3. ಮಿನುಗುವ ನಕ್ಷತ್ರ- — النَّجْمُ الثَّاقِبُ ﴿٣﴾
4. ಮೇಲ್ವಿಚಾರಕನಿಲ್ಲದಂತಹ ಜೀವವೊಂದೂ ಇಲ್ಲ.[1] — اِنْ كُلُّ نَفْسٍ لَّمَّا عَلَيْهَا حَافِظٌ ﴿٤﴾
5. ಇನ್ನು ಮನುಷ್ಯನು, ತಾನು ಯಾವ ವಸ್ತುವಿನಿಂದ ಸೃಷ್ಟಿಸಲ್ಪಟ್ಟಿರುವೆನು ಎಂಬುದನ್ನಾದರೂ ಸ್ವಲ್ಪ ನೋಡಿಕೊಳ್ಳಲಿ. — فَلْيَنْظُرِ الْاِنْسَانُ مِمَّ خُلِقَ ﴿٥﴾
6. ಅವನು ಒಂದು ಚಿಮ್ಮುವ ದ್ರವದಿಂದ ಸೃಷ್ಟಿಸಲ್ಪಟ್ಟಿದ್ದಾನೆ- — خُلِقَ مِنْ مَّآءٍ دَافِقٍ ﴿٦﴾
7. ಅದು ಬೆನ್ನು ಮತ್ತು ಎದೆಯ ಮೂಳೆಗಳ ನಡುವಿನಿಂದ ಹೊರಡುತ್ತದೆ.[2] — يَّخْرُجُ مِنْ بَيْنِ الصُّلْبِ وَالتَّرَآئِبِ ﴿٧﴾
8. ಖಂಡಿತವಾಗಿಯೂ ಅವನು (ಆ ಸೃಷ್ಟಿಕರ್ತನು) ಅವನನ್ನು ಪುನಃ ಸೃಷ್ಟಿಸಲು ಶಕ್ತನು. — اِنَّهٗ عَلٰى رَجْعِهٖ لَقَادِرٌ ﴿٨﴾

---

1. ಮೇಲ್ವಿಚಾರಕನೆಂದರೆ ಸ್ವತಃ ಅಲ್ಲಾಹನು. ಅವನು ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ಚಿಕ್ಕ-ದೊಡ್ಡ ಸೃಷ್ಟಿಗಳ ಮೇಲ್ವಿಚಾರಣೆ ಮತ್ತು ಸಂರಕ್ಷಣೆ ನಡೆಸುತ್ತಿದ್ದಾನೆ. ರಾತ್ರಿಯ ವೇಳೆ ಆಕಾಶದಲ್ಲಿ ಗೋಚರಿಸುವ, ಮಿನುಗುತ್ತಿರುವ ಅಸಂಖ್ಯ ಗ್ರಹ-ನಕ್ಷತ್ರಗಳ ಪೈಕಿ ಪ್ರತಿಯೊಂದರ ಅಸ್ತಿತ್ವವೂ ಅದನ್ನು ಸೃಷ್ಟಿಸಿದವನು, ಬೆಳಗಿಸಿದವನು ಮತ್ತು ಅಂತರಿಕ್ಷದಲ್ಲಿ ತೇಲಿಸಿದವನು ಒಬ್ಬನಿದ್ದಾನೆಂದು ಸಾಕ್ಷ್ಯವಹಿಸುತ್ತಿದೆ. ಅವನು ಅದನ್ನು ಯಾವ ರೀತಿ ನಿಯಂತ್ರಿಸುತ್ತಿದ್ದಾನೆಂದರೆ ಅದು ತನ್ನ ಸ್ಥಾನದಿಂದ ಕೆಳಗೆ ಬೀಳುವುದಿಲ್ಲ. ಅಸಂಖ್ಯ ನಕ್ಷತ್ರಗಳ ಪರಿಭ್ರಮಣದ ವೇಳೆ ಅವುಗಳಲ್ಲಿ ಯಾವುದೂ ಪರಸ್ಪರ ಢಿಕ್ಕಿ ಹೊಡೆಯುವುದಿಲ್ಲ. ಹೀಗೆ ಅಲ್ಲಾಹನು ನಿಸರ್ಗದ ಎಲ್ಲಾ ವಸ್ತುಗಳ ಮೇಲ್ವಿಚಾರಣೆ ನಡೆಸುತ್ತಿದ್ದಾನೆ.
2. ಸ್ತ್ರೀ ಮತ್ತು ಪುರುಷರ ಜನನದ ಬಿಂದುವು ಮನುಷ್ಯನ ಬೆನ್ನೆಲುಬು ಮತ್ತು ಪಕ್ಕೆಲುಬುಗಳ ಮಧ್ಯದಲ್ಲಿರುವ ಭಾಗದಿಂದ ಹೊರಡುತ್ತದೆ. ಆದ್ದರಿಂದ ಮಾನವನನ್ನು ಬೆನ್ನು ಮತ್ತು ಎದೆಯ ಮಧ್ಯದಿಂದ ಹೊರಡುವ ನೀರಿನಿಂದ ಸೃಷ್ಟಿಸಲಾಗಿದೆ ಎನ್ನಲಾಗಿದೆ.

| | |
|---|---|
| 9. ಅಡಗಿದ್ದ ರಹಸ್ಯಗಳ ವಿಚಾರಣೆ ನಡೆಯಲಿರುವ ದಿನ.[3] | يَوْمَ تُبْلَى السَّرَآئِرُ ﴿٩﴾ |
| 10. ಅಂದು ಮಾನವನ ಬಳಿ ತನ್ನದಾದ ಯಾವ ಬಲವೂ ಇರಲಾರದು ಮತ್ತು ಅವನಿಗೆ ಯಾವ ಸಹಾಯಕನೂ ಇರಲಾರನು. | فَمَا لَهٗ مِنْ قُوَّةٍ وَّلَا نَاصِرٍ ﴿١٠﴾ |
| 11. ಮಳೆ ಸುರಿಸುವ ಆಕಾಶದಾಣೆ- | وَالسَّمَآءِ ذَاتِ الرَّجْعِ ﴿١١﴾ |
| 12. ಮತ್ತು (ಸಸ್ಯಗಳು ಮೊಳೆಯುವಾಗ) ಒಡೆಯುವ ಭೂಮಿಯಾಣೆ, | وَالْاَرْضِ ذَاتِ الصَّدْعِ ﴿١٢﴾ |
| 13. ಇದೊಂದು ನಿರ್ಣಾಯಕ ಮಾತು, | اِنَّهٗ لَقَوْلٌ فَصْلٌ ﴿١٣﴾ |
| 14. ಇದು ತಮಾಷೆಯಲ್ಲ.[4] | وَّمَا هُوَ بِالْهَزْلِ ﴿١٤﴾ |
| 15. ಇವರು (ಮಕ್ಕಾದ ಸತ್ಯನಿಷೇಧಿಗಳು) ಕೆಲವು ಕುತಂತ್ರಗಳನ್ನು ಹೂಡುತ್ತಿದ್ದಾರೆ- | اِنَّهُمْ يَكِيْدُوْنَ كَيْدًا ﴿١٥﴾ |
| 16. ಮತ್ತು ನಾನೂ ಒಂದು ತಂತ್ರ ಹೂಡುತ್ತಿದ್ದೇನೆ. | وَّاَكِيْدُ كَيْدًا ﴿١٦﴾ |
| 17. ಆದುದರಿಂದ ಸಂದೇಶವಾಹಕರೇ, ಈ ಸತ್ಯನಿಷೇಧಿಗಳನ್ನು ಸ್ವಲ್ಪ ಸಮಯ ಅವರ ಪಾಡಿಗೆ ಬಿಟ್ಟು ಬಿಡಿರಿ. | فَمَهِّلِ الْكٰفِرِيْنَ اَمْهِلْهُمْ رُوَيْدًا ﴿١٧﴾ |

---

3. ಅಡಗಿದ್ದ ರಹಸ್ಯಗಳೆಂದರೆ ಲೋಕದಲ್ಲಿ ರಹಸ್ಯವಾಗಿಯೇ ಉಳಿದ ವ್ಯಕ್ತಿಯ ಕರ್ಮಗಳು ಮತ್ತು ಕೇವಲ ಬಹಿರಂಗ ಸ್ವರೂಪ ಮಾತ್ರ ಲೋಕದ ಮುಂದೆ ಅನಾವರಣಗೊಂಡ ವ್ಯವಹಾರಗಳು. ಅದರ ಹಿಂದಿನ ಸಂಕಲ್ಪ, ಉದ್ದೇಶ ಮತ್ತು ಬಯಕೆಗಳು ಜನರಿಂದ ಗೌಪ್ಯವಾಗಿಯೇ ಉಳಿದಿರುತ್ತವೆ.
4. ಅರ್ಥಾತ್- ಆಕಾಶದಿಂದ ಮಳೆ ಸುರಿಯುವುದು ಮತ್ತು ಭೂಮಿ ಬಿರಿದು ಸಸ್ಯಗಳನ್ನು ಹೊರಡಿಸುವುದು ಕೇವಲ ಮೋಜಲ್ಲ. ಅದೊಂದು ಗಂಭೀರವಾದ ವಾಸ್ತವಿಕತೆ. ಹಾಗೆಯೇ ಮಾನವನೂ ಮತ್ತೊಮ್ಮೆ ಪ್ರಭುವಿನೆಡೆಗೆ ಮರಳಬೇಕಾಗಿದೆ ಎಂಬ ಕುರ್‌ಆನಿನ ಸೂಚನೆಯೂ ಕೇವಲ ಆಟ ವಿನೋದವಲ್ಲ. ಬದಲಾಗಿ ಅದೊಂದು ನಿಖರವಾದ ಮಾತಾಗಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ

1. (ಸಂದೇಶವಾಹಕರೇ) ನಿಮ್ಮ ಸರ್ವೋನ್ನತ ಪ್ರಭುವಿನ ನಾಮವನ್ನು ಜಪಿಸಿರಿ, — سَبِّحِ اسْمَ رَبِّكَ الْاَعْلَى ۝١
2. ಅವನು ಸೃಷ್ಟಿಸಿದನು ಮತ್ತು ಸಂತುಲಿತಗೊಳಿಸಿದನು.[1] — الَّذِىْ خَلَقَ فَسَوّٰى ۝٢
3. ಅವನು ವಿಧಿಯನ್ನು ನಿರ್ಣಯಿಸಿದನು.[2] ಆಮೇಲೆ ಮಾರ್ಗದರ್ಶನ ಮಾಡಿದನು.[3] — وَالَّذِىْ قَدَّرَ فَهَدٰى ۝٣
4. ಅವನು ಸಸ್ಯಗಳನ್ನು ಬೆಳೆಸಿದನು- — وَالَّذِىْٓ اَخْرَجَ الْمَرْعٰى ۝٤
5. ತರುವಾಯ ಅವುಗಳನ್ನು ಕಪ್ಪು ಕಸಕಡ್ಡಿಗಳಾಗಿ ಮಾಡಿಬಿಟ್ಟನು. — فَجَعَلَهٗ غُثَآءً اَحْوٰى ۝٥
6. ನಾವು ನಿಮಗೆ ಓದಿಸಿ ಬಿಡುವೆವು. ಆ ಬಳಿಕ ನೀವು ಮರೆತು ಬಿಡಲಾರಿರಿ-[4] — سَنُقْرِئُكَ فَلَا تَنْسٰٓى ۝٦

---

1. ಅರ್ಥಾತ್- ಭೂಮಿಯಿಂದ ಆಕಾಶದ ತನಕವಿರುವ ನಿಸರ್ಗದ ಸಮಸ್ತ ವಸ್ತುಗಳನ್ನು ಸೃಷ್ಟಿಸಿದನು. ಸೃಷ್ಟಿಸಿರುವ ಪ್ರತಿಯೊಂದು ವಸ್ತುವನ್ನೂ ಸಮರ್ಪಕವಾಗಿ ಮತ್ತು ಸರಿಯಾಗಿ ಸೃಷ್ಟಿಸಿದನು. ಅವುಗಳಲ್ಲಿ ಸಮತೋಲನವನ್ನು ಸರಿಯಾಗಿ ಸ್ಥಾಪಿಸಿದನು. ಅವುಗಳನ್ನು ಎಂತಹ ಸ್ವರೂಪದಲ್ಲಿ ಸೃಷ್ಟಿಸಿದನೆಂದರೆ ಅಂತಹ ಸಾಧನಕ್ಕೆ ಅದಕ್ಕಿಂತ ಉತ್ತಮ ಸ್ವರೂಪವನ್ನು ಕಲ್ಪಿಸಲಿಕ್ಕೂ ಸಾಧ್ಯವಿಲ್ಲ.
2. ಅರ್ಥಾತ್- ಪ್ರತಿಯೊಂದು ವಸ್ತುವನ್ನು ಸೃಷ್ಟಿಸುವುದಕ್ಕೆ ಮೊದಲೇ ಅದಕ್ಕೆ ಭೂಮಿಯಲ್ಲಿ ಯಾವ ಕೆಲಸ ಮಾಡಬೇಕಾಗಿದೆ, ಈ ಕೆಲಸ ಮಾಡಲು ಅದರ ಪ್ರಮಾಣ ಎಷ್ಟಿರಬೇಕು. ಸ್ವರೂಪ ಹೇಗಿರಬೇಕು, ಗುಣವಿಶೇಷತೆಗಳು ಏನಾಗಿರಬೇಕು, ಅದರ ನೆಲೆ ಎಲ್ಲಿರಬೇಕು, ಅದರ ಉಳಿವು, ನೆಲೆ ನಿಲ್ಲುವಿಕೆ ಮತ್ತು ಸಕ್ರಿಯತೆಗಾಗಿ ಯಾವ ಮೂಲ ಮತ್ತು ಅವಕಾಶಗಳನ್ನೊದಗಿಸಬೇಕು, ಯಾವ ಸಂದರ್ಭದಲ್ಲಿ ಅದು ಅಸ್ತಿತ್ವಕ್ಕೆ ಬರಬೇಕು, ಎಲ್ಲಿಯ ವರೆಗೆ ತನ್ನ ಪಾಲಿನ ಕೆಲಸ ಮಾಡಬೇಕು ಮತ್ತು ಯಾವಾಗ ನಾಶವಾಗಬೇಕು ಎಂಬುದನ್ನೆಲ್ಲಾ ಗೊತ್ತುಪಡಿಸಿದನು. ಈ ಸಮಗ್ರ ಯೋಜನೆಯ ಹೆಸರು ಅವನ 'ತಕ್‌ದೀರ್' ಅಥವಾ ವಿಧಿ ಎಂದಾಗಿದೆ.
3. ಅರ್ಥಾತ್- ಯಾವ ವಸ್ತುವನ್ನೂ ಸೃಷ್ಟಿಸಿ ಹಾಗೆಯೇ ಬಿಟ್ಟು ಬಿಟ್ಟಿಲ್ಲ. ಬದಲಾಗಿ ಅವನು ಯಾವ ಕೆಲಸಕ್ಕಾಗಿ ಯಾವ ವಸ್ತುವನ್ನು ಸೃಷ್ಟಿಸಿದನೋ ಅದಕ್ಕೆ ಆ ಕೆಲಸ ಮಾಡುವ ವಿಧಾನವನ್ನೂ ಕಲಿಸಿದನು.
4. ಆರಂಭ ಕಾಲದಲ್ಲಿ ವಹೀ ಅವತೀರ್ಣಗೊಳ್ಳುತ್ತಿದ್ದಾಗ, ಕೆಲವೊಮ್ಮೆ ಜಿಬ್‌ರೀಲ್(ಅ) ವಹ್ಯ್‌ಯನ್ನು ಕೇಳಿಸಿ ವಿರಮಿಸುವುದಕ್ಕೆ ಮೊದಲೇ ಮರೆತು ಹೋಗುವ ಭಯದಿಂದ ಪ್ರವಾದಿವರ್ಯರು(ಸ) ಅದರ ಆರಂಭಿಕ ಭಾಗವನ್ನು ಪುನರಾವರ್ತಿಸಲಾರಂಭಿಸುತ್ತಿದ್ದರು. ಆದ್ದರಿಂದಲೇ ಅಲ್ಲಾಹನು ಪ್ರವಾದಿವರ್ಯರನ್ನು(ಸ) ಸಮಾಧಾನ ಪಡಿಸುತ್ತಾ ಹೀಗೆಂದಿದ್ದಾನೆ, 'ವಹೀ ಅವತೀರ್ಣಗೊಳ್ಳುವಾಗ ನೀವು

7. ಅಲ್ಲಾಹನು ಇಚ್ಛಿಸಿದ್ದರ ಹೊರತು.[5] ಅವನು ವ್ಯಕ್ತವಾಗಿರುವುದನ್ನೂ ಗುಪ್ತವಾಗಿರುವುದನ್ನೂ ಬಲ್ಲನು.

إِلَّا مَا شَآءَ ٱللَّهُ ۚ إِنَّهُۥ يَعْلَمُ ٱلْجَهْرَ وَمَا يَخْفَىٰ ﴿٧﴾

8. ನಾವು ನಿಮಗೆ ಸರಳ ವಿಧಾನದ ಸೌಲಭ್ಯ ನೀಡುತ್ತೇವೆ.

وَنُيَسِّرُكَ لِلْيُسْرَىٰ ﴿٨﴾

9. ಆದುದರಿಂದ ಉಪದೇಶದಿಂದ ಪ್ರಯೋಜನವಾಗುವುದಿದ್ದರೆ ನೀವು ಉಪದೇಶ ನೀಡಿರಿ.[6]

فَذَكِّرْ إِن نَّفَعَتِ ٱلذِّكْرَىٰ ﴿٩﴾

10. ಭಯಭಕ್ತಿಯುಳ್ಳವನು ಉಪದೇಶವನ್ನು ಸ್ವೀಕರಿಸಿಕೊಳ್ಳುವನು-

سَيَذَّكَّرُ مَن يَخْشَىٰ ﴿١٠﴾

11. ಮತ್ತು ಅದರಿಂದ ದೂರವುಳಿಯುವವನು ಅತ್ಯಂತ ಭಾಗ್ಯಹೀನನು-

وَيَتَجَنَّبُهَا ٱلْأَشْقَى ﴿١١﴾

12. ಅವನು ಘೋರ ಅಗ್ನಿಯಲ್ಲಿ ಬೀಳುವನು.

ٱلَّذِى يَصْلَى ٱلنَّارَ ٱلْكُبْرَىٰ ﴿١٢﴾

13. ಅನಂತರ ಅವನು ಅದರಲ್ಲಿ ಸಾಯಲಿಕ್ಕೂ ಇಲ್ಲ, ಬದುಕಲಿಕ್ಕೂ ಇಲ್ಲ.

ثُمَّ لَا يَمُوتُ فِيهَا وَلَا يَحْيَىٰ ﴿١٣﴾

14. ಪಾವಿತ್ರ್ಯವನ್ನು ಕೈಗೊಂಡವನು ಯಶಸ್ವಿಯಾಗಿ ಬಿಟ್ಟನು.

قَدْ أَفْلَحَ مَن تَزَكَّىٰ ﴿١٤﴾

15. ತನ್ನ ಪ್ರಭುವಿನ ನಾಮವನ್ನು ಸ್ಮರಿಸಿದವನು ಮತ್ತು ನಮಾಝ್ ಮಾಡಿದವನು.

وَذَكَرَ ٱسْمَ رَبِّهِۦ فَصَلَّىٰ ﴿١٥﴾

16. ಆದರೆ ನೀವು ಇಹಲೋಕ ಜೀವನಕ್ಕೆ ಆದ್ಯತೆ ಕೊಡುತ್ತೀರಿ.

بَلْ تُؤْثِرُونَ ٱلْحَيَوٰةَ ٱلدُّنْيَا ﴿١٦﴾

17. ವಸ್ತುತಃ ಪರಲೋಕವು ಹೆಚ್ಚು ಉತ್ತಮವೂ ಶಾಶ್ವತವೂ ಆಗಿದೆ.

وَٱلْءَاخِرَةُ خَيْرٌ وَأَبْقَىٰٓ ﴿١٧﴾

18. ಇದನ್ನೇ ಹಿಂದೆ ಬಂದಿದ್ದ ಗ್ರಂಥಗಳಲ್ಲಿ ಹೇಳಲಾಗಿತ್ತು-

إِنَّ هَٰذَا لَفِى ٱلصُّحُفِ ٱلْأُولَىٰ ﴿١٨﴾

19. ಇಬ್‌ರಾಹೀಮ್ ಮತ್ತು ಮೂಸಾರ ಗ್ರಂಥಗಳಲ್ಲಿ.

صُحُفِ إِبْرَٰهِيمَ وَمُوسَىٰ ﴿١٩﴾

---

ಮೌನವಾಗಿ ಅದನ್ನು ಕೇಳುತ್ತೀರಿ. ನಾವು ನಿಮಗೆ ಓದಿಸಿ ಬಿಡುವೆವು ಆ ಬಳಿಕ ನೀವು ಮರೆಯಲಾರಿರಿ'.

5. ಅರ್ಥಾತ್- ಸಮಸ್ತ ಕುರ್‌ಆನಿನ ಒಂದು ಪದವೂ ಬಿಟ್ಟು ಹೋಗದಂತೆ ತಮ್ಮ ನೆನಪಿನಲ್ಲುಳಿಯುವುದು ತಮ್ಮ ಸಾಮರ್ಥ್ಯದಿಂದಾಗಿಯಲ್ಲ. ಬದಲಾಗಿ ಅದು ಅಲ್ಲಾಹನ ಅನುಗ್ರಹ ಮತ್ತು ಸೌಭಾಗ್ಯದ ಪರಿಣಾಮವಾಗಿದೆ. ಅನ್ಯಥಾ ಅಲ್ಲಾಹನು ಬಯಸಿದ್ದರೆ ಅದನ್ನು ಮರೆಸುತ್ತಿದ್ದನು.

6. ಅರ್ಥಾತ್- ಧರ್ಮಪ್ರಚಾರ ಕಾರ್ಯದ ಮೂಲಕ ನಾವು ನಿಮ್ಮನ್ನು ಯಾವುದೇ ರೀತಿಯ ಸಂಕಷ್ಟಕ್ಕೀಡು ಮಾಡ ಬಯಸುವುದಿಲ್ಲ. ಕಿವುಡರಿಗೆ ಕೇಳಿಸಲು ಅಥವಾ ಅಂಧರಿಗೆ ದಾರಿಗಾಣಿಸಲು ನಾವು ಹೇಳುವುದಿಲ್ಲ. ಲಭ್ಯವಿರುವ ಸರಳ ಮಾರ್ಗವೊಂದನ್ನು ನಾವು ನಿಮಗೆ ಗೊತ್ತು ಪಡಿಸುತ್ತೇವೆ. ಅದೇನೆಂದರೆ ಯಾರಾದರೂ ಉಪದೇಶದಿಂದ ಪ್ರಯೋಜನ ಪಡೆಯುತ್ತಾರೆಂದು ನಿಮಗೆ ಭಾಸವಾದರೆ ಉಪದೇಶಿಸಿರಿ. ಉಪದೇಶ ಸ್ವೀಕರಿಸಲು ಸಿದ್ಧರಿಲ್ಲವೆಂದು ಸ್ವಾನುಭವದಿಂದ ನಿಮಗೆ ತಿಳಿದು ಬಂದಿರುವಂತಹ ವ್ಯಕ್ತಿಗಳ ಹಿಂದೆ ಬೀಳುವ ಯಾವ ಅವಶ್ಯಕತೆಯೂ ನಿಮಗಿಲ್ಲ.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللَّهِ الرَّحْمَٰنِ الرَّحِيمِ

1. ಆವರಿಸಿ ಬಿಡಲಿರುವ ಆ ವಿಪತ್ತಿನ ಸುದ್ದಿ ನಿಮಗೆ ತಲುಪಿದೆಯೇ? — هَلْ أَتَاكَ حَدِيثُ الْغَاشِيَةِ ﴿١﴾

2. ಕೆಲವು ಮುಖಗಳು[1] ಅಂದು ಭಯಗ್ರಸ್ತವಾಗಿರುವುವು, — وُجُوهٌ يَوْمَئِذٍ خَاشِعَةٌ ﴿٢﴾

3. ತೀವ್ರ ಪರಿಶ್ರಮ ಪಡುತ್ತಿರುವುವು, — عَامِلَةٌ نَاصِبَةٌ ﴿٣﴾

4. ಘೋರ ಅಗ್ನಿಯಲ್ಲಿ ಉರಿಯುತ್ತಿರುವುವು- — تَصْلَىٰ نَارًا حَامِيَةً ﴿٤﴾

5. ಅವರಿಗೆ ಕುದಿಯುತ್ತಿರುವ ಚಿಲುಮೆಯ ನೀರನ್ನು ಕುಡಿಯಲು ಕೊಡಲಾಗುವುದು. — تُسْقَىٰ مِنْ عَيْنٍ آنِيَةٍ ﴿٥﴾

6. ಮುಳ್ಳು ತುಂಬಿದ ಒಣಹುಲ್ಲಿನ ಹೊರತು ಬೇರೆ ಯಾವ ಆಹಾರವೂ ಅವರಿಗೆ ಇರಲಾರದು- — لَيْسَ لَهُمْ طَعَامٌ إِلَّا مِنْ ضَرِيعٍ ﴿٦﴾

7. ಅದು ಪುಷ್ಟಿಗೊಳಿಸಲಾರದು, ಹಸಿವೆಯನ್ನೂ ನೀಗಿಸಲಾರದು- — لَا يُسْمِنُ وَلَا يُغْنِي مِنْ جُوعٍ ﴿٧﴾

8. ಅಂದು ಕೆಲವು ಮುಖಗಳು ಕಾಂತಿಯುಕ್ತವಾಗಿರುವುವು, — وُجُوهٌ يَوْمَئِذٍ نَاعِمَةٌ ﴿٨﴾

9. ತಮ್ಮ ಸಾಧನೆಗಳ ಬಗ್ಗೆ ಸಂತುಷ್ಟವಾಗಿರುವುವು. — لِسَعْيِهَا رَاضِيَةٌ ﴿٩﴾

10. ಉನ್ನತವಾದ ಸ್ವರ್ಗೋದ್ಯಾನಗಳಲ್ಲಿ ಇರುವುವು- — فِي جَنَّةٍ عَالِيَةٍ ﴿١٠﴾

11. ಅಲ್ಲಿ ಅವರು ಯಾವುದೇ ಅಸಂಬದ್ಧ ಮಾತನ್ನು ಕೇಳಲಾರರು. — لَا تَسْمَعُ فِيهَا لَاغِيَةً ﴿١١﴾

---

1. 'ಮುಖಗಳು' ಎಂಬ ಪದವನ್ನು ಇಲ್ಲಿ ವ್ಯಕ್ತಿಗಳು ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಮುಖವು, ಮಾನವ ದೇಹದ ಅತ್ಯಂತ ಸುವ್ಯಕ್ತವಾದ ಭಾಗವಾಗಿರುವುದರಿಂದ 'ಕೆಲವು ವ್ಯಕ್ತಿಗಳು' ಎಂದು ಹೇಳುವ ಬದಲು 'ಕೆಲವು ಮುಖಗಳು' ಎಂಬ ಪದವನ್ನು ಪ್ರಯೋಗಿಸಲಾಗಿದೆ.

12. ಅದರಲ್ಲಿ ಚಿಲುಮೆಗಳು ಹರಿಯುತ್ತಿರುವುವು,

فِيهَا عَيْنٌ جَارِيَةٌ ﴿١٢﴾

وقف لازم

13. ಅದರೊಳಗೆ ಉನ್ನತ ಪೀಠಗಳಿರುವುವು,

فِيهَا سُرُرٌ مَّرْفُوعَةٌ ﴿١٣﴾

14. ಪಾನಪಾತ್ರೆಗಳು ಇರಿಸಲ್ಪಟ್ಟಿರುವುವು,

وَأَكْوَابٌ مَّوْضُوعَةٌ ﴿١٤﴾

15. ಒರಗುವ ದಿಂಬುಗಳ ಸಾಲುಗಳಿರುವುವು,

وَنَمَارِقُ مَصْفُوفَةٌ ﴿١٥﴾

16. ಮತ್ತು ನುಣುಪಾದ ಹಾಸುಗಳು ಹಾಸಿರುವುವು.

وَزَرَابِيُّ مَبْثُوثَةٌ ﴿١٦﴾

17. (ಇವರು ನಂಬುವುದಿಲ್ಲವೆಂದಾದರೆ) ಒಂಟೆಗಳು ಹೇಗೆ ಸೃಷ್ಟಿಸಲ್ಪಟ್ಟಿವೆ ಎಂಬುದನ್ನು ಇವರು ನೋಡುವುದಿಲ್ಲವೇ?

أَفَلَا يَنظُرُونَ إِلَى الْإِبِلِ كَيْفَ خُلِقَتْ ﴿١٧﴾

18. ಆಕಾಶವು ಹೇಗೆ ಎತ್ತರಿಸಲ್ಪಟ್ಟಿದೆಯೆಂಬುದನ್ನು ನೋಡುವುದಿಲ್ಲವೇ?

وَإِلَى السَّمَاءِ كَيْفَ رُفِعَتْ ﴿١٨﴾

19. ಪರ್ವತಗಳು ಹೇಗೆ ನಾಟಲ್ಪಟ್ಟಿವೆಯೆಂಬುದನ್ನು ನೋಡುವುದಿಲ್ಲವೇ?

وَإِلَى الْجِبَالِ كَيْفَ نُصِبَتْ ﴿١٩﴾

20. ನೆಲವನ್ನು ಹೇಗೆ ಹಾಸಲಾಗಿದೆಯೆಂಬುದನ್ನು ನೋಡುವುದಿಲ್ಲವೇ?[2]

وَإِلَى الْأَرْضِ كَيْفَ سُطِحَتْ ﴿٢٠﴾

21. ಸರಿ! (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾ ಸಾಗಿರಿ. ನೀವು ಕೇವಲ ಉಪದೇಶಕರು.

فَذَكِّرْ إِنَّمَا أَنتَ مُذَكِّرٌ ﴿٢١﴾

22. ಅವರ ಮೇಲೇನೂ ಬಲಾತ್ಕಾರ ಮಾಡುವವರಲ್ಲ-

لَّسْتَ عَلَيْهِم بِمُصَيْطِرٍ ﴿٢٢﴾

23. ಆದರೆ ಯಾರು ವಿಮುಖನಾಗುವನೋ ಹಾಗೂ ನಿರಾಕರಿಸುವನೋ-

إِلَّا مَن تَوَلَّىٰ وَكَفَرَ ﴿٢٣﴾

24. ಅವನಿಗೆ ಅಲ್ಲಾಹನು ಘೋರ ಯಾತನೆ ಕೊಡುವನು.

فَيُعَذِّبُهُ اللَّهُ الْعَذَابَ الْأَكْبَرَ ﴿٢٤﴾

2. ಅರ್ಥಾತ್- ಪರಲೋಕದ ಕುರಿತಾದ ಈ ಮಾತುಗಳನ್ನು ಕೇಳಿ ಇದು ಸಂಭವಿಸುವುದಾದರೂ ಹೇಗೆ ಎಂದು ಅವರು ಕೇಳುತ್ತಾರೆ. ಹಾಗಾದರೆ ಅವರು ತಮ್ಮ ಸುತ್ತಮುತ್ತಲಿನ ವಸ್ತುಗಳ ಕಡೆಗೆ ದೃಷ್ಟಿ ಬೀರುವುದಿಲ್ಲವೇ? ಈ ಒಂಟೆ ಹೇಗೆ ಸೃಷ್ಟಿಸಲ್ಪಟ್ಟಿತು? ಈ ಆಕಾಶ ಹೇಗೆ ಉನ್ನತಗೊಂಡಿತು? ಈ ಪರ್ವತ ಹೇಗೆ ನೆಲೆಯೂರಿತು? ಈ ಭೂಮಿ ಹೇಗೆ ಹರಡಿತು? ಎಂದು ಅವರೆಂದೂ ಆಲೋಚಿಸುವುದಿಲ್ಲವೇ. ಈ ವಸ್ತುಗಳೆಲ್ಲವೂ ಉಂಟಾಗಲು ಸಾಧ್ಯವಿದೆ. ಮಾತ್ರವಲ್ಲ ಅವರ ಮುಂದೆಯೇ ಅಸ್ತಿತ್ವದಲ್ಲಿದೆ. ಹಾಗಿರುವಾಗ ಪರಲೋಕ ಮಾತ್ರ ಯಾಕೆ ಬರಲಾರದು. ಪರಲೋಕದಲ್ಲಿ ಮತ್ತೊಂದು ವಿಶ್ವ ಅಸ್ತಿತ್ವಕ್ಕೆ ಬರಲು ಯಾಕೆ ಸಾಧ್ಯವಿಲ್ಲ. ಸ್ವರ್ಗ ಮತ್ತು ನರಕಗಳೇಕೆ ಉಂಟಾಗಲಾರವು.

| | |
|---|---|
| 25. ಇವರಿಗೆಲ್ಲ ನಮ್ಮ ಕಡೆಗೇ ಮರಳಲಿಕ್ಕಿದೆ- | إِنَّ إِلَيْنَآ إِيَابَهُمْ ﴿٢٥﴾ |
| 26. ತರುವಾಯ ಇವರ ವಿಚಾರಣೆ ನಡೆಸುವ ಹೊಣೆ ನಮ್ಮ ಮೇಲೆಯೇ ಇದೆ. | ثُمَّ إِنَّ عَلَيْنَا حِسَابَهُمْ ﴿٢٦﴾ |







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ۝

1. ಪ್ರಾತಃಕಾಲದ ಆಣೆ,

وَالْفَجْرِ ۝١

2. ದಶರಾತ್ರಿಗಳ ಆಣೆ,

وَلَيَالٍ عَشْرٍ ۝٢

3. ಸಮ-ವಿಷಮಗಳ ಆಣೆ,

وَّالشَّفْعِ وَالْوَتْرِ ۝٣

4. ಮತ್ತು ಅಗಲುತ್ತಿರುವ ರಾತ್ರಿಯ ಆಣೆ.

وَالَّيْلِ اِذَا يَسْرِ ۝٤

5. ಇದರಲ್ಲಿ ಬುದ್ಧಿಜೀವಿಗಳಿಗೇನಾದರೂ ಆಣೆ ಇದೆಯೇ?[1]

هَلْ فِيْ ذٰلِكَ قَسَمٌ لِّذِيْ حِجْرٍ ۝٥

6-7. ನಿಮ್ಮ ಪ್ರಭು ಉನ್ನತ ಸ್ತಂಭಗಳ ಆದ್‌ಇರಮ್‌ನವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?

اَلَمْ تَرَ كَيْفَ فَعَلَ رَبُّكَ بِعَادٍ ۝٦ اِرَمَ ذَاتِ الْعِمَادِ ۝٧

8. ಅವರಂತಹ ಯಾವ ಜನಾಂಗವೂ ಜಗತ್ತಿನ ನಾಡುಗಳಲ್ಲಿ ಸೃಷ್ಟಿಸಲ್ಪಟ್ಟಿರಲಿಲ್ಲ.

الَّتِيْ لَمْ يُخْلَقْ مِثْلُهَا فِي الْبِلَادِ ۝٨

9. ಕಣಿವೆಗಳಲ್ಲಿ ಬಂಡೆಗಳನ್ನು ಕೊರೆದಿದ್ದ ಸಮೂದರೊಂದಿಗೆ-

وَثَمُوْدَ الَّذِيْنَ جَابُوا الصَّخْرَ بِالْوَادِ ۝٩

10. ಮತ್ತು ಮೊಳೆಗಳವನಾದ ಫಿರ್‌ಔನನೊಂದಿಗೆ-

وَفِرْعَوْنَ ذِي الْاَوْتَادِ ۝١٠

11. (ಅವನು ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?). ಇವರು ಜಗತ್ತಿನ ನಾಡುಗಳಲ್ಲಿ ವಿದ್ರೋಹವೆಸಗಿದವರಾಗಿದ್ದರು-

الَّذِيْنَ طَغَوْا فِي الْبِلَادِ ۝١١

1. ಮುಂದಿನ ಸೂಕ್ತಗಳನ್ನು ಗಮನಿಸಿದರೆ ಪ್ರವಾದಿವರ್ಯರು(ಸ) ಮತ್ತು ಸತ್ಯನಿಷೇಧಿಗಳ ನಡುವೆ ಪರಲೋಕದ ಶಿಕ್ಷೆ-ರಕ್ಷೆಗಳ ಬಗ್ಗೆ ಚರ್ಚೆ ನಡೆಯುತ್ತಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಪ್ರವಾದಿವರ್ಯರು(ಸ) ಅದನ್ನು ಸಾಬೀತುಪಡಿಸಿದರೆ ಸತ್ಯನಿಷೇಧಿಗಳು ಅದನ್ನು ನಿರಾಕರಿಸುತ್ತಿದ್ದರು. ಈ ಕುರಿತು ನಾಲ್ಕು ವಿಷಯಗಳ ಆಣೆ ಹಾಕಿದ ನಂತರ, “ಈ ಬಗ್ಗೆ ಸಾಕ್ಷ್ಯವಹಿಸಲು ಇದರ ನಂತರ ಮತ್ತಾವುದೇ ಆಣೆಯ ಔಚಿತ್ಯವಿದೆಯೇ?” ಎಂದು ಹೇಳಲಾಗುತ್ತಿದೆ.

12. ಮತ್ತು ಅಲ್ಲಿ ಬಹಳಷ್ಟು ಕ್ಷೋಭೆ ಹರಡಿದ್ದರು.

فَأَكْثَرُوا فِيهَا الْفَسَادَ ﴿١٢﴾

13. ಕೊನೆಗೆ ನಿಮ್ಮ ಪ್ರಭು ಅವರ ಮೇಲೆ ಯಾತನೆಯ ಕೊರಡೆಯನ್ನು ಬಾರಿಸಿಬಿಟ್ಟನು.

فَصَبَّ عَلَيْهِمْ رَبُّكَ سَوْطَ عَذَابٍ ﴿١٣﴾

14. ವಾಸ್ತವದಲ್ಲಿ ನಿಮ್ಮ ಪ್ರಭು ಹೊಂಚು ಹಾಕುತ್ತಿದ್ದಾನೆ.[2]

إِنَّ رَبَّكَ لَبِالْمِرْصَادِ ﴿١٤﴾

15. ಆದರೆ ಮಾನವನ ಅವಸ್ಥೆ ಹೀಗಿದೆ: ಅವನ ಪ್ರಭು ಅವನನ್ನು ಪರೀಕ್ಷೆ ಗೊಳಪಡಿಸಿದಾಗ ಮತ್ತು ಅವನಿಗೆ ಗೌರವ ಹಾಗೂ ಅನುಗ್ರಹ ದಯಪಾಲಿಸಿದಾಗ ಅವನು, ನನ್ನ ಪ್ರಭು ನನ್ನನ್ನು ಸನ್ಮಾನಿತನಾಗಿ ಮಾಡಿದನೆಂದು ಹೇಳುತ್ತಾನೆ.

فَأَمَّا الْإِنسَانُ إِذَا مَا ابْتَلَاهُ رَبُّهُ فَأَكْرَمَهُ وَنَعَّمَهُ فَيَقُولُ رَبِّي أَكْرَمَنِ ﴿١٥﴾

16. ಮತ್ತು ಅವನನ್ನು ಪರೀಕ್ಷೆಗೊಳಪಡಿಸಿದಾಗ ಮತ್ತು ಅವನ ಪಾಲಿಗೆ ಅವನ ಜೀವನಾಧಾರವನ್ನು ಸೀಮಿತಗೊಳಿಸಿದಾಗ ನನ್ನ ಪ್ರಭು ನನ್ನನ್ನು ಅಪಮಾನಿಸಿದನೆಂದು ಹೇಳುತ್ತಾನೆ.[3]

وَأَمَّا إِذَا مَا ابْتَلَاهُ فَقَدَرَ عَلَيْهِ رِزْقَهُ فَيَقُولُ رَبِّي أَهَانَنِ ﴿١٦﴾

17. ಖಂಡಿತ ಅಲ್ಲ! ವಾಸ್ತವದಲ್ಲಿ ನೀವು ಅನಾಥರನ್ನು ಗೌರವದಿಂದ ಕಾಣುವುದಿಲ್ಲ-

كَلَّا بَل لَّا تُكْرِمُونَ الْيَتِيمَ ﴿١٧﴾

18. ಬಡವನಿಗೆ ಉಣಬಡಿಸುವಂತೆ ಪರಸ್ಪರರನ್ನು ಪ್ರೇರೇಪಿಸುವುದಿಲ್ಲ-

وَلَا تَحَاضُّونَ عَلَىٰ طَعَامِ الْمِسْكِينِ ﴿١٨﴾

19. ವಾರೀಸು ಸೊತ್ತನ್ನೆಲ್ಲ ಕಬಳಿಸಿ ಬಿಡುತ್ತೀರಿ-

وَتَأْكُلُونَ التُّرَاثَ أَكْلًا لَّمًّا ﴿١٩﴾

20. ಮತ್ತು ಸಂಪತ್ತನ್ನು ಅತಿಯಾಗಿ ಪ್ರೀತಿಸುತ್ತೀರಿ.

وَتُحِبُّونَ الْمَالَ حُبًّا جَمًّا ﴿٢٠﴾

21. ಖಂಡಿತ ಅಲ್ಲ![4] ಭೂಮಿಯು ನಿರಂತರ ಗುದ್ದಿ ಪುಡಿಗುಟ್ಟಲ್ಪಟ್ಟಾಗ-

كَلَّا إِذَا دُكَّتِ الْأَرْضُ دَكًّا دَكًّا ﴿٢١﴾

---

2. ಹೊಂಚು ಹಾಕುವುದೆಂದರೆ ಯಾರನ್ನಾದರೂ ಕಾಯುತ್ತಾ ಅವಿತುಕೊಂಡು ಕುಳಿತಿರುವುದು ಮತ್ತು ಅವನು ಅಲ್ಲಿಗೆ ಬಂದು ತಲಪಿದೊಡನೆ ಹಠಾತ್ತನೆ ಅವರ ಮೇಲೆ ಎರಗಿ ಬಿಡುವುದು. ತನ್ನ ಪರಿಣಾಮದ ಬಗ್ಗೆ ಅಶ್ರದ್ಧನಾಗಿರುವವನು ಆ ಪ್ರದೇಶದ ಮೂಲಕ ನಿಶ್ಚಿಂತನಾಗಿ ಸಾಗುತ್ತಿರುವಾಗಲೇ ಇದ್ದಕ್ಕಿದ್ದಂತೆ ಬಲಿಯಾಗಿ ಬಿಡುತ್ತಾನೆ. ಅಲ್ಲಾಹನಿಗೆ ಪ್ರತಿಯಾಗಿ ಲೋಕದಲ್ಲಿ ಕ್ಷೋಭೆಯ ಬಿರುಗಾಳಿಯನ್ನೆಬ್ಬಿಸುವ ಅಕ್ರಮಿಗಳ ಅವಸ್ಥೆಯೂ ಹೀಗೆಯೇ ಇರುತ್ತದೆ. ಅವರ ಕೆಲಸಗಳನ್ನೆಲ್ಲಾ ನೋಡುವ ದೇವನೊಬ್ಬನಿದ್ದಾನೆಂಬ ಪರಿವೆಯೇ ಅವರಿಗಿರುವುದಿಲ್ಲ. ಅವರು ಬಹಳ ನಿರ್ಭಯವಾಗಿ ದಿನೇ ದಿನೇ ಹೆಚ್ಚೆಚ್ಚು ದುಷ್ಕೃತ್ಯಗಳನ್ನು ಮಾಡುತ್ತಾ ಹೋಗುತ್ತಾರೆ. ಕೊನೆಗೆ ಅಲ್ಲಾಹನು ಮೀರಲು ಬಿಡದ ಆ ಚರಮ ಹಂತಕ್ಕೆ ತಲಪಿದಾಗ ಹಠಾತ್ತನೆ ಅಲ್ಲಾಹನ ಯಾತನೆಯ ಹೊಡೆತ ಅವರ ಮೇಲೆ ಬೀಳುತ್ತದೆ.
3. ಅರ್ಥಾತ್- ಮಾನವನ ಭೌತಿಕವಾದಿ ದೃಷ್ಟಿಕೋನ ಹೀಗಿರುತ್ತದೆ- ಈ ಲೋಕದ ಸಿರಿಸಂಪತ್ತು ಮತ್ತು ಸ್ಥಾನಾಧಿಕಾರಗಳನ್ನು ಅವನು ಗೌರವವೆಂದೂ ಅದು ಸಿಗದಿರುವುದನ್ನು ನಿಂದ್ಯತೆಯೆಂದೂ ಅವನು ಭಾವಿಸುತ್ತಾನೆ. ಆದರೆ ವಾಸ್ತವಿಕತೆಯೇನೆಂದರೆ ಅಲ್ಲಾಹನು ಭೂಮಿಯಲ್ಲಿ ಯಾರಿಗೆ ಏನನ್ನು ದಯಪಾಲಿಸಿದ್ದರೂ ಅದು ಪರೀಕ್ಷಾರ್ಥವಾಗಿದೆ. ಸಿರಿಸಂಪತ್ತು ಮತ್ತು ಅಧಿಕಾರವೂ ಪರೀಕ್ಷಾರ್ಥವಾಗಿದೆ. ಬಡತನವೂ ಪರೀಕ್ಷೆಗಾಗಿಯೇ ಇದೆ. ಆದರೆ ಅವರಿಗದು ತಿಳಿಯುವುದಿಲ್ಲ.
4. ಲೋಕದ ಜೀವನದಲ್ಲಿ ಇದೆಲ್ಲವನ್ನೂ ಮಾಡುತ್ತಿರೋಣ. ಅದರ ಬಗ್ಗೆ ವಿಚಾರಣೆ ನಡೆಯುವ ಸಮಯ ಎಂದೂ ಬರಲಾರದು ಎಂಬ ನಿಮ್ಮ ಭಾವನೆ ಸರಿಯಲ್ಲ.

22. ಮತ್ತು ದೇವಚರರು ಸಾಲುಸಾಲಾಗಿ ನಿಂತಿರುವ ಸ್ಥಿತಿಯಲ್ಲಿ ನಿಮ್ಮ ಪ್ರಭು ಆಗಮಿಸುವಾಗ.

وَجَاءَ رَبُّكَ وَالْمَلَكُ صَفًّا صَفًّا

23. ಅಂದು ನರಕವನ್ನು ಮುಂದೆ ತರಲಾಗುವುದು. ಅಂದು ಮಾನವನಿಗೆ ಮನವರಿಕೆಯಾಗುವುದು. ಅಂದು ಅವನು ತಿಳಿಯುವುದರಿಂದೇನು ಫಲ?

وَجِايْءَ يَوْمَئِذٍ بِجَهَنَّمَ يَوْمَئِذٍ يَتَذَكَّرُ الْإِنْسَانُ وَأَنَّى لَهُ الذِّكْرَى

24. ಅವನು, "ಅಯ್ಯೋ! ನಾನು ನನ್ನ ಈ ಜೀವನಕ್ಕಾಗಿ ಮೊದಲೇ ಸಿದ್ಧತೆ ಮಾಡುತ್ತಿದ್ದರೆ!" ಎಂದು ಹೇಳುವನು.

يَقُولُ يَا لَيْتَنِي قَدَّمْتُ لِحَيَاتِي

25. ಅಂದು ಅಲ್ಲಾಹನು ಕೊಡುವಂತಹ ಯಾತನೆಯನ್ನು ಕೊಡಬಲ್ಲವರು ಬೇರಾರೂ ಇಲ್ಲ.

فَيَوْمَئِذٍ لَا يُعَذِّبُ عَذَابَهُ أَحَدٌ

26. ಅಲ್ಲಾಹನು ಬಂಧಿಸುವ ರೀತಿಯಲ್ಲಿ ಬಂಧಿಸುವವನೂ ಯಾರೂ ಇಲ್ಲ.

وَلَا يُوثِقُ وَثَاقَهُ أَحَدٌ

27. (ಇನ್ನೊಂದು ಕಡೆಯಿಂದ ಹೀಗೆ ಅಪ್ಪಣೆಯಾಗುವುದು;) "ಓ ಶಾಂತಚಿತ್ತವೇ![5]

يَا أَيَّتُهَا النَّفْسُ الْمُطْمَئِنَّةُ

28. ನೀನು (ನಿನ್ನ ಸದ್ಗತಿಯಿಂದ) ಸಂತುಷ್ಟನೂ (ನಿನ್ನ ಪ್ರಭುವಿನ ಬಳಿ) ಮೆಚ್ಚುಗೆಗೆ ಪಾತ್ರನೂ ಆಗಿರುವ ಸ್ಥಿತಿಯಲ್ಲಿ ನಿನ್ನ ಪ್ರಭುವಿನ ಬಳಿಗೆ ನಡೆ.

ارْجِعِي إِلَى رَبِّكِ رَاضِيَةً مَرْضِيَّةً

29. ನನ್ನ (ಸಜ್ಜನ) ದಾಸರೊಂದಿಗೆ ಸೇರಿಕೋ-

فَادْخُلِي فِي عِبَادِي

30. ಮತ್ತು ನನ್ನ ಸ್ವರ್ಗದೊಳಗೆ ಪ್ರವೇಶಿಸು."

وَادْخُلِي جَنَّتِي

---

5. ಶಾಂತ ಚಿತ್ತವೆಂದರೆ (ನಫ್ಸ್ ಮುತ್‌ಮಇನ್ನ್) ಯಾವುದೇ ಸಂಶಯಕ್ಕೆಡೆ ಕೊಡದೆ ಪೂರ್ಣ ಸಂತೃಪ್ತಿಯೊಂದಿಗೆ ಶಾಂತಚಿತ್ತದಿಂದ ಏಕಮೇವಾದ್ವಿತೀಯನಾದ ಅಲ್ಲಾಹನನ್ನು ತನ್ನ ಪ್ರಭುವೆಂದೂ ಪ್ರವಾದಿಗಳು ತಂದ ಸತ್ಯಧರ್ಮವನ್ನು ತನ್ನ ಧರ್ಮವೆಂದೂ ಭಾವಿಸಿದ ವ್ಯಕ್ತಿಯಾಗಿದ್ದಾನೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲ್ಲ,[1] ನಾನು ಈ (ಮಕ್ಕಾ) ಪಟ್ಟಣದ ಆಣೆ ಹಾಕುತ್ತೇನೆ-

لَآ اُقْسِمُ بِهٰذَا الْبَلَدِ ۙ

2. (ಸಂದೇಶವಾಹಕರೇ) ಈ ಪಟ್ಟಣದಲ್ಲಿ ನಿಮ್ಮನ್ನು 'ಧರ್ಮಸಮ್ಮತ' ಗೊಳಿಸಿಕೊಳ್ಳಲಾಗಿದೆ-[2]

وَاَنْتَ حِلٌّ ۢ بِهٰذَا الْبَلَدِ ۙ

3. ಮತ್ತು ನಾನು ತಂದೆಯ ಹಾಗೂ ಅವನಿಂದ ಜನಿಸಿದ ಮಕ್ಕಳ ಆಣೆ ಹಾಕುತ್ತೇನೆ-

وَوَالِدٍ وَّمَا وَلَدَ ۙ

4. ವಾಸ್ತವದಲ್ಲಿ ನಾವು ಮಾನವನನ್ನು ಸಂಕಷ್ಟದಲ್ಲೇ ಸೃಷ್ಟಿಸಿದ್ದೇವೆ.[3]

لَقَدْ خَلَقْنَا الْاِنْسَانَ فِيْ كَبَدٍ ۗ

5. ಅವನನ್ನು ಯಾರೂ ನಿಯಂತ್ರಿಸಲಾರರೆಂದು ಅವನು ಭಾವಿಸಿ ರುವನೇ?

اَيَحْسَبُ اَنْ لَّنْ يَّقْدِرَ عَلَيْهِ اَحَدٌ ۘ

6. ನಾನು ಧನರಾಶಿಯನ್ನೇ ಖರ್ಚು ಮಾಡಿ ಬಿಟ್ಟೆನೆಂದು ಅವನು ಹೇಳುತ್ತಾನೆ.

يَقُوْلُ اَهْلَكْتُ مَالًا لُّبَدًا ۗ

7. ಅವನನ್ನು ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೆಯೇ?[4]

اَيَحْسَبُ اَنْ لَّمْ يَرَهٗٓ اَحَدٌ ۗ

8-9. ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಗೆಯನ್ನೂ

اَلَمْ نَجْعَلْ لَّهٗ عَيْنَيْنِ ۙ

1. ಅರ್ಥಾತ್- ನೀವು ಭಾವಿಸಿಕೊಂಡಿರುವುದು ಸತ್ಯವಲ್ಲ.
2. ಅರ್ಥಾತ್- ಪ್ರಾಣಿಗಳಿಗೂ ಅಭಯ ಪ್ರಾಪ್ತವಿರುವ ಈ ನಗರದಲ್ಲಿ ನಿಮ್ಮ ಮೇಲೆ ಅಕ್ರಮವೆಸಗುವುದನ್ನು ಧರ್ಮಸಮ್ಮತಗೊಳಿಸಲಾಗಿದೆ.
3. ಅರ್ಥಾತ್- ಈ ಲೋಕ ಮಾನವನಿಗೆ ಸವಿಯುಣ್ಣುವ ಮತ್ತು ಸುಖದ ಸುಪ್ಪತ್ತಿಗೆಯಲ್ಲಿರುವ ಸ್ಥಳವಲ್ಲ. ಬದಲಾಗಿ ಇದು ಪರಿಶ್ರಮಪಡುವ ಮತ್ತು ಕಾಠಿಣ್ಯಗಳನ್ನು ಸಹಿಸಿಕೊಳ್ಳುವ ಸ್ಥಳವಾಗಿದೆ. ಯಾವ ಮಾನವನೂ ಈ ಪರಿಸ್ಥಿತಿಯಿಂದ ದಾಟದಿರಲಾರ.
4. ಅರ್ಥಾತ್- ದುರಹಂಕಾರವನ್ನು ಮೆರೆಯುವ ವ್ಯಕ್ತಿಗೆ, ಇದನ್ನೆಲ್ಲಾ ನೋಡುವ ದೇವನೊಬ್ಬ ಮೇಲಿದ್ದಾನೆ. ಈ ಸಂಪತ್ತನ್ನು ಯಾವ ಮೂಲದಿಂದ ಗಳಿಸಿ ಯಾವುದರಲ್ಲಿ ಖರ್ಚು ಮಾಡಿದೆ ಎಂದು ಅವನು ನೋಡುತ್ತಿದ್ದಾನೆಂದು ತಿಳಿದಿಲ್ಲವೇ?

ಎರಡು ತುಟಿಗಳನ್ನೂ ಕೊಟ್ಟಿಲ್ಲವೇ?[5]

وَلِسَانًا وَّشَفَتَيْنِ ۙ﴿٩﴾

10. ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನು ತೋರಿಸಿ ಕೊಡಲಿಲ್ಲವೇ?

وَهَدَيْنٰهُ النَّجْدَيْنِ ۚ﴿١٠﴾

11. ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ.

فَلَا اقْتَحَمَ الْعَقَبَةَ ۖ﴿١١﴾

12. ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا الْعَقَبَةُ ۗ﴿١٢﴾

13. ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು-

فَكُّ رَقَبَةٍ ۙ﴿١٣﴾

14-16. ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು.

اَوْ اِطْعٰمٌ فِیْ یَوْمٍ ذِیْ مَسْغَبَةٍ ۙ﴿١٤﴾
یَّتِیْمًا ذَا مَقْرَبَةٍ ۙ﴿١٥﴾
اَوْ مِسْكِیْنًا ذَا مَتْرَبَةٍ ۗ﴿١٦﴾

17. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವುದು.

ثُمَّ كَانَ مِنَ الَّذِیْنَ اٰمَنُوْا وَتَوَاصَوْا بِالصَّبْرِ وَتَوَاصَوْا بِالْمَرْحَمَةِ ۗ﴿١٧﴾

18. ಇವರೇ ಬಲಗಡೆಯವರು.

اُولٰٓىِٕكَ اَصْحٰبُ الْمَیْمَنَةِ ۗ﴿١٨﴾

19. ಮತ್ತು ನಮ್ಮ ಸೂಕ್ತಗಳನ್ನು ತಿರಸ್ಕರಿಸಿದವರು ಎಡಗಡೆಯವರು.[6]

وَالَّذِیْنَ كَفَرُوْا بِاٰیٰتِنَا هُمْ اَصْحٰبُ الْمَشْئَمَةِ ۗ﴿١٩﴾

20. ಅವರ ಮೇಲೆ ನರಕಾಗ್ನಿಯು ಆವರಿಸಿಕೊಂಡಿರುವುದು.

عَلَیْهِمْ نَارٌ مُّؤْصَدَةٌ ۠﴿٢٠﴾ ع ١٥

---

5. ಅರ್ಥಾತ್- ನಾವು ಜ್ಞಾನ ಮತ್ತು ವಿವೇಕದ ಮೂಲಗಳನ್ನು ನೀಡಿಲ್ಲವೇ?
6. ಬಲಗಡೆಯವರು ಮತ್ತು ಎಡಗಡೆಯವರು ಎಂಬುದರ ವಿವರಣೆಗೆ ಅಲ್ ವಾಕಿಅಃ ಅಧ್ಯಾಯದ 8,9,27 ಮತ್ತು 41ನೆಯ ಸೂಕ್ತಗಳನ್ನು ನೋಡಿರಿ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ

1. ಸೂರ್ಯನ ಹಾಗೂ ಅದರ ಬಿಸಿಲಿನಾಣೆ, — وَالشَّمْسِ وَضُحٰهَا ﴿١﴾

2. ಚಂದ್ರನಾಣೆ- ಅದು ಅದನ್ನು ಹಿಂಬಾಲಿಸಿದಾಗ, — وَالْقَمَرِ اِذَا تَلٰهَا ﴿٢﴾

3. ಹಗಲಿನಾಣೆ- ಅದು ಸೂರ್ಯನನ್ನು ಪ್ರಕಟಗೊಳಿಸಿದಾಗ, — وَالنَّهَارِ اِذَا جَلّٰىهَا ﴿٣﴾

4. ರಾತ್ರಿಯಾಣೆ- ಅದು ಸೂರ್ಯನನ್ನು ಕವಿದಾಗ, — وَالَّيْلِ اِذَا يَغْشٰىهَا ﴿٤﴾

5. ಆಕಾಶದ ಹಾಗೂ ಅದನ್ನು ಸ್ಥಾಪಿಸಿದವನಾಣೆ, — وَالسَّمَآءِ وَمَا بَنٰىهَا ﴿٥﴾

6. ಭೂಮಿಯ ಹಾಗೂ ಅದನ್ನು ಹಾಸಿದವನಾಣೆ, — وَالْاَرْضِ وَمَا طَحٰىهَا ﴿٦﴾

7. ಮಾನವ ಚಿತ್ತದ ಹಾಗೂ ಅದನ್ನು ಸುಗಮಗೊಳಿಸಿದವನಾಣೆ,[1] — وَنَفْسٍ وَّمَا سَوّٰىهَا ﴿٧﴾

8. ಆ ಬಳಿಕ ಅವನು ಅದರ ದುಷ್ಕೃತೆಯನ್ನೂ ಅದರ ಸಾತ್ವಿಕತೆಯನ್ನೂ ಅದಕ್ಕೆ ಪ್ರೇರೇಪಿಸಿದನು.[2] — فَاَلْهَمَهَا فُجُوْرَهَا وَتَقْوٰىهَا ﴿٨﴾

9. ಖಂಡಿತವಾಗಿಯೂ ತನ್ನ ಆತ್ಮವನ್ನು ಸಂಸ್ಕರಿಸಿ ಕೊಂಡವನು ವಿಜಯಿಯಾದನು- — قَدْ اَفْلَحَ مَنْ زَكّٰىهَا ﴿٩﴾

---

1. ಅರ್ಥಾತ್- ಮಾನವನು ಮಾಡುವ ಕೆಲಸಗಳಿಗೆ ಅವನನ್ನು ಸಮರ್ಥನನ್ನಾಗಿ ಮಾಡುವ ದೇಹ, ಮೆದುಳು, ಇಂದ್ರಿಯಗಳು ಮತ್ತು ಶಕ್ತಿ ಸಾಮರ್ಥ್ಯಗಳನ್ನು ನಾವು ದಯಪಾಲಿಸಿದೆವು.
2. ಇದಕ್ಕೆ ಎರಡು ಅರ್ಥಗಳಿವೆ. ಮೊದಲನೆಯದಾಗಿ ಸೃಷ್ಟಿಕರ್ತನು ಅವನಲ್ಲಿ ಒಳಿತು ಮತ್ತು ಕೆಡುಕುಗಳೆರಡರ ಕಡೆಗೂ ಸೆಳೆತ ಮತ್ತು ಬಲವನ್ನಿಟ್ಟಿದ್ದಾನೆ. ಎರಡನೆಯದಾಗಿ ಪ್ರತಿಯೊಬ್ಬ ಮಾನವನ ಸುಪ್ತ ಮನಸ್ಸಿನಲ್ಲಿ ಅಲ್ಲಾಹನು ನಡವಳಿಕೆಯಲ್ಲಿ ಕೆಲವು ಉತ್ತಮವಾದುದು ಮತ್ತು ಕೆಲವು ಕೆಟ್ಟದ್ದಾಗಿವೆ ಎಂಬ ಕಲ್ಪನೆಯನ್ನು ಲೀನಗೊಳಿಸಿದ್ದಾನೆ. ಒಳ್ಳೆಯ ನೀತಿ-ನಡವಳಿಕೆ ಮತ್ತು ಕೆಟ್ಟ ನೀತಿ ನಡವಳಿಕೆ ಸರಿಸಮಾನವಲ್ಲ. ಫುಜೂರ್ (ದುಷ್ಟ ಕೆಲಸಗಳು) ಅತ್ಯಂತ ತುಚ್ಛವಾದುದಾಗಿವೆ. ತಕ್ವಾ(ಕೆಡುಕಿನಿಂದ ದೂರ ಉಳಿಯುವುದು) ಅತ್ಯಂತ ಉದಾತ್ತ ಗುಣವಾಗಿದೆ- ಎಂಬಿತ್ಯಾದಿಗಳು ಮಾನವನ ಮಟ್ಟಿಗೆ ಅಪರಿಚಿತ ಕಲ್ಪನೆಯಲ್ಲ. ಮಾನವ ಪ್ರಕೃತಿಯೇ ಅದನ್ನರಿತಿದೆ. ಒಳಿತು-ಕೆಡುಕುಗಳ ನಡುವೆ ಭೇದ ಕಲ್ಪಿಸುವ ಆಜನ್ಮ ಗುಣವನ್ನು ಸೃಷ್ಟಿಕರ್ತನು ಅವನಿಗೆ ದಯಪಾಲಿಸಿದ್ದಾನೆ.

| | |
|---|---|
| 10. ಮತ್ತು ಅದನ್ನು ದಮನಿಸಿದವನು ಸೋಲುಂಡನು.[3] | وَقَدْ خَابَ مَن دَسَّىٰهَا ﴿١٠﴾ |
| 11. ಸಮೂದರು ತಮ್ಮ ವಿದ್ರೋಹದಿಂದಾಗಿ ಸುಳ್ಳಾಗಿಸಿದರು. | كَذَّبَتْ ثَمُودُ بِطَغْوَىٰهَآ ﴿١١﴾ |
| 12. ಆ ಜನಾಂಗದ ಅತ್ಯಂತ ದುಷ್ಟ ವ್ಯಕ್ತಿಯು ಕೆರಳಿ ಎದ್ದಾಗ- | إِذِ ٱنۢبَعَثَ أَشْقَىٰهَا ﴿١٢﴾ |
| 13. ಅಲ್ಲಾಹನ ಸಂದೇಶವಾಹಕರು ಆ ಜನರೊಡನೆ, "ಜಾಗ್ರತೆ! ಅಲ್ಲಾಹನ ಒಂಟೆಯನ್ನು (ಮುಟ್ಟಬೇಡಿರಿ) ಮತ್ತು ಅದು ನೀರು ಕುಡಿಯುವುದನ್ನು (ತಡೆಯಬೇಡಿರಿ)" ಎಂದರು. | فَقَالَ لَهُمْ رَسُولُ ٱللَّهِ نَاقَةَ ٱللَّهِ وَسُقْيَٰهَا ﴿١٣﴾ |
| 14. ಆದರೆ ಅವರು ಅವರ ಮಾತನ್ನು ಸುಳ್ಳೆಂದು ಸಾರಿದರು ಮತ್ತು ಒಂಟೆಯನ್ನು ಕೊಂದುಬಿಟ್ಟರು. ಕೊನೆಗೆ ಅವರ ಪಾಪದ ಫಲವಾಗಿ ಅವರ ಪ್ರಭು ಅವರ ಮೇಲೆ, ಏಕಕಾಲದಲ್ಲಿ ಎಲ್ಲರನ್ನೂ ಮಣ್ಣುಗೂಡಿಸುವಂತಹ ವಿಪತ್ತನ್ನು ಎರಗಿಸಿದನು-[4] | فَكَذَّبُوهُ فَعَقَرُوهَا فَدَمْدَمَ عَلَيْهِمْ رَبُّهُم بِذَنۢبِهِمْ فَسَوَّىٰهَا ﴿١٤﴾ |
| 15. ಮತ್ತು ಅವನಿಗೆ (ತನ್ನ ಈ ಕೃತ್ಯದ) ಯಾವುದೇ ದುಷ್ಪರಿಣಾಮದ ಭಯವಿಲ್ಲ. | وَلَا يَخَافُ عُقْبَٰهَا ﴿١٥﴾ |

3. ಆತ್ಮವನ್ನು ಸಂಸ್ಕರಿಸಿಕೊಳ್ಳುವುದೆಂದರೆ ಅದನ್ನು ಕೆಡುಕುಗಳಿಂದ ಮುಕ್ತಗೊಳಿಸುವುದು. ಅದರಲ್ಲಿ ಒಳಿತುಗಳನ್ನು ಬೆಳೆಸುವುದು, ಅದನ್ನು ದಮನಿಸುವುದು ಎಂದರೆ ಮಾನವ ತನ್ನ ಮನಸ್ಸಿನ ದುಷ್ಪ್ರೇರಣೆಗಳನ್ನು ಬೆಳೆಸಿ ಸತ್ಪ್ರೇರಣೆಗಳನ್ನು ದಮನಿಸಿ ಬಿಡುವುದು.
4. ಆ ದುಷ್ಟ ವ್ಯಕ್ತಿ ತನ್ನ ಜನಾಂಗದ ಇಚ್ಛೆಯಂತೆ ಮಾತ್ರವಲ್ಲ ಅವರ ಅಪೇಕ್ಷೆಯಂತೆ ಒಂಟೆಯನ್ನು ಕೊಂದಿದ್ದನು. ಸೂರಃ ಅಲ್ ಕಮರ್‌ನ 29ನೆಯ ಸೂಕ್ತದಲ್ಲೂ ಇದನ್ನು ವಿವರಿಸಲಾಗಿದೆ. ಆದ್ದರಿಂದ ಸಮಸ್ತ ಜನಾಂಗದ ಮೇಲೆ ಯಾತನೆಯನ್ನೆರಗಿಸಲಾಯಿತು.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ರಾತ್ರೆಯಾಣೆ- ಅದು ಆವರಿಸಿದಾಗ- — وَالَّيْلِ اِذَا يَغْشٰى ①
2. ಹಗಲಿನಾಣೆ- ಅದು ಬೆಳಗಿದಾಗ- — وَالنَّهَارِ اِذَا تَجَلّٰى ②
3. ಮತ್ತು ಗಂಡು ಹೆಣ್ಣುಗಳನ್ನು ಸೃಷ್ಟಿಸಿದವನಾಣೆ- — وَمَا خَلَقَ الذَّكَرَ وَالْاُنْثٰۤى ③
4. ವಾಸ್ತವದಲ್ಲಿ ನಿಮ್ಮ ಪರಿಶ್ರಮಗಳು ವಿಭಿನ್ನ ತರದ್ದಾಗಿವೆ.[1] — اِنَّ سَعْيَكُمْ لَشَتّٰى ④
5. ಆದುದರಿಂದ ಯಾರು (ದೇವಮಾರ್ಗದಲ್ಲಿ) ಸಂಪತ್ತು ಕೊಟ್ಟನೋ (ದೇವಾಜ್ಞೋಲ್ಲಂಘನೆಯಿಂದ) ದೂರವುಳಿದನೋ- — فَاَمَّا مَنْ اَعْطٰى وَاتَّقٰى ⑤
6. ಮತ್ತು ಒಳಿತನ್ನು ಸತ್ಯವೆಂದು ಅಂಗೀಕರಿಸಿದವನಿಗೆ- — وَصَدَّقَ بِالْحُسْنٰى ⑥
7. ಅವನಿಗೆ ನಾವು ಸರಳ ಪಥವನ್ನು ಸುಗಮಗೊಳಿಸುವೆವು.[2] — فَسَنُيَسِّرُهٗ لِلْيُسْرٰى ⑦
8. ಮತ್ತು ಜಿಪುಣತೆ ತೋರಿದನೋ (ತನ್ನ ಪ್ರಭುವಿನ ಬಗ್ಗೆ) ನಿರ್ಲಕ್ಷ್ಯ ತೋರಿದನೋ- — وَاَمَّا مَنْۢ بَخِلَ وَاسْتَغْنٰى ⑧
9. ಮತ್ತು ಒಳಿತನ್ನು ತಿರಸ್ಕರಿಸಿದನೋ- — وَكَذَّبَ بِالْحُسْنٰى ⑨
10. ಅವನಿಗೆ ನಾವು ಕಠಿಣ ದಾರಿಯನ್ನು ಸುಗಮಗೊಳಿಸುವೆವು.[3] — فَسَنُيَسِّرُهٗ لِلْعُسْرٰى ⑩

---

1. ಅರ್ಥಾತ್- ದಿನ ರಾತ್ರಿಗಳು ಮತ್ತು ಹೆಣ್ಣು ಗಂಡುಗಳು ಯಾವ ರೀತಿ ಭಿನ್ನವಾಗಿವೆಯೋ, ಅದರ ಲಕ್ಷಣ ಮತ್ತು ಪರಿಣಾಮಗಳು ಹೇಗೆ ಪರಸ್ಪರ ತದ್ವಿರುದ್ಧವಾಗಿವೆಯೋ ಹಾಗೆಯೇ ನೀವು ಯಾವ ಮಾರ್ಗ ಮತ್ತು ಉದ್ದೇಶಗಳಿಗಾಗಿ ನಿಮ್ಮ ಪ್ರಯತ್ನಗಳನ್ನು ವ್ಯಯಿಸುತ್ತಿದ್ದೀರೋ ಅವು ತನ್ನ ಸ್ವರೂಪ ಮತ್ತು ಪರಿಣಾಮಗಳ ದೃಷ್ಟಿಯಿಂದ ತದ್ವಿರುದ್ಧವಾಗಿವೆ.
2. ಅರ್ಥಾತ್- ಮಾನವನ ಪ್ರಕೃತಿ ಸಹಜವಾದ ಮಾರ್ಗದಲ್ಲಿ ನಡೆಯುವುದನ್ನು ಅವನ ಪಾಲಿಗೆ ಸುಲಭಗೊಳಿಸುವೆವು.
3. ಅರ್ಥಾತ್- ಪ್ರಕೃತಿಗೆ ವಿರುದ್ಧವಾಗಿ ನಡೆಯುವುದನ್ನು ಅವನ ಪಾಲಿಗೆ ಸುಲಭಗೊಳಿಸುವೆವು.

11. ಅವನು ವಿನಾಶ ಹೊಂದುವಾಗ ಅವನ ಸಂಪತ್ತು ಅವನ ಯಾವ ಪ್ರಯೋಜನಕ್ಕೆ ಬಂದೀತು?

وَمَا يُغْنِيْ عَنْهُ مَالُهٗۤ اِذَا تَرَدّٰى ﴿١١﴾

12. ಖಂಡಿತವಾಗಿಯೂ ದಾರಿತೋರಿಸುವ ಹೊಣೆ ನಮ್ಮ ಮೇಲಿದೆ-

اِنَّ عَلَيْنَا لَلْهُدٰى ﴿١٢﴾

13. ಮತ್ತು ವಾಸ್ತವದಲ್ಲಿ ಪರಲೋಕ ಮತ್ತು ಇಹಲೋಕ ಇವೆರಡಕ್ಕೂ ನಾವೇ ಒಡೆಯರು.

وَاِنَّ لَنَا لَلْاٰخِرَةَ وَالْاُوْلٰى ﴿١٣﴾

14. ನಾನಂತು ಧಗಧಗಿಸುವ ಅಗ್ನಿಯ ಕುರಿತು ನಿಮಗೆ ಎಚ್ಚರಿಕೆ ಕೊಟ್ಟು ಬಿಟ್ಟಿರುವೆನು.

فَاَنْذَرْتُكُمْ نَارًا تَلَظّٰى ﴿١٤﴾

15. ಯಾರೂ ಅದರಲ್ಲಿ ಉರಿಯಲಾರರು-

لَا يَصْلٰىهَاۤ اِلَّا الْاَشْقَى ﴿١٥﴾

16. ಸುಳ್ಳಾಗಿಸಿದ ಹಾಗೂ ವಿಮುಖನಾದ ಹತಭಾಗ್ಯನ ಹೊರತು.

الَّذِيْ كَذَّبَ وَتَوَلّٰى ﴿١٦﴾

17. ಅತ್ಯಂತ ಧರ್ಮನಿಷ್ಠನು ಅದರಿಂದ ದೂರವಿರಿಸಲ್ಪಡುವವನು-

وَسَيُجَنَّبُهَا الْاَتْقَى ﴿١٧﴾

18. ಪುನೀತನಾಗಲಿಕ್ಕಾಗಿ ತನ್ನ ಸಂಪತ್ತನ್ನು ದಾನ ಮಾಡುವವನು.

الَّذِيْ يُؤْتِيْ مَالَهٗ يَتَزَكّٰى ﴿١٨﴾

19. ಅವನು ಪ್ರತಿಫಲ ಕೊಡಬೇಕಾದಂತಹ ಯಾರ, ಯಾವ ಉಪಕಾರ ಭಾರವೂ ಅವನ ಮೇಲಿಲ್ಲ-

وَمَا لِاَحَدٍ عِنْدَهٗ مِنْ نِّعْمَةٍ تُجْزٰۤى ﴿١٩﴾

20. ಅವನಂತು ಕೇವಲ ತನ್ನ ಸರ್ವೋನ್ನತ ಪ್ರಭುವಿನ ಪ್ರಸನ್ನತೆಗಾಗಿ ಈ ಕಾರ್ಯವನ್ನು ಮಾಡುತ್ತಾನೆ.

اِلَّا ابْتِغَآءَ وَجْهِ رَبِّهِ الْاَعْلٰى ﴿٢٠﴾

21. ಮತ್ತು ಅವನು ಖಂಡಿತವಾಗಿಯೂ (ಇವನಿಂದ) ಪ್ರಸನ್ನನಾಗುವನು.

وَلَسَوْفَ يَرْضٰى ﴿٢١﴾

---







(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسْمِ اللّٰهِ الرَّحْمٰنِ الرَّحِيْمِ ○ |
| 1. ಪ್ರಕಾಶಮಯ ಹಗಲಿನಾಣೆ- | وَالضُّحٰى ﴿۱﴾ |
| 2. ಮತ್ತು ರಾತ್ರಿಯಾಣೆ - ಅದು ಪ್ರಶಾಂತವಾಗಿ ಆವರಿಸುವಾಗ- | وَالَّيْلِ اِذَا سَجٰى ﴿۲﴾ |
| 3. (ಸಂದೇಶವಾಹಕರೇ) ನಿಮ್ಮ ಪ್ರಭು ನಿಮ್ಮನ್ನು ಖಂಡಿತ ಕೈ ಬಿಡಲಿಲ್ಲ ಮತ್ತು ಅವನು ಕೋಪಿಸಲೂ ಇಲ್ಲ. | مَا وَدَّعَكَ رَبُّكَ وَمَا قَلٰى ﴿۳﴾ |
| 4. ಮತ್ತು ಖಂಡಿತವಾಗಿಯೂ ಅನಂತರದ ಕಾಲಘಟ್ಟವು ನಿಮ್ಮ ಪಾಲಿಗೆ ಮುಂಚಿನ ಕಾಲಘಟ್ಟಕ್ಕಿಂತ ಉತ್ತಮವಾಗಿರುವುದು. | وَلَلْاٰخِرَةُ خَيْرٌ لَّكَ مِنَ الْاُوْلٰى ﴿۴﴾ |
| 5. ಸದ್ಯದಲ್ಲೇ ನಿಮ್ಮ ಪ್ರಭು, ನೀವು ಸಂತುಷ್ಟರಾಗುವಷ್ಟನ್ನು ನಿಮಗೆ ಕೊಡುವನು. | وَلَسَوْفَ يُعْطِيْكَ رَبُّكَ فَتَرْضٰى ﴿۵﴾ |
| 6. ಅವನು ನಿಮ್ಮನ್ನು ಅನಾಥನಾಗಿ ಕಂಡು ಆಶ್ರಯವನ್ನು ಒದಗಿಸಲಿಲ್ಲವೇ? | اَلَمْ يَجِدْكَ يَتِيْمًا فَاٰوٰى ﴿۶﴾ |
| 7. ಮತ್ತು ನಿಮ್ಮನ್ನು ಸನ್ಮಾರ್ಗ ಅರಿಯದವರಾಗಿ ಕಂಡು ಮಾರ್ಗದರ್ಶನ ಮಾಡಲಿಲ್ಲವೇ? | وَوَجَدَكَ ضَآلًّا فَهَدٰى ﴿۷﴾ |
| 8. ನಿಮ್ಮನ್ನು ನಿರ್ಗತಿಕನಾಗಿ ಕಂಡು ಸ್ಥಿತಿವಂತನಾಗಿ ಮಾಡಲಿಲ್ಲವೇ? | وَوَجَدَكَ عَآئِلًا فَاَغْنٰى ﴿۸﴾ |
| 9. ಆದುದರಿಂದ ಅನಾಥನ ಮೇಲೆ ಕಾಠಿಣ್ಯ ತೋರಬೇಡಿರಿ. | فَاَمَّا الْيَتِيْمَ فَلَا تَقْهَرْ ﴿۹﴾ |
| 10. ಮತ್ತು ಯಾಚಕನನ್ನು ಜರೆಯಬೇಡಿರಿ. | وَاَمَّا السَّآئِلَ فَلَا تَنْهَرْ ﴿۱۰﴾ |
| 11. ಮತ್ತು ನಿಮ್ಮ ಪ್ರಭುವಿನ ಅನುಗ್ರಹವನ್ನು ಪ್ರಕಟಪಡಿಸಿರಿ. | وَاَمَّا بِنِعْمَةِ رَبِّكَ فَحَدِّثْ ﴿۱۱﴾ ع ۱۸ |






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. (ಸಂದೇಶವಾಹಕರೇ) ನಾವು ನಿಮ್ಮ ಹೃದಯವನ್ನು ನಿಮಗಾಗಿ ತೆರೆಯಲಿಲ್ಲವೇ?[1]

أَلَمْ نَشْرَحْ لَكَ صَدْرَكَ ۝١

2-3. ನಿಮ್ಮ ಬೆನ್ನು ಮುರಿಯುತ್ತಿದ್ದ ಹೊರೆಯನ್ನು ನಿಮ್ಮ ಮೇಲಿಂದ ಇಳಿಸಿ ಬಿಡಲಿಲ್ಲವೇ?[2]

وَوَضَعْنَا عَنْكَ وِزْرَكَ ۝٢
الَّذِيْٓ أَنْقَضَ ظَهْرَكَ ۝٣

4. ಮತ್ತು ನಿಮಗಾಗಿ ನಿಮ್ಮ ಖ್ಯಾತಿಯ ಪ್ರಸ್ತಾಪವನ್ನು ಎತ್ತರಕ್ಕೇರಿಸಲಿಲ್ಲವೇ?

وَرَفَعْنَا لَكَ ذِكْرَكَ ۝٤

5. ವಾಸ್ತವದಲ್ಲಿ ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ-

فَإِنَّ مَعَ الْعُسْرِ يُسْرًا ۝٥

6. ಖಂಡಿತವಾಗಿಯೂ ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ.[3]

إِنَّ مَعَ الْعُسْرِ يُسْرًا ۝٦

---

1. ಹೃದಯ ತೆರೆಯುವುದು ಎಂಬ ಪದ ಪವಿತ್ರ ಕುರ್‌ಆನಿನಲ್ಲಿ ಯಾವ ಸಂದರ್ಭಗಳಲ್ಲೆಲ್ಲಾ ಬಂದಿದೆಯೋ ಅದನ್ನು ಗಮನದಲ್ಲಿರಿಸಿದರೆ ಇದಕ್ಕೆ ಎರಡು ಅರ್ಥಗಳಿವೆ ಎಂದು ತಿಳಿದು ಬರುತ್ತದೆ. 1) ಒಬ್ಬ ವ್ಯಕ್ತಿ ಎಲ್ಲಾ ಬಗೆಯ ಮಾನಸಿಕ ಗೊಂದಲ ಮತ್ತು ತುಮುಲಗಳಿಂದ ಮುಕ್ತವಾಗಿ ಇಸ್ಲಾಮಿನ ಮಾರ್ಗವೇ ಸತ್ಯ ಎಂಬ ಬಗ್ಗೆ ಪೂರ್ಣ ಸಂತೃಪ್ತನಾಗುವುದು. 2) ಒಬ್ಬ ವ್ಯಕ್ತಿಯ ಧೈರ್ಯ ವರ್ಧಿಸುವುದು. ಯಾವುದೇ ಮಹತ್ತರ ಅಭಿಯಾನ ನಡೆಸಲಿಕ್ಕೂ ಅತ್ಯಂತ ಕಠಿಣತಮವಾದ ಕೆಲಸವನ್ನು ಮಾಡಲಿಕ್ಕೂ ಹಿಂಜರಿಯದಿರುವುದು. ಪ್ರವಾದಿತ್ವದ ಉನ್ನತ ಕರ್ತವ್ಯಗಳನ್ನು ವಹಿಸಿಕೊಳ್ಳುವ ಸ್ಥೈರ್ಯ ಅವರಲ್ಲಿ ಬೆಳೆಯುವುದು.
2. ಅರ್ಥಾತ್- ತಮ್ಮ ಸಮುದಾಯದ ಅಜ್ಞಾನ ಮತ್ತು ದುರಾಚಾರಗಳನ್ನು ಕಂಡು ಅವರ ಸಂವೇದನಾ ಶೀಲ ಸ್ವಭಾವದ ಮೇಲೆ ಬೀಳುತ್ತಿದ್ದ ದುಃಖ, ಚಿಂತೆ ಮತ್ತು ಕಳವಳದ ಹೊರೆ- ಅವರು ಈ ಬಗ್ಗೆ ಕೊರಗುತ್ತಿದ್ದರು. ಕೆಡುಕನ್ನು ದೂರೀಕರಿಸುವ ಯಾವುದೇ ವಿಧಾನ ಅವರಿಗೆ ಕಂಡು ಬರುತ್ತಿರಲಿಲ್ಲ. ಈ ಚಿಂತೆ ಅವರ ಬೆನ್ನ ಮೇಲಿನ ದೊಡ್ಡ ಹೊರೆಯಾಗಿ ಪರಿಣಮಿಸಿತು. ಅಲ್ಲಾಹನು ಸನ್ಮಾರ್ಗದ ವಿಧಾನ ತೋರುವ ಮೂಲಕ ಅವರ ಮೇಲಿನಿಂದ ಈ ದುಃಸ್ಸಹವಾದ ಹೊರೆಯನ್ನು ಇಳಿಸಿದನು. ಅವರ ಮನಸ್ಸಿನ ಭಾರವನ್ನು ಹಗುರಗೊಳಿಸಿದನು. ಅರಬ್ ಜಗತ್ತಿನಲ್ಲಿ ಮಾತ್ರವಲ್ಲ ಅದರ ಹೊರಗೂ ಲೋಕದಾದ್ಯಂತ ಜನರು ತಲ್ಲೀನರಾಗಿರುವ ಕೆಡುಕುಗಳಿಂದ ಅವರನ್ನು ವಿಮೋಚಿಸಲು ಇಸ್ಲಾಮಿನಿಂದ ಸಾಧ್ಯವಿದೆ ಎಂದು ಅನಂತರ ಅವರಲ್ಲಿ ಪರಿಪೂರ್ಣ ಸಮಾಧಾನ ಮೂಡಿತು.
3. ಇದನ್ನು ಎರಡು ಬಾರಿ ಪುನರಾವರ್ತಿಸಲಾಗಿದೆ. ಯಾವ ಕಠಿಣ ಪರಿಸ್ಥಿತಿಗಳ ಮೂಲಕ ತಾವು ಸಾಗುತ್ತಿದ್ದೀರೋ ಅದು ಹೆಚ್ಚು ಕಾಲ ಉಳಿಯಲಾರದು. ಅದರ ನಂತರ ಸದ್ಯದಲ್ಲೇ ಒಳ್ಳೆಯ ಪರಿಸ್ಥಿತಿ ಎದುರಾಗಲಿದೆ ಎಂದು ಪ್ರವಾದಿವರ್ಯರಿಗೆ(ಸ) ಸಾಂತ್ವನ ನೀಡುವುದು ಇದರ ಉದ್ದೇಶವಾಗಿದೆ.

7. ಆದುದರಿಂದ ನೀವು ಬಿಡುವು ಸಿಕ್ಕಿದಾಗ ದಾಸ್ಯ-ಆರಾಧನೆಯ ಪರಿಶ್ರಮದಲ್ಲಿ ತೊಡಗಿ ಬಿಡಿರಿ. فَإِذَا فَرَغْتَ فَانْصَبْ ۝٧

8. ಮತ್ತು ನಿಮ್ಮ ಪ್ರಭುವಿನ ಕಡೆಗೇ ವಾಲಿಕೊಂಡಿರಿ.[4] وَإِلَىٰ رَبِّكَ فَارْغَبْ ۝٨

---

4. ಅರ್ಥಾತ್- ಯಾವುದೇ ಚಟುವಟಿಕೆಗಳಿಲ್ಲದಾಗ ತಮ್ಮ ಬಿಡುವಿನ ವೇಳೆಯನ್ನು ಪ್ರಭುವಿನ ಆರಾಧನೆ, ಉಪಾಸನೆ ಮತ್ತು ಶ್ರಮದಲ್ಲಿ ಕಳೆಯಿರಿ. ಎಲ್ಲೆಡೆಯಿಂದ ಗಮನವನ್ನು ಸರಿಸಿ ತಮ್ಮ ಪ್ರಭುವಿನೆಡೆಗೆ ಏಕಾಗ್ರಚಿತ್ತದಿಂದ ತಿರುಗಿರಿ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಅಂಜೂರ ಮತ್ತು ಇಪ್ಪೆಯಾಣೆ-[1]

وَالتِّيۡنِ وَالزَّيۡتُوۡنِ ۝١

2. ಸೀನಾಯ್ ಪರ್ವತದಾಣೆ-

وَطُوۡرِ سِيۡنِيۡنَ ۝٢

3. ಮತ್ತು ಈ ಶಾಂತಿಪೂರ್ಣ ನಗರ(ಮಕ್ಕಾ) ದಾಣೆ-

وَهٰذَا الۡبَلَدِ الۡاَمِيۡنِ ۝٣

4. ನಾವು ಮಾನವನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ.

لَقَدۡ خَلَقۡنَا الۡاِنۡسَانَ فِىۡۤ اَحۡسَنِ تَقۡوِيۡمٍ ۝٤

5. ತರುವಾಯ ನಾವು ಅವನನ್ನು ಪಲ್ಲಟಗೊಳಿಸಿ, ನೀಚರಲ್ಲಿ ಅತ್ಯಂತ ನೀಚನಾಗಿ ಮಾಡಿದೆವು-

ثُمَّ رَدَدۡنٰهُ اَسۡفَلَ سٰفِلِيۡنَ ۝٥

6. ಆದರೆ, ವಿಶ್ವಾಸವಿರಿಸಿಕೊಂಡ ಮತ್ತು ಸತ್ಕರ್ಮವೆಸಗುತ್ತಿದ್ದವರ ಹೊರತು- ಅವರಿಗೆ ಎಂದೂ ಮುಗಿಯದಂತಹ ಸತ್ಫಲವಿದೆ.

اِلَّا الَّذِيۡنَ اٰمَنُوۡا وَعَمِلُوا الصّٰلِحٰتِ فَلَهُمۡ اَجۡرٌ غَيۡرُ مَمۡنُوۡنٍ ۝٦

7. (ಸಂದೇಶವಾಹಕರೇ) ಇದರ ನಂತರ ಇನ್ನಾರು ತಾನೇ ಪುರಸ್ಕಾರ ಮತ್ತು ಶಿಕ್ಷೆಯ ವಿಷಯದಲ್ಲಿ ನಿಮ್ಮನ್ನು ಸುಳ್ಳಾಗಿಸಬಲ್ಲರು?

فَمَا يُكَذِّبُكَ بَعۡدُ بِالدِّيۡنِ ۝٧

8. ಅಲ್ಲಾಹನು ಎಲ್ಲ ಅಧಿಪತಿಗಳಿಗಿಂತ ಮಹಾ ಅಧಿಪತಿಯಲ್ಲವೇ?[2]

اَلَيۡسَ اللّٰهُ بِاَحۡكَمِ الۡحٰكِمِيۡنَ ۝٨

ع

1. ಅರ್ಥಾತ್- ಹೆಚ್ಚಿನ ಸಂಖ್ಯೆಯ ಪ್ರವಾದಿಗಳ ಜನ್ಮಸ್ಥಳವಾಗಿರುವ ಮತ್ತು ಈ ಫಲಗಳು ಹೆಚ್ಚಾಗಿ ಬೆಳೆಯುವ (ಸಿರಿಯಾ ಮತ್ತು ಫೆಲೆಸ್ತೀನ್) ಪ್ರದೇಶಗಳು.

2. ಅರ್ಥಾತ್- ಲೋಕದ ಸಣ್ಣ ಸಣ್ಣ ಆಡಳಿತಗಾರರಿಂದಲೂ ನೀವು ಬಯಸುವುದು ಮತ್ತು ನಿರೀಕ್ಷಿಸುವುದು- ಅವರು ನ್ಯಾಯಪಾಲಿಸಬೇಕು, ಅಪರಾಧಿಗಳನ್ನು ದಂಡಿಸಬೇಕು ಮತ್ತು ಸತ್ಕಾರ್ಯಗಳನ್ನು ಮಾಡುವವರಿಗೆ ಪ್ರತಿಫಲ ಮತ್ತು ಅನುಗ್ರಹಗಳನ್ನು ನೀಡಬೇಕು ಎಂದಾಗಿದೆ. ಹಾಗಿರುವಾಗ ಅಲ್ಲಾಹನಿಂದ ನೀವು ಮತ್ತೇನನ್ನು ಬಯಸುತ್ತೀರಿ? ಎಲ್ಲ ಅಧಿಪತಿಗಳಿಗಿಂತಲೂ ಮಿಗಿಲಾದ ಅಧಿಪತಿಯಾದ ಅವನು ನ್ಯಾಯಪಾಲಿಸಲಾರ ಎಂದು ನೀವು ಭಾವಿಸಿದ್ದೀರಾ? ಒಳಿತು-ಕೆಡುಕುಗಳನ್ನು ಸರಿಸಮಗೊಳಿಸುವನೆಂದು ನಿರೀಕ್ಷಿಸುತ್ತೀರಾ? ದುಷ್ಕೃತ್ಯಗಳನ್ನೆಸಗುವವರು ಮತ್ತು ಸತ್ಕಾರ್ಯಗಳನ್ನು ಮಾಡುವವರಿಬ್ಬರೂ ಮೃತಪಟ್ಟು ಮಣ್ಣಾಗಿ ಬಿಡುವರು. ಅನಂತರ ದುಷ್ಕೃತ್ಯಗಳಿಗೆ ಶಿಕ್ಷೆಯಾಗಲಿ, ಸತ್ಕರ್ಮಗಳಿಗೆ ಪ್ರತಿಫಲವಾಗಲಿ ದೊರೆಯಲಾರದೆಂದು ನೀವು ಕಲ್ಪಿಸಿಕೊಂಡಿದ್ದೀರಾ?






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. (ಸಂದೇಶವಾಹಕರೇ) ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ.

اِقْرَاْ بِاسْمِ رَبِّكَ الَّذِیْ خَلَقَ ﴿١﴾

2. ಅವನು, ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು.

خَلَقَ الْاِنْسَانَ مِنْ عَلَقٍ ﴿٢﴾

3. ಓದಿರಿ, ಮತ್ತು ನಿಮ್ಮ ಪ್ರಭು ಮಹಾ ಉದಾರಿ-

اِقْرَاْ وَرَبُّكَ الْاَكْرَمُ ﴿٣﴾

4. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು-

الَّذِیْ عَلَّمَ بِالْقَلَمِ ﴿٤﴾

5. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯಪಾಲಿಸಿದನು.[1]

عَلَّمَ الْاِنْسَانَ مَا لَمْ يَعْلَمْ ﴿٥﴾

6. ಸರ್ವಥಾ ಅಲ್ಲ![2] ಮಾನವನು ವಿದ್ರೋಹವೆಸಗುತ್ತಾನೆ-

كَلَّاۤ اِنَّ الْاِنْسَانَ لَيَطْغٰۤى ﴿٦﴾

7. ತನ್ನನ್ನು ಸರ್ವಸ್ವತಂತ್ರನೆಂದು ಕಂಡು.

اَنْ رَّاٰهُ اسْتَغْنٰى ﴿٧﴾

8. (ವಸ್ತುತಃ ಅವನಿಗೆ) ನಿನ್ನ ಪ್ರಭುವಿನ ಕಡೆಗೇ ಖಂಡಿತ ಮರಳಬೇಕಾಗಿದೆ.

اِنَّ اِلٰى رَبِّكَ الرُّجْعٰى ﴿٨﴾

9-10. ಒಬ್ಬ ದಾಸನು ನಮಾಝ್ ಮಾಡುತ್ತಿರುವಾಗ ಅವನನ್ನು ತಡೆಯುವ ವ್ಯಕ್ತಿಯನ್ನು ನೀವು ಕಂಡಿರಾ?

اَرَءَيْتَ الَّذِیْ يَنْهٰى ﴿٩﴾
عَبْدًا اِذَا صَلّٰى ﴿١٠﴾

---

1. ಇದು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಪ್ರಪ್ರಥಮ ವಾಣಿಯಾಗಿದೆ.
2. ಅವರು ಪ್ರವಾದಿತ್ವದ ಪದವಿಗೆ ನಿಯೋಗಿಸಲ್ಪಟ್ಟ ನಂತರ ಹರಮ್‌ನಲ್ಲಿ ನಮಾಝ್ ಮಾಡಲಿಚ್ಛಿಸಿದಾಗ ಅಬೂಜಹಲ್ ಅವರನ್ನು ತಡೆಯ ಬಯಸಿದ ಸಂದರ್ಭದಲ್ಲಿ ಈ ಸೂಕ್ತಗಳು ಅವತೀರ್ಣಗೊಂಡವು.

| | |
|---|---|
| 11. ನಿಮ್ಮ ಅಭಿಪ್ರಾಯವೇನು? (ಆ ದಾಸನು) ಸನ್ಮಾರ್ಗದಲ್ಲಿದ್ದರೆ- | أَرَءَيْتَ إِن كَانَ عَلَى ٱلْهُدَىٰٓ ﴿١١﴾ |
| 12. ಅಥವಾ ಧರ್ಮನಿಷ್ಠೆಯ ಉಪದೇಶ ನೀಡುತ್ತಿದ್ದರೆ? | أَوْ أَمَرَ بِٱلتَّقْوَىٰ ﴿١٢﴾ |
| 13. (ತಡೆಯುವವನಾದ ಈ ವ್ಯಕ್ತಿಯು ಸತ್ಯವನ್ನು) ತಿರಸ್ಕರಿಸುವವನೂ ವಿಮುಖನಾಗುವವನೂ ಆಗಿದ್ದರೆ, ನಿಮ್ಮ ಅಭಿಪ್ರಾಯವೇನು? | أَرَءَيْتَ إِن كَذَّبَ وَتَوَلَّىٰٓ ﴿١٣﴾ |
| 14. ಅಲ್ಲಾಹನು ನೋಡುತ್ತಿದ್ದಾನೆಂಬುದನ್ನು ಅವನು ತಿಳಿದಿಲ್ಲವೇ? | أَلَمْ يَعْلَم بِأَنَّ ٱللَّهَ يَرَىٰ ﴿١٤﴾ |
| 15. ಖಂಡಿತ ಅಲ್ಲ! ಅವನು (ತನ್ನ ನಿಲುವನ್ನು) ತೊರೆಯದಿದ್ದರೆ ನಾವು ಅವನ ಜುಟ್ಟನ್ನು ಹಿಡಿದು ಎಳೆಯುವೆವು. | كَلَّا لَئِن لَّمْ يَنتَهِ لَنَسْفَعًۢا بِٱلنَّاصِيَةِ ﴿١٥﴾ |
| 16. ಸುಳ್ಳುಗಾರ ಹಾಗೂ ಮಹಾ ಅಪರಾಧಿ ಜುಟ್ಟನ್ನು. | نَاصِيَةٍ كَـٰذِبَةٍ خَاطِئَةٍ ﴿١٦﴾ |
| 17. ಅವನು ತನ್ನ ಬೆಂಬಲಿಗರ ಹಿಂಡನ್ನು ಕರೆದುಕೊಳ್ಳಲಿ- | فَلْيَدْعُ نَادِيَهُۥ ﴿١٧﴾ |
| 18. ನಾವೂ ಯಾತನೆ ನೀಡುವ ದೇವಚರರನ್ನು ಕರೆಸಿಕೊಳ್ಳುವೆವು- | سَنَدْعُ ٱلزَّبَانِيَةَ ﴿١٨﴾ |
| 19. ಖಂಡಿತ ಅಲ್ಲ! ಅವನ ಮಾತನ್ನು ಅನುಸರಿಸಬೇಡಿರಿ, ಸಾಷ್ಟಾಂಗ ವೆರಗಿರಿ ಮತ್ತು (ನಿಮ್ಮ ಪ್ರಭುವಿನ) ಸಾಮೀಪ್ಯ ಪಡೆಯಿರಿ. | كَلَّا لَا تُطِعْهُ وَٱسْجُدْ وَٱقْتَرِب ۩ ﴿١٩﴾ |







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ನಾವು ಇದನ್ನು (ಕುರ್‌ಆನನ್ನು) ಪ್ರತಿಷ್ಠಿತ ರಾತ್ರಿಯಲ್ಲಿ ಅವತೀರ್ಣಗೊಳಿಸಿರುವೆವು.

إِنَّآ أَنْزَلْنٰهُ فِيْ لَيْلَةِ الْقَدْرِ ۝١

2. ಪ್ರತಿಷ್ಠಿತ ರಾತ್ರಿ ಏನೆಂದು ನಿಮಗೇನು ಗೊತ್ತು?

وَمَآ أَدْرٰىكَ مَا لَيْلَةُ الْقَدْرِ ۝٢

3. ಪ್ರತಿಷ್ಠಿತ ರಾತ್ರಿಯು ಸಾವಿರ ಮಾಸಗಳಿಗಿಂತಲೂ ಹೆಚ್ಚು ಶ್ರೇಷ್ಠವಾಗಿದೆ.

لَيْلَةُ الْقَدْرِ خَيْرٌ مِّنْ أَلْفِ شَهْرٍ ۝٣

4. ದೇವಚರರು ಮತ್ತು 'ರೂಹ್' ಆ ರಾತ್ರಿ ತಮ್ಮ ಪ್ರಭುವಿನ ಅನುಜ್ಞೆಯಿಂದ ಪ್ರತಿಯೊಂದು ಆದೇಶದೊಂದಿಗೆ ಇಳಿಯುತ್ತಾರೆ.

تَنَزَّلُ الْمَلٰٓئِكَةُ وَالرُّوْحُ فِيْهَا بِإِذْنِ رَبِّهِمْ مِّنْ كُلِّ أَمْرٍ ۝٤

5. ಆ ರಾತ್ರಿಯು ಅರುಣೋದಯದ ವರೆಗೂ ಸಾದ್ಯಂತ ಮಂಗಲಮಯವಾಗಿದೆ.

سَلٰمٌ هِيَ حَتّٰى مَطْلَعِ الْفَجْرِ ۝٥







**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಗ್ರಂಥದವರು ಮತ್ತು ಬಹುದೇವಾರಾಧಕರ ಪೈಕಿ ಸತ್ಯನಿಷೇಧಿಗಳಾಗಿದ್ದವರು (ತಮ್ಮ ನಿಷೇಧ ನೀತಿಯಿಂದ) ಹಿಂಜರಿಯುವವರಾಗಿರಲಿಲ್ಲ- ಅವರ ಬಳಿಗೆ ಸುವ್ಯಕ್ತ ಪುರಾವೆಯು ಬಂದು ಬಿಡುವ ವರೆಗೆ-

لَمْ يَكُنِ الَّذِيْنَ كَفَرُوْا مِنْ اَهْلِ الْكِتٰبِ وَالْمُشْرِكِيْنَ مُنْفَكِّيْنَ حَتّٰى تَاْتِيَهُمُ الْبَيِّنَةُ ۝١

2-3. (ಅಂದರೆ) ಅಲ್ಲಾಹನ ವತಿಯಿಂದ, ನೇರವಾದ ಹಾಗೂ ಸರಿಯಾದ ಬರಹಗಳುಳ್ಳ[1] ಪಾವನ ಗ್ರಂಥಗಳನ್ನು ಓದಿ ಹೇಳುವ ಸಂದೇಶ ವಾಹಕನು[2] ಬರುವವರೆಗೆ.

رَسُوْلٌ مِّنَ اللّٰهِ يَتْلُوْا صُحُفًا مُّطَهَّرَةً ۝٢ فِيْهَا كُتُبٌ قَيِّمَةٌ ۝٣

4. ಈ ಹಿಂದೆ ಗ್ರಂಥ ನೀಡಲ್ಪಟ್ಟಿದ್ದವರಲ್ಲಿ ಒಡಕುಂಟಾದುದು ಅವರ ಬಳಿಗೆ (ಸನ್ಮಾರ್ಗದ) ಸುಸ್ಪಷ್ಟ ಆದೇಶ ಬಂದ ಬಳಿಕವಷ್ಟೇ.[3]

وَمَا تَفَرَّقَ الَّذِيْنَ اُوْتُوا الْكِتٰبَ اِلَّا مِنْۢ بَعْدِ مَا جَآءَتْهُمُ الْبَيِّنَةُ ۝٤

5. ಅವರಿಗೆ ನೀಡಲಾಗಿದ್ದ ಆದೇಶವು- ಅವರು ತಮ್ಮ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು, ಏಕನಿಷ್ಠೆಯಿಂದ ಅಲ್ಲಾಹನ ದಾಸ್ಯ ಮಾಡಬೇಕು, ನಮಾಝನ್ನು ಸಂಸ್ಥಾಪಿಸಬೇಕು ಮತ್ತು ಝಕಾತನ್ನು ನೀಡಬೇಕು - ಎಂಬುದರ ಹೊರತು ಬೇರೇನೂ ಆಗಿರಲಿಲ್ಲ. ಇದುವೇ ಅತ್ಯಂತ ಸರಿಯಾದ ಧರ್ಮ.

وَمَآ اُمِرُوْٓا اِلَّا لِيَعْبُدُوا اللّٰهَ مُخْلِصِيْنَ لَهُ الدِّيْنَ ۙ حُنَفَآءَ وَيُقِيْمُوا الصَّلٰوةَ وَيُؤْتُوا الزَّكٰوةَ وَذٰلِكَ دِيْنُ الْقَيِّمَةِ ۝٥

6. ಗ್ರಂಥದವರು ಹಾಗೂ ಬಹುದೇವಾರಾಧಕರ ಪೈಕಿ ಸತ್ಯನಿಷೇಧಿ

اِنَّ الَّذِيْنَ كَفَرُوْا مِنْ اَهْلِ الْكِتٰبِ

1. ಅರ್ಥಾತ್- ಯಾವುದೇ ರೀತಿಯ ಮಿಥ್ಯೆ, ಪಥಭ್ರಷ್ಟತೆ, ಅಂಧಕಾರ ಮತ್ತು ನೈತಿಕ ಮಾಲಿನ್ಯಗಳ ಸೇರ್ಪಡೆಯಿಲ್ಲದಂತಹ ಗ್ರಂಥಗಳು.
2. ಇಲ್ಲಿ ಸ್ವತಃ ಪ್ರವಾದಿವರ್ಯರನ್ನೇ(ಸ) ಸುವ್ಯಕ್ತವಾದ ಒಂದು ಪುರಾವೆಯೆನ್ನಲಾಗಿದೆ.
3. ಅರ್ಥಾತ್- ಇದಕ್ಕೆ ಮೊದಲು ಗ್ರಂಥ ಕೊಡಲ್ಪಟ್ಟವರು ಅನೇಕ ರೀತಿಯ ಪಥಭ್ರಷ್ಟತೆಯಲ್ಲಿ ಸಿಲುಕಿ ವಿವಿಧ ಪಂಗಡಗಳಾಗಿ ಒಡೆದು ಹೋಗಲು ಕಾರಣ, ಅವರ ಮಾರ್ಗದರ್ಶನಕ್ಕಾಗಿ ಅಲ್ಲಾಹನ ವತಿಯಿಂದ ಸುವ್ಯಕ್ತ ಪುರಾವೆಗಳನ್ನು ಕಳುಹಿಸಲು ಯಾವುದೇ ಲೋಪ ಸಂಭವಿಸಿರುವುದಲ್ಲ. ಅಲ್ಲಾಹನ ವತಿಯಿಂದ ಮಾರ್ಗದರ್ಶನಗಳು ಬಂದ ನಂತರವೇ ಅವರು ಈ ನಿಲುವನ್ನು ತಳೆದಿದ್ದರು. ಆದ್ದರಿಂದ ಅವರ ಪಥಭ್ರಷ್ಟತೆಗೆ ಅವರೇ ಹೊಣೆಗಾರರು.

وَالْمُشْرِكِيْنَ فِيْ نَارِ جَهَنَّمَ خٰلِدِيْنَ فِيْهَا ۗ اُولٰٓئِكَ هُمْ شَرُّ الْبَرِيَّةِ ۞

ಗಳಾಗಿರುವವರು[4] ಖಂಡಿತವಾಗಿಯೂ ನರಕಾಗ್ನಿಯಲ್ಲಿ ಬೀಳುವರು ಮತ್ತು ಸದಾಕಾಲ ಅದರಲ್ಲಿರುವರು. ಇವರು ಅತ್ಯಂತ ನಿಕೃಷ್ಟ ಸೃಷ್ಟಿಗಳು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ ۙ اُولٰٓئِكَ هُمْ خَيْرُ الْبَرِيَّةِ ۞

7. ಸತ್ಯವಿಶ್ವಾಸ ಸ್ವೀಕರಿಸಿದವರೂ ಸತ್ಕರ್ಮ ಮಾಡಿದವರೂ ಅತ್ಯುತ್ತಮ ಸೃಷ್ಟಿಗಳು.

جَزَآؤُهُمْ عِنْدَ رَبِّهِمْ جَنّٰتُ عَدْنٍ تَجْرِيْ مِنْ تَحْتِهَا الْاَنْهٰرُ خٰلِدِيْنَ فِيْهَآ اَبَدًا ۗ رَضِيَ اللّٰهُ عَنْهُمْ وَرَضُوْا عَنْهُ ۗ ذٰلِكَ لِمَنْ خَشِيَ رَبَّهٗ ۞

8. ಅವರ ಪ್ರತಿಫಲ ಅವರ ಪ್ರಭುವಿನ ಬಳಿ ಶಾಶ್ವತ ನಿವಾಸದ ಸ್ವರ್ಗೋದ್ಯಾನಗಳಾಗಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಅಲ್ಲಾಹ್ ಅವರಿಂದ ಸಂಪ್ರೀತನಾದನು ಮತ್ತು ಅವರು ಅಲ್ಲಾಹನಿಂದ ಸಂಪ್ರೀತರಾದರು. ತನ್ನ ಪ್ರಭುವನ್ನು ಭಯ ಪಟ್ಟವನಿಗೆ ಇದೆಲ್ಲವೂ ಇದೆ.

---

4. ಇಲ್ಲಿ ಸತ್ಯನಿಷೇಧವೆಂದರೆ ಪ್ರವಾದಿವರ್ಯರನ್ನು(ಸ) ನಿಷೇಧಿಸುವುದಾಗಿದೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಭೂಮಿಯು ತನ್ನ ಸಂಪೂರ್ಣ ಉಗ್ರತೆಯೊಂದಿಗೆ ಕುಲುಕಲ್ಪಡುವಾಗ,

إِذَا زُلْزِلَتِ الْأَرْضُ زِلْزَالَهَا ۝١

2. ಭೂಮಿಯು ತನ್ನೊಳಗಿನ ಸಕಲ ಹೊರೆಗಳನ್ನೂ ಹೊರ ಹಾಕಿಬಿಡುವಾಗ-

وَأَخْرَجَتِ الْأَرْضُ أَثْقَالَهَا ۝٢

3. ಮತ್ತು ಮನುಷ್ಯನು 'ಇದಕ್ಕೇನಾಗುತ್ತಿದೆ?' ಎನ್ನುವಾಗ,

وَقَالَ الْإِنْسَانُ مَا لَهَا ۝٣

4. ಅಂದು ಅದು ತನ್ನ (ಮೇಲೆ ಗತಿಸಿದ) ಸ್ಥಿತಿಗತಿಗಳನ್ನು ವಿವರಿಸುವುದು-

يَوْمَئِذٍ تُحَدِّثُ أَخْبَارَهَا ۝٤

5. ಏಕೆಂದರೆ ನಿನ್ನ ಪ್ರಭು ಅದಕ್ಕೆ (ಹಾಗೆ ಮಾಡಬೇಕೆಂದು) ಅಪ್ಪಣೆ ಕೊಟ್ಟಿರುವನು.

بِأَنَّ رَبَّكَ أَوْحَىٰ لَهَا ۝٥

6. ಅಂದು ಜನರು ವಿಭಿನ್ನ ಸ್ಥಿತಿಗಳಲ್ಲಿ ಮರಳುವರು. (ಇದು) ಅವರ ಕರ್ಮಗಳು ಅವರಿಗೆ ತೋರಿಸಲ್ಪಡಲಿಕ್ಕಾಗಿ,

يَوْمَئِذٍ يَصْدُرُ النَّاسُ أَشْتَاتًا لِيُرَوْا أَعْمَالَهُمْ ۝٦

7. ತರುವಾಯ ಅಣು ಗಾತ್ರದಷ್ಟು ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.

فَمَنْ يَعْمَلْ مِثْقَالَ ذَرَّةٍ خَيْرًا يَرَهُ ۝٧

8. ಮತ್ತು ಅಣು ಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.

وَمَنْ يَعْمَلْ مِثْقَالَ ذَرَّةٍ شَرًّا يَرَهُ ۝٨






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಬುಸುಗುಡುತ್ತ ಓಡುವವುಗಳ (ಕುದುರೆಗಳ) ಆಣೆ-

وَالۡعٰدِيٰتِ ضَبۡحًا ۙ﴿۱﴾

2. ಅವು (ತಮ್ಮ ಗೊರಸುಗಳಿಂದ) ಕಿಡಿಗಳನ್ನು ಹಾರಿಸುತ್ತವೆ-

فَالۡمُوۡرِيٰتِ قَدۡحًا ۙ﴿۲﴾

3. ಅನಂತರ ಪ್ರಾತಃಕಾಲದಲ್ಲಿ ಆಕ್ರಮಣ ನಡೆಸುತ್ತವೆ-

فَالۡمُغِيۡرٰتِ صُبۡحًا ۙ﴿۳﴾

4. ಆಗ ಅವು ಧೂಳೆಬ್ಬಿಸುತ್ತವೆ-

فَاَثَرۡنَ بِهٖ نَقۡعًا ۙ﴿۴﴾

5. ತರುವಾಯ ಇದೇ ಸ್ಥಿತಿಯಲ್ಲಿ ಯಾವುದಾದರೂ ಜನ ಸಮೂಹ ದೊಳಕ್ಕೆ ನುಗ್ಗಿ ಬಿಡುತ್ತವೆ-

فَوَسَطۡنَ بِهٖ جَمۡعًا ۙ﴿۵﴾

6. ವಾಸ್ತವದಲ್ಲಿ ಮಾನವನು ತನ್ನ ಪ್ರಭುವಿಗೆ ಬಹಳ ಕೃತಘ್ನ ನಾಗಿದ್ದಾನೆ.[1]

اِنَّ الۡاِنۡسَانَ لِرَبِّهٖ لَكَنُوۡدٌ ۚ﴿۶﴾

7. ಮತ್ತು ಇದಕ್ಕೆ ಸ್ವತಃ ಅವನೇ ಸಾಕ್ಷಿಯಾಗಿದ್ದಾನೆ.[2]

وَاِنَّهٗ عَلٰى ذٰلِكَ لَشَهِيۡدٌ ۚ﴿۷﴾

8. ಅವನು ಧನ ಕನಕಗಳ ಅತಿಯಾದ ಮೋಹದಲ್ಲಿ ಸಿಲುಕಿ ಕೊಂಡಿದ್ದಾನೆ.

وَاِنَّهٗ لِحُبِّ الۡخَيۡرِ لَشَدِيۡدٌ ؕ﴿۸﴾

---

1. ಅರ್ಥಾತ್- ಅಲ್ಲಾಹನು ಅವರಿಗೆ ದಯಪಾಲಿಸಿರುವ ಶಕ್ತಿ-ಸಾಮರ್ಥ್ಯಗಳನ್ನು ಶೋಷಣೆ ಮತ್ತು ದಬ್ಬಾಳಿಕೆಗಾಗಿ ಉಪಯೋಗಿಸುತ್ತಾನೆ.
2. ಅರ್ಥಾತ್- ಅವನ ಆತ್ಮಸಾಕ್ಷಿಯೇ ಇದಕ್ಕೆ ಸಾಕ್ಷಿ, ಅವನ ಕರ್ಮಗಳು ಇದಕ್ಕೆ ಸಾಕ್ಷಿ. ಅಲ್ಲದೆ ಸತ್ಯನಿಷೇಧಿಗಳಾದ ಅನೇಕ ವ್ಯಕ್ತಿಗಳು ನಾಲಗೆಯಿಂದಲೂ ತಮ್ಮ ಕೃತಘ್ನತೆಯನ್ನು ವ್ಯಕ್ತಪಡಿಸುತ್ತಾರೆ.

9-10. ಸಮಾಧಿಗಳೊಳಗೆ (ದಫನವಾಗಿ) ಇರುವ ಸಕಲವನ್ನೂ ಹೊರ ತೆಗೆಯಲಾಗುವ ಮತ್ತು ಹೃದಯಗಳೊಳಗೆ (ಅಡಗಿ) ಇರುವ ಎಲ್ಲವನ್ನೂ ಹೊರತೆಗೆದು ವಿಚಾರಣೆಗೊಳ ಪಡಿಸಲಾಗುವ ಆ ಸಂದರ್ಭವನ್ನು ಅವನು ಅರಿತಿಲ್ಲವೇ?[3]

أَفَلَا يَعْلَمُ إِذَا بُعْثِرَ مَا فِي الْقُبُورِ ۝٩ وَحُصِّلَ مَا فِي الصُّدُورِ ۝١٠

11. ಖಂಡಿತವಾಗಿಯೂ ಅಂದು ಅವರ ಪ್ರಭು ಅವರನ್ನು ಪೂರ್ಣವಾಗಿ ತಿಳಿದವನಾಗಿರುವನು.[4]

إِنَّ رَبَّهُمْ بِهِمْ يَوْمَئِذٍ لَّخَبِيرٌ ۝١١

---

3. ಅರ್ಥಾತ್- ಮನಸ್ಸಿನಲ್ಲಡಗಿದ್ದ ಇರಾದೆ ಮತ್ತು ಉದ್ದೇಶಗಳನ್ನೆಲ್ಲಾ ಬಹಿರಂಗಗೊಳಿಸಲಾಗುವುದು. ಅದರ ಬಗ್ಗೆ ಪರಿಶೋಧನೆ ನಡೆಸಿ ಒಳ್ಳೆಯದು ಮತ್ತು ಕೆಟ್ಟದ್ದನ್ನು ಆರಿಸಿ ಪ್ರತ್ಯೇಕ ಗೊಳಿಸಲಾಗುವುದು.
4. ಅರ್ಥಾತ್- ಯಾರು ಹೇಗಿದ್ದಾರೆ ಮತ್ತು ಯಾವ ಶಿಕ್ಷೆ ಅಥವಾ ಪ್ರತಿಫಲಕ್ಕೆ ಅರ್ಹರಾಗಿದ್ದಾರೆ ಎಂದು ಅವನಿಗೆ ಚೆನ್ನಾಗಿ ತಿಳಿದಿದೆ.







**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಮಹಾ ದುರಂತ!

اَلْقَارِعَةُ ۙ ①

2. ಏನದು ಮಹಾ ದುರಂತ?

مَا الْقَارِعَةُ ۚ ②

3. ಆ ಮಹಾ ದುರಂತವೇನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا الْقَارِعَةُ ۗ ③

4. ಅಂದು ಜನರು ಚದುರಿದ ಹಾತೆಗಳಂತಾಗುವರು-

يَوْمَ يَكُوْنُ النَّاسُ كَالْفَرَاشِ الْمَبْثُوْثِ ۙ ④

5. ಮತ್ತು ಪರ್ವತಗಳು ಬಣ್ಣ ಬಣ್ಣದ ಹಿಂಜಿದ ಉಣ್ಣೆಯಂತಾಗಿ ಬಿಡುವುದು.

وَتَكُوْنُ الْجِبَالُ كَالْعِهْنِ الْمَنْفُوْشِ ۗ ⑤

6. ತರುವಾಯ ಯಾರ ತೂಕದ ತಟ್ಟೆಗಳು ಭಾರವಾಗಿರುವುವೋ-[1]

فَاَمَّا مَنْ ثَقُلَتْ مَوَازِيْنُهٗ ۙ ⑥

7. ಅವನು ಮನೋಹರವಾದ ಸುಖಭೋಗದಲ್ಲಿರುವನು.

فَهُوَ فِيْ عِيْشَةٍ رَّاضِيَةٍ ۗ ⑦

8. ಮತ್ತು ಯಾರ ತೂಕದ ತಟ್ಟೆಗಳು ಹಗುರವಾಗಿರುವುವೋ-

وَاَمَّا مَنْ خَفَّتْ مَوَازِيْنُهٗ ۙ ⑧

9. ಅವನ ನಿವಾಸವು ಆಳವಾದ ಹೊಂಡವಾಗಿರುವುದು.

فَاُمُّهٗ هَاوِيَةٌ ۗ ⑨

10. ಅದೇನೆಂದು ನಿಮಗೇನು ಗೊತ್ತು?

وَمَآ اَدْرٰىكَ مَا هِيَهْ ۗ ⑩

11. ಧಗಧಗಿಸುವ ಅಗ್ನಿಯದು.

نَارٌ حَامِيَةٌ ࣖ ⑪

---

1. ಅರ್ಥಾತ್- ಒಳಿತಿನ ತಟ್ಟೆ ಭಾರವಾಗಿರುವವರು.






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಹೆಚ್ಚು ಹೆಚ್ಚಾಗಿ ಮತ್ತು ಇತರರಿಗಿಂತ ಅಧಿಕವಾಗಿ ಸಂಪಾದಿಸುವ ಚಿಂತೆಯು ನಿಮ್ಮನ್ನು ಅನಾಸ್ಥೆಗೆ ಒಳಪಡಿಸಿ ಬಿಟ್ಟಿದೆ-

اَلْهٰكُمُ التَّكَاثُرُ ۝١

2. ಕೊನೆಗೆ (ಇದೇ ಚಿಂತೆಯಲ್ಲಿ) ನೀವು ಗೋರಿಯ ಅಂಚನ್ನು ತಲುಪುತ್ತೀರಿ.

حَتّٰى زُرْتُمُ الْمَقَابِرَ ۝٢

3. ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ.-[1]

كَلَّا سَوْفَ تَعْلَمُوْنَ ۝٣

4. ಇನ್ನೂ (ಕೇಳಿರಿ) ಖಂಡಿತ ಅಲ್ಲ, ಸದ್ಯವೇ ನಿಮಗೆ ತಿಳಿಯಲಿದೆ.

ثُمَّ كَلَّا سَوْفَ تَعْلَمُوْنَ ۝٤

5. ಖಂಡಿತ ಅಲ್ಲ, ನೀವು ಖಚಿತ ಜ್ಞಾನದ ಆಧಾರದಲ್ಲಿ (ಈ ಪ್ರವೃತ್ತಿಯ ಪರಿಣಾಮವನ್ನು) ತಿಳಿದಿರುತ್ತಿದ್ದರೆ! (ನಿಮ್ಮ ವರ್ತನೆ ಹೀಗಿರುತ್ತಿರಲಿಲ್ಲ.)

كَلَّا لَوْ تَعْلَمُوْنَ عِلْمَ الْيَقِيْنِ ۝٥

6. ನೀವು ನರಕವನ್ನು ಕಂಡೇ ತೀರುವಿರಿ-

لَتَرَوُنَّ الْجَحِيْمَ ۝٦

7. ಇನ್ನೂ (ಕೇಳಿರಿ) ನೀವು ಸಂಪೂರ್ಣ ಅರಿವಿನೊಂದಿಗೆ ಅದನ್ನು ನೋಡುವಿರಿ-

ثُمَّ لَتَرَوُنَّهَا عَيْنَ الْيَقِيْنِ ۝٧

8. ಆ ಬಳಿಕ ಖಂಡಿತವಾಗಿಯೂ ಈ ಅನುಗ್ರಹಗಳ ಬಗ್ಗೆ ನೀವು ಪ್ರಶ್ನಿಸಲ್ಪಡುವಿರಿ.

ثُمَّ لَتُسْـَٔلُنَّ يَوْمَىِٕذٍ عَنِ النَّعِيْمِ ۝٨

---

1. ಸದ್ಯವೇ ಎಂದರೆ ಪರಲೋಕವೂ ಆಗಿರಬಹುದು ಅಥವಾ ಮರಣವೂ ಆಗಿರಬಹುದು. ಏಕೆಂದರೆ ಯಾವ ಚಟುವಟಿಕೆಗಳಲ್ಲಿ ನಾನು ಜೀವನ ಕಳೆದೆನೋ ಅದು ನನ್ನ ಪಾಲಿಗೆ ಅನುಗ್ರಹ ಮತ್ತು ಸಂತಸ-ಸೌಭಾಗ್ಯ ತರುವ ಸಾಧನಗಳಾಗಿದ್ದುವೋ ಅಥವಾ ಕೆಟ್ಟ ಪರಿಣಾಮ ಮತ್ತು ನಿಂದ್ಯತೆಗೆ ಹೇತುವಾಗಿದ್ದುವೋ ಎಂಬುದು ಮರಣ ಹೊಂದಿದ ತಕ್ಷಣ ಮಾನವನ ಮುಂದೆ ಅನಾವರಣಗೊಳ್ಳುವುದು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಕಾಲದಾಣೆ,[1]

وَالْعَصْرِ ①

2. ನಿಜವಾಗಿ ಮನುಷ್ಯನು ಮಹಾ ನಷ್ಟದಲ್ಲಿದ್ದಾನೆ-

اِنَّ الْاِنْسَانَ لَفِيْ خُسْرٍ ②

3. ಸತ್ಯವಿಶ್ವಾಸ ಸ್ವೀಕರಿಸಿದ, ಸತ್ಕರ್ಮ ಮಾಡುತ್ತಿದ್ದ ಮತ್ತು ಪರಸ್ಪರ ಸತ್ಯ ಹಾಗೂ ಸಹನೆಯನ್ನು ಉಪದೇಶಿಸುತ್ತಿದ್ದವರ ಹೊರತು.

اِلَّا الَّذِيْنَ اٰمَنُوْا وَعَمِلُوا الصّٰلِحٰتِ وَتَوَاصَوْا بِالْحَقِّ ۙ وَتَوَاصَوْا بِالصَّبْرِ ③

---

1. ಕಾಲವೆಂದರೆ ಗತಕಾಲ ಮತ್ತು ವರ್ತಮಾನ ಕಾಲಗಳೆರಡೂ ಆಗಿವೆ. ಇದರ ಆಣೆ ಹಾಕಿರುವುದರ ಅರ್ಥ ಮುಂದೆ ಪ್ರಸ್ತಾಪಿಸಲಾಗುತ್ತಿರುವ ವಿಷಯಗಳು ಸತ್ಯವಾದುದೆಂದು ಇತಿಹಾಸವೂ ಸಾಕ್ಷಿ ಹೇಳುತ್ತದೆ, ಅಂತೆಯೇ ವರ್ತಮಾನ ಕಾಲವೂ ಅದಕ್ಕೆ ಸಾಕ್ಷಿಯಾಗಿದೆ ಎಂದಾಗಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. (ಎದುರೆದುರೇ) ಜನರನ್ನು ಮೂದಲಿಸುವ ಮತ್ತು (ಬೆನ್ನ ಹಿಂದೆ) ದೂಷಿಸುವ ಅಭ್ಯಾಸವಿರುವ ಪ್ರತಿಯೊಬ್ಬನಿಗೂ ವಿನಾಶವಿದೆ-

وَيْلٌ لِّكُلِّ هُمَزَةٍ لُّمَزَةِ ۙ﴿١﴾

2. ಅವನು ಸಂಪತ್ತನ್ನು ಸಂಗ್ರಹಿಸಿದನು ಮತ್ತು ಅದನ್ನು ಎಣಿಸಿ ಎಣಿಸಿ ಇಟ್ಟನು-

الَّذِىْ جَمَعَ مَالًا وَّعَدَّدَهٗ ۙ﴿٢﴾

3. ಅವನ ಸಂಪತ್ತು ಶಾಶ್ವತವಾಗಿ ಅವನ ಬಳಿಯಲ್ಲೇ ಇರುವುದೆಂದು ಅವನು ಭಾವಿಸುತ್ತಾನೆ.[1]

يَحْسَبُ اَنَّ مَالَهٗۤ اَخْلَدَهٗ ۚ﴿٣﴾

4. ಖಂಡಿತ ಇಲ್ಲ. ಅವನು ಪುಡಿಗುಟ್ಟಿ ಬಿಡುವ ಸ್ಥಳಕ್ಕೆ ಎಸೆಯಲ್ಪಡುವನು.

كَلَّا لَيُنْۢبَذَنَّ فِى الْحُطَمَةِ ۖ﴿٤﴾

5. ಪುಡಿಗುಟ್ಟಿ ಬಿಡುವ ಆ ಸ್ಥಳ ಏನೆಂದು ನಿಮಗೇನು ಗೊತ್ತು?

وَمَاۤ اَدْرٰىكَ مَا الْحُطَمَةُ ؕ﴿٥﴾

6. ಚೆನ್ನಾಗಿ ಧಗಧಗಿಸಲ್ಪಟ್ಟಿರುವ ಅಲ್ಲಾಹನ ಬೆಂಕಿ-

نَارُ اللّٰهِ الْمُوْقَدَةُ ۙ﴿٦﴾

7. ಅದು ಹೃದಯಗಳ ವರೆಗೂ ತಲಪುವುದು.

الَّتِىْ تَطَّلِعُ عَلَى الْاَفْـِٕدَةِ ؕ﴿٧﴾

1. “ಅವನ ಸಂಪತ್ತು ಅವನಿಗೆ ಅಮರ ಜೀವನವನ್ನು ದಯಪಾಲಿಸುತ್ತದೆ ಎಂದು ಅವನು ಭಾವಿಸಿರುವಂತಿದೆ. ಒಂದು ದಿನ ಅವನು ಇದೆಲ್ಲವನ್ನೂ ಬಿಟ್ಟು ಬರಿಗೈಯಲ್ಲಿ ಲೋಕದಿಂದ ನಿರ್ಗಮಿಸಬೇಕಾಗುವುದು ಎಂಬ ಭಾವನೆಯೂ ಅವನಲ್ಲೆಂದೂ ಮೂಡುವುದಿಲ್ಲ” ಎಂಬುದು ಇದರ ಇನ್ನೊಂದು ಅರ್ಥ.

| | |
|---|---|
| 8. ಅದನ್ನು ಅವರ ಮೇಲೆ ಆವರಿಸಿ ಮುಚ್ಚಿ ಬಿಡಲಾಗುವುದು- | إِنَّهَا عَلَيْهِم مُّؤْصَدَةٌ ﴿٨﴾ |
| 9. ಅವರು ಎತ್ತರವಾದ ಸ್ತಂಭಗಳಲ್ಲಿ (ಸಿಲುಕಿ ಕೊಂಡಿರುವ ಸ್ಥಿತಿಯಲ್ಲಿ).[2] | فِي عَمَدٍ مُّمَدَّدَةٍ ﴿٩﴾ |

2. 'ಫಿ ಅಮದಿಮ್ಮುಮದ್ದದಃ' ಎಂಬುದಕ್ಕೆ ಅನೇಕ ಅರ್ಥಗಳಿರಲು ಸಾಧ್ಯವಿದೆ. ಮೊದಲನೆಯದಾಗಿ ನರಕದ ಬಾಗಿಲುಗಳನ್ನು ಭದ್ರಪಡಿಸಿ ಅದರಲ್ಲಿ ಎತ್ತರವಾದ ಕಂಬಗಳನ್ನು ನಾಟಿ ಬಿಡಲಾಗುವುದು. ಎರಡನೆಯದಾಗಿ ಈ ಅಪರಾಧಿಗಳನ್ನು ಎತ್ತರವಾದ ಕಂಬಗಳಿಗೆ ಕಟ್ಟಿ ಬಿಡಲಾಗುವುದು. ಮೂರನೆಯದಾಗಿ ಅದರ ಅಗ್ನಿಜ್ವಾಲೆಗಳು ಉನ್ನತ ಕಂಬಗಳಂತೆ ಮೇಲೇಳುತ್ತಿರುವುವು.







(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ನಿಮ್ಮ ಪ್ರಭು ಆನೆಯವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?

أَلَمْ تَرَ كَيْفَ فَعَلَ رَبُّكَ بِأَصْحٰبِ الْفِيْلِ ۝١

2. ಅವನು ಅವರ ಯೋಜನೆಯನ್ನು ನಿರರ್ಥಕಗೊಳಿಸಿ ಬಿಡಲಿಲ್ಲವೇ?

أَلَمْ يَجْعَلْ كَيْدَهُمْ فِيْ تَضْلِيْلٍ ۝٢

3. ಮತ್ತು ಅವನು ಅವರ ಮೇಲೆ ಪಕ್ಷಿಗಳ ಗುಂಪುಗಳನ್ನೇ ಕಳುಹಿಸಿಬಿಟ್ಟನು-

وَّأَرْسَلَ عَلَيْهِمْ طَيْرًا أَبَابِيْلَ ۝٣

4. ಅವು ಅವರ ಮೇಲೆ ಸುಟ್ಟ ಮಣ್ಣಿನ ಕಲ್ಲುಗಳನ್ನು ಎಸೆಯುತ್ತಿದ್ದುವು-

تَرْمِيْهِمْ بِحِجَارَةٍ مِّنْ سِجِّيْلٍ ۝٤

5. ತರುವಾಯ ಅವನು ಅವರನ್ನು (ಪ್ರಾಣಿಗಳು) ತಿಂದು ಹಾಕಿದ ಹೊಟ್ಟಿನಂತೆ ಮಾಡಿಬಿಟ್ಟನು.[1]

فَجَعَلَهُمْ كَعَصْفٍ مَّأْكُوْلٍ ۝٥

---

1. ಇದು ಪ್ರವಾದಿವರ್ಯರ(ಸ) ಜನನಕ್ಕೆ ಐವತ್ತು ದಿನ ಮೊದಲು ಸಂಭವಿಸಿದ್ದ ಘಟನೆಯ ಪ್ರಸ್ತಾಪ. ಯಮನ್‌ನ, ಅಬಿಸೀನಿಯಾ ಮೂಲದ ಕ್ರೈಸ್ತ ರಾಜನಾದ ಅಬ್ರಹಾ, ಕಅಬಾ ಭವನವನ್ನು ಕೆಡವಿ ಹಾಕುವ ಉದ್ದೇಶದಿಂದ ಅರ್ವತ್ತು ಸಾವಿರ ಸೈನಿಕರೊಂದಿಗೆ ಮಕ್ಕಾದ ಮೇಲೆ ದಂಡೆತ್ತಿ ಬಂದಿದ್ದನು. ಸೇನೆಯಲ್ಲಿ ಅನೇಕ ಆನೆಗಳೂ ಇದ್ದವು. ಅವನು ಮುಝ್ದಲಿಫಾ ಮತ್ತು ಮಿನಾದ ನಡುವೆ ತಲಪಿದಾಗ ಇದ್ದಕ್ಕಿದ್ದಂತೆ ಸಮುದ್ರದ ಕಡೆಯಿಂದ ಪಕ್ಷಿಗಳ ಅನೇಕ ತಂಡಗಳು ತಮ್ಮ ಕೊಕ್ಕು ಮತ್ತು ಕಾಲುಗಳಲ್ಲಿ ಹರಳುಕಲ್ಲುಗಳನ್ನು ಹಿಡಿದುಕೊಂಡು ಬಂದವು. ಅವು ಸೇನೆಯ ಮೇಲೆ ಕಲ್ಲಿನ ಮಳೆಗರೆದವು. ಹರಳುಗಳು ಯಾರ ಮೇಲೆ ಬೀಳುತ್ತಿತ್ತೋ ಅವರ ಮಾಂಸ ಕೊಳೆತು ಮೈಯಿಂದ ಕೆಳಗೆ ಜಾರುತ್ತಿತ್ತು. ಹೀಗೆ ಸಮಸ್ತ ಸೇನೆ ನಾಶವಾಯಿತು. ಅರೇಬಿಯಾದಲ್ಲಿ ಈ ಘಟನೆ ಅತ್ಯಂತ ಪ್ರಸಿದ್ಧವಾಯಿತು. ಈ ಸೂಕ್ತಗಳು ಅವತೀರ್ಣಗೊಳ್ಳುವಾಗ ಘಟನೆಯನ್ನು ಕಣ್ಣಾರೆ ಕಂಡಂತಹ ಸಾವಿರಾರು ವ್ಯಕ್ತಿಗಳು ಮಕ್ಕಾದಲ್ಲಿದ್ದರು. ಅಲ್ಲಾಹನ ಮಹಿಮೆಯಿಂದಾಗಿಯೇ ಆನೆಯವರ ನಾಶ ಸಂಭವಿಸಿತೆಂದು ಸಮಸ್ತ ಅರಬ್ ನಿವಾಸಿಗಳು ನಂಬಿದ್ದರು.



## 106. ಕುರೈಶ್



(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಕುರೈಶರು ಪರಿಚಿತರಾದುದಕ್ಕಾಗಿ-

لِاِيۡلٰفِ قُرَيۡشٍ ۙ﴿۱﴾

2. (ಅಂದರೆ) ಚಳಿಗಾಲ ಮತ್ತು ಬೇಸಗೆಯ ಪ್ರಯಾಣಗಳಿಗೆ ಪರಿಚಿತರಾದುದಕ್ಕಾಗಿ.[1]

اٖلٰفِهِمۡ رِحۡلَةَ الشِّتَآءِ وَالصَّيۡفِ‌ۚ﴿۲﴾

3. ಅವರು ಈ ಭವನದ[2] ಪ್ರಭುವಿನ ದಾಸ್ಯ-ಆರಾಧನೆ ಮಾಡಲಿ-

فَلۡيَعۡبُدُوۡا رَبَّ هٰذَا الۡبَيۡتِۙ‏ ﴿۳﴾

4. ಅವನು ಅವರನ್ನು ಹಸಿವೆಯಿಂದ ಪಾರುಗೊಳಿಸಿ ಅವರಿಗೆ ಉಣಿಸಿದನು ಮತ್ತು ಭಯದಿಂದ ರಕ್ಷಿಸಿ ಶಾಂತಿ ಪ್ರದಾನ ಮಾಡಿದನು.[3]

الَّذِىۡۤ اَطۡعَمَهُمۡ مِّنۡ جُوۡعٍ ۙ وَّاٰمَنَهُمۡ مِّنۡ خَوۡفٍ﴿۴﴾

---

1. ಚಳಿಗಾಲ ಮತ್ತು ಬೇಸಿಗೆಯ ಯಾತ್ರೆಗಳೆಂದರೆ ವ್ಯಾಪಾರಾರ್ಥವಾಗಿ ಮಾಡುವ ಪ್ರಯಾಣಗಳು. ಬೇಸಿಗೆಯಲ್ಲಿ ಕುರೈಶರು ಸಿರಿಯಾ ಮತ್ತು ಫೆಲೆಸ್ತೀನ್‌ನ ಕಡೆಗೆ ಹಾಗೂ ಚಳಿಗಾಲದಲ್ಲಿ ಅರೇಬಿಯಾದ ದಕ್ಷಿಣದ ಕಡೆಗೆ ವ್ಯಾಪಾರಾರ್ಥ ಹೋಗುತ್ತಿದ್ದರು. ಈ ಪ್ರಯಾಣಗಳಿಂದಾಗಿಯೇ ಅವರು ಧನಿಕರಾಗಿ ಮಾರ್ಪಟ್ಟಿದ್ದರು.
2. ಈ ಭವನವೆಂದರೆ ಕಅಬಾ ಭವನವಾಗಿದೆ.
3. ಮಕ್ಕಾ ಪಟ್ಟಣವು 'ಹರಮ್' (ನಿಷೇಧಿತ ಪ್ರದೇಶ) ಆಗಿದ್ದುದರಿಂದ ಅರೇಬಿಯಾದ ಯಾವುದೇ ಗೋತ್ರ ಅವರ ಮೇಲೆ ಆಕ್ರಮಣ ನಡೆಸೀತೆಂಬ ಭಯ ಅವರಿಗಿರಲಿಲ್ಲ. ಕುರೈಶರು 'ಕಅಬಾ' ಭವನದ ಪರಿಚಾರಕರಾಗಿದ್ದುದರಿಂದ ಅವರ ವ್ಯಾಪಾರಿ ತಂಡ ಅರಬ್‌ನ ಸಮಸ್ತ ಪ್ರದೇಶದಿಂದ ನಿರ್ಭೀತಿಯಿಂದ ಸಾಗುತ್ತಿತ್ತು. ಯಾರೂ ಅವರನ್ನು ಕೆಣಕುತ್ತಿರಲಿಲ್ಲ.






(ಅವತೀರ್ಣ - ಮಕ್ಕಾದಲ್ಲಿ)

بِسْمِ اللّٰهِ الرَّحْمٰنِ الرَّحِيْمِ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

اَرَءَيْتَ الَّذِيْ يُكَذِّبُ بِالدِّيْنِ ﴿١﴾

1. ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವನನ್ನು?

فَذٰلِكَ الَّذِيْ يَدُعُّ الْيَتِيْمَ ﴿٢﴾

2. ಅವನೇ ತಾನೆ, ಅನಾಥನನ್ನು ದೂರ ದಬ್ಬುವವನು-

وَلَا يَحُضُّ عَلٰى طَعَامِ الْمِسْكِيْنِ ﴿٣﴾

3. ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು![1]

فَوَيْلٌ لِّلْمُصَلِّيْنَ ﴿٤﴾

4. ಮತ್ತು ವಿನಾಶ ಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ-

الَّذِيْنَ هُمْ عَنْ صَلَاتِهِمْ سَاهُوْنَ ﴿٥﴾

5. ಅವರು ತಮ್ಮ ನಮಾಝಿನ ಬಗ್ಗೆ ಅನಾಸ್ಥೆ ತೋರುತ್ತಾರೆ,[2]

الَّذِيْنَ هُمْ يُرَآءُوْنَ ﴿٦﴾

6. ಅವರು ತೋರಿಕೆಯ ಕೆಲಸ ಮಾಡುತ್ತಾರೆ-

وَيَمْنَعُوْنَ الْمَاعُوْنَ ﴿٧﴾

7. ಮತ್ತು (ಜನರಿಗೆ) ಸಾಮಾನ್ಯ ಅವಶ್ಯಕ ವಸ್ತುಗಳನ್ನು ಕೊಡುವುದಕ್ಕೂ ಹಿಂಜರಿಯುತ್ತಾರೆ.

---

1. ಅರ್ಥಾತ್- ಸ್ವತಃ ಈ ಕೆಲಸಕ್ಕೆ ಮುಂದಾಗುವುದಿಲ್ಲ. ದರಿದ್ರರಿಗೆ ಉಣಬಡಿಸುವಂತೆ ಅವನು ತನ್ನ ಮನೆಯವರಿಗೂ ಹೇಳುವುದಿಲ್ಲ. ಹಾಗೆಯೇ ಜನರನ್ನೂ ದರಿದ್ರರಿಗೆ ನೆರವಾಗುವಂತೆ ಪ್ರೇರೇಪಿಸುವುದಿಲ್ಲ.
2. ಅರ್ಥಾತ್- ನಮಾಝ್‌ನಲ್ಲಿ ಮರೆಯುವುದಲ್ಲ ಬದಲಾಗಿ ನಮಾಝ್‌ನ ಬಗ್ಗೆ ಅಶ್ರದ್ಧನಾಗುವುದು.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. (ಸಂದೇಶವಾಹಕರೇ) ನಾವು ನಿಮಗೆ ಕೌಸರ್ ದಯ ಪಾಲಿಸಿರುತ್ತೇವೆ.[1]

اِنَّاۤ اَعۡطَيۡنٰكَ الۡكَوۡثَرَؕ ۝١

2. ನೀವಿನ್ನು ನಿಮ್ಮ ಪ್ರಭುವಿಗಾಗಿಯೇ ನಮಾಝ್ ನಿರ್ವಹಿಸಿರಿ ಮತ್ತು ಬಲಿದಾನ ನೀಡಿರಿ.

فَصَلِّ لِرَبِّكَ وَانۡحَرۡؕ ۝٢

3. ಖಂಡಿತವಾಗಿಯೂ ನಿಮ್ಮ ಶತ್ರುವೇ ಮೂಲ ಕಡಿಯಲ್ಪಟ್ಟವ ನಾಗಿರುವನು.[2]

اِنَّ شَانِئَكَ هُوَ الۡاَبۡتَرُ ۝٣

---

1. ಕೌಸರ್ ಎಂದರೆ ಇಹ-ಪರಗಳ ಅಸಂಖ್ಯ ಒಳಿತುಗಳಾಗಿವೆ. ಅದರಲ್ಲಿ ಹಶ್ರ್‌ನ ಮೈದಾನದ ಕೌಸರ್ ಸರೋವರ ಮತ್ತು ಸ್ವರ್ಗದ ಕೌಸರ್ ಕಾಲುವೆಯೂ ಸೇರಿದೆ.
2. ಸತ್ಯನಿಷೇಧಿಗಳು ಪ್ರವಾದಿವರ್ಯರನ್ನು(ಸ) ಅಬ್‌ತರ್ ಎನ್ನುತ್ತಿದ್ದರು. ಅವರು ಇದನ್ನು ಯಾವ ಅರ್ಥದಲ್ಲಿ ಬಳಸುತ್ತಿದ್ದರೆಂದರೆ ಪ್ರವಾದಿವರ್ಯರು(ಸ) ತಮ್ಮ ಜನಾಂಗದಿಂದ ಸಂಬಂಧ ಕಡಿದುಕೊಂಡಿದ್ದರು. ಅವರ ಗಂಡು ಸಂತತಿಯ ಪೈಕಿ ಯಾರೂ ಬದುಕುಳಿದಿರಲಿಲ್ಲ. ಆದ್ದರಿಂದ ಅವರು ಹೇಳ ಹೆಸರಿಲ್ಲದಂತಾಗಿ ಬಿಡುವರು ಎಂದು ಸತ್ಯನಿಷೇಧಿಗಳು ಭಾವಿಸಿದ್ದರು. ಅದಕ್ಕಾಗಿ ನಾಮಾವಶೇಷರಾಗುವವರು ತಾವಲ್ಲ ತಮ್ಮ ಶತ್ರುಗಳು ಎಂದು ಹೇಳಲಾಗಿದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ ٱللَّهِ ٱلرَّحۡمَٰنِ ٱلرَّحِيمِ

1. ಹೇಳಿ ಬಿಡಿರಿ! ಓ, ಸತ್ಯನಿಷೇಧಿಗಳೇ,[1] — قُلۡ يَٰٓأَيُّهَا ٱلۡكَٰفِرُونَ ١

2. ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ-[2] — لَآ أَعۡبُدُ مَا تَعۡبُدُونَ ٢

3. ಮತ್ತು ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ.[3] — وَلَآ أَنتُمۡ عَٰبِدُونَ مَآ أَعۡبُدُ ٣

4. ಮತ್ತು ನೀವು ಆರಾಧಿಸಿದವುಗಳ ಆರಾಧನೆಯನ್ನು ನಾನೂ ಮಾಡುವವನಲ್ಲ-[4] — وَلَآ أَنَا۠ عَابِدٞ مَّا عَبَدتُّمۡ ٤

5. ನಾನು ಆರಾಧಿಸುವವನನ್ನು ನೀವೂ ಆರಾಧಿಸುವವರಲ್ಲ. — وَلَآ أَنتُمۡ عَٰبِدُونَ مَآ أَعۡبُدُ ٥

6. ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ.[5] — لَكُمۡ دِينُكُمۡ وَلِيَ دِينِ ٦

---

1. ಅರ್ಥಾತ್- ತನ್ನ ಪ್ರವಾದಿತ್ವ ಮತ್ತು ನಾನು ತಂದಿರುವ ಬೋಧನೆಗಳನ್ನು ನಂಬಲು ನಿರಾಕರಿಸುವ ಜನರೇ!
2. ಸತ್ಯನಿಷೇಧಿಗಳು ಇತರ ಆರಾಧ್ಯರುಗಳ ಜತೆಗೆ ಅಲ್ಲಾಹನ ಆರಾಧನೆಯನ್ನೂ ಮಾಡುತ್ತಿದ್ದರು. ಆದರೆ ಬಹುದೇವಾರಾಧನೆ ಮಾಡುತ್ತಾ ಅಲ್ಲಾಹನ ಆರಾಧನೆ ಮಾಡುವುದು ಸುತರಾಂ ಆರಾಧನೆಯೆನಿಸಿಕೊಳ್ಳದು. ಆದ್ದರಿಂದ ಬಹುದೇವ ವಿಶ್ವಾಸಿಗಳ ಎಲ್ಲಾ ಆರಾಧ್ಯರುಗಳ ಆರಾಧನೆಯ ಬಗ್ಗೆ ನಿರಾಕರಣೆ ವ್ಯಕ್ತಪಡಿಸಲಾಗಿದೆ.
3. ಅರ್ಥಾತ್- ಯಾವ ಗುಣವಿಶೇಷತೆಗಳುಳ್ಳ ದೇವನನ್ನು ನಾನು ಆರಾಧಿಸುತ್ತೇನೋ ಆ ಗುಣ ವಿಶೇಷತೆಗಳುಳ್ಳ ದೇವನನ್ನು ನೀವು ಆರಾಧಿಸುವುದಿಲ್ಲ.
4. ಅರ್ಥಾತ್- ಯಾವ ಆರಾಧ್ಯರುಗಳನ್ನು ಇದಕ್ಕೆ ಮೊದಲು ನೀವು ಮತ್ತು ನಿಮ್ಮ ಪೂರ್ವಜರು ಆರಾಧನೆ ಮಾಡಿದ್ದಾರೋ ಅವುಗಳನ್ನು ನಾನೆಂದೂ ಆರಾಧಿಸಲಾರೆ.
5. ಅರ್ಥಾತ್- ಧರ್ಮದ ವಿಷಯದಲ್ಲಿ ನನಗೂ ನಿಮಗೂ ಯಾವುದೇ ಹೋಲಿಕೆಯಿಲ್ಲ. ನನ್ನ ಮಾರ್ಗವೇ ಬೇರೆ, ನಿಮ್ಮ ಮಾರ್ಗವೇ ಬೇರೆ.






(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. [1]ಅಲ್ಲಾಹನ ಸಹಾಯ ಬಂದು ಬಿಟ್ಟಾಗ ಮತ್ತು ವಿಜಯ ಪ್ರಾಪ್ತವಾದಾಗ-

اِذَا جَآءَ نَصْرُ اللّٰهِ وَالْفَتْحُ ۝١

2. ಮತ್ತು (ಸಂದೇಶವಾಹಕರೇ) ಜನರು ತಂಡೋಪತಂಡವಾಗಿ ಅಲ್ಲಾಹನ ಧರ್ಮದಲ್ಲಿ ಪ್ರವೇಶಿಸುತ್ತಿರುವುದನ್ನು ನೀವು ಕಂಡಾಗ-

وَرَاَيْتَ النَّاسَ يَدْخُلُوْنَ فِيْ دِيْنِ اللّٰهِ اَفْوَاجًا ۝٢

3. ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನ ಕೀರ್ತನೆ ಮಾಡಿರಿ ಮತ್ತು ಅವನೊಡನೆ ಕ್ಷಮೆ ಯಾಚಿಸಿರಿ.[2] ನಿಸ್ಸಂದೇಹವಾಗಿಯೂ ಅವನು ಅತ್ಯಧಿಕ ಪಶ್ಚಾತ್ತಾಪ ಸ್ವೀಕರಿಸುವವನಾಗಿರುತ್ತಾನೆ.

فَسَبِّحْ بِحَمْدِ رَبِّكَ وَاسْتَغْفِرْهُ ۚ اِنَّهٗ كَانَ تَوَّابًا ۝٣

---

1. ನಂಬಲರ್ಹ ವರದಿಗಳ ಆಧಾರದಲ್ಲಿ ಇದು ಕುರ್‌ಆನಿನ ಅತ್ಯಂತ ಕೊನೆಯ ಅಧ್ಯಾಯವಾಗಿದೆ. ಇದು ಪ್ರವಾದಿವರ್ಯರ(ಸ) ಮರಣಕ್ಕಿಂತ ಸುಮಾರು ಮೂರು ತಿಂಗಳು ಮೊದಲು ಅವತೀರ್ಣಗೊಂಡಿತ್ತು. ಅನಂತರ ಕೆಲವು ಸೂಕ್ತಗಳು ಅವತೀರ್ಣಗೊಂಡಿವೆಯಾದರೂ ಪೂರ್ಣ ಅಧ್ಯಾಯ ಅವತೀರ್ಣಗೊಂಡಿಲ್ಲ.
2. ಈ ಸೂಕ್ತದ ಅವತರಣದ ನಂತರ ಪ್ರವಾದಿವರ್ಯರು(ಸ) ತಮ್ಮ ಕೊನೆಯ ದಿನಗಳಲ್ಲಿ ಹೆಚ್ಚೆಚ್ಚು ಸ್ತುತಿ-ಸ್ತೋತ್ರ ಮತ್ತು ಕ್ಷಮಾಯಾಚನೆಯಲ್ಲಿ ತೊಡಗಿದ್ದರೆಂದೂ ವರದಿಗಳಿಂದ ತಿಳಿದು ಬರುತ್ತದೆ.






(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಅಬೂಲಹಬನ[1] ಕೈಗಳು ಮುರಿದು ಹೋದುವು ಮತ್ತು ಅವನು ನಾಶವಾದನು.[2]

تَبَّتْ يَدَآ اَبِيْ لَهَبٍ وَّتَبَّ ①

2. ಅವನ ಸಂಪತ್ತಾಗಲಿ ಅವನ ಸಂಪಾದನೆಯಾಗಲಿ ಅವನ ಯಾವ ಕೆಲಸಕ್ಕೂ ಬರಲಿಲ್ಲ.

مَآ اَغْنٰى عَنْهُ مَالُهٗ وَمَا كَسَبَ ②

3. ಖಂಡಿತವಾಗಿಯೂ ಅವನು ಧಗಧಗಿಸುವ ಅಗ್ನಿಯಲ್ಲಿ ಹಾಕಲ್ಪಡುವನು.

سَيَصْلٰى نَارًا ذَاتَ لَهَبٍ ③

4. ಮತ್ತು (ಅವನ ಜೊತೆ) ಕುಪ್ರಚಾರಕಳಾದ ಅವನ ಪತ್ನಿ ಕೂಡಾ.[3]

وَّامْرَاَتُهٗ ۭ حَمَّالَةَ الْحَطَبِ ④

5. ಅವಳ ಕೊರಳಲ್ಲಿ ದರ್ಬೆ ಹುಲ್ಲಿನ ಹಗ್ಗವಿರುವುದು.

فِيْ جِيْدِهَا حَبْلٌ مِّنْ مَّسَدٍ ⑤

---

1. ಪ್ರವಾದಿವರ್ಯರ(ಸ) ಚಿಕ್ಕಪ್ಪನಾಗಿದ್ದ ಅವನು ಅಬೂಲಹಬ್ ಎಂಬ ಹೆಸರಿನಿಂದಲೇ ಖ್ಯಾತನಾಗಿದ್ದನು.
2. ಅರ್ಥಾತ್- ಇಸ್ಲಾಮಿನ ಮಾರ್ಗವನ್ನು ತಡೆಯಲಿಕ್ಕಾಗಿ ಅವನು ತನ್ನೆಲ್ಲಾ ಶಕ್ತಿಯನ್ನು ವ್ಯಯಿಸಿ ವಿಫಲನಾದನು. ಈ ಸೂಕ್ತದಲ್ಲಿ ಅನಂತರ ಸಂಭವಿಸಲಿಕ್ಕಿರುವ ವಿಷಯದ ಬಗ್ಗೆ ಭವಿಷ್ಯ ನುಡಿಯಲಾಗಿದೆಯಾದರೂ, ಆ ಘಟನೆ ಸಂಭವಿಸಿಯೇ ಬಿಟ್ಟಿತೇನೋ ಎಂಬಂತೆ ವಿವರಿಸಲಾಗಿದೆ.
3. ಆ ಮಹಿಳೆಯ ಹೆಸರು ಉಮ್ಮು ಜಮೀಲ್ ಎಂದಾಗಿತ್ತು. ಆಕೆ ಅಬೂ ಸುಫ್‌ಯಾನ್‌ನ ಸಹೋದರಿಯಾಗಿದ್ದಳು ಮತ್ತು ಇಸ್ಲಾಮಿನ ವಿರುದ್ಧದ ವೈರತ್ವದಲ್ಲಿ ಆಕೆ ಯಾವ ರೀತಿಯಲ್ಲೂ ತನ್ನ ಪತಿಗಿಂತ ಹಿಂದಿರಲಿಲ್ಲ.






**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹೇಳಿರಿ-[1] ಅವನು ಅಲ್ಲಾಹನು[2] ಏಕೈಕನು.[3] — قُلْ هُوَ اللّٰهُ اَحَدٌ ۚ﴿۱﴾

2. ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು. — اَللّٰهُ الصَّمَدُ ۚ﴿۲﴾

3. ಅವನಿಗೆ ಯಾವುದೇ ಸಂತಾನವಿಲ್ಲ, ಅವನು ಯಾರ ಸಂತಾನವೂ ಅಲ್ಲ- — لَمْ يَلِدْ ۙ وَلَمْ يُوْلَدْ ۙ﴿۳﴾

4. ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ. — وَلَمْ يَكُنْ لَّهٗ كُفُوًا اَحَدٌ ۚ﴿۴﴾

---

1. ಬಹುದೇವಾರಾಧಕರು ಮತ್ತು ಸತ್ಯನಿಷೇಧಿಗಳು ಪ್ರವಾದಿವರ್ಯರೊಡನೆ(ಸ), 'ತಮ್ಮ ಪ್ರಭು ಮತ್ತು ಇತರೆಲ್ಲಾ ಆರಾಧ್ಯರುಗಳನ್ನು ಬಿಟ್ಟು ತಾವು ಪರಿಚಯಿಸುವ ಆ ಏಕೈಕ ಆರಾಧ್ಯ ಹೇಗಿದ್ದಾನೆ? ಅವನ ವಂಶ ಯಾವುದು? ಯಾವುದರಿಂದ ಸೃಷ್ಟಿಸಲ್ಪಟ್ಟಿದ್ದಾನೆ? ಯಾರಿಂದ ಅವನು ನಿಸರ್ಗದ ವಾರೀಸುದಾರಿಕೆಯನ್ನು ಪಡೆದಿದ್ದಾನೆ ಮತ್ತು ನಂತರ ಯಾರು ಅವನ ವಾರೀಸುದಾರರಾಗಲಿದ್ದಾರೆ?" ಎಂದು ಮುಂತಾಗಿ ಕೇಳುತ್ತಿದ್ದರು. ಈ ಪ್ರಶ್ನೆಗಳಿಗೆ ಉತ್ತರವಾಗಿ ಈ ಅಧ್ಯಾಯವನ್ನು ಅವತೀರ್ಣಗೊಳಿಸಲಾಗಿದೆ.
2. ಅರ್ಥಾತ್- ಯಾರನ್ನು ನೀವು ಸ್ವತಃ ಅಲ್ಲಾಹ್ ಎಂಬ ಹೆಸರಿನಿಂದ ಅರಿತಿದ್ದೀರೋ ಮತ್ತು ಯಾರನ್ನು ನಿಮ್ಮ ಮತ್ತು ಸಕಲ ಸೃಷ್ಟಿಗಳ ಸೃಷ್ಟಿಕರ್ತ ಮತ್ತು ಪಾಲಕ ಎಂದು ಭಾವಿಸುತ್ತೀರೋ ಅವನೇ ನನ್ನ ಪ್ರಭು. ಬಹುದೇವವಿಶ್ವಾಸಿಗಳು ದೇವನ ಬಗ್ಗೆ ಯಾವ ರೀತಿಯ ವಿಶ್ವಾಸವನ್ನು ಹೊಂದಿದ್ದರೆಂದು ಕುರ್‌ಆನಿನ ಹಲವೆಡೆಗಳಲ್ಲಿ ವಿವರಿಸಲಾಗಿದೆ. ಉದಾ: ನೋಡಿರಿ. ಯೂನುಸ್, ಸೂಕ್ತ 22, 23, 31 ಬನೀಇಸ್ರಾಈಲ್ ಸೂಕ್ತ 67, ಅಲ್ ಮೂಮಿನೂನ್ ಸೂಕ್ತ 84ರಿಂದ 89, ಅಲ್ ಅಂಕಬೂತ್ ಸೂಕ್ತ 61ರಿಂದ 63, ಅಝ್ಝುಖ್‌ರುಫ್ ಸೂಕ್ತ 87.
3. ಇಲ್ಲಿ 'ವಾಹಿದ್'ನ ಬದಲಿಗೆ 'ಅಹದ್' ಎಂಬ ಪದ ಉಪಯೋಗಿಸಲಾಗಿದೆ. ಆ ಎರಡೂ ಪದಗಳ ಅರ್ಥ 'ಏಕನು' ಎಂದಾಗಿದೆ. ಆದರೆ ಅರಬಿ ಭಾಷೆಯಲ್ಲಿ 'ವಾಹಿದ್' ಎಂಬ ಪದ ತನ್ನೊಳಗೆ ಅನೇಕ ಸಮಾನ ಅಂಶಗಳನ್ನು ಹೊಂದಿರುವ ಎಲ್ಲಾ ವಸ್ತುಗಳಿಗೆ ಪ್ರಯೋಗವಾಗುತ್ತದೆ. ಉದಾಹರಣೆಗೆ ಏಕ ಮಾನವ, ಏಕ ಜನಾಂಗ, ಏಕ ರಾಷ್ಟ್ರ, ಏಕ ವಿಶ್ವ. ಇವುಗಳೆಲ್ಲವನ್ನೂ 'ವಾಹಿದ್' ಎಂದೇ ಕರೆಯಲಾಗುತ್ತದೆ. ಇದರಲ್ಲಿ ಒಂದಕ್ಕಿಂತ ಹೆಚ್ಚು ಅಂಶಗಳಿರುವುದನ್ನು ಪರಿಗಣಿಸಲಾಗಿಲ್ಲ. ಆದರೆ 'ಅಹದ್' ಎಂಬ ಪದವನ್ನು ಎಲ್ಲ ರೀತಿಯಿಂದಲೂ ಏಕೈಕವಾಗಿರುವ ಮತ್ತು ಹೆಚ್ಚಿನ ಅಂಶಗಳೇ ಇಲ್ಲದ ವಸ್ತುಗಳಿಗೆ ಪ್ರಯೋಗಿಸಲಾಗುತ್ತದೆ. ಆದ್ದರಿಂದ ಅರಬಿ ಭಾಷೆಯಲ್ಲಿ ಈ ಪದವನ್ನು ಅಲ್ಲಾಹನಿಗೆ ಮಾತ್ರ ಉಪಯೋಗಿಸಲಾಗುತ್ತದೆ.





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಹೇಳಿರಿ- ನಾನು ಮುಂಜಾವಿನ ಪ್ರಭುವಿನ[1] ಅಭಯ ಯಾಚಿಸುತ್ತೇನೆ-

قُلْ اَعُوْذُ بِرَبِّ الْفَلَقِ ﴿١﴾

2. ಅವನು(ಅಲ್ಲಾಹನು) ಸೃಷ್ಟಿಸಿದ ಸಕಲ ವಸ್ತುಗಳ ಕೇಡಿನಿಂದ,

مِنْ شَرِّ مَا خَلَقَ ﴿٢﴾

3. ಇರುಳಿನ ಅಂಧಕಾರವು ಕವಿದಾಗ ಉಂಟಾಗುವ ಕೇಡಿನಿಂದ-[2]

وَمِنْ شَرِّ غَاسِقٍ اِذَا وَقَبَ ﴿٣﴾

4. ಗಂಟುಗಳ ಮೇಲೆ ಊದುವವರ (ಅಥವಾ ಹಾಗೆ ಊದುವ ಸ್ತ್ರೀಯರ) ಕೇಡಿನಿಂದ-[3]

وَمِنْ شَرِّ النَّفّٰثٰتِ فِى الْعُقَدِ ﴿٤﴾

5. ಮತ್ತು ಮತ್ಸರಿಯು ಮತ್ಸರ ಪಡುವಾಗ ಅವನ ಕೇಡಿನಿಂದ.[4] (ಅಭಯ ಯಾಚಿಸುತ್ತೇನೆ).

وَمِنْ شَرِّ حَاسِدٍ اِذَا حَسَدَ ﴿٥﴾

---

1. ಅರ್ಥಾತ್- ರಾತ್ರಿಯ ಅಂಧಕಾರವನ್ನು ಸೀಳಿ ಉಜ್ವಲವಾದ ಪ್ರಭಾತವನ್ನು ತರುವ ಪ್ರಭುವಿನ.
2. ಏಕೆಂದರೆ ಹೆಚ್ಚಿನೆಲ್ಲಾ ಅಕ್ರಮ ಅನ್ಯಾಯಗಳು ರಾತ್ರಿಯ ವೇಳೆಯೇ ನಡೆಯುತ್ತವೆ ಮತ್ತು ಕ್ರೂರ ಜಂತುಗಳು ಸಹ, ರಾತ್ರಿಯ ವೇಳೆಯಲ್ಲೇ ಹೊರಡುತ್ತವೆ.
3. ಅರ್ಥಾತ್- ಮಾಟ ಮಾಡುವ ಸ್ತ್ರೀ-ಪುರುಷರು.
4. ಅರ್ಥಾತ್- ಅಸೂಯೆಯಿಂದಾಗಿ ಅವರು ಏನಾದರೂ ನಷ್ಟ ಉಂಟುಮಾಡಲು ಪ್ರಯತ್ನಿಸಿದಾಗ.






(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسْمِ اللّٰهِ الرَّحْمٰنِ الرَّحِيْمِ |
| 1. ಹೇಳಿರಿ- ನಾನು ಅಭಯ ಯಾಚಿಸುತ್ತೇನೆ- ಮಾನವರ ಪ್ರಭುವಿನ- | قُلْ اَعُوْذُ بِرَبِّ النَّاسِ ① |
| 2. ಮಾನವರ ಸಾಮ್ರಾಟನ- | مَلِكِ النَّاسِ ② |
| 3. ಮಾನವರ ನೈಜ ಆರಾಧ್ಯನ- | اِلٰهِ النَّاسِ ③ |
| 4. ಪದೇಪದೇ ಬಂದು ದುಷ್ಪ್ರೇರಣೆ ನೀಡುವವನ ಕೇಡಿನಿಂದ-[1] | مِنْ شَرِّ الْوَسْوَاسِ الْخَنَّاسِ ④ |
| 5. ಜನರ ಮನಸ್ಸುಗಳಲ್ಲಿ ದುಷ್ಪ್ರೇರಣೆ ಉಂಟು ಮಾಡುವವನ ಕೇಡಿನಿಂದ- | الَّذِىْ يُوَسْوِسُ فِىْ صُدُوْرِ النَّاسِ ⑤ |
| 6. ಅವನು ಯಕ್ಷಗಳ ಪೈಕಿಯಾಗಿರಲಿ, ಮಾನವರ ಪೈಕಿಯಾಗಿರಲಿ.[2] | مِنَ الْجِنَّةِ وَ النَّاسِ ⑥ |

---

1. ಅರ್ಥಾತ್- ಒಮ್ಮೆ ದುಷ್ಪ್ರೇರಣೆ ನೀಡುವಲ್ಲಿ ಸಫಲನಾಗದಿದ್ದರೆ ಸರಿದು ಬಿಡುತ್ತಾನೆ. ಅನಂತರ ಮತ್ತೆ ಬಂದು ದುಷ್ಪ್ರೇರಣೆ ನೀಡತೊಡಗುತ್ತಾನೆ. ಈ ಪ್ರಯತ್ನವನ್ನು ನಿರಂತರ ಜಾರಿಯಲ್ಲಿರಿಸುತ್ತಾನೆ.
2. ಅರ್ಥಾತ್- ದುಷ್ಪ್ರೇರಣೆ ನೀಡುವವರು ಮಾನವರ ಪೈಕಿಯಲ್ಲಾಗಿರಲಿ, ಜಿನ್ನ್‌ಗಳ (ಯಕ್ಷರ) ಪೈಕಿಯಲ್ಲಾಗಿರಲಿ - ಇಬ್ಬರ ಕೇಡಿನಿಂದಲೂ ನಾನು ಅಭಯ ಯಾಚಿಸುತ್ತೇನೆ.